



ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ

# ರುಗ್ಮಿಣೀಶವಿಜಯ



ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ




ಶ್ರೀವಾದಿರಾಜತೀರ್ಥ ಶ್ರೀಚರಣವಿರಚಿತ

# ರುಗ್ಮಿಣೀಶವಿಜಯ

(ಮೂಲ, ಪ್ರತಿಪದಾರ್ಥ, ಅನುವಾದ, ವಿವರಣೆಗಳ ಸಮೇತ)

ಸಂಪಾದನೆ, ಅನುವಾದ :

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಪ್ರಕಾಶನ :

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦೦೧೯





ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ



# ರುಗ್ಮಿಣೀಶವಿಜಯ

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ

**Rugminīśavijaya** : Edited critically with translation and explanatory notes by Vidyāvācaspati, Darśanaratnaṁ, Pravacanācārya, Sacchāstravicakṣaṇaratnaṁ, Śāstrapravacanakesari, Madhvamatavar-dhana, Vidvaccūḍāmaṇi, Vedavidyāvicakṣaṇa, Paṇḍitaratnaṁ, Vidyāvāridhi, Sacchāstrapravacanapravīṇa, Gītāratnākara, Tattvavācaspati, Jñānaratnākara (and Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005**) **Dr.Vyāsanakere Prabhañjanacārya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyāsanakere**, Publication wing of **Śrī Vyāsamadhva Samśodhana Pratiṣṭhāna** Pājaka, No.89/24, Third Cross, Mount Joy Extension, Hanumanthanagar, Bangalore - 560019. Pages: 1008(48+976)

RUGMINISHAVIJAYA

ISBN NO. 978-93-81826-50-8

Phone : 26602802; 26611011.

Internet : www.vyasamadhwa.org

E-mail : info@vyasamadhwa.org



First Edition : 2016

Price : Rs. 400/-

Typeset by : Vyasa Madhva Samshodhana Pratishtana(Regd)

Printed at :

**Vāgartha**, N.R. Colony, Bangalore - 19. Ph: 22427677

# ವಿಷಯಾನುಕ್ರಮಣಿಕೆ


## ಪ್ರಸ್ತಾವನೆ i-xlviii

ಶ್ರೀವಾದಿರಾಜಸ್ವಾಮಿಗಳು – ಶ್ರೀವಾದಿರಾಜರ ಕೃತಿಗಳು – ರುಗ್ಮಿಣೀಶವಿಜಯ – ವ್ಯಾಖ್ಯಾನಕಾರ ಶ್ರೀನಾರಾಯಣಾಚಾರ್ಯರು – ಶ್ರೀರುಗ್ಮಿಣೀಶಯವಿಜಯದ ಸಾರ – ವೈಶಿಷ್ಟ್ಯ – ರುಗ್ಮಿಣೀಶ-ವಿಜಯ ಹಾಗೂ ಭಾಗವತ- ರುಗ್ಮಿಣೀಶವಿಜಯ ಹಾಗೂ ಭಾಗವತತಾತ್ಪರ್ಯನಿರ್ಣಯ-ಮಹಾಭಾರತತಾತ್ಪರ್ಯನಿರ್ಣಯ- ರುಗ್ಮಿಣೀಶವಿಜಯ ಹಾಗು ಹರಿದಾಸಸಾಹಿತ್ಯ.

## ೧. ಪ್ರಥಮ ಸರ್ಗ ೧-೬೯

ಮಂಗಲಾಚರಣ, ಶ್ರೀಕೃಷ್ಣಸ್ತುತಿ – (೧); ಹಯಗ್ರೀವಸ್ತುತಿ – (೬-೯); ರುಗ್ಮಿಣೀಸ್ತುತಿ – (೧೦); ಮಧ್ವಸ್ತುತಿ – (೧೧) ; ವಾಣೀಸ್ತುತಿ – (೧೩.); ಕಾವ್ಯೋದ್ದೇಶ – (೧೩.); ಕವಿನಾಮಕಥನ – (೧೫); ವಿನಯೋಕ್ತಿ – (೧೬-೧೭); ಧಾತ್ರೀಕೃತವಿರಿಂಚಸ್ತವನ – (೧೮); ಭೂಭಾರಶಬ್ದಾರ್ಥಕಥನ – (೧೯) ಗೋರೂಪಸ್ವೀಕಾರದ ಕಾರಣ – (೨೦); ಬ್ರಹ್ಮಾದಿಗಳಿಂದ ಕ್ಷೀರಸಮುದ್ರಕ್ಕೆ ಗಮನ – (೨೧,೨೨); ಬ್ರಹ್ಮಾದಿಗಳು ಮಾಡಿದ ಶ್ರೀಹರಿಯ ಪ್ರಾರ್ಥನೆ – (೨೩.-೨೭); ಪ್ರಸನ್ನನಾದ ಹರಿಯಿಂದ ಪ್ರಾದುರ್ಭಾವಕ್ಕಾಗಿ ಸಮ್ಮತಿ – (೨೯); ಅವತಾರಕ್ಕಾಗಿ ದುರ್ಗೆಗೆ ಆದೇಶ – (೨೯,೩೦); ಆದಿಯಲ್ಲಿ ಶೇಷಾವತಾರ ಮತ್ತು ಅದಕ್ಕೆ ಕಾರಣಕಥನ – (೩೧); ಕೃಷ್ಣಾವತಾರಕ್ಕೆ ಕಾರಣ – (೩೩.) ಶ್ರೀಹರಿಗೆ ಗರ್ಭವಾಸಾದಿಗಳು ಸರ್ವಥಾ ಇಲ್ಲ – (೩೪); ಬ್ರಹ್ಮಾದಿಗಳು ಮಾಡಿದ ಗರ್ಭಸ್ತುತಿ – (೩೫); ಶ್ರೀಕೃಷ್ಣಜಯಂತೀ – (೩೬); ರೋಹಿಣೀನಕ್ಷತ್ರದಲ್ಲಿ ಚಂದ್ರೋದಯಕಾಲದಲ್ಲಿ ಅವತಾರ ಹಾಗೂ ಅದಕ್ಕೆ ಕಾರಣ – (೩೭,೩೮); ಗಂಧರ್ವಾದಿಗಳು ಮಾಡಿದ ಕೃಷ್ಣಸ್ತುತಿ – (೩೯, ೪೦); ದೇವತೆಗಳಿಂದ ಪುಷ್ಪವೃಷ್ಟಿ – (೪೦); ಆಕಾಶದಲ್ಲಿ ದುಂದುಭಿ ಧ್ವನಿ – (೪೧); ಮೇಘಘೋಷ – (೪೨); ಸರೋವರದಲ್ಲಿ ಪ್ರಸನ್ನತೆ – (೪೩.); ಗಗನದಲ್ಲಿ ಹೊಳೆದ ನಕ್ಷತ್ರಗಳು – (೪೩.); ವೃದ್ಧರು ಮಾಡಿದ ಶ್ರೀಕೃಷ್ಣಸ್ತುತಿ – (೪೫); ಹಿತವಾಗಿ ಬೀಸಿದ ಗಾಳಿ – (೪೬); ದಿಗಂತಕ್ಕೆ ತೆರಳಿದ ಮೇಘಗಳು- (೪೭); ಚರಾಚರಗಳ ಸಂತುಷ್ಟಿ – (೪೭); ವಸುದೇವದೇವಕಿಯರ ಬಂಧಮೋಚನ – (೪೮); ವಸುದೇವದೇವಕೀಕೃತ ಕೃಷ್ಣಸ್ತುತಿ – (೪೯); ಶ್ರೀಕೃಷ್ಣನಿಗೆ ದೇವಕೀಪುತ್ರತ್ವಸಮರ್ಥನ – (೪೯); ವಸುದೇವನ ಪಿತೃತ್ವಸಮರ್ಥನ – (೫೦) ; ಪುನಃ ಕೃಷ್ಣಸ್ತುತಿ – (೫೧); ಶ್ರೀಹರಿಯ ಪ್ರಾದುರ್ಭಾವ – (೫೩.-೫೬); ದುರ್ಗೆಯ ಪ್ರಾದುರ್ಭಾವ – (೫೮); ಗೋಕುಲದತ್ತ ವಸುದೇವ -(೬೧); ಮೇಘವೃಷ್ಟಿ – (೬೨); ಆದಿಶೇಷ ಮಾಡಿದ ವಿಶೇಷಸೇವೆ – (೬೩.); ಬ್ರಹ್ಮಾದಿಗಳಿಂದ ಶ್ರೀಕೃಷ್ಣಸ್ತುತಿ – (೬೪); ಯಮುನೆಯಿಂದ ಮಾರ್ಗಪ್ರದಾನ – (೬೪-೬೬); ಶ್ರೀಕೃಷ್ಣಗಮನದ ರಾಜವೈಭವ – (೬೬,೬೭); ಸರ್ಗೋಪಸಂಹಾರ – (೬೮)

## ೨. ದ್ವಿತೀಯ ಸರ್ಗ ೭೦-೧೨೩

ಶ್ರೀಕೃಷ್ಣನ ಗೋಕುಲಪ್ರವೇಶ (೭೦); ಗೃಹವೀಥಿಕಾವರ್ಣನೆ – (೭೦); ಸ್ಥಳದ ವರ್ಣನೆ – (೭೧); ದುರ್ಗೆಯ ಮಧುರಾಗಮನ – (೭೧,೭೨); ವಸುದೇವನ ನಿರ್ಗಮನ – (೭೩.); ಪುನಃ ಗೃಹಪ್ರವೇಶ – (೭೪); ದುರ್ಗಾನುಗ್ರಹ – (೭೫); ಸೂರ್ಯೋದಯದ ವರ್ಣನೆ – (೭೬-೮೦); ನಂದಗೋಪನ ಸಂಭ್ರಮ-(೮೧); ಅವನು ಮಾಡಿದ ದಾನದ ವೈಭವ-(೮೨);

ಗೋಕುಲದ ವರ್ಣನೆ- (೮೨-೮೪); ಪುನಃ ಸೂರ್ಯೋದಯದ ವರ್ಣನೆ;-(೮೫-೮೭); ಶ್ರೀಕೃಷ್ಣನು ಗೋಪಾಲಕವಂಶದಲ್ಲಿ ಅವತರಿಸಲು ಕಾರಣ - (೮೮); ಶ್ರೀಕೃಷ್ಣನಿಗೆ ಜಾತಕರ್ಮ - (೮೯); ಶ್ರೀಕೃಷ್ಣನ ಸ್ತನಪಾನಕರ್ಮದ ವೈಭವ - (೯೦-೯೨); ಪೂತನಿಯ ಆಗಮನ - (೯೩.-೯೪); ಪೂತನಾಸಂಹಾರ - (೯೫-೯೮); ಪೂತನಿಯು ತಾಟಕೆ - (೯೯); ಊರ್ವಶಿಗೆ ಸದ್ಗತಿ, ತಾಟಕೆಗೆ ದುರ್ಗತಿ - (೧೦೦); ದ್ವೇಷದಿಂದ ಮೋಕ್ಷವಿಲ್ಲ - (೧೦೧-೧೦೮); ಜೀವದ್ವಯಾವೇಶದ ಸಮರ್ಥನೆ - (೧೦೯-೧೧೪); ದ್ವೇಷದಿಂದ ಮೋಕ್ಷ ಎಂಬುದರ ಅಂತರ್ಯ- (೧೦೪-೧೦೬); ಸರ್ಗೋಪಸಂಹಾರ - (೧೨೩.)

೩. ತೃತೀಯ ಸರ್ಗ ೧೨೪-೧೭೧

ತೃಣಾವರ್ತನ ವಧೆ-(೧೨೪-೧೨೯) ದೋಲಾವೈಭವ - (೧೩.೦,೧೩.೧); ಯಶೋದೆಯ ಶ್ರೀಕೃಷ್ಣಸೇವಾಸಂಭ್ರಮ - (೧೩.೧,೧೩.೨); ಲಕ್ಷ್ಮೀಪತಿಯ ವಾಗ್ವೈಭವ - (೧೩.೩.,೧೩.೪); ಗೋಪೀಕೃತ ದೋಲಾಸೇವಾ - (೧೩.೪,೧೩.೫); ಯಶೋದೆಗೆ ವಿಶ್ವರೂಪಪ್ರದರ್ಶನ - (೧೩.೬,೧೩.೭); ಅನಂತನಾಮನಿಗೆ ನಾಮಕರಣ - (೧೩.೮-೧೪೦); ಶ್ರೀಕೃಷ್ಣನಾಮಾರ್ಥಕಥನ - (೧೪೦-೧೪೨); ಅಂಬೆಗಾಲಿಟ್ಟ ಶ್ರೀಕೃಷ್ಣ - (೧೪೩.-೧೪೪); ಯಶೋದೆಯ ಸುಕೃತ - (೧೪೫); ಶ್ರೀಕೃಷ್ಣನ ದಿಗಂಬರತ್ವದ ಆಂತರ್ಯ - (೧೪೬); ಶ್ರೀಕೃಷ್ಣನ ಬಾಲಲೀಲಾವಿಲಾಸ - (೧೪೮,೧೪೯); ನವನೀತಾದಿ ಚೌರ್ಯ ಮತ್ತು ಅದರ ಆಂತರ್ಯ - (೧೪೯-೧೫೨); ಶ್ರೀಪತಿಯ ಚೋರತ್ವ ಎಲ್ಲಿ/ಏತಕ್ಕೆ? - (೧೫೨-೧೫೪); ಗೋಪೀಕೃಷ್ಣರ ಸಲ್ಲಾಪ -(೧೫೫); ಗೋಪಿಯರ ನಿಂದಾಸ್ತುತಿವಚನಗಳು - (೧೫೭-೧೬೮); ಶ್ರೀಕೃಷ್ಣನು ನಂದಸುತನಲ್ಲ - (೧೫೯); ಶ್ರೀಕೃಷ್ಣನು ದೇವನೇ ಹೊರತು ದೇವಭಕ್ತನಲ್ಲ - (೧೫೯); ಶ್ರೀಕೃಷ್ಣನ ಉದರದಲ್ಲಿ ಬ್ರಹ್ಮಾದಿದೇವತೆಗಳು - (೧೬೦); ಶ್ರೀಕೃಷ್ಣನು ಭವಪಾಶಮೋಚಕನಾದ ಶ್ರೀಹರಿ -(೧೬೧); ವಿಶ್ವತಶ್ಚಕ್ಷು ಶ್ರೀಕೃಷ್ಣ - (೧೬೨); ಸರ್ವಶಕ್ತ ಶ್ರೀಕೃಷ್ಣ - (೧೬೩.); ಅಚಿಂತ್ಯಾದ್ಭುತ ಶಕ್ತಿಸಂಪನ್ನ ಶ್ರೀಕೃಷ್ಣ - (೧೬೩.); ಶ್ರೀಕೃಷ್ಣನ ಬಾಯಿಯಲ್ಲಿ ವರುಣ - (೧೬೪); ಅಷ್ಟೈಶ್ವರ್ಯಸಂಪನ್ನ ಶ್ರೀಕೃಷ್ಣ - (೧೬೫); ಜಗನ್ನಿಯಾಮಿಕ ಶ್ರೀಕೃಷ್ಣ - (೧೬೫); ಶ್ರೀಕೃಷ್ಣನ ಕಣ್ಣುಗಳಲ್ಲಿ ಸೂರ್ಯಚಂದ್ರರು - (೧೬೬); ಕಿಂ ದೇವಿ ಕುರ್ಮೋ ವಯಮ್-(೧೬೭); ಗೋಪಿಯರು ಮಾಡಿದ ನಿಂದಾಸ್ತುತಿ - (೧೬೮); ಶ್ರೀಕೃಷ್ಣನು ಮಾಡಿದ ಮೃದ್ಭಕ್ಷಣ-(೧೬೮,೧೬೯); ಪುನಃ ವಿಶ್ವರೂಪಪ್ರದರ್ಶನ-(೧೬೯); ಸರ್ಗೋಪಸಂಹಾರ-(೧೭೦)

೪. ಚತುರ್ಥ ಸರ್ಗ ೧೭೨-೨೨೬

ಯಶೋದೆಯಲ್ಲಿ ಶ್ರೀಕೃಷ್ಣನ ವಾತ್ಸಲ್ಯ-(೧೭೨); ಯಶೋದೆಯಿಂದ ಸ್ತನ್ಯಪ್ರಾಶನ-(೧೭೩.); ಶ್ರೀಕೃಷ್ಣನಿಂದ ದಧಿಭಾಂಡಭಂಜನ - (೧೭೪); ಅದರ ಆಂತರ್ಯ - (೧೭೫); ಶ್ರೀಕೃಷ್ಣಗ್ರಹಣ - (೧೭೫); ಶ್ರೀಕೃಷ್ಣನ ಬಂಧನಪ್ರಯತ್ನ - (೧೭೮); ದ್ವ್ಯಂಗುಲೋನವಾದ ಹಗ್ಗ - (೧೭೯); ಭಕ್ತಿಪಾಶದಿಂದ ಶ್ರೀಕೃಷ್ಣನ ಬಂಧನ - (೧೮೦); ಉಲೂಖಲದಲ್ಲಿ ಶ್ರೀಕೃಷ್ಣಬಂಧನ - (೧೮೧); ಯಮಲಾರ್ಜುನಭಂಜನ - (೧೮೧-೧೮೫); ವೃಂದಾವನವೈಭವ - (೧೯೦-೧೯೩.); ವತ್ಸಾಸುರವಧೆ - (೧೯೩.); ಬಕಾಸುರವಧೆ - (೧೯೦-೨೦೨); ವೃಂದಾವನವಾಸ -

(೨೦೨-೨೦೭); ವಸಂತವರ್ಣನೆ - (೨೦೭-೨೦೯); ಶ್ರೀಕೃಷ್ಣವಿಹಾರ - (೨೦೯-೨೧೪); ಕಾಲಿಯಮರ್ದನಪ್ರಸಂಗ - ೨೧೪-೨೨೫); ಸರ್ಗೋಪಸಂಹಾರ - (೨೨೬)

೫. ಪಂಚಮ ಸರ್ಗ ೨೨೭-೨೬೯

ಶ್ರೀಕೃಷ್ಣನಿಂದ ದಾವಾಗ್ನಿಪಾನ - (೨೨೭,೨೨೮); ವ್ರಜಪ್ರವೇಶ - (೨೨೮); ಗ್ರೀಷ್ಮಋತುವರ್ಣನೆ - (೨೨೯-೨೩೦); ಉಗ್ರಾಸುರನ ವಧೆ - (೨೩೧-೨೩೬); ಪುನಃ ಗ್ರೀಷ್ಮಋತುವಿನ ವರ್ಣನೆ - (೨೩೬-೨೩೯); ನೀಲಾಸ್ವಯಂವರ - (೨೪೦); ಧೇನುಕಾಸುರಮಥನ - (೨೪೧-೨೪೫); ಪ್ರಲಂಬಾಸುರಸಂಹಾರ - (೨೪೬); ಪುನಃ ದಾವಾಗ್ನಿಪಾನ - (೨೪೭); ವರ್ಷಋತುವರ್ಣನೆ - (೨೪೭-೨೫೨); ಶರದೃತುವರ್ಣನೆ - (೨೫೨-೨೫೪); ಹೇಮಂತಋತುವರ್ಣನೆ - (೨೫೬, ೨೫೭); ಗೋಪಿಯರು ಮಾಡಿದ ಕಾತ್ಯಾಯನೀವ್ರತ - ಕೃಷ್ಣಾನುಗ್ರಹ - (೨೫೭-೨೬೨); ವಿಪ್ರಪತ್ನಿಯರಿಂದ ಅನ್ನಸಮರ್ಪಣೆ - (೨೬೩-೨೬೫); ಗೋವರ್ಧನೋ-ದ್ಧರಣ - (೨೬೬-೨೬೮); ಸರ್ಗೋಪಸಂಹಾರ - (೨೬೯)

೬. ಷಷ್ಠ ಸರ್ಗ ೨೭೧-೩೨೪

ಗೋವರ್ಧನೋದ್ಧರಣದ ಮಹತ್ತ್ವ-(೨೭೧-೨೭೭); ಶಿಶುವಿನ ಕೈಯಲ್ಲಿ ಸಹಸ್ರ ಆನೆಗಳು ಎಂಬ ಸಮಸ್ಯೆಯ ಪೂರ್ತಿ - (೨೭೭); ಗೋವರ್ಧನದ ವರ್ಣನೆ - (೨೭೭-೨೮೧); ಗೋವರ್ಧನೋದ್ಧರಣದ ಫಲಶ್ರುತಿ-(೨೮೨-೨೮೪); ಇಂದ್ರನ ಶರಣಾಗತಿ - (೨೮೪); ನಂದಗೋಪನ ಮೋಕ್ಷಣ- (೨೮೫-೨೮೭); ಸೂರ್ಯಾಸ್ತದ ವರ್ಣನೆ - (೨೮೭-೨೯೬); ಚಂದ್ರೋದಯದ ವರ್ಣನೆ - (೨೯೬-೩೦೫); ವೇಣುಗಾನದ ವರ್ಣನೆ - (೩೦೮-೩೧೩); ಶ್ರೀಕೃಷ್ಣಗೋಪಿಯರ ಸಲ್ಲಾಪ - (೩೧೪-೩೨೦); ಶ್ರೀಕೃಷ್ಣ ತಿರೋಧಾನ-(೩೨೦); ಗೋಪಿಯರ ಕಾತರ್ಯ-(೩೨೧,೩೨೨); ಸರ್ಗೋಪಸಂಹಾರ - (೩೨೪)

೭. ಸಪ್ತಮ ಸರ್ಗ ೩೨೫-೩೭೩

ಗೋಪಿಯರ ವಿಲಾಪ - (೩೨೫); ಅಶ್ವತ್ಥದ ಪ್ರಾರ್ಥನೆ - (೩೨೬-೩೩೧); ತುಲಸಿ ಮೊದಲಾದವರ ಪ್ರಾರ್ಥನೆ - (೩೩೧-೩೩೬); ಪದ್ಮಿನಿಯ ಪ್ರಾರ್ಥನೆ - (೩೩೬-೩೩೮); ಪದ್ಮದ ಪ್ರಾರ್ಥನೆ - (೩೩೮,೩೩೯); ಚೂತಾದಿಗಳ ಪ್ರಾರ್ಥನೆ - (೩೪೦-೩೪೩); ಅಶೋಕದ ಪ್ರಾರ್ಥನೆ - (೩೪೪-೩೪೫); ಮುರಳಿಯ ಪ್ರಾರ್ಥನೆ - (೨೪೬,೩೪೭); ವೃಂದಾವನದ ಪ್ರಾರ್ಥನೆ - (೩೪೯,೩೫೦); ಕೃಷ್ಣಸಾರದ ಪ್ರಾರ್ಥನೆ - (೩೫೮); ಗೋಪಿಯರ ವಿಲಾಪದ ವರ್ಣನೆ -(೨೫೮-೩೬೬); ಪುನಃ ಗೋಪಿಯರಿಂದ ಶ್ರೀಕೃಷ್ಣನ ಪ್ರಾರ್ಥನೆ - (೩೬೭-೩೭೨); ಸರ್ಗೋಪಸಂಹಾರ - (೩೭೩)

೮. ಅಷ್ಟಮ ಸರ್ಗ ೩೭೪-೪೦೩

ಗೋಪಿಯರ ಪ್ರಲಾಪ - (೩೭೪-೪೦೩); ಮಾಯಾವಾದಿಗಳ ಖಂಡನೆ - (೪೦೪, ೪೦೫): ಶ್ರೀಕೃಷ್ಣನ ವರ್ಣನೆ - (೪೦೬,೪೦೭); ಗೋಪಿಯರ ಕಾತರತೆ - (೪೦೭-೪೧೧); ಶ್ರೀಕೃಷ್ಣದರ್ಶನ, ರಾಸಕ್ರೀಡೆಯ ಆರಂಭ : (೪೧೧-೪೧೮); ಸರ್ಗೋಪಸಂಹಾರ - (೪೨೧)

೯. ನವಮ ಸರ್ಗ ೪೨೨-೪೫೫

ರಾಸಕ್ರೀಡೆಯ ವರ್ಣನೆ - (೪೨೨-೪೫೦); ಶ್ರೀಕೃಷ್ಣನಿಗೆ ಜಾರತ್ವಾದಿ ದೋಷಾಭಾವಸಮರ್ಥನೆ - (೪೫೧-೪೫೨); ವೃಂದಾವನದ ವರ್ಣನೆ - (೪೫೨-೪೫೫); ಸರ್ಗೋಪಸಂಹಾರ - (೪೫೫)

೧೦. ದಶಮ ಸರ್ಗ ೪೫೬-೫೦೯

ರಾಸಕ್ರೀಡೆಯ ವರ್ಣನೆಯ ಉಪಸಂಹಾರ - (೪೫೬); ಅಜಗರದಿಂದ ನಂದನ ವಿಮೋಚನೆ - (೪೫೭); ಶಂಖಚೂಡನ ವಧೆ - (೪೫೮,೪೫೯); ಅರಿಷ್ಟಾಸುರನ ವಧೆ - (೪೬೦-೪೬೩); ಅಸುರಸ್ತ್ರೀಯರ ದುರ್ದಶೆ - (೪೬೩); ಕೇಶಿಯ ವಧೆ - (೪೬೪-೪೬೭); ನಾರದರಿಂದ ಕಂಸನಿಗೆ ಶ್ರೀಕೃಷ್ಣನ ಜನ್ಮರಹಸ್ಯದ ಕಥನ - (೪೬೭-೪೭೦); ನಾರದರಿಂದ ಶ್ರೀಕೃಷ್ಣನ ಪ್ರಾರ್ಥನೆ - (೪೭೦,೪೭೧); ಅಕ್ರೂರನ ಪ್ರೇಷಣೆ - (೪೭೨,೪೭೩); ಅಕ್ರೂರನ ಕೃಷ್ಣದರ್ಶನಸಂಭ್ರಮ - (೪೭೩); ಶ್ರೀಕೃಷ್ಣನಿಂದ ಅಕ್ರೂರನ ಸ್ವಾಗತ - (೪೭೩,೪೭೪); ಶ್ರೀಕೃಷ್ಣ ಮಾಡಿದ ಕುಶಲಪ್ರಶ್ನೆ - (೪೭೫); ಅಕ್ರೂರನ ಪ್ರತ್ಯುತ್ತರ - (೪೭೫-೪೭೯); ಮಧುರಾಗಮನೋದ್ಯೋಗ - (೪೭೯); ಗೋಪಿಯರ ವಿಲಾಪ - (೪೮೮); ಅಕ್ರೂರನಿಂದ ಶ್ರೀಕೃಷ್ಣಸಾಕ್ಷಾತ್ಕಾರ - (೪೮೯-೪೯೯); ಭಗವದನುಗ್ರಹ - (೪೯೯); ಯಮುನಾ- ನದಿಯ ವರ್ಣನೆ - (೫೦೦); ಮಧುರಾಪ್ರವೇಶ - ೫೦೦); ಅಕ್ರೂರ ಮಾಡಿದ ಶ್ರೀಕೃಷ್ಣಸ್ತುತಿ - (೫೦೧-೫೦೯); ಸರ್ಗೋಪಸಂಹಾರ - (೫೦೯)

೧೧. ಏಕಾದಶ ಸರ್ಗ ೫೧೦-೫೫೫

ಮಧುರಾಪ್ರವೇಶ - (೫೧೦); ರಜಕನ ಸಂಹಾರ - (೫೧೨,೫೧೩); ತ್ರಿವಕ್ರೆಯ ಉದ್ಧಾರ - (೫೧೩-೫೧೬); ಶಿವಧನುರ್ಭಂಗ - (೫೧೭-೫೨೦); ಸೂರ್ಯಾಸ್ತದ ವರ್ಣನೆ-(೫೨೧); ಕೃಷ್ಣಪರಾಕ್ರಮದ ಶ್ರವಣದಿಂದ ಕಂಸನಿಗುಂಟಾದ ಭಯ - (೫೨೧-೫೨೯); ಕುವಲಯಾಪೀಡಾದಿಗಳ ವಧೆ - (೫೨೯-೫೩೫); ಶ್ರೀಕೃಷ್ಣಬಲರಾಮರ ರಂಗಪ್ರವೇಶ - (೫೩೬); ಚಾಣೂರಮುಷ್ಟಿಕರ ವಧೆ - (೫೩೭-೫೪೨); ಕಂಸಸೇನೆಯ ಸಂಹಾರ - (೫೪೨-೫೪೭); ಪೂತನಾದಿಗಳ ವಧೆಯ ಆಂತರ್ಯ - (೫೪೭); ಕಂಸವಧೆ-(೫೪೯-೫೫೨); ವಿಶ್ರಾಂತಿತೀರ್ಥದ ವರ್ಣನೆ - (೫೫೪); ಸರ್ಗೋಪಸಂಹಾರ - (೫೫೫)

೧೨. ದ್ವಾದಶ ಸರ್ಗ ೫೫೬-೬೦೧

ಉಗ್ರಸೇನನಿಗೆ ರಾಜ್ಯಪ್ರಾಪ್ತಿ - (೫೫೬-೫೬೦); ಶ್ರೀಕೃಷ್ಣನ ಮಹಿಮೆ - (೫೬೦-೫೬೨); ಮಧುರೆಯ ವರ್ಣನೆ - (೫೬೨, ೫೬೩); ವಸುದೇವದೇವಕಿಯರಿಗೆ ಸಾಂತ್ವನ - (೫೬೪-೫೬೬); ಶ್ರೀಕೃಷ್ಣ - ಬಲರಾಮರ ಉಪನಯನ - (೫೬೭-೫೭೫); ಶ್ರೀಕೃಷ್ಣ-ಬಲರಾಮರ ಗುರುಕುಲವಾಸ - (೫೭೫,೫೭೭); ಗುರುಪುತ್ರೋಜ್ಜೀವನ - (೫೭೭-೫೮೩); ಮಧುರೆಯ ವರ್ಣನೆ - (೫೩೮); ಅಮಾತ್ಯರು ಉಪದೇಶಿಸಿದ ರಾಜನೀತಿ-(೫೮೪-೬೦೦); ಸರ್ಗೋಪಸಂಹಾರ - (೬೦೧)

**೧೩. ತ್ರಯೋದಶ ಸರ್ಗ ೬೦೨-೬೪೭**

ಉದ್ಧವನ ಗೋಕುಲಗಮನಕ್ಕೆ ಆದೇಶ - (೬೦೨); ಉದ್ಧವನ ಗೋಕುಲಪ್ರವೇಶ - (೬೦೩-೬೦೭); ನಂದಗೋಪನಿಂದ ಉದ್ಧವನ ಸ್ವಾಗತ - (೬೦೮-೬೦೯); ಉದ್ಧವನಿಂದ ಗೋಪಿಯರ ವೈಕ್ಲವ್ಯದರ್ಶನ - (೬೧೦-೬೧೫); ಭ್ರಮರಗೀತೆ - (೬೧೬-೬೨೩); ಉದ್ಧವನ ಮಥುರಾಗಮನ - ಜರಾಸಂಧನ ಸಮರೋದ್ಯಮ - (೬೨೩-೬೨೫); ಜರಾಸಂಧನಿಂದ ಮಥುರೆಯ ಆಕ್ರಮಣ -(೬೨೬-೬೨೮); ಕೃಷ್ಣನ ಸಂಗ್ರಾಮದ ವೈಭವ - (೬೨೯-೬೪೬); ಸರ್ಗೋಪಸಂಹಾರ - (೬೪೭)

**೧೪. ಚತುರ್ದಶ ಸರ್ಗ ೬೪೮-೬೯೬**

ಜರಾಸಂಧನ ಪರಾಭವ - (೬೪೮-೬೬೦); ಪುನಃ ಪುನಃ ಅವನ ಪರಾಭವ - (೬೬೦-೬೭೦); ದ್ವಾರಕಾನಿರ್ಮಾಣ - (೬೭೦,೬೭೧); ಕಾಲಯವನನ ವಧೆ - (೬೭೨-೬೭೪); ಮುಚುಕುಂದನ ಉದ್ಧಾರ - (೬೭೫); ಶ್ರೀಕೃಷ್ಣನಿಗೆ ರುಗ್ಮಿಣಿಯ ಪತ್ರಸಂದೇಶ - (೬೭೬-೬೮೫); ಶ್ರೀಕೃಷ್ಣನ ವಿದರ್ಭಗಮನ - (೬೮೫-೬೮೭); ಕೃಷ್ಣದರ್ಶನದಿಂದ ಜನತೆಗಾದ ಸಂಭ್ರಮ - (೬೮೮-೬೯೧); ರುಗ್ಮಿಣಿಯ ಕುಲದೇವತಾಯಾತ್ರೆ - (೬೯೧,೬೯೨); ಜರಾಸಂಧಾದಿಗಳ ಪರಾಜಯ - (೬೯೩-೬೯೪); ರುಗ್ಮಿಣೀ ಹರಣ - (೬೯೪-೬೯೫); ಸರ್ಗೋಪಸಂಹಾರ - (೬೯೬)

**೧೫. ಪಂಚದಶ ಸರ್ಗ ೬೯೭-೭೩೬**

ಪುನಃ ಜರಾಸಂಧಾದಿಗಳ ಪರಾಭವ - (೬೯೭-೭೦೩); ರುಗ್ಮಿಯ ಪರಾಭವ -(೭೦೪); ಶ್ರೀಕೃಷ್ಣರುಗ್ಮಿಣಿಯರ ದ್ವಾರಕಾಗಮನ - (೭೦೫-೭೦೭); ಮೂಲಮಾಧವಕ್ಷೇತ್ರವರ್ಣನೆ - (೭೦೭); ಪ್ರಯಾಣವೈಭವ- (೭೦೭-೭೧೨); ಸಮುದ್ರವರ್ಣನೆ - (೭೧೨,೭೧೩); ಮೂಲಮಾಧವಕ್ಷೇತ್ರದಲ್ಲಿ ನಡೆದ ವಾಜ್ಞ್ನಿಶ್ಚಯ - (೭೧೪-೭೩೦); ಶ್ರೀಕೃಷ್ಣನ ಕಾಶೀಯಾತ್ರೆ, ಇತ್ಯಾದಿ - (೭೩೧-೭೩೫); ಸರ್ಗೋಪಸಂಹಾರ - (೭೩೬)

**೧೬. ಷೋಡಶ ಸರ್ಗ ೭೩೭-೭೭೭**

ರುಗ್ಮಿಣೀಸ್ವಯಂವರದ ವರ್ಣನೆ - (೭೩೭-೭೬೨); ಮಾಲಾರ್ಪಣೆ - (೭೬೩-೭೬೮), ವಿವಾಹಸಂಭ್ರಮ - (೭೬೯-೭೭೦); ದ್ವಾರಕಾಪ್ರವೇಶ - (೭೭೨); ಸಮುದ್ರವರ್ಣನೆ - (೭೭೨-೭೭೭); ಸರ್ಗೋಪಸಂಹಾರ - (೭೭೭)

**೧೭. ಸಪ್ತದಶ ಸರ್ಗ ೭೭೮-೮೫೦**

ಮುನಿಗಳಿಂದ ಕೃಷ್ಣಸ್ತುತಿ-(೭೭೮-೮೧೬); ದ್ವಾರಕಾವರ್ಣನೆ-(೮೧೬-೮೪೯); ಸರ್ಗೋಪಸಂಹಾರ - (೮೫೦)

**೧೮. ಅಷ್ಟಾದಶ ಸರ್ಗ ೮೫೧-೮೯೨**

ಶ್ರೀಕೃಷ್ಣ-ರುಗ್ಮಿಣಿಯರ ಪಾದಕಮಲಗಳ ವರ್ಣನೆ - (೮೫೧); ಶ್ರೀಕೃಷ್ಣಪಾದಕಮಲಗಳ ವರ್ಣನೆ - (೮೫೧-೮೫೮); ಜಂಘೆಯ ವರ್ಣನೆ - (೮೫೯,೮೬೦); ತೊಡೆಗಳ ವರ್ಣನೆ -

(೮೬೦-೮೬೨); ಕಟಿಯ ವರ್ಣನೆ - (೮೬೩); ನಿತಂಬದ ವರ್ಣನೆ - (೮೬೩); ರುಗ್ಮಿಣಿಯ ನೀವಿಯ ವರ್ಣನೆ - (೮೬೪); ಶ್ರೀಕೃಷ್ಣನ ಉದರದ ವರ್ಣನೆ - (೮೬೪); ತ್ರಿವಲಿಗಳ ವರ್ಣನೆ - (೮೬೫-೮೬೮); ಮಧ್ಯದ ವರ್ಣನೆ - (೮೬೯-೮೭೧); ವಕ್ಷಃಸ್ಥಳದ ವರ್ಣನೆ - (೮೩೨-೮೭೫); ಬಾಹುಗಳ ವರ್ಣನೆ - (೮೭೬,೮೭೬); ಸುದರ್ಶನದ ವರ್ಣನೆ - (೮೭೭); ನಂದಕದ ವರ್ಣನೆ - (೮೭೯); ಧನುಸ್ಸಿನ ವರ್ಣನೆ - (೮೭೯); ಹಸ್ತವರ್ಣನೆಯ ಉಪಸಂಹಾರ - (೮೮೦); ರುಗ್ಮಿಣಿಯ ಹಸ್ತಗಳ ವರ್ಣನೆ - (೮೮೦,೮೮೧); ರುಗ್ಮಿಣಿಯ ಕಪೋಲದ ವರ್ಣನೆ - (೮೮೧,೮೮೨); ವನಮಾಲೆಯ ವರ್ಣನೆ - (೮೮೩); ರುಗ್ಮಿಣಿಯ ಮಾಂಗಲ್ಯದ ವರ್ಣನೆ - (೮೮೩,೮೮೪); ಶ್ರೀಕೃಷ್ಣನ ಮುಖದ ವರ್ಣನೆ - (೮೮೬); ಶ್ರೀಕೃಷ್ಣನ ಮೂಗಿನ ವರ್ಣನೆ - (೮೮೭); ಶ್ರೀಕೃಷ್ಣನ ಮಾತುಗಳ ವರ್ಣನೆ - (೮೮೭); ಕಿವಿಗಳ ವರ್ಣನೆ - (೮೮೮); ನೇತ್ರಗಳ ವರ್ಣನೆ - (೮೮೯); ಲಲಾಟದ ವರ್ಣನೆ - (೮೮೯); ಭ್ರೂವಿಲಾಸದ ವರ್ಣನೆ - (೮೯೦); ಅಧರಗಳ ವರ್ಣನೆ - (೮೯೧); ಶ್ರೀರುಗ್ಮಿಣಿಯ ಅಧರದ ವರ್ಣನೆ - (೮೯೧); ಶ್ರೀರುಗ್ಮಿಣಿಯ ಕಪೋಲಗಳ ವರ್ಣನೆ - (೮೯೨); ಸರ್ಗೋಪಸಂಹಾರ - (೮೯೨)

**೧೯. ಏಕೋನವಿಂಶ ಸರ್ಗ** **೮೯೩-೯೩೪**

ರುಗ್ಮಿಣೀಗಂಡಸ್ಥಲವರ್ಣನೆ - (೮೯೩); ಮೌಕ್ತಿಕವರ್ಣನೆ - (೮೯೩,೮೯೪); ರುಗ್ಮಿಣೀ ಕಟಾಕ್ಷವರ್ಣನೆ - (೮೯೫); ರುಗ್ಮಿಣೀ ವರ್ಣನೆ -(೮೯೫-೮೯೮); ಪುನಃ ಕಟಾಕ್ಷವರ್ಣನೆ, ಅಲಕರಾಶಿವರ್ಣನೆ - (೯೦೦); ಮೌಲಿವರ್ಣನೆ -(೯೦೧); ಜಾಂಬವತ್ಯಾದಿ ಪರಿಣಯ - (೯೦೨); ಕಾವ್ಯಸಂದೇಶ (ವಿಷ್ಣುಸರ್ವೋತ್ತಮತ್ತ್ವರೂಪಪ್ರಮೇಯಸಮರ್ಥನೆ) - (೯೦೩-೯೧೪); ಕೈಲಾಸಯಾತ್ರಾಪ್ರಸಂಗ - (೯೧೫); ರುಗ್ಮಿಣೀ ಗರ್ಭವರ್ಣನೆ - (೯೧೫-೯೧೯); ಪ್ರದ್ಯುಮ್ನಜನನ - (೯೧೯,೯೨೦); ಪ್ರದ್ಯುಮ್ನನಲ್ಲಿ ಪ್ರದ್ಯುಮ್ನರೂಪೀ-ಭಗವಂತನ ಆವೇಶ - (೯೨೧); ಅನಿರುದ್ಧೋತ್ಪತ್ತಿ - (೯೨೨); ವಜ್ರೋತ್ಪತ್ತಿ - (೯೨೩); ದ್ವಾರಾವತೀವರ್ಣನೆ - (೯೨೩, ೯೨೪); ಕುಶಸ್ಥಲೀ ವರ್ಣನೆ - (೯೨೫); ಶ್ರೀಕೃಷ್ಣಮಹಿಮಾ - (೯೨೫); ಕಾವ್ಯವರ್ಣನೆ - (೯೨೭, ೯೨೮); ಶ್ರೇಯಃ ಪ್ರಾರ್ಥನೆ - (೯೨೯-೯೩೦); ಕಾವ್ಯಪ್ರಶಸ್ತಿ - (೯೩೧,೯೩೨); ಸರ್ಗೋಪಸಂಹಾರ - (೯೩೩,೯೩೪)

**ಪರಿಶಿಷ್ಟ - ೧ :** ಶ್ರೀರುಗ್ಮಿಣೀಶವಿಜಯದ ಪದ್ಮಬಂಧಶ್ಲೋಕ - ಚಿತ್ರ ೯೩೫
**ಪರಿಶಿಷ್ಟ - ೨ :** ಶ್ರೀರುಗ್ಮಿಣೀಶವಿಯದ ಚಕ್ರಬಂಧಶ್ಲೋಕ - ಚಿತ್ರ ೯೩೬
**ಪರಿಶಿಷ್ಟ - ೩ :** ಶ್ರೀರುಕ್ಮಿಣೀಶವಿಜಯದಲ್ಲಿನ ಸೂಕ್ತಿಗಳು ೯೩೭
**ಪರಿಶಿಷ್ಟ - ೪ :** ಶ್ರೀರುಗ್ಮಿಣೀಶವಿಜಯ ವ್ಯಾಖ್ಯಾನ - ಆದ್ಯಂತ ಶ್ಲೋಕಗಳು ೯೪೩
**ಪರಿಶಿಷ್ಟ - ೫ :** ಶ್ರೀವಾದಿರಾಜತೀರ್ಥಶ್ರೀಚರಣಕೃತ ಶ್ರೀಕೃಷ್ಣಸ್ತೋತ್ರಗಳು ೯೪೭
**ಪರಿಶಿಷ್ಟ - ೬ :** ಶ್ರೀವಾದಿರಾಜತೀರ್ಥಶ್ರೀಚರಣಕೃತಶ್ರೀದುರ್ಗಾಸ್ತವಃ ೯೫೭
**ಪರಿಶಿಷ್ಟ - ೭ :** ಶ್ರೀರುಗ್ಮಿಣೀಶವಿಜಯ - ಶ್ಲೋಕಾನುಕ್ರಮಣಿಕಾ ೯೫೯

# ಪ್ರಸ್ತಾವನೆ

ಶ್ರೀವಾದಿರಾಜತೀರ್ಥಶ್ರೀಚರಣರಿಂದ ವಿರಚಿತವಾದ ಮಹಾಕಾವ್ಯ ರುಗ್ಮಿಣೀಶವಿಜಯ. ಸಮಗ್ರಸಂಸ್ಕೃತಸಾಹಿತ್ಯದಲ್ಲಿಯೇ ಅನನ್ಯವೆನ್ನಿಸುವ ಹಿರಿಮೆ ಇದರದು. ನಾರಾಯಣ-ಪಂಡಿತಾಚಾರ್ಯರ ಸುಮಧ್ವವಿಜಯದೊಂದಿಗೆ ಇದನ್ನು ಸಹ ಅಧ್ಯಯನ ಮಾಡುವುದು ಮಾಧ್ವಪರಂಪರೆಯಲ್ಲಿ ಅನೂಚಾನವಾಗಿ ನಡೆದು ಬಂದಿದೆ; ಇದನ್ನು ರಚನೆ ಮಾಡಿದ ಮಹನೀಯರು ವಿಶ್ವಖ್ಯಾತಿಯ ಮಹೋನ್ನತವ್ಯಕ್ತಿತ್ವದ ಶ್ರೀವಾದಿರಾಜತೀರ್ಥಶ್ರೀಚರಣರು. ಸುಮಧ್ವವಿಜಯವು ಮೋಕ್ಷ ನೀಡಿಸುವ ವಿಶ್ವಗುರುಶ್ರೀಮಧ್ವಾಚಾರ್ಯರ ಜೀವನ-ಗಾಥೆಯಾದರೆ, ರುಗ್ಮಿಣೀಶವಿಜಯವು ಮೋಕ್ಷ ನೀಡುವ ಪರದೇವತೆಯಾದ ಶ್ರೀಕೃಷ್ಣನ ದಿವ್ಯಕಥಾನಕ.

## [1]ಶ್ರೀವಾದಿರಾಜಸ್ವಾಮಿಗಳು (೧೪೮೧ - ೧೬೦೧)

[2]ಶ್ರೀವಾದಿರಾಜಸ್ವಾಮಿಗಳು ದ್ವೈತವೇದಾಂತದ ಮಹಾವಿಭೂತಿಗಳಲ್ಲಿ ಒಬ್ಬರು. ಮುನಿ-ತ್ರಯರೆಂದು ಪ್ರಸಿದ್ಧವಾಗಿರುವ ಆಚಾರ್ಯಶ್ರೀಮಧ್ವರು (೧೨೦೦-೧೨೮೦), ಶ್ರೀಜಯ-ತೀರ್ಥರು (೧೩೪೧-೧೩೮೮) ಮತ್ತು ಶ್ರೀವ್ಯಾಸರಾಜರ (೧೪೬೦-೧೫೩೯) ಅನಂತರದ ಅಗ್ರಮಾನ್ಯ ಗ್ರಂಥಕಾರರೆಂಬುದು ಇವರ ಪ್ರಶಸ್ತಿ.

ಒಟ್ಟು ೧೨೦ ವರ್ಷಗಳ (೧೪೮೧-೧೬೦೧) ದೀರ್ಘಬಾಳನ್ನು ಬಾಳಿದ ವೈಷ್ಣವಯತಿಗಳು ಎಂಬುದು ಇವರ ವಿಶೇಷ ಹಿರಿಮೆ. ಬ್ರಹ್ಮಚರ್ಯದಿಂದ ನೇರವಾಗಿ ಪರಮಹಂಸಾಶ್ರಮ ಸ್ವೀಕರಿಸಿದ ಇವರ ಸನ್ಯಾಸಜೀವನವೇ ಸುಮಾರು ೧೧೨ ವರ್ಷಗಳಷ್ಟು ದೀರ್ಘವಾಗಿತ್ತು. ಇಷ್ಟು ದೀರ್ಘಕಾಲ ಸಂನ್ಯಾಸಾಶ್ರಮ ನಿರ್ವಹಿಸಿದ ಮತ್ತೊಬ್ಬ ಯತಿಯನ್ನು ಇತಿಹಾಸ ಕಂಡಿಲ್ಲ.

---

೧. ಶ್ರೀವಾದಿರಾಜಸ್ವಾಮಿಗಳ ಜೀವನ, ಕೃತಿಗಳು, ಅವರ ಕೃತಿಗಳ ಆದ್ಯಂತಶ್ಲೋಕಗಳು, ಅವರ ಸಮಗ್ರ ಸ್ತೋತ್ರಕೃತಿಗಳು, ಆಯ್ದ ಕೀರ್ತನೆ, ಸುಳಾದಿ, ಉಗಾಭೋಗಗಳು ಮೊದಲಾದವುಗಳನ್ನು ನಮ್ಮ ಪ್ರಕಾಶನದ **'ಶ್ರೀವಾದಿರಾಜದರ್ಶನ'** ಹಾಗೂ **'ಶ್ರೀವಾದಿರಾಜಕೃತಿಮಂಜರೀ'** ಎಂಬ ಕೃತಿಗಳಲ್ಲಿ ಕಾಣಬಹುದು.

೨. ಇವರ ಸಾಕ್ಷಾಚ್ಛಿಷ್ಯರಾದ ಶ್ರೀರಘುನಾಥಾಚಾರ್ಯರ **'ವೃತ್ತರತ್ನಸಂಗ್ರಹ'** (೩. ಪ್ರಬಂಧಗಳು - ೧೮೭ ಶ್ಲೋಕಗಳು) ಎಂಬ ಕೃತಿಯು ಇವರ ಜೀವನ ಮತ್ತು ಸಾಧನೆಗಳ ಬಗ್ಗೆ ಸಾಕಷ್ಟು ವಿವರಗಳನ್ನು ಒದಗಿಸುವ ಅಪೂರ್ವಕೃತಿ. ಅನಂತರದ ಶ್ರೀರಾಮಚಂದ್ರಾಚಾರ್ಯರೆಂಬವರ **'ಶ್ರೀವಾದಿರಾಜಗುರುವರಚರಿತಾ-ಮೃತ'** (೯ ಬಿಂದುಗಳು, ೪೩೮ ಶ್ಲೋಕಗಳು) ಮತ್ತು ಶ್ರೀಷಟ್ಟುರಾಚಾರ್ಯರ **ಶ್ರೀವಾದಿರಾಜಗುಣರತ್ನ-ಮಾಲಾ** (೧೧ ವಿಕಾಸಗಳು ಮತ್ತು ೭೪೧ ಶ್ಲೋಕಗಳು) ಕೃತಿಗಳಲ್ಲೂ ಶ್ರೀವಾದಿರಾಜರ ಬಗ್ಗೆ ಅನೇಕ ಉಪಯುಕ್ತ ವಿವರಗಳು ಸಂಕಲಿತವಾಗಿವೆ. ಅಲ್ಲದೆ ಇವರ ಬಗ್ಗೆ ಶ್ರೀವೇದವೇದ್ಯರು, ಶ್ರೀವೇದನಿಧಿಗಳು, ಶ್ರೀವಾದಿವಂದ್ಯರು, ಶ್ರೀಸತ್ಯಧರ್ಮರು ಮೊದಲಾದ ಮಹನೀಯರು ರಚಿಸಿರುವ ಸ್ತೋತ್ರಗಳಲ್ಲೂ, ಇವರ ಕಾವ್ಯಕೃತಿಗಳ ಪ್ರಮುಖ ವ್ಯಾಖ್ಯಾತೃಗಳಾದ ಶ್ರೀನಾರಾಯಣಾಚಾರ್ಯರ ಕೃತಿಗಳ ಆದ್ಯಂತಗಳಲ್ಲೂ ಶ್ರೀವಾದಿರಾಜರ ಹಿರಿಮೆಯನ್ನು ತಿಳಿಸುವ ಸಾಕಷ್ಟು ವಿವರಗಳಿವೆ (ನಮ್ಮ ಐತರೇಯಪ್ರಕಾಶನದ ಶ್ರೀವಾದಿರಾಜಸ್ತೋತ್ರಮಂಜರಿಯಲ್ಲಿ ಇವುಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಕಾಣಬಹುದು).

ಶ್ರೀಮಧ್ವಮುನಿಗಳ ಸಹೋದರರೂ ಮಹಾತಪಸ್ವಿಗಳೂ ಆದ ಶ್ರೀವಿಷ್ಣುತೀರ್ಥರನ್ನು ಪ್ರಥಮ ಪೀಠಾಧೀಶರನ್ನಾಗಿ ಹೊಂದಿದ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಮಠವು ಶ್ರೀವಾದಿರಾಜರು ಅಲಂಕರಿಸಿದ ಗುರುಪೀಠ. ಶ್ರೀವಾಗೀಶತೀರ್ಥರಿಂದ ಸನ್ಯಾಸ ಪಡೆದ ಇವರು ಆ ಪೀಠದಲ್ಲಿ ಇಪ್ಪತ್ತನೆಯವರು.

[೧]ಶ್ರೀವಿದ್ಯಾನಿಧಿಗಳು ಹಾಗೂ [೨]ಶ್ರೀವ್ಯಾಸರಾಜರಂತಹ [೩]ಮಹಾವಿದ್ವನ್ಮಣಿಗಳ ಬಳಿ ವಿವಿಧಶಾಸ್ತ್ರಗಳ ಅಧ್ಯಯನದ ಹಿನ್ನೆಲೆಯ ಇವರ ಸಾಧನೆ ಲೋಕೋತ್ತರವಾದುದು. ನೂರಾರು ಶಿಷ್ಯರಿಗೆ ಪಾಠ ಪ್ರವಚನಗಳನ್ನು ಮಾಡುತ್ತಲೇ ಅಂದಿನ ವಿಷಮರಾಜಕೀಯ ಪರಿಸ್ಥಿತಿಯಲ್ಲೂ [೪]ಸಮಗ್ರಭರತಖಂಡವನ್ನು ಸಂಚರಿಸಿ ವೈದಿಕಸಂಸ್ಕೃತಿಯ ಮಹತ್ತ್ವ, ತತ್ತ್ವಜ್ಞಾನದ ಆವಶ್ಯಕತೆ ಮತ್ತು ವೈಷ್ಣವಸಿದ್ಧಾಂತದ ಹಿರಿಮೆಗಳನ್ನು ಪ್ರಚುರಪಡಿಸಿದ ಇವರ ಕರ್ತೃತ್ವಶಕ್ತಿ ಅದ್ಭುತವಾದುದು.

ತಪಶ್ಶಕ್ತಿ, ಮಂತ್ರಸಿದ್ಧಿ ಮತ್ತು ತತ್ತ್ವಜ್ಞಾನಗಳ ತ್ರಿವೇಣೀಸಂಗಮವಾಗಿದ್ದ ಇವರಿಗೆ ರಾಜಮಹಾರಾಜರು[೫] ತಲೆಬಾಗಿದರು. ವಿಜಯನಗರದ ಚಕ್ರವರ್ತಿ ಎನ್ನಿಸಿದ ಕೃಷ್ಣದೇವರಾಯ (೧೫೦೯-೧೫೨೯) ಮತ್ತು ಅನಂತರದ ಅಚ್ಯುತದೇವರಾಯ (೧೫೩೦-೧೫೪೨)ರು ಶ್ರೀವಾದಿರಾಜರ ಪರಮಭಕ್ತರೆನ್ನಿಸಿದ್ದರೆಂದು ಇತಿಹಾಸದಿಂದ ತಿಳಿಯುತ್ತದೆ. ಸೋದೆಯ ಅರಸಪ್ಪನಾಯಕನಂತೂ ಇವರ ಆಜ್ಞಾಧಾರಕನಾದ ಶಿಷ್ಯನೇ ಆಗಿದ್ದನು. ಪ್ರಸಂಗಾಭರಣತೀರ್ಥ, ಷಡ್ದರ್ಶನಷಣ್ಮುಖ, ಸರ್ವಜ್ಞಕಲ್ಪ, ಕವಿಕುಲತಿಲಕ ಮೊದಲಾದ ಮಹತ್ತ್ವದ ಬಿರುದುಗಳಿಂದ ಅಂದಿನ ವಿದ್ವದ್ವೃಂದ ಇವರನ್ನು ಗೌರವಿಸಿದೆ.

ಉಡುಪಿಯ ಶ್ರೀಕೃಷ್ಣಪೂಜೆಯ ಪರ್ಯಾಯವ್ಯವಸ್ಥೆಯನ್ನು ಎರಡು ತಿಂಗಳುಗಳಿಂದ ಎರಡು ವರ್ಷಗಳಿಗೆ ಬದಲಾಯಿಸಿದ್ದು ಇವರ ಮಹತ್ತ್ವದ ಸಾಧನೆಗಳಲ್ಲೊಂದು. ಇವರಿಗಿಂತ ಇವರ ಶಿಷ್ಯರಾದ ಶ್ರೀವೇದವೇದ್ಯತೀರ್ಥರೇ ಹೆಚ್ಚು ವೃದ್ಧಾಪ್ಯವನ್ನು ಹೊಂದಿದಾಗ ಅವರ ಅನುಕೂಲಕ್ಕಾಗಿ ತಮ್ಮ ಒಂದು ಪರ್ಯಾಯವನ್ನೇ ಅವರಿಗಾಗಿ ಬಿಟ್ಟುಕೊಟ್ಟು, ಉಡುಪಿಯ ಪ್ರತಿರೂಪದಂತೆ ಸೋದೆಯಲ್ಲಿ ಶ್ರೀತ್ರಿವಿಕ್ರಮದೇವಾಲಯ, ಧವಲಗಂಗಾಸರೋವರ ಮೊದಲಾದವುಗಳನ್ನು ನಿರ್ಮಿಸಿ, ಅಲ್ಲಿಯೇ ಆ ಬಾರಿ ಪರ್ಯಾಯ ಕೈಗೊಂಡ ಪ್ರಕರಣವು ಇವರ ಅಪೂರ್ವಶಿಷ್ಯವಾತ್ಸಲ್ಯ, ಅಪ್ರತಿಮ ಔದಾರ್ಯ ಹಾಗೂ ಉಜ್ಜ್ವಲ ತಪಶ್ಶಕ್ತಿಗಳಿಗೆ ಉತ್ತಮ ನಿದರ್ಶನ.

---

೧. ಶ್ರೀವಾಗೀಶತೀರ್ಥರ ಪೂರ್ವಾಶ್ರಮದ ಬಂಧುಗಳು ; ಪೂರ್ವಾಶ್ರಮದ ನಾಮ ಶ್ರೀನಿವಾಸಾಚಾರ್ಯರು ; ಗೃಹಸ್ಥಾಶ್ರಮಿಗಳಾಗಿದ್ದು, ಬಳಿಕ ಶ್ರೀವಾಗೀಶತೀರ್ಥರ ಬಳಿ ಸನ್ಯಾಸ ಸ್ವೀಕರಿಸಿದವರು.

೨. ಹಯಗ್ರೀವಸ್ಯ ಮಧ್ವಸ್ಯ ವಿದ್ಯಾನಿಧಿಗುರೋರ್ಗುರೋಃ —ಯುಕ್ತಿಮಲ್ಲಿಕಾ
ವಿದ್ಯಾನಿಧೇಃ - ವಿದ್ಯಾನಿಧಿಮುನ್ಯಾದೇಃ - —ಯುಕ್ತಿಮಲ್ಲಿಕಾಟೀಕಾ

೩. ಸಂತ ಶ್ರೀವಿಜಯೀಂದ್ರ ವಾದಿರಾಜರೆಂಬ ಸಚ್ಛಿಷ್ಯರನು ಪಡೆದು —ಶ್ರೀಪುರಂದರದಾಸರು
ವಿಜಯೀಂದ್ರಸಂತ ವಾದಿರಾಜಪುರಂದರರಿಂತು ಸಚ್ಛಿಷ್ಯರನು ಪಡೆದು —ಶ್ರೀವಿಜಯದಾಸರು

೪. ಗುರ್ಜರಾದಿಷು ದೇಶೇಷು ಸ್ವಶಿಷ್ಯಾನ್ ಕೃಪಯಾ ಯುತಃ।
ತತ್ರತ್ಯಾನೇವ ಕೃತವಾನ್ ವಿಷ್ಣುದೀಕ್ಷಾಪ್ರವರ್ತಕಾನ್ ॥ —ವೃತ್ತರತ್ನಸಂಗ್ರಹ

೫. ಶ್ರೀವಾದಿರಾಜಗುರುವರಚರಿತಾಮೃತ - (೩./೩.೪,೩.೫)

ಇಂದು ಮನೆಮಾತಾಗಿರುವ ಶ್ರೀರಾಘವೇಂದ್ರಸ್ವಾಮಿಗಳಿಗಿಂತ ಮುಂಚಿತವಾಗಿಯೇ ಅಸಂಖ್ಯ ಸಾತ್ತ್ವಿಕಪವಾಡಗಳ ಮೂಲಕ ನಾಸ್ತಿಕವರ್ಗವನ್ನು ಮಣಿಸಿದ ಶ್ರೇಯಸ್ಸು ಸಹ ಇವರದೇ [೧]ಆಗಿದೆ. ಅದರಂತೆ, ಶ್ರೀರಾಘವೇಂದ್ರರಿಗಿಂತ ಮುಂಚೆಯೇ ಸಶರೀರವಾಗಿ ಬೃಂದಾವನಪ್ರವೇಶ ಮಾಡಿದ ಹಿರಿಮೆಯೂ ಇವರದಾಗಿದೆ.

ಸ್ವರ್ಣಕಾರರು, ಕೋಟೇಶ್ವರದವರು ಮೊದಲಾಗಿ ಅನೇಕರಿಗೆ ವೈಷ್ಣವದೀಕ್ಷೆಯನ್ನು ಕೊಟ್ಟು ಉದ್ಧರಿಸಿದ ಇವರ ವಿಶಾಲದೃಷ್ಟಿ ಅನನ್ಯವಾದುದು. ಪ್ರಸಿದ್ಧ ಹರಿದಾಸರಲ್ಲೊಬ್ಬರಾದ ಶ್ರೀಕನಕದಾಸರು ಶ್ರೀವಾದಿರಾಜರ ನಿಕಟವರ್ತಿಗಳೂ, ಕೃಪಾಪಾತ್ರರೂ ಆಗಿದ್ದರೆನ್ನಲು [೨]ದಾಖಲೆಗಳಿವೆ. ಶ್ರೀಕನಕದಾಸರು ವೈಷ್ಣವಮಂಡಲಿಯಲ್ಲಿ ವಿಶೇಷವಾಗಿ ಆದರಣೀಯರಾಗಲು ಶ್ರೀವ್ಯಾಸರಾಜರ ಹಾಗೂ ಶ್ರೀವಾದಿರಾಜರ ಪಾತ್ರ ಅತ್ಯಂತ ಪ್ರಮುಖವಾದುದು. ವಿಷ್ಣುಭಕ್ತಿಯೇ ಮಾನ್ಯತೆಯ ಪ್ರಮುಖ ಮಾನದಂಡ ಎಂಬ ಆಚಾರ್ಯಶ್ರೀಮಧ್ವರ ಸಂದೇಶವನ್ನು ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರು ಅನುಸರಣ ಮಾಡಿದ ರೀತಿ ಅನನ್ಯವಾದುದು.

ಜೀವನಮುದ್ದಕ್ಕೂ ಆರ್ತರ ಸಂಕಷ್ಟವನ್ನು ಸಮರ್ಥವಾಗಿ ಪರಿಹರಿಸಿದ ಇವರು ಬೃಂದಾವನವನ್ನು ಪ್ರವೇಶಿಸಿ ಶತಕಗಳೇ ಉರುಳಿದ್ದರೂ ಭಕ್ತರಿಗೆ ಇನ್ನೂ ಆಶ್ರಯದಾಯಕರಾದ ಕಲ್ಪವೃಕ್ಷ, ಕಾಮಧೇನು ಎನ್ನಿಸಿರುವರು ಎನ್ನಲು ಸೋದೆಯಲ್ಲಿ ಅವರ ಬೃಂದಾವನದ ಬಳಿ ಎಡೆಬಿಡದೆ ನೆರೆದಿರುವ ಭಕ್ತಸಮೂಹ [೩]ಸಾಕ್ಷಿಯಾಗಿದೆ.

ಧರ್ಮಸ್ಥಳ, ಸೋದೆ ಮೊದಲಾದ ಅನೇಕ ಸ್ಥಳಗಳಲ್ಲಿ ಶಿವಲಿಂಗಗಳನ್ನು ಸಹ ಪ್ರತಿಷ್ಠಾಪಿಸಿದ್ದು ಇವರ ಮತ್ತೊಂದು ಸಾಧನೆ; ಅವರ ಈ ಕಾರ್ಯ ವೈಷ್ಣವರು ಶಿವ-ದ್ವೇಷಿಗಳೆಂಬ ಕೆಲವರ ತಪ್ಪು ತಿಳುವಳಿಕೆಯನ್ನು ಸಂಪೂರ್ಣವಾಗಿ ಹೋಗಲಾಡಿಸುತ್ತದೆ. ಶೈವವೈಷ್ಣವರ ಸುಮಧುರ ಬಾಂಧವ್ಯಕ್ಕೆ ಶ್ರೀವಾದಿರಾಜರ ಕೊಡುಗೆ ಲೌಕಿಕವಾಗಿ ಅತ್ಯಂತ ಮಹತ್ತ್ವಪೂರ್ಣವಾದುದು.

ಶ್ರೀಹಯಗ್ರೀವೋಪಾಸಕರಾಗಿದ್ದ ಶ್ರೀವಾದಿರಾಜರು ವಿದ್ಯಾಪ್ರಪಂಚಕ್ಕೆ ಸಲ್ಲಿಸಿರುವ ಸೇವೆಯಂತೂ ಯಾವುದೇ ಅಳತೆಗೋಲಿನಿಂದಲೂ ಅಗ್ರಮಾನ್ಯವೇ ಆಗಿದೆ. ಜೀವನವಿಡೀ ಇವರು ನಡೆಸಿದ ಪಾಠಪ್ರವಚನಗಳಿಗೆ ಸಾಕ್ಷಿಯಾಗಿ ಇವರ ಸೋದರರೂ, ಅನಂತರ ಭಂಡಾರಕೇರಿ ಪೀಠವನ್ನಲಂಕರಿಸಿದವರೂ, ಇವರ ಯುಕ್ತಿಮಲ್ಲಿಕಾ ಮತ್ತು ಪಾಷಂಡಮತ-ಖಂಡನಗ್ರಂಥಕ್ಕೆ ಟೀಕೆ ಬರೆದವರೂ ಆದ [೪]ಶ್ರೀಸುರೋತ್ತಮತೀರ್ಥರು, ಇವರ ಉತ್ತರಾಧಿ-

---

೧. ಅವರ ಅಂತಹ ಕೆಲವು ಪ್ರಮುಖ ಪವಾಡಗಳನ್ನು ಶ್ರೀಜಗನ್ನಾಥದಾಸರು, 'ವಾದಿರಾಜ ಗುರು ವಾದಿರಾಜ' ಎಂಬ ಕೀರ್ತನೆಯಲ್ಲಿ ಸಂಗ್ರಹಿಸಿರುವರು.

೨. ತ್ರಿವಿಕ್ರಮದಾಸಸ್ಯ ದಾಸ — ಶ್ರೀಕನಕದಾಸರ ಮೋಹನತರಂಗಿಣೀ

೩. ಕಾಮಧೇನುರ್ಯಥಾ ಪೂರ್ವಂ ಸರ್ವಾಭೀಷ್ಟಫಲಪ್ರದಾ।
ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಃ ಸತಾಮ್ ॥ — ಶ್ರೀವಾದಿರಾಜಕವಚ

೪. ಶ್ರೀಸುರೋತ್ತಮತೀರ್ಥರು ಶ್ರೀವಿಷ್ಣುತೀರ್ಥರ ಸನ್ಯಾಸಪದ್ಧತಿ ಕೃತಿಗೆ ವ್ಯಾಖ್ಯಾನ ರಚಿಸಿದ್ದು, ಅದು ಉಪಲಬ್ಧವಿದೆ; ಶ್ರೀಮಧ್ವಾಚಾರ್ಯರ 'ಸದಾಚಾರಸ್ಮೃತಿ'ಗೂ ಸಹ ಟೀಕೆಯನ್ನು ರಚಿಸಿರುವರೆಂದು

ಕಾರಿಗಳಾಗಿ ಪೀಠವೇರಿದ ಶ್ರೀವೇದವೇದ್ಯತೀರ್ಥರು, ಇವರ ರುಗ್ಮಿಣೀಶವಿಜಯ, ತೀರ್ಥಪ್ರಬಂಧಗಳಿಗೆ ಉತ್ಕೃಷ್ಟವ್ಯಾಖ್ಯಾನಗಳನ್ನು ಬರೆದಿರುವ ನಾರಾಯಣಾಚಾರ್ಯರು, ಇವರ ಜೀವನಚರಿತ್ರೆಯನ್ನು ಹೃದಯಂಗಮವಾಗಿ ಚಿತ್ರಿಸಿರುವ ವೃತ್ತರತ್ನಸಂಗ್ರಹಕಾರ ರಘುನಾಥಾಚಾರ್ಯರು ಮೊದಲಾದ ಮಹನೀಯರನ್ನು ಇಲ್ಲಿ ಉಲ್ಲೇಖಿಸಬಹುದು.

ಆ ಕಾಲದಲ್ಲಿ ತುಂಬಾ ಪ್ರಬಲರಾಗಿದ್ದ ಅದ್ವೈತ, ಶೈವ ಮತ್ತು ಜೈನ ಎಂಬ ಮೂರು ಪಂಗಡಗಳ ವಾದಿಗಳನ್ನು ತುಂಬಾ ಸಮರ್ಥವಾಗಿ ಎದುರಿಸಿದ್ದು ಇವರ ಶಿಖರಪ್ರಾಯವಾದ ಸಾಧನೆ; ಅದರಿಂದಾಗಿ ಇವರಿಗೆ 'ವಾದಿರಾಜ' ಎಂಬ ಹೆಸರು ತುಂಬಾ ಅನ್ವರ್ಥವಾದುದು; ಇವರ ವಾದಕೌಶಲಕ್ಕೆ ಬೆರಗಾಗದ, ತಲೆಬಾಗದ ಪ್ರತಿವಾದಿಯೇ ಇರಲಿಲ್ಲ. ಹಯಗ್ರೀವೋಪಾಸಕರಾದ ಶ್ರೀವಾದಿರಾಜರು ಹಯವದನ ಅಂಕಿತದಿಂದ ಕನ್ನಡಭಾಷೆಯಲ್ಲಿ ಅಸಂಖ್ಯಕೃತಿಗಳನ್ನು ರಚನೆ ಮಾಡಿದಂತೆ, ಶ್ರೀಹಯಗ್ರೀವನ ವಿಶೇಷಸ್ಮರಣೆ ಪಾಮರರಿಗೂ ಎಟಕುವಂತೆ ಭೋಜನಕಾಲದಲ್ಲೂ ಸ್ಮರಣೆಗೆ ಬರುವಂತೆ ಮಾಡಿದ ಮತ್ತೊಂದು ಮಹತ್ಕಾರ್ಯ **ಹಯಗ್ರೀವ** ಎಂಬ ಭಕ್ಷ್ಯವೊಂದನ್ನೇ ಜಾರಿಗೆ ತಂದದ್ದು. ಅದು ಭಗವತ್ಸ್ಮರಣೆಗೆ ಕಾರಣವಾಗುವುದು ಮಾತ್ರವಲ್ಲದೇ ವಿಶೇಷವಾದ [1]ಜ್ಞಾನವೃದ್ಧಿಗೂ ಕಾರಣವಾಗುವಂತೆ ಮಾಡಿದರು; ಹಯಗ್ರೀವರೂಪ ವಿಶೇಷವಾಗಿ ಜ್ಞಾನಪ್ರದಾಯಕ ರೂಪವೇ ಆಗಿದೆಯಲ್ಲವೆ. ಅದರಂತೆ ಶ್ರೀಹರಿನೈವೇದ್ಯಕ್ಕೆ ವಿಹಿತವಾಗುವ **ವಾದಿರಾಜಗುಳ್ಳ** ಎಂಬ ಮತ್ತೊಂದು ಬಗೆಯ ಶಾಕವನ್ನು ಒದಗಿಸಿದ್ದು ಅವರ ಮತ್ತೊಂದು ಹಿರಿಮೆ.

ಗ್ರಂಥಕಾರರಾಗಿಯಂತೂ ಶ್ರೀವಾದಿರಾಜರ ಸಾಧನೆ ಅತ್ಯಂತ ಮಹತ್ತರವಾದುದು, ಸಂಖ್ಯೆ ಹಾಗೂ ಸತ್ತ್ವ ಎರಡರ ದೃಷ್ಟಿಯಿಂದಲೂ ಇವರ ಗ್ರಂಥರಚನೆ ಅಪಾರ ಹಾಗೂ ಅಗಾಧ. ಅಷ್ಟಮಠಗಳ ಯತಿಗಳಲ್ಲಿ ಗ್ರಂಥರಚನೆಯ ದೃಷ್ಟಿಯಲ್ಲೂ ಇವರದೇ [2]ಅಗ್ರಸ್ಥಾನ[3].

---

ಪ್ರತೀತಿ. 'ತಾವು ಯುಕ್ತಿಮಲ್ಲಿಕೆಗೆ ಬರೆದ ಟೀಕೆಯು ಮೂಲತಃ ಶ್ರೀವಾದಿರಾಜರದೇ; ಹೆಸರು ಮಾತ್ರ ತಮ್ಮದು' ಎಂಬ ಇವರ ಮಾತಿನಲ್ಲಿ ಎದ್ದು ಕಾಣುವ ಗುರುಭಕ್ತಿ ಅನ್ಯಾದೃಶವಾದುದು :

ಕೃತಿಮೇತಾಂ ಸ್ವಯಂ ಕೃತ್ವಾ ವಾದಿರಾಜೋ ಬುಧಾಗ್ರಣೀಃ।
ಖ್ಯಾಪಯಾಮಾಸ ಮನ್ನಾಮ್ನಾ ಸಂತೋ ಹ್ಯಾಶ್ರಿತವತ್ಸಲಾಃ॥ –ಯುಕ್ತಿಮಲ್ಲಿಕಾವ್ಯಾಖ್ಯಾಭಾವವಿಲಾಸಿನೀ
ಸ್ವಕೃತಗ್ರಂಥರಾಜಸ್ಯ ಯುಕ್ತಿಸಾರಸ್ಯ ವಾದಿರಾಟ್।
ಟೀಕಾಂ ಕೃತ್ವಾ ಸ್ವಯಂ ತಸ್ಯ ನಾಮ್ನಾ ಖ್ಯಾಪಿತವಾನಹೋ॥ – ವೃತ್ತರತ್ನಸಂಗ್ರಹ

೧. ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್।
ತಸ್ಯ ನಿಃಸರತೇ ವಾಣೀ ಜಹ್ನುಕನ್ಯಾಪ್ರವಾಹವತ್॥ –ಹಯಗ್ರೀವಸಂಪದಾಸ್ತೋತ್ರ

೨. ಸುಶ್ರಾವ್ಯಕಾವ್ಯಸ್ತುತಿಯುಕ್ತಿಸಾರಂ ಗಾಥಾಶ್ಚ ನಾನಾವಿಧಶಬ್ದಹೃದ್ಯಾಃ।
ಜ್ಞಾನಾದಿದಾಶ್ಚಾಪ್ರತಿಮಾಃ ಕವೀಂದ್ರಃ ಶ್ರೀವಾದಿರಾಜೋ ವ್ಯತನೋದಸಂಖ್ಯಾನ್॥
–ವೃತ್ತರತ್ನಸಂಗ್ರಹ(೩./೩.೧)

೩. ಶ್ರೀಸೋದೆಮಠದಲ್ಲಿ ಗ್ರಂಥಕಾರರೆಂದು ಪ್ರಸಿದ್ಧವಾಗಿರುವ ಇತರ ಕೆಲವು ಪೀಠಾಧೀಶರ ವಿವರ ಹೀಗಿದೆ:
i. **ಶ್ರೀವಿಷ್ಣುತೀರ್ಥರು**-(ಮಠದ ಮೂಲಪುರುಷರು) ಸಂನ್ಯಾಸಪದ್ಧತಿ, ಶ್ರವಣದ್ವಾದಶೀನಿರ್ಣಯ, ವಿಷುಪಂಚಕನಿರ್ಣಯ, ಪಂಚಸಂಸ್ಕಾರಸಂಗ್ರಹ.

'ಯುಕ್ತಿಮಲ್ಲಿಕೆ'[೧] ಯು ಇವರ ಕೃತಿರಾಜ; ಗುಣ,ಶುದ್ಧಿ,ಭೇದ, ವಿಶ್ವ ಮತ್ತು ಫಲ ಎಂಬ ಐದು ಸೌರಭಗಳಲ್ಲಿ (ಗುಣಸೌರಭ -೧೦೯೯, ಶುದ್ಧಿಸೌರಭ -೫೩.೨, ಭೇದಸೌರಭ - ೧೫೯೧, ವಿಶ್ವಸೌರಭ - ೧೨೫.೭ ಮತ್ತು ಫಲಸೌರಭ - ೧೦೦೦ - ಒಟ್ಟು ೫೩.೭೯ ಶ್ಲೋಕಗಳು) ಶ್ರೀಮದಾಚಾರ್ಯರ ಅನುವ್ಯಾಖ್ಯಾನದ ಮೇಲ್ಪಂಕ್ತಿಯಲ್ಲಿ ಬ್ರಹ್ಮಸೂತ್ರಭಾಷ್ಯದ ಪ್ರಮೇಯಗಳನ್ನು ಅನೇಕತೆರನಾದ ರೋಚಕವೂ, ಪ್ರಬಲವೂ ಆದ ಯುಕ್ತಿಗಳಿಂದ ನಿರೂಪಿಸುವ ಈ ಗ್ರಂಥವು ಸಮಗ್ರತತ್ತ್ವಶಾಸ್ತ್ರದ ಇತಿಹಾಸದಲ್ಲೇ ಅಪೂರ್ವವೆನ್ನಿಸುವ

---

ii. ಶ್ರೀವೇದಾತ್ಮತೀರ್ಥರು - ನಖಸ್ತುತಿಟೀಕಾ ಮತ್ತು ವಾಯುಸ್ತುತಿಟೀಕಾ.

iii. ಶ್ರೀರತ್ನಗರ್ಭತೀರ್ಥರು - ಮಹಾಭಾರತತಾತ್ಪರ್ಯನಿರ್ಣಯಟೀಕಾ

vi. ಶ್ರೀವೇದಾಂಗತೀರ್ಥರು - ವಾಯುಸ್ತುತಿಟೀಕಾ, ಮಹಾಭಾರತತಾತ್ಪರ್ಯನಿರ್ಣಯಟೀಕಾ, ಸುಮಧ್ವವಿಜಯಟೀಕಾ, ಪಾರಿಜಾತಹರಣಟೀಕಾ, ಗೀತಾಟಿಪ್ಪಣೀ, ಭಜಮಧ್ವೇಶಂ (ಶಂಕರಾಚಾರ್ಯರ 'ಭಜ ಗೋವಿಂದಂ' ಕೃತಿಯ ಖಂಡನರೂಪ) ಮತ್ತು ಅಣುಮಧ್ವವಿಜಯಟೀಕಾ.

v. ಶ್ರೀವೇದವೇದ್ಯತೀರ್ಥರು - ತಂತ್ರಸಾರಟೀಕಾ ಮತ್ತು ಶ್ರೀವಾದಿರಾಜಸ್ತುತಿ

vi. ಶ್ರೀವಾದಿವಂದ್ಯತೀರ್ಥರು - ಶ್ರೀವಾದಿರಾಜಾಷ್ಟಕ, ಶ್ರೀವಾದಿರಾಜಸ್ತುತಿ, ಜಯಸ್ತೋತ್ರ ಹಾಗೂ ಶ್ರೀವಾದಿರಾಜಧ್ಯಾನಪ್ರಕಾರ.

vii.ಶ್ರೀವಿಬುಧವರ್ಯತೀರ್ಥರು- ವಿಷ್ಣುಸಹಸ್ರನಾಮಟೀಕಾ(ಶ್ಲೋಕರೂಪ) ಮತ್ತು ಸುಭದ್ರಾಹರಣ ಕಾವ್ಯ.

೧. ದ್ವೈತವಾಙ್ಮಯದಲ್ಲಿ ಶ್ಲೋಕರೂಪವಾದ ವಾದಗ್ರಂಥಗಳಲ್ಲಿ ಶ್ರೀಮನ್ಮಧ್ವಾಚಾರ್ಯರ ಅನುವ್ಯಾಖ್ಯಾನ ಹಾಗೂ ಶ್ರೀವಾದಿರಾಜಸ್ವಾಮಿಗಳ ಯುಕ್ತಿಮಲ್ಲಿಕಾ ಕೃತಿಗಳು ಅತ್ಯಂತ ಅಪೂರ್ವವಾದುವು. ಅನುವ್ಯಾಖ್ಯಾನವು ಬ್ರಹ್ಮಸೂತ್ರಭಾಷ್ಯದ ವಿವರಣರೂಪದ ಕೃತಿಯಾಗಿರುವಂತೆ ಯುಕ್ತಿಮಲ್ಲಿಕೆಯು ಬ್ರಹ್ಮಸೂತ್ರಗಳ ಸಮಗ್ರ ವಿಶ್ಲೇಷಣೆಗೆ ಮೀಸಲಾಗಿರುವ ಕೃತಿ; ಎಂದರೆ ಇವರಡೂ ಸಹ ಬ್ರಹ್ಮಮೀಮಾಂಸೆಗೆ ಸಂಬಂಧಿಸಿದ ಕೃತಿಗಳು. ಅನುವ್ಯಾಖ್ಯಾನವು ಐದು ಅಕ್ಷರಗಳನ್ನು ಹೊಂದಿರುವಂತೆ ಯುಕ್ತಿಮಲ್ಲಿಕೆಯು ಸಹ ಐದು ಅಕ್ಷರಗಳನ್ನು ಹೊಂದಿರುವುದು ಗಮನಾರ್ಹ. ಒಂದು ರೀತಿಯಲ್ಲಿ ಯುಕ್ತಿಮಲ್ಲಿಕೆಯು ಅನುವ್ಯಾಖ್ಯಾನಕ್ಕೆ ವಿವರಣರೂಪವಾದ ಕೃತಿಯೂ ಆಗಿದೆ. ಯುಕ್ತಿಮಲ್ಲಿಕೆಯು ಐದು ಸೌರಭಗಳನ್ನು ಹೊಂದಿರುವದನ್ನು ಸಹ ಅದರಲ್ಲಿನ ಐದು ಅಕ್ಷರಗಳು ಸೂಚಿಸುವುದು ಮತ್ತೊಂದು ಗಮನಾರ್ಹವಾದ ಸಂಗತಿ. ಹೀಗೆ ಹೆಸರಿನಲ್ಲಿಯೇ ಸೌರಭಗಳ ಸಂಖ್ಯೆಯನ್ನು ಸೂಚಿಸಿರುವುದು ವಿಶೇಷ ಕೌಶಲ. ಸೌರಭ ಸಂಖ್ಯೆಗಳನ್ನು ಮಾತ್ರವಲ್ಲದೇ ಅವುಗಳ ಹೆಸರು ಹಾಗೂ ವಿಷಯಗಳನ್ನೂ ಸಹ ಯುಕ್ತಿಮಲ್ಲಿಕಾ ಎಂಬ ಹೆಸರೇ ಸೂಚಿಸುವಂತಿದೆ. 'ಯು,ಕ್ತಿ, ಮ,ಲ್ಲಿ,ಕಾ,' ಎಂಬ ಹೆಸರಿನಲ್ಲಿನ ಐದು ಅಕ್ಷರಗಳು ಕ್ರಮವಾಗಿ ಗುಣ ಮೊದಲಾದ ಐದು ಸೌರಭಗಳನ್ನು ಸೂಚಿಸುತ್ತವೆ ಎಂಬುದು ಗಮನಿಸಬೇಕಾದ ಸಂಗತಿ. ಯುಕ್ತಿಗಳನ್ನು ಮಲ್ಲಿಗೆ ಎಂದು ಕರೆದಿರುವಲ್ಲೂ ಸಹ ಔಚಿತ್ಯವನ್ನು ಗುರುತಿಸಬಹುದು. ಅಪೂರ್ವಪರಿಮಳ, ಅಪಾರಸಂಖ್ಯೆ ಹಾಗೂ ಅಚ್ಚಬಿಳಿಯ ಬಣ್ಣ - ಈ ಮೂರೂ ಮಲ್ಲಿಗೆಯ ವೈಶಿಷ್ಟ್ಯಗಳು. ಯುಕ್ತಿಮಲ್ಲಿಕಾ ಕೃತಿಯಲ್ಲಿ ಪ್ರಯೋಗಿಸಲ್ಪಟ್ಟಿರುವ ಅನುಮಾನಗಳು ಅಸಂಖ್ಯ, ಶಾಸ್ತ್ರಪರಿಮಳಗರ್ಭಿತ ಹಾಗೂ ಯಾವುದೇ ದೋಷವಿಲ್ಲದ ಪರಿಶುದ್ಧ ಸ್ವರೂಪದವುಗಳು ಎಂಬ ವಿಶೇಷಾಂಶವು ಇದರಿಂದ ಧ್ವನಿತವಾಗುವುದು. ಮಲ್ಲಿಗೆಯ ಬಳ್ಳಿಗಳು ಆಸರೆಯನ್ನು ತಬ್ಬಿ ಬೆಳೆಯುವಂತೆ, ಇಲ್ಲಿಯ ಯುಕ್ತಿಗಳೆಲ್ಲ ಪ್ರತ್ಯಕ್ಷ ಹಾಗೂ ಪ್ರಮಾಣಗಳ ಆಧಾರವನ್ನು ಹೊಂದಿವೆ ಎಂಬ ಮತ್ತೊಂದು ಅಂಶವೂ ಸೂಚಿತ. ನ್ಯಾಯಸುಧೆಯಲ್ಲಿನ 'ಶುದ್ಧಂ ಪ್ರಮಾಣಂ' ಎಂಬ ಶ್ರೀಜಯತೀರ್ಥರ ಮಾತಿನ ವಿಶ್ಲೇಷಣೆ ಎಂಬಂತೆ ಇಲ್ಲಿಯ ಯುಕ್ತಿಗಳು ಪರಿಪೂರ್ಣವಾಗಿವೆ ಎಂಬ ವಿಶೇಷಾರ್ಥ ಇದರಿಂದ ಧ್ವನಿತ.

ಶ್ಲೋಕರೂಪದ ಸ್ವತಂತ್ರ 'ವಾದಗ್ರಂಥ'. ಶಾಸ್ತ್ರನ್ಯಾಯ ಮತ್ತು ಲೋಕನ್ಯಾಯಗಳನ್ನು ಅಸಂಖ್ಯವಾಗಿ ಉಪಯೋಗಿಸಿಕೊಂಡು ವೈಷ್ಣವವೇದಾಂತದ ಪ್ರಮುಖ ತತ್ತ್ವಗಳನ್ನು ಜಿಜ್ಞಾಸುಗಳಿಗೆ ತುಂಬಾ ಪರಿಣಾಮಕಾರಿಯಾಗಿ ತಲುಪಿಸುವ ಇಂತಹ ಶ್ಲೋಕಾತ್ಮಕವಾದ ಸ್ವತಂತ್ರಗ್ರಂಥ ಮತ್ತೊಂದಿಲ್ಲ ಎನ್ನಬಹುದು.

ನ್ಯಾಯರತ್ನಾವಲಿ(೯೦೧ಶ್ಲೋಕಗಳು), ಹರಿಭಕ್ತಿಲತಾ (೩೯೪ಶ್ಲೋಕಗಳು), ಶ್ರುತಿತತ್ತ್ವಪ್ರಕಾಶಿಕಾ(೫೦೬ಶ್ಲೋಕಗಳು), ಏಕಾದಶೀನಿರ್ಣಯ(೫೫ಶ್ಲೋಕಗಳು) ಮತ್ತು ಪಾಷಂಡ-ಮತಖಂಡನ (೧೨೯ಶ್ಲೋಕಗಳು) ಇವು ಅವರ ಇತರ ಪದ್ಯರೂಪದ ಪ್ರಮುಖ ಶಾಸ್ತ್ರಗ್ರಂಥಗಳು[1].

ನ್ಯಾಯಸುಧಾಗುರ್ವರ್ಥದೀಪಿಕಾ(೬೦೦೦ಗ್ರಂಥಗಳು), ತತ್ತ್ವಪ್ರಕಾಶಿಕಾಗುರ್ವರ್ಥ-ದೀಪಿಕಾ (೩೫೦೦ಗ್ರಂಥಗಳು), ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕಾ ಮತ್ತು ಮಹಾಭಾರತಲಕ್ಷಾಲಂಕಾರ; ಇವು ಇವರ ಪ್ರಮುಖ ವ್ಯಾಖ್ಯಾನಗ್ರಂಥಗಳು. ಈಶಾವಾಸ್ಯ ಹಾಗೂ ಷಟ್ಪ್ರಶ್ನೋಪನಿಷತ್‌ಗಳ ಭಾಷ್ಯಗಳಿಗೆ ರಚಿತವಾಗಿರುವ ಶ್ರೀಜಯತೀರ್ಥರ ಟೀಕೆಯ ಪ್ರಾಚೀನ ಟಿಪ್ಪಣಿಗಳು ಎಂಬ ಹಿರಿಮೆ ಇವರ ಉಪನಿಷದ್ಭಾಷ್ಯಟಿಪ್ಪಣಿಗಳ ವೈಶಿಷ್ಟ್ಯ.

ವಿವರಣವ್ರಣ(೨೫೦೦ ಗ್ರಂಥಗಳು-ಪ್ರಕಾಶಾತ್ಮಕೃತ ಪಂಚಪಾದಿಕಾವಿವರಣ ಮತ್ತು 'ತತ್ತ್ವದೀಪನ' ಎಂಬ ವ್ಯಾಖ್ಯಾನಗಳ ಖಂಡನೆ) ಮತ್ತು ಕಲ್ಪಲತಾ (ವಾದಿರಾಜಸೂರಿ ಎಂಬ ಜೈನಪಂಡಿತನ ಪ್ರಮಾಣಮಂಜರೀ ಎಂಬ ಕೃತಿಯ ಖಂಡನ) ಇವು ಇವರ ಪ್ರಮುಖ ಖಂಡನಗ್ರಂಥಗಳು.

ರುಗ್ಮಿಣೀಶವಿಜಯ (೧೯ ಸರ್ಗಗಳು - ಒಟ್ಟು ೧೨೪೧ ಶ್ಲೋಕಗಳು), ಸರಸ-ಭಾರತೀವಿಲಾಸ (೧೨ವಿಲಾಸಗಳು - ೭೦೦ ಶ್ಲೋಕಗಳು), ತೀರ್ಥಪ್ರಬಂಧ (೪ಪ್ರಬಂಧಗಳು - ೨೩೫ ಶ್ಲೋಕಗಳು) ಮತ್ತು ಕವಿಕದಂಬಕಂಠಭೂಷಾ(೧೫ ಶ್ಲೋಕಗಳು) ಇವು ಇವರ ಪ್ರಮುಖ ಕಾವ್ಯಕೃತಿಗಳು. ದಶಮಸ್ಕಂಧ ಭಾಗವತೋಕ್ತ ಶ್ರೀಕೃಷ್ಣಕಥೆಯನ್ನು ಶ್ರೀಮದಾ-ಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ ಮತ್ತು ಭಾಗವತತಾತ್ಪರ್ಯನಿರ್ಣಯ-ಗ್ರಂಥಗಳ ಹಿನ್ನೆಲೆಯಲ್ಲಿ ಅಪೂರ್ವವಾಗಿ ವರ್ಣಿಸುವ 'ರುಗ್ಮಿಣೀಶವಿಜಯ'ವು ನವರಸಭರಿತವಾದ ಒಂದು [2]ಸುಂದರಮಹಾಕಾವ್ಯ.

---

೧. ಇವರ ಪದ್ಯಕೃತಿಗಳಲ್ಲಿ ದಶಾವತಾರಸ್ತೋತ್ರ(೨)ಗಳು, ಕೃಷ್ಣಸ್ತೋತ್ರ(೭)ಗಳು, ಹಯಗ್ರೀವಸ್ತೋತ್ರ-ಗಳು(೧೨), ವ್ಯಾಸಸ್ತೋತ್ರಗಳು(೨), ನರಸಿಂಹಸ್ತೋತ್ರಗಳು(೨), ಲಕ್ಷ್ಮೀಸ್ತೋತ್ರಗಳು (೩) ಮತ್ತು ಮಧ್ವಸ್ತೋತ್ರಗಳು(೪) ಮೊದಲಾದ ಅನೇಕ ಸ್ತೋತ್ರಗಳು ಸೇರಿವೆ.

೨. ರುಗ್ಮಿಣೀಶವಿಜಯವು ನಾರಾಯಣಾಚಾರ್ಯರ ವ್ಯಾಖ್ಯಾನಸಮೇತ ನನ್ನ ಸಂಪಾದನೆಯಲ್ಲಿ ಪ್ರಕಟಿತವಾಗಿದೆ. (ಪ್ರ:ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀಸಭಾ, ತಿರುಚಾನೂರು, ೧೯೯೬); ರುಗ್ಮಿಣೀಶ-ವಿಜಯವು ಕನ್ನಡ ಅನುವಾದ ಹಾಗೂ ವಿವರಣೆಗಳ ಸಮೇತ ನಮ್ಮ ಪ್ರಕಾಶನದಿಂದ ಪ್ರಕಾಶಿತವಾಗಿದೆ.

ಇವರ ನ್ಯಾಯಸುಧಾಗುರ್ವರ್ಥದೀಪಿಕೆಯು ಇಂದು ನ್ಯಾಯಸುಧೆಗೆ ಉಪಲಬ್ಧವಿರುವ ಟಿಪ್ಪಣಿಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದು. ಅವರ ತತ್ತ್ವಪ್ರಕಾಶಿಕಾಗುರ್ವರ್ಥದೀಪಿಕೆಯು ಸಹ ಒಂದರ್ಥದಲ್ಲಿ ತತ್ತ್ವಪ್ರಕಾಶಿಕೆಗೆ ದೊರೆತಿರುವ ಅತ್ಯಂತ ಪ್ರಾಚೀನ ಟಿಪ್ಪಣಿಯಾಗಿದೆ.

ಶ್ರೀಲಕ್ಷ್ಮೀ, ಬ್ರಹ್ಮ(ವಾಯು) ಮತ್ತು ಸರಸ್ವತಿ(ಭಾರತೀ)ಯರ ಪರಶುಕ್ಲತ್ರಯವನ್ನು ನಿರೂಪಿಸುವ ಅವರ ಸರಸಭಾರತೀವಿಲಾಸವು ಒಂದರ್ಥದಲ್ಲಿ ಶ್ರೀಮದಾಚಾರ್ಯರ 'ಪರಶುಕ್ಲತ್ರಯಂ ಸ್ಮೃತಂ'(೧೮/೨೮) ಎಂಬ ಮಹಾಭಾರತತಾತ್ಪರ್ಯನಿರ್ಣಯದ ವಾಕ್ಯಕ್ಕೆ ವಿಸ್ತೃತಶ್ಲೋಕರೂಪವ್ಯಾಖ್ಯಾನದಂತಿದೆ. ಶ್ರೀವಾಯುಜೀವೋತ್ತಮತ್ವವನ್ನು ಈ ತೆರನಾಗಿ ವಿವರವಾಗಿ ವಿವೇಚಿಸಿರುವ ಮತ್ತೊಂದು ಗ್ರಂಥವೇ ವೈಷ್ಣವಸಾಹಿತ್ಯದಲ್ಲಿಲ್ಲವೆನ್ನಬಹುದು. ಇದು ಅವರೇ ಕರೆದಿರುವಂತೆ 'ಭಾರತೀಶವಿಜಯ'ವೇ ಆಗಿದ್ದು, ಮತ್ತೊಂದು ಸುಮಧ್ವ-ವಿಜಯದಂತೆ ಮಾನ್ಯವಾಗಿದೆ. ಶ್ರೀರುದ್ರದೇವರ ಅಸಾಮಂಜಸ್ಯವನ್ನು ಸಹ ವಿವರವಾಗಿ ತಿಳಿಸಿರುವುದು ಈ ಕೃತಿಯ ಮತ್ತೊಂದು ವೈಶಿಷ್ಟ್ಯ. ಅವರ 'ಹರಿಭಕ್ತಿಲತಾ'ದ ಬಹುಭಾಗವು ಇದಕ್ಕೆ ಪೂರಕರೂಪವಾಗಿದೆ ಎಂಬುದನ್ನು ಗಮನಿಸಬೇಕು.

ಇವರ ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕೆಯು ನಿಜವಾದ ಅರ್ಥದಲ್ಲಿ ನಿರ್ಣಯದ ಭಾವಪ್ರಕಾಶಿಕೆಯೇ ಆಗಿದೆ. ಕೆಲವು ಸ್ಥಳಗಳಲ್ಲಂತೂ ಅದರಲ್ಲಿಯ ವಿವರಗಳು ತಮ್ಮ ಅಪೂರ್ವತೆಯಿಂದ ಅಚ್ಚರಿಪಡಿಸುತ್ತವೆ. ತಾತ್ಪರ್ಯನಿರ್ಣಯದ ಉಪಲಬ್ಧ ಟಿಪ್ಪಣಿಗಳಲ್ಲೆಲ್ಲ ಒಂದು ವಿನೂತನಶೈಲಿಯ ಕೃತಿ ಎಂಬುದು ಇದರ ಮತ್ತೊಂದು ವೈಶಿಷ್ಟ್ಯ.

ಅವರ ಮಹಾಭಾರತಲಕ್ಷಾಲಂಕಾರವು ಇಂದು ಸಮಗ್ರಮಹಾಭಾರತಕ್ಕೆ ಉಪಲಬ್ಧವಿರುವ ವೈಷ್ಣವಪರಂಪರೆಯ ಏಕೈಕ ಮಹಾಭಾರತಟಿಪ್ಪಣಿಯಾಗಿದೆ. ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದ ಹಿನ್ನೆಲೆಯಲ್ಲಿ ಮಹಾಭಾರತದ ಶ್ಲೋಕಗಳನ್ನು ಹೇಗೆ ಅರ್ಥೈಸಬೇಕು ಎಂಬುದನ್ನು ಅರಿಯಲು 'ದಾರಿದೀಪ'ವಾಗಿರುವ ಈ ಕೃತಿ ಮಹಾಭಾರತ ವ್ಯಾಖ್ಯಾನ ಪರಂಪರೆಗೇ ಒಂದು 'ಅಲಂಕಾರ'.

ಅಪಾರಸಂಖ್ಯೆಯ ಇಂತಹ [೧]ಸಂಸ್ಕೃತಕೃತಿಗಳನ್ನಲ್ಲದೆ ಕನ್ನಡದಲ್ಲಿ ಶ್ರೀಕೃಷ್ಣಬಾಲಲೀಲೆ, ಕೇಶವನಾಮ, ಅವತಾರತ್ರಯಸುವ್ವಾಲಿ, ಭ್ರಮರಗೀತೆ, ನಾರಾಯಣಕವಚ, ವೈಕುಂಠವರ್ಣನೆ, ಲಕ್ಷ್ಮೀಶೋಭನಹಾಡು, ಗುಂಡಕ್ರಿಯೆ, ಸ್ವಪ್ನಪದ ಮೊದಲಾದ ದೀರ್ಘಪದ್ಯಕೃತಿಗಳನ್ನೂ, ನೂರಾರು ಕೀರ್ತನೆ, ಉಗಾಭೋಗ, ಸುಳಾದಿಗಳನ್ನೂ ಹಯವದನ ಎಂಬ ಅಂಕಿತದಿಂದ ರಚಿಸಿ, ಹರಿದಾಸಸಾಹಿತ್ಯವನ್ನು ಸಹ ಅಪಾರವಾಗಿ ಶ್ರೀಮಂತವನ್ನಾಗಿಸಿದ್ದಾರೆ. ಕನ್ನಡದಲ್ಲಿ ಅಪಾರಕೃತಿಗಳನ್ನು ರಚಿಸಿದ (ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರು ಎಂಬ)

---

೧. ಅವರ ಕೃತಿಗಳು ಎಂದು ಕೆಲವು ಕಡೆ ಮುದ್ರಿತವಾಗಿರುವ ಹಿತೋಪದೇಶ ಮತ್ತು ಹಯಗ್ರೀವದಂಡಕ ಕೃತಿಗಳು ವಾಸ್ತವವಾಗಿ ಕ್ರಮವಾಗಿ ಶ್ರೀಅಕ್ಷೋಭ್ಯತೀರ್ಥರು, ಮತ್ತು ಶ್ರೀಮುಷ್ಣಂ ಕೋನೇರ್ಯಾ-ಚಾರ್ಯರ ರಚನೆಗಳೆಂದು ಅನೇಕ ಆಧಾರಗಳಿಂದ ಸ್ಥಿರಪಟ್ಟಿದೆ(ನಮ್ಮ ಪ್ರಕಾಶನದ ಕನ್ನಡ ಅನುವಾದ ಸಮೇತ ಪದ್ಯಮಾಲಾ ಕೃತಿಯ ಪರಿಶಿಷ್ಟ ಹಾಗೂ ಸ್ತೋತ್ರಮಾಲಿಕಾ ಭಾಗ-೨ ಕೃತಿಗಳನ್ನು ನೋಡ-ಬಹುದು) ಮಂಗಳಾಷ್ಟಕವು ಶ್ರೀರಾಜರಾಜೇಶ್ವರತೀರ್ಥಕರ್ತೃಕ ಎಂಬುದಾಗಿಯೇ ಹೆಚ್ಚು ಪ್ರಸಿದ್ಧ.

ಪರಮಹಂಸತ್ರಯರಲ್ಲಿ ಒಬ್ಬರು ಎಂಬುದು ಇವರ ಹಿರಿಮೆ. ತುಳುಭಾಷೆಯಲ್ಲೂ ದಶಾವತಾರ-ಸ್ತವನಪರವಾದ 'ಪಾಡ್ದನ'ವೆಂಬ ಕೃತಿಗಳನ್ನು ರಚಿಸಿ ಆ ಪ್ರಾಂತದ ದಲಿತಜನಾಂಗದಲ್ಲೂ ವಿಷ್ಣುಭಕ್ತಿಯ ಪ್ರಸಾರವನ್ನು ಮಾಡಿರುವರು. ಅವುಗಳಲ್ಲಿ ಕೆಲವು ಪ್ರಕಟವಾಗಿವೆ[೧]. ಇವರು ರಚಿಸಿರುವ ವೈಕುಂಠಪಟ ಹಾಗೂ ಪಂಚೀಕರಣ ಆಟಗಳು ತತ್ತ್ವಗಳನ್ನು ಪ್ರಾಯೋಗಿಕವಾಗಿ ಅರ್ಥಮಾಡಿಕೊಳ್ಳಲು ಅನುಕೂಲಿಸುವ ಅಪೂರ್ವ ಕೃತಿಗಳು.

ಅತಿಹೆಚ್ಚಿನಸಂಖ್ಯೆಯಲ್ಲಿ ಸ್ತೋತ್ರಕೃತಿಗಳನ್ನು ಬರೆದಿರುವ ವೈಷ್ಣವಗ್ರಂಥಕಾರರೆಂಬುದು ಇವರ ಮತ್ತೊಂದು ಪ್ರಶಸ್ತಿ. 'ದಶಾವತಾರಸ್ತುತಿ', 'ಕೃಷ್ಣಾಷ್ಟಕ' ಮೊದಲಾದ ಇಂದು ಉಪ-ಲಬ್ಧವಿರುವ ನಲವತ್ತಕ್ಕೂ ಹೆಚ್ಚಿನ ಇವರ ಸ್ತೋತ್ರಕೃತಿಗಳು ಛಂದೋವೈವಿಧ್ಯ, ರಚನಾಕೌಶಲ, ಶ್ಲೇಷ, ಯಮಕ, ಅನುಪ್ರಾಸಾದಿ ಅಲಂಕಾರ ವೈಭವ, ಗೇಯತೆ, ಅರ್ಥವಿಸ್ತಾರ ಮೊದಲಾದ ಗುಣಗಳಿಂದಾಗಿ ಆ ಮಾಧ್ಯಮಕ್ಕೆ ಸಂದಿರುವ ಉತ್ಕೃಷ್ಟ ಕೊಡುಗೆಗಳಾಗಿದ್ದು, ಅವುಗಳ ಶ್ರವಣ ಪಠನಗಳು ವಿನೂತನ ಪ್ರಪಂಚವನ್ನೇ ಸೃಷ್ಟಿಸಿಬಿಡುತ್ತವೆ.

ಕಾವ್ಯದ ಮಾಧುರ್ಯ ಮತ್ತು ಶಾಸ್ತ್ರದ ಅರ್ಥಗೌರವ ಈ ಎರಡೂ ವಾದಿರಾಜರ ಕೃತಿಗಳಲ್ಲಿ ಓತಪ್ರೋತವಾಗಿವೆ. ಮನಸೆಳೆಯುವ ಸರಸಸುಂದರಯುಕ್ತಿಗಳು ಮತ್ತು ಅನುಪ್ರಾಸ ಭೂಯಿಷ್ಠವಾದ ಶೈಲಿ, ಇವು ಶ್ರೀವಾದಿರಾಜರ ಕೃತಿಗಳಲ್ಲಿ ಉದ್ದಕ್ಕೂ ಗೋಚರಿಸುವ ಅಂಶಗಳು. [೨]ಸಂಸ್ಕೃತಭಾಷೆಯನ್ನು ಶಾಸ್ತ್ರ ಕಾವ್ಯ, ಖಂಡನೆ, ಮಂಡನೆ, ಟೀಕೆ, ಟಿಪ್ಪಣಿ, ಗದ್ಯ, ಪದ್ಯ ಮೊದಲಾದ ಎಲ್ಲಾ ಮಾಧ್ಯಮಗಳಿಗೂ ಪರಿಣಾಮಕಾರಿಯಾಗಿ ಅಳವಡಿಸಿಕೊಂಡಿರುವ ಗ್ರಂಥಕಾರರಲ್ಲಿ ಆಚಾರ್ಯ ಶ್ರೀಮಧ್ವರ ಅನಂತರದ ಅಗ್ರಸ್ಥಾನ ಇವರದೇ ಆಗಿದೆ. ಸಾರ್ವಕಾಲಿಕಮಹತ್ತ್ವದ ಇವರಂಥ ಗ್ರಂಥಕಾರರು ಇತಿಹಾಸದಲ್ಲಿ ಅಪೂರ್ವ. ಅಪಾರ ಶಾಸ್ತ್ರವೈದುಷ್ಯ, ಪರಿಪೂರ್ಣಸಿದ್ಧಾಂತನಿಷ್ಠೆ ಮತ್ತು ಅಪೂರ್ವಕಾವ್ಯಪ್ರತಿಭೆಗಳೊಂದಿಗೆ ಶ್ರೀಮದಾನಂದತೀರ್ಥಭಗವತ್ಪಾದರ ಬಗ್ಗೆ ತುಂಬಿ ತುಳುಕುವ [೩]ಭಕ್ತಿಭಾವ ಇವರ ಕೃತಿಗಳಲ್ಲೆಲ್ಲ ಗೋಚರಿಸುವ ಮತ್ತೊಂದು ವಿಶಿಷ್ಟಗುಣ. ಮನಸ್ಸನ್ನು ಅರಳಿಸುವ ಕಾವ್ಯಮಾಧುರ್ಯ, ವಿಚಾರಗಳನ್ನು ಕೆರಳಿಸುವ ಯುಕ್ತಿಕೌಶಲ ಇವುಗಳನ್ನು ಹಾಸುಹೊಕ್ಕಾಗಿ ಹೊಂದಿರುವ ಇವರ ಗ್ರಂಥರಚನೆಯ ಸಿದ್ಧಿ ಅಸಾಮಾನ್ಯವಾದುದು. ಭಾಷೆ, ಶೈಲಿ, ವಿಷಯನಿರೂಪಣೆ ಮೊದಲಾದ ಅನೇಕ ದೃಷ್ಟಿಯಿಂದ ಇಷ್ಟು ಪರಿಪಕ್ವವಾದ ರಚನೆಗಳು ಜಗತ್ತಿನ ಯಾವುದೇ ಭಾಷೆಯ ಸಾಹಿತ್ಯದಲ್ಲೂ ವಿರಳವೇ ಸರಿ. ಇಂತಹ ಅನೇಕ ವೈಶಿಷ್ಟ್ಯದಿಂದಾಗಿ ಶ್ರೀವಾದಿರಾಜರು ಒಂದರ್ಥದಲ್ಲಿ ಅಭಿನವಮಧ್ವಾಚಾರ್ಯರೇ ಆಗಿರುವರು.

---

೧. 'ಸ್ವಾಪ್ನವೃಂದಾವನಾಖ್ಯಾನ' ಎಂಬ ಮತ್ತೊಂದು ಗ್ರಂಥವೂ ಇವರ ರಚನೆ ಎಂದು ಪ್ರತೀತಿ.

೨. ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಮ್ ।
ಸರಹಸ್ಯಂ ಸಪ್ರಮಾಣಂ ವಾದಿರಾಜವಚೋಽಮೃತಮ್ ॥ –ವೃತ್ತರತ್ನಸಂಗ್ರಹ

೩.. ಆನಂದತೀರ್ಥಮತಮುಜ್ಝಿತದೋಷಜಾತಂ
ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ ।
ಮಾನೌಘಶೋಭಿ ಮಮ ದುರ್ಜನಪುಂಜತೋಽಭೀ -
ರ್ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭ್ಯಃ ॥ – ರುಗ್ಮಿಣೀಶವಿಜಯ (೨/೬೦)

# ಶ್ರೀವಾದಿರಾಜರ ಕೃತಿಗಳು

## ೧. ಟೀಕೆಗಳು[೧]

೦೧. ಮಹಾಭಾರತಲಕ್ಷಾಲಂಕಾರ[೨]
೦೨. ಮ.ಭಾ.ತಾ.ನಿರ್ಣಯಭಾವಪ್ರಕಾಶಿಕಾ[೩]
೦೩. ತಲವಕಾರೋಪನಿಷದ್ಭಾಷ್ಯಟೀಕಾ★
೦೪. ತೈತ್ತಿರೀಯೋಪನಿಷದ್ಭಾಷ್ಯಟೀಕಾ★
೦೫. ಕಾಠಕೋಪನಿಷದ್ಭಾಷ್ಯಟೀಕಾ
೦೬. ಆಥರ್ವಣೋಪನಿಷದ್ಭಾಷ್ಯಟೀಕಾ★
೦೭. ಮಾಂಡೂಕೋಪನಿದ್ಭಾಷ್ಯಟೀಕಾ★
೦೮. ತಂತ್ರಸಾರಟೀಕಾ★
೦೯. ಸನತ್ಸುಜಾತೀಯವ್ಯಾಖ್ಯಾನ[೪]
೧೦. ಪುರುಷಸೂಕ್ತವ್ಯಾಖ್ಯಾನ

## ೨. ಟಿಪ್ಪಣಿಗಳು

೧. ನ್ಯಾಯಸುಧಾಗುರ್ವರ್ಥದೀಪಿಕಾ★
೨. ತತ್ತ್ವಪ್ರಕಾಶಿಕಾಗುರ್ವರ್ಥದೀಪಿಕಾ★
೩. ಈಶಾವಾಸ್ಯೋಪನಿಷದ್ಭಾಷ್ಯಟಿಪ್ಪಣಿ[೫]★
೪. ಷಟ್ಪ್ರಶ್ನೋಪನಿಷದ್ಭಾಷ್ಯಟೀಕಾಟಿಪ್ಪಣಿ★
೫. ಗೀತಾಭಾಷ್ಯಟಿಪ್ಪಣಿ[೬]
೬. ಪ್ರಮಾಣಪದ್ಧತಿ ಟಿಪ್ಪಣಿ[೭]

## ೩. ಸ್ವತಂತ್ರಗ್ರಂಥಗಳು(ಶಾಸ್ತ್ರಕೃತಿಗಳು)

೦೧. ಯುಕ್ತಿಮಲ್ಲಿಕಾ(ಶ್ಲೋ. ಸಂ. ೫೩೭೯)
೦೨. ನ್ಯಾಯರತ್ನಾವಲೀ[೮] (೯೦೧)
೦೩. ಚಕ್ರಸ್ತುತಿ★ (೭೬)
೦೪. ಉಪನ್ಯಾಸರತ್ನಮಾಲಾ★

---

೧. ಶ್ರೀವಾದಿರಾಜರು ಶ್ರೀಮದಾಚಾರ್ಯರ ಕೃತಿಗಳೆಂಬುದಾಗಿ ಪ್ರಸಿದ್ಧವಿರುವ 'ಬಿಲ್ವಮಂಗಲಃ ಸಾಧುಃ' ಎಂಬ ವಾಕ್ಯಕ್ಕೂ, "ಚಂಚಲೋऽಯಂ ಮನೋಮೀನಃ ಸಮಾನೇಯೋ ಹರಿಸ್ಥಲೇ । ವಿಷಯೋದಕಸಂಚಾರೀ ಸುಯತ್ನಬಡಿಶಾಹೃತಃ॥" ಎಂಬ ಸೂಕ್ತಿಗೂ ವ್ಯಾಖ್ಯಾನ ರಚಿಸಿರುವ ವಿವರ, ಶ್ರೀಕೂಡ್ಲಿಆರ್ಯಅಕ್ಷೋಭ್ಯತೀರ್ಥ ಸಂಸ್ಥಾನದ ಪೀಠಾಧೀಶರೂ, ಶ್ರೀವ್ಯಾಸರಾಜರ ವಿದ್ಯಾಶಿಷ್ಯರೂ ಆದ ಶ್ರೀನಾರಾಯಣತೀರ್ಥರ ಕೈಬರಹದ ಟಿಪ್ಪಣಿ(ಇದರ ಪೂರ್ಣಪಾಠವನ್ನು ನಮ್ಮ ಪ್ರಕಾಶನದ 'ಶ್ರೀಜಯತೀರ್ಥರ ಮೂಲವೃಂದಾವನಸ್ಥಳ: ಮಳಖೇಡ' ಎಂಬ ಕೃತಿಯ ರಕ್ಷಾಪುಟ ೩.ರಲ್ಲಿ ಕೊಡಲಾಗಿದೆ.)ಯಲ್ಲಿ ದಾಖಲಾಗಿದೆ.
೨. ಪ್ರಕಾಶಿತ: (ಭಾಗ ೧, ೧೯೫೯, ಭಾಗ ೨,೧೯೮೫)ಶ್ರೀಸೋದಾವಾದಿರಾಜಮಠ,ಉಡುಪಿ ; ಇತ್ತೀಚೆಗೆ ಬೆಂಗಳೂರಿನ ಮಹಾಭಾರತಸಂಶೋಧನಾಪ್ರತಿಷ್ಠಾನದಿಂದ ಈ ಕೃತಿ ಸಮಗ್ರವಾಗಿ ಪ್ರಕಾಶಿತ(೨೦೦೬)ವಾಗಿದೆ.
೩. ಪ್ರಕಾಶಿತ: ಶ್ರೀವಾದಿರಾಜಗ್ರಂಥಪ್ರಕಾಶನ ಸಮಿತಿ, ಉಡುಪಿ (೧೯೫೨); ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ, ಬೆಂಗಳೂ(೧೯೯೮)
೪. ಪ್ರಕಾಶಿತ: ಟಿ.ಆರ್. ಕೃಷ್ಣಾಚಾರ್ಯ, ಕುಂಭಕೋಣಂ
೫. ಮಹಾಭಾರತಸಂಶೋಧನ ಪ್ರತಿಷ್ಠಾನದಿಂದ ಪ್ರಕಾಶಿತವಾದ ಮಹಾಭಾರತಲಕ್ಷಾಲಂಕಾರದಲ್ಲಿ ಈಶಾವಾಸ್ಯೋಪನಿಷದ್ಭಾಷ್ಯಟಿಪ್ಪಣಿ ಹಾಗೂ ಷಟ್ಪ್ರಶ್ನೋಪನಿಷದ್ಭಾಷ್ಯಟಿಪ್ಪಣಿಗಳನ್ನು ಟೀಕೆಗಳು ಎಂದು ತಪ್ಪಾಗಿ ಉಲ್ಲೇಖಿತವಾಗಿದೆ.
೬. ಅನುಪಲಬ್ಧ ಕೃತಿ
೭. ಇದರ ಉಲ್ಲೇಖ ಪ್ರಮಾಣಪದ್ಧತಿಯ ಜನಾರ್ದನಭಟ್ಟೀಯ ಟಿಪ್ಪಣಿಯಲ್ಲಿ ಬಂದಿದೆ. –
ಅತ್ರ ವಾದಿರಾಜತೀರ್ಥಾ ಆಶಂಕ್ಯ ಸಮಾದಧತೇ । ತಥಾ ಹಿ .... । (ಪ್ರತ್ಯಕ್ಷಪರಿಚ್ಛೇದ ಪು. ೯೮ )
೮. ಪ್ರಕಾಶಿತ : ಶ್ರೀಸೋದೆ ವಾದಿರಾಜಮಠ, ಉಡುಪಿ.

೦೫. ಹರಿಭಕ್ತಿಲತಾ (೩೯೪)
೦೬. ಶ್ರುತಿತತ್ತ್ವಪ್ರಕಾಶಿಕಾ ೧ (೫೦೭)
೦೭. ಸದಾಚಾರಸ್ಮೃತಿ★ (೬)
೦೮. ಸಂಕಲ್ಪಪದ್ಧತಿ★ (೬)
೦೯. ಏಕಾದಶೀನಿರ್ಣಯ★ (೫೫)
೧೦. ಭೂಗೋಲನಿರ್ಣಯ★ (೫೫)
೧೧. ತಾರತಮ್ಯ (೮೧)
೧೨. ಚಿಂತಾಖಂಡನ★ (೧೫)
೧೩. ಪಾಷಂಡಖಂಡನವ್ಯಾಸಸ್ತೋತ್ರ (೩೦)
೧೪. ಪಾಷಂಡಮತಖಂಡನ★ (೧೨೯)
೧೫. ಕಲ್ಪಲತಾ★
೧೬. ವಿವರಣವ್ರಣ★
೧೭. ಶಕುನಮಾಲಾ[೧]
೧೮. ಮುಹೂರ್ತರಾಜ[೪]
೧೯. ಮಾಧ್ವವಾಗ್ವಜ್ರಾವಲಿ[೧]
೨೦. ಸಂಸ್ಕೃತ(ಬ್ರಹ್ಮ)ಸೂತ್ರಾರ್ಥ
೨೧. ನಯಸಿದ್ಧಾಂತಸಂಗ್ರಹ[೨]
೨೨. ಅಧಿಕರಣನಾಮಾವಲಿ★
೨೩. ಶ್ರೀಮದ್ಭಾಗವತಾನುಕ್ರಮಣಿಕಾ[೩] (೧೧೮)
೨೪. ಪೂಜಾಕಲ್ಪ[೪]
೨೫. ವಾಯುಸ್ತುತಿಪುರಶ್ಚರಣವಿಧಿ[೪]

## ೪. ಸ್ವತಂತ್ರಗ್ರಂಥಗಳು (ಕಾವ್ಯಗಳು)

೧. ರುಗ್ಮಿಣೀಶವಿಜಯ[೫] (೧೨೪೧)
೨. ಸರಸಭಾರತೀವಿಲಾಸ[೬] (೭೦೦)
೩. ತೀರ್ಥಪ್ರಬಂಧ (೨೧೫)
೪. ಕವಿಕದಂಬಕಂಠಭೂಷಾ (೧೫)
೫. ಭಾಗವತಸಂಗ್ರಹ[೭]

## ೫. ಸ್ವತಂತ್ರಗ್ರಂಥಗಳು(ಸ್ತೋತ್ರಗಳು)

೦೧. ರಮೇಶಸ್ತುತಿ (೪)
೦೨. ವಿಷ್ಣುಸ್ತುತಿ (೯)
೦೩. ದಶಾವತಾರಸ್ತೋತ್ರ (೯)
೦೪. ದಶಾವತಾರಸ್ತುತಿ (೩೪)
೦೫. ಚತುರ್ವಿಂಶತಿ ಮೂರ್ತಿಸ್ತೋತ್ರ (೮)
೦೬. ವರಾಹಹಯವದನ ಸ್ತೋತ್ರ(೬)
೦೭. ವರಾಹಪಂಚಕ (೫)
೦೮. ನರಹರ್ಯಷ್ಟಕ (೯)

---

೧. ಹಸ್ತಪ್ರತಿ : ಶ್ರೀಜಯತೀರ್ಥಸಂಸ್ಕೃತಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ ;

೨. ಪ್ರಕಾಶಿತ: ಚಿಕ್ಕೇರೂರು ಗೋವಿಂದಾಚಾರ್ಯರು, ಹರಪನಹಳ್ಳಿ

೩. ಪ್ರಕಾಶಿತ: ಅನೇಕ ಕಡೆಗಳಲ್ಲಿ ಪ್ರಕಾಶಿತ.

೪. ಪ್ರಕಾಶಿತ: ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ (೨೦೧೦), ಬೆಂಗಳೂರು.

೫. ಇದು ಶ್ರೀನಾರಾಯಣಾಚಾರ್ಯರ ಸಂಸ್ಕೃತವ್ಯಾಖ್ಯಾನದೊಂದಿಗೆ ನನ್ನಿಂದ ಸಂಪಾದಿತವಾಗಿ ತಿರುಚಾನೂರಿನ ಶ್ರೀಮನ್ಮಧ್ವ ಸಿದ್ಧಾಂತೋನ್ನಾಹಿನೀಸಭಾದಿಂದ ಪ್ರಕಾಶಿತವಾಗಿದೆ(೧೯೯೦); ಇದರ ಪರಿಷ್ಕೃತ, ವಿಸ್ತೃತ ಆವೃತ್ತಿ ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದಿಂದ ಪ್ರಕಾಶಿತ(೨೦೧೫).

★ ಪ್ರಕಾಶಿತ: ಶ್ರೀವಾದಿರಾಜಗ್ರಂಥಪ್ರಕಾಶನ ಸಮಿತಿ, ಉಡುಪಿ.

೬. ಇದು ನನ್ನಿಂದ ಸಂಪಾದಿತವಾಗಿ ತಿರುಚಾನೂರಿನ ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀಸಭಾದಿಂದ ಪ್ರಕಾಶಿತವಾಗಿದೆ.

೭. ಇದರ ಹಸ್ತಪ್ರತಿಯು ಉಡುಪಿ ಶ್ರೀಸೋದೆಮಠದ ಗ್ರಂಥಾಗಾರದಲ್ಲಿದೆ :
ಶ್ರೀಭಾಗವತದುಗ್ಧಾಬ್ಧೇರುದ್ಧೃತಂ ಸಂಗ್ರಹಾಮೃತಮ್ ।
ವಾದಿರಾಜಾಖ್ಯಯತಿನಾ ಮಾಧ್ವಭೂದೇವತೃಪ್ತಯೇ ॥– ಎಂಬುದು ಈ ಗ್ರಂಥದ ಅಂತಿಮ ಶ್ಲೋಕ.

೦೯. ತ್ರಿವಿಕ್ರಮಸ್ತೋತ್ರ (೧೮)
೧೦. ಶ್ರೀರಾಮದಶಕ (೨೪)
೧೧. ಶ್ರೀರಾಮಪಂಚಕ (೬)
೧೨. ಶ್ರೀರಾಮಕವಚ (೧೧)
೧೩. ರೂಪ್ಯಪೀಠಕೃಷ್ಣಸ್ತುತಿ (೯)
೧೪. ಶ್ರೀಕೃಷ್ಣಸ್ತವ (೯)
೧೫. ಶ್ರೀಕೃಷ್ಣಸ್ತುತಿ (೯)
೧೬. ಅಷ್ಟಮಹಿಷೀಕೃತಕೃಷ್ಣಸ್ತುತಿ (೯)
೧೭. ಶ್ರೀಕೃಷ್ಣಸ್ತೋತ್ರ (೯)
೧೮. ಶ್ರೀಕೃಷ್ಣ ಅಪಾದಸ್ತೋತ್ರ (೧೧)
೧೯. ಹರ್ಯಷ್ಟಕ (೯)
೨೦. ಹಯಾಸ್ಯದಶಕ (೧೧)
೨೧. ಹಯವದನಾಷ್ಟಕ (೯)
೨೨. ಹಯಾಸ್ಯನುತಿಪಂಚಕ (೬)
೨೩. ಹಯಗ್ರೀವಧ್ಯಾನಪ್ರಕರಣ (೩೯)
೨೪. ಹಯಗ್ರೀವಸ್ತುತಿ (೧೮)
೨೫. ಹಯಗ್ರೀವಸಂಪದಾಸ್ತೋತ್ರ (೪)
೨೬. ಹಯಗ್ರೀವಸ್ತೋತ್ರ (೧೧)
೨೭. ಶ್ರೀಹಯಗ್ರೀವಸ್ತೋತ್ರ (೧೬)
೨೮. ಶ್ರೀವೇದವ್ಯಾಸಾಷ್ಟಕ (೯)
೨೯. ಶ್ರೀವ್ಯಾಸವರ್ಣನ (೨)
೩೦. ವೇಂಕಟೇಶಸ್ತುತಿಃ (೨)
೩೧. ವೇಂಕಟೇಶಮಂಗಲಾಷ್ಟಕ (೯)
೩೨. ಅಕ್ಷಪಂಚಕ (೬)
೩೩. ಉಕ್ತಿಪ್ರತ್ಯುಕ್ತಿಸ್ತೋತ್ರ (೩)
೩೪. ಧೀಶುದ್ಧಿಸ್ತೋತ್ರ (೧೨)
೩೫. ಪ್ರಾರ್ಥನಾದಶಕ (೧೨)
೩೬. ದೇವತಾಹ್ವಾನಪ್ರಕಾರ(ಗದ್ಯ)*
೩೭. ಶ್ಲೋಕತ್ರಯ(ನೈವೇದ್ಯವಿಧಿ)(೪)
೩೮. ಪರಮಸ್ತುತಿ (೯)
೩೯. ಋಣಮೋಚನಸ್ತೋತ್ರ (೯)
೪೦. ಸ್ವಪ್ನಪದ್ಯ (೧)
೪೧. ಸಪ್ತರಾತ್ರೋತ್ಸವಪ್ರಕಾರ (೨೩)
೪೨. ಅಭಯಸಂಸ್ತವ (೧೩)
೪೩. ಶ್ರೀಶ್ರೀಶಗುಣದರ್ಪಣ (೧೯)
೪೪. ಲಕ್ಷ್ಮ್ಯಾರ್ಯಾವೃತ್ತ (೧೩)
೪೫. ದುರ್ಗಾಸ್ತವ (೧೫)
೪೬. ಅವತಾರತ್ರಯಸ್ತೋತ್ರ (೩)
೪೭. ಮಧ್ವಾಷ್ಟಕ (೯)
೪೮. ವಾಯುಸ್ತುತಿ (೧೫)
೪೯. ಮಧ್ವಮುನಿಪ್ರತಾಪಾಷ್ಟಕ (೯)
೫೦. ನವಗ್ರಹಸ್ತೋತ್ರ (೫)
೫೧. ಶ್ರೀಪಾದರಾಜಷಟ್ಕ (೯)
೫೨. ಸಹಸ್ರಾರಸ್ತುತಿ(ಚಕ್ರಸ್ತುತಿ)(೧೩)
೫೩. ಕುರುಸ್ತುತಿ (೧೫)
೫೪. ಹರಿಭಕ್ತ್ಯಷ್ಟಕ (೯)
೫೫. ಶ್ರೀಕೃಷ್ಣರಾಮಾವತಾರಚರಿತರತ್ನಸಂಗ್ರಹ
೫೬. ಶ್ರೀವೇಂಕಟೇಶಸ್ತೋತ್ರ
೫೭. ಶ್ರೀವೇಂಕಟೇಶ ಮಂಗಳಾಷ್ಟಕ-೨
೫೮. ಶ್ರೀಪೂರ್ಣಪ್ರಜ್ಞಗ್ರಂಥಮಾಲಿಕಾ[1]

## ೬. ಸ್ವತಂತ್ರಕೃತಿಗಳು(ಕನ್ನಡ ಕೃತಿಗಳು)

೦೧. ವೈಕುಂಠವರ್ಣನೆ
೦೨. ಲಕ್ಷ್ಮೀಶೋಭನಪದ
೦೭. ನೇವೇದ್ಯಪ್ರಕರಣ
೦೮. ಅವತಾರತ್ರಯಸುವಾಲಿ

---

೧. ಶ್ರೀವಾದಿರಾಜರಿಂದ ರಚಿತವಾದ ಈ ಎರಡು ಕೃತಿಗಳು ನನ್ನ ಸಂಗ್ರಹ (ಶ್ರೀಜಯತೀರ್ಥ ಸಂಸ್ಕೃ ಹಸ್ತಲಿಖಿತ ಗ್ರಂಥಾಲಯ ವ್ಯಾಸನಕೆರೆ)ದಲ್ಲಿ ಇತ್ತೀಚೆಗೆ ದೊರೆತಿವೆ.

* ಇದು ನಮ್ಮ ಪ್ರಕಾಶನದ 'ಪೂಜಾಕಲ್ಪ' ಎಂಬ ಕೃತಿಯಲ್ಲೂ, 'ಸ್ತೋತ್ರಮಾಲಿಕಾ ಭಾಗ-೨ ಕೃತಿಯಲ್ಲೂ ಪ್ರಕಾಶಿತವಾಗಿವೆ.

೨. ಈ ಶ್ರೀವೇಂಕಟೇಶಮಂಗಳಾಷ್ಟಕ ಹಾಗೂ ಶ್ರೀಪೂರ್ಣಪ್ರಜ್ಞಗ್ರಂಥಮಾಲಿಕಾ ಕೃತಿಗಳು ನಮ್ಮ ಪ್ರಕಾಶನದ 'ಪೂಜಾಕಲ್ಪ' ಎಂಬ ಕೃತಿಯಲ್ಲೂ, 'ಸ್ತೋತ್ರಮಾಲಿಕಾ ಭಾಗ-೨' ಕೃತಿಯಲ್ಲೂ ಪ್ರಕಾಶಿತವಾಗಿವೆ.

೦೩. ಸ್ವಪ್ನಪದ
೦೪. ಗುಂಡಕ್ರಿಯೆ
೦೫. ಭ್ರಮರಗೀತೆ
೦೬. ನಮಸ್ಕಾರಸ್ತೋತ್ರ
೦೯. ನೂರಾರು ದೇವರನಾಮಗಳು
೧೦. ಉಗಾಭೋಗಗಳು
೧೧. ಸುಳಾದಿಗಳು
೧೨. ರಾಗಮಾಲಿಕೆ[1]

ಯುಕ್ತಿವೈಭವದ ದೃಷ್ಟಿಯಿಂದ ಅವರ ಸಕಲಕೃತಿಗಳೂ ಯುಕ್ತಿಮಲ್ಲಿಕೆಗಳಾಗಿವೆ. ಶೈಲಿಯ ರಮ್ಯತೆಯಿಂದ 'ಸರಸಭಾರತೀವಿಲಾಸ'ಗಳಾಗಿವೆ; ಕಾವ್ಯದ ದೃಷ್ಟಿಯಿಂದ ರುಗ್ಮಿಣೀಶ-ವಿಜಯವಾಗಿವೆ; ವ್ಯಾಖ್ಯಾನಕೌಶಲದ ದೃಷ್ಟಿಯಿಂದ 'ಗುರ್ವರ್ಥದೀಪಿಕೆ'ಗಳಾಗಿವೆ; ಮೂಲ-ಗ್ರಂಥಗಳ 'ಭಾವಪ್ರಕಾಶಿಕೆ'ಗಳಾಗಿವೆ. ಒಟ್ಟಾಗಿ ಮಹಾಭಾರತಾದಿ ಮೂಲಗ್ರಂಥಗಳಿಗೆ ಅಪೂರ್ವ 'ಅಲಂಕಾರ' ಪೂಜೆಯಾಗಿವೆ; ಪರಮತವಿಮರ್ಶೆಯ ದೃಷ್ಟಿಯಿಂದ 'ಪಾಷಂಡ-ಮತಖಂಡನ'ವಾಗಿವೆ; ಕವಿಕದಂಬಕ್ಕೆ 'ಕಂಠಭೂಷ'ವಾಗಿವೆ; ಹಯಗ್ರೀವ, ಕೃಷ್ಣಾದಿಭಗವ-ದ್ರೂಪಗಳ ದಿವ್ಯಸ್ತೋತ್ರವಾಗಿವೆ; 'ಲಕ್ಷ್ಮೀಸ್ತೋತ್ರ'ಗಳಾಗಿ ಸಂಪತ್ಕರವೂ 'ಮಧ್ವಸ್ತುತಿ'ಗಳಾಗಿ ತತ್ತ್ವಜ್ಞಾನಜನಕವೂ ಆಗಿವೆ. ಅವರ ಚಿಂತನೆ ತತ್ತ್ವಶಾಸ್ತ್ರವಾದರೆ, ರಚನೆ ಮಹಾಕಾವ್ಯವಾಗಿದೆ.

## ಶ್ರೀರುಗ್ಮಿಣೀಶವಿಜಯ

ರುಗ್ಮಿಣೀಶವಿಜಯವು ಒಟ್ಟು ೧೯ಸರ್ಗಗಳ ಮಹಾಕಾವ್ಯ; ಇದರಲ್ಲಿರುವ ಒಟ್ಟು ಶ್ಲೋಕಗಳ ಸಂಖ್ಯೆ[2] ೧೨೪೦; ಶ್ರೀಕೃಷ್ಣಾವತಾರದಿಂದ ಪ್ರಾರಂಭಿಸಿ ರುಗ್ಮಿಣೀಕಲ್ಯಾಣದವರೆಗಿನ ಪ್ರಸಂಗ ಇದರ ಮುಖ್ಯ ವಿಷಯ. ಶ್ರೀಮದ್ಭಾಗವತ, ವಿಷ್ಣುಪುರಾಣ, ಹರಿವಂಶ ಮೊದಲಾದ ಮೂಲಗ್ರಂಥಗಳಲ್ಲಿ ಬಂದಿರುವ ಶ್ರೀಕೃಷ್ಣಾವತಾರದ ವಿವರಗಳನ್ನು ಕಾವ್ಯಮಯವಾಗಿ ನಿರೂಪಿಸಿರುವುದು ಇದರ ವೈಶಿಷ್ಟ್ಯ. ಶ್ರೀಮನ್ಮಧ್ವಾಚಾರ್ಯರ ಮಹಾಭಾರತ-ತಾತ್ಪರ್ಯನಿರ್ಣಯ ಹಾಗೂ ಶ್ರೀಮದ್ಭಾಗವತತಾತ್ಪರ್ಯ ಗ್ರಂಥಗಳನ್ನು ಆಧರಿಸಿದ ಪ್ರಮೇಯಗಳ ನಿರೂಪಣೆ, ಆಧ್ಯಾತ್ಮಿಕ ವಿಶ್ಲೇಷಣೆ ಇದರ ವಿಶೇಷವಾದ ಹಿರಿಮೆ. ಶ್ರೀಕೃಷ್ಣಾವತಾರ, ಶ್ರೀಕೃಷ್ಣನ ಬಾಲಲೀಲೆಗಳು, ಕಂಸವಧೆ ಮೊದಲಾದ ದುಷ್ಟನಿಗ್ರಹ ಪ್ರಸಂಗಗಳು ಮೊದಲಾದ ಸಕಲ ಪ್ರಸಂಗಗಳು ಸಹ ಮೂಲತಃ ಆಧ್ಯಾತ್ಮಿಕ ಎಂಬುದನ್ನು ವಿವರಿಸುವ ಅಸಾಧಾರಣವಾದ ಸಿದ್ಧಿ ಈ ಮಹಾಕಾವ್ಯದ್ದಾಗಿದೆ. ಮೂಲಕಥೆಯ ನಿರೂಪಣೆಗೆ

---

೧. ಶ್ರೀವಾದಿರಾಜರ ಕೃತಿ ಎಂಬುದಾಗಿ ಉಡುಪಿ ಹಾಗೂ ಬೆಳಗಾವಿಗಳಿಂದ ಪ್ರಕಾಶಿತವಾಗಿರುವ 'ಶ್ರೀಕೃಷ್ಣಬಾಲಲೀಲೆ' ಎಂಬ ಕೃತಿಯು ವಾಸ್ತವವಾಗಿ ಶ್ರೀಕಂಬಾಲೂರು ರಾಮಚಂದ್ರತೀರ್ಥರ ಅನಂತರದ ಕವಿಯೊಬ್ಬರಿಂದ ರಚಿತವಾದ ಕೃತಿ ಎಂಬುದು ಅದರ ಆರಂಭದ ಭಾಗದಿಂದಲೇ ತಿಳಿದುಬರುವುದು: 'ನ್ಯಾಯಸುಧೆಯ ವ್ಯಾಖ್ಯಾನ ಮಾಡಿ ಮಾಯವಾದಿಗಳ ಗೆಲಿದ । ರಾಯ ರಾಮಚಂದ್ರರ ಚರಣಕೆರಗುವೆ॥ (ಪದ್ಯ ೪)

೨. ಸರ್ಗಕ್ರಮದಲ್ಲಿ ಶ್ಲೋಕಗಳ ಸಂಖ್ಯೆ ಹೀಗಿದೆ: ಸರ್ಗ ೧ (೬೭); ಸರ್ಗ ೨ (೬೮); ಸರ್ಗ ೩.(೬೩.); ಸರ್ಗ ೪(೭೩.); ಸರ್ಗ ೫(೫೯); ಸರ್ಗ ೬(೬೭); ಸರ್ಗ ೭(೬೫); ಸರ್ಗ ೮(೬೨); ಸರ್ಗ ೯(೬೫); ಸರ್ಗ ೧೦(೮೪); ಸರ್ಗ ೧೧(೬೫); ಸರ್ಗ ೧೨(೭೦); ಸರ್ಗ ೧೩.(೬೫); ಸರ್ಗ ೧೪(೭೦); ಸರ್ಗ ೧೫(೬೨); ಸರ್ಗ ೧೬(೬೨); ಸರ್ಗ ೧೭(೭೧); ಸರ್ಗ ೧೮(೬೧); ಸರ್ಗ ೧೯(೪೧).

ಎಲ್ಲಿಯೂ ಭಂಗ ಬರದಂತೆ ಪ್ರಮೇಯಗಳನ್ನು ಸರಳವಾಗಿ, ಮಾರ್ಮಿಕವಾಗಿ, ಭಕ್ತಿ ಹೆಚ್ಚುವಂತೆ ನಿರೂಪಿಸುವ ಇಲ್ಲಿಯ ಕೌಶಲ ಸಾಹಿತ್ಯಪ್ರಪಂಚದಲ್ಲಿಯೆ ಅಪೂರ್ವವೆನ್ನಿಸುವಂತಹುದು.

ಶ್ರೀವಾದಿರಾಜರು ಸಂಚಾರ ಕ್ರಮೇಣ ಒಮ್ಮೆ ಪೂನಾ ಪ್ರಾಂತದಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿಯ ವಿದ್ವದ್ವೃಂದ ರಾಜಾಶ್ರಯದಲ್ಲಿ ಸಭೆಯೊಂದನ್ನು ನಡೆಸಿ ಸಂಸ್ಕೃತದ ಶ್ರೇಷ್ಠ ಮಹಾಕಾವ್ಯವೊಂದಕ್ಕೆ ಆನೆ ಮೇಲೆ ಮೆರವಣಿಗೆ ಮೊದಲಾದ ವಿಶೇಷವಾದ ಗೌರವವನ್ನು ಸಲ್ಲಿಸುವ ನಿರ್ಣಯವನ್ನು ಕೈಗೊಂಡು ಅದಕ್ಕಾಗಿ [೧]ಮಾಘಕವಿಯ ಶಿಶುಪಾಲವಧೆ[೨] ಎಂಬ

---

೧. ಈ ಕೆಳಗಿನ ಶ್ಲೋಕದಿಂದಾಗಿ ಇವನು 'ಘಂಟಾಮಾಘ' ಎಂದು ಪ್ರಸಿದ್ಧನಾಗಿರುವನು:

**ಉದಯತಿ ವಿತತೋರ್ಧ್ವರಶ್ಮಿರಜ್ಜಾವಹಿಮರುಚೌ ಹಿಮಧಾಮ್ನಿ ಯಾತಿ ಚಾಸ್ತಮ್ ।**
**ವಹತಿ ಗಿರಿರಯಂ ವಿಲಂಬಿಘಂಟಾದ್ವಯಪರಿವಾರಿತವಾರಣೇಂದ್ರಲೀಲಾಮ್ ॥** (೪/೨೦)

೨. ಮಾಘನು ಸಂಸ್ಕೃತದ ಪಂಚಮಹಾಕಾವ್ಯಗಳಲ್ಲಿ ಒಂದು ಎನ್ನಿಸಿದ ಶಿಶುಪಾಲವಧ ಎಂಬ ಮಹಾಕಾವ್ಯದ ಕರ್ತೃ. ಇವನ ಕಾಲ ಸುಮಾರು ಏಳನೇ ಶತಮಾನ. ಇವನು ಸುಪ್ರಭದೇವ ಎಂಬ ಶ್ರೀವರ್ಮಲ ಎಂಬ ರಾಜನ ಸರ್ವಾಧಿಕಾರಿಯಾಗಿದ್ದ ದತ್ತಕ ಎಂಬವನ ಪುತ್ರ. ಪ್ರಾಯಃ ಗುಜರಾತ್ ಪ್ರಾಂತದವನು. ಇವನ ಹೆಸರಿನಲ್ಲಿ ಇಂದು ಉಪಲಬ್ಧವಿರುವ ಏಕಮಾತ್ರ ಕೃತಿ ಶಿಶುಪಾಲವಧ. ಈ ಕಾವ್ಯದಲ್ಲಿ ಒಟ್ಟು ೨೦ಸರ್ಗಗಳಿವೆ; ಅದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ ೧೬೫೦.. ಮಾಘನು ತನ್ನ ಈ ಕೃತಿಯನ್ನು ಭಾರವಿಯ ಮೇಲಿನ ಸ್ಪರ್ಧೆಯಿಂದ ರಚಿಸಿದ ಎಂದು ಹೇಳುವರು. ಮೇಲ್ನೋಟಕ್ಕೆ ಭಾರವಿಯ ಕಿರಾತಾರ್ಜುನೀಯ ಹಾಗೂ ಈ ಶಿಶುಪಾಲವಧ ಕೃತಿಯಲ್ಲಿ ಕಂಡುಬರುವ ಅನೇಕ ಸಾಮ್ಯಾಂಶಗಳು ಇದಕ್ಕೆ ಪೂರಕವೆನ್ನಿಸುವಂತಿವೆ. ಅನೇಕ ಶಾಸ್ತ್ರಗಳಲ್ಲಿ ಕೋವಿದನಾಗಿದ್ದ ಮಾಘನ ಶಬ್ದಸಂಪತ್ತು ಅಗಾಧವಾದುದು. 'ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ' ಎಂಬ ಮಾತು ಇದನ್ನು ಪುಷ್ಟೀಕರಿಸುವುದು. ಮುಖ್ಯವಾಗಿ ಇವನದು ಸರಸಕಾವ್ಯ ಎನ್ನುವುದಕ್ಕಿಂತ ಪಾಂಡಿತ್ಯ ಪ್ರದರ್ಶನಕ್ಕಾಗಿ ರಚಿತವಾದ ವಿದ್ವತ್ ಕಾವ್ಯ ಎನ್ನಬಹುದು. ಬಗೆಬಗೆಯ ಅಲಂಕಾರಗಳು, ಏಕಾಕ್ಷರ, ದ್ವ್ಯಕ್ಷರ, ಸರ್ವತೋಭದ್ರ, ಮುರಜ ಮುಂತಾದ ಬಂಧಗಳಲ್ಲಿ ತುಂಬಾ ನಿಪುಣನಾದವನು. 'ಮಾಘೇ ಮೇಘೇ ಗತಂ ವಯಃ' ಎಂಬ ಮಾತಿನಲ್ಲಿ ಈ ಕಾವ್ಯದ ಗಾಂಭೀರ್ಯ ಸ್ಫುಟಪಡುವುದು. ಕುರರೀ, ಉದ್ಗತಾ, ಪಂಚಕಾವಲೀ, ಮತ್ತಮಯೂರ ಮೊದಲಾದ ವಿವಿಧ ವೃತ್ತಗಳಲ್ಲಿ ಇವನು ನಿಪುಣ. 'ಲಕ್ಷ್ಮೀಪತೇಶ್ಚರಿತಕೀರ್ತನ ಮಾತ್ರಚಾರು' ಎಂಬುದು ತನ್ನ ಕಾವ್ಯದ ಬಗ್ಗೆ ಇವನ ಹೇಳಿಕೆ: 'ತಾವದ್ಭಾಭಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ। ಉದಿತೇ ತು ಪುನರ್ಮಾಘೇ ಭಾರವೇರ್ಭಾ ರವೇರಿವ ॥', 'ಮಾಘೇನ ವಿಘ್ನಿತೋತ್ಸಾಹಾಃ ನ ಕ್ರಮಂತೇ ಪದಕ್ರಮೇ । ಸ್ಮರಂತೋ ಭಾರವೇರೇವ ಕವಯಃ ಕಪಯೋ ಯಥಾ ॥', 'ಮುರಾರಿ ಪದಚಿಂತಾ ಚೇತ್ ತದಾ ಮಾಘೇ ಮತಿಂ ಕುರು । ಮುರಾರಿ ಪದಚಿಂತಾ ಚೇತ್ ತದಾ ಮಾಘೇ ಮತಿಂ ಕುರು ॥' ಮೊದಲಾದ ಮಾತುಗಳಲ್ಲಿ ಈ ಕವಿಯ ಪ್ರಶಂಸೆ ವ್ಯಕ್ತಪಡುವುದು. ಉಪಮೆ ಹಾಗೂ ಉತ್ಪ್ರೇಕ್ಷೆ ಈ ಕೃತಿಯಲ್ಲಿನ ಪ್ರಧಾನ ಅಲಂಕಾರಗಳು. ಈ ಮಾಘಕಾವ್ಯಕ್ಕೆ ಎಂಟಕ್ಕಿಂತ ಹೆಚ್ಚು ಟೀಕೆಗಳು ಉಪಲಬ್ಧವಿದ್ದು, ಅವುಗಳಲ್ಲಿ ಮಲ್ಲಿನಾಥನ ಸರ್ವಂಕಷ ಎಂಬ ಟೀಕೆ ಹೆಚ್ಚು ಪ್ರಸಿದ್ಧ.

ಇದರಲ್ಲಿ ರೈವತಕಪರ್ವತದ ವರ್ಣನೆ(೪ನೇ ಸರ್ಗ), ಷಡೃತುಗಳ ವರ್ಣನೆ(೬ನೇ ಸರ್ಗ), ಪುಷ್ಪಾಪಚಯ ವರ್ಣನೆ (೭ನೇ ಸರ್ಗ), ಜಲಕ್ರೀಡಾ ವರ್ಣನೆ(೮ನೇ ಸರ್ಗ), ಸಂಧ್ಯಾಕಾಲ, ಚಂದ್ರೋದಯ, ಪಾನಗೋಷ್ಠಿ, ರಾತ್ರಿಕ್ರೀಡಾ ಮೊದಲಾದವುಗಳ ವರ್ಣನೆ(೯,೧೦ನೇ ಸರ್ಗಗಳು),

ಮಹಾಕಾವ್ಯವನ್ನು ಆರಿಸಿಕೊಂಡಿತ್ತು. ಅದಕ್ಕೆ ಕಾಳಿದಾಸರ ಉಪಮಾ ಕೌಶಲ, ಭಾರವಿಯ ಅರ್ಥಗಾಂಭೀರ್ಯ ಹಾಗೂ ದಂಡಿ ಕವಿಯ ಪದಲಾಲಿತ್ಯ ಮೂರು ಸಹ ಅದರಲ್ಲಿ ಕಂಡುಬಂದು, 'ಕಾವ್ಯೇಷು ಮಾಘಃ' ಎಂಬ ಪ್ರಸಿದ್ಧಿಗೆ ಒಳಗಾಗಿದ್ದುದು ಕಾರಣವಾಗಿತ್ತು.[೧] ಆ ವಿಷಯ ಕಿವಿಗೆ ಬೀಳುತ್ತಲೆ ಶ್ರೀವಾದಿರಾಜಸ್ವಾಮಿಗಳು ಚಿಂತಿಸಿದರು; ಮಾಘನ ಆ ಕೃತಿಯು ಲೌಕಿಕರೀತಿಯಲ್ಲಿ ಶ್ರೇಷ್ಠವೆನ್ನಿಸಿದ್ದರೂ ನಿಜ ಅರ್ಥದಲ್ಲಿ ಮಹಾಕಾವ್ಯಕ್ಕೆ ನ್ಯಾಯ ಸಲ್ಲಿಸುವಂತಹ ಸರ್ವೋತ್ಕೃಷ್ಟವಾದ ಹಿರಿಮೆಯನ್ನೇನು ಹೊಂದಿರಲಿಲ್ಲ. ಅದರ ಮುಖ್ಯಉದ್ದೇಶ ವಿಷಯಕ್ಕೆ ನ್ಯಾಯ ಸಲ್ಲಿಸುವುದಕ್ಕಿಂತ ವಿದ್ವತ್ಪ್ರದರ್ಶನದ ಹವಣಿಕೆಯಿಂದ ಕೂಡಿತ್ತು. ಹಾಗೆ ನೋಡುವುದಾದರೆ ಸಾಹಿತ್ಯ ಪ್ರಪಂಚದ ಹೆಚ್ಚಿನ ಕೃತಿಗಳ ಉದ್ದೇಶ ಅದೇ ಆಗಿರುತ್ತದೆ. ಮಾನವನ ಜೀವನದ ಉನ್ನತಿಗೆ ಅಗತ್ಯವಾದ ಮೌಲ್ಯಗಳನ್ನು ಕಾವ್ಯದ ಮಾಧ್ಯಮದಲ್ಲಿ ನಿರೂಪಿಸುವ ಮೂಲಕ ಮನುಕುಲದ ಏಳಿಗೆಗೆ ಶ್ರಮಿಸುವ ವ್ಯಕ್ತಿತ್ವದ ಕವಿಗಳ ಸಂಖ್ಯೆ ವಿರಳಾತಿವಿರಳ ಎನ್ನಬಹುದು. ಮಹಾಭಾರತ, ರಾಮಾಯಣಗಳಂತಹ ಸಾರ್ವಕಾಲಿಕ ಹಿರಿಮೆಯ ಕೃತಿಗಳ ಯಶಸ್ಸು ಇರುವುದು ಅಂತಹ ಲೋಕಕಲ್ಯಾಣದ ಹಿನ್ನೆಲೆಯಲ್ಲಿ ಎಂಬುದನ್ನು ಮರೆಯುವಂತಿಲ್ಲ. ಅಂತಹ ಲೋಕೋತ್ತರ ಕೃತಿಗಳನ್ನು ಆಧರಿಸಿಯೂ ಹೆಚ್ಚಿನ ಕವಿಪುಂಗವರು ಹಿಡಿದದ್ದು ಮಾತ್ರ ತಮ್ಮ ವಿದ್ವತ್ತನ್ನು ಪ್ರದರ್ಶಿಸಿ ಸಮಾಜದ ಒಂದು ವರ್ಗವನ್ನು ಮೆಚ್ಚಿಸುವುದಷ್ಟೇ ಆಗಿದ್ದುದು ಒಂದು ಸಾಹಿತ್ಯಿಕ ದುರಂತ ಎನ್ನಬಹುದು. ಅದಕ್ಕೆ ಅಪವಾದವಾಗಿ ಇರುವ ಕವಿಗಳ ಸಂಖ್ಯೆ ಈ ಮುನ್ನವೇ ತಿಳಿಸಿದಂತೆ ಅತ್ಯಂತ ವಿರಳ. ಇಂತಹ ಕಾವ್ಯಗಳ ಅಧ್ಯಯನ ಆ ಕಾಲಕ್ಕೆ ರೋಚಕವೆನ್ನಿಸಿದರೂ ಮನಸ್ಸಿಗೆ ಉಲ್ಲಾಸದ ಬದಲಾಗಿ ಉದ್ವೇಗವನ್ನು ಹುಟ್ಟಿಸುವುದೇ ಹೆಚ್ಚು. ಅವುಗಳ ಅಧ್ಯಯನದಿಂದ ಭಾಷಾ ಪ್ರೌಢಿಮೆ ಲಭಿಸಬಹುದಾದರು, ಮೌಲಿಕ ಜೀವನಕ್ಕೆ ಅಗತ್ಯವಾದ ಮುಖ್ಯ ಸಂದೇಶ ಸರ್ವಥಾ ಲಭಿಸದು. ಈ ಹಿನ್ನೆಲೆಯಲ್ಲೇ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಮಾತು ವಿದ್ವಾಂಸರಲ್ಲಿ ಪ್ರಚಲಿತವಿದೆ. ಸಂಸ್ಕಾರವನ್ನು ಹುಟ್ಟಿಸುವುದಕ್ಕಿಂತ ಹೆಚ್ಚಾಗಿ ಇರುವ ಸಂಸ್ಕಾರವನ್ನು ಸಹ ನಶಿಸುವಂತೆ ಮಾಡುವ ಅಪಾಯ ಇಂತಹ ಕಾವ್ಯಗಳಿಂದ ಆಗುವುದುಂಟು; 'ಮಾಘ ಓದಿ ಮಗ ಕೆಟ್ಟ' ಎಂಬ ಗಾದೆಯ ಮಾತಿನಂತೆ ಪ್ರಸಿದ್ಧವಾಗಿರುವ ಮಾತು ಇಂತಹ ಕಾವ್ಯಗಳ ಪರಿಣಾಮಕ್ಕೆ ಹಿಡಿದ ಕನ್ನಡಿ ಎನ್ನಬಹುದು. ಈ ಹಿನ್ನೆಲೆಯಲ್ಲಿ ಶ್ರೀವಾದಿರಾಜಸ್ವಾಮಿಗಳು ಶಿಶುಪಾಲವಧಕ್ಕೆ ಆ ಗೌರವ ಸಲ್ಲುವುದು ಜಿಜ್ಞಾಸುವೃಂದಕ್ಕೆ ತಪ್ಪು ಸಂದೇಶದ ರವಾನೆಯಾಗುವುದು ಎಂದು ಭಾವಿಸಿದರು. ಅಂತಹ ಕೃತಿಯನ್ನು ಸಾರ್ವಕಾಲಿಕ ಶ್ರೇಷ್ಠಕೃತಿಗಳ ಸಾಲಿಗೆ ಸೇರಿಸುವುದನ್ನು ತಪ್ಪಿಸಲು ನಿರ್ಧರಿಸಿದರು. ಅದರಲ್ಲಿನ ದೋಷಗಳನ್ನು

---

ಪ್ರಭಾತವರ್ಣನೆ(೧೧ನೇಸರ್ಗ), ಯಮುನಾವರ್ಣನೆ(೧೨ನೇಸರ್ಗ), ರಾಜಸೂಯವರ್ಣನೆ(೧೪ನೆ ಸರ್ಗ) ಮೊದಲಾದ ವರ್ಣನೆಗಳು (ಸಾಮಾನ್ಯವಾಗಿ ಇದೇ ತೆರನಾದ ವರ್ಣನೆಗಳು ಭಾರವಿಯ ಕಿರಾತಾರ್ಜುನೀಯದಲ್ಲೂ ಕಂಡುಬರುವವು) ಆಕರ್ಷಕವೆನ್ನಿಸುವಂತಿರುವವು.

೧. ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಮ್ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

ಆವಿಷ್ಕರಿಸುವ ನೇತ್ಯಾತ್ಮಕ ಮಾರ್ಗದ ಬದಲು[೧] ನೈಜ ಹಿರಿಮೆಯ ಉತ್ಕೃಷ್ಟವಾದ ಕೃತಿಯೊಂದನ್ನು ತಾವೇ ರಚಿಸಲು ತೀರ್ಮಾನಿಸಿದರು. ಅದು ನಿಜವಾದ ಅರ್ಥದಲ್ಲಿ ಸವಾಲಿನ ಕಾರ್ಯವೇ ಆಗಿತ್ತು. ತಮ್ಮ ಎಡಬಿಡದ ನಿತ್ಯ ಕಾರ್ಯಕ್ರಮಗಳು, ವ್ಯಾಪಕವಾದ ಸಂಚಾರ, ಪಾಠ-ಪ್ರವಚನ ಮೊದಲಾದ ಕಾರ್ಯಗಳಲ್ಲಿ ಅವರಿಗೆ ಸಮಯ ಲಭಿಸುವುದು ದುರ್ಲಭ ಎಂಬುದೇ ಅದು ಸವಾಲು ಎನ್ನಿಸಲು ಮುಖ್ಯವಾದ ಕಾರಣ. ಆದರೂ, ಅವರು ಆ ವಿದ್ವತ್ಸಭೆಗೆ ಸಂದೇಶವೊಂದನ್ನು ಮುಟ್ಟಿಸಿದರು. ತಮ್ಮ ಬಳಿ ಶಿಶುಪಾಲವಧಕ್ಕಿಂತ ಮಿಗಿಲಾದ ಮಹಾಕಾವ್ಯ ಒಂದಿರುವುದಾಗಿಯೂ, ಅದನ್ನು ತಮ್ಮ ಸ್ವಕ್ಷೇತ್ರವಾದ ಉಡುಪಿಯಿಂದ ತರಿಸಿಕೊಡಲು ಒಂದು ಇಪ್ಪತ್ತು ದಿವಸಗಳಷ್ಟು ಅವಧಿ ಅಗತ್ಯವೆಂದು ಹೇಳಿದರು[೨].

ಶ್ರೀವಾದಿರಾಜರಂತಹ ವಿದ್ವದ್ವರೇಣ್ಯರ ಮಾತು ಎಂಬ ಹಿನ್ನೆಲೆಯಲ್ಲಿ ವಿದ್ವದ್ವೃಂದ ಅದನ್ನು ಅರ್ಥಮಾಡಿಕೊಳ್ಳುವ ವಿವೇಕವನ್ನು ತೋರಿತು; ಅವರ ಸೂಚನೆಯನ್ನು ಅಂಗೀಕರಿಸಿ ಆ ಮಹಾಕಾವ್ಯಕ್ಕಾಗಿ ತಾವು ಕಾಯುವುದಾಗಿ ತಿಳಿಸಿ ಆ ಸಮಾರಂಭವನ್ನು ಮುಂದೂಡಿದರು.

ಇತ್ತ ಶ್ರೀವಾದಿರಾಜರು ಕೂಡಲೇ ಆ ಕೃತಿಯ ರಚನೆಯನ್ನು ಪ್ರಾರಂಭಿಸಿಬಿಟ್ಟರು; ಇತರರಂತೆ ಎಲ್ಲ ಕಾರ್ಯಕ್ರಮಗಳನ್ನು ಬದಿಗಿರಿಸಿ ಒಂದೆಡೆ ಕುಳಿತು ಬರೆಯುವ ಕಾಯಕ ಅವರದಾಗಿರಲಿಲ್ಲ. ವೇದಾಂತ ಪ್ರಪಂಚದಲ್ಲಿ ತಲ್ಲೀನರಾಗಿದ್ದ ಅವರಿಗೆ ಆ ರೀತಿಯಲ್ಲಿ ಕೃತಿ ರಚಿಸುವ ಪ್ರವೃತ್ತಿಯೂ ಇರಲಿಲ್ಲ. ನಿತ್ಯಾಹ್ನಿಕ, ದೇವಪೂಜೆ ಮೊದಲಾದ ಯಾವ ಕಾರ್ಯಗಳಿಗೂ ಲೋಪವಾಗದಂತೆ ತಮ್ಮ ಕಾರ್ಯಚಟುವಟಿಕೆಗಳನ್ನು ಮುಂದುವರೆಸುತ್ತಲೇ ಪ್ರತಿನಿತ್ಯ ಪೂಜಾವಸಾನದ ಬಳಿಕ ಗಂಧಾಕ್ಷತೆ ಧಾರಣ ಮಾಡುವಾಗ, ಕಾವ್ಯರಚನೆಗೆ ತೊಡಗಿದರು; ಅಪೂರ್ವ ಕೃತಿ ಅವರ ಬಾಯಿಂದ ಆಶು ಕವಿತೆಯಂತೆ ಹೊರಹೊಮ್ಮತೊಡಗಿತು. ಕೂಡಲೇ ಅವರ ಆದೇಶದಂತೆ

---

೧. ಮಾಘ ಕಾವ್ಯದ 'ಕಥಾಭಾಗವು ಮೂರನೇ ಸರ್ಗದಿಂದ ಮುಗ್ಗರಿಸುತ್ತದೆ..... ಇದರಲ್ಲಿನ ರೈವತಕವರ್ಣನೆ, ಸೂರ್ಯಾಸ್ತ, ವನವಿಹಾರ- ಮುಂತಾದವುಗಳು ಮನೋಹರವಾಗಿದ್ದರೂ ಸಂದರ್ಭೋಚಿತಗಳೆನ್ನಲಾಗುವುದಿಲ್ಲ. ಶಿಶುಪಾಲನ ದೂತನು ಶ್ರೀಕೃಷ್ಣನಿಗೆ ನಿಂದಾಸ್ತುತಿಯುಕ್ತವಾದ ಶ್ಲೇಷೋಕ್ತಿಯನ್ನಾಡುತ್ತಾನೆ. ರಾಜದೂತನ ನುಡಿ ನಿಷ್ಕೃಷ್ಟವಾದ ಸಂದೇಶವನ್ನೀಯದೆ, ಎರಡರ್ಥ ಉಳ್ಳದ್ದಾಗಿದೆ' – ಸಂಸ್ಕೃತ ಭಾಷಾಶಾಸ್ತ್ರ ಮತ್ತು ಸಾಹಿತ್ಯಚರಿತ್ರೆ: ಲೇ. ಡಾ. ಕೇ. ಕೃಷ್ಣಮೂರ್ತಿ, ವಿದ್ವಾನ್ ಎನ್ ರಂಗನಾಥಶರ್ಮ, ವಿದ್ವಾನ್ ಎಚ್.ಕೆ. ಸಿದ್ಧಗಂಗಯ್ಯ; ಪ್ರ: ಕರ್ನಾಟಕ ಸರ್ಕಾರ ಪಠ್ಯಪುಸ್ತಕಗಳ ಇಲಾಖೆ, ವರ್ಷ: ೧೯೭೭, ಪು. ೩೪೦).

'ಇದರಲ್ಲಿಯ ವರ್ಣನೆಯ ಪ್ರಾರಂಭವು ಅತಿಸುಂದರವೂ, ಹೃದಯಂಗಮವೂ ಆಗಿರುವುದಾದರೂ ಹಾಗೆಯೇ ಓದುತ್ತ ಓದುತ್ತ ಮುಂದಾಗುವವನಿಗೆ ಕಥಾಸಂವಿಧಾನವೂ ರಸಮಾಧುರ್ಯವೂ ಸಂಕೋಚವಾಗಿಯೂ, ಕ್ಲಿಷ್ಟವಾಗಿಯೂ ತೋರಿಬರುವುದು. ಕಥಾಸಂದರ್ಭಕ್ಕೆ ಬೇಡದ ಎಷ್ಟೋ ವಿಷಯಗಳನ್ನು ವರ್ಣಿಸಿರುವುದರಲ್ಲಿ ತನ್ನ ಅನುಪಮ ಮೇಧಾಶಕ್ತಿಯನ್ನು ತೋರ್ಪಡಿಸಿರುವುದು ಅಲ್ಲಲ್ಲಿ ಕಂಡುಬರುವುದು' – (ಸಂಸ್ಕೃತಕವಿಚರಿತೆ ಭಾಗ-೧; ದಿ. ಎಂ.ಎನ್.ಶ್ರೀನಿವಾಸ ಐಯ್ಯಂಗಾರ್, ತೃತೀಯಾವೃತ್ತಿ-೧೯೮೬; ಪು. ೪೭೫).

೨. ಅವರು ಹಾಗೆ ಇಪ್ಪತ್ತು ದಿನದ ಅವಧಿಯನ್ನು ಕೇಳಲು ಮಾಘಕವಿಯ ಶಿಶುಪಾಲವಧವು ೨೦ಸರ್ಗಗಳ ಕೃತಿ ಆಗಿರುವುದು ಕಾರಣ ಎಂದು ತಿಳಿಯಬಹುದು.

ಅದನ್ನು ಲಿಪಿಬದ್ಧಗೊಳಿಸುವ ಕಾರ್ಯವನ್ನು ಅವರ ಶಿಷ್ಯವೃಂದ ಮಾಡತೊಡಗಿತು. ದಿನಕ್ಕೊಂದು ಸರ್ಗದಂತೆ ಕಾವ್ಯರಚನೆ ಸಾಗಿ ಹತ್ತೊಂಭತ್ತನೆಯ ದಿವಸ ಅದು ಪೂರೈಸಿತು. ಆ ಅದ್ಭುತ ಕೃತಿಯೇ ರುಗ್ಮಿಣೀಶವಿಜಯ. ಇಪ್ಪತ್ತನೆಯ ದಿನ ಅದರ ಪ್ರತಿ ವಿದ್ವನ್ಮಂಡಲಿಯ ಕೈಸೇರಿತು. ಅದಕ್ಕಾಗಿ ಕಾತರದಿಂದ ನಿರೀಕ್ಷಿಸುತ್ತಿದ್ದ ಆ ವಿದ್ವದ್ವೃಂದ ಕೂಡಲೇ ಅದರ ಅವಲೋಕನ ಕಾರ್ಯಕ್ಕೆ ತೊಡಗಿತು. ಸವಾಲಿನದಾಗಿ ರಚಿತವಾದ ಆ ಕೃತಿಯನ್ನು ಕಟು ವಿಮರ್ಶೆಗೆ ಒಳಪಡಿಸಿಯೇ ಅವಲೋಕಿಸತೊಡಗಿದರು. ಪದ, ಅರ್ಥ, ಅಲಂಕಾರ, ಛಂದಸ್ಸು, ವರ್ಣನೆ ಮೊದಲಾದ ಪ್ರತಿವಿಭಾಗದಲ್ಲೂ ಅವರದು ನಿಷ್ಠುರ ಧೋರಣೆಯೇ ಆಗಿತ್ತು. ಕಾರಣ ಮಾಘಕವಿಯ ಶಿಶು-ಪಾಲವಧದ ಪ್ರಭಾವ ಅಲ್ಲಿನ ಕಾವ್ಯಾಭ್ಯಾಸಿಗಳಲ್ಲಿ ಆಳವಾಗಿ ಬೇರೂರಿದ್ದುದೇ ಆಗಿತ್ತು. ಅದನ್ನು ಮೀರಿಸುವ ಕೃತಿ ಎಂಬ ಧ್ಯೇಯವನ್ನು ಹೊಂದಿದ್ದರಿಂದ ಅದರೊಂದಿಗೆ ತುಲನಾತ್ಮಕವಾಗಿಯೇ ಇದನ್ನು ವಿಮರ್ಶಿಸುವ ಕಾರ್ಯವನ್ನು ಅವರು ನಡೆಸಿದರು. ಅವರು ಎಷ್ಟು ಪ್ರಯತ್ನಿಸಿದರೂ ಆ ಕೃತಿಯಲ್ಲಿ ಕಂಡುಬರುತ್ತಿದ್ದುದು ಕೇವಲ ಗುಣಗಳೇ ಹೊರತು ದೋಷಗಳಲ್ಲ. ವಿದ್ವಾಂಸರ ತೆರೆದ ಮನಸ್ಸಿಗೆ ಅದರ ಪ್ರತಿಸರ್ಗದ ಕೊನೆಯಲ್ಲೂ ನಿರೂಪಿತವಾಗಿದ್ದ 'ರೋಮ್ಣಾಂ ಹರ್ಷಣಕಾರಿಣಿ.....' ಅದರ ಹಿರಿಮೆ ಮನಸ್ಸಿಗೆ ಒಪ್ಪಿತವಾಯಿತು. 'ರುಗ್ಮಿಣೀಶವಿಜಯ[೧]' ಎಂಬ ಅದರ ಹೆಸರೇ ರೋಮಾಂಚ ಹುಟ್ಟಿಸುವಂತಿತ್ತು. ಅಲ್ಲಿ ತಿಳಿಸಿರುವಂತೆ ಅದು ರೋಮಹರ್ಷಕವಾಗಿತ್ತು. ಚಿಂತಿಸಿದಷ್ಟೂ ಹೊಸಹೊಸ ಅರ್ಥಗಳನ್ನು ನೀಡುತ್ತಿತ್ತು. ಅದನ್ನು ಆಲಿಸುತ್ತಿದ್ದಂತೆಯೇ ಅವರ ಮನಸ್ಸಿನಲ್ಲಿ ವಿಚಿತ್ರವಾದ ಉಲ್ಲಾಸ ಹುಟ್ಟುತ್ತಿತ್ತು. ಶಿಶುಪಾಲವಧ ಒಂದೇ ಏಕೆ, ಆ ಕಾಲದಲ್ಲಿ ಶ್ರೇಷ್ಠ ಕಾವ್ಯಗಳೆಂದು ಅಂಗೀಕೃತವಾಗಿದ್ದ ಶ್ರೀಹರ್ಷನ ನೈಷಧಚರಿತ ಮೊದಲಾದ ಕೃತಿಗಳಲ್ಲಿ ಕಾಣದಿದ್ದ ಒಂದು ಅಪೂರ್ವತೆ ಅದರಲ್ಲಿ ಗೋಚರಿಸಿತು. ಕಾಳಿದಾಸನ ಕೃತಿಗಳಲ್ಲಿ ಮಿಕ್ಕೆಲ್ಲ ಕವಿಗಳ ಕೃತಿಗಳಿಗಿಂತ ಹೆಚ್ಚಿನ ಕಾವ್ಯಾಂಶ ತುಂಬಿರುವುದು ನಿಜ. ಆದರೆ, ರುಗ್ಮಿಣೀಶವಿಜಯದಲ್ಲಿ ಕಂಡುಬಂದ ಅಸಾಧಾರಣವೈಶಿಷ್ಟ್ಯವೆಂದರೆ ಅದರ ಅಪೂರ್ವ ಅಲೌಕಿಕತೆ. ಸಂಸ್ಕೃತ ಮಹಾಕಾವ್ಯಗಳಿಗೆ ತೀರ ಹೊಸತೆನ್ನಿಸುವ ಹಿರಿಮೆ ಅದರಲ್ಲಿ ತುಂಬಿತ್ತು. ಶ್ರೀಕೃಷ್ಣನ ವೇಣುಗಾನ, ಜಗತ್ತನ್ನು ತನ್ಮಯವಾಗಿಸಿದ್ದಂತೆ ಅವನ ಮಹಿಮೆಯ ವರ್ಣನಾರೂಪವಾದ ರುಗ್ಮಿಣೀಶವಿಜಯ ಅವರನ್ನು ತಲೆದೂಗುವಂತೆ ಮಾಡಿತ್ತು. ಮಹಾಕಾವ್ಯಕ್ಕೆ ವಿಹಿತವಾದ ಸಕಲ ಲಕ್ಷಣಗಳು ಸಹ ಅದರಲ್ಲಿ ಪೂರ್ಣವಾಗಿ ತುಂಬಿದ್ದವು. ಸರ್ಗಬಂಧ, ಮಂಗಲಾಚರಣೆ, ಉತ್ತಮಕಥಾವಸ್ತು, ಧರ್ಮಾದಿ ಪುರುಷಾರ್ಥಗಳ ನಿರೂಪಣೆ, ಲೋಕೋತ್ತರವಾದ ನಾಯಕ, ನಗರವರ್ಣನೆ, ಸಮುದ್ರವರ್ಣನೆ, ಪರ್ವತವರ್ಣನೆ, ಋತುವರ್ಣನೆ, ಚಂದ್ರೋದಯವರ್ಣನೆ, ಸೂರ್ಯೋ-ದಯವರ್ಣನೆ, ಉದ್ಯಾನವರ್ಣನೆ, ಜಲಕ್ರೀಡಾವರ್ಣನೆ, ಸುರತಾದಿಗಳವರ್ಣನೆ, ವಿಪ್ರಲಂಭ-

---

೧. ಶ್ರೀವಾದಿರಾಜರ ಈ ಕೃತಿಯ ಹೆಸರಿನಲ್ಲಿ ರುಗ್ಮಿಣೀ ಹಾಗೂ ಶ್ರೀಕೃಷ್ಣ ಇಬ್ಬರ ಹೆಸರುಗಳು ಪ್ರಸ್ತಾಪಿತವಾಗಿ ಅವರ ವಿಜಯದ ಕಥೆ, ಎಂದರೆ ಲಕ್ಷ್ಮೀನಾರಾಯಣರ ಮಾಹಾತ್ಮ್ಯ ಎಂಬ ವಿಶೇಷಾರ್ಥ ಧ್ವನಿತವಾಗಿ ಶ್ರೋತೃಗಳಿಗೆ ಜ್ಞಾನಾನಂದಕರವು, ಸಪತ್ಕರವು ಆಗುವಂತಹ ವಿಶೇಷ ಹಿರಿಮೆ ನಿರೂಪಿತವಾದರೆ, ಮಾಘನದು 'ಶಿಶುಪಾಲವಧ' ಎಂಬ ಹೆಸರಿನಲ್ಲಿ ದೈತ್ಯನಾದ ಶಿಶುಪಾಲನ ಹೆಸರು ಅದರಲ್ಲೂ ಸಹ ವಧೆ ಎನ್ನುವ ಅಮಂಗಳಕರವಾದ ಪದಗಳು ಕಂಡುಬರುವವು; ಹೀಗೆ ಹೆಸರಿನಲ್ಲಿಯೇ ಶಿಶುಪಾಲವಧವನ್ನು ಮೀರಿಸುವ ಕೃತಿ ತಮ್ಮದು ಎಂಬುದನ್ನು ಶ್ರೀವಾದಿರಾಜರು ಹಾಗೆ ತಿಳಿಸಿದ್ದು ಗಮನಾರ್ಹವೆನ್ನಿಸುವುದು.

ಶೃಂಗಾರದ ನಿರೂಪಣೆ, ಕುಮಾರೋದಯ, ಮಂತ್ರಾಲೋಚನೆ, ರಾಯಭಾರ, ಪ್ರಯಾಣ, ನಾಯಕಾಭ್ಯುದಯ, ಬಗೆಬಗೆಯ ಅಲಂಕಾರಗಳು[೧], ಮನೋಹರವಾದ ವೃತ್ತಗಳು[೨], ಲೋಕ-ರಂಜಕವಾದ ನಿರೂಪಣೆ ಮೊದಲಾದ ಕಲ್ಪೋತ್ತರ ಉಳಿಯುವಂತಹ ಶ್ರೇಷ್ಠ ಮಹಾಕಾವ್ಯದ [೩]ಲಕ್ಷಣಗಳು ಅದರಲ್ಲಿ ಕಣ್ಣಿಗೆ ರಾಚುವಂತಿದ್ದವು. ಸಂಗ್ರಹವಾಗಿ ಹೇಳುವುದಾದರೆ, ಆ ಕೃತಿ,

---

೧. ರುಗ್ಮಿಣೀಶವಿಜಯದಲ್ಲಿನ ಕೆಲವು ಅಲಂಕಾರಗಳು ಹೀಗಿವೆ:
೧.ರೂಪಕ(೧/೧); ೨.ಉತ್ಪ್ರೇಕ್ಷಾ(೧/೨); ಪರಿಣಾಮ(೧/೩.); ೪.ಸ್ವಭಾವೋಕ್ತಿ(೧/೪); ೫.ಆಶೀಃ (೧/೬); ೬.ಪರ್ಯಾಯೋಕ್ತ(೧/೭); ೭.ಕಾವ್ಯಲಿಂಗ(೧/೮); ೮.ನಿದರ್ಶನ(೧/೯); ೯. ಕ್ರಿಯಾಜಾತಿ(೧/೧೬);೧೦.ಸಂಕರ(೨/೨೪); ೧೧.ವಸ್ತುತತ್ತ್ವ(೧/೩.೫); ೧೨.ಯುಕ್ತಿ(೧/೪೭); ೧೩..ಆಕ್ಷೇಪ(೬/೫೬); ೧೪.ವಿಭಾವನ(೧/೫೭); ೧೫.ತುಲ್ಯಯೋಗಿತ್ವ(೨/೯); ಜಾತಿ(೩/೧೬); ೧೭.ವಾಕೋವಾಕ್ಯ(೩./೧೨, ೧೩.); ೧೮. ಸಂಸೃಷ್ಟಿ(೪/೨೩.); ೧೯. ವ್ಯಾಜಸ್ತುತಿ(೫/೧೨); ೨೦.ದೃಷ್ಟಾಂತ(೫/೩.೩.); ೨೧. ಪ್ರತಿವಸ್ತೂಪಮಾ(೫/೩.೭); ೨೨. ಭ್ರಾಂತಿ(೬/೧); ೨೩.. ವಿನಿಮಯ(೬/೧೮); ೨೪.ಸಮಾಸೋಕ್ತಿ(೬/೩.೩.); ೨೫.ದೀಪಕ(೬/೪೪); ೨೬. ಅತಿಶಯೋಕ್ತಿ (೭/೧೩.); ೨೮.ವ್ಯತಿರೇಕ(೧೪/೫೯); ೨೯. ಅತ್ಯುಕ್ತಿ(೧೭/೩.೧); ೩.೦. ಹೇತು(೧೮/೧).

೨. ರುಗ್ಮಿಣೀಶವಿಜಯದಲ್ಲಿನ ಕೆಲವು ವೃತ್ತಗಳು ಹೀಗಿವೆ:
೧. ಶಾರ್ದೂಲವಿಕ್ರೀಡಿತ (೧/೧); ೨. ಪಥ್ಯಾವಕ್ತ್ರ(೧/೩.); ೩.. ವಸಂತತಿಲಕಾ(೧/೫); ೪. ಇಂದ್ರವಜ್ರಾ(೧/೭); ೫.ಉಪೇಂದ್ರವಜ್ರಾ (೧/೮); ೬. ವಂಶಸ್ಥ(೨/೩.೪); ೭.ಮಾಲಿನೀ(೪/೩.); ೮. ಸ್ರಗ್ಧರಾ(೪/೩.೨); ೯.ದ್ರುತವಿಲಂಬಿತ(೪/೩.೮); ೧೦. ಮಂದಾಕ್ರಾಂತಾ(೫/೩.೪); ೧೧. ತುರಗರಯ (೬/೪೧); ೧೨. ಪ್ರಿಯವಾದಿನೀ(೮/೯); ೧೩.. ದೋಧಕ(೮/೬); ೧೪.ಸ್ರಗ್ವಿಣೀ (೮/೭); ೧೫.ಪುಷ್ಪಿತಾಗ್ರಾ(೧೦/೩.೭); ೧೬. ಅನುಷ್ಟುಪ್, ೧೭.ಆರ್ಯಾ(೯/೩.೩.); ೧೮. ಶಿಖರಿಣೀ(೧೧/೧೩.); ೧೯. ಪೃಥ್ವೀ (೧೪/೩.೭).

೩.. ಸರ್ಗಬಂಧೋ ಮಹಾಕಾವ್ಯಮುಚ್ಯತೇ ತಸ್ಯ ಲಕ್ಷಣಮ್ ।
ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾऽಪಿ ತನ್ಮುಖಮ್ ॥
ಇತಿಹಾಸಕಥೋದ್ಭೂತಮಿತರದ್ವಾ ಸದಾಶ್ರಯಮ್ ।
ಚತುರ್ವರ್ಗಫಲಾಯತ್ತಂ ಚತುರೋದಾತ್ತನಾಯಕಮ್ ।
ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ ।
ಉದ್ಯಾನಸಲಿಲಕ್ರೀಡಾಮಧುಪಾನರತೋತ್ಸವೈಃ ॥
ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ ।
ಮಂತ್ರದೂತಪ್ರಯಾಣಾಜಿನಾಯಕಾಭ್ಯುದಯೈರಪಿ ॥
ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಮ್ ।
ಸರ್ಗೈರನತಿವಿಸ್ತೀರ್ಣೈಃ ಶ್ರವ್ಯವೃತ್ತೈಃ ಸುಸಂಧಿಭಿಃ ॥
ಸರ್ವತ್ರ ಭಿನ್ನವೃತ್ತಾಂತೈರುಪೇತಂ ಲೋಕರಂಜನಮ್ ।
ಕಾವ್ಯಂ ಕಲ್ಪಾಂತರಸ್ಥಾಯಿ ಜಾಯೇತ ಸದಲಂಕೃತಿ ॥
ನ್ಯೂನಮಪ್ಯತ್ರ ಯೈಃ ಕೈಶ್ಚಿದಂಗೈಃ ಕಾವ್ಯಂ ನ ದುಷ್ಯತಿ ।
ಯದ್ಯುಪಾತ್ತೇಷು ಸಂಪತ್ತಿರಾರಾಧಯತಿ ತದ್ವಿದಃ । - ಕಾವ್ಯಾದರ್ಶ(೧/೧೪-೨೦)
ತುತೋಷ ಲೋಕಃ ಕವಿವರ್ಯವಾದಿರಾಜಾಖ್ಯವೃಕ್ಷಾದುಪಲಭ್ಯ ರಮ್ಯಮ್ ।
ಸುವರ್ಣಮಾಧುರ್ಯರಸಾದಿಭಿಶ್ಚ ಪೂರ್ಣಂ ಮಹಾಕಾವ್ಯಫಲಂ ಸುವೃತ್ತಮ್ ॥

ಅದನ್ನು ಲಿಪಿಬದ್ಧಗೊಳಿಸುವ ಕಾರ್ಯವನ್ನು ಅವರ ಶಿಷ್ಯವೃಂದ ಮಾಡತೊಡಗಿತು. ದಿನಕ್ಕೊಂದು ಸರ್ಗದಂತೆ ಕಾವ್ಯರಚನೆ ಸಾಗಿ ಹತ್ತೊಂಭತ್ತನೆಯ ದಿವಸ ಅದು ಪೂರೈಸಿತು. ಆ ಅದ್ಭುತ ಕೃತಿಯೇ ರುಗ್ಮಿಣೀಶವಿಜಯ. ಇಪ್ಪತ್ತನೆಯ ದಿನ ಅದರ ಪ್ರತಿ ವಿದ್ವನ್ಮಂಡಲಿಯ ಕೈಸೇರಿತು. ಅದಕ್ಕಾಗಿ ಕಾತರದಿಂದ ನಿರೀಕ್ಷಿಸುತ್ತಿದ್ದ ಆ ವಿದ್ವದ್ವೃಂದ ಕೂಡಲೇ ಅದರ ಅವಲೋಕನ ಕಾರ್ಯಕ್ಕೆ ತೊಡಗಿತು. ಸವಾಲಿನದಾಗಿ ರಚಿತವಾದ ಆ ಕೃತಿಯನ್ನು ಕಟು ವಿಮರ್ಶೆಗೆ ಒಳಪಡಿಸಿಯೇ ಅವಲೋಕಿಸತೊಡಗಿದರು. ಪದ, ಅರ್ಥ, ಅಲಂಕಾರ, ಛಂದಸ್ಸು, ವರ್ಣನೆ ಮೊದಲಾದ ಪ್ರತಿವಿಭಾಗದಲ್ಲೂ ಅವರದು ನಿಷ್ಠುರ ಧೋರಣೆಯೇ ಆಗಿತ್ತು. ಕಾರಣ ಮಾಘಕವಿಯ ಶಿಶು-ಪಾಲವಧದ ಪ್ರಭಾವ ಅಲ್ಲಿನ ಕಾವ್ಯಾಭ್ಯಾಸಿಗಳಲ್ಲಿ ಆಳವಾಗಿ ಬೇರೂರಿದ್ದುದೇ ಆಗಿತ್ತು. ಅದನ್ನು ಮೀರಿಸುವ ಕೃತಿ ಎಂಬ ಧ್ಯೇಯವನ್ನು ಹೊಂದಿದ್ದರಿಂದ ಅದರೊಂದಿಗೆ ತುಲನಾತ್ಮಕವಾಗಿಯೇ ಇದನ್ನು ವಿಮರ್ಶಿಸುವ ಕಾರ್ಯವನ್ನು ಅವರು ನಡೆಸಿದರು. ಅವರು ಎಷ್ಟು ಪ್ರಯತ್ನಿಸಿದರೂ ಆ ಕೃತಿಯಲ್ಲಿ ಕಂಡುಬರುತ್ತಿದ್ದುದು ಕೇವಲ ಗುಣಗಳೇ ಹೊರತು ದೋಷಗಳಲ್ಲ. ವಿದ್ವಾಂಸರ ತೆರೆದ ಮನಸ್ಸಿಗೆ ಅದರ ಪ್ರತಿಸರ್ಗದ ಕೊನೆಯಲ್ಲೂ ನಿರೂಪಿತವಾಗಿದ್ದ 'ರೋಮ್ಣಾಂ ಹರ್ಷಣಕಾರಿಣಿ.....' ಅದರ ಹಿರಿಮೆ ಮನಸ್ಸಿಗೆ ಒಪ್ಪಿತವಾಯಿತು. 'ರುಗ್ಮಿಣೀಶವಿಜಯ'[೧] ಎಂಬ ಅದರ ಹೆಸರೇ ರೋಮಾಂಚ ಹುಟ್ಟಿಸುವಂತಿತ್ತು. ಅಲ್ಲಿ ತಿಳಿಸಿರುವಂತೆ ಅದು ರೋಮಹರ್ಷಕವಾಗಿತ್ತು. ಚಿಂತಿಸಿದಷ್ಟೂ ಹೊಸಹೊಸ ಅರ್ಥಗಳನ್ನು ನೀಡುತ್ತಿತ್ತು. ಅದನ್ನು ಆಲಿಸುತ್ತಿದ್ದಂತೆಯೇ ಅವರ ಮನಸ್ಸಿನಲ್ಲಿ ವಿಚಿತ್ರವಾದ ಉಲ್ಲಾಸ ಹುಟ್ಟುತ್ತಿತ್ತು. ಶಿಶುಪಾಲವಧ ಒಂದೇ ಏಕೆ, ಆ ಕಾಲದಲ್ಲಿ ಶ್ರೇಷ್ಠ ಕಾವ್ಯಗಳೆಂದು ಅಂಗೀಕೃತವಾಗಿದ್ದ ಶ್ರೀಹರ್ಷನ ನೈಷಧಚರಿತ ಮೊದಲಾದ ಕೃತಿಗಳಲ್ಲಿ ಕಾಣದಿದ್ದ ಒಂದು ಅಪೂರ್ವತೆ ಅದರಲ್ಲಿ ಗೋಚರಿಸಿತು. ಕಾಳಿದಾಸನ ಕೃತಿಗಳಲ್ಲಿ ಮಿಕ್ಕೆಲ್ಲ ಕವಿಗಳ ಕೃತಿಗಳಿಗಿಂತ ಹೆಚ್ಚಿನ ಕಾವ್ಯಾಂಶ ತುಂಬಿರುವುದು ನಿಜ. ಆದರೆ, ರುಗ್ಮಿಣೀಶವಿಜಯದಲ್ಲಿ ಕಂಡುಬಂದ ಅಸಾಧಾರಣವೈಶಿಷ್ಟ್ಯವೆಂದರೆ ಅದರ ಅಪೂರ್ವ ಅಲೌಕಿಕತೆ. ಸಂಸ್ಕೃತ ಮಹಾಕಾವ್ಯಗಳಿಗೆ ತೀರ ಹೊಸತೆನ್ನಿಸುವ ಹಿರಿಮೆ ಅದರಲ್ಲಿ ತುಂಬಿತ್ತು. ಶ್ರೀಕೃಷ್ಣನ ವೇಣುಗಾನ, ಜಗತ್ತನ್ನು ತನ್ಮಯವಾಗಿಸಿದ್ದಂತೆ ಅವನ ಮಹಿಮೆಯ ವರ್ಣನಾರೂಪವಾದ ರುಗ್ಮಿಣೀಶವಿಜಯ ಅವರನ್ನು ತಲೆದೂಗುವಂತೆ ಮಾಡಿತ್ತು. ಮಹಾಕಾವ್ಯಕ್ಕೆ ವಿಹಿತವಾದ ಸಕಲ ಲಕ್ಷಣಗಳು ಸಹ ಅದರಲ್ಲಿ ಪೂರ್ಣವಾಗಿ ತುಂಬಿದ್ದವು. ಸರ್ಗಬಂಧ, ಮಂಗಲಾಚರಣೆ, ಉತ್ತಮಕಥಾವಸ್ತು, ಧರ್ಮಾದಿ ಪುರುಷಾರ್ಥಗಳ ನಿರೂಪಣೆ, ಲೋಕೋತ್ತರವಾದ ನಾಯಕ, ನಗರವರ್ಣನೆ, ಸಮುದ್ರವರ್ಣನೆ, ಪರ್ವತವರ್ಣನೆ, ಋತುವರ್ಣನೆ, ಚಂದ್ರೋದಯವರ್ಣನೆ, ಸೂರ್ಯೋ-ದಯವರ್ಣನೆ, ಉದ್ಯಾನವರ್ಣನೆ, ಜಲಕ್ರೀಡಾವರ್ಣನೆ, ಸುರತಾದಿಗಳವರ್ಣನೆ, ವಿಪ್ರಲಂಭ-

---

೧. ಶ್ರೀವಾದಿರಾಜರ ಈ ಕೃತಿಯ ಹೆಸರಿನಲ್ಲಿ ರುಗ್ಮಿಣೀ ಹಾಗೂ ಶ್ರೀಕೃಷ್ಣ ಇಬ್ಬರ ಹೆಸರುಗಳು ಪ್ರಸ್ತಾಪಿತವಾಗಿ ಅವರ ವಿಜಯದ ಕಥೆ, ಎಂದರೆ ಲಕ್ಷ್ಮೀನಾರಾಯಣರ ಮಾಹಾತ್ಮ್ಯ ಎಂಬ ವಿಶೇಷಾರ್ಥ ಧ್ವನಿತವಾಗಿ ಶ್ರೋತೃಗಳಿಗೆ ಜ್ಞಾನಾನಂದಕರವು, ಸಪತ್ಕರವು ಆಗುವಂತಹ ವಿಶೇಷ ಹಿರಿಮೆ ನಿರೂಪಿತವಾದರೆ, ಮಾಘನದು 'ಶಿಶುಪಾಲವಧ' ಎಂಬ ಹೆಸರಿನಲ್ಲಿ ದೈತ್ಯನಾದ ಶಿಶುಪಾಲನ ಹೆಸರು ಅದರಲ್ಲೂ ಸಹ ವಧೆ ಎನ್ನುವ ಅಮಂಗಳಕರವಾದ ಪದಗಳು ಕಂಡುಬರುವವು; ಹೀಗೆ ಹೆಸರಿನಲ್ಲಿಯೇ ಶಿಶುಪಾಲವಧವನ್ನು ಮೀರಿಸುವ ಕೃತಿ ತಮ್ಮದು ಎಂಬುದನ್ನು ಶ್ರೀವಾದಿರಾಜರು ಹಾಗೆ ತಿಳಿಸಿದ್ದು ಗಮನಾರ್ಹವೆನ್ನಿಸುವುದು.

ಶೃಂಗಾರದ ನಿರೂಪಣೆ, ಕುಮಾರೋದಯ, ಮಂತ್ರಾಲೋಚನೆ, ರಾಯಭಾರ, ಪ್ರಯಾಣ, ನಾಯಕಾಭ್ಯುದಯ, ಬಗೆಬಗೆಯ ಅಲಂಕಾರಗಳು[೧], ಮನೋಹರವಾದ ವೃತ್ತಗಳು[೨], ಲೋಕ-ರಂಜಕವಾದ ನಿರೂಪಣೆ ಮೊದಲಾದ ಕಲ್ಪೋತ್ತರ ಉಳಿಯುವಂತಹ ಶ್ರೇಷ್ಠ ಮಹಾಕಾವ್ಯದ[೩] ಲಕ್ಷಣಗಳು ಅದರಲ್ಲಿ ಕಣ್ಣಿಗೆ ರಾಚುವಂತಿದ್ದವು. ಸಂಗ್ರಹವಾಗಿ ಹೇಳುವುದಾದರೆ, ಆ ಕೃತಿ,

---

೧. ರುಗ್ಮಿಣೀಶವಿಜಯದಲ್ಲಿನ ಕೆಲವು ಅಲಂಕಾರಗಳು ಹೀಗಿವೆ:
೧.ರೂಪಕ(೧/೧); ೨.ಉತ್ಪ್ರೇಕ್ಷಾ(೧/೨); ಪರಿಣಾಮ(೧/೩.); ೪.ಸ್ವಭಾವೋಕ್ತಿ(೧/೪); ೫.ಆಶೀಃ (೧/೬); ೬.ಪರ್ಯಾಯೋಕ್ತ(೧/೭); ೭.ಕಾವ್ಯಲಿಂಗ(೧/೮); ೮.ನಿದರ್ಶನ(೧/೯); ೯. ಕ್ರಿಯಾಜಾತಿ(೧/೧೬);೧೦.ಸಂಕರ(೨/೨೪); ೧೧.ವಸ್ತುತತ್ತ್ವ(೧/೩.೫); ೧೨.ಯುಕ್ತಿ(೧/೪೭); ೧೩..ಆಕ್ಷೇಪ(೬/೫೬); ೧೪.ವಿಭಾವನ(೧/೫೭); ೧೫.ತುಲ್ಯಯೋಗಿತ್ವ(೨/೯); ಜಾತಿ(೩./೧೬); ೧೭.ವಾಕೋವಾಕ್ಯ(೩./೧೨, ೧೩.); ೧೮. ಸಂಸೃಷ್ಟಿ(೪/೨೩.); ೧೯. ವ್ಯಾಜಸ್ತುತಿ(೫/೧೨); ೨೦.ದೃಷ್ಟಾಂತ(೫/೩.೩.); ೨೧. ಪ್ರತಿವಸ್ತೂಪಮಾ(೫/೩.೭); ೨೨. ಭ್ರಾಂತಿ(೬/೧); ೨೩.. ವಿನಿಮಯ(೬/೧೮); ೨೪.ಸಮಾಸೋಕ್ತಿ(೬/೩.೩.); ೨೫.ದೀಪಕ(೬/೪೪); ೨೬. ಅತಿಶಯೋಕ್ತಿ (೭/೧೩.); ೨೮.ವ್ಯತಿರೇಕ(೧೪/೫೯); ೨೯. ಅತ್ಯುಕ್ತಿ(೧೭/೩.೧); ೩.೦. ಹೇತು(೧೮/೧).

೨. ರುಗ್ಮಿಣೀಶವಿಜಯದಲ್ಲಿನ ಕೆಲವು ವೃತ್ತಗಳು ಹೀಗಿವೆ:
೧. ಶಾರ್ದೂಲವಿಕ್ರೀಡಿತ (೧/೧); ೨. ಪಥ್ಯಾವಕ್ತ್ರ(೧/೩.); ೩.. ವಸಂತತಿಲಕಾ(೧/೫); ೪. ಇಂದ್ರವಜ್ರಾ(೧/೭); ೫.ಉಪೇಂದ್ರವಜ್ರಾ (೧/೮); ೬. ವಂಶಸ್ಥ(೨/೩.೪); ೭.ಮಾಲಿನೀ(೪/೩.); ೮. ಸ್ರಗ್ಧರಾ(೪/೩.೨); ೯.ದ್ರುತವಿಲಂಬಿತ(೪/೩.೮); ೧೦. ಮಂದಕ್ರಾಂತಾ(೫/೩.೪); ೧೧. ತುರಗರಯ (೬/೪೧); ೧೨. ಪ್ರಿಯವಾದಿನೀ(೮/೯); ೧೩.. ದೋಧಕ(೮/೬); ೧೪.ಸ್ರಗ್ವಿಣೀ (೮/೭); ೧೫.ಪುಷ್ಪಿತಾಗ್ರಾ(೧೦/೩.೭); ೧೬. ಅನುಷ್ಟುಪ್, ೧೭.ಆರ್ಯಾ(೯/೩.೩.); ೧೮. ಶಿಖರಿಣೀ(೧೧/೧೩.); ೧೯. ಪೃಥ್ವೀ (೧೪/೩.೭).

೩.. ಸರ್ಗಬಂಧೋ ಮಹಾಕಾವ್ಯಮುಚ್ಯತೇ ತಸ್ಯ ಲಕ್ಷಣಮ್ ।
ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾಽಪಿ ತನ್ಮುಖಮ್ ॥
ಇತಿಹಾಸಕಥೋದ್ಭೂತಮಿತರದ್ವಾ ಸದಾಶ್ರಯಮ್ ।
ಚತುರ್ವರ್ಗಫಲಾಯತ್ತಂ ಚತುರೋದಾತ್ತನಾಯಕಮ್ ।
ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ ।
ಉದ್ಯಾನಸಲಿಲಕ್ರೀಡಾಮಧುಪಾನರತೋತ್ಸವೈಃ ॥
ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ ।
ಮಂತ್ರದೂತಪ್ರಯಾಣಾಜಿನಾಯಕಾಭ್ಯುದಯೈರಪಿ ॥
ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಮ್ ।
ಸರ್ಗೈರನತಿವಿಸ್ತೀರ್ಣೈಃ ಶ್ರವ್ಯವೃತ್ತೈಃ ಸುಸಂಧಿಭಿಃ ॥
ಸರ್ವತ್ರ ಭಿನ್ನವೃತ್ತಾಂತೈರುಪೇತಂ ಲೋಕರಂಜನಮ್ ।
ಕಾವ್ಯಂ ಕಲ್ಪಾಂತರಸ್ಥಾಯಿ ಜಾಯೇತ ಸದಲಂಕೃತಿ ॥
ನ್ಯೂನಮಪ್ಯತ್ರ ಯೈಃ ಕೈಶ್ಚಿದಂಗೈಃ ಕಾವ್ಯಂ ನ ದುಷ್ಯತಿ ।
ಯದ್ಯುಪಾತ್ತೇಷು ಸಂಪತ್ತಿರಾರಾಧಯತಿ ತದ್ವಿದಃ । - ಕಾವ್ಯಾದರ್ಶ(೧/೧೪-೨೦)
ತುತೋಷ ಲೋಕಃ ಕವಿವರ್ಯವಾದಿರಾಜಾಖ್ಯವೃಕ್ಷಾದುಪಲಭ್ಯ ರಮ್ಯಮ್ ।
ಸುವರ್ಣಮಾಧುರ್ಯರಸಾದಿಭಿಶ್ಚ ಪೂರ್ಣಂ ಮಹಾಕಾವ್ಯಫಲಂ ಸುವೃತ್ತಮ್ ॥

ಶ್ರೀವಾದಿರಾಜರ ಭವ್ಯ ಆಕೃತಿಯಂತೆ ರಾರಾಜಿಸುತ್ತಿತ್ತು:

ರುಗ್ಮಿಣೀಶವಿಜಯಸ್ಯ ರುಗ್ಮಿಣೀವಲ್ಲಭಪ್ರಿಯತಮಸ್ಯ ಚಾತುರೀ।
ಮಾಘಕಾವ್ಯಮುಖಕಾವ್ಯಮಂಡಲಂ ನಾಪ ಪಾಪಹರಣಸ್ಯ ಶೃಣ್ವತಾಮ್ ॥
ವಿರಕ್ತಿವಿಜ್ಞಾನಸುಭಕ್ತಿಯುಕ್ತಿಪ್ರೌಢ್ಯಾದಿಪೂರ್ಣಸ್ಯ ಮನೋಹರಸ್ಯ।
ಶ್ರೀವಾದಿರಾಜಃ ಸ್ವಕೃತಸ್ಯ ಕಾವ್ಯರಾಜಸ್ಯ ಸಾಮ್ಯಂ ಸ್ವಯಮೇವ ಧತ್ತೇ॥
ವಾದಿರಾಜಕೃತಿರಮ್ಯವಿಲಾಸಂ ವರ್ಣಿತುಂ ಪ್ರಭುರಹಂ ಕಿಲ ನಾಸಮ್ ।
ಯತ್ರ ಸಾರಮನುಭೂಯ ಕವೀಂದ್ರಾಸ್ತೋಷಮಾಪುರತುಲಂ ರಸಿಕೇಂದ್ರಾಃ।
ವಾದಿರಾಜಮುಖಭಕ್ಯಬಿಲಾಷೋ ಹಂಸರಾಜಶುಭಧರ್ಮವಿಲಾಸಃ।
ಸೂಕ್ತರಾಜದುರುಕೃಷ್ಣವಿಲಾಸೋ ವಾದಿರಾಜಕವಿರತ್ರ ಲಲಾಸ॥

– ಶ್ರೀರಘುನಾಥಾಚಾರ್ಯಕೃತ(ಶ್ರೀವಾದಿರಾಜ)ವೃತ್ತರತ್ನಸಂಗ್ರಹ(೧/೩.೫-೩.೯)

ತತಃ ಪುಣ್ಯಪುರೀಂ ಪ್ರಾಪ್ತೋ ಭೇರೀತಾಡನಪೂರ್ವಕಮ್ ।
ಕಾವ್ಯಶ್ರೇಷ್ಠಂ ಮಾಘಕಾವ್ಯಂ ಗಜಮೂರ್ಧನಿ ಪೂಜ್ಯತೇ।
ಇತ್ಯಾಘೋಷಿತಮಾಕರ್ಣ್ಯ ಸಭಾಪತಿಮವೋಚತ।
ಅಸ್ಮತ್ಪುರೇ ಮಹಾಕಾವ್ಯಮೇಕಂ ಶ್ರೇಷ್ಠಂ ಪ್ರಕಾಶತೇ॥
ದೀಯತೇ ಸಮಯಃ ಕಶ್ಚಿದ್ದರ್ಶಯಿಷ್ಯೇ ಪರೀಕ್ಷ್ಯತಾಮ್ ।
ಅಂಗೀಕುರ್ವತಿ ವಿಜ್ಞೌಘೇ ಗುರುರೇಕೋನವಿಂಶತಾ।
ದಿವಸೈರೇಕದಿವಸೇ ಹ್ಯೇಕಸರ್ಗಕ್ರಮೇಣ ಸಃ।
ರುಗ್ಮಿಣೀಶಮಹಾಕಾವ್ಯಂ ನಿರ್ಮಮೇ ಸುರಸಾಕರಮ್ ॥
ಅವೇಕ್ಷಣಾಯ ವಿದುಷಾಂ ಸಂಸದಂ ಪ್ರೈಷಯತ್ ಸುಧೀಃ।
ಪರಿಷತ್ ಸಾ ಪರೀಕ್ಷಾಥ ವಿಸ್ಮಿತಾಽಽನಂದಪೂರಿತಾ॥
ರುಗ್ಮಿಣೀಶಮಹಾಕಾವ್ಯಮುತ್ತಮಂ ಮಾಘತೋಽಪಿ ಚ।
ಇತ್ಯಾಘೋಷ್ಯ ಚ ಸಮ್ಮಾನ್ಯ ಪ್ರಾರ್ಚಯತ್ ಕವಿಸತ್ತಮಮ್ ॥
ಕವೀನಾಂ ಕುಲಮಧ್ಯೇ ಹಿ ತಿಲಕೋಽಯಮಿತಿ ಪ್ರಥಾಮ್ ।
ಖ್ಯಾಪಯಾಮಾಸ ವಿದುಷಾಂ ಪರಿಷದ್ಗುಣಮೋದಿನೀ॥

-ಶ್ರೀವಾದಿರಾಜಗುರುವರಚರಿತಾಮೃತ(೩./೪-೧೦)

ಅನನ್ಯಸುಕರಂ ದಿವ್ಯಂ ನಾನಾವೃತ್ತೋಪಶೋಭಿತಮ್ ।
ಶ್ಲೇಷಾನುಪ್ರಾಸಯಮಕಚಿತ್ರಬಂಧವಿಭೂಷಿತಮ್ ॥
ರೂಪಕೋಲ್ಲೇಖದೃಷ್ಟಾಂತೋತ್ಪ್ರೇಕ್ಷಾಪಹ್ನುತಿದೀಪಕೈಃ।
ಯುಕ್ತಿಪ್ರೌಢೋಕ್ತಿಗೂಢೋಕ್ತಿವಕ್ರೋಕ್ತಿವಿವೃತೋಕ್ತಿಭಿಃ॥
ವ್ಯಾಜನಿಂದಾಪ್ರಭೃತಿಭಿರ್ನಾನಾಲಂಕಾರಮಂಡಲೈಃ।
ವಿದುಷಾಮಪ್ಯವಿದುಷಾಂ ಮನೋಹಾರಿಭಿರುಜ್ಜ್ವಲೈಃ॥
ಪೂರಿತಂ ಸುರಸೋಪೇತಂ ಮಾಧುರ್ಯಾದಿಗುಣಾನ್ವಿತಮ್ ।
ನಿರವದ್ಯೈಃ ಪದ್ಯೈರ್ವಾಕ್ಯೈಃ ಪ್ರತಿಶ್ಲೋಕಮಲಂಕೃತಮ್ ।
ಮಾಧ್ವರಾದ್ಧಾಂತದುಗ್ಧಾಬ್ಧಿಸ್ವಬ್ಧಿಹೇತುಸುಧಾಕರಮ್ ।
ಶುದ್ಧಮಧ್ವರಿಸದ್ಭಕ್ತಿಸಿದ್ಧಿಬುದ್ಧಿಸಮೃದ್ಧಿದಮ್ ॥
ವಿಪಕ್ಷರೂಕ್ಷಕಕ್ಷಾಖ್ಯಕಕ್ಷಾಭಕ್ಷಾಶುಶುಕ್ಷಣಿಮ್ ।
ರಕ್ಷೋರಿಕ್ಷ್ಮೇಶದೀಕ್ಷೇಕ್ಷಾದಕ್ಷಶಿಕ್ಷಾವಿಚಕ್ಷಣಮ್ ॥

ವಿರಕ್ತಿವಿಜ್ಞಾನಸುಭಕ್ತಿಯುಕ್ತಿಪ್ರೌಢ್ಯಾದಿಪೂರ್ಣಸ್ಯ ಮನೋಹರಸ್ಯ ।
ಶ್ರೀವಾದಿರಾಜಃ ಸ್ವಕೃತಸ್ಯ ಕಾವ್ಯರಾಜಸ್ಯ ಸಾಮ್ಯಂ ಸ್ವಯಮೇವ ಧತ್ತೇ[೧] ॥

ಇನ್ನೊಂದು ರೀತಿಯಲ್ಲಿ ಅದು ಶ್ರೀಕೃಷ್ಣನಿಂದ ನಿರ್ಮಿತವಾದ ದ್ವಾರಾವತಿಯ ಸೊಬಗನ್ನು ಹೊಂದಿತ್ತು:

ಕೃಷ್ಣಸ್ಯೋದಯವರ್ಣನೈಃ ಸುಚರಿತಸ್ತೋಮಸ್ತವೈಃ ಸೂಕ್ತಿಭಿಃ
ಸುಶ್ಲೋಕೈಃ ಸುಭಗಾ ರಸೈಶ್ಚ ವಿವಿಧೈಃ ಸ್ವಾನಂದಸರ್ಗೈರ್ವೃತಾ ।
ದುಷ್ಪ್ರಾಗಮ್ಯನಿಜಾರ್ಥತೋಷಿತಖಗಾ ಸಾಽಸ್ಯಾಃ ಕೃತೇರ್ವೈಖರೀಂ
ಬಿಭ್ರಾಣೇವ ವಿಭಾತಿ ವಿಟ್ಠಲಪುರೀ ವಿಷ್ವಕ್ಸುವರ್ಣೋಜ್ಜ್ವಲಾ ॥

ಮಾಘನ ಕಾವ್ಯ ಮುಖ್ಯವಾಗಿ ಶೃಂಗಾರಮಯ; ಅದನ್ನು ಮೀರಿಸುವ ಕೃತಿಯಲ್ಲಿ ಶೃಂಗಾರದ ನಿರೂಪಣೆ ಅನಿವಾರ್ಯವಾಗಿತ್ತು. ಶ್ರೀವಾದಿರಾಜಸ್ವಾಮಿಗಳಾದರೋ ಯತಿಗಳು. ಅದರಲ್ಲೂ ಉಡುಪಿಯ ಅಷ್ಟಮಠಗಳಲ್ಲೊಂದಾದ ಸೋದೆ ಮಠದ ಅಧಿಪತಿಗಳು. ವೇದಾಂತ ಶಾಸ್ತ್ರಕ್ಕೆ ತಮ್ಮನ್ನು ಪೂರ್ಣವಾಗಿ ತೆರೆದುಕೊಂಡವರು. ಪಾವಿತ್ರ್ಯಕ್ಕೆ ಮತ್ತೊಂದು ಹೆಸರು ಎಂಬಂತೆ ಬದುಕಿದ ದಿವ್ಯ ಜೀವನದವರು. ಅಂತಹವರ ಕೃತಿಯಲ್ಲಿ ಶೃಂಗಾರ ಹೇಗೆ ಮೂಡಿಬಂದೀತು ಎಂಬುದು ವಿದ್ವಾಂಸರು ಸಹಜವಾಗಿ ಸಂದೇಹಿಸುವ ವಿಷಯವಾಗಿತ್ತು. ಆದರೆ, ಶ್ರೀವಾದಿರಾಜಸ್ವಾಮಿಗಳ ಶೃಂಗಾರ ನಿರೂಪಣೆ ವಿದ್ವಾಂಸರನ್ನೂ ದಂಗುಬಡಿಸಿತ್ತು. ಶ್ರೀಕೃಷ್ಣನ ಕಥಾನಕದಲ್ಲಿ ಶೃಂಗಾರಕ್ಕೆ ಕೊರತೆ ಎಲ್ಲಿದೆ? ಶ್ರೀಕೃಷ್ಣನದು ದೈವೀ ಶೃಂಗಾರ, ಶ್ರೀವಾದಿರಾಜರದು ದೈವಿಕ ನಿರೂಪಣೆ. ಹೀಗಾಗಿ ಶೃಂಗಾರದ ಚಿತ್ರಣಕ್ಕೆ ಹೊಸ ಆಯಾಮವನ್ನು ನೀಡುವಂತಹ ಅಪೂರ್ವ ಕೌಶಲ ಅದರಲ್ಲಿ ಅಭಿವ್ಯಕ್ತವಾಗಿದೆ. ಲೋಕಶೃಂಗಾರದಲ್ಲಿ ಮನಸ್ಸಿನ ವಿಕೃತಿಯನ್ನು ಕಾಣುವ ಜನ ದೈವಿಕ ಶೃಂಗಾರದಲ್ಲಿ ಮನೋವಿಕಾಸವನ್ನು ಹೊಂದುವ ಹೊಸತನವನ್ನು ಹೆಜ್ಜೆಹೆಜ್ಜೆಗೂ ಮೈಗೂಡಿಸಿಕೊಂಡ ಆ ಕೃತಿ ಅವರಿಗೆಲ್ಲ ಅಚ್ಚರಿಯ ಸಂಗತಿಯೇ ಆಯಿತು.

ವಿದ್ವಾಂಸರಲ್ಲಿ ಅದು ಶ್ರೇಷ್ಠ ಎಂಬ ಬಗ್ಗೆ ಬಹುಮತವಲ್ಲ, ಒಮ್ಮತವೇ ಮೂಡಿತು. ಅದು ರಚಿತವಾದ ರೀತಿಯನ್ನು ತಿಳಿದಮೇಲಂತು, ಅವರ ಅಚ್ಚರಿಗೆ ಪಾರವೇ ಇರಲಿಲ್ಲ, ಅವರು

---

ಅಖಿಲೋಪನಿಷನ್ಮುಖ್ಯಗ್ರಂಥಸಾರಾರ್ಥಬೃಂಹಿತಮ್ ।
ಸ್ವಪಕ್ಷಸಾಧಕಾಸಂಖ್ಯನ್ಯಾಯಸಂದೋಹದೀಪಿತಮ್ ॥
ವಿಷ್ಣೋಃ ಸರ್ವೋತ್ತಮತ್ವಂ ಸತ್ಪ್ರಮಾಣೈಃ ಪ್ರತಿಪಾದಯತ್ ।
ಮನಃ ಪ್ರಸಾದನೋಪಾಯಂ ಸದ್ಯಃ ಶ್ರವಣರಂಜನಮ್ ॥
ಕೈವಲ್ಯವರ್ತ್ಮಪಾಥೇಯಂ ಜ್ಞಾನವಿಜ್ಞಾನಸಾಧನಮ್ ।
ಸ ರುಗ್ಮಿಣೀಶವಿಜಯಾಖ್ಯಂ ಮಹಾಕಾವ್ಯಮಾತನೋತ್ ॥

- ಶ್ರೀವಾದಿರಾಜಗುಣರತ್ನಮಾಲಾ (೫/೨೯-೪೭)

೧. ಇದು ಶ್ರೀಮಧ್ವಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯವು ಅವರ ಪ್ರತಿರೂಪದಂತೇ ಇತ್ತು ಎಂಬ ಮಧ್ವವಿಜಯದ ಮಾತನ್ನು ಹೋಲುವುದು: ರೂಪಮನ್ಯದಿವ ಧನ್ಯಮಾತ್ಮನಃ. (೯/೧೧)

ಅದನ್ನು ಶ್ರೇಷ್ಠ ಸಂಸ್ಕೃತ ಮಹಾಕಾವ್ಯ ಎಂಬುದಾಗಿ ಘೋಷಿಸಿ, ಆನೆ ಮೇಲಿಟ್ಟು ಮೆರವಣಿಗೆ ಮಾಡಿ ಸಾರ್ಥಕ್ಯವನ್ನು ಪಡೆದರು; 'ಕವಿಕುಲತಿಲಕ' ಎಂಬ ಮಹಾಪ್ರಶಸ್ತಿಯನ್ನು ಸಮರ್ಪಿಸಿ, ಧನ್ಯತೆಯನ್ನು ಪಡೆದರು:

ಕವೀನಾಂ ಕುಲಮಧ್ಯೇ ಹಿ ತಿಲಕೋಽಯಮಿತಿ ಪ್ರಥಾಮ್ ।
ಖ್ಯಾಪಯಾಮಾಸ ವಿದುಷಾಂ ಪರಿಷದ್ಗುಣಮೋದಿನೀ[೧] ॥

ಹೀಗೆ ಕೇವಲ ಹತ್ತೊಂಭತ್ತು ದಿವಸಗಳಷ್ಟು ಅಲ್ಪಾವಧಿಯಲ್ಲಿ ಲೋಕೋತ್ತರವಾದ ಮಹಾಕಾವ್ಯವೊಂದನ್ನು ಸಂಸ್ಕೃತ ವಾಙ್ಮಯಕ್ಕೆ ನೀಡಿದ ಹಿರಿಮೆ ಶ್ರೀವಾದಿರಾಜರದಾಯಿತು. ಪ್ರಾಯಃ ಅಷ್ಟು ಅಲ್ಪಾವಧಿಯಲ್ಲಿ ಸಂಸ್ಕೃತದ ಒಂದು ಮಹಾಕಾವ್ಯ ಪೂರೈಸಿದ ದಾಖಲೆ ಮತ್ತೊಂದಿಲ್ಲ ಎನ್ನಬಹುದು.

ಆ ಕೃತಿಗೆ ಅಲ್ಲಿ ಮಾತ್ರವೇ ಅಲ್ಲದೆ, ಅದನ್ನು ಓದಿದ ಪ್ರತಿ ವಿದ್ವತ್ಸಭೆಯಲ್ಲೂ ಸಹ ವಿಶಿಷ್ಟ ಮನ್ನಣೆ ಲಭಿಸಿತು. ಸೋದಾ ಕ್ಷೇತ್ರದಲ್ಲಿ ಸಹ[೨] ಅದಕ್ಕೆ ವೈಭವದ ಮೆರವಣಿಗೆ ಇತ್ಯಾದಿ ನಡೆದ ವಿವರ ಅವರ ಚರಿತ್ರೆಯಲ್ಲಿ ದಾಖಲಾಗಿದೆ. ಒಬ್ಬ ಯತಿಗಳಾಗಿ, ವೇದಾಂತಿಗಳಾಗಿ ವಾದಿಗಳನ್ನು ಪರಾಭವಗೊಳಿಸಿ ಸನ್ಮಾನಿತರಾಗುವುದು ಪ್ರಸಿದ್ಧ. ಆದರೆ, ಕಾವ್ಯಪ್ರಪಂಚದಲ್ಲೂ ಸಹ ಅಂತಹ ಹಿರಿಮೆಯನ್ನು ಸಾಧಿಸಿದ ವೈಶಿಷ್ಟ್ಯ ಶ್ರೀವಾದಿರಾಜರದಾಯಿತು.

ಮಾಘನ ಶಿಶುಪಾಲವಧವು ಕಾಳಿದಾಸನ ಕೃತಿಗಳನ್ನು, ಭಾರವಿಯ ಕೃತಿಯನ್ನು ಮೀರಿಸಿದ ಕೃತಿ ಎನ್ನುವುದಾದರೆ, ಮಾಘನ ಕೃತಿಯನ್ನು ಮೀರಿಸಿದ ಕೃತಿ ರುಗ್ಮಿಣೀಶವಿಜಯವಾಯಿತು. ಇದರಿಂದ ಶ್ರೀವಾದಿರಾಜರ ಈ ಕೃತಿ ಸಂಸ್ಕೃತದ ಅನುಪಮ ಮಹಾಕಾವ್ಯ ಎಂದಾಗುವುದು. ಅಷ್ಟು ಮಾತ್ರವಲ್ಲದೆ, ಮನಸ್ಸಿಗೆ ಉಲ್ಲಾಸ ನೀಡದೆ ಕೇವಲ ಮನೋರಂಜನೆಗೆ ಮಾತ್ರ ಸೀಮಿತವಾಗುವ ವಿದ್ವತ್ಪ್ರದರ್ಶನವನ್ನಷ್ಟೇ ಗುರಿಯನ್ನಾಗಿ ಉಳ್ಳ ಸಕಲ ಲೌಕಿಕ ಕಾವ್ಯಗಳಿಗೂ ಸಹ ಶ್ರೀವಾದಿರಾಜರ ಈ ಕೃತಿ ಉತ್ತರ ರೂಪವಾಗಿ ರಚಿತವಾದ ಮಹತ್ತರವಾದ ಕೃತಿ ಎನ್ನುವ ಸ್ಥಾನವನ್ನು ಅಲಂಕರಿಸಿತು. ವೃತ್ತರತ್ನಸಂಗ್ರಹದಲ್ಲಿನ –

ಮಾಘಕಾವ್ಯಮುಖಕಾವ್ಯಮಂಡಲಂ ನಾಪ ಪಾಪಹರಣಸ್ಯ ತ್ರುಣ್ವತಾಮ್ ।
ವಿರಕ್ತಿವಿಜ್ಞಾನಸುಭಕ್ತಿಯುಕ್ತಿಪ್ರೌಢ್ಯಾದಿಪೂರ್ಣಸ್ಯ ಮನೋಹರಸ್ಯ ॥

– ಎಂಬ ಮಾತಿನಲ್ಲಿ ಈ ವಿಷಯ ಬಂದಿದೆ. ಅದರಂತೆ, 'ಮಾಘಾದೇರ್ಮತ್ವಾ ಕೋಟಿಗುಣಾಧಿಕಂ' ಎಂಬ ಮಾತು ಸಹ ಇದನ್ನು ದೃಢಪಡಿಸುವುದು. ಒಟ್ಟಾಗಿ ಮನಸ್ಸಿಗೆ

---

೧. ಶ್ರೀವಾದಿರಾಜಗುರುವರಚರಿತಾಮೃತ (೩.೪/೧೦)

೨. ಸೋದಾಭೂಪೋಽಪಿ ಮಾಘಾದೇರ್ಮತ್ವಾ ಕೋಟಿಗುಣಾಧಿಕಮ್ ।
ಆರೋಪ್ಯ ಕರಿಣಃ ಪೃಷ್ಠೇಽಮಾನಯತ್ ಪ್ರತಿಪತ್ತನಮ್ ॥
ಸುಪರ್ವಾಣಃ ಸುಪರ್ಣಾದ್ಯಾ ಗಂಧರ್ವಾ ಮುನಯೋಽಪಿ ಹಿ ।
ಸ್ವಸ್ವಲೋಕಸಭಾಸ್ವೇತತ್ ಪೂಜಯಾಮಾಸುರಾದರಾತ್ ॥
–ಶ್ರೀವಾದಿರಾಜಗುಣರತ್ನಮಾಲಾ(೫-೪೯,೫೦)

ಉಲ್ಲಾಸ, ಪಾಪಕ್ಕೆ ಪರಿಹಾರ, ಪುಣ್ಯವೃದ್ಧಿಗೆ ಕಾರಣ, ಜ್ಞಾನಭಕ್ತ್ಯಾದಿಗಳಿಗೆ ಸಾಧನ ಎಂಬ ವೈಶಿಷ್ಟ್ಯವನ್ನು ಲೌಕಿಕ ಕಾವ್ಯಗಳು ಹೊಂದಲು ಸಾಧ್ಯವೇ ಇಲ್ಲ ಎಂಬ ವಿಶೇಷಾಂಶವನ್ನು ಆ ಮೂಲಕ ಲೋಕ ಅರಿಯುವಂತಾಯಿತು ಎನ್ನಬಹುದು.

ರುಗ್ಮಿಣೀಶವಿಜಯದಲ್ಲಿನ ಈ ಕೆಳಗಿನ ಎರಡು ಮಾತುಗಳು ಒಂದು ರೀತಿಯಲ್ಲಿ ಇತರ ಲೌಕಿಕ ಕಾವ್ಯಗಳ ಬಗ್ಗೆ ಶ್ರೀವಾದಿರಾಜರ ತೀಕ್ಷ್ಣ ವಿಮರ್ಶೆಯ ಮಾತುಗಳಂತಿವೆ:

ಅಪಿ ವಿವಿಧತದೀಯಾಭ್ಯಾಸಕೌಶಲ್ಯಮಾಸೀತ್ ಫಣಿಪತಿಯದುಪತ್ಯೋರಗ್ರತೋಽಪ್ಯಗ್ರಮತ್ಯೋಃ।
ಗತಫಲಮತಿಯತ್ನಾಭ್ಯಸ್ತವಿದ್ಯಾಽನವಸ್ಥಾ ಫಲತಿ ಸಹಜತೇಜೋಬುದ್ಧಿಭಾಜಾಂ ಕಿಮನ್ಯೇ[1] ॥
-(೧೧/೪೨)

[2]ಅಶನಿಸಮಕಠೋರಮಲ್ಲಘಾತೋ ಮೃದುನಿ ಹರೇರಫಲಃ ಕಲೇವರೇಽಭೂತ್।
ಮೃದುಸರಸಕವೇಃ ಪುರಃ ಕಿಮೀಡ್ಯಾ ಕಠಿನಪದಪ್ರಿಯಕಾವ್ಯಕಾರಶೀಲಾ[3] ॥ - (೧೧/೪೪)

ಮಾಘನದು ಮಹಾಕವಿ ಎನ್ನಿಸಿಕೊಳ್ಳುವ ಕೀರ್ತಿಯ ಹಂಬಲದ [4]ರಚನೆಯಾದರೆ, ಕಾಳಿದಾಸನದೂ ಅಂತಹುದೇ: 'ಮಂದಃ ಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಮ್।' (ರಘುವಂಶ). ಇವರಿಬ್ಬರದು ಮಾತ್ರವಲ್ಲದೇ ಒಟ್ಟಾಗಿಯೇ ಕಾವ್ಯ ರಚನೆಯ ಉದ್ದೇಶಗಳಲ್ಲಿ ಹೆಚ್ಚಿನವರದು ಕೀರ್ತಿಕಾಮನೆಯೇ ಆಗಿರುತ್ತದೆ. 'ಕಾವ್ಯಂ ಯಶಸೇ ಅರ್ಥಕೃತೇ' ಎಂಬ ಮಮ್ಮಟನ ಮಾತಿನಲ್ಲೂ ಈ ವಿಷಯ ಬಂದಿದೆ. ಆಸ್ಥಾನ ಕವಿಗಳಿಗಾಗಿ ರಾಜಮಹಾರಾಜರನ್ನು ಮೆಚ್ಚಿಸಲೆಂದು ಕಾವ್ಯಗಳನ್ನು ರಚಿಸುವವರಿಗಂತೂ ಕೀರ್ತಿಯೊಂದಿಗೆ ಸಂಪತ್ತಿನ ಕಾಮನೆಯೂ ಸೇರಿರುತ್ತದೆ. ಆದರೆ, ಶ್ರೀವಾದಿರಾಜರ ಕೃತಿ ಕೇವಲ ಭಗವತ್ಪ್ರೀತಿಯನ್ನು ಉದ್ದೇಶಿಸಿ

---

೧. ಅಭ್ಯಸ್ತವಿದ್ಯಾಯಾಃ ವಿಸ್ಮರಣಸಂಭವಾತ್ ಪರಿಮಿತತ್ವಾಚ್ಚ। ಸ್ವಾಭಾವಿಕವಿದ್ಯಾಯಾಃ ಅಪರಿಮಿತತ್ವಾತ್ ವಿಸ್ಮರಣಾಸಂಭವಾಚ್ಚೇತಿ ಭಾವಃ। - ವ್ಯಾ.

೨. 'ಅತ ಏವ ನೀರಸತರುರಿಹ ವಿಲಸತಿ ಪುರತಃ' ಇತಿ ಮೃದುಕಾವ್ಯಕಾರಾಗ್ರೇ 'ಶುಷ್ಕೋ ವೃಕ್ಷಸ್ತಿಷ್ಠತ್ಯಗ್ರೇ' ಇತಿ ಕಠೋರ ಕವಿತಾಂ ಸಂತೋ ನ ಮಾನಯಂತಿ। - ವ್ಯಾ.

೩.. ಅನಾಲೋಡಿತಕಾರ್ಯಸ್ಯ ವಾಗ್ಜಾಲಂ ವಾಗ್ಮಿನೋ ವೃಥಾ।
ನಿಮಿತ್ತಾದಪರಾದ್ಧೇಷೋರ್ಧಾನುಷ್ಕಸ್ಯೇವ ವಲ್ಗಿತಮ್ ॥ - ಶಿಶುಪಾಲವಧ (೨/೨೭)
- ಎಂಬ ಮಾಘ ಕವಿಯ ಮಾತು ಹೆಚ್ಚಾಗಿ ಕೇವಲ ಕೀರ್ತಿಕಾಮನೆ ಮೊದಲಾದ ಹಿನ್ನೆಲೆಯಲ್ಲಿ ರಚಿಸುವ ಸಕಲ ಕೃತಿಗಳಿಗೂ ಅನ್ವಯಿಸುವಂತಿದೆ.

೪. ಶ್ರೀಶಬ್ದರಮ್ಯಕೃತಸರ್ಗಸಮಾಪ್ತಿಲಕ್ಷ್ಮ ಲಕ್ಷ್ಮೀಪತೇಶ್ಚರಿತಕೀರ್ತನಮಾತ್ರಚಾರು।
ತಸ್ಯಾತ್ಮಜಃ ಸುಕವಿಕೀರ್ತಿದುರಾಶಯಾದಃ ಕಾವ್ಯಂ ವ್ಯಧತ್ತ ಶಿಶುಪಾಲವಧಾಭಿಧಾನಮ್ ॥
- ಶಿಶುಪಾಲವಧ (ಕವಿವಂಶಕೀರ್ತನ - ೫)
ಸುಕವೀನಾಂ ಶ್ರೇಷ್ಠವಿದುಷಾಂ ವರರುಚಿ-ಸುಬಂಧು-ಸೋಮನಾಥ-ಭವಭೂತಿ-ಕ್ರೀಡಾನಂದ-ಕಾಳಿದಾಸ-ಬಿಹ್ಲಣ-ಭಾರವಿ-ಬಾಣ-ಮಯೂರಾದೀನಾಂ ಯಾ ಕೀರ್ತಿಃ ಖ್ಯಾತಿರ್ಯಶಸ್ತತ್ರ ಯಾ ದುರಾಶಾ ದುರಭಿಲಾಷಸ್ತಯಾ । ಮಹಾಕವಿಕೀರ್ತಿಲಿಪ್ಸಯೇತ್ಯರ್ಥಃ । ದುಷ್ಟತ್ವಂ ಸ್ವಾಶಾಯಾಃ ಸ್ವಲ್ಪಬುದ್ಧಿತ್ವೇನ ಸುಕವಿಕೀರ್ತೇರಪ್ರಾಪ್ಯತ್ವಾತ್। - ವ್ಯಾ. (ವಲ್ಲಭದೇವಕೃತ)

ಬರೆದಂತಹ ಪರಮಸಾತ್ತ್ವಿಕ ಕೃತಿ. ಭಗವನ್ಮಾಹಾತ್ಮ್ಯವನ್ನು ಬಗೆಬಗೆಯಾಗಿ ಕೊಂಡಾಡಿ ಮೆರೆದು ಸಂತೋಷಿಸುವ ಕಾರ್ಯದೊಂದಿಗೆ ಅದನ್ನು ಅಧ್ಯಯನ ಮಾಡುವವರಿಗೂ ಭಗವದ್ಭಕ್ತಿಯ ಬಗ್ಗೆ ಆಸಕ್ತಿಯನ್ನು ಕೆರಳಿಸುವಂತಹ ಉದಾತ್ತ ಧ್ಯೇಯವನ್ನು ಈ ಕೃತಿ ಹೊಂದಿದೆ: 'ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ' ಎಂಬ ಅವರ ಮಾತಿನಲ್ಲಿ ಈ ವಿಷಯ ಬಂದಿದೆ.

ಮಾಘಾದಿಗಳನ್ನು ಮೀರಿಸುವ ಉದ್ದೇಶ ಇದರ ಒಂದು ಮುಖ ಮಾತ್ರ. ಇದರ ಮುಖ್ಯ ಉದ್ದೇಶ ಮಾತ್ರ ಶ್ರೀಹರಿಯ ಪ್ರೀತಿಯೇ ಆಗಿದೆ ಎಂಬುದು ಕಾವ್ಯದುದ್ದಕ್ಕೂ ಕಂಡುಬರುವ ವಿಶೇಷವಾದ ಅಂಶ. ಮಹಾಕಾವ್ಯವೆಂದರೆ ಕೇವಲ ವಿದ್ವತ್ಪ್ರದರ್ಶನದ ಮಾಧ್ಯಮ ಎಂಬ ಭ್ರಮೆ ಶತಮಾನಗಳ ಕಾಲ ವಾಙ್ಮಯಪ್ರಪಂಚವನ್ನು ಆವರಿಸಿತ್ತು. ಅದನ್ನು ನಿವಾರಿಸುವ ಕೃತಿಗಳಲ್ಲಿ ನಾರಾಯಣಪಂಡಿತರ ಸುಮಧ್ವವಿಜಯ, ಶ್ರೀವಾದಿರಾಜರ ರುಗ್ಮಿಣೀಶವಿಜಯ ಮೊದಲಾದವುಗಳು ಅತ್ಯಪೂರ್ವವೆನ್ನಿಸುವ ಕೃತಿಗಳು. ಮುಕ್ತಿದಾಯಕನಾದ ಭಗವಂತನ ಚರಿತ್ರೆಯಾಗಿ ರುಗ್ಮಿಣೀಶವಿಜಯ ಯಶಸ್ವಿಯಾಗಿದ್ದರೆ, ಮುಕ್ತಿಯನ್ನು ನೀಡಿಸುವ ಗುರುಗಳ ದಿವ್ಯ ಕಥಾನಕವಾಗಿ ಮಧ್ವವಿಜಯ ಯಶಸ್ವಿಯಾಗಿದೆ.

ಶ್ರೀವಾದಿರಾಜರದು ಮುಖ್ಯವಾಗಿ ಶ್ರೀಹರಿಯ ಅನುಗ್ರಹ ಸಂಪಾದನೆಯ ಪರಮ ಉದ್ದೇಶವನ್ನು ಹೊಂದಿದ ಪರಿಶುದ್ಧ ಕೃತಿ ಎಂಬುದು ಕಾವ್ಯೋಪಸಂಹಾರದ ಈ ಕೆಳಗಿನ ಮಾತುಗಳಲ್ಲಿ ಸ್ಫುಟವಾಗಿ ನಿರೂಪಿತವಾಗಿದೆ:

> ಕೃಷ್ಣಃ ಕಾವ್ಯಕೃತೇ ಸ್ವಹಸ್ತಕಮಲಚ್ಛತ್ರಂ ಪ್ರದದ್ಯಾತ್ ಪ್ರಭುಃ
> ಸಚ್ಛಾಸ್ತ್ರಾಭಿಧರಮ್ಯರಾಜ್ಯಪದವೀಂ ಸುಜ್ಞಾನಯಾನಂ ಮುದಾ।
> ಸ್ವಾಂಘ್ರ್ಯಾರಾಧನಕಂಕಣಂ ಕರಯುಗೇ ಕೈಂಕರ್ಯಹಾರಂ ಗಲೇ
> ಸ್ವಾತ್ಮಾನಂ ಹೃದಿ ನಿತ್ಯಚಿಂತನಧನಂ ಸದ್ಯುಕ್ತಿರತ್ನಾನ್ಯಪಿ॥ - (೧೯/೩೯)

ಇಂತಹ ಅಪೂರ್ವತೆಯಿಂದಾಗಿ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬುದಾಗಿ ಅನುಪಾದೇಯದ ಸಾಲಿಗೆ ಸೇರಿದ ಕಾವ್ಯಪ್ರಪಂಚ ಯತಿಗಳಿಗೂ, ಅದರಲ್ಲೂ ಪರಮಹಂಸರಿಗೂ ಸಹ ಉಪಾದೇಯವಾಗುವಂತಹ ಅನುಪಮವಾದ ಹಿರಿಮೆಯನ್ನು ಗಳಿಸುವಂತಾಯಿತು:

> ಹಂಸಾನಾಂ ಹೃದಯಂಗಮಂ ಕವಿಲಸದ್ಭ್ರುಂಗಾದೃತಂ ಮೌಕ್ತಿಕ-
> ಪ್ರಖ್ಯಾಗ್ರ್ಯೋಕ್ತಿನವಂ ಪ್ರಬಂಧಜಲಜಂ ಪಾದೇऽರ್ಪಿತಂ ಸ್ಯಾದ್ಧರೇಃ।
> ಲಕ್ಷ್ಮೀರಮ್ಯಕರೇ ಪರಾಮರತತೇಃ ಸನ್ಮಾನಸೇ ಶಾರದಾ-
> ನಂದಂ ತತ್ತ್ವವನಃ ಸ್ವಹೃತ್ಕೃತಗುಣಂ ವಿಸ್ತಾರಯತ್ವಂಜಸಾ॥ - (೧೯/೪೦)

ತಮ್ಮ ಕಾವ್ಯದ ಇಂತಹ ಅಪೂರ್ವ ಯಶಸ್ಸು ಹಾಗೂ ತಮ್ಮ ಸಕಲಬಗೆಯ ಸಾಧನೆ ಶ್ರೀಮನ್ಮಧ್ವಸಿದ್ಧಾಂತದ ಅನುಸರಣೆಯ ಫಲಶ್ರುತಿ ಎನ್ನುವ ಅವರ ಮಧ್ವನಿಷ್ಠೆ ಅತ್ಯಂತ ಅಪೂರ್ವವಾದುದು:

ಆನಂದತೀರ್ಥಮತಮುಜ್ಝಿತದೋಷಜಾತಂ
ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ।
ಮಾನೌಘಶೋಭಿ ಮಮ ದುರ್ಜನಪುಂಜತೋऽಭೀ-
ರ್ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭೂಃ॥ - (೨/೬೦)

## ಶ್ರೀವಾದಿರಾಜರ ಶೈಲಿಯ ಅಪೂರ್ವತೆ

ಶ್ರೀವಾದಿರಾಜರದು ಸಂಸ್ಕೃತ ಸಾಹಿತ್ಯದಲ್ಲಿಯೇ ಅತ್ಯಂತ ಅಪೂರ್ವವೆನ್ನಿಸುವ ರಮ್ಯಶೈಲಿ. ಅವರ ರಚನೆ ಗದ್ಯವಿರಲಿ, ಪದ್ಯವಿರಲಿ ಅನುಪ್ರಾಸಾದಿ ಅಲಂಕಾರಗಳಿಂದ ತುಂಬಿ ಮನಸ್ಸಿಗೆ ಮುದನೀಡುತ್ತವೆ. ತತ್ತ್ವಶಾಸ್ತ್ರದ ಗಹನವಿಚಾರಗಳನ್ನು ರಮಣೀಯವಾದ ಶಬ್ದಜಾಲದಲ್ಲಿ ಅಪೂರ್ವಯುಕ್ತಿಗಳೊಂದಿಗೆ ನಿರೂಪಿಸುವ ಅವರ ಶೈಲಿ ದಾರ್ಶನಿಕಸಾಹಿತ್ಯದಲ್ಲೇ ತೀರ ವಿನೂತನ. ಅದು ಪಾಮರರಂಜಕ, ಪಂಡಿತಬೋಧಕ; ಎಂತಹ ಅರಸಿಕಮನಸ್ಸಿಗೂ ದಿವ್ಯರಸಾನುಭೂತಿಯನ್ನು ನೀಡುವ ಮಾಂತ್ರಿಕಶಕ್ತಿ ಅದರದು. ತಾತ್ತ್ವಿಕ ನಿರೂಪಣೆಗೆ ಅವರು ಕೊಡುವ ದೃಷ್ಟಾಂತಗಳು ಎಂತಹ ನಾಸ್ತಿಕನ ಮನಸ್ಸಿನಲ್ಲೂ ಸಹ ಆಧ್ಯಾತ್ಮದ ಸಿಂಚನ ಉಂಟುಮಾಡುವಂತಹುದು. ಮಧುರವಾದ ಪದವಿನ್ಯಾಸ, ಅರ್ಥಗಾಂಭೀರ್ಯದ ಅದ್ಭುತ ನಿರೂಪಣೆ, ಪುಂಖಾನುಪುಂಖವಾಗಿ ಕಾಣಿಸಿಕೊಳ್ಳುವ ಅಲಂಕಾರಗಳು, ಉದ್ದಕ್ಕೂ ಗೋಚರಿಸುವ ಬಗೆಬಗೆಯ ರಸಗಳು ಇವುಗಳಿಂದಾಗಿ ಅವರದು ಕೇವಲ ಕಾವ್ಯವಾಗದೆ ಕಾವ್ಯಶ್ರೀ ಆಯಿತು. ಕ್ಷೀರಸಾಗರದಲ್ಲಿ ಮಹಾಲಕ್ಷ್ಮಿಯ ಆವಿಷ್ಕಾರವಾದಂತೆ, ಅವರ ನಿರ್ಮಲ ಹೃದಯವೆಂಬ ಕ್ಷೀರಸಮುದ್ರದಲ್ಲಿ ಕಾವ್ಯಲಕ್ಷ್ಮಿ ಆವಿರ್ಭವಿಸಿದಳು. ವೇದಾಂತವನ್ನು ಸಹ ಕಾವ್ಯದಂತೆ ನಿರೂಪಿಸುವ ಅಪೂರ್ವ ಶೈಲಿ ಅವರದು. ಕಾವ್ಯದಲ್ಲಿ ವೇದಾಂತವನ್ನು ತುಂಬಿಸಿದ ಮತ್ತೊಂದು ಅಪೂರ್ವತೆಯು ಅವರದಾಯಿತು.

ಸಾಮಾನ್ಯವಾಗಿ ವೇದಾಂತವು ಜಡ, ಕಾವ್ಯವು ರಂಜಕ ಎಂಬುದು ಲೋಕದ ಪರಿಕಲ್ಪನೆ. ಆದರಿಂದಾಗಿ ವೇದಾಂತಿಗಳಿಗೆ ಕಾವ್ಯ ಒಲಿಯದು, ಕವಿಗಳಿಗೆ ವೇದಾಂತ ದಕ್ಕದು ಎಂಬ ಭಾವನೆ ವಿಮರ್ಶಕರಲ್ಲಿದೆ. ವೇದಾಂತಿಯಾಗಿ ಮಹಾಕವಿ ಎನ್ನಿಸುವುದು, ಕವಿಯಾಗಿ ಮಹಾವೇದಾಂತಿ ಎನ್ನಿಸುವುದು ಲಕ್ಷ್ಮೀ-ಸರಸ್ವತಿಯರು ಒಂದೆಡೆ ಸೇರುವಷ್ಟೇ ಅಪೂರ್ವದ ಸಂಗತಿ. ಅದನ್ನು ಸಾಧಿಸಿದ ವಿರಳಾತಿವಿರಳ ವ್ಯಕ್ತಿಗಳಲ್ಲಿ ಶ್ರೀವಾದಿರಾಜರದು ಅಗ್ರಶ್ರೇಣಿಯ ಹಿರಿಮೆ. ಅದೆಲ್ಲ ಮಧ್ವಸಿದ್ಧಾಂತದ ಹಿರಿಮೆ ಎಂದು ಪ್ರಾಂಜಲವಾಗಿ ನುಡಿಯುವ ಅವರ ವ್ಯಕ್ತಿತ್ವ ಲೋಕಮಾನ್ಯವೆನ್ನಿಸುವಂತಹುದು.

ಚಿತ್ರಾಲಂಕಾರರಮ್ಯಾ ಮೃದುಪದವಿಲಸನ್ನರ್ಮಗಂಭೀರಭಾವಾ
ಸತ್ಸರ್ಗಾಶ್ಚರ್ಯಬಂಧಾ ನವರಸಭರಿತಾ ಸ್ತುತ್ಯಸಂಸ್ಥಾನಯುಕ್ತಾ।
ಕಾವ್ಯಶ್ರೀರಾವಿರಾಸೀತ್ ಯದಮಲಹೃದಯಾಚ್ಛ್ರೀಪತೇರ್ಯತ್ರ ವಾಸಃ
ಸೋऽವ್ಯಾಚ್ಛ್ರೀವಾದಿರಾಜಾಮೃತಮಯಜಲಧಿರ್ಯುಕ್ತಿರತ್ನಾಕರೋ ನಃ॥
- ಶ್ರೀನಾರಾಯಣಾಚಾರ್ಯರು (ರುಗ್ಮಿಣೀಶವಿಜಯ ವ್ಯಾಖ್ಯಾನ)

ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಮ್ ।
ಸರಹಸ್ಯಂ ಸಪ್ರಮಾಣಂ ವಾದಿರಾಜವಚೋಽಮೃತಮ್ ॥
ಸಂಪ್ರದಾಯಯುತಂ ತತ್ತ್ವನಿರ್ಣಯಾಢ್ಯಂ ವಿಸಂಶಯಮ್ ।
ಅವಾರ್ಯಂ ಪಂಡಿತಾಗ್ರ್ಯೈಶ್ಚ ಪ್ರತಿಚೋದ್ಯನಿವಾರಕಮ್ ॥
ಸಸುಂದರಶಿರಃಕಂಪಂ ಪ್ರಹರ್ಷಿತಸಭಾಜನಮ್ ।
ವಿಕಾಸಿತಶ್ರೋತ್ರಮುಖಂ ವಿಕಸ್ವರವಿಲೋಚನಮ್ ॥
ಹೃಷ್ಟತನೂರುಹಂ ಗಾತ್ರೇ ಸ್ಪರ್ಶಿತಶ್ರೋತ್ರಮಾನಸಮ್ ।
ಸುಖಬೋಧಕರಂ ಶ್ರೋತುರ್ಗ್ರಾಹ್ಯಂ ಸದ್ಭಿಃ ಪುಮರ್ಥದಮ್ ॥
ವಾಗೀಶ್ವರೇಶಕಾರುಣ್ಯವಾರ್ಧಿಜಾತಂ ಸುಕೋಮಲಮ್ ।
ನಿರ್ದುಷ್ಟಂ ರಸವತ್ಸ್ಪಷ್ಟಂ ನಾನಂದಯತಿ ಕಂ ಜನಮ್ ॥

- ಶ್ರೀರಘುನಾಥಾಚಾರ್ಯರು(ವೃತ್ತರತ್ನಸಂಗ್ರಹ, ೧/೪೮-೫೨)

ಸರಸಭಾರತೀವಿಲಾಸಕ್ಕೆ ಅವರು ಮಾಡಿರುವ ಬಣ್ಣನೆ ಅವರ ಎಲ್ಲ ಗ್ರಂಥಗಳಿಗೂ ಒಟ್ಟಾಗಿ ಅನ್ವಯಿಸುವ ಅಪೂರ್ವ ಹಿರಿಮೆ:

ಚಾರ್ವಪೂರ್ವಪದಶ್ರೇಣೀಂ ದುರ್ವಾಗ್ಗರ್ವಾಪಹಾರಿಣೀಮ್ ।
ಸರ್ವೇಷ್ಟಕಾರಿಣೀಮುರ್ವೀಂ ಕುರ್ವೇ ಸರಸಭಾರತೀಮ್ ॥ - (೧-೨)

## ವ್ಯಾಖ್ಯಾತೃ ಶ್ರೀನಾರಾಯಣಾಚಾರ್ಯರು

ಸಾಮಾನ್ಯವಾಗಿ ಯಾವುದೇ ಶ್ರೇಷ್ಠ ಕೃತಿಯನ್ನು ಪೂರ್ತಿಯಾಗಿ ಅರ್ಥಮಾಡಿಕೊಳ್ಳಲು ವ್ಯಾಖ್ಯಾನದ ನೆರವು ಅನಿವಾರ್ಯ. ಶಾಸ್ತ್ರಗ್ರಂಥಗಳಂತೆ ಕಾವ್ಯಗ್ರಂಥಗಳಿಗೂ ಅನ್ವಯಿಸುವ ಮಾತು ಇದು. ಸಂಸ್ಕೃತದ ಮಹಾಕಾವ್ಯಗಳ ಮಟ್ಟಿಗೆ ಈ ಮಾತು ತುಂಬಾ ಯಥಾರ್ಥವಾದುದು. ಕಾಳಿದಾಸಾದಿಗಳ ಮಹಾಕಾವ್ಯಗಳು ಸಹ ಸೂಕ್ತ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿಯೇ ಅಧ್ಯಯನ ಮಾಡಲ್ಪಡುವುದು ಪ್ರಸಿದ್ಧವಾದ ವಿಷಯ. ಆದರೆ, ಸಂಸ್ಕೃತದ ಯಾವ ಮಹಾಕವಿಗೂ ಸಹ ಅವರ ಸಾಕ್ಷಾತ್ ಶಿಷ್ಯರೊಬ್ಬರು ರಚಿಸಿದ್ದ ವ್ಯಾಖ್ಯಾನ ಅಷ್ಟಾಗಿ ಕಂಡುಬರುವುದಿಲ್ಲ. ಶ್ರೀವಾದಿರಾಜರ ರುಗ್ಮಿಣೀಶವಿಜಯ ಈ ದೃಷ್ಟಿಯಲ್ಲೂ ಅಪೂರ್ವವೆನ್ನಿಸುವ ಮಹಾಕಾವ್ಯ.

ಶ್ರೀವಾದಿರಾಜರ ರುಗ್ಮಿಣೀಶವಿಜಯಕ್ಕೆ ಅವರ ಶಿಷ್ಯವರೇಣ್ಯರಲ್ಲೊಬ್ಬರಾದ ನಾರಾಯಣಾಚಾರ್ಯ ಎಂಬವರು ವ್ಯಾಖ್ಯಾನವನ್ನು ರಚಿಸಿರುವರು; ಅವರು ಲಕ್ಷ್ಮೀಪತಿಭಟ್ಟೋಪಾಧ್ಯಾಯ ಎಂಬವರ ಪುತ್ರ[೧]. ಗುರುಭಾವಪ್ರಕಾಶಿಕೆ ಎಂದು ಅದರ ಹೆಸರು.

೧. ಮಧ್ವಾಗಮಾಗತಜ್ಞಾನನಿರ್ಧೂತಾನ್ಯದುರಾಗಮಮ್ ।
ಲಕ್ಷ್ಮೀಪತಿಂ ನುಮಸ್ತಾತಂ ಪಕ್ಷೀಶಧ್ವಜಸಂಶ್ರಯಮ್ ॥
- ತೀರ್ಥಪ್ರಬಂಧ ವ್ಯಾಖ್ಯಾನ(ಶ್ರೀಸೋದಾಮಠದಲ್ಲಿರುವ ಹಸ್ತಪ್ರತಿ)

ಶ್ರೀವಾದಿರಾಜರ ಕೃತಿಯ ಅರ್ಥವೈಭವವನ್ನು ಸಾಕ್ಷಾತ್ತಾಗಿ ಅವರಿಂದಲೇ ಶ್ರವಣ ಮಾಡಿದ ಭಾಗ್ಯಶಾಲಿ ಅವರು. ಅದರಿಂದಾಗಿಯೇ ಅವರಿಗೆ ಅವರ ಕೃತಿಗಳ ಭಾವಾವಿಷ್ಕಾರ ಸಾಧ್ಯವಾಗಿದೆ ಎಂದು ಅವರೇ ನುಡಿದಿರುವುದು ಗಮನಾರ್ಹ. ಶ್ರೀವಾದಿರಾಜರ ಮಾತಿನ ಚಾತುರ್ಯವನ್ನು ಪೂರ್ತಿಯಾಗಿ ತಿಳಿಯುವುದು ಅಶಕ್ಯ. ಆದರೂ ಅವರ ಉಪದೇಶವನ್ನು ಸಾಕ್ಷಾತ್ತಾಗಿ ಕೇಳಿದ್ದರಿಂದಾಗಿ, ಸ್ವಲ್ಪಮಟ್ಟಿಗೆ ತಿಳಿಸಲು ತಮ್ಮಿಂದ ಸಾಧ್ಯ ಎಂಬ ಅವರ ಮಾತು ಸ್ಮರಣೀಯವಾಗಿದೆ:

ವಾದಿರಾಜೋಕ್ತಿಚಾತುರ್ಯಮಶಕ್ಯಂ ಜ್ಞಾತುಮಂಜಸಾ ।
ತಥಾಽಪಿ ವಕ್ಷ್ಯೇ ತಚ್ಛಿಕ್ಷಾಮನುಸೃತ್ಯೈವ ಲೇಶತಃ ॥ - (೧/೮)

ಹಯಗ್ರೀವಕೃಪಾದೃಷ್ಟಿದೃಷ್ಟೇನ ಕೃತಿನಾ ಮಯಾ ॥
ಗುರೂಪದೇಶಾತಿಶಯಾದ್ವಿಶೇಷೋಽಪ್ಯತ್ರ ಲಿಖ್ಯತೇ ॥ - (೭/೨)

ಶ್ರೀವಾದಿರಾಜರ ಅನುಗ್ರಹದಿಂದಾಗಿ ತಾವು ಪ್ರಾರಬ್ಧವಶಾತ್ ಒದಗಿದ್ದ ಅಪಮೃತ್ಯುವನ್ನು ಪರಿಹರಿಸಿಕೊಂಡ ಭಾಗ್ಯಶಾಲಿ ಎಂಬ ಮಾತನ್ನು ಅವರು ನುಡಿದಿರುವುದು ಇಲ್ಲಿ ಅತ್ಯಂತ ಉಲ್ಲೇಖನಾರ್ಹವಾಗಿದೆ:

ನಮೋಽಸ್ತು ವಾದಿರಾಜಾಯ ಗುರವೇ ದೀನಬಂಧವೇ ।
ಯೋ ಮಾಂ ವರಾಕಂ ಕೃಪಯಾ ಮೃತ್ಯುಗ್ರಸ್ತಮಮೂಮುಚತ್ ॥ - (೧೪/೧)

ಶ್ರೀನಾರಾಯಣಾಚಾರ್ಯರು ಶ್ರೀವಾದಿರಾಜರ ತೀರ್ಥಪ್ರಬಂಧಕ್ಕೂ ಸಹ ಇಂತಹುದೇ ಅಪೂರ್ವ ವ್ಯಾಖ್ಯಾನವನ್ನು ರಚಿಸಿರುವರು. ಹೀಗೆ ಶ್ರೀವಾದಿರಾಜರ ಎರಡು ಕಾವ್ಯಕೃತಿಗಳಿಗೂ ಸಹ ವ್ಯಾಖ್ಯಾನವನ್ನು ಒದಗಿಸಿದ ಶ್ರೇಯಸ್ಸು ಇವರದು[೧].

---

೧. ಸಾಮಾನ್ಯವಾಗಿ ಪ್ರಮೇಯಗಳ ವಿಷಯ ಬಂದಾಗಲೆಲ್ಲ 'ಇತಿ ಭಾವಃ' ಎಂಬುದಾಗಿ ಅವುಗಳನ್ನು ವಿವರಿಸುವುದು ಈ ವ್ಯಾಖ್ಯಾನಕಾರರ ವೈಶಿಷ್ಟ್ಯ; ಉದಾಹರಣೆಗಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ:
ಕ್ರೋಧೋಽಪಿ ದೇವಸ್ಯ ವರೇಣ್ಯ ತುಲ್ಯಃ ಇತ್ಯೇತದ್ವಿಷಯಂ ಭಕ್ತಜನವಿಷಯಮ್, ನಾಭಕ್ತಜನ-ವಿಷಯಮಿತಿ ಭಾವಃ ॥ (೪/೭೧)
ಲೋಚನಾವಿಷಯೇ ವಸ್ತುನಿ ಲೋಚನಬಾಹುಲ್ಯಮಪ್ರಯೋಜಕಮಿತಿ ಭಾವಃ । (೫/೫೬)
ವಿಷ್ಣುಪ್ರಣಾಮಾಭಿಷೇಕನಾಮೋಚ್ಚಾರಣಾನಾಂ ಮಹಾಪಾಪಪರಿಹಾರಹೇತುತ್ವಂ ವಿಷ್ಣುದ್ರೋಹಸ್ಯ ಮಹಾಪಾತಕತ್ವಂ ಚಾನೇನ ದ್ಯೋತ್ಯತೇ । (೬/೨೧)
ಕಿಲೇತ್ಯನೇನ ಕಥಾಯಾಃ ಪೌರಾಣಿಕತ್ವಮಭಿಪ್ರೈತಿ । (೬/೨೨)
ನಾಯಿಕಾನಾಯಕವಿಭೇದಸ್ತು ಗ್ರಂಥಗೌರವಭಯಾನ್ನ ಲಿಖ್ಯತೇ । (೬/೩೪)
ವಾಚ್ಮಾಧುರ್ಯಾತ್ ಸರ್ವಮಪಿ ಕಾರ್ಯಂ ಸಾಧಯಿತುಂ ಶಕ್ನುತ ಇತ್ಯರ್ಥಃ । 'ವಾಚ್ಮಾ-ಧುರ್ಯಾತ್ ಸರ್ವಲೋಕಪ್ರಿಯತ್ವಮ್' ಇತ್ಯನ್ಯತ್ರೋಕ್ತೇಃ । (೬/೪೧)
ಯಮಕಲಕ್ಷಣಂತು ದಂಡಿನೋಕ್ತಮ್ । .... ಇತಿ । ಅಸ್ಮಿನ್ ಶ್ಲೋಕೇ ಆದಿಪಾದಯಮಕಮ್ । (೭/೫೩)

# ಶ್ರೀರುಗ್ಮಿಣೀಶವಿಜಯ ಕಥಾಸಾರ

ಶ್ರೀರುಗ್ಮಿಣೀಶವಿಜಯ ಎಂಬ ಹೆಸರಿನಲ್ಲಿ ರುಗ್ಮಿಣೀ ಮಹಾಲಕ್ಷ್ಮಿ, ರುಗ್ಮಿಣೀಶ ಸಾಕ್ಷಾತ್ ಶ್ರೀಹರಿಯಾದ ಶ್ರೀಕೃಷ್ಣ ವಿಜಯ ಎಂದರೆ ರುಗ್ಮಿಣಿಯ ವಿಜಯ ಹಾಗೂ ಶ್ರೀಕೃಷ್ಣನ ವಿಜಯ, ರುಗ್ಮಿಣೀಪತಿಯಾದ ಶ್ರೀಕೃಷ್ಣನ ವಿಜಯ ಎಂದು ಅರ್ಥವಾಗುವುದು. ಒಟ್ಟಾಗಿ ಶ್ರೀಲಕ್ಷ್ಮೀನಾರಾಯಣರ ಮಹಾಮಾಹಾತ್ಮ್ಯವನ್ನು ನಿರೂಪಿಸುವ ಕೃತಿ ಎಂದು ಇದರ ಅರ್ಥ. ಶ್ರೀಕೃಷ್ಣನು ಪರಮಪುರುಷನಾದ ಶ್ರೀಹರಿಯಾದರೆ, ರುಗ್ಮಿಣಿಯು ಮೂಲಜಡಪ್ರಕೃತಿಗೆ ಅಭಿಮಾನಿ ದೇವತೆಯಾದ ಮಹಾಲಕ್ಷ್ಮಿ. ಎಂದರೆ, ಇದು ಒಂದು ಅರ್ಥದಲ್ಲಿ ಪ್ರಕೃತಿ-ಪುರುಷರ ಕಥೆ; ಒಟ್ಟಾಗಿ ಆಧ್ಯಾತ್ಮಿಕ ಮಹತ್ವದ ಅಪೂರ್ವ ಕೃತಿ ಎಂದಾಗುವುದು. ಶ್ರೀಮಧ್ವಪ್ರತಿಷ್ಠಿತ ಶ್ರೀರುಗ್ಮಿಣೀಕರಾರ್ಚಿತ ಶ್ರೀಕೃಷ್ಣನನ್ನು ಐದು ಪರ್ಯಾಯಗಳಷ್ಟು ಸುದೀರ್ಘಕಾಲ ಪೂಜಿಸಿದ ದಾಖಲೆಯ ಶ್ರೀವಾದಿರಾಜರ ಕೃತಿ ಎಂಬ ಕಾರಣದಿಂದಲೂ ಇದಕ್ಕೆ ವಿಶೇಷ ಮಹತ್ವವಿದೆ.

ಶ್ರೀಮದ್ಭಾಗವತ ಮಹಾಪುರಾಣದ ದಶಮಸ್ಕಂಧ[1] ಪೂರ್ವಾರ್ಧ ಸಮಗ್ರ ಹಾಗೂ ಉತ್ತರಾರ್ಧದ ರುಗ್ಮಿಣೀ ಕಲ್ಯಾಣದ ಪ್ರಸಂಗ ರುಗ್ಮಿಣೀಶವಿಜಯ ಕೃತಿಯ ಮುಖ್ಯ ವಿಷಯ. ಪೂರ್ವಾರ್ಧದ ಸಿಂಹಪಾಲು ಶ್ರೀಕೃಷ್ಣನ ಬಾಲಲೀಲೆಗಳ ವರ್ಣನೆಗೆ ಮೀಸಲು. ಆದರಿಂದಾಗಿ ಈ ಕೃತಿಯ ಬಹುಭಾಗ ಆದರ ರೋಚಕ ನಿರೂಪಣೆಗೆ ಮೀಸಲು.

ಮೊದಲ ಸರ್ಗದ ಮೊದಲ ೧೨ ಶ್ಲೋಕಗಳಲ್ಲಿ ಶ್ರೀಕೃಷ್ಣ, ಹಯಗ್ರೀವ, ರುಗ್ಮಿಣೀ, ಮಧ್ವಾಚಾರ್ಯರು, ವಾಣಿ, ಇವರ ಸ್ತೋತ್ರವು, ಮುಂದೆ ಕಾವ್ಯದ ಉದ್ದೇಶ, ಕವಿಯ ನಾಮಸಂಕೀರ್ತನೆ, ವಿನಯೋಕ್ತಿಗಳು ಬಂದಿವೆ. ಶ್ರೀಕೃಷ್ಣಾವತಾರಕ್ಕಾಗಿ ಧಾತ್ರಿಯ ಗೋರೂಪ ಧಾರಣ, ಬ್ರಹ್ಮಾದಿಗಳಿಂದ ನಡೆದ ಮಹಾವಿಷ್ಣುವಿನ ಸ್ತೋತ್ರ, ಅವತಾರಕ್ಕಾಗಿ ಶ್ರೀಹರಿಯ ಸಮ್ಮತಿ, ದುರ್ಗೆಗೆ ಆದೇಶ, ಶೇಷಾವತಾರ, ಕೃಷ್ಣಾವತಾರ, ರೋಹಿಣೀ ನಕ್ಷತ್ರ, ಅಷ್ಟಮೀ ತಿಥಿ ಮೊದಲಾದವುಗಳ ಔಚಿತ್ಯ, ವಸುದೇವ-ದೇವಕಿಯರ ಬಂಧಮೋಚನ, ವಸುದೇವ-ದೇವಕಿಯರಿಂದ ನಡೆದ ಕೃಷ್ಣಸ್ತುತಿ, ದರ್ಗಾಪ್ರಾದುರ್ಭಾವ, ಶ್ರೀಕೃಷ್ಣನೊಂದಿಗೆ ವಸುದೇವನ ಗೋಕುಲಗಮನ ಮೊದಲಾದವುಗಳು ನಿರೂಪಿತವಾಗಿವೆ.

---

ಏತತ್ಪದ್ಯಂ ವ್ಯಾಖ್ಯಾತಮಪಿ ವ್ಯವಹಿತತ್ವಾತ್ ಪುನರಪಿ ವ್ಯಾಕ್ರಿಯತೇ। (೧೦/೬೫)

ಶ್ರೀಕೃಷ್ಣವಿಯೋಗಜವಿಷಯದ್ವೇಷಾವಸ್ಥಾಯಾ ಕೃತಸ್ಯಾಪಿ ಅಧಃಶಯನಸ್ಯ ತಾಂಬೂಲಪರಿತ್ಯಾಗಸ್ಯ ಚ ಮುನಿವ್ರತಸಾಧಾರಣ್ಯಾತ್ ಮುನೀಂದ್ರವೃಂದಾಶ್ರಮಸಮ್ಮಿತಾನೀತಿ ಪ್ರಾಗುಕ್ತಮ್। ಏವಮುತ್ತರತ್ರಾಪಿ ದ್ರಷ್ಟವ್ಯಮ್। (೧೩./೧೮)

ಅನ್ಯತ್ರ ದ್ವಾತ್ರಿಂಶದುದ್ಭಾಷ್ಯಪುಂಜೈಃ ಸಮಯೋಜಯನ್ ದ್ವಾತ್ರಿಂಶದುಪನಿಷದಾಮಾಪಾತರಮಣೀಯಪೂರ್ವೋತ್ತರವಿರುದ್ಧಾರ್ಥಕದ್ವಾತ್ರಿಂಶದುದ್ಭಾಷ್ಯಾಣ್ಯಪಿ ಚಕ್ರುರಿತ್ಯರ್ಥಃ । ಯದ್ವಾ ಏಕವಿಂಶತಿಕುಭಾಷ್ಯೈಃ ಸಮಯೋಜನಯನ್ನಿತ್ಯರ್ಥಃ। (೧೩./೪೩.)

೧. ಮಾಘಕಾವ್ಯದ ವಸ್ತು ದಶಮಸ್ಕಂಧ ಉತ್ತರಾರ್ಧದ ಶಿಶುಪಾಲವಧೆ; ಶ್ರೀವಾದಿರಾಜರು ಸಹ ದಶಮಸ್ಕಂಧದ ಕಥೆಯನ್ನೇ ಆರಿಸಿಕೊಂಡದ್ದು ಸಹ ಮಾಘನ ಮಾಧ್ಯಮದಲ್ಲಿಯೇ ಅವನನ್ನು ಪರಾಭವಗೊಳಿಸುವ ಕೌಶಲವಾಗಿತ್ತು ಎಂಬುದನ್ನು ತಿಳಿಸುವುದು.

ಎರಡನೆಯ ಸರ್ಗದಲ್ಲಿ ಗೋಕುಲ ಪ್ರವೇಶ, ಗೋಕುಲದ ಬೀದಿಗಳ ಸ್ಥಳಗಳ ವರ್ಣನೆ, ದುರ್ಗೆಯ ಮಥುರಾಗಮನ, ಸೂರ್ಯೋದಯ ವರ್ಣನೆ, ನಂದಗೋಪನ ಸಂಭ್ರಮ, ಗೋಕುಲವರ್ಣನೆ, ಪೂತನಾಸಂಹಾರ, ದ್ವೇಷಾದಿಗಳಿಂದ ಮುಕ್ತಿಯು ಲಭಿಸದು ಎಂಬ ವಿಚಾರ, ಶಕಟಾಸುರ ಸಂಹಾರ - ಇವು ನಿರೂಪಿತವಾಗಿವೆ.

ತೃತೀಯ ಸರ್ಗದಲ್ಲಿ ತೃಣಾವರ್ತ ವಧೆ, ಶ್ರೀಕೃಷ್ಣನ ಡೋಲಾವೈಭವ, ಯಶೋದೆಗೆ ವಿಶ್ವರೂಪ ಪ್ರದರ್ಶನ, ಶ್ರೀಕೃಷ್ಣನ ನಾಮಕರಣ, ಅಂಬೆಗಾಲಿನ ಸಂಚಾರ, ನವನೀತಾದಿಗಳ ಚೌರ್ಯ ಹಾಗೂ ಅದರ ಅಂತರಾರ್ಥ. ಗೋಪೀಕೃಷ್ಣರ ಸಲ್ಲಾಪ, ಗೋಪಿಯರ ನಿಂದಾವಾಕ್ಯಗಳಲ್ಲಿ ವ್ಯಕ್ತವಾದ ಶ್ರೀಕೃಷ್ಣನ ಮಹಿಮೆ, ಕೃಷ್ಣ ಮಣ್ಣು ತಿಂದ ಪ್ರಸಂಗದ ಆಂತರ್ಯ, ಮತ್ತೊಮ್ಮೆ ವಿಶ್ವರೂಪಪ್ರದರ್ಶನ - ಇವು ಬಂದಿವೆ.

ನಾಲ್ಕನೆ ಸರ್ಗದಲ್ಲಿ ಯಶೋದೆಯಿಂದ ನಡೆದ ಶ್ರೀಕೃಷ್ಣನ ಸೇವೆ, ಕೃಷ್ಣನನ್ನು ಕಟ್ಟುವ ಯಶೋದೆಯ ಪ್ರಯತ್ನ, ಯಮಲಾರ್ಜುನ ಭಂಜನ, ವೃಂದಾವನಗಮನಕ್ಕೆ ಸಂಕಲ್ಪ, ವೃಕಗಳ ಸೃಷ್ಟಿ, ವೃಂದಾವನಗಮನದ ವೈಭವ, ವತ್ಸಾಸುರವಧೆ, ಬಕಾಸುರವಧೆ, ವೃಂದಾವನವಾಸ, ಕಾಲೀಯಮರ್ದನ ಪ್ರಸಂಗಗಳು ಬಂದಿವೆ.

ಐದನೆಯ ಸರ್ಗದಲ್ಲಿ ಶ್ರೀಕೃಷ್ಣನಿಂದ ನಡೆದ ದಾವಾಗ್ನಿಪಾನ, ಗ್ರೀಷ್ಮಋತುವಿನ ವರ್ಣನೆ, ಉಗ್ರಾಸುರವಧೆ, ನೀಲಾಸ್ವಯಂವರ, ಧೇನುಕಾಸುರಮಥನ, ಪ್ರಲಂಬಾಸುರಸಂಹಾರ, ಮತ್ತೊಮ್ಮೆ ದಾವಾಗ್ನಿಪಾನ, ವರ್ಷರ್ತುವರ್ಣನೆ, ಶರದೃತುವಿನ ವರ್ಣನೆ, ಹೇಮಂತ ಋತುವಿನ ವರ್ಣನೆ, ಗೋಪಿಯರ ಕಾತ್ಯಾಯನೀವ್ರತ, ಶ್ರೀಕೃಷ್ಣನಿಂದ ನಡೆದ ಗೋಪೀ-ವಸ್ತ್ರಾಪಹಾರ, ವಿಪ್ರಪತ್ನಿಯರಿಂದ ಅನ್ನಸಮರ್ಪಣೆ, ಗೋವರ್ಧನೋದ್ಧರಣಕಾರ್ಯ ನಿರೂಪಿತ.

ಆರನೆಯ ಸರ್ಗದಲ್ಲಿ ಗೋವರ್ಧನೋದ್ಧರಣದ ವಿಶ್ಲೇಷಣೆ, ಗೋವರ್ಧನವರ್ಣನೆ, ಇಂದ್ರನ ಶರಣಾಗತಿ, ಅಜಗರದಿಂದ ನಂದಗೋಪನ ಬಿಡುಗಡೆ, ಸೂರ್ಯಾಸ್ತ, ಚಂದ್ರೋದಯಗಳ ವರ್ಣನೆ, ವೇಣುಗಾನವರ್ಣನೆ, ಶ್ರೀಕೃಷ್ಣಗೋಪಿಯರ ಸಲ್ಲಾಪ, ಶ್ರೀಕೃಷ್ಣನ ತಿರೋಧಾನ, ಗೋಪಿಯರ ಶೋಕ - ಇವು ಬಂದಿವೆ.

ಏಳನೆಯ ಸರ್ಗದಲ್ಲಿ ಗೋಪಿಯರ ವಿಲಾಪ, ಅಶ್ವತ್ಥ ತುಲಸೀ, ಪದ್ಮಿನಿ, ಪದ್ಮ, ಚೂತ, ಅಶೋಕ ಮೊದಲಾದವುಗಳ ಪ್ರಾರ್ಥನೆ, ಮುರಳಿ, ವೃಂದಾವನ, ಚಂದ್ರ, ಯಾಮಿನೀ, ಯಮುನೆ, ಮಾರುತ, ಪಕ್ಷಿಸಂಕುಲ, ಪಿಕ, ಕೃಷ್ಣಸಾರ ಮೊದಲಾದವುಗಳಲ್ಲಿ ಗೋಪಿಯರ ಕೋರಿಕೆ, ಪುನಃ ಗೋಪಿಯರ ವಿಲಾಪ - ಇವು ನಿರೂಪಿತವಾಗಿವೆ.

ಎಂಟನೆಯ ಸರ್ಗದಲ್ಲಿ ಗೋಪಿಯರ ಪ್ರಲಾಪ, ಚಂದ್ರವರ್ಣನೆ, ಶ್ರೀಕೃಷ್ಣನ ಆವಿರ್ಭಾವ ಹಾಗೂ ರಾಸಕ್ರೀಡೆಯ ಪ್ರಾರಂಭ - ಇವು ವರ್ಣಿತವಾಗಿವೆ.

ಒಂಭತ್ತನೆಯ ಸರ್ಗದಲ್ಲಿ ರಾಸಕ್ರೀಡೆಯ ವರ್ಣನೆ, ಶ್ರೀಕೃಷ್ಣನು ಜಾರತ್ವಾದಿ ಸಕಲ ದೋಷದೂರ ಎಂಬುದರ ನಿರೂಪಣೆ, ವೃಂದಾವನದ ವರ್ಣನೆ ಬಂದಿವೆ.

ಹತ್ತನೆಯ ಸರ್ಗದಲ್ಲಿ ರಾಸವರ್ಣನೆಯ ಉಪಸಂಹಾರ, ಅಜಗರದಿಂದ ನಂದನ ಮೋಕ್ಷಣ, ಶಂಖಚೂಡವಧ, ಅರಿಷ್ಟಾಸುರವಧ, ಕೇಶಿವಧ, ನಾರದರಿಂದ ಕಂಸನಿಗೆ ಶ್ರೀಕೃಷ್ಣಜನ್ಮರಹಸ್ಯಕಥನ, ನಾರದಕೃತ ಶ್ರೀಕೃಷ್ಣಪ್ರಾರ್ಥನೆ, ಅಕ್ರೂರಪ್ರೇಷಣ, ಶ್ರೀಕೃಷ್ಣದರ್ಶನ- ದಿಂದ ಅಕ್ರೂರನಿಗಾದ ಸಂಭ್ರಮ, ಶ್ರೀಕೃಷ್ಣ-ಅಕ್ರೂರರ ಸಂಭಾಷಣೆ, ಮಥುರಾಗಮನದ ಉಪಕ್ರಮ, ಗೋಪಿಯರ ವಿಲಾಪ, ಅಕ್ರೂರನಿಗೆ ಲಭಿಸಿದ ಶ್ರೀಕೃಷ್ಣನ ಸಾಕ್ಷಾತ್ಕಾರ, ಯಮುನಾವರ್ಣನೆ, ಮಥುರಾಪ್ರವೇಶ, ಅಕ್ರೂರ ಮಾಡಿದ ವಿಶೇಷ ಶ್ರೀಕೃಷ್ಣಸ್ತುತಿ – ಇವು ಬಂದಿವೆ.

ಹನ್ನೊಂದನೆಯ ಸರ್ಗದಲ್ಲಿ ಶ್ರೀಕೃಷ್ಣನ ಮಥುರಾಪ್ರವೇಶ, ರಜಕಸಂಹಾರ, ತ್ರಿವಕ್ರೆಯ ಉದ್ಧಾರ, ಶಿವಧನುರ್ಭಂಗ, ಸೂರ್ಯಾಸ್ತ ವರ್ಣನೆ, ಶ್ರೀಕೃಷ್ಣನ ಪರಾಕ್ರಮ ಶ್ರವಣದಿಂದ ಕಂಸನಿಗಾದ ಭಯ, ಕುವಲಯಾಪೀಡಾದಿಗಳ ವಧ, ಶ್ರೀಕೃಷ್ಣಬಲರಾಮರ ರಂಗಪ್ರವೇಶ, ಚಾಣೂರ-ಮುಷ್ಟಿಕಾದಿಗಳ ವಧ, ಕಂಸಸೇನೆಯ ಸಂಹಾರ, ಹಾಗೂ ಕಂಸವಧೆ ಮತ್ತು ವಿಶ್ರಾಂತಿತೀರ್ಥದ ವರ್ಣನೆ – ಇವು ನಿರೂಪಿತವಾಗಿವೆ.

ಹನ್ನೆರಡನೆಯ ಸರ್ಗದಲ್ಲಿ ಉಗ್ರಸೇನನಿಗೆ ರಾಜ್ಯಪ್ರಾಪ್ತಿ, ಶ್ರೀಕೃಷ್ಣಮಾಹಾತ್ಮ್ಯ, ಮಥುರಾವರ್ಣನೆ, ಶ್ರೀಕೃಷ್ಣ-ಬಲರಾಮರ ಉಪನಯನ ಹಾಗೂ ಗುರುಕುಲವಾಸ, ಶ್ರೀಕೃಷ್ಣನಿಂದ ಗುರುಪುತ್ರನ ಆನಯನ, ಮಥುರಾ ವರ್ಣನೆ ಹಾಗೂ ಉಗ್ರಸೇನನಿಗೆ ಅಮಾತ್ಯರು ಮಾಡಿದ ರಾಜನೀತಿಯ ಉಪದೇಶ – ಇವು ಬಂದಿವೆ.

ಹದಿಮೂರನೆಯ ಸರ್ಗದಲ್ಲಿ ಉದ್ಧವನ ಗೋಕುಲಗಮನ, ಗೋಕುಲಪ್ರವೇಶ, ಉದ್ಧವನಿಗೆ ದೊರೆತ ಅಪೂರ್ವ ಸ್ವಾಗತ, ಉದ್ಧವನನ್ನು ಕಂಡು ಗೋಪಿಯರಿಗಾದ ಸಂಭ್ರಮ, ಭ್ರಮರಗೀತೆ, ಉದ್ಧವನ ಮಥುರಾಗಮನ, ಜರಾಸಂಧನ ಸಮರೋದ್ಯಮ, ಮಥುರೆಯ ಆಕ್ರಮಣ, ಕೃಷ್ಣ ಮಾಡಿದ ಯುದ್ಧದ ವೈಭವ – ಇವು ನಿರೂಪಿತವಾಗಿವೆ.

ಹದಿನಾಲ್ಕನೆಯ ಸರ್ಗದಲ್ಲಿ ಶ್ರೀಕೃಷ್ಣನಿಂದ ಜರಾಸಂಧನ ಪರಾಭವ, ಜರಾಸಂಧ ಮಾಡಿದ ಮತ್ತಷ್ಟು ಯುದ್ಧಗಳು ಹಾಗೂ ಅವನ ಪರಾಭವ, ದ್ವಾರಕೆಯ ನಿರ್ಮಾಣ, ಕಾಲಯವನವಧೆ, ಮುಚುಕುಂದನ ಉದ್ಧಾರ, ಶ್ರೀಕೃಷ್ಣನಿಗೆ ರುಗ್ಮಿಣೀ ಕಳುಹಿಸಿದ ಪತ್ರ ಸಂದೇಶ, ಶ್ರೀಕೃಷ್ಣನ ವಿದರ್ಭಗಮನ, ಕೃಷ್ಣದರ್ಶನದಿಂದ ವಿದರ್ಭದ ಜನತೆಗೆ ಆದ ಸಂಭ್ರಮ, ರುಗ್ಮಿಣಿಯ ಕುಲದೇವತಾಯಾತ್ರೆ, ಜರಾಸಂಧಾದಿಗಳ ಪರಾಜಯ, ರುಗ್ಮಿಣೀಹರಣ – ಇವು ಬಂದಿವೆ.

ಹದಿನೈದನೆಯ ಸರ್ಗದಲ್ಲಿ ಪುನಃ ಜರಾಸಂಧಾದಿಗಳ ಪರಾಭವ, ರುಗ್ಮಿಯ ಪರಾಭವ, ಶ್ರೀಕೃಷ್ಣ-ರುಗ್ಮಿಣಿಯರ ದ್ವಾರಕಾಗಮನ, ಮೂಲಮಾಧವ ಕ್ಷೇತ್ರದ ವರ್ಣನೆ, ಸಮುದ್ರವರ್ಣನೆ, ಮೂಲಮಾಧವಕ್ಷೇತ್ರದಲ್ಲಿ ನಡೆದ ವಾಙ್ನಿಶ್ಚಯ, ಶ್ರೀಕೃಷ್ಣನ ಕಾಶೀಯಾತ್ರೆ ಮೊದಲಾದವುಗಳು ಬಂದಿವೆ.

ಹದಿನಾರನೆಯ ಸರ್ಗದಲ್ಲಿ ರುಗ್ಮಿಣೀಸ್ವಯಂವರದ ವರ್ಣನೆ, ರುಗ್ಮಿಣಿಯಿಂದ ಶ್ರೀಕೃಷ್ಣನಿಗೆ ಮಾಲಾರ್ಪಣೆ, ವಿವಾಹ ಸಂಭ್ರಮ, ದ್ವಾರಕಾಪ್ರವೇಶ, ಸಮುದ್ರವರ್ಣನೆಗಳು ಬಂದಿವೆ.

ಹದಿನೇಳನೆಯ ಸರ್ಗದಲ್ಲಿ ಮುನಿಜನರು ಮಾಡಿದ ಇತರ ಅವತಾರಗಳಿಂದ ಘಟಿತವಾದ ಶ್ರೀಕೃಷ್ಣಸ್ತುತಿ, ದ್ವಾರಕಾವರ್ಣನೆ - ಇವು ವಿಸ್ತಾರವಾಗಿ ಬಂದಿವೆ.

ಹದಿನೆಂಟನೆಯ ಸರ್ಗದಲ್ಲಿ ಶ್ರೀಕೃಷ್ಣರುಗ್ಮಿಣಿಯರ ಆಪಾದಮೌಲಿಪರ್ಯಂತ ವರ್ಣನೆ ವಿಸ್ತಾರವಾಗಿ ನಿರೂಪಿತವಾಗಿದೆ.

ಹತ್ತೊಂಭತ್ತನೆಯ ಸರ್ಗದಲ್ಲಿ ರುಗ್ಮಿಣಿಯ ಗಂಡಸ್ಥಲ ವರ್ಣನೆ, ಮೂಗುತಿಯ ವರ್ಣನೆ, ಕಟಾಕ್ಷವರ್ಣನೆ, ಅಲಕರಾಶಿಯ ವರ್ಣನೆ, ಮೌಲಿ ವರ್ಣನೆ ಬಂದಿದ್ದು ಮುಂದೆ ಶ್ರೀಕೃಷ್ಣನೊಂದಿಗೆ ಜಾಂಬವತಿ ಮೊದಲಾದವರೊಂದಿಗಿನ ಪರಿಣಯ, ಕಾವ್ಯದ ಮುಖ್ಯ ಸಂದೇಶವಾದ ವಿಷ್ಣುಸರ್ವೋತ್ತಮತ್ವದ ಪ್ರತಿಪಾದನೆ, ಶ್ರೀಕೃಷ್ಣ ಮಾಡಿದ ಕೈಲಾಸ ಯಾತ್ರಾ ಪ್ರಸಂಗದ ಆಂತರ್ಯದ ನಿರೂಪಣೆ, ಪ್ರದ್ಯುಮ್ನನ ಜನನ, ಅನಿರುದ್ಧನ ಜನನ, ವಜ್ರನ ಹುಟ್ಟು, ದ್ವಾರಕೆಯ ವರ್ಣನೆ, ಕುಶಸ್ಥಲೀಯ ವರ್ಣನೆ, ಶ್ರೀಕೃಷ್ಣನ ಮಾಹಾತ್ಮ್ಯದ ನಿರೂಪಣೆ, ಕಾವ್ಯದ ವರ್ಣನೆ, ಶ್ರೇಯಃಪ್ರಾರ್ಥನೆ, ಕಾವ್ಯಪ್ರಶಸ್ತಿಗಳೊಂದಿಗೆ ಕೃತಿಯು ಮುಕ್ತಾಯವಾಗಿದೆ.

ರುಗ್ಮಿಣೀಶವಿಜಯವು ಮಹಾಕಾವ್ಯದ ಸಕಲ ಲಕ್ಷಣಗಳನ್ನು ಹೊಂದಿರುವ ವಿಶಿಷ್ಟ ಕೃತಿ. ಇದರಲ್ಲಿ ಸೂರ್ಯೋದಯ ವರ್ಣನೆ (೨/೯-೧೫, ೨೨-೨೫); ಸೂರ್ಯಾಸ್ತವರ್ಣನೆ (೬/೨೪-೩೩., ೧೧/೧೫-೧೬); ಚಂದ್ರೋದಯವರ್ಣನೆ (೬/೩೪-೩೬); ವಸಂತ-ವರ್ಣನೆ (೪/೪೪-೪೬); ಗ್ರೀಷ್ಮವರ್ಣನೆ (೫/೪-೬, ೫/೧೫-೧೯); ವರ್ಷರ್ತುವರ್ಣನೆ (೫/೩೦-೩೬); ಶರದೃತುವರ್ಣನೆ (೫/೩೭-೩೯); ಹೇಮಂತಋತುವರ್ಣನೆ (೫/೪೦,೪೧); ಗೋವರ್ಧನಪರ್ವತ ವರ್ಣನೆ (೬/೩.-೧೬); ಮಧುರಾನಗರವರ್ಣನೆ (೧೭/೨೬-೭೦, ೧೯/೩೩.,೩೪); ಯುದ್ಧವರ್ಣನೆ (೧೩./೪೪-೬೪); ಪ್ರಯಾಣವರ್ಣನೆ (೧/೫೫,೬೬, ೧೫/೧೫-೨೩.); ದೂತವರ್ಣನೆ (೧೧/೧೬-೨೮); ಬೃಂದಾವನವರ್ಣನೆ (೪/೨೧-೨೪, ೯/೬೧-೬೪); ವಿವಾಹವರ್ಣನೆ (೫/೨೦, ೧೭ನೇ ಸರ್ಗ, ೧೯/೧೨); ವಿಪ್ರಲಂಭವರ್ಣನೆ (೬/೬೪-೬೬, ೭/೧, ೭ನೇ ಸರ್ಗ, ೮/೧-೧೧, ೩೯-೪೫, ೧೩./೧೭-೨೭); ರಾಸಕ್ರೀಡಾವರ್ಣನೆ (೯/೧-೫೭); ಗೋಪೀವಿಲಾಪವರ್ಣನೆ (೧೦/೩೪-೪೨) ಮತ್ತು ಮಂತ್ರವರ್ಣನೆ (೧೨/೩೯-೬೯).

ಶ್ರೀವಾದಿರಾಜರ ಅಪೂರ್ವವರ್ಣನಕೌಶಲಕ್ಕೆ ಕೆಲವು ಉದಾಹರಣೆಗಳು ಹೀಗಿವೆ:

ಯದುವಂಶಮಣಿಯಾದ ಶ್ರೀಕೃಷ್ಣನ ಅವತಾರದಿಂದ, ಭುವನಕ್ಕೆ ವೈಭವ ನೀಡುವ ಮಣಿಯಾದ ಕಮಲಗಳು ಭೂಮಿಯಲ್ಲಿ ಅರಳಿದವು; ಸ್ವರ್ಗಲೋಕದಲ್ಲಿ ದೇವತೆಗಳ ಮುಖಕಮಲಗಳು ಅರಳಿದವು[೧].

---

೧. ದಿವಿ ದ್ಯುರತ್ನೇಽಭ್ಯುದಿತೇಽಂಬುಜಾನಿ ಭುವಿ ಪ್ರಸೇದುರ್ಭುವನೋದಯಾನಿ ।
ಇಹ ಪ್ರಜಾತೇ ಯದುವಂಶರತ್ನೇ ಸುರಾನನಾಬ್ಜಾನಿ ಚ ನಾಕಿಲೋಕೇ ॥ - ೨/೧೧

ಜನರು ಶಾಂತಸ್ವಭಾವದವರಿಗೆ ಅಂಜುವುದಿಲ್ಲ, ಅವರೇನಿದ್ದರು ಅಂಜುವುದು ನಿಷ್ಠುರಿಗಳಿಗೆ ಮಾತ್ರ ಎಂಬುದನ್ನು ನಿರೂಪಿಸಿರುವ ವೈಖರಿ[೧].

ಯಶೋದೆ ಶ್ರೀಕೃಷ್ಣನನ್ನು ಬಗೆಬಗೆಯಲ್ಲಿ ಲಾಲಿಸಿದ ವೈಖರಿ[೨]:

ಶಿಶುರೂಪದ ಶ್ರೀಕೃಷ್ಣ ಹಾಗೂ ಯಶೋದೆ ಇವರ ಪರಸ್ಪರ ಉಕ್ತಿ-ಪ್ರತ್ಯುಕ್ತಿಗಳ ಮೂಲಕ ನಿದ್ರೆಯ ತತ್ತ್ವವನ್ನು ಆವಿಷ್ಕರಿಸುವ ಶ್ರೀವಾದಿರಾಜ ಕೌಶಲ[೩]:

ಶ್ರೀಕೃಷ್ಣ ಗೋ-ಗೋಪ-ಗೋಪಿಯರ ಸಮೇತ ವೃಂದಾವನಕ್ಕೆ ಆಗಮಿಸಿದಾಗ ವೃಂದಾವನವು ಶ್ರೀಕೃಷ್ಣನನ್ನು ಸ್ವಾಗತಿಸಿದ ಪರಿ[೪]:

ಶ್ರೀಕೃಷ್ಣನು ವೃಂದಾವನದಲ್ಲಿ ಶಾರ್ದೂಲವಿಕ್ರೀಡಿತವನ್ನು ಮಾಡಿದ ಎಂಬುದನ್ನು ಶಾರ್ದೂಲವಿಕ್ರೀಡಿತವೃತ್ತದಲ್ಲಿಯೇ ತಿಳಿಸಿರುವ ಕೌಶಲ[೫]:

ಯಮುನೆಯು ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಸಂಭ್ರಮಿಸಿದ ರೀತಿ[೬]:

---

೧. ವಿಧೌ ಪ್ರಶಾಂತೇಽಭ್ಯುದಿತೇ ಜನೋಽಯಮಭುಂಕ್ತ ಭೋಗಾನ್ ಪುನರುಷ್ಣಭಾನೌ ।
ಕರೋತಿ ಧರ್ಮಾಂಶ್ಚಕಿತಸ್ತಥಾ ತದ್ಬಿಭೇತಿ ಸರ್ವಃ ಪರುಷಾನ್ನ ಶಾಂತಾತ್ ॥ - ೨/೨೨

೨. ಗಂಡಂ ವರಾಂಗುಲಿದಲೈರ್ಲಘು ಚಾಲಯಂತೀ ಮಂದಸ್ಮಿತಾನನಮಥೋ ಪರಿರಂಭಯಂತೀ ।
ಸಾಂದ್ರಸ್ತನಸ್ರುತಪಯಃ ಕಿಲ ಪಾಯಯಂತೀ ನಂದಸ್ಯ ರಾಜ್ಞ್ಯಭವದಿತ್ಥಮಹರ್ನಯಂತೀ ॥ - ೩/೧೦

೩. ನಿದ್ರಾಮಾಶ್ರಯ ಕಿಂ ತದಾಶ್ರಯಫಲಂ ಭುಕ್ತಂ ವ್ರಜೇಜ್ಜೀರ್ಣತಾಂ
ನಿದ್ರಾ ಕಾಽಂಬ ನಿಮೀಲಿತಾಕ್ಷಿಯುಗಲಃ ಪ್ರಾಜ್ಞಂ ಯದಾಲಿಂಗತಿ ।
ಅಸ್ತ್ವೇವಂ ತ್ವಿತಿ ಮುದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತತ್
ಸರ್ವಂ ಜೀರ್ಣಮಥೋ ದಿಶೇತಿ ಜನನೀಂ ಶಂಸನ್ ನಿಜಂ ಸೋಽವತಾತ್॥ - ೩/೧೨
ಮಾತರ್ಗಾಯಸಿ ಕಿಂ ಸದಾ ಜಲನಿಧೌ ಶೇಷಾಂಗಸಂಶಾಯಿನಂ
ತಾತಾಸೌ ನನು ನಿದ್ರಯಾ ಪರಿವೃತೋ ದದ್ಯಾತ್ ತವಾಪೀತಿ ತಾಮ್ ।
ಏವಂ ಚೇದ್ಗದಿತಂ ತ್ವದೀಯಮಖಿಲಂ ತತ್ಕರ್ಣದೇಶಂ ಕಥಂ
ಯಾತೀತಿ ಪ್ರತಿಪಾದಯನ್ ನಿಜಮತಂ ಪಾಯಾದ್ಯಶೋದಾಸುತಃ ॥ - ೩/೧೩

೪. ಪುಷ್ಪೈರ್ವೃಕ್ಷಗಣಾ ಮನೋಜ್ಞವಚನೈಃ ಕೀರಾಃ ಸ್ವರೈಃ ಕೋಕಿಲಾ
ನೃತ್ತೈಃ ಕೇಕಿವರಾ ಗಜಾಶ್ಚ ಗತಿಭಿಃ ಶೈಲಾಃ ಸ್ರವನ್ನಿರ್ಝರೈಃ ।
ಸುಚ್ಛಾಯೈರ್ಮಣಿಕುಟ್ಟಿಮಸ್ಥಲಚಯೈಃ ಸಾ ಭೂರ್ಮೃಗಾ ವೀಕ್ಷಣೈ-
ಸ್ತದ್ವೃಂದಾವನಮಚ್ಯುತಾರ್ಹಭವನಂ ನೂನಂ ತದಾ ತೇನಿರೇ ॥ - ೪/೨೨

೫. ತದ್ವೃಂದಾವನಭೂಗಣಂ ಪದರುಚಾ ಪ್ರಾಗಂಕಯನ್ ಸೋಽಸಕೃತ್
ಪಶ್ಚಾತ್ ತದ್ಗಮರುದ್ಗಣಂ ಚ ವರಯನ್ ಕುರ್ವನ್ನಿವಾಂತರ್ವನಮ್ ।
ಸದ್ಭಾಸ್ವದ್ಗಣಶೋಭಿ ಲೇಖಸವಯೋಹೃದ್ವ್ಯೋಗಣೌ ಚಾಶ್ರಯನ್
ಲಕ್ಷ್ಮೀಶೋಽನುಕರೋತಿ ತತ್ರ ವಿಚರನ್ ಶಾರ್ದೂಲವಿಕ್ರೀಡಿತಮ್ ॥ - ೪/೨೮

೬. ಕೃಷ್ಣಾಲಿಂಗನಕಾತರೈಃ ಕರಸಮೈರೋಘೈರ್ನಿವೃತ್ತೈರಿವ
ಸ್ವಪ್ರಾಂತಸ್ಥಿತತತ್ಪದಾಂಕಮುರಸಾ ಧರ್ತುಂ ಧಿಯೇವಾರ್ಕಜಾ ।

ಶ್ರೀಕೃಷ್ಣನ ಕಾಲೀಯಮಥನದ ವೈಭವದ ವರ್ಣನೆ[೧]:

ಶರದೃತುವು ಕಾಲಿಟ್ಟದ್ದನ್ನು ಶ್ರೀಮನ್ಮಧ್ವಾಚಾರ್ಯರು ಸಚ್ಛಾಸ್ತ್ರಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾದದ್ದಕ್ಕೆ ಹೋಲಿಸುವ ರೀತಿ[೨]:

ಸ್ತ್ರೀಯರು ಸಹ ಭಗವದಾರಾಧನೆಗೆ ಅರ್ಹರು ಎಂಬ ತತ್ತ್ವದ ನಿರೂಪಣೆ[೩]:

ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಕೈಯಲ್ಲಿ ಎತ್ತಿಹಿಡಿದಾಗಿನ ದೃಶ್ಯ ಗೋವರ್ಧನಗಿರಿಯು ಸಹ ರೋಮಾಂಚನಗೊಂಡಂತಿತ್ತು ಎಂಬ ರೋಮಾಂಚಕರವಾದ ವರ್ಣನೆ[೪]:

ಗೋವರ್ಧನಗಿರಿಯನ್ನು ಕೈಯಲ್ಲಿ ಎತ್ತಿಹಿಡಿದಿದ್ದ ಶ್ರೀಕೃಷ್ಣ ಸಂಪುಟದಲ್ಲಿ ಎಂಬಂತೆ ಕಂಗೊಳಿಸಿದ ಎಂಬ ವಿವರಣೆ[೫]:

'ಶಿಶುವಿನ ಕೈಯಲ್ಲಿ ಸಾವಿರ ಆನೆಗಳು ಇವೆ' ಎಂಬ ಸಮಸ್ಯಾಪೂರ್ತಿಯ ಶ್ಲೋಕ[೬]:

ಗೋವರ್ಧನೋದ್ಧಾರದ ಬಳಿಕ ಅಲ್ಲಿ ನೆಲೆಸಿದ್ದ ಪ್ರಶಾಂತ ವಾತಾವರಣದ ವರ್ಣನೆ[೭]:

---

ಸುಪ್ರೇಮಾಂಬುಧಿಮಿತ್ರಣಾದಿವ ಜಗದ್ವಂದ್ಯಸ್ಯ ಪಾತಾದಿವ
ಸ್ನಿಗ್ಧಾ ತಂ ಮದನಾಕೃತಿಂ ಸ್ವಹೃದಯೇನಾಶ್ಲಿಷ್ಯ ಸಾಽವರ್ಧತ ॥ - ೪/೫೮

೧. ಅನೀನದತ್ ಪದ್ಮಭವೋ ಮೃದಂಗಂ ಜಗೌ ಹನೂಮಾನ್ ಜಗತಾಮಧೀಶಮ್ ।
ಅದರ್ಶಯತ್ ತಾಲಗತೀಃ ಕಪರ್ದೀ ನನರ್ತ ಗೋಪಾಲಕಬಾಲಮೌಲಿಃ ॥ - ೪/೬೮

೨. ರಾಮಾಯೋಗಿಜನಸ್ಯ ಭೀಮಚರಿತಃ ಸದ್ವಂಶಜಾತಂ ಮುಹುಃ
ಪ್ರೇಮಾಲಂಬನಶಬ್ದಹೃದ್ಯವದನಂ ಕುರ್ವನ್ ಸ್ವಕೀಯಾಗಮೈಃ ।
ಸುಕ್ಷೇಮಂ ಸುಮನಶ್ಚಯಸ್ಯ ವಿದಧತ್ ಸುವ್ಯಾಪ್ತಮೂರ್ತಿಃ ಕ್ಷಿತೌ
ಸಚ್ಛಾಸ್ತ್ರೇ ಸುಖತೀರ್ಥವನ್ಮರುದಭೂನ್ಮೂರ್ಧಾಭಿಷಿಕ್ತಸ್ತದಾ ॥ - ೫/೩೯

೩. ವಿಪ್ರಾಂಗನಾಃ ಸ್ವಪ್ರಭವೇ ಪ್ರಹೃಷ್ಟಾಃ ಪ್ರತ್ಯರ್ಪ್ಯ ಸರ್ಪಿರ್ದಧಿಪಾಯಸಾದಿ ।
ಮುಕ್ತಿಂ ಕರಸ್ಥಾಂ ಕಿಲ ತಾ ವಿತೇನುಃ ಪುಂಸ್ತ್ವೇನ ಕಿಂ ಪೂರುಷಮೌಲಿಭಾಜಾಮ್ ॥ - ೫/೫೩

೪. ಪ್ರಸೂನಕೋಶೈರ್ಘನವರ್ಷಪಾತನಿಪಾತಿತೈರಂಕಿತಸರ್ವಗಾತ್ರಃ ।
ಮುಕುಂದಹಸ್ತಾಂಬುಜಸಂಗಸೌಖ್ಯಪ್ರಹೃಷ್ಟರೋಮಾಲಿರಿವಾದ್ರಿರಾಸ್ತೇ ॥ - ೬/೯

೫. ಪಯಃಶ್ರಿತಸ್ವಪ್ರತಿಬಿಂಬಲೋಲಂ ಪತತ್ಪ್ರಸೂನಾಂಚಿತಶೃಂಗಜಾಲಮ್ ।
ಸ್ವಕುಕ್ಷಿಮಧ್ಯಾರ್ಪಿತನಂದಬಾಲಂ ಜನೋಽದ್ಭುತಂ ಸಂಪುಟಮಾಶಶಂಕೇ ॥ - ೬/೧೧

೬. ಸ ಪರ್ಯಟತ್ಕುಂಜರಪುಂಜಶೋಭಂ ಧರಂ ಯದಾ ಶ್ರೀಪತಿರುದ್ದಧಾರ ।
ತದಾ ಸಮಸ್ಯಾಂ ಪರಿಪೂರಯಂತಿ ಶಿಶೋಃ ಕರೇ ಹಸ್ತಿಸಹಸ್ರಮಸ್ತಿ ॥ - ೬/೧೩

೭. ಧಾರಾ ನೈವ ಪಯೋಮುಚಾಂ ಯದುಪತೇ ಪ್ರೇಮಾಶ್ರುಧಾರಾ ಪರಂ
ಸ್ವಾನಾಂ ನಾಪಿ ಚ ಗರ್ಜಿತಂ ಸ್ತುತಿಕೃತಾಂ ಸಿದ್ಧೇಶ್ವರಾಣಾಂ ಧ್ವನಿಃ ।
ವಿದ್ಯುನ್ನಾಮರನರ್ತಕೀಕರಚಯಾಲಂಕಾರಕಾಂತಿಃ ಪ್ರಭೋ
ನೋ ವಾಯುಃ ಸುರವೃಷ್ಟಪುಷ್ಪಸವಗಾನಲ್ಪಾಲಿಪಕ್ಷೈರ್ಮರುತ್ ॥ - ೬/೧೮
ನೀಲಂ ನೈವ ನಭಃ ಸುಲಜ್ಜಿತಶಚೀಭರ್ತುರ್ಮುಖೇ ನೀಲಿಮಾ
ಮೇಘಾಃ ಕ್ವಾಪಿ ನ ಸಂತಿ ಕಿಂತು ದಿವಿಜಭ್ರಾಜದ್ವಿಮಾನಾಂಬುದಾಃ ।

ಸೂರ್ಯಾಸ್ತದ ಆಂತರ್ಯದ ನಿರೂಪಣೆ[೧]:

ಶ್ರೀಕೃಷ್ಣನ ವೇಣುಗಾನದಿಂದ ಉಂಟಾದ ಅದ್ಭುತ ಪರಿಣಾಮದ ಬಣ್ಣನೆ[೨]:

ಶ್ರೀಕೃಷ್ಣನ ವೇಣುಗಾನವನ್ನು ಕೇಳಿದಾಗ ಗೋಪಿಯರ ಬಗೆಬಗೆಯ ಪ್ರತಿಕ್ರಿಯೆ[೩]:

ಗೋಪಿಕಾಸ್ತ್ರೀಯರು ಶ್ರೀಕೃಷ್ಣನಿಗಾಗಿ ಕಾತರಿಸಿ ಸಂಚರಿಸಿದ ರೀತಿ ಕಾಮಿಗಳ ರೀತಿಯಾಗಿರದೇ ಆರಣ್ಯದಲ್ಲಿ ನೆಲೆಸಿದ ಮುನಿಗಳ ಭವಗಚ್ಚಿಂತನೆಯ ರೀತಿಯಂತಿತ್ತು ಎಂಬ ಆಧ್ಯಾತ್ಮಿಕ ಚಿಂತನೆ[೪]:

ಯಮುನೆಯು ತಮ್ಮ ಪ್ರಶ್ನೆಗೆ ಉತ್ತರ ನೀಡದಿರಲು ಗೋಪಿಯರು ಕಂಡುಕೊಂಡ ಅಪೂರ್ವ ಕಾರಣ[೫]:

ಕಮಲಪುಷ್ಪಗಳು ಗೋಪಿಯರ ಪ್ರಾರ್ಥನೆಗೆ ಓಗೊಡದಿರಲು ಬಂದಿರುವ ಕಾರಣದ ಉತ್ಪ್ರೇಕ್ಷೆಯ ರೋಚಕತೆ[೬]:

---

ತಾಮಿಸ್ರಂ ನ ಹಿ ದಿಶ್ಯಥೇದೃಶಮಪಿ ತ್ವಾಂ ಮಾನುಷಂ ಮನ್ವತಾಂ
ಚಿತ್ತೇಷ್ವಸ್ತಿ ನ ವೇಪಥುರ್ನಿಜಜನೇ ಭೀತೇಂದ್ರಗಾತ್ರೇ ಪರಮ್ ॥ - ೬/೧೯

೧. ಸ ಲಬ್ಧಜನ್ಮಾ ದಿಶಿ ವಜ್ರಪಾಣೇಃ ಪ್ರವೃದ್ಧಗಾತ್ರೋ ಗಗನಸ್ಯ ಮಧ್ಯೇ ।
ಅಗಾದ್ವಿನಾಶಂ ದ್ಯುಮಣಿಃ ಪ್ರತೀಚ್ಯಾಂ ವಿಧೇರ್ನಿದೇಶೋ ಮಹತಾऽಪ್ಯಲಂಘ್ಯಃ ॥ - ೬/೨೮

೨. ಹೃದ್ಗಂ ಹೃದ್ಯನುರಂಜಯನ್ ಸವಯಸಃ ಸಂಹರ್ಷಯನ್ ಕರ್ಷಯನ್
ಗೋಪಸ್ತ್ರೀಹೃದಯಂ ಪಶೂನ್ ಋಷಿಗಣಾನ್ ನಿಶ್ಚೇಷ್ಟಯನ್ ಸ್ವಷ್ಟಯನ್ ।
ವಿಶ್ವಂ ಸ್ವಸ್ಯ ವಶಂ ವಿಯದ್ಗ್ಲಹವಧೂಃ ಸಮ್ಮೂರ್ಛಯಂಶ್ಚಾರಣಾನ್
ಸಿದ್ಧಾನ್ ಸಂತ್ರಪಯನ್ ಸುರಾನ್ ವಿನಮಯನ್ ವೇಣುಂ ಪುಪೋಷಾಚ್ಯುತಃ ॥ - ೬/೪೭

೩. ದೋಹಂ ಕಾಪಿ ವಿಹಾಯ ಕೃಷ್ಣಸುರಭಿಂ ದೋಗ್ಧುಂ ಸಮಸ್ತೇಪ್ಸಿತಂ
ತದ್ಬಿಂಬೋಷ್ಠಸುಧಾತಿಲುಬ್ಧಹೃದಯಾ ಭುಕ್ತಿಂ ವಿಸೃಜ್ಯಾಪರಾ ।
ಕಾಂತಂ ಕಾಚನ ಸದ್ಗುಣಾರ್ಣವಭೃತೇ ಭರ್ತ್ರೇ ಸ್ಪೃಹಾಂ ಬಿಭ್ರತೀ
ತೋಕಂ ಕೃಷ್ಣವಿಹಾರಯೋಗ್ಯವಿಭವಾ ಕನ್ಯೇತಿ ಕಾಚಿದ್ಗತಾ ॥ - ೬/೫೨
ಗೋಪ್ಯನ್ಯಾऽಂಜನರೂಷಿತಂ ಸ್ವನಯನಂ ಕುರ್ವಂತ್ಯಗಾತ್ ಸತ್ವರಾ
ತಜ್ಜ್ಞಾನಾಂಜನತುಷ್ಟಧೀರಿವ ಪದೋರ್ಭೂಷಾಂ ಸ್ವದೋಷ್ಣೀತರಾ ।
ಸಂಧಾಯಾಚ್ಯುತಸನ್ನಿಧಿಂ ಸಮಗಮತ್ ಕೃಷ್ಣಾಂಘ್ರಿಸೇವಾಂ ಸದಾ
ತನ್ವಂತ್ಯಾಃ ಕರಭೂಷಣಂ ಮಮ ಭವೇತ್ ತತ್ಪಾದಯೋರ್ಭೂಷಣಮ್॥ - ೬/೫೩

೪. ತಾಃ ಪತ್ಯಪತ್ಯಭವನೇಷು ವಿರಕ್ತಚಿತ್ತಾಃ ಶ್ರೀಪುಂಡರೀಕನಯನೇಕ್ಷಣಕಾರ್ಯಸಕ್ತಾಃ ।
ಆರಣ್ಯಕೇಷು ಮುನಿವರ್ಗ ಇವಾತಿಮುಗ್ಧಾಶ್ಚೇರುರ್ವಿಮೃಗ್ಯ ಬಹುಧಾ ತಮರಣ್ಯಕೇಷು ॥ - ೬/೬೫

೫. ನೈಷಾ ನವಾಂಬುದತನುಂ ಕಥಯೇನ್ನಿಜಂ ನಃ ಸ್ವೀಯಪ್ರವಾಹಭರಧಿಕ್ಕೃತಲೋಕವಾರ್ತಾ ।
ಸಾ ಚುಂಬಿತಾಖಿಲಸರೋರುಹಕೋಮಲಾಸ್ಯಾ ಭೃಂಗಾವಲೀಭಿರಿತರಾರ್ತಿಮಜಾನತೀ ಯಾ ॥ - ೭/೧೬

೬. ಇಮಾನಿ ಲಕ್ಷ್ಮ್ಯಾಃ ಕಿಲ ನಃ ಸಪತ್ನ್ಯಾಃ ಸಮಾನನಾಮಾನಿ ಸದಾ ಗೃಹಾಣಿ ।
ಅಸ್ಮಾತ್ರಿಣೆ ಚಾಸ್ಮಾನ್ ದ್ವಿಷತಸ್ತದೀಯಪುತ್ರಸ್ಯ ತದ್ಗಚ್ಛತ ದೇಶಮನ್ಯಮ್ ॥ - ೭/೧೮

ಕೃಷ್ಣಸಾರದ ನಲಿವನ್ನು ಗೋಪಿಯರು ಉತ್ಪ್ರೇಕ್ಷಿಸಿದ ರೀತಿ[೧]:

ಕೃಷ್ಣನ ಬಗ್ಗೆ ಗೋಪಿಯರ ವಿಚಿತ್ರ ಬಗೆಯ ನಿಂದಾಸ್ತುತಿ[೨]:

ಗೋಪಿಯರ ಬಗೆಬಗೆಯ ಪ್ರಾರ್ಥನೆಗೆ ಶ್ರೀಕೃಷ್ಣ ಕಾಣಿಸಿಕೊಳ್ಳದಿರಲು ನೀಡಿರುವ ರೋಚಕವಾದ ಕಾರಣ[೩]:

ಬಗೆಬಗೆಯ ಯಮಕಾಲಂಕಾರಗಳ ವೈಭವ[೪]:

ಒಂದು ಅಪೂರ್ವ ದೃಶ್ಯಕಾವ್ಯದ ಸೊಬಗಿನ ರಾಸಕ್ರೀಡೆಯ ವೈಭವ[೫]:

---

೧. ಹೇ ಕೃಷ್ಣಸಾರ ಕೃತಕೌತುಕಮಾತ್ಮದೃಷ್ಟೇಃ ಶ್ರೀಕೃಷ್ಣವರ್ಷ್ಮ ಕಿಮಲಕ್ಷಿ ಭರಂ ಬಿಭರ್ಷಿ ।
ನೇತ್ರೋದಯಸ್ಯ ಮುರಲೀರವರಂಜಿತಸ್ಯ ಶ್ರೋತ್ರಸ್ಯ ಚೋನ್ನತಿರಿಯಂ ಭವತಸ್ತ್ವಕಾಸ್ತಿ ॥ -೭/೪೧
೨. ಅನೃತಲಪಿತಮೇನಂ ಸಾರ್ಥಯಧ್ವಂ ತಥಾ ತದ್ವಿದಧತಿ ಬತ ಚೇತಃ ಪ್ರಾರ್ಥನಾಶೀಲಮೇತೇ ।
ಪರಭೃತಶುಕಭೃಂಗಾ ಗೀತವಾಕ್ಯಾಲಕಾಭಾಃ ಪಥಿ ಪಥಿ ಪರಮಸ್ಯ ಶ್ರೀಮುಖಶ್ರೀಶ್ಚ ಚಂದ್ರಃ ॥ -೭/೪೪
೩. ವೃಕ್ಷೇಷು ಪಕ್ಷಿಷು ಮೃಗೇಷು ವಿಚಾರಯಂತೀಃ ಪ್ರೇಕ್ಷ್ಯ ಪ್ರಮುಗ್ಧಹೃದಯಾಃ ಶ್ರುತತತ್ತ್ವಕಾಂತೀಃ ।
ಆವಿರ್ಬಭೂವುರಪಿ ರಮ್ಯತದೀಯವಾಕ್ಯಭಾವಂ ಪ್ರವಿವಿದಿಷುಃ ಸ ತದಾ ತಿರೋಽಭೂತ್ ॥- ೭/೫೨
೪. ರಮಾ ನಯಾಹಂಕೃತಿದೂರವೃತ್ತಿರಮಾನಯಾಽಹಂಕೃತಿದೂರವೃತ್ತಿಃ ।
ರಮಾ ನ ಯಾಽಹಂ ಕೃತಿದೂರವೃತ್ತಿರಮಾನಯಾಹಂಕೃತಿದೂರವೃತ್ತಿಃ ॥ - ೭/೬೧
ತತಾತತಾತೀತತತತ್ತ್ವತತಿತಾತೋಽತತೇ ತು ತತ್ ।
ತತ್ತಾತೌತಾತಿತೇತೀ ತೇಽತತಾತಾತೀತೇ ತತೋಽತ್ತಿ ತಾಮ್ ॥ - ೭/೬೨
ವಿರಹವಹ್ನಿಬಲಾ ಮಲಯಾನಿಲಾ ಜಗದಿವಾಖಿಲಧಾಮ ಲಯಾನಿಲಾಃ ।
ಚಲತಿ ವೀಕ್ಷ್ಯ ಭಿಯಾಽಮಲ ಯಾನಿಲಾ ಬತ ತುದಂತಿತರಾಮಲಯಾನಿಲಾಃ ॥ - ೮/೧
ನಾನಾನನಾನನುನ್ನೂನಂ ನೈನೋಽನನ್ನೇಽನ್ನಿನಾಂ ನು ನೌಃ ।
ನಾನಾನ್ನನುನ್ನೇನಾನೇನ ನೋನೋ ನೇನ ನ ನೋ ನನು ॥ - ೮/೩
ಕಮಲಾಸನಾಚ್ಚ ಭವತೋಽಭವತೋ ಮಹತೀಂದಿರಾ ಕಿಲ ತಯಾ ಲತಯಾ ।
ತರುವದ್ಭವಾನ್ ಪರಿವೃತೋಽರಿವೃತೋದಯದಾವ ಸೇದಮನು ತೇ ಮನುತೇ ॥ - ೮/೨೯
ಮುಖಸಾರಸಂ ಚ ಸುರಸಂ ಸುರಸಂಸ್ತುತ ಚಾರುಭಾವಯುಗಲಂ ಯುಗಲಮ್ ।
ನಯನಾಬ್ಜಯೋರಜ ಮನೋಜಮನೋಜಯಿ ಸುಸ್ಮಿತಂ ಹೃದಯತೇಽದಯ ತೇ ॥ - ೮/೩೭
೫. ಮಂಡಲೀಕೃತಮನೋರಮರಾಮಾ ಕುಂಡಲದ್ಯುತಿಸುದೀಪಿತಸೀಮಾ ।
ಗಂಡಚುಂಬನಕುತೂಹಲಕಾಮಾಖಂಡಿತಾನನಸರೋರುಹಧಾಮಾ ॥ - ೯/೧
ಪಾದಸಂಚರಣದರ್ಶಿತತಾಲಃ ಸ್ವಾದುಗೀತವರವಿಭ್ರಮಜಾಲಃ ।
ಮೋದಿತದ್ವಿಜಮೃಗಾಂಘ್ರಿಪಶೈಲಃ ಶ್ರೀಧರೇಕ್ಷಣರಸಾಯನಲೋಲಃ ॥ - ೯/೬
ಕೃಷ್ಣಮೂರ್ತಿಶತವಾಸವನೀಲಃ ಪುಷ್ಪಗೋಪತರುಣೀಮಣಿಮಾಲಃ ।
ಘೃಷ್ಟಪಾಣಿವರದಾಮವಿಲೋಲಶ್ಚಿತ್ರಹಾರಸರಹಾರಣಶೀಲಃ ॥ - ೯/೭
ಮಂಜುಶಿಂಜದತಿಭಾಸುರಭೂಷಃ ಕಂಜನಾಭಬಹುಸುಂದರವೇಷಃ ।
ಅಂಸಲಗ್ನಕರಸಾರಸಪಾಶಃ ಸಂಪ್ರತೋ ಜಯತಿ ರಾಸವಿಲಾಸಃ ॥ - ೯/೧೧
ಪುಂಡರೀಕಮುಖಮುಖ್ಯವಿಕಾಸಃ ಖಂಡಿತಾರಿತಿಮಿರೋರುತರಾಶಃ ।
ಶೌಂಡಮಧ್ವಕವಿವರ್ಣ್ಯವಿಲಾಸಃ ಪಾಂಡುರಂಗರವಿರತ್ರ ಲಲಾಸ ॥ - ೯/೧೨

ಶ್ರೀಕೃಷ್ಣನ ರಾಸಕ್ರೀಡೆಯ ಸೊಬಗಿಗೆ ಪಶುಪಕ್ಷಿಗಳಿಂದ ಲಭಿಸಿದ ರೋಚಕ ಪ್ರತಿಕ್ರಿಯೆ[೧]:

ಶ್ರೀಕೃಷ್ಣ ಕೇಶಿರಾಕ್ಷಸನನ್ನು ಸಂಹರಿಸಿದಾಗ ತೋರಿದ ಅದ್ಭುತ ಕೌಶಲ[೨]:

ಶ್ರೋತೃಗಳಿಗೂ ಸಂಭ್ರಮ ಹುಟ್ಟಿಸುವಂತಹ ಶ್ರೀಕೃಷ್ಣನನ್ನು ಕಂಡ ಅಕ್ರೂರನ ಸಂಭ್ರಮದ ವರ್ಣನೆ[೩]:

ಅಕ್ರೂರನು ಆದಿಪುರುಷ ನಾರಾಯಣನಾದ ಆ ಕೃಷ್ಣನಿಗೆ ವಂದಿಸಿದ; ಹೊಸಬಗೆಯಲ್ಲಿ ಕೃಷ್ಣನನ್ನು ಕಂಡ ಉತ್ಸವದ ಸಂಭ್ರಮದಿಂದಾಗಿ ಕುಣಿದಾಡಿದ; ತನ್ನ ಬಗೆಬಗೆಯ ದುರಿತರಾಶಿಯನ್ನು ನೀಗಿಸಿಕೊಂಡು ಗರ್ಜಿಸಿದ. ನಂದಗೋಪನ ತಪಸ್ಸಿನ ಫಲಶ್ರುತಿಯಾದ ಅವನನ್ನು ಅಭಿನಂದಿಸಿದ.

ಶ್ರೀಕೃಷ್ಣನು ಅಕ್ರೂರನಿಗೆ ನೀಡಿದ ಗಾಢಾಲಿಂಗನ ಅವನ ಸಂಸಾರ ಬಂಧವನ್ನೇ ಶಿಥಿಲಗೊಳಿಸುವಂತಿತ್ತು ಎಂಬ ಅದ್ಭುತ ಕಲ್ಪನೆ[೪]:

ತನ್ನನ್ನು ಸಂದರ್ಶಿಸಿದ ಅಕ್ರೂರನಿಗೆ ಶ್ರೀಕೃಷ್ಣ ಮಾಡಿದ ಕುಶಲಪ್ರಶ್ನೆ[೫]:

ಸಂಸಾರಸಾಗರವನ್ನು ದಾಟಿಸುವ ಅಪೂರ್ವನಾವೆ ಶ್ರೀಕೃಷ್ಣ ಎಂಬ ನಿರೂಪಣೆ[೬]:

---

ರಾಸೋತ್ಸವಸ್ಯ ಹಿ ರಸಂ ಭುವಿ ವರ್ಣಯೇತ್ ಕಃ ಶ್ರೀಶೋಡುರಾಜನಿಜಸೌಭಗರಂಜಿತಸ್ಯ ।
ಯದ್ಭೃಂಗಹಂಸಶುಕಕೋಕಿಲಕೇಕಿಮುಖ್ಯಾ ದ್ರಷ್ಟುಂ ಪ್ರಹೃಷ್ಟಮನಸಃ ಪರಿತಃ ಸಮೀಯುಃ ॥ - ೯/೧೫

೧. ಬರ್ಹೀ ತರ್ಹಿ ನನರ್ತ ಯಂ ಪ್ರತಿ ನಗಾಃ ಪುಷ್ಪಂ ಸಮಭ್ಯಾರ್ಚಯನ್
ಸ್ವೈರಂ ಮಂಜುರವಾ ಜಗುರ್ಮಧುಕರಾಃ ಪ್ರೈಕ್ಷಂತ ಸಾಕ್ಷಾನ್ಮೃಗಾಃ ।
ಉತ್ಕ್ಷಿಪ್ತೋಚ್ಚಫಣಾಃ ಫಣೀಶ್ವರಗಣಾಃ ಕಂಪೇನ ಯಂ ಪರ್ಯಗುಃ
ಸೋಽಯಂ ಶ್ರೀರಮಣೋ ಮಯಾ ರಚಿತಯಾ ಪ್ರೀಣಾತು ದೇವೋಽರ್ಚಯಾ - ೯/೧೭

೨. ತದ್ಧೈರ್ಯಂ ಜರಯನ್ ಬಲಂ ಚ ಶಮಯನ್ನಂಗಂ ಮುಹುಃ ಕಂಪಯ -
ನ್ನಕ್ಷೀಭ್ಯೋಽಪಟುತಾಂ ದಿಶನ್ ದೃಢತರಾನ್ ದಂತಾನ್ ಬಲಾತ್ ಪಾಟಯನ್।
ತಚ್ಛ್ವಾಸಂ ಸ್ಖಲಯನ್ ಜರೇವ ಬಹುಶಸ್ತದ್ಯೌವನಂ ದೂರಯನ್
ಹಸ್ತೋಽಸೌ ವವೃಧೇಽಂತರಂತಕಪುರಾತಿಥ್ಯಂ ದ್ವಿಷಃ ಸೂಚಯನ್ ॥ - ೧೦/೧೪

೩.. ನನಾಮ ನಾರಾಯಣಮಾದಿಪೂರುಷಂ ನನರ್ತ ನವ್ಯೋತ್ಸವಜಾತಸಂಭ್ರಮಃ ।
ನನಾದ ನಾನಾದುರಿತೌಘಮರ್ದಯನ್ ನನಂದ ನಂದಸ್ಯ ತಪಃಫಲೋದಯಮ್ ॥ -೧೦/೨೪

೪. ತಮಾಲಿಲಿಂಗೇ ದೃಢಮಚ್ಯುತಃ ಪ್ರಿಯಂ ಸತಂಕಮೇಣಾಂಕಶುಚಿಸ್ಮಿತಾನನಃ ।
ಅನಾದಿಸಿದ್ಧಂ ಭವರೂಪಬಂಧನಂ ತದಾಶ್ರಿತಂ ವಿಶ್ಲಥಯನ್ನಿವಾಂಜಸಾ ॥ - ೧೦/೨೫

೫. ಕ್ಷೇಮಃ ಕಿಂ ತವ ನಃ ಪಿತಾ ಚ ಕುಶಲೀ ಸ್ವಾಧ್ಯಾಯತೀರ್ಥಾಪ್ತಿ-
ಸ್ವರ್ಗ್ಯಾರಾಧನಮುಖ್ಯಶೋಭನಕೃತಿರ್ವಿಘ್ನೋಜ್ಝಿತಾ ವರ್ತತೇ ।
ಕಿಂ ಸಂಸಾರವಿಮುಕ್ತಯೇ ಪ್ರಯತಸೇ ಕಂಸಸ್ಯ ಕಾ ವಾ ಸ್ಪೃಹಾ
ಸ ತ್ವಂ ವೇತ್ಸ್ಯಖಿಲಂ ಯದದ್ಯ ಹಿ ಮಯಾ ಕಾರ್ಯಂ ಚ ತಜ್ಜ್ಞಾಪಯ ॥ - ೧೦/೨೭

೬. ಸಂಸಾರಾಸಾರಸಿಂಧೋರ್ಜನಿಮರಣಜರಾದ್ಯೂರ್ಮಿಭಿರ್ಬಾಧಿತಾನಾಂ
ದಾರಾಗಾರಾದಿಭಾರಾಃ ಕಿಮಿಹ ಸುಖಕರಾಃ ಪ್ರೇಮಪಾಶೈರ್ನಿಬದ್ಧಾಃ ।
ಕೃಷ್ಣ ತ್ವತ್ಪಾದಪೋತಂ ಪ್ರದಿಶ ತದನಿಶಂ ಸತ್ಪತಾಕಂ ಸಕೇತುಂ
ರಮ್ಯಂ ಕರ್ಮಂದಿಗಮ್ಯಂ ಭವಜಲಧಿಭವತ್ಖೇದವಿಚ್ಛೇದಹೇತುಮ್ ॥ - ೧೦/೭೫

ಶ್ರೀಕೃಷ್ಣನು ಮೂಕತ್ವಾದಿಗಳನ್ನು ನೀಡಲಿ, ಕಾಮಕ್ರೋಧಗಳನ್ನು ಅನುಗ್ರಹಿಸಲಿ ಎಂಬ ಅಕ್ರೂರನ ಒಗಟಿನ ರೂಪದ ಕೋರಿಕೆ[೧]:

ಭಯ ಪೀಡಿತನ ಫಜೀತಿಯನ್ನು ವರ್ಣಿಸುವ ಪರಿ[೨]:

ಶ್ರೀಕೃಷ್ಣನು ಪೂತನಿ ಮೊದಲಾದವರ ಸಂಹಾರದ ಬಳಿಕ ಕಂಸನನ್ನು ಕೊಂದಿದ್ದರ ಮರ್ಮ[೩]:

ವಿಷ್ಣುಭಕ್ತನನ್ನು ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯು ಎಂದೂ ತೊರೆಯಳು[೪]:

ವಿಷ್ಣುದ್ವೇಷಿಗಳ ಬಳಿ ಮಹಾಪತಿವ್ರತೆಯಾದ ಮಹಾಲಕ್ಷ್ಮಿ ಎಂದೂ ಸುಳಿಯಳು[೫]:

ವಿಷಯಭೋಗ ನಿಜಕ್ಕೂ ವಿಷಪ್ರಾಶನವೇ ಸರಿ ಎಂಬ ನಿರೂಪಣೆಯ ಕೌಶಲ[೬]:

ಶ್ರೀಕೃಷ್ಣನ ಬಾಣವನ್ನು ಮಧ್ವಾಚಾರ್ಯರಿಗೆ ಹೋಲಿಸುವ ಚಾತುರ್ಯ[೭]:

---

೧. ಪುಣ್ಯಶ್ರೇಣ್ಯತಿದೂರಮಪ್ಯನುದಿನಂ ಮೂಕಂ ಸತಾಂ ದೂಷಣೇ-
ಷ್ವಂಧಂ ಮೀನದೃಗೀಕ್ಷಣೇಷು ಬಧಿರಂ ತ್ವದ್ಭಿನ್ನಗೋಷ್ಠೀಷು ಮಾಮ್ ।
ಪಂಗುಂ ಪಾಪಕರಪ್ರಯಾಣಕರಣೇಽಪಾಣಿಂ ಚ ತತ್ಕರ್ಮಸು
ಕ್ಲೀಬಂ ಗ್ರಾಮ್ಯರತೌ ಮುಕುಂದ ಕುರು ಮಾಂ ಮೂಢಂ ತದೀಯಸ್ಮೃತೌ ॥ - ೧೦/೭೭
ಕಾಮಸ್ತೇಽಂಘ್ರಿಯುಗಾರ್ಚನೇಽಮಲಧಿಯಾಂ ಲೋಭಃ ಸುಪುಣ್ಯಾರ್ಜನೇ
ಮಾತ್ಸರ್ಯಂ ಚರಿತಾನುಕೀರ್ತನಸುಧಾಪಾನಾನ್ಮದಃ ಶತ್ರುಷು ।
ಕ್ರೋಧೋ ಭಕ್ತಜನೇಷು ರಾಗ ಉದಯಾಚ್ಛ್ರೀವಿಟ್ಠಲಾನ್ಯತ್ರ ನೋ
ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯ ಶತ್ರುರ್ಭವೇತ್ ॥ - ೧೦/೭೮
೨. ಯುದ್ಧಾರ್ಥಂ ನ ಕದಾಪಿ ಗಚ್ಛತಿ ಗತೋಽಪ್ಯೋಜಸ್ವಿನಾಂ ಪೃಷ್ಠತ-
ಸ್ತಿಷ್ಠತ್ಯನ್ಯಮವೇಕ್ಷ್ಯ ಶಸ್ತ್ರನಿಕರಂ ಪೃಥ್ವ್ಯಾಂ ಕ್ಷಣೇನೋಜ್ಝತಿ ।
ಶತ್ರುಂ ಸ್ತೌತಿ ತೃಣಾಂಗುಲೀದಲಮದನ್ ಕಂಪೀ ಪತನ್ ಧಾವತಿ
ಸ್ತಬ್ಧೇತ್ಥಂ ಬಹುಲೋಕನಿಂದಿತದಶಾಂ ಸಂಪ್ರಾಪಯಿಷ್ಯಾಮ್ಯಹಮ್ ॥ - ೧೧/೨೬
೩.. ಧಾತ್ರೀಂ ಪ್ರಾಕ್ ಪರಿಪೋಷಣಾಯ ಪತಗಂ ವಾತಂ ವಿಲಾಸಾಯ ತಾನ್
ವತ್ಸಾನೋವೃಷಧೇನುಕಾದಿದಿತಿಜಾಂಸ್ತದ್ವಾರಪೋಧಾನಿವ ।
ಅಶ್ವೇಭೌ ರಜಕಂ ಚ ಮಾತುಲಕೃತೇ ಸಂಪ್ರೇಷ್ಯ ಮಲ್ಲಾಂಶ್ಚ ತ-
ತ್ಸೇನಾಂ ಪ್ರೇಷಯತಿ ಸ್ಮ ಗಾಢತಮಸೇ ಸಂಪ್ರೇಷಯಿಷ್ಯನ್ ಕ್ರಮಾತ್ ॥ - ೧೧/೫೮
೪. ವಿಷ್ಣುಭಕ್ತಿರತಂ ಭೂಪಂ ನೈವ ತ್ಯಕ್ಷ್ಯತಿ ತತ್ಪ್ರಿಯಾ ।
ತದ್ದ್ವೇಷಿಣೇ ನ ಸಾ ಸ್ಥಾತುಮುತ್ಸಹತೇ ಪತಿವ್ರತಾ ॥ - ೧೨/೫೮
೫. ವಿಷ್ಣೋರರ್ಭಕಸಂಕಾಶಾನ್ ವೈಷ್ಣವಾನ್ ಯಸ್ತು ನಿಂದತಿ ।
ತತ್ರಾಪಿ ನ ಸ್ಥಿರಾ ಶ್ರೀಃ ಸ್ಯಾತ್ ಪುತ್ರದ್ವೇಷಿಣಿ ಮಾತೃವತ್ ॥ - ೧೨/೬೦
೬. ವಿಷಯೇಷೂಪಭುಕ್ತೇಷು ತೃತೀಯೋಂಽಶೋಽಸ್ಯ ಜೀರ್ಯತೇ ।
ಶಿಷ್ಟಂ ತು ವಿಷಸಾರೂಪ್ಯಾತ್ ಕಷ್ಟಾಯ ಪರಿಕಲ್ಪ್ಯತೇ ॥ - ೧೨/೬೮
೭. ಹೃನ್ಮಧ್ಯಾಲಯತಃ ಸ ನಿರ್ಗತತನುಃ ಪೃಥ್ವೀಭುಜಾಮಚ್ಯುತ-
ಪ್ರೇಕ್ಷಾವಾಪ್ತಮಹೋದಯಃ ಪವನವದ್ವಿಖ್ಯಾತವೇಗಃ ಕ್ಷಿತೌ ।
ಸಚ್ಛಾಸ್ತ್ರೋದಿತಕೃಷ್ಣವಿಕ್ರಮಚಯಂ ವಿಖ್ಯಾಪಯನ್ ಸ್ವರ್ಗಿಣಾಂ
ಸುಪ್ರೀತಿಂ ಜನಯನ್ ಮುರಾಂತಕಚಮೂಂ ಪುಷ್ಣನ್ನೃಪೈಃ ಪೀಡ್ಯಿಷಃ ॥ - ೧೩/೫೬

ನಿಗ್ರಹಸ್ಥಾನಗಳಿಗೆ ನಿದರ್ಶನವಾದ ಜರಾಸಂಧನ ಸೇನೆಯ ಪರಾಭವ ಎನ್ನುವ ಕೌಶಲ[೧]:

ರುಗ್ಮಿಣಿಯು ನಿರೂಪಿಸಿದ ರುದ್ರಾದಿ ದೇವತೆಗಳ ಅಸಾಮಂಜಸ್ಯ[೨]:

ಶ್ರೀಕೃಷ್ಣನು ಮನ್ಮಥಾದಿಗಳನ್ನೂ ಮಿರಿದ ಪುರಾಣಪುರುಷ ಎಂಬ ಚೇತೋಹಾರಿ ನಿರೂಪಣೆ[೩]:

ನವಗ್ರಹಗಳು ಶ್ರೀಕೃಷ್ಣನನ್ನು ಅವಲಂಬಿಸಿರುವ ತಾತ್ವಿಕ ನಿರೂಪಣೆ[೪]:

ಶ್ರೀಕೃಷ್ಣನು ತೀರ್ಥಪಾದ ಎಂಬುದರ ವರ್ಣನೆ[೫]:

ರುಗ್ಮಿಣಿಯು ಸರ್ವತೀರ್ಥಗಳ ನಿಧಿ ಎಂಬ ವಿಶೇಷತೆಯ ನಿರೂಪಣೆ[೬]:

ರುದ್ರಾದಿ ದೇವತೆಗಳ ಪರಿಮಿತಿಯನ್ನು ವರ್ಣಿಸುವ ರೀತಿ[೭]:

---

೧. ಸಂವಾದಂ ಕಿಲ ಕೇಽಪಿ ಬಭ್ರುರಪರೇಽನುಕ್ತಿಂ ಶರೈಸ್ತಾಡಿತಾ
ನಿರ್ಯಾಂತಃ ಕಟಕಾನ್ನಿರುಂಧತಿ ನಿಜೇ ಕ್ರುದ್ಧಾ ವಿರೋಧಂ ಪರೇ।
ಧ್ವಸ್ತಾಃ ಕೇಚಿದಸಂಗತಿಂ ನಿಜಜನ್ಯೈಃ ಸರ್ವೇ ಜಯೈರ್ನ್ಯೂನತಾ-
ಮಾಧಿಕ್ಯಂ ಹತಿಭಿಃ ಪರಾಜಿತಮಭೂದಿತ್ಥಂ ತದದ್ವೈತಿವತ್ ॥ - ೧೪/೧೦

೨. ಶಂಭುಃ ಪುತ್ರಸಮಃ ಸ ಮೇ ಪುರರಿಪುಃ ಪೌತ್ರಃ ಶಶೀ ಸೋದರಃ
ಸಿಂಧುರ್ಮೇ ಜನಕಾಯಿತೋ ಮಧುಸಖೋ ಮತ್ಸೂನುಕಲ್ಪಃ ಪ್ರಭೋ।
ಅಂಬಾಽಹಂ ಸಕಲಸ್ಯ ಚೇತಿ ಕಮಲಾ ಕೃಷ್ಣೈಕಲಗ್ನಂ ಮನೋ-
ಭೃಂಗಂ ದರ್ಶಯಿತುಂ ಕೃತೋಗ್ರಶಪಥಾ ಸ್ವಂ ರೂಪಮಸ್ಪಷ್ಟಯತ್ ॥ - ೧೪/೪೩

೩.. ನಾಯಂ ಸ್ಮರಃ ಶ್ಯಾಮಲಕೋಮಲಾಂಗೋ ನಾಯಂ ಶಶೀ ವೀತಕಲಂಕಶಂಕಃ।
ನಾಯಂ ರವಿರ್ಲೋಕದೃಗಾರ್ತಿಹಾರೀ ಸೋಽಯಂ ಪುರಾಣಃ ಪುರುಷೋಽದ್ವಿತೀಯಃ -೪/೫೯

೪. ಯದ್ವಕ್ತ್ರೇ ವಿಧುಮಾಮನಂತಿ ಸುಬುಧಂ ಮುಗ್ಧಸ್ಮಿತೇ ಹಸ್ತಯೋ-
ರುದ್ಯದ್ಭೋಮಮಣಿಂ ಗುರುಂ ಕಟಿತಟೇ ಮಧ್ಯಂ ಚ ಕಾವ್ಯಾಸ್ಪದಮ್।
ಯತ್ಪಾದಸ್ಪೃಶಿ ಮಂಗಲಂ ಪದತಲೇ ಕೇತುಂ ಗತೌ ಮಂದಗಂ
ಯದ್ರೋಚಿಷ್ಟಕಿತಂ ತಮಸ್ತದನಯೋರ್ನಿತ್ಯಂ ಮುಹೂರ್ತೋದಯಃ॥ - ೧೫/೪೭

೫. ಪರಿಹೃತಭವಪಾಶ ಶ್ರೀಶ ಮಾ ಯಾಹಿ ಶೌರೇ ತ್ರಿಭುವನಪರಿಗೀತಂ ತೀರ್ಥಜಾತಂ ತ್ವಯೀಶೇ।
ವ್ರಜತಿ ಸಕಲಮಾಸೀತ್ ಪೃಷ್ಠತಃ ಸ್ಪಷ್ಟಯುಷ್ಮಚ್ಚರಣವರಣಭೂಮ್ನ್ಯಾಂ ಕ್ವಾಸ್ತಿ ತೀರ್ಥಂ ತ್ವದಗ್ರೇ -೧೫/೫೪

೬. ಭ್ರೂಕಾಶೀಂ ವರನಾಭಿಮಾನಸವತೀಂ ಹಾರಾವಲೀಜಾಹ್ನವೀಮ್
ನೀವೀದಿವ್ಯಸರಸ್ವತೀಂ ಪ್ರವಿಲಸದ್ರೋಮಾಲಿಸೂರ್ಯಾತ್ಮಜಾಮ್।
ಕಾಂಚೀಶೋಭಿಕಟಿಂ ಕುಚೋಚ್ಚಬದರೀಂ ನೇತ್ರಾಂತಯುಗ್ಮಪ್ರಭಾ-
ಕಾವೇರ್ಯಂತರಗಾಸ್ಯಚಂದ್ರಸರಸೀಂ ಯಾತ್ರಾಽಸ್ತು ಭೈಷ್ಮೀಂ ಪ್ರತಿ॥ - ೧೫/೫೯

೭. ಉಗ್ರೋಽಯಂ ಸಖಿ ಚಂಚಲೋಽಯಮಮಲೇ ಸೋಽಯಂ ರಮೇ ಗೂಢಪಾ-
ದ್ವ್ಯದ್ಧೋಽಸೌ ಜ್ವಲನೋಽಯಮೇಷ ತಪನಃ ಸದ್ವಕ್ರತುಂಡೋ ಹ್ಯಸೌ।
ಮುಗ್ಧೋಽದಂತಕ ಏಷ ದೇವಿ ಜಲರಾಟ್ ಗೋತ್ರಾಸಹೋಽಸೌ ಕ್ಷಿತಾ-
ವಿತ್ಯಾದ್ಯಾಭಿಧಯೈವ ಧಿಕ್ಕೃತಸುರಾ ಶ್ರೀರಾಸಸಾದಾಚ್ಯುತಮ್ ॥ - ೧೬/೩೯
ವೇಧಾ ವೈದಿಕಮೌಲಿರೇಷ ಪವನೋ ಮಂತ್ರಂ ಜಪನ್ ಸಂತತಂ
ಶರ್ವೋಽಸೌ ಸುವಿರಕ್ತಧೀಃ ಸ ಮಘವಾ ವ್ಯಾಪಾರಭಾರಾಕುಲಃ।

ಬ್ರಹ್ಮಾದಿಗಳಿಗೆ ನಿಷಿದ್ಧವೆನ್ನಿಸುವ ಪುಷ್ಪಗಳ ಯಾದಿಯನ್ನು ಒದಗಿಸುವ ಅಪೂರ್ವತೆ[೧]:

ಸಮುದ್ರದ ನೀರು ಉಪ್ಪು ಎಂಬುದನ್ನು ಧ್ವನಿಪೂರ್ಣವಾಗಿ ನಿರೂಪಿಸುವ ಕೌಶಲ[೨]:

ಶ್ರೀಕೃಷ್ಣನಲ್ಲಿ ವಿರುದ್ಧ ಧರ್ಮಗಳ ಸಮಾವೇಶಕ್ಕೆ ಪಾದಕಮಲಗಳ ನಿದರ್ಶನ[೩]:

ರುಗ್ಮಿಣಿಯದು ನವರತ್ನಖಚಿತ ಚಿನ್ನದಂತಹ ಅದ್ಭುತ ಶರೀರ ಎಂಬಲ್ಲಿನ ರೂಪಕ ಪರಂಪರೆ[೪]:

ಹೀಗೆ ರುಗ್ಮಿಣೀಶವಿಜಯವು ಸಾಲುಸಾಲಾಗಿ ರೋಚಕ ನಿರೂಪಣೆಯನ್ನು ಒಡಲಲ್ಲಿ ತುಂಬಿಕೊಂಡಿದೆ; ಈಗ ಉಲ್ಲೇಖಿಸಿದ ನಿದರ್ಶನಗಳು ಅದಕ್ಕೆ ದಿಕ್ಸೂಚಿ ಮಾತ್ರ.

ರುಗ್ಮಿಣೀಶವಿಜಯವು ಪ್ರೌಢಶೈಲಿಯ ಮಹಾಕಾವ್ಯ. ಹೀಗೆ ಅದರಲ್ಲಿನ ಶಬ್ದಸಂಪತ್ತು ಸಹ ಅಪೂರ್ವ; ವಿಷಯವಂತೂ ಶ್ರೀಮದ್ಭಾಗವತಪುರಾಣದ ಶ್ರೀಕೃಷ್ಣಕಥೆ. ಅದರ ಹಿನ್ನೆಲೆಯ ವೇದಾಂತ ವೈಷ್ಣವ ವೇದಾಂತ. ಈ ಹಿನ್ನೆಲೆಯಲ್ಲಿ ಕಾವ್ಯ, ಶಾಸ್ತ್ರ ಹಾಗೂ ಪುರಾಣಗಳ ಮೇಲೆ ಪೂರ್ತಿ ಹಿಡಿತವಿಲ್ಲದವರಿಗೆ ಇದರ ಅರ್ಥಾನುಸಂಧಾನ ಸುಲಭಸಾಧ್ಯವೆನ್ನಿಸದ ವಿಚಾರ. ಈ ಅರ್ಥದಲ್ಲಿ ಈ ರುಗ್ಮಿಣೀಶವಿಜಯವು ಸುಮಧ್ವವಿಜಯದಂತೆ ಒಂದು ಪ್ರೌಢ ಶಾಸ್ತ್ರಕಾವ್ಯವೆನ್ನಿಸುವುದು. ವಿದ್ವತ್ಕಾವ್ಯಗಳು ಬುದ್ಧಿ ಕೌಶಲಕೆ ನಿದರ್ಶನವೆನ್ನಿಸಿದರೆ, ಶಾಸ್ತ್ರಕಾವ್ಯಗಳು ಅಪರೋಕ್ಷಾನುಭೂತಿಗೆ ನಿದರ್ಶನವೆನ್ನಿಸುವವು.

---

ಸೂರ್ಯಃ ಪರ್ಯಟನಪ್ರಿಯಃ ಸ ತು ಶಶೀ ದೋಷಾಕರೋऽಸೌ ಸ್ಮರೋऽ-
ನಂಗಶ್ಚೇತ್ಯಖಿಲಾನುಪೇಕ್ಷ್ಯ ಕಮಲಾ ವವ್ರೇ ಯದೂನಾಂಪತಿಮ್ ॥ - ೧೬/೪೦
ಪುತ್ರೋ ಯಸ್ಯ ಸ ಪದ್ಮಭೂಃ ಫಣಿಪತಿಃ ಶಯ್ಯಾ ಖಗೇಶೋ ರಥಃ
ಶಂಭುರ್ಯಚ್ಚರಣಾಂಬುಮೌಲಿರಗಭಿತ್ ತದ್ದತ್ತಸಾಮ್ರಾಜ್ಯಭುಕ್ ।
ನಿತ್ಯಂ ಯತ್ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂ-
ಸ್ತಂ ವರ್ಯಂ ವರಯಾಂಬಭೂವ ಸುದತೀ ಸಾ ದ್ವಾರಕಾನಾಯಕಮ್ ॥ - ೧೬/೪೧

೧. ಯಾ ವೈ ಚಂಪಕಸಂಪದಾऽಬ್ಜವಸತೇರ್ದೂರ್ವಾಶ್ರಿಯಾ ಸ್ವಾತ್ಮನಃ
ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜಕಾಂತ್ಯಾ ವಿಧೋಃ ।
ಸನ್ನೀಲೋತ್ಪಲಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾऽಮತಾ
ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥ - ೧೬/೪೨

೨. ಅಸಹ್ಯವಹ್ನಿವ್ಯಥಿತೋऽಪಿ ವಾರ್ಧಿರನಂತರತ್ನಾನ್ಯುದರೇ ಪಿಧಾಯ ।
ನ ಜಾತು ಪಾನೀಯಮಪಿ ಪ್ರದತ್ತೇ ಧನಸ್ಯ ಲಾಭಾದಧಿಕೋ ಹಿ ಲೋಭಃ ॥ - ೧೬/೫೨

೩. ಧರ್ಮಾ ವಿರುದ್ಧಗತಯೋऽಪಿ ಹರೌ ವಿರೋಧಂ ಸಂತ್ಯಜ್ಯ ಸಂತಿ ಬಹುಶಸ್ತ್ವಿತಿ ಬೋಧಯಂತೌ ।
ಪದ್ಮಸ್ಥಚಂದ್ರಕಲಿಕಾದ್ಯುತಿಮನ್ನಖಾಂಕ ಶ್ರೀರುಗ್ಮಿಣೀಶಚರಣೌ ಶರಣಂ ಮಮಾಸ್ತಾಮ್ ॥ - ೧೮/೭

೪. ಸ್ವರ್ಣಾಂಗೀ ವರನೀಲರತ್ನಸದೃಶಾಪಾಂಗೀ ಪ್ರವಾಲೋಲ್ಲಸ-
ತ್ಪಾದಾ ಯಾ ಸ್ಮಿತಮೌಕ್ತಿಕಾ ಮರಕತಸ್ಕಂಧಾಭನೀಲಾಪಟಾ ।
ವೈಡೂರ್ಯಾಗ್ರ್ಯನಖಾ ನಖಕ್ಷತಲಸನ್ಮಾಣಿಕ್ಯಪುಷ್ಪೋಷ್ಠಸ-
ದ್ಗೋಮೇದಾ ರದವಜ್ರರುಕ್ ಸುರತರುಂ ನಾಸ್ಮೈ ದದೌ ಶ್ರೀಪತಿಃ ॥ - ೧೯/೫

ರುಗ್ಮಿಣೀಶವಿಜಯ ಕೃತಿಯ ಅಧ್ಯಯನ ಜಿಜ್ಞಾಸುಗಳಿಗೆ ಶ್ರೀಕೃಷ್ಣಕಥೆಯ ಬಗ್ಗೆ ಹೊಸ ಒಳನೋಟವನ್ನು ನೀಡುವುದು. ಹೆಸರಿಗೆ ಕಥೆಯಂತೆ ಕಾಣುವ ಭಗವಂತನ ಅವತಾರಚರಿತ್ರೆ ವಾಸ್ತವಿಕವಾಗಿ ಅಧ್ಯಾತ್ಮಮಯ ಎಂಬುದನ್ನು ತಿಳಿಸುವಲ್ಲಿ ಈ ಕೃತಿ ಸಾಧಿಸಿರುವ ಯಶಸ್ಸು ಅಭೂತಪೂರ್ವ.

## ಶ್ರೀಮದ್ಭಾಗವತ ಹಾಗೂ ರುಗ್ಮಿಣೀಶವಿಜಯ

ಶ್ರೀಮದ್ಭಾಗವತ ದಶಮಸ್ಕಂಧದ ಶ್ಲೋಕರೂಪದ ವ್ಯಾಖ್ಯಾನದಂತಿರುವುದು ಎಂಬುದು ರುಗ್ಮಿಣೀಶವಿಜಯದ ವೈಶಿಷ್ಟ್ಯ. ಶ್ರೀಮದ್ಭಾಗವತದ ಪ್ರತಿ ಶ್ಲೋಕದ ವ್ಯಾಖ್ಯಾನವಾಗದೆ ಟ್ಟು ದಶಮಸ್ಕಂಧದ ಅಲ್ಲಿಯ ಮುಖ್ಯ ಘಟ್ಟಗಳನೆಲ್ಲ ತಾತ್ವಿಕವಾಗಿ ಚಿಂತಿಸುವ ಕ್ರಮವನ್ನು ಅನಾವರಣಗೊಳಿಸುವುದು. ಇದರ ಅಧ್ಯಯನ ಭಾಗವತದ ಅಧ್ಯಯನಕ್ಕೆ ಪೂರಕವಾದರೆ, ಭಾಗವತದದಶಮಸ್ಕಂದದ ಅಧ್ಯಯನ ಇದರ ಅಧ್ಯಯನಕ್ಕೆ ಪೀಠಿಕೆಯಾಗುವುದು.

## ರುಗ್ಮಿಣೀಶಯವಿಜಯ- ಶ್ರೀಮದ್ಭಾಗವತನಿರ್ಣಯ- ಮಹಾಭಾರತತಾತ್ಪರ್ಯನಿರ್ಣಯ

ಶ್ರೀಮದಾಚಾರ್ಯರ ಶ್ರೀಮದ್ಭಾಗವತತಾತ್ಪರ್ಯನಿರ್ಣಯ ಹಾಗೂ ಶೀಮನ್ಮಹಾ- ಭಾರತತಾತ್ಪರ್ಯನಿರ್ಣಯ ಕೃತಿಗಳಲ್ಲಿನ ಕೃಷ್ಣಕಥಾ ಭಾಗದ ತಾತ್ವಿಕ ವಿವರಣೆಗಳನ್ನೆಲ್ಲ ಈ ಕೃತಿ ಉದ್ದಕ್ಕೂ ಒಳಗೊಂಡಿದೆ. ಶ್ರೀಮದಾಚಾರ್ಯರು ನಿರೂಪಿಸಿದ ಶ್ರೀಮದ್ಭಾಗವತ ಪ್ರತಿಪಾದ್ಯವಾದ ಶ್ರೀಕೃಷ್ಣನ ಕಥೆಯ ಅಂತರಾರ್ಥವನ್ನು ಕಂಡುಕೊಳ್ಳಲು ಇದರಿಂದಾಗುವ ಉಪಕಾರ ಅಪಾರವಾದುದು. ಸಿದ್ಧಾಂತದ ಪ್ರಮೇಯಗಳನ್ನು ಕಥಾಸರಣಿಗೆ ಅನ್ವಯಿಸುವಂತೆ ಅನುಸಂಧಾನ ಮಾಡಿಕೊಳ್ಳುವ ಅಪೂರ್ವ ರೀತಿಯನ್ನು ಈ ಕೃತಿ ಜಿಜ್ಞಾಸುಗಳಿಗೆ ನಿಧಿಯ ರೂಪದಲ್ಲಿ ನೀಡಿದೆ ಎನ್ನಬಹುದು.

## ರುಗ್ಮಿಣೀಶವಿಜಯ-ಹರಿದಾಸಸಾಹಿತ್ಯ

ಹರಿದಾಸಸಾಹಿತ್ಯಕ್ಕೆ ರುಗ್ಮಿಣೀಶವಿಜಯದ ಕಾಣಿಕೆ ಅನನ್ಯವೆನ್ನಿಸುವಂತಹುದು. ಹರಿದಾಸ- ಸಾಹಿತ್ಯ ಪೂರ್ಣಪ್ರಮಾಣದಲ್ಲಿ ವಿಕಾಸ ಹೊಂದಿದ್ದು ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು ಹಾಗೂ ಶ್ರೀವಾದಿರಾಜರು ಎಂಬ ಯತಿರಾಜರ ನೇತೃತ್ವದಲ್ಲಿ. ದಾಸಸಾಹಿತ್ಯದಲ್ಲಿ ಶ್ರೀಕೃಷ್ಣಲೀಲೆಯ ವರ್ಣನೆಯದೇ ಸಿಂಹಪಾಲು. ಅದರಲ್ಲೂ ಶ್ರೀಕೃಷ್ಣನ ಬಾಲಲೀಲೆಗಳ ವರ್ಣನೆ ದಾಸಸಾಹಿತ್ಯದ ಹೃದಯದ ಸ್ಥಾನವನ್ನು ಅಲಂಕರಿಸಿದೆ. ಅಂತಹ ಬಾಲಲೀಲಗೆಗಳ ವರ್ಣನೆಗೆ ಆ ಮೂವರು ಯತಿರಾಜರ ಕನ್ನಡ ಕೃತಿಗಳು ಒಂದು ಆಕರವಾದರೆ, ಶ್ರೀವಾದಿರಾಜರ ರುಗ್ಮಿಣೀಶವಿಜಯ ಇನ್ನೊಂದು ಮುಖ್ಯ ಆಕರ. ಶ್ರೀಮದ್ಭಾಗವತದ ಶ್ರೀಕೃಷ್ಣಲೀಲೆಯನ್ನು ಆಧ್ಯಾತ್ಮಿಕ ಚಿಂತನೆಗೆ ಅಳವಡಿಸಿಕೊಳ್ಳುವ ರೀತಿಯ ಅನಾವರಣವನ್ನು ಈ ಕೃತಿ ಅನುಪಮರೀತಿಯಲ್ಲಿ ಮಾಡಿದೆ. ಅದರ ಪ್ರಯೋಜನವನ್ನು ಪಡೆದ ಹರಿದಾಸಸಾಹಿತ್ಯ ಮಧ್ವಸಿದ್ಧಾಂತದ ಚೌಕಟ್ಟಿನಲ್ಲಿ ಶ್ರೀಮದ್ಭಾಗವತಾದಿಗಳಲ್ಲಿ ಬಂದ ಶ್ರೀಕೃಷ್ಣನ ಲೀಲಾವೈಭವವನ್ನು ಪರಿಪರಿಯಾಗಿ ನಿರೂಪಿಸುತ್ತಾ ಅದನ್ನು ಜನಮಾನಸದಲ್ಲಿ

ಅಮರವನ್ನಾಗಿಸಿದೆ. ಈ ಅರ್ಥದಲ್ಲಿ ಶ್ರೀವಾದಿರಾಜರ ರುಗ್ಮಿಣೀಶವಿಜಯದ ಅಧ್ಯಯನವನ್ನು ಹರಿದಾಸಸಾಹಿತ್ಯದ ಅಭ್ಯಾಸಿಗಳು ವಿಶೇಷವಾಗಿ ಮಾಡುವ ಅಗತ್ಯ ಎದ್ದು ಕಾಣುವುದು.

ಇಂತಹ ರುಗ್ಮಿಣೀಶವಿಜಯ ಕೃತಿಯು ಆಧುನಿಕ ವಿಮರ್ಶಕರ ಗಮನಕ್ಕೆ ಅಷ್ಟಾಗಿ ಬಂದಿಲ್ಲ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಕುರಿತ ಗ್ರಂಥಗಳಲ್ಲಿ ಈ ಕೃತಿಯ ಬಗ್ಗೆ ಗಮನಾರ್ಹ ಉಲ್ಲೇಖ ಕಂಡುಬರುವುದಿಲ್ಲ. ಉಲ್ಲೇಖಿಸುವ ಕೆಲವರು ಇದರ ಅನುಪಮ ಹಿರಿಮೆಯನ್ನು ಗಮನಿಸಿಲ್ಲ. ಹಾಗಾದರೆ ಇದಕ್ಕೆ ಕಾರಣವೇನು? ಎಂಬ ಸಂಶಯ ಮೂಡುವುದು ಸಹಜ. ಅದಕ್ಕೆ ಉತ್ತರ ಸುಲಭ. ನಮ್ಮವರ ವಿಮರ್ಶೆ ಏನಿದ್ದರೂ ಸಹ ಪಾಶ್ಚಾತ್ಯರ ವಿಮರ್ಶೆಯ ಜಾಡಿನಲ್ಲಿ ಸಾಗುವಂತಹುದು. ಈ ರುಗ್ಮಿಣೀಶವಿಜಯ ಕೃತಿಯು ಪಾಶ್ಚಾತ್ಯರ ಗಮನಕ್ಕೆ ಬಂದಿಲ್ಲ. ಅದರಲ್ಲಿ ನಮ್ಮ ಗ್ರಂಥಗಳು ಕಂಡವರ ಕೈಗೆ ಸಿಕ್ಕಬಾರದು ಎಂಬ ನಮ್ಮವರ ಅತಿ ಮಡಿವಂತಿಕೆಯ ಧೋರಣೆಯು ಕಾರಣ. ಈ ಕಾರಣದಿಂದಾಗಿ ಅನೇಕ ಅಪೂರ್ವ ಗ್ರಂಥಗಳು ಗೆದ್ದಲು ಮೊದಲಾದ ಹುಳು ಹಪ್ಪಡಿಗಳ ಪಾಲಾಗಿ ಹೋಗಿರುವುದುಂಟು. ಮಡಿವಂತಕೆ ಒಳ್ಳೆಯದೇ ಆದರು, ಅತಿ ಮಡಿವಂತಿಕೆ ಇಂತಹ ಅನರ್ಥಕ್ಕೆ ಕಾರಣವಾಗುವುದು ನಿಶ್ಚಿತ. ಇನ್ನು ನಮ್ಮ ವಿಮರ್ಶಕರಂತೂ 'ಪರಪ್ರತ್ಯಯನೇಯಬುದ್ಧಿ'ಯವರೇ. ಪಾಶ್ಚಾತ್ಯರು ಮೆಚ್ಚದ್ದನ್ನು ತಾವು ಮೆಚ್ಚಲೇ ಕೂಡದು ತಮ್ಮ ವಿವೇಕವೇ ಹೆಚ್ಚಿನವರದು.

ಹೆಚ್ಚಿನ ವಿಮರ್ಶಕರಿಗೆ ವೈಷ್ಣವ ಸಾಹಿತ್ಯ, ಅದರಲ್ಲೂ ಮಾಧ್ವ ಸಾಹಿತ್ಯವನ್ನು ಕಂಡರೆ ಮೊದಲಿಂದಲೂ ಅಷ್ಟಕ್ಕಷ್ಟೆ. ಇವರು ಬೇರೆಯವರ ಕೃತಿಗಳನ್ನು ನೋಡುವ ದೃಷ್ಟಿಯೇ ಬೇರೆ, ಮಾಧ್ವ ಕೃತಿಗಳನ್ನು ನೋಡುವ ದೃಷ್ಟಿಯೇ ಬೇರೆ. ಪರರ ಕೃತಿಗಳಲ್ಲಿ ಗುಣಗಳನ್ನು ಕಾಣುವ ವೈಶಾಲ್ಯವನ್ನು ತೋರುವ ಅವರು ಮಾಧ್ವ ಕೃತಿಗಳಲ್ಲಿ ವಿನಾಕಾರಣ ಅನಾದರವನ್ನು ತೋರಿಸುವಲ್ಲಿ ನಿಷ್ಣಾತರು. ಬ್ರಾಹ್ಮಣಸಾಹಿತ್ಯವನ್ನು ಪ್ರತ್ಯೇಕಿಸಿ ನೋಡುವ ಮನೋಭಾವದ ವಿಮರ್ಶಕರು ಒಂದುಕಡೆಯಾದರೆ, 'ವೈಷ್ಣವಾನಾಂ ಅನೇಕತ್ವಂ' ಎಂಬ ಮಾತಿನಂತೆ ನಮ್ಮವರ ಪರಸ್ಪರ ಸಹೃದಯತೆಯ ಹೊರತಾದ ಸಂಕುಚಿತ ದೃಷ್ಟಿ ಇನ್ನೊಂದು ಕಡೆ. ಇಂತಹ ಕಾರಣಗಳಿಂದಾಗಿ ರುಗ್ಮಿಣೀಶವಿಜಯದಂತಹ ಅಮೋಘ ಕೃತಿ ತನಗೆ ತಕ್ಕುದಾದ ಪ್ರಸಾರವನ್ನು ಕಂಡಿಲ್ಲ. ಮಾಧ್ವರೂ ಇದರ ವಿಶೇಷ ಅಧ್ಯಯನವನ್ನು ಮಾಡುವ ಕಾರ್ಯದಲ್ಲಿ ತೊಡಗಿಲ್ಲ. ವಿದ್ಯಾರ್ಥಿಗಳು ಇದನ್ನು ಅಧ್ಯಯನ ಮಾಡದಿರಲು ಇದು ಯಾವುದೇ ವಿದ್ಯಾಪೀಠಗಳಲ್ಲೂ ಪಠ್ಯಪುಸ್ತಕವಾಗದಿರುವುದು ಒಂದು ಕಾರಣವಾದರೆ, ತಾವಾಗಿಯೇ ಓದಿದ ವಿದ್ಯಾರ್ಥಿಗಳಿಗೆ ಯೋಗ್ಯ ಪುರಸ್ಕಾರದ ಕೊರತೆ ಮತ್ತೊಂದು ಕಾರಣ. ಆದರೆ, ಯಾವುದೇ ಒಂದು ಕಾರಣದಿಂದಾದರೂ ಈ ಕೃತಿಯನ್ನು ಒಮ್ಮೆ ನೋಡುವ ಸಹೃದಯಿ ಅದನ್ನು ಕೆಳಗಿಡಲು ಸರ್ವಥಾ ಬಯಸಲಾರ. ಅರ್ಹತೆ ಇಲ್ಲದ ಅನೇಕ ಕೃತಿಗಳಿಗೆ ಇಂದು ದೊರೆತಿರುವ ಪುರಸ್ಕಾರ ಈ ಕೃತಿಗೆ ದೊರೆತಲ್ಲಿ, ಈ ಕೃತಿಗೆ ಮಾತ್ರವಲ್ಲದೇ ಇಡೀ ಆಧ್ಯಾತ್ಮಿಕ ಪ್ರಪಂಚದ ಕೃತಿಶ್ರೇಣಿಗೆ ಲಭಿಸಿದ ಗೌರವವಾಗುವುದು. ಈ ದಿಸೆಯಲ್ಲಿ ಸಂಬಂಧಪಟ್ಟವರು ಸೂಕ್ತ ಪ್ರಯತ್ನವನ್ನು ಕೈಗೊಳ್ಳುವುದು ಇಂದಿನ ತುರ್ತು ಅಗತ್ಯಗಳಲ್ಲೊಂದು.

# ಪ್ರಸ್ತುತ ಅನುವಾದ

ಪ್ರಸ್ತುತ ಅನುವಾದದಲ್ಲಿ ಮೂಲಶ್ಲೋಕಗಳು, ಅನುವಾದ ಹಾಗೂ ವಿವರಣೆಗಳನ್ನು ಕೊಡಲಾಗಿದ್ದು ಶ್ರೀವಾದಿರಾಜರ ನಿರೂಪಣೆಗೆ ಹಿನ್ನೆಲೆಯಾಗಿರುವ ಪ್ರಮಾಣವಚನಗಳನ್ನು ಉದ್ಧರಿಸಿ ಕೊಡಲಾಗಿದೆ. ಒಂದು ದೃಷ್ಟಿಯಲ್ಲಿ ಇದು ಈಗಾಗಲೇ ನಮ್ಮ ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದಿಂದ ಪ್ರಕಾಶಿತವಾಗಿರುವ ರುಗ್ಮಿಣೀಶವಿಜಯದ ವ್ಯಾಖ್ಯಾನ ಸಮೇತವಾದ ಸಂಪುಟದ ಕನ್ನಡ ಆವೃತ್ತಿಯಂತೆ ಸಿದ್ಧವಾಗಿದೆ. ವ್ಯಾಖ್ಯಾನದ ಮುಖ್ಯಾಂಶಗಳನ್ನೆಲ್ಲ ವಿವರಣೆಯಲ್ಲಿ ಸಂಗ್ರಹಿಸಲಾಗಿದ್ದು ಕೆಲವು ವಿಷಯಗಳನ್ನು ಅಡಿಟಿಪ್ಪಣಿಯಲ್ಲಿ ಮೂಲವಾಕ್ಯಗಳನ್ನಷ್ಟೇ ಕೊಡಲಾಗಿದೆ. ಗ್ರಂಥವಿಸ್ತಾರ ಭಯವೇ ಇದಕ್ಕೆ ಕಾರಣ. ಜಟಿಲವಾದ ಶ್ಲೋಕಗಳಿಗೂ, ಯಮಕ ಶ್ಲೋಕಗಳಿಗೂ ಪದಚ್ಛೇದವನ್ನು ಸಹ ಕೊಡಲಾಗಿದೆ. ಅನುವಾದ ಆದಷ್ಟು ಮೂಲಕ್ಕೆ ಹತ್ತಿರವಾಗುವಂತೆ ನೋಡಿಕೊಳ್ಳಲಾಗಿದ್ದು, ಅದರಿಂದ ಕೃತಿಯ ಅಭ್ಯಾಸಿಗಳಿಗೆ ಅನುಕೂಲವಾಗುವುದೆಂದು ಭಾವಿಸಲಾಗಿದೆ. ಅಷ್ಟಮ ಸರ್ಗದ ಶ್ಲೋಕಗಳನ್ನು ಆಧರಿಸಿ ರಚಿತವಾದಂತಿರುವ ಶ್ರೀಸತ್ಯಧರ್ಮತೀರ್ಥ ಶ್ರೀಪಾದರ ಕವಿಕಂಠಮಣಿ ಎಂಬ ಕೃತಿಯನ್ನು ಅಡಿಟಿಪ್ಪಣಿಯಲ್ಲಿ ಪೂರ್ಣವಾಗಿ ಕೊಡಲಾಗಿದೆ. ಶ್ರೀವಾದಿರಾಜರು ಈ ಕೃತಿಯಲ್ಲಿನ ಎರಡು ಶ್ಲೋಕ(೮/೨೯,೧೭/೧೨)ಗಳಿಗೆ ಸ್ವತಃ ತಾವೇ ತುಂಬಾ ವಿಸ್ತಾರವಾದ ವ್ಯಾಖ್ಯಾನವನ್ನು ಉಪನ್ಯಾಸರೂಪದಲ್ಲಿ ತಿಳಿಸಿದ್ದು, ಅವುಗಳನ್ನೂ ಈ ಕೃತಿಯಲ್ಲಿ ಪೂರ್ತಿಯಾಗಿ ಅಳವಡಿಸಲಾಗಿದೆ. ಇದರ ೧೭ನೇ ಸರ್ಗದಲ್ಲಿನ ಮೊದಲ ೨೪ ಶ್ಲೋಕಗಳು ಶ್ರೀಕೃಷ್ಣರೂಪದ ವರ್ಣನೆಯೊಂದಿಗೆ ದಶಾವತಾರ, ಕೇಶವಾದಿ ದ್ವಾದಶ ರೂಪಗಳು, ಕಪಿಲ, ದತ್ತ, ವ್ಯಾಸ ಮೊದಲಾದ ಇತರ ರೂಪಗಳ ವರ್ಣನೆಯೂ ಬಂದಿದೆ. ಈ ಭಾಗ ಸುಮಧ್ವವಿಜಯದ ೮ನೇ ಸರ್ಗದ ನಾರಾಯಣರೂಪದ ವರ್ಣನೆಯನ್ನು ಹೋಲುವುದು. ಆದ್ದರಿಂದ ಅದರ ಅಡಿಟಿಪ್ಪಣಿಯಲ್ಲಿ ಸುಮಧ್ವವಿಜಯದ ಅವತಾರವರ್ಣನೆ ಪರವಾದ ಶ್ಲೋಕಗಳನ್ನು ಕೊಡಲಾಗಿದೆ. ಪರಿಶಿಷ್ಟದಲ್ಲಿ ರುಗ್ಮಿಣೀಶವಿಜಯದಲ್ಲಿನ ಸೂಕ್ತಿಗಳು, ಈ ಕೃತಿಯ ಅಧ್ಯಯನಕ್ಕೆ ಪೂರಕವೆಂಬ ಕಾರಣದಿಂದ ಉಡುಪಿಯ ಶ್ರೀಕೃಷ್ಣನ್ನು ಕುರಿತು ಅವರು ರಚಿಸಿರುವ ಕೆಲವು ಸ್ತೋತ್ರಗಳು ಹಾಗೂ ಅವರ ದುರ್ಗಾಸ್ತವಗಳನ್ನು ಸಹ ಕೊಡಲಾಗಿದೆ.

ಈ ಕೃತಿಯ ಪ್ರಕಾಶನವನ್ನು ಶ್ರೀಹರಿವಾಯುಗುರುಗಳ ಒಬ್ಬ ಅಂತರಂಗಭಕ್ತರು ಶ್ರೀರುಗ್ಮಿಣೀಕೃಷ್ಣರ ವಿಶೇಷಸೇವೆಯನ್ನಾಗಿ ಪ್ರಾಯೋಜಿಸಿರುವರು; ಅವರಿಗೆ ನಮ್ಮ ಪ್ರತಿಷ್ಠಾನವು ಸಕಲ ಶ್ರೇಯಸ್ಸನ್ನು ಹಾರೈಸುತ್ತದೆ. ಡಿ.ಟಿ.ಪಿ ಕಾರ್ಯವನ್ನು ಭಾಗ್ಯಲಕ್ಷ್ಮೀ, ಶಶಿಕಲಾ, ವಿಜಯಲಕ್ಷ್ಮೀ ಮತ್ತು ಪ್ರವೀಣ ಮೊದಲಾದವರು ಮಾಡಿರುವರು. ಕರಡು ತಿದ್ದುವ ಕಾರ್ಯ ಚಿ. ಸುದರ್ಶನ(ಆನಂದಪದ್ಮನಾಭ) ಹಾಗೂ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಇವರದು. ಸಹಕಾರ ನನ್ನ ಧರ್ಮಪತ್ನಿ ಚಿ.ಸೌ. ವಿ.ಪಿ.ಜಯಶ್ರೀ ಹಾಗೂ ಸೊಸೆ ಚಿ.ಸೌ. ಶ್ರುತಿ ವ್ಯಾಸನಕೆರೆ ಇವರದು. ಮುದ್ರಣ ವಾಗರ್ಥ ಅವರದು. ಈ ಎಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

ಬೆಂಗಳೂರು — ವ್ಯಾಸನಕೆರೆ ಪ್ರಭಂಜನಾಚಾರ್ಯ

೧೯.೦೬.೨೦೧೬

ದುರ್ಮುಖಿ ಸಂವತ್ಸರ - ಶ್ರೀಶ್ರೀಪಾದರಾಜರ ಆರಾಧನೆ

ಶ್ರೀಃ

ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ

# ಶ್ರೀರುಗ್ಮಿಣೀಶವಿಜಯ

## ೧. ಪ್ರಥಮ ಸರ್ಗ

(ಮಂಗಲಾಚರಣ, ಶ್ರೀಕೃಷ್ಣಸ್ತುತಿ - ೧; ಹಯಗ್ರೀವಸ್ತುತಿ - ೨,೩; ರುಗ್ಮಿಣೀಸ್ತುತಿ - ೪; ಮಧ್ವಸ್ತುತಿ - ೫ ; ವಾಣೀಸ್ತುತಿ - ೬; ಕಾವ್ಯೋದ್ದೇಶ - ೭; ಕವಿನಾಮಕಥನ - ೮; ವಿನಯೋಕ್ತಿ - ೯, ೧೦; ಧಾತ್ರೀಕೃತವಿರಿಂಚಸ್ತವನ - ೧೧; ಭೂಭಾರಶಬ್ದಾರ್ಥಕಥನ - ೧೨; ಗೋರೂಪಸ್ವೀಕಾರದ ಕಾರಣ - ೧೩; ಬ್ರಹ್ಮಾದಿಗಳಿಂದ ಕ್ಷೀರಸಮುದ್ರಕ್ಕೆ ಗಮನ - ೧೪, ೧೫; ಬ್ರಹ್ಮಾದಿಗಳು ಮಾಡಿದ ಶ್ರೀಹರಿಯ ಪ್ರಾರ್ಥನೆ - ೧೬-೨೨; ಪ್ರಸನ್ನನಾದ ಹರಿಯಿಂದ ಪ್ರಾದುರ್ಭಾವಕ್ಕಾಗಿ ಸಮ್ಮತಿ - ೨೩; ಅವತಾರಕ್ಕಾಗಿ ದುರ್ಗೆಗೆ ಆದೇಶ - ೨೪,೨೫; ಆದಿಯಲ್ಲಿ ಶೇಷಾವತಾರ ಮತ್ತು ಅದಕ್ಕೆ ಕಾರಣಕಥನ - ೨೬; ಕೃಷ್ಣಾವತಾರಕ್ಕೆ ಕಾರಣ - ೨೮; ಶ್ರೀಹರಿಗೆ ಗರ್ಭವಾಸಾದಿಗಳು ಸರ್ವಥಾ ಇಲ್ಲ - ೨೯; ಬ್ರಹ್ಮಾದಿಗಳು ಮಾಡಿದ ಗರ್ಭಸ್ತುತಿ - ೩೦; ಶ್ರೀಕೃಷ್ಣಜಯಂತೀ - ೩೧; ರೋಹಿಣೀನಕ್ಷತ್ರದಲ್ಲಿ ಚಂದ್ರೋದಯಕಾಲದಲ್ಲಿ ಅವತಾರ ಹಾಗೂ ಅದಕ್ಕೆ ಕಾರಣ - ೩೨,೩೩; ಗಂಧರ್ವಾದಿಗಳು ಮಾಡಿದ ಕೃಷ್ಣಸ್ತುತಿ - ೩೪, ೩೫; ದೇವತೆಗಳಿಂದ ಪುಷ್ಪವೃಷ್ಟಿ - ೩೬; ಆಕಾಶದಲ್ಲಿ ದುಂದುಭಿ ಧ್ವನಿ - ೩೭; ಮೇಘಘೋಷ - ೩೮; ಸರೋವರದಲ್ಲಿ ಪ್ರಸನ್ನತೆ - ೩೯; ಗಗನದಲ್ಲಿ ಹೊಳೆದ ನಕ್ಷತ್ರಗಳು - ೪೦; ವೃದ್ಧರು ಮಾಡಿದ ಶ್ರೀಕೃಷ್ಣಸ್ತುತಿ - ೪೧; ಹಿತವಾಗಿ ಬೀಸಿದ ಗಾಳಿ - ೪೨; ದಿಗಂತಕ್ಕೆ ತೆರಳಿದ ಮೇಘಗಳು- ೪೩; ಚರಾಚರಗಳ ಸಂತುಷ್ಟಿ - ೪೪; ವಸುದೇವದೇವಕಿಯರ ಬಂಧಮೋಚನ - ೪೫; ವಸುದೇವದೇವಕೀಕೃತ ಕೃಷ್ಣಸ್ತುತಿ - ೪೬; ಶ್ರೀಕೃಷ್ಣನಿಗೆ ದೇವಕೀಪುತ್ರತ್ವಸಮರ್ಥನ - ೪೭; ವಸುದೇವನ ಪಿತೃತ್ವಸಮರ್ಥನ - ೪೮ ; ಪುನಃ ಕೃಷ್ಣಸ್ತುತಿ - ೪೯; ಶ್ರೀಹರಿಯ ಪ್ರಾದುರ್ಭಾವ - ೫೦-೫೭; ದುರ್ಗೆಯ ಪ್ರಾದುರ್ಭಾವ - ೫೫; ಗೋಕುಲದತ್ತ ವಸುದೇವ -೫೯; ಮೇಘವೃಷ್ಟಿ - ೬೦; ಆದಿಶೇಷ ಮಾಡಿದ ವಿಶೇಷಸೇವೆ - ೬೧; ಬ್ರಹ್ಮಾದಿಗಳಿಂದ ಶ್ರೀಕೃಷ್ಣಸ್ತುತಿ - ೬೨; ಯಮುನೆಯಿಂದ ಮಾರ್ಗಪ್ರದಾನ - ೬೩, ೬೪; ಶ್ರೀಕೃಷ್ಣಗಮನದ ರಾಜವೈಭವ - ೬೫,೬೬; ಸರ್ಗೋಪಸಂಹಾರ - ೬೭)

ಮಂಗಲಾಚರಣ - ಶ್ರೀಕೃಷ್ಣಸ್ತುತಿ

ಶ್ರೀವೇದಾಂತಮಹಾಚಲಂ ಹಿ ಪರಿತಃ ಸಂಯೋಜ್ಯ ಸೂತ್ರಾಹಿಪಂ
ಸದ್ವಾತಾಗಮಪೋಷಿತಾತ್ಮಹೃದಯಂ ತತ್ಪೂರ್ವಪಕ್ಷಾಸುರೈಃ।

## ಪ್ರಸ್ತುತ ಅನುವಾದ

ಪ್ರಸ್ತುತ ಅನುವಾದದಲ್ಲಿ ಮೂಲಶ್ಲೋಕಗಳು, ಅನುವಾದ ಹಾಗೂ ವಿವರಣೆಗಳನ್ನು ಕೊಡಲಾಗಿದ್ದು ಶ್ರೀವಾದಿರಾಜರ ನಿರೂಪಣೆಗೆ ಹಿನ್ನೆಲೆಯಾಗಿರುವ ಪ್ರಮಾಣವಚನಗಳನ್ನು ಉದ್ಧಕ್ಕೂ ಕೊಡಲಾಗಿದೆ. ಒಂದು ದೃಷ್ಟಿಯಲ್ಲಿ ಇದು ಈಗಾಗಲೇ ನಮ್ಮ ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದಿಂದ ಪ್ರಕಾಶಿತವಾಗಿರುವ ರುಗ್ಮಿಣೀಶವಿಜಯದ ವ್ಯಾಖ್ಯಾನ ಸಮೇತವಾದ ಸಂಪುಟದ ಕನ್ನಡ ಆವೃತ್ತಿಯಂತೆ ಸಿದ್ಧವಾಗಿದೆ. ವ್ಯಾಖ್ಯಾನದ ಮುಖ್ಯಾಂಶಗಳನ್ನೆಲ್ಲ ವಿವರಣೆಯಲ್ಲಿ ಸಂಗ್ರಹಿಸಲಾಗಿದ್ದು ಕೆಲವು ವಿಷಯಗಳನ್ನು ಅಡಿಟಿಪ್ಪಣಿಯಲ್ಲಿ ಮೂಲವಾಕ್ಯಗಳನ್ನಷ್ಟೇ ಕೊಡಲಾಗಿದೆ. ಗ್ರಂಥವಿಸ್ತಾರ ಭಯವೇ ಇದಕ್ಕೆ ಕಾರಣ. ಜಟಿಲವಾದ ಶ್ಲೋಕಗಳಿಗೂ, ಯಮಕ ಶ್ಲೋಕಗಳಿಗೂ ಪದಚ್ಛೇದವನ್ನು ಸಹ ಕೊಡಲಾಗಿದೆ. ಅನುವಾದ ಆದಷ್ಟು ಮೂಲಕ್ಕೆ ಹತ್ತಿವಾಗುವಂತೆ ನೋಡಿಕೊಳ್ಳಲಾಗಿದ್ದು ಅದರಿಂದ ಕೃತಿಯ ಅಭ್ಯಾಸಿಗಳಿಗೆ ಅನುಕೂಲವಾಗುವುದೆಂದು ಭಾವಿಸಲಾಗಿದೆ. ಅಷ್ಟಮ ಸರ್ಗದ ಶ್ಲೋಕಗಳನ್ನು ಆಧರಿಸಿ ರಚಿತವಾದಂತಿರುವ ಶ್ರೀಸತ್ಯಧರ್ಮತೀರ್ಥ ಶ್ರೀಪಾದರ ಕವಿಕಂಠಮಣಿ ಎಂಬ ಕೃತಿಯನ್ನು ಅಡಿಟಿಪ್ಪಣಿಯಲ್ಲಿ ಪೂರ್ಣವಾಗಿ ಕೊಡಲಾಗಿದೆ. ಶ್ರೀವಾದಿರಾಜರು ಈ ಕೃತಿಯಲ್ಲಿನ ಎರಡು ಶ್ಲೋಕ(೮/೨೯,೧೭/೧೨)ಗಳಿಗೆ ಸ್ವತಃ ತಾವೇ ತುಂಬಾ ವಿಸ್ತಾರವಾದ ವ್ಯಾಖ್ಯಾನವನ್ನು ಉಪನ್ಯಾಸರೂಪದಲ್ಲಿ ತಿಳಿಸಿದ್ದು ಅವುಗಳನ್ನೂ ಈ ಕೃತಿಯಲ್ಲಿ ಪೂರ್ತಿಯಾಗಿ ಅಳವಡಿಸಲಾಗಿದೆ. ಇದರ ೧೭ನೇ ಸರ್ಗದಲ್ಲಿನ ಮೊದಲ ೨೪ ಶ್ಲೋಕಗಳು ಶ್ರೀಕೃಷ್ಣರೂಪದ ವರ್ಣನೆಯೊಂದಿಗೆ ದಶಾವತಾರ, ಕೇಶವಾದಿ ದ್ವಾದಶ ರೂಪಗಳು, ಕಪಿಲ, ದತ್ತ, ವ್ಯಾಸ ಮೊದಲಾದ ಇತರ ರೂಪಗಳ ವರ್ಣನೆಯೂ ಬಂದಿದೆ. ಈ ಭಾಗ ಸುಮಧ್ವವಿಜಯದ ೮ನೇ ಸರ್ಗದ ನಾರಾಯಣರೂಪದ ವರ್ಣನೆಯನ್ನು ಹೋಲುವುದು. ಆದ್ದರಿಂದ ಅದರ ಅಡಿಟಿಪ್ಪಣಿಯಲ್ಲಿ ಸುಮಧ್ವವಿಜಯದ ಅವತಾರವರ್ಣನೆ ಪರವಾದ ಶ್ಲೋಕಗಳನ್ನು ಕೊಡಲಾಗಿದೆ. ಪರಿಶಿಷ್ಟದಲ್ಲಿ ರುಗ್ಮಿಣೀಶವಿಜಯದಲ್ಲಿನ ಸೂಕ್ತಿಗಳು, ಈ ಕೃತಿಯ ಅಧ್ಯಯನಕ್ಕೆ ಪೂರಕವೆಂಬ ಕಾರಣದಿಂದ ಉಡುಪಿಯ ಶ್ರೀಕೃಷ್ಣನ್ನು ಕುರಿತು ಅವರು ರಚಿಸಿರುವ ಕೆಲವು ಸ್ತೋತ್ರಗಳು ಹಾಗೂ ಅವರ ದುರ್ಗಾಸ್ತವಗಳನ್ನು ಸಹ ಕೊಡಲಾಗಿದೆ.

ಈ ಕೃತಿಯ ಪ್ರಕಾಶನವನ್ನು ಶ್ರೀಹರಿವಾಯುಗುರುಗಳ ಒಬ್ಬ ಅಂತರಂಗಭಕ್ತರು ಶ್ರೀರುಗ್ಮಿಣೀಕೃಷ್ಣರ ವಿಶೇಷಸೇವೆಯನ್ನಾಗಿ ಪ್ರಾಯೋಜಿಸಿರುವರು; ಅವರಿಗೆ ನಮ್ಮ ಪ್ರತಿಷ್ಠಾನವು ಸಕಲ ಶ್ರೇಯಸ್ಸನ್ನು ಹಾರೈಸುತ್ತದೆ. ಡಿ.ಟಿ.ಪಿ ಕಾರ್ಯವನ್ನು ಭಾಗ್ಯಲಕ್ಷ್ಮೀ, ಶಶಿಕಲಾ, ವಿಜಯಲಕ್ಷ್ಮೀ ಮತ್ತು ಪ್ರವೀಣ ಮೊದಲಾದವರು ಮಾಡಿರುವರು. ಕರಡು ತಿದ್ದುವ ಕಾರ್ಯ ಚಿ. ಸುದರ್ಶನ(ಆನಂದಪದ್ಮನಾಭ) ಹಾಗೂ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಇವರದು. ಸಹಕಾರ ನನ್ನ ಧರ್ಮಪತ್ನಿ ಚಿ.ಸೌ. ವಿ.ಪಿ.ಜಯಶ್ರೀ ಹಾಗೂ ಸೊಸೆ ಚಿ.ಸೌ. ಶ್ರುತಿ ವ್ಯಾಸನಕೆರೆ ಇವರದು. ಮುದ್ರಣ ವಾಗರ್ಥ ಅವರದು. ಈ ಎಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

ಬೆಂಗಳೂರು ವ್ಯಾಸನಕೆರೆ ಪ್ರಭಂಜನಾಚಾರ್ಯ

೧೯.೦೬.೨೦೧೬

ದುರ್ಮುಖ ಸಂವತ್ಸರ – ಶ್ರೀಶ್ರೀಪಾದರಾಜರ ಆರಾಧನೆ

ಶ್ರೀಃ

ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ

# ಶ್ರೀರುಗ್ಮಿಣೀಶವಿಜಯ

## ೧. ಪ್ರಥಮ ಸರ್ಗ

(ಮಂಗಲಾಚರಣ, ಶ್ರೀಕೃಷ್ಣಸ್ತುತಿ - ೧; ಹಯಗ್ರೀವಸ್ತುತಿ - ೨,೩; ರುಗ್ಮಿಣೀಸ್ತುತಿ - ೪; ಮಧ್ವಸ್ತುತಿ - ೫ ; ವಾಣೀಸ್ತುತಿ - ೬; ಕಾವ್ಯೋದ್ದೇಶ - ೭; ಕವಿನಾಮಕಥನ - ೮; ವಿನಯೋಕ್ತಿ - ೯, ೧೦; ಧಾತ್ರೀಕೃತವಿರಿಂಚಸ್ತವನ - ೧೧; ಭೂಭಾರಶಬ್ದಾರ್ಥಕಥನ - ೧೨; ಗೋರೂಪಸ್ವೀಕಾರದ ಕಾರಣ - ೧೩; ಬ್ರಹ್ಮಾದಿಗಳಿಂದ ಕ್ಷೀರಸಮುದ್ರಕ್ಕೆ ಗಮನ - ೧೪, ೧೫; ಬ್ರಹ್ಮಾದಿಗಳು ಮಾಡಿದ ಶ್ರೀಹರಿಯ ಪ್ರಾರ್ಥನೆ - ೧೬-೨೨; ಪ್ರಸನ್ನನಾದ ಹರಿಯಿಂದ ಪ್ರಾದುರ್ಭಾವಕ್ಕಾಗಿ ಸಮ್ಮತಿ - ೨೩; ಅವತಾರಕ್ಕಾಗಿ ದುರ್ಗೆಗೆ ಆದೇಶ - ೨೪,೨೫; ಆದಿಯಲ್ಲಿ ಶೇಷಾವತಾರ ಮತ್ತು ಅದಕ್ಕೆ ಕಾರಣಕಥನ - ೨೬; ಕೃಷ್ಣಾವತಾರಕ್ಕೆ ಕಾರಣ - ೨೮; ಶ್ರೀಹರಿಗೆ ಗರ್ಭವಾಸಾದಿಗಳು ಸರ್ವಥಾ ಇಲ್ಲ - ೨೯; ಬ್ರಹ್ಮಾದಿಗಳು ಮಾಡಿದ ಗರ್ಭಸ್ತುತಿ - ೩೦; ಶ್ರೀಕೃಷ್ಣಜಯಂತೀ - ೩೧; ರೋಹಿಣೀನಕ್ಷತ್ರದಲ್ಲಿ ಚಂದ್ರೋದಯಕಾಲದಲ್ಲಿ ಅವತಾರ ಹಾಗೂ ಅದಕ್ಕೆ ಕಾರಣ - ೩೨,೩೩; ಗಂಧರ್ವಾದಿಗಳು ಮಾಡಿದ ಕೃಷ್ಣಸ್ತುತಿ - ೩೪, ೩೫; ದೇವತೆಗಳಿಂದ ಪುಷ್ಪವೃಷ್ಟಿ - ೩೬; ಆಕಾಶದಲ್ಲಿ ದುಂದುಭಿ ಧ್ವನಿ - ೩೭; ಮೇಘಘೋಷ - ೩೮; ಸರೋವರದಲ್ಲಿ ಪ್ರಸನ್ನತೆ - ೩೯; ಗಗನದಲ್ಲಿ ಹೊಳೆದ ನಕ್ಷತ್ರಗಳು - ೪೦; ವೃದ್ಧರು ಮಾಡಿದ ಶ್ರೀಕೃಷ್ಣಸ್ತುತಿ - ೪೧; ಹಿತವಾಗಿ ಬೀಸಿದ ಗಾಳಿ - ೪೨; ದಿಗಂತಕ್ಕೆ ತೆರಳಿದ ಮೇಘಗಳು- ೪೩; ಚರಾಚರಗಳ ಸಂತುಷ್ಟಿ - ೪೪; ವಸುದೇವದೇವಕಿಯರ ಬಂಧಮೋಚನ - ೪೫; ವಸುದೇವದೇವಕೀಕೃತ ಕೃಷ್ಣಸ್ತುತಿ - ೪೬; ಶ್ರೀಕೃಷ್ಣನಿಗೆ ದೇವಕೀಪುತ್ರತ್ವಸಮರ್ಥನ - ೪೭; ವಸುದೇವನ ಪಿತೃತ್ವಸಮರ್ಥನ - ೪೮ ; ಪುನಃ ಕೃಷ್ಣಸ್ತುತಿ - ೪೯; ಶ್ರೀಹರಿಯ ಪ್ರಾದುರ್ಭಾವ - ೫೦-೫೭; ದುರ್ಗೆಯ ಪ್ರಾದುರ್ಭಾವ - ೫೫; ಗೋಕುಲದತ್ತ ವಸುದೇವ -೫೯; ಮೇಘವೃಷ್ಟಿ - ೬೦; ಆದಿಶೇಷ ಮಾಡಿದ ವಿಶೇಷಸೇವೆ - ೬೧; ಬ್ರಹ್ಮಾದಿಗಳಿಂದ ಶ್ರೀಕೃಷ್ಣಸ್ತುತಿ - ೬೨; ಯಮುನೆಯಿಂದ ಮಾರ್ಗಪ್ರದಾನ - ೬೩, ೬೪; ಶ್ರೀಕೃಷ್ಣಗಮನದ ರಾಜವೈಭವ - ೬೫,೬೬; ಸರ್ಗೋಪಸಂಹಾರ - ೬೭)

ಮಂಗಲಾಚರಣ - ಶ್ರೀಕೃಷ್ಣಸ್ತುತಿ

ಶ್ರೀವೇದಾಂತಮಹಾಚಲಂ ಹಿ ಪರಿತಃ ಸಂಯೋಜ್ಯ ಸೂತ್ರಾಹಿಪಂ
ಸದ್ವಾತಾಗಮಪೋಷಿತಾತ್ಮಹೃದಯಂ ತತ್ಪೂರ್ವಪಕ್ಷಾಸುರೈಃ।

**ಸಿದ್ಧಾಂತೋಕ್ತಿಸುರೇಶ್ವರೈಶ್ಚ ಮಥಿತೋ ಯಃ ಕೃಷ್ಣದುಗ್ಧಾಂಬುಧಿಃ**
**ಸ್ವೀಯಾನಾಮಮೃತಂ ಪ್ರಯಚ್ಛತಿ ಸ ಮಾಂ ಪಾಯಾದ್ಗುಣೋದ್ಯನ್ಮಣಿಃ[೧] ॥ ೧ ॥**

ಶ್ರೀಕೃಷ್ಣನು ಅದ್ಭುತವಾದ [೨]ಕ್ಷೀರಸಾಗರ. ಅವನ ಅನಂತಗುಣಗಳೇ ಅದರಲ್ಲಿನ ಹೊಳೆಯುವ ರತ್ನಗಳು. ಅದರಲ್ಲಿ ಶ್ರೀವೇದಾಂತ(ಉಪನಿಷತ್ತು)ವೆಂಬ ಮಂದರಪರ್ವತವನ್ನು ಇರಿಸಿ, ಮಧ್ವಭಾಷ್ಯವೆಂಬ ಗಾಳಿಯಿಂದ ಪೋಷಿತವಾದ ಬ್ರಹ್ಮಸೂತ್ರಗಳೆಂಬ ವಾಸುಕಿಯಿಂದ ಅದನ್ನು [೩]ಪೂರ್ವಪಕ್ಷ ಹಾಗೂ ಸಿದ್ಧಾಂತ ಎಂಬ ಅಸುರರು ಹಾಗೂ ಸುರರು [೪]ಮಥನ ಮಾಡಿದಾಗ ಉದ್ಭವಿಸುವ ಅಮೃತವನ್ನು ಅವನು ತನ್ನವರಿಗೆ ಮಾತ್ರ ನೀಡುವನು. ಅಂತಹ ಶ್ರೀಕೃಷ್ಣನು ನನ್ನನ್ನು ಪಾಲಿಸಲಿ.

ವಿ. : ೧. ಶ್ರೀವಾದಿರಾಜಸ್ವಾಮಿಗಳು ರುಗ್ಮಿಣೀಶವಿಜಯವೆಂಬ ಮಹಾಕಾವ್ಯವನ್ನು ರಚಿಸಲು ಆರಂಭಿಸಿ, ನಿರ್ವಿಘ್ನಪರಿಸಮಾಪ್ತಿಗಾಗಿ ಶಿಷ್ಟಾಚಾರಪರಂಪರಾಪ್ರಾಪ್ತವಾದ ಮಂಗಲಾಚರಣೆಯನ್ನು ಈ ಪದ್ಯದಲ್ಲಿ ಮಾಡಿರುವರು.

೨. ಅಷ್ಟಮಠಗಳಿಗೂ ಆರಾಧ್ಯದೈವವಾದ ಹಾಗೂ ಗ್ರಂಥಪ್ರತಿಪಾದ್ಯ ದೇವತೆಯೂ ಆದ ಶ್ರೀಕೃಷ್ಣನನ್ನು ಈ ಪದ್ಯದಲ್ಲಿ ಸ್ತುತಿಸಿರುವರು.

೩. ಇದು ಅಪೂರ್ವವಾದ ಸಮಸ್ತವಸ್ತುವಿಷಯಕವಾದ ರೂಪಕಾಲಂಕಾರ. ಶ್ರೀಕೃಷ್ಣನೇ ಕ್ಷೀರಸಾಗರ. ಅವನ ಗುಣಗಳೇ ರತ್ನಗಳು. ವೇದಾಂತವೇ ಮಂದರಪರ್ವತ, ಮಧ್ವಭಾಷ್ಯವೇ [೫]ಗಾಳಿ, ಬ್ರಹ್ಮಸೂತ್ರಗಳೇ ವಾಸುಕಿ, ಪೂರ್ವಪಕ್ಷಗಳು ಅಸುರರು, ಸಿದ್ಧಾಂತವಚನಗಳು ಸುರರು, ವಿಚಾರವೇ ಮಥನಕಾರ್ಯ, ಜ್ಞಾನಮೋಕ್ಷಗಳೇ ಅಮೃತ ಎಂಬ ರೂಪಕ ಇಲ್ಲಿಯ ಅತ್ಯಂತ ರೋಚಕವಾದುದು.

---

೧. ರೂಪಕಾಲಂಕಾರಃ। -ವ್ಯಾ.

೨. ಯಥಾ ಕ್ಷೀರಸಮುದ್ರಃ ಮಂದರಂ ಮಂಥಾನಂ ವಾಸುಕಿಂ ಚ ಸೂತ್ರಂ ಕೃತ್ವಾ ದೇವಾಸುರೈರ್ಮಥಿತೋ ವರುಣತ್ವೇನ ಸ್ವಕೀಯದೇವಾನಾಂ ಪೀಯೂಷಂ ಪ್ರಯಚ್ಛತಿ ತಥಾ ಕೃಷ್ಣೋಽಪಿ ಬ್ರಹ್ಮಸೂತ್ರನಿರ್ಣೀತ-ವೇದಾಂತಾರ್ಥೈರಧಿಕಾರಿಭಿಃ ಪೂರ್ವಪಕ್ಷಸಿದ್ಧಾಂತೈಶ್ಚ ಧೀಪೂರ್ವಕಂ ವಿಚಾರಿತೋ ಮೋಕ್ಷಂ ಪ್ರದದಾತೀತಿ ಸಮುದಾಯಾರ್ಥಃ। -ವ್ಯಾ.

೩. ಪೂರ್ವಪಕ್ಷಾಖ್ಯದೈತ್ಯೈಃ ದುಷ್ಟತ್ವಾನ್ಮುಖಗ್ರಾಹಿತ್ವಾದಿತಿ ಭಾವಃ। -ವ್ಯಾ.

೪. ಏತಾದೃಶಂ ಸೂತ್ರಾಹಿಪಂ ಸಂಯೋಜ್ಯ ಸಮ್ಯಕ್ಸಂಬಧ್ಯ ಪ್ರತಿವಾಕ್ಯಂ ವಿಚಾರಂ ಕೃತ್ವಾ। ಅನ್ಯತ್ರ ಪರಿತೋ ವೇಷ್ಟನಂ ಕೃತ್ವಾ ಕಿಂಚಿನ್ನ್ಯೂನತಾಯಾಂ ಮಥನಾಸಂಭವಾದಿತಿ ಭಾವಃ। -ವ್ಯಾ.

೫. ಪೂರ್ಣಬೋಧಕೃತಭಾಷ್ಯಾದಿಶಾಸ್ತ್ರೇಣಾಪವ್ಯಾಖ್ಯಾನನಿರಾಸಪೂರ್ವಕಂ ಸೂತ್ರಾರ್ಥೇ ಪ್ರತಿಪಾದಿತೇ ಸೂತ್ರಾಭಿಪ್ರಾಯಃ ಪುಷ್ಟೋ ಭವತೀತ್ಯರ್ಥಃ। -ವ್ಯಾ.

೪. [೧]ಶ್ರೀವೇದಾಂತವೆಂದರೆ ಮಾನ್ಯವಾದ ಉಪನಿಷತ್ತು ಹಾಗೂ ಇದರಿಂದ ಉಪಲಕ್ಷಿತವಾದ ಸದಾಗಮಗಳು ಎಂದರ್ಥ. ಮಹಾಚಲ ಎಂದರೆ ಸಪ್ತಕುಲಾಚಲಗಳಲ್ಲಿ ಒಂದಾದ ಮಂದರಪರ್ವತ; ಸೂತ್ರಗಳು ಎಂದರೆ ಬ್ರಹ್ಮಸೂತ್ರಗಳು; ನಿರುಪಪದವಾದ ಸೂತ್ರಗಳು ಎಂದರೆ ಬ್ರಹ್ಮಸೂತ್ರಗಳು ಎಂಬುವ ವಿವರ ಬ್ರಹ್ಮಸೂತ್ರಭಾಷ್ಯದಲ್ಲಿ ಬಂದಿದೆ. 'ಸರ್ಪರಾಜ' ಎಂದರೆ ನಾಗರಾಜನಾದ ವಾಸುಕಿ, ಸದ್ವಾತ ಎಂದರೆ ಮುಖ್ಯಪ್ರಾಣ; ಅಮೃತ ಎಂದರೆ ಜ್ಞಾನ ಹಾಗೂ ಮೋಕ್ಷಗಳು.

೫. ಮಧ್ವಭಾಷ್ಯಾದಿ ಕೃತಿಗಳಿಂದ ಅಪವ್ಯಾಖ್ಯಾನಗಳು [೨]ನಿರಾಸವಾಗಿ ಬ್ರಹ್ಮಸೂತ್ರಗಳ ಅಭಿಪ್ರಾಯ ಸ್ಫುಟವಾಗಿ ತಿಳಿಯುವುದು ಎಂಬುದನ್ನು **'ಸದ್ವಾತಾಗಮಪೋಷಿತಾತ್ಮ-ಹೃದಯಮ್**[೩]' ಎಂಬ ಪದದಿಂದ ತಿಳಿಸಿರುವರು.

೬. ಸಮುದ್ರವು ರತ್ನಾಕರವಾಗಿರುವಂತೆ ಶ್ರೀಕೃಷ್ಣನು ಗುಣಗಳೆಂಬ ರತ್ನಗಳಿಂದ ತುಂಬಿರು-ವನು. ಎಂದರೆ ಅವನು ಗುಣಪೂರ್ಣ ಎಂದರ್ಥ. ಇದು ಉಪಾಧಿಖಂಡನಟೀಕೆಯ [೪]**ಗುಣಮಾಣಿಕ್ಯಮಂಡನಮ್** ಎಂಬುದರ ಭಾವವಾಗಿದೆ. ಶ್ರೀಕೃಷ್ಣನು ಅಮೃತ ನೀಡುವನು ಎಂದರೆ ಮೋಕ್ಷವನ್ನು ಕರುಣಿಸುವನು ಎಂದರ್ಥ.

೭. [೫]**ಕೃಷ್ಣದುಗ್ಧಾಂಬುಧಿ** ಎಂಬ ಪದದಿಂದ ಶ್ರೀಕೃಷ್ಣನೇ ಕಾವ್ಯದ ನಾಯಕ; ಅವನು ಕ್ಷೀರಸಮುದ್ರ, [೬]**ಗುಣೋದ್ಯನ್ಮಣಿ** ಎಂದರೆ ಗುಣಪೂರ್ಣತ್ವದಿಂದಾಗಿ ಸರ್ವೋತ್ತಮ ಎಂಬ

---

೧. ಶ್ರಿಯಃ ಪೂಜ್ಯಾಶ್ಚ ತೇ ವೇದಾಂತಾಃ ಉಪನಿಷದಶ್ಚ ಶ್ರೀವೇದಾಂತಾಃ ಪೂಜ್ಯವೇದಾಂತಾಸ್ತ ಏವ ಮಹಾಚಲೋ ಮಂದರಪರ್ವತಃ। -ವ್ಯಾ.

೨. ಅಹಿಪವತ್ ಪ್ರತಿವಾದಿಭಯಂಕರತ್ವಾದ್ವಾ। -ವ್ಯಾ.

೩. ಸನ್ನುತ್ತಮೋ ವಾತಃ ಸದ್ವಾತಃ ಮುಖ್ಯಪ್ರಾಣ ಇತ್ಯರ್ಥಃ। "ಸಚ್ಛಬ್ದ ಉತ್ತಮಂ ಬ್ರೂಯಾತ್" ಇತಿ ವಚನಾತ್। ತಸ್ಯಾಗಮಃ ಶಾಸ್ತ್ರಂ ಭಾಷ್ಯಾದಿ*। -ವ್ಯಾ.

* ಭಾಗವತತಾತ್ಪರ್ಯೋದ್ಧೃತತಂತ್ರಭಾಗವತವಚನ (೧೦/೩/೨೬)

೪. ರಮಾಯಾ ರಮಣಂ ನತ್ವಾ ಗುಣಮಾಣಿಕ್ಯಮಂಡನಮ್।
ತತ್ತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮೋ ಯಥಾಮತಿ॥ - ಶ್ರೀಜಯತೀರ್ಥರು (ಉಪಾಧಿಖಂಡನಟೀಕಾ)

೫. ಶ್ರೀಜಯತೀರ್ಥರ ತತ್ತ್ವಪ್ರಕಾಶಿಕಾದಲ್ಲಿ ಶ್ರೀವೇದವ್ಯಾಸದೇವರನ್ನು ಇದೇ ತೆರನಾಗಿ 'ಸುಧಾನಿಧಿ' ಎಂಬುದಾಗಿ ವರ್ಣಿಸಿರುವುದು ಗಮನಾರ್ಹ:
ಯಾಂಚಾಮಂದರಲೋಲಿತಾದ್ಯತ ಉದ್ವೈದ್ಧಿದ್ಯೇಂದಿರಾ ನಿರ್ಜರೈ-
ರ್ಜಾತೋ ಭಾರತಪಾರಿಜಾತಸುತರುಃ ಸದ್ಬ್ರಹ್ಮಸೂತ್ರಾಮೃತಮ್।
ಆಸೀತ್ ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ
ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸತಾಂ ಭೂತಿದಃ॥ ಶ್ರೀಜಯತೀರ್ಥರು (ತತ್ತ್ವಪ್ರಕಾಶಿಕಾ)

೬. ಏತಾದೃಶಃ ಯಃ ಕೃಷ್ಣದುಗ್ಧಾಂಬುಧಿಃ ಕೃಷ್ಣಾಖ್ಯಕ್ಷೀರಸಮುದ್ರಃ ಶ್ರೀಯಾನಾಂ ಸ್ವಭಕ್ತಾನಾಂ ಅಮೃತಂ ಮೋಕ್ಷಂ ಪ್ರಯಚ್ಛತಿ ಹಿ ದದಾತಿ ಹಿ। -ವ್ಯಾ.
ಅತ್ರ ಕೃಷ್ಣದುಗ್ಧಾಂಬುಧಿರಿತ್ಯನೇನ ಕೃಷ್ಣಸ್ಯ ಕಾವ್ಯನಾಯಕತ್ವಮುದಧಿತ್ವನಿರೂಪಣೇನ ತಸ್ಯ ಗಂಭೀರತ್ವಂ ಗುಣೋದ್ಯನ್ಮಣಿರಿತ್ಯನೇನ ಗುಣೋತ್ತಮತ್ವಂ ಚ ದ್ಯೋತ್ಯತೇ। ತೇನೇದಂ ನ ಕರ್ತವ್ಯಮ್ "ಕಾವ್ಯಾಲಾಪಾಂಶ್ಚ ವರ್ಜಯೇತ್" ಇತಿ ಸ್ಮೃತ್ಯಾ ನಿಷಿದ್ಧತ್ವಾತ್ಪ್ರಯೋಜನಾಭಾವಾಚ್ಚ ನ ಖಲು ಕಾವ್ಯಕರಣೇ ಕಿಂಚಿತ್ಪ್ರಯೋಜನ-

ಭಾವ ಸೂಚಿತ. ಇದರಿಂದ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಸ್ಮೃತಿಯಿಂದ ನಿಷಿದ್ಧವಾಗಿರುವ ಕಾವ್ಯರಚನೆಯು ಅಯುಕ್ತ ಎಂಬ ಶಂಕೆಗೆ ಉತ್ತರ ಲಭಿಸುವುದು. "ತಸ್ಮಾದ್ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ । ಶ್ರೋತವ್ಯಃ ಕೀರ್ತಿತವ್ಯಶ್ಚ ಮಂತವ್ಯಶ್ಚೇಚ್ಛತಾಽಭಯಮ್" ಇತಿ ಎಂಬ ಹಾಗೂ "ಕ ಉತ್ತಮಶ್ಲೋಕಗುಣಾನುವಾದಾತ್ ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್" ಎಂಬ ಶ್ರೀಮದ್ಭಾಗವತವಚನದಿಂದ [೧]ಉತ್ತಮಶ್ಲೋಕನಾದ ಶ್ರೀಹರಿಯ ಗುಣಕೀರ್ತನಗಳು ಕರ್ತವ್ಯ ಎಂಬುದು ಸ್ಫುಟಪಡುವುದು.

೮. ಅಸತ್ಕಾವ್ಯ ರಚನೆಯು [೨]ನಿಷಿದ್ಧ ಎಂಬುದಷ್ಟೇ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಮಾತಿನ ಭಾವ. ಈ ಕಾವ್ಯದಲ್ಲಿ ಪ್ರತಿಪಾದಿತವಾದ ಭಗವನ್ಮಹಿಮೆಯ ಅನುಸಂಧಾನದಿಂದ ಭಕ್ತಿಯು ಹುಟ್ಟಿ ಮೋಕ್ಷವೆಂಬ ಫಲವು ಲಭಿಸುವುದು; ಇದರಿಂದಾಗಿ ಇದು ಸಾರ್ಥಕವಾದ ರಚನೆ ಎಂದು ಭಾವ.

೯. ಶ್ರೀ ಎಂಬುದು ಮಂಗಲಸೂಚಕ. ಆದ್ದರಿಂದ ಪ್ರಾರಂಭದಲ್ಲಿ [೩]ಸಂಯುಕ್ತಾಕ್ಷರ ಪ್ರಯೋಗವು ಯೋಗ್ಯವೇ ಆಗಿದೆ. [೪]'ಸದ್ವಾತ್ತಾಗಮ' ಇತ್ಯಾದಿ ಪದಗಳಲ್ಲಿ ಶ್ಲೇಷಾಲಂಕಾರವು ಬಂದಿದೆ.

---

ಮಸ್ತೀತ್ಯಾಶಂಕಾ ನಿರಸ್ತಾ ಭವತಿ । ತಥಾಹಿ । ಉತ್ತಮನಾಯಕಗುಣಕೀರ್ತನಸ್ಯ "ತಸ್ಮಾದ್ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ । ಶ್ರೋತವ್ಯಃ ಕೀರ್ತಿತವ್ಯಶ್ಚ ಮಂತವ್ಯಶ್ಚೇಚ್ಛತಾಽಭಯಮ್"ಇತಿ ಸ್ಮೃತ್ಯಾ (೨/೧/೫) ವಿಹಿತತ್ವಾತ್ । ತದಕರ್ತುಃ "ಕ ಉತ್ತಮಶ್ಲೋಕಗುಣಾನುವಾದಾತ್ ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್" ಇತಿ ಭಾಗವತೇ(೧೦/೧/೪) ಮಿಥ್ಯಾಜ್ಞಾನಿತ್ವಕಥನೇನ ವಿರಕ್ತ್ಯಾಶೋಭನತ್ವಕಥನೇನ ನಿಂದಿತತ್ವಾತ್ । -ವ್ಯಾ.

ಅನಿತ್ಯತ್ವಲಕ್ಷಣಚಲನಾಭಾವಾದಾರಣ್ಯಕತ್ವಾದ್ವಾ ವೇದಾಂತಾನಾಂ ಮಹಾಚಲತ್ವೋಕ್ತಿಃ ತಮ್ । -ವ್ಯಾ.

೧. ಸಚ್ಛಾಸ್ತ್ರೇಣ ಬ್ರಹ್ಮಣಿ ವಿಚಾರಿತೇ ಸತಿ ಬ್ರಹ್ಮಣೋ ಗುಣಪೂರ್ಣತಾ ಸಿದ್ಧ್ಯತೀತಿ ಭಾವಃ। -ವ್ಯಾ.

ಅತ ಏವ ಚಾದೌ ಶುಭಫಲಪ್ರದಭೂದೇವತಾಕಗುರುವರ್ಣತ್ರಯಾತ್ಮಕಮಗಣಪ್ರಯೋಗಃ ಕೃತಃ । ತದುಕ್ತಮ್ । "ಶುಭದೋ ಮೋ ಭೂಮಿಃ ಸರ್ವಗುರುಃ"ಇತಿ। ಅತ್ರ "ಸಂಯೋಗಃ ಸರ್ವಥಾ ತ್ಯಾಜ್ಯೋ ವರ್ಣಾನಾಂ ಕ್ಷಂ ವಿನಾ ಮುಖೇ" ಇತಿ ತ್ಯಾಜ್ಯತ್ವೇನೋಕ್ತಸಂಯುಕ್ತಾಕ್ಷರಪ್ರಯೋಗೋ ನ ದೋಷಾಯ। ಶ್ರೀಶಬ್ದಸ್ಯ ಮಾಂಗಲ್ಯಾರ್ಥಕತ್ವಾತ್। ತದುಕ್ತಮ್ : "ದೇವತಾವಾಚಕಾಃ ಶಬ್ದಾ ಯೇ ಚ ಭದ್ರಾದಿವಾಚಕಾಃ। ತೇ ಸರ್ವೇ ನೈವ ನಿಂದ್ಯಾ ಸ್ಯುರ್ಲಿಪಿತೋ ಗಣತೋಽಪಿ ಚ॥" ಇತಿ। -ವ್ಯಾ.

೨. ನಿಷೇಧಶಾಸ್ತ್ರಸ್ಯಾಸತ್ಕಾವ್ಯವಿಷಯತ್ವಾದ್ಭಗವದ್ಗುಣವರ್ಣನಾತ್ಮಕಂ ಕಾವ್ಯಂ ಕರ್ತವ್ಯಮ್ । ನಾಪಿ ಪ್ರಯೋಜನಾಭಾವಃ। ಏತತ್ಕಾವ್ಯೇ ಪ್ರವೃತ್ತಸ್ಯ ಭಗವನ್ಮಹಿಮ್ನೋಽನುಸಂಧಾನೇನ ಭಗವತಿ ಭಕ್ತ್ಯುದಯಾತ್, ತಥಾ ಕೈವಲ್ಯಲಕ್ಷಣಫಲಸ್ಯ ಭಗವದ್ಗುಣಶ್ರವಣೇನ ಪಾಪಪರಿಹಾರಸ್ಯ ಶಬ್ದಾರ್ಥಚಮತ್ಕಾರದರ್ಶನೇನ ಸಂತೋಷಾತಿಶಯಸ್ಯ "ಕಾವ್ಯಂ ಯಶಸೇಽರ್ಥಕೃತೇ"(ಕಾವ್ಯಪ್ರಕಾಶ)ಇತಿ ಆಲಂಕಾರಿಕಶಾಸ್ತ್ರೋಕ್ತಾವಾಂತರಪ್ರಯೋಜನಸ್ಯ ಚ ಸತ್ತ್ವಾತ್ । -ವ್ಯಾ.

೩.. ಸಂಪ್ರದಾನವಿವಕ್ಷಾಭಾವಾನ್ನ ಚತುರ್ಥೀ। ಹಿ ಶಬ್ದೇನ ಕೃಷ್ಣಸ್ಯ ಮೋಕ್ಷಪ್ರದಾತೃತ್ವಂ ಪ್ರಸಿದ್ಧಮಿತಿ ದ್ಯೋತಯತಿ।-ವ್ಯಾ.

೪. "ಉಪಮೈವ ತಿರೋಭೂತಭೇದಾ ರೂಪಕಮಿಷ್ಯತೇ" ಇತಿ । ಸದ್ವಾತ್ತಾಗಮೇತ್ಯಾದೇಃ ಶ್ಲಿಷ್ಟತ್ವಾತ್ ಶ್ಲಿಷ್ಟಪರಂಪರಿತಮ್ । ಇದಂ ಚ ರೂಪಕಂ ನಿರವಯವಂ ಸಾವಯವಂ ಪರಂಪರಿತಂ ಚೇತಿ ತ್ರಿವಿಧಮ್ । ತತ್ರಾದ್ಯಂ ಕೇವಲಂ ಮಾಲಾರೂಪಂ ಚೇತಿ ದ್ವಿವಿಧಮ್ । ದ್ವಿತೀಯಂ ಸಮಸ್ತವಸ್ತುವಿಷಯಮ್, ಏಕದೇಶವರ್ತಿ ಚೇತಿ ದ್ವಿಧಾ । ತೃತೀಯಂ ತು ಶ್ಲಿಷ್ಟಾಶ್ಲಿಷ್ಟಶಬ್ದನಿಬಂಧನತ್ವೇನ ದ್ವಿವಿಧಮ್ । ತತ್ರೈಕಂ ಕೇವಲಮಾಲಾರೂಪಕತ್ವೇನ ಚತುರ್ವಿಧಮಿತ್ಯಷ್ಟೌ ರೂಪಕಭೇದಾಃ। ಲಕ್ಷಣೋದಾಹರಣಾನಿ ಗ್ರಂಥವಿಸ್ತರಭಯಾನ್ನಾತ್ರ ಲಿಖ್ಯಂತೇ। -ವ್ಯಾ.

೧೦. ಈ ಸರ್ಗದಲ್ಲಿ ಅನೇಕ ಬಗೆಯ ವೃತ್ತಗಳು ಬಂದಿವೆ: ಈ ಶ್ಲೋಕದ ವೃತ್ತ ಶಾರ್ದೂಲವಿಕ್ರೀಡಿತ[೧]:

೧೧. ಅಹಿಪ ಎಂದರೆ ಸರ್ಪರಾಜನಾದ ವಾಸುಕಿ; ಬ್ರಹ್ಮಸೂತ್ರಗಳೇ ವಾಸುಕಿ ಎಂಬುದು ಇಲ್ಲಿಯ ರೂಪಕ. ಸಮುದ್ರಮಥನದ ಸಮಯದಲ್ಲಿ ಹಗ್ಗದಂತೆ ವಾಸುಕಿ ವರ್ತಿಸಿದ್ದರಿಂದ ಶಬ್ದಸಾಮ್ಯದಿಂದಾಗಿ ಸೂತ್ರಗಳನ್ನು ಅಹಿಪ ಎಂದು ಕರೆಯಲಾಗಿದೆ: **ಸೂತ್ರಾಹಿಪಂ ಸೂತ್ರಾಣ್ಯೇವ ಬ್ರಹ್ಮಸೂತ್ರಾಣ್ಯೇವಾಹಿಪಃ ಸರ್ಪಶ್ರೇಷ್ಠೋ ವಾಸುಕಿರಿತ್ಯರ್ಥಃ। ಸಮುದ್ರಮಥನಸಮಯೇಽಹಿಪಸ್ಯ ಸೂತ್ರಾತ್ಮಕತ್ವೇನ ಶಬ್ದಸಾಮ್ಯಾತ್ ಸೂತ್ರಾಣಾಮಹಿಪತ್ವೋಕ್ತಿಃ।** (ವ್ಯಾ.)

೧೨. ಶ್ರೀಕೃಷ್ಣನು ಅದ್ಭುತವಾದ ಕ್ಷೀರಸಾಗರ; ಮೋಕ್ಷವನ್ನು ಕರುಣಿಸಲು ವೇದವೇದಾಂತಾದಿ ಶಾಸ್ತ್ರಗಳ ಹಿನ್ನೆಲೆಯಲ್ಲಿ ಜಿಜ್ಞಾಸೆಮಾಡಬೇಕು; ಇದಕ್ಕೆ ಬ್ರಹ್ಮಸೂತ್ರಗಳೆಂಬ ಕಡಗೋಲು ಅಗತ್ಯ; ಬ್ರಹ್ಮಸೂತ್ರಗಳ ಸರಿಯಾದ ತಿಳುವಳಿಕೆಗೆ ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳ ಸಹಾಯವು ಅತ್ಯಗತ್ಯ. ಪೂರ್ವಪಕ್ಷಗಳು ಹಾಗೂ ಸಿದ್ಧಾಂತಗಳ ಯುಕ್ತಿಗಳನ್ನು ಸರಿಯಾಗಿ ಅನ್ವಯಿಸಿಕೊಂಡು, ಶಾಸ್ತ್ರಾರ್ಥವನು ಸರಿಯಾಗಿ ಅರ್ಥಮಾಡಿಕೊಂಡಲ್ಲಿ ಶ್ರೀಕೃಷ್ಣನು ಪ್ರಸನ್ನನಾಗಿ ತನ್ನ ಭಕ್ತರಿಗೆ ಮೋಕ್ಷವನ್ನು ಕರುಣಿಸುವನು[೨]. ಶ್ರೀಮಧ್ವಭಾಷ್ಯಾದಿಗಳ ಸಹಕಾರವಿಲ್ಲದೆ ಕೃಷ್ಣನನ್ನು ಸರಿಯಾಗಿ ಅರಿತು ಅವನಿಂದ ಪೂರ್ಣಪ್ರಯೋಜನವಾದ ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲ ಎಂಬುದು ಇಲ್ಲಿಯ ಮುಖ್ಯಭಾವ.

೧೩. ಇದು ಶ್ರೀಹರಿಯ ಯಾದವಕೃಷ್ಣರೂಪದ ಸ್ತುತಿಯಾಗಿರುವಂತೆ, ವಾಸಿಷ್ಠ ಕೃಷ್ಣರೂಪದ ಸ್ತುತಿಯೂ ಆಗಿದೆ. ಆ ರೂಪವೂ ಸಹ ಕ್ಷೀರಸಾಗರದಂತಹುದು; ಅನಂತಗುಣಗಳಿಂದ ಕಂಗೊಳಿಸುವಂತಹುದು. ಬ್ರಹ್ಮಸೂತ್ರಗಳನ್ನು ರಚಿಸಿದಂತಹುದು, ಪೂರ್ವಪಕ್ಷ ಸಿದ್ಧಾಂತಗಳ ರೂಪದಲ್ಲಿ ಶಾಸ್ತ್ರಮಥನವನ್ನು ಗೈದು ತತ್ತ್ವಜ್ಞಾನದ ಅಮೃತವನ್ನು ಲೋಕಕ್ಕೆ ನೀಡಿದಂತಹುದು; **ಅಹಿ** – ಸರ್ಪ; **ಅಹಿಪ** – ವಾಸುಕಿ; **ದುಗ್ಧಾಂಬುಧಿ** – ಕ್ಷೀರಸಾಗರ.

೧೪. ಯಾದವಕೃಷ್ಣನನ್ನು ತಿಳಿದು ಅವನಿಂದ ಮೋಕ್ಷವನ್ನು ಪಡೆಯಲು ಮಧ್ವಶಾಸ್ತ್ರದ ಅಗತ್ಯವಿರುವಂತೆ ವಾಸಿಷ್ಠಕೃಷ್ಣರೂಪವೂ ಸಹ ಮೋಕ್ಷಕರುಣಿಸುವ ಕ್ಷೀರಸಾಗರವಾಗಲು ವೇದಾದಿ ಮೂಲಶಾಸ್ತ್ರಗಳು, ಸರ್ವಮೂಲಗ್ರಂಥಗಳು, ಪೂರ್ವಪಕ್ಷಸಿದ್ಧಾಂತಯುಕ್ತಿಗಳ ಸೂಕ್ತ ಅನ್ವಯಕ್ರಮ ಅತ್ಯಂತ ಅಗತ್ಯ; ಆಗ ಮಾತ್ರವೇ ವೇದವ್ಯಾಸರನ್ನು ಸಾಕ್ಷಾತ್ ಮೋಕ್ಷನೀಡುವ ಶ್ರೀಹರಿ ಎಂಬುದಾಗಿ ತಿಳಿದು ಉದ್ಧಾರವಾಗಲು ಸಾಧ್ಯ ಎಂಬುದು ಇಲ್ಲಿಯ ಸೂಚನೆ.

---

೧. ಅಸ್ಮಿನ್ ಸರ್ಗೇ ನಾನಾವೃತ್ತಾನಿ । ಲಕ್ಷಣಂ ತು ತತ್ತಚ್ಛ್ಲೋಕವ್ಯಾಖ್ಯಾನಾವಸರೇ ವಕ್ಷ್ಯತೇ । ಶ್ಲೋಕೇಽಸ್ಮಿನ್ ಶಾರ್ದೂಲವಿಕ್ರೀಡಿತಂ ವೃತ್ತಮ್ । "ಸೂರ್ಯಾಶ್ವೈರ್ಮಸಜೌಸ್ತತಾಃ ಸಗುರವಃ ಶಾರ್ದೂಲವಿಕ್ರೀಡಿತಮ್" ಇತ್ಯುಕ್ತತ್ವಾತ್ ॥ –ವ್ಯಾ.

೨. ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ –ಗೀತಾ (೧೨/೭)

೧೫. ಶ್ರೀಕೃಷ್ಣರೂಪವನ್ನು ಸಾಗರವೆಂದು ಕರೆಯುವ ಇದಕ್ಕೆ ಪ್ರೇರಣೆಯನ್ನಾಗಿ, ಮಹಾಭಾರತತಾತ್ಪರ್ಯನಿರ್ಣಯದ ಈ ಕೆಳಗಿನ ಶ್ಲೋಕವನ್ನು ಗಮನಿಸಬಹುದು:

ಜಯತ್ಯಸಂಕ್ಷ್ಯೋರುಬಲಾಂಬುಪೂರೋ ಗುಣೋಚ್ಚರತ್ನಾಕರ ಆತ್ಮವೈಭವಃ।
ಸದಾ ಸದಾತ್ಮಜ್ಞನದೀಭಿರಾಪ್ಯಃ ಕೃಷ್ಣಾವತಾರೋ ಹರಿರೇಕಸಾಗರಃ॥ (೩/೩)

೧೬. ಹೀಗೆ ಎರಡು ರೂಪಗಳನ್ನು ಸಹ ಒಂದೇ ಶ್ಲೋಕದಲ್ಲಿ ಸ್ತುತಿಸುವ ಮೂಲಕ ಶ್ರೀವಾದಿರಾಜಸ್ವಾಮಿಗಳು ವಿಶಿಷ್ಟ ಬಗೆಯ ಚಿಂತನೆಯನ್ನು ನೀಡಿರುವರು; ಇದೇ ರೀತಿಯಾದ ಸುಮಧ್ವವಿಜಯದ ಈ ಕೆಳಗಿನ ಶ್ಲೋಕವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು:

ಅನಾಕುಲಂ ಗೋಕುಲಮುಲ್ಲಲಾಸ ಯತ್ಪಾಲಿತಂ ನಿತ್ಯಮನಾವಿಲಾತ್ಮ।
ತಸ್ಮೈ ನಮೋ ನೀರದನೀಲಭಾಸೇ ಕೃಷ್ಣಾಯ ಕೃಷ್ಣಾರಮಣಪ್ರಿಯಾಯ॥ (೧/೨)

## ಶ್ರೀಹಯಗ್ರೀವದೇವರ ಸ್ತುತಿ-೧

**ಸಚ್ಛಾಸ್ತ್ರೋದಿತವರ್ತ್ಮನಾ ಪದಮಿದಂ ಧ್ಯಾಯನ್ ಮದಂಕಾಂಕಿತೋ**
**ಮನ್ಮಂತ್ರಂ ಜಪ ಶಾಸ್ತ್ರಸಂಪದಮಥೋ ದಾಸ್ಯಾಮಿ ಭಾಗ್ಯೈಃ ಸಹ।**
**ತತ್ತತ್ತ್ವಾನ್ಯಪಿ ಬೋಧಯಾಮಿ ತದನು ಪ್ರಾಪ್ಯೋ ಮದಂಘ್ರಿರ್ಭವೇ-**
**ದಿತ್ಯಾಘೋಷಯತೀವ ಯಃ ಕರಚಯೈಸ್ತಂ ವಾಜಿವಕ್ತ್ರಂ ಭಜೇ॥ ೨॥**

ಸಚ್ಛಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ನನ್ನ ಈ ಪಾದವನ್ನು ಧ್ಯಾನಿಸುತ್ತಾ ನನ್ನ ಚಿಹ್ನೆಗಳನ್ನು ಧರಿಸಿ, ನನ್ನ ಮಂತ್ರವನ್ನು ಜಪಿಸು; ಆಗ ನಾನು ಭಾಗ್ಯಗಳೊಂದಿಗೆ ಶಾಸ್ತ್ರಸಂಪತ್ತನ್ನು ನೀಡುವೆನು; ಅದರ ತತ್ತ್ವಗಳನ್ನು ತಿಳಿಸುವೆನು ಸಹ; ಆ ಬಳಿಕ ಹೊಂದಬೇಕಾದ ನನ್ನ ಪಾದವು ಲಭಿಸುವುದು ಎಂಬುದಾಗಿ ತನ್ನ ಕರಸಮೂಹಗಳಿಂದ [೧]ಘೋಷಣೆ ಮಾಡುವಂತಿರುವ ಶ್ರೀಹಯಗ್ರೀವದೇವರನ್ನು ಭಜಿಸುವೆನು.

ವಿ. ೧. [೨]ಹೆಚ್ಚು ವಿಘ್ನಗಳು ಸಂಭಾವಿತ ಎಂಬ ಕಾರಣದಿಂದ ತಮ್ಮ ಉಪಾಸ್ಯದೇವತೆಯಾದ ಹಯಗ್ರೀವ, ಕಾವ್ಯನಾಯಕಿಯಾದ ರುಗ್ಮಿಣಿ, ಗುರುಗಳಾದ ಶ್ರೀಮಧ್ವಾಚಾರ್ಯರು ಹಾಗೂ ಸರಸ್ವತಿ ಎಂಬ ದೇವತೆಗಳ ಭಜನರೂಪವಾದ ಸುದೀರ್ಘಮಂಗಳವನ್ನು ಈ ಪದ್ಯದಿಂದ **ತಾಟಂಕದ್ವಯ** ಎಂಬ ಆರನೆಯ ಪದ್ಯದ ವರೆಗಿನ ಒಟ್ಟು ಐದು ಶ್ಲೋಕಗಳಲ್ಲಿ ಮಾಡುತ್ತಿರುವರು.

---

೧. ಶಂಖಾಕ್ಷಪುಸ್ತಕಸುಬೋಧಯುತಾಬ್ಜಬಾಹುಮ್। - ತಂತ್ರಸಾರಸಂಗ್ರಹ (೪/೫೦)

೨. ವಿಘ್ನಬಾಹುಲ್ಯಶಂಕಯಾ ಸ್ವೋಪಾಸ್ಯದೇವತಾಕಾವ್ಯನಾಯಿಕೀಸ್ವಾಚಾರ್ಯವಾಗ್ದೇವತಾಭಜನಾದಿರೂಪಮಂಗಲಾನಿ ಕರೋತಿ - ಸಚ್ಛಾಸ್ತ್ರೇತ್ಯಾದಿ ತಾಟಂಕದ್ವಯೇತ್ಯಂತೈಃ ಪಂಚಭಿಃ ಶ್ಲೋಕೈಃ। -ವ್ಯಾ.

೨. **ಸಚ್ಛಾಸ್ತ್ರ** ಎಂದರೆ [೧]ನಿರ್ದುಷ್ಟವಾದ ಎಂದರೆ ಅಪ್ರಾಮಾಣ್ಯಕ್ಕೆ ಕಾರಣವಾಗುವ ಅನಾಪ್ತತ್ವ ಮೊದಲಾದ ದೋಷಗಳಿಂದ ರಹಿತವಾದ ಉತ್ತಮ ಅರ್ಥವನ್ನು ತಿಳಿಸಿಕೊಡುವ ಶಾಸ್ತ್ರ ಎಂದರ್ಥ. ಸತ್ ಎಂದರೆ ಮುಖ್ಯಪ್ರಾಣ. ಅವರಿಂದ ರಚಿತವಾದ ಸರ್ವಮೂಲಗ್ರಂಥ-ಗಳಿಂದ ಯುಕ್ತವಾದ ವೇದಾದಿ ಶಾಸ್ತ್ರಗಳಿಂದ ಎಂಬ ಅರ್ಥವೂ ವಿವಕ್ಷಿತ.

೩. [೨]**ಮದಂಕಾಂಕಿತಃ** – ಶ್ರೀಹರಿಯ ಅಂಕಗಳು ಎಂದರೆ ಶಂಖ, ಚಕ್ರ ಮೊದಲಾದ ಚಿಹ್ನೆಗಳು ಎಂದರ್ಥ. ಊರ್ಧ್ವಪುಂಡ್ರ ಹಾಗೂ ಶಂಖಚಕ್ರಾದಿ ಲಾಂಛನಗಳನ್ನು ಧರಿಸಿಯೇ ವಿಷ್ಣುವನ್ನು [೩]ಧ್ಯಾನಿಸಬೇಕು ಎಂಬುದಾಗಿ ಶ್ರುತಿ ಇದೆ.

೪. [೪]**ಮನ್ಮಂತ್ರಂ** ಎಂದರೆ ಶ್ರೀಹರಿಯನ್ನು ಪ್ರದಿಪಾದಿಸುವ ಮಂತ್ರ ಹಯಗ್ರೀವ ಮಂತ್ರ ಎಂದರ್ಥ; ಇದರಿಂದ ಕೃಷ್ಣ , ರಾಮ ಇತ್ಯಾದಿ ಇತರ ಸಕಲವೈಷ್ಣವಮಂತ್ರಗಳು ಉಪಲಕ್ಷಿತ ಎಂದು ತಿಳಿಯಬೇಕು. [೫]ಧ್ಯಾನಪೂರ್ವಕವಾದ ಜಪವೇ ಮಹಾಫಲಕ್ಕೆ ಸಾಧನವಾದ್ದರಿಂದ ಧ್ಯಾನಿಸುತ್ತಾ ಜಪಿಸಬೇಕು ಎಂದು ತಿಳಿಸಿರುವರು.

೬. **ಕರಚಯೈಃ** – ಶಂಖ, ಜಪಮಾಲೆ, ಪುಸ್ತಕ ಹಾಗೂ [೬]ಜ್ಞಾನಮುದ್ರೆಗಳಿಂದ ಕೂಡಿದ ಕೈಗಳಿಂದ ಎಂದರ್ಥ ; **ಕರಚಯ**–ಕೈಗಳ ಗುಂಪು.

೭. [೭]ಕೆಳಕ್ಕೆ ಚಾಚಿರುವ ಕಿರುಬೆರಳಿನಿಂದ ಕೂಡಿದ ಹಸ್ತದಿಂದ ''ನನ್ನ ಪದವನ್ನು ಧ್ಯಾನಿಸು'' ಎಂಬುದಾಗಿಯೂ, [೮]ಶಂಖ, ಜಪಮಾಲೆ ಮುಂತಾದವುಗಳನ್ನು ಹಿಡಿದ ತನ್ನ ಕೈಗಳಿಂದ ತನ್ನ

---

೧. ಸತಾ ನಿರ್ದುಷ್ಟೇನಾನಾಪ್ತಪ್ರಣೀತತ್ವಾದಿದೋಷಶೂನ್ಯೇನೋತ್ತಮಾರ್ಥಪ್ರತಿಪಾದಕತ್ವಾದುತ್ತಮೇನ ಚ ಶಾಸ್ತ್ರೇ-ಣೋದಿತಮುಪದಿಷ್ಟಂ ವರ್ತ್ಮ ಮಾರ್ಗಃ ತೇನ। ಸಚ್ಛಾಸ್ತ್ರೋಕ್ತಪ್ರಕಾರೇಣೇತ್ಯರ್ಥಃ। –ವ್ಯಾ.

೨. ಮದಂಕಾಂಕಿತಃ ಮಮಾಂಕಾಃ ಶಂಖಚಕ್ರಾದಿಚಿಹ್ನಾನಿ। ''ಉತ್ಸಂಗಚಿಹ್ನಯೋರಂಕಃ'' ಇತ್ಯಮರಃ। –ವ್ಯಾ.

೩. ''ಧೃತೋರ್ಧ್ವಪುಂಡ್ರೋದರಚಕ್ರಧಾರೀ ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ''ಇತಿ ಶ್ರುತೇಃ। –ವ್ಯಾ.

೪. ಮನ್ಮಂತ್ರಂ ಮತ್ಪ್ರತಿಪಾದಕಪ್ರಣವಹಯಗ್ರೀವಮಂತ್ರಂ ಜಪ –ಆವೃತ್ತಿಂ ಕುರು। –ವ್ಯಾ.

೫. ಧ್ಯಾನಪೂರ್ವಸ್ಯ ಜಪಸ್ಯ ಮಹಾಫಲಹೇತುತ್ವಾದಿತಿ ಭಾವಃ। –ವ್ಯಾ.

೬. ಅಧೋಮುಖಕನಿಷ್ಠಾಂಗುಲೀಯುಕ್ತಹಸ್ತೇನ ಸಚ್ಛಾಸ್ತ್ರೋದಿತವರ್ತ್ಮನಾ ಪದಮಿದಂ ಧ್ಯಾಯನ್ನಿತ್ಯಸ್ಯಾರ್ಥಃ । ಶಂಖಜಪಮಾಲಾಹಸ್ತಾಭ್ಯಾಂ ಮದಂಕಾಕಿತೋ ಮನ್ಮಂತ್ರಂ ಜಪೇತ್ಯಸ್ಯಾರ್ಥಃ ಪುನಃ ಪುಸ್ತಕಶಂಖಹಸ್ತಾಭ್ಯಾಂ ಶಾಸ್ತ್ರಸಂಪದಂ ಭಾಗ್ಯೈಃ ಸಹ ದಾಸ್ಯಾಮೀತ್ಯಸ್ಯಾರ್ಥಃ। ''ಶಂಖಂ ನಿಧೌ ಚ ಜಲಜೇ'' ಇತ್ಯಭಿಧಾನಾತ್। ತದ್ಯುಕ್ತಸ್ಯ ಹಸ್ತಸ್ಯ ಭಾಗ್ಯಸೂಚಕತ್ವಮುಪಪದ್ಯತೇ । ಪುನರ್ಜ್ಞಾನಮುದ್ರಾಯುಕ್ತಹಸ್ತಾಧೋಮುಖಕನಿಷ್ಠಾಂಗುಲೀಯುಕ್ತ-ಹಸ್ತಾಭ್ಯಾಂ ತತ್ತತ್ವಾನ್ಯಪಿ ಬೋಧಯಾಮೀತ್ಯಸ್ಯ ಮದಂಘ್ರಿಃ ಪ್ರಾಪ್ಯೋ ಭವೇದಿತ್ಯಸ್ಯಾರ್ಥಶ್ಚ ಸೂಚಿತಃ । ವೀರಾಸನೋಪವಿಷ್ಟಸ್ಯ ದೇವಸ್ಯ ಪಾದಾಭಿಮುಖ್ಯೇನ ಪುಸ್ತಕಹಸ್ತಕನಿಷ್ಠಾಂಗುಲೇರವನತತ್ವಾನ್ಮದಂಘ್ರಿಃ ಪ್ರಾಪ್ಯೋ ಭವೇದಿತ್ಯರ್ಥಸೂಚಕತ್ವಮುಪಪದ್ಯತೇ। ಪುನಃ ಶಂಖಹಸ್ತೇನಾಘೋಷಣಂ ಸೂಚಿತಮಿತಿ ಜ್ಞಾತವ್ಯಮ್ ।ಯಥಾ ಲೋಕೇ ಕಶ್ಚಿತ್ಕರಪಲ್ಲವಾಭಿಜ್ಞಃ ಪುರುಷಃ ವಿವಕ್ಷಿತಮರ್ಥಂ ಹಸ್ತವ್ಯಾಪಾರಾದಿನಾ ದರ್ಶಯತಿ ತದ್ವದಿತಿ ಭಾವಃ। –ವ್ಯಾ.

೭. ಅತ್ರ ಕ್ರಿಯಾಸಂಗತಸ್ಯೇವಕಾರಸ್ಯೋತ್ಪ್ರೇಕ್ಷಾವ್ಯಂಜಕತ್ವಾತ್ ಉತ್ಪ್ರೇಕ್ಷಾಲಂಕಾರಃ। –ವ್ಯಾ.

೮. ಇತಿ ಕರಚಯೈಃ ಶಂಖಾಕ್ಷಮಾಲಾಪುಸ್ತಕಜ್ಞಾನಮುದ್ರಾಸಮೇತೈಃ ಹಸ್ತಸಮೂಹೈಃ। –ವ್ಯಾ.

ಲಾಂಛನಗಳನ್ನು ಧರಿಸಿ ತನ್ನ ಮಂತ್ರಗಳನ್ನು ಜಪಿಸು ಎಂಬುದಾಗಿಯೂ, ಪುಸ್ತಕ ಮತ್ತು ಶಂಖಗಳನ್ನು ಹಿಡಿದಿರುವ ಕೈಗಳಿಂದ ಭಾಗ್ಯಗಳ ಜೊತೆಗೆ ಶಾಸ್ತ್ರಸಂಪತ್ತನ್ನು ನೀಡುವೆ ಎಂಬುದಾಗಿಯೂ, ಜ್ಞಾನಮುದ್ರೆಯಿಂದ ಕೂಡಿದ ಕೆಳಗೆ ಚಾಚಿದ ಕಿರುಬೆರಳಿನಿಂದ, ನನ್ನ ಪಾದವು ಲಭಿಸುವುದು ಎಂಬುದಾಗಿಯೂ ಶ್ರೀಹಯಗ್ರೀವನು ತಿಳಿಸುತ್ತಿರುವನು.

೮. ವೀರಾಸನದಲ್ಲಿ ಕುಳಿತ ಶ್ರೀಹಯಗ್ರೀವಮೂರ್ತಿಯ ಪಾದದತ್ತ ಪುಸ್ತಕವನ್ನು ಹಿಡಿದ ಅವನ ಕೈಯ ಕಿರುಬೆರಳು ಬಾಗಿರುವುದರಿಂದ ಅವನ ಪಾದವು ಲಭಿಸುವುದು ಎಂಬ ತತ್ತ್ವ ಸೂಚಿತ ಎಂದೂ ತಿಳಿಯಬೇಕು. [೧]ಹಸ್ತಮುದ್ರಿಕೆಯಲ್ಲಿ ಪರಿಣಿತನಾದ ಪಂಡಿತನು ತನ್ನ ಮನೋಗತವನ್ನು ತಿಳಿಸುವಂತೆ ಈ ಪ್ರಸಂಗ ಎಂದು ತಿಳಿಯಬೇಕು.

೯. ತಂತ್ರಸಾರಸಂಗ್ರಹ (೪/೪೮,೫೦,೫೧)ದಲ್ಲಿ ಬಂದಿರುವ ಹಯಗ್ರೀವಮಂತ್ರದ ಧ್ಯಾನಶ್ಲೋಕವನ್ನು ಇದು ಆಧರಿಸಿದೆ :

ಧ್ಯಾಯೇಚ್ಛಶಾಂಕಶತಕೋಟ್ಯತಿಸೌಖ್ಯಕಾಂತಿಂ ಸಂಸಿಚ್ಯಮಾನಮಮೃತೋರುಘಟ್ಯೈಃ ಸುರೇಶೈಃ।
ವರ್ಣಾಭಿಮಾನಿಭಿರಜೇಶಮುಖ್ಯೈಃ ಸಹೈವ ಪಂಚಾಶತಾ ಪ್ರತಿಗಿರಂತಮಶೇಷವಿದ್ಯಾಃ ॥
ವಂದೇ ತುರಂಗವದನಂ ಶಶಿಬಿಂಬಸಂಸ್ಥಂ ಚಂದ್ರಾವದಾತಮಮಿತಾತ್ಮಕರೈಃ ಸಮಂತಾತ್ ।
ಅಂಡಾಂತರಂ ಬಹಿರಪಿ ಪ್ರತಿಭಾಸಯಂತಂ ಶಂಖಾಕ್ಷಪುಸ್ತಕಸುಬೋಧಯುತಾಬ್ಜಬಾಹುಮ್ ॥
ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ ವಿದ್ಯಾ ಅಶೇಷತ ಉತಾಬ್ಜಭವೇಶಮುಖ್ಯೈಃ।
ಸಂಸೇವ್ಯಮಾನಮತಿಭಕ್ತಿಭರಾವನಮ್ರೈರ್ಲಕ್ಷ್ಮ್ಯಾಽಮೃತೇನ ಸತತಂ ಪರಿಷಿಚ್ಯಮಾನಮ್ ॥

೧೦. ಶ್ರೀಹಯಗ್ರೀವರೂಪ ವಿದ್ಯಾಪ್ರದಾಯಕವಾದ ರೂಪ; ಸಕಲ ವೇದಾದಿ ರೂಪ-ವಾಙ್ಮಯವನ್ನು ಅಭಿವ್ಯಕ್ತಿಗೊಳಿಸಿದ ವಿಶೇಷ ಹಿರಿಮೆ ಈ ರೂಪದ್ದು :

ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇದದ್ಯದೃಗ್ವೇದೋ[೨] ಯಜುರ್ವೇದಃ ಸಾಮವೇದೋಽ-ಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಲೋಕಾಃ ಸೂತ್ರಾಣ್ಯ-ನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಃಶ್ವಸಿತಾನಿ ॥ (ಬೃಹದಾರಣ್ಯಕೋಪನಿಷತ್)

೧೧. ಶ್ರೀಹಯಗ್ರೀವನಾಮದ ಉಚ್ಚಾರಣೆಯೂ ಸಹ ವಿದ್ಯೆ, ವಾಕ್ ಮೊದಲಾದವುಗಳನ್ನು ನೀಡುವ ಮಂತ್ರ ಎಂಬ ಹಿರಿಮೆಯನ್ನು ಶ್ರೀವಾದಿರಾಜರು ನಿರೂಪಿಸಿರುವರು :

ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್ ।
ತಸ್ಯ ನಿಃಸರತೇ ವಾಣೀ ಜಹ್ನುಕನ್ಯಾಪ್ರವಾಹವತ್ ॥

---

೧. ಉತ್ತಮಪುರುಷಪ್ರಯೋಗಾದಸ್ಮಚ್ಛಬ್ದೋಽಧ್ಯಾಹಾರ್ಯಃ। –ವ್ಯಾ.

೨. ತಸ್ಮಾದ್ವೇದಾಃ ಸಮುತ್ಪನ್ನಾ ವಿದ್ಯಾಖ್ಯಾ ಮೂಲಿಕಾ ಶ್ರುತಿಃ।
ಸರ್ವೋಪನಿಷದಶ್ಚೈವ ಪಂಚರಾತ್ರಾಖ್ಯಸಂಹಿತಾಃ।
ಬ್ರಹ್ಮಸೂತ್ರಾಣಿ ವೇದಾನಾಂ ವ್ಯಾಖ್ಯಾಸ್ತಾಸಾಂ ಚ ವಿಸ್ತರಃ।
ಸರ್ವಮೇತಜ್ಜಗಚ್ಚೈವ ನಿಃಸೃತಂ ತುರಗಾನನಾತ್ । – ಬೃಹದ್ಭಾಷ್ಯ (ಮೈತ್ರೇಯೀಬ್ರಾಹ್ಮಣ)

- ಇದರ ಅನುಸಂಧಾನವನ್ನು ಸುಲಭವನ್ನಾಗಿಸಲು ಅವರು ಹಯಗ್ರೀವ ಎಂಬುದಾಗಿ ಒಂದು ನೂತನ ಭಕ್ಷ್ಯವನ್ನೇ ಸೃಷ್ಟಿಸಿದರು ಎಂಬುದು ಗಮನಾರ್ಹ; ವರ್ತ್ಮ - ಮಾರ್ಗ.

೧೨. ಭಗವದ್ರೂಪಗಳ ಭಂಗಿಗಳನ್ನು ಹೀಗೆ ತತ್ತ್ವಬೋಧಕವನ್ನಾಗಿ ಅನುಸಂಧಾನಮಾಡಿ ಸ್ತುತಿಸುವ ವಿಶೇಷ ರೀತಿಯ ಕೌಶಲ ಶ್ರೀವಾದಿರಾಜರ ಅನೇಕ ಕೃತಿಗಳಲ್ಲಿ ಕಂಡುಬರುವುದು[೧].

### ಶ್ರೀಹಯಗ್ರೀವದೇವರ ಸ್ತುತಿ-೨

**ಶ್ರಯೇ ಹಯಮುಖಂ ಶ್ರಾವ್ಯಕಾವ್ಯಮಾರ್ಗಸಮಾಪ್ತಯೇ ।**
**ಸರಾಗಯೋಗಿಪೂಗೋಕ್ತಸ್ತೋತ್ರತೋತ್ರವಶಂ ಮಹಃ[೨] ॥ ೩ ॥**

ಅನುರಾಗದಿಂದ ಕೂಡಿದ ಯೋಗಿವೃಂದವು ನುಡಿಯುವ ಸ್ತೋತ್ರವೆಂಬ ಕಶೆಗೆ ವಶವಾಗುವ ಹಯಗ್ರೀವ ಎಂಬ ತೇಜಸ್ಸನ್ನು ರಮಣೀಯವಾದ ಕಾವ್ಯಮಾರ್ಗದ ಪರಿಸಮಾಪ್ತಿಗಾಗಿ ಆಶ್ರಯಿಸುವೆನು.

ವಿ: ಪರಿಚಿತವಲ್ಲದ ಮಾರ್ಗದ ಪ್ರಯಾಣಕ್ಕಾಗಿ ಮಾರ್ಗಮಧ್ಯದಲ್ಲಿ ಶ್ರಮದಿಂದ ಉಂಟಾಗುವ ಆಲಸ್ಯದ ಪರಿಹಾರಕ್ಕಾಗಿ ಪರಿಚಯವಿರುವ ಅಶ್ವವನ್ನು[೩] ಕಶೆಯಿಂದ ವಶಮಾಡಿಕೊಂಡು, ಕತ್ತಲೆಯನ್ನುತೊಡೆಯಲೆಂದು ದೀಪವನ್ನುಆಶ್ರಯಿಸುವಂತೆರುಗ್ಮಿಣೀಶವಿಜಯವೆಂಬ ಕಾವ್ಯದ ಪರಿಸಮಾಪ್ತಿಗಾಗಿ ಭಕ್ತರ ಸ್ತೋತ್ರವೆಂಬ ಕಶೆಗೆ ವಶವಾಗುವ ಹಯಗ್ರೀವನೆಂಬ ತೇಜಸ್ಸನ್ನು[೪] ಆಶ್ರಯಿಸುವೆನು ಎಂದು ಭಾವ (ತೋತ್ರ-ಚಾಟಿ).

---

೧. ಶ್ರೀವಾದಿರಾಜರು ಉಡುಪಿಯ ಶ್ರೀಕೃಷ್ಣ ಪಂಢರಪುರದ ಪಾಂಡುರಂಗ, ತಿರುಪತಿಯ ಶ್ರೀನಿವಾಸ ಮೊದಲಾದ ಭಗವನ್ಮೂರ್ತಿಗಳನ್ನು ಸಹ ಈ ರೀತಿಯಾಗಿ ಸ್ತುತಿಸಿದ್ದು ಅಂತಹ ಕೆಲವು ಶ್ಲೋಕಗಳು ಹೀಗಿವೆ :
ನಿರ್ಮಥ್ಯೋಗ್ರಭವಾರ್ಣವೇ ನಿಜಮನೋಽಭೀಷ್ಟಂ ದಿಶಾಮೀತಿ ಯಃ
ಸಮ್ಯಗ್ ಜ್ಞಾಪಯಿತುಂ ಕರೇಣ ವಿಲಸನ್ಮಂಥಾನಮನ್ಯೇನ ಚ ।
ರಮ್ಯಂ ದಾಮ ದಧನ್ ಮಹೇಶರಜತಗ್ರಾಮಶ್ರಿಯೋಽಲಂಕೃತಿಃ
ಕರ್ಮಂದೀಶ್ವರಭಕ್ತಿಬಂಧನವಶಃ ಪ್ರೀತೋಽಸ್ತು ಕೃಷ್ಣಃ ಪ್ರಭುಃ ॥ -ತೀರ್ಥಪ್ರಬಂಧ(೧/೧೧)
ತೀರೇ ಸತ್ಸರಿತಸ್ತಿರಸ್ಕೃತಧನಾಸಕ್ತಿರ್ವಿರಕ್ತಿಪ್ರಿಯಃ
ಪಾದಾಂಭೋಜಮಿದಂ ಮದಂಕಸಹಿತಃ ಸಂಚಿಂತಯಾಂತರ್ಹೃದಿ ।
ಪಶ್ಚಾತ್ ತೇ ಕಟಿಮಾತ್ರ ಏವ ಭವಿತಾ ಸಂಸಾರವಾರ್ಧಿರ್ನ ಚೇತ್
ಶಿಕ್ಷಾಮೀತಿ ಹಿ ಲಕ್ಷಯತ್ಯನುದಿನಂ ಸ್ವಾವಸ್ಥಯಾ ವಿಠ್ಠಲಃ ॥ -ತೀರ್ಥಪ್ರಬಂಧ(೨/೬)
ಯೇ ಶಂಖಚಕ್ರೋಜ್ಜ್ವಲಬಾಹುಯುಗ್ಮಾಃ ಸ್ವಾಂಘ್ರಿಂ ಭಜಂತೇ ಭವಸಿಂಧುರೇಷಃ ।
ಕಟಿಪ್ರಮಾಣಸ್ತ್ವಿತಿ ವೇಂಕಟೇಶಃ ಸ್ಫುಟೀಕರೋತ್ಯಾತ್ಮಕರಾಂಬುಜಾತೈಃ ॥ -ತೀರ್ಥಪ್ರಬಂಧ(೩/೨೧)

೨. ಪರಿಣಾಮಾಲಂಕಾರ ಹಾಗೂ ವೃತ್ತ್ಯನುಪ್ರಾಸ ಎಂಬ ಶಬ್ದಾಲಂಕಾರ ; ಪಥ್ಯಾವಕ್ತ್ರ ವೃತ್ತ: ಪರಿಣಾಮಾಲಂಕಾರಃ । ವೃತ್ತ್ಯನುಪ್ರಾಸಾಖ್ಯಃ ಶಬ್ದಾಲಂಕಾರಶ್ಚ । ಪ್ರಾಯಶೋಽಸ್ಮಿನ್ಕಾವ್ಯೇ ಯದ್ಯಪಿ ಅಯಮನುಪ್ರಾಸಾಲಂಕಾರೋಽಸ್ತಿ । ವೃತ್ತಂ ತು ಪಥ್ಯಾವಕ್ತ್ರಮ್ । -ವ್ಯಾ.

೩. ತೋತ್ರಂ ಕಶಾ । -ವ್ಯಾ.

೪. ಯಥಾ ಲೋಕೇ ಅನಭ್ಯಸ್ತಮಾರ್ಗಗಮನಾಯ ಮಧ್ಯೇ ಶ್ರಮಜನಿತಾಲಸ್ಯಪರಿಹಾರಾಯ ಚ ಪರಿಚಯವಂತಮಶ್ವಂ ಕಶಯಾ ವಶೀಕೃತ್ಯ ತಮೋವಿಚ್ಛೇದಾಯ ದೀಪಿಕಾಂ ಚಾಶ್ರಯತೇ ತದ್ವದಿತಿ ಭಾವಃ । ಹಯಮುಖಸ್ಯ ತೇಜೋರೂಪತ್ವಾತ್ತದಾಶ್ರಯಣೇನೋಭಯಕಾರ್ಯಸಿದ್ಧಿರಿತಿ ಜ್ಞಾತವ್ಯಮ್ । -ವ್ಯಾ.

## ಶ್ರೀರುಗ್ಮಿಣೀದೇವಿಯ ಸ್ತುತಿ

[1]ಸಿಂಜನ್ನೂಪುರಶೋಭಿಪಾದಕಮಲಾಂ ಮಂದಸ್ಮಿತೋದ್ಯನ್ಮುಖೀಂ
ಕಂಜಾಕ್ಷೀಂ ಕುಚಭಾರಭೀರುವಿಲಸನ್ಮಧ್ಯಾಂ ಕ್ವಣತ್ಕಂಕಣಾಮ್ ।
ಶಂಭ್ವಾದ್ಯೈಃ ಪರಿಸೇವಿತಾಂ ಸುವಸನಾಂ ಜಾಂಬೂನದಾಲಂಕೃತಾ-
ಮಂಬಾಂ ತಾಂ [2]ಪ್ರಣತೋಽಸ್ಮಿ ಕೃಷ್ಣರಮಣೀಂ ಲಂಬಾಲಕಾಂ ರುಗ್ಮಿಣೀಮ್ [3] ೪

ಧ್ವನಿಗೈಯ್ಯುವ ಕಾಲ್ಗೆಜ್ಜೆಗಳಿಂದ ಶೋಭಿಸುವ ಕಮಲದಂತಹ ಪಾದಗಳು, ಮಂದಹಾಸದಿಂದ ಕೂಡಿದ ಹೊಳೆಯುವ ಮುಖ, ಕಮಲದಂತಹ ಕಣ್ಣುಗಳು, ಸ್ತನಗಳ ಭಾರದಿಂದ ಬಳುಕುವ ಹೊಳೆಯುವ ನಡು, ಧ್ವನಿಗೈಯ್ಯುವ ಕೈಬಳೆಗಳು, ಉತ್ತಮವಾದ ಪೀತಾಂಬರ, ಚಿನ್ನದ ಆಭರಣಗಳ ಅಲಂಕಾರ, ನೀಳವಾದ ಮುಂಗುರುಳುಗಳು, ಸುತ್ತಲೂ ಬ್ರಹ್ಮ ಮೊದಲಾದ ದೇವತೆಗಳ ಪರಿವಾರ, ಇಂತಹ ಶ್ರೀಕೃಷ್ಣನ ರಮಣಿಯಾದ ರುಗ್ಮಿಣಿಯನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸುವೆನು.

ವಿ. : ೧. ಕಾವ್ಯದ ನಾಯಕಿಯಾದ ರುಗ್ಮಿಣೀದೇವಿಯ ಸ್ತೋತ್ರ ಈ ಶ್ಲೋಕದಲ್ಲಿದೆ.

೨. [4]ರುಗ್ಮಿಣಿಯ ಆಪಾದಮೌಲಿಪರ್ಯಂತ ವರ್ಣನೆ ಇದರಲ್ಲಿದೆ. ಪಾದಕಮಲಗಳು ಮುಖ, ಕಣ್ಣುಗಳು, ನಡು, ಕೈಬಳೆಗಳು, ವಸ್ತ್ರ ಅಲಂಕಾರಗಳು, ಸುತ್ತಲಿನ ಪರಿವಾರಗಳ ವಿವರಗಳನ್ನು ನೀಡುವ ಈ ಪದ್ಯ [5]ರುಗ್ಮಿಣಿಯ ಭವ್ಯ ಚಿತ್ರವನ್ನು ಧ್ಯಾನಕ್ಕೆ ಹೊಂದುವಂತೆ ತಿಳಿಸುವ ಅಪೂರ್ವತೆಯನ್ನು ಹೊಂದಿದೆ.

೩. [6]ಶಂಭು ಎಂಬುದಕ್ಕೆ ಬ್ರಹ್ಮ ಹಾಗೂ ಶಿವ ಎಂಬ ಎರಡು ಅರ್ಥಗಳು ಕೋಶದಲ್ಲಿವೆ; ಇಲ್ಲಿ ಬ್ರಹ್ಮ ಎಂಬ ಅರ್ಥ ಮುಖ್ಯವಾಗಿ ವಿವಕ್ಷಿತ. ಬ್ರಹ್ಮದೇವರು ಕ್ಷರಪುರುಷರಲ್ಲಿ ಉತ್ತಮರು, ಎಂದರೆ ಜೀವೋತ್ತಮರು. ಅವರೇ ಮೊದಲಾದವರನ್ನು ಪರಿವಾರವಾಗಿ ಹೊಂದಿರುವ ಮಹಾಲಕ್ಷ್ಮಿಯು ಅವರೆಲ್ಲರಿಗಿಂತ ಮಿಗಿಲಾದ ಅಕ್ಷರಪುರುಷಳು ಎಂದು ಭಾವ ; ಅಲಕ-ಮುಂಗುರುಳು.

೪. ಮಹಾಲಕ್ಷ್ಮಿಯನ್ನು ಪ್ರತ್ಯೇಕವಾಗಿ ಸ್ತೋತ್ರಮಾಡದೆ, ರುಗ್ಮಿಣೀರೂಪವನ್ನು ಸ್ತುತಿಸಿರುವುದು ಅವರ ಮೂಲರೂಪಕ್ಕೂ ಅವತಾರರೂಪಗಳಿಗೂ ಯಾವುದೇ ವಿಧವಾದ ಭೇದವಿಲ್ಲ ಎಂಬ ತತ್ತ್ವವನ್ನು ಸೂಚಿಸುವುದು; ರುಗ್ಮಿಣಿಯು ಜಾಂಬವತಿ ಮೊದಲಾದವರಂತೆ ಆವೇಶ

---

೧. ಸಿಂಜತ್ಕ್ವಣನ್ನೂಪುರಪಾದಶೋಭಿತಾಮ್ ॥ -ಭಾಗ.(೧೦/೫೮/೫೬)
೨. ನಮನಸ್ಯ ಭಕ್ತಿಶ್ರದ್ಧಾತಿಶಯಪೂರ್ವಕತ್ವದ್ಯೋತನಾಯ ಪ್ರೇತ್ಯುಪಸರ್ಗಃ। -ವ್ಯಾ.
೩. ಸ್ವಭಾವೋಕ್ತಿರಲಂಕಾರಃ; ಶಾರ್ದೂಲವಿಕ್ರೀಡಿತಮ್ । -ವ್ಯಾ.
೪. ಅನೇನ ರುಗ್ಮಿಣ್ಯಾಃ ಸಾಮಾನ್ಯತಃ ಪಾದಾದಿವರ್ಣನಂ ಕೃತಂ ಭವತಿ । -ವ್ಯಾ.
೫. ವೈದರ್ಭೀರೀತಿಃ। -ವ್ಯಾ.
೬. ಶಂಭುರ್ಬ್ರಹ್ಮಾ। ಶಂಭೂ ಬ್ರಹ್ಮತ್ರಿಲೋಚನಾವಿತ್ಯಮರಃ। -ವ್ಯಾ.

ಹೊಂದಿದವರಾಗಿರದೆ, [೧]ಸಾಕ್ಷಾತ್ ಮಹಾಲಕ್ಷ್ಮಿಯೇ ಆಗಿರುವಳು ಎಂಬ ವಿಶೇಷಾರ್ಥವು ಇದರಿಂದ ಸೂಚಿತ : **ರಮೈವ ರುಗ್ಮಿಣೀತಿ...** । ಮ.ಭಾ.ತಾ.ನಿ.(೧೭/೧)

೫. ಸಕಲರ ಮಾತು, ಮನಸ್ಸುಗಳಿಗೆ ಅಭಿಮಾನಿಯಾದ ಮಹಾಲಕ್ಷ್ಮಿಯ ಸ್ತುತಿಯು ಗ್ರಂಥಾರಂಭದಲ್ಲಿ ವಿಹಿತ; ಅದರಂತೆ ಮಹಾಲಕ್ಷ್ಮಿಯು ಭಾಗ್ಯದ ದೇವತೆಯಾಗಿರುವುದರಿಂದ ಸಾಧನೆಗೆ ಭಾಗ್ಯವು ಅತ್ಯಗತ್ಯವಾದ್ದರಿಂದ ಅವರ ಸ್ತುತಿ ಕರ್ತವ್ಯ ಎಂಬ ಪ್ರಮೇಯವು ಇದರಿಂದ ಸೂಚಿತ : **ದೇವೀ ಭಾಗ್ಯಾತ್ಮಿಕಾ ನೃಣಾಮ್** ।-ಮ.ಭಾ.ತಾ.ನಿ (೩./೭)

೬. ಇಲ್ಲಿ ವೈದರ್ಭೀ ಎಂಬ ರೀತಿ ಇದೆ. ವಿದರ್ಭದೇಶದ ರಾಜಕುಮಾರಿಯಾಗಿ ಅವತರಿಸಿ, ವೈದರ್ಭೀ ಎನಿಸಿದ ರುಗ್ಮಿಣೀ ದೇವಿಯ ವರ್ಣನೆಗೆ ವೈದರ್ಭೀರೀತಿಯನ್ನೇ ಬಳಸಿರುವುದು ಶ್ರೀವಾದಿರಾಜರ ವಿಶೇಷ ಕೌಶಲ ಎಂಬುದನ್ನು [೨]ಗಮನಿಸಬೇಕು; **ಕಂಜ** – ಕಮಲ; **ಕಂಜಾಕ್ಷೀ** – ಕಮಲನಯನೆ; [೩]**ಜಾಂಬೂನದ**– ಚಿನ್ನ;

## ಶ್ರೀಮನ್ಮಧ್ವಾಚಾರ್ಯರ ಸ್ತುತಿ

**ಸತ್ಸಂಘಮಾನಸಸರೋವರಮಧ್ಯವರ್ತೀ**
**ಕೃಷ್ಣಾಂಘ್ರಿಚಾರುಕಮಲಾರ್ಪಿತಚಿತ್ತವೃತ್ತಿಃ ।**
**ಶಾಸ್ತ್ರಾತ್ರಿಮಂಜುಪದರಂಜಿತರಮ್ಯಸಂಸ-**
**ದಾಸ್ಮಾಕಹೃತ್ಸರಸಿಜೇಽಸ್ತು[೪] ಸ ಮಧ್ವಹಂಸಃ[೫] ॥ ೫ ॥**

ಸಜ್ಜನವೃಂದವೆಂಬ ಮಾನಸಸರೋವರದ ಮಧ್ಯದಲ್ಲಿ ನೆಲೆಸಿರುವ, ಶ್ರೀಕೃಷ್ಣನ ಪಾದವೆಂಬ ಮನೋಹರವಾದ ತಾವರೆಯಲ್ಲಿ ಮನಸ್ಸನ್ನು ತೊಡಗಿಸಿರುವ, ಶಾಸ್ತ್ರಗಳ ಅತ್ಯಂತ

---

೧. ತಾಂ ಆಂಭ್ರಣೀಸೂಕ್ತಪ್ರಸಿದ್ಧಾಂ ಶ್ರೀದೇವ್ಯವತಾರಭೂತಾಂ ರುಗ್ಮಿಣೀಂ ಪ್ರಣತೋಽಸ್ಮಿ। -ವ್ಯಾ.

೨. ತದುಕ್ತಮ್ – ''ಸರಸೌ ಯತ್ರ ಶಬ್ದಾರ್ಥೌ ಮಾಧುರ್ಯಂ ಶ್ರುತಿಮೋದಕೃತ್ । ಅನಿಷ್ಠುರೈಃ ಶ್ರುತಿಸುಖೈರ್ವರ್ಣೈಃ ಸ್ಯಾತ್ ಸುಕುಮಾರತಾ । ಶಬ್ದಾರ್ಥಯೋರ್ಗುಣೋತ್ಕರ್ಷಾ ಯತ್ರ ಸಾ ಸ್ಯಾದುದಾಹೃತೇತಿ'' ಇತ್ಯಾದಿ । ''ಏತೈಃ ಸಮಗ್ರಾ ವೈದರ್ಭೀ ವರ್ಣ್ಯತೇ ದಶಭಿರ್ಗುಣೈಃ'' ಇತಿ। -ವ್ಯಾ.

೩.. ಜಾಂಬೂನದ ಎಂದರೆ ಇಂದ್ರಗೋಪದಂತಹ ಹೊಳಪಿನ ವಿಶೇಷ ಬಗೆಯ ಚಿನ್ನ ಎಂದು ತಿಳಿಯಬೇಕು:

ಮಯಂ ತು ಮಾನುಷಂ ಸ್ವರ್ಣಂ ಪೀತಂ ಗಾಂಧರ್ವಮೇವ ಚ।
ಇಂದ್ರಗೋಪನಿಭಂ ನಾಮ್ನಾ ಜಾಂಬೂನದಮಿತಿ ಸ್ಮೃತಮ್। – ಬೃಹದಾರಣ್ಯಕೋಪನಿಷದ್ಭಾಷ್ಯ (೬/೪)

೪. ಪ್ರಾರ್ಥನಾಯಾಂ ಲೋಟ್। -ವ್ಯಾ.

೫. ವಸಂತತಿಲಕ ವೃತ್ತ :
ಉಕ್ತಾ ವಸಂತತಿಲಕಾ ತಭಜಾ ಜಗೌ ಗಃ ಸಿಂಹೋನ್ನತೇಯಮುದಿತಾ ಮುನಿಕಾಶ್ಯಪೇನ
ಉದ್ಧರ್ಷಿಣೀತಿ ಗದಿತಾ ಮುನಿಸೈತವೇನ ರಾಮೇಣ ಸೇಯಮುದಿತಾ ಮಧುಮಾಧವೀತಿ ॥
– ಇತಿ ವೃತ್ತರತ್ನಾಕರೇ (೩./೭೧)

ರೋಚಕವಾದ ಪದಗಳಿಂದ ರಮ್ಯವಾದ ಸಭೆಯನ್ನು ರಂಜಿಸುವ, ಶ್ರೀಮಧ್ವಾಚಾರ್ಯರೆಂಬ ಹಂಸವು ನಮ್ಮ ಹೃತ್ಕಮಲದಲ್ಲಿ ನೆಲೆಸಲಿ.

ವಿ. ೧. ಈ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರನ್ನು ಸ್ತುತಿಸಿರುವರು.

೨. ಪರಮಹಂಸರಾದ ಶ್ರೀಮಧ್ವಾಚಾರ್ಯರನ್ನು ಇಲ್ಲಿ ಹಂಸಪಕ್ಷಿ ಎಂದು ಕರೆದಿರುವುದು ಅತ್ಯಂತ ರೋಚಕ. ಹಂಸಪಕ್ಷಿಯು ಮಾನಸಸರೋವರದಲ್ಲಿ ನೆಲೆಸಿರುವುದು. ಕಮಲಗಳಲ್ಲಿ ಆಕರ್ಷಣೆ ಹೊಂದಿರುವುದು. ಮನೋಹರವಾದ ನಡೆಗಳಿಂದ ಸಜ್ಜನರನ್ನು ಆಹ್ಲಾದ-ಪಡಿಸುವುದು. ಶ್ರೀಮಧ್ವಾಚಾರ್ಯರು ಸಜ್ಜನ ಸಮೂಹವೆಂಬ ಮಾನಸಸರೋವರದ ಮಧ್ಯೆ ಇರುವವರು. ಶ್ರೀಕೃಷ್ಣನ ಪಾದಕಮಲಗಳಲ್ಲಿ ಸದಾ ಮನಸ್ಸನ್ನು ತೊಡಗಿಸಿರುವವರು. ಸಚ್ಛಾಸ್ತ್ರವೆಂಬ ಮನೋಹರಪದಗಳಿಂದ[೨] ಸಜ್ಜನರ ಸಭೆಯನ್ನು ಆನಂದಪಡಿಸುವವರು. ಹೀಗೆ ಅವರು ಹಂಸದಂತಿರುವುದು ಅತ್ಯಂತ ಸಮುಚಿತ ಎಂಬುದು ಇಲ್ಲಿಯ ಭಾವ.

೩. [೧]ಸಜ್ಜನರ ಸಮುದಾಯವೇ ಮಾನಸಸರೋವರ. ಶ್ರೀಕೃಷ್ಣನ ಪಾದಗಳೇ ಕಮಲ. ಶಾಸ್ತ್ರಗಳ ಮನೋಹರ ಪದಗಳೇ ಹಂಸಪಕ್ಷಿಯ ನಡೆ ಎಂಬಲ್ಲಿ ರೂಪಕಾಲಂಕಾರ.

೪. ಶ್ರೀಮನ್ಮಧ್ವಾಚಾರ್ಯರು ಪದ್ಮನಾಭತೀರ್ಥಾದಿ ಸಜ್ಜನರ ಮಧ್ಯೆ ಶೋಭಿಸುವವರು. ತಮ್ಮ ವಿಶ್ವ ಶಬ್ದದ ಶತಾರ್ಥ ಕಥನಾದಿಗಳ ಮೂಲಕ ವಿದ್ವತ್ಸಭೆಯನ್ನು ಸಂತೋಷಪಡಿಸಿದವರು ಎಂಬ[೩] ವಿವರಗಳು ಇದರಿಂದ ಸೂಚಿತ.

೫. ಶ್ರೀವಾದಿರಾಜಸ್ವಾಮಿಗಳ ರುಗ್ಮಿಣೀಶವಿಜಯವು ಶ್ರೀಮದ್ಭಾಗವತ ಹಾಗೂ ಮುಖ್ಯವಾಗಿ ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಶ್ರೀಮದ್ಭಾಗವತ-ತಾತ್ಪರ್ಯನಿರ್ಣಯಗಳನ್ನು ಆಧರಿಸಿದ ಕೃತಿ; ಅವರು ಅಲಂಕರಿಸಿದ ಸೋದೆಯ ಮಠವು ಶ್ರೀಮಧ್ವಾಚಾರ್ಯರಿಂದ ಪ್ರವರ್ತಿತವಾದ ಅಷ್ಟಮಠಗಳಲ್ಲಿ ಒಂದು; ಅದರೊಂದಿಗೆ ಶ್ರೀಮನ್ಮಧ್ವಾಚಾರ್ಯರು ಸಕಲವೈಷ್ಣವರಿಗೂ ಮೂಲಗುರುಗಳು ಹಾಗೂ ಸರ್ವಜೀವೋ-ತ್ತಮರು: **ಆಚಾರ್ಯಃ ಪವನೋಽಸ್ಮಾಕಮ್** । (ಯುಕ್ತಿಮಲ್ಲಿಕಾ) ಈ ಹಿನ್ನೆಲೆಯಲ್ಲಿ ಶ್ರೀಮನ್ಮಧ್ವಾಚಾರ್ಯರ ಪ್ರಾರ್ಥನೆಯು ಇಲ್ಲಿ ಸಮುಚಿತವಾಗಿದೆ.

೬. ಶ್ರೀಸೋದೆಮಠದ ಮೂಲಪುರುಷರು ಶ್ರೀವಿಷ್ಣುತೀರ್ಥರಾದರೆ, ಪ್ರವರ್ತಕರು ಶ್ರೀಮನ್ಮಧ್ವಾಚಾರ್ಯರು, ಈ ದೃಷ್ಟಿಯಿಂದಲೂ ಶ್ರೀಮಧ್ವಾಚಾರ್ಯರ ಸ್ತುತಿಯು ಇಲ್ಲಿ ಸಂಗತವಾಗಿದೆ.

---

೧. ಪದಶಬ್ದೇನ ತಜ್ಜನ್ಯಾ ಗತಯೋ ಲಕ್ಷ್ಯಂತೇ । -ವ್ಯಾ.

೨. ಗೀತಾ(೧೭/೨೬)

೩.. ಅನ್ಯಥಾ ರಂಜನಾಯೋಗಾತ್ । ಏಕಸ್ಯ ವಿಶ್ವಶಬ್ದಸ್ಯ ಶತಾರ್ಥಕಥನೇನ ಸಭಾಂ ರಂಜಿತವಾನಿತಿ ಪ್ರಾಚೀನಪ್ರಥಾ । -ವ್ಯಾ.

ಪ್ರತ್ಯಯಪ್ರಕೃತಿಸಂಗಮಭಂಗೀಂ ಶಬ್ದಶಾಸ್ತ್ರವಿಹಿತಾಂ ಪ್ರತಿದರ್ಶ್ಯ ।
ಶುದ್ಧಧೀಃ ಶ್ರುತಿಶಿರಃಶತಸಿದ್ಧಾನಭ್ಯಧಾತ್ ಸಪದಿ ವಿಶ್ವಪದಾರ್ಥಾನ್ ॥ -ಸುಮಧ್ವವಿಜಯ(೬/೭)

### ಶ್ರೀಸರಸ್ವತೀದೇವಿಯ ಸ್ತುತಿ

ತಾಟಂಕದ್ವಯಶೋಭಿಕರ್ಣಯುಗಲಂ ಭ್ರಾಜದ್ದಯಾವೀಕ್ಷಣಂ
ಪೂರ್ಣೇಂದುದ್ಯುತಿ ವಿದ್ರುಮಾಧರರುಚಾ ವ್ಯಾಮಿಶ್ರಮಂದಸ್ಮಿತಮ್ ।
ಈಷತ್ಕುಂಚಿತಕುಂತಲಂ ಸತಿಲಕಂ ನಾಸೋಲ್ಲಸನ್ಮೌಕ್ತಿಕಂ
ಭೂಯಾತ್ ಕೂರ್ಮಸದೃಕ್ಷಗಂಡಯುಗಲಂ ವಾಣೀಮುಖಂ ಶ್ರೇಯಸೇ ॥ ೬ ॥

ಎರಡು ಓಲೆಗಳಿಂದ ಕಂಗೊಳಿಸುವ ಕಿವಿಗಳು, ಹೊಳೆಯುವ ಕೃಪಾಕಟಾಕ್ಷ, ಪೂರ್ಣ-ಚಂದ್ರನಂತಹ ಕಾಂತಿ, ಹವಳದಂತಹ ತುಟಿಗಳ ಕಾಂತಿಯಿಂದ ಮಿಶ್ರಿತವಾದ ಕಿರುನಗೆ, ಸ್ವಲ್ಪ ವಕ್ರವಾದ ಮುಂಗುರುಳು, ಧರಿಸಿದ ತಿಲಕ, ಮೂಗಿನಲ್ಲಿ ಹೊಳೆಯುವ ಮುತ್ತಿನ ನತ್ತು; ಆಮೆಯನ್ನು ಹೋಲುವ ಎರಡು ಕೆನ್ನೆಗಳು; ಇಂತಹ ಸರಸ್ವತಿಯ ಮುಖವು ಶ್ರೇಯಸ್ಸನ್ನು ಕರುಣಿಸಲಿ.

ವಿ. ೧. ಇದರಲ್ಲಿ ಸರಸ್ವತಿಯ ಮುಖದ ವರ್ಣನೆ ಬಂದಿದೆ. ಸರಸ್ವತಿಯ ಮುಖವು ಎರಡು ತಾಟಂಕಗಳಿಂದ ಕಂಗೊಳಿಸುವ ಕಿವಿಗಳಿಂದ ಕೂಡಿದ್ದು, ಹೊಳೆಯುವ ಕೃಪಾನೋಟವನ್ನು ಹೊಂದಿದೆ. ಪೂರ್ಣಚಂದ್ರನ ಕಾಂತಿ ಅದರದು; ಅದರ ತುಟಿಗಳು ಹವಳದಂತೆ ಹೊಳೆಯುವವು. ಕಿರುನಗೆ ಸೂಸುವ ಅದರ ಹಣೆಯ ಮೇಲೆ ಮುಂಗುರುಳುಗಳು ಶೋಭಿಸುವವು. ಹಣೆಯ ಮೇಲೆ ತಿಲಕ, ಮೂಗಿನಲ್ಲಿ ಮುತ್ತಿನ ಮೂಗುತಿ ಹೊಳೆಯುವವು. ಅವರ ಕೆನ್ನೆಗಳು ಕೂರ್ಮದಂತೆ ಶೋಭಿಸುವವು; ತಾಟಂಕ - ಕರ್ಣಪತ್ರ, ಓಲೆ; ಭ್ರಾಜತ್ - ಹೊಳೆಯುವ.

೨. ಇಲ್ಲಿ [೧]ಶ್ರೇಯಸೇ ಎಂದರೆ ಶ್ರೇಯಸ್ಸಿಗೆ, ಎಂದರೆ ವಿದ್ಯಾಪ್ರಾಪ್ತಿಗೆ ಹಾಗೂ ಶ್ರೇಯಸ್ಸಿಗೆ ಎಂದರ್ಥ; ಇಲ್ಲಿ ಆಶೀಃ ಎಂಬ ಅಲಂಕಾರ. [೨]ದ್ರಾಕ್ಷಾಪಾಕವೆಂಬ ಶೈಲಿ ಇದೆ.

೩. ಶ್ರೇಯಸ್ಸು ಎಂಬುದು ಕಠೋಪನಿಷತ್ತಿನಲ್ಲಿ ಬಂದಿರುವ ಪದ; ಪ್ರೇಯಸ್ಸು ಎಂಬುದು ಐಹಿಕ ಸುಖ , ಶ್ರೇಯಸ್ಸು ಎಂಬುದು ಪಾರಲೌಕಿಕ ಸುಖ ಎಂಬುದು ವಿಶೇಷ.

೪. ವಿದ್ರುಮ-ಹವಳ; ಈಷತ್-ಸ್ವಲ್ಪ; ಸದೃಕ್ಷ - ಸದೃಶ; ಕುಂತಲ - ಮುಂಗುರುಳು.

### ಕೃತಿಯ ಉದ್ದೇಶ

ಶ್ರೀನಾಥಕೀರ್ತ್ಯಂಬುಜಸೇವ್ಯಗಂಧಂ
ಪ್ರಾಣಃ ಸ ಸಂಗೃಹ್ಯ ವಿಹರ್ತುಮೀಷ್ಟೇ ।

---

೧. ಶ್ರೇಯಸೇ ವಿದ್ಯಾಸಂಪತ್ತಯೇ ನಿಃಶ್ರೇಯಸಾಯ ಚ ಭೂಯಾತ್ । -ವ್ಯಾ.
೨. ದ್ರಾಕ್ಷಾಪಾಕಃ : "ದ್ರಾಕ್ಷಾಪಾಕಃ ಸ ವಿಜ್ಞೇಯೋ ಬಹಿರಂತಃ ಸ್ಫುರದ್ರಸಃ" ಇತ್ಯುಕ್ತತ್ವಾತ್ । -ವ್ಯಾ.

[೧]ಸೋಽಹಂ ತದೀಯಾಗಮವಿಸ್ತೃತಂ ತ-
ದ್ವಾಣೀಮುಖಂ ವಾಸಯಿತುಂ ವೃಣೋಮಿ[೨] ॥ ೭ ॥

ಲಕ್ಷ್ಮೀಪತಿಯಾದ ಶ್ರೀಹರಿಯ ಕೀರ್ತಿ ಎಂಬ ಕಮಲದ ಸೇವನೀಯವಾದ ಪರಿಮಳವನ್ನು ಸಂಗ್ರಹಿಸಿ, [೩]ವಿಹರಿಸಲು ಆ ಮುಖ್ಯಪ್ರಾಣನು ಶಕ್ತನು; ನಾನಾದರೋ ಅವರ ಶಾಸ್ತ್ರದಲ್ಲಿ ಹರಡಿರುವ ಅದನ್ನು ನನ್ನ ವಾಕ್ಶುದ್ಧಿಗೋಸುಗ ವರ್ಣಿಸುವೆನು.

ವಿ : ೧. [೪]ಶ್ರೀಮುಖ್ಯಪ್ರಾಣನಿಗೆ ಶ್ರೀಹರಿಯ ಮಾಹಾತ್ಮ್ಯವಿಷಯದಲ್ಲಿ ಅಜ್ಞಾನಾದಿಗಳು ಇಲ್ಲ ಎಂಬುದನ್ನು 'ಸಂ' ಎಂಬ [೫]ಉಪಸರ್ಗದಿಂದ ಸೂಚಿಸಿರುವರು.

೨. [೬]ಕಮಲದ ಪರಿಮಳವನ್ನು ಹೊತ್ತು ಸಂಚರಿಸುವ ಕಾರ್ಯದಲ್ಲಿ ವಾಯುವೇ ಸಮರ್ಥ ಎಂಬುದು ಇಲ್ಲಿಯ ಮುಖ್ಯಭಾವ; ಮಹಾಭಾರತದ ವನಪರ್ವದಲ್ಲಿ ಭೀಮಸೇನ ದ್ರೌಪದಿಯ ಕೋರಿಕೆಯಂತೆ ಸೌಗಂಧಿಕಪುಷ್ಪವನ್ನು, ಪಂಚವರ್ಣದ ಪುಷ್ಪಗಳನ್ನು ತಂದ ಪ್ರಸಂಗವನ್ನು ಇದು ಧ್ವನಿಸುವುದು ; ದ್ರೌಪದಿಯು ಭಾವಿ ಸರಸ್ವತಿ ಎಂಬುದು ಸಹ ಗಮನಾರ್ಹವಾದ ಅಂಶ.

೩. [೭]ಉತ್ತಮಾಧಿಕಾರಿಯಾದ ಮುಖ್ಯಪ್ರಾಣನಿಗೂ ಶ್ರೀಹರಿ ಮಹಿಮೆಯ ಏಕದೇಶದಲ್ಲಿ ಮಾತ್ರವೇ ಜ್ಞಾನ ಎಂದ ಮೇಲೆ ಅಧಮಾಧಿಕಾರಿಗಳ ಬಗ್ಗೆ ಹೇಳುವುದೇನಿದೆ? ಎಂಬುದು ಗಂಧಪದವನ್ನು ಪ್ರಯೋಗಿಸುವ ಮೂಲಕ ಕವಿಗಳು ಸೂಚಿಸಿರುವರು.

**೪. ವಾಣೀಮುಖಂ ವಾಸಯಿತುಂ** ಎಂದರೆ [೮]ವಾಕ್ಶುದ್ಧ್ಯರ್ಥವಾಗಿ ಎಂದರ್ಥ. **ಸೇವ್ಯಗಂಧ** ಎಂದರೆ ಗ್ರಾಹ್ಯವಾದ ಪರಿಮಳ ಎಂದರ್ಥ.

---

೧. ಸರ್ವಜ್ಞಮನ್ಯಮನವೇಕ್ಷ್ಯ ಸಕಾರ್ಯವೀರ್ಯಂ ಸ್ಮೇರಾನನೋ ಭುವನಜೀವನಮಾಬಭಾಷೇ ।
- ಸುಮಧ್ವವಿಜಯ ( ೨/೨)
೨. ರೂಪಕರಂ ಪರಿತಮ್ ಪರ್ಯಾಯೋಕ್ತಮಲಂಕಾರಃ । ಇಂದ್ರವಜ್ರಾವೃತ್ತಮ್ । -ವ್ಯಾ.
೩. ಯಥಾ ವಿಲಾಸೀ ಕಶ್ಚನ ಪುರುಷಃ ಕಸ್ತೂರ್ಯಾದಿಪರಿಮಲದ್ರವ್ಯಂ ವಿಲಾಸಿನೀಮುಖವಾಸನಾರ್ಥಂ ಸಂಗೃಹ್ಣಾತಿ ತದ್ವದಿತಿ ಭಾವಃ । -ವ್ಯಾ.
೪. ಯಥಾ ವಾತಾನಭಿಮುಖಸ್ಯ ವಾಯುನಾಽನೀಯಮಾನಕಮಲಪರಿಮಲಾನುಭವಸ್ಯ ದುರ್ಲಭತ್ವೇಽಪಿ ತದಭಿಮುಖಸ್ಯ ಸುಲಭತ್ವಂ ತಥಾ ಆಚಾರ್ಯಮತವಿಮುಖಾನಾಂ ಅನ್ಯೇಷಾಂ ಹರಿಮಹಿಮಜ್ಞಾನಂ ದುರ್ಲಭಮಪಿ ಆಚಾರ್ಯಮತಾನುವರ್ತಿನೋ ಮಮ ಸುಲಭಮಿತಿ ಭಾವಃ । -ವ್ಯಾ.
೫. ಸ್ವಯೋಗ್ಯಹರಿಮಹಿಮಾವಿಷಯೇ ಶ್ರೀಮುಖ್ಯಪ್ರಾಣಸ್ಯಾಜ್ಞಾನಾದ್ಯಸಂಭವಂ ಸೂಚಯಿತುಂ ಸಮಿತ್ಯುಪಸರ್ಗಃ। -ವ್ಯಾ.
೬. ಕಮಲಾಮೋದಮುಪಾದಾಯ ಸಂಚರಣೇ ವಾಯುರೇವ ಸಮರ್ಥೋ ಭವತೀತಿ ಧ್ವನಿತೋಽರ್ಥಃ । -ವ್ಯಾ.
ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತ ಇತಿ (ಭಾ.೨/೭/೧೧) ಸ್ಮೃತೇಃ ।
೭. ಉತ್ತಮಾಧಿಕಾರಿಣೋ ಮುಖ್ಯಪ್ರಾಣಸ್ಯಾಪಿ ಹರಿಮಹಿಮ್ನೈಕದೇಶೇ ಜ್ಞಾನಂ ಕಿಲ ಕಿಮ್ವಧಮಾಧಿಕಾರಿಣಾಮಿತಿ ಗಂಧಪದಪ್ರಯೋಕ್ತುಃ ಕವೇರ್ಹೃದಯಮ್ । -ವ್ಯಾ.
೮. ವಾಣೀಮುಖಂ ವಾಣ್ಯಾ ವಾಚೋ ಮುಖಂ ವಾಸಯಿತುಂ ಪರಿಮಲೀಕರ್ತುಂ ವಾಕ್ಶುದ್ಧ್ಯರ್ಥಮಿತ್ಯರ್ಥಃ । -ವ್ಯಾ.

೫. ಗಾಳಿಯತ್ತ ಮುಖಮಾಡದವನಿಗೆ ಗಾಳಿಯಿಂದ ಬೀಸಿಬರುವ ಪರಿಮಳದ ಅನುಭವ ದುರ್ಲಭ. ಸುಮುಖನಾದವನಿಗೆ ಸುಲಭ. ಅದರಂತೆ ಮಧ್ವಮತವನ್ನರಿಯದವನಿಗೆ ಶ್ರೀಹರಿಯ ಮಹಿಮೆಯ ಜ್ಞಾನ ದುರ್ಲಭ. ಆದರೆ ಮಧ್ವಮತವನ್ನನುಸರಿಸುವವರಿಗೆ ಸುಲಭ ಎಂದರ್ಥ.

೬. ಇದು ಶ್ರೀಜಯತೀರ್ಥರ ತತ್ತ್ವಪ್ರಕಾಶಿಕಾ ಗ್ರಂಥದಲ್ಲಿನ ಈ ಕೆಳಗಿನ ಮಾತನ್ನು ಜ್ಞಾಪಿಸುವಂತಿದೆ:

ಗಂಗಾಸಂಗೇನ ನೈರ್ಮಲ್ಯಂ ರಥ್ಯಾದ್ಭಿರ್ಲಭ್ಯತೇ ಯಥಾ ।
ವಾಚೋವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ ॥

### ಕವಿನಾಮಕೀರ್ತನ

**ಹಯಾಸ್ಯನಾಸಾಪುಟಜಾತವಾತ-**
**ವಿಘಾತಧೂತಾಘಪಲಾಲಜಾತಃ ।**
**ಮುನೀಶವಾಗೀಶಸುತಃ ಸುರಮ್ಯಾಂ**
**ಹರೇಃ ಕಥಾಂ ಶಂಸತಿ ವಾದಿರಾಜಃ[೧] ॥ ೮ ॥**

ಶ್ರೀಹಯಗ್ರೀವದೇವರ ಮೂಗಿನ ಹೊರಳೆಗಳಿಂದ ಹೊರಹೊಮ್ಮುವ ಗಾಳಿಯ ಹೊಡೆತಕ್ಕೆ ಪಾಪಗಳೆಂಬ ಜೊಂಡಿನ ರಾಶಿ ಹಾರಿಹೋಗಿರುವ, ಮುನಿಶ್ರೇಷ್ಠರಾದ ಶ್ರೀವಾಗೀಶತೀರ್ಥರ ವರಕುಮಾರಕರಾದ ಶ್ರೀವಾದಿರಾಜರು ಅತ್ಯಂತ ಸೊಗಸಾದ ಶ್ರೀಹರಿಯ ಕಥೆಯನ್ನು ಬಣ್ಣಿಸುತ್ತಿರುವರು.

ವಿ. ೧. ಈ ಶ್ಲೋಕದಲ್ಲಿ ಗ್ರಂಥಕಾರರ ಪರಿಚಯ ಬಂದಿದೆ. ತಾವು [೨]ವಾಗೀಶತೀರ್ಥರ ಉತ್ತರಾಧಿಕಾರಿಗಳಾಗಿ ಪೀಠವನ್ನಲಂಕರಿಸಿದವರು. ಶ್ರೀಹರಿಯ ಹಯಗ್ರೀವರೂಪ ಉಪಾಸನೆ-ಯಿಂದಾಗಿ ದೋಷ ಕಳೆದುಕೊಂಡಿರುವವರು[೩] ಎಂಬ ವಿಶೇಷಾಂಶವು ಇಲ್ಲಿ ಸೂಚಿತ.

೨. ತಾವು ಗ್ರಂಥರಚನೆಗೆ ಪ್ರತಿಬಂಧಕ ರೂಪವಾದ ಪಾಪಾದಿ ದೋಷಗಳನ್ನು ಹೊಂದದವರು ಎಂದು ತಿಳಿಸುವ ಮೂಲಕ ಇದರ ರಚನೆಗೆ ಅರ್ಹತೆ ಪಡೆದವರು ಎಂಬ ಅಂಶವನ್ನು ಸೂಚಿಸಿರುವರು.

---

೧. ವೃತ್ತ್ಯನುಪ್ರಾಸಾಖ್ಯಃ ಶಬ್ದಾಲಂಕಾರಶ್ಚ, ಅನುಪ್ರಾಸಾಖ್ಯಲಂಕಾರೋಽಸ್ಮಿನ್ ಕಾವ್ಯೇ ಪ್ರಾಯಿಕಃ । ಗೌಡೀ ರೀತಿಃ, ಉಪೇಂದ್ರವಜ್ರಾವೃತ್ತಮ್ । -ವ್ಯಾ.

೨. ವಾದಿರಾಜ ಇತ್ಯನೇನ ಸ್ವಸ್ಯ ಕಾವ್ಯಕರಣಶಕ್ತಿಃ। -ವ್ಯಾ.
ವಾಗೀಶಸುತ ಇತ್ಯನೇನ ಏತತ್ಸರ್ವಂ ಸ್ವೋಪದೇಷ್ಟ್ರುಗುರುಪ್ರಸಾದಾಯತ್ತಮ್ । "ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ"(ಶ್ವೇತಾಶ್ವತರೋಪನಿಷತ್-೬/೨೩.) ಇತಿ ಆಚಾರ್ಯವಾನ್ ಪುರುಷೋ ವೇದ ಇತಿ (ಛಾಂದೋಗ್ಯೇ-೬/೧೪/೨) ಚ ಶ್ರುತೇಃ। -ವ್ಯಾ.

೩. "ಹಯಾಸ್ಯನಾಸಾಪುಟಜಾತವಾತವಿಘಾತಧೂತಾಘಪಲಾಲಜಾತಃ" ಇತ್ಯನೇನ ಕಾವ್ಯಕರಣೇ ಪ್ರತಿಬಂಧಕೀ-ಭೂತದುರಿತಧ್ವಂಸಃ। -ವ್ಯಾ.

೩. ಇಲ್ಲಿ [೧]ಪಾಪಗಳನ್ನು ಜೊಂಡುಗಳು ಎಂದು ಕರೆಯುವ ಮೂಲಕ ಶ್ರೀಹಯಗ್ರೀವದೇವರ ಕರುಣೆಗೆ ಪಾತ್ರರಾದವರಿಗೆ ಪಾಪಗಳನ್ನು ಕಳೆದುಕೊಳ್ಳುವುದು ಬಹಳ ಸುಲಭ[೨] ಎಂಬ ಅಂಶವು ಸಹ ಸೂಚಿತ.

೪. ಇಲ್ಲಿಯ 'ವಾದಿರಾಜಃ ಶಂಸತಿ'ಎಂಬ [೩]ಪರೋಕ್ಷವಚನವನ್ನು ಭಗವದ್ಗೀತೆಯ 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ' (೧೮/೬೧) ಎಂಬ ಮಾತಿನಂತೆ ಎಂದು ತಿಳಿಯಬೇಕು.

**ವಿನಯೋಕ್ತಿ**

**ಅಪಂಡಿತೇನಾಪಿ ಮಯಾಽಽರ್ಜಿತೇಯಂ**
**ಮುಕುಂದಲೀಲಾ ಕವಿಕಂಠಮಾಲಾ ।**
**ಅಕೌಶಲೇನ ಗ್ರಥಿತೇತಿ ಜಾತಿ-**
**ಪ್ರಸೂನಮಾಲಾಂ ಕಿಮು ಸಂತ್ಯಜಂತಿ ॥ ೯ ॥**

ನಾನು ಪ್ರಾಜ್ಞನಾದವನೇನೂ ಅಲ್ಲ, ಆದರೂ ನಾನು ರಚಿಸಿದ ಶ್ರೀಹರಿಯ ಲೀಲಾ-ವರ್ಣನರೂಪವಾದ ಈ ಕೃತಿಯು ಜ್ಞಾನಿಗಳಿಗೆ ಕಂಠಮಾಲೆಯಾಗಿದೆ; ಕಟ್ಟಿರುವವನು ಜಾಣನಲ್ಲ ಎಂಬ ಕಾರಣದಿಂದ ಜಾಜಿಹೂವಿನ ಹಾರವನ್ನು ತೊರೆಯಲಾದೀತೇ !

ವಿ. ೧. ಇದರಲ್ಲಿ ಸ್ವಾಹಂಕಾರಖಂಡನೆಯನ್ನು ಮಾಡಿಕೊಂಡಿರುವರು; ಶ್ರೀಹರಿಯ ಲೀಲಾ-ವರ್ಣನರೂಪವಾದ ಈ ಕೃತಿಯು ಜ್ಞಾನಿಗಳ ಕಂಠಮಾಲೆಯಂತೆ ಗ್ರಾಹ್ಯ ಎಂಬ ವಿಶೇಷಾಂಶ ಇದರಲ್ಲಿ ಸೂಚಿತ.

೨. [೪]ಮಾಲೆ ಕಟ್ಟುವವನು ನಿಪುಣನಲ್ಲವಾದರೂ ಆ ಮಾಲೆಯಲ್ಲಿನ ಜಾಜಿಹೂವಿನ ಮಹತ್ತ್ವಕ್ಕೆ ಕುಂದಿರದು. ಅದರಂತೆ ತಾವು ಅಂತಹ ಚತುರಕವಿಗಳಲ್ಲವಾದರೂ ಅವರ ಕೃತಿಯಲ್ಲಿನ ಮುಕುಂದನ ಲೀಲೆಗಳು ಜಾಜಿಹೂವಿನಂತೆ ಸ್ವೀಕಾರಕ್ಕೆ ಅರ್ಹ ಎಂದು ಭಾವ.

೩. ಜಾಜಿಹೂವು ಹೂವುಗಳಲ್ಲಿ ತುಂಬಾ ಶ್ರೇಷ್ಠವಾದುದು. ಅಂತಹ ಮಾಲೆಯಂತಿರುವ ಈ ಕೃತಿ ಸಜ್ಜನರಿಂದ ಗ್ರಾಹ್ಯ ಎಂದು ಭಾವ[೫].

೪. ಈ ಶ್ಲೋಕವು ಈ ಕೆಳಗಿನ ಸುಮಧ್ವವಿಜಯದ ಶ್ಲೋಕ(೧/೮)ದ ಹಿನ್ನೆಲೆಯಲ್ಲಿ ವಿಶೇಷರೀತಿಯ ಅರ್ಥವನ್ನು ಕೊಡುವುದು :

---

೧. ಅಘಾನಾಂ ಪಲಾಲತ್ವೋಕ್ತ್ಯಾಹರಿಮುಖ್ಯಪ್ರಾಣಾನುಗ್ರಹಪಾತ್ರಸ್ಯ ದುರಿತನಿರಾಕರಣಂ ತೃಣಪ್ರಾಯಮ್ ।

೨. ಪದಾರ್ಥೀಭೂತದುರಿತಧ್ವಂಸಸ್ಯ ಹರಿಕಥಾಕಥನಹೇತುಕತ್ವಾತ್ಪದಾರ್ಥಹೇತುಕಂ ಕಾವ್ಯಲಿಂಗಮಲಂಕಾರಃ । -ವ್ಯಾ.

೩. ಪರೋಕ್ಷವಚನಂ ತು ದ್ರೋಣಂ ಪ್ರತಿ ಭೀಮವಚನವತ್ । -ಗೀತಾಭಾಷ್ಯ (೧೮/೬೧)

೪. ಮಾಲಾಕಾರಸ್ಯಾಚಾತುರ್ಯೇಽಪಿ ಕುಸುಮೇಷು ಜಾತಿಕುಸುಮಸ್ಯ ಶ್ರೈಷ್ಠ್ಯಾತ್ತತ್ಪ್ರಸೂನಲೋಭಾತ್ ತತ್ಪ್ರಸೂನ-ಮಾಲಾಂ ಪ್ರತಿಗೃಹ್ಣಂತ್ಯೇವೇತ್ಯರ್ಥಃ ।

೫. ನಿದರ್ಶನಮಲಂಕಾರಃ । -ವ್ಯಾ.

ಮಾಲಾಕೃತಸ್ತಚ್ಚರಿತಾಖ್ಯರತ್ನೈರಸೂಕ್ಷ್ಮದೃಷ್ಟೇಃ ಸಕುತೂಹಲಸ್ಯ।
ಪೂರ್ವಾಪರೀಕಾರಮಥಾಪರಂ ವಾ ಕ್ಷಾಮ್ಯಂತು ಮೇ ಹಂತ ಮುಹುರ್ಮಹಾಂತಃ॥

೫. ನಿರ್ಗಂಧ ಕುಸುಮಗಳ ಮಾಲೆಯನ್ನು ಎಂತಹ ಜಾಣನು ಕಟ್ಟಿದ್ದರೂ ಸಹ ವಿವೇಕಿಗಳಿಗೆ ಗ್ರಾಹ್ಯವೆನಿಸದು ಎಂಬ ಧ್ವನಿಯು ಸಹ ಇಲ್ಲಿದೆ ; ಇದರಿಂದ ಕೇವಲ ಶ್ರವಣಮನೋಹರ ಎಂಬ ಕಾರಣದಿಂದ ಲೌಕಿಕ ಕಾವ್ಯಗಳನ್ನು ವಿವೇಕಿಗಳು ಆಲಿಸರು ಎಂಬ ತತ್ತ್ವವು ಇದರಿಂದ ಸೂಚಿತ; ''ಕಾವ್ಯಾಲಾಪಾಂಶ್ಚ ವರ್ಜಯೇತ್'' ಎಂಬ ಪ್ರತ್ಯವಾಯದ ಮಾತು ಕೇವಲ ಲೌಕಿಕಕಾವ್ಯಗಳಿಗೆ ಅನ್ವಯಿಸು- ವುದು ಎಂದು ತಿಳಿಯಬೇಕು.

೬. ಇಲ್ಲಿಯ ಅಪಂಡಿತೇನಾಪಿ ಎಂಬ ಮಾತು ತರ್ಕಮುದ್ರೆಯದು; ಅಪಿ ಚೇತ್ ಸುದುರಾಚಾರಃ (ಗೀತಾ-೯/೩೦) ; ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್; -ಗೀತಾ(೧೮/೪೮)ಎಂಬ ಶ್ಲೋಕಗಳಲ್ಲಿ ಹೇಗೋ ಹಾಗೆ; ಆದ್ದರಿಂದ ಇದು ಅವರ ನಿಜವಾದ ಪಾಂಡಿತ್ಯಕ್ಕೆ ದ್ಯೋತಕ ಎಂದು ತಿಳಿಯುವುದು.

ಸ್ವಾಹಂಕಾರ ಖಂಡನೆ

ಅಪಿ ಪ್ರಮಾದಾಗತದೋಷಲೇಶಾ-
ಮಿಮಾಂ ಕವಿತ್ವಶ್ರಿಯಮಾದ್ರಿಯಧ್ವಮ್।
ಬುಧಾ ವಿದಗ್ಧೈಃ ಕಿಮುಪೇಕ್ಷಣೀಯಾ
ಪಯೋಬ್ಧಿಜಾ ಚಂಚಲತಾಖ್ಯದೋಷಾತ್ ॥ ೧೦ ॥

ಜ್ಞಾನಿಗಳೇ! ಪ್ರಮಾದವಶಾತ್ ಸ್ವಲ್ಪ ದೋಷವಿದ್ದರೂ ಈ ಕಾವ್ಯಸಂಪತ್ತನ್ನು ತಾವು ಆದರಿಸಿರಿ; ಚಾಂಚಲ್ಯ ಎಂಬ ದೋಷಹೊಂದಿರುವಳು ಎಂಬ ಕಾರಣದಿಂದ ಜ್ಞಾನಿಗಳು ಕ್ಷೀರಸಾಗರದಲ್ಲಿ ಜನಿಸಿದ ಮಹಾಲಕ್ಷ್ಮಿಯನ್ನು ಉಪೇಕ್ಷಿಸಲಾದೀತೇ ?

ವಿ. ೧. ಇದು ಸಹ ಸ್ವಾಹಂಕಾರಖಂಡನೆಯ ಶ್ಲೋಕ. ಮಹಾಲಕ್ಷ್ಮಿಯು ಚಂಚಲೆ ಎಂಬ ಕಾರಣದಿಂದ ಜ್ಞಾನಿಗಳು ಸಂಪತ್ತನ್ನು ಹೇಗೆ ತೊರೆಯದೆ ಆದರದಿಂದ ಕಾಣುವರೋ ಅದರಂತೆ ಈ ಕೃತಿಯಲ್ಲಿ ಅನವಧಾನದಿಂದಾಗಿ ಕೆಲವು ದೋಷಗಳು ಕಂಡುಬಂದರೂ ಆ ಕಾರಣಕ್ಕಾಗಿ ಈ ಕೃತಿ ಸ್ವೀಕಾರಾನರ್ಹವೆನ್ನಿಸದು ಎಂದರ್ಥ.

೨. ತಮ್ಮ ಕೃತಿಯನ್ನು ಮಹಾಲಕ್ಷ್ಮಿಗೆ ಹೋಲಿಸುವ ಮೂಲಕ ಅದು ಸಂಪತ್ಕರ ಎಂಬ ತತ್ತ್ವವನ್ನು ಸೂಚಿಸಿರುವರು. ಇದು ಶಾಸ್ತ್ರಾಧ್ಯಯನವು ಸಂಪತ್ಕರ ಎಂಬುದಕ್ಕೂ ಸೂಚಕ. ನ್ಯಾಯಸುಧೆಯು ಶ್ರೀಕರಗ್ರಂಥ; ಅದಕ್ಕೆ ತಾವೇ ಸಾಕ್ಷಿ ಎಂಬ ನ್ಯಾಯಸುಧಾ ಗುರ್ವರ್ಥದೀಪಿಕೆ (೧/೧/೧)ಯಲ್ಲಿನ ಅವರ ಮಾತು ಇಲ್ಲಿ ಸ್ಮರಣೀಯ:

ಶ್ರಿಯ ಇತಿ ಭೂತಿರ್ಮಹಾಲಕ್ಷ್ಮೀರಿತಿ ಚ ಶ್ರೀವಾಚಕಪದಾಭ್ಯಾಮಾದ್ಯಂತಯೋಃ ಸಂಪುಟೀ-
ಕರಣಾತ್ ಶ್ರೀಕರೋಽಯಂ ಗ್ರಂಥಃ। ತತ್ರ ವಯಮೇವ ಸಾಕ್ಷಿಣಃ।

೩. **ಕವಿತ್ವಶ್ರೀ** ಎಂಬ ಮಾತಿನಿಂದ ಇಲ್ಲಿಯ ಕವಿತ್ವಕ್ಕೆ ಅಪಾರ ಗುಣಗಳು ಇವೆ ಎಂಬುದನ್ನು ಸೂಚಿಸಿ, ಅನೇಕ ಗುಣಗಳು ಸೇರಿದಾಗ ಒಂದು ದೋಷ ನಗಣ್ಯವೆನಿಸುವುದು. [1]ಚಂದ್ರನ ಕಿರಣಗಳಲ್ಲಿ ಕಪ್ಪು ಕಲೆಯು ಹೇಗೋ ಹಾಗೆ ಎಂಬ ಭಾವ ಸೂಚಿತ. ಇದರಿಂದ ಈ ಕಾವ್ಯವು ಬಹುಗುಣಭರಿತ ಎಂಬ ಭಾವವೇ ಮುಖ್ಯವಾಗಿ ಸೂಚಿತ ಎಂದು ತಿಳಿಯಬೇಕು.

೪. ಮಹಾಲಕ್ಷ್ಮಿಯು ಚಂಚಲೆ ಎಂಬ ಇಲ್ಲಿಯ ಮಾತು ಮೇಲ್ನೋಟಕ್ಕೆ ಮಹಾಲಕ್ಷ್ಮಿಯ ದೋಷವೊಂದನ್ನು ಹೇಳಿದಂತೆ ಕಾಣುತ್ತದೆ; ಆದರೆ ಹಾಗೆ ತಿಳಿಯಕೂಡದು. ಇತರರಾರೂ ಶ್ರೀಹರಿಯಂತೆ ಗುಣಪೂರ್ಣರಲ್ಲರಾದ್ದರಿಂದ ಅವರಲ್ಲಿ ಮಹಾಲಕ್ಷ್ಮಿಯು ನೆಲೆಸರು ಎಂಬುದು ಅದರ ಭಾವ. ಗುಣಹೀನರನ್ನು ತೊರೆಯುವುದು ದೋಷವಾಗಿರದೆ, ಗುಣವೇ ಆಗಿದೆ ಎಂಬುದನ್ನು ತಿಳಿದಲ್ಲಿ ಈ ಮಾತಿನ ಭಾವ ಸ್ಫುಟಪಡುವುದು ; ವಿದಗ್ಧರು - ಪ್ರೌಢರು.

೫. ಇಲ್ಲಿಯ **ಅಪಿ** ಎಂಬುದು ತರ್ಕಮುದ್ರೆಯ ನಿರೂಪಣೆ; ಹಿಂದಿನ ಶ್ಲೋಕದಲ್ಲಿ **ಅಪಂಡಿತೇನಾಪಿ** ಎಂಬುದು ಹೇಗೋ ಹಾಗೆ. ಆದ್ದರಿಂದ 'ಇದರಲ್ಲಿ ದೋಷಗಳು ಇದ್ದರೂ' ಎಂಬುದಕ್ಕೆ 'ದೋಷವಿಲ್ಲ' ಎಂಬುದೇ ತಾತ್ಪರ್ಯ.

೬. ಮಹಾಲಕ್ಷ್ಮಿಯು ಚಂಚಲೆ ಎಂಬುದಕ್ಕೆ ಸಂಪತ್ತು ಅಸ್ಥಿರ ಎಂಬುದು ಮತ್ತೊಂದು ಬಗೆಯ ಅರ್ಥ; ಆದ್ದರಿಂದ ಭೋಗಭಾಗ್ಯಗಳಿಗಾಗಿ ಹಂಬಲಿಸದೆ, ಎಂದೂ ಶಾಶ್ವತನಾದ ಲಕ್ಷ್ಮೀಪತಿಯಾದ ಶ್ರೀಹರಿಯನ್ನೇ ಜ್ಞಾನಿಗಳು ಆರಾಧಿಸುವರು ಎಂಬುದು ಇಲ್ಲಿಯ ತತ್ತ್ವ.

## ರಕ್ಷಣೆಯನ್ನು ಬಯಸಿ ಬ್ರಹ್ಮದೇವರ ಬಳಿಗೆ ಧಾವಿಸಿದ ಭೂದೇವಿ

**ಅಸಂಖ್ಯಪಾಪಾಚಲಕೋಟಿಭಾಜಾಂ**
**ದಿತೇಃ ಸುತಾನಾಂ ವಶಮಾಗತೇಯಮ್ ।**
**ಅಸಹ್ಯಭಾರಾರ್ದಿತಸರ್ವಗಾತ್ರೀ**
**ಜಗಾಮ ಧಾತ್ರೀ ಶರಣಂ ವಿರಿಂಚಮ್ [2] ॥ ೧೧ ॥**

ಎಣಿಕೆಯಿಲ್ಲದ ಪಾಪಗಳೆಂಬ ಕೋಟಿಗಟ್ಟಲೆ ಬೆಟ್ಟಗಳನ್ನು ಹೊತ್ತ, ದೈತ್ಯರ ವಶಕ್ಕೆ ಒಳಗಾದ, ಸಹಿಸಲಾಗದಷ್ಟು ಭಾರದಿಂದ ತನ್ನ ದೇಹವೆಲ್ಲ ಪೀಡಿತಳಾದ ಈ ಭೂದೇವಿಯು ಬ್ರಹ್ಮದೇವರನ್ನು ಶರಣುಹೊಕ್ಕಳು.

---

೧. ಕವಿತ್ವಶ್ರಿಯಮಿತ್ಯನೇನ ಕವಿತ್ವಸ್ಯ ಬಹುಗುಣಯುತತ್ವಸೂಚನಮ್ । "ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ (ಕುಮಾರಸಂಭವ-೧/೩.)" ಇತಿ ನ್ಯಾಯಾತ್ ಸ್ವಲ್ಪದೋಷೋऽನಾದರಣೀಯ ಇತಿ ಕವೇರ್ಭಾವಃ। (ವ್ಯಾ.)

೨. ಛೇಕಾನುಪ್ರಾಸೋऽಲಂಕಾರಃ। -ವ್ಯಾ.

ವಿ : ೧. ಬೆಟ್ಟಗಳನ್ನು[1] ಭೂಮಿ ಹೊತ್ತಿರುವುದು ಸುಪ್ರಸಿದ್ಧ. ಆದರೆ ಪಾಪವೆಂಬ ಬೆಟ್ಟಗಳನ್ನು ಕೋಟಿ ಸಂಖ್ಯೆಗಳಲ್ಲಿ ಹೊತ್ತ ದೈತ್ಯರ ಭಾರವನ್ನು ಹೊರಲು ಅವಳಿಗೆ ಅಸಾಧ್ಯವೆನ್ನಿಸಿತು ಎಂಬ ಮಾತಿನಲ್ಲಿ ಪಾಪದ ಬೆಟ್ಟ ಕಲ್ಲಿನ ಬೆಟ್ಟಕ್ಕಿಂತ ಹೆಚ್ಚಿನ ಹೊರೆ ಎಂಬ ಭಾವ ಸೂಚಿತ. ಇದರಿಂದ ಬೆಟ್ಟಗಳನ್ನೇ ಹೊರುವ ಭೂಮಿಗೆ ಕೇವಲ ದೈತ್ಯರು ಹೇಗೆ ಭಾರವಾಗುವರು ಎಂಬ ಪ್ರಶ್ನೆಗೆ ಉತ್ತರ ಸೂಚಿತ.

೨. [2]ಪಾಪದ ಬೆಟ್ಟಗಳ ದೈತ್ಯರ ಭಾರ ಭೂಮಿಗೆ ಸರ್ವರೀತಿಯಲ್ಲೂ ಭಾರವಾಯಿತು ಎಂಬ ಇಲ್ಲಿಯ ನಿರೂಪಣೆ ದೈತ್ಯರ ಹೊರೆ ಹೊರಲಾರದಷ್ಟು ಅಗಾಧ ಎಂಬುದಕ್ಕೆ ಸೂಚಕ.

೩. ಧಾತ್ರೀ ಎಂದರೆ ಧಾರಣ ಪೋಷಣ ಮಾಡುವವಳು ಎಂದರ್ಥ; ಇದರಿಂದ ಧಾರಣೆ-ಪೋಷಣೆಗಳು ಭೂಮಿಗೆ ಸಹಜವಾದ ಕಾರ್ಯ. ಆದರೆ ಪಾಪಿಗಳ ಧಾರಣೆ-ಪೋಷಣೆ ಮಾತ್ರ ಅವಳಿಂದಾಗದು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

**ಭೂಭಾರ ಶಬ್ದದ ಅರ್ಥ**

**ಮುಕುಂದವಿದ್ವೇಷಿಭರೇಣ ಭಿನ್ನಾ**
**ಬಭೂವ ಸಾ ಕ್ಷಾಂತಿಯುತಾಽಪಿ ಖಿನ್ನಾ।**
**ತಥಾಹಿ ಲೋಕೇ ಪತಿನಿಂದಕೇಭ್ಯಃ**
**ಪತಿವ್ರತಾನಾಮಪರಃ ಕ್ವ ಭಾರಃ[3] ॥ ೧೨ ॥**

ಮೋಕ್ಷದಾಯಕನಾದ ಶ್ರೀಹರಿಯ ದ್ವೇಷಿಗಳ ಭಾರದಿಂದ ನೊಂದ ಭೂದೇವಿಯು ಕ್ಷಮಾಶೀಲಳಾದರೂ, ಖೇದಗೊಂಡಳು. ಅದು ಸರಿಯೆ! ಲೋಕದಲ್ಲಿ ಪತಿನಿಂದಕರ ಹೊರತು ಪತಿವ್ರತಾಸ್ತ್ರೀಯರಿಗೆ ಬೇರೆ ಭಾರ ಎಲ್ಲಿದೆ?

ವಿ. : ೧. ಹಿಂದಿನ ಶ್ಲೋಕದಲ್ಲಿ ಪ್ರಸ್ತಾಪಿಸಿದ ಪಾಪಗಳ ವಿವರಣೆ ಇದರಲ್ಲಿದೆ. ಎಲ್ಲ ಪಾಪಗಳಿಗಿಂತಲೂ ಮಿಗಿಲಾದ ಪಾಪ ಶ್ರೀಹರಿಯ ದ್ವೇಷ; ಮುಕ್ತಿ ಕರುಣಿಸುವ ಕರುಣಾಳುವಾದ ಅವನನ್ನು ದ್ವೇಷಿಸುವುದು ಅಂಧತಮಸ್ಸಿಗೆ ದಾರಿ. ಆದ್ದರಿಂದ ಆ ಕಾಲದ ದುಷ್ಟರು ಪ್ರಧಾನವಾಗಿ ಹರಿದ್ವೇಷಿಗಳಾಗಿದ್ದುದೇ ಭೂದೇವಿಯ ಖೇದಕ್ಕೆ ಮುಖ್ಯಕಾರಣ ಎನ್ನಿಸಿತು ಎಂದು ಭಾವ.

೨. ಪತಿವ್ರತಾಸ್ತ್ರೀಯರಿಗೆ ಭಾರವೆಂದರೆ ತನ್ನ ಪತಿಯನ್ನು ದ್ವೇಷಿಸುವ ಜನರೇ ಎಂಬುದು ಮುಖ್ಯಾರ್ಥ. ಎಂದರೆ ಪತಿವ್ರತಾಸ್ತ್ರೀಯರು[4] ತನ್ನ ಪತಿಯ ನಿಂದೆಯನ್ನು ಮಾಡುವ ಜನರನ್ನು

೧. ಭೂಮಿರ್ದೃಪ್ತನೃಪವ್ಯಾಜದೈತ್ಯಾನೀಕಶತಾಯುತೈಃ।
ಆಕ್ರಾಂತಾ ಭೂರಿಭಾರೇಣ ಬ್ರಹ್ಮಾಣಂ ಶರಣಂ ಯಯೌ॥ -ಭಾಗ.(೧೦/೧/೧೭)
೨. ಪಾಪಿಷ್ಠತ್ವಾದ್ದೈತ್ಯಾನಾಂ ಭಾರಮಸಹಮಾನಾ ಸತೀತ್ಯರ್ಥಃ। -ವ್ಯಾ.
೩.. ಅನುಪ್ರಾಸಾಲಂಕಾರಃ। -ವ್ಯಾ.
೪. ಪತಿವ್ರತಾನಾಂ ಪತಿನಿಂದಕಾ ಏವ ಭಾರಭೂತಾ ಇತ್ಯರ್ಥಃ । ಭೂಮೇರಪಿ ವಿಷ್ಣುಪತ್ನೀತ್ವಾದ್ವಿಷ್ಣುದ್ವೇಷಿಣಃ ಪತಿದ್ವೇಷಿತ್ವೇನ ಭಾರಭೂತಾ ಇತಿ ಲೌಕಿಕಮ್ । - ವ್ಯಾ.

ಸರ್ವಥಾ ಸಹಿಸರು ಎಂದರ್ಥ. ಶ್ರೀಹರಿಯು ಭೂಪತಿ. ವರಾಹರೂಪದಿಂದ ಅದನ್ನು ಮೇಲೆತ್ತಿದವನು. ಸದಾ ಸ್ವಾಮಿಯಾಗಿ ಸಂರಕ್ಷಿಸುವವನು. ಭೂದೇವಿಯಲ್ಲಿ[೧] ಆವಿಷ್ಟಳಾದ ಭೂರೂಪದ ಮಹಾಲಕ್ಷ್ಮಿಗೆ ಪತಿಯಾದವನು. ಆದ್ದರಿಂದ ಅವನು ಭೂದೇವಿಗೆ ಪತಿ ಎನ್ನಿಸಿರುವನು. ಅಂತಹ ಶ್ರೀಹರಿಯ ದ್ವೇಷ ಸಹಜವಾಗಿಯೇ ಭೂದೇವಿಗೆ ತಡೆಯಲಾಗದಷ್ಟು ಅಪ್ರಿಯ ಎಂದರ್ಥ.

೩. ಅಗಾಧಭಾರದ ಬೆಟ್ಟಗಳನ್ನೊಳಗೊಂಡಂತೆ, ಇಡೀ ಪ್ರಾಣಿಸಂಕುಲವನ್ನು ಹೊರುವ ಭೂದೇವಿಗೆ ಜನರ ಭಾರ ಹೇಗೆ ಹೊರೆಯಾದೀತು? ಎಂಬುದಕ್ಕೆ ಇಲ್ಲಿ ರೋಚಕವಾದ ವಿವರಣೆಯಿದೆ. ಎಂದರೆ ಭೂದೇವಿಗೆ ಉಂಟಾದ ಭಾರ[೨] ಭೌತಿಕವಾದುದಲ್ಲ, ಮಾನಸಿಕವಾದುದು ಎಂದರ್ಥ.

೪. ಒಂದು ಸ್ಥಳದಲ್ಲಿ ಸಮಾನ ಮನಸ್ಕರಾದ ನೂರಾರು ಜನರು ಇದ್ದರೂ ಭಾರವೆನ್ನಿಸರು. ಆದರೆ ವಿರುದ್ಧಸ್ವಭಾವದ ಒಬ್ಬನೇ ಇದ್ದರೂ ಅವನು ಹೊರೆ ಎನ್ನಿಸುವನು; ಹತ್ತಾರು ಜನರ ಕುಟುಂಬಕ್ಕೆ ಒಬ್ಬ ಪರಕೀಯ ಆಗಮಿಸಿದಾಗ ಹೊರೆ ಎನ್ನಿಸುವನು, ಅದರಂತೆ ಹರಿದ್ವೇಷಿಗಳು ಹರಿಭಕ್ತರಿಗೆ ಹೊರೆ ಎನ್ನಿಸುವರು; ಎಂದು ಇದನ್ನು ತಿಳಿಯಬೇಕು.

### ಭೂದೇವಿಯು ಗೋರೂಪವನ್ನು ಧರಿಸಲು ಕಾರಣ

**ನಿಶಮ್ಯ ಗೋಬ್ರಾಹ್ಮಣಮುಖ್ಯಬಂಧುಂ**
**ಧ್ರುವಂ ಮುಕುಂದಂ ಶರಣಂ ವ್ರಜಂತೀ ।**
**ಬಭೂವ ಗೋರೂಪಧರಾ ಧರಾ ಸಾ**
**ತಮಾರ್ತಭಾರಾಪಹರಂ ಚ ದೀನಾ ॥ ೧೩ ॥**

ಶ್ರೀಹರಿಯು ಗೋವುಗಳಿಗೆ ಬ್ರಾಹ್ಮಣರಿಗೆ ಮುಖ್ಯಬಂಧು ಎಂಬುದನ್ನು ಕೇಳಿ ಆರ್ತರ ನೋವನ್ನು ಪರಿಹರಿಸುವ ಅವನನ್ನು ಶರಣುಹೊಂದಲೆಂದು ಭೂದೇವಿ ದೀನಳಾಗಿ ಗೋವಿನ ರೂಪವನ್ನು ಧರಿಸಿದಳು; ನಿಶ್ಚಿತ.

ವಿ. : ೧. [೩] ಭೂದೇವಿಯು ಹಾಗೆ ಶರಣುಹೋಗುವ ಕಾಲದಲ್ಲಿ ಗೋರೂಪವನ್ನು ಧರಿಸಿದ ವಿವರ ಶ್ರೀಮದ್ಭಾಗವತದಲ್ಲಿ ಬಂದಿದೆ. ಅದಕ್ಕೆ ಕಾರಣವನ್ನು ಶ್ರೀವಾದಿರಾಜರು ಈಗ ಉತ್ಪ್ರೇಕ್ಷಿಸಿರುವರು.

೨. [೪] ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

---

೧. ತದಾ ಭೂಮಿಃ ಪಂಚಭೂತಾವರಾ ಯಾ ಯಸ್ಯಾಂ ಜಜ್ಞೇ ನರಕಃ ಶ್ರೀವರಾಹಾತ್ ।
ಮೂಲಪ್ರಕೃತ್ಯೈವ ಭೂಮ್ಯಾ ನಿತಾಂತಮಾವಿಷ್ಟಾ ಯಾ ಸಾಽಗಮತ್ ಕೃಷ್ಣಪಾದೌ ॥–ಮ.ಭಾ.ತಾ.ನಿ.(೨೦/೧೦೫)

೨. ಆಂತರಂ ತು ಮುಕುಂದಾಭಿಧಪರಮಪುರುಷವಿದ್ವೇಷಿತ್ವೇನ ದೈತ್ಯಾನಾಂ ಭೂಭಾರಕತ್ವಮಿತಿ ದ್ರಷ್ಟವ್ಯಮ್ । –ವ್ಯಾ.

೩. ಗೌರ್ಭೂತ್ವಾಽಶ್ರುಮುಖೀ ಖಿನ್ನಾ ರುದಂತೀ ಕರುಣಂ ಯಥಾ ।
ಉಪಸ್ಥಿತಾಽಂತಿಕೇ ತಸ್ಮೈ ವ್ಯಸನಂ ಸಮವೋಚತ ॥ –ಭಾಗ.(೧೦/೧/೧೮)

೪. ಮಹಾಭಾರತ (ಶಾಂತಿಪರ್ವ, ಭೀಷ್ಮಸ್ತವರಾಜ – ೪೭/೯೫); ವಿಷ್ಣುಪುರಾಣ (೧/೧೯/೬೫)

– ಎಂಬ ವಚನದಲ್ಲಿ ಶ್ರೀಹರಿಯು ಗೋಬ್ರಾಹ್ಮಣರಿಗೆ ಹಿತವನ್ನು ಮಾಡುವವನು ಎಂಬ ಮಾತು ಬಂದಿದೆ. ಅದಕ್ಕೆ ಅನುಗುಣವಾಗಿ, ಭೂದೇವಿಯು ಗೋರೂಪವನ್ನೇ ಧರಿಸಿದಳು ಎಂದು ತಿಳಿಯಬೇಕು.

೩.. ಶ್ರೀಹರಿಯು ಗೋಬ್ರಾಹ್ಮಣ ಹಿತೈಷಿ ಎಂಬಲ್ಲಿ ಗೋವಿನ ಉಲ್ಲೇಖ ಮುಂಚಿತವಾಗಿಯೇ ಬಂದಿದೆ. ಅದರಿಂದಾಗಿ ಭೂದೇವಿ ಗೋರೂಪವನ್ನೇ ಧರಿಸಿದಳು. ಅದರಂತೆ ಗೋ ಸ್ತ್ರೀಲಿಂಗದ ಪದ. ಭೂದೇವಿಯು ಸ್ತ್ರೀ. ಅದರಿಂದಾಗಿಯೇ ಅವಳು [೧]ಗೋರೂಪವನ್ನೇ ಧರಿಸಿದಳು ಎಂಬು–ದಾಗಿಯೂ ತಿಳಿಯಬೇಕು; 'ಧ್ರುವಂ' ಎಂಬುದನ್ನು ಮುಕುಂದನಿಗೆ ವಿಶೇಷಣವನ್ನಾಗಿಯೂ ಅನ್ವಯಿಸಿಕೊಳ್ಳಬಹುದು: 'ಸ್ಥವಿರೋ ಧ್ರುವಃ' (ವಿಷ್ಣುಸಹಸ್ರನಾಮ). ಶ್ರೀಹರಿಯು ಧ್ರುವ, ಎಂದರೆ, ಕೂಟಸ್ಥ ನಿತ್ಯ, ಶಶ್ವದೇಕಪ್ರಕಾರ ಎಂದು ಅರ್ಥ.

೪. ಭೂದೇವಿಯು ಸ್ತ್ರೀಯಾದ್ದರಿಂದ ಗೋವಿನ ರೂಪವನ್ನೇ ಧರಿಸಿದಳು ಎಂಬುದು ಸ್ತ್ರೀಜೀವಕ್ಕೆ ಎಂದೂ ಸಹ ಪುರುಷತ್ವವಿಲ್ಲ[೨] ಎಂಬ ಪ್ರಮೇಯಕ್ಕೂ ಸೂಚಕ[೩].

೫. ಭೂಮಿಗೆ ಗೋ ಎಂಬ ಹೆಸರು ಸಹ ಇರುವುದು[೪]; ಅದು ಗೋರೂಪದಲ್ಲಿಯೇ ಪರೀಕ್ಷಿದ್ರಾಜನ ಕಣ್ಣಿಗೆ ಕಾಣಿಸಿಕೊಂಡದ್ದು ಶ್ರೀಮದ್ಭಾಗವತದಲ್ಲಿ ಸುಪ್ರಸಿದ್ಧ.

೬. 'ದೀನನಾಥ' ಎಂಬುದು ಶ್ರೀಹರಿಯ ನಾಮಗಳಲ್ಲಿ ಒಂದು.

**ಶ್ರೀಹರಿಯ ಸನ್ನಿಧಿಗೆ ಬ್ರಹ್ಮಾದಿಗಳ ಆಗಮನ**

ವಿರಿಂಚವೈರಿಂಚಮುಖಾಮರೇಶಾಃ[೫]
ಸ್ವಪಾರತಂತ್ರ್ಯಂ[೬] ಭುವಿ ದರ್ಶಯಂತಃ ।
ಹರಿಂ ಧರಾಕಾರ್ಯಕೃತೇ ಗೃಣಂತಃ
ಪುರಾನ್ನಿರೀಯುರ್ಹೃದಿ ತಂ ಸ್ಮರಂತಃ ॥ ೧೪ ॥

---

೧. ಪ್ರಥಮೋಲ್ಲಂಘನೇ ಕಾರಣಾಭಾವಾತ್ ಗೋರೂಪಧರಾ ಬಭೂವ । –ವ್ಯಾ.
೨. ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾತ್ ಬಲವತ್ಕಾರಣೈರಪಿ । – ಮ.ಭಾ.ತಾ.ನಿ. (೧೧/೧೧೨)
೩.. ವಿವರಗಳಿಗೆ ಮಹಾಭಾರತತಾತ್ಪರ್ಯನಿರ್ಣಯ(೧೧/೧೧೨)ವನ್ನು ನೋಡಬಹುದು.
೪. ಸ್ವರ್ಗೇಷು ಪಶುವಾಗ್ವಜ್ರದಿಙ್ನೇತ್ರಘೃಣಿಭೂಜಲೇ ।
ಲಕ್ಷದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ ॥ –ಅಮರಕೋಶ
ಗೌರ್ನಾದಿತ್ಯೇ ಬಲೀವರ್ದೇ ಕಿರಣಕ್ರತುಭೇದಯೋಃ ।
ಸ್ತ್ರೀಷು ಸ್ಯಾತ್ ಭಾರತ್ಯಾಂ ಭೂಮೌ ಚ ಸುರಭಾವಪಿ ॥(ಕೇಶವಃ) ;
ಗೌಃ ಸ್ವರ್ಗೇ ಚ ಬಲೀವರ್ದೇ ರಶ್ಮೌ ಚ ಕುಲಿಶೇ ಪುಮಾನ್ ॥
ಸ್ತ್ರೀ ಸೌರಭೇಯೀ ದೃಗ್ಬಾಣದಿಗ್ವಾಗ್‌ಭೂಷ್ವಪ್ಸು ಭೂಮ್ನಿ ಚ ॥
೫. ಬ್ರಹ್ಮಾ ತದುಪಧಾರ್ಯಾಥ ಸಹ ದೇವೈಸ್ತಯಾ ಸಹ ।
ಜಗಾಮ ಸತ್ರಿನಯನಸ್ತೀರಂ ಕ್ಷೀರಪಯೋನಿಧೇಃ ॥ –ಭಾಗ.(೧೦/೧/೧೯)
೬. ಯಃ ಪದ್ಮಾಸನಧೂರ್ಜಟಿಪ್ರಭೃತಿಭಿಃ ಕಾರ್ಯಾಕ್ಷಮೈಃ ಪ್ರಾರ್ಥಿತಃ । – (೧೯/೧೩.)

ಬ್ರಹ್ಮ, ಶಿವ ಮೊದಲಾದ ದೇವಶ್ರೇಷ್ಠರು ತಮ್ಮ ಪಾರತಂತ್ರ್ಯವನ್ನು ಜಗತ್ತಿಗೆ ಸಾರುತ್ತ, ಶ್ರೀಹರಿಯನ್ನು ಭೂದೇವಿಯ ಕಾರ್ಯಕ್ಕೆಂದು ಸ್ತುತಿಸುತ್ತ , ಅವನನ್ನು ತಮ್ಮ ಹೃದಯದಲ್ಲಿ ಸ್ಮರಿಸುತ್ತ, ತಮ್ಮ ತಮ್ಮ ಸ್ಥಳಗಳಿಂದ ಹೊರಟು ನಿಂತರು.

ವಿ. : ೧. ವಿರಿಂಚ - ಬ್ರಹ್ಮ ; ವೈರಿಂಚ - ಬ್ರಹ್ಮಪುತ್ರನಾದ ಶಿವ; ಬ್ರಹ್ಮ, ಶಿವ ಮೊದಲಾದ ಸಕಲ ದೇವತೆಗಳು ಅಸ್ವತಂತ್ರರು. ಶ್ರೀಹರಿಯೊಬ್ಬನೇ ಸ್ವತಂತ್ರ ಎಂಬುದು ಅವರೆಲ್ಲಾ ಹೀಗೆ ತಮ್ಮ ತಮ್ಮ ಸ್ಥಳಗಳಿಂದ[೧] ಶ್ರೀಹರಿಯನ್ನು ಸ್ತುತಿಸಲೆಂದು ತೆರಳುವ ಮೂಲಕ ತಿಳಿಸಿದರು ಎಂದರ್ಥ.

೨. ಸ್ತುತಿಸುತ್ತ, ಸ್ಮರಿಸುತ್ತ, ಅವರೆಲ್ಲಾ ಹೊರಟರು ಎಂಬ ಮಾತಿನಿಂದ ವಿಷ್ಣುಕ್ಷೇತ್ರಗಳಿಗೆ ಯಾತ್ರೆ ಕೈಗೊಂಡಾಗ ಅವನನ್ನು ಕುರಿತ ಸ್ತೋತ್ರಗಳ ಪಠನೆ, ಹಾಗೂ ಅವನ ಸ್ಮರಣೆ ಅಗತ್ಯ ಕರ್ತವ್ಯ ಎಂಬ [೨]ತತ್ತ್ವ ಸೂಚಿತ. ಶ್ರೀಮದಾಚಾರ್ಯರು ಶ್ರೀವೇದವ್ಯಾಸರ ಹಾಗೂ ಶ್ರೀನಾರಾಯಣದೇವರ ಸನ್ನಿಧಿಗೆ ತೆರಳುವಾಗ ಅವರ ಗುಣ ಹಾಗೂ ರೂಪಗಳ ಚಿಂತನೆಯನ್ನು ಮಾಡಿದ ಮಧ್ವವಿಜಯ(೭/೧೭-೪೮); (೮/೯-೪೨)ದ ಪ್ರಸಂಗ ಇಂತಹುದೇ ಆಗಿದೆ.

### ಶ್ರೀಹರಿಯ ಬಳಿಗೆ ತೆರಳಿದ ದೇವತೆಗಳು

**ಸುರಾವಲೀ ಸಾ ಶ್ರುತಿವರ್ಣ್ಯವೇಷಾ**
**ನಭಸ್ಥಲೇ ನಷ್ಟತಮಿಸ್ರಜಾಲೇ ।**
**ಯಯೌ ಯತೀಂದ್ರೈರಪಿ ಯತ್ನಗಮ್ಯಾಂ**
**ಪಯೋಬ್ಧಿವೇಲಾಂ[೩] ಪತದೂರ್ಮಿಮಾಲಾಮ್ ॥ ೧೫ ॥**

ವೇದಗಳಲ್ಲಿ ವರ್ಣಿತವಾದ ರೂಪಗಳ ಆ ಸುರರ ತಂಡವು ಕತ್ತಲೆಯ ರಾಶಿ ಇರದ ಗಗನ ಪ್ರದೇಶದಲ್ಲಿ ಯತಿಶ್ರೇಷ್ಠರು ಸಹ ಪ್ರಯತ್ನಪೂರ್ವಕ ತಲುಪುವಂತಹ ಅಪ್ಪಳಿಸುವ ಅಲೆಗಳ ರಾಶಿಯ ಕ್ಷೀರಸಾಗರದ ತೀರಕ್ಕೆ ತೆರಳಿತು.

ವಿ. : ೧. ಬ್ರಹ್ಮ , ರುದ್ರ ಹಾಗೂ ಇಂದ್ರಾದಿ ದೇವತೆಗಳು ಶ್ರುತಿಗಳಲ್ಲಿ ಕ್ರಮವಾಗಿ ಚತು-ರ್ಮುಖ, ಪಂಚಮುಖ, ಸಹಸ್ರಾಕ್ಷ ಎಂಬುದಾಗಿ ವರ್ಣಿತರಾಗಿರುವರು. ಅಂತಹ ಆ [೪]ದೇವತೆಗಳು ತಮ್ಮ ಆಯಾ ರೀತಿಯ ಆಕೃತಿಯಿಂದಲೇ ಕ್ಷೀರಸಮುದ್ರಕ್ಕೆ ತೆರಳಿದರು ಎಂದರ್ಥ.

---

೧. ಭಾರಜನಿತಖೇದಪರಿಹಾರಾಯ ಸ್ವಸಮೀಪಮಾಗತಾಯಾಃ ಧರಾಯಾಃ ಪ್ರಯೋಜನಾರ್ಥಂ ಸ್ವಸ್ವಪುರಾದನ್ಯತ್ರ ನಿರ್ಗಮನೇನ ಸ್ವೇಷಾಂ ಪಾರತಂತ್ರ್ಯಂ ದರ್ಶಿತಂ ಭವತೀತಿ ಭಾವಃ। -ವ್ಯಾ.

೨. ಅತ್ರ ಗೃಣಂತಃ ಸ್ಮರಂತೋ ನಿರೀಯುರಿತ್ಯನೇನ ವಿಷ್ಣುಕ್ಷೇತ್ರಯಾತ್ರಾಯಾಃ ತತ್ಸ್ತೋತ್ರಪಾಠತತ್ಸ್ಮರಣಪೂರ್ವಕ-ಕರ್ತವ್ಯತ್ವಂ ಧ್ವನ್ಯತೇ। ಅನುಪ್ರಾಸಶಬ್ದಾಲಂಕಾರಃ। -ವ್ಯಾ.

೩.. ಅನುಪ್ರಾಸಶಬ್ದಾಲಂಕಾರಃ। -ವ್ಯಾ.

೪. ವೈಕಾರಿಕೋ ದೇವಸರ್ಗಃ। - ಭಾಗ.(೩/೧೦/೧೬)

೨. ಇಲ್ಲಿ [೧]ಯತೀಂದ್ರರು ಎಂದರೆ ಶ್ರೇಷ್ಠ ಸನ್ಯಾಸಿಗಳು ಹಾಗೂ ಯಮ-ನಿಯಮಾದಿ ವಿಶೇಷ ಸಾಧಕರಾದವರು ಎಂಬ ಅರ್ಥವು ವಿವಕ್ಷಿತ.

೩. ನಷ್ಟತಮಿಸ್ರಜಾಲೇ ಎಂಬ ಪದಗಳಿಂದ ದೇವತೆಗಳು ತೇಜೋರೂಪದವರು ಎಂಬ ಪ್ರಮೇಯ ಸೂಚಿತ; ತಮಿಸ್ರ – ಕತ್ತಲೆ; ಊರ್ಮಿ – ಅಲೆ.

## ಬ್ರಹ್ಮದೇವರು ಮಾಡಿದ ಶ್ರೀಹರಿಯ ಆರಾಧನೆ

**ತತೋಽಬ್ಜಭೂಃ ಕ್ಷೀರಪಯೋಬ್ಧಿತೀರೇ**
**ಸಮಾಧಿಮಾಸ್ಥಾಯ ಸುಸಂಯತಾಕ್ಷಃ ।**
**ಸ್ಥಿರಾಸನಃ ಪ್ರಾಣಗಣಾನ್ ನಿಯಮ್ಯ**
**ಪ್ರಚಕ್ರಮೇ ಪ್ರಾಂಜಲಿರಾತ್ಮದೀಕ್ಷಾಮ್ [೨] ॥ ೧೬ ॥**

ಬಳಿಕ ಕಮಲಸಂಭವರಾದ ಬ್ರಹ್ಮದೇವರು ಜಿತೇಂದ್ರಿಯರಾಗಿ ಆ ಕ್ಷೀರಸಮುದ್ರದ ತೀರದಲ್ಲಿ ಅಸಂಪ್ರಜ್ಞಾತ ಸಮಾಧಿಯಲ್ಲಿ ಕುಳಿತು, ಸ್ಥಿರವಾದ ಆಸನದಲ್ಲಿ ಪ್ರಾಣಗಳನ್ನು ನಿಯಂತ್ರಿಸಿ-ಕೊಂಡು, ಅಂಜಲಿಬದ್ಧರಾಗಿ, ಶ್ರೀಹರಿಯ ಪೂಜಾದೀಕ್ಷೆಯನ್ನು ಕೈಗೊಂಡರು.

ವಿ. : ೧. [೩]ಮೊದಲಿಗೆ ಜೀವೋತ್ತಮರಾದ ಬ್ರಹ್ಮದೇವರು ಧ್ಯಾನಕ್ಕೆ ತೊಡಗಿದ್ದನ್ನು ವರ್ಣಿಸು- ವರು. ಬ್ರಹ್ಮದೇವರು ಸರ್ವಶ್ರೇಷ್ಠಸಾಧಕರು. ಅವರು ಹೀಗೆ ಇಂದ್ರಿಯನಿಗ್ರಹ, ವಿಹಿತ ಆಸನ, ಪ್ರಾಣಾಯಾಮ ಮೊದಲಾದವುಗಳನ್ನು ಮಾಡುವ ಮೂಲಕ ಶ್ರೀಹರಿಯ ಧ್ಯಾನಕ್ಕೆ ತೊಡಗಿದರು ಎಂದು ತಿಳಿಸುವ ಮೂಲಕ ಶ್ರೀಹರಿಯ ಪ್ರಸಾದ ಸುಲಭಸಾಧ್ಯವಾದುದಲ್ಲ ಎಂಬ ತತ್ತ್ವವನ್ನು ಸೂಚಿಸಿರುವರು ಎಂದು ತಿಳಿಯಬೇಕು; ಅಬ್ಜ – ಕಮಲ; ಅಬ್ಜಭೂಃ – ಕಮಲಸಂಭವರಾದ ಬ್ರಹ್ಮದೇವರು.

೨. ಬ್ರಹ್ಮದೇವರು ಸದಾ ಜಿತೇಂದ್ರಿಯರು, ಸಿದ್ಧಾಸನರು, ಪ್ರಾಣಾಯಾಮಪರಾಯಣರು. ಶ್ರೀಹರಿಯ ಮುಂದೆ ಬದ್ಧಾಂಜಲಿಯಾದವರು ಎಂಬುದನ್ನು [೪]ಸುಸಂಯತಾಕ್ಷಃ, ಸ್ಥಿರಾಸನಃ ಮೊದಲಾದ ಪದಗಳಿಂದ ಸೂಚಿಸಿರುವರು ಎಂದು ತಿಳಿಯಬೇಕು; ಅಬ್ಧಿ – ಸಮುದ್ರ.

## ಪದ್ಮಾಸನರಾದ ಬ್ರಹ್ಮದೇವರು

**ಯದಾ ಸ ಪದ್ಮಾಸನಸಂಸ್ಥಿತೋಽಲಂ**
**ಜಜಾಪ ವಿದ್ಯಾಮಿತರೈರವೇದ್ಯಾಮ್ ।**

---

೧. ಯತೀಂದ್ರೈರಪಿ – ನಿರ್ಜಿತೇಂದ್ರಿಯೈರ್ಯೋಗಿಭಿರಪಿ । –ವ್ಯಾ.
೨. ಕ್ರಿಯಾಜಾತಿರಲಂಕಾರಃ । –ವ್ಯಾ.
೩. ಉತ್ತಮಾಧಿಕಾರಿಣಶ್ಚತುರ್ಮುಖಸ್ಯಾಪಿ ಮಹಾಪ್ರಯತ್ನಸಾಧ್ಯತ್ವಾತ್ ಹರಿಪ್ರಸಾದಸ್ಯ ದೌರ್ಲಭ್ಯಂ ಕಿಂ ವರ್ಣನೀಯಮಿತಿ ಭಾವಃ । –ವ್ಯಾ.
೪. ಧಾತೂನಾಮನೇಕಾರ್ಥತ್ವಾದುಪಸರ್ಗಬಲಾಚ್ಚ ಇಹಾರಂಭಾರ್ಥೋ ಬೋದ್ಧವ್ಯಃ । –ವ್ಯಾ.

**ತದಾ ಪ್ರಭೃತ್ಯೇವ ಜಗತ್ಸು ನೂನಂ**
**ಬಭೂವ ಪದ್ಮಾಸನಶಬ್ದಿತೋಽಸೌ[೧] ॥ ೧೭ ॥**

ಅವರು ಪದ್ಮಾಸನದಲ್ಲಿ ಕುಳಿತು ಇತರರಿಗೆ ಸಾಕಲ್ಯೇನ ತಿಳಿಯಲಾಗದ ಪುರುಷಸೂಕ್ತ ಮಂತ್ರಗಳನ್ನು ಜಪಿಸಿದರು; ಅಂದಿನಿಂದಲೇ ಅವರಿಗೆ ಲೋಕಗಳಲ್ಲಿ ಪದ್ಮಾಸನ ಎಂಬ ಹೆಸರು ಉಂಟಾಯಿತು ಎನ್ನಬಹುದು.

ವಿ. : ೧. ಬ್ರಹ್ಮದೇವರು ಪದ್ಮಾಸನರು ಎಂಬುದು ಸುಪ್ರಸಿದ್ಧ. ಅವರಿಗೆ ಆ ಹೆಸರು ಬರಲು ಹೀಗೆ ಅವರು ಪದ್ಮಾಸನದಲ್ಲಿ ಕುಳಿತು ಪುರುಷಸೂಕ್ತ ಮಂತ್ರಗಳಿಂದ ಶ್ರೀಹರಿಯನ್ನು ಜಪಿಸ-ತೊಡಗಿದ್ದು ಒಂದು ಕಾರಣವಾಯಿತು ಎಂದು ಭಾವ.

೨. [೨]ಬ್ರಹ್ಮದೇವರು ಪದ್ಮಾಸನದಲ್ಲಿ ಕುಳಿತು ಮಂತ್ರ ಜಪಿಸಿದ ಪ್ರಸಂಗವು ಜಪಕಾರ್ಯಕ್ಕೆ ಪದ್ಮಾಸನವೇ ಹೆಚ್ಚು ವಿಹಿತ ಎಂಬುದಕ್ಕೆ ಸೂಚಕ.

೩. ಪುರುಷಸೂಕ್ತವು ಇತರರಿಗೆ ಅವೇದ್ಯ ಎನ್ನುವ ಮೂಲಕ ಅದಕ್ಕೆ ಬ್ರಹ್ಮದೇವರೇ ಋಷಿಗಳು ಎಂಬ ವಿಶೇಷ ಪ್ರಮೇಯವೂ ಸೂಚಿತ; ಸರ್ವಶ್ರೇಷ್ಠಸೂಕ್ತವಾದ ಪುರುಷಸೂಕ್ತದ ಜಪಕ್ಕೆ ಬ್ರಹ್ಮದೇವರೇ ಮುಖ್ಯಾಧಿಕಾರಿಗಳು[೩] ಎಂಬ ವಿಶೇಷಾಂಶವು ಸಹ ಇಲ್ಲಿದೆ.

೪. ಪುರುಷಸೂಕ್ತವು ಅಷ್ಟಮಹಾಮಂತ್ರಗಳಲ್ಲಿ ಒಂದು ಎಂಬ ವಿವರ ತಂತ್ರಸಾರಸಂಗ್ರಹದಲ್ಲಿ ಬಂದಿದೆ.

೫. [೪]ಬ್ರಹ್ಮದೇವರು ಹೀಗೆ ಪದ್ಮಾಸನದಲ್ಲಿ ಕುಳಿತು[೫] ಸದಾ ಶ್ರೀಹರಿಯನ್ನು ಆರಾಧಿಸುವ ಕಾರಣದಿಂದ ಅವರು ಪದ್ಮೋದ್ಭವರೇ ಆದವರು ಎಂಬ ಅರ್ಥವೂ ಸೂಚಿತ. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬ ಮಾತಿನಿಂದ ಇತರರು ಪದ್ಮಾಸನವನ್ನು ಹಾಕಿದರೂ ಬ್ರಹ್ಮದೇವರಂತೆ ಸದಾ ಆ ಆಸನದಲ್ಲಿ ಆ ರೀತಿಯಾಗಿ ಕುಳ್ಳಿರಲು ಅಸಮರ್ಥರು ಎಂಬ ಭಾವವೂ ಸೂಚಿತ.

### ಕಾಮಜಿತ್ ಹಾಗೂ ದಿಗಂಬರ ಎನ್ನಿಸಿದ ಶಿವ

**ತದಾ ತದನ್ಯಾನ್ಯಪಹಾಯ ಹೇಯಾ-**
**ನ್ಯರಕ್ತಚಿತ್ತಃ ಸ ವಿರಿಂಚಪುತ್ರಃ ।**

---

೧. ಉತ್ಪ್ರೇಕ್ಷಾಲಂಕಾರಃ । ಪದ್ಮಾಸನಶಬ್ದಸ್ಯ ಶ್ಲಿಷ್ಟತ್ವಾತ್ ಶ್ಲಿಷ್ಟಗರ್ಭಿತೋಽಯಮ್ । –ವ್ಯಾ.

೨. ಬ್ರಹ್ಮಣಃ ಪದ್ಮಾಸನಶಬ್ದಾಭಿಧೇಯತ್ವೇ ಜಪಕಾಲೀನಪದ್ಮಾಸನಸ್ಥಿತಿರೂಪಕರಣೋತ್ಪ್ರೇಕ್ಷಾ । –ವ್ಯಾ.

೩. ಬ್ರಹ್ಮಾದೀನಾಂ ದೇವಾನಾಂ ಹರಿಭಜಕತ್ವೇ ತತ್ತನ್ನಾಮ್ನಾಮೇವ ಜ್ಞಾಪಕತ್ವಮುತ್ಪ್ರೇಕ್ಷಯನ್ನಾಹ – 'ಯದಾ ಸ ಪದ್ಮಾಸನ...' ಇತ್ಯಾದಿ 'ರಸಾ ಪಿಪಾಸಾ...' ಇತ್ಯಂತೈಃ ಶ್ಲೋಕೈಃ । –ವ್ಯಾ.

೪. ಯತೋಽಯಂ ಹರಿಪೂಜಾತ್ಮಕಜಪಕಾಲೇ ಪದ್ಮಸದೃಶಾಸನಸ್ಥಿತ್ಯಾ ಪದ್ಮವದಾಸನಂ ಯಸ್ಯೇತಿ ಸಮಾಸೇನ ಪದ್ಮಾಸನನಾಮಾ ಬಭೂವ । ಅತೋಽಸ್ಯ ಹರಿಭಜಕತ್ವೇ ಪದ್ಮಾಸನನಾಮೈವ ಜ್ಞಾಪಕಮಿತಿ ಭಾವಃ । –ವ್ಯಾ.

೫. ಶರೀರಾರ್ಜವಸಂಪಾದಕತ್ವೇನ ಚಿತ್ತಸ್ವಾಸ್ಥ್ಯಹೇತುತ್ವಾತ್ ಜಪಕಾಲೇ ಪದ್ಮಾಸನಸ್ಯ ಮುಖ್ಯತ್ವಾದಿತಿ ಭಾವಃ ।–ವ್ಯಾ.

ಸ್ತುವನ್ ಗಿರೀಶೋಽಪಿ ಗಿರಾ ಮುರಾರಿ-
ಮನಂಗಜಿದ್ದಿಗ್ವಸನೋ ಬಭೂವ ॥ ೧೮ ॥

ಆಗಲೇ ಇತರ ಹೇಯವಸ್ತುಗಳನ್ನು ತೊರೆದು, ವಿರಕ್ತಚಿತ್ತರಾಗಿ ವೇದಮಂತ್ರಗಳಿಂದ ಮುರಾರಿಯಾದ ಶ್ರೀಹರಿಯನ್ನು ಸ್ತುತಿಸತೊಡಗಿದ ರುದ್ರದೇವರು, ಕ್ರಮವಾಗಿ ದಿಗಂಬರ ಹಾಗೂ ಅನಂಗಜಿತ್(ಕಾಮಜಿತ್) ಎನ್ನಿಸಿದರು.

ವಿ. : ೧. ರುದ್ರದೇವರು ಕಾಮಜಿತ್(ಕಾಮಹರ), ದಿಗಂಬರ ಎಂಬುದು ಸುಪ್ರಸಿದ್ಧ. ಅವರು ಹಾಗೆ ಪ್ರಸಿದ್ಧರಾಗಲು ಶ್ರೀಹರಿಯನ್ನು ಸ್ತುತಿಸುವ ಆ ಸಮಯದಲ್ಲಿ ಕಾಮಕ್ರೋಧಗಳನ್ನು ಸಂಪೂರ್ಣವಾಗಿ ತೊರೆದದ್ದು, ದಿಗಂಬರರಾಗಿಯೇ ಕುಳಿತದ್ದು ಕಾರಣವಾಯಿತು ಎಂದು ಭಾವ.

೨. ರುದ್ರದೇವರು ಕಾಮಾದಿ ದೋಷಗಳನ್ನು ಗೆಲ್ಲುವುದು, ವಸ್ತ್ರರಹಿತರಾಗಿರುವುದು ಅವರ [೧]ಹರಿಪೂಜಾ ದೀಕ್ಷೆಗೆ ಸೂಚಕ. ಆದ್ದರಿಂದ ಅವರು ಸಾಧಕರೇ ಹೊರತು ಶ್ರೀಹರಿಯಂತೆ ಸದಾ ಸಿದ್ಧರಲ್ಲ ಎಂದಾಗುವುದು. ಇದು ಅವರ ಬಾಹ್ಯರೂಪದಿಂದಲೇ ಗೋಚರಿಸುವುದು ಎಂದರ್ಥ[೨]; ಅನಂಗ – ಕಾಮ.

### ಶೇಷಾದಿಗಳ ಆರಾಧನೆಯ ವೈಖರಿ

ತದೈವ ಶೇಷೋಽಜನಿ ವಾಯುಭಕ್ಷಃ
ಸಹಸ್ರನೇತ್ರೋಽಪಿ ತದೈವ ನೂನಮ್ ।
ಶತಕ್ರತುಃ ಸುಪ್ತಿವಿದೂರಭಾವಾ
ಬಭೂವುರಸ್ವಪ್ನಪದಾಶ್ಚ[೩] ದೇವಾಃ[೪] ॥ ೧೯ ॥

ಆಗಲೇ ಶೇಷನು ವಾಯುಭಕ್ಷ ಎನಿಸಿದ. ಸಹಸ್ರಾಕ್ಷನಾದ ಇಂದ್ರ ಶತಕ್ರತು ಎನ್ನಿಸಿದ್ದು ಸಹ ಆಗಲೇ. ದೇವತೆಗಳು ಸಹ ಸಂಪೂರ್ಣ ನಿದ್ರೆ ತೊರೆದವರಾಗಿ, ಅಸ್ವಪ್ನರು (ನಿದ್ರೆ ಇಲ್ಲದವರು) ಎನ್ನಿಸಿದರು.

ವಿ. : ೧. ಈ ಶ್ಲೋಕದಲ್ಲಿ ಶೇಷದೇವರು ವಾತಾಶನರು, ಇಂದ್ರದೇವರು ಶತಕ್ರತು, ದೇವತೆಗಳು ಅಸ್ವಪ್ನರು ಎಂಬ ಪ್ರಸಿದ್ಧಿಗೆ ಕಾರಣ ನೀಡಲಾಗಿದೆ;

---

೧. ವಿಷ್ಣ್ವಿತರವಿಷಯಪರಿತ್ಯಾಗಾತ್ ದಿಗ್ವಸನಃ ಅರಕ್ತಚಿತ್ತತ್ವಾದನಂಗಜಿತ್ ಗೀರ್ಭಿಃ ಸ್ತುತಿಕರಣಾತ್ ಗಿರಿಶಶ್ಚ ಬಭೂವೇತಿ ಹೇತೂತ್ಪ್ರೇಕ್ಷಾಯಾಂ ಕ್ರಮಾಲಂಕಾರೇಣ ಸಂಕರಃ । –ವ್ಯಾ.

೨. ಮೌಲೌ ಯಚ್ಚರಣಾಂಬು ಫಾಲಫಲಕೇ ಯಸ್ಯಾಂಘ್ರಿರೇಣುಃ ಕಥಾ
ಕರ್ಣೇ ವಾಚಿ ಯದೀಯನಾಮ ಹೃದಿ ಯದ್ರೂಪಂ ಯದಾಸ್ವಾದಿತಮ್ ।
ಕುಕ್ಷೌ ಯತ್ತಪಸೇಽಪಟಂ ಕಟಿತಟಂ ವ್ಯಾಘ್ರಾಜಿನೇ ಸಂಸ್ಥಿತಿಃ
ಪಾದೌ ಯತ್ಪುರಚಾರಿಣೌ ಸ ಹಿ ಸದಾ ತತ್ಕಿಂಕರಃ ಶಂಕರಃ ॥ –ತೀರ್ಥಪ್ರಬಂಧ(೨/೨೬)

೩. 'ಆದಿತ್ಯಾ ಋಭವೋಽಸ್ವಪ್ನಾಃ' –ಅಮರಕೋಶ

೪. ಅನುಪ್ರಾಸೋಽಪ್ಯಲಂಕಾರಃ । –ವ್ಯಾ.

೨. ಶೇಷದೇವರು ಶ್ರೀಹರಿಯ ಆರಾಧನೆಯ ದೀಕ್ಷೆಯಲ್ಲಿ ಅನ್ನ, ನೀರುಗಳನ್ನು ತೊರೆದು ಉಪವಾಸವಿದ್ದದ್ದರಿಂದ ಅವರಿಗೆ 'ವಾತಾಶನ' ಎಂಬ ಹೆಸರಾಯಿತು. ಇಂದ್ರನು ಭಗವದ್ದರ್ಶನಕ್ಕಾಗಿ ಮೈಯೆಲ್ಲಾ ಕಣ್ಣಾಗಿ ಕಾದಿದ್ದರಿಂದ ಸಹಸ್ರಾಕ್ಷ ಎನ್ನಿಸಿದ. ದೇವತೆಗಳು ನಿದ್ರೆತೊರೆದು ಜಾಗರಣೆಗೆ ತೊಡಗಿದ್ದರಿಂದ ಅಸ್ವಪ್ನರು ಎನ್ನಿಸಿದರು[೧] ಎಂದು ಭಾವ.

೩. ವಿನಿದ್ರರು ಎಂಬುದಕ್ಕೆ ಅಜ್ಞಾನಾದಿ ದೋಷದೂರರು ಎಂದೂ, ವಾಯುಭಕ್ಷರು ಎಂಬುದಕ್ಕೆ ಏಕಾದಶ್ಯಾದಿ ವ್ರತನಿರತರು ಎಂದೂ ವಿಶೇಷಾರ್ಥ; ಇದರಿಂದ ಶ್ರೀಹರಿಯ ಆರಾಧನೆಗೆ ಜ್ಞಾನ ಹಾಗೂ ವ್ರತಾನುಷ್ಠಾನಾದಿ ರೂಪವಾದ ಸದಾಚಾರ ಸಹ ಅಗತ್ಯ ಎಂಬ ತತ್ತ್ವ ಸೂಚಿತವಾಗುವುದು.

## 'ಅಚಲಾ', 'ಸರ್ವಂಸಹಾ' ಎನ್ನಿಸಿದ ಭೂಮಿ

ರಸಾ[೨] ಪಿಪಾಸೋಗ್ರಭರಾಶನಾಯಾ
ವಿಷಹ್ಯ ವಿಷ್ಣುಂ ಮನಸಾಽಚಲೇನ।
ತದಾಽನುಧಾವಂತ್ಯಚಲೇತಿ ಸರ್ವಂ-
ಸಹೇತಿ ನೂನಂ ಜಗದೇ ಜಗತ್ಯಾಮ್[೩]॥ ೨೦ ॥

ಆಗ ಭೂಮಿಯು ಬಾಯಾರಿಕೆ ಹಾಗೂ ತೀವ್ರವಾಗಿ ಒತ್ತಿಬಂದ ಹಸಿವುಗಳನ್ನು ಸಹಿಸಿಕೊಂಡು ಅಚಲವಾದ ಮನಸ್ಸಿನಿಂದ ವಿಷ್ಣುವನ್ನೇ ಸ್ಮರಿಸುತ್ತಾ ಲೋಕದಲ್ಲಿ ಸರ್ವಂಸಹಾ, ಅಚಲಾ ಎಂಬುದಾಗಿ ಹೇಳಲ್ಪಟ್ಟಿರಬೇಕು.

ವಿ. : ೧. ತೀವ್ರವಾದ ಹಸಿವು ಬಾಯಾರಿಕೆಗಳನ್ನು ಸಹಿಸಿಕೊಂಡು ಮಹಾವಿಷ್ಣುವನ್ನು ಆರಾಧಿಸಿದ ಕಾರಣದಿಂದಾಗಿ ಭೂಮಿಗೆ ಸರ್ವಂಸಹಾ[೪] ಎಂಬ ಹೆಸರೂ, ಅಚಲವಾದ ಮನಸ್ಸಿನಿಂದ ಧ್ಯಾನಿಸಿದ್ದರಿಂದ ಅಚಲಾ[೫] ಎಂಬ ಹೆಸರು ಉಂಟಾದವು ಎಂದು ಭಾವ.

---

೧. ದೇವಾಶ್ಚಾಸ್ವಪ್ನಪದಾಃ ಹರಿಪೂಜಾಯಾಂ ನಿದ್ರಾಜಾಡ್ಯಮಪಹಾಯ ಜಾಗರೂಕತ್ವಾದಸ್ವಪ್ನನಾಮಾನೋ ಬಭೂವುರಿತ್ಯರ್ಥಃ । -ವ್ಯಾ.

೨. ಅಶನಾಯೋದನ್ಯಧನಾಯಾ ಬುಭುಕ್ಷಾಪಿಪಾಸಾರ್ಥೇಷು। - ಪಾ.ಸೂ.(೭/೪/೩೪)

೩. ಜಗನ್ಯೈರಿತಿ ಶೇಷಃ। ದ್ವಿಧಾಽನುಪ್ರಾಸೋಽಲಂಕಾರಃ। -ವ್ಯಾ.

೪. ಸರ್ವಂಸಹಾ ವಸುಮತೀ ವಸುಧೋರ್ವೀ ವಸುಂಧರಾ।
ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾಽವನಿರ್ಮೇದಿನೀ ಮಹೀ॥ -ಅಮರಕೋಶ

೫. ಭೂರ್ಭೂಮಿರಚಲಾಽನಂತಾ ರಸಾ ವಿಶ್ವಂಭರಾ ಸ್ಥಿರಾ।
ಧರಾ ಧರಿತ್ರೀ ಧರಣೀ ಕ್ಷೋಣೀ ಜ್ಯಾ ಕಾಶ್ಯಪೀ ಕ್ಷಿತಿಃ॥ -ಅಮರಕೋಶ
ಅಚಲಾ ಭುವಿ (ಹೈಮಃ)
ತದಾರಭ್ಯ ಪಿಪಾಸಾದಿಸಹಿಷ್ಣುತ್ವಾತ್ ಸರ್ವಂಸಹೇತಿ ಅಚಲೇನ ಸ್ಥಿರೇಣ ಮನಸಾ ಸ್ಮರಣಾತ್ ಅಚಲೇತಿ ಚ ಪದಾಭ್ಯಾಂ ಜಗದೇ ಅಭ್ಯಧಾಯಿ । -ವ್ಯಾ.

೨. ಸಕಲ ಕಾರ್ಯಗಳಿಗೂ ಹಸಿವು, ಬಾಯಾರಿಕೆಗಳು ಮುಖ್ಯವಾಗಿ ಅಡ್ಡಿ ಎನ್ನಿಸುವುವು. ಅವೆರಡನ್ನೂ ಸಹಿಸುವುದು ಅಸಾಧ್ಯ; ಸರ್ವವನ್ನೂ ಸಹಿಸಿದಂತೆಯೇ. ಭೂಮಿಯು ಶ್ರೀಹರಿ ಸೇವೆಗಾಗಿ ಹಾಗೆ ಸಹಿಸಿದ್ದರಿಂದ ಅದಕ್ಕೆ ಸರ್ವಂಸಹಾ ಎಂಬ ಹೆಸರು ಸಾರ್ಥಕವಾಯಿತು ಎಂದರ್ಥ; ರಸಾ – ಭೂಮಿ; ಪಿಪಾಸಾ – ಬಾಯಾರಿಕೆ; ಅಶನಾಯಾ – ಹಸಿವು.

೩. ಹೀಗೆ ಹಸಿವು, ಬಾಯಾರಿಕೆಗಳನ್ನು ಸಹಿಸಿಕೊಂಡು ಅಚಲವಾದ ಮನಸ್ಸಿನಿಂದ ಶ್ರೀಹರಿಯನ್ನಾರಾಧಿಸುವುದು ಅವನ ವಿಶೇಷಪ್ರಸಾದಕ್ಕೆ ಸಾಧನ ಎಂಬ ಸೂಚನೆ ಇಲ್ಲಿದೆ.

## ಬ್ರಹ್ಮದೇವರು ಮಾಡಿದ ಪುರುಷಸೂಕ್ತೋಕ್ತ ಸ್ತುತಿ

**ಸಹಸ್ರಕಾರ್ಯೇಷು ಭವಾನ್ ಸಮರ್ಥಃ**
**ಸಹಸ್ರನೇತ್ರಾನನಪಾಣಿಪಾದಃ ।**
**ಇತೀವ ವಿಜ್ಞಾಪಯಿತುಂ ವಿರಿಂಚಃ**
**ಸ್ತುತಿಂ ಸ ಪುಂಸೂಕ್ತಗತಾಂ[೧] ತತಾನ[೨] ॥ ೨೧ ॥**

ಸಾವಿರಕಣ್ಣುಗಳು, ಮುಖಗಳು, ಕೈಗಳು ಹಾಗೂ ಪಾದಗಳ ನೀನೇ ಸಾವಿರ ಕಾರ್ಯಗಳನ್ನು ಸಾಧಿಸುವ ಸಮರ್ಥ ಎಂಬುದನ್ನು ವಿಶೇಷವಾಗಿ ಜ್ಞಾಪಿಸಿಕೊಳ್ಳಲೆಂಬಂತೆ ಆ ಬ್ರಹ್ಮದೇವರು ಪುರುಷಸೂಕ್ತದಲ್ಲಿನ ಸ್ತುತಿಯನ್ನು ಮಾಡಿದರು.

ವಿ. : ೧. ಬಹುಕಾರ್ಯವನ್ನು ಸಾಧಿಸಲು ಬಹಳ ಕಣ್ಣುಗಳು ಬಹಳ ಕೈಗಳು ಬಹಳ ಕಾಲುಗಳು, ಅಗತ್ಯ. ಶ್ರೀಹರಿಯೊಬ್ಬನೇ ಹಾಗೆ [೩]'ಸಹಸ್ರಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಮೊದಲಾದ ಪುರುಷಸೂಕ್ತೋಕ್ತಹಿರಿಮೆಯನ್ನು ಹೊಂದಿದ ದೇವತೆ. ಆದ್ದರಿಂದಲೇ ಅವನೊಬ್ಬನೇ ಸರ್ವಕಾರ್ಯಸಾಧಕ; ಅದರಿಂದಾಗಿ ಸರ್ವೋತ್ತಮ ಎಂದು ಭಾವ.

೨. [೪]ಪುರುಷಸೂಕ್ತದ ಫಲಶ್ರುತಿರೂಪವಾದ ಈ ಅರ್ಥಾನುಸಂಧಾನವು ಶ್ರೀಹರಿಯ ಅನಂತ-ಕಾರ್ಯಸಾಧಕತ್ವದ ಅನುಸಂಧಾನಕ್ಕೆ ಸಾಧಕ ಎಂದು ತಿಳಿಯಬೇಕು; ಪುಂಸೂಕ್ತ-ಪುರುಷಸೂಕ್ತ.

## ಫಲಿಸಿದ ದೇವತೆಗಳ ಪ್ರಾರ್ಥನೆ

**ತಚ್ಚಿತ್ತೇಽಂಕುರಿತಃ ಸುಭಕ್ತಿಲತಯಾ ಶ್ಲಿಷ್ಟಃ ಪ್ರಮೋದಾಶ್ರುಭಿಃ**
**ಸಿಕ್ತಃ ಸತ್ಪುಲಕಾಲಿಮೂಲವಿತತಃ ಕಾಯಪ್ರಭಾಪಲ್ಲವಃ ।**

---

೧. ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ ।
ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ । – ಭಾಗ. (೧೦/೧/೨೦)
೨. ಉತ್ಪ್ರೇಕ್ಷಾಲಂಕಾರೋಽನುಪ್ರಾಸಶ್ಚ । –ವ್ಯಾ.
೩. ಸಹಸ್ರಶಬ್ದಃ ಪ್ರತ್ಯೇಕಮಭಿಸಂಬಧ್ಯತೇ । –ವ್ಯಾ.
೪. ಪುರುಷಸೂಕ್ತೇ ಸಹಸ್ರಶೀರ್ಷೇತ್ಯಾದಿನಾ ಬಹ್ವಾನನಾದ್ಯುಕ್ತೇರಿತಿ ಭಾವಃ । –ವ್ಯಾ.

**ಈಷನ್ಮೀಲಿತನೇತ್ರಕುಡ್ಮಲಯುತಃ ಶಾಖಾಸಹಸ್ರೋರ್ಜಿತಃ**
**ಪ್ರಾಪ್ತಃ ಶ್ರೀರಮಣದ್ವಿಜೇನ ಫಲಿತಸ್ತದ್ಧ್ಯಾನಕಲ್ಪದ್ರುಮಃ[೧] ॥ ೨೨ ॥**

ದೇವತೆಗಳ ಧ್ಯಾನವೆಂಬ ಕಲ್ಪವೃಕ್ಷವನ್ನು ಅವರ ಮನಸ್ಸಿನಲ್ಲಿ ಅಂಕುರಿಸಿದ ನಿರ್ಮಲವಾದ ಭಕ್ತಿ ಎಂಬ ಬಳ್ಳಿಯು ತಬ್ಬಿತು; ಆನಂದಾಶ್ರುಗಳು ನೆನೆಸಿದವು; ಉತ್ತಮವಾದ ರೋಮಾಂಚನದ ಹಿಂಡೆಂಬ ಬೇರುಗಳು ಎಲ್ಲೆಡೆ ಹರಡಿದವು; ದೇಹದ ಪ್ರಭೆ ಎಂಬ ಎಸಳು ಮೂಡಿತು; ಸ್ವಲ್ಪ ತೆರೆದ ನೇತ್ರಗಳೇ ಮೊಗ್ಗುಗಳಾದವು; ಸಾವಿರಾರು ವೇದಶಾಖೆ-ಗಳೇ ಅದಕ್ಕೆ ರೆಂಬೆಗಳಾದವು; ಅದು ಫಲವನ್ನು ಬಿಡಲು ಅದರ ಬಳಿಗೆ ಲಕ್ಷ್ಮೀರಮಣ ಎಂಬ ಪಕ್ಷಿಯು ಆಗಮಿಸಿತು.

ವಿ.: ೧. ಆ ಬ್ರಹ್ಮಾದಿ ದೇವತೆಗಳ[೨] ಧ್ಯಾನವು ಫಲಿಸಿ, ಶ್ರೀಹರಿಯು ಪ್ರಕಟನಾದ ಎಂದು ಭಾವ.

೨. ಭಕ್ತಿಯೇ ಬಳ್ಳಿ, ಆನಂದಾಶ್ರುಗಳೇ ಜಲ, ರೋಮಾಂಚನಗಳೇ ಬೇರುಗಳು, ದೇಹ-ಕಾಂತಿಯೇ ಎಸಳು, ಸ್ವಲ್ಪ ತೆರೆದ ಕಣ್ಣುಗಳೇ ಮೊಗ್ಗುಗಳು, ವೇದಶಾಖೆಗಳೇ ರೆಂಬೆಗಳು, ಶ್ರೀಹರಿಯೇ ಪಕ್ಷಿ ಎಂಬಲ್ಲಿನ ರೂಪಕ ಅತ್ಯಂತ ರೋಚಕವಾದುದು ; **ದ್ರುಮ – ವೃಕ್ಷ.**

೩. ಒಂದು[೩] ವೃಕ್ಷಕ್ಕೆ ಜಲ, ಬೇರು, ಪ್ರಭೆ, ಮೊಗ್ಗು, ರೆಂಬೆ, ಫಲಗಳು ಅತ್ಯಗತ್ಯ. ಹಾಗೆಯೇ ಸುತ್ತುವರೆದ ಬಳ್ಳಿ, ಅದರಲ್ಲಿನ[೪] ಫಲಕ್ಕಾಗಿ ಧಾವಿಸಿಬರುವ ಪಕ್ಷಿ – ಹೀಗೆ ಒಂದು ವೃಕ್ಷದ ಪೂರ್ಣತೆಯಂತೆ ಅವರ[೫] ಧ್ಯಾನವೂ ಪೂರ್ಣಫಲಿಸಿ ಶ್ರೀಹರಿಯು ಗೋಚರನಾದ ಎಂದರ್ಥ.

೪. [೬]ಆನಂದಾಶ್ರುಗಳು ಎಂಬ ಮಾತಿನಿಂದ ತಣ್ಣನೆಯ ನೀರು ಬಳ್ಳಿಗೆ ಪೋಷಕ ಎಂಬ ತತ್ತ್ವ ಸೂಚಕ. ಇದು ಶ್ರೀವಾದಿರಾಜಸ್ವಾಮಿಗಳ ತೀರ್ಥಪ್ರಬಂಧದ ಈ ಶ್ಲೋಕದ ಸೂಚನೆಯಂತಿದೆ :

**ವರಾಹನಯನಾನಂದಧಾರಾ ನೇತ್ರಾವತೀ ಸರಿತ್ ।**
**ಶುಷ್ಕಾಂ ತದ್ಭಕ್ತಿಲತಿಕಾಂ ಪುಷ್ಣಾತಿ ಕಥಮನ್ಯಥಾ ॥** (೧/೩.೨)

---

೧. ಶ್ಲಿಷ್ಟಪರಂಪರಿತಂ ರೂಪಕಮಲಂಕಾರಃ। ಶಾರ್ದೂಲವಿಕ್ರೀಡಿತಂ ವೃತ್ತಮ್ । –ವ್ಯಾ.
೨. ಧ್ಯಾನಸ್ಯ ಮಾನಸಚಿತ್ತಾಖ್ಯಾವಸ್ಥಾವಿಶೇಷಸಾಧ್ಯತ್ವಾದಿತಿ ಭಾವಃ। –ವ್ಯಾ.
ಭಕ್ತಿಯುಕ್ತಸ್ಯ ಧ್ಯಾನಸ್ಯ ಮಹಾಫಲಹೇತುತ್ವಾದಿತಿ ಭಾವಃ। –ವ್ಯಾ.
೩. ಅನೇನ ದೇವಾನಾಮುತ್ತಮಾಧಿಕಾರಿತ್ವೇನ ಬಹುಶಾಖಾಗತಗುಣೋಪಸಂಹಾರೇ ಸಾಮರ್ಥ್ಯಮಸ್ತೀತಿ ಗಮ್ಯತೇ। –ವ್ಯಾ.
"ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್" । –ಬ್ರಹ್ಮಸೂತ್ರಮ್(೩./೩./೧)
೪. ಪ್ರಾಪ್ತಃ ಧ್ಯಾನಸ್ಯ ಪರಿಪಾಕಾವಸ್ಥಾಯಾಂ ವಿಷ್ಣುಃ ಪ್ರಸನ್ನಸ್ತತ್ರಾಗಮದಿತ್ಯರ್ಥಃ। –ವ್ಯಾ.
ಫಲನಿಷ್ಪತ್ತ್ಯನಂತರಂ ಪಕ್ಷಿಣೋ ವೃಕ್ಷಮಾತ್ರಯಂತೇ ಇತಿ ಭಾವಃ। –ವ್ಯಾ.
೫. ನಾಸಿಕಾಗ್ರನಿವಿಷ್ಟದೃಷ್ಟೇರ್ಧ್ಯಾತುರಶ್ರೂಣಾಂ ಹೃದಿ ನಿಪಾತನಾದಿತಿ ಭಾವಃ। –ವ್ಯಾ.
೬. ಆಲವಾಲಾದಪಿ ಬಹಿರ್ನಿಃಸರಣಾದಿತಿ ಭಾವಃ। –ವ್ಯಾ.

೫. ದ್ವಾಸುಪರ್ಣಾ ಎಂಬ ಶ್ರುತಿಯಲ್ಲಿ ಜಗತ್ತು , ವೃಕ್ಷ, ಜೀವ ಹಾಗೂ ಈಶ್ವರ ಅದರಲ್ಲಿನ ಪಕ್ಷಿಗಳು ಎಂಬ ವಿವರ ಬಂದಿದೆ. ಅದರ ಹಿನ್ನೆಲೆಯಲ್ಲಿ ರೂಪುಗೊಂಡ ಸುಂದರರೂಪಕ ಇದಾಗಿದೆ. ಇದರಿಂದ ಜೀವ, ತನ್ನೊಡನೆಯೇ ಇರುವ ಶ್ರೀಹರಿಯನ್ನು ಸಾಕ್ಷಾತ್ಕರಿಸಲು ಧ್ಯಾನವೇ ಮುಖ್ಯಸಾಧನ ಎಂಬ ತತ್ತ್ವ ನಿರೂಪಿತವಾಗಿದೆ. ಧ್ಯಾನದ ಸಾರ್ಥಕ್ಯ ಶ್ರೀಹರಿಯು ಒಲಿದಾಗಲೇ ಎಂಬುದು ಇಲ್ಲಿಯ ಮುಖ್ಯಪ್ರಮೇಯ. ಧ್ಯಾನಕ್ಕೆ ಭಕ್ತಿ ಅತ್ಯಗತ್ಯ ಎಂಬುದು ಇಲ್ಲಿಯ ಇನ್ನೊಂದು ಪ್ರಮೇಯ ; ಪುಲಕ - ರೋಮಾಂಚನ; ಪಲ್ಲವ - ಚಿಗುರು; ಕುಡ್ಮಲ - ಮೊಗ್ಗು.

## ಪ್ರಸನ್ನನಾದ ಶ್ರೀಹರಿ

ತತಃ ಪ್ರಸನ್ನಃ ಕರುಣಾಂಬುರಾಶಿಃ
ಸುರಾನ್ ಸಮಾಶ್ವಾಸ್ಯ ವಿರಿಂಚಪೂರ್ವಾನ್ ।
ಧರಾಂ ಗತಕ್ಲೇಶಭರಾಂ ವಿಧಾಯ
ಸ್ವಕೀಯಮಾಯಾಂ ಹರಿರಿತ್ಯವೋಚತ್ ॥ ೨೩ ॥

ಬಳಿಕ ಪ್ರಸನ್ನನಾಗಿ ಕರುಣಾಸಮುದ್ರನಾದ ಶ್ರೀಹರಿಯು, ಬ್ರಹ್ಮಾದಿದೇವತೆಗಳನ್ನು ಸಾಂತ್ವನ ಪಡಿಸಿದ; ಭೂಮಿಯ ಕ್ಲೇಶಭಾರವನ್ನು ಇಳಿಸಿದ; ತನ್ನ ಪತ್ನಿಯಾದ ಮಾಯೆಯನ್ನು ಕುರಿತು ಹೀಗೆಂದ.

ವಿ. : ೧. ಇಲ್ಲಿ ಶ್ರೀಹರಿಯ ಪ್ರಸಾದದಿಂದಾದ ಪರಿಣಾಮದ ವರ್ಣನೆ ಬಂದಿದೆ.

೨. ಶ್ರೀಹರಿಯ ಒಲುಮೆಯಿಂದಾಗಿ ಭೂಮಿಗೆ ಭಾರವು ಆ ಕೂಡಲೇ ಇಳಿದಂತಾಯಿತು ಎಂಬ ಸೂಚನೆ ಇಲ್ಲಿದೆ ; ಅಂಬುರಾಶಿ - ಜಲನಿಧಿ, ಸಮುದ್ರ.

೩.. ಮಹಾಲಕ್ಷ್ಮಿಯು ಶ್ರೀಹರಿಗೆ ಪ್ರಿಯೆಯಾದ ಮಾಯೆ ಎಂಬುದು ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ (೭/೧೪)ಎಂಬ ಗೀತೆಯ ಮಾತಿನ ಭಾವವಾಗಿದೆ. ಇದರಿಂದ [1]ಮಾಯಾವಾದದ ಕಲ್ಪನೆಯ ಮಾಯೆ ಇದಲ್ಲ ಎಂಬುದು ಸೂಚಿತ.

## ಸ್ಫುಟಪಟ್ಟ ಶ್ರೀಹರಿಯ ಸರ್ವೋತ್ತಮತ್ವ

[2]ದೇವೇಷು ಧಾತಾ ಪ್ರಭುರಸ್ಯ ಲಕ್ಷ್ಮೀ-
ಸ್ತಸ್ಯಾಃ ಪ್ರಭುಃ ಸೋಽಹಮಿತೀವ ಶಂಸನ್ ।

---

೧. ಮಾಯಾ ನಾರಾಯಣೀಶಾನೇತಿ ಮಾಯಾಶಬ್ದಸ್ಯ ಲಕ್ಷ್ಮ್ಯಾಂ ಪ್ರಯೋಗಾತ್ । -ವ್ಯಾ.

೨. ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥
-ಮಹಾಭಾರತ ( ಅಶ್ವಮೇಧಿಕಪರ್ವ, ವೈಷ್ಣವಧರ್ಮಪರ್ವ)

ಆಜ್ಞಾಮಜಸ್ಯೈವ ದದಾವದೃಶ್ಯೋ
ವಿಜ್ಞೇಯಮೂರ್ತಿಃ ಸ್ಫುಟಮಿಂದಿರಾಯಾಃ ॥ ೨೪ ॥

ದೇವತೆಗಳಿಗೆ ಬ್ರಹ್ಮದೇವರು ಒಡೆಯರು; ಅವರಿಗೆ ಮಹಾಲಕ್ಷ್ಮಿಯು ಒಡತಿ; ತಾನು ಅವಳಿಗೆ ಒಡೆಯ ಎಂದು ತಿಳಿಸಿಕೊಡಲೋ ಎಂಬಂತೆ ಶ್ರೀಹರಿಯು ಬ್ರಹ್ಮದೇವರಿಗೆ ಅದೃಶ್ಯ ರೂಪದಿಂದ ಆದೇಶ ನೀಡಿದ ; ಮಹಾಲಕ್ಷ್ಮಿಗೆ ಸ್ಫುಟವಾಗಿ ಗೋಚರಿಸಿಯೇ [೧] ಆದೇಶವಿತ್ತ.

ವಿ. : [೨] ೧. ಶ್ರೀಹರಿಯು ಆ ಪ್ರಸಂಗದಲ್ಲಿ ಮಹಾಲಕ್ಷ್ಮಿಗೆ ಸಾಕ್ಷಾದ್ದರ್ಶನ ನೀಡಿ ಆದೇಶವಿತ್ತ. ಬ್ರಹ್ಮದೇವರಿಗೆ [೩] ಅದೃಶ್ಯನಾಗಿಯೇ ಆಜ್ಞೆ ನೀಡಿದ. ಇತರ ದೇವತೆಗಳಿಗೆ ದರ್ಶನವನ್ನೂ ನೀಡಲಿಲ್ಲ ಮಾತನ್ನೂ ಕೇಳಿಸಲಿಲ್ಲ. ಇತರ ಸಕಲ ದೇವತೆಗಳಿಗಿಂತ ಬ್ರಹ್ಮದೇವರು ಶ್ರೇಷ್ಠ. ಮಹಾಲಕ್ಷ್ಮಿ ಅವರಿಗಿಂತ ಉತ್ತಮಳು. ತಾನು ಮಹಾಲಕ್ಷ್ಮಿಗಿಂತಲೂ ಉತ್ತಮನಾದ ಸರ್ವೋತ್ತಮ ಎಂಬ ತತ್ತ್ವವನ್ನು ಈ ಮೂಲಕ ಲೋಕಕ್ಕೆ ಸಾರಿದ ಎಂದರ್ಥ.

೨. ಇದು ಸಹ ಶ್ರೀಮದ್ಭಾಗವತ (೧೦/೧/೨೧) ವಾಕ್ಯದ ವಿವರಣರೂಪ.

ಶ್ರೀಹರಿಯು ದುರ್ಗೆಗೆ ನೀಡಿದ ಆದೇಶ

ತ್ವಮೇತ್ಯ ದೇವಕ್ಯುದರಸ್ಥಗರ್ಭಂ
ನಿಧೇಹಿ ರೋಹಿಣ್ಯುದರೇ ಸ್ವಶಕ್ತ್ಯಾ [೪] ।

---

೧. ಗಿರಂ ಸಮಾಧೌ ಗಗನೇ ಸಮೀರಿತಾಂ ನಿಶಮ್ಯ ವೇಧಾಸ್ತ್ರಿದಶಾನುವಾಚ ಹ ।
ಗಾಂ ಪೌರುಷೀಂ ಮೇ ಶೃಣುತಾಮರಾಃ ಪುನರ್ವಿಧೀಯತಾಮಾಶು ತಥೈವ ಮಾ ಚಿರಮ್ ॥
ಪುರೈವ ಪುಂಸಾಽವಧೃತೋ ಧರಾಜ್ವರೋ ಭವದ್ಭಿರಂಶೈರ್ಯದುಷೂಪಜನ್ಯತಾಮ್ ।
ಸ ಯಾವದುರ್ವ್ಯಾ ಭರಮೀಶ್ವರೇಶ್ವರಃ ಸ್ವಕಾಲಶಕ್ತ್ಯಾ ಕ್ಷಪಯಂಶ್ಚರೇದ್ಭುವಿ ॥
ವಸುದೇವಗೃಹೇ ಸಾಕ್ಷಾದ್ ಭಗವಾನ್ ಪುರುಷಃ ಪರಃ ।
ಜನಿಷ್ಯತೇ ತತ್ಪ್ರಿಯಾರ್ಥಂ ಸಂಭವಂತು ಸುರಸ್ತ್ರಿಯಃ ॥
ವಾಸುದೇವಕಲಾಽನಂತಃ ಸಹಸ್ರವದನಃ ಸ್ವರಾಟ್ ।
ಅಗ್ರತೋ ಭವಿತಾ ದೇವೋ ಹರೇಃ ಪ್ರಿಯಚಿಕೀರ್ಷಯಾ ॥
ಯೋಗಮಾಯಾ ಭಗವತೀ ಯಯಾ ಸಮ್ಮೋಹಿತಂ ಜಗತ್ ।
ಆದಿಷ್ಟಾ ಪ್ರಭುಣಾಽಂಶೇನ ಕಾರ್ಯಾರ್ಥಂ ಸಂಭವಿಷ್ಯತಿ ॥ -ಭಾಗ.(೧೦/೧/೨೧-೨೫)

೨. ಉತ್ಪ್ರೇಕ್ಷಾಲಂಕಾರಃ। -ವ್ಯಾ.

೩. ಅದೃಶ್ಯೇನಾಪಿ ಹರಿಣಾ ಅಜಸ್ಯೈವಾಜ್ಞಾದಾನಾತ್ ಅನ್ಯೇಷಾಂ ದೇವಾನಾಮದಾನಾತ್ ತೇಭ್ಯೋ ವಿರಿಂಚಸ್ಯೋತ್ತಮತ್ವಮ್ ದೃಶ್ಯಾತ್ಮಮೂರ್ತಿನಾ ಲಕ್ಷ್ಮ್ಯಾಃ ಆಜ್ಞಾದಾನಾತ್ ವಿರಿಂಚಾದಪಿ ಲಕ್ಷ್ಮ್ಯಾಃ ಉತ್ತಮತ್ವಂ ಲಕ್ಷ್ಮೀಂ ಪ್ರತ್ಯಾಜ್ಞಾದಾನಕರ್ತೃತ್ವಾತ್ ತಸ್ಯಾ ಅಪಿ ಸ್ವೋತ್ತಮತ್ವಮುಕ್ತಮೇವೇತಿ ಭಾವಃ। -ವ್ಯಾ.

೪. ಭಗವಾನಪಿ ವಿಶ್ವಾತ್ಮಾ ವಿದಿತ್ವಾ ಕಂಸಜಂ ಭಯಮ್ ।
ಯದೂನಾಂ ನಿಜನಾಥಾನಾಂ ಯೋಗಮಾಯಾಂ ಸಮಾದಿಶತ್ ॥
ಗಚ್ಛ ದೇವಿ ವ್ರಜಂ ಭದ್ರೇ ಗೋಪಗೋಭಿರಲಂಕೃತಮ್ ।
ರೋಹಿಣೀ ವಸುದೇವಸ್ಯ ಭಾರ್ಯಾಽಽಸ್ತೇ ನಂದಗೋಕುಲೇ ॥

ಇತೀರಿತಾ ತಂ ರಮಣಂ ರಮಾ ಸಾ
ಪ್ರದಕ್ಷಿಣೀಕೃತ್ಯ ತಥಾಽಕರೋತ್ ತತ್ ॥ ೨೫ ॥

''ನೀನು ಭೂಮಿಗೆ ತೆರಳಿ, ದೇವಕಿಯ ಉದರದಲ್ಲಿನ ಗರ್ಭವನ್ನು ನಿನ್ನ ಸಾಮರ್ಥ್ಯದಿಂದ ರೋಹಿಣಿಯ ಉದರದಲ್ಲಿ ಇರಿಸು'' ಹೀಗೆ ತಿಳಿಸಲ್ಪಟ್ಟ ಆ ಮಹಾಲಕ್ಷ್ಮಿಯು ಅವನಿಗೆ ಪ್ರದಕ್ಷಿಣೆ ಮಾಡಿ ಹಾಗೆಯೇ ಮಾಡಿದಳು; (ನಿಧೇಹಿ - ಇರಿಸು).

ವಿ. : ೧. ಆಗ ದೇವಕಿಯು ಗರ್ಭಿಣಿಯಾಗಿದ್ದು ಆ ಗರ್ಭವನ್ನು ರೋಹಿಣಿಯ ಗರ್ಭಕ್ಕೆ ಸ್ಥಳಾಂತರಿಸಲು ಶ್ರೀಹರಿಯು ದುರ್ಗಾರೂಪದ ಮಹಾಲಕ್ಷ್ಮಿಗೆ ಆದೇಶಿಸಿದ ಎಂದರ್ಥ.

೨. ಹೀಗೆ ದೇವಕಿ ಹಾಗೂ ರೋಹಿಣಿ ಇಬ್ಬರಿಗೂ ಬಲರಾಮನು ಪುತ್ರ ಎನ್ನಿಸುವಂತಾಯಿತು ಅದಕ್ಕೆ ಅವರಿಬ್ಬರೂ ಸಹ ಶ್ರೀಹರಿಯ ಆವೇಶ ಹೊಂದಿದ ಶ್ರೇಷ್ಠ ದೇವತೆ ತಮ್ಮ ಪುತ್ರನೆನ್ನಿಸಬೇಕು ಎಂದು ತಪಸ್ಸು ಮಾಡಿದ್ದುದೇ ಕಾರಣ ಎಂಬ ವಿಶೇಷಾಂಶ ಮಹಾಭಾರತತಾತ್ಪರ್ಯನಿರ್ಣಯ-ದಲ್ಲಿದೆ (ಮ.ಭಾ.ತಾ.ನಿ. ೧೨/೧೧೨):

ವಿಷ್ಣ್ವಾವೇಶೀ ಬಲವಾನ್ ಯೋ ಗುಣಾಧಿಕಃ ಸ ಮೇ ಸುತಃ ಸ್ಯಾದಿತಿ ರೋಹಿಣೀ ಚ ।
ತೇಪೇ ತಪೋಽತೋ ಹರಿಶುಕ್ಲಕೇಶಯುತಃ ಶೇಷೋ ದೇವಕೀರೋಹಿಣೀಜಃ ॥

### ಅವತರಿಸಲು ಆದಿಶೇಷನಿಗೆ ಆದೇಶ

ಆಜ್ಞಾಪಯಾಮಾಸ ಪುರಾ ಸ ಶೇಷಂ
ಜಜ್ಞೇ ಸ ರೋಹಿಣ್ಯುದರೋದಯಾದ್ರೇಃ ।
ಸಂಪ್ರೇಷಯಂತಿ ಸ್ಮ ನರೈರ್ನರೇಂದ್ರಾಃ
ಶಯ್ಯಾಂ ಸ್ವಕೀಯಾಂ ಪುರತಃ ಪ್ರಯಾಣೇ ॥ ೨೬ ॥

---

ಅನ್ಯಾಶ್ಚ ಕಂಸಸಂವಿಗ್ನಾ ವಿವರೇಷು ವಸಂತಿ ಹಿ ।
ದೇವಕ್ಯಾ ಜಠರೇ ಗರ್ಭಂ ಶೇಷಾಖ್ಯಂ ಧಾಮ ಮಾಮಕಮ್ ॥
ತತ್ ಸನ್ನಿಕೃಷ್ಯ ರೋಹಿಣ್ಯಾ ಉದರೇ ಸನ್ನಿವೇಶಯ ।
ಅಥಾಹಂ ಸ್ವಾಂಶಭಾಗೇನ ದೇವಕ್ಯಾಃ ಪುತ್ರತಾಂ ಶುಭೇ ॥ -ಭಾಗ.(೧೦/೩/೬-೯)
ಪ್ರಾಪ್ಸ್ಯಾಮಿ ತ್ವಂ ಯಶೋದಾಯಾಂ ನಂದಪತ್ನ್ಯಾಂ ಭವಿಷ್ಯಸಿ ।
ಅರ್ಚಿಷ್ಯಂತಿ ಮನುಷ್ಯಾಸ್ತ್ವಾಂ ಸರ್ವಕಾಮವರೇಶ್ವರೀಮ್ ॥
ನಾನೋಪಹಾರಬಲಿಭಿಃ ಸರ್ವಕಾಮವರಪ್ರದಾಮ್ ।
ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚ ನರಾ ಭುವಿ ॥
ದುರ್ಗೇತಿ ಭದ್ರಕಾಲೀತಿ ವಿಜಯಾ ವೈಷ್ಣವೀತಿ ಚ ।
ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ ॥
ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿ ಚ ॥ -ಭಾಗ.(೧೦/೩/೧೦-೧೨)

ಶ್ರೀಹರಿಯು ಮೊದಲಿಗೆ ಶೇಷನಿಗೆ ಅವತರಿಸಲು ಆದೇಶಿಸಿದ; ಆದಿಶೇಷನು ರೋಹಿಣಿಯ [೧]ಉದರವೆಂಬ ಉದಯಪರ್ವತದಲ್ಲಿ ಜನಿಸಿದ. ಪ್ರಯಾಣಕಾಲದಲ್ಲಿ ರಾಜರು ತಮ್ಮ ಹಾಸಿಗೆಯನ್ನು ಮುಂಚಿತವಾಗಿಯೇ ತಮ್ಮ ಜನರ ಮೂಲಕ ಕಳುಹಿಸಿಕೊಡುವರಲ್ಲವೇ !

ವಿ. : ೧. [೨]ಪ್ರಯಾಣಕಾಲದಲ್ಲಿ ರಾಜರು ತಮ್ಮ ಹಾಸಿಗೆಯನ್ನು ತಮಗಿಂತ ಮುಂಚಿತವಾಗಿ ಕಳುಹಿಸಿಕೊಡುವಂತೆ [೩]ಶ್ರೀಹರಿಯು ತನ್ನ ಅವತಾರ ಕಾಲದಲ್ಲಿ ತನಗಿಂತ ಮುಂಚಿತವಾಗಿ ತನ್ನ ತಲ್ಪವಾದ ಶೇಷನನ್ನು ಅವತರಿಸಲು ಆದೇಶಿಸಿದ ಎಂದರ್ಥ.

೨. ಶ್ರೀರಾಮಾವತಾರದ ಉಪಸಂಹಾರಕಾಲದಲ್ಲೂ ಹೀಗೆ ತನಗಿಂತ ಮುಂಚಿತವಾಗಿ ಶೇಷಾವತಾರನಾದ ಲಕ್ಷ್ಮಣನನ್ನು ಅವತಾರ ಪರಿಸಮಾಪ್ತಿ ಮಾಡಲು ಸೂಚಿಸುವ ಮೂಲಕ ಈ ತತ್ತ್ವವನ್ನು ನಿರೂಪಿಸಿದ ಎಂದು ತಿಳಿಯಬೇಕು (ಮ.ಭಾ.ತಾ.ನಿ -೯/೪೮); ಶ್ರೀವಾದಿರಾಜರ ಈ ಮಾತು ರಾಮಾಯಣದ ಆ ಪ್ರಸಂಗಕ್ಕೂ ವ್ಯಾಖ್ಯೆಯಂತಿರುವುದು ಗಮನಾರ್ಹ.

೩. **ಉದಯಾದ್ರೇಃ** ಎಂಬ ಪದದಿಂದ ಬಲರಾಮನ ಅವತಾರವು ಚಂದ್ರೋದಯದಂತೆ ಆಹ್ಲಾದಕರವಾಗುವುದು ಎಂಬ ವಿಶೇಷಾಂಶ ಸೂಚಿತ.

## ಬಲರಾಮನ ಅವತಾರ

**ಕೇಶಾತ್ಮನಾ ಸನ್ನಿಹಿತಃ ಸ ತಸ್ಮಿನ್**
**ಶ್ರೀಶೋಽಗ್ರಜತ್ವಂ ಸ್ವಯಮೇವ ನೂನಮ್ ।**
**ಧತ್ತೇ ವಿಧತ್ತೇ ಬಲಭದ್ರಮಾತು-**
**ರ್ನಿತ್ಯಂ ಸ್ವಮಾತೃತ್ವಸುಖಂ ಸುಖಾತ್ಮಾ[೪] ॥ ೨೭ ॥**

ಆ ಬಲರಾಮನಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯು [೫]ಶುಕ್ಲಕೇಶರೂಪದಿಂದ ತಾನೇ ಸನ್ನಿಹಿತನಾಗಿ, ತನಗೆ ತಾನೇ ಅಗ್ರಜನೆನ್ನಿಸಿದ. ಸುಖಸ್ವರೂಪನಾದ ಅವನು ತಾಯಿಯಾದ ರೋಹಿಣಿಗೆ ತನ್ನ ತಾಯಿ ಎನ್ನಿಸಿಕೊಳ್ಳುವ ಆನಂದವನ್ನು ಸದಾ ನೀಡಿದ.

---

೧. ಉದರೋದಯಾದ್ರೇರಿತ್ಯನೇನ ಬಲಭದ್ರಸ್ಯ ಚಂದ್ರಸಾಮ್ಯಂ ಧ್ವನ್ಯತೇ । -ವ್ಯಾ.
೨. ಸ್ಮೇತ್ಯನೇನ ಲೋಕಪ್ರಸಿದ್ಧಿಂ ದ್ಯೋತಯತಿ । -ವ್ಯಾ.
೩. ಕೃಷ್ಣಾವತಾರಾತ್ ಪೂರ್ವಂ ಬಲಭದ್ರಾವತಾರೇ ನಿಮಿತ್ತತ್ವೇನೋತ್ಪ್ರೇಕ್ಷಿತತ್ವೇನ ಶಯ್ಯಾತ್ವೇನಾಗ್ರತಃ ಪ್ರೇಷಣಸ್ಯ ಲೋಕರೀತ್ಯಾ ಸಮರ್ಥನಾತ್ ಉತ್ಪ್ರೇಕ್ಷಾಮೂಲಕೋಽಯಮರ್ಥಾಂತರನ್ಯಾಸಃ। -ವ್ಯಾ.
೪. ಛೇಕಾನುಪ್ರಾಸಃ -ವ್ಯಾ.
೫. ಏವಂ ಸಂಸ್ತೂಯಮಾನಸ್ತು ಭಗವಾನ್ ಪರಮೇಶ್ವರಃ ।
ಉಜ್ಜಹಾರಾತ್ಮನಃ ಕೇಶೌ ಸಿತಕೃಷ್ಣೌ ಮಹಾಮುನೇ ।
ಉವಾಚ ಚ ಸುರಾನೇತೌ ಮತ್ಕೇಶೌ ವಸುಧಾತಲೇ ॥
ಅವತೀರ್ಯ ಭುವೋ ಭಾರಕ್ಲೇಶಹಾನಿಂ ಕರಿಷ್ಯತಃ ॥ -ವಿಷ್ಣುಪುರಾಣ(೫/೧೬೦,೬೧)
ಕೇಶಾತ್ಮನಾ – ಶುಕ್ಲಕೇಶರೂಪೇಣ -ವ್ಯಾ.
ಸ್ವಸನ್ನಿಧಾನಭರಿತಬಲಭದ್ರದರ್ಶನೇನ ಸ್ವದರ್ಶನಜನ್ಯಸುಖಂ ತಸ್ಯಾ ವಿಧತ್ತ ಇತಿ ಭಾವಃ। ಬಲಭದ್ರೇ ಶುಕ್ಲಕೇಶ-ಸನ್ನಿಧಾನಮಸ್ತೀತಿ ತಾತ್ಪರ್ಯಾರ್ಥಃ। -ವ್ಯಾ.

ವಿ. : ೧. ಬಲರಾಮನು ಶ್ರೀಹರಿಯ ಶುಕ್ಲಕೇಶದ ಆವೇಶ ಹೊಂದಿದ ಆದಿಶೇಷ. ಶ್ರೀಕೃಷ್ಣನಂತೂ ಸಾಕ್ಷಾತ್ ಕೃಷ್ಣಕೇಶನೇ. ಹೀಗೆ ಒಂದು ರೀತಿಯಲ್ಲಿ ಎರಡೂ ಶ್ರೀಕೃಷ್ಣನ ರೂಪಗಳೇ ಆದ್ದರಿಂದ ಬಲರಾಮ ಲೋಕದೃಷ್ಟಿಯಲ್ಲಿ ಅಣ್ಣನಾದರೂ ವಾಸ್ತವವಾಗಿ [೧] ಶ್ರೀಹರಿಯು ತನಗೆ ತಾನೇ ಅಣ್ಣ ಎನ್ನಿಸಿದ ಎಂದರ್ಥ.

೨. ಇದರಂತೆ ಶ್ರೀಭೀಮಸೇನನು ಮೇಲ್ನೋಟಕ್ಕೆ ಯುಧಿಷ್ಠಿರನ ತಮ್ಮನಾದರೂ, ಅವನಲ್ಲಿ ತನ್ನ ಸೌಮ್ಯನಾಮಕ ರೂಪದ ಆವೇಶವನ್ನಿರಿಸಿದ್ದರಿಂದ ಶ್ರೀಕೃಷ್ಣನಂತೆ ತನಗೇ ತಾನು ತಮ್ಮ ಎನಿಸಿದಂತಾಯಿತು ಎಂಬ ವಿಶೇಷಾಂಶವನ್ನು ತಿಳಿದುಕೊಳ್ಳಬಹುದು.

೩.. [೨] ಬಲರಾಮನ ಅವತಾರದಿಂದ ಲಾಭವಾದದ್ದು ರೋಹಿಣಿಗೇ ಹೊರತು ಬಲರಾಮನಿಗಲ್ಲ ಎಂಬುದನ್ನು ಸುಖಾತ್ಮಾ ಎಂಬ ಪದದಿಂದ ಸೂಚಿಸಿರುವರು.

## ಕೃಷ್ಣಾವತಾರದ ಮತ್ತೊಂದು ಉದ್ದೇಶ

ಬಲಾತ್ ಪ್ರಗೃಹ್ಯ ಸ್ವಕವಾಟಪಾಲೌ
ನಿಶಾಚರೌ ಭೂತಲಮೇತ್ಯ ದೃಪ್ತೌ ।
ನೃತಸ್ಕರೌ ತೌ[೩] ವಿನಿಹತ್ಯ ವಿಷ್ಣು-
ರ್ನಿಜೌ ನಿನೀಷನ್ನಿವ ಗಾಂಗತೋಽಭೂತ್[೪] ॥ ೨೮ ॥

ಸೊಕ್ಕಿನಿಂದಾಗಿ ರಾಕ್ಷಸರಾಗಿ ಜನಿಸಿದ್ದ ತನ್ನ ದ್ವಾರಪಾಲಕರನ್ನು, ತಾನೇ ಭೂಮಿಗೆ ಬಂದು ಅವರಲ್ಲಿದ್ದ ರಾಕ್ಷಸರನ್ನು ಸಂಹರಿಸಿ, ಅವರನ್ನು ಪುನಃ ತನ್ನ ಲೋಕಕ್ಕೆ ಕರೆತರಲೆಂಬಂತೆ ಮಹಾವಿಷ್ಣುವು ಭೂಮಿಯಲ್ಲಿ ಅವತರಿಸಿದ.

ವಿ. : ೧. ಮಹಾವಿಷ್ಣುವಿನ ಶ್ರೀಕೃಷ್ಣಾವತಾರಕ್ಕೆ ಮತ್ತೊಂದು ಕಾರಣವನ್ನು ಇಲ್ಲಿ ಉತ್ಪ್ರೇಕ್ಷಿಸಿರುವರು.

೨. [೫] ಸನಕಾದಿಗಳ ಶಾಪದಿಂದ ರಾಕ್ಷಸರಾಗಿ ಭೂಮಿಯಲ್ಲಿ ಜನಿಸಿದ್ದ ತನ್ನ ದ್ವಾರಪಾಲಕರಾದ ಜಯವಿಜಯರನ್ನು ಮರಳಿ ತನ್ನ ಲೋಕಕ್ಕೆ ಕರೆತರುವ ಮತ್ತೊಂದು ಉದ್ದೇಶವೂ ಸಹ

---

೧. ನಿತ್ಯಂ ಅವತಾರಸಮಾಪ್ತಿಪರ್ಯಂತಂ ಸನ್ನಿಹಿತಃ ಪ್ರವಿಷ್ಟಃ ಸನ್ ಸ್ವಯಮೇವಾಗ್ರಜತ್ವಂ ಸ್ವಾಗ್ರಜತ್ವಂ ಸ್ವಜ್ಯೇಷ್ಠತ್ವಮಿತ್ಯರ್ಥಃ। -ವ್ಯಾ.

೨. ಕೃಷ್ಣಾವತಾರಾತ್ ಪೂರ್ವಂ ಬಲಭದ್ರಾವಿಷ್ಟತ್ವೇನ ಸ್ವಯಮೇವ ಜಾತತ್ವಾದಿತಿ ಭಾವಃ। -ವ್ಯಾ.

೩.. ನೀತೌ ಪುನರ್ಹರೇಃ ಪಾರ್ಶ್ವಂ ಜಗ್ಮತುರ್ವಿಷ್ಣುಪಾರ್ಷದೌ। - ಭಾಗ.( ೭/೧/೪೬)

೪. ಉತ್ಪ್ರೇಕ್ಷಾನುಽಪ್ರಾಸಸ್ಯಾಲಂಕಾರಃ। -ವ್ಯಾ.

೫. ಸನಕಾದಿಶಾಪೇನಾಸುರಾಕ್ರಾಂತತ್ವೇನ ಭುವಿ ಜಾತಯೋಃ ಜಯವಿಜಯಯೋಃ ಶಾಪಮೋಕ್ಷಾರ್ಥಂ ಭೂಮಾವವತತಾರೇತಿ ತಾತ್ಪರ್ಯಾರ್ಥಃ। -ವ್ಯಾ.

[1]ಶ್ರೀಹರಿಯ ಕೃಷ್ಣಾವತಾರಕ್ಕೆ ಇದ್ದಿತು ಎಂದು ಭಾವ: ಮಯ್ಯೆವ ವಧ್ಯೌ ಭವತಂ ತ್ರಿಜನ್ಮಸು - ಮ.ಭಾ.ತಾ.ನಿ.(೮/೧೨೩.)

೩.. ಮಹಾವಿಷ್ಣುವಿನ ದ್ವಾರಪಾಲಕರಿಗೆ ಶಾಪಕ್ಕೆ ಕಾರಣವಾಗಿದ್ದು ಪ್ರಾರಬ್ಧವಶಾತ್ ಅವರಿಗೆ ಒದಗಿದ್ದ ದರ್ಪ; ಸ್ವತಃ ಭೂಮಿಗೆ ತೆರಳಿ ಅವರನ್ನು ಕರೆತರಲು ಅವತರಿಸಿದ ಶ್ರೀಹರಿಯ ಕರುಣೆಯೂ ಸಹ ಇಲ್ಲಿ ಸೂಚಿತವಾಗಿದೆ.

೪. ಹಿರಣ್ಯಕಶಿಪು-ಹಿರಣ್ಯಾಕ್ಷರ ಸಂಹಾರಕ್ಕೆ ಅವರು ತನ್ನ ಭಕ್ತರಾದ ಜಯ-ವಿಜಯರನ್ನು ಆಕ್ರಮಿಸಿದ ಮತ್ತೊಂದು ಅಪಚಾರವೂ ಸಹ ಕಾರಣವಾಯಿತು ಎಂಬ ವಿಶೇಷಾಂಶವು ಇದರಿಂದ ತಿಳಿಯುವುದು; ನಿಶಾಚರ - ರಾಕ್ಷಸ ; ತಸ್ಕರ - ಕಳ್ಳ.

### ಶ್ರೀಕೃಷ್ಣನಿಗೆ ಗರ್ಭವಾಸವಿಲ್ಲ

ನ ಗರ್ಭವಾಸೋ ಮಮ ನಿರ್ಮಲಸ್ಯೇ-
ತ್ಯದೋ ಬುಧಾನ್ ಬೋಧಯಿತುಂ ಹೃದೇವ।
ಫಣೀಶ್ವರಂ ಗರ್ಭಗತಂ ವಿಧಾಯ
ಪುನಃ ಸ್ವಯಂ ಸನ್ನಿಹಿತೋ ಬಭೂವ[2]॥ ೨೯ ॥

ಸದಾ ನಿರ್ದೋಷನಾದ ತನಗೆ ಗರ್ಭವಾಸವು ಸರ್ವಥಾ ಇಲ್ಲ ಎಂಬುದನ್ನು ಜ್ಞಾನಿಗಳಿಗೆ ತಿಳಿಸಿಕೊಡುವ ಮನಸ್ಸಿನಿಂದೆಂಬಂತೆ ಶ್ರೀಹರಿಯು ಮೊದಲಿಗೆ ನಾಗರಾಜನಾದ ಶೇಷನನ್ನು ಗರ್ಭದಲ್ಲಿ ಇರುವಂತೆ ಮಾಡಿ, ಆ ಬಳಿಕ ತಾನು ಅಲ್ಲಿ ನೆಲೆಸಿದ.

ವಿ. : ೧. ಶ್ರೀಕೃಷ್ಣ ಮೊದಲಾದ ಶ್ರೀಹರಿಯ (ಹಾಗೂ ಮಹಾಲಕ್ಷ್ಮಿಯ) ಅವತಾರಗಳು ಇತರದೇವತೆಗಳ ಅವತಾರಗಳಂತೆ ಪ್ರಾಕೃತವಾದವುಗಳಲ್ಲ; ಸದಾ ಅಪ್ರಾಕೃತನಾದ ಶ್ರೀಹರಿಗೆ ಗರ್ಭವಾಸದ ಪ್ರಸಕ್ತಿಯೇ ಇಲ್ಲ ಎಂಬುದು ಶಾಸ್ತ್ರಗಳ ನಿರ್ಣಯ; ಅದನ್ನು ಪ್ರತ್ಯಕ್ಷವಾಗಿ ಸಹ ತೋರಿಸಲೆಂದು ಶ್ರೀಹರಿಯು ಮೊದಲಿಗೆ ದೇವಕಿಯ ಏಳನೆಯ ಗರ್ಭದಲ್ಲಿ ಶೇಷದೇವರನ್ನು ಇರುವಂತೆ ಮಾಡಿ, ಆ ಬಳಿಕ ತಾನು ಅವತರಿಸಿದ ಎಂದರ್ಥ. ಹೀಗೆ ಶೇಷದೇವರನ್ನು ಗರ್ಭವಾಸಕ್ಕೆ ಅಣಿಗೊಳಿಸುವ ಮೂಲಕ ಅದಕ್ಕೆ ಆಜ್ಞೆ ನೀಡುವ ತನಗೆ ಗರ್ಭವಾಸದ ಪ್ರಸಕ್ತಿ ಸರ್ವಥಾ ಇಲ್ಲ ಎಂಬ ಪ್ರಮೇಯವನ್ನೂ ಶ್ರೀಹರಿಯು ಸೂಚಿಸಿದ ಎಂದು ಭಾವ.

೨. ಶೇಷದೇವರು ಜೀವಕೋಟಿಗೆ ಸೇರಿದವರಾದ್ದರಿಂದ ಅವರಿಗೆ ಗರ್ಭವಾಸಾದಿಗಳು ಉಂಟು ಎಂಬುದೂ ಸಹ ಇದರಿಂದ ಸೂಚಿತ.

---

೧. ಯಥಾ ವೀರೋ ರಾಜಾ ಸ್ವಪುರಪ್ರವೇಶಪ್ರತಿಬಂಧಕರ್ತೄನ್ ದ್ವಾರಪಾಲಾನ್ ಪ್ರಗೃಹ್ಯ ಸ್ವವಿಷಯಂ ನೀತ್ವಾ ತಿಷ್ಠತಃ ದೃಪ್ತಾನ್ ಚೋರಾನ್ ಸ್ವಯಮೇವಾಗತ್ಯ ವಿನಿಹತ್ಯ ಸ್ವಪುರಂ ಪ್ರತ್ಯಾನಯತಿ ತದ್ವದಿತಿ ಭಾವಃ। -ವ್ಯಾ.

೨. ಪೂರ್ವವದಲಂಕಾರಃ। -ವ್ಯಾ.

೩. [೧]ರಾಜನು ಕೊಳೆಯಾದ ಮನೆಗೆ ತನ್ನ ದಾಸಿಯನ್ನು ಕಳುಹಿಸಿ, ಅಲ್ಲಿಯ ಧೂಳು ಮೊದಲಾದವುಗಳನ್ನು ಸ್ವಚ್ಛಗೊಳಿಸಿ, ಬಳಿಕ ತಾನು ಪ್ರವೇಶಿಸುವಂತೆ ಎಂಬ ದೃಷ್ಟಾಂತವನ್ನು ವ್ಯಾಖ್ಯಾನ ನೀಡಿದೆ; ಶ್ರೀಹರಿಯ ದಾಸವರ್ಗಕ್ಕೆ ಸೇರಿದ ಶೇಷದೇವರನ್ನು ದಾಸಿಗೆ ಹೋಲಿಸಿರುವುದು ಸಮುಚಿತವೇ ಆಗಿದೆ.

೪. ಶ್ರೀಹರಿಗೆ ಗರ್ಭಪ್ರವೇಶವು ಗೃಹಪ್ರವೇಶದಂತೆಯೇ ಹೊರತು ಇತರರಂತೆ ಶುಕ್ರದ್ವಾರಾ ಯೋನಿಪ್ರವೇಶವಲ್ಲ ಎಂಬ ಧ್ವನಿ '[೨]ಸನ್ನಿಹಿತಃ' ಎಂಬ ಪದದಲ್ಲಿದೆ.

### ಬ್ರಹ್ಮಾದಿಗಳು ಮಾಡಿದ ಗರ್ಭಸ್ತುತಿ

ಗರ್ಭೇऽಪ್ಯದಭ್ರಾತ್ಮಸುಖೈಕಮೂರ್ತಿ-
ಮಭ್ಯೇತ್ಯ ಪದ್ಮಾಸನಮುಖ್ಯದೇವಾಃ ।
ಗೀರ್ಭಿರ್ಭವದ್ಗರ್ಭನಿವಾಸಜಾರ್ತಿ-
ನಿರ್ಭಂಗಸಿದ್ಧ್ಯರ್ಥಮಿವಾಸ್ತುವಂಸ್ತಮ್ ॥ ೩೦ ॥

ಗರ್ಭದಲ್ಲೂ ಪೂರ್ಣವಾದ ಸ್ವರೂಪಸುಖದ ಮೂರ್ತಿಯಾದ ಶ್ರೀಹರಿಯ ಬಳಿಗೆ ಸಾರಿ ಬ್ರಹ್ಮನೇ ಮೊದಲಾದ ದೇವತೆಗಳು ಅವತರಿಸುವ ನಿನಗೆ ಗರ್ಭವಾಸದಿಂದೊದಗುವ ನೋವು ಸರ್ವಥಾ ಇಲ್ಲ ಎಂಬುದನ್ನು ಸಾಧಿಸಲೆಂಬಂತೆ ಅವನನ್ನು ತಮ್ಮ ಮಾತುಗಳಿಂದ ಸ್ತುತಿಸಿದರು.

ವಿ. : ೧. [೩]ಶ್ರೀಹರಿಯು ಸರ್ವತ್ರ ಪರಿಪೂರ್ಣ. ಪೂರ್ಣಜ್ಞಾನಾನಂದಮಯ ಎಂಬುದನ್ನು ಸಾರಲೆಂದು ಬ್ರಹ್ಮಾದಿದೇವತೆಗಳು ದೇವಕಿಯ ಗರ್ಭದಲ್ಲಿ ನೆಲೆಸಿದ್ದ ಶ್ರೀಕೃಷ್ಣನನ್ನು ಸ್ತುತಿಸಿದರು ; ಈ ಸ್ತೋತ್ರಭಾಗವು ಗರ್ಭಸ್ತುತಿ ಎಂಬುದಾಗಿ ಶ್ರೀಮದ್ಭಾಗವತದಲ್ಲಿ ಸುಪ್ರಸಿದ್ಧ.

೨. ಇಂತಹ ಗರ್ಭಸ್ತುತಿಯನ್ನು ಪಠಿಸುವವರಿಗೆ ಮುಂದೆಂದೂ [೪]ಗರ್ಭವಾಸದ ದುಃಖ ಉಂಟಾಗದು ಎಂದರೆ ಕ್ರಮವಾಗಿ ಸಾಧನೆ ಸಂಪೂರ್ತಿಯಾಗಿ ಮುಕ್ತಿಯೇ ಲಭಿಸುವುದು ಎಂಬ ವಿಶೇಷ ಸೂಚನೆ ಇಲ್ಲಿದೆ.

---

೧. ಯಥಾ ರಾಜಾ ಮಲಿನಂ ಗೃಹಂ ಸ್ವದಾಸೀಮಂತಃ ಪ್ರವೇಶ್ಯ, ರಜೋನಿಸ್ಸಾರಣಮಾರ್ಜನಾದಿನಾ ಮಾಲಿನ್ಯಮಪಸಾರ್ಯ ನಿರ್ಮಲೀಕೃತ್ಯ ಪಶ್ಚಾತ್ ಸ್ವಯಂ ಪ್ರವಿಶತಿ ತದ್ವದಿತಿ ಭಾವಃ। -ವ್ಯಾ.

೨. ಸನ್ನಿಹಿತ ಇತ್ಯನೇನ ಗೃಹವತ್ ಪ್ರವೇಶಮಾತ್ರಂ ನ ತು ಜೀವವತ್ ಶುಕ್ರದ್ವಾರಾ ಯೋನಿಪ್ರವೇಶ ಇತಿ ಧ್ವನ್ಯತೇ।-ವ್ಯಾ.

೩. ಅಪರಿಮಿತಸ್ವರೂಪಾನಂದೈಕದೇಹ ಇತ್ಯರ್ಥಃ - ವ್ಯಾ.

೪. ಗರ್ಭೇऽಪಿ ಜಠರೇऽಪಿ ದುಃಖಹೇತುಭೂತಸ್ಥಾನೇऽಪೀತ್ಯರ್ಥಃ -ವ್ಯಾ.

ದಿಷ್ಟ್ಯಾಂऽಬ ತೇ ಕುಕ್ಷಿಗತಃ ಪರಃ ಪುಮಾನ್
ಅಂಶೇನ ಸಾಕ್ಷಾದ್ಭಗವಾನ್ ಭವಾಯ ನಃ ।
ಮಾ ಭೂದ್ಭಯಂ ಭೋಜಪತೇರ್ಮುಮೂರ್ಷೋರ್-
ಗೋಪ್ತಾ ಯದೂನಾಂ ಭವಿತಾ ತವಾತ್ಮಜಃ ॥ -ಭಾಗ.(೧೦/೩./೪೨)

೩. ವಿಹಾರಕ್ಕೆಂದು ಕಾರಾಗೃಹದರ್ಶನಕ್ಕೋಸ್ಕರ ಬಂದ ರಾಜನಿಗೆ ಅಲ್ಲಿಯ ದುಃಖವನ್ನು ವಿವರಿಸಿ, ಸ್ತುತಿಮಾಡಿದಾಗ ಅವನು ಪ್ರಸನ್ನನಾಗಿ ಕಾರಾಗೃಹದ ಬಂಧನದಿಂದ ಬಿಡುಗಡೆ-ಮಾಡುವಂತೆ, ಗರ್ಭಸ್ತುತಿಯಿಂದ ಪ್ರಸನ್ನನಾಗಿದ್ದುಕೊಂಡು ಗರ್ಭವಾಸದಿಂದ ಹುಟ್ಟುವ ದುಃಖವನ್ನು ಪರಿಹರಿಸುವನು ಎಂಬ ಭಾವದಿಂದ ಸ್ತುತಿಸಿದರು; ದಭ್ರ – ಅಲ್ಪ; ಅದಭ್ರ – ಪೂರ್ಣ.

೪. ಶ್ರೀಹರಿಯು ಗರ್ಭದಲ್ಲೂ ಪೂರ್ಣಸುಖೈಕಮೂರ್ತಿ ಎಂಬುದಾಗಿ ಉಪಾಸನೆ ಮಾಡಿದಾಗ ನಮಗೂ ಸಹ ಗರ್ಭವಾಸ ದುಃಖವು ಪರಿಹಾರವಾಗುವುದು ಎಂದು ಭಾವ.

## ಶ್ರೀಕೃಷ್ಣಜಯಂತೀ

**ಅಥೋ [1] ಜಯಂತ್ಯಾಮುದಭೂನ್ನಿಶೀಥೇ**
**ಶಶೀವ ದೇವಕ್ಯುದರೋದಯಾದ್ರೇಃ।**
**ದಿಗಷ್ಟಕೇ ರಾತ್ರಿಚರಾನ್ ಜಿಗೀಷೋ-**
**ಸ್ತಿಥಿರ್ನಿಶಾ ಸಾ ಚ ಗುಣೋಚಿತೈವ ॥ ೩೧ ॥**

ಬಳಿಕ ಜಯಂತಿಯಂದು ಮಧ್ಯರಾತ್ರಿಯಲ್ಲಿ ದೇವಕೀದೇವಿಯ ಉದರವೆಂಬ ಉದಯ-ಪರ್ವತದಿಂದ ಚಂದ್ರನಂತೆ ಶ್ರೀಕೃಷ್ಣನು ಪ್ರಾದುರ್ಭವಿಸಿದ; ಅಷ್ಟದಿಕ್ಕುಗಳಲ್ಲಿನ ರಾಕ್ಷಸರನ್ನು ಜಯಿಸಬಯಸಿದ ಅವನಿಗೆ ಆ ತಿಥಿ ಹಾಗೂ ರಾತ್ರಿ ಎರಡೂ ಸಹ ತಕ್ಕುವೇ ಸರಿ.

ವಿ. : ೧. ಶ್ರೀಕೃಷ್ಣ ಅವತರಿಸಿದ ದಿವಸ ಶ್ರೀಕೃಷ್ಣಜಯಂತಿ ಎಂದು ಸುಪ್ರಸಿದ್ಧ. ಶ್ರೀಮದಾ-ಚಾರ್ಯರು ಜಯಂತೀನಿರ್ಣಯದಲ್ಲಿ ತಿಳಿಸಿರುವಂತೆ ಸಿಂಹಮಾಸದ ಮಧ್ಯರಾತ್ರಿ ಅಷ್ಟಮೀ-ತಿಥಿಯಂದು [2] ರೋಹಿಣೀನಕ್ಷತ್ರದಲ್ಲಿ ಶ್ರೀಕೃಷ್ಣ ಪ್ರಾದುರ್ಭವಿಸಿದ. ಸಾಮಾನ್ಯವಾಗಿ ಶ್ರಾವಣ ಕೃಷ್ಣಪಕ್ಷದ ಅಷ್ಟಮೀ ಶ್ರೀಕೃಷ್ಣಾಷ್ಟಮೀ ಎಂದು ಪ್ರಸಿದ್ಧ. ಸಿಂಹಮಾಸದ ನಿಯಮ ಅನುಸರಿಸಿದಾಗ ಒಮ್ಮೊಮ್ಮೆ ಭಾದ್ರಪದ ಶ್ರೀಕೃಷ್ಣಾಷ್ಟಮಿಯು 'ಶ್ರೀಕೃಷ್ಣಜಯಂತೀ' ಎನ್ನಿಸುವುದು.

---

೧. ರೋಹಿಣ್ಯಾಮರ್ಧರಾತ್ರೇ ತು ಯದಾ ಕಾಲಾಷ್ಟಮೀ ಭವೇತ್ ।
ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶನೀ ॥ –ಜಯಂತೀನಿರ್ಣಯ

೨. "ಕೃಷ್ಣಾಷ್ಟಮೀ ಶ್ರಾವಣೇ ತು ಪ್ರದೋಷಸಹಿತಾಷ್ಟಮೀ।
ಜನ್ಮಾಷ್ಟಮೀ ಭವೇತ್ ಸೈವ ಜಯಂತೀ ರೋಹಿಣೀಯುತಾ" ಇತಿ ಸ್ಮೃತೇಃ। –ವ್ಯಾ.
ಸಿಂಹಮಾಸೇ ತು ರೋಹಿಣ್ಯಾ ಯುತಾಂ ಕೃಷ್ಣಾಷ್ಟಮೀಂ ಪುಮಾನ್ ।
ಉಪೋಷ್ಯ ಮಧ್ಯರಾತ್ರೇ ಚ ಪೂಜಯೇನ್ನಂದನಂದನಮ್ ॥
ಯಶೋದಾಸಂಯುತಂ ತಲ್ಪೇ ಶಯಾನಂ ತು ಚತುರ್ಭುಜಮ್ ।
ಶಂಖಚಕ್ರಗದಾಪದ್ಮಧರಂ ಜ್ಞಾನಸ್ವರೂಪಿಣಮ್ ॥
ಕ್ಷೀರಪಾಯಸಮಧ್ವಾದ್ಯೈರ್ನವನೀತಯುತೈಸ್ತಥಾ ।
ಅಪೂಪಕದಲಾದ್ಯೈಶ್ಚ ಮಾತುಳಂಗಸಿತಾದಿಭಿಃ ॥
ಸುಮನೋಭಿಸ್ತುಲಸ್ಯಾದಿದಶಭಿರ್ಗಂಧಸಂಯುತೈಃ।
ಅರ್ಚಯಿತ್ವಾ ಪರೇದ್ಯುಶ್ಚ ಪ್ರಾತರೇವಾಥ ಪೂಜಯೇತ್ ॥ – ಶ್ರೀವಿಷ್ಣುತೀರ್ಥರ ಸಂನ್ಯಾಸಪದ್ಧತಿ

೨. ಚಂದ್ರೋದಯದ ಕಾಲಕ್ಕೆ ಶ್ರೀಕೃಷ್ಣ [೧]ಪ್ರಾದುರ್ಭವಿಸಿದ್ದನ್ನು ಚಂದ್ರನಿಗೆ ಹೋಲಿಸುವ ಮೂಲಕವೇ ಸೂಚಿಸಿರುವುದು ಇಲ್ಲಿಯ ಔಚಿತ್ಯ.

೩. ಚಂದ್ರನಂತೆ ಶ್ರೀಕೃಷ್ಣ ಪ್ರಾದುರ್ಭವಿಸಿದ ಎಂಬ ಮಾತಿನಲ್ಲಿ ಶ್ರೀಕೃಷ್ಣನಿಗೆ ಶುಕ್ಲಶೋಣಿತಾದಿ ಸಂಬಂಧ ಸರ್ವಥಾ ಇಲ್ಲ ಎಂಬ ತತ್ತ್ವವೂ ಸೂಚಿತ.

೪. [೨]ಶತ್ರುಗಳನ್ನು ಜಯಿಸಲು ಅವತರಿಸಿದ್ದರಿಂದ ಆ ತಿಥಿಯು ಜಯಂತೀ ಎನ್ನಿಸಿತು. [೩]ಅಷ್ಟದಿಕ್ಕುಗಳಲ್ಲಿನ ದೈತ್ಯರನ್ನು ಸಂಹರಿಸಲು ಅವತರಿಸಿದ್ದರಿಂದ ಅಷ್ಟಮೀ ತಿಥಿಯು ಸಾರ್ಥಕವೆನಿಸಿತು. ರಾತ್ರಿ ಕಾಲದಲ್ಲೇ ಚಟುವಟಿಕೆಯಿಂದ ಇರುವ ಅಸುರರನ್ನು ಸಂಹರಿಸಲು ಅವತರಿಸಿದ್ದರಿಂದ ರಾತ್ರಿಕಾಲವೂ ಉಚಿತವೆನಿಸಿತು. ಹೀಗೆ ಜಯಂತಿಯಂದು, ಅಷ್ಟಮೀ ಹಾಗೂ ರಾತ್ರಿ ಎಂಬ ಎರಡೂ ಸಹ [೪]ಶ್ರೀಕೃಷ್ಣಾವತಾರಕ್ಕೆ ಸಾರ್ಥಕವೆನ್ನಿಸಿದವು ಎಂದು ಭಾವ.

೫. ಶ್ರೀಕೃಷ್ಣನು ಅವತರಿಸಿದ್ದು ಯದುವಂಶದಲ್ಲಿ ; ಅದು ಚಂದ್ರವಂಶದ ಒಂದು ಕವಲು. ಚಂದ್ರನು ಬೆಳಗುವುದು ರಾತ್ರಿಕಾಲದಲ್ಲಿ, ಕೃಷ್ಣಪಕ್ಷದ ಅಷ್ಟಮಿಯಂದಂತೂ ಮಧ್ಯರಾತ್ರಿಯಲ್ಲಿಯೇ. ಅದಕ್ಕಾಗಿಯೇ ಶ್ರೀಕೃಷ್ಣ ಆ ಕಾಲದಲ್ಲಿ ಅವತರಿಸಿದ ಎಂಬ ಔಚಿತ್ಯ ಇಲ್ಲಿ ಸೂಚಿತ. ಇದರಂತೆ ಸೂರ್ಯವಂಶದಲ್ಲಿ ಶ್ರೀರಾಮನು ಸೂರ್ಯನು ಪ್ರಖರವಾಗಿ ಬೆಳಗುವ ಮಧ್ಯಾಹ್ನಕಾಲದಲ್ಲಿ ಅವತರಿಸಿದ ಎಂಬುದೂ ಸಹ ಗಮನಾರ್ಹವೆನ್ನಿಸುವುದು; [೫]ನಿಶೀಥ - ಮಧ್ಯರಾತ್ರಿ.

### ರೋಹಿಣೀನಕ್ಷತ್ರದಲ್ಲಿ ಅವತರಿಸಲು ಕಾರಣ

ಪ್ರಥಾಂ ಯಶೋದಾಸುತ ಇತ್ಯುದಾರಾಂ
ಕರಿಷ್ಯಮಾಣೋ ಜನನೀಮಿವಾನ್ಯಾಮ್ ।
ಸ ದೇವಕೀಗರ್ಭಭವೋऽನುಗೃಹ್ಣನ್
ತತಾನ ರೋಹಿಣ್ಯುದಯಪ್ರಸಿದ್ಧಿಮ್ [೬] ॥ ೩೨ ॥

---

೧. ಶುಕ್ರಶೋಣಿತಸಂಬಂಧೇನೋತ್ಪತ್ತ್ಯಭಾವೋऽನೇನ ದ್ಯೋತ್ಯತೇ । -ವ್ಯಾ.

೨. ಜಗೀಷೋರವತಾರಕಾಲತ್ವಾತ್ ತಿಥೇರ್ಜಯಂತೀತ್ವಂ । - ವ್ಯಾ.

೩. ಅಷ್ಟದಿಕ್ಷು ಸ್ಥಿತದೈತ್ಯವಧಾರ್ಥಮ್ ಉತ್ಪಸ್ಯಮಾನಸ್ಯಾವತಾರಕಾಲತ್ವಾತ್ ಸಂಖ್ಯಾಸಾಮ್ಯಾತ್ ಅಷ್ಟಮೀತ್ವಂ ಚೋಚಿತಮಿತಿ ಭಾವಃ । ನಿಶಾಚರಜಯಿನಾ ನಿಶ್ಯವತೀರ್ಣೇನ ಭವಿತವ್ಯಮ್ । ಅನ್ಯಥಾ ವೈಯ್ಯಧಿಕರಣ್ಯಾತ್ ತಸ್ಯೋತ್ಪತ್ತಿಕಾಲಸ್ಯ ನಿಶಾತ್ವಮಪ್ಯುಚಿತಮಿತಿ ಭಾವಃ । -ವ್ಯಾ.

೪. ಜಗೀಷೋರವತಾರಕಾಲತ್ವಾತ್ ತಿಥೇರ್ಜಯಂತೀತ್ವಮ್ । -ವ್ಯಾ.
ಅನೇನ ಜಯಂತೀನಾಮ್ನ್ಯಷ್ಟಮ್ಯಾಂ ರಾತ್ರೌ ಕೃಷ್ಣಾವತಾರೋ ಜಾತ ಇತಿ ಪೌರಾಣಿಕೀಂ ಕಥಾಂ ಸಂಚಾರಯತಾ ಜಯಂತೀತ್ಯಾದೀನಾಮನ್ವರ್ಥತ್ವಮುತ್ಪ್ರೇಕ್ಷ್ಯತ ಇತಿ ಉತ್ಪ್ರೇಕ್ಷಾಲಂಕಾರಃ । -ವ್ಯಾ.

೫. ಯಸ್ಯಾಂ ಜಾತೋ ಹರಿಃ ಸಾಕ್ಷಾನ್ನಿಶೀಥೇ ಭಗವಾನಜಃ ।
ತಸ್ಮಾತ್ ತದ್ದಿನಮತ್ಯಂತಂ ಪುಣ್ಯಂ ಪಾಪಹರಂ ಶುಭಮ್ ॥ - ಶ್ರೀಜಯಂತೀಕಲ್ಪ

೬. ಉತ್ಪ್ರೇಕ್ಷಾಲಂಕಾರಃ -ವ್ಯಾ.

ಯಶೋದಾಸುತ ಎಂಬ ಶ್ರೇಷ್ಠವಾದ ಪ್ರಸಿದ್ಧಿಯನ್ನು ಹೊಂದುವ ಅವನು, ದೇವಕಿಯ ಗರ್ಭದಲ್ಲಿ ಅವತರಿಸಿ, ಮತ್ತೊಬ್ಬ ತಾಯಿಯನ್ನು ಸಹ ಅನುಗ್ರಹಿಸಲೆಂದೆಂಬಂತೆ ರೋಹಿಣೀ ನಕ್ಷತ್ರದಲ್ಲಿ ಜನಿಸಿದ ಪ್ರಸಿದ್ಧಿಯನ್ನು ಹೊಂದಿದ.

ವಿ. : ೧. [1]ದೇವಕೀನಂದನನಾದ ಶ್ರೀಕೃಷ್ಣ ಯಶೋದಾನಂದನ ಎನ್ನಿಸಿದ್ದು ಸುಪ್ರಸಿದ್ಧ. ದೇವಕಿಯಂತೆ ವಸುದೇವನ ಮತ್ತೊಬ್ಬ ಪತ್ನಿ ರೋಹಿಣೀ. ಶ್ರೀಕೃಷ್ಣನು ರೋಹಿಣೀನಕ್ಷತ್ರದಲ್ಲಿ ಅವತರಿಸುವ ಮೂಲಕ [2]ರೋಹಿಣೀನಂದನ ಎಂಬ ಪ್ರಸಿದ್ಧಿಯನ್ನೂ ಸಹ ಹೊಂದಿ ಅವಳಿಗೂ ಸಹ ಕೃಷ್ಣನ ತಾಯಿ ಎಂಬ ಕೀರ್ತಿಯನ್ನು ಕರುಣಿಸಿದ ಎಂದರ್ಥ. ಶ್ರೀಕೃಷ್ಣನು ರೋಹಿಣೀ-ನಕ್ಷತ್ರದಲ್ಲಿ ಅವತರಿಸಿದ್ದನ್ನು ಹೀಗೆ ಉತ್ಪ್ರೇಕ್ಷಿಸಿರುವರು.

೨. ಶ್ರೀಕೃಷ್ಣನು ದೇವಕೀನಂದನ, ಯಶೋದಾನಂದನ ಎಂಬುದು ಸಹ ರೋಹಿಣೀನಂದನ ಎಂಬಂತೆ ಔಪಚಾರಿಕವೇ ಹೊರತು ವಾಸ್ತವವಲ್ಲ ಎಂಬ ತತ್ತ್ವವೂ ಸಹ ಇದರಿಂದ ಸೂಚಿತ.

### ಅಷ್ಟಮಿಯ ಚಂದ್ರನ ವಿಶೇಷತೆ

**ಯದಾ ಹರಿಃ ಪ್ರಾದುರಭೂತ್ ಕಲಾಭಿ-**
**ಸ್ತದಾ ಸಮಾಯವ್ಯಯವಾಂಶ್ಚ ಚಂದ್ರಃ ।**
**ಪ್ರಿಯಾಪ್ರಿಯಾಪ್ಯೇವ ನಿಜಾನ್ವಯೋತ್ಥ-**
**ಮುಕುಂದವಕ್ತ್ರೇಂದುಕಲಾವಲೋಕಾತ್ ॥ ೩೩ ॥**

ತನ್ನ ವಂಶದಲ್ಲಿ ಅವತರಿಸಿದ ಶ್ರೀಕೃಷ್ಣನ ಮುಖಚಂದ್ರನ ಕಾಂತಿಯನ್ನು ಕಂಡು, ಚಂದ್ರನು ಪ್ರಿಯ ಹಾಗೂ ಅಪ್ರಿಯಗಳನ್ನು ಒಟ್ಟಾಗಿ ಹೊಂದಿದವನಂತೆ ಕಲೆಗಳಿಂದ ವೃದ್ಧಿಹ್ರಾಸಗಳನ್ನು ಸಮನಾಗಿ ಹೊಂದಿದವನಾದ.

ವಿ. : ೧. ತನ್ನ ವಂಶದಲ್ಲಿ ಶ್ರೀಕೃಷ್ಣ ಅವತರಿಸಿ, ಸತ್ಕೀರ್ತಿಯು ಲಭಿಸಿದ್ದರಿಂದ ಅದು ಆಯವೆನ್ನಿಸಿತು. ಆದರೆ ತನ್ನ ಸೌಂದರ್ಯವನ್ನು ಅಪಾರವಾಗಿ ಮೀರಿಸಿದ ಅವನ ಮುಖ ಚಂದ್ರನ ದರ್ಶನದಿಂದಾಗಿ ಅವನಿಗೆ ವ್ಯಥೆಯೆನ್ನಿಸಿ ಅದು ವ್ಯಯ ಎನ್ನಿಸಿತು. ಹೀಗೆ [3]ಚಂದ್ರನಿಗೆ

---

೧. ಪ್ರಥಾಮಿತ್ಯನೇನ ಕೃಷ್ಣಸ್ಯ ಯಥಾ ಯಶೋದಾಸುತತ್ವಂ ಪ್ರಥಾಮಾತ್ರಂ ತಥಾ ದೇವಕೀಸುತತ್ವಮಪಿ ಪ್ರಥಾಮಾತ್ರಮಿತಿ ಧ್ವನ್ಯತೇ। –ವ್ಯಾ.

೨. ಅನ್ಯತ್ರ ಪ್ರಾದುರ್ಭೂತತ್ವೇಽಪಿ ಅಹಮನ್ಯಸ್ಯಾಃ ಸುತ ಇತಿ ಯಥ ಪ್ರಥಾಂ ಸಂಪಾದಯಿಷ್ಯಾಮಿ ತಥಾ ರೋಹಿಣೀ ನಕ್ಷತ್ರೇ ಪ್ರಾದುರ್ಭೂತಃ ನಾಮಸಾಮ್ಯಾತ್ ರೋಹಿಣ್ಯಾಮುತ್ಪನ್ನ ಇತಿ ಪ್ರಥಯಾ ಬಲಭದ್ರಮಾತರಮಪ್ಯನು-ಗೃಹ್ಣಾಮೀತ್ಯಭಿಪ್ರಾಯೇಣೇವ ರೋಹಿಣ್ಯುದಯಪ್ರಸಿದ್ಧಿಂ ತತಾನೇತಿ ಭಾವಃ। –ವ್ಯಾ.

೩. ಪರಮಾತ್ಮನಃ ಕೃಷ್ಣಸ್ಯ ಸ್ವಕುಲೋತ್ಪನ್ನತ್ವಾತ್ ಕೃಷ್ಣಃ ಸೋಮಕುಲೇ ಜಾತ ಇತಿ ಪ್ರಥಮಾ ಯಶೋಲಕ್ಷಣಸ್ಯ ಪ್ರಿಯಸ್ಯಾಪ್ತಿಃ ಸ್ವಾತಿಶಯಿತಕಾಂತಿಯುಕ್ತತದ್ವಕ್ತ್ರೇಂದುದರ್ಶನೇನ ಪರಾಜಯಲಕ್ಷಣಾಪ್ರಿಯಸ್ಯ ಚಾವಾಪ್ಯೇವ ಶರೀರಾರ್ಧಸ್ಯೋ-ಪಚಯಃ ಶರೀರಾರ್ಧಸ್ಯೋಪಚಯೋ ಜಾತ ಇತ್ಯರ್ಥಃ । ಹರ್ಷಶೋಕಯೋಃ ಶರೀರೋಪಚಯಾಪಚಯ-ಹೇತುತ್ವಾದಿತಿ ಭಾವಃ। –ವ್ಯಾ.

ಏಕಕಾಲದಲ್ಲಿ ಆಯ-ವ್ಯಯಗಳು ಲಭಿಸಿದ್ದರ ಸಂಕೇತವೋ ಎಂಬಂತೆ ಅಷ್ಟಮಿಯ ಚಂದ್ರ ಅರ್ಧಭಾಗ ಮಾತ್ರ ಕಂಗೊಳಿಸಿದ ಎಂಬುದು ಇಲ್ಲಿಯ ಉತ್ಪ್ರೇಕ್ಷೆಯ ಭಾವ.

೨. ಶ್ರೀಕೃಷ್ಣನ ಮುಖದ ಕಾಂತಿ, ಚಂದ್ರನ ಕಾಂತಿಗಿಂತ ಅನಂತಪಟ್ಟು ಮಿಗಿಲಾದುದು ಎಂಬುದು ಇಲ್ಲಿಯ ಮುಖ್ಯ ಪ್ರಮೇಯ (ದ್ವಾದಶಸ್ತೋತ್ರ -೧/೮):

ಸ್ಮರೇತ ಯಾಮಿನೀನಾಥಸಹಸ್ರಾಮಿತಕಾಂತಿಮತ್ ।
ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥

೩. ಆಯ - ವೃದ್ಧಿ; ವ್ಯಯ - ಹ್ರಾಸ; ವಕ್ತ್ರ - ಮುಖ.

## ಶ್ರೀಕೃಷ್ಣಾವತಾರದಿಂದ ಗಂಧರ್ವಾಪ್ಸರೆಯರಿಗಾದ ಸಂಭ್ರಮ

**ತದೈವ ಗಂಧರ್ವಗಣಾ ಜಗುಸ್ತಂ**
**ತಿಲೋತ್ತಮಾದ್ಯಾ ನನೃತುಸ್ತದೈವ ।**
**ಸ್ವಗೀತನಾಟ್ಯೇನ ವಿಜೇಷ್ಯಮಾಣಂ**
**ತಮಾತ್ಮಸಾತ್ ಕರ್ತುಮಿವಾಶು ಬಾಲ್ಯೇ ॥ ೩೪ ॥**

ತನ್ನ ಗೀತ-ನರ್ತನಗಳಿಂದ ತಮ್ಮನ್ನು ಮೀರಿಸುವ ಶ್ರೀಕೃಷ್ಣನನ್ನು ಬಾಲ್ಯದಲ್ಲೇ ತಮ್ಮವನನ್ನಾಗಿ ಮಾಡಿಕೊಳ್ಳಲೆಂಬಂತೆ, ಆಗಲೇ ಗಂಧರ್ವರ ಗುಂಪು ಅವನ ಮಹಿಮೆಯನ್ನು ಹಾಡಿತು ; ತಿಲೋತ್ತಮೆ ಮೊದಲಾದವರು ಆಗಲೇ ನರ್ತನ ಮಾಡಿದರು. .

ವಿ. : ೧. ಶ್ರೀಮದ್ಭಾಗವತದಲ್ಲಿ ಶ್ರೀಕೃಷ್ಣಾವತಾರಕಾಲದಲ್ಲಿ[೧] ಕಿನ್ನರ-ಗಂಧರ್ವರು ಬಗೆಬಗೆಯಾಗಿ ಹಾಡಿದರು; ಅಪ್ಸರೆಯರ ಗುಂಪು ನರ್ತಿಸಿತು ಎಂಬ ಮಾತು ಬಂದಿದೆ; ಅದನ್ನು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು.

೨. ಮುಂದೆ ಶ್ರೀಕೃಷ್ಣನು ಗಾಯನದಲ್ಲಿ ಗಂಧರ್ವರನ್ನು ಮೀರಿಸುವನು; ನರ್ತನದಲ್ಲಿ ಅಪ್ಸರೆಯರನ್ನು ಮೀರಿಸುವನು; ಇಂತಹ ಶ್ರೀಕೃಷ್ಣನನ್ನು ಬಾಲ್ಯದಲ್ಲಿಯೇ ತಮ್ಮವನನ್ನಾಗಿ ಮಾಡಿಕೊಂಡು ಬಿಟ್ಟರೆ[೨] ಮುಂದೆ ಅವನಿಗೆ ಬರುವ ಕೀರ್ತಿ[೩] ತಮ್ಮದೇ ಆಗುವುದು ಎಂಬ ಹುನ್ನಾರ ಅವರದಾಗಿದ್ದಿತು ಎಂಬ ಉತ್ಪ್ರೇಕ್ಷೆ ಅತ್ಯಂತ ರೋಚಕ.

---

೧. ಅನೇನ "ಜಗುಃ ಕಿನ್ನರಗಂಧರ್ವಾ ನನೃತುಶ್ಚಾಪ್ಸರೋಗಣಾ"(ಭಾಗ. ೧೦/೩/೨) ಇತಿ ಪೌರಾಣಿಕೀ ಕಥಾ ಸಂಚಾರಿತಾ । -ವ್ಯಾ.

ಜಗುಃ ಕಿನ್ನರಗಂಧರ್ವಾಸ್ತುಷ್ಟುವುಃ ಸಿದ್ಧಚಾರಣಾಃ ।
ವಿದ್ಯಾಧರಾಶ್ಚ ನನೃತುರಪ್ಸರೋಭಿಃ ಸಮಂ ಮುದಾ ॥
ಮುಮುಚುರ್ಮುನಯೋ ದೇವಾಃ ಸುಮನಾಂಸಿ ಮುದಾನ್ವಿತಾಃ । -ಭಾಗ.(೧೦/೪/೬,೭)

೨. ಇದಾನೀಮಸ್ಮತ್ಕೃತಗೀತನಾಟ್ಯೇನಾತ್ಮಸಾತ್ಕೃತಸ್ಯ ಕೃಷ್ಣಸ್ಯಾತ್ಮೀಯತ್ವೇನ ತದ್ವಿಜಯೋಽಸ್ಮದ್ವಿಜಯ ಏವೇತ್ಯಭಿಪ್ರಾಯೇಣೇವೇತಿ ಭಾವಃ । -ವ್ಯಾ.

೩. ತದೈವ ತತ್ಕಾಲ ಏವ ಸ್ವಗೀತನಾಟ್ಯೇನ ಸ್ವೇನ ಕರಿಷ್ಯಮಾಣಂ ಗೀತಂ ವೇಣುಗೀತಂ ಚ ನಾಟ್ಯಂ ರಾಸಕ್ರೀಡಾಯಾಂ ಕರಿಷ್ಯಮಾಣಂ ನೃತ್ಯಂ ಚ । -ವ್ಯಾ.

೩. ಅತ್ಯಂತನಿಪುಣನಾದ ವ್ಯಕ್ತಿಯನ್ನು ತಮ್ಮ ಗುಂಪಿಗೆ ಸೇರಿಸಿಕೊಳ್ಳುವ ಜಾಣತನ ವಿವೇಕಿಗಳಲ್ಲಿ ಕಂಡುಬರುವುದು ಈ ಹಿನ್ನೆಲೆಯಲ್ಲೇ ಎಂದು ತಿಳಿಯಬೇಕು.

**ದಿಕ್ಕುಗಳಿಗೆ ಹಾಗೂ ಭೂಮಿಗೆ ಆದ ನಲಿವು**

**ದಿಶೋ ಯಶೋಭಿಃ ಪರಿಪೂರಯಿಷ್ಯ-**
**ತ್ಯುದಗ್ರಚೇಷ್ಟಃ ಸ ಇತಿ ಪ್ರಹೃಷ್ಟಾಃ ।**
**ರಸಾ ಪ್ರಸನ್ನಾ ಕಿಲ ರಂಜಿತಾಂ ಮಾಂ**
**ಕರಿಷ್ಯತಿ ಸ್ವಾಂಘ್ರಿತಲಶ್ರಿಯೇತಿ [೧] ॥ ೩೫ ॥**

ಉತ್ಕೃಷ್ಟಮಹಿಮನಾದ ಶ್ರೀಕೃಷ್ಣನು ತನ್ನ ಕೀರ್ತಿಗಳಿಂದ ನಮ್ಮನ್ನು ತುಂಬಿಸಿಬಿಡುವನು ಎಂದು ದಿಕ್ಕುಗಳು ನಲಿದವು; ಅವನು ತನ್ನ ಪಾದತಲಗಳ ಕಾಂತಿಯಿಂದ ನನ್ನನ್ನು ಅಲಂಕರಿಸುವನು ಎಂಬುದಾಗಿ ಭೂಮಿಯು ನಲಿಯಿತು.

ವಿ. : ೧. ಇದು "ದಿಶಃ ಪ್ರಸೇದುಃ" , "ಮಹೀ ಮಂಗಲಭೂಯಿಷ್ಠಾ" ಎಂಬ ಭಾಗವತ (೧೦/೩/೨) ವಚನಗಳ ಆಧರಿಸಿದ ಉತ್ಪ್ರೇಕ್ಷೆ ಎಂಬುದು ಕಿಲ ಎಂಬ ಶಬ್ದದಿಂದ ಸೂಚಿತ.

೨. ಶ್ರೀಕೃಷ್ಣನ ಕೀರ್ತಿ ಅಷ್ಟದಿಕ್ಕುಗಳನ್ನೂ ತಲುಪಿದವು ; ಅವನ ಹೆಜ್ಜೆಗಳಿಂದ ಭೂಮಿಯು ಮಂಗಳಮಯವೆನ್ನಿಸಿತು ಎಂಬುದು ಇಲ್ಲಿಯ ಭಾವ ; ಉದಗ್ರ – ಉತ್ಕೃಷ್ಟ

**ದೇವತೆಗಳು ಮಾಡಿದ ಅಪೂರ್ವ ಶ್ರೀಹರಿಸ್ತೋತ್ರ**

**ತದೈವ ದೇವಾ ವವೃಷುಃ ಪ್ರಸೂನೈ-**
**ರ್ಹೃದಿ ಸ್ಮರಂತೋ ವಚಸಾ ಸ್ತುವಂತಃ ।**
**ನಗೇಂದ್ರಮೈಂದ್ರಂ ಭುವಿ ನೇಷ್ಯತೋಽಸ್ಯ**
**ಮನಃ ಸಮುದ್ಬೋಧಯಿತುಂ ಪುರೈವ ॥ ೩೬ ॥**

ಮುಂದೆ ದೇವಲೋಕದ ವೃಕ್ಷಶ್ರೇಷ್ಠವಾದ ಪಾರಿಜಾತವನ್ನು ಭೂಮಿಗೆ ಒಯ್ಯಲಿರುವ ಶ್ರೀಕೃಷ್ಣನ ಮನಸ್ಸನ್ನು ಸಂತೋಷಪಡಿಸಲೋ ಎಂಬಂತೆ ದೇವತೆಗಳು ಅವನನ್ನು ಹೃದಯದಲ್ಲಿ ಸ್ಮರಿಸುತ್ತಾ, ಮಾತಿನಿಂದ ಸ್ತುತಿಸುತ್ತಾ ಪುಷ್ಪಗಳ ಮಳೆಗರೆದರು.

ವಿ. : ೧. ಮುಂದೆ ಶ್ರೀಕೃಷ್ಣನು ಇಂದ್ರನನ್ನು ಪರಾಭವಗೊಳಿಸಿ, [೨] ದೇವಲೋಕದ ಪಾರಿಜಾತವನ್ನು ಭೂಲೋಕಕ್ಕೆ ತೆಗೆದುಕೊಂಡು ಹೋಗುವ ಪ್ರಸಂಗದ ಮುನ್ಸೂಚನೆ ಇದರಲ್ಲಿದೆ.

---

೧. ವಸ್ತುತತ್ತ್ವಮ್ ಉತ್ಪ್ರೇಕ್ಷಾಲಂಕಾರಃ –ವ್ಯಾ.
೨. ನಗೇಂದ್ರಂ ಮಹೀರುಹಶ್ರೇಷ್ಠಂ ಪಾರಿಜಾತಮಿತ್ಯರ್ಥಃ। –ವ್ಯಾ.

೨. ದೇವತೆಗಳು ಈಗಲೇ ಪಾರಿಜಾತಪುಷ್ಪಗಳನ್ನು ಶ್ರೀಕೃಷ್ಣನ ಮೇಲೆ ಸುರಿಸುವ ಮೂಲಕ ಅವನಿಗೆ ಅವುಗಳ ಮೇಲೆ ಆಸಕ್ತಿ ಹುಟ್ಟಿಸುವ[೧] ಪ್ರಯತ್ನಮಾಡಿದರು ಎಂಬ ಅರ್ಥವನ್ನು ನೀಡುವ ಇದು "ವವೃಷುಃ ಕುಸುಮಾಸಾರೈಃ" ಎಂಬ ಭಾಗವತವಚನವನ್ನು ಆಧರಿಸಿದ ಉತ್ಪ್ರೇಕ್ಷೆ.

## ಶ್ರೀಕೃಷ್ಣನು ವಸುದೇವನಿಂದ ಜನಿಸಿದವನಲ್ಲ

**ಪುತ್ರತ್ವಾದಿಹ ವಾಸುದೇವಪದವೀ ಯದ್ಯಸ್ಯ ಶೌರೇಸ್ತದಾ**
**ನಃ ಪುತ್ರತ್ವಕೃತಾಽಸ್ತು ಸೇತಿ ವಸವೋ ದೇವಾಶ್ಚ ಹೃಷ್ಟಾ ಧ್ರುವಮ್ ।**
**ಯದ್ಯಸ್ಯಾನಕದುಂದುಭೀಷ್ಟಶಿಶುತಾ ಸೋಽಸ್ಮಾಕಮೇವಂ ಶಿಶು-**
**ಸ್ತರ್ಹೀತ್ಯಾನಕದುಂದುಭಿಧ್ವನಿರಭೂದ್ವ್ಯೋಮ್ನಿ ಸ್ವಯಂಭೂದಯೇ[೨] ॥೩೭॥**

ಸ್ವಯಂಭೂ ಆದ ಶ್ರೀಕೃಷ್ಣನು ಅವತರಿಸುತ್ತಿದ್ದಂತೆ, ವಸುದೇವನಿಗೆ ಮಗನಾಗಿ ಜನಿಸಿದ್ದರಿಂದ ಇವನಿಗೆ ವಾಸುದೇವ ಎಂಬ ಹೆಸರು ಎಂದಾದಲ್ಲಿ ಅದು ಇವನು ನಮಗೂ ಪುತ್ರ ಎಂದಾಗಲಿ ಎಂಬುದಾಗಿ ಹರ್ಷದಿಂದ ವಸುಗಳು, ದೇವತೆಗಳು ನಲಿದರು. ಇವನು ಆನಕದುಂದುಭಿ ಎನ್ನಿಸಿದ ವಸುದೇವನ ಬಯಕೆಯ ಶಿಶು ಎನ್ನಿಸುವುದಾದಲ್ಲಿ ಅದರಂತೆ ನಮಗೂ ಸಹ ಆಗಲಿ ಎಂದು ಸೂಚಿಸಲೋ ಎಂಬಂತೆ ಗಗನದಲ್ಲಿ ಆನಕಗಳ ದುಂದುಭಿಗಳ ಧ್ವನಿಯು ಮೊಳಗಿತು.

ವಿ. : ೧. ಕೃಷ್ಣನಿಗೆ ವಾಸುದೇವ ಎಂಬ ಹೆಸರು ವಸುದೇವನ ಮಗನಾದ ಕಾರಣದಿಂದ ಬಂದಿತು ಎಂಬುದು ಸರಿಯಲ್ಲ[೩] ಎಂಬ ಪ್ರಮೇಯ ಇಲ್ಲಿದೆ. ಆ ಕಾರಣದಿಂದಲೇ ಅವನಿಗೆ ವಾಸುದೇವ ಎಂಬ ಹೆಸರು ಎಂದಾದಲ್ಲಿ ಅವನು ನಮಗೂ ಪುತ್ರನೇ ಆಗಬೇಕಾದೀತು; ಆದರೆ ಅದು ಸಾಧ್ಯವಿಲ್ಲ. ಆದ್ದರಿಂದ ಅವನು ವಾಸುದೇವ ಎನ್ನಿಸಿರುವುದು [೪]ಸರ್ವತ್ರವ್ಯಾಪ್ತನಾದ ದೇವನಾದ್ದರಿಂದಲೇ ಎಂಬುದು ಮುಖ್ಯಾರ್ಥ; ಇಲ್ಲಿಯ ನಿರೂಪಣೆ ತರ್ಕಮುದ್ರೆಯದು ಎಂದು ತಿಳಿಯಬೇಕು.

೨. ಅದರಂತೆ [೫]ಆನಕದುಂದುಭಿ ಎಂಬ ಹೆಸರಿನ ವಸುದೇವನ ಮಗ ಶ್ರೀಕೃಷ್ಣ ಎಂಬುದು ಸಹ ಸರಿಯಲ್ಲ; ಹಾಗಿದ್ದಲ್ಲಿ ಕೃಷ್ಣನು ತಮಗೂ ಮಗನಾಗಬೇಕಾಗುತ್ತಿತ್ತು ಎಂದು ಸೂಚಿಸಲೋ ಎಂಬಂತೆ ದೇವದುಂದುಭಿಗಳು [೬]ಮೊಳಗಿದವು ಎಂದರ್ಥ.

---

೧. ಕೃಷ್ಣಸ್ಯ ಮನಃ ಪುರೈವ ಪೂರ್ವಮೇವ ಸಮುದ್ಬೋಧಯಿತುಂ ಸಮ್ಯಗುದ್ಬುದ್ಧಂ ಕರ್ತುಮಿವ ಪುಷ್ಪಾಣಿ ಪ್ರದರ್ಶ್ಯ ತೇಷು ಲೋಭಮುತ್ಪಾದಯಿತುಮಿವೇತ್ಯರ್ಥಃ। -ವ್ಯಾ.
೨. ಉತ್ಪ್ರೇಕ್ಷಾಲಂಕಾರಃ -ವ್ಯಾ.
೩. ವಸುದೇವಸುತತ್ವಾಭಾವೇ ಹೇತುಸೂಚನಾರ್ಥಮಿದಮ್ । -ವ್ಯಾ.
೪. "ವಸುದೇವಸುತೋ ನಾಯಂ ನಾಯಂ ಗರ್ಭೇಽವಸತ್ ಪ್ರಭುಃ"ಇತಿ ವಚನಾತ್ । ವಸುದೇವಾದುತ್ಪನ್ನಃ ಕೃಷ್ಣೋ ನೇತಿ ತಾತ್ಪರ್ಯಾರ್ಥಃ।(ಮ.ಭಾ.ತಾ.ನಿ.; ಮಹಾಭಾರತ -೨/೭೮) -ವ್ಯಾ.
೫. ಅಸ್ಮಾಕಮಪಿ ಆನಕಾಶ್ಚ ದುಂದುಭಯಶ್ಚ ಆನಕದುಂದುಭಯಃ ಇತಿ ವ್ಯುತ್ಪತ್ತ್ಯಾ ಆನಕದುಂದುಭಿತ್ವಾದಿತಿ ಭಾವಃ। -ವ್ಯಾ.
೬. ಕೃಷ್ಣಾವತಾರೇ ಸತಿ ಸಂತೋಷಾತಿಶಯೇನ ದಿವಿ ದೇವಾ ವಾದ್ಯಾನ್ಯವಾದಯಂತೇತಿ ಪೌರಾಣಿಕೀ ಕಥೇತಿ । ಜಾಯಮಾನೇಽಜನೇ ತಸ್ಮಿನ್ ನೇದುರ್ದುಂದುಭಯೋ ದಿವಿ। (ಭಾಗ.೧೦/೩./೯) -ವ್ಯಾ.

೩. ಶ್ರೀಕೃಷ್ಣನಿಗೆ ವಾಸುದೇವ ಎಂಬ ಹೆಸರು ನಿತ್ಯಶಬ್ದರಾಶಿಯಾದ ವೇದಗಳಲ್ಲಿ, ಅನಂತರದ ಇತಿಹಾಸಪುರಾಣಗಳಲ್ಲಿ ಬಂದಿದ್ದು ಅವೆಲ್ಲಾ ವಸುದೇವನಿಗಿಂತ ಮುಂಚಿನ ಉಲ್ಲೇಖ-ಗಳಾದ್ದರಿಂದ ಶ್ರೀಕೃಷ್ಣನಿಗೆ ವಾಸುದೇವ[೧] ಎಂಬ ಹೆಸರು ಅವನ ಸರ್ವತ್ರವ್ಯಾಪ್ತತ್ವಾದಿ ಗುಣನಿಮಿತ್ತಿಕವಾದುದೇ ಹೊರತು ವಸುದೇವನ ಮಗನಾದ ಕಾರಣದಿಂದ ಅಲ್ಲ ಎಂಬುದು ಒಟ್ಟು ತಾತ್ಪರ್ಯ. ವಸುದೇವನ ಮಗ ಎಂಬುದು ಲೋಕದೃಷ್ಟಿಯ ವ್ಯವಹಾರವೇ ಹೊರತು ಶಾಸ್ತ್ರದೃಷ್ಟಿಯದಲ್ಲ ಎಂದು ತಿಳಿಯಬೇಕು.

೪. ಇಲ್ಲಿ ಸ್ವಯಂಭೂ ಎಂಬ ಪದವು ಶ್ರೀಕೃಷ್ಣನು ಸ್ವೇಚ್ಛೆಯಿಂದ ಅವತರಿಸುವವನು ಎಂಬ ವಿಶೇಷಾರ್ಥವನ್ನು ಧ್ವನಿಸುವುದು : **ಸಂಭವಾಮ್ಯಾತ್ಮಮಾಯಯಾ** – ಗೀತಾ(೪/೬).

೫. ಸ್ವಯಂಭೂ ಎಂಬುದು ಶ್ರೀವಿಷ್ಣುಸಹಸ್ರನಾಮದ ಪದ : **ಸ್ವಯಂಭೂಃ ಶಂಭುರಾದಿತ್ಯಃ** ; **ವ್ಯೋಮ** – ಗಗನ.

### ಸಮುದ್ರದ ಬಳಿ ಗರ್ಜಿಸಿದ ಮೇಘ

**ಶರೀರಕಾಂತ್ಯಾ ಜಲದಃ ಸ್ವಜೈತ್ರಂ**
**ನಿರೀಕ್ಷ್ಯ ಕೃಷ್ಣಂ[೨] ಜಲರಾಶಿತೀರೇ ।**
**[೩]ಜಗರ್ಜ ಶಕ್ತ್ಯಾ ರಹಿತಸ್ಯ ಪುಂಸೋ**
**ಜಲಾಂತಿಕೇಷ್ವೇವ ಹಿ ಗರ್ಜಿತಾನಿ ॥ ೩೮ ॥**

ಶ್ರೀಕೃಷ್ಣನು ಶರೀರಕಾಂತಿಯಿಂದ ತನ್ನನ್ನು ಮೀರಿಸಿರುವುದನ್ನು ಕಂಡು ಮೇಘವು ಜಲರಾಶಿ-ಯಾದ ಸಮುದ್ರದ ತೀರದಲ್ಲಿ ಗರ್ಜಿಸಿತು; ಶಕ್ತಿ ಸಾಲದ ಮನುಷ್ಯನು ಕೂಗಾಡುವುದು ಬುದ್ಧಿಹೀನರ ಬಳಿಯೇ ಅಲ್ಲವೇ !

ವಿ. : ೧. ಇದು ಶ್ರೀಮದ್ಭಾಗವತ(೧೦/೪/೭)ದಲ್ಲಿನ **ಮಂದಂ ಮಂದಂ ಜಲಧರಾ ಜಗರ್ಜು-ರನುಸಾಗರಮ್** ಎಂಬ ಮಾತನ್ನು ಆಧರಿಸಿದ ಉತ್ಪ್ರೇಕ್ಷಾ ಮೂಲವಾದ ಅರ್ಥಾಂತರನ್ಯಾಸ.

೨. ಶ್ರೀಕೃಷ್ಣಾವತಾರಕಾಲದಲ್ಲಿ ಮೇಘಗಳು ಸಮುದ್ರದ ಬಳಿ ಗರ್ಜಿಸತೊಡಗಿದವು ಎಂಬ ಮಾತಿಗೆ [೪]ಮೇಘಗಳು ಶ್ರೀಕೃಷ್ಣನ ಕಾಂತಿ ತಮ್ಮ ಕಾಂತಿಗಿಂತ ಮಿಗಿಲಾದುದು ಎಂಬ ಕಾರಣದಿಂದ

---

೧. ಯದ್ಯಯಂ ವಸುದೇವಾದ್ಯುತ್ಪತ್ತ್ಯಭಾವೇಽಪಿ ವಸುದೇವಸ್ಯಾಯಂ ವಾಸುದೇವ ಇತಿ ವ್ಯುತ್ಪತ್ತಿಸಂಭವಮಾತ್ರೇಣ ವಸುದೇವಪುತ್ರಸ್ತರ್ಹಿ ವಸವಶ್ಚ ದೇವಾಶ್ಚ ವಸುದೇವಾಃ ವಸುದೇವಾನಾಮಯಂ ವಾಸುದೇವ ಇತಿ ವ್ಯುತ್ಪತ್ತಿಸಂಭವಾತ್ ಅಸ್ಮತ್ಪುತ್ರಃ ಕಿಂ ನ ಸ್ಯಾದಿತಿ ಭಾವಃ । –ವ್ಯಾ.

೨. ತಂ ತ್ವಾಂ ವಯಂ ಜಡಧಿಯೋ ನ ವಿದಾಮ ಭೂಮನ್ –ಸಮುದ್ರರಾಜನ ಮಾತು ।
– ಮ.ಭಾ.ತಾ.ನಿ.(೮/೧೧); ಭಾಗ.(೯/೧೦/೧೪)

೩. ಮಂದಂ ಮಂದಂ ಜಲಧರಾ ಜಗರ್ಜುರನುಸಾಗರಮ್ ।
ನಿಶೀಥೇ ತಮ ಉದ್ಭೂತೇ ಜಾಯಮಾನೇ ಜನಾರ್ದನೇ ॥ –ಭಾಗ.(೧೦/೪/೭)

೪. ಮೇಘಗರ್ಜಿತಸ್ಯ ಪರಾಜಯಹೇತುಕತ್ವೋತ್ಪ್ರೇಕ್ಷಯಾ ಉತ್ಪ್ರೇಕ್ಷಾಮೂಲಕೋಽರ್ಥಾಂತರನ್ಯಾಸಃ । –ವ್ಯಾ.

ನೊಂದು ಅದಕ್ಕೆ ಪ್ರತ್ಯುತ್ತರ ಕೊಡಲು [೧]ಶಕ್ತಿ ಸಾಲದೇ ಸಮುದ್ರದತ್ತ ಸಾಗಿ ಕೂಗಿಕೊಂಡವು ಎಂದರ್ಥ. ಎಂದರೆ ತಮ್ಮನ್ನು ದೊಡ್ಡವರು ಪರಾಭವಗೊಳಿಸಿದಾಗ ಉತ್ತರಿಸಲು ಶಕ್ತಿ ಸಾಲದ ಸಾಮಾನ್ಯರು [೨]ಮೂರ್ಖರ ಬಳಿ ಬಾಯಿಗೆ ಬಂದಂತೆ ಗಳಹುವರು ಎಂಬುದಕ್ಕೆ ಇದು ಸೂಚಕ.

೩. ಜಲ ಎಂಬುದು 'ಲಡಯೋರಭೇದಃ' ಎಂಬ ಮಾತಿನಿಂದ ಜಡ ಎಂದಾಗುವುದು ಇದರಿಂದ ಜಲಾಂತಿಕ ಎಂಬುದು ಜಡಾಂತಿಕ ಎನ್ನಿಸಿ, ಮೂರ್ಖರ ಗುಂಪಿನ ಬಳಿ ಎಂಬ ಅರ್ಥ ಬರುವುದು. ಹೀಗೆ [೩]ಜಲಪದವು ಶ್ಲೇಷಾರ್ಥವನ್ನು ಹೊಂದಿರುವುದರಿಂದ ಇಲ್ಲಿ ಶ್ಲೇಷಾಲಂಕಾರ.

### ಪ್ರಸನ್ನವಾದ ಸರೋವರಗಳು

ಸರಃ ಪ್ರಸನ್ನಂ ನಿಶಿ ಸಾರಸೌಘೈಃ
ಸ ಕಾಮಿನೀಭಿಃ ಸಹ ಸಂಪ್ರವಿಶ್ಯ ।
ಕರಿಷ್ಯತೀಶೋ ಮುಖಪದ್ಮಪುಂಜೈ-
ರಲಂಕೃತಂ ಮಾಮಿತಿ ಶಂಸತೀವ ॥ ೩೯ ॥

ಸ್ವಾಮಿಯಾದ ಕೃಷ್ಣನು ರಾತ್ರಿಕಾಲದಲ್ಲಿ ಆ ಕಮಲಮುಖಿಯರಾದ ಗೋಪಿಕಾಸ್ತ್ರೀಯ-ರೊಂದಿಗೆ ನನ್ನೊಳಗೆ ಪ್ರವೇಶಿಸಿ ನನಗೆ ಶೋಭೆ ನೀಡುವನು ಎಂಬುದನ್ನು ಸೂಚಿಸಲೆಂಬಂತೆ, ಆ ಕಾಲದಲ್ಲಿ ಕಮಲನಿವಹಗಳಿಂದ ಕೂಡಿದ ಸರೋವರವು ತಿಳಿಯಾಗಿ ಶೋಭಿಸಿತು.

ವಿ : ೧. ಇದು **ಹ್ರದಾ ಜಲರುಹಶ್ರಿಯಃ** ಎಂಬ ಭಾಗವತ(೧೦/೨/೩೩)ವಚನವನ್ನಾಧರಿಸಿದ ಉತ್ಪ್ರೇಕ್ಷೆ.

೨. ಶ್ರೀಕೃಷ್ಣನು ಅವತರಿಸಿದ್ದು ರಾತ್ರಿಕಾಲದಲ್ಲಿ ಎಂಬ ಮಾತು ಈಗಾಗಲೇ ಬಂದಿದೆ. ಸರೋವರದಲ್ಲಿ ಕಮಲಗಳು ಅರಳುವುದು ಅಸ್ವಾಭಾವಿಕ; ಆದರೆ ಕೃಷ್ಣಾವತಾರಕಾಲಕ್ಕೆ ಕಮಲಗಳು ಅರಳಿದ್ದವು ಎಂಬುದು ಮುಂದೆ ಶ್ರೀಕೃಷ್ಣನು ಸರೋವರಗಳಲ್ಲಿ ಪದ್ಮಗಳಂತಹ ಮುಖದ ಗೋಪಿಕಾಸ್ತ್ರೀಯರುಗಳೊಂದಿಗೆ ಆ ಸರೋವರಗಳಲ್ಲಿ ವಿಹರಿಸುವುದಕ್ಕೆ ಸೂಚನೆ ಎಂಬುದು ಇಲ್ಲಿಯ ಭಾವ; ಸಾರಸ – ಕಮಲ; ಓಘ – ಸಮೂಹ.

### ಥಳಥಳಿಸಿದ ಗಗನಾಂಗಣ

ನಭಃ ಪ್ರಸನ್ನೋಡುಗಣಂ ತದಾಸೀ-
ದ್ವಿಭುತ್ವಧರ್ಮೇಣ ಪುರಾಽದ್ವಿತೀಯಮ್ ।

---

೧. ತಥಾಹಿ । ಶಕ್ತ್ಯಾ ಬಲೇನ ರಹಿತಸ್ಯ ಸ್ವಜೇತುಃ ಪ್ರತಿಜಯೇ ಸಾಮರ್ಥ್ಯಹೀನಸ್ಯೇತ್ಯರ್ಥಃ । ಪುಂಸಃ ಪುರುಷಸ್ಯ । ಗರ್ಜಿತಾನಿ ಜಲ್ಪಿತಾನಿ । ಜಲಾಂತಿಕೇಷ್ವೇವ ಜಡಾನಾಮಂತಿಕೇಷ್ವೇವ ಮೂರ್ಖಸಮೀಪೇಷ್ವೇವೇತಿ ಯಾವತ್ । ಭವಂತೀತಿ । ಹಿ ಪ್ರಸಿದ್ಧಮಿತ್ಯರ್ಥಃ । –ವ್ಯಾ.

೨. ಯಥಾ ಲೋಕೇ ಕೇನಚಿತ್ ಪರಾಜಿತಃ ಪುನಸ್ತತ್ಪರಾಜಯೇ ಅಸಮರ್ಥಃ ಸನ್ ಸ್ವಜೇತ್ರಪಕರ್ಷವಚನಾನಿ ಮೂರ್ಖಸಮೀಪೇ ಕಥಯತಿ ತದ್ವದಿತಿ ಭಾವಃ । –ವ್ಯಾ.

೩. ಜಲಪದಸ್ಯ ಶ್ಲಿಷ್ಟತ್ವಾತ್ ಶ್ಲಿಷ್ಟಗರ್ಭಿತೋಽಯಮ್ । –ವ್ಯಾ.

ವಿಲೋಕ್ಯ ಬಾಲಂ ಭುವಿ ತಾರಹಾರ-
ವಿಭೂಷಿತಸ್ವಾಂಗಮಿವ ಪ್ರಹರ್ಷಾತ್ ॥ ೪೦ ॥

ಆ ಮುನ್ನ ತನ್ನ ವ್ಯಾಪಕತ್ವ ಗುಣದಿಂದ ಅದ್ವಿತೀಯನೆನ್ನಿಸಿದ್ದ ಶ್ರೀಕೃಷ್ಣನು ಭೂಮಿಯಲ್ಲಿ ಬಾಲಕನಾಗಿರುವುದನ್ನು ಕಂಡು, ಗಗನವು, ಅತಿನಲಿವಿನಿಂದೆಂಬಂತೆ, ತನ್ನ ಅಂಗಗಳಲ್ಲಿ ಹೊಳೆಯುವ ನಕ್ಷತ್ರಗಳೆಂಬ ಮುತ್ತಿನ ಮಾಲೆಗಳ ಅಲಂಕಾರವನ್ನು ಧರಿಸಿತು.

ವಿ. : ೧. ಶ್ರೀಕೃಷ್ಣನು ಸರ್ವತ್ರವ್ಯಾಪ್ತನಾದ ಶ್ರೀಹರಿ. ಆದರಿಂದಾಗಿ ಗಗನಕ್ಕೆ ಅವನ ವ್ಯಾಪ್ತಿಯ ಬಗ್ಗೆ ಅಸೂಯೆ ಹುಟ್ಟಿತ್ತು. ಈಗ ಅವನು ಬಾಲಕನಾಗಿ ಅವತರಿಸಿರುವುದರಿಂದ ಆ ವ್ಯಾಪ್ತತ್ವ ಮರೆಯಾದಂತಾಯಿತು ಎಂಬ ಖುಷಿಯಿಂದ ಗಗನಕ್ಕೆ ಸಮಾಧಾನವೆನ್ನಿಸಿ, ಪ್ರಸನ್ನವಾಯಿತು ಎಂಬುದು[1] ಇಲ್ಲಿಯ ಭಾವ. ಇದು **ಗಗನಂ ನಿರ್ಮಲೋಡುಗಣೋದಯಮ್** ಎಂಬ ಭಾಗವತ(೧೦/೩/೨)ವಚನವನ್ನಾಧರಿಸಿದ ಉತ್ಪ್ರೇಕ್ಷೆ.

೨. ಆ ನಲಿವಿನಲ್ಲಿ ತನ್ನಲ್ಲಿನ ನಕ್ಷತ್ರಗಳನ್ನು ಆಕಾಶವು ತನ್ನ ದೇಹವನ್ನಲಂಕರಿಸಿರುವ ಮುತ್ತಿನ ಹಾರಗಳು ಎಂಬುದಾಗಿ ತಿಳಿದು ಸಂಭ್ರಮಿಸಿತು ಎಂದರ್ಥ.

೩. ಶ್ರೀಕೃಷ್ಣಾವತಾರಕಾಲದಲ್ಲಿ ಗಗನವು ನಿರಭ್ರವಾಗಿ ನಕ್ಷತ್ರದಿಂದ ತುಂಬಿ ಕಂಗೊಳಿಸಿತು ಎಂಬುದು ವಸ್ತುಸ್ಥಿತಿ; ಆದು ಮಳೆಗಾಲವಾದ್ದರಿಂದ ಮೋಡ, ಮಳೆಗಳ ವಾತಾವರಣವಿದ್ದರೂ ಶ್ರೀಕೃಷ್ಣನ ಪ್ರಭಾವದಿಂದಾಗಿ ಹಾಗೆ ಗಗನವು ನಿರ್ಮಲವಾಗಿ ಕಂಗೊಳಿಸಿತು ಎಂದು ತಿಳಿಯಬೇಕು

೪. ಧನಾದಿ ಐಶ್ವರ್ಯದಿಂದ ಕೂಡಿದ ತನಗಿಂತ ಮಿಗಿಲಾದವನನ್ನು ಕಂಡು ಕರುಬುವ ವ್ಯಕ್ತಿಯು ಕಾರಣಾಂತರದಿಂದ ಅಂತಹವನಿಗೆ ಐಶ್ವರ್ಯನಾಶವಾಗಿ ನ್ಯೂನತೆ ಉಂಟಾದಾಗ ವಸ್ತ್ರಾದಿಗಳಿಂದ ಅಲಂಕರಿಸಿಕೊಂಡು ಸಂಭ್ರಮಿಸುವಂತೆ ಆ[2] ಪ್ರಸಂಗವಿದ್ದಿತು ಎಂದು ತಿಳಿಯಬೇಕು.

---

೧. ಪುರಾ ಅವತಾರಾತ್ ಪೂರ್ವಂ ವಿಭುತ್ವಧರ್ಮೇಣ ವಿಭುತ್ವಾಖ್ಯೋ ಧರ್ಮಃ ವಿಭುತ್ವಧರ್ಮಃ ತೇನ ವ್ಯಾಪಕತ್ವೇನೇತ್ಯರ್ಥಃ। -ವ್ಯಾ.

೨. ಯಥಾ ಧನಾದಿನಾ ಸ್ವಾಧಿಕಂ ದೃಷ್ಟ್ವಾ ಈರ್ಷ್ಯಯಾ ಸಂತಪ್ತಃ ಕಶ್ಚಿತ್ ಪುನಸ್ತಸ್ಯ ನ್ಯೂನತಾಯಾಂ ಪ್ರಾಪ್ತಾಯಾಂ ಪ್ರಹರ್ಷಾದಾತ್ಮಾನಂ ವಸ್ತ್ರಾಭರಣಾದಿನಾ ಭೂಷಯತಿ ತದ್ವದಿತಿ ಭಾವಃ। -ವ್ಯಾ.

ದಿಶಃ ಪ್ರಸೇದುರ್ಗಗನಂ ನಿರ್ಮಲೋಡುಗಣೋದಯಮ್ ।
ಮಹೀ ಮಂಗಲಭೂಯಿಷ್ಠಪುರಗ್ರಾಮವ್ರಜಾಕರಾ ॥
ನದ್ಯಃ ಪ್ರಸನ್ನಸಲಿಲಾ ಹ್ರದಾ ಜಲರುಹಶ್ರಿಯಃ ।
ದ್ವಿಜಾಲಿಕುಲಸನ್ನಾದಸ್ತಬಕಾ ವನರಾಜಯಃ ॥
ವವೌ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶುಚಿಃ ।
ಅಗ್ನಯಶ್ಚ ದ್ವಿಜಾತೀನಾಂ ಶಾಂತಾಸ್ತತ್ರ ಸಮಿಂಧತ ॥
ಮನಾಂಸ್ಯಾಸನ್ ಪ್ರಸನ್ನಾನಿ ಸಾಧೂನಾಮಸುರದ್ರುಹಾಮ್ ।
ಜಾಯಮಾನೇಽಜನೇ ತಸ್ಮಿನ್ ನೇದುರ್ದುಂದುಭಯೋ ದಿವಿ ॥ -ಭಾ.(೧೦/೪/೨-೫)

ತಾನಾಗಿಯೇ ಪ್ರಜ್ವಲಿಸಿದ ಅಗ್ನಿ

ಶಿಶುಂ ವಶೀಕರ್ತುಮಥೋ ನ ಭಾರಃ
ಇತೀವ ಬುದ್ಧ್ವಾ ತುತುಷುಃ ಸ್ಮ ವೃದ್ಧಾಃ।
ಉಪೇಕ್ಷಯಿಷ್ಯಂತಿ ನ ಚೇತ್ ಕೃತಾರ್ಥಾ
ಇತಿ ಸ್ವಯಂ ಪ್ರಾಜ್ವಲದಗ್ನಿರೇಷಾಮ್ ॥ ೪೧ ॥

ಮಗುವನ್ನು ವಶಪಡಿಸಿಕೊಳ್ಳುವುದು ಭಾರವೇನಲ್ಲ ಎಂಬ ಯೋಚನೆಯಿಂದೆಂಬಂತೆ ದೊಡ್ಡವರು ಸಂತೋಷಿಸಿದರು; ಇಲ್ಲವಾದಲ್ಲಿ ಕೃತಕೃತ್ಯರಾದ ಅವರು ತನ್ನನ್ನು ಉಪೇಕ್ಷಿಸಿ-ಯಾರು, ಎಂದು ಬಗೆದೋ ಎಂಬಂತೆ ಅವರ ಅಗ್ನಿಯು ಪ್ರಜ್ವಲಿಸತೊಡಗಿತು.

ವಿ. : ೧. ಇದು ಮನಾಂಸ್ಯಾಸನ್ ಪ್ರಸನ್ನಾನಿ ಸಾಧೂನಾಮ್(೧೦/೩/೫), ಅಗ್ನಯಶ್ಚ ದ್ವಿಜಾತೀನಾಂ ಶಾಂತಾಸ್ತತ್ರ ಸಮಿಂಧತ (೧೦/೩/೪) ಎಂಬ ಭಾಗವತ ವಚನಗಳನ್ನಾಧರಿಸಿದ ಉತ್ಪ್ರೇಕ್ಷೆ.

೨. ಮಕ್ಕಳನ್ನು ವಶಪಡಿಸಿಕೊಳ್ಳುವುದು ಸುಲಭ. ಅವರು ಒಳ್ಳೆಯ ಮಾತು ಮೊದಲಾದ-ವುಗಳಿಂದಲೇ ಪ್ರಸನ್ನರಾಗಿ ಬಿಡುವರು. ಶ್ರೀಕೃಷ್ಣ ಆಗ ಶಿಶುರೂಪದಿಂದ ಇದ್ದದ್ದರಿಂದ ವಶಪಡಿಸಿಕೊಳ್ಳುವುದು ಸುಲಭ ಎಂದು ಭಾವಿಸಿ ವೃದ್ಧರು ಸಂಭ್ರಮಿಸಿದರು[೧] ಎಂದು ಭಾವ.

---

ಸಾಗರಾಃ ಸಮಕಂಪಂತ ಚೇಲುಶ್ಚ ಧರಣೀಧರಾಃ।
ಜಜ್ವಲುಶ್ಚಾಗ್ನಯಃ ಶಾಂತಾ ಜಾಯಮನೇ ಜನಾರ್ದನೇ॥
ಶಿವಾಶ್ಚ ಪ್ರವವುರ್ವಾತಾಃ ಪ್ರಶಾಂತಮಭವದ್ರಜಃ।
ಜ್ಯೋತೀಂಷ್ಯತಿಪ್ರಕಾಶಂತ ಜಾಯಮಾನೇ ಜನಾರ್ದನೇ॥
ಅನಾಹತಾ ದುಂದುಭಯೋ ದೇವಾನಾಂ ಪ್ರಾಣದರ್ನ ದಿವಿ।
ಆಕಾಶಾತ್ ಪುಷ್ಪವೃಷ್ಟಿಂ ಚ ವವರ್ಷ ತ್ರಿದಶೇಶ್ವರಃ॥
ಗೀರ್ಭಿರ್ಮಂಗಲಯುಕ್ತಭಿಃ ಸ್ತುವಂತೋ ಮಧುಸೂದನಮ್।
ಮಹರ್ಷಯಃ ಸಗಂಧರ್ವಾ ಪ್ರಹೃಷ್ಟಮಭಜ್ಜಗತ್ ॥ – ಹರಿವಂಶ (೨/೪/೧೫,೧೬,೧೭,೧೯,೨೦)

ಸಂತಃ ಸಂತೋಷಮಧಿಕಂ ಪ್ರಶಮಂ ಚಂಡಮಾರುತಃ।
ಪ್ರಸಾದಂ ನಿಮ್ನಗಾಯಾತಾ ಜಾಯಮಾನೇ ಜನಾರ್ದನೇ॥
ಸಿಂಧುವೋ ನಿಜಶಬ್ದೇನ ವಾದ್ಯಂ ಚಕ್ರುರ್ಮನೋಹರಂ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ॥
ಸ್ಸಸೃಜುಃ ಪುಷ್ಪವರ್ಷಾಣಿ ದೇವಾ ಭುವ್ಯಂತರಿಕ್ಷಗಾಃ।
ಜಜ್ವಲುಶ್ಚಾಗ್ನಯಾ ಶಾಂತಾ ಜಾಯಮಾನೇ ಜನಾರ್ದನೆ॥
ಮಧ್ಯರಾತ್ರೋಽಖಿಲಾಧಾರಾ ಜಾಯಮಾನೇ ಜನಾರ್ದನೇ।
ಮಂದ್ರಂ ಜಗರ್ಜುರ್ಜಲಧಾರಾ ಪುಷ್ಪವೃಷ್ಟಿಮುಚೋ ದ್ವಿಜಾ॥ – ಶ್ರೀಮಹಾವಿಷ್ಣುಪುರಾಣ (೩/೫/೪-೭)

೧. ಬಾಲಕಾ ಹಿ ಕಿಂಚಿನ್ಮಧುರವಚನಫಲದಾನಾದಿನಾಽಪಿ ವಶವರ್ತಿನೋ ಭವಂತಿ ಇತಿ ಬುದ್ಧ್ವೇವ ತುತುಷುಃ ಸಂತುಷ್ಟಾ ಬಭೂವುಃ। ಬ್ರಹ್ಮಾದಿಭಿರಪಿ ಅತಿಶಯೇನ ಪ್ರಸನ್ನೀಕರ್ತುಮಶಕ್ಯಃ ಪರಮಾತ್ಮಾ ಇದಾನೀಂ ಶಿಶುಭಾವ-ಮನುಕುರ್ವನ್ ಕಿಂಚಿತ್ಫಲದಾನಸ್ತುತ್ಯಾದಿನಾ ಪ್ರಸನ್ನೀಕರ್ತುಂ ಶಕ್ಯತ ಇತಿ ಧಿಯೇವ ತುಷ್ಟಾಃ ಬಭೂವುರಿತ್ಯರ್ಥಃ।

೩. [೧]ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ (೯/೨೬) ಎಂಬ ಗೀತಾವಚನದಲ್ಲಿ ಬಂದಿರುವಂತೆ ಶ್ರೀಕೃಷ್ಣನು ಕೇವಲ ಪತ್ರ, ಪುಷ್ಪ , ಫಲ, ಜಲಗಳಿಗೂ ಸಹ ಒಲಿಯುವ ಪರಮಕರುಣಾಳು ಎಂಬ ತತ್ತ್ವ ಸೂಚಿತ.

೪. ಆ ಕಾಲದಲ್ಲಿ ವಿಪ್ರರು ಆರಾಧಿಸುವ ಅಗ್ನಿಯು ಶಾಂತವಾಗಿದ್ದರೂ ಪ್ರಜ್ವಲಿಸತೊಡಗಿತು; ಅದಕ್ಕೆ ಜೀವನದ ಮುಖ್ಯ ಸಿದ್ಧಿಯಾದ ಶ್ರೀಕೃಷ್ಣನ ದರ್ಶನವೇ ಆದ ಮೇಲೆ ಮತ್ತೇಕೆ ಅಗ್ನಿಕಾರ್ಯಾದಿಗಳು ಎಂಬ ಭಯದಿಂದ ವಿಪ್ರರು ಅವುಗಳನ್ನು ತೊರೆದಾರು, ಎಂಬ ಕಾರಣದಿಂದ ಅಗ್ನಿ ತಾನಾಗಿಯೇ ಪ್ರಜ್ವಲಿಸಿತು ಎಂದರ್ಥ.

### ಹಿತವಾಗಿ ಬೀಸಿದ ಗಾಳಿ

ಪ್ರಸೂನವೃಂದಾನಿ ವಿಕಂಪಯಂಸ್ತ-
ದ್ಗೃಹಂ ಸ್ಪೃಶನ್ ಸಾರಸವಾರಿಸಂಗಃ।
ವವೌ ಮರುನ್ಮಾಮಸುರಾದ್ವಿಯುಕ್ತಂ
ಕರಿಷ್ಯತೀತ್ಯರ್ಚನಧೀರಿವಾಸ್ಯ [೨] ॥ ೪೨ ॥

ಹೂಗಳ ಗುಂಪನ್ನು ನಲುಗಿಸುತ್ತಾ, ಶ್ರೀಕೃಷ್ಣನ ಗೃಹವನ್ನು ಸ್ಪರ್ಶಿಸುತ್ತಾ, ಸರೋವರದ ನೀರಿನ ಮೇಲೆ ಬೀಸಿಬಂದ ಗಾಳಿಯು ಶ್ರೀಕೃಷ್ಣನು ನನ್ನನ್ನು ಅಸುರನಿಂದ ಬಿಡುಗಡೆ ಮಾಡುವನು ಎಂಬ ಭಾವನೆಯಿಂದ ಪೂಜಿಸಲು ಮನಸ್ಸು ಮಾಡಿತೋ ಎಂಬಂತಿತ್ತು.

ವಿ. : ೧. ಇದು [೩]ವವೌ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶುಚಿಃ ಎಂಬ ಭಾಗವತ (೧೦/೩/೪)ವಚನವನ್ನಾಧರಿಸಿದ ಉತ್ಪ್ರೇಕ್ಷೆ.

೨. ಶ್ರೀಕೃಷ್ಣಾವತಾರಕಾಲದಲ್ಲಿ ಗಾಳಿಯು ಹಿತವಾಗಿ ಬೀಸುತ್ತಿದ್ದಿತು. ಸರೋವರದ ಮೇಲೆ ಬೀಸಿ ಬಂದ ಆ ಗಾಳಿ ತಂಪಾಗಿಯೂ [೪]ಪರಿಮಳಭರಿತವಾಗಿಯೂ ಇದ್ದಿತು ಎಂಬುದು ಒಟ್ಟು ಭಾವ.

೩. ಕಂಸನಲ್ಲಿ ಭೃಗುಮುನಿಗಳ ಅಂಶವೂ ವಾಯುದೇವರ ಆವೇಶವೂ ಇದ್ದಿತು ಎಂಬುದು ಭಾಗವತತಾತ್ಪರ್ಯಾದಿಗಳಲ್ಲಿ ಬಂದಿರುವ ವಿವರ. ಕಂಸನನ್ನು ಸಂಹಾರಮಾಡುವ ಮೂಲಕ

---

-ವ್ಯಾ.

೧. ಅನೇನ ''ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ''ಇತಿ ಸ್ಮೃತೇಃ ಭಕ್ತಸ್ಯಾಲ್ಪಸಾಧನೈರಪಿ ಪರಮಾತ್ಮಾ ಸಂತುಷ್ಟೋ ಭವತೀತಿ ಪರಮಾತ್ಮನಃ ಕೃಷ್ಣಾವತಾರೇ ಭಕ್ತಾನಾಮತಿಸೌಲಭ್ಯಂ ಧ್ವನ್ಯತೇ। -ವ್ಯಾ.

೨. ಉತ್ಪ್ರೇಕ್ಷಾಲಂಕಾರಃ -ವ್ಯಾ.

೩. ದೇಹೇ ಚ ಯೋಽಭವದಮುಷ್ಯ ರಮೇಶಬಂಧುರ್ವಾಯುಃ ಸ ಕೃಷ್ಣತನುಮಾಶ್ರಯದನ್ಯಪಾಪಮ್।
-ಮ.ಭಾ.ತಾ.ನಿ. (೧೩/೧೩೧)

೪. ಅನೇನ ವಾಯೋಃ ಸೌರಭ್ಯಂ ಪುಷ್ಪಾನಪಾತಯಿತ್ವಾ ಕಂಪನಮಾತ್ರೇಣ ಮಾಂದ್ಯಂ ಚ, ಅರ್ಚನಾರ್ಥಂ ಪುಷ್ಪಗ್ರಹಣಂ ಚ ದ್ಯೋತ್ಯತೇ। -ವ್ಯಾ.

ತನ್ನನ್ನು ಅಂತಹ ಅಯೋಗ್ಯನ ಸಂಗ[೧]ದಿಂದ ಶ್ರೀಕೃಷ್ಣನು ಪಾರುಮಾಡುವನು ಎಂಬ ಭಾವನೆಯಿಂದ ಪೂಜಿಸಲೋ ಎಂಬಂತೆ ಆಗ ಗಾಳಿ ಹಿತವಾಗಿ ಬೀಸುತ್ತಿದ್ದಿತು ಎಂದರ್ಥ.

೪. [೨]ಪೂಜೆಗೆ ಪುಷ್ಪ, ಗಂಧ, ನೀರು ಅಗತ್ಯ. ಆ ಸಮಯದಲ್ಲಿ ಗಾಳಿಯು ಸರೋವರದಲ್ಲಿನ ಕಮಲಗಳ ಮೇಲಿನಿಂದ ಬೀಸಿಬಂದಿದ್ದರಿಂದ ಪೂಜೆಗೆ ಅಗತ್ಯವಾದ ಅವೆಲ್ಲವೂ ಸಹ [೩]ಲಭಿಸಿದಂತಾಗಿತ್ತು ಎಂಬುದು ತಾತ್ಪರ್ಯ; ಪ್ರಸೂನ - ಹೂವು.

### ದಿಗಂತದತ್ತ ತೆರಳಿದ ಮೇಘಗಳು

ಜಾತೇ ಹರೌ ಸ್ವರ್ಪಿತಪುಷ್ಪವರ್ಷೈ-
ರ್ಗೀರ್ಭಿಃ ಸ್ತುವದ್ಭಿಃ ಸುರಸಿದ್ಧಸಂಘೈಃ ।
ದೂರೇ ವಿಧೂತಾ ಇವ ವಿಘ್ನಭೀತ್ಯಾ
ಮೇಘಾ ದಿಗಂತಂ ಯಯುರಂಬರಾಂತಾತ್ ॥ ೪೩ ॥

ಶ್ರೀಕೃಷ್ಣನು ಅವತರಿಸಿದಾಗ ಭಕ್ತಿಪೂರ್ವಕವಾಗಿ ಪುಷ್ಪವೃಷ್ಟಿಗಳನ್ನು ಸಮರ್ಪಿಸಿ ಮಾತುಗಳಿಂದ ಸ್ತುತಿಸುವ ದೇವತೆಗಳ ಹಾಗೂ ಸಿದ್ಧರ ಗುಂಪುಗಳಿಂದ ವಿಘ್ನಭಯದಿಂದ ದೂರಕ್ಕೆ ತಳ್ಳಲ್ಪಟ್ಟವುಗಳಂತೆ ಮೇಘಗಳು ಗಗನದ ಮಧ್ಯದಿಂದ ದಿಗಂತದತ್ತ ತೆರಳಿದವು.

ವಿ. : ೧. ಶ್ರೀಕೃಷ್ಣಾವತಾರದಿಂದ ಸಂಭ್ರಮಿಸಿದ ದೇವತೆಗಳು, ಸಿದ್ಧರು ಸ್ತುತಿಪೂರ್ವಕ ಸುರಿಸಿದ ಪುಷ್ಪವೃಷ್ಟಿಯು ಗಗನದಲ್ಲಿನ ಮೇಘಗಳನ್ನು ದೂರಕ್ಕೆ ತಳ್ಳುವಷ್ಟು ಅಪಾರವಾಗಿದ್ದಿತು ಎಂಬುದು ಇಲ್ಲಿಯ ಭಾವ; ಅಂಬರ - ಆಕಾಶ.

೨. ಆಗ ಮೋಡಗಳಿಲ್ಲದೆ ಆಕಾಶವು ನಿರ್ಮಲವಾಗಿ ಕಂಗಳಿಸುತ್ತಿದ್ದಿತು ಎಂಬ ಹಿಂದಿನ (ಶ್ಲೋ.೪೦) ಉಲ್ಲೇಖಕ್ಕೆ ಪೂರಕವೆನ್ನಿಸುವ ವಿವರಣೆ ಇದಾಗಿದೆ.

### ಶ್ರೀಕೃಷ್ಣಾವತಾರದಿಂದ ಚರಾಚರಗಳಿಗೆ ಸಂತೃಪ್ತಿ

ಅಜನ್ಮನಸ್ತಸ್ಯ ಹಿ ಜನ್ಮಕಾಲೇ
ಚರಾಚರಂ ತುಷ್ಟಮಭೂತ್ ಕಿಲೇದಮ್ ।
ತಥಾಹಿ ತುಷ್ಟಿರ್ಭುವಿ ಕಸ್ಯ ನ ಸ್ಯಾ-
ದದೃಷ್ಟಪೂರ್ವಸ್ಯ ನಿರೀಕ್ಷಣೇನ ॥ ೪೪ ॥

---

೧. ದುರ್ಜನಸಂಸರ್ಗೋ ಹಿ ಸತಾಂ ಮಹಾದುಃಖಕಾರಣಮಿತಿ ಭಾವಃ। -ವ್ಯಾ.

೨. ಅನೇನ ಶೈತ್ಯಂ ಪೂಜಾಕರ್ತುಃ ಸ್ನಾನಮುದಕಾದಾನಂ ಚ ದ್ಯೋತ್ಯತೇ. -ವ್ಯಾ.
ಅನೇನ ಪೂಜಾರ್ಥಂ ಪ್ರತಿಮಾಸ್ಪರ್ಶೋ ಧ್ವನ್ಯತೇ। -ವ್ಯಾ.

೩. ಅನುಷ್ಣಾಶೀತಸ್ಪರ್ಶರೂಪಸ್ಯಗುಣತ್ಯಾಗೇನ ಪುಷ್ಪಜಲನಿಷ್ಠಸೌರಭ್ಯಾದಿಗುಣಗ್ರಹಾತ್ ತದ್ಗುಣಾಲಂಕಾರಃ। 'ವವೌ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶುಚಿಃ' ಇತಿ (೧೦/೩./೪)ಭಾಗವತಕಥಾಽನೇನ ಸಂಚಾರಿತಾ ॥

ಹುಟ್ಟು ಇರದ ಕೃಷ್ಣನ ಅವತಾರಕಾಲದಲ್ಲಿ ಈ ಚರಾಚರವಸ್ತುಗಳು ಸಂತುಷ್ಟಿಹೊಂದಿದವು. ಆ ಮುನ್ನ ಎಂದೂ ಕಾಣದ ವಸ್ತುವನ್ನು ಕಂಡಾಗ ಲೋಕದಲ್ಲಿ ಯಾರಿಗೆ ತಾನೇ ಸಂತುಷ್ಟಿ ಹುಟ್ಟದು?

ವಿ. : ೧. ಹುಟ್ಟಿರುವವರು ಹುಟ್ಟುವುದು ಅಚ್ಚರಿಯ ಸಂಗತಿಯೇನಲ್ಲ. ಆದರೆ [೧]ಸರ್ವಥಾ ಜನಿಸದ ಭಗವಂತ ಅವತರಿಸಿದ ಎಂಬುದು ಸಮಸ್ತ ಲೋಕಕ್ಕೇ ಅಚ್ಚರಿಯ ಸಂಗತಿಯಾಗಿತ್ತು. ಅದನ್ನು ಕಂಡ ಜನರಿಗೆ ಆದ [೨]ಸಂತೋಷಕ್ಕೆ ಪಾರವೇ ಇರಲಿಲ್ಲ ಎಂದರ್ಥ.

೨. [೩]ಶ್ರೀಕೃಷ್ಣನಿಗೆ ಸರ್ವಥಾ ಹುಟ್ಟು ಇಲ್ಲ ಎಂಬುದು ಇಲ್ಲಿಯ ಮುಖ್ಯಭಾವ.

## ವಸುದೇವದೇವಕಿಯರ ನಿಗಡಮೋಚನ

**ಶರೀರಿಣಾಂ ಸ್ಥಾವರಜಂಗಮಾನಾಂ**
**ನಿರೀಕ್ಷಣೇನೈವ ವಿಮುಕ್ತಿದೋಽಹಮ್[೪] ।**
**ಇತೀವ ವಿಖ್ಯಾಪಯಿತುಂ ಸ ದೃಷ್ಟೋ**
**ಜಹಾರ ಪಿತ್ರೋರ್ನಿಗಡಸ್ಯ ಬಂಧಮ್ ॥ ೪೫ ॥**

"ಜಡಚೇತನಜೀವಿಗಳಿಗೆ ದರ್ಶನಮಾತ್ರದಿಂದಲೇ ಮುಕ್ತಿನೀಡುವವನು ನಾನು" ಎಂದು ತಿಳಿಸಲೆಂಬಂತೆ ತಂದೆ-ತಾಯಿಗಳಿಗೆ ಕಾಣಿಸಿಕೊಂಡ ಶ್ರೀಕೃಷ್ಣನು ಅವರ ಸಂಕೋಲೆಯ ಬಂಧನವನ್ನು ಬಿಡಿಸಿದ.

ವಿ. : ೧. ಭಗವಂತನ ದರ್ಶನವಾಗುತ್ತಲೇ ಸಂಸಾರದ ಬಂಧವು ಕಳುಚುವುದು ಎಂಬ ಶಾಸ್ತ್ರವಾಣಿಗೆ ಶ್ರೀಕೃಷ್ಣನ ದರ್ಶನವಾಗುತ್ತಲೇ ವಸುದೇವ-ದೇವಕಿಯರ ಸಂಕೋಲೆಗಳು ಕಳಚಿದ್ದು ನಿದರ್ಶನವಾಗಿತ್ತು ಎಂದು ಭಾವ.

೨. [೫]ಶ್ರೀಕೃಷ್ಣನ ದರ್ಶನವಾಗುತ್ತಲೇ ಕಂಸನು ಹಾಕಿದ ಸಂಕೋಲೆಗಳ ಬಂಧನ ವಸುದೇವ ದೇವಕಿಯರಿಗೆ ಇಲ್ಲವಾಯಿತು ಎಂಬ ಶ್ರೀಮದ್ಭಾಗವತದ ವಿವರಣೆಗೆ ಇದು ತಾತ್ವಿಕ ವಿಶ್ಲೇಷಣೆ-ಯಾಗಿದೆ; ನಿಗಡ - ಸಂಕೋಲೆ.

---

೧. ಹಿ ಶಬ್ದೇನ ಜನನಾಭಾವಸ್ಯ "ನ ಜಾಯತೇ ಮ್ರಿಯತೇ ವಾ ಕದಾಚಿತ್" ಇತಿ (ಗೀತಾ.೨/೨೦) ಸ್ಮೃತಿಪ್ರಸಿದ್ಧಿಂ ದ್ಯೋತಯತಿ । -ವ್ಯಾ.

೨. ಕೃಷ್ಣಾವತಾರೇ ಸರ್ವಪ್ರಾಣಿನಾಂ ಸಂತೋಷೋ ಜಾತ ಇತಿ ಭಾವಃ । ಕಿಲೇತ್ಯೈತಿಹ್ಯಮ್ । -ವ್ಯಾ.
ತಸ್ಯ ನಿರೀಕ್ಷಣೇನ ದರ್ಶನೇನ ಕಸ್ಯ ಪ್ರಾಣಿನಃ ತುಷ್ಟಿಃ ಸಂತೋಷೋ ನ ಸ್ಯಾತ್ । ಅಪೂರ್ವದರ್ಶನೇನ ಸರ್ವಸ್ಯಾಪಿ ಸಂತೋಷೋ ಜಾತ ಇತ್ಯರ್ಥಃ । -ವ್ಯಾ.

೩. ಅಜನ್ಮನೋ ಜನ್ಮ ಇತಿ ಪರಸ್ಪರವಿರುದ್ಧತ್ವಾದದೃಷ್ಟಪೂರ್ವಮಿತಿ ಭಾವಃ । -ವ್ಯಾ.

೪. ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ - ಕಠೋಪನಿಷತ್
ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥ - ಭಾಗ.(೧/೨/೨೨).

೫. ಕೃಷ್ಣಜನನಾನಂತರಂ ಕಂಸಕೃತನಿಗಡಬಂಧೋ ನಿರ್ಗತ ಇತಿ ಪೌರಾಣಿಕೀ ಕಥಾ । -ವ್ಯಾ.

## ವಸುದೇವದೇವಕಿಯರು ಮಾಡಿದ ಶ್ರೀಕೃಷ್ಣಸ್ತುತಿಯ ಅಂತರ್ಯ

ಏತತ್ಪಿತೃತ್ವಪ್ರಥಯಾ ಭಯಂ ಸ್ಯಾತ್
ಪಾಪಾದಿತೀಡ್ಯಂ ಪಿತರೌ ಗುಣಾಢ್ಯಮ್ ।
ಜ್ಞಾನಾತ್ಮಕಸ್ತ್ವಂ ಪ್ರಕೃತೇರ್ವಿದೂರ-
ಸ್ತಾವಸ್ತುತಾಂ ತಾತ ಇತೀಶಮಸ್ಯ ॥ ೪೬ ॥

ಇವನನ್ನು ಹೆತ್ತವರು ಎಂಬ ಪ್ರಸಿದ್ಧಿಯಿಂದಾಗಿ ಒದಗುವ ಪಾಪದಿಂದ ಭಯ ಉಂಟಾದೀತು ಎಂದು ಭಾವಿಸಿ, ತಂದೆತಾಯಿಗಳಾದ ವಸುದೇವದೇವಕಿಯರು "ನೀನು ಜ್ಞಾನಸ್ವರೂಪನು, ಪ್ರಕೃತಿಯಿಂದ ಅತ್ಯಂತ ವಿದೂರನು, ಈ ಜಗತ್ತಿನ ತಂದೆ" ಎಂಬುದಾಗಿ ಶ್ರೀಕೃಷ್ಣನನ್ನು ಸ್ತುತಿಸಿದರು.

ವಿ. : ೧. ತಾವು ಸರ್ವಸ್ವಾಮಿಯಾದ ಶ್ರೀಕೃಷ್ಣನ ಜನನಿಜನಕರು ಎನ್ನಿಸಿಕೊಳ್ಳುವುದು ತಮಗೆ ಪಾಪಕ್ಕೆ ಕಾರಣವಾದೀತು ಎಂಬ ಭಯದಿಂದ ವಸುದೇವದೇವಕಿಯರು ಶ್ರೀಕೃಷ್ಣನನ್ನೇ ಜಗತ್ತಿನ ತಂದೆ, [1] ಜ್ಞಾನಸ್ವರೂಪ, ಅಪ್ರಾಕೃತ ಎಂಬುದಾಗಿ ಸ್ತುತಿಸಿದರು ಎಂದರ್ಥ.

೨. ಶ್ರೀಕೃಷ್ಣಾವತಾರವಾಗುತ್ತಿದ್ದಂತೆಯೇ ವಸುದೇವದೇವಕಿಯರು ಶ್ರೀಕೃಷ್ಣನನ್ನು ಸ್ತುತಿಸಿದ್ದು ಶ್ರೀಮದ್ಭಾಗವತದಲ್ಲಿ ಪ್ರಸಿದ್ಧ; ಅದರ ತಾತ್ಪರ್ಯವನ್ನು ಹೀಗೆ ತಿಳಿಸಿರುವರು.

೩. ಇವರ ಈ ರೀತಿಯ ಪ್ರಾರ್ಥನೆ ಹೊರಗೆ ಕಾವಲು ಕಾಯುತ್ತಿದ್ದ ಕಂಸಭೃತ್ಯರಿಗೆ ಮಧ್ಯ-ರಾತ್ರಿಯಲ್ಲಿ ವಸುದೇವದೇವಕಿಯರು ದೇವತಾಸ್ಮರಣೆ, ಸ್ತೋತ್ರಪಾಠಾದಿಗಳನ್ನು ಮಾಡುತ್ತಿದ್ದಿರ-ಬೇಕು ಎಂಬ [2] ಭ್ರಮೆಗೆ ಕಾರಣವಾಯಿತು.

೪. ಶ್ರೀಕೃಷ್ಣನು ಜಗತ್ತಿನ ತಂದೆ ಎಂಬ ಪದದಿಂದ ಅವನು ತಮ್ಮಿಂದ ಜನಿಸಿದವನಲ್ಲ ಎಂದೂ ಜ್ಞಾನಾತ್ಮಕ ಎಂಬ ಪದದಿಂದ ಜ್ಞಾನಾದಿ ಗುಣಸ್ವರೂಪ ಎಂದೂ ಅದರಿಂದಾಗಿಯೇ ಅವನು ಅಪ್ರಾಕೃತ ಎಂದೂ ಸ್ಫುಟಪಡುವುದು ಎಂದು ತಿಳಿಯಬೇಕು; ಪ್ರಥಾ - ಪ್ರಸಿದ್ಧಿ; ಈಡ್ಯ - ಸ್ತುತ್ಯ

### ಶ್ರೀಕೃಷ್ಣ ದೇವಕಿಯ ಪುತ್ರ ಎಂಬುದು ಒಂದು ರೀತಿಯಲ್ಲಿ ನಿಜವೇ

ಯ ಏಷ ಪುತ್ಸಂಜ್ಞಿತನಾರಕಸ್ಥಾನ್
ಜನಾನ್ ಸ್ವನಾಮಸ್ಮರಣೇನ ಪಾತಿ ।

---

೧. ಜ್ಞಾನಾತ್ಮಕತ್ವಾದುಕ್ತಗುಣವಿಶಿಷ್ಟತ್ವೇನಾವಯೋರೇತತ್ ಪಿತೃತ್ವಪ್ರಥಾ ಅಜ್ಞಪ್ರಜ್ಞಾಮಾದಯೇತಿ ಸ್ತುತಿಕರ್ತ್ರೋರ್ಭಾವಃ । -ವ್ಯಾ.

೨. ಅಂತರಾಲೇ ಬುದ್ಧ್ಯಾ ದೇವತಾಸ್ಮರಣಸ್ತೋತ್ರಪಾಠಾದಿಕಂ ಕ್ರಿಯತ ಇತಿ ಬಹಿಃಸ್ಥಿತಕಂಸಭೃತ್ಯಾನಾಂ ಭ್ರಾಂತಿಮುತ್ಪಾದಯಿತುಮೇವೇತಿ ಭಾವಃ । -ವ್ಯಾ.

ಸ ದೃಷ್ಟಿಗಃ ಸನ್ ವಸುದೇವಪತ್ನ್ಯಾಃ
ಕಥಂ ನ ಪುತ್ರಃ ಶತಪತ್ರನೇತ್ರಃ [೧] ॥ ೪೭ ॥

ತನ್ನ ನಾಮಸ್ಮರಣೆಯಿಂದಲೇ 'ಪುತ್' ಎಂಬ ಹೆಸರಿನ ನರಕದಲ್ಲಿರುವ ಜನರನ್ನು ಪಾಲಿಸುವ ಪುಂಡರೀಕಾಕ್ಷನಾದ ಅವನು ವಸುದೇವನ ಪತ್ನಿಯಾದ ದೇವಕಿಯ ಕಣ್ಣಿಗೆ ಗೋಚರನಾದಾಗ ಅವಳಿಗೆ ಹೇಗೆ ತಾನೆ ಪುತ್ರನಾಗಲಾರ?

ವಿ. : ೧. [೨] ಜನ್ಮ ನೀಡಿದವಳು ಎಂಬ ಕಾರಣದಿಂದ ಹೀಗೆ ದೇವಕಿಯು ಕೃಷ್ಣನಿಗೆ [೩] ಜನನಿ ಎನ್ನಿಸದಿದ್ದರೂ, ತನ್ನ ದರ್ಶನದಿಂದ ದೇವಕಿಗೆ ಸರ್ವಥಾ ನರಕದ ಭಯವಿಲ್ಲದಂತೆ ಮಾಡಿದ ಕಾರಣದಿಂದ ಶ್ರೀಕೃಷ್ಣನು ಅವಳಿಗೆ ಪುತ್ರ ಎನ್ನಿಸಿದ್ದು ಸಾರ್ಥಕವಾಯಿತು ಎಂದರ್ಥ; ಶತಪತ್ರ-ಕಮಲ.

೨. [೪] ನರಕದಿಂದ ಪಾರುಮಾಡುವವನನ್ನು ಪುತ್ರ ಎನ್ನುವರು ಎಂಬುದು ಶಾಸ್ತ್ರವಾಣಿ[೫].

೩. ಸ್ಮರಣೆಯಿಂದಲೇ ಉದ್ಧಾರಮಾಡುವ ಶ್ರೀಹರಿಯು ದರ್ಶನದಿಂದ ಉದ್ಧಾರಮಾಡು-ವುದಂತೂ ಕೈಮುತ್ಯಸಿದ್ಧ ಎಂಬುದು ಇಲ್ಲಿಯ ಯುಕ್ತಿ.

೪. ಇಲ್ಲಿ ಯುಕ್ತಿ ಎಂಬ ಅಲಂಕಾರವಿದೆ. ದುರ್ಘಟವಾದ ಅರ್ಥವನ್ನು ಹೊಂದಿಸುವ ಕೌಶಲಕ್ಕೆ ಯುಕ್ತಿ ಎನ್ನುವರು; ಸರ್ವಥಾ ಪುತ್ರನೆನ್ನಿಸದ ಶ್ರೀಕೃಷ್ಣನನ್ನು ಬೇರೊಂದು ರೀತಿಯಲ್ಲಿ ಪುತ್ರ ಎಂಬುದಾಗಿ ಸಾಧಿಸಿ ತೋರಿಸಿರುವುದು ಇಲ್ಲಿಯ ಅಂತಹ ಕೌಶಲ; ಸಂಜ್ಞಾ - ಹೆಸರು;

ಶ್ರೀಕೃಷ್ಣನು ವಸುದೇವಪುತ್ರ ಎಂಬುದು ಸಹ ನಿಜವೇ ಸರಿ

ಯದೀಯರೂಪಂ ಪ್ರಕಟೀಕರೋತಿ
ಪಿತಾ ಸ ತಸ್ಯೇತಿ ಹಿ ವೇದವಾದಃ।

---

೧. ಯುಕ್ತಿರಲಂಕಾರಃ -ವ್ಯಾ.

೨. ನಾಮಸ್ಮರಣಮಾತ್ರಂ ಕುರ್ವತಾಮಪ್ಯಯಂ ಪುತ್ರಃ ಕಿಲ ಕಥಂ ದೇವಕ್ಯಾಃ ಪ್ರತ್ಯಕ್ಷೀಭೂತಃ ಕೃಷ್ಣಃ ಪುತ್ರೋ ನ ಭವೇದಿತ್ಯರ್ಥಃ। -ವ್ಯಾ.

೩.. ಮಾತೃತ್ವಪ್ರಸಿದ್ಧಿರಪ್ಯುಪಪದ್ಯತ ಇತಿ ದ್ಯೋತ್ಯತೇ। -ವ್ಯಾ.

೪. ತತ್ಸ್ಥಾನ್ ಜನಾನ್ ಸ್ವನಾಮಸ್ಮರಣೇನ ಪಾತಿ ನರಕಾದುದ್ಧೃತ್ಯ ರಕ್ಷತೀತ್ಯರ್ಥಃ। -ವ್ಯಾ.

೫. ಪುನ್ನಾಮ್ನೋ ನರಕಾತ್ ತ್ರಾತಾ ಪುತ್ರ ಇತ್ಯಭಿಧೀಯತೇ। ಇತಿ ಚ। (ವೇ);
ಪುನ್ನಾಮ್ನೋ ನರಕಾದ್ಯಸ್ಮಾತ್ ಪಿತರಂ ತ್ರಾಯತೇ ಸುತಃ।
ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಪಿತೄನ್ ಯಃ ಪಾತಿ ಸರ್ವತಃ॥ – ವಾಲ್ಮೀಕಿ ರಾಮಾಯಣ (೨/೧೦೭/೧೨)
ಪುನ್ನಾಮ್ನೋ ನರಕಾದ್ಯಸ್ಮಾತ್ ಪಿತರಂ ತ್ರಾಯತೇ ಸುತಃ।
ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ॥ -ಮಹಾಭಾರತ (೧/೭೪/೩೯)
ತ್ರಾತಾ ಯ ಏವ ನರಕಾತ್ ಸ ಹಿ ಪುತ್ರನಾಮಾ। -ಸುಮಧ್ವವಿಜಯ (೨/೧೭)

ತಥಾವಿಧಸ್ಯಾನಕದುಂದುಭೇಸ್ತ-
ತ್ಪಿತೃತ್ವಮಪ್ಯಸ್ತು ನ ತೇನ ಹಾನಿಃ ॥ ೪೮ ॥

ಯಾವನು ಯಾವುದರ ರೂಪವನ್ನು ಪ್ರಕಟಗೊಳಿಸುವನೋ ಅವನು ಅದಕ್ಕೆ ತಂದೆ ಎಂಬುದು ವೇದವಚನ; ಶ್ರೀಕೃಷ್ಣರೂಪದ ಪ್ರಕಟಣೆಗೆ ಆ ರೀತಿಯಲ್ಲಿ ಕಾರಣನಾದ ವಸುದೇವನು ತಂದೆ ಎನ್ನಿಸಲಿ; ಅದರಿಂದ ಹಾನಿ ಏನಿಲ್ಲ.

ವಿ. : ೧. ದೇವಕಿಗೆ ಶ್ರೀಕೃಷ್ಣನ ಜನನಿ ಎಂಬುದು ಹಿಂದೆ ಹೇಳಿದ ರೀತಿಯಲ್ಲಿ ಉಚಿತವಾಗಿರುವಂತೆ ತಂದೆ ಎಂಬ ಪ್ರಸಿದ್ಧಿ ವಸುದೇವನಿಗೆ ಒಂದು ರೀತಿಯಲ್ಲಿ ಅನ್ವಯಿಸುವುದು ಎಂಬ ವಿವರ ಇಲ್ಲಿದೆ.

೨. [೧]ಕವಿರ್ಯಃ ಪುತ್ರಃ ಸ ಇಮಾ ಚಿಕೇತ ಯಸ್ತಾ ವಿಜಾನಾತ್ ಸ ಪಿತುಷ್ಪಿತಾಸತ್[೨] ಎಂಬ ವೇದವಾಣಿಯಲ್ಲಿ ಜಗತ್ತಿಗೆ ಶ್ರೀಹರಿಯ ಮಹಿಮೆಯನ್ನು ತಿಳಿಸಿಕೊಟ್ಟದ್ದಕ್ಕಾಗಿ ತಂದೆ ಎಂಬ ಪ್ರಸಿದ್ಧಿ ಬರುವುದು ಎಂಬುದಾಗಿ ವಿವರಣೆ ಇದೆ. ಅದಕ್ಕೆ ಅನುಗುಣವಾಗಿ ವಸುದೇವನೂ ಸಹ ಶ್ರೀಕೃಷ್ಣನಿಗೆ ತಂದೆ ಎನ್ನಿಸುವನು ಎಂದು ಭಾವ; ವೇದವಾದ – ವೇದವಚನ.

೩. 'ಜನಿತೋತ ವಿಷ್ಣೋಃ' ಎಂಬುದಾಗಿ ಶ್ರೀವಾಯುದೇವರಿಗೆ ಪ್ರಸಿದ್ಧಿ ಇರುವುದು ಸಹ ಈ ಅರ್ಥದಲ್ಲಿ ಎಂಬುದನ್ನು ಸಹ ತಿಳಿಯಬೇಕು. ಪಿತೃದೇವತೆಗಳು ತಮ್ಮ ಪಿತೃಗಳಿಗೆ ಪಿತೃಗಳು ಎನಿಸಿದ [೩]ಹರಿವಂಶದ ಪ್ರಸಂಗ ಇದಕ್ಕೆ ಮತ್ತೊಂದು ನಿದರ್ಶನ.

೪. [೪]ಮಿನೋತಿ ಎಂಬ ವ್ಯುತ್ಪತ್ತಿಯಿಂದ ದೇವಕಿಗೆ ಮಾತೃತ್ವವು ಕೂಡುವಂತೆ ವಸುದೇವನಿಗೆ ಈ ರೀತಿಯಲ್ಲಿ ಪಿತೃತ್ವವು ಸಹ ಕೂಡುವುದರಿಂದ ನಿಜವಾದ ಅರ್ಥದಲ್ಲಿ ಅವನು ತಂದೆಯಲ್ಲ ಎಂಬ ವಿವರಕ್ಕೆ ಬಾಧಕ ಒದಗದು ಎಂದು ಭಾವ.

ನಿಜ ಅರ್ಥದಲ್ಲಿ ಶ್ರೀಕೃಷ್ಣನು ವಸುದೇವದೇವಕಿಯರ ಪುತ್ರನಲ್ಲ

ಏತೇನೈವ ಪುರಾಽಽತ್ಮನಾಽಹಮಭವಂ ತ್ವದ್ದೃಷ್ಟಿಮಾರ್ಗೋಽಧುನಾ
ತೇನೈವಾಸಮಿತೀರಯನ್ ಜನಿಮಸೌ ಮೇನೇ ನ ಸೂನುಃ ಸ್ವಕಾಮ್ ।

೧. ಋಗ್ವೇದ (೧/೬೪/೧೬)
೨. ಕವಿಃ ಸರ್ವಜ್ಞಃ ಯಃ ಪುತ್ರಃ ಚತುರ್ಮುಖಃ ಸ ಏವ ವಿಶ್ವಮಕರೋತ್ । ಯಸ್ತಾ ವಿಷ್ಣೋರ್ಮೂರ್ತೀರ್ವ್ಯಜಾನಾತ್ ವಿಜ್ಞಾಪಯಾಮಾಸ। ಅತ ಏವ ಚತುರ್ಮುಖಃ ಪಿತುಃ ಸ್ವಪಿತುರ್ವಿಷ್ಣೋಃ ಪಿತಾ ಆಸತ್ ಆಸೀದಿತಿ ಶ್ರುತ್ಯರ್ಥಃ। -ವ್ಯಾ.
೩. ಯೂಯಂ ಶರೀರಕರ್ತಾರಸ್ತೇಷಾಂ ದೇವಾ ಭವಿಷ್ಯಥ।
ತೇ ತು ಜ್ಞಾನಪ್ರದಾತಾರಃ ಪಿತರೋ ವೋ ನ ಸಂಶಯಃ॥ -ಹರಿವಂಶ(೧/೧೭/೩೧)
೪. ಮಿನೋತೀತಿ ವ್ಯುತ್ಪತ್ತ್ಯಾ ದೇವಕ್ಯಾ ಮಾತೃತ್ವವದ್ವಸುದೇವಸ್ಯ ವಿದ್ಯಮಾನವಸುದೇವಾದುತ್ಪತ್ತ್ಯನಂಗೀಕಾರಿಣಾಂ ಅಸ್ಮಾಕಂ ಹಾನಿಃ ಅನಿಷ್ಟಂ ನ ನೇತ್ಯರ್ಥಃ। -ವ್ಯಾ.

**ಮಾತಾ ತಂ ಕಿಲ [೧]ಸಂಸ್ತುವಂತ್ಯಭಿನವಂ [೨]ವಿಶ್ವಂ ಯದಿತ್ಯಾದಿನಾ**
**ಪ್ರಾಜ್ಞೋಽಸೌ ವಿನತಃ ಪಿತಾ ಚ [೩]ವಿದಿತೋಽಸೀತ್ಯಾದಿಭಿಸ್ತಂ ಗೃಣನ್ ॥ ೪೯ ॥**

"[೪]ದೇವಕಿ ! ನಾನು ಹಿಂದೆ ಇದೇ ದೇಹದಿಂದಲೇ ನಿನಗೆ ಕಣ್ಣಿಗೆ ಕಾಣಿಸಿದ್ದೆ; ಈಗಲೂ ಅದೇ ರೀತಿಯಾಗಿ ಕಂಡಿರುವೆ" ಎಂದು ತಿಳಿಸುತ್ತಾ ತನ್ನ ಹುಟ್ಟನ್ನು ಶ್ರೀಕೃಷ್ಣ ಒಪ್ಪದಾದ[೫]. ತಾಯಿ ಎನ್ನಿಸಿದ ದೇವಕಿಯು ಸಹ ಅಂತಹ ಮನೋಹರನಾದ ಕೃಷ್ಣನನ್ನು "ವಿಶ್ವಂ ಯತ್" ಇತ್ಯಾದಿಯಾಗಿ ಆದರಿಸುತ್ತಾ, ಅವನನ್ನು ತನ್ನ ಪುತ್ರ ಎಂದು ಒಪ್ಪದಾದಳು. ಅದರಂತೆ ಪ್ರಾಜ್ಞನಾದ ತಂದೆ ವಸುದೇವನು ಸಹ ತಲೆಬಾಗಿ "ವಿದಿತೋಽಸಿ" ಇತ್ಯಾದಿಯಾಗಿ ಬಹಳವಾಗಿ ಸ್ತುತಿಸುತ್ತಾ ಮಣಿದು ತನ್ನ ಮಗ ಎಂದು ಒಪ್ಪದಾದನು.

ವಿ. : ೧. ಶ್ರೀಕೃಷ್ಣನು ವಸುದೇವದೇವಕಿಯರ ಮಗನಲ್ಲ ಎಂಬುದು ಅವತಾರಕಾಲದಲ್ಲಿ ವಸುದೇವದೇವಕಿಯರು ಸ್ತುತಿಸಿದ 'ವಿಶ್ವಂ ಯತ್' ಹಾಗೂ 'ವಿದಿತೋಽಸಿ' ವಾಕ್ಯಗಳಿಂದ ಸ್ಪಷ್ಟಪಡುವ ವಿಚಾರ ಎಂದರ್ಥ.

೨. ಹಿಂದೆ ಎಂದರೆ, ಹಿಂದಿನ ಜನ್ಮದಲ್ಲಿ ಎಂದರ್ಥ; ವಸುದೇವನು ಸುತಪಸ್ ಎಂಬ ಪ್ರಜಾಪತಿಯಾಗಿ, ದೇವಕಿಯು ಪೃಶ್ನಿ ಎಂಬುವವಳಾಗಿ ಇದ್ದಾಗ, [೬]ಅದರಂತೆ ವಸುದೇವ

---

೧. ಮಾನಯಂತ್ಯಭಿನವರ್ಮ (ಪಾ)
೨. ವಿಶ್ವಂ ಯದೇತತ್ ಸ್ವತನೌ ನಿಶಾಂತೇ ಯಥಾವಕಾಶಂ ಪುರುಷಃ ಪುರೋ ಭವಾನ್ ।
ಬಿಭರ್ತಿ ಸೋಽಯಂ ಮಮ ಗರ್ಭಗೋಽಭೂದಹೋ ನೃಲೋಕಸ್ಯ ವಿಡಂಬನಂ ತತ್ ॥-ಭಾಗ(೧೦/೩./೩.೧)
೩.. ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।
ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಗ್ ॥ ... -ಭಾಗ.(೧೦/೩./೩.೭,೩.೮, ೪೩.)
೪. ಹೇ ದೇವಕಿ ! ಯೇನ ತವೇತಿ ಪದತ್ರಯಂ ಅಧ್ಯಾಹಾರ್ಯಂ ಪೂರ್ವಂ ತವ ಪೂರ್ವಸ್ಮಿನ್ ಜನ್ಮನೀತ್ಯರ್ಥಃ ।-ವ್ಯಾ.
೫. ಕೃಷ್ಣಸ್ಯೋತ್ಪತ್ತಿರಸ್ತೀತ್ಯಜ್ಞಪ್ರಸಿದ್ಧಿಮೇತೇನೇತ್ಯಾದಿಕತಿಪಯಶ್ಲೋಕೈರ್ನಿರಾಕರೋತಿ । ಏತೇನೇತಿ । -ವ್ಯಾ.
೬. ತ್ವಮೇವ ಪೂರ್ವಸರ್ಗೇಽಭೂಃ ಪೃಶ್ನಿಃ ಸ್ವಾಯಂಭುವೀ ಸತಿ ।
ತದಾಽಯಂ ಸುತಪಾ ನಾಮ ಪ್ರಜಾಪತಿರಕಲ್ಮಷಃ ॥
ಯುವಾಂ ವೈ ಬ್ರಹ್ಮಣಾಽಽದಿಷ್ಟೌ ಪ್ರಜಾಸರ್ಗೇ ಯದಾ ತತಃ ।
ಸನ್ನಿಯಮ್ಯೇಂದ್ರಿಯಗ್ರಾಮಂ ತೇಪಾಥೇ ಪರಮಂ ತಪಃ ॥
ವರ್ಷವಾತಾತಪಹಿಮಘರ್ಮಕಾಲಗುಣಾನನು ।
ಸಹಮಾನೌ ಶ್ವಾಸರೋಧವಿನಿರ್ಧೂತಮನೋಮಲೌ ॥
ಶೀರ್ಣಪರ್ಣಾನಿಲಾಹಾರಾವುಪಶಾಂತೇನ ಚೇತಸಾ ।
ಮತ್ತಃ ಕಾಮಾನಭೀಪ್ಸಂತೌ ಮದಾರಾಧನಮೀಹತುಃ ॥
ಏವಂ ಮಾಂ ತಪ್ಯತೋರ್ಭದ್ರೇ ತಪಃ ಪರಮದುಷ್ಕರಮ್ ।
ದಿವ್ಯವರ್ಷಸಹಸ್ರಾಣಿ ದ್ವಾದಶೇಯುರ್ಮಹಾತ್ಮನೋಃ ॥
ತದಾ ವಾಂ ಪರಿತುಷ್ಟೋಽಹಮಮುನಾ ವಪುಷಾಽನಘೇ ।
ತಪಸಾ ಶ್ರದ್ಧಯಾ ನಿತ್ಯಂ ಭಕ್ತ್ಯಾ ಚ ಹೃದಿ ಭಾವಿತಃ ॥
ಪ್ರಾದುರಾಸಂ ವರದರಾಟ್ ಯುವಯೋಃ ಕಾಮ್ಯದಿತ್ಸಯಾ ।
ವ್ರಿಯತಾಂ ವರ ಇತ್ಯುಕ್ತೇ ಮಾದೃಶೋ ವಾಂ ವೃತಃ ಸುತಃ ॥

ಕಶ್ಯಪನಾಗಿ, ದೇವಕಿಯು ಅದಿತಿಯಾಗಿದ್ದಾಗ ತೋರಿಸಿದ್ದ ರೂಪವನ್ನೇ ಈಗಲೂ ತೋರಿಸಿದೆ ಎಂದು ಶ್ರೀಕೃಷ್ಣ ಸ್ಪಷ್ಟವಾಗಿ ತಿಳಿಸುವ ಮೂಲಕ ತನ್ನ ಆ ರೂಪವೇ ಇದು, ತನ್ನದು ಅವರಿಬ್ಬರಿಂದ ಹುಟ್ಟಿಬಂದ ರೂಪವಲ್ಲ ಎಂಬುದನ್ನು [೧]ಸ್ಪಷ್ಟಪಡಿಸಿರುವನು ಎಂಬುದು ತಿಳಿಯುವುದು ಎಂದರ್ಥ[೨].

### ತಂದೆತಾಯಿಗಳೇ ಒಪ್ಪದ ಶ್ರೀಕೃಷ್ಣನ ಜನ್ಮ

**ಜಾನಾತಿ ಮಾತಾ ಪರಮಾತ್ಮಜಾತಂ**
**ನೂನಂ ಪಿತಾಽಪಿ ಕ್ವಚಿದೇವ ಲೋಕೇ ।**
**ತಾಭ್ಯಾಮನಂಗೀಕೃತಕೃಷ್ಣಜನ್ಮ**
**ಕೋ ವಾ ಪುಮಾನ್ ಸಾಧಯಿತುಂ ಸಮರ್ಥಃ ॥ ೫೦ ॥**

ತನ್ನ ಮಗನನ್ನು ಹೆತ್ತತಾಯಿ ಸರಿಯಾಗಿ ತಿಳಿಯಬಲ್ಲಳು; ಅದರಂತೆ ತಂದೆಯೂ ಒಂದೊಮ್ಮೆ ತಿಳಿಯಬಲ್ಲ. ಅವರಿಬ್ಬರೂ ಒಪ್ಪದ ಶ್ರೀಕೃಷ್ಣನ ಜನ್ಮವನ್ನು ಬೇರೆ ಯಾವ ಪುರುಷನು ತಾನೇ ಸಾಧಿಸಲು ಶಕ್ತನಾದಾನು?

---

ಅಜುಷ್ಟಗ್ರಾಮ್ಯವಿಷಯಾವನಪತ್ಯೌ ಚ ದಂಪತೀ ।
ನ ವವ್ರಾಥೇಽಪವರ್ಗಂ ಮೇ ಮೋಹಿತೌ ಮಮ ಮಾಯಯಾ ॥
ಗತೇ ಮಯಿ ತತೋ ಲಬ್ಧ್ವಾ ವರಂ ಮತ್ಸದೃಶಂ ಸುತಮ್ ।
ಗ್ರಾಮ್ಯಾನ್ ಭೋಗಾನಭುಂಜಾಥಾಂ ಯುವಾಂ ಪ್ರಾಪ್ತಮನೋರಥೌ ॥
ಅದೃಷ್ಟ್ವಾಽನ್ಯತಮಂ ಲೋಕೇ ಶೀಲೌದಾರ್ಯಗುಣೈಃ ಸಮಮ್ ।
ಅಹಂ ಸುತೋ ವಾಮಭವಂ ಪೃಶ್ನಿಗರ್ಭ ಇತಿ ಸ್ಮೃತಃ ॥
ತಯೋರ್ವಾಂ ಪುನರೇವಾಹಮದಿತ್ಯಾಮಾಸ ಕಾಶ್ಯಪಾತ್ ।
ಉಪೇಂದ್ರ ಇತಿ ವಿಖ್ಯಾತೋ ವಾಮನತ್ವಾಚ್ಚ ವಾಮನಃ ॥
ತೃತೀಯೇಽಸ್ಮಿನ್ ಭವೇಽಹಂ ವೈ ತೇನೈವ ವಪುಷಾಽಥ ವಾಮ್ ।
ಜಾತೋ ಭೂಯಸ್ತಯೋರೇವ ಸತ್ಯಂ ಮೇ ವ್ಯಾಹೃತಂ ಸತಿ ॥
ಏತದ್ ವಾಂ ದರ್ಶಿತಂ ರೂಪಂ ಪ್ರಾಗ್ಜನ್ಮಸ್ಮರಣಾಯ ಮೇ ।
ನಾನ್ಯಥಾ ಮದ್ಭವಜ್ಞಾನಂ ಮರ್ತ್ಯಲಿಂಗೇನ ಜಾಯತೇ ॥
ಯುವಾಂ ಮಾಂ ಪುತ್ರಭಾವೇನ ಬ್ರಹ್ಮಭಾವೇನ ಚಾಸಕೃತ್ ।
ಚಿಂತಯಂತೌ ಕೃತಸ್ನೇಹೌ ಯಾಸ್ಯೇಥೇ ಮದ್ಗತಿಂ ಪರಾಮ್ ॥ -ಭಾಗ.(೧೦/೪/೩೨-೪೫)

೧. ಸತ್ಯಂ ಮೇ ವ್ಯಾಹೃತಂ ಸತೀತಿ ಪ್ರತ್ಯಭಿಜ್ಞಾವಚನಸ್ಯಾಬಾಧಿತಾರ್ಥತ್ವಲಕ್ಷಣಸತ್ಯತ್ವೋಕ್ತೇರಿತಿ ಭಾವಃ ।

೨. ತದಾ ವಾಂ ಪರಿತುಷ್ಟೋಽಹಮ್ ಅಮುನಾ ವಪುಷಾಽನಘೇ ।
ಪ್ರಾದುರಾಸಂ ವರದರಾಟ್ ಯುವಯೋಃ ಕಾಮದಿತ್ಸಯಾ ॥
ತೃತೀಯೇಽಸ್ಮಿನ್ ಭವೇಽಹಂ ವೈ ತೇನೈವ ವಪುಷಾ ತಥಾ ।
ಜಾತೋ ಭೂತಸ್ತಯೋರೇವ ಸತ್ಯಂ ಮೇ ವ್ಯಾಹೃತಂ ಸತಿ ॥ ಇತಿ ಭಾಗವತೋಕ್ತೇಃ । -ವ್ಯಾ.
ಪಿತೃಭ್ಯಾಂ ಪುತ್ರೇಣ ಚ ಜನನಸ್ಯಾನಂಗೀಕಾರಾನ್ನ ಕೃಷ್ಣಸ್ಯ ಜನಿರಿತಿ ಭಾವಃ । -ವ್ಯಾ.

ವಿ. : ೧. ತನ್ನ ಮಗು ಯಾರದು ಎಂಬುದನ್ನು ಖಚಿತವಾಗಿ ತಿಳಿಸಬಲ್ಲ ಅರ್ಹತೆ ತಾಯಿಯದು; ಆ ಬಳಿಕ ತಂದೆಯದು. ಅಂತಹ ತಂದೆತಾಯಿಗಳಾದ ವಸುದೇವದೇವಕಿಯರೇ ಶ್ರೀಕೃಷ್ಣ ತಮ್ಮಿಂದ ಜನಿಸಿದವನಲ್ಲ ಎಂದು ಸಾರಿರುವಾಗ ಅದನ್ನು ನಾನು ಸಾಧಿಸುವೆ ಎಂದು ಹೇಳುವವನು ಸರ್ವಥಾ ಅವಿವೇಕಿ ಎಂದರ್ಥ.

೨. ಬುಧನು ಚಂದ್ರ ಬೃಹಸ್ಪತಿಯರಲ್ಲಿ ಯಾರ ಮಗ ಎಂಬ ಗೊಂದಲವೆದ್ದಾಗ ಬ್ರಹ್ಮದೇವರ ಮಾತಿನಂತೆ ಅವನು ಚಂದ್ರನ ಮಗ ಎಂದು ತಾರೆಯು ಸ್ಫುಟಪಡಿಸಿದ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ:

ಬ್ರಹ್ಮಾ ತಾಂ ರಹ ಆಹೂಯ ಸಮಪ್ರಾಕ್ಷೀಚ್ಚ ಸಾಂತ್ವಯನ್ ।
ಸೋಮಸ್ಯೇತ್ಯಾಹ ಶನಕೈಃ ಸೋಮಸ್ತಂ ತಾವದಾಗ್ರಹೀತ್ ॥ -ಭಾಗ.(೯/೨೪/೧೩)

೩. ಇದು ಮಗುವಿನ ವಿಚಾರದಲ್ಲಿ 'ತಾಯಿಯ ಮಾತು ಅಂತಿಮ' ಎಂಬ ಮಾತಿಗೆ ನಿದರ್ಶನ. ಈ ಪ್ರಸಂಗದಲ್ಲಿ ತಂದೆಯಾದ ವಸುದೇವನಂತೆ ತಾಯಿಯಾದ ದೇವಕಿಯು ಸಹ ಶ್ರೀಕೃಷ್ಣ ತಮ್ಮ ಪುತ್ರನಲ್ಲ ಎಂದು ಸ್ಫುಟವಾಗಿ ತಿಳಿಸಿರುವುದು ಶ್ರೀಕೃಷ್ಣನು ಅವರಿಬ್ಬರ ಮಗನಲ್ಲ ಎಂಬುದಕ್ಕೆ ಅತ್ಯಂತ ಪ್ರಮುಖವಾದ ಆಧಾರ ಎಂದು ಭಾವ.

## ಶ್ರೀಕೃಷ್ಣನದು ಅವತಾರವೇ ಹೊರತು ಹುಟ್ಟಲ್ಲ

**ಸ್ತುತಿಂ ಸ್ವಪಿತ್ರೋರವಧಾರ್ಯ ಯೋಽಸೌ**
**ಬಭೂವ ಪಶ್ಚಾಚ್ಛಿಶುವೇಷಧಾರೀ ।**
**ಅಸೂತ ತಂ ಕಾ ನು ತದಾ ಮೃಗಾಕ್ಷೀ**
**ಪುರಾ ಪುರಾಣಾಕೃತಿಮಪ್ರಮೇಯಮ್ ॥ ೫೧ ॥**

ತನ್ನ ತಂದೆತಾಯಿಗಳ ಸ್ತುತಿಯನ್ನು ಆಲಿಸಿ ಆ ಬಳಿಕ ಶ್ರೀಕೃಷ್ಣ ಶಿಶುರೂಪವನ್ನು ಧರಿಸಿದನಲ್ಲ! ಆಗ ಅವನನ್ನು ಹೆತ್ತವಳು ಯಾವ ಹರಿಣಾಕ್ಷಿ? ಅದರಂತೆ ಆ ಮುನ್ನ ಪ್ರಕಟನಾದ ಅಪ್ರಮೇಯನಾದ ಅವನನ್ನು ಯಾರು ಹೆತ್ತಿದ್ದರು !

ವಿ. : ೧. ಶ್ರೀಕೃಷ್ಣನು ಅವರಿಬ್ಬರ ಕೋರಿಕೆಯನ್ನು ಮನ್ನಿಸಿ ಶಿಶುರೂಪ ಧರಿಸಿದ ವಿವರ [1]ಶ್ರೀಮದ್ಭಾಗವತದಲ್ಲಿದೆ. ಅವತಾರಕಾಲದಲ್ಲಿ ಕಾಣಿಸಿಕೊಂಡದ್ದು [2]ಚಕ್ರಶಂಖಧರವಾದ

---

೧. ಪಶ್ಚಾತ್ ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್ (ಭಾಗ.೧೦/೩./೩.೮) ಇತಿ ಪ್ರಾರ್ಥನಾನಂತರಮ್ । -ವ್ಯಾ.

೨. 'ಶಂಖಚಕ್ರಪೀತಾಂಬರಾದಿಧಾರಿಣೋ ದಿವ್ಯದೇಹಸ್ಯೋತ್ಪತ್ತಿರುಚ್ಯತೇ ಉತ ಪಶ್ಚಾಚ್ಛಿಶುವತ್ ಪ್ರತೀತಸ್ಯ ನಾದ್ಯಃ । ಪುರಾಣಾಕೃತಿತ್ವೇನೋತ್ಪತ್ತೇರ್ವಕ್ತುಮನುಚಿತತ್ವಾತ್ । ನ ದ್ವಿತೀಯಃ । ತಸ್ಯ ಸ್ವಯಮೇವ ಜಾತತ್ವಸ್ಯ ಪಿತ್ರೋಃ ಸಂಪಶ್ಯತೋಃ ಸದ್ಯೋ ಬಭೂವ ಪ್ರಾಕೃತಃ ಶಿಶುಃ' ಇತಿ ಸ್ಮೃತಿಸಿದ್ಧತ್ವಾದಿತಿ ಭಾವಃ । -ಭಾ. (೧೦/೩./೪೬)

ದಿವ್ಯರೂಪ. ಆ ಬಳಿಕ ಧರಿಸಿದ್ದು ಶಿಶುರೂಪ. ತಾನಾಗಿ ಕಾಣಿಸಿಕೊಂಡ ಶ್ರೀಕೃಷ್ಣ ತಾನಾಗಿಯೇ ಶಿಶುರೂಪವನ್ನು ಧರಿಸಿದ ಎಂಬುದು ಸ್ಪಷ್ಟ. ಮುಂಚಿನ ರೂಪದಂತೆ ಈ ರೂಪವನ್ನು ಸಹ ಅವನು ತಾನಾಗಿ ಧರಿಸಿದ್ದೇ ಹೊರತು ವಸುದೇವದೇವಕಿಯರು ನೀಡಿದ್ದಲ್ಲ.

೨. ಹೀಗೆ ಎರಡು ರೂಪಗಳನ್ನು ಸಹ ಶ್ರೀಕೃಷ್ಣ ತಾನಾಗಿ ತೋರಿಸಿದ್ದೇ ಹೊರತು ವಸುದೇವ-ದೇವಕಿಯರು ಸೃಷ್ಟಿಮಾಡಿದ್ದಲ್ಲ; ಆದ್ದರಿಂದ ಶ್ರೀಕೃಷ್ಣನು ಅವರಿಬ್ಬರಿಂದ ದೇಹಪಡೆದವನಲ್ಲ ಎಂಬುದು ಸ್ಫುಟಪಡುವುದು ಎಂದರ್ಥ.

೩. ಇಲ್ಲಿರುವ ಪ್ರಶ್ನೆ ಆಕ್ಷೇಪರೂಪವಾದದ್ದು ಎಂದು ತಿಳಿಯಬೇಕು; ಮೃಗಾಕ್ಷಿ – ಹರಿಣಾಕ್ಷಿ.

ನಿಜಕ್ಕೂ ಹುಟ್ಟಿದ್ದಲ್ಲಿ ಶಂಖಚಕ್ರಾದಿಗಳು ಹೇಗೆ ಬಂದವು ?

ಯದೀಹ ಜಾತೋ ವಸುದೇವವೀರ್ಯಾತ್
ತದಾ ಕುತಸ್ತಸ್ಯ ವಿಭೂಷಣಾನಿ ।
ವರಾಂಬರಂ ಕೌಸ್ತುಭರತ್ನಮುದ್ಯ-
ತ್ಸುದರ್ಶನಂ ಶಂಖಗದಾದಿಜಾತಮ್ [೧] ॥ ೫೨ ॥

ಶ್ರೀಕೃಷ್ಣನು ವಸುದೇವನ ವೀರ್ಯದಿಂದ ಜನಿಸಿದ್ದಲ್ಲಿ ಅವನಿಗೆ ಆಗ ವಿಭೂಷಣಗಳು, ದಿವ್ಯವಾದ ಪೀತಾಂಬರ, ಕೌಸ್ತುಭರತ್ನ, ಹೊಳೆಯುವ ಸುದರ್ಶನ, ಶಂಖ, ಗದೆ ಮೊದ-ಲಾದವುಗಳ ಗುಂಪು, ಇವೆಲ್ಲವೂ ಎಲ್ಲಿಂದ ಬಂದವು?

ವಿ. : ೧. [೨]ಶ್ರೀಕೃಷ್ಣನು ಶಂಖಚಕ್ರಗದಾಪದ್ಮಧರನಾಗಿ, ಪೀತಾಂಬರಧಾರಿಯಾಗಿ, ಕೌಸ್ತುಭ-ಮಣಿಭೂಷಿತನಾಗಿ ಕಾಣಿಸಿಕೊಂಡ ವಿವರ ಶ್ರೀಮದ್ಭಾಗವತದಲ್ಲಿದೆ (೧೦/೪/೯-೧೦):

ತಮದ್ಭುತಂ ಬಾಲಕಮಂಬುಜೇಕ್ಷಣಂ ಚತುರ್ಭುಜಂ ಶಂಖಗದಾರ್ಯುದಾಯುಧಮ್ ।
ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ ಪೀತಾಂಬರಂ ಸಾಂದ್ರಪಯೋದಸೌಭಗಮ್ ॥
ಮಹಾರ್ಹವೈಡೂರ್ಯಕಿರೀಟಕುಂಡಲತ್ವಿಷಾ ಪರಿಷ್ವಕ್ತಸಹಸ್ರಕುಂತಲಮ್ ।
ಉದ್ದಾಮಕಾಂಚ್ಯಂಗದಕಂಕಣಾದಿಭಿರ್ವಿರೋಚಮಾನಂ ವಸುದೇವ ಐಕ್ಷತ ॥

೨. [೩]ವಸುದೇವನ ರೇತಸ್ಸಿನಿಂದಲೇ ಶ್ರೀಕೃಷ್ಣನು ಜನಿಸಿದ್ದಲ್ಲಿ ಈ ರೀತಿಯಾಗಿ ಆಭರಣ, ಪೀತಾಂಬರ, ಕೌಸ್ತುಭಮಣಿ, ಸುದರ್ಶನ, ಶಂಖಾದಿಗಳು ಎಲ್ಲಿಂದ ಬಂದವು? ಅವುಗಳು ವಸುದೇವನ ರೇತಸ್ಸಿನಿಂದ ಸೃಷ್ಟಿಯಾಗಿರಲು ಸಾಧ್ಯವೇ? ಆದ್ದರಿಂದ ಶ್ರೀಕೃಷ್ಣನು ತನ್ನ

೧. ಆಕ್ಷೇಪಾಲಂಕಾರಃ -ವ್ಯಾ.
೨. ಮುಕುಟಕುಂಡಲಾಂಬರಾದ್ಯಲಂಕಾರಭರಿತತ್ವೇನ ಸುದರ್ಶನಾದ್ಯಾಯುಧಧಾರಿತ್ವೇನ ಚಾವತೀರ್ಣಸ್ಯ ಪರಮಾತ್ಮನೋ ವಸುದೇವವೀರ್ಯಾದುತ್ಪತ್ತಿಕಥನಮಸಂಗತಂ ಇತ್ಯರ್ಥಃ। -ವ್ಯಾ.
೩. ನಹಿ ಸುವರ್ಣಾದೀನಾಂ ರೇತೋವಿಕಾರತ್ವಂ ದೃಷ್ಟಮಿತಿ ಭಾವಃ। -ವ್ಯಾ.

ದಿವ್ಯರೂಪವನ್ನು ಆಗ ಪ್ರಕಟಪಡಿಸಿದನೇ ಹೊರತು ಅದು ವಸುದೇವದೇವಕಿಯರ ಸೃಷ್ಟಿಯಾಗಿರಲಿಲ್ಲ ಎಂದು ಭಾವ.

### ಶ್ರೀಕೃಷ್ಣನದು ಕೇವಲ ಪ್ರಾದುರ್ಭಾವ

ಅಹೋ [1] ಪಿಶಾಚಾ ಅಪಿ ದೇಹಿದೇಹೇ
ಗತಾಗತಂ ಶಕ್ತಿಯುತಾ ಲಭಂತೇ ।
ಅನಂತಶಕ್ತೇಃ ಪರಮಸ್ಯ ನ ಸ್ಯಾತ್
ಕುತೋ ಬಹಿರ್ನಿರ್ಗಮ ಏವ ತರ್ಹಿ ॥ ೫೩ ॥

ಅಬ್ಬ! ಶಕ್ತಿಯಿಂದ ಕೂಡಿದ ಪಿಶಾಚಿಗಳು ಸಹ ದೇಹಿಗಳ ದೇಹದಲ್ಲಿ ಆವೇಶಿಸುವುದನ್ನು, ಹೊರನಡೆಯುವುದನ್ನು ಮಾಡುವವು; ಅನಂತಶಕ್ತಿಯುಳ್ಳ ಸರ್ವೋತ್ತಮನಾದ ಶ್ರೀಕೃಷ್ಣ ತಾನಾಗಿಯೇ ಹಾಗೆ ಹೊರಗೆ ನಿರ್ಗಮಿಸಿದ್ದು ಏಕಾಗಬಾರದು?

ವಿ. : ೧. ಶ್ರೀಕೃಷ್ಣನದು ಗರ್ಭದಲ್ಲಿ ಉತ್ಪತ್ತಿಯಲ್ಲ; ಪ್ರವೇಶಮಾತ್ರ ಎಂಬುದನ್ನು ಮತ್ತೊಂದು ರೀತಿಯಿಂದ ಸಮರ್ಥಿಸಿರುವರು.

೨. ಸಾಮಾನ್ಯ ಶಕ್ತಿಯುಳ್ಳ ಪಿಶಾಚಿ ಮೊದಲಾದ ಕ್ಷುದ್ರಗ್ರಹಗಳೇ ಮನುಷ್ಯರ ದೇಹದಲ್ಲಿ ಪ್ರವೇಶಿಸುವುದು ಹೊರನಡೆಯುವುದು ಕಂಡಿದೆ; ಎಂದ ಮೇಲೆ ಅನಂತಸಾಮರ್ಥ್ಯದ ಶ್ರೀಕೃಷ್ಣನು ವಸುದೇವದೇವಕಿಯರಲ್ಲಿ ಪ್ರವೇಶಿಸಿ, ಹೊರಗೆ ಕಾಣಿಸಿಕೊಂಡ ಎಂಬುದರಲ್ಲಿ ಆಶ್ಚರ್ಯವೇನಿದೆ ? ಎಂದರ್ಥ.

೩. ಮನುಷ್ಯರಲ್ಲಿ ಪಿಶಾಚಿಗಳ ಆವೇಶ, ನಿರ್ಗಮನಗಳು ನಡೆದಾಗ ಅದನ್ನು ಹುಟ್ಟು ಸಾವು ಎನ್ನಲು ಹೇಗೆ ಅಶಕ್ಯವೋ ಅದರಂತೆ ಕೃಷ್ಣಾದಿ ಭಗವದ್ರೂಪಗಳಿಗೆ ಹುಟ್ಟುಸಾವುಗಳನ್ನು ಸರ್ವಥಾ ಹೇಳಕೂಡದು ಎಂದರ್ಥ.

### ನೃಸಿಂಹಾವತಾರದಂತೆ ಕೃಷ್ಣಾವತಾರ

ಯದಾ [3] ನೃಸಿಂಹಾಕೃತಿರಾವಿರಾಸೀತ್
ಪದಾಹತಸ್ತಂಭವರಾದ್ಧಿ ಪೂರ್ವಮ್ ।
ತದಾ ನು ಕಾ ಸ್ತ್ರೀ ಸುಷುವೇ ಮುಕುಂದಂ
ಸ ಕಸ್ಯ ವೀರ್ಯಾದಜನಿಷ್ಟ ಕಾಯಃ ॥ ೫೪ ॥

---

೧. ದುರ್ಘಟಾ ಶಕ್ತಿರಪಿ ಹಿ ಪಿಶಾಚಾನಾಂ ಹಿ ದೃಶ್ಯತೇ ।
ದೇವಾನಾಂ ಕಿಮು ಕಿಮ್ವೇವ ಪರಮಸ್ಯ ಹರೇಃ ಪ್ರಭೋಃ ॥ - ಛಾಂದೋಗ್ಯಭಾಷ್ಯ (೭/೪/೧೪)

೨. ಅಹೋ ಅಲ್ಪಸಾಮರ್ಥ್ಯಯುಕ್ತಪಿಶಾಚೇಷು ವಿದ್ಯಮಾನೋ ವಿಶ್ವಾಸೋಽನಂತಬಲೇ ಪರಮಾತ್ಮನಿ ನಾಸ್ತೀತಿ ಪರಮಾತ್ಮನ ಉತ್ಪತ್ತಿಮಂಗೀಕುರ್ವತಾಂ ಪಾಮರಾಣಾಂ ಮೌರ್ಖ್ಯಂ ಅಹೋ ಆಶ್ಚರ್ಯಮಿತ್ಯರ್ಥಃ । -ವ್ಯಾ.

೩.. ಯಥಾ ಪುರಾ ಸ್ತಂಭತ ಆವಿರಾಸೀದಶುಕ್ಲರಕ್ತೋಽಪಿ ನೃಸಿಂಹರೂಪಃ ।
ತಥೈವ ಕೃಷ್ಣೋಽಪಿ ತಥಾಽಪಿ ಮಾತಾಪಿತೃಕ್ರಮಾದೇವ ವಿಮೋಹಯತ್ಯಜಃ ॥ -ಮ.ಭಾ.ತಾ.ನಿ.(೧೨/೬೩.)

ಹಿಂದೆ, ಕಾಲಿನಿಂದ ಹೊಡೆಯಲ್ಪಟ್ಟ ಶ್ರೇಷ್ಠಸ್ತಂಭದಿಂದ [೧]ನೃಸಿಂಹರೂಪವು ಪ್ರಕಟವಾದಾಗ, ಮುಕ್ತಿನೀಡುವ ಆ ಶ್ರೀಹರಿಯನ್ನು ಯಾವ ಸ್ತ್ರೀ ಹೆತ್ತಿದ್ದಳು? ಅವನದು ಯಾರ ರೇತಸ್ಸಿನಿಂದ ಹುಟ್ಟಿದ ದೇಹ?

ವಿ. : ೧. ಶ್ರೀಹರಿಯ ರೂಪಗಳಿಗೆ ಜೀವರಿಗಿರುವಂತೆ ಹುಟ್ಟು ಇಲ್ಲವೆಂಬುದನ್ನು ಶ್ರೀನರಸಿಂಹರೂಪದ ನಿದರ್ಶನದೊಂದಿಗೆ ಇಲ್ಲಿ ಸಮರ್ಥಿಸಿರುವರು.

೨. ಹಿರಣ್ಯಕಶಿಪುವು ಹೊಡೆದ ಕಂಬದಿಂದ [೨]ಶ್ರೀನೃಸಿಂಹರೂಪವು ಪ್ರಕಟವಾದದ್ದು ಶ್ರೀಮದ್ಭಾಗವತಪುರಾಣಗಳಲ್ಲಿ ಸುಪ್ರಸಿದ್ಧ. ಅಲ್ಲಿ ಸ್ಪಷ್ಟವಾಗಿ ತಿಳಿಯುವಂತೆ ಅದಕ್ಕೆ ಯಾವ ತಂದೆತಾಯಿಗಳು ಇಲ್ಲ. ಅದರಂತೆ ಶ್ರೀಕೃಷ್ಣ ಮೊದಲಾದ ಶ್ರೀಹರಿಯ ಸಕಲ ರೂಪಗಳಿಗೂ ಹುಟ್ಟು ಮೊದಲಾದ ಪ್ರಸಕ್ತಿ ಸರ್ವಥಾ ಇಲ್ಲ ಎಂದರ್ಥ.

೩. ನಿಶ್ಚಿತವಾದ ಆ ಪ್ರಸಂಗದಿಂದ ಇತರ ಪ್ರಸಂಗಗಳಲ್ಲಿ ಶ್ರೀಹರಿಯ ಅವತಾರದ ರೀತಿ ಸ್ಫುಟ ಪಡುವುದು ಎಂದರ್ಥ. ಅಲ್ಲಿ ನೃಸಿಂಹರೂಪದ ಪ್ರಾದುರ್ಭಾವಕ್ಕೆ ಕಂಬ ಕೇವಲ ನಿಮಿತ್ತವೆನ್ನಿಸಿದಂತೆ ಇಲ್ಲಿ ಕೃಷ್ಣರೂಪದ ಪ್ರಾದುರ್ಭಾವಕ್ಕೆ ವಸುದೇವದೇವಕಿಯರು ನಿಮಿತ್ತವಾದರು ಎಂಬ ಭಾವವು ಸೂಚಿತ. ಶ್ರೀಹರಿಯ ಸಕಲ ಪ್ರಾದುರ್ಭಾವಗಳು ಸಹ ನೃಸಿಂಹಾವತಾರದಂತೆ ಸಾಕ್ಷಾದ್ರೂಪಗಳು ಎಂಬುದು ಮುಖ್ಯಭಾವ.

೪. ಶ್ರೀಮದ್ಭಾಗವತದಲ್ಲಿ ಹಿರಣ್ಯಕಶಿಪುವು ಹಾಗೆ ಕಂಬವನ್ನು ಅಪ್ಪಳಿಸಿದ್ದು ತನ್ನ ಮುಷ್ಟಿಯಿಂದ ಎಂಬ ಉಲ್ಲೇಖ ಇದೆ : ಸ್ತಂಭಂ ತತಾಡಾತಿಬಲಃ ಸ್ವಮುಷ್ಟಿನಾ ।(೭/೮/೧೫). ''ಪದಾ ಸ್ತಂಭಂ ತತಾಡಾಶು'' ಎಂಬುದಾಗಿ ಪುರಾಣಾಂತರದಲ್ಲಿ ಬಂದಿರುವ ವಚನವನ್ನು ಉಲ್ಲೇಖಿಸಿ, ಈ ರುಗ್ಮಿಣೀಶವಿಜಯದ ವಿವರವನ್ನು ಶ್ರೀಸತ್ಯಧರ್ಮತೀರ್ಥರು ತಮ್ಮ ಭಾಗವತವ್ಯಾಖ್ಯಾನದಲ್ಲಿ [೩]ಸ್ಫುಟಪಡಿಸಿರುವರು.

---

೧. ವಿಷ್ಣೋಃ ಸರ್ವಾವತಾರೇಷು ಬಹಿರ್ನಿರ್ಗಮನಮಾತ್ರಂ ನ ತು ಉತ್ಪತ್ತಿರಿತ್ಯತ್ರ ನೃಸಿಂಹಾವತಾರ ಏವ ದೃಷ್ಟಾಂತ ಇತ್ಯಾಹ। -ವ್ಯಾ.

೨. ಪೂರ್ವಂ ಪೂರ್ವಸ್ಮಿನ್ ಕಾಲೇ ಯದಾ ಪದಾಹತಸ್ತಂಭವರಾತ್ ಪದಾ ಹಿರಣ್ಯಕಶಿಪುಪಾದೇನಾಹತಸ್ತಾಡಿತಃ ಯಃ ಸ್ತಂಭವರಸ್ತಸ್ಮಾದ್ಧಿರಣ್ಯಕಶಿಪುಪಾದೇನ ತಾಡಿತಸ್ತಂಭಾದಿತಿ ಪೌರಾಣಿಕೀ ಕಥಾ। -ವ್ಯಾ.

೩.. ನನು ಪದಾ ಸ್ತಂಭಂ ತತಾಡಾಶ್ವಿತಿ ಪುರಾಣಾಂತರೇ ಸ್ಪಷ್ಟಮುಕ್ತೇರತ್ರ ಮುಷ್ಟಿನೇತಿ ನಿಷ್ಟಂಕನಂ ಕಥಮಿತಿ ಚೇನ್ನ। ''ಸಿಂಹಸ್ಯಾರ್ಧಂ ತನುಂ ಕೃತ್ವಾ ನರಸ್ಯಾರ್ಧಂ ತನುಂ ತದಾ । ನೃಸಿಂಹವಪುರವ್ಯಕ್ತೋ ಹಿರಣ್ಯಕಶಿಪೋಃ ಪುರಃ । ಆವಿರ್ಬಭೂವ ಸಹಸಾ'' ಇತ್ಯಾದಿಕೂರ್ಮಪುರಾಣೇ ; ''ಭಗವಾನಪಿ ದೇವೇಶೋ ನಾರಸಿಂಹಮಥಾಕರೋತ್ । ಸ್ತೂಯಮಾನೋ ಮುನಿಗಣೈರ್ಹಿರಣ್ಯಕಶಿಪೋಃ ಪುರಮ್ । ತತ್ರ ಗತ್ವಾ''ಇತ್ಯಾದಿ ನೃಸಿಂಹಪುರಾಣೇ ; ''ನಾರಸಿಂಹಮನಾಧೃಷ್ಯಂ ದೇವದಾನವರಕ್ಷಸಾಮ್ । ಹಿರಣ್ಯಕಶಿಪೋಃ ಸ್ಥಾನಂ ಜಗಾಮ ಪ್ರಭುರೀಶ್ವರಃ । ನರಸ್ಯ ಕೃತ್ವಾಽರ್ಧತನುಂ ಸಿಂಹಸ್ಯಾರ್ಧತನುಂ ಪ್ರಭುಃ। ತತೋಽಪಶ್ಯತ ವಿಸ್ತೀರ್ಣಾಂ ದಿವ್ಯಾಂ ರಮ್ಯಾಂ ಮನೋರಮಾಮ್ । ಸರ್ವಕಾಮಯುತಾಮ್'' ಇತ್ಯಾದಿ ಹರಿವಂಶೇ; ''ಹಿರಣ್ಯಕಶಿಪೋಃ ಸ್ಥಾನಂ ಜಗಾಮ ಹರಿರೀಶ್ವರಃ । ನರಸ್ಯಾರ್ಧತನುಂ ಕೃತ್ವಾ ಸಿಂಹಸ್ಯಾರ್ಧತನುಂ ತಥಾ । ತತೋಽಪಶ್ಯತ ವಿಸ್ತೀರ್ಣಾಂ ಹಿರಣ್ಯಕಶಿಪೋಃ ಸಭಾಮ್'' ಇತ್ಯಾದಿಮತ್ಸ್ಯಪುರಾಣಾದೌ, ಸ್ತಂಭತಾಡನಾದೇಸ್ತದುದ್ಭೂತೇಶ್ಚಾನುಕ್ತತ್ವಾತ್ ಪದಾ ವಾ ಮುಷ್ಟಿನಾ ವೇತಿ ತವ ಚಿಂತಾ

## ದುರ್ಗೆಯ ಅವತಾರ

**ತದ್ವೈವ<sup></sup> ಮಾಯಾ ಹರಿಣೋಪದಿಷ್ಟಾ**
**ಬಭೂವ ನಂದಸ್ಯ ಕಲತ್ರರತ್ನೇ ।**
**ಹರಿಸ್ತುಗಿತ್ಯಾದಿವಿಮೋಹರಾಶೇ-**
**ರ್ಭವಿಷ್ಯತೋಽಸ್ಯಾಮಿವ ಮೂಲಭೂತಾ ॥ ೫೫ ॥**

ಹಾಗೆಯೇ ಶ್ರೀಹರಿಯು ತಿಳಿಸಿದಂತೆ ದುರ್ಗೆಯು ನಂದನ ಪಟ್ಟಮಹಿಷಿಯಾದ ಯಶೋದೆಯಲ್ಲಿ ಅವತರಿಸಿದಳು; ಅವಳಿಗೆ ಮುಂದೆ ಹುಟ್ಟುವ ಶ್ರೀಕೃಷ್ಣನು ತನ್ನ ಮಗ, ಇದೇ ಮೊದಲಾದ ಭ್ರಾಂತಿಯ ಪರಂಪರೆಗೆ ಮೂಲಭೂತಳಾದವಳೆಂಬಂತೆ.

ವಿ. : ೧. ಕೃಷ್ಣಾವತಾರವಾದ ಕೂಡಲೇ ಅತ್ತ ನಂದಪತ್ನಿಯಾದ ಯಶೋದೆಯಲ್ಲಿ ದುರ್ಗಾ-ದೇವಿಯು ಪ್ರಾದುರ್ಭವಿಸಿದಳು ಎಂಬುದು ಶ್ರೀಮದ್ಭಾಗವತದ ವಿವರ; ಕೃಷ್ಣಾಷ್ಟಮಿಯು ದುರ್ಗಾಷ್ಟಮಿಯೂ ಆಗಿದೆ ಎಂಬುದು ವಿಶೇಷ.

೨. ದುರ್ಗೆಯು ತಮೋಭಿಮಾನಿನಿ ಎಂದರೆ ಮಾಯಾಶಕ್ತಿಯ ಸಂಕೇತ: **ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ** - ಗೀತಾ(೧೭/೧೪).

೩. ಶ್ರೀಕೃಷ್ಣನು ನಂದತನಯ ಇತ್ಯಾದಿ ಭ್ರಮೆಗೆ ಕಾರಣೀಭೂತಳೋ ಎಂಬಂತೆ ದುರ್ಗಾ-ವತಾರವಾಯಿತು ಎಂಬುದು ಇಲ್ಲಿಯ ಭಾವ; ತುಕ್ - ತನಯ.

## ಶ್ರೀಕೃಷ್ಣನು ಗೋಕುಲಕ್ಕೆ ತೆರಳಲು ಕಾರಣ

**ಯದೀಹ ವಾಸೋ ಮಮ ತರ್ಹಿ ಕಂಸಃ**
**ಸುಹೃದ್ವಧಕ್ಲೇಶವಿದೂರ ಏವ ।**

---

ದೂರನಿಹಿತೇತಿ ತಸ್ಯ ಕಲ್ಪಭೇದಃ ಸಮಾಧೀಯತೇ ವಾಽಸ್ಯಾ ಅಪಿ ಶಾಂತಿಸಂಭವಾತ್ । ಸ್ವಮುಷ್ಟಿನಾ ಖಡ್ಗಂ ಪ್ರಗೃಹ್ಯ ತತಾಡ । ಪಾದೇನೇತಿ ಶೇಷೇಣಾನ್ವೇತುಂ ಶಕ್ಯಮಿತ್ಯವೇಹಿ । ಮುಷ್ಟಿಕುಟ್ಟನಸ್ಯ ಅತ್ಯುತ್ಕಟಪಾಪತ್ವಾಭಾವಾತ್ ಸದ್ಯಃ ಸಂಹಾರಾದಿರ್ನ ಸ್ಯಾತ್ ಅತಃ ಪದೇತಿ ಯುಕ್ತಮ್ । ಅಯುಕ್ತಂ ಚ ಮುಷ್ಟಿತಾಡನೇ ಖಡ್ಗಗ್ರಹಣಮ್ । ತಥಾಹಿ ರುಗ್ಮಿಣೀಶವಿಜಯೇ – ''ಯದಾ ನೃಸಿಂಹಾಕೃತಿರಾವಿರಾಸೀತ್ ಪದಾಹತಾತ್ ಸ್ತಂಭವಾರಾದ್ಧಿ ಪೂರ್ವಮ್ । ತದಾನು ಕಾ ಸ್ತ್ರೀ ಸುಷುವೇ ಮುಕುಂದಂ ಸ ಕಸ್ಯ ವೀರ್ಯಾದಜನಿಷ್ಟಕಾಯಃ'' ಇತ್ಯುಕ್ತೇರಿತಿ। ಸ್ತಂಭೋದ್ಭವಸ್ತೂದಾಹೃತಸ-ರ್ವಸ್ವದುರ್ಮಿರ್ಲೋಽಪಿ ಭಗವತೋ ಜನವತ್ತ್ವಸಕ್ತಜನನನಿರಾಸಾಯ ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾದಿತಿ ನಿದರ್ಶನೀಯ ಇತಿ ಯಥಾಯಥಂ ತತ್ರ ತದ್ವಾಚಕಪದಮಧ್ಯಾಹೃತ್ಯ ವಿಪಶ್ಚಿದ್ಭಿರ್ಯೋಜನಾ ಕರ್ತವ್ಯೇತಿ ದಿಕ್ ॥ -ಶ್ರೀಮದ್ಭಾಗವತ ಸತ್ಯಧರ್ಮೀಯಟೀಕಾ(೭/೮/೧೫)

೧. ತದ್ವೈವ ಜಾತಾ ಚ ಹರೇರನುಜ್ಞಯಾ ದುರ್ಗಾಭಿಧಾ ಶ್ರೀರನು ನಂದಪತ್ನ್ಯಾಮ್ । -ಮ.ಭಾ.ತಾ.ನಿ.(೧೨/೬೭)

೨. ಮಾಯಾ ಹಿ ಜನಮೋಹಿನೀತಿ ಭಾವಃ । ಕೃಷ್ಣಾವತಾರಸಮಯೇ ವ್ರಜೇ ಯಶೋದಾಯಾಂ ದುರ್ಗಾಽಪ್ಯ-ಜಾಯತೇತಿ ಪೌರಾಣಿಕೀ ಕಥಾ । -ವ್ಯಾ.

**ಯದಾ ಬಹಿರ್ಗಂತುಮಿಯೇಷ ತರ್ಹ್ಯಜಾ ಯಾ ಯೋಗಮಾಯಾಽಜನಿ ನಂದಜಾಯಯಾ ।**
- ಭಾಗ.(೧೦/೩./೪೭)

**ಯಮಾತಿಥಿಃ ಸ್ಯಾದಿತಿ ವೀಕ್ಷ್ಯ ಕೃಷ್ಣ-**
**ಸ್ತತೋ ವ್ರಜಂ ಪ್ರತ್ಯಗಮತ್ ಸ ಧೀಮಾನ್[೧] ॥ ೫೬ ॥**

ನಾನು ಇಲ್ಲಿಯೇ ನೆಲೆಸಿದಲ್ಲಿ ಕಂಸನು ತನ್ನ ಬಂಧುಗಳ ವಿಯೋಗದ ದುಃಖವಿಲ್ಲದವನಾಗಿ ಒಂಟಿಯಾಗಿಯೇ ಯಮನಿಗೆ ಅತಿಥಿಯಾಗುವಂತಾಗುವುದು ಎಂದು ಗಮನಿಸಿ, ಮಹಾ-ಪ್ರಾಜ್ಞನಾದ ಆ ಶ್ರೀಕೃಷ್ಣನು ಅಲ್ಲಿಂದ ಗೋಕುಲಕ್ಕೆ ತೆರಳಿದ.

ವಿ. : ೧. ಶ್ರೀಕೃಷ್ಣನು ಅವತರಿಸಿದ ಬಳಿಕ ಅಲ್ಲಿಯೇ ನೆಲೆಸಿದ್ದಲ್ಲಿ ಕಂಸ ಅವನನ್ನು ಸಂಹರಿಸಲೆಂದು ಅಲ್ಲಿಗೆ ಬಂದು ಶ್ರೀಕೃಷ್ಣನಿಂದ ತಾನೇ ಹತನಾಗುತ್ತಿದ್ದ ಎಂದಾಗುವುದು. ಆದರೆ ಶ್ರೀಕೃಷ್ಣಾವತಾರವಾದದ್ದು ಕೇವಲ ಕಂಸಸಂಹಾರಕ್ಕಾಗಿ ಮಾತ್ರವಲ್ಲದೆ ಸಮಸ್ತದುಷ್ಟರ ವಿನಾಶಕ್ಕಾಗಿ (ವಿನಾಶಾಯ ಚ ದುಷ್ಕೃತಾಮ್..। – ಗೀತಾ.೪/೮); ಎಂದರೆ ಕಂಸನೊಬ್ಬನೇ ಸಾಯುವಂತಾಗಿ ಉಳಿದವರ ಸಂಹಾರಕ್ಕೆ ಪ್ರಸಕ್ತಿ ತಪ್ಪುತ್ತಿತ್ತು. ಆದ್ದರಿಂದ ತಾನು ಆಗ ಅಲ್ಲಿ ನೆಲೆಸದೇ ಗೋಕುಲಕ್ಕೆ ತೆರಳಿದಲ್ಲಿ ಕಂಸನು ತನ್ನನ್ನು ಸಂಹರಿಸಲೆಂದು ತನ್ನ ಪರಿವಾರವನ್ನು ಕ್ರಮವಾಗಿ ಕಳುಹಿಸಿಕೊಡುವನು ಅವರನ್ನೆಲ್ಲಾ ಕೊಂದು ಬಳಿಕ ಕಂಸನನ್ನು ಕೊಲ್ಲುವುದು ಶ್ರೀಕೃಷ್ಣನ ಸಂಕಲ್ಪವಾಗಿದ್ದಿತು ಎಂದರ್ಥ.

೨. ಕಂಸನನ್ನು ಆಗಲೇ ಕೊಂದಿದ್ದಲ್ಲಿ ಅವನಿಗೆ ತನ್ನ ಸಮಸ್ತ ಬಂಧುಬಾಂಧವರ ಸಾವನ್ನು ನೋಡುವ ದುಃಖ ತಪ್ಪುವಂತಾಗುತ್ತಿತ್ತು; ಹಾಗೆ ಆಗಕೂಡದು. ಅವನು ಬಂಧುಬಾಂಧವರ ಸಾವನ್ನು ಕಂಡು ಅದರ ಕ್ಲೇಶವನ್ನು ಅನುಭವಿಸಿ, ಆ ಬಳಿಕ ಸತ್ತಲ್ಲಿ ದುಃಖಾತಿಶಯವಾಗುವುದು. ಹಾಗೆಯೇ ಆಗಬೇಕು ಎಂಬುದು ಶ್ರೀಕೃಷ್ಣನ ಸಂಕಲ್ಪವಾಗಿದ್ದಿತು.

೩. ಈ ನ್ಯಾಯ ಇತರ ಸಮಸ್ತದುಷ್ಟರಿಗೂ ಅನ್ವಯಿಸುವಂತಹುದು. ಇದರಿಂದಾಗಿ ಪ್ರತಿಯೊಂದು ದುಷ್ಟರ ಕಥೆಗಳಲ್ಲೂ ಮೊದಲು ಅವರ ಪರಿವಾರದವರು ಅಳಿದು, ಬಳಿಕ ಪ್ರಧಾನ ದುಷ್ಟರು ಸಾಯುವುದು ಕಂಡುಬರುವುದು. ರಾಮಾಯಣದಲ್ಲೂ ರಾವಣನು ಕೊನೆಯವನಾಗಿ ಸಾಯುವುದು, ಮಹಾಭಾರತದಲ್ಲಿ ದುರ್ಯೋಧನನು ಕೊನೆಯಲ್ಲಿ ಸಾಯುವುದು ಇದಕ್ಕೆ ನಿದರ್ಶನ: ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ। ಮ.ಭಾ.ತಾ.ನಿ.(೭/೩೯)

೪. ಲೋಕದಲ್ಲೂ ದುಷ್ಟರಿಗೆ ಕೂಡಲೇ ಕೇಡಾಗದಿರಲು ಸಹ ಇದೇ ಕಾರಣ ಎಂದು ತಿಳಿಯಬೇಕು. ಮೊದಲು ಅವರ ಬಂಧುಬಾಂಧವರಿಗೆ ಕೇಡುಂಟುಮಾಡಿ ಆ ದುಃಖವನ್ನೂ ಸಹ ದುಷ್ಟರು ಅನುಭವಿಸುವಂತೆ ಮಾಡಿ ಕೊನೆಗೆ ಅವರ ಅವಸಾನವಾಗುವಂತೆ ಮಾಡುವುದು ಶ್ರೀಹರಿಯ ಸಂಕಲ್ಪ ಎಂಬುದು ಒಟ್ಟಾಗಿ ಇಲ್ಲಿ ಸೂಚಿತವಾದ ತತ್ತ್ವ ಎಂದು ತಿಳಿಯಬೇಕು.

**ಶ್ರೀಕೃಷ್ಣನು ಗೋಕುಲಕ್ಕೆ ತೆರಳಲು ಮತ್ತೊಂದು ಕಾರಣ**

**ನ ಕಂಸಭೀತ್ಯಾಽಭಿಯಯೌ ವ್ರಜಂ ಸ**
**ಸ್ವಸಂಶ್ರಿತಾನಾಮಭಯಸ್ಯ ಕರ್ತಾ ।**

೧. ಸುಧೀಮಾನ್ (ಪಾ.)

ಸ್ವವಲ್ಲಭಾಂ ನಂದಕಲತ್ರಜಾತಾಂ
ಮನೋರಮಾಮೀಕ್ಷಿತುಮೇವ ಸೋಽಗಾತ್[೧] ॥ ೫೭ ॥

ತನ್ನನ್ನು [೨]ನೆರೆನಂಬಿದವರಿಗೆ ಅಭಯ ನೀಡುವ ಶ್ರೀಕೃಷ್ಣನು ಗೋಕುಲಕ್ಕೆ ತೆರಳಿದ್ದು ಕಂಸನ ಭಯದಿಂದಲ್ಲ ; ನಂದನ ಪತ್ನಿಯಾದ ಯಶೋದೆಯಲ್ಲಿ ಅವತರಿಸಿದ ತನ್ನ ಪತ್ನಿಯಾದ ಮನಮೆಚ್ಚಿನ ದುರ್ಗೆಯನ್ನು ನೋಡಲೆಂದೇ ಅವನು ತೆರಳಿದ.

ವಿ. : ೧. ಶ್ರೀಕೃಷ್ಣನು ಗೋಕುಲಕ್ಕೆ ತೆರಳಲು ಮುಖ್ಯಕಾರಣವನ್ನು ಹಿಂದಿನ ಶ್ಲೋಕದಲ್ಲಿ ತಿಳಿಸಿ, ಈ ಶ್ಲೋಕದಲ್ಲಿ ಮತ್ತೊಂದು ರೀತಿಯಲ್ಲಿ ಅದನ್ನು ಉತ್ಪ್ರೇಕ್ಷಿಸುತ್ತಿರುವರು; ಕಲತ್ರ – ಪತ್ನೀ.

೨. ಯಶೋದೆಯಲ್ಲಿ ಅವತರಿಸಿದ ದುರ್ಗೆ ತನ್ನ ಪತ್ನಿ, ಅವಳನ್ನು ಕಾಣಲೆಂದು ಕೃಷ್ಣ ಹಾಗೆ ಹೊರಟನೇ ಹೊರತು ಕಂಸನ ಭಯದಿಂದಲ್ಲ; ಕಂಸನನ್ನು ಸಕುಟುಂಬಸಪರಿವಾರವಾಗಿ ನಾಶ-ಮಾಡಲೆಂದು ಕೃಷ್ಣ ತಾನು ಅವತರಿಸಿದ ಸ್ಥಳವಾದ ಮಧುರೆಯಲ್ಲಿ ನೆಲೆಸಲಿಲ್ಲ ಎಂಬುದೇನೋ ಸರಿ. ಆದರೆ ಅವನು ಬೇರೆಲ್ಲಿಗೋ ತೆರಳದೆ, ಗೋಕುಲಕ್ಕೇ ಏತಕ್ಕೆ ತೆರಳಿದ ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ನೀಡಿರುವರು. ರಾತ್ರಿ ಕಾಲದಲ್ಲಿ ಹಾಗೆ ತೆರಳಲು ಅಲ್ಲಿ ತನ್ನ ಪತ್ನಿ ಇರುವುದೇ ಕಾರಣ-ವಾಗಿತ್ತು; ಕಾಮಿಗಳ ಪ್ರವೃತ್ತಿ ಅಂತಹುದೇ ಅಲ್ಲವೇ ಎಂಬುದು ವಿನೋದದ ಛಾಯೆಯ ಉತ್ತರ[೩].

ತಾವಾಗಿ ತೆರೆದುಕೊಂಡ ಬಾಗಿಲುಗಳು

[೪]ಕವಾಟಮುದ್ಘಾಟ್ಯ ಗೃಹಾಣಿ ವರ್ತ್ಮ
ದದುಃ ಕಿಲಾಸ್ಮೈ ಮಮ ಬುದ್ಧಿರಿತ್ಥಮ್ ।
ವನಸ್ಪತೀಶೋ ಬಹಿರಭ್ರಸಂಸ್ಥ-
ಸ್ತದೀಕ್ಷಣಾರ್ಥೀ ಸ್ವಯಮುದ್ಬಿಭೇದ[೫] ॥ ೫೮ ॥

ಮನೆಗಳು ತಾವಾಗಿಯೇ ಬಾಗಿಲು ತೆರೆದು, ಆ ಶ್ರೀಕೃಷ್ಣನಿಗೆ ದಾರಿ ನೀಡಿದವು; ಆದರೆ ನನಗನ್ನಿಸುವುದು ಹೀಗೆ: 'ಹೊರಗೆ ಗಗನದಲ್ಲಿದ್ದ ವನಸ್ಪತಿಗಳ ಒಡೆಯನಾದ ಚಂದ್ರನು ಅವನನ್ನು ಕಾಣಲು ಬಯಸಿದವನಾಗಿ ತಾನಾಗಿಯೇ ಬಾಗಿಲನ್ನು ತೆರೆದ'[೬] ಎಂದು.

---

೧. ವಿಭಾವನಮಲಂಕಾರಃ। ಉಪೇಂದ್ರವಜ್ರಾವೃತ್ತಮ್ । –ವ್ಯಾ.

೨. ಸ್ವಾಶ್ರಿತಜನಭಯಪರಿಹಾರಕಸ್ಯ ಕೃಷ್ಣಸ್ಯ ಕುತೋ ಭಯಮಿತಿ ಭಾವಃ। –ವ್ಯಾ.

೩. ವಿಲಾಸಿನೋ ಹಿ ಕಾಮಿನೀಃ ಪ್ರತಿ ರಾತ್ರೌ ಗಚ್ಛಂತೀತಿ ಭಾವಃ। –ವ್ಯಾ.

೪. ದ್ವಾರಸ್ತು ಸರ್ವಾಃ ಪಿಹಿತಾ ದುರತ್ಯಯಾಃ ಬೃಹತ್ಕಪಾಟಾಯಸಕೀಲಶೃಂಖಲೈಃ ॥
ತಾಃ ಕೃಷ್ಣವಾಹೇ ವಸುದೇವ ಆಗತೇ ಸ್ವಯಂ ವ್ಯಶೀರ್ಯಂತ ಯಥಾ ತಮೋ ರವೇಃ ।
ವವರ್ಷ ಪರ್ಜನ್ಯ ಉಪಾಂಶು ಗರ್ಜಿತಃ ಶೇಷೋಽನ್ವಗಾದ್ವಾರಿ ನಿವಾರಯನ್ ಫಣೈಃ ॥–ಭಾಗ(೧೦/೪/೪೮,೪೯)

೫. ಉತ್ಪ್ರೇಕ್ಷಾ –ವ್ಯಾ.

೬. ತತ್ರ ಮಮ ಬುದ್ಧಿರಿತ್ಥಂ ಮಮೇತ್ಥಂ ಭಾತೀತ್ಯರ್ಥಃ। –ವ್ಯಾ.

ವಿ. : ೧. ಬಾಗಿಲುಗಳು ತಾವಾಗಿಯೇ ತೆರೆದುಕೊಂಡವು ಎಂಬುದು ಶ್ರೀಮದ್ಭಾಗವತದ ವಿವರಣೆ. ಆದರೆ ಕೃಷ್ಣನನ್ನು ಕಾಣುವ ಕಾತರದಿಂದ ಚಂದ್ರ ತಾನೇ ಬಾಗಿಲನ್ನು ತೆರೆದ ಎಂಬುದು ಇಲ್ಲಿಯ ಉತ್ಪ್ರೇಕ್ಷೆ.

೨. ಚಂದ್ರನು ವನಸ್ಪತಿಗಳ ಒಡೆಯ ಎಂಬುದು ಭಗವದ್ಗೀತೆಯಿಂದ ತಿಳಿಯುವ ವಿವರ; **ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ।** – (೧೫/೧೩)

೩. ಚಂದ್ರನು ವನಸ್ಪತಿಗಳ ಒಡೆಯನಾದರೆ ಅವನ ಅಂತರ್ಯಾಮಿಯಾದ ಶ್ರೀಕೃಷ್ಣ ಅವನ ಸ್ವಾಮಿ. ತನ್ನ ಸ್ವಾಮಿಯನ್ನು ಕಾಣಲು ಚಂದ್ರ ಸ್ವತಃ ಹಾಗೆ ಬಾಗಿಲು ತೆರೆದ ಎಂಬುದು ಇಲ್ಲಿಯ ಭಾವ.

೪. [1]ಚಂದ್ರನಿಗೆ ಹಾಗೆ ಬಾಗಿಲು ತೆರೆಯುವ ಸಾಮರ್ಥ್ಯ ಸಹಜ ಎಂಬುದನ್ನು "ವನಸ್ಪತೀಶ" (ವೃಕ್ಷಗಳ ಒಡೆಯ) ಎಂಬ ಪದದಿಂದ ತಿಳಿಸಿರುವರು. ಅಭ್ರ – ಆಕಾಶ.

**ನಿರ್ವಿಘ್ನವಾಗಿ ಸಾಗಿದ ವಸುದೇವನ ಪ್ರಯಾಣ**

**ಕರೇ ನಿಧಾಯಾದ್ಭುತಬಾಲಮೇನ-**
**ಮಭೂದ್ಬಹಿರ್ನಿಃಸರತೋಽಸ್ಯ ಶೌರೇಃ।**
**ನ ತದ್ಗೃಹದ್ವಾರಗಣೋಽಂತರಾಯಃ**
**ಕರಸ್ಥದೇವಸ್ಯ ಕುತೋಽಂತರಾಯಃ ॥ ೫೯ ॥**

ಅದ್ಭುತಬಾಲಕನಾದ ಶ್ರೀಕೃಷ್ಣನನ್ನು ಕೈಯಲ್ಲಿ ಇರಿಸಿಕೊಂಡು, ಹೊರಹೊರಟ ವಸುದೇವನಿಗೆ ಆ ಕಾರಾಗೃಹದ ಬಾಗಿಲುಗಳ ಸಾಲು ಅಡ್ಡಿಯಾಗಲಿಲ್ಲ; ಕೈಯಲ್ಲಿ ಭಗವಂತನಿರುವವನಿಗೆ ವಿಘ್ನ ಎಲ್ಲಿಯದು ?

ವಿ. : ೧. ವಸುದೇವನಿಗೆ ಹಾಗೆ ಹೊರಕ್ಕೆ ತೆರಳಲು ಬಾಗಿಲು ಮೊದಲಾದವುಗಳಿಂದ ವಿಘ್ನ ಉಂಟಾಗದಿರಲು ಅತ್ಯಂತ ಮುಖ್ಯವಾದ ಕಾರಣವನ್ನು ಇಲ್ಲಿ ತಿಳಿಸಿರುವರು.

೨. ಸಾಮಾನ್ಯವಾಗಿ ಕೈಯಲ್ಲಿ ಲಕ್ಷ್ಮಿ (ಸಂಪತ್ತು) ಇರುವವರಿಗೆ ಕೆಲಸಕಾರ್ಯಗಳಿಗೆ ವಿಘ್ನ ಒದಗದು. ಶ್ರೀಕೃಷ್ಣನಂತೂ ಸಾಕ್ಷಾತ್ ಲಕ್ಷ್ಮೀಪತಿ ಎಂದ ಮೇಲೆ ಅಂತಹವನನ್ನು ಕೈಯಲ್ಲಿ ಇರಿಸಿಕೊಂಡ ವಸುದೇವನಿಗೆ ವಿಘ್ನವೆಲ್ಲಿಯದು? ಎಂದು ಭಾವ.

೩. ಇಲ್ಲಿ ಕೈಯಲ್ಲಿ ಇರಿಸಿಕೊಂಡಿರುವುದು ಎಂದರೆ ವಶಮಾಡಿಕೊಂಡಿರುವುದು ಎಂದರ್ಥ. ಶ್ರೀಕೃಷ್ಣನನ್ನು ವಶಮಾಡಿಕೊಳ್ಳುವುದು ಎಂದರೆ ಭಕ್ತಿಯಿಂದ ಒಲಿಸುವುದು ಎಂದರ್ಥ. ವಸುದೇವ ಶ್ರೀಕೃಷ್ಣನ ಪರಮಭಕ್ತ. ಆದ್ದರಿಂದ ಅವನಿಗೆ[2] ವಿಘ್ನ ಒದಗಲಿಲ್ಲ ಎಂದು ತಾತ್ಪರ್ಯ.

---

೧. ವನಸ್ಪತೀಶ ಇತ್ಯನೇನ ಚಂದ್ರಸ್ಯ ಕವಾಟೋದ್ಭೇದನೇ ಸಾಮರ್ಥ್ಯಂ ಧ್ವನ್ಯತೇ। –ವ್ಯಾ.

೨. ತಥಾಹಿ ಕರಸ್ಥದೇವಸ್ಯ ಹಸ್ತಸ್ಥಿತಕೃಷ್ಣಸ್ಯ ವಸುದೇವಸ್ಯಾಂತರಾಯಃ ಕುತಃ। ದೇವತಾಸ್ಮರಣವತಾಂ ಅಂತರಾಯೋ ನಾಸ್ತಿ ಕಿಮು ಹಸ್ತಸ್ಥದೇವಸ್ಯೇತಿ ಭಾವಃ। –ವ್ಯಾ.

೪. ಶ್ರೀಹರಿಯನ್ನು ಸ್ಮರಣೆಮಾಡುವವರಿಗೆ ಸಹ ವಿಘ್ನ ಒದಗದು. ಇನ್ನು ಅವನನ್ನು ಕೈಯಲ್ಲಿ ಹಿಡಿದ ವಸುದೇವನಿಗೆ ವಿಘ್ನವೆಲ್ಲಿಯದು ಎಂಬ ಕೈಮುತ್ಯವೂ ಇಲ್ಲಿ ಸೂಚಿತ; ಅಂತರಾಯ-ವಿಘ್ನ.

೫. ಇಲ್ಲಿ ದೇವರನ್ನು ಕೈಯಲ್ಲಿ ಹಿಡಿಯುವುದು ಎಂದರೆ ಸಾಲಿಗ್ರಾಮಾದಿ [೧] ಅಧಿಷ್ಠಾನದಲ್ಲಿ ಪೂಜಿಸುವುದು. ಭಾಗವತ, ಸರ್ವಮೂಲ ಮೊದಲಾದ ಗ್ರಂಥಗಳನ್ನು ಕೈಯಲ್ಲಿ ಹಿಡಿದು ಓದುವುದು; ಎಂದರೆ ಪ್ರತಿನಿತ್ಯ ದೇವಪೂಜೆ ಹಾಗೂ ಪಾಠಪ್ರವಚನ ಕಾರ್ಯದಲ್ಲಿ ತೊಡಗಿದವರಿಗೆ ವಿಘ್ನಗಳು ಸರ್ವಥಾ ಒದಗವು ಎಂಬುದು ಇಲ್ಲಿಯ ಮುಖ್ಯಭಾವ :

ಶಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದಿನೇ ದಿನೇ ।
ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ ॥

-ಕೃಷ್ಣಾಮೃತಮಹಾರ್ಣವ ಶ್ಲೋ. ೨೦೩.

## ಶ್ರೀಕೃಷ್ಣನಿಗೆ ಮೇಘಮಾಡಿದ ವೃಷ್ಟಿ

ಅಗಣ್ಯಗೋಗೋಕುಲಗೋಪನಾಶ-
ಮಭೀಪ್ಸತಾ ಸ್ವೇನ ಕರಿಷ್ಯಮಾಣಮ್ ।
ಅಘಂ ಹಿ ಪೂರ್ವಂ ಪರಿಹರ್ತುಮೀಷ-
ದ್ವವರ್ಷ ತಸ್ಮಿನ್ ಜಲದೋಽಧಿಮಾರ್ಗಮ್ ॥ ೬೦ ॥

ತಾನು ಮುಂದೆ ಮಾಡಲಿರುವ ಅಸಂಖ್ಯವಾದ ಗೋವುಗಳ, ಗೋಕುಲ ಹಾಗೂ ಗೋಪರ ನಾಶದ ಪಾಪವನ್ನು ಮುಂಚಿತವಾಗಿಯೇ ಪರಿಹರಿಸಿಕೊಳ್ಳಬಯಸಿದ ಮೇಘವು ದಾರಿಯಲ್ಲಿ ಶ್ರೀಕೃಷ್ಣನ ಮೇಲೆ ತುಂತುರುಮಳೆಯನ್ನು ಸುರಿಸಿತು.

ವಿ. : ೧. ಶ್ರೀಕೃಷ್ಣನು ಹಾಗೆ ತೆರಳುವ ಮಾರ್ಗದಲ್ಲಿ ತುಂತುರುಮಳೆ ಸುರಿಯುತ್ತಿದ್ದಿತು ಎಂಬುದು ಶ್ರೀಮದ್ಭಾಗವತದ ನಿರೂಪಣೆ. ಅದರ ಕಾರಣವನ್ನು ಇಲ್ಲಿ ಉತ್ಪ್ರೇಕ್ಷಿಸಿರುವರು.

೨. ಮುಂದೆ ಗೋವರ್ಧನೋದ್ಧರಣ ಪ್ರಸಂಗದಲ್ಲಿ ಇಂದ್ರನು ಸುರಿಸಿದ ಧಾರಾಕಾರ ಮಳೆಯಿಂದಾಗಿ, ಗೋ-ಗೋಕುಲ ಹಾಗೂ ಗೋಪರಿಗೆ ಅಪಾರಹಾನಿಯಾಗುವುದು ಪ್ರಸಿದ್ಧ. ಆ ಪಾಪವನ್ನು ಮುಂಚಿತವಾಗಿಯೇ ಪರಿಹರಿಸಿಕೊಳ್ಳಲು ಬಯಸಿಯೋ ಎಂಬಂತೆ ಮೋಡವು ಶ್ರೀಕೃಷ್ಣನಿಗೆ ತುಂತುರುಮಳೆಯ ಸೇವೆಯನ್ನು ಸಲ್ಲಿಸುವ ಉಪಾಯ ಹೂಡಿತು ಎಂಬ ಇಲ್ಲಿಯ ಕಾವ್ಯಚಮತ್ಕಾರ ಅಪೂರ್ವ.

೩. ಮುಂದೆ ಶ್ರೀಕೃಷ್ಣನಿಂದ ಗೋವರ್ಧನೋದ್ಧರಣ ಕಾರ್ಯವು ನಡೆಯುವುದು ಎಂಬುದರ ಸೂಚನೆ ಇಲ್ಲಿಯ ಮುಖ್ಯಭಾವ.

---

೧. ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥ - ಸ್ಕಂದಪುರಾಣ

೪. ಹಾಗೆ [೧]ತುಂತುರುಮಳೆ ಸುರಿಯುವುದು ದೈವಿಕವಾದ ಪುಷ್ಪವೃಷ್ಟಿ ಎಂಬುದು ಶಾಸ್ತ್ರಗಳ ನಿರೂಪಣೆ. ಇದರಿಂದ ಶ್ರೀಕೃಷ್ಣನಿಗೆ ಪುಷ್ಪವೃಷ್ಟಿಯ ಸೇವೆ ಮಾಡಿದ ಭಾಗ್ಯ ಮೋಡಗಳದಾಯಿತು ಎಂಬ ಸೂಚನೆಯೂ ಬಂದಿದೆ.

೫. ಇನ್ನೊಂದು ರೀತಿಯಲ್ಲಿ ಶ್ರೀಕೃಷ್ಣನನ್ನು ಹಿಡಿದ ಭಾಗ್ಯಶಾಲಿಯಾದ ವಸುದೇವನಿಗೆ ಸಂದ ಅಭಿನಂದನೆಯೂ ಅದಾಗಿತ್ತು ಎಂದು ತಿಳಿಯಬಹುದು. ಭಗವತ್ಸೇವೆಯನ್ನು ಮಾಡುವವರಿಗೆ [೨]ದೇವತೆಗಳು ಬಗೆಬಗೆಯಲ್ಲಿ ಅನುಕೂಲತೆಗಳನ್ನು ಕಲ್ಪಿಸಿ ಕೊಡುವರು ಎಂಬ ಸೂಚನೆಯೂ ಇಲ್ಲಿದೆ; ಅಧ್ವಿಮಾರ್ಗ - ಮಾರ್ಗದಲ್ಲಿ.

೬. ಕೃಷ್ಣಾವತಾರ ಕಾಲದಲ್ಲಿ ಪ್ರಸನ್ನವಾಗಿದ್ದ ಗಗನದಲ್ಲಿ ಆ ಬಳಿಕ ಪುನಃ ಮೇಘಗಳು ಕಾಣಿಸಿಕೊಂಡು, ಪುಷ್ಪವೃಷ್ಟಿಯಂತಹ ಮಳೆ ಸುರಿಯತೊಡಗಿತು ಎಂದು ತಿಳಿಯಬೇಕು.

### ಶ್ರೀಕೃಷ್ಣನಿಗೆ ಆದಿಶೇಷ ಸಲ್ಲಿಸಿದ ವಿಶೇಷ ಸೇವೆ

**ಯದೇಷ ದೇವೇಶಿತುರಗ್ರಜತ್ವಂ**
**ಬಭಾರ ರೋಹಿಣ್ಯುದಯಾದ್ರಿಚಂದ್ರಃ।**
**ಅಘಸ್ಯ ತಸ್ಯ ಪ್ರಶಮೇಚ್ಛಯೇವ**
**ಪಥಿ ವ್ರಜಂತಂ ಫಣಿಪಃ ಸಿಷೇವೇ ॥ ೬೧ ॥**

ತಾನು ರೋಹಿಣಿಯ ಉದಯಪರ್ವತದ ಚಂದ್ರನಾಗಿ ಅವತರಿಸಿ, ದೇವತೆಗಳ ಒಡೆಯನಾದ ಅವನಿಗೆ ಅಣ್ಣನೆನಿಸಿದ ಅಪರಾಧವನ್ನು ಪರಿಹರಿಸಿಕೊಳ್ಳಲು ಬಯಸಿಯೋ ಎಂಬಂತೆ ದಾರಿಯಲ್ಲಿ ಸಾಗುತ್ತಿದ್ದ ಶ್ರೀಕೃಷ್ಣನಿಗೆ ನಾಗರಾಜನಾದ ಆದಿಶೇಷ ಸೇವೆ ಸಲ್ಲಿಸಿದ.

ವಿ. : ೧. ಶೇಷದೇವರು ಶ್ರೀಕೃಷ್ಣನನ್ನು ಕೈಯಲ್ಲಿ ಹಿಡಿದ ವಸುದೇವನಿಗೆ ಛತ್ರಿಯಂತೆ ತನ್ನ ಹೆಡೆಗಳನ್ನು ಹಿಡಿದು ಸೇವೆ ಸಲ್ಲಿಸಿದರೆಂಬುದು ಶ್ರೀಮದ್ಭಾಗವತದ ನಿರೂಪಣೆ (ಶೇಷೋऽನ್ವಗದ್ವಾರಿ ನಿವಾರಯನ್ ಫಣೈಃ-೧೦/೪/೪೯); ಅದನ್ನು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು.

೨. ಶೇಷದೇವರು ಬಲರಾಮನಾಗಿ ಶ್ರೀಕೃಷ್ಣನಿಗಿಂತ ಮುಂಚಿತವಾಗಿ ಅವತರಿಸಿದ್ದರಿಂದ, ಅವನಿಗೆ ಅಣ್ಣ, ಹಿರಿಯ ಎನಿಸುವಂತಾಯಿತು. ಇದು ಸಲ್ಲದ ವಿಚಾರ; ಎಂದರೆ ಅಪಚಾರವೇ. ಅದನ್ನು ಪರಿಹರಿಸಿಕೊಳ್ಳಲೋ ಎಂಬಂತೆ ಶೇಷ ಹೀಗೆ ಛತ್ರಸಮರ್ಪಣೆಯ ಸೇವೆಯನ್ನು ಮಾಡಿ ಕೃತಾರ್ಥನಾದ ಎಂಬುದು ಉತ್ಪ್ರೇಕ್ಷೆ.

---

೧. ಇದಾನೀಂ ಮಾರ್ಗಗಮನಸಮಯೇ ಕಿಂಚಿಜ್ಜಲಬಿಂದುಪ್ರಕ್ಷೇಪೇಣ ಕೃತಸೇವಾಮವಲೋಕ್ಯ ಕರಿಷ್ಯಮಾಣಮಪರಾಧಂ ಪರಿಹರಿಷ್ಯತೀತಿ ಭಾವಃ। -ವ್ಯಾ.

೨. ತಸ್ಮಿನ್ ಕೃಷ್ಣೇ ಈಷತ್ ಕಿಂಚಿತ್ ವರ್ಷಾಕಾಲೇऽಪಿ ಸ್ವಸ್ಥೂಲಧಾರಾಂ ವಿಹಾಯ ವಸುದೇವಸ್ಯ ಮಾರ್ಗಶ್ರಮಪರಿಹಾರೋ ಯಥಾ ಭವತಿ ತಥಾ ಸ್ವಲ್ಪಮಿತ್ಯರ್ಥಃ। -ವ್ಯಾ.

೩. ಶೇಷದೇವರು ಬಲರಾಮನಾಗಿ ಅವತರಿಸಲು ಶ್ರೀರಾಮ ರೂಪದ ಶ್ರೀಹರಿಗೆ ಸಲ್ಲಿಸಿದ ಸೇವೆಯ ಬಗ್ಗೆ ಹೊಂದಿದ್ದ ಸ್ವಲ್ಪ ಖಿನ್ನತೆಯೂ ಕಾರಣವಾಗಿತ್ತು ಎಂಬ ಮಾತಿನಲ್ಲಿ ಹೀಗೆ ಶೇಷರೂಪದಿಂದ ಸೇವಿಸಿದ್ದು ಅರ್ಥವತ್ತಾದುದು ಎನ್ನಿಸುವುದು: ಸೇವಾಖಿನ್ನೋ ಲಕ್ಷ್ಮಣೋऽಗ್ರೇ ಹರೇರ್ಭೂತ್ ।- ಮ.ಭಾ.ತಾ.ನಿ.(೧೨/೧೦೬)[೧]

೪. [೨]ಛತ್ರ ಹಿಡಿಯುವವರು ಸೇವಕರು ಎಂಬುದು ಸುನಿಶ್ಚಿತ; ಶೇಷದೇವರು ಹೀಗೆ ಛತ್ರಸಮರ್ಪಣ ಸೇವೆಯನ್ನು ಮಾಡುವ ಮೂಲಕ ತಾನು ಅಣ್ಣ ಎನಿಸಿದ್ದು ಕಾರಣಾಂತರದಿಂದಲೇ ಹೊರತು ವಾಸ್ತವವಾಗಿ ಶ್ರೀಕೃಷ್ಣನೇ ಸ್ವಾಮಿ, ತಾನು ಅವನ ಸೇವಕ ಎಂಬ ಪ್ರಮೇಯವನ್ನು ತಿಳಿಸಿದರು ಎಂದರ್ಥ; ಅಘ – ಪಾಪ; ಅಗ್ರಜ – ಅಣ್ಣ.

**ಶ್ರೀಕೃಷ್ಣನಿಗೆ ಮಣಿದ ಬ್ರಹ್ಮಾದಿಗಳು**

**ವಿರಿಂಚವೈರಿಂಚಮುಖಾಮರಾಲಿಃ**
**ಪ್ರಬೋಧಯಂತೀವ ತದಾ ನನಾಮ ।**
**ಪುರಾಣಪುಂಸಃ ಪುರುಷೋತ್ತಮಸ್ಯ**
**ನಮಸ್ಕೃತಿಂ ಲೋಕವಿಡಂಬಕಸ್ಯ ॥ ೬೨ ॥**

ಲೋಕವಿಡಂಬಕನಾದ, ಪುರಾಣಪುರುಷನಾದ ಆ ಪುರುಷೋತ್ತಮನಿಗೆ ನಮಸ್ಕಾರದ ರೀತಿಯನ್ನು ತಿಳಿಸಿಕೊಡಲೆಂಬಂತೆ ಬ್ರಹ್ಮ ರುದ್ರ ಮೊದಲಾದ ಅಮರರ ಗುಂಪು ಆಗ ನಮಸ್ಕರಿಸಿತು.

ವಿ : ೧. [೩]ಮುಂದೆ ಶ್ರೀಕೃಷ್ಣ ವಸುದೇವದೇವಕಿಯರಿಗೆ ನಮಸ್ಕರಿಸುವುದು ಅನೇಕ ಬಾರಿ ನಿರೂಪಿತವಾಗಿದೆ. ವಸ್ತುತಃ ಅದು ಲೋಕವಿಡಂಬನೆಗಾಗಿ ಮಾಡಿದ ಕಾರ್ಯವೇ ಹೊರತು ವಾಸ್ತವವಾಗಿ ಅವನು ಕ್ಷರಾಕ್ಷರ ಪುರುಷೋತ್ತಮ, ಪುರಾಣಪುರುಷ, ಸರ್ವೋತ್ತಮ ಎಂಬುದು ತತ್ತ್ವ.

೨. ತನಗಿಂತ ಉತ್ತಮರಾದವರು ಸರ್ವಥಾ ಇಲ್ಲವಾದ್ದರಿಂದ, ಬೇರಾರಿಗೂ ನಮಸ್ಕರಿಸಿ ತಿಳಿಯದ ಕೃಷ್ಣನಿಗೆ ಅದನ್ನು ತಿಳಿಸಿಕೊಡಲೋ ಎಂಬಂತೆ ಬ್ರಹ್ಮಾದಿದೇವತೆಗಳು ಅವನಿಗೆ ನಮಸ್ಕರಿಸಿದರು. ವೈರಿಂಚಿ – ವಿರಿಂಚಿ ಪುತ್ರ, ಶಿವ; ಆಲಿ – ಪಂಕ್ತಿ.

**ಶ್ರೀಕೃಷ್ಣನಿಗೆ ಮಾರ್ಗ ನೀಡಿದ ಯಮುನೆ**

**ಪುರಾ ಸ್ವಭರ್ತುಃ ಪ್ರತಿಬಂಧಕರ್ತುರ್-**
**ವಿಶೋಷಣಂ ಬಂಧನಮರ್ಕಕನ್ಯಾ ।**

---

೧. ವಿವರಗಳಿಗೆ ನಮ್ಮ ಪ್ರಕಾಶನದ ಮಹಾಭಾರತತಾತ್ಪರ್ಯನಿರ್ಣಯದ ಕನ್ನಡ ಅನುವಾದವನ್ನು ನೋಡಬಹುದು (೧೨/೧೦೬)

೨. ತ್ವಚ್ಛತ್ರಧಾರಿಸದೃಶಸ್ಯ ಮಮ ಕುತೋऽಗ್ರಜತ್ವಮಿತಿ ದರ್ಶಯನ್ನಿವ ಭೇಜೇ ಇತ್ಯರ್ಥಃ । –ವ್ಯಾ.

೩.. ಕದಾऽಪ್ಯನೇನ ಕೃಷ್ಣೇನ ಪೂರ್ವಂ ನಮಸ್ಕಾರೋ ನ ಕೃತ ಇತಿ ಭಾವಃ । –ವ್ಯಾ.

ವಿಚಿಂತ್ಯ ಭೀತೇವ ದದೌ ಮುರಾರೇಃ
ಪ್ರವಾಹಮಾರಾತ್ ಪರಿಹೃತ್ಯ ಮಾರ್ಗಮ್[1] ॥ ೬೩ ॥

ಹಿಂದೆ ಅವನಿಗೆ ಅಡ್ಡಿಮಾಡಿದ ತನ್ನ ಪತಿಯಾದ ವರುಣನು ಶೋಷಣೆ ಹಾಗೂ ಬಂಧನ-ಗಳಿಗೆ ಒಳಗಾದದ್ದನ್ನು ಗಮನಿಸಿ ಅಂಜಿದವಳಂತೆ ಸೂರ್ಯಪುತ್ರಿಯಾದ ಯಮುನೆಯು ದೂರದಿಂದಲೇ ತನ್ನ ಪ್ರವಾಹವನ್ನು ಸಂಕುಚಿತಗೊಳಿಸಿಕೊಂಡು ಮುರಾರಿಯಾದ ಶ್ರೀಕೃಷ್ಣನಿಗೆ ಮಾರ್ಗವನ್ನು ನೀಡಿದಳು.

ವಿ. : ೧. ಶ್ರೀಮದ್ಭಾಗವತದಲ್ಲಿ ಆ ಸಮಯದಲ್ಲಿ ತುಂಬಿಹರಿಯುತ್ತಿದ್ದ ಯಮುನಾನದಿಯು ಶ್ರೀಕೃಷ್ಣನಿಗೆ ಮಾರ್ಗನೀಡಿದ ವಿವರ ನಿರೂಪಿತವಾಗಿದೆ: **ಭಯಾನಕಾವರ್ತಶತಾಕುಲಾ ನದೀ ಮಾರ್ಗಂ ದದೌ ಸಿಂಧುರಿವ ಶ್ರಿಯಃಪತೇಃ ।** -ಭಾಗ.(೧೦/೩/೫೦). ಅದನ್ನು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು.

೨. ಸಮುದ್ರರಾಜನಾದ ವರುಣನು ಶ್ರೀರಾಮರೂಪದ ಶ್ರೀಕೃಷ್ಣನಿಗೆ ಮಾರ್ಗನೀಡದ ಸಮಯದಲ್ಲಿ ಶ್ರೀರಾಮ ಅದನ್ನು ತನ್ನ ನೋಟಮಾತ್ರದಿಂದ ಸಂಪೂರ್ಣವಾಗಿ ಒಣಗಿಸಿದ, ಆ ಬಳಿಕ ಸೇತುಬಂಧನದಿಂದ ನಿಗ್ರಹಿಸಿದ ವಿವರ ರಾಮಾಯಣದಲ್ಲಿ ಬಂದಿದೆ[2]. ಇದನ್ನು ಗಮನಿಸಿಯೋ ಎಂಬಂತೆ ಸಮುದ್ರಪತ್ನಿಯಾದ ಯಮುನೆ ತನಗೆ ಅಂತಹ ಶಿಕ್ಷೆ ಆಗದಿರಲೆಂದು ತಾನಾಗಿಯೇ ಮಾರ್ಗನೀಡಿ, ಸೇವೆ ಸಲ್ಲಿಸಿದಳು[3] ಎಂದು ಭಾವ; ಸೇತುಬಂಧ-ವರುಣಬಂಧನ.

೩. [4]ಅಪರಾಧಿಗಳಿಗೆ ವಿತ್ತಾಪಹರಣ, ಬಂಧನ ರೂಪದ ಶಿಕ್ಷೆಯನ್ನು ರಾಜರು ನೀಡುವುದು ಲೋಕದಲ್ಲಿ ಪ್ರಸಿದ್ಧ; ಅಂತಹ ಶಿಕ್ಷೆ ವರುಣನಿಗೆ ಆಗಿತ್ತು; ಅದು ತನಗೆ ಆಗದಿರಲಿ ಎಂಬ ಯಮುನೆಯ ಆಶಯ ಮತ್ತೊಬ್ಬರಿಗೆ ಆದ ಶಿಕ್ಷೆಯಿಂದ ಇತರರು ಪಾಠಕಲಿಯಬೇಕಾದ ಅಗತ್ಯವನ್ನು ಸಹ ಸೂಚಿಸುವಂತಿದೆ.

೪. ಗಂಗೆ ಮುಖ್ಯವಾಗಿ ವರುಣನ ಪತ್ನಿ; ಎಲ್ಲ ನದಿಗಳು ವರುಣನ ಪತ್ನಿಯರು ಎಂದು ಕರೆಯುವುದು ಶಾಸ್ತ್ರದ ರೂಢಿ. ಆ ಹಿನ್ನೆಲೆಯಲ್ಲಿ ಯಮುನೆಯನ್ನು ವರುಣಪತ್ನಿ ಎಂದು ಕರೆದಿರುವುದು ಉಚಿತವಾಗಿದೆ.

೫. **ಅರ್ಕಕನ್ಯಾ** - ಅರ್ಕ ಎಂದರೆ ಸೂರ್ಯ; ಅರ್ಕಕನ್ಯಾ ಎಂದರೆ ಸೂರ್ಯಪುತ್ರಿಯಾದ ಯಮುನೆ ಎಂದರ್ಥ; **ಆರಾತ್** - ಹತ್ತಿರ, ದೂರ.

---

೧. ಉಪಮಾಮೂಲೋತ್ಪ್ರೇಕ್ಷಾಲಂಕಾರಃ -ವ್ಯಾ.

೨. ಕಲ್ಪಾಂತಮಸ್ಯ ನಿಶಿಚಾರಪತಿತ್ವಪೂರ್ವಮಾಯುಃ ಪ್ರದಾಯ ನಿಜಲೋಕಗತಿಂ ತದಂತೇ ।
ರಾತ್ರಿತ್ರಯೇಽಪ್ಯನುಪಗಾಮಿನಮೀಕ್ಷ್ಯ ಸೋಽಬ್ಧಿಂ ಚುಕ್ರೋಧ ರಕ್ತನಯನಾಂತಮಯುಂಜದಬ್ಧೌ ॥
-ಮ.ಭಾ.ತಾ.ನಿ.(೮/೯)

೩. ಕದಾಽಪ್ಯನೇನ ಕೃಷ್ಣೇನ ಪೂರ್ವಂ ನಮಸ್ಕಾರೋ ನ ಕೃತ ಇತಿ ಭಾವಃ। -ವ್ಯಾ.

೪. ಅನೇನ ಪ್ರಭವಃ ಸ್ವಭೃತ್ಯಾದೀನಾಂ ಅಪರಾಧಿನಾಂ ವಿತ್ತಾಪಹರಣಂ ಬಂಧನಂ ಚ ಕುರ್ವಂತೀತಿ ಧ್ವನ್ಯತೇ।-ವ್ಯಾ.

### ಯಮುನೆಯ ಪ್ರಸಂಗದ ಸಂದೇಶ

ಭವಪ್ರವಾಹೋಽಪಿ ತವೈವಮೇವೇ-
ತ್ಯುದೀರಯಂತೀವ ಯಮಸ್ವಸಾ ಸಾ ।
ಕರಸ್ಥಕೃಷ್ಣಾಯ ದಿದೇಶ ದೂರೇ
ಪ್ರವಾಹಮಾಧಾಯ ಪದಾರ್ಹಪದ್ಯಾಮ್ ॥ ೬೪ ॥

ನಿನಗೆ ಸಂಸಾರಸಾಗರವು ಸಹ ಹೀಗೆಯೇ ಎಂದು ಅರುಹಲೋ ಎಂಬಂತೆ ಯಮನ ಸೋದರಿಯಾದ ಆ ಯಮುನೆಯು, ತನ್ನ ಪ್ರವಾಹವನ್ನು ಸಂಕುಚಿತಗೊಳಿಸಿಕೊಂಡು, ಶ್ರೀಕೃಷ್ಣನನ್ನು ಕೈಯಲ್ಲಿ ಹಿಡಿದ ವಸುದೇವನಿಗೆ ಕಾಲ್ನಡಿಗೆಗೆ ಅನುವಾಗುವ ಮಾರ್ಗವನ್ನು ನೀಡಿದಳು.

ವಿ. : ೧. ಈ ಪ್ರಸಂಗವು ವಸುದೇವನಿಗೆ ಮುಂದೆ ಸಂಸಾರಸಾಗರದ ದಾಟುವಿಕೆಗೆ ಮುನ್ಸೂಚನೆ-ಯಂತೆ ಆಯಿತು ಎಂದು ಭಾವ; ಭವ – ಸಂಸಾರ.

೨. ವಸುದೇವನಿಗೆ ಮಾತ್ರವಲ್ಲದೆ, ಶ್ರೀಹರಿಯನ್ನು ಒಲಿಸುವುದು ಸಕಲರಿಗೂ [೧]ಸಂಸಾರ ಸಾಗರತರಣದ ಪರಮೋಪಾಯ ಎಂಬ ಪ್ರಮೇಯ ಇದರಿಂದ ಸೂಚಿತ.

೩. ಶ್ರೀಮಧ್ವಾಚಾರ್ಯರು, ಶಿಷ್ಯರ ಸಮೇತ ಗಂಗಾನದಿಯನ್ನು ವಸ್ತ್ರವೂ ತೋಯದಂತೆ ದಾಟಿದ ಮಧ್ವವಿಜಯದ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು (೧೦/೯). ಶ್ರೀಕೃಷ್ಣನನ್ನು ಕೈಯಲ್ಲಿ ಹಿಡಿದ ವಸುದೇವನಿಗೆ ಯಮುನೆಯನ್ನು ದಾಟಲು ಸಾಧ್ಯವಾದರೆ, ಅವನನ್ನು ಹೃದಯದಲ್ಲೇ ಹೊತ್ತ ಶ್ರೀಮಧ್ವಾಚಾರ್ಯರಿಗೆ ತಾವು ಮಾತ್ರವಲ್ಲದೆ, ತಮ್ಮ ಶಿಷ್ಯರನ್ನೂ ಸಹ ಗಂಗಾನದಿ ದಾಟಿಸಲು ನೆರವಾಯಿತು. ಇದರಿಂದ ಶ್ರೀಹರಿಯ ಸೇವೆಯನ್ನು ಹೆಚ್ಚು ಹೆಚ್ಚಾಗಿ ಮಾಡುತ್ತಾ ಹೋದಂತೆ ಅದಕ್ಕನುಗುಣವಾಗಿ ಸಿದ್ಧಿಯು ಸಹ ಹೆಚ್ಚುವುದು ಎಂದು ತಿಳಿಯುವುದು; ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ । -ಬ್ರಹ್ಮಸೂತ್ರ-ಭಾಷ್ಯ(೩/೩/೨೦)

### ಗರುಡನಂತೆ ತೆರಳಿದ ವಸುದೇವ

ವಿಭೂಷಣೇಷು ಪ್ರತಿಬಿಂಬಿತಾಹಿಃ
ಪ್ರಹೃಷ್ಟಪಾಣಿದ್ವಯರೋಮಪತ್ರಃ ।
ಸ ಕೃಷ್ಣವಾಹೋ ವಿನತಾಂಗಜಾತಃ
ಪಿತಾ ಗರುತ್ಮಾನಿವ ವೇಗತೋಽಗಾತ್ [೨] ॥ ೬೫ ॥

---

೧. ಅನೇನ ಪರಮಾತ್ಮಾನಂ ಕರತಲಾಮಲಕೀಕುರ್ವತಃ ಸಂಸಾರಾಬ್ಧಿತರಣಮತಿಸುಲಭಮಿತಿ ಧ್ವನ್ಯತೇ । -ವ್ಯಾ.

೨. ಉಪಮಾರೂಪಕಶ್ಲಿಷ್ಟಾನಾಂ ಸಂಕರಃ -ವ್ಯಾ.

ಧರಿಸಿದ ಆಭರಣಗಳಲ್ಲಿ ಪ್ರತಿಫಲಿಸಿದ ಶೇಷ, ಎರಡು ಕೈಗಳಲ್ಲಿ ಹರ್ಷದಿಂದ ಕಾಣಿಸಿಕೊಂಡ ರೋಮಗಳೆಂಬ ರೆಕ್ಕೆಗಳು, ಬಾಗಿದ ಶರೀರ, ಹೀಗೆ ಕೃಷ್ಣನನ್ನು ಎತ್ತಿಕೊಂಡಿದ್ದ ವಸುದೇವನು ವಿನತೆಯ ಪುತ್ರನಾದ ಗರುಡನೆಂಬಂತೆ ವೇಗದಿಂದ ಸಾಗಿದ.

ವಿ. : ೧. ವಸುದೇವನ ಪ್ರಯಾಣ ಗರುಡವೇಗದಿಂದ ಸಾಗಿತ್ತು ಎಂಬುದು ಇಲ್ಲಿಯ ಭಾವ.

೨. ಗರುಡ ಶ್ರೀಕೃಷ್ಣನ ವಾಹನ; ಗರುಡನೂ ಸಹ ಶಿವನಂತೆ ನಾಗಭೂಷಣ. ಪ್ರಸ್ತುತ ವಸುದೇವನು [1]ಗರುಡನಂತೆ ಶೋಭಿಸಲು, ಅವನು ಧರಿಸಿದ್ದ ಆಭರಣಗಳಲ್ಲಿ ಮೇಲೆ ಛತ್ರಾಕಾರದಲ್ಲಿದ್ದ ಶೇಷನ ಪ್ರತಿಬಿಂಬ ಒಂದು ಕಾರಣವಾದರೆ, ಕೃಷ್ಣನನ್ನು ಹಿಡಿದಿದ್ದ ಕೈಗಳಲ್ಲಿ ಉಂಟಾದ ರೋಮಾಂಚನ ರೆಕ್ಕೆಗಳಂತೆ, ಶೋಭಿಸಿದ್ದು ಮತ್ತೊಂದು ಕಾರಣ. ಹೀಗೆ ಕೃಷ್ಣನನ್ನು ಹೊತ್ತ ವಸುದೇವ ಕೃಷ್ಣವಾಹನನಾದ ಗರುಡನಂತೆ ಶೋಭಿಸಿದ ಎಂಬುದು ಉಪಮೆ, ರೂಪಕ, ಶ್ಲೇಷಗಳಿಂದ ಕೂಡಿದ ಸಂಕರಾಲಂಕಾರ.

೩. ಗರುಡನು ವಿನತೆಯ ಪುತ್ರನಾದರೆ, ವಸುದೇವ ವಿನತವಾದ ಅಂಗಗಳಿಂದ ಕೂಡಿದ ದೇಹಹೊಂದಿದ್ದ ಎಂಬ ಅರ್ಥದಲ್ಲಿ ವಿನತಾಂಗಜಾತ ಎಂಬ ಪದ ಅವನಿಗೂ ಅನ್ವಯಿಸುವುದು(ಶ್ಲೇಷಾಲಂಕಾರ).

೪. ಇದರಿಂದ ಶ್ರೀಹರಿಯ ಆದೇಶವಾದ ನಿತ್ಯನೈಮಿತ್ತಿಕಾದಿ ಸ್ವಕರ್ಮಗಳನ್ನು ಅತ್ಯಂತ ಉತ್ಸಾಹದಿಂದ ಆದಷ್ಟು ತೀವ್ರಗತಿಯಲ್ಲಿ ನಡೆಸಿ ಕೃತಾರ್ಥರಾಗಬೇಕು ಎಂಬ ತತ್ತ್ವವೂ ನಿರೂಪಿತ ಎಂದು ತಿಳಿಯಬೇಕು.

## ರಾಜವೈಭವದ ಶ್ರೀಕೃಷ್ಣನ ಪ್ರಯಾಣ

**ಗರ್ಜದ್ವಾರ್ವಹದುಂದುಭಿಃ ಪರಿಪತದ್ಗಂಧರ್ವಬಂದಿಧ್ವನಿ-**
**ರ್ಹಸ್ತಾಬ್ಜೇ ಧ್ವಜಚಿಹ್ನಿತೇ ಸ ನಿವಸನ್ ಸತ್ಪುಷ್ಪಕಶ್ರೀಮುಷಿ ।**
**ಸ್ವರ್ಮುಕ್ತಾಮಲಮಾಲ್ಯಚಾಮರಗಣಶ್ಛತ್ರಾಯಿತಾಹೀಶ್ವರಃ[2]**
**ಶಕ್ರಾದ್ಯೈಃ ಪರಿವಾರಿತಃ ಪಥಿ ಯಯೌ ರಾಜಾಧಿರಾಜಪ್ರಭಃ ॥ ೬೬ ॥**

ಗರ್ಜಿಸುವ ಮೇಘರೂಪದ ದುಂದುಭಿಗಳ ಧ್ವನಿ, ಪರಿಪರಿಯಾಗಿ ಸ್ತುತಿಸುವ ಗಂಧರ್ವರೆಂಬ ಸ್ತುತಿಪಾಠಕರ ಧ್ವನಿ, ಧ್ವಜರೇಖೆಯಿಂದ ಕೂಡಿದ ಉತ್ತಮಪುಷ್ಪಕವಿಮಾನದ

---

೧. ಅನಂತೋ ವಾಮಕಟಕಂ ಯಜ್ಞಸೂತ್ರಂ ತು ವಾಸುಕಿಃ ।
ತಕ್ಷಕಃ ಕಟಿಸೂತ್ರಂ ತು ಹಾರಃ ಕರ್ಕೋಟಕಸ್ತಥಾ ।
ಅನ್ಯೈರಾಭರಣೈರ್ದಿವ್ಯೈರ್ಭೂಷಿತಂ ಸರ್ಪಭೂಷಣಮ್ ॥
-ಇತಿ ಗರುಡಸ್ತುತೇರ್ಗರುಡಸ್ಯಾಪಿ ಸರ್ಪಭೂಷಣತ್ವಾದಿತಿ ಭಾವಃ- ವ್ಯಾ.

ಪಾದಾಂಗುಷ್ಠೇನ ಚಿಕ್ಷೇಪ ಸುಮುಖಂ ಗರುಡೋರಸಿ ।
ತತಃ ಪ್ರಭೃತಿ ರಾಜೇಂದ್ರ ಸಹ ಸರ್ಪೇಣ ವರ್ತತೇ ॥ -ಮಹಾಭಾರತ (೧೫/೧೦೫/೩೧)

೨. ಉಪಮಾಗರ್ಭಿತಂ ರೂಪಕಮಲಂಕಾರಃ । ಶಾರ್ದೂಲವಿಕ್ರೀಡಿತಂ ವೃತ್ತಮ್ । -ವ್ಯಾ.

ಕಾಂತಿಯನ್ನು ಮೀರಿಸುವ ವಸುದೇವನ ಕಮಲದಂತಹ ಕೈಗಳು, ದೇವತೆಗಳು ಸುರಿಸಿದ ನಿರ್ಮಲವಾದ ಪುಷ್ಪಮಾಲೆಗಳ ರೂಪದ ಚಾಮರದ ಸಾಲುಗಳು, ಶ್ವೇತಚ್ಛತ್ರದಂತಿದ್ದ ಆದಿಶೇಷ, ಮಾರ್ಗದಲ್ಲಿ ಇಂದ್ರಾದಿದೇವತೆಗಳ ಪರಿವಾರ; ಹೀಗೆ ಶ್ರೀಕೃಷ್ಣನು ಚಕ್ರವರ್ತಿಯ ಸೊಬಗಿನಿಂದ ಮಾರ್ಗದಲ್ಲಿ ಸಾಗಿದ.

ವಿ. : ೧. [೧] ಶ್ರೀಕೃಷ್ಣನು ಹಾಗೆ ರಾತ್ರಿಕಾಲದಲ್ಲಿ ಮಧುರೆಯಿಂದ ತೆರಳಿದ್ದು ಕಳ್ಳನಂತಹ ನಡತೆ-ಯಲ್ಲವೆ ? ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವಿದೆ.

೨. ಶ್ರೀಕೃಷ್ಣನ ಗಮನಕಾಲದ ಮೇಲಿನ ಪ್ರತಿಯೊಂದು ಸಹ ರಾಜವೈಭವವಾಗಿದ್ದಿತೇ ಹೊರತು ಚೋರರ ಲಕ್ಷಣವಾಗಿರಲಿಲ್ಲ. ದುಂದುಭಿಯ ನಾದ, ವಂದಿಮಾಗಧರ ಘೋಷ, ಧ್ವಜ, ವಿಮಾನದಲ್ಲಿ ಸಂಚಾರ, ಚಾಮರಗಳ ವೈಭವ, ಶ್ವೇತಚ್ಛತ್ರ, ಅಪಾರ ಪರಿವಾರ – ಇವೆಲ್ಲಾ [೨] ರಾಜವೈಭವವೇ ಅಲ್ಲವೇ ! ಇದರಿಂದ ಪ್ರಾಜ್ಞರಿಗೆ ಶ್ರೀಕೃಷ್ಣನ ಗಮನ ಚಕ್ರವರ್ತಿಯ ನಡೆಯಂತೆಯೇ ಕಾಣಿಸಿತು ಎಂದರ್ಥ ; ವಾರ್ವಹ – ಮೇಘ.

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋऽಯಮಾದ್ಯೋ ಮುದಾಮ್ ॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಪ್ರಥಮಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶವಿಜಯವೆಂಬ ಈ ಕೃತಿಯಲ್ಲಿ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಆನಂದಗಳನ್ನು ಸುರಿಸುವ ಮೊದಲನೆಯ ಸರ್ಗವು ಮುಕ್ತಾಯವಾಯಿತು.

ವಿ. : ೧. 'ರುಗ್ಮಿಣೀಶವಿಜಯ' ಕಾವ್ಯದ ಒಟ್ಟು ಮಹತ್ವವನ್ನು ಸಂಗ್ರಹವಾಗಿ ನಿರೂಪಿಸುವ ಅಪೂರ್ವಶ್ಲೋಕ ಇದಾಗಿದೆ ; ಈ ಶ್ಲೋಕವು ಶ್ರೀರುಗ್ಮಿಣೀಶವಿಜಯದ ಪ್ರತಿಸರ್ಗದ ಅಂತಿಮ ಶ್ಲೋಕವಾಗಿರುವುದು ವಿಶೇಷ.

---

೧. ಕೃಷ್ಣಸ್ಯ ನಿಶಿ ಚೋರವದ್ಗಮನಮಸಹಮಾನೋ ನೃಪೇಂದ್ರಯಾತ್ರಾವದ್ವರ್ಣಯತಿ । ಗರ್ಜದಿತಿ । –ವ್ಯಾ.

೨. ಮ್ಲಾನತ್ವಾದಿದೋಷರಹಿತಾನಿ ಮಾಲ್ಯಾನಿ ಪುಷ್ಪದಾಮಾನಿ ಮಾಲ್ಯಪುಷ್ಪೇ ಪುಷ್ಪದಾಮ್ನೀತ್ಯಮರಃ । ತಾನ್ಯೇವ ಚಾಮರಗಣಃ ಉಪರಿಪತತಾಂ ಮಾಲ್ಯಾನಾಂ ಶೇಷಫಣಾವ್ಯವಧಾನೇನ ಉಭಯತಃಪಾತಿತ್ವಾದಿತಿ ಭಾವಃ । –ವ್ಯಾ.

೨. ಈ ಕೃತಿ ರೋಮಹರ್ಷಕ, ಪಾಪನಾಶಕ, ಅನೇಕ ಚಿತ್ರವಿಚಿತ್ರವಾದ ಅರ್ಥಗಳಿಂದ ಗರ್ಭಿತ, ದೇವಸಭೆಗಳಲ್ಲಿಯೂ ಆದೃತ ಎಂಬುದು ಇಲ್ಲಿಯ ಮುಖ್ಯಭಾವ.

೩. ರುಗ್ಮಿಣೀಶವಿಜಯ ಎಂಬುದು ಕೃತಿಯ ಹೆಸರು. **ಸದ್ವಾದಿರಾಜೋದಿತ** ಎಂಬಲ್ಲಿ ಕೃತಿಕರ್ತೃಗಳ ಹೆಸರು. ರೋಮಹರ್ಷಕ ಮೊದಲಾದವುಗಳು ಕೃತಿಯಿಂದಾಗುವ ಪ್ರಯೋಜನದ ನಿರೂಪಣೆ. ಹೀಗೆ ಅನೇಕ ಅರ್ಥಗಳನ್ನು ಸ್ಫುರಿಸುವ ಈ ಶ್ಲೋಕ ಅತ್ಯಂತ ಕೌಶಲ-ಪೂರ್ಣವಾದುದು.

೪. **ಸದ್ವಾದಿರಾಜೋದಿತ** ಎಂಬುದಕ್ಕೆ ಉತ್ತಮ ವಾದಿಶ್ರೇಷ್ಠರಾದ ಶುಕಮುನಿ ಮೊದಲಾದವರಿಂದ ವರ್ಣಿತವಾದದ್ದು [೧]ರುಗ್ಮಿಣೀಶನಾದ ಶ್ರೀಕೃಷ್ಣನ ಮಹಿಮೆ ಎಂಬುದು ಒಂದು ಅರ್ಥವಾದರೆ, ಉತ್ತಮರಾದ ವಾದಿರಾಜಕವಿಗಳು[೨] ರಚಿಸಿದ ಈ ರುಗ್ಮಿಣೀಶವಿಜಯ ಎಂಬುದು ಮತ್ತೊಂದು ಅರ್ಥ.

೫. ಇದು ಮತ್ತೊಂದು ರೀತಿಯಲ್ಲಿ ಶ್ರೀವಾದಿರಾಜಸ್ವಾಮಿಗಳ ಸರಸಭಾರತೀವಿಲಾಸ, ಯುಕ್ತಿಮಲ್ಲಿಕಾ [೩]ಮೊದಲಾದ ಇತರ ಕೃತಿಗಳಿಗೂ ಯಥೋಚಿತವಾಗಿ ಅನ್ವಯಿಸುವ ವಿಶೇಷ ರೀತಿಯ ವರ್ಣನೆಯಾಗಿದೆ.

೬. ಈ ಶ್ಲೋಕದ ಬಗ್ಗೆ ಇನ್ನೂ ಹೆಚ್ಚಿನ ವಿವರಣೆಗಳನ್ನು ೧೯ನೆಯ ಸರ್ಗದ ಕೊನೆಯ ಶ್ಲೋಕದ ವಿವರಣೆಯಲ್ಲಿ ಕೊಡಲಾಗಿದೆ.

*****

---

೧. ವಿಷ್ಣುಭಕ್ತತ್ವಾತ್ ಉತ್ತಮ ಇತಿ ವಾ ಸ ಚಾಸೌ ವಾದಿರಾಜಾಖ್ಯೋ ಯತಿಶ್ಚ ತೇನೋದಿತೇ ಕೃತೇ ರುಗ್ಮಿಣೀಶವಿಜಯೇ ರುಗ್ಮಿಣೀಶವಿಜಯಾಖ್ಯೇ ಕಾವ್ಯೇ। -ವ್ಯಾ.

೨. ಸಂತೋ ವಾದಿರಾಜಾಃ ವಾದಿಶ್ರೇಷ್ಠಾಃ ಶುಕಾದಯಸ್ತೈರುದಿತೇ ಅಭಿವರ್ಣಿತೇ ರುಗ್ಮಿಣೀಶವಿಜಯೇ ರುಗ್ಮಿಣೀಶಸ್ಯ ಕೃಷ್ಣಸ್ಯ ವಿಜಯೇ ಪರಾಕ್ರಮೇ ಭುವಿ ಭೂಮೌ ಸಂಜಾತೇ ಸತಿ ಉಜ್ಜೃಂಭಿತೇ ಸತಿ ಸುರಮಂಡಲೀಷು ದೇವಶ್ರೇಣೀಷು ಮಹಿತಃ ಪೂಜಿತಃ ಮಹಾನ್ ವಾ। -ವ್ಯಾ.

೩. ಏಕೇನೈವ ಶ್ಲೋಕೇನ ಕಥಾಸಂಗ್ರಹಸ್ಯ ಪರಿಚ್ಛೇದಸ್ಯ ಚೋಕ್ತತ್ವಾದತಿಕೌಶಲಮಿದಮ್ । ಏವಮುತ್ತರತ್ರ ಸರ್ಗಪದ್ಯೇಷ್ವಪಿ ದ್ರಷ್ಟವ್ಯಮ್ । -ವ್ಯಾ.

# ೨. ದ್ವಿತೀಯ ಸರ್ಗ

(ಶ್ರೀಕೃಷ್ಣನ ಗೋಕುಲಪ್ರವೇಶ - ೧; ಗೃಹವೀಥಿಕಾವರ್ಣನೆ - ೨; ಸ್ಥಳದ ವರ್ಣನೆ - ೩; ದುರ್ಗೆಯ ಮಧುರಾಗಮನ - ೪,೫; ವಸುದೇವನ ನಿರ್ಗಮನ - ೬; ಪುನಃ ಗೃಹಪ್ರವೇಶ - ೭; ದುರ್ಗಾನುಗ್ರಹ - ೮; ಸೂರ್ಯೋದಯದ ವರ್ಣನೆ - ೯-೧೫; ನಂದಗೋಪನ ಸಂಭ್ರಮ-೧೬; ಅವನು ಮಾಡಿದ ದಾನದ ವೈಭವ-೧೭; ಗೋಕುಲದ ವರ್ಣನೆ- ೧೮-೨೧; ಪುನಃ ಸೂರ್ಯೋದಯದ ವರ್ಣನೆ;-೨೨-೨೫; ಶ್ರೀಕೃಷ್ಣನು ಗೋಪಾಲಕವಂಶದಲ್ಲಿ ಅವತರಿಸಲು ಕಾರಣ - ೨೬; ಶ್ರೀಕೃಷ್ಣನಿಗೆ ಜಾತಕರ್ಮ - ೨೭; ಶ್ರೀಕೃಷ್ಣನ ಸ್ತನಪಾನಕರ್ಮದ ವೈಭವ - ೨೮-೩೨; ಪೂತನಿಯ ಆಗಮನ - ೩೩-೩೫; ಪೂತನಾಸಂಹಾರ - ೩೬-೩೯; ಪೂತನಿಯು ತಾಟಕೆ - ೪೦; ಉರ್ವಶಿಗೆ ಸದ್ಗತಿ, ತಾಟಕೆಗೆ ದುರ್ಗತಿ - ೪೧; ದ್ವೇಷದಿಂದ ಮೋಕ್ಷವಿಲ್ಲ -೪೨-೫೨; ಜೀವದ್ವಯಾವೇಶದ ಸಮರ್ಥನೆ - ೫೩-೫೮; ದ್ವೇಷದಿಂದ ಮೋಕ್ಷ ಎಂಬುದರ ಆಂತರ್ಯ- ೫೮-೬೦; ಸರ್ಗೋಪಸಂಹಾರ - ೬೮)

### ಶ್ರೀಕೃಷ್ಣನ ಗೋಕುಲಪ್ರವೇಶ

ತತೋ ಯಶೋದಾಂ ಸ್ವಕುಲಸ್ಯ ಪುಣ್ಯ-
ಲಸದ್ಯಶೋದಾಂ ಹಿ ಕರಿಷ್ಯಮಾಣಃ ।
ಸ ಗೋಕುಲಂ ಗೋಕುಲಗೋಪಪುಂಜ-
ವಿಭೂಷಿತಂ ಪ್ರಾವಿಶದಬ್ಜನೇತ್ರಃ ॥ ೧ ॥

ಬಳಿಕ ಪುಂಡರೀಕಾಕ್ಷನಾದ ಶ್ರೀಕೃಷ್ಣನು ಯಶೋದೆಯನ್ನು ತನ್ನ ಕುಲಕ್ಕೆ ಪುಣ್ಯ ಹಾಗೂ ಹೊಳೆಯುವ ಕೀರ್ತಿ ನೀಡುವವಳನ್ನಾಗಿ ಮಾಡಲೆಂದು, ಗೋವುಗಳ ಸಮೂಹದಿಂದಲೂ ಗೋಪರ ವೃಂದದಿಂದಲೂ ವಿಭೂಷಿತವಾಗಿದ್ದ ಗೋಕುಲವನ್ನು ಪ್ರವೇಶಿಸಿದ.

ವಿ. : ೧. ಯಶೋದೆಯು [1]ಶ್ರೀಕೃಷ್ಣನ ಆರಾಧನೆಯಿಂದ ಪುಣ್ಯ ಹಾಗೂ ಕೀರ್ತಿಗಳನ್ನು ಪಡೆದದ್ದು ಲೋಕವಿಖ್ಯಾತ; ಅವಳಿಗೆ ಅಂತಹ ಅವಕಾಶವನ್ನು ನೀಡಲೆಂದೇ ಶ್ರೀಕೃಷ್ಣನು ಗೋಕುಲಕ್ಕೆ ತೆರಳಿದ ಎಂದರ್ಥ.

೨. ಇದರಂತೆ ಶ್ರೀಹರಿಯು ತನ್ನ ಭಕ್ತರಿಗೆ ಪುಣ್ಯ ಹಾಗೂ ಕೀರ್ತಿಗಳನ್ನು ನೀಡಲೆಂದೇ ಅವಕಾಶವನ್ನು ಕಲ್ಪಿಸುವನು ಎಂದು ತಿಳಿಯಬೇಕು; ವೃಂದ - ಸಮೂಹ.

### ಗೋಕುಲದ ಗೃಹವೀಥಿಕೆಯ ವರ್ಣನೆ

ವಿಕೀರ್ಣಪುಷ್ಪಾಂಬುದಲಂಬಿಚಂದ್ರ-
ಮಹಃಪತಾಕಾ ನವವಾರಿಸಿಕ್ತಾ ।
ಫಣೀಂದ್ರಕಂಠೋದರರತ್ನಕಾಂತಿ-
ವಿಚಿತ್ರಿತಾ ಸಾ ಗೃಹವೀಥಿಕಾऽऽಸೀತ್ [2] ॥ ೨ ॥

---

೧. ಪರಮಾತ್ಮನಃ ಪ್ರೀಣನೇನ ಕಸ್ಯ ಕುಲಸ್ಯ ಪುಣ್ಯಯಶ ಆದಿಕಂ ನ ಭವೇದಿತಿ ಭಾವಃ । -ವ್ಯಾ.

೨. ಚಂದ್ರಕಿರಣಸ್ಯ ಪತಾಕಾಕಾರತ್ವಾದಿತಿ ಭಾವಃ । ಪತಾಕಾಲಂಕೃತೇತ್ಯರ್ಥಃ । -ವ್ಯಾ.

ದಾರಿಯಲ್ಲಿ ಹರಡಿದ (ದೇವತೆಗಳು ಸುರಿಸಿದ) ಪುಷ್ಪಗಳು, ಮೋಡಗಳ ಮಧ್ಯದಿಂದ ಹೊರಹೊಮ್ಮುತ್ತಿದ್ದ ಚಂದ್ರಕಾಂತಿಯ ರೂಪದ ಪತಾಕೆ, ಆಗಷ್ಟೇ ಸುರಿದ ನೀರಿನಿಂದ ತೋಯ್ದಿದ್ದ ನೆಲ, ಆದಿಶೇಷನ ಕಂಠ ಹಾಗೂ ಉದರಗಳಲ್ಲಿನ ರತ್ನಗಳ ಕಾಂತಿಯ ಅಲಂಕಾರ; ಇವುಗಳಿಂದಾಗಿ, ಆ ನಂದಗೋಕುಲದ ಮಾರ್ಗವು ಕಂಗೊಳಿಸುತ್ತಿದ್ದಿತು.

ವಿ. : ೧. ಶ್ರೀಕೃಷ್ಣಾವತಾರದ ಬಳಿಕ ದೇವತೆಗಳು ಮಾಡಿದ ಪುಷ್ಪವೃಷ್ಟಿ ಹಾಗೂ ತುಂತುರುಮಳೆ ಸುರಿದ ವಿವರ ಹಿಂದೆ ಬಂದಿದೆ(೧/೬೦). ಅದರಿಂದಾಗಿ ಗೋಕುಲದ ಮಾರ್ಗಕ್ಕೆ ಹೊಸಬಗೆಯ ಶೋಭೆ ಉಂಟಾಗಿದ್ದ ವಿವರ ಇಲ್ಲಿದೆ.

೨. ಅಂಬುದ – ಮೇಘ; ವೀಥಿಕಾ – ಬೀದಿ, ಹಾದಿ; ವಿಕೀರ್ಣ – ಹರಡಿದ.

### ಗೋಕುಲದ ಸ್ಥಳದ ವರ್ಣನೆ

ಫಣಾವಲೀತೋರಣಭಾಗ್ವಿಮಾನ-
ವಿತಾನಯುಕ್ತೋರಗರಾಜಮೌಲೇಃ[೧] ।
ಪತತ್ಪಯೋಬಿಂದುಸಿತಾಕ್ಷತಾ ಸಾ
ಸ್ಥಲೀ ನಿಶೀಥೇಽಪಿ ವಿಭೂಷಿತೇವ[೨] ॥ ೩ ॥

ಹೆಡೆಗಳ ಸಾಲು ಎಂಬ ತೋರಣ ಹಾಗೂ ವಿಮಾನಗಳೆಂಬ ಪತಾಕೆಗಳಿಂದ ಕೂಡಿದ, ಉರಗ-ರಾಜನಾದ ಶೇಷನ ಮುಕುಟದಿಂದ ಸುರಿಯುತ್ತಿದ್ದ ಜಲಬಿಂದುಗಳೆಂಬ ಬಿಳಿದಾದ ಅಕ್ಷತೆ-ಗಳನ್ನು ಹೊಂದಿದ್ದ, ಆ ವ್ರಜಸ್ಥಳವು ಅರ್ಧರಾತ್ರಿಯಲ್ಲೂ[೩] ಸಿಂಗಾರಗೊಂಡಿದ್ದಂತೆ ತೋರುತ್ತಿದ್ದಿತು.

ವಿ. : ೧. ತೋರಣಗಳಂತೆ ಕಾಣುವ ಹೆಡೆಗಳ ಸಾಲು, ಅಕ್ಷತೆಗಳಂತೆ ಸುರಿಯುತ್ತಿದ್ದ ಶೇಷನ ಮುಕುಟದ ಜಲಬಿಂದುಗಳು, ಗೋಕುಲಕ್ಕೆ ವಿಶೇಷವಾದ ಶೋಭೆಯನ್ನು ನೀಡಿದ್ದವು ಎಂದು ಭಾವ.

೨. ಫಣ – ಹೆಡೆ ; ಸಿತ – ಶುಭ್ರ.

### ಗೋಕುಲಕ್ಕೆ ತೆರಳಲು ದುರ್ಗೆಯ ಸಂಕಲ್ಪ

ವಿಮುಕ್ತವರ್ಗಾಧಿಪತಿಂ ಪತಿಂ ಶ್ರೀಃ
ಶಿಶುಂ ತಮಾಲೋಕ್ಯ[೪] ಸುಲಜ್ಜಿತೇವ ।

---

೧. ತತ ಆರಭ್ಯ ನಂದಸ್ಯ ವ್ರಜಃ ಸರ್ವಸಮೃದ್ಧಿಮಾನ್ ।
ಹರೇರ್ನಿವಾಸಾನುಗುಣ್ಯೆ ರಮಾಕ್ರೀಡಮಭೂನ್ನೃಪ ॥ -ಭಾಗ.(೧೦/೬/೧೮)

೨. ರೂಪಕಾನುಪ್ರಾಸೋತ್ಪ್ರೇಕ್ಷಾಲಂಕಾರಾಃ। -ವ್ಯಾ.

೩. ಮಂಗಲಾರ್ಥಂ ಸುವಾಸಿನೀಪ್ರಯುಕ್ತಾಶೀರ್ವಾದಾಕ್ಷತಪ್ರಕ್ಷೇಪವತೀತ್ಯರ್ಥಃ। -ವ್ಯಾ.

೪. ನಿತ್ಯನೂತನವಯೋವಿಲಾಸಯುಕ್ತಾಯಾಃ ಸ್ವರಮಣಸಮೀಪೇ ಶೈಶವೇನಾವಸ್ಥಾನಂ ಲಜ್ಜಾಕರಮಿತಿ ಭಾವಃ। -ವ್ಯಾ.

## ೨. ದ್ವಿತೀಯ ಸರ್ಗ

(ಶ್ರೀಕೃಷ್ಣನ ಗೋಕುಲಪ್ರವೇಶ - ೧; ಗೃಹವೀಥಿಕಾವರ್ಣನೆ - ೨; ಸ್ಥಳದ ವರ್ಣನೆ - ೩; ದುರ್ಗೆಯ ಮಥುರಾಗಮನ - ೪,೫; ವಸುದೇವನ ನಿರ್ಗಮನ - ೬; ಪುನಃ ಗೃಹಪ್ರವೇಶ - ೭; ದುರ್ಗಾನುಗ್ರಹ - ೮; ಸೂರ್ಯೋದಯದ ವರ್ಣನೆ - ೯-೧೫; ನಂದಗೋಪನ ಸಂಭ್ರಮ-೧೬; ಅವನು ಮಾಡಿದ ದಾನದ ವೈಭವ-೧೭; ಗೋಕುಲದ ವರ್ಣನೆ- ೧೮-೨೧; ಪುನಃ ಸೂರ್ಯೋದಯದ ವರ್ಣನೆ-೨೨-೨೫; ಶ್ರೀಕೃಷ್ಣನು ಗೋಪಾಲಕವಂಶದಲ್ಲಿ ಅವತರಿಸಲು ಕಾರಣ - ೨೬; ಶ್ರೀಕೃಷ್ಣನಿಗೆ ಜಾತಕರ್ಮ - ೨೭; ಶ್ರೀಕೃಷ್ಣನ ಸ್ತನಪಾನಕರ್ಮದ ವೈಭವ - ೨೮-೩೨; ಪೂತನಿಯ ಆಗಮನ - ೩೩-೩೫; ಪೂತನಾಸಂಹಾರ - ೩೬-೩೯; ಪೂತನಿಯು ತಾಟಕೆ - ೪೦; ಊರ್ವಶಿಗೆ ಸದ್ಗತಿ, ತಾಟಕೆಗೆ ದುರ್ಗತಿ - ೪೧; ದ್ವೇಷದಿಂದ ಮೋಕ್ಷವಿಲ್ಲ-೪೨-೫೨; ಜೀವದ್ವಯಾವೇಶದ ಸಮರ್ಥನೆ - ೫೩-೫೮; ದ್ವೇಷದಿಂದ ಮೋಕ್ಷ ಎಂಬುದರ ಆಂತರ್ಯ- ೫೮-೬೦; ಸರ್ಗೋಪಸಂಹಾರ - ೬೮)

### ಶ್ರೀಕೃಷ್ಣನ ಗೋಕುಲಪ್ರವೇಶ

ತತೋ ಯಶೋದಾಂ ಸ್ವಕುಲಸ್ಯ ಪುಣ್ಯ-
ಲಸದ್ಯಶೋದಾಂ ಹಿ ಕರಿಷ್ಯಮಾಣಃ।
ಸ ಗೋಕುಲಂ ಗೋಕುಲಗೋಪಪುಂಜ-
ವಿಭೂಷಿತಂ ಪ್ರಾವಿಶದಬ್ಜನೇತ್ರಃ॥ ೧ ॥

ಬಳಿಕ ಪುಂಡರೀಕಾಕ್ಷನಾದ ಶ್ರೀಕೃಷ್ಣನು ಯಶೋದೆಯನ್ನು ತನ್ನ ಕುಲಕ್ಕೆ ಪುಣ್ಯ ಹಾಗೂ ಹೊಳೆಯುವ ಕೀರ್ತಿ ನೀಡುವವಳನ್ನಾಗಿ ಮಾಡಲೆಂದು, ಗೋವುಗಳ ಸಮೂಹದಿಂದಲೂ ಗೋಪರ ವೃಂದದಿಂದಲೂ ವಿಭೂಷಿತವಾಗಿದ್ದ ಗೋಕುಲವನ್ನು ಪ್ರವೇಶಿಸಿದ.

ವಿ. : ೧. ಯಶೋದೆಯು [೧]ಶ್ರೀಕೃಷ್ಣನ ಆರಾಧನೆಯಿಂದ ಪುಣ್ಯ ಹಾಗೂ ಕೀರ್ತಿಗಳನ್ನು ಪಡೆದದ್ದು ಲೋಕವಿಖ್ಯಾತ; ಅವಳಿಗೆ ಅಂತಹ ಅವಕಾಶವನ್ನು ನೀಡಲೆಂದೇ ಶ್ರೀಕೃಷ್ಣನು ಗೋಕುಲಕ್ಕ ತೆರಳಿದ ಎಂದರ್ಥ.

೨. ಇದರಂತೆ ಶ್ರೀಹರಿಯು ತನ್ನ ಭಕ್ತರಿಗೆ ಪುಣ್ಯ ಹಾಗೂ ಕೀರ್ತಿಗಳನ್ನು ನೀಡಲೆಂದೇ ಅವಕಾಶವನ್ನು ಕಲ್ಪಿಸುವನು ಎಂದು ತಿಳಿಯಬೇಕು; ವೃಂದ – ಸಮೂಹ.

### ಗೋಕುಲದ ಗೃಹವೀಥಿಕೆಯ ವರ್ಣನೆ

ವಿಕೀರ್ಣಪುಷ್ಪಾಂಬುದಲಂಬಿಚಂದ್ರ-
ಮಹಃಪತಾಕಾ ನವವಾರಿಸಿಕ್ತಾ।
ಫಣೀಂದ್ರಕಂಠೋದರರತ್ನಕಾಂತಿ-
ವಿಚಿತ್ರಿತಾ ಸಾ ಗೃಹವೀಥಿಕಾऽऽಸೀತ್ [೨]॥ ೨ ॥

---

೧. ಪರಮಾತ್ಮನಃ ಪ್ರೀಣನೇನ ಕಸ್ಯ ಕುಲಸ್ಯ ಪುಣ್ಯಯಶ ಆದಿಕಂ ನ ಭವೇದಿತಿ ಭಾವಃ। –ವ್ಯಾ.

೨. ಚಂದ್ರಕಿರಣಸ್ಯ ಪತಾಕಾಕಾರತ್ವಾದಿತಿ ಭಾವಃ। ಪತಾಕಾಲಂಕೃತೇತ್ಯರ್ಥಃ। –ವ್ಯಾ.

ದಾರಿಯಲ್ಲಿ ಹರಡಿದ (ದೇವತೆಗಳು ಸುರಿಸಿದ) ಪುಷ್ಪಗಳು, ಮೋಡಗಳ ಮಧ್ಯದಿಂದ ಹೊರಹೊಮ್ಮುತ್ತಿದ್ದ ಚಂದ್ರಕಾಂತಿಯ ರೂಪದ ಪತಾಕೆ, ಆಗಷ್ಟೇ ಸುರಿದ ನೀರಿನಿಂದ ತೋಯ್ದಿದ್ದ ನೆಲ, ಆದಿಶೇಷನ ಕಂಠ ಹಾಗೂ ಉದರಗಳಲ್ಲಿನ ರತ್ನಗಳ ಕಾಂತಿಯ ಅಲಂಕಾರ; ಇವುಗಳಿಂದಾಗಿ, ಆ ನಂದಗೋಕುಲದ ಮಾರ್ಗವು ಕಂಗೊಳಿಸುತ್ತಿದ್ದಿತು.

ವಿ. : ೧. ಶ್ರೀಕೃಷ್ಣಾವತಾರದ ಬಳಿಕ ದೇವತೆಗಳು ಮಾಡಿದ ಪುಷ್ಪವೃಷ್ಟಿ ಹಾಗೂ ತುಂತುರುಮಳೆ ಸುರಿದ ವಿವರ ಹಿಂದೆ ಬಂದಿದೆ(೧/೬೦). ಅದರಿಂದಾಗಿ ಗೋಕುಲದ ಮಾರ್ಗಕ್ಕೆ ಹೊಸಬಗೆಯ ಶೋಭೆ ಉಂಟಾಗಿದ್ದ ವಿವರ ಇಲ್ಲಿದೆ.

೨. ಅಂಬುದ – ಮೇಘ; ವೀಥಿಕಾ – ಬೀದಿ, ಹಾದಿ; ವಿಕೀರ್ಣ – ಹರಡಿದ.

### ಗೋಕುಲದ ಸ್ಥಳದ ವರ್ಣನೆ

ಫಣಾವಲೀತೋರಣಭಾಗ್ವಿಮಾನ-
ವಿತಾನಯುಕ್ತೋರಗರಾಜಮೌಲೇಃ[1] ।
ಪತತ್ಪಯೋಬಿಂದುಸಿತಾಕ್ಷತಾ ಸಾ
ಸ್ಥಲೀ ನಿಶೀಥೇಽಪಿ ವಿಭೂಷಿತೇವ[2] ॥ ೩ ॥

ಹೆಡೆಗಳ ಸಾಲು ಎಂಬ ತೋರಣ ಹಾಗೂ ವಿಮಾನಗಳೆಂಬ ಪತಾಕೆಗಳಿಂದ ಕೂಡಿದ, ಉರಗ-ರಾಜನಾದ ಶೇಷನ ಮುಕುಟದಿಂದ ಸುರಿಯುತ್ತಿದ್ದ ಜಲಬಿಂದುಗಳೆಂಬ ಬಿಳಿದಾದ ಅಕ್ಷತೆ-ಗಳನ್ನು ಹೊಂದಿದ, ಆ ವ್ರಜಸ್ಥಳವು ಅರ್ಧರಾತ್ರಿಯಲ್ಲೂ[3] ಸಿಂಗಾರಗೊಂಡಿದ್ದಂತೆ ತೋರುತ್ತಿದ್ದಿತು.

ವಿ. : ೧. ತೋರಣಗಳಂತೆ ಕಾಣುವ ಹೆಡೆಗಳ ಸಾಲು, ಅಕ್ಷತೆಗಳಂತೆ ಸುರಿಯುತ್ತಿದ್ದ ಶೇಷನ ಮುಕುಟದ ಜಲಬಿಂದುಗಳು, ಗೋಕುಲಕ್ಕೆ ವಿಶೇಷವಾದ ಶೋಭೆಯನ್ನು ನೀಡಿದ್ದವು ಎಂದು ಭಾವ.

೨. ಫಣ – ಹೆಡೆ ; ಸಿತ – ಶುಭ್ರ.

### ಗೋಕುಲಕ್ಕೆ ತೆರಳಲು ದುರ್ಗೆಯ ಸಂಕಲ್ಪ

ವಿಮುಕ್ತವರ್ಗಾಧಿಪತಿಂ ಪತಿಂ ಶ್ರೀಃ
ಶಿಶುಂ ತಮಾಲೋಕ್ಯ[4] ಸುಲಜ್ಜಿತೇವ ।

---

೧. ತತ ಆರಭ್ಯ ನಂದಸ್ಯ ವ್ರಜಃ ಸರ್ವಸಮೃದ್ಧಿಮಾನ್ ।
ಹರೇರ್ನಿವಾಸಾನುಗುಣ್ಯೈ ರಮಾಕ್ರೀಡಮಭೂನ್ನೃಪ ॥ –ಭಾಗ.(೧೦/೬/೧೮)

೨. ರೂಪಕಾನುಪ್ರಾಸೋತ್ಪ್ರೇಕ್ಷಾಲಂಕಾರಾಃ । –ವ್ಯಾ.

೩. ಮಂಗಲಾರ್ಥಂ ಸುವಾಸಿನೀಪ್ರಯುಕ್ತಾಶೀರ್ವಾದಾಕ್ಷತಪ್ರಕ್ಷೇಪವತೀತ್ಯರ್ಥಃ । –ವ್ಯಾ.

೪. ನಿತ್ಯನೂತನವಯೋವಿಲಾಸಯುಕ್ತಾಯಾಃ ಸ್ವರಮಣಸಮೀಪೇ ಶೈಶವೇನಾವಸ್ಥಾನಂ ಲಜ್ಜಾಕರಮಿತಿ ಭಾವಃ । –ವ್ಯಾ.

ಇಯೇಷ ದೋಷಾಂತರ ಏವ ಗಂತುಂ
ಸ್ವಯಂ ಗೃಹೀತಾರ್ಭಕರಮ್ಯರೂಪಾ ॥ ೪ ॥

ಮುಕ್ತರ ಗುಂಪಿಗೆ ಒಡೆಯನಾದ ತನ್ನ ಪತಿಯಾದ ಶ್ರೀಹರಿಯು ಶಿಶುರೂಪದಲ್ಲಿರುವುದನ್ನು ಕಂಡು ಬಹಳ ನಾಚಿದವಳಂತೆ ಮಹಾಲಕ್ಷ್ಮಿಯು ಆ ರಾತ್ರಿಯ ಮಧ್ಯದಲ್ಲಿಯೇ ತಾನು ಸಹ ಚಿಕ್ಕ ಮಗುವಿನ ಮನೋಹರರೂಪವನ್ನು ತಳೆದು ಅಲ್ಲಿಂದ ತೆರಳಬಯಸಿದಳು.

ವಿ. : ೧. ವಸುದೇವನು ಶ್ರೀಕೃಷ್ಣನನ್ನು ಗೋಕುಲದಲ್ಲಿರಿಸಿ, ಅಲ್ಲಿ ಅವತರಿಸಿದ್ದ ಶ್ರೀದುರ್ಗಾದೇವಿಯನ್ನು ತನ್ನೊಂದಿಗೆ ಮಧುರೆಗೆ ಕರೆದೊಯ್ದ ವಿವರ ಶ್ರೀಮದ್ಭಾಗವತದಲ್ಲಿ ಪ್ರಸಿದ್ಧ. ಆ ಪ್ರಸಂಗವನ್ನು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು; **ದೋಷಾಂತರ** – ರಾತ್ರಿಮಧ್ಯ; **ಅರ್ಭಕ** – ಶಿಶು.

೨. ಶ್ರೀಹರಿಯು ಸಕಲ [೧] ಮುಕ್ತವರ್ಗಕ್ಕೂ ಅಧಿಪತಿಯಾದ ಸರ್ವತಂತ್ರ ಸ್ವತಂತ್ರ, ಅಂತಹವನು ಶ್ರೀಕೃಷ್ಣರೂಪದಿಂದ ಅವತರಿಸಿ, ಹೀಗೆ ಪ್ರಾಕೃತಶಿಶುವಿನಂತೆ ಇರುವುದನ್ನು ಕಂಡು ಅವನ ಪತ್ನಿಯಾದ ಮಹಾಲಕ್ಷ್ಮಿಗೆ ಲಜ್ಜೆ ಎನಿಸಿತು. ಅದಕ್ಕಾಗಿ ದುರ್ಗಾರೂಪದಿಂದ ಅವತರಿಸಿದ್ದ ಅವಳು ತಾನೂ ಸಹ ಆ ರಾತ್ರಿಯಲ್ಲಿಯೇ ಬೇರೆಡೆಗೆ ತೆರಳಲು ನಿಶ್ಚಯಿಸಿದಳು ಎಂದರ್ಥ.

೩. [೨] ಶಿಶುರೂಪ ಧರಿಸಿದ ತಾನು ಸಹ ತನ್ನ ಪತಿಯಾದ ನಾರಾಯಣನಿಗೆ ಆ ರೂಪದಲ್ಲಿ ಕಾಣಿಸಬಯಸದೆ ಬೇರೆಡೆಗೆ ತೆರಳಲು ಇಚ್ಛಿಸಿದಳು ಎಂಬ ಭಾವವೂ ಇಲ್ಲಿದೆ.

### ದುರ್ಗೆಗೆ ಶ್ರೀಕೃಷ್ಣನ ವಿಯೋಗವಿಲ್ಲ

ಹರೇಃ ಪ್ರಿಯಾ ತದ್ಭಗಿನೀತ್ವಮದ್ಯ
ಹ್ಯುಪೇಯುಷೀ ತತ್ರ ನ ಸಾ ಸ್ಥಿರಾऽऽಸೀತ್ ।
ಮನೋಜ್ಞಮೂರ್ತ್ಯಂತರತಸ್ತದೀಯ-
ವಿಶಾಲವಕ್ಷಃಸ್ಥಲಮೇತ್ಯ ತೃಪ್ತಾ ॥ ೫ ॥

ಮನೋಹರವಾದ ತನ್ನ ಮತ್ತೊಂದು ರೂಪದಿಂದ ಅವನ ವಿಶಾಲವಾದ ವಕ್ಷಃಸ್ಥಳದಲ್ಲಿ ನೆಲೆಸಿ ಸಂತೃಪ್ತಳಾದ ಶ್ರೀಹರಿಯ ಪತ್ನಿಯಾದ ಆ ದುರ್ಗೆಯು, ಅವನ ತಂಗಿ ಎನ್ನಿಸಿದ್ದರಿಂದ ಆ ಗೋಕುಲದಲ್ಲಿ ಸ್ಥಿರವಾಗಿ ನೆಲೆಸದವಳಾದಳು.

ವಿ. : ೧. ದುರ್ಗಾದೇವಿಯು ಗೋಕುಲದಿಂದ ತೆರಳಲು ಮತ್ತೊಂದು ಕಾರಣವನ್ನು ಇಲ್ಲಿ ನೀಡಿರುವರು.

---

೧. ವಿಮುಕ್ತಪ್ರಭೋಃ ಪರಮಪುರುಷಸ್ಯ ಉತ್ಪನ್ನಶಿಶುಭಾವಪ್ರದರ್ಶನಂ ಪ್ರಾಕ್ ಸ್ವಾತ್ಮನಾ ಸಹ ಕೃತವಿಲಾಸಸ್ಯ ಸ್ವಪತೇಃ ಶೈಶವಂ ಚ ಲಜ್ಜಾಕರಮಿತಿ ಭಾವಃ। –ವ್ಯಾ.

೨. ಲಜ್ಜಾವಾನಪಿ ರಾತ್ರಾವೇವ ಚರತಿ ನ ತು ದಿವಾ ತದ್ವದಿತಿ ಭಾವಃ। –ವ್ಯಾ.

೨. ವಸುದೇವನು ಶೂರರಾಜನ ಕ್ಷತ್ರಿಯಸ್ತ್ರೀಯ ಪುತ್ರ; ನಂದಗೋಪ ಅವನ ವೈಶ್ಯಸ್ತ್ರೀಯ ಪುತ್ರ; ಇದರಿಂದಾಗಿ ಅವರಿಬ್ಬರೂ ಶೂರರಾಜನ ಮಕ್ಕಳೇ ಆದ್ದರಿಂದ ವಸುದೇವ-ನಂದಗೋಪರು ಅಣ್ಣತಮ್ಮಂದಿರೆನ್ನಿಸುವರು. ಶ್ರೀಕೃಷ್ಣನು ವಸುದೇವಪುತ್ರತ್ವೇನ ಅವತರಿಸಿದರೆ ದುರ್ಗಾದೇವಿಯು ನಂದಗೋಪನ ಪುತ್ರೀತ್ವೇನ ಅವತರಿಸಿದಳು. ಅಣ್ಣತಮ್ಮಂದಿರಾದ ವಸುದೇವನಂದಗೋಪರ ಮಕ್ಕಳಾದ ಅವರಿಬ್ಬರೂ ಹೀಗೆ ಅಣ್ಣ-ತಂಗಿ ಎನ್ನಿಸುವಂತಾಯಿತು. ನಿಜಕ್ಕೂ ಪತಿಪತ್ನಿಯರಾದ ತಾವು ಅಣ್ಣತಂಗಿಯರು ಎಂದು ಲೋಕದೃಷ್ಟಿಗೆ ಕಾಣುವುದರಿಂದ ಹಾಗೆ ಜೊತೆ ಇರುವುದು ತರವಲ್ಲ ಎಂದು ಭಾವಿಸಿಯೋ ಎಂಬಂತೆ ದುರ್ಗೆಯು ಗೋಕುಲದಿಂದ ತೆರಳಿದಳು ಎಂಬುದು ಇದರ ಭಾವ.

೩. ಇದರಿಂದ[೧] ಲೋಕಕ್ಕೆ ಅಣ್ಣತಂಗಿಯರ ಸಂಬಂಧದ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಜೊತೆ-ಯಾಗಿರುವಿಕೆಯು ಸಲ್ಲದು ಎಂಬ ತತ್ತ್ವವೂ ಸಹ ಅವರಿಂದ ಸೂಚಿತವಾಯಿತು.

೪. ಹೀಗೆ ಶ್ರೀಕೃಷ್ಣದುರ್ಗೆಯರು ಬೇರೆ ಸ್ಥಳಗಳಲ್ಲಿ ನೆಲೆಸುವಂತಾದ್ದರಿಂದ ಅವರಿಬ್ಬರಿಗೂ ವಿಯೋಗವುಂಟಾಯಿತು ಎಂಬ ಪ್ರಶ್ನೆಗೂ ಇದರಲ್ಲಿ ಉತ್ತರವಿದೆ. ಸದಾ ಒಂದು ರೂಪದಿಂದ ಶ್ರೀಹರಿಯ ವಕ್ಷಸ್ಥಳದಲ್ಲಿ ಮಹಾಲಕ್ಷ್ಮಿಯು ನೆಲೆಸಿರುವುದರಿಂದ ಅವರಿಬ್ಬರಿಗೂ ಯಾವುದೇ ಬಗೆಯ ವಿಯೋಗವೂ ಸರ್ವಥಾ ಇಲ್ಲವೇ ಇಲ್ಲ ಎಂದರ್ಥ; **ರಾಮಾಂತಿಕೇ ಸ್ಥಿತಾ ದೇವೀ ನ ಮಂದೈಃ ಸಮದೃಶ್ಯತ** (ಮಣಿಮಂಜರೀ-೨/೨) ಎಂಬಂತೆ ಇದನ್ನು ತಿಳಿಯಬೇಕು.

೫. ಇದರಿಂದ ಈ ದುರ್ಗಾರೂಪವು ಸಾಕ್ಷಾತ್ ಲಕ್ಷ್ಮೀರೂಪ; ಕೆಲವರು ಭಾವಿಸಿರುವಂತೆ ಪಾರ್ವತಿಯ ದುರ್ಗಾರೂಪವಲ್ಲ ಎಂದೂ ತಿಳಿಯಬೇಕು.

### ವಸುದೇವನ ಕೈಗೆ ದುರ್ಗೆಯ ಆಗಮನದ ಅಂತರಾರ್ಥ

**ಮುಕುಂದಸೇವಾರ್ಹಫಲಂ ಸ್ಮ ತಾವ-**
**ದ್ವಹನ್ನಿವಾಥಾನಕದುಂದುಭಿಸ್ತಾಮ್ ।**
**ಶಿಶುಸ್ವರೂಪಾಂ ಕಮಲಾಂ ಸ್ವಹಸ್ತೇ**
**ಸ ಬಿಭ್ರದಭ್ಯಾಗಮದಾತ್ಮವಾಸಮ್ ॥ ೬ ॥**

ಮುಕುಂದನ ಸೇವೆಗೆ ತಕ್ಕ ಫಲವೆಂಬಂತೆ[೨] ಶಿಶುರೂಪದ ಆ ಮಹಾಲಕ್ಷ್ಮಿಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ವಸುದೇವ ತನ್ನ ಗೃಹಕ್ಕೆ ಮರಳಿದ.

೧. ಲೌಕಿಕಧರ್ಮಾನುಕಾರಿಣ್ಯಾಃ ಅತ್ರಾವಸ್ಥಿತೌ ರತ್ಯಾದಿಪ್ರಯೋಜನಾಭಾವಾದಿತಿ ಭಾವಃ। -ವ್ಯಾ.

೨. ದೇವಕ್ಯಾಃ ಶಯನೇ ನ್ಯಸ್ಯ ವಸುದೇವೋಽಥ ದಾರಿಕಾಮ್ ।
ಪ್ರತಿಮುಚ್ಯ ಪದೋರ್ಲೋಹಮಾಸ್ತೇ ಪೂರ್ವವದಾವೃತಃ॥ -ಭಾಗ.(೧೦/೪/೫೨)

ವಿ. : ೧. ವಸುದೇವನ ಕೈಗೆ ದುರ್ಗೆ ಬಂದದ್ದು ಅವನು ಮಾಡಿದ ಶ್ರೀಹರಿಯ ಸೇವೆಯ ಫಲ; ಎಂದರೆ ಸಾಕ್ಷಾತ್ ಶ್ರೀಹರಿಯಾದ ಶ್ರೀಕೃಷ್ಣನ ಸೇವೆಗೆ ಪ್ರತಿಫಲವೋ ಎಂಬಂತೆ ದುರ್ಗಾರೂಪದ ಮಹಾಲಕ್ಷ್ಮಿ ಅವನ ಕೈಗೆ ದೊರೆತಳು ಎಂದರ್ಥ.

೨. ಇದರಿಂದ ದೇವಪೂಜಾದಿರೂಪದ ಆರಾಧನೆಯನ್ನು ಮಾಡುವವರ ಕೈಗೆ ಅಪಾರ ಸಂಪತ್ತು ಲಭಿಸುವುದು ಎಂಬ ಫಲಶ್ರುತಿಯು ಸೂಚಿತ; ದೇವಪೂಜೆಯಿಂದ ಧರ್ಮಾದಿ ಸಕಲಪುರುಷಾರ್ಥಗಳೂ ಲಭಿಸುವವು ಎಂಬ ಮಾತಿಗೆ ಇದು ನಿದರ್ಶನದಂತಿದೆ:

ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ।
ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥ (ಕೃ.ಮ.-೨೧)

**ಕಂಸನ ಮೃತ್ಯುವಿನಂತೆ ಆಗಮಿಸಿದ ದುರ್ಗೆ**

**ಸುತಂ ಯಶೋದಾಶಯನೇ ನಿಧಾಯ**
**ವಿರಿಂಚಪೂರ್ವಾಮರಮುಖ್ಯತಾತಮ್ ।**
**ವಿವೇಶ ಕಂಸಸ್ಯ ಗೃಹಂ ಸ ಶೌರಿಃ**
**ಪ್ರಗೃಹ್ಯ ತನ್ಮೃತ್ಯುಮಿವಾಂಬಿಕಾಂ ತಾಮ್ ॥ ೭ ॥**

ಮಗನಾಗಿ ಅವತರಿಸಿದ, ಬ್ರಹ್ಮ ಮೊದಲಾದ ದೇವತೆಗಳಿಗೆಲ್ಲಾ ಮುಖ್ಯ ಜನಕನಾದ, ಶ್ರೀಕೃಷ್ಣನನ್ನು ಯಶೋದೆಯ ಹಾಸಿಗೆಯಲ್ಲಿ ಮಲಗಿಸಿ, ಆ ವಸುದೇವನು, ಕಂಸನ ಮೃತ್ಯುದೇವತೆಯನ್ನೆಂಬಂತೆ ಆ ದುರ್ಗೆಯನ್ನು ಕರೆದುಕೊಂಡು, ಕಂಸನಿರಿಸಿದ್ದ ಸೆರೆಮನೆಯನ್ನು ಪ್ರವೇಶಿಸಿದ.

ವಿ. : ೧. [೧]ಶ್ರೀಕೃಷ್ಣನು ಹೆಸರಿಗೆ ವಸುದೇವನ ಪುತ್ರ ಎನ್ನಿಸಿದರೂ ವಾಸ್ತವವಾಗಿ ಬ್ರಹ್ಮಾದಿ ಸಕಲ ದೇವತೆಗಳಿಗೂ ತಂದೆ ಎನ್ನಿಸಿದ ಸಾಕ್ಷಾತ್ ಶ್ರೀಹರಿ; ಅದರಂತೆ ದುರ್ಗೆಯೂ ಜಗನ್ಮಾತೆಯಾದ ಮಹಾಲಕ್ಷ್ಮಿ.

೨. ವಸುದೇವ ಶ್ರೀಕೃಷ್ಣನನ್ನು ಅಲ್ಲಿ ಮಲಗಿಸಿ, ದುರ್ಗೆಯನ್ನು ತನ್ನೊಂದಿಗೆ ಒಯ್ದದ್ದು ವಾಸ್ತವವಾಗಿ ಕಂಸನ ಪಾಲಿಗೆ ಮೃತ್ಯುದೇವತೆಯನ್ನೇ ಒಯ್ದಂತಾಯಿತು ಎಂದು ಭಾವ.

೩.. ದುರ್ಗೆಯು ತಮೋಭಿಮಾನಿನಿ. ತಮಸ್ಸು ಅಜ್ಞಾನ, ಮೃತ್ಯುಗಳಿಗೆ ಸಂಕೇತ. ಅಂತಹ ದುರ್ಗೆಯ ಬಾಯಿಯಿಂದಲೇ ಕಂಸನಿಗೆ ಮೃತ್ಯುವಾಗಿ ಶ್ರೀಕೃಷ್ಣನು ಆಗಲೇ ಜನಿಸಿರುವನು

೧. ಅನೇನ ಶ್ರೀಕೃಷ್ಣಸ್ಯ ಸುತತ್ವಮೌಪಚಾರಿಕಮಿತಿ ಗಮ್ಯತೇ । -ವ್ಯಾ.

ಎಂಬ ವಾರ್ತೆಯು ಕಂಸನಿಗೆ ತಲುಪುವುದರಿಂದ [೧] ದುರ್ಗೆ ಅವನ ಪಾಲಿಗೆ ಮೃತ್ಯುದೇವತೆಯೇ ಆಗುವಳು ಎಂಬುದು ಅರ್ಥವತ್ತಾದ ನಿರೂಪಣೆ.

### ದೇವಕಿಯ ತಲ್ಪದಲ್ಲಿ ನೆಲೆಸಿದ ದುರ್ಗೆ

ಪ್ರಭಾತಕಾಲೇ ಖಲಮಭ್ರಗಾ ಸಾ
ಪ್ರಬೋಧ್ಯ ಬಂಧಾತ್ ಪಿತರೌ ವಿಯೋಜ್ಯ ।
[೨] ಹರೇರ್ವಿಯೋಗೋದಿತಚಿತ್ತಚಿಂತಾಂ
ಬಿಭೇದ ಮಾತುಃ ಶಯನೀಯಸಂಸ್ಥಾ ॥ ೮ ॥

ಆ ದುರ್ಗೆಯು ಪ್ರಾತಃಕಾಲದಲ್ಲಿ ಆಕಾಶಕ್ಕೆ ನೆಗೆದು, ಕಂಸನಿಗೆ ಅವನ ಸಾವಿನ ವಿವರ ತಿಳಿಸಿದಳು; ವಸುದೇವದೇವಕಿಯರ ಬಂಧನವನ್ನು ಬಿಡಿಸಿದಳು; ದೇವಕಿಯ ಹಾಸಿಗೆಯಲ್ಲಿ ಪವಡಿಸುವ ಮೂಲಕ ದೇವಕಿಗೆ ಶ್ರೀಕೃಷ್ಣನ ವಿಯೋಗದಿಂದ ಉಂಟಾಗಿದ್ದ ಮನೋ-ವ್ಯಾಕುಲವನ್ನು ಪರಿಹರಿಸಿದಳು.

ವಿ. : ೧. ದುರ್ಗೆಯಿಂದಾದ ಅನೇಕ ಕಾರ್ಯಗಳನ್ನು ಇಲ್ಲಿ ವಿವರಿಸಲಾಗಿದೆ.

೨. ತನ್ನ ಮೃತ್ಯುವೆಂದು ಬಗೆದು ತನ್ನನ್ನು ಕೊಲ್ಲಬಂದ ಕಂಸನಿಗೆ ಅವನ ನಿಜವಾದ ಮೃತ್ಯುವಾದ ಶ್ರೀಕೃಷ್ಣನು ಆಗಲೇ ಅವತರಿಸಿದ್ದನ್ನು ದುರ್ಗೆಯು ತಿಳಿಸಿದಳು. ಆ ಬಳಿಕ ಪಶ್ಚಾತ್ತಾಪದ ನಾಟಕವಾಡಿದ ಕಂಸ ವಸುದೇವದೇವಕಿಯರನ್ನು ಬಂಧಮುಕ್ತರನ್ನಾಗಿಸಿದ. ದುರ್ಗೆಯು ಅನಂತರ ಇತರ ಯಾರಿಗೂ ಗೋಚರಿಸದೆ ದೇವಕಿಯ ತಲ್ಪದಲ್ಲಿ ನೆಲೆಸಿ, ಅವಳಿಗೆ ಶ್ರೀಕೃಷ್ಣನ ವಿಯೋಗದ ನೋವುಂಟಾಗದಂತೆ ಅನುಗ್ರಹಿಸಿದಳು ಎಂದರ್ಥ.

೩.. ದುರ್ಗೆಯು ಇತರರ ಕಣ್ಣಿಗೆ ಅದೃಶ್ಯಳಾಗಿ ವಸುದೇವದೇವಕಿಯರ ಕಣ್ಣಿಗೆ ಮಾತ್ರ ಸದಾ ಗೋಚರಿಸುತ್ತಾ ಅವರಿಗೆ ಪುತ್ರವಿಯೋಗದ ನೋವು ಉಂಟಾಗದಂತೆ ನೋಡಿಕೊಂಡಳು ಎಂಬ ಇಲ್ಲಿಯ [೩] ವಿವರ ಮಹಾಭಾರತತಾತ್ಪರ್ಯನಿರ್ಣಯದ ವಿವರಣೆಯಾಗಿದೆ. (೧೨/೭೨):

ಉಕ್ತ್ವೇತಿ ಕಂಸಂ ಪುನರೇವ ದೇವಕೀತಲ್ಪೇಽಶಯದ್ಬಾಲರೂಪೈವ ದುರ್ಗಾ ।
ನಾಜ್ಞಾಸಿಷುಸ್ತಾಮಥ ಕೇಚನಾತ್ರ ಋತೇ ಹಿ ಮಾತಾಪಿತರೌ ಗುಣಾಢ್ಯಾಮ್ ॥

---

೧. ಯಶೋದಾಶಯನೇ ಯಶೋದಾಪರ್ಯಂಕೇ ನಿಧಾಯ ತಾಂ ಅಂಬಿಕಾಂ ದುರ್ಗಾಂ ತಸ್ಯ ಕಂಸಸ್ಯ ಮೃತ್ಯುಮಿವ ಪ್ರಗೃಹ್ಯ ದುರ್ಗಾಯಾಃ ಸಂಹಾರಮೂರ್ತಿತ್ವಾದಿತಿ ಭಾವಃ । -ವ್ಯಾ.

೨. ಕಿಂ ಮಯಾ ಹತಯಾ ಮಂದ ಜಾತಃ ಖಲು ತವಾಂತಕಃ ।
ಯತ್ರ ಕ್ವಚಿತ್ ಪೂರ್ವಶತ್ರುರ್ಮಾ ಹಿಂಸೀಃ ಕೃಪಣಾಂ ವೃಥಾ ॥ -ಭಾಗ.(೧೦/೫/೧೨)

೩.. ಸಾ ಕನ್ಯಾ ವವೃಧೇ ತತ್ರ ವೃಷ್ಣಿಸಂಘಸುಪೂಜಿತಾ ।
ಪುತ್ರವತ್ ಪಾಲ್ಯಮಾನಾ ಸಾ ವಸುದೇವಾಜ್ಞಯಾ ತದಾ ॥ -ಹರಿವಂಶ (ವಿಷ್ಣುಪರ್ವ,೪/೪೬)
ದುರ್ಗಾವಚನಂ ನಿಶಮ್ಯ ತೌ ನಿರಪರಾಧಿನಾವಿತಿ ಕಂಸಃ ಬಂಧಾದ್ವಿಮೋಚಯಾಮಾಸೇತಿ ಪೌರಾಣಿಕೀ ಕಥಾ । - ದೇವಕೀಂ ವಸುದೇವಂ ಚ ವಿಮುಚ್ಯ ಪ್ರಶ್ರಿತೋಽಬ್ರವೀತ್ । ಇತಿ ಭಾಗ.(೧೦/೪/೧೪)

## ಸೂರ್ಯೋದಯದ ವರ್ಣನೆ

ಸ್ನಾತ್ವಾ ಪೂರ್ವಪಯೋನಿಧಾವಚಲಸತ್ಪೀಠಾಧಿರೂಢಃ ಕರೈಃ
ಪದ್ಮಾನಿ ಪ್ರತಿಗೃಹ್ಯ ಸಾಂದ್ರತಿಮಿರಾಣ್ಯುನ್ಮೂಲ್ಯ ರಾಗಾವೃತಃ।
ಸಿಂಜತ್ಪಕ್ಷಿಗಣಾನ್ನಿಶಮ್ಯ ಪರಮಂ ಕೃಷ್ಣಾವತಾರಂ ರವಿ-
ಸ್ತತ್ಪೂಜಾರ್ಥಮಿವೋದಿತೋ [1]ವ್ರಜಗೃಹದ್ವಾರೇಷು ತಾನ್ ಪ್ರಾಹಿಣೋತ್ ॥೯॥

ಉಲಿಯುವ ಪಕ್ಷಿಗಳ ಹಿಂಡುಗಳ ಮೂಲಕ ಉತ್ತಮವಾದ ಶ್ರೀಕೃಷ್ಣಾವತಾರವನ್ನು ಕೇಳಿಸಿ-ಕೊಂಡ ಸೂರ್ಯನು, ಪೂರ್ವಸಮುದ್ರದಲ್ಲಿ ಮಿಂದು, ಉದಯಾಚಲವೆಂಬ ಉತ್ತಮ ಪೀಠದಲ್ಲಿ ಕುಳಿತು, ದಟ್ಟವಾದ ಕತ್ತಲೆಯನ್ನು ನಾಶಗೈದು, ತನ್ನ ಕೈ(ಕಿರಣ)ಗಳಿಂದ ಪದ್ಮಗಳನ್ನು ಹಿಡಿದು, ಅನುರಾಗದಿಂದ ಕೂಡಿದವನಾಗಿ ಅವುಗಳನ್ನು ಅವನ ಪೂಜೆಗೋಸ್ಕರವೆಂಬಂತೆ ಗೋಕುಲದ ಮಂದಿರಗಳ ಬಾಗಿಲುಗಳಲ್ಲಿ ಹರಡಿದ.

ವಿ. : ೧. ಒಬ್ಬ ಅರ್ಚಕನು ಪ್ರಾತಃಕಾಲದಲ್ಲಿ ಸ್ನಾನಪೂರೈಸಿ, ಉತ್ತಮಪೀಠದಲ್ಲಿ ಕುಳಿತು, ಬೆಳಕಿನಿಂದ ದೀಪಬೆಳಗುವ ಮೂಲಕ ಕತ್ತಲೆಯನ್ನು ಪರಿಹರಿಸಿ, ಭಕ್ತಿಯಿಂದ ಕೂಡಿ, ಕೈಗಳಲ್ಲಿ ಕಮಲಪುಷ್ಪಗಳನ್ನು ಹಿಡಿದು, ಧಾವಿಸಿಬರುವಂತೆ ಸೂರ್ಯನು ಪೂರ್ವಸಾಗರದಲ್ಲಿ ಮಿಂದು, ಉದಯಾಚಲ ಪೀಠದಲ್ಲಿ ಮಂಡಿಸಿ, ಕೈಗಳಲ್ಲಿ ಕಮಲಗಳನ್ನು ಹಿಡಿದು, ದೀಪದಿಂದ ದಟ್ಟವಾದ ಕತ್ತಲೆಯನ್ನು ಕಳೆದು, ಭಕ್ತಿಯಿಂದ ಶ್ರೀಕೃಷ್ಣನ ಪೂಜೆಗೆಂದು ಧಾವಿಸಿ, ಕೈಯಲ್ಲಿಯ ಪದ್ಮಗಳನ್ನು ಗೋಕುಲದ ಮನೆಮನೆಗಳ ಮಹಾದ್ವಾರಗಳಲ್ಲೂ ಸಮರ್ಪಿಸಿದನು[2] ಎಂದು ಭಾವ.

೨. ಶ್ರೀಕೃಷ್ಣಾವತಾರದ ಮಾರನೆಯ ದಿನದ ಸೂರ್ಯೋದಯವನ್ನು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು; ಪಯೋನಿಧಿ – ಸಮುದ್ರ; ವ್ರಜ – ಹಟ್ಟಿ.

೩. ಇದರಿಂದ ಸೂರ್ಯನು ಭಗವದಾರಾಧಕನಾದ ಸೂರ್ಯನೇ ಸರ್ವೋತ್ತಮ ಎಂಬ ಸೌರಮತವು ನಿರಾಕೃತವಾಯಿತೆಂದು ತಿಳಿಯಬೇಕು; ಅದರಂತೆ ಗಾಯತ್ರೀಮಂತ್ರವು ಈ ಸೂರ್ಯಮಂತ್ರವಾಗಿರದೆ ಸೂರ್ಯಾಂತರ್ಗತನಾದ ಭಾರತೀರಮಣ ಮುಖ್ಯಪ್ರಾಣಾಂತ-ರ್ಯಾಮಿಯಾದ ಶ್ರೀನಾರಾಯಣನ ಮಂತ್ರ ಎಂಬ ಸೂಚನೆಯನ್ನು ಸಹ ಗ್ರಹಿಸಬೇಕು.

---

೧. ಗೋಷ್ಠಂ ಘೋಷ ಇತಿ ಪ್ರೋಕ್ತೋ ವ್ರಜಸ್ತತ್ಪಾಲಸಂಸ್ಥಿತಿಃ। -ಭಾ.ತಾ.(೪/೧೮/೩.೧)

೨. ವ್ರಜಗೃಹದ್ವಾರೇಷು ಕ್ವ ಕೃಷ್ಣಸ್ತಿಷ್ಠತೀತಿ ಸಕಲಗೃಹೇಷು ವಿಚಾರಯಿತುಮಿವ ತಾನ್ ಕರಾನ್ ಪೂಜಾಕಾರ್ಯಂ ಕರ್ತುಂ ಹಸ್ತಪ್ರಸಾರಣವತ್ಪ್ರೇಷಿತವಾನ್ । ಅತ್ರ ಸೂರ್ಯಾರ್ಚಕಯೋಃ ತುಲ್ಯಧರ್ಮಾಣಾಂ ಬಿಂಬಪ್ರತಿಬಿಂಬ-ಭಾವತ್ವೇನ ತುಲ್ಯಯೋಗಿತ್ವಹೇತುಕದೃಷ್ಟಾಂತಾನುಪ್ರಾಣತೋತ್ಪ್ರೇಕ್ಷಾಲಂಕಾರಃ। -ವ್ಯಾ.

### ಕಮಲದಂತೆ ಹೊಳೆದ ಸೂರ್ಯ

ಸುಮೇರುಸಂಸ್ಥೈರಮರ್ತ್ಯೈರುಪಾಯಾತ್
ಸಮುದ್ಧೃತಂ ವಿಷ್ಣುಪದಾರ್ಚನಾಯ ।
ಸಮುದ್ರವಾಪೀಸ್ಥಸಹಸ್ರಪತ್ರ-
ಮಿವೋದಿತೋ ಭಾತಿ ಸಹಸ್ರರಶ್ಮಿಃ ॥ ೧೦ ॥

ಶ್ರೇಷ್ಠವಾದ ಮೇರುಪರ್ವತದಲ್ಲಿ ನೆಲೆಸಿರುವ ದೇವತೆಗಳು ಮಹಾವಿಷ್ಣುವಿನ ಪಾದವನ್ನು ಪೂಜಿಸಲೆಂದು ಉಪಾಯದಿಂದ ಸಮುದ್ರವೆಂಬ ಸರೋವರದಿಂದ ಎತ್ತಿತಂದ ಸಾವಿರದಳ-ಗಳ ಕಮಲವೋ ಎಂಬಂತೆ ಸಹಸ್ರಕಿರಣನಾದ ಸೂರ್ಯ ಕಂಗೊಳಿಸಿದ.

ವಿ. : ೧. ಗಗನದಲ್ಲಿ ಉದಿಸಿರುವ ಸೂರ್ಯನನ್ನು ಕಮಲಕ್ಕೆ ಹೋಲಿಸುವ ಇಲ್ಲಿಯ ವರ್ಣನೆ ಅತ್ಯಂತ ರೋಚಕ.

೨. ಗಗನದಲ್ಲಿನ ಸೂರ್ಯನು ಮೇರುಪರ್ವತದ ದೇವತೆಗಳು ವಿಷ್ಣುವಿನ ಪಾದಪೂಜೆಗೆಂದು ಸಮುದ್ರದಿಂದ ಮೇಲೆತ್ತಿದ ಕಮಲಪುಷ್ಪದಂತೆ ಕಾಣುತ್ತಿದ್ದ ಎಂಬುದು ಇದರ ಭಾವ.

೩. ಕಮಲಪುಷ್ಪ ಸಹಸ್ರದಳಗಳಿಂದ ಕೂಡಿದ್ದರೆ, ಸೂರ್ಯ ಸಹಸ್ರಕಿರಣನಾದವನು; ಆದರಿಂದಾಗಿ, ಸೂರ್ಯನನ್ನು ಕಮಲಪುಷ್ಪ ಎಂದು ಕರೆದಿರುವುದು ಉಚಿತವಾಗಿದೆ.

೪. ಸಾವಿರದಳದ ಕಮಲ ಸಾಮಾನ್ಯ ಸರೋವರಗಳಲ್ಲಿ ಬೆಳೆಯಲಾರದು; ಆದರಿಂದಾಗಿ ಅದನ್ನು ಸಮುದ್ರದಲ್ಲಿನ ಕಮಲ ಎಂದು ಕರೆದಿರುವರು. ಸೂರ್ಯೋದಯಕಾಲದಲ್ಲಿ ಸೂರ್ಯನು ಸಮುದ್ರದಿಂದ ಮೇಲೆದ್ದು ಬರುವಂತೆ ಕಾಣುವುದನ್ನು ಆಧರಿಸಿ, ಈ ಮಾತು ಬಂದಿದೆ; ಸಹಸ್ರಪತ್ರ – ಕಮಲ; ಸಹಸ್ರರಶ್ಮಿ – ಸೂರ್ಯ.

೫. ಮಹಾಕಾವ್ಯಕ್ಕೆ ಅಗತ್ಯವೆನ್ನಿಸಿರುವ ಸೂರ್ಯೋದಯದ ವರ್ಣನೆ ಈ ಶ್ಲೋಕದಲ್ಲಿದೆ.

### ಸೂರ್ಯೋದಯದಲ್ಲಿ ಅರಳಿದ ಕಮಲಗಳು

ದಿವಿ ದ್ಯುರತ್ನೇಽಭ್ಯುದಿತೇಽಂಬುಜಾನಿ
ಭುವಿ ಪ್ರಸೇದುರ್ಭುವನೋದಯಾನಿ ।
ಇಹ ಪ್ರಜಾತೇ ಯದುವಂಶರತ್ನೇ
ಸುರಾನನಾಬ್ಜಾನಿ ಚ ನಾಕಿಲೋಕೇ ॥ ೧೧ ॥

ಗಗನಮಣಿಯಾದ ಸೂರ್ಯನು ಗಗನದಲ್ಲಿ ಉದಿಸುತ್ತಿದ್ದಂತೆ ಭೂಮಿಗೆ ಉಲ್ಲಾಸ ನೀಡುವ ಕಮಲಗಳು ಭೂಮಿಯಲ್ಲಿ ಅರಳಿದವು; ಇಲ್ಲಿ ಯದುವಂಶಮಣಿಯಾದ ಶ್ರೀಕೃಷ್ಣನು ಅವತರಿಸುತ್ತಿದ್ದಂತೆ ದೇವಲೋಕದಲ್ಲಿನ ದೇವತೆಗಳ ಮುಖಕಮಲಗಳು ಅರಳಿದವು.

ವಿ. : ೧. [1]ಸೂರ್ಯೋದಯದಿಂದ ಭೂಮಿಯ ಕಮಲಗಳು ಅರಳಿದಂತೆ ಕೃಷ್ಣಾವತಾರ-ದಿಂದ ದೇವಲೋಕದ ಸುರರ ಮುಖಕಮಲಗಳು ಅರಳಿದವು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಗಗನದ ಸೂರ್ಯನಿಂದ ಭೂಮಿಯಲ್ಲಿನ ಕಮಲಗಳು ಅರಳಿದವು; ಭೂಮಿಯಲ್ಲಿ ಅವತರಿಸಿದ ಕೃಷ್ಣನೆಂಬ ಸೂರ್ಯನಿಂದ ದೇವತೆಗಳ ಮುಖಕಮಲಗಳು ಅರಳಿದವು ಎಂಬಲ್ಲಿ [2]ಸೂರ್ಯನಿಂದ ಭೂಮಿಗೆ ಮಂಗಳವಾದರೆ ಶ್ರೀಕೃಷ್ಣನಿಂದ ದೇವತೆಗಳಿಗೆ ಮಂಗಳವಾಯಿತು ಎಂಬ ಭಾವವನ್ನು ಕಾಣಬಹುದು.

೩. ಶ್ರೀಕೃಷ್ಣನು ಅವತರಿಸುತ್ತಿದ್ದಂತೆ ದೇವತಾಕಾರ್ಯ ಪೂರೈಸುವುದು ಎಂದು ದೇವತೆಗಳು ನಲಿದರು ಎಂಬುದು ಒಟ್ಟು ತಾತ್ಪರ್ಯ; ದ್ಯುರತ್ನ – ಸೂರ್ಯ.

### ವಂದಿಮಾಗಧಸೂತರು ಮಾಡಿದ ಸ್ತುತಿ

**ತರುವ್ರಜೇ ಪಕ್ಷಿಗಣಾಶ್ಚರಂತೋ**
**ಜಗುರ್ನಿರೀಕ್ಷ್ಯೋದಯಮುಷ್ಣರಶ್ಮೇಃ ।**
**ವ್ರಜೇ ಚ ದುಷ್ಟೋಷ್ಣಲಸನ್ಮರೀಚೇಃ**
**ಸಮಾಗತಾ ಮಾಗಧಬಂದಿಸೂತಾಃ ॥ ೧೨ ॥**

ವೃಕ್ಷಗಳ ಹಿಂಡಿನಲ್ಲಿ ಅಲೆಯುವ ಪಕ್ಷಿಗಳ ಹಿಂಡುಗಳು, ಸೂರ್ಯೋದಯವನ್ನು ಕಂಡು ಉಲಿದವು; ಗೋಕುಲದಲ್ಲಿ ದುಷ್ಟರಿಗೆ ಸೂರ್ಯಪ್ರಾಯನಾದ ಶ್ರೀಕೃಷ್ಣನು ಅವತರಿಸಿದ್ದನ್ನು ಕಂಡು, ಅಲ್ಲಿ ನೆರೆದಿದ್ದ ವಂದಿಮಾಗಧಸೂತರು, ಅವನನ್ನು ಸ್ತುತಿಸಿದರು.

ವಿ. : ೧. ಪಕ್ಷಿಗಳಿಗೆ ಸೂರ್ಯೋದಯದಿಂದ ಕತ್ತಲೆ ಕಳೆದ ನಲಿವು ಉಂಟಾಗಿದ್ದರೆ ವಂದಿ-ಮಾಗಧರಿಗೆ ಶ್ರೀಕೃಷ್ಣನ ಅವತಾರದಿಂದ ದುಷ್ಟರು ಅಳಿಯುವ ಸಂಭ್ರಮ ಉಂಟಾಗಿತ್ತು ಎಂದು ಭಾವ.

೨. ಮಾಗಧ, ಬಂದಿ, ಸೂತರು ಎಂದರೆ ಸ್ತುತಿಪಾಠಕರು ಎಂದರ್ಥ; [3]ವಾಕ್ಯರೂಪವಾದ ತಮ್ಮ ರಚನೆಗಳಿಂದ ಸ್ತುತಿಸುವವರು ಮಾಗಧರು, ಇತರರ ವಾಕ್ಯರೂಪ ಕೃತಿಗಳನ್ನು ಹಾಡುವವರು ಬಂದಿಗಳು, ಗದ್ಯಪದ್ಯರೂಪ ಸ್ತುತಿಗಳನ್ನು ಉಚ್ಚರಿಸುವವರು ಸೂತರು ಎಂಬ ವಿವರ ವ್ಯಾಖ್ಯಾನದಲ್ಲಿದೆ.

---

೧. ಸೂರ್ಯೋದಯೇ ಕಮಲವಿಕಾಸವಚ್ಛ್ರೀಕೃಷ್ಣೋದಯೇ ದೇವಾನಾಂ ಮುಖವಿಕಾಸೋ ಜಾತ ಇತಿ ಭಾವಃ ।–ವ್ಯಾ.

೨. ಭೂಲೋಕೋದಿತಶ್ರೀಕೃಷ್ಣಪ್ರಕಾಶಸ್ಯೋರ್ಧ್ವಗಾಮಿತ್ವಾದಾಕಾಶೋದಿತಸೂರ್ಯಪ್ರಕಾಶಸ್ಯಾಧೋಗಾಮಿ-ತ್ವಾಚ್ಚ ದ್ವಯಮಪಿ ಯುಕ್ತಮಿತಿ ಭಾವಃ । –ವ್ಯಾ.

೩. ಮಾಗಧಬಂದಿಸೂತಾಃ – ಸ್ವಕೃತವಾಕ್ಯರೂಪಸ್ತುತಿಪರಕೃತವಾಕ್ಯರೂಪಸ್ತುತಿಗದ್ಯಪದ್ಯರೂಪಸ್ತುತಿಪಾಠಕರ್ತಾರಃ ಪಾಠಕವಿಶೇಷಾಃ । –ವ್ಯಾ.

೩. ವ್ರಜ - ಸಮೂಹ, ಗೋಕುಲ; ಉಷ್ಣರಶ್ಮಿ - ಸೂರ್ಯ.

### ನಲಿವಿನಿಂದ ಸಂಚರಿಸಿದ ಗೋಪಿಯರು

ತದಾ ಸ್ವವಂಶ್ಯೈಃ ಸಹ ರಾಜಹಂಸ್ಯೋ
ಜನೈರ್ವ್ಯದೃಶ್ಯಂತ ಶನೈಶ್ಚರಂತ್ಯಃ।
ಬೃಹನ್ನಿತಂಬಸ್ತನಭಾರಭೀರು-
ತನುಸ್ಫುರನ್ಮಧ್ಯಯುತಾಶ್ಚ ಗೋಪ್ಯಃ॥ ೧೩ ॥

ಆಗ ಹೆಣ್ಣು [೧]ರಾಜಹಂಸಪಕ್ಷಿಗಳು ತಮ್ಮ ವಂಶದ ಇತರ ಪಕ್ಷಿಗಳೊಂದಿಗೆ ಮೆಲ್ಲನೆ ಓಡಾಡು-ವುದನ್ನು ಜನರು ಕಂಡರು; ಅದರಂತೆ ಬೃಹನ್ನಿತಂಬ ಹಾಗೂ ಸ್ತನಗಳ ಭಾರಕ್ಕೆ ಅಂಜಿ ಮೆಲ್ಲನೆ ನಡೆಯುವ ಹೊಳೆಯುವ ತೆಳುನಡುವಿನ ಗೋಪಿಯರು ತಮ್ಮವರೊಂದಿಗೆ ಕಾಣಿಸಿಕೊಂಡರು.

ವಿ. : ೧. ಉತ್ಸವಗಳಲ್ಲಿ ಸ್ತ್ರೀಯರ ಪ್ರಾಧಾನ್ಯವು ವಿಶೇಷ ಎಂಬುದು ಇದರಿಂದ ತಿಳಿಯುವುದು: ಅನೇನ ಲೋಕೇ ಸ್ತ್ರೀಣಾಂ ಪ್ರಾಧಾನ್ಯಂ ಧ್ವನ್ಯತೇ। - ವ್ಯಾ.

೨. ಸ್ತ್ರೀಯರು ಹಂಸಗಮನೆಯರು ಎಂಬ ಹಿನ್ನೆಲೆಯಲ್ಲಿ ಇಲ್ಲಿಯ ನಿರೂಪಣೆ ಅತ್ಯಂತ ಔಚಿತ್ಯಪೂರ್ಣವಾದುದು; ಶನೈಃ - ಮೆಲ್ಲನೆ.

### ಗೋಪಿಯರ ನಲಿವಿಗೆ ಕಾರಣ

ಕೃಷ್ಣಂ ಸ್ವಕಾಂತಮಧುನೈವ ವಶಂ ವಿಧಾತು-
ಮುತ್ಕಾನ್ವಿತಾ ಇವ ಮನೋಹರಕೋಮಲಾಂಗ್ಯಃ[೨]।
ವ್ಯಾಲೋಲಹಾರಸರಕುಂಡಲಕುಂತಲೋದ್ಯ-
ಚ್ಚೇಲಾಂತನೂಪುರರುಚಃ ಪಥಿ ತಾ ವಿರೇಜುಃ[೩]॥ ೧೪ ॥

ತಮ್ಮ ಕಾಂತನಾದ ಶ್ರೀಕೃಷ್ಣನನ್ನು ಆಗಲೇ ವಶಪಡಿಸಿಕೊಳ್ಳಲು ತವಕ ಹೊಂದಿದವರಂತೆ, ಗೋಕುಲದಲ್ಲಿನ ಮನೋಹರ ಕೋಮಲಾಂಗಿಯರಾದ ಗೋಪಿಯರು, ಚಲಿಸುವ ಮುತ್ತಿನ-ಮಾಲೆಗಳ, ಸರಗಳ, ಕುಂಡಲಗಳ, ಮುಂಗುರುಳುಗಳ, ಹೊಳೆಯುವ ಉತ್ತರೀಯಗಳ, ಕಾಲ್ಗೆಜ್ಜೆಗಳ ಕಾಂತಿಯಿಂದ ಕೂಡಿದವರಾಗಿ ಮಾರ್ಗದಲ್ಲಿ ರಾರಾಜಿಸಿದರು.

---

೧. ಪ್ರಾತರ್ಯಾಶೋದಾಯಾಂ ಪುತ್ರೋತ್ಪತ್ತಿಂ ಶ್ರುತ್ವಾ ತದ್ಗೃಹಂ ಪ್ರತ್ಯಾಗಚ್ಛಂತ್ಯೋ ಜನೈರ್ವ್ಯದೃಶ್ಯಂತೇತ್ಯರ್ಥಃ। - ವ್ಯಾ.

೨. ಗೋಪ್ಯಃ ಸುಮೃಷ್ಟಮಣಿಕುಂಡಲನಿಷ್ಕಕಂಠ್ಯಃ ಚಿತ್ರಾಂಬರಾಃ ಪಥಿ ಶಿಖಾಚ್ಯುತಮಾಲ್ಯವರ್ಷಾಃ।
ನಂದಾಲಯಂ ಸವಲಯಾ ವ್ರಜತೀರ್ವಿರೇಜುಃ ವ್ಯಾಲೋಲಕುಂಡಲಪಯೋಧರಹಾರಶೋಭಾಃ॥
- ಭಾಗ. (೧೦/೬/೧೧)

೩. ವಸಂತತಿಲಕಾವೃತ್ತಮ್ - ವ್ಯಾ.

ವಿ. : ಶ್ರೀಕೃಷ್ಣಾವತಾರದ ಸಂಭ್ರಮದಲ್ಲಿ ಗೋಪಿಯರು ಮಹೋತ್ಸವವನ್ನು ಆಚರಿಸಿದ್ದು ಕೃಷ್ಣನನ್ನು ಆಗಲೇ ವಶಪಡಿಸಿಕೊಳ್ಳುವ, ಅವರ ಕಾತರತೆಯಿಂದೆಂಬಂತೆ ಕಾಣುತ್ತಿದ್ದಿತು ಎಂದು ಭಾವ[1]; ಚೇಲ – ವಸ್ತ್ರ; ಉತ್ಕ – ಉತ್ಸುಕ.

**ನಂದನು ಮಾಡಿದ ಅಪಾರಸಂಖ್ಯೆಯ ಗೋದಾನ**

**ಸಹಸ್ರಶೋ ಗೋಗಣಮುಷ್ಣದೀಪ್ತಿಃ**
**ಸಮರ್ಪಯಾಮಾಸ ಪದೇ ಮುರಾರೇಃ।**
**ಸುವರ್ಣಭಾಸಂವಲಿತಾಂಶ್ಚ ನಂದಃ**
**ಸ್ವಗೋಗಣಾನ್ ವಿಪ್ರಕುಲಾಯ ದತ್ತಾನ್ ॥ ೧೫ ॥**

ಸೂರ್ಯನು ವಿಷ್ಣುಪದವಾದ ಆಕಾಶದಲ್ಲಿ ಸಾವಿರಸಂಖ್ಯೆಯಲ್ಲಿ ತನ್ನ ಕಿರಣಗಳನ್ನು ಸಮರ್ಪಿಸಿದ; ವಿಪ್ರವೃಂದಕ್ಕೆ ತಾನು ನೀಡಿದ ಸುವರ್ಣದ ಕಾಂತಿಯಿಂದ ಕೂಡಿದ ತನ್ನ ಗೋವುಗಳ ಹಿಂಡನ್ನು ನಂದನು ಶ್ರೀಕೃಷ್ಣನ ಪಾದದಲ್ಲಿ ಸಮರ್ಪಿಸಿದ.

ವಿ. : ೧. ಸೂರ್ಯನು ಆಕಾಶದಲ್ಲಿ ತನ್ನ ಕಿರಣಗಳನ್ನು ಹರಡುತ್ತಿದ್ದಂತೆ ಪುತ್ರೋತ್ಸವದ ಸಂಭ್ರಮದಿಂದ ನಂದನು ಸಾವಿರ ಸಂಖ್ಯೆಗಳಲ್ಲಿ ಗೋವುಗಳನ್ನು ಬ್ರಾಹ್ಮಣರಿಗೆ ದಾನವಾಗಿತ್ತನು ಎಂದು ಭಾವ.

೨. ಪುತ್ರೋತ್ಸವ ಕಾಲದಲ್ಲಿ ಗೋದಾನವು ವಿಹಿತ ಎಂಬುದು ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ. ಬಂಧನದಲ್ಲಿದ್ದ [2]ವಸುದೇವನು ಸಹ ಕೃಷ್ಣಾವತಾರವಾಗುತ್ತಿದ್ದಂತೆ ಅಸಂಖ್ಯ ಗೋವುಗಳನ್ನು ದಾನನೀಡುವ ಸಂಕಲ್ಪವನ್ನು ಮಾಡಿದ್ದ ಎಂಬ ವಿವರ ಶ್ರೀಮದ್ಭಾಗವತ (೧೦/೬/೩.) ದಲ್ಲಿದೆ:

**ಧೇನೂನಾಂ ನಿಯುತೇ ಪ್ರಾದಾದ್ ವಿಪ್ರೇಭ್ಯಃ ಸಮಲಂಕೃತೇ।**
**ತಿಲಾದ್ರೀನ್ ಸಪ್ತ ರತ್ನೌಘಾನ್ ಶಾತಕುಂಭಾಂತರಾವೃತಾನ್ ॥**

೩. ವಿಷ್ಣುಪದ ಎಂದರೆ ಆಕಾಶ. [3]ಸೂರ್ಯನ ಕಿರಣಗಳು ಗಗನದಲ್ಲಿ ಪಸರಿಸಿದವು. ಶ್ರೀಕೃಷ್ಣನ ಪಾದದಲ್ಲಿ ಸೂರ್ಯ ತನ್ನ ಕೈಗಳನ್ನಿರಿಸಿದ ಎಂಬ ಎರಡು ಅರ್ಥಗಳೂ ವಿವಕ್ಷಿತ.

೪. ನಂದನು ಗೋವುಗಳನ್ನು [4]ಕೃಷ್ಣಾರ್ಪಣ ಬುದ್ಧಿಯಿಂದ ಬ್ರಾಹ್ಮಣರಿಗೆ ಸಮರ್ಪಿಸಿದ ಎಂದು ಭಾವ; ಉಷ್ಣದೀಪ್ತಿ – ಸೂರ್ಯ.

---

೧. ಹಾರಾದೀನಾಂ ಚಾಂಚಲ್ಯವಿಲಾಸೇನ ಪೂರ್ಣತಯಾ ಸ್ಥಿರಚಿತ್ತಮಪಿ ಚಾಂಚಲ್ಯಂ ದತ್ವಾ ವಶೀಕರ್ತುಮಿವೇತ್ಯರ್ಥಃ। –ವ್ಯಾ.

೨. ಸ್ವಕೃತಗೋದಾನಂ ಶ್ರೀಕೃಷ್ಣಾರ್ಪಿತಂ ಚಕಾರೇತ್ಯರ್ಥಃ। –ವ್ಯಾ.

೩.. ಸ್ವಕಿರಣೈರಾಕಾಶಂ ಪ್ರಕಾಶಿತವಾನಿತ್ಯರ್ಥಃ। –ವ್ಯಾ.

೪. ವೈಷ್ಣವಾ ಹಿ ಸ್ವದೀಯಮಾನಸಕಲದಾನಾದಿಸತ್ಕರ್ಮಫಲಂ ಶ್ರೀಕೃಷ್ಣಾರ್ಪಣಂ ಕುರ್ವಂತೀತಿ ಭಾವಃ। –ವ್ಯಾ.

೫. ಉದಿಸುವ ಸೂರ್ಯನ ಕಿರಣಗಳು [೧] ಹೊಂಬಣ್ಣದಿಂದ ಕೂಡಿದ್ದರೆ ನಂದ ಸಮರ್ಪಿಸಿದ ಗೋವುಗಳು, ಸುವರ್ಣದಿಂದ ಅಲಂಕೃತವಾಗಿದ್ದವು ಎಂಬುದು ವಿಶೇಷ.

**ಗೋದಾನದ ಉದ್ದೇಶ**

**ಸ ನಂದಗೋಪಃ ಪ್ರದದೌ ದ್ವಿಜೇಭ್ಯೋ**
**ಬಹೂನಿ ಗೋರೂಪಧನಾನಿ ವಿಷ್ಣೋಃ।**
**ತಟೀಷು ಗೋಭಿಃ ಸಹ ಸಂಚರಿಷ್ಣೋಃ**
**ಸಹಸ್ರಶಸ್ತಾ ಇವ ಸಾಧಯಿಷ್ಯನ್ [೨] ॥ ೧೬ ॥**

ಗೋವರ್ಧನದ ತಪ್ಪಲಲ್ಲಿ ಗೋವುಗಳೊಂದಿಗೆ ಸಂಚರಿಸುವ ಶ್ರೀಕೃಷ್ಣನಿಗೆ ಸಾವಿರ ಸಂಖ್ಯೆ-ಯಲ್ಲಿ ಒದಗಿಸಿಕೊಡಲೋ ಎಂಬಂತೆ ಆ ನಂದಗೋಪನು ದ್ವಿಜರಿಗೆ ಬಹುಸಂಖ್ಯೆಯಲ್ಲಿ ಗೋರೂಪದ ಸಂಪತ್ತುಗಳನ್ನು ನೀಡಿದ.

ವಿ. : ೧. ಮುಂದೆ ಶ್ರೀಕೃಷ್ಣನು ಗೋವುಗಳನ್ನು ಕಾಯುವಾಗ ಅವರ ಹಿರಿಮೆಗೆ ತಕ್ಕಂತೆ ಅವುಗಳ ಸಂಖ್ಯೆ ಅಪಾರವಾಗಿ ಇರಬೇಕು ಎಂದು ಯೋಚಿಸಿದ ನಂದಗೋಪ ಅದಕ್ಕೆ ಉಪಾಯವಾಗಿ ತನ್ನಲ್ಲಿನ ಗೋವುಗಳನ್ನು ಬ್ರಾಹ್ಮಣರಿಗೆ ದಾನನೀಡಿದ. ಹಾಗೆ ದಾನನೀಡಿದ ಅವು ಅಪಾರವಾಗಿ ಬೆಳೆದು, ತನಗೆ ಲಭಿಸುವುದರಿಂದ ಶ್ರೀಕೃಷ್ಣನ ಸೇವೆಗೆ ಅವಕಾಶ ಲಭಿಸುವುದು ಎಂಬುದು ಅವನ ಅಭಿಪ್ರಾಯವಾಗಿತ್ತು ಎಂದರ್ಥ.

೨. ಇದರಿಂದ ದಾನವಾಗಿ ನೀಡಿದ ವಸ್ತುಗಳು ಅಸಂಖ್ಯವಾಗಿ ಪುನಃ ತಮಗೇ ಲಭಿಸುವವು ಎಂಬ ತತ್ತ್ವವು ಸೂಚಿತ. ದಾನನೀಡುವುದು ಎಂದರೆ ತನ್ನೆಲ್ಲಾ ವಸ್ತುಗಳನ್ನು ಉಳಿಸಿಕೊಳ್ಳುವುದು ಹಾಗೂ ಹೆಚ್ಚಿಸಿಕೊಳ್ಳುವುದು ಎಂದೇ ಅರ್ಥ ಎಂಬ ತತ್ತ್ವವನ್ನು ಈ ಮೂಲಕವಾಗಿ ಸೂಚಿಸಿರುವರು : ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಮ್ - ದ್ವಾದಶಸ್ತೋತ್ರ(೮/೧೦); **ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ** (ಹರಿಕಥಾಮೃತಸಾರ -೨/೧೫).

೩. ಇದು ಬಾಲಮಧ್ವರಿಗೆ ಕ್ಷೀರಪಾನಕ್ಕೆಂದು ಗೋದಾನ ಮಾಡುವ ಮೂಲಕ ಮುಕ್ತಿಯ ಹಾದಿಯನ್ನು ಕಂಡುಕೊಂಡ ಮೂಡಿಲ್ಲಾಯ ಬ್ರಾಹ್ಮಣರ ಪ್ರಸಂಗವನ್ನು ಜ್ಞಾಪಿಸುವಂತಿದೆ: ''ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್'' (ಸುಮಧ್ವವಿಜಯ - ೨/೩.೦); **ತಟೀಷು** - ತಪ್ಪಲುಗಳಲ್ಲಿ.

೧. ಅನೇನ ಕಿರಣಾನಾಂ ರಾಗವದ್ರಾಗೋ ಧ್ವನ್ಯತೇ। -ವ್ಯಾ.
೨. ಉತ್ಪ್ರೇಕ್ಷಾ। -ವ್ಯಾ.

ವಿ. : ಶ್ರೀಕೃಷ್ಣಾವತಾರದ ಸಂಭ್ರಮದಲ್ಲಿ ಗೋಪಿಯರು ಮಹೋತ್ಸವವನ್ನು ಆಚರಿಸಿದ್ದು ಕೃಷ್ಣನನ್ನು ಆಗಲೇ ವಶಪಡಿಸಿಕೊಳ್ಳುವ, ಅವರ ಕಾತರತೆಯಿಂದೆಂಬಂತೆ ಕಾಣುತ್ತಿದ್ದಿತು ಎಂದು ಭಾವ[೧]; ಚೇಲ - ವಸ್ತ್ರ; ಉತ್ಕ - ಉತ್ಸುಕ.

### ನಂದನು ಮಾಡಿದ ಅಪಾರಸಂಖ್ಯೆಯ ಗೋದಾನ

ಸಹಸ್ರಶೋ ಗೋಗಣಮುಷ್ಣದೀಪ್ತಿಃ
ಸಮರ್ಪಯಾಮಾಸ ಪದೇ ಮುರಾರೇಃ।
ಸುವರ್ಣಭಾಸಂವಲಿತಾಂಶ್ಚ ನಂದಃ
ಸ್ವಗೋಗಣಾನ್ ವಿಪ್ರಕುಲಾಯ ದತ್ತಾನ್ ॥ ೧೫ ॥

ಸೂರ್ಯನು ವಿಷ್ಣುಪದವಾದ ಆಕಾಶದಲ್ಲಿ ಸಾವಿರಸಂಖ್ಯೆಯಲ್ಲಿ ತನ್ನ ಕಿರಣಗಳನ್ನು ಸಮರ್ಪಿಸಿದ; ವಿಪ್ರವೃಂದಕ್ಕೆ ತಾನು ನೀಡಿದ ಸುವರ್ಣದ ಕಾಂತಿಯಿಂದ ಕೂಡಿದ ತನ್ನ ಗೋವುಗಳ ಹಿಂಡನ್ನು ನಂದನು ಶ್ರೀಕೃಷ್ಣನ ಪಾದದಲ್ಲಿ ಸಮರ್ಪಿಸಿದ.

ವಿ. : ೧. ಸೂರ್ಯನು ಆಕಾಶದಲ್ಲಿ ತನ್ನ ಕಿರಣಗಳನ್ನು ಹರಡುತ್ತಿದ್ದಂತೆ ಪುತ್ರೋತ್ಸವದ ಸಂಭ್ರಮದಿಂದ ನಂದನು ಸಾವಿರ ಸಂಖ್ಯೆಗಳಲ್ಲಿ ಗೋವುಗಳನ್ನು ಬ್ರಾಹ್ಮಣರಿಗೆ ದಾನವಾಗಿತ್ತನು ಎಂದು ಭಾವ.

೨. ಪುತ್ರೋತ್ಸವ ಕಾಲದಲ್ಲಿ ಗೋದಾನವು ವಿಹಿತ ಎಂಬುದು ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ. ಬಂಧನದಲ್ಲಿದ್ದ [೨]ವಸುದೇವನು ಸಹ ಕೃಷ್ಣಾವತಾರವಾಗುತ್ತಿದ್ದಂತೆ ಅಸಂಖ್ಯ ಗೋವುಗಳನ್ನು ದಾನನೀಡುವ ಸಂಕಲ್ಪವನ್ನು ಮಾಡಿದ್ದ ಎಂಬ ವಿವರ ಶ್ರೀಮದ್ಭಾಗವತ (೧೦/೬/೩.) ದಲ್ಲಿದೆ:

ಧೇನೂನಾಂ ನಿಯುತೇ ಪ್ರಾದಾದ್ ವಿಪ್ರೇಭ್ಯಃ ಸಮಲಂಕೃತೇ।
ತಿಲಾದ್ರೀನ್ ಸಪ್ತ ರತ್ನೌಘಾನ್ ಶಾತಕುಂಭಾಂತರಾವೃತಾನ್ ॥

೩. ವಿಷ್ಣುಪದ ಎಂದರೆ ಆಕಾಶ. [೩]ಸೂರ್ಯನ ಕಿರಣಗಳು ಗಗನದಲ್ಲಿ ಪಸರಿಸಿದವು. ಶ್ರೀಕೃಷ್ಣನ ಪಾದದಲ್ಲಿ ಸೂರ್ಯ ತನ್ನ ಕೈಗಳನ್ನಿರಿಸಿದ ಎಂಬ ಎರಡು ಅರ್ಥಗಳೂ ವಿವಕ್ಷಿತ.

೪. ನಂದನು ಗೋವುಗಳನ್ನು [೪]ಕೃಷ್ಣಾರ್ಪಣ ಬುದ್ಧಿಯಿಂದ ಬ್ರಾಹ್ಮಣರಿಗೆ ಸಮರ್ಪಿಸಿದ ಎಂದು ಭಾವ; ಉಷ್ಣದೀಪ್ತಿ - ಸೂರ್ಯ.

---

೧. ಹಾರಾದೀನಾಂ ಚಾಂಚಲ್ಯವಿಲಾಸೇನ ಪೂರ್ಣತಯಾ ಸ್ಥಿರಚಿತ್ತಮಪಿ ಚಾಂಚಲ್ಯಂ ದತ್ವಾ ವಶೀಕರ್ತುಮಿವೇತ್ಯರ್ಥಃ। -ವ್ಯಾ.

೨. ಸ್ವಕೃತಗೋದಾನಂ ಶ್ರೀಕೃಷ್ಣಾರ್ಪಿತಂ ಚಕಾರೇತ್ಯರ್ಥಃ। -ವ್ಯಾ.

೩.. ಸ್ವಕಿರಣೈರಾಕಾಶಂ ಪ್ರಕಾಶಿತವಾನಿತ್ಯರ್ಥಃ। -ವ್ಯಾ.

೪. ವೈಷ್ಣವಾ ಹಿ ಸ್ವದೀಯಮಾನಸಕಲದಾನಾದಿಸತ್ಕರ್ಮಫಲಂ ಶ್ರೀಕೃಷ್ಣಾರ್ಪಣಂ ಕುರ್ವಂತೀತಿ ಭಾವಃ। -ವ್ಯಾ.

೫. ಉದಿಸುವ ಸೂರ್ಯನ ಕಿರಣಗಳು [೧]ಹೊಂಬಣ್ಣದಿಂದ ಕೂಡಿದ್ದರೆ ನಂದ ಸಮರ್ಪಿಸಿದ ಗೋವುಗಳು, ಸುವರ್ಣದಿಂದ ಅಲಂಕೃತವಾಗಿದ್ದವು ಎಂಬುದು ವಿಶೇಷ.

### ಗೋದಾನದ ಉದ್ದೇಶ

ಸ ನಂದಗೋಪಃ ಪ್ರದದೌ ದ್ವಿಜೇಭ್ಯೋ
ಬಹೂನಿ ಗೋರೂಪಧನಾನಿ ವಿಷ್ಣೋಃ ।
ತಟೀಷು ಗೋಭಿಃ ಸಹ ಸಂಚರಿಷ್ಣೋಃ
ಸಹಸ್ರಶಸ್ತಾ ಇವ ಸಾಧಯಿಷ್ಯನ್ [೨] ॥ ೧೬ ॥

ಗೋವರ್ಧನದ ತಪ್ಪಲಲ್ಲಿ ಗೋವುಗಳೊಂದಿಗೆ ಸಂಚರಿಸುವ ಶ್ರೀಕೃಷ್ಣನಿಗೆ ಸಾವಿರ ಸಂಖ್ಯೆಯಲ್ಲಿ ಒದಗಿಸಿಕೊಡಲೋ ಎಂಬಂತೆ ಆ ನಂದಗೋಪನು ದ್ವಿಜರಿಗೆ ಬಹುಸಂಖ್ಯೆಯಲ್ಲಿ ಗೋರೂಪದ ಸಂಪತ್ತುಗಳನ್ನು ನೀಡಿದ.

ವಿ. : ೧. ಮುಂದೆ ಶ್ರೀಕೃಷ್ಣನು ಗೋವುಗಳನ್ನು ಕಾಯುವಾಗ ಅವರ ಹಿರಿಮೆಗೆ ತಕ್ಕಂತೆ ಅವುಗಳ ಸಂಖ್ಯೆ ಅಪಾರವಾಗಿ ಇರಬೇಕು ಎಂದು ಯೋಚಿಸಿದ ನಂದಗೋಪ ಅದಕ್ಕೆ ಉಪಾಯವಾಗಿ ತನ್ನಲ್ಲಿನ ಗೋವುಗಳನ್ನು ಬ್ರಾಹ್ಮಣರಿಗೆ ದಾನನೀಡಿದ. ಹಾಗೆ ದಾನನೀಡಿದ ಅವು ಅಪಾರವಾಗಿ ಬೆಳೆದು, ತನಗೆ ಲಭಿಸುವುದರಿಂದ ಶ್ರೀಕೃಷ್ಣನ ಸೇವೆಗೆ ಅವಕಾಶ ಲಭಿಸುವುದು ಎಂಬುದು ಅವನ ಅಭಿಪ್ರಾಯವಾಗಿತ್ತು ಎಂದರ್ಥ.

೨. ಇದರಿಂದ ದಾನವಾಗಿ ನೀಡಿದ ವಸ್ತುಗಳು ಅಸಂಖ್ಯವಾಗಿ ಪುನಃ ತಮಗೇ ಲಭಿಸುವವು ಎಂಬ ತತ್ತ್ವವು ಸೂಚಿತ. ದಾನನೀಡುವುದು ಎಂದರೆ ತನ್ನೆಲ್ಲಾ ವಸ್ತುಗಳನ್ನು ಉಳಿಸಿಕೊಳ್ಳುವುದು ಹಾಗೂ ಹೆಚ್ಚಿಸಿಕೊಳ್ಳುವುದು ಎಂದೇ ಅರ್ಥ ಎಂಬ ತತ್ತ್ವವನ್ನು ಈ ಮೂಲಕವಾಗಿ ಸೂಚಿಸಿರುವರು : ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಮ್ - ದ್ವಾದಶಸ್ತೋತ್ರ(೮/೧೦); **ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ** (ಹರಿಕಥಾಮೃತಸಾರ -೨/೧೫).

೩. ಇದು ಬಾಲಮಧ್ವರಿಗೆ ಕ್ಷೀರಪಾನಕ್ಕೆಂದು ಗೋದಾನ ಮಾಡುವ ಮೂಲಕ ಮುಕ್ತಿಯ ಹಾದಿಯನ್ನು ಕಂಡುಕೊಂಡ ಮೂಡಿಲ್ಲಾಯ ಬ್ರಾಹ್ಮಣರ ಪ್ರಸಂಗವನ್ನು ಜ್ಞಾಪಿಸುವಂತಿದೆ: ''ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್'' (ಸುಮಧ್ವವಿಜಯ - ೨/೩೦); **ತಟೀಷು** - ತಪ್ಪಲುಗಳಲ್ಲಿ.

---

೧. ಅನೇನ ಕಿರಣಾನಾಂ ರಾಗವದ್ರಾಗೋ ಧ್ವನ್ಯತೇ। -ವ್ಯಾ.
೨. ಉತ್ಪ್ರೇಕ್ಷಾ। -ವ್ಯಾ.

### ನಂದನು ಮಾಡಿದ ವಿವಿಧ ದಾನಗಳ ಹಿನ್ನೆಲೆ

ವಿಪ್ರರ್ಷಿದೇವಪಿತೃಬಂದಿಸುಹೃಜ್ಜನೇಭ್ಯೋ
ವಿತ್ತಾನ್ಯದಾತ್ ಕಿಲ[೧] ಸುತುಷ್ಟಮನಾಃ ಸ ನಂದಃ।
ಇತ್ಥಂ ಮತಿರ್ಮಮ ವಿಭೋಃ ಪಿತೃತಾಂ ಸ್ವಸಂಸ್ಥಾ-
ಮುದ್ವೀಕ್ಷ್ಯ ತಾನ್ ಪ್ರಹಸತೋಽಭಿಮುಖೀಚಿಕೀರ್ಷುಃ ॥ ೧೭ ॥

ಸಂತುಷ್ಟಮನಸ್ಕನಾದ ನಂದನು ವಿಪ್ರರಿಗೆ, ಋಷಿಗಳಿಗೆ, ದೇವತೆಗಳಿಗೆ, ಪಿತೃಗಳಿಗೆ, ವಂದಿಮಾಗಧರಿಗೆ ಹಾಗೂ ಬಂಧುಜನರಿಗೆ ದ್ರವ್ಯಗಳನ್ನು ನೀಡಿದ; ತಾನು ಶ್ರೀಕೃಷ್ಣನ ತಂದೆ ಎನ್ನಿಸಿಕೊಂಡದ್ದನ್ನು ಕಂಡು ನಗಾಡುತ್ತಿದ್ದ ಅವರನ್ನು ಒಲಿಸಿಕೊಳ್ಳಲೆಂದು ಹಾಗೆ ಮಾಡಿದ ಎಂಬುದು ನನ್ನ ವಿಚಾರ.

ವಿ. : ೧. ಶ್ರೀಮದ್ಭಾಗವತದಲ್ಲಿ ಕೃಷ್ಣಾವತಾರ ಸಮಯದಲ್ಲಿ ನಂದಗೋಪನು ಬ್ರಾಹ್ಮಣರು ಮೊದಲಾದವರಿಗೆ ಯಥೇಚ್ಛವಾಗಿ ಧನಾದಿಗಳನ್ನು ದಾನಮಾಡಿರುವುದರ ವಿಚಾರ ಬಂದಿದೆ; ಅದನ್ನು ಆಧರಿಸಿದ ಉತ್ಪ್ರೇಕ್ಷೆ ಇದಾಗಿದೆ.

೨. ಹುಟ್ಟಿರದ ಶ್ರೀಹರಿಗೆ ತಂದೆ ಎನ್ನಿಸಿಕೊಳ್ಳುವುದು ಮಹಾಪಚಾರ. ನಂದ ಅದನ್ನು ಗಮನಿಸಿ, ವಿಪ್ರರು ದೇವತೆಗಳು ಆ ಬಗ್ಗೆ ತನ್ನನ್ನು ಅಪಹಾಸ್ಯ ಮಾಡುವರು ಎಂಬುದನ್ನು ತಿಳಿದು ಅವರನ್ನು ಸುಮ್ಮನಿರಿಸಲೆಂದು ಹಾಗೆ ಧನಾದಿಗಳನ್ನು ನೀಡುವ ತಂತ್ರ ಮಾಡಿದ ಎಂಬುದು ಇಲ್ಲಿಯ ಉತ್ಪ್ರೇಕ್ಷೆ.

೩.. ಇದರಿಂದ ದೇವತೆಗಳು ಮೊದಲಾದವರು ಶ್ರೀಕೃಷ್ಣನು ಹುಟ್ಟಿಲ್ಲದವನು ಎಂದು ಅರಿತಿದ್ದಂತೆ ಸ್ವತಃ ನಂದನು ಸಹ ಅದನ್ನು ಅರಿತಿದ್ದನೆಂದು ತಿಳಿಯುವುದು.

೪. ತನ್ನ ಬಗ್ಗೆ ಅಪಖ್ಯಾತಿ ಬಂದಾಗ ಅದನ್ನು ಈ ರೀತಿಯಾಗಿ ಧನಾದಿಗಳನ್ನು ನೀಡಿ, ಸುಮ್ಮನಿರಿಸುವುದು[೨] ಜನಗಳ ತಂತ್ರ; ನಂದನು ಮಾಡಿದ್ದು ಹಾಗೆಯೇ ಎಂಬುದು ಇಲ್ಲಿಯ ಕಾವ್ಯ ವೈಭವ.

### ಸೂರ್ಯಕಿರಣಗಳಿಂದ ನಡೆದ ಅಲಂಕಾರ

ಧ್ವಜಪ್ರಭೈರೂರ್ಧ್ವಮುಖೈರ್ಮಯೂಖೈ-
ರಧೋಮುಖೈಸ್ತೋರಣಸಮ್ಮಿತೈಶ್ಚ।

---

೧. ನಂದೋ ಮಹಾಮನಾಸ್ತೇಭ್ಯೋ ವಾಸೋಲಂಕಾರಗೋಧನೈಃ।
ಸೂತಮಾಗಧಬಂದಿಭ್ಯೋ ಯೇಽನ್ಯೇ ವಿದ್ಯೋಪಜೀವಿನಃ॥
ತೈಸ್ತೈಃ ಕಾಮೈರಧೀನಾತ್ಮಾ ಯಥೋಚಿತಮಪೂಜಯತ್।
ವಿಷ್ಣೋರಾರಾಧನಾರ್ಥಾಯ ಸ್ವಪುತ್ರಸ್ಯೋದಯಾಯ ಚ॥ -ಭಾಗ.(೧೦/೬/೧೪,೧೫)

೨. ಯಥಾ ಲೋಕೇ ಅಜ್ಞಃ ಆತ್ಮನ್ಯವಿದ್ಯಮಾನವಿದ್ಯಾಪ್ರಾಗಲ್ಭ್ಯಾದಿಕಂ ದರ್ಶಯನ್ ಪರಿಹಸತೋ ಜನಾನ್ ದ್ರವ್ಯಾದಿನಾಽಭಿಮುಖೀಕರೋತಿ ತದ್ವದಿತಿ ಭಾವಃ। -ವ್ಯಾ.

ವಿಭೂಷಿತಾ ದ್ಯೌರ್ವ್ರಜಭೂಶ್ಚ ಚಿತ್ರ-
ಧ್ವಜೈಃ ಸ್ಫುರತ್ತೋರಣಸಂಚಯೈಶ್ಚ ॥ ೧೮ ॥

ಗಗನವು ಧ್ವಜಗಳಂತಹ ಊರ್ಧ್ವಮುಖವಾದ ಕಿರಣಗಳಿಂದಲೂ, ತೋರಣಗಳಂತಹ ಅಧೋಮುಖಕಿರಣಗಳಿಂದಲೂ, ಅಲಂಕೃತಗೊಂಡಿತು; ಗೋಕುಲಪ್ರದೇಶವು ಸಹ ಹೀಗೆ ಚಿತ್ರವಾದ ಧ್ವಜಗಳಿಂದಲೂ ಹೊಳೆಯುವ ತೋರಣಗಳ ಸಾಲುಗಳಿಂದಲೂ ಕಂಗೊಳಿಸತೊಡಗಿತು.

ವಿ. : ೧. ಶ್ರೀಕೃಷ್ಣಾವತಾರದ ಮಹೋತ್ಸವವನ್ನು ಆಚರಿಸಲು ಗೋಕುಲವು ಧ್ವಜ, ತೋರಣ-ಗಳಿಂದ ಅಲಂಕೃತವಾಗಿತ್ತು ಎಂದು ಭಾವ. ಆ ಸಮಯದಲ್ಲಿ ಗಗನದಲ್ಲಿ ಮೇಲು, ಕೆಳಗೂ ಹೊಮ್ಮುತ್ತಿದ್ದ ಸೂರ್ಯನ ಕಿರಣಗಳಿಂದ ಅಲ್ಲಿಯೂ ಸಹ ಧ್ವಜ, ತೋರಣಗಳು ಕಾಣಿಸಿ-ಕೊಂಡಂತಾಗಿ ಅಲ್ಲೂ ಉತ್ಸವದ ವಾತಾವರಣ ಉಂಟಾಗಿದ್ದಿತು ಎಂಬುದು ಇಲ್ಲಿಯ ಕಾವ್ಯ.

೨. ಊರ್ಧ್ವ ಕಿರಣಗಳನ್ನು ಧ್ವಜಗಳೆಂದೂ ಅಧೋಮುಖ ಕಿರಣಗಳನ್ನು ತೋರಣಗಳೆಂದೂ ಇಲ್ಲಿ ಕರೆಯಲಾಗಿದೆ. ಧ್ವಜಗಳು ಮೇಲ್ಮುಖವಾಗಿಯೂ ತೋರಣಗಳು ಅಧೋಮುಖ-ವಾಗಿಯೂ ಇರುವುದನ್ನು ಈ ಕಲ್ಪನೆಯು ಆಧರಿಸಿದೆ ಎಂದು ತಿಳಿಯಬೇಕು; ಮಯೂಖ - ಕಿರಣ; ದ್ಯೌಃ - ಗಗನ.

ತಳಿರುತೋರಣಗಳ ಅಲಂಕಾರದ ಉದ್ದೇಶ

ಲಸತ್ಪತಾಕಧ್ವಜಕುಂಭತೋರಣೈ-
ರ್ವಿಭಾಸಿತಾನಿ ವ್ರಜಮಂದಿರಾಣಿ ತೇ ।
ಪ್ರವೇಕ್ಷ್ಯತೀಮಾನಿ ಸ ಬಾಲಲೀಲಯಾ
ವಿಭುರ್ಬತೇತೀವ ವಿತೇನುರಂಜಸಾ ॥ ೧೯ ॥

ವಿಭುವಾದ ಶ್ರೀಕೃಷ್ಣನು ಇವುಗಳನ್ನು ಬಾಲಕ್ರೀಡೆಯಾಡುತ್ತಾ ಪ್ರವೇಶಿಸುವನು ಎಂಬ ಭಾವದಿಂದಲೋ ಎಂಬಂತೆ ಆ ಗೋಕುಲದ ಮಂದಿರಗಳನ್ನು ಹೊಳೆಯುವ ಪತಾಕೆಗಳು, ಧ್ವಜಗಳು, ಪೂರ್ಣಕಲಶಗಳು, ಹಾಗೂ ತೋರಣಗಳಿಂದ ಚೆನ್ನಾಗಿ ಶೋಭಿಸುವಂತೆ ಮಾಡಿದರು.

ವಿ. : ೧. ದೇವೋತ್ಸವವು ಮಂದಿರಗಳ ಮುಂದೆ ಬರುವಾಗ ಅವುಗಳನ್ನು ಅಲಂಕರಿಸುವುದು ಶಾಸ್ತ್ರವಿಧಿ. ಶ್ರೀಕೃಷ್ಣನು ಮುಂದೆ ಬಾಲಲೀಲೆಗಳನ್ನು ತೋರುತ್ತಾ ಆ ಮಂದಿರಗಳಲ್ಲೆಲ್ಲಾ ಓಡಾಡಿಬಿಡುವನು ಎಂಬ ಯೋಚನೆಯಿಂದ ಆ ಮುನ್ನವೇ ಆ ಮಂದಿರಗಳನ್ನು ಅಲಂಕರಿಸಿ-ಬಿಟ್ಟರು ಎಂದು ಭಾವ.

೨. ಇದರಿಂದ ಶ್ರೀಕೃಷ್ಣನು ಕೇವಲ ಬಾಲಕನಾಗಿರದೆ ಸಾಕ್ಷಾತ್ ಪರದೈವವಾಗಿರುವನು ಎಂಬುದು ಅವರ ಭಾವನೆಯಾಗಿದ್ದಿತು ಎಂಬ ಅಂಶ ಸೂಚಿತ.

### ಗೋಕುಲದ ದನಕರುಗಳಿಗೂ ಅಲಂಕಾರ

ಸ ಪಾಲಯಿಷ್ಯನ್ ಸದಯಾವಲೋಕೈ-
ರಿಮಾನ್ ಕೃತಾರ್ಥಾನ್ ರಚಯಿಷ್ಯತೀತಿ ।
ಹೃದೇವ ವತ್ಸವ್ರಜಗೋವೃಷಾದೀ-
ನಲಂಪ್ರಚಕ್ರುಃ ಸಹರಿದ್ರತೈಲೈಃ ॥ ೨೦ ॥

ಆ ಶ್ರೀಕೃಷ್ಣನು ಮುಂದೆ ಇವುಗಳನ್ನು ಕಾಯುತ್ತಾ ತನ್ನ ಕೃಪಾಪೂರಿತ ದೃಷ್ಟಿಗಳಿಂದ ಕೃತಾರ್ಥ-ರನ್ನಾಗಿಸುವನು ಎಂಬ ಭಾವದಿಂದಲೋ ಎಂಬಂತೆ, ಅಲ್ಲಿಯ ಕರುಗಳ ಗುಂಪು, ಗೋವು-ಗಳು, ಎತ್ತುಗಳು ಮೊದಲಾದವುಗಳನ್ನು ಅರಿಶಿನಮಿಶ್ರಿತ ತೈಲದಿಂದ ಅಲಂಕರಿಸಿದರು.

ವಿ. ೧. ಮಂದಿರಗಳನ್ನು ಮಾತ್ರವಲ್ಲದೆ ಅಲ್ಲಿಯ ಹಸು, ಕರು, ಎತ್ತುಗಳನ್ನೂ ಸಹ ಹರಿದ್ರಾದಿಗಳಿಂದ ಅಲಂಕರಿಸಿದರು ಎಂದು ಭಾವ.

೨. ಆ ರೀತಿಯ ಅಲಂಕಾರಕ್ಕೆ ಮುಂದೆ ಅವುಗಳೆಲ್ಲಾ [೧]ಶ್ರೀಕೃಷ್ಣನ ಕೃಪಾದೃಷ್ಟಿಗೆ ಪಾತ್ರವಾಗುವ ಭಾಗ್ಯಶಾಲಿಗಳು ಎಂಬ ಚಿಂತನೆಯೇ ಕಾರಣವಾಗಿತ್ತು ಎಂಬುದು ಅದಕ್ಕೆ ನೀಡಿರುವ ಕಾರಣ.

೩. ಉತ್ಸವಗಳಲ್ಲಿ ಕೇವಲ ಭಗವನ್ಮೂರ್ತಿಗಳಿಗೆ ಮಾತ್ರವಲ್ಲದೆ ಮಂದಿರ ಹಾಗೂ ಅಲ್ಲಿಯ ಪಶು ಮೊದಲಾದ ಇತರ ವಸ್ತುಗಳಿಗೂ ಅಲಂಕಾರಮಾಡುವುದು ಸಹಜ; ಇದಕ್ಕೆ ಅವೆಲ್ಲಾ ಭಗವತ್ಕೃಪಾಕಟಾಕ್ಷಕ್ಕೆ ಕಾರಣವಾಗುವವು ಎಂಬ ಅನುಸಂಧಾನವೇ ಕಾರಣ ಎಂಬುದು ಇಲ್ಲಿಯ ಶಾಸ್ತ್ರೀಯ ಹಿನ್ನೆಲೆಯ ವಿವರಣೆ; ವೃಷ - ವೃಷಭ, ಎತ್ತು; ಹರಿದ್ರ - ಅರಿಶಿಣ.

### ಗೋಪಕುಮಾರರ ಸಂಭ್ರಮ

ಇತ್ಥಂ ತ್ವಮತ್ರ ಶಿಶುಭಾವಮುಪೇತ್ಯ ಸಾಕ-
ಮಸ್ಮಾಭಿರೀಶ ವಿಹರೇತಿ ವದನ್ನಿವಾಸ್ಮೈ ।
ದಧ್ನಾ ಘೃತೇನ ಪಯಸಾ ನವನೀತಜಾತೈಃ
ಸ್ನಿಗ್ಧಸ್ತದೈತ್ಯ ವಿಜಹಾರ ಕುಮಾರವರ್ಗಃ ॥ ೨೧ ॥

''ಸ್ವಾಮಿಯಾದ ಶ್ರೀಕೃಷ್ಣ! ನೀನು ಹೀಗೆ ಶಿಶುಭಾವವನ್ನು ಹೊಂದಿ ನಮ್ಮೊಂದಿಗೆ ಕ್ರೀಡಿಸು'' ಎಂದು ಅರುಹಲೋ ಎಂಬಂತೆ ಅಲ್ಲಿಯ ಬಾಲಕರ ಹಿಂಡು ಮೊಸರಿನಿಂದ, ತುಪ್ಪದಿಂದ,

---

೧. ಶ್ರೀಕೃಷ್ಣದಯಾವಲೋಕನಪಾತ್ರಾಣಾಮವಿಭೂಷಿತತ್ವಮನುಚಿತಮಿತಿ ಭಾವಃ। -ವ್ಯಾ.

ಹಾಲಿನಿಂದ, ಬೆಣ್ಣೆಯಿಂದ ಸಮೇತವಾಗಿ ಭಕ್ತಿಯಿಂದ ಆಗ ಅಲ್ಲಿಗೆ ಬಂದು ವಿಹರಿಸ-ತೊಡಗಿತು.

ವಿ. : ಗೋಕುಲದ ಬಾಲಕರ ತಂಡಗಳು ಹಾಲು, ಮೊಸರು, ಮೊದಲಾದವುಗಳನ್ನು ಸಮರ್ಪಿಸುತ್ತಾ ನಲಿಯತೊಡಗಿದವು ಎಂದರ್ಥ. ಅದಕ್ಕೆ ಮುಂದೆ ತಮ್ಮೊಂದಿಗೆ ಶ್ರೀಕೃಷ್ಣನು ಅವುಗಳೊಂದಿಗೆ ಕ್ರೀಡಿಸಬೇಕು ಎಂಬ ಉದ್ದೇಶ ಇದ್ದಿತು ಎಂದು ಭಾವ; ಇದು ಮುಂದೆ ಶ್ರೀಕೃಷ್ಣ ಗೋಕುಲದಲ್ಲಿ ಹಾಲು, ಮೊಸರು ಮೊದಲಾದವುಗಳೊಂದಿಗೆ ಕ್ರೀಡಿಸುವ ಪ್ರಸಂಗಕ್ಕೆ ಸೂಚನೆಯಂತಿದೆ.

### ಸೂರ್ಯೋದಯ ಚಂದ್ರೋದಯಗಳ ವಿಶೇಷ

**ವಿಧೌ ಪ್ರಶಾಂತೇಽಭ್ಯುದಿತೇ ಜನೋಽಯ-**
**ಮಭುಂಕ್ತ ಭೋಗಾನ್ ಪುನರುಷ್ಣಭಾನೌ ।**
**ಕರೋತಿ ಧರ್ಮಾಂಶ್ಚಕಿತಸ್ತಥಾ ತ-**
**ದ್ಬಿಭೇತಿ ಸರ್ವಃ ಪರುಷಾನ್ನ ಶಾಂತಾತ್ ॥ ೨೨ ॥**

ಜನರು ಪ್ರಶಾಂತನಾದ ಚಂದ್ರ ಉದಿಸಿದಾಗ ಭೋಗಗಳಲ್ಲಿ ತೊಡಗುವರು; ಆದರೆ ಚಂಡ-ಕಿರಣನಾದ ಸೂರ್ಯ ಉದಿಸಿದಾಗ ಭಯದಿಂದ ಕರ್ತವ್ಯಕರ್ಮಗಳಲ್ಲಿ ತೊಡಗುವರು; ಇದರಿಂದ ಎಲ್ಲರೂ ಅಂಜುವುದು ಉಗ್ರರಿಗೇ ಹೊರತು ಶಾಂತರಿಗಲ್ಲ ಎಂದು ತಿಳಿಯುವುದು.

ವಿ. : ೧. ಜನರು ಚಂದ್ರನಿರುವ ರಾತ್ರಿಕಾಲದಲ್ಲಿ ಭೋಗಪರಾಯಣರಾದರೆ ಸೂರ್ಯ-ನಿರುವ ಹಗಲಿನಲ್ಲಿ ಕರ್ತವ್ಯಕರ್ಮದಲ್ಲಿ ತೊಡಗುವರು ಎಂಬುದು ಲೋಕ ಕಂಡಿರುವ ಸತ್ಯ; ಅದಕ್ಕೆ ಕಾರಣವನ್ನು ಇಲ್ಲಿ ಹೀಗೆ ತಿಳಿಸಿರುವರು; **ಉಷ್ಣಭಾನು** – ಸೂರ್ಯ; **ಪರುಷ** – ಕ್ರೂರ.

೨. ಚಂದ್ರನು ಶಾಂತಕಿರಣ. ಅದಕ್ಕಾಗಿ ಜನ ಅವನಿಗೆ ಅಂಜದೆ, ಭೋಗಾನುಭವದಲ್ಲಿ ತೊಡಗುವರು; ಸೂರ್ಯನು ಉಷ್ಣಕಿರಣ; ಅದಕ್ಕಾಗಿ ಅವನಿಗೆ ಅಂಜಿ ತಮ್ಮ ಕರ್ತವ್ಯಕರ್ಮ-ಗಳನ್ನು ಪಾಲಿಸುವರು. ಇದರಿಂದ ಜನ ಅಂಜಿ ನಡೆಯುವುದು ಶಾಂತಸ್ವಭಾವದವರಿಗಲ್ಲ; [೧]ಉಗ್ರಸ್ವಭಾವದವರಿಗೆ ಮಾತ್ರ ಎಂದು ತಿಳಿಯುವುದು; ಹುಲಿಗೆ ಜನ ಅಂಜುವಂತೆ ಜಿಂಕೆಯ ಮರಿಗೆ ಅಂಜಲಾರರಲ್ಲವೆ!

೩.. ಈ ನಿದರ್ಶನದ ಮೂಲಕ ಮನುಷ್ಯನು ಇತರರನ್ನು ಕರ್ತವ್ಯ ಪರಾಯಣರನ್ನಾಗಿ ಮಾಡಲು ಕಠಿಣವಾಗಿ ವರ್ತಿಸಬೇಕೇ ಹೊರತು ಮೃದುವಾಗಿ ಅಲ್ಲ ಎಂಬ ತತ್ತ್ವ ಸೂಚಿತ. ಲೋಕದಲ್ಲಿ ಮಕ್ಕಳು ತಂದೆಗೆ ಅಂಜುವಂತೆ ತಾಯಿಗೆ ಅಂಜುವುದಿಲ್ಲ ಎಂಬಲ್ಲಿಯೂ ಇದೇ

೧. ಸರ್ವೋ ಜನಃ ಪರುಷಾತ್ ಕ್ರೂರಾತ್ ಬಿಭೇತಿ ತ್ರಸತಿ । ಶಾಂತಾನ್ನ ಬಿಭೇತಿ । ನ ಹಿ ತರಕ್ಷೋರಿವ ಹರಿಣಶಾವಾತ್ ಬಿಭೇತೀತಿ ಭಾವಃ । -ವ್ಯಾ.

ಭಾವ ಅಡಗಿದೆ. ಸಾಮಾನ್ಯವಾಗಿ ತಂದೆ ಕಠಿಣ, ತಾಯಿ ಮೃದು ಎಂಬುದು ಲೋಕ ಕಂಡಿರುವ ಸತ್ಯ; ಅಲ್ಲವೇ!

### ಗಗನದಲ್ಲಿ ಮೇಲೇರಿದ ಸೂರ್ಯ

ನಭಃಸ್ಪೃಶನ್ನುನ್ಮುಖದೀಪ್ತಿವೃಂದೈ-
ರಸೌ ಕ್ರಮೇಣೋರ್ಧ್ವಮಿಯಾಯ ಭಾಸ್ವಾನ್ ।
ತಥಾಹಿ ತದ್ವಿಷ್ಣುಪದಾನುಷಕ್ತ-
ಕರಃ ಕಥಂ ನೋರ್ಧ್ವಮುಪೈತಿ ಲೋಕಃ [೧] ॥ ೨೩ ॥

ಮೇಲ್ಮುಖವಾದ ತನ್ನ ಕಿರಣವೃಂದದಿಂದ ಗಗನವನ್ನು ಮುಟ್ಟುತ್ತಾ ಸೂರ್ಯ ಕ್ರಮವಾಗಿ ಮೇಲೇರಿದ; ಅದು ಸರಿ! ವಿಷ್ಣುಪಾದವನ್ನು ಅಪಾರಭಕ್ತಿ ತುಂಬಿದ ಕೈಗಳಿಂದ ಆರಾಧಿಸುವ ಜನರು ಹೇಗೆ ತಾನೇ ಮೇಲೇರಲಾರರು ?

ವಿ. : ೧. ಉದಿಸಿದ ಸೂರ್ಯ ಕ್ರಮವಾಗಿ ಮೇಲೇರುವುದು ಕಂಡಿದೆ; ಅದಕ್ಕೆ ಅವನು ತನ್ನ ಕೈಗಳಿಂದ ವಿಷ್ಣುಪದವೆನ್ನಿಸಿದ ಆಕಾಶವನ್ನು ಸ್ಪರ್ಶಿಸುವುದೇ ಕಾರಣ.

೨. [೨] ವಿಷ್ಣುಪದದ ಸ್ಪರ್ಶದಿಂದ ಜನರು ಖಂಡಿತವಾಗಿ ಅಭ್ಯುದಯವನ್ನು ಕಾಣುವರು ಎಂಬುದಕ್ಕೆ ಇದು ನಿದರ್ಶನ.

೩. ಸೂರ್ಯನು ಬೆಳಕು ನೀಡುವುದು ಅವನೊಳಗಿನ ಅಂತರ್ಯಾಮಿಯಾದ ಶ್ರೀಹರಿಯ ಅನುಗ್ರಹದಿಂದ ಎಂಬ ಶಾಸ್ತ್ರವಚನದ ಹಿನ್ನೆಲೆಯಲ್ಲಿ ಇಲ್ಲಿಯ ಅಲಂಕಾರ ರೂಪುಗೊಂಡಿದೆ.

೪. ಇದು ಒಂದು ರೀತಿಯಲ್ಲಿ ಪ್ರತಿನಿತ್ಯ ಮಾಡುವ ವಿಷ್ಣುಪಾದದ ಪೂಜೆ ಹಾಗೂ ಪಾಠಪ್ರವಚನಗಳ ಫಲಶ್ರುತಿಯಂತಿರುವ ಶ್ಲೋಕವೂ ಆಗಿದೆ.

೫. ಶ್ರೀಹರಿಯನ್ನು ಆರಾಧಿಸುವವರಿಗೆ ಸರ್ವತೋಮುಖವಾದ ಉನ್ನತಿ ಸುನಿಶ್ಚಿತ ಎಂಬುದು ಇಲ್ಲಿಯ ಸಂದೇಶ; ಭಾಸ್ವಾನ್ – ಸೂರ್ಯ; ವಿಷ್ಣುಪದ – ಆಕಾಶ.

### ಸೂರ್ಯನ ತೀಕ್ಷ್ಣತೆಗೆ ಕಾರಣೋತ್ಪ್ರೇಕ್ಷೆ

ಸೋಮಾನ್ವಯೇ ಜಾತಮಿನೋ ನಿರೀಕ್ಷ್ಯ
ರಾಮಾನುಜಂ [೩] ಮನ್ಯುಮಿವಾದಧಾನಃ ।

---

೧. ಶ್ಲಿಷ್ಟಗರ್ಭಿತಾರ್ಥಾಂತರನ್ಯಾಸಃ । –ವ್ಯಾ.

೨. ಶ್ರೀಹರಿಚರಣಾರಾಧಕಸ್ಯೋರ್ಧ್ವಗತಿರೇವ ನಾಧೋಗತಿರಿತ್ಯರ್ಥಃ । –ವ್ಯಾ.

೩. 'ಹೃದ್ಯಭಿವೃದ್ಧಮನ್ಯುಃ' ಇತಿ ಪಾಠೇ ಸ್ಪಷ್ಟೋಽರ್ಥಃ । –ವ್ಯಾ.

ರಾಗಂ ಪರಿತ್ಯಜ್ಯ ಬಭೂವ ತೀಕ್ಷ್ಣಃ
ಶ್ರೇಯೋಽನುಜಸ್ಯಾಪಿ ನ ವೈ ಸಹಂತೇ ॥ ೨೪ ॥

ಬಲರಾಮನ ತಮ್ಮನಾದ ಶ್ರೀಕೃಷ್ಣನು ಚಂದ್ರನ ವಂಶದಲ್ಲಿ ಜನಿಸಿದ್ದನ್ನು ಕಂಡು, ಕೋಪ-ಗೊಂಡವನಂತೆ ಸೂರ್ಯ ಅವನ ಬಗ್ಗೆ ಪ್ರೀತಿಯನ್ನು ತೊರೆದು, ಉಗ್ರಭಾವವನ್ನು ಹೊಂದಿದ; ಆಶ್ಚರ್ಯ ! ಜನರು ತನ್ನ ತಮ್ಮನ ಉನ್ನತಿಯನ್ನೂ ಸಹ ಸಹಿಸಲಾರರಲ್ಲ!

ವಿ. : ೧. ಕೆಂಪಾಗಿ ತಂಪಾಗಿ ಉದಿಸಿದ ಸೂರ್ಯ ಕ್ರಮೇಣ ತೀಕ್ಷ್ಣನಾದ ಎಂಬುದು ಇಲ್ಲಿಯ ಭಾವ; ಅದನ್ನು ಕಾವ್ಯಮಯವಾಗಿ ಇಲ್ಲಿ ನಿರೂಪಿಸಿರುವರು.

೨. ತನ್ನ ವಂಶದಲ್ಲಿ ಹಿಂದೆ ಶ್ರೀರಾಮರೂಪದಿಂದ ಶ್ರೀಹರಿ ಅವತರಿಸಿದ್ದನ್ನು ಕಂಡು ಸೂರ್ಯ ಸಂಭ್ರಮಿಸಿದ್ದ. ಆದರೆ ಈಗ ತನ್ನ ತಮ್ಮನಾದ ಚಂದ್ರನ ವಂಶದಲ್ಲೂ ಅವತರಿಸಿದ್ದನ್ನು ಕಂಡು ಅವನ ಮೇಲೆ ಅಸೂಯೆ ಹುಟ್ಟಿ, ಕೆರಳಿದ; ಅದರಿಂದಾಗಿ ಅವನು ಉಷ್ಣ ಕಿರಣನಾದ ಎಂದರ್ಥ.

೩.. ಮತ್ತೊಬ್ಬರ ಶ್ರೇಯಸ್ಸನ್ನು ಕಂಡು ಕೊರಗುವುದು ಸಾಮಾನ್ಯರ ಸ್ವಭಾವ. ಸೂರ್ಯನಲ್ಲೂ ಈ ಗುಣ ಹುಟ್ಟಿಬಿಟ್ಟಿತಲ್ಲ ಎಂಬುದು ಕಾವ್ಯದೃಷ್ಟಿ; ಮನ್ಯು – ಕ್ರೋಧ; ಇನ – ಸೂರ್ಯ.

೪. [೧]ಸೂರ್ಯಚಂದ್ರರು ಸಮಾನ ಕಕ್ಷೆಯವರು. ಅದರಲ್ಲಿ ಹಗಲಿನಲ್ಲಿ ಬೆಳಗುವ ಸೂರ್ಯ ಅಣ್ಣ; ರಾತ್ರಿಯಲ್ಲಿ ಬೆಳಗುವ ಚಂದ್ರ ತಮ್ಮ ಎಂಬುದು [೨]ಕವಿಸಮಯ. ಸೂರ್ಯಪ್ರಕಾಶವನ್ನು ಅವಲಂಬಿಸಿ, ರಾತ್ರಿಯಲ್ಲಿ ಚಂದ್ರ ಬೆಳಗುವನು ಎಂಬ ತತ್ತ್ವವನ್ನು ಸಹ ಈ ನಿರೂಪಣೆ ತಿಳಿಸಿಕೊಡುವುದು; ಅನ್ವಯ – ವಂಶ.

ಛಾಯಾಶ್ರಿತರ ತಂಪಿಗೆ ಕಾರಣ

ಮ್ಲಾನಂ ವಿಧತ್ತೇ ನ ಮುಖಂ ಜನಾನಾಂ
ಛಾಯಾಶ್ರಿತಾನಾಮಪಿ [೩]ತಿಗ್ಮಭಾನುಃ ।
ಕ್ರೂರೋಽಪಿ ಮರ್ತ್ಯಃ ಸ್ವಕಲತ್ರಸಾಂದ್ರ-
ಸಂಬಂಧಭಾಜಾಂ ನ ಹಿ ತಾಪದಾಯೀ [೪] ॥ ೨೫ ॥

ಚಂಡಕಿರಣನಾದ ಸೂರ್ಯನು ನೆರಳನ್ನು ಆಶ್ರಯಿಸಿದ ಜನರಿಗೆ ಮುಖವನ್ನು ಬಾಡದಂತೆ ಮಾಡುವನು; ಎಂತಹ ಕ್ರೂರಿಯಾದ ಮನುಷ್ಯನೂ ಸಹ ತನ್ನ ಹೆಂಡತಿಯ ಹತ್ತಿರದ ಸಂಬಂಧಿಗಳಿಗೆ ನೋವು ನೀಡಲಾರನಲ್ಲವೇ(ಶ್ಲೇಷಾಲಂಕಾರ).

---

೧. ಶ್ಲಿಷ್ಟಗರ್ಭಿತಾರ್ಥಾಂತರನ್ಯಾಸಃ। ಏತಸ್ಯೋತ್ಪ್ರೇಕ್ಷಾಸಾಪೇಕ್ಷತ್ವಾತ್ತಯೋರಂಗಾಂಗಿಭಾವೇನ ಸಂಕರಃ। –ವ್ಯಾ.

೨. ದಿವಾ ಸೂರ್ಯೋ ಜಾಯತೇ ರಾತ್ರೌ ಸೋಮೋ ಜಾಯತ ಇತಿ ಸೋಮಃ ಸೂರ್ಯಾನುಜ ಇತಿ ಕವೀನಾಂ ಸಮಯಃ। –ವ್ಯಾ.

೩.. ತಿಗ್ಮರೋಚಿಃ (ಪಾಠಾಂತರ); ತಿಗ್ಮಶೋಚಿಃ (ಪಾಠಾಂತರ)

೪. ಶ್ಲೇಷಾಲಂಕಾರ

ವಿ. : ೧. ಸೂರ್ಯನ ಪ್ರಖರತೆಯನ್ನು ತಪ್ಪಿಸಿಕೊಳ್ಳಲು ವೃಕ್ಷ ಮೊದಲಾದವುಗಳ ನೆರಳನ್ನು ಆಶ್ರಯಿಸುವುದು ಕಂಡಿದೆ ; ಅದನ್ನು ಇಲ್ಲಿ ಕಾವ್ಯಮಯವಾಗಿ ವರ್ಣಿಸಿರುವರು.

೨. ಸೂರ್ಯನು ಎಷ್ಟೇ ಪ್ರಖರನಾಗಿದ್ದರೂ [೧]ನೆರಳನ್ನು ಆಶ್ರಯಿಸಿದವರಿಗೆ ತಾಪ ನೀಡನು ಅದಕ್ಕೆ ಛಾಯೆ ಅವನ ಹೆಂಡತಿಯಾಗಿರುವುದೇ ಕಾರಣ. ಎಂತಹ ಕ್ರೂರಮನುಷ್ಯನು ಸಹ ತನ್ನ ಹೆಂಡತಿಯ ಸಂಬಂಧಿಗಳ ಬಗ್ಗೆ ಮಾತ್ರ ಮೃದುವಾಗಿಯೇ ಇರುವನು ಎಂಬುದು ಲೋಕರೂಢಿ; ಗ್ಲಾನ – ಖೇದ; ತಿಗ್ಮಭಾನು – ಸೂರ್ಯ; ಸಾಂದ್ರ – ನಿರಂತರ.

೩. ಸಂಜ್ಞಾ ಮತ್ತು ಛಾಯೆ ಎಂಬ ಇಬ್ಬರು ಸೂರ್ಯಪತ್ನಿಯರು ಎಂಬ ಪ್ರಮೇಯದ ಹಿನ್ನೆಲೆಯಲ್ಲಿ ಈ ಕಲ್ಪನೆ ಬಂದಿದೆ. ಛಾಯಾ ಎಂಬುದಕ್ಕೆ ನೆರಳು ಎಂಬುದು ಮತ್ತೊಂದು ಅರ್ಥ.

### ಶ್ರೀಕೃಷ್ಣನು ಗೋಪಾಲಕವಂಶದಲ್ಲಿ ಅವತರಿಸಲು ಕಾರಣ

**ಯತೋ ಹಿ ಗೋರೂಪಧರಾಂ ಧರಿತ್ರೀಂ**
**ಸ ಪಾಲಯಿಷ್ಯನ್ ಹರಿರಾವಿರಾಸೀತ್ ।**
**ಸಹಾನುಕೂಲೈರಮರ್ಯೈಃ ಸ್ವಕೀಯೈ-**
**ಸ್ತತಃ ಸ ಗೋಪಾಲಕವಂಶಜೋಽಭೂತ್ ॥ ೨೬ ॥**

ಗೋರೂಪವನ್ನು ತಳೆದ ಭೂಮಿಯನ್ನು ಪಾಲಿಸಲೆಂದು ಶ್ರೀಕೃಷ್ಣನು ಅವತರಿಸಿದ್ದರಿಂದ ತನ್ನ ಅನುಯಾಯಿಗಳಾದ ದೇವತೆಗಳೊಂದಿಗೆ ಅವನು ಗೋಪಾಲಕವಂಶದಲ್ಲಿಯೇ ಅವತರಿಸಿದ.

ವಿ. : ೧. ಭಾರಪೀಡಿತಳಾದ ಭೂದೇವಿಯು ಗೋರೂಪದಿಂದ ಶ್ರೀಹರಿಯನ್ನು ಮೊರೆಹೊಕ್ಕ ವಿವರ ಹಿಂದಿನ ಸರ್ಗದಲ್ಲಿ ಬಂದಿದೆ (೧/೧೩). ಹಾಗೆ ಭೂಮಿಯು ತನ್ನನ್ನು ಗೋರೂಪದಿಂದ ಶರಣು ಹೊಕ್ಕದ್ದರಿಂದ ಶ್ರೀಕೃಷ್ಣನು ಗೋಪಾಲಕವಂಶದಲ್ಲಿಯೇ ಅವತರಿಸಿದ ಎಂದರ್ಥ; ಅದರಂತೆ ಅವನ ಪರಿವಾರದವರಾದ ದೇವತೆಗಳೂ ಸಹ ಗೋಪರಾಗಿಯೇ ಜನಿಸಿದರು.

೨. ಗೋಕುಲದ ಗೋಪಗೋಪಿಯರೆಲ್ಲಾ ದೇವಾಂಶಸಂಭೂತರು ಎಂಬ ಮಾತಿನ ಹಿನ್ನೆಲೆಯಲ್ಲಿ ಈ ವಿಷಯ ನಿರೂಪಿತವಾಗಿದೆ: [೨]ಯೇ ಯಾದವಾಸ್ತೇಽಪಿ ಸುರಾಃ ಸಗೋಪಾಃ

---

೧. ಛಾಯಾಶ್ರಿತಾನಾಮಿತ್ಯನೇನ ಛಾಯಾನಾಮ್ನೀಂ ಸ್ವಭಾರ್ಯಾಮಾಶ್ರಿತಾನಾಮಿತಿ ದ್ಯೋತನಾತ್ ಶ್ಲಿಷ್ಟಮೂಲಕಾ-ರ್ಥಾಂತರನ್ಯಾಸಃ । –ವ್ಯಾ.

ಮಾಯಾಮಯೀ ತು ಸಾ ಸಂಜ್ಞಾ ತಸ್ಯಾಶ್ಛಾಯಾ ಸಮುತ್ಥಿತಾ ।
ಪ್ರಾಂಜಲಿಃ ಪ್ರಣತಾ ಭೂತ್ವಾ ಛಾಯಾ ಸಂಜ್ಞಾಂ ನರೇಶ್ವರ ॥ – ಹರಿವಂಶ (೧/೯/೧೦

೨. ನಂದಾದ್ಯಾ ಯೇ ವ್ರಜೇ ಗೋಪಾ ಯಾಶ್ಚಾಮೀಷಾಂ ಚ ಯೋಷಿತಃ ।
ವೃಷ್ಣಯೋ ವಸುದೇವಾದ್ಯಾ ದೇವಕ್ಯಾದ್ಯಾ ಯದುಸ್ತ್ರಿಯಃ ॥
ಸರ್ವೇ ವೈ ದೇವತಾಪ್ರಾಯಾ ಉಭಯೋರಪಿ ಭಾರತ ।

(ಮ.ಭಾ.ತಾ.ನಿ.-೧೧/೨೩.೩); ಅದರಂತೆ ಕಂಸನ ಅನುಯಾಯಿಗಳೆಲ್ಲಾ ಅಸುರಾಂಶ ಸಂಭೂತರು ಎಂಬುದು ಮತ್ತೊಂದು ವಿಶೇಷ.

### ಶ್ರೀಕೃಷ್ಣನಿಗೆ ನಡೆದ ಜಾತಕರ್ಮ

ಅಜನ್ಮನಸ್ತಸ್ಯ ಹಿ ಜಾತಕರ್ಮ
[1]ವಿಧಾಯ ವಿಪ್ರಾ ವಿದಧುರ್ವಿಧಿಜ್ಞಾಃ।
ಮಧೋಃ ಕುಲೇಽಜಾತಮಪಿ ಸ್ವಮಂತ್ರ-
ಮಧುಶ್ರಿಯಾ ಮಾಧವಮಾದಿದೇವಮ್ ॥ ೨೭ ॥

ಹುಟ್ಟು ಇರದ ಆ ಶ್ರೀಕೃಷ್ಣನಿಗೆ ಶಾಸ್ತ್ರವಿಧಿಯನ್ನು ತಿಳಿದ ವಿಪ್ರರು ಜಾತಕರ್ಮವನ್ನು ಮಾಡಿದರು. ಮಧುವಿನ ಕುಲದಲ್ಲಿ ಜನಿಸದಿದ್ದರೂ, ತಮ್ಮ ಮಂತ್ರ ಹಾಗೂ ಮಧುವಿನ ಕಾಂತಿಯಿಂದ ಆದಿದೇವನಾದ ಅವನನ್ನು ಮಾಧವ ಎಂದರು.

ವಿ. ೧. ಜಾತಕರ್ಮ ಎಂಬುದು ಷೋಡಶ ಸಂಸ್ಕಾರಗಳಲ್ಲೊಂದು. ಜನನಾನಂತರ ಮಗು- ವಿಗೆ ಆಯುಷ್ಯ, ವರ್ಚಸ್ಸು, ಯಶಸ್ಸು ಹಾಗೂ ಬಲಗಳು ಸಿದ್ಧಿಸಲೆಂದು ಮಾಡುವ ಕರ್ಮವೇ ಈ ಜಾತಕರ್ಮ ಸಂಸ್ಕಾರ. ಶ್ರೀಕೃಷ್ಣನಿಗೆ ಅಂತಹ ಜಾತಕರ್ಮ ಸಂಸ್ಕಾರವನ್ನು ವಿಪ್ರರು ಮಾಡಿದರು ಎಂದರ್ಥ.

೨. ಹುಟ್ಟಿರುವವರಿಗೆ ಮಾಡುವ ಕರ್ಮ ಈ ಜಾತಕರ್ಮ; ಹುಟ್ಟೇ ಇರದ ಶ್ರೀಕೃಷ್ಣನಿಗೆ ಜಾತಕರ್ಮ ನಡೆದದ್ದು ಹೇಗೆ? ಎಂಬುದಕ್ಕೆ ಉತ್ತರ ಇಲ್ಲಿದೆ.

೩. [2]ಮಾಧವ ಎಂಬರೆ ಮಧುಕುಲದಲ್ಲಿ ಜನಿಸಿದವ ಎಂದರ್ಥ. ಮಾ ಎಂಬ ಮಹಾಲಕ್ಷ್ಮಿಗೆ ಪತಿ ಎಂಬುದು ಇನ್ನೂ ಮುಖ್ಯವಾದ ಅರ್ಥ. ಮಧು ಎಂಬ ಯಾದವಕುಲದಲ್ಲಿ ಜನ್ಮರಹಿತನಾದ ಶ್ರೀಕೃಷ್ಣ ಜನಿಸಿಯೇ ಇಲ್ಲ; ಆದರೂ ಮಹಾಲಕ್ಷ್ಮೀಪತಿ ಎಂಬ ಅರ್ಥದಲ್ಲಿ ಆ ಹೆಸರು ಅವನಿಗೆ ಉಚಿತ ಎಂದು ಭಾವ.

೪. ಮಧುಕುಲದಲ್ಲಿ ಜನಿಸಿದ ನಿಮಿತ್ತವಲ್ಲವಾದರೂ ಮಂತ್ರರೂಪದ ಮಧುವಿನಿಂದ ಅವನಿಗೆ ಮಾಧವ ಎಂಬ ಹೆಸರು ಉಚಿತವಾಯಿತು ಎಂಬುದು ಒಳಗಿನ ಅರ್ಥ.

---

ಜ್ಞಾತಯೋ ಬಂಧುಸುಹೃದೋ ಯೇ ಚ ಕಂಸಮನುವ್ರತಾಃ ॥
ಅಸುರಾಃ ಸರ್ವ ಏವೈತೇ ಲೋಕೋಪದ್ರವಕಾರಿಣಃ। -ಭಾಗ.(೧೦/೨/೮-೧೦)

೧. ನಂದಸ್ತ್ವಾತ್ಮಜ ಉತ್ಪನ್ನೇ ಜಾತಾಹ್ಲಾದೋ ಮಹಾಮನಾಃ।
ಆಹೂಯ ವಿಪ್ರಾನ್ ವೇದಜ್ಞಾನ್ ಸ್ನಾತಃ ಶುಚಿರಲಂಕೃತಃ ॥
ವಾಚಯಿತ್ವಾ ಸ್ವಸ್ತ್ಯಯನಂ ಜಾತಕರ್ಮಾತ್ಮಜಸ್ಯ ವೈ।
ಕಾರಯಾಮಾಸ ವಿಧಿನಾ ಪಿತೃದೇವಾರ್ಚನಂ ತಥಾ ॥ -ಭಾಗ.(೧೦/೬/೧,೨)

೨. ಮಾಧವ ಇತ್ಯನೇನ ಮಾಯಾಃ ಧವೋ ಮಾಧವ ಇತಿ ವ್ಯುತ್ಪತ್ತಿಸಂಭವಾತ್ ಮಧುಶ್ರಿಯೇತ್ಯನೇನ ಮಧುನಃ ಸಂಬಂಧೀ ಮಾಧವ ಇತಿ ವ್ಯುತ್ಪತ್ತಿಸಂಭವಾಚ್ಚೇತಿ ಭಾವಃ। -ವ್ಯಾ.

೫. ವಿಪ್ರರ ಬಾಯಿಂದ ಬರುವ ವೇದಮಂತ್ರಗಳು ಮಧುವಿನಂತೆ ಆಪ್ಯಾಯಮಾನ ಎಂಬುದು ಮತ್ತೊಂದು ಬಗೆಯ ಭಾವ; ವೇದಮಂತ್ರಗಳಿಂದ ನಡೆದಾಗಲೇ ಸಂಸ್ಕಾರಗಳು ಅರ್ಥವತ್ತಾಗುವುವು ಎಂಬುದು ಇಲ್ಲಿಯ ಸಂದೇಶ.

೬. ಜಾತಕರ್ಮವು ನಾಭಿಭೇದದ ಮುನ್ನ ಮಾಡುವ ಒಂದು ಸಂಸ್ಕಾರ; ದ್ವಿಜನಿಗೆ ವಿಹಿತವಾದ ಷೋಡಶ ಸಂಸ್ಕಾರಗಳಲ್ಲಿ ಒಂದು; ನಾಭಿಭೇದದ ಬಳಿಕ ಸೂತಕ ಒದಗುವುದರಿಂದ ಅದಕ್ಕೆ ಮುಂಚಿತವಾಗಿಯೇ ಇದನ್ನು ಪೂರೈಸಬೇಕು :

ಪ್ರಾಙ್ನಾಭಿಕೃಂತನಾತ್ ಪುಂಸೋ ಜಾತಕರ್ಮ ವಿಧಾನತಃ।
ಸ್ತನಪ್ರಾಶನತಃ ಪೂರ್ವಂ ಭಿನ್ನೇ ನಾಲೇ ತು ಸೂತಕಮ್ ॥ - ಇತಿ ವಸಿಷ್ಠವಚನಾತ್

### ಶ್ರೀಕೃಷ್ಣನ ಸ್ತನ್ಯಪಾನಕ್ಕೆ ಕಾರಣ

ತತಃ ಸ ಕೃಷ್ಣಃ ಕೃತಜಾತಕರ್ಮಾ
ಪ್ರಚಕ್ರಮೇಽಂಬಾಸ್ತನಪಾನಕರ್ಮ।
ಸ್ವವೀಕ್ಷಣೇನೈವ ಮುಹುಃ ಸ್ರುತಂ ತತ್
ಪಯೋ ಮುಧಾ ಸ್ಯಾದಿತಿ ಚಿಂತಯೇವ ॥ ೨೮ ॥

ಜಾತಕರ್ಮ ಪೂರೈಸಿದ ಬಳಿಕ ಶ್ರೀಕೃಷ್ಣನು ತಾಯಿಯ ಸ್ತನ್ಯಪಾನದ ಕಾರ್ಯದಲ್ಲಿ ತೊಡಗಿದ; ತನ್ನನ್ನು ನೋಡುತ್ತಲೇ ಸುರಿದ ಆ ಹಾಲು ವ್ಯರ್ಥವಾದೀತು ಎಂಬ ಭಾವನೆ-ಯಿಂದಲೋ ಎಂಬಂತೆ.

ವಿ. : ೧. [೧]ಪೂರ್ಣಕಾಮನಾದ ಶ್ರೀಹರಿಗೆ ಸ್ತನ್ಯಪಾನದ ಅಗತ್ಯ ಸರ್ವಥಾ ಇಲ್ಲ; ಆದರೂ ತನ್ನ ದರ್ಶನದಿಂದಾಗಿ ತಾನಾಗಿ ಸುರಿದ ಹಾಲು ವ್ಯರ್ಥವಾಗಬಾರದು ಎಂಬ ಭಾವನೆಯಿಂದಷ್ಟೇ ಆ ಕಾರ್ಯ ಮಾಡಿದ ಎಂದರ್ಥ.

೨. ಶ್ರೀಕೃಷ್ಣನ ದರ್ಶನದಿಂದ ಯಶೋದೆಗಾಗುತ್ತಿದ್ದ ಆನಂದದ ರಮ್ಯಚಿತ್ರಣ ಇದರಲ್ಲಿದೆ.

೩. ಇದರಿಂದ ಜಾತಕರ್ಮದ ಮುನ್ನ ಸ್ತನ್ಯಪ್ರಾಶನವು ನಿಷಿದ್ಧ ಎಂಬ ಪ್ರಮೇಯವು ಸಹ ತಿಳಿಯುವುದು.

### ಶ್ರೀಕೃಷ್ಣನ ಸ್ತನ್ಯಪಾನಕ್ಕೆ ಮತ್ತೊಂದು ಕಾರಣ

ಪುರಾ ಜನನ್ಯಾಃ ಸ್ತನಪಾನಜಾತ-
ಸುಖಾನಭಿಜ್ಞೋಽಜನಿರೇಷ ಕೃಷ್ಣಃ।

---

೧. ಪೂರ್ಣಸ್ಯ ಸ್ವಸ್ಯ ಸ್ತನ್ಯಪಾನಪ್ರಯೋಜನಾಭಾವಾತ್ ಸ್ವದರ್ಶನೇನ ಸ್ರುತಂ ಸ್ತನಕ್ಷೀರಂ ಕುರ್ವನ್ನಿವ ಸ್ತನ್ಯಪಾನಂ ಚಕಾರೇತಿ ಭಾವಃ। -ವ್ಯಾ.

**ಪಪೌ ಸ್ತನಕ್ಷೀರಮತೃಪ್ತಕಲ್ಪಃ**
**ಪ್ರಿಯೇಷು ನೂತ್ನೇಷು ಹಿ ಕಸ್ಯ ತೃಪ್ತಿಃ ॥ ೨೯ ॥**

ಆ ಮುನ್ನ ತಾಯಿಯ ಸ್ತನ್ಯಪಾನದಿಂದಾಗುವ ಸುಖವನ್ನು ಅರಿಯದಿದ್ದ ಶ್ರೀಕೃಷ್ಣ ಅವತರಿಸಿದ್ದ; ಈಗ ಆ ಕಾರ್ಯವನ್ನು ತೃಪ್ತಿ ಸಾಲದವನೆಂಬಂತೆ ಮಾಡತೊಡಗಿದ. ಪ್ರಿಯವಾದ ಹೊಸ ವಿಷಯದಲ್ಲಿ ಯಾರಿಗೆ ತಾನೇ ತೃಪ್ತಿ ಉಂಟಾದೀತು?

ವಿ. : ೧. ಶ್ರೀಕೃಷ್ಣ ಆ ಮುನ್ನ ಎಂದೂ ಸಹ ಸ್ತನ್ಯಮಾಡಿರಲಿಲ್ಲ [೧] ಎಂಬುದು ಇಲ್ಲಿಯ ಮುಖ್ಯತತ್ತ್ವ.

೨. [೨]ಸಾಮಾನ್ಯವಾಗಿ ಹೊಸ ವಿಷಯವನ್ನು ಎಷ್ಟು ಸವಿದರೂ ಆ ಬಗ್ಗೆ ತೃಪ್ತಿಯಾಗದು ಎಂಬುದು ಇಲ್ಲಿಯ ಕಾವ್ಯಮಯ ನಿರೂಪಣೆ.

### ಶ್ರೀಕೃಷ್ಣನ ಸ್ತನ್ಯಪಾನಕ್ಕೆ ಇನ್ನೊಂದು ಕಾರಣ

**ಬಹೂನಿ ಪುಣ್ಯಾನಿ ಸ ನಂದಪತ್ನ್ಯಾಃ**
**ಹೃದಿ ಸ್ಥಿರೀಕರ್ತುಮುರೋಜದುಗ್ಧಮ್ ।**
**ಪಪೌ ಪ್ರದೇಶಾರ್ಥಿತಯೇವ ಶೌರಿ-**
**ರ್ನ ಚೇತ್ ಸುತೃಪ್ತಸ್ಯ ಕುತಸ್ತದಿಚ್ಛಾ ॥ ೩೦ ॥**

ನಂದಪತ್ನಿಯಾದ ಯಶೋದೆಯ ಹೃದಯದಲ್ಲಿ ಅಪಾರಸಂಖ್ಯೆಯಲ್ಲಿ ಪುಣ್ಯವನ್ನು ನೆಲೆಗೊಳಿಸಲು ಸ್ಥಳವನ್ನು ಬಯಸಿಯೋ ಎಂಬಂತೆ ಶ್ರೀಕೃಷ್ಣ ಹಾಗೆ ಸ್ತನ್ಯಪಾನವನ್ನು ಮಾಡಿದ. ಇಲ್ಲವಾದಲ್ಲಿ ನಿತ್ಯತೃಪ್ತನಾದ ಅವನಿಗೆ ಆ ಬಯಕೆ ಏಕೆ ಬರುತ್ತಿತ್ತು?

ವಿ. : ೧. [೩]ಹಾಗೆ ಸ್ತನ್ಯಪಾನ ಮಾಡುವ ಮೂಲಕ ಶ್ರೀಕೃಷ್ಣನು ಯಶೋದೆಗೆ ಅಪಾರ ಪುಣ್ಯವನ್ನು ನೀಡಿದ ಎಂದು ತಾತ್ಪರ್ಯ. ಹಾಗೆ ಪುಣ್ಯ ತುಂಬಿಸಲು ಸ್ಥಾವಕಾಶ ಬಯಸಿಯೋ ಎಂಬಂತೆ[೪] ಮಾತ್ರ ಆ ಸ್ತನ್ಯಪಾನ ಕರ್ಮ ನಡೆದಿತ್ತು. ಸದಾ ಪೂರ್ಣಕಾಮನಾದ ಶ್ರೀಕೃಷ್ಣನಿಗೆ ಬೇರಾವ ಕಾಮನೆಯೂ ಅಸಂಭಾವಿತ[೫] ಎಂಬುದು ಇದಕ್ಕೆ ಮುಖ್ಯಕಾರಣ; ಉರೋಜ - ಸ್ತನ.

---

೧. ಸ್ತನ್ಯಸ್ಯ ಸ್ವೇನ ಪೂರ್ವಂ ಕದಾಪ್ಯನಾಸ್ವಾದಿತತ್ವಾದಿತಿ ಭಾವಃ । -ವ್ಯಾ.

೨. ತಥಾಹಿ । ನೂತ್ನೇಷು ನವೀನೇಷು ಪ್ರಿಯೇಷು ಕಸ್ಯ ತೃಪ್ತಿರಲಂಬುದ್ಧಿರ್ಭವೇತ್ ನ ಕಸ್ಯಾಪೀತ್ಯರ್ಥಃ । ಆಜನ್ಮನಃ ಸ್ತನಪಾನಮತೃಪ್ತಪೂರ್ವಮಿತಿ ಭಾವಃ । -ವ್ಯಾ.

೩. ಕೃಷ್ಣಃ ಯಾವದ್ಯಾವತ್ ಸ್ತನ್ಯಂ ಪಿಬತಿ ತಾವತ್ತಾವದ್ಯಶೋದಾಹೃದಿ ಪುಣ್ಯಸ್ಯೋಪಚಯೋ ಜಾತ ಇತ್ಯರ್ಥಃ । -ವ್ಯಾ.

೪. ಹೃದಯ ಏವ ಕ್ಷೀರರೂಪವಸ್ತುನಿ ಸ್ಥಿತೇ ಸತಿ ತತ್ರ ಪುಣ್ಯಪ್ರಕ್ಷೇಪಸ್ಯಾನವಕಾಶಾತ್ ಪಾನಾತ್ ಕ್ಷೀರಂ ಬಹಿಃ ಕೃತ್ವಾ ಪುಣ್ಯಂ ಪ್ರಕ್ಷೇಪ್ತುಮಿವೇತಿ ಭಾವಃ । -ವ್ಯಾ.

೫. ತೃಪ್ತ್ಯರ್ಥಂ ಖಲು ಸ್ತನ್ಯಪಾನಂ, ತೃಪ್ತೇಃ ಪೂರ್ವಂ ಸತ್ವಾತ್ ಕಿಮರ್ಥಂ ಸ್ತನ್ಯಪಾನಂ ಕುರ್ಯಾದಿತ್ಯರ್ಥಃ । -ವ್ಯಾ.

### ಶ್ರೀಕೃಷ್ಣನ ಸ್ತನ್ಯಪಾನದ ವೈಭವ

ವಿಭುರ್ಯಶೋದಾಂಕಗತೋऽಪಿಬತ್ ಸ
ಸ್ತನಂ ಪ್ರಗೃಹ್ಯಾನ್ಯಮುರೋಜದುಗ್ಧಮ್[೧] ।
ದೃಶಾऽಮೃತಂ ದಾನಫಲಂ ತದೈವ
ದಿಶನ್ನಿವಾಂಬಾನನಮೀಕ್ಷಮಾಣಃ ॥ ೩೧ ॥

ಯಶೋದೆಯ ತೊಡೆಯನ್ನೇರಿ ಪ್ರಭುವಾದ ಶ್ರೀಕೃಷ್ಣ ಅವಳಿಗೆ ಸ್ತನ್ಯದಾನದ ಫಲವಾಗಿ ಮೋಕ್ಷವನ್ನು ಆಗಲೇ ನೀಡುವವನಂತೆ ಅವಳ ಮುಖವನ್ನು ನೋಡುತ್ತ ಒಂದು ಸ್ತನವನ್ನು ಹಿಡಿದುಕೊಂಡು ಮತ್ತೊಂದು ಸ್ತನದ ಕ್ಷೀರವನ್ನು ಪಾನಮಾಡಿದ.

ವಿ. : ೧. ಯಶೋದೆಯು ನೀಡಿದ ಸ್ತನ್ಯಕ್ಕೆ ಮೋಕ್ಷವೇ ಫಲ ಎಂಬುದು ಇಲ್ಲಿಯ ಮುಖ್ಯಾಂಶ. ನಿಜಕ್ಕೂ ಸಹ ಮೋಕ್ಷ ಲಭಿಸುವುದು ಅಪರೋಕ್ಷಜ್ಞಾನದಿಂದ ಮಾತ್ರ. ಇಲ್ಲಿ ಸ್ತನ್ಯದಿಂದ ಮೋಕ್ಷ ಎಂಬುದಕ್ಕೆ ಇಂತಹ ಪವಿತ್ರಕಾರ್ಯಗಳಿಂದ ಲಭಿಸಿದ ಅಪರೋಕ್ಷಜ್ಞಾನದಿಂದಾಗಿ ಅವಳಿಗೆ ಮೋಕ್ಷ ಎಂದು ತಿಳಿಯಬೇಕು.

೨. ಏಕಕಾಲಕ್ಕೆ ಹಾಗೆ ಗ್ರಹಣ ಹಾಗೂ ಪ್ರಾಶನಗಳ ಮೂಲಕ ಶ್ರೀಕೃಷ್ಣ ಅಂತಹ ಸಂದೇಶವನ್ನು ನೀಡಿದ ಎಂದರ್ಥ.

### ಯಶೋದೆಯ ಸ್ತನ್ಯಪ್ರಾಶನದ ಹಿಂದಿನ ಭಾವ

ಪೂರ್ಣಸ್ಯಾಪೂರ್ಣತಾಂ ಮತ್ವಾ ಗೋಪೀ ಗೋಪೀನಮಂದಿರಾ ।
[೨]ಕ್ಷೀರಸ್ಯತೀತಿ ಕ್ಷಣಶಃ ಕ್ಷೀರಂ ಪಾಯಯತಿ ಪ್ರಭುಮ್ ॥ ೩೨ ॥

ಗೋವುಗಳಿಂದ ತುಂಬಿದ್ದ ಗೃಹದ ಯಶೋದೆಯು ಪೂರ್ಣನಾದ ಶ್ರೀಕೃಷ್ಣನನ್ನು ಅಪೂರ್ಣ ಎಂದು ಭಾವಿಸಿ, ಅವನು ತನಗಾಗಿ ಕ್ಷೀರವನ್ನು ಅಪೇಕ್ಷಿಸಿರುವನು ಎಂದು ತಿಳಿದು ಪ್ರತಿಕ್ಷಣದಲ್ಲೂ ಸ್ವಾಮಿಯಾದ ಅವನಿಗೆ ಕ್ಷೀರಪಾನ ಮಾಡಿಸುತ್ತಲೇ ಇದ್ದಳು.

---

೧. ಪಯಾಂಸಿ ಯಾಸಾಮಪಿಬತ್ ಪುತ್ರಸ್ನೇಹಸ್ನುತಾನ್ಯಲಮ್ ।
ಭಗವಾನ್ ದೇವಕೀಪುತ್ರಃ ಕೈವಲ್ಯಾದ್ಯಖಿಲಾರ್ಥದಃ ॥
ತಾಸಾಮವಿರತಂ ಕೃಷ್ಣೇ ಕುರ್ವಂತೀನಾಂ ಸುತೇಕ್ಷಣಮ್ ।
ನ ಪುನಃ ಕಲ್ಪತೇ ರಾಜನ್ ಸಂಸಾರೋऽಜ್ಞಾನಸಂಭವಃ ॥ -ಭಾಗ.(೧೦/೭/೪೦,೪೧)
ಅನಃ ಶಯಾನಸ್ಯ ಶಿಶೋರಥಾಲ್ಪಕಪ್ರವಾಲಮೃದ್ವಂಘ್ರಿಹತಂ ವ್ಯವರ್ತತ ।
ವಿಧ್ವಸ್ತನಾನಾರಸಕುಪ್ಯಭಾಜನಂ ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಮ್ ॥ -ಭಾಗ.(೧೦/೮/೯)

೨. ಕ್ಷೀರಸ್ಯತಿ – ಕ್ಷೀರಮಾತ್ಮಾರ್ಥಂ ಪಾತುಮಿಚ್ಛತಿ । -ವ್ಯಾ.

ವಿ. : ೧. [೧]ಯಶೋದೆಯು ಶ್ರೀಕೃಷ್ಣನು ಕ್ಷೀರಪಾನಮಾಡುತ್ತಿರುವುದು ಕೇವಲ ಇವಳ ಒಳಿತಿಗೋಸ್ಕರ ಎಂದು ತಿಳಿಯದೆ, ಹಾಲನ್ನು ಬಯಸಿ, ಬಯಸಿ, ಕುಡಿಯುತ್ತಿರುವನೆಂದು ಭಾವಿಸಿ, ಪುನಃಪುನಃ ಹಾಲನ್ನು ಕುಡಿಸುತ್ತಲೇ ಇದ್ದಳು ಎಂದು ಅರ್ಥ; ಪೀನ - ಪೂರ್ಣ.

೨. ಶ್ರೀಹರಿಯ ಅನುಗ್ರಹವನ್ನು ಅಪೇಕ್ಷೆ ಎಂದು ಭಾವಿಸುವುದು ಅವಿವೇಕ ಎಂದರ್ಥ.

### ಪೂತನಿಯ ಆಗಮನ

ತತಃ ಕದಾಚಿತ್ ಪಥಿ ಪೂತನಾಖ್ಯಾ
ಸ್ವಮಾಯಯಾ ರೂಪಮವಾಪ್ಯ ರಮ್ಯಮ್ ।
ತಮಂಕಮಾರೋಪ್ಯ ವಿಷಾನುಷಕ್ತ-
ಕುಚಂ ಮುದಾಽಪಾಯಯದಂಬುಜಾಕ್ಷಮ್ ॥ ೩೩ ॥

ಅನಂತರ ಒಮ್ಮೆ ಪೂತನಾ ಎಂಬವಳು ಹಾದಿಯಲ್ಲಿ ತನ್ನ ಮಾಯೆಯಿಂದ ಸುಂದರವಾದ ರೂಪವನ್ನು ಧರಿಸಿ, ಶ್ರೀಕೃಷ್ಣನನ್ನು ತೊಡೆಯಮೇಲೆ ಇರಿಸಿಕೊಂಡು, ಪುಂಡರೀಕಾಕ್ಷನಾದ ಅವನಿಗೆ ತನ್ನ ವಿಷಪೂರಿತವಾದ ಸ್ತನವನ್ನು ಸಂತೋಷದಿಂದ ಪಾನಮಾಡಿಸಿದಳು.

ವಿ. : ೧. ಪೂತನಿ ಎಂಬವಳು ಹಿಂದಿನ ಜನ್ಮದಲ್ಲಿ ತಾಟಕೆಯಾಗಿ ಜನಿಸಿ, ಶ್ರೀರಾಮನಿಂದ ಹತಳಾಗಿದ್ದವಳು. ಈಗ ಶ್ರೀಕೃಷ್ಣನನ್ನು ಕೊಲ್ಲಲೆಂದು, ಮರಳಿ ಜನಿಸಿಬಂದಿದ್ದವಳು ಎಂಬುದು ಇದರ ಹಿಂದಿನ ಪ್ರಮೇಯ.

೨. ಶ್ರೀಕೃಷ್ಣನನ್ನು ಅಂಬುಜಾಕ್ಷ (ಪುಂಡರೀಕಾಕ್ಷ) ಎಂದು ಕರೆಯುವ ಮೂಲಕ ಅವಳ ಮಾಯೆ ಶ್ರೀಕೃಷ್ಣನ ಮೇಲೆ ಯಾವುದೇ ಪ್ರಭಾವವನ್ನು ಬೀರಲಿಲ್ಲ ಎಂಬುದನ್ನು ಸೂಚಿಸಿರುವರು; ಮಾಯೆಯ ಪರಿಣಾಮ ಬುದ್ಧಿಗೆ ಮಂಕು ಕವಿಯುವುದು. ಶ್ರೀಕೃಷ್ಣನಿಗೆ ಅದರ ಪರಿಣಾಮ ಸರ್ವಥಾ ಆಗಿಲ್ಲ ಎಂಬುದಕ್ಕೆ ಅವನ ಕಮಲದಂತಹ ಕಣ್ಣುಗಳೇ ಸಾಕ್ಷಿಯಾಗಿದ್ದವು ಎಂದು ಭಾವ.

೩. ಶ್ರೀಕೃಷ್ಣನಿಗೆ ತನ್ನ ಮಾಯೆ ಕವಿದಿದೆ ಎಂಬ ಭ್ರಮೆಯಿಂದ ಅವನನ್ನು ಕೊಲ್ಲುವುದು ಸುಲಭ ಎಂಬುದೇ ಅವಳ ಸಂತೋಷಕ್ಕೆ ಕಾರಣವಾಗಿದ್ದಿತು ಎಂಬುದನ್ನು 'ಮುದಾ' ಎಂಬ ಪದದಿಂದ ಸೂಚಿಸಿರುವರು.

೪. ರಾಕ್ಷಸಿಯಾದ ಪೂತನಿಯ ವಿಕಾರರೂಪವು ಹಾಗೆ ಸುಂದರವಾಗಿ ಕಾಣಲು ಒಳಗಿದ್ದ ಊರ್ವಶಿಯ ಆವೇಶ ಕಾರಣವಾಗಿದ್ದಿತು. ನಿಜವಾದ ಹಿರಿಮಗೆ ಕಾರಣವಾಗುವ ನೈಜರೂಪವು ಅಸುರಸ್ತ್ರೀಯರಿಗೆ ಸರ್ವಥಾ ಇರುವುದಿಲ್ಲ:

ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ ।
ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್ ॥

---

೧. ಗೋಪೀನಮಂದಿರೇತ್ಯನೇನ ವಿತ್ತಬಾಹುಲ್ಯಾದೇವೇದಂ ನ ತು ತಸ್ಯಾಪೂರ್ಣತೇತಿ ಧ್ವನ್ಯತೇ। -ವ್ಯಾ.

ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ।
ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ ॥

- ಮ.ಭಾ.ತಾ.ನಿ. (೨/೩೮,೩೯)

## ಊರ್ವಶಿಯಂತೆ ಕಂಗೊಳಿಸಿದ ಪೂತನಿ

ಪರಿಸ್ಫುರನ್ನೂಪುರಕಂಕಣೋಜ್ಜ್ವಲಾ
ಲಸನ್ನಿತಂಬಾರ್ಪಿತರತ್ನಮೇಖಲಾ ।
ದೃಗಂತಸಂಸ್ತಂಭಿತಮಾನಿಮಂಡಲಾ
[೧]ತದೋರ್ವಶೀವಾಸ್ತಿ ವಿಲೋಲಕುಂಡಲಾ ॥ ೩೪ ॥

ಝುಗಝುಗಿಸುವ ಕಾಲ್ಗೆಜ್ಜೆಗಳಿಂದ ಹಾಗೂ ಕೈಬಳೆಗಳಿಂದ ಹೊಳೆಯುವ, ಶೋಭಿಸುವ ನಿತಂಬದ ಮೇಲೆ ರತ್ನದ ಒಡ್ಯಾಣವನ್ನು ಧರಿಸಿದ, ತನ್ನ ಕುಡಿನೋಟದಿಂದಲೇ ಎಂತಹ ಅಹಂಕಾರಿಗಳ ಗುಂಪನ್ನೂ ಮರಳುಗೊಳಿಸುವ, ಓಲಾಡುವ ಓಲೆಗಳ, ಅವಳು ಆಗ ಊರ್ವಶಿಯೋ ಎಂಬಂತಿದ್ದಳು.

ವಿ. : ೧. [೨]ಪೂತನಿಯು ಮಾಯೆಯಿಂದ ಸ್ವೀಕರಿಸಿದ ರೂಪದ ವರ್ಣನೆ ಇದರಲ್ಲಿದೆ. ಅವಳ ರೂಪ ಊರ್ವಶಿಯ ರೂಪದಂತಿತ್ತು ಎಂದರ್ಥ.

೨. ಪೂತನಿಯಲ್ಲಿ ಊರ್ವಶಿಯ ಆವೇಶ ಎಂಬುದು ನಿರ್ಣಯದಲ್ಲಿ ಸ್ಫುಟವಾಗಿರುವ ವಿಚಾರ; ಅದನ್ನು ಅವಳು ಊರ್ವಶಿಯಂತಿದ್ದಳು[೩] ಎಂಬುದರಿಂದ ಕೌಶಲಪೂರ್ವಕವಾಗಿ ಇಲ್ಲಿ ತಿಳಿಸಿರುವರು. ಅದರಂತೆ ಅವಳಿಗೆ ಅಂತಹ ಸುಂದರ ರೂಪ ಬರಲು, ಕೇವಲ ಅವಳ ಮಾಯೆ ಕಾರಣವಾಗಿರದೆ, ಅವಳಲ್ಲಿದ್ದ ಊರ್ವಶಿಯ ಆವೇಶವೇ ಕಾರಣವಾಗಿದ್ದಿತು ಎಂಬ ಪ್ರಮೇಯ ಇಲ್ಲಿದೆ; ಈ ಶ್ಲೋಕವು ವಂಶಸ್ಥವೃತ್ತದಲ್ಲಿದೆ; ಮೇಖಲ – ಒಡ್ಯಾಣ.

## ಪೂತನಿಯ ಸ್ತನ್ಯಪ್ರಾಶನಕ್ಕೆ ಕೃಷ್ಣ ತೊಡಗಲು ಕಾರಣ

ಸ ಪೂತನೋಚ್ಚಸ್ತನಕುಂಭಚುಂಬಿ-
ಮುಖಾರವಿಂದೋ ಹರಿರಾಬಭಾಸೇ ।
ವಿಷಂ ಬಹಿಷ್ಠಂ ಪ್ರಮದಾಂತರಂಗೇ
ಸುಪೂರಯಂಸ್ತನ್ಮುಖವರ್ತ್ಮನೇವ ॥ ೩೫ ॥

---

೧. ಸಾ ತಾಟಕಾ ಚೋರ್ವಶೀಸಂಪ್ರವಿಷ್ಟಾ(ಮಾ.ಭಾ.ತಾ.ನಿ. ೧೨/೮೮) ।

೨. ಯಯಾ ಸಾ ತಥಾ ದೃಗಂತೇನ ಲೋಚನಾಂತೇನ ಕಟಾಕ್ಷೇಣೇತ್ಯರ್ಥಃ । –ವ್ಯಾ.

೩. ಅನೇನ ಪೂತನಾಯಾಮುರ್ವಶ್ಯಾವೇಶಾತ್ ಸೌಂದರ್ಯಮಿತ್ಯವಗಮ್ಯತೇ । –ವ್ಯಾ.

ಹೊರಗೆ ಮೆತ್ತಿದ್ದ ಸ್ತನಗಳ ವಿಷವನ್ನು ಅವಳ ಸ್ತನದ ಚೂಚುಕದ ತುದಿಯ ಮಾರ್ಗವಾಗಿಯೇ ಒಳಗೆ ತುಂಬಿಸಲೆಂಬಂತೆ ಪೂತನಿಯ ಉನ್ನತವಾದ ಸ್ತನ ಎಂಬ ಕುಂಭವನ್ನು ಚುಂಬಿಸುವ ಮುಖಕಮಲದ ಆ ಶ್ರೀಕೃಷ್ಣನು ಶೋಭಿಸಿದ.

ವಿ. : ಶ್ರೀಕೃಷ್ಣನು ಪೂತನಿಯು ತನಗೆ ನೀಡಲೆಂದು ತಂದಿದ್ದ ವಿಷವನ್ನು ಮರಳಿ ಅವಳಿಗೇ ನೀಡಿದ ಎಂದರ್ಥ. ಇದು, **ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಮ್ । - ದ್ವಾದಶಸ್ತೋತ್ರ; ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ ( ಹರಿಕಥಾಮೃತಸಾರ)** ಎಂಬ ಮಾತುಗಳಿಗೆ ನಿದರ್ಶನದಂತಿದೆ.

**ಶ್ರೀಕೃಷ್ಣನಿಗೆ ಪೂತನಿಯ ವಿಷದ ಪ್ರಭಾವ ತಪ್ಪಲು ಕಾರಣೋತ್ಪ್ರೇಕ್ಷೆ**

**ರಮಾಧರೋಷ್ಠಾಮೃತಪಾನಜಾತ-**
**ಮಹಾನುಭಾವೇನ ನ ಪೂತನಾಯಾಃ ।**
**ಉರೋಜಸಂಗ್ಯಾರ್ತಿಕರೋ ಗರೋಽಸೌ**
**ಬಭೂವ ಬಾಲಸ್ಯ ಬಲಾನುಜಸ್ಯ [೧] ॥ ೩೬ ॥**

ಮಹಾಲಕ್ಷ್ಮಿಯ [೨] ಅಧರಾಮೃತಪಾನದಿಂದ ಉಂಟಾದ ಮಹಾಪ್ರಭಾವದಿಂದಾಗಿ, ಬಲ-ರಾಮನ ತಮ್ಮನಾದ ಬಾಲಕ ಶ್ರೀಕೃಷ್ಣನಿಗೆ, ಆ ಪೂತನಿಯ ಸ್ತನ್ಯದ ವಿಷವು ಯಾವುದೇ ಕೆಡುಕನ್ನು ಉಂಟುಮಾಡಲಿಲ್ಲ.

ವಿ. : ೧. ಪೂತನಿಯ ವಿಷವು ಶ್ರೀಕೃಷ್ಣನಿಗೆ ಕೇಡುಮಾಡದಿರಲು, ಕಾವ್ಯರೀತಿಯ ಕಾರಣ-ವನ್ನು ಇಲ್ಲಿ ನೀಡಿರುವರು. ಅಮೃತದ ವಿರುದ್ಧ ವಿಷದ ಆಟವೂ ಸಾಗದು ಎಂಬುದಷ್ಟೇ ಇಲ್ಲಿಯ ತಾತ್ಪರ್ಯ.

೨. ಸ್ವತಃ ಸ್ವರತನಾದ ಶ್ರೀಹರಿಗೆ ರಮಾದೇವಿಯ ಅಪೇಕ್ಷೆಯೇ ಇಲ್ಲ ಎಂಬುದು ವಸ್ತುಸ್ಥಿತಿ; ಶ್ರೀಹರಿಯು ಸ್ವತಃ ಅಮೃತಸ್ವರೂಪನಾದ್ದರಿಂದ ಅವನಿಗೆ ವಿಷದ ಬಾಧೆ ಎಲ್ಲಿಯದು (**ಅಮೃತಃ ಶಾಶ್ವತಃ ಸ್ಥಾಣುಃ...**- ವಿಷ್ಣುಸಹಸ್ರನಾಮ).

೩. ಮುಂದೆ ೧೮ನೇ ಸರ್ಗದಲ್ಲಿ ಬರುವ ಈ ಕೆಳಗಿನ ಶ್ಲೋಕವು ಸಹ ಇದೇ ತೆರನಾದುದು ಎಂಬುದು ಗಮನಾರ್ಹ, ರು.ವಿ.(೧೮/೫೯):

**ಸಂಪಕ್ವಬಿಂಬಸಮರಮ್ಯತಮಾಧರೋಷ್ಠಃ ಸತ್ಸಂಪದೇ ಭವತು ಸಾತ್ವತರಾಜರಾಷ್ಟ್ರ್ಯಃ ।**
**ಯತ್ಸಂಭವಾಮೃತಕಣೇನ ಫಣೀಂದ್ರತಲ್ಪಃ ಕೃಷ್ಣಃ ಸ ನಿತ್ಯಮಜರಾಮರಣೋ ಬಭೂವ ॥**

---

೧. ಕಾವ್ಯಲಿಂಗಮಲಂಕಾರಃ। -ವ್ಯಾ.
೨. ಅಮೃತಪೂರ್ಣಸ್ಯ ವದನಸ್ಯ ವಿಷಮಕಿಂಚಿತ್ಕರಮಿತಿ ಭಾವಃ। -ವ್ಯಾ.

೪. ಜೀವೋತ್ತಮರಾದ ವಾಯುದೇವರಿಗೆ ಕಲಿಯ ಸ್ವಭಾವವಾದ ಕಾಲಕೂಟದಂತಹ ವಿಷವೇ ಯಾವ ಪರಿಣಾಮವನ್ನೂ ಮಾಡಲಿಲ್ಲ ಎಂಬುದು ಸುಪ್ರಸಿದ್ಧ[1]; ಎಂದ ಮೇಲೆ ಸರ್ವೋತ್ತಮನಾದ ಶ್ರೀಕೃಷ್ಣನಿಗೆ ಈ ಪೂತನಿಯ ವಿಷ ಏನು ತಾನೆ ಮಾಡೀತು! ಎಂದು ತಿಳಿಯಬೇಕು; ನಾಗರಾಜನಾದ ಬಲರಾಮನ ತಮ್ಮ ಎಂಬ ಮಾತಿನಲ್ಲೂ ಈ ಧ್ವನಿ ಇದೆ.

### ಪೂತನಿಯ ವಧೆಗೆ ಕಾರಣೋತ್ಪ್ರೇಕ್ಷೆ

ಮರಿಷ್ಯತೋ ಭೋಜಪತೇರ್ನ ಜನ್ಮ
ತಮಃಶ್ರಮಾರ್ಹಸ್ಯ ಭವಿಷ್ಯತೀಹ।
ಇತೀವ ಧಾತ್ರೀಮವಧೀತ್ ಸ ತಸ್ಯ
ವ್ರತೀಂದ್ರವೃಂದಾರ್ಚಿತಪಾದಪೀಠಃ ॥ ೩.೭ ॥

ಇನ್ನೇನು ಸಾಯಲಿರುವ ತಮಸ್ಸಿನ ನೋವಿಗೆ ಅರ್ಹನಾದ ಕಂಸನಿಗೆ ಮರುಹುಟ್ಟು ಇಲ್ಲವೆಂಬ ಕಾರಣದಿಂದ ಮುನಿಶ್ರೇಷ್ಠರ ಹಿಂಡುಗಳಿಂದ ಆರಾಧಿತ ಪಾದಪೀಠನಾದ ಶ್ರೀಕೃಷ್ಣನು, ಅವನ ಸಾಕುತಾಯಿಯಾದ ಪೂತನಿಯನ್ನು ಕೊಂದುಹಾಕಿದ.

ವಿ. : ೧. [2]ಪೂತನಿಯ ಸಂಹಾರಕ್ಕೆ ಇಲ್ಲಿ ತಾತ್ತ್ವಿಕ ಕಾರಣವನ್ನು ನೀಡಲಾಗಿದೆ.

೨. ಪೂತನಿಯು ಕಂಸನ ಸಾಕುತಾಯಿ. ಕಂಸ ಇನ್ನೇನು ಸಾಯಲಿರುವುದರಿಂದ ಇವಳ ಅಗತ್ಯ ಅವನಿಗೆ ಇಲ್ಲ. ಆದ್ದರಿಂದ ಇವಳನ್ನು ಕೊಲ್ಲಬಹುದು. ಕಂಸನು ತಮಸ್ಸಿಗೆ ಹೋಗುವ ಮಹಾಪಾಪಿಯಾದ್ದರಿಂದ ಅವನು ಮರಳಿ ಹುಟ್ಟುವ ಸಂಭವವೂ ಇಲ್ಲ ಆದ್ದರಿಂದ ಇವಳ ಅಗತ್ಯ ಮತ್ತೆಂದೂ ಇಲ್ಲವೇ ಇಲ್ಲ ಎಂಬ ಕಾರಣದಿಂದ ಶ್ರೀಕೃಷ್ಣ ಅವಳನ್ನು ಸಂಹರಿಸಿದ ಎಂದರ್ಥ.

೩. ಕಂಸನು ತಮೋಯೋಗ್ಯ. ಅವನ ಸಂಹಾರ ಸನ್ನಿಹಿತ ಎಂಬ ಪ್ರಮೇಯ ಹಾಗೂ ಅದರಂತೆ ತಮಸ್ಸು ಮುಕ್ತಿಯಂತೆ ನಿತ್ಯವಾದ ಲೋಕ[3]; ಅಲ್ಲಿಗೆ ಹೋದವರು ಮರಳಿ ಬಾರರು ಎಂಬ ಪ್ರಮೇಯ ಇಲ್ಲಿ ನಿರೂಪಿತವಾಗಿದೆ ; ವ್ರತೀಂದ್ರ - ಪರಮಹಂಸ.

---

೧. 'ವಾಯುರಸ್ಮಾ ಉಪಾಮಂಥತ್ ಪಿನಷ್ಟಿಸ್ಮಾ ಕುನನ್ನಮಾ।
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ ಸಹ॥' - ಋ. (೧೦/೧೩.೬/೭)
ಅಥ ತ್ವದಾಜ್ಞಾಂ ಪುರತೋ ನಿಧಾಯ ನಿಧಾಯ ಪಾತ್ರೇ ತಪನೀಯರೂಪೇ।
ಸ್ವಯಂ ತ್ವನಿರ್ಮಥ್ಯ ಬಲೋಪಪನ್ನಂ ಪಪೌ ಸ ವಾಯುಸ್ತದುತಾಸ್ಯ ಜೀರ್ಣಮ್ ॥-ಮ.ಭಾ.ತಾ.ನಿ.(೧೦/೧೬)
೨. ಅನುತ್ಪನ್ನ್ಯತಃ ಸ್ತನದಾತ್ರ್ಯಾ ಧಾತ್ರ್ಯಾ ಕಿಂ ಪ್ರಯೋಜನಮಿತಿ ಭಾವೇನೇತಿ ಭಾವಃ। -ವ್ಯಾ.
೩.. ಮುಕ್ತಿರ್ನಿತ್ಯಾ ತಮಶ್ಚೈವ ನಾವೃತ್ತಿಃ ಪುನರೇತಯೋಃ। -ಮ.ಭಾ.ತಾ.ನಿ.(೧/೮೮)
ಅನಾದಿಕಾಲತಃ ಪ್ರಾಪ್ತಾಃ ಕಲ್ಯಾದ್ಯಾಸ್ತತ್ರ ದಾನವಾಃ।
ಅಸಂಗ್ಯಾತಾಃ ಕಿಲಾಶ್ನಾಂತಿ ಯಾತನಾಸ್ತೀವ್ರವೇದನಾಃ।
ಲಯೇಽಪಿ ಮುಕ್ತಿವದಿದಂ ವಿಷ್ವಕ್ ತಿಷ್ಠತ್ಯನಶ್ವರಮ್ ॥ - ಭೂಗೋಲ ನಿರ್ಣಯ (೮೨,೮೩.)

೪. ಶ್ರೀಕೃಷ್ಣನಿಗೆ ಪೂತನಿಯ ಸಂಹಾರದಿಂದ ಸ್ತ್ರೀಹತ್ಯಾ ನಿಮಿತ್ತ ದೋಷದ ಪ್ರಸಕ್ತಿ ಸರ್ವಥಾ ಇಲ್ಲ[೪] ಎಂಬುದನ್ನು 'ವ್ರತೀಂದ್ರವೃಂದಾರ್ಚಿತಪಾದಪೀಠಃ' ಎಂಬ ಪದದಿಂದ ಸೂಚಿಸಿರುವರು.

**ಆತ್ಮಘಾತಕವಾದ ಪೂತನಿಯ ವಿಷ**

**ವ್ರಜಸ್ಥಬಾಲಗ್ರಹಪೀಡಿತಾ ಸಾ**
**ವಿಷಪ್ರದಾನಸ್ಯ ಫಲಂ ಪ್ರಪೇದೇ ।**
**ತಥಾಹಿ ಕೃತ್ಯಾ ಮಹತಿ ಪ್ರಯುಕ್ತಾ**
**ಸ್ವಕೀಯಮೃತ್ಯುತ್ವಮುಪೈತಿ ಪೃಥ್ವ್ಯಾಮ್ ॥ ೩೮ ॥**

ಗೋಕುಲದಲ್ಲಿದ್ದ ಬಾಲರೂಪಿಯಾದ ಶ್ರೀಕೃಷ್ಣನೆಂಬ ಗ್ರಹದಿಂದ ಪೀಡಿತಳಾದ ಆ ಪೂತನಿಯು ವಿಷವನ್ನು ನೀಡಿದ್ದಕ್ಕೆ ತಕ್ಕ ಫಲವನ್ನು ಪಡೆದುಕೊಂಡಳು; ಅದು ಯುಕ್ತವೇ ಸರಿ! ದೊಡ್ಡವರ ಮೇಲೆ ಪ್ರಯೋಗಿಸಿದ ಅಭಿಚಾರಕ್ರಿಯೆಯು ಪ್ರಯೋಗಿಸಿದವನಿಗೇ ಮೃತ್ಯುವಾಗುವುದು.

ವಿ. : ೧. ಶ್ರೀಕೃಷ್ಣನಿಗೆ ವಿಷ ನೀಡಿದ ಪಾಪದಿಂದಾಗಿ ಪೂತನಿಯು ಮರಣ ಹೊಂದಿದಳು ಎಂದರ್ಥ.

---

೪. ಪೂತನಿಯ ಸಂಹಾರದಿಂದ ಶ್ರೀಕೃಷ್ಣನಿಗೆ ಸ್ತ್ರೀಹತ್ಯಾದೋಷದ ಪ್ರಸಕ್ತಿ ಸರ್ವಥಾ ಇಲ್ಲ ಎಂಬುದು ಶ್ರೀರಾಮರೂಪದ ಶ್ರೀಹರಿಯಿಂದ ತಾಟಕೆಯ ಸಂಹಾರ ನಡೆದಾಗ ಬರುವ ವಾಲ್ಮೀಕಿರಾಮಾಯಣದ ವಿಶ್ವಾಮಿತ್ರವಚನಗಳಿಂದ ಸ್ಫುಟಪಟ್ಟು, ಶ್ರೀಹರಿಯು ಸಕಲ ದೋಷದೂರ ಎಂಬ ಪ್ರಮೇಯವು ಸಿದ್ಧವಾಗುವುದು :
ಏತಾಂ ರಾಘವ ದುರ್ವೃತ್ತಾಂ ಯಕ್ಷೀಂ ಪರಮದಾರುಣಾಮ್ ।
ಗೋಬ್ರಾಹ್ಮಣಹಿತಾರ್ಥಾಯ ಜಹಿ ದುಷ್ಟಪರಾಕ್ರಮಾಮ್ ॥
ನಹ್ಯೇನಾಂ ಶಾಪಸಂಸ್ಪೃಷ್ಟಾಂ ಕಶ್ಚಿದುತ್ಸಹತೇ ಪುಮಾನ್ ।
ನಿಹಂತುಂ ತ್ರಿಷು ಲೋಕೇಷು ತ್ವಾಮೃತೇ ರಘುನಂದನ ॥
ನ ಹಿ ತೇ ಸ್ತ್ರೀವಧಕೃತೇ ಘೃಣಾ ಕಾರ್ಯಾ ನರೋತ್ತಮ ।
ಚಾತುರ್ವರ್ಣ್ಯಹಿತಾರ್ಥಂ ಹಿ ಕರ್ತವ್ಯಂ ರಾಜಸೂನುನಾ ॥
ನೃಶಂಸಮನೃಶಂಸಂ ವಾ ಪ್ರಜಾರಕ್ಷಣಕಾರಣಾತ್ ।
ಪಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸದಾ ॥
ರಾಜ್ಯಭಾರನಿಯುಕ್ತಾನಾಮೇಷ ಧರ್ಮಃ ಸನಾತನಃ ।
ಅಧರ್ಮ್ಯಾಂ ಜಹಿ ಕಾಕುತ್ಸ್ಥ ಧರ್ಮೋ ಹ್ಯಸ್ಯಾಂ ನ ವಿದ್ಯತೇ ॥
ಶ್ರೂಯತೇ ಹಿ ಪುರಾ ಶಕ್ರೋ ವಿರೋಚನಸುತಾಂ ನೃಪ ।
ಪೃಥಿವೀಂ ಹಂತುಮಿಚ್ಛಂತೀಂ ಮಂಥರಾಮಭ್ಯಸೂದಯತ್ ॥
ವಿಷ್ಣುನಾ ಚ ಪುರಾ ರಾಮ ಭೃಗುಪತ್ನೀ ಪತಿವ್ರತಾ ।
ಅನಿಂದ್ರಂ ಲೋಕಮಿಚ್ಛಂತೀ ಕಾವ್ಯಮಾತಾ ನಿಷೂದಿತಾ ॥
ಏತೈಶ್ಚಾನ್ಯೈಶ್ಚ ಬಹುಭೀ ರಾಜಪುತ್ರೈರ್ಮಹಾತ್ಮಭಿಃ ।
ಅಧರ್ಮಸಹಿತಾ ನಾರ್ಯೋ ಹತಾಃ ಪುರುಷಸತ್ತಮೈಃ ॥
ತಸ್ಮಾದೇನಾಂ ಘೃಣಾಂ ತ್ಯಕ್ತ್ವಾ ಜಹಿ ಮಚ್ಛಾಸನಾನ್ನೃಪ । –ವಾಲ್ಮೀಕಿರಾಮಾಯಣ (೧/೨೫/೧೪-೨೨)

೨. [1]ಪೂತನಿಯು ಸ್ವತಃ ಬಾಲರನ್ನು ಪೀಡಿಸುತ್ತಿದ್ದ ಬಾಲಗ್ರಹವೆನ್ನಿಸಿದ್ದವಳು. ಆದರೆ ಶ್ರೀಕೃಷ್ಣನೆಂಬ ಬಾಲರೂಪದ ಗ್ರಹದಿಂದ ಅವಳೇ ಪೀಡಿತಳಾದಳು.

೩. ದೊಡ್ಡವರಿಗೆ ಮಾಡುವ ಸ್ವಲ್ಪ ಅಪಚಾರವು ಸಹ [2]ಆತ್ಮಘಾತಕ ಎಂಬ ತತ್ತ್ವವೂ ಇಲ್ಲಿ ನಿರೂಪಿತವಾಗಿದೆ.

೪. ಗ್ರಹ ಎಂದರೆ ಹಿಡಿಯುವುದು ಎಂದರ್ಥ. ಸಕಲಗ್ರಹಗಳಿಗೂ ಅನುಗ್ರಾಹಕನಾದ್ದರಿಂದ ಶ್ರೀಕೃಷ್ಣನಿಗೆ 'ಗ್ರಹ' ಎಂಬ ಮಾತು ಯುಕ್ತವಾಗುವುದು:

ಸಕಲಗ್ರಹಬಲ ನೀನೇ ಸರಸಿಜಾಕ್ಷ – ಶ್ರೀಪುರಂದರದಾಸರು.

೫. ಶ್ರೀಮದ್ಭಾಗವತದ ಕೃಷ್ಣಗ್ರಹಗೃಹೀತಾತ್ಮಾ (೭/೪/೩೮) ಎಂಬ ಮಾತಿನಲ್ಲಿ ಕೃಷ್ಣನನ್ನು ಗ್ರಹ ಎಂದಿರುವುದನ್ನು ಇಲ್ಲಿ ಗಮನಿಸಬಹುದು.

೬. ಸ್ತೋತ್ತಮದ್ರೋಹ ಸರ್ವಥಾ ಅನರ್ಥಕರ ಎಂಬುದು ಅಪರೋಕ್ಷಜ್ಞಾನಿಗಳಿಗೂ ಅನ್ವಯಿಸುವಾಗ ಪೂತನಿಯಂತಹ ಮಹಾರಾಕ್ಷಸಿಗೆ ಅನ್ವಯಿಸಿದ್ದು ಅತ್ಯಂತ ಸಮುಚಿತ ಎಂದೂ ತಿಳಿಯಬೇಕು :

> ವಾರಾಣಸೀಂ ಪರಿಸಮೇತ್ಯ ಸುದಕ್ಷಿಣಂ ತಂ
> ಸರ್ತ್ವಿಗ್ಜನಂ ಸಮದಹತ್ ಸ್ವಕೃತೋಽಭಿಚಾರಃ । ಇತ್ಯಾದಿ ಭಾಗ. (೧೦/೬೬/೨೭-೪೨)
> ಕೋ ನಾಮ ಸತ್ಸು ವಿಷಮಃ ಪ್ರಭವೇತ್ ಸುಖಾಯ । -ಮ.ಭಾ.ತಾ.ನಿ. (೧೯/೪೫)

## ಪಾತಾಳಕ್ಕೆ ತೆರಳಿದ ಪೂತನಿ

**ಅಪಿ ಪ್ರದತ್ತೇ ಗರಲೇ ಶಿಶುಂ ತ-**
**ಮಭೀತಮಾಲೋಕ್ಯ ಭುಜಂಗಸಂಘಾನ್ ।**
**ವಿಭೀಷಯಂತೀ ಸಮಗಾದಧಃ ಸಾ**
**ನ ಚೇದ್ವಿಪರ್ಯಸ್ತಮೃತಿಃ ಕಥಂ ಸ್ಯಾತ್ ॥ ೩೯ ॥**

ವಿಷವನ್ನು ನೀಡಿದರೂ ಸಹ ಮಗುವು ನಿರ್ಭೀತಿಯಿಂದಿದ್ದುದನ್ನು ಕಂಡು [3]ಪೂತನಿಯು ಹಾವುಗಳ ಹಿಂಡನ್ನು ಭಯಪಡಿಸಲೆಂದು ಪಾತಾಳಕ್ಕೆ ತೆರಳಿದಳು; ಇಲ್ಲವಾದಲ್ಲಿ ಇಂತಹ ವಿರುದ್ಧರೀತಿಯ ಮರಣವು ಹೇಗಾಗುತ್ತಿತ್ತು !

---

೧. ಪರಮಾತ್ಮನಿ ಶ್ರೀಕೃಷ್ಣೇ ಕುಕರ್ಮಪ್ರಯೋಕ್ತ್ರ್ಯಾಃ ಮರಣಮುಚಿತಮಿತಿ ಭಾವಃ। -ವ್ಯಾ.

೨. ಸ್ವಾತ್ಮೋತ್ತಮೇಷ್ವಥ ಸುರೇಷು ವಿಶೇಷತಶ್ಚ ಸ್ವಲ್ಪೋಽಪಿ ದೋಷ ಉರುತಾಮಭಿಯಾತಿ ಯಸ್ಮಾತ್ ॥ -ಮ.ಭಾ.ತಾ.ನಿ.(೧೪/೪೭)

೩.. ಪೂತನಾ ನ ಮೃತಾ ಕಿಂತು ಭುಜಂಗಭೀಷಣಾರ್ಥಂ ಸ್ವಯಮೇವಾಧೋಲೋಕಂ ಜಗಾಮೇತ್ಯರ್ಥಃ। -ವ್ಯಾ.

ವಿ. : ೧. ಶ್ರೀಕೃಷ್ಣನ ಮೇಲೆ ವಿಷವು ಪರಿಣಾಮ ಬೀರದ್ದನ್ನು ಕಂಡು ಅದನ್ನು ನೀಡಿದ್ದ ಹಾವುಗಳಿಗೆ ನೀವು ನೀಡಿದ ವಿಷ ಅಂತಹ ಕ್ರೂರವಾದುದೇನೂ ಅಲ್ಲ ಎಂದು ದಂಡಿಸಲೋ ಎಂಬಂತೆ ಪೂತನಿಯು ಅಧೋಲೋಕಕ್ಕೆ ತೆರಳಿದಳು ಎಂದು ಭಾವ.

೨. ಒಂದು ವಸ್ತುವಿನಿಂದ ನಿರೀಕ್ಷಿತ ಪರಿಣಾಮ ಬೀರದಿದ್ದಾಗ ಅದನ್ನು ನೀಡಿದವರನ್ನು ಆಕ್ಷೇಪಿಸುವುದು ಸಹಜ; ಪೂತನಿಯು ಇಲ್ಲಿ ಹಾಗೆ ಮಾಡಿದಳು ಎನ್ನುವ ಮೂಲಕ ಅವಳು ಮಹಾಕ್ರೂರಿಗಳ ಪ್ರತಿನಿಧಿಯಾಗಿ, ಶ್ರೀಕೃಷ್ಣನಿಗೆ ವಿಷ ನೀಡಲು ಬಂದಿದ್ದ ಮಹಾಪಾತಕಿಯಾಗಿದ್ದಳು ಎಂಬ ಅಂಶ ಸೂಚಿತ.

೩. ವಿಷ ಕೊಟ್ಟದ್ದು ಶ್ರೀಕೃಷ್ಣನಿಗಾದರೂ ಸತ್ತಿದ್ದು ವಿಷವನ್ನು ನೀಡಿದ ಪೂತನಿಯೇ; 'ವಿಪರ್ಯಸ್ತಮೃತಿ' ಎಂದರೆ ವಿಷ ಕುಡಿದವನಿಗೆ ಬದಲಾಗಿ ವಿಷ ನೀಡಿದವನೇ ಸಾಯುವುದು ಎಂದರ್ಥ.

೪. [೧]ಪೂತನಿಯು ಅಧೋಗತಿಗೆ ತೆರಳಿದಳು ಎಂಬುದು ಮುಖ್ಯ ಭಾವ.

**ಆಕೃತಿಯಲ್ಲೂ ತಾಟಕೆಯಾದ ಪೂತನಿ**

**ಉತ್ತುಂಗಹಸ್ತಚರಣಾಯತಶೈಲಶೃಂಗಾಂ**
**ವಿಸ್ತಾರಿತಾನನವಿನಿರ್ಗತದೀರ್ಘದಂಷ್ಟ್ರಾಮ್ ।**
**ಶುಷ್ಯತ್ತಟಾಕಸದೃಶೋದರಘೋರರೂಪಾಂ[೨]**
**ತರ್ಕೇಽತಿಕರ್ಕಶರವೋಜ್ಜ್ವಲತಾಟಕಾಂ ತಾಮ್ ॥ ೪೦ ॥**

ಉನ್ನತವಾದ ಕೈಕಾಲುಗಳೆಂಬ ವಿಶಾಲವಾದ ಪರ್ವತ ಶಿಖರಗಳು, ತೆರೆದ ಬಾಯಿಂದ ಹೊರಚಾಚಿದ್ದ ಉದ್ದನೆಯ ಹಲ್ಲುಗಳು, ಒಣಗಿದ ಸರೋವರದಂತಿದ್ದ ಉದರ, ಅತ್ಯಂತ ಭಯಾನಕವಾದ ರೂಪ; ಇಂತಹ ಅವಳನ್ನು ಅತ್ಯಂತ ಕರ್ಕಶಧ್ವನಿಯಿಂದ ಕೂಡಿದ ತಾಟಕೆ ಎಂದು ಊಹಿಸುವೆ.

---

೧. ನ ಚೇದೇವಂ ನ ಚೇತ್ ವಿಪರ್ಯಸ್ತಮೃತಿಃ ಏಕಸ್ಯ ವಿಷದಾನೇ ಅನ್ಯಸ್ಯ ಮರಣಂ ಕಥಂ ಸ್ಯಾತ್ । ಅನೇನ ಪೂತನಾಯಾ ಅಧೋಲೋಕಗಮನಮೇವ ನ ತೂರ್ಧ್ವಲೋಕಗಮನಮಿತಿ ಧ್ವನ್ಯತೇ । -ವ್ಯಾ.

೨. ಪತಮಾನೋಽಪಿ ತದ್ದೇಹಸ್ತ್ರಿಗವ್ಯೂತ್ಯಂತರದ್ರುಮಾನ್ ।
ಚೂರ್ಣಯಾಮಾಸ ರಾಜೇಂದ್ರ ಮಹದಾಸೀತ್ ತದದ್ಭುತಮ್ ॥
ಈಷಾಮಾತ್ರೋಗ್ರದಂಷ್ಟ್ರಾಸ್ಯಂ ಗಿರಿಕಂದರನಾಸಿಕಮ್ ।
ಗಂಡಶೈಲಸ್ತನಂ ರೌದ್ರಂ ಪ್ರಕೀರ್ಣಾರುಣಮೂರ್ಧಜಮ್ ॥
ಅಂಧಕೂಪಗಭೀರಾಕ್ಷಂ ಪುಲಿನಾರೋಹಭೀಷಣಮ್ ।
ಬದ್ಧಸೇತುಭುಜೋರ್ವಂಘ್ರಿ ಶೂನ್ಯತೋಯಹ್ರದೋದರಮ್ ॥
ಸಂತತ್ರಸುಃ ಸ್ಮ ತದ್ವೀಕ್ಷ್ಯ ಗೋಪಾ ಗೋಪ್ಯಃ ಕಳೇಬರಮ್ । -ಭಾಗ.(೧೦/೭/೧೫-೧೮)

ವಿ. : ೧. ಸತ್ತು ಬಿದ್ದಿದ್ದ ಪೂತನಿಯ ವಿಕಾರರೂಪದ ವರ್ಣನೆ ಇದರಲ್ಲಿದೆ. ಹಾಗೆ ಬಿದ್ದಿದ್ದ ಅವಳು ತಾಟಕೆ ಇರಬೇಕು ಎನ್ನಿಸುವುದು; ಎಂದರೆ ಅವಳು ಹಿಂದಿನ ಜನ್ಮದಲ್ಲಿ ತಾಟಕೆ-ಯಾಗಿದ್ದವಳು ಎಂಬುದು ಮುಖ್ಯಭಾವ.

೨. ಅವಳ ಸುಂದರರೂಪಕ್ಕೆ ಉರ್ವಶಿಯ ಆವೇಶವು ಕಾರಣವಾಗಿದ್ದಂತೆ ವಿಕೃತರೂಪಕ್ಕೆ ತಾಟಕೆಯಾಗಿದ್ದ ಅವಳ ಸ್ವಭಾವವೇ ಕಾರಣವಾಗಿದ್ದಿತು ಎಂಬುದು ಇಲ್ಲಿಯ ತಾತ್ಪರ್ಯ.

೩.. ಕಾವ್ಯಮಯವಾಗಿ ಅವಳಲ್ಲಿದ್ದ ಉರ್ವಶಿಯ ಆವೇಶ ಹಾಗೂ [೧]ತಾಟಕೆಯ ಸ್ವಭಾವ-ವನ್ನು ನಿರೂಪಿಸಿರುವ ಇಲ್ಲಿಯ ಕೌಶಲ ಅತ್ಯಂತ ರೋಚಕವಾದುದು.

### ತಮಸ್ಸಿಗೆ ಪೂತನಿ – ಸ್ವರ್ಗಕ್ಕೆ ಉರ್ವಶೀ

**ಮುಕುಂದವಿದ್ವೇಷವಿಷಾನುಷಂಗಾ-**
**ದ್ವಿಯೋಜಿತಾಂಗೀ ಕಿಲ ಪೂತನ್ಯೈಕಾ ।**
**ಪಪಾತ ಧನ್ಯಾ ಲಲನಾಗ್ರಗಣ್ಯಾ**
**ಜಗಾಮ ಚಾನ್ಯಾಽಮರಲೋಕಲೋಕಮ್ ॥ ೪೧ ॥**

ಶ್ರೀಹರಿದ್ವೇಷವೆಂಬ ವಿಷದ ಸಂಪರ್ಕದಿಂದಾಗಿ ದೇಹತೊರೆದ ಪೂತನಿ ಎಂಬವಳು ತಮಸ್ಸಿಗೆ ಬಿದ್ದಳು; ಅವಳಲ್ಲಿದ್ದ ಮತ್ತೊಬ್ಬ ಸ್ತ್ರೀಯಾದ ಉರ್ವಶಿಯೆಂಬ ಮಹಿಳಾಮಣಿಯು ದೇವವೃಂದವಿರುವ ಲೋಕವನ್ನು ಸೇರಿದಳು.

ವಿ. : ೧. ಜೀವದ್ವಯಾವೇಶವಿದ್ದ ಆ ಪೂತನಿಯಲ್ಲಿ ರಾಕ್ಷಸಿಯಾದ ತಾಟಕೆಯು ತಮಸ್ಸಿಗೂ ಉರ್ವಶಿಯೆಂಬ [೨]ಅಪ್ಸರೆಯು ಸ್ವರ್ಗಕ್ಕೂ ತೆರಳಿದರು ಎಂದರ್ಥ.

೨. ಪೂತನಿಯ ಪತನಕ್ಕೆ [೩]ಹರಿದ್ವೇಷವು ಕಾರಣವಾದಂತೆ, ಉರ್ವಶಿಯ ಉದ್ಧಾರಕ್ಕೆ ಅವಳಲ್ಲಿದ್ದ ಹರಿಭಕ್ತಿಯು ಕಾರಣವಾಯಿತು ಎಂದು ತಿಳಿಯಬೇಕು.

---

೧. ಅನೇನ ಪೂತನಾಯಾಃ ತಾಟಕಾತ್ವಂ ಧ್ವನ್ಯತೇ। –ವ್ಯಾ.

೨. ಜೀವಾಸ್ತು ದ್ವಿವಿಧಾಃ ಸಂತೋಽಸಂತಶ್ಚ। ತತ್ರ ಸತಾಮೇವ ಮೋಕ್ಷೋ ನತ್ವಸತಾಮಿತಿ ಸ್ಥಿತೇ ಪುರಾಣಾದಿಷು ಪೂತನಾದೀನಾಂ ಮೋಕ್ಷೋಕ್ತಿಂ ಘಟಯನ್ನತ್ರ ಜೀವದ್ವಯಸಮಾವೇಶಮುಪಪಾದಯತಿ । ಮುಕುಂದೇ-ತ್ಯಾದಿಪದ್ಯೈಃ। –ವ್ಯಾ.

ಕಂಸಪೂತನಿಕಾದ್ಯಾಶ್ಚ ಬಾಂಧವಾದಿಯುತಾ ಯತಃ।
ಜೀವದ್ವಯಸಮಾವೇಶಾದ್ಗತಿದ್ವಯಜಿಗೀಷವಃ ॥ ಇತಿ ಸ್ಮೃತೇರುಕ್ತ ಏವಾರ್ಥಃ॥ –ವ್ಯಾ.
ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ। –ಗೀತಾ (೧೬/೬)

೩.. ಶ್ರೀಕೃಷ್ಣವಿದ್ವೇಷಾಖ್ಯವಿಷಪಾನೇನ ಮೃತೇತ್ಯರ್ಥಃ। –ವ್ಯಾ.

೩. [1]ಪೂತನಿಯೆಂಬ ರಾಕ್ಷಸಿಯೇ ಸ್ವರ್ಗಕ್ಕೆ ತೆರಳಿದಳು ಎಂಬಂತೆ ಶ್ರೀಮದ್ಭಾಗವತದಲ್ಲಿ ಮೇಲ್ನೋಟಕ್ಕೆ ಕಾಣುವುದು; ವಾಸ್ತವವಾಗಿ ಅದು ಜೀವದ್ವಯಾವೇಶದ ಪ್ರಸಂಗ ಎಂಬುದನ್ನು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುವರು. ಅದನ್ನು ಆಧರಿಸಿದ ನಿರೂಪಣೆ ಇದಾಗಿದೆ (ತುಂಬುರುವಿನ ಸಂಗದಿಂದಾಗಿ ಒದಗಿದ ಶಾಪದಿಂದ ಉರ್ವಶಿಯು ಹೀಗೆ ಪೂತನಿಯಲ್ಲಿ ಸೇರಿಕೊಳ್ಳುವಂತಾಗಿದ್ದಿತು ಎಂಬುದು ವಿಶೇಷ) :

ಸಾ ತಾಟಕಾ ಚೋರ್ವಶೀಸಂಪ್ರವಿಷ್ಟಾ ಕೃಷ್ಣಾನಧ್ಯಾನಾನ್ನಿರಯಂ ಸಂಜಗಾಮ ।
ಸಾ ಚೋರ್ವಶೀ ಕೃಷ್ಣಭುಕ್ತಸ್ತನೇನ ಪೂತಾ ಸ್ವರ್ಗಂ ಪ್ರಯಯೌ ತತ್ಕ್ಷಣೇನ ॥
ಸಾ ತುಂಬುರೋಃ ಸಂಗಮ ಆವಿವೇಶ ರಕ್ಷಸ್ತನುಂ ಶಾಪತೋ ವಿತ್ತಪಸ್ಯ ।
ಕೃಷ್ಣಸ್ಪರ್ಶಾತ್ ಶುದ್ಧಭಾವಾ ಪುನರ್ದಿವಂ ಯಯೌ ತುಷ್ಟೇ ಕಿಮಲಭ್ಯಂ ರಮೇಶೇ ॥
- ಮ.ಭಾ.ತಾ.ನಿ. (೧೨/೮೮,೮೯)

## ಅಸುರರ ಭಾಗ್ಯವನ್ನು ಭಕ್ತರಿಗೆ ನೀಡುವ ಭಗವಂತ

**ಯದಿ ಪ್ರಭುರ್ವಿದ್ವಿಷತೋಽಪಿ ಶೌರಿಃ**
**ಪ್ರಸಾದಕೃತ್ ತರ್ಹಿ ಕುತಃ ಸುರಾರೀನ್ ।**
**ವಿಜಿತ್ಯ ಭಕ್ತಾಯ ತದೀಯಭಾಗ್ಯಂ**
**ಪ್ರಯಚ್ಛತಿ ಸ್ವೈರಮಿಹಾವತೀರ್ಯ ॥ ೪೨ ॥**

ಪ್ರಭುವಾದ ಶ್ರೀಹರಿಯು ದ್ವೇಷಿಗಳಿಗೂ ಅನುಗ್ರಹಮಾಡುವುದಿದ್ದಲ್ಲಿ ಅದೇತಕ್ಕೆ ಇಲ್ಲಿ ಸ್ವೇಚ್ಛೆಯಿಂದ ಅವತರಿಸಿ, ಸುರವೈರಿಗಳಾದ ದೈತ್ಯರನ್ನು ಪರಾಭವಗೊಳಿಸಿ ಅವರ ಭಾಗ್ಯವನ್ನು ತನ್ನ ಭಕ್ತರಿಗೆ ನೀಡುತ್ತಿದ್ದ ?

ವಿ. : ೧. 'ದ್ವೇಷದಿಂದಲೇ ಮುಕ್ತಿ' ಎಂಬ ಕೆಲವರ ವಾದವನ್ನು ಇಲ್ಲಿ (ಶ್ಲೋ.೪೨-೬೦) ವಿವರವಾಗಿ [2]ನಿರಾಕರಿಸುತ್ತಿರುವರು.

೨. ಶ್ರೀಹರಿಯು ದ್ವೇಷಿಗಳಿಗೂ ಅನುಗ್ರಹಮಾಡುವವನಾಗಿದ್ದಲ್ಲಿ ಅವನು ದುಷ್ಟರ [3]ಸಂಹಾರಕ್ಕೆಂದು ಅವತಾರವನ್ನೇತಕ್ಕೆ ಮಾಡುತ್ತಿದ್ದ ಎಂಬುದು ಇಲ್ಲಿಯ ಮುಖ್ಯಾಂಶ.

೩. ಇದು ಒಂದು ರೀತಿಯಲ್ಲಿ, **ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ** ಎಂಬ ಋಗ್ವೇದ (೧೦/೫೫/೬) ಮಂತ್ರದ ವಿವರಣೆಯಂತಿದೆ.

---

೧. ಪೂತನಾಯಾ ಮೋಕ್ಷೋಕ್ತಿಸ್ತದ್ಗತೋರ್ವಶೀಮಾದಾಯೇತಿ ಭಾವಃ। -ವ್ಯಾ.

೨. 'ಸರ್ವಥಾ ಭಕ್ತಿತೋ ಮುಕ್ತಿರ್ದ್ವೇಷಾತ್ತಮ ಉದೀರಿತಮ್ ।
ನಿಯಮಸ್ತ್ವನಯೋರ್ನಿತ್ಯಂ ಮೋಹಾಯಾನ್ಯದ್ವಚೋ ಭವೇತ್ ॥' ಇತಿ ಸ್ಮೃತೇಃ ದ್ವೇಷಾನ್ನ ಮೋಕ್ಷ ಇತ್ಯೇತದುಪಪಾದಯನ್ನಾಹ। -ವ್ಯಾ.

೩. ಅಸುರಾನ್ ನಿಗೃಹ್ಯ ತೇಷಾಂ ಧನದಾನೇ ತನ್ನಿಷ್ಠದ್ವೇಷಃ ನಿಮಿತ್ತಂ ಅನ್ಯಕಾರಣಸ್ಯಾಭಾವಾದಿತಿ ಭಾವಃ। -ವ್ಯಾ.

೪. ಕಂಸನನ್ನು ಕೊಂದು ಅವನ ತಂದೆ ಉಗ್ರಸೇನನಿಗೆ, ಶೃಗಾಲವಾಸುದೇವನನ್ನು ಕೊಂದು ಅವನ ಮಗ ಶಕ್ರದೇವನಿಗೆ, ಜರಾಸಂಧನನ್ನು ಕೊಲ್ಲಿಸಿ ಅವನ ಮಗ ಸಹದೇವನಿಗೆ, ನರಕಾಸುರನನ್ನು ಕೊಂದು ಅವನ ಮಗ ಭಗದತ್ತನಿಗೆ, ಶ್ರೀಕೃಷ್ಣನು ರಾಜ್ಯವನ್ನು ನೀಡಿದ ಪ್ರಸಂಗಗಳು ಇದಕ್ಕೆ ನಿದರ್ಶನ ಎಂದು ತಿಳಿಯಬೇಕು.

### ಅರಿಷ್ಟ ಮೊದಲಾದವರಿಗೆ ಆಗಿದ್ದು ಸದ್ಗತಿಯಲ್ಲ

ದ್ವಿಷಾಂ ಹರಿರ್ಯಚ್ಛತಿ ಯರ್ಹಿ ಮೋಕ್ಷಂ
ನ ತರ್ಹಿ ಕಸ್ಮಾದಪವರ್ಗಮಾರ್ಗಃ ।
ಅರಿಷ್ಟವಾತಾಸುರವತ್ಸಕೇಶಿ-
ವಿನಾಶಕಾಲೇ ವಿವೃತಃ ಶುಕೇನ ॥ ೪೩ ॥

ಶ್ರೀಹರಿಯು ದ್ವೇಷಿಗಳಿಗೂ ಮೋಕ್ಷನೀಡುವವನಾಗಿದ್ದಲ್ಲಿ , ಅರಿಷ್ಟಾಸುರ, ವಾತಾಸುರ, ವತ್ಸಾಸುರ, ಕೇಶಿ ಮೊದಲಾದವರ ವಿನಾಶಕಾಲದಲ್ಲಿ ಅವರಿಗೆ ಅದು ಮುಕ್ತಿಗೆ ದ್ವಾರವಾಯಿತೆಂದು ಶುಕಾಚಾರ್ಯರು ಏತಕ್ಕೆ ತಿಳಿಸಲಿಲ್ಲ ?

ವಿ. : ೧. ದ್ವೇಷಿಗಳಿಗೂ ಮುಕ್ತಿ ಎಂದಾಗಿದ್ದಲ್ಲಿ , ಪೂತನಿಯ ಪ್ರಸಂಗದಲ್ಲಿ ಹೇಳಿದಂತೆ ಅರಿಷ್ಟಾಸುರ, ತೃಣಾವರ್ತ, ಮೊದಲಾದ ರಾಕ್ಷಸರ ಸಂಹಾರಕಾರ್ಯದಲ್ಲಿ ಅವರಿಗೂ ಮುಕ್ತಿಯಾಯಿತೆಂದು ಏತಕ್ಕೆ ನಿರೂಪಿಸಿಲ್ಲ? ಎಂಬ ಪ್ರಬಲ ಆಕ್ಷೇಪವನ್ನು ಇಲ್ಲಿ ಎತ್ತಿರುವರು.

೨. ಇತರ ಅಸುರರು ಸತ್ತಾಗ ಅವರಿಗೆ ಸದ್ಗತಿಯಾಯಿತೆಂದು ತಿಳಿಸದೆ, ಪೂತನಿ ಮೊದಲಾದ ಕೆಲವರಿಗೆ ಮಾತ್ರ [೧]ಸದ್ಗತಿಯಾಯಿತೆಂದು ಶ್ರೀಮದ್ಭಾಗವತಾದಿ ಗ್ರಂಥಗಳು ನಿರೂಪಿಸಿರುವುದರಿಂದ ಅಸುರರಿಗೆ ದುರ್ಗತಿಯೇ ನಿಶ್ಚಿತ ಎಂದೂ ಪೂತನಿ ಮೊದಲಾದವರ ಪ್ರಸಂಗದಲ್ಲಿ ಜೀವದ್ವಯಾವೇಶವೆಂಬ ವಿಶೇಷವಿದೆ ಎಂದೂ ಸೂಚಿತವಾಗುವುದು ಎಂದು ತಿಳಿಯಬೇಕು; ಅಪವರ್ಗ-ಮೋಕ್ಷ.

### ಶ್ರೀಕೃಷ್ಣನ ದ್ವೇಷಿಗಳಿಗೆ ದುರ್ಗತಿಯೇ ನಿಶ್ಚಿತ

ಪತಂತ್ಯಧೋಽನಾದೃತಕೃಷ್ಣಪಾದಾ
ನ ಚೇದ್ಯಮಸ್ಯಾಲಯಮೇಷ್ಯಸಿ ತ್ವಮ್ ।

---

೧. ಕೇಶ್ಯಾದೀನಾಂ ಮೋಕ್ಷಮನುಕ್ತ್ವಾ ಪೂತನಾಯಾ ಏವ ಮೋಕ್ಷೋಕ್ತೇರ್ಜ್ಞಾಯತೇಽತ್ರ ಕಶ್ಚಿದ್ವಿಶೇಷೋಽಸ್ತೀತಿ । ಸಾ ಚ ವಿಶೇಷಃ ಪೂತನಾಯಾಂ ಶುಭಜೀವಸಮಾವೇಶರೂಪಃ ಕೇಶ್ಯಾದಿಷು ನೇತಿ । ಅನ್ಯಥಾ ಕೃಷ್ಣೇನ ನಾಶಿತಾನಾಂ ಸರ್ವೇಷಾಮಪಿ ಮೋಕ್ಷೇ ಕೇಶ್ಯಾದಿವಧೇಽಪಿ ತೇಷಾಂ ಮುಕ್ತಿರ್ವಕ್ತವ್ಯಾ ಸ್ಯಾತ್ । ಸರ್ವತ್ರಾನುಕ್ತ್ವಾ ಪೂತನಾಕಂಸ-ಶಿಶುಪಾಲವಧಾಖ್ಯಸ್ಥಾನತ್ರಯ ಏವ ತೇಷಾಂ ಮುಕ್ತಿಕಥನೋಕ್ತೇರಿತಿ ಹೃದಯಮ್ । -ವ್ಯಾ.

**ಸ ನೈರ್ಋತಂ ಧಾಮ ಜಗಾಮ ದೈತ್ಯ**
**ಇತೀರಿತಾ ದುರ್ಗತಿರೇವ ತೇಷಾಮ್ ॥ ೪೪ ॥**

''ಶ್ರೀಕೃಷ್ಣನ ಪಾದದಲ್ಲಿ ಭಕ್ತಿ ಇಲ್ಲದವರು ಅಧೋಗತಿಗೆ ತೆರಳುವರು'', ''ಇಲ್ಲವಾದಲ್ಲಿ ನೀನು ಯಮಲೋಕಕ್ಕೆ ತೆರಳುವಿ'' ಹಾಗೂ ''ಆ ದೈತ್ಯನು ಅಸುರಲೋಕಕ್ಕೆ ತೆರಳಿದ'', ಎಂದು ಉಕ್ತವಾಗಿದೆ; ಆದ್ದರಿಂದ ಅಸುರರಿಗೆ ದುರ್ಗತಿಯೇ ಉಕ್ತವಾಗಿದೆ ಎಂದಾಗುವುದು.

ವಿ. : ೧. ಶ್ರೀಮದ್ಭಾಗವತದಲ್ಲಿ ಅನೇಕ ಪ್ರಸಂಗಗಳಲ್ಲಿ ದ್ವೇಷಿಗಳಿಗೆ ಅಧೋಗತಿ ಎಂಬ ಮಾತು ಸ್ಪಷ್ಟವಾಗಿ ನಿರೂಪಿತವಾಗಿರುವುದರಿಂದ ಅವರಿಗೆ ಸರ್ವಥಾ ಸದ್ಗತಿ ಲಭಿಸಲಾರದು ಎಂದೇ[೧] ತಿಳಿಯಬೇಕು.

೨. ಪತಂತ್ಯಧೋ... ಎಂಬ ಮಾತಿಗೆ ಶ್ರೀಮದ್ಭಾಗವತದ ಮೂಲ ಶ್ಲೋಕ ಹೀಗಿದೆ :

ಯೇಽನ್ಯೇಽರವಿಂದಾಕ್ಷ ವಿಮುಕ್ತಮಾನಿನಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ ।
ಆರುಹ್ಯ ಕೃಚ್ಛ್ರೇಣ ಪರಂಪದಂ ತತಃ ಪತಂತ್ಯಧೋಽನಾದೃತಯುಷ್ಮದಂಘ್ರಯಃ ।
- ಭಾ. (೧೦/೨/೩೨)

೩. ಯಮಸ್ಯಾಲಯಮೇಷ್ಯಸಿ ತ್ವಂ ಎಂಬ ಮಾತಿಗೆ ಮೂಲ ಶ್ಲೋಕ :

ಅಂಬಷ್ಠಾಂಬಷ್ಠ ಮಾರ್ಗಂ ನೋ ದೇಹ್ಯಪಕ್ರಾಮ ಮಾ ಚಿರಮ್ ।
ನ ಚೇತ್ ಸಕುಂಜರಂ ತ್ವಾಽದ್ಯ ನಯಾಮಿ ಯಮಸಾದನಮ್ ॥ -ಭಾ.(೧೦/೪೩/೪)

೪. ಸ ನೈರ್ಋತಂ ಧಾಮ[೨] ಜಗಾಮ ದೈತ್ಯಃ ಎಂಬ ಮಾತಿಗೆ ಮೂಲಶ್ಲೋಕ :

ಜಗಾಮ ಕೃಚ್ಛ್ರಂ ನಿರ್ಋತೇರಥ ಕ್ಷಯಂ
ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ । -ಭಾ.(೧೦/೩೬/೧೪)

---

೧. ಅನೇನ, ''ಯೇಽನ್ಯೇಽರವಿಂದಾಕ್ಷ ವಿಮುಕ್ತಮಾನಿನಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ । ಆರುಹ್ಯ ಕೃಚ್ಛ್ರೇಣ ಪರಂ ತತಃ ಪತಂತ್ಯಧೋಽನಾದೃತಯುಷ್ಮದಂಘ್ರಯಃ ।'' ಇತಿ ವಾಕ್ಯಮುದಾಹೃತಮ್ । ಅನೇನ : ಅಂಬಷ್ಠಾಂಬಷ್ಠ ಮಾರ್ಗಂ ನೋ ದೇಹ್ಯಪಕ್ರಾಮ ಮಾ ಚಿರಮ್ । ನ ಚೇತ್ ಸಕುಂಜರಂ ತ್ವಾಽಥ ನಯಾಮಿ ಯಮಸಾದನಮ್ ॥ ಯದಿ ಶ್ರೀಕೃಷ್ಣಹತಾನಾಂ ದ್ವೇಷಿಣಾಂ ಮೋಕ್ಷಃ ಸ್ಯಾತ್ ತರ್ಹ್ಯಸ್ಮಿನ್ ವಚನೇ ಯಮಸಾದನಮಿತ್ಯನುಕ್ತ್ವಾ 'ಶ್ರೀಕೃಷ್ಣೋ ಮಮ ಸಾದನಮ್' ಇತಿ ಬ್ರೂಯಾದಿತಿ ಭಾವಃ । ಅನೇನ ''ಜಗಾಮ ಕೃಚ್ಛ್ರಂ ನಿರ್ಋತೇರಥ ಕ್ಷಯಂ ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ'' ಇತಿ ವಚನಮುದಾಹೃತಮ್ । -ವ್ಯಾ.

೨. ತಿರ್ಯಕ್ಷು ನರಕೇ ಚೈವ ಸುಖಲೇಶೋಽಪಿ ವಿದ್ಯತೇ ।
ನಾಂಧೇತಮಸಿ ಮಗ್ನಾನಾಂ ಸುಖಲೇಶೋಽಪಿ ಕಶ್ಚನ ॥
- ಬ್ರಹ್ಮಸೂತ್ರಭಾಷ್ಯ (೩./೧/೨೦)- ಭವಿಷ್ಯತ್ಪುರಾಣವಚನ

**ದ್ವೇಷಮೂಲ ಸ್ಮರಣೆಯು ಸದ್ಗತಿಗೆ ಸಾಧನವಾಗದು**

ವಿದ್ವೇಷಮೂಲಸ್ಮರಣೇನ ತುಷ್ಟಿ-
ರಿತ್ಯಪ್ಯವದ್ಯಂ ನ ಜಹಾತಿ ಪಕ್ಷಃ ।
ಹಿಂಸಾರ್ಥಮಾಲಿಂಗಯತಸ್ತರಕ್ಷೋಃ
ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ ॥ ೪೫ ॥

ದ್ವೇಷಮೂಲಕವಾದ ಸ್ಮರಣೆಯಿಂದ ಶ್ರೀಹರಿಗೆ ಸಂತುಷ್ಟಿಯಾಗುವುದು ಎಂಬ ಪಕ್ಷವೂ ಸಹ ಸರಿ ಎನ್ನಿಸದು; ಹಿಂಸೆ ಮಾಡಲೆಂದು ತನ್ನನ್ನು ತಬ್ಬುವ ಹುಲಿಯ ಬಗ್ಗೆ ಅದರ ಅಂಗಸ್ಪರ್ಶ ಮೊದಲಾದ ಕಾರಣದಿಂದ ಕಾಮಧೇನುವು ನಲಿಯುವುದೇ!

ವಿ. : ೧. ದ್ವೇಷದಿಂದೇನೂ ಮುಕ್ತಿಯಲ್ಲ ಆದರೆ ಅದರಿಂದ ಉಂಟಾಗುವ ಸ್ಮರಣೆಯಿಂದಾಗಿ ಶ್ರೀಹರಿಯು ತೃಪ್ತನಾಗಿ, ಸದ್ಗತಿನೀಡುವವನು ಎಂಬ ವಾದವೂ ಸಹ ಸರಿಯಾದುದಲ್ಲ. ಆ ಮಾತಿನಲ್ಲಿ ಪ್ರಧಾನವಾಗುವುದು ದ್ವೇಷವೇ ಹೊರತು ಸ್ಮರಣೆಯಲ್ಲ. ಇಲ್ಲವಾದಲ್ಲಿ ತನ್ನನ್ನು [1]ಹಿಂಸಿಸಲೆಂದು ಆಲಿಂಗಿಸಿಕೊಂಡ ಹುಲಿಯ ಬಗ್ಗೆ ಕಾಮಧೇನುವು ಸಹ ಪ್ರೀತಿ ಹೊಂದುವುದು ಎನ್ನಬೇಕಾದೀತು ; ತರಕ್ಷು – ವ್ಯಾಘ್ರ.

೨. ಹಸುಗಳನ್ನು ಹುಲಿ ಹಿಡಿಯುವುದು ಲೋಕದಲ್ಲಿ ಕಂಡಿದೆ. ಆ ಸಮಯದಲ್ಲಿ ಹಸುವಿನ ಸ್ಪರ್ಶದ ಕಾರಣದಿಂದ ಹುಲಿಗೆ ದೋಷವೇ ಹೊರತು ಪುಣ್ಯವಲ್ಲ; ಹುಲಿಗೆ ಬೇಕಿರುವುದು ಹಸುವಿನ ಹತ್ಯೆಯೇ ಹೊರತು ಅದರ ಸ್ಪರ್ಶದಿಂದಾಗುವ ಪುಣ್ಯವಲ್ಲ; ಅದರಂತೆ ಕೇವಲ ದ್ವೇಷದಿಂದ ಶ್ರೀಹರಿಯ ಸ್ಮರಣೆಮಾಡುವವನಿಗೆ ದೋಷವೇ ಹೊರತು ಪುಣ್ಯವಲ್ಲ. ಆದ್ದರಿಂದ ದ್ವೇಷಿಗಳಿಗೆ ಸರ್ವಥಾ ಅಧೋಗತಿಯೇ ಹೊರತು ಸದ್ಗತಿಯಲ್ಲ ಎಂಬುದು ತಾತ್ಪರ್ಯ.

೩.. [2]ಮುಂದೆ ಬರುವ ಚಾಣೂರನ ವಧೆಯ ಪ್ರಸಂಗದ ಮಾತು ಸಹ ಇಂತಹುದೇ ಆಗಿದ್ದು ಅದರಲ್ಲಿ ಇನ್ನಷ್ಟು ವಿವರಗಳು ಬಂದಿವೆ.

**ಬ್ರಹ್ಮಹತ್ಯೆ-ಗೋಹತ್ಯೆಗಳು ತಾರಕವಾಗಬಲ್ಲವೆ ?**

ನಚೇದ್ಗವಾಂ ವಿಪ್ರಶಿಖಾಮಣೀನಾಂ
ಹತಿಶ್ಚ ಪುಣ್ಯಾಯ ಭವೇದ್ಧಿ ಮೂಢಾಃ ।

---

೧. ತಥಾ ಹಿ । ಕಾಮಧೇನುಃ ಹಿಂಸಾರ್ಥಂ ಹಂತುಂ ಆಲಿಂಗಯತಃ ಸಂಶ್ಲಿಷ್ಯತಃ ತರಕ್ಷೋಃ ವ್ಯಾಘ್ರಸ್ಯ ಚೇಷ್ಟಯಾಽಂಗ-ಸ್ಪರ್ಶಾದಿವ್ಯಾಪಾರೇಣ ತುಷ್ಯತಿ ಕಿಂ ನ ತುಷ್ಯತೀತ್ಯರ್ಥಃ । –ವ್ಯಾ.

೨. ಅಂಗಾಲಿಂಗನತತ್ಪರಸ್ಯ ಚರಣಸ್ಪರ್ಶೋದ್ಯತಸ್ಯಾಪ್ಯಲಂ
ನಮ್ರಸ್ಯ ಸ್ವಮುಪೇಯುಷೋಽಪಿ ಪರಿತಶ್ಚಾಣೂರನಾಮ್ನೋ ವಶೇ ।
ಕೃಷ್ಣೋಽಭೂನ್ನ ಚ ಮುಷ್ಟಿಕಸ್ಯ ಸಮರೇ ಸಂಕರ್ಷಣಃ ಸತ್ಕೃತಿಂ
ದುಷ್ಟೈರಾಚರಿತಾಂ ಕಿಮತ್ರ ಮತಿಮಾನ್ ಮೃತ್ಯುಪ್ರದಾಂ ವಿಶ್ವಸೇತ್ ॥ –ರು.ವಿ.(೧೧/೪೩.)

ತದಂಗಸಂಸ್ಪರ್ಶನದರ್ಶನಾದ್ಯೈ-
ಸ್ತದೀಯನಾಮಗ್ರಹಣಾದಿಭಿರ್ವಾ ॥ ೪೬ ॥

ಎಲೈ ತಿಳಿಗೇಡಿಗಳೇ ! ಹಾಗಿಲ್ಲದಿದ್ದಲ್ಲಿ ಗೋವುಗಳ ಹಾಗೂ ವಿಪ್ರಶ್ರೇಷ್ಠರ ಹತ್ಯೆಯೂ ಸಹ, ಅವರ ಅಂಗಸ್ಪರ್ಶನ, ಅವಲೋಕನ ಮೊದಲಾದವುಗಳಿಂದಲೂ, ಅವರ ಹೆಸರಿನ ಉಚ್ಚಾರಣೆ ಮೊದಲಾದವುಗಳಿಂದಲೂ ಪುಣ್ಯಕ್ಕೆ ಕಾರಣವಾಗಬೇಕಾದೀತು.

ವಿ. : ೧. ಗೋಹತ್ಯೆ, ಬ್ರಹ್ಮಹತ್ಯೆ ಮೊದಲಾದ ಮಹಾಪಾತಕಗಳು ಸಹ ಸ್ಪರ್ಶಾದಿಗಳ ಕಾರಣದಿಂದ ಅವು ಸಹ ಪುಣ್ಯಕಾರ್ಯವೇ ಆಗಬೇಕಾದೀತು ಎಂಬ ಪ್ರಬಲ ಆಕ್ಷೇಪವನ್ನು ಇಲ್ಲಿ ಮಾಡಿರುವರು.

೨. ದ್ವೇಷದಿಂದ ಮಾಡುವ [೧]ಅಂಗಸ್ಪರ್ಶಾದಿಗಳು ಹೇಗೆ ತಾರಕವಲ್ಲವೋ, ನಾಮೋಚ್ಚಾರಣೆಯೂ ಸಹ ಅದರಂತೆಯೇ ತಾರಕವಾಗದು ಎಂದು ತಿಳಿಯಬೇಕು.

ದೋಷವು ದುರಂತಕ್ಕೆ ಕಾರಣ ಎಂಬುದು ಶಾಸ್ತ್ರಗಳ ನಿರ್ಣಯ

ದೋಷಂ ದುರಂತಂ ಕ್ವ ಚ ವರ್ಣಯದ್ಭಿ-
ರ್ದ್ವೇಷಂ ಹರೇಃ ಕ್ವಾಪಿ ತಮೋನಿದಾನಮ್ ।
ಈಶಾಪ್ತಿವಿಘ್ನಂ ಕ್ವ ಚ ನಿರ್ಣಯದ್ಭಿ-
ರೇತನ್ಮತಂ ವಿಪ್ರತಿಷಿದ್ಧಮಾರ್ಯೈಃ ॥ ೪೭ ॥

ಕೆಲವೆಡೆ ದೋಷವು ದುರಂತಕ್ಕೆ ಕಾರಣ ಎಂದು ಬಣ್ಣಿಸುವ, ಹಾಗೂ ಕೆಲವೆಡೆಗಳಲ್ಲಿ ಶ್ರೀಹರಿಯ ವಿದ್ವೇಷವು ತಮಸ್ಸಿಗೆ ಸಾಧನ ಹಾಗೂ ಕೆಲವೆಡೆ ಶ್ರೀಹರಿಯನ್ನು ಹೊಂದಲು ಅಡ್ಡಿ ಎಂದು ನಿರ್ಣಯಿಸಿರುವ, ಜ್ಞಾನಿಗಳು ದ್ವೇಷದಿಂದ ಮುಕ್ತಿ ಎಂಬ ವಾದವನ್ನು ನಿರಾಕರಿಸಿರುವರು.

ವಿ. : ೧. ದ್ವೇಷವು ಅತ್ಯಂತ ಅನರ್ಥಕರ ಎಂದು ಸ್ಫುಟವಾಗಿ ನಿರ್ಣಯಿಸುವ ಜ್ಞಾನಿಗಳಿಗೆ ದ್ವೇಷದಿಂದ ಮುಕ್ತಿ ಎಂಬುದು ಸರ್ವಥಾ ಸಮ್ಮತವಾದುದಲ್ಲ; ನಿದಾನ - ಕಾರಣ.

೨. ಅಂತಹ ಕೆಲವು ವಚನಗಳು ಹೀಗಿವೆ :

ಯದನಿಂದತ್ ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ।
ತಸ್ಮಾತ್ ಪಿತಾ ಮೇ ಪೂಯೇತ ದುರಂತಾದುಸ್ತರಾದಘಾತ್ ॥ -ಭಾಗ.(೭/೧೦/೧೭)

---

೧. ದರ್ಶನಸ್ಪರ್ಶನಾದಿಕಂ ವಿನಾ ತೇಷಾಂ ಹನನಾಯೋಗಾದ್ಧನನಮೂಲಸ್ಪರ್ಶನಾದಿನಾ ಪುಣ್ಯಂ ಸ್ಯಾದಿತಿ ಭಾವಃ। ಯದಿ ಚೋಪರಿ ಕ್ರಿಯಮಾಣಹನನಾದಿರೂಪದ್ವೇಷೇಣ ಪುಣ್ಯಸಾಧನಮಪಿ ದರ್ಶನಾದಿಕಂ ದ್ವೇಷಾನುಷಂಗಾದ್ದೋಷ ಏವ। ತರ್ಹಿ ಪ್ರಕೃತೇಽಪಿ ಸಮಮ್। -ವ್ಯಾ.

ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ॥
ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ॥ -ಭಾಗ.(೪/೨೧/೪೬)

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥ -ಗೀ.(೧೬/೧೯,೨೦)

ದ್ವೇಷದಿಂದ ಮುಕ್ತಿ ಎಂಬುದು ಯಾವ ಮತಕ್ಕೂ ಸಮ್ಮತವಲ್ಲ

ಅದ್ವೈತಿನಸ್ತಾರ್ಕಿಕಮಾನಿನೋ ವಾ
ರಾದ್ಧಾಂತಮಧ್ಯೇ ಪರವಾದಿನಾಂ ವಾ ।
ಜ್ಞಾನಂ ವಿನಾ ಯನ್ನ ಹಿ ಬಂಧಮೋಕ್ಷ-
ಸ್ತೇನೇದಮಾತ್ಮೀಯವಚೋವಿರುದ್ಧಮ್ ॥ ೪೮ ॥

ಅದ್ವೈತಿಗಳಾಗಲಿ, ತಾರ್ಕಿಕರೆಂದು ತಿಳಿದವರಾಗಲಿ ಅಥವಾ ಇತರ ಪರವಾದಿಗಳಾಗಲಿ, ತಮ್ಮ ಸಿದ್ಧಾಂತದ ಮಧ್ಯದಲ್ಲಿ 'ಜ್ಞಾನದ ಹೊರತು ಬಂಧದಿಂದ ಮೋಕ್ಷವಿಲ್ಲ' ಎಂಬುದಾಗಿ ನಿರ್ಣಯಿಸಿರುವರು; ಎಂದ ಮೇಲೆ ದ್ವೇಷದಿಂದ ಮುಕ್ತಿ ಎಂಬುದು ಅವರ ಮಾತಿಗೂ ವಿರುದ್ಧವೆನ್ನಿಸುವುದು.

ವಿ. : ಅದ್ವೈತಿಗಳು, ತಾರ್ಕಿಕರು ಮೊದಲಾಗಿ ಇತರ ಮತದವರು ಸಹ ಬ್ರಹ್ಮಜ್ಞಾನದಿಂದ ಮುಕ್ತಿ ಎಂದು ಸಿದ್ಧಾಂತಮಾಡಿರುವರೇ ಹೊರತು ದ್ವೇಷದಿಂದ ಎಂದಲ್ಲ. ಆದ್ದರಿಂದ ದ್ವೇಷದಿಂದ [೧]ಮುಕ್ತಿ ಎಂಬ ಭಾವ ಯಾವ ಮತಕ್ಕೂ ಅನುಗುಣವೆನ್ನಿಸುವಂತಹುದಲ್ಲ ಎಂದು ತಾತ್ಪರ್ಯ; ರಾದ್ಧಾಂತ - ಸಿದ್ಧಾಂತ.

ದ್ವೇಷದಿಂದ ಮುಕ್ತಿ ಎಂಬುದು ಸಕಲಪ್ರಮಾಣಗಳಿಗೂ ವಿರುದ್ಧ

ಜ್ಞಾನಾನ್ಯಮಾರ್ಗಪ್ರತಿಷೇಧಕರ್ತ್ರ್ಯಾ
ಶ್ರುತ್ಯಾ ಚ ನಿರ್ಣಾಯಕಸೂತ್ರಕರ್ತ್ರಾ[೨] ।
ಕಿಮೇಷ ಮಾರ್ಗಃ ಸುಲಭೋ ನ ದೃಷ್ಟಃ
ಕಿಂ ವಾ ತಪಸ್ಯಾವ್ರತಕರ್ಶಿತಾಂಗೈಃ ॥ ೪೯ ॥

೧. ಬ್ರಹ್ಮಜ್ಞಾನಪದಾರ್ಥಾದಿಜ್ಞಾನೇನೈವ ಮೋಕ್ಷ ಇತ್ಯುಕ್ತತ್ವಾದಿತಿ ಭಾವಃ। -ವ್ಯಾ.
ತೇನ ಕಾರಣೇನೇದಂ ಜ್ಞಾನಂ ವಿನಾ ದ್ವೇಷಾನ್ಮೋಕ್ಷಕಥನಮಾತ್ಮೀಯವಚೋವಿರುದ್ಧಮ್ । ಏವಂ ವದತಃ ಸ್ವವಚನವಿರೋಧಃ ಸ್ಯಾದಿತಿ ಭಾವಃ। -ವ್ಯಾ.
೨. ವಿದ್ಯೈವ ತು ನಿರ್ಧಾರಣಾತ್ - ಇತಿ ಬ್ರಹ್ಮಸೂತ್ರಮ್। (೩/೩./೪೮)

'ಜ್ಞಾನದ ಹೊರತು ಬೇರೊಂದು ಮಾರ್ಗವು ಇಲ್ಲವೇ ಇಲ್ಲ' ಎಂದು ಅಲ್ಲಗಳೆಯುವ [೧]ಶ್ರುತಿಗಾಗಲಿ, ಸಕಲ ಶಾಸ್ತ್ರನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದ ವೇದವ್ಯಾಸರಿಗಾಗಲಿ ಅಥವಾ ಧ್ಯಾನ, ವ್ರತ, ಮೊದಲಾದವುಗಳಿಂದ ದೇಹದಂಡಿಸುವ ಮುನಿಗಳಿಗಾಗಲಿ, 'ದ್ವೇಷದಿಂದ ಮುಕ್ತಿ' ಎಂಬ ಈ ಸುಲಭ ಮಾರ್ಗ ಏಕೆ ಕಂಡಿಲ್ಲ?

ವಿ. : ೧. ದ್ವೇಷದಿಂದಲೇ ಮುಕ್ತಿ ಎಂಬುದು ಅತ್ಯಂತ ಸುಲಭವೆನ್ನಿಸುವ ಮಾರ್ಗ, ಸಾಮಾನ್ಯವಾಗಿ ಹೆಚ್ಚಿನವರು ಮಾಡುತ್ತಿರುವುದೂ[೨] ಅದನ್ನೇ. ಇದೇ ಮುಕ್ತಿಗೆ ಸಾಧನವಾಗಿದ್ದಲ್ಲಿ, ವಿದ್ಯಯಾ ಅಮೃತಮಶ್ನುತೇ, ವಿದ್ಯೈವ ತು ನಿರ್ಧಾರಣಾತ್ ಇತ್ಯಾದಿ ಶ್ರುತಿ[೩] ಹಾಗೂ ಸೂತ್ರವಚನಗಳು ಏಕೆ ಬೇಕಿದ್ದವು? ಅಧ್ಯಯನಾದಿಗಳ ಗೊಂದಲವೂ ಇರುತ್ತಿರಲಿಲ್ಲ, ಶಮದಮಾದಿಗಳ ಅಗತ್ಯವೂ ಇರುತ್ತಿರಲಿಲ್ಲ; ಅಲ್ಲವೇ!

೨. ಇದರಿಂದ ಶ್ರುತಿಗಳಲ್ಲಾಗಲಿ ಅಥವಾ ಬ್ರಹ್ಮಜ್ಞಾನಿಗಳಲ್ಲಾಗಲೀ, ಯಾವುದೇ ಇತರ ಜ್ಞಾನಿಗಳ ಮತದಲ್ಲಾಗಲೀ ದ್ವೇಷದಿಂದ ಮುಕ್ತಿ ಎಂಬ ಪರಿಕಲ್ಪನೆ ಸರ್ವಥಾ ಕಂಡುಬರುವುದಿಲ್ಲ ಎಂದು ಅರ್ಥ; ತಪಸ್ಯಾ - ಧ್ಯಾನ.

### ಅವೈಷ್ಣವರಿಗೆ ಸರ್ವಥಾ ಮೋಕ್ಷವಿಲ್ಲ

**ಅವೈಷ್ಣವಾನಾಂ ಯತನೈರ್ನ ಮೋಕ್ಷಃ[೪]**
**ಪತಂತ್ಯಧಸ್ತಾಮಸವೃತ್ತಯಸ್ತೇ ।**
**ಏತತ್ಸಮಾನಾರ್ಥಕಭಾರತೋಕ್ತಿ-**
**ವ್ರಾತಾಮತಂ ತನ್ನ ಮತಂ ಶುಕಸ್ಯ ॥ ೫೦ ॥**

"ಅವೈಷ್ಣವರ ಪ್ರಯತ್ನಗಳಿಗೆ ಮೋಕ್ಷವು ಲಭಿಸದು, ತಾಮಸ ಪ್ರವೃತ್ತಿಯ ಅವರು ಅಧೋಗತಿಗೆ ತೆರಳುವರು" ಎಂಬ ಮಾತುಗಳಿಗೆ ಸಮಾನಾರ್ಥಕವಾದ ಮಹಾಭಾರತದ ವಾಕ್ಯವೃಂದಕ್ಕೆ ಸಮ್ಮತವಲ್ಲದ ಈ ವಿಚಾರ ಶುಕಾಚಾರ್ಯರಿಗೆ ಸಮ್ಮತವಾದುದಲ್ಲ.

ವಿ. : ಅವೈಷ್ಣವರು ಎಷ್ಟು ಪ್ರಯತ್ನಿಸಿದರೂ ಮೋಕ್ಷ ಲಭಿಸದು. ಅವರಿಗೆ ತಮಸ್ಸೇ ಗತಿ ಎಂಬ ಅರ್ಥದ ಅಸಂಖ್ಯವಚನಗಳು [೫]ಮಹಾಭಾರತದಲ್ಲಿವೆ. ಎಂದರೆ ಮಹಾಭಾರತವು ದ್ವೇಷದಿಂದ

---

೧. ತಮೇವಂ ವಿದ್ವಾನ್ ಅಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ। ಶ್ರುತಿಃ

೨. ದ್ವೇಷಸ್ಯಾಪಿ ಮೋಕ್ಷೋಪಾಯತ್ವೇ ಸುಲಭತ್ವಾದ್ದ್ವೇಷಮಾರ್ಗ ಏವ ಶ್ರುತ್ಯಾ ಬ್ರಹ್ಮಸೂತ್ರಕರ್ತ್ರಾ ಚ ಕಥನೀಯಃ ಸ್ಯಾತ್ । ಋಷಿಭಿರಪಿ ಸ ಏವಾನುಷ್ಠೇಯಃ ಸ್ಯಾತ್, ನ ಚೈವಮತೋ ನ ದ್ವೇಷಾನ್ಮೋಕ್ಷ ಇತಿ ಭಾವಃ॥

೩. ನಾನ್ಯಃ ಪಂಥಾ ಅಯನಾಯ ವಿದ್ಯತೇ - ತೈತ್ತಿರೀಯಾರಣ್ಯಕ (೩./೧/೩.)
ಅಥಾತೋ ಬ್ರಹ್ಮಜಿಜ್ಞಾಸಾ - ಬ್ರಹ್ಮಸೂತ್ರ (೧/೧/೧)

೪. ಭವೇದ್ಧಿ ಮೋಕ್ಷೋ ನಿಯತಂ ಸುರಾಣಾಂ ನೈವಾಸುರಾಣಾಂ ಚ ಕಥಂಚನ ಸ್ಯಾತ್ ।
ಉತ್ಸಾಹಯುಕ್ತಸ್ಯ ಚ ತತ್ಪ್ರತೀಪಂ ಭವೇದ್ಧಿ ರಾಹೋರಿವ ದುಃಖರೂಪಮ್ ॥ -ಮ.ಭಾ.ತಾ.ನಿ.(೧೦/೩೫)

೫. ವೈಕುಂಠಂ ನಾಮ ಲೋಕಂ ವೈ ದಿವ್ಯಂ ನಿತ್ಯಂ ಸನಾತನಮ್ ।

ಮುಕ್ತಿ ಎಂಬ ವಾದವನ್ನು ಸರ್ವಥಾ ಒಪ್ಪರು. [1]ಮಹಾಭಾರತಕ್ಕೆ ವಿರುದ್ಧವಾದ ಅರ್ಥವನ್ನು ಶುಕಾಚಾರ್ಯರು ಸರ್ವಥಾ ಹೇಳಲಾರರು ಎಂದು ಭಾವ.

ಶ್ರೀಹರಿಯ ನಿಂದೆಯ ಶ್ರವಣವೂ ಅನರ್ಥಕರ

ನಿಂದಾಂ ಮುಕುಂದಸ್ಯ ಸಕೃನ್ನಿಶಮ್ಯ
ಮಂದಃ ಪತೇತ್ ಕಿಂ ಪುನರಚ್ಯುತಂ ತಮ್ ।
ನಿಂದನ್ನಿತಿ ಹ್ಯಾಲಪತಃ ಶುಕಸ್ಯ
ಕಿಂ ದ್ವೇಷತೋ ಮುಕ್ತಿರಿತಿ ಸ್ಮ ಹೃದ್ಯಮ್ ॥ ೫೧ ॥

ಶ್ರೀಹರಿಯ ನಿಂದೆಯನ್ನು ಒಮ್ಮೆ ಕೇಳುವ ಅವಿವೇಕಿಯೂ ಸಹ ಅಧಃಪತನ ಹೊಂದುವನು. ಇನ್ನು ಅಚ್ಯುತನಾದ ಆ ಶ್ರೀಹರಿಯನ್ನು ಸಾಕ್ಷಾತ್ ನಿಂದಿಸುವವನಿಗೆ ಹೇಳುವುದೇನಿದೆ? ಎಂಬುದಾಗಿ ಸಾರುವ ಶುಕಮುನಿಗಳಿಗೆ ದ್ವೇಷದಿಂದ ಮುಕ್ತಿ ಎಂಬ ಅಭಿಪ್ರಾಯ ಇರಲು ಸಾಧ್ಯವೇ?

ವಿ. : ೧. ಶ್ರೀಹರಿಯನ್ನು ನಿಂದಿಸುವುದಿರಲಿ, ಅವನ [2]ನಿಂದೆಯನ್ನು ಒಮ್ಮೆ ಕಿವಿಯಾರೆ ಕೇಳುವುದು ಸಹ ಅಧಃಪತನಕ್ಕೆ ಕಾರಣ ಎಂದಿರುವುದರಿಂದ ಸಾಕ್ಷಾತ್ ನಿಂದಿಸುವವರಿಗೆ ಮುಕ್ತಿ ಉಂಟೆ ಎಂದು ಶುಕಾಚಾರ್ಯರು ತಿಳಿಸಿರುವುದರಿಂದ ದ್ವೇಷದಿಂದ ಮುಕ್ತಿ ಎಂಬ ವಾದವು ಎಂದಿಗೂ ಅವರಿಗೆ ಸಮ್ಮತವಾಗದು ಎಂದು ಭಾವ.

೨. ಜ್ಞಾನಿಗಳು ಎಂದಿಗೂ ತಮ್ಮ ಮಾತಿಗೆ [3]ವಿರೋಧವಾಗುವಂತೆ ಹೇಳಲಾರರು ಎಂದು ತಾತ್ಪರ್ಯ.

ದ್ವೇಷಿಗಳಿಗೆ ಮೋಕ್ಷ ಎಂಬದರ ತಾತ್ಪರ್ಯ

ಅಪೋಽಬ್ರುವನ್ನಿತಿ ಸನಾತನವೇದವಾಕ್ಯಾತ್
ಕಿಂ ವಕ್ಯತಾ ಜಡಜಲಸ್ಯ ತಥಾ ಶುಕೋಕ್ತೌ ।
ಕಂಸಾದಿಮೋಕ್ಷವಚನಾನ್ಯಪಿ ಯುಕ್ತಿಯುಕ್ತ-
ಮಾನಾಂತರೋದಿತಮನೋಮಧುರಾರ್ಥಭಾಂಜಿ ॥ ೫೨ ॥

---

ಅವೈಷ್ಣವಾನಾಮಪ್ರಾಪ್ಯಂ ಮಹಾಯತ್ನವತಾಮಪಿ ॥ -ಭಾರತ(ವ್ಯಾಖ್ಯಾನದಲ್ಲಿ ಉದ್ಧೃತ)
ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ -ಗೀತಾ(೧೪/೧೮)

೧. ನ ಹಿ ಭಾರತವಿರುದ್ಧಂ ಶುಕೋ ವಕ್ತೀತಿ ಭಾವಃ । -ವ್ಯಾ.

೨. ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥ -ಭಾಗ.(೧೦/೭೪/೪೦)

೩.. ನ ಹಿ ಸ್ವವಚನವ್ಯಾಹತಂ ಶುಕೋ ವದತೀತಿ ಭಾವಃ । -ವ್ಯಾ.

'ನೀರು ಮಾತನಾಡಿತು' ಎಂಬ ಸನಾತನ ವೇದವಾಕ್ಯದಿಂದ ಜಡವಾದ ನೀರಿಗೆ ಮಾತನಾಡುವ ಶಕ್ತಿಯನ್ನು ಹೇಳಲಾದೀತೆ? ಅದರಂತೆ ಶುಕಾಚಾರ್ಯರ ಮಾತಿನಲ್ಲಿ 'ಕಂಸ ಮೊದಲಾದವರಿಗೆ ಮುಕ್ತಿಯಾಯಿತು' ಎನ್ನುವ ಮಾತು ಯುಕ್ತಿಯುಕ್ತವಾದ ಇತರ ಪ್ರಮಾಣಗಳು ತಿಳಿಸುವ, ಮನಸ್ಸಿಗೆ ಒಪ್ಪುವ, ಮಧುರವಾದ ಬೇರೊಂದು ಅರ್ಥವನ್ನು ಹೊಂದಿರುವುದು.

ವಿ. : 'ನೀರು ಮಾತನಾಡಿತು', 'ಮಣ್ಣು ಮಾತನಾಡಿತು' ಎಂಬ ವೇದದ ಮಾತುಗಳಿಗೆ ಅವುಗಳ ಅಭಿಮಾನಿ ದೇವತೆಗಳು ಮಾತನಾಡಿದರು[೧] ಎಂಬ ಅರ್ಥವೇ ವಿಹಿತ ಎಂಬುದಾಗಿ ಬ್ರಹ್ಮಸೂತ್ರಗಳಲ್ಲಿ ನಿರ್ಣಯವಾಗಿದೆ[೨]. ಎಂದರೆ [೩]ನೀರು ಮಾತಾಡಿತು ಎಂಬ ಅಸಂಭಾವಿತ ಅರ್ಥಗಳನ್ನು ವೇದಾದಿ ಶಾಸ್ತ್ರಗಳು ಸರ್ವಥಾ ತಿಳಿಸಲಾರವು. ಅದರಂತೆ ದ್ವೇಷದಿಂದ ಮುಕ್ತಿ ಎಂಬುದು ಅತ್ಯಂತ ಅಸಂಭಾವಿತ ಅರ್ಥ. ಆದ್ದರಿಂದ ದ್ವೇಷದಿಂದ ಮುಕ್ತಿ ಎಂಬ ಮಾತಿಗೆ ಅವುಗಳಿಗೆ ವಿರುದ್ಧವೆನ್ನಿಸದ ಯುಕ್ತಿಯುಕ್ತವಾದ ಮನಸ್ಸಿಗೆ ಒಪ್ಪಿಗೆಯಾಗುವ ಯೋಗ್ಯ ಅರ್ಥವನ್ನೇ ಮಾಡಬೇಕು ಎಂದು ಭಾವ; ಮಾನ - ಪ್ರಮಾಣ.

## ಜೀವದ್ವಯಾವೇಶದ ಸಮರ್ಥನೆ

**ಯಥಾ ಗ್ರಹಾವಿಷ್ಟಕಲೇವರೇ ದ್ವೌ**
**ಕೃತಾಭಿಮಾನಾವಿಹ ಚೇತನೌ ಸ್ತಃ।**
**ತಥೈವ ಕಂಸಾದಿಶರೀರಸಂಸ್ಥೌ**
**[೪]ಶುಭಾಶುಭೌ ದ್ವೌ ಸುಖದುಃಖಭಾಜೌ ॥ ೫೩ ॥**

---

೧. ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀ ಗತಿಮ್ । - ಭಾಗ.(೧೦/೭/೩೮)
೨. ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ । -ಬ್ರಹ್ಮಸೂತ್ರ (೨/೧/೬)
'ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ।
ಅಚಿಂತ್ಯಾಃ ಶಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ।
ತಾಶ್ಚ ಸರ್ವಗತಾ ನಿತ್ಯಂ ವಾಸುದೇವೈಕಸಂಶ್ರಯಾಃ' ಇತಿ ॥ -ಬ್ರಹ್ಮಸೂತ್ರಭಾಷ್ಯ (೨/೧/೬)
೩. ಯಥಾ ಆಪೋಽಬ್ರುವನ್ನಿತಿ ವಾಕ್ಯಸ್ಯ ಪ್ರತ್ಯಕ್ಷಾದಿಪ್ರಮಾಣವಿರೋಧೇನ ಪ್ರತೀತಾರ್ಥಂ ಪರಿತ್ಯಜ್ಯ ತದವಿರುದ್ಧಂ ಅಬಾದ್ಯಭಿಭಾನಿದೇವತಾಪರತ್ವಮುಚ್ಯತೇ । ತಥಾ ಕಂಸಾದಿದ್ವೇಷಿಣಾಂ ಮೋಕ್ಷವಚನಸ್ಯ ಉಕ್ತಬಹುಪ್ರಮಾಣ-ವಿರೋಧೇನ ಪ್ರತೀತಾರ್ಥಂ ಪರಿತ್ಯಜ್ಯ ಪೂತನಾಕಂಸನರಕಶಿಶುಪಾಲಾದಿಷು ದ್ವಿಧಾ ಜೀವಾಃ ಸಂತಸ್ತ್ವಸಂತಶ್ಚತತ್ರ ಬಂಧ್ವಾದಿರೂಪಿಣಃ ವಿಷ್ಣೋ ಸಂತ ಇತಿ ಜ್ಞೇಯಾಃ। -ವ್ಯಾ.
೪. ಶುಭಜೀವಪ್ರಕಾಶೇನ ಕದಾಚಿಚ್ಛುಭಬುದ್ಧಯಃ।
ವಿಪರ್ಯಯೇ ಚಾನ್ಯಥಾ ಸ್ಯುಃ ಶುಭಾಸ್ತತ್ರ ಹರಿಂ ಯಯುಃ ॥
ಅಶುಭಾಸ್ತು ತಮೋ ಘೋರಂ ಯದಿ ತತ್ರೈವ ಮಧ್ಯಮಾಃ।
ಮಧ್ಯಮಾಂ ಗತಿಮೇವಾಪುಃ ಏಕದೇಹಗತಾ ಅಪಿ ॥
-ಭಾಗವತತಾತ್ಪರ್ಯೋದ್ಧೃತ ಗರುಡಪುರಾಣವಚನ (೧೦/೫/೧೮)

ಹೇಗೆ ಗ್ರಹ ಹೊಕ್ಕ ದೇಹದಲ್ಲಿ ಅಭಿಮಾನವಿರುವ ಎರಡು ಚೇತನಗಳು ಇರುವವೋ ಹಾಗೆ ಕಂಸ ಮೊದಲಾದವರ ಶರೀರಗಳಲ್ಲಿ ಸುಖದುಃಖಗಳಿಗೆ ಭಾಗಿಗಳಾದ ಶುಭ ಹಾಗೂ ಅಶುಭ ಎಂಬ ಎರಡು ಚೇತನರು ಇರುವರು.

ವಿ. : ೧. ಒಂದೇ ದೇಹದಲ್ಲಿ ಇಬ್ಬರು ಚೇತನರಿರುವ ಪ್ರಸಂಗಗಳು ಜೀವದ್ವಯಾವೇಶವುಳ್ಳ ಪ್ರಸಂಗಗಳು ; ಗ್ರಹಪ್ರವೇಶಿಸಿದ ದೇಹದಲ್ಲಿ ಇಬ್ಬರು ಚೇತನರು ಇರಲು ಸಾಧ್ಯವಾಗುವಂತೆ ಕಂಸ ಮೊದಲಾದವರ [1]ದೇಹದಲ್ಲಿ ಶುಭ ಹಾಗೂ ಅಶುಭ ಎಂಬ ಎರಡು ಬಗೆಯ ಚೇತನರು ಇರುವರು ಎಂದರ್ಥ.

೨. ಒಂದೇ ದೇಹದಲ್ಲಿ ಹೀಗೆ ಎರಡು ಬಗೆಯ ಚೇತನರಿದ್ದರೂ ಸುಖಾನುಭವವು ಸಾತ್ವಿಕಚೇತನಕ್ಕೂ ದುಃಖಾನುಭವವು ತಾಮಸಚೇತನಕ್ಕೂ ಒದಗುವುದು.

೩.. ಗ್ರಹಾವಿಷ್ಟ ದೇಹದಲ್ಲಿ ಗ್ರಹ ಹಾಗೂ ಅಲ್ಲಿಯ ಚೇತನ ಎರಡೂ ಪ್ರತ್ಯೇಕವಾಗಿಯೇ ಇರುವಂತೆ ಒಂದೇ ದೇಹದಲ್ಲಿ ಹೀಗೆ ಎರಡು ವಿಧ ಚೇತನರು ಇರುವುದು ಸಾಧ್ಯ, ಎಂದು ತಿಳಿಯಬೇಕು.

## ಸುಜೀವಿಗೆ ಮಾತ್ರವೇ ಮೋಕ್ಷ

ದ್ವಿಷಂತಮೇಕಂ [2]ದಿತಿಜಂ ವಿಹಾಯ
ಹರಿಪ್ರಿಯಸ್ಯಾಸುರತಾ ಕಥಂ ಸ್ಯಾತ್ ।
ಕ್ವಚಿದ್ದ್ವಿಷಂತೋಽಪಿ ಕಿಮರ್ಜುನೇಂದ್ರ-
ಪುರೋಗಮಾ ದೈತ್ಯತಯಾ ನಿರುಕ್ತಾಃ ॥ ೫೪ ॥

ದ್ವೇಷಗೈಯ್ಯುವ ದೈತ್ಯನಿಗೆ ಹೊರತು ಶ್ರೀಹರಿಗೆ ಪ್ರಿಯನಾದ ಇನ್ನೊಬ್ಬ ಚೇತನಕ್ಕೆ ಅಸುರತ್ವ ಹೇಗೆ ತಾನೇ ಬಂದೀತು? ಒಮ್ಮೊಮ್ಮೆ ದ್ವೇಷಮಾಡುವ ಅರ್ಜುನ, ಇಂದ್ರ ಮೊದಲಾದವರು ದೈತ್ಯರೆಂದು ಹೇಳಲ್ಪಟ್ಟಿರುವರೇನು?

---

೧. ಅತಃ ಏಕಸ್ಮಿನ್ ಶರೀರೇ ಜೀವದ್ವಯಾಭಿಮಾನೋ ನಾಸಂಭಾವಿತ ಇತಿ ಭಾವಃ। -ವ್ಯಾ.

೨. ಶಿಶುಪಾಲೇ ದ್ವಿಷಂತಂ ದ್ವೇಷಂ ಕುರ್ವಂತಮ್ ಏಕಂ ದಿತಿಜಮಸುರಂ ವಿಹಾಯ ಹರಿಪ್ರಿಯಸ್ಯ ಹರಿಭಕ್ತಸ್ಯಾ-ಸುರತಾ ಅಸುರಾಶಬ್ದವಾಚ್ಯತಾ ಕಥಂ ಸ್ಯಾತ್ । ಶಿಶುಪಾಲೇಽಯಮಸುರ ಇತಿ ಅಸುರಶಬ್ದಃ ಪ್ರಯುಜ್ಯತೇ। ಸ ಕಿಂ ನಿಬಂಧನ ಇತಿ ವಿಚಾರಣೀಯಮ್ । ಕಿಂ ಸ್ವಭಾವತೋಽಸುರತ್ವಾದ್ವಾ ಅಸುರಯೋನಾವುತ್ಪನ್ನತ್ವಾದ್ವಾ ಅಸುರವದ್ದ್ವಿದ್ವೇಷಕರಣಾದ್ವಾ । ನಾದ್ಯಃ। ತಸ್ಯ ಜಯರೂಪಸ್ಯ ಶಿಶುಪಾಲಸ್ಯ ಹರಿಪ್ರಿಯತ್ವಾತ್। ನ ದ್ವಿತೀಯಃ। ಶಿಶುಪಾಲಸ್ಯ ಕ್ಷತ್ರಿಯಯೋನಾವುತ್ಪನ್ನತ್ವಾತ್ । ತೃತೀಯೇಽಪಿ ನಿರಂತರಂ ದ್ವೇಷಕಾರಣಾದ್ವಾ ಕದಾಚಿದ್ದ್ವೇಷ-ಕಾರಣಾದ್ವಾ । ನಾದ್ಯಃ। ಶಿಶುಪಾಲೇ ಕದಾಚಿದ್ಧರಿಭಕ್ತಿಶ್ರವಣಾತ್ । ನ ದ್ವಿತೀಯ ಇತ್ಯಾಹ। ಕ್ವಚಿದಿತಿ। ಕ್ವಚಿತ್ ಕದಾಚಿತ್ ದ್ವಿಷಂತೋಽಪಿ ಅರ್ಜುನೇಂದ್ರಪುರೋಗಮಾಃ ಪಾರ್ಥಪುರುಹೂತಪ್ರಮುಖಾಃ ದೈತ್ಯತಯಾಽ-ಸುರತ್ವೇನ ನಿರುಕ್ತಾಃ ಕಿಮ್ । -ವ್ಯಾ.

ವಿ. : ೧. ದೇಹದಲ್ಲಿ ಎರಡು ಚೇತನರಿದ್ದರೂ ದ್ವೇಷಮಾಡುವ ಚೇತನ ದೈತ್ಯ; ಹಾಗಿಲ್ಲದವನು ದೈತ್ಯನಲ್ಲ ಎಂದರ್ಥ.

೨. ದ್ವೇಷದಲ್ಲೂ ಸಹ ತಾತ್ಕಾಲಿಕ ದ್ವೇಷ ಹಾಗೂ ಸ್ವಾಭಾವಿಕ ದ್ವೇಷ ಎಂಬುದಾಗಿ ಎರಡು ಬಗೆ. ತಾತ್ಕಾಲಿಕ ದ್ವೇಷವು[೧] ಅರ್ಜುನ, ಇಂದ್ರ ಮೊದಲಾದ ಸಾತ್ವಿಕ ಚೇತನರಿಗೂ ಒಮ್ಮೊಮ್ಮೆ ಬರುವುದುಂಟು. ಆದರೆ ಸ್ವಾಭಾವಿಕ ದ್ವೇಷವು ಸ್ವಭಾವತಃ ಅಸುರರಾದ ತಾಮಸಚೇತನರಿಗೇ ಹೊರತು ಸಾತ್ವಿಕ ಚೇತನರಿಗಲ್ಲ; ಪುರೋಗಮಾಃ – ಪ್ರಮುಖರು.

೩. ಭಕ್ತಿಯು ನವವಿಧವಾಗಿರುವಂತೆ ದ್ವೇಷವು ಸಹ ನವವಿಧವಾದುದು :

ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥

-ಮ.ಭಾ.ತಾ.ನಿ.(೧/೧೧೦,೧೧೧)

ಈ ಬಗೆಯ ದ್ವೇಷಗಳು ಸಾತ್ವಿಕಚೇತನರಿಗೂ ಒಮ್ಮೊಮ್ಮೆ ಕಂಡು ಬಂದು ಕೊನೆಗೊಮ್ಮೆ ಪೂರ್ಣವಾಗಿ ಇಲ್ಲವಾಗುವುವು ಎಂಬ ವಿಶೇಷಾಂಶ ಭಾಗವತತಾತ್ಪರ್ಯದಲ್ಲಿದೆ[೨].

೪. ಅಸುರರಿಗೆ ಇಂತಹ ದ್ವೇಷಗಳು ಸದಾ ಇರುವುವು; ಮಾತ್ರವಲ್ಲದೆ ಕ್ರಮವಾಗಿ ಹೆಚ್ಚುತ್ತಾ ಹೋಗಿ ಕೊನೆಗೆ ಅಂಧತಮಸ್ಸಿಗೆ ಕಾರಣವಾಗುವವು[೩].

೫. ನಿತ್ಯದ್ವೇಷಿಗಳಾದ ಹಿರಣ್ಯಕಶಿಪು ಮೊದಲಾದವರನ್ನು ದೈತ್ಯರೆಂದು ಕರೆಯುವಂತೆ ಒಮ್ಮೊಮ್ಮೆ ದ್ವೇಷಿಸುವ ಅರ್ಜುನಾದಿಗಳನ್ನು ದೈತ್ಯರೆಂದು ಶಾಸ್ತ್ರಗಳು ಕರೆದಿಲ್ಲ ಎಂಬುದು ಗಮನಾರ್ಹ.

---

೧. ನ ಹಿ ಕದಾಚಿದ್ದ್ವೇಷಂ ಕುರ್ವತ್ಸು ಪಾರ್ಥಾದಿಷು ದೈತ್ಯಶಬ್ದಃ ಪ್ರಯುಜ್ಯತ ಇತ್ಯರ್ಥಃ । ತಥಾ ಚ ತತ್ರಾಸುರಶಬ್ದಪ್ರಯೋಗಾತ್ ತನ್ನಿಷ್ಠಜಯಸ್ಯ ಹರಿಪ್ರಿಯತ್ವೇನಾಸುರತ್ವಾಯೋಗಾತ್ ತಚ್ಛಬ್ದವಾಚ್ಯಃ ಕಶ್ಚನಾಸುರಃ ಶಿಶುಪಾಲೇಽಸ್ತೀತಿ ಸ್ವೀಕರ್ತವ್ಯಮಿತಿ । -ವ್ಯಾ.

೨. ಈಶಸ್ಯಾಪೂರ್ಣತಾಜ್ಞಾನಂ ವಿಷ್ಣೋರನ್ಯಸ್ಯ ಚೇಶತಾ ।
ಭೇದಸ್ತಸ್ಯಾವತಾರೇಷು ಜೀವಸ್ಯೇಶತ್ವಮೇವ ಚ ।
ತಥಾ ಜೀವತ್ವಮೀಶಸ್ಯ ಜಡಾಭೇದಸ್ತಯೋರಪಿ ।
ಭೇದಮೋಹ ಇತಿ ಪ್ರೋಕ್ತಃ ಸ ಸದಾ ನ ಹರೌ ಕ್ವಚಿತ್ ।
ಅನ್ಯೇಷಾಂ ತತ್ಪ್ರಸಾದೇನ ಶನೈರ್ಯಾತಿ ಸತಾಮಪಿ' ಇತಿ ಸ್ಕಾಂದೇ ॥ -ಭಾಗವತತಾತ್ಪರ್ಯ(೩./೧೦/೧೪)

೩.. ಅನಾದಿದ್ವೇಷಿಣೋ ದೈತ್ಯಾ ವಿಷ್ಣೌ ದ್ವೇಷೋ ವಿವರ್ಧಿತಃ ।
ತಮಸ್ಯಂಧೇ ಪಾತಯತಿ ದೈತ್ಯಾನಂತೇ ವಿನಿಶ್ಚಯಾತ್ ॥
ಪೂರ್ಣದುಃಖಾತ್ಮಕೋ ದ್ವೇಷಃ ಸೋಽನಂತೋ ಹ್ಯವತಿಷ್ಠತೇ ।
ಪತಿತಾನಾಂ ತಮಸ್ಯಂಧೇ ನಿಶ್ಶೇಷಸುಖವರ್ಜಿತೇ ॥ -ಮ.ಭಾ.ತಾ.ನಿ.(೧/೧೦೮,೧೦೯)

೬. ಇದರಿಂದ ದ್ವೇಷದಿಂದ ಮುಕ್ತಿ ಎಂಬಂತೆ ಕಾಣುವ ಪ್ರಸಂಗಗಳು ತಾತ್ಕಾಲಿಕದ್ವೇಷ ಮಾಡುವ ಸಾತ್ವಿಕ ಚೇತನರಿಗೆ ಅನ್ವಯಿಸುವವೇ ಹೊರತು, ನಿತ್ಯದ್ವೇಷಿಗಳಾದ ತಾಮಸ ಚೇತನರಿಗಲ್ಲ; ಅಂತಹವರಿಗೆ ತಮಸ್ಸೇ ಗತಿ ಎಂದು ತಿಳಿಯಬೇಕು.

೭. ಗೋವರ್ಧನೋದ್ಧರಣದ ಪ್ರಸಂಗದಲ್ಲಿ ಇಂದ್ರನು ಮಳೆ ಸುರಿಸಿದ ಪ್ರಸಂಗ, ವಿಪ್ರಪುತ್ರನ ಸಂರಕ್ಷಣೆಯ ಪ್ರಸಂಗದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಅವಜ್ಞೆಯಿಂದ ಕಂಡ ಪ್ರಸಂಗ - ಇವು ಇಂದ್ರ, ಅರ್ಜುನರು ಭಾಗವತಧರ್ಮವನ್ನು ತಪ್ಪಿದ ಪ್ರಸಂಗಗಳಾಗಿದ್ದು ದ್ವೇಷವೆನ್ನಿಸುವ ಸಾಲಿಗೆ ಸೇರಿವೆ ಎಂದು ತಿಳಿಯಬೇಕು; ಆದರೆ ಇವು 'ಅವರು ಭಕ್ತರು' ಎಂಬ ಅಂಶಕ್ಕೆ ಬಾಧಕವನ್ನು ಉಂಟುಮಾಡವು ಎಂಬುದು ವಿಶೇಷ.

### ಸುಜೀವಿಗಳು ಎಂದೂ ದ್ವೇಷಿಸಲಾರರು

**ನ ಚೋಗ್ರಶಾಪಾದಸುರತ್ವಮೇಷಾಂ**
**ವಿಹಾಯ ದುಷ್ಟಂ ಕಮಪಿ ಸ್ವನಿಷ್ಠಮ್ ।**
**ಯತೋಽಭಿಶಪ್ತೇಽಪಿ ನೃಪೇ ತದೇತ-**
**ದಭೂತ್ ಪುರಾ ಕಿಂಕರದೈತ್ಯಯೋಗಾತ್ ॥ ೫೫ ॥**

ತಮ್ಮೊಳಗಿನ ಅಸುರರನ್ನು ಬಿಟ್ಟು ಎಂತಹ ಉಗ್ರ ಶಾಪದಿಂದಲೂ ಯೋಗ್ಯರಿಗೆ ಅಸುರತ್ವ ಒದಗದು. ಹಿಂದೆ ಕಲ್ಮಾಷಪಾದ ರಾಜನಿಗೆ ಶಾಪ ಒದಗಿದಾಗಲೂ, ಅವನಿಗೆ ದೈತ್ಯತ್ವ ಒದಗಿದ್ದು ಒಳಗಿದ್ದ ಕಿಂಕರ ಎಂಬ ಅಸುರನ ಸಂಪರ್ಕದಿಂದಾಗಿಯೇ, ಅಲ್ಲವೆ !

ವಿ. : ೧. ಸನಕಾದಿಗಳಂತಹ ಮಹನೀಯರ ಭಯಂಕರ ಶಾಪದಿಂದಲೂ ಸಹ ಜಯ-ವಿಜಯರಿಗೆ ಅಸುರತ್ವ ಒದಗಲಿಲ್ಲ. ಆ ಶಾಪದಿಂದಾಗಿ ಅವರು ಹಿರಣ್ಯಕಶಿಪು ಮೊದಲಾದ ಅಸುರರೊಂದಿಗೆ ಆವೇಶ ಹೊಂದಿ ಒಂದೇ ದೇಹದಲ್ಲಿ ಇರುವಂತಾಯಿತೇ ಹೊರತು ಅವರೇ ಅಸುರರಾಗಲಿಲ್ಲ ಎಂದು ತಿಳಿಯಬೇಕು.

೨. ಹಿಂದೆ ಕಲ್ಮಾಷಪಾದ ಎಂಬ ರಾಜನಿಗೆ ಶಾಪವೊದಗಿ ಅಸುರತ್ವ ಪ್ರಾಪ್ತಿಯಾಯಿತು ಎಂಬ ಉಲ್ಲೇಖ ಶ್ರೀಮದ್ಭಾಗವತಾದಿ ಪುರಾಣಗಳಲ್ಲಿ ಇದೆ. [೧]ಅಲ್ಲಿಯೂ ಸಹ ಆ ರಾಜನೇ ರಾಕ್ಷಸನಾಗಲಿಲ್ಲ. ಕಿಂಕರ ಎಂಬ ಹೆಸರಿನ ರಾಕ್ಷಸನು ಒಳಗೆ ಪ್ರವೇಶಿಸಿದ್ದರಿಂದಾಗಿ ಅವನಿಗೆ ರಾಕ್ಷಸ ದೇಹ ಮಾತ್ರ ಬಂದಿದ್ದಿತು.

---

೧. ಸ ಶಾಪಾತ್ ತಸ್ಯ ವಿಪ್ರರ್ಷೇರ್ವಿಶ್ವಾಮಿತ್ರಸ್ಯ ಚಾಜ್ಞಯಾ ।
ವಿವೇಶ ಕಿಂಕರೋ ನಾಮ ನೃಪತಿಂ ರಾಕ್ಷಸಸ್ತದಾ ॥ -ಮಹಾಭಾರತ. ಆದಿ.(೧೭೫/೨)
ಇತಿ ಭಾರತವಚನಾದಯಮರ್ಥಃ ಪ್ರಸಿದ್ಧಃ । ಅತಃ ಸನಕಾದಿಶಾಪೋಽಪಿ ಶಿಶುಪಾಲಾದೀನಾಮಸುರಾವೇಶ ಏವ ನಿಮಿತ್ತಮ್ । ನ ತು ಸಜ್ಜೀವಸ್ಯಾಸುರತ್ವಾಪಾದನ ಇತಿ ಭಾವಃ । -ವ್ಯಾ.

೩. ಇದರಿಂದ ಸಾತ್ವಿಕ ಚೇತನರಿಗೆ ಅಸುರತ್ವವಾಗಲೀ, ತಾಮಸಚೇತನರಿಗೆ ದೇವತ್ವವಾಗಲೀ ಸರ್ವಥಾ ಒದಗದು ಎಂಬ ವಿಷಯ ಸುನಿಶ್ಚಿತವಾಗುವುದು ಎಂದು ತಿಳಿಯಬೇಕು.

೪. ಶುಭಜೀವರಿಗೆ ಯಾವುದೇ ಕಾರಣದಿಂದಲೂ ಅಸುರತ್ವ ಒದಗದು ಎಂಬ ಈ ಮಾತು ಒಂದು ರೀತಿಯಲ್ಲಿ ಸ್ತ್ರೀಜೀವರಿಗೆ ವರ, ಶಾಪ ಮೊದಲಾದ ಯಾವುದೇ ಕಾರಣದಿಂದಲೂ ಪುರುಷತ್ವ ಪ್ರಾಪ್ತಿ ಸರ್ವಥಾ ಇಲ್ಲ. ವಿಶೇಷ ಪ್ರಸಂಗದಲ್ಲಿ ಸ್ತ್ರೀಜೀವವು ಪುರುಷದೇಹದಲ್ಲಿ ಅಲ್ಲಿರುವ [೧]ಪುರುಷಜೀವದೊಂದಿಗೆ ನೆಲೆಸಬಹುದು ಮಾತ್ರ ಎಂಬ ಮಾತನ್ನು ಹೋಲುವುದು.

## ಜೀವದ್ವಯಾವೇಶವನ್ನು ಒಪ್ಪಲೇಬೇಕು

**ತವೈವ ಚೈದ್ಯೇ ಜಯನಾಮಕಃ ಸನ್**
**ತಥಾ ಪರಸ್ಮಿನ್ ವಿಜಯಾಭಿಧಾನಃ ।**
**ನಿರಂತರದ್ವೇಷಫಲಸ್ಯ ಮೂಲಂ**
**ಬಲೇನ ರಕ್ಷೋಽಪಿ ಹಿ ತರ್ಹಿ ಸಿದ್ಧ್ಯೇತ್ ॥ ೫೬ ॥**

ನಿನ್ನ ಮತದಂತೆಯೇ ಶಿಶುಪಾಲನಲ್ಲಿ ಜಯ ಎಂಬ ಹೆಸರಿನವನು, ಇನ್ನೊಬ್ಬನಾದ ದಂತವಕ್ತ್ರನಲ್ಲಿ ವಿಜಯ ಎಂಬ ಹೆಸರಿನವನೂ ನೆಲೆಸಿದ್ದರು. ಇದರಿಂದ ನಿರಂತರ ದ್ವೇಷ ಎಂಬ ಫಲಕ್ಕೆ ಮೂಲವಾಗಿ ಅವರಲ್ಲಿ ಅಸುರನೊಬ್ಬನು ಇದ್ದನು ಎಂಬುದನ್ನು ಬಲಾತ್ಕಾರದಿಂದಾದರೂ ಒಪ್ಪಲೇಬೇಕಾಗುವುದು.

ವಿ. : ೧. ಶಿಶುಪಾಲ, ದಂತವಕ್ತ್ರ ಪ್ರಸಂಗದಲ್ಲಿ ಸಹ ನಡೆದದ್ದು ಹೀಗೆಯೇ; ಶಿಶುಪಾಲನಲ್ಲಿ ಜಯನ ಆವೇಶವಾದರೆ, ದಂತವಕ್ತ್ರನಲ್ಲಿ ವಿಜಯನ ಆವೇಶ. ದ್ವೇಷಕ್ಕೆ ಕಾರಣವಾದದ್ದು ಅಲ್ಲಿದ್ದ ದೈತ್ಯರಾದ ಹಿರಣ್ಯಕಶಿಪು, ಹಿರಣ್ಯಾಕ್ಷರೇ ಹೊರತು ಜಯವಿಜಯರಲ್ಲ.

೨. [೨]ಹಾಲು ಕಪ್ಪಾಗಿ ಕಂಡಾಗ ಅದು ಹಾಲಿನ ಸ್ವಭಾವವಲ್ಲ; ಕಪ್ಪಗಿನ ಮತ್ತೊಂದು ವಸ್ತುವಿನ ಇರುವಿಕೆಯ ಕಾರಣ ಹೇಗೋ ಹಾಗೆ. ಆದರಂತೆ ಕಪ್ಪುವಸ್ತುವು ಬಿಳಿಯಾಗಿ ಕಾಣುವುದೂ ಸಹ

---

೧. ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾದ್ಬಲವತ್ಕಾರಣೈರಪಿ ।
ಅತಃ ಶಿವವರೇಽಪ್ಯೇಷಾ ಜಜ್ಞೇ ಯೋಷೈವ ನಾನ್ಯಥಾ ॥
ಪಶ್ಚಾಚ್ಚ ಪುಂತನುಂ ಸೈಷಾ ಪ್ರವಿವೇಶೈವ ಪುಂಯುತಾಮ್ ।
ನಾಸ್ಯಾ ದೇಹಃ ಪುಂಸ್ತ್ವಮಾಪ ನ ಚ ಪುಂಸಾಽನಧಿಷ್ಠಿತೇ ॥
ಪುಂದೇಹೇ ನ್ಯವಸತ್ ಸಾಽಥ ಗಂಧರ್ವೇಣ ತ್ವಧಿಷ್ಠಿತಮ್ ॥ -ಮ.ಭಾ.ತಾ.ನಿ.(೧೧/೧೧೨-೧೧೪)

೨. ನ ಹಿ ಕಾರ್ಯಮಕಾರಣಮ್ । -ಮ.ಭಾ.ತಾ.ನಿ.(೩.೨/೭೧)
ತ್ವದೀಯಾಂಗೀಕಾರಬಲೇನ ಚ ಸಿದ್ಧ್ಯೇತ್ । ತ್ವದ್ವಚನಾನುಸಾರೇಣ ಶುಭಕಾರ್ಯಾನ್ಯಥಾನುಪಪತ್ತ್ಯಾ ಶುಭೋಽಶುಭಶ್ಚೇತಿ ಜೀವದ್ವಯಂ ಸಿದ್ಧ್ಯತೀತಿ ಭಾವಃ । -ವ್ಯಾ.

ಅಲ್ಲಿರುವ ಬಿಳಿದಾದ ಮತ್ತೊಂದು ವಸ್ತುವಿನ ಇರುವಿಕೆಯಿಂದಾಗಿ. ಇದರಂತೆಯೇ ಭಕ್ತಿಗೆ ಯಾವಾಗಲೂ ಸುಜೀವಿಯೇ ಕಾರಣ; ಅದರಂತೆ ದ್ವೇಷಕ್ಕೆ ಕುಜೀವಿಯೇ ಕಾರಣ ಎಂದು ಸ್ಫುಟವಾಗಿ ತಿಳಿಯಬೇಕು; ರಕ್ಷಃ – ರಾಕ್ಷಸ.

### ಶಿಶುಪಾಲನಲ್ಲಿದ್ದ ದೈತ್ಯನಿಗೆ ಅಧೋಗತಿ

ಯದೀಹ ಚೈದ್ಯೇ ದಿತಿಜೋ ನ ವೈರಾ-
ನ್ನ ತರ್ಹಿ ಮೋಕ್ಷಃ ಪರಿಚರ್ಯಯೈವ।
ಯದಾ ತು ಸೇವಾವಿಧುರೋಽಪರೋಽಸ್ತಿ
ತದಾ ಬಲಾತ್ ಸಿಧ್ಯತಿ ಜೀವಯುಗ್ಮಮ್ ॥ ೫೭ ॥

ಶಿಶುಪಾಲನಲ್ಲಿ ದೈತ್ಯನು ಇಲ್ಲವಾಗಿದ್ದಲ್ಲಿ ವೈರದಿಂದ ಮುಕ್ತಿ ಎಂದಾಗದೆ ಸೇವೆಯಿಂದಲೇ ಮುಕ್ತಿ ಎಂದಾಗುವುದು; ಸೇವೆ ಮಾಡದೆ ಕೇವಲ ವೈರ ಮಾಡುವ ಮತ್ತೊಬ್ಬನು ಇರುವನು ಎಂದಾದಲ್ಲಿ ಬಲಾತ್ಕಾರದಿಂದಲೇ ಜೀವದ್ವಯವು ಸಿದ್ಧವಾಗುವುದು; (ವಿಧುರ – ರಹಿತ).

ವಿ. : ಇಲ್ಲಿ 'ವೈರ' ಎಂಬುದಕ್ಕೆ ಸ್ವಲ್ಪಕಾಲೀನವೈರ ಹಾಗೂ 'ಸೇವೆ' ಎಂಬುದಕ್ಕೆ ಬಹುಕಾಲೀನ ಸೇವೆ ಎಂಬ ವಿವರ ವ್ಯಾಖ್ಯಾನದಲ್ಲಿದೆ.

### ಶ್ರೀವೇದವ್ಯಾಸರ ಮಾತಿನ ಅಂತರಾರ್ಥ

ವಿದ್ವೇಷಿಜೀವಕೃತಸಂಗಮಪಿ ಸ್ವಭಕ್ತಂ
ಕೃಷ್ಣೋ ವ್ಯಮೋಚಯದಹೋ ಕರುಣಾಂಬುರಾಶಿಃ।
ಕಿನ್ನಾಮ ತದ್ರಹಿತಭಕ್ತಜನಾನಿತಿ ಸ್ಮ
ಕೈಮುತ್ಯಮೂಹಯತ ಸತ್ಯವತೀಸುತೋಕ್ತ್ಯಾ[೧] ॥ ೫೮ ॥

"ತನ್ನನ್ನು ದ್ವೇಷಿಸುವ ಜೀವನ ಸಹವಾಸ ಮಾಡಿದ್ದರೂ ಸಹ ತನ್ನ ಭಕ್ತನನ್ನು ಕೃಷ್ಣ ಮುಕ್ತನನ್ನಾಗಿಸಿದ; ಅಬ್ಬ! ಅವನು ಎಂತಹ ಕರುಣಾಸಮುದ್ರ ! ಇನ್ನು ಅದಿಲ್ಲದ ತನ್ನ ಭಕ್ತಜನರಿಗೆ

೧. ನೂನಂ ಹಿ ದೃಷ್ಟನಿಷ್ಠೋಽಯಂ ನಾದೃಷ್ಟಪರಮೋ ಜನಃ।
ಅದೃಷ್ಟಮಾತ್ಮನಸ್ತತ್ತ್ವಂ ಯೋ ವೇದ ನ ಸ ಮುಹ್ಯತಿ ॥ -ಭಾಗ.(೧೦/೬/೩.೦)
ಪೂತನಾ ಲೋಕಬಾಲಘ್ನೀ ರಾಕ್ಷಸೀ ರುಧಿರಾಶನಾ।
ಜಿಘಾಂಸಯಾಽಪಿ ಹರಯೇ ಸ್ತನಂ ದತ್ವಾಽಽಪ ಸದ್ಗತಿಮ್ ॥
ಕಿಂ ಪುನಃ ಶ್ರದ್ಧಯಾ ಭಕ್ತ್ಯಾ ಕೃಷ್ಣಾಯ ಪರಮಾತ್ಮನೇ।
ಯಚ್ಛನ್ ಪ್ರಿಯತಮಂ ಕಿಂಚಿದ್ರಕ್ತಸ್ತನ್ಮಾತರೋ ಯಥಾ ॥
ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀಗತಿಮ್।
ಕೃಷ್ಣಭುಕ್ತಸ್ತನಕ್ಷೀರಾಃ ಕಿಮು ಗಾವೋ ನು ಮಾತರಃ ॥ -ಭಾಗ.(೧೦/೭/ ೩೬-೩೯)

ಮುಕ್ತಿ ನೀಡದಿರುವನೆ?'' ಎಂಬ ಕೈಮುತ್ಯವನ್ನು ಸತ್ಯವತೀಸುತರಾದ ಶ್ರೀವೇದವ್ಯಾಸರ ಮಾತಿನಿಂದ ಊಹಿಸಿರಿ.

ವಿ. : ೧. ಶಿಶುಪಾಲಾದಿಗಳಿಗೆ ಶ್ರೀಕೃಷ್ಣನು ಮೋಕ್ಷ ಕರುಣಿಸಿದ ಎಂಬ ಮಾತು ಅವನ ಕಾರುಣ್ಯಕ್ಕೆ ದ್ಯೋತಕ. ಏಕೆಂದರೆ ಜಯ ಮೊದಲಾದ ತನ್ನ ಭಕ್ತರು ಹಿರಣ್ಯಕಶಿಪು ಮೊದಲಾದ ದೈತ್ಯರೊಂದಿಗೆ ಒಂದೇ ದೇಹದಲ್ಲಿ ನೆಲೆಸಿದ್ದರೂ ಅವರ ಆ ದೋಷವನ್ನು ಮನ್ನಿಸಿ ಶ್ರೀಕೃಷ್ಣ ಅವರಿಗೆ ಮೋಕ್ಷ ನೀಡಿದ ಎಂಬಲ್ಲಿ ಅವನ ಅಪಾರ ಕರುಣೆ ವ್ಯಕ್ತವಾಗುತ್ತದೆ; **ಕರುಣಾಂಬುರಾಶಿ – ಕರುಣಾಸಮುದ್ರ.**

೨. ಇನ್ನು ಆ ರೀತಿ ದುಷ್ಟ ಜೀವರೊಂದಿಗೆ ನೆಲೆಸದೆ ಪ್ರತ್ಯೇಕವಾಗಿ ಇರುವ ಸುಜೀವಿಗಳ ಮೇಲೆ ಶ್ರೀಕೃಷ್ಣ ವಿಶೇಷಾನುಗ್ರಹವನ್ನು ಮಾಡಿ [೧]ಮೋಕ್ಷ ಕರುಣಿಸುವುದು ಕೈಮುತ್ಯಸಿದ್ಧ ಎಂಬುದು ವೇದವ್ಯಾಸರ ಮಾತಿನ ಮಥಿತಾರ್ಥ ಎಂದು ತಿಳಿಯಬೇಕು; ಅದರ ಹೊರತು ದ್ವೇಷದಿಂದಲೇ ಮುಕ್ತಿ ಎಂಬ ಅಪಾರ್ಥವನ್ನು ಸರ್ವಥಾ ತಿಳಿಯಬಾರದು :

ದ್ವೇಷಿಜೀವಯುತಂ ಚಾಪಿ ಕೃಷ್ಣಶ್ಚೈದ್ಯಂ ವ್ಯಮೋಚಯತ್ ।
ಅಹೋಽತಿಕರುಣಾ ವಿಷ್ಣೋಃ ಶಿಶುಪಾಲಸ್ಯ ಮೋಕ್ಷಣಾತ್ ॥–ಭಾ.ತಾ.(೧೦/೨೪/೨೫)

## ಅಸ್ಪಷ್ಟ ನಿರೂಪಣೆಗೆ ಕಾರಣ

**ದ್ವೇಷಾಭಿವೃದ್ಧಿಂ ದ್ವಿಷತಾಂ ವಿಧಾತುಂ**
**ವ್ಯಾಸಶ್ಚ ನ ಸ್ಪಷ್ಟಮಿದಂ ಪ್ರಮೇಯಮ್ ।**
**ಊಚೇ ನ ಚೇದ್ಭಕ್ತಜನೈರಗಮ್ಯಂ**
**ಪಾಪೈರಸಾಧ್ಯಂ ತಮ ಆಪ್ನುಯಾತ್ ಕಃ ॥ ೫೯ ॥**

ದ್ವೇಷಿಗಳಿಗೆ ದ್ವೇಷವನ್ನು ಬಹಳವಾಗಿ ಹೆಚ್ಚಿಸಬೇಕು ಎಂಬ ಕಾರಣದಿಂದ ವೇದವ್ಯಾಸರು ಈ ಪ್ರಮೇಯವನ್ನು ಸ್ಪಷ್ಟವಾಗಿ ಹೇಳಿಲ್ಲ; ಇಲ್ಲವಾದಲ್ಲಿ ಭಕ್ತಜನರು ಎಂದೂ ಹೊಂದಲಾಗದ, ಇತರ ಪಾಪಗಳಿಂದ ಪಡೆಯಲಾಗದ ತಮಸ್ಸನ್ನು ಯಾರು ತಾನೇ ಹೊಂದುತ್ತಿದ್ದರು?

ವಿ. : ೧. ಈ ವಿಷಯವನ್ನು ವೇದವ್ಯಾಸರು ಸ್ಪಷ್ಟವಾಗಿ ತಿಳಿಸದೆ ಪೂತನಿಗೆ ಸದ್ಗತಿಯಾಯಿತು; ಶಿಶುಪಾಲ ಮುಕ್ತನಾದ; ಮೊದಲಾಗಿ ಸಮ್ಮುಗ್ಧಾಕಾರವಾಗಿ ವರ್ಣಿಸಿರುವುದಕ್ಕೆ [೨]ಕಾರಣವನ್ನು ಇಲ್ಲಿ ತಿಳಿಸಿರುವರು.

---

೧. ಅಹೋ ಭಕ್ತಜನೇಷು ಅಸ್ಯ ಶ್ರೀಕೃಷ್ಣಸ್ಯ ಕರುಣಾ ಆಶ್ಚರ್ಯಮಿತ್ಯನೇನ ಪ್ರಕಾರೇಣೋಕ್ತಕೈಮುತ್ಯಮೂಹಯತ ತರ್ಕಯತ ಉಕ್ತಕೈಮುತ್ಯಸ್ಯ ಏವಮೇವಾರ್ಥಃ ಸ್ವೀಕ್ರಿಯತಾಮಿತ್ಯರ್ಥಃ । ಇತ್ಥಂ ಕೈಮುತ್ಯಕಲ್ಪನಂ ನ ಸ್ವಕಪೋಲಕಲ್ಪಿತಂ ಕಿಂತು ಸ್ಪಷ್ಟಂ ವೇದವ್ಯಾಸವಚನಮಸ್ತೀತ್ಯಾಹ। ಸತ್ಯವತೀಸುತೋಕ್ತ್ಯೇತಿ। ಇತಿ ಸತ್ಯವತೀಸುತೋಕ್ತ್ಯಾ ಶ್ರೀವೇದವ್ಯಾಸವಚನಾನುಸಾರೇಣೋಕ್ತಕೈಮುತ್ಯವಚನಸ್ಯೋಕ್ತ ಏವಾರ್ಥಃ। ತಸ್ಮಾದಿಯಂ ಜೀವದ್ವಯಾಂಗೀ-ಕಾರೇಣ ಕೈಮುತ್ಯೋಪಪತ್ತಿರಿತಿ ಭಾವಃ। –ವ್ಯಾ.

೨. ಸಂತಿ ಖಲು ತೇಽಪಿ ಜೀವಾಃ ಯೇ ತಮೋಯೋಗ್ಯಾಸ್ತೇಷಾಂ ದ್ವೇಷಲಕ್ಷಣಸಾಧನಾನುಷ್ಠಾನೇನ ತಮಃಪ್ರಾಪ್ತ್ಯರ್ಥಂ ಶ್ರೀವೇದವ್ಯಾಸಃ ಸ್ಪಷ್ಟಂ ನ ಜಗಾದೇತಿ ಭಾವಃ। –ವ್ಯಾ.

೨. ಈ ಪ್ರಮೇಯವನ್ನು ಸ್ಪಷ್ಟವಾಗಿ ತಿಳಿಸಿದಲ್ಲಿ ಅಯೋಗ್ಯಜೀವರೂ ಸಹ ಶ್ರೀಹರಿಯನ್ನು ದ್ವೇಷಿಸುತ್ತಿರಲಿಲ್ಲ. ಆದರೆ ಅವರಿಗೆ ದ್ವೇಷದ ಹೊರತು ಅವರ ಸ್ವಗತಿಯಾದ ತಮಸ್ಸು ಆಗುವಂತೆಯೂ ಇಲ್ಲ. ಅದಕ್ಕಾಗಿಯೇ ಅವರಿಗೆ ಮೋಹನ ಮಾಡಲೆಂದು, ಶ್ರೀವೇದವ್ಯಾಸರು ಕೆಲವು ವಿಷಯಗಳನ್ನು ಈ ರೀತಿ ತಿಳಿಸುವುದುಂಟು. ಆದರೆ ಅವರು ಅದರ ಸ್ಪಷ್ಟೀಕರಣವನ್ನು ಬೇರೊಂದೆಡೆ ಕೊಡುವ ಮೂಲಕ ಯೋಗ್ಯರು ಸರಿಯಾದ ಅರ್ಥವನ್ನು ತಿಳಿಯಲು ತಪ್ಪದೆ ಅನುಗ್ರಹವನ್ನು ಮಾಡುವರು ಎಂಬುದು ವಿಶೇಷ; ಇದನ್ನೆಲ್ಲಾ ಗಮನಿಸದ ತಾಮಸರು ತಪ್ಪಾಗಿ ವಿಷಯಗಳನ್ನು ತಿಳಿದು ಅದರಿಂದ ತಾವೂ ಅನರ್ಥಕ್ಕೆ ಗುರಿಯಾಗಿ, ಇತರರ ಅನರ್ಥಕ್ಕೆ ಸಹ ಕಾರಣವಾಗುವರು.

೩. ಸುಮಧ್ವವಿಜಯದಲ್ಲಿ ಬಂದಿರುವ ಮಾಯಾವಾದಿಗಳ ಮಧ್ವದ್ವೇಷದ ಬಗ್ಗೆಯೂ ಇಂತಹುದೇ ಮಾತು ಬಂದಿರುವುದು ಗಮನಾರ್ಹ[೧].

## ಮಧ್ವಸಿದ್ಧಾಂತದ ಹಿರಿಮೆ

**ಆನಂದತೀರ್ಥಮತಮುಜ್ಝಿತದೋಷಜಾತಂ**
**[೨]ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ[೩] ।**
**ಮಾನೌಘಶೋಭಿ ಮಮ ದುರ್ಜನಪುಂಜತೋಽಭೀ-**
**ರ್ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭೂಃ ॥ ೬೦ ॥**

ಶ್ರೀಮದಾನಂದತೀರ್ಥರ ಮತವು ಸಕಲದೋಷಗಳಿಂದ ರಹಿತವಾದುದು; ಸ್ವರೂಪಾನಂದಾವಿರ್ಭಾವರೂಪಮುಕ್ತಿಯನ್ನು ನೀಡುವಂತಹುದು; ಉನ್ಮತ್ತರಾದ ಮಾಯಾವಾದಿಗಳನ್ನು ಸದೆಬಡಿಯುವಂತಹುದು; ಪ್ರಮಾಣಪುಂಜಗಳಿಂದ ಶೋಭಿಸುವಂತಹುದು; ನನಗೆ ದುರ್ಜನರ ಹಿಂಡಿಗೆ ಅಂಜದಿರುವ ಕಾವ್ಯಶಕ್ತಿಯಿಂದ ವಿಜೃಂಭಿಸುವ ಇಂತಹ ಬುದ್ಧಿಯು ಇದರಿಂದಲೇ ಬಂದಿದೆ.

ವಿ. : ೧. ಈವರೆಗೆ ಪೂತನಿಯ ವಿಷಯವನ್ನು ಬಗೆಬಗೆಯಾಗಿ ವಿಮರ್ಶಿಸಿದ ಶ್ರೀವಾದಿರಾಜರು ಈ ಶ್ಲೋಕದಲ್ಲಿ ಅದನ್ನು ಉಪಸಂಹಾರಮಾಡುತ್ತಾ, ಇಂತಹ ನಿರ್ಮಲವಿಚಾರ ಸರಣಿಗೆ

---

೧. ಇತ್ಯಾದ್ಯೇತೇ ಕಾರ್ಯಮಾಲೋಚ್ಯ ಕಾಲೇ ಚಕ್ರುರ್ವರ್ಕಾತ್ಶಕ್ತಿಭಕ್ತಪ್ರತೀಪಮ್ ।
ಯೋಗ್ಯಾ ಮಂಕ್ತುಂ ತೇಽನ್ಯಥಾ ಸ್ಯುಃ ಕಥಂ ವಾ ದುಃಖೋಗ್ರಾಂಭಸ್ಯಂಧತಾಮಿಸ್ರಸಿಂಧೌ ॥ -ಸು.ವಿ.೧೨/೨೫

೨. ಆನಂದರೂಪಸ್ಯ ಪರಸ್ಯ ಪಾತ್ರಧೀರಾನಂದಸಂದಾಯಿ ಸುಶಾಸ್ತ್ರಕೃತ್ ಸ ಯತ್ ।
ಆನಂದತೀರ್ಥೇತಿ ಪದಂ ಗುರೂದಿತಾಂ ಬಭೂವ ತಸ್ಯಾತ್ಯನುರೂಪರೂಕಮ್ ॥ - ಮಧ್ವವಿಜಯ (೫/೨)

೩. **ಆನಂದತೀರ್ಥಮತಮುಜ್ಝಿತದೋಷಜಾತಂ ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ ।**
ಸನ್ಮಾನಸಂಭೃತಮತಿಪ್ರಿಯಮಚ್ಯುತಸ್ಯ ಸನ್ಮಾನಸಂ ಸತತಮುಜ್ಜ್ವಲಯಚ್ಚಕಾಸ್ತಿ ॥
- ಎಂಬ ವೈಶ್ವನಾಥಿನಾರಾಯಣಾಚಾರ್ಯವಿರಚಿತ ಅದ್ವೈತಕಾಲಾನಲ(೫/೫೮)ದ ಶ್ಲೋಕವು ಇದರ ಸ್ಫೂರ್ತಿಯಲ್ಲಿ ರಚಿತವಾಗಿರುವುದು ಸ್ಪಷ್ಟ

ಮೂಲ ಆಕರವು ಶ್ರೀಮದಾಚಾರ್ಯರ ಸತ್ಸಿದ್ಧಾಂತ ಎಂಬುದನ್ನು ಹೃದಯತುಂಬಿ ಹಾಡಿರುವರು.

೨. ಶ್ರೀಜಯತೀರ್ಥರಂತೆ ತಮ್ಮ ಗ್ರಂಥಗಳಲ್ಲಿ ಶ್ರೀಮದಾಚಾರ್ಯರನ್ನು ಅವರ ಸಿದ್ಧಾಂತವನ್ನು ಪರಿಪರಿಯಾಗಿ ಬಣ್ಣಿಸುವುದು ಶ್ರೀವಾದಿರಾಜಸ್ವಾಮಿಗಳ ವೈಶಿಷ್ಟ್ಯ; ಅದಕ್ಕೆ ಇದೊಂದು ಉತ್ತಮ ನಿದರ್ಶನ; **ವೃಂದ** - ಸಮೂಹ.

೩.. ಪೂತನಿಯ ಬಗ್ಗೆ ಜನರಿಗಿರುವ ತಪ್ಪು ಕಲ್ಪನೆಯನ್ನು ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಶ್ರೀಮದ್ಭಾಗವತತಾತ್ಪರ್ಯನಿರ್ಣಯದ ಬೆಳಕಿನಲ್ಲಿ ಅತ್ಯಂತ ಮನೋಜ್ಞವಾಗಿ ನಿರೂಪಿಸಿದ್ದು ಈ ಭಾಗದ ವೈಶಿಷ್ಟ್ಯ; ಒಂದು ರೀತಿಯಲ್ಲಿ ಶ್ರೀಮದಾಚಾರ್ಯರ ಆ ಭಾಗದ ನಿರೂಪಣೆಗೆ ಶ್ಲೋಕರೂಪದ ವ್ಯಾಖ್ಯಾನದಂತಿರುವ ಈ ಭಾಗ ಶ್ರೀವಾದಿರಾಜರ ಅಪೂರ್ವ ಕೊಡುಗೆಗಳಲ್ಲೊಂದು. ಒಂದು ವಿಶಿಷ್ಟ ಪ್ರಮೇಯವನ್ನು ಸಮಗ್ರವಾಗಿ ವಿವೇಚಿಸುವ ಇಲ್ಲಿಯ ಕೌಶಲ ವ್ಯಾಖ್ಯಾನಕಾರರಿಗೆ ದಾರಿದೀಪದಂತಿದೆ.

೪. ಶ್ರೀಮದಾಚಾರ್ಯರ ಸಿದ್ಧಾಂತವು ಯಾವುದೇ ದೋಷವಿರದ ನಿರ್ಮಲ ಸಿದ್ಧಾಂತ; ಮೋಕ್ಷಕ್ಕೆ ಕಾರಣವಾಗುವಂತಹ ಅಪೂರ್ವತತ್ತ್ವಜ್ಞಾನ; ಮಾಯಾವಾದಾದಿ ಸಕಲ ದುರ್ಮತ-ಗಳನ್ನು ಸದೆಬಡಿಯುವಂತಹ ಪರಿಪೂರ್ಣಸಿದ್ಧಾಂತ; ಪ್ರತಿಯೊಂದು ಪ್ರಮೇಯಕ್ಕೂ ಸಕಲ ಬಗೆಯ ಪ್ರಮಾಣಗಳನ್ನೂ ಒಳಗೊಂಡಿರುವ ಪೂರ್ಣಸಿದ್ಧಾಂತ. ಇದರ ಅನುಸರಣೆಯಿಂದ ನಿರ್ಭೀತವಾದ ಬದುಕು ಹಾಗೂ ಉತ್ಕೃಷ್ಟವಾದ ಕಾವ್ಯಪ್ರತಿಭೆಗಳು ಸಿದ್ಧಿಸುವುವು ಎಂಬುದು ಇದರ ಒಂದು ಬಗೆಯ ಫಲಶ್ರುತಿ.

### ಶ್ರೀಕೃಷ್ಣನಿಗೆ ನಡೆದ ನಿಷ್ಕ್ರಮಣ ಸಂಸ್ಕಾರ

**ತತಃ ಶುಭೌತ್ಥಾನಿಕಕರ್ಮ[1] ಕರ್ತು-**
**ಮಿಯೇಷ ನಂದಃ ಪುರುಷೋತ್ತಮಸ್ಯ ।**
**[2]ಗೃಹಾದ್ಬಹಿರ್ದೈತ್ಯಚಮೂಂ ಜಿಘಾಂಸು-**
**ರಮಂಸ್ತ ತತ್ ಸ್ವಾಚರಣಾನುರೂಪಮ್ ॥ ೬೧ ॥**

ಬಳಿಕ ನಂದಗೋಪನು ಪುರುಷೋತ್ತಮನಾದ ಶ್ರೀಕೃಷ್ಣನಿಗೆ ಮಂಗಳಕರವಾದ ನಿಷ್ಕ್ರಮಣ ಸಂಸ್ಕಾರವನ್ನು ಮಾಡಲು ಬಯಸಿದ; ಮನೆಯ ಹೊರಗಿನ ದೈತ್ಯಸೇನೆಯನ್ನು ಸದೆಬಡಿಯ ಬಯಸಿದ ಶ್ರೀಕೃಷ್ಣನು ಅದನ್ನು ತನ್ನ ಕಾರ್ಯಸೂಚಿಗೆ ಅನುಗುಣವಾದದ್ದು ಎಂದು ತಿಳಿದ.

---

೧. ಕದಾಚಿದೌತ್ಥಾನಿಕಕೌತುಕಾಪ್ಲವೇ ಜನ್ಮರ್ಕ್ಷಯೋಗೇ ಸಮವೇತಯೋಷಿತಮ್ ।
ವಾದಿತ್ರಗೀತದ್ವಿಜಮಂತ್ರವಾಚಕೈಶ್ಚಕಾರ ಸೂನೋರಭಿಷೇಚನಂ ಸತೀ ॥ -ಭಾಗವತ (೧೦/೭/೪)

೨. ಏಕಾ ಪೂತನಾ ಗೃಹಾಭ್ಯಂತರೇ ವಧ್ಯಾ ಅನ್ಯೇ ಬಹಿರ್ವಧ್ಯಾಃ ತೇಷಾಂ ವಧಸ್ತು ಬಹಿಃ ಕರ್ತವ್ಯಃ ತದರ್ಥಂ ಹಿ ಬಹಿರ್ಜಿಗಮಿಷೋಃ ಸ್ವಸ್ಯಾನುಕೂಲಂ ಮೇನೇ ಇತ್ಯರ್ಥಃ । -ವ್ಯಾ.

ವಿ. : ೧. [1]ನಿಷ್ಕ್ರಮಣ ಎಂಬುದು ಷೋಡಶಸಂಸ್ಕಾರಗಳಲ್ಲೊಂದು. ಹುಟ್ಟಿದ ಹನ್ನೆರಡನೆಯ ದಿನ ಅಥವಾ ಒಂದು ಪಕ್ಷದ ಬಳಿಕ, ಮೂರನೆಯ ಅಥವಾ ಆರನೆಯ ತಿಂಗಳಿನಲ್ಲಿ ಸೂರ್ಯದರ್ಶನಕ್ಕೆಂದು ಮಗುವನ್ನು ಮನೆಯಿಂದ ಮೊದಲಬಾರಿಗೆ ಹೊರಕ್ಕೆ ಕರೆದುಕೊಂಡು ಹೋಗುವ ಸಂಸ್ಕಾರವೇ ಈ ನಿಷ್ಕ್ರಮಣ ಸಂಸ್ಕಾರ:

ದ್ವಾದಶೇऽಹನಿ ಕರ್ತವ್ಯಂ ಶಿಶೋರ್ನಿಷ್ಕ್ರಮಣಂ ಗೃಹಾತ್ ।
ತೃತೀಯೇ ಹ್ಯರ್ಧಮಾಸೇ ವಾ ದರ್ಶನಾರ್ಥಂ ರವೇರಪಿ ॥ ಇತಿ (ವ್ಯಾ.)

೨. ಶ್ರೀಕೃಷ್ಣನಿಗೆ ಆಗ ಮೂರನೆಯ ತಿಂಗಳು. ಆಗ ನಂದ ಆ ಸಂಸ್ಕಾರವನ್ನು ಮಾಡಬಯಸಿದ ಎಂದರ್ಥ. ನಂದನ ಈ ಕಾರ್ಯವು ಮನೆಯ ಹೊರಗಿನ ದೈತ್ಯವೃಂದವನ್ನು ದಂಡಿಸಬಯಸಿದ್ದ ಶ್ರೀಕೃಷ್ಣನ ಸಂಕಲ್ಪಕ್ಕೆ ಅನುಗುಣವಾಗಿಯೇ ಇದ್ದಿತು ಎಂಬುದು ವಿಶೇಷ.

೩. ಸರ್ವತಂತ್ರಸ್ವತಂತ್ರನಾದ ಶ್ರೀಕೃಷ್ಣನಿಗೆ ಅಂತಹ ಯಾವ ಸಂಸ್ಕಾರದ ಅಗತ್ಯವೂ ಇಲ್ಲ; ಆದರೆ ಲೋಕದೃಷ್ಟಿಯಲ್ಲಿ ಅದು ನಡೆಯಿತು ಎಂದು ತಿಳಿಯಬೇಕು ಎಂದರ್ಥ.

೪. ಶ್ರೀಕೃಷ್ಣನು ಹೊರಗಿನ ದೈತ್ಯರನ್ನು ಸಹ ಕೊಲ್ಲುವ ಪ್ರಸಂಗಕ್ಕೆ ಅದು ದಾರಿಯಾಯಿತು ಎಂಬ ವಿವರವೂ ಇಲ್ಲಿದೆ; ಚಮೂ – ಸೇನೆ.

**ಶ್ರೀಕೃಷ್ಣನಿಗೆ ದೈತ್ಯವಧೆಯ ದೀಕ್ಷಾಬಂಧನದಂತಹ ಕಾರ್ಯ**

ನಿಜಂ ಸಮಾಹೂಯ ಸ ಬಂಧುವರ್ಗಂ
ಪಿತಾ ಸುತಂ ಶ್ರೀಪತಿಮಭ್ಯಷಿಂಚತ್ ।
ತದಾಪ್ರಭೃತ್ಯುದ್ಧತದೈತ್ಯವರ್ಗ-
ವಿಘಾತದೀಕ್ಷಾಮಿವ ತಸ್ಯ ಬಧ್ನನ್ ॥ ೬೨ ॥

ತಂದೆ ಎನಿಸಿದ ನಂದಗೋಪ ತನ್ನ ಬಂಧುವರ್ಗವನ್ನು ನೆರಹಿ ಮಗನಾದ ಶ್ರೀಪತಿಯಾದ ಕೃಷ್ಣನಿಗೆ ಮಂಗಳಸ್ನಾನವನ್ನು ಮಾಡಿಸಿದ; ಅದು ಅಂದಿನಿಂದ ಶ್ರೀಕೃಷ್ಣನಿಂದ ನಡೆಯುವ ಕೊಬ್ಬಿದ ದೈತ್ಯವರ್ಗದ ಸಂಹಾರಕ್ಕೆಂದು ಅವನಿಗೆ ಕಟ್ಟಿದ ದೀಕ್ಷೆಯಂತಾಯಿತು.

ವಿ. : ಆ ಸಂಸ್ಕಾರದ ಅಂಗವಾಗಿ ನಂದ ಮಾಡಿಸಿದ ಮಂಗಳಸ್ನಾನ ಶ್ರೀಕೃಷ್ಣನ ದೈತ್ಯಸಂಹಾರ ಕಾರ್ಯಕ್ಕೆ ದೀಕ್ಷೆಯಂತಾಯಿತು ಎಂದರ್ಥ; ವಿಘಾತ – ನಾಶ.

**ಶಕಟಾಸುರನ ಆಗಮನ**

ಯದಾ ಸುಹೃತ್ಸಂಚಯಮರ್ಚಯಂತೀ
ಸುತಂ ನ ಸಸ್ಮಾರ ಮುದಾ ಯಶೋದಾ ।

೧. ಔತ್ಥಾನಿಕಂ ನಾಮ ದ್ವಾದಶೇऽಹನಿ ಅರ್ಧಮಾಸೇ ವಾ ತೃತೀಯೇ ವಾ ಶಿಶೋರಾದಿತ್ಯದರ್ಶನಾರ್ಥಂ ಗೃಹಾದ್ಬಹಿ-ರ್ನಿಷ್ಕ್ರಮಣಮ್ । –ವ್ಯಾ.

ತದೈವ ಮಾಯೀ ಶಕಟಾಸುರಸ್ತಂ
[೧]ನಿಹಂತುಕಾಮೋಽಭಿಸಸಾರ ಶೂರಃ ॥ ೬೩ ॥

ಆಗೊಮ್ಮೆ ಸಂಭ್ರಮದಿಂದ ಬಂಧುವರ್ಗವನ್ನು ಆದರಿಸುವ ಕಾರ್ಯದಲ್ಲಿ ತೊಡಗಿದ್ದ ಯಶೋದೆಯು ಶ್ರೀಕೃಷ್ಣನನ್ನು ಗಮನಿಸದಾದಳು; ಆಗಲೇ ಕಪಟಿಯಾದ ಶೂರ ಶಕಟಾಸುರನು ಅವನನ್ನು ಕೊಲ್ಲುವ ಬಯಕೆಯಿಂದ ಅಲ್ಲಿಗೆ ಧಾವಿಸಿದ.

ವಿ. : ೧. ಬಂಧುಬಳಗದ ಆದರೋಪಚಾರದ ಭರದಲ್ಲಿ ಯಶೋದೆ ಕೃಷ್ಣನನ್ನು ಕ್ಷಣಕಾಲ ಗಮನಿಸದಾದಳು; ಅದು ಶಕಟಾಸುರನಿಗೆ ದೊರೆತ ಅವಕಾಶವಾಯಿತು ಎಂದರ್ಥ.

೨. ಯಶೋದೆ ಹೀಗೆ ಶ್ರೀಕೃಷ್ಣನನ್ನು ಮರೆತದ್ದು ಜನರು ಬಂಧುಬಳಗಗಳ ಸಂಪರ್ಕದಲ್ಲಿ ದೇವರನ್ನು ಮರೆಯುವುದಕ್ಕೆ ಸಂಕೇತದಂತಿದೆ; ಮದುವೆಯೊಂದಕ್ಕೆ ಮಧ್ಯಗೇಹದಂಪತಿಗಳು ತೆರಳಿದ್ದಾಗ ತಾಯಿ ವೇದವತಿಯು ಮಗು ವಾಸುದೇವನನ್ನು ಮರೆತ ಇಂತಹುದೇ ಪ್ರಸಂಗ ಸುಮಧ್ವವಿಜಯದಲ್ಲಿದೆ[೨].

೩. ಒಟ್ಟಾಗಿ ಜನಜಂಗುಳಿಯಲ್ಲಿ ಶ್ರೀಹರಿವಾಯುಗಳ ವಿಸ್ಮರಣೆ ಉಂಟಾಗುವುದರಿಂದ ಸಾಧ್ಯವಾದಷ್ಟು ಅದರಿಂದ ದೂರವಿರುವುದು ಸಹ ಆಧ್ಯಾತ್ಮಿಕ ಸಾಧನೆಗೆ ಅತ್ಯಗತ್ಯ ಎಂಬ ಸೂಚನೆ ಇಲ್ಲಿದೆ: ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ – ಗೀತಾ(೧೩/೧೧).

೪. ಅಸುರರು ಇಂತಹ ಸನ್ನಿವೇಶಕ್ಕಾಗಿ ಹೊಂಚುತ್ತಿರುವರು ಎಂಬುದು ಶಕಟಾಸುರ ಆ ಸಮಯಕ್ಕೆ ಆಗಮಿಸಿದ ವಿವರದಿಂದ ತಿಳಿಯುವುದು; ಸಂಚಯ – ಸಮೂಹ.

### ಶಕಟಾಸುರನ ಸಂಹಾರಕ್ಕೆ ಕಾರಣ

ಮರಿಷ್ಯಮಾಣಃ ಸಕಲಂ ಸ್ವಭಾಗ್ಯ-
ಮನೇನ ಕಂಸಃ ಸಹ ನೇಷ್ಯತೀತಿ ।
ಭಿಯೇವ ಪೂರ್ವಂ ಶಕಟಂ ಮುರಾರಿ-
ರ್ಬಭಂಜ ಪಾದೇನ ಸುಕೋಮಲೇನ ॥ ೬೪ ॥

---

೧. ಯದಾಽಽಪ ಕೃಷ್ಣಶ್ಚತುರಃ ಸ ಮಾಸಾಂಸ್ತದೋಪನಿಷ್ಕ್ರಾಮಣಮಸ್ಯ ಚಾಸೀತ್ ।
ಜನ್ಮರ್ಕ್ಷಮಸ್ಮಿನ್ ದಿನ ಏವ ಚಾಸೀತ್ ಪ್ರಾತಃ ಕಿಂಚಿತ್ ತತ್ರ ಮಹೋತ್ಸವೋಽಭೂತ್ ॥
ತದಾ ಶಯಾನಃ ಶಕಟಸ್ಯ ಸೋಽಧಃ ಪದಾಽಕ್ಷಿಪತ್ ತಂ ದಿತಿಜಂ ನಿಹಂತುಮ್ ।
ಅನಃ ಸಮಾವಿಶ್ಯ ದಿತೇಃ ಸುತೋಽಸೌ ಸ್ಥಿತಃ ಪ್ರತೀಪಾಯ ಹರೇಃ ಸುಪಾಪಃ ॥
ಕ್ಷಿಪ್ತೋಽನಸಿಸ್ಥಃ ಶಕಟಾಕ್ಷನಾಮಾ ಸ ವಿಷ್ಣುನೇತ್ಥಾಸಹಿತಃ ಪಪಾತ ।
ಮಮಾರ ಚಾಶು ಪ್ರತಿಭಗ್ನಗಾತ್ರೋ ವ್ಯತ್ಯಸ್ತಚಕ್ರಾಕ್ಷಮಭೂದನಶ್ಚ ॥ –ಮ.ಭಾ.ತಾ.ನಿ.(೧೨/೮೯-೯೧)
೨. ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಸಂಭ್ರಮೇ ।
ಅವಿದುಷೀ ಜನನೀತಿ ಸ ಬಾಲಕಃ ಶರಣತೋ ರಣತೋ ನಿರಗಾನ್ನೃಭಿಃ ॥ –ಸು.ವಿ.(೩/೨)

ಸಾಯಲಿರುವ ಕಂಸನು ತನ್ನ ಭಾಗ್ಯವನ್ನೆಲ್ಲಾ ಇವನೊಂದಿಗೆ ಜೊತೆಯಲ್ಲಿ ಒಯ್ದಾನು ಎಂಬ ಅಂಜಿಕೆಯಿಂದಲೋ ಎಂಬಂತೆ ಮುರಾರಿಯಾದ ಶ್ರೀಕೃಷ್ಣ ತನ್ನ ತುಂಬಾ ಕೋಮಲವಾದ ಪಾದದಿಂದ ಮೊದಲಿಗೆ ಆ ಶಕಟಾಸುರನನ್ನು ಪುಡಿಗೈದ.

ವಿ. : ೧. ತನ್ನನ್ನು ಕೊಲ್ಲಲೆಂದು ಬಂದ ಶಕಟಾಸುರನನ್ನು ಶ್ರೀಕೃಷ್ಣ ಲೀಲಾಜಾಲವಾಗಿ ಸಂಹರಿಸಿದ ಎಂದು ಭಾವ.

೨. ಶಕಟಾಸುರನ ಸಂಹಾರವನ್ನು ಲೋಕನ್ಯಾಯದೊಂದಿಗೆ ವಿವರಿಸಿರುವರು. ಖಳರು ಒಂದು ಸ್ಥಳದಿಂದ ಪಲಾಯನಗೈಯ್ಯುವಾಗ ವಾಹನಗಳಲ್ಲಿ ತಾವು ದೋಚಿದ್ದನ್ನೆಲ್ಲಾ ಹೇರಿ-ಕೊಂಡು ಸಾಗುವುದು ಲೋಕದಲ್ಲಿ ಕಂಡಿದೆ. ಕಂಸನು ಸಹ ಪರಲೋಕಕ್ಕೆ ತೆರಳಲಿರುವವನು. ಅವನೀಗ ತನ್ನ ಭಾಗ್ಯವನ್ನೆಲ್ಲಾ [೧] ಶಕಟನ ಮೇಲೆ ಹೇರಿಕೊಂಡು ಹೋದಾನು ಎಂಬ ಅಂಜಿಕೆ-ಯಿಂದಲೋ ಎಂಬಂತೆ ಶ್ರೀಕೃಷ್ಣ [೨] ಮೊದಲಿಗೆ ಶಕಟಾಸುರನನ್ನು ಸಂಹರಿಸಿದ ಎಂದಿರುವರು.

೩. ದುಷ್ಟರನ್ನು ಆಕ್ರಮಿಸುವಾಗ ಅಧಿಕಾರಿಗಳು ಮೊದಲಿಗೆ ಖಳರ ವಾಹನಗಳನ್ನು ವಶಕ್ಕೆ ತೆಗೆದುಕೊಳ್ಳುವ ಪದ್ಧತಿಗೆ ಶ್ರೀಕೃಷ್ಣನ ಈ ಲೀಲೆಯು ಸ್ಫೂರ್ತಿಯಂತಿದೆ ಎಂಬುದನ್ನು ಗಮನಿಸಬೇಕು. ವಾಹನಗಳನ್ನು Seize ಮಾಡಿದಾಗ ದುಷ್ಟರು ಅಸಹಾಯಕರಾಗುವುದು ಲೋಕದಲ್ಲಿ ಕಂಡಿದೆಯಲ್ಲವೆ!

೪. ಶ್ರೀಕೃಷ್ಣ ಮುರಾ ಎಂಬ ಅಸುರನನ್ನು ಸಂಹಾರಿಸಿ ಮುರಾರಿ ಎನ್ನಿಸುವುದು ಮುಂದೆ ನರಕಾಸುರನ ವಧೆಯ ಸಂದರ್ಭದಲ್ಲಿ; ಎಂದರೆ ಇನ್ನೂ ಬಹುಕಾಲದ ಅನಂತರ; ಆದರೂ ಇಲ್ಲಿಯೇ ಮುರಾರಿ ಎಂದು ಅವನನ್ನು ಕರೆದಿರುವುದು ಅದು ನಿಶ್ಚಿತ ಎಂಬ ಭಾವದಿಂದ ಎಂದು ತಿಳಿಯಬೇಕು[೩].

೫. ಶಕಟಾಸುರನಂತಹ ಘೋರರಾಕ್ಷಸನನ್ನು ಶ್ರೀಕೃಷ್ಣ ಕೇವಲ ತನ್ನ ಕೋಮಲಪಾದಗಳಿಂದ ಸಂಹರಿಸಿದ ಎಂಬ ಮಾತಿನಲ್ಲಿ ಅನಾಯಾಸವಾಗಿ ಸಂಹರಿಸಿದ ಎಂಬ ವಿವರ ಸೂಚಿತ.

೬. **ಪದತಲವಿದಲಿತಗುರುತರಶಕಟಃ** – ಎಂಬ ಶ್ರೀಮದಾಚಾರ್ಯರ ಕಂದುಕಸ್ತುತಿಯ ಮಾತು ಇಲ್ಲಿ ಸ್ಮರಣೀಯ; ಭೀಃ – ಭೀತಿ.

## ಅಳಿದ ಶಕಟಾಸುರನ ಮಾಯೆ

**ತತಃ ಸ ಮಾಯಾಮಪಹಾಯ ದೈತ್ಯ-**
**ಸ್ವರೂಪಧಾರೀ ಪುನರಾವಿರಾಸೀತ್ ।**

---

೧. ಅನ್ಯತ್ರ ಗಂತಾರೋ ಲೋಕಾಃ ಸ್ವಕೀಯಂ ವಸ್ತುಜಾತಂ ಶಕಟೇ ನಿಕ್ಷಿಪ್ಯ ನಯತೀತಿ ಭಾವಃ। –ವ್ಯಾ.
೨. ಅನೇನ – ಶಕಟೇನ, ತಸ್ಯ ಶಕಟಾಕಾರತ್ವಾದಿತಿ ಭಾವಃ। –ವ್ಯಾ.
೩. ವಿಷ್ಣುಚ್ಚ ನಿಶ್ಚಿತಂ ಯತ್ತದತೀತತ್ವೇನ ಭಣ್ಯತೇ ।
ಚಕ್ರವತ್ ಪರಿವೃತ್ತೇರ್ವಾ ದುಷ್ಟಾನಾಂ ಮೋಹನಾಯ ವಾ ॥ (ನಾರದೀಯ) –ಭಾ.ತಾ.(೩/೩/೨೫–೨೮)

ತಥಾ ಹಿ ವಿಷ್ಣೋಃ ಪದಯೋಗಕಾಲೇ
ಕಥಂ ನು ಸಾ ಜೀವಿತುಮುತ್ಸಹೇತ ॥ ೬೫ ॥

ಆಗ ಕಪಟಿಯಾದ ಆ ಶಕಟಾಸುರನು ಮಾಯೆಯನ್ನು ತೊರೆದು ದೈತ್ಯರೂಪವನ್ನೇ ಧರಿಸಿ ಪುನಃ ಎದುರಿಸಿ ಬಂದ. ಅದು ಸರಿಯೇ ! ವಿಷ್ಣುವಿನ ಪಾದದ ಸಂಪರ್ಕವೊದಗಿದಾಗ, ಅವನ ಆ ಮಾಯೆ ಎಂತು ತಾನೇ ಉಳಿಯಲು ಸಾಧ್ಯ?

ವಿ. : ೧. ಶಕಟರೂಪದಲ್ಲಿ ಬಂದಿದ್ದ ಶಕಟಾಸುರನು ಕೃಷ್ಣನ ಪಾದದ ಪೆಟ್ಟಿಗೆ ಶಕಟ ನುಚ್ಚು ನೂರಾದಾಗ ಅವನು ತನ್ನ ರಾಕ್ಷಸರೂಪದಿಂದಲೇ ಕೃಷ್ಣನ ಮೇಲೆರಗಿದ ; ಅವನ ಮಾಯೆಯ ಆಟ ಸಾಗದಾಯಿತು ಎಂದರ್ಥ.

೨. ಶ್ರೀಕೃಷ್ಣನ ಪಾದಸ್ಪರ್ಶವಾದಾಗ ಮಾಯೆಗೆ ಉಳಿವೆಲ್ಲಿ ? ಎಂಬುದು ಇಲ್ಲಿಯ ವಿಶೇಷಾಂಶ. ಶ್ರೀಕೃಷ್ಣನ ಪದಸ್ಪರ್ಶದಂತೆ ವಾಸಿಷ್ಠಕೃಷ್ಣರೂಪದ ಅವನ ಪದರೂಪವಾದ ಶಾಸ್ತ್ರಗಳ ಸಂಪರ್ಕವೂ ಸಹ ಅಜ್ಞಾನದ ಮಾಯೆಯನ್ನು ಪರಿಹರಿಸುವುದು; ಪಾಠಪ್ರವಚನಗಳಿಂದ ಅಜ್ಞಾನ ಅಳಿಯುವುದು ಎಂಬ ತತ್ತ್ವ ಇದರಿಂದ ಸೂಚಿತ ಎಂದು ತಿಳಿಯಬೇಕು.

೩. ಶ್ರೀಹರಿಗೆ ಅವಿದ್ಯೆ, ಅಜ್ಞಾನ, ಮಾಯೆಗಳ ಪ್ರಸಂಗ ಸರ್ವಥಾ ಇಲ್ಲ ಎಂಬ ಉಪಾಧಿ ಖಂಡನ ಮೊದಲಾದ ಸರ್ವಮೂಲಗ್ರಂಥಗಳಲ್ಲಿನ ಮಾತುಗಳಿಗೆ ಇದು ನಿದರ್ಶನದಂತಿದೆ:

ಅಜ್ಞತಾಽಖಿಲಸಂವೇತ್ತುಃ ಘಟತೇ ನ ಕುತಶ್ಚನ । -(ಉಪಾಧಿಖಂಡನ)

## ಶಕಟಾಸುರನ ಮರಣ

ಸ ಕೃಷ್ಣಪಾದಾಭಿಹತಾಖಿಲಾಂಗೋ
ಬಭೂವ ದೈತ್ಯಃ ಕಿಲ ನಿರ್ಗತಾಸುಃ ।
ಅಹಂ ತು ಮನ್ಯೇ ಸ್ವಕಜಾತ್ಯಯೋಗ್ಯ-
[1]ರಥಾಂಗಧಾರೀ ಸ ಮಮಾರ ಧೀರಃ ॥ ೬೬ ॥

ಕೃಷ್ಣನ ಪಾದದ ಪೆಟ್ಟಿಗೆ ಸಕಲ ಅವಯವಗಳೂ ಪುಡಿಯಾಗಿ ಆ ದೈತ್ಯನು ಅಸುನೀಗಿದ; ನಾನಾದರೋ ಧೀರನಾದ ಅವನು ತನ್ನ ಅಸುರಜಾತಿಗೆ ಉಚಿತವಲ್ಲದ ಚಕ್ರಾಯುಧವನ್ನು ಧರಿಸಿದ್ದರಿಂದ ಮೃತನಾದ ಎಂದು ಭಾವಿಸುವೆ.

ವಿ. : ೧.[2]ಶಕಟಾಸುರನು ಶಕಟರೂಪದಲ್ಲಿ ಬಂದದ್ದು ಒಂದು ರೀತಿಯಲ್ಲಿ ಚಕ್ರವನ್ನು ಧರಿಸಿ ಬಂದಂತಾಗಿತ್ತು. ಅವೈಷ್ಣವನಾದ ಅವನಿಗೆ ಚಕ್ರಶಂಖಗಳ ಧಾರಣೆ ಆಗಿಬರುವಂತಹುದಲ್ಲ. ತನಗೆ ಉಚಿತವಲ್ಲದ ಅದನ್ನು ಧರಿಸಿದ್ದರಿಂದಲೇ ಅವನು ಮರಣಿಸಿದ ಎಂದರ್ಥ.

---

೧. ರಥಾಂಗಶಬ್ದಸ್ಯ ಶ್ಲಿಷ್ಟತ್ವಾತ್ತನ್ಮೂಲಕೋತ್ಪ್ರೇಕ್ಷಾಲಂಕಾರಃ । -ವ್ಯಾ.

೨. ಅನಃ ಶಯಾನಸ್ಯ ಶಿಶೋರಥಾಲ್ಪಕಪ್ರವಾಲಮೃದ್ವಂಘ್ರಿಹತಂ ವ್ಯವರ್ತತ ।
ವಿಧ್ವಸ್ತನಾನಾರಸಕುಪ್ಯಭಾಜನಂ ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಮ್ ॥ -ಭಾಗ.(೧೦/೮/೯)

೨. ^೧^ತನಗೆ ಉಚಿತವಲ್ಲದ್ದನ್ನು ಬಯಸುವುದು ಕೇಡಿಗೆ ಕಾರಣವಾಗುವುದು ಎಂದರ್ಥ.

೩. ಇದರಿಂದ ಅವೈಷ್ಣವರು ಶಂಖಚಕ್ರಾದಿಗಳನ್ನು ಧರಿಸಿದರೂ ಅದರ ಪ್ರಯೋಜನವನ್ನು ಪಡೆಯಲಾರರು ಎಂದು ತಿಳಿಯುವುದು.

೪. ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ - (ಮ.ಭಾ.ತಾ.ನಿ.-೧/೯೫) ಎಂಬ ಶ್ಲೋಕದ ಭಾವವನ್ನು ಸ್ಫುಟಪಡಿಸುವ ಪ್ರಸಂಗ ಇದಾಗಿದೆ ; ರಥಾಂಗ - ಚಕ್ರ.

### ಶಕಟಾಸುರನಿಗೆ ಅಧೋಗತಿ ಪ್ರಾಪ್ತಿ

ಧ್ರುವಂ ಪುನರ್ವಿಷ್ಣುಪದಸ್ಯ ಸಂಗ-
ಭಯಾತ್ ಸಕೃದ್ವಿಷ್ಣುಪದಾಹತೋಽಸೌ ।
ಅಧಃಪಪಾತಾಸುರಮಂಡಲೀಯಂ
ವಿನಾಶಕಾಲೇ ಹಿ ವಿರುದ್ಧಬುದ್ಧಿಃ ॥ ೬೭ ॥

ಶ್ರೀಕೃಷ್ಣನ ಪಾದದಿಂದ ಒಮ್ಮೆ ಹೊಡೆಯಲ್ಪಟ್ಟ ಅವನು ಮತ್ತೊಮ್ಮೆ ವಿಷ್ಣುಪಾದದ ಸಂಗ-ವುಂಟಾದೀತು ಎಂಬ ಭಯದಿಂದ ಕೆಳಗುರುಳಿದ; ಈ ಅಸುರರ ಗುಂಪು ವಿನಾಶಕಾಲದಲ್ಲಿ ವಿರುದ್ಧಬುದ್ಧಿಯದಾಗಿರುವುದೇ ಸರಿ ಎಂಬುದು ನಿಶ್ಚಿತ.

ವಿ. : ೧. ಒಂದು ಬಾರಿಯ ಪಾದದ ಪೆಟ್ಟಿಗೆ ಶಕಟಾಸುರನು ಹತನಾದದ್ದನ್ನು ಹೀಗೆ ವರ್ಣಿಸಿರುವರು.

೨. ಆಗ ಸಾಯದಿದ್ದಲ್ಲಿ ಮತ್ತೊಮ್ಮೆ ವಿಷ್ಣುಪಾದದ ಸಂಪರ್ಕ ಉಂಟಾದೀತು ಎಂಬ ^೨^ಭಯದಿಂದ ಎಂಬಂತೆ ಶಕಟಾಸುರ ಮರಣಿಸಿದ ಎಂದು ಭಾವ; ಆಗ ಬೀಳದೆ ಪುನಃ ಮೇಲೆದ್ದರೆ ಗಗನದ ಸ್ಪರ್ಶವಾದೀತು; ಗಗನ ಎಂದರೆ ಆಕಾಶ, ವಿಷ್ಣುಪಾದ. ಅದು ಆಗದಿರಲಿ ಎಂಬ ಯೋಚನೆಯಿಂದ ಅವನು ಮೇಲೇಳದೆ ಹಾಗೇ ಸತ್ತ ಎಂದು ತಿಳಿಯಬೇಕು.

೩. ವಿಷ್ಣುಪಾದದ ಸಂಗ ಉದ್ಧಾರಹೇತುವೇ ಹೊರತು ವಿನಾಶಹೇತುವಲ್ಲ; ಆದರೂ ಅವನು ಹಾಗೆ ವಿನಾಶಹೇತು ಎಂದು ಅದನ್ನು ತಪ್ಪಾಗಿ ತಿಳಿದದ್ದು, ಅವನ ಅಸುರಸ್ವಭಾವಕ್ಕೆ ದ್ಯೋತಕ ಎಂದರ್ಥ. ಅಸುರರಿಗೆ ಒದಗುವುದು ಯಾವಾಗಲೂ ಮಿಥ್ಯಾಜ್ಞಾನವೇ ಅಲ್ಲವೇ! ಸಕೃತ್ - ಒಮ್ಮೆ.

---

೧. ಅಯೋಗ್ಯಕರ್ಮಕರಣಾನ್ಮೃತ ಇತಿ ಮನ್ಯ ಇತಿ ಭಾವಃ। -ವ್ಯಾ.

೨. ನನು ನಾಮಮಾತ್ರಸಾಮ್ಯಾತ್ ಕಥಂ ಭಯಮಿತ್ಯತ ಆಹ। ತಥಾಹೀತಿ। ಇಯಮಸುರಮಂಡಲೀ ಅಸುರವರ್ಗಃ ವಿನಾಶಕಾಲೇ ವಿರುದ್ಧಾ ವಿಪರೀತಾ ಬುದ್ಧಿರ್ಜ್ಞಾನಂ ಯಸ್ಯಾಃ ಸಾ ಅಸುರಾಣಾಂ ಮಿಥ್ಯಾಜ್ಞಾನಿತ್ವಾದಿತಿ ಭಾವಃ। -ವ್ಯಾ.

ಕೃತಾಂತಪಾಶಬದ್ಧಾನಾಂ ದೈವೋಪಹತಚೇತಸಾಮ್ ।
ಬುದ್ಧಯಃ ಕುಬ್ಜಗಾಮಿನ್ಯೋ ಭವಂತಿ ಮಹತಾಮಪಿ ॥ - ಇತಿ ಸ್ಮೃತಿಃ

## ಸರ್ಗೋಪಸಂಹಾರ

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ದ್ವಿತೀಯೋ ಮುದಾಮ್ ॥೬೮॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ದ್ವಿತೀಯಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಎರಡನೆಯ ಸರ್ಗವು ಮುಕ್ತಾಯವಾಯಿತು.

# ೩. ತೃತೀಯ ಸರ್ಗ

(ತೃಣಾವರ್ತನ ವಧೆ-೧-೭ ದೋಲಾವೈಭವ - ೮,೯; ಯಶೋದೆಯ ಶ್ರೀಕೃಷ್ಣಸೇವಾಸಂಭ್ರಮ - ೧೦,೧೧; ಲಕ್ಷ್ಮೀಪತಿಯ ವಾಗ್ವೈಭವ - ೧೨,೧೩; ಗೋಪೀಕೃತ ದೋಲಾಸೇವಾ - ೧೪,೧೫; ಯಶೋದೆಗೆ ವಿಶ್ವರೂಪಪ್ರದರ್ಶನ - ೧೬,೧೭; ಅನಂತನಾಮನಿಗೆ ನಾಮಕರಣ - ೧೮-೨೦; ಶ್ರೀಕೃಷ್ಣ ನಾಮಾರ್ಥಕಥನ - ೨೧-೨೪; ಅಂಬೆಗಾಲಿಟ್ಟ ಶ್ರೀಕೃಷ್ಣ - ೨೫-೨೬; ಯಶೋದೆಯ ಸುಕೃತ - ೨೭; ಶ್ರೀಕೃಷ್ಣನ ದಿಗಂಬರತ್ವದ ಆಂತರ್ಯ - ೨೮; ಶ್ರೀಕೃಷ್ಣನ ಬಾಲಲೀಲಾವಿಲಾಸ - ೨೧-೩೧; ನವನೀತಾದಿ ಚೌರ್ಯ ಮತ್ತು ಅದರ ಆಂತರ್ಯ - ೩೨-೩೬; ಶ್ರೀಪತಿಯ ಚೋರತ್ವ ಎಲ್ಲಿ/ಏತಕ್ಕೆ? - ೩೭-೩೯; ಗೋಪೀಕೃಷ್ಣರ ಸಲ್ಲಾಪ -೪೦-೪೨; ಗೋಪಿಯರ ನಿಂದಾಸ್ತುತಿವಚನಗಳು - ೪೩-೫೯; ಶ್ರೀಕೃಷ್ಣನು ನಂದಸುತನಲ್ಲ - ೪೬; ಶ್ರೀಕೃಷ್ಣನು ದೇವನೇ ಹೊರತು ದೇವಭಕ್ತನಲ್ಲ - ೪೭; ಶ್ರೀಕೃಷ್ಣನ ಉದರದಲ್ಲಿ ಬ್ರಹ್ಮಾದಿದೇವತೆಗಳು - ೪೮; ಶ್ರೀಕೃಷ್ಣನು ಭವಪಾಶಮೋಚಕನಾದ ಶ್ರೀಹರಿ -೪೯; ವಿಶ್ವತಶ್ಚಕ್ಷು ಶ್ರೀಕೃಷ್ಣ - ೫೧; ಸರ್ವಶಕ್ತ ಶ್ರೀಕೃಷ್ಣ - ೫೨; ಅಚಿಂತ್ಯಾದ್ಭುತ ಶಕ್ತಿಸಂಪನ್ನ ಶ್ರೀಕೃಷ್ಣ - ೫೩; ಶ್ರೀಕೃಷ್ಣನ ಬಾಯಿಯಲ್ಲಿ ವರುಣ - ೫೪; ಅಷ್ಟೈಶ್ವರ್ಯಸಂಪನ್ನ ಶ್ರೀಕೃಷ್ಣ - ೫೫; ಜಗನ್ನಿಯಾಮಿಕ ಶ್ರೀಕೃಷ್ಣ - ೫೬; ಶ್ರೀಕೃಷ್ಣನ ಕಣ್ಣುಗಳಲ್ಲಿ ಸೂರ್ಯಚಂದ್ರರು - ೫೭; ಕಿಂ ದೇವಿ ಕುರ್ಮೋ ವಯಮ್-೫೮; ಗೋಪಿಯರು ಮಾಡಿದ ನಿಂದಾಸ್ತುತಿ - ೫೯; ಶ್ರೀಕೃಷ್ಣನು ಮಾಡಿದ ಮೃದ್ಭಕ್ಷಣ-೬೦,೬೧; ಪುನಃ ವಿಶ್ವರೂಪಪ್ರದರ್ಶನ-೬೨; ಸರ್ಗೋಪಸಂಹಾರ-೬೩)

### ತೃಣಾವರ್ತದೈತ್ಯನ ಆಗಮನ

ಅಥಾಪರೋ ದೈತ್ಯಕದಂಬಕಾಸು-
ರಿವೋದ್ಧತೋ ವಾತಶರೀರಧಾರೀ[1] ।
ಪ್ರಗೃಹ್ಯ ಕೃಷ್ಣಂ ಗಗನಂ ಜಗಾಮ
ಸ್ವನಾಶಯೋಗ್ಯಸ್ಥಲಕಾಂಕ್ಷಯೇವ ॥ ೧ ॥

---

೧. ಕದಾಚಿತ್ ತಂ ಲಾಲಯಂತೀ ಯಶೋದಾ ವೋಢುಂ ನಾಶಕ್ನೋದ್ಭೂರಿಭಾರಾಧಿಕಾರ್ತಾ ।
ನಿಧಾಯ ತಂ ಭೂಮಿತಲೇ ಸ್ವಕರ್ಮ ಯದಾ ಚಕ್ರೇ ದೈತ್ಯ ಆಗಾತ್ ಸುಘೋರಃ ॥
ತೃಣಾವರ್ತೋ ನಾಮತಃ ಕಂಸಭೃತ್ಯಃ ಸೃಷ್ಟ್ವಾಽತ್ಯುಗ್ರಂ ಚಕ್ರವಾತಂ ಶಿಶುಂ ತಮ್ ।
ಆದಾಯಾಗಾದಂತರಿಕ್ಷಂ ಸ ತೇನ ಶಸ್ತಃ ಕಂಠಗ್ರಾಹಸಂರುದ್ಧವಾಯುಃ ॥
ಪಪಾತ ಕೃಷ್ಣೇನ ಹತಃ ಶಿಲಾತಲೇ ತೃಣಾವರ್ತಃ ಪರ್ವತೋದಗ್ರದೇಹಃ ।
ಸುವಿಸ್ಮಯಂ ಚಾಪುರಥೋ ಜನಾಸ್ತೇ ತೃಣಾವರ್ತಂ ವೀಕ್ಷ್ಯ ಸಂಚೂರ್ಣಿತಾಂಗಮ್ ॥
-ಮ.ಭಾ.ತಾ.ನಿ(೧೨/೧೧೬-೧೧೮)

ಆ ಬಳಿಕ ದೈತ್ಯರ ಗುಂಪಿಗೆ ಪ್ರಾಣವಾಯುವಿನಂತಿದ್ದ ಮತ್ತೊಬ್ಬ ಕೊಬ್ಬಿದ ದೈತ್ಯನು ಸುಂಟರಗಾಳಿಯ ರೂಪವನ್ನು ಧರಿಸಿ, ಶ್ರೀಕೃಷ್ಣನನ್ನು ಎತ್ತಿಕೊಂಡು ತನ್ನ ನಾಶಕ್ಕೆ ಉಚಿತವಾದ ಸ್ಥಳವನ್ನು ಬಯಸಿಯೋ ಎಂಬಂತೆ ಗಗನಕ್ಕೆ ಹಾರಿದ.

ವಿ. : ೧. ಈಗ ತೃಣಾವರ್ತನ ವಧೆಯನ್ನು ತಿಳಿಸುತ್ತಿರುವರು; ಪಾರ್ವತಿಯ ವರವಿದ್ದ ಅವನು ತುಂಬಾ ಪ್ರಬಲದೈತ್ಯ ಎಂಬುದನ್ನು ದೈತ್ಯರ ಸಮೂಹದ ಪ್ರಾಣವಾಯು ಎಂಬ ಪದದಿಂದ ತಿಳಿಸಿರುವರು; ಅವನಿಗೆ ಪಾರ್ವತಿಯ ವರವಿದ್ದಿತು ಎಂಬುದು ವಿಶೇಷ[1].

೨. ವಾತಶರೀರಧಾರೀ ಎಂದರೆ ತೃಣಾವರ್ತನು ಸುಂಟರಗಾಳಿಯ ರೂಪವನ್ನು ಧರಿಸಿದವನಾಗಿ ಬಂದನು ಎಂದರ್ಥ.

೩. ಅವನು ಶ್ರೀಕೃಷ್ಣನನ್ನು ಎತ್ತಿಕೊಂಡು ಗಗನಕ್ಕೆ ಹಾರಿದ್ದನ್ನು ತನ್ನ ಸಾವಿಗೆ ಉಚಿತವಾದ ಸ್ಥಳ ಎಂದು ತಿಳಿಸಿರುವರು. ಎಂದರೆ ಅವನು ವಾತರೂಪದಲ್ಲಿದ್ದವನು. ವಾಯುವಿಗೆ ಆಕಾಶದಲ್ಲಿ ಲಯ. ಆದ್ದರಿಂದ ಅವನು ಅಲ್ಲಿಗೆ ತೆರಳಿದ್ದು ತನ್ನ ನಾಶವನ್ನು ತಂದುಕೊಳ್ಳಲೆಂದೇ ಎಂದಾಗಿತ್ತು ಎಂದರ್ಥ; **ಆಕಾಶಾದ್ವಾಯುಃ** ಎಂಬುದು ವಾಯುವಿನ ಉತ್ಪತ್ತಿಕ್ರಮವಾದರೆ **ವಾಯುರಾಕಾಶೇ** ಎಂಬುದು ಅದರ ಲಯಕ್ರಮ; ಇದಕ್ಕೆ ಅನುಗುಣವಾಗಿ ವಾತರೂಪದ ತೃಣಾವರ್ತ ವಿಷ್ಣುಪದವೆನ್ನಿಸಿದ ಗಗನದಲ್ಲಿ ಲಯಹೊಂದಿದ ಎಂದು ಭಾವ.

### ತೃಣಾವರ್ತನಿಂದಾದ ಲೋಕನಾಶ

**ದುಸ್ತರ್ಕಾಯಿತಶರ್ಕರಾಭಿರಮಲಂ ಚಕ್ಷುಃ ಸ ಮುಷ್ಣನ್ ಗವಾ-**
**ಮಾವಾಸೇ ವಸತಾಂ ಸತಾಮುರುತಮೋ ವಿಸ್ತಾರಯನ್ ವಾರಯನ್ ।**
**ತದ್ವಾಕ್ಯಶ್ರವಣಂ ಕಠೋರಕುಟಿಲಧ್ವಾನೈರ್ಯಶೋದಾಸುತಂ**
**ದೈತ್ಯೋಽಗೂಹಯದಾಗಮಾಂತಲಲನಾಗರ್ಭಂ ಕುವಾದೀವ ತಮ್ ॥೨॥**

ಆ ತೃಣಾವರ್ತನು ಕುತರ್ಕದಂತಿದ್ದ ಮಣ್ಣಿನ ಕಣಗಳಿಂದ ಕಣ್ಣು ಮಂಕಾಗಿಸುತ್ತಾ, ಗೋಕುಲದಲ್ಲಿ ನೆಲೆಸಿದ್ದ ಸಜ್ಜನರಿಗೆ ದಟ್ಟವಾದ ಕತ್ತಲೆಯನ್ನು ಪಸರಿಸುತ್ತಾ, ನಿಷ್ಠುರವಾದ ತನ್ನ ಕಠೋರವಾದ ವಕ್ರಧ್ವನಿಗಳಿಂದ ಗೋಕುಲದ ಜನಗಳ ವಾಕ್ಯಗಳನ್ನು ಕಿವಿಗೆ ಕೇಳಿಸದಂತೆ

---

೧. ಪುರಾ ಧುನಿಶ್ಚಮುಸ್ತಥಾಽಪಿ ಪೂತನಾಸಮನ್ವಿತೌ ।
ಅನೋಕ್ಷಸಂಯುತೌ ತಪಃ ಪ್ರಚಕ್ರತುಃ ಶಿವಾಂ ಪ್ರತಿ ॥
ತಯಾ ವರೋಽಪ್ಯವಧ್ಯತಾ ಚತುರ್ಷು ಚ ಪ್ರಯೋಜಿತಃ ।
ಅನಂತರಂ ತೃಣೋದ್ಭ್ರಮಿಸ್ತಪ್ತೋಽಚರದ್ವರಂ ಚ ತಮ್ ॥
ಅವಾಪ ತೇ ತ್ರಯೋ ಹತಾಃ ಶಿಶುಸ್ವರೂಪವಿಷ್ಣುನಾ ।
ಧುನಿಶ್ಚಮುಶ್ಚ ತೌ ತರೂ ಸಮಾಶ್ರಿತೌ ನಿಷೂದಿತೌ ॥ - ಮ.ಭಾ.ತಾ.ನಿ (೧೩./೨೦-೨೨)

ಮಾಡುತ್ತಾ, ಕುವಾದಿಯಂತೆ ವೇದಾಂತಗಳೆಂಬ ನಾರಿಯರ ಹಾರ್ದವಾದ ಶ್ರೀಕೃಷ್ಣನನ್ನು ಮರೆಮಾಡಿದನು.

ವಿ. : ೧. ಆ ತೃಣಾವರ್ತನು ಧೂಳಿನ ಕಣಗಳಿಂದ ಜನಗಳಿಗೆ ಕಣ್ಣು ಕಾಣದಂತೆ ಮಾಡುತ್ತಾ, ಕತ್ತಲೆಯನ್ನು ಹೆಚ್ಚಿಸುತ್ತಾ, ತನ್ನ ಕೆಟ್ಟ ಧ್ವನಿಗಳಿಂದ ಲೋಕದ ಜನಗಳ ಮಾತುಗಳು ಕೇಳದಂತೆ ಮಾಡುತ್ತಾ ಶ್ರೀಕೃಷ್ಣನನ್ನು ಕಾಣದಂತಾಗಿಸಿದನು ಎಂದು ಭಾವ.

೨. [1]ತೃಣಾವರ್ತನು ಶ್ರೀಕೃಷ್ಣನನ್ನು ಮರೆಮಾಡಿದಂತಹ [2]ಕಾರ್ಯವು ತನ್ನ ಕುವಾದಿಯೊಬ್ಬನು ಪರಬ್ರಹ್ಮನನ್ನು ಜನಗಳ ಕಣ್ಣಿನಿಂದ ಮರೆಮಾಡುವ ಕಾರ್ಯಕ್ಕೆ ಹೋಲಿಸಿರುವರು. ಕುವಾದಿಗಳು ತಮ್ಮ ಶುಷ್ಕತರ್ಕಗಳಿಂದ ಜನಗಳ ವಿಚಾರಶಕ್ತಿಗೆ ಮಂಕು ಕವಿಸುವರು. ಸಚ್ಛಾಸ್ತ್ರಶ್ರವಣದಲ್ಲಿ ತೊಡಗಿದವರಿಗೆ ತಮ್ಮ ಕೆಟ್ಟಧ್ವನಿಗಳಿಂದ ಅವಿದ್ಯೆ ಕವಿಯುವಂತೆ ಮಾಡುವರು. ಒಟ್ಟಾಗಿ ಆಗಮಗಳ ಮುಖ್ಯಹೃದಯವಾದ ಭಗವನ್ಮಹಿಮೆಯು ಪ್ರಕಟವಾಗ ದಂತೆ ಮರೆಮಾಡಿಬಿಡುವರು.

೩.. ವರಬಲದಿಂದ ಲೋಕನಾಶಕ್ಕೆ ತೊಡಗುವ ಅಸುರರ ಕಾರ್ಯವು ಶಾಸ್ತ್ರಪ್ರಪಂಚದಲ್ಲಿ [3]ದುರ್ವಾದಿಗಳ ಭಗವನ್ಮಹಿಮಾವಿರೋಧಿಕಾರ್ಯದಂತೆ ಅಪಾಯಕರ ಎಂಬುದು ಇಲ್ಲಿಯ ಒಟ್ಟು ಭಾವ; **ಶರ್ಕರಾ** - ಹರಳು; **ಧ್ವಾನ** - ಧ್ವನಿ.

೪. ಸುಂಟರಗಾಳಿಗೆ ಭೂಮಿಯ ಮೇಲಿನ ಧೂಳು ಮೇಲೆದ್ದು ಜನರ ಕಣ್ಣಿಗೆ ಬಿದ್ದು, ಕತ್ತಲೆ ಹೆಚ್ಚುವಂತಾಗಿ, ಅದರ ಕೆಟ್ಟ ಶಬ್ದಕ್ಕೆ ಒಳ್ಳೆಯವರ ಮಾತು ಕಿವಿಗೆ ಬೀಳದಂತಾಗಿ, ದಾರಿತಪ್ಪುವುದು ಸುಪ್ರಸಿದ್ಧ; ಈ ತೃಣಾವರ್ತನಿಂದ ಆದದ್ದು ಅದೇ ಎಂದು ತಿಳಿಯಬೇಕು.

### ಗಗನಕ್ಕೆ ನೆಗೆದ ತೃಣಾವರ್ತ

**ತದಾ ಖಲಸ್ಯೋತ್ಪತನಂ ಸ ಶೌರಿ-**
**ರ್ಹ್ಯದಾಽನುಮೇನೇ ಪತಿತಸ್ಯ ದೂರಾತ್ ।**
**ಗಿರೀಂದ್ರಕಲ್ಪೋತ್ಪತಿತಾತ್ಮಮೂರ್ತ್ಯಾ**
**ಶರೀರಮಾಚೂರ್ಣಯಿತುಂ ಧಿಯೇವ ॥ ೩ ॥**

---

೧. ಯಥಾ ನಿರ್ಗುಣಪ್ರತಿಪಾದಕತ್ವೋಕ್ತ್ಯಾ ವೇದಾಂತೇಷು ಕೃಷ್ಣಗೂಹನಂ ತಥೇತಿ ಭಾವಃ । -ವ್ಯಾ.

೨. **ಗೋಕುಲಂ ಸರ್ವಮಾವೃಣ್ವನ್ ಮುಷ್ಣಂಶ್ಚಕ್ಷೂಂಷಿ ರೇಣುಭಿಃ ।**
ಈರಯನ್ ಸುಮಹಾಘೋರಶಬ್ದೇನ ಪ್ರದಿಶೋ ದಿಶಃ ॥ -ಭಾಗ.(೧೦/೮/೨೨.)

೩.. ದುಸ್ತರ್ಕಾಯಿತಶರ್ಕರಾಭಿಃ ಭೇದಃ ಕಿಂ ಭಿನ್ನೋ ವಾ ಅಭಿನ್ನೋ ವಾ ಭಿನ್ನಾಭಿನ್ನೋ ವಾ । ಯದಿ ಪ್ರಪಂಚಃ ಸತ್ಯಃ ಸ್ಯಾತ್ತರ್ಹಿ ದೃಗ್‍ದೃಶ್ಯಯೋಃ ಸಂಬಂಧಾನುಪಪತ್ತಿರಿತ್ಯಾದಿಶುಷ್ಕತರ್ಕರೂಪಧೂಲೀಪ್ರಕ್ಷೇಪೈಃ ಮುಷ್ಣನ್ ಉರುತಮಃ ಧೂಲ್ಯಾ ಪ್ರಕಾಶತಿರೋಧಾನೇನ ನಿಬಿಡಾಂಧಕಾರಂ ಅನ್ಯತ್ರ ಸ್ವಕೀಯಮಿಥ್ಯಾಜ್ಞಾನಂ ವಿಸ್ತಾರಯನ್ ಕಠೋರಕುಟಿಲಧ್ವಾನೈಃ । -ವ್ಯಾ.

ಆಗ ಮೇಲಿಂದ ಬೀಳುವ ಮಹಾಪರ್ವತದಂತಹ ತನ್ನ ದೇಹದ ಅಪ್ಪಳಿಸುವಿಕೆಯಿಂದ ಕೆಳಗೆ ಬೀಳುವ ಅವನನ್ನು ಪುಡಿಮಾಡುವ ಬುದ್ಧಿಯಿಂದಲೋ ಎಂಬಂತೆ ಆ ಖಳನು ದೂರಕ್ಕೆ ಮೇಲೆ ಹಾರುವುದನ್ನು ಶ್ರೀಕೃಷ್ಣನು ಮನಸಾ ಒಪ್ಪಿದನು.

ವಿ. : ೧. ಶ್ರೀಕೃಷ್ಣನಂತಹ ಸಕಲಲೋಕಧಾರಕನನ್ನು ಮೇಲೆತ್ತಿ ಒಯ್ಯಲು ಆ ತೃಣಾವರ್ತನಿಗೆ ಸಾಧ್ಯವಾಯಿತೇ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಅವನಿಗೆ ಶ್ರೀಕೃಷ್ಣನನ್ನು ಮೇಲೆತ್ತಿ ಒಯ್ಯಲು ಸಾಧ್ಯವಾದದ್ದು ಶ್ರೀಕೃಷ್ಣನ ಸಂಕಲ್ಪದಿಂದಾಗಿಯೇ ಹೊರತು ತನ್ನ ಶಕ್ತಿಯಿಂದೇನೂ ಅಲ್ಲ. ಏಕೆಂದರೆ ಶ್ರೀಕೃಷ್ಣಮೇಲಕ್ಕೆ ಹಾರುವ ಅವನನ್ನು ತನ್ನ ಪರ್ವತಕಾಯದಿಂದ ಕೆಳಕ್ಕೆ ಬೀಳಿಸಿ ನುಜ್ಜುಗುಜ್ಜುಮಾಡಲು ಅನುವಾಗಲೆಂದೇ ಹಾಗೆ ಅವನಿಗೆ ಅವಕಾಶನೀಡಿದ ಎಂದರ್ಥ. ಇಲ್ಲವಾದಲ್ಲಿ ಆ ಪಾಪಿಗೆ ಶ್ರೀಕೃಷ್ಣನನ್ನು ಮೇಲೆತ್ತಿ ಒಯ್ಯಲು ಎಂದಾದರೂ ಸಾಧ್ಯವಾಗುತ್ತಿತ್ತೇ? ಎಂದು ತಿಳಿಯಬೇಕು.

೨. ಇದರಿಂದ ದುಷ್ಟರಿಗೆ ಒಂದು ಕಾಲಕ್ಕೆ ಉನ್ನತಿ ಎಂಬಂತೆ ಕಂಡರೂ ಮುಂದೆ ಅದು ಅವರ ಮಹಾಪತನಕ್ಕೆ ಕಾರಣವಾಗುವುದೇ ಹೊರತು ಸರ್ವಥಾ ಶುಭವೆನ್ನಿಸದು ಎಂಬ ಭಾವ ನಿರೂಪಿತ.

**ಗಗನವನ್ನು ಜಲವೆಂದು ಭ್ರಮಿಸಿದ ತೃಣಾವರ್ತ**

**ಹರಿಂ ಸ ಸಂಸ್ಥಾಪ್ಯ ಹೃದಿ ಸ್ವಕೀಯೇ**
**ಪರಿಭ್ರಮನ್ ವ್ಯೋಮ್ನಿ ಮುಹುಃ ಶ್ವಸಂಶ್ಚ।**
**ಗರಂ ನಿಪೀಯ ಭ್ರಮಿತಾಂತರಾತ್ಮಾ**
**ಸರೋಧಿಯಾಽಭ್ರಂ ಪ್ರವಿಶನ್ನಿವಾಸ್ತೇ ॥ ೪ ॥**

ತನ್ನ ಹೃದಯದಲ್ಲಿ ಶ್ರೀಕೃಷ್ಣನನ್ನು ಇರಿಸಿಕೊಂಡು, ಗಗನದಲ್ಲಿ ಗರಗರನೆ ತಿರುಗುತ್ತಾ, ಮತ್ತೆ ಮತ್ತೆ ಏದುಸಿರುಬಿಡುತ್ತಾ, ವಿಷವನ್ನು ಕುಡಿದು ಬುದ್ಧಿಗೆ ಮಂಕುಕವಿದವನಂತೆ ಅವನು ಸರೋವರವೆಂದು ತಿಳಿದು ಗಗನಕ್ಕೆ ನೆಗೆದ.

ವಿ. : ೧. ಶ್ರೀಕೃಷ್ಣನನ್ನು ಎತ್ತಿಕೊಂಡು ಮೇಲೆ ಹಾರಿದ ಅವನು ಸರೋವರವೆಂದು ತಿಳಿದು ಆಕಾಶಕ್ಕೆ ನೆಗೆದಂತಾಯಿತು ಎಂದಿರುವರು.[೧] ನೀರಿಗೆ ಹಾರುವ ಬದಲು ಗಗನಕ್ಕೆ ನೆಗೆದು ಸಾವಿನ ಅಂಚಿಗೆ ತಲುಪಿದ ಎಂದು ಅರ್ಥ.

೨. ಶ್ರೀಕೃಷ್ಣನದು ಕೃಷ್ಣವರ್ಣ ಹಾಗೂ ಅವನು ತೃಣಾವರ್ತನ ಸಾವಿಗೆ ಕಾರಣ ಎಂಬ ಕಾರಣದಿಂದ ಅವನನ್ನು ಗರ ಎಂದು ಕರೆದಿರುವರು; **ವ್ಯೋಮ** – ಗಗನ; **ಅಭ್ರ** – ಆಕಾಶ.

೩. ತೃಣಾವರ್ತನ ಈ ಪ್ರಸಂಗವು ರಾಜಸೂಯಯಾಗದ ಮಯ ಸಭೆಯಲ್ಲಿ ದುರ್ಯೋಧನನು ನೆಲವನ್ನು ಜಲವೆಂದೂ, ಜಲವನ್ನು ನೆಲವೆಂದೂ ಭ್ರಮಿಸಿದ ಪ್ರಸಂಗವನ್ನು ಹೋಲುವುದು. ಅಲ್ಲಿಯೂ ದುರ್ಯೋಧನನಿಗಾದದ್ದು ಪಾತವೇ ಎಂಬುದು ಗಮನಾರ್ಹ.

---

೧. ಸ್ವಹೃದಿಸ್ಥಕೃಷ್ಣಸ್ಯ ಕೃಷ್ಣವರ್ಣತ್ವಾತ್ ಸ್ವಮೃತಿಹೇತುತ್ವಾಚ್ಚೇತಿ ಭಾವಃ। –ವ್ಯಾ.

ಸಲ್ಲದ್ದನ್ನು ಬಯಸಿ ಪತನ ಕಂಡ ತೃಣಾವರ್ತ

ಮುರದ್ವಿಷಂ ಮೂರ್ಧ್ನಿ ನಿಧಾಯ [1]ವಿಷ್ಣೋಃ
ಪದಂ ಪ್ರವೇಷ್ಟುಂ ತ್ವರಯಾ ಗತೋऽಪಿ।
ಅಸೌ ಪಪಾತಾಮರವೈರ್ಯಧಸ್ತಾ-
ದಯೋಗ್ಯಕಾಮಸ್ಯ ಕಥಂ ನ ಪಾತಃ ॥ ೫ ॥

ಶ್ರೀಕೃಷ್ಣನನ್ನು ತಲೆಯ ಮೇಲೆ ಹೊತ್ತು ವಿಷ್ಣುಪದವೆಂಬ ಆಕಾಶವನ್ನು ತಲುಪಲು ತ್ವರೆ-ಯಿಂದ ಹೊರಟರೂ ಆ ದೈತ್ಯನು ಕೆಳಕ್ಕೆ ಬಿದ್ದನು; ತನಗೆ ಸಲ್ಲದ್ದನ್ನು ಬಯಸುವವನಿಗೆ ಅಧಃಪತನ ಹೇಗೆ ತಾನೇ ತಪ್ಪಿತು?

ವಿ. : ೧. ಅವನು ಹೊತ್ತಿದ್ದು ವಿಷ್ಣುವನ್ನು; ತೆರಳಿದ್ದು ಗಗನಕ್ಕೆ; ಆದರೂ ಅವನು ಕೆಳಕ್ಕೇತಕ್ಕೆ ಬಿದ್ದ ಎಂಬುದಕ್ಕೆ ಉತ್ತರ ಇಲ್ಲಿದೆ.

೨. ವಿಷ್ಣುಪದಕ್ಕೆ ನೆಗೆಯುವುದು ಎಂದರೆ ಶ್ರೀಕೃಷ್ಣನನ್ನು ಹಿಡಿಯುವುದು ಸಜ್ಜನರಿಗೆ ಮಾತ್ರ ಸಲ್ಲುವ ಕಾರ್ಯ. ಆದರೆ ಈ ತೃಣಾವರ್ತ ದುಷ್ಟ. ಅವನಿಗೆ ಶ್ರೀಕೃಷ್ಣನನ್ನು ಮುಟ್ಟುವ, ವಿಷ್ಣುಪದಕ್ಕೆ ಹಾರುವ ಅರ್ಹತೆ ಇಲ್ಲವೇ ಇಲ್ಲ; ಆದ್ದರಿಂದ ಅದು ಅವನ ಅಧಃಪತನಕ್ಕೆ ಕಾರಣವಾಯಿತು ಎಂದರ್ಥ.

೩.. ತನಗೆ ಸಲ್ಲದ್ದನ್ನು ಬಯಸುವರಿಗೆ ಅಧಃಪತನ ತಪ್ಪಿದ್ದಲ್ಲ ಎಂಬ ತತ್ತ್ವದ ಸೂಚನೆ ಇಲ್ಲಿದೆ:
[2]ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ । - ಬ್ರಹ್ಮಸೂತ್ರ(೩/೪/೪೧)
[3]ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ। - ಮ.ಭಾ.ತಾ.ನಿ.(೧/೯೫)

---

೧. ವಿಷ್ಣೋಃ ಪದಮಾಕಾಶಂ ವೈಕುಂಠಮಿತಿ ಧ್ವನಿಃ। -ವ್ಯಾ.

೨. ನ ಚ ಪರಮಾತ್ಮೈಶ್ವರ್ಯಾದಿಕಮಾಕಾಂಕ್ಷ್ಯಮ್ । ಬ್ರಹ್ಮಾದೀನಾಮಪಿ ನಾಕಾಂಕ್ಷ್ಯಂ, ಕಿಮು ಪರಸ್ಯೇತಿ ಸೂಚಯಿತುಮಪಿಶಬ್ದಃ। ಚಶಬ್ದಸ್ತು ಜ್ಞಾನಾರ್ಥಿನಾಂ ಪೂರ್ವೋಕ್ತಾದಿತ್ಥಂಭಾವಾಂತರಸೂಚಕಃ। ಅಯೋಗ್ಯ-ಮಾರೋಢುಂ ಪ್ರಯತನ್ ಪ್ರಪತನ್ ಹಿ ದೃಶ್ಯತೇ। ಏವಮಯೋಗ್ಯಸ್ಯ ಪರಮಾತ್ಮೈಶ್ವರ್ಯಸ್ಯ ಬ್ರಹ್ಮಾದಿಪದಸ್ಯ ಚಾಕಾಂಕ್ಷಾಯಾಂ ಪತನಮನುಮೀಯತೇ।
'ನ ದೇವಪದಮನ್ವಿಚ್ಛೇತ್ ಕುತ ಏವ ಹರೇರ್ಗುಣಾನ್ ।
ಇಚ್ಛನ್ ಪತತಿ ಪೂರ್ವಸ್ಮಾದಧಸ್ತಾದ್ಯತ್ರ ನೋತ್ಥಿತಿಃ' ಇತಿ ಬ್ರಹ್ಮಾಂಡೇ।
'ಸ್ವಕೀಯಮಿಚ್ಛಮಾನಂ ತು ರಾಜಾದ್ಯಾಃ ಪಾತಯಂತಿ ಹಿ।
ಏವಮೇವ ಸುರಾದ್ಯಾಶ್ಚ ಹರಿಶ್ಚ ಸ್ವಪದೇಚ್ಛುಕಮ್' ಇತ್ಯಾದ್ಯನುಮಾನರೂಪವಾಕ್ಯಾಚ್ಚ
'ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ। ಅವ ದಸ್ಯೂನಧೂನುಥಾಃ' ಇತಿ ಚ ಶ್ರುತಿಃ॥
-ಬ್ರಹ್ಮಸೂತ್ರಭಾಷ್ಯ

೩. ಅಸುರಸ್ಯ ವಿಷ್ಣುಪದಪ್ರಾಪ್ತೇರಯೋಗ್ಯತ್ವಾತ್ ''ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ'' ಇತಿ (ಮ.ಭಾ.ತಾ.ನಿ.೧/೯೫) ಸ್ಮೃತೇರಧಃಪಾತೋ ಯುಕ್ತ ಏವೇತಿ ಭಾವಃ। -ವ್ಯಾ.

ಧರೆಗುರುಳಿದ ತೃಣಾವರ್ತ

ಸ ವಾತರೂಪೀ ದಿತಿಜೋ ಮುಕುಂದ-
ಭರಾಸಹಿಷ್ಣುರ್ನಿಪಪಾತ ಭೂಮೌ ।
ತಥಾ ಹಿ ವಾತಸ್ಯ ಜವೋಽಧಿಕೋಽಪಿ
ಕಥಂ ನು ವಿಶ್ವಂಭರಮುದ್ಬಿಭರ್ತಿ ॥ ೬ ॥

ಆ ಸುಂಟರಗಾಳಿಯ ರೂಪದ ದೈತ್ಯನು ಮುಕುಂದನಾದ ಶ್ರೀಕೃಷ್ಣನ ಭಾರವನ್ನು ಸಹಿಸಲಾರದವನಾಗಿ, ಭೂಮಿಯ ಮೇಲೆ ದೊಪ್ಪನೆ ಬಿದ್ದ. ಗಾಳಿಯ ವೇಗ ಎಷ್ಟೇ ಹೆಚ್ಚಿದ್ದರೂ, ವಿಶ್ವಂಭರನನ್ನು ಎತ್ತಬಲ್ಲದೇ!

ವಿ. : ೧. ಗಾಳಿಯ ವೇಗ ಅಪಾರವಿದ್ದರೂ ವಿಶ್ವಂಭರನನ್ನು ಎತ್ತಲು ಅದಕ್ಕೆ ಅಶಕ್ಯ. ಅದರಿಂದ ಈ ತೃಣಾವರ್ತ ರೂಪದ ಅಸುರನಿಗೆ ಕೃಷ್ಣನ ಭಾರವನ್ನು ಹೊರುವುದಾಗದೇ ಕೆಳಕ್ಕೆ ಬಿದ್ದ ಎಂದರ್ಥ.

೨. ಇದು ತೀರ್ಥಪ್ರಬಂಧದಲ್ಲಿನ ಈ ಕೆಳಗಿನ ಶ್ಲೋಕದಂತಿರುವುದು ಗಮನಾರ್ಹ :

ನ ಮೂರ್ಛತಿ ಶಿಲೋಚ್ಚಯೇ ಪವನವೇಗ ಇತ್ಯಜ್ಞವಾಕ್
ಯತೋ ಹನುಮತಾಽಽಹೃತಾಃ ಸುಬಹವೋ ಮರುತ್ಸೂನುನಾ ।
ಗಭೀರತರವಾರಿಧಿಸ್ಥಗನಚುಂಚವಃ ಪರ್ವತಾಃ
ಜಯಂತಿ ಕೃತಸೇತವಃ ಕ್ಷಪಣಹೇತವೋ ರಕ್ಷಸಾಮ್ ॥ (೪/೧೭)

೩.. ವಾಯುವೇಗವು ಪರ್ವತಗಳ ಮೇಲೆ ನಡೆಯದು ಎಂಬುದು ಅಯಥಾರ್ಥ ಎಂಬುದು ಜಗತ್ತಿಗೆ ತಿಳಿದ ಸಂಗತಿಯಾದರೆ, ವಿಶ್ವಂಭರನ ಮುಂದೆ ಗಾಳಿಯ ವೇಗ ನಡೆಯದು ಎಂಬುದು ಮಾತ್ರ ಯಥಾರ್ಥವೇ ಆಗಿದೆ ಎಂಬುದು ವಿಶೇಷ.

ತಪ್ಪಿಗೆ ತಕ್ಕ ಶಿಕ್ಷೆ ಅನುಭವಿಸಿದ ತೃಣಾವರ್ತ

ಚಕ್ಷುಶ್ಚೌರ್ಯಫಲಂ ಜಗಾಮ ಪರಿವೃತ್ತಾಕ್ಷಃ ಪ್ರಭೋರೋಜಸಾ
ವಿಷ್ವಕ್ಸಂಭ್ರಮಣೇನ ದತ್ತತಮಸೋ ವಿಭ್ರಾಂತಮೂರ್ಧಾ ಫಲಮ್ ।
ಸಾಧೂನಾಂ ಹೃದಯಾರ್ತಿದಾನಫಲಿತಂ ಕ್ಲೇಶಂ ಪ್ರಪನ್ನಃ ಕ್ಷಿತೌ
ಮಾತುಃ ಪಾತಕರಃ ಪರಸ್ಯ ಸ ಖಲಃ ಪಾಷಾಣಪೃಷ್ಠೇಽಪತತ್ ॥೭॥

ಆ ಅಸುರನು ಪ್ರಭುವಾದ ಶ್ರೀಕೃಷ್ಣನ ಸಾಮರ್ಥ್ಯದಿಂದ ಕಣ್ಣು ತಿರುಗಿದವನಾದ; ಗೋಕುಲದ ಜನರಿಗೆ ಕಣ್ಣು ಕಾಣದಂತೆ ಮಾಡಿದ್ದಕ್ಕೆ ತಕ್ಕ ಫಲವನ್ನು ಹೊಂದಿದ; ಸುತ್ತುವ

ಮೂಲಕ ಜನರಿಗೆ ಮೂರ್ಛೆ ಎಂಬ ಕತ್ತಲೆ ಕವಿಸಿದ್ದರಿಂದ ತಲೆಸುತ್ತುವವನಾಗಿ ಉರುಳಿದ; ಸಜ್ಜನರ ಮನಸ್ಸಿಗೆ ನೋವು ನೀಡಿದ ಫಲವಾಗಿ ತಾನೂ ಕ್ಲೇಶಕ್ಕೊಳಗಾಗಿ [೧]ಭೂಮಿಗೆ ಬಿದ್ದ; ಸರ್ವೋತ್ತಮನಾದ ಶ್ರೀಕೃಷ್ಣನ ತಾಯಿಯಾದ ಯಶೋದೆಗೆ ನೋವುಂಟುಮಾಡಿದ ಆ ಖಳನು ಬಂಡೆಯ ಮೇಲೆ ಬಿದ್ದ.

ವಿ. : ೧. ಸುಂಟರಗಾಳಿಯ ರೂಪದಲ್ಲಿ ಗೋಕುಲದ ಜನಗಳಿಗೆ ಬಗೆಬಗೆಯ ತೊಂದರೆಯನ್ನು ಕೊಟ್ಟಿದ್ದರ ಫಲವನ್ನು ತೃಣಾವರ್ತ ಅನುಭವಿಸಿದ; ಇದರಿಂದ ಸಜ್ಜನರಿಗೆ ಮಾಡುವ ಅಪಚಾರವು ಆತ್ಮಘಾತಕ ಎಂಬ ತತ್ತ್ವವು ಸೂಚಿತ; ವಿಷ್ವಕ್ - ಎಲ್ಲೆಡೆ.

೨. [೨]ಸಜ್ಜನರಿಗೆ ಕೇಡು ಬಗೆಯುವವನು ಎಂತು ಸುಖಿಯಾದಾನು? ಎಂಬ ಮಾತಿಗೆ ಇದು ಉತ್ತಮ ನಿದರ್ಶನ: ಕೋ ನಾಮ ಸತ್ಸು ವಿಷಮಃ ಪ್ರಭವೇತ್ ಸುಖಾಯ (ಮ.ಭಾ.ತಾ.ನಿ.-೧೯/೪೫).

### ದೋಲೆಯಲ್ಲಿ ಶ್ರೀಕೃಷ್ಣ

**ಆಲೋಲಹೈಮವರದಾಮವತೀಂ ವಿತಾನ-**
**ಜಾಲಾವಲಂಬಿಶುಭಮೌಕ್ತಿಕರಮ್ಯಮಾಲಾಮ್ ।**
**ದೋಲಾಂ ವಿಧಾಯ ತದುಪರ್ಯಧಿರೋಪ್ಯ ಬಾಲಂ**
**ಸಾಲೋಕ್ಯಸೌಖ್ಯಮಲಭಿಷ್ಟ ಹೃದಾ ಯಶೋದಾ ॥ ೮ ॥**

ಜೋಲುವ ಚಿನ್ನದ ಶ್ರೇಷ್ಠವಾದ ಹಗ್ಗದ ಹಾರುಬಟ್ಟೆಗಳ ಸಾಲಿನಿಂದ ಜೋಲುವ ಮಂಗಳಕರವಾದ ಮುತ್ತಿನ ರಮಣೀಯವಾದ ಮಾಲೆಗಳ ತೊಟ್ಟಿಲನ್ನು ಮಾಡಿ ಅದರಲ್ಲಿ ಬಾಲಕೃಷ್ಣನನ್ನು ಇರಿಸಿ, ಯಶೋದೆಯು ಹೃದಯದಲ್ಲಿ ಸಾಲೋಕ್ಯಸುಖವನ್ನು ಅನುಭವಿಸಿದಳು.

ವಿ. : ೧. ಶ್ರೀಕೃಷ್ಣನನ್ನು ತೊಟ್ಟಿಲಲ್ಲಿ ಮಲಗಿಸಿ, ಯಶೋದೆಯು ಪಟ್ಟ ಸಂಭ್ರಮವನ್ನು ಸಾಲೋಕ್ಯ ಮುಕ್ತಿಗೆ ಸದೃಶವಾದ ಸುಖ ಎಂದು ಇಲ್ಲಿ ವರ್ಣಿಸಿರುವರು.

೨. ಸಾಲೋಕ್ಯ ಎಂಬುದು ಚತುರ್ವಿಧ ಮುಕ್ತಿಗಳಲ್ಲಿ ಒಂದು; ಶ್ರೀವಿಷ್ಣುವಿನ ಲೋಕವಾದ ವೈಕುಂಠಲೋಕದಲ್ಲಿ ವಾಸಿಸುವುದು ಎಂಬುದು ಇದರ ಅರ್ಥ; ಮಹಾವಿಷ್ಣುವೇ ಆದ ಶ್ರೀಕೃಷ್ಣನ ಜೊತೆಗೆ ಯಶೋದೆಯು ಆ ಸಮಯದಲ್ಲಿ ಇದ್ದದ್ದರಿಂದ ಅದನ್ನು ಸಾಲೋಕ್ಯ ಎಂದು ಕರೆದಿರುವುದು ಉಚಿತವಾಗಿದೆ; ದಾಮ - ಹಗ್ಗ; ದೋಲಾ - ತೊಟ್ಟಿಲು.

---

೧. ಶಿರೋಭ್ರಮಣೇನ ಕಿಮಪಿ ನ ಪ್ರಕಾಶತ ಇತಿ ಭಾವಃ। -ವ್ಯಾ.
೨. ಪರಚಕ್ಷುಷೋಽಪಹಾರೇಣ ಸ್ವಸ್ಯಾಪಿ ಚಕ್ಷುಷೋಽಪಹಾರೋ ಜಾತ ಇತ್ಯರ್ಥಃ। -ವ್ಯಾ.
ಪರೇಷಾಂ ತಮೋದಾನೇನ ಸ್ವಸ್ಯಾಪ್ಯಜ್ಞಾನಂ ಜಾತಮಿತ್ಯರ್ಥಃ। -ವ್ಯಾ.
ಲೋಕೇ ಮಹತ್ಸು ಯಾದೃಶಮಘಂ ಆಚರತಿ ತಾದೃಶಮೇವ ಫಲಂ ಭುಜ್ಯತ ಇತಿ ಭಾವಃ। -ವ್ಯಾ.

## ದೋಲೆಯಲ್ಲಿನ ಕೃಷ್ಣನಿಂದ ಯಶೋದೆಗಾದ ಅಪೂರ್ವ ಆನಂದ

ದೋಲಾವಿಲಾಸಚಲಿತಾಲಕಶೋಭಿಫಾಲಂ
ಬಾಲಂ ಶುಚಿಸ್ಮಿತಸುಧಾರಸಶೋಭಿತಾಸ್ಯಮ್ ।
ಶ್ಯಾಮಂ ಸಮೀಕ್ಷ್ಯ ಸಮಯಂ ಕಿಲ ಶಮ್ಮಯಂ ಸಾ
ತೇನೇ ಕ್ವಣತ್ಕನಕನೂಪುರಶೋಭಿಪಾದಮ್ ॥ ೯ ॥

ತೊಟ್ಟಿಲ ತೂಗುವಿಕೆಯಿಂದಾಗಿ ಚಲಿಸುವ ಮುಂಗುರುಳುಗಳಿಂದ ಶೋಭಿತವಾದ ಹಣೆ, ಮುಖದಲ್ಲಿ ನಿರ್ಮಲವಾದ ಮಂದಹಾಸವೆಂಬ ಅಮೃತರಸದ ಶೋಭೆ, ಧ್ವನಿಗೈಯ್ಯುವ ಚಿನ್ನದ ಕಾಲ್ಗೆಜ್ಜೆಗಳಿಂದ ಕಂಗೊಳಿಸುವ ಪಾದಗಳು; ಇಂತಹ ನೀಲಮೇಘಶ್ಯಾಮನಾದ ಬಾಲಕೃಷ್ಣನನ್ನು ಕಾಣುತ್ತಾ ಸಮಯವನ್ನೆಲ್ಲಾ ಆ ಯಶೋದೆಯು ಸುಖಮಯ-ವನ್ನಾಗಿಸಿಕೊಂಡಳು.

ವಿ. : ೧. ಶ್ರೀಕೃಷ್ಣನ ಮುಂಗುರುಳುಗಳಿಂದ ಶೋಭಿತವಾದ ಹಣೆ, ಮಂದಹಾಸ, ಕಾಲ್ಗೆಜ್ಜೆ-ಗಳಿಂದ ಕೂಡಿದ ಪಾದಗಳು, ಮೊದಲಾದವುಗಳ ದರ್ಶನದಿಂದ [೧]ಯಶೋದೆಯ ಆ ಕಾಲವೆಲ್ಲಾ ಪರಮಸಾರ್ಥಕವಾಯಿತು[೨] ಎಂದು ಭಾವ.

೨. ಕ್ವಣತ್ - ಧ್ವನಿ ಮಾಡುವ ; ಶಂ - ಸುಖ ; ನೂಪುರ - ಕಾಲ್ಗೆಜ್ಜೆ.

## ಯಶೋದೆಯು ಕೃಷ್ಣನನ್ನು ಆಡಿಸುತ್ತಿದ್ದ ಬಗೆ

ಗಂಡಂ ವರಾಂಗುಲಿದಲೈರ್ಲಘು ಚಾಲಯಂತೀ
ಮಂದಸ್ಮಿತಾನನಮಥೋ ಪರಿರಂಭಯಂತೀ ।
ಸಾಂದ್ರಸ್ತನಸ್ರುತಪಯಃ ಕಿಲ ಪಾಯಯಂತೀ
ನಂದಸ್ಯ ರಾಜ್ಞ್ಯಭವದಿತ್ಥಮಹರ್ನಯಂತೀ ॥ ೧೦ ॥

ಶ್ರೀಕೃಷ್ಣನ ಕೆನ್ನೆಯನ್ನು ತನ್ನ ಶ್ರೇಷ್ಠ ಬೆರಳ ತುದಿಗಳಿಂದ ಮೆಲ್ಲನೆ ತಟ್ಟುತ್ತಿದ್ದಳು; ಕಿರುನಗೆ ಸೂಸುವ ಮುಖದ ಅವನನ್ನು ಆಲಿಂಗಿಸಿಕೊಳ್ಳುತ್ತಿದ್ದಳು; ಒತ್ತಾದ ಸ್ತನಗಳಿಂದ ಉಕ್ಕಿಬಂದ ಸ್ತನ್ಯವನ್ನು ಪ್ರಾಶನಮಾಡಿಸುತ್ತಿದ್ದಳು; ನಂದಪತ್ನಿಯಾದ ಇಡೀ ದಿನವನ್ನು ಯಶೋದೆಯು ಹೀಗೆ ಕಳೆಯುತ್ತಿದ್ದಳು.

---

೧. ಕೃಷ್ಣದರ್ಶನೇನ ಯಶೋದಾಯಾಃ ಸಕಲೋಽಪಿ ಸಮಯಃ ಸುಖಕರೋ ಜಾತ ಇತಿ ಭಾವಃ । -ವ್ಯಾ.

೨. ಆಯುರ್ಹರತಿ ವೈ ಪುಂಸಾಮುದ್ಯನ್ನಸ್ತಂ ಚ ಯನ್ನಸೌ ।
ತಸ್ಯರ್ತೇ ಯಃ ಕ್ಷಣೋ ನೀತ ಉತ್ತಮಶ್ಲೋಕವಾರ್ತಯಾ ॥ -ಭಾಗವತ(೨/೩./೧೭)
ತಸ್ಯಾಯುಷೋ ಯ ಉತ್ತಮಶ್ಲೋಕವಾರ್ತಯಾರ್ತೇ ಕ್ಷಣಃ ಸ ನೀತ ಏವ ವೃಥಾ ॥ -ಭಾ.ತಾ.(೨/೩./೧೭)

ವಿ. : ೧. ಯಶೋದೆಯು ತನ್ನ ಜೀವನದ ಪ್ರತಿಕ್ಷಣವನ್ನು ಶ್ರೀಕೃಷ್ಣನ ಬಗೆಬಗೆಯ ಸೇವೆಗೆ ಮೀಸಲಾಗಿಟ್ಟ ವಿವರ ಇದರಲ್ಲಿ ನಿರೂಪಿತವಾಗಿದೆ ; ಗಂಡ – ಕಪೋಲ.

೨. ಶ್ರೀಮದಾಚಾರ್ಯರ ಅನುಜರಾದ ಶ್ರೀವಿಷ್ಣುತೀರ್ಥರು ಸಂನ್ಯಾಸದೀಕ್ಷೆಯನ್ನು ಪಡೆದ ಬಳಿಕ ಶ್ರವಣ, ಮನನ, ಅನುವಾದಗಳ ಹೊರತು ಬೇರೊಂದು ರೀತಿಯಲ್ಲಿ ಕಾಲಕಳೆಯಲಿಲ್ಲ ಎಂಬ ಸುಮಧ್ವವಿಜಯ (೧೫/೯೯)ದ ಮಾತನ್ನು ಇದು ಹೋಲುವುದು ಗಮನಾರ್ಹ:

ಶ್ರವಣೇನಾನುವಾದೇನ ಮನನೇನಾವ್ಯಥಾಕರೋತ್ ।
ಕಾಲಂ ವೇದಾಂತಶಾಸ್ತ್ರಸ್ಯ ವೇದಾಂತಗುರುಸೋದರಃ ॥

೩. ಈ ಶ್ಲೋಕದಲ್ಲಿ ಪ್ರತಿಪಾದದ ಕೊನೆಯಲ್ಲಿನ ಚಾಲಯಂತೀ, ಪರಿರಂಭಯಂತೀ, ಪಾಯಯಂತೀ, ಅಹರ್ನಯಂತೀ ಎಂಬಲ್ಲಿನ ಅನುಪ್ರಾಸವು ಅತ್ಯಂತ ರೋಚಕ.

## ದೋಲೆಯಲ್ಲಿನ ಶ್ರೀಕೃಷ್ಣನ ಲೀಲೆ

ಯಾऽಮರ್ತ್ಯಮರ್ತ್ಯದಿತಿಜಾಲಿಭಿರಪ್ಯಭೇದ್ಯಂ
ಬ್ರಹ್ಮಾಂಡಭಾಂಡಮಭಿನನ್ನಖಕೋಟಿಮಾತ್ರಾತ್ ।
ಸ್ವಾಂಗುಷ್ಠಪುಷ್ಟಸುಭಗಾಂಗುಲಿಮಚ್ಯುತಸ್ತಾಂ
ಸಂಗೃಹ್ಯ ಚುಂಬತಿ ಶಿಶುಪ್ರಕೃತಿಃ ಶಯಾನಃ ॥ ೧೧ ॥

ದೇವ, ಮನುಷ್ಯ ಹಾಗೂ ದೈತ್ಯರ ಹಿಂಡುಗಳು ಸಹ ಭೇದಿಸಲಾಗದ ಬ್ರಹ್ಮಾಂಡಖರ್ಪರವನ್ನು ಕೇವಲ ತನ್ನ ಉಗುರಿನ ತುದಿಯಿಂದಲೇ ಭೇದಿಸಿದಂತಹ ತನ್ನ ಪುಷ್ಟವಾದ ರಮ್ಯ ಹೆಬ್ಬೆರಳನ್ನು ಮಲಗಿದ್ದ ಆ ಶಿಶುರೂಪದ ಶ್ರೀಕೃಷ್ಣ ತನ್ನ ಕೈಯಲ್ಲಿ ಹಿಡಿದು ಚುಂಬಿಸುತ್ತಿದ್ದ.

ವಿ. : ೧. ಶ್ರೀಕೃಷ್ಣನ ಸಕಲ ಅವಯವಗಳೂ ಸಹ ಪರಿಪೂರ್ಣ ಎಂಬುದನ್ನು ಇಲ್ಲಿ ಕಾವ್ಯ-ಮಯವಾಗಿ ನಿರೂಪಿಸಿರುವರು.

೨. ಬ್ರಹ್ಮಾಂಡಖರ್ಪರವು ಸುರಾಸುರಾದಿ ಸಕಲರಿಂದಲೂ ಸಹ ಅಭೇದ್ಯ; ಅದನ್ನು ಕೇವಲ ತನ್ನ ಬೆರಳಿನ ನಖಸ್ಪರ್ಶಮಾತ್ರದಿಂದ ಭೇದಿಸಿದ ಹಿರಿಮೆ ಶ್ರೀಕೃಷ್ಣನದು; ಅಂತಹ ಶ್ರೀಕೃಷ್ಣ ಸರ್ವೋತ್ತಮ ಎಂಬುದು ಇಲ್ಲಿಯ ಮುಖ್ಯಭಾವ.

೩. ಮಕ್ಕಳು ತಮ್ಮ ಪಾದದ ಹೆಬ್ಬರಳನ್ನು ಬಾಯಲ್ಲಿರಿಸಿಕೊಂಡು ಚೀಪುವುದು ಲೋಕದಲ್ಲಿ ಕಂಡುಬರುವ ಸಹಜಪ್ರವೃತ್ತಿ; ಆದರೆ ಕೃಷ್ಣ ಮಾಡಿದ ಆ ಲೀಲೆ ಮಾತ್ರ ಅವನ ಸರ್ವೋತ್ತಮತ್ವಕ್ಕೆ ನಿದರ್ಶನವಾಗಿದ್ದಿತು ಎಂಬುದು ಮಾತ್ರ ವಿಶೇಷ .

೪. ಶ್ರೀಕೃಷ್ಣನು ಹಾಗೆ ಮಾಡಿದ್ದು ತನ್ನ ತ್ರಿವಿಕ್ರಮರೂಪದಿಂದ ಎಂಬ ವಿವರ ಶ್ರೀಮದ್ಭಾಗ-ವತದಲ್ಲಿ ಪ್ರಸಿದ್ಧ[2]; ಅಮರ್ತ್ಯ – ದೇವತೆಗಳು; ಮರ್ತ್ಯ – ಮನುಷ್ಯ; ಕೋಟಿ – ತುದಿ;

---

೧. ಅತಃ ಸಕಲಮಪ್ಯಾಯುಷ್ಯಂ ಸಾರ್ಥಕಮಿತಿ ಭಾವಃ। ಜಾತಿರಲಂಕಾರಃ। -ವ್ಯಾ.

೨. ಯತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠನಖನಿರ್ಭಿನ್ನೋರ್ಧ್ವಾಂಡ-ಕಟಾಹವಿವರೇಣಾಂತಃಪ್ರವಿಷ್ಟಾ ಯಾ ಬಾಹ್ಯಜಲಧಾರಾ...ತದ್ವಿಷ್ಣುಪದಮಾಹುಃ। -ಭಾ.(೫/೧೭/೧)

೫. ಶ್ರೀಕೃಷ್ಣನು ವಟಪತ್ರಶಾಯಿಯಾಗಿ ಹಾಗೆ ತನ್ನ ಬಲಗಾಲನ್ನು ಬಾಯಲ್ಲಿರಿಸಿಕೊಂಡು ಚೀಪುತ್ತಿದ್ದ ವಿವರ ಶ್ರೀಮದ್ಭಾಗವತದಲ್ಲಿ ಬಂದಿದೆ; ಸುಭಗ – ಮನೋಹರ; ಪ್ರಕೃತಿ–ಸ್ವಭಾವ.

೬. ಇಲ್ಲಿ ಪಾದವೆಂದರೆ ಸ್ವರೂಪ ಎಂದರ್ಥ ( ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ); ಪಾದದ ಪುಷ್ಟವಾದ ರಮ್ಯ ಹೆಬ್ಬೆರಳು ಎಂಬುದು ಸ್ವರೂಪಾನಂದ ವಿಶೇಷಕ್ಕೆ ಸಂಕೇತ; ಇದರಿಂದ ಶ್ರೀಹರಿಯದು ಸದಾ ಪರಿಪೂರ್ಣವಾದ ಸ್ವರೂಪಾನಂದದ ಭೋಗವೇ ಹೊರತು ಬೇರೆಯದಲ್ಲ ಎಂಬ ವಿಶೇಷಾರ್ಥ ತಿಳಿಯುವುದು.

## ಪ್ರಾಜ್ಞನಾಮಕ ಶ್ರೀಹರಿ ತಾನೇ ಎಂದು ತಿಳಿಸಿದ ಶ್ರೀಕೃಷ್ಣ

**ನಿದ್ರಾಮಾಶ್ರಯ ಕಿಂ ತದಾಶ್ರಯಫಲಂ ಭುಕ್ತಂ ವ್ರಜೇಜ್ಜೀರ್ಣತಾಂ**
**ನಿದ್ರಾ ಕಾಽಂಬ ನಿಮೀಲಿತಾಕ್ಷಿಯುಗಲಃ ಪ್ರಾಜ್ಞಂ ಯದಾಲಿಂಗತಿ ।**
**ಅಸ್ತ್ವೇವಂ ತ್ವಿತಿ ಮುದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತತ್**
**ಸರ್ವಂ ಜೀರ್ಣಮಥೋ ದಿಶೇತಿ ಜನನೀಂ ಶಂಸನ್ನಿಜಂ ಸೋಽವತಾತ್[೨] ॥೧೨॥**

(ಯಶೋದೆ)'ಶ್ರೀಕೃಷ್ಣ ನಿದ್ರೆಮಾಡು'; (ಕೃಷ್ಣ)'ಅಮ್ಮ! ಅದರಿಂದೇನು ಫಲ?'; (ಯಶೋದೆ) 'ತಿಂದಿದ್ದು ಜೀರ್ಣವಾಗುವುದು'; (ಕೃಷ್ಣ )'ಅಮ್ಮ! ನಿದ್ರೆ ಎಂದರೇನು?', (ಯಶೋದೆ) 'ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಪ್ರಾಜ್ಞನಾಮಕ ಭಗವಂತನನ್ನು ಆಲಿಂಗಿಸಿಕೊಳ್ಳುವುದು'; 'ಹಾಗೆಯೇ ಆಗಲಿ' ಎಂದು ನುಡಿದ ಕೃಷ್ಣ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ತನ್ನ ದೇಹವನ್ನೇ ಗಾಢವಾಗಿ ಆಲಿಂಗಿಸಿಕೊಳ್ಳುತ್ತಾ ಕೇಳಿದ: 'ಅಮ್ಮ! ಎಲ್ಲವೂ ಜೀರ್ಣವಾಯಿತು; ಪುನಃ ನೀಡು'; ಹೀಗೆ ಯಶೋದೆಗೆ ತಿಳಿಸಿದ ಶ್ರೀಕೃಷ್ಣನು ತನ್ನ ಭಕ್ತಜನರನ್ನು ಪಾಲಿಸಲಿ.

ವಿ. : ೧. [೩]ಬಾಲಕೃಷ್ಣ ಯಶೋದೆಯರ ಸರಸಸಂವಾದದ ಮೂಲಕ [೪]ಮಾಂಡೂಕೋ-ಪನಿಷತ್ತಿನಲ್ಲಿ ಬಂದಿರುವ ನಿದ್ರೆಯ ಅರ್ಥವನ್ನು ತಿಳಿಸುವ ಅಪೂರ್ವಶ್ಲೋಕ ಇದಾಗಿದೆ.

---

ಕ್ಷಿತಿಂ ಪದೈಕೇನ ಬಲೇರ್ವಿಚಕ್ರಮೇ ನಭಃ ಶರೀರೇಣ ದಿಶಶ್ಚ ಬಾಹುಭಿಃ ।
ಪದಂ ದ್ವಿತೀಯಂ ಕ್ರಮತಸ್ತ್ರಿವಿಷ್ಟಪಂ ನ ವೈ ತೃತೀಯಸ್ಯ ತದೀಯಮಣ್ವಪಿ ।
ಉರುಕ್ರಮಸ್ಯಾಂಘ್ರಿರುಪರ್ಯುಧೋ ದಿವೋ ಮಹರ್ಜನಾಭ್ಯಾಂ ತಪಸಃ ಪರಂ ಗತಃ ॥ -ಭಾ. (೮/೧೯/೩೩)

೧. ಚಾರ್ವಂಗುಲಿಭ್ಯಾಂ ಪಾಣಿಭ್ಯಾಮುನ್ನೀಯ ಚರಣಾಂಬುಜಮ್ ।
ಮುಖೇ ನಿಧಾಯ ವಿಪ್ರೇಂದ್ರ ಧಯಂತಂ ವೀಕ್ಷ್ಯ ವಿಸ್ಮಿತಃ ॥ -ಭಾಗ. (೧೨/೮/೨೫)

೨. ವಾಕೋವಾಕ್ಯಮಲಂಕಾರಃ । "ಉಕ್ತಿಪ್ರತ್ಯುಕ್ತಿಚಾತುರ್ಯಂ ವಾಕೋವಾಕ್ಯಮ್" ಇತ್ಯುಕ್ತತ್ವಾತ್ । -ವ್ಯಾ.

೩. ಅನೇನ ನಿತ್ಯಪ್ರಬುದ್ಧತಯಾ ಪರಮಾತ್ಮನಃ ಕೃಷ್ಣಸ್ಯ ನಿದ್ರಾದಿದೋಷರಾಹಿತ್ಯಂ ಧ್ವನ್ಯತೇ । -ವ್ಯಾ.

೪. ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಂ ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ।
-ಮಾಂಡೂಕೋಪನಿಷತ್

೨. ನಿದ್ರೆ ಎಂದರೆ [೧]ಪ್ರಾಜ್ಞ ಎಂಬ ಭಗವದ್ರೂಪದೊಂದಿಗೆ ಆಲಿಂಗನ ಎಂದು ಇಲ್ಲಿಯ ಭಾವ.

೩. ತನ್ನನ್ನು ತಾನೇ ಆಲಿಂಗಿಸಿಕೊಳ್ಳುವ ಮೂಲಕ 'ಪ್ರಾಜ್ಞ' ನಾಮಕ ಶ್ರೀಹರಿ ತಾನೇ ಎಂಬುದಾಗಿ ಶ್ರೀಕೃಷ್ಣನು ತಿಳಿಸಿಕೊಟ್ಟ ಎಂದರ್ಥ.

೪. ಈ ರೀತಿಯಾದ ಪ್ರಶ್ನೋತ್ತರರೂಪ ನಿರೂಪಣೆಗೆ ವಾಕೋವಾಕ್ಯಾಲಂಕಾರ ಎಂದು ಹೆಸರು.

### ತಾನು ನಿದ್ರಾತೀತ ಎಂದು ತಿಳಿಸಿದ ಶ್ರೀಕೃಷ್ಣ

**ಮಾತರ್ಗಾಯಸಿ ಕಿಂ ಸದಾ ಜಲನಿಧೌ ಶೇಷಾಂಗಸಂಶಾಯಿನಂ**
**ತಾತಾಸೌ ನನು ನಿದ್ರಯಾ ಪರಿವೃತೋ ದದ್ಯಾತ್ ತವಾಪೀತಿ ತಾಮ್ ।**
**ಏವಂ ಚೇದ್ಗದಿತಂ ತ್ವದೀಯಮಖಿಲಂ ತತ್ಕರ್ಣದೇಶಂ ಕಥಂ**
**ಯಾತೀತಿ ಪ್ರತಿಪಾದಯನ್ ನಿಜಮತಂ ಪಾಯಾದ್ಯಶೋದಾಸುತಃ ॥ ೧೩ ॥**

(ಕೃಷ್ಣ)'ಅಮ್ಮ! ನೀನೇಕೆ ಸಾಗರದಲ್ಲಿ ಶೇಷನ ಮೇಲೆ ಪವಡಿಸಿರುವ ಶ್ರೀಹರಿಯನ್ನು ಕುರಿತು ಸದಾ ಹಾಡುವಿ?'; (ಯಶೋದೆ)'ಮಗು! ನಿದ್ರೆಯಿಂದ ಕೂಡಿದ ಅವನು ನಿನಗೂ ಸಹ ಅದನ್ನು ನೀಡಲಿ ಎಂದು'; (ಕೃಷ್ಣ)'ಹಾಗಿದ್ದರೆ ನೀನು ಹಾಡುವುದೆಲ್ಲ ಅವನ ಕಿವಿಗೆ ಎಂತು ತಲುಪೀತು?'; ಹೀಗೆ ಕೇಳುವ ಮೂಲಕ ತನಗೆ ನಿದ್ರೆ ಇಲ್ಲ ಎಂಬ ತತ್ತ್ವವನ್ನು ಪ್ರತಿಪಾದಿಸಿದ ಯಶೋದಾಸುತನಾದ ಶ್ರೀಕೃಷ್ಣನು ಪಾಲಿಸಲಿ.

ವಿ. : ೧. ಶ್ರೀಶೇಷಶಾಯಿಯಾದ ಶ್ರೀಹರಿ ಯೋಗನಿದ್ರೆಯಲ್ಲಿರುವುದು ಶಾಸ್ತ್ರಗಳ ನಿರೂಪಣೆ. ಯೋಗನಿದ್ರೆ ಎಂದರೆ ಕಣ್ಣುಗಳನ್ನು ಮುಚ್ಚಿಕೊಳ್ಳುವುದು ಮಾತ್ರ; [೨]ನಿಜಕ್ಕೂ ನಿದ್ರಿಸುವುದಲ್ಲ ಎಂಬುದು ಅದರ ಮರ್ಮ. ಅದನ್ನು[೩] ಕಾವ್ಯಮಯವಾಗಿ ನಿರೂಪಿಸಿರುವುದು ಇಲ್ಲಿಯ ವಿಶೇಷ.

೨. ಶೇಷಶಾಯಿಯಾದ ಶ್ರೀಹರಿಯು ನಿಜಕ್ಕೂ ನಿದ್ರಿಸಿದಲ್ಲಿ ಯಶೋದೆಯ ಪ್ರಾರ್ಥನೆ ಅವನಿಗೆ ಎಂತು ತಲುಪೀತು? ಎನ್ನುವ ಮೂಲಕ ಅವನಿಗೆ ನಿಜಕ್ಕೂ ನಿದ್ರೆ ಇಲ್ಲ ಎಂಬ ತತ್ತ್ವವನ್ನು ತಿಳಿಸಿರುವ ಇಲ್ಲಿಯ ಪರಿ ಅತ್ಯಂತ ರೋಚಕವಾದುದು; ಜಲನಿಧಿ - ಸಮುದ್ರ.

೩. ಇದೂ ಸಹ ವಾಕೋವಾಕ್ಯಾಲಂಕಾರ.

### ಗೋಪಿಯರಿಂದ ಶ್ರೀಕೃಷ್ಣನ ದೋಲೋತ್ಸವ

**ಲೋಲತ್ಕಂಕಣಪಾಣಿಪದ್ಮಧೃತಯಾ ನೀಲೋಚ್ಚಲತ್ಕುಂತಲಾ**
**ಬಾಲಾಃ ಸ್ರಸ್ತದುಕೂಲಹಾರವಲಯಾ ಮೌಲಿಸ್ಖಲನ್ಮಲ್ಲಿಕಾಃ ।**

---

೧. ಸ್ವಸ್ಯೈವ ಪ್ರಾಜ್ಞತ್ವಾದಿತಿ ಭಾವಃ । -ವ್ಯಾ.
೨. ತ್ವದ್ಗಾನಂ ನಿದ್ರಾವೃತಃ ಕಥಂ ಶ್ರೋಷ್ಯತೀತ್ಯರ್ಥಃ । -ವ್ಯಾ.
೩. ಸ್ವವಿಷಯಕಗಾನಂ ಶ್ರುತ್ವಾ ಸಂತುಷ್ಟಸ್ತ್ವಮಪಿ ತಾಂ ಸ್ವಸಂಸ್ಥಿತಾಂ ನಿದ್ರಾಂ ದಿಶತ್ವಿತಿ ತಂ ಗಾಯಾಮೀತ್ಯರ್ಥಃ । -ವ್ಯಾ.

**ಲೋಲಾಂಗ್ಯಃ ಕ್ವಣದಂಘ್ರಿಭೂಷಣಗಣಾ ಈಷಚ್ಚಲತ್ಕುಂಡಲಾಃ**
**ವ್ಯಾಲೋಲಂ ಸಹ ದೋಲಯಾ ಮೃಗದೃಶಃ ಕೃತ್ವೋಪನಿನ್ಯುಃ ಪ್ರಿಯಮ್॥೧೪॥**

ಹಾರಾಡುವ ಕಪ್ಪು ಮುಂಗುರುಳುಗಳು, ಜಾರುವ ಉಟ್ಟ ಪಟ್ಟೆವಸ್ತ್ರ ಕೊರಳಮಾಲೆಗಳು ಹಾಗೂ ಕೈಬಳೆಗಳು, ತಲೆಯಿಂದ ಉದುರುವ ಮಲ್ಲಿಗೆ ಹೂವುಗಳು, ಬಳಕುವ ಮೈ, ಧ್ವನಿಗೈಯ್ಯುವ ಕಾಲ್ಗೆಜ್ಜೆಗಳ ಗುಂಪು, ಸ್ವಲ್ಪ ಅಲುಗುವ ಓಲೆಗಳು, ಇಂತಹ ಹರಿಣಾಕ್ಷಿಯರಾದ ಗೋಪಬಾಲಿಕೆಯರು ಚಲಿಸುವ ಬಳೆಗಳ ಕರಪದ್ಮದಿಂದ ಹಿಡಿದ ದೋಲೆಯೊಂದಿಗೆ ತಾವು ಸಹ ಬಳುಕುತ್ತಾ ಪ್ರಿಯನಾದ ಶ್ರೀಕೃಷ್ಣನನ್ನು ತಮ್ಮ ಸನಿಹಕ್ಕೆ ತಂದುಕೊಂಡರು.

ವಿ. : ೧. ಕೃಷ್ಣನನ್ನು ತೊಟ್ಟಿಲಲ್ಲಿ ತೂಗುವ ಗೋಪಿಯರ ಸಿದ್ಧಿಯನ್ನು ಇಲ್ಲಿ ವರ್ಣಿಸಿರುವರು.

೨. ತೊಟ್ಟಿಲು ತೂಗುವಾಗ ತೊಟ್ಟಿಲಿನೊಂದಿಗೆ ಅದನ್ನು ತೂಗುವವರೂ ಸಹ ಓಲಾಡುವುದು ಸಹಜ. ಪ್ರಸ್ತುತ ಶ್ರೀಕೃಷ್ಣನನ್ನು ತೂಗುವ [1]ಗೋಪಿಯರ ಅಂತಹ ರೀತಿಯನ್ನು ಸ್ವಭಾವೋಕ್ತಿಯ ಮೂಲಕ ಇಲ್ಲಿ ಬಣ್ಣಿಸಿರುವರು; ಮೌಲಿ – ತಲೆ.

೩. ತೂಗುವ ತೊಟ್ಟಿಲು ತೂಗುವವರ ಬಳಿಗೆ ಬರುವುದನ್ನು ಇಲ್ಲಿ ಆ ಮೂಲಕ ಗೋಪಿಯರು ಕೃಷ್ಣನನ್ನು ಸನಿಹಕ್ಕೆ ತಂದುಕೊಂಡರು ಎಂದು ವರ್ಣಿಸಿರುವುದು ಇಲ್ಲಿಯ ಅಪೂರ್ವತೆ ; ಹೀಗೆ ತೊಟ್ಟಿಲು ತೂಗುವ ಕಾರ್ಯದಲ್ಲೂ ಅಧ್ಯಾತ್ಮದ ಚಿಂತನೆ ನೀಡಿರುವುದು ಗಮನಾರ್ಹ; ದುಕೂಲ–ರೇಷ್ಮೆವಸ್ತ್ರ; ವಲಯ – ಬಳೆ; ವ್ಯಾಲೋಲ – ಚಂಚಲ.

## ದೋಲೋತ್ಸವದ ಅಂತರಾರ್ಥ

**ಯೇ ವೈ ವಿಟ್ಠಲಸೇವಕಾಃ ಶುಭಧಿಯಸ್ತೇಷಾಂ ಸ ಲಭ್ಯಸ್ತ್ವಿತಿ**
**ಪ್ರಾಯೋ ಜ್ಞಾಪಯಿತುಂ ಮುರದ್ವಿಷಮಿತಃ ಸಂಪ್ರಾಪಯಂತ್ಯೇಕದಾ ।**
**ಅನ್ಯೇಷಾಂ ಸ ಹಿ ದೂರಗಸ್ತ್ವಿತಿ ತತಃ ಪ್ರಾಪ್ತಂ ಚ ತಂ ಕುರ್ವತೀ**
**ದೋಲಾ ಸಾ ಮಣಿಮಂಡಿತಾ ವಿಜಯತೇ ಸ್ವಾನಂದಮೂರ್ತೇಃ ಶಿಶೋಃ ॥೧೫॥**

ಯಾರು ಶ್ರೀವಿಟ್ಠಲನನ್ನು ಸೇವಿಸುವ ಸಾತ್ವಿಕಬುದ್ಧಿಯವರೋ ಅವರಿಗೆ ಅವನು ದೊರಕುವನು ಎಂದು ತಿಳಿಸಿಕೊಡಲೆಂಬಂತೆ ಆ ತೊಟ್ಟಿಲು ಒಮ್ಮೆ ಅದರಲ್ಲಿನ ಮುರಾರಿಯಾದ ಬಾಲಕೃಷ್ಣನನ್ನು ಸನಿಹಕ್ಕೆ ತಂದುಕೊಡುವುದು; ಹಾಗಲ್ಲದವರಿಗೆ ಅವನು ದೂರಾಗುವನು ಎಂದು ತಿಳಿಸಲು ಮತ್ತೊಮ್ಮೆ ಅವನನ್ನು ದೂರಕ್ಕೆ ಒಯ್ಯುವುದು;

೧. ಸ್ತ್ರೀಣಾಂ ವಿಭೂಷಣವಿಲಾಸಾ ಏವ ಪುರುಷವಶೀಕರಣಾಯಾಲಮಿತಿ ಭಾವಃ। –ವ್ಯಾ.

ಮಣಿಗಳಿಂದ ಅಲಂಕೃತವಾದ ಆನಂದಸ್ವರೂಪನಾದ ಆ ಶಿಶುವಾದ ಶ್ರೀಕೃಷ್ಣನ ಇಂತಹ ಆ ತೊಟ್ಟಿಲು ಸರ್ವೋತ್ಕೃಷ್ಟವಾದುದು.

ವಿ. : ೧. ತೂಗುವ ತೊಟ್ಟಿಲು ಒಮ್ಮೆ ಸನಿಹಕ್ಕೂ ಒಮ್ಮೆ ದೂರಕ್ಕೂ ತೆರಳುವುದು ಸಹಜ. ಪ್ರಸ್ತುತ ಶ್ರೀಕೃಷ್ಣನಿರುವ ತೊಟ್ಟಿಲು ಸಹ ಹಾಗೆಯೇ ಮಾಡುತ್ತಿತ್ತು; ಅದರ [೧]ಅಂತರಾರ್ಥವನ್ನು ಇಲ್ಲಿ ವಿವರಿಸಿರುವರು.

೨. ತೊಟ್ಟಿಲು ಹತ್ತಿರಬರುವುದು ಶ್ರೀಹರಿ ಹತ್ತಿರನಾಗುವುದಕ್ಕೆ ಸಂಕೇತ. ಅದು ದೂರ ತೆರಳುವುದು ಅವನು ದೂರವಾಗುವುದರ ಸಂಕೇತ. ತೊಟ್ಟಿಲ ಹತ್ತಿರ ಬರುವ ಮೂಲಕ ತಾನು ಭಕ್ತರಿಗೆ ಒಲಿಯುವವನು ಎಂಬುದಾಗಿಯೂ ದೂರ ತೆರಳುವ ಮೂಲಕ ತಾನು ಅಭಕ್ತರಿಗೆ ಎಂದೂ ನಿಲುಕದವನು ಎಂಬುದಾಗಿಯೂ [೨]ಶ್ರೀಕೃಷ್ಣನು ಸೂಚಿಸುತ್ತಿರುವನು ಎಂಬ ಪ್ರಮೇಯ ಇಲ್ಲಿದೆ.

೩. ದೋಲೆಯು ದೂರಕ್ಕೆ ತೆರಳುವುದು ಶ್ರೀಕೃಷ್ಣನಿಗೆ ಇತರವಸ್ತುಗಳ ಅಗತ್ಯವಿಲ್ಲವೆಂಬುದಕ್ಕೂ, ಮರಳಿ ಹತ್ತಿರ ಬರುವುದು ತನ್ನ ಸೇವೆಗೆ ಫಲ ನೀಡಲೆಂದು ಅವನು ಭಕ್ತಜನರೆಡೆಗೆ ಧಾವಿಸುವುದಕ್ಕೂ ಸೂಚಕ ಎಂಬ ಭಾವವೂ ವ್ಯಾಖ್ಯಾನದಲ್ಲಿದೆ[೩].

೪. ಇದು ಒಂದು ರೀತಿಯಲ್ಲಿ 'ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್ । ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ಎಂಬ ದ್ವಾದಶಸ್ತೋತ್ರದ (೧೧/೭) ವಿವರಣೆಯಂತಿದೆ.

**ಯಶೋದೆಗೆ ಶ್ರೀಕೃಷ್ಣ ತೋರಿದ ವಿಶ್ವರೂಪ**

**ಸ್ತನೋತ್ಥದುಗ್ಧೇನ ಸುತೃಪ್ತಮೇನಂ**
**ನಿರೂಪಯಂತ್ಯಾಃ ಸ ಹರಿರ್ಜಗಂತಿ ।**
**ಪ್ರದರ್ಶಯಾಮಾಸ ನ ತೃಪ್ತಿರಸ್ಮಾ-**
**ದುದಾರದೇಹಸ್ಯ ಮಮೇತಿ ಶಿಕ್ಷನ್ ॥ ೧೬ ॥**

ತನ್ನ ಸ್ತನ್ಯಕ್ಷೀರದಿಂದ ಶ್ರೀಕೃಷ್ಣ ತೃಪ್ತನಾದನೆಂದು ಯಶೋದೆಯು ಭಾವಿಸಿದಾಗ, ವ್ಯಾಪ್ತದೇಹದ ತನಗೆ ಅದು ಸಾಲದು ಎಂದು ತಿಳಿಸಿಕೊಡಲೆಂಬಂತೆ ಎಂಬಂತೆ ಶ್ರೀಕೃಷ್ಣ ಲೋಕಗಳನ್ನು ಪ್ರದರ್ಶಿಸಿದ.

---

೧. ಲಾತಿ ಸ್ವೀಕರೋತಿ ತಸ್ಯ ಸೇವಕಾಃ ಪೂಜಕಾಸ್ತೇಷಾಮ್ । –ವ್ಯಾ.

೨. ವಿದಾ ಜ್ಞಾನೇನ ತಾನ್ ಶೂನ್ಯಾನ್ ಲಾತಿ ಗೃಹ್ಣಾತಿ ಯಃ ಸ್ವಯಮ್ ।
ಅಜ್ಞಾನುಗ್ರಹಕೃದ್ದೇವೋ ವಿಠ್ಠಲೋ ಕಥ್ಯತೇ ಬುಧೈಃ ।
–ಪ್ರಕ್ರಿಯಾಕೌಮುದೀ ವ್ಯಾಖ್ಯಾನದಲ್ಲಿ (ಪ್ರಕಾಶ) ಉದ್ಧೃತಪ್ರಮಾಣವಚನ (ಪತ್ರ ೪)

೩. ಅತ್ರ ದೋಲಾಯಾಸ್ತತೋ ದೂರದೇಶಪ್ರಾಪ್ತ್ಯಾ ಕೃಷ್ಣಸ್ಯಾತ್ಮರತತ್ವೇನಾನ್ಯನಿರಪೇಕ್ಷತ್ವಂ ಪುನರಾಗಮನೇನ ಸ್ವಸೇವಾಫಲದಾನಾಯ ಭಕ್ತಜನಾಭಿಮುಖ್ಯಂ ಸೇವಾತ್ಯಾಗಲಕ್ಷಣಾಪರಾಧಸಹಿಷ್ಣುತ್ವಂ ಚ ದ್ಯೋತ್ಯತೇ । –ವ್ಯಾ.

ವಿ. : ೧. ಶ್ರೀಕೃಷ್ಣ ಒಮ್ಮೆ ತನಗೆ ಸ್ತನ್ಯಪಾನ ಮಾಡಿಸುತ್ತಿದ್ದ ಯಶೋದೆಗೆ ಆಕಳಿಸುವ ನೆಪದಲ್ಲಿ ವಿಶ್ವರೂಪ ತೋರಿದ ವಿವರ [೧] ಶ್ರೀಮದ್ಭಾಗವತ ಹಾಗೂ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ; ಅದಕ್ಕೆ ಕಾರಣವನ್ನು ಇಲ್ಲಿ ಉತ್ಪ್ರೇಕ್ಷಿಸಿರುವರು.

೨. ತನ್ನದು ಸರ್ವತ್ರ ವ್ಯಾಪ್ತವಾದ ದೊಡ್ಡ ಆಕೃತಿ; ಅಂತಹ ಆಕೃತಿಗೆ ಅವಳು ನೀಡುವ ಕ್ಷೀರವು ಎಷ್ಟೂ ಸಾಲದು ಎಂಬುದು ಇಲ್ಲಿಯ ಉತ್ಪ್ರೇಕ್ಷೆಯ ಭಾವ.

### ವಿಶ್ವರೂಪದರ್ಶನದ ಫಲಶ್ರುತಿ

**ಮುಖೇ ಸ ಲೋಕಾನ್ ಖಲು ಲೋಕಯಿತ್ವಾ**
**ತದಂತರೇऽಂಬಾಂ ಸಗೃಹಾಂ ಸನಾಥಾಮ್ ।**
**ಅಖಂಡಯತ್ ಪುತ್ರಮತಿಂ ಜನನ್ಯಾ-**
**ಮಯೋಜಯದ್ವಿಶ್ವಪಿತೃತ್ವಬುದ್ಧಿಮ್ ॥ ೧೭ ॥**

ಆ ಶ್ರೀಕೃಷ್ಣನು ತನ್ನ ಮುಖದಲ್ಲಿ ಲೋಕಗಳನ್ನು, ಅದರೊಳಗೆ ತನ್ನ ಪತಿಯ ಸಮೇತಳಾದ ಅವಳನ್ನೂ, ಅವಳ ಮನೆಯನ್ನೂ ತೋರಿಸುವ ಮೂಲಕ ಯಶೋದೆಯಲ್ಲಿದ್ದ ತನ್ನ ಬಗೆಗಿನ ಪುತ್ರ ಎಂಬ ಭಾವವನ್ನು ತೊಡೆದು ಹಾಕಿ, ತಾನು ಜಗತ್ತಿನ ತಂದೆ ಎಂಬ ಭಾವವನ್ನು ಮೂಡಿಸಿದ.

ವಿ. : ೧. ಶ್ರೀಕೃಷ್ಣನು ವಿಶ್ವರೂಪವನ್ನು ತೋರಿಸಿದ ಮುಖ್ಯ ಉದ್ದೇಶವನ್ನು ಇಲ್ಲಿ ತಿಳಿಸಿರುವರು.

೨. [೨] ಯಶೋದೆಗೆ ಕೃಷ್ಣನ ಬಗ್ಗೆ ಅಪಾರಭಕ್ತಿ ಇದ್ದರೂ ಅವನನ್ನು ತನ್ನ ಮಗ ಎಂದು ತಪ್ಪಾಗಿ ತಿಳಿಯುವ ದೋಷವೂ ಇದ್ದಿತು. ಹೀಗೆ ತನ್ನ ವಿಶ್ವರೂಪವನ್ನು ತೋರಿಸುವ ಮೂಲಕ ಅವಳಿಗೆ

---

೧. ಖಂ ರೋದಸೀ ಜ್ಯೋತಿರನೀಕಮಾಶಾಃ ಸೂರ್ಯೇಂದುವಹ್ನಿಶ್ವಸನಾಂಬುಧೀಂಶ್ಚ ।
ದ್ವೀಪಾನ್ ನಗಾಂಸ್ತದ್ದುಹಿತೄರ್ವನಾನಿ ಭೂತಾನಿ ಯಾನಿ ಸ್ಥಿರಜಂಗಮಾನಿ ॥ -ಭಾಗ.(೧೦/೮/೩೮)

ಸ ಪ್ರಾಕೃತಂ ಶಿಶುಮಾತ್ಮಾನಮುಚ್ಚೈರ್ವಿಜಾನಂತ್ಯಾ ಮಾತುರಾದರ್ಶನಾಯ ।
ವಿಜೃಂಭಮಾಣೋऽಖಿಲಮಾತ್ಮಸಂಸ್ಥಂ ಪ್ರದರ್ಶಯಾಮಾಸ ಕದಾಚಿದೀಶಃ ॥
ಸಾಂಡಂ ಮಹಾಭೂತಮನೋಭಿಮಾನಮಹತ್ಪ್ರಕೃತ್ಯಾ ವೃತಮಬ್ಜಜಾದಿಭಿಃ ।
ಸುರೈಃ ಶಿವೇತ್ರೈರ್ನರದೈತ್ಯಸಂಘೈರ್ಯುತಂ ದದರ್ಶಾಸ್ಯ ತನೌ ಯಶೋದಾ ॥
ನ್ಯಮೀಲಯಚ್ಚಾಕ್ಷಿಣೀ ಭೀತಭೀತಾ ಜುಗೂಹ ಚಾತ್ಮಾನಮಥೋ ರಮೇಶಃ ।
ವಪುಃ ಸ್ವಕೀಯಂ ಸುಖಚಿತ್ಸ್ವರೂಪಂ ಪೂರ್ಣಂ ಸತ್ತು ಜ್ಞಾಪಯಂಸ್ತದ್ವ್ಯದರ್ಶಯತ್ ॥
-ಮ.ಭಾ.ತಾ.ನಿ.(೧೨/೧[illegible])

೨. ಮಾತುಃ ಸ್ವೋದರೇ ನಂದಾದಿಸಕಲಪ್ರಪಂಚಪ್ರದರ್ಶನೇನ ನಾಯಂ ಮಮ ಪುತ್ರೋऽಯಮೇವ ಜಗಜ್ಜನಕ ಇತಿ ಬುದ್ಧ್ಯಾ ತಾಂ ಯೋಜಯಾಮಾಸೇತ್ಯರ್ಥಃ । -ವ್ಯಾ.

ತಾನು ಸರ್ವಥಾ ಆವಳಿಗೆ ಪುತ್ರನಲ್ಲ; ಇಡೀ ಲೋಕವೇ ಅವನ ಸೃಷ್ಟಿ ಎಂಬ ತತ್ತ್ವವನ್ನು ತಿಳಿಸಿಕೊಟ್ಟ ಆ ಮೂಲಕ ಅವಳಲ್ಲಿ ನಿರ್ಮಲವಾದ ಭಕ್ತಿ ಉದಿಸಲು ಕಾರಣನಾದ ಎಂದರ್ಥ.

೩. ಭಕ್ತಿಗೆ ಯಾವ ಬಗೆಯ ದೋಷವು ಸೇರಿದರೂ ಸಹ ಅದು ಪೂರ್ಣವೆನ್ನಿಸಲಾರದು. ಭಕ್ತಿಯ ಪೂರ್ಣತೆಯ ಹೊರತು ಮುಕ್ತಿ ಲಭಿಸದು. ಆದ್ದರಿಂದ ಭಕ್ತಿಗೆ ಯಾವುದೇ ರೀತಿಯ ಲೋಪವೂ ಬಾರದಂತೆ ನೋಡಿಕೊಳ್ಳುವ ಎಚ್ಚರವನ್ನು ಸಾಧಕರು ಸರ್ವಥಾ ಹೊಂದಿರಬೇಕು ಎಂಬ ಸಂದೇಶವೂ ಇದರಲ್ಲಿ ಅಡಗಿದೆ: ಐಶ್ವರ್ಯವಿಹೀನಾ ಯಾ ಭಕ್ತಿಃ ಸಾ ಭಕ್ತಿರಿತಿ ನಿಶ್ಚಿತಾ । - ಮ.ಭಾ.ತಾ.ನಿ.(೧/೧೧೨); ಅಮಲಾ ಭಕ್ತಿಶ್ಚ ತತ್ಸಾಧನಮ್ । - (ಶ್ರೀವ್ಯಾಸರಾಜರ ಪ್ರಮೇಯನವರತ್ನಮಾಲಿಕಾ).

**ಅನಂತನಾಮನ ಸ್ವಯಂನಾಮಕರಣ**

**ನ ನಾಮ ಕುರ್ವಂತಿ ಮಮೇತಿ ನೂನಂ**
**ಸ ಪೂತನಾದೀನ್ ವಿನಿಹತ್ಯ ಮಾತುಃ ।**
**ಪ್ರದರ್ಶ್ಯ ವಿಶ್ವಂ ಜಠರೇ ಸ್ವಶಕ್ತ್ಯಾ**
**ಬಹೂನಿ ನಾಮಾನಿ ಬಭಾರ ಬಾಲಃ ॥ ೧೮ ॥**

ತನಗಿನ್ನೂ ನಾಮಕರಣ ಮಾಡಿಲ್ಲ ಎಂಬುದನ್ನು ತಿಳಿಸಲೆಂಬಂತೆ ಆ ಬಾಲಕೃಷ್ಣನು ಪೂತನಿ ಮೊದಲಾದವರನ್ನು ಸಂಹರಿಸಿ, ತನ್ನ ಉದರದಲ್ಲಿ ವಿಶ್ವವನ್ನೂ ತೋರಿಸಿ, ತನ್ನ ಸಾಮರ್ಥ್ಯದಿಂದಲೇ ಅನೇಕ ಹೆಸರುಗಳನ್ನು ಹೊಂದಿಬಿಟ್ಟನು.

ವಿ. : ೧. ಈ ಪ್ರಸಂಗಗಳು ನಡೆದಾಗ ಶ್ರೀಕೃಷ್ಣನಿಗೆ ಇನ್ನು ನಾಮಕರಣಸಂಸ್ಕಾರವು ಸಹ ಪೂರೈಸಿರಲಿಲ್ಲ ಎಂಬುದು ಇಲ್ಲಿಯ ಮುಖ್ಯಭಾವ.

೨. ಪೂತನಿಯ ಸಂಹಾರದಿಂದ **'ಪೂತನಾಜೀವಿತಹರಃ'** ಎಂಬ ಹೆಸರೂ, ಶಕಟನ ಸಂಹಾರದಿಂದ **'ಶಕಟಾಸುರಭಂಜನಃ'**, [೧]ತೃಣಾವರ್ತನ ಸಂಹಾರದಿಂದ **'ತೃಣಾವರ್ತ-ತೃಣೀಕರ್ತಾ'** ಎಂಬ ಹೆಸರೂ ಜಠರದಲ್ಲಿ ವಿಶ್ವವನ್ನು ತೋರುವ ಮೂಲಕ ವಿಶ್ವಂಭರ ಎಂಬ ಹೆಸರುಗಳು ಶ್ರೀಕೃಷ್ಣನಿಗೆ ಉಂಟಾದವು ಎಂದರ್ಥ.

೩. ಹೀಗೆ ತನಗೆ ತಾನೇ ನಾಮಕರಣ ಮಾಡಿಕೊಳ್ಳುವ ಮೂಲಕ ಶ್ರೀಕೃಷ್ಣನು ತನ್ನ ನಾಮಗಳೆಲ್ಲಾ ತನ್ನ ಗುಣಗಳನ್ನು ಬಣ್ಣಿಸುವ ನಿತ್ಯನಾಮಗಳು ಎಂಬ ಹಿರಿಮೆಯನ್ನು ಜಗತ್ತಿಗೆ ಸಾರಿದ ಎಂದು ತಿಳಿಯಬೇಕು.

---

೧. ಪೂತನಾಹನನಾತ್ ಪೂತನಾಘಾತಕಃ ಶಕಟವಧಾಚ್ಛಕಟಾಸುರಭಂಜಕಃ ತೃಣಾವರ್ತಹತ್ಯಯಾ ತೃಣಾವರ್ತ-ನಿಷೂದನಃ ಜಠರೇ ವಿಶ್ವಪ್ರದರ್ಶನಾತ್ ವಿಶ್ವಂಭರ ಇತ್ಯಾದ್ಯನೇಕಾನಿ ನಾಮಾನಿ। -ವ್ಯಾ.
**ಪೂತನಾಜೀವಿತಹರಃ ಶಕಟಾಸುರಭಂಜನಃ।...**
ತೃಣೀಕೃತತೃಣಾವರ್ತೋ ಯಮಲಾರ್ಜುನಭಂಜನಃ॥ - ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರ(೪-೭)

## ಗರ್ಗಾಚಾರ್ಯರ ನಾಮಕರಣದ ಅಂತರಾರ್ಥ

[೧]ಅಭ್ಯೇತ್ಯ ಗರ್ಗಃ ಕಿಲ ರಾಮಕೃಷ್ಣೌ
ಚಕಾರ ನಾಮ್ನಾ ವಿನತೌ ಸುತೌ ತೌ ।
ಅಹಂ ತು ಮನ್ಯೇ ಚಕಿತಸ್ತದೀಯ-
ಗುರುತ್ವಕೀರ್ತ್ಯಾ ಜಗೃಹೇ ತದಾಖ್ಯಾಮ್ [೨]॥ ೧೯ ॥

ಆ ಬಳಿಕ ಗರ್ಗಾಚಾರ್ಯರು ಅಲ್ಲಿಗೆ ಆಗಮಿಸಿ, ವಿನೀತರಾದ ಅವರಿಬ್ಬರಿಗೂ ರಾಮ, ಕೃಷ್ಣ ಎಂಬ ಹೆಸರುಗಳನ್ನು ಇರಿಸಿದರು; ಅವರಿಬ್ಬರಿಗೆ ಗುರು ಎಂಬ ಪ್ರಸಿದ್ಧಿಗೆ ಅಂಜಿ, ಅವರು ಹಾಗೆ ಆ ಎರಡು ಹೆಸರುಗಳನ್ನು ಉಚ್ಚರಿಸಿದರು ಎಂದು ನಾನು ಭಾವಿಸುವೆ.

ವಿ. : ೧. ಗರ್ಗಾಚಾರ್ಯರು ರಾಮ ಹಾಗೂ ಕೃಷ್ಣ ಎಂಬ ಹೆಸರುಗಳನ್ನು ಅವರಿಬ್ಬರಿಗೂ ಇರಿಸಿ, ನಾಮಕರಣ ಸಂಸ್ಕಾರವನ್ನು ನೆರವೇರಿಸಿಕೊಟ್ಟರು ಎಂಬುದು ಇಲ್ಲಿಯ ಮುಖ್ಯಭಾವ.

೨. ನಾಮಕರಣಸಂಸ್ಕಾರದ ಮೂಲಕ ಗರ್ಗಾಚಾರ್ಯರಿಗೆ ಒಂದು ರೀತಿಯಲ್ಲಿ ಗುರು ಎಂಬ ಪ್ರಸಿದ್ಧಿ ಲಭಿಸಿತು. ಆದರೆ ಲೋಕಗುರುವಾದ ಶ್ರೀಕೃಷ್ಣನಿಗೆ ಹಾಗೂ ಅವನ ಶುಕ್ಲಕೇಶರೂಪದ ಆವೇಶ ಹೊಂದಿದ್ದ ಬಲರಾಮನಿಗೆ ಗುರುವಾಗುವ ಯೋಗ್ಯತೆ ಸರ್ವಥಾ ಯಾರದೂ ಅಲ್ಲ; ಎಂದ ಮೇಲೆ ತಮಗೆ ಅಂತಹ ಪ್ರಸಿದ್ಧಿ ಬರುವುದು ಒಳಿತಿಗೆ ಕಾರಣವಾಗುವುದಲ್ಲ ಎಂದು ಭಾವಿಸಿ, ಅವರು ಅದರ ಪರಿಹಾರಕ್ಕೆಂದು ರಾಮ, ಕೃಷ್ಣ ಎಂಬ ಹೆಸರುಗಳನ್ನು ಉಚ್ಚರಿಸಿದರೇ ಹೊರತು, ನಿತ್ಯನಾಮನಾದ ಶ್ರೀಹರಿಗೆ ಹೊಸತಾಗಿ ಯಾವ ನಾಮಕರಣವನ್ನು ಅವರು ಮಾಡಲೇ ಇಲ್ಲ ಎಂದರ್ಥ. ಶ್ರೀಹರಿಯ ಇತರ ನಾಮಗಳಂತೆ ಶ್ರೀಕೃಷ್ಣ ಎಂಬುದು ಸಹ ನಿತ್ಯನಾಮ ಎಂದು ತಾತ್ಪರ್ಯ.

೩. ಇದರಿಂದ ಶ್ರೀಕೃಷ್ಣನ ಸಕಲನಾಮಗಳು ಸಹ ಅನಾದಿನಿತ್ಯಗಳಾದ ನಾಮಗಳೇ ಹೊರತು ಇತರರಿಂದ ಲಭಿಸಿದ ನಾಮಗಳಲ್ಲ ಎಂಬ ವಿಶೇಷಪ್ರಮೇಯ ನಿರೂಪಿತವಾಗಿದೆ ಎಂದು ತಿಳಿಯಬೇಕು.

೪. ಮುಂದೆ (ರು.ವಿ. - ೬/೨೧) ಗೋವರ್ಧನೋದ್ಧರಣಪ್ರಸಂಗದಲ್ಲಿ ಇಂದ್ರನು ಶ್ರೀಕೃಷ್ಣನ ಗೋವಿಂದನಾಮವನ್ನು ಉಚ್ಚರಿಸುವುದು ಸಹ ಇದೇ ತೆರನಾಗಿದೆ ಎಂಬುದು ಗಮನಾರ್ಹ.

---

೧. ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ ।
ವಾಸುದೇವ ಇತಿ ಶ್ರೀಮಾನಭಿಜ್ಞಾಃ ಸಂಪ್ರಚಕ್ಷತೇ ॥
ನಾರಯೋಽಭಿಭವಂತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ ॥
ತಸ್ಮಾನ್ನಂದ ಕುಮಾರೋಽಯಂ ನಾರಾಯಣಸಮೋ ಗುಣೈಃ ।
ಶ್ರಿಯಾ ಕೀರ್ತ್ಯಾಽನುಭಾವೇನ ತತ್ಕರ್ಮಸು ನ ವಿಸ್ಮಯಃ ॥ -ಭಾಗ.(೧೦/೨೪/೧೭,೨೧-೨೨)
ಗರ್ಗಃ ಶೂರಸುತೋಕ್ತ್ಯಾ ವ್ರಜಮಾಯಾತ್ ಸಾತ್ವತಾಂ ಪುರೋಧಾಃ ಸಃ ।
ಚಕ್ರೇ ಕ್ಷತ್ರಿಯಯೋಗ್ಯಾನ್ ಸಂಸ್ಕಾರಾನ್ ಕೃಷ್ಣರೋಹಿಣೀಸೂನ್ವೋಃ ॥ - ಮ.ಭಾ.ತಾ.ನಿ (೧೩/೧)
೨. ಉತ್ಪ್ರೇಕ್ಷಾಲಂಕಾರಃ । -ವ್ಯಾ.

### ಕೃಷ್ಣನಾಮಕ್ಕೆ ಕಾರಣ

ಅನಂತನಾಮಾऽಪಿ ಸ ಕೃಷ್ಣಸಂಜ್ಞಾ-
ಮವಾಪ್ಯ ತುಷ್ಟಃ ಕಿಲ ಗರ್ಗದತ್ತಾಮ್ ।
ತಥಾ ಹಿ ಶಬ್ದೇಷು ಬಹೂದಿತೇಷು
ಪ್ರಿಯೇರಿತಃ ಪ್ರೀತಿಕರೋ ಹಿ ಲೋಕೇ ॥ ೨೦ ॥

ಶ್ರೀಕೃಷ್ಣನು ಅನಂತನಾಮಗಳನ್ನು ಹೊಂದಿದವನಾದರೂ ಗರ್ಗಾಚಾರ್ಯರು ನುಡಿದ 'ಕೃಷ್ಣ' ಎಂಬ ಹೆಸರನ್ನು ಹೊಂದಿ ತೃಪ್ತನಾದ; ಅನೇಕರು ಹೇಳುವ ಹೆಸರುಗಳು ಇದ್ದರೂ ಪ್ರಿಯರಾದವರು ಹೇಳಿದ ಹೆಸರುಗಳೇ ಪ್ರೀತಿಗೆ ಕಾರಣವಾಗುವವು ಎಂಬುದು ಲೋಕದಲ್ಲಿ ಪ್ರಸಿದ್ಧ; ಅಲ್ಲವೇ !

ವಿ. : ೧. ಶ್ರೀಕೃಷ್ಣನು ಅನಂತನಾಮನಾದರೆ, ಕೃಷ್ಣ ಎಂಬ ಹೆಸರನ್ನೇ ಏತಕ್ಕೆ ಧರಿಸಿದ ಎಂಬುದಕ್ಕೆ ಇಲ್ಲಿ ಉತ್ತರವಿದೆ. ಅನೇಕರು ಅನೇಕ ಹೆಸರುಗಳಿಂದ ಕರೆದರೂ ತುಂಬಾ [1]ಪ್ರಿಯರಾದವರು ಕರೆಯುವ ಹೆಸರುಗಳ ಮೇಲೆ ಹೆಚ್ಚು ಒಲವು ಎಂಬುದು ಲೋಕಪ್ರಸಿದ್ಧ. ಪ್ರಸ್ತುತ ಗರ್ಗಾಚಾರ್ಯರು ಶ್ರೀಕೃಷ್ಣನ ವಿಶೇಷಭಕ್ತರಲ್ಲಿ ಒಬ್ಬರಾದ್ದರಿಂದ ಅವರು ನುಡಿದ ಕೃಷ್ಣ ಎಂಬ ಹೆಸರನ್ನೇ ಮೆಚ್ಚಿ ಅದರಿಂದಲೇ ಪ್ರಸಿದ್ಧನಾದ ಎಂದರ್ಥ.

೨. ಶ್ರೀಹರಿಗೆ ಅನಂತ ಹೆಸರುಗಳು ಇದ್ದರೂ ಭಕ್ತರು ಭಕ್ತಿಯಿಂದ ಕರೆಯುವ ಹೆಸರಿಗೆ ಅವನು ಒಲಿಯುವನು ಎಂದು ತಾತ್ಪರ್ಯ.

### ಕೃಷ್ಣನಾಮದ ಅರ್ಥ

ಸಪತ್ನಪತ್ನೀವದನೋಡುರಾಜಂ
ಕ್ರಮೇಣ ಯಃ ಕ್ಷೀಣಕಲಂ ಕರೋತಿ ।
ಸಿತೇತರಃ ಪಕ್ಷ ಇವರ್ಕ್ಷನಾಥಂ
ಗುಣೋಚಿತಾ ತಸ್ಯ ಹಿ ಕೃಷ್ಣಸಂಜ್ಞಾ ॥ ೨೧ ॥

ನಕ್ಷತ್ರರಾಜನಾದ ಚಂದ್ರನನ್ನು ಕ್ರಮವಾಗಿ ಕಳಾಹೀನನನ್ನಾಗಿ ಮಾಡುವ ಕೃಷ್ಣಪಕ್ಷದಂತೆ, ತನ್ನ ವೈರಿಗಳ ಪತ್ನಿಯರ ಮುಖಚಂದ್ರನನ್ನು ಕಾಂತಿಹೀನನನ್ನಾಗಿ ಮಾಡುವ ಶ್ರೀಕೃಷ್ಣನಿಗೆ ''ಶ್ರೀಕೃಷ್ಣ'' ಎಂಬ ಹೆಸರು ಅವನ ಗುಣಕ್ಕೆ ತಕ್ಕುದೇ ಆಯಿತು.

ವಿ. : ೧. ಶ್ರೀಕೃಷ್ಣನು ಶತ್ರುಗಳನ್ನು ಸಂಹರಿಸಿದಾಗ ಅವರ ಪತ್ನಿಯರು ವಿಧವೆಯರಾಗಿ, ಅವರು ಕಳಾಹೀನರಾಗುವರು; [2]ಕೃಷ್ಣಪಕ್ಷದಲ್ಲಿ ಚಂದ್ರನ ಕಾಂತಿಯೂ ಸಹ ಕುಂದುತ್ತಾ ಹೋಗುವುದು. ಇದರಿಂದಾಗಿ ಶ್ರೀಕೃಷ್ಣನಿಗೆ ಆ ಹೆಸರು ಉಚಿತ ಎಂದರ್ಥ.

---

೧. ಪರೋಕ್ತವಚನೇಭ್ಯಃ ಸುಹೃದುಕ್ತವಚನಮೇವ ಸುಖಕರಮಿತಿ ಭಾವಃ। -ವ್ಯಾ.
೨. ಕೃಷ್ಣಪಕ್ಷಸ್ಯಾಪಿ ಕೃಷ್ಣಶಬ್ದವಾಚ್ಯತ್ವಾದಿತಿ ಭಾವಃ। -ವ್ಯಾ.

೨. 'ಕೃಷ್ ಆಕರ್ಷಣೇ'- ಎಂಬ ಧಾತುವಿನಿಂದ ನಿಷ್ಪನ್ನವಾದ ಕೃಷ್ಣ ಎಂಬ ಪದಕ್ಕೆ ಇತರರ ಕಾಂತಿಯನ್ನು ಆಕರ್ಷಿಸಿ, ಕುಂದಿಸುವವನು ಎಂದು ಅರ್ಥವಾಗುವುದು; ಆ ಅರ್ಥದಲ್ಲಿ ಹೀಗೆ ಆ ಹೆಸರು ಸಾರ್ಥಕ ಎಂದು ತಿಳಿಯಬೇಕು ; ಸಪತ್ನೀ – ಸವತಿ ; ಸಿತೇತರ – ಕೃಷ್ಣ.

### ಕೃಷ್ಣನಾಮದ ಮತ್ತೊಂದು ಅರ್ಥ

ಯತಃ ಸ್ವಸಂದರ್ಶನತೋ ನರಾಣಾಂ
ವರಾಂಗನಾನಾಂ ಸುರಚಾರಣಾನಾಮ್ ।
ಮನಾಂಸಿ ಸರ್ವಾಣ್ಯಪಕರ್ಷತೀಶ-
ಸ್ತತೋಽಪಿ ಕೃಷ್ಣಂ ಪ್ರವದಂತಿ ಸಂತಃ ॥ ೨೨ ॥

ತನ್ನ ನೋಟದಿಂದ ನರರ, ನಾರಿಯರ, ದೇವತೆಗಳ, ಚಾರಣರ ಮನಸ್ಸುಗಳನ್ನೆಲ್ಲಾ ತನ್ನೆಡೆಗೆ ಸೆಳೆಯುವುದರಿಂದ ಸಹ ಸಜ್ಜನರು ಅವನನ್ನು ಕೃಷ್ಣ ಎಂದು ಕರೆಯುವರು.

ವಿ. : [೧]ಕೃಷ್ಣ ಎಂಬುದಕ್ಕೆ 'ಕೃಷ್ ಆಕರ್ಷಣೇ' ಎಂಬ ಧಾತುವಿನಿಂದ ಆಕರ್ಷಕ ಎಂದು ಅರ್ಥ- ವಾಗುವುದು. ಇದರಿಂದ ಸಕಲರ ಮನಸ್ಸನ್ನೂ ದರ್ಶನಮಾತ್ರದಿಂದ ತನ್ನೆಡೆಗೆ ಸೆಳೆಯುವವನು ಎಂಬ ಕಾರಣದಿಂದ ಅವನಿಗೆ ಶ್ರೀಕೃಷ್ಣ ಎಂಬ ಹೆಸರು ಅತ್ಯಂತ ಸಮುಚಿತವಾದುದು ಎಂಬ ಅರ್ಥ ಸೂಚಿತ :

ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್ ।
ಅತೋ ವದಂತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನಃ ॥
– ಮಹಾಕೌರ್ಮೇ, ಗೀತಾಭಾಷ್ಯ(೫/೧)

### ಕೃಷ್ಣನಾಮದ ಇನ್ನೊಂದು ಅರ್ಥ

ಯತಃ ಸ ಪೃಥ್ವೀತಲಸಂಸ್ಥಿತೋಽಪಿ
ಸುಖೀ ಧರಣ್ಯಾಃ ಸುಖದಾಯಕಶ್ಚ ।
ತತೋಽಪಿ ಕೃಷ್ಣಂ ಪ್ರವದಂತಿ ಕೃಷ್ಣಂ
ಸಮುಲ್ಲಸತ್ಕೇಶವಕೇಶರೂಪಮ್ ॥ ೨೩ ॥

ಅವನು ಭೂತಳದಲ್ಲಿ ನೆಲೆಸಿದ್ದರೂ ಸಹ ಆನಂದಪೂರ್ಣನಾಗಿರುವನು; ಹಾಗೂ ಭೂಮಿಗೂ ಸುಖದಾಯಕನಾಗಿರುವನು; ಅದರಿಂದ ಸಹ ಉಜ್ವಲವಾದ ಕೇಶವನಾದ ಶ್ರೀಹರಿಯ ಕೃಷ್ಣಕೇಶದ ಅವತಾರವಾದ ಕೃಷ್ಣನನ್ನು 'ಕೃಷ್ಣ' ಎಂದು ಕರೆಯುವರು.

---

೧. ಕೃಷ ಆಕರ್ಷಣ ಇತಿ ಧಾತೋರೌಣಾದಿಕೇ ಣಪ್ರತ್ಯಯೇ ರಷಾಭ್ಯಾಂ ನೋ ಣಃ ಸಮಾನಪದ (ಪಾ.ಸೂ. ೮/೪/೧)ಇತಿ ಣತ್ವೇ ಚ ಕೃಷ್ಣಶಬ್ದಸ್ಯ ನಿಷ್ಪನ್ನತ್ವಾದಿತಿ ಭಾವಃ। -ವ್ಯಾ.

ವಿ. : ೧. ಇದರಿಂದ [೧]ಶ್ರೀಕೃಷ್ಣನು ಕೃಷ್ಣಕೇಶಸ್ವರೂಪನು ಎಂಬ ಅರ್ಥದಲ್ಲೂ ಕೃಷ್ಣಶಬ್ದ-ವಾಚ್ಯನಾದವನು ಎಂಬ ಭಾವ ಸೂಚಿತ.

೨. [೨]ಕೃಷ್ ಎಂಬುದು ಭೂವಾಚಕವಾದ ಶಬ್ದ. ಣ ಎಂಬುದಕ್ಕೆ ಸುಖರೂಪ ಎಂದು ಅರ್ಥ. ಈಗ ಕೃಷ್ಣ ಎಂಬುದಕ್ಕೆ ಸುಖರೂಪನು ಹಾಗೂ ಭೂಮಿಗೆ ಸುಖ ನೀಡುವವನು ಎಂಬ ಅರ್ಥಗಳು ಸೂಕ್ತವೆನ್ನಿಸುವವು ಎಂದು ತಿಳಿಯಬೇಕು : ಕೃಷಿರ್ಭೂವಾಚಕಃ ಶಬ್ದೋ ಣಶ್ಚ ನಿರ್ವೃತಿವಾಚಕಃ। - ಗೀತಾಭಾಷ್ಯ(೫/೧)

೩. ಸಾಮಾನ್ಯವಾಗಿ ಇತರ ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ಅವರ ಮೂಲ-ರೂಪಗಳ ಶಕ್ತಿಸಾಮರ್ಥ್ಯಾದಿಗಳು ಕುಂದುವವು; ಸರ್ವೋತ್ತಮನಾದ ಶ್ರೀಕೃಷ್ಣನಿಗೆ (ಹಾಗೂ ಮಹಾಲಕ್ಷ್ಮಿಗೆ) ಮಾತ್ರ ಅಂತಹ ಶಕ್ತಿಹ್ರಾಸಾದಿಗಳು ಸರ್ವಥಾ ಇಲ್ಲ. ಅವನ ಸಕಲ ಅವತಾರಗಳು ಸಹ ಮೂಲರೂಪದಂತೆಯೇ ಪರಿಪೂರ್ಣ[೩] ಎಂಬ ವಿಶೇಷಾಂಶವನ್ನು ಪೃಥ್ವೀತಲಸಂಸ್ಥಿತೋಽಪಿ ಸುಖೀ ಎಂಬ ಮಾತಿನಿಂದ ತಿಳಿಸಿರುವರು (ಶ್ರೀವಾಯುದೇವರ ಅವತಾರರೂಪಗಳಲ್ಲಿ ಅವರ ಮೂಲರೂಪದ ಶಕ್ತಿಸಾಮರ್ಥ್ಯಗಳು ಅವರ ಇಚ್ಛೆಯಿಂದ ಪ್ರಕಟವಾಗುವವು ಎಂಬುದು ಮತ್ತೊಂದು ವಿಶೇಷಾಂಶ).

### ಕೃಷ್ಣನಾಮದ ಬೇರೊಂದು ಅರ್ಥ

**ಯತಶ್ಚ ದೈತೇಯಕದಂಬಕಕ್ಷ-**
**ಚಯಸ್ಯ ವಿಧ್ವಂಸವಿಧೌ ಮುರಾರಿಃ।**
**ವನಾಗ್ನಿಮನ್ವೇತಿ ಲಯಾಗ್ನಿಕಲ್ಪಂ**
**ತತೋಽಪಿ ಗಾಯಂತಿ ಹಿ [೪]ಕೃಷ್ಣಮೇನಮ್ ॥ ೨೪ ॥**

ದೈತ್ಯವೃಂದವೆಂಬ ಪೊದೆಗಳ ರಾಶಿಯನ್ನು ನಾಶಪಡಿಸುವ ಕಾರ್ಯದಲ್ಲಿ ಕಾಡ್ಗಿಚ್ಚಿನಂತಿರುವ ಕಾರಣದಿಂದಾಗಿ ಸಹ ಪ್ರಳಯಾಗ್ನಿ ಸದೃಶನಾದ ಈ ಮುರಾರಿಯನ್ನು 'ಕೃಷ್ಣ' ಎಂದು [೫]ಕೊಂಡಾಡುವರು.

---

೧. ಅನೇನ ಕೃಷ್ಣಶಬ್ದವಾಚ್ಯತ್ವೇ ಕೃಷ್ಣಕೇಶಾತ್ಮಕತ್ವಂ ಚ ಹೇತುರಿತ್ಯುಕ್ತಂ ಭವತಿ। -ವ್ಯಾ.

೨. ಕೃಷಿರ್ಭೂಮಿಃ ತಸ್ಯಾಮಪಿ ಣಃ ಸುಖರೂಪ ಕೃಷೇರ್ಭೂಮೇಃ ಣಃ ಸುಖಂ ಯಸ್ಮಾದಿತಿ ವಾ ಕೃಷ್ಣ ಇತಿ ವ್ಯುತ್ಪತ್ತೇಃ। ಕೃಷಿರ್ಭೂವಾಚಕಃ ಶಬ್ದೋ ಣಶ್ಚ ನಿರ್ವೃತ್ತಿವಾಚಕಃ। ತಯೋರೈಕ್ಯಂ ಪರಂಬ್ರಹ್ಮ ಕೃಷ್ಣ ಇತ್ಯಭಿಧೀಯತೇ ॥ ಇತಿ ಸ್ಮೃತಿಸಿದ್ಧತ್ವಾದಿತಿ ಭಾವಃ। -ವ್ಯಾ.

೩.. ಸರ್ವೇ ಗುಣಾ ಆವೃತಾ ಮಾನುಷತ್ವೇ ಯುಗಾನುಸಾರಾನ್ಮೂಲರೂಪಾನುಸಾರಾತ್।
ಕ್ರಮಾತ್ ಸುರಾಣಾಂ ಭಾಗತೋ ವ್ಯಕ್ತರೂಪಾ ಆದಾನತೋ ವ್ಯಕ್ತಿಮಾಯಾಂತ್ಯುರೂಣಾಮ್ ॥
ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ ಪ್ರಾದುರ್ಭಾವೇಷ್ವತಿಸುವ್ಯಕ್ತಶಕ್ತೇಃ।
ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ ತದನ್ಯೇಷಾಂ ವ್ಯಕ್ತತಾ ಕಾರಣೇನ ॥-ಮ.ಭಾ.ತಾ.ನಿ.(೨೨/೨೮೪, ೨೮೫)

೪. ನಿಯಮನಾದಿನಾ ಸಕಲಲೋಕಕರ್ಷಣಾತ್ ಕೃಷ್ಣಃ। -ಗೀತಾಭಾಷ್ಯ (೫/೧)
ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಸಾತ್ವತಃ ॥ - ಉದ್ಯೋಗಪರ್ವ(೭೦/೫)

೫. ಮೂಲ ಹಾಗೂ ಸರ್ವಮೂಲಗ್ರಂಥಗಳಲ್ಲಿ ಬಂದಿರುವಂತೆ ಕೃಷ್ಣ ಶಬ್ದಕ್ಕೆ ಇರುವ ಇನ್ನೂ ಕೆಲವು ಅರ್ಥಗಳು ಹೀಗಿವೆ :

ವಿ. : ಕೃಷ್ಣ ಎಂಬುದಕ್ಕೆ ಅನೇಕಾರ್ಥಗಳಿದ್ದು ಅದರಲ್ಲಿ ಅಗ್ನಿ ಎಂಬ ಅರ್ಥವು ಸೇರಿದೆ: ''ವ್ಯಾಸಾರ್ಜುನಾಗ್ನಿಹರಿಕೋಕಿಲಕಾಕಶೂದ್ರತಾಮಿಸ್ರಪಕ್ಷಕಲಿನೀಲಗುಣೇಷು ಕೃಷ್ಣಃ''[೧]. ಇದರಿಂದ ದೈತ್ಯವೃಂದಕ್ಕೆ ಅಗ್ನಿಪ್ರಾಯನಾದ ಕೃಷ್ಣ ಎಂಬ ಹೆಸರು ಯೋಗ್ಯವಾದುದು ಎಂಬ ಅರ್ಥ ನಿಷ್ಪನ್ನವಾಗುವುದು; ಕದಂಬ – ಗುಂಪು; ಕಕ್ಷ – ಪೊದೆ.

### ಶ್ರೀಕೃಷ್ಣನು ಅಂಬೆಗಾಲಿಡಲು ಕಾರಣ

**ವ್ರಜಾಂಗನಾನಾಂ ಸ್ಮರತಾಂ ಮುನೀನಾ-**
**ಮಭೇದ್ಯಹೃದ್ಯಪ್ರಣಯಾಖ್ಯದಾಮ್ನಾ।**
**ನಿಬದ್ಧಮೃದ್ವಂಘ್ರಿಸರೋಜಯುಗ್ಮ-**
**ಶ್ಚಚಾರ ದೋರ್ಭ್ಯಾಂ ಶುಭಜಾನುಯುಗ್ಮಾಮ್ ॥ ೨೫ ॥**

ತನ್ನನ್ನು ಸ್ಮರಿಸುವ ಗೋಪಿಕಾಸ್ತ್ರೀಯರು ಹಾಗೂ ಮುನಿಜನರು ತಮ್ಮ ಅಭೇದ್ಯವಾದ ಸೊಗಸಾದ ಪ್ರೇಮಪಾಶದಿಂದ ಕೋಮಲವಾದ ತನ್ನ ಕಮಲದಂತಹ ಎರಡು ಪಾದಗಳನ್ನು ಬಿಗಿದದ್ದರಿಂದ ಶ್ರೀಕೃಷ್ಣ ತನ್ನ ತೋಳುಗಳಿಂದ, ಮಂಗಳಕರವಾದ ಮೊಣಕಾಲುಗಳಿಂದ ನಡೆಯತೊಡಗಿದ.

ವಿ. : ೧. ಶ್ರೀಕೃಷ್ಣನು ಅಂಬೆಗಾಲಿಕ್ಕಿ ನಡೆಯತೊಡಗಿದ ಎಂದರ್ಥ; ಇದನ್ನು ಸುಂದರವಾದ ಉತ್ಪ್ರೇಕ್ಷೆಯಿಂದ ವರ್ಣಿಸಿರುವರು.

೨. ಒಬ್ಬನ ಕಾಲುಗಳನ್ನು ಬಿಗಿದು ಕಟ್ಟಿದಾಗ ಅವರು ಅನಿವಾರ್ಯವಾಗಿ ತೋಳುಗಳಿಂದ ಮೊಣಕಾಲುಗಳಿಂದ ಸಂಚರಿಸಬೇಕಾಗುವುದು. ಪ್ರಸ್ತುತ ಶ್ರೀಕೃಷ್ಣನ ಪಾದಕಮಲಗಳನ್ನು ಗೋಪಿಯರು, ಮುನಿಜನರು ಭಕ್ತಿಪಾಶದಿಂದ ಕಟ್ಟಿದ್ದರಿಂದ ಅವನು ಕಾಲುಗಳಿಂದ ನಡೆಯಲಾಗದೆ, ಹೀಗೆ ಅಂಬೆಗಾಲಿಟ್ಟು ನಡೆಯತೊಡಗಿದ.

೩. ಬಾಲ್ಯ ಮೊದಲಾದ ಅವಸ್ಥೆಗಳನ್ನಾಗಲೀ, ಅದಕ್ಕೆ ಮೂಲವಾದ ಪ್ರಾಕೃತದೇಹವನ್ನಾಗಲೀ ಸರ್ವಥಾ ಹೊಂದದ ಶ್ರೀಕೃಷ್ಣ ಸಾಮಾನ್ಯ ಶಿಶುವಿನಂತೆ ಅಂಬೆಗಾಲಿಡುವುದು ಸರ್ವಥಾ ಅಶಕ್ಯ; ಆದರೂ ಹಾಗೆ ಮಾಡಲು ಇಂತಹ ವಿಶೇಷ ಕಾರಣವುಂಟು ಎಂಬುದನ್ನು ಇಲ್ಲಿ ತಿಳಿಸಿರುವರು.

---

ಕೃಷಾಮಿ ಪೃಥಿವೀಂ ಪಾರ್ಥ ಭೂತ್ವಾ ಕಾರ್ಷ್ಣಾಯಸೋ ಹಲಃ।
ತಸ್ಮಾತ್ ಕೃಷ್ಣೋಽಹಮರ್ಜುನ.... ॥ – ಮಹಾಭಾರತ ಶಾಂತಿಪರ್ವ (೩.೪೨,೭೯)
ಕರೋತಿ ಇತಿ ಕೃ.... ಣಕಾರೋ ಬಲಂ, ಷಕಾರಃ ಪ್ರಾಣ ಆತ್ಮಾ। –ಐತರೇಯೋಪನಿಷದ್ಭಾಷ್ಯ
ಕೃಷಿರ್ಭೂವಾಚಕಃ ಶಬ್ದಃ ಣಶ್ಚ ನಿವೃತ್ತಿ ವಾಚಕಃ।
ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಶಾಶ್ವತಃ॥ –ಮಹಾಭಾರತ, ಉದ್ಯೋಗಪರ್ವ(೭೦/೫)
೧. ಇತಿ ಭಾಸ್ಕರೋಕ್ತೇರಗ್ನೇರಪಿ ಕೃಷ್ಣಶಬ್ದವಾಚ್ಯತ್ವಾದಿತಿ ಭಾವಃ। –ವ್ಯಾ.

೪. [1]ಕಾಲುಗಳನ್ನು ಕಟ್ಟಿಹಾಕಿದಾಗ ಸರ್ವಶಕ್ತನಾದ ಅವನು ಅವುಗಳನ್ನು ಬಿಡಿಸಿಕೊಳ್ಳ-ಬಹುದಿತ್ತಲ್ಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಅದು ಬೇರಾವುದೋ ಪಾಶವಾಗಿದ್ದಲ್ಲಿ ಹಾಗೆ ಮಾಡುತ್ತಿದ್ದ; ಆದರೆ ಅದು ಭಕ್ತಿಪಾಶವಾದ್ದರಿಂದ ಅದನ್ನು ಬಿಡಿಸಿಕೊಳ್ಳಲು ಬಯಸವೆ, ಕೃಷ್ಣ ಹಾಗೆ ಮಾಡಿದ ಎಂದರ್ಥ.

೫. ಸ್ತ್ರೀಯರು, ಪುರುಷರು ಮೊದಲಾಗಿ ಸಕಲ ಯೋಗ್ಯರೂ ಶ್ರೀಹರಿಭಕ್ತರಾಗಲು ಸಾಧ್ಯ ಎಂಬುದನ್ನು ಇಲ್ಲಿಯ 'ವ್ರಜಾಂಗನಾನಾಂ , ಮುನೀನಾಂ' ಎಂಬ ಪದಗಳಿಂದ ಸೂಚಿಸಿರುವರು ಎಂದು ತಿಳಿಯಬಹುದು; ಪ್ರಣಯ – ಪ್ರೇಮ.

### ಅಂಬೆಗಾಲಿಡಲು ಮತ್ತೊಂದು ಕಾರಣ

ಅನೇಕಲೋಕಾನುದರೇ ವಿಧಾಯ
ಯ ಏಷ ಶೇತೇ ಸ್ಮ ಲಯಾಂಬುಮಧ್ಯೇ ।
ಶಿಶುಃ ಸ ಸಂದರ್ಶಯಿತುಂ ಸಲಜ್ಜಃ
ಕೃಶೋದರಂ ಜಾನುಚರೋ ಬಭೂವ ॥ ೨೬ ॥

ಅನೇಕ ಲೋಕಗಳನ್ನು ಉದರದಲ್ಲಿರಿಸಿಕೊಂಡು ಪ್ರಳಯೋದಕದಲ್ಲಿ ಪವಡಿಸುವ ಆ ಶ್ರೀಕೃಷ್ಣನು ಶಿಶುರೂಪದವನಾಗಿ ತನ್ನ ತೆಳು ಉದರವನ್ನು ತೋರಿಸಲು ನಾಚಿದವನಂತೆ, ಹಾಗೆ ಅಂಬೆಗಾಲಿರಿಸಿದ.

ವಿ. : ೧. ಶ್ರೀಕೃಷ್ಣನು ಅಂಬೆಗಾಲಿಡಲು ಮತ್ತೊಂದು ಕಾರಣವನ್ನು ಇಲ್ಲಿ ತಿಳಿಸಿರುವರು.

೨. ಅಂಬೆಗಾಲಿಟ್ಟು ನಡೆದಾಗ ಕೆಳಭಾಗದ ಉದರವು ಕಾಣದಂತಾಗುವುದು; ಶ್ರೀಕೃಷ್ಣ ತನ್ನ ಉದರ ಕಾಣದಿರಲಿ ಎಂಬ ಕಾರಣದಿಂದಲೇ ಹಾಗೆ ಅಂಬೆಗಾಲಿರಿಸಿದ ಎಂದರ್ಥ.

೩. [2]ಮೊದಲು ಶ್ರೀಮಂತನಾದವನು ಮುಂದೆ ಕಾರಣಾಂತರದಿಂದ ಬಡತನ ಬಂದಾಗ ನಾಚಿಕೆಗೊಳಪಡುವಂತೆ ಕೃಷ್ಣನ ಪರಿಸ್ಥಿತಿ ಇದ್ದಿತು. ಹೇಗೆಂದರೆ ಪ್ರಳಯೋದಕದಲ್ಲಿ ಸಕಲ ಜಗತ್ತನ್ನು ತನ್ನ ಉದರಲ್ಲಿಟ್ಟು ಇರಿಸಿಕೊಳ್ಳುವ ಹಿರಿಮೆಯ ಅವನು ಈಗ ಆ ಜಗತ್ತನ್ನು ಹೊರಹಾಕಿರುವನು ಎಂದರೆ ಅವನ ಒಡಲು ಈಗ ಬರಿದಾಗಿರುವುದು ಎಂದರ್ಥ. ಅದನ್ನು ಕಂಡ ಜನ ಅದರ ಬಗ್ಗೆ ಆಡಿಕೊಳ್ಳದಿರಲಿ ಎಂಬ ಭಾವದಿಂದಲೋ ಎಂಬಂತೆ ಶ್ರೀಕೃಷ್ಣ ಹಾಗೆ ಅಂಬೆಗಾಲಿರಿಸಿದ.

---

೧. ಬದ್ಧಚರಣೋ ಹಿ ಜಾನುಭ್ಯಾಂ ಹಸ್ತಾಭ್ಯಾಂ ಚ ಗಚ್ಛತೀತಿ ಭಾವಃ। –ವ್ಯಾ.

೨. ಯಥಾ ಪ್ರಾಕ್ ಸಂಪನ್ನಃ ಪುನಃ ಸ್ವದಾರಿದ್ರ್ಯಂ ಲಜ್ಜಯಾ ನ ದರ್ಶಯತಿ ತಥಾ ಜಾನುಭ್ಯಾಂ ಸಂಚರಣೇ ಉದರ-ಸ್ಯಾಧೋಮುಖತ್ವೇನಾನ್ಯೈರದರ್ಶನಾದಿತಿ ಭಾವಃ। –ವ್ಯಾ.

೪. ಶ್ರೀಕೃಷ್ಣನು ವಾಸ್ತವವಾಗಿ, ಜನಿಸಿದವನೇ ಅಲ್ಲ ; ಆದರೂ ಪ್ರಳಯಕಾಲದಲ್ಲಿ ಇಡೀ ಜಗತ್ತನ್ನು ತನ್ನ ಜಠರದಲ್ಲಿರಿಸಿಕೊಳ್ಳುವ ಮಹಾಮಹಿಮ; ಅನಂತರ ನಡೆಯುವ ಸೃಷ್ಟಿಯೂ ಅವನ ಕಾರ್ಯವೇ ಎಂಬ ತತ್ತ್ವ ಇಲ್ಲಿ ಪ್ರತಿಪಾದಿತ.

**ಏನು ಸುಕೃತವ ಮಾಡಿದಳೋ ಯಶೋದೆ**

**ಕರ್ಷನ್ನಂಘ್ರಿಯುಗಂ ಮುನೀಂದ್ರಮನಸಾ ಸಾಕಂ ವ್ರಜಸ್ತ್ರೀದೃಶಾ**
**ಜಂಬಾಲೇನ ಚ ನೀಲನೀಲಸುತನುರ್ಲೋಲಾಲಕಶ್ರೀಮುಖಃ ।**
**ಅಂಬಾಂಬೇತಿ ಹಿ ಯ್ಯಾಮುದೀರ್ಯ ಪಿಬತಿ ಸ್ವಾಂಕಾಧಿರೂಢಃ ಸ್ತನಂ**
**ಕಿಂ ವಾಽತಪ್ಯತ ಸಾ ತಪೋಽಸ್ಯ [1]ಜನನೀ ಯಸ್ಯೇದಮೀದೃಕ್ಫಲಮ್ ॥ ೨೬ ॥**

ಮುನಿಶ್ರೇಷ್ಠರ ಮನಸ್ಸಿನಿಂದಲೂ, ಗೋಪಸ್ತ್ರೀಯರ ನೋಟದಿಂದಲೂ, ತನ್ನ ಎರಡೂ ಪಾದಗಳನ್ನು ಬಿಡಿಸಿಕೊಂಡು, ಕೆಸರಿನಿಂದ ಕಪ್ಪುಕಪ್ಪಾದ ಸುಂದರದೇಹದ ಶ್ರೀಕೃಷ್ಣನು ಹಾರುವ ಮುಂಗುರುಳುಗಳಿಂದ ಕೂಡಿದ ಕಾಂತಿಯುಕ್ತವಾದ ಮುಖದಿಂದ "ಅಮ್ಮ ! ಅಮ್ಮ !" ಎಂದು ಕರೆಯುತ್ತಾ ಯಾವ ತಾಯಿಯ ತೊಡೆಯನ್ನೇರಿ ಸ್ತನ್ಯವನ್ನು ಪಾನಮಾಡಿದನು, ಇಂತಹ ಫಲವನ್ನು ಪಡೆಯಲು, ಆ ತಾಯಿ ಯಶೋದೆಯು ಯಾವ ತಪಸ್ಸನ್ನು ಗೈದಿದ್ದಳೋ !

ವಿ. : ೧. ಶ್ರೀಕೃಷ್ಣನು ಯಶೋದೆಗೆ ನೀಡಿದ ಆನಂದ ಊಹಾತೀತವಾಗಿದ್ದಿತು; ಋಷಿಮುನಿಗಳಿಗೂ ಲಭಿಸದ ಅಪಾರಭಾಗ್ಯ ಅವಳದಾಗಿತ್ತು. ಅದನ್ನು ಪಡೆಯುವುದು ಸಾಮಾನ್ಯ ತಪಸ್ಸಿಗೆ ಅಸಾಧ್ಯ ಎಂದ ಮೇಲೆ ಯಶೋದೆಯು ಮಾಡಿದ ತಪಸ್ಸು ಅತ್ಯುನ್ನತ ಬಗೆಯದಾಗಿದ್ದಿತು ಎಂದು ಭಾವ.

೨. ಶ್ರೀಕೃಷ್ಣನನ್ನು ನೋಡುವುದು, ಮುಟ್ಟುವುದು, ಹಿಡಿಯುವುದು, ತೊಡೆಯಮೇಲೆ ಮಲಗಿಸಿಕೊಳ್ಳುವುದು ಒಂದೊಂದು ಸಹ ಅಪಾರ ಪುಣ್ಯದಿಂದ ಮಾತ್ರವೇ ಲಭಿಸಲು ಸಾಧ್ಯ. ಆದರೆ ಆ ಎಲ್ಲ [2]ಭಾಗ್ಯವನ್ನೂ ಪಡೆದ ಹಿರಿಮೆ ಯಶೋದೆಯದಾಗಿತ್ತು. ಎಂದರೆ ಅವಳ ತಪಸ್ಸು ಅಗಾಧವಾಗಿತ್ತು ಎಂದರ್ಥ; ಜಂಬಾಲ – ಕೆಸರು.

೩. ಶ್ರೀವಾದಿರಾಜರ ಏನು ಸುಕೃತವ ಮಾಡಿದಳು ಯಶೋದೆ ಎಂಬ ಕೀರ್ತನೆಯು ಅವರ ಈ ಶ್ಲೋಕದ ವಿವರಣೆಯಂತಿದೆ ; ಆ ಕೀರ್ತನೆಯಲ್ಲಿ ಈ ರುಗ್ಮಿಣೀಶವಿಜಯದಲ್ಲಿನ ಶ್ರೀಕೃಷ್ಣನ ಲೀಲೆಗಳ ಬಗೆಗೆ ಪೋಷಕವಾದ ಇನ್ನೂ ಅನೇಕ ಅಂಶಗಳು[3] ಬಂದಿವೆ.

---

೧. ನಂದಃ ಕಿಮಕರೋದ್ ಬ್ರಹ್ಮನ್ ಶ್ರೇಯ ಏವಂ ಮಹೋದಯಮ್ ।
ಯಶೋದಾ ಚ ಮಹಾಭಾಗಾ ಪಪೌ ಯಸ್ಯಾಃ ಸ್ತನಂ ಹರಿಃ ॥ –ಭಾ.(೧೦/೮/೪೬)

೨. ಸ್ತ್ರೀಣಾಮಪಾಂಗಸ್ಯಾಸಿತತ್ವಾದಿತಿ ಭಾವಃ । –ವ್ಯಾ.

೩.. ಏನು ಸುಕೃತವ ಮಾಡಿದಳು ತಾ ಯಶೋದೆ –ಗಾನಲೋಲನ ಮುಖವ ಮುದ್ದಿಸುವಳಂತೆ ಪ
ಗಂಗಾಜನಕಗೆ ಗಡಿಗೆ ನೀರೆರೆವಳಂತೆ –ಮಂಗಳಾಂಗಗೆ ಭಾಮೆ ಶೃಂಗರಿಪಳಂತೆ
ತುಂಗಭೂಧರನ್ನ ತೊಟ್ಟಿಲೊಳ್ ತೂಗುವಳಂತೆ–ಕಂಗಳಾಗೋಚರನ ಎತ್ತಿ ಮುದ್ದಿಪಳಂತೆ ೧

## ಶ್ರೀಕೃಷ್ಣನ ಬಗೆಬಗೆಯ ಕಾರ್ಯಗಳ ಅಂತರಾರ್ಥ

ವೈಗುಣ್ಯಂ ವಿವಿಧೋದಯೈರ್ವಿಮೃಶತಾಂ ವಿತ್ತೈರ್ಜಗದ್ಬಾಧ್ಯತಾಂ
ವೈರೂಪ್ಯಂ ನಿಜತೇಜಸಾ ನಿರುಪಮೈರಂಗೈರ್ನಿರಾಕಾರತಾಮ್ ।
ನೀಚೈಕ್ಯಂ ಚ ನಿರಸ್ಯ ನಿರ್ಮಲಧಿಯಾಂ ನಿತ್ಯಾರ್ಚಯಾ ವಿಟ್ಠಲೋ
ದಿಗ್ಭಿನ್ನಾಂಬರಧಿಕ್ಕ್ರಿಯಾರ್ಥಮಭವದ್ದಿಗ್ವಸ್ತ್ರತಾಂ ದೀಪಯನ್ ॥ ೨೮ ॥

ಶ್ರೀಕೃಷ್ಣನು ತನ್ನ ಬಗೆಬಗೆಯ ಗುಣಗಳ ಪ್ರಕಾಶನದ ಮೂಲಕ ತಾನು ನಿರ್ಗುಣ ಎಂಬುದನ್ನು ನಿರಾಕರಿಸಿದ; ತನ್ನನ್ನು ಚಿಂತಿಸುವವರಿಗೆ ಬಹುಬಗೆಯ ಐಶ್ವರ್ಯಗಳನ್ನು ನೀಡುವ ಮೂಲಕ ಜಗತ್ತು ಬಾಧ್ಯ ಎಂಬುದನ್ನು ನಿರಾಕರಿಸಿದ; ತನ್ನ ಸಹಜ ತೇಜಸ್ಸಿನಿಂದ (ನೀಲಾದಿ)ರೂಪರಹಿತ ಎಂಬುದನ್ನು ಅಲ್ಲಗಳೆದ. ಅನುಪಮವಾದ ಅಂಗಾಂಗಗಳಿಂದ ನಿರಾಕಾರ ಎಂಬುದನ್ನು ನಿರಾಕರಿಸಿದ. ನಿರ್ಮಲಮನಸ್ಕರಿಂದ ನಿತ್ಯಪೂಜೆಗೊಳ್ಳುವ ಮೂಲಕ ನೀಚರೊಂದಿಗೆ ಐಕ್ಯವನ್ನೂ ನಿರಾಸಮಾಡಿದ, ದಿಕ್ಕುಗಳಿಂದ ಬೇರೆಯಾದ ಗಗನವಿದೆ ಎಂಬುದನ್ನು ನಿರಾಕರಿಸಲೆಂದು ದಿಗಂಬರನಾಗಿ ಸಂಚರಿಸಿದ.

ವಿ. : ೧. ಶ್ರೀಕೃಷ್ಣನ ಬಾಲಲೀಲೆಗಳಿಂದ ತಿಳಿದುಬರುವ ಅನೇಕ ಪ್ರಮೇಯಗಳ ವಿಶ್ಲೇಷಣೆ ಇಲ್ಲಿದೆ.

೨. ಕೆಲವರು ಅವನನ್ನು ನಿರ್ಗುಣ ಎನ್ನುವರು; ಮತ್ತೆ ಕೆಲವರು ಈ ಜಗತ್ತನ್ನು ಬಾಧ್ಯ ಎನ್ನುವರು. ಕೆಲವರು ಅವನನ್ನು ನಿರಾಕಾರ ಎನ್ನುವರು; ಕೆಲವರು ನಿರವಯವ ಎನ್ನುವರು; ಮತ್ತೆ ಕೆಲವರು ನೀಚರಾದ ಜೀವರೊಂದಿಗೆ ಐಕ್ಯಹೊಂದಿದವನು ಎನ್ನುವರು; ಇಂತಹ ವಾದಗಳನ್ನು ಶ್ರೀಕೃಷ್ಣ ತನ್ನ ಬಾಲಲೀಲೆಗಳಿಂದ ನಿರಾಕರಿಸಿದ ಎಂದರ್ಥ.

೩. ಶ್ರೀಕೃಷ್ಣನ ಒಂದೊಂದು ಲೀಲೆಯೂ ಅವನ ವೀರ್ಯಸೌಂದರ್ಯಾದಿ ಗುಣಗಳನ್ನು ಪ್ರಕಟಿಸುವುದರಿಂದ ಅವನು ನಿರ್ಗುಣನಲ್ಲ; ಸಗುಣ[೧] ಎಂದಾಗುವುದು. ತನ್ನನ್ನು ಸ್ಮರಿಸುವ

---

ಚತುರಾಸ್ಯನ ಪಿತನ ಸುತನೆಂದೆನ್ನುವಳಂತೆ - ಶ್ರುತಿವಿನುತನಿಗೆ ಜೋಗುಳವ ಪಾಡುವಳಂತೆ
ಶತರವಿತೇಜಗಾರತಿಯನೆತ್ತುವಳಂತೆ- ಗತಭೀತನಿಗೆ ಭಾಮೆ ರಕ್ಷೆ ನೀಡುವಳಂತೆ ೨
ನಗವನೆತ್ತಿದವನ ಮಗುವೆಂದೆತ್ತುವಳಂತೆ - ನಿಗಮಗೋಚರನ ಈಕ್ಷಿಸುವಳಂತೆ
ಅಗಣಿತಸತ್ತ್ವನ್ನ ಹಗ್ಗದಿ ಕಟ್ಟುವಳಂತೆ - ಮಿಗೆ ನಿತ್ಯತೃಪ್ತನಿಗೆ ಪಾಲನುಣಿಸುವಳಂತೆ ೩
ಬಹುಮುಖನಿಗೆ ಭಾಮೆ ಮುದ್ದು ನೀಡುವಳಂತೆ- ಅಹಿತಲ್ಪನಿಗೆ ಹಾವು ಕಚ್ಚೀತು ಎಂಬುವಳಂತೆ
ಬಹುದೈತ್ಯಸಂಹರಗೆ ಭಯವ ತೋರುವಳಂತೆ- ಮಹಿಮ ನರಹರಿಗೆ ಗುಮ್ಮನ ತೋರ್ಪಳಂತೆ ೪
ಕಡಗೋಲನೇಣನಾ ಕೈಯೊಳಗೆ ಪಿಡಿದು ಪಾ- ಲ್ಗಡಲೊಡೆಯ ದ್ವಾರಕಾನಿಲಯ ಗುಣರನ್ನನಾ
ಬಿಡದೆ ಸಲಹುವ ಹಯವದನ ಮೋಹನ ಮುದ್ದು- ಉಡುಪಿ ಶ್ರೀಕೃಷ್ಣನ ಉಡಿಯಲೆತ್ತುವಳಂತೆ ೫

೧. ನ ಚ ಕೃಷ್ಣಸ್ಯ ಪರಬ್ರಹ್ಮತ್ವೇ ವಿವಾದಃ । ಅಸ್ಮಿನ್ನೇವ ಪದ್ಯೇ ನಿರ್ಮಲಧಿಯಾಂ ನಿತ್ಯಾರ್ಚಯಾ ನೀಚೈಕ್ಯಂ ಚ ನಿರಸ್ಯೇತ್ಯುಕ್ತ್ಯಾ ನಿರಸ್ತಾಜ್ಞಾನೈರಪರೋಕ್ಷಜ್ಞಾನಿಭಿಃ ಪೂಜ್ಯತ್ವೇನ ಮಾಯಾಶಬಲಬ್ರಹ್ಮತಾಮಪಾಕೃತ್ಯ ಪರ-

ಗೋಪಜನರಿಗೆ ಬಗೆಬಗೆಯ ಐಶ್ವರ್ಯಗಳನ್ನು ನೀಡುವುದರಿಂದ ಅವು ಬಾಧಿತವಲ್ಲ ಎಂದು ತಿಳಿಯುವುದು. ಅಪಾರತೇಜಸ್ಸಿನಿಂದ ಕಂಗೊಳಿಸುವುದರಿಂದ ಅವನಿಗೆ ಮಾಯ ಎಂಬ ಕತ್ತಲಿನ ಸೋಂಕು ಅಸಂಭಾವಿತ ಎಂದಾಗುವುದು. ನಿರ್ಮಲಮನಸ್ಕರಾದ ಭಕ್ತಜನರು ಸದಾ ಅವನನ್ನು ಪೂಜಿಸುವುದರಿಂದ ಅವನು ಅವರೆಲ್ಲರಿಗಿಂತ ಉತ್ತಮನು, ಸರ್ವೋತ್ತಮನು ಎಂದಾಗು-ವುದರಿಂದ ಅಭೇದಮತವು ಮಿಥ್ಯೆ ಎಂದಾಗುವುದು. ಹೀಗೆ ಅನೇಕ ಮುಖ್ಯಪ್ರಮೇಯಗಳು ವ್ಯಕ್ತವಾಗುವವು ಎಂದರ್ಥ.

೪. ಇನ್ನು ಶ್ರೀಕೃಷ್ಣನು ದಿಗಂಬರನಾಗಿ ಸಂಚರಿಸಿದ್ದೂ ಸಹ ಮತ್ತೊಂದು ತತ್ತ್ವಕ್ಕೆ ದ್ಯೋತಕವಾಗಿದೆ. ತಾರ್ಕಿಕರು ದಿಕ್ಕುಗಳೇ ಬೇರೆ, ಗಗನವೇ ಬೇರೆ ಎನ್ನುವರು ಆದರೆ ದಿಕ್ಕುಗಳು ಗಗನಗಳಿಂದ ಬೇರೆಯಲ್ಲ ಎಂಬುದನ್ನು ದಿಗಂಬರನಾಗಿ ಗೋಚರಿಸುವ ಮೂಲಕ ತಿಳಿಸಿಕೊಟ್ಟ ಎಂಬುದು ಮತ್ತೊಂದು ಪ್ರಮೇಯ: ದಿಗೇವಾಂಬರಂ ಯಸ್ಯೇತಿ ಸಮಾನಾಧಿಕರಣೇ ಸಮಾಸೇ ದಿಶಾಮಂಬರಾತ್ಮಕತ್ವಪ್ರಾಪ್ತ್ಯಾಽಂಬರಶಬ್ದಸ್ಯ ವಸ್ತ್ರಾಕಾಶೋಭಯವಾಚಕತ್ವೇನ ಚಾಂಬರ-ವ್ಯತಿರಿಕ್ತದಿಶಾಂ ನಿರಾಕರಣಸ್ಯಾಪಿ ಸೂಚಿತತ್ವಾದಿತಿ ಭಾವಃ।-ವ್ಯಾ.

೫. ಹೀಗೆ [೧]ಶ್ರೀಕೃಷ್ಣನ ಬಾಲಲೀಲೆಗಳು ವಿವಿಧ ತಪ್ಪು ಕಲ್ಪನೆಗಳನ್ನು ಪ್ರತ್ಯಕ್ಷವಾಗಿ ನಿರಾಕರಿಸುವ ಅಪೂರ್ವತೆಯಿಂದ ಕೂಡಿವೆ ಎಂದು ಭಾವ.

೬. ಹೀಗೆ ಶ್ರೀಹರಿಯ ಅವತಾರಗಳ ಲೀಲೆಗಳನ್ನು ಅರ್ಥಮಾಡಿಕೊಳ್ಳುವ ಮೂಲಕ ಅವನು ಸಗುಣ ಸಾಕಾರ ಮೊದಲಾದ ಮಹಾಪ್ರಮೇಯಗಳನ್ನು ದೃಢಪಡಿಸಿಕೊಳ್ಳಬೇಕು ಎಂಬ ಸಂದೇಶವನ್ನು ನೀಡಿರುವರು ಎಂದು ತಿಳಿಯಬೇಕು.

---

ಬ್ರಹ್ಮತ್ವಸ್ಯೈವ ಸ್ಥಾಪಯಿಷ್ಯಮಾಣತ್ವಾತ್ । ವಿಮೃಶತಾಂ ಸ್ಮರತಾಂ ವ್ರಜಸ್ಥಜನಾನಾಂ ವಿತ್ತೈಃ ಕೃಷ್ಣಸನ್ನಿಧಾನೇನ ನಿಷ್ಪನ್ನದ್ರವ್ಯೈಃ ಜಗತಾಂ ಬಾಧ್ಯತಾಂ ಬ್ರಹ್ಮಜ್ಞಾನಬಾಧ್ಯತಾಂ ಮಾಯಾವಾದ್ಯುಕ್ತವಿಶ್ವಮಿಥ್ಯಾತ್ವಮಿತ್ಯರ್ಥಃ। ನಿರಸ್ಯ ಪರಬ್ರಹ್ಮಸಾಕ್ಷಾತ್ಕಾರೇಣೈವ ವರ್ಧಮಾನದ್ರವ್ಯಾದೇಃ ಬ್ರಹ್ಮಜ್ಞಾನಬಾಧ್ಯತ್ವಾಯೋಗಾದಿತಿ ಭಾವಃ। ನಿಜತೇಜಸಾ ಸ್ವಸ್ಯ ರಕ್ತಾಧರೋಷ್ಠಹಸ್ತಪಾದತಲಾದೇಃ ಶ್ವೇತದಂತನಖಾದೇಃ ನೀಲಾಂಗಾನಾಂ ಚ ಕಾಂತ್ಯಾ ವೈರೂಪ್ಯಂ ಮಾಯಾವಾದ್ಯುಕ್ತನಿರವಯವತ್ವಂ ನಿರಸ್ಯ ಪರಬ್ರಹ್ಮಣ್ಯೇವ ದೃಶ್ಯಮಾನಾಕಾರಸ್ಯ ನಿರಾಕಾರತ್ವಾಯೋಗಾದಿತಿ ಭಾವಃ। ನಿರ್ಮಲಧಿಯಾಂ ಜೀವನ್ಮುಕ್ತತಯಾ ನಿರ್ಗತಾ ಅವಿದ್ಯಾಖ್ಯಮಲಾ ಧೀರ್ಯೇಷಾಂ ತೇಷಾಂ ದೇವಕೀ ಗರ್ಭಾದಾವಗತಬ್ರಹ್ಮನಾರದಾದೀನಾಂ ನಿತ್ಯಾರ್ಚಯಾ ನಿತ್ಯಪೂಜಯಾ । "ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ"★ಇತ್ಯಾದಿ ಸ್ಮೃತಿಶ್ರುತ್ಯುಕ್ತಮೌಕ್ತಪೂಜನಂ ಚ ಸಂಗೃಹೀತುಂ ನಿತ್ಯೇತ್ಯುಕ್ತಮ್ । ನೀಚೈಕ್ಯಂ ಜೀವೈಕ್ಯಂ ಮಾಯಾಶಬಲನೀಚಬ್ರಹ್ಮೈಕ್ಯಂ ಚ ನಿರಸ್ಯ ಪೂಜ್ಯಪೂಜಕಯೋರೈಕ್ಯಾಯೋಗಾತ್ । ನಿರಸ್ತಾವಿದ್ಯೈರ್ಜೀವನ್ಮುಕ್ತೈಃ ಪರಮಮುಕ್ತೈಶ್ಚ ಮಾಯಾಶಬಲಿತಸ್ಯ ಪೂಜನಾಯೋಗಾದಿತಿ ಭಾವಃ। ದಿಗ್ಭ್ಯೋ ಭಿನ್ನಮಂಬರಂ ಗಗನಮಸ್ತೀತಿ ಯತ್ತಾರ್ಕಿಕಮತಂ ಅಹಂಕಾರತತ್ವಾತ್ ಪಂಚಭೂತಾನಾಮೇವ ಸೃಷ್ಟಿಂ ವದತಾಂ ವೇದಾಂತಿನಾಂ ಮತೇ ತದಭಾವಾತ್ ತಸ್ಯ ಧಿಕ್ಕ್ರಿಯಾರ್ಥಂ ನಿರಾಕರಣಾರ್ಥಂ ದಿಗ್ವಸ್ತ್ರತಾಂ ದಿಗಂಬರತ್ವಂ ದೀಪಯನ್ ಪ್ರಕಾಶಯನ್ ಅಭವತ್ ।

★ ಮ.ಭಾ.ತಾ.ನಿ.(೨/೬೨)

೧. ಪರಬ್ರಹ್ಮಣ್ಯೇವ ಕೃಷ್ಣೇ ಪ್ರತ್ಯಕ್ಷಸಿದ್ಧಶೌರ್ಯಾದಿಗುಣಾನಾಮಪಲಾಪಾಯೋಗಾದಿತಿ ಭಾವಃ। -ವ್ಯಾ.

## ಗೋವತ್ಸಗಳೊಂದಿಗೆ ಶ್ರೀಕೃಷ್ಣ

**ಗೋಪೀಗೃಹಾಂಗಣತಲೇ ರಣದಂಘ್ರಿವೇಷೋ
ಗೋವತ್ಸಕೈಃ ಸಹ ಚರನ್ ರಜಸಾಽನುಷಕ್ತಃ।
ದೇಹಾಭಿಮಾನರಹಿತೈರ್ದಿವಿ ಸಂಸ್ತುವದ್ಭಿ-
ರ್ದೇವೈಶ್ಚ ದೃಶ್ಯವಿಭವೋ ದಯಿತಾಸಮೇತೈಃ॥ ೨೯ ॥**

ಗೋಪಿಯರ ಮನೆಗಳ ಅಂಗಳಪ್ರದೇಶದಲ್ಲಿ ಧ್ವನಿಗೈಯ್ಯುವ ಕಾಲ್ಗೆಜ್ಜೆಗಳಿಂದ ಕೂಡಿದ-ವನಾದ; ಕರುಗಳೊಡನೆ ಸಂಚರಿಸುತ್ತಾ ಮೈಯಲ್ಲಿ ಧೂಳು ಮೆತ್ತಿದವನಾದ; ಗಗನದಲ್ಲಿ ತನ್ನನ್ನು ಬಹಳವಾಗಿ ಸ್ತುತಿಸುವ ದೇಹಾಭಿಮಾನವನ್ನು ತೊರೆದ ಸಪತ್ನೀಕರಾದ ದೇವತೆಗಳು ಕಾಣುವ ವೈಭವವನ್ನು ಹೊಂದಿದ; ಇಂತಹ ಶ್ರೀಕೃಷ್ಣನು ಸದಾ ನನ್ನ ಧ್ಯಾನಕ್ಕೆ ಗೋಚರನಾಗಲಿ; (ಅಂಘ್ರಿವೇಷ – ಪಾದಭೂಷಣ).

ವಿ. : ೨೯ ರಿಂದ ೩೧ರವರೆಗಿನ ಶ್ಲೋಕಗಳಿಗೆ ಏಕಾನ್ವಯ (ಕುಲಕ).

## ಬಾಲಕೃಷ್ಣನ ವೈಭವ

**ಶಾರ್ದೂಲರಮ್ಯನಖರಂಜಿತಕಂಠದೇಶಃ
ಸಾಸೂಯದಾನವನಿಕಾಯವನೇ ಹುತಾಶಃ।
ಹಾರಸ್ಫುರತ್ಕಟಕಕಂಕಣನೂಪುರಶ್ರೀ-
ಹಾಸಪ್ರಕಾಶಿತದಿಶಾಪಟಲಃ ಸ ಬಾಲಃ॥ ೩೦ ॥**

ಶ್ರೀಕೃಷ್ಣನು ಕಂಠದಲ್ಲಿ ಹೊಳೆಯುವ ಹುಲಿಯ ರಮ್ಯಉಗುರುಗಳಿಂದ ಶೋಭಿಸುವನು, ಮತ್ಸರಿಸುವ ದಾನವವೃಂದವೆಂಬ ಕಾಡಿಗೆ ಕಿಚ್ಚಿನಂತಹವನು, ಮುತ್ತಿನಹಾರ ಹಾಗೂ ಹೊಳೆಯುವ ಕಡಗ, ಕಂಕಣ ಹಾಗೂ ನೂಪುರಗಳ ಕಾಂತಿಯ, ಮಂದಹಾಸದಿಂದ [೧]ದಿಕ್ಕುಗಳನ್ನೆಲ್ಲಾ ಬೆಳಗುವವನು, ಇವನು ಸದಾ ನನ್ನ ಹೃದಯದಲ್ಲಿ ನೆಲೆಸಲಿ.

ವಿ. : ೧. ಈ ಶ್ಲೋಕಕ್ಕೆ ಮುಂದಿನ ಶ್ಲೋಕದಲ್ಲಿನ 'ಹೃದ್ಗಃ ಸದಾಽಸ್ತು' ಎಂಬ ಪದಗಳೊಂದಿಗೆ ಅನ್ವಯ.

೨. ಶಾರ್ದೂಲ – ಹುಲಿ; ನಿಕಾಯ – ಸಮೂಹ; ಪಟಲ – ಮಂಡಲ.

---

೧. ದಿಶಾನಾಮಾಶಾನಾಮ್। ಟಾಪಂ ಚೈವ ಹಲಂತಾನಾಮಿತಿ ವಚನಾತ್। –ವ್ಯಾ.

ಬಗೆಬಗೆಯ ವೈಭವದ ಶ್ರೀಕೃಷ್ಣ

ನವ್ಯಸ್ಖಲದ್ವಚನನಂದಿತಸರ್ವಲೋಕಃ
ಸುವ್ಯಕ್ತಕುಂತಲಲತತಿಃ ಸುಭಗಾಗ್ರಗಣ್ಯಃ।
ದಿಗ್ವಸ್ತ್ರದರ್ಶಿತಕಟಿರ್ದಿನನಾಥದೀಪ್ತಿ-
ರ್ಹೃದ್ಗಃ ಸದಾಽಸ್ತು ಸ ಶಿಶುರ್ಹೃದಯಂಗಮೋ ಮೇ ॥ ೩೧ ॥

ಶ್ರೀಕೃಷ್ಣನು ತನ್ನ ಹೊಸತಾದ ತೊದಲ್ನುಡಿಗಳಿಂದ ಸಕಲ ಜನರಿಗೂ ಆನಂದ ನೀಡುವವನು, ಸುವ್ಯಕ್ತವಾದ ಮುಂಗುರುಳುಗಳ ಸಾಲುಳ್ಳವನು, ಚೆಲುವರಲ್ಲಿ ಮೊದಲಿಗನು, ದಿಗಂಬರನಾಗುವ ಮೂಲಕ ತನ್ನ ಕಟಿಪ್ರದೇಶವನ್ನು ಪ್ರಕಟಿಸಿದವನು, ಸೂರ್ಯನಂತಹ ಕಾಂತಿಯ ಆ ಹೃದಯಂಗಮನಾದ ಬಾಲಕೃಷ್ಣನು ಸದಾ ನನ್ನ ಧ್ಯಾನಕ್ಕೆ ಗೋಚರನಾಗಲಿ.

ವಿ. : ಸುಭಗ – ಸುಂದರ ; ಕಟಿ – ಸೊಂಟ ; ದಿನನಾಥ – ಸೂರ್ಯ.

ಶ್ರೀಕೃಷ್ಣ ಮಾಡಿದ ಕ್ಷೀರಚೌರ್ಯ

ನಾರೀಣಾಮಪಿ ಮೋಕ್ಷದಃ ಕಿಮಿತಿ ನೋಽದದ್ಯಾ ವಿಶುದ್ಧಾತ್ಮನಾ-
ಮಸ್ಮಾಕಂ ತ್ವಿತಿ ಯೋಗಿಪೂಗಮನಸಾಂ ಕೋಪಂ ವಿಧುನ್ವನ್ನಿವ।
ಗೋಪಸ್ತ್ರೀನಿಕರಸ್ಯ ದುಗ್ಧಜಲಧಿಂ ಸ್ವಂ ದಾತುಕಾಮೋ ಹರಿ-
ಸ್ತದ್ಗೇಹಸ್ಥಿತದುಗ್ಧಮಂಡಲಮಥೋ ಮುಷ್ಣಂಶ್ಚಚಾರ ವ್ರಜೇ[೧] ॥ ೩೨ ॥

ಗೋಪಿಕಾಸ್ತ್ರೀಯರ ವೃಂದಕ್ಕೆ ತನ್ನ ಕ್ಷೀರಸಾಗರವನ್ನು ನೀಡಬಯಸಿದ ಶ್ರೀಕೃಷ್ಣನು "ಸ್ತ್ರೀಯರಿಗೂ ಮೋಕ್ಷವನ್ನು ನೀಡುವ ನೀನು ಶುದ್ಧಾಂತಃಕರಣರಾದ ನಮಗೇಕೆ ಅದನ್ನು ನೀಡುತ್ತಿಲ್ಲ ?" ಎಂಬ ಯೋಗಿವೃಂದದ ಮನಸ್ಸುಗಳ ಕೋಪವನ್ನು ಕಳೆಯಲೋ ಎಂಬಂತೆ ಅವರ ಮನೆಗಳಲ್ಲಿದ್ದ ಹಾಲನ್ನೆಲ್ಲಾ ಕದಿಯುತ್ತಾ ಗೋಕುಲದಲ್ಲಿ ಸಂಚರಿಸಿದ.

ವಿ. : ಗೋಪಿಕಾಸ್ತ್ರೀಯರಿಗೂ ಮೋಕ್ಷನೀಡಿದ ನೀನು ನಮಗೇಕೆ ಅದನ್ನು ನೀಡುತ್ತಿಲ್ಲ ಎಂಬ ಭಾವದಿಂದ ಯೋಗಿಗಳು ಕೋಪಗೊಳ್ಳದಿರಲಿ ಎಂಬ ಕಾರಣದಿಂದ ಕೃಷ್ಣ ಗೋಪಿಕಾಸ್ತ್ರೀಯರ ಮನೆಯಲ್ಲಿನ ಹಾಲನ್ನೆಲ್ಲ ಕದಿಯತೊಡಗಿದ; ಎಂದರೆ ಗೋಪಿಕಾಸ್ತ್ರೀಯರಿಗೆ ಮೋಕ್ಷನೀಡಿದ್ದು ಅವರ ಮನೆಯ ಹಾಲನ್ನು ಕದ್ದದ್ದರಿಂದಲೇ ಹೊರತು ಬೇರೆ ಕಾರಣದಿಂದಲ್ಲ ಎಂದರೆ ಹಾಲು ಕದ್ದದ್ದಕ್ಕೆ ಪ್ರತಿಯಾಗಿ ಕ್ಷೀರಸಾಗರಪ್ರಾಪ್ತಿರೂಪ ಮೋಕ್ಷವನ್ನು ನೀಡಿದೆ ಎಂಬುದನ್ನು ತಿಳಿಸುತ್ತಾ ಯೋಗಿಗಳ ಮನಸ್ಸಿಗೆ ಉಂಟಾದ ಖೇದವನ್ನು ಪರಿಹರಿಸಿದ ಎಂದರ್ಥ.

---

೧. ಅಕ್ರುಧ್ಯತಾಂ ಕೇಶವೋಽನುಗ್ರಹಾಯ ಶುಭಂ ಸ್ವಯೋಗ್ಯಾದಧಿಕಂ ನಿಹಂತುಮ್।
ಸ ಕ್ರುಧ್ಯತಾಂ ನವನೀತಾದಿ ಮುಷ್ಣನ್ ಚಚಾರ ದೇವೋ ನಿಜಸತ್ಸುಖಾಂಬುಧಿಃ॥ –ಮ.ಭಾ.ತಾ.ನಿ.(೧೨/೧೨೦)

೨. ಪೂಗ - ಸಮೂಹ ; ದುಗ್ಧ - ಕ್ಷೀರ; ಜಲಧಿ - ಸಮುದ್ರ; ಮುಷ್ಣನ್- ಕದಿಯುತ್ತಾ.

ಬೆಕ್ಕಿಗೂ ಹಾಲು ನೀಡಿದ ಶ್ರೀಕೃಷ್ಣ

ಹರೌ ಪಯೋ ಮುಷ್ಣತಿ ಕಾಽಪಿ ತುಷ್ಟಾ
ದಧಾರ ಮರ್ಕಾಯ ದದತ್ಯಮರ್ಷಮ್ ।
ತಥಾ ಹಿ ತಚ್ಛೇಷಮನನ್ಯಯೋಗ್ಯಂ
ಹರಂತಮುದ್ವೀಕ್ಷ್ಯ ಕಥಂ ನ ಮನ್ಯುಃ [೧] ॥ ೩೩ ॥

ಶ್ರೀಕೃಷ್ಣನು ಹಾಲು ಕದ್ದಾಗ ಸಂತೋಷಿಸಿದ ಒಬ್ಬ ಗೋಪಿ ಅವನು ಅದನ್ನು ಬೆಕ್ಕಿಗೆ ನೀಡಿದಾಗ ಮಾತ್ರ ಕೋಪಗೊಂಡಳು; ಅದು ಯುಕ್ತವೇ ಸರಿ. ಅವೈಷ್ಣವರಿಗೆ ಯೋಗ್ಯವಲ್ಲದ ಆ ಶ್ರೀಹರಿಯ ಶೇಷವನ್ನು ಅದು ಕದ್ದೊಯ್ಯುವುದನ್ನು ಕಂಡು ಹೇಗೆ ತಾನೇ ಕೋಪವು ಹುಟ್ಟದಿದ್ದೀತು ?

ವಿ. : ೧. ಗೋಪಿಗೆ ಶ್ರೀಕೃಷ್ಣನು ಹಾಲು ಕದ್ದದ್ದು ಖುಷಿ ನೀಡಿದರೂ, ಅವನು ಕುಡಿದು ಬಿಟ್ಟ ಶೇಷವನ್ನು ಬೆಕ್ಕೊಂದು ಕುಡಿದಾಗ ಮಾತ್ರ ಕೋಪ ಉಕ್ಕಿತು ಎಂದರ್ಥ.

೨. ಶ್ರೀಕೃಷ್ಣನ ನೈವೇದ್ಯಶೇಷವು ಬ್ರಹ್ಮರುದ್ರಾದಿ ದೇವತೆಗಳ ಸ್ವೀಕಾರಕ್ಕೆ ಯೋಗ್ಯ-ವಾದುದು. ಅದನ್ನು ಹೀಗೆ ಬೆಕ್ಕೊಂದು ಕುಡಿಯುವುದು ಹೇಗೆ ತಾನೇ ಉಚಿತವಾದೀತು? ಎಂದು [೨] ಭಾವ ; **ಮರ್ಕ** - ಬೆಕ್ಕು. 'ಮರ್ಕ' ಶಬ್ದಕ್ಕೆ ಕಪಿ ಎಂಬ ಅರ್ಥವೇ ಕೋಶಗಳಲ್ಲಿ ಹೆಚ್ಚು ಪ್ರಸಿದ್ಧ ಆದರೂ ಇಲ್ಲಿ ಮರ್ಕಾಯ ಎಂಬುದಕ್ಕೆ ಬೆಕ್ಕಿಗೆ ಎಂಬ ಅರ್ಥವೇ ಹೆಚ್ಚು ಉಚಿತವಾಗಿದೆ.

೩.. ಇದರಿಂದ ಶ್ರೀಕೃಷ್ಣನ ನೈವೇದ್ಯಶೇಷವು ರಮಾಬ್ರಹ್ಮಾದಿಗಳ ಸ್ವೀಕಾರಕ್ಕೆ ಯೋಗ್ಯವಾದ ಮಹಾಪ್ರಸಾದ ಎಂಬ ತತ್ತ್ವ ತಿಳಿಯುವುದು: ಪಾವನಂ ವಿಷ್ಣುನೈವೇದ್ಯಂ ಸುಭೋಜ್ಯಂ ಋಷಿಭಿಃ ಸ್ಮೃತಮ್ । (ಕೃ.ಮ.-೯೪).

ಶ್ರೀಕೃಷ್ಣ ಹಾಲು ಕುಡಿದ ಸೊಬಗು

ಪ್ರಗೃಹ್ಯ ಘಂಟಾಮಪರೇಣ ಪಾತ್ರಂ
ಕರೇಣ ಚಾನ್ಯೇನ ಪಯಃ ಪಿಬಂತಮ್ ।

---

೧. ಹಸ್ತಾಗ್ರಾಹ್ಯೇ ರಚಯತಿ ವಿಧಿಂ ಪೀಠಕೋಲೂಖಲಾದ್ಯೈ-
ಶ್ಛಿದ್ರಂ ಹ್ಯಂತರ್ನಿಹಿತವಯುನೇ ಶಿಕ್ಯಭಾಂಡೇಷು ತದ್ವಿತ್ ।
ಧ್ವಾಂತಾಗಾರೇ ಧೃತಮಣಿಗಣಂ ಸ್ವಾಂಗಮರ್ಥಪ್ರದೀಪಂ
ಕಾಲೇ ಗೋಪ್ಯೋ ಯರ್ಹಿ ಗೃಹಕೃತ್ಯೇಷು ಸುವ್ಯಗ್ರಚಿತ್ತಾಃ ॥ -ಭಾಗ.(೧೦/೯/೩೦)

೨. ಬ್ರಹ್ಮಾದಿದೇವತಾಯೋಗ್ಯಹರಿಪ್ರಸಾದಮಪಹರಂತಂ ಮಾರ್ಜಾರಂ ಪ್ರತ್ಯಮರ್ಷಂ ದಧಾರ । ನ ತು ಪಯಃ ಪಿಬಂತಂ ಕೃಷ್ಣಂ ಪ್ರತೀತ್ಯುಕ್ತ್ಯಾ ತಸ್ಯಾಸ್ತತ್ತ್ವವೇತ್ರೀತ್ವಂ ಧ್ವನ್ಯತೇ । -ವ್ಯಾ.

ನಿಶಾಮ್ಯ ಮಿತ್ರಾಣಿ ಚ ತರ್ಪಯಂತಂ
ಸುವಿಸ್ಮಿತಾ ಕಾऽಪಿ ಬಭೂವ ತೂಷ್ಣೀಮ್ ॥ ೩೪ ॥

ಒಂದು ಕೈಯಿಂದ ಘಂಟೆಯನ್ನು ಹಿಡಿದು, ಮತ್ತೊಂದು ಕೈಯಿಂದ ಪಾತ್ರೆಯನ್ನು ಹಿಡಿದು, ಇನ್ನೊಂದು ಕೈಯಿಂದ ಹಾಲು ಕುಡಿಯುತ್ತಾ, ತನ್ನ ಗೆಳೆಯರನ್ನೂ ತೃಪ್ತಿಪಡಿಸುತ್ತಿದ್ದ ಕೃಷ್ಣನನ್ನು ಕಂಡು, ಗೋಪಿಯೊಬ್ಬಳು ತುಂಬ ವಿಸ್ಮಿತಳಾಗಿ ಸುಮ್ಮನೆ ನಿಂತುಬಿಟ್ಟಳು.

ವಿ. : ೧. ಇದರಲ್ಲಿ ಶ್ರೀಕೃಷ್ಣನು ತನ್ನ ನಾಲ್ಕು ಕೈಗಳಿಂದ ಬಗೆಬಗೆಯ ವ್ಯಾಪಾರಗಳನ್ನು ಮಾಡು-ತ್ತಿದ್ದುದನ್ನು ವಿವರಿಸಿರುವರು.

೨. ಶ್ರೀಕೃಷ್ಣನು ಹಾಗೆ 'ಚತುರ್ಭುಜ' ಎಂಬುದನ್ನು ಭಗವದ್ಗೀತೆ ತಿಳಿಸಿದೆ: ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ। (೧೧/೪೬)

೩. ಶ್ರೀಕೃಷ್ಣನನ್ನು ಅಂಜಿಸಲೆಂದು ಬಂದ ಗೋಪಿ ಅವನ ಅದ್ಭುತವ್ಯಾಪಾರವನ್ನು ಕಂಡು ಮೂಕವಿಸ್ಮಿತಳಾದಳು[೧] ಎಂದರ್ಥ; ತೂಷ್ಣೀಂ – ಸುಮ್ಮನೆ.

### ಗೋಪಿಯು ಶ್ರೀಕೃಷ್ಣನಿಗೆ ಮಾಡಿದ ಪುಷ್ಪಾರ್ಚನೆ

ಕರಸ್ಥಭಾಸ್ವನ್ನವನೀತಮನ್ಯಾ
ವಿಭೀಷಯಂತ್ಯನ್ವಗಮನ್ಮುಕುಂದಮ್ ।
ಸ್ವಮೌಲಿಮಾಲಾಚ್ಯುತಪುಷ್ಪಪುಂಜೈಃ
ಪದಾನಿ ತಸ್ಯೇಶಿತುರರ್ಚಯಂತೀ ॥ ೩೫ ॥

ಮತ್ತೊಬ್ಬ ಗೋಪಿಯು ಕೈಯಲ್ಲಿ ಥಳಥಳಿಸುವ ಬೆಣ್ಣೆ ಹಿಡಿದಿದ್ದ ಶ್ರೀಕೃಷ್ಣನನ್ನು ಭಯಪಡಿಸ-ಲೆಂದು ತನ್ನ ಮುಡಿಯ ಮಾಲೆಯಿಂದ ಉದುರಿದ ಪುಷ್ಪಗಳ ಗುಂಪಿನಿಂದ ಈಶನಾದ ಅವನ ಪಾದಗಳನ್ನು ಪೂಜಿಸುತ್ತಾ ಹಿಂಬಾಲಿಸಿದಳು.

ವಿ. : ೧. ಶ್ರೀಕೃಷ್ಣನನ್ನು ಹಿಡಿಯಲೆಂದು ಧಾವಿಸಿದ ಗೋಪಿಯ ಮುಡಿಯಿಂದ ಉದುರಿದ ಹೂವುಗಳು ಶ್ರೀಕೃಷ್ಣನ ಪಾದಚಿಹ್ನೆಗಳ ಮೇಲೆ ಬೀಳುತ್ತಿದ್ದುದರಿಂದ ಅದು ಒಂದು ರೀತಿಯಲ್ಲಿ ಅವಳು ಅವನಿಗೆ ಮಾಡಿದ ಪುಷ್ಪಾರ್ಚನರೂಪಪೂಜೆಯೇ ಆಯಿತು ಎಂಬುದು ಇಲ್ಲಿಯ ಭಾವ ; ಭಾಸ್ವತ್ – ಹೊಳೆಯುವ.

೨. ಅವಳು ಬುದ್ಧಿಪೂರ್ವಕವಾಗಿ ತೆರಳಿದ್ದು ಶ್ರೀಕೃಷ್ಣನನ್ನು ಬೆದರಿಸಲೆಂದು ; ಆದರೆ, ಅವಳ ಆ ಕಾರ್ಯ ಅವಳಿಗೆ ತಿಳಿಯದಂತೆ ಅವನ ಪೂಜೆಯೇ ಆಯಿತು ಎಂಬುದು ಇಲ್ಲಿಯ ನಿರೂಪಣೆಯ ವಿಶೇಷ.

---

೧. ಕೃಷ್ಣಭೀಷಣಾರ್ಥಮಾಗತಾ ಅದ್ಭುತದರ್ಶನೇನ ಮೂಕೀಭಾವಮವಲಂಬ್ಯ ಸ್ಥಿತೇತ್ಯರ್ಥಃ। -ವ್ಯಾ.

### ಶ್ರೀಕೃಷ್ಣ ಮೊಸರು ಕದಿಯಲು ಕಾರಣ

ಅಧಿಕ್ಷಿಪಂತ್ಯಾಂ ಸುಕೃತೇನ ಸಾಕಂ
ದಧೀನಿ ಧೀರಃ ಸ ಚುಚೋರ ಚೋರಃ ।
ಅಗಣ್ಯಪುಣ್ಯಾಖ್ಯಧನಾನಿ ದಾನೀ
ಪ್ರದಾಯ ಸೋಽಚೂಚುರದಾನತಾಯಾಮ್ ॥ ೩೬ ॥

ತಾನು ಕದ್ದಾಗ ಆಕ್ಷೇಪಿಸಿದ ಗೋಪಿಯ ಮೊಸರಿನ ರಾಶಿಯನ್ನು ಅವಳ ಪುಣ್ಯದ ಸಮೇತ ಚೋರನಾದ ಶ್ರೀಕೃಷ್ಣ ಅಪಹರಿಸಿದ; ಭಕ್ತಿಪೂರ್ವಕ ಬಾಗಿದ ಮತ್ತೊಬ್ಬಳಿಗೆ ದಾನಿಯಾದ ಅವನು ಎಣಿಕೆ ಮೀರಿದ ಪುಣ್ಯರೂಪ ಧನಗಳನ್ನು ನೀಡಿ, ಮೊಸರನ್ನು ಕದ್ದ.

ವಿ. : ೧. ಶ್ರೀಕೃಷ್ಣಸ್ವೀಕರಿಸಿದ್ದನ್ನು ತನ್ನ ಭಾಗ್ಯವೆಂದು ಬಗೆಯದೆ, ನಷ್ಟವೆಂದು ಭಾವಿಸಿದವಳಿಗೆ [೧]ಪುಣ್ಯಹಾನಿಯಾಯಿತು. ಅದನ್ನು ಭಕ್ತಿಯಿಂದ ಅನುಮೋದಿಸಿದವಳಿಗೆ ಅಪಾರಪುಣ್ಯ[೨] ಲಭಿಸಿತು ಎಂದು ಭಾವ.

೨. ಇದರಿಂದ [೩]ವಿಷ್ಣುದ್ರೋಹಿಗಳಿಗೆ ಐಹಿಕ, ಪಾರತ್ರಿಕ ಎರಡೂ ತಪ್ಪಿದರೆ, ವಿಷ್ಣುಭಕ್ತರಿಗೆ ಅವೆರಡೂ ಲಭಿಸುವವು[೪] ಎಂಬ ತತ್ತ್ವ ಪ್ರತಿಪಾದಿತವಾಯಿತು ಎಂದು ತಿಳಿಯಬೇಕು.

### ದೋಷವಾಗದ ಶ್ರೀಕೃಷ್ಣನ ಚೋರತನ

ಅಭೂದ್ಯಶೋದಾತನಯಸ್ಯ ಪೃಥ್ವ್ಯಾಂ
ವಿನಿಂದಿತಾ ತಸ್ಕರತಾಽಪಿ ಭೂತ್ಯೈ ।
ತಥಾ ಹಿ [೫]ಲಕ್ಷ್ಮೀನಯನಾಂತಭಾಜಾ-
ಮಸಹ್ಯದೋಷೋಽಪಿ ಭವೇದ್ಗುಣಾಯ ॥ ೩೭ ॥

ಭೂಮಿಯಲ್ಲಿ ತುಂಬ ನಿಂದಿತವಾದ ಯಶೋದಾತನಯನಾದ ಶ್ರೀಕೃಷ್ಣನ ಚೋರತನವೂ ಸಹ ಅವನಿಗೆ ಹಿರಿಮೆ ಎನ್ನಿಸಿಬಿಟ್ಟಿತು. ಅದು ಹಾಗೆಯೇ; ಲಕ್ಷ್ಮೀಕಟಾಕ್ಷಕ್ಕೆ ಪಾತ್ರರಾದವರ ಸಹಿಸಲಾಗದ ದೋಷವೂ ಸಹ ಗುಣವೇ ಎನ್ನಿಸುವುದಲ್ಲವೇ !

---

೧. ನ ಕೇವಲಂ ತಸ್ಯಾಃ ದಧಿಹಾನಿಃ ಕೃಷ್ಣನಿರಾಕರಣೇನ ಸುಕೃತಹಾನಿರಪಿ ಜಾತೇತ್ಯರ್ಥಃ । -ವ್ಯಾ.

೨. ಕೃಷ್ಣಸ್ಯ ದಧಿಪಾನಂ ಭಕ್ತಿಪೂರ್ವಕಮಂಗೀಕೃತಾಯಾಃ ಪುಣ್ಯಾಭಿವೃದ್ಧಿರ್ಜಾತೇತಿ ಭಾವಃ । -ವ್ಯಾ.

೩.. ವಿಷ್ಣುದ್ರೋಹಿಣಾಮೈಹಿಕಂ ಪಾರತ್ರಿಕಮುಭಯಮಪಿ ನಶ್ಯತೀತಿ ಭಾವಃ । -ವ್ಯಾ.

೪. ಚೋರೋಽಪಿ ಸ್ವಾಕ್ಷೇಪೇ ಕೃತೇ ಸರ್ವಂ ವಸ್ತು ಹರತಿ ಅನುಮತೌ ಕೃತಾಯಾಂ ಹರ್ಷೇಣಾರ್ಥಂ ದತ್ವಾ ಗಚ್ಛತಿ ತಥೇತ್ಯಪಿ ಭಾವಃ । -ವ್ಯಾ.

೫. ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ । - ದ್ವಾದಶಸ್ತೋತ್ರ (೨/೯)

ವಿ. : ೧. ಶ್ರೀಕೃಷ್ಣನ ಚೌರ್ಯವು ಲೋಕದ ಚೌರ್ಯದಂತಲ್ಲ; ಅದು ಸಹ ಗುಣವೇ ಎಂಬುದು ಇಲ್ಲಿಯ ಮುಖ್ಯಭಾವ.

೨. ಲೋಕದೃಷ್ಟಿಯಲ್ಲಿ ಶ್ರೀಮಂತರು ಮಾಡುವ ತಪ್ಪುಗಳನ್ನು ಜನ ಅವನ ಶ್ರೀಮಂತಿಕೆಯ ಹಿನ್ನೆಲೆಯಲ್ಲಿ ಗುಣವೆಂದೇ ಭ್ರಮಿಸುವ ಪ್ರವೃತ್ತಿಯ ಲೋಕವಿಡಂಬನೆಯನ್ನು ಇದರಲ್ಲಿ ಕಾಣಬಹುದು ; ತಸ್ಕರ - ಕಳ್ಳ; ತಸ್ಕರತಾ - ಕಳ್ಳತನ; ನಯನಾಂತ - ಕಟಾಕ್ಷ.

೩. ಇಂದು ಲೋಕದಲ್ಲಿ ನಡೆಯುತ್ತಿರುವುದೂ ಹಾಗೆಯೇ! ಗುಣವಂತನಾದ ದರಿದ್ರನನ್ನು ಜನ ತಪ್ಪಾಗಿ ತಿಳಿಯುವುದು, ಅವಮಾನಿಸುವುದು, ಎಲ್ಲರೂ ಕಂಡಿರುವಂತಹುದೇ. ಅದರಂತೆ ಅತ್ಯಂತ ಮಹಾಪಾತಕಗಳನ್ನೆಸಗಿದ್ದರೂ ಕೇವಲ ಹಣವಂತರೆಂಬ ಕಾರಣದಿಂದ ಅವುಗಳನ್ನೆಲ್ಲಾ ಗುಣವೆಂದು ಕೊಂಡಾಡುವ ದುಷ್ಪ್ರವೃತ್ತಿಯು ಪ್ರಸಿದ್ಧವೇ ಆಗಿದೆ.

೪. ಇದನ್ನೆಲ್ಲಾ ಶ್ರೀವಾದಿರಾಜಸ್ವಾಮಿಗಳು ಇಲ್ಲಿ ಅತ್ಯಂತ ಮಾರ್ಮಿಕವಾಗಿ ಧ್ವನಿಸಿರುವರು.

೫. ಆದರೆ ಶ್ರೀಕೃಷ್ಣ ಲಕ್ಷ್ಮೀಕಟಾಕ್ಷಕ್ಕೆ ಪಾತ್ರ ಎಂಬುದನ್ನು ಮಹಾಲಕ್ಷ್ಮಿಯೇ ಅವನ ಕಟಾಕ್ಷಕ್ಕೆ ಹಂಬಲಿಸುವವಳು ಎಂಬ ಅರ್ಥದಲ್ಲಿ ತಿಳಿಯಬೇಕು: **ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ** - ದ್ವಾದಶಸ್ತೋತ್ರ (೭/೧)

೬. ಶ್ರೀಕೃಷ್ಣನು ಲಕ್ಷ್ಮೀಕಟಾಕ್ಷಕ್ಕೆ ಪಾತ್ರ ಎಂಬ ಮಾತಿನಲ್ಲಿ ವಾಸ್ತವಿಕವಾಗಿ ಅನಂತಾನಂತ ಗುಣಪೂರ್ಣ ಎಂಬ ಭಾವವು ಸೂಚಿತವಾಗಿ, ಶ್ರೀಕೃಷ್ಣನ ಚೋರತನವು ಪೂಜ್ಯವಾದದ್ದು ಲೋಕದ ಶ್ರೀಮಂತಿಕೆಯ ಕಾರಣದಿಂದ ಎಂಬ ಅರ್ಥದಲ್ಲಿ ಅಲ್ಲ ಎಂಬ ವಿಶೇಷಾರ್ಥವು ತಿಳಿಯುವುದು.

**ನವನೀತಚೋರನೆಂದವರಿಗೆ ಫಲನೀಡಲು ಕಾರಣ**

**ಸ್ವಕೀಯಚೌರ್ಯಂ ನಿತರಾಂ ಗೃಣದ್ಭ್ಯೋ**
**ದದೌ ವಿಮುಕ್ತಿಂ ಕಿಲ ಗೋಪಬಾಲಃ ।**
**ಅಹಂ ಸ್ವಮರ್ಮಾಲಪತಾಂ ಸ ಚಕ್ರೇ**
**ಫಲೇನ ವಾಗ್ಬಂಧಮಿತಿ ಪ್ರತರ್ಕೇ ॥ ೩೮ ॥**

ತನ್ನ ಕಳ್ಳತನವನ್ನು ಬಹಳವಾಗಿ ಬಣ್ಣಿಸಿದವರಿಗೆ ಬಾಲಗೋಪಾಲನು ವಿಮುಕ್ತಿಯನ್ನೇ ನೀಡಿದನಲ್ಲವೆ ! ತನ್ನ ಗುಟ್ಟನ್ನು ಹೇಳತೊಡಗಿದವರಿಗೆ ಹಾಗೆ ಫಲನೀಡುವ ಮೂಲಕ ಅವರ ಬಾಯಿಮುಚ್ಚಿಸಿದ ಎಂದು ನಾನು ಬಲವಾಗಿ ಊಹಿಸುವೆ.

ವಿ. : ೧. ಶ್ರೀಕೃಷ್ಣನ ಚೋರತನದ ವರ್ಣನೆಯೂ ಸಹ ನಿಜವಾದ ಅರ್ಥದಲ್ಲಿ ಗುಣವೇ ಆಗಿರುವುದರಿಂದ ಅದು ಮೋಕ್ಷಕ್ಕೆ ಸಾಧನ ಎಂಬುದು ಮುಖ್ಯಭಾವ.

೨. ಲೋಕದ ಸ್ವಭಾವವನ್ನು ವಿಡಂಬನೆ ಮಾಡುತ್ತಲೇ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸಿರುವುದು ಇಲ್ಲಿಯ ವಿಶೇಷ. ನಿಂದೆಯಂತೆ ಕಾಣುವ ಇದು ವಾಸ್ತವವಾಗಿ ಸ್ತುತಿಯೇ ಆಗಿದೆ: **ಚೋರತ್ವದಲಿ ಮಾಡಿದ ಪಾಪಗಳಿಗೆಲ್ಲಾ ಹೇ ನವನೀತಚೋರ ಎಂದರೆ ಸಾಲದೆ** - ಶ್ರೀವ್ಯಾಸರಾಜರು.

೩. [1]ತಮ್ಮ ದೋಷಗಳನ್ನು ಹೇಳುವವರಿಗೆ ಕೇಳಿದ್ದನ್ನು ನೀಡಿ ಬಾಯಿ ಮುಚ್ಚಿಸುವ ತಂತ್ರ ಲೋಕದಲ್ಲಿ ಸುಪ್ರಸಿದ್ಧ; ಮೇಲ್ನೋಟಕ್ಕೆ ಕೃಷ್ಣನ ರೀತಿ ಅದರಂತಿದೆ ಎನ್ನುತ್ತಲೇ ನಿಜಕ್ಕೂ ಹಾಗಿಲ್ಲ ಎಂದು ತಿಳಿಸುವುದು ಇಲ್ಲಿಯ ಕೌಶಲ.

೪. ತೀರ್ಥಪ್ರಬಂಧದಲ್ಲಿನ ಹಂಪೆಯ ವಿಟ್ಠಲನ ಸ್ತುತಿಯಲ್ಲಿಯೂ ಈ ಛಾಯೆಯು ಕಂಡುಬರುವುದು ಗಮನಾರ್ಹ:

**ಚೌರ್ಯಾನ್ಮಾತೃನಿಬದ್ಧಚಾರುಚರಣಃ ಪಾಪೌಘಚೌರ್ಯಾದ್ಬುಧೈಃ**
**ಬದ್ಧಸ್ತ್ವಂ ಪಥಿ ಪುಂಡರೀಕಮುನಿನಾ ಜಾರೇತಿ ಸಂಬೋಧಿತಃ।**
**ತುಂಗಾತೀರಗತೋऽಸಿ ವಿಟ್ಠಲ ದಿಶನ್ನ್ಯಾಕೃತಿರ್ವಾಂಛಿತಂ**
**ವೇತ್ತ್ರಾಣಾಂ ಯದಿ ಮೇ ನ ದಾಸ್ಯಸಿ ಪದಂ ತ್ವತ್ಸಂಸ್ಥಿತಿಃ ಕಥ್ಯತೇ ॥ - (೩/೧೩)**

**ಶ್ರೀಕೃಷ್ಣನ ಕದಿಯುವ ಸ್ವಭಾವ**

**ಸ್ವಭಕ್ತಪುಂಜಾರ್ಜಿತಪಾಪವೃಂದಂ**
**ದಿವಾನಿಶಂ ಯೋ ಹರತಿ ಸ್ಮ ಬಾಲಃ।**
**ಗೃಹೇ ಗೃಹೇ ದುಗ್ಧಮಸಾವಮುಷ್ಣಾತ್**
**ತಥಾಹಿ ಕಸ್ಸ್ಯಕ್ಷ್ಯತಿ ಸಿದ್ಧವಿದ್ಯಾಮ್ ॥ ೩೯ ॥**

ತನ್ನ ಭಕ್ತವೃಂದವು ಮಾಡಿದ ಪಾಪದ ಹಿಂಡನ್ನು ಹಗಲಿರುಳೂ ಅಪಹರಿಸುವ ಆ ಬಾಲಕೃಷ್ಣನು ಮನೆಮನೆಗಳಲ್ಲೂ ಹಾಗೆ ಹಾಲನ್ನು ಕದಿಯುತ್ತಿದ್ದನು; ಅದು ಸರಿಯೇ! ತನಗೆ ಒಲಿದ ವಿದ್ಯೆಯನ್ನು ಯಾವನು ತಾನೇ ತೊರೆದಾನು!

ವಿ. : ೧. ಶ್ರೀಕೃಷ್ಣನು ಹಾಗೆ ಮನೆಮನೆಗಳಲ್ಲೂ ಹಾಲನ್ನು ಕದಿಯಲು ಅವನು ಸದಾ ತನ್ನ ಭಕ್ತರ ಪಾಪವನ್ನು ಕದಿಯುತ್ತಿದ್ದ ಅಭ್ಯಾಸವೇ ಕಾರಣ ಎಂದು ತಿಳಿಸಿರುವರು.

೨. [2]ಶ್ರೀಕೃಷ್ಣನು ತನ್ನ ಭಕ್ತರ ಅಪಾರ ಪಾಪರಾಶಿಯನ್ನು ಸದಾ ಪರಿಹರಿಸುವ ಮಹಾಕರುಣಾಳು ಎಂಬುದು ಇಲ್ಲಿಯ ಮುಖ್ಯಭಾವ; ಇದು ಶ್ರೀಮದಾಚಾರ್ಯರ ಕೃಷ್ಣಾಮೃತಮಹಾರ್ಣವವಾಕ್ಯದ ವಿವರಣೆಯಂತಿದೆ:

---

೧. ಯಥಾ ಚೋರಃ ಸ್ವಚೌರ್ಯಂ ಸೂಚಯತೋ ಧನಾದಿದಾನೇನ ತದ್ವಚನಂ ಪ್ರತಿಬಧ್ನಾತಿ ತದ್ವದಿತಿ ಭಾವಃ।-ವ್ಯಾ.

೨. ಪ್ರತಿಕ್ಷಣಂ ಸ್ವಭಕ್ತಪಾಪಾನಿ ಮುಷಿತ್ವಾऽಭ್ಯಸ್ತಚೌರ್ಯಃ ಕೃಷ್ಣಸ್ತತ್ಸಂಸ್ಕಾರವಶಾದಿವ ದುಗ್ಧಮಚೂಚುರದಿತ್ಯರ್ಥಃ। -ವ್ಯಾ.

ನಾರಾಯಣೋ ನಾಮ ನರೋ ನರಾಣಾಂ ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಮ್ ।
ಅನೇಕಜನ್ಮಾರ್ಜಿತಪಾಪಸಂಚಯಂ ಹರತ್ಯಶೇಷಂ ಸ್ಮೃತಮಾತ್ರ ಏವ ॥ (೪೮)

೩. ಈ ಮೂಲಕ ಶ್ರೀಕೃಷ್ಣ ಸಹಜವಾಗಿಯೇ ಭಕ್ತವತ್ಸಲ ಎಂಬ ಅವನ ಹಿರಿಮೆಯನ್ನು ವರ್ಣಿಸಿರುವರು.

### ಬೆಣ್ಣೆ ಕದಿಯಲು ಶ್ರೀಕೃಷ್ಣ ನೀಡಿದ ಕಾರಣ

ಹಸ್ತಃ ಕಿಂ ನವನೀತಭಾಜನಮುಖೇ ನ್ಯಸ್ತಸ್ತ್ವಯಾ ಶ್ರೀಪತೇ
ದೃಪ್ತಪ್ರಸ್ತರಸಮ್ಮಿತಾತಿಕಠಿನಾವಸ್ಥಾಂತರಾಯಾ ಗೃಹೇ ।
ಯುಕ್ತಾ ನ ಸ್ಥಿತಿರಸ್ಯ ಕೋಮಲಹೃದಸ್ತತ್ತನ್ವಿ ಚಿತ್ತೇ ಮಮ
ಪ್ರೀತ್ಯಾ ಸ್ಥಾಪಯಿತುಂ ಮೃಗಾಕ್ಷಿ ಮೃದುನೀತ್ಯುಕ್ತ್ವಾ ಹಸನ್ ಪಾತ್ವಸೌ ॥೪೦॥

(ಗೋಪಿ)"ಸಿರಿಯರಸನಾದ ಶ್ರೀಕೃಷ್ಣ! ಬೆಣ್ಣೆಯ ಪಾತ್ರೆಯಲ್ಲಿ ಏಕೆ ಕೈ ಇರಿಸಿದೆ?"; (ಕೃಷ್ಣ) "ಸೊಕ್ಕಿನ ನಿನ್ನ ಕಲ್ಲಿನಂತಹ ಅತಿಕಠಿನ ಹೃದಯದವಳ ಮನೆಯಲ್ಲಿ ಈ ಮೃದುವಾದ ಬೆಣ್ಣೆಯು ಇರುವುದು ತರವಲ್ಲ ಎಂಬ ಕಾರಣದಿಂದ; ಎಲೈ ಸುಂದರಿ ! ನನ್ನ ಮೃದುವಾದ ಚಿತ್ತದಲ್ಲಿ ಪ್ರೀತಿಯಿಂದ ಅದನ್ನು ಇರಿಸಿಕೊಳ್ಳಲೆಂದು ಹಾಗೆ ಕೈ ಇಟ್ಟೆ; ಎಲೈ ಹರಿಣಾಕ್ಷಿ !" ಎಂದು ನುಡಿದು ನಗಾಡಿದ ಆ ಶ್ರೀಕೃಷ್ಣನು ನನ್ನನ್ನು ಪಾಲಿಸಲಿ.

ವಿ. : ೧. ಬೆಣ್ಣೆ ಕದಿಯುವಾಗ ಗೋಪಿಯ ಕೈಗೆ ಸಿಕ್ಕ ಶ್ರೀಕೃಷ್ಣನು ತನ್ನ ಚಮತ್ಕಾರದ ಮಾತುಗಳಿಂದ ಅವಳನ್ನು ವಶಪಡಿಸಿಕೊಳ್ಳುವ ರೀತಿ ಇಲ್ಲಿ ವರ್ಣಿತವಾಗಿದೆ.

೨. ತನಗೆ ಬೆಣ್ಣೆ ನೀಡದ ಅವಳು "ಕಠಿಣ ಹೃದಯಳು" ಎಂದು ಅವಳನ್ನು ಜರಿಯುತ್ತಲೇ, ತನ್ವಿ ಮೃಗಾಕ್ಷಿ ಎಂದು ಹೊಗಳುತ್ತಾ ಅವಳ ಮನಸ್ಸನ್ನು ಗೆಲ್ಲುವ ಶ್ರೀಕೃಷ್ಣನ ರೀತಿ ಅತ್ಯಂತ [1]ರೋಚಕವಾದುದು ; ಭಾಜನ - ಪಾತ್ರೆ ; ಪ್ರಸ್ತರ - ಪಾಷಾಣ ; ತನ್ವಿ - ಕೃಶಾಂಗಿ.

### ಶ್ರೀಕೃಷ್ಣನ ಪಾದ ಕಠಿಣವಾಗಲು ಕಾರಣ !

ಯಸ್ಯ ಶ್ರೀಚರಣಾಂಬುಜೇನ ಶಕಟಃ ಸಂಚೂರ್ಣಿತಾಂಗೋಽಭವತ್
ತಸ್ಯಾಂಗೇ ಮೃದುತಾ ನ ಯುಕ್ತಿಸಹಿತೇತ್ಯುಕ್ತೇ ಮುದಾ ಯೋಽವದತ್ ।

---

೧. ಅತ್ರ ಹಸ್ತಃ ಕಿಮಿತ್ಯಾದಿನಾ ಶ್ರೀಪತ ಇತ್ಯಂತೇನ ಗೋಪ್ಯಾಃ ಕೋಪನಟನಂ ದೃಪ್ತಪ್ರಸ್ತರೇತ್ಯಾದಿನಾ ನಿಸ್ಪೃಹಸ್ಯ ತ್ವದನುಗ್ರಹಾರ್ಥಮಾಗತಸ್ಯ ಮಮ ನಿರಾಕರಣಮನುಚಿತಂ ತನ್ವಿ ಮೃಗಾಕ್ಷೀತ್ಯನೇನ ತಸ್ಯಾಃ ವಶೀಕರಣಾಯಾನುನಯಃ ಮೃದುನಿ ಚಿತ್ತ ಇತ್ಯನೇನ ಜ್ಞಾನಶೂನ್ಯಸ್ಯ ಸ್ತ್ರೀಜನಸ್ಯಾಪ್ಯನುಗ್ರಹಂ ಕುರ್ವತೋ ದೇವಸ್ಯಾನುಕಂಪಾತಿಶಯಃ ಸ್ವಚೌರ್ಯಗೂಹನಚಾತುರ್ಯಂ ಚ ದ್ಯೋತ್ಯತೇ । -ವ್ಯಾ.

ಬಾಲ್ಯೇ ಮಾಮಧಿರೋಪ್ಯ ವಕ್ಷಸಿ ಶಿಶುಂ ಸನ್ನರ್ತಯಂತ್ಯಾಸ್ತವ
ಸ್ಥೂಲೋರೋಜಸಮಾಗಮೇನ ತದಿತಿ ಪ್ರೌಢಿಂ ಸ ದದ್ಯಾನ್ಮಮ ॥ ೪೧ ॥

ಯಾರ ಮಂಗಲಕರವಾದ ಪಾದಕಮಲದಿಂದ ಶಕಟಾಸುರನು ಪುಡಿಪುಡಿಯಾದನೋ, ಅಂತಹ ನಿನ್ನ ದೇಹದಲ್ಲಿ ಮೃದುತ್ವ ಇರುವುದು ಯುಕ್ತಿಗೆ ಒಪ್ಪೀತೇ? ಎಂದು ಅವಳು ಕೇಳಲು, ''ಚಿಕ್ಕಂದಿನಲ್ಲಿ ನನ್ನನ್ನು ನಿನ್ನ ಎದೆಯ ಮೇಲೆ ನಿಲ್ಲಿಸಿಕೊಂಡು ನರ್ತನ ಮಾಡಿಸುತ್ತಿದ್ದ ನಿನ್ನ ಸ್ಥೂಲಸ್ತನಗಳ ಸಂಪರ್ಕದಿಂದಾಗಿ ನನ್ನ ಕಾಲಿನಲ್ಲಿ ಮಾತ್ರ ಕಾಠಿಣ್ಯ ವುಂಟಾಗಿದೆ'' ಎಂದು ಮುದದಿಂದ ಉತ್ತರಿಸಿದ ಶ್ರೀಕೃಷ್ಣನು ನನಗೆ ವಾಕ್ಚಾತುರ್ಯವನ್ನು ಕರುಣಿಸಲಿ.

ವಿ. : ೧. ಕಠಿಣ ಹೃದಯಳೆಂದು ತನ್ನನ್ನು ನಿಂದಿಸಿದ ಶ್ರೀಕೃಷ್ಣನಿಗೆ ಗೋಪಿಯು 'ಶಕಟಾಸುರ-ನನ್ನು ಕಾಲಿನಿಂದಲೇ ಕೊಂದ ನಿನ್ನದು ಯಾವ ಮಹಾ ಕೋಮಲ ದೇಹ ?' ಎಂದು ಕುಟುಕಿದ ಗೋಪಿಗೆ ಶ್ರೀಕೃಷ್ಣ ನೀಡಿದ ಮಾರ್ಮಿಕ ಉತ್ತರ ಇಲ್ಲಿದೆ.

೨. ನನ್ನ ಹೃದಯವೇನೋ ಮೃದುವೇ, ಆದರೆ ನನ್ನ ಪಾದ ಮಾತ್ರ ನಿನ್ನ ಕಠಿಣಸ್ತನಗಳ ಸಂಪರ್ಕದಿಂದಾಗಿ ತಾನೂ ಕಠಿಣವೇ ಆಗಿಬಿಟ್ಟಿದೆ ಎಂಬುದು ಶ್ರೀಕೃಷ್ಣನ ಕೌಶಲಪೂರ್ಣವಾದ ಉತ್ತರ. ಇದರಿಂದ ತಾನು ಅವಳನ್ನು [1]ಕಠಿಣಹೃದಯಳು ಎಂದು ತಿಳಿಸಿದ್ದು ರುಜುವಾತಾಯಿತು ಎಂಬುದು ಅವನ ಮಾತಿನ ಮರ್ಮ. ತನ್ನ ಪಾದಕ್ಕೂ ಸಹ ಕಠಿಣತೆಯನ್ನು ನೀಡುವಷ್ಟು[2] ಅವಳ ಹೃದಯ ಕಠಿಣ ಎನ್ನುವ ಮೂಲಕ ತನ್ನದು ಸತ್ಯವಚನ ಎಂಬ ಶ್ರೀಕೃಷ್ಣನ ಪ್ರತಿಪಾದನೆ ಅತ್ಯಂತ ರೋಚಕವಾದುದು.

## ಗೋಪಿಯ ಬಂಧನ ಕಾರ್ಯದ ಬಗ್ಗೆ ಶ್ರೀಕೃಷ್ಣನ ಆಕ್ಷೇಪ

ಬಧ್ನಾಮ್ಯದ್ಯ ಭವಂತಮಂಗ ಕಿತವಂ ಸಾಧ್ಯಂ ತತಃ ಕಿಂ ಪ್ರಿಯೇ
ದುಗ್ಧಾನಾಂ ಪರಿರಕ್ಷಣಂ ಕಪಟಸನ್ನದ್ಧೇ ನಿಬದ್ಧೇ ತ್ವಯಿ ।
ಮುಗ್ಧೇ ತ್ವಂ ವಿರಸಾ ಸಮುಜ್ಝಸಿ ಪರಂ ಸ್ನಿಗ್ಧಂ ನ ತನ್ಮಾಂ ತ್ಯಜೇತ್
ಪದ್ಯಾಕ್ಷಿಪ್ತ್ಯಬಲಾಮುದೀರ್ಯ ವಶಯನ್ ಬುದ್ಧಿಂ ಸ ದದ್ಯಾನ್ಮಮ ॥ ೪೨ ॥

(ಗೋಪಿ)''ಎಲವೋ ! ವಂಚಕನಾದ ನಿನ್ನನ್ನು ನಾನೀಗ ಕಟ್ಟಿಹಾಕುವೆ''; (ಕೃಷ್ಣ)''ಪ್ರಿಯೇ ! ಆದರಿಂದ ನೀನು ಏನು ಸಾಧಿಸಿದಂತಾಯಿತು?''; (ಗೋಪಿ)''ಕಪಟ ಯೋಜನೆಯ ನಿನ್ನನ್ನು

---

೧. ಸ್ತ್ರೀಸ್ತನಯೋಃ ಕಾಠಿ[illegible]ಸ್ಯ ಪ್ರಸಿದ್ಧತ್ವಾದಿತಿ ಭಾವಃ। -ವ್ಯಾ.

೨. ಸಂಸರ್ಗಜಾ ದೋಷಗುಣಾ ಭವಂತೀತಿ ನ್ಯಾಯಾತ್ ಪಾದಮಾತ್ರೇ ತತ್ಕಾಠಿಣ್ಯಂ ನಾನ್ಯತ್ರಾಯಮಪಿ ತವೈವ ದೋಷೋ ನ ಮಮೇತಿ ಭಾವಃ। -ವ್ಯಾ.

ಕಟ್ಟಿಹಾಕಿದಾಗ ಹಾಲಿನ ರಕ್ಷಣೆಯಾಗುವುದು''; (ಕೃಷ್ಣ)''ಎಲೈ ಮುಗ್ಧೆಯೇ! ಕಮಲಾಕ್ಷಿಯೇ! ಭಕ್ತಿ ಇಲ್ಲದ ನೀನು ಮೆಚ್ಚಿಬಂದ ನನ್ನಂತಹ ಶ್ರೇಷ್ಠನಾದವನನ್ನು ತೊರೆಯುತ್ತಿರುವಿ; ಆದರೆ ಸರಸವಾದ ಆ ಹಾಲು ಮಾತ್ರ ನನ್ನನ್ನು ಎಂದೂ ತೊರೆಯದು'' ಎಂದು ನುಡಿದು ಆ ಆಬಲೆಯನ್ನು ವಶ ಮಾಡಿಕೊಂಡ ಶ್ರೀಕೃಷ್ಣನು ನನಗೆ ಬುದ್ಧಿಯನ್ನು ನೀಡಲಿ.

ವಿ. : ೧. ಗೋಪಿಯು ಕಟ್ಟಿಹಾಕಿದರೂ ಸಹ ತನ್ನ [೧]ಹಾಲು ಕದಿಯುವ ಕಾರ್ಯವು ಸರ್ವಥಾ ನಿಲ್ಲದು ಎಂಬುದು ಇಲ್ಲಿಯ ಶ್ರೀಕೃಷ್ಣನ ಭಾವ.

೨. [೨]ಹರಿಯನ್ನು ತೊರೆಯುವುದು ಭಕ್ತಿರಹಿತರ ಕಾರ್ಯ; ತೊರೆಯದಿರುವುದು ಭಕ್ತರ ಕಾರ್ಯ ಎಂಬ ತತ್ತ್ವವು ಇಲ್ಲಿ ಪ್ರತಿಪಾದಿತ ; ಕಿತವ – ವಂಚಕ.

೩. ಹಾಲಿನಲ್ಲಿ 'ಗೋವಿಂದ' ಎಂಬ ತನ್ನ ರೂಪವೇ ಅಂತರ್ಯಾಮಿಯಾಗಿರುವುದರಿಂದ ತನ್ನನ್ನು ಬಿಟ್ಟು ಹಾಲು ಇರಲಾರದು ಎಂಬ ಮತ್ತೊಂದು ಪ್ರಮೇಯವನ್ನು ಕೃಷ್ಣ ಇಲ್ಲಿ ಸೂಚಿಸಿರುವನು.

### ಯಶೋದೆಗೆ ಶ್ರೀಕೃಷ್ಣನ ಬಗ್ಗೆ ಚಾಡಿ ಹೇಳಿದ ಗೋಪಿಯರು

**ತತಃ ಕ್ವಣನ್ನೂಪುರಶೋಭಿಪಾದಾಃ**
**ಸ್ತ್ರಿಯೋ ವಿದಗ್ಧೈರನುಮೇಯಮಧ್ಯಾಃ।**
**ಶುಚಿಸ್ಮಿತಾಃ ಕುಂಡಲಶೋಭಿಗಂಡಾ**
**ನ್ಯವೇದಯಂಸ್ತಚ್ಚರಿತಾನಿ ಮಾತುಃ ॥ ೪೩ ॥**

ಬಳಿಕ ಧ್ವನಿಗೈಯ್ಯುವ ನೂಪುರಗಳಿಂದ ಕಂಗೊಳಿಸುವ ಪಾದಗಳ, ನಿಪುಣರೂ ಸಹ ಊಹಿಸಿ ಮಾತ್ರ ತಿಳಿಯುವಂತಹ ತೆಳುನಡುವಿನ, ನಿರ್ಮಲ ಮಂದಹಾಸದ, ಕುಂಡಲಗಳಿಂದ ಶೋಭಿಸುವ ಕೆನ್ನೆಗಳ ಗೋಪಿಯರು ಶ್ರೀಕೃಷ್ಣನ ಚೇಷ್ಟೆಗಳನ್ನು ಯಶೋದೆಗೆ ನಿವೇದಿಸಿಕೊಂಡರು.

ವಿ. : ೧. ಇಲ್ಲಿಂದ ಮುಂದಿನ ಶ್ಲೋಕಗಳಲ್ಲಿ ಶ್ರೀಕೃಷ್ಣನ ಬಗೆಬಗೆಯ ಚೇಷ್ಟೆಗಳ ರೋಚಕ ವಿವರಗಳು ಬಂದಿವೆ ; ವಿದಗ್ಧ – ಪ್ರೌಢ.

೨. ಇಲ್ಲಿಯ ಗೋಪಿಯರ ವರ್ಣನೆ ಅವರು ಲಕ್ಷಣವತಿಯರು; ಆದ್ದರಿಂದಲೇ ಉತ್ತಮ ಸ್ತ್ರೀಯರು ಎಂಬ ವಿಷಯಕ್ಕೂ ದ್ಯೋತಕ. ಮೂಲತಃ ಅವರೆಲ್ಲಾ ಅಪ್ಸರೆಯರು ಎಂಬ ಮಾತು ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ[೩] : ಪರಮಾಪ್ಸರಸಃ ಪುರಾ ಯಾಃ.

---

೧. ''ಯದ್ಯದ್ವಿಭೂತಿಮತ್ಸತ್ತ್ವಮ್''(ಗೀತಾ.೧೦/೪೧) ಇತಿ ವಾಕ್ಯಾತ್ ಕ್ಷೀರೇ ಸ್ವಸ್ಯ ವಿಶೇಷಸನ್ನಿಧಾನಂ ಸೂಚಯಿತುಮಿದಮುಕ್ತಮ್ । -ವ್ಯಾ.

೨. ಅತ್ರ ವಿರಸಾ ತ್ವಂ ಸಮುಝ್ಝಸೀತ್ಯನೇನಾತಿಮನೋಹರೇ ಮಯಿ ಅನುರಾಗಾಭಾವಃ ಕಾಮಿನ್ಯಾಸ್ತವ ನೋಚಿತಃ ಸ್ನಿಗ್ಧಂ ನ ತನ್ಮಾಂ ತ್ಯಜೇದಿತ್ಯನೇನಾನುರಾಗೇಣಾಹಂ ವಶ್ಯಃ ಮುಗ್ಧೇ ಪದ್ಮಾಕ್ಷೀತ್ಯನೇನ ತಸ್ಯಾ ವಶೀಕರಣಾ-ಯಾನುನಯಶ್ಚ ದ್ಯೋತ್ಯತೇ । -ವ್ಯಾ.

೩. ಅಗ್ರೇ ದ್ವಿಜತ್ವತ ಉಪಾವಹದೇಷ ನೀಲಾಂ ಗೋಪಾಂಗನಾ ಅಪಿ ಪುರಾ ವರಮಾಪಿರೇ ಯತ್ ।
ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ ಭೂಯಾತ್ ತವೇತಿ ಪರಮಾಪ್ಸರಸಃ ಪುರಾ ಯಾಃ ॥(೧೩./೫೦)

### ಶ್ರೀಕೃಷ್ಣನ ಬಗ್ಗೆ ಗೋಪಿಗೆ ಕೋಪ ಬಾರದಿರಲು ಕಾರಣ

ಯದಾऽऽತ್ಮಜಸ್ತೇ ಪಿಬತಿ ಸ್ಮ ದುಗ್ಧಂ
ವಿಭಿದ್ಯ ಪಾತ್ರಾಣಿ ತದಾ ಮಮಾಸೀತ್ ।
ನ ಮನ್ಯುರುತ್ಸರ್ಪಿತದೀಯದಂತ-
[೧]ದೃಗಂತಕಾಂತಿಂ ಹೃದಿ ತರ್ಕಯಂತ್ಯಾಃ[೨] ॥ ೪೪ ॥

ನಿನ್ನ ಮಗ ಪಾತ್ರೆಗಳನ್ನು ಒಡೆದು ಹಾಲು ಕುಡಿಯತೊಡಗಿದಾಗ, ಅದರಲ್ಲಿ ಅವನ ಹೊರಹೊಮ್ಮಿದ ದಂತಗಳ ಹಾಗೂ ಕುಡಿನೋಟಗಳ ಕಾಂತಿಯನ್ನು ಚಿಂತಿಸತೊಡಗಿದ ನನ್ನ ಮನಸ್ಸಿನಲ್ಲಿ ಅವನ ಬಗ್ಗೆ ಕೋಪವು ಹುಟ್ಟಲೇ ಇಲ್ಲ.

ವಿ. : ೧. ಶ್ರೀಕೃಷ್ಣನ ನೋಟ ಹಾಗೂ ಮುಗುಳ್ನಗೆಗಳು ಅವನ ಬಗ್ಗೆ ಭಕ್ತಿ ಉಕ್ಕಿಸುವ ಶ್ರೇಷ್ಠ ಸಾಧನಗಳು ಎಂಬ ಮುಖ್ಯವಿವರ ಇಲ್ಲಿದೆ.

೨. ಅವನ ನೋಟ ಹಾಗೂ ಮಂದಹಾಸಗಳಲ್ಲಿ ಅವನ ನಿರ್ದೋಷತ್ವವು ಸ್ಫುಟವಾಗಿ ವ್ಯಕ್ತವಾಗುತ್ತಿತ್ತು ಎಂದು ಭಾವ.

೩. ಶ್ರೀಕೃಷ್ಣನ ಕಾಂತಿಯನ್ನು ಕಂಡ ಅವಳಿಗೆ ಅದು ಹಾಲು ಎಂಬ ಭ್ರಮೆಯುಂಟಾಗಿ ಕೃಷ್ಣನು ಹಾಲನ್ನು ಕದ್ದಿದ್ದರ ಬಗ್ಗೆ ಕೋಪ ಹುಟ್ಟದಂತಾಯಿತು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

### ಬೈಯ್ಯ ಬಂದ ಗೋಪಿಯರಿಗೆ ಶ್ರೀಕೃಷ್ಣ ಮಾಡಿದ ಚೇಷ್ಟೆ

ಪಯಃ ಪ್ರಮುಷ್ಣನ್ ಸಖಿ ಭರ್ತ್ಸನಾರ್ಥಂ
ಸಮಾಗತಾನಾಮಪಹೃತ್ಯ ಚೇತಃ ।
ಸ್ವಕೃತ್ಯಸಾಧ್ಯಾನ್ಯವಲಂಬ್ಯ ಕಂಠಂ
ಜಿಘೃಕ್ಷತಿ ಸ್ವೈರಮಯಂ ಸುತಸ್ತೇ ॥ ೪೫ ॥

"ಅಮ್ಮ ! ಹಾಲು ಕದಿಯುವ ನಿನ್ನ ಮಗ [೩]ಶ್ರೀಕೃಷ್ಣನು, ಅವನನ್ನು ಬೆದರಿಸಲೆಂದು ತೆರಳಿದ ನಮ್ಮ ಮನಸ್ಸನ್ನು ಅಪಹರಿಸಿ, [೪]ತನ್ನ ಕೃತ್ಯಕ್ಕೆ ನೆರವಾಗುವ ಪಾತ್ರೆಗಳನ್ನು ಹಿಡಿದು ನಮ್ಮ ಬಾಯನ್ನು ಕಟ್ಟಿಸಿ, ನಮ್ಮ [೫]ಕಂಠವನ್ನೇರಿ ಗಟ್ಟಿಯಾಗಿ ಹಿಡಿಯ ಬಯಸುವನು".

---

೧. ಕ್ಷೀರಧಾರಾಯಾಂ ಕೃಷ್ಣದಂತದೃಗಂತಧವಲಕಾಂತಿಭ್ರಾಂತ್ಯಾ ಕೃಷ್ಣಸ್ಯಾಪರಾಧಾಭಾವಂ ಮತ್ವಾ ಕೋಪೋ ನಾಸೀದಿತ್ಯರ್ಥಃ । -ವ್ಯಾ.

೨. ಭ್ರಾಂತಿರಲಂಕಾರಃ । ಭ್ರಾಂತಿರ್ವಿಪರ್ಯಯಜ್ಞಾನಮಿತ್ಯುಕ್ತತ್ವಾತ್ । -ವ್ಯಾ.

೩. ಸ್ತ್ರೀಣಾಂ ಮನೋಹರಃ ಕೃಷ್ಣ ಇತಿ ಭಾವಃ । -ವ್ಯಾ.

೪. ಸ್ವಲಾವಣ್ಯಾತಿಶಯೇನಾಪಹೃತ್ಯ ಸ್ವಸ್ಯ ಕೃತ್ಯಾ ಪ್ರಯತ್ನೇನಾಸಾಧ್ಯಾನಿ ದೂರಸ್ಥಾನಿ ದುಗ್ಧಪಾತ್ರಾಣೀತ್ಯರ್ಥಃ । -ವ್ಯಾ.

೫. ಕಂಠಂ ಚೇತಸೋಪಹತತ್ವಾತ್ ಸ್ತಂಭೀಭೂತಾನಾಮಸ್ಮಾಕಂ ಕಂಠಂ ಅವಲಂಬ್ಯ ಆರುಹ್ಯ ಸ್ವೈರಂ ಸ್ವೇಚ್ಛಯಾऽ-ಸ್ಮಚ್ಛಂಕಾಭಾವಾದಿತಿ ಭಾವಃ । -ವ್ಯಾ.

ವಿ. : ತನ್ನನ್ನು ಬೆದರಿಸಲು ಬಂದವರ ಕತ್ತನ್ನೇರಿ, ಅವರನ್ನೇ ಬಳಸಿಕೊಂಡು ಪಾತ್ರೆಗಳಿಗೆ ಕೈಹಾಕುವ ಕೃಷ್ಣನ ಚಾತುರ್ಯದ ವರ್ಣನೆ ಇದರಲ್ಲಿದೆ; ಸ್ವೈರಂ - ಸ್ವೇಚ್ಛೆಯಿಂದ.

**ತಾನು ನಂದಸುತನಲ್ಲ ಎಂದು ಸಾರಿದ ಶ್ರೀಕೃಷ್ಣ**

**ಯದೀದೃಶಂ ಕರ್ಮ ಕರೋಷಿ ಕೃಷ್ಣ**
**ನ ತರ್ಹಿ ನಂದಸ್ಯ ಸುತಸ್ತ್ವಮನ್ಯಃ।**
**ಇತೀರಿತೇ ಹಂತ ಹಸನ್ ಯಶೋದೇ**
**ಬಹೂನ್ಯನಿಷ್ಟಾನಿ ಸ ನಸ್ತನೋತಿ ॥ ೪೬ ॥**

"ಕೃಷ್ಣ ! ಇಂತಹ ಕಾರ್ಯಗಳನ್ನು ನೀನು ಮಾಡುವುದಿದ್ದಲ್ಲಿ ನೀನು ನಂದನ ಮಗನಲ್ಲ ; ಬೇರೆಯವನೇ ಸರಿ" ಎಂದಾಗ "ಅಯ್ಯೋ ಯಶೋದೆ ! ಅವನು ನಗುತ್ತಲೇ ನಮಗೆ ಬಹುಬಗೆಯ ಅನಿಷ್ಟಗಳನ್ನು ಉಂಟುಮಾಡುವನು".

ವಿ. : ೧. ಹೀಗೆ ಬೈದಾಗ ಶ್ರೀಕೃಷ್ಣನು ತಾನು ನಂದನ ಮಗನಲ್ಲ ಎಂಬುದು ಸತ್ಯ ಎಂದು ತಿಳಿಸುವಂತೆ ಬಹುಬಗೆಯ ಅನಿಷ್ಟಗಳನ್ನು ಮಾಡುವನು.

೨. ಇದರಿಂದ ಶ್ರೀಕೃಷ್ಣನೇ ತಾನು ನಂದನ ಮಗನಲ್ಲ ಎಂದು [1]ಲೋಕಕ್ಕೆ ಸಾರಿದವನು ಎಂದು ತಾತ್ಪರ್ಯ.

**'ಅಹಂ ಬ್ರಹ್ಮಾಸ್ಮಿ' ಎಂದ ಶ್ರೀಕೃಷ್ಣ**

**ಇದಂ ಹಿ ದೇವಸ್ಯ ಸಮರ್ಪಣಾರ್ಹ-**
**ಮಿತೀರಿತೇ ತರ್ಹ್ಯಹಮೇವ ದೇವಃ।**
**ಸ ಇತ್ಥಮಾಭಾಷ್ಯ ತದೇವ ಭುಂಕ್ತೇ**
**ನ ದೇವಿ ಪುತ್ರಸ್ತವ ದೇವಭಕ್ತಃ ॥ ೪೭ ॥**

"ಇದು ದೇವರ ಸಮರ್ಪಣೆಗೆ ಮೀಸಲು" ಎಂದು ನಾವು ತಿಳಿಸಿದಾಗ, ಆ ಶ್ರೀಕೃಷ್ಣನು ಹಾಗಿದ್ದಲ್ಲಿ "ನಾನೇ ಆ ದೇವರು" ಎಂದು ನುಡಿದು ಅದನ್ನೇ ತಿಂದು ಬಿಡುವನಲ್ಲ! ಮಹಾರಾಣಿ! ನಿನ್ನ ಮಗ ದೇವಭಕ್ತನಲ್ಲ.

ವಿ. : ೧. ಶ್ರೀಕೃಷ್ಣನು ಕದಿಯ ಬಂದಾಗ ಆ ಪದಾರ್ಥಗಳು ದೇವರನೈವೇದ್ಯಕ್ಕೆಂದು ಮೀಸಲು ಎಂದು ಗೋಪಿಯರು ತಿಳಿಸಿದರೂ ಅವನು ನಾನೇ ದೇವರು ಎನ್ನುತ್ತಾ ಅವೆಲ್ಲಾ ತನಗೇ ಮೀಸಲು ಎಂದು ತಿಂದುಬಿಡುವನು ಎಂಬುದು ಗೋಪಿಯರ ಆಕ್ಷೇಪದ ಮುಖ್ಯಾಂಶ.

---

೧. ಹಂತೇತ್ಯನೇನ ಬಹೂನ್ಯನಿಷ್ಟಾನಿ ಕೃತಾನಿ ಚೇತ್ । ಏತಾದೃಶಸ್ತ್ವಂ ನಂದಸ್ಯ ಸುತೋ ನ ಭವಸೀತಿ ಸುತರಾಂ ವಕ್ಷ್ಯಂತಿ ತನ್ಮಮೇಷ್ಟಮಿತಿ ಸೂಚಯತೀತಿ ಭಾವಃ। -ವ್ಯಾ.

೨. ಈ ಮೂಲಕ ಶ್ರೀಕೃಷ್ಣ ಸ್ವತಃ ತಾನು ಪರಬ್ರಹ್ಮ ಎಂಬ ತತ್ತ್ವವನ್ನು ತಿಳಿಸಿದ ಎಂದು ಭಾವ.

೩. ಗೋಪಿಯರು ಶ್ರೀಕೃಷ್ಣನನ್ನು [1]ದೇವಭಕ್ತನಲ್ಲ ಎಂದುದು ಸತ್ಯವೇ ಆಗಿತ್ತು. ಏಕೆಂದರೆ ಅವನು ಸಾಕ್ಷಾತ್ ಪರದೇವತೆಯಾದ ಶ್ರೀಹರಿಯೇ ಅಲ್ಲವೇ!

೪. ಹೀಗೆಯೇ ಮುಂದೆ ತಿಳಿಸುವಂತೆ ಮೇಲ್ನೋಟಕ್ಕೆ ನಿಂದೆಯಂತೆ ಕಾಣುವ ಈ ಮಾತುಗಳೆಲ್ಲಾ ವಸ್ತುತಃ ಸ್ತೋತ್ರವೇ ಆಗಿವೆ ಎಂಬುದು ಗಮನಾರ್ಹ.

೫. 'ಅಹಂ ಬ್ರಹ್ಮಾಸ್ಮಿ' ಎಂಬ ವೇದವಚನಕ್ಕೆ ಮಾಯಾವಾದಿಗಳು ಹೇಳುವ ಅರ್ಥ ಆಸ್ತಿಕ ಜನರಿಗೆ ಸರ್ವಥಾ ಒಪ್ಪಿಗೆಯಾಗದು ಎಂಬುದು ಗೋಪಿಯರ ಈ ಮಾತಿನಿಂದ ಸ್ಫುಟಪಡುವುದು.

**ಉದರದಲ್ಲಿ ಬ್ರಹ್ಮಾದಿಗಳನ್ನು ಧರಿಸಿದ ಶ್ರೀಕೃಷ್ಣ**

**ಗೃಹೇ ಗೃಹೇಽಯಂ ನವನೀತದುಗ್ಧ-**
**ದಧೀನಿ ಸರ್ವಾಣ್ಯಪಹೃತ್ಯ ಭುಂಕ್ತೇ ।**
**ತಥಾಪಿ ತೃಪ್ತಿಂ ನ ಸುತಸ್ತವೈತಿ**
**ಕಿಮಸ್ಯ ಭೂತಾನಿ ವಸಂತಿ ಕುಕ್ಷೌ ॥ ೪೮ ॥**

ಮನೆಮನೆಗಳಲ್ಲಿ ಇವನು ಬೆಣ್ಣೆ , ಹಾಲು, ಮೊಸರುಗಳನ್ನೆಲ್ಲ ಅಪಹರಿಸಿ, ತಿನ್ನುವನು. ಆದರೂ ನಿನ್ನ ಮಗ ತೃಪ್ತಿಹೊಂದುವುದಿಲ್ಲವಲ್ಲ! ಇವನ ಉದರದಲ್ಲಿ ಭೂತಗಳೇನಾದರೂ ನೆಲೆಸಿವೆಯೇ?

ವಿ. : ಶ್ರೀಕೃಷ್ಣನ [2]ಬಹುಭೋಕ್ತೃತ್ವವು ಇಲ್ಲಿ ನಿರೂಪಿತವಾಗಿದೆ. ಹೆಚ್ಚು ತಿನ್ನುವವರನ್ನು 'ಹೊಟ್ಟೆಯಲ್ಲಿ ದೆವ್ವ ಹೊಕ್ಕವನು' ಎಂಬುದು ಲೋಕರೂಢಿ; ಆ ಅರ್ಥದಲ್ಲಿ ಇದು ನಿಂದೆ; ಆದರೆ ಇಲ್ಲಿ [3]ಭೂತಾನಿ ಎಂಬುದಕ್ಕೆ 'ಬ್ರಹ್ಮಾದಯೋ ಹಿ ಭೂತಾನಿ' ಎಂಬ ಮಾತಿನಂತೆ ಬ್ರಹ್ಮರುದ್ರಾದಿ ದೇವತೆಗಳು ಎಂದರ್ಥ. ಇದರಿಂದ ಕೃಷ್ಣನ ಉದರದಲ್ಲಿ ಬ್ರಹ್ಮಾದಿ ದೇವತೆಗಳು ಆಶ್ರಯಪಡೆದು ನೆಲೆಸಿರುವರು ಎಂಬ ತತ್ತ್ವ ಸೂಚಿತವಾಗಿ ಅವನು [4]ಸರ್ವೋತ್ತಮ ಎಂಬ ಅಂಶ ದೃಢಪಡುವುದು: ಕುಕ್ಷಿಗಂ ಯಸ್ಯ ವಿಶ್ವಂ ಸದಾಽಜಾದಿಕಮ್ – ದ್ವಾದಶಸ್ತೋತ್ರ(೮/೧೧); ಕುಕ್ಷಿ – ಉದರ.

---

೧. ಹೇ ದೇವಿ ಯಶೋದೇ ತವ ಪುತ್ರಃ ದೇವಭಕ್ತೋ ನ ಭವತಿ ವೈಷ್ಣವಪುತ್ರೋಽಪ್ಯಯಂ ಮಾಯಾವಾದಿವತ್ ಅಹಂ ಬ್ರಹ್ಮಾಸ್ಮೀತಿ ವದತೀತಿ ನಿಂದಾಭಾಸಃ। ಸ್ವಸ್ಯೈವ ಪರದೇವತ್ವಾದಿತಿ ತತ್ತ್ವಮ್ । –ವ್ಯಾ.

೨. ಪ್ರತಿಗೃಹಂ ಕೃಷ್ಣಚೌರ್ಯಸ್ಯೈವಾಘೋಷ್ಯಮಾಣತ್ವಾದಿತಿ ಭಾವಃ। –ವ್ಯಾ.

೩. ಭೂತಾನಿ ಬ್ರಹ್ಮರಾಕ್ಷಸಾದಿಭೂತಾನಿ ವಸಂತಿ ಕಿಮ್ । –ವ್ಯಾ.

೪. ಪಂಚಮಹಾಭೂತಾನಾಮಪ್ಯಾಧಾರೀಭೂತಾಖಿಲಂಭರತನೂದರಸ್ಯಾಸ್ಯೋದರಪೂರಕಂ ಬ್ರಹ್ಮಾಂಡಮಪಿ ನ ಭವತಿ ಅಲ್ಪಮಿದಂ ನವನೀತಾದಿಕಂ ನ ಕಥಂಚಿತ್ಪೂರಕಮ್ ಅತೋ ವಸ್ತುಕೃತಾ ನಾಸ್ಯ ತೃಪ್ತಿಃ ಕಿಂತು ಸ್ವಭಾವಾ-ದೇವೇತ್ಯಾಂತರೋ ಭಾವಃ। –ವ್ಯಾ.

### ಕರುಗಳ ಹಗ್ಗವನ್ನು ಬಿಚ್ಚಿದ ಕಾರ್ಯದ ಅಂತರಾರ್ಥ

ನ ಮುಂಚ [೧]ವತ್ಸಾಂಸ್ತ್ವಮಿಹೇತ್ಯ ಬದ್ಧಾ-
ನಿತೀರಿತೇ ಪುಣ್ಯಪದೇ ಯಶೋದೇ ।
ಸ್ಮಿತೋಲ್ಲಸದ್ವಕ್ತ್ರಮದಾತ್ ಸುತಸ್ತೇ
ಸ್ವಭಾವ ಇತ್ಯುತ್ತರಮುತ್ತರಜ್ಞಃ ॥ ೪೯ ॥

"ಕಟ್ಟಿದ ಕರುಗಳನ್ನು ನೀನು ಇಲ್ಲಿಗೆ ಬಂದು ಬಿಚ್ಚಿದಿರು" ಎಂದು ನಾವು ಹೇಳಿದರೆ "ಪುಣ್ಯನಾಮದ ಯಶೋದೆಯೇ ! ಉತ್ತರನೀಡುವಲ್ಲಿ ನಿಪುಣನಾದ ನಿನ್ನ ಮಗ ಈ ಕೃಷ್ಣ ಮಂದಹಾಸದಿಂದ ಹೊಳೆಯುವ ಮುಖದಿಂದ "ಅದು ಸ್ವಭಾವ[೨]" ಎಂದುತ್ತರಿಸುವನಲ್ಲ!

ವಿ. : 'ಕಟ್ಟಿದ್ದನ್ನು ಬಿಚ್ಚಿ ಹಾಕುವುದು ತನ್ನ ಸ್ವಭಾವ' ಎಂಬ ಶ್ರೀಕೃಷ್ಣನ ಉತ್ತರ ಅವನು ಅನಾದಿ ಕಾಲದಿಂದ ತನ್ನ ಭಕ್ತರ ಕಟ್ಟನ್ನು ಬಿಡಿಸುವ [೩]ಮುಕ್ತಿದಾಯಕ ಎಂಬ ತತ್ತ್ವಕ್ಕೆ ದ್ಯೋತಕ: ಭವಪಾಶಾಚ್ಚ ಮೋಚಕಃ ; ವಕ್ತ್ರ – ಮುಖ.

### ಒರಳನ್ನು ಎತ್ತಿ ಒಯ್ದ ಶ್ರೀಕೃಷ್ಣ

ಕಸ್ಮಾದಂಗ ನಯಸ್ಯುಲೂಖಲಮಿತೋ ದುಗ್ಧಸ್ಯ ಪಾತ್ರಾದಧಃ
ಸ್ನಿಗ್ಧಂ ಸ್ಥಾಪಯಿತುಂ ತತಶ್ಚ ಕಿಮಿತಿ ಪ್ರೋಕ್ತೇ ಪ್ರಭುರ್ಯೋಽಗದತ್ ।
ಮಧ್ಯಸ್ಯಾಗ್ರಸುಜಾತಸುಸ್ಮಿತಪಯಃಪಾತ್ರಾನನಸ್ಯೋಪಮಾಂ
ಮುಗ್ಧೇ ವೀಕ್ಷಯಿತುಂ ತವೇತಿ ಸ ಪಟುರ್ದುಷ್ಕರ್ಮಣಾಂ ಗೂಹನೇ ॥ ೫೦ ॥

"ಅಯ್ಯ! ಈ ಒರಳನ್ನೇತಕ್ಕೆ ನೀನು ಇಲ್ಲಿಂದ ಒಯ್ಯುತ್ತಿರುವೆ?" ಎಂದರೆ, "ಹಾಲಿನ ಪಾತ್ರೆಯ ಕೆಳಗೆ ಪ್ರಿಯವಾದ ಇದನ್ನು ಇರಿಸಲೆಂದು ಒಯ್ಯುವೆ" ಎಂದು ಪ್ರಭುವಾದ ಇವನು ನುಡಿದ; "ಅದರಿಂದೇನು?" ಎಂದು ಕೇಳಿದರೆ, ಇವನು ಹೇಳಿದ: "ಮುಗ್ಧೆಯೇ! ಮೇಲ್ಭಾಗದಲ್ಲಿ

---

೧. ವತ್ಸಾನ್ ಮುಂಚನ್ ಕ್ವಚಿದಸಮಯಾನ್ ಕ್ರೋಶಸಂಜಾತಹಾಸಃ
ಸ್ತೇಯಂ ಸ್ವಾದ್ವತ್ತ್ಯಥ ದಧಿ ಪಯಃ ಕಲ್ಪಿತೈಃ ಸ್ತೇಯಯೋಗೈಃ ।
ಮರ್ಕಾನ್ ಭೋಕ್ಷ್ಯನ್ ವಿಭಜತಿ ಸ ಚೇನ್ನಾತ್ತಿ ಭಾಂಡಂ ಭಿನತ್ತಿ
ದ್ರವ್ಯಾಲಾಭೇ ಸುಗೃಹಕುಪಿತೋ ಯಾತ್ಯುಪಕ್ರೋಶ್ಯ ತೋಕಾನ್ ॥ –ಭಾ.(೧೦/೮/೨೯)

೨. ಲೋಕೇಽಪ್ಯಕಾರ್ಯಮಿದಂ ತ್ವಯಾ ನ ಕರ್ತವ್ಯಮಿತಿ ಬಹುಧಾ ಸ್ವಕೀಯೈರುಕ್ತೇಽಪಿ ತತ್ರೈವಾಸಕ್ತಚಿತ್ತಾಃ ಮಮಾಯಂ ಸ್ವಭಾವ ಇತಿ ಯಥಾ ವದಂತಿ ತಥೇತಿ ಭಾವಃ । –ವ್ಯಾ.

೩. "ಭವಪಾಶಾಚ್ಚ ಮೋಚಕಃ", "ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ"★ "ದೇವಸ್ಯೈಷ ಸ್ವಭಾವೋಽಯಮ್" ಇತಿ ವಚನಾತ್ ಬಂಧಮೋಚಕತ್ವಂ ಮಮ ಸ್ವಭಾವ ಇತಿ ಹೃದಯಮ್ । –ವ್ಯಾ.

★ ವಿಷ್ಣುತತ್ತ್ವನಿರ್ಣಯೋದ್ಧೃತಪುರಾಣವಚನ

ಮೂಡಿದ ಮಂದಹಾಸವೆಂಬ ಹಾಲಿನ ಪಾತ್ರೆಯ ಮುಖದ, ನಿನ್ನ ನಡುವಿನ ಸಾದೃಶ್ಯವನ್ನು ಕಾಣಲೆಂದು''ಎಂದು; ಇವನು ತನ್ನ ದುಷ್ಕರ್ಮಗಳನ್ನು ಮುಚ್ಚಿಹಾಕುವುದರಲ್ಲಿ ಮಹಾ ನಿಪುಣ.

ವಿ. : ೧. ಶ್ರೀಕೃಷ್ಣನು ಹಾಗೆ ಒರಳನ್ನು ಒಯ್ಯುತ್ತಿದ್ದುದು ಅದರ ಮೇಲೆ ತಾನು ನಿಂತು ಮೇಲಿರಿಸಿದ ಹಾಲಿನ ಪಾತ್ರೆಗಳನ್ನು ತೆಗೆದುಕೊಳ್ಳಲೆಂದು. ಆದರೆ ಅದನ್ನು ಗೋಪಿಯು ನೋಡಿ ಕೇಳಿದಾಗ, ಅದಕ್ಕೆ ಅವನು ಕೊಟ್ಟ ಉತ್ತರ: ''ಈ ಒರಳಿನಲ್ಲಿ ನಿನ್ನ ಸಾದೃಶ್ಯವನ್ನು ಕಾಣಲೆಂದು ಹಾಗೆ ಮಾಡಿದೆ'' ಎಂಬುದು. ಹೀಗೆ ಹೇಳುವ ಮೂಲಕ ತನ್ನ ಮುಖ್ಯ ಉದ್ದೇಶವನ್ನು ಅವಳಿಗೆ ತಿಳಿಯದಂತೆ ಮರೆಮಾಚುವುದು ಅವನ ಕೌಶಲವಾಗಿತ್ತು. ಇದನ್ನು ಗಮನಿಸಿದ ಗೋಪಿಯು ತನ್ನ ತಪ್ಪನ್ನು ಮುಚ್ಚಿಕೊಳ್ಳುವುದರಲ್ಲಿ ಅವನು ಎಷ್ಟು ಜಾಣ ಎಂದು ನಿವೇದಿಸುತ್ತಿರುವಳು.

೨. ಇಲ್ಲಿಯ [೧]''ದುಷ್ಕರ್ಮಣಾಂ ಗೂಹನೇ'' ಎಂಬ ವಾಕ್ಯದಿಂದ ತನ್ನ ಭಕ್ತರ ಪಾಪಗಳನ್ನು ಪರಿಹರಿಸುವ ಕರುಣಾಳು ಎಂಬ ತತ್ತ್ವವು ಸೂಚಿತ ; ಉಲೂಖಲ – ಒರಳು ; ಪಟು – ನಿಪುಣ.

**ಮೈಯೆಲ್ಲಾ ಕಣ್ಣಿನ ಶ್ರೀಕೃಷ್ಣ**

**ಕ್ವಚಿತ್ಕರೇಣೈವ ಸ ದುಗ್ಧಭಾಜನಂ**
**ಕ್ವಚಿಚ್ಚ ಪಾದೇನ ಸಮೀಕ್ಷತೇ ಸಖಿ ।**
**ಸಮಾಗತಾಃ ಪಶ್ಯತಿ ಪೃಷ್ಠತಸ್ತದಾ**
**ಸ ವಿಶ್ವತಶ್ಚಕ್ಷುರಿವಾಸ್ತಿ ಬಾಲಕಃ ॥ ೫೧ ॥**

ಕೆಲವೆಡೆ ಇವನು ಹಾಲಿನ ಪಾತ್ರೆಯನ್ನು ಕೈಯಿಂದ, ಮತ್ತೆ ಕೆಲವೆಡೆ ಅದನ್ನು ಪಾದದಿಂದ ನೋಡಿಬಿಡುವನು; ನಾವು ಹಿಂದಿನಿಂದ ಹೋದರೂ ಇವನು ಗಮನಿಸಿಬಿಡುವನು; ''ಗೆಳತಿ! ನಿನ್ನ ಮಗ ಎಲ್ಲೆಡೆ ಕಣ್ಣಿರುವವನಂತೆ ಇರುವನಲ್ಲ!''

ವಿ. : ೧. ಶ್ರೀಕೃಷ್ಣ ಯಾವುದೇ ರೀತಿಯಲ್ಲಾದರೂ ಹಾಲಿನ ಪಾತ್ರೆಯನ್ನು ಗಮನಿಸುವುದು, ಅವನನ್ನು ಹಿಡಿಯಲು ಹೊರಟ ಅವರನ್ನು ಗುರುತಿಸಿ ದಾರಿತಪ್ಪಿಸುವುದು ಗೋಪಿಯರಿಗೆ ದೊಡ್ಡ ಒಗಟಾಗಿತ್ತು. ಅವನ ಕಣ್ಣು ತಪ್ಪಿಸುವುದು ಅಸಾಧ್ಯ ಎಂಬುದು ಅವರಿಗೆ ಮನವರಿಕೆಯಾಗಿ ಅವನು ಮೈಯೆಲ್ಲಾ ಕಣ್ಣಿನವನು ಎಂದು ನುಡಿಯುತ್ತಿರುವರು.

೨. ಇಲ್ಲಿ [೨]ವಿಶ್ವತಶ್ಚಕ್ಷುಃ ಎಂಬುದು ಶ್ರೀಹರಿಯ ಲಕ್ಷಣ ; ಆ ಮೂಲಕ ಅವರು ಶ್ರೀಕೃಷ್ಣನು ಪರಬ್ರಹ್ಮ ಎಂದು ಗುರುತಿಸಿದಂತಾಯಿತು ಎಂಬ ಧ್ವನಿಯೂ ಇಲ್ಲಿದೆ.

---

೧. ಉಪರ್ಯಧೋವಿಸ್ತೃತಸ್ಯ ಮಧ್ಯೇ ಕೃಶಸ್ಯ ಉಲೂಖಲಸ್ಯೋಪರಿ ಹರಿದ್ರಾದಿರಂಜತಪಯಃಪಾತ್ರೇ ನಿಹಿತೇ ಉಪರಿಸ್ಥಿತಮಂದಹಾಸೋಪೇತಕುಂಕುಮಾಸಕ್ತಮುಖಸ್ಯ ತವ ಮಧ್ಯಸ್ಯೋಪಮಾ ಭವಿಷ್ಯತೀತ್ಯುಕ್ತ್ವಾ ಮಾಂ ವಶೀಕೃತ್ಯ ಚೌರ್ಯಂ ಚಾತುರ್ಯೇಣ ಗೂಹಿತವಾನಿತ್ಯಭಿಪ್ರಾಯಃ । ದುಷ್ಕರ್ಮಣಾಂ ಗೂಹನೇ ಪಟುರಿತ್ಯನೇನ ಪಾಪಪರಿಹಾರಸಾಮರ್ಥ್ಯಂ ಧ್ವನ್ಯತೇ। –ವ್ಯಾ.

೨. ಸರ್ವತ್ರ ಜಾಗರೂಕತಾ ಪ್ರೌಢಚೋರಸ್ಯ ಲಕ್ಷಣಮಿತಿ ಭಾವಃ । ''ವಿಶ್ವತಶ್ಚಕ್ಷುರುತ ವಿಶ್ವತೋಮುಖಃ'' (ಋಗ್ವೇದ.೧೦/೮೧/೩.)ಇತಿ ಶ್ರುತೇಃ। ವಿಶ್ವತಶ್ಚಕ್ಷುಸ್ತ್ವಂ ಸಹಜಮಿತಿ ಹೃದಯಮ್ । –ವ್ಯಾ.

### ಮನೆಗಳನ್ನೇ ಬೀಳಿಸಬಲ್ಲ ನಿಪುಣ

ಉಲೂಖಲೇ ತಂ ಯದಿ ಬಂಧಯಾಮೋ
ನಯೇತ್ ತದೋಲೂಖಲಮೇವ ಬಾಲಃ।
ಧ್ರುವಂ ಗೃಹಸ್ತಂಭವರೇ ನಿಬದ್ಧೋ
ಗೃಹಾಣ್ಯಸೌ ಪಾತಯಿತುಂ ಸಮರ್ಥಃ॥ ೫೨ ॥

ಒರಳಿಗೆ ಕಟ್ಟಿಹಾಕೋಣ ಎಂದರೆ ಆ ಬಾಲಕನು ಆಗ ಒರಳನ್ನೇ ಎಳೆದೊಯ್ಯುದ್ಬಿಡುವನು; ಮನೆಯ ದೊಡ್ಡಕಂಬಕ್ಕೇನಾದರೂ ಕಟ್ಟಿದರೆ, ಅವನು ನಿಶ್ಚಯವಾಗಿಯೂ ಮನೆಗಳನ್ನೇ ಬೀಳಿಸಬಲ್ಲ ಸಮರ್ಥ!

ವಿ. : ೧. ಈ ಮೂಲಕ ಶ್ರೀಕೃಷ್ಣನು ಮುಂದೆ ಮಾಡುವ ಯಮಲಾರ್ಜುನಭಂಜನದ ಸೂಚನೆಯೂ ಬಂದಿದೆ ಎಂದು ತಿಳಿಯಬಹುದು.

೨. ಒರಳಿಗೆ ಕಟ್ಟಿದಾಗ ಅದನ್ನೇ ಎಳೆದೊಯ್ಯುವ ಇವನು ಕಂಭಕ್ಕೆ ಕಟ್ಟಿದರೆ ಅದನ್ನು ಎಳೆದೊಯ್ದು ಮನೆಗಳನ್ನೇ ಬೀಳಿಸಿಯಾನು ಎಂಬ ಕಾರಣದಿಂದ ಕಂಭಕ್ಕೆ ಕಟ್ಟುವ ಕೆಲಸವನ್ನು ತಾವು ಮಾಡಿಲ್ಲ ಎಂಬ ವಿಷಯವನ್ನು ಗೋಪಿಯರು ಇಲ್ಲಿ ತಿಳಿಸುತ್ತಿರುವರು.

### ಬಂಧನಕ್ಕೆ ಸಿಲುಕದ ಶ್ರೀಕೃಷ್ಣ

ವಿಶ್ವಂಭರಸ್ಯಾಸ್ಯ ಹಿ ಬಂಧನಾಯ
ದಾಮಾನಿ ಸಂಪಾದಯಿತುಂ ಕ ಈಶಃ।
ಬದ್ಧಃ ಕಥಂಚಿದ್ಯದಿ ತರ್ಹಿ ಬದ್ಧಾ
ಮಧ್ಯೇ ವಿಲೀನಾ ವಯಮೇವ ನೂನಮ್ ॥ ೫೩ ॥

ವಿಶ್ವವನ್ನೇ ಧರಿಸಿರುವ ಈ ಶ್ರೀಕೃಷ್ಣನ ಬಂಧನಕ್ಕೆ ಹಗ್ಗಗಳನ್ನು ಹೊಂದಿಸಲು ಯಾವನು ತಾನೇ ಸಮರ್ಥನಾದಾನು? ಹೇಗಾದರೂ ಇವನನ್ನು ನಾವೇನಾದರೂ ಬಂಧಿಸಿದರೂ ಸಹ ಅದರ ಮಧ್ಯೆ ನಾವೇ ಸಿಕ್ಕಿಹಾಕಿಕೊಳ್ಳುವುದು ನಿಶ್ಚಿತ.

ವಿ. : ೧. ಶ್ರೀಕೃಷ್ಣನಿಗೆ ಬಂಧನ ಅಶಕ್ಯ ಎಂಬುದನ್ನು ಇಲ್ಲಿ ಮತ್ತೊಂದು ಬಗೆಯಲ್ಲಿ ತಿಳಿಸಿರುವರು.

೨. ಶ್ರೀಕೃಷ್ಣನು ವಿಶ್ವಂಭರನಾದ್ದರಿಂದ ಅವನನ್ನು ಕಟ್ಟಲು ಎಷ್ಟು ಹಗ್ಗಗಳೂ ಸಾಲವು; ವಿಶ್ವದಲ್ಲಿ ಹಗ್ಗಗಳೂ ಸೇರಿರುವುದರಿಂದ ಅವನ್ನು ಭರಿಸಿದವನೂ ಶ್ರೀಕೃಷ್ಣನೇ ಅಲ್ಲವೇ ಎಂಬುದು [೧] ಪೂರ್ವಾರ್ಧದ ಭಾವ.

---

೧. ನೂನಂ ಕೃಷ್ಣಸ್ಯ ನಿತ್ಯಮುಕ್ತತ್ವೇನಾಸಂಗತ್ವೇನ ಚ ಬಂಧಾಯೋಗಾತ್ । ತದ್ಬಂಧನೇ ಸ್ವಪರಿಶ್ರಿತಾಕಾಶಬಂಧನೇನ ಸ್ವಸ್ಯೈವ ಬಂಧನವತ್ ತನ್ಮಧ್ಯಸ್ಥಿತಾ ವಯಮೇವ ಬದ್ಧಾಃ ಭವೇಮ ಇತ್ಯರ್ಥಃ । ಅನೇನಾಪಿ ಯಶೋದಯಾ ಕರಿಷ್ಯಮಾಣಕೃಷ್ಣಬಂಧನಜ್ಞಾನಂ ಸೂಚ್ಯತೇ । -ವ್ಯಾ.

ಮೂಡಿದ ಮಂದಹಾಸವೆಂಬ ಹಾಲಿನ ಪಾತ್ರೆಯ ಮುಖದ, ನಿನ್ನ ನಡುವಿನ ಸಾದೃಶ್ಯವನ್ನು ಕಾಣಲೆಂದು'' ಎಂದು; ಇವನು ತನ್ನ ದುಷ್ಕರ್ಮಗಳನ್ನು ಮುಚ್ಚಿಹಾಕುವುದರಲ್ಲಿ ಮಹಾ ನಿಪುಣ.

ವಿ. : ೧. ಶ್ರೀಕೃಷ್ಣನು ಹಾಗೆ ಒರಳನ್ನು ಒಯ್ಯುತ್ತಿದ್ದುದು ಅದರ ಮೇಲೆ ತಾನು ನಿಂತು ಮೇಲಿರಿಸಿದ ಹಾಲಿನ ಪಾತ್ರೆಗಳನ್ನು ತೆಗೆದುಕೊಳ್ಳಲೆಂದು. ಆದರೆ ಅದನ್ನು ಗೋಪಿಯು ನೋಡಿ ಕೇಳಿದಾಗ, ಅದಕ್ಕೆ ಅವನು ಕೊಟ್ಟ ಉತ್ತರ: ''ಈ ಒರಳಿನಲ್ಲಿ ನಿನ್ನ ಸಾದೃಶ್ಯವನ್ನು ಕಾಣಲೆಂದು ಹಾಗೆ ಮಾಡಿದೆ'' ಎಂಬುದು. ಹೀಗೆ ಹೇಳುವ ಮೂಲಕ ತನ್ನ ಮುಖ್ಯ ಉದ್ದೇಶವನ್ನು ಅವಳಿಗೆ ತಿಳಿಯದಂತೆ ಮರೆಮಾಚುವುದು ಅವನ ಕೌಶಲವಾಗಿತ್ತು. ಇದನ್ನು ಗಮನಿಸಿದ ಗೋಪಿಯು ತನ್ನ ತಪ್ಪನ್ನು ಮುಚ್ಚಿಕೊಳ್ಳುವುದರಲ್ಲಿ ಅವನು ಎಷ್ಟು ಜಾಣ ಎಂದು ನಿವೇದಿಸುತ್ತಿರುವಳು.

೨. ಇಲ್ಲಿಯ [೧] ''ದುಷ್ಕರ್ಮಣಾಂ ಗೂಹನೇ'' ಎಂಬ ವಾಕ್ಯದಿಂದ ತನ್ನ ಭಕ್ತರ ಪಾಪಗಳನ್ನು ಪರಿಹರಿಸುವ ಕರುಣಾಳು ಎಂಬ ತತ್ತ್ವವು ಸೂಚಿತ ; **ಉಲೂಖಲ** – ಒರಳು ; **ಪಟು** – ನಿಪುಣ.

**ಮೈಯೆಲ್ಲಾ ಕಣ್ಣಿನ ಶ್ರೀಕೃಷ್ಣ**

**ಕ್ವಚಿತ್ಕರೇಣೈವ ಸ ದುಗ್ಧಭಾಜನಂ**
**ಕ್ವಚಿಚ್ಚ ಪಾದೇನ ಸಮೀಕ್ಷತೇ ಸಖಿ ।**
**ಸಮಾಗತಾಃ ಪಶ್ಯತಿ ಪೃಷ್ಠತಸ್ತದಾ**
**ಸ ವಿಶ್ವತಶ್ಚಕ್ಷುರಿವಾಸ್ತಿ ಬಾಲಕಃ ॥ ೫೧ ॥**

ಕೆಲವೆಡೆ ಇವನು ಹಾಲಿನ ಪಾತ್ರೆಯನ್ನು ಕೈಯಿಂದ, ಮತ್ತೆ ಕೆಲವೆಡೆ ಅದನ್ನು ಪಾದದಿಂದ ನೋಡಿಬಿಡುವನು; ನಾವು ಹಿಂದಿನಿಂದ ಹೋದರೂ ಇವನು ಗಮನಿಸಿಬಿಡುವನು; ''ಗೆಳತಿ! ನಿನ್ನ ಮಗ ಎಲ್ಲೆಡೆ ಕಣ್ಣಿರುವವನಂತೆ ಇರುವನಲ್ಲ!''

ವಿ. : ೧. ಶ್ರೀಕೃಷ್ಣ ಯಾವುದೇ ರೀತಿಯಲ್ಲಾದರೂ ಹಾಲಿನ ಪಾತ್ರೆಯನ್ನು ಗಮನಿಸುವುದು, ಅವನನ್ನು ಹಿಡಿಯಲು ಹೊರಟ ಅವರನ್ನು ಗುರುತಿಸಿ ದಾರಿತಪ್ಪಿಸುವುದು ಗೋಪಿಯರಿಗೆ ದೊಡ್ಡ ಒಗಟಾಗಿತ್ತು. ಅವನ ಕಣ್ಣು ತಪ್ಪಿಸುವುದು ಅಸಾಧ್ಯ ಎಂಬುದು ಅವರಿಗೆ ಮನವರಿಕೆಯಾಗಿ ಅವನು ಮೈಯೆಲ್ಲಾ ಕಣ್ಣಿನವನು ಎಂದು ನುಡಿಯುತ್ತಿರುವರು.

೨. ಇಲ್ಲಿ [೨] ವಿಶ್ವತಶ್ಚಕ್ಷುಃ ಎಂಬುದು ಶ್ರೀಹರಿಯ ಲಕ್ಷಣ ; ಆ ಮೂಲಕ ಅವರು ಶ್ರೀಕೃಷ್ಣನು ಪರಬ್ರಹ್ಮ ಎಂದು ಗುರುತಿಸಿದಂತಾಯಿತು ಎಂಬ ಧ್ವನಿಯೂ ಇಲ್ಲಿದೆ.

---

೧. ಉಪರ್ಯಧೋವಿಸ್ತೃತಸ್ಯ ಮಧ್ಯೇ ಕೃಶಸ್ಯ ಉಲೂಖಲಸ್ಯೋಪರಿ ಹರಿದ್ರಾದಿರಂಜಿತಪಯಃಪಾತ್ರೇ ನಿಹಿತೇ ಉಪರಿಸ್ಥಿತಮಂದಹಾಸೋಪೇತಕುಂಕುಮಾಸಕ್ತಮುಖಸ್ಯ ತವ ಮಧ್ಯಸ್ಯೋಪಮಾ ಭವಿಷ್ಯತೀತ್ಯುಕ್ತ್ವಾ ಮಾಂ ವಶೀಕೃತ್ಯ ಚೌರ್ಯಂ ಚಾತುರ್ಯೇಣ ಗೂಹಿತವಾನಿತ್ಯಭಿಪ್ರಾಯಃ । ದುಷ್ಕರ್ಮಣಾಂ ಗೂಹನೇ ಪಟುರಿತ್ಯನೇನ ಪಾಪಪರಿಹಾರಸಾಮರ್ಥ್ಯಂ ಧ್ವನ್ಯತೇ। –ವ್ಯಾ.

೨. ಸರ್ವತ್ರ ಜಾಗರೂಕತಾ ಪ್ರೌಢಚೋರಸ್ಯ ಲಕ್ಷಣಮಿತಿ ಭಾವಃ । ''ವಿಶ್ವತಶ್ಚಕ್ಷುರುತ ವಿಶ್ವತೋಮುಖಃ'' (ಋಗ್ವೇದ.೧೦/೮೧/೩.)ಇತಿ ಶ್ರುತೇಃ। ವಿಶ್ವತಶ್ಚಕ್ಷುಸ್ತ್ವಂ ಸಹಜಮಿತಿ ಹೃದಯಮ್। –ವ್ಯಾ.

ಮನೆಗಳನ್ನೇ ಬೀಳಿಸಬಲ್ಲ ನಿಪುಣ

ಉಲೂಖಲೇ ತಂ ಯದಿ ಬಂಧಯಾಮೋ
ನಯೇತ್ ತದೋಲೂಖಲಮೇವ ಬಾಲಃ।
ಧ್ರುವಂ ಗೃಹಸ್ತಂಭವರೇ ನಿಬದ್ಧೋ
ಗೃಹಾಣ್ಯಸೌ ಪಾತಯಿತುಂ ಸಮರ್ಥಃ॥ ೫೨ ॥

ಒರಳಿಗೆ ಕಟ್ಟಿಹಾಕೋಣ ಎಂದರೆ ಆ ಬಾಲಕನು ಆಗ ಒರಳನ್ನೇ ಎಳೆದೊಯ್ಯುಬಿಡುವನು; ಮನೆಯ ದೊಡ್ಡಕಂಬಕ್ಕೇನಾದರೂ ಕಟ್ಟಿದರೆ, ಅವನು ನಿಶ್ಚಯವಾಗಿಯೂ ಮನೆಗಳನ್ನೇ ಬೀಳಿಸಬಲ್ಲ ಸಮರ್ಥ!

ವಿ. : ೧. ಈ ಮೂಲಕ ಶ್ರೀಕೃಷ್ಣನು ಮುಂದೆ ಮಾಡುವ ಯಮಲಾರ್ಜುನಭಂಜನದ ಸೂಚನೆಯೂ ಬಂದಿದೆ ಎಂದು ತಿಳಿಯಬಹುದು.

೨. ಒರಳಿಗೆ ಕಟ್ಟಿದಾಗ ಅದನ್ನೇ ಎಳೆದೊಯ್ಯುವ ಇವನು ಕಂಭಕ್ಕೆ ಕಟ್ಟಿದರೆ ಅದನ್ನು ಎಳೆದೊಯ್ದು ಮನೆಗಳನ್ನೇ ಬೀಳಿಸಿಯಾನು ಎಂಬ ಕಾರಣದಿಂದ ಕಂಭಕ್ಕೆ ಕಟ್ಟುವ ಕೆಲಸವನ್ನು ತಾವು ಮಾಡಿಲ್ಲ ಎಂಬ ವಿಷಯವನ್ನು ಗೋಪಿಯರು ಇಲ್ಲಿ ತಿಳಿಸುತ್ತಿರುವರು.

ಬಂಧನಕ್ಕೆ ಸಿಲುಕದ ಶ್ರೀಕೃಷ್ಣ

ವಿಶ್ವಂಭರಸ್ಯಾಸ್ಯ ಹಿ ಬಂಧನಾಯ
ದಾಮಾನಿ ಸಂಪಾದಯಿತುಂ ಕ ಈಶಃ।
ಬದ್ಧಃ ಕಥಂಚಿದ್ಯದಿ ತರ್ಹಿ ಬದ್ಧಾ
ಮಧ್ಯೇ ವಿಲೀನಾ ವಯಮೇವ ನೂನಮ್ ॥ ೫೩ ॥

ವಿಶ್ವವನ್ನೇ ಧರಿಸಿರುವ ಈ ಶ್ರೀಕೃಷ್ಣನ ಬಂಧನಕ್ಕೆ ಹಗ್ಗಗಳನ್ನು ಹೊಂದಿಸಲು ಯಾವನು ತಾನೇ ಸಮರ್ಥನಾದಾನು? ಹೇಗಾದರೂ ಇವನನ್ನು ನಾವೇನಾದರೂ ಬಂಧಿಸಿದರೂ ಸಹ ಅದರ ಮಧ್ಯೆ ನಾವೇ ಸಿಕ್ಕಿಹಾಕಿಕೊಳ್ಳುವುದು ನಿಶ್ಚಿತ.

ವಿ. : ೧. ಶ್ರೀಕೃಷ್ಣನಿಗೆ ಬಂಧನ ಅಶಕ್ಯ ಎಂಬುದನ್ನು ಇಲ್ಲಿ ಮತ್ತೊಂದು ಬಗೆಯಲ್ಲಿ ತಿಳಿಸಿರುವರು.

೨. ಶ್ರೀಕೃಷ್ಣನು ವಿಶ್ವಂಭರನಾದ್ದರಿಂದ ಅವನನ್ನು ಕಟ್ಟಲು ಎಷ್ಟು ಹಗ್ಗಗಳೂ ಸಾಲವು; ವಿಶ್ವದಲ್ಲಿ ಹಗ್ಗಗಳೂ ಸೇರಿರುವುದರಿಂದ ಅವನ್ನು ಭರಿಸಿದವನೂ ಶ್ರೀಕೃಷ್ಣನೇ ಅಲ್ಲವೇ ಎಂಬುದು [೧] ಪೂರ್ವಾರ್ಧದ ಭಾವ.

---

೧. ನೂನಂ ಕೃಷ್ಣಸ್ಯ ನಿತ್ಯಮುಕ್ತತ್ವೇನಾಸಂಗತ್ವೇನ ಚ ಬಂಧಾಯೋಗಾತ್ । ತದ್ಬಂಧನೇ ಸ್ವಪರಿಶ್ರಿತಾಕಾಶಬಂಧನೇನ ಸ್ವಸ್ಯೈವ ಬಂಧನವತ್ ತನ್ಮಧ್ಯಸ್ಥಿತಾ ವಯಮೇವ ಬದ್ಧಾಃ ಭವೇಮ ಇತ್ಯರ್ಥಃ । ಅನೇನಾಪಿ ಯಶೋದಯಾ ಕರಿಷ್ಯಮಾಣಕೃಷ್ಣಬಂಧನಜ್ಞಾನಂ ಸೂಚ್ಯತೇ । -ವ್ಯಾ.

೩. ಒಂದು ವೇಳೆ ಶ್ರೀಕೃಷ್ಣನನ್ನು ಹೇಗಾದರೂ ಬಂಧಿಸಲು ಸಾಧ್ಯವಾದೀತು ಎಂದು ಭಾವಿಸಿದರೂ ಆ ಬಂಧನ ನಿಜಕ್ಕೂ ಆಗುವುದು ಬಂಧಿಸಲು ಹೊರಟ ತಮಗೇ. ಏಕೆಂದರೆ ವಿಶ್ವದಲ್ಲಿ ಅವರು ಸಹ ಸೇರಿರುವುದರಿಂದ [೧] ವಿಶ್ವಂಭರನಾದ ಅವನ ಬಂಧನ ತಮ್ಮ ಬಂಧನವೇ ಆಗುವುದು ನಿಶ್ಚಿತ ಎಂಬುದು ಉತ್ತರಾರ್ಧದ ಭಾವ.

### ಶ್ರೀಕೃಷ್ಣನ ಬಾಯಲ್ಲಿ ಸಾಗರ !

ಅಹೋ ಯಶೋದೇ ತವ ಬಾಲಕೋಽಯಂ
ಗೃಹೇ ಗೃಹೇಽತ್ಯುಷ್ಣಮಪೀಹ ದುಗ್ಧಮ್ ।
ಪಿಬನ್ ನ ತಾಪಂ ಲಭತೇ ಕದಾಪಿ
ಕಿಮಸ್ಯ ವಕ್ತ್ರೇ ಜಲರಾಶಿರಾಸ್ತೇ ॥ ೫೪ ॥

"ಅಬ್ಬ ಯಶೋದೆ! ನಿನ್ನ ಪುಟ್ಟಮಗ ಮನೆಮನೆಗಳಲ್ಲೂ ತುಂಬಾ ಬಿಸಿಯಾದ ಹಾಲನ್ನು ಕುಡಿದರೂ ಸಹ ತಾಪಕ್ಕೆ ಎಂದಿಗೂ ಒಳಗಾಗುವುದೇ ಇಲ್ಲವಲ್ಲ! ಇವನ ಬಾಯಲ್ಲಿ ಸಾಗರವೇನಾದರೂ ಇದ್ದೀತೇ?"

ವಿ. : ೧. ಶ್ರೀಕೃಷ್ಣನು ಆರಿದ ಹಾಲನ್ನು ಮಾತ್ರವಲ್ಲದೇ ಅತಿಬಿಸಿಯಾದ ಹಾಲನ್ನೂ ಸಹ ನೇರವಾಗಿ ಕುಡಿಯಬಲ್ಲ ಸಮರ್ಥ; ಅವನಿಗೆ ಉಷ್ಣದ ಭಯವೇ ಇಲ್ಲ ಎಂಬುದು ಇಲ್ಲಿಯ ಭಾವ.

೨. ಅಗ್ನಿಯೊಳಗಿದ್ದು ಅವನಿಗೆ ಸುಡುವ ಸಾಮರ್ಥ್ಯವನ್ನು ದಯಪಾಲಿಸಿರುವವನು ಸಾಕ್ಷಾತ್ ಪರಶುರಾಮರೂಪದ ಶ್ರೀಹರಿಯೇ ಆದ್ದರಿಂದ ಅವನಿಗೆ ಅಗ್ನಿಯ ಭಯವಿಲ್ಲಿಯದು! ಎಂಬುದು ಅಂತರಾರ್ಥ.

೩. ಸಮುದ್ರದಲ್ಲಿ ಎಷ್ಟು ಬಿಸಿಯಾದ ನೀರನ್ನು ಚೆಲ್ಲಿದರೂ ಅದರ ಅಗಾಧತೆಯಿಂದಾಗಿ ಆ ನೀರು ಕೂಡಲೇ ತಣ್ಣಗಾಗುವುದು. ಶ್ರೀಕೃಷ್ಣನ ಬಾಯಲ್ಲಿ ಅಂತಹ ಬಿಸಿಹಾಲು ತಂಪಾಗುವುದು ಎಂದರೆ ಅವನ ಬಾಯಲ್ಲಿ ಸಾಗರವಿದೆ ಎಂದಾಗುವುದು ಎಂಬುದು ಇಲ್ಲಿಯ ಭಾವ.

೪. ಶ್ರೀಕೃಷ್ಣನ ಬಾಯಲ್ಲಿ ಸಾಗರವಿರುವುದು ಸತ್ಯ. ವರುಣನು ಶ್ರೀಹರಿಯ ಬಾಯಿಯನ್ನು ಆಧರಿಸಿಯೇ ಇರುವುದು [೨] ಶಾಸ್ತ್ರಗಳ ಪ್ರತಿಪಾದನೆ : ರಸ ಏವ ಜಿಹ್ವಾ-ಭಾಗ(೨/೧/೩೦); ಈ ಅಂಶ ಇಲ್ಲಿ ಧ್ವನಿತವಾಗಿರುವುದು ವಿಶೇಷ; ಜಲರಾಶಿ - ಸಮುದ್ರ.

---

೧. ಯದಿ ಕಥಂಚಿತ್ ಕೃಚ್ಛ್ರಾತ್ ಅಸ್ಮಾಭಿರ್ಬದ್ಧಸ್ತರ್ಹಿ ಮಧ್ಯೇ ಕೃಷ್ಣಸ್ಯ ಮಧ್ಯೇ ವಿಲೀನಾಃ ವಿಶ್ವಂಭರತ್ವಾದಿತಿ ಭಾವಃ। -ವ್ಯಾ.

೨. ಅನೇನ ಕೃಷ್ಣಜಿಹ್ವಾಯಾಂ ವರುಣೋಽಸ್ತೀತಿ ಧ್ವನ್ಯತೇ। -ವ್ಯಾ.

**ಅಷ್ಟೈಶ್ವರ್ಯಸಂಪನ್ನನಾದ ಕೃಷ್ಣ**

**ವಿಲೋಕ್ಯ ದೂರಸ್ಥಿತದುಗ್ಧಭಾಂಡ-**
**ಮುಲೂಖಲಾದ್ಯೈರ್ಯತತೇ ಗೃಹೀತುಮ್ ।**
**ಶಿಶುಃ ಸ ತಾವತ್ ಕ್ವಚಿದೇಧತೇಽಹೋ**
**ಕಿಮೇಷ ಗೂಢಾಷ್ಟಮಹಾವಿಭೂತಿಃ ॥ ೫೫ ॥**

ದೂರದಲ್ಲಿರುವ ಹಾಲಿನ ಪಾತ್ರೆಯನ್ನು ನೋಡಿ, ಅದನ್ನು ಒರಳು ಮೊದಲಾದವುಗಳ ಮೂಲಕ ತೆಗೆದುಕೊಳ್ಳಲು ಈ ಕೂಸು ಪ್ರಯತ್ನಿಸುವುದು; ಕೆಲವೊಮ್ಮೆ ತಾನೇ ದೊಡ್ಡದಾಗುವುದು; ಅಬ್ಬ! ಇವನು ಅಣಿಮಾದಿ [೧]ಅಷ್ಟಮಹೈಶ್ವರ್ಯಗಳನ್ನು ಅಡಗಿಸಿ-ಕೊಂಡಿರುವನೇನು?

ವಿ. : ೧. ಇದರಿಂದ ತನ್ನ ಅವಯವಗಳನ್ನು ದೊಡ್ಡದನ್ನಾಗಿಸಿಕೊಳ್ಳುವ ಮಹಿಮಾ ಎಂಬ ಯೋಗಶಕ್ತಿ ಇವನಲ್ಲಿದೆ ಎಂದಾಗುವುದು; ಅದರಂತೆ ಇತರ ಯೋಗಶಕ್ತಿಗಳೂ ಸಹ ಇವನ ಅಧೀನ ಎಂದೂ ಸಿದ್ಧವಾಗುವುದು ಎಂದು ತಾತ್ಪರ್ಯ: **ಯತ್ರ ಯೋಗೇಶ್ವರಃ ಕೃಷ್ಣಃ** (ಗೀತಾ. ೧೮/೭೮)

೨. ವಾಮನಾವತಾರದಲ್ಲಿ ತ್ರಿವಿಕ್ರಮರೂಪದಿಂದ ಕೇವಲ ತನ್ನ ಪಾದವೊಂದನ್ನೇ ಸತ್ಯಲೋಕಾದಿ ಪರ್ಯಂತ ಬೆಳೆಸಿದ ದಾಖಲೆಯನ್ನು ಇದು ಧ್ವನಿಸುವುದು.

೩. ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಕಾಮ್ಯ, ಪ್ರಾಕಾಶ್ಯ, ಈಶಿತ್ವ ಹಾಗೂ ವಶಿತ್ವ ಎಂಬ ಇವು ಎಂಟು [೨]ಯೋಗಸಿದ್ಧಿಗಳು; ದುಗ್ಧಭಾಂಡ – ಹಾಲಿನ ಪಾತ್ರೆ.

**ಲೋಕನಿಯಾಮಕನಾದ ಶ್ರೀಕೃಷ್ಣ**

**ನ ನಿಷ್ಠುರಾ ವಾಕ್ ಸಮುದೇತಿ ವಕ್ತ್ರಾತ್**
**ಕರಶ್ಚ ನಸ್ತಾಡಯಿತುಂ ಯಶೋದೇ ।**

---

೧. ಅಣಿಮಾ ಮಹಿಮಾ ಮೂರ್ತೇರ್ಲಘಿಮಾ ಪ್ರಾಪ್ತಿರಿಂದ್ರಿಯೈಃ ।
ಪ್ರಾಕಾಶ್ಯಂ ಶ್ರುತದೃಷ್ಟೇಷು ಶಕ್ತಿಪ್ರೇರಣಮೀಶಿತಾ ॥
ಗುಣೇಷ್ವಸಂಗೋ ವಶಿತಾ ಯತ್ಕಾಮಸ್ತದವಾಪ್ನುತಿ ।
ಏತಾ ಮೇ ಸಿದ್ಧಯಃ ಸೌಮ್ಯ ಅಷ್ಟಾವೌತ್ಪತ್ತಿಕಾ ಮತಾಃ ॥ –ಭಾ.(೧೧/೧೫/೪,೫)
'ಸರ್ವಾಧಿಕಾ ಅಣಿಮಾದ್ಯಾ ವಿಷ್ಣೋರ್ನಾನ್ಯಸ್ಯ ಕಸ್ಯಚಿತ್ ।
ಸ್ವಾಭಾವಿಕಾ ವಿರಿಂಚಸ್ಯ ತತ್ಪ್ರಸಾದಾತ್ ಪರಾಧಿಕಾಃ' ಇತಿ ಸ್ವಾಭಾವ್ಯೇ ॥ –ಭಾ. ತಾ. (೧೧/೧೫/೩)
'ದೇವೇಷ್ವಿಂದ್ರೇಶವಾಯುಶ್ರೀವಿಷ್ಣೂನಾಮುತ್ತರೋತ್ತರಮ್ ।
ಸಿದ್ಧಯಃ ಪರಿಪೂರ್ಣಾಸ್ತು ವಿಷ್ಣೋರೇಕಸ್ಯ ನಾನ್ಯಗಾಃ' ಇತ್ಯೈಶ್ವರ್ಯೇ ॥ –ಭಾ. ತಾ.(೧೧/೧೫/೬)
'ಏವಮೇವ ತು ನಿಃಸೀಮಾ ದೇವಾನಾಮಷ್ಟಸಿದ್ಧಯಃ ।
ಉತ್ತರೋತ್ತರಮತ್ರಾಪಿ ಯಾವದ್ವಿಷ್ಣುಃ ಸ ಪೂರ್ಣಭುಕ್' ಇತಿ ಹರಿವಂಶೇಷು ॥ –ಭಾ.ತಾ.(೧೧/೧೫/೬)
೨. ಅಷ್ಟೌ ಮಹತ್ಯಃ ವಿಭೂತಯಃ ಅಣಿಮಾದ್ಯೈಶ್ವರ್ಯಾಣಿ । –ವ್ಯಾ.

ವಿಲೋಲನೇತ್ರಂ ತವ ಪುತ್ರರತ್ನಂ
ಧ್ರುವಂ ಸುತಸ್ತೇ ಜಗತಾಂ ನಿಯಂತಾ ॥ ೫೬ ॥

"ಯಶೋದೆ ! ಕಣ್ಣಾಡಿಸತೊಡಗುವ ನಿನ್ನ ಪುತ್ರನಾದ ಶ್ರೀಕೃಷ್ಣನ ಬಗ್ಗೆ ನಮ್ಮ ಬಾಯಿಂದ ನಿಷ್ಠುರ ಮಾತು ಹೊರಡದಾಗುವುದು, ನಮ್ಮ ಕೈ ಹೊಡೆಯದಾಗುವುದು; ನಿಜಕ್ಕೂ ನಿನ್ನ ಮಗ ಜಗನ್ನಿಯಾಮಕನೇ ಸರಿ".

ವಿ. : ೧. ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ಅವರ ಕೋಪವೆಲ್ಲಾ ತಣ್ಣಗಾಗಿ, ಕಠಿಣಮಾತು ಬರದಾಗುವುದು; ಹೊಡೆಯಲೆತ್ತಿದ ಕೈ ಹಾಗೇ ನಿಂತುಬಿಡುವುದು; ಇದರಿಂದ ಶ್ರೀಕೃಷ್ಣ ನಿಜಕ್ಕೂ ಸರ್ವನಿಯಾಮಕ ಎಂಬುದು ಸ್ಫುಟಪಡುವುದು ಎಂಬುದು ಇಲ್ಲಿಯ ಭಾವ.

೨. ಶ್ರೀಕೃಷ್ಣನು ಸರ್ವಜಗನ್ನಿಯಾಮಕ ಎಂಬುದು ಇಲ್ಲಿಯ ಮುಖ್ಯತಾತ್ಪರ್ಯ.

### ಶ್ರೀಕೃಷ್ಣನ ಕಣ್ಣುಗಳಲ್ಲಿ ಸೂರ್ಯಚಂದ್ರರು

ಬತಾಂಧಕಾರಾರ್ಪಿತದಧ್ಯಮತ್ರ-
ಮಪಿ ಸ್ವಭಾಸ್ವನ್ನಯನಾಂತಲಕ್ಷ್ಮಾ[೧] ।
ಸಮೀಕ್ಷತೇ ಲೋಚನಯೋಃ ಕಿಮೇಷ
ಬಿಭರ್ತಿ ಬಾಲಸ್ತವ ಪುಷ್ಪವಂತೌ ॥ ೫೭ ॥

"ಅಯ್ಯೋ ! ಕತ್ತಲೆಯಲ್ಲಿರಿಸಿದ ಮೊಸರಿನ ಪಾತ್ರೆಯನ್ನೂ ಸಹ ತನ್ನ ಹೊಳೆಯುವ ಕಣ್ಣುಗಳ ಕುಡಿನೋಟದ ಕಾಂತಿಯಿಂದಲೇ ಇವನು ನೋಡಿಬಿಡುವನಲ್ಲ ! ಈ ನಿನ್ನ ಮಗ ತನ್ನ ಎರಡು ಕಣ್ಣುಗಳಲ್ಲಿ ಸೂರ್ಯಚಂದ್ರರನ್ನೇನಾದರೂ ಧರಿಸಿರುವನೇನು?".

ವಿ. : ೧. ಕತ್ತಲೆಯಲ್ಲಿನ ಪದಾರ್ಥಗಳನ್ನು ಬೆಳಕಿನ ಸಹಾಯವಿಲ್ಲದೇ ಹಾಗೆ ಸ್ಫುಟವಾಗಿ ಕಾಣುವುದರಿಂದ ಅವನ ಕಣ್ಣಿನಲ್ಲಿಯೇ ಅಂತಹ ಬೆಳಕು ಇರುವುದು ಖಚಿತ; ಅದು ಸಾಮಾನ್ಯ ಬೆಳಕಾಗಿರದೇ, ಅದು ಸೂರ್ಯಚಂದ್ರರ ಬೆಳಕೇ ಆಗಿರಬೇಕು ಎಂದರೆ ಅವನ [೧]ಕಣ್ಣುಗಳಲ್ಲಿ ಸೂರ್ಯಚಂದ್ರರು ಇರುವರು ಎಂದು ಭಾವ ; ಪುಷ್ಪವಂತೌ - ಸೂರ್ಯಚಂದ್ರರು ; ಅಮತ್ರ - ಪಾತ್ರೆ; ಲಕ್ಷ್ಮೀ - ಕಾಂತಿ.

೨. ಶ್ರೀಕೃಷ್ಣನ ಕಣ್ಣುಗಳನ್ನು ಆಶ್ರಯಿಸಿ ಸೂರ್ಯಚಂದ್ರರಿರುವುದು ಶಾಸ್ತ್ರಸಿದ್ಧವಾದ ವಿವರ : **ಸೂರ್ಯಾಚಂದ್ರಮಸೌ ಅಸ್ಯ ಚಕ್ಷುಷೀ**-ಶ್ರುತಿ; 'ಶಶಿಸೂರ್ಯನೇತ್ರಮ್'-ಗೀತಾ(೧೧/೧೯)

---

೧. ಕೃಷ್ಣಲೋಚನಯೋಃ ಸೂರ್ಯಾಚಂದ್ರಮಸೌ ತಿಷ್ಠತ ಇತಿ ಹೃದಯಮ್ । -ವ್ಯಾ.

## ವಿಶ್ವಂಭರನಾದ ಕೃಷ್ಣ

**ಮಂತ್ರಾತ್ಮಾ ಸ ಕವಾಟಮಾಶು ವಿವೃತಂ ಕರ್ತುಂ ಸಮರ್ಥೋ ವೃಥಾ**
**ಬಂಧಂ ನಿತ್ಯವಿಮುಕ್ತಿದೋ ರಚಯಿತುಂ ವಿಶ್ವಂಭರೋಽಯಂ ಜಗತ್ ।**
**ವಕ್ತ್ರೇ ದರ್ಶಯಿತುಂ ಕಠೋರವಚಸಾಂ ವಿಸ್ಮಾಪನಂ ಕರ್ಹಿಚಿ-**
**ದ್ಬದ್ಧಃ ಪಾಟಯಿತುಂ ಚ ತದ್ವಿಟಪಿನೋ ಕಿಂ ದೇವಿ ಕುರ್ಮೋ ವಯಮ್ ॥೫೮॥**

ಮಂತ್ರದೇವತೆಯಾದ ಇವನು ಮುಚ್ಚಿದ ಬಾಗಿಲನ್ನು ಕೂಡಲೇ ತೆಗೆಯುವ ಸಮರ್ಥ; ನಿತ್ಯವಾದ ಮುಕ್ತಿಯನ್ನು ನೀಡಬಲ್ಲ ಇವನು ನಮ್ಮ ಬಂಧನವನ್ನು ವ್ಯರ್ಥಮಾಡಲು ಶಕ್ತನು. ವಿಶ್ವಂಭರನಾದ ಇವನು ಕಠಿಣಮಾತುಗಳ ನಮಗೆ ಅಚ್ಚರಿಮೂಡಿಸುತ್ತಾ ಜಗತ್ತನ್ನು ಬಾಯಲ್ಲೇ ತೋರಿಸಬಲ್ಲ ಸಮರ್ಥ. ಒಂದುವೇಳೆ ಮರಕ್ಕೆ ಬಿಗಿದರೆ, ಅದನ್ನು ಬೀಳಿಸಲೂ ಸಮರ್ಥ. ಮಹಾರಾಣಿ ! ನಾವು ಏನು ಮಾಡೋಣ?.

ವಿ. : ೧. ಶ್ರೀಕೃಷ್ಣನ ಪರಿಪರಿ ಮಹಿಮೆಗಳನ್ನು ಒಂದೆಡೆ ಸಂಗ್ರಹಿಸುವ ಅಪೂರ್ವ [೧]ಶ್ಲೋಕ-ವಿದು ; ಕವಾಟ – ಬಾಗಿಲು; ವಿಟಪಿ – ಮರ.

೨. ಮುಚ್ಚಿದ ಬಾಗಿಲನ್ನು ಕೇವಲ ನೋಟದಿಂದಲೇ ತೆರೆಯಬಲ್ಲ ಇವನು [೨]ಮಂತ್ರದೇವತೆ; ಹಾಕಿದ ಕಟ್ಟನ್ನು ಬಿಡಿಸಿಕೊಳ್ಳಬಲ್ಲ ಇವನು [೩]ಮುಕ್ತಿನೀಡಬಲ್ಲ ಮುಕುಂದ; ಬಾಯಲ್ಲೇ ಲೋಕಗಳನ್ನು ತೋರಬಲ್ಲ ಇವನು ವಿಶ್ವಂಭರ; ಕಟ್ಟಿದ ಮರವನ್ನೇ ಎಳೆದೊಯ್ಯಬಲ್ಲ ಇವನು [೪]ಮಹಾಸಮರ್ಥ ಎನ್ನುವ ಮೂಲಕ ಅವನನ್ನು [೫]ಯಾವರೀತಿಯಲ್ಲೂ ತಾವು ನಿಯಂತ್ರಿಸಲು ಅಸಮರ್ಥರು ಎಂಬ ವಿಷಯವನ್ನು ಅವರು ಹೀಗೆ ತಿಳಿಸುತ್ತಿರುವರೆಂಬುದು ಗಮನಾರ್ಹ.

೩. ಈ ಮಾತಿನಲ್ಲಿ ಶ್ರೀಕೃಷ್ಣನು ತನ್ನ ದರ್ಶನಮಾತ್ರದಿಂದ ವಸುದೇವ–ದೇವಕಿಯರಿಗೆ ಕಂಸ ತೊಡಿಸಿದ್ದ ಸಂಕೋಲೆಗಳ ಬಂಧನದ ಮೋಚನ, ಯಶೋದೆಯು ಮಾಡಿದ ಬಂಧನದಿಂದ ನಡೆದ ಯಮಲಾರ್ಜುನ ಭಂಜನ ಮೊದಲಾದ ಕಾರ್ಯಗಳ ಹಿರಿಮೆಯು ಸಹ ಸೂಚಿತ.

---

೧. ಏತಾವದ್ಭಿಃ ಪ್ರಾಚೀನಪದ್ಯೈಃ ಅಧ್ಯಾತ್ಮರಸಸ್ಯಾದ್ಭುತರಸಸ್ಯ ಚ ಸಂಗ್ರಹೇಣ ಸರ್ವತ್ರ ರಸದ್ವಯ-ಸಾಂಕರ್ಯಾದ್ರಸವದಲಂಕಾರೋ ದ್ರಷ್ಟವ್ಯಃ। –ವ್ಯಾ.

೨. ಮಂತ್ರಸಿದ್ಧೋ ಹಿ ಕವಾಟಾರ್ಗಲಾದಿಕಂ ಭಿನತ್ತೀತಿ ಭಾವಃ । ಅನೇನ ವಸುದೇವಕಾರಾಗೃಹದ್ವಾರಕವಾಟ-ವಿವರಣವಿಷಯಕಂ ಜ್ಞಾನಂ ಸೂಚ್ಯತೇ। –ವ್ಯಾ.

೩. ಅನ್ಯೇಷಾಂ ಬಂಧವಿಧ್ವಂಸದಃ ಕೃಷ್ಣಃ ಸ್ವಬಂಧಧ್ವಂಸಂ ಕಥಂ ನ ಕುರ್ಯಾದಿತಿ ಭಾವಃ। –ವ್ಯಾ.

೪. ಅನೇನೋತ್ತರತ್ರ ಕೃಷ್ಣೇನ ಸ್ವಮಾತ್ರೇ ಸ್ವೋದರೇ ದರ್ಶಯಿಷ್ಯಮಾಣಬ್ರಹ್ಮಾಂಡವಿಷಯಕಾನಾಗತಜ್ಞಾನಂ ಸೂಚ್ಯತೇ। –ವ್ಯಾ.

೫. ಅನೇನ ವಸುದೇವಸ್ಯ ಕಂಸಕೃತಶೃಂಖಲಾಬಂಧಧ್ವಂಸಃ ಸೂಚ್ಯತೇ। –ವ್ಯಾ.
ಅನೇನ ಯಶೋದಾಕರ್ತೃಕಬಂಧನಯಮಲಾರ್ಜುನಭಂಗವಿಷಯಕಜ್ಞಾನಂ ಸೂಚ್ಯತೇ। –ವ್ಯಾ.

ದೂರು ಮುಗಿಸಿದ ಗೋಪಿಯರು

ಇತಿ ಸ್ಮ ಸಂಕೀರ್ತ್ಯ ಸುರಾಧಿರಾಜಂ
ವ್ರಜಸ್ತ್ರಿಯೋ ಭಾವವಿಮುಕ್ತಿಬೀಜಮ್ ।
ವಿಲೋಲನೇತ್ರಂ ತಮವೇಕ್ಷ್ಯ ವಾಚಃ
ಶನೈರಲಂಚಕ್ರುರನೇಕಭಾವಾಃ ॥ ೫೯ ॥

ಮುಂದೆ ತಮಗೆ ಮುಕ್ತಿಗೆ ಕಾರಣನಾಗುವ ಸುರರೊಡೆಯನಾದ ಶ್ರೀಕೃಷ್ಣನನ್ನು ಗೋಪಿಯರು ಹೀಗೆ ಸ್ತುತಿಸಿ, ಕಾತರದ ಕಣ್ಣುಗಳ ಅವನನ್ನು ನೋಡಿ, ಬಗೆ ಬಗೆಯ ಭಾವಗಳಿಂದ ಕೂಡಿದ ತಮ್ಮ ಮಾತುಗಳನ್ನು ಮೆಲ್ಲನೆ ಮುಗಿಸಿದರು.

ವಿ. : ೧. ಶ್ರೀಕೃಷ್ಣನನ್ನು ಅವರು ದೂರುತ್ತಿದ್ದುದು [೧]ಸ್ತೋತ್ರವೇ ಆಯಿತು. ಆ ವೇಳೆಗೆ ಸ್ವತಃ ಶ್ರೀಕೃಷ್ಣನೇ ಆಗಮಿಸಿದ; ಅವನನ್ನು ಕಂಡ ಅವರಿಗೆ ಧನ್ಯತಾಭಾವ ಮೂಡಿತು. ಪ್ರಸನ್ನರಾದ ಅವರು ತಮ್ಮ ಮಾತುಗಳ ಒಳಾರ್ಥವನ್ನು ತಾವೇ ಅರಿತು, [೨]ಸಂಭ್ರಮಿಸಿ, ಮಾತನ್ನು ಮುಗಿಸಿದರು ಎಂದು ತಾತ್ಪರ್ಯ.

೨. ಹೀಗೆ ಅರ್ಥವತ್ತಾದ ಭಾವದಿಂದಾಗಿ ಗೋಪಿಯರ ಮಾತುಗಳು ಅಲಂಕಾರ-ಪ್ರಾಯವಾಗಿದ್ದವು ಎಂಬ ಮತ್ತೊಂದು ಅರ್ಥವೂ ಇದಕ್ಕಿದೆ[೩].

ಮಣ್ಣು ತಿಂದ ಶ್ರೀಕೃಷ್ಣ

ಸದಾ ಸದಾನಂದಸುತೃಪ್ತವೃತ್ತೇ-
ರ್ಭವದ್ಗೃಹಸ್ಥೈರ್ನವನೀತಮುಖ್ಯೈಃ ।
ಸಮಾ ಮಮೈಷಾ ಮೃದಿತೀವ ಶಂಸನ್
ಮೃದಂ ಜಘಾಸ ಸ್ವವಶೋಽಖಿಲೇಶಃ ॥ ೬೦ ॥

ಸದಾ ಉತ್ತಮ ಆನಂದದಿಂದ ತೃಪ್ತಸ್ವಭಾವದ ನನಗೆ ನಿಮ್ಮ ಮನೆಗಳಲ್ಲಿನ ಬೆಣ್ಣೆ ಮೊದಲಾದವು ಈ ಮಣ್ಣಿಗೆ ಸಮಾನ ಎಂದು ತಿಳಿಸಲೋ ಎಂಬಂತೆ ಸ್ವತಂತ್ರನಾದ ಸರ್ವಸ್ವಾಮಿಯಾದ ಶ್ರೀಕೃಷ್ಣನು ಮಣ್ಣನ್ನು ತಿಂದ.

ವಿ. : ೧. ಅಲ್ಲಿಗೆ ಆಗಮಿಸಿದ ಶ್ರೀಕೃಷ್ಣ ಅವರೆಲ್ಲಾ ನೋಡುತ್ತಿದ್ದಂತೆಯೇ ಮಣ್ಣನ್ನು ತಿಂದ ಎಂದರ್ಥ.

---

೧. ಅನೇನ ಗೋಪೀಭಿರಾದರೇಣ ಸಂಕೀರ್ತನಂ ಕೃತಂ ನ ತು ಕೋಪೇನ ನಿಂದಾ ಕೃತೇತಿ ಧ್ವನ್ಯತೇ। -ವ್ಯಾ.

೨. ಪ್ರಾಕ್ ಕೃಷ್ಣಕಥಾಶ್ರವಣಾದಿಕಂ ಕೃತ್ವಾ ಪಶ್ಚಾತ್ಕೃಷ್ಣದರ್ಶನೇನ ವಿಮುಕ್ತಿಂ ಗತಾ ಇವ ತೂಷ್ಣೀಂ ಬಭೂವುರಿತ್ಯರ್ಥಃ। -ವ್ಯಾ.

೩. ಅಲಂಚಕ್ರುಃ – ಕೃಷ್ಣಮಾಹಾತ್ಮ್ಯಸಂಕೀರ್ತ್ಯಾ ಭೂಷಯಾಂಚಕ್ರುಃ। -ವ್ಯಾ.

೨. ಹಾಗೆ ಮಣ್ಣು ತಿನ್ನುವ ಮೂಲಕ ಅವರ ಮನೆಗಳಲ್ಲಿನ ಬೆಣ್ಣೆ ಮೊದಲಾದವುಗಳೆಲ್ಲಾ ತನಗೆ ಆ ಮಣ್ಣಿಗೆ ಸಮಾನ ಎಂಬ ಅರ್ಥವನ್ನು ಧ್ವನಿಸಿದ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ರೋಚಕವಾದುದು ; ಮೃತ್ - ಮಣ್ಣು.

೩. [೧]ಇದೆಲ್ಲದಕ್ಕೂ ಮುಖ್ಯಕಾರಣ ತಾನು ಸದಾ ಸ್ವಾನಂದತೃಪ್ತ ಎಂದು ಮುಖ್ಯಪ್ರಮೇಯ.

### ತಾನು ಚೋರನಲ್ಲ ಎಂದು ನಿರೂಪಿಸಿದ ಶ್ರೀಕೃಷ್ಣ

ಗೋಪೀಭಿರಾಪಾದಿತಚೌರ್ಯಕರ್ಮಾ
ಮಾತುಃ ಸಮಕ್ಷಂ ಮಹಿತಸ್ತ್ರಿಲೋಕ್ಯಾಮ್ ।
ಮೃತ್ಸ್ನಾಂ ಕಿಲಾದದ್ವಸುದೇವಸೂನು-
ರ್ನಾತ್ರಾಸ್ತಿ ಚೋರತ್ವಮಿತೀವ ಹಿನ್ವನ್ ॥ ೬೧ ॥

ತಾಯಿಯ ಎದುರಿನಲ್ಲಿ ಗೋಪಿಯರಿಂದ ಕಳ್ಳತನದ ಆರೋಪ ಹೊರಿಸಲ್ಪಟ್ಟ ತ್ರಿಲೋಕ-ಗಳಲ್ಲೂ ಮಾನ್ಯನಾದ ಶ್ರೀಕೃಷ್ಣನು ತನ್ನ ಮೇಲಿನ ಕಳ್ಳತನದ ಆರೋಪವನ್ನು ನಿರಾಕರಿಸಲೆಂಬಂತೆ ಮಣ್ಣನ್ನು ತಿಂದ !

ವಿ. : ೧. ಹಾಲು ಮೊಸರು ತಿಂದಾಗ ಕಳ್ಳನೆಂದು ಆಪಾದಿಸಲು ಸಾಧ್ಯ. ಆದರೆ ಎಲ್ಲೆಡೆಯೂ ಸಿಗುವ ಮಣ್ಣನ್ನು ತಿಂದಾಗ ಕಳ್ಳನೆಂದು ಕರೆಯಲಾಗದು. ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣ ಹಾಗೆ ಮಣ್ಣು ತಿಂದದ್ದು ತನ್ನಲ್ಲಿ ಚೋರತನವಿಲ್ಲ ಎಂಬುದನ್ನು ಸ್ಫುಟಪಡಿಸುವಂತಾಯಿತು ಎಂದು ಭಾವ : 'ಅತ್ರ ಮೃದ್ಭಕ್ಷಣೇ ಮಮ ಚೋರತ್ವಂ ನ ಕಥಯಂತಿ ಕಿಲೇತಿ ಹಿನ್ವನ್ ...' (ವ್ಯಾ.)

೨. ಮೃತ್ಸ್ನಾ - ಮಣ್ಣು.

### ಅನಂತಮಡಿಯಾದ ಮಣ್ಣು

[೨]ಮೃದಂ ಸಮಾಸ್ವಾದ್ಯ ಜಗಂತಿ ಮಾತುಃ
ಪ್ರದರ್ಶಯಾಮಾಸ ಕಿಲಾಸ್ಯದೇಶೇ ।
ಅಹಂ ಸುಪಾತ್ರೇ ರಸಯಾ ಪ್ರದತ್ತಾ
ಸಹಸ್ರಧಾಽಸೌ ಫಲಿತೇತಿ ಮನ್ಯೇ ॥ ೬೨ ॥

---

೧. ಸದಾನಂದತೃಪ್ತಸ್ಯ ಮೃದಿವ ನವನೀತಾದಿಕಮಪ್ಯಪ್ರಯೋಜಕಮಿತಿ ಭಾವೇನೇವೇತಿ ಭಾವಃ। -ವ್ಯಾ.

೨. ಸಾ ತತ್ರ ದದೃಶೇ ವಿಶ್ವಂ ಜಗತ್ ಸ್ಥಾಸ್ನು ಚ ಖಂ ದಿಶಃ।
ಸಾದ್ರಿದ್ವೀಪಾಬ್ಧಿಭೂಗೋಲಂ ಸವಾಯ್ವಗ್ನೀಂದುತಾರಕಮ್ ॥
ಜ್ಯೋತಿಶ್ಚಕ್ರಂ ಜಲಂ ತೇಜೋ ನಭಃ ಸ್ವರ್ವಿಯದೇವ ಚ।
ವೈಕಾರಿಕಾಣೀಂದ್ರಿಯಾಣಿ ಮನೋ ಮಾತ್ರಾ ಗುಣಾಸ್ತ್ರಯಃ ॥ -ಭಾಗ.(೧೦/೮/೩೭,೩೮)

ಮಣ್ಣನ್ನು ಬಹಳ ರುಚಿ ಎಂಬಂತೆ ಆಸ್ವಾದಿಸಿದ ಶ್ರೀಕೃಷ್ಣ ತನ್ನ ಬಾಯಲ್ಲಿ ತಾಯಿಗೆ ಲೋಕಗಳನ್ನೇ ತೋರಿಸಿದ; ಸತ್ಪಾತ್ರನಾದ ಅವನಿಗೆ ಭೂದೇವಿಯು ಭಕ್ತಿಯಿಂದ ನೀಡಿದ ಆ ಮಣ್ಣು ಸಾವಿರಮಡಿಯಾಗಿ ಫಲನೀಡಿತು ಎಂದು ನಾನು [೧]ಭಾವಿಸುವೆ.

ವಿ. : ೧. ಶ್ರೀಕೃಷ್ಣ ತಾನು ಮಣ್ಣು ತಿಂದಿಲ್ಲ ಎಂಬುದನ್ನು ದೃಢಪಡಿಸಲೆಂದು ಬಾಯ್ತೆರೆದು ಅದರಲ್ಲಿ ಯಶೋದೆಗೆ ಸಕಲಲೋಕಗಳನ್ನೂ ತೋರಿಸಿ ಆಶ್ಚರ್ಯಪಡಿಸಿದ ಎಂಬುದು ವಸ್ತುಸ್ಥಿತಿ.

೨. ಆದರೆ ಶ್ರೀಕೃಷ್ಣನ ಬಾಯನ್ನು ಸೇರಿದ ಮಣ್ಣು ತಾನಾಗಿ ಅನಂತಪಟ್ಟು ಬೆಳೆದು ಹಾಗೆ ಕಾಣಿಸಿತು ಎಂಬುದು ಇಲ್ಲಿಯ ಉತ್ಪ್ರೇಕ್ಷೆ. [೨]ಸತ್ಪಾತ್ರರಿಗೆ ನೀಡಿದ ವಸ್ತುಗಳು ಅನಂತಮಡಿಯಾಗುವವು[೩] ಎಂಬುದು ಇಲ್ಲಿಯ ಸಂದೇಶ : **ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಮ್।** - ದ್ವಾದಶಸ್ತೋತ್ರ(೮/೧೧); **ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ** - ಹರಿಕಥಾಮೃತಸಾರ(೨/೧೫); **ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್ ।** ಮಧ್ವವಿಜಯ (೨/೩೦);

೩. **ಸಹಸ್ರಶಸ್ತಾ ಇವ ಸಾಧಯಿಷ್ಯನ್**(೨/೧೬) ಎಂಬುದಾಗಿ ಈ ಮುನ್ನ ಬಂದಿರುವ ಮಾತಿನ ಅರ್ಥವು ಸಹ ಇದೇ ಆಗಿದೆ ಎಂಬುದು ಗಮನಾರ್ಹ ; ರಸಾ - ಭೂಮಿ.

೪. ಸುದಾಮ ನೀಡಿದ ಒಂದು ಹಿಡಿ ಅವಲಕ್ಕಿಗೆ ಪ್ರತಿಯಾಗಿ ಅಖಂಡ ಐಶ್ವರ್ಯವನ್ನು ಶ್ರೀಕೃಷ್ಣ ನೀಡಿದ [೪]ಪ್ರಸಂಗವೂ ಸಹ ಇದರಂತಹುದೇ ಆಗಿದೆ.

## ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।**

---

೧. ಸ ಕದಾಚಿಚ್ಛಿಶುಭಾವಂ ಕುರ್ವಂಸ್ತ್ವಾ ಮಾತುರಾತ್ಮನೋ ಭೂಯಃ।
ಅಪನೇತುಂ ಪರಮೇಶೋ ಮೃದಂ ಜಘಾಸೇಕ್ಷತಾಂ ವಯಸ್ಯಾನಾಮ್ ॥
ಮಾತ್ರೋಪಾಲಬ್ಧ ಈಶೋ ಮುಖವಿವೃತಿಮಕರ್ನಾಂಬ ಮೃದ್ಭಕ್ಷಿತಾಽಹಂ
ಪಶ್ಯೇತ್ಯಾಸ್ಯಾಂತರೇ ತು ಪ್ರಕೃತಿವಿಕೃತಿಯುಕ್ ಸಾ ಜಗತ್ ಪರ್ಯಪಶ್ಯತ್ ।
ಇತ್ಥಂ ದೇವೋಽಪ್ಯಚಿಂತ್ಯಾಮಪರದುರಧಿಗಾಂ ಶಕ್ತಿಮುಚ್ಚಾಂ ಪ್ರದರ್ಶ್ಯ
ಪ್ರಾಯೋ ಜ್ಞಾತಾತ್ಮತತ್ತ್ವಾಂ ಪುನರಪಿ ಭಗವಾನಾವೃಣೋದಾತ್ಮಶಕ್ತ್ಯಾ ॥ - ಮ.ಭಾ.ತಾ.ನಿ.(೧೩/೪,೫)
ಕಿಂಚಿತ್ಕರೋತ್ಯುರ್ವಪಿ ಯತ್ ಸ್ವದತ್ತಂ ಸುಹೃತ್ಕೃತಂ ಫಲ್ಗಪಿ ಭೂರಿಕಾರಿ।
ಮಯೋಪನೀತಂ ಪೃಥುಕೈಕಮುಷ್ಟಿಂ ಪ್ರತ್ಯಗ್ರಹೀತ್ ಪ್ರೀತಿಯುತೇ ಮಹಾತ್ಮಾ॥ ಭಾ. (೧೦/೯೯/೩೩)
೨. ಅಹಂ ರಸಯಾ ಷಡ್ರಸಭರಿತಯಾ ಭೂಮ್ಯಾ ಭಕ್ತಿರಸಭರಿತಯೇತಿ ಧ್ವನ್ಯತೇ। -ವ್ಯಾ.
೩. ಅತ ಏವಾಣ್ವಪ್ಯುಪಹೃತಂ ಭಕ್ತಪ್ರೇಮ್ಣಾ ಭೂರ್ಯೇವ ಮೇ ಭವೇದಿತಿ ವಚನಾತ್ ಸುಪಾತ್ರೇ ಕೃಷ್ಣೇ ಭಕ್ತ್ಯಾ ದತ್ತಮಲ್ಪಮಪಿ ಬಹು ಭವತೀತಿ ಭಾವಃ। -ವ್ಯಾ.
೪. ಕಿಂಚಿತ್ಕರೋತ್ಯುರ್ವಪಿ ಯತ್ ಸ್ವದತ್ತಂ ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರಿ।
ಮಯೋಪನೀತಂ ಪೃಥುಕೈಕಮುಷ್ಟಿಂ ಪ್ರತ್ಯಗ್ರಹೀತ್ ಪ್ರೀತಿಯುತೋ ಮಹಾತ್ಮಾ॥ - ಭಾಗ. (೧೦/೯೯/೩೩)

ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಸ್ತೃತೀಯೋ ಮುದಾಮ್ ||೬೩||

|| ಇತಿ ಶ್ರೀವಾದಿರಾಜತೀರ್ಥಪ್ರಣೀತರುಗ್ಮಿಣೀಶವಿಜಯೇ ತೃತೀಯಃ ಸರ್ಗಃ ||೩||

ರೋಮಗಳಿಗೆ ಪುಲಕನೀಡುವ,ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ ನಿರ್ಮಲವಾದ ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶ-ವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಮೂರನೆಯ ಸರ್ಗವು ಮುಕ್ತಾಯವಾಯಿತು.

*****

# ೪. ಚತುರ್ಥ ಸರ್ಗ

(ಯಶೋದೆಯಲ್ಲಿ ಶ್ರೀಕೃಷ್ಣನ ವಾತ್ಸಲ್ಯ-೧; ಯಶೋದೆಯಿಂದ ಸ್ತನ್ಯಪ್ರಾಶನ-೨; ಶ್ರೀಕೃಷ್ಣನಿಂದ ದಧಿಭಾಂಡಭಂಜನ - ೩; ಅದರ ಆಂತರ್ಯ - ೪; ಶ್ರೀಕೃಷ್ಣಗ್ರಹಣ - ೫; ಶ್ರೀಕೃಷ್ಣನ ಬಂಧನಪ್ರಯತ್ನ - ೭ ; ದ್ವ್ಯಂಗುಲೋನವಾದ ಹಗ್ಗ - ೯; ಭಕ್ತಿಪಾಶದಿಂದ ಶ್ರೀಕೃಷ್ಣನ ಬಂಧನ - ೧೦; ಉಲೂಖಲದಲ್ಲಿ ಶ್ರೀಕೃಷ್ಣಬಂಧನ - ೧೧; ಯಮಲಾರ್ಜುನಭಂಜನ - ೧೨-೧೫; ವೃಂದಾವನವೈಭವ - ೨೧-೨೪; ವತ್ಸಾಸುರವಧೆ - ೨೫; ಬಕಾಸುರವಧೆ - ೨೧-೩೫; ವೃಂದಾವನವಾಸ - ೩೬-೪೩; ವಸಂತವರ್ಣನೆ - ೪೪-೪೬; ಶ್ರೀಕೃಷ್ಣವಿಹಾರ - ೪೭-೫೪; ಕಾಲಿಯಮರ್ದನಪ್ರಸಂಗ - ೫೫-೭೨; ಸರ್ಗೋಪಸಂಹಾರ - ೭೩)

## ಯಶೋದೆಯ ಬಳಿಗೆ ನಡೆದ ಶ್ರೀಕೃಷ್ಣ

ಉದ್ಗಚ್ಛತ್ಕಬರೀಪ್ರಸೂನನಿಕರಾಂ ವೈರಾಗ್ಯಭಾಗ್ಯಪ್ರಿಯಃ
ಸದ್ಗೀತಾತ್ಮಯಶೋಽನುವರ್ಣನಪರಾಂ ಜ್ಞಾನಾನುಮೋದೀ ಹರಿಃ।
ದಧ್ನೋ ನಿರ್ಮಥನೋದ್ಯತಾಂ ಸಮುದಿತಪ್ರೇಮಾಶ್ರುಧಾರಾಂ ನಿಜ-
ಪ್ರೇಮ್ಣಾ ಮಂದಮುಪಾಜಗಾಮ ಜನನೀಂ ಭಕ್ತ್ಯೈಕವಶ್ಯಃ ಪ್ರಭುಃ ॥ ೧ ॥

ಬಿಚ್ಚಿದ ಮುಡಿಯಿಂದ ಉದುರುತ್ತಿದ್ದ ಹೂವುಗಳ ರಾಶಿಯ, ಉತ್ತಮರು ಹಾಡಿದ ತನ್ನ ಮಹಿಮೆಯ ವರ್ಣನೆಯಲ್ಲಿ ತೊಡಗಿದ್ದ, ಉಕ್ಕಿದ ಪ್ರೀತಿಯಿಂದಾಗಿ ಆನಂದಾಶ್ರುವನ್ನು ಸುರಿಸುತ್ತಿದ್ದ, ಮೊಸರನ್ನು ಕಡೆಯುವಲ್ಲಿ ತೊಡಗಿದ್ದ ತಾಯಿ ಯಶೋದೆಯ ಬಳಿಗೆ ವೈರಾಗ್ಯಭಾಗ್ಯಪ್ರಿಯನೂ, ಜ್ಞಾನಕ್ಕೆ ಮೆಚ್ಚುವವನೂ, ಭಕ್ತರಿಗೆ ಮಾತ್ರವೇ ಒಲಿಯುವ ಪ್ರಭುವೂ ಆದ ಶ್ರೀಕೃಷ್ಣನು ಸಹಜಪ್ರೀತಿಯಿಂದ ಮೆಲ್ಲನೆ ಆಗಮಿಸಿದ.

ವಿ. : ೧. ಒಮ್ಮೆ ಮೊಸರು ಕಡೆಯುತ್ತಿದ್ದ ಯಶೋದೆಯ ಬಳಿಗೆ [೧]ಶ್ರೀಕೃಷ್ಣ ಧಾವಿಸಿದ ಪ್ರಸಂಗದ ವಿವರ ಇಲ್ಲಿದೆ.

೨. ಹಾಗೆ ಅವಳ ಬಳಿಗೆ ತೆರಳಲು ಅವಳಿಗಿದ್ದ ಅರ್ಹತೆಯನ್ನು ಕಾವ್ಯಮಯವಾಗಿ ವರ್ಣಿಸಿರುವರು; ಕಬರೀ – ಮುಡಿ ; ಪ್ರಸೂನ – ಹೂವು ; ನಿಕರ – ಸಮೂಹ.

೩.. ತನ್ನ ಮುಡಿಯಿಂದ ಹೂವುಗಳು ಉದುರಿಬೀಳುತ್ತಿದ್ದರೂ ಆ ಬಗ್ಗೆ ಯಶೋದೆಗೆ ಗಮನವಿರಲಿಲ್ಲ ಎಂಬ ಮಾತಿನಲ್ಲಿ ಅವಳಿಗಿದ್ದ ಅಪಾರ ವೈರಾಗ್ಯದ ಸೂಚನೆ ಇದೆ. ಅದಕ್ಕಾಗಿ, [೨]ವೈರಾಗ್ಯಭಾಗ್ಯಪ್ರಿಯನಾದ ಅವನು ಅವಳ ಬಳಿಗೆ ತೆರಳಿದ.

---

೧. ಅನೇನ ಪರಮಾತ್ಮನಃ ಕೃಷ್ಣಸ್ಯ ಪ್ರಾಪ್ತೌ ದ್ವಿತೀಯಪಾದೋಕ್ತಭಕ್ತಿಲಕ್ಷಣಸಾಧನಸಂಪತ್ತಿಃ ಸೂಚಿತಾ। -ವ್ಯಾ.

೨. ವಿರಕ್ತ್ಯಾದಿಸಾಧನವತಾಂ ಪರಮಾತ್ಮಾ ಲಭ್ಯ ಏವೇತಿ ಭಾವಃ। -ವ್ಯಾ.

೪. [೧]ಉತ್ತಮರು ಎಂದರೆ ನಿರ್ದೋಷವಾದ ವೇದಗಳು, ಉಪನಿಷತ್ತುಗಳು ಮೊದಲಾದ-ವುಗಳನ್ನು ಬಲ್ಲ ಜ್ಞಾನಿಗಳು ಎಂದರ್ಥ; ಇದು ದ್ವಾದಶಸ್ತೋತ್ರದಲ್ಲಿನ ಉನ್ನತಪ್ರಾರ್ಥಿತಾ-ಶೇಷಸಂಸಾಧಕಮ್ ಎಂಬ ಮಾತಿನ ವಿವರಣೆಯಂತಿದೆ.

೫. [೨]ಮೊಸರನ್ನು ಕಡೆಯುವಾಗ ಅದರಿಂದ ಬರುವ ಬೆಣ್ಣೆಯನ್ನು ಶ್ರೀಕೃಷ್ಣನಿಗೆ ಸಮರ್ಪಿ-ಸುವೆ ಎಂಬ ಅವಳ ಭಕ್ತಿಭಾವವನ್ನು ಗಮನಿಸಿ, ಭಕ್ತೈಕವಶ್ಯನಾದ ಶ್ರೀಕೃಷ್ಣ ಅವಳ ಬಳಿಗೆ ತೆರಳಿದ.

೬. ಹೀಗೆ ಭಗವದುಪಾಸನೆಗೆ ಅಗತ್ಯವಾದ ವೈರಾಗ್ಯ , ಭಕ್ತಿ ಹಾಗೂ ಜ್ಞಾನಗಳು ಯಶೋದೆ-ಯಲ್ಲಿದ್ದುದರಿಂದ [೩]ಅವಳ ಬಗ್ಗೆ ಅನುಗ್ರಹ ತೋರಲೆಂದು ಶ್ರೀಕೃಷ್ಣ ಹಾಗೆ ತೆರಳಿದ. ಇದರಿಂದ ನಿಜಕ್ಕೂ ತನ್ನ ತಾಯಿಯಲ್ಲದ ಯಶೋದೆಯ ಬಳಿಗೆ [೪]ಶ್ರೀಕೃಷ್ಣ ತೆರಳಲು ಕಾರಣವನ್ನು ತಿಳಿಸಿದಂತಾಯಿತು.

೭. ಶ್ರೀಕೃಷ್ಣನಿಗೆ ವಾಸ್ತವವಾಗಿ ತಂದೆತಾಯಿಗಳ ಪ್ರಸಕ್ತಿಯೇ ಇಲ್ಲ ಎಂಬುದು ಪರಮತತ್ತ್ವ.

## ಯಶೋದೆಯಿಂದ ಶ್ರೀಕೃಷ್ಣನಿಗೆ ಸ್ತನ್ಯಪ್ರಾಶನ

**ಅಂಕೋಜ್ಝಿತೇಂದುಪ್ರತಿಮಾನನಂ ತ-**
**ಮಂಕಂ ಸಮಾರೋಪ್ಯ ಮುಹುರ್ಮೃಜಂತೀ ।**
**ಪಂಕಂ ಮನೋಜ್ಞಾಂಗಗತಂ ಕ್ಷುಧಾರ್ತ-**
**ಶಂಕಾ ಸ್ತನಕ್ಷೀರಮಪಾಯಯತ್ ಸಾ[೫] ॥ ೨ ॥**

ಕಳಂಕವಿಲ್ಲದ ಚಂದ್ರನಂತಹ ಮುಖದ ಆ ಶ್ರೀಕೃಷ್ಣನನ್ನು ತೊಡೆಯಮೇಲೇರಿಸಿಕೊಂಡು, ಅವನ ಮನೋಹರವಾದ ಅಂಗಾಂಗಗಳಿಗೆ ಮೆತ್ತಿದ್ದ ಮಣ್ಣನ್ನು ತೊಳೆಯುತ್ತಾ, ಆ ಯಶೋದೆಯು ಅವನು ಹಸಿವಿನಿಂದ ಪೀಡಿತ ಎಂದು ಭಾವಿಸಿ, ಮೊಲೆಹಾಲನ್ನು ಕುಡಿಸತೊಡಗಿದಳು.

---

೧. ಅನೇನ ಮಹಿಮಾನುವರ್ಣನಸ್ಯ ಜ್ಞಾನಪೂರ್ವಕತ್ವಾತ್ ತೃತೀಯಾಧ್ಯಾಯಚತುರ್ಥಪಾದೋಕ್ತಜ್ಞಾನಸಂಪತ್ತಿಃ ಸೂಚಿತಾ । -ವ್ಯಾ.

೨. ಸ್ವಯಮೇವಾಗತಸ್ಯ ಕೃಷ್ಣಸ್ಯ ದಧಿಮಥನಕಾಲೀನಯಶೋದಾವಸ್ಥಾಯಾಃ ವೈರಾಗ್ಯಾದಿಕಾರಣಾಂತರ-ತ್ವವರ್ಣನಾತ್ ವಿಭಾವನಾಲಂಕಾರಃ। ಹೇತೂತ್ಪ್ರೇಕ್ಷಾ ವಾ। -ವ್ಯಾ.

೩. ಅನೇನ ಯಶೋದಾಯಾಃ ಸ್ವಕಬರೀಚ್ಯುತಪುಷ್ಪಸಂಗ್ರಹಾನಪೇಕ್ಷತಯಾ ತೃತೀಯಾಧ್ಯಾಯಪ್ರಥಮಪಾದೋಕ್ತ-ಸ್ರಗಾದಿವಿಷಯತ್ಯಾಗಲಕ್ಷಣವೈರಾಗ್ಯಸಂಪತ್ತಿಃ ಸೂಚಿತಾ । ಅತ ಏವ ವೈರಾಗ್ಯಮೇವ ಭಾಗ್ಯಂ ಐಶ್ವರ್ಯಂ ಯೇಷಾಂ ತೇ ವೈರಾಗ್ಯಭಾಗ್ಯಾಃ ವಿರಕ್ತಾ ಇತ್ಯರ್ಥಃ। -ವ್ಯಾ.

೪. ನಿದ್ರೋತ್ಥಿತಃ ಕೃಷ್ಣಃ ದಧಿಮಥನಕಾಲೇ ಯಶೋದಾಸಮೀಪಮಾಜಗಾಮೇತಿ ಪೌರಾಣಿಕೀ ಕಥಾ। -ವ್ಯಾ.

೫. ತ್ರಯ್ಯಾ ಚೋಪನಿಷದ್ಭಿಶ್ಚ ಸಾಂಖ್ಯಯೋಗೈಶ್ಚ ಸಾತ್ತ್ವತೈಃ।
ಉಪಗೀಯಮಾನಮಾಹಾತ್ಮ್ಯಂ ಹರಿಂ ಸಾಽಮನ್ಯತಾತ್ಮಜಮ್ ॥ -ಭಾಗ.(೧೦/೯/೪೫)

ವಿ. : ೧. ಈ ಪದ್ಯದಲ್ಲಿನ ಅಂಕ, ಅಂಕ, ಪಂಕ, ಶಂಕಾ ಎಂಬ ಪ್ರತಿಪಾದದಲ್ಲಿನ ದ್ವಿತೀಯಾಕ್ಷರಾನುಪ್ರಾಸ ಗಮನಾರ್ಹ.

೨. ತನ್ನೆಡೆಗೆ ಬಂದ ಶ್ರೀಕೃಷ್ಣನಿಗೆ ಯಶೋದೆಯು ಹಾಲು ಕುಡಿಸತೊಡಗಿದಳು ಎಂದು ಭಾವ. ಶ್ರೀಕೃಷ್ಣ ಮೈಮೇಲಿನ ಧೂಳು ಎಂದರೆ ಆಟದ ಸಮಯದಲ್ಲಿ ಉಂಟಾದ ಧೂಳು ಎಂದರ್ಥ. ಸ್ವತಃ ಅಪ್ರಾಕೃತನಾದ ಶ್ರೀಹರಿಗೆ ನಿಜವಾದ ಅರ್ಥದಲ್ಲಿ ಧೂಳಿನ ಪ್ರಶ್ನೆಯೇ ಉದ್ಭವಿಸದು.

೩. ಶ್ರೀಕೃಷ್ಣನದು ಚಂದ್ರನಂತಹ ಮುಖ ಎಂಬುದು ನಿಜವಾದರೂ ಚಂದ್ರನಂತೆ ಅವನಲ್ಲಿ ಕಪ್ಪುಕಲೆ ಇಲ್ಲ ಎಂದು ತಿಳಿಸಲು 'ಅಂಕೋಜ್ಝಿತೇಂದುಪ್ರತಿಮಾನನಮ್' ಎಂದಿರುವರು.

೪. ಅಂಕ ಎಂಬುದಕ್ಕೆ ಚಿಹ್ನೆ, ಕಳಂಕ ಎಂದೂ, ತೊಡೆ ಎಂದೂ ಅರ್ಥ; ಮೃಜಂತೀ – ತೊಳೆಯುತ್ತ; ಮನೋಜ್ಞಾ – ಮನೋಹರ ; ಕ್ಷುಧಾರ್ತಾ – ಹಸಿವಿನಿಂದ ಪೀಡಿತ.

### ಮೊಸರಿನ ಪಾತ್ರೆಯನ್ನು ಒಡೆದ ಶ್ರೀಕೃಷ್ಣ

**ತದನು [1]ದಹನವೇಗಾದುತ್ಪ್ರವೃತ್ತಕ್ಷೀರಲೋಭಾತ್**
**ಮಧುಜಿತಮಪಹಾಯಾಜಾನತೀ ಸಾ ಜಗಾಮ ।**
**ಹರಿರಪಿ ಸಮಯಾರ್ಹಾಂ ಹಾನಿಮಸ್ಯೈ ಪ್ರದಾತುಂ**
**ವ್ಯಭಜತ ದಧಿಭಾಂಡಂ ಕ್ಷಿಪ್ತಪಾಷಾಣಖಂಡಃ [2]॥ ೩ ॥**

ಆ ಬಳಿಕ ಮಧುಸೂದನನಾದ ಶ್ರೀಕೃಷ್ಣನನ್ನು ಶ್ರೀಹರಿ ಎಂದು ಅರಿಯದ ಆ ಯಶೋದೆಯು, ಬೆಂಕಿಯ ತೀವ್ರತೆಯಿಂದಾಗಿ ಉಕ್ಕತೊಡಗಿದ ಕ್ಷೀರದ ಮೇಲಿನ ಆಶೆಯಿಂದ ಅವನನ್ನು ಕೆಳಕ್ಕಿಳಿಸಿ ಧಾವಿಸಿದಳು; ಶ್ರೀಕೃಷ್ಣನಾದರೋ ಕಾಲೋಚಿತವಾದ ಕೆಡುಕನ್ನು ಅವಳಿಗೆ ಉಂಟು-ಮಾಡಲೆಂದು ಕಲ್ಲಿನತುಂಡನ್ನು ಎಸೆದು ಮೊಸರಿನ ಗಡಿಗೆಯನ್ನು ಒಡೆದುಹಾಕಿದ.

ವಿ. : ೧. ಯಶೋದೆಯು ಆ ಸಮಯದಲ್ಲಿ ಒಲೆಯ ಮೇಲಿನ ಹಾಲು ಉಕ್ಕಿದ್ದನ್ನು ಕಂಡು ಅದನ್ನು ಇಳಿಸಲೆಂದು ತೊಡೆಯಮೇಲಿದ್ದ ಕೃಷ್ಣನನ್ನು ಕೆಳಗಿಳಿಸಿ, ಅತ್ತ ಧಾವಿಸಿದಳು; ಆಗ ಶ್ರೀಕೃಷ್ಣ ಅವಳು ತನ್ನನ್ನು ಹಾಗೆ ಇಳಿಸಿದ ತಪ್ಪಿಗೆ ತಕ್ಕ ಶಿಕ್ಷೆ ನೀಡಲೆಂದು ಕಲ್ಲಿನ ತುಂಡೊಂದನ್ನು ಎಸೆದು ಮೊಸರಿನ ಗಡಿಗೆಯನ್ನೇ ಒಡೆದುಹಾಕಿದ ಎಂದರ್ಥ; **ದಧಿಭಾಂಡ – ಮೊಸರಿನ ಪಾತ್ರೆ.**

---

೧. ತಮಂಕಮಾರೂಢಮಪಾಯಯತ್ ಸ್ತನಂ ಸ್ನೇಹಸ್ರುತಂ ಸಸ್ಮಿತಮೀಕ್ಷತೀ ಮುಖಮ್ ।
ಅತೃಪ್ತಮುತ್ಸೃಜ್ಯ ಜವೇನ ಸಾ ಯಯಾವುತ್ಸಿಚ್ಯಮಾನೇ ಪಯಸಿ ತ್ವಧಿಶ್ರಿತೇ ॥
ಸಂಜಾತಕೋಪಃ ಸ್ಫುರಿತಾರುಣಾಧರಂ ಸಂದಶ್ಯ ದದ್ಭಿರ್ದಧಿಮಂಡಭಾಜನಮ್ ।
ಭಿತ್ತ್ವಾ ಮೃಷಾಶ್ರುರ್ದೃಷದಶ್ಮನಾ ರಹೋ ಜಘಾಸ ಹೈಯಂಗವಮಂತರಂ ಗತಃ ॥ –ಭಾಗ.(೧೦/೧೦/೫,೬)
೨. ಮಾಲಿನೀವೃತ್ತಮ್ । –ವ್ಯಾ.

೨. [1]ಸರ್ವಜಗದೊಡೆಯನಾದ ತಾನೇ ತೊಡೆಯ ಮೇಲೆ ಇದ್ದರೂ ಅದನ್ನು ಅರಿಯದೆ, ಸಾಮಾನ್ಯವಾದ ಕ್ಷೀರಕ್ಕಾಗಿ ಅವನನ್ನು ಇಳಿಸಿದ್ದು ಅವಳ ಅಜ್ಞಾನಕ್ಕೆ ಸಂಕೇತವಾಗಿತ್ತು; ಅದಕ್ಕೆಂದೇ ಶ್ರೀಕೃಷ್ಣನು ಅವಳಿಗೆ ಪಾಠ ಕಲಿಸಲೆಂದು ಹಾಗೆ ಮಾಡಿದ ಎಂದರ್ಥ; ದಹನ – ವಹ್ನಿ.

೩. ಸರ್ವಶ್ರೇಷ್ಠವಾದ ಶ್ರೀಹರಿಯ ಸೇವೆಯನ್ನು ತೊರೆದು, ಲೌಕಿಕ ಕಾರ್ಯಗಳತ್ತ ಗಮನ-ಹರಿಸುವವರಿಗೆ ಇಹ ಲೋಕದ ಫಲವೂ ಇಲ್ಲದಂತಾಗುವುದು ಎಂಬುದು ಇಲ್ಲಿಯ ಧ್ವನಿ.

೪. 'ಕ್ಷೀರ'ದ ಮೇಲಿನ ಆಸೆಯಿಂದ 'ಮಧು'ಸೂದನನಾದ ಶ್ರೀಕೃಷ್ಣನ ಪರಿತ್ಯಾಗ ಸರ್ವಥಾ ಅನುಚಿತ ಎಂಬುದು ಇಲ್ಲಿಯ ತಾತ್ಪರ್ಯ; 'ನ ಹಿ ಕಪರ್ದಿಕಾಲಾಭಾರ್ಥಂ ಲಕ್ಷಲಾಭಂ ನಾಶಯನ್ನುಪಕಾರೀ ಭವತಿ' (ವಿಷ್ಣುತತ್ತ್ವವಿನಿರ್ಣಯಟೀಕಾ) ಎಂಬಂತೆ.

### ಬೆಕ್ಕಿನ ಪಾಲಾದ ಬೆಣ್ಣೆ

ದದೌ[2] ಬಿಡಾಲಾಯ ಜನನ್ಯದೃಷ್ಟ-
ಸ್ತದಾ ಸ್ವನೀತಂ ನವನೀತಜಾತಮ್ ।
ಕ್ಷಿಣೋತಿ ನೂನಂ ಧನಲೋಭಭಾಜಾಂ
ಧನಾನ್ಯನರ್ಹತ್ಸ್ವತಿದಿಶ್ಯ ದೇವಃ ॥ ೪ ॥

ತಾಯಿಗೆ ಕಾಣದಂತೆ ತಾನು ತಂದಿದ್ದ ಬೆಣ್ಣೆಯ ರಾಶಿಯನ್ನು ಶ್ರೀಕೃಷ್ಣ ಬೆಕ್ಕಿಗೆ ನೀಡಿದ; ಧನದ ಮೇಲೆ ದುರಾಸೆಯವರ ಸಂಪತ್ತನ್ನು ದೇವನಾದ ಅವನು ಅಯೋಗ್ಯರಿಗೆ ದೊರಕುವಂತೆ ಮಾಡಿ ನಾಶಗಯ್ಯುವನು ಎಂಬುದು ನಿಶ್ಚಿತ.

ವಿ. : ೧. ಈ ಪ್ರಸಂಗದಿಂದ ಶ್ರೀಹರಿಯು ಧನಕನಕಾದಿಗಳ ಮೇಲಿನ ಲೋಭದಿಂದ ತನ್ನನ್ನು ತೊರೆಯುವವರ ಐಶ್ವರ್ಯವನ್ನು ಅಯೋಗ್ಯರ ಪಾಲಾಗಿಸಿ, [3]ನಾಶಗೈಯ್ಯುವನು ಎಂಬುದು ಇಲ್ಲಿಯ ಭಾವ; ಬಿಡಾಲ – ಬೆಕ್ಕು; ನವನೀತ – ಬೆಣ್ಣೆ.

---

೧. ಪರಮಾತ್ಮಾ ಹಿ ಅಜ್ಞಾನವಶಾತ್ ಸ್ವಸೇವಾಂ ಪರಿತ್ಯಜ್ಯ ವಿಷಯಸೇವಿನಾಂ ಸ್ವಭಕ್ತಾನಾಮಪಿ ಐಹಿಕಂ ಪಾರತ್ರಿಕಮಪಿ ನಾಶಯತೀತಿ ಭಾವಃ ।

೨. ಉಲೂಖಲಾಂಘ್ರೇರುಪರಿ ವ್ಯವಸ್ಥಿತಂ ಮರ್ಕಾಯ ಕಾಮಂ ದದತಂ ಯಥೇಪ್ಸಿತಮ್ ।
ಹೈಯಂಗವಂ ಚೌರ್ಯವಿಶಂಕಿತೇಕ್ಷಣಂ ನಿರೀಕ್ಷ್ಯ ಪಶ್ಚಾತ್ ಸುತಮಾಗಮಚ್ಛನೈಃ ॥ -ಭಾಗ.(೧೦/೧೦/೮)

೩. ''ಅನ್ಯಾಯೇನಾರ್ಜಿತಂ ವಿತ್ತಮನ್ಯಾಯೇನ ವಿನಶ್ಯತಿ'' ಇತಿ ವಚನಾದನಾದೃತದೇವೈರ್ಲೋಭೇನಾರ್ಜಿತಂ ದ್ರವ್ಯಂ ಸ್ವಕೀಯಾನನುಭುಕ್ತಂ ಸತ್ಪಾತ್ರೇ ವಾऽದತ್ತಂ ವಿನಶ್ಯತೀತಿ ಭಾವಃ । -ವ್ಯಾ.
ದಾನಂ ಭೋಗೋ ನಾಶಸ್ತಿಸ್ರೋ ಹಿ ಗತಿರ್ಭವತಿ ವಿತ್ತಸ್ಯ ।
ಯೋ ನ ದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ ॥ -ಸುಭಾಷಿತ

೨. [೧]ಅದೃಷ್ಟಃ ಎಂಬ ಪದದಿಂದ ತಾನು ಕಣ್ಣಿಗೆ ಕಾಣಿಸಿಕೊಳ್ಳದೆ ಹಾಗೆ ಮಾಡುವವನು ಎಂಬ ಮತ್ತೊಂದು ಅರ್ಥ ಸೂಚಿತ. ಇಂತಹ ನಿಷಿದ್ಧಕಾರ್ಯಗಳಿಂದ ಅಪರೋಕ್ಷಜ್ಞಾನ ಲಭಿಸ-ದಂತಾಗುವುದು ಎಂಬ ತತ್ತ್ವವು ಸೂಚಿತ (ಅರ್ಥಾಂತರನ್ಯಾಸಾಲಂಕಾರ).

**ಶ್ರೀಕೃಷ್ಣನನ್ನು ಹಿಡಿದ ಪುಣ್ಯವತಿ**

**ವಿಚಾರಭಾರಾರ್ಪಿತಮಾನಸಾऽಥೋ**
**ವಿಮರ್ಶಲಭ್ಯಂ ತಮವೇಕ್ಷ್ಯ ಮಾತಾ ।**
**ಅನುವ್ರಜಂತ್ಯಸ್ಪೃಶದಪ್ಯಗಮ್ಯಂ[೨]**
**ಪರಾನುಯಾತ್ರಾರ್ಜಿತಪುಣ್ಯಪಾತ್ರೀ[೩] ॥ ೫ ॥**

ಬಹುಬಗೆಯ ಚಿಂತನೆಯಲ್ಲಿ ತೊಡಗಿದ ತಾಯಿ ಯಶೋದೆಯು ಆ ಬಳಿಕ ವಿಮರ್ಶೆಗೆ ದೊರಕುವ ಅವನನ್ನು ಕಂಡು, ಹಿಂಬಾಲಿಸಿ ಸಾಗಿ, ಸರ್ವೋತ್ತಮನಾದ ಅವನ ಹಿಂದೆ ಓಡಿದ್ದರಿಂದ ಲಭಿಸಿದ ಪುಣ್ಯದ ಪ್ರಭಾವವನ್ನು ಪಡೆದವನಾಗಿ, ಅಗಮ್ಯನಾದ ಅವನನ್ನು ಕೊನೆಗೂ ಹಿಡಿದುಬಿಟ್ಟಳು.

ವಿ. : ೧. [೪]ಯಶೋದೆಗೆ ಅಗಮ್ಯನಾದ ಕೃಷ್ಣನನ್ನು ಹಿಡಿಯುವುದು ಎಂದೂ ಸಹ ದುಸ್ಸಾಧ್ಯ-ವಾದ ಸಂಗತಿ; ಅದರಿಂದಾಗಿಯೇ ಕೂಡಲೇ ಅವಳಿಗೆ ಅವನನ್ನು ಹಿಡಿಯಲು ಸಾಧ್ಯವಾಗ-ದಾಯಿತು. ಆದರೂ ಅವನ ಹಿಂದೆ ಓಡಿದ್ದರಿಂದ ಲಭಿಸಿದ ಪುಣ್ಯದಿಂದಾಗಿ ಕೊನೆಗೂ ಅವನನ್ನು ಹಿಡಿಯಲು ಸಾಧ್ಯವಾಯಿತು ಎಂಬುದು ಇಲ್ಲಿಯ ಭಾವ.

೨. [೫]ಅಗಮ್ಯನಾದ ಶ್ರೀಹರಿಯನ್ನು ಅರಿಯುವುದು ಎಂತು ಎಂಬುದಕ್ಕೆ ಈ ಪ್ರಸಂಗದಲ್ಲಿ ಉತ್ತರವಿದೆ; ಅವನ ಬಗ್ಗೆ ಜಿಜ್ಞಾಸೆಯೇ ಅವನನ್ನು ಹಿಡಿಯುವ ಸಾಧನ. ಜಿಜ್ಞಾಸೆಯಿಂದ ಲಭಿಸುವ [೬]ಪುಣ್ಯಕ್ಕೆ ಅವನು ಲಭಿಸುವನು ಎಂಬುದು ಇಲ್ಲಿಯ ತತ್ತ್ವ : **ಅಥಾತೋ ಬ್ರಹ್ಮಜಿಜ್ಞಾಸಾ ।** -ಬ್ರಹ್ಮಸೂತ್ರ(೧/೧/೧); **ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ**

---

೧. ಅನೇನ ಸ್ವಸೇವಾವಿಧುರಾಣಾಂ ಅದೃಶ್ಯಃ ಪರಮಾತ್ಮೇತಿ ಧ್ವನ್ಯತೇ । -ವ್ಯಾ.

೨. ಪುನಃ ಸಮೀಕ್ಷ್ಯ ತಚ್ಛ್ರಮಂ ಜಗಾಮ ತತ್ಕರಗ್ರಹಮ್ ।
ಪ್ರಭುಃ ಸ್ವಭಕ್ತವಶ್ಯತಾಂ ಪ್ರಕಾಶಯನ್ನುರುಕ್ರಮಃ ॥ - ಮ.ಭಾ.ತಾ.ನಿ.(೧೩/೧೫)

೩.. ಅನ್ವಂಚಮಾನಾ ಜನನೀ ಬೃಹಚ್ಚಲಚ್ಛ್ರೋಣೀಭರಾಕ್ರಾಂತಗತಿಃ ಸುಮಧ್ಯಮಾ ।
ಜವೇನ ವಿಭ್ರಂಶಿತಕೇಶಬಂಧನಚ್ಯುತಪ್ರಸೂನಾನುಗತಿಃ ಪರಾಮೃಶತ್ ॥ -ಭಾಗ.(೧೦/೧೦/೮)

೪. ಸ್ವಭಾವತ ಏವ ದೃಷ್ಟಸ್ಯ ಶ್ರವಣಾನ್ವೇಷಣಾದಿವಿಚಾರರೂಪಕಾರಣತ್ವಕಲ್ಪನಯಾ ಸ್ವಭಾವತ ಏವ ಗೃಹೀತಸ್ಯಾ-ನುಯಾತ್ರಾಜನಿತಪುಣ್ಯರೂಪಕಾರಣತ್ವಕಲ್ಪನಯಾ ಚ ಹೇತೂತ್ಪ್ರೇಕ್ಷಾಲಂಕಾರಃ ।

೫. ಚೋರಾ ಹಿ ಗವೇಷಣಾಯಾಂ ಲಭ್ಯಂತ ಇತಿ ಭಾವಃ । -ವ್ಯಾ.

೬. ಪುಣ್ಯವತಾಂ ಪರಮಾತ್ಮಪ್ರಾಪ್ತಿರ್ಭವತೀತಿ ಭಾವಃ । -ವ್ಯಾ.

ಮುಚ್ಯತೇ । -(ಅನುವ್ಯಾಖ್ಯಾನ-೧/೧/೧); ಇದರಿಂದ 'ಮಾತಾ' ಎಂಬುದಕ್ಕೆ 'ಪ್ರಮಾತಾ' ಎಂಬ ಅರ್ಥವೂ ಧ್ವನಿತ ಎಂದು ತಿಳಿಯಬಹುದು.

೩. ಜಿಜ್ಞಾಸೆಯ ಹೊರತು ಬೇರಾವುದಕ್ಕೂ ಶ್ರೀಹರಿಯು ದೊರೆಯಲಾರನು; ಜ್ಞಾನವೇ ಶ್ರೀಹರಿಯನ್ನು ಒಲಿಸುವ ಪರಮಸಾಧನ ಎಂಬ [೧]ಪ್ರಮೇಯವು ವಿಮರ್ಶಲಭ್ಯಂ ಎಂಬ ಪದದಿಂದ ಸೂಚಿತ ; ಇದು ಜ್ಞಾನಗಮ್ಯಃ ಎಂಬ ವಿಷ್ಣುಸಹಸ್ರನಾಮದ ಭಾವವೂ ಆಗಿದೆ.

## ಶ್ರೀಕೃಷ್ಣನನ್ನು ಬೆದರಿಸುವ ಯಶೋದೆಯ ಪ್ರಯತ್ನ

ಯದೀಯನಾಮ ಸ್ಮರತಾಂ ಜನಾನಾಂ
ಬಿಭೇತ್ಯಸಹ್ಯೋಽಪಿ ಹಿ ದಂಡಪಾಣಿಃ ।
[೨]ಅಭೀಷಯದ್ವಿಶ್ವಸೃಜಾಂ ವರಿಷ್ಠಂ
ಗೃಹೀತದಂಡಾ ಕಿಲ ನಂದರಾಜ್ಞೀ ॥ ೬ ॥

ಸಹಿಸಲಾಗದ ಯಮನೂ ಸಹ ಯಾರ ನಾಮವನ್ನು ಸ್ಮರಿಸುವ ಜನರಿಗೆ ಅಂಜುವನೋ ಅಂತಹ ಬ್ರಹ್ಮಾದಿಗಳಿಗಿಂತ ಮಿಗಿಲಾದ ಶ್ರೀಕೃಷ್ಣನನ್ನು ಆ ನಂದರಾಣಿಯಾದ ಯಶೋದೆಯು ದಂಡಹಿಡಿದು ಅಂಜಿಸತೊಡಗಿದಳು.

ವಿ. : ೧. ಹಾಗೆ ಸಿಕ್ಕ ಶ್ರೀಕೃಷ್ಣನನ್ನು ದಂಡದಿಂದ ಯಶೋದೆ [೩]ಅಂಜಿಸತೊಡಗಿದ ಕಾರ್ಯ ಎಂತಹ ಅವಿವೇಕದ ಕೃತ್ಯ ಎಂಬುದನ್ನು ಹೀಗೆ ಇಲ್ಲಿ ವರ್ಣಿಸಿರುವರು; ವರಿಷ್ಠ - ಅತ್ಯಂತ ಶ್ರೇಷ್ಠ; ದಂಡಪಾಣಿ - ಯಮ; ರಾಜ್ಞೀ - ರಾಣಿ.

೨. [೪]ಭಗವನ್ನಾಮ ಸ್ಮರಿಸುವವರಿಗೆ ಸಹ ನರಕದ ಭಯವೇ ಇಲ್ಲದಿರುವಾಗ ಭಗವಂತನೇ ಆದ ಶ್ರೀಕೃಷ್ಣನನ್ನು ಅಂಜಿಸುವ ಅವಳ ಪ್ರಯತ್ನ ಮಹಾ ಅವಿವೇಕಕ್ಕೆ ಸೂಚಕ ಎಂಬುದು ಇಲ್ಲಿಯ ತತ್ತ್ವ.

---

೧. ಅನೇನ ಹರೇರ್ವೇದಾಂತವಿಚಾರಲಭ್ಯತ್ವಂ ಧ್ವನ್ಯತೇ। -ವ್ಯಾ.

೨. ಕೃತಾಗಸಂ ತಂ ಪ್ರರುದಂತಮಕ್ಷಿಣೀ ಕಷಂತಮಂಜನ್ಮಷಿಣೀ ಸ್ವಪಾಣಿನಾ ।
ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ ಹಸ್ತೇ ಗೃಹೀತ್ವಾ ಭಿಷಯಂತ್ಯವಾಗುರತ್ ॥ -ಭಾಗ.(೧೦/೧೦/೧೧)

೩.. ಇತ್ಯನೇನ ಕೃಷ್ಣಭೀಷಣೋದ್ಯೋಗೇ ಯಶೋದಾಯಾ ಮೌರ್ಖ್ಯಂ ವಿಜೃಂಭಿತಮಿತಿ ಧ್ವನ್ಯತೇ। -ವ್ಯಾ.

೪. ಕಮಲನಯನ ವಾಸುದೇವ ವಿಷ್ಣೋ ಧರಣಿಧರಾಚ್ಯುತ ಶಂಖಚಕ್ರಪಾಣೇ ।
ಭವ ಶರಣಮಿತೀರಯಂತಿ ಯೇ ವೈ ತ್ಯಜ ಭಟ ದೂರತರೇಣ ತಾನಪಾಪಾನ್ ।
-ಯಮಗೀತಾ, ವಿಷ್ಣುಪುರಾಣ (೩/೭/೩೩)

ತಾನ್ ನೋಪಸೀದತ ಹರೇರ್ಗದಯಾಽಭಿಗುಪ್ತಾನ್
ನೈಷಾಂ ಭಯಂ ನ ಚ ವಯಂ ಪ್ರಭವಾಮ ದಂಡೇ ॥
-ಇತಿ (ಭಾಗವತ ೬/೩/೨೭) ವಚನಾನಿ ಹಿ ಶಬ್ದಃ ದ್ಯೋತಯತಿ। (ವ್ಯಾ.)

### ಶ್ರೀಕೃಷ್ಣನನ್ನು ಕಟ್ಟುವ ಯಶೋದೆಯ ದುಃಸಾಹಸ

**ಅಜಾಂಡಕೋಟ್ಯಾಶ್ರಯರೋಮಕೂಪಂ**
**ತಮಾತ್ತಕೋಪಾ ಕಿಲ ನಂದಗೋಪೀ ।**
**ಇಯೇಷ ಬದ್ಧುಂ ನ ಹಿ ರೋಷರುದ್ಧಂ**
**ಮನೋ ಮಿನೋತ್ಯಪ್ಯಮರಾನುಭಾವಮ್ ॥ ೭ ॥**

ಕೋಪಗೊಂಡ ಯಶೋದೆಯು ಕೋಟಿಗಟ್ಟಲೆ ಬ್ರಹ್ಮಾಂಡಗಳನ್ನು ತನ್ನ ರೋಮಕೂಪದಲ್ಲಿ ಇರಿಸಿಕೊಂಡ ಆ ಶ್ರೀಕೃಷ್ಣನನ್ನು ಕಟ್ಟಿಹಾಕಲು ಇಚ್ಛಿಸಿದಳು; ಕೋಪದಿಂದ ಮಂಕಾದ ಮನಸ್ಸು ದೇವತೆಗಳ ಪ್ರಭಾವವನ್ನು ಸಹ ಅರಿಯದಾಗುವುದು; ಅಲ್ಲವೆ !

ವಿ. : ೧. ಶ್ರೀಕೃಷ್ಣನೆಲ್ಲಿ ? ಯಶೋದೆಯೆಲ್ಲಿ ? [೧]ಅವನನ್ನು ಕಟ್ಟುವ ಅವಳ ಪ್ರಯತ್ನ ಅವಿವೇಕದ ಫಲವೇ ಸರಿ; ಅಂತಹ ಅವಿವೇಕಕ್ಕೆ ಕೋಪವೇ ಕಾರಣ. ಅವನ ಬಗ್ಗೆ ಕೋಪಗೊಂಡ ಯಶೋದೆಗೆ ಅವನ ಮಹಿಮೆ ತಿಳಿಯದೇ ಹೋಯಿತು ಎಂದರ್ಥ; ಅಜಾಂಡ – ಬ್ರಹ್ಮಾಂಡ.

೨. ಕಾಮಕ್ರೋಧಾದಿ ದೋಷಗಳನ್ನು ಹೊಂದಿದವರಿಗೆ ಬ್ರಹ್ಮಜ್ಞಾನ ಲಭಿಸದು ಎಂಬುದು ಇಲ್ಲಿಯ ತತ್ತ್ವ : ಕೋಪಃ ಸ್ವಪರಸಾಮರ್ಥ್ಯವಿವೇಕಂ ನಾಶಯತೀತಿ ಭಾವಃ । –ವ್ಯಾ.

### ಶ್ರೀಕೃಷ್ಣನಿಗೆ ಬಂಧನವಾಗದಿರಲು ಕಾರಣ

**ಕೃತಾಗಸಂ ತಂ ಕಿಲ ನೈವ ಮಾತಾ**
**ಶಶಾಕ ಬದ್ಧುಂ ಮಮ ತು ಪ್ರತರ್ಕಃ ।**
**ತದೀಯರಮ್ಯೋದರಮಧ್ಯಸಂಸ್ಥ-**
**ವಿಮುಕ್ತಶಕ್ತ್ಯೈವ ನ ಬಂಧ ಆಸೀತ್ ॥ ೮ ॥**

ತಪ್ಪು ಮಾಡಿದ ಆ ಕೃಷ್ಣನನ್ನು ತಾಯಿ ಯಶೋದೆಗೆ ಕಟ್ಟಿಹಾಕಲು ಆಗಲೇ ಇಲ್ಲ ; ಅವನ ರಮ್ಯವಾದ ಉದರದ ಮಧ್ಯದಲ್ಲಿ ನೆಲೆಸಿದ್ದ ವಿಮುಕ್ತರ ಸಾಮರ್ಥ್ಯದಿಂದಾಗಿ ಅವನಿಗೆ ಬಂಧ ಒದಗಲಿಲ್ಲ ಎಂಬುದು ನನ್ನ ಬಲವಾದ ಊಹೆ.

ವಿ. : ೧. ಶ್ರೀಕೃಷ್ಣನನ್ನು ಯಶೋದೆಗೆ [೨]ಕಟ್ಟಿಹಾಕಲು ಅಸಾಧ್ಯವಾಯಿತು ಎಂಬುದು ವಾಸ್ತವ ಸಂಗತಿ.

---

೧. ಅಸಾಧ್ಯಕಾರ್ಯಕರಣೋದ್ಯೋಗೇ ಯಶೋದಾಯಾ ಮೌರ್ಖ್ಯಾತಿಶಯಃ ಕಿಂ ವರ್ಣನೀಯ ಇತಿ ಭಾವಃ ।
೨. ಅನ್ಯಥಾ ಕೃಷ್ಣಬಂಧನೇನ ಕೃಷ್ಣಾಸಂಗತ್ವೇನ ತದಾಶ್ರಿತಮುಕ್ತಾನಾಮೇವ ಬಂಧಪ್ರಾಪ್ತ್ಯಾ ತೇಷಾಂ ವಿಮುಕ್ತತ್ವ-ಹಾನೇರಿತಿ ಭಾವಃ । –ವ್ಯಾ.

೨. ಒಮ್ಮೆ ಮುಕ್ತರಾದವರಿಗೆ ಮತ್ತೆಂದೂ ಬಂಧ ಒದಗದು; ಅಂತಹ ಮುಕ್ತರ ಗುಂಪು ಶ್ರೀಕೃಷ್ಣನ ಉದರದಲ್ಲಿದೆ; ಅದರಿಂದ ಯಶೋದೆಗೆ ಅವನನ್ನು ಬಂಧಿಸಲು ಆಗಲೇ ಇಲ್ಲ ಎಂಬುದು [೧]ಕಾವ್ಯರೀತಿಯ ಉತ್ತರ ; ಆಗಸ್ - ಪಾಪ.

**ಎರಡಂಗುಲ ಕಡಿಮೆ ಎನ್ನಿಸಿದ ಹಗ್ಗ**

**ಸಾಶಾಂ ಮುಹುಃ ಸ್ವಪ್ರಸುವಂ ವಿಧಾತು-**
**ಮೀಶತ್ವಮಪ್ಯಾತ್ಮಗತಂ ಮುಕುಂದಃ।**
**ಬಂಧಂ ರುಣದ್ಧಿ ಸ್ಮ ತದಾತ್ತದಾಮ**
**ಸಂದರ್ಶಯನ್ ಸ್ವಾತ್ಮನಿ [೩] ಕಿಂಚಿದೂನಮ್ ॥ ೯ ॥**

ತನ್ನ ತಾಯಿ ಯಶೋದೆಯು ಮತ್ತೆ ಪೂರ್ಣವಾಗಿ ಆಸೆ ತೊರೆಯದಿರಲೆಂದು ಹಾಗೂ ತನ್ನಲ್ಲಿನ ಈಶಭಾವವನ್ನು ತೋರಿಸಿಕೊಡಲೆಂದು, ಆಗ ಅವಳು ತೆಗೆದುಕೊಂಡ [೨]ಹಗ್ಗಗಳು ತನ್ನ ಬಗ್ಗೆ ಸ್ವಲ್ಪ ಕಡಿಮೆ ಎನ್ನಿಸುವಂತೆ ಮಾಡಿ, ತನಗೆ ಬಂಧನವಾಗದಂತೆ ನೋಡಿಕೊಂಡ.

ವಿ. : ೧. ಅವಳು ನಿರಾಶಳಾಗಿ ಕಟ್ಟುವ ಕಾರ್ಯವನ್ನು ಕೈಬಿಡದಿರಲೆಂದು ಅವಳು ತಂದ ಹಗ್ಗ ಸ್ವಲ್ಪಮಾತ್ರ ಕಡಿಮೆ ಎನ್ನಿಸುವಂತೆ ಮಾಡಿದ; ಪೂರ್ಣಕಡಿಮೆ ಎನ್ನಿಸುವಂತೆ ಮಾಡಿದಲ್ಲಿ ಅವಳು ಕಟ್ಟುವ ಆಸೆಯನ್ನೇ ತೊರೆದಾಳು ಎಂದು ಭಾವಿಸಿ ಹಾಗೆ ಮಾಡಿದ ಎಂದರ್ಥ;ಪ್ರಸುವ-ತಾಯಿ.

---

೧. ದೃಷ್ಟ್ವಾ ಸ ಚೇತನಗಣಾನ್ ಜಠರೇ ಶಯಾನಾನ್ ಆನಂದಮಾತ್ರವಪುಷಃ ಸೃತಿವಿಪ್ರಮುಕ್ತಾನ್ ।
ಧ್ಯಾನಂಗತಾನ್ ಸೃತಿಗತಾಂಶ್ಚ ಸುಷುಪ್ತಿಸಂಸ್ಥಾನ್ ಬ್ರಹ್ಮಾದಿಕಾನ್ ಕಲಿಪರಾನ್ ಮನುಜಾಂಸ್ತಥೈಕ್ಷತ್ ॥
-ಮ.ಭಾ.ತಾ.ನಿ.(೧/೪)

ಸ್ವಸ್ವಸಮಗ್ರಯೋಗ್ಯತಾಭಿಜ್ಞಪರಮಾನುಗ್ರಹಶೀಲಭಗವತ್ಪ್ರೇರಿತಚತುರ್ಮುಖಾದಿಸದ್ಗುರೂಪದಿಷ್ಟಸ್ವಸ್ವಯೋಗ್ಯ ಭಗವದ್ರೂಪಗುಣೋಪಾಸನಯಾ ಸಂಜಾತಸ್ವಸ್ವಯೋಗ್ಯಭಗವದ್ರೂಪವಿಶೇಷದರ್ಶನಭೋಗಾಭ್ಯಾಂ ವಿನಷ್ಟಾ-ನಿಷ್ಟಸಂಚಿತಪ್ರಾರಬ್ಧಲಕ್ಷಣಾಶೇಷಕರ್ಮಣಾಂ, ಸ್ವಸ್ವಯೋಗ್ಯತಾನುಸಾರೇಣ ಸಂಪೂರ್ಣಸಾಧನಾನಾಂ,ಪೂರ್ವ-ಕಲ್ಪೇ ಬ್ರಹ್ಮಣಾ ಸಹ ವಿರಜಾನದೀಸ್ನಾನೇನ ತ್ಯಕ್ತಲಿಂಗಾನಾಂ, ತಥಾ ವಿನಷ್ಟಾವಶಿಷ್ಟೇಷ್ಟಾಶೇಷಪ್ರಾರಬ್ಧಕರ್ಮಣಾಂ, ಪ್ರಲಯಕಾಲೇ ಭಗವದುದರೇ ವಸತಾಂ, ಆನಂದಮಾತ್ರವಪುಷಾಂ, ತದನುಭವರಹಿತಾನಾಂ, ಸ್ವಸ್ವಯೋಗ್ಯ-ಭಗವದ್ರೂಪವಿಶೇಷಧ್ಯಾನರತಾನಾಂ, ಸೃಷ್ಟಿಕಾಲೇ ಭಗವದಾಜ್ಞಯಾ ಭಗವದುದರಾದ್ಬಹಿರ್ಗತಾನಾಂ ಶ್ರೀಶ್ವೇತ-ದ್ವೀಪದರ್ಶನಂ ನಿಮಿತ್ತೀಕೃತ್ಯ ಪ್ರಧಾನಾವರಣಭೂತಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯಾನಂದಾವಿರ್ಭಾವ-ಲಕ್ಷಣಮುಕ್ತಿ ...। - ಶ್ರೀರಾಘವೇಂದ್ರಸ್ವಾಮಿಗಳು (ಪ್ರಾತಃಸಂಕಲ್ಪಗದ್ಯ)

೨. **ಗೋಪ್ಯಾದದೇ ತ್ವಯಿ ಕೃತಾಗಸಿ ದಾಮ ತಾವದ್ಯಾ ತೇ ದಶಾऽಶ್ರುಕಲಿಲಾಂಜನಸಂಭ್ರಮಾಕ್ಷಮ್ ।**
**ವಕ್ತ್ರಂ ನಿನಮ್ಯ ಭಯಭಾವನಯಾ ಸ್ಥಿತಸ್ಯ ಸಾ ಮಾಂ ವಿಮೋಹಯತಿ ಭೀರಪಿ ಯಂ ಬಿಭೇತಿ ॥**
-ಭಾಗ.(೧/೮/೩.೪)

೩.. ದಾಮಾಂತರಪ್ರವೃತ್ತೌ ಸಾಭಿಲಾಷಾಂ ವಿಧಾತುಮೀಶತ್ವಮಪಿ ಕರ್ತುಮಕರ್ತುಮನ್ಯಥಾಕರ್ತುಂ ಸಾಮರ್ಥ್ಯ-ರೂಪಮೈಶ್ವರ್ಯಮಪಿ ಆತ್ಮಗತಂ ಸ್ವಗತಂ ವಿಧಾತುಂ ಚ ಸಾಮರ್ಥ್ಯಾಭಾವೇ ತದಾತ್ತಸಕಲದಾಮ್ನಾಂ ಕಿಂಚಿ-ನ್ನ್ಯೂನೀಕರಣಾಯೋಗಾದಿತಿ ಭಾವಃ। -ವ್ಯಾ.

೨. ಯಶೋದೆಯು ಕೃಷ್ಣನನ್ನು ಕಟ್ಟಲು ತೆಗೆದುಕೊಂಡ ಪ್ರತಿಹಗ್ಗವೂ [೧] ಎರಡು ಅಂಗುಲ ಮಾತ್ರ ಕಡಿಮೆಯಾಗುತ್ತಿದ್ದಿತು ಎಂಬ ಭಾಗವತದ ಅರ್ಥವನ್ನು ಇಲ್ಲಿ ಹೀಗೆ ತಿಳಿಸಲಾಗಿದೆ.

೩. ತನ್ನನ್ನು ಕಟ್ಟಲಾಗದಂತೆ ಮಾಡುವ ಮೂಲಕ ತಾನು ಈಶ ಎಂಬುದನ್ನು ತೋರಿಸಿ-ಕೊಡುವುದು ಸಹ ಶ್ರೀಕೃಷ್ಣನ ಆ ಕಾರ್ಯದ ಉದ್ದೇಶವಾಗಿತ್ತು ಎಂದೂ ಭಾವ ; ದಾಮ-ಹಗ್ಗ.

## ಭಕ್ತಿಪಾಶಕ್ಕೆ ಸಿಲುಕಿದ ಶ್ರೀಕೃಷ್ಣ

ಸುತೋ ನ ಮೇಽಯಂ ಹರಿರೇವ ಸಾಕ್ಷಾ-
ದಿತಿ ಪ್ರಬೋಧೇಽಂಕುರಿತೇ ಪುರಂಧ್ರೀ ।
ಬಬಂಧ ನಂದಸ್ಯ ಬಲಾನುಜಂ ತಂ
ಬುದ್ಧೈರ್ನಿಬದ್ಧಂ ಪ್ರಣಯಾಖ್ಯರಜ್ಜ್ವಾ ॥ ೧೦ ॥

"ಇವನು ನನ್ನ ಮಗನಲ್ಲ; ಸಾಕ್ಷಾತ್ ಶ್ರೀಹರಿಯೇ ಆಗಿರುವನು" ಎಂಬ ಜ್ಞಾನವು ಉದಿಸುತ್ತಿದ್ದಂತೆ ನಂದನ ಪತ್ನಿಯಾದ ಯಶೋದೆಯು ಜ್ಞಾನಿಗಳು ಭಕ್ತಿ ಎಂಬ ಪಾಶದಿಂದ ಗಾಢವಾಗಿ ಬಿಗಿಯುವ, ಬಲರಾಮನ ತಮ್ಮನಾದ ಆ ಶ್ರೀಕೃಷ್ಣನನ್ನು ಕಟ್ಟಿಹಾಕಿದಳು.

ವಿ. : ೧. ಯಶೋದೆಗೆ ಅವನು ಸರ್ವಥಾ ಶ್ರೀಹರಿ ಎಂಬ ಅರಿವು ಮೂಡುತ್ತಲೇ ಶ್ರೀಕೃಷ್ಣ ಅವಳಿಗೆ ವಶನಾದ ಎಂದರ್ಥ.

೨. [೨] ಶ್ರೀಕೃಷ್ಣನನ್ನು ಸರಿಯಾಗಿ ತಿಳಿಯದಿದ್ದ ಕಾರಣ ಅವಳಿಗೆ ಅವನು ಆ ಮುನ್ನ ವಶನಾಗಲಿಲ್ಲ. ಅವನು ಸಾಕ್ಷಾತ್ ಶ್ರೀಹರಿ ಎಂಬ ಜ್ಞಾನ ಅವಳಿಗೆ ಬರುತ್ತಲೇ ಅವಳಿಗೆ ವಶನಾದ ಎಂದು ತಿಳಿಸುವ ಮೂಲಕ ಶ್ರೀಹರಿಯು ತನ್ನನ್ನು ಯಥಾರ್ಥವಾಗಿ ತಿಳಿಯುವ ಜ್ಞಾನಿಗಳಿಗೆ ಮಾತ್ರ ವಶನಾಗುವನು ಇತರರಿಗೆ ಸರ್ವಥಾ ಅಲ್ಲ ಎಂಬ ತತ್ತ್ವ ಸೂಚಿತ.

೩. ದುರ್ಯೋಧನನಿಗೆ ಶ್ರೀಕೃಷ್ಣನ ಬಗ್ಗೆ ಯಥಾರ್ಥಜ್ಞಾನ ಕೊನೆಗೂ ಮೂಡಲೇ ಇಲ್ಲ ಆದ್ದರಿಂದ ಶ್ರೀಕೃಷ್ಣನನ್ನು ಕಟ್ಟಲು ಅವನಿಗೆ ಸಾಧ್ಯವಾಗಲೇ ಇಲ್ಲ ಎಂಬ ಮಹಾಭಾರತ ಉದ್ಯೋಗ ಪರ್ವದ ಪ್ರಸಂಗ ಇಲ್ಲಿ ಸ್ಮರಣೀಯ ; ಪುರಂಧ್ರೀ – ಸ್ತ್ರೀ ; ರಜ್ಜು – ಹಗ್ಗ.

೪. ಇಲ್ಲಿ ಕಟ್ಟುವುದು ಎಂದರೆ ವಶಮಾಡಿಕೊಳ್ಳುವುದು ಎಂದರ್ಥ. ತನಗಿಂತ ದೊಡ್ಡವರನ್ನು ಕೇವಲ ಭಕ್ತಿಯಿಂದ ವಶಮಾಡಿಕೊಳ್ಳುವುದು ಎಂದು ಮಾತ್ರವೇ ಅರ್ಥ : **ಸದ್ಭಕ್ತಿಪಾಶದಲಿ ಕಟ್ಟುವರ ಭವಕಟ್ಟು ಬಿಡಿಸುವ** ಎಂಬ[೩] ಮಾತು ಈ ಪ್ರಸಂಗದ ವಿವರಣೆಯಂತಿದೆ.

---

೧. 'ದ್ವ್ಯಂಗುಲೋನಮಭೂತ್ ತೇನ ಸಂದಧೇಽನ್ಯಚ್ಚ ಗೋಪಿಕಾ । ತದಪಿ ದ್ವ್ಯಂಗುಲಂ ನ್ಯೂನಂ ...' ।
-ಭಾಗ.(೧೦/೯/೧೫)

೨. ಕೃಷ್ಣಃ ಸ್ವಸಾಮರ್ಥ್ಯದರ್ಶನೇನ ಸ್ವಸ್ಮಿನ್ ಪರಬ್ರಹ್ಮತ್ವಬುದ್ಧಿಂ ಕುರ್ವತ್ಯಾಃ ಯಶೋದಾಯಾಃ ಬುದ್ಧಿ-ವ್ಯಾಮೋಹನಾಯ ತಯಾಽಬಧ್ಯತೇತ್ಯರ್ಥಃ। ಜ್ಞಾನಿಲಭ್ಯಃ ಪರಮಾತ್ಮೇತಿ ಧ್ವನಿತೋಽರ್ಥಃ। -ವ್ಯಾ.

೩. ಬಿಟ್ಟವರ ಭವಪಾಶದಿಂದಲಿ ಕಟ್ಟುವನು ಬಹು ಕಠಿಣನಿವ ಶಿಷ್ಟೇಷ್ಟನೆಂದರಿದನವರತ ಸದ್ಭಕ್ತಿಪಾಶದಲಿ।

### ಶ್ರೀಕೃಷ್ಣನೊಂದಿಗೆ ಒರಳಿಗೂ ಬಂಧನ

ಅಸಾಧ್ಯಭಾಗಸ್ಥಿತದುಗ್ಧಚೌರ್ಯೇ
ವಿಶಾರದಂ ತಂ ವಿನಿಬಧ್ಯ ಮಾತಾ ।
ಉಲೂಖಲಸ್ಯಾಪಿ ಬಬಂಧ ಮಧ್ಯಂ
ಸಹಾಯಭೂತಸ್ಯ ತದೀಯಕಾರ್ಯೇ ॥ ೧೧ ॥

ಎಟುಕಲಾಗದ ಸ್ಥಳದಲ್ಲಿರಿಸಿದ್ದ ಹಾಲನ್ನು ಕದಿಯುವುದರಲ್ಲೂ ನಿಪುಣನಾಗಿದ್ದ ಅವನನ್ನು ಹಾಗೆ ಕಟ್ಟಿದ ಯಶೋದೆಯು ಅವನ ಕದಿಯುವ ಕಾರ್ಯಕ್ಕೆ ನೆರವು ನೀಡುತ್ತಿದ್ದ ಒರಳಿನ ಮಧ್ಯಕ್ಕೂ ಕಟ್ಟನ್ನು ಬಿಗಿದಳು.

ವಿ. : ೧. [೧]ಯಶೋದೆಯು ಶ್ರೀಕೃಷ್ಣನನ್ನು ಒರಳಿಗೆ ಕಟ್ಟಿಹಾಕಿದಳು ಎಂದರ್ಥ.

೨. [೨]ಇದು ಒಂದು ರೀತಿಯಲ್ಲಿ ಒರಳಿಗೂ ಕಟ್ಟುಹಾಕಿದಂತಾಯಿತು. ಒರಳಿಗೇಕೆ ಕಟ್ಟು? ಎಂಬ ಪ್ರಶ್ನೆಗೆ ಇದರಲ್ಲಿ ಉತ್ತರವಿದೆ.

೩.. ಶ್ರೀಕೃಷ್ಣನು ಒರಳಿನ ಮೇಲೆ ಏರಿ, ಹಾಲಿನ ಪಾತ್ರೆಯನ್ನು ಕದಿಯುತ್ತಿದ್ದುದರಿಂದ ಅವನಿಗೆ ನೆರವು ನೀಡಿದ ಅದು ಸಹ ಅಪರಾಧಿ ಎನ್ನಿಸುವಂತಾಯಿತು. ಆದರಿಂದಾಗಿಯೇ ಅದಕ್ಕೂ ಬಂಧನ ಉಂಟಾಯಿತು; ವಿಶಾರದ – ನಿಪುಣ; ಉಲೂಖಲ – ಒರಳು.

೪. ಇದರಿಂದ [೩]ಅಪರಾಧಿಯಂತೆ, ಅಪರಾಧಿಗಳಿಗೆ ನೆರವು ನೀಡುವವರೂ ಸಹ ಅಪರಾಧಿಗಳು ಎಂಬ ತತ್ತ್ವ ಸೂಚಿತ: ನಾರಾಯಣದ್ವಿಟ್‌ತದನುಬಂಧಿನಿಗ್ರಹಃ ಕ್ಷತ್ರಿಯಾಣಾಂ ಪರಮೋ ಧರ್ಮಃ – ಎಂಬಂತೆ.

### ಒರಳನ್ನೆಳೆದೊಯ್ದ ಶ್ರೀಕೃಷ್ಣ

ಅನಾಹಿ ಯಃ ಕಾರ್ಯವಶಾಜ್ಜನನ್ಯಾ
ಶನೈರಸೌ ಸಾಕಮುಲೂಖಲೇನ ।
ವಿಧಾಯ ಪೃಷ್ಟಂ ಸ್ವಕಯೋರನಿಷ್ಟ-
ಮಭೀಪ್ಸಿತಂ ದಾತುಮಿವ ಪ್ರತಸ್ಥೇ ॥ ೧೨ ॥

---

ಕಟ್ಟುವರ ಭವಕಟ್ಟು ಬಿಡಿಸುವ ಸಿಟ್ಟಿನವನಿವನಲ್ಲ ಕಾಮದ ಕೊಟ್ಟು ಕಾವನು ಸಕಲಸೌಖ್ಯವ ಇಹಪರಂಗಳಲಿ ॥
–ಹರಿಕಥಾಮೃತಸಾರ (೨/೨೬)

೧. ಕೃಷ್ಣಂ ನಿಬಧ್ಯಾವಶಿಷ್ಟದಾಮೋಲೂಖಲಮಧ್ಯೇ ಅನುಸಂಧಿತವತೀತ್ಯರ್ಥಃ । –ವ್ಯಾ.

೨. ಚೋರತತ್ಸಹಾಯಿನೋರೇಕಶೃಂಖಲಾಬಂಧಸ್ಯ ಲೋಕೇ ದರ್ಶನಾದಿತಿ ಭಾವಃ । –ವ್ಯಾ.

೩.. ಕೃಷ್ಣಸಂಬಂಧಿಚೌರ್ಯಕಾರ್ಯೇ ಸಹಾಯಭೂತಸ್ಯ ಉಲೂಖಲಮಾರುಹ್ಯೋಪರಿಸ್ಥಿತದುಗ್ಧಸ್ಯ ಚೋರಿತತ್ವಾದಿತಿ ಭಾವಃ । ವ್ಯಾ.

ಕಾರ್ಯನಿಮಿತ್ತದಿಂದಾಗಿ ಹೀಗೆ ತಾಯಿಯಿಂದ ಕಟ್ಟಲ್ಪಟ್ಟ ಶ್ರೀಕೃಷ್ಣ, ತನ್ನ ಭಕ್ತರ ಅನಿಷ್ಟವನ್ನು ಕುಟ್ಟಿಹಾಕಿ, ಅವರಿಗೆ ಇಷ್ಟಾರ್ಥವನ್ನು ನೀಡಲೋ ಎಂಬಂತೆ ಆ ಒರಳಿನ ಸಮೇತವಾಗಿ ಮೆಲ್ಲನೆ ಸಾಗಿದ.

ವಿ. : ೧. ತನ್ನನ್ನು ಕಟ್ಟಿಹಾಕಿದ ಒರಳನ್ನೆಳೆದುಕೊಂಡು ಶ್ರೀಕೃಷ್ಣ ಸಾಗತೊಡಗಿದ ಎಂದರ್ಥ.

೨. ತನ್ನ ಭಕ್ತರಾದ ನಳಕೂಬರರು ತಾವು ಮಾಡಿದ ಅಪರಾಧದಿಂದಾಗಿ, ಎರಡು ಅವಳಿ ಅರ್ಜುನವೃಕ್ಷ (ಮತ್ತಿಮರ)ಗಳಾಗಿ ಜನಿಸಿದ್ದರು. ಅವರ ಅಪರಾಧವನ್ನು ಪರಿಹರಿಸಿ, ಅವರಿಗೆ ಕಲ್ಯಾಣವುಂಟುಮಾಡಲೆಂದು ಶ್ರೀಕೃಷ್ಣ[೧] ಒರಳಿನ ಸಮೇತವಾಗಿಯೇ ತೆರಳಿದ ಎಂದರ್ಥ.

೩. ಹಾಗೆ ಒರಳನ್ನು ಒಯ್ದದ್ದು ಅವರ ಪಾಪವನ್ನು ಕುಟ್ಟಿಪುಡಿಮಾಡಲೋ ಎಂಬಂತಿತ್ತು ಎಂಬುದು ಇಲ್ಲಿಯ ಭಾವ; ಅನಾಹಿ - ಕಟ್ಟಲ್ಪಟ್ಟವನು ; ಘೃಷ್ಟ - ಪುಡಿಯಾದ.

### ಯಮಳಾರ್ಜುನಬಂಧನಕ್ಕೆ ಕಾರಣ

ಅಸಜ್ಜನೇಷ್ವಾಚರಿತೋಗ್ರಶಿಕ್ಷಾಂ
ಸ್ವಭಕ್ತಪುಂಜೇಷು ಕೃತಾಂ ಚ ರಕ್ಷಾಮ್ ।
ನಭಸ್ಯಥೋ ಗಾತುಮುಭೌ ಚಿಕೀರ್ಷನ್
ವಿಪಾಟಯಾಮಾಸ ಸ ಪಾದಪೌ[೨] ದ್ವಾ ॥ ೧೩ ॥

---

೧. ಕೃಷ್ಣಪಾದಸಂಗ್ಯುಲೂಖಲಸಂಗೇನ ತಯೋಃ ಪಾಪನಾಶಾತ್ ತತ್ಪಾಸ್ಯೋಲೂಖಲಘೃಷ್ಟತ್ವೋತ್ಪ್ರೇಕ್ಷಾ । -ವ್ಯಾ.

೨. ಸುತಸ್ಯ ಮಾತೃವಶ್ಯತಾಂ ಪ್ರದರ್ಶ್ಯ ಧರ್ಮಮೀಶ್ವರಃ ।
ಬಭಂಜ ತೌ ದಿವಿಸ್ಪೃಶೌ ಯಮಾರ್ಜುನೌ ಸುರಾತ್ಮಜೌ ॥
ಪುರಾ ಧುನಿಶ್ಚಮುಸ್ತಥಾಽಪಿ ಪೂತನಾಸಮನ್ವಿತೌ ।
ಅನೋಕ್ಷಸಂಯುತೌ ತಪಃ ಪ್ರಚಕ್ರತುಃ ಶಿವಾಂ ಪ್ರತಿ ॥
ತಯಾ ವರೋಽಪ್ಯವಧ್ಯತಾ ಚತುರ್ಷು ಚ ಪ್ರಯೋಜಿತಃ ।
ಅನಂತರಂ ತೃಣೋದ್ಭ್ರಮಿಸ್ತಪೋಽಚರದ್ವರಂ ಚ ತಮ್ ॥
ಅವಾಪ ತೇ ತ್ರಯೋ ಹತಾಃ ಶಿಶುಸ್ವರೂಪವಿಷ್ಣುನಾ ।
ಧುನಿಶ್ಚಮುಶ್ಚ ತೌ ತರೂ ಸಮಾಶ್ರಿತೌ ನಿಷೂದಿತೌ ॥
ತರುಪ್ರಭಂಗತೋಽಮುನಾ ತರೂ ಚ ಶಾಪಸಂಭವೌ ।
ಧನೇಶಪುತ್ರಕೌ ದ್ರುತಂ ತರುತ್ವಮಾಪ್ನುತಂ ಕ್ಷಿತಿ ।
ಪುರಾ ಹಿ ನಾರದಾಂತಿಕೇ ದಿಗಂಬರೌ ಶಶಾಪ ಸಃ ॥
ತತೋ ಹಿ ತೌ ನಿಜಾಂ ತನುಂ ಹರೇಃ ಪ್ರಸಾದತಃ ಶುಭೌ ।
ಅವಾಪತುಃ ಸ್ತುತಿಂ ಪ್ರಭೋರ್ವಿಧಾಯ ಜಗ್ಮತುರ್ಗೃಹಮ್ ॥
ನಲಕೂಬರಮಣಿಗ್ರೀವೌ ಮೋಚಯಿತ್ವಾ ತು ಶಾಪತಃ ।
ವಾಸುದೇವೋಽಥ ಗೋಪಾಲೈರ್ವಿಸ್ಮಿತೈರಭಿವೀಕ್ಷಿತಃ ॥ -ಮ.ಭಾ.ತಾ.ನಿ.(೧೩./೧೯-೨೫)

ಬಳಿಕ ಆ ಶ್ರೀಕೃಷ್ಣನು ದುಷ್ಟರನ್ನು ತಾನು ಉಗ್ರವಾಗಿ ಶಿಕ್ಷಿಸಿದ್ದನ್ನು ಹಾಗೂ ತನ್ನ ಭಕ್ತವರ್ಗಕ್ಕೆ ರಕ್ಷಣೆ ನೀಡಿದ್ದನ್ನು ಗಗನದಲ್ಲಿ ಹಾಡಲೆಂದು ಆ ಎರಡು ವೃಕ್ಷಗಳನ್ನೂ ಸಹ ಬೀಳಿಸಿದ.

ವಿ. : ೧. [1]ಅವಳಿವೃಕ್ಷಗಳ ಮಧ್ಯೆ ಒರಳನ್ನು ಎಳೆದೊಯ್ದ ಕೃಷ್ಣ ಆ ಎರಡು ವೃಕ್ಷಗಳೂ ಮುರಿದು ಬೀಳುವಂತೆ ಮಾಡಿದ ಎಂದರ್ಥ.

೨. ಹಾಗೆ ಉರುಳಿಬೀಳುವ ವೃಕ್ಷಗಳಲ್ಲಿ ನೆಲೆಸಿದ್ದ [2]ನಳಕೂಬರ ಮಣಿಗ್ರೀವರು ಶಾಪ-ಮುಕ್ತರಾಗಿ ಪುನಃ ತಮ್ಮ ಲೋಕವನ್ನು ಸೇರುವರು ಎಂಬುದು ಇಲ್ಲಿಯ ಮತ್ತೊಂದು ಭಾವ.

೩. ಹಾಗೆ ತಮ್ಮ ಲೋಕ ಸೇರುವ ಅವರು ಅಲ್ಲಿ ತಮ್ಮನ್ನು ಉದ್ಧರಿಸಿದ ಶ್ರೀಕೃಷ್ಣನ ಮಹಿಮೆಯನ್ನು ಅಲ್ಲಿಯ ಜನರಿಗೆ ತಿಳಿಸಿದ್ದರಿಂದ ತನ್ನ ಕೀರ್ತಿ ಅಲ್ಲಿಯೂ ಸಹ ಹರಡುವಂತಾಗುವುದು ಎಂಬ ಭಾವನೆಯಿಂದಲೋ ಎಂಬಂತೆ ಅವರನ್ನು ಉದ್ಧರಿಸಿ ಕಳುಹಿಸಿದ ಎಂಬುದು ಇಲ್ಲಿಯ ಕಾವ್ಯನಿರೂಪಣೆ; ಪಾದಪ – ಮರ.

೪. ಇದು ಆ ವೃಕ್ಷಗಳಲ್ಲಿ ನಳಕೂಬರ ಮಣಿಗ್ರೀವರೆಂಬ ಸಾತ್ವಿಕರಾದ ಕುಬೇರಪುತ್ರ-ರೊಂದಿಗೆ ಅಸುರರಾದ ಧುನಿ ಮತ್ತು ಚಮೂ ಎಂಬ ಇಬ್ಬರು ಅಸುರರು ಸಹ ಇದ್ದರು ಎಂಬುದಕ್ಕೆ ಸೂಚಕ ; ಇದನ್ನು ಅಸಜ್ಜನರಿಗೆ ಉಗ್ರಶಿಕ್ಷೆ , ಸಜ್ಜನರಿಗೆ ರಕ್ಷಣೆ ಎಂಬ ಪದಗಳಿಂದ ತಿಳಿಸಿರುವರು ಎಂದು ತಿಳಿಯಬೇಕು.

೫. ಹೀಗೆ ದುಷ್ಟಶಿಕ್ಷಣೆ ಹಾಗೂ ಶಿಷ್ಟರಕ್ಷಣೆ ಎಂಬ ಎರಡು ವಿಭಿನ್ನಕಾರ್ಯಗಳನ್ನು ಮಾಡಲೆಂದು ಆ ಇಬ್ಬರನ್ನು ಶ್ರೀಕೃಷ್ಣ ಬಿಡುಗಡೆ ಮಾಡಿ ಸ್ವರ್ಗಕ್ಕೆ ಕಳುಹಿಸಿದ ಎಂಬ ಮತ್ತೊಂದು ವಿಶೇಷವೂ ಇಲ್ಲಿದೆ.

೬. ಶ್ರೀಗೋಪಾಲದಾಸರ 'ಇಂದಿರೇಶನೆ ನಿನ್ನದೊಂದೆ ಕ್ರಿಯೆ ದ್ವಂದ್ವದ್ವಂದ್ವವಾಯಿತು – ಬಾಲಕ್ರೀಡೆ ಯಮಳಾರ್ಜುನರ ಪಾಲಿಸಿತೊ ಕರುಣದಿ' ಎಂಬ ಕೃತಿ ಇದರ ವಿವರಣೆಯಂತಿದೆ.

### ಯಮಳಾರ್ಜುನಭಂಜನಕ್ಕೆ ಮತ್ತೊಂದು ಕಾರಣ

ಸ್ವಭೃತ್ಯಭೀಮಾನುಜಮದ್ವಿತೀಯಂ
ಪ್ರಿಯಂ ವಿಧಿತ್ಸುರ್ದಯಯೇವ ದೇವಃ।
ಸ ಭೂರುಹಾವರ್ಜುನಸಂಜ್ಞಿತೌ ತೌ
ಬಭಂಜ ಕಂಜಾಯತಮಂಜುನೇತ್ರಃ ॥ ೧೪ ॥

---

೧. ಉಭಾವಿತ್ಯನೇನ ದುಷ್ಟಶಿಕ್ಷಾಯಾಃ ಭಕ್ತರಕ್ಷಾಯಾಶ್ಚ ಪ್ರತ್ಯೇಕಮಿತಿ ಬಹುಲತ್ವೇನ ಏಕೇನ ಗಾತುಮಶಕ್ಯತ್ವಂ ಧ್ವನ್ಯತೇ। –ವ್ಯಾ.

೨. ಯಮಲಾರ್ಜುನಭಂಜನೇನಾಪಿ ತದಾಶ್ರಿತಾಸುರಶಿಕ್ಷಾ ನಲಕೂಬರಮಣಿಗ್ರೀವಯೋಃ ರಕ್ಷಾ ಚ ಕೃತೇತಿ ದ್ಯೋತ್ಯತೇ । ಅನೇನಾನಯೋರ್ವೃಕ್ಷಯೋಃ ಸ್ವಭಕ್ತವ್ಯತಿರಿಕ್ತೌ ಶಿಕ್ಷಾಯೋಗ್ಯೌ ದ್ವಾವಸುರೌ ತಿಷ್ಠತ ಇತಿ ಸೂಚ್ಯತೇ। –ವ್ಯಾ.

ತನ್ನ ಭೃತ್ಯನಾದ ಭೀಮಸೇನನ ತಮ್ಮನಾದ ಪ್ರೀತಿಯ ಅರ್ಜುನನನ್ನು ಕೃಪೆಯಿಂದ ಅದ್ವಿತೀಯನನ್ನಾಗಿ ಮಾಡಬಯಸಿದವನೆಂಬಂತೆ, ಕಮಲದಂತೆ ವಿಶಾಲವಾದ ಸುಂದರನೇತ್ರಗಳ ಆ ಶ್ರೀಕೃಷ್ಣನು 'ಅರ್ಜುನ' ಎಂಬ ಹೆಸರಿನ ಆ ವೃಕ್ಷಗಳನ್ನು ಮುರಿದುಹಾಕಿದ.

ವಿ. : ೧. ಯಮಳಾರ್ಜುನಭಂಜನಕ್ಕೆ ಇಲ್ಲಿ ಮತ್ತೊಂದು ರೀತಿಯಲ್ಲಿ ಕಾರಣವನ್ನು ಉತ್ಪ್ರೇಕ್ಷಿಸಿರುವರು; **ಭೂರುಹ** – ಮರ ; **ಕಂಜ** – ಕಮಲ ; **ಅರ್ಜುನ ವೃಕ್ಷ** – ಮತ್ತಿ ಮರ.

೨. ಆ ವೇಳೆಗಾಗಲೇ ಅವತರಿಸಿದ್ದ ಅರ್ಜುನ ಭೀಮಸೇನನ ತಮ್ಮ ; ಭೀಮಸೇನ ತನ್ನ ಅತ್ಯಂತ ಪ್ರಿಯಸೇವಕ. ಅಂತಹವನ ತಮ್ಮನಾದ ಅರ್ಜುನನು ಲೋಕದಲ್ಲಿ ಅದ್ವಿತೀಯ ಎನ್ನಿಸಬೇಕು. ಎಂದರೆ [೧]ಇನ್ನೊಬ್ಬ ಅರ್ಜುನ ಇಲ್ಲವೇ ಇಲ್ಲ ಎನ್ನಿಸಬೇಕು. ಈ ಅರ್ಜುನವೃಕ್ಷಗಳು ಉಳಿದಿದ್ದಲ್ಲಿ ಅವನಿಗೆ ಒಬ್ಬನೇ ಅರ್ಜುನ ಎಂಬ ಹೆಸರು ಬರುತ್ತಿರಲಿಲ್ಲ. [೨]ಅದಕ್ಕಾಗಿಯೋ ಎಂಬಂತೆ ಶ್ರೀಕೃಷ್ಣ ಆ ವೃಕ್ಷಗಳನ್ನು ನಾಶಮಾಡಿದ ಎಂದರ್ಥ. ಇನ್ನೊಬ್ಬ ಪ್ರಸಿದ್ಧ ಅರ್ಜುನ ಕಾರ್ತವೀರ್ಯಾರ್ಜುನ ; ಆದರೆ ಅವನು ಪರಶುರಾಮರೂಪದ ಶ್ರೀಹರಿಯಿಂದ ಆ ಮುನ್ನವೇ ಹತನಾದವನು. ಆದ್ದರಿಂದ ಅವನ ಪ್ರಸಕ್ತಿ ಇಲ್ಲ ಎಂದು ಸಹ ತಿಳಿಯಬೇಕು; **ಮಂಜು**–ಸುಂದರ.

೩. ತನ್ನ ಪರಮ ಭಕ್ತನಾದ ಭೀಮಸೇನದೇವರಿಗೆ ಸಂಬಂಧಿಸಿದವರನ್ನು ಶ್ರೀಹರಿಯು ಹೀಗೆ ಅದ್ವಿತೀಯರನ್ನಾಗಿ ಮಾಡುವನು ಎಂಬುದಕ್ಕೆ ಇದು ಸೂಚಕ.

೪. ವಾಲಿಯಾಗಿ ಜನಿಸಿದ್ದ ಇಂದ್ರದೇವರು ಹನುಮಂತನಿಗೆ ವಿರುದ್ಧವಾದ ಪಕ್ಷವನ್ನು ವಹಿಸಿದ್ದರಿಂದ ಕೇಡಿಗೆ ಗುರಿಯಾಗಬೇಕಾಯಿತು. ಆದರೆ ಅರ್ಜುನನಾಗಿ ಜನಿಸಿದಾಗ ಭೀಮನ ತಮ್ಮನಾಗಿ ಅತ್ಯಂತ ನಿಕಟವರ್ತಿ ಎನಿಸಿದ್ದರಿಂದ ಶ್ರೀಕೃಷ್ಣನಿಗೆ ಪ್ರಿಯನಾಗಿ ಅದ್ವಿತೀಯ ಕಾರ್ಯವನ್ನು ಸಾಧಿಸಲು ಸಾಧ್ಯವಾಯಿತು ಎಂಬ ವಿಶೇಷ ಪ್ರಮೇಯ ಇದರಿಂದ ಸೂಚಿತವಾಯಿತು[೩].

---

೧. ತಮರ್ಜುನಾಂತರರಹಿತಮಿತ್ಯರ್ಥಃ। –ವ್ಯಾ.

೨. ಅರ್ಜುನಾಭಿಧೇಯಯೋರನಯೋಃ ಸತ್ತ್ವೇ ತಸ್ಯ ಸದ್ವಿತೀಯತ್ವಂ ಸ್ಯಾದಿತಿ ಶಂಕಯೇತಿ ಭಾವಃ। –ವ್ಯಾ.

೩. ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಮ್ ।
ಕಸ್ಮಿನ್ ವಹಂತ್ವಿತಿ ತಥೈವ ಹಿ ಸೋಽವತಾರೇ ತಸ್ಮಾತ್ ಸ ಮಾರುತಿಕೃತೇ ರವಿಜಂ ರರಕ್ಷ॥
ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷದ್ಭೀಮಾರ್ಥಮೇವ ತದರಿಂ ರವಿಜಂ ನಿಹತ್ಯ।
ಪೂರ್ವಂ ಹಿ ಮಾರುತಿಮವಾಪ ರವೇಃ ಸುತೋಽಯಂ ತೇನಾಸ್ಯ ವಾಲಿನಮಹನ್ ರಘುಪಃ ಪ್ರತೀಪಮ್ ॥
ಏವಂ ಸುರಾಶ್ಚ ಪವನಸ್ಯ ವಶೇ ಯತೋಽತಃ ಸುಗ್ರೀವಮತ್ರ ತು ಪರತ್ರ ಚ ಶಕ್ರಸೂನುಮ್ ।
ಸರ್ವೇ ಶ್ರಿತಾ ಹನುಮತಸ್ತದನುಗ್ರಹಾಯ ತತ್ರಾಗಮದ್ರಘುಪತಿಃ ಸಹ ಲಕ್ಷ್ಮಣೇನ॥–ಮ.ಭಾ.ತಾ.ನಿ(೫/೪೬-೪೮)
ಭೀಮಾರ್ಥಂ ಕೇಶವೋಽನ್ಯೇ ಚ ದೇವಾಃ ಫಲ್ಗುನಪಕ್ಷಿಣಃ।
ಆಸನ್ ಯಥೈವ ರಾಮಾದ್ಯಾಃ ಸಂಗ್ರಹೇಣ ಹನೂಮತಃ।
ಸುರಾಃ ಸುಗ್ರೀವಪಕ್ಷಸ್ಥಾ ಪೂರ್ವಮಾಸಂಸ್ತಥೈವ ಹಿ॥

### ನಳಕೂಬರಮಣಿಗ್ರೀವರಿಗೆ ಸದ್ಗತಿ

ತದಂಗಬಂಧಪ್ರತಿಬಂಧಪುಣ್ಯ-
ಬಲೇನ ಸಿದ್ಧೌ ತತ ಉತ್ಥಿತೌ ದ್ವಾ ।
ಪ್ರಶಂಸ್ಯ ವೃಂದಾವನವಲ್ಲಭಂ ತಂ
ತದೇಯತುಸ್ತನ್ಮನಸೌ ಸ್ವಲೋಕಮ್ ॥ ೧೫ ॥

ಅವನ ಅಂಗಕ್ಕೆ ಬಿಗಿದ ಬಂಧನವನ್ನು ಕಳಚುವುದಕ್ಕೆ ನಿಮಿತ್ತವಾಗುವ ಮೂಲಕ ಒದಗಿದ ಪುಣ್ಯದ ಬಲದಿಂದಾಗಿ, ಜ್ಞಾನಾದಿ ಸಿದ್ಧರಾದ ಅವರಿಬ್ಬರೂ ಆ ವೃಕ್ಷಗಳಿಂದ ಮೇಲೆದ್ದು [1]ವೃಂದಾವನ-ಪತಿಯಾದ ಆ ಶ್ರೀಕೃಷ್ಣನನ್ನು ಕೊಂಡಾಡಿ ಅವನನ್ನೇ ಧ್ಯಾನಿಸುತ್ತಾ ತಮ್ಮ ಲೋಕಕ್ಕೆ ತೆರಳಿದರು.

ವಿ. : ೧. ಯಮಲಾರ್ಜುನಭಂಜನದಿಂದ ಆ ವೃಕ್ಷಗಳಲ್ಲಿ ನೆಲೆಸಿದ್ದ ನಳಕೂಬರಮಣಿ-ಗ್ರೀವರಿಗೆ ಶಾಪದಿಂದ ಮುಕ್ತಿ ಲಭಿಸಿ, ಅವರು ತಮ್ಮ ಲೋಕಕ್ಕೆ ತೆರಳುವಂತಾಯಿತು ಎಂದರ್ಥ.

೨. [2]ಶ್ರೀಕೃಷ್ಣ ಒರಳನ್ನು ಆ ವೃಕ್ಷಗಳ ಮಧ್ಯೆ ಎಳೆದೊಯ್ದಾಗ ವೃಕ್ಷಗಳೊಂದಿಗೆ ಆ ಒರಳಿನ ಕಟ್ಟು ಸಹ ಬಿಚ್ಚಿಹೋಯಿತು. ಇದರಿಂದ ಶ್ರೀಕೃಷ್ಣನಿಗೆ ಬಂಧವಿಲ್ಲ ಎಂಬುದು ಲೋಕಕ್ಕೆ ತಿಳಿಯುವಂತಾಯಿತು. ಅದನ್ನು ತಿಳಿಸಿದ ಪುಣ್ಯ ನಳಕೂಬರ ಮಣಿಗ್ರೀವರಿಗೆ ಒದಗಿತು. ಅದರಿಂದ ಅವರಿಗೆ ವೃಕ್ಷಯೋನಿಯಿಂದ ಮುಕ್ತಿ ಲಭಿಸಿ ಉದ್ಧಾರಹೊಂದಿದರು ಎಂದು ಭಾವ.

೩. ಶ್ರೀಕೃಷ್ಣನಿಗೆ [3]ಬಂಧಾದಿ ದೋಷಗಳಿಲ್ಲ ಎಂಬ ತತ್ತ್ವವನ್ನು ಪ್ರತಿಪಾದಿಸುವುದು ಮುಕ್ತಿಗೆ ಸಾಧನ ಎಂಬ ತತ್ತ್ವ ಇದರಿಂದ ಸೂಚಿತ.

೪. ಆ ಅರ್ಜುನವೃಕ್ಷಗಳಲ್ಲಿ ಧುನಿ ಮತ್ತು ಚಮು ಎಂಬ ಪಾರ್ವತೀವರದಿಂದ ಕೊಬ್ಬಿದ್ದ ಅಸುರರು ಆವಿಷ್ಟರಾಗಿದ್ದ ವಿಶೇಷ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ (೧೩./೨೦,೨೨).

### ವೃಂದಾವನಕ್ಕೆ ತೆರಳಲು ಶ್ರೀಕೃಷ್ಣನ ಸಂಕಲ್ಪ

ಬೃಹದ್ವನೇ ಸ್ವಸ್ಯ ಹಿ ಸನ್ನಿಧಾನಾ-
ನ್ಮಹಾಪುರೀಸಾಮ್ಯಮುಪೇಯುಷೀತ್ಥಮ್ ।

---

ತದರ್ಥಮೇವ ಭೀಮಸ್ಯ ಹ್ಯನುಜತ್ವಂ ಸುರೇಶ್ವರಃ ।
ಆಪ ಪೂರ್ವಾನುತಾಪೇನ ತೇನ ಭೀಮಸ್ತಥಾऽಕರೋತ್ ॥ - ಮ.ಭಾ.ತಾ.ನಿ.(೧೫/೫೧,೫೨)

೧. ಅನೇನ ಭವಿಷ್ಯದ್ವೃಂದಾವನಗಮನಂ ಸೂಚ್ಯತೇ । -ವ್ಯಾ.

೨. ತಸ್ಮಿನ್ ಕೃಷ್ಣೇ ಮನೋ ಯಯೋಸ್ತೌ ತನ್ಮನಸೌ ತತ್ಸ್ಮರಣಯುಕ್ತಾವಿತ್ಯರ್ಥಃ । -ವ್ಯಾ.

೩. ಅನೇನ ಕೃಷ್ಣಸ್ಯ ಬಂಧಾಭಾವಪ್ರತಿಪಾದನಂ ದ್ಯೋತ್ಯತೇ । -ವ್ಯಾ.

ವನಪ್ರಿಯೋಽಸೌ ಚಕಮೇ ರಮೇಶೋ
ಮನೋಜ್ಞವೃಂದಾವನ ಏವ [1]ವಾಸಮ್ ॥ ೧೬ ॥

ಗೋಕುಲವು ಹೀಗೆ ತನ್ನ ಸನ್ನಿಧಾನದಿಂದ ಮಹಾನಗರದ ಸಾಮ್ಯವನ್ನು ಹೊಂದಿಬಿಡಲು, ವನಪ್ರಿಯನಾದ ರಮೇಶನಾದ ಶ್ರೀಕೃಷ್ಣನು ಮನೋಹರವಾದ ವೃಂದಾವನದಲ್ಲಿಯೇ ನೆಲೆಸಲು ಬಯಸಿದ.

ವಿ. : ೧. [2]ಗೋಕುಲವು ಶ್ರೀಕೃಷ್ಣನ ಸನ್ನಿಧಾನದಿಂದಾಗಿ ವಿಶಿಷ್ಟ ಶೋಭೆಯನ್ನು ಪಡೆದು ಮಹಾನಗರಿಯಂತಾಗಿಬಿಟ್ಟಿತು. ಆದರೆ ಶ್ರೀಕೃಷ್ಣ [3]ವನಪ್ರಿಯ. ಆದ್ದರಿಂದ ಅದನ್ನು ತೊರೆದು, ವೃಂದಾವನವೆಂಬ ಮತ್ತೊಂದು ಸ್ಥಳಕ್ಕೆ ತೆರಳಲು ಬಯಸಿದ.

೨. "ವನಂ ಸಜ್ಜನಸಂಗತಿಃ" ಎಂಬುದು ವನ ಶಬ್ದಕ್ಕೆ ಮತ್ತೊಂದು ಬಗೆಯ ಅರ್ಥ. ಶ್ರೀಕೃಷ್ಣ ವನಪ್ರಿಯ ಎಂದರೆ ಸಜ್ಜನರ ಮಧ್ಯೆ ವಾಸಿಸಲು ಬಯಸುವವನು ಎಂಬುದು ಮುಖ್ಯಾರ್ಥ.

೩. ಶ್ರೀಹರಿಯು ನೆಲೆಸುವ ಸ್ಥಳ ಮಹಾನಗರಿಯಂತಾಗಿ ಸಂಪದ್ಭರಿತವಾಗುವುದು ಎಂಬುದು ಇಲ್ಲಿ ಸೂಚಿತವಾದ ಅರ್ಥ.

೪. ಶ್ರೀಕೃಷ್ಣನ ಸನ್ನಿಧಾನದಿಂದಾಗಿ ವೃಂದಾವನವೂ ಸಹ ಮಹಾನಗರಿಯಂತೆಯೇ ಆಯಿತು ಎಂಬ ವಿವರ ಮುಂದೆ ಬರುವುದು(ರು.ವಿ. ೯/೬೧-೬೪).

೫. ಇಲ್ಲಿನ 'ವನಪ್ರಿಯ' ಎಂಬ ಮಾತು ರಾಮಾವತಾರದ ವನವಾಸಕ್ಕೆ ನೀಡಿದ ವಿವರಣೆ-ಯಂತಿದೆ - ಎಂದರೆ ಶ್ರೀರಾಮನ ವನವಾಸವೂ ಸಹ ಶ್ರೀಕೃಷ್ಣನ ವೃಂದಾವನವಾಸದಂತೆ ಆನಂದ ಪೂರ್ಣವೂ, ಲೋಕಕಲ್ಯಾಣಕರವೂ ಆದ ವಿಹಾರಕಾರ್ಯವಾಗಿದ್ದಿತು ಎಂದಾಗುವುದು.

## ಗೋಕುಲವನ್ನು ತೊರೆಯಲೆಂದು ವೃಕಗಳ ಸೃಷ್ಟಿ

ವಿರೋಧಿದೈತೇಯಪರಾಭವೇನ
ಸ್ಥಿರೇಹ ನೋತ್ಥಾಸ್ಯತಿ ಬಂಧುತೇಯಮ್ ।
ಇತಿ ಪ್ರಭುಃ ಸ್ವಪ್ರಿಯಸಾಧ್ವಸಾಯ
ವೃಕಾನನೇಕಾಂಶ್ಚ ಸಸರ್ಜ ರೋಮ್ಣಃ[4] ॥ ೧೭ ॥

---

೧. "ವಸ್ತುಮಿತಿ ಪಾಠೇ" ವಾಸಂ ಕರ್ತುಮಿತ್ಯರ್ಥಃ । -ವ್ಯಾ.
೨. ಬೃಹದ್ವನಮಿತಿ ನಂದವ್ರಜಸ್ಯ ನಾಮ । -ವ್ಯಾ.
೩. ವನಪ್ರಿಯಸ್ಯ ವನ ಏವಾಭಿರುಚಿರ್ಯುಕ್ತೇತಿ ಭಾವಃ । -ವ್ಯಾ.
೪. ವೃಂದಾವನಮಿಯಾಸುಃ ಸನ್ ನಂದಸೂನುರ್ಬೃಹದ್ವನೇ ।
ಸಸರ್ಜ ರೋಮಕೂಪೇಭ್ಯೋ ವೃಕಾನ್ ವ್ಯಾಘ್ರಸಮಾನ್ ಬಲೇ ॥
ಅನೇಕಕೋಟಿಸಂಘೈಸ್ತ್ಯೈಃ ಪೀಡ್ಯಮಾನಾ ಪ್ರಜಾಲಯಾಃ ।
ಯಯುರ್ವೃಂದಾವನಂ ನಿತ್ಯಾನಂದಮಾದಾಯ ನಂದಜಮ್ ॥ - ಮ.ಭಾ.ತಾ.ನಿ. (೧೩/೨೬,೨೭)

ವಿರೋಧಿಗಳಾದ ದೈತ್ಯರ ಪರಾಭವದಿಂದಾಗಿ ಇಲ್ಲಿ ನೆಲೆಸಿರುವ ಬಂಧುಜನರು ತೆರಳಲು ಸಿದ್ಧರಾಗರು ಎಂಬ ಕಾರಣದಿಂದ ಪ್ರಭುವಾದ ಶ್ರೀಕೃಷ್ಣ ತನ್ನ ಪ್ರಿಯರಾದ ಗೋಪಜನರಿಗೆ ಭಯಹುಟ್ಟಿಸಲೆಂದು ರೋಮಗಳಿಂದ ಅನೇಕ ತೋಳಗಳನ್ನು ಸೃಷ್ಟಿಸಿದ.

ವಿ. : ೧. ಗೋಕುಲವನ್ನು ದೈತ್ಯರು ಆಕ್ರಮಿಸುವಂತಿಲ್ಲ ಎಂಬ ಸುರಕ್ಷತಾ ಭಾವದಿಂದಾಗಿ ಅಲ್ಲಿಯ ಜನರು ವೃಂದಾವನಕ್ಕೆ ತೆರಳಲು ಬಯಸಲಾರರು. ಹಾಗೆ ಅವರು ತೆರಳುವಂತಾಗಲು ಭಯ ಹುಟ್ಟಿಸುವುದು ಅಗತ್ಯ. ಆಗ ಆ ಸ್ಥಳವನ್ನು ತೊರೆದು ವೃಂದಾವನಕ್ಕೆ ತೆರಳಲು ಸಿದ್ಧರಾಗುವರು. ಶ್ರೀಕೃಷ್ಣ ಅದಕ್ಕೆಂದು ತನ್ನ ರೋಮಕೂಪಗಳಿಂದಲೇ ತೋಳಗಳನ್ನು ಸೃಷ್ಟಿಸಿದ[೧].

೨. ಶ್ರೀಕೃಷ್ಣನ ಅದ್ಭುತವಾದ ಮತ್ತೊಂದು ಬಗೆಯ [೨]ಸೃಷ್ಟಿಕ್ರಮ ಇಲ್ಲಿ ನಿರೂಪಿತವಾಗಿದೆ. ಹಾಗೆ ಸೃಷ್ಟವಾದ ತೋಳಗಳು ಭಗವದ್ರೂಪಗಳು ಎಂಬ ವಿವರವನ್ನು ಶ್ರೀಸತ್ಯಧರ್ಮ-ತೀರ್ಥರು ತಮ್ಮ [೩]ಭಾಗವತಟಿಪ್ಪಣಿಯಲ್ಲಿ ಬರೆದಿರುವರು.

---

೧. ಏವಂ ಕಥಯತಸ್ತಸ್ಯ ವಾಸುದೇವಸ್ಯ ಧೀಮತಃ ।
ಪ್ರಾದುರ್ಬಭೂವುಃ ಶತಶೋ ರಕ್ತಮಾಂಸವಸಾಶನಾಃ ॥
ಘೋರಾಶ್ಚಿಂತಯತಸ್ತಸ್ಯ ಸ್ವತನೂರುಹಜಾಸ್ತದಾ ।
ವಿನಿಷ್ಪೇತುರ್ಭಯಕರಾಃ ಸರ್ವಶಃ ಶತಶೋ ವೃಕಾಃ ॥
ನಿಷ್ಪತಂತಿ ಸ್ಮ ಬಹವೋ ವ್ರಜಸ್ಯೋತ್ಸಾದನಾಯ ವೈ ।
ವೃಕಾನ್ ನಿಷ್ಪತಿತಾನ್ ದೃಷ್ಟ್ವಾ ಗೋಷು ವತ್ಸೇಷ್ವಥೋ ನೃಷು ॥
ಗೋಪೀಷು ಚ ಯಥಾಕಾಮಂ ವ್ರಜೇ ತ್ರಾಸೋऽಭವನ್ಮಹಾನ್ ।
ತೇ ವೃಕಾಃ ಪಂಚಬದ್ಧಾಶ್ಚ ದಶಬದ್ಧಾಸ್ತಥಾ ಪರೇ ॥
ತ್ರಿಂಶದ್ವಿಂಶತಿಬದ್ಧಾಶ್ಚ ಶತಬದ್ಧಾಸ್ತಥಾ ಪರೇ ।
ನಿಶ್ಚೇರುಸ್ತಸ್ಯ ಗಾತ್ರೇಭ್ಯಃ ಶ್ರೀವತ್ಸಕೃತಲಕ್ಷಣಾಃ ॥
ಕೃಷ್ಣಸ್ಯ ಕೃಷ್ಣವದನಾ ಗೋಪಾನಾಂ ಭಯವರ್ಧನಾಃ ।
ಭಕ್ಷಯದ್ಭಿಶ್ಚ ತೈರ್ವತ್ಸಾಂಸ್ತ್ರಾಸಯದ್ಭಿಶ್ಚ ಗೋವ್ರಜಾನ್ ॥
ನಿಶಿ ಬಾಲಾನ್ ಹರದ್ಭಿಶ್ಚ ವೃಕೈರುತ್ಸಾದ್ಯತೇ ವ್ರಜಃ ।
ನ ವನೇ ಶಕ್ಯತೇ ಗಂತುಂ ನ ಗಾಶ್ಚ ಪರಿರಕ್ಷಿತುಮ್ ॥
ನ ವನಾತ್ ಕಿಂಚಿದಾಹರ್ತುಂ ನ ಚ ವಾ ತರಿತುಂ ನದೀಮ್ ।
ತ್ರಸ್ತಾ ಹ್ಯುದ್ವಿಗ್ನಮನಸೋऽಗತಾಸ್ತಸ್ಮಿನ್ ವನೇऽವಸನ್ ।
ಏವಂ ವೃಕೈರುದೀರ್ಣೈಸ್ತು ವ್ಯಾಘ್ರತುಲ್ಯಪರಾಕ್ರಮೈಃ ।
ವ್ರಜೋ ನಿಷ್ಪಂದಚೇಷ್ಟಸ್ಯ ಏಕಸ್ಥಾನಚರಃ ಕೃತಃ ॥ –ಹರಿವಂಶ, ವಿಷ್ಣುಪರ್ವ (೮/೩೦-೩೮)

೨. ವೃಂದಾವನಂ ಯಿಯಾಸುಃ ಸನ್ನಂದಸೂನುರ್ಬೃಹದ್ವನೇ ।
ಸಸರ್ಜ ರೋಮಕೂಪೇಭ್ಯೋ ವೃಕಾನ್ ವ್ಯಾಘ್ರಸಮಾನ್ ಬಲೇ ॥
ತತ್ರೋತ್ಪಾತಭಿಯಾ ಗೋಪಾ ಆಪುರ್ವೃಂದಾವನಂ ವನಮ್ ॥ –ಮಣಿಮಂಜರೀ(೩/೩೦)

೩. ತೇ ಚ ಸ್ಥಲಾಂತರಗಮನಮನಸಾ ಶ್ರೀಕೃಷ್ಣೇನ ಬಹಿರಾವಿರ್ಭಾವಿತಾಸ್ತದಾತ್ಮಕಾ ಇತಿ ಜ್ಞೇಯಮ್ ।
ಶ್ರೀವತ್ಸಕೃತಲಕ್ಷಣಾ ಇತಿ ತದಸಾಧಾರಣಲಕ್ಷಣೋಕ್ತೇಃ । –ಶ್ರೀಮದ್ಭಾಗವತಟಿಪ್ಪಣ (೧೦/೧೨/೧೨)

೩. ಜನರಿಗೆ ಸುರಕ್ಷಿತವಾದ ಸ್ಥಳದಲ್ಲಿ ನೆಲೆಸುವ ಇಚ್ಛೆ ಹುಟ್ಟುವುದು ಸಹಜ ಎಂಬ ವಿವರವೂ ಇಲ್ಲಿದೆ ; ದೈತೇಯ – ದೈತ್ಯ ; ವೃಕ – ತೋಳ ; ಬಂಧುತಾ – ಬಂಧುವರ್ಗ ; ಸಾಧ್ವಸ – ಭಯ.

ವೃಂದಾವನಕ್ಕೆ ತೆರಳಲು ಮುಖ್ಯ ಕಾರಣ

ಇಹ ಸ್ವಕೀಯಾನ್ ನಿಹತಾನ್ ನಿಶಮ್ಯ
ನ ಮಾಂ ವ್ರಜಸ್ಥಂ ಪ್ರತಿ ಯಾಂತಿ ದೈತ್ಯಾಃ ।
ಸ ಇತ್ಥಮಾಲೋಚ್ಯ ವಿಭುಃ ಸ್ವಕೀಯಾನ್
ನ್ಯಯುಂಕ್ತ ವೃಂದಾವನಮೇವ ಗಂತುಮ್ ॥ ೧೮ ॥

''ತಮ್ಮವರು ಇಲ್ಲಿ ಹತರಾದುದನ್ನು ಕೇಳಿ ದೈತ್ಯರು ಈ ಗೋಕುಲದಲ್ಲಿನ ತನ್ನನ್ನು ಎದುರಿಸಿ ಬರದಂತಾಗುವರು'' – ಹೀಗೆ ಆಲೋಚಿಸಿ ಪ್ರಭುವಾದ ಶ್ರೀಕೃಷ್ಣ ತನ್ನವರನ್ನು ವೃಂದಾವನಕ್ಕೇ ತೆರಳಲು ನಿಯೋಜಿಸಿದ.

ವಿ. : ೧. ಗೋಕುಲದಲ್ಲಿ ಈಗಾಗಲೇ ಶಕಟಾಸುರ ಮೊದಲಾದವರ ಸಂಹಾರ ನಡೆದಿದೆ. ಇದನ್ನು ಕಂಸನ ಕಡೆಯ ದೈತ್ಯರು ಕೇಳಿ, ಭಯಪಟ್ಟು[೧] ಇಲ್ಲಿಗೆ ಬರಲು ಬಯಸಲಾರರು. [೨]ತನ್ನ ಅವತಾರವಾಗಿರುವುದು ಅವರ ಸಂಹಾರಕ್ಕಾಗಿ; ಆದ್ದರಿಂದ ಅವರು ತನ್ನನ್ನು ಎದುರಿಸಿ ಬರು-ವಂತಾಗಲು ಬೇರೆ ಸ್ಥಳಕ್ಕೆ ತೆರಳುವುದೇ ಉಚಿತ ಎಂದು ಶ್ರೀಕೃಷ್ಣ ನಿಶ್ಚಯಿಸಿದ ಎಂದು ಭಾವ.

೨. ಇದು ಶಕಟಾಸುರ ಮೊದಲಾದವರ ಸಂಹಾರಕಾರ್ಯವು ಇತರ ದೈತ್ಯರ ಮೇಲೆ ಉಂಟುಮಾಡಿದ್ದ ಪ್ರಭಾವವನ್ನು ತಿಳಿಸಿಕೊಡುವುದು.

---

೧. ತತ್ರೋಪಾನಂದನಾಮಾಽಽಹ ಗೋಪೋ ಜ್ಞಾನವಯೋಧಿಕಃ ।
ದೇಶಕಾಲಾರ್ಥತತ್ತ್ವಜ್ಞಃ ಪ್ರಿಯಕೃದ್ರಾಮಕೃಷ್ಣಯೋಃ ॥
ಉತ್ಥಾತವ್ಯಮಿತೋಽಸ್ಮಾಭಿರ್ಗೋಕುಲಸ್ಯ ಹಿತೈಷಿಭಿಃ ।
ಆಯಾಂತ್ಯತ್ರ ಮಹೋತ್ಪಾತಾಃ ಪ್ರಜಾನಾಂ ನಾಶಹೇತವಃ ॥
ಮುಕ್ತಃ ಕಥಂಚಿದ್ರಾಕ್ಷಸ್ಯಾ ಬಾಲಘ್ನ್ಯಾ ಬಾಲಕೋ ಹ್ಯಸೌ ।
ಹರೇರನುಗ್ರಹಾನ್ನೂನಮನಶ್ಚೋಪರಿ ನಾಪತತ್ ॥
ಚಕ್ರವಾತೇನ ನೀತೋಽಯಂ ದೈತ್ಯೇನ ವಿಯದೂಹ್ಯತಾ ।
ಶಿಲಾಯಾಂ ಪತಿತಸ್ತತ್ರ ಪರಿತ್ರಾತಃ ಸುರೇಶ್ವರೈಃ ॥
ಯನ್ನ ಮ್ರಿಯೇತ ದ್ರುಮಯೋರಂತರಂ ಪ್ರಾಪ್ಯ ಬಾಲಕಃ ।
ಅಸಾವನ್ಯತಮೋ ವಾಽಪಿ ತಚ್ಚಾಪ್ಯಚ್ಯುತರಕ್ಷಣಮ್ ॥
ಯಾವದೌತ್ಪಾತಿಕೋಽರಿಷ್ಟೋ ವ್ರಜಂ ನಾಭಿಭವೇದಿತಃ ।
ತಾವದ್ಬಾಲಾನುಪಾದಾಯ ಯಾಸ್ಯಾಮೋಽದ್ಯೈವ ಸಾನುಗಾಃ ॥
ವನಂ ವೃಂದಾವನಂ ನಾಮ ಪಶವ್ಯಂ ನವಕಾನನಮ್ ।
ಗೋಪಗೋಪೀಗವಾಂ ಸೇವ್ಯಂ ಪುಣ್ಯಾದ್ರಿತೃಣವೀರುಧಮ್ ॥
ತತ್ ತತ್ರಾದ್ಯೈವ ಯಾಸ್ಯಾಮಃ ಶಕಟಾನ್ ಯುಙ್ಕ್ತ ಮಾ ಚಿರಮ್ । – ಭಾಗವತ (೧೦/೧೨/೧೧-೧೮)

೨. ಸ್ವೇಷಾಂ ಪರಾಜಯಹೇತುಸ್ಥಾನತ್ವಾದಿತಿ ಭಾವಃ । –ವ್ಯಾ.

### ಗೋಗೋಪರೊಂದಿಗೆ ಶ್ರೀಕೃಷ್ಣರಾಮರ ವೃಂದಾವನಗಮನದ ವೈಭವ

**ಭಾರಾನ್ ಸ್ವಾನಧಿರೋಪ್ಯ ಚಾರುಶಕಟಶ್ರೇಣ್ಯಾಮರಣ್ಯಾಲಯಾ**
**ಗೋಪಾ ಗೋಧನವೃದ್ಧಮುಗ್ಧಲಲನಾಬಾಲಾದಿಭಿಃ ಸಂಯುತಾಃ।**
**ವೀಣಾವೇಣುಮೃದಂಗಶೃಂಗನಿನದೈಃ ಸಂಪೂರಿತಾಶಾಃ ಶನೈಃ**
**ರಾಮಶ್ರೀರಮಣಾಶ್ರಯಾಃ ಪ್ರತಿಯಯುರ್ವೃಂದಾವನಂ ಪಾವನಮ್ ॥ ೧೯ ॥**

ತಮ್ಮ ವಸ್ತುಗಳನ್ನು ಸೊಗಸಾದ ಗಾಡಿಗಳ ಸಾಲುಗಳಲ್ಲಿ ಏರಿಸಿಕೊಂಡು, ಅರಣ್ಯನಿವಾಸಿಗಳಾದ ಗೋಪಾಲರು ಗೋಸಂಪತ್ತು, ವೃದ್ಧರು, ಮುಗ್ಧಸ್ತ್ರೀಯರು, ಬಾಲಕರು ಮೊದಲಾದವರೊಂದಿಗೆ ಕೂಡಿಕೊಂಡು, ವೀಣೆ, ಕೊಳಲು, ಮೃ ದಂಗ, ಶೃಂಗ ಮೊದಲಾದವುಗಳ ಧ್ವನಿಗಳಿಂದ ದಿಕ್ಕುಗಳನ್ನು ತುಂಬಿಸುತ್ತಾ ಬಲರಾಮ ಹಾಗೂ ಶ್ರೀಕೃಷ್ಣರನ್ನು ಆಶ್ರಯಿಸಿಕೊಂಡು, ಪಾವನವಾದ ವೃಂದಾವನಕ್ಕೆ ಮೆಲ್ಲನೆ ಸಾಗಿದರು.

ವಿ. : ೧. ಹಾಗೆ ಶ್ರೀಕೃಷ್ಣ ಸೃಷ್ಟಿಸಿದ ತೋಳಗಳಿಗೆ ಅಂಜಿ, ಇನ್ನು ಗೋಕುಲದ ವಾಸ ಸುರಕ್ಷಿತವಲ್ಲವೆಂದು ಭಾವಿಸಿ ಗೋಪರು ತಮ್ಮ ಸಮಸ್ತ ವಸ್ತುಗಳೊಂದಿಗೂ, ಜನರೊಂದಿಗೂ ವೃಂದಾವನಕ್ಕೆ ತೆರಳಿದರು ಎಂದರ್ಥ; ಇಲ್ಲಿ 'ಭಾರಾನ್' ಎಂಬುದಕ್ಕೆ ತಮಗೆ ಸಂಬಂಧಿಸಿದ ಸಾಮಾನು-ಸರಂಜಾಮುಗಳನ್ನು ಎಂದರ್ಥ.

೨. ಹಾಗೆ ಅವರು ತೆರಳಿದ್ದು ಒಂದು ಮಹೋತ್ಸವದಂತಿದ್ದಿತು ಎಂಬುದನ್ನು ಆ ಸಮಯದಲ್ಲಿ ಅವರು ಮಾಡಿದ ಬಗೆಬಗೆಯ [1]ವಾದ್ಯಗಳ ಧ್ವನಿಗಳು ಸೂಚಿಸುತ್ತಿದ್ದವು.

೩. ಅವರು ಹಾಗೆ ತೆರಳುವಾಗ ಅವರ ಜೊತೆಯಲ್ಲಿ ಶ್ರೀಕೃಷ್ಣ ಬಲರಾಮರು ಇದ್ದದ್ದರಿಂದ ಅವರಿಗೆ ಭಯದ ಪ್ರಸಕ್ತಿ ಇರಲಿಲ್ಲ ಎಂಬುದನ್ನು ಶನೈಃ (ಮೆಲ್ಲನೆ) ಎಂಬ ಪದದಿಂದ ಸೂಚಿಸಿರುವರು; ಚಾರು - ಮನೋಹರ; ಶಕಟ - ಗಾಡಿ; ಆಶಾ - ದಿಕ್ಕು; ಶ್ರೇಣಿ - ಸಾಲು.

### ನಲಿಯುತ್ತಾ ಸಾಗಿದ ಪ್ರಯಾಣ

**[2]ಜೃಂಭಚ್ಚಂಪಕಗುಂಫಿತೋಚ್ಚಕಬರೀಭಾರಾಶ್ಚಲತ್ಕಂಚುಕಾಃ**
**ಸಿಂಜನ್ಮಂಜುಲಭೂರಿಭೂಷಣಧರಾ ಗೋಪ್ಯಃ ಸಮಾಪ್ಯ ಕ್ರಿಯಾಃ।**
**ಕೃಷ್ಣಸ್ಯಾದ್ಭುತಕರ್ಮ ರಾಮಚರಿತೈಃ ಸಾಕಂ ಜಗುಃ ಕೃತ್ಸ್ನಶಃ**
**[3]ಸ್ವಾಭೀಷ್ಟಾಪ್ತ್ಯುಚಿತಸ್ಥಲೀಗತಿಮಿವ ಪ್ರೇಕ್ಷ್ಯ ಪ್ರಹೃಷ್ಟಾಃ ಪಥಿ ॥ ೨೦ ॥**

---

೧. ವೀಣಾಸ್ತಂತುವಾದ್ಯವಿಶೇಷಾ ವಲ್ಲಕ್ಯಾದಯಃ ವೇಣವೋ ವಂಶಾಃ ಸುಷಿರವಾದ್ಯವಿಶೇಷಾಃ ಮೃದಂಗಾ ಮುರಜಾಃ ಆನದ್ಧವಾದ್ಯವಿಶೇಷಾಃ । ತತಂ ವೀಣಾದಿಕಂ ವಾದ್ಯಮಾನದ್ಧಂ ಮುರಜಾದಿಕಮ್ । ವಂಶಾದಿಕಂ ತು ಸುಷಿರಮಿತ್ಯಮರಃ। -ವ್ಯಾ.

೨. ಚಂಚಚ್ಚಂಪಕ... ಇತಿ ಪಾಠೇ ಮನೋಹರಚಂಪಕೈರಿತ್ಯರ್ಥಃ। -ವ್ಯಾ.

೩. ವ್ರಜಾತ್ ಸ್ವಾನ್ ಸ್ವಾನ್ ಸಮಾಯುಜ್ಯ ಯಯುಃ ರೂಢಪರಿಚ್ಛದಾಃ।
ವೃದ್ಧಾನ್ ಬಾಲಾನ್ ಸ್ತ್ರಿಯೋ ರಾಜನ್ ಸರ್ವೋಪಸ್ಕರಣಾನಿ ಚ।

ಎತ್ತರದ ಭಾರವಾದ ಮುಡಿಗಳಲ್ಲಿ ಅರಳಿದ ಸಂಪಿಗೆ ಹೂವುಗಳ ಅಪಾರ ಗುಚ್ಛಗಳು, ಚಲಿಸುವ ಕಂಚುಕಗಳು, ಮೈಮೇಲೆ ಧ್ವನಿಗೈಯ್ಯುವ ಮಂಜುಳವಾದ ಬಗೆಬಗೆಯ ಆಭರಣಗಳು, ಇಂತಹ ಗೋಪಿಯರು ತಮ್ಮ ಕಾರ್ಯಗಳನ್ನು ಪೂರೈಸಿ, ತಮ್ಮ ಬಯಕೆ ಸಿದ್ಧಿಸುವ ಉಚಿತ ಸ್ಥಳಕ್ಕೆ ತೆರಳುವೆವು ಎಂದು ಭಾವಿಸಿಯೋ ಎಂಬಂತೆ, ಮಾರ್ಗದಲ್ಲಿ ಅಪಾರವಾಗಿ ನಲಿದ ಅವರು ಬಲರಾಮನ ಚರಿತ್ರೆಯೊಂದಿಗೆ ಶ್ರೀಕೃಷ್ಣನ ಅದ್ಭುತ ಕಾರ್ಯಗಳನ್ನು ಬಹಳವಾಗಿ ಹಾಡಿದರು.

ವಿ. : ೧. ಹಿಂದಿನ ಶ್ಲೋಕದಲ್ಲಿ ಗೋಪರ ಪ್ರಯಾಣದ ಸಂಭ್ರಮವನ್ನು ವರ್ಣಿಸಿದ್ದರೆ, ಈ ಶ್ಲೋಕದಲ್ಲಿ ಗೋಪಿಯರ ಪ್ರಯಾಣ ವೈಖರಿಯನ್ನು ತಿಳಿಸಿರುವರು.

೨. ವೃಂದಾವನಕ್ಕೆ ತೆರಳುವಾಗ ಮುಂದೆ ಕೃಷ್ಣನೊಂದಿಗೆ ನಡೆಯುವ ರಾಸಕ್ರೀಡೆ ಮೊದಲಾದ ಬಹುಬಗೆಯ ಅಪೇಕ್ಷೆಗಳು ಈಡೇರುವ ಸೂಚನೆ ಅವರಿಗೆ ಅವ್ಯಕ್ತವಾಗಿ ಲಭಿಸಿತ್ತು ಎಂಬ ನಿರೂಪಣೆ ಇಲ್ಲಿದೆ.

೩. ಪ್ರಯಾಣಕಾಲದಲ್ಲಿ ಹೀಗೆ ಶ್ರೀಹರಿಯ ಹಾಗೂ ಅವನ ಭಕ್ತರ ಚರಿತ್ರೆಗಳನ್ನು ಹಾಡುವುದು ಸುಖಪ್ರಯಾಣಕ್ಕೆ ಸಾಧಕ ಎಂಬ ಸಂದೇಶವೂ ಇಲ್ಲಿದೆ ; ಕಂಚುಕ – ರವಿಕೆ.

೪. ಶ್ರೀಮನ್ಮಧ್ವಾಚಾರ್ಯರು ಸಹ್ಯಪ್ರಾಂತದಿಂದ ಕಾಸರಗೋಡಿನತ್ತ ದಿಗ್ವಿಜಯ ಹೊರಟಾಗ ಅವರ ಶಿಷ್ಯವೃಂದ ಸ್ತೋತ್ರಗಳನ್ನು ಹಾಡುತ್ತಿದ್ದ ವಿವರವು ಇದೇ ತೆರನಾಗಿರುವುದು ಗಮನಾರ್ಹ (ಸುಮಧ್ವವಿಜಯ–೧೩./೨೫) :

ಪುರತೋ ಮಧುರಸ್ವನೈರ್ವದದ್ಭಿಃ ಸ್ವಕೃತಾಃ ಕರ್ಣಸುಖಾ ಮುಕುಂದಗಾಥಾಃ ।
ಧೃತಪಂಕಜಬೀಜಚಕ್ರಚಿಹ್ನೈಃ ಕೃತನೃತ್ತೈಶ್ಚತುರೈರ್ನಿಷೇವ್ಯಮಾಣಮ್ ॥

೫. ರಾಮಚರಿತ್ರೈಃ ಸಾಕಂ – ಬಲರಾಮನ ಚರಿತ್ರೆಯೊಂದಿಗೆ ಶ್ರೀಕೃಷ್ಣನ ಅದ್ಭುತಕರ್ಮಗಳನ್ನು ಹಾಡಿದರು ಎಂಬ ಮಾತಿನಲ್ಲಿ ಶ್ರೀಕೃಷ್ಣನ ಚರಿತ್ರೆಗೇ ಪ್ರಾಧಾನ್ಯ ಎಂಬ ವಿಶೇಷಾಂಶ ಸೂಚಿತವಾಗಿದೆ: 'ಸಹಯುಕ್ತೇ ಅಪ್ರಧಾನೇ' (ಪಾ.ಸೂ. ೨/೩./೧೯).

## ಗಗನವನ್ನು ಕವಿದ ಪ್ರಯಾಣದ ಧೂಳಿ

**ಗವಾಂ ಖುರೈರ್ಗೋಪಪದೈರನೋಭಿಃ**
**ಸಮುತ್ಥಧೂಲೀ ಸವಿತುಃ ಕರೌಘಮ್ ।**

---

ಅನಸ್ಸ್ವಾರೋಪ್ಯ ಗೋಪಾಲಾ ಯತ್ತಾ ಆತ್ತಶರಾಸನಾಃ ।
ಗೋಧನಾನಿ ಪುರಸ್ಕೃತ್ಯ ಶೃಂಗಾಣ್ಯಾಪೂರ್ಯ ಸರ್ವತಃ ।
ತೂರ್ಯಘೋಷೇಣ ಮಹತಾ ಯಯುಃ ಸಹಪುರೋಹಿತಾಃ ॥
ಗೋಪ್ಯೋ ರೂಢರಥಾ ನೃತ್ನಕುಚಕುಂಕುಮಕಾಂತಯಃ ।
ಕೃಷ್ಣಲೀಲಾ ಜಗುಃ ಪ್ರೀತಾಃ ನಿಷ್ಕಕಂಠ್ಯಃ ಸುವಾಸಸಃ ॥ –ಭಾಗ.(೧೦/೧೨/೩೦–೩೨)

**ರುರೋಧ ದೂರೇ ಕಿಲ ತಾಂ ಸ್ವಮೂರ್ಧ್ನಿ**
**ಸ ಏವ ಪೋಢುಂ ಧ್ರುವಮುನ್ನಿನಾಯ ॥ ೨೧ ॥**

ಗೋವುಗಳ ಗೊರಸುಗಳಿಂದ, ಗೋಪರ ಪಾದಗಳಿಂದ, ಗಾಡಿಗಳಿಂದ ಮೇಲೆದ್ದ ಧೂಳಿಯು ಸೂರ್ಯನ ಕಿರಣಗಳನ್ನು ದೂರದಲ್ಲೇ ತಡೆದುಬಿಟ್ಟಿತು; ಆ ಧೂಳಿಯನ್ನು ತನ್ನ ಶಿರಸ್ಸಿನ ಮೇಲೆ ಧರಿಸಲೆಂದು ಆ ಸೂರ್ಯನು ತಾನಾಗಿಯೇ ತನ್ನ ಕಿರಣಗಳನ್ನು ಮೇಲೆಬ್ಬಿಸಿದ; ನಿಶ್ಚಿತ.

ವಿ. : ೧. ಪೂರ್ವಾರ್ಧದಲ್ಲಿ ಗೋಪ ಮೊದಲಾದವರ ಪ್ರಯಾಣದಿಂದ ಎದ್ದ ಧೂಳಿಯ ವಿವರವಿದೆ.

೨. ಉತ್ತರಾರ್ಧದಲ್ಲಿ ಸೂರ್ಯನೇ ಧೂಳು ಮೆತ್ತಿದ ಕಿರಣವನ್ನು ತನ್ನ ತಲೆಯ ಮೇಲೆ ಧರಿಸಲೆಂದು ಮೇಲೆತ್ತಿಕೊಂಡ ಎಂಬ ನಿರೂಪಣೆ ಇದೆ; ಖುರ – ಗೊರಸು ; ಅನಃ – ಗಾಡಿ.

೩. ಇದರಿಂದ ವೈಷ್ಣವರ ಪಾದಧೂಳಿಯನ್ನು ಶಿರಸಾ ಧರಿಸುವುದು ಭಾಗವತಧರ್ಮ (೭/೫/೩೨) ಎಂಬ ತತ್ತ್ವ ಸೂಚಿತ :

ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ ಸ್ಪೃಶತ್ಯನರ್ಥಾಪಗಮೋ ಯದುತ್ಥಃ।
ಮಹೀಯಸಾಂ ಪಾದರಜೋಭಿಷೇಕಂ ನಿಷ್ಕಿಂಚನಾನಾಂ ನ ವೃಣೀತ ಯಾವತ್ ॥

೪. ಗೋಗೋಪಿಯರೆಲ್ಲಾ[೧] ಋಷಿದೇವತಾದಿಗಳ ಅವತಾರರಾದ್ದರಿಂದ ಅವರ ಪಾದಧೂಳಿ ಪವಿತ್ರ ಎಂಬ ಮತ್ತೊಂದು ತತ್ತ್ವವೂ ಇಲ್ಲಿ ನಿರೂಪಿತವಾಗಿದೆ.

### ಶ್ರೀಕೃಷ್ಣನಿಗೆ ಸ್ವಾಗತ ಕೋರಿದ ವೃಂದಾವನ

**ಪುಷ್ಪೈರ್ವೃಕ್ಷಗಣಾ ಮನೋಜ್ಞವಚನೈಃ ಕೀರಾಃ ಸ್ವರೈಃ ಕೋಕಿಲಾ**
**ನೃತ್ತೈಃ ಕೇಕಿವರಾ ಗಜಾಶ್ಚ ಗತಿಭಿಃ ಶೈಲಾಃ ಸ್ರವನ್ನಿರ್ಝರೈಃ।**
**ಸುಚ್ಛಾಯೈರ್ಮಣಿಕುಟ್ಟಿಮಸ್ಥಲಚಯೈಃ ಸಾ ಭೂರ್ಮೃಗಾ ವೀಕ್ಷಣೈ-**
**ಸ್ತದ್ವೃಂದಾವನಮಚ್ಯುತಾರ್ಹಭವನಂ[೨] ನೂನಂ ತದಾ ತೇನಿರೇ ॥ ೨೨ ॥**

ಆಗ, ಹೂವುಗಳಿಂದ ವೃಕ್ಷಗಳ ಗುಂಪುಗಳು, ಮನೋಹರ ವಚನಗಳಿಂದ ಗಿಳಿಗಳು, ಸ್ವರಗಳಿಂದ ಕೋಗಿಲೆಗಳು, ನರ್ತನಗಳಿಂದ ಶ್ರೇಷ್ಠ ನವಿಲುಗಳು, ನಡಿಗೆಗಳಿಂದ ಆನೆಗಳು, ಸುರಿಯುವ ತೊರೆಗಳಿಂದ ಬೆಟ್ಟಗಳು, ನಿಬಿಡ ಕಾಂತಿಯಿಂದ ಕೂಡಿದ ರತ್ನಖಚಿತವಾದ

---

೧. ಅನೇನ ಗೋಗೋಪಾನಾಂ ಋಷಿದೇವಪ್ರವರತ್ವೇನ ದೇವಮಾನ್ಯತ್ವಂ ಧ್ವನ್ಯತೇ। -ವ್ಯಾ.

೨. ನೃತ್ಯಂತ್ಯಮೀ ಶಿಖಿನ ಈಡ್ಯ ಮುದಾ ಹರಿಣ್ಯಃ ಕುರ್ವಂತಿ ಗೋಪ್ಯ ಇವ ತೇ ಪ್ರಿಯಮೀಕ್ಷಣೇನ।
ಸೂಕ್ತೈಶ್ಚ ಕೋಕಿಲಗಣಾ ಗೃಹಮಾಗತಾಯ ಧನ್ಯಾ ವನೌಕಸ ಇಯಾನ್ ಹಿ ಸತಾಂ ನಿಸರ್ಗಃ॥
-ಭಾಗ.(೧೦/೧೫/೭)

ಹಾಸುಗಳಿಂದ ಆ ಭೂಮಿಯು ನೋಟಗಳಿಂದ ಜಿಂಕೆಗಳು ಆ ವೃಂದಾವನವನ್ನು ಶ್ರೀಕೃಷ್ಣನು ನೆಲೆಸಲು ಅನುಗುಣವಾದ ಭವನವನ್ನಾಗಿ ಮಾಡಿದವು; ನಿಶ್ಚಿತ.

ವಿ. : ೧. ವೃಂದಾವನದ ಅಪೂರ್ವವರ್ಣನೆಯು ಇಲ್ಲಿದೆ.

೨. ಹೂ ತುಂಬಿದ ವೃಕ್ಷಗಳು, ರಮ್ಯವಚನಗಳ ಗಿಳಿಗಳು, ಸುಸ್ವರದ ಕೋಗಿಲೆಗಳು, [1]ನರ್ತಿಸುವ ನವಿಲುಗಳು, ನಡೆದಾಡುವ ಆನೆಗಳು, ತ್ವರೆಗಳಿಂದ ಕೂಡಿದ ಬೆಟ್ಟಗಳು, ಮಣಿ-ಖಚಿತವಾದ ಭೂಮಿ, ಬೆರಗುಗಣ್ಣುಗಳಿಂದ ಕೂಡಿದ ಜಿಂಕೆಗಳು ಮೊದಲಾದವು ವೃಂದಾವನದಲ್ಲಿ ತುಂಬಿ ಭಗವಂತನ ವಾಸಕ್ಕೆ ಯೋಗ್ಯವಾದ ರಾಜಯೋಗ್ಯವಾದ ಪರಿಸರ ಅಲ್ಲಿ ಉಂಟಾಗಿತ್ತು ಎಂದು ಭಾವ.

೩. ಇದರಿಂದ ಇಂತಹ ಪರಿಸರವು ಭಗವದ್ಭಕ್ತರ ವಾಸಕ್ಕೆ ಯೋಗ್ಯ ಎಂಬ ತತ್ತ್ವವು ಸಹ ಸೂಚಿತ; ಕೀರ – ಗಿಳಿ ; ಕೇಕಿ – ನವಿಲು ; ಶೈಲ – ಬೆಟ್ಟ ; ನಿರ್ಝರ – ತೊರೆ.

**ತ್ರಿಧಾಮನಾದ ಶ್ರೀಕೃಷ್ಣ**

**ಸ ಲಬ್ಧಜನ್ಮಾ ಮಧುರಾಖ್ಯಪುರ್ಯಾಂ**
**ವ್ರಜೇಽಭಿವೃದ್ಧಃ ಕತಿಚಿದ್ದಿನಾನಿ ।**
**ಉಪೇತ್ಯ ವೃಂದಾವನಮೇಷ ಕೃಷ್ಣ-**
**ಸ್ತ್ರಿಧಾಮತಾಂ[2] ದರ್ಶಯತೀವ ದೇವಃ ॥ ೨೩ ॥**

ಮಧುರಾಪಟ್ಟಣದಲ್ಲಿ ಅವತರಿಸಿ, ಕೆಲವು ದಿನಗಳ ಕಾಲ ಗೋಕುಲದಲ್ಲಿ ಬೆಳೆದು, ವೃಂದಾವನವನ್ನು ತಲುಪುವ ಮೂಲಕ ದೇವನಾದ ಶ್ರೀಕೃಷ್ಣನು ತಾನು ತ್ರಿಧಾಮ ಎಂಬುದನ್ನು ಪ್ರಕಟಪಡಿಸಿದ ಎಂಬಂತಿದೆ.

ವಿ. : ೧. ಶ್ರೀಹರಿಯ ನಾಮಗಳಲ್ಲಿ ತ್ರಿಧಾಮ ಎಂಬುದು ಒಂದು. ಅನಂತಾಸನ, ಶ್ವೇತದ್ವೀಪ, ವೈಕುಂಠ – ಇವು ಮೂರೂ ಅವನ ನೆಲೆಗಳು. ಅದಕ್ಕೆಂದೇ ಅವನಿಗೆ ಆ ಹೆಸರು. ಪ್ರಸ್ತುತ ಕೃಷ್ಣರೂಪದಿಂದಲೂ ಮಧುರೆ, ಗೋಕುಲ ಹಾಗೂ ವೃಂದಾವನ ಎಂಬ ಮೂರು ಸ್ಥಳ-ಗಳಲ್ಲಿ ನೆಲೆಸುವ ಮೂಲಕ ತಾನು [3]ತ್ರಿಧಾಮನಾದ ಶ್ರೀಹರಿ ಎಂದು ಸೂಚಿಸಿದ ಎಂದು ಭಾವ.

೨. ಮತ್ತೊಂದು ರೀತಿಯಲ್ಲಿ ಮಧುರೆ, ಗೋಕುಲ ಹಾಗೂ ವೃಂದಾವನಗಳು ಶ್ರೀಕೃಷ್ಣ ನೆಲೆಸಿದ್ದರಿಂದಾಗಿ [4]ಅನಂತಾಸನ, , ಶ್ವೇತದ್ವೀಪ, ವೈಕುಂಠದಂತೆ ಶೋಭಿಸಿದವು ಎಂಬ ಭಾವವೂ

---

೧. ಪುಷ್ಪೋಪಹಾರಮಧುರವಚನಗೀತನೃತ್ಯಗತಿವಿಲಾಸೋದಕಸುಚ್ಛಾಯಾದ್ಯುಪಚಾರವತ್ತ್ವಲು ರಾಜಭವನಂ, ತತ್ಸರ್ವಂ ವೃಂದಾವನೇಽಪ್ಯಭವದಿತ್ಯರ್ಥಃ । –ವ್ಯಾ.

೨. ತ್ರಿಕಕುದ್ಧಾಮಾ – ಇತಿ ವಿಷ್ಣುಸಹಸ್ರನಾಮಸು ।
ಅನಂತಾಸತವೈಕುಂಠನಾರಾಯಣಪುರಾಣಿ ತು ತ್ರೀಣಿ ಧಾಮಾನಿ ವೈ ವಿಷ್ಣೋಃ –ಬ್ರಹ್ಮಾಂಡೇ (ಭಾ.ತಾ.೨/೬/೧೯)

೩.. ''ತ್ರಿಧಾಮಾ ಕರುಣಾಕರಃ'' ಇತಿ ಸ್ಮೃತೇಃ –ವ್ಯಾ.

೪. ಅನಂತಾಸನಶ್ವೇತದ್ವೀಪವೈಕುಂಠಾಖ್ಯತ್ರಿಧಾಮಸ್ಥಿತತ್ವೇನ ಮಧುರಾದಿತ್ರಿಧಾಮಸ್ಥಿತತ್ವರೂಪ ನಿಮಿತ್ತಮುತ್ಪ್ರೇಕ್ಷತ ಇತಿ ವಿಭಾವನೋತ್ಪ್ರೇಕ್ಷಣಯೋಃ ಸಂಸೃಷ್ಟಿರಲಂಕಾರಃ । –ವ್ಯಾ.

ಸೂಚಿತ. ಭಗವಂತ ನೆಲೆಸಿದ ಮೇಲೆ ಅವು ಹಾಗೆ ಶೋಭಿಸುವುದು ಸಹಜ : ತಿರುಪತಿಯು ಭೂವೈಕುಂಠ ಎನ್ನಿಸಿರುವಂತೆ ಎಂದು ತಿಳಿಯಬೇಕು.

### ಸಾರ್ಥಕ ಹೆಸರಿನ ವೃಂದಾವನ

**ಫಲೈಃ ಪ್ರಸೂನೈಃ ಪಯಸಾ ತೃಣೇನ**
**ವಿಧಾಯ ಗೋಗೋಪನಿಕಾಯರಕ್ಷಾಮ್ ।**
**ವನಂ ಸ್ವನಾಮಾನುಗುಣಂ ಬಭಾಜ**
**ಹರೌ ಪ್ರಸನ್ನೇ ಕಿಮಿಹಾಸ್ತ್ಯಸಾಧ್ಯಮ್ ॥ ೨೪ ॥**

ಹಣ್ಣುಗಳಿಂದ, ಹೂವುಗಳಿಂದ, ನೀರುಗಳಿಂದ ಹಾಗೂ ಹುಲ್ಲುಗಳಿಂದ ಗೋವುಗಳ ಹಿಂಡಿಗೆ, ಗೋಪವೃಂದಕ್ಕೆ ರಕ್ಷಣೆಯನ್ನು ನೀಡುತ್ತಾ ಆ ವನವು ವೃಂದಾವನ ಎಂಬ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿತು; ಶ್ರೀಹರಿಯು ಪ್ರಸನ್ನನಾದಾಗ ಇಲ್ಲಿ ಯಾವುದು ತಾನೆ ಅಸಾಧ್ಯ?

ವಿ. : ೧. ವೃಂದಾವನಕ್ಕೆ ಆ ಹೆಸರು ಸಾರ್ಥಕ ಎಂಬುದನ್ನು ಅಲ್ಲಿಯ ಫಲ ಮೊದಲಾದವುಗಳ ಸಮೃದ್ಧಿಯಿಂದ ಗೋಗೋಪರಿಗೆ ದೊರಕಿದ ರಕ್ಷಣೆಯ ಕಾರಣವನ್ನಿತ್ತು ನಿರೂಪಿಸಿರುವರು ; (ವೃಂದಾವನಮ್-ವೃಂದಾನಾಂ ಅವನಂ ಯಸ್ಮಾತ್).

೨. ಹೀಗೆ ಅದು ವೃಂದಾವನವೆನ್ನಿಸಲು ಶ್ರೀಹರಿಯ ಒಲುಮೆಗೆ ಪಾತ್ರವಾದದ್ದೇ ಕಾರಣ ಎಂದು ತಿಳಿಸುವ ಮೂಲಕ [೧]ಶ್ರೀಹರಿಯ ಪ್ರಸಾದಕ್ಕೆ ಅಲಭ್ಯವಾದದ್ದು ಏನಿದೆ ಎಂಬ ವಿಶೇಷ ತತ್ತ್ವವನ್ನು ನಿರೂಪಿಸಿರುವರು : ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ । -ಭಾಗವತ (೧೦/೩೭/೨); ತುಷ್ಟೇ ಕಿಮಲಭ್ಯಂ ರಮೇಶೇ ।-ಮ.ಭಾ.ತಾ.ನಿ.(೧೨/೮೮).

೩. ಇದು ಒಂದು ರೀತಿಯಲ್ಲಿ ವೃಂದಾವನವು ಫಲ ಮೊದಲಾದವುಗಳ ಮೂಲಕ ಗೋಗೋಪರಿಗೆ ಉಪಕಾರ ಮಾಡುತ್ತಾ ಶ್ರೀಹರಿಗೆ ಸಲ್ಲಿಸಿದ [೨]ಗೀತೋಕ್ತಸೇವೆಯಂತಿದೆ.

### ವೃಂದಾವನದಲ್ಲಿ ಕೃಷ್ಣನ ಬಗೆಬಗೆಯ ಲೀಲೆಗಳು

**ತತಃ ಸ ಗೋರೂಪಧರೈರ್ನಿಯುದ್ಧಂ-**
**ಶ್ಚಚಾರ ಚಾರೂಪಲಮುತ್ಕ್ಷಿಪಂಶ್ಚ[೩] ।**

---

೧. ಹರೌ ಕೃಷ್ಣೇ ಪ್ರಸನ್ನೇ ಸತಿ ಇಹ ಲೋಕೇ ಅಸಾಧ್ಯಮಲಭ್ಯಂ ಕಿಮಸ್ತಿ ಸರ್ವಂ ಸುಲಭಮಿತ್ಯರ್ಥಃ । -ವ್ಯಾ.

೨. ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ - ಗೀತಾ (೯/೨೬)

೩. ಕ್ವಚಿದ್ವಾದಯತೋ ವೇಣುಂ ಕ್ಷೇಪಣೈಃ ಕ್ಷಿಪತಃ ಕ್ವಚಿತ್ ।
ವೃಷಾಯಮಾಣೌ ನದತೌ ಯುಯುಧಾತೇ ಪರಸ್ಪರಮ್ ॥ -ಭಾ.( ೧೦/೧೧/೩೯)

ವನೇಽನುಶಿಕ್ಷನ್ನಿವ ವತ್ಸದೈತ್ಯ-
ರಣಂ ತಥೋತ್ಕ್ಷೇಪಣಮೇವ ತನ್ವಾಃ ॥ ೨೫ ॥

ಬಳಿಕ ಆ ಶ್ರೀಕೃಷ್ಣನು ಗೋವುಗಳ ವೇಷ ಧರಿಸಿದ ಗೋಪಾಲಕರೊಂದಿಗೆ ಮಲ್ಲಯುದ್ಧ ಮಾಡುತ್ತಾ, ಮನೋಹರವಾದ ಕಲ್ಲುಗಳನ್ನು ಮೇಲಕ್ಕೆ ಎಸೆಯುತ್ತಾ, ಮುಂದೆ ತಾನು ಮಾಡುವ ವತ್ಸಾಸುರನೆಂಬ ದೈತ್ಯನೊಂದಿಗಿನ ಯುದ್ಧವನ್ನು ಹಾಗೂ ಅವನ ದೇಹವನ್ನು ಮೇಲೆತ್ತಿ ಎಸೆಯುವುದನ್ನು ಅಭ್ಯಾಸ ಮಾಡುವವನಂತೆ ವೃಂದಾವನದಲ್ಲಿ ಸಂಚರಿಸಿದ.

ವಿ. : ೧. ಶ್ರೀಕೃಷ್ಣ ವೃಂದಾವನದಲ್ಲಿ ಗೋವುಗಳ ವೇಷಧರಿಸಿದ ಗೋಪಾಲಕರೊಂದಿಗೆ ವಿನೋದಕ್ಕೆಂದು ಯುದ್ಧಮಾಡುವುದು ಕಲ್ಲುಗಳನ್ನು ಮೇಲಕ್ಕೆ ಎಸೆಯುವುದು ಮೊದಲಾದ ಆಟಗಳನ್ನು ಆಡಿದ ಎಂದರ್ಥ; ಚಾರು – ಮನೋಹರ.

೨. ಶ್ರೀಕೃಷ್ಣನ ಆ ಲೀಲೆಗಳು ಮುಂದೆ ಅವನು ಮಾಡುವ ವತ್ಸಾಸುರನ ಸಂಹಾರಕಾರ್ಯಕ್ಕೆ ಸೂಚನೆಯಂತಿದ್ದವು ಎಂಬುದು ಇಲ್ಲಿಯ ನಿರೂಪಣೆ; ಉಪಲ – ಕಲ್ಲು; ನಿಯುದ್ಧ – ದ್ವಂದ್ವಯುದ್ಧ, ಮಲ್ಲಯುದ್ಧ.

ಶ್ರೀಕೃಷ್ಣ ತೋರಿದ ರಘುರಾಮಲೀಲೆ

ಪ್ಲವಂಗವೇಷೈರನುಗೈಃ ಸಮೇತಃ
ಸ ಸೇತುಬಂಧಾದಿವಿಹಾರಶೀಲಃ ।
ಚರನ್ನರಣ್ಯೇ ರಘುರಾಮರೂಪಂ
ಸ್ವಕೀಯಮಾಜ್ಞಾಪಯತಿ ಸ್ಮ ದೇವಃ ॥ ೨೬ ॥

ಕಪಿವೇಷವನ್ನು ಧರಿಸಿದ ತನ್ನ ಸಂಗಡಿಗರೊಂದಿಗೆ ಶ್ರೀಕೃಷ್ಣನು ಸೇತುಬಂಧನ ಮೊದಲಾದ ಕ್ರೀಡೆಗಳನ್ನು ಆಡುವವನಾಗಿ, ವನದಲ್ಲಿ ವಿಹರಿಸುತ್ತಾ, ತನ್ನ ರಘುರಾಮರೂಪವನ್ನು ಜನರಿಗೆ ಪ್ರಕಟಪಡಿಸಿದ.

ವಿ. : ೧. ಕಪಿವೇಷ ಧರಿಸಿದ ಗೋಪರೊಂದಿಗೆ ಶ್ರೀಕೃಷ್ಣ ಸೇತುಬಂಧನಾದಿ ಬಗೆಬಗೆಯ ಆಟಗಳನ್ನೂ ಆಡಿದ.

೨. ಈ ಬಗೆಯ ಕ್ರೀಡೆ ಅವನು ತಾನು ಸಾಕ್ಷಾತ್ [೧]ಶ್ರೀರಾಮನೇ ಆಗಿದ್ದವನು ಎಂಬುದನ್ನು ಸೂಚಿಸುವಂತಿದ್ದಿತು ಎಂಬುದು ಇಲ್ಲಿಯ ವಿಶೇಷ ನಿರೂಪಣೆ ; ವಾಸ್ತವವಾಗಿ ಆ ಶ್ರೀರಾಮನೇ ಈ ಶ್ರೀಕೃಷ್ಣ ಎಂಬುದು ತತ್ತ್ವ.

---

೧. ಕಪಿವೇಷಧಾರಿಗೋಪೈರನುಗತತ್ವಾತ್ ಸೇತುಕರಣಾದರಣ್ಯೇ ಸಂಚರಣಾದಹಮೇವ ರಘುರಾಮ ಇತಿ ಪ್ರಕಟಯಾಮಾಸೇತ್ಯರ್ಥಃ। –ವ್ಯಾ.

೩.. ಈ ಮೂಲಕ ರಾಮಾಯಣ, ಮಹಾಭಾರತಾದಿಗಳನ್ನು ಆಧರಿಸಿ, ನೃತ್ಯ ನಾಟಕಾದಿಗಳನ್ನು ಮಾಡುವ [೧] ಪರಂಪರೆಗೂ ಶ್ರೀಕೃಷ್ಣ ಹೀಗೆ ನಾಂದಿಹಾಡಿದ ಎಂಬ ಅಂಶವೂ ಸೂಚಿತ ಎಂದು ತಿಳಿಯಬಹುದು. ಇದರಿಂದ ರಾಮಾಯಣಕಾಲದಲ್ಲಿ ಮಾಡಿದ ವನವಾಸಾದಿಗಳೂ ಕೇವಲ ನಾಟಕ ಎಂಬ ಪ್ರಮೇಯವೂ ಸೂಚಿತ. ಶ್ರೀರಾಮನ ವನವಾಸವು ಶ್ರೀಕೃಷ್ಣನ ವೃಂದಾವನ-ವಾಸದಂತೆ ಪರಮವೈಭವದ ಕಾಲವೇ ಆಗಿತ್ತು ಎಂಬ ಅರ್ಥವೂ ಧ್ವನಿತ; ಪ್ಲವಂಗ - ಕಪಿ.

### ವತ್ಸಾಸುರನ ಆಗಮನ

**ಸಹಾನುಗೈರ್ಗಾಃ ಕಿಲ ಚಾರಯಂತಂ**
**ಖಲೋಽಭ್ಯಗಾತ್ ತಂ ಪಶುವೇಷಧಾರೀ ।**
**ಅಹಂ ಮಹಾಂತಂ ಪ್ರತಿಯಾಸ್ಯತೋಽಸ್ಯ[೨]**
**ಪಶುತ್ವಮಾಜಾನಜಮೇವ ಮನ್ಯೇ ॥ ೨೭ ॥**

ತನ್ನ ಅನುಯಾಯಿಗಳೊಂದಿಗೆ ಗೋವುಗಳಿಗೆ ಹುಲ್ಲು ಮೇಯಿಸುತ್ತಿದ್ದ ಶ್ರೀಕೃಷ್ಣನ ಬಳಿಗೆ ಒಬ್ಬ ದುಷ್ಟನು ಪಶುವಿನ ವೇಷವನ್ನು ಧರಿಸಿ ಆಗಮಿಸಿದ; ಸರ್ವಸಮರ್ಥನಾದ ಶ್ರೀಕೃಷ್ಣನನ್ನು ಎದುರಿಸಿ ಹೊರಟ ಅವನಿಗೆ ಪಶುತ್ವವು ಹುಟ್ಟಿನಿಂದಲೇ ಬಂದದ್ದು ಎಂದು ನಾನು ತಿಳಿಯುವೆ.

ವಿ. : ೧. ಶ್ರೀಕೃಷ್ಣನ ಸಂಹಾರಕ್ಕೆಂದು ಕಂಸ ಕಳುಹಿಸಿದ [೩] ವತ್ಸಾಸುರ ಎಂಬ ರಾಕ್ಷಸನು ಕರುವಿನ ರೂಪದಲ್ಲಿ ಆಗಮಿಸಿದ ಎಂದು ಅರ್ಥ.

೨. ಸ್ವೋತ್ತಮರ ದ್ರೋಹವೇ ಮಹಾ ಅವಿವೇಕ ; ಶ್ರೀಕೃಷ್ಣನಂತಹ ಸರ್ವೋತ್ತಮನನ್ನು ಎದುರಿಸಿದ ಅವನು ಹುಟ್ಟಿನಿಂದಲೇ ಪಶು ಎಂಬುದು ಅತ್ಯಂತ ಸತ್ಯ ಎಂಬುದು ಇಲ್ಲಿಯ ಭಾವ.

೩.. ದೊಡ್ಡವರ ವಿರೋಧ ಪಶುವಿನ ನಡತೆ ಎಂಬ ಸಂದೇಶ ಇಲ್ಲಿದೆ.

### ಶ್ರೀಕೃಷ್ಣ ಮಾಡಿದ ಶಾರ್ದೂಲವಿಕ್ರೀಡಿತ

**ತದ್ವೃಂದಾವನಭೂಗಣಂ ಪದರುಚಾ ಪ್ರಾಗಂಕಯನ್ ಸೋಽಸಕೃತ್**
**ಪಶ್ಚಾತ್ ತದ್ಗಮರುದ್ಗಣಂ ಚ ವರಯನ್ ಕುರ್ವನ್ನಿವಾಂತರ್ವನಮ್ ।**

---

೧. ಕೃಷ್ಣೇನೋಕ್ತಕ್ರೀಡಾ ಕೃತೇತಿ ಪೌರಾಣಿಕೀ ಕಥಾ । -ವ್ಯಾ.

೨. ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಮ್ ।
ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥ - ಕೃಷ್ಣಾಮೃತಮಹಾರ್ಣವ (೩.)

೩. ಪಶುವೇಷಂ ಧೃತ್ವಾ ಯುದ್ಧಾಯ ಕೃಷ್ಣಮಾಜಗಾಮ ಕಿಲೇತ್ಯರ್ಥಃ। -ವ್ಯಾ.

**ಸದ್ಭಾಸ್ವದ್ಗಣಶೋಭಿ ಲೇಖಸವಯೋಹೃದ್ವ್ಯೋಗಣೌ ಚಾಶ್ರಯನ್**
**ಲಕ್ಷ್ಮೀಶೋಽನುಕರೋತಿ ತತ್ರ ವಿಚರನ್ ಶಾರ್ದೂಲವಿಕ್ರೀಡಿತಮ್ ॥ ೨೮ ॥**

ಶ್ರೀಕೃಷ್ಣನು ಮೊದಲಿಗೆ ಆ ವೃಂದಾವನ ಭೂಪ್ರದೇಶವನ್ನು ತನ್ನ ಹೆಜ್ಜೆಗಳ ಕಾಂತಿಯಿಂದ ಅಲಂಕರಿಸಿದ; ಬಳಿಕ ಅಲ್ಲಿಯ ಗಾಳಿಯ ಸಮೂಹವನ್ನು ಅನೇಕಬಾರಿ ಮತ್ತೆ ಮತ್ತೆ ಸ್ವೀಕರಿಸಿದ.; ಉತ್ತಮವಾದ ಸೂರ್ಯಕಿರಣಗಳ ವೃಂದದಿಂದ ವೃಂದಾವನದ ಬಳಾಂಗಣವನ್ನು ಶೋಭಿಸುವಂತೆ ಮಾಡಿದ. ಹೀಗೆ ದೇವತೆಗಳ ಹಾಗೂ ಗೋಪರ ಹೃದಯಾಕಾಶದಲ್ಲಿ ನೆಲೆಸುತ್ತಾ, ಸಂಚರಿಸಿದ ಆ ಲಕ್ಷ್ಮೀಶನಾದ ಶ್ರೀಕೃಷ್ಣನು ಶಾರ್ದೂಲವಿಕ್ರೀಡಿತ (ಹುಲಿಕುಣಿತ)ವನ್ನು ಅನುಕರಿಸಿದ[೧].

ವಿ. : ೧. [೨]ಶ್ರೀಕೃಷ್ಣನು ವೃಂದಾವನದಲ್ಲಿ ಸಂಚರಿಸುತ್ತಿದ್ದುದು [೩]ಶಾರ್ದೂಲದ ವಿಹಾರದಂತೆ ಕಂಗೊಳಿಸುತ್ತಿತ್ತು ಎಂದು ಭಾವ.

೨. ಶ್ರೀಕೃಷ್ಣನ ವಿಹಾರವನ್ನು ಶಾರ್ದೂಲವಿಕ್ರೀಡಿತವೆಂದು ಕರೆಯುವ ಈ ಶ್ಲೋಕದ ವೃತ್ತವೂ ಸಹ [೪]ಶಾರ್ದೂಲವಿಕ್ರೀಡಿತವೇ ಆಗಿದೆ; ಈ ಬಗೆಯ ರಚನೆಗಳು [೫]ಸಂಸ್ಕೃತಸಾಹಿತ್ಯದಲ್ಲಿ ಅತ್ಯಂತ ವಿರಳ.

೩.. ಮಗಣ (ಭೂಮಿ), ಸಗಣ(ವಾಯು), ನಡುವೆ ಜಗಣ(ಸೂರ್ಯ), ತಗಣ(ಆಕಾಶ) ಎಂಬ ಗಣಗಳ ವೃತ್ತ ಶಾರ್ದೂಲವಿಕ್ರೀಡಿತ. ಇಲ್ಲಿ ಮೊದಲಿಗೆ ವೃಂದಾವನದ ಭೂಮಿಯನ್ನು

---

೧. ದೇವಾನಾಂ ಹೃದಯಾಕಾಶಗಣಃ ಸವಯಸಾಂ ಹೃದಯಾಕಾಶಗಣಶ್ಚೇತಿ ದ್ವೌ ಲೇಖಸವಯೋಹೃದ್ವ್ಯೋಗಣೌ ಆಶ್ರಯನ್ ತದ್ಧ್ಯಾನವಿಷಯೀಭವನ್ನಿತ್ಯರ್ಥಃ। –ವ್ಯಾ.
ಗಣದೇವತಾಸ್ತು ಅಮೃತಾನಂದೀಯೇ ಕಥಿತಾಃ। – ವ್ಯಾ.
ಜಃ ಸೂರ್ಯೋ ರೋಗದಃ ಪ್ರೋಕ್ತಃ ಸೋ ವಾಯವ್ಯಃ ಸುಖಪ್ರದಃ।
ಶುಭದೋ ಮೋ ಭೂಮಿಮಯೋ ನೋ ಗೌರ್ಧನಕರೋ ಮತಃ॥
– ಅಮೃತಾನಂದೀಯ ಅಲಂಕಾರಸಂಗ್ರಹ (೧/೩.೪)

೨. ವೃತ್ತಮಪಿ ವಾಯುದೇವತಾಕಸಗಣದ್ವಯಮಂಗೀಕರೋತಿ । ಪುನಃ ಕಿಂಕುರ್ವನ್ ಪದರುಚಾ ಅಂತರ್ವನಂ ವನಮಧ್ಯಂ ಸದ್ಭಾಸ್ವದ್ಗಣಶೋಭಿ ಸತ್ಸೂರ್ಯಸಮೂಹಶಾಲಿ ಕುರ್ವನ್ನಿವ ಕೃಷ್ಣಪಾದಸ್ಯ ಕೋಟಿಸೂರ್ಯಸದೃಶ-ಕಾಂತಿಯುಕ್ತತ್ವಾದಿತಿ ಭಾವಃ।

೩.. ವೃತ್ತಮಪಿ ದ್ವಯೋಃ ಸಗಣಯೋರ್ಮಧ್ಯೇ ಸೂರ್ಯದೇವತಾಕಜಗಣಶಾಲಿ। –ವ್ಯಾ.

೪. ವತ್ಸವಧೇ ಶಾರ್ದೂಲವಿಕ್ರೀಡಿತಸ್ಯ ವೃತ್ತಸ್ಯ ಸಾದೃಶ್ಯಂ ವ್ಯಜ್ಯತೇ। –ವ್ಯಾ.

೫. ವೃತ್ತಮಪ್ಯಾಕಾಶದೇವತಾಕತಗಣದ್ವಯಶೋಭೀತಿ ಭಾವಃ। ಗಣಲಕ್ಷಣಂ ತೂಕ್ತಂ ವೃತ್ತರತ್ನಾಕರೇ।
''ಸರ್ವಗುರ್ಮೋ ಮುಖಾಂತಲೌ ಯರಾವಂತರ್ಗಲೌ ಸತೌ।
ಗ್ಮಧ್ಯಾದ್ಯೌ ಜ್ಭೌ ತ್ರಿಲೋ ನೋಽಷ್ಟೌ ಭವಂತ್ಯತ್ರ ಗಣಾಸ್ತ್ರಿಕಾಃ'' ॥ –ವ್ಯಾ.
ಶಾರ್ದೂಲವಿಕ್ರೀಡಿತವೃತ್ತಸ್ಯಾಪಿ ಸುಪ್ತಿಜಂತಪದೇನ ಪ್ರಥಮಂ ಭೂಮಿದೇವತಾಕಮಗಣಾಂಕಿತತ್ವಾತ್ ಉಪಮಾ। –ವ್ಯಾ.

ಅಲಂಕರಿಸುವುದು(ಮಗಣ-ಭೂಮಿ), ಬಳಿಕ ಮಂದಮಾರುತವನ್ನು ಸ್ವೀಕರಿಸುವುದು (ಸಗಣ-ವಾಯು), ಬಳಿಕ ದೇವತೆಗಳ ಹೃದಯಾಕಾಶ (ಸೂರ್ಯ-ತಗಣ) ದಲ್ಲಿ ನೆಲೆಸಿದ ಸೂರ್ಯ(ಜಗಣ-ಸೂರ್ಯ)ನಂತೆ ಬೆಳಗುವುದು; ಹೀಗೆ ವರ್ಣನೆಯಲ್ಲಿ ಶಾರ್ದೂಲ-ವಿಕ್ರೀಡಿತವೃತ್ತದ ಲಕ್ಷಣವನ್ನು ಅಳವಡಿಸಿರುವುದು ಈ ಶ್ಲೋಕದ ವಿಶೇಷತೆ.

೪. ಶ್ರೀಕೃಷ್ಣನು ಮಾಡಿದ್ದು ಶಾರ್ದೂಲವಿಕ್ರೀಡಿತ. ಅದನ್ನು ತಿಳಿಸಲು ಬಳಸಿರುವ ಇಲ್ಲಿಯ ವೃತ್ತ ಶಾರ್ದೂಲವಿಕ್ರೀಡಿತ. ನಿರೂಪಣೆಯ ಕ್ರಮವೂ ಸಹ ಶಾರ್ದೂಲವಿಕ್ರೀಡಿತ ವೃತ್ತದಲ್ಲಿನ ಗಣಗಳಿಗೆ ಅನುಗುಣವಾದುದು. ಹೀಗೆ ಇಲ್ಲಿ ಶಾರ್ದೂಲವಿಕ್ರೀಡಿತವೃತ್ತಕ್ಕೆ ಸಂದಿರುವ ನ್ಯಾಯ ಅತ್ಯಂತ ಅಪೂರ್ವವಾದುದು ; ಅಸಕೃತ್ - ಮತ್ತೆ ಮತ್ತೆ ; ಲೇಖ - ದೇವತೆ.

೫. ಶಾರ್ದೂಲವಿಕ್ರೀಡಿತ ವೃತ್ತದ ಲಕ್ಷಣ ಹೀಗಿದೆ: ಸೂರ್ಯಾಶ್ವೈರ್ಯದಿ ಮಃ ಸಜೌ ಸತತಗಾಃ ಶಾರ್ದೂಲವಿಕ್ರೀಡಿತಮ್ ।(ಮ,ಸ,ಜ,ಸ,ತ,ತ) ; ಸವಯಃ-ವಯಸ್ಕರು, ಗೆಳೆಯರು.

ವತ್ಸಾಸುರನನ್ನು ಅಪ್ಪಳಿಸಿ ಕೊಂದ ಶ್ರೀಕೃಷ್ಣ

ಉದಕ್ಷಿಪತ್ ತಂ ಹರಿರಾತ್ಮದೋರ್ಭ್ಯಾ-
ಮಧಃಪಪಾತಾಶು ಸ ವತ್ಸದೈತ್ಯಃ ।
ವ್ರಜಾಧಿನಾಥಸ್ಯ ಸ ಏಷ ಧರ್ಮೋ
ಗೃಹೀತಮಾಯಸ್ಯ ಚ ತಸ್ಯ ಪಾತಃ ॥ ೨೯ ॥

ಅವನನ್ನು ಶ್ರೀಕೃಷ್ಣ ತನ್ನ ಎರಡೂ ಕೈಗಳಿಂದ ಎತ್ತಿ ಮೇಲಕ್ಕೆ ಎಸೆದ; ಆ ವತ್ಸಾಸುರ ಕೂಡಲೆ ಕೆಳಕ್ಕುರುಳಿದ; ಹಾಗೆ ಮಾಡಿದ್ದು ಗೋಕುಲದ ಒಡೆಯನಾದ ಶ್ರೀಕೃಷ್ಣನ ಧರ್ಮವಾದರೆ, ಕಪಟಿಯಾದ ಅವನು ಹಾಗೆ ಬಿದ್ದದ್ದು ಅವನ ಧರ್ಮವೂ ಆಗಿತ್ತು.

ವಿ. : ೧. ವತ್ಸಾಸುರನನ್ನು ಶ್ರೀಕೃಷ್ಣ ಶಾರ್ದೂಲವಿಕ್ರೀಡಿತದಿಂದ ಮೇಲಕ್ಕೆ ಎಸೆದು ಸಂಹರಿಸಿದ ಎಂದು ಭಾವ.

೨. ತನಗೆ ಪ್ರಿಯವಾದ ವತ್ಸವೇಷವನ್ನು ಧರಿಸಿದ್ದರಿಂದ ಶ್ರೀಕೃಷ್ಣ ಅವನನ್ನು ಮೇಲೆತ್ತಿದ[1]. ಆದರೆ ಕಪಟಿಯಾದ ಅವನು ನಿಜಕ್ಕೂ ವತ್ಸನಲ್ಲವಾದ್ದರಿಂದ ಅದಕ್ಕೆ ಅರ್ಹತೆ ಇಲ್ಲದೆ ತನ್ನ ರೀತಿಗನುಗುಣವಾಗಿ ಅಧಃಪತನ ಹೊಂದಿದ ಎಂದು ಭಾವ.

೩.. **ಗೋಬ್ರಾಹ್ಮಣಹಿತಾಯ ಚ** ಎಂಬ ಮಾತಿನಂತೆ ಶ್ರೀಕೃಷ್ಣ ಗೋವುಗಳ ವೇಷಧರಿಸಿದವ-ರನ್ನೂ ಉದ್ಧರಿಸುವ ಮಹಾಮಹಿಮ; ಆದರೆ ಅದು ತೋರಿಕೆಯ ವೇಷವಾದ್ದರಿಂದ[2] ಆ ವತ್ಸಾಸುರನು ಉದ್ಧಾರವಾಗುವುದರ ಬದಲು ವಿನಾಶವನ್ನು ಕಂಡ ಎಂಬುದು ವಸ್ತುಸ್ಥಿತಿ.

---

೧. ಸ್ವರಕ್ಷ್ಯವತ್ಸವೇಷಧಾರಿಣೋ ಊರ್ಧ್ವಗತಿಪ್ರೇಷಣಂ ಯುಕ್ತಮಿತ್ಯರ್ಥಃ । -ವ್ಯಾ.

೨. ಊರ್ಧ್ವಗತಿಸಾಧಕೇ ಹರೌ ವಿದ್ಯಮಾನೇಽಪಿ ದಾತುರೇವ ವಿರೋಧಕೃತಾಂ ದೈತ್ಯಾನಾಮಧಃಪಾತ ಏವೇತಿ ಭಾವಃ -ವ್ಯಾ.

೪. ನಿಜಕ್ಕೂ ಗೋಬ್ರಾಹ್ಮಣರಿಗೆ ಭಗವಂತ ಹಿತಕರನಾದರೂ, ಕೇವಲ ವೇಷಮಾತ್ರದಿಂದ ಬ್ರಾಹ್ಮಣರಾದವರನ್ನು ಅವನು ಸರ್ವಥಾ ಉದ್ಧರಿಸಲಾರ ಎಂಬುದು ಇಲ್ಲಿಯ ಸಂದೇಶ.

೫. ಇದು ಮಹಾಭಾರತದಲ್ಲಿ ಭೀಮಸೇನ ಮಾಡಿದ ಜಟಾಸುರ ಸಂಹಾರ ಕಾರ್ಯವನ್ನು ಸ್ಮರಣೆಗೆ ತರುವಂತಿದೆ. ಜಟಾಸುರನು ವಿಪ್ರವೇಷದಲ್ಲಿ ಇರುವವರೆಗೂ ಅವನನ್ನು ಸಂಹರಿಸದೇ ಇದ್ದ ಭೀಮ ಆ ಬಳಿಕ ಅವನನ್ನು ಸಂಹರಿಸುವನು; ಶ್ರೀಕೃಷ್ಣ ವತ್ಸರೂಪದಲ್ಲಿದ್ದ ಅಸುರನನ್ನೇ ಸಂಹರಿಸುವನು ಎಂಬುದಷ್ಟೇ ವ್ಯತ್ಯಾಸ.

### ಇತರರ ಪತನಕ್ಕೂ ಕಾರಣನಾದ ವತ್ಸಾಸುರ

**ಸ ಪಾತಯಾಮಾಸ ಪತನ್ ಕಪಿತ್ಥ-**
**ಫಲಾನಿ ಲೋಲದ್ರುಮಸಂಚಯೇಭ್ಯಃ ।**
**ತಥಾಹಿ ಕೃಷ್ಣಪ್ರತಿಪಕ್ಷಿಪಕ್ಷಃ**
**ಕಥಂ ನ ಪಾತೈಕಫಲಸ್ತ್ರಿಲೋಕ್ಯಾಮ್ ॥ ೩೦ ॥**

ಹಾಗೆ ಕೆಳಕ್ಕೆ ಉರುಳಿದ ಅವನು ಚಲಿಸುವ ಮರಗಿಡಗಳ ಸಾಲುಗಳಿಂದ ಬೇಲದ ಹಣ್ಣುಗಳನ್ನು ಕೆಳಕ್ಕುರುಳಿಸಿದ; ಅದು ಸರಿಯೇ; ಶ್ರೀಕೃಷ್ಣನ ವಿರುದ್ಧಪಕ್ಷದವನಿಗೆ ಮೂರು ಲೋಕಗಳಲ್ಲೂ ಪತನವೇ ಮುಖ್ಯಫಲವಾಗಿ ಹೇಗೆ ತಾನೆ ಆಗದು?

ವಿ. : ೧. ವತ್ಸಾಸುರ ಬಿದ್ದ; [1]ಮರಗಿಡಗಳಲ್ಲಿದ್ದ ಬೇಲದ ಹಣ್ಣುಗಳೂ ಸಹ ಕೆಳಕ್ಕೆ ಬಿದ್ದವು ಎಂದರ್ಥ; **ಕಪಿತ್ಥ** – ಬೇಲ; **ದ್ರುಮ** – ಮರ.

೨. ಶ್ರೀಕೃಷ್ಣನ ವಿರೋಧಿಗಳು ತಾವು ಮಾತ್ರವಲ್ಲದೆ ತಮ್ಮ ಸಂಪರ್ಕಕ್ಕೆ ಬರುವವರನ್ನೂ ಸಹ ಹಾಳುಮಾಡುವ [2]ಮಹಾಪಾಪಿಗಳು ಎಂಬುದು ಇಲ್ಲಿಯ ಸಂದೇಶ.

೩. ಭಗವದ್ದ್ವೇಷಿಗಳ ಸಹವಾಸದಿಂದ ಅಧಃಪತನ ಖಚಿತ ಎಂಬುದು ಇಲ್ಲಿಯ ತತ್ತ್ವ : ''**ತಮೋದ್ವಾರಂ ಯೋಷಿತಾಂ ಸಂಗಿಸಂಗಮ್**'' ಭಾಗ.(೫/೫/೨)

೪. ಭೀಮಸೇನನು ತನ್ನನ್ನು ವಂಚಿಸಲೆಂದು ಫಲಭರಿತವಾದ ವೃಕ್ಷವೊಂದನ್ನು ಏರಿಕುಳಿತಿದ್ದ ಕೌರವರನ್ನೆಲ್ಲಾ ವೃಕ್ಷದ ಬುಡಕ್ಕೆ ತನ್ನ ಪಾದಪ್ರಹಾರವನ್ನು ಮಾಡಿ, ಫಲಗಳ ಸಮೇತ ಕೆಳಕ್ಕೆ ಬೀಳಿಸಿದ ಮಹಾಭಾರತದ ಪ್ರಸಂಗವು ಒಂದು ರೀತಿಯಲ್ಲಿ ಇದೇ ತೆರನಾದುದು[3].

---

೧. ಕೃಷ್ಣೋಕ್ತ್ಯಿಪ್ತವತ್ಸಾದಸುರಸ್ಯಾತ್ಮಸಾತ್ಕರಣಾತ್ಸಹಾಯ ಇತಿ ಧ್ವನಿಃ । –ವ್ಯಾ.

೨. ದ್ವೇಷಿವದ್ದ್ವೇಷಿಪಕ್ಷಪಾತಿನೋಽಪಿ ಪಾತ ಏವೇತಿ ಭಾವಃ । –ವ್ಯಾ.

೩.. ಪಕ್ವೋರುಭೋಜ್ಯಫಲಸನ್ನಯನಾಯ ವೃಕ್ಷೇಷ್ವಾರೂಢರಾಜತನಯಾನಭಿವೀಕ್ಷ್ಯ ಭೀಮಃ ।
ಪಾದಪ್ರಹಾರಮುರುವೃಕ್ಷತಲೇ ಪ್ರದಾಯ ಸಾಕಂ ಫಲೈರ್ವಿನಿಪತತ್ಸು ಫಲಾನ್ಯಭುಂಕ್ತ ॥–ಮ.ಭಾ.ತಾ.ನಿ.(೧೪/೬೨)

ಬಕಾಸುರನ ಆಗಮನ

[1]ಅನ್ಯೋನ್ಯಾಶ್ರಿತರಾಗರಜ್ಜುವಿತತೇ ಸಂಸೃತ್ಯಭೇದ್ಯದ್ರುಮೇ
ಸಂಗೃಹ್ಯ ಪ್ರತಿಕಲ್ಪಮಬ್ಜಜಮುಖಾನ್ ಭುಂಕ್ತೇ ಸುಪರ್ಣಾನಿಹ।
ತಂ ವಿಶ್ವಾದ್ಭುತಲುಬ್ಧಕಂ ದಿತಿಸುತಃ ಶ್ರುತ್ವಾ ಬಕೋಽಭ್ಯಾಯಯೌ
ನೂನಂ ಮೀನತನುಂ ತಿಮಿಂಗಿಲಮಿವ ವ್ಯತ್ಯಸ್ತಬುದ್ಧಿರ್ಭಕಃ ॥ ೩೧ ॥

ಪರಸ್ಪರರಲ್ಲಿನ [2]ಅನುರಾಗವೆಂಬ ಪಾಶದಿಂದ ಬಿಗಿದ ಸಂಸಾರವೆಂಬ ಅಭೇದ್ಯವೃಕ್ಷದಲ್ಲಿ ಪ್ರತಿಕಲ್ಪದಲ್ಲೂ ಬ್ರಹ್ಮ ಮೊದಲಾದ ಪಕ್ಷಿಗಳನ್ನು ಹಿಡಿದು ತಿನ್ನುವವನು ಶ್ರೀಕೃಷ್ಣ; ಅಂತಹ ಭುವನಾದ್ಭುತ ಬೇಟೆಗಾರನಾದ ಶಿಶುರೂಪದ ಕೃಷ್ಣನ ಬಗ್ಗೆ ಕೇಳಿ ವಿಪರೀತಬುದ್ಧಿಯ ದೈತ್ಯನಾದ ಬಕಾಸುರನು ಅವನ ಮೇಲೆ ಎದುರಿಸಿಬಂದ; ಮೀನು ಎಂದು ಭಾವಿಸಿ ತಿಮಿಂಗಿಲದ ಮೇಲೆ ಎರಗುವಂತೆ[3].

ವಿ. : ೧. ವತ್ಸಾಸುರನ ಸಂಹಾರದ ಬಳಿಕ ಬಕಾಸುರ ಎಂಬ ಮತ್ತೊಬ್ಬ ರಾಕ್ಷಸನ ಸಂಹಾರದ ಪ್ರಸಂಗ ಇಲ್ಲಿ ನಿರೂಪಿತವಾಗಿದೆ.

೨. ಶ್ರೀಕೃಷ್ಣನ ಮೇಲೆ ಬಕಾಸುರ ಎದುರಿಸಿ ಬಂದದ್ದು ಬಕಪಕ್ಷಿಯು ತಿಮಿಂಗಿಲದ ಬಾಯನ್ನು ಹೊಕ್ಕಂತೆ ಆಯಿತು; ಎಂದರೆ ಆತ್ಮಘಾತಕವಾದ ಮೂರ್ಖಕಾರ್ಯವಾಯಿತು ಎಂದು ಭಾವ.

೩. [4]ಮೀನುಗಳನ್ನು ತಿಂದು ಜೀವಿಸುವುದು ಬಕಪಕ್ಷಿಗಳ ರೀತಿ. ಆದರೆ ಕೃಷ್ಣನು ಮತ್ಸ್ಯ-ರೂಪನೇ ಹೊರತು ಲೋಕದ ಮೀನಲ್ಲ, ಅದರಿಂದಾಗಿ ಅವನ ಮೇಲೆ ಎರಗಿದ ಬಕಾಸುರನ ಸ್ಥಿತಿ ತಿಮಿಂಗಿಲದ ಬಾಯನ್ನು ಹೊಕ್ಕ ಬಕಪಕ್ಷಿಯ ಸ್ಥಿತಿಯಂತಾಯಿತು ಎಂದು ಭಾವ.

೪. ಶ್ರೀಕೃಷ್ಣನು ಪ್ರತಿಕಲ್ಪದಲ್ಲಿಯೂ ಸಹ ಬ್ರಹ್ಮಾದಿಗಳಿಂದ ಕೂಡಿದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಸಾಕ್ಷಾತ್ ಶ್ರೀಹರಿ ಎಂಬ ತತ್ತ್ವವು ಇಲ್ಲಿ ನಿರೂಪಿತವಾಗಿದೆ: ಧಾತಾ ಯಥಾ ಪೂರ್ವಮಕಲ್ಪಯತ್ । (ಋಗ್ವೇದ); ಸಂಸೃತಿ – ಸಂಸಾರ; ಸುಪರ್ಣ – ಪಕ್ಷಿ.

ತಾನು ಕೃಷ್ಣನ ವೈರಿ ಎಂಬುದನ್ನು ಸಾರಿದ ಬಕಾಸುರ

ಕೃಷ್ಣ ತ್ವನ್ನಾಮ ಜಿಹ್ವಾ ನ ಕಥಯತಿ ಮಮೇತ್ಯಾಸ್ಯಮಾದರ್ಶಯನ್ ಸ್ವೌ
ಪಕ್ಷೌ ನೋ ಕೃಷ್ಣಪಕ್ಷಸ್ತ್ವಿತಿ ವಿಶದಯಿತುಂ ಪ್ರೋತ್ಕ್ಷಿಪನ್ನಂಘ್ರಿಯುಗ್ಮಮ್ ।

---

೧. ಜಾಲಸ್ಯಾಪ್ಯನ್ಯೋನ್ಯನಿಬದ್ಧರಜ್ಜುನಿರ್ಮಿತತ್ವಾದಿತಿ ಭಾವಃ। -ವ್ಯಾ.
೨. ಸಂಸೃತ್ಯಭೇದ್ಯದ್ರುಮ ಇತ್ಯನೇನ ರಾಗ ಏವ ಸಂಸಾರಮೂಲಕಾರಣಮಿತಿ ಸೂಚಯತಿ। -ವ್ಯಾ.
೩. ಯಥಾ ಮೀನಾಶಯಾ ತಿಮಿಂಗಿಲಸಮೀಪಮಾಗತಸ್ಯ ಬಕಪಕ್ಷಿಣಃ ತತ ಏವ ನಾಶಃ ತಥಾ ತಂ ಕೃಷ್ಣಂ ಹಂತುಮಾಗತಸ್ಯ ಬಕಾಸುರಸ್ಯ ಕೃಷ್ಣಾದೇವ ನಾಶೋ ಭವಿಷ್ಯತೀತಿ ಭಾವಃ। -ವ್ಯಾ.
೪. ಅನೇನಾದ್ಭುತಮೀನಾಕಾರತ್ವಾನ್ಮತ್ಸ್ಯಾಕಾರೋಽಪಿ ಹರಿಃ ದೈತ್ಯಸಂಹಾರೀತಿ ಸೂಚಿತಮ್। -ವ್ಯಾ.

**ಪಶ್ಚಾದ್ಭಾಗೇ ವಿಧುನ್ವನ್ ಹರಿನಿಲಯಮಹೀಸಂಗಭೀತ್ಯೇಶಕೇಶಂ**
**ಮತ್ವಾ ವ್ಯೋಮಾಧ್ವನಾಽಸೌ ಯದುಕುಲತಿಲಕಂ ಸತ್ವರೋಽಭ್ಯಾಜಗಾಮ**[1] ॥೩೨॥

ಆ ಬಕಾಸುರನು "ಎಲೈ ಶ್ರೀಕೃಷ್ಣ! ನಿನ್ನ ನಾಮವನ್ನು ನನ್ನ ನಾಲಿಗೆ ನುಡಿಯದು" ಎಂದು ತಿಳಿಸಲು ಬಾಯಿ ತೆರೆದುಕೊಂಡು ಧಾವಿಸಿದ; ತಾನು ಕೃಷ್ಣಪಕ್ಷದವನೇನಲ್ಲ ಎಂಬುದನ್ನು ತಿಳಿಸಲು ಎರಡು ರೆಕ್ಕೆಗಳನ್ನು ಬಡಿಯುತ್ತ ಬಂದ; ಶ್ರೀಕೃಷ್ಣನಿರುವ ಭೂಮಿಯ ಸಂಪರ್ಕವಾದೀತು ಎಂಬ ಭಯದಿಂದ ತನ್ನ ಎರಡು ಕಾಲುಗಳನ್ನು ಹಿಂದೆ ಝಾಡಿಸುತ್ತ, ಗಗನವನ್ನು ಶಿವನ ಕೇಶ ಎಂದು ಭಾವಿಸಿ, ಗಗನಮಾರ್ಗದಿಂದ ಯದುಕುಲತಿಲಕನಾದ ಶ್ರೀಕೃಷ್ಣನ ಬಳಿಗೆ ವೇಗದಿಂದ ಧಾವಿಸಿ ಬಂದ.

ವಿ. : ೧. ಬಕಾಸುರನು ಗಗನಮಾರ್ಗದಿಂದ ಶ್ರೀಕೃಷ್ಣನ ಮೇಲೆ ಆಕ್ರಮಣ ನಡೆಸಿದ ಎಂದರ್ಥ.

೨. ಅವನು ಶ್ರೀಕೃಷ್ಣನನ್ನು ಆಕ್ರಮಿಸುವಾಗ ಬಾಯಿ ತೆರೆದದ್ದು ಅವನ ನಾಲಿಗೆಯಿಂದ ಕೃಷ್ಣನಾಮದ ಉಚ್ಚಾರಣೆ ನಡೆದಿಲ್ಲ ಎಂಬುದನ್ನು ತೋರಿಸುವಂತಿತ್ತು. ಅವನು ತನ್ನ ಬಿಳಿರೆಕ್ಕೆಗಳನ್ನು ಬಡಿಯುತ್ತಿದ್ದುದು ತಾನು ಕೃಷ್ಣಪಕ್ಷದವನಲ್ಲ ಎಂದರೆ ಕೃಷ್ಣನ ವಿರೋಧಿ ಎಂದು ಸಾರುವಂತಿತ್ತು. ಅವನು ಕಾಲುಗಳನ್ನು ಹಿಂಭಾಗದತ್ತ ಚಾಚಿದ್ದು ಕೃಷ್ಣನಿರುವ ಭೂಮಿಯ ಸಂಪರ್ಕ ಬಂದು ಪಾವನವಾಗುವ ಪ್ರಸಂಗ ಬರದಿರಲಿ ಎಂಬ ಮೂರ್ಖತನವಾಗಿತ್ತು ಎಂದು ಉತ್ಪ್ರೇಕ್ಷಿಸಿರುವರು. **ಈಶಕೇಶ** – ಶಿವನ ಕೇಶ.

೩. ಹೀಗೆ ಆ ಬಕಾಸುರನು ಸ್ವರೂಪತಃ ಕೃಷ್ಣವಿರೋಧಿಯಾದ ದೈತ್ಯ ಎಂಬುದು ಅವನ ಆಗಮನದ ರೀತಿಯಿಂದಲೇ ಸ್ಫುಟಪಡುತ್ತಿದ್ದಿತು ಎಂದು ಭಾವ.

## ಶ್ರೀಕೃಷ್ಣನನ್ನೇ ನುಂಗಿದ ಬಕಾಸುರ

**ಹರಿಂ ಪ್ರಜಗ್ರಾಸ ತತಃ ಖಲೋಽಸೌ**
**ರುರೋಧ ಕಂಠಶ್ವಸನಂ ಜ್ವಲನ್ ಸಃ।**
**ಪುನಶ್ಚ ಚಚ್ಛರ್ದ ಸ ಏವ ನೂನಂ**
**ನಿರಕ್ರಮೀತ್ ತಸ್ಯ ಹೃದೋಽಘಪೂರ್ಣಾತ್** ॥ ೩೩ ॥

ಬಳಿಕ ಶ್ರೀಕೃಷ್ಣನನ್ನು ಆ ದುಷ್ಟ ನುಂಗಿದ; ಶ್ರೀಕೃಷ್ಣ ಅವನ ಕಂಠದ ಉಸಿರನ್ನು ತಡೆದು ಪ್ರಜ್ವಲಿಸತೊಡಗಿದ; ಆಗ ಅವನು ಶ್ರೀಕೃಷ್ಣನನ್ನು ಬಾಯಿಂದ ಹೊರಹಾಕಿದ. ಅವನ ಪಾಪತುಂಬಿದ ಹೃದಯದಿಂದ ಶ್ರೀಕೃಷ್ಣ ತಾನಾಗಿಯೇ ಹೊರನಡೆದ ಎಂಬುದು ನಿಶ್ಚಿತ.

---

೧. ಸ್ರಗ್ಧರಾವೃತ್ತಮ್ –ವ್ಯಾ.
೨. ವ್ಯೋಮಾಧ್ವನೇತ್ಯತ್ರ ವ್ಯೋಮೇತಿ ವ್ಯೋಮಾಧ್ವನೇತಿ ಚ ಪದವಿಭಾಗಃ ಕರ್ತವ್ಯಃ। –ವ್ಯಾ.

ವಿ. : ೧. ಶ್ರೀಕೃಷ್ಣನನ್ನು ಕೊಲ್ಲಲೆಂದು ಬಕಾಸುರ ಅವನನ್ನು ನುಂಗಿದ. ಕೃಷ್ಣ ಅವನಿಗೆ ಉಸಿರುಕಟ್ಟುವಂತೆ ಮಾಡಿ, ಅವನ ಉದರದಲ್ಲಿ ಬೆಂಕಿಯಂತೆ ಪ್ರಜ್ವಲಿಸಿದ. ಅದನ್ನು ತಡೆಯಲಾಗದೆ ಅವನು ಕೃಷ್ಣನನ್ನು ಪುನಃ ಹೊರಹಾಕಿದ ಎಂಬುದು ವಸ್ತುಸ್ಥಿತಿ.

೨. ಶ್ರೀಕೃಷ್ಣ ಅವನ ಹೃದಯವನ್ನು ಪ್ರವೇಶಿಸಿ, ಅಲ್ಲಿಯೂ ಬರೀ ಪಾಪದ ರಾಶಿಯೇ ತುಂಬಿರುವುದನ್ನು ಕಂಡು ಅಲ್ಲಿರಲು ಬಯಸದೇ ತಾನಾಗಿಯೇ ಹೊರಕ್ಕೆ ಬಂದ ಎಂಬುದು ಕಾವ್ಯನಿರೂಪಣೆ.

೩. ಇದರಿಂದ [೧]ಪಾಪಿಗಳ ಹೃದಯದಲ್ಲಿ ಶ್ರೀಕೃಷ್ಣ ಎಂದೂ ಸಹ ಧ್ಯಾನಗೋಚರನಾಗಲಾರ ಎಂಬ ಪ್ರಮೇಯ ನಿರೂಪಿತ; ಶ್ವಸನ - ವಾಯು; ಅಘ - ಪಾಪ; ಚಚ್ಛರ್ದ - ಹೊರಹಾಕಿದ.

೪. ಭಗವದ್ವಿರೋಧಿಗಳು ದೇವರ ಸ್ವತ್ತನ್ನು ಮಾತ್ರವಲ್ಲದೆ, ದೇವರ ವಿಗ್ರಹಗಳನ್ನು ಸಹ ನುಂಗುವ ಮಹಾಪಾತಕಿಗಳು ಎಂಬುದನ್ನು ಶ್ರೀಕೃಷ್ಣನನ್ನು ನುಂಗುವ ಈ ಬಕಾಸುರನ ಪ್ರಯತ್ನ ಸೂಚಿಸುವುದು.

### ಶ್ರೀಕೃಷ್ಣನ ಅಸುರಸಂಹಾರ ಕಾರ್ಯದ ವಿಶಿಷ್ಟ ಕ್ರಮ

**ಪ್ರಾಗ್ಬಾಲಗ್ರಹರೂಪಿಣೀಂ ಸ ಶಕಟೇ ಸಂಕಲ್ಪ್ಯ ರಜ್ಜುಗ್ರಹಾಂ**
**ತದ್ವಾಹಾನ್ ಖರಕೇಶಿವತ್ಸವೃಷಭಾನ್ ನಿಃಶೇಷದೈತ್ಯಾಸುವತ್ ।**
**ಸಂಯೋಜ್ಯಾನಿಲರೂಪದೈತ್ಯಮಧುನಾ ತಚ್ಚಿಹ್ನಮತ್ಯದ್ಭುತಂ**
**ಕೃಷ್ಣಃ ಪ್ರೇಷಯತೀವ ಹಸ್ತಗಬಕೋ ಗಾಢಂ ತಮಃ ಪ್ರಾಪಯನ್ ॥ ೩೪ ॥**

ಶ್ರೀಕೃಷ್ಣನು ಮೊದಲಿಗೆ ಶಕಟಾಸುರನಲ್ಲಿ ಹಗ್ಗಹಿಡಿಯುವ ಕಾರ್ಯದವಳನ್ನಾಗಿ ಪೂತನಿ-ಯನ್ನು ಸಂಕಲ್ಪಿಸಿದ; ಅದಕ್ಕೆ ವಾಹನಗಳನ್ನಾಗಿ ಖರ, ಕೇಶಿ, ವತ್ಸಾಸುರ, ವೃಷಭಾಸುರರನ್ನು ಸಂಕಲ್ಪಿಸಿದ. ಸಕಲ ದೈತ್ಯರ ಉಸಿರು ಎಂಬುದಾಗಿ ತೃಣಾವರ್ತನನ್ನು ಭಾವಿಸಿದ; ಈಗ ಬಕಾಸುರನನ್ನು ಕೈಯಲ್ಲಿ ಹಿಡಿದ ಶ್ರೀಕೃಷ್ಣ ಅತ್ಯದ್ಭುತವಾದ ಧ್ವಜ ಎಂದು ಸಂಕಲ್ಪಿಸಿ ಅವನನ್ನು ಅಂಧಂತಮಸ್ಸಿಗೇ ಕಳುಹಿಸಿದ.

ವಿ. : ೧. [೨]ಶ್ರೀಕೃಷ್ಣನ ಅಸುರಸಂಹಾರರೂಪ ವ್ಯಾಪಾರವು ಕಂಸನನ್ನು ವ್ಯವಸ್ಥಿತವಾಗಿ ತಮಸ್ಸಿಗೆ ಕಳುಹಿಸುವ ಯೋಜನೆಯಾಗಿತ್ತು ಎಂಬುದನ್ನು ಇಲ್ಲಿ ನಿರೂಪಿಸಿರುವರು.

೨. ಪೂತನಿಯಿಂದ ಪ್ರಾರಂಭಿಸಿ ಬಕಾಸುರನ ವರೆಗಿನ ಕಂಸನ ದೈತ್ಯಭೃತ್ಯರು ಅವನ ಪರಲೋಕಪ್ರಯಾಣಕ್ಕೆ ವಾಹನದಂತೆ ನಿಯುಕ್ತರಾದರು ಎಂಬ ಇಲ್ಲಿಯ ಕಲ್ಪನೆ ಅತ್ಯಂತ ರೋಚಕವಾದುದು. ಶಕಟಾಸುರನೇ ವಾಹನ, ಪೂತನಿ ಆ ಗಾಡಿ ಓಡಿಸುವ ಸಾರಥಿ, ಖರ

---

೧. ನ ಹಿ ಪಾಪಿನಾಂ ಹೃದಯೇ ಕೃಷ್ಣಃ ತಿಷ್ಠತೀತಿ ಭಾವಃ । -ವ್ಯಾ.
೨. ಸುರರೂಪಪ್ರಾಣಸ್ಯ ಕೃಷ್ಣೇನ ವಿಯೋಜಿತತ್ವಾದಿತಿ ಭಾವಃ । -ವ್ಯಾ.

ಮೊದಲಾದ ನಾಲ್ವರು ಆ ಗಾಡಿಯ ನಾಲ್ಕು ಎತ್ತುಗಳು; ತೃಣಾವರ್ತ ಈ ಅಸುರವೃಂದದ ಪ್ರಾಣಶಕ್ತಿ; ಬಕಾಸುರನು ಆ ಗಾಡಿಯ ಧ್ವಜ - ಹೀಗೆ ಕೃಷ್ಣನಿಂದ ಕಂಸನ ಪರಲೋಕದ ಪ್ರಯಾಣದ ವ್ಯವಸ್ಥೆ ಸುವ್ಯವಸ್ಥಿತವಾಗಿ ಮಾಡಲ್ಪಟ್ಟಿತು ಎಂದರ್ಥ. ಶ್ರೀಹರಿಯ ವಿರೋಧಿಗಳೆಲ್ಲ ಒಟ್ಟಾಗಿ ಅಂಧಂತಮಸ್ಸಿಗೆ ತೆರಳುವರು ಎಂಬುದು ಇಲ್ಲಿಯ ಒಟ್ಟು ಭಾವ.

### ಬಕಾಸುರನ ವಧೆ

ಪತತ್ರಿಣಂ ತಂ ಪರಿಗೃಹ್ಯ ದೋರ್ಭ್ಯಾಂ
ವಿಭಿದ್ಯ ತುಂಡಂ ವಿನಿಪಾತ್ಯ ಭೂಮೌ।
ಸ ಯಾತನಾಮೀನಭುಜಂ ವಿಧಾತುಂ
ನ್ಯಯೋಜಯನ್ನಾರಕವಾಪಿಕಾಸು ॥ ೩೫ ॥

ಶ್ರೀಕೃಷ್ಣನು ಆ ಪಕ್ಷಿರೂಪದ ಬಕಾಸುರನನ್ನು ಎರಡೂ ಕೈಗಳಿಂದ ಹಿಡಿದು, ಅವನ ಕೊಕ್ಕನ್ನು ಸೀಳಿ, ಭೂಮಿಯ ಮೇಲೆ ಬೀಳಿಸಿ, ನರಕಲೋಕದಲ್ಲಿನ ಬಾವಿಗಳಲ್ಲಿನ ಯಾತನೆ ಎಂಬ ಮೀನುಗಳನ್ನು ತಿನ್ನುವ ಕಾರ್ಯದಲ್ಲಿ ಅವನನ್ನು ತೊಡಗಿಸಿದ.

ವಿ: ೧. ಶ್ರೀಕೃಷ್ಣನು ಬಕಾಸುರನ ಕೊಕ್ಕನ್ನು ಇಬ್ಭಾಗವಾಗಿ ಸೀಳಿ ಕೊಂದುಹಾಕಿದ ಎಂದು ಅರ್ಥ.

೨. ಹಾಗೆ ಸತ್ತ ಬಕಾಸುರ ನರಕಕ್ಕೆ ತೆರಳಿದ ಎಂಬುದನ್ನು ಅಲ್ಲಿಯ ಬಾವಿಗಳಲ್ಲಿನ ಯಾತನೆ ಎಂಬ ಮೀನುಗಳನ್ನು ತಿನ್ನಲೆಂದು ಶ್ರೀಕೃಷ್ಣ ಕಳುಹಿಸಿದ ಎಂದು ತಿಳಿಸಿರುವರು.

೩. ಬಕಪಕ್ಷಿಗೆ ಮೀನುಗಳು ಪ್ರಿಯವಾದ ಆಹಾರ; ಅದರಿಂದಾಗಿ ನರಕದ ಯಾತನೆಗಳನ್ನು ಮೀನುಗಳು ಎಂದು ಕರೆದಿರುವರು.

೪. ನರಕವನ್ನು ನೀಡಿ ಶಿಕ್ಷಿಸುವವನೂ ಸಹ ಭಗವಂತನಾದ ಶ್ರೀಹರಿಯೇ ಎಂಬುದನ್ನೂ ಸಹ ಇಲ್ಲಿ ತಿಳಿಸಿರುವರು ; ಪತತ್ರಿ – ಪಕ್ಷಿ; ತುಂಡ – ಕೊಕ್ಕು ; ವಾಪಿಕಾ – ಬಾವಿ.

೫. ಭೀಮಸೇನನು ಬಕಾಸುರನನ್ನು ಇದೇ ರೀತಿಯಾಗಿ ಸೀಳಿಹಾಕಿಯೇ ಸಂಹರಿಸಿದ ಮಹಾಭಾರತದ ವಿವರವು, ಭೀಮನು ಶ್ರೀಕೃಷ್ಣನ ಸಾಕ್ಷಾತ್ ಪ್ರತಿಬಿಂಬ ಎಂಬುದಕ್ಕೆ ಗಮಕದಂತಿದೆ[೧].

### ವಸಂತಋತುವಿನ ವರ್ಣನೆ

ತತಃ ಸ ಪಶ್ಯನ್ ಪರಿತೋ ವಸಂತ-
ಶ್ರಿಯಂ ಮರುನ್ಮರ್ದಿತಘರ್ಮಬಿಂದುಃ।

---

೧. ಆಕ್ರಮ್ಯ ಪಾದಮಪಿ ಪಾದತಲೇನ ತಸ್ಯ ದೋರ್ಭ್ಯಾಂ ಪ್ರಗೃಹ್ಯ ಚ ಪರಂ ವಿದದಾರ ಭೀಮಃ।
ಮೃತ್ವಾ ಸ ಚೋರುತಮ ಏವ ಜಗಾಮ ಪಾಪೋ ವಿಷ್ಣುದ್ವಿಡೇವ ಹಿ ಶನೈರನಿವೃತ್ತಿ ಜೋಗ್ರಮ್ ॥
-ಮ.ಭಾ.ತಾ.ನಿ. (೧೯/೯೧)

ಚಚಾರ ಚಾಮೀಕರಚಾರುವಾಸಾಃ
ಪ್ರಸೂನಮೃದ್ವಂಘ್ರಿತಲೋಽಂಬುಜಾಕ್ಷಃ ॥ ೩೬ ॥

ಬಳಿಕ ಗಾಳಿಯಿಂದ ಮೈಮೇಲಿನ ಬೆವರ ಹನಿಗಳನ್ನು ಪರಿಹರಿಸಿಕೊಂಡ, ರಮ್ಯವಾದ ಪೀತಾಂಬರವನ್ನುಟ್ಟ, ಹೂವಿನಂತೆ ಕೋಮಲ ಅಂಗಾಲುಗಳ, ತಾವರೆಯಂತಹ ಕಣ್ಣುಗಳ ಆ ಶ್ರೀಕೃಷ್ಣನು ಸುತ್ತಲೂ ವಸಂತಋತುವಿನ ಕಾಂತಿಯನ್ನು ನೋಡುತ್ತಾ ಸಂಚರಿಸಿದ.

ವಿ. : ೧. ಇದರಲ್ಲಿ ಮಹಾಕಾವ್ಯಕ್ಕೆ ಅಗತ್ಯವಾದ ವಸಂತಋತುವಿನ ವರ್ಣನೆ ಬಂದಿದೆ.

೨. ಅಪ್ರಾಕೃತ ದೇಹನಾದ ಶ್ರೀಕೃಷ್ಣನಿಗೆ ಬೆವರು ಮೊದಲಾದವುಗಲ ಪ್ರಸಕ್ತಿ ಕೇವಲ ಲೋಕದೃಷ್ಟಿಯ ಪ್ರದರ್ಶನ ಮಾತ್ರ ಎಂದು ತಿಳಿಯಬೇಕು.

೩. ಘರ್ಮ – ಬೆವರು; ಚಾಮೀಕರ – ಚಿನ್ನ; ಅಂಘ್ರಿತಲ – ಅಂಗಾಲು.

ಮುಂದುವರೆದ ವಸಂತಋತುವಿನ ವರ್ಣನೆ

ಬರ್ಹಾಕ್ಷೀಂ ಪ್ರಸವಾನನಾಮಲಿಕುಲೋತ್ಫುಲ್ಲಾಲಕಾಂ ಪಲ್ಲವ-
ಪ್ರಾಂತಸ್ಕಂಧಭುಜಾಂ ಲತಾಮೃದುತನುಂ ರಕ್ತಾಂಬರಾರಂಜಿತಾಮ್ ।
ಮಾದ್ಯತ್ಕೋಕಿಲಸುಸ್ವನಾಂ ಶುಕವಚಶ್ಚಾಟುಂ ಪಲಾಶಾಧರಾಂ
ಶಕ್ತೋಽಭೂದ್ವನದೇವತಾಮೃತುಮತೀಮಪ್ಯುಜ್ಝಿತುಂ ನೋ ಹರಿಃ ॥ ೩೭ ॥

ನವಿಲುಗರಿಗಳು ಎಂಬ ಕಣ್ಣುಗಳು, ಪುಷ್ಪಗಳೆಂಬ ಮುಖ, ದುಂಬಿಯ ಗುಂಪುಗಳಂತಹ ಮನೋಹರವಾದ ಮುಂಗುರುಳುಗಳು, ಎಸಳುಗಳಂತಹ ಕೆಂಪಾದ ಅಂಗೈಗಳಿಂದ ಕೂಡಿದ ಕಾಂಡದಂತಹ ತೋಳುಗಳು, ಬಳ್ಳಿಯಂತಹ ಕೋಮಲದೇಹ, ಕೆಂಪಾದ ಆಕಾಶವೆಂಬ ಉಡುಪಿನ ಶೋಭೆ, ಮದಿಸಿದ ಕೋಗಿಲೆಗಳೆಂಬ ಮಧುರ ಧ್ವನಿ, ಗಿಳಿಗಳ ಮಾತಿನಂತಹ ಮಂಜುಳವಾಣಿ, ಪಲಾಶಪುಷ್ಪಗಳಂತಹ ತುಟಿಗಳು – ಇಂತಹ ಆ ವನದೇವತೆಯನ್ನು ಅವಳು [1]ಋತುಮತಿಯಾಗಿದ್ದರೂ ಸಹ ತೊರೆಯಲು ಶ್ರೀಕೃಷ್ಣ ಶಕ್ತನಾಗಲಿಲ್ಲ.

ವಿ. : ೧. ಇದರಲ್ಲಿ ವಸಂತಋತುವಿನ ವರ್ಣನೆ ಮುಂದುವರೆದಿದೆ ; ಬರ್ಹ – ನವಿಲುಗರಿ.

೨. ಇಲ್ಲಿ ವನವೇ ದೇವತಾಸ್ತ್ರೀ, ಅಲ್ಲಿನ ನವಿಲುಗರಿಗಳೇ ಅವಳ ಕಣ್ಣುಗಳು, ಹೂವುಗಳೇ ಮುಖ, ಭ್ರಮರಗಳ ಸಾಲುಗಳೇ ಮುಂಗುರುಳುಗಳು, ಎಸಳುಗಳಂತಹ ಕೆಂಪಾದ ಅಂಗೈಗಳಿಂದ ಕೂಡಿದ ಕಾಂಡದಂತಹ ತೋಳುಗಳು, ಬಳ್ಳಿಗಳೇ ಮೃದುವಾದ ದೇಹ, [2]ಕೆಂಬಣ್ಣದ ಆಕಾಶವೇ ಉಡುಪು,

೧. ಋತುಮತೀಮಪಿ ವಸಂತರ್ತುಮತೀಮಪಿ ರಜಸ್ವಲಾಮಪೀತಿ ಧ್ವನಿಃ। -ವ್ಯಾ.

೨. "ರಕ್ತಂ ವಶ್ಯಕರಂ ಭವೇತ್" ಇತಿ ವಚನಾತ್ ವಶೀಕರಣೋಚಿತರಕ್ತವಸ್ತ್ರಾಲಂಕೃತಾಂ ಸಂಗೀತಚಾಟೂಕ್ತಿಚತುರಾಂ ದೃಗಂತಾದ್ಯಂಗಸೌಂದರ್ಯೋಪೇತಾಂ ವನಿತಾಂ ರಸಿಕಪುರುಷಃ ರಜಸ್ವಲಾಮಪಿ ನ ತ್ಯಜತೀತಿ ಧ್ವನಿತೋಽರ್ಥಃ।-ವ್ಯಾ.

ಕೂಗುವ ಕೋಗಿಲೆಗಳೇ ಧ್ವನಿ, ಗಿಳಿಯ ಧ್ವನಿಗಳೇ ಮಾತುಗಳು, ಪಲಾಶಪುಷ್ಪಗಳೇ ತುಟಿಗಳು ಎಂದು ವರ್ಣಿಸುವ ಮೂಲಕ ಅದಕ್ಕೆ ಪುರುಷನನ್ನು [೧]ವಶಮಾಡಿಕೊಳ್ಳುವ ಸಾಮರ್ಥ್ಯವನ್ನು ಸೂಚಿಸಿರುವರು; ಅನುಗುಣವಾದ ಅವಯವಗಳ ಕಲ್ಪನೆಯನ್ನು ನೀಡಿರು- ವರು; ಋತುಮತೀ - ರಜಸ್ವಲೆ.

೩. ಋತುಮತಿ [೩]ಸ್ತ್ರೀ ರಮಣವು [೨]ನಿಷಿದ್ಧ ಎಂಬ ಪ್ರಮೇಯವೂ ಇಲ್ಲಿ 'ಅಪಿ'ಪದದಿಂದ ನಿರೂಪಿತವಾಗಿದೆ; ಸ್ವನ - ಧ್ವನಿ; ಚಾಟು - ಪ್ರಿಯವಚನ; ಅಲಿ - ದುಂಬಿ; ಪ್ರಸವ - ಪುಷ್ಪ.

**ಶ್ರೀಕೃಷ್ಣನನ್ನು ಅನುಸರಿಸಿ ನಡೆದ ವನಲಕ್ಷ್ಮಿ**

**ಸಜಲಶೀಕರದಕ್ಷಿಣವಾಯುನಾ**
**ಕುಸುಮಸಂಚಯಕಂಪನಚಂಚುನಾ ।**
**ವ್ಯಜನಪಾಣಿತಲೇವ ತಮನ್ವಗಾ-**
**ದ್ವನರಮಾ ನರಮಾನಸಮಂಡನಮ್ [೪] ॥ ೩೮ ॥**

ಪುಷ್ಪರಾಶಿಗಳ ಮೇಲಿನ ಓಲಾಟದಿಂದ ರಮಣೀಯವಾದ, ನೀರಹನಿಯಿಂದ ಕೂಡಿ ತಂಪಾದ ಮಲಯಮಾರುತದಿಂದಾಗಿ, ಕೈಯಲ್ಲಿ ವ್ಯಜನಹಿಡಿದಂತಿದ್ದ , ವನಲಕ್ಷ್ಮಿಯು ಮನುಷ್ಯರ ಹೃದಯಭೂಷಣನಾದ ಶ್ರೀಕೃಷ್ಣನನ್ನು ಅನುಸರಿಸಿ ನಡೆದಳು.

ವಿ. : ೧. [೫]ಶ್ರೀಕೃಷ್ಣನು ತೆರಳುತ್ತಿದ್ದಂತೆ ಅವನು ಸಂದರ್ಶಿಸಿದ ಪ್ರತಿಯೊಂದು ಸ್ಥಳದಲ್ಲಿಯೂ ಫಲಪುಷ್ಪಾದಿಗಳಿಂದ ತುಂಬಿ, ಆ ವೃಂದಾವನವು ಕಂಗೊಳಿಸತೊಡಗಿತು ಎಂಬುದನ್ನು ಶ್ರೀಕೃಷ್ಣನ ಹಿಂದೆ ವನಲಕ್ಷ್ಮಿಯೇ ತೆರಳಿದಳು ಎಂದು ಕಾವ್ಯಮಯವಾಗಿ ತಿಳಿಸಿರುವರು; ಶೀಕರ - ಹನಿ; ವ್ಯಜನ - ಬೀಸಣಿಕೆ; (ಚುಂಚು) ಚಂಚು -ಮನೋಹರ; ಮಂಡನ - ಭೂಷಣ.

೨. ಶ್ರೀಕೃಷ್ಣನ ಜೊತೆಗೆ ಸಾಕ್ಷಾತ್ ಮಹಾಲಕ್ಷ್ಮಿಯೇ ಇರುತ್ತಿರುವಾಗ ಆ ವನಲಕ್ಷ್ಮಿಯು ಹಾಗೆ ಅವನನ್ನು ಹಿಂಬಾಲಿಸಿ ನಡೆದದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ ಎಂಬ ಧ್ವನಿಯೂ ಇಲ್ಲಿದೆ .

೩. ಇವುಗಳಿಂದ [೬]ಮಾಂದ್ಯ ಹಾಗೂ ಪರಿಮಳಗಳು ಸಹ ಸೂಚಿತ.

---

೧. ಅನೇನ ಪುರುಷವಶೀಕರಣೌಚಿತ್ಯಂ ಸೂಚ್ಯತೇ। -ವ್ಯಾ.

೨. ನಿಷಿದ್ಧಕಾಲೇऽಪಿ ರಮಣಂ ಸ್ವಾಪರಿತ್ಯಾಗಿನಂ ಕುರ್ವಂತ್ಯಾಃ ಕಾಂತಾಯಾಃ ಲಾವಣ್ಯಾತಿಶಯಃ ಕಥಂ ಕಥನೀಯ ಇತಿ ಭಾವಃ। -ವ್ಯಾ.

೩. ನೋಪಗಚ್ಛೇತ್ ಪ್ರಮತ್ತೋऽಪಿ ಸ್ತ್ರಿಯಮಾರ್ತವದರ್ಶನೇ। - ಮನುಸ್ಮೃತಿ (೪/೪೦)

೪. ದ್ರುತವಿಲಂಬಿತವೃತ್ತಮ್। -ವ್ಯಾ.

೫. ಕೃಷ್ಣೇ ವನೇ ಯತ್ರ ಯತ್ರ ಸಂಚರತಿ ತತ್ರ ಫಲಪುಷ್ಪಾದಿವನಸೌರಭ್ಯಾದಿಗುಣಯುಕ್ತೋ ವಾಯುಸ್ತಿಷ್ಠತೀತಿ ಭಾವಃ -ವ್ಯಾ.

೬. ಅನೇನ ಮಾಂದ್ಯಂ ಸೌರಭ್ಯಂ ಚ ದ್ಯೋತ್ಯತೇ। -ವ್ಯಾ.

### ವಸಂತಕಾಲದ ಕೋಗಿಲೆಯ ಗಾನ

ಪರಿಲಸತ್ಸಹಕಾರನವಾಂಕುರೇ
ಪಿಕಗಣಃ ಶುಶುಭೇ ಶನಕೈರ್ಧ್ವನನ್ ।
ಸ್ಮರರಹಸ್ಯಮನೂನಿವ ಸಂಜಪ-
ನ್ನಖಿಲದರ್ಪಕದರ್ಪಕಸಾಯಕೇ ॥ ೩೯ ॥

ಸಕಲಕಾಮಿಗಳನ್ನು ಮದವೇರುವಂತೆ ಮಾಡುವ ಕಂದರ್ಪನ ಬಾಣವಾದ ಕಂಗೊಳಿಸುವ ಮಾವಿನ ಹೊಸಚಿಗುರಿನಲ್ಲಿ ಕಾಮನ ರಹಸ್ಯಮಂತ್ರಗಳನ್ನೆಂಬಂತೆ ಮೆಲ್ಲಗೆ ಧ್ವನಿಗೈಯ್ಯುತ್ತಿದ್ದ ಕೋಗಿಲೆಗಳ ಗುಂಪು ಕಂಗೊಳಿಸಿತು.

ವಿ. : ೧. ಆ ವಸಂತಕಾಲದಲ್ಲಿ ಚಿಗುರಿದ ಮಾವಿನಮರಗಳಲ್ಲಿ ಕೋಗಿಲೆಗಳು ಧ್ವನಿಗೈಯ್ಯುತ್ತಿದ್ದವು ಎಂದು ಭಾವ. ಆ ಕೋಗಿಲೆಯ ಧ್ವನಿಗಳನ್ನು [೧]ಕಾಮನ ರಹಸ್ಯಮಂತ್ರಗಳು ಎಂದು ಉತ್ಪ್ರೇಕ್ಷಿಸಿರುವರು ; ಧ್ವನನ್ - ಧ್ವನಿಗೈಯ್ಯುತ್ತ ; ಸಾಯಕ - ಬಾಣ ; ದರ್ಪಕ - ಕಂದರ್ಪ.

೨. ಚೂತವು ಕಾಮನ ಪಂಚಬಾಣಗಳಲ್ಲಿ ಒಂದಾಗಿದೆ.

೩. ಸಹಕಾರ-ಮಾವು ; ಸ್ಮರ-ಮನ್ಮಥ ; ಪಿಕ-ಕೋಗಿಲೆ ; ಮನು-ಮಂತ್ರ; ಶನಕೈಃ-ಮೆಲ್ಲನೆ.

### ದುಂಬಿಯ ಗಾನದ ಸಂದೇಶ

[೨]ಕುಸುಮಚುಂಬನಕೃನ್ಮಧುರಧ್ವನಿಃ
ಪ್ರಿಯಜನಾನಿತಿ [೩]ಶಿಕ್ಷತಿ ಷಟ್ಪದಃ[೪] ।
ಮೃದುಗಿರಾಽಬ್ಜಮುಖೀಸರಸಾಧರಂ[೫]
ಪಿಬತ ಮಾ ಬತ ಮಾನ ಇಹೋಚಿತಃ ॥ ೪೦ ॥

ಹೂಗಳಿಗೆ ಮುತ್ತಿಡುವ ಇನಿದನಿಯ ದುಂಬಿಯು, ಕಮಲಮುಖಿಯರಾದ ಪ್ರಿಯೆಯರ ಸರಸಾಧರವನ್ನು ಮೆಲುಮಾತಿನಿಂದ ಪಾನಮಾಡಿರಿ; ಈ ವಿಷಯದಲ್ಲಿ ಬಿಗುಮಾನ ಸಲ್ಲದು ಎಂಬ ಸಂದೇಶವನ್ನು ಪ್ರಿಯಜನರಿಗೆ ನೀಡುತ್ತಿದೆ; (ಷಟ್ಪದ-ಭ್ರಮರ ; ಅಬ್ಜ-ಕಮಲ).

---

೧. ತಸ್ಯ ಸಾಯಕೇ ಬಾಣೇ ಚೂತಸ್ಯ ಕಾಮಬಾಣತ್ವಾದಿತಿ ಭಾವಃ । -ವ್ಯಾ.
೨. ಅನೇನ ಕಮಲಸದೃಶಕಾಂತಾಮುಖಚುಂಬನಶಿಕ್ಷಾ ದರ್ಶಿತಾ । -ವ್ಯಾ.
೩.. ಅನೇನ ನಾಯಿಕಾಕೋಪಶಾಂತ್ಯೈ ಸಾಂತ್ವವಚನಂ ವಕ್ತವ್ಯಮಿತಿ ಶಿಕ್ಷಿತಮ್ । -ವ್ಯಾ.
೪. ಷಟ್‌ಪದ ಇತ್ಯನೇನ ಏತಾದೃಶಪ್ರಾರ್ಥನಾನಂಗೀಕಾರೇ ನಾಯಕಸ್ಯಾನ್ಯತ್ರ ಗಮನೇ ಶಿಕ್ಷಾ ಸ್ವಾಪರಾಧಶ್ಚಂ ದ್ಯೋತ್ಯತೇ । -ವ್ಯಾ.
೫. ಚೂತಾಂಕುರಾಸ್ವಾದಮಧುರಕಂಠಪಿಕಸ್ವರಶ್ರವಣೇ ಸುತರಾಂ ಕಾಮೋದ್ರೇಕೋ ಭವತಿ । -ವ್ಯಾ.

### ವಿರಹಿಗಳ ದೂತಿಯರಂತಾದ ದುಂಬಿಗಳು

ಮರುತಿ ವಾತಿ ಶುಚಾ ಪಥಿಕಾಂಗನಾ
ನಯನವಾರಿ ಯುಯೋಜ ಪಥಿ ಸ್ಪೃಶನ್ ।
ಅಮುಮವೈತು ಪತಿರ್ಮಮ ವೇದನಾ-
ಮಲಿಕುಲಾಲಿಕುಲಾಭ್ಯುದಿತಾಮಿತಿ ॥ ೪೧ ॥

ಗಾಳಿಯು ಬೀಸುತ್ತಿದ್ದಂತೆ, ಶೋಕದಿಂದ ಮಾರ್ಗದಲ್ಲಿ ಅದನ್ನು ಸ್ಪರ್ಶಿಸುತ್ತಾ [೧]ಪಯಣಿಗರ ಪತ್ನಿಯರು ಅದಕ್ಕೆ ತಮ್ಮ ಕಣ್ಣೀರನ್ನು ಸೋಕಿಸಿದರು; ದುಂಬಿಗಳ ಹಿಂಡು ಎಂಬ ಗೆಳತಿಯರ ವೃಂದದ ಮೂಲಕ ತಿಳಿಸಲ್ಪಡುವ ತಮ್ಮ ಈ ವೇದನೆಯನ್ನು ತಮ್ಮ ಪತಿಯು ತಿಳಿಯುವಂತಾಗಲಿ ಎಂಬ ಭಾವದಿಂದ ; (ಅಲಿ - ದುಂಬಿ, ಭ್ರಮರ).

### ಅಭಿನವಶಿವನ ಆವಿಷ್ಕಾರ

ಮಧುನಿಯುಕ್ತಭುಜಂಗಚಯಃ ಸ್ತನೇ
ರಹಸಿ ನೂತ್ನಶಿವಂ ರಚಯನ್ನಿವ ।
ನಖಪದೇಂದುಕಲಾಂ [೨]ವಸನಚ್ಯುತಿಂ
ವಿತನುತೇಽತನುತೇಜಸಿ ಯೋಷಿತಾಮ್ ॥ ೪೨ ॥

ವಸಂತಕಾಲದ ವಿಟರ ಗುಂಪು ಅಪಾರಕಾಂತಿಯ ತಮ್ಮ ಪ್ರಿಯೆಯರ ಸ್ತನದಲ್ಲಿ ಅಭಿನವ ಶಂಕರನನ್ನು ಸೃಷ್ಟಿಸುವುದೆಂಬಂತೆ ಅದರ ಮೇಲೆ ರಹಸ್ಯವಾಗಿ ಉಗುರಿನ ಗುರುತುಗಳ ರೂಪದ ಚಂದ್ರಕಲೆಯನ್ನು, ವಸ್ತ್ರಾಹಿತ್ಯರೂಪ ದಿಗಂಬರತ್ವವನ್ನು ಉಂಟುಮಾಡಿದರು.

ವಿ. : ೧. ಇದರಲ್ಲಿ ಪ್ರಿಯರ ಸ್ತನಗಳನ್ನು ಲಿಂಗ ಎಂಬುದಾಗಿಯೂ, ಅದರಲ್ಲಿ ವಿಟರಿಂದ ಮಾಡುವ ನಖಕ್ಷತವನ್ನು ಚಂದ್ರಕಾಂತಿ ಎಂಬುದಾಗಿಯೂ [೩]ವಸ್ತ್ರಾಹಿತ್ಯವನ್ನು ದಿಗಂಬರತ್ವ ಎಂಬುದಾಗಿಯೂ, ಲಂಪಟರನ್ನು ನಾಗಗಳ ಸಾಲು ಎಂಬುದಾಗಿಯೂ ನಿರೂಪಿಸಲಾಗಿದೆ.

೨. [೪]ಲಿಂಗಾಕಾರ, ತುದಿಯಲ್ಲಿ ಚಂದ್ರನ ಕಲೆ, ಮೈಯಲ್ಲಿ ದಿಗಂಬರತ್ವ, ಮೈಗೆ ಬಿಗಿದ ನಾಗಗಳು ಇದು ಶಿವನ ಚಿತ್ರ ಎಂಬ ಕಲ್ಪನೆಯ ಇಲ್ಲಿಯ ವರ್ಣನೆ ಔಚಿತ್ಯಪೂರ್ಣವೆನ್ನಿಸುವುದು.

---

೧. ಅನೇನ ಪಥಿಕಾಂಗನಾಯಾಃ ಮೋಹಾವಸ್ಥಾ ದರ್ಶಿತಾ । -ವ್ಯಾ.

೨. ಶಿವಸ್ಯಾಪಿ ಚಂದ್ರಮೌಲಿತ್ವಾನ್ ದಿಗಂಬರತ್ವಾದಿತಿ ಭಾವಃ । -ವ್ಯಾ.

೩. ಬಲವದ್ವಿರೋಧಸ್ಯ ಪ್ರಕಟತಯಾ ಕರ್ತುಮಶಕ್ಯತ್ವಾದಿತಿ ಭಾವಃ । -ವ್ಯಾ.

೪. ಶಿವನಿರ್ಮಾಣೇ ತದಾಭರಣತ್ವೇನ ತತ್ಪರಿಚಿತಭುಜಂಗಾನಾಂ ಸಾಮರ್ಥ್ಯಮಸ್ತೀತಿ ದ್ಯೋತನಾಯ ವಿಟಪದೇ ಭುಜಂಗಚಯ ಇತ್ಯುಕ್ತಮ್ । ಅನೇನ ರತ್ಯಾರಂಭಃ ಸೂಚ್ಯತೇ । -ವ್ಯಾ

೩. ಭುಜಂಗ – ವಿಟ; ಇಂದು – ಚಂದ್ರ; ಅತನು – ಬಹಳ.

೪. ಮುಂದಿನ ಶ್ಲೋಕದೊಂದಿಗೆ ಈ ಶ್ಲೋಕಕ್ಕೆ ಏಕಾನ್ವಯ.

### ಅಭಿನವಶಿವ ಎಂಬುದರ ಸಮರ್ಥನೆ

ಮೃಗಮದೇನ ಸಿತೇತರಕಂಠತಾಂ[೧]
ಕರಯುಗಾಂಬುಜವೇಷ್ಟಿತಮೂರ್ಧತಾಮ್ ।
ಹೃದಯಮಂದಿರತಾಂ ಸಮದೃಶ್ಯತಾಂ
ರುಚಿರತಾಂ [೨]ಚಿರತಾಂತಮುಖ್ಯೈಃ ಸ್ವಕೈಃ ॥ ೪೩ ॥

ಲೇಪಿಸಿದ [೩]ಕಸ್ತೂರಿಯಿಂದಾಗಿ ಕಂಠದಲ್ಲಿ ನೀಲಿಯಾಗಿರುವಿಕೆಯನ್ನು (ನೀಲಕಂಠ), [೪]ಕಮಲದಂತಹ ಎರಡು ಕೈಗಳ ಬಂಧನದಿಂದ ಒಪ್ಪುವ ಶಿರಸ್ಸನ್ನು, ತಮ್ಮ ಹೃದಯದಲ್ಲಿ ನೆಲೆಸಿರುವಿಕೆಯನ್ನು, ಕಾಣದಿರುವಿಕೆಯನ್ನು, ತಮ್ಮ ಬಹಳ ಬಳಲಿದ ಮುಖಗಳಿಂದಾಗಿ ರಮ್ಯತೆಯನ್ನು ಹೊಂದಿದವು.

ವಿ. : ೧. ಇಲ್ಲಿಯು ಸಹ ಆಗ ಉಂಟಾದ ಪರಶಿವನ ಹೋಲಿಕೆ ಮುಂದುವರೆದಿದೆ.

೨. [೫]ಹೀಗೆ ಮತ್ತೊಬ್ಬ ಶಂಕರನ ಜನನದಿಂದಾಗಿ ಕಾಮ ಮರುಹುಟ್ಟು ಪಡೆದವನಾಗಿ ವಸಂತಕಾಲದಲ್ಲಿ, ಕಾಮೋದ್ದೀಪಕವಾದ ವಾತಾವರಣ ಮೂಡಿತು ಎಂದರ್ಥ; ರುಚಿರ – ಮನೋಹರ; ಮೃಗಮದ – ಕಸ್ತೂರಿ.

### ಮದನಮಾರುತದ ವರ್ಣನೆ

[೬]ಮದನವಹ್ನಿಸಖಃ ಪ್ರಿಯಶೀತಲಃ
ಕುಸುಮಗಂಧವಹಃ ಕಿಲ ಸೇವ್ಯತೇ ।
ಮರುದುಪಾರತಮನ್ಮಥಸಂಗರೈಃ[೭]
ಸ ಪರಿತಃ ಪರಿತಪ್ತಮುಖ್ಯೈರ್ನರೈಃ ॥ ೪೪ ॥

---

೧. ಶಿವಸ್ಯಾಪಿ ನೀಲಕಂಠತ್ವಾದರ್ಧಕಾರ್ಪಿತಾಂಬುಜಮಸ್ತಕತ್ವಾದಿತಿ ಭಾವಃ । –ವ್ಯಾ.

೨. ರತಾವಸಾನೇ ಶ್ರಾಂತಿಪರಿಹಾರಾಯ ಕುಚೋಪರಿ ಶಿರಃ ಕೃತ್ವಾ ನಿದ್ರಾಂ ಚಕ್ರ ಇತಿ ಭಾವಃ । –ವ್ಯಾ.

೩. ಅನೇನ ಕಸ್ತೂರ್ಯಾದಿಪರಿಮಲದ್ರವ್ಯೇಣ ಕುಚಾಲಂಕರಣಂ ಕುಚಗ್ರಹಣಲಕ್ಷಣಪ್ರಥಮಾ ರತಿಃ ಸೂಚ್ಯತೇ । –ವ್ಯಾ.

೪. ಅನೇನ ಗಾಢಾಲಿಂಗನಲಕ್ಷಣಾ ಮಧ್ಯಾ ರತಿಃ ಸೂಚ್ಯತೇ । –ವ್ಯಾ.

೫. ಶಿವಸ್ಯಾಪಿ ಸ್ಮರಜ್ಞನಹೃನ್ನಿಲಯತ್ವಾದಯೋಗ್ಯಜನಾದೃಶ್ಯತ್ವಾದ್ಭುಜಂಗಮುಖ್ಯೈರ್ಭೂಷಿತತ್ವಾಚ್ಚೇತಿ ಭಾವಃ । –ವ್ಯಾ.

೬. ಮದನವಹ್ನಿಸಖ ಇತ್ಯನೇನ ಕುಸುಮಗಂಧವಹ ಇತ್ಯನೇನ ಚ ವಾಯುಗುಣಾತಿಶಯೇನ ಸಮಾಪಿತರತೀನಾಮಪಿ ರಿರಂಸಾ ಜಾಯತೇ ಇತಿ ದ್ಯೋತ್ಯತೇ । –ವ್ಯಾ.

೭. ಮನ್ಮಥಸಂಗರಃ ಕಾಮಯುದ್ಧಂ ಯೇಷಾಂ ತೇ ನಿವೃತ್ತಸುರತಾ ಇತ್ಯರ್ಥಃ । –ವ್ಯಾ.

ಮನ್ಮಥನೆಂಬ ಅಗ್ನಿಗೆ ಸಖನಾದ, ಹಿತವೂ ತಂಪೂ ಆದ, ಹೂಗಳ ಪರಿಮಳವನ್ನು ಹೊತ್ತು ತರುತ್ತಿದ್ದ ಮಂದಮಾರುತವನ್ನು ರತಿಯುದ್ಧವನ್ನು ಪೂರೈಸಿದ ಬಸವಳಿದ ಮುಖದ ಜನರು ಎಲ್ಲೆಡೆಗಳಲ್ಲೂ ಸೇವಿಸುತ್ತಿದ್ದರು; (ಸಂಗರ - ಯುದ್ಧ).

### ಕಾಮನ ಮರುಸೃಷ್ಟಿಗೆ ಅನುಕೂಲಿಸಿದ ವಾತಾವರಣ

ದಾಕ್ಷಿಣ್ಯಂ ಪ್ರಕಟೀಕರೋತಿ ಮರುತಾ ರಾಗಂ ಪ್ರವಾಲೈಃ ಪಿಕೈ-
ರ್ಮಾಧುರ್ಯಂ ಪ್ರಿಯಭಾಷಣಂ ಶುಕಚಯೈರ್ಗೀತಾನಿ ಭೃಂಗೈರ್ಮಧುಃ।
ಸ್ನಾನಂ ಸನ್ಮಧುನಾಽರ್ಚನಂ ಚ ಕುಸುಮೈಶ್ಛತ್ರಂ ತರುಚ್ಛಾಯಯಾ
ಸ್ವಾಧೀಶಂ ಜನಯಿಷ್ಯತೋಽಸ್ಯ ಹೃದಯಂ ವ್ಯಗ್ರಂ ವಿಧಾಸ್ಯನ್ನಿವ ॥ ೪೫ ॥

ಈ ವಸಂತವು ತನ್ನ ಒಡೆಯನಾದ ಕಾಮನಿಗೆ ಮತ್ತೊಮ್ಮೆ ಜನ್ಮನೀಡುವ ಕಾರ್ಯದಲ್ಲಿ ಶ್ರೀಕೃಷ್ಣನನ್ನು ಅಣಿಗೊಳಿಸಲೆಂಬಂತೆ ತನ್ನ ಗಾಳಿಯಿಂದ ಸರಳತೆಯನ್ನು, ಚಿಗುರುಗಳಿಂದ ಅನುರಾಗವನ್ನು ಕೋಗಿಲೆಗಳಿಂದ ಮಧುರತೆಯನ್ನು ಗಿಳಿಹಿಂಡುಗಳಿಂದ ಪ್ರಿಯವಚನಗಳನ್ನು ದುಂಬಿಗಳಿಂದ ಗಾಯನವನ್ನು ಉತ್ತಮ ಜೇನಿನಿಂದ ಅಭಿಷೇಕವನ್ನು, ಹೂವುಗಳಿಂದ ಅರ್ಚನೆಯನ್ನು, ಮರಗಳ ನೆರಳಿನ ಮೂಲಕ ಛತ್ರವನ್ನು ಪ್ರಕಟಪಡಿಸಿತು.

ವಿ. : ೧. [೧]ಶಿವನಿಂದ ಬೂದಿಯಾದ ಕಾಮನು ಮಹಾವಿಷ್ಣುವಿನ ಮನಸ್ಸಿನಿಂದ ಜನಿಸಿದನು. ಶ್ರೀಕೃಷ್ಣನಂತೂ ಕಾಮಜನಕನಾದ ಶ್ರೀಹರಿ; ಅವನಿಂದ ಮತ್ತೊಮ್ಮೆ ಕಾಮನ ಮರುಜನ್ಮವನ್ನು ಅಣಿಗೊಳಿಸಲು ಬಯಸಿಯೋ ಎಂಬಂತೆ ವಸಂತಕಾಲವು ಅವನನ್ನು ಬಗೆಬಗೆಯಾಗಿ ಉಪಚರಿಸಿತು ಎಂದರ್ಥ.

೨. [೨]ಉಪಚಾರವು ದಕ್ಷಿಣಾಸಮರ್ಪಣೆ, ಅನುರಾಗ, ಮಧುರತೆ, ಪ್ರಿಯವಚನ, ಸಂಗೀತ, ಅಭಿಷೇಕ, ಪುಷ್ಪಾರ್ಚನೆ, ಮತ್ತು ಸಮರ್ಪಣೆ ಎಂಬುದಾಗಿ ಅನೇಕ ಬಗೆಯದು ; ಅವನ್ನೆಲ್ಲ ವಸಂತವು ಶ್ರೀಕೃಷ್ಣನಿಗೆ ಸಲ್ಲಿಸಿದ ವಿವರ ಇಲ್ಲಿ ನಿರೂಪಿತವಾಗಿದೆ.

೩. [೩]ಆಗ ಬೀಸಿದ ಗಾಳಿಯೇ ದಕ್ಷಿಣೆ, ಹೂವಿನ ಪರಾಗವೇ ಅನುರಾಗ, ಕೋಗಿಲೆಗಳ ಗಾನವೇ ಮಧುರತೆ, ಗಿಳಿಗಳ ವಚನವೇ ಪ್ರಿಯಭಾಷಣ, ದುಂಬಿಗಳ ಝೇಂಕಾರವೇ ಸಂಗೀತ, ಜೇನೇ ಅಭಿಷೇಕ, ಪುಷ್ಪಗಳೇ ಅರ್ಚನೆ, ಮರಗಳ ನೆರಳೇ ಛತ್ರ ಎಂಬ ಇಲ್ಲಿಯ ನಿರೂಪಣೆಯು ಶಾಸ್ತ್ರಗಳು ವಿಧಿಸಿರುವ ವ್ಯಾಪ್ತೋಪಾಸನೆಯ ಪರಿಕಲ್ಪನೆಗೆ ನಿದರ್ಶನವಾಗಿದೆ.

---

೧. ಅನೇನಾನುಸರಣಪಕ್ಷೇ ಸರಲತ್ವಂ ವ್ಯಜ್ಯತೇ। -ವ್ಯಾ.

೨. ಅತಃ ಛತ್ರಪಾದುಕಾದಿಧಾರಣಮಪಿ ಕುರ್ವಂತೀತಿ ಭಾವಃ। -ವ್ಯಾ.

೩. ಅನೇನ ಚಿತ್ತವ್ಯಗ್ರೀಕರಣಾಯೋದ್ದೀಪನವಿಭಾವಾಃ ವಸಂತಕಾಲಸ್ವಭಾವಾನುಸಾರತೋ ನೀತಯಶ್ಚ ದರ್ಶಿತಾಃ। -ವ್ಯಾ.

ವಸಂತಕಾಲದಲ್ಲಿ ಕಾಮಿಗಳ ಪರಿಸ್ಥಿತಿ

[೧]ವಸಂತಕಾಲೇ ವನಿತಾಸಹಾಯಂ[೨]
ಲಷಂತಿ ಮರ್ತ್ಯಾ ಇತಿ ಕಿಂ ವಿಚಿತ್ರಮ್ ।
ಯತಃ [೩]ಸರಾಗಾಸ್ತರವೋಽಪಿ ತನ್ವೀ-
ರ್ಲತಾ ನ ವಾತಾಚಲಿತಾಸ್ತ್ಯಜಂತಿ ॥ ೪೬ ॥

ಮರಗಳು ಸಹ ಅನುರಾಗದಿಂದ ಕೂಡಿ ಗಾಳಿಗೆ ಬಳುಕುವ ಬಳ್ಳಿಗಳನ್ನು ತೊರೆಯಲಾರವು ಎಂಬುದರಿಂದ ವಸಂತಕಾಲದಲ್ಲಿ ಮಾನವರು ಸ್ತ್ರೀಯರ ಒಡನಾಟವನ್ನು ಬಯಸುವರು ಎಂಬಲ್ಲಿ ಅಚ್ಚರಿಯೇನಿದೆ ?

ವಿ. : ತನ್ವೀಃ -ತೆಳುವಾದ; ಲಷಂತಿ-ಬಯಸುವರು.

ವಸಂತನನ್ನು ಮೀರಿಸಿದ ಶ್ರೀಕೃಷ್ಣ

ಅಧರಪಾಣಿಪದೂರ್ಜಿತಪಲ್ಲವೋ
ಮಧುರವೇಣುರವಃ ಕಲಭಾಷಣಃ ।
ವದನಗಂಧವಹಶ್ವಸನೋಽಜಯತ್
ಸಕುಸುಮಃ ಕುಸುಮಾಕರಮಚ್ಯುತಃ ॥ ೪೭ ॥

ಅರಳಿದ ಚಿಗುರುಗಳಂತಹ ಕೋಮಲವಾದ ತುಟಿಗಳು, ಕೈಗಳು ಹಾಗೂ ಪಾದಗಳು, ಮಧುರವಾದ ಕೊಳಲಿನ ನಿನಾದ, ಅವ್ಯಕ್ತ ಮಧುರವಾದ ವಾಣಿ, ಬಾಯಿಂದ ಹೊರ-ಹೊರಡುವ ಸುಗಂಧಭರಿತವಾದ ಗಾಳಿ, ಸುತ್ತಲೂ ಹೂಗಳು, ಇವುಗಳಿಂದಾಗಿ ಅಚ್ಯುತ-ನಾದ ಶ್ರೀಕೃಷ್ಣನು ವಸಂತಋತುವನ್ನು ಮೀರಿಸಿದನು.

ವಿ. : ೧. ವಸಂತ ಋತುವಿನಲ್ಲಿ ಚಿಗುರುಗಳು ಕಾಣಿಸಿಕೊಳ್ಳುವವು; ಕೋಗಿಲೆಗಳು ಹಾಡುವವು, ಗಿಳಿ ಮೊದಲಾದ ಪಕ್ಷಿಗಳು ಉಲಿಯುವವು; ಹಿತವಾದ ಗಾಳಿ ಬೀಸುವುದು; ಆದರೆ ಶ್ರೀಕೃಷ್ಣನಿರುವಲ್ಲಿ ಇವೆಲ್ಲ ಸದಾ ಇನ್ನೂ ವಿಶೇಷವಾಗಿಯೇ ಇರುವುದರಿಂದ ಅವನು ವಸಂತನನ್ನು ಮೀರಿಸಿದ ಎಂದು ಭಾವ.

೨. [೪]ಅಚ್ಯುತ ಎಂಬ ಪದದಿಂದ ಶ್ರೀಕೃಷ್ಣನದು ಸದಾ ಇರುವ ಅಚ್ಚಳಿಯದ ಹಿರಿಮೆ; ವಸಂತಋತುವಿನದು ಕಾಲಕ್ಕೆ ಅನುಗುಣವಾದ ಸೀಮಿತವಾದ ಹಿರಿಮೆ ಎಂಬ ತತ್ತ್ವವೂ ಸೂಚಿತ.

---

೧. ವಸಂತಕಾಲೇ ಕಿಸಲಯರಾಗಯುಕ್ತಾಃ ತರವೋ ಲತಾಮಾಶ್ಲಿಷ್ಯ ಶೋಭಂತೇ ಇತಿ ಭಾವಃ। -ವ್ಯಾ.

೨. ಅನೇನಾಂಗೀಕಾರೇ ವೈಮುಖ್ಯಂ ಧ್ವನ್ಯತೇ। -ವ್ಯಾ.

೩. ಅನುರಾಗಸಹಿತಾ ಇತಿ ಧ್ವನಿಃ। -ವ್ಯಾ.

೪. ಅಚ್ಯುತ ಇತ್ಯನೇನ ಋತೋರ್ಮಾಸದ್ವಯಪರ್ಯಂತಮೇತಾದೃಶತ್ವಾತ್ ಕೃಷ್ಣಸ್ಯ ಚ್ಯುತಿರಹಿತತ್ವೇನ ಸರ್ವದೈತಾ-ದೃಶತ್ವಾತ್ ತಜ್ಜಯೋ ಯುಕ್ತ ಇತಿ ದ್ಯೋತ್ಯತೇ। -ವ್ಯಾ.

೩. ಊರ್ಜಿತ - ಸನ್ನದ್ಧ; ಕುಸುಮಾಕರ - ವಸಂತಋತು; ಕಲಭಾಷಣ - ಅವ್ಯಕ್ತಮಧುರ ವಾಣಿ; ಶ್ವಸನ - ವಾಯು.

### ಕಾಲಿಯಮರ್ದನಕ್ಕೆ ಮುನ್ಸೂಚನೆ

ವಿತತಪಲ್ಲವಫುಲ್ಲವನೇ ಕ್ವಚಿತ್
ತರುತಟೇ ವಸತೋಽಸ್ಯ ಪದಾಂಬುಜಮ್ ।
ಉಪಚಚಾರ ವರಾನುಗಮಂಡಲೀ
ಭುಜಗತೋ ಜಗತೋಽಭಯಸಿದ್ಧಯೇ ॥ ೪೮ ॥

ಹರಡಿದ ಪಲ್ಲವಗಳಿಂದ ಅರಳಿದ ಆ ಕಾಡಿನಲ್ಲಿ ಒಂದೆಡೆ ವೃಕ್ಷದ ಬುಡವೊಂದರಲ್ಲಿ ಕುಳಿತ ಶ್ರೀಕೃಷ್ಣನ ಪಾದಕಮಲವನ್ನು ಅವನ ಶ್ರೇಷ್ಠವಾದ ಭೃತ್ಯವೃಂದವು ಕಾಲಿಯ ಸರ್ಪದಿಂದ ಜಗತ್ತಿಗೆ ಅಭಯ ನೀಡಿಸುವ ಉದ್ದೇಶದಿಂದ ಉಪಚರಿಸಿತು.

ವಿ. : ೧. ಒಂದೆಡೆ ಮರದ ಬುಡದಲ್ಲಿ ಕುಳಿತ ಶ್ರೀಕೃಷ್ಣನ ಪಾದಕಮಲಗಳನ್ನು ಗೋಪ-ಸಮುದಾಯವು ಭಕ್ತಿಯಿಂದ ಪೂಜಿಸಿತು[೧] ಎಂದರ್ಥ; ವಿತತ - ಹರಡಿದ; ಫುಲ್ಲ - ಅರಳಿದ.

೨. ಮುಂದೆ ಈ ಶ್ರೀಕೃಷ್ಣನ [೨]ಪಾದವು ಕಾಲಿಯಮಥನವನ್ನು ಮಾಡಿ ಲೋಕಕ್ಕೆ ಅಭಯ ನೀಡುವುದು ಎಂಬ ಸೂಚನೆ ಇಲ್ಲಿದೆ; ಪಲ್ಲವ - ಚಿಗುರು.

### ಕಾಲಿಯನ ಮೇಲಿನ ತಾಂಡವಕ್ಕೆ ಪೂರ್ವರಂಗ

ಫಣಿಫಣಾಂಕಣನರ್ತನಕೌಶಲಾ-
ಭ್ಯಸನಧೀರಿವ ಸರ್ವವಿದಾಂವರಃ ।
ಸ ಶಿಖಿತಾಂಡವಮನ್ವಕರೋತ್ ಕ್ವಚಿ-
ದ್ಧೃತಶಿಖಂಡಶಿಖಂಡಸುಮಂಡಿತಃ ॥ ೪೯ ॥

ಹಾವಿನ ಹೆಡೆಯ ಮೇಲಿನ ಅಂಗಣದಲ್ಲಿ ನರ್ತನಕೌಶಲವನ್ನು ಅಭ್ಯಾಸಮಾಡುವ ವಿಚಾರ-ದಿಂದೆಂಬಂತೆ, ಸರ್ವಜ್ಞಶಿರೋಮಣಿಯಾದ ಶ್ರೀಕೃಷ್ಣ ಒಂದೆಡೆ ನವಿಲುಗರಿಯ ಪುಚ್ಛದಿಂದ ಜುಟ್ಟನ್ನು ಅಲಂಕರಿಸಿಕೊಂಡು ನವಿಲಿನಂತೆ ನರ್ತನವನ್ನು ಅನುಕರಿಸಿದ.

---

೧. ''ಪಾದಸಂಹನನಂ ಚಕ್ರುಃ ಕಿಂಚಿತ್ ತಸ್ಯ ಮಹಾತ್ಮನಃ'' ಇತಿ ಭಾಗವತ(೧೦/೧೫/೧೭) ವಚನೋಕ್ತಸ್ಯ ನಿಮಿತ್ತಾಂತರೋತ್ಪ್ರೇಕ್ಷೇಯಮಿತ್ಯವಗಂತವ್ಯಮ್ । -ವ್ಯಾ.

೨. ಪದೇನ ಹಿ ಕಾಲಿಯಂ ನಿಯಮ್ಯ ವಿಷಭಯಂ ಪರಿಹರಿಷ್ಯತೀತಿ ಅತಃ ಪಾದೋಪಚಾರ ಏವ ಯುಕ್ತ ಇತಿ ಭಾವಃ। -ವ್ಯಾ.

ವಿ. : ೧. ಶ್ರೀಕೃಷ್ಣ ಒಂದೆಡೆ ನವಿಲಿನಂತೆ ಕುಣಿದ ಎಂಬ ವಿವರ ಶ್ರೀಮದ್ಭಾಗವತದಲ್ಲಿದೆ: ಅಭಿನೃತ್ಯತಿ ನೃತ್ಯಂತಂ ಬರ್ಹಿಣಂ ಹಾಸಯನ್ ಕ್ವಚಿತ್ ॥ ಅದನ್ನು ಮುಂದೆ ಕಾಳಿಯ ಸರ್ಪದ ಹೆಡೆಯಮೇಲೆ ಮಾಡುವ ನರ್ತನಕ್ಕೆ ಅಭ್ಯಾಸದ ಪ್ರಕ್ರಿಯೆಯಂತಿತ್ತು ಎಂದು [೧]ವರ್ಣಿಸಿರುವರು; ಶಿಖಿ – ನವಿಲು; ಶಿಖಂಡ – ನವಿಲುಗರಿ, ಜುಟ್ಟು.

೨. ಶ್ರೀಕೃಷ್ಣನು ಸರ್ವಜ್ಞನಾದ್ದರಿಂದ ಅವನಿಗೆ ಯಾವ ಅಭ್ಯಾಸದ ಅಗತ್ಯವೂ ಇಲ್ಲ ಎಂಬುದನ್ನು 'ಸರ್ವವಿದಾಂವರಃ' ಎಂಬ ಪದದಿಂದ ಸೂಚಿಸಿರುವರು.

೩. [೨]ನವಿಲು ಸರ್ಪಗಳನ್ನು ಮಣಿಸುವುದು ಲೋಕದಲ್ಲಿ ಕಂಡಿರುವ ಸತ್ಯವೇ ಆಗಿದೆ.

---

೧. ಕೃಷ್ಣಃ ಗೋಪ್ಯೈಃ ಸಹ ಕ್ವಚಿನ್ಮಯೂರವತ್ ನನರ್ತೇತಿ ಪೌರಾಣಿಕೀ (ಭಾಗ.೧೦/೧೫/೧೧) ಕಥಾ। -ವ್ಯಾ.

ಕ್ವಚಿದ್ವಾದಯತೋ ವೇಣೂನ್ ಕ್ಷೇಪಣೈಃ ಕ್ಷಿಪತಃ ಕ್ವಚಿತ್ ।
ಕ್ವಚಿತ್ ಪದ್ಯೈಃ ಕಿಂಕಿಣೀಭಿಃ ಕ್ವಚಿತ್ ಕೃತ್ರಿಮಗೋವೃಷೈಃ ॥
ವೃಷಾಯಮಾಣೌ ನರ್ದಂತೌ ಯುಯುಧಾತೇ ಪರಸ್ಪರಮ್ ।
ಅನುಕೃತ್ಯ ರುತೈರ್ಜಂತೂನ್ ಚೇರತುಃ ಪ್ರಾಕೃತೌ ಯಥಾ ॥ -ಭಾಗ.(೧೦/೧೨/೩೯,೪೦)

ಕ್ವಚಿದ್ ಗಾಯತಿ ಗಾಯತ್ಸು ಮದಾಂಧಾಲಿಷ್ವನುವ್ರತೈಃ।
ಉಪಗೀಯಮಾನಚರಿತಃ ಸಖಿಸಂಕರ್ಷಣಾನ್ವಿತಃ ॥
ಕ್ವಚಿಚ್ಚ ಕಲಹಂಸಾನಾಮನುಕೂಜತಿ ಕೂಜಿತಮ್ ।
ಅಭಿನೃತ್ಯತಿ ನೃತ್ಯಂತಂ ಬರ್ಹಿಣಂ ಹಾಸಯನ್ ಕ್ವಚಿತ್ ॥
ಮೇಘಗಂಭೀರಯಾ ವಾಚಾ ನಾಮಭಿರ್ದೂರಗಾನ್ ಪಶೂನ್ ।
ಕ್ವಚಿದಾಹ್ವಯತಿ ಪ್ರೀತ್ಯಾ ಗೋಗೋಪಾಲಮನೋಜ್ಞಯಾ ॥
ಚಕೋರಕ್ರೌಂಚಚಕ್ರಾಹ್ವಭಾರಾದ್ವಾಜಾಲಿಬರ್ಹಿಣಾಮ್ ।
ಅನುರೌತಿ ಸ್ಮ ಸತ್ವಾನಾಂ ಭೀತವದ್ ವ್ಯಾಘ್ರಸಿಂಹಯೋಃ ॥
ಕ್ವಚಿತ್ ಕ್ರೀಡಾಪರಿಶ್ರಾಂತಂ ಗೋಪೋತ್ಸಂಗೋಪಬರ್ಹಣಮ್ ।
ಸ್ವಯಂ ವಿಶ್ರಾಮಯತ್ಯಾರ್ಯಂ ಪಾದಸಂವಾಹನಾದಿಭಿಃ ॥
ನೃತ್ಯತೋ ಗಾಯತೋ ವಾಽಪಿ ವಲ್ಗತೋ ಯುಧ್ಯತೋ ಮಿಥಃ।
ಗೃಹೀತಹಸ್ತೌ ಗೋಪಾಲಾನ್ ಹಸಂತೌ ಪ್ರಶಶಂಸತುಃ ॥
ಕ್ವಚಿತ್ ಪಲ್ಲವತಲ್ಪೇಷು ನಿಯುದ್ಧಶ್ರಮಕರ್ಶಿತಃ।
ವೃಕ್ಷಮೂಲಾಶ್ರಯಃ ಶೇತೇ ಗೋಪೋತ್ಸಂಗೋಪಬರ್ಹಣಃ ॥
ಪಾದಸಂವಾಹನಂ ಚಕ್ರುಃ ಕೇಚಿತ್ ತಸ್ಯ ಮಹಾತ್ಮನಃ।
ಅಪರೇ ಹತಪಾಪ್ಮಾನೋ ವ್ಯಜನೈಃ ಸಮಬೀಜಯನ್ ॥
ಅನ್ಯೇ ತದನುರೂಪಾಣಿ ಮನೋಜ್ಞಾನಿ ಮಹಾತ್ಮನಃ।
ಗಾಯಂತಿ ಸ್ಮ ಮಹಾರಾಜ ಸ್ನೇಹಕ್ಲಿನ್ನಧಿಯಃ ಶನೈಃ ॥ -ಭಾಗ.(೧೦/೧೫/೯-೧೭)

೨. ಫಣಫಣಾಂಕಣನರ್ತನಾಭ್ಯಸನಂ ಫಣಿವಿರೋಧಿನೋ ಮಯೂರಾದೇವ ಕರ್ತವ್ಯಮಿತಿ ಭಾವಃ। -ವ್ಯಾ.

### ಕೃಷ್ಣನ ಮನೋಹರವಾದ ಕೂಗು

[೧]ಮುನಿಮನಃಸರಸೀರುಹಹಂಸರಾಟ್
ತದುಚಿತಸ್ವರಶಿಕ್ಷಣಧೀರಿವ ।
ಅನುನನಾದ ಸ ಹಂಸಕದಂಬಕ-
[೨]ಶ್ರುತಿಮನೋಽತಿಮನೋರಮಕೂಜಿತಮ್ ॥ ೫೦ ॥

ಮುನಿಗಳ ಮಾನಸಸರೋವರದ ರಾಜಹಂಸನಾದ ಶ್ರೀಕೃಷ್ಣ ಅವರಿಗೆ ಯೋಗ್ಯವಾದ ಸ್ವರವನ್ನು ತಿಳಿಸಿಕೊಡುವ ಬುದ್ಧಿಯಿಂದಲೋ ಎಂಬಂತೆ ಹಂಸವೃಂದದ ಕಿವಿ ಹಾಗೂ ಮನಸ್ಸುಗಳಿಗೆ ಅತ್ಯಂತ ಮನೋಹರವಾದ ಕೂಗನ್ನು ಅನುಕರಿಸಿದ.

ವಿ. : ಶ್ರೀಕೃಷ್ಣ ಮತ್ತೊಂದೆಡೆ ಹಂಸಪಕ್ಷಿಯಂತೆ ಕೂಗಿದ ಎಂಬ ಭಾಗವತದ ವಿವರಕ್ಕೆ ಇಲ್ಲಿ ಕಾವ್ಯಮಯವಾದ ವಿಶ್ಲೇಷಣೆ[೩] ಬಂದಿದೆ ; ಸರಸೀರುಹ - ಕಮಲ ; ಕೂಜಿತ - ಧ್ವನಿ.

### ಸೂರ್ಯಾಸ್ತದ ವರ್ಣನೆ

ಮಧುವಶೀಕೃತಚಿತ್ತ ಇವೋಷ್ಣಭಾಃ
ವರುಣಪಾಲಿತದಿಙ್ಮೃಗಲೋಚನಾಮ್ ।
ಸಮಧಿಗಮ್ಯ ದಿವಃ ಸ್ವಮುಪೀಪತ-
ದ್ದುರಿತವಾರಿತವಾಜಿಮನಾ ಇವ ॥ ೫೧ ॥

ಉಷ್ಣಕಿರಣನಾದ ಸೂರ್ಯನು ವಸಂತದಿಂದ ಮನಸ್ಸು ಸೆಳೆಯಲ್ಪಟ್ಟವನಂತೆ, ವರುಣ-ಪಾಲಿತವಾದ ದಿಗಂಗನೆಯನ್ನು ಸಮೀಪಿಸಿದ; ಪಾಪದಿಂದ ತಡೆಯಲ್ಪಟ್ಟ ಕುದುರೆಗಳ ಮನಸ್ಸಿನಿಂದ ತಡೆಯಲ್ಪಟ್ಟವನಂತೆ ಗಗನದಿಂದ ಕೆಳಕ್ಕುರುಳಿದ.

ವಿ. : ೧. ಸೂರ್ಯನು ಅಸ್ತಂಗತನಾದ ಎಂಬುದನ್ನು ಹೀಗೆ ವರ್ಣಿಸಿರುವರು.

೨. ಪಶ್ಚಿಮದಿಕ್ಕು ಒಬ್ಬ ಸ್ತ್ರೀ ಇದ್ದಂತೆ. ವಸಂತಋತುವಿನ ಪ್ರಭಾವದಿಂದಾಗಿ ಅವಳು ತನ್ನ ಪತ್ನಿಯಲ್ಲದಿದ್ದರೂ, ಅವನು ಅವಳತ್ತ ಆಕರ್ಷಿತನಾದ. ಆ ಪರಸ್ತ್ರೀಗಮನದ ಪಾಪದಿಂದಲೋ

---

೧. ಹಂಸಶ್ರೇಷ್ಠಃ ಮುನಿಹೃದಯಕಮಲವಾಸೀತ್ಯರ್ಥಃ। -ವ್ಯಾ.

೨. ಹಂಸಾನಾಮುಚಿತಃ ಯೋಗ್ಯಃ ಸ್ವರಃ ಹಂಸಜಾತೀಯಸ್ವರ ಇತ್ಯರ್ಥಃ। -ವ್ಯಾ.
ಹಂಸಪಕ್ಷಿವಚ್ಚುಕೂಜೇತ್ಯರ್ಥಃ। -ವ್ಯಾ.
ಹಂಸಜಾತ್ಯನುಸಾರಿಸ್ವರಾಭಾವೇ ಸ್ವಸ್ಯ ಹಂಸತ್ವಾಯೋಗಾದಿತಿ ಭಾವಃ ''ಕ್ವಚಿಚ್ಚ ಕಲಹಂಸಾನಾಮನುಕೂಜತಿ ಕೂಜಿತಮ್ । ಅಭಿನೃತ್ಯತಿ ನೃತ್ಯಂತಂ ಬರ್ಹಿಣಂ ಹಾಸಯನ್ ಕ್ವಚಿತ್'' ಇತಿ ಭಾಗವತೇ(೧೦/೧೫/೧೧)

೩.. ವಚನಕಥಿತಕಥಾದ್ವಯಮನೇನ ಶ್ಲೋಕದ್ವಯೇನ ಉತ್ಪ್ರೇಕ್ಷಿತಮಿತಿ ದ್ರಷ್ಟವ್ಯಮ್ । -ವ್ಯಾ.

ಎಂಬಂತೆ ಅವನ ಕುದುರೆಗಳು ಮುಗ್ಗರಿಸಿದವು. ಕೂಡಲೇ ಸೂರ್ಯ ಕೆಳಕ್ಕುರುಳಿಬಿಟ್ಟ ಎಂದರ್ಥ. ಮೃಗಲೋಚನಾ – ಹರಿಣಾಕ್ಷಿ; ಉಷ್ಣಭಾ – ಸೂರ್ಯ ; ವಾಜಿ – ಕುದುರೆ.

೩.. ಸೂರ್ಯ ಮುಳುಗಿದ ಎಂಬುದನ್ನು ಕೆಳಕ್ಕುರುಳಿದ ಎಂದು ತಿಳಿಸುತ್ತಾ ಪರಸ್ತ್ರೀಗಮನ ಎಂತಹ ತೇಜಸ್ವಿಗೂ ಅಧಃಪತನಕ್ಕೆ ಕಾರಣವಾಗುವ [೧] ಮಹಾಪಾತಕ ಎಂಬ ಸಂದೇಶವನ್ನು ಇಲ್ಲಿ ನೀಡಿರುವರು (ಮಹಾಭಾರತ -೧೩./೧೦೪/೨೧); ಮನುಸ್ಮೃತಿ - ೪/೧೩೪):

ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।
ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಮ್ ॥

## ಗೋಪಿಯರನ್ನು ಸಂತೋಷಪಡಿಸಿದ ಶ್ರೀಕೃಷ್ಣನ ವೇಣುಗಾನ

**ಮುದಿತಗೋನಿಕರೈಃ ಪರಿವಾರಿತಃ**
**ಸಖಿಜನೈಃ ಸಹ ವೇಣುಮುದೀರಯನ್ ।**
**ನಿಜಗೃಹಂ ಪ್ರವಿಶನ್ ಸ ನಿಶಾಮುಖೇ**
**ನರಮಣೀ ರಮಣೀಃ ಸಮಹರ್ಷಯತ್ ॥ ೫೨ ॥**

ಆನಂದ ತುಂಬಿದ ಗೋವುಗಳ ಹಿಂಡುಗಳೊಂದಿಗೆ ಕೂಡಿಕೊಂಡು, ಸ್ನೇಹಿತಜನರೊಂದಿಗೆ ಕೊಳಲನ್ನು ಊದುತ್ತಾ ಮುಸ್ಸಂಜೆಯ ವೇಳೆಗೆ ತನ್ನ ಮನೆಗೆ ಹಿಂದಿರುಗಿದ ಪುರುಷೋತ್ತಮನಾದ ಆ ಶ್ರೀಕೃಷ್ಣನು ಗೋಪಿಯರನ್ನು ಸಂತೋಷಪಡಿಸಿದ.

ವಿ. : ನರಮಣಿ – ಪುರುಷೋತ್ತಮ; ನಿಶಾಮುಖ – ಮುಸ್ಸಂಜೆ.

## ಚಂದ್ರನಂತೆ ಕಂಗೊಳಿಸಿದ ಶ್ರೀಕೃಷ್ಣ

**ಪ್ರತಿಗೃಹಂ ಪ್ರಮದಾಭಿರಿತಸ್ತತಃ**
**ಸಕುತುಕಾಭಿರಸೌ ಪರಿಸೇವಿತಃ ।**
**ಸ್ಮಿತಕಟಾಕ್ಷಮನೋರಮವಿಭ್ರಮಃ**
**ಸ್ಮರಜನೀ ರಜನೀಶ ಇವಾಬಭೌ ॥ ೫೩. ॥**

ಮನೆಮನೆಗಳಲ್ಲೂ ಕೌತುಕಭರಿತರಾದ ಗೋಪಿಯರಿಂದ ಎಲ್ಲೆಡೆ ಪರಿಸೇವಿತನಾದ, ಮಂದಹಾಸ ತುಂಬಿದ ಕುಡಿನೋಟದ ಮನೋಹರವಿಲಾಸದ ಕಾಮಜನಕನಾದ [೨] ಶ್ರೀಕೃಷ್ಣ ಚಂದ್ರನಂತೆ ಕಂಗೊಳಿಸಿದ.

---

೧. ಅನೇನ ಮದ್ಯಪಾನಾಪಾರವಶ್ಯಂ ವ್ಯಜ್ಯತೇ। –ವ್ಯಾ.
೨. ಆಹ್ಲಾದಕರತ್ವಾತ್ ರಾತ್ರಾವಪಿ ಪ್ರಕಾಶಮಾನತ್ವಾದಿತಿ ಭಾವಃ। –ವ್ಯಾ.

ವಿ. : ಸ್ಮಿತ - ಮಂದಹಾಸ; ರಜನೀಶ - ಚಂದ್ರ; ವಿಭ್ರಮ - ವಿಲಾಸ; ಸ್ಮರಜನಿ - ಮನ್ಮಥನ ತಂದೆ (ಶ್ರೀಕೃಷ್ಣ).

**ಸುಖಮಯವಾಗಿ ಕಳೆದ ರಾತ್ರಿಸಮಯ**

**ಯದುಪತಿಃ ಸ ನಿಜೈಃ ಸಹ ನಿರ್ಮಲಂ**
**ಸ್ವಗೃಹಮೇತ್ಯ ಶನೈರಲಸಾಂ ನಿಶಾಮ್ ।**
**ತನುರುಚಾ ಬಹುದೂರಪಲಾಯಿತಾಂ**
**ಮಹಿತಯಾ ಹಿತಯಾ ವ್ಯತನೋತ್ ಸತಾಮ್ ॥ ೫೪ ॥**

ಯದುಪತಿಯಾದ ಆ ಶ್ರೀಕೃಷ್ಣನು ತನ್ನವರೊಂದಿಗೆ ನಿರ್ಮಲವಾದ ತನ್ನ ಮನೆಯನ್ನು ಸೇರಿ ಮೆಲ್ಲನೆ ಸಾಗುತ್ತಿದ್ದ ಆ ಜಡವಾದ ರಾತ್ರಿಯನ್ನು ಸಜ್ಜನರಿಗೆ ಹಿತವಾದ ಪೂಜಿತವಾದ ದೇಹಕಾಂತಿಯಿಂದ ಬಹುದೂರಕ್ಕೆ ಪಲಾಯನಗೊಳ್ಳುವಂತೆ ಮಾಡಿದ.

ವಿ. : ೧. ಅಂದಿನ ರಾತ್ರಿ ಕಳೆದು ಬೆಳಗಾಯಿತು ಎಂದರ್ಥ. ಶ್ರೀಕೃಷ್ಣನ ಸನ್ನಿಧಾನದಿಂದಾಗಿ ಸುದೀರ್ಘವಾದ ಆ ರಾತ್ರಿಯು ಬಲುಬೇಗನೆ ಕಳೆಯಿತು ಎಂದು ಭಾವ.

೨. ಹಿತಕರವಾದಾಗ ಸಮಯವು ಬೇಗ ಕಳೆದಂತೆಯೂ, ದುಃಖಕರವಾದಾಗ ನಿಧಾನವಾಗಿ ಕಳೆಯುವಂತೆಯೂ ಭಾಸವಾಗುವುದು ಎಂಬ ಹಿನ್ನೆಲೆಯಲ್ಲಿ ಈ ವರ್ಣನೆ ಬಂದಿದೆ : **ಅಹಸ್ತು ಮಾಸಶಬ್ದೋಕ್ತಂ ಯತ್ರ ಚಿಂತಾಯುತಂ ವ್ರಜೇತ್ ।** -ಭಾ.ತಾ.(೧/೧೧/೧೩)

೩. [1]ರಾತ್ರಿಯು, ಪ್ರಾತಃಕಾಲದಲ್ಲಿ ಮೇರುಪರ್ವತದ ಹಿಂಭಾಗಕ್ಕೆ ಸಾಗುವುದರಿಂದ ಬಹುದೂರಕ್ಕೆ ಪಲಾಯಿತ ಎಂಬುದು ಅರ್ಥವತ್ತಾದ ಮಾತು.

**ಸೂರ್ಯೋದಯದ ವರ್ಣನೆ**

**ಸ್ವತನಯಾಂ ಸರಿತಂ ವಿಷವರ್ಜಿತಾಂ**
**ಕರುಣಯಾ ಹರಿರದ್ಯ ಕರಿಷ್ಯತಿ ।**
**ಇತಿ ಮುದೇವ ಗಿರಿಂ ರವಿರೀಕ್ಷಿತುಂ**
**ಪರವಶೋ ರವಶೋಭಿತಮಾರುಹತ್ ॥ ೫೫ ॥**

ಇಂದು ತನ್ನ ಮಗಳಾದ ಯಮುನಾನದಿಯನ್ನು ಕರುಣೆಯಿಂದ ಶ್ರೀಕೃಷ್ಣ ವಿಷರಹಿತಳನ್ನಾಗಿ ಮಾಡುವನು ಎಂದು ಆನಂದದಿಂದ ಪರವಶನಾದ ಸೂರ್ಯನು ಅದನ್ನು ಕಾಣಲೆಂಬಂತೆ ಪಕ್ಷಿಗಳ ಧ್ವನಿಯಿಂದ ಶೋಭಿತವಾಗಿದ್ದ [2]ಬೆಟ್ಟವನ್ನು ಏರಿದನು.

---

೧. ಪ್ರಾತರಂಧಕಾರಸ್ಯ ಮೇರುಪೃಷ್ಠಗಮನಾದಿತಿ ಭಾವಃ । -ವ್ಯಾ.
೨. ಯಥಾ ಲೋಕೇ ಯುದ್ಧಾದಿಕಂ ದ್ರಷ್ಟುಂ ಉಚ್ಚಸೌಧಾದಿಕಮಾರುಹಂತಿ ತದ್ವದಿತಿ ಭಾವಃ । -ವ್ಯಾ.

ವಿ. : ೧. ಅಂದು ಕಾಳಿಯ ಮಥನದ ಕಾರ್ಯ ನಡೆದು ತನ್ನ ಮಗಳಾದ ಯಮುನೆಯು ವಿಶೇಷ ಶೋಭೆ ಹೊಂದುವಳೆಂದು ಭಾವಿಸಿ, [೧]ಸೂರ್ಯನು ಸಂಭ್ರಮದಿಂದ ಉದಯಾಚಲದಲ್ಲಿ ಕಾಣಿಸಿಕೊಂಡ ಎಂದರ್ಥ.

೨. ಅಂದು ಸೂರ್ಯೋದಯವಾಯಿತು ಎಂಬುದು ಮುಖ್ಯಾರ್ಥ; ಅಂದು ನಡೆಯುವ ಕಾಲಿಯಮರ್ದನ ಪ್ರಸಂಗದ ಸೂಚನೆ ಇಲ್ಲಿದೆ ; ರವ - ಧ್ವನಿ.

**ಬಲರಾಮನನ್ನು ಬಿಟ್ಟು ತೆರಳಿದ ಶ್ರೀಕೃಷ್ಣ**

**ತದನು ಭೋಗಿಕುಲಾಗ್ರಗಮಗ್ರಜಂ**
**ಸ ಹಿ ವಿಸೃಜ್ಯ ತದನ್ವಯಸಂಭವಮ್ ।**
**[೨]ನಮಯಿತುಂ ಯಮುನಾಮಗಮದ್ವಿಭುಃ**
**ಸಭುಜಗಾಂ ಭುಜಗಾಂತಕವಾಹನಃ ॥ ೫೬ ॥**

ಆ ಬಳಿಕ ನಾಗಕುಲದ ಹಿರಿಯನೆನಿಸಿದ ಆದಿಶೇಷನ ಅವತಾರನಾದ ತನ್ನ ಅಣ್ಣ ಬಲರಾಮನನ್ನು ಬಿಟ್ಟು, ಗರುಡವಾಹನನಾದ ಪ್ರಭುವಾದ ಶ್ರೀಕೃಷ್ಣನು ಅವನ ವಂಶದಲ್ಲಿ ಜನಿಸಿದ ಕಾಳಿಯನನ್ನು ಬಗ್ಗುಬಡಿಯಲೆಂದು ಆ ಸರ್ಪದಿಂದ ಕೂಡಿದ್ದ ಯಮುನೆಯತ್ತ ತೆರಳಿದ.

ವಿ. : ೧. ಅಂದು ಬಲರಾಮನನ್ನು ಜೊತೆಗೆ ಕರೆದೊಯ್ಯದೇ ಶ್ರೀಕೃಷ್ಣನು ತಾನೊಬ್ಬನೇ ಗೋಕುಲದಿಂದ ಯಮುನಾನದಿಯತ್ತ ತೆರಳಿದ ಎಂದರ್ಥ.

೨. ಆದಿಶೇಷನ ಅವತಾರನಾದ [೩]ಬಲರಾಮನನ್ನು ಅವನ ವಂಶಜನಾದ ಕಾಳಿಯನ ದಮನವನ್ನು ಕಾಣದಿರಲೋ ಎಂಬಂತೆ ಶ್ರೀಕೃಷ್ಣ ಅಂದು ಅವನನ್ನು ಕರೆದೊಯ್ಯಲಿಲ್ಲ ಎಂಬ ಉತ್ಪ್ರೇಕ್ಷೆ ಇಲ್ಲಿ ಸೂಚಿತ.

೩.. ಶಸ್ತ್ರಚಿಕಿತ್ಸೆಯನ್ನು ನೋಡುವ ಅವಕಾಶವನ್ನು ಬಂಧುಜನರಿಗೆ ವೈದ್ಯರು ನೀಡದಿರುವ ಪ್ರಸಂಗಕ್ಕೆ ಇದು ಸೂಚನೆಯಂತಿದೆ.

೪. **ಭುಜಗಾಂತಕವಾಹನಃ** ಎಂಬ ಪದದಿಂದ ಶ್ರೀಕೃಷ್ಣನಿಗೆ ಕಾಳಿಯನ ಭಯ ಸರ್ವಾತ್ಮನಾ ಇಲ್ಲ ಎಂಬುದು ಸೂಚಿತ; **ಭುಜಗ** - ಸರ್ಪ; **ಭುಜಗಾಂತಕ** - ಗರುಡ; **ಭುಜಗಾಂತಕವಾಹನ** - ಗರುಡವಾಹನ.

---

೧. ಭೀಷೋದೇತಿ ಸೂರ್ಯಃ ಇತಿ ಶ್ರುತೇಃ (ತೈತ್ತಿರೀಯ. ಉ. ೨/೮) । -ವ್ಯಾ.
೨. ದಮಯಿತುಮಿತಿ ಪಾಠೇ । ಶಿಕ್ಷಯಿತುಮಿತ್ಯರ್ಥಃ । -ವ್ಯಾ.
೩.. ಬಲರಾಮಸ್ಯ ಶೇಷಾವತಾರತ್ವಾದಿತಿ ಭಾವಃ । -ವ್ಯಾ.

## ಮಡುವಿನಲ್ಲಿ ಧುಮುಕಿದ ಶ್ರೀಕೃಷ್ಣ

ಯದಿ ರಸಾತಲಮೇತಿ ತದ್ಯೈಮ್ಯಹಂ
ದಮಯಿತುಂ ತಮಿತೀವ ಸ ಪಾದಪಾತ್ ।
[೧]ಅಪತದಂಬುನಿ ವಿಸ್ಮಯಕಾರಕಃ
ಸವಯಸಾಂ ವಯಸಾಮಿವ ವಲ್ಲಭಃ ॥ ೫೭ ॥

ಅವನು ರಸಾತಳಕ್ಕೆ ತೆರಳಿದರೂ ನಾನು ಅವನನ್ನು ದಮನ ಮಾಡಲು ಅಲ್ಲಿಗೇ ತೆರಳುವೆ ಎಂದು ತಿಳಿಸಲೋ ಎಂಬಂತೆ ಗೆಳೆಯರಿಗೆ ವಿಸ್ಮಯ ಹುಟ್ಟಿಸುವ ಆ ಶ್ರೀಕೃಷ್ಣನು ಮರವನ್ನೇರಿ ಅಲ್ಲಿಂದ ಪಕ್ಷಿರಾಜನಾದ [೨]ಗರುಡನಂತೆ ಆ ಯಮುನೆಯ ಜಲದಲ್ಲಿ ಧುಮುಕಿದ.

ವಿ. : ೧. ಶ್ರೀಕೃಷ್ಣನು ಯಮುನೆಯಲ್ಲಿ ಧುಮುಕಿದ ರಭಸವು ಕಾಳಿಯನು ತಪ್ಪಿಸಿಕೊಳ್ಳಲೆಂದು ರಸಾತಳಕ್ಕೆ ತೆರಳಿದರೂ ಬಿಡುವಂತಿರಲಿಲ್ಲ ಎಂದು ಭಾವ.

೨. ಪಾದಪ – ಮರ ; ವಯಃ – ಪಕ್ಷಿ ; ವಯಸಾಂವಲ್ಲಭ – ಗರುಡ. ಪಕ್ಷಿಗಳ ಒಡೆಯ.

## ಕೃಷ್ಣ ಹಾರಿದ ರಭಸಕ್ಕೆ ಉಕ್ಕೇರಿದ ಯಮುನೆ

ಕೃಷ್ಣಾಲಿಂಗನಕಾತರೈಃ ಕರಸಮೈರೋಘೈರ್ನಿವೃತ್ತೈರಿವ
ಸ್ವಪ್ರಾಂತಸ್ಥಿತತತ್ಪದಾಂಕಮುರಸಾ ಧರ್ತುಂ ಧಿಯೇವಾರ್ಕಜಾ ।
ಸುಪ್ರೇಮಾಂಬುಧಿಮಿಶ್ರಣಾದಿವ [೩]ಜಗದ್ವಂದ್ಯಸ್ಯ ಪಾತಾದಿವ
ಸ್ನಿಗ್ಧಾ ತಂ ಮದನಾಕೃತಿಂ ಸ್ವಹೃದಯೇನಾಶ್ಲಿಷ್ಯ ಸಾಽವರ್ಧತ [೪] ॥ ೫೮ ॥

---

೧. ಸಾರ್ಪಹ್ರದಃ ಪುರುಷಸಾರನಿಪಾತವೇಗಸಂಕ್ಷೋಭಿತೋರಗವಿಷೋಚ್ಛ್ವಸಿತಾಂಬುರಾಶಿಃ ।
ಪರ್ಯಕ್ ಪ್ಲುತೋ ವಿಷಕಷಾಯವಿಭೀಷಣೋರ್ಮಿಭೀಮೋ ಧನುಃಶತಮನಂತಬಲಸ್ಯ ಕಿಂ ತತ್ ॥
ತಚ್ಚಿತ್ರತಾಂಡವವಿರುಗ್ಣಫಣಾತಪತ್ರೋ ರಕ್ತಂ ಮುಖೈರುರು ವಮನ್ ನೃಪ ಭಗ್ನಗಾತ್ರಃ ।
ಸ್ಮೃತ್ವಾ ಚರಾಚರಗುರುಂ ಪುರುಷಂ ಪುರಾಣಂ ನಾರಾಯಣಂ ತಮರಣಂ ಮನಸಾ ಜಗಾಮ ॥
ಕೃಷ್ಣಸ್ಯ ಗರ್ಭಜಗತೋಽತಿಭರಾವಸನ್ನಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಮ್ ॥
–ಭಾಗ.(೧೦/೧೪/೭,೩೦,೩೧)

೨. ಯಥಾ ಶಾಖಾಗ್ರೇ ಸ್ಥಿತೋ ಗರುಡೋ ಜಲಾಂತಸ್ಥಿತಸರ್ಪಗ್ರಹಣಾಯ ಅಧಃ ಪತತಿ ತಥಾ ಅಪತತ್ । ಜಲೇ ಬಹುದೂರಂ ಮಿಮಂಕ್ಷುಃ ಉನ್ನತವೃಕ್ಷಶೈಲಾದಿಕಮಾರುಹ್ಯ ನಿಪತತೀತಿ ಭಾವಃ । –ವ್ಯಾ.

೩. ಉತ್ತಮನಾಯಕಸ್ಯ ಸ್ವಚರಣಾದಿನಿಪತನೇ ಕಾಂತಾಯಾ ಹರ್ಷೋದ್ರೇಕೇಣ ದೇಹಾಭಿವೃದ್ಧೇರ್ಜಾಯಮಾನತ್ವಾದಿತಿ ಭಾವಃ । –ವ್ಯಾ.

೪. ಮಾಲೋತ್ಪ್ರೇಕ್ಷೇಯಮ್ । –ವ್ಯಾ.

ಶ್ರೀಕೃಷ್ಣನ ಆಲಿಂಗನಕ್ಕೆ ಕಾತರಿಸುವ ಕೈಗಳಂತಿದ್ದ ತನ್ನ ಹಿಮ್ಮೆಟ್ಟಿದಂತಹ ಪ್ರವಾಹಗಳಿಂದ ತನ್ನ ತೀರದಲ್ಲಿ ಒಡಮೂಡಿದ ಅವನ ಪಾದದ ಗುರುತುಗಳನ್ನು ಹೃದಯದಲ್ಲಿ ಧರಿಸುವ ಬುದ್ಧಿಯಿಂದೆಂಬಂತೆ, [೧]ಉತ್ತಮವಾದ ಪ್ರೇಮವೆಂಬ ಸಾಗರದ ಜೊತೆಗೂಡುವಿಕೆಯಿಂದೆಂಬಂತೆ, ಜಗದ್ವಂದ್ಯನಾದ ಶ್ರೀಕೃಷ್ಣನ ಧುಮುಕುವಿಕೆಯಿಂದೆಂಬಂತೆ, ಭಕ್ತಿಪೂರಿತಳಾದ ಆ ಯಮುನೆಯು [೨]ಮನ್ಮಥರೂಪದ ಶ್ರೀಕೃಷ್ಣನನ್ನು ತನ್ನ ಹೃದಯದಲ್ಲಿ [೩]ಆಲಿಂಗಿಸಿಕೊಂಡು ಉಕ್ಕಿದಳು.

ವಿ. : ೧. [೪]ಶ್ರೀಕೃಷ್ಣನು ಧುಮುಕಿದ ರಭಸಕ್ಕೆ ಯಮುನಾ ನದಿಯು ಉಕ್ಕಿ ಹರಿಯಿತು ಎಂದು ಭಾವ; ಅರ್ಕ-ಸೂರ್ಯ; ಅರ್ಕಜಾ-ಸೂರ್ಯಪುತ್ರಿ, ಯಮುನೆ.

೨. ಯಮುನಾನದಿಯ ಪ್ರವಾಹಗಳನ್ನು ಅದರ ಕೈಗಳು ಎಂಬ, ಅದರಲ್ಲಿ ಕೃಷ್ಣ ಧುಮುಕಿದ್ದನ್ನು ಯಮುನೆಯೇ ತನ್ನ ಹೃದಯದಲ್ಲಿ ಆಲಿಂಗಿಸಿಕೊಂಡಂತೆ ಎಂಬ ಇಲ್ಲಿಯ ಕಾವ್ಯಮಯ ನಿರೂಪಣೆ ಅತ್ಯಂತ ರೋಚಕ.

೩. [೫]ಯಮುನೆಯಲ್ಲಿ ಶ್ರೀಕೃಷ್ಣನ ಪತ್ನಿಯಾದ ಕಾಲಿಂದಿಯು ನೆಲೆಸಿರುವಳೆಂಬುದು ಈ ಮಾತಿನಿಂದ ತಿಳಿಯುತ್ತದೆ.

### ಶ್ರೀಕೃಷ್ಣನನ್ನು ಕಟ್ಟಿದ ಕಾಳಿಯ

**ಕಲಿಲಯಂತಮಪಃ ಪುರುಷೋತ್ತಮಂ**
**ಫಣಿಪತಿಃ ಕಿಲ [೬]ದಂಶಿತುಮಗ್ರಹೀತ್ ।**
**ನಹಿ ಸ ವೇತ್ತಿ ಬಲಂ [೭]ಶ್ರವಣೋಜ್ಝಿತಃ**
**ಪರಮಯಾ ರಮಯಾ ಶ್ರುತಿಭಿಃ ಸ್ತುತಮ್ ॥ ೫೯ ॥**

ಜಲವನ್ನು ಉಲ್ಲೋಲಕಲ್ಲೋಲಗೊಳಿಸಿದ ಪುರುಷೋತ್ತಮನಾದ ಶ್ರೀಕೃಷ್ಣನನ್ನು ನಾಗರಾಜನಾದ ಆ ಕಾಲಿಯನು ಕಚ್ಚಲೆಂದು ಹಿಡಿದುಕೊಂಡ; ಕಿವಿಯಿಲ್ಲದ ಅವನು ಸರ್ವಶ್ರೇಷ್ಠಳಾದ ಮಹಾಲಕ್ಷ್ಮಿಯಿಂದ ವೇದವಚನಗಳಿಂದ ಸ್ತುತಿಸಲ್ಪಡುವ ಅವನ ಬಲವನ್ನು ಅರಿತಿರಲಿಲ್ಲವಷ್ಟೆ!

---

೧. ಸುಪ್ರೇಮಾಂಬುಧಿಃ ಸುಸ್ನೇಹಸಮುದ್ರಃ ತಸ್ಯ ಮಿಶ್ರಣಾತ್ಸಂಯೋಗಾದಿವ ಸಮುದ್ರಸಂಗಮನೇ ನದ್ಯಾಃ ಜಲಾಭಿವೃದ್ಧೇರ್ಜಾಯಮಾನತ್ವಾದಿತಿ ಭಾವಃ। -ವ್ಯಾ.

೨. ಮದನಸ್ಯಾಕೃತಿರಿವಾಕೃತಿರ್ಯಸ್ಯ ಮದನಸ್ಯಾಕೃತಿರ್ಯಸ್ಮಾದಿತಿ ವಾ ಅತಿಸುಂದರಮಿತ್ಯರ್ಥಃ। -ವ್ಯಾ.

೩.. ಪ್ರಾಣಕಾಂತಾಲಿಂಗನಸ್ಯಾಪ್ಯಭಿವೃದ್ಧಿಹೇತುತ್ವಾದಿತಿ ಭಾವಃ। -ವ್ಯಾ.
ಸ್ವಪ್ರಾಂತೇ ಸ್ವತಟೇ ಸ್ಥಿತಂ ತತ್ಪದಾಂಕಂ ಕೃಷ್ಣಪಾದಚಿಹ್ನಂ ಉರಸಾ ವಕ್ಷಸಾ ಧರ್ತುಂ ಧಿಯೇವ ಬುದ್ಧ್ಯೇವ ತಾವತ್ಪರ್ಯಂತಮಭಿವೃದ್ಧತ್ವಾದಿತಿ ಭಾವಃ। -ವ್ಯಾ.

೪. ಪ್ರವಾಹಸ್ಯ ನಿವೃತ್ತೌ ಜಲಾಭಿವೃದ್ಧಿರ್ಭವತೀತಿ ಭಾವಃ। -ವ್ಯಾ.

೫. ಅನೇನ ಕಾಲಿಂದ್ಯಾಂ ಕಾಲಿಂದೀನಾಮ್ನೀ ಕೃಷ್ಣಪತ್ನೀ ತಿಷ್ಠತೀತಿ ಗಮ್ಯತೇ। - ವ್ಯಾ.

೬. ಹಿಂಸಿತುಮಿತಿ ಪಾಠೇ ಹಂತುಮಿತ್ಯರ್ಥಃ । -ವ್ಯಾ.

೭. ಆತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ। -ಶ್ರುತಿ

ವಿ. : ೧. ಹಾವುಗಳಿಗೆ ಕಿವಿಗಳಿರುವುದಿಲ್ಲ ಎಂಬ ಅಂಶವನ್ನು ಇಲ್ಲಿ ತಿಳಿಸಲಾಗಿದೆ.

೨. ಕಿವಿಗಳಿಲ್ಲದವರಿಗೆ ಅಂದರೆ [1]ಶ್ರವಣ ಮಾಡದವರಿಗೆ ಶ್ರೀಹರಿಯ ಮಹಿಮೆ ತಿಳಿಯಲಾರದು ಎಂಬ ವಿಶೇಷ ಪ್ರಮೇಯವನ್ನು ಇಲ್ಲಿ ತಿಳಿಸಿರುವರು ; ಇದು ಒಂದು ರೀತಿಯಲ್ಲಿ 'ಔಪನಿಷದಃ ಪುರುಷಃ', 'ಶಾಸ್ತ್ರಯೋನಿತ್ವಾತ್', 'ಸದಾಗಮೈಕವಿಜ್ಞೇಯಮ್' ಮೊದಲಾದ ಪ್ರಮೇಯಗಳಿಗೆ ನಿದರ್ಶನದಂತಿದೆ ; ಫಣಿ – ಹಾವು ; ಫಣಿಪತಿ – ಸರ್ಪರಾಜ, ಕಾಲಿಯ.

೩. ಶ್ರವಣೋಜ್ಝಿತಃ ಎಂಬಲ್ಲಿ ಶ್ರವಣ ಎಂದರೆ ಕಿವಿ ಹಾಗೂ ಹರಿಕಥಾಶ್ರವಣ ಎಂಬ ಎರಡು ಅರ್ಥಗಳೂ ವಿವಕ್ಷಿತ (ಶ್ಲೇಷಾಲಂಕಾರ).

೪. ಕಾಲಿಯನು ಕೇವಲ ಫಣಿಪತಿಯಾದರೆ, ಶ್ರೀಕೃಷ್ಣ ಕ್ಷರಾಕ್ಷರಪುರುಷೋತ್ತಮನಾದ ಸರ್ವೋತ್ತಮ ಎಂಬ ಇಲ್ಲಿಯ ಪದಗಳ ಔಚಿತ್ಯ ರೋಚಕವಾದುದು.

### ಶ್ರೀಕೃಷ್ಣನ ಬಳಿಗೆ ಧಾವಿಸಿದ ಗೋಪರು

**ಉತ್ಪಾತಚಕಿತಾ ಗೋಪಾಃ ಕೃಷ್ಣಸಂದರ್ಶನಾರ್ಥಿನಃ ।**
**ಪುರೋಧಾಯ ಯಯೂ ರಾಮಂ ಶೇಷಮಾರ್ಗಗತಾ ಇವ ॥ ೬೦ ॥**

ದುಃಶಕುನಗಳಿಂದ ಭಯಗೊಂಡ ಗೋಪರು ಕೃಷ್ಣನನ್ನು ಕಾಣಬಯಸಿದವರಾಗಿ ಶೇಷಮಾರ್ಗವನ್ನು ಹಿಡಿದವರೆಂಬಂತೆ ಬಲರಾಮನನ್ನು ಮುಂದಿರಿಸಿಕೊಂಡು ತೆರಳಿದರು.

ವಿ. : ೧. [2]ಮುಕ್ತಿಗೆ ತೆರಳಲು ಗರುಡಮಾರ್ಗ ಹಾಗೂ ಶೇಷಮಾರ್ಗ ಎಂಬ ಎರಡು ಬಗೆಯ ಮಾರ್ಗಗಳನ್ನು ಶಾಸ್ತ್ರಗಳು ನಿರೂಪಿಸಿವೆ :

**ಸೋಮಸ್ತು ವಾರೀಶಯುತೋಽನಿರುದ್ಧಂ ವಿಶತ್ಯಸೌ ಕಾಮಮಸೌ ತು ವಾರುಣೀಮ್ ।**
**ಸಾ ಶೇಷದೇವಂ ಸ ಗಿರಂ ಚ ಸೈವ ವಾಯುಂ ವಿಶತ್ಯಂಜ ಇತೀಹ ನಿರ್ಣಯಃ [3]॥**

೨. ಇಲ್ಲಿ ಬಲರಾಮನನ್ನು ಮುಂದಿರಿಸಿಕೊಂಡು ಶ್ರೀಕೃಷ್ಣನನ್ನು ಕಾಣಹೊರಟ ಗೋಪರನ್ನು ಶೇಷಮಾರ್ಗದಿಂದ ಮುಕ್ತಿಗೆ ಹೊರಟ ಸಾಧಕರಿಗೆ ಹೋಲಿಸಲಾಗಿದೆ; ಬಲರಾಮನು ಶೇಷಾವತಾರನಾದ್ದರಿಂದ ಈ ನಿರೂಪಣೆ ಅತ್ಯಂತ ಸ್ವರಸವಾದುದು.

---

೧. ಔಪನಿಷದಃ ಪುರುಷ ಇತಿ ಶ್ರುತೇರೌಪನಿಷದಸ್ಯ ಕೃಷ್ಣಸ್ಯ ಶ್ರೌತಂ ಸಾಮರ್ಥ್ಯಂ ಶಬ್ದಗ್ರಾಹಕಶ್ರವಣಾಭಾವಾನ್ನ ಜಾನಾತೀತ್ಯರ್ಥಃ । –ವ್ಯಾ.

೨. ಮೋಕ್ಷಗಂತೄಣಾಂ ಮಾರ್ಗದ್ವಯಂ ಗರುಡಮಾರ್ಗಃ ಶೇಷಮಾರ್ಗ ಇತಿ ।
ತತ್ರ ಶೇಷಮಾರ್ಗಗಾಮಿನಃ ಶೇಷಂ ಪುರೋಧಾಯ ಗಚ್ಛಂತೀತಿ ಪ್ರಮೇಯಸ್ಯ ಶ್ರುತಿಸಿದ್ಧತ್ವಾದ್ ಬಲಭದ್ರಸ್ಯಾಪಿ ಶೇಷತ್ವಾದಿತಿ ಭಾವಃ । –ವ್ಯಾ.
ಸ್ವೋತ್ತಮಪ್ರವೇಶದ್ವಾರಾ ಶೇಷಮಾರ್ಗಗರುಡಮಾರ್ಗಾಭ್ಯಾಂ ಗತಾನಾಮ್ । –(ಶ್ರೀವ್ಯಾಸಗದ್ಯ)

೩.. ಅನುವ್ಯಾಖ್ಯಾನ (೪/೨/೧೩.೪)

### ಶ್ರೀಕೃಷ್ಣನ ಹಾದಿಯನ್ನು ಗುರುತಿಸಿದ ಗೋಪರು

ವ್ರಜಾಮ ವ್ರಜಗೋಪಾಲಾ ಯಮುನಾಮಮುನಾಽಧ್ವನಾ ।
ಪದಾನಿ ಪಥಿ ಕೃಷ್ಣಸ್ಯ ಲಕ್ಷ್ಯಂತೇ ಲಕ್ಷಣೈಃ ಸಹ ॥ ೬೧ ॥

"ಎಲೈ ಗೋಕುಲದ ಗೋಪರೇ! ಈ ಮಾರ್ಗವನ್ನು ಹಿಡಿದು ನಾವು ಯಮುನೆಯತ್ತ ತೆರಳೋಣ; ಈ ಹಾದಿಯಲ್ಲಿ ಶ್ರೀಕೃಷ್ಣನ ಪಾದಗಳು ಅವುಗಳ ಲಕ್ಷಣಗಳೊಂದಿಗೆ ಗೋಚರಿಸುತ್ತಿವೆ."

ವಿ. : ೧. ಹಾಗೆ ತೆರಳಿದ ಅವರಿಗೆ ಶ್ರೀಕೃಷ್ಣ ತೆರಳಿದ ಮಾರ್ಗದ ಗುರುತು, ಅವನ ಪಾದದ ಗುರುತುಗಳಿಂದಾಗಿ ಸ್ಫುಟವಾಗಿ ತಿಳಿಯಿತು ಎಂದರ್ಥ.

೨. ಶ್ರೀಕೃಷ್ಣನ ಪಾದದ ಗುರುತುಗಳು ಎಂದರೆ ಶ್ರೀಮದ್ಭಾಗವತದ ಕಪಿಲಗೀತೆಯಲ್ಲಿ ಬಂದಿರುವಂತೆ ಧ್ವಜರೇಖೆ, ವಜ್ರರೇಖೆ ಮೊದಲಾದವುಗಳು ಎಂದು ತಿಳಿಯಬೇಕು:

ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್[೧]।

### ಭಕ್ತರನ್ನು ಕಂಡು ನರ್ತಿಸಿದ ಶ್ರೀಕೃಷ್ಣ

ಇತ್ಥಂ[೨] ವಿಮರ್ಶತಃ ಪ್ರಾಪ್ತಾನ್ ದೃಷ್ಟ್ವಾ ಸ್ವಾನ್ ಸರ್ಪಮೂರ್ಧ್ನಿ ಸಃ ।
ನನರ್ತ ಕಿಲ ನರ್ನರ್ತಿ ಸುಹೃದಾಗಮನೇ ನ ಕಃ ॥ ೬೨ ॥

ಹೀಗೆ ಆಲೋಚಿಸಿ, ಅಲ್ಲಿಗೆ ಬಂದ ತನ್ನವರನ್ನು ಕಂಡು, ಶ್ರೀಕೃಷ್ಣ ಕಾಲಿಯನ ಹೆಡೆಯಮೇಲೆ ಕುಣಿಯತೊಡಗಿದ ; ಆಪ್ತರು ಬಂದಾಗ ಯಾವನು ತಾನೇ ಕುಣಿಯದಿದ್ದಾನು?

ವಿ. : ಅವರು ಹಾಗೆ ಬರುತ್ತಲೇ ಶ್ರೀಕೃಷ್ಣ ಕಾಲಿಯನ ಮೇಲೆ ನರ್ತಿಸತೊಡಗಿದ ಎಂದರ್ಥ.

### ಕಾಲಿಯನ ಮೇಲೆ ಕೃಷ್ಣನ ನರ್ತನ

ಸರತ್ನಕೃಷ್ಣಾಹಿಫಣಾಂಕಣೇಷು
ನನರ್ತ ಕೃಷ್ಣಃ ಕಿಲ ಲೋಕವಂದ್ಯಃ ।
ಪದಂ ಗರುತ್ಮತ್ಕರಮುಖ್ಯದೈವ-
ಮಿವೌಷಧಂ ತದ್ದಮನೇ ವಿಧಿತ್ಸನ್ ॥ ೬೩ ॥

---

೧. ಭಾಗವತ (೩./೨೮/೨೧)

೨. ವಿಮರ್ಶತಃ ಶ್ರವಣಾದಿವಿಚಾರೇಣಾಗತಾನ್ ಶೇಷಮಾರ್ಗೇಣ ವೈಕುಂಠಂ ಪ್ರತ್ಯಾಗತಾನ್ ಸ್ವಾನ್ ಭೃತ್ಯಾನ್ ದೃಷ್ಟ್ವಾ ಪರಮಾತ್ಮಾ ಸರ್ಪಮೂರ್ಧ್ನಿ ತದೀಯಮೃತ್ಯುಲಕ್ಷಣಕಾಲೋರಗಶಿರಸಿ ನೃತ್ಯತೀತಿ ಧ್ವನಿತೋಽರ್ಥಃ । -ವ್ಯಾ.

ಲೋಕವಂದ್ಯನಾದ ಶ್ರೀಕೃಷ್ಣನು ರತ್ನದಿಂದ ಕೂಡಿದ ಆ ಕಾಳಿಯನ ಹೆಡೆಯ ಪ್ರದೇಶಗಳಲ್ಲಿ ಕುಣಿಯತೊಡಗಿದ; ಗರುಡನ ಕೈಗಳ ಪೂಜೆಗೆ ಮುಖ್ಯದೇವತೆಯಾದ ತನ್ನ ಪಾದವನ್ನು ಅದರ ದಮನಕ್ಕೆ ಮುಖ್ಯವಾದ ಔಷಧಿಯನ್ನಾಗಿ ಮಾಡಲೋ ಎಂಬಂತೆ.

ವಿ. : ಹಾಗೆ ಕುಣಿಯುತ್ತಾ ಕಾಳಿಯನನ್ನು ಮರ್ದಿಸಿದ ಶ್ರೀಕೃಷ್ಣನ[೧] ಪಾದವು ಅವನಿಗೆ ವಿಷದ ಭಯವನ್ನು ಪರಿಹರಿಸುವ[೨] ಔಷಧಿಯಂತಿದ್ದಿತು ಎಂದು ಭಾವ.

## ಕಾಲಿಯಮರ್ದನ

ಉನ್ನೀಯ ಕಾಲಿಯಫಣೇಂದ್ರವಿರಾಜಿಪುಚ್ಛಂ
ಖಿನ್ನಂ ಮಮರ್ದ ವಿಷದೂಷಿತಮಸ್ಯ ವಕ್ತ್ರಮ್ ।
ತಸ್ಯಾಂತರಾಶ್ರಿತಮಶೇಷಮಸಾವಸಹ್ಯಂ
ನಿಷ್ಕಾಸಯನ್ನಿವ ವಿಷಂ ವಿನತಾನನೇನ ॥ ೬೪ ॥

ಕಾಲಿಯ ಸರ್ಪದ ಹೊಳೆಯುವ ಬಾಲವನ್ನು ಕೈಯಲ್ಲಿ ಹಿಡಿದುಕೊಂಡು, ಶ್ರೀಕೃಷ್ಣ ವಿಷದೂಷಿತವಾದ ಅದರ ಖೇದಗೊಂಡ ಮುಖವನ್ನು, ಅದರೊಳಗೆ ನೆಲೆಸಿದ ಅಸಹ್ಯವಾದ ವಿಷವನ್ನು ಅದರ ಬಾಗಿದ ಮುಖದ ಮೂಲಕ ಪೂರ್ಣವಾಗಿ ಹೊರಹಾಕುವವನಂತೆ ಮರ್ದಿಸತೊಡಗಿದ.

ವಿ. : ೧. ಕಾಲಿಯನ ಮುಖವನ್ನು ಶ್ರೀಕೃಷ್ಣ ವಿಶೇಷವಾಗಿ ತುಳಿದದ್ದು ಅದರಲ್ಲಿನ ವಿಷವನ್ನು ಹೊರಹಾಕಲೆಂದೇ ಹೊರತು, ಕೇವಲ ನೋಯಿಸಲೆಂದಲ್ಲ[೩]; ವಿನತ - ಬಾಗಿದ.

೨. ಭಗವಂತನು ಭಕ್ತರಿಗೆ ನೋವನ್ನು ಕೊಡುವುದು ಅವರಲ್ಲಿನ ದೋಷಗಳನ್ನು ಪರಿಹರಿಸುವ ಕರುಣೆಯಿಂದಲೇ ಹೊರತು ಕೇವಲ ಹಿಂಸಿಸಲೆಂದಲ್ಲ, ಎಂಬ ವಿಶೇಷಸಂದೇಶ ಇದರಿಂದ ತಿಳಿಯುವುದು: ''ಭೂತ್ಯೈ ನಿಜಾಶ್ರಿತಜನಸ್ಯ''- ಮ.ಭಾ.ತಾ.ನಿ.(೧/೩), ''ಆದದ್ದೆಲ್ಲಾ ಒಳಿತೇ ಆಯಿತು''- ಶ್ರೀಪುರಂದರದಾಸರು.

ಮುಖವನ್ನು ತುಳಿದು ಬಾಲವನ್ನು ಹಿಡಿದ ಶ್ರೀಕೃಷ್ಣ

ಸ ದಂದಶೂಕಸ್ಯ ಮುಖಂ ವಿಭಿಂದನ್
ತದೀಯಪುಚ್ಛಂ ಜಗೃಹೇ ಕರೇಣ ।

---

೧. ಸ್ಕಂಧಾಧಿರೂಢಸ್ಯ ಕೃಷ್ಣಸ್ಯ ಪಾದಯೋರ್ಗರುಡಕರಗತತ್ವಾದಿತಿ ಭಾವಃ। -ವ್ಯಾ.

೨. ಗರುಡಸ್ಮರಣಮಾತ್ರೇಣ ವಿಷಪರಿಹಾರೋ ಜಾಯತೇ ಕಿಲ, ಕಿಂ ಪುನರ್ಗರುಡಕರಸ್ಪರ್ಶಿಕೃಷ್ಣಪಾದಸಂಬಂಧೇನೇತಿ ಭಾವಃ। -ವ್ಯಾ.

೩.. ಯಥಾ ಚೇಲಾದಿಸ್ಥಿತಂ ತಂಡುಲಾದಿಕಂ ನಿಃಶೇಷತಯಾ ನಿಷ್ಕಾಸಯಿತುಂ ಚೇಲಪುಚ್ಛಮೂರ್ಧ್ವೀಕೃತ್ಯ ಮುಖಮಧಃಕಾರಯಂತಿ ತಥೇತಿ ಭಾವಃ। - ವ್ಯಾ.

ಯಥಾಪರಾಧಂ ನನು ದಂಡದಾತಾ
ನಿರಾಗಸಂ ಕಂ ವರಯೇನ್ನ ಶೌರಿಃ ॥ ೬೫ ॥

ಆ ಶ್ರೀಕೃಷ್ಣನು ಸರ್ಪದ ಮುಖವನ್ನು ತುಳಿಯುತ್ತಾ ಅದರ ಪುಚ್ಛವನ್ನು ಕೈಯಲ್ಲಿ ಎತ್ತಿಹಿಡಿದ. ಅಪರಾಧಕ್ಕೆ ಅನುಗುಣವಾಗಿ ಶಿಕ್ಷೆ ನೀಡುವ ಶ್ರೀಹರಿಯು ನಿರ್ದೋಷನಾದ ಯಾವನನ್ನು ತಾನೇ ಸ್ವೀಕರಿಸದಿದ್ದಾನು?

ವಿ. : ೧. [1]ಕಾಲಿಯನ ಮುಖವನ್ನು ತುಳಿಯಲು ಅದರಲ್ಲಿದ್ದ ವಿಷವು ಕಾರಣವಾಗಿತ್ತು . ಅದರ ಬಾಲವನ್ನು ಹಿಡಿದುಕೊಳ್ಳಲು ಅದರಲ್ಲಿ [2]ವಿಷ ಇಲ್ಲದ್ದು ಕಾರಣ; ಇದರಿಂದ ಶ್ರೀಹರಿಯು ಶಿಕ್ಷಿಸುವುದು ಅಪಚಾರ ಮಾಡಿದವರನ್ನೇ ಹೊರತು ನಿರಪರಾಧಿಗಳನ್ನಲ್ಲ [3]ಎಂಬ ತತ್ತ್ವ ತಿಳಿಯುವುದು; **ದಂದಶೂಕ** – ಹಾವು; ನಿರಾಗಸ – ನಿರಪರಾಧಿ.

೨. ವೈಷ್ಣವರಿಗೆ ಶ್ರೀಹರಿಯು ಅವರ ಕರ್ಮಕ್ಕೆ ತಕ್ಕಂತೆ ಕ್ಲೇಶಗಳನ್ನು ನೀಡಿದರೂ, ಅವರು ಭಕ್ತರು ಎಂಬುದನ್ನು ಗಮನಿಸಿ ಅವರ ರಕ್ಷಣೆಯನ್ನು ಸಹ ತಪ್ಪದೆ ಮಾಡುವನು; ಇದರಿಂದ ಕ್ಲೇಶ ಒದಗಿದಾಗ ಅದು ಶ್ರೀಹರಿಯು ಪಾಪಪರಿಹಾರಕ್ಕೆ ಮಾಡಿರುವ ಅನುಗ್ರಹ ಎಂದು ಭಾವಿಸಿ, ವೈಷ್ಣವರು ಅದನ್ನು ಸಾಧನೆಯ ಮಾರ್ಗವನ್ನಾಗಿ ಮಾಡಿಕೊಳ್ಳಬೇಕು ಎಂಬ ತತ್ತ್ವವು ಇದರಿಂದ ಸೂಚಿತ.

೩. ಸಮಃ ಎಂಬ ವಿಷ್ಣುಸಹಸ್ರನಾಮದ ಪದವು ಶ್ರೀಹರಿಯು ನಿಷ್ಪಕ್ಷಪಾತಿ ಎಂಬ ಪ್ರಮೇಯವನ್ನು ನಿರೂಪಿಸುವುದು: **ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಚ ದರ್ಶಯತಿ ।** (ಬ್ರಹ್ಮಸೂತ್ರ ೨/೧/೩.೫).

**ಶ್ರೀಹರಿಯು ನೀಡುವ ಶಿಕ್ಷೆಯು ಸಹ ಅನುಗ್ರಹವೇ**

**ವಿದಾರಯನ್ನಪ್ಯಹಿರಾಜಮೌಲಿಂ**
**ಕರೇಣ ಪಸ್ಪರ್ಶ ತಮಾರ್ತಬಂಧುಃ ।**
**ನಿಜೇಷು ಶಿಕ್ಷಾಽಪಿ ಹಿ ತಸ್ಯ ವಿಷ್ಣೋಃ**
**ಪರಂ ಪರಾನುಗ್ರಹಹೇತುರೇವ ॥ ೬೬ ॥**

ನಾಗರಾಜನಾದ ಕಾಲಿಯನ ತಲೆಯನ್ನು ಜೋರಾಗಿ ಸೀಳುತ್ತಿದ್ದರೂ, ಆರ್ತಬಂಧುವಾದ ಶ್ರೀಕೃಷ್ಣನು ಅವನನ್ನು ಕೈಯಿಂದ ಸ್ಪರ್ಶಿಸಿದ; ಮಹಾವಿಷ್ಣುವು ತನ್ನ ಭಕ್ತರಿಗೆ ಶಿಕ್ಷೆಯನ್ನು ನೀಡುವುದೂ ಸಹ ಬಹಳವಾಗಿ ಅವನ [4]ಪರಮಾನುಗ್ರಹಕ್ಕೇ ಕಾರಣವಾಗುವುದು.

---

೧. ಮುಖೇನ ದಂಶತೀತಿ ಅಪರಾಧಿನೋ ಮುಖಸ್ಯ ದಮನಮುಚಿತಮ್ । ನಿರಪರಾಧಿನಃ ಪುಚ್ಛಸ್ಯ ಪರಿಗ್ರಹಣಂ ಚೋಚಿತಮಿತಿ ಭಾವಃ । –ವ್ಯಾ.

೨. ಪದಾ ಯಾವತ್ಕುಟ್ಟನಂ ಕರೋತಿ ತಾವತ್ಪುಚ್ಛಂ ಸಮ್ಯಗ್ಗೃಹೀತವಾನಿತ್ಯರ್ಥಃ । –ವ್ಯಾ.

೩. ಶೌರಿಃ ಕೃಷ್ಣಃ ಯಥಾಪರಾಧಮ್ ಅಪರಾಧಮನತಿಕ್ರಮ್ಯ ಅಪರಾಧಾನುಸಾರೇಣೇತ್ಯರ್ಥಃ । –ವ್ಯಾ.

೪. ತಸ್ಯ ವಿಷ್ಣೋಃ ನಿಜೇಷು ಸ್ವಭಕ್ತೇಷು ಶಿಕ್ಷಾಽಪಿ ಪರಂ ಅತಿಶಯೇನ ಪರಾನುಗ್ರಹಹೇತುರೇವ ಉತ್ತಮಾನುಗ್ರಹಕಾರಣಮೇವ । ಅನುಗ್ರಹಾರ್ಥಂ ವಿಷ್ಣುರ್ಭಕ್ತಾಂಚ್ಛಿಕ್ಷಯತಿ ನ ತ್ವಸುರವತ್ತಮಃ ಪ್ರಾಪಯಿತುಮಿತಿ ಭಾವಃ । –ವ್ಯಾ.

### ಶ್ರೀಕೃಷ್ಣನನ್ನು ಸ್ತುತಿಸಿದ ದೇವವೃಂದ

ನೃತ್ಯಂತಮೇನಂ ನಿಜನಾಥಮೇತ್ಯ
ಭೃತ್ಯಾ ಭವಾಬ್ಜಾಸನಮುಖ್ಯದೇವಾಃ ।
ವಿಷ್ವಗ್ಗ್ಯಣಂತಃ ಕಿಲ ತಸ್ಯದಾರ್ತ-
ಸರ್ಪಾಶ್ರಿತಾಜ್ಞಾನಮಿವಾಪಹರ್ತುಮ್ ॥ ೬೭ ॥

ನರ್ತಿಸುತ್ತಿದ್ದ ತಮ್ಮ ಆ ಸ್ವಾಮಿಯ ಬಳಿಗೆ ಅವನ ಭೃತ್ಯರಾದ ಶಿವ, ಬ್ರಹ್ಮ ಮೊದಲಾದ ದೇವತೆಗಳು ನೊಂದ ಸರ್ಪವನ್ನು ಆವರಿಸಿದ್ದ ಅಜ್ಞಾನವನ್ನು ತೊಡೆಯಲೋ ಎಂಬಂತೆ ಸ್ತುತಿಸುತ್ತಾ ಸುತ್ತಲೂ ನೆರೆದರು.

ವಿ. : [೧]ಬ್ರಹ್ಮಾದಿಗಳು ಹಾಗೆ ಸ್ತುತಿಸಿದ್ದರಿಂದ ಆ ಕಾಳಿಯನಿಗೆ ಶ್ರೀಕೃಷ್ಣನ ಬಗ್ಗೆ ಇದ್ದ ಅಜ್ಞಾನವು ಪರಿಹಾರವಾಯಿತು ಎಂದರ್ಥ; ವಿಷ್ವಕ್ - ಎಲ್ಲೆಡೆ; ಅಬ್ಜಾಸನ -ಪದ್ಮಾಸನ, ಬ್ರಹ್ಮ.

### ಬ್ರಹ್ಮರುದ್ರಾದಿಗಳು ಶ್ರೀಕೃಷ್ಣನಿಗೆ ಸಲ್ಲಿಸಿದ ಸಂಗೀತಸೇವೆ

ಅನೀನದತ್ ಪದ್ಮಭವೋ ಮೃದಂಗಂ
ಜಗೌ ಹನೂಮಾನ್ ಜಗತಾಮಧೀಶಮ್ ।
ಅದರ್ಶಯತ್ ತಾಲಗತೀಃ ಕಪರ್ದೀ
ನನರ್ತ ಗೋಪಾಲಕಬಾಲಮೌಲಿಃ ॥ ೬೮ ॥

ಬ್ರಹ್ಮದೇವರು ಮೃದಂಗವನ್ನು ಬಾರಿಸಿದರು, ಹನುಮಂತ ಜಗದೊಡೆಯನಾದ ಅವನನ್ನು ಕುರಿತು ಹಾಡತೊಡಗಿದ; ರುದ್ರದೇವರು (ದ್ರುತವಿಲಂಬಿತಾದಿ) ತಾಳಗಳನ್ನು ತೋರಿಸಿದರು; ಗೋಪಾಲಶಿರೋಮಣಿಯಾದ ಶ್ರೀಕೃಷ್ಣ ನರ್ತನ ಮಾಡಿದ.

ವಿ. : ೧. ಇದರಿಂದ ನರ್ತನ ಮಾಡಿದ ಶ್ರೀಕೃಷ್ಣ ಸರ್ವೋತ್ತಮ; ಮೃದಂಗ ಬಾರಿಸಿದ ಬ್ರಹ್ಮ, ಗಾನಮಾಡಿದ ಹನುಮಂತ ಜೀವೋತ್ತಮರು, ತಾಳ ಹಾಕಿದ ರುದ್ರದೇವರು ಅನಂತರದವರು ಎಂಬ [೨]ತಾರತಮ್ಯ ತತ್ತ್ವವು ತಿಳಿಯುವುದು ಎಂದರ್ಥ; ನರ್ತನ, ಗಾನ ಹಾಗೂ ವಾದ್ಯಗಳು ಮೂರೂ ಸೇರಿದಾಗ ಸಂಗೀತವೆನ್ನಿಸುವದು: ನೃತ್ತಂ ಗೀತಂ ಚ ವಾದ್ಯಂ ಚ ತ್ರಯಂ ಸಂಗೀತ-ಮುಚ್ಯತೇ; ಮೃದಂಗ - ಮದ್ದಲೆ.

೨. ಶ್ರೀಕನಕದಾಸರ ಈ ಕೆಳಗಿನ ಪದ್ಯ ಈ ಶ್ಲೋಕದ ಭಾವಾನುವಾದದಂತಿದೆ :

---

೧. ದೇವೈರಸ್ಮಾಭಿಃ ಕೃಷ್ಣಪರಿಚರ್ಯಾಯಾಂ ಕೃತಾಯಾಮ್ ಅಯಂ ಕೃಷ್ಣಃ ಸಾಕ್ಷಾತ್ಪರಮಾತ್ಮೇತಿ ಜಾನೀಯಾತ್ ಕಾಲಿಯ ಇತೀವೋಪಪತಸ್ಥುರಿತ್ಯರ್ಥಃ । -ವ್ಯಾ.

೨. ಅನೇನ ಏತಾದೃಶಕೃಷ್ಣಸ್ಯ ಗೋಪಾಲಕತ್ವಂ ಲೋಕವಿಡಂಬನಾರ್ಥಮಿತಿ ಧ್ವನ್ಯತೇ । -ವ್ಯಾ.

ಡೋಲಿನ ಮೇಲ್ಕಯ್ಯ ಬರಮಪ್ಪ ಹಾಕ್ಯಾನು ತಾಳವ ಶಿವನಪ್ಪ ಕಟಿದಾನ್ಯಾ ।
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು ಚೆಲುವ ಕನಕಪ್ಪ ಕುಣಿದಾನ್ಯಾ ॥

೩. ಶ್ರೀಕೃಷ್ಣನು ಕಾಲಿಯನನ್ನು ಮಥಿಸಿದ ಪ್ರಸಂಗವು ಅಧ್ಯಾತ್ಮವನ್ನು ಸಾರುವಂತಹುದು. ಕಾಲಿಯ ಸರ್ಪ ಮಹಾಮೃತ್ಯುವಿನ ಸಂಕೇತ; ಶ್ರೀಕೃಷ್ಣ ಅದನ್ನು ಹಾಗೆ ಮರ್ದಿಸುವ ಮೂಲಕ ತಾನು ಸರ್ವಥಾ ಮೃತ್ಯುರಹಿತನಾದವನು, ಅನಾದಿನಿತ್ಯನಾದವನು ಎಂಬ ಪರಮಪ್ರಮೇಯ-ವನ್ನು ಲೋಕಕ್ಕೆ ಸಾರಿದ ಎಂದರ್ಥ. ಈ ತತ್ತ್ವದ ಹಿನ್ನೆಲೆಯನ್ನು ಗಮನಿಸಿಯೇ ಹಾಗೆ ಬ್ರಹ್ಮಾದಿದೇವತೆಗಳು ಸಂಭ್ರಮದಿಂದ ನಲಿದಾಡಿದರು ಎಂದು ತಿಳಿಯಬೇಕು. ಶೇಷಶಾಯಿ, ಅನಂತಪದ್ಮನಾಭ ಮೊದಲಾದ ಶ್ರೀಹರಿಯ ರೂಪಗಳ ಅಂತರಾರ್ಥವು ಸಹ ಇದೇ ಆಗಿದೆ ಎಂದು ತಿಳಿಯಬೇಕು.

### ನಾಗಪತ್ನಿಯರು ಮಾಡಿದ ಶ್ರೀಕೃಷ್ಣಸ್ತುತಿ

ತತೋಽಹಿಪತ್ನೀಪ್ರಿಯಮಂಜುವಾಕ್ಯಂ
ನಿಶಮ್ಯ ತಂ ನಿರ್ಭಯಮಾಶು ಚಕ್ರೇ ।
ತಥಾಹಿ ನಾರೀಮೃದುಭಾಷಣೇನ
ನ ಕಸ್ಯ ಚಿತ್ತಂ ಮೃದುತಾಮುಪೈತಿ ॥ ೬೯ ॥

ಆ ಬಳಿಕ ನಾಗಪತ್ನಿಯರ ಪ್ರಿಯವಾದ ಮಂಜುಳವಾಣಿಯನ್ನು ಕೇಳಿ ಶ್ರೀಕೃಷ್ಣ ಆ ಕಾಳಿಯನಿಗೆ ಅಭಯವನ್ನು ನೀಡಿದ; ಅದು ಸರಿಯೇ! ಸ್ತ್ರೀಯರ ಮೆದುಮಾತುಗಳಿಗೆ ಯಾವನ ಮನಸ್ಸು ತಾನೇ ಕರಗದಿದ್ದೀತು?

ವಿ. : ೧. ನಾಗಪತ್ನಿಯರು ಶ್ರೀಕೃಷ್ಣನನ್ನು ಸ್ತುತಿಸಿದಾಗ ಶ್ರೀಕೃಷ್ಣ ಕಾಳಿಯನನ್ನು ಅನುಗ್ರಹಿಸಿ ಉದ್ಧರಿಸಿದ ಎಂದರ್ಥ. ಅದನ್ನು ಹೀಗೆ ಉತ್ಪ್ರೇಕ್ಷಿಸಿರುವರು.

೨. ಸ್ತ್ರೀಯರ ಮಾತಿನಲ್ಲಿ ಶ್ರೀಹರಿಯ ವಿಭೂತಿರೂಪ ಇರುವ ಉಲ್ಲೇಖ ಭಗವದ್ಗೀತೆಯಲ್ಲಿ ಬಂದಿದೆ : ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥-ಗೀತಾ (೧೦/೩೪)

೩. ಸ್ತ್ರೀಯರಿಗೂ ಯಥೋಚಿತವಾಗಿ ಶ್ರೀಹರಿಯನ್ನು ಸ್ತುತಿಸುವ ಅರ್ಹತೆ ಇರುವುದನ್ನು ಸಹ ಈ ಪ್ರಸಂಗವು ಸೂಚಿಸುವುದು.

### ಸ್ತ್ರೀಪಕ್ಷಪಾತಿಯಂತೆ ಕಂಡ ಶ್ರೀಕೃಷ್ಣ

[2]ವಿಷಾಶ್ರಯತ್ವೇನ ಗುಣೇನ ನಾಮ್ನಾ
ದ್ವಯೋಃ ಸ ಸಾಮ್ಯೇಽಪಿ ಭುಜಂಗಮಂ ತಮ್ ।

---

೧. ತಥಾಹಿ ತದುಕ್ತಮ್ । ನಾರೀಮೃದುಭಾಷಣೇನ ಕಾಮಿನೀಕೋಮಲವಚನೇನ ಕಸ್ಯ ಪ್ರಾಣಿನಶ್ಚಿತ್ತಂ ಮೃದುತಾಂ ಮಾರ್ದವಂ ನೋಪೈತಿ । ಅತಿಪುರುಷೋಽಪಿ ಪುರುಷಃ ಕಾಮಿನೀವಚನೇನ ಮೃದುರ್ಭವತೀತಿ ಭಾವಃ । -ವ್ಯಾ.

೨. ಏಕಸ್ಯ ಗರಲಾಶ್ರಯತ್ವೇನ ಅನ್ಯಸ್ಯಾಃ ಜಲಾಶ್ರಯತ್ವೇನೇತ್ಯುಭಯೋರ್ವಿಷಾಶ್ರಯತ್ವಸಾಮ್ಯಾದಿತಿ ಭಾವಃ । -ವ್ಯಾ.

**ನಿಪೀಡ್ಯ ಭಾಸ್ವತ್ತನಯಾಂ ಜುಗೋಪ**
**ನ ಕಸ್ಯ ಯೋಷಿತ್ಸು ಹಿ [೧] ಪಕ್ಷಪಾತಃ ॥ ೭೦ ॥**

ವಿಷವನ್ನು ಹೊಂದಿರುವಿಕೆಯಿಂದ, ಗುಣದಿಂದ, ಹೆಸರಿನಿಂದ ಅವರಿಬ್ಬರಿಗೂ ಸಾಮ್ಯವಿದ್ದರೂ, ಶ್ರೀಕೃಷ್ಣ ಆ ಕಾಳಿಯನನ್ನು ಮರ್ದನಮಾಡಿ ಸೂರ್ಯಪುತ್ರಿಯಾದ ಯಮುನೆಯನ್ನು ಸಂರಕ್ಷಿಸಿದ; ಲೋಕದಲ್ಲಿ ಸ್ತ್ರೀಯರ ಬಗ್ಗೆ ಯಾರಿಗೆ ತಾನೆ ಪಕ್ಷಪಾತವಿರದು !

ವಿ. : ೧. ಮೇಲ್ನೋಟಕ್ಕೆ ಶ್ರೀಕೃಷ್ಣ ಸ್ತ್ರೀ ಎಂಬ ಕಾರಣದಿಂದ ಯಮುನೆಯನ್ನು ರಕ್ಷಿಸಿದಂತೆ ಕಾಣುವುದು; ವಾಸ್ತವವಾಗಿ ಯಮುನೆಯ ರಕ್ಷಣೆಗೆ ಅವಳು ಪರಮ ಹರಿಭಕ್ತಳು ಎಂಬುದು ಮುಖ್ಯಕಾರಣ. ಅದರಂತೆ ಕಾಲಿಯನ ದಮನಕ್ಕೆ ಅವನ ವಿಷದಿಂದಾಗಿದ್ದ ಅನರ್ಥ ಕಾರಣ. ಶ್ರೀಹರಿಗೆ ಸ್ತ್ರೀ, ಪುರುಷ ಮೊದಲಾದ ಯಾವುದೇ ರೀತಿಯ ಪಕ್ಷಪಾತವು ಸರ್ವಥಾ ಇಲ್ಲ ಎಂಬುದು ಶಾಸ್ತ್ರಸಿದ್ಧವಾದ ಪ್ರಮೇಯ [೨]; **ಯೋಷಿತ್**-ಸ್ತ್ರೀ.

೨. ಸ್ತ್ರೀ ಎಂಬುದಕ್ಕೆ ಅಸ್ವತಂತ್ರ ಎಂದರ್ಥ; ಅಸ್ವತಂತ್ರರು ಎಂದು ಅರಿತು ಉಪಾಸನೆ ಮಾಡುವ ಸಾಧಕರ ಮೇಲೆ ಶ್ರೀಹರಿಯ ಅನುಗ್ರಹವೇ ಹೊರತು ತಾನು ಪುರುಷ ಎಂದು ಬೀಗುವವರ ಮೇಲಲ್ಲ ಎಂಬುದು ಇಲ್ಲಿಯ ಧ್ವನಿ. ಇದರಿಂದ ಶ್ರೀವಾದಿರಾಜರ ಅಪೂರ್ವ ಕೌಶಲ ಅರಿವಾಗುವುದು. ಲೋಕದೃಷ್ಟಿಯನ್ನು ಅನುಸರಿಸಿದ ಕಾವ್ಯದೃಷ್ಟಿಯ ಮಾತು ಎಂದು ಕಾಣುವ ಇದು ವಾಸ್ತವವಾಗಿ ಮತ್ತೊಂದು ರೀತಿಯಲ್ಲಿ ಶ್ರೇಷ್ಠತತ್ತ್ವವೂ ಆಗಿದೆ ಎಂದು ತಿಳಿಯಬೇಕು ; **ಭುಜಂಗಮ**-ಹಾವು ; **ಭಾಸ್ವತ್ತನಯಾ**-ಸೂರ್ಯಪುತ್ರಿ, ಯಮುನೆ.

೩.. ಕಾಲಿಯ ವಿಷಾಶ್ರಯ; [೩] ವಿಷ ಎಂದರೆ ಗರಲ, ಅದಕ್ಕೆ ಜಲ ಎಂಬ ಅರ್ಥವೂ ಇದೆ; ಯಮುನೆಯು ಜಲಾಶ್ರಯ; ಹೀಗೆ ಅವೆರಡೂ ಸಮಾನಕ್ಕೆ ಆಶ್ರಯನೀಡಿವೆ; ಅದರಂತೆ ಕೃಷ್ಣ ಎಂಬುದು ಕೃಷ್ಣವರ್ಣದ ಕಾಲಿಯನ ನಾಮ; ಕೃಷ್ಣಾ ಎಂಬುದು ಯಮುನೆಯ ಹೆಸರು. ಹೀಗೆ ಎರಡರಲ್ಲೂ [೪] ನಾಮ ಸಾಮ್ಯವಿದೆ ಎಂದು ತಿಳಿಯಬೇಕು; ಕೃಷ್ಣ ಎಂಬುದು ಮುಖ್ಯವಾಗಿ ಶ್ರೀಹರಿಯ ಹೆಸರೇ ಎಂಬುದು ಮತ್ತೊಂದು ಸ್ವಾರಸ್ಯ.

### ಶ್ರೀಹರಿಯ ನಿಗ್ರಹವೂ ಅನುಗ್ರಹಕ್ಕೆ ಸಮಾನ

**ಆಗಸ್ಕೃತಂ ನಾಗಪತಿಂ ಸ ಕೃಷ್ಣಃ**
**ಪಾದೇನ ಶಿಕ್ಷನ್ನಪಿ ತತ್ಕೃತಾಂಕೈಃ ।**

---

೧. ಸರ್ವೇಷಾಂ ಸ್ತ್ರೀಪಕ್ಷಪಾತೋ ಭವೇದೇವೇತ್ಯರ್ಥಃ । -ವ್ಯಾ.
೨. ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ । -ಬ್ರಹ್ಮಸೂತ್ರ(೨/೧/೩೪)
ಕರ್ಮಾಪೇಕ್ಷಯಾ ಫಲದಾತೃತ್ವಾನ್ನ ತಸ್ಯ ವೈಷಮ್ಯನೈರ್ಘೃಣ್ಯೇ ।
'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್' ಇತಿ ಹಿ ಶ್ರುತಿಃ ॥ -ಬ್ರಹ್ಮಸೂತ್ರ ಭಾಷ್ಯ.(೨/೧/೩೪)
೩.. 'ವಿಷಂ ತು ಗರಲೇ ಜಲೇ' ಇತ್ಯಭಿಧಾನಾತ್ । - ವ್ಯಾ.
೪. ನೀಲಗುಣವಿಶಿಷ್ಟತ್ವೇನ ನಾಮ್ನಾ ಕೃಷ್ಣಃ ಕೃಷ್ಣೇತ್ಯಭಿಧಯಾ ಸಾಮ್ಯೇಽಪಿ ಸ್ವನಾಮಧಾರಕತ್ವಸಾಮ್ಯೇಪೀತ್ಯರ್ಥಃ । - ವ್ಯಾ.

ತಾರ್ಕ್ಷ್ಯಾದ್ಭಯಂ ತಸ್ಯ ಜಹಾರ ಭಕ್ತೇ
ಕ್ರೋಧೋಽಪಿ ದೇವಸ್ಯ ವರೇಣ ತುಲ್ಯಃ ॥ ೭೧ ॥

ಅಪಚಾರವೆಸಗಿದ ನಾಗರಾಜನಾದ ಕಾಳಿಯನನ್ನು ಶ್ರೀಕೃಷ್ಣ ಪಾದದಿಂದ ದಂಡಿಸಿದರೂ ಸಹ ಅದರ ಮೇಲೆ ಮೂಡಿದ ತನ್ನ ಪಾದಚಿಹ್ನೆಗಳಿಂದ ಅವನಿಗಿದ್ದ ಗರುಡನ ಭಯವನ್ನು ಪರಿಹರಿಸಿದ; ಹೀಗೆ ದೇವನಾದ ಶ್ರೀಹರಿಯ ಕ್ರೋಧವು ಸಹ ಭಕ್ತರ ವಿಷಯದಲ್ಲಿ ವರಕ್ಕೆ ಸಮವಾಗುವುದು.

ವಿ. : ೧. ಮೇಲ್ನೋಟಕ್ಕೆ ಕಾಳಿಯನನ್ನು ಉಗ್ರವಾಗಿ ಮರ್ದನಮಾಡಿದ್ದರಿಂದ ಅವನಿಗೆ ಶಿಕ್ಷೆ ನೀಡಿದಂತೆ ಕಂಡರೂ, ವಾಸ್ತವವಾಗಿ ಆ ಮೂಲಕ ಅವನ ಹೆಡೆಯ ಮೇಲೆ ಶ್ರೀಕೃಷ್ಣನ ಪಾದಗಳ ಚಿಹ್ನೆಮೂಡಿದ್ದರಿಂದ ಮುಂದೆ ಅವನಿಗೆ ಗರುಡನಿಂದ ಭಯವು ಸಂಪೂರ್ಣವಾಗಿ ಪರಿಹಾರ-ವಾಗುವಂತಾಯಿತು. ಇದರಿಂದ ಭಕ್ತರ ವಿಷಯದಲ್ಲಿ ಶ್ರೀಹರಿಯು ನೀಡುವ ಶಿಕ್ಷೆಯು ಸಹ ವರದಂತೆ ಅನುಗ್ರಹವೇ ಆಗುವುದು ಎಂಬ ತತ್ತ್ವ ತಿಳಿಯುವುದು.

೨. ತಪ್ತಮುದ್ರಾಧಾರಣವು ಆ ಕಾಲಕ್ಕೆ ದೇಹಕ್ಕೆ ಹಿಂಸೆ ಎನ್ನಿಸಿದರೂ ಅದರಿಂದ ಮೂಡುವ ಗುರುತಿನಿಂದಾಗಿ [1]ವೈಷ್ಣವತ್ವವು ಲಭಿಸಿ ಅದರಿಂದ ನರಕದ ಭಯವು ತಪ್ಪುವುದರಿಂದ ಅದು ಅನುಗ್ರಹವೇ ಆಗುವಂತೆ ಇದನ್ನು ತಿಳಿಯಬೇಕು; ತಾರ್ಕ್ಷ್ಯ - ಗರುಡ.

೩.. ವೈದ್ಯರು ಮಾಡುವ ಶಸ್ತ್ರಚಿಕಿತ್ಸೆಗಳು ಸಹ ಇದರಂತೆ ಮೇಲ್ನೋಟಕ್ಕೆ ಹಿಂಸೆ ಎನ್ನಿಸಿದರೂ ರೋಗ,ಪರಿಹಾರ ಮಾಡುವುದರಿಂದ ಒಳಿತೇ ಎನಿಸುವವಲ್ಲವೇ!

## ಕಾಲಿಯಮರ್ದನದಿಂದ ಗರುಡಶೇಷರಿಗಾದ ಆನಂದ

ಸ್ವಪಕ್ಷಪಾತಿಪ್ರಿಯಮಕ್ಷಿಕರ್ಣ-
ವಿಮರ್ದನಾನ್ನೂನಮಸೌ ಪ್ರಸಾಧ್ಯ ।
ವಿಧಾಯ ಚಾಸ್ಯಾಭಯಮಂಜಸಾಽಂತೇ
ಮುದಂ ಸ್ವತಲ್ಪಾಯ ದದಾವನಲ್ಪಾಮ್ ॥ ೭೨ ॥

ಶ್ರೀಕೃಷ್ಣನು ಹೀಗೆ ಆ ಕಾಳಿಯನನ್ನು ಮರ್ದನಮಾಡುವ ಮೂಲಕ ನಿಶ್ಚಿತವಾಗಿ ತನ್ನ ಪಕ್ಷದವನಾದ ಗರುಡನಿಗೆ ಪ್ರಿಯವನ್ನೆಸಗಿದ; ಕೊನೆಗೆ ಅವನಿಗೆ ಅಭಯವನ್ನು ನೀಡುವ ಮೂಲಕ ತನ್ನ ಹಾಸಿಗೆ ಎನ್ನಿಸಿದ ಆದಿಶೇಷನಿಗೆ ಬಹಳ ಸಂತೋಷವನ್ನುಂಟುಮಾಡಿದ.

೧. 'ಕ್ರೋಧೋಽಪಿ ದೇವಸ್ಯ ವರೇಣ ತುಲ್ಯ' ಇತ್ಯೇತದ್ವಚನಂ ಭಕ್ತಜನವಿಷಯಮ್ । ನಾಭಕ್ತಜನವಿಷಯಮಿತಿ ಭಾವಃ। -ವ್ಯಾ.

ವಿ.: ೧. ಕಾಳಿಯನ ದಮನದಿಂದಾಗಿ [೧] ಶೇಷ-ಗರುಡರಿಬ್ಬರಿಗೂ ಸಂತೋಷವೇ ಉಂಟಾಯಿತು ಎಂದು ಭಾವ; ಗರುಡಶೇಷರಿಬ್ಬರು ಸಮಾನಕಕ್ಷೆಯವರು ಎಂಬ ವಿಶೇಷವು ಇದರಲ್ಲಿ ಸೂಚಿತ.

೨. ಬಲಿಯ ನಿಗ್ರಹದಿಂದ ಅವನ ಕಡೆಯವರಿಗೆಲ್ಲ ಸಂತಸವೇ ಆದಂತೆ ಈ ಪ್ರಸಂಗ ಎಂದು ತಿಳಿಯಬೇಕು; ಅಕ್ಷಿಕರ್ಣ –ಸರ್ಪ, ಕಾಳಿಯ; ತಲ್ಪ – ಹಾಸಿಗೆ.

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಶ್ಚತುರ್ಥೋ ಮುದಾಮ್ ॥೭೩॥**

॥ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಚತುರ್ಥಃ ಸರ್ಗಃ ॥ ೪ ॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶ-ವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ನಾಲ್ಕನೆಯ ಸರ್ಗವು ಮುಕ್ತಾಯವಾಯಿತು.

★★★★★

---

೧. ಶೇಷಗರುಡಯೋಃ ಸಮಾನತ್ವಾದುಭಯಪ್ರೀತಿಕರಣಸ್ಯಾವಶ್ಯಕತ್ವಾದಿತಿ ಭಾವಃ। –ವ್ಯಾ.

# ೫. ಪಂಚಮ ಸರ್ಗ

(ಶ್ರೀಕೃಷ್ಣನಿಂದ ದಾವಾಗ್ನಿಪಾನ - ೧,೨; ವ್ರಜಪ್ರವೇಶ - ೩; ಗ್ರೀಷ್ಮಋತುವರ್ಣನೆ - ೪-೬; ಉಗ್ರಾಸುರನ ವಧೆ - ೭-೧೪; ಪುನಃ ಗ್ರೀಷ್ಮಋತುವಿನ ವರ್ಣನೆ - ೧೫-೧೯; ನೀಲಾಸ್ವಯಂವರ - ೨೦; ಧೇನುಕಾಸುರಮಥನ - ೨೧-೨೭; ಪ್ರಲಂಬಾಸುರಸಂಹಾರ - ೨೮; ಪುನಃ ದಾವಾಗ್ನಿಪಾನ - ೨೯; ವರ್ಷಋತುವರ್ಣನೆ - ೩೦-೩೬; ಶರದೃತುವರ್ಣನೆ - ೩೭-೩೯; ಹೇಮಂತಋತುವರ್ಣನೆ - ೪೦, ೪೧; ಗೋಪಿಯರು ಮಾಡಿದ ಕಾತ್ಯಾಯನೀವ್ರತ - ಕೃಷ್ಣಾನುಗ್ರಹ - ೪೨-೪೯; ವಿಪ್ರಪತ್ನಿಯರಿಂದ ಅನ್ನಸಮರ್ಪಣೆ - ೫೦-೫೪; ಗೋವರ್ಧನೋದ್ಧರಣ - ೫೫-೫೮; ಸರ್ಗೋಪಸಂಹಾರ - ೫೯)

ಶ್ರೀಕೃಷ್ಣನಿಂದ ದಾವಾಗ್ನಿಪಾನ

ಸ ಯಾಮುನಾಂಭಸ್ಯವಗಾಹನೋತ್ಥ-
ಶರೀರಶೈತ್ಯಂ ಶಮಯನ್ನಿವೇಶಃ ।
ನಿಶಿ ಪ್ರವೃದ್ಧಂ ನವಕಾನನಾಗ್ನಿಂ
ಪಪೌ ದಯಾಲುಃ ಸ್ವಜನಸ್ಯ ಗುಪ್ತ್ಯೈ ॥ ೧ ॥

ಯಮುನೆಯ ನೀರಿನಲ್ಲಿ ಮುಳುಗಿದ್ದರಿಂದ ಉಂಟಾದ ದೇಹದ ಶೀತವನ್ನು ಪರಿಹರಿಸಿ-ಕೊಳ್ಳಲೆಂಬಂತೆ ದಯಾಳುವಾದ, ಸರ್ವಸಮರ್ಥನಾದ ಆ ಶ್ರೀಕೃಷ್ಣನು ತನ್ನ ಜನರ ರಕ್ಷಣೆಗೆಂದು ರಾತ್ರಿಯಲ್ಲಿ ಪ್ರಜ್ವಲಿಸಿದ ಕಾಡ್ಗಿಚ್ಚನ್ನು ಪಾನಮಾಡಿದ.

ವಿ. : ೧. ಶ್ರೀಕೃಷ್ಣನು ಕಾಳಿಯ ಮಥನಮಾಡಿದ ದಿನದಂದು ರಾತ್ರಿಯಲ್ಲಿ ಕಾಡ್ಗಿಚ್ಚನ್ನು ಪಾನಮಾಡಿ ಗೋಗೋಪರನ್ನು ರಕ್ಷಿಸಿದ ಎಂದರ್ಥ.

೨. ಹಾಗೆ [೧]ಕಾಡ್ಗಿಚ್ಚನ್ನು ಪಾನಮಾಡಿದ್ದನ್ನು ಅಂದು ಕಾಳಿಯಮಥನಕ್ಕಾಗಿ ಬಹು ಹೊತ್ತು ಯಮುನಾನದಿಯಲ್ಲಿ ಮುಳುಗಿದ್ದರಿಂದ ಉಂಟಾದ ಶೀತವನ್ನು ಪರಿಹರಿಸಿಕೊಳ್ಳಲೋ ಎಂಬಂತೆ ಎಂದು ಉತ್ಪ್ರೇಕ್ಷಿಸಿರುವರು; ಇದು ಅಗ್ನಿಯು ಶೀತಕ್ಕೆ ಪರಿಹಾರ ಎಂಬ ಶ್ರುತಿವಾಕ್ಯವನ್ನು ಆಧರಿಸಿದ ಉತ್ಪ್ರೇಕ್ಷೆ; **ಅಂಭಃ** – ನೀರು.

೩. ಶ್ರೀಕೃಷ್ಣನಿಗೆ ಶೀತಾದಿಗಳ ಬಾಧೆ ಸರ್ವಥಾ ಇಲ್ಲ ಎಂದು ಸೂಚಿಸಲು **ಈಶಃ** ಎಂಬ ವಿಶೇಷಣವನ್ನು ಉಪಯೋಗಿಸಿರುವರು; **ಕಾನನಾಗ್ನಿ** – ಕಾಡ್ಗಿಚ್ಚು; **ಗುಪ್ತಿ** – ರಕ್ಷಣೆ.

---

೧. "ಅಗ್ನಿರ್ಹಿಮಸ್ಯ ಭೇಷಜಮ್" ಇತಿ ಶ್ರುತೇರಿತಿ ಭಾವಃ। -ವ್ಯಾ.
(ವಾಜಸನೇಯೀ ಸಂಹಿತಾ - ೨೩/೧೦, ತೈತ್ತಿರೀಯ ಸಂಹಿತಾ - ೭/೪/೧೮)

### ಅಗ್ನಿಯ ಜನಕನೂ ಶ್ರೀಕೃಷ್ಣನೇ

ಸ್ತುವಂತು ಸರ್ವೇ ವನವಹ್ನಿಪಾನ-
ಕೃತಾನುಭಾವಂ ನ ವಯಂ ಮುರಾರೇಃ ।
ಸ್ವಜನ್ಮಭೂಮಿಂ ಶಿಖಿನಿ ಪ್ರವಿಷ್ಟೇ
ಕ ಈಶಿತುಸ್ತೇನ ಕೃತೋಽನುಭಾವಃ ॥ ೨ ॥

ಎಲ್ಲರೂ ಬೇಕಾದರೆ ಮುರಾರಿಯಾದ ಶ್ರೀಕೃಷ್ಣನ ಕಾಡ್ಗಿಚ್ಚನ್ನು ಪಾನಮಾಡಿದ ಮಹಿಮೆ-ಯನ್ನು ಹಾಡಿಹೊಗಳಲಿ; ಆದರೆ ನಾವು ಹಾಗೆ ಮಾಡಲಾರೆವು; ಅಗ್ನಿಯು ತನ್ನ ಜನ್ಮಭೂಮಿಯಾದ ಶ್ರೀಕೃಷ್ಣನ ಬಾಯನ್ನು ಪ್ರವೇಶಿಸಿದ್ದರಲ್ಲಿ ಈಶನಾದ ಆ ಶ್ರೀಕೃಷ್ಣ ಮಾಡಿದ ಮಹಿಮೆ ಏನು ತಾನೆ ಇದೆ?

ವಿ.: ೧. ಮೇಲ್ನೋಟಕ್ಕೆ ಇದು ಶ್ರೀಕೃಷ್ಣನ ಪ್ರಭಾವದ ಹಿರಿಮೆಯನ್ನು ಅಲ್ಲಗಳೆಯುವ ವಾಕ್ಯದಂತೆ ಕಾಣುವುದು; ಆದರೆ ವಾಸ್ತವವಾಗಿ ಅಗ್ನಿಯು ಸೃಷ್ಟಿಯಾದದ್ದೇ ಶ್ರೀಕೃಷ್ಣನ ಮುಖದಿಂದ ಎಂಬ [೧]ಪುರುಷಸೂಕ್ತೋಕ್ತ ಮಹಿಮೆಯನ್ನು ತಿಳಿಸುವ ವೈಖರಿಯಾಗಿದೆ.

೨. [೨]ಜನ್ಮಸ್ಥಾನದಲ್ಲೇ ದೇವತೆಗಳಿಗೆ ಲಯ[೩] ಎಂಬ ಶಾಸ್ತ್ರೋಕ್ತ ತತ್ತ್ವವನ್ನು [೪]ಅಗ್ನಿಗೆ ಶ್ರೀಕೃಷ್ಣನ ಮುಖದಲ್ಲಿ ಲಯ ಎಂಬ ಇಲ್ಲಿಯ ವಿವರದಿಂದ ತಿಳಿಸಿರುವರು.

೩.. ಈ ರೀತಿಯಾದ ವರ್ಣನೆಗೆ ವ್ಯಾಜಸ್ತುತಿ ಅಲಂಕಾರ ಎಂದು ಹೆಸರು.

### ಮರಳಿ ವೃಂದಾವನಕ್ಕೆ

ಸ್ವಜನೈರ್ನಿಜಪಾದಾಬ್ಜಭಜನೈಃ ಸಹಿತಸ್ತತಃ ।
ವ್ರಜಮಾರ್ಜಿತಸರ್ವಾರ್ಥವ್ರಜಂ ನಿವಿವಿಶೇಽಚ್ಯುತಃ ॥ ೩ ॥

ಆ ಬಳಿಕ ಅಚ್ಯುತನಾದ ಶ್ರೀಕೃಷ್ಣನು ತನ್ನ ಪಾದಕಮಲವನ್ನು ಸೇವಿಸುವ ಸ್ವಜನರೊಂದಿಗೆ ಕೂಡಿಕೊಂಡು ಸಮಸ್ತ ಪುರುಷಾರ್ಥವೃಂದವನ್ನು ಪಡೆದ ವೃಂದಾವನವನ್ನು ಪ್ರವೇಶಿಸಿದ.

---

೧. ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ । - ಪುರುಷಸೂಕ್ತ(ಋ.)

೨. ವಹ್ನೌ ಸ್ವಜನ್ಮಭೂಮಿಂ ಪ್ರವಿಷ್ಟೇ ಸತಿ ಶ್ರೀಕೃಷ್ಣಸ್ತುತಿಕರಣಂ ವ್ಯಧಿಕರಣಮಿತಿ ಭಾವಃ ।

೩.. ''...ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು ।
ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ॥
ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತಃ'' ಇತಿ ॥ -ಬ್ರಹ್ಮಸೂತ್ರಭಾಷ್ಯ (೪/೧/೬)

೪. ಸ್ವಜನ್ಮಭೂಮಿಂ ಸ್ವೋತ್ಪತ್ತಿಸ್ಥಾನಂ ಮುಖಮ್ । ''ಮುಖಾದಿಂದ್ರಶ್ಚಾಗ್ನಿಶ್ಚ''ಇತಿ ಶ್ರುತೇಃ । -ವ್ಯಾ.

### ಗ್ರೀಷ್ಮಋತುವಿನ ಆಗಮನ

ನಿಜಬಲಕರಮಗ್ನಿಂ ಕೃಷ್ಣಪೀತಂ ನಿಶಮ್ಯ
ಜ್ವಲಿತ ಇವ ಸಸೂರ್ಯಃ ಪ್ರಾದುರಾಸೀನ್ನಿದಾಘಃ ।
ಸ್ವಕೃತಿಮಥ ಸನಾಮ್ನಾ ನಿರ್ಣಿನೀಷುರ್ವಿಚಿಂತ್ಯ
ದ್ರುತಮೃತುಪತಿನೇವ ಪ್ರಾಪ ಗೋಪೋ ವನಾಂತಮ್ ॥ ೪ ॥

ತನಗೆ ಬಲನೀಡುವ ಅಗ್ನಿಯನ್ನು ಶ್ರೀಕೃಷ್ಣ ಪಾನಮಾಡಿದ್ದನ್ನು ಕೇಳಿ ಕೆರಳಿದನೋ ಎಂಬಂತೆ ಸೂರ್ಯನೊಂದಿಗೆ ಗ್ರೀಷ್ಮಋತುವು ಕಾಣಿಸಿಕೊಂಡಿತು; ಬಳಿಕ ತನ್ನ ಸಮಾನನಾಮನಾದ ಋತುಪತಿಯಾದ ವಸಂತನೊಂದಿಗೆ ಸಮಾಲೋಚಿಸಿ, ತನ್ನ ಕರ್ತವ್ಯವನ್ನು ನಿಶ್ಚಯಿಸಲೆಂಬಂತೆ ಗೋಪಾಲಕನಾದ ಶ್ರೀಕೃಷ್ಣನು ವನದ ಮಧ್ಯವನ್ನು ಬೇಗನೇ ತಲುಪಿದ.

ವಿ. : ೧. ವಸಂತಋತುವಿನ ಬಳಿಕ ಗ್ರೀಷ್ಮಋತು ಕಾಲಿಟ್ಟಿತು ಎಂದರ್ಥ.

೨. ಗ್ರೀಷ್ಮಋತುವಿನಲ್ಲಿ ಅಗ್ನಿಯು ಜೊತೆ ಸೇರಿದಾಗ ತಾಪ ಹೆಚ್ಚುವುದು; ಅದಕ್ಕಾಗಿ ಅಗ್ನಿಯನ್ನು [೧]ಗ್ರೀಷ್ಮಕ್ಕೆ ನಿಜಬಲಕರ ಎಂಬುದಾಗಿ ಕರೆದಿರುವರು.

೩. [೨]ಗ್ರೀಷ್ಮಋತುವಿನಲ್ಲಿ ಬಿಸಿಲಿನ ಬೇಗೆ ಹೆಚ್ಚು; ಅದಕ್ಕಾಗಿ ಸಸೂರ್ಯಃ ಎಂದಿರುವರು.

೪. [೩]ಒಂದೇ ಹೆಸರಿನವರಲ್ಲಿ ಪರಸ್ಪರ ಸದಾ ಪ್ರೀತಿ; ವಸಂತಕ್ಕೆ ಮಾಧವ ಎಂದು ಹೆಸರು, ಶ್ರೀಕೃಷ್ಣನಂತೂ ಮಾಧವನೇ, ಅದಕ್ಕಾಗಿ ಸನಾಮ್ನಾ ಎಂದಿರುವರು.

೫. ಸಾಮಾನ್ಯವಾಗಿ ಪ್ರಿಯರೊಂದಿಗೆ ಯೋಜನೆಗಳನ್ನು ರೂಪಿಸುವುದುಂಟು ; ಅದನ್ನು ತೋರಿಸಿಕೊಡಲೆಂಬಂತೆ ಶ್ರೀಕೃಷ್ಣ ವಸಂತನೊಂದಿಗೆ ಸಮಾಲೋಚನೆ ನಡೆಸಲೆಂದು ವನಕ್ಕೆ ಬಂದ ಎಂದು ಉತ್ಪ್ರೇಕ್ಷಿಸಿರುವರು ; ನಿದಾಘ – ಗ್ರೀಷ್ಮ; ದ್ರುತಂ – ಬೇಗನೇ.

### ಗ್ರೀಷ್ಮಋತುವಿನ ವರ್ಣನೆ

ತಾಪೇ ತದ್ವನಮಾಧವೇನ ವಿಜಿತೇ ಭಾಸ್ವತ್ಪ್ರಭಾಸಂಭವೇ
ದಾವೇ ಚ ವ್ರಜಮಾಧವೇನ ದಮಿತೇ ಗ್ರೀಷ್ಮೋ ಜಜೃಂಭೇ ಕ್ಷಣಾತ್ ।
ಕೋಪೇನೇವ ವಸಂತಪುಷ್ಪನಿಚಯಂ ಶುಷ್ಕಂ ವಿಧಾಯಾನಿಲಂ
ತಪ್ತಂ ಚಂಪಕಕಂಪಿತಾಂಶ್ಚ ಮಧುಪಾನ್ ಮೂಕಾನ್ ಪಿಕಾದೀನ್ ಖಗಾನ್॥೫॥

---

೧. ಅಗ್ನಿಂ ದಾವಾಗ್ನಿಂ ಕೃಷ್ಣೇನ ಪೀತಂ ನಿಶಮ್ಯ ಶ್ರುತ್ವಾ ಜ್ವಲಿತ ಇವ ಸ್ವಸಹಾಯನಾಶಜನ್ಯಕೋಪಾತ್ ಪ್ರಜ್ವಲಿತ ಇವ ಸಸೂರ್ಯಃ ಏಕಸ್ಮಿನ್ ಸಹಾಯೇ ಗತೇ ಸಹಾಯಾಂತರೇಣ ಕಾರ್ಯಂ ಸಾಧಯಾಮೀತಿ ವಾ ಸೂರ್ಯೇಣ ಸಹಿತಃ ಸನ್ ಗ್ರೀಷ್ಮೇ ಸೂರ್ಯಸ್ಯಾತಿತೈಕ್ಷ್ಣ್ಯಾದಿತಿ ಭಾವಃ । –ವ್ಯಾ.

೨. ಗ್ರೀಷ್ಮೋಽಹಿ ದಾವಾಗ್ನಿನಾ ಲೋಕಾನ್ ಸಂತಾಪಯತೀತಿ ಭಾವಃ । –ವ್ಯಾ.

೩. ಏಕನಾಮ್ನೋಃ ಸದಾ ಪ್ರೀತಿರಿತಿ ವಸಂತಸ್ಯ ಸಮಾನನಾಮತ್ವೇನ ಶ್ರೀಕೃಷ್ಣಸುಹೃತ್ತ್ವಮಿತಿ ಭಾವಃ –ವ್ಯಾ.

ಸೂರ್ಯನ ಬಿಸಿಲಿನಿಂದ ಉಂಟಾದ ತಾಪವು ವೃಂದಾವನದಲ್ಲಿನ ಮಾಧವ(ವಸಂತ)-ನಿಂದ ಉಪಶಮನಗೊಂಡಿತ್ತು; ಕಾಡ್ಗಿಚ್ಚನ್ನು ಗೋಕುಲದ ಶ್ರೀಕೃಷ್ಣ ನಂದಿಸಿದ್ದ; ಬಳಿಕ ಗ್ರೀಷ್ಮವು ವಿಜೃಂಭಿಸತೊಡಗಿತು; ಕೋಪದಿಂದೆಂಬಂತೆ ವಸಂತಕಾಲದ ಪುಷ್ಪವೃಂದವನ್ನು ಒಣಗಿಸಿತು. ಗಾಳಿ ಬಿಸಿಯಾಯಿತು; ಸಂಪಿಗೆಹೂಗಳ [1]ಪರಿಮಳದಿಂದಾಗಿ ದುಂಬಿಗಳು ಮಂಕಾದವು. ಅದರಂತೆ ಕೋಗಿಲೆ ಮೊದಲಾದವುಗಳು ಧ್ವನಿಗೈಯ್ಯುವುದನ್ನು ನಿಲ್ಲಿಸಿದವು.

ವಿ. : ೧. ಬಿಸಿಲಿನ ತಾಪವು ಮರದ ನೆರಳನ್ನು ಆಶ್ರಯಿಸಿದಾಗ ಉಪಶಮನಹೊಂದುವುದು. ಕಾಡ್ಗಿಚ್ಚನ್ನಂತೂ ಕೃಷ್ಣ ನುಂಗಿಯೇ ಬಿಟ್ಟಿದ್ದ. ಹೀಗಾಗಿ [2]ಗ್ರೀಷ್ಮದ ತಾಪವು ಕುಗ್ಗುವಂತಾಗಿದ್ದಿತು ಎಂದರ್ಥ.

೨. ಗ್ರೀಷ್ಮಕಾಲದಲ್ಲಿ ವಸಂತಕಾಲದ ಪುಷ್ಪಗಳು ಬಾಡುವವು. ಬಿಸಿಲಿನ ಬೇಗೆಗೆ ಮಂದಾನಿಲವು ಬಿಸಿಯಾಗುವುದು. ಸಂಪಿಗೆಹೂವಿನ ಪರಿಮಳಕ್ಕೆ ದುಂಬಿಗಳೂ ಮಂಕಾಗುವವು. [3]ಕೋಗಿಲೆ ಮೊದಲಾದ ಪಕ್ಷಿಗಳು ತಮ್ಮ ಗೂಡನ್ನು ಸೇರಿ ಹಾಡುವುದನ್ನು ಸಹ ನಿಲ್ಲಿಸುವವು ಎಂಬ ವಿವರ ಉತ್ತರಾರ್ಧದಲ್ಲಿ ನಿರೂಪಿತವಾಗಿದೆ; ದುಂಬಿಗಳಿಗೆ ಸಂಪಿಗೆ ಹೂವಿನ ಪರಿಮಳ ಅಹಿತ; ಅದರಂತೆ ಕೋಗಿಲೆಗಳಿಗೆ ಗ್ರೀಷ್ಮವು ಅಹಿತ ಎಂಬ ಹಿನ್ನೆಲೆಯಲ್ಲಿ ಈ ನಿರೂಪಣೆ ಬಂದಿದೆ.

### ಶ್ರೀಕೃಷ್ಣನ ವೈರಿಯಂತೆ ಕಾಣಿಸಿಕೊಂಡ ಗ್ರೀಷ್ಮ

**ಪಾಥಃ ಶೀತಮಶೀತಲೋಷ್ಣಧರಿಣೀಂ ಭಾಸ್ವದ್ಬಲೇನೋಷ್ಣಯ-**
**ನ್ನೂರ್ಧ್ವಂ ಗಂಧವಹಂ ನಯನ್ ತ್ರಿವೃತಮಪ್ಯಮ್ಮಾತ್ರಪಾತ್ರಂ ವಪುಃ ।**
**ಕುರ್ವನ್ ಕೃಷ್ಣಕ್ಲೃತೇರ್ವಿರೋಧಮಿವ ತದ್ವಾಸಂ ಚ ವಾಃ ಶೋಷಯನ್**
**ವಿಶ್ವಂ ತಸ್ಯ ವಶಂ ದವೇನ ಚ ದಹನ್ ವೈರೀವ ಸೋಽದೃಶ್ಯತ ॥ ೬ ॥**

ಗ್ರೀಷ್ಮಋತು ತಂಪಾದ ನೀರನ್ನೂ ಹಾಗೂ ಬಿಸಿ, ತಂಪೂ ಎರಡೂ ಅಲ್ಲದ ಭೂಮಿಯನ್ನೂ ಸೂರ್ಯನ ಸಹಕಾರದಿಂದ ಬಿಸಿಯನ್ನಾಗಿಸಿತು, ಗಾಳಿಯನ್ನು ಮೇಲಕ್ಕೆ ಸಾಗಿಸಿತು, ನೀರು, ಅಗ್ನಿ ಹಾಗೂ ಪೃಥಿವಿಗಳಿಂದ ಕೂಡಿದ ದೇಹವನ್ನು ಕೇವಲ ಜಲಮಯವನ್ನಾಗಿಸಿತು, ಕೃಷ್ಣನ ವಾಸಸ್ಥಾನವಾದ ನೀರನ್ನು ಆವಿಯಾಗಿಸಿತು, ಹೀಗೆ ಶ್ರೀಕೃಷ್ಣನ ಅಧೀನವಾದ ಜಗತ್ತನ್ನೆಲ್ಲಾ ಕಾಡ್ಗಿಚ್ಚಿನಿಂದ ಸುಡುತ್ತಾ, ಅವನ ವೈರಿ ಎಂಬಂತೆ ಕಾಣಿಸಿಕೊಂಡಿತು.

---

೧. ಭೃಂಗಾಣಾಂ ಚಂಪಕಗಂಧಸ್ಯಾನಿಷ್ಟತ್ವಾತ್ ಇತಿ ಭಾವಃ। -ವ್ಯಾ.

೨. ಅನೇನ ಗ್ರೀಷ್ಮಸಹಾಯಸೂರ್ಯಸ್ಯ ಕೃಷ್ಣಸಹಾಯೇನ ವಸಂತೇನ ಪರಾಭವೋ ಜಾತ ಇತಿ ದ್ರಷ್ಟವ್ಯಮ್। -ವ್ಯಾ.

೩. ಪಿಕಾದೀನ್ ಖಗಾನ್ ಪಕ್ಷಿಗಣಾನ್ ಮೂಕಾಂಶ್ಚ ವಿಧಾಯ ಉಷ್ಣಕಾಲೇ ಪಕ್ಷಿಣೋ ವೃಕ್ಷಕೋಟರೇಷು ಮೂಕೀಭೂಯ ತಿಷ್ಠಂತೀತಿ ಭಾವಃ। -ವ್ಯಾ.

ವಿ.: ೧.ಗ್ರೀಷ್ಮದ ಬೇಗೆಗೆ ತಣ್ಣನೆಯ ಸ್ವಭಾವದ ನೀರು ಸಹ ಬಿಸಿಯಾಗುವುದು. ಭೂಮಿಯು ಬಿಸಿಯನ್ನು ಹೊಂದುವುದು. ಬಿಸಿಲಿನ ಬೇಗೆಗೆ ಗಾಳಿಯು ಮೇಲಕ್ಕೆ ಸಾಗಿ ಸುಂಟರಗಾಳಿಯಾಗಿ ಪರಿವರ್ತನೆ ಹೊಂದುವುದು; ದೇಹದಲ್ಲಿನ ನೀರಿನ ಅಂಶ ಕಡಿಮೆಯಾಗಿ ಹೆಚ್ಚು ನೀರು ಕುಡಿಯಬೇಕೆನ್ನಿಸುವುದು; ಜಲಾಶಯಗಳಲ್ಲಿನ ನೀರು ಆವಿಯಾಗಿ ಹೋಗುವುದು; ಈ ಸಹಜ ಕ್ರಿಯೆಗಳು ಆ ಪ್ರಸಂಗದಲ್ಲಿ ಶ್ರೀಕೃಷ್ಣನಿಗೆ ವಿರುದ್ಧವಾದ್ದರಿಂದ ಅದನ್ನು ಮಾಡಿದ ಗ್ರೀಷ್ಮ ಅವನಿಗೆ ವೈರಿಯಂತೆ ಕಾಣಿಸಿತು ಎಂದು ಭಾವ.

೨. ನೀರು ಶ್ರೀಕೃಷ್ಣನ ನೆಲೆ ಎಂಬುದು ನಾರಾಯಣ[೧] ಶಬ್ದದ ಅರ್ಥ; ಗ್ರೀಷ್ಮಕಾಲದಲ್ಲಿ ಜಲದ ಅಂಶ ಕಡಿಮೆಯಾಗುವುದರಿಂದ ಶ್ರೀಕೃಷ್ಣನ ನೆಲೆಯನ್ನೇ ಗ್ರೀಷ್ಮ ನಾಶಮಾಡಿದಂತೆ ಕಾಣುವುದು; ಅಂತಹ ಕಾರ್ಯ ಮಾಡುವವನು ಶತ್ರುವೇ ಆದ್ದರಿಂದ ಗ್ರೀಷ್ಮಋತುವನ್ನು ಇಲ್ಲಿ ಶತ್ರುವೇ ಎಂದು ಉತ್ಪ್ರೇಕ್ಷಿಸಿರುವರು. ಒಟ್ಟಾಗಿ ಶ್ರೀಕೃಷ್ಣನ ಸೃಷ್ಟಿಗೆ ವಿರುದ್ಧವಾದ ರೀತಿಯಲ್ಲೆಂಬಂತೆ ಗ್ರೀಷ್ಮ ವರ್ತಿಸಿತು ಎಂದು [೨]ಭಾವ; ದವ – ಕಾಡ್ಗಿಚ್ಚು; ಗಂಧವಹ – ವಾಯು.

೩. ಗ್ರೀಷ್ಮಕಾಲದಲ್ಲಿ [೩]ಸೂರ್ಯನ ಬಿಸಿಲು ಹೆಚ್ಚುವುದು; [೪]ಭೂಮಿ, ನೀರು ಮೊದಲಾದವುಗಳು ಬಿಸಿಯಾಗುವುವು; [೫]ಸುಂಟರಗಾಳಿ ಹುಟ್ಟುವುದು, [೬]ಬಾಯಾರಿಕೆ ಹೆಚ್ಚುವುದು; ನೀರು ಆವಿಯಾಗುವುದು, ಕಾಡ್ಗಿಚ್ಚಿನಿಂದ [೭]ಕಾಡಿನಲ್ಲಿನ ಪ್ರಾಣಿಗಳು ನಾಶಹೊಂದುವುದು ಸಹಜ ಧರ್ಮಗಳು ; ಪಾಥಃ – ನೀರು; ವಾಃ – ನೀರು; ಭಾಸ್ವಾನ್ – ಸೂರ್ಯ.

### ವಿಷವೃಕ್ಷದ ರೂಪದಲ್ಲಿ ಕಾಣಿಸಿಕೊಂಡ ಉಗ್ರಾಸುರ

**ಸುಚ್ಛಾಯೈಃ ಶುಕಮಂಡಿತೈಃ ಶುಭಫಲೈರುದ್ಯತ್ಪ್ರಸೂನೋದ್ಗಮೈ-**
**ರ್ವೃಕ್ಷೈರ್ಮಾಧವಪಕ್ಷಗೈಃ ಪ್ರಶಮಿತೇ ಖೇದೇ ನಿದಾಘೋದ್ಭವೇ ।**
**ದೈತ್ಯಃ ಕೋऽಪಿ ತರುತ್ವಮೇತ್ಯ ವರತಸ್ತತ್ಕ್ಷಪಾತೀವ ತ-**
**ಚ್ಛಾಯಾವಾಸಸುಖಾತ್ ಸಹಸ್ರಗುಣಿತಂ ಶೋಕಂ ವಿತೇನೇ ವನೇ ॥ ೭ ॥**

---

೧. ''ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥'' ಇತಿ –ಮನುಸ್ಮೃತಿ (೧೦/೧)

೨. ಸ ಗ್ರೀಷ್ಮಃ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತಿ ಶ್ರುತೇಃ ವಿಶ್ವಸ್ಯ ಕೃಷ್ಣಸಂಸೃಷ್ಟತ್ವಂ ನಿಶಮ್ಯ ಕೃಷ್ಣಕೃತೇಃ ಶ್ರೀಕೃಷ್ಣಕರ್ಮಣಃ ವಿರೋಧಂ ಕುರ್ವನ್ನಿವ ಕೃಷ್ಣೇನ ಯದ್ಯದ್ವಸ್ತು ಯಾದೃಶಂ ಯಾದೃಶಂ ಕೃತಂ ತಸ್ಯ ತಸ್ಯ ವಸ್ತುನಃ ವೈಪರೀತ್ಯಂ ಕುರ್ವನ್ನಿವ । – ವ್ಯಾ.

೩. ಅನೇನಾರ್ಕಸ್ಯ ತೈಕ್ಷ್ಣ್ಯಂ ಭೂಜಲಾದೀನಾಮೌಷ್ಣ್ಯಂ ಚಕ್ರವಾತೋತ್ಪತ್ತಿಃ ಪಿಪಾಸಾ ಜಲಶೋಷಣಂ ದಾವಾಗ್ನಿನಾ ವನಸ್ಥಪ್ರಾಣನಾಶಶ್ಚೇತಿ ಗ್ರೀಷ್ಮಧರ್ಮಾ ವರ್ಣಿತಾಃ । –ವ್ಯಾ.

೪. ಅನುಷ್ಣಾಶೀತಸ್ಪರ್ಶವತೀಂ ಭೂಮಿಮಿತ್ಯರ್ಥಃ । –ವ್ಯಾ.

೫. ಗಂಧವಹಂ ವಾಯುಂ ತಿರ್ಯಗ್ಗಮನಸ್ವಭಾವಂ ವಾಯುಂ ಊರ್ಧ್ವಂ ಉಪರಿ ನಯನ್ ಪ್ರಾಪಯನ್ ಗ್ರೀಷ್ಮೇ ಚಕ್ರವಾತ್ಯಾಯಾ ಊರ್ಧ್ವಗಮನಾದಿತಿ ಭಾವಃ । –ವ್ಯಾ.

೬. ಗ್ರೀಷ್ಮೇ ಬಹುಜಲಪಾನಕರಣಾದಿತಿ ಭಾವಃ । –ವ್ಯಾ.

೭. ತದಾಶ್ರಯತ್ವನಿಮಿತ್ತಕನಾರಾಯಣನಾಮ್ನೈವ ನಾಶಿತಂ ಭವೇದಿತಿ ಭಾವಃ । –ವ್ಯಾ.

ದಟ್ಟವಾದ ನೆರಳು, ಗಿಳಿಗಳ ಶೋಭೆ, ಉತ್ತಮ ಹಣ್ಣುಗಳು, ಕಾಣಿಸಿಕೊಂಡ ಹೂವಿನ ಮೊಗ್ಗುಗಳು, ಇವುಗಳಿಂದ ಕೂಡಿದ ವಸಂತಕಾಲದ ವೃಕ್ಷಗಳಿಂದ, ಗ್ರೀಷ್ಮಕಾಲದ ಖೇದವು ಉಪಶಮನ ಹೊಂದಲು, ದೈತ್ಯನೊಬ್ಬನು ವರಬಲದಿಂದಾಗಿ ವೃಕ್ಷದ ರೂಪವನ್ನು ಧರಿಸಿ, ಆ ಗ್ರೀಷ್ಮದ ಪಕ್ಷಪಾತಿ ಎಂಬಂತೆ, ಅದರ ನೆರಳಿನಲ್ಲಿ ನೆಲೆಸುವ ಸುಖಕ್ಕಿಂತ [೧]ಸಹಸ್ರಾರು ಪಟ್ಟು ಮಿಗಿಲಾದ ಶೋಕವನ್ನು ಆ ವೃಂದಾವನದಲ್ಲಿ ಉಂಟುಮಾಡಿದ.

ವಿ. : ೧. ಗ್ರೀಷ್ಮದ ಬೇಗೆಯು ಹೀಗೆ ವೃಂದಾವನದಲ್ಲಿನ ಬಗೆಬಗೆಯ ಸಮೃದ್ಧ ವೃಕ್ಷಗಳಿಂದ ಪುನಃ ಪರಿಹಾರವಾಯಿತು ; ಆದರೆ ಆ ಸುಖವನ್ನು ನಾಶಪಡಿಸುವಂತೆ ದೈತ್ಯನೊಬ್ಬನು ವೃಂದಾವನವನ್ನು ಕಂಗೆಡಿಸಿದ ಎಂದರ್ಥ.

೨. ಅದು ವಿಷವೃಕ್ಷವಾದ್ದರಿಂದ ಅದರ ನೆರಳೂ ಸಹ ನಲಿವಿನ ಬದಲು ನೋವನ್ನೇ ಉಂಟುಮಾಡುತ್ತಿದ್ದಿತು ಎಂದು ಭಾವ.

**ಸಜ್ಜನರ ಪ್ರಯಾಣಕ್ಕೆ ವಿಘ್ನಮಾಡುವ ಖಳರ ದುಷ್ಪ್ರವೃತ್ತಿ**

**ತರುತ್ವಮಪ್ಯಾಪ್ಯ ವನಂ ಮುರಾರೇ-**
**ರದೂಷಯದ್ದಂತ ವಿಷೈಃ ಸಮಂತಾತ್ ।**
**ಸ್ವನಾಸಿಕಾಚ್ಛೇದಮಪೀಹ ಸೋಢ್ವಾ**
**ಖಲೋ ನಿರುಂಧೇ ಖಲು ಸತ್ಪ್ರಯಾಣಮ್ ॥ ೮ ॥**

ಮರದ ರೂಪವನ್ನು ಸಹ ಧರಿಸಿ ಶ್ರೀಕೃಷ್ಣ ನೆಲೆಸಿದ ವೃಂದಾವನವನ್ನು ಆ ದೈತ್ಯನು ತನ್ನ ವಿಷದಿಂದ ಎಲ್ಲೆಡೆಯಲ್ಲೂ ಕಲುಷಿತಗೊಳಿಸಿದ; ದುಷ್ಟನು ತನ್ನ ಮೂಗನ್ನು ಕೊಯ್ದುಕೊಳ್ಳುವುದನ್ನು ಸಹಿಸಿಕೊಂಡಾದರೂ ಸಜ್ಜನರ ಪ್ರಯಾಣಕ್ಕೆ ತಡೆಯೊಡ್ಡುವನು; ಅಲ್ಲವೇ !

ವಿ. : ೧. ಹಾಗೆ ಆಗಮಿಸಿದ ದೈತ್ಯನು ವಿಷವೃಕ್ಷದ ರೂಪದಿಂದ ವೃಂದಾವನವನ್ನು ಕಂಗೆಡಿಸಿದ ಎಂದರ್ಥ.

೨. ತಾನು ವೃಕ್ಷದ ರೂಪವನ್ನು ಧರಿಸಿದರೂ ಸರಿ, ವೃಂದಾವನವನ್ನು ಕಂಗೆಡಿಸಬೇಕು ಎಂಬ ಅವನ ಪ್ರಯತ್ನ ತನ್ನ ಮೂಗನ್ನು ಕೊಯ್ದುಕೊಳ್ಳುವ ದುಃಖವನ್ನು ತಡೆದುಕೊಂಡಾದರೂ ಸಜ್ಜನರ ಪ್ರಯಾಣಕ್ಕೆ ವಿಘ್ನ ಉಂಟುಮಾಡುವ ದುಷ್ಟರ ಪ್ರಯತ್ನದಂತಹುದು ಎಂದರ್ಥ.

೩. ಇದರಿಂದ ದುಷ್ಟರು ತಮಗೆ ಕೇಡಾದರೂ ಸರಿ, ಇತರರಿಗೆ ಒಳಿತಾಗಬಾರದು ಎಂಬ ಕೆಟ್ಟ ಧ್ಯೇಯದವರು ಎಂಬ ತತ್ತ್ವ ನಿರೂಪಿತವಾಗಿದೆ; 'ಯೇ ತು ಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ' ಎಂಬ ಗುಂಪಿಗಿಂತಲೂ ಹೀನವೆನ್ನಿಸುವ ಪ್ರವೃತ್ತಿ ಇಂತಹವರದು.

---

೧. ಸಹಸ್ರಗುಣಪರಿಮಿತಂ ತತೋಽಪ್ಯಧಿಕಮಿತ್ಯರ್ಥಃ। -ವ್ಯಾ.

### ಬ್ರಹ್ಮವರದ ಉಗ್ರಾಸುರನ ಪ್ರತಾಪ

ವಿನಾಶ್ಯ ವೃಂದಾವನವಾಸಿಪಕ್ಷಿ-
ಮೃಗಾದಿನಾನಾವಿಧಜೀವವರ್ಗಮ್ ।
ವರಪ್ರದಾತುಸ್ತರಸಾ ವಿಧಾತು-
ರಸೌ ವಿಶಂಕೋ ವಿದಧೇ ಪ್ರತೀಪಮ್ ॥ ೯ ॥

ಅವನು ವೃಂದಾವನದಲ್ಲಿ ನೆಲೆಸಿದ್ದ ಪಕ್ಷಿಗಳು, ಮೃಗಗಳು ಮೊದಲಾದ ಬಗೆಬಗೆಯ ಜೀವಿಗಳ ಗುಂಪನ್ನು ವೇಗದಿಂದ ವಿನಾಶ ಮಾಡಿ ತನಗೆ ವರನೀಡಿದ ಬ್ರಹ್ಮದೇವರಿಗೆ ನಿಶ್ಶಂಕೆಯಿಂದ ವಿರೋಧವೆಸಗಿದ.

ವಿ. : ೧. ಆ ವಿಷವೃಕ್ಷದಿಂದಾಗಿ ಆ ವೃಂದಾವನದಲ್ಲಿದ್ದ ಸಕಲ ಜೀವಿವರ್ಗಕ್ಕೆ ಕೇಡಾಯಿತು ಎಂದು ಭಾವ.

೨. ಅವನು ಬ್ರಹ್ಮಬಲದಿಂದ ಕೂಡಿದ ದೈತ್ಯ ಎಂಬ ಅಂಶ ಇಲ್ಲಿ ಬಂದಿದೆ[೧].

೩. ಬ್ರಹ್ಮದೇವರು ಸೃಷ್ಟಿಮಾಡುವವರು; ಈ ದೈತ್ಯನು ಅಲ್ಲಿ[೨] ವಿನಾಶದ ಕಾರ್ಯವೆನ್ನಸಗಿದ. ಇದರಿಂದ ತನಗೆ ವರನೀಡಿದ ಬ್ರಹ್ಮದೇವರ ಪ್ರವೃತ್ತಿಗೆ ಪ್ರತಿಕೂಲವಾಗಿ ನಡೆದುಕೊಳ್ಳುವ ಅವನ ಅವಿವೇಕ ಎಷ್ಟು ಅಗಾಧ ಎಂಬ ವಿಷಯ ನಿರೂಪಿತವಾಗಿದೆ.

೪. ಅನುಗ್ರಹಿಸಿದವರಿಗೆ ಅನುಕೂಲವಾಗುವಂತೆ ನಡೆದುಕೊಳ್ಳುವುದು ಸಜ್ಜನರ ನೀತಿ; ಇಲ್ಲಿ ವರ ನೀಡಿದ ಬ್ರಹ್ಮದೇವರಿಗೆ ಪ್ರತಿಕೂಲವಾಗಿ ನಡೆದುಕೊಂಡ ಅವನು ಮಹಾದೈತ್ಯ[೩] ಎಂಬುದು ಸ್ಪಷ್ಟ

### ಉಗ್ರಾಸುರ ಮಾಡಿದ ಗೋಗೋಪರ ನಾಶ

ತದೀಯಗಂಧೇನ ಫಲೇನ ಪುಷ್ಪ-
ಕುಲೇನ ಮೂಲಾಶ್ರಯಣೇನ ಲೋಕಃ ।

---

೧. ಇತ್ಥಂ ಸುರಾಸುರಗಣೈರವಿಚಿಂತ್ಯದಿವ್ಯಕರ್ಮಾಣಿ ಗೋಕುಲಗತೇಽಗಣಿತೋರುಶಕ್ತೌ ।
ಕುರ್ವತ್ಯಜೇ ವ್ರಜಭುವಾಮಭವದ್ವಿನಾಶ ಉಗ್ರಾಭಿಧಾದಸುರತಸ್ತರುರೂಪತೋಽಲಮ್ ॥
ತದ್ಗಂಧತೋ ನೃಪಶುಮುಖ್ಯಸಮಸ್ತಭೂತಾನ್ಯಾಪುರ್ಮೃತಿಂ ಬಹುಲರೋಗನಿಪೀಡಿತಾನಿ ।
ಧಾತುರ್ವರಾಜ್ಜಗದಭಾವಕೃತೈಕಬುದ್ಧಿರ್ವಧ್ಯೋ ನ ಕೇನಚಿದಸೌ ತರುರೂಪದೈತ್ಯಃ ॥
ಸಂಕರ್ಷಣೇಽಪಿ ತದುದಾರವಿಷಾನುವಿಷ್ಟೇ ಕೃಷ್ಣೋ ನಿಜಸ್ಪರ್ಶತಸ್ತಮಪೇತರೋಗಮ್ ।
ಕೃತ್ವಾ ಬಭಂಜ ವಿಷವೃಕ್ಷಮಮುಂ ಬಲೇನ ತಸ್ಯಾನುಗೈಃ ಸಹ ತದಾಕೃತಿಭಿಃ ಸಮಸ್ತೈಃ ॥
ದೈತ್ಯಾಂಶ್ಚ ಗೋವಪುಷ ಆತ್ತವರಾನ್ ವಿರಿಂಚಾನ್ಮೃತ್ಯೂಜ್ಝಿತಾನಪಿ ನಿಪಾತ್ಯ ದದಾಹ ವೃಕ್ಷಾನ್ ।
ವಿಕ್ರೀಡ್ಯ ರಾಮಸಹಿತೋ ಯಮುನಾಜಲೇ ಸ ನೀರೋಗಮಾಶು ಕೃತವಾನ್ ವ್ರಜಮಬ್ಜನಾಭಃ ॥
-ಮ.ಭಾ.ತಾ.ನಿ.(೧೩/೪೪-೪೭)

೨. ತತ್ರತ್ಯಸ್ಯ ಜೀವವರ್ಗಸ್ಯ ನಾಶಕರಣಾದಿತಿ ಭಾವಃ । -ವ್ಯಾ.

೩. ಕೃತಘ್ನಾಃ ಖಲು ದುರ್ಜನಾಃ ಸ್ವೋಪಕಾರಿಣಾಮಪಿ ಅಪಕಾರಂ ಕುರ್ವಂತೀತಿ ಭಾವಃ । -ವ್ಯಾ.

ತದ್ವೈವ ನಾಶಂ ಕಿಲ ಯಾತಿ ಕೃಷ್ಣ-
ವಿಪಕ್ಷಮೈತ್ರೀ ಕಿಮು ಸೌಖ್ಯದಾತ್ರೀ ॥ ೧೦ ॥

ಆ ವಿಷವೃಕ್ಷದ ವಾಸನೆಯಿಂದ, ಹಣ್ಣಿನಿಂದ, ಪುಷ್ಪವೃಂದದಿಂದ; ಬುಡವನ್ನು ಆಶ್ರಯಿಸುವುದರಿಂದ ಜನರು ಕೂಡಲೇ ಸಾವನ್ನಪ್ಪುತ್ತಿದ್ದರು. ಕೃಷ್ಣನ ವಿರೋಧಿಗಳ ಒಡನಾಟ ಸುಖವನ್ನು ನೀಡೀತೇ?

ವಿ. : ೧. ಆ ವಿಷವೃಕ್ಷವು ಹಣ್ಣು, ಹೂವು, ಹಾಗೂ ನೆರಳನ್ನು ನೀಡುವ ವಿಚಿತ್ರ ವೃಕ್ಷವಾಗಿತ್ತು. ಜನರು ಅದರಿಂದ ಆಕರ್ಷಿತರಾಗಿ ಅದರ ಬಳಿಗೆ ತೆರಳಿ ಸಾವಿಗೆ ಗುರಿಯಾಗುತ್ತಿದ್ದರು ಎಂದರ್ಥ.

೨. ಶ್ರೀಕೃಷ್ಣನಿಗೆ ವಿರೋಧಿಯಾದ ಆ [೧]ದೈತ್ಯನ ಸಹವಾಸ ಮಾರಕವಾಗಿತ್ತು. ಶ್ರೀಹರಿಯ ವಿರೋಧಿಗಳ ಸಂಗ ಸರ್ವನಾಶಕ್ಕೆ ಕಾರಣ ಎಂಬ ತತ್ತ್ವ ಇದರಿಂದ ಸೂಚಿತ ಎಂದು ತಿಳಿಸಿರುವರು: ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ – ಶ್ರೀಮದ್ಭಾಗವತ (೫/೫/೨); ವಿಪಕ್ಷ – ವಿರುದ್ಧ ಪಕ್ಷ.

ಬಲರಾಮನನ್ನೂ ಪೀಡಿಸಿದ ಉಗ್ರಾಸುರ

ಕಿಂ ವಾಚ್ಯಮಸ್ಯಾತಿವಿಷೋಲ್ಬಣತ್ವಂ
ಯಸ್ಮಾತ್ ಸ ದರ್ವೀಕರವರ್ಗಮೌಲಿಃ ।
ರಾಮೋऽಪಿ ತತ್ಸಂಗತವಾಯುನೈವ
ಗ್ಲಾನಿಂ ಸತಾಂ ಗ್ಲಾನಿಹರೋऽಪ್ಯವಾಪ ॥ ೧೧ ॥

ಅದರ ಸಂಪರ್ಕ ಪಡೆದ ಗಾಳಿಯಿಂದಲೇ, ಸಜ್ಜನರ ನೋವನ್ನು ಪರಿಹರಿಸುವ, ಸರ್ಪಕುಲದ ಚಕ್ರವರ್ತಿಯಾದ ಬಲರಾಮನು ಸಹ ಕ್ಲೇಶಕ್ಕೆ ಒಳಗಾದ ಎಂದ ಮೇಲೆ ಆ ವೃಕ್ಷದ ವಿಷ ಅತ್ಯಂತ ಉಲ್ಬಣ ಎಂದು ಹೇಳಬೇಕಿದೆಯೇ?

ವಿ. : ೧. ಆ ಬ್ರಹ್ಮವರದಿಂದ ಕೂಡಿದ್ದ ಆ ದೈತ್ಯನ ವಿಷದ ಪರಿಣಾಮ ಬಲರಾಮನ ಮೇಲೂ ಉಂಟಾಯಿತು ಎಂಬುದು ಇಲ್ಲಿಯ ಮುಖ್ಯಾಂಶ; ದರ್ವೀಕರ – ಹಾವು; ಉಲ್ಬಣ – ಉತ್ಕಟ.

೨. ಬಲರಾಮ ವಿಷಕ್ಕೆ ಹೆಸರಾದ ಸರ್ಪಗಳಿಗೆ ಪ್ರಧಾನ; ಅಂತಹವನಿಗೂ ಆ ವಿಷದ ಬಾಧೆ ಉಂಟಾಯಿತು ಎಂದ ಮೇಲೆ [೨]ಅವನ ವಿಷ ಎಷ್ಟು ತೀಕ್ಷ್ಣ ಎಂದು ಸ್ಪಷ್ಟಪಡುವುದು ಎಂದು ಭಾವ; ಗ್ಲಾನಿ – ಶ್ರಮ.

---

೧. ದುರ್ಜನಮೈತ್ರ್ಯಾ ದುಃಖಕರತ್ವಾದಿತಿ ಭಾವಃ । –ವ್ಯಾ.

೨. ಶೇಷಾತ್ಮಕಬಲಭದ್ರಸ್ಯಾಪಿ ಗ್ಲಾನಿಕರತ್ವಾದಸ್ಯ ವಿಷೌತ್ಕಟ್ಯಂ ಕಿಂ ವರ್ಣನೀಯಮಿತ್ಯರ್ಥಃ । –ವ್ಯಾ.

### ಗೋಮುಖವ್ಯಾಘ್ರದಂತಿದ್ದ ಮಹಾವಿಷವೃಕ್ಷ

ಫಲೈಃ ಪ್ರಸೂನೈರ್ವಿಲಸತ್ಪ್ರವಾಲೈ-
ರ್ದಲೈರ್ವಿಲೋಲೈಃ ಸ ಶುಭಾಯಿತೋऽಪಿ।
ಬಿಭರ್ತಿ ಹಾಲಾಹಲಮೇವ ಮಧ್ಯೇ
ಖಲಃ ಪ್ರಕೃತ್ಯಾ ಖಲು ಗೂಢವೃತ್ತಿಃ ॥ ೧೨ ॥

ತನ್ನ ಹಣ್ಣುಗಳಿಂದ, ಹೂವುಗಳಿಂದ, ಹೊಳೆಯುವ ಚಿಗುರುಗಳಿಂದ, ಚಲಿಸುವ ದಳಗಳಿಂದ ಒಳ್ಳೆಯವನಂತೆ ಕಾಣುತ್ತಿದ್ದರೂ ಅವನು ತನ್ನ ಹೃದಯದಲ್ಲಿ ಮಾತ್ರ ಹಾಲಾಹಲವನ್ನೇ ತುಂಬಿಕೊಂಡಿದ್ದ; ದುಷ್ಟರು ಸ್ವಾಭಾವಿಕವಾಗಿಯೇ ಕಪಟಿಗಳು; ಅಲ್ಲವೇ !

ವಿ. : ಆ ವಿಷವೃಕ್ಷವು ತೋರಿಕೆಗೆ ಅತ್ಯಂತ ಆಕರ್ಷಕವಾಗಿ ಕಾಣುತ್ತಿದ್ದಿತು ಎಂದು ಭಾವ; ಆಕರ್ಷಣೆಯಿಂದಲೇ ಜನರನ್ನು ದಾರಿತಪ್ಪಿಸುವುದು ದುಷ್ಟರ ಲಕ್ಷಣ ಎಂಬ ತತ್ತ್ವ ಇಲ್ಲಿ ಸೂಚಿತ. ಪೂತನಿಯು ಆಕರ್ಷಕರೂಪದಿಂದ ಬಂದದ್ದು ಮೊದಲಾದವುಗಳು ಇದಕ್ಕೆ ಇತರ ನಿದರ್ಶನಗಳು ಎಂದು ತಿಳಿಯಬಹುದು.

### ಪಶುಪಕ್ಷಿಗಳಿಗೂ ಉಗ್ರಗಾಮಿಯಾದ ಉಗ್ರಾಸುರ

ಪತತ್ತ್ರಿಣಾಂ ಪತ್ರಫಲಾಶನಾನಾಂ
ವನೇऽತಿರಮ್ಯೇ ವಸತಾಂ ಸತಾಂ ಚ।
ನಿರಾಗಸಾಂ ದ್ರೋಹಮಹೋ ವ್ಯಧಾದ್ಯ-
ಸ್ತಮುಗ್ರನಾಮಾರ್ಹಚರಿತ್ರಮೂಹೇ ॥ ೧೩ ॥

ಪಾಪವರಿಯದ ಪಕ್ಷಿಗಳಿಗೆ, ಎಲೆ, ಹಣ್ಣುಗಳನ್ನು ತಿಂದು ಬದುಕುವ ಋಷಿಮುನಿಗಳಿಗೆ, ಆ ಅತಿಮನೋಹರವಾದ ಕಾಡಿನಲ್ಲಿ ನೆಲೆಸಿದ್ದ ಸಜ್ಜನರಿಗೆ ಆ ದೈತ್ಯ ದ್ರೋಹವೆಸಗಿದ; ಅವನನ್ನು ಉಗ್ರ ಎಂಬ ಹೆಸರಿಗೆ ಅನುಗುಣವಾದ ನಡತೆಯ ಉಗ್ರ[೧] ಎಂಬ ಹೆಸರಿನವನು ಎಂದು ನಾನು ಊಹಿಸುವೆ.

ವಿ. : ೧. [೨]ನಿರಪರಾಧಿಗಳಿಗೆ ನೋವುಂಟುಮಾಡುವವನು ನಿಜಕ್ಕೂ ಉಗ್ರಗಾಮಿಯೇ; ಆ ವೃಂದಾವನದಲ್ಲಿ ತನಗೆ ದ್ರೋಹವೆಸಗದ ಜೀವಸಂಕುಲಕ್ಕೆ ಕೆಡುಕುಂಟುಮಾಡಿದ ಆ ದೈತ್ಯ ನಿಜಕ್ಕೂ ಉಗ್ರಾಸುರನೇ ಸರಿ.

---

೧. ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋऽಹಿತಾಃ — ಭಗವದ್ಗೀತಾ (೧೬/೯)

೨. ಅನೇನಾಸ್ಯ ದೈತ್ಯಸ್ಯೋಗ್ರನಾಮಕತ್ವಂ ಧ್ವನ್ಯತೇ। —ವ್ಯಾ.

೨. ಹಾಗೆ ಆಗಮಿಸಿದ ಆ ವಿಷವೃಕ್ಷರೂಪದ ದೈತ್ಯನು ಉಗ್ರಾಸುರ ಎಂಬ ಹೆಸರಿನವನು ಎಂದು ಇಲ್ಲಿ ರೋಚಕವಾಗಿ ತಿಳಿಸಲಾಗಿದೆ; ಪತತ್ರಿ – ಪಕ್ಷಿ; ನಿರಾಗಸ – ನಿರಪರಾಧಿ.

### ಶ್ರೀಕೃಷ್ಣನಿಂದ ಉಗ್ರಾಸುರನ ವಧೆ

ನಗಂ ತಮುತ್ಪಾಟ್ಯ ಸಮಂ ಸಮಾಧಿಕೃ-
ಚ್ಛ್ರಮಾಖ್ಯವೃಕ್ಷೇಣ ಸ ಗೋಸ್ವರೂಪಿಣಃ ।
ಖಲಾಂಶ್ಚ ತೇನೈವ ಜಘಾನ ಲೀಲಯಾ
ಪ್ರಭೋಃ ಕ್ರಿಯೈಕಾऽಪ್ಯುರುಕಾರ್ಯಸಾಧಿಕಾ ॥ ೧೪ ॥

ಸಮಾಧಿನಿರತರಾದ ಋಷಿಮುನಿಗಳ ಶ್ರಮವೆಂಬ ವೃಕ್ಷದೊಂದಿಗೆ ಶ್ರೀಕೃಷ್ಣನು ಆ ವಿಷವೃಕ್ಷವನ್ನು ಬುಡಸಮೇತ ಕಿತ್ತು, ಅದರಿಂದಲೇ ಗೋರೂಪದಲ್ಲಿದ್ದ ದುಷ್ಟರನ್ನು ಲೀಲೆಯಿಂದ ಕೊಂದುಹಾಕಿದ; ಸ್ವಾಮಿಯಾದ ಅವನ ಒಂದು ಕ್ರಿಯೆಯು ಸಹ ಬಹುಕಾರ್ಯವನ್ನು ಸಾಧಿಸುವುದು.

ವಿ. : ೧. [೧]ಶ್ರೀಕೃಷ್ಣ ಆ ವೃಕ್ಷವನ್ನು ಕಿತ್ತು ಅದರಿಂದಲೇ ಗೋರೂಪದ ಅಸುರರನ್ನು ಸಂಹರಿಸುವ ಮೂಲಕ ಆ ಎರಡು ಕಾರ್ಯಗಳನ್ನು ಏಕಕಾಲಕ್ಕೆ ಸಾಧಿಸಿದ; ಇದರಿಂದ ಶ್ರೀಹರಿಯ ಒಂದೊಂದು ಕಾರ್ಯವೂ ಏಕಕಾಲಕ್ಕೆ ಅನೇಕ ಕಾರ್ಯಗಳನ್ನು ಸಾಧಿಸುವುದು ಎಂದು ತಿಳಿಯುವುದು: ಇಂದಿರೇಶನೆ ನಿನ್ನದೊಂದು ಒಂದು ಕ್ರಿಯವು ದ್ವಂದ್ವ ದ್ವಂದ್ವವಾಯಿತೋ – ಶ್ರೀಗೋಪಾಲದಾಸರು; ನಗ – ವೃಕ್ಷ.

೨. ಅವನ ಸಹಾಯಕ್ಕೆಂದು ಅಲ್ಲಿ ನೆರೆದಿದ್ದ ಇತರ ಅನೇಕ ವೃಕ್ಷರೂಪದ ಅಸುರರನ್ನು ಸಹ ಶ್ರೀಕೃಷ್ಣ ಸಂಹರಿಸಿದ ಎಂಬ ವಿಶೇಷಾಂಶ [೨]ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ(೧೩/೪೪). ಉಗ್ರಾಸುರನಿಗೆ ಬ್ರಹ್ಮದೇವರಿಂದ ಅವಧ್ಯತ್ವ ವರವಿದ್ದಿತು ಎಂಬ [೩]ವಿವರವೂ ತಾತ್ಪರ್ಯನಿರ್ಣಯದಲ್ಲಿದೆ.

### ಗ್ರೀಷ್ಮದ ಮಹಾಪ್ರತಾಪ

ಅಹೋ ನಿದಾಘೋತ್ಥಭಯಾದಿವೇಶೋ
ಬಿಭರ್ತಿ ಗಂಗಾಂ ಜಲಧೌ ಸ ಶೇತೇ ।

---

೧. ಏಕಾ ಕ್ರಿಯಾ ದ್ವ್ಯರ್ಥಕರೀ ಬಭೂವ ।

೨. ಸಂಕರ್ಷಣೇऽಪಿ ತದುದಾರವಿಷಾನುವಿಷ್ಟೇ ಕೃಷ್ಣೋ ನಿಜಸ್ಪರ್ಶತಸ್ತಮಪೇತರೋಗಮ್ ।
ಕೃತ್ವಾ ಬಭಂಜ ವಿಷವೃಕ್ಷಮಮುಂ ಬಲೇನ ತಸ್ಯಾನುಗೈಃ ಸಹ ತದಾಕೃತಿಭಿಃ ಸಮಸ್ತೈಃ ॥
– ಮ.ಭಾ.ತಾ.ನಿ (೧೩/೪೬)

೩. ಧಾತುರ್ವರಾಜ್ಜಗದಭಾವಕೃತೈಕಬುದ್ಧಿರ್ವಧ್ಯೋ ನ ಕೇನಚಿದಸೌ ತರುರೂಪದೈತ್ಯಃ – ಮ.ಭಾ.ತಾ.ನಿ(೧೩/೪೫)

**ರಮಾಪತಿಃ ಪಂಕಜವಿಷ್ಟರಶ್ಚ**
**ಚತುರ್ಮುಖಸ್ತಂ ವಿಷಹೇತ ಕೋಽನ್ಯಃ ॥ ೧೫ ॥**

ಅಬ್ಬ! ಗ್ರೀಷ್ಮದ ಬೇಗೆಗೆ ಅಂಜಿಯೋ ಎಂಬಂತೆ ಶಿವನು ಗಂಗೆಯನ್ನು ತನ್ನ ತಲೆಯ ಮೇಲೆ ಹೊತ್ತಿರುವನು; ಶ್ರೀಪತಿಯಾದ ವಿಷ್ಣುವು ಸಮುದ್ರದಲ್ಲಿ ಮಲಗಿರುವನು; ಬ್ರಹ್ಮದೇವರು ಪದ್ಮದ ಮೇಲೆ ಕುಳಿತಿರುವರು; ಎಂದ ಮೇಲೆ ಇತರ ಯಾವನು ತಾನೇ ಅದನ್ನು ಸಹಿಸಿಯಾನು?

ವಿ. : ೧. ಶಿವನು ಗಂಗಾಧರ, ಮಹಾವಿಷ್ಣುವು ಕ್ಷೀರಾಬ್ಧಿಶಾಯಿ, ಬ್ರಹ್ಮದೇವರು ಪದ್ಮಾಸನರು ಎಂಬುದು ಇಲ್ಲಿಯ ಮುಖ್ಯಭಾವ.

೨. ತ್ರಿಮೂರ್ತಿಗಳೇ ಗ್ರೀಷ್ಮದ ಬೇಗೆಗೆ ಅಂಜಿದಂತೆ ಕ್ರಮವಾಗಿ ಗಂಗಾಧರ, ಕ್ಷೀರಾಬ್ಧಿಶಾಯಿ, ಪದ್ಮಾಸನರಾಗಿರುವರು ಎಂಬುದು ಉತ್ಪ್ರೇಕ್ಷೆ. ಇದು ಗ್ರೀಷ್ಮದ ವಿಶಿಷ್ಟವಾದ ವರ್ಣನೆ; ವಿಷ್ಟರ – ಆಸನ.

೩.. ವಿಷ್ಣುವು ಸರ್ವೋತ್ತಮ ಹಾಗೂ ಬ್ರಹ್ಮನು ಜೀವೋತ್ತಮ; ಅವರಿಗೆ ಗ್ರೀಷ್ಮದ ಬೇಗೆಯ ಭಯ ಇನಿತೂ ಅಸಂಭಾವಿತ; ಮನೋಭಿಮಾನಿಯಾದ ಶಿವನೂ ಸಹ ತನಗಿಂತ ಕಡಿಮೆ ಎನ್ನಿಸುವ ಗ್ರೀಷ್ಮಕ್ಕಾಗಲಿ, ಅದರ ಅಭಿಮಾನಿದೇವತೆಗಾಗಲಿ ಅಂಜುವ ಅಗತ್ಯವಿಲ್ಲ ಎಂಬುದು ಗಮನಾರ್ಹ; ಇಲ್ಲಿ ಹಾಗೆ ವರ್ಣಿಸಿರುವುದು ಕಾವ್ಯದೃಷ್ಟಿಯಿಂದ ಮಾತ್ರ ಎಂಬುದನ್ನು ಇವ ಶಬ್ದದಿಂದ ಸೂಚಿಸಿರುವರು ಎಂದು ತಿಳಿಯಬೇಕು.

**ಗ್ರೀಷ್ಮದಲ್ಲೂ ಉಗ್ರತಪಸ್ಯೆವ ಮಹಾತಪಸ್ವಿಗಳು**

**ತದಾಽಪಿ ಸಿದ್ಧಾಶ್ಚತುರಗ್ನಿಮಧ್ಯೇ**
**ಪ್ರಹೃಷ್ಟರೋಮಾವಲಯಃ ಸ್ಮರಂತಿ ।**
**ನಿಮೀಲಿತಾಕ್ಷಾಃ ಪರಮಂ ಪುಮಾಂಸಂ**
**[1]ಫಲಾರ್ಥಿನಾಂ ಕಿಂ ನ ವಿಷಹ್ಯಮಸ್ತಿ ॥ ೧೬ ॥**

ಆಗಲೂ ತಪಸ್ವಿಗಳು ನಾಲ್ಕು ಅಗ್ನಿಗಳ ಮಧ್ಯೆ ಮಹದಾನಂದದ ರೋಮಾಂಚನವನ್ನು ಹೊಂದಿದವರಾಗಿ ಪರಮಪುರುಷನಾದ ಶ್ರೀಹರಿಯನ್ನು ನಿಮೀಲಿತನೇತ್ರರಾಗಿ ಸ್ಮರಿಸುವರು. ಫಲಾರ್ಥಿಗಳಿಗೆ ಸಹಿಸಿಕೊಳ್ಳಲಾಗದ್ದು ಯಾವುದಿದೆ ?

ವಿ. : ೧. ಇಂತಹ ಗ್ರೀಷ್ಮಋತುವಿನಲ್ಲೂ ಸುತ್ತಲೂ ನಾಲ್ಕು ಹೋಮಕುಂಡಗಳ ಮಧ್ಯೆ [2]ತಪಸ್ವಿಗಳು ಖುಷಿಯಿಂದಲೇ ಶ್ರೀಹರಿಯ ಧ್ಯಾನದಲ್ಲಿ ನಿರತರಾಗಿರುವರು; ಹಾಗೆ ಅವರು

---

೧. ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ। -ಬ್ರಹ್ಮಸೂತ್ರಭಾಷ್ಯ(೩/೩/೨೦)

೨. ಸಿದ್ಧಾಸ್ತು ಮೋಕ್ಷರೂಪಫಲಾರ್ಥಿನ ಇತಿ ಭಾವಃ। -ವ್ಯಾ.

೨. ಹಾಗೆ ಆಗಮಿಸಿದ ಆ ವಿಷವೃಕ್ಷರೂಪದ ದೈತ್ಯನು ಉಗ್ರಾಸುರ ಎಂಬ ಹೆಸರಿನವನು ಎಂದು ಇಲ್ಲಿ ರೋಚಕವಾಗಿ ತಿಳಿಸಲಾಗಿದೆ; ಪತತ್ರಿ - ಪಕ್ಷಿ; ನಿರಾಗಸ - ನಿರಪರಾಧಿ.

### ಶ್ರೀಕೃಷ್ಣನಿಂದ ಉಗ್ರಾಸುರನ ವಧೆ

ನಗಂ ತಮುತ್ಪಾಟ್ಯ ಸಮಂ ಸಮಾಧಿಕೃ-
ಚ್ಛ್ರಮಾಖ್ಯವೃಕ್ಷೇಣ ಸ ಗೋಸ್ವರೂಪಿಣಃ ।
ಖಲಾಂಶ್ಚ ತೇನೈವ ಜಘಾನ ಲೀಲಯಾ
ಪ್ರಭೋಃ ಕ್ರಿಯೈಕಾಽಪ್ಯುರುಕಾರ್ಯಸಾಧಿಕಾ ॥ ೧೪ ॥

ಸಮಾಧಿನಿರತರಾದ ಋಷಿಮುನಿಗಳ ಶ್ರಮವೆಂಬ ವೃಕ್ಷದೊಂದಿಗೆ ಶ್ರೀಕೃಷ್ಣನು ಆ ವಿಷವೃಕ್ಷವನ್ನು ಬುಡಸಮೇತ ಕಿತ್ತು, ಅದರಿಂದಲೇ ಗೋರೂಪದಲ್ಲಿದ್ದ ದುಷ್ಟರನ್ನು ಲೀಲೆಯಿಂದ ಕೊಂದುಹಾಕಿದ; ಸ್ವಾಮಿಯಾದ ಅವನ ಒಂದು ಕ್ರಿಯೆಯು ಸಹ ಬಹುಕಾರ್ಯವನ್ನು ಸಾಧಿಸುವುದು.

ವಿ. : ೧. [೧]ಶ್ರೀಕೃಷ್ಣ ಆ ವೃಕ್ಷವನ್ನು ಕಿತ್ತು ಅದರಿಂದಲೇ ಗೋರೂಪದ ಅಸುರರನ್ನು ಸಂಹರಿಸುವ ಮೂಲಕ ಆ ಎರಡು ಕಾರ್ಯಗಳನ್ನು ಏಕಕಾಲಕ್ಕೆ ಸಾಧಿಸಿದ; ಇದರಿಂದ ಶ್ರೀಹರಿಯ ಒಂದೊಂದು ಕಾರ್ಯವೂ ಏಕಕಾಲಕ್ಕೆ ಅನೇಕ ಕಾರ್ಯಗಳನ್ನು ಸಾಧಿಸುವುದು ಎಂದು ತಿಳಿಯುವುದು: ಇಂದಿರೇಶನೆ ನಿನ್ನದೊಂದು ಒಂದು ಕ್ರಿಯವು ದ್ವಂದ್ವ ದ್ವಂದ್ವವಾಯಿತೋ - ಶ್ರೀಗೋಪಾಲದಾಸರು; ನಗ - ವೃಕ್ಷ.

೨. ಅವನ ಸಹಾಯಕ್ಕೆಂದು ಅಲ್ಲಿ ನೆರೆದಿದ್ದ ಇತರ ಅನೇಕ ವೃಕ್ಷರೂಪದ ಅಸುರರನ್ನು ಸಹ ಶ್ರೀಕೃಷ್ಣ ಸಂಹರಿಸಿದ ಎಂಬ ವಿಶೇಷಾಂಶ [೨]ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ(೧೩./೪೪). ಉಗ್ರಾಸುರನಿಗೆ ಬ್ರಹ್ಮದೇವರಿಂದ ಅವಧ್ಯತ್ವ ವರವಿದ್ದಿತು ಎಂಬ [೩]ವಿವರವೂ ತಾತ್ಪರ್ಯನಿರ್ಣಯದಲ್ಲಿದೆ.

### ಗ್ರೀಷ್ಮದ ಮಹಾಪ್ರತಾಪ

ಅಹೋ ನಿದಾಘೋತ್ಥಭಯಾದಿವೇಶೋ
ಬಿಭರ್ತಿ ಗಂಗಾಂ ಜಲಧೌ ಸ ಶೇತೇ ।

---

೧. ಏಕಾ ಕ್ರಿಯಾ ದ್ವ್ಯರ್ಥಕರೀ ಬಭೂವ ।

೨. ಸಂಕರ್ಷಣೇಽಪಿ ತದುದಾರವಿಷಾನುವಿಷ್ಟೇ ಕೃಷ್ಣೋ ನಿಜಸ್ಪರ್ಶತಸ್ತಮಪೇತರೋಗಮ್ ।
ಕೃತ್ವಾ ಬಭಂಜ ವಿಷವೃಕ್ಷಮಮುಂ ಬಲೇನ ತಸ್ಯಾನುಗೈಃ ಸಹ ತದಾಕೃತಿಭಿಃ ಸಮಸ್ತೈಃ ॥
- ಮ.ಭಾ.ತಾ.ನಿ (೧೩./೪೬)

೩.. ಧಾತುರ್ವರಾಜ್ಜಗದಭಾವಕೃತ್ತೈಕಬುದ್ಧಿರ್ವಧ್ಯೋ ನ ಕೇನಚಿದಸೌ ತರುರೂಪದೈತ್ಯಃ - ಮ.ಭಾ.ತಾ.ನಿ(೧೩./೪೫)

ರಮಾಪತಿಃ ಪಂಕಜವಿಷ್ಟರಶ್ಚ
ಚತುರ್ಮುಖಸ್ತಂ ವಿಷಹೇತ ಕೋಽನ್ಯಃ ॥ ೧೫ ॥

ಅಬ್ಬ! ಗ್ರೀಷ್ಮದ ಬೇಗೆಗೆ ಅಂಜಿಯೋ ಎಂಬಂತೆ ಶಿವನು ಗಂಗೆಯನ್ನು ತನ್ನ ತಲೆಯ ಮೇಲೆ ಹೊತ್ತಿರುವನು; ಶ್ರೀಪತಿಯಾದ ವಿಷ್ಣುವು ಸಮುದ್ರದಲ್ಲಿ ಮಲಗಿರುವನು; ಬ್ರಹ್ಮದೇವರು ಪದ್ಮದ ಮೇಲೆ ಕುಳಿತಿರುವರು; ಎಂದ ಮೇಲೆ ಇತರ ಯಾವನು ತಾನೇ ಅದನ್ನು ಸಹಿಸಿಯಾನು?

ವಿ. : ೧. ಶಿವನು ಗಂಗಾಧರ, ಮಹಾವಿಷ್ಣುವು ಕ್ಷೀರಾಬ್ಧಿಶಾಯಿ, ಬ್ರಹ್ಮದೇವರು ಪದ್ಮಾಸನರು ಎಂಬುದು ಇಲ್ಲಿಯ ಮುಖ್ಯಭಾವ.

೨. ತ್ರಿಮೂರ್ತಿಗಳೇ ಗ್ರೀಷ್ಮದ ಬೇಗೆಗೆ ಅಂಜಿದಂತೆ ಕ್ರಮವಾಗಿ ಗಂಗಾಧರ, ಕ್ಷೀರಾಬ್ಧಿಶಾಯಿ, ಪದ್ಮಾಸನರಾಗಿರುವರು ಎಂಬುದು ಉತ್ಪ್ರೇಕ್ಷೆ. ಇದು ಗ್ರೀಷ್ಮದ ವಿಶಿಷ್ಟವಾದ ವರ್ಣನೆ; ವಿಷ್ಟರ - ಆಸನ.

೩. ವಿಷ್ಣುವು ಸರ್ವೋತ್ತಮ ಹಾಗೂ ಬ್ರಹ್ಮನು ಜೀವೋತ್ತಮ; ಅವರಿಗೆ ಗ್ರೀಷ್ಮದ ಬೇಗೆಯ ಭಯ ಇನಿತೂ ಅಸಂಭಾವಿತ; ಮನೋಭಿಮಾನಿಯಾದ ಶಿವನೂ ಸಹ ತನಗಿಂತ ಕಡಿಮೆ ಎನ್ನಿಸುವ ಗ್ರೀಷ್ಮಕ್ಕಾಗಲಿ, ಅದರ ಅಭಿಮಾನಿದೇವತೆಗಾಗಲಿ ಅಂಜುವ ಅಗತ್ಯವಿಲ್ಲ ಎಂಬುದು ಗಮನಾರ್ಹ; ಇಲ್ಲಿ ಹಾಗೆ ವರ್ಣಿಸಿರುವುದು ಕಾವ್ಯದೃಷ್ಟಿಯಿಂದ ಮಾತ್ರ ಎಂಬುದನ್ನು ಇವ ಶಬ್ದದಿಂದ ಸೂಚಿಸಿರುವರು ಎಂದು ತಿಳಿಯಬೇಕು.

ಗ್ರೀಷ್ಮದಲ್ಲೂ ಉಗ್ರತಪಸ್ಸೈವ ಮಹಾತಪಸ್ವಿಗಳು

ತದಾಽಪಿ ಸಿದ್ಧಾಶ್ಚತುರಗ್ನಿಮಧ್ಯೇ
ಪ್ರಹೃಷ್ಟರೋಮಾವಲಯಃ ಸ್ಮರಂತಿ ।
ನಿಮೀಲಿತಾಕ್ಷಾಃ ಪರಮಂ ಪುಮಾಂಸಂ
[೧]ಫಲಾರ್ಥಿನಾಂ ಕಿಂ ನ ವಿಷಹ್ಯಮಸ್ತಿ ॥ ೧೬ ॥

ಆಗಲೂ ತಪಸ್ವಿಗಳು ನಾಲ್ಕು ಅಗ್ನಿಗಳ ಮಧ್ಯೆ ಮಹದಾನಂದದ ರೋಮಾಂಚನವನ್ನು ಹೊಂದಿದವರಾಗಿ ಪರಮಪುರುಷನಾದ ಶ್ರೀಹರಿಯನ್ನು ನಿಮೀಲಿತನೇತ್ರರಾಗಿ ಸ್ಮರಿಸುವರು. ಫಲಾರ್ಥಿಗಳಿಗೆ ಸಹಿಸಿಕೊಳ್ಳಲಾಗದ್ದು ಯಾವುದಿದೆ ?

ವಿ. : ೧. ಇಂತಹ ಗ್ರೀಷ್ಮಋತುವಿನಲ್ಲೂ ಸುತ್ತಲೂ ನಾಲ್ಕು ಹೋಮಕುಂಡಗಳ ಮಧ್ಯೆ [೨]ತಪಸ್ವಿಗಳು ಖುಷಿಯಿಂದಲೇ ಶ್ರೀಹರಿಯ ಧ್ಯಾನದಲ್ಲಿ ನಿರತರಾಗಿರುವರು; ಹಾಗೆ ಅವರು

೧. ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ। -ಬ್ರಹ್ಮಸೂತ್ರಭಾಷ್ಯ(೩/೩/೨೦)

೨. ಸಿದ್ಧಾಸ್ತು ಮೋಕ್ಷರೂಪಫಲಾರ್ಥಿನ ಇತಿ ಭಾವಃ। -ವ್ಯಾ.

ಅಂತಹ ಬೇಗೆಯನ್ನು ಸಹಿಸುವುದು ಮೋಕ್ಷವೆಂಬ ಮಹಾಪುರುಷಾರ್ಥದ ಸಂಪಾದನೆಗೋಸ್ಕರ.

೨. ಶ್ರೇಷ್ಠಪುರುಷಾರ್ಥದ ಸಂಪಾದನೆಗೆ ಹೀಗೆ ಬಗೆಬಗೆಯ ಬೇಗೆಗಳನ್ನು ಸಹಿಸಿಕೊಳ್ಳುವುದು ಅತ್ಯಗತ್ಯ ಎಂಬುದು ಇಲ್ಲಿಯ ಸಂದೇಶ; ಇದರಿಂದ ಏಕಾದಶೀ, ಕೃಷ್ಣಾಷ್ಟಮೀ ಹಾಗೂ ಚಾತುರ್ಮಾಸ್ಯದಂತಹ ವ್ರತಗಳ ಶ್ರದ್ಧಾಪೂರ್ವಕವಾದ ಆಚರಣೆಯು ಜ್ಞಾನದ್ವಾರಾ ಮೋಕ್ಷಕ್ಕೆ ಸಾಧನ ಎಂಬ ತತ್ತ್ವ ತಿಳಿಯುವುದು: ಕರ್ಮಣಾ ಜ್ಞಾನಮಾತನೋತಿ.

ವೃಂದಾವನದಲ್ಲಿ ಬೀಸಿದ ಗಾಳಿಯ ವಿಚಿತ್ರ ರೀತಿ

ಸುಶೀತಲಃ ಕೃಷ್ಣಪದಾಬ್ಜಯುಗ್ಮ-
ಮಿತಃ ಸ್ಪೃಶತ್ಯುಜ್ಜ್ವಲಕಾನನಾಗ್ನಿಮ್[೧] ।
ತತಃ ಸಮುತ್ಥಾಪಯತಿ ಸ್ಮ ವಾಯು-
ರಯಂ ಸ್ವಭಾವಃ ಖಲು ಚಂಚಲಾನಾಮ್[೨] ॥ ೧೭ ॥

ವಾಯುವು ಈ ವೃಂದಾವನದಲ್ಲಿ ತುಂಬಾ ತಂಪಾಗಿ ಶ್ರೀಕೃಷ್ಣನ ಪಾದಕಮಲಗಳನ್ನು ಸ್ಪರ್ಶಿಸುವುದು; ಇತರೆಡೆಗಳಲ್ಲಿ ಪ್ರಜ್ವಲಿಸುವ ಕಾಡ್ಗಿಚ್ಚನ್ನು ಹುಟ್ಟಿಸುವುದು; ಚಂಚಲಮನಸ್ಕರ ಸ್ವಭಾವ ಇಂತಹುದೇ ಅಲ್ಲವೇ !

ವಿ. : ೧. ಅಂತಹ ಸಮಯದಲ್ಲೂ ವೃಂದಾವನದಲ್ಲಿ ಮಾತ್ರ ತಂಪಾದ ಗಾಳಿಯೇ ಬೀಸುತ್ತಿತ್ತು ಎಂಬುದು ಇಲ್ಲಿಯ ಮುಖ್ಯಭಾವ ; ಇದರಿಂದ ಶ್ರೀಕೃಷ್ಣ ನೆಲೆಸಿದ ಸ್ಥಳದಲ್ಲಿ ಸುಖಸಂತೋಷಗಳು ಸಮೃದ್ಧವಾಗಿ ನೆಲೆಸುವವು ಎಂದರ್ಥ.

೨. ವಾಯುವು ಹೀಗೆ ಒಂದೆಡೆ ಹಿತಸ್ಪರ್ಶನಾದರೆ ವೃಂದಾವನದ ಹೊರಗಡೆ ಕಾಡ್ಗಿಚ್ಚನ್ನು ಹೊತ್ತಿಸುವಷ್ಟು ಪ್ರಖರ. ಇದರಿಂದ ವಾಯುವು ಚಂಚಲ ಎಂಬುದು ಸ್ಥಿರಪಡುವುದೆಂದು ಭಾವ.

೩. ಇದು ಸುಮಧ್ವವಿಜಯದ ಈ ಕೆಳಗಿನ ಶ್ಲೋಕದ ಭಾವದಂತಿದೆ :

ವೀರದೃಷ್ಟಿಕೃತಸಿಂಹವಿಭ್ರಮಃ ಶಾಂತದೃಷ್ಟಿಕೃತಶಾಂತಸಂಮದಃ ।
ತತ್ರ ತತ್ರ ಪಥಿ ಪಥ್ಯವಿಭ್ರಮಃ ಪರ್ವತಾದವತತಾರ ಸ ಧೀರಧೀಃ ॥ -(೯/೩)

ಗ್ರೀಷ್ಮದ ವಾಯುವಿನ ವಿಚಿತ್ರ ವ್ಯಾಪಾರ

ಪ್ರಿಯಾಸ್ತನಾಖ್ಯಾನ್ ಪರಿರಭ್ಯ ಕುಂಭಾನ್
ಸುಧಾಂ ತದೀಯಾಧರಜಾಂ ಪಿಬಂತಃ[೩] ।

---

೧. ವಾಯುವಶಾತ್ ವೃಕ್ಷಸಂಘರ್ಷೇಣ ದಾವಾಗ್ನ್ಯುತ್ಪತ್ತೇರಿತಿ ಭಾವಃ । -ವ್ಯಾ.

೨. ಚಂಚಲಾನಾಂ ಅಸ್ಥಿರಾಣಾಮಯಂ ಸುಜನಸಮೀಪೇ ಸೌಜನ್ಯಂ ದುರ್ಜನಸಮೀಪೇ ದೌರ್ಜನ್ಯಮಿತ್ಯನೇಕಪ್ರಕಾರಃ ಸ್ವಭಾವಃ ಖಲು । -ವ್ಯಾ.

೩. ಗಿರಿಕುಂಜಾವಾಸೇನ ಸ್ತನಪರಿರಂಭಣೇನ ಚ ತಾಪಂ ನ ವಿಂದಂತಿ । ''ಕೂಪೋದಕಂ ವಟಚ್ಛಾಯಾ ತಾಂಬೂಲಂ ತರುಣೀಸ್ತನೌ'' ಇತಿ ವಚನಾತ್ । ಅಧರಾಮೃತಪಾನೇನ ಚ ಪಿಪಾಸಾಂ ನ ವಿಂದಂತೀತ್ಯರ್ಥಃ । -ವ್ಯಾ.

ವಿಂದಂತ್ಯಹೋ ನಾಗರಿಕಾ ನ ತಾಪಂ
ನ ವಾ ಪಿಪಾಸಾಂ ಗಿರಿಕುಂಜವಾಸಾಃ ॥ ೧೮ ॥

ಪ್ರಿಯೆಯರ ಸ್ತನಗಳೆಂಬ ಕುಂಭಗಳನ್ನು ತಬ್ಬಿಕೊಂಡು ಅವರ ಅಧರಾಮೃತವನ್ನು ಪಾನಮಾಡುತ್ತ ಬೆಟ್ಟದ ಪೊದೆಗಳಲ್ಲಿ ನೆಲೆಸಿದ ನಗರವಾಸಿಗಳು ತಾಪವನ್ನಾಗಲಿ, ಬಾಯಾರಿಕೆಯನ್ನಾಗಲಿ, ಹೊಂದಲೇ ಇಲ್ಲ; (ಪಿಪಾಸಾ-ಬಾಯಾರಿಕೆ; ಕುಂಜ-ಪೊದೆ).

ಕೃಷ್ಣನ ನೋಟದಿಂದ ಅಳಿದ ಗ್ರೀಷ್ಮದ ಪ್ರತಾಪ

ಜಹಾರ ಕೃಷ್ಣಸ್ತಪನೋತ್ಥತಾಪಂ
ಮುಖೇಂದುನಾ ದೃಷ್ಟಿಪಥಂ ಗತೇನ ।
ಸುಧಾರ್ದ್ರವೀಕ್ಷಾಮಯವೃಷ್ಟಿಭಿಶ್ಚ
[೧]ವ್ರಜೌಕಸಾಂ ಕಾನನವಾಸಿನಾಂ ಚ ॥ ೧೯ ॥

ಶ್ರೀಕೃಷ್ಣನು ವೃಂದಾವನವಾಸಿಗಳಿಗೆ ಹಾಗೂ ಅರಣ್ಯವಾಸಿಗಳಿಗೆ ಸೂರ್ಯನಿಂದ ಉಂಟಾದ ತಾಪವನ್ನು ತನ್ನ ಮುಖಚಂದ್ರನ ದರ್ಶನ ಹಾಗೂ ಅಮೃತತುಂಬಿದ ತನ್ನ ನೋಟವೆಂಬ ವೃಷ್ಟಿಗಳಿಂದ ಪರಿಹರಿಸಿದ.

ವಿ. : ೧. ಅರಣ್ಯವಾಸಿಗಳು ಎಂದರೆ ಗೋಪಾಲಕರು; ಕಾನನ ವಾಸಿಗಳು ಎಂದರೆ ವೃಂದಾವನವಾಸಿಗಳಾದ ಮುನಿಗಳು.

೨. ಶ್ರೀಕೃಷ್ಣನ ದರ್ಶನ ಹಾಗೂ ಅವರ ಅಮೃತಮಯ ನೋಟ[೨], ಇವುಗಳಿಂದಾಗಿ ಅಲ್ಲಿಯ ಸಕಲರಿಗೂ ಯಾವ ತಾಪವೂ ಉಂಟಾಗುತ್ತಿರಲಿಲ್ಲ. ಶ್ರೀಕೃಷ್ಣನನ್ನು ಅವರು ಕಾಣುವುದು ಶ್ರೀಕೃಷ್ಣ ಅವರನ್ನು ನೋಡುವುದು, ಹೀಗೆ ಒಟ್ಟಾಗಿ ಅಲ್ಲಿಯ ಜನರಿಗೆ ಆನಂದಮಯ ವಾತಾವರಣವೇ ಸದಾ ಇರುತ್ತಿತ್ತು ಎಂದು ಭಾವ.

೩. [೩]ಚಂದ್ರೋದಯ ಹಾಗೂ ಮಳೆಗಳಿಂದ ಸೂರ್ಯನ ತಾಪ ಪರಿಹಾರವಾಗುವುದು ಎಂಬುದು ಲೋಕಪ್ರಸಿದ್ಧ.

---

೧. ಬರ್ಹಾಪೀಡಂ ನಟವರವಪುಃ ಕರ್ಣಯೋಃ ಕರ್ಣಿಕಾರಂ
ಬಿಭ್ರದ್ವಾಸಃ ಕನಕಕಪಿಶಂ ವೈಜಯಂತೀಂ ಚ ಮಾಲಾಮ್ ।
ರಂಧ್ರಾನ್ ವೇಣೋರಧರಸುಧಯಾ ಪೂರಯನ್ ಗೋಪವೃಂದೈ-
ರ್ವೃಂದಾರಣ್ಯಂ ಸ್ವಪದರಮಣಂ ಪ್ರಾವಿಶದ್ಗೀತಕೀರ್ತಿಃ ॥ -ಭಾಗ.(೧೦/೧೯/೫)

೨. ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ ।
ಕರುಣಾಪೂರ್ಣ ವರಪ್ರದಚರಿತಂ ಜ್ಞಾಪಯ ಮೇ ತೇ ॥ -ದ್ವಾದಶಸ್ತೋತ್ರ (೧೦/೧೮)

೩. ಚಂದ್ರೋದಯೇ ವೃಷ್ಟೌ ಚ ತಪನತಾಪನಿವೃತ್ತೇರಿತಿ ಭಾವಃ । -ವ್ಯಾ.

## ನೀಲಾದೇವಿಯ ಸ್ವಯಂವರ

ನೀಲಾಂ [೧]ಕುಂಭಕಸಂಭವಾಮಲಭತ ಸ್ವೀಯಾಂ ಸ ಜಿತ್ವಾ ವೃಷಾನ್
ಶೌರಿಃ ಸಪ್ತ ಸ ಚಾಪಿ ನೀಲಮಣಿಭಿರ್ನೀಲಾಂ[೨] ಕರೇ ತತ್ಪುರೀಮ್ ।
ಧಾತೂನ್ ಸಪ್ತ ನಿಗೃಹ್ಯ [೩]ಕುಂಭಕಬಲಾಚ್ಛೃಂಗಪ್ರಹಾರೈರ್ದ್ರವ-
ತ್ಕುಂಭಾಭಾಂಗಯುಜೋಽಪರೇಽಪಿ ಬಹವೋ[೪] ನೀಲಾಂ ಮುಖಸ್ಯ ಪ್ರಭಾಮ್ ೨೦

ಶ್ರೀಕೃಷ್ಣನು ಕುಂಭಕನ ಪುತ್ರಿಯಾಗಿ ಅವತರಿಸಿದ್ದ ತನ್ನವಳೇ ಆದ ನೀಲಾದೇವಿಯನ್ನು ಏಳು ಗೂಳಿಗಳನ್ನು ನಿಗ್ರಹಿಸಿ, ಪಡೆದ ; ಅವಳ ತಂದೆ ಕುಂಭಕನಾದರೋ ಕುಂಭಕದ ಬಲದಿಂದಾಗಿ ಸಪ್ತಧಾತುಗಳನ್ನು ನಿಗ್ರಹಿಸಿದವನಾಗಿ, ಇಂದ್ರನೀಲಮಣಿಗಳಿಂದಾಗಿ ನೀಲವರ್ಣದಿಂದ ಕೂಡಿದ್ದ ಅವನ ಪಟ್ಟಣವಾದ ವೈಕುಂಠವನ್ನು ಕರವಶಮಾಡಿಕೊಂಡ; ಆ ಗೂಳಿಗಳ ಶೃಂಗಗಳ ಪ್ರಹಾರದಿಂದ ರಕ್ತಸುರಿಯುವ ಕುಂಭದಂತಹ ಅಂಗಗಳಿಂದ ಕೂಡಿದ ಇತರ ಅನೇಕರು ಸಹ ಮುಖದಲ್ಲಿ ನೀಲಕಾಂತಿಯನ್ನು ಹೊಂದಿದವರಾದರು.

ವಿ. : ೧. ಕುಂಭಕ ಯಶೋದೆಯ ಸಹೋದರ ; ಷಣ್ಮಹಿಷಿಯರಲ್ಲಿ ಒಬ್ಬಳಾದ ನೀಲಾದೇವಿಯು ಅವನ ಮಗಳಾಗಿ ಅವತರಿಸಿದ್ದಳು. ಸ್ವಯಂವರದ ನಿಯಮದಂತೆ ಆ ಏಳು ಗೂಳಿಗಳನ್ನು ನಿಗ್ರಹಸಿ, ಕೃಷ್ಣ ಅವಳನ್ನು ತನ್ನ ಪತ್ನಿಯನ್ನಾಗಿ ಪಡೆದ ಎಂಬುದು ಮುಖ್ಯಾರ್ಥ.

೨. ಕುಂಭಕ ಶ್ರೀಕೃಷ್ಣನಿಗೆ ಕನ್ಯಾದಾನ ಮಾಡಿದ ಫಲವಾಗಿ, ವೈಕುಂಠಲೋಕವನ್ನು ಪಡೆದುಕೊಂಡ.

---

೧. ಸಪ್ತೋಕ್ಷಣೋಽತಿಬಲವೀರ್ಯಯುತಾನದಮ್ಯಾನ್ ಸರ್ವೈರ್ಗಿರೀಶವರತೋ ದಿತಿಜಪ್ರಧಾನಾನ್ ।
ಹತ್ವಾ ಸುತಾಮಲಭದಾಶು ವಿಭುರ್ಯಶೋದಾಭ್ರಾತುಃ ಸ ಕುಂಭಕಸಮಾಹ್ವಯಿನೋಽಪಿ ನೀಲಾಮ್ ।
ಯಾ ಪೂರ್ವಜನ್ಮನಿ ತಪಃ ಪ್ರಥಮೈವ ಭಾರ್ಯಾ ಭೂಯಾಸಮಿತ್ಯಚರದಸ್ಯ ಹಿ ಸಂಗಮೋ ಮೇ ।
ಸ್ಯಾತ್ ಕೃಷ್ಣಜನ್ಮನಿ ಸಮಸ್ತವರಾಂಗನಾಭ್ಯಃ ಪೂರ್ವಂ ತ್ವಿತಿ ಸ್ಮ ತದಿಮಾಂ ಪ್ರಥಮಂ ಸ ಆಪ ॥
– ಮ.ಭಾ.ತಾ.ನಿ. (೧೩./೪೮-೪೯)

೨. ಕೃಷ್ಣೋ ನೀಲಾಂ ಸ್ತ್ರಿಯಂ ಕುಂಭಕೋ ನೀಲಾಂ ಪುರೀಂ ಅನ್ಯೇ ನೀಲಾಂ ಮುಖಕಾಂತಿಮಿತಿ ತ್ರಯಾಣಾಮಪಿ ನೀಲಾಪ್ರಾಪ್ತಿರಭೂದಿತಿ ಭಾವಃ। –ವ್ಯಾ.

೩. ಸ ಚ ನೀಲಾಪಿತಾ ಕುಂಭಕೋಽಪಿ ಸಪ್ತಧಾತೂನ್ ತ್ವಕ್‌ಚರ್ಮಮಾಂಸರುಧಿರಮೇದೋಮಜ್ಜಾಸ್ಥ್ಯಾಖ್ಯಾನ್ ಕುಂಭಕಬಲಾತ್ ಕುಂಭಾಖ್ಯಪ್ರಾಣಾಯಾಮಬಲಾತ್ ನಿಗೃಹ್ಯ ಪ್ರಾಣಾಯಾಮಬಲೇನ ಸಪ್ತಧಾತ್ವಾತ್ಮಕಶರೀರೇ ಅನಾಸ್ಥಾಂ ಸಂಪಾದ್ಯೇತ್ಯರ್ಥಃ। –ವ್ಯಾ.

೪. ನೀಲಾಯಾಃ ಕುಂಭಕಗೋಪಜನ್ಯತ್ವಾತ್ । ವೈಕುಂಠಪ್ರಾಪ್ತೇರಂತಃಕರಣಶುದ್ಧಿದ್ವಾರಾ ಕುಂಭಕಪ್ರಾಣಾಯಾಮ-ಜನ್ಯತ್ವಾತ್ । ಮುಖನೈಲ್ಯಸ್ಯ ಕುಂಭಸದೃಶಶರೀರಕ್ಷತಜನ್ಯತ್ವಾತ್ತತ್ಪ್ರಾಪ್ತನೀಲಾಯಾ ಅಪ್ಯೇವಂ ಕುಂಭಕಸಂಭವತ್ವಾ-ದಿತ್ಯಪಿ ದ್ರಷ್ಟವ್ಯಮ್ । –ವ್ಯಾ.

೩. ಸ್ವಯಂವರಕ್ಕೆಂದು ಬಂದಿದ್ದ ಇತರರು ಆ ಗೂಳಿಗಳನ್ನು ನಿಗ್ರಹಿಸಲಾಗದೆ ಅವುಗಳ ಕೋಡುಗಳ ತಿವಿತಕ್ಕೆ ಮೈಯೆಲ್ಲಾ ಗಾಯಗೊಂಡವರಾಗಿ ಮುಖದಲ್ಲಿ ನಾಚಿಕೆಯಿಂದಾಗಿ ಕಪ್ಪು ಕಾಂತಿಗಳನ್ನು ಹೊಂದಿದರು ; **ಶೃಂಗ – ಕೋಡು.**

೪. ಕುಂಭಕಬಲಾತ್ ಎಂಬುದು ರೇಚಕ, ಪೂರಕ, ಕುಂಭಕ ಎಂಬ ಪ್ರಾಣಾಯಾಮದ ಮೂರು ಅಂಗಗಳಲ್ಲಿ ಕುಂಭಕಸ್ಥಿತಿ ಎಂಬ ಸಿದ್ಧಿಯನ್ನು ಪಡೆದ ಕುಂಭಕನು ಅದರ ಫಲವನ್ನಾಗಿ ವೈಕುಂಠಲೋಕವನ್ನು ಹೊಂದಿದ. ಇಲ್ಲಿ ಏಳು ಧಾತುಗಳು[೧] ಎಂದರೆ ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು, ಮಜ್ಜೆ ಹಾಗೂ ಅಸ್ಥಿ ಎಂಬ ಏಳು ಎಂಬುದಾಗಿ ತಿಳಿಯಬೇಕು.

೫. ಶ್ರೀಕೃಷ್ಣನು ನೀಲಾದೇವಿಯನ್ನು ವರಿಸಿದಾಗ ಲೋಕದೃಷ್ಟಿಯಲ್ಲಿ ಇನ್ನೂ ಉಪನೀತನೇ ಆಗಿರಲಿಲ್ಲ. ಆದರೂ ಹಾಗೆ ಅವಳನ್ನು ವಿವಾಹವಾದ. ಅದಕ್ಕೆ ಅವಳು ಹಾಗೆ ವರವನ್ನು ಪಡೆದುಕೊಂಡಿದ್ದುದೇ ಮುಖ್ಯಕಾರಣವಾಗಿದ್ದಿತು ಎಂಬ ವಿಶೇಷಾಂಶ ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿದೆ (೧೩./೫೦):

**ಅಗ್ರೇ ದ್ವಿಜತ್ವತ ಉಪಾವಹದೇಷ ನೀಲಾಂ ಗೋಪಾಂಗನಾ ಅಪಿ ಪುರಾ ವರಮಾಪಿರೇ ಯತ್ ।**
**ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ ಭೂಯಾತ್ ತವೇತಿ ಪರಮಾಪ್ಸರಸಃ ಪುರಾ ಯಾಃ ॥**

## ಧೇನುಕಾಸುರ ಪ್ರಸಂಗ

**ಅಥಾಪರೋ ರಾಸಭವೇಷಧಾರೀ**
**ವನಂ ಸಮಾಕ್ರಮ್ಯ ಮುಕುಂದಯೋಗ್ಯಮ್ ।**
**ಜಘಾನ ಜಂತೂನ್ ಬತ ತಾದೃಶೋಽಸೌ**
**ಖರಃ ಪ್ರಕೃತ್ಯೇತಿ ಮಮ ಪ್ರತರ್ಕಃ ॥ ೨೧ ॥**

ಆ ಬಳಿಕ ಕತ್ತೆಯರೂಪದ ಮತ್ತೊಬ್ಬ ರಾಕ್ಷಸನು ಮುಕುಂದನಿಗೆ ಯೋಗ್ಯವಾದ ಆ ತಾಳವನವನ್ನು ಆಕ್ರಮಿಸಿ ಅಲ್ಲಿದ್ದ ಜೀವಿಗಳನ್ನು ಹಿಂಸಿಸಿದ. ಅವನು ಸ್ವಾಭಾವಿಕವಾಗಿಯೇ ಖರ(ಕತ್ತೆ) ಎಂದು ನನ್ನ ಬಲವಾದ ಊಹೆ.

ವಿ. : ೧. ಇಲ್ಲಿ ಖರಾಸುರ (ಧೇನುಕಾಸುರ) ಎಂಬ ರಾಕ್ಷಸನ ವಧೆಯ ಪ್ರಸಂಗ ಬಂದಿದೆ.

೨. ಅಂತಹ ಪುಣ್ಯಕ್ಷೇತ್ರವನ್ನು ಮಲಿನಗೊಳಿಸಿದ ಅವನು ನಿಜಕ್ಕೂ ಕತ್ತೆಯೇ ಸರಿ ಎಂಬುದು ಇಲ್ಲಿಯ ಭಾವ ; **ರಾಸಭ – ಕತ್ತೆ ; ಜಂತು – ಪ್ರಾಣಿ.**

೩. [೨]ಪುಣ್ಯಕ್ಷೇತ್ರಗಳನ್ನು ಕಲುಷಿತಗೊಳಿಸುವವರು ಈ ಖರಾಸುರನಂತೆ ದೇವವಿರೋಧಿಗಳಾದ ಅಯೋಗ್ಯರೇ ಸರಿ ಎಂಬ ಸಂದೇಶವೂ ಇದರಿಂದ ಸೂಚಿತ.

---

೧. ತ್ವಕ್ಚರ್ಮಮಾಂಸರುಧಿರಮೇದೋಮಜ್ಜಾಸ್ಥಿಧಾತವಃ ।
ಸಪ್ತ ಸ್ಥೂಲಶರೀರೇಽಸ್ಮಿನ್ ವರ್ತಂತೇ ಸರ್ವದೈವ ಹಿ ॥ –ಅಧ್ಯಾತ್ಮಮಾಲಾ(ಶ್ಲೋ.೨)

೨. ಪುಣ್ಯಕ್ಷೇತ್ರದೂಷಕಸ್ಯ ರಾಸಭತ್ವಮಾಜಾನಜಮಿತ್ಯರ್ಥಃ । –ವ್ಯಾ.

೪. ರಾಮಾಯಣದಲ್ಲಿ ಖರ ಎಂಬ ಹೆಸರಿನ ರಾಕ್ಷಸನು ಶ್ರೀರಾಮನಿಂದ ದಂಡಕಾರಣ್ಯದಲ್ಲಿ ಹತನಾಗಿದ್ದ; ಇಲ್ಲಿಯ ಧೇನುಕಾಸುರನು ಖರರೂಪದ ರಾಕ್ಷಸ ಎಂಬುದು ವಿಶೇಷ.

### ಧೇನುಕನ ನಾಶಕ್ಕೆ ಕಾರಣವಾದ ಗೋಪಾಲಕರ ಹಸಿವು

ಕ್ಷುಧಾಽತಿಲೋಲಾಃ ಕಿಲ ಗೋಪಬಾಲಾಃ
ಸಹಾಚ್ಯುತೇನಾಭಿಯಯುರ್ವನಂ ತತ್ ।
ತಥಾ ಹಿ ದುಷ್ಟಸ್ಯ ವಿನಾಶತೋಽನ್ಯತ್
ಸತಾಂ ಮನಸ್ತೃಪ್ತಿಕರಂ ಕಿಮಸ್ತಿ ॥ ೨೨ ॥

ಹಸಿವಿನಿಂದಾಗಿ ಬಹಳ ಪೀಡಿತರಾಗಿದ್ದ ಗೋಪಾಲಬಾಲಕರು ಶ್ರೀಕೃಷ್ಣನೊಂದಿಗೆ ಆ ತಾಳವನವನ್ನು ತಲುಪಿದರು; ಅದು ಸರಿಯೇ, ದುಷ್ಟರ ವಿನಾಶಕ್ಕಿಂತ ಬೇರೆಯಾದ ಮನಸ್ಸಿಗೆ ತೃಪ್ತಿ ನೀಡುವ ಕೆಲಸ ಸಜ್ಜನರಿಗೆ ಇದೆಯೇನು?

ವಿ. : ಮೇಲ್ನೋಟಕ್ಕೆ ಅವರು ಹಸಿವಿನಿಂದ ಬಳಲಿ ಅಲ್ಲಿಗೆ ಬಂದರೂ, ವಾಸ್ತವವಾಗಿ ನಡೆದದ್ದು ಧೇನುಕಾಸುರನ ವಧೆಗೆ ಎಂದು ಭಾವ; ಅವರ ಹಸಿವೆಯೂ ಸಹ ಅಸುರನ ಸಂಹಾರಕ್ಕೆ ಕಾರಣವಾಗಿ, ಭಗವತ್ಸೇವಾರೂಪವಾದ ಮಹತ್ಕಾರ್ಯವಾಯಿತು ಎಂದರ್ಥ ; ಕ್ಷುಧಾ-ಹಸಿವೆ.

### ಧೇನುಕ-ಬಲರಾಮರ ಯುದ್ಧ

ಅಥಾಸಸಾದಾಸುರವರ್ಗವರ್ಯೋ
ಬಲಶ್ಚ ತಂ ಪ್ರತ್ಯಗಮದ್ಬಲಾಢ್ಯಃ ।
ನಿಜಧ್ವಜಕ್ಷ್ಮಾಜಸಮಾಜರಾಜ-
ದ್ವನಂ ತದಾಕ್ರಾಂತಮಿವೇರ್ಷ್ಯಮಾಣಃ ॥ ೨೩ ॥

ಆಗ ಅಸುರವರ್ಗದ ಹಿರಿಯನಾದ ಧೇನುಕಾಸುರ ಧಾವಿಸಿದ ; ಅವನನ್ನು ಬಲಾಢ್ಯನಾದ ಬಲರಾಮನು ತನ್ನ ಧ್ವಜದ ಹೆಸರಿನ ವೃಕ್ಷಗಳ ಗುಂಪಿನಿಂದ ಶೋಭಿಸುತ್ತಿದ್ದ ವನವು ಅವನಿಂದ ಆಕ್ರಮಿಸಲ್ಪಟ್ಟಿದ್ದನ್ನು ಕಂಡು ಮತ್ಸರಿಸಿದವನಂತೆ ಎದುರಿಸಿದ.

ವಿ. : ೧. ಧೇನುಕಾಸುರನನ್ನು ಬಲರಾಮ ಎದುರಿಸಿದ ಎಂಬುದು ಮುಖ್ಯಾಂಶ ; ಆ ತಾಳವನವು ಒಂದು ರೀತಿಯಲ್ಲಿ ಬಲರಾಮನಿಗೆ ಪ್ರಿಯವಾಗಲು ಕಾರಣ ಅವನು [೧]ತಾಳಧ್ವಜನಾಗಿದ್ದುದು ಎಂಬ ಉತ್ಪ್ರೇಕ್ಷೆ ಇಲ್ಲಿದೆ.

---

೧. ಬಲಸ್ಯ ತಾಲಧ್ವಜತ್ವಾದಿತಿ ಭಾವಃ । -ವ್ಯಾ.

೨. [1]ತಮ್ಮ ಧ್ವಜ, ಛತ್ರ ಮೊದಲಾದವುಗಳಿಗೆ ಆಕ್ರಮಣ ನಡೆಯುವುದು ಶೂರರ ಕೀರ್ತಿಗೆ ಶೋಭೆ ತರುವಂತಹುದಲ್ಲ ಎಂಬ ಭಾವದಿಂದ ಬಲರಾಮ ಹಾಗೆ ಧಾವಿಸಿದ ಎಂಬುದು ಉತ್ಪ್ರೇಕ್ಷೆಯ ಹಿನ್ನೆಲೆ ; ಕ್ಷ್ಮಾಜ - ಭೂರುಹ, ವೃಕ್ಷ.

ಬಲರಾಮನನ್ನು ಒದೆಯಲು ಧೇನುಕಾಸುರನ ಪ್ರಯತ್ನ

ಸ ಧೇನುಕಸ್ತಂ ನಿಜಪಾರ್ಷ್ಣಿಪದ್ಭ್ಯಾಂ
ಪ್ರತಾಡಯನ್ ಗಾಢಮಸಹ್ಯಸತ್ತ್ವಃ।
ಪ್ರಗೃಹ್ಯ ತಾವುತ್ಕ್ಷಿಪತೋ [2]ಬಲಸ್ಯ
ಖಲಃ ಸಹಾಯೋಽಭವದಸ್ತಮಾಯಃ ॥ ೨೪ ॥

ಸಹಿಸಲಸಾಧ್ಯವಾದ ಸಾಮರ್ಥ್ಯವನ್ನು ಹೊಂದಿದ್ದ ಆ ಧೇನುಕನು ತನ್ನ ಹಿಂಗಾಲುಗಳಿಂದ ಬಲರಾಮನನ್ನು ಜೋರಾಗಿ ಒದ್ದ; ಆ ಮೂಲಕ ಅವುಗಳನ್ನು ಹಿಡಿದು ಮೇಲಕ್ಕೆ ಎಸೆ-ಯುವ ಬಲರಾಮನಿಗೆ ಆ ಮಾಯೆ ಅಡಗಿದ ದುಷ್ಟ ಒಂದು ರೀತಿಯಲ್ಲಿ ನೆರವಾದನು.

ವಿ. : ೧. ಧೇನುಕಾಸುರನು ಹಾಗೆ ತನ್ನ ಹಿಂಗಾಲುಗಳಿಂದ ಬಲರಾಮನನ್ನು ಒದೆಯ-ಹೊರಟದ್ದು ಬಲರಾಮನಿಗೆ ಅನುಕೂಲವೇ ಆಯಿತು; ಬಲರಾಮ ಅವನ ಎರಡೂ [3]ಕಾಲು-ಗಳನ್ನು ಹಿಡಿದು, ಮೇಲಕ್ಕೆ ಎಸೆಯಲು ಅದರಿಂದ ಅನುಕೂಲವೇ ಆಯಿತು ಎಂದರ್ಥ.

೨. ಕೊನೆಗಾಲದಲ್ಲಿ ಆ ಧೇನುಕನು ಮಾಯೆ ಅಳಿದು ನಿಜರೂಪವನ್ನೇ ಹೊಂದಿದ ಎಂಬ ವಿಶೇಷಾಂಶವು ಇಲ್ಲಿದೆ.

೩. ದುಷ್ಟರು ಮಾಡುವ ಸಂಚು ಅವರ ಪ್ರಾಣಕ್ಕೇ ಸಂಚಕಾರವಾಗುವುದು ಸಹಜ ಎಂಬ ಸಂದೇಶವು ಇಲ್ಲಿದೆ.

೪. ಮುಂದೆ ಅರಿಷ್ಟಾಸುರ(೧೦/೭), ಕೇಶಿ(೧೦/೧೨) ಮೊದಲಾದ ಅಸುರರ ಪ್ರಯತ್ನವು ಸಹ ಇದೇ ರೀತಿಯಾಗಿ, ಶರೀಕೃಷ್ಣನ ಸಂಕಲ್ಪಕ್ಕೆ ಅನುಗುಣವಾದ ರೀತಿಯಲ್ಲಿಯೇ ಅವರಿಗೆ ಆತ್ಮಘಾತಕವಾಗಿ ಪರಿಣಮಿಸಿತು ಎಂಬುದನ್ನು ಗಮನಿಸಬೇಕು.

ಧೇನುಕಾಸುರನ ವಧೆ

ಉತ್ಕ್ಷಿಪ್ಯ ತಂ ತಾಲಮಹೀರುಹಾಗ್ರೇ
ಸಂಪ್ರೇಷಯಾಮಾಸ ಸತಾಂ ವಿಪಕ್ಷಮ್ ।

---

೧. ಸ್ವಧ್ವಜಛತ್ರಾದೀನಾಂ ಸಪತ್ನಾಕ್ರಮಣೋಪೇಕ್ಷಾ ಶೂರಾಣಾಮಪಶಸ್ಕರೀತಿ ಭಾವೇನೇವ ಬಲರಾಮಃ ಸ್ವಯಂ ಯುದ್ಧಾರ್ಥಮಗಮದಿತ್ಯುತ್ಪ್ರೇಕ್ಷಾ। -ವ್ಯಾ.

೨. ಬಲಕಾರ್ಯದರ್ಶನೇನ ಬಲಭದ್ರ ಇತಿ ನಾಮ್ನೋಽನ್ವರ್ಥ್ಯಮಿತಿ ಭಾವಃ। -ವ್ಯಾ.

೩. ಆಭಿಮುಖ್ಯೇನಾಗಮನೇ ಪಾರ್ಷ್ಣಿಪಾದಗ್ರಹಣಾಯೋಗಾದಿತಿ ಭಾವಃ। -ವ್ಯಾ.

ವಿಷ್ವಕ್ಫಲಾಲಂಬಿನಿ ಪಾದಪಾಗ್ರೇ
ಧೃತ್ವೋಪಲಂ ಬಾಲ ಇವಾತ್ತಲೀಲಃ ॥ ೨೫ ॥

ಬಲರಾಮನು ಸಜ್ಜನವಿರೋಧಿಯಾದ ಅವನನ್ನು ಎಲ್ಲೆಡೆ ಹಣ್ಣುಗಳು ಜೋತಾಡುತ್ತಿದ್ದ ತಾಳವೃಕ್ಷದ ತುದಿಯ ಮೇಲೆ ಜೋರಾಗಿ ಅಪ್ಪಳಿಸಿದ; ಬಾಲಕನೊಬ್ಬ ಲೀಲೆಯಿಂದ ಕಲ್ಲನ್ನು ಎತ್ತಿ ಎಸೆಯುವಂತೆ.

ವಿ. : ೧. ಬಲರಾಮನು ಧೇನುಕಾಸುರನನ್ನು ಲೀಲಾಜಾಲವಾಗಿಯೇ ಸಂಹರಿಸಿದ ಎಂದು ಭಾವ; ಪಾದಪ-ವೃಕ್ಷ; ಮಹೀರುಹ-ವೃಕ್ಷ; ಉಪಲ-ಪಾಷಾಣ, ಕಲ್ಲು; ವಿಷ್ವಕ್-ಸರ್ವತ್ರ.

೨. ಧೇನುಕಾಸುರ ಹಾಗೂ ಅವನ ಅನುಯಾಯಿಗಳಿಗೆ ವಿನಾಯಕನ ವರವಿದ್ದಿತು ಎಂಬ ವಿಶೇಷಾಂಶ [೧]ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ. ವಿಘ್ನೇಶನ ವರವಿದ್ದ ಅವನು ಸಜ್ಜನರಿಗೆ ವಿಘ್ನಮಾಡುವ ಮೂಲಕ ಆ ವರದ ದುರುಪಯೋಗವನ್ನು ಮಾಡಿಕೊಂಡಿದ್ದ ಎಂಬುದು ಅವನ ದುರಂತ.

೩.. ಆ ಸಮಯದಲ್ಲಿ ವಿಶೇಷವಾಗಿ ಅವನಲ್ಲಿ ಶ್ರೀಕೃಷ್ಣನ ಶುಕ್ಲಕೇಶರೂಪದ ಆವೇಶವಿದ್ದಿತು ಎಂದು ತಿಳಿಯುವುದು; ಇದರಿಂದಾಗಿಯೇ **ಧೇನುಕಾಸುರಭಂಜನ** ಎಂಬ ಹೆಸರು ಶ್ರೀಕೃಷ್ಣನಿಗೆ ಅನ್ವಯಿಸುವಂತೆ ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರದಲ್ಲಿ ನಿರೂಪಿತವಾಗಿದೆ ಎಂದು ತೋರುವುದು.

೪. ವಿಘ್ನೇಶನ ವರವಿದ್ದ ಧೇನುಕಾಸುರನ ವಧೆಯು ಒಂದು ರೀತಿಯಲ್ಲಿ ಗಾಣಪತಮತದ ಖಂಡನೆಯೂ ಆಗಿದ್ದು, ಈ ಪ್ರಸಂಗ ಬ್ರಹ್ಮಸೂತ್ರಗಳ ಪತ್ಯುರಧಿರಣಕ್ಕೆ ನಿದರ್ಶನದಂತಿದೆ ಎಂದು ತಿಳಿಯಬಹುದು.

೫. ಇಲ್ಲಿ ತಾಲವನ ಎಂದರೆ, ತಾಳವೃಕ್ಷಗಳ ವನ ಎಂಬುದಾಗಿ ಅನೇಕರು ತಿಳಿದಿರುವುದುಂಟು. ಆದರೆ, ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಖರತಾಲವನ ಎಂಬುದಾಗಿ [೨]ಕರೆಯಲಾಗಿದೆ.

---

೧. ತತ್ರಾಥ ಕೃಷ್ಣಮವದನ್ ಸಬಲಂ ವಯಸ್ಯಾಃ ಪಕ್ವಾನಿ ತಾಲಸುಫಲಾನ್ಯನುಭೋಜಯೇತಿ ।
ಇತ್ಯರ್ಥಿತಃ ಸಬಲ ಆಪ ಸ ತಾಲವೃಂತಂ ಗೋಪೈರ್ದುರಾಸದಮತೀವ ಹಿ ಧೇನುಕೇನ ॥
ವಿಘ್ನೇಶತೋ ವರಮವಾಪ್ಯ ಸುದುಷ್ಟದೈತ್ಯೋ ದೀರ್ಘಾಯುರುತ್ತಮಬಲಃ ಕದನಪ್ರಿಯೋಽಭೂತ್ ।
ನಿತ್ಯೋದ್ಧತಃ ಸ ಉತ ರಾಮಮವೇಕ್ಷ್ಯ ತಾಲವೃಂದಾತ್ ಫಲಾನಿ ಗಲಯಂತಮಥಾಭ್ಯಧಾವತ್ ॥
ತಸ್ಯ ಪ್ರಹಾರಮಭಿಕಾಂಕ್ಷತ ಆಶು ಪೃಷ್ಠಪಾದೌ ಪ್ರಗೃಹ್ಯ ತೃಣರಾಜಶಿರೋಽಹರತ್ ಸಃ ।
ತಸ್ಮಿನ್ ಹತೇ ಖರತರೇ ಖರರೂಪದೈತ್ಯೇ ಸರ್ವೇ ಖರಾಶ್ಚ ಖರತಾಲವನಾಂತರಸ್ಥಾಃ ॥
ಪ್ರಾಪುಃ ಖರಾಃ ಖರತರಾಃ ಖರರಾಕ್ಷಸಾರಿಂ ಕೃಷ್ಣಂ ಬಲೇನ ಸಹಿತಂ ನಿಹತಾಶ್ಚ ತೇನ ।
ಸರ್ವಾನ್ ನಿಹತ್ಯ ಖರರೂಪಧರಾನ್ ಸ ದೈತ್ಯಾನ್ ವಿಘ್ನೇಶ್ವರಸ್ಯ ವರತೋಽನ್ಯಜನೈರವಧ್ಯಾನ್ ।
ಪಕ್ವಾನಿ ತಾಲಸುಫಲಾನಿ ನಿಜೇಷು ಚಾದಾದ್ದುರ್ವಾರಪೌರುಷಗುಣೋದ್ಭರಿತೋ ರಮೇಶಃ ॥
-ಮ.ಭಾ.ತಾ.ನಿ.(೧೩/೫೧-೫೪)

೨. ತಸ್ಮಿನ್ ಹತೇ ಖರತರೇ ಖರರೂಪದೈತ್ಯೇ ಸರ್ವೇ ಖರಾಶ್ಚ ಖರತಾಲವನಾಂತರಸ್ಥಾಃ -ಮ.ಭಾ.ತಾ.ನಿ(೧೩/೫೩.)
ಖರತಾಲಃ ಶ್ರೀತಾಲ ಇತಿ ತಾಲಭೇದೋಽಸ್ತಿ ತತ್ರ ಖರತಾಲವನಸ್ಯ ಅಂತಸ್ಥಾಃ ಮಧ್ಯಸ್ಥಾಃ । -(ಜ.)

ಖರತಾಲ ಎಂಬುದಕ್ಕೆ ಶ್ರೀತಾಲ (ಖರ್ಜೂರ) ಎಂಬ ವಿಶೇಷಾರ್ಥ ತಾತ್ಪರ್ಯನಿರ್ಣಯದ ಜನಾರ್ದನೀಯ ಟಿಪ್ಪಣಿಯಲ್ಲಿ ಉಕ್ತವಾಗಿದೆ. ಆದ್ದರಿಂದ ನಿಷಿದ್ಧವೆಂಬುದಾಗಿ ಪ್ರತೀತವಾಗಿರುವ ತಾಳೆಹಣ್ಣುಗಳನ್ನು ಶ್ರೀಕೃಷ್ಣ ಗೋಪರಿಗೆ ಹೇಗೆ ತಿನ್ನಿಸಿದ ಎಂಬ ಶಂಕೆಗೆ ಅವಕಾಶವಿಲ್ಲವಾಗುವುದು.

### ಅವೈಷ್ಣವರಿಗೆ ನೆರವಾಗುವುದು ಪತನದ ಹಾದಿ

**ವ್ಯಸುರಥ ನಿಪತನ್ ಸ ಸ್ವಾಂಘ್ರಿಪಾನೇವ ಕಾಂಶ್ಚಿ-**
**ದ್ದುರುತಮತನುರುಚ್ಚೈಃ ಪಾತಯಾಮಾಸ ದೈತ್ಯಃ।**
**ಹರಿಪದವಿಮುಖಾನಾಂ ಪೋಷಣಸ್ಯೋಚಿತಂ ತೇ**
**ಫಲಮಲಭಿಷತಾಲಂ ತೈಃ ಸಹೇತ್ಯಸ್ಮದೂಹಃ ॥ ೨೬ ॥**

ಗತಪ್ರಾಣನಾಗಿ ಉರುಳಿದ ಆ ಅತಿದೊಡ್ಡ ದೇಹದ ದೈತ್ಯ ಧೇನುಕಾಸುರನು ತನ್ನ ಕೆಲವು ವೃಕ್ಷಗಳನ್ನೇ ಕೆಳಕ್ಕುರುಳಿಸಿದ; ಶ್ರೀಹರಿಪಾದಕ್ಕೆ ವಿಮುಖರಾದವರ ಪೋಷಣೆಗೆ ಉಚಿತವಾದ ಫಲವನ್ನೇ ಆ ಮರಗಳು, ಅವರೊಂದಿಗೆ ಚೆನ್ನಾಗಿ ಹೊಂದಿದವು ಎಂದು ನನ್ನ ಊಹೆ.

ವಿ. : ೧. ಭಯಂಕರದೇಹದ ಆ ಧೇನುಕಾಸುರನು ಅಪ್ಪಳಿಸಿದ್ದರಿಂದ ಆ ತಾಳವನದಲ್ಲಿದ್ದ ಅನೇಕ ವೃಕ್ಷಗಳು ಕೆಳಕ್ಕುರುಳಿದವು ಎಂದರ್ಥ.

೨. ಅಷ್ಟು ದಿನಗಳ ಕಾಲ ಅಂತಹ ಪಾಪಿದೈತ್ಯನಿಗೆ ಪೋಷಣೆಗೆ ನೆರವಾಗಿದ್ದ ಪಾಪಕ್ಕೆ ತಕ್ಕ ಫಲವನ್ನು ಆ ವೃಕ್ಷಗಳು ಅನುಭವಿಸುವಂತಾಯಿತು ಎಂಬ ವಿವರಣೆ ಇಲ್ಲಿದೆ.

೩. ಅಯೋಗ್ಯರಿಗೆ ಆಸರೆ ನೀಡುವುದು ಆತ್ಮಘಾತಕವಾದ ದುಷ್ಕಾರ್ಯ ಎಂಬ ಸಂದೇಶ ಇದರಲ್ಲಿದೆ; ವ್ಯಸುಃ – ಮೃತ; ಅಂಘ್ರಿಪ – ವೃಕ್ಷ.

### ಹೆಸರು ಸಾರ್ಥಕಪಡಿಸಿಕೊಂಡ ಬಲರಾಮ

**ಮುನಿಕೃತಾಗ್ರಜನಾಮ ಗುಣೋಚಿತಂ**
**ವಿರಚಯನ್ನಿವ ಸಾನುಗಧೇನುಕಮ್ ।**
**ಹಲಧರೇಣ ಹತಂ ಸಮಕಾರಯತ್**
**ಸುರನತೋ ರಣತೋಷಿತನಾಕಿನಾ ॥ ೨೭ ॥**

ಮುನಿಗಳಾದ ಗರ್ಗಾಚಾರ್ಯರು ಇರಿಸಿದ್ದ ಅಣ್ಣಬಲರಾಮನ ಹೆಸರನ್ನು ಅನುಗುಣವನ್ನಾಗಿ ಮಾಡಲೆಂಬಂತೆ ದೇವತೆಗಳನ್ನೂ ಸಂತೋಷಪಡಿಸುವ ಯುದ್ಧ ಮಾಡಿದ ಅವನಿಂದ ಅನು- ಯಾಯಿಗಳ ಸಮೇತವಾಗಿ ಧೇನುಕಾಸುರನನ್ನು ಸುರಪೂಜಿತನಾದ ಶ್ರೀಕೃಷ್ಣ ಸಂಹಾರಮಾಡಿಸಿದ.

ವಿ. : ೧. ಗರ್ಗಾಚಾರ್ಯರು [1]ಬಲರಾಮನಿಗೆ ನಾಮಕರಣಕಾಲದಲ್ಲಿ ಇರಿಸಿದ್ದ 'ಬಲಭದ್ರ' ಎಂಬ ಹೆಸರು ಧೇನುಕಾಸುರನ ವಧೆಯಿಂದ ಸಾರ್ಥಕವಾಯಿತು ಎಂದು ಭಾವ.

೨. ಬಲರಾಮನಿಗೆ ಅವಕಾಶನೀಡಲೆಂದೇ ಶ್ರೀಕೃಷ್ಣ ತಾನು ನೇರವಾಗಿ ಅವನನ್ನು ಸಂಹರಿಸದೆ ಹಾಗೆ ಅವನಿಗೆ ಅವಕಾಶ ನೀಡಿದ ಎಂಬ ತತ್ತ್ವವೂ ಇಲ್ಲಿ ಸೂಚಿತ ; ಹಲ – ನೇಗಿಲು.

## ಪ್ರಲಂಬಾಸುರ-ವ್ಯೋಮಾಸುರರ ವಧೆ

**ಗ್ರೀಷ್ಮೇ ಭಾಸ್ವತಿ ಚಾಪರಾಧಕೃತಿ ಸಂಕ್ರುದ್ಧಃ ಪ್ರಲಂಬಂ ಹಲೀ**
**ಲೀಲಾಯಾಶ್ಛಲತೋ ಜಘಾನ ಮುರಜಿದ್ವ್ಯೋಮಂ ಮಯಸ್ಯಾತ್ಮಜಮ್ ।**
**ಯುಕ್ತಂ ತದ್ಧಿ ಮನಃಪ್ರಿಯಾನ್ ಜನಯಿತಾ ಸಂತರ್ಜಯನ್ ಸ್ವಾನ್ ಶಿಶೂನ್**
**ತತ್ಪ್ರಾಂತಸ್ಥಶಿಲಾದಿ ಹಸ್ತಲಗುಡೈಸ್ತಪ್ತೋऽಪಿ ಯತ್ ತಾಡಯೇತ್ ॥ ೨೮ ॥**

ಗ್ರೀಷ್ಮಋತುವಿನಲ್ಲಿ ಸೂರ್ಯನು ಅಪಚಾರವೆಸಗುತ್ತಿದ್ದುದನ್ನು ಕಂಡು, ಬಹಳವಾಗಿ ಕೆರಳಿದ ಬಲರಾಮನು ಆಟದ ನೆಪದಲ್ಲಿ ಪ್ರಲಂಬಾಸುರನನ್ನು ಸಂಹರಿಸಿದ; ಮುರಾರಿಯಾದ ಶ್ರೀಕೃಷ್ಣನು ಮಯಪುತ್ರನಾದ ವ್ಯೋಮ ಎಂಬ ರಾಕ್ಷಸನನ್ನು ಕೊಂದ; ಅದು ಯುಕ್ತವೇ ಸರಿ. ತನ್ನ ಮನಸ್ಸಿಗೆ ಪ್ರಿಯರಾದ ತನ್ನ ಶಿಶುಗಳಿಂದ ನೊಂದ ತಂದೆಯು ಅವರನ್ನು [2]ಭಯಪಡಿಸಲೆಂದು ಸಮೀಪದಲ್ಲಿನ ಶಿಲೆ ಮೊದಲಾದವುಗಳನ್ನು ತನ್ನ ಕೈಯಲ್ಲಿನ ದಂಡಗಳಿಂದ ಹೊಡೆಯುವನಲ್ಲವೆ !

ವಿ. : ೧. [3]ಗ್ರೀಷ್ಮ ಹಾಗೂ ಸೂರ್ಯ ಬಲರಾಮ-ಶ್ರೀಕೃಷ್ಣರಿಗೆ ಪ್ರಿಯರಾದವರು. ಆದರೆ ಅವರ ಬಿಸಿಲಿನಿಂದಾಗಿ ಅವರ ಮೇಲೆ ಬೇಸರಿಸಿದ ಶ್ರೀಕೃಷ್ಣ ಅವರನ್ನು ಶಿಕ್ಷಿಸದೆ ಇತರರಾದ ಪ್ರಲಂಬಾಸುರ ಹಾಗೂ ವ್ಯೋಮಾಸುರರನ್ನು ಕೊಂದು ಅವರ ಮೇಲಿನ ತಮ್ಮ ಅಸಮಾಧಾನವನ್ನು ತೋರಿಸಿಕೊಂಡರು ಎಂದರ್ಥ.

೨. ಇದರಿಂದ ತನ್ನ ನಿಯಮದಂತೆಯೇ ವರ್ತಿಸುವ ಗ್ರೀಷ್ಮ ಹಾಗೂ ಸೂರ್ಯರ ಮೇಲೆ ಶ್ರೀಕೃಷ್ಣನಿಗೆ ಅವರು ತನ್ನ ಕರ್ತವ್ಯ ಮಾಡುವವರು ಎಂಬ ಪ್ರೀತಿ ಇದ್ದಿತು ಎಂಬ ವಿಶೇಷಾಂಶ ಸೂಚಿತ : ಗ್ರೀಷ್ಮ ಇಧ್ಮಃ ... । –ಪುರುಷಸೂಕ್ತ.

೩. ಬಲರಾಮನು ಪ್ರಲಂಬಾಸುರನನ್ನು ಹಾಗೂ ಶ್ರೀಕೃಷ್ಣನು ವ್ಯೋಮಾಸುರನನ್ನು ಸಂಹರಿಸಿದರು ಎಂಬುದು ಇಲ್ಲಿಯ ಮುಖ್ಯಾಂಶ; ಛಲ – ನೆಪ; ಲಗುಡ – ದಂಡ.

---

೧. ಬಲಕಾರ್ಯದರ್ಶನೇನ ಬಲಭದ್ರ ಇತಿ ನಾಮ್ನೋऽಪ್ಯರ್ಥವತ್ತ್ವಮಿತಿ ಭಾವಃ। –ವ್ಯಾ.

೨. ಯಥಾ ಲೋಕೇ ಪಿತಾ ಸ್ವಸುತಾದೀನ್ ತತ್ಸಮೀಪಸ್ಥಸ್ತಂಭಭಿತ್ತ್ಯಾದಿ ಪ್ರತಾಡ್ಯ ಭೀಷಯತಿ ತದ್ವದಿತಿ ಭಾವಃ। –ವ್ಯಾ.

೩. ಅನೇನ ಗ್ರೀಷ್ಮಸೂರ್ಯಯೋಃ ಸ್ವಕೀಯತ್ವಂ ಧ್ವನ್ಯತೇ। –ವ್ಯಾ.

೪. [೧]ಪ್ರಲಂಬಾಸುರ ಹಾಗೂ ವ್ಯೋಮಾಸುರರ ವಧೆಗಳನ್ನು ಶ್ರೀಮದ್ಭಾಗವತ ಹಾಗೂ [೨]ಮಹಾಭಾರತತಾತ್ಪರ್ಯನಿರ್ಣಯಗಳಿಂದ ತಿಳಿದುಕೊಳ್ಳಬಹುದು.

### ಶ್ರೀಕೃಷ್ಣನಿಂದ ಮತ್ತೊಮ್ಮೆ ಕಾಡ್ಗಿಚ್ಚಿನ ಪಾನ

ಪರಾಭವಂ ವೀಕ್ಷ್ಯ ತತೋ ನಿದಾಘಃ
ಸಸರ್ಜ ದಾವಾನಲಮುಜ್ಜ್ವಲಂತಮ್ ।
ಹರಿಃ ಪಪೌ[೩] ತಂ ಚ ಜಗನ್ನಿವಾಸೋ
ವಿನಾಶಶೂನ್ಯಸ್ಯ ಹಿ ಕಿಂ ನ ಕಾರ್ಯಮ್ ॥ ೨೯ ॥

ತನ್ನ ಪರಾಭವವನ್ನು ಗಮನಿಸಿದ ಗ್ರೀಷ್ಮವು ಪ್ರಜ್ವಲಿಸುವ ಕಾಡ್ಗಿಚ್ಚನ್ನು ಸೃಷ್ಟಿಸಿತು; ಜಗನ್ನಿವಾಸನಾದ ಶ್ರೀಕೃಷ್ಣ ಅದನ್ನು ಸಹ ಕುಡಿದುಬಿಟ್ಟನು; ವಿನಾಶವಿಲ್ಲದವನಿಗೆ ಆಗದ ಕಾರ್ಯ ಯಾವುದು?

ವಿ. : ೧. ಆಗೊಮ್ಮೆ ಶ್ರೀಕೃಷ್ಣನಿಂದ ನಡೆದ ದಾವಾಗ್ನಿಪಾನದ ವಿವರ ಇಲ್ಲಿ ಸೂಚಿತವಾಗಿದೆ.

೨. ಬೆಂಕಿಯೊಂದಿಗೆ ಸರಸ ಅಪಾಯಕರ; ಆದರೆ ಶ್ರೀಕೃಷ್ಣ ಸರ್ವಥಾ [೪]ನಾಶಶೂನ್ಯನಾದ ಶ್ರೀಹರಿ ; ಆದ್ದರಿಂದ ಅವನಿಗೆ ಆಗದ್ದು ಯಾವುದೂ ಇಲ್ಲ ಎಂದು ತಾತ್ಪರ್ಯ.

೩. ಹಿಂದೊಮ್ಮೆ ಈಗಾಗಲೇ (೫/೧,೨) ಶ್ರೀಕೃಷ್ಣ ದಾವಾಗ್ನಿಯನ್ನು ಪಾನ ಮಾಡಿದ್ದನ್ನು 'ಚ'ಕಾರದಿಂದ ಸೂಚಿಸಿರುವರು.

### ವರ್ಷರ್ತುವಿನ ಆಗಮನ

ಮೇಘಾಃ ಸವರ್ಣಸ್ಯ ಹರೇಃ ಸಹಾಯಂ
ಪ್ರಾಯೋ ವಿಧಾತುಂ ಪರಿತಃ ಸಮೇತ್ಯ ।

---

೧. ಪಕ್ಷದ್ವಯೇನ ವಿಹರತ್ಸ್ವಥ ಗೋಪಕೇಷು ದೈತ್ಯಃ ಪ್ರಲಂಬ ಇತಿ ಕಂಸವಿಸೃಷ್ಟ ಆಗಾತ್ ।
ಕೃಷ್ಣಸ್ಯ ಪಕ್ಷಿಷು ಜಯತ್ಸು ಸ ರಾಮಮೇತ್ಯ ಪಾಪಃ ಪರಾಜಿತ ಉವಾಹ ತಮುಗ್ರರೂಪಃ ॥
ಭೀತೇನ ರೋಹಿಣಿಸುತೇನ ಹರಿಃ ಸ್ತುತೋಽಸೌ ಸ್ವಾವಿಷ್ಟತಾಮುಪದಿದೇಶ ಬಲಾಭಿವೃತ್ತ್ಯೈ ।
ತೇನೈವ ಪೂರಿತಬಲೋಽಂಬರಚಾರಿಣಂ ತಂ ಪಾಪಂ ಪ್ರಲಂಬಮುರುಮುಷ್ಟಿಹತಂ ಚಕಾರ ॥
ತಸ್ಮಿನ್ ಹತೇ ಸುರಗಣಾ ಬಲದೇವನಾಮ ರಾಮಸ್ಯ ಚಕ್ರುರತಿತೃಪ್ತಿಯುತಾ ಹರಿಶ್ಚ ।
ವಹ್ನಿಂ ಪಪೌ ಪುನರಪಿ ಪ್ರದಹಂತಮುಚ್ಚೈರ್ಗೋಪಾಂಶ್ಚ ಗೋಗಣಮಗಣ್ಯಗುಣಾರ್ಣವೋಽಪಾತ್ ॥
-ಮ.ಭಾ.ತಾ.ನಿ.(೧೩/೫೫-೫೭)

೨. ವ್ಯೋಮಶ್ಚ ನಾಮ ಮಯಸೂನುರಜಪ್ರಸಾದಾಲ್ಲಬ್ಧಾಮಿತಾಯುರಖಿಲಾನ್ ವಿದಧೇ ಬಿಲೇ ಸಃ ।
ತಂ ಶ್ರೀಪತಿಃ ಸುರಪತಿಃ ಪಶುವದ್ವಿಶಸ್ಯ ನಿಃಸಾರಿತಾನ್ ಬಿಲಮುಖಾದಖಿಲಾಂಶ್ಚಕಾರ ॥
-ಮ.ಭಾ.ತಾ.ನಿ.(೧೩/೮೨)

೩. ವಹ್ನಿಂ ಪಪೌ ಪುನರಪಿ ಪ್ರದಹಂತಮುಚ್ಚೈರ್ಗೋಪಾಂಶ್ಚ ಗೋಗಣಮಗಣ್ಯಗುಣಾರ್ಣವೋಽಪಾತ್ ॥
-ಮ.ಭಾ.ತಾ.ನಿ.(೧೩/೫೭)

೪. ತಥಾಹಿ ವಿನಾಶಶೂನ್ಯಸ್ಯ ಮೃತಿರಹಿತಸ್ಯ ಕಿಂ ನ ಕಾರ್ಯಂ ಮರಣಭಯಾಭಾವಾದಿತಿ ಭಾವಃ । -ವ್ಯಾ.

ಭಾಸ್ವಂತಮಂಗ್ಯೈಃ ಪಯಸಾ ನಿದಾಘ-
ಮಾಚ್ಛಾದ್ಯ ವಿಶ್ವಂ ಪುಪುಷುಸ್ತದೀಯಮ್ ॥ ೩೦ ॥

ತಮ್ಮಂತೆ ನೀಲವರ್ಣದವನಾದ ಶ್ರೀಕೃಷ್ಣನಿಗೆ ನೆರವಾಗಲೋ ಎಂಬಂತೆ ಮೇಘಗಳು ಸುತ್ತಲೂ ಕವಿದು ತಮ್ಮ ಶರೀರಗಳಿಂದ ಸೂರ್ಯನನ್ನು, ತಮ್ಮ ನೀರಿನಿಂದ ಬೇಗೆಯನ್ನು ಮರೆಮಾಡಿ ಅವನ ಲೋಕವನ್ನು ಪೋಷಿಸಿದವು.

ವಿ. : ೧. ಆಗ ಗ್ರೀಷ್ಮಋತು ಕಳೆದು ವರ್ಷಋತು ಪ್ರಾರಂಭವಾಯಿತು ಎಂಬುದನ್ನು ಹೀಗೆ ವರ್ಣಿಸಿರುವರು.

೨. ಶ್ರೀಕೃಷ್ಣನು ನೀಲಮೇಘಶ್ಯಾಮ; ತಮ್ಮಂತೆಯೇ ನೀಲವರ್ಣದ ಶ್ರೀಕೃಷ್ಣನಿಗೆ ನೆರವು ನೀಡಲೋ ಎಂಬಂತೆ ಮೋಡಗಳು ಗಗನದಲ್ಲಿ ತುಂಬಿ ಸೂರ್ಯನನ್ನು ಮರೆಮಾಡಿದವು. ಗ್ರೀಷ್ಮದ ಬೇಗೆಯನ್ನು ಹೋಗಲಾಡಿಸಿದವು; ನಿದಾಘ – ಬೇಸಿಗೆ.

೩. ಇದರಿಂದ ತಮ್ಮದೇ ಹೆಸರು, ವರ್ಣ, ಮೊದಲಾದವುಗಳನ್ನು ಹೊಂದಿದವರ ಬಗ್ಗೆ ಒಲವು ಮೂಡುವುದು ಲೋಕರೂಢಿ ಎಂಬ ವಿಶೇಷಾಂಶ ಸೂಚಿತ.

೪. ಸವರ್ಣದವರಿಗೆ ಎಂದರೆ ಸ್ವಜಾತಿಯವರ ಬಗ್ಗೆ ಪಕ್ಷಪಾತ ತೋರುವ ಲೋಕರೂಢಿ ಸುಪ್ರಸಿದ್ಧವೇ ಆಗಿದೆ.

### ವಿಷ್ಣುಭಕ್ತರಿಗೆ ಸಕಲರೂ ಹಿತೈಷಿಗಳೇ

ಆಶ್ರಿತ್ಯ ವಿಷ್ಣುಪದಮರ್ಥಿಷು ಯಚ್ಛತೋಽಂಬು
ಮೇಘಸ್ಯ ಸಾರಥಿರಭೂಜ್ಜಲನಾಯಕೋಽಪಿ ।
ನಿತ್ಯಂ ಮುಕುಂದಚರಣಾರ್ಪಿತವೈಭವಸ್ಯ
ಮರ್ತ್ಯೋಪಕಾರನಿರತಸ್ಯ ನ ಕಃ ಸಹಾಯಃ ॥ ೩೧ ॥

ಗಗನವನ್ನು ಆಶ್ರಯಿಸಿ, ಬಯಸಿದವರಿಗೆ ನೀರನ್ನು ನೀಡಿದ ಮೇಘಕ್ಕೆ ಜಲನಾಯಕನಾದ ಸಮುದ್ರವೂ ಸಹ ನೆರವಾಯಿತು; ಸದಾ ಶ್ರೀಹರಿಯ ಚರಣಕ್ಕೆ ತಮ್ಮ ಐಶ್ವರ್ಯವನ್ನು ಒಪ್ಪಿಸುವ, ಜನೋಪಕಾರದಲ್ಲಿ ತೊಡಗಿದ ಜನರಿಗೆ ಯಾರು ತಾನೇ ನೆರವಾಗರು ?

ವಿ. : ೧. ಸಮುದ್ರದ ನೀರಿನಿಂದ ಮೇಘಗಳು ನಿರ್ಮಿತವಾಗುವುದರಿಂದ ಮೇಘಗಳ ಮಳೆ ಸುರಿಸುವ ಕಾರ್ಯಕ್ಕೆ ಅದು ನೆರವು ನೀಡಿತು ಎಂದು ತಿಳಿಸಿರುವರು.

೨. [೧]ಮೇಘಗಳು ವಿಷ್ಣುಪದ(ಆಕಾಶ)ವನ್ನು ಆಶ್ರಯಿಸಿ, ಜನರಿಗೆ ಉಪಯುಕ್ತವಾಗುವ ಮಳೆಯನ್ನು ನೀಡುವ ಸತ್ಕಾರ್ಯದಲ್ಲಿ ತೊಡಗಿರುವುದರಿಂದ ಸಮುದ್ರ ಅದಕ್ಕೆ ನೆರವು

೧. ಮೇಘಸ್ಯಾಪಿ ವಿಷ್ಣುಪದಾರ್ಪಿತವಿಭವತ್ವಾಜ್ಜೀವನದಾನೇನ ಮನುಷ್ಯೋಪಕಾರಿತ್ವಾದಿತಿ ಭಾವಃ । –ವ್ಯಾ.

ನೀಡುವುದು. ಇದರಿಂದ ಶ್ರೀಹರಿಯ ಭಕ್ತರಾಗಿ ಲೋಕೋಪಕಾರಕ್ಕೆ ತೊಡಗುವ ಜನರಿಗೆ ಎಲ್ಲರೂ ಸಹಕಾರನೀಡುವವರು ಎಂಬ ತತ್ತ್ವ ನಿರೂಪಿತವಾಯಿತು.

೩. ವಿಷ್ಣುಪದ ಎಂದರೆ ಮಹಾವಿಷ್ಣುವಿನ ಪಾದ ಹಾಗೂ ಆಕಾಶ ಎಂಬ ಎರಡು ಅರ್ಥಗಳು ವಿವಕ್ಷಿತ (ಶ್ಲೇಷಾಲಂಕಾರ).

೪. ಜಲನಾಯಕ ಎಂಬುದಕ್ಕೆ ಜಡನಾಯಕ ಎಂದೂ ಅರ್ಥ. (ಜಲಂ ನೀರೇ ಜಡೇ -ಅಭಿಧಾನ). ಇದರಿಂದ ಜಡನಾಯಕ ಎಂದರೆ ಮೂರ್ಖಶಿಖಾಮಣಿ ಎಂದಾಗುವುದು. ಇದರಿಂದ ವಿಶೇಷ ಹರಿಪ್ರೀತಿಕರ ಪ್ರಸಂಗಗಳಲ್ಲಿ ಸಜ್ಜನರಿಗೆ ಮಹಾಮೂರ್ಖರೂ ಸಹ ನೆರವು ನೀಡುವರು ಎಂಬ ವಿಶೇಷಾರ್ಥ ತಿಳಿಯುವುದು.

ಪರೋಪಕಾರಿಗಳಿಗೆ ಶತ್ರುಗಳೂ ಮಿತ್ರರಾಗುವರು

ಲೋಕಸ್ಯ ಶೋಕಹರವಾರ್ಯಭಿವರ್ಷತೋಽಲಂ
ಮೇಘಸ್ಯ ಯೋಗಕೃದಭೂದಮತೋಽಪಿ ವಾತಃ।
ಕಾಮಂ ಪರೋಪಕೃತಿಲಗ್ನಮನೋರಥಾನಾಂ
ಕ್ಷೇಮಂಕರತ್ವಮುಪಯಾಂತಿ ಹಿ ಶತ್ರವೋಽಪಿ ॥ ೩೨ ॥

ಲೋಕಕ್ಕೆ ಶೋಕ ನೀಗಿಸುವ ನೀರನ್ನು ಸುರಿಸತೊಡಗಿದ ಮೋಡಗಳಿಗೆ ಅವುಗಳಿಗೆ ಶತ್ರು-ವಾದ ಗಾಳಿಯೂ ಸಹ ಇತರ ಮೋಡಗಳೊಂದಿಗೆ ಜೊತೆಗೂಡಿಸಿ ನೆರವಾಯಿತು ; ಯಥೇಚ್ಛವಾಗಿ ಪರೋಪಕಾರದಲ್ಲಿ ತೊಡಗುವ ಬಯಕೆಯ ಜನರಿಗೆ ಶತ್ರುಗಳೂ ಸಹ ಒಳಿತನ್ನು ಬಯಸುವವರಾಗುವರು.

ವಿ. : ೧. ಹಿಂದಿನ ಶ್ಲೋಕದಲ್ಲಿದ್ದಂತೆ ಇಲ್ಲಿಯೂ ಸಹ ಪರೋಪಕಾರನಿರತರಿಗೆ ಇತರರ ಸಹಾಯ ಲಭಿಸುವುದು ಖಚಿತ ಎಂಬ ಭಾವ ನಿರೂಪಿತವಾಗಿದೆ.

೨. [೧]ಮಳೆಗಾಲದಲ್ಲಿ ಬೀಸುವ ಗಾಳಿಗೆ ಮೋಡಗಳು ಒಂದನ್ನೊಂದು ಸಂಧಿಸುವವು ಎಂಬ ಅರ್ಥ ವಿವಕ್ಷಿತ.

ಪುನಃ ವರ್ಷರ್ತುವಿನ ವರ್ಣನೆ

ಉದ್ಯದ್ವಿದ್ಯುತಿ[೨] ವಕ್ರಶಕ್ರಧನುಷಿ ವ್ಯೋಮಾಗ್ರಸೀಮಾಶ್ರಯೇ
ವರ್ಷರ್ತ್ವೂರ್ಜಿತಗರ್ಜಿತೇಽತಿಚಕಿತಾ ಮರ್ತ್ಯಾಃ [೩]ಪಯೋಧಾರಿಣಿ।

---

೧. ಪುರೋವಾತಸ್ಯ ಮೇಘಮೇಲನಕಾರಿತ್ವಾದಿತಿ ಭಾವಃ। -ವ್ಯಾ.
೨. ವಿದ್ಯುದಾದೀನಾಂ ಬಿಂಬಪ್ರತಿಬಿಂಬಭಾವಗತತ್ವೇನ ದೃಷ್ಟಾಂತಾಲಂಕಾರಃ। ವ್ಯಾ.
೩. ಸ್ತನಪರಿರಂಭಣಸ್ಯ ಕಟಾಕ್ಷವಿಕ್ಷೇಪಣಾದಿನಾ ಪುರುಷವಶೀಕರಣಾನಂತರಭಾವಿತ್ವಾದಿತಿ ಭಾವಃ। ವ್ಯಾ.

**ನೇತ್ರಾಂತಭ್ರುಕುಟೀಬಲಂ ಕೃಶಲಸನ್ಮಧ್ಯೋರ್ಧ್ವಭಾಗೋದಿತಂ**
**ನಾರೀಪೀನಪಯೋಧರಂ ಭಯಹರಂ ಭೇಜುಃ ಕ್ಷಣದ್ಭೂಷಣಮ್ ॥ ೩೩ ॥**

ಕೋರೈಸುವ ಮಿಂಚು, ಬಾಗಿದ ಕಾಮನಬಿಲ್ಲು , ಜೋರಾದ ಗುಡುಗು, ಇವುಗಳಿಂದ ಕೂಡಿ ಮೋಡವು ಗಗನಪ್ರಾಂತದಲ್ಲಿ ಮಳೆಯನ್ನು ಸುರಿಸತೊಡಗಲು ತುಂಬಾ ಭಯಪಟ್ಟ ಮಾನವರು ಕುಡಿನೋಟ, ಹುಬ್ಬಿನ ವಿಲಾಸಗಳ ಬಲವುಳ್ಳ, ಧ್ವನಿಗಯ್ಯುವ ಆಭರಣಗಳ, ಹೊಳೆಯುವ ತೆಳುನಡುವಿನ ಮೇಲ್ಭಾಗದಲ್ಲಿ ಒಡಮೂಡಿದ, ಭಯನೀಗಿಸುವ ಸ್ತ್ರೀಯರ ಉಬ್ಬಿದ ಸ್ತನಗಳನ್ನು ಆಶ್ರಯಿಸಿದರು.

ವಿ. : ೧. [1]ಒಬ್ಬ ರಾಜನಿಂದ ಉಂಟಾಗುವ ಭಯವನ್ನು ಪರಿಹರಿಸಿಕೊಳ್ಳಲು ಅವನಿಗಿಂತ ಬಲಶಾಲಿಯಾದ ಮತ್ತೊಬ್ಬ ರಾಜನನ್ನು ಆಶ್ರಯಿಸುವಂತೆ, ಮೋಡಗಳಿಗೆ ಅಂಜಿದ ಜನರು ಸ್ತ್ರೀಯರ ಸ್ತನಗಳೆಂಬ ಬೇರೊಂದು ಬಗೆಯ ನೆಲೆಯನ್ನು ಆಶ್ರಯಿಸಿ ತಮ್ಮ ಭೀತಿಯನ್ನು ಕಳೆದುಕೊಂಡರು ಎಂದರ್ಥ.

೨. ಶಕ್ರಧನುಃ – ಕಾಮನಬಿಲ್ಲು; ಪಯೋಧಾರಿ – ಮೇಘ; ಪಯೋಧರ – ಸ್ತನ; ವ್ಯೋಮ – ಆಕಾಶ; ಸೀಮೆ – ಪ್ರಾಂತ.

### ಸಾವಿರಪಟ್ಟು ಹೆಚ್ಚುವ ದಾನದ ಫಲ

**ಕಾದಂಬಿನ್ಯೈ ವಿತರತಿ ಪಯೋಬಿಂದುಮಾತ್ರಂ ಪಯೋಧಾ-**
**ವಾಸೀದ್ವೃದ್ಧಿಃ ಸಕಲಸರಿತಾಂ ಸ್ವಾತ್ಮನಶ್ಚೇತಿ ಯುಕ್ತಮ್ ।**
**ನಿತ್ಯಂ ವಿಷ್ಣೋಃ ಪದಮಧಿಗತಾಯಾತ್ಯುದಾರಾಯ ದಾನಾ-**
**ದಬ್ಬಿಂದೂನಾಮಪಿ ಶತಗುಣಾ ವೃದ್ಧಿರದ್ಧಾ ಸ್ವವರ್ಗೇ[2] ॥ ೩೪ ॥**

ಸಮುದ್ರವು ಮೇಘಗಳ ಸಾಲಿಗೆ ಕೇವಲ ಹನಿ ನೀರನ್ನು ನೀಡಿದರೂ, ಸಕಲ ನದಿಗಳಿಗೂ ಹಾಗೂ ತನಗೂ ವೃದ್ಧಿ ಉಂಟಾಯಿತು ಎಂಬುದು ಯುಕ್ತವಾದುದು. ಸದಾ ಶ್ರೀಹರಿಯ ಪದವನ್ನು ಆಶ್ರಯಿಸಿದ ದಾನಶೀಲನಿಗೆ ದಾನನೀಡುವುದರಿಂದ ತಾವು ನೀಡಿದ ಜಲಬಿಂದುಗಳಿಗಿಂತ ನೂರು ಪಟ್ಟು ಮಿಗಿಲಾದ ವೃದ್ಧಿಯು ತಮ್ಮವರ ಗುಂಪಿಗೆ ಉಂಟಾಗುವುದು.

ವಿ. : ೧. ಮೇಘಗಳ ಉತ್ಪತ್ತಿಗೆ ಸಮುದ್ರದ ನೀರು ಅಗತ್ಯ. ಹಾಗೆ ನೀರನ್ನು ನೀಡಿದ್ದರ ಫಲವೋ ಎಂಬಂತೆ ಸಮುದ್ರದಲ್ಲೂ ನದಿಗಳಲ್ಲೂ [3]ಮಳೆಯ ಕಾರಣದಿಂದ ನೀರಿನ ಹೆಚ್ಚಳ ಉಂಟಾಯಿತು ಎಂದರ್ಥ.

---

೧. ರಾಜಭಯಸ್ಯ ತತ್ಸದೃಶರಾಜಾಂತರಾಶ್ರಯಣೇನ ಪರಿಹಾರವತ್ ಪಯೋಧರಜನ್ಯಭಯಸ್ಯ ತತ್ಸದೃಶಪಯೋ-ಧರಾಂತರಂ ಸಮಾಶ್ರಿತ್ಯ ಪರಿಹರ್ತವ್ಯತ್ವಾದಿತಿ ಭಾವಃ। ವ್ಯಾ.

೨. ಮಂದಾಕ್ರಾಂತಾವೃತ್ತಮ್ । –ವ್ಯಾ.

೩.. ವರ್ಷಾಕಾಲೇ ಸಕಲನದೀನಾಂ ಸಮುದ್ರಸ್ಯಾಪಿ ಜಲಾಭಿವೃದ್ಧೇರ್ಜಾಯಮಾನತ್ವಾದಿತಿ ಭಾವಃ। –ವ್ಯಾ.

೨. ಆ ರೀತಿಯ ಹೆಚ್ಚಳಕ್ಕೆ ಅದು ಮೇಘಗಳಿಗೆ[1] ತನ್ನಲ್ಲಿನ ನೀರನ್ನು ದಾನಮಾಡಿದ್ದೇ ಕಾರಣ-ವಾಯಿತು ಎಂಬ ವಿವರಣೆ ಇಲ್ಲಿದೆ; ಅದ್ಧಾ - ನಿಶ್ಚಯ; ಅಬ್ಬಿಂದು - ನೀರಿನ ಹನಿ.

೩. ಇದರಿಂದ [2] ವಿಷ್ಣುಭಕ್ತರಿಗೆ ನೀಡುವ ಅತ್ಯಲ್ಪ [3] ದಾನವೂ ಸಹ ವಿಶೇಷವಾದ ವೃದ್ಧಿಗೆ ಕಾರಣ ಎಂಬ ಸಂದೇಶ ತಿಳಿಯುವುದು: **ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್ ।** -ಸುಮಧ್ವವಿಜಯ(೨/೩೦); ಕಾದಂಬಿನೀ -ಮೇಘಮಾಲೆ.

೪. ನೀರು ನೀಡಿದ್ದು ಸಮುದ್ರವಾದರೂ ಅದಕ್ಕೆ ಮಾತ್ರವಲ್ಲದೆ ನದಿಗಳಿಗೂ ನೀರಿನಲ್ಲಿ ಹೆಚ್ಚಳ ಉಂಟಾಗಲು ಅವು [4] ಸಮುದ್ರದ ಪತ್ನಿಯರಾಗಿರುವುದೇ ಕಾರಣ ಎಂದು ತಿಳಿಯಬೇಕು.

೫. ಮನೆಯ ಯಜಮಾನ ಮಾಡುವ ದಾನ ಅವನ ಪತ್ನೀ-ಪುತ್ರರು ಮೊದಲಾಗಿ ಸಕಲರ ಒಳಿತಿಗೂ ಕಾರಣ ಎಂಬ ವಿಶೇಷಾಂಶವು ಇಲ್ಲಿ ಸೂಚಿತ; ಪಯೋಧಿ - ಸಮುದ್ರ.

**ಪುನಃ ವರ್ಷರ್ತುವಿನ ವರ್ಣನೆ**

**ಮೇಘಾಗಮೋಽಸಹ್ಯಮಪಿ ಪ್ರಜಹ್ರೇ**
**ಗ್ರೀಷ್ಮಸ್ಯ ಸತ್ತ್ವಂ ಸಕಲಂ ತಥಾ ತತ್ ।**
**ಸರ್ವಂಸಹಾಜೀವನಹರ್ತುರಸ್ಯ**
**ದುರ್ವಾರತೇಜೋಽಪಿ ಕಿಮೇತಿ ವೃದ್ಧಿಮ್ ॥ ೩೫ ॥**

ಮೇಘಗಳ ಆಗಮನವು ಗ್ರೀಷ್ಮದ ಸಹಿಸಲಾಗದ ಸಕಲಸಾಮರ್ಥ್ಯವನ್ನು ಸಹ ಕುಗ್ಗಿಸಿಬಿಟ್ಟಿತು. ಅದು ಸರಿಯೇ; ಎಲ್ಲವನ್ನೂ ಸಹಿಸುವ ಭೂಮಿಯಲ್ಲಿನ ನೀರನ್ನು ಇಂಗಿಸುವ ಅದರ ನಿವಾರಿಸಲಾಗದ ತೇಜಸ್ಸು ಸಹ ಹೆಚ್ಚಳವನ್ನು ಹೊಂದೀತೇ?

ವಿ.: ೧. ಸಹನಶೀಲರಿಗೆ ದ್ರೋಹಮಾಡುವವರ ತೇಜಸ್ಸು ಕುಂದುವುದು, ಮಳೆಗಾಲ-ದಿಂದಾಗಿ ಬಿಸಿಲಿನ ಪ್ರಖರತೆ ಕುಗ್ಗಿತು ಎಂದು ತಾತ್ಪರ್ಯ.

೨. ಸರ್ವಂಸಹಾ ಎಂದರೆ ಭೂಮಿ; ಎಲ್ಲವನ್ನೂ ಸಹಿಸುವವಳು ಎಂದರ್ಥ :

**ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ ।**
**ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ।**
**ವಿಷ್ಠಾಮೂತ್ರಕಫೋತ್ಸರ್ಗಮಪರಾಧಂ ಕ್ಷಮಸ್ವ ಮೇ ॥**

-ಈ ಮಾತುಗಳಲ್ಲಿ ಭೂಮಿಯ ಅಪಾರವಾದ ಕ್ಷಮಾಗುಣವು ನಿರೂಪಿತವಾಗಿದೆ.

---

೧. ಅಬ್ಬಿಂದೂನಾಮಪಿ ದಾನಾತ್ ಸ್ವವರ್ಗೇ ಸ್ವಜನಸಮೂಹೇ ಶತಗುಣಾ ಶತಗುಣಿತಾ ವೃದ್ಧಿರಭಿವೃದ್ಧಿರ್ಭವತಿ । -ವ್ಯಾ.

೨. ಸಮಮಬ್ರಾಹ್ಮಣೇ ದಾನಂ ದ್ವಿಗುಣಂ ಬ್ರಾಹ್ಮಣಬ್ರುವೇ ।
ಸ್ವಾಧೀತೇ ಶತಸಾಹಸ್ರಮನಂತಂ ವೇದಪಾರಗೇ ॥ -ಮನುಸ್ಮೃತಿ (೭/೮೫)

೩. ಅನೇನ ಮೇಘಸ್ವಭಾವಃ ಸತ್ಪಾತ್ರೇ ದಾನಂ ಚ ವರ್ಣಿತಂ ಭವತಿ । -ವ್ಯಾ.

೪. ಸರಿತಾಂ ಪತ್ನೀತ್ವಾತ್ ಸಮುದ್ರಸ್ಯ ಪತಿತ್ವಾಚ್ಚ ಸರಿದಾದಿವೃದ್ಧಿರಪಿ ಸ್ವವರ್ಗವೃದ್ಧಿರೇವೇತಿ ಭಾವಃ । -ವ್ಯಾ.

೩. ಜೀವನ ಎಂಬುದಕ್ಕೆ ಬದುಕು ಹಾಗೂ ನೀರು ಎಂಬ ಎರಡು ಅರ್ಥಗಳು ವಿವಕ್ಷಿತ ; (ಶ್ಲೇಷಾಲಂಕಾರ): ಜೀವನಂ ಭುವನಂ ವನಮ್ ।(ಅಮರಕೋಶ)

### ಸಚ್ಛಾಸ್ತ್ರದಂತೆ ಶೋಭಿಸಿದ ಶರದೃತು

**ಸಾಧೂನಾಂ ವರಮಾನಸಾಕೃತಿ ಸರಃ ಸಂಶೋಧಯತ್ ತನ್ಮುಖ-**
**ಪ್ರಖ್ಯಂ ಪದ್ಮಚಯಂ ಪ್ರಹರ್ಷಯದಲಂ ಪಂಕಂ ಚ ಸಂಖಂಡಯತ್ ।**
**ಹೃದ್ವ್ಯೋಮೇವ ಘನಾಪಿಧಾನರಹಿತಂ ಕುರ್ವನ್ನಭಃ ಸಂಹರತ್**
**ತಾಮಿಸ್ರಂ ಹರಿವೀರ್ಯಕೀರ್ತಿಸದೃಶೌ ಸೂರ್ಯೋಡುಪೌ ಸ್ವಪ್ಪಯತ್ ॥೩೬॥**

**ಸಂಸಾರಾಖ್ಯಮಭೇದ್ಯಬಂಧನಮಿವ ಪ್ರಾವೃಟ್ಕೃತಂ ಬಂಧನಂ**
**ಭಿಕ್ಷೂಣಾಂ ವಣಿಜಾಮಧಃಕೃತಜಲಂ ವಿಚ್ಛೇದಯನ್ಮೋದಯತ್ ।**
**ಮೋಕ್ಷಾನಂದಮಹಾಪ್ರವಾಹತುಲನೈರ್ಗೋಕ್ಷೀರಪಾನೈರ್ಜನಾನ್**
**ಸಚ್ಛಾಸ್ತ್ರಪ್ರತಿಕೃತ್ಯಲಕ್ಷ್ಯತ ಶರತ್ಸಾಮ್ರಾಜ್ಯಮುಜ್ಜೃಂಭಿತಮ್[೧] ॥ ೩೭ ॥**

ವಿಜೃಂಭಿಸಿದ ಶರತ್ಕಾಲದ ವೈಭವವು ಸಜ್ಜನರ ಶ್ರೇಷ್ಠವಾದ ಮನಸ್ಸಿನ ರೂಪದ ಸರೋವರವನ್ನು ಶುದ್ಧಿಗೊಳಿಸಿತು, ಅವರ ಮುಖದಂತಹ ಪದ್ಮವೃಂದಗಳನ್ನು ಅರಳಿಸಿತು, ಅದರಲ್ಲಿನ ಪಾಪವೆಂಬ ಕೆಸರನ್ನು ಚೆನ್ನಾಗಿ ತೊಡೆಯಿತು, ಸಜ್ಜನರ ಹೃದಯಾಕಾಶವನ್ನು ಪ್ರಕೃತಿಬಂಧನದಿಂದೆಂಬಂತೆ ಗಗನವನ್ನು ಮೇಘಗಳ ತೆರೆ ಇಲ್ಲದ್ದನ್ನಾಗಿ ಮಾಡಿತು, ಕತ್ತಲೆಯನ್ನು ಪರಿಹರಿಸಿತು, ಶ್ರೀಹರಿಯ, ಶಕ್ತಿ ಹಾಗೂ ಕೀರ್ತಿಗಳಂತಹ ಸೂರ್ಯಚಂದ್ರರನ್ನು ಬೆಳಗಿಸಿತು, ನೀರನ್ನು ಇಂಗಿಸುವ, [೨]ಸಂನ್ಯಾಸಿಗಳಿಗೆ ಹಾಗೂ [೩]ವ್ಯಾಪಾರಿಗಳಿಗೆ ಸಂಸಾರವೆಂಬ ಅಭೇದ್ಯವಾದ ಮಳೆಗಾಲದಿಂದಾದ ಬಂಧನವನ್ನು ಪರಿಹರಿಸಿತು, ಮೋಕ್ಷಾನಂದವೆಂಬ ಮಹಾಪ್ರವಾಹವನ್ನು ಸರಿಗಟ್ಟುವ ಗೋಕ್ಷೀರಗಳ ಪಾನದಿಂದ ಜನರನ್ನು ನಲಿಸಿತು, ಸಚ್ಛಾಸ್ತ್ರದ ಪ್ರತಿಕೃತಿಯಂತೆ ಗೋಚರಿಸಿತು.

ವಿ. : ೧. ವರ್ಷರ್ತುವಿನ ಬಳಿಕ ಶರದೃತುವಿನ ಆಗಮನವನ್ನು ಇಲ್ಲಿ ವರ್ಣಿಸಿರುವರು.

೨. ಇಲ್ಲಿಯೂ ಸಹ [೪]ಶರದೃತುವಿನ ವೈಭವವನ್ನು ಸಚ್ಛಾಸ್ತ್ರದ ವೈಭವವನ್ನೆಂಬಂತೆ ವರ್ಣಿಸಲಾಗಿದೆ ; **ಪ್ರಾವೃಟ್** - ಮಳೆಗಾಲ; **ವಣಿಕ್** - ವ್ಯಾಪಾರಿ.

---

೧. ಪ್ರತಿವಸ್ತೂಪಮಾಲಂಕಾರಃ। -ವ್ಯಾ.

೨. ವರ್ಷಾಕಾಲೇ ಸನ್ಯಾಸಿನಾಂ ಸಂಚರಣಸ್ಯ ನಿಷಿದ್ಧತ್ವಾದಿತಿ ಭಾವಃ। -ವ್ಯಾ.

೩.. ವಿಶಾಂ ಚ ಬಲೀವರ್ದಾದೀನಾಂ ಮಾರ್ಗಸ್ಯ ಕರ್ದಮಬದ್ಧತ್ವೇನ ಸಂಚರಣಾನರ್ಹತ್ವಾದಿತಿ ಭಾವಃ। -ವ್ಯಾ.

೪. ಶರದಿ ಪಿತ್ತೋಪಶಮನಾಯ ಗೋಕ್ಷೀರಪಾನಸ್ಯ ವೈದ್ಯಶಾಸ್ತ್ರೇ ವಿಹಿತತ್ವಾದಿತಿ ಭಾವಃ। -ವ್ಯಾ.

೩. [1]ಶರದೃತುವಿನಲ್ಲಿ ಮೋಡಗಳು ಮರೆಯಾಗಿ ಗಗನವು ಶುಭ್ರವಾಗಿ ಕಂಗೊಳಿಸುವುದರಿಂದ ಸೂರ್ಯಚಂದ್ರರ ಬೆಳಕು ಲೋಕಕ್ಕೆ ಸ್ಪಷ್ಟವಾಗಿ ತಲುಪುವುದು ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ; ಪ್ರಖ್ಯಂ - ಹೋಲುವ; ತಾಮಿಸ್ರ - ಕತ್ತಲೆ; ನಭ - ಆಕಾಶ.

೪. ಸೂರ್ಯಚಂದ್ರರು ಲೋಕಗಳನ್ನು ಬೆಳಗುವಂತೆ [2]ಸಚ್ಛಾಸ್ತ್ರಗಳು ಮನಸ್ಸನ್ನು ಬೆಳಗುವವು ಎಂಬ ಇಲ್ಲಿಯ ನಿರೂಪಣೆ ಅತ್ಯಂತ ರೋಚಕವಾದುದು.

೫. ಶಾಸ್ತ್ರಾಧ್ಯಯನದಿಂದ ಮನಸ್ಸು ಶುದ್ಧವಾಗುವುದು. ಮುಖವು ಪ್ರಸನ್ನಗೊಳ್ಳುವುದು. ಮನಸ್ಸಿನ ರಾಗದ್ವೇಷಗಳು [3]ಪರಿಹಾರವಾಗುವವು. ಮನಸ್ಸನ್ನು ಕವಿದ ಅಜ್ಞಾನವು ಮರೆಯಾಗಿ ಹೃದಯಾಕಾಶದಲ್ಲಿ ಶ್ರೀಹರಿಯು ದರ್ಶನ ನೀಡುವನು. ಹೀಗೆ ಸೂರ್ಯಚಂದ್ರರ ಪ್ರಕಾಶಕ್ಕೆ ಶಾಸ್ತ್ರವನ್ನು ಹೋಲಿಸುವ ಮೂಲಕ ಅದರ ಅಧ್ಯಯನವಿಲ್ಲದವರು ಕಗ್ಗತ್ತಲಿನ ವಾತಾವರಣವನ್ನು ಅನುಭವಿಸುವರು ಎಂಬ ಎಚ್ಚರಿಕೆಯನ್ನೂ ಸಹ ನೀಡಿರುವರು; ಉಡುಪ - ಚಂದ್ರ.

೬. ಸುಮಧ್ವವಿಜಯದಲ್ಲಿ ಶ್ರೀಮದಾಚಾರ್ಯರ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ-ಗಳನ್ನು ಸೂರ್ಯಚಂದ್ರರಿಗೆ ಹೋಲಿಸಿರುವ ಈ ಕೆಳಗಿನ ಶ್ಲೋಕಕ್ಕೆ ಇದು ವಿವರಣೆಯಂತಿದೆ :

ಗೀತಾತಾತ್ಪರ್ಯಭಾಷ್ಯಾಭ್ಯಾಮಾಭ್ಯಾಂ ವಿಶ್ವಂ ಪ್ರಕಾಶ್ಯತೇ ।
ಗೋಗಣೈರಪ್ರತೀಕಾರ್ಯೈರರ್ಕೇಂದುಭ್ಯಾಮಿವಾಧಿಕಮ್ ॥ (೧೫/೭೫)

೭. [4]ಅಂತಃಕರಣಶುದ್ಧಿ, ಮುಖವಿಕಾಸ, ಪಾಪಗಳ ಪರಿಹಾರ, ಪ್ರಕೃತಿಯ ಆವರಣಗಳ ನಿವೃತ್ತಿ, ಅಜ್ಞಾನದ ಧ್ವಂಸ, ಅಪರೋಕ್ಷಜ್ಞಾನ, ಸಂಸಾರನಿವೃತ್ತಿ ಹಾಗೂ ಸ್ವರೂಪಾನಂದಾ-ವಿರ್ಭಾವಗಳು [5]ಸಚ್ಛಾಸ್ತ್ರಾಧ್ಯಯನದಿಂದ ಲಭಿಸುತ್ತವೆ ಎಂದು ಭಾವ.

೮. ಸಚ್ಛಾಸ್ತ್ರದಿಂದ ಲಭಿಸುವ ಸಕಲ ಪ್ರಯೋಜನವನ್ನು ಅತ್ಯಂತ ಪರಿಣಾಮಕಾರಿಯಾಗಿ ಈ ಎರಡು ಶ್ಲೋಕಗಳಲ್ಲಿ ನಿರೂಪಿಸಲಾಗಿದೆ; ಸಚ್ಛಾಸ್ತ್ರ ಎಂದರೆ ಪ್ರಾಣಶಾಸ್ತ್ರ, ಮಧ್ವಶಾಸ್ತ್ರ ಎಂದರ್ಥ. (ಸದಿತಿ ಪ್ರಾಣಃ).

೯. ಈ ಶ್ಲೋಕ ಹಾಗೂ ಈ ಹಿಂದಿನ ಶ್ಲೋಕ ಎರಡೂ ಸೇರಿ ಯುಗ್ಮ ಎನ್ನಿಸುತ್ತವೆ.

---

೧. ಶರದೋ ಜಲನೈರ್ಮಲ್ಯಹೇತುತ್ವಾದಿತಿ ಭಾವಃ। ಶಾಸ್ತ್ರಮಪಿ ಸತಾಮಂತಃಕರಣಶುದ್ಧಿಕೃತ್ । -ವ್ಯಾ.
೨. ಸಚ್ಛಾಸ್ತ್ರಮೇವ ಶ್ರೀಮಧ್ವಶಾಸ್ತ್ರಮೇವ ಪ್ರತಿಕೃತಿರುಪಮಾನಮ್ । -ವ್ಯಾ.
೩. ಶಾಸ್ತ್ರಂ ಚ ಶ್ರವಣಮಾತ್ರೇಣ ಪಾಪಪರಿಹಾರಕೃತ್ । ಶಾಸ್ತ್ರಮಪಿ ಸತಾಂ ಹೃದಯಾಕಾಶಗತಪ್ರಕೃತಿಬಂಧನಲಕ್ಷಣಾನಿಬಿಡಾವರಣನಿರಾಸಕೃತ್ । ಶಾಸ್ತ್ರಮಪಿ ಅಜ್ಞಾನಧ್ವಂಸಕೃತ್ । ಶಾಸ್ತ್ರಮಪಿ ವಿಷ್ಣುಮಹಿಮಾಪ್ರಕಟನಕೃತ್ । -ವ್ಯಾ.
೪. ಅಂತಃಕರಣಶುದ್ಧಿರ್ಮುಖವಿಕಾಸಃ ಪಾಪಪರಿಹಾರಃ ಪ್ರಾಕೃತಾವರಣನಿವೃತ್ತಿರಜ್ಞಾನಧ್ವಂಸಃ ಅಪರೋಕ್ಷಜ್ಞಾನಂ ಸಂಸಾರನಿವೃತ್ತಿಃ ಸ್ವರೂಪಾನಂದಾವಿರ್ಭಾವಶ್ಚ ಶಾಸ್ತ್ರಾದ್ಭವತೀತಿ ಭಾವಃ। -ವ್ಯಾ.
೫. ಶಾಸ್ತ್ರಮಪ್ಯಧಃಕೃತಜಲ(ದ)ಮ್ ಅಧರೀಕೃತಮೂರ್ಖಂ ಸಂಸಾರಬಂಧಧ್ವಂಸಕೃತ್ । -ವ್ಯಾ.

೧೦. ಈ ವರ್ಣನೆಯು ಭಾಗವತದಲ್ಲಿ ಬಂದಿರುವ ಶರದೃತುವಿನ ವರ್ಣನೆಯ [1]ಸಾರದಂತಿದೆ.

### ಮಧ್ವಶಾಸ್ತ್ರದಂತೆ ಬೆಳಗಿದ ಶರದೃತು

ಪದ್ಮಾಸೇವ್ಯಗುಣೌಘವಿಸ್ತೃತಿಕರಃ ಸ್ವಷ್ಟೀಭವಚ್ಛಾರದಾ-
ನಂದಃ ಕಂಪಿತಭೋಗಿರಾಜಶಿರಸಾ [2]ಮಾನ್ಯಾಗಮಃ ಸಂತತಮ್ ।
ಸನ್ಮಾರ್ಗಾಶ್ರಿತಪಂಕಶೋಷಣಕರಃ ಸತ್ಪಾಂಥಘರ್ಮಾಪಹೋ
ನಿತ್ಯಂ ವಿಷ್ಣುಪದಾಶ್ರಯಃ ಪರಿಲಸತ್ಪುಣ್ಯಾಂಬುಪೂತೋಽಸಕೃತ್ ॥ ೩೮ ॥

ರಾಮಾಯೋಗಿಜನಸ್ಯ ಭೀಮಚರಿತಃ ಸದ್ವಂಶಜಾತಂ ಮುಹುಃ
ಪ್ರೇಮಾಲಂಬನಶಬ್ದಹೃದ್ಯವದನಂ ಕುರ್ವನ್ ಸ್ವಕೀಯಾಗಮೈಃ ।
ಸುಕ್ಷೇಮಂ ಸುಮನಶ್ಚಯಸ್ಯ ವಿದಧತ್ ಸುವ್ಯಾಪ್ತಮೂರ್ತಿಃ ಕ್ಷಿತೌ
ಸಚ್ಛಾಸ್ತ್ರೇ ಸುಖತೀರ್ಥವನ್ಮರುದಭೂನ್ಮೂರ್ಧಾಭಿಷಿಕ್ತಸ್ತದಾ [3] ॥ ೩೯ ॥

---

೧. ವ್ಯೋಮ್ನೋಽಬ್ದಮಭ್ರಶಾಬಲ್ಯಂ ಭುವಃ ಪಂಕಮಪಾಂ ಮಲಮ್ ।
ಶರಜ್ಜಹಾರಾಶ್ರಮಿಣಾಂ ಕೃಷ್ಣಭಕ್ತಿರ್ಯಥಾಽಶುಭಮ್ ॥
ಸರ್ವಸ್ವಂ ಜಲದಾ ಹಿತ್ವಾ ವಿರೇಜುಃ ಶುಭ್ರವರ್ಚಸಃ ।
ಯಥಾ ತ್ಯಕ್ತೈಷಣಾಃ ಶಾಂತಾ ಮುನಯೋ ಮುಕ್ತಕಲ್ಮಷಾಃ ॥
ಗಿರಯೋ ಮುಮುಚುಸ್ತೋಯಂ ಕ್ವಚಿನ್ನ ಮುಮುಚುಃ ಶಿವಮ್ ।
ಯಥಾ ಜ್ಞಾನಾಮೃತಂ ಕಾಲೇ ಜ್ಞಾನಿನೋ ದದತೇ ನ ವಾ ॥
ನೈವಾವಿದನ್ ಕ್ಷೀಯಮಾಣಂ ಜಲಂ ಗಾಧಜಲೇಚರಾಃ ।
ಯಥಾಽಽಯುರನ್ವಹಂ ಕ್ಷಯ್ಯಂ ನರಾ ಮೂಢಾಃ ಕುಟುಂಬಿನಃ ॥
ಗಾಧವಾರಿಚರಾಸ್ತಾಪಮವಿಂದನ್ ಶರದರ್ಕಜಮ್ ।
ಯಥಾ ದರಿದ್ರಃ ಕೃಪಣಃ ಕುಟುಂಬ್ಯವಿಜಿತೇಂದ್ರಿಯಃ ॥
ಶನೈಶ್ಶನೈರ್ಜಹುಃ ಪಂಕಂ ಸ್ಥಲಾನ್ಯಾಸಂಶ್ಚ ವೀರುಧಃ ।
ಯಥಾಽಹಮ್ಮಮತಾಂ ಧೀರಾಃ ಶರೀರಾದಿಷ್ವನಾತ್ಮಸು ॥
ನಿಶ್ಚಲಾಂಬುರಭೂತ್ ತೂಷ್ಣೀಂ ಸಮುದ್ರಃ ಶರದಾಗಮೇ ।
ಆತ್ಮನ್ಯುಪರತೇ ಯದ್ವನ್ಮುನಿರ್ವ್ಯುಪರತಾಗಮಃ ॥
ಕೇದಾರೇಭ್ಯಸ್ತ್ವಪೋಽಗೃಹ್ಣನ್ ಕರ್ಷಕಾ ದೃಢಸೇತುಭಿಃ ।
ಯಥಾ ಪ್ರಾಣೈಃ ಸ್ವವಿಜ್ಞಾನಂ ತನ್ನಿರೋಧೇನ ಯೋಗಿನಃ ॥
ಶರದರ್ಕಾಂಶುಜಂ ತಾಪಂ ಭೂತಾನಾಮುಡುಪೋಽಹರತ್ ।
ದೇಹಾಭಿಮಾನಜಂ ಬೋಧೋ ಮುಕುಂದೋ ವ್ರಜಯೋಷಿತಾಮ್ ॥ -ಭಾ.(೧೦/೧೮/೩೨-೪೦)

೨. ಪ್ರಚುರಾಂತರಪ್ರವಚನಂ ಫಣಿರಾಡುಪಶುಶ್ರುವಾನ್ ಸಸನಕಾದಿಮುನಿಃ ।
ಗಗನೇಽಲ್ಪದೃಷ್ಟವಪುರತ್ರ ಜನೈಸ್ತ್ವರಿತಂ ನಿಲೀನರುಚಿರಾಪ ಪದಮ್ ॥ -ಸುಮಧ್ವವಿಜಯ (೧೧/೧)

೩.. ವಿಶಿಷ್ಟಸ್ಯಾಶ್ಲಿಷ್ಟತ್ವಾತ್ ತುಲ್ಯಯೋಗಿತ್ವಮಲಂಕಾರಃ । -ವ್ಯಾ.

ಶರದೃತುವು ಕಮಲಗಳು ಅತಿಶಯವಾಗಿ ಸೇವಿಸುವಂತಹ ಗುಣಗಳ ರಾಶಿಯನ್ನು ವಿಸ್ತಾರಗೊಳಿಸುವುದು, ಶರದೃತುವಿನ ಆನಂದವನ್ನು ಸ್ಫುಟಪಡಿಸುವುದು, ತಲೆದೂಗುವ ಭೋಗಿಗಳಾದ ರಾಜರು ಶಿರಸಾ ಆದರಿಸುವ ಆಗಮನವನ್ನು ಹೊಂದಿರುವುದು, ಸದಾ ಸನ್ಮಾರ್ಗವನ್ನು ಅವಲಂಬಿಸುವವರ ಕೆಸರನ್ನು ತೊಡೆದು ಹಾಕುವುದು, ಸಜ್ಜನರೆಂಬ ಪಯಣಿಗರ ಬೇಗೆಯನ್ನು ಪರಿಹರಿಸುವುದು, ಸದಾ ಗಗನವನ್ನು ಆಶ್ರಯಿಸಿರುವುದು, ಹೊಳೆಹೊಳೆಯುವ ಪುಣ್ಯಜಲದಿಂದ ಪಾವನವಾಗಿರುವುದು. ಕಾಂತೆಯರನ್ನು ಅಗಲಿದ ಜನಗಳಿಗೆ ಭಯಂಕರ ಎನ್ನಿಸುವುದು, ತನ್ನ ಬರುವಿಕೆಯಿಂದ ಉತ್ತಮವೇಣುಗಳ ವೃಂದವನ್ನು ಸ್ನೇಹಕ್ಕೆ ಎಡೆನೀಡುವ ಧ್ವನಿಯಿಂದ ಮನೋಹರವಾದ ರಂಧ್ರಗಳನ್ನುಳ್ಳವುಗಳನ್ನಾಗಿ ಮತ್ತೆ ಮತ್ತೆ ಮಾಡುವುದು, ಪುಷ್ಪಗಳ ಸಮೂಹಕ್ಕೆ ಉತ್ತಮವಾದ ಕ್ಷೇಮವನ್ನು ನೀಡುವುದು, ಭೂಮಿಯಲ್ಲೆಲ್ಲಾ ಹರಡುವುದು; ಇಂತಹ ಶರತ್ಕಾಲವು ವಾಯುವು ಸಚ್ಛಾಸ್ತ್ರದಲ್ಲಿ ಆನಂದತೀರ್ಥರಂತೆ [೧]ಪಟ್ಟಾಭಿಷಿಕ್ತವಾಯಿತು.

(ಆನಂದತೀರ್ಥರು ಮಹಾಲಕ್ಷ್ಮಿಯು ಸೇವಿಸುವ ಶ್ರೀಹರಿಯ ಜ್ಞಾನಾನಂದಾದಿ ಗುಣಗಳನ್ನು ವಿಸ್ತಾರಗೊಳಿಸುವರು, [೨]ಭಾರತೀದೇವಿಗೆ ಆನಂದವನ್ನು ಅತಿಶಯಗೊಳಿಸುವುದು, ತಲೆಯಾಡಿಸುವ ನಾಗರಾಜನಾದ ಆದಿಶೇಷನು ಶಿರಸಾ ಆದರಿಸುವಂತಹ ಶಾಸ್ತ್ರವನ್ನು ರಚಿಸಿದವರು, ಸನ್ಮಾರ್ಗವನ್ನು ಅವಲಂಬಿಸುವವರ ಮನಸ್ಸಿನ ಮಿಥ್ಯಾಜ್ಞಾನವನ್ನು ಪರಿಹರಿಸುವರು, ಮೋಕ್ಷಮಾರ್ಗದಲ್ಲಿ ಸಾಗುವವರ ಬೇಗೆಯನ್ನು ಪರಿಹರಿಸುವವರು, ವಿಷ್ಣುಪದವನ್ನು ಸದಾ ಆಶ್ರಯಿಸಿರುವುದು, ಅತಿಶಯವಾಗಿ ಹೊಳೆಯುವ ಪುಣ್ಯವೆಂಬ ಜಲದಿಂದ ಪಾವನಗೊಳಿಸುವರು. ಶ್ರೀಹರಿಯಲ್ಲಿ ಭಕ್ತಿಯಿಲ್ಲದ ಜನರಿಗೆ ಭಯಂಕರವಾಗಿ ಕಾಣಿಸಿಕೊಳ್ಳುವರು, ಉತ್ತಮ ಕುಲದಲ್ಲಿ ಜನಿಸಿದವರನ್ನು ತಮ್ಮ ಶಾಸ್ತ್ರಗಳಿಂದ ಭಕ್ತಿಯಿಂದ ಕೂಡಿದ ಶಬ್ದಗಳಿಂದ ಮನೋಹರವಾದ ಮುಖದಿಂದ ಕೂಡಿದವರನ್ನಾಗಿ ಮಾಡುವರು, ಸಜ್ಜನವೃಂದಕ್ಕೆ ಸುಕ್ಷೇಮವನ್ನು ಉಂಟುಮಾಡುತ್ತಾ, ಭೂಮಿಯಲ್ಲೆಲ್ಲಾ ವ್ಯಾಪಿಸುವರು. ಹೀಗೆ ಶ್ರೀಮಧ್ವಾಚಾರ್ಯರು ಶರದೃತುವಿನಂತೆ [೩]ಸಚ್ಛಾಸ್ತ್ರವೆಂಬ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗಿರುವರು).

---

೧. ಸ ಶಂಕರಪದದ್ವಿಜೋಪಹೃತಮಾಪ್ಯ ಗೋವಾಖ್ಯಗಾಂ ಗರಿಷ್ಠಕದಲೀಲಸದ್ದಶಶತೀಚತುಷ್ಕಂ ಚರನ್ ।
ಪಯಃ ಕಲಶಪಂಚಕತ್ರಿಕಯುಗಾಭಿಪೂರ್ಣಂ ಪಪಾವದೃಷ್ಟಗತಿರಪ್ಯಭೂನ್ನೃಪನೃಮಂಡಲೈರುದ್ಧೃತೈಃ ॥
-ಸುಮಧ್ವವಿಜಯ(೧೦/೫೨)

೨. ವಿಚಿತ್ರಶಬ್ದಪ್ರಯೋಗೇಣ ವಾಗ್ದೇವ್ಯಾಃ ಸಂತೋಷಜನನಾದಿತಿ ಭಾವಃ । -ವ್ಯಾ.

೩.. ಅನ್ಯತ್ರ ಸತಾಂ ಮಾರ್ಗಃ ಶಾಸ್ತ್ರಮಾರ್ಗಃ ತದಾಶ್ರಿತಾನಾಂ ಅಂತಃಕರಣವಿಷಯಃ ಪಂಕಃ ಮಿಥ್ಯಾಜ್ಞಾನಂ ತಸ್ಯ ಶೋಷಣಕರಃ । -ವ್ಯಾ.
ಅನ್ಯತ್ರ ಸತ್ಪಾಂಥಾಃ ಮೋಕ್ಷಮಾರ್ಗಚರಾಃ ತೇಷಾಂ ಧರ್ಮಾಪಹಃ ತಾಪಾಪಹಃ । ಅನ್ಯತ್ರ ಹರಿಚರಣಾಸಕ್ತಃ ।-ವ್ಯಾ.

ವ್ರತಂ ವಿತೇನುಃ ಕಿಲ ಗೋಪಕನ್ಯಾಃ
ವಿತರ್ಕ್ಯ ತಸ್ಯಾಸಮಧಾಮ ಧನ್ಯಾಃ ॥ ೪೨ ॥

ಪತಿಯನ್ನು ವಶಪಡಿಸಿಕೊಳ್ಳಲು ಇದೇ ಸಮಯ ಎಂಬಂತೆ [೧]ಶ್ರೀಕೃಷ್ಣನನ್ನು ಪತಿಯನ್ನಾಗಿ ಹೊಂದುವ ಬಯಕೆಯ ಧನ್ಯೆಯರಾದ ಗೋಪಕನ್ಯೆಯರು ಅವನ ಅಸದೃಶವಾದ ತೇಜಸ್ಸನ್ನು ಗಮನಿಸಿ, ವ್ರತವನ್ನು ಕೈಗೊಂಡರು.

ವಿ. : ೧. ಗೋಪಕನ್ಯೆಯರು ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಅದಕ್ಕಾಗಿ [೨]ಕಾತ್ಯಾಯಿನೀ ವ್ರತವನ್ನು ಮಾಡತೊಡಗಿದರು ಎಂದರ್ಥ.

೨. ಇದರಿಂದ ಶ್ರೀಕೃಷ್ಣನು ಲೌಕಿಕರಂತೆ ಸುಮ್ಮನೆ ಸಿಕ್ಕುವವನಲ್ಲ; ವಿಶೇಷ ಪ್ರಯತ್ನಗಳಿಗೆ ಮಾತ್ರ ಲಭಿಸುವನು ಎಂಬ ಅರ್ಥವಿಶೇಷವು ಸೂಚಿತ.

### ದುರ್ಗೆಯನ್ನೇ ಅರ್ಚಿಸಲು ಕಾರಣ

ಪುಮಾಂಸಮಭ್ಯರ್ಚಯಿತುಂ ಸಲಜ್ಜಾಃ
[೩]ಸಮಾಂತರಂಗಾ ವರವರ್ಣಿನೀಶ್ಚ ।
ಸಹೋದರೀಂ ಶ್ರೀರಮಣಸ್ಯ ದುರ್ಗಾ-
ಮಪೂಜಯಂಸ್ತಾಃ ಕೃತವಿಶ್ವಸರ್ಗಾಮ್ [೪] ॥ ೪೩ ॥

ಪುರುಷನಾದ ಶ್ರೀಕೃಷ್ಣನನ್ನು ಬೇಡಿಕೊಳ್ಳಲು ನಾಚಿದವರಾಗಿ, ತಮ್ಮ ಸಮಾನಮನಸ್ಸಿನ ಇತರ ಸ್ತ್ರೀದೇವತೆಗಳನ್ನು ಪ್ರಾರ್ಥಿಸಲು ಸಹ ನಾಚಿದವರಾಗಿ, ಆ ಶ್ರೀಕೃಷ್ಣನ ಸಹೋದರಿ- ಯಾದ ಜಗವನ್ನೆಲ್ಲಾ ನಿರ್ಮಿಸುವಂತಹ ದುರ್ಗೆಯನ್ನು ಅವರು ಪೂಜಿಸಿದರು.

ವಿ. : ೧. ಪುರುಷನೆಂಬ ಕಾರಣದಿಂದ ನಾಚಿ, ಅವರು ಕೃಷ್ಣನನ್ನೇ ಸಾಕ್ಷಾತ್ ಆರಾಧಿಸಲಿಲ್ಲ. ಅದರಂತೆ ಇತರ ಸ್ತ್ರೀಯರೂ ಸಹ ತಮ್ಮ ಸಮಾನಬಯಕೆಯಿಂದಲೇ ಕೃಷ್ಣನನ್ನು ಆರಾಧಿಸಿಯಾರು ಎಂದು ಶಂಕಿಸಿ, ಅವರ ಆರಾಧನೆಗೂ ತೊಡಗಲಿಲ್ಲ. ಆದರೆ ಜಗವನ್ನೆಲ್ಲಾ ಸೃಷ್ಟಿಸುವ ದುರ್ಗೆಯು ತಾಯಿ ಇದ್ದಂತೆ ಎಂದು ಭಾವಿಸಿ, ಅವಳನ್ನು ಆರಾಧಿಸಿದರು ಎಂದು ಭಾವ.

---

೧. ಹಿಮಕಾಲೇ ಪುರುಷಾಃ ಪ್ರಯತ್ನಂ ವಿನಾ ಸ್ವಯಮೇವ ಸ್ವಾಧೀನಾ ಭವಂತಿ । ಕಾಂತಾಕುಚಾಲಿಂಗನೇನ ಹಿಮನಿವೃತ್ತೇರಿತಿ ಭಾವಃ। -ವ್ಯಾ.

೨. ಅನೇನ ಶ್ರೀಕೃಷ್ಣಃ ಲೌಕಿಕವಲ್ಲಭ್ಯೋ ನ ಭವತಿ ಕಿಂತು ಪ್ರಯತ್ನಲಭ್ಯ ಇತಿ ಸೂಚ್ಯತೇ । ಅತ ಏವ ವ್ರತಂ ದುರ್ಗಾಪೂಜಾನಿಯಮಂ ವಿತೇನುಃ ಚಕ್ರುಃ। -ವ್ಯಾ.

೩.. ಸಮಾಂತರಂಗಾಃ ಸಮಾನಾಂತಃಕರಣಾಃ ಸಮಾನಕಾಮಾ ಇತ್ಯರ್ಥಃ। -ವ್ಯಾ.

೪. ಉತ್ಪ್ರೇಕ್ಷಾಲಂಕಾರಃ। -ವ್ಯಾ.

೨. [೧]ದುರ್ಗೆಯು ಸಹ ಮಹಾವಿಷ್ಣುವಿನ ಪತ್ನಿಯಾಗಿದ್ದರೂ ಕೃಷ್ಣಾವತಾರಕಾಲದಲ್ಲಿ ಅವನ [೨]ತಂಗಿಯಾಗಿ ಅವತರಿಸಿದ್ದರಿಂದ ಅವಳ ಪ್ರಾರ್ಥನೆಗೆ ಔಚಿತ್ಯ ಲಭಿಸುವುದು.

೩.. ಕೃತವಿಶ್ವಸರ್ಗಾಂ: ಜಗನ್ಮಾತೆಯಾದ ದುರ್ಗೆಯು [೩]ತಾಯಿಯಂತೆ ಇರುವುದರಿಂದ ಅವಳಲ್ಲಿ ಬೇಡಿಕೊಳ್ಳುವುದು ನಾಚಿಕೆಯ ವಿಷಯವಲ್ಲ ಎಂಬ ಭಾವನೆಯಿಂದ ಅವರು [೪]ದುರ್ಗೆಯನ್ನೇ ಪ್ರಾರ್ಥಿಸಿದರು ಎಂದು ಭಾವ; ವರವರ್ಣಿನೀ – ಸ್ತ್ರೀ; ಸರ್ಗ – ಸೃಷ್ಟಿ.

### ದುರ್ಗೆಯು ಮಹಾಲಕ್ಷ್ಮೀ

ಕೃಷ್ಣಂ ಪತಿಂ ತಾಃ ಕಿಲ ಕಾಮಯಂತ್ಯೋ
ಲಕ್ಷ್ಮೀಂ ಪ್ರಸನ್ನಾಂ ವಿದಧುರ್ವ್ರತೇನ।
ಸ್ವಪ್ರೇಯಸೀವೈರಿವಧೂಃ ಕಥಂ ತಾ-
ಸ್ತುಷ್ಟಾಃ ಪ್ರಭುಃ ಸೋಽಪರಥಾ ವಿದಧ್ಯಾತ್ ॥ ೪೪ ॥

ಶ್ರೀಕೃಷ್ಣನನ್ನೇ ಪತಿಯನ್ನಾಗಿ ಹೊಂದಬಯಸಿದ ಅವರು ವ್ರತದಿಂದ ಮಹಾಲಕ್ಷ್ಮಿಯನ್ನು ಪ್ರಸನ್ನೀಕರಿಸಿಕೊಂಡರು; ಇಲ್ಲವಾದಲ್ಲಿ ತನ್ನ ಪತ್ನಿಗೆ ಸವತಿಯರೆನ್ನಿಸುವ ಅವರನ್ನು ಪ್ರಭು- ವಾದ ಶ್ರೀಕೃಷ್ಣ ಹೇಗೆ ತಾನೇ ಸಂತುಷ್ಟರನ್ನಾಗಿ ಮಾಡುತ್ತಿದ್ದನು?

ವಿ. : ೧. ಅವರು ಶ್ರೀಕೃಷ್ಣನನ್ನು ಪತಿಯನ್ನಾಗಿ ಹೊಂದುವ ಬಯಕೆಯಿಂದ ಶ್ರೀಕೃಷ್ಣಪತ್ನಿಯಾದ ಮಹಾಲಕ್ಷ್ಮಿಯನ್ನೇ ಆರಾಧಿಸಿ ಒಲಿಸಿಕೊಂಡರು ಎಂದರ್ಥ; ಇಲ್ಲವಾದಲ್ಲಿ ಅವರಿಗೆ ಕೃಷ್ಣಪತ್ನಿಯಾದ ಮಹಾಲಕ್ಷ್ಮಿಗೆ [೫]ಸವತಿಯರಾಗುವ ಯೋಗ ಹೇಗೆ ತಾನೆ ಬರುತ್ತಿತ್ತು ಎಂದರ್ಥ.

೨. ಮಹಾಲಕ್ಷ್ಮಿಯ ಒಲುಮೆಯಿಂದಾಗಿ ಅವರಲ್ಲಿ ಮಹಾಲಕ್ಷ್ಮಿಯ ಆವೇಶ ಉಂಟಾಗಿ ಅವರಿಗೆ ಕೃಷ್ಣಪತ್ನಿಯರೆನ್ನಿಸುವ ಸೌಭಾಗ್ಯ ಲಭಿಸಿತು ಎಂದು ತಾತ್ಪರ್ಯ.

### ಗೋಪಕನ್ಯೆಯರು ಮಾಡಿದ ಪೂಜೆಯ ವೈಭವ

ನೇಮುಸ್ತಾಂ ಪ್ರಣಯಾಪರಾಧಶಮನೇ ನಮ್ರೋಽಸ್ತು ಕೃಷ್ಣಸ್ತ್ವಿತಿ
ಪ್ರೇಮ್ಣಾ ಪುಷ್ಪಮವೇದಯನ್ ಸ್ವಕಬರೀಂ ತೈಃ ಸಂದಧಾತ್ವಿತ್ಯಲಮ್ ।

---

೧. ದುರ್ಗಾಯಾ ವಿಷ್ಣುಪತ್ನೀತ್ವೇಽಪಿ ಶ್ರೀಕೃಷ್ಣಾವತಾರೇ ತತ್ಸಹಜಾತತ್ವಾತ್ ತತ್ಪ್ರಾರ್ಥನಾ ಯುಕ್ತೇತಿ ಭಾವಃ। -ವ್ಯಾ.

೨. ನಂದವಸುದೇವಯೋರ್ಮಾತೃಭೇದೇಽಪಿ ಶೂರಾಖ್ಯಪಿತ್ರೈಕ್ಯೇನ ಜ್ಯೇಷ್ಠಕನಿಷ್ಠತ್ವಾತ್ ನಂದಕುಮಾರ್ಯಪಿ ದುರ್ಗಾ ಶ್ರೀಕೃಷ್ಣಸ್ಯ ಸಹೋದರೀತಿ ಭಾವಃ। -ವ್ಯಾ.
ಸ ಚ ಶೂರತಾತಸುತಸ್ಯ ವೈಶ್ಯಾಪ್ರಭವೋಽಥ ಗೋಪಃ। -ಮ.ಭಾ.ತಾ.ನಿ.(೧೧/೨೮)

೩. ಕೃತವಿಶ್ವಸರ್ಗಾಮಿತ್ಯನೇನ ದುರ್ಗಾಯಾ ಮಾತೃತ್ವಾತ್ ಮಾತರಿ ಸ್ವಾಭಿಲಷಿತಕಥನಂ ನ ಲಜ್ಜಾಕರಮಿತಿ ದ್ಯೋತ್ಯತೇ। -ವ್ಯಾ.

೪. ಶ್ರೀಕೃಷ್ಣಸೌಂದರ್ಯದರ್ಶನೇನ ಸರ್ವಾಸಾಮಪಿ ಸ್ಪೃಹೋತ್ಪತ್ತೇರಿತಿ ಭಾವಃ। -ವ್ಯಾ.

೫. ಪ್ರೇಮಾಸ್ಪದೀಭೂತಜ್ಯೇಷ್ಠಪತ್ನ್ಯನುಮತಿಂ ವಿನಾ ಪತ್ನ್ಯಂತರಪ್ರತಿಗ್ರಹಸ್ಯಾಶಕ್ಯತ್ವಾತ್ ಇತಿ ಭಾವಃ। -ವ್ಯಾ.

ಧೂಪಂ ಮಜ್ಜನಮಾರಚಯ್ಯ ಸಹ ತದ್ಧೂಮೇನ ತಾಂ ಶೋಷಯ-
ತ್ವಾಲಿಂಗ್ಯಾತನುತಾದಿತೀವ ತಿಲಕಂ ಗಂಧಂ ಚ ತಸ್ಯೈ ದದುಃ ॥ ೪೫ ॥

ಪ್ರಣಯಕಾಲದ ಅಪಚಾರವನ್ನು ಶಮನಗೊಳಿಸುವಲ್ಲಿ ಶ್ರೀಕೃಷ್ಣ ಮಣಿಯುವಂತಾಗಲಿ ಎಂಬ ಭಾವನೆಯಿಂದ ಅವರು ಮಹಾಲಕ್ಷ್ಮಿಗೆ ನಮಸ್ಕರಿಸಿದರು; ತಮ್ಮ ಮುಡಿಯನ್ನು ಪ್ರೀತಿಯಿಂದ ಶ್ರೀಕೃಷ್ಣ ಆ ಕುಸುಮಗಳಿಂದ ಅಲಂಕರಿಸಲಿ ಎಂಬ ಭಾವನೆಯಿಂದ, ಭಕ್ತಿಯಿಂದ ಪುಷ್ಪಗಳನ್ನು ಸಮರ್ಪಿಸಿದರು. ತಮ್ಮೊಂದಿಗೆ ಮಂಗಲಸ್ನಾನವನ್ನು ಮಾಡಿ ಶ್ರೀಕೃಷ್ಣ ಧೂಪದಿಂದ ಮುಡಿಯನ್ನು ಒಣಗಿಸಲಿ ಎಂಬ ಭಾವದಿಂದ ಧೂಪಾರತಿಯನ್ನು ಮಾಡಿದರು; ತಮ್ಮನ್ನು ಆಲಿಂಗಿಸಿ ಶ್ರೀಕೃಷ್ಣ ತನ್ನ ತಿಲಕಗಂಧಗಳಿಂದ ತಮಗೆ ತಿಲಕಗಂಧಗಳನ್ನು ನೀಡಲಿ ಎಂಬ ಭಾವದಿಂದ ತಿಲಕವನ್ನೂ ಮತ್ತು ಗಂಧವನ್ನೂ ಅವಳಿಗೆ ಸಮರ್ಪಿಸಿದರು.

ವಿ. : ಗೋಪಿಯರು ಕಾತ್ಯಾಯಿನೀರೂಪದ ಮಹಾಲಕ್ಷ್ಮಿಗೆ ನಮಸ್ಕಾರ, ಪುಷ್ಪಾರ್ಚನೆ, ಧೂಪಸಮರ್ಪಣೆ ಹಾಗೂ ಗಂಧಾರ್ಪಣೆಗಳನ್ನು ಮಾಡಿದರು ಎಂದು ಭಾವ; ಹಾಗೆ ಪೂಜಿಸು-ವಾಗ ಅದರ [೧] ಹಿನ್ನೆಲೆಯನ್ನೂ ಸಹ ಉತ್ಪ್ರೇಕ್ಷಿಸಿರುವುದು ಇಲ್ಲಿಯ ವಿಶೇಷ; ಕಬರೀ-ಮುಡಿ.

## ಗೋಪಿಯರು ಮಾಡಿದ ಇನ್ನಿತರ ಪೂಜೆಗಳು

ತಾಂಬೂಲಂ ಚ ಮುಕುಂದಚರ್ವಿತಲಸತ್ತಾಂಬೂಲಸಿದ್ಧ್ಯೈ ಪಯ-
ಸ್ತದ್ಬಿಂಬೋಷ್ಠಸುಧಾಪ್ತಯೇ ಮೃದುತನೌ ಭೂಷಾವಲೀಂ ಸಂದಧುಃ ।
ರತ್ಯಂತೇ ಸಮಲಂಕರೋತು ಗಲಿತಾಕಲ್ಪೌಘಮಸ್ಮತ್ತನು-
ಷ್ವಿತ್ಯಾದೀಪ್ಸಿತಲಬ್ಧಯೇಽತಿಕುಶಲಾಸ್ತಾಮರ್ಚಯಾಂಚಕ್ರಿರೇ ॥ ೪೬ ॥

ಶ್ರೀಕೃಷ್ಣನು ಮೆದ್ದ ಸೊಗಸಾದ ತಾಂಬೂಲವು ತಮಗೆ ಲಭಿಸಲಿ ಎಂಬ ಭಾವದಿಂದ [೨] ತಾಂಬೂಲವನ್ನು ನೀಡಿದರು; ಅವನ ಅಧರಾಮೃತದ ಪ್ರಾಪ್ತಿಗೆಂದು ಕ್ಷೀರವನ್ನು ಸಮರ್ಪಿಸಿದರು. ರತಿಕ್ರೀಡೆಯ ಅನಂತರ ಕಳಚಿ ಬೀಳುವ ಆಭರಣಗಳಿಂದ ತಮ್ಮ ಕೋಮಲದೇಹವನ್ನು ಅಲಂಕರಿಸಲಿ ಎಂದು ಬಗೆದು ಮಹಾಲಕ್ಷ್ಮಿಗೆ ಆಭರಣಗಳನ್ನು ಸಮರ್ಪಿಸಿದರು. ಇದೇ ಮೊದಲಾದ ಅಭೀಷ್ಟಸಿದ್ಧಿಗಾಗಿ [೩] ಅತಿಜಾಣೆಯರಾದ ಅವರು ಕಾತ್ಯಾಯನಿಯನ್ನು ಪೂಜಿಸಿದರು; ಆಕಲ್ಪ - ಆಭರಣ.

---

೧. ಸೇವಾನುಸಾರಿಫಲಸ್ಯ ದಾತವ್ಯತ್ವಾದಿತಿ ಭಾವಃ। -ವ್ಯಾ.
ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ । - ಗೀತಾ (೪/೧೧)

೨. ಶ್ರೀಕೃಷ್ಣಭಕ್ಷಿತಮನೋಹರತಾಂಬೂಲಪ್ರಾಪ್ತ್ಯರ್ಥಮಿತ್ಯರ್ಥಃ । -ವ್ಯಾ.

೩.. ವ್ರಜಕುಮಾರ್ಯವಯವಾನಾಂ ಭೂಷಣಭೂಷಣತ್ವಾದಿತಿ ಭಾವಃ। -ವ್ಯಾ.

### ಗೋಪೀವಸ್ತ್ರಾಪಹರಣಪ್ರಸಂಗ

ತತಃ [1]ಸಪತ್ನ್ಯರ್ಚನತತ್ಪರಾಣಾಂ
ವ್ರತಂ ವಿರುದ್ಧಂ ವ್ರಜಬಾಲಿಕಾನಾಮ್ ।
ಸ ಭಗ್ನಮಾಧಾತುಮಿವಾಂಬರಾಣಿ
ಜಹಾರ ಧೀರೋಽಂಬುವಿಹಾರಕಾಲೇ ॥ ೪೭ ॥

ಆ ಬಳಿಕ ತಮ್ಮ ಸವತಿಯ ಆರಾಧನೆಯಲ್ಲಿ ತೊಡಗಿದ ಆ ಗೋಪಕನ್ಯೆಯರ ವ್ರತವು ವಿರುದ್ಧವಾದುದು ಎಂಬ ಕಾರಣದಿಂದ ಅದಕ್ಕೆ ಭಂಗವನ್ನು ಉಂಟುಮಾಡಲೆಂಬಂತೆ ಧೀರನಾದ ಶ್ರೀಕೃಷ್ಣನು ಜಲಕ್ರೀಡೆಯ ಸಮಯದಲ್ಲಿ ಅವರ ವಸ್ತ್ರಗಳನ್ನು ಅಪಹರಿಸಿದ.

ವಿ. : ಇಲ್ಲಿ ಕೆಲವು ಶ್ಲೋಕಗಳಿಂದ ಗೋಪಿಯರ ಜಲಕ್ರೀಡೆ ಹಾಗೂ ಅವರ ವಸ್ತ್ರಾಪಹಾರಾದಿ ಪ್ರಸಂಗಗಳನ್ನು ಸಂಗ್ರಹವಾಗಿ ನಿರೂಪಿಸಿರುವರು; ಸಪತ್ನೀ – ಸವತಿ; ಅಂಬುವಿಹಾರ – ಜಲಕ್ರೀಡೆ.

### ಶ್ರೀಕೃಷ್ಣಗೋಪಿಯರ ಅಪೂರ್ವ ಸಲ್ಲಾಪ

ದೇಹೀಶಾಂಬರಮಸ್ಮದೀಯಮಬಲಾ ದತ್ತಂ ಕ್ವ ತದ್ವರ್ತತೇ
ಮಧ್ಯೇ ವಃ ಪ್ರತಿಭಾತಿ ತರ್ಹಿ ನ ಕಥಂ ಸಂದೃಶ್ಯತೇಽಸ್ಮದ್ದೃಶಾ ।
ಮುಗ್ಧಾಸ್ತಾರ್ಕಿಕಮೌಲಿಯುಕ್ತ್ಯಕಲಿತಂ ತನ್ನೈವ ವಃ ಶಕ್ಯತೇ
ದ್ರಷ್ಟುಂ ಚಂಚಲಲೋಚನೈರಿತಿ ವದನ್ ಕೃಷ್ಣಃ ಸ ಪುಷ್ಣಾತು ಮಾಮ್ ॥ ೪೮ ॥

(ಗೋಪಿಯರು) "ಸ್ವಾಮಿ ಶ್ರೀಕೃಷ್ಣ ! ನಮ್ಮ ವಸ್ತ್ರವನ್ನು ನೀಡು," (ಶ್ರೀಕೃಷ್ಣ )"ಅಬಲೆಯರೆ! ನೀಡಿದೆನಲ್ಲ" (ಗೋಪಿಯರು)"ಅದೆಲ್ಲಿರುವುದು?" (ಶ್ರೀಕೃಷ್ಣ )"ನಿಮ್ಮ ನಡುವಿನಲ್ಲಿ ಕಂಗೊಳಿಸುತ್ತಿದೆಯಲ್ಲ" (ಗೋಪಿಯರು)"ಹಾಗಿದ್ದಲ್ಲಿ ಅದು ನಮ್ಮ ಕಣ್ಣಿಗೇಕೆ ಬೀಳುತ್ತಿಲ್ಲ?" (ಶ್ರೀಕೃಷ್ಣ) "ಮುಗ್ಧೆಯರೇ! ತಾರ್ಕಿಕಶಿರೋಮಣಿಗಳ ಯುಕ್ತಿಗೂ ನಿಲುಕದ ಅದನ್ನು ಚಂಚಲನೇತ್ರೆಯರಾದ ನಿಮಗೆ ಕಾಣಲು ಶಕ್ಯವಾಗದು"ಎಂದು ನುಡಿದ ಆ ಶ್ರೀಕೃಷ್ಣನು ನನ್ನನ್ನು ಪೋಷಿಸಲಿ.

ವಿ. : ೧. [2]ಆ ಪ್ರಸಂಗದಲ್ಲಿ [3]ಶ್ರೀಕೃಷ್ಣನೊಂದಿಗೆ ನಡೆದ ಗೋಪಿಯರ ಸಲ್ಲಾಪವನ್ನು ಸಂಗ್ರಹಿಸಿರುವರು ; ಅಂಬರ – ವಸ್ತ್ರ ; ಆಗಸ.

---

೧. ಪತಿಕಾಮನಯಾ ಸಪತ್ನೀಪ್ರಾರ್ಥನಾಯಾ ವಿರುದ್ಧತ್ವಾದಿತಿ ಭಾವಃ । -ವ್ಯಾ.

೨. ಸ್ತ್ರೀಣಾಂ ಮಧ್ಯಸ್ಯಾತಿಸೌಕ್ಷ್ಮ್ಯಾದಪ್ರಕಾಶಮಾನತ್ವೇನಾಂಬರತ್ವವ್ಯಪದೇಶಃ । ಅನೇನ ಗೋಪೀಷು ಶ್ರೀಕೃಷ್ಣೇನ ತನುಮಧ್ಯಾ ಇತಿ ಸ್ವಾನುರಾಗನಿವೇದನರೂಪಾ ಸ್ತುತಿಃ ಕೃತೇತಿ ವ್ಯಜ್ಯತೇ । -ವ್ಯಾ.

೩.. ಗೂಢಾಭಿಸಂಧೇಃ ಶ್ರೀಕೃಷ್ಣಸ್ಯ ಛಲೋತ್ತರಂ ಶ್ರೀಕೃಷ್ಣಸ್ಯ ಸರ್ವಸ್ರಷ್ಟೃತ್ವಾದ್ಗೋಪಿಕಾನಾಂ ಮಧ್ಯಸ್ಯಾಪಿ ತತ್ಸೃಷ್ಟತ್ವಾದ್ದತ್ತಮಿತ್ಯುಚಿತಮ್ । -ವ್ಯಾ.

ಪರೋಕ್ತಸ್ಯ ತದಭಿಪ್ರೇತಾರ್ಥಾಂತರಂ ಪರಿಕಲ್ಪ್ಯ ತದ್ದೂಷಣೇನ ಪರೋಕ್ತಭಂಗಃ ಛಲಮ್ । ಯಥಾ ಗೃಷ್ಟಿವಿವಕ್ಷಯಾ ಗಾಮಾನಯೇತ್ಯುಕ್ತೇ ಪೃಥಿವೀವಿವಕ್ಷಯಾ ಗವಾನಯನಮಶಕ್ಯಮಿತಿ ॥ -ಪ್ರಮಾಣಪದ್ಧತಿ

೨. ತಾರ್ಕಿಕರ ಯುಕ್ತಿಗೆ ನಿಲುಕದ ಗಗನ(ಅಂಬರ)ವು[೧] ಹೇಗೆ ಪ್ರತ್ಯಕ್ಷ ಕಂಡೀತು ಎಂಬುದು ಇಲ್ಲಿಯ ಭಾವ.

೩. ಇಲ್ಲಿ ಅಂಬರ ಎಂಬುದಕ್ಕೆ ಗಗನ ಎಂಬ ಅರ್ಥದಲ್ಲಿ ಅದೃಶ್ಯ ಎಂದಿರುವುದು ಛಲೋಕ್ತಿ ಎಂದು ತಿಳಿಯಬೇಕು.

೪. ಜಲ ಎಂದರೆ ಶಾಸ್ತ್ರ; ಕ್ರೀಡೆ ಎಂದರೆ ಅಧ್ಯಯನರೂಪವಾದ ವಿಹಾರ; ಜಲಕ್ರೀಡೆ ಎಂದರೆ ಒಟ್ಟಾಗಿ ಶಾಸ್ತ್ರಾಧ್ಯಯನ ಎಂದರ್ಥ. ನಗ್ನಸ್ನಾನ, ನಗ್ನ ಜಲಕ್ರೀಡೆಗಳು ನಿಷಿದ್ಧ ಎಂದರೆ ವಸ್ತ್ರವಿಲ್ಲದ ಸ್ನಾನಾದಿಗಳು ನಿಷಿದ್ಧ; ವಸ್ತ್ರ ಎಂದರೆ ವಾಯುದೇವರು(ಪ್ರಾಣಸ್ಯ ವಸ್ತ್ರಬುದ್ಧ್ಯಾ). ವಸ್ತ್ರವಿಲ್ಲದ ಜಲಕ್ರೀಡೆ ಎಂದರೆ, ಮಧ್ವಶಾಸ್ತ್ರವನ್ನು ತೊರೆದ ವೇದಾದಿ ಶಾಸ್ತ್ರಾಧ್ಯಯನವು ನಿಷಿದ್ಧ ಎಂದರ್ಥ. ಗೋಪಿಯರು ಬುದ್ಧಿಯ ಸಂಕೇತ; ನೇರವಾಗಿ ಮೂಲಶಾಸ್ತ್ರಗಳನ್ನು ಓದುವುದು ನಗ್ನಶಾಸ್ತ್ರ- ವಿದ್ದಂತೆ ನಿರರ್ಥಕ, ಶ್ರೀಕೃಷ್ಣನು ಹಾಗೆ ವಸ್ತ್ರಾಪಹಾರ ಮಾಡುವ ಮೂಲಕ ಅದನ್ನು ತೋರಿಸಿಕೊಟ್ಟು ಬಳಿಕ ವಸ್ತ್ರಗಳನ್ನು ನೀಡಿದ್ದು ಮಧ್ವಶಾಸ್ತ್ರವನ್ನು ಅನುಗ್ರಹಿಸುವುದಕ್ಕೆ ಸಂಕೇತ. ಆ ಬಳಿಕ ಅವರಿಗೆ ತನ್ನ ಸಂಗಮರೂಪದ ಅನುಗ್ರಹವನ್ನು ನೀಡಿದ್ದು ಮಧ್ವಶಾಸ್ತ್ರದ ಅಧ್ಯಯನಕ್ಕೆ ಫಲರೂಪವಾಗಿ ತನ್ನ ಸಂಗಮರೂಪವಾದ ವೈಕುಂಠಲೋಕವನ್ನು ನೀಡುವುದು ಎಂದರ್ಥ.

### ಗೋಪಿಯರಿಗೆ ವಸ್ತ್ರನೀಡಿದ ಶ್ರೀಕೃಷ್ಣ

**ತತಃ ಕ್ರಮೇಣಾಂಕುರಿತಾಂಗಜಾತಾ**
**ನಿರೀಕ್ಷ್ಯ ತಾಶ್ಚಂಚಲಲೋಚನಾಂತಾಃ ।**
**ಸ್ವಸಂಗಯೋಗ್ಯಾ ಇತಿ ತರ್ಕಯನ್ ಸ**
**ದದೌ ಮುದಾ ತದ್ವಸನಾನಿ ಮಾನೀ ॥ ೪೯ ॥**

ಬಳಿಕ ಚಂಚಲ ಕುಡಿನೋಟದ ಆ ಸ್ತ್ರೀಯರು ಕ್ರಮವಾಗಿ [೨]ಕಾಮಪೀಡಿತರಾದದ್ದನ್ನು ಗಮನಿಸಿ, ಅವರು ತನ್ನ ಸಂಗಕ್ಕೆ ಅರ್ಹರು ಎಂದು ತರ್ಕಿಸಿ, ಸ್ವಾಭಿಮಾನಿಯಾದ ಶ್ರೀಕೃಷ್ಣನು ಅವರಿಗೆ ಸಂತೋಷದಿಂದ ಅವರ ವಸ್ತ್ರಗಳನ್ನು ನೀಡಿದ.

ವಿ.: [೩]ಅವರಲ್ಲಿ ಕ್ರಮವಾಗಿ ರಮಾವೇಶ ಮೂಡಿದ್ದನ್ನು ಕಂಡು ಶ್ರೀಕೃಷ್ಣ ಅವರನ್ನು ಸ್ವೀಕರಿಸಲು ನಿಶ್ಚಯಿಸಿ ವಸ್ತ್ರಗಳನ್ನು ನೀಡಿದ ಎಂದು ಅರ್ಥ; **ಅಂಗಜಾತ** – ಅಂಗಜ, ಕಾಮ.

---

೧. ಅನೇನ ವ್ಯೋಮ್ನಃ ಸುತರಾಂ ಲೋಚನಾಗೋಚರತ್ವಂ ಸೂಚ್ಯತೇ । ದ್ರಷ್ಟುಂ ನೈವ ಶಕ್ಯತೇ । ಅನುಮಾನಾ-ಗೋಚರಸ್ಯಾತೀಂದ್ರಿಯಸ್ಯ ಸಾಕ್ಷಿಸಿದ್ಧಸ್ಯ ಗಗನಸ್ಯ ಚಕ್ಷುಷಾ ದ್ರಷ್ಟುಮಶಕ್ಯತ್ವಾದಿತಿ ಭಾವಃ । –ವ್ಯಾ.

೨. ಅನೇನಾಸಾಂ ಕಾಮಜನನೀತ್ವಂ ದ್ಯೋತ್ಯತೇ । –ವ್ಯಾ.

೩. ಕಾಮಮಾತುಃ ಶ್ರೀಕೃಷ್ಣಸ್ಯ ಪತ್ನೀತ್ವಾದಿತಿ ಭಾವಃ । –ವ್ಯಾ.

### ವಿಪ್ರರ ಯಜ್ಞಭೂಮಿಯ ಬಳಿಗೆ ಹಸಿದ ಗೋಪರು

ತತೋ ವನೇ ಸಂಚರಣಾದತಿಶ್ರಾಂತಾಃ ಕದಾಚನ।
[೧]ಅನ್ನಾರ್ಥಿನೋ ಯಯುರ್ಗೋಪಾಃ ಪೂರ್ಣಾಂ ಯಜ್ಞಸಭಾಂ ದ್ವಿಜೈಃ ॥ ೫೦ ॥

ಅನಂತರ ಒಮ್ಮೆ ಕಾಡಿನಲ್ಲಿ ಅಲೆದದ್ದರಿಂದಾಗಿ ತುಂಬಾ ಬಳಲಿದ ಗೋಪರು ಆಹಾರ ಬಯಸಿದವರಾಗಿ ವಿಪ್ರರಿಂದ ತುಂಬಿದ್ದ ಯಜ್ಞಸಭೆಗೆ ತೆರಳಿದರು.

### ಗೋಪರ ಹರಿಭಕ್ತಿ

ಕ್ಷುತ್ಪೀಡಿತಾಽಪಿ ಪರಮಾನುಗಮಂಡಲೀ ಸಾ
ಕೃಷ್ಣಾಯ ಭೋಜ್ಯಮಿತಿ ವಿಪ್ರಚಯಂ ಯಯಾಚೇ।
ಯುಕ್ತಂ ಹಿ ತನ್ಮುರರಿಪೋರನುಗಾ ವಿರಾಗಾ
ಯತ್ನಂ ಕದಾಚಿದಪಿ ನ ಸ್ವಕೃತೇ ಪ್ರಕುರ್ಯುಃ ॥ ೫೧ ॥

ಹಸಿವಿನಿಂದ ಬಳಲಿದ್ದರೂ ಶ್ರೀಕೃಷ್ಣನ ಅನುಯಾಯಿಗಳ ಆ ಗುಂಪು ಶ್ರೀಕೃಷ್ಣನಿಗೆ ಭೋಜನ ನೀಡಬೇಕು ಎಂಬುದಾಗಿ ಆ ವಿಪ್ರವೃಂದವನ್ನು ಬೇಡಿಕೊಂಡಿತು. ಅದು ಯುಕ್ತವೇ ಸರಿ. ಶ್ರೀಕೃಷ್ಣನ ಅನುಯಾಯಿಗಳಾದ, ವಿರಕ್ತರಾದವರು ಎಂದಿಗೂ ಸಹ ತಮಗೋಸ್ಕರವಾಗಿ ಪ್ರಯತ್ನವನ್ನು ಮಾಡರು.

ವಿ.: ೧. ಹಸಿದಿದ್ದರೂ ಆ ಗೋಪರು ತಮಗೆ ಎಂದು ಕೇಳದೆ ಶ್ರೀಕೃಷ್ಣನಿಗೋಸ್ಕರ ಅನ್ನ ಎಂದು ಪ್ರಾರ್ಥಿಸಿದ್ದು ಅವರ ಹಿರಿಮೆಗೆ ದ್ಯೋತಕ; ಕ್ಷುತ್ - ಹಸಿವು; ಚಯ - ಸಮೂಹ.

೨. ಎಷ್ಟು ಹಸಿದಿದ್ದರೂ ತಮಗೋಸ್ಕರ ಎಂದು ಭಾವಿಸದೆ ದೇವರನೈವೇದ್ಯಕ್ಕೋಸ್ಕರವಾಗಿಯೇ ಅಡುಗೆಯನ್ನು ಸಿದ್ಧಪಡಿಸುವುದು [೨]ಭಗವದ್ಭಕ್ತರ ಲಕ್ಷಣ ಎಂಬ ವಿಶೇಷಾಂಶ ಇಲ್ಲಿ ಸೂಚಿತ.

### ಶ್ರೀಕೃಷ್ಣನಿಗೆ ಅನ್ನ ನೀಡದ ವಿಪ್ರರು

ಸ್ವೀಯಕ್ರಿಯಾಭಂಗಭಯೇನ ವಿಪ್ರಾಃ
ಶ್ರೇಯಸ್ಕೃತೇ ತೇ ನ ದದುಃ ಕಿಲಾನ್ನಮ್।
ಭೃತ್ಯೈಃ ಸಹಾಶ್ನಾತಿ ಮಖೇಽಸ್ಮದೀಯ
ಇತ್ಥಂ ವಿದಿತ್ವೇತಿ ಮಮ ಪ್ರತರ್ಕಃ ॥ ೫೨ ॥

---

೧. ಪ್ರಾಣಬುದ್ಧಿಮನಃಸ್ವಾತ್ಮದಾರಾಪತ್ಯಧನಾದಯಃ।
ಯತ್ಸಂಪರ್ಕಾತ್ ಪ್ರಿಯಾ ಆಸಂಸ್ತತಃ ಕೋ ನ್ವಪರಃ ಪ್ರಿಯಃ॥ - ಭಾಗ. (೧೦/೨೩/೨೭)

೨. ಹರಿಭಕ್ತಾ ಹಿ ನ ಸ್ವೋದರಭರಣೇ ಪ್ರಯತ್ನಂ ಕುರ್ವಂತಿ ಕಿಂತು ಶ್ರೀವಿಷ್ಣುಪೂಜಾರ್ಥಮೇವ ಯತಂತೇ ಇತಿ ಭಾವಃ। -ವ್ಯಾ.

ತಮ್ಮ ಕಾರ್ಯಕ್ಕೆ ಭಂಗ ಒದಗೀತು ಎಂಬ ಭಯದಿಂದ ಆ ಬ್ರಾಹ್ಮಣರು ಶ್ರೇಯಸ್ಸು ನೀಡುವ ಶ್ರೀಕೃಷ್ಣನಿಗೆಂದು[೧] ಅನ್ನವನ್ನು ನೀಡದಾದರು; ಅವನು ಹೇಗಿದ್ದರೂ ನಮ್ಮ ಯಜ್ಞದಲ್ಲಿ ಭೃತ್ಯರೊಂದಿಗೆ ಅನ್ನವನ್ನು ಸ್ವೀಕರಿಸುವನಲ್ಲ ಎಂದು ಭಾವಿಸಿ ಅವರು ಹಾಗೆ ಮಾಡಿದರು ಎಂದು ನನ್ನ ಬಲವಾದ ಊಹೆ.

ವಿ. : ಆ ಬ್ರಾಹ್ಮಣರು ಹಾಗೆ ಬೇಡಿದರೂ ಶ್ರೀಕೃಷ್ಣನಿಗೆ ಅನ್ನ ನೀಡದೆ ಅಪಚಾರವೆಸಗಿದರು ಎಂದು [೨] ಶ್ರೀಮದ್ಭಾಗವತಾದಿಗಳಲ್ಲಿ ಬಂದಿರುವ ನಿರೂಪಣೆ. ಆದರೂ ಅವರು ಆ ಬಳಿಕ ತಮ್ಮ ಆ [೩] ಕಾರ್ಯಕ್ಕೆ ಪಶ್ಚಾತ್ತಾಪಪಟ್ಟಿದ್ದರಿಂದ ಅವರು ಸಾತ್ವಿಕಚೇತನರು ಎಂದು ತಿಳಿಸಲೆಂದು ಇಲ್ಲಿ ಹೀಗೆ ಉತ್ಪ್ರೇಕ್ಷಿಸಿರುವರು ಎಂದು ತಿಳಿಯಬೇಕು; ಮಖ – ಯಜ್ಞ.

---

೧. ನಹ್ಯಶ್ನತಃ ಕ್ಷುತ್ಪೀಡಾ ಭವತೀತಿ ಭಾವೇನೈವಾನ್ನಂ ನ ದದುರಿತ್ಯರ್ಥಃ। –ವ್ಯಾ.

೨. ದೃಷ್ಟ್ವಾ ಸ್ತ್ರೀಣಾಂ ಭಗವತಿ ಕೃಷ್ಣೇ ಭಕ್ತಿಮಲೌಕಿಕೀಮ್ ।
ಆತ್ಮಾನಂ ಚ ತಯಾ ಹೀನಮನುತಪ್ತಾ ವ್ಯಗರ್ಹಯನ್ ॥
ಧಿಗ್ ಜನ್ಮ ನಸ್ತ್ರಿವೃದ್ ವಿದ್ಯಾಂ ಧಿಗ್ ವ್ರತಂ ಧಿಗ್ ಬಹುಜ್ಞತಾಮ್ ।
ಧಿಕ್ ಕುಲಂ ಧಿಕ್ಕ್ರಿಯಾದಾಕ್ಷ್ಯಂ ವಿಮುಖಾ ಯೇ ತ್ವಧೋಕ್ಷಜೇ ॥
ನೂನಂ ಭಗವತೋ ಮಾಯಾ ಮಾಯಿನಾಮಪಿ ಮೋಹಿನೀ ।
ಯದ್ವಯಂ ಗುರವೋ ನೃಣಾಂ ಸ್ವಾರ್ಥೇ ಮುಹ್ಯಾಮಹೇ ದ್ವಿಜಾಃ ॥
ಅಹೋ ಪಶ್ಯತ ನಾರೀಣಾಮಪಿ ಕೃಷ್ಣೇ ಜಗದ್ಗುರೌ ।
ದುರಂತಭಾವಂ ಯೋಽವಿಧ್ಯನ್ಮೃತ್ಯುಪಾಶಾನ್ ಗೃಹಾಭಿಧಾನ್ ॥
ನಾಸಾಂ ದ್ವಿಜಾತಿಸಂಸ್ಕಾರೋ ನ ನಿವಾಸೋ ಗುರಾವಪಿ ।
ನ ತಪೋ ನಾತ್ಮಮೀಮಾಂಸಾ ನ ಶೌಚಂ ನ ಕ್ರಿಯಾಃ ಶುಭಾಃ ॥
ಅಥಾಪಿ ಹ್ಯುತ್ತಮಶ್ಲೋಕೇ ಕೃಷ್ಣೇ ಯೋಗೇಶ್ವರೇಶ್ವರೇ ।
ಭಕ್ತಿರ್ದೃಢಾ ನ ಚಾಸ್ಮಾಕಂ ಸಂಸ್ಕಾರಾದಿಮತಾಮಪಿ ॥

–ಭಾಗವತ (೧೦/೨೧/೩೮-೪೩)

ಕೃಷ್ಣಂ ಕದಾಚಿದತಿದೂರಗತಂ ವಯಸ್ಯಾ ಊಚುಃ ಕ್ಷುಧಾರ್ದಿತತರಾ ವಯಮಿತ್ಯುದಾರಮ್ ।
ಸೋಽಪ್ಯಾಹ ಸತ್ರಮಿಹ ವಿಪ್ರಗಣಾಶ್ಚರಂತಿ ತಾನ್ ಯಾಚತೇತಿ ಪರಿಪೂರ್ಣಸಮಸ್ತಕಾಮಃ ॥
ತಾನ್ ಪ್ರಾಪ್ಯ ಕಾಮಮನವಾಪ್ಯ ಪುನಶ್ಚ ಗೋಪಾಃ ಕೃಷ್ಣಂ ಸಮಾಪುರಥ ತಾನವದತ್ ಸ ದೇವಃ ।
ಪತ್ನೀಃ ಸಮರ್ಥಯತ ಮದ್ವಚನಾದಿತಿ ಸ್ಮ ಚಕ್ರುಶ್ಚ ತೇ ತದಪಿ ತಾ ಭಗವಂತಮಾಪುಃ ॥
ತಾಃ ಷಡ್ವಿಧಾನ್ನಪರಿಪೂರ್ಣಕರಾಃ ಸಮೇತಾಃ ಪ್ರಾಪ್ತಾ ವಿಸೃಜ್ಯ ಪತಿಪುತ್ರಸಮಸ್ತಬಂಧೂನ್ ।
ಆತ್ಮಾರ್ಚನೈಕಪರಮಾ ವಿಸಸರ್ಜ ಕೃಷ್ಣ ಏಕಾ ಪತಿಪ್ರವಿಧೃತಾ ಪದಮಾಪ ವಿಷ್ಣೋಃ ॥
ಭುಕ್ತ್ವಾಽಥ ಗೋಪಸಹಿತೋ ಭಗವಾಂಸ್ತದನ್ನಂ ರೇಮೇ ಚ ಗೋಕುಲಮವಾಪ್ಯ ಸಮಸ್ತನಾಥಃ ।
ಆಜ್ಞಾತಿಲಂಘನಕೃತೇಃ ಸ್ವಕೃತಾಪರಾಧಾತ್ ಪಶ್ಚಾತ್ ಸುತಪ್ತಮನಸೋಽಪ್ಯಭವನ್ ಸ್ಮ ವಿಪ್ರಾಃ ॥

–ಮ.ಭಾ.ತಾ.ನಿ.(೧೩/೬೦-೬೧)

೩. ಸ್ವಪತ್ನೀಭಿರನ್ನದಾನಾನಂತರಂ ಪಶ್ಚಾತ್ತಾಪಸ್ಯ ಜಾತತ್ವಾತ್ ಬ್ರಾಹ್ಮಣಾನಾಂ ಶುಭಜೀವತ್ವಮುತ್ಪ್ರೇಕ್ಷಿತುಃ ಕವೇರ್ಹೃದಯಮ್ । –ವ್ಯಾ.

## ಭಕ್ತಿಗಿಂತ ಪುರುಷತ್ವ ದೊಡ್ಡದಲ್ಲ

ವಿಪ್ರಾಂಗನಾಃ ಸ್ವಪ್ರಭವೇ ಪ್ರಹೃಷ್ಟಾಃ
ಪ್ರತ್ಯರ್ಪ್ಯ ಸರ್ಪಿರ್ದಧಿಪಾಯಸಾದಿ ।
ಮುಕ್ತಿಂ ಕರಸ್ಥಾಂ ಕಿಲ ತಾ ವಿತೇನುಃ
ಪುಂಸ್ತ್ವೇನ ಕಿಂ [೧]ಪೂರುಷಮೌಲಿಭಾಜಾಮ್ ॥ ೫೩ ॥

ವಿಪ್ರಪತ್ನಿಯರು ತುಂಬಾ ಸಂತೋಷದಿಂದ ತಮ್ಮ ಸ್ವಾಮಿಯಾದ ಶ್ರೀಕೃಷ್ಣನಿಗೆ ತುಪ್ಪ ಮೊಸರು, ಪಾಯಸ ಮೊದಲಾದ ಭಕ್ಷ್ಯಗಳನ್ನು ಸಮರ್ಪಿಸಿ, ಮುಕ್ತಿಯನ್ನು ವಶಮಾಡಿ-ಕೊಂಡರು; ಪುರುಷೋತ್ತಮನಾದ ಶ್ರೀಹರಿಯ ಭಕ್ತರಾದವರಿಗೆ ಪುರುಷತ್ವದಿಂದ ಏನಾಗಬೇಕಿದೆ?

ವಿ. : ೧. ಅವರು ಸ್ತ್ರೀಯರಾದರೂ ಶ್ರೀಕೃಷ್ಣನಿಗೆ ಹಾಗೆ ಭಕ್ತಿಯಿಂದ ನೈವೇದ್ಯ ಸಮರ್ಪಿಸುವ ಮೂಲಕ [೨]ಮುಕ್ತಿಗೆ ಅರ್ಹರಾದರು ಎಂದು ಅರ್ಥ.

೨. ಭಕ್ತಿಯಿಂದ ಆರಾಧಿಸುವುದು ಮುಕ್ತಿಗೆ ಸಾಧನ; ಅದಕ್ಕೆ ಪುರುಷತ್ವ ಮೊದಲಾದವುಗಳು ಅನಗತ್ಯ ಎಂಬುದು ಇಲ್ಲಿಯ ಭಾವ ; ಸರ್ಪಿಃ – ತುಪ್ಪ.

## ಗೋವರ್ಧನೋದ್ಧರಣ ಪ್ರಸಂಗ

ಸ ವಿಪ್ರಪತ್ನ್ಯರ್ಪಿತಭಕ್ತಭುಕ್ತ್ವಾ
ವಿಭುಃ ಸಮಾಸಕ್ತಮನಾ ಇವೈಂದ್ರಮ್ ।
ಅಭುಂಕ್ತ ಭೋಜ್ಯಂ ಗತಭೀರ್ಗಿರೀಂದ್ರ-
ವಪುಃ[೩] ಸ್ವಕೀಯಾರ್ಪಿತಮಪ್ರತೀತಃ ॥ ೫೪ ॥

ಆ ವ್ಯಾಪ್ತನಾದ ಶ್ರೀಕೃಷ್ಣನು ವಿಪ್ರಪತ್ನಿಯರು ಸಮರ್ಪಿಸಿದ ಅನ್ನವನ್ನು ತಿಂದು ಅದರ ರುಚಿಕಂಡವನೋ ಎಂಬಂತೆ, ಇಂದ್ರನಿಗೆಂದು ತನ್ನವರು ಸಮರ್ಪಿಸಿದ ಭೋಜನವನ್ನು ಬೆಟ್ಟದಂತಹ ರೂಪವನ್ನು ಸ್ವೀಕರಿಸಿ, ಅದೃಶ್ಯನಾಗಿ ನಿರ್ಭೀತಿಯಿಂದ ಭಕ್ಷಿಸಿದ.

---

೧. ಪೂರುಷಮೌಲಿಭಾಜಾಮ್ - ಪುರುಷೋತ್ತಮಭಕ್ತಾನಾಮ್ । –ವ್ಯಾ.

೨. ಮುಕ್ತೌ ಪುಂಸ್ತ್ವಂ ನ ಪ್ರಯೋಜಕಂ ಹರಿಭಕ್ತಿರೇವ ಪ್ರಯೋಜಿಕೇತ್ಯರ್ಥಃ। –ವ್ಯಾ.

೩.. ಯಜನಾಂತೇ ತದನ್ನಂ ತು ತತ್ಪಯೋ ದಧಿ ಚೋತ್ತಮಮ್ ।
ಮಾಂಸಂ ಚ ಮಾಯಯಾ ಕೃಷ್ಣೋ ಗಿರಿರ್ಭೂತ್ವಾ ಸಮಶ್ನುತೇ ॥...
ಭುಕ್ತ್ವಾ ಚಾವಭೃಥೇ ಕೃಷ್ಣಃ ಪಯಃ ಪೀತ್ವಾ ಚ ಕಾಮತಃ।
ಸಂತೃಪ್ತೋಽಸ್ಮೀತಿ ದಿವ್ಯೇನ ರೂಪೇಣ ಪ್ರಜಹಾಸ ವೈ ॥
ತಂ ಗೋಪಾಃ ಪರ್ವತಾಕಾರಂ ದಿವ್ಯಸ್ರಗನುಲೇಪನಮ್ ।
ಗಿರಿ ಮೂರ್ಧ್ನಿ ಸ್ಥಿತಂ ದೃಷ್ಟ್ವಾ ಕೃಷ್ಣಂ ಜಗ್ಮುಃ ಪ್ರಧಾನತಃ ॥ – ಹರಿವಂಶ (೧/೧೭/೨೦-೨೩.)

ವಿ. : ೧. ಇಲ್ಲಿಂದ ಮುಂದೆ ಗೋವರ್ಧನೋದ್ಧರಣ ಪ್ರಸಂಗವನ್ನು ನಿರೂಪಿಸುತ್ತಿರುವರು.

೨. [೧]ಇಂದ್ರನಿಗೆಂದು ಹಮ್ಮಿಕೊಂಡಿದ್ದ ಯಾಗವನ್ನು ನಿಲ್ಲಿಸಿ ಶ್ರೀಕೃಷ್ಣನು ಗೋವರ್ಧನಪೂಜೆಗೆ ಗೋಪರನ್ನು ತೊಡಗಿಸಿ, ಆಗ ಅವರು ಅರ್ಪಿಸಿದ ಅನ್ನವನ್ನು ಬೆಟ್ಟದಂತಹ ಬೃಹದ್ರೂಪವನ್ನು ಸ್ವೀಕರಿಸಿ ಅದೃಶ್ಯನಾಗಿಯೇ ತಿಂದುಹಾಕಿದ ಎಂದು ಅರ್ಥ.

೩. ಶ್ರೀಕೃಷ್ಣ ಹಾಗೆ ಅಪಾರ ಅನ್ನವನ್ನು ತಿನ್ನಲು ಯೋಜಿಸಿದ್ದು ಆ ವಿಪ್ರಪತ್ನಿಯರು ಸಮರ್ಪಿಸಿದ ಅನ್ನದ ರುಚಿಯನ್ನು ಕಂಡದ್ದರಿಂದಲೋ ಎಂಬಂತೆ ಇದ್ದಿತು ಎಂಬ ಇಲ್ಲಿಯ ಉತ್ಪ್ರೇಕ್ಷೆ ಅತ್ಯಂತ ರೋಚಕ; ಭಕ್ತ - ಅನ್ನ.

## ಬಲಿಯನ್ನು ಸ್ವೀಕರಿಸಿ ಇಂದ್ರನನ್ನು ಕೆರಳಿಸಿದ ಕೃಷ್ಣ

[೨]ಪ್ರದಕ್ಷಿಣೀಕೃತ್ಯ ಗಿರಿಂ ಸ್ವವರ್ಗೈ-
ರ್ಮುದಾಽರ್ಪಿತಂ [೩]ಪರ್ವತರೂಪಧಾರೀ ।

---

೧. ಇಂದ್ರಾಯ ಯಾಗಂ ತ್ಯಾಜಯಿತ್ವಾ ತದರ್ಥಂ ಕಲ್ಪಿತಂ ಬಲಿಂ ಸ್ವಯಂ ಜಗ್ರಾಸೇತ್ಯರ್ಥಃ । -ವ್ಯಾ.

೨. ದೇವೇ ವರ್ಷತಿ ಯಜ್ಞವಿಪ್ಲವರುಷಾ ವಜ್ರಾಶ್ಮವರ್ಷಾನಿಲೈಃ
ಸೀದತ್ಪಾಲಪಶು ಸ್ತ್ರಿಯಾಽಽತ್ಮಶರಣಂ ದೃಷ್ಟ್ವಾಽನುಕಂಪ್ಯುತ್ಸ್ಮಯಃ ।
ಉತ್ಪಾಟ್ಯೈಕಕರೇಣ ಶೈಲಮಬಲೋ ಲೀಲೋಚ್ಛಿಲೀಂಧ್ರಂ ಯಥಾ
ಬಿಭ್ರದ್ ಗೋಷ್ಠಮಪಾನ್ಮಹೇಂದ್ರಮದಭಿತ್ ಪ್ರೀಯಾನ್ನ ಇಂದ್ರೋ ಗವಾಮ್ ॥ -ಭಾಗ.(೧೦/೨೪/೨೫)

೩. ಕೃಷ್ಣೋಽಥ ವೀಕ್ಷ್ಯ ಪುರುಹೂತಮಹಪ್ರಯತ್ನಂ ಗೋಪಾನ್ ನ್ಯವಾರಯದವಿಸ್ಮರಣಾಯ ತಸ್ಯ ।
ಮಾ ಮಾನುಷೋಽಯಮಿತಿ ಮಾಮವಗಚ್ಛತಾತ್ ಸ ಇತ್ಯವ್ಯಯೋಽಸ್ಯ ವಿದಧೇ ಮಹಭಂಗಮೀಶಃ॥
ಗೋಪಾಂಶ್ಚ ತಾನ್ ಗಿರಿಮಹೋಽಸ್ಮದುರುಸ್ವಧರ್ಮ ಇತ್ಯುಕ್ತಿಸಚ್ಛಲತ ಆತ್ಮಮಹೇಽವತಾರ್ಯ ।
ಭೂತ್ವಾಽತಿವಿಸ್ತೃತತನುರ್ಬುಭುಜೇ ಬಲಿಂ ಸ ನಾನಾವಿಧಾನ್ನರಸಪಾನಗುಣೈಃ ಸಹೈವ ॥
ಇಂದ್ರೋಽಥ ವಿಷ್ಟತರಥಾಂಗಧರಾವತಾರೋ ಮೇಘಾನ್ ಸಮಾದಿಶದುರೂದಕಪೂಗವೃಷ್ಟ್ಯೈ ।
ತೇ ಪ್ರೇರಿತಾಃ ಸಕಲಗೋಕುಲನಾಶನಾಯ ಧಾರಾ ವಿತೇರುರುರುನಾಗಕರಪ್ರಕಾರಾಃ ॥
ತಾಭಿರ್ನಿಪೀಡಿತಮುದೀಕ್ಷ್ಯ ಸ ಕಂಜನಾಭಃ ಸರ್ವಂ ವ್ರಜಂ ಗಿರಿವರಂ ಪ್ರಸಭಂ ದಧಾರ ।
ವಾಮೇನ ಕಂಜದಲಕೋಮಲಪಾಣಿನೈವ ತತ್ರಾಖಿಲಾಃ ಪ್ರವಿವಿಶುಃ ಪಶುಪಾಃ ಸ್ವಗೋಭಿಃ ॥
ವೃಷ್ಟ್ಯೋರುವಾರ್ಯಥ ನಿರಂತರಸಪ್ತರಾತ್ರಂ ತ್ರಾತಂ ಸಮೀಕ್ಷ್ಯ ಹರಿಣಾ ವ್ರಜಮಶ್ರಮೇಣ ।
ಶಕ್ರೋಽನುಸಂಸ್ಮೃತಸುರಪ್ರವರಾವತಾರಃ ಪಾದಾಂಬುಜಂ ಯದುಪತೇಃ ಶರಣಂ ಜಗಾಮ ॥
ತುಷ್ಟಾವ ಚೈನಮುರುವೇದಶಿರೋಗತಾಭಿರ್ಗೀರ್ಭಿಃ ಸದಾಽಗಣಿತಪೂರ್ಣಗುಣಾರ್ಣವಂ ತಮ್ ।
ಗೋಭೃದ್ಗುರುಂ ಹರಗುರೋರಪಿ ಗೋಗಣೇನ ಯುಕ್ತಃ ಸಹಸ್ರಗುರಗಾಧಗುಮಗ್ರ್ಯಮಗ್ರ್ಯಾತ್ ॥
ತ್ವತ್ತೋ ಜಗತ್ ಸಕಲಮಾವಿರಭೂದಗಣ್ಯಧಾಮಸ್ತ್ವಮೇವ ಪರಿಪಾಸಿ ಸಮಸ್ತಮಂತೇ ।
ಅತ್ಸಿ ತ್ವಯ್ಯೈವ ಜಗತೋಽಸ್ಯ ಹಿ ಬಂಧಮೋಕ್ಷೌ ನ ತ್ವತ್ತಮೋಽಸ್ತಿ ಕುಹಚಿತ್ ಪರಿಪೂರ್ಣಶಕ್ತೇ ॥
ಕ್ಷಂತವ್ಯಮೇವ ಭವತಾ ಮಮ ಬಾಲ್ಯಮೀಶ ತ್ವತ್ಸಂಶ್ರಯೋಽಸ್ಮಿ ಹಿ ಸದೇತ್ಯಭಿವಂದಿತೋಽಜಃ ।
ಕ್ಷಾಂತಂ ಸದೈವ ಭವತಸ್ತವ ಶಿಕ್ಷಣಾಯ ಪೂಜಾಪಹಾರವಿಧಿರಿತ್ಯವದದ್ರಮೇಶಃ ॥
ಗೋವಿಂದಮೇನಮಭಿಷಿಚ್ಯ ಸ ಗೋಗಣೇಶೋ ಗೋಭಿರ್ಜಗಾಮ ಗುಣಪೂರ್ಣಮಮುಂ ಪ್ರಣಮ್ಯ ।
ಗೋಪೈರ್ಗಿರಾಂಪತಿರಪಿ ಪ್ರಣತೋಽಭಿಗಮ್ಯ ಗೋವರ್ಧನೋದ್ಧರಣಸಂಗತಸಂಶಯೈಃ ಸಃ ॥

**ಬಲಿಂ ಚ ಕೃಷ್ಣಃ ಶತಮನ್ಯುಮನ್ಯು-**
**ವಿವರ್ಧನೋಽಸಾವುರರೀಚಕಾರ ॥ ೫೫ ॥**

ಪರ್ವತವನ್ನು ಪ್ರದಕ್ಷಿಣೆ ಮಾಡಿ ತನ್ನವರು ಸಂತೋಷದಿಂದ ಸಮರ್ಪಿಸಿದ ನೈವೇದ್ಯವನ್ನು ಶತಮನ್ಯು ಎನ್ನಿಸಿದ [1]ಇಂದ್ರನಿಗೆ ಕೋಪ ಹೆಚ್ಚಿಸಲೆಂದು ಶ್ರೀಕೃಷ್ಣನು ಪರ್ವತದ ರೂಪವನ್ನು ಧರಿಸಿ ಸ್ವೀಕರಿಸಿದ.

ವಿ. : ಶತಮನ್ಯು - ಇಂದ್ರ ; ಮನ್ಯು - ಕೋಪ.

**ಪುರುಷೋತ್ತಮನನ್ನು ಅರಿಯದಾದ ಸಹಸ್ರಾಕ್ಷ**

**ಸಹಸ್ರನೇತ್ರೋಽಪಿ ಸ ಕೃಷ್ಣಸತ್ತ್ವಂ**
**ಮನಾಗವಿಜ್ಞಾಯ ದಿದೇಶ ಮೇಘಾನ್ ।**
**ಪ್ರವರ್ಷಣಾರ್ಥಂ [2]ನಿಗಮೈಕವೇದ್ಯೇ**
**ಕಿಮಕ್ಷಿಬಾಹುಲ್ಯಮುಪೈತಿ ಕೃತ್ಯಮ್ ॥ ೫೬ ॥**

ಇಂದ್ರನು ಸಾವಿರ ಕಣ್ಣಿನವನಾದರೂ ಕೃಷ್ಣನ ಸಾಮರ್ಥ್ಯವನ್ನು ಸ್ವಲ್ಪವೂ ತಿಳಿಯದೆ, ಜೋರಾಗಿ ಮಳೆ ಸುರಿಸಲೆಂದು ಮೇಘಗಳನ್ನು ಕಳುಹಿಸಿಕೊಟ್ಟ; ವೇದೈಕವೇದ್ಯನಾದ ಶ್ರೀಕೃಷ್ಣನ ಬಗ್ಗೆ ಹೆಚ್ಚು ಕಣ್ಣುಗಳಿಂದ ಆಗುವುದೇನಿದೆ?

ವಿ. : ೧. ಇಂದ್ರದೇವನು ಸಾವಿರ ಕಣ್ಣಿನವನಾದರೂ ಶ್ರೀಕೃಷ್ಣನ ಮಹಿಮೆಯನ್ನು ಹೇಗೆ ಗುರುತಿಸದಾದ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ; ಮನಾಕ್ - ಸ್ವಲ್ಪ

೨. ಶ್ರೀಕೃಷ್ಣನು ವೇದೈಕವೇದ್ಯನಾದ ಪರಬ್ರಹ್ಮ ಅವನನ್ನು ತಿಳಿಯಲು [3]ಶಾಸ್ತ್ರದ ಕಣ್ಣು ಬೇಕೇ ಹೊರತು ಹೊರಗಿನ ಕಣ್ಣುಗಳು ಅನುಪಯುಕ್ತ; ಆದ್ದರಿಂದ ಸಾವಿರ ಹೊರಗಣ್ಣುಗಳನ್ನು ಹೊಂದಿದ್ದ ಇಂದ್ರನಿಗೆ ಶ್ರೀಕೃಷ್ಣನ ಹಿರಿಮೆಯನ್ನು ಗುರುತಿಸಲು ಸಾಧ್ಯವಾಗದೇ ಹೋಯಿತು ಎಂದರ್ಥ: ಇದು **ಶಾಸ್ತ್ರಯೋನಿತ್ವಾತ್** ಎಂಬ ಬ್ರಹ್ಮಸೂತ್ರದ ವಿವರಣೆಯಾಗಿದೆ.

---

ಕೃಷ್ಣಂ ತತಃಪ್ರಭೃತಿ ಗೋಪಗಣಾ ವ್ಯಜಾನನ್ ನಾರಾಯಣೋಽಯಮಿತಿ ಗರ್ಗವಚಶ್ಚ ನಂದಾತ್ ।
ನಾರಾಯಣಸ್ಯ ಸಮ ಇತ್ಯುದಿತಂ ನಿಶಮ್ಯ ಪೂಜಾಂ ಚ ಚಕ್ರುರಧಿಕಾಮರವಿಂದನೇತ್ರೇ ॥
-ಮ.ಭಾ.ತಾ.ನಿ.(೧೩/೬೨-೭೧)

೧. ಇದಾನೀಮಸ್ಮದ್ವಿರೋಧಿನಂ ಬಲ್ಯಾಖ್ಯದೈತ್ಯಮಂಗೀಕರೋತಿ ಪರ್ವತಂ ಚ ಮಾನಯತೀತಿ ಶತಮನ್ಯೋಃ ಕೋಪಾಭಿವೃದ್ಧಿಜನನಾಯ ತಾವಂಗೀಚಕಾರೇತಿ ಧ್ವನಿತೋಽರ್ಥಃ । -ವ್ಯಾ.

೨. ಶಾಸ್ತ್ರಯೋನಿತ್ವಾತ್ - ಬ್ರಹ್ಮಸೂತ್ರ (೧/೧/೩.)

೩. ''ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ'' ಇತಿ ಶ್ರುತೇಃ (ವಿಷ್ಣುತತ್ತ್ವವಿನಿರ್ಣಯೋದ್ಧೃತ-ಪಿಪ್ಪಲಾದಶ್ರುತಿ) ಲೋಚನಾವಿಷಯೇ ವಸ್ತುನಿ ಲೋಚನಬಾಹುಲ್ಯಮಪ್ರಯೋಜಕಮಿತಿ ಭಾವಃ । -ವ್ಯಾ.

೩. ಅತೀಂದ್ರಿಯ ವಿಷಯಗಳಲ್ಲಿ ಹೊರಗಣ್ಣುಗಳ ಸಂಖ್ಯೆ ಅಪ್ರಯೋಜಕ ಎಂದು ತಾತ್ಪರ್ಯ.

### ಗೋವರ್ಧನವನ್ನು ಎತ್ತಿ ಹಿಡಿದ ಶ್ರೀಕೃಷ್ಣ

ಶತಕ್ರತೌ ವರ್ಷತಿ ವಾಸುದೇವೋ
ಗಿರಿಂ ಸಮುದ್ಧೃತ್ಯ ಬಭೂವ ತೂಷ್ಣೀಮ್ ।
ಜಿಹೀರ್ಷುಭಿಃ ಸ್ವಾಸಮಶತ್ರುಶೌರ್ಯಂ
ತದಾದ್ಯವೈರ್ಯುದ್ಧರಣಂ ಹಿ ಕಾರ್ಯಮ್ ॥ ೫೭ ॥

ಇಂದ್ರನು ಮಳೆ ಸುರಿಸತೊಡಗಿದಾಗ ವಾಸುದೇವನಾದ ಶ್ರೀಕೃಷ್ಣ ಆ ಗೋವರ್ಧನಗಿರಿಯನ್ನು ಮೇಲೆತ್ತಿ ಸುಮ್ಮನೆ ನಿಂತುಬಿಟ್ಟ; ತನಗೆ ಸಾಟಿಯಾಗದ ಶತ್ರುವಿನ ಶೌರ್ಯವನ್ನು ಬಗ್ಗು-ಬಡಿಯಲು ಅವನ ಹಿಂದಿನ ಶತ್ರುವನ್ನು ಮೇಲೆತ್ತುವ ಕಾರ್ಯವೇ ಉಚಿತ; ಅಲ್ಲವೆ !

ವಿ. : ೧. ಒಬ್ಬ ಶತ್ರುವನ್ನು ಕೆರಳಿಸಲು ಅವನ ಹಿಂದಿನ ಶತ್ರುವನ್ನು ಉನ್ನತಿಗೆ ತರಲು ಪ್ರಯ-ತ್ನಿಸುವುದು ಶ್ರೇಷ್ಠವಾದ ಉಪಾಯ ಎಂಬುದಾಗಿ ಈ ಪ್ರಸಂಗದಲ್ಲಿ ತೋರಿಸಿದ ಎಂದು ಅರ್ಥ.

೨. ಇಂದ್ರದೇವರು ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ವಿವರ ವೇದಾದಿಗಳಲ್ಲಿ ನಿರೂಪಿತವಾಗಿದೆ. ಇದರಿಂದ ಪರ್ವತಗಳು ಇಂದ್ರದೇವರ ವೈರಿಗಳು ಎಂದಾಗುವುದು.[೧] ಗೋವರ್ಧನವು ಸಹ ಒಂದು ಪರ್ವತವಾದ್ದರಿಂದ ಅದು ಸಹ ಇಂದ್ರ-ದೇವರಿಗೆ ವೈರಿ ಇದ್ದಂತೆ; ಅದನ್ನು ಮೇಲೆತ್ತುವ ಮೂಲಕ ಶ್ರೀಕೃಷ್ಣನು ಇಂದ್ರದೇವರ ಕೋಪವನ್ನು ಹೆಚ್ಚಿಸಿದ ಎಂದು ಭಾವ; ಶತಕ್ರತು - ಇಂದ್ರ.

೩. [೨]ಅಲ್ಪಸಾಮರ್ಥ್ಯದ ಶತ್ರುವನ್ನು ಮಹಾಶೂರನಾದವನು ಎದುರಿಸುವುದು ತರವಲ್ಲ ಎಂಬ ಭಾವನೆಯಿಂದಲೂ ಶ್ರೀಕೃಷ್ಣ ಹಾಗೆ ಇಂದ್ರನನ್ನು ತಾನೇ ಎದುರಿಸದೆ ಗೋವರ್ಧನವನ್ನು ಮೇಲೆತ್ತಿದ ಎಂದು ಭಾವ.

### ಗೋವರ್ಧನಕ್ಕೆ ಬುದ್ಧಿ ಕಲಿಸಿದ ಕೃಷ್ಣ

ಮಯೀಶ್ವರೇ ಭೂಭೃತಿ ಜಾಗರೂಕೇ
ಸ್ವಯಂ ಚ ಭೂಭೃತ್ ಕಿಲ ಬುದ್ಧಿಶೂನ್ಯಃ।

---

೧. ಯಃ ಪರ್ವತಾನ್ ಪ್ರಕುಪಿತಾನರಮ್ಣಾತ್ । -ಋಗ್ವೇದ (೨/೧೨/೨)
ಶ್ಯಾಲೋ ಹರಸ್ಯ ಗಿರಿಪಕ್ಷವಿನಾಶಕಾಲೇ ... -ಮ.ಭಾ.ತಾ.ನಿ(೭/೨)
ಇಂದ್ರಾಯುಧಂ ಹೀಂದ್ರಕರಾಭಿನುನ್ನಂ ಚಿಚ್ಛೇದ ಪಕ್ಷಾನ್ ಕ್ಷಿತಿಧಾರಿಣಾಂ ಪ್ರಾಕ್ । -ಸು.ವಿ.(೧/೨೯)

೨. ನಾಲ್ಪಶತ್ರುರ್ಮಹಾಶೂರೇಣ ಗಂತವ್ಯ ಇತಿ ಮಹಾಶೂರಸ್ಯ ಶ್ರೀಕೃಷ್ಣಸ್ಯ ಅಲ್ಪಸುರೇಂದ್ರಂ ಪ್ರತಿ ಗಮನಾದೇ-ರ್ಹೀನತ್ವಾತ್ । ಇಂದ್ರಸ್ಯ ಶತ್ರುಂ ಪರ್ವತಂ ಸಮುದ್ಧೃತ್ಯ ತೂರ್ಣೀಭಾವೋ ಯುಕ್ತ ಏವೇತ್ಯರ್ಥಃ। -ವ್ಯಾ.

ಸ ಇತ್ಯಮರ್ಷಾದಿವ ಭೂಧರೇಂದ್ರಂ
ಕರೇಣ ಭೂಮೇರುದಬೀಭಿದತ್ ತಮ್ ॥ ೫೮ ॥

ಭೂಮಿಯನ್ನೇ ಹೊತ್ತ ಸಮರ್ಥನಾದ ನಾನು ಜಾಗರೂಕನಾಗಿರುವಾಗ ಬುದ್ಧಿಶೂನ್ಯನಾದ ಈ ಪರ್ವತವು ತಾನೆಂತು ಭೂಧರ ಎನ್ನಿಸಿಯಾನು? ಎಂಬ ಕೋಪದಿಂದಲೋ ಎಂಬಂತೆ ಶ್ರೀಕೃಷ್ಣ ಆ ಪರ್ವತಶ್ರೇಷ್ಠವಾದ ಗೋವರ್ಧನವನ್ನು ತನ್ನ ಒಂದೇ ಕೈಯಿಂದ ಮೇಲೆತ್ತಿದ.

ವಿ. : ೧. ಹಿಂದಿನ ಶ್ಲೋಕದಲ್ಲಿ ಆ ಪ್ರಸಂಗ ಇಂದ್ರದೇವರಿಗೆ ಪಾಠ ಎಂಬ ನಿರೂಪಣೆ ಇದ್ದರೆ ಈ ಶ್ಲೋಕದಲ್ಲಿ ಅದು ಪರ್ವತಕ್ಕೂ ಪಾಠವಾಯಿತು ಎಂದು ತಿಳಿಸಿರುವರು.

೨. ಶ್ರೀಕೃಷ್ಣನ ಪ್ರತಿಯೊಂದು ಕಾರ್ಯವೂ ಸಹ ಸರ್ವರಿಗೂ ಎಚ್ಚರಿಕೆ ನೀಡುವಂತಹುದು ಎಂಬುದು ಇಲ್ಲಿಯ ಭಾವ.

೩.. ಈಶ್ವರನಾದ ಶ್ರೀಕೃಷ್ಣನೇ ಸರ್ವಭೃತ್ ಎಂದರೆ ಭೂಭೃತ್ ಸಹ ಅವನೇ. ಆದರೆ ಪರ್ವತಕ್ಕೆ ಭೂಭೃತ್ ಎಂಬ ಹೆಸರಿದೆ. ಅದು ಸೂಕ್ತವಲ್ಲ ಎಂಬುದನ್ನು ತಿಳಿಸಿ, ಆ ಗೋವರ್ಧನಗಿರಿಯ ಅಹಂಕಾರವನ್ನು ಪರಿಹರಿಸುವುದು ಸಹ ಶ್ರೀಕೃಷ್ಣನ ಗೋವರ್ಧನೋದ್ಧರಣಕಾರ್ಯದ ಉದ್ದೇಶವಾಗಿದ್ದಿತು ಎಂದು ತಿಳಿಯಬೇಕು; **ಅಮರ್ಷ** – ಕೋಪ ; **ಭೂಧರ** – ಪರ್ವತ.

೪. **ಭೂಧರೇಂದ್ರ** ಎಂದರೆ ಶ್ರೇಷ್ಠಪರ್ವತ ಎಂದರ್ಥ; ಇತರ ಪರ್ವತಗಳನ್ನು ಬಿಟ್ಟು ಗೋವರ್ಧನವನ್ನೇ ಎತ್ತಲು ಕಾರಣ ಈ ಪದದಲ್ಲಿದೆ; ಇತರ ಅನೇಕ ಶ್ರೇಷ್ಠಪರ್ವತಗಳು ಇದ್ದರೂ ಗೋವರ್ಧನವು ಗೋವುಗಳ ಪೋಷಣೆಯಂತಹ ಮಹತ್ಕಾರ್ಯವನ್ನುನಿರ್ವಹಿಸುತ್ತಿದ್ದುದರಿಂದ ಭೂಧರೇಂದ್ರ ಎಂಬ ಪದವು ಅದಕ್ಕೆ ಸೂಕ್ತ; ಇಂತಹ ಮಹಾಪರ್ವತವನ್ನೇ ಎತ್ತಬಲ್ಲ ತಾನು ಸರ್ವಸಮರ್ಥ ಎಂಬುದಾಗಿಯೂ ಶ್ರೀಕೃಷ್ಣ ಆ ಮೂಲಕ ಸೂಚಿಸಿದ ಎಂದೂ ತಿಳಿಯಬಹುದು; ಇದು ಒಂದು ರೀತಿಯಲ್ಲಿ ಮಹಾಮಲ್ಲನಿಬರ್ಹಣನ್ಯಾಯ ಎಂದು ತಿಳಿಯಬಹುದು: ಮಹಾಮಲ್ಲೇಶಭಂಗವತ್ ।- (ಅನುವ್ಯಾಖ್ಯಾನ).

ಸರ್ಗೋಪಸಂಹಾರ

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಪಂಚಮಃ ॥ ೫೯ ॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಪಂಚಮಃ ಸರ್ಗಃ ॥೫॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶ-ವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಆನಂದಗಳ ಐದನೆಯ ಸರ್ಗವು ಮುಕ್ತಾಯವಾಯಿತು.

*****

# ೬. ಷಷ್ಠ ಸರ್ಗ

(ಗೋವರ್ಧನೋದ್ಧರಣದ ಮಹತ್ತ್ವ-೧-೧೨; ಶಿಶುವಿನ ಕೈಯಲ್ಲಿ ಸಹಸ್ರ ಆನೆಗಳು ಎಂಬ ಸಮಸ್ಯೆಯ ಪೂರ್ತಿ - ೧೩; ಗೋವರ್ಧನದ ವರ್ಣನೆ - ೧೩-೧೬; ಗೋವರ್ಧನೋದ್ಧರಣದ ಫಲಶ್ರುತಿ-೧೭-೨೦; ಇಂದ್ರನ ಶರಣಾಗತಿ - ೨೧; ನಂದಗೋಪನ ಮೋಕ್ಷಣ- ೨೨-೨೩; ಸೂರ್ಯಾಸ್ತದ ವರ್ಣನೆ - ೨೪-೩೩; ಚಂದ್ರೋದಯದ ವರ್ಣನೆ - ೩೪-೪೬; ವೇಣುಗಾನದ ವರ್ಣನೆ - ೫೦-೫೩; ಶ್ರೀಕೃಷ್ಣಗೋಪಿಯರ ಸಲ್ಲಾಪ - ೫೪-೬೩; ಶ್ರೀಕೃಷ್ಣ ತಿರೋಧಾನ-೬೪; ಗೋಪಿಯರ ಕಾತರ್ಯ-೬೫, ೬೬; ಸರ್ಗೋಪಸಂಹಾರ - ೬೭)

ಎತ್ತಿದ್ದರೂ ಎತ್ತಿರದಿದ್ದಂತೆ ಕಂಡ ಗೋವರ್ಧನ

ಮಹೇಂದ್ರವಿಜ್ಞಪ್ತಘನಾಲಿಮುಕ್ತ-
ಪಯಃಪ್ರವಾಹಾವೃತಭಿನ್ನಭಾಗಮ್ ।
ಮುಕುಂದಹಸ್ತೋದ್ಧೃತಮದ್ರಿರಾಜ-
ಮನುದ್ಧೃತಂ ತಂ ಮನುಜಾ ವ್ಯಜಾನನ್ [೧] ॥ ೧ ॥

ಮಹೇಂದ್ರನ ಆದೇಶದಂತೆ ಮೇಘಗಳ ಸಾಲು ಸುರಿಸಿದ ಜಲಪ್ರವಾಹದಿಂದ ಕೀಳಲ್ಪಟ್ಟ ಪ್ರದೇಶವು ತುಂಬಿಹೋಗಿದ್ದರಿಂದ ಮುಕುಂದನಾದ ಶ್ರೀಕೃಷ್ಣನ ಹಸ್ತದಿಂದ ಮೇಲೆತ್ತಲ್ಪಟ್ಟ ಆ ದೊಡ್ಡ ಗೋವರ್ಧನ ಬೆಟ್ಟವನ್ನು ಎತ್ತಲ್ಪಟ್ಟಿಲ್ಲ ಎಂದೇ ಜನರು ತಿಳಿದರು.

ವಿ. : ಅಪಾರ [೨]ವೃಷ್ಟಿಯಿಂದಾಗಿ ನಿರಂತರ ಸುರಿದ ಜಲಪ್ರವಾಹದಿಂದ ಬೆಟ್ಟ ಎತ್ತಿದ್ದ ಭೂಭಾಗವೆಲ್ಲಾ ಮುಚ್ಚಿ ಹೋದದ್ದರಿಂದ ಶ್ರೀಕೃಷ್ಣ ಎತ್ತಿದ್ದ ಗೋವರ್ಧನಪರ್ವತವು ಎತ್ತಲ್ಪಟ್ಟಿಲ್ಲ ಎಂಬಂತೆ ಕಾಣುತ್ತಿತ್ತು ಎಂದು ಭಾವ; ಘನಾಲಿ - ಮೇಘಗಳ ಸಾಲು; ಘನ - ಮೇಘ; ಪಯಃ-ನೀರು.

ತಪಸ್ವಿಯಂತೆ ಕಂಡ ಗೋವರ್ಧನ

ವರ್ಷಾಸು ವರ್ಷಸಹತಾಮಧಿಗಮ್ಯ ವಾರ್ಷು
ತಪ್ತಂ ತಪಃ ಕೃತಪದಸ್ಯ ಪದಂ ಪ್ರಪೇದೇ ।
ಶರ್ಮಾನ್ಯಜನ್ಮನಿ ಸಿಷಾಧಯಿಷೋರ್ಮಹೀಧ್ರೋ
ಹೃನ್ಮಧ್ಯಲಬ್ಧಪರಮಸ್ಯ ತದೋಪಮಾಯಾಃ [೩] ॥ ೨ ॥

---

೧. ಭ್ರಾಂತಿರಲಂಕಾರಃ। -ವ್ಯಾ.

೨. ವೃಷ್ಟಿಬಾಹುಲ್ಯಾದವಿಚ್ಛಿನ್ನಪಯಃಪ್ರವಾಹೈಃ ಖಂಡದ್ವಯಾಂತರಸ್ಯಾಚ್ಛಾದನಾದಿತಿ ಭಾವಃ। -ವ್ಯಾ.

೩.. ಉಪಮಾಲಂಕಾರಃ। -ವ್ಯಾ.

ಬೇರೊಂದು ಜನ್ಮದಲ್ಲಿ ಸುಖವನ್ನು ಸಾಧಿಸಬಯಸಿದ ಸಾಧಕನು ಹೃದಯದಲ್ಲಿ ಸರ್ವೋ-ತ್ತಮನಾದ ಶ್ರೀಕೃಷ್ಣನನ್ನು ಧರಿಸಿ, ನೀರಿನಲ್ಲಿ ತಪಸ್ಸನ್ನು ಮಾಡಲು ಮಳೆಗಾಲದಲ್ಲಿ ಮಳೆಯನ್ನು ಸಹಿಸಿಕೊಳ್ಳುವ ಹಿರಿಮೆಯನ್ನು ಸಾಧಿಸಿ, ಈಗ ನೀರಿನಲ್ಲಿ ತಪಸ್ಸು ಮಾಡಲು ತೊಡಗಿರುವವನಂತೆ ಆ ಗೋವರ್ಧನಬೆಟ್ಟವು ಕಾಣುತ್ತಿದ್ದಿತು.

ವಿ.: ಮೇಲೆ ಮಳೆ, ಸುತ್ತ ನೀರು, ಮಧ್ಯದಲ್ಲಿ ಕೃಷ್ಣ - ಇವುಗಳಿಂದಾಗಿ ಆ ಪರ್ವತವು ಜನ್ಮಾಂತರದಲ್ಲಿ ಆನಂದ ಪಡೆಯಲೆಂದು ಮುನಿಯೊಬ್ಬ ನೀರು ಮಳೆಗಳ [೧]ಮಧ್ಯ ಕೃಷ್ಣನನ್ನು ಚಿಂತಿಸುತ್ತಾ ತಪಸ್ಸನ್ನು ಗೈಯ್ಯುವ ಋಷಿಯಂತೆ ಕಾಣುತ್ತಿತ್ತು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು; ಶರ್ಮ - ಸುಖ; ಮಹೀಧ್ರ - ಪರ್ವತ.

**ಬಗೆಬಗೆಯ ಜನರು ನೋಡಿದ ಗೋವರ್ಧನ**

**ಅಂತಃ ಕೃಪಾವಿಪುಲಧಾರವಿಲೋಚನಶ್ರೀ-**
**ಕಾಂತಾಖ್ಯಮೇಘವಿಭವೇಕ್ಷಣಲೋಲನೇತ್ರೈಃ।**
**ಸಂತೋಷಹೇತುಷು ಗುಹಾಸು ಗತೈಃ ಸ ಸತ್ತ್ವೈಃ**
**ಕ್ರಾಂತೋ ಬಹಿಶ್ಚ ಘನದರ್ಶಿಭಿರದ್ರಿರಾಸೀತ್ ॥ ೩ ॥**

ಒಳಭಾಗದಲ್ಲಿ ಕರುಣೆಯ ವಿಪುಲಧಾರೆಗಳಿಂದ ಕೂಡಿದ ಕಣ್ಣುಗಳ ಶ್ರೀಕೃಷ್ಣನೆಂಬ ಮೇಘದ ವೈಭವವನ್ನು ಕಾಣಲೆಂದು ಕಾತರಿಸುತ್ತಿದ್ದ ಕಣ್ಣುಗಳ ಜನರು, ಹೊರಭಾಗದಲ್ಲಿ ಸಂತೋಷಕ್ಕೆ ಕಾರಣವಾದ ಗುಹೆಗಳನ್ನು ಪ್ರವೇಶಿಸಿದ ಪ್ರಾಣಿಗಳು, ಹೀಗೆ ಮೋಡವನ್ನು ಕಾಣುತ್ತಿದ್ದವರಿಂದ ಆ ಬೆಟ್ಟವು ತುಂಬಿಹೋಗಿದ್ದಿತು.

ವಿ. : ೧. [೨]ಬೆಟ್ಟದ ಒಳಗಿನ ಗುಹೆಗಳಲ್ಲೂ, ಬೆಟ್ಟದ ಹೊರಗಿನ ಪ್ರದೇಶಗಳಲ್ಲೂ ರಕ್ಷಣೆ ಪಡೆದ ಜನರು ಶ್ರೀಕೃಷ್ಣನ ದಯೆಯನ್ನು ನೆನೆಯುತ್ತಾ, ಸಂಭ್ರಮಿಸುತ್ತಿದ್ದರು ಎಂದರ್ಥ.

೨. ಗುಹೆಗಳಲ್ಲಿನ ಪ್ರಾಣಿಗಳಿಗೆ ಹಾಗೂ ಬೆಟ್ಟದ ಕೆಳಗಿನ ಜನಗಳಿಗೆ ಬೆಟ್ಟದಿಂದ ಸಂಪೂರ್ಣ ರಕ್ಷಣೆ ಲಭಿಸಿದ್ದರಿಂದ ಆ ಗಿರಿಯನ್ನು ನೋಡುವಾಗ ಅವರಿಗೆ ಸಂಭ್ರಮವಾಗುತ್ತಿದ್ದಿತು ಎಂದು ಭಾವ; ಈಕ್ಷಣ - ನೋಟ.

**ಗೋಪುರದಂತೆ ಕಂಗೊಳಿಸಿದ ಗೋವರ್ಧನ**

**ಸುವರ್ಣಶೃಂಗೈಃ ಕಲಶೋಪಮಾನೈ-**
**ರ್ಮೃಗಾದಿಭಿಃ ಕೃತ್ರಿಮಸನ್ನಿಭೈಶ್ಚ।**

---

೧. ಜಲಮಧ್ಯಸ್ಥಿತತ್ವಾತ್ ಶಿರಸಿ ಪತದ್ವೃಷ್ಟಿತ್ವಾತ್ ಸ್ವಾಂತರ್ಗತಕೃಷ್ಣತ್ವಾಚ್ಚೇತಿ ಭಾವಃ। -ವ್ಯಾ.
೨. ಪರ್ವತಾಂತರ್ಬಹಿಃ ಸ್ಥಿತಾನಾಮುಭಯೇಷಾಂ ಧಾರಾಧರೇಕ್ಷಣಂ ತುಲ್ಯಮಾಸೀದಿತಿ ಭಾವಃ। -ವ್ಯಾ.

ಗುಹೋಲ್ಲಸದ್ದ್ವಾರಗಣೈಃ ಸಮಂತಾ-
ದ್ವೃತೋ ಗಿರಿರ್ಗೋಪುರತೀವ ವಿಷ್ಣೋಃ ॥ ೪ ॥

ಕಲಶಗಳಂತೆ ಕಾಣುತ್ತಿದ್ದ ಚಿನ್ನದ ಶಿಖರಗಳು, ಕೃತ್ರಿಮವೆಂಬಂತೆ ಕಾಣುತ್ತಿದ್ದ ಮೃಗ ಮೊದ-ಲಾದವುಗಳು, ನಾಲ್ಕು ದಿಕ್ಕುಗಳಲ್ಲಿಯೂ ಗುಹೆ ಎಂಬ ಹೊಳೆಯುವ ದ್ವಾರ ಸಮೂಹಗಳು, ಸುತ್ತಲೂ ಇವುಗಳಿಂದ ಕೂಡಿದ ಪರ್ವತವು ಶ್ರೀಕೃಷ್ಣನಿಗೆ ದೇಗುಲದ ಗೋಪುರ-ವೆಂಬಂತಿದ್ದಿತು.

ವಿ. : ೧. ಚಿನ್ನದ ಕಲಶಗಳು, ಮೇಲಕ್ಕೆತ್ತಲ್ಪಟ್ಟ ನಾನಾ ಬಗೆಯ ಚಿತ್ರಗಳು ಹಾಗೂ ನಾಲ್ಕು ದ್ವಾರಗಳಿಂದ ದೇವಾಲಯದ [೧]ಗೋಪುರವು ಶೋಭಿಸುವಂತೆ ಆ ಸಮಯದಲ್ಲಿ ಗೋವರ್ಧನ-ಗಿರಿಯು ಶೋಭಿಸುತ್ತಿದ್ದಿತು; ಮೃಗಗಳು ಚಿತ್ರಲಿಖಿತವಾದಂತೆ ನಿಶ್ಚಲವಾಗಿ ಕಾಣಲು ಶೀತದ ಭಯ [೨]ಕಾರಣವಾಗಿದ್ದಿತು.

೨. ಆ ಶೋಭೆಗೆ ಬಹಳ ಪ್ರಮುಖವಾದ ಕಾರಣ ಅದರ ಒಳಗಡೆ ಸಾಕ್ಷಾತ್ ಭಗವಂತನಾದ ಶ್ರೀಕೃಷ್ಣ ನೆಲೆಸಿದ್ದು ಎಂಬುದು ಇಲ್ಲಿಯ ಮುಖ್ಯಧ್ವನಿ.

### ಮಲ್ಲಯುದ್ಧದ ತಯಾರಿಯಂತೆ ಕಂಡ ಗೋವರ್ಧನೋದ್ಧರಣ ಕಾರ್ಯ

ಬಭೌ ಸಮುತ್ತುಂಗನಗಂ ದಧಾನಃ
ಸ ಭಾವಿಮಲ್ಲೇಂದ್ರಜಯೋಪಯೋಗಿ ।
ತದೀಯವಿದ್ಯಾಭ್ಯಸನಂ ವಿಧಾತುಂ
ಶಿಲೋಚ್ಚಯಂ ಬಿಭ್ರದಿವಾಭ್ರಲಗ್ನಮ್ ॥ ೫ ॥

ಮುಂದೆ ಮಹಾಜಟ್ಟಿಗಳ ಜಯಕ್ಕೆ ಉಪಯೋಗವಾಗುವಂತಹ, ಅದಕ್ಕೆ ಸಂಬಂಧಿಸಿದ [೩]ವಿದ್ಯೆಯ ತಯಾರಿಯನ್ನು ಮಾಡಲೆಂದು ಗಗನಚುಂಬಿಯಾದ ದೊಡ್ಡ ಬಂಡೆಯನ್ನು ಹಿಡಿದವನಂತೆ, ತುಂಬಾ ಎತ್ತರವಾದ ಬೆಟ್ಟವನ್ನು ಹಿಡಿದಿದ್ದ ಶ್ರೀಕೃಷ್ಣನು ಕಂಗೊಳಿಸಿದ.

ವಿ. : ಶ್ರೀಕೃಷ್ಣನು ಮುಂದೆ ಚಾಣೂರಾದಿ ಕಂಸನ ಜಟ್ಟಿಗಳೊಂದಿಗೆ ಮಲ್ಲಯುದ್ಧದಲ್ಲಿ ತೊಡಗುವುದು ಪ್ರಸಿದ್ಧವಾದ ವಿಚಾರ. ಶ್ರೀಕೃಷ್ಣ ಇಲ್ಲಿ ಹೀಗೆ ಗೋವರ್ಧನಗಿರಿಯನ್ನು ಧರಿಸಿದ್ದು

---

೧. ಗೋಪುರಸ್ಯಾಪಿ ಸುವರ್ಣಕಲಶೋಪೇತತ್ವಾತ್ ಚಿತ್ರಲಿಖಿತಮೃಗಾದಿಯುಕ್ತತ್ವಾಚ್ಚತುರ್ದಿಕ್ಷು ದ್ವಾರಸಮೇತ-ತ್ವಾಚ್ಚೇತಿ ಭಾವಃ। -ವ್ಯಾ.

೨. ಶೀತಭಯಾತ್ ನಿಶ್ಚಲಾಂಗತ್ವೇನ ಕೃತ್ರಿಮಪ್ರತಿಮಾಸದೃಶೈಃ ಮೃಗಾದಿಭಿಃ। - ವ್ಯಾ.

೩. ಮಲ್ಲಾ ಹಿ ಸ್ವವಿದ್ಯಾಭ್ಯಾಸಸಮಯೇ ಶಿಲಾಭಾರಂ ಹಸ್ತೇನೋದ್ಧೃತ್ಯ ಇತಸ್ತತಶ್ಚಾಲಯಂತಿ ತಥೇತಿ ಭಾವಃ। ಅನ್ಯಥಾ ಪರ್ವತಧಾರಣೇ ಪ್ರಯೋಜನಾಭಾವಾತ್ ಗೋಪಾದಿರಕ್ಷಣಸ್ಯ ಪ್ರಕಾರಾಂತರೇಣಾಪಿ ಸಂಭವಾದಿತಿ ಭಾವಃ। -ವ್ಯಾ.

ಆ ಮಲ್ಲಯುದ್ಧಕ್ಕೆ ಮಾಡುವ ಪೂರ್ವತಯಾರಿಯಂತೆ ಕಾಣುತ್ತಿದ್ದಿತು ಎಂಬುದು ಇಲ್ಲಿಯ ಉತ್ಪ್ರೇಕ್ಷೆ; ನಗ - ಪರ್ವತ ; ಉಚ್ಚಯ - ಸಮೂಹ.

ಮಂದರದಂತೆ ಕಂಡ ಗೋವರ್ಧನ

ಕೃಷ್ಣಧೃತಃ ಸುರವಿಸ್ಮಯಕಾರೀ
ವಿಸ್ತೃತಪುಷ್ಕರಮಧ್ಯಗತಾರ್ದ್ರಃ।
ಸಿಂಧುಕಬಂಧಸಮುದ್ಧೃತಭಾಸ್ವ-
ನ್ಮಂದರಕಾಂತಿಮಚೂಚುರದದ್ರಿಃ[೧] ॥ ೬ ॥

ಶ್ರೀಕೃಷ್ಣನು ಕೈಯಲ್ಲಿ ಹಿಡಿದಿದ್ದ, ಸುರರಿಗೂ ಅಚ್ಚರಿಯನ್ನುಂಟುಮಾಡುತ್ತಿದ್ದ, ವಿಸ್ತಾರವಾದ ನೀರಿನ ಮಧ್ಯೆ ತೇವಗೊಂಡಿದ್ದ, ಆ ಬೆಟ್ಟವು ಸಮುದ್ರದ ಉದಕದಿಂದ ಮೇಲೆತ್ತಿ ತಂದ ಮಂದರಪರ್ವತದ ಶೋಭೆಯನ್ನು ಮೀರಿಸಿತು.

ವಿ. : ೧.ಶ್ರೀಕೃಷ್ಣನು ಕೂರ್ಮರೂಪದಿಂದ ಹೊತ್ತಿದ್ದ ಮಂದರಪರ್ವತದಂತೆ, ಅವನು ಈಗ ಹೊತ್ತಿದ್ದ ಗೋವರ್ಧನಪರ್ವತವು ಕಾಣುತ್ತಿದ್ದಿತು ಎಂದು ಭಾವ.

೨. ಗೋವರ್ಧನಗಿರಿಯನ್ನು ಎತ್ತಿದ ಶ್ರೀಕೃಷ್ಣನು ಮಂದರಗಿರಿಯನ್ನು ಹೊತ್ತ ಪೂರ್ವ-ರೂಪದ ಶ್ರೀಹರಿಯೇ ಸರಿ ಎಂಬುದು ಆ ಪ್ರಸಂಗದಿಂದ ತಿಳಿಯುವಂತಿದ್ದಿತು ಎಂಬುದು ಇಲ್ಲಿಯ ಮತ್ತೊಂದು ಬಗೆಯ ಸೂಚನೆ; ಪುಷ್ಕರ - ಜಲ.

ನಾವೆಯಂತೆ ಕಂಡ ಗೋವರ್ಧನ

ಅನುಚಕ್ರೇಽಂಭಸಾಂಚಕ್ರೇ ಲಸತಾ ತೇನ ಭೂಭೃತಾ।
ತಿತೀರ್ಷೋರ್ವ್ರಜವರ್ಗಸ್ಯ ಶಮಿತೋಪಪ್ಲವಃ ಪ್ಲವಃ[೨] ॥ ೭ ॥

ಜಲರಾಶಿಯಲ್ಲಿ ಹೊಳೆಯುತ್ತಿದ್ದ ಆ ಬೆಟ್ಟವು ಜಲವನ್ನು ದಾಟಬಯಸಿದ ಗೋಪಜನರಿಗೆ [೩]ವೃಷ್ಟಿಯ ಆಘಾತವನ್ನು ಪರಿಹರಿಸಿದ ನಾವೆಯಂತೆ ಕಾಣುತ್ತಿದ್ದಿತು.

ವಿ.: ೧. ಗೋವರ್ಧನಗಿರಿಯು ಆ ಜಲಸಾಗರವನ್ನು ದಾಟಲು ಆ ಗೋಪಜನರ ಪಾಲಿಗೆ ನೌಕೆಯಂತೆ ಗೋಚರಿಸಿತು ಎಂದರ್ಥ.

೨. ಒಟ್ಟಾಗಿ ಆಪತ್ತನ್ನು ಪರಿಹರಿಸಿಕೊಳ್ಳಲು ಅದು ಸಾಧನವಾಯಿತು ಎಂಬುದು ಇಲ್ಲಿಯ ಮುಖ್ಯಭಾವ; ಉಪಪ್ಲವ - ಆಪತ್ತು; ಪ್ಲವ - ನಾವೆ.

---

೧. ಪೂರ್ಣೋಪಮಾ। ದೋಧಕವೃತ್ತಮ್। -ವ್ಯಾ.

೨. ಉಪಮಾಲಂಕಾರಃ। -ವ್ಯಾ.

೩. ವರ್ಷಾಕಾಲೇ ವೃಷ್ಟಿನಿವಾರಣಾಯ ಸ್ವೋಪರಿ ನಾರಿಕೇಲಪತ್ರಾದಿನಾ ಆದ್ರಿಶೃಂಗವತ್ಕೃತಗೃಹ ಇತ್ಯರ್ಥಃ। -ವ್ಯಾ.

**ಸಕಲರಿಗೂ ರಕ್ಷಣೆ ನೀಡಿದ ಗೋವರ್ಧನ**

**ಖಗಾನ್ ಸ ವೃಷ್ಟೇರ್ದ್ರುಮಕೋಟರೇಷು**
**ಮೃಗಾನ್ ಜುಗೋಪ ಸ್ವಗುಹಾಗೃಹೇಷು ।**
**ಮುನೀನ್ ಘನಾತ್ಯುಚ್ಚ್ರಿತಮೇಖಲಾಸು**
**ವಿಪತ್ಸು ಕಃ ಸ್ವೀಯಮುಪೇಕ್ಷತೇಽಗ್ರ್ಯಃ ॥ ೮ ॥**

ಆ ಪರ್ವತವು ತನ್ನ ಮರಗಳ ಪೊಟರೆಗಳಲ್ಲಿ ಪಕ್ಷಿಗಳನ್ನು, ತನ್ನಲ್ಲಿದ್ದ ಗುಹೆಗಳೆಂಬ ಮನೆಗಳಲ್ಲಿ ಮೃಗಗಳನ್ನು, ಮೇಘಕ್ಕಿಂತ ಎತ್ತರದಲ್ಲಿದ್ದ ತನ್ನ ತಪ್ಪಲುಗಳಲ್ಲಿ ಮುನಿಗಳನ್ನು ಸಂರಕ್ಷಿಸಿತು; ಶ್ರೇಷ್ಠನಾದ ಯಾವನು ತಾನೆ ಆಪತ್ಕಾಲದಲ್ಲಿ ತನ್ನವರನ್ನು ಉಪೇಕ್ಷಿಸಿಯಾನು?

ವಿ.: ೧. ಆ ಬೆಟ್ಟದ ಪೊಟರೆಗಳಲ್ಲಿ ಪಕ್ಷಿಗಳು, ಗುಹೆಗಳಲ್ಲಿ ಪ್ರಾಣಿಗಳು, ತಪ್ಪಲಿನಲ್ಲಿ ಮುನಿಗಳು ಸುರಕ್ಷಿತವಾಗಿ ನೆಲೆಸಿದರು ಎಂದರ್ಥ.

೨. ಆ ರಕ್ಷಣೆಯ ಕಾರ್ಯವನ್ನು ಬೆಟ್ಟವೇ ಮಾಡಿತು ಎಂದು ತಿಳಿಸುವ ಮೂಲಕ ಆಪತ್ಕಾಲದಲ್ಲಿ ತನ್ನವರನ್ನು ವಿವೇಕಿಯಾದವನು ಎಂದೂ ಕೈಬಿಡನು ಎಂಬ ಸಂದೇಶಕ್ಕೆ ಅನ್ವಯಿಸಿರುವರು.

೩. [೧]ಆಪತ್ಕಾಲದಲ್ಲಿ ತಮ್ಮವರನ್ನು ಸಂರಕ್ಷಿಸುವ ಹೊಣೆ ಹೊರುವುದು ಶ್ರೇಷ್ಠ ವ್ಯಕ್ತಿಗಳ ಸ್ವಭಾವ ಎಂಬ ತತ್ತ್ವವು ಇಲ್ಲಿದೆ; ಕೋಟರ – ಪೊಟರೆ.

**ರೋಮಾಂಚನಗೊಂಡಂತೆ ಕಂಡ ಗೋವರ್ಧನ**

**ಪ್ರಸೂನಕೋಶೈರ್ಘನವರ್ಷಪಾತ-**
**ನಿಪಾತಿತೈರಂಕಿತಸರ್ವಗಾತ್ರಃ[೨] ।**
**ಮುಕುಂದಹಸ್ತಾಂಬುಜಸಂಗಸೌಖ್ಯ-**
**ಪ್ರಹೃಷ್ಟರೋಮಾಲಿರಿವಾದ್ರಿರಾಸ್ತೇ ॥ ೯ ॥**

ಮೋಡಗಳಿಂದ ಸುರಿದ ಮಳೆಗೆ ಕೆಳಗುದುರಿದ ಹೂಮೊಗ್ಗುಗಳಿಂದ ಭೂಷಿತವಾದ ಸರ್ವ ಪ್ರದೇಶದ ಆ ಪರ್ವತವು ಶ್ರೀಕೃಷ್ಣನ ಕರಕಮಲದ ಸಂಪರ್ಕದಿಂದಾದ ನಲಿವಿನಿಂದ ರೋಮಾಂಚನಗೊಂಡಂತ್ತಿದ್ದಿತು.

ವಿ. : ಮಳೆಯಿಂದಾಗಿ ಬೆಟ್ಟಗಳಲ್ಲಿನ ಮರಗಳಲ್ಲಿನ ಹೂವುಗಳು ಅಪಾರವಾಗಿ ಸುರಿದು ಅದರಿಂದ ಮುಚ್ಚಿಹೋದ ಆ ಪರ್ವತವು ಶ್ರೀಕೃಷ್ಣನ ಕರಸ್ಪರ್ಶದಿಂದ ರೋಮಾಂಚನಗೊಂಡಂತೆ ಕಾಣುತ್ತಿದ್ದಿತು ಎಂದರ್ಥ; ಪ್ರಸೂನಕೋಶ – ಹೂಮೊಗ್ಗು.

---

೧. ಸ್ವಾಶ್ರಿತಪರಿಪಾಲನಮಗ್ರ್ಯಾಣಾಂ ಸಹಜಮಿತ್ಯರ್ಥಃ। -ವ್ಯಾ.
೨. ಅಂಕಿತಭೃಂಗಜಾಲ ಇತಿ ಪಾಠೇ ಸ್ಪಷ್ಟೋಽರ್ಥಃ। -ವ್ಯಾ.

### ಸಿಡಿಲು-ಮಳೆಗಳಿಗೆ ಕಂಪಿಸದ ಗೋವರ್ಧನ

ಸ ಭೂಧರಃ ಸಾಶನಿವರ್ಷಪಾತ-
ಸಮಾಹತೋಽಪ್ಯಣ್ವಪಿ ನೋ ಚಕಂಪೇ ।
ತಥಾ ಹಿ ಗೋಬ್ರಾಹ್ಮಣರಕ್ಷಕಸ್ಯ
ಕ್ವ ಕೃಷ್ಣದೋರ್ದಂಡಧೃತಸ್ಯ ಕಂಪಃ ॥ ೧೦ ॥

ಆ ಪರ್ವತವು ಸಿಡಿಲು ಮಳೆಗಳಿಂದ ಬಹಳವಾಗಿ ಅಪ್ಪಳಿಸಲ್ಪಟ್ಟರೂ ಸ್ವಲ್ಪವೂ ಕಂಪಿಸಲಿಲ್ಲ; ಅದು ಸರಿಯೇ; ಗೋಬ್ರಾಹ್ಮಣರನ್ನು ರಕ್ಷಿಸುವವನಿಗೆ; ಶ್ರೀಕೃಷ್ಣನ ಬಾಹುದಂಡದಿಂದ ಧರಿಸಲ್ಪಟ್ಟವನಿಗೆ ನಡುಕವೆಲ್ಲಿಯದು?

ವಿ. : ೧. ಗೋವರ್ಧನಗಿರಿಯು ಅಂತಹ ಸಿಡಿಲು ಮಳೆಗಳಿಗೂ ನಲುಗದೆ ಸುರಕ್ಷಿತವಾಗಿದ್ದಿತು ಎಂದು ಭಾವ; ಅಶನಿ – ಸಿಡಿಲು.

೨. ಅದರ ರಕ್ಷಣೆಯಲ್ಲಿ ಗೋಬ್ರಾಹ್ಮಣರು ನೆಲೆಸಿದ್ದರು; ಶ್ರೀಕೃಷ್ಣನಂತೂ ಅದನ್ನು ಕೈಯಲ್ಲೇ ಹಿಡಿದಿದ್ದ ಎಂದ ಮೇಲೆ ಅದಕ್ಕೇಕೆ ಕಂಪನ? ಅಂದರೆ [೧]ಗೋಬ್ರಾಹ್ಮಣರನ್ನು ರಕ್ಷಿಸುವವರಿಗೆ ಶ್ರೀಕೃಷ್ಣನ ರಕ್ಷಣೆ ಪಡೆದವರಿಗೆ ಎಂದೂ ಭಯವಿರದು ಎಂಬ ಸಂದೇಶ ಇಲ್ಲಿದೆ.

೩. 'ಅಭಯಂ' ಎಂಬುದು ದೈವೀಸಂಪತ್ತಿನ ಪ್ರಥಮಲಕ್ಷಣ ಎಂಬ ವಿಶೇಷಾಂಶ ಭಗವದ್ಗೀತೆಯಲ್ಲಿದೆ[೨].

### ಸಂಪುಟದಂತೆ ಕಂಡ ಗೋವರ್ಧನ

ಪಯಃಶ್ರಿತಸ್ವಪ್ರತಿಬಿಂಬಲೋಲಂ
ಪತತ್ಪ್ರಸೂನಾಂಚಿತಶೃಂಗಜಾಲಮ್ ।
ಸ್ವಕುಕ್ಷಿಮಧ್ಯಾರ್ಪಿತನಂದಬಾಲಂ
ಜನೋಽದ್ಭುತಂ ಸಂಪುಟಮಾಶಶಂಕೇ ॥ ೧೧ ॥

ನೀರಿನಲ್ಲಿ ಕಾಣುತ್ತಿದ್ದ ಮನೋಹರವಾದ ತನ್ನ ಪ್ರತಿಬಿಂಬ, ಮೇಲೆ ಉದುರಿಬೀಳುತ್ತಿದ್ದ ಪುಷ್ಪಗಳಿಂದ ಪೂಜಿತವಾದ ಶಿಖರಗಳ ಸಾಲು, ತನ್ನ ಒಡಲಲ್ಲಿ ನೆಲೆಸಿದ್ದ ನಂದನ ಕಂದನಾದ

---

೧. ಕ್ವ ಗೋವಿಪ್ರಪೂಜಕಸ್ಯ ಶ್ರೀಹರಿಭಕ್ತಸ್ಯ ಕಿಮಪಿ ಭಯಂ ನ ಭವತೀತಿ ಭಾವಃ। -ವ್ಯಾ.

೨. ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ಗೀತಾ (೧೬/೧)

ಮುಕುಂದ; ಇಂತಹ ಆ ಗೋವರ್ಧನಗಿರಿಯನ್ನು ಜನರು ಅದ್ಭುತವಾದ ಸಂಪುಟ ಎಂದೇ ತರ್ಕಿಸಿದರು.

ವಿ. : ೧. ನೀರಿನಲ್ಲಿ ಕಾಣುತ್ತಿದ್ದ ಗೋವರ್ಧನಗಿರಿಯ ಪ್ರತಿಬಿಂಬವು ಮಧ್ಯದಲ್ಲಿ ಕಂಗೊಳಿಸುತ್ತಿದ್ದ ಶ್ರೀಕೃಷ್ಣನಿಂದಾಗಿ ಸಂಪುಟದಂತೆ ಗೋಚರಿಸಿತು ಎಂಬ ಇಲ್ಲಿಯ ಕಾವ್ಯ ಅತ್ಯಂತ ರೋಚಕವಾದುದು.

೨. ಮೇಲಿನ ಪರ್ವತದ ಭಾಗ ಕೆಳಗಿನ ನೀರಿನಲ್ಲಿ ವಿರುದ್ಧರೀತಿಯಲ್ಲಿ [೧]ಪ್ರತಿಫಲಿಸುತ್ತಿದ್ದುದರಿಂದ ಅದು ಸಂಪುಟದಂತೆ ಕಾಣುತ್ತಿದ್ದಿತು ಎಂಬ ವರ್ಣನೆ ಔಚಿತ್ಯಪೂರ್ಣವಾದುದು.

೩. ಸಂಪುಟದೊಳಗೆ ಶ್ರೀಕೃಷ್ಣಪ್ರತಿಮೆ ಕಂಗೊಳಿಸುವಂತೆ ಅಂತಹ ಗೋವರ್ಧನಗಿರಿಯ ಮಧ್ಯದಲ್ಲಿ ಶ್ರೀಕೃಷ್ಣ ಕಂಗೊಳಿಸುತ್ತಿದ್ದ ಎಂಬ ಇಲ್ಲಿಯ ಕಲ್ಪನೆ ಅತ್ಯದ್ಭುತ.

೪. ಜಾಲ - ಸಮೂಹ; ಪಯಃಶ್ರಿತ - ನೀರೊಳಗಿನ ; ಪ್ರಸೂನ - ಹೂ ; ಶೃಂಗ - ಶಿಖರ; ಲೋಲ- ಮನೋಹರ.

ಸ್ವರ್ಗಗಗನಗಳನ್ನು ಕಬಳಿಸುವಂತೆ ಕಂಡ ಗೋವರ್ಧನ

**ತ್ರಿವಿಷ್ಟಪಾಭ್ರಪ್ರತಿರೂಪಧಾರೀ**
**ಸ ಪರ್ವತಃ ಸ್ಫಾಟಿಕತುಂಗಶೃಂಗೇ ।**
**ಹರೇರ್ನಿದೇಶಾದಪರಾಧಿಶಕ್ರ-**
**ಘನಾಲಯೌ ತೌ ಗ್ರಸತೀವ ಲೋಕೌ ॥ ೧೨ ॥**

ಸ್ಫಟಿಕಗಳಿಂದ ತುಂಬಿದ ತನ್ನ ಉನ್ನತಶಿಖರದಲ್ಲಿ, ಸ್ವರ್ಗ ಹಾಗೂ ಆಕಾಶಗಳ ಪ್ರತಿಬಿಂಬಗಳನ್ನು ಧರಿಸಿದ ಆ ಗೋವರ್ಧನಗಿರಿಯು ಶ್ರೀಹರಿಯ ಆದೇಶದಂತೆ ಅಪರಾಧಿಗಳಾದ ಇಂದ್ರ ಹಾಗೂ ಮೇಘಗಳಿಗೆ ನೆಲೆಯಾದ ಸ್ವರ್ಗ ಹಾಗೂ ಗಗನ ಎಂಬ ಆ ಎರಡು ಲೋಕಗಳನ್ನು ಕಬಳಿಸುತ್ತಿರುವಂತಿದೆ.

ವಿ.: ಗೋವರ್ಧನಗಿರಿಯು ತುಂಬಾ ಎತ್ತರವಾಗಿದ್ದ ಸಂಪದ್ಭರಿತವಾದ ಪರ್ವತ ಎಂಬುದನ್ನು ಹೀಗೆ ಉತ್ಪ್ರೇಕ್ಷೆಯ ಮೂಲಕ ತಿಳಿಸಿರುವರು; ತ್ರಿವಿಷ್ಟಪ - ಸ್ವರ್ಗ; ಅಭ್ರ - ಆಕಾಶ.

ಒಂದು ಅಪೂರ್ವ ಸಮಸ್ಯಾಪೂರ್ತಿ

**ಸ ಪರ್ಯಟತ್ಕುಂಜರಪುಂಜಶೋಭಂ**
**ಧರಂ ಯದಾ ಶ್ರೀಪತಿರುದ್ದಧಾರ ।**

---

೧. ಪ್ರತಿಫಲನಸ್ಯ ವೈಪರೀತ್ಯೇನ ಜಾಯಮಾನತ್ವಾತ್ಪ್ರತಿಬಿಂಬಸ್ಯ ಸಂಪುಟಪೂರ್ವಾರ್ಧತಾ ಉಪರಿಸ್ಥಿತಬಿಂಬಭೂತಸ್ಯ ಪರ್ವತಸ್ಯ ಉತ್ತರಾರ್ಧತೇತಿ ಸಂಪುಟತ್ವಮುಪಪದ್ಯತ ಇತಿ ಭಾವಃ। -ವ್ಯಾ.

ತದಾ ಸಮಸ್ಯಾಂ ಪರಿಪೂರಯಂತಿ
ಶಿಶೋಃ ಕರೇ ಹಸ್ತಿಸಹಸ್ರಮಸ್ತಿ[1] ॥ ೧೩ ॥

ಆ ಶ್ರೀಕೃಷ್ಣನು ಓಡಾಡುವ ಆನೆಗಳ ಹಿಂಡಿನ ಶೋಭೆಯಿಂದ ಕೂಡಿದ ಆ ಪರ್ವತವನ್ನು ಮೇಲೆತ್ತಿದಾಗ "ಶಿಶುವಿನ ಕೈಯಲ್ಲಿ ಸಾವಿರ ಆನೆಗಳಿವೆ" ಎಂಬ ಸಮಸ್ಯೆಯನ್ನು (ಕವಿಗಳು) ಪೂರ್ಣಗೊಳಿಸಿದರು.

ವಿ. : ೧. [2]ಶಿಶೋಃ ಕರೇ ಹಸ್ತಿಸಹಸ್ರಮಸ್ತಿ ಎಂಬುದು ಮೇಲ್ನೋಟಕ್ಕೆ ಒಪ್ಪಲಾಗದ ಒಗಟು. ಶ್ರೀಕೃಷ್ಣ ಗೋವರ್ಧನಗಿರಿಯನ್ನು ಎತ್ತಿದಾಗ ಅದು ಸಾವಿರಾರು ಆನೆಗಳ ಸೊಬಗನ್ನು ಹೊಂದಿದ್ದರಿಂದ ಆ ಸಮಸ್ಯೆಯನ್ನು ಪರಿಹರಿಸಲು ಕವಿಗಳಿಗೆ ಶಕ್ಯವಾಯಿತು ಎಂದರ್ಥ.

೨. ಸಾವಿರಾರು ಆನೆಗಳಿಂದ ಕೂಡಿದ್ದ ಗೋವರ್ಧನಪರ್ವತವನ್ನು ಶ್ರೀಕೃಷ್ಣ ಎತ್ತಿದ್ದ ಎಂಬ ಅರ್ಥವು ಸಹ ಇದಕ್ಕೆ ಉಚಿತವೆನ್ನಿಸುವುದು.

೩. ಅಚಿಂತ್ಯಾದ್ಭುತ ಶಕ್ತಿಸಂಪನ್ನನಾದ ಶ್ರೀಹರಿಗೆ ಅನ್ವಯಿಸುವಂತೆ ಚಿಂತಿಸಿದಾಗ ಎಂತಹ ಕಠಿನಸಮಸ್ಯೆಯೂ ಸಹ ಸುಲಭವಾಗಿ ಪರಿಹಾರವಾಗುವುದು ಎಂಬ ಸೂಚನೆಯು ಇಲ್ಲಿದೆ.

೪. ಇದೇ ರೀತಿಯಾಗಿ [3]ತೀರ್ಥಪ್ರಬಂಧದಲ್ಲಿ ಮೂಕಾಂಬಿಕೆಯನ್ನು ವರ್ಣಿಸುವ ಪ್ರಸಂಗ-ದಲ್ಲಿ, ಕಾತ್ಯಾಯನೀ ಕಂದುಕವದ್ವಿಭಾತಿ ಎಂಬುದಾಗಿ ಸಮಸ್ಯಾಪೂರ್ತಿಯ ಶ್ಲೋಕವು ಬಂದಿ-ರುವುದು ಗಮನಾರ್ಹ; ಕುಂಜರ – ಆನೆ; ಪುಂಜ – ಸಮೂಹ.

ಆದಿಶೇಷನ ಹೆಡೆಯ ಮೇಲಿನ ಭೂಮಿಯಂತಿದ್ದ ಗೋವರ್ಧನ

ಸ ಭಾಸುರಶ್ರೀಶಕಪೋಲಲಗ್ನ-
ನಖೋಲ್ಲಸದ್ರತ್ನಕರಾಗ್ರಸಂಸ್ಥಃ।
ಬಿಭರ್ತಿ ಕೂರ್ಮಾಶ್ರಿತನಾಗರಾಜ-
[4]ಫಣಾಸ್ಥಪೃಥ್ವೀಶ್ರಿಯಮದ್ರಿರಾಜಃ ॥ ೧೪ ॥

ಶ್ರೀಹರಿಯ ಹೊಳೆಯುವ ಕೆನ್ನೆಗೆ ತಾಗಿದ ನಖಗಳೆಂಬ ಹೊಳೆಯುವ ಉತ್ತಮ ರತ್ನಗಳ ಕೈಯ ತುದಿಯಲ್ಲಿ ನೆಲೆಸಿದ್ದ ಆ ಶ್ರೇಷ್ಠ ಪರ್ವತವಾದ ಗೋವರ್ಧನವು ಕೂರ್ಮನನ್ನು

---

೧. ಅನೇನ ವೃಷ್ಟ್ಯುಪರಮಃ ಸೂಚ್ಯತೇ। –ವ್ಯಾ.

೨. ಕವೀನಾಂ 'ಶಿಶೋಃ ಕರೇ ಹಸ್ತಿಸಹಸ್ರಮಸ್ತಿ' ಇತಿ ವಿಷಮಸಮಸ್ಯಾಪೂರಣಸ್ಯಾವಕಾಶೋ ಜಾತ ಇತ್ಯರ್ಥಃ। –ವ್ಯಾ.

೩. ಕ್ವಚಿತ್ ಪೃಥಿವ್ಯಾಂ ಪರಿತಶ್ಚರಂತೀ ನಭಃಸ್ಥಲಂ ಚಾಪಿ ಮುಹುರ್ವ್ರಜಂತೀ।
ವಿಪಕ್ಷವಿಧ್ವಂಸವಿಧೌ ಸ್ಫುರಂತೀ ಕಾತ್ಯಾಯನೀ ಕಂದುಕವದ್ವಿಭಾತಿ ॥ –ತೀರ್ಥಪ್ರಬಂಧ (೧/೫೭)

೪. ಸಹಸ್ರಮೂರ್ಧ್ನೋಽಸ್ಯ ಬತೈಕಮೂರ್ಧನಿ ಸಸಪ್ತಪಾತಾಲಗಿರೀಂದ್ರಸಾಗರಾ।
ಧರಾಽಖಿಲೇಯಂ ನನು ಸರ್ಷಪಾಯತಿ ಪ್ರಸಹ್ಯ ಕೋ ನಾಮ ಹರೇತ್ ತಮೇನಮ್ ॥–ಮ.ಭಾ.ತಾ.ನಿ.(೮/೮೮)

ಆಶ್ರಯಿಸಿದ ನಾಗರಾಜನಾದ ಶೇಷನ ಹೆಡೆಯ ಮೇಲಿರುವ ಭೂಮಿಯ ಕಾಂತಿಯನ್ನು ಹೊಂದಿತು.

ವಿ. : ೧. ಆ ಸಮಯದಲ್ಲಿ ಗೋವರ್ಧನಗಿರಿಯು ಶೇಷನ ಸಾವಿರ ಹೆಡೆಗಳಲ್ಲಿ ಒಂದು ಹೆಡೆಯ ಮೇಲೆ ಸಾಸಿವೆಕಾಳಿನಂತೆ ರಾರಾಜಿಸುವ ಭೂಮಿಯ ಕಾಂತಿಯನ್ನು ಹೊಂದಿತು ಎಂದರ್ಥ; ಭೂಮಿವನ್ನು ಹೊತ್ತು ಭೂಧರವೆನ್ನಿಸಿದ ಪರ್ವತವು ಭೂಮಿಯಂತೆ ಕಾಣಿಸಿತು ಎಂಬ ಇಲ್ಲಿಯ ಕಲ್ಪನೆ ಅತ್ಯಂತ ರೋಚಕವಾದುದು.

೨. ಇಲ್ಲಿ ಕೂರ್ಮಾಶ್ರಿತ ಎಂದರೆ ವಾಯುದೇವರ ಕೂರ್ಮರೂಪವನ್ನು ಆಶ್ರಯಿಸಿರುವ ಎಂದರ್ಥ.

೩. [1]ಈ ಕೆಳಗಿನ ಬೃಹದಾರಣ್ಯಕೋಪನಿಷದ್ಭಾಷ್ಯದ ವಿವರವನ್ನು ಈ ವಿವರಣೆಯು ಆಧರಿಸಿದೆ:

ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ॥
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ ।
ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ॥ - ವೈಭವೇ (ಬೃಹದ್ಭಾಷ್ಯ)

ಸ ಏಷ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ॥ ಇತಿ ಪ್ರಭಂಜನೇ ।
- (ಬೃಹದ್ಭಾಷ್ಯ)

ಕೂರ್ಮೋ ಬೃಹದಂಡವೋಢಾ । – ಮಹಾಭಾರತತಾತ್ಪರ್ಯನಿರ್ಣಯ (೩/೪೪)

೪. [2]ಪರ್ವತವನ್ನು ಮೇಲೆತ್ತಿದಾಗ ಶ್ರೀಕೃಷ್ಣನ ತೋಳು ಹಾವಿನ ಹೆಡೆಯಂತಹ ಕೈಯ ತುದಿಯನ್ನು ಹೊಂದಿದ್ದಿತು ಹಾಗೂ ಅವನ ಕೆನ್ನೆಗಳು ಕೂರ್ಮದಂತೆ ಇದ್ದಿತು ಎನ್ನುವ ಮೂಲಕ ಕೂರ್ಮನನ್ನು ಆಶ್ರಯಿಸಿದ ಶೇಷನ ಹೋಲಿಕೆಯನ್ನು ನೀಡಲಾಗಿದೆ.

೫. ತೋಳುಗಳನ್ನು ಹಾವಿಗೆ ಹೋಲಿಸಿರುವುದು ಇಲ್ಲಿಯ ವಿಶೇಷವು ಮಹಾಭಾರತ-ತಾತ್ಪರ್ಯನಿರ್ಣಯದಲ್ಲಿನ, ಅಥೋ ಹನೂಮಾನ್ ಉರಗೇಂದ್ರಭೋಗಸಮಂ ಸ್ವಬಾಹುಂ (೮/೭೭) ಎಂಬ ಮಾತುಗಳನ್ನು ಆಧರಿಸಿದೆ; 'ಭುಜಗಭೋಗಾಭಮುದ್ಯಮ್ಯಹೃದ್ಯಂ ನಿಜಭುಜಂ ದಕ್ಷಿಣಂ ಲಕ್ಷಣಾಢ್ಯಮ್ । ಲಲಿತಮುದ್ರಿಕವಿಜ್ಞಾನಮುದ್ರಂ ಭಜ ಭಜಾನಂತಮಿತ್ಯಾಲಪಂತಮ್। ಪ್ರಣತವಾನ್ ಪ್ರಾಣಿನಾಂ ಪ್ರಾಣಭೂತಂ ಪ್ರಣತಿಭಿಃ

---

೧. ಆವ ಕಚ್ಛಪರೂಪದಿಂದಲಂಡೋದಕದಿ ಓವಿ ಧರಿಸಿಹ ಶೇಷಮೂರುತಿಯನು ।-ಮಧ್ವನಾಮ (ಶ್ರೀಪಾದರಾಜರು)

೨. ಪರ್ವತೋದ್ಧರಣಸಮಯೇ ಫಣಾಸದೃಶಹಸ್ತಾಗ್ರಯುಕ್ತಬಾಹುಮೂಲಸ್ಯ ಕೂರ್ಮಸದೃಶಕಪೋಲಸಂಗತತ್ವಾ-ದ್ಬಾಹೋಃ ಕೂರ್ಮಾಶ್ರಿತಶೇಷೋಪಮಾ । -ವ್ಯಾ.
ಮೊದಲಸರ್ಗದಲ್ಲಿನ ಭೂಯಾತ್ ಕೂರ್ಮಸದೃಕ್ಷಗಂಡಯುಗಲಮ್(೧/೬) ಎಂಬಲ್ಲಿ ಕೂರ್ಮಕ್ಕೆ ಸರಸ್ವತೀ-ದೇವಿಯ ಕೆನ್ನೆಯನ್ನು ಹೋಲಿಸಲಾಗಿರುವುದು ಗಮನಾರ್ಹ.

ಪ್ರೀಣಯೇ ಪೂರ್ಣಬೋಧಮ್ ॥' ಎಂಬುದಾಗಿ ಶ್ರೀಪೂರ್ಣಬೋಧಸ್ತೋತ್ರದ ಮಾತೂ ಗಮನಾರ್ಹ.

೬. ಈ ಶ್ಲೋಕವು ಶ್ರೀಶೈಲ ಪರ್ವತವನ್ನು ವರ್ಣಿಸುವ ತೀರ್ಥಪ್ರಬಂಧದ ಈ ಕೆಳಗಿನ ಶ್ಲೋಕದಂತಿದೆ:

ಶ್ರೀಶೈಲಶಿಖರಾವಾಸೋ ಭಾತೀಶೋ ಮಲ್ಲಿಕಾರ್ಜುನಃ।
ಬದ್ಧಸ್ವೀಯಜಟಾಜೂಟಮಧ್ಯಸ್ಥ ಇವ ಚಂದ್ರಮಾಃ॥ - (೩/೩)

### ಆಗ್ನೇಯಾಸ್ತ್ರದಂತೆ ಕಂಡ ಗೋವರ್ಧನ

ಉದ್ಗಚ್ಛದೂಷ್ಮಾವಲಿಧೂಮಲಿಂಗ-
ಮದ್ರಿಂ ದ್ರವದ್ಧಾತುರಸಾರ್ದ್ರಶೃಂಗಮ್ ।
ವಿಷ್ವಕ್ತತದ್ರತ್ನಚಯಸ್ಫುಲಿಂಗ-
ಮಗ್ನ್ಯಸ್ತ್ರಮೀಶಾಚರಿತಂ ಪ್ರತರ್ಕೇ [೧] ॥ ೧೫ ॥

ಹೊರಹೊಮ್ಮುವ ಆವೆಗಳ ಪಂಕ್ತಿಗಳ ರೂಪದ ಧೂಮದ ಚಿಹ್ನೆಯಿಂದ ಕೂಡಿದ, ಕರಗಿದ ಧಾತುಗಳ ರಸದಿಂದ[೨] ನೆನೆದ ಶಿಖರಗಳ, ಸುತ್ತಲೂ ಚಿಮ್ಮುವ ರತ್ನಗಳ ಸಮೂಹವೆಂಬ ಕಿಡಿಗಳ, ಆ ಪರ್ವತವು ಶ್ರೀಕೃಷ್ಣನಿಂದ ಪ್ರಯೋಗಿಸಲ್ಪಟ್ಟ ಆಗ್ನೇಯಾಸ್ತ್ರವೆಂದು ನಾನು ಭಾವಿಸುವೆ.

ವಿ. : ೧. ಶ್ರೀಕೃಷ್ಣನ ಕೈಯಲ್ಲಿ ಹಿಡಿದ ಗೋವರ್ಧನಗಿರಿಯನ್ನು ಇಲ್ಲಿ ವೃಷ್ಟಿಯ ಪರಿಹಾರ-ಕ್ಕೆಂದು ಪ್ರಯೋಗಿಸಲ್ಪಟ್ಟ ಆಗ್ನೇಯಾಸ್ತ್ರ ಎಂದು ಉತ್ಪ್ರೇಕ್ಷಿಸಲಾಗಿದೆ.

೨. ಬೆಟ್ಟದಲ್ಲಿ ಮೇಲಾಭಾಗದಲ್ಲಿ ಚಿಮ್ಮುತ್ತಿದ್ದ[೩] ಆವೆಗಳೇ ಧೂಮ, ಅದರಿಂದ ಸಿಡಿಯು-ತ್ತಿದ್ದ ರತ್ನಗಳೇ ಅಗ್ನಿಯ ಕಿಡಿಗಳು ಎಂಬಲ್ಲಿನ ಇಲ್ಲಿಯ ಕಲ್ಪನೆ ಅತ್ಯಂತ ಮನೋಜ್ಞವಾದುದು.

೩. ಇಂದ್ರ ಸುರಿಸಿದ[೪] ಮಳೆ ವಾರುಣಾಸ್ತ್ರದಂತೆ ಇದ್ದರೆ, ಅದಕ್ಕೆ ಪ್ರತಿಯಾಗಿ ಶ್ರೀಕೃಷ್ಣ ಎತ್ತಿದ ಗೋವರ್ಧನಗಿರಿಯು ಅದಕ್ಕೆ ಪ್ರತ್ಯಸ್ತ್ರವಾದ ಆಗ್ನೇಯಾಸ್ತ್ರದಂತೆ ಇದ್ದಿತು ಎಂಬುದು ಇಲ್ಲಿಯ ವರ್ಣನೆಯ ಭಾವ.

---

೧. ಉತ್ಪ್ರೇಕ್ಷಾಲಂಕಾರಃ। -ವ್ಯಾ.
೨. ರಕ್ತಧಾತುರಸಾರ್ದ್ರತ್ವೇನ ಅಂಗಾರಸದೃಶಶೃಂಗವಂತಮಿತಿ ಭಾವಃ। -ವ್ಯಾ.
೩.. ಅಗ್ನೇರ್ಧೂಮಧ್ವಜತ್ವಾದಿತಿ ಭಾವಃ। -ವ್ಯಾ.
೪. ಅನೇನ ವೃಷ್ಟಿಃ ಸರ್ವಥಾ ಗತೇತಿ ಧ್ವನ್ಯತೇ। -ವ್ಯಾ.

## ಬಗೆಬಗೆಯ ಸೊಬಗಿನ ಗೋವರ್ಧನ

**ಅದ್ರಿಸ್ತಂ ಘನಮಿಂದ್ರನೀಲಧರಣೀಕಾಂತ್ಯಾ ಶಿಖಂಡಶ್ರಿಯಾ**
**ತಸ್ಯಾಖಂಡಲಚಾಪಮಂಬುನಿಚಯಂ ಮುಕ್ತಾಫಲಾನಾಂ ರುಚಾ ।**
**ಸೌವರ್ಣಸ್ಥಲಶೋಭಯಾ ಚ ತಟಿತಂ ಪಂಚಾಸ್ಯನಾದೇನ ತ-**
**ನ್ನಾದಂ ಸಾಧು ಜಿಗಾಯ ಕಿಂ ನ ಸುಕರಂ ನಿತ್ಯಂ [1]ಕ್ಷಮಾಧಾರಿಣಃ ॥ ೧೬ ॥**

ಆ ಗೋವರ್ಧನಗಿರಿಯು, ತನ್ನ ಇಂದ್ರನೀಲವರ್ಣದ ನೆಲದ ಕಾಂತಿಯಿಂದ ಆ ಮೇಘವನ್ನು, ತನ್ನಲ್ಲಿನ ಪಿಚ್ಛದ ಕಾಂತಿಯಿಂದ ಕಾಮನಬಿಲ್ಲನ್ನು, ತನ್ನಲ್ಲಿನ ಮೌಕ್ತಿಕದ ಕಾಂತಿಯಿಂದ ಅದರಲ್ಲಿನ ಜಲಸಮೂಹವನ್ನು, ಚಿನ್ನದಂತೆ ಶೋಭಿಸುವ ಭೂಪ್ರದೇಶದ ಕಾಂತಿಯಿಂದ ಮಿಂಚನ್ನು, ತನ್ನಲ್ಲಿನ ಸಿಂಹಗಳ ನಾದದಿಂದ ಅದರ ಗರ್ಜನೆಯನ್ನು ಬಹಳವಾಗಿ ಮೀರಿಸಿತು; ಸದಾ ಕ್ಷಮಾಶೀಲರಾದವರಿಗೆ ಯಾವುದು ತಾನೆ ಸುಕರವಲ್ಲ?

ವಿ. : ೧. ಶ್ರೀಕೃಷ್ಣನ ಕೈಯಲ್ಲಿ ಶೋಭಿಸಿದ ಆ ಗೋವರ್ಧನವು ಮೇಘವನ್ನು ಸಕಲ ಬಗೆಗಳಿಂದಲೂ ಮೀರಿಸಿತು ಎಂಬುದನ್ನು ಮನೋಜ್ಞವಾಗಿ ವರ್ಣಿಸಿರುವರು.

೨. [2]ಮೇಘದ ನೀಲವರ್ಣವನ್ನು ತನ್ನಲ್ಲಿನ ಇಂದ್ರನೀಲಮಣಿಯ ಕಾಂತಿಯಿಂದ, ಕಾಮನ- ಬಿಲ್ಲನ್ನು ತನ್ನಲ್ಲಿನ ನವಿಲುಗರಿಯ ಕಾಂತಿಯಿಂದ, ಜಲರಾಶಿಯನ್ನು ಮುತ್ತಿನ ಮಣಿಗಳ ಕಾಂತಿಯಿಂದ, ಮಿಂಚನ್ನು ಸುವರ್ಣದ ಕಾಂತಿಯಿಂದ, ಗುಡುಗನ್ನು ಸಿಂಹಗರ್ಜನೆಯಿಂದ ಮೀರಿಸಿತು ಎಂದು ಭಾವ; **ಅಂಬುನಿಚಯ**-ಜಲರಾಶಿ; **ಪಂಚಾಸ್ಯ**-ಸಿಂಹ; **ತಟಿತ್**-ಮಿಂಚು.

೩. [3]ಕ್ಷಮಾಧಾರಿ ಎಂಬಲ್ಲಿ ಪರ್ವತ ಹಾಗೂ ಕ್ಷಮಾಶೀಲ ಎಂಬ ಎರಡು ಅರ್ಥಗಳು ವಿವಕ್ಷಿತ. ಕ್ಷಮಾಧಾರಿಯಾದ ಪರ್ವತವು ಎಲ್ಲವನ್ನೂ ಮೀರಿಸುವುದು ಎಂಬುದು ಒಂದರ್ಥ-ವಾದರೆ [4]ಕ್ಷಮಾಶೀಲವಾದವರಿಗೆ ಸಕಲ ಕಾರ್ಯಗಳೂ ಸುಸಾಧ್ಯ ಎಂಬುದು ಇನ್ನೊಂದು ಅರ್ಥ; **ಶಿಖಂಡ** - ನವಿಲುಗರಿ; **ಆಖಂಡಲ** - ಇಂದ್ರ; **ಆಖಂಡಲಚಾಪ** - ಇಂದ್ರಚಾಪ, ಕಾಮನಬಿಲ್ಲು.

---

೧. ಕರ್ತಾ ಚ ಸರ್ವಜಗತಃ ಸುಖದುಃಖಯೋರ್ಹಿ ನಾರಾಯಣಸ್ತದನುದತ್ತಮಿಹಾಸ್ಯ ಸರ್ವಮ್ ।
ತಸ್ಮಾನ್ನ ಕೋಪವಿಷಯೋಽಸ್ತಿ ಕುತಶ್ಚ ಕಶ್ಚಿತ್ ತಸ್ಮಾತ್ ಕ್ಷಮೈವ ಸಕಲೇಷು ಪರೋಽಸ್ಯ ಧರ್ಮಃ ॥
-ಮ.ಭಾ.ತಾ.ನಿ.(೨೨/೬೮)

೨. ವೃಷ್ಟಿಃ ಸರ್ವಥಾ ಗತೇತಿ ಭಾವಃ । -ವ್ಯಾ.

೩. ನಿತ್ಯಮನವರತಂ ಕ್ಷಮಾಧಾರಿಣಃ ಭೂಧರಸ್ಯ ತಿತಿಕ್ಷಾವತ ಇತಿ ಧ್ವನಿಃ । -ವ್ಯಾ.

೪. ಕಿಂ ನ ಸುಕರಂ ''ಕ್ಷಮಯಾ ಕಿಂ ನ ಸಾಧ್ಯತೇ'' ಇತಿ ವಚನಾತ್ ಸರ್ವಂ ಸುಕರಮಿತ್ಯರ್ಥಃ । -ವ್ಯಾ.

೪. [೧]ಇಲ್ಲಿ ಉಪಮೆ, ಶ್ಲೇಷ ಹಾಗೂ ಅರ್ಥಾಂತರನ್ಯಾಸ ಎಂಬ ಮೂರು ಅಲಂಕಾರಗಳೂ ಇವೆ; ಒಟ್ಟಾಗಿ ಸಂಕರಾಲಂಕಾರ.

### ಪರಿಸ್ಥಿತಿಯನ್ನು ತಿಳಿದುಬರಲು ಶ್ರೀಕೃಷ್ಣನ ಆದೇಶ

**ನಿರ್ಗತ್ಯ ಪಶ್ಯತಾಟೋಪಃ ಕಿಮದ್ಯಾಪ್ಯಸ್ತಿ ವಾರ್ಮುಚಾಮ್ ।**
**[೨]ಇತ್ಯುಕ್ತಃ ಕೋಽಪಿ ಗೋಪಸ್ತದ್ವಿದಿತ್ವಾ ವಕ್ತಿ ಮಾಧವಮ್ ॥ ೧೭ ॥**

"ಮೇಘಗಳ ಆರ್ಭಟ ಇನ್ನೂ ಇದೆಯೇ? ನೋಡಿರಿ" ಎಂದು ಹೇಳಲ್ಪಟ್ಟ ಒಬ್ಬ ಗೋಪ ಅದನ್ನು ತಿಳಿದು ಬಂದು ಶ್ರೀಕೃಷ್ಣನಿಗೆ ಅರಿಕೆ ಮಾಡಿಕೊಂಡ.

ವಿ. : ವಾರ್ಮುಕ್ – ಮೇಘ.

### ಗೋವರ್ಧನೋದ್ಧರಣದ ಫಲಶ್ರುತಿ

**ಧಾರಾ ನೈವ ಪಯೋಮುಚಾಂ ಯದುಪತೇ ಪ್ರೇಮಾಶ್ರುಧಾರಾ ಪರಂ**
**ಸ್ವಾನಾಂ ನಾಪಿ ಚ ಗರ್ಜಿತಂ ಸ್ತುತಿಕೃತಾಂ ಸಿದ್ಧೇಶ್ವರಾಣಾಂ ಧ್ವನಿಃ ।**
**ವಿದ್ಯುನ್ನಾಮರನರ್ತಕೀಕರಚಯಾಲಂಕಾರಕಾಂತಿಃ ಪ್ರಭೋ**
**ನೋ ವಾಯುಃ ಸುರವೃಷ್ಟಪುಷ್ಪಸಹಗಾನಲ್ಪಾಲಿಪಕ್ಷೈರ್ಮರುತ್ [೩]॥ ೧೮ ॥**

"ಯದುಪತಿಯಾದ ಶ್ರೀಕೃಷ್ಣ ! ಮೇಘಗಳ ಜಲಧಾರೆ ಈಗಿಲ್ಲ; ಆದರೆ ಈಗಿರುವುದು ನಮ್ಮವರ ಆನಂದಾಶ್ರುವಿನ ಧಾರೆ ಮಾತ್ರ. ಮೇಘಗಳ ಗರ್ಜನೆಯೂ ಇಲ್ಲ; ಈಗ ಕೇಳುತ್ತಿರುವುದು ಸ್ತುತಿ ಮಾಡುವ ದೇವಶ್ರೇಷ್ಠರ ಧ್ವನಿ. ಮಿಂಚು ಸಹ ಇಲ್ಲ; ಇಲ್ಲಿಯದು ದೇವನರ್ತಕಿಯರ ಕರವೃಂದಗಳ ಅಲಂಕಾರದ ಕಾಂತಿ. ಸ್ವಾಮಿ! ಈಗ ಗಾಳಿಯೂ ಬೀಸುತ್ತಿಲ್ಲ; ದೇವತೆಗಳು ಸುರಿಸಿದ ಹೂವುಗಳ ಜೊತೆಯಿರುವ ಅನೇಕದುಂಬಿಗಳ ರೆಕ್ಕೆಗಳ ಗಾಳಿಯಷ್ಟೆ!

ವಿ. : ೧. ಮಳೆ, ಗುಡುಗು, ಮಿಂಚು ಹಾಗೂ ಗಾಳಿಗಳು ಸಂಪೂರ್ಣ ನಿಂತಿವೆ ಎಂಬುದನ್ನು ಕಾವ್ಯಮಯವಾಗಿ ನಿರೂಪಿಸುವ ಅಪೂರ್ವಶ್ಲೋಕ ಇದಾಗಿದೆ.

---

೧. ಇಂದ್ರನೀಲಧರಣೀಕಾಂತ್ಯೇತ್ಯಾದಿನಾ ಉಪಮಾಯಾಃ ಜಗಾಯೇತಿ ಕ್ರಿಯಾಪದಸ್ಯ ಪ್ರತ್ಯೇಕಂ ಸಂಬಂಧಾದ್ದೀಪಕಸ್ಯ ಕ್ಷಮಾಧಾರಿಣ ಇತಿ ಶ್ಲಿಷ್ಟಸ್ಯ ಚ ಕಿಂ ನ ಸುಕರಮಿತ್ಯರ್ಥಾಂತರನ್ಯಾಸಸ್ಯ ಚ ಗಮ್ಯಮಾನತ್ವಾದೇತೇಷಾಂ ಸಂಕರೋಽಲಂಕಾರಃ। –ವ್ಯಾ.

೨. ಖಂ ವ್ಯಭ್ರಮುದಿತಾದಿತ್ಯಂ ವಾತವರ್ಷಂ ಚ ದಾರುಣಮ್ ।
ನಿಶಾಮ್ಯೋಪರತಂ ಗೋಪಾನ್ ಗೋವರ್ಧನಧರೋಽಬ್ರವೀತ್ ॥ –ಭಾ.(೧೦/೨೩./೨೫)

೩.. ವಿನಿಮಯಾಲಂಕಾರಃ। –ವ್ಯಾ.

೨. [೧]ಮಳೆಯ ಜಾಗದಲ್ಲಿ ಆನಂದಾಶ್ರುವಿನ ಧಾರೆ, ಗುಡುಗಿನ ಬದಲು ದೇವಶ್ರೇಷ್ಠರ ಸ್ತೋತ್ರದ ಧ್ವನಿ, ಮಿಂಚಿನ ಬದಲು [೨]ದೇವನರ್ತಕಿಯರ ಕೈ ಬಳೆಗಳ ಆಭರಣಗಳ ಹೊಳಪು ಹಾಗೂ [೩]ದೇವತೆಗಳು ಆನಂದದಿಂದ ಸುರಿಸಿದ ಪುಷ್ಪವೃಷ್ಟಿಯತ್ತ ಸಾಗಿದ ದುಂಬಿಗಳ ಸಾಲಿನ ರೆಕ್ಕೆಗಳ ಗಾಳಿ ಎಂಬಲ್ಲಿನ ಕಾವ್ಯಸೌಂದರ್ಯ ಅತ್ಯಪೂರ್ವವಾದುದು.

೩.. [೪]ಸ್ತುತಿಸುವವರ ಸಂಖ್ಯೆ ಬಹಳ ಎಂಬುದನ್ನು ಮೇಘಗಳ ಗರ್ಜನೆ ಎಂಬುದರಿಂದಲೂ, ನರ್ತಿಸುವ ನರ್ತಕಿಯರ ಸಂಖ್ಯೆಯೂ ಸಹ ಅಗಾಧ ಎಂಬುದನ್ನು ಮಿಂಚು ಎಂಬುದರಿಂದಲೂ ಸುರಿಸಿದ ಪುಷ್ಪಗಳು ಅಸಂಖ್ಯ ಎಂಬುದನ್ನು ವೃಷ್ಟಿ ಎಂಬುದರಿಂದಲೂ ಸೂಚಿಸಿರುವ ಇಲ್ಲಿಯ ಕಾವ್ಯಧ್ವನಿ ಅತ್ಯಂತ ಅಪೂರ್ವವಾದುದು; ಪಯೋಮುಚಾಂ–ಮೇಘಗಳ; ಅಲಿ–ಭ್ರಮರ.

೪. ಅತ್ಯಂತ ದುಃಖದ ಸನ್ನಿವೇಶವು ಹಾಗೆ ದೇವತೆಗಳೂ ನಲಿಯುವಂತೆ ಆನಂದದ ಸನ್ನಿವೇಶವಾಗಿ ಬದಲಾದದ್ದು ಶ್ರೀಕೃಷ್ಣ ಮಹಿಮೆಯ ವೈಭವದ ಸಂಕೇತ.

### ಸ್ಥಾನಪಲ್ಲಟಗೊಂಡ ಕಪ್ಪು ಮೊದಲಾದವುಗಳು

**ನೀಲಂ ನೈವ ನಭಃ ಸುಲಜ್ಜಿತಶಚೀಭರ್ತುರ್ಮುಖೇ ನೀಲಿಮಾ**
**ಮೇಘಾಃ ಕ್ವಾಪಿ ನ ಸಂತಿ ಕಿಂತು ದಿವಿಜಭ್ರಾಜದ್ವಿಮಾನಾಂಬುದಾಃ।**
**ತಾಮಿಸ್ರಂ ನ ಹಿ[೫] ದಿಶ್ಯಥೇದೃಶಮಪಿ ತ್ವಾಂ ಮಾನುಷಂ ಮನ್ವತಾಂ**
**ಚಿತ್ತೇಷ್ವಸ್ತಿ ನ ವೇಪಥುರ್ನಿಜಜನೇ ಭೀತೇಂದ್ರಗಾತ್ರೇ ಪರಮ್ ॥ ೧೯ ॥**

ಗಗನವೇನೂ ಕಪ್ಪಾಗಿಲ್ಲ; ಬಹಳ ನಾಚಿರುವ ಶಚೀಪತಿಯಾದ ಇಂದ್ರನ ಮುಖದಲ್ಲಿ ಕಪ್ಪು ತುಂಬಿದೆ. ಮೋಡಗಳು ಎಲ್ಲೂ ಇಲ್ಲ; ಆದರೆ ದೇವತೆಗಳ ಹೊಳೆಯುವ ವಿಮಾನಗಳೆಂಬ ಮೋಡಗಳಿವೆ. ದಿಕ್ಕುಗಳಲ್ಲಿ ಕತ್ತಲೆಯೂ ಇಲ್ಲ; ಆದೀಗ ಇಂತಹ ನಿನ್ನನ್ನು ಈಗಲೂ ಮನುಷ್ಯ ಎಂದು (ತಪ್ಪು)ತಿಳಿದ ಮೂರ್ಖರ ಮನಸ್ಸನ್ನು ಹೊಕ್ಕಿದೆ. ನಿನ್ನವರಲ್ಲಿ ನಡುಕವೂ ಇಲ್ಲ; ಭಯಪಟ್ಟಿರುವ ಇಂದ್ರನ ದೇಹವನ್ನು ಅದು ಹೊಕ್ಕಿದೆ.

ವಿ. : ೧. ಮೋಡಗಳಿಂದಾಗಿ ಆಕಾಶವು ಕಪ್ಪಾಗಿ, ಕತ್ತಲೆ ಎಲ್ಲೆಡೆ ಕವಿದು, ಜಲಧಾರೆಗೆ ಅಂಜಿದ ಗೋಗೋಪರಲ್ಲಿ ನಡುಕ ಹುಟ್ಟಿತ್ತು. ಆದರೆ ಶ್ರೀಕೃಷ್ಣನ ಅಪೂರ್ವ ರಕ್ಷಣೆಯಿಂದಾಗಿ ಅವೆಲ್ಲಾ ಪರಿಹಾರವಾಗಿವೆ ಎಂದು ಇಲ್ಲಿ ಮನೋಜ್ಞವಾಗಿ ವರ್ಣಿಸಿರುವರು.

---

೧. ವೃಷ್ಟಿರ್ಗತಾ, ತತ ಉದ್ವೇಜಿತಾನಾಂ ಸ್ವಕೀಯಾನಾಂ ಆನಂದೋ ಜಾತ ಇತಿ ಭಾವಃ। –ವ್ಯಾ.
೨. ನೃತ್ಯಸಮಯೇ ಇತಸ್ತತೋ ಹಸ್ತವಿಕ್ಷೇಪಾದಲಂಕಾರಕಾಂತೇರ್ವಿದ್ಯುದ್ವಚ್ಚಲನಾದಿತಿ ಭಾವಃ। –ವ್ಯಾ.
೩.. ದೇವೈರ್ಬಹುತರಪುಷ್ಪವೃಷ್ಟಿಃ ಕೃತೇತ್ಯರ್ಥಃ। –ವ್ಯಾ.
೪. ಮೇಘಾಟೋಪಃ ಸರ್ವೋಽಪಿ ಗತಃ ಸ್ವಕೀಯಾನಾಂ ದೇವಾದೀನಾಂ ಸಂತೋಷೋ ಜಾತ ಇತೀಮಮರ್ಥಂ ಭಂಗ್ಯಂತರೇಣ ವದತೋ ಗೋಪಸ್ಯ ಪ್ರಾಗಲ್ಭ್ಯಾತಿಶಯಃ ಕಥಂ ಕಥನೀಯ ಇತಿ ಭಾವಃ –ವ್ಯಾ.
೫. ಹಿ ಶಬ್ದೋ ವಾಕ್ಯಾಲಂಕಾರೇ। –ವ್ಯಾ.

೨. [೧]ಇಂದ್ರನ ಮುಖದಲ್ಲಿ ಕಪ್ಪು ಎಂದರೆ ನಾಚಿಕೆಯಿಂದ ಕಳೆಗುಂದುವಿಕೆ; ಆಕಾಶದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಕಾಣಲೆಂದು ಧಾವಿಸಿದ ವಿಮಾನಗಳು ಮೋಡಗಳಂತೆ ಕಾಣುತ್ತಿವೆಯೇ ಹೊರತು[೨] ಅವು ಮೋಡಗಳಲ್ಲ ಎಂಬ ನಿರೂಪಣೆ. ಕತ್ತಲೆ ಎಂದರೆ ಅಜ್ಞಾನ ಹಾಗೂ ಮಿಥ್ಯಾಜ್ಞಾನ, ಅದು ಕೃಷ್ಣನನ್ನು ಈಗಲೂ ಸಹ ಮನುಷ್ಯ ಎಂದು ತಿಳಿಯುವವರ ಮನಸ್ಸನ್ನು ಹೊಕ್ಕಿದೆ. ಗೋಗೋಪರ ನಡುಕವೆಲ್ಲಾ ಈಗ ಶ್ರೀಕೃಷ್ಣನಿಗೆ ಅಪಚಾರವೆಸಗಿದ ಇಂದ್ರದೇವರ ಮೈಯಲ್ಲಿ ತುಂಬಿದೆ ಎಂಬ ಮಾತಿನಲ್ಲಿ ಇಂದ್ರನ ಪರಾಭವ ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ (ವಾಕ್ಯಾಲಂಕಾರ); ಅಂಬುದ - ಮೇಘ; ವೇಪಥು - ನಡುಕ; ಗಾತ್ರ - ಶರೀರ.

### ವೃಂದಾವನಕ್ಕೆ ಮರಳಿದ ಶ್ರೀಕೃಷ್ಣ

ತತಃ ಪರೀತಃ ಸ್ವೈರ್ಗೋಪೈರ್ಗೋಪೀಭಿರ್ಗೋಧನೈರಪಿ ।
[೩]ಪ್ರತಸ್ಥೇ ಪ್ರಯತಂ ಗೋಷ್ಠಂ ಸ್ತೂಯಮಾನಃ ಸುರೈರ್ನರೈಃ ॥ ೨೦ ॥

ಆ ಬಳಿಕ ತನ್ನ ಗೋಪರಿಂದಲೂ, ಗೋಪಿಯರಿಂದಲೂ, ಹಾಗೂ ಗೋರೂಪ ಧನ-ದಿಂದಲೂ ಕೂಡಿಕೊಂಡು ಶ್ರೀಕೃಷ್ಣ ಸುರರಿಂದಲೂ ನರರಿಂದಲೂ ಸ್ತುತಿಸಲ್ಪಡುತ್ತಾ ಪವಿತ್ರವಾದ ಗೋವ್ರಜಕ್ಕೆ ತೆರಳಿದ; (ಗೋಷ್ಠ - ಹಟ್ಟಿ).

### ಇಂದ್ರ ನಡೆಸಿದ ಶ್ರೀಕೃಷ್ಣಾಭಿಷೇಕ

ನಾಥಾಪರಾಧಕೃದುಪೇತ್ಯ ಸುಲಜ್ಜಿತೋಽಥೋ
[೪]ಶಕ್ರೋಽಚ್ಯುತಂ ರಹಸಿ ರಮ್ಯತಮಂ ತ್ರಿಲೋಕ್ಯಾಮ್ ।
ಮೂರ್ಧ್ನಾ ಪ್ರಣಮ್ಯ ಸದಯಂ ಸುಧಯಾಽಭ್ಯಷಿಂಚ-
ದ್ಗೋವಿಂದನಾಮ ಚ ಪಠನ್ ಸ್ವಕೃತಾಘಶಾಂತ್ಯೈ ॥ ೨೧ ॥

---

೧. ಶಚೀಭರ್ತುರಿತ್ಯನೇನ ಅಭಿಮಾನಿನಾಂ ಸ್ತ್ರೀಸಮಕ್ಷಂ ಜಾತಃ ಪರಾಭವೋ ಅತಿಲಜ್ಜಾಕರ ಇತಿ ಧ್ವನ್ಯತೇ । -ವ್ಯಾ.

೨. ನಭಸ್ತು ಇಂದ್ರಜಯಾದಿಮಾಹಾತ್ಮ್ಯಂ ದೃಷ್ಟ್ವಾ ಕೃಷ್ಣದರ್ಶನಾಯಾಗತಾನಾಂ ದೇವಾನಾಂ ಪುಷ್ಪಕೈಃ ಸಂಕುಲಂ ದೃಶ್ಯತ ಇತ್ಯರ್ಥಃ । -ವ್ಯಾ.

೩.. ಭಗವಾನಪಿ ತಂ ಶೈಲಂ ಸ್ವಸ್ಥಾನೇ ಪೂರ್ವವತ್ ಪ್ರಭುಃ ।
ಪಶ್ಯತಾಂ ಸರ್ವಭೂತಾನಾಂ ಸ್ಥಾಪಯಾಮಾಸ ಲೀಲಯಾ ॥ -ಭಾಗ.(೧೦/೨೫./೨೮)
ಯಃ ಸಪ್ತಹಾಯನೋ ಬಾಲಃ ಕರೇಣೈಕೇನ ಲೀಲಯಾ ।
ಕಥಂ ಬಿಭ್ರದ್ ಗಿರಿವರಂ ಪುಷ್ಕರಂ ಗಜರಾಡಿವ ॥ -ಭಾಗ.(೧೦/೨೬/೩.)

೪. ಇಂದ್ರಃ ಸುರರ್ಷಿಭಿಃ ಸಾಕಂ ಚೋದಿತೋ ದೇವಮಾತೃಭಿಃ ।
ಅಭ್ಯಷಿಂಚತ ದಾಶಾರ್ಹಂ ಗೋವಿಂದ ಇತಿ ಚಾಭ್ಯಧಾತ್ ॥ -ಭಾಗ.(೧೦/೨೭/೨೩.)

ಬಳಿಕ ಸ್ವಾಮಿಗೆ ದ್ರೋಹ ಬಗೆದ ದೇವೇಂದ್ರ ಬಹಳ ನಾಚಿದವನಾಗಿ, ಏಕಾಂತದಲ್ಲಿ ಅವನ ಬಳಿಗೆ ತೆರಳಿದ; ಮೂರು ಲೋಕಗಳಲ್ಲೂ ಮನೋಹರನೂ, ದಯಾಳುವೂ ಆದ ಅವನಿಗೆ ತಲೆಬಾಗಿ ವಂದಿಸಿದ; ತನ್ನ ಪಾಪದ ಪರಿಹಾರಕ್ಕಾಗಿ, ಗೋವಿಂದ ಎಂಬ ಹೆಸರನ್ನು ಪಠಿಸಿದ, ಅವನಿಗೆ ಅಮೃತದಿಂದ ಅಭಿಷೇಕ ಮಾಡಿದ.

ವಿ. : ೧. ಗೋಗೋಪರನ್ನು ನಾಶಪಡಿಸುವ ತನ್ನ ಪ್ರಯತ್ನ ಶ್ರೀಕೃಷ್ಣನಿಂದ ಹಾಗೆ ವಿಫಲವಾಗಲು, ಬಹಳವಾಗಿ ನಾಚಿದ ಇಂದ್ರನು ಶ್ರೀಕೃಷ್ಣನ ಬಳಿಗೆ ಧಾವಿಸಿ, ತನ್ನ [೧]ಅಪರಾಧವನ್ನು ಮನ್ನಿಸಲು ಬಗೆಬಗೆಯಾಗಿ ಪ್ರಾರ್ಥಿಸಿಕೊಂಡ ಎಂಬುದು ಇಲ್ಲಿಯ ಮುಖ್ಯಭಾವ.

೨. ತನ್ನ ಪಾಪದ ಪರಿಹಾರಕ್ಕಾಗಿ ನಮಸ್ಕಾರ, ಅಭಿಷೇಕ ಹಾಗೂ ನಾಮಸ್ಮರಣೆಗಳನ್ನು ಮಾಡುವ ಮೂಲಕ ಇಂದ್ರನು ಪಾಪಪರಿಹಾರಕ್ಕೆ ಅವು ಶ್ರೇಷ್ಠವಾದ ಉಪಾಯ ಎಂಬ ತತ್ತ್ವವನ್ನೂ ಆ ಮೂಲಕ ಜಗತ್ತಿಗೆ ಸಾರಿದ ಎಂದು ತಿಳಿಯಬಹುದು.

೩. [೨]ಗೋವಿಂದ[೩] ಎಂಬುದು ಅಚ್ಯುತ, ಅನಂತ ಹಾಗೂ ಗೋವಿಂದ ಎಂಬ ಶ್ರೀಹರಿಯ ನಾಮತ್ರಯಗಳಲ್ಲಿ ಮೂರನೆಯದು. ಆ ನಾಮದ ಪಠಣೆಯಿಂದ ಸಕಲ ಪಾಪಗಳೂ ಕರ್ಮಲೋಪಾದಿದೋಷಗಳೂ [೪]ಪರಿಹಾರವಾಗುವವು ಎಂಬುದು ಶಾಸ್ತ್ರಗಳ ನಿರೂಪಣೆ (ಕೃಷ್ಣಾಮೃತಮಹಾರ್ಣವ -೨೦೬):

> ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ।
> ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥

೪. ಇಂದ್ರನು 'ಗೋವಿಂದ' ಎಂಬ ಹೆಸರನ್ನು ಉಚ್ಚರಿಸಿದ ಈ ಪ್ರಸಂಗವು ಹಿಂದೆ ನಾಮಕರಣ ಕಾಲದಲ್ಲಿ ಗರ್ಗಾಚಾರ್ಯರು ಕೃಷ್ಣನಾಮವನ್ನು ಉಚ್ಚರಿಸಿದ ಪ್ರಸಂಗದಂತಿದೆ(ರು.ವಿ.೩./೧೯).

### ವರುಣನಿಂದಾದ ನಂದನ ಬಂಧನ

> ಬದ್ಧ್ವಾ ನಿನಾಯ ಕಿಲ ನಂದಮಕಾಲವಾರಿ-
> ಮಧ್ಯಪ್ರವಿಷ್ಟಮನುಗಃ ಸಲಿಲೇಶ್ವರಸ್ಯ ।

---

೧. ವಿಷ್ಣುಪ್ರಣಾಮಾಭಿಷೇಕನಾಮೋಚ್ಚಾರಣಾನಾಂ ಮಹಾಪಾಪಪರಿಹಾರಹೇತುತ್ವಂ ವಿಷ್ಣುದ್ರೋಹಸ್ಯ ಮಹಾಪಾತಕತ್ವಂ ಚಾನೇನ ದ್ಯೋತ್ಯತೇ । -ವ್ಯಾ.

೨. ಇಂದ್ರೇಣ ಗೋವಿಂದನಾಮ ನ ದತ್ತಂ ಕಿಂತು ಅಚ್ಯುತಾನಂತಗೋವಿಂದೇತಿ ನಾಮತ್ರಯಪಾಠಸ್ಯ ಪ್ರಾಯಶ್ಚಿತ್ತವಿಧಿಷು ವಿಹಿತತ್ವಾತ್ಪೂರ್ವಂ ವಿದ್ಯಮಾನಸ್ಯೈವ ಗೋವಿಂದನಾಮ್ನಃ ಪಾಠ ಏವ ಕೃತ ಇತಿ ಭಾವಃ । -ವ್ಯಾ.

೩. ಗೋವಿಂದಮೇನಮಭಿಷಿಚ್ಯ ಸ ಗೋಗಣೇಶೋ ಗೋಭಿರ್ಜಗಾಮ ಗುಣಪೂರ್ಣಮಮುಂ ಪ್ರಣಮ್ಯ ।
ಗೋಪೈರ್ಗಿರಾಂ ಪತಿರಪಿ ಪ್ರಣತೋಽಭಿಗಮ್ಯ ಗೋವರ್ಧನೋದ್ಧರಣಸಂಗತಸಂಶಯೈಃ ಸಃ ॥
- ಮ.ಭಾ.ತಾ.ನಿ. (೧೩./೭೦)

೪. ಅನೇನ ಶ್ರೀಕೃಷ್ಣಸ್ಯ ಗೋವಿಂದನಾಮೇಂದ್ರೇಣ ದತ್ತಮಿತಿ "ಅಭ್ಯಷಿಂಚತ ದಾಶಾರ್ಹಂ ಗೋವಿಂದ ಇತಿ ಚಾಭ್ಯಧಾತ್" । ಭಾಗ.(೧೦/೨೭/೨೩.) ಪುರಾಣವಚನಸ್ಯ ತಾತ್ಪರ್ಯಮುಕ್ತಂ ಭವತಿ । -ವ್ಯಾ.

ಭೃತ್ಯಚ್ಛಲೇನ ಸ ಸಮನ್ಯುರಮುಂ ಬಬಂಧ
ಶ್ರುತ್ವಾ ಸ್ವನಾಥಪಿತರಂ ತ್ವಿತಿ ಮೇ ಪ್ರತರ್ಕಃ ॥ ೨೨ ॥

ಅಕಾಲದಲ್ಲಿ ಯಮುನೆಯ ಮಧ್ಯೆ ಪ್ರವೇಶಿಸಿದ ನಂದನನ್ನು ಜಲದೊಡೆಯನಾದ ವರುಣನ ಭೃತ್ಯನು ಬಂಧಿಸಿ, ಎಳೆದೊಯ್ದ; ತನ್ನ ಸ್ವಾಮಿಯಾದ ಶ್ರೀಹರಿಗೆ ತಂದೆ ಎನ್ನಿಸಿಕೊಂಡದ್ದನ್ನು ಕಂಡು, ಕೋಪಗೊಂಡ ವರುಣನು ಭೃತ್ಯನ ನೆಪದಲ್ಲಿ ಅವನನ್ನು ತಾನೇ ಬಂಧಿಸಿದ ಎಂದು ನನ್ನ ಬಲವಾದ ಊಹೆ.

ವಿ. : ೧. ಒಮ್ಮೆ ಸಾಧನದ್ವಾದಶಿಯಂದು ನಂದಗೋಪ ಅಕಾಲದಲ್ಲಿ ಯಮುನೆಯಲ್ಲಿ ಸ್ನಾನಕ್ಕೆಂದು ತೆರಳಿದ್ದಾಗ ಅವನನ್ನು ವರುಣನ ಭೃತ್ಯನೊಬ್ಬನು ಬಂಧಿಸಿ ವರುಣಲೋಕಕ್ಕೆ ಕರೆದೊಯ್ದ ಎಂಬುದು [೧] ಶ್ರೀಮದ್ಭಾಗವತದಲ್ಲಿ ಬಂದಿರುವ ಪ್ರಸಂಗ[೨].

೨. ಆ ರೀತಿಯ ಬಂಧನಕ್ಕೆ ಮುಖ್ಯಕಾರಣ ಜಗದೊಡೆಯನಾದ ಶ್ರೀಕೃಷ್ಣನಿಗೆ ತಾನು ತಂದೆ ಎಂಬ ನಂದಗೋಪನ ಭ್ರಮೆ ಎಂಬುದು ಇಲ್ಲಿಯ ತತ್ತ್ವ ; ಸಲಿಲೇಶ್ವರ – ವರುಣ.

೩. ತನ್ನ ಸ್ವಾಮಿಯಾದ ಶ್ರೀಕೃಷ್ಣನಿಗೆ ಅಂತಹ ಅಪಚಾರಮಾಡಿದ ನಂದಗೋಪನನ್ನು ಸಾಕ್ಷಾತ್ ವರುಣನೇ ತನ್ನ ಭೃತ್ಯನ ನೆಪದಲ್ಲಿ ಬಂಧಿಸಿದ ಎಂಬುದು ಇಲ್ಲಿಯ ಕಾವ್ಯನಿರೂಪಣೆ.

೪. ಶ್ರೀಕೃಷ್ಣನನ್ನು ಹೀಗೆ ಇತರರ ಪುತ್ರ ಎಂದು ತಪ್ಪಾಗಿ ಭಾವಿಸುವುದು ಭವಬಂಧನಕ್ಕೆ ಕಾರಣವಾಗುವಂತಹ ದೊಡ್ಡ ಅಪಚಾರ ಎಂಬುದು ಇಲ್ಲಿಯ ಸಂದೇಶ.

೫. [೩] ವರುಣ, ಶ್ರೀಕೃಷ್ಣನು ಸಾಕ್ಷಾತ್ ಶ್ರೀಹರಿ ಎಂಬುದನ್ನು ನಂದನಿಗೆ ತಿಳಿಸಿದ ಎಂಬ ವಿಶೇಷಾಂಶವು ಗಮನಾರ್ಹ.

೬. ಇಲ್ಲಿಯ ನಂದನ ಅಕಾಲ ಸಂಚಾರವು [೪] ಸುಮಧ್ವವಿಜಯದಲ್ಲಿನ ಮಧ್ಯಗೇಹ ದಂಪತಿಗಳು ಉಡುಪಿಯಿಂದ ಮಧ್ಯರಾತ್ರಿಯಲ್ಲಿ ಪಾಜಕಕ್ಷೇತ್ರಕ್ಕೆ ತೆರಳಿದ ಪ್ರಸಂಗದಂತಿದೆ. ಅಲ್ಲಿ ಅದರಿಂದ ಬಾಲಮಧ್ವರು ವಾಯುದೇವರ ಅವತಾರ ಎಂಬ ಪ್ರಮೇಯ ಸ್ಫುಟವಾದರೆ, ಈ

---

೧. ಕಿಲೇತ್ಯನೇನ ಕಥಾಯಾಃ ಪೌರಾಣಕತ್ವಮಭಿಪ್ರೈತಿ (ಭಾಗ.೧೦/೨೮) । –ವ್ಯಾ.

೨. ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಮ್ ।
ಸ್ನಾತುಂ ನಂದಸ್ತು ಕಾಳಿಂದ್ಯಾ ದ್ವಾದಶ್ಯಾಂ ಜಲಮಾವಿಶತ್ ॥
ತಂ ಗೃಹೀತ್ವಾऽನಯದ್ ಭೃತ್ಯೋ ವರುಣಸ್ಯಾಸುರೋऽಂತಿಕಮ್ ।
ಅವಿಜ್ಞಾಯಾಸುರೀಂ ವೇಲಾಂ ಪ್ರವಿಷ್ಟಮುದಕಂ ನಿಶಿ ॥ –ಭಾಗ.(೧೦/೨೬/೧,೨)

೩.. ನಂದಂ ಯದಾ ಚ ಜಗೃಹೇ ವರುಣಸ್ಯ ದೂತಸ್ತತ್ರಾಪಿ ಮಾಂ ಜಲಪತೇರ್ಗೃಹಮಾಶು ಯಾಂತಮ್ ।
ಸಂಪೂಜ್ಯ ವಾರಿಪತಿರಾಹ ವಿಮುಚ್ಯ ನಂದಂ ನಾಯಂ ಸುತಸ್ತವ ಪುಮಾನ್ ಪರಮಃ ಸ ಏಷಃ ॥
–ಮ.ಭಾ.ತಾ.ನಿ.(೧೪/೧೧೦)

೪. ಆವಿಶ್ಯ ಪೂರುಷಮುವಾಚ ಮಹಾಗ್ರಹೋऽಸಾವಸ್ಮದ್ವಿಹಾರಸಮಯೋಪಗತಾನ್ ಸಮಸ್ತಾನ್ ।
ಯಚ್ಛಕ್ತಿಗುಪ್ತಿರಹಿತಾನಲಮಸ್ಮಿ ಹಂತುಂ ಲೋಕೇಶ್ವರಃ ಸ ಬತ ಬಾಲತಮಃ ಕಿಲೇತಿ ॥ –ಸು.ವಿ.(೨/೩.೪)

ಪ್ರಸಂಗದಲ್ಲಿ ನಂದನಿಗೆ ಶ್ರೀಕೃಷ್ಣ ಶ್ರೀಹರಿಯ ಅವತಾರ ಎಂಬುದು ಸ್ಫುಟವಾಯಿತು ಎಂಬುದು ವಿಶೇಷ.

ಕೃಷ್ಣನಿಂದ ನಂದಮೋಚನ

ಕೃಷ್ಣೋಽಪಿ ವೀಕ್ಷ್ಯ ದೃಢಭಕ್ತಿಮಿವ ಪ್ರತುಷ್ಟಃ
ಕೃತ್ಯಚ್ಛಲೇನ ನಿಜದರ್ಶನಮೇವ ದಿತ್ಸನ್ ।
ಗತ್ವಾಽಂಬುರಾಶಿನಿಲಯಂ ಜನಕೇನ ಸಾಕ-
ಮಭ್ಯರ್ಚಿತಃ ಸ್ವಭವನಂ ಪುನರಾಜಗಾಮ ॥ ೨೩ ॥

ಕೃಷ್ಣನೂ ಸಹ ವರುಣನ ದೃಢವಾದ ಭಕ್ತಿಯನ್ನು ಕಂಡು, ತುಂಬಾ ಸಂತೋಷಪಟ್ಟವನಂತೆ ಕಾರ್ಯನಿಮಿತ್ತದಿಂದ ತನ್ನ ದರ್ಶನ ನೀಡಲೆಂದು ವರುಣನ ಮನೆಗೆ ತೆರಳಿ, ಬಹಳವಾಗಿ ಅವನಿಂದ ಪೂಜಿತನಾಗಿ, ತಂದೆಯಾದ ನಂದಗೋಪನೊಂದಿಗೆ ಪುನಃ ತನ್ನ ಮನೆಗೆ ಮರಳಿದ.

ವಿ. : ೧. ಮೇಲ್ನೋಟಕ್ಕೆ ಶ್ರೀಕೃಷ್ಣನು ನಂದಗೋಪನ ಬಿಡುಗಡೆಗೆಂದು ವರುಣಲೋಕಕ್ಕೆ ಧಾವಿಸಿದ ಎಂದು ಕಾಣುವುದು ; ವಾಸ್ತವವಾಗಿ ವರುಣ ಮಾಡಿದ ತನ್ನ ಅಪೂರ್ವಸೇವೆಗೆ ಮೆಚ್ಚಿದ ಶ್ರೀಕೃಷ್ಣ ಅವನಿಗೆ ಅದರ ಪ್ರತಿಫಲವನ್ನಾಗಿ ತನ್ನ ದರ್ಶನವನ್ನೇ ಅನುಗ್ರಹಿಸಿದ ಎಂಬುದು ಅಂತರಾರ್ಥ.

೨. ಹೀಗೆ ತನ್ನ ಬಗ್ಗೆ ತಪ್ಪುತಿಳಿಯುವವರನ್ನು ನಿಗ್ರಹಿಸುವ ಕಾರ್ಯವನ್ನು ಮಾಡಿದ ಶ್ರೀಕೃಷ್ಣನು ಪರಪಕ್ಷನಿರಾಕರಣೆ ಮಾಡುವ ಮೂಲಕ, ತನ್ನ ದೋಷದೂರತ್ವವನ್ನು ಸಮರ್ಥನೆ ಮಾಡುವ ತನ್ನ ಭಕ್ತಜನರನ್ನು ತಾನು ಬಹಳವಾಗಿ [೧] ಅನುಗ್ರಹಿಸುವವನು ಎಂಬುದನ್ನು ಸೂಚಿಸಿದ ಎಂದು ತಿಳಿಯಬಹುದು; ಅಂಬುರಾಶಿನಿಲಯ – ಸಮುದ್ರ.

ಸೂರ್ಯಾಸ್ತದ ವರ್ಣನೆ

ತಪ್ತಂ ಹೇಮ ಕೃಶಾನುಸಂಗಿ ಗಗನೇ ವಾತಾಯನೇ ಭಾಜನೇ
ಮಾಹೇಂದ್ರ್ಯಾಃ ಶುಭಕುಂಡಲಂ ರಚಯಿತುಂ ದೇವೈರುಪಾಯಾದ್ದಿಶಃ ।
ಸಂಗೃಹ್ಯಾಂಬುನಿ ಸನ್ನಿವೇಶಿತಮಿವೋತ್ತುಂಗಸ್ಫುಲಿಂಗಾವೃತಂ
ತೇಜೋರಾಶಿರಿನೋ ಜಗಾಮ ಜಲಧಿಂ ರಾಗಾಂಚಿತಃ ಪಶ್ಚಿಮಮ್ [೨] ॥ ೨೪ ॥

ಪ್ರಾಚೀ(ಪೂರ್ವ)ದಿಕ್ಕು ಎಂಬ ಅಂಗನೆಗೆ ಶುಭಕರವಾದ ಕುಂಡಲಗಳನ್ನು ನಿರ್ಮಿಸಲೆಂದು ದೇವತೆಗಳು ಉಪಾಯವಾಗಿ ಕೈಗೆತ್ತಿಕೊಂಡ, ಗಾಳಿ ಬೀಸುವ ಗಗನವೆಂಬ ಮೂಸೆಯಲ್ಲಿ

---

೧. ಪಿತೃತ್ವಪ್ರಥಾಮಾತ್ರಮಪ್ಯಸಹಮಾನತ್ವಾದಿತಿ ಭಾವಃ। -ವ್ಯಾ.
೨. ಉಪಮಾಮೂಲಕೋತ್ಪ್ರೇಕ್ಷಾಲಂಕಾರಃ। -ವ್ಯಾ.

ಅಗ್ನಿಯ ಸಂಪರ್ಕದಿಂದಾಗಿ ಕಾದ, ಸಿಡಿಯುವ ದೊಡ್ಡದಾದ ಕಿಡಿಗಳಿಂದ ಕೂಡಿದ್ದ, ನೀರಿನಲ್ಲಿರಿಸಿದ ಚಿನ್ನವೋ ಎಂಬಂತೆ, ತೇಜೋರಾಶಿಯಾದ ಕೆಂಬಣ್ಣದ ಸೂರ್ಯನು ಪಶ್ಚಿಮ ಸಮುದ್ರಕ್ಕೆ ತೆರಳಿದ.

ವಿ. : ೧. ಸೂರ್ಯಾಸ್ತವನ್ನು ಇಲ್ಲಿ ವಿಶಿಷ್ಟರೀತಿಯಲ್ಲಿ ವರ್ಣಿಸಲಾಗಿದೆ.

೨. ಆಭರಣ ಮಾಡುವ ಶಿಲ್ಪಿಗಳು [೧]ಕುಂಡಲ ಮೊದಲಾದ ಆಭರಣಗಳನ್ನು ಮಾಡಲು ಕಾದ ಚಿನ್ನವನ್ನು ನೀರಿನಲ್ಲಿ ಅದ್ದುವಂತೆ, [೨]ಇಂದ್ರಪತ್ನಿಯಾದ ಶಚೀದೇವಿಗೆ ಕುಂಡಲಗಳನ್ನು ಮಾಡಲೆಂದು ಸಿದ್ಧವಾಗಿದ್ದ ಕಾದ ಚಿನ್ನದಂತಿದ್ದ [೩]ಸೂರ್ಯನು ಕೆಂಬಣ್ಣಕ್ಕೆ ತಿರುಗಿ ಪಶ್ಚಿಮದಿಕ್ಕಿಗೆ ತೆರಳಿ ಮುಳುಗಿದ ಎಂದು ಭಾವ; ಇನ – ಸೂರ್ಯ.

೩.. ಶಿಲ್ಪಿಗಳು ಕಾದ ಚಿನ್ನವನ್ನು ನೀರಿನಲ್ಲಿ ಅದ್ದುವಂತೆ ಸೂರ್ಯ ಪಶ್ಚಿಮಸಮುದ್ರದಲ್ಲಿ ಮುಳುಗಿದ ಎಂಬುದು ಇಲ್ಲಿಯ ಒಟ್ಟು ಭಾವ; ಕೃಶಾನು – ಅಗ್ನಿ; ಸ್ಫುಲಿಂಗ – ಕಿಡಿ.

೪. ಮಾಹೇಂದ್ರೀ ಎಂದರೆ ಇಂದ್ರನಿಗೆ ಸಂಬಂಧಿಸಿದ ದಿಕ್ಕು, ಪೂರ್ವ ಎಂದರ್ಥ; ಅಂಗನೆ ಎಂದರೆ ಇಂದ್ರಪತ್ನಿ ಶಚೀ ಎಂದರ್ಥ.

**ಮತ್ತೊಂದು ಬಗೆಯಲ್ಲಿ ಸೂರ್ಯಾಸ್ತದ ವರ್ಣನೆ**

**ಕರೈರ್ಗಿರೀಂದ್ರಾನ್ ಪರಿತೋ ದಧಾನೋಽ-**
**ಪ್ಯಸೌ ವಿವಸ್ವಾನ್ ಪತಿತಃ ಕಿಲಾಬ್ಧೌ।**
**ಮಮೇತ್ಥಮಾಭಾತಿ ಸರಿಚ್ಛರೀರ-**
**ವಿಶೋಷಕಂ ತತ್ಪತಿರಗ್ರಸೀತ್ ತಮ್ ॥ ೨೫ ॥**

ತನ್ನ ಕಿರಣಗಳಿಂದ ಮಹಾಪರ್ವತಗಳನ್ನು ಸುತ್ತಲೂ ಹಿಡಿದುಕೊಂಡಿದ್ದರೂ ಸಹ ಆ ಸೂರ್ಯ ಸಮುದ್ರದಲ್ಲಿ ಮುಳುಗಿಬಿಟ್ಟ, ನನಗೆ ಹೀಗೆ ಎನ್ನಿಸುವುದು: ತನ್ನ ಪತ್ನಿಯರಾದ ನದಿಗಳ ದೇಹಗಳನ್ನು ಶೋಷಿಸುವ ಸೂರ್ಯನನ್ನು ನದಿಗಳ ಪತಿಯಾದ ಸಾಗರ ತಾನೇ ಕಬಳಿಸಿದ; (ಉತ್ಪ್ರೇಕ್ಷಾಲಂಕಾರ).

ವಿ.: ೧. ಸೂರ್ಯಾಸ್ತವನ್ನು ಇಲ್ಲಿ ವಿಶಿಷ್ಟರೀತಿಯಲ್ಲಿ ವರ್ಣಿಸಿರುವರು.

---

೧. ಯಥಾ ಆಭರಣಕರ್ತಾರಃ ಕಾರವೋ ಧಮನ್ಯಾದಿವಾತಸಂಚಾರಯೋಗ್ಯಮೂಷಾಯಾಂ ಸುವರ್ಣಂ ನಿಧಾಯ ಅನಲಸಂಯೋಗೇನ ತಪ್ತಂ ಕೃತ್ವಾಽಯೋಮಯದಂಡೇನೋದ್ಧೃತ್ಯ ಜಲೇ ಪ್ರಕ್ಷಿಪಂತಿ ತದ್ವದಿತಿ ಭಾವಃ। – ವ್ಯಾ.
ಪ್ರಾತಃ ಕುಂಡಲಾಕಾರೇಣ ಪ್ರಾಚ್ಯಾಮುದೇಷ್ಯಮಾಣತ್ವಾದಿತ್ಯರ್ಥಃ। – ವ್ಯಾ.

೨. ಮಾಹೇಂದ್ರ್ಯ ಇತ್ಯನೇನ ಇಂದ್ರವದಿಂದ್ರಪತ್ನ್ಯಪಿ ದೇವ್ಯೈರ್ಮಾನ್ಯೇತಿ ಧ್ವನ್ಯತೇ। ಜ್ಯೋತಿಶ್ಚಕ್ರಸ್ಯ ದೇವೈಶ್ಚಾಲ್ಯಮಾನತ್ವಾತ್। – ವ್ಯಾ.

೩.. ದಿವಾಽಗ್ನಿಃ ಸೂರ್ಯಂ ಪ್ರವಿಶತೀತಿ ಸ್ಮಾರ್ತಪ್ರಸಿದ್ಧೇಃ। – ವ್ಯಾ.

೨. [೧]ಸೂರ್ಯನ ಕಿರಣಗಳಿಗೆ ನದಿಗಳ ನೀರು ಆವಿಯಾಗುವುದು ವೈಜ್ಞಾನಿಕ ಸತ್ಯ. ನದಿಗಳು ಸಮುದ್ರದ ಪತ್ನಿಯರು ಎಂಬುದು ಪೌರಾಣಿಕ ಪರಿಕಲ್ಪನೆ. ಸೂರ್ಯ ತನ್ನ ಪತ್ನಿಯರಾದ ನದಿಗಳ ನೀರನ್ನು ಶೋಷಿಸಿದ ಎಂಬ ಸೇಡಿನಿಂದ ಎಂಬಂತೆ ಸಮುದ್ರ ಸೂರ್ಯನನ್ನು ನುಂಗಿದ ಎಂಬುದು ಇಲ್ಲಿಯ ರೋಚಕವಾದ ಪರಿಕಲ್ಪನೆ.

೩.. ತನ್ನ ಪತ್ನಿಗೆ ಅಪಚಾರವೆಸಗುವ ಜನರನ್ನು ಅವರ ಪತಿ ತನಗೆ ಸಮಯವೊದಗಿದಾಗ ಉಪಾಯದಿಂದ ಸದೆ ಬಡಿಯುವುದು ಲೋಕನೀತಿ; ವಿವಸ್ವಾನ್-ಸೂರ್ಯ; ಸರಿತ್-ನದಿ.

### ಸೂರ್ಯಾಸ್ತದ ಆಂತರ್ಯ

**ತ್ಯಕ್ತ್ವಾ ಕ್ರಮೇಣ ಸಹಜಾತಮಪಿ ಸ್ವರಾಗಂ**
**[೨]ಚಕ್ರಾಬ್ಜಮಾನಿತಕರಃ ಪ್ರತತೋರ್ಧ್ವಪಾದಃ।**
**ಆಶ್ರಿತ್ಯ ವಿಷ್ಣುಪದಮುಗ್ರತಪೋಽತಪದ್ಯ-**
**ಸ್ತಸ್ಯೈವ ಧಾಮ ಸ ಜಗಾಮ ಕುತೋಽಸ್ಯ ಪಾತಃ ॥ ೨೬ ॥**

ತನಗೆ ಸ್ವಾಭಾವಿಕವಾಗಿದ್ದ ರಾಗ(ಬಣ್ಣ ಹಾಗೂ ವಿಷಯಾಸಕ್ತಿ)ಗಳನ್ನು ಕ್ರಮವಾಗಿ ತೊರೆದು ಚಕ್ರ (ಚಕ್ರವಾಕ) ಹಾಗೂ ಕಮಲಗಳಿಂದ ಆದರಿಸಲ್ಪಟ್ಟ ಕಿರಣ(ಕೈ)ಗಳನ್ನು ಹೊಂದಿದ, ಊರ್ಧ್ವಮುಖವಾಗಿ ತನ್ನ ಕಿರಣಗಳನ್ನು ಪಸರಿಸಿದ, ಸೂರ್ಯನು ವಿಷ್ಣುಪದವನ್ನು ಆಶ್ರಯಿಸಿ ಉಗ್ರತಪಸ್ಸನ್ನು ಗೈದು, ಅವನ ನೆಲೆಯನ್ನೇ ಸೇರಿದ; ಅವನಿಗೆ ಪಾತಕವೆಲ್ಲಿಯದು?

ವಿ.: ೧. ಹಿಂದಿನ ಪದ್ಯದಲ್ಲಿ ಸೂರ್ಯನು [೩]ಸಮುದ್ರದಲ್ಲಿ ಪತನ ಹೊಂದಿದ ಎಂಬ ಅರ್ಥದಲ್ಲಿ ಸೂರ್ಯಾಸ್ತದ ವರ್ಣನೆ ಬಂದಿದ್ದರೆ, ಈ ಪದ್ಯದಲ್ಲಿ ಮತ್ತೊಂದು ಬಗೆಯಲ್ಲಿ ಆ ವರ್ಣನೆ ಬಂದಿದೆ.

೨. ಸೂರ್ಯನು ಚಕ್ರವಾಕ ಹಾಗೂ ಕಮಲಗಳ ಆದರಕ್ಕೆ ಪಾತ್ರನಾದವನು; ಎಲ್ಲೆಡೆ ಕಿರಣಗಳನ್ನು ಹೊಮ್ಮಿಸಿದವನು, ಸದಾ ವಿಷ್ಣುಪದವನ್ನು ಆಶ್ರಯಿಸಿ ತಾಪ ನೀಡುವವನು ಎಂಬುದು ಲೋಕಪ್ರಸಿದ್ಧ. ಅದನ್ನು ವೈಷ್ಣವಚಿಹ್ನೆಗಳಾದ ಚಕ್ರ, ಪದ್ಮಗಳನ್ನು ಧರಿಸಿದವನು ಎಂಬುದಾಗಿ, [೪]ತಲೆಕೆಳಕಾಗಿ ತಪಸ್ಸುಮಾಡುವವನು ಎಂಬುದನ್ನು [೫]'ಪ್ರತತೋರ್ಧ್ವಪಾದಃ'

---

೧. ಸ್ತ್ರೀವಿಷಯೇ ಪರೈರಪಕೃತಾ ಗೂಢಮನ್ಯವಃ ಪುರುಷಾಃ ಸ್ವಾನುಕೂಲಕಾಲೇ ಬಹುಸಾಧನವಂತಮಪಿ ಸ್ವವಿರೋಧಿನಂ ಪಾತಯಂತೀತ್ಯಲಂಕಾರೇಣ ವಸ್ತುಧ್ವನಿಃ। -ವ್ಯಾ.

೨. **ಚಕ್ರಾತಿಮಾನಿತಕರಃ ಇತಿ ಪಾಠೇ** -ವ್ಯಾ.

೩.. ಅಸ್ತಮಯಸಮಯೇ ಸೂರ್ಯಕಿರಣಾನಾಮೂರ್ಧ್ವಗಮನಾದಿತಿ ಭಾವಃ। -ವ್ಯಾ.

೪. ಮೂರ್ಧಾನಮಧರೀಕೃತ್ಯ ತಪಸ್ವಿಭಿಸ್ತಪಶ್ಚರಣಾದಿತಿ ಭಾವಃ। -ವ್ಯಾ.

೫. ತಪಸ್ವಿನೋ ವೈರಾಗ್ಯಾರ್ಜನಸ್ಯಾವಶ್ಯಕತ್ವಾದಿತಿ ಭಾವಃ। -ವ್ಯಾ.

ಎಂಬುದಾಗಿ, ಆಕಾಶವನ್ನು ಆಶ್ರಯಿಸಿದ ಅವನನ್ನು ವಿಷ್ಣುಪದವನ್ನು ಆಶ್ರಯಿಸಿದವನು ಎಂಬುದಾಗಿ ವರ್ಣಿಸಿ, ಪರಮವಿಷ್ಣುಭಕ್ತ ಎಂದಿರುವರು. ಆ ಮೂಲಕವಾಗಿ ಅವನು ವಿಷ್ಣುವಿನ ನೆಲೆ ಎನ್ನಿಸಿದ ಸಾಗರವನ್ನೇ ಸೇರಿದ ಎನ್ನುವ ಮೂಲಕ ಸಾಲೋಕ್ಯಮುಕ್ತಿಯನ್ನು ಪಡೆದ ಎಂದು ಭಾವ.

೩. ಶಂಖ, ಚಕ್ರಾದಿ ವೈಷ್ಣವಲಾಂಛನಗಳ ಧಾರಣೆ, ಬಗಬಗೆಯ ತಪಸ್ಸು, ವಿಷಯವೈರಾಗ್ಯ, [೧]ವಿಷ್ಣುಪದವೆನ್ನಿಸಿದ ಶಾಸ್ತ್ರಗಳ ಅಧ್ಯಯನರೂಪ ಮಹಾಸಾಧನೆ ಮೊದಲಾದವುಗಳು ಮೋಕ್ಷಕ್ಕೆ ಸಾಧನವೆನ್ನಿಸಿದ ಶ್ರೇಷ್ಠ ವೈಷ್ಣವಲಕ್ಷಣಗಳು ಎಂಬ ಅಪೂರ್ವ ವಿಷಯ ಇದರಿಂದ ಸೂಚಿತ.

೪. [೨]ಸೂರ್ಯನು ವಿಷ್ಣುವನ್ನು ಆಶ್ರಯಿಸಿದವನು ಎಂಬ ಈ ಮಾತಿನಲ್ಲಿ, ಸೂರ್ಯನ ಸರ್ವೋತ್ತಮತ್ವವನ್ನು ನಂಬುವ ಸೌರಮತದ ನಿರಾಕರಣೆಯೂ ಇದೆ ಎಂಬುದು ಗಮನಾರ್ಹ.

೫. ಚಕ್ರ, ಚಕ್ರವಾಕ; ಕಮಲ, ಪದ್ಮಚಿಹ್ನೆ; ರಾಗ (ಕೆಂಬಣ್ಣ ಹಾಗೂ ವಿಷಯಾಸಕ್ತಿ)[೩], ಕರ - ತೋಳು ಹಾಗು ಕಿರಣ; ಪಾದ ಹಾಗೂ ಕಿರಣ; ವಿಷ್ಣುಪದ - ಗಗನ ಹಾಗೂ ವಿಷ್ಣುಪದವೆನ್ನಿಸುವ ಶಾಸ್ತ್ರಗಳು ಎಂಬಲ್ಲಿ ಶ್ಲೇಷಾಲಂಕಾರ.

೬. [೪]ಸೂರ್ಯ ಉದಿಸುವಾಗ ಹೊಂಬಣ್ಣವಿದ್ದು ಕ್ರಮೇಣ ಅದು ಮರೆಯಾಗುವುದನ್ನು ವಿಷಯರಾಗದ ತ್ಯಾಗ ಎಂದೂ ಸೂರ್ಯಾಸ್ತದ ಸಮಯದಲ್ಲಿ ಅವನ ಕಿರಣಗಳು ಮೇಲ್ಮುಖವಾಗಿ ಹರಡುವುದರಿಂದ 'ಊರ್ಧ್ವಪಾದ' ಎಂದೂ ಕರೆದಿರುವರು.

೭. [೫]ವೈಷ್ಣವರಿಗೆ ಎಂದೂ ಸಹ ಅಧಃಪತನ ಒದಗದು ಎಂಬ ತತ್ತ್ವವೂ ಇಲ್ಲಿದೆ : ನಾಭಾವೋ ವಿದ್ಯತೇ ಸತಃ - ಗೀತಾ(೨/೧೬); ನ ಮೇ ಭಕ್ತಃ ಪ್ರಣಶ್ಯತಿ - ಗೀತಾ(೯/೩೧)

### ಸೂರ್ಯಾಸ್ತದ ಸಂದೇಶ

ತಪ್ತಂ ತಪಸ್ವಿನಿವಹಂ ಭುವಿ ಯಸ್ತತಾನ
ಪೃಥ್ವ್ಯಾಶ್ಚ ಜೀವನಮಹೋ ಸ್ವಕರೈರ್ಜಹಾರ।
ಲಕ್ಷ್ಮೀಂ ತಥೋಡುನಿಕರಸ್ಯ ವೃಥೈವ ಭಾನೋ-
ಸ್ತಸ್ಯಾಸ್ಯ ಪಾತಮಪಿ ಯುಕ್ತಿಸಹಂ ವದಾಮಃ ॥ ೨೭ ॥

---

೧. ವಿಷ್ಣೋಃ ಸಮುದ್ರಶಾಯಿತ್ವಾದಿತಿ ಭಾವಃ। -ವ್ಯಾ.
೨. ಅನ್ಯತ್ರ ವಿಷ್ಣೋಃ ಪದಂ ಚರಣಂ ಆಶ್ರಿತ್ಯ ಮನಸಾ ಧ್ಯಾತ್ವೇತ್ಯರ್ಥಃ। -ವ್ಯಾ.
೩. ಅನ್ಯತ್ರ ಸಹಜಾತಮಪಿ ಸ್ವಾಭಾವಿಕಮಪಿ ದುಸ್ತ್ಯಜಮಪೀತ್ಯರ್ಥಃ। -ವ್ಯಾ.
೪. ಉದಯಕಾಲೀನಾರ್ಕಗತರಾಗಸ್ಯ ಪ್ರಹರಾದುಪರ್ಯಭಾವಾದಿತಿ ಭಾವಃ। -ವ್ಯಾ.
೫. ಅಸ್ಯ ವಿಷ್ಣುಸಾಲೋಕ್ಯಂ ಗತಸ್ಯ ಪಾತಃ ಕುತಃ। ಅನೇನ ಮುಕ್ತಸ್ಯ ಕದಾಽಪಿ ಸಂಸಾರೇ ಪಾತೋ ನಾಸ್ತೀತಿ ಧ್ವನ್ಯತೇ। -ವ್ಯಾ.

ಅಬ್ಬ! ಸೂರ್ಯನು ವಿನಾಕಾರಣ ಭೂಮಿಯಲ್ಲಿ ತಪಸ್ವಿಗಳ ಗುಂಪಿಗೆ ತಾಪನೀಡುವನು ; ತನ್ನ ಕಿರಣಗಳಿಂದ ಭೂಮಿಯಲ್ಲಿನ ನೀರನ್ನು ಹೀರುವನು; ಅದರಂತೆ ನಕ್ಷತ್ರಗಣದ ಕಾಂತಿಯನ್ನು ಉಡುಗಿಸುವನು; ಆದ್ದರಿಂದ ಅವನಿಗೆ ಆ ಪತನವು ಸಹ ಯುಕ್ತಿಗೆ ಅನುಗುಣವೇ ಆಗಿದೆ ಎನ್ನುವೆವು.

ವಿ. : ೧. ಈ ಶ್ಲೋಕದಲ್ಲಿ[೧] ಸೂರ್ಯ ಪತನಹೊಂದಿದ ಎನ್ನುವ ಮೂಲಕ ಸೂರ್ಯಾಸ್ತವನ್ನು ಮತ್ತೊಂದು ಬಗೆಯಲ್ಲಿ ವರ್ಣಿಸಿರುವರು; **ಉಡು** - ನಕ್ಷತ್ರ ; **ನಿಕರ** - ಸಮೂಹ.

೨. ಸೂರ್ಯನಿಂದ ತಪಸ್ವಿಗಳಿಗೆ ತಾಪ ಹೆಚ್ಚುವುದು, ಸೂರ್ಯನ ಕಿರಣಗಳಿಗೆ ಭೂಮಿಯಲ್ಲಿನ ಜಲಾಂಶ ಕುಂದುವುದು, ನಕ್ಷತ್ರಗಳ ಕಾಂತಿ ಮಂಕಾಗುವುದು; ಹೀಗೆ ಅನೇಕರಿಗೆ ಒಂದು ರೀತಿಯಲ್ಲಿ ಅನಿಷ್ಟ ಬಗೆಯುವ ಸೂರ್ಯನಿಗೆ ಅಧಃಪತನರೂಪ ಅನಿಷ್ಟವಾದದ್ದು ಅರ್ಥವತ್ತಾಗಿದೆ ಎಂಬುದು ಇಲ್ಲಿಯ ಭಾವ ; **ಜೀವನ** - ನೀರು.

೩. ಮತ್ತೊಬ್ಬರಿಗೆ ಕೇಡು ಬಗೆಯುವವರಿಗೆ ಸರ್ವಥಾ ಕೇಡು ತಪ್ಪದು ಎಂಬುದು ಇಲ್ಲಿಯ ಸಂದೇಶ : **ನಾಸತೋ ವಿದ್ಯತೇ ಭಾವಃ** ...। ಗೀತಾ(೨/೧೬)

### ವಿಧಿಯ ಆದೇಶ ಮೀರಲಾಗದು

**ಸ ಲಬ್ಧಜನ್ಮಾ ದಿಶಿ ವಜ್ರಪಾಣೇಃ**
**ಪ್ರವೃದ್ಧಗಾತ್ರೋ ಗಗನಸ್ಯ ಮಧ್ಯೇ ।**
**ಅಗಾದ್ವಿನಾಶಂ ದ್ಯುಮಣಿಃ ಪ್ರತೀಚ್ಯಾಂ**
**ವಿಧೇರ್ನಿದೇಶೋ ಮಹತಾಽಪ್ಯಲಂಘ್ಯಃ ॥ ೨೮ ॥**

ಸೂರ್ಯನು ವಜ್ರಪಾಣಿಯಾದ ಇಂದ್ರನ ದಿಕ್ಕಿನಲ್ಲಿ ಉದಿಸುವನು, ಗಗನದ ಮಧ್ಯದಲ್ಲಿ ಅಭಿವೃದ್ಧಿಪಡೆಯುವನು, ಪಶ್ಚಿಮದಿಕ್ಕಿನಲ್ಲಿ ವಿನಾಶ ಹೊಂದುವನು; ವಿಧಿಯ ಆಣತಿಯು ದೊಡ್ಡವರಿಗೂ ಮೀರಲಾಗದಂತಹುದು.

ವಿ. : ೧. ತೇಜಸ್ವಿಯಾದ ಸೂರ್ಯ ಹುಟ್ಟಿದ್ದು ಒಂದೆಡೆ, ಬೆಳೆದದ್ದು ಒಂದೆಡೆ, ಮುಳುಗಿದ್ದು ಮತ್ತೊಂದೆಡೆ ಎಂದು ತಿಳಿಸುವ ಮೂಲಕ ದೈವಸಂಕಲ್ಪ ವಿಚಿತ್ರಬಗೆಯದು; ಅದು ಎಂತಹ ದೊಡ್ಡವರನ್ನೂ ಬಿಡದು ಎಂಬ ತತ್ತ್ವ ನಿರೂಪಿತವಾಗಿದೆ.

೨. ಇಲ್ಲಿಯೂ ಸಹ ಸೂರ್ಯನು ಪರಾಧೀನ ಎಂದು ತಿಳಿಸುವ ಮೂಲಕ ಸೌರಮತದ ನಿರಾಕರಣೆ ಬಂದಿದೆ ಎಂದು ತಿಳಿಯಬೇಕು; **ವಜ್ರಪಾಣಿ** - ಇಂದ್ರ; **ದ್ಯುಮಣಿ** - ಸೂರ್ಯ.

---

೧. ತಪ್ತಮಿತ್ಯಾದಿಪದಾರ್ಥೈಃ ಪಾತಸ್ಯೋಪಪಾದನಾತ್ ಪದಾರ್ಥಹೇತುಕಂ ಕಾವ್ಯಲಿಂಗಮಲಂಕಾರಃ। -ವ್ಯಾ.

### ತ್ರಿಧಾಮಗಳಲ್ಲೂ ಸೂರ್ಯಾಸ್ತದ ಪರಿಣಾಮ

ರಾಗಂ ಪಯೋಧರತಟೇ ಹರಿದಂಗನಾನಾಂ
ರಾಗೀ ಸಮರ್ಪ್ಯ ಸವಿತಾ ಸಮಗಾದಗಾಂತಮ್ ।
ಕೂಜದ್ವಿಹಂಗಮರವೈರಿವ ತಾ ರುದಂತ್ಯೋ
ಭೇಜುಸ್ತಮಸ್ತತಿಮಥಾಂತರಿವೋರುಮೂರ್ಛಾಮ್ ॥ ೨೯ ॥

ಪ್ರಣಯಿಯಾದ ಸೂರ್ಯನು ದಿಕ್ಕುಗಳು ಎಂಬ ಕಾಮಿನಿಯರಿಗೆ ಮೇಘ(ಸ್ತನ)ಗಳ ಸನಿಹದಲ್ಲಿ ರಾಗ ಹುಟ್ಟಿಸಿದ; ಬಳಿಕ ಬೆಟ್ಟದ ಕೊನೆಗೆ ತೆರಳಿದ; ಆ ಸ್ತ್ರೀಯರು ಕೂಗುವ ಪಕ್ಷಿಗಳ ಧ್ವನಿಗಳಿಂದಾಗಿ ರೋದಿಸುವಂತೆ ಇದ್ದರು; ಬಳಿಕ ಗಾಢಮೂರ್ಛೆ ಹೊಂದಿದವರಂತೆ ಕತ್ತಲೆಯ ರಾಶಿಯಲ್ಲಿ ಮುಳುಗಿದರು.

ವಿ. : ೧. ಕಾಮಿಯೊಬ್ಬ ಕಾಮಿನಿಯರಿಗೆ ಕಾಮಹುಟ್ಟಿಸಿ, ದೂರ ತೆರಳಿ ನೋವುಂಟು ಮಾಡುವಂತೆ ಹಗಲಿಡೀ ದಿಕ್ಕುಗಳನ್ನು ಬೆಳಗಿದ ಸೂರ್ಯ[೧] ಅಸ್ತಂಗತನಾದ ಎಂಬುದು ಇಲ್ಲಿಯ ವಿವರಣೆ ; ಅಗ – ಬೆಟ್ಟ.

೨. ಸೂರ್ಯ ಮುಳುಗುವ ಸಮಯದಲ್ಲಿ ಮೋಡಗಳ ಬಳಿ [೨]ಕೆಂಪು ಗೋಚರಿಸುವುದು. ಅದನ್ನೇ ಇಲ್ಲಿ ದಿಗಂಗನೆಯರ ಸ್ತನಗಳ ಬಗ್ಗೆ ಸೂರ್ಯ ಹುಟ್ಟಿಸಿದ ರಾಗ ಎಂದಿರುವರು. ಸೂರ್ಯ ಮುಳುಗುವ ಸಮಯದಲ್ಲಿ ಪಕ್ಷಿಗಳು ಕಲರವವನ್ನು ಹೊಮ್ಮಿಸುವುವು. ಅದನ್ನು ಇಲ್ಲಿ ಆ [೩]ದಿಗಂಗನೆಯರ ರೋದನಧ್ವನಿ ಎಂದಿರುವರು; ಸೂರ್ಯ ಮುಳುಗಿದ ಬಳಿಕ ಗಾಢವಾದ ಕತ್ತಲೆ ಆವರಿಸುವುದು. ಅದನ್ನು ಇಲ್ಲಿ ಆ ದಿಗಂಗನೆಯರಿಗೆ ದಿಕ್ಕು ತೋಚದಂತೆ ಕತ್ತಲೆ ಕವಿಯಿತು ಎಂದಿರುವರು ; ವಿಹಂಗಮ – ಪಕ್ಷಿ ; ಹರಿತ್ – ದಿಕ್ಕು.

೩. ಇದು ವಿಪ್ರಲಂಭಶೃಂಗಾರದ ವರ್ಣನೆಯಾಗಿದೆ; [೪]ರಾಗ (ಕೆಂಪು, ಅನುರಾಗ), ಪಯೋಧರ (ಮೋಡ, ಸ್ತನ) ಎಂಬಲ್ಲಿ ಶ್ಲೇಷಾಲಂಕಾರ.

---

೧. ಸಾಯಂ ದಿಶಸ್ತಮೋವ್ಯಾಪ್ತಾ ಬಭೂವುರಿತ್ಯರ್ಥಃ। –ವ್ಯಾ.

೨. ಕೂಜದ್ವಿಹಂಗಮರವೈಃ ಧ್ವನತ್ಪಕ್ಷಿನಿನದೈಃ ಸಾಯಂ ವೃಕ್ಷೇಷು ಸ್ಥಿತ್ವಾ ಪಕ್ಷಿಣೋ ಧ್ವನಂತೀತಿ ಭಾವಃ। –ವ್ಯಾ.

೩.. ವಿಪ್ರಲಂಭಃ ಶೃಂಗಾರಃ –
''ಅಯುಕ್ತಯೋಸ್ತರುಣಯೋರ್ಯೋಽನುರಾಗಃ ಪರಸ್ಪರಮ್ ।
ದರ್ಶನಸ್ಪರ್ಶನಾದೀನಾಮನವಾಪ್ತೌ ಪ್ರಕೃಷ್ಯತೇ। ಸ ವಿಪ್ರಲಂಭೋ ವಿಜ್ಞೇಯಃ'' ಇತ್ಯುಕ್ತೇಃ। –ವ್ಯಾ.

೪. ಅಯಂ ತು ರಾಗಪಯೋಧರಶಬ್ದಯೋಃ ಶ್ಲಿಷ್ಟತ್ವಾತ್ ತದುಜ್ಜೀವಿತೋತ್ಪ್ರೇಕ್ಷಾಲಂಕಾರೇಣ ಧ್ವನ್ಯತ ಇತಿ ಅಲಂಕಾರೇಣ ರಸಧ್ವನಿಃ। –ವ್ಯಾ.

## ಸೂರ್ಯಾಸ್ತಕ್ಕೆ ಕಾರಣೋತ್ಪ್ರೇಕ್ಷೆ

ಅಂಭೋಧಿಹೃತ್ಕೃತಪದಂ ಪ್ರತಿರೂಪಮರ್ಕಃ
ಸಂದೃಶ್ಯ ಸಾಧು ಧವಲೀಕೃತತಜ್ಜಲೌಘಮ್ ।
ಶಾಂತೋ ಹಿ ಸರ್ವಹೃದಯಂಗಮತಾಮುಪೈತೀ-
ತ್ಯಂತೇ ಶಮಂ ಸಮಧಿಗಮ್ಯ ವಿವೇಶ ಸೋಽಬ್ಧಿಮ್ ॥ ೩೦ ॥

ಸಾಗರದ ಮಧ್ಯದಲ್ಲಿ ತಳವೂರಿ, ಜಲರಾಶಿಯನ್ನು ಥಳಿಥಳಿಸುವಂತೆ ಮಾಡಿದ ತನ್ನ ಪ್ರತಿಬಿಂಬವನ್ನು ನಿಚ್ಚಳವಾಗಿ ಕಂಡು ಸೂರ್ಯನು, ಪ್ರಶಾಂತನಾದವನು ಸರ್ವರಿಗೂ ಹೃದಯಂಗಮನೆನಿಸುವನು ಎಂದು ತಿಳಿದು ಕೊನೆಗೆ ಶಮನವನ್ನು ಹೊಂದಿ ಸಮುದ್ರವನ್ನು ಹೊಕ್ಕನು.

ವಿ. : ೧. ಸೂರ್ಯನು ತಾನು ಮುಳುಗುವಾಗ ಸಮುದ್ರದ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ಕಂಡು ಸೌಮ್ಯಸ್ವಭಾವದವರು ಜನರ ಪ್ರೀತಿಗೆ ಪಾತ್ರರಾಗುವರು ಎಂದು ತಿಳಿದು [1]ಸಮುದ್ರದೊಳಗೆ ಪ್ರವೇಶಿಸಿದ ಎಂದು ಇಲ್ಲಿಯ ಭಾವ; ಅಂಭೋಧಿ - ಸಮುದ್ರ; ಅರ್ಕ - ಸೂರ್ಯ.

೨. ಸೂರ್ಯನು ಮುಳುಗುವಾಗ ಪ್ರಖರತೆಯನ್ನು ಹೊಂದಿರದೆ ಶಾಂತನಾಗಿರುವನು ಎಂಬುದು ಇಲ್ಲಿಯ ತಾತ್ಪರ್ಯ.

## ಸೂರ್ಯಾಸ್ತದಿಂದಾಗಿ ಬಾಡಿದ ಕಮಲಗಳು

ಮಿತ್ರೇಽಂಬುಜಾತನಿಕರಸ್ಯ ನಿತಾಂತಮಿತ್ರೇ
ಹ್ಯಸ್ತಂ ಸಮೀಯುಷಿ ಮುಖಂ ಮುಕುಲೀಬಭೂವ ।
ಪದ್ಮಸ್ಯ ಶುದ್ಧಜಲಗಸ್ಯ ಚ ಮುದ್ರಯಂತಿ
ನಷ್ಟಾಃ ಪ್ರಿಯಾಃ ಖಲು ಸಮೃದ್ಧಿಯುಜೋಽಪಿ ವಕ್ತ್ರಮ್ ॥ ೩೧ ॥

ಕಮಲಗಳ ಗುಂಪಿಗೆ ಬಹುಪ್ರಿಯನಾದ ಸೂರ್ಯ ಅಸ್ತಂಗತನಾಗುತ್ತಿದ್ದಂತೆ ಶುದ್ಧ ಜಲದಲ್ಲಿನ ಪದ್ಮದ ಮುಖವು ಮಂಕಾಯಿತು; ಮರೆಯಾಗುವ ಪ್ರಿಯಜನರು ಸಮೃದ್ಧಿಯಿಂದ ಕೂಡಿದ ತಮ್ಮ ಆಪ್ತರ ಮುಖವನ್ನು ಸಹ ನಿಶ್ಚಯವಾಗಿ ಮುದುಡಿಸುವರು.

ವಿ. : ೧. ಸೂರ್ಯಾಸ್ತದ ಬಳಿಕ ಕಮಲಗಳು ಬಾಡಿದವು[2] ಎಂದು ಭಾವ.

---

೧. ಪ್ರತಿಬಿಂಬಸ್ಯ ಕಾಂತಿಮತ್ತ್ವೇಽಪಿ ಔಷ್ಣ್ಯಾಭಾವಾದಿತಿ ಭಾವಃ । -ವ್ಯಾ.
೨. ಸೂರ್ಯಾಸ್ತಮಯೇ ಸತಿ ಕಮಲಾನಾಂ ಮುಕುಲೀಭಾವೋ ಜಾತ ಇತ್ಯರ್ಥಃ । -ವ್ಯಾ.

೨. ಪ್ರಿಯನಾದ ಸೂರ್ಯ ಮುಳುಗಿದ್ದರಿಂದ ಕಮಲಗಳು ನೋವಿನಿಂದ ಹಾಗೆ ಮುದುಡಿದವು ಎಂಬುದು ಇಲ್ಲಿಯ [೧] ಉತ್ಪ್ರೇಕ್ಷೆ ; ವಕ್ತ್ರ - ಮುಖ.

೩. ದೂರಕ್ಕೆ ತೆರಳುವ ಪ್ರಿಯಜನರು ತಮ್ಮ ಅಗಲಿಕೆಯ ಮೂಲಕ ಆಪ್ತೇಷ್ಟರಿಗೆ ನೋವನ್ನುಂಟುಮಾಡುವರು ಎಂಬುದು ಇಲ್ಲಿಯ ಲೋಕನೀತಿ; ನಿಕರ - ಸಮೂಹ; ನಿತಾಂತ - ಅತ್ಯಂತ; ಮುಕುಲೀಬಭೂವ - ಬಾಡಿತು.

### ತಪಸ್ವಿಯಂತೆ ಕಂಡ ಕಮಲ

**ಆಕಂಠೋದಕವಾಸಿ ಹೃದ್ಗಮಧುಕೃಝ್ಝಂಕಾರರಮ್ಯೋಂಕೃತಿ**
**ಭ್ರಾಜತ್ಕಂಟಕಕಂಟಕದ್ಯುತಿ ಮುಹುರ್ಮಂತ್ರಾರ್ಥಸಂಚಿಂತಯಾ ।**
**ಈಷತ್ಕಂಪಿತಮೂರ್ಧಶೋಭಿ ನಲಿನಂ ಹಂಸೌಘಸಂಶಿಕ್ಷಿತಂ**
**ಸ್ವಾಂತಃಸ್ಥಾಪಿತಧಾತೃ ಸಾಧು ತಪತೀವಾಕಾಂಕ್ಷ್ಯ ಮಿತ್ರೋದಯಮ್[೨] ॥ ೩೨ ॥**

ಕಂಠದವರೆಗೆ ನೀರಿನಲ್ಲಿ ವಾಸ, ತನ್ನ ಹೃದಯದಲ್ಲಿನ ಭ್ರಮರಗಳ ಝೇಂಕಾರದಿಂದಾಗಿ ರಮ್ಯವಾದ ಓಂಕಾರಧ್ವನಿ, ಹೊಳೆಯುವ ಮುಳ್ಳುಗಳ ರೂಪದ ರೋಮಾಂಚನದ ಕಾಂತಿ, ಮತ್ತೆ ಮತ್ತೆ ಮಂತ್ರಾರ್ಥದ ಸಂಚಿಂತನೆಯಿಂದಾಗಿ ಸ್ವಲ್ಪ ಕಂಪಿಸುವ ಶಿರಸ್ಸಿನ ಶೋಭೆ, ಹಂಸವೃಂದದಿಂದ ಕುಕ್ಕಲ್ಪಡುವಿಕೆ, ಒಳಗೆ ನೆಲೆಸಿರುವ ಬ್ರಹ್ಮ, ಇಂತಹ ಕಮಲವು ಸೂರ್ಯೋದಯವನ್ನು ಹಾರೈಸಿ ಚೆನ್ನಾಗಿ ತಪಗೈಯ್ಯುವಂತಿರುವುದು.

ವಿ. : ೧. ನೀರಿನಲ್ಲಿ ಶೋಭಿಸುವ ಕಮಲವನ್ನು ಇಲ್ಲಿ ಸೂರ್ಯೋದಯವನ್ನು ಬಯಸಿ ತಪಸ್ಸು ಮಾಡುವ ತಪಸ್ವಿ ಎಂದು ಕರೆಯಲಾಗಿದೆ.

೨. ತಪಸ್ವಿಗಳು ಕಂಠದವರೆಗಿನ ನೀರಿನಲ್ಲಿ ಮುಳುಗುವರು; ಮನಸ್ಸಿನಲ್ಲಿ ಮಧುಸೂದನನಾದ ಶ್ರೀಹರಿಯ ಸ್ತುತಿರೂಪವಾದ ಮನೋಹರವಾದ ಓಂಕಾರವನ್ನು ಜಪಿಸುವರು; ಶ್ರೀಹರಿಯ ಧ್ಯಾನದಿಂದಾಗಿ ಉಂಟಾದ ಆನಂದದಿಂದ ರೋಮಾಂಚನವನ್ನು ಹೊಂದುವರು; ಮಂತ್ರಾರ್ಥಚಿಂತನೆಯಿಂದಾಗಿ [೩] ಶಿರಸ್ಸನ್ನು ಓಲಾಡಿಸುವರು. ಅಂತಹ ತಪಸ್ವಿಗಾಗಿ ಪರಮಹಂಸರಾದ ಗುರುಗಳ ತಂಡದಿಂದ ಉಪದೇಶವನ್ನು ಪಡೆದಿರುವರು. ತಮ್ಮ ಇಷ್ಟದೇವತೆಯನ್ನು

---

೧. ಇಷ್ಟನಾಶೇ ಕಸ್ಯ ಮುದ್ರಣಂ ನ ಜಾಯತ ಇತ್ಯರ್ಥಃ। -ವ್ಯಾ.

೨. ಅತ್ರಾಪ್ರಕೃತತಪಸ್ವಿಸಾಮ್ಯೇನೌಪಮ್ಯಾದಪ್ರಕೃತಗೋಚರಾತ್ ತುಲ್ಯಯೋಗಿತಾ। ನ ತು ಶ್ಲೇಷಃ। ತಸ್ಯ ವಿಶೇಷ್ಯಸ್ಯಾಪಿ ಶ್ಲಿಷ್ಟತ್ವನಿಯಮಾತ್। -ವ್ಯಾ.
ಉತ್ಪ್ರೇಕ್ಷಾವ್ಯಂಜಕೇವಶಬ್ದಪ್ರಯೋಗಾತ್ ಸ್ವೋಜ್ಜೀವಿತೋತ್ಪ್ರೇಕ್ಷಯಾ ಸಂಕೀರ್ಯತೇ। -ವ್ಯಾ.

೩. ತಪಸ್ವಿನೋಽಪಿ ಸ್ವಜಪ್ಯಮಂತ್ರಾರ್ಥಧ್ಯಾನೇನ ಶಿರಃಕಂಪೋ ಜಾಯತೇ । ಸ್ವಾಂತಃ ಸ್ವೋದರೇ ಸ್ಥಾಪಿತಃ ಸನ್ನಿಧಾಪಿತಃ ಧಾತಾ ಚತುರ್ಮುಖೋ ಯೇನ ತತ್ತಥೋಕ್ತಮ್ । ಚತುರ್ಮುಖಸ್ಯ ಕಮಲಾಸನತ್ವಾದಿತಿ ಭಾವಃ। -ವ್ಯಾ.

ಮನಸ್ಸಿನಲ್ಲಿ ನೆಲೆಗೊಳಿಸಿರುವರು. ಅಂತಹ ಅವರ ತಪಸ್ಸಿನ ಉದ್ದೇಶ ಪರಮಮಿತ್ರನಾದ ಶ್ರೀಹರಿಯನ್ನು ಕಾಣುವುದೇ ಆಗಿರುವುದು; ಧಾತೃ - ಬ್ರಹ್ಮ.

೩. ಕಮಲವು ಕತ್ತಿನವರೆಗೆ ನೀರಿನಲ್ಲಿ ಮುಳುಗಿರುವುದು. ಅದರಲ್ಲಿ ನೆಲೆಸಿದ ದುಂಬಿಗಳ ಧ್ವನಿಯನ್ನು ಹೊಂದಿರುವುದು, ಮುಳ್ಳುಗಳು ರೋಮಾಂಚನದಂತಿರುವುದು, ಬೀಸುವ ಗಾಳಿಯಿಂದಾಗಿ ಅದರ ತುದಿಯು ಕಂಪಿಸುವುದು, ಮೇಲ್ಭಾಗ ಓಲಾಡುತ್ತಿರುವುದು. ಅದರಲ್ಲಿ ಹಂಸಪಕ್ಷಿಗಳು ಮಾಡುವ ವ್ರಣಗಳು ತುಂಬಿರುವವು, ಮಧ್ಯದಲ್ಲಿ ಬ್ರಹ್ಮದೇವರನ್ನು ಹೊಂದಿರುವುದು; ಹೀಗೆ ತಪಸ್ವಿಗಳ ಲಕ್ಷಣವನ್ನು ಹೊಂದಿರುವುದರಿಂದ ಕಮಲವು ಸೂರ್ಯೋದಯವನ್ನು ಬಯಸಿ ತಪಸ್ಸುಮಾಡುವಂತಿದೆ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ಮನೋಜ್ಞವಾಗಿದೆ.

೪. ಭ್ರಮರಗಳ ಧ್ವನಿ ಓಂಕಾರದಂತಿದೆ ಎಂಬುದು ಒಂದು ರೀತಿಯಲ್ಲಿ ಐತರೇಯ-ಭಾಷ್ಯದಲ್ಲಿನ ನಿರೂಪಣೆಯ ಸಂಗ್ರಹದಂತಿದೆ :

ಸರ್ವೈಶ್ಚ ವೈದಿಕಪದೈರಪಿ ಲೋಕಶಬ್ದೈ-
ರ್ಮೇಘಾಗ್ನಿವಾರಿಧಿತಲಾದಿರವೈಶ್ಚ ಸರ್ವೈಃ ।
ಏಕೋಽಭಿಧೇಯಃ ಪರಿಪೂರ್ಣಗುಣಃ ಪ್ರಿಯೋಽಲಂ
ನಾರಾಯಣೋ ಮಮ ಸದೈವ ಸುತುಷ್ಟಿಮೇತು ॥

೫. [1]ಮಿತ್ರೋದಯ ಎಂಬಲ್ಲಿ ಶ್ರೀಹರಿ ಹಾಗೂ ಸೂರ್ಯ ಎಂಬ ಎರಡು ಅರ್ಥಗಳೂ ವಿವಕ್ಷಿತ. ಶ್ರೀಹರಿಯು ಪ್ರತಿಯೊಬ್ಬರ ಸ್ವರೂಪಯೋಗ್ಯತೆಯನ್ನು ಅರಿತು ಹಿತನೀಡುವ ಕರುಣಾಳುವಾದ್ದರಿಂದ ಮಿತ್ರ ಎನ್ನಿಸಿರುವನು: ಮಿನೋತಿ ತ್ರಾಯತೇ ಚೇತಿ ಮಿತ್ರಮಿತ್ಯಭಿ-ಧೀಯತೇ । (ಐತರೇಯಭಾಷ್ಯ); ಮಮಾಭ್ಯಧಿಕಮಿತ್ರಾಯ ನಮೋ ನಾರಾಯಣಾಯ ತೇ (ಈಶಾವಾಸ್ಯಭಾಷ್ಯ).

೬. ಕಂಟಕ - ರೋಮಾಂಚನ; ಕಂಟಕ - ಮುಳ್ಳು; ಮಿತ್ರ - ಸೂರ್ಯ; ಹಂಸ - ಹಂಸ ಪಕ್ಷಿ ಹಾಗೂ ಯತಿ ಎಂಬಲ್ಲಿ ಶ್ಲೇಷಾಲಂಕಾರ.

ಚಂದ್ರೋದಯದ ವರ್ಣನೆ

ದಿಗಾಯತಾಕ್ಷೀಮಪರಾಮುಪೇತ್ಯ
ದಿಶಾಪತೌ ರಾಗಮುಪೇಯುಷೀಂದುಃ[2] ।

---

೧. ಪ್ರಕೃತೇ ಮಿತ್ರಸೃಷ್ಟೇರಪೇಕ್ಷಿತತ್ವಾತ್ ಸೃಷ್ಟಿಕರ್ತುರ್ಬ್ರಹ್ಮಣಶ್ಚತುರ್ಮುಖಸ್ಯಾಂತಃಸ್ಥಾಪನಂ ಯುಕ್ತಮಿತಿ ಭಾವಃ । -ವ್ಯಾ.

೨. ಅತ್ರ ಪ್ರಸ್ತುತಾಪರಾಧಿನಾಯಕಸ್ಯ ಖಂಡಿತಾಯಾಃ ನಾಯಿಕಾಯಾಃ ಪ್ರತೀತೇಃ ಸಮಾಸೋಕ್ತ್ಯಾ ಸಂಕೀರ್ಯತೇ । ನಾಯಕೋ ದಕ್ಷಿಣಃ । ತುಲ್ಯೋ ನೈಕತ್ರ ದಕ್ಷಿಣ ಇತ್ಯುಕ್ತೇಃ । ನಾಯಿಕಾ ವಿಪ್ರಲಬ್ಧಾ ಖಂಡಿತಾ ಚ । ಜ್ಞಾತೇಽನ್ಯಾಸಂಗವಿಕೃತೇ ಖಂಡಿತೇರ್ಷ್ಯಾಕಷಾಯಿತೇತ್ಯುಕ್ತೇಃ । -ವ್ಯಾ.

ಅದೃಶ್ಯತೈಂದ್ರ್ಯಾಂ ದಿಶಿ ರೋಷರಕ್ತಂ
ನಿಬದ್ಧನೀಲಭ್ರುಕುಟೀವ ವಕ್ತ್ರಮ್[೧] ॥ ೩೩ ॥

ದಿಕ್ಪತಿಯಾದ ಸೂರ್ಯನು ಬೇರೊಂದು ದಿಕ್ಕೆಂಬ ಅಂಗನೆಯಲ್ಲಿ ಅನುರಾಗವನ್ನು ಹೊಂದಲು, ಇಂದ್ರಸಂಬಂಧಿಯಾದ ಪೂರ್ವದಿಕ್ಕಿನಲ್ಲಿ, ರೋಷದಿಂದ ಕೆಂಪಾದ, ಗಂಟಿಕ್ಕಿದ ನೀಲಹುಬ್ಬಿನ ಮುಖವೆಂಬಂತೆ ಚಂದ್ರ ಕಾಣಿಸಿಕೊಂಡ.

ವಿ. : ೧. ಇಲ್ಲಿಂದ ಮುಂದಿನ ಶ್ಲೋಕಗಳಲ್ಲಿ ಚಂದ್ರೋದಯದ ವರ್ಣನೆ ಬಂದಿದೆ.

೨. [೨]ಸೂರ್ಯನು ಉದಿಸುವ ದಿಕ್ಕು ಪೂರ್ವ; ಮುಳುಗುವ ದಿಕ್ಕು ಪಶ್ಚಿಮ. ಆ ಎರಡು ದಿಕ್ಕುಗಳನ್ನೂ ಸ್ತ್ರೀಯರು ಎಂದು ಕಲ್ಪಿಸಿ, ಪೂರ್ವದಿಕ್ಕಿನಲ್ಲಿ ಉದಿಸಿದ ಸೂರ್ಯನು ಕ್ರಮೇಣ ಪಶ್ಚಿಮದಿಕ್ಕಿನಲ್ಲಿ ಮುಳುಗುವನು; ಇದು ಸೂರ್ಯನು ತನ್ನ ಒಬ್ಬ ಪ್ರಿಯೆಯನ್ನು ತೊರೆದು ಮತ್ತೊಬ್ಬ ಸ್ತ್ರೀಯಲ್ಲಿ ಅನುರಕ್ತನಾಗುವ ಪ್ರಸಂಗದಂತಿದೆ ಎಂಬುದು ಇಲ್ಲಿಯ ಕಲ್ಪನೆ.

೩. ತನ್ನ ಪ್ರಿಯಕರನು ತನ್ನನ್ನು ತೊರೆದು ಮತ್ತೊಬ್ಬ ಅಂಗನೆಯಲ್ಲಿ ಅನುರಕ್ತನಾದಾಗ ಮೊದಲಿನ [೩]ಸ್ತ್ರೀಯು ರೋಷದಿಂದ ಹುಬ್ಬು ಗಂಟಿಕ್ಕಿ ಮುಖವನ್ನು ಕೆಂಪುಮಾಡಿಕೊಳ್ಳುವಂತೆ ಪೂರ್ವದಿಕ್ಕಿನಲ್ಲಿ ಚಂದ್ರೋದಯವಾಯಿತು ಎಂದರ್ಥ ; ಭ್ರುಕುಟೀ – ಹುಬ್ಬು ಗಂಟು.

೪. ಸೂರ್ಯಾಸ್ತವಾಗುತ್ತಿದ್ದಂತೆ ಚಂದ್ರೋದಯವಾಗುವ ದಿನ ಪೂರ್ಣಿಮೆ ; ಎಂದರೆ ಇಲ್ಲಿ ಪ್ರಸಕ್ತವಾಗಿರುವುದು ಪೂರ್ಣಚಂದ್ರನ ವರ್ಣನೆ ಎಂದಾಗುವುದು.

೫. ಉದಿಸುವ ಸೂರ್ಯನಂತೆ ಉದಿಸುವ ಚಂದ್ರನೂ ಸಹ ಸ್ವಲ್ಪ ಕೆಂಪುಬಣ್ಣವನ್ನು ಹೊಂದಿರುವನು ಎಂಬ ಅಂಶವನ್ನು ಆಧರಿಸಿದ ನಿರೂಪಣೆ ಇದಾಗಿದೆ.

### ಪೂರ್ವದಿಗಂಗನೆಯನ್ನು ಸಂತೈಸುವಂತೆ ಕಂಡ ಚಂದ್ರ

ನಕ್ಷತ್ರಾಲಿಭಿರಿಂದ್ರದಿಙ್ಮೃಗದೃಶಂ ಸಂಧಾಯ ಪೂರ್ವಂ ಪುನ-
ಸ್ತತ್ಪಾದೇ ಪ್ರಣತಿಂ ವಿಧಾಯ ನಿತರಾಮಾಶಾಂತರಾಸಕ್ತಿಜಮ್ ।
ತಸ್ಯಾಃ ಕೋಪಸಮಂ ತಮಃ ಪರಿಹರನ್ ಸ್ವೀಯೈಃ ಕರೈಸ್ತಾಂ ಸ್ಪೃಶನ್
ವಕ್ತ್ರಾಂಭೋರುಹಚುಂಬನಾಯ ಶನಕೈರುದ್ಯಾತಿ ನೂನಂ ಶಶೀ ॥ ೩೪ ॥

ಚಂದ್ರನು ಮೊದಲಿಗೆ ನಕ್ಷತ್ರಗಳೆಂಬ ಗೆಳತಿಯರ ಮೂಲಕ ಪೂರ್ವದಿಕ್ಕೆಂಬ ಅಂಗನೆ-ಯೊಂದಿಗೆ ಸಂಧಿಮಾಡಿಕೊಂಡ ; ಬಳಿಕ ಅವಳ ಪಾದದಲ್ಲಿ ಸಾಷ್ಟಾಂಗ ಹಾಕಿ, ಬೇರೊಂದು

---

೧. ಉತ್ಪ್ರೇಕ್ಷಾಲಂಕಾರಃ। –ವ್ಯಾ.

೨. ಸೂರ್ಯಾಸ್ತಮಯಾನಂತರಂ ಚಂದ್ರೋದಯೋಽಪಿ ಜಾತ ಇತ್ಯರ್ಥಃ। –ವ್ಯಾ.

೩. ನ ಕೇವಲಂ ಸಪತ್ನೀಗಮನಮಾತ್ರಂ ತತ್ರಾನುರಾಗಮಪಿ ಸಂಪಾದಿತವಾನಿತಿ ಧ್ವನಿಃ। –ವ್ಯಾ.

ದಿಕ್ಕಿನ ಬಗೆಗಿನ ಆಸಕ್ತಿಯಿಂದಾಗಿ ಹುಟ್ಟಿದ ಅವಳ ಕೋಪದಂತಹ ತಮಸ್ಸನ್ನು ಸಂಪೂರ್ಣವಾಗಿ ತೊಡೆದುಹಾಕಿ, ತನ್ನ ಕಿರಣ(ಕೈ)ಗಳಿಂದ ಅವಳನ್ನು ಸ್ಪರ್ಶಿಸುತ್ತಾ ಅವಳ ಮುಖಕಮಲವನ್ನು ಚುಂಬಿಸಲೆಂದು ಮೆಲ್ಲನೆ ಮೇಲಕ್ಕೆ ಏರತೊಡಗಿದ.

ವಿ.: ೧. ಇಲ್ಲಿ ಚಂದ್ರೋದಯವನ್ನು ಮತ್ತೊಂದು ಬಗೆಯಲ್ಲಿ ವರ್ಣಿಸಲಾಗಿದೆ.

೨. ಹಿಂದಿನ ಶ್ಲೋಕದಲ್ಲಿ ಹೇಗೋ ಹಾಗೆ ಇಲ್ಲಿಯೂ ಸಹ [೧]ಪೂರ್ವದಿಕ್ಕನ್ನು ಒಬ್ಬ ಅಂಗನೆಯೆಂದು ಕರೆದು, ಚಂದ್ರ ಅವಳನ್ನು ಉಪಾಯದಿಂದ ಒಲಿಸುತ್ತಿರುವನೋ ಎಂಬಂತೆ ಕ್ರಮವಾಗಿ ಪೂರ್ವದಲ್ಲಿ ಮೇಲೇರಿ ಬರುತ್ತಿರುವನು ಎಂದು [೨]ವರ್ಣಿಸಿರುವರು.

೩.. ನಕ್ಷತ್ರಗಳೇ ಸಖಿಯರು, ಪೂರ್ವದಿಕ್ಕು ಅಂಗನೆ, ಕೋಪವೇ ಕತ್ತಲೆ, ತನ್ನ ಕಿರಣಗಳೇ ಕೈಗಳು, ಅದರ ಮುಖವೇ ಕಮಲ ಎಂಬಲ್ಲಿ ರೂಪಕಾಲಂಕಾರ.

೪. [೩]ಚಂದ್ರನು ತನ್ನ ಕಿರಣಗಳನ್ನು ಪೂರ್ವದಿಕ್ಕಿನಲ್ಲಿ ಪಸರಿಸುವುದನ್ನು ಆ ದಿಗಂಗನೆಗೆ ಮಾಡಿದ ಸಾಷ್ಟಾಂಗ ವಂದನೆ ಎಂಬಲ್ಲಿನ ಉತ್ಪ್ರೇಕ್ಷೆ ಅತ್ಯಂತ ರೋಚಕ; ಅದರಂತೆ ತನ್ನ ಕಿರಣಗಳನ್ನು ಹರಡುವುದನ್ನು ಕೈಗಳಿಂದ ಅವಳನ್ನು ಸ್ಪರ್ಶಿಸುವುದು ಎಂಬುದೂ ಸಹ.

೫. ಕೋಪಗೊಂಡ ನಾಯಕಿಯನ್ನು ಅವಳಿಗೆ [೪]ದ್ರೋಹವೆಸಗಿದ ನಾಯಕನು ಬಗೆಬಗೆಯಲ್ಲಿ ಸಾಂತ್ವನ ಪಡಿಸುವ ರೀತಿಯಲ್ಲಿ ಚಂದ್ರ ಪೂರ್ವದಿಕ್ಕಿನಲ್ಲಿ ಬೆಳಗಿದ ಎಂಬುದು ಇಲ್ಲಿಯ ಒಟ್ಟು ಭಾವ; ಆಲಿ – ಸಖಿ; ಅಂಭೋರುಹ – ಕಮಲ; ಶಶೀ – ಚಂದ್ರ.

## ಚಂದ್ರೋದಯದಿಂದ ಬೆಳಗಿದ ದಿಕ್ಕುಗಳು

ಚಂದ್ರಸ್ಯ ಕೋಮಲಕರೈ [೫]ರಚಿತಾಂಗಸಂಗಾಃ
ಸಾಂದ್ರಾಂಧಕಾರಮಪಿ ತಾಃ ಸಹಸಾ ವಿಹಾಯ ।
ಈಶಂ ಸ್ವಪತ್ಸ್ವಖಿಲಜಂತುಷು ವವ್ರುರೇನ-
ಮಾಶಾ ಹಿ ನೂತ್ನವಿಷಯಾ ಗಣಯಂತಿ ನೈನಃ ॥ ೩೫ ॥

ಚಂದ್ರನ [೬]ಕೋಮಲವಾದ ಕಿರಣಗಳಿಂದ ಅವನ ಅಂಗಸಂಗವನ್ನು ಪಡೆದ ಆ ದಿಗಂಗನೆಯರು ನಿಬಿಡವಾದ ಕತ್ತಲೆಯನ್ನು ಸಹ ಕೂಡಲೇ ತೊರೆದು, ಎಲ್ಲಾ ಪ್ರಾಣಿಗಳು ಗಾಢ

---

೧. ಚಂದ್ರೋದಯಾನಂತರಂ ಕಿರಣಪ್ರಸಾರೈಃ ಪ್ರಥಮತಸ್ತಸ್ಯಾಂ ದಿಶ್ಯೇವ ತಮೋನಾಶಾದಿತಿ ಭಾವಃ। –ವ್ಯಾ.

೨. ಉಪಮಾಸಮಾಸೋಕ್ತ್ಯೋಃ ಸಂಕರಃ। ನಾಯಿಕಾನಾಯಕವಿಭೇದಸ್ತು ಗ್ರಂಥಗೌರವಭಯಾನ್ನ ಲಿಖ್ಯತೇ। –ವ್ಯಾ.

೩. ಪುನಸ್ತಸ್ಯಾಃ ದಿಶಃ ಪಾದೇ ಚರಣೇ ಪ್ರಣತಿಂ ನಮಸ್ಕಾರಂ ವಿಧಾಯ ದಿಗಧೋಭಾಗೇ ಚಂದ್ರೋದಯಸ್ಯ ಜಾಯಮಾನತ್ವಾದಿತಿ ಭಾವಃ। –ವ್ಯಾ.

೪. ಯಥಾ ಅಪರಾಧೀ ನಾಯಕಃ ಕುಪಿತಾಂ ನಾಯಿಕಾಂ ಸ್ವಸಖೀಪ್ರೇಷಣಪ್ರಣಾಮಕರಗ್ರಹಣಾದಿನಾ ಕೋಪಂ ಪರಿಹೃತ್ಯ ಆನನಚುಂಬನಂ ಕರೋತಿ ತದ್ವದಿತಿ ಭಾವಃ। –ವ್ಯಾ.

೫. ರಚಿತಃ ಅಂಗಸಂಗೋ ಯಾಸಾಂ ತಾಃ ಆಲಿಂಗಿತಾ ಇತಿ ಧ್ವನಿಃ। –ವ್ಯಾ.

೬. ಕೋಮಲಕರೈರ್ಮೃದುಕಿರಣೈಃ ಹಸ್ತೇನೇತಿ ಧ್ವನಿಃ। –ವ್ಯಾ.

ನಿದ್ರೆಯಲ್ಲಿದ್ದಾಗ, ಆ ಚಂದ್ರನನ್ನು ತಮ್ಮ ಪ್ರಿಯನನ್ನಾಗಿ ಅಂಗೀಕರಿಸಿದರು; ಹೊಸ ವಸ್ತುಗಳ ಬಗ್ಗೆ ಮೂಡುವ ಬಯಕೆಯು ಪಾಪವನ್ನು ಲೆಕ್ಕಿಸದು, ಅಲ್ಲವೆ !

ವಿ. : ೧. ದಿಕ್ಕುಗಳಲ್ಲಿ ಚಂದ್ರನ ಬೆಳದಿಂಗಳು ಕ್ರಮವಾಗಿ ಪಸರಿಸುವುದನ್ನು ಇಲ್ಲಿ ಕಾವ್ಯಮಯವಾಗಿ ವರ್ಣಿಸಿರುವರು.

೨. ಇಲ್ಲಿ [೧] ದಿಕ್ಕುಗಳನ್ನು ಅಂಗನೆಯರೆಂದೂ, ಚಂದ್ರನನ್ನು ಪರಪುರುಷನೆಂದೂ, [೨] ರಾತ್ರಿಕಾಲವನ್ನು ಇತರರು ಗಮನಿಸದಂತಹ ಏಕಾಂತಕಾಲವೆಂದೂ ಕರೆಯುತ್ತಾ ಅವು ತಮ್ಮ ಪತಿಯಾದ ಸೂರ್ಯನನ್ನು ತೊರೆದು [೩] ಪರಪುರುಷನಾದ ಚಂದ್ರನನ್ನು ಬಯಸಿದವು ಎಂಬುದಾಗಿ ಉತ್ಪ್ರೇಕ್ಷಿಸಿರುವರು; ಏನಃ – ಪಾಪ; ಕರ – ಕಿರಣ, ಕೈ; **ಅಂಧಕಾರ** – ಕತ್ತಲೆ, ದುಃಖ; **ಆಶಾ** – ದಿಕ್, ಆಸೆ.

೩. ಇಲ್ಲಿ [೪] ನಾಯಕನಾದ ಚಂದ್ರನನ್ನು ಉಪಪತಿ, ದಿಕ್ಕುಗಳನ್ನು ಕಾಮಿನಿಯರು ಎಂಬುದಾಗಿ ವರ್ಣಿಸಲಾಗಿದೆ.

### ರಸಿಕನಂತೆ ಕಂಗೊಳಿಸಿದ ಚಂದ್ರ

**ಪೂರ್ವಾಬ್ಧಾವವಗಾಹ್ಯ ಫೇನನಿಚಯಶ್ರೀಖಂಡಲೇಪದ್ಯುತಿಃ**
**ಸ್ವಾಂಕಾಲಂಕೃತಿಮೂಲನೀಲತಿಲಕಸ್ತಾರೌಘಹಾರಾನ್ ದಿಶನ್ ।**
**ವ್ಯೋಮಾಖ್ಯಾಂ ಕಬರೀಂ ಪ್ರಗೃಹ್ಯ ಸುಕರೈರಾಶ್ಲಿಷ್ಯ ದಿಕ್ಕಾಮಿನೀ-**
**ಮೈಂದ್ರೀಮಿಂದುರಸೌ ಚುಚುಂಬ ಸರಸೋ ರಾಗೇಣ ತಾಂ ರಂಜಯನ್** [೫] **॥೩೬॥**

ಪೂರ್ವಸಮುದ್ರದಲ್ಲಿ [೬] ಸ್ನಾನ, ಅದರ ನೊರೆಗಳ ರಾಶಿ ಎಂಬ ಶ್ರೀಗಂಧಲೇಪದ ಕಾಂತಿ, ತನ್ನ ಕಪ್ಪುಕಲೆಯ ರೂಪದ ಮುಖ್ಯ ಅಲಂಕಾರವಾದ ಕಪ್ಪುತಿಲಕ, ಇಂತಹ ರಸಿಕನಾದ ಚಂದ್ರನು ನಕ್ಷತ್ರಗಳೆಂಬ ಮುತ್ತಿನ ಮಾಲೆಗಳನ್ನು ಕಾಣಿಕೆಯಾಗಿ ನೀಡುತ್ತಾ, ಗಗನವೆಂಬ ಮುಡಿಯನ್ನು ತನ್ನ ಕಿರಣಗಳಿಂದ ಹಿಡಿದು ಪೂರ್ವದಿಕ್ಕೆಂಬ ಆ ಅಂಗನೆಯನ್ನು ಅನುರಾಗದಿಂದ ಮೆಚ್ಚಿಸಿ ಚುಂಬಿಸಿದ.

---

೧. ದಿಶಃ ಪರಾಂಗನಾ ಇತಿ ಧ್ವನಿಃ । ಚಂದ್ರಸ್ಯ ಸುಂದರಪುರುಷಸ್ಯೇತಿ ಧ್ವನಿಃ । –ವ್ಯಾ.

೨. ಸಾಂದ್ರಾಂಧಕಾರಮಪಿ ನಿಬಿಡಾಂಧಕಾರಮಪಿ ಭರ್ತೃವಿರಹಜದುಃಖಮಪೀತಿ ಧ್ವನಿಃ । –ವ್ಯಾ.

೩. ಪರಪುರುಷಗಮನಸ್ಯ ಜನಸಂಚಾರರಹಿತಕಾಲಿಕತ್ವಾದಿತಿ ಭಾವಃ । –ವ್ಯಾ.

೪. ನಾಯಕ ಉಪಪತಿಃ । "ಲಂಘಿತಾಚಾರಯಾ ಯಸ್ತು ವಿನಾಽಪಿ ವಿಧಿನಾ ಸ್ತ್ರಿಯಾ । ಸಂಕೇತಂ ನೀಯತೇ ಪ್ರೋಕ್ತೋ ಬುಧೈರುಪಪತಿಸ್ತು ಸಃ" ಇತ್ಯುಕ್ತೇಃ । –ವ್ಯಾ.
ನಾಯಿಕಾ ಜಾರಿಣ್ಯಃ ಅಭಿಸಾರಿಕಾಶ್ಚ । "ಸ್ಮರಾರ್ತಾಽಭಿಸರೇತ್ ಕಾಂತಂ ಸಾರಯೇದ್ವಾಽಭಿಸಾರಿಕಾ" ಇತ್ಯುಕ್ತೇಃ । –ವ್ಯಾ.

೫. ರೂಪಕಮಲಂಕಾರಃ । –ವ್ಯಾ.

೬. ಪ್ರಸಾಧನವಿಧೇಃ ಸ್ನಾನಪೂರ್ವಕತ್ವಾದಿತಿ ಭಾವಃ । –ವ್ಯಾ.

ವಿ. : ೧. ಇಲ್ಲಿಯೂ ಸಹ ಚಂದ್ರನ ಬೆಳದಿಂಗಳಿನ ಸೊಬಗಿನ ವರ್ಣನೆ ಮುಂದುವರೆದಿದೆ.

೨. ಹಿಂದಿನ ಶ್ಲೋಕದಲ್ಲಿದ್ದಂತೆ [೧] ಇಲ್ಲಿಯೂ ಸಹ ಕಾಮುಕನು ಪರಸ್ತ್ರೀಯನ್ನು ಉಪಾಯ-ದಿಂದ ಒಲಿಸಿಕೊಳ್ಳುವ ರೀತಿಯಲ್ಲಿ ಚಂದ್ರನು ಪೂರ್ವದಿಕ್ಕನ್ನು ಕ್ರಮೇಣ ವ್ಯಾಪಿಸಿದ್ದನ್ನು ವರ್ಣಿಸಿರುವರು ; ಫೇನ – ನೊರೆ.

**ಶ್ರೀಕೃಷ್ಣನ ವಕ್ಷಃಸ್ಥಳದಂತೆ ಕಂಗೊಳಿಸಿದ ಗಗನ**

**ಸುವರ್ಣಸಂವೀತವರೇಂದ್ರನೀಲ-**
**ಸುಮಧ್ಯನಿಷ್ಕಾಂಚಿತಕೃಷ್ಣವಕ್ಷಃ ।**
**ಸಹಾರಮನ್ವೇತ್ಯುದಿತೋರ್ಧ್ವರಶ್ಮಿ-**
**ಶಶಾಂಕಸಂಗ್ಯಭ್ರಮುದಾರತಾರಮ್ [೨] ॥ ೩೭ ॥**

ಉದಿಸಿದ ಊರ್ಧ್ವಕಿರಣಗಳ ಚಂದ್ರನಿಂದ ಕೂಡಿದ, ಉತ್ಕೃಷ್ಟವಾದ ನಕ್ಷತ್ರಗಳನ್ನು ಹೊಂದಿದ ಗಗನವು, ಮುತ್ತಿನ ಮಾಲೆಗಳಿಂದ ಕೂಡಿದ ಚಿನ್ನದಿಂದ ಬೆಸೆದ ಶ್ರೇಷ್ಠವಾದ ಇಂದ್ರನೀಲ-ಮಣಿಯ ಪದಕದ ಕಂಠಹಾರದಿಂದ ಅಲಂಕೃತವಾದ ಶ್ರೀಕೃಷ್ಣನ ವಕ್ಷಃಸ್ಥಳವನ್ನು ಹೋಲುವುದು.

ವಿ. : ೧. ಚಂದ್ರನ ಬೆಳದಿಂಗಳಿನಿಂದ ಭೂಷಿತವಾದ ಗಗನವು ಶ್ರೀಕೃಷ್ಣನ ವಕ್ಷಸ್ಥಳವನ್ನು ಹೋಲುವುದು ಎಂದು ಭಾವ.

೨. ಮುತ್ತಿನ ಹಾರಗಳಿಂದ ಕೂಡಿದ ಶ್ರೀಕೃಷ್ಣನ ವಕ್ಷಸ್ಥಳವು ಚಿನ್ನದಿಂದ ಕೂಡಿದ ಇಂದ್ರನೀಲಮಣಿಯಂತಹ ಮಧ್ಯಭಾಗವೆಂಬ ಕಂಠಮಣಿಯಿಂದ ಶೋಭಿಸುವಂತಹುದು. ನಕ್ಷತ್ರಗಳಿಂದ ಕೂಡಿದ ಗಗನವು ಹರಡಿದ ಚಂದ್ರನ ಕಿರಣಗಳ ಸಂಗದಿಂದ ಶೋಭಿಸುವುದು ಎಂಬಲ್ಲಿ ಎರಡಕ್ಕೂ ಸಮಾನವಾದ ಅಂಶಗಳ ವಿವರವಿದೆ; ಅಭ್ರ – ಗಗನ.

**ಲಕ್ಷ್ಮಿಯ ಕುಚಕೋಶದಂತೆ ಕಂಡ ಚಂದ್ರಮಂಡಲ**

**ವಾರ್ವಾಹಾವೃತಸರ್ವಭಾಗಮುದಿತಂ ಬಿಂಬಂ ಶಶಾಂಕಂ ವಿಧೋ-**
**ರೀಷದ್ದರ್ಶಿತಕೋಣಮಚ್ಯುತಮನಸ್ತೋಷಂ ನಭೋಽಗ್ರಸ್ಥಿತಮ್ ।**

---

೧. ಅತ್ರ ನಾಯಕೋ ದಯಿತಃ । "ವಾಸೋಽಂಗರಾಗಮಾಲ್ಯಾದ್ಯೈಃ ಹೃದ್ಯೈರ್ಯಃ ಪ್ರೇಯಸೀಂ ರಹಃ । ಪ್ರಸಾದಯನ್ ರಮಯತಿ ದಯಿತಃ ಸೋಽಭಿಧೀಯತೇ" ಇತ್ಯುಕ್ತೇಃ । ಐಂದ್ರೀಮಿತ್ಯಾದ್ಯುಕ್ತ್ಯಾ ಅಲಂಕಾರದಾನೇನ ಚ ನಾಯಿಕಾ ಪರಕೀಯೇತಿ ಧ್ವನ್ಯತೇ। -ವ್ಯಾ.

೨. ಪೂರ್ಣೋಪಮಾಲಂಕಾರಃ : ಅನಯಾ ಗೋಪೀನಾಂ ಕಾಮೋದ್ದೀಪನಕಾರಿತ್ವಂ ಚಂದ್ರಸ್ಯ ಧ್ವನ್ಯತ ಇತ್ಯಲಂಕಾ-ರೇಣ ಧರ್ಮಧ್ವನಿಃ। -ವ್ಯಾ.

**ರೇಜೇ ಕುಂಕುಮಶೋಭಿ ರಮ್ಯವಸನಚ್ಛನ್ನಂ ಮರುದ್ದರ್ಶಿತ-**
**ಪ್ರಾಂತಂ ಶ್ರೀಕುಚಕೋಶಮೀಷದುದಯನ್ಮಧ್ಯೋಪರಿಷ್ಟಾದಿವ [೧] ॥ ೩೮ ॥**

ಮೋಡದಿಂದ ಮುಚ್ಚಲ್ಪಟ್ಟ ಸರ್ವಪ್ರದೇಶ, ಸ್ವಲ್ಪ ಭಾಗ ಮಾತ್ರ ತೋರುತ್ತಿದ್ದ ತುದಿಯ ಭಾಗ, ಮೊಲದ ಚಿಹ್ನೆಯಿಂದ ಕೂಡಿದ ಗಗನಪ್ರಾಂತದಲ್ಲಿ ಉದಿಸಿದ ಇಂತಹ ಚಂದ್ರಮಂಡಲವು ಕುಂಕುಮದ ಶೋಭೆ, ರಮ್ಯವಾದ ವಸ್ತ್ರದ ತೆರೆ, ಗಾಳಿಯಿಂದಾಗಿ ನಡುವಿನ ಮೇಲ್ಭಾಗದಲ್ಲಿ ಸ್ವಲ್ಪ ಮಾತ್ರ ಹೊರತೋರುವ ಅಚ್ಯುತನಾದ ಶ್ರೀಕೃಷ್ಣನ ಮನಸ್ಸಿಗೆ ಮುದ ನೀಡುವ ಮಹಾಲಕ್ಷ್ಮಿಯ ಮೊಗ್ಗಿನಂತಹ ಸ್ತನದಂತೆ ಕಂಗೊಳಿಸಿತು.

ವಿ. : ವಾರ್ವಾಹ - ಮೇಘ.

### ಚಂದ್ರನ ಕಲಂಕಕ್ಕೆ ಕಾರಣೋತ್ಪ್ರೇಕ್ಷೆ

**ಗತೇ ದಿಶಾಂ ಭರ್ತರಿ ದೇಶಮನ್ಯಂ**
**ದಿವಾಕರೇ ಮಂದಮುಪೇತ್ಯ ಚಂದ್ರಃ।**
**ತದಂಬರಂ ಯಜ್ಜಗೃಹೇ ಕರೈಃ ಸ್ವೈ-**
**ಸ್ತತಃ ಕಲಂಕೀತಿ ಮಮ ಪ್ರತರ್ಕಃ [೨] ॥ ೩೯ ॥**

ದಿಕ್ಕುಗಳ ಪತಿಯಾದ ಸೂರ್ಯನು ಬೇರೆ ದೇಶಕ್ಕೆ ತೆರಳಿದಾಗ ಅವುಗಳ ಬಳಿಗೆ ಮೆಲ್ಲನೆ ಆಗಮಿಸಿದ ಚಂದ್ರನು ಅವರ ವಸ್ತ್ರಗಳನ್ನು ತನ್ನ ಕಿರಣಗಳಿಂದ ಸೆಳೆದ; ಅದಕ್ಕೆಂದೇ ಅವನು ಕಲಂಕ ಹೊಂದಿದವನಾಗಿರುವನು ಎಂಬುದು ನನ್ನ ಬಲವಾದ ಊಹೆ.

ವಿ.: ೧. ಚಂದ್ರನಲ್ಲಿ ಕಲಂಕವಿರುವುದನ್ನು ಇಲ್ಲಿ ಕಾವ್ಯಮಯವಾಗಿ ವರ್ಣಿಸಿರುವರು.

೨. ದಿಕ್ಕುಗಳೆಂಬ ಸೂರ್ಯಪತ್ನಿಯರನ್ನು ಚಂದ್ರ ಆ ಸೂರ್ಯನಿಲ್ಲದ ರಾತ್ರಿಕಾಲದಲ್ಲಿ ಸಂಪರ್ಕಿಸುವ ಕಾರಣದಿಂದಾಗಿ, ಕಲಂಕದಿಂದ ಕೂಡಿದವನಾಗಿರುವನು ಎಂದು ಭಾವ.

೩. ಇದರಿಂದ ಪರಸ್ತ್ರೀಗಮನವು ಎಂತಹ ತೇಜಸ್ವಿಗೂ [೩] ಕಲಂಕವಾಗುವುದು ಎಂಬ ಸಂದೇಶ ಸೂಚಿತ.

**ಯತ್ಪೂರ್ಣಂ ಪೌರ್ಣಮಾಸ್ಯಾಮುದಯತಿ ನಿಶಿ ತತ್ಕೀರ್ತಿನಾರ್ಯಾಃ ಕುಮಾರ್ಯಾ**
**ವಕ್ತ್ರಂ ಕಸ್ತೂರಿಕಾಕ್ತಂ ಪ್ರವಿರಲಕಚವಿನ್ಯಸ್ತಪುಷ್ಪಂ ಹಿ ಮನ್ಯೇ।**

---

೧. ಪೂರ್ಣೋಪಮಾ। -ವ್ಯಾ.

೨. ಉತ್ಪ್ರೇಕ್ಷಾಲಂಕಾರಃ। -ವ್ಯಾ.

೩.. ಅನೇನ ಚೌರ್ಯೇಣ ಗಮನಂ ದ್ಯೋತ್ಯತೇ। -ವ್ಯಾ.

**[೧]ಸ್ತೋತ್ರವ್ಯಾಜೇನ[೨] ದೇವೈರ್ವದನವಿನಿಹಿತಂ[೩] ನಂದಸೂನೋರ್ನ ಚೇತ್ ತತ್**
**ಪ್ರೀತ್ಯೈ ಗೋಪಾಂಗನಾನಾಂ ಕಥಮಹಿತವಧೂವರ್ಗತಾಪಾಯ ಚ ಸ್ಯಾತ್॥೪೦॥**

ಹುಣ್ಣಿಮೆಯಂದು ರಾತ್ರಿಯಲ್ಲಿ ಉದಿಸುವ ಪೂರ್ಣಚಂದ್ರನನ್ನು, ನಂದಸೂನುವಾದ ಶ್ರೀಕೃಷ್ಣನ ಕೀರ್ತಿನಾರಿ ಎಂಬ ಕುಮಾರಿಯ ಕಸ್ತೂರಿಯಿಂದ ಲೇಪಿತವಾದ, ದಟ್ಟವಾದ ತಲೆಕೂದಲುಗಳಲ್ಲಿ ಹೂ ಮುಡಿದಿರುವ ಮುಖ ಎಂಬುದಾಗಿ ಭಾವಿಸುವೆನು; ದೇವತೆಗಳು ಸ್ತೋತ್ರದ ನೆಪದಲ್ಲಿ ಮುಖದಲ್ಲಿ ಇರಿಸಿದ್ದು ಎಂದೂ ತಿಳಿಯುವೆನು; ಇಲ್ಲವಾದಲ್ಲಿ ಅದು ಅಲ್ಲಿನ ಗೋಪಿಕಾ ಸ್ತ್ರೀಯರ ಪ್ರೀತಿಗೂ ಶತ್ರುಸ್ತ್ರೀಯರ ಗುಂಪಿನ ಸಂತಾಪಕ್ಕೂ ಹೇಗೆ ಕಾರಣವಾಗುತ್ತಿದ್ದಿತು ? (ಕಚ – ಕೇಶ).

ವಿ. : ಹುಣ್ಣಿಮಯ ರಾತ್ರಿಯಲ್ಲಿ ಬೆಳಗುವ ಪೂರ್ಣಚಂದ್ರನು ಶ್ರೀಕೃಷ್ಣನು ಕೀರ್ತಿನಾರಿ ಎಂಬ ಕುಮಾರಿಯ ಮುಖ, ಪೂರ್ಣಚಂದ್ರನಲ್ಲಿಯ[೪] ಕಪ್ಪು ಕಲೆಯು ಆ ಕುಮಾರಿಯು ಧರಿಸಿರುವ ತಿಲಕ, ಅವನ ಸುತ್ತ ಇರುವ ನಕ್ಷತ್ರಗಳು ಆ ಕುಮಾರಿಯು ತನ್ನ ಕೇಶಪಾಶದಲ್ಲಿ ಮುಡಿದಿರುವ [೫]ಹೂವುಗಳು ಎನ್ನುವ ಇಲ್ಲಿಯ ಪರಿಕಲ್ಪನೆ ಅತ್ಯಂತ ಮನೋಜ್ಞವಾದುದು.

**ದಿವಸಕರೇ ಹೃತತಸ್ಕರಪ್ರಚಾರೇ**
**ನರನಯನಸ್ಯ ವಿದೂರವರ್ತ್ಮ ಯಾತೇ ।[೬]**
**ರಜನಿಕರೋಽಯಮುಪೇತ್ಯ ಮಾನವಾನಾಂ**
**ಶ್ರಮಮಧರೀಕುರುತೇ ಸ್ಮ ಪೂರ್ಣಬಿಂಬಃ ॥ ೪೧ ॥**

ಕಳ್ಳರ ಸಂಚಾರವನ್ನು ಸ್ಥಗಿತಗೊಳಿಸುವ ಸೂರ್ಯನು ಮನುಷ್ಯರ ಕಣ್ಣುಗಳಿಂದ ಬಹುದೂರಕ್ಕೆ ತೆರಳಿದ ಮೇಲೆ ಈ ಪೂರ್ಣಬಿಂಬನಾದ ಚಂದ್ರನು ಆಗಮಿಸಿ ಮಾನವರ ಆಯಾಸವನ್ನು ಪರಿಹರಿಸಿದನು.

---

೧. ಸ ಚೋಕ್ತಾರ್ಥಾಪತ್ತಿಪ್ರಸಾದೇನ ಲಬ್ಧ ಇತಿ ತಯೋಃ ಸಂಕರಃ। –ವ್ಯಾ.
೨. ವ್ಯಾಜೇನೇತಿ ಸತ್ಯಾರ್ಥಾಪಹ್ನವಪ್ರತೀತೇರಪಹ್ನವಗರ್ಭಿತೋತ್ಪ್ರೇಕ್ಷಾಲಂಕಾರಃ। –ವ್ಯಾ.
೩. ಪುನಃ ಕೀದೃಶಂ ಸ್ತೋತ್ರವ್ಯಾಜೇನ ಸ್ತುತಿಕರಣವ್ಯಪದೇಶೇನ ದೇವೈರ್ವದನೇ ಮುಖೇ ವಿನಿಹಿತಂ ನಿಕ್ಷಿಪ್ತಂ। ಅನೇನ ಪ್ರತಿದಿನಂ ಕ್ರಿಯಮಾಣಕಲಾಪಾನಸ್ಯ ಗತಿರುಕ್ತಾ। – ವ್ಯಾ.
೪. ಕಸ್ತೂರೀತಿಲಕೋಪೇತಮಿತ್ಯರ್ಥಃ। ಅನೇನ ಕಲಂಕಸ್ಯ ನಿರ್ವಾಹಃ ಕೃತಃ। – ವ್ಯಾ.
೫. ಪುನಃ ಕೀದೃಶಂ ಪ್ರವಿರಲಾನಿ ಪ್ರಕೀರ್ಣಾನಿ ಕಚವಿನ್ಯಸ್ತಾನಿ ಕೇಶಪಾಶನಿಹಿತಾನಿ ಪುಷ್ಪಾಣಿ ಯಸ್ಯ ತತ್ ತಥೋಕ್ತಮ್ । ಅನೇನ ನಕ್ಷತ್ರಾಣಾಂ ನಿರ್ವಾಹಃ ಕೃತಃ – ವ್ಯಾ.
೬. ತುರಗರಯಂ ವೃತ್ತಮ್ । –ವ್ಯಾ.

ವಿ. : ೧. [1]ರಾಜನು ಬೇರೆಡೆಗೆ ತೆರಳಿದಾಗ ಅವನ ಪುತ್ರನು ಪ್ರಜೆಗಳ ಯೋಗಕ್ಷೇಮ-ಕಾರ್ಯವನ್ನು ನಿರ್ವಹಿಸುವಂತೆ ಸೂರ್ಯನು ಅಸ್ತಂಗತವಾದಾಗ ಚಂದ್ರನು ಮಾನವರಿಗೆ ಹಿತಕರನಾಗಿ ಬೆಳಗುವನು; ರಜನಿಕರ – ಚಂದ್ರ.

೨. ಇಲ್ಲಿ ಸೂರ್ಯನು ಮನುಷ್ಯರ ಕಣ್ಣಿಗೆ ಕಾಣದೆ ದೂರಕ್ಕೆ ತೆರಳಿದಾಗ ಎಂದು ತಿಳಿಸುವ ಮೂಲಕ ಸೂರ್ಯನು ಅಸ್ತಂಗತನಾಗುವುದು ಎಂದರೆ ಸೂರ್ಯನು ನಾಶವಾಗುವುದು ಎಂದಲ್ಲ, ಭೂಮಿಯ ಬೇರೊಂದೆಡೆಗೆ ತೆರಳುವನು ಎಂಬ ವೈಜ್ಞಾನಿಕ ಸತ್ಯವನ್ನು ನಿರೂಪಿಸಿ-ರುವರು ಎಂದು ತಿಳಿಯಬೇಕು.

ಸ ಮಾರಮೌರ್ವೀಸ್ಥಿತಮಲ್ಲಿಕೇಷು-
ರಿವ ವ್ರಜಸ್ತ್ರೀಹೃದಯಂ ವಿಜಿತ್ಯ ।
ಹರೇಃ [2]ಪದಂ ಪ್ರಾಪ ಶನೈಃ ಸ್ಮರೇಣ
ತಮಾತ್ಮಸಾತ್ಕರ್ತುಮಿವೋತ್ಪ್ರಯುಕ್ತಃ ॥ ೪೨ ॥

ಆ ಚಂದ್ರನು, ಆ ಕೃಷ್ಣನನ್ನು ತನ್ನವನನ್ನಾಗಿಸಿಕೊಳ್ಳಲೆಂಬಂತೆ ಮನ್ಮಥನಿಂದ ಮೇಲಕ್ಕೆ ಪ್ರಯೋಗಿಸಲ್ಪಟ್ಟ ಮನ್ಮಥನ ಧನುಸ್ಸಿನಲ್ಲಿನ ಹಗ್ಗದಲ್ಲಿನ ಮಲ್ಲಿಗೆಯ ಬಾಣದಂತೆ ಗೋಕುಲದ ಸ್ತ್ರೀಯರ ಹೃದಯವನ್ನು ಗೆದ್ದು, ಮೆಲ್ಲನೆ ಶ್ರೀಕೃಷ್ಣನ ಪಾದ(ಆಕಾಶ)ವನ್ನು ತಲುಪಿದ.

ವಿ. : ೧. [3]ಚಂದ್ರೋದಯದಿಂದ ಗೋಪಿಕೆಯರ ಮನಸ್ಸಿನಲ್ಲಿ ಶ್ರೀಕೃಷ್ಣನ ಬಗ್ಗೆ ಕಾಮಭಾವ ಉದಿಸಿತು ಎಂದು ಭಾವ ; ಮಾರ – ಮನ್ಮಥ ; ಇಷು – ಬಾಣ.

೨. ಶ್ರೀಕೃಷ್ಣನನ್ನು ಸಹ ತನ್ನೆಡೆಗೆ ಸೆಳೆಯಲೆಂದು ಮನ್ಮಥ ಬಯಸಿದ್ದು ಅವನ ಮನಸ್ಸನ್ನು ವಿಕಾರಗೊಳಿಸುವ ರೀತಿಯಲ್ಲಿ ಎಂಬ ಅರ್ಥದಲ್ಲಿ ಅಲ್ಲ; ಕೇವಲ ಪ್ರಾರ್ಥಿಸುವ ಸಲುವಾಗಿ ಎಂಬ ಅರ್ಥವನ್ನು ಹರೇಃ ಪದಂ ಪ್ರಾಪ ಎಂಬ ಪದದಿಂದ ಸೂಚಿಸಿರುವರು.

೩. ಎಂದರೆ ಗೋಪಿಕಾಸ್ತ್ರೀಯರ ಬಗ್ಗೆ ಶ್ರೀಕೃಷ್ಣನು ಅನುಗ್ರಹಭಾವವನ್ನು ತಡೆಯಲಿ ಎಂಬ ಉದ್ದೇಶವಷ್ಟೇ ಮನ್ಮಥನ ಭಾವವಾಗಿದ್ದಿತು ಎಂದು ಭಾವ. ಸ್ವತಃ ಕಾಮಜನಕನಾದ ಶ್ರೀಕೃಷ್ಣನ ಮನಸ್ಸನ್ನು ಸೆಳೆಯುವ ಶಕ್ತಿಯು ಇತರರಿಗೆ ಸರ್ವಥಾ ಇಲ್ಲ ಎಂಬ ಅರ್ಥವು ಇದರಿಂದ ಸೂಚಿತ.

---

೧. ಅನೇನ ಪ್ರಜಾಪಾಲಕೇ ವೃದ್ಧೇ ರಾಜ್ಞಿ ಗತೇ ಸತಿ ಅರ್ವಾಚೀನೋಽಪಿ ತತ್ಪುತ್ರಸ್ತತೋಽಪ್ಯಧಿಕಂ ಪ್ರಜಾಃ ಸುಖಯತೀತ್ಯಯಮರ್ಥೋಽ ಧ್ವನ್ಯತೇ। –ವ್ಯಾ.

೨. ಪದಮಿತ್ಯನೇನ ವ್ರಜಸ್ತ್ರೀಜಯವನ್ನ ಶ್ರೀಕೃಷ್ಣಜಯಃ ಕಿಂತು ಪಾದಪ್ರಣಾಮಾದಿನಾ ಅಭಿಮುಖೀಕರಣಮಾತ್ರಮಿತಿ ಧ್ವನ್ಯತೇ। –ವ್ಯಾ.

೩. ಚಂದ್ರೋದಯಂ ವೀಕ್ಷ್ಯ ವ್ರಜಾಂಗನಾನಾಂ ಶ್ರೀಕೃಷ್ಣೇನ ರಂತುಮಿಚ್ಛಾ ಶ್ರೀಕೃಷ್ಣಸ್ಯ ತಾಭಿಃ ಸಹ ರಂತುಮಿಚ್ಛಾ ಚೋತ್ಪನ್ನೇತಿ ಭಾವಃ। –ವ್ಯಾ.

### ಚಂದ್ರೋದಯದಲ್ಲಿ ಶ್ರೀಕೃಷ್ಣನ ವೃಂದಾವನ ಪ್ರವೇಶ

ಗಂಧರ್ವಗೀತವೃತಮಭ್ರಮಪಾರತಾರಂ
ಚಂದ್ರೇಣ ರಂಜಿತಮುದೀಕ್ಷ್ಯ ಮುದಾ ಮುಕುಂದಃ।
ವೃಂದಾವನಂ ಮಧುಪಮಂಜುರವಂ ಪ್ರಸೂನ-
ಸಂದೋಹಸಾಂದ್ರಮವಿಶತ್ ತರುಜಾಲನೀಲಮ್ [೧] ॥ ೪೩ ॥

ಗಂಧರ್ವರ ಗಾಯನದಿಂದ ತುಂಬಿದ, ಅಪಾರ ನಕ್ಷತ್ರಗಳು ಕಂಗೊಳಿಸುವ [೨]ಗಗನವು ಚಂದ್ರನಿಂದ ರಂಜಿತವಾದದ್ದನ್ನು ಕಂಡು, ಶ್ರೀಕೃಷ್ಣನು ದುಂಬಿಗಳ ಮಂಜುಳನಾದದಿಂದ ಕೂಡಿದ, ಪುಷ್ಪರಾಶಿ ತುಂಬಿದ್ದ, ವೃಕ್ಷಗಳ ಸಮೂಹಗಳಿಂದ ಶ್ಯಾಮಲವಾಗಿದ್ದ ವೃಂದಾವನ-ವನ್ನು ಆನಂದದಿಂದ ಹೊಕ್ಕನು.

ವಿ. : ೧. ಚಂದ್ರೋದಯವಾಗುತ್ತಿದ್ದಂತೆ [೩]ಶ್ರೀಕೃಷ್ಣ ವೃಂದಾವನವನ್ನು ಪ್ರವೇಶಿಸಿದ ಎಂದರ್ಥ.

೨. ಗಗನದಲ್ಲಿ ಚಂದ್ರ ಬೆಳಗಿದಂತೆ, ವೃಂದಾವನದಲ್ಲಿ ಶ್ರೀಕೃಷ್ಣ ಕಂಗೊಳಿಸಿದ ಎಂದು ಭಾವ.

೩. ಗಗನದಲ್ಲಿ [೪]ಗಂಧರ್ವರ ಗಾಯನವಿದ್ದಂತೆ ವೃಂದಾವನದಲ್ಲಿ ದುಂಬಿಗಳ ಮಂಜುಳ-ನಾದವಿತ್ತು. ಗಗನದಲ್ಲಿ ಅಪಾರ [೫]ನಕ್ಷತ್ರಗಳಿದ್ದಂತೆ ವೃಂದಾವನದಲ್ಲಿ ಪುಷ್ಪವೃಂದ ತುಂಬಿತ್ತು. ಗಗನದ ನೀಲವರ್ಣದಂತೆ ಅಪಾರ ವೃಕ್ಷಗಳಿಂದ ನಿಬಿಡವಾಗಿದ್ದ ವೃಂದಾವನವು ನೀಲವರ್ಣದಿಂದ ಕೂಡಿತ್ತು. ಅಂತಹ ವೃಂದಾವನದಲ್ಲಿ ಶ್ರೀಕೃಷ್ಣ ಚಂದ್ರನಂತೆ ಪ್ರವೇಶಿಸಿದ ಎಂಬುದು ಇಲ್ಲಿಯ ಒಟ್ಟು ತಾತ್ಪರ್ಯ.

### ಶ್ರೀಕೃಷ್ಣನ ಪ್ರವೇಶದಿಂದಾದ ಅಪೂರ್ವಪರಿಣಾಮ

ಇಂದುಃ ಸ್ವರಮ್ಯಕಿರಣೈರ್ವಿಪಿನಂ ಪುಪೂರ
ಮಂದಾನಿಲಶ್ಚ ಮುದಿತೋತ್ಪಲಮಾನ್ಯಗಂಧೈಃ।
ಸಾಂದ್ರಪ್ರಸೂನನಿಚಯೈಸ್ತರವಃ ಸಮಂತಾತ್
ಕಂದರ್ಪತಾತಮವಲೋಕ್ಯ ಪಿಕಾಶ್ಚ ಗೀತೈಃ [೬] ॥ ೪೪ ॥

---

೧. ಅತ್ರ ಬಿಂಬಪ್ರತಿಬಿಂಬಭಾವೇನೌಪಮ್ಯಸ್ಯ ಗಮ್ಯತ್ವಾತ್ ಉಪಮಾಲಂಕಾರಃ। -ವ್ಯಾ.
೨. ಅಭ್ರಸಾಮ್ಯಾರ್ಥಮಿದಮ್। -ವ್ಯಾ.
೩. ಚಂದ್ರಸ್ಯ ಶ್ರೀಕೃಷ್ಣಃ ಪ್ರತಿನಿಧಿರಿತಿ ಬೋಧ್ಯಮ್। -ವ್ಯಾ.
೪. ಅನೇನ ಗಂಧರ್ವಗೀತಪ್ರತಿರೂಪಕಮುಕ್ತಮ್। -ವ್ಯಾ.
೫. ಅನೇನ ನಕ್ಷತ್ರಪ್ರತಿರೂಪಕಮುಕ್ತಮ್। -ವ್ಯಾ.
೬. ದೀಪಕಾಲಂಕಾರಃ। -ವ್ಯಾ.

ಕಾಮಜನಕನಾದ ಶ್ರೀಕೃಷ್ಣನನ್ನು ಕಂಡು, ಚಂದ್ರನು ಕಾಡನ್ನು ತನ್ನ ರಮಣೀಯವಾದ ಕಿರಣಗಳಿಂದ ತುಂಬಿಸಿದ; ಮಂದಮಾರುತವು ಅರಳಿದ ಕನ್ನೈದಿಲೆಗಳ ಆಹ್ಲಾದಕರವಾದ ಪರಿಮಳದಿಂದ ತುಂಬಿಸಿತು; ವೃಕ್ಷಗಳು ನಿಬಿಡವಾದ ಪುಷ್ಪವೃಂದಗಳನ್ನು ಎಲ್ಲೆಡೆಯೂ ತುಂಬಿಸಿದವು ಹಾಗೂ ಕೋಗಿಲೆಗಳು ತಮ್ಮ ಧ್ವನಿಗಳಿಂದ ತುಂಬಿಸಿದವು.

ವಿ. : ೧. ಶ್ರೀಕೃಷ್ಣನ ಆಗಮನದಿಂದ ನಲಿದ ಚಂದ್ರ, [೧]ಮಂದಮಾರುತ, ವೃಕ್ಷಗಳು ಹಾಗೂ ಕೋಗಿಲೆಗಳು ಆ ವನದಲ್ಲಿ ಬಗೆಬಗೆಯಿಂದ ಅವನಿಗೆ ತಮ್ಮ ಸೇವೆಯನ್ನು ಸಲ್ಲಿಸಿದ ಮನೋಜ್ಞ-ವಾದ ನಿರೂಪಣೆ ಇಲ್ಲಿದೆ; ವಿಪಿನ – ಅರಣ್ಯ; ಉತ್ಪಲ – ಕನ್ನೈದಿಲೆ.

೨. ಚಂದ್ರನು ಕಿರಣಗಳಿಂದ; ಮಂದಮಾರುತ ಮನೋಹರ ಪರಿಮಳದಿಂದ, ವೃಕ್ಷಗಳು ಹೂವುಗಳಿಂದ ಹಾಗೂ ಕೋಗಿಲೆಗಳು ಗೀತೆಗಳಿಂದ [೨]ಶ್ರೀಕೃಷ್ಣನನ್ನು ಸೇವಿಸಿದವು ಎಂದು ಭಾವ.

೩. ಇದರಿಂದ ಪ್ರತಿಯೊಬ್ಬರೂ ಸಹ ತಮ್ಮ ಯೋಗ್ಯತೆಗೆ ಅನುಗುಣವಾಗಿ ಭಗವತ್ಸೇವೆಯನ್ನು ತಪ್ಪದೇ ಸಮರ್ಪಿಸಬೇಕು ಎಂಬ ವಿಶೇಷಾಂಶ ನಿರೂಪಿತವಾಗಿದೆ.

## ಶ್ರೀಕೃಷ್ಣನ ಪಾದವನ್ನು ಸ್ಪರ್ಶಿಸಿದ ಚಂದ್ರಕಿರಣಗಳು

**ವಿಶ್ವಸ್ಯ ಮೋಹನ ಇತೀಶ ಯಶೋ ಮದೀಯಂ**
**[೩]ವಿಸ್ತಾರಯೇಹ ಲಲನಾಸಹಿತೋ ವಿಹೃತ್ಯ ।**
**ಇತ್ಯರ್ಥನಾಕೃದಿವ ವೃಕ್ಷತಲಪ್ರವಿಷ್ಟೈಃ**
**ಕೃಷ್ಣಾಂಘ್ರಿಮಾಸ್ಪೃಶತಿ ಹೃದ್ಯಕರೈರ್ಹಿಮಾಂಶುಃ [೪] ॥ ೪೫ ॥**

ನೀನು ಗೋಪಿಯರೊಂದಿಗೆ ವಿಹರಿಸುವ ಮೂಲಕ "ವಿಶ್ವವನ್ನೇ ಮೋಹಿಸುವವನು" ಎಂಬ ನನ್ನ ಕೀರ್ತಿಯನ್ನು ಹರಡಿಸು ಎಂದು ಬೇಡುವವನಂತೆ ಚಂದ್ರನು ಮರಗಳ ಬುಡದೊಳಗೆ ಪ್ರವೇಶಿಸಿದ ತನ್ನ ಕಿರಣಗಳ ಮೂಲಕ ಶ್ರೀಕೃಷ್ಣನ ಪಾದವನ್ನು ಸ್ಪರ್ಶಿಸಿದ.

ವಿ. : ೧. ವೃಕ್ಷಗಳ ಎಲೆಗಳ ಮಧ್ಯದಿಂದ ನುಸುಳಿದ ಚಂದ್ರನ ಕಿರಣಗಳು ಶ್ರೀಕೃಷ್ಣನ ಪಾದಗಳನ್ನು ಸ್ಪರ್ಶಿಸಿದವು ಎಂದು ಭಾವ; ಅದನ್ನು ಚಂದ್ರನು ಶ್ರೀಕೃಷ್ಣನಿಗೆ ಸಲ್ಲಿಸಿದ ಪ್ರಾರ್ಥನೆ ಎಂಬುದಾಗಿ ಇಲ್ಲಿ ಉತ್ಪ್ರೇಕ್ಷಿಸಿರುವರು; ಹಿಮಾಂಶು – ಚಂದ್ರ.

---

೧. ಮಂದಾನಿಲಶ್ಚ ಮುದಿತಸ್ಯ ಚಂದ್ರಕಿರಣಾನ್ ಪ್ರಸಾರಿತವಾನಿತಿ ಭಾವಃ। ಏವಮುತ್ತರತ್ರಾಪಿ ದ್ರಷ್ಟವ್ಯಮ್ । –ವ್ಯಾ.

೨. ಮದನಮಿತ್ರತ್ವಾಚ್ಚಂದ್ರಃ ಸ್ವಮಿತ್ರತ್ವಾಚ್ಚಂದ್ರಃ ಸ್ವಮಿತ್ರತಾತಪ್ರವಿಷ್ಟೇ ವನೇ ಸ್ವಕಿರಣಾನ್ ಪ್ರಸಾರಿತವಾನಿತಿ ಭಾವಃ। ಏವಮುತ್ತರತ್ರಾಪಿ ದ್ರಷ್ಟವ್ಯಮ್ । –ವ್ಯಾ.

೩.. ಯತ್ರ ಯತ್ರ ಗಚ್ಛತಿ ತತ್ರ ತತ್ರ ಸ್ಪೃಶತೀತ್ಯರ್ಥಃ। ಪೌನಃಪುನ್ಯೇನ ಪ್ರಾರ್ಥನಾಲಕ್ಷಣಮಿದಮ್ । –ವ್ಯಾ.

೪. ಉತ್ಪ್ರೇಕ್ಷಾಲಂಕಾರಃ। –ವ್ಯಾ.

೨. ಶ್ರೀಕೃಷ್ಣನ ಪಾದವನ್ನು ಸ್ಪರ್ಶಿಸುವ ಮೂಲಕ ಚಂದ್ರನು ಆ ವೃಂದಾವನದಲ್ಲಿ ವಿಹರಿಸುವ ತನ್ನ ಕೀರ್ತಿಯನ್ನು ವಿಶೇಷವಾಗಿ ಹರಡಲಿ ಎಂದು ಪ್ರಾರ್ಥಿಸಿಕೊಂಡ ಎನ್ನುವ ಮೂಲಕ ಶ್ರೀಕೃಷ್ಣನು ಚಂದ್ರಾದಿ ಸಕಲದೇವತೆಗಳಿಗಿಂತ ಮಿಗಿಲಾದವನು ಎಂಬ ತತ್ತ್ವವು ಸೂಚಿತ.

**ಶ್ರೀಕೃಷ್ಣ ಮಾಡಿದ ವೇಣುಗಾನ**

**ವ್ಯಾಕೀರ್ಣಕಾಮ ಇವ ತೈರ್ವಿವಿಧೈರ್ವಿಭಾವೈ-**
**ರಾಕರ್ಷಯನ್ ವ್ರಜವಧೂರ್ನಿಜಸಂಗಯೋಗ್ಯಾಃ।**
**ವೇಣುಂ ಕ್ರಮೇಣ ರಣಯನ್ ಬಹುತಾನಗಾನ-**
**ಮಾನಜ್ಞಮೌಲಿರುದಗಾಯದಧೀಶ್ವರೋಽಸೌ ॥ ೪೬ ॥**

ಆ ಬಹುಬಗೆಯ ವಿಭಾವಗಳಿಂದ ಕಾಮೋದ್ರೇಕಗೊಂಡವನಂತೆ, ನಾನಾ ತಾನ ಗಾನಗಳ ಪ್ರಮಾಣವನ್ನು ಬಲ್ಲ ಸಕಲಜಗದೊಡೆಯನಾದ ಆ ಶ್ರೀಕೃಷ್ಣನು ತನ್ನ ಸಂಗಕ್ಕೆ ಅರ್ಹರಾಗಿದ್ದ ಗೋಪಿಕಾಸ್ತ್ರೀಯರನ್ನು ಆಕರ್ಷಿಸುತ್ತ, ಕ್ರಮೇಣ ಕೊಳಲನ್ನು ನುಡಿಸುತ್ತ, ಉತ್ಕೃಷ್ಟವಾಗಿ ಹಾಡಿದನು.

ವಿ.: ೧. ಶ್ರೀಕೃಷ್ಣನು ಗೋಪಿಕಾಸ್ತ್ರೀಯರ ಮನಸ್ಸನ್ನು ಆಕರ್ಷಿಸಿದ ಬಗೆಯು ಇಲ್ಲಿ ವರ್ಣಿತ-ವಾಗಿದೆ.

೨. ಗೋಪಿಯರು ಶ್ರೀಕೃಷ್ಣನ ಸಂಗಕ್ಕೆ ಯೋಗ್ಯರಾದವರು ಎಂದರೆ ಆ ಕಾಲದಲ್ಲಿ ರಮಾವೇಶದಿಂದ ಕೂಡಿದವರು ಎಂದರ್ಥ:

**ಋತೇ ರಮಾಂ ಜಾತು ಮಮಾಂಗಸಂಗಯೋಗ್ಯಾಂಗನಾ ನೈವ ಸುರಾಲಯೇಽಪಿ।**
- ಮ.ಭಾ.ತಾ.ನಿ. (೧೧/೧೨೬)

೩. ಶ್ರೀಕೃಷ್ಣನು ಅಧೀಶ್ವರ ಎನ್ನುವ ಮೂಲಕ ಅವನು [1]ಕಾಮೋದ್ರೇಕಗೊಂಡದ್ದು ಕೇವಲ ನಟನೆ ಎಂಬ ವಿಶೇಷಾಂಶ ಸೂಚಿತ.

೪. ಇಲ್ಲಿ [2]ವಿಭಾವ ಎಂದರೆ ವಿಲಾಸ ಎಂದರ್ಥ. ರತಿ ಎಂಬ ಸ್ಥಾಯಿಭಾವಕ್ಕೆ ರಸತ್ವವನ್ನು ನೀಡುವಂತಹ ಉದ್ದೀಪನಕಾರ್ಯ ಎಂದರ್ಥ; ಅಂತಹ ವಿಭಾವವು ಆಲಂಬನ, ಉದ್ದೀಪನ ಎಂಬುದಾಗಿ [3]ಎರಡು ಬಗೆ.

---

೧. ಚಂದ್ರಾದ್ಯುದ್ದೀಪನವಿಭಾವೈಃ। ತದುಕ್ತಮ್ - 'ವಿಭಾವೈರನುಭಾವೈಶ್ಚ ಸಾತ್ತ್ವಿಕೈರ್ವ್ಯಭಿಚಾರಿಭಿಃ। ಆನೀಯಮಾನಃ ಸ್ವಾದುತ್ವಂ ಸ್ಥಾಯಿಭಾವೋ ರಸಃ ಸ್ಮೃತಃ' ಇತಿ। -ವ್ಯಾ.
೨. ವ್ಯಾಕೀರ್ಣಃ ರಸೀಭೂತಃ ಕಾಮಃ ರತಿರಿಚ್ಛಾವಿಶೇಷೋ ಯಸ್ಯ ಸ ಇವ ಕಾಮೋದ್ರೇಕವಾನಿವೇತ್ಯರ್ಥಃ। -ವ್ಯಾ.
೩. ತತ್ರ ವಿಭಾವಾಸ್ತು ದ್ವಿವಿಧಾಃ। ಆಲಂಬನವಿಭಾವಾ ಉದ್ದೀಪನವಿಭಾವಾಶ್ಚೇತಿ। "ಚಂದ್ರೋದಯೋ ಘನಧ್ವಾನಃ ಕೋಕಿಲಾರಣಿತಂ ಮಧುಃ। ಉದ್ದೀಪನವಿಭಾವಾಃ ಸ್ಯುಃ" ಇತಿ। -ವ್ಯಾ.

## ಶ್ರೀಕೃಷ್ಣನ ವೇಣುಗಾನದ ಅಪೂರ್ವತೆ

**ಹೃದ್ಗಂ ಹೃದ್ಯನುರಂಜಯನ್ ಸವಯಸಃ ಸಂಹರ್ಷಯನ್ ಕರ್ಷಯನ್**
**ಗೋಪಸ್ತ್ರೀಹೃದಯಂ ಪಶೂನ್ ಋಷಿಗಣಾನ್ ನಿಶ್ಚೇಷ್ಟಯನ್ ಸ್ವಷ್ಟಯನ್ ।**
**ವಿಶ್ವಂ ಸ್ವಸ್ಯ ವಶಂ ವಿಯದ್ವ್ಯಹವಧೂಃ ಸಮ್ಮೂರ್ಛಯಂಶ್ಚಾರಣಾನ್**
**ಸಿದ್ಧಾನ್ ಸಂತ್ರಪಯನ್ ಸುರಾನ್ ವಿನಮಯನ್ ವೇಣುಂ ಪುಪೋಷಾಚ್ಯುತಃ॥**

ತನ್ನ ಉದರದಲ್ಲಿ ನೆಲೆಸಿದ ಜಗತ್ತನ್ನು ಮನಸ್ಸಿನಲ್ಲಿಯೇ ರಂಜಿಸುತ್ತ, ಗೆಳೆಯರನ್ನು ನಲಿಸುತ್ತ, ಗೋಪಿಯರ ಮನಸ್ಸನ್ನು ಸೆಳೆಯುತ್ತ, ಗೋವುಗಳನ್ನು ಋಷಿಗಳ ಗುಂಪನ್ನು ಮೈಮರೆಯುವಂತೆ ಮಾಡುತ್ತ, ಜಗತ್ತನ್ನು ತನ್ನ ವಶವೆಂದು ಪ್ರಕಟಪಡಿಸುತ್ತ, ಗಗನದಲ್ಲಿ ನೆಲೆಸಿದ್ದ ಸ್ತ್ರೀಯರನ್ನು ಪರವಶರನ್ನಾಗಿಸುತ್ತ, ಚಾರಣರನ್ನೂ ಸಿದ್ಧರನ್ನೂ ಮೈಮರೆಸುತ್ತಾ, ದೇವತೆಗಳನ್ನು ಮಣಿಸುತ್ತ ಅಚ್ಯುತನಾದ ಶ್ರೀಕೃಷ್ಣನು [೧]ವೇಣುಗಾನವನ್ನು ಮಾಡಿದ.

ವಿ.: ೧. ಶ್ರೀಕೃಷ್ಣನ ವೇಣುಗಾನದ ಅಪೂರ್ವ ವರ್ಣನೆ ಇಲ್ಲಿ ನಿರೂಪಿತವಾಗಿದೆ.

೨. ಗೋಪಗೋಪಿಯರಿಗೆ ಗೋವು ಮೊದಲಾದ ಪ್ರಾಣಿಗಳಿಗೆ, ಋಷಿಮುನಿಗಳಿಗೆ ದೇವತಾಸ್ತ್ರೀಯರಿಗೆ, ಸಿದ್ಧಚಾರಣರಿಗೆ, ಹಾಗೂ ದೇವತೆಗಳಿಗೆ ಶ್ರೀಕೃಷ್ಣನ ವೇಣುಗಾನ[೨] ಬಗೆ-ಬಗೆಯಲ್ಲಿ ಆನಂದ ನೀಡಿತು ಎಂಬುದು ಇಲ್ಲಿಯ ಮುಖ್ಯಭಾವ; ಸವಯಸ್ಕರು – ಗೆಳೆಯರು.

೩. ಸಾಮಾನ್ಯವಾಗಿ ಒಂದೊಂದು ವಸ್ತುವು ಒಂದೊಂದು ಬಗೆಯ ಜನರಿಗೆ ಹಿತವೆನ್ನಿಸುವುದು ಕಂಡಿದೆ. ಆದರೆ ಶ್ರೀಕೃಷ್ಣನ ವೇಣುಗಾನ ಸಮಸ್ತ ವಿಶ್ವಕ್ಕೇ ಆಕರ್ಷಕವಾಗಿದ್ದಿತು ಎಂಬಲ್ಲಿ ಅದರ ಅಸಾಧಾರಣವಾದ ಹಿರಿಮೆ ನಿರೂಪಿತವಾಗಿದೆ.

## ಶ್ರೀಕೃಷ್ಣನ ವೇಣುನಾದದ ವೈಖರಿ

**ಶುಷ್ಕಾಮಪಿ ಸ್ಮ ಸರಸಾಮಧರಾಮೃತೇನ**
**ಹೃದ್ಯಸ್ವನಾಮಪಿ ವಿಧಾಯ ಮೃದೂಕ್ತಿಶೂನ್ಯಾಮ್ ।**

---

೧. ಬರ್ಹಾಪಿಚ್ಛೋ ವನಚರವಪುಃ ಕರ್ಣಯೋಃ ಕರ್ಣಿಕಾರಃ
ಸವ್ಯೇ ಬಾಹೌ ನಿಹಿತವದನಃ ಸಜ್ಜಮನ್ಯತ್ರ ಹಸ್ತೇ ।
ಭ್ರೂವಿನ್ಯಾಸಾಂಗುಲಿಭೀ ರಣಯನ್ ಗಾಪಯನ್ ಗೋಪವೃಂದಾನ್
ಭೂತಗ್ರಾಮಂ ತರ್ಹಿ ರಮಯನ್ ಬ್ರಹ್ಮ ಗಾಂಧರ್ವಮೇವ ॥ –ಭಾಗ.(೧೦/೧೯/೬)
ವಾಮಬಾಹುಕೃತವಾಮಕಪೋಲೋ ವಲ್ಗಿತಭ್ರುರಧರಾರ್ಪಿತವೇಣುಃ ।
ಕೋಮಲಾಂಗುಲಿಭಿರಾಶ್ರಿತಮಾರ್ಗಂ ಗೋಪ್ಯ ಈರಯತಿ ಯತ್ರ ಮುಕುಂದಃ ॥
ವ್ಯೋಮಯಾನವನಿತಾಃ ಸಹ ಸಿದ್ಧೈರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ।
ಕಾಮಮಾರ್ಗಣಸಮರ್ಪಿತಚಿತ್ತಾಃ ಕಶ್ಮಲಂ ಯಯುರಪಸ್ಮೃತನೀವ್ಯಃ ॥ – ಭಾಗ.(೧೦/೩೫/೧,೨)

೨. ಶ್ರೀಕೃಷ್ಣಗೀತಶ್ರವಣಾಯಾಕಾಶಗತಸುರವಧೂರಿತ್ಯರ್ಥಃ । –ವ್ಯಾ.

ಛಿದ್ರಂ ನಿಗೂಹ್ಯ ಮುರಲೀಂ[೧] ಮುರಜಿಚ್ಚುಚುಂಬೇ
ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ[೨] ॥ ೪೮ ॥

ಮುರಾರಿಯಾದ ಶ್ರೀಕೃಷ್ಣನು ಒಣಗಿದ ಆ ವೇಣುವನ್ನು ಅಧರಾಮೃತದಿಂದ ಸರಸ-ವನ್ನಾಗಿಸಿದ; ಮೃದುವಚನವಿರದ ಅದನ್ನು ರಮ್ಯಧ್ವನಿಯುಳ್ಳದ್ದನ್ನಾಗಿಸಿದ; ಅದರಲ್ಲಿನ ಛಿದ್ರವನ್ನು ಮರೆಮಾಡಿ, ಆ[೩] ಮುರಳಿಯನ್ನು ಚುಂಬಿಸಿದ; ಉತ್ತಮವಂಶ(ಬಿದಿರು)ದಲ್ಲಿ ಜನಿಸಿದ ಸ್ತ್ರೀಯರಲ್ಲಿ ಯಾರಿಗೆ ತಾನೇ ಪಕ್ಷಪಾತವಿರದು?

ವಿ. : ೧. [೪]ವೇಣು ಎಂದರೆ ಒಣಗಿದ ಬಿದಿರಿನ ತುಣುಕು. ಶ್ರೀಕೃಷ್ಣ ಅದನ್ನು ತನ್ನ ಅಧರಾಮೃತದಿಂದ ಆರ್ದ್ರವನ್ನಾಗಿಸಿದ; ಅದು ಜಡ, ಆದ್ದರಿಂದ ಮಧುರಮಾತನ್ನಾಡುವ ಶಕ್ತಿಯನ್ನು ಹೊಂದಿಲ್ಲದಂತಹುದು. ಶ್ರೀಕೃಷ್ಣ ಅದರಿಂದ ಮಧುರಧ್ವನಿ ಹೊರಹೊಮ್ಮುವಂತೆ ಮಾಡಿದ; ಅದರಲ್ಲಿ ಅನೇಕ ರಂಧ್ರಗಳು ಅವುಗಳನ್ನು ತನ್ನ ಬೆರಳುಗಳಿಂದ ಮುಚ್ಚಿ ನುಡಿಸಿದ; ಅದಕ್ಕೆ ಅದು ಉತ್ತಮವಂಶಕ್ಕೆ ಸೇರಿದ್ದು ಎಂಬುದು ಕಾರಣ.

೨. ವಂಶ ಎಂದರೆ ಬಿದಿರು ಹಾಗೂ ಕುಲ ಎಂಬ ಎರಡು ಅರ್ಥಗಳು ವಿವಕ್ಷಿತ; [೫]ಛಿದ್ರ ಎಂಬುದಕ್ಕೆ ರಂಧ್ರ ಹಾಗೂ ದೋಷ ಎಂದರ್ಥ(ಶ್ಲೇಷಾಲಂಕಾರ).

೩. [೬]ವಿರಸಳಾದ ಪ್ರಿಯೆಯನ್ನು ಸರಸಳನ್ನಾಗಿಸಿ, ಒರಟು ಮಾತಿನ ಅವಳನ್ನು ಮಧುರ-ಮಾತನ್ನು ನುಡಿಯುವಂತೆ ಮಾಡಿ, ಅವಳಲ್ಲಿನ ದೋಷಗಳನ್ನು ಮರೆಮಾಚಿ, ಶ್ರೀಕೃಷ್ಣಸ್ವೀಕರಿಸಿದ ಎಂಬ ಮಾತಿನಲ್ಲಿ ಉತ್ತಮವಂಶಕ್ಕೆ ಸೇರಿದ ಸ್ತ್ರೀಯರಲ್ಲಿ ಪಕ್ಷಪಾತ ಮಾಡುವುದು ಉಚಿತ ಎಂಬ ತತ್ತ್ವ ಸೂಚಿತ ಎಂದು ತಿಳಿಸಿರುವರು.

೪. ಇದರಿಂದ ಒಬ್ಬ ಸ್ತ್ರೀಯು [೭]ಉತ್ತಮಕುಲದಲ್ಲಿ ಜನಿಸಿದವಳಾಗಿದ್ದರೆ ಅವಳು ಕಾರಣಾಂತರದಿಂದ ವಿಭಿನ್ನರೀತಿಯವಳಾಗಿದ್ದರೂ ಅವಳನ್ನು ಪುನಃ ಸನ್ಮಾರ್ಗದಲ್ಲಿ ತರಲು ಸಾಧ್ಯ ಎಂಬ ವಿಶೇಷಾಂಶವು ಸೂಚಿತ; ಸ್ವನ – ಧ್ವನಿ.

ಅಪರವಶಮಪೀಶಂ ಸ್ವಾನುರಕ್ತಂ ವಿಧತ್ತೇ
ಸಹಜಮಪಿ ವಿರೋಧಂ ಹಂತಿ ಜಂತುಷ್ವಭೇದ್ಯಮ್ ।

---

೧. ಕೀಚಕಾನ್ವಯಯೋರ್ವಂಶಇತ್ಯಭಿಧಾನಾತ್ ಮುರಲ್ಯಾ ಅಪಿ ವಕ್ರವ್ರಣಾದಿದೋಷರಹಿತವಂಶಜಾತತ್ವಾದಿತಿ ಭಾವಃ। -ವ್ಯಾ.

೨. ಸಾಮಾನ್ಯೇನ ವಿಶೇಷಸಮರ್ಥನರೂಪೋऽರ್ಥಾಂತರನ್ಯಾಸಃ। -ವ್ಯಾ.

೩. ಪ್ರಕೃತಮುರಲೀವಿಶೇಷಣಸಾಮಾನ್ಯಾದಪ್ರಕೃತಗುಣಹೀನಕುಲಾಂಗನಾ ಪ್ರತೀತೇಃ ಸಮಾಸೋಕ್ತ್ಯಾಸಂಕೀರ್ಯತ ಇತಿ । -ವ್ಯಾ.

೪. ವಂಶಸ್ಯಾರ್ದ್ರತಾಯಾಂ ಸ್ವರಾಣಾಮಭಿವ್ಯಕ್ತೇರಭಾವಾದಿತಿ ಭಾವಃ। -ವ್ಯಾ.

೫. ಛಿದ್ರಂ ರಂಧ್ರಭಾಗಂ ನಿಗೂಹ್ಯ ಅಂಗುಲಿಭಿಃ ಪಿಧಾಯ ದೋಷಮಾಚ್ಛಾದ್ಯೇತಿ ಧ್ವನಿಃ। -ವ್ಯಾ.

೬. ಅನೇನ ಕಠಿಣಹೃದಯಾ ಯಾ ನಾಯಿಕಾ ತಾಮಪ್ಯುಪಾಯೇನ ಮೃದುಚಿತ್ತಾಂ ಕುರ್ವನ್ ನಾಯಕಶ್ಚ ಧ್ವನ್ಯತೇ। -ವ್ಯಾ.

೭. ಆಭಿಜಾತ್ಯಕಾಮಾಃ ಪುರುಷಾಃ ಕುಲಲೋಭಾದ್ಗುಣಹೀನಾಮಪಿ ಗುಣವತೀಂ ಕೃತ್ವಾ ರಮಯಂತೀತ್ಯರ್ಥಃ। -ವ್ಯಾ.

## ಶ್ರೀಕೃಷ್ಣನ ವೇಣುಗಾನದ ಅಪೂರ್ವತೆ

**ಹೃದ್ಗಂ ಹೃದ್ಯನುರಂಜಯನ್ ಸವಯಸಃ ಸಂಹರ್ಷಯನ್ ಕರ್ಷಯನ್**
**ಗೋಪಸ್ತ್ರೀಹೃದಯಂ ಪಶೂನ್ ಋಷಿಗಣಾನ್ ನಿಶ್ಚೇಷ್ಟಯನ್ ಸ್ವಷ್ಟಯನ್ ।**
**ವಿಶ್ವಂ ಸ್ವಸ್ಯ ವಶಂ ವಿಯದ್ಗ್ನಹವಧೂಃ ಸಮ್ಮೂರ್ಛಯಂಶ್ಚಾರಣಾನ್**
**ಸಿದ್ಧಾನ್ ಸಂತ್ರಪಯನ್ ಸುರಾನ್ ವಿನಮಯನ್ ವೇಣುಂ ಪುಪೋಷಾಚ್ಯುತಃ॥**

ತನ್ನ ಉದರದಲ್ಲಿ ನೆಲೆಸಿದ ಜಗತ್ತನ್ನು ಮನಸ್ಸಿನಲ್ಲಿಯೇ ರಂಜಿಸುತ್ತ, ಗೆಳೆಯರನ್ನು ನಲಿಸುತ್ತ, ಗೋಪಿಯರ ಮನಸ್ಸನ್ನು ಸೆಳೆಯುತ್ತ, ಗೋವುಗಳನ್ನು ಋಷಿಗಳ ಗುಂಪನ್ನು ಮೈಮರೆಯುವಂತೆ ಮಾಡುತ್ತ, ಜಗತ್ತನ್ನು ತನ್ನ ವಶವೆಂದು ಪ್ರಕಟಪಡಿಸುತ್ತ, ಗಗನದಲ್ಲಿ ನೆಲೆಸಿದ್ದ ಸ್ತ್ರೀಯರನ್ನು ಪರವಶರನ್ನಾಗಿಸುತ್ತ, ಚಾರಣರನ್ನೂ ಸಿದ್ಧರನ್ನೂ ಮೈಮರೆಸುತ್ತಾ, ದೇವತೆಗಳನ್ನು ಮಣಿಸುತ್ತ ಅಚ್ಯುತನಾದ ಶ್ರೀಕೃಷ್ಣನು [೧]ವೇಣುಗಾನವನ್ನು ಮಾಡಿದ.

ವಿ.: ೧. ಶ್ರೀಕೃಷ್ಣನ ವೇಣುಗಾನದ ಅಪೂರ್ವ ವರ್ಣನೆ ಇಲ್ಲಿ ನಿರೂಪಿತವಾಗಿದೆ.

೨. ಗೋಪಗೋಪಿಯರಿಗೆ ಗೋವು ಮೊದಲಾದ ಪ್ರಾಣಿಗಳಿಗೆ, ಋಷಿಮುನಿಗಳಿಗೆ ದೇವತಾಸ್ತ್ರೀಯರಿಗೆ, ಸಿದ್ಧಚಾರಣರಿಗೆ, ಹಾಗೂ ದೇವತೆಗಳಿಗೆ ಶ್ರೀಕೃಷ್ಣನ ವೇಣುಗಾನ[೨] ಬಗೆ-ಬಗೆಯಲ್ಲಿ ಆನಂದ ನೀಡಿತು ಎಂಬುದು ಇಲ್ಲಿಯ ಮುಖ್ಯಭಾವ; ಸವಯಸ್ಕರು – ಗೆಳೆಯರು.

೩.. ಸಾಮಾನ್ಯವಾಗಿ ಒಂದೊಂದು ವಸ್ತುವು ಒಂದೊಂದು ಬಗೆಯ ಜನರಿಗೆ ಹಿತವೆನ್ನಿಸುವುದು ಕಂಡಿದೆ. ಆದರೆ ಶ್ರೀಕೃಷ್ಣನ ವೇಣುಗಾನ ಸಮಸ್ತ ವಿಶ್ವಕ್ಕೇ ಆಕರ್ಷಕವಾಗಿದ್ದಿತು ಎಂಬಲ್ಲಿ ಅದರ ಅಸಾಧಾರಣವಾದ ಹಿರಿಮೆ ನಿರೂಪಿತವಾಗಿದೆ.

## ಶ್ರೀಕೃಷ್ಣನ ವೇಣುನಾದದ ವೈಖರಿ

**ಶುಷ್ಕಾಮಪಿ ಸ್ಮ ಸರಸಾಮಧರಾಮೃತೇನ**
**ಹೃದ್ಯಸ್ವನಾಮಪಿ ವಿಧಾಯ ಮೃದೂಕ್ತಿಶೂನ್ಯಾಮ್ ।**

---

೧. ಬರ್ಹಾಪಿಚ್ಛೋ ವನಚರವಪುಃ ಕರ್ಣಯೋಃ ಕರ್ಣಿಕಾರಃ
ಸವ್ಯೇ ಬಾಹೌ ನಿಹಿತವದನಃ ಸಜ್ಜಮನ್ಯತ್ರ ಹಸ್ತೇ ।
ಭ್ರೂವಿನ್ಯಾಸಾಂಗುಲಿಭೀ ರಣಯನ್ ಗಾಪಯನ್ ಗೋಪವೃಂದಾನ್
ಭೂತಗ್ರಾಮಂ ತರ್ಹಿ ರಮಯನ್ ಬ್ರಹ್ಮ ಗಾಂಧರ್ವಮೇವ ॥ –ಭಾಗ.(೧೦/೧೯/೬)
ವಾಮಬಾಹುಕೃತವಾಮಕಪೋಲೋ ವಲ್ಗಿತಭ್ರುರಧರಾರ್ಪಿತವೇಣುಃ ।
ಕೋಮಲಾಂಗುಲಿಭಿರಾಶ್ರಿತಮಾರ್ಗಂ ಗೋಪ್ಯ ಈರಯತಿ ಯತ್ರ ಮುಕುಂದಃ ॥
ವ್ಯೋಮಯಾನವನಿತಾಃ ಸಹ ಸಿದ್ಧೈರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ।
ಕಾಮಮಾರ್ಗಣಸಮರ್ಪಿತಚಿತ್ತಾಃ ಕಶ್ಮಲಂ ಯಯುರಪಸ್ಮೃತನೀವ್ಯಃ ॥ – ಭಾಗ.(೧೦/೩೫/೧,೨)

೨. ಶ್ರೀಕೃಷ್ಣಗೀತಶ್ರವಣಾಯಾಕಾಶಗತಸುರವಧೂರಿತ್ಯರ್ಥಃ । –ವ್ಯಾ.

**ಛಿದ್ರಂ ನಿಗೂಹ್ಯ ಮುರಲೀಂ [೧]ಮುರಜಿಚ್ಚುಚುಂಬೇ**
**ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ [೨] ॥ ೪೮ ॥**

ಮುರಾರಿಯಾದ ಶ್ರೀಕೃಷ್ಣನು ಒಣಗಿದ ಆ ವೇಣುವನ್ನು ಅಧರಾಮೃತದಿಂದ ಸರಸ-ವನ್ನಾಗಿಸಿದ; ಮೃದುವಚನವಿರದ ಅದನ್ನು ರಮ್ಯಧ್ವನಿಯುಳ್ಳದ್ದನ್ನಾಗಿಸಿದ; ಅದರಲ್ಲಿನ ಛಿದ್ರವನ್ನು ಮರೆಮಾಡಿ, ಆ [೩]ಮುರಳಿಯನ್ನು ಚುಂಬಿಸಿದ; ಉತ್ತಮವಂಶ(ಬಿದಿರು)ದಲ್ಲಿ ಜನಿಸಿದ ಸ್ತ್ರೀಯರಲ್ಲಿ ಯಾರಿಗೆ ತಾನೇ ಪಕ್ಷಪಾತವಿರದು?

ವಿ. : ೧. [೪]ವೇಣು ಎಂದರೆ ಒಣಗಿದ ಬಿದಿರಿನ ತುಣುಕು. ಶ್ರೀಕೃಷ್ಣ ಅದನ್ನು ತನ್ನ ಅಧರಾಮೃತದಿಂದ ಆರ್ದ್ರವನ್ನಾಗಿಸಿದ; ಅದು ಜಡ, ಆದ್ದರಿಂದ ಮಧುರಮಾತನ್ನಾಡುವ ಶಕ್ತಿಯನ್ನು ಹೊಂದಿಲ್ಲದಂತಹುದು. ಶ್ರೀಕೃಷ್ಣ ಅದರಿಂದ ಮಧುರಧ್ವನಿ ಹೊರಹೊಮ್ಮುವಂತೆ ಮಾಡಿದ; ಅದರಲ್ಲಿ ಅನೇಕ ರಂಧ್ರಗಳು ಅವುಗಳನ್ನು ತನ್ನ ಬೆರಳುಗಳಿಂದ ಮುಚ್ಚಿ ನುಡಿಸಿದ; ಅದಕ್ಕೆ ಅದು ಉತ್ತಮವಂಶಕ್ಕೆ ಸೇರಿದ್ದು ಎಂಬುದು ಕಾರಣ.

೨. ವಂಶ ಎಂದರೆ ಬಿದಿರು ಹಾಗೂ ಕುಲ ಎಂಬ ಎರಡು ಅರ್ಥಗಳು ವಿವಕ್ಷಿತ; [೫]ಛಿದ್ರ ಎಂಬುದಕ್ಕೆ ರಂಧ್ರ ಹಾಗೂ ದೋಷ ಎಂದರ್ಥ(ಶ್ಲೇಷಾಲಂಕಾರ).

೩. [೬]ವಿರಸಳಾದ ಪ್ರಿಯೆಯನ್ನು ಸರಸಳನ್ನಾಗಿಸಿ, ಒರಟು ಮಾತಿನ ಅವಳನ್ನು ಮಧುರ-ಮಾತನ್ನು ನುಡಿಯುವಂತೆ ಮಾಡಿ, ಅವಳಲ್ಲಿನ ದೋಷಗಳನ್ನು ಮರೆಮಾಚಿ, ಶ್ರೀಕೃಷ್ಣಸ್ವೀಕರಿಸಿದ ಎಂಬ ಮಾತಿನಲ್ಲಿ ಉತ್ತಮವಂಶಕ್ಕೆ ಸೇರಿದ ಸ್ತ್ರೀಯರಲ್ಲಿ ಪಕ್ಷಪಾತ ಮಾಡುವುದು ಉಚಿತ ಎಂಬ ತತ್ತ್ವ ಸೂಚಿತ ಎಂದು ತಿಳಿಸಿರುವರು.

೪. ಇದರಿಂದ ಒಬ್ಬ ಸ್ತ್ರೀಯು [೭]ಉತ್ತಮಕುಲದಲ್ಲಿ ಜನಿಸಿದವಳಾಗಿದ್ದರೆ ಅವಳು ಕಾರಣಾಂತರದಿಂದ ವಿಭಿನ್ನರೀತಿಯವಳಾಗಿದ್ದರೂ ಅವಳನ್ನು ಪುನಃ ಸನ್ಮಾರ್ಗದಲ್ಲಿ ತರಲು ಸಾಧ್ಯ ಎಂಬ ವಿಶೇಷಾಂಶವು ಸೂಚಿತ; ಸ್ವನ – ಧ್ವನಿ.

**ಅಪರವಶಮಪೀಶಂ ಸ್ವಾನುರಕ್ತಂ ವಿಧತ್ತೇ**
**ಸಹಜಮಪಿ ವಿರೋಧಂ ಹಂತಿ ಜಂತುಷ್ವಭೇದ್ಯಮ್ ।**

---

೧. ಕೀಚಕಾನ್ವಯಯೋರ್ವಂಶಇತ್ಯಭಿಧಾನಾತ್ ಮುರಲ್ಯಾ ಅಪಿ ವಕ್ರವ್ರಣಾದಿದೋಷರಹಿತವಂಶಜಾತತ್ವಾದಿತಿ ಭಾವಃ । –ವ್ಯಾ.

೨. ಸಾಮಾನ್ಯೇನ ವಿಶೇಷಸಮರ್ಥನರೂಪೋಽರ್ಥಾಂತರನ್ಯಾಸಃ । –ವ್ಯಾ.

೩. ಪ್ರಕೃತಮುರಲೀವಿಶೇಷಣಸಾಮಾನ್ಯಾದಪ್ರಕೃತಗುಣಹೀನಕುಲಾಂಗನಾ ಪ್ರತೀತೇಃ ಸಮಾಸೋಕ್ತ್ಯಾಸಂಕೀರ್ಯತ ಇತಿ । –ವ್ಯಾ.

೪. ವಂಶಸ್ಯಾರ್ದ್ರತಾಯಾಂ ಸ್ವರಾಣಾಮಭಿವ್ಯಕ್ತೇರಭಾವಾದಿತಿ ಭಾವಃ । –ವ್ಯಾ.

೫. ಛಿದ್ರಂ ರಂಧ್ರಭಾಗಂ ನಿಗೂಹ್ಯ ಅಂಗುಲಿಭಿಃ ಪಿಧಾಯ ದೋಷಮಾಚ್ಛಾದ್ಯೇತಿ ಧ್ವನಿಃ । –ವ್ಯಾ.

೬. ಅನೇನ ಕಠಿಣಹೃದಯಾ ಯಾ ನಾಯಿಕಾ ತಾಮಪ್ಯುಪಾಯೇನ ಮೃದುಚಿತ್ತಾಂ ಕುರ್ವನ್ ನಾಯಕಶ್ಚ ಧ್ವನ್ಯತೇ । –ವ್ಯಾ.

೭. ಆಭಿಜಾತ್ಯಕಾಮಾಃ ಪುರುಷಾಃ ಕುಲಲೋಭಾದ್ಗುಣಹೀನಾಮಪಿ ಗುಣವತೀಂ ಕೃತ್ವಾ ರಮಯಂತೀತ್ಯರ್ಥಃ । –ವ್ಯಾ.

ವಶಯತಿ ಜಗದೇತನ್ಮಾನ್ಯತಾಮಾಪ ವೇಣು-
[1]ರ್ಮಧುರನಿನದಭಾಜಾಂ ಕಿಂ ನ ಸಾಧ್ಯಂ ಹಿ ಲೋಕೇ ॥ ೪೯ ॥

ಆ ವೇಣುವು ಇತರರಿಗೆ ವಶನಾಗದ ಶ್ರೀಕೃಷ್ಣನನ್ನು ಸಹ ತನ್ನ ಬಗ್ಗೆ ಅನುರಾಗ ತಾಳುವಂತೆ ಮಾಡಿಕೊಂಡಿತು; ಪ್ರಾಣಿಗಳಲ್ಲಿ ಸಹಜವಾಗಿದ್ದ ದುರ್ಭೇದ್ಯವಾದ ವಿರೋಧವನ್ನು ಸಹ ಇಲ್ಲವಾಗಿಸಿತು; ಇಡೀ ಜಗತ್ತನ್ನೇ ತನ್ನ ವಶಮಾಡಿಕೊಂಡು ಮಾನ್ಯತೆ ಪಡೆಯಿತು; ಮಧುರ ಧ್ವನಿಯನ್ನು ಹೊಂದಿದವರಿಗೆ ಲೋಕದಲ್ಲಿ ಯಾವುದು ತಾನೆ ಸಾಧ್ಯವಾಗದು?

ವಿ.: ೧. [2]ವೇಣುವು ಶ್ರೀಕೃಷ್ಣನ ಮೆಚ್ಚುಗೆಗೆ ಪಾತ್ರವಾಯಿತು. ಅದರ ಧ್ವನಿ ಹಸು-ಹುಲಿ, ಹಾವು-ಮುಂಗುಸಿ, ಆನೆ-ಸಿಂಹ ಮೊದಲಾದ ಪ್ರಾಣಿಗಳಲ್ಲಿನ[3] ಸಹಜವಾದ ಪರಸ್ಪರ ವೈರಭಾವವನ್ನು ಅಳಿಸಿಹಾಕಿತು. ಜಗತ್ತೇ ಅದಕ್ಕೆ ವಶವಾಗಿ, ಅದರ ಬಗ್ಗೆ ಗೌರವ ತಾಳಿತು. ಇದೆಲ್ಲಕ್ಕೂ ಕಾರಣ ಅದರಿಂದ ಹೊರಡುವ ಮಧುರವಾದ ಧ್ವನಿ ಎಂಬುದು ವಿಶೇಷ.

೨. ಇದರಿಂದ ಮಧುರವಾಗಿ ಮಾತನಾಡುವವರಿಗೆ ಕಾರ್ಯಸಾಧನೆ ಸುಲಭ ಎಂಬ ತತ್ತ್ವ ಸೂಚಿತ[4]; ನಿನದ - ಧ್ವನಿ.

ಶ್ರೀಕೃಷ್ಣನ ಸರ್ವೋತ್ತಮತ್ವ

ಸ ಜಯತಿ ಯದುನಾಥಃ ಶ್ರಾವಿತಾನೇಕಗೀತಃ
ಕರಧೃತವರವೇಣುಃ[5] ಕಾಮಿನೀಕಾಮಧೇನುಃ ।

---

೧. ವಾಙ್ಮಾಧುರ್ಯಾತ್ಸರ್ವಮಪಿ ಕಾರ್ಯಂ ಸಾಧಯಿತುಂ ಶಕ್ಯತ ಇತ್ಯರ್ಥಃ । ''ವಾಙ್ಮಾಧುರ್ಯಾತ್ಸರ್ವಲೋಕ-ಪ್ರಿಯತ್ವಮ್'' ಇತ್ಯನ್ಯತ್ರೋಕ್ತೇಃ । -ವ್ಯಾ.

೨. ವೇಣುಗೀತರಸಶ್ರವಣಪಾರವಶ್ಯಾತ್ ಜಂತವಃ ಸ್ವಾಭಾವಿಕಮಪಿ ವಿರೋಧಂ ನ ಸ್ಮರಂತೀತಿ ಭಾವಃ । -ವ್ಯಾ.

೩.. ಗೋವ್ಯಾಘ್ರೌ ಸರ್ಪನಕುಲೌ ಗಜಸಿಂಹೌ ಶ್ರೀಕೃಷ್ಣಗೀತಪಾರವಶ್ಯಾತ್ ಸ್ವವೈರಂ ವಿಹಾಯ ಸಹೈವ ಪರಿತಃ ಸ್ಥಿತಾ ಇತಿ ಪೌರಾಣಿಕಪ್ರಸಿದ್ಧೇಃ । -ವ್ಯಾ.

೪. ಅಭ್ಯಾವಹತಿ ಕಲ್ಯಾಣಂ ವಿವಿಧಂ ವಾಕ್ ಸುಭಾಷಿತಾ ।
ಸೈವ ದುರ್ಭಾಷಿತಾ ರಾಜನ್ನನರ್ಥಾಯೋಪಪದ್ಯತೇ ॥ -ಮಹಾಭಾರತ (೫/೩೪/೭೮)

೫. ವೇಣುಗೀತಾ :
ವಾಮಬಾಹುಕೃತವಾಮಕಪೋಲೋ ವಲ್ಗಿತಭ್ರುರಧರಾರ್ಪಿತವೇಣುಃ ।
ಕೋಮಲಾಂಗುಲಿಭಿರಾಶ್ರಿತಮಾರ್ಗಂ ಗೋಪ್ಯ ಈರಯತಿ ಯತ್ರ ಮುಕುಂದಃ ॥
ವ್ಯೋಮಯಾನವನಿತಾಃ ಸಹ ಸಿದ್ಧೈರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ।
ಕಾಮಮಾರ್ಗಣಸಮರ್ಪಿತಚಿತ್ತಾಃ ಕಶ್ಮಲಂ ಯಯುರಪಸ್ಮೃತನೀವ್ಯಃ ॥
ಹಂತ ಚಿತ್ರಮಬಲಾಃ ಶೃಣುತೇದಂ ಹಾರಭಾಸ ಉರಸಿ ಸ್ಥಿತವಿದ್ಯುತ್ ।
ನಂದಸೂನುರಯಮಾರ್ತಜನಾನಾಂ ಶರ್ಮದೋ ಯರ್ಹಿ ಕೂಜಿತವೇಣುಃ ॥
ವೃಂದಶೋ ವ್ರಜವೃಷಾ ಮೃಗಗಾವೋ ವೇಣುವಾದ್ಯಹೃತಚೇತಸ ಏತ್ಯ ।
ದಂತದಷ್ಟಕವಲಾ ಧೃತಕರ್ಣಾ ನಿದ್ರಿತಾ ಲಿಖಿತಚಿತ್ರಮಿವಾಸನ್ ॥

ಬರ್ಹಿಣಃ ಸ್ತಬಕಧಾತುಪಲಾಶೈರ್ಬದ್ಧಮಲ್ಲಪರಿಬರ್ಹವಿಡಂಬಃ ।
ಕರ್ಹಿಚಿತ್ ಸಬಲ ಆಲಿ ಸ ಗೋಪೈರ್ಗಾಃ ಸಮಾಹ್ವಯತಿ ಯತ್ರ ಮುಕುಂದಃ ॥
ತರ್ಹಿ ಭಗ್ನಗತಯಃ ಸರಿತೋ ವೈ ತತ್ಪದಾಂಬುಜರಜೋಽನಿಲನೀತಮ್ ।
ಆಮೃಶನ್ ಪಯಸಿ ವಾ ಬಹುಪುಣ್ಯಾಃ ಪ್ರೇಮವೇಪಿತಭುಜಾ ಹತವೇಗಾಃ ॥
ಅನುಚರೈಃ ಸಮನುವರ್ಣಿತವೀರ್ಯ ಆದಿಪೂರುಷ ಇವಾಚಲಭೂತಿಃ ।
ವನಚರೋ ಗಿರಿತಟೇಷು ಚರಂತೀರ್ವೇಣುನಾಽಽಹ್ವಯತಿ ಗಾಃ ಸ ಯದಾ ಹಿ ॥
ವನಲತಾಸ್ತರವ ಆತ್ಮನಿ ವಿಷ್ಣುಂ ವ್ಯಂಜಯಂತ ಇವ ಪುಷ್ಪ ಫಲಾಢ್ಯಾಃ ।
ಪ್ರಣತಭಾರವಿಟಪಾ ಮಧುಧಾರಾಃ ಪ್ರೇಮಹೃಷ್ಟತನವಃ ಸಸೃಜುಃ ಸ್ಮ ॥
ದರ್ಶನೀಯವಿಕಚೋತ್ಪಲಮಾಲಾದಿವ್ಯಗಂಧತುಲಸೀಮಧುಮತ್ತೈಃ ।
ಅಲಿಕುಲೈರಲಘುಗೀತಮಭೀಷ್ಟಮಾದ್ರಿಯದ್ ಯರ್ಹಿ ಸಂಧಿತವೇಣುಃ ॥
ಸರಸಿ ಸಾರಸಹಂಸವಿಹಂಗಾಶ್ಚಾರುಗೀತಹೃತಚೇತಸ ಏತ್ಯ ।
ಹರಿಮುಪಾಸತ ತೇ ಯತಚಿತ್ತಾ ಹಂತ ಮೀಲಿತದೃಶೋ ಧೃತಮೌನಾಃ ॥
ಸಹಬಲಃ ಸ್ರಗವತಂಸವಿಲಾಸಃ ಸಾನುಷು ಕ್ಷಿತಿಭೃತೋ ವ್ರಜದೇವ್ಯಃ ।
ಆಹ್ವಯದ್ ಯರ್ಹಿ ವೇಣುರವೇಣ ಜಾತಹರ್ಷ ಉಪರಂಭತಿ ವಿಶ್ವಮ್ ॥
ಮಹದತಿಕ್ರಮಣಶಂಕಿತಚೇತಾ ಮಂದಮಂದಮನುಗರ್ಜತಿ ಮೇಘಃ ।
ಸುಹೃದಮಭ್ಯವರ್ಷತ್ ಸುಮನೋಭಿಶ್ಛಾಯಯಾ ಚ ವಿದಧೇ ವಿತಪತ್ರಮ್ ॥
ವಿವಿಧಗೋಪಚರಣೇಷು ವಿದಗ್ಧೋ ವೇಣುವಾದ್ಯಮಧುರಾಂ ನಿಜಶಿಕ್ಷಾಮ್ ।
ತವ ಸುತಃ ಸತಿ ಯದಾಽಧರಬಿಂಬೇ ದತ್ತವೇಣುರನಯತ್ ಸ್ವರಜಾತೀಃ ॥
ಸುಮನಸ್ತದುಪಧಾರ್ಯ ಸುರೇಶಾಃ ಶಕ್ರಶರ್ವಪರಮೇಷ್ಠಿಪುರೋಗಾಃ ।
ಕವಯ ಆನತಕಂಧರಗಾತ್ರಾಃ ವಿಸ್ಮಯಂ ಯಯುರನಿಶ್ಚಿತತತ್ತ್ವಾಃ ॥
ನಿಜಪದಾಬ್ಜದಲೈರ್ಧ್ವಜವಜ್ರನೀರಜಾಂಕುಶವಿಚಿತ್ರಲಲಾಮೈಃ ।
ವ್ರಜಭುವಃ ಪ್ರಶಮಯನ್ ಖುರತೋದಂ ವರ್ಷ್ಮಧುರ್ಯಗತಿರೀರಿತವೇಣುಃ ॥
ವ್ರಜಮಿತೇನ ವಯಂ ಸವಿಲಾಸವೀಕ್ಷಣಾರ್ಪಿತಮನೋಭವವೇಗಾಃ ।
ವ್ರಜಗತಿಂ ಗಮಿತಾ ನ ವಿದಾಮಃ ಕಶ್ಮಲೇನ ಕಬರಂ ವಸನಂ ವಾ ॥
ಮಣಿಧರಃ ಕ್ವಚಿದಾಗಮಯನ್ ಗಾ ಮಾಲಯಾ ದಯಿತಗಂಧತುಲಸ್ಯಾ ।
ಪ್ರಣಯಿನೋಽನುಚರಸ್ಯ ಕದಾಽಂಸೇ ಪ್ರಕ್ಷಿಪನ್ ಭುಜಮಗಾಯತ ಯತ್ರ ॥
ಕ್ವಣಿತವೇಣುಮುಪ ವಂಚಿತಚಿತ್ತಾಃ ಕೃಷ್ಣಮೀಯುರನು ಕೃಷ್ಣ ಗೃಹಿಣ್ಯಃ ।
ಗುಣಗಣಾರ್ಣವಮನುಗಮ್ಯ ಹರಿಣ್ಯೋ ಗೋಪಿಕಾ ಇವ ವಿಮುಕ್ತಗೃಹೇಶಾಃ ॥
ಕುಂದದಾಮಕೃತಕೌತುಕವೇಷೋ ಗೋಪಗೋಧನವೃತೋ ಯಮುನಾಯಾಮ್ ।
ನಂದಸೂನುರನಘೇ ತವ ವತ್ಸೋ ನರ್ಮದಃ ಪ್ರಣಯಿನಾಂ ವಿಜಹಾರ ॥
ಮಂದವಾಯುರುಪವಾತ್ಯನುಕೂಲಂ ಮಾನಯನ್ ಮಲಯಜಸ್ಪರ್ಶೇನ ।
ಬಂದಿನಸ್ತಮುಪದೇವಗಣಾ ಯೇ ವಾದ್ಯಗೀತಬಲಿಭಿಃಪರಿವವ್ರುಃ ॥
ವತ್ಸಲೋ ವ್ರಜಗವಾಂ ಯದಗಾಧ್ರೋ ವಂದ್ಯಮಾನಚರಣಃ ಪಥಿ ವೃದ್ಧೈಃ ।
ಕೃತ್ಸ್ನಗೋಧನಮಪೋಹ್ಯ ದಿನಾಂತೇ ಗೀತವೇಣುರನುಗೋದ್ಧೃತಕೀರ್ತಿಃ ॥
ಉತ್ಸವಂ ಶ್ರಮಮಪೋಹ್ಯ ದೃಶೀನಾಮುದ್ವಹನ್ ಖುರರಜಶ್ಛುರಿತಸ್ರಕ್ ।
ದಿತ್ಸಯೈತಿ ಸುಹೃದಾಶಿಷ ಏಷ ದೇವಕೀಜಠರಭೂರುಡುರಾಜಃ ॥
ಮದವಿಘೂರ್ಣಿತಲೋಚನ ಈಷನ್ಮಾನದಃ ಸ್ವಸುಹೃದಾಂ ವನಮಾಲೀ ।
ಬದರಪಾಂಡುವದನೋ ಮೃದುಗಂಡಂ ಮಂಡಯನ್ ಕನಕಕುಡ್ಮಲಲಕ್ಷ್ಮ್ಯಾ ॥

**ಸುಲಲಿತವನಮಾಲಃ ಸುಂದರಾಪಾಂಗಲೀಲಃ**
**ಸಜಲಜಲದಮೂರ್ತಿಃ ಸಾಧುಭಿರ್ಗೀತಕೀರ್ತಿಃ ॥ ೫೦ ॥**

ಅನೇಕ ಗೀತೆಗಳನ್ನು ಕೇಳಿಸಿದ, ಕೈಯಲ್ಲಿ ಶ್ರೇಷ್ಠವಾದ ವೇಣುವನ್ನು ಹಿಡಿದ, ಗೋಪಿಯರಿಗೆ ಕಾಮಧೇನುವಾದ, ಕೊರಳಲ್ಲಿ ಮನೋಹರವಾದ ವನಮಾಲೆ ಧರಿಸಿದ, ಸುಂದರವಾದ ಕುಡಿನೋಟದ ವಿಲಾಸದ, ನೀಲಮೇಘಶ್ಯಾಮ ದೇಹದ, ಸಜ್ಜನರು ಕೊಂಡಾಡುವ ಕೀರ್ತಿಯುಳ್ಳ, ಯದುಗಳ ಒಡೆಯನಾದ ಶ್ರೀಕೃಷ್ಣನು ಸರ್ವಶ್ರೇಷ್ಠನಾಗಿರುವನು.

ವಿ. : ೧. ಇದರಲ್ಲಿ ಸುಂದರವಾದ ಬಗೆಬಗೆಯ ವಿಶೇಷಣಗಳಿಂದ ಶ್ರೀಕೃಷ್ಣನ ಹಿರಿಮೆಯನ್ನು ವರ್ಣಿಸಿರುವರು. [೧]ಶ್ರೀಕೃಷ್ಣನು ಯಾದವರಿಗೆ ಒಡೆಯ ಮೊದಲಾದ ಮಾತುಗಳಲ್ಲಿ ಅವನ ಸರ್ವೋತ್ತಮತ್ವವು ಸ್ಫುಟವಾಗಿ ಪ್ರತಿಪಾದಿತವಾಗಿದೆ – 'ತ್ವಂ ಪಾಸಿ ನಸ್ತ್ರಿಭುವನಂ ಚ ತಥಾಽ-ಧುನೇಶ ಭಾರಂ ಭುವೋ ಹರ ಯದೂತ್ತಮ ವಂದನಂ ತೇ ।' – ಭಾಗವತ (೧೦/೩./೪೧)

೨. ಇಲ್ಲಿ ವರವೇಣು ಎಂಬ ಪದದಿಂದ ಅದರಲ್ಲಿ ಮಹಾಲಕ್ಷ್ಮಿಯ ಸನ್ನಿಧಾನ ಎಂಬ ವಿಶೇಷಾಂಶ ನಿರೂಪಿತವಾಗಿದೆ: **ಶ್ರೀದೇವೀ ವೇಣುಮಾಶ್ರಿತ್ಯ ರೇಮೇ ಕೃಷ್ಣಮುಖಾಂಬುಜೇ ।** (ಭಾಗವತತಾತ್ಪರ್ಯ–೧೦/೧೯/೧೦)

೩. ಗೋಪಿಕಾಸ್ತ್ರೀಯರು ಅಪ್ಸರಃಸ್ತ್ರೀಯರ ಅವತಾರ ಎಂಬುದನ್ನು ಕಾಮಿನೀ ಎಂಬ ಪದ-ದಿಂದ ಸೂಚಿಸಿರುವರು ಎಂದು ತಿಳಿಯಬಹುದು: **ಪರಮಾಪ್ಸರಸಾಃ ಪುರಾ ಯಾಃ** –ಮ.ಭಾ.ತಾ.ನಿ. (೧೩./೫೦)

೪. ವನಮಾಲೆ ಎಂದರೆ ಸಾಕ್ಷಾತ್ ಶ್ರೀದೇವಿ ಎಂಬ ವಿಶೇಷಾಂಶ ಪದ್ಯಮಾಲಾದಲ್ಲಿದೆ : **ಶ್ರೀರೇವ ವನಮಾಲಾಯಾಮ್** (ಶ್ಲೋಕ ೮೧).

೫. ಶ್ರೀಹರಿಯ ಕುಡಿನೋಟದ ಹಿರಿಮೆ ಶ್ರೀಮದಾಚಾರ್ಯರ ದ್ವಾದಶಸ್ತೋತ್ರದ ಶ್ರೀಸ್ತುತಿ ಎಂಬ ಏಳನೆಯ ಅಧ್ಯಾಯದಲ್ಲಿ ಪರಿಪರಿಯಾಗಿ ನಿರೂಪಿತವಾಗಿದೆ: **ಶ್ರೀಯರ್ಯತ್ಕಟಾಕ್ಷ-ಬಲವತ್ಯಜಿತಂ ನಮಾಮಿ.**

೬. ಸಾಧುಭಿಃ – ಸಾಧುಗಳು ಎಂದರೆ ಸಜ್ಜನರು, ಇಲ್ಲಿ ಮುಖ್ಯವಾಗಿ ಬ್ರಹ್ಮಾದಿ ದೇವತೆಗಳು ಎಂದು ಅರ್ಥ.

---

ಯದುಪತಿರ್ದ್ವಿರದರಾಜವಿಹಾರೋ ಯಾಮಿನೀಪತಿರಿವೈಷ ದಿನಾಂತೇ ।
ಮುದಿತವಕ್ತ್ರ ಉಪಯಾತಿ ದುರಂತಂ ಮೋಚಯನ್ ವ್ರಜಗವಾಂ ದಿನತಾಪಮ್ ॥
ಶ್ರೀ ಶುಕ ಉವಾಚ ।
ಏವಂ ವ್ರಜಸ್ತ್ರಿಯೋ ರಾಜನ್ ಕೃಷ್ಣಲೀಲಾ ನು ಗಾಯತೀಃ ।
ರೇಮಿರೇಽಹಃಸು ತಚ್ಚಿತ್ತಾಸ್ತನ್ಮನಸ್ಕಾ ಮಹೋದಯಾಃ ॥ –ಭಾ.(೧೦/೩೫/೧-೨೬)

೧. ಜಯತಿ ಉತ್ಕೃಷ್ಟೋ ವರ್ತತೇ। ಗೋಪೀನಾಂ ಚಿತ್ತಂ ಪರಾಭಾವಯತೀತಿ ವಾ। ''ಜಯೇರ್ಜಯಾಭಿಭವಯೋ-ರಾದ್ಯೇಽರ್ಥೇಸಾವಕರ್ಮಕಃ । ಉತ್ಕರ್ಷಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೇಽರ್ಥೇ ಸಕರ್ಮಕಃ''(ಮಾಯಾ-ವಾದಖಂಡನಟೀಕಾ) ಇತಿ ವಚನಾತ್ । –ವ್ಯಾ.

## ಶ್ರೀಕೃಷ್ಣನಿಂದ ಆಕರ್ಷಿತರಾದ ಗೋಪಿಯರು

**ಚಂದ್ರೇ ಜೃಂಭತಿ ತನ್ಮುಖತ್ವಿಷಿ ಮುಹುರ್ಮಂದಾನಿಲೇ ತದ್ವಪು-**
**ರ್ಗಂಧೇ ವಾತಿ ವಿಯೋಗವಹ್ನಿಸಚಿವೇ ತತ್ಕೋಮಲಾಲಾಪವತ್ ।**
**ವೇಣೌ ಕೂಜತಿ ಪಂಚಬಾಣವಿಶಿಖೈಃ ಶಾಣಾಶಿತೈಸ್ತಾಡಿತಾ**
**ಮಾನಿನ್ಯೋಽಪಿ ಯಯುರ್ಮನೋಭವಪಿತುಃ ಶ್ರೇಯೋನಿಧಿಂ ಸನ್ನಿಧಿಂ ॥೫೧॥**

ಶ್ರೀಕೃಷ್ಣನ ಮುಖಕಮಲದ ಕಾಂತಿಯನ್ನು ಹೊಂದಿದ ಚಂದ್ರನು ಪ್ರಕಾಶಿಸುತ್ತಿರಲು, ಅವನ ದೇಹದ ಪರಿಮಳವನ್ನು ಹೊತ್ತ ವಿರಹಾಗ್ನಿಗೆ ಜೊತೆ ಎನ್ನಿಸಿದ ಮಂದಮಾರುತವು ಮತ್ತೆ ಮತ್ತೆ ಬೀಸುತ್ತಿರಲು, ಅವನ ಇನಿಧ್ವನಿಯಂತೆ ಕೊಳಲು ಧ್ವನಿಗೈಯ್ಯುತ್ತಿರಲು, ಸಾಣೆ ಹಿಡಿದು ಹರಿತವಾದ ಮನ್ಮಥನ ಬಾಣಗಳಿಂದ ಪೀಡಿತರಾದ ಗೋಪಿಯರು ಹಮ್ಮಿನವ-ರಾದರೂ ಕಾಮಜನಕನಾದ ಶ್ರೇಯೋನಿಧಿಯಾದ ಶ್ರೀಕೃಷ್ಣನ ಸನ್ನಿಧಿಗೆ ತೆರಳಿದರು.

ವಿ.: ೧. ಚಂದ್ರನ ಬೆಳದಿಂಗಳು, ಮಂದಮಾರುತ, ವೇಣುಗಾನಗಳಿಂದಾಗಿ ವಿಶೇಷವಾಗಿ ಕಾಮಪೀಡಿತರಾದ ಗೋಪಿಯರು ಶ್ರೀಕೃಷ್ಣನ ಬಳಿಗೆ ತೆರಳಿದರು ಎಂದರ್ಥ.

೨. ಇಲ್ಲಿಯ ವಿಯೋಗವಹ್ನಿಸಚಿವೇ ಎಂಬ ಪದವು ಚಂದ್ರ, ಮಂದಮಾರುತ, ವೇಣುಗಾನಗಳಿಗೆ[೧] ಅನ್ವಯಿಸುವುದು. ವಿಶೇಷವಾಗಿ ಮಂದಮಾರುತಕ್ಕೆ ಇದರ ಅನ್ವಯ.

೩.. ಮನ್ಮಥನಿಗೆ ಐದು ಬಾಣಗಳು ಎಂದು ಪ್ರಸಿದ್ಧಿ. ಅದಕ್ಕೆ ಅವನಿಗೆ [೨]ಪಂಚಬಾಣ ಎಂದು ಹೆಸರು; ಮನೋಭವ – ಕಾಮ; ಶಾಣ – ಸಾಣೆ; ಶಿತ – ತೀಕ್ಷ್ಣ.

೪. ಮಗನ ಪೀಡೆಯನ್ನು ಸಹಿಸದವರು ಅವನ ತಂದೆಯ ಬಳಿಗೆ ದೂರುನೀಡಲು ತೆರಳುವಂತೆ ಕಾಮಪೀಡಿತರಾದ ಗೋಪಿಯರು ಕಾಮಜನಕನಾದ ಶ್ರೀಕೃಷ್ಣನ ಬಳಿಗೆ ತೆರಳಿದರು ಎಂಬ ಇಲ್ಲಿಯ [೩]ಭಾವ ಅತ್ಯಂತ ರೋಚಕ ; ಪಂಚಬಾಣ – ಮನ್ಮಥ.

## ಬಹುಬಗೆಯ ವಿಕಾರಕ್ಕೊಳಗಾದ ಗೋಪಿಯರು

**ದೋಹಂ ಕಾಪಿ ವಿಹಾಯ ಕೃಷ್ಣಸುರಭಿಂ ದೋಗ್ಧುಂ ಸಮಸ್ತೇಪ್ಸಿತಂ**
**ತದ್ಬಿಂಬೋಷ್ಠಸುಧಾತಿಲುಬ್ಧಹೃದಯಾ ಭುಕ್ತಿಂ ವಿಸೃಜ್ಯಾಪರಾ ।**

---

೧. ವಿಯೋಗವಹ್ನಿಸಚಿವೇ ವಿರಹಾಗ್ನಿಸಹಾಯೇ ಮಂದಾನಿಲೇ ಮಂದಾನಿಲಸ್ಯೋದ್ದೀಪನವಿಭಾವತ್ವಾದಿತಿ ಭಾವಃ। -ವ್ಯಾ.

೨. ಅರವಿಂದಮಶೋಕಂ ಚ ಚೂತಂ ಚ ನವಮಲ್ಲಿಕಾ ।
ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ॥ -ಅಮರಕೋಶ

೩.. ಯಥಾ ಪುತ್ರದೌರ್ಜನ್ಯಮಾವೇದಯಿತುಂ ತತ್ಪಿತೃಸಮೀಪಂ ಗಚ್ಛಂತಿ ತದ್ವದಿತಿ ಭಾವಂ ದ್ಯೋತಯಿತುಂ ಮನೋ-ಭವಪಿತುರಿತ್ಯುಕ್ತಮ್ । -ವ್ಯಾ.

**ಕಾಂತಂ ಕಾಚನ ಸದ್ಗುಣಾರ್ಣವಭೃತೇ ಭರ್ತ್ರೇ ಸ್ಪೃಹಾಂ ಬಿಭ್ರತೀ**
**ತೋಕಂ ಕೃಷ್ಣವಿಹಾರಯೋಗ್ಯವಿಭವಾ ಕನ್ಯೇತಿ ಕಾಚಿದ್ಗತಾ ॥ ೫೨ ॥**

ಒಬ್ಬ ಗೋಪಿ ಹಾಲು ಕರೆಯುವುದನ್ನು ನಿಲ್ಲಿಸಿ, ಸಮಸ್ತ ಅಭೀಷ್ಟಗಳನ್ನು ನೀಡುವ ಶ್ರೀಕೃಷ್ಣನೆಂಬ ಕಾಮಧೇನುವಿನತ್ತ ತೆರಳಿದಳು; ಮತ್ತೊಬ್ಬಳು ಊಟಮಾಡುವುದನ್ನು ತೊರೆದು, ಆ ಶ್ರೀಕೃಷ್ಣನ ಅಧರಾಮೃತದಲ್ಲಿ ಬಹಳ ಆಸೆವುಳ್ಳ ಮನಸ್ಸಿನವಳಾಗಿ ತೆರಳಿದಳು; ಮತ್ತೊಬ್ಬಳು ತನ್ನ ಗಂಡನನ್ನು ತೊರೆದು, ಸದ್ಗುಣಗಳ ಸಾಗರವನ್ನು ಧರಿಸಿದ ಶ್ರೀಕೃಷ್ಣನೆಂಬ ಪತಿಯಲ್ಲಿ ಆಸಕ್ತಿಹೊಂದಿದವಳಾಗಿ ತೆರಳಿದಳು; ಇನ್ನೊಬ್ಬಳು ತಾನು ಶ್ರೀಕೃಷ್ಣನ ವಿಹಾರಕ್ಕೆ ಯೋಗ್ಯವಾದ ಸಮೃದ್ಧ ಕನ್ಯೆ ಎಂದು ತೋರಿಸಿಕೊಳ್ಳಲು ತನ್ನ ಮಗುವನ್ನೇ ತೊರೆದು ನಡೆದಳು.

ವಿ.: ೧. ಶ್ರೀಕೃಷ್ಣನ ವೇಣುಗಾನದಿಂದ ಗೋಪಿಯರು ಮೈಮರೆತು ಮಾಡಿದ ಕಾರ್ಯಗಳ ವಿವರ ಇಲ್ಲಿದೆ.

೨. ಒಬ್ಬಳು ಹಾಲು ಕರೆಯುವುದನ್ನು ನಿಲ್ಲಿಸಿದರೆ, ಮತ್ತೊಬ್ಬಳು ಭೋಜನವನ್ನೇ ನಿಲ್ಲಿಸಿದಳು, ಇನ್ನೊಬ್ಬಳು ಗಂಡನನ್ನೇ ತೊರೆದಳು, ಮತ್ತೊಬ್ಬಳು ಮಗುವನ್ನೇ ಬಿಟ್ಟು ಧಾವಿಸಿದಳು ಎಂದರ್ಥ.

೩. ಸಮಸ್ತಾಭೀಷ್ಟವನ್ನು ನೆರವೇರಿಸುವ ಶ್ರೀಕೃಷ್ಣನಿರುವಾಗ ಕೇವಲ ಹಾಲು ಕೊಡುವ ಈ ಹಸುವನ್ನು ಕರೆದೇನು ಪ್ರಯೋಜನ ಎಂದು ಹಾಲುಕರೆಯುವುದನ್ನು ನಿಲ್ಲಿಸಿದವಳ ಭಾವವಾಗಿದ್ದರೆ, [೧]ಅಮೃತವೇ ದೊರೆಯುವಾಗ ಈ ಭೋಜನದಿಂದೇನು ಎಂಬುದು ಭೋಜನ ತೊರೆದವಳ ಭಾವವಾಗಿತ್ತು. [೨]ಸಮಸ್ತ ಗುಣನಿಧಿಯಾದ ಶ್ರೀಕೃಷ್ಣನಿರುವಾಗ ಈ ಸಾಮಾನ್ಯ ಪತಿಯಿಂದೇನು? ಎಂದು ಭಾವ ಪತಿಯನ್ನು ತೊರೆದವಳದಾಗಿದ್ದಿತು; [೩]ಮಗುವಿನ ಸಮೇತ ತೆರಳಿದರೆ ತಾನು ಕನ್ಯೆಯಲ್ಲ ಎಂದು ಭಾವಿಸಿಯಾನು ಎಂಬ ಯೋಚನೆಯಿಂದ ತನ್ನ ಮಗುವನ್ನೇ ತೊರೆದು ಮತ್ತೊಬ್ಬಳು ತೆರಳಿದ್ದಳು; ಅಂತೂ ಶ್ರೀಕೃಷ್ಣನಿಗಾಗಿ ಅವರು ಮಾಡಿದ ತ್ಯಾಗ ವಾಸ್ತವವಾಗಿ, ಕೇವಲ ಭಾವೋದ್ವೇಗದ ಕಾರ್ಯವಾಗಿರದೆ, ಭಕ್ತಿಪೂರಿತವಾದ ತಾತ್ತ್ವಿಕ ಕಾರ್ಯವಾಗಿದ್ದಿತು ಎಂಬುದು ಇಲ್ಲಿಯ ತಾತ್ಪರ್ಯ; [೪]ದೋಹ-ಕರೆಯುವುದು; ವಿಭವ-ಸಂಪತ್.

---

೧. ಸತ್ಯಾಂ ಕಾಮಧೇನೌ ಧೇನುಮಾತ್ರದೋಹನಸ್ಯಾನುಚಿತತ್ವಾದಿತಿ ಭಾವಃ। -ವ್ಯಾ.
ಅಮೃತಭೋಜನೇ ವಿದ್ಯಮಾನೇ ಮಾನುಷಾನ್ನಭೋಜನಸ್ಯಾಯುಕ್ತತ್ವಾದಿತಿ ಭಾವಃ। -ವ್ಯಾ.
೨. ಗುಣಭರಿತಂ ಕಾಂತಂ ವಿಹಾಯ ನಿರ್ಗುಣಪುರುಷಗ್ರಹಣಸ್ಯಾಪ್ರೌಢಿಹೇತುತ್ವಾದಿತಿ ಭಾವಃ। -ವ್ಯಾ.
೩. ಶಿಶುನಾ ಸಹ ಗಮನೇ ಗತಯೌವನೇತಿ ಮಾಂ ನಾಂಗೀಕುರ್ಯಾದಿತಿ ಧಿಯೇತಿ ಭಾವಃ। -ವ್ಯಾ.
೪. ದುಹಂತ್ಯೋಽಭಿಯಯುಃ ಕಾಶ್ಚಿದ್ ದೋಹಂ ಹಿತ್ವಾ ಸಮುತ್ಸುಕಾಃ।
ಪಯೋಽಧಿಶ್ರಿತ್ಯ ಸಂಯಾವಮನುದ್ವಾಸ್ಯಾಪರಾ ಯಯುಃ ॥
ಪರಿವೇಶಯಂತ್ಯಸ್ತದ್ ಹಿತ್ವಾ ಪಾಯಯಂತ್ಯಃ ಶಿಶೂನ್ ಪಯಃ।
ಶುಶ್ರೂಷಂತ್ಯಃ ಪತೀನ್ ಕಾಶ್ಚಿದಶ್ನಂತ್ಯೋಽಪಾಸ್ಯ ಭೋಜನಮ್ ॥
ಲಿಂಪಂತ್ಯಃ ಪ್ರಮೃಜಂತ್ಯೋಽನ್ಯಾ ಅಂಜಂತ್ಯಃ ಕಾಶ್ಚ ಲೋಚನೇ।
ವ್ಯತ್ಯಸ್ತವಸ್ತ್ರಾಭರಣಾಃ ಕಾಶ್ಚಿತ್ ಕೃಷ್ಣಾಂತಿಕಂ ಯಯುಃ ॥ -ಭಾಗ.(೧೦/೨೭/೫-೭)

**ಗೋಪ್ಯನ್ಯಾऽಂಜನರೂಷಿತಂ ಸ್ವನಯನಂ ಕುರ್ವಂತ್ಯಗಾತ್ ಸತ್ವರಾ**
**ತಜ್ಜ್ಞಾನಾಂಜನತುಷ್ಟಧೀರಿವ ಪದೋರ್ಭೂಷಾಂ ಸ್ವದೋಷ್ಣೀತರಾ।**
**ಸಂಧಾಯಾಚ್ಯುತಸನ್ನಿಧಿಂ ಸಮಗಮತ್ ಕೃಷ್ಣಾಂಘ್ರಿಸೇವಾಂ ಸದಾ**
**ತನ್ವಂತ್ಯಾಃ ಕರಭೂಷಣಂ ಮಮ ಭವೇತ್ ತತ್ಪಾದಯೋರ್ಭೂಷಣಮ್॥೩೩॥**

ಕಣ್ಣಿಗೆ ಕಾಡಿಗೆ ಲೇಪಿಸಿಕೊಳ್ಳುತ್ತಿದ್ದ ಮತ್ತೊಬ್ಬ ಗೋಪಿಯು ಅದನ್ನು ತೊರೆದು ಶ್ರೀಕೃಷ್ಣನ ಬಗೆಗಿನ ಜ್ಞಾನವೆಂಬ ಅಂಜನದಿಂದ ಸಂತುಷ್ಟಬುದ್ಧಿಯವಳಂತೆ ವೇಗದಿಂದ ನಡೆದಳು; ಮತ್ತೊಬ್ಬ ಗೋಪಿಯು ತನ್ನ ಕಾಲ್ಗೆಜ್ಜೆಗಳನ್ನು ಕೈಗಳಿಗೆ ಕಟ್ಟಿಕೊಂಡು ಅಚ್ಯುತನಾದ ಶ್ರೀಕೃಷ್ಣನ ಸನ್ನಿಧಿಗೆ ಧಾವಿಸಿದಳು; "ಅವನ ಪಾದಸೇವೆಯನ್ನು ಸದಾ ಮಾಡುವ ನನಗೆ ಅವನ ಎರಡು ಪಾದಗಳ ಭೂಷಣವು ಕೈಗಳಿಗೆ ಅಲಂಕಾರವಾಗಲಿ" ಎಂದು ಭಾವಿಸಿಯೋ ಎಂಬಂತೆ.

ವಿ.: ೧. ಇಲ್ಲಿ ಇನ್ನೂ ಕೆಲವು [೧]ಗೋಪಿಯರು ಮಾಡಿದ ಕಾರ್ಯದ ವಿವರ ಬಂದಿದೆ.

೨. ಕಣ್ಣುಗಳಿಗೆ ಕಾಡಿಗೆ ಲೇಪಿಸಿಕೊಳ್ಳುವುದನ್ನು ಬಿಟ್ಟು ಒಬ್ಬಳು ತೆರಳಿದರೆ, ಮತ್ತೊಬ್ಬಳು ಕಾಲ್ಗೆಜ್ಜೆಗಳನ್ನು ಕೈಗೆ ಕಟ್ಟಿಕೊಂಡು ಹೊರಟುಬಿಟ್ಟಳು. ಇವುಗಳಿಂದ ಗೋಪಿಯರು [೨]ಶ್ರೀಕೃಷ್ಣನ ಬಗ್ಗೆ ಹೊಂದಿದ್ದ ಕಾತರತೆಯು ಸ್ಫುಟವಾಗಿ ವ್ಯಕ್ತವಾಗುವುದು.

೩. ಶ್ರೀಕೃಷ್ಣನ ಬಗ್ಗೆ ಜ್ಞಾನಾಂಜನವೇ ಇರುವಾಗ ಕಣ್ಣುಗಳಿಗೆ ಈ ಅಂಜನವೇಕೆ ಎಂಬ ಭಾವ ಮೊದಲನೆಯದವಳದಾದರೆ, ಶ್ರೀಕೃಷ್ಣನ ಪಾದಭೂಷಣಗಳೇ ತನ್ನ [೩]ಕರಭೂಷಣಗಳಾಗಲಿ ಎಂಬುದು ಎರಡನೆಯವಳ ಭಾವವಾಗಿತ್ತು ಎಂಬುದು ಸಹ ಅವರಿಗೆ ಶ್ರೀಕೃಷ್ಣನ ಬಗ್ಗೆ ಇದ್ದ ನೈಜಭಕ್ತಿಯ ದ್ಯೋತಕ ಎಂಬುದು ಇಲ್ಲಿಯ ಮುಖ್ಯಭಾವ.

---

ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಬಂಧುಭಿಃ।
ಗೋವಿಂದಾಪಹೃತಾತ್ಮಾನೋ ನ ನ್ಯವರ್ತಂತ ಯೋಷಿತಃ॥
ದುಸ್ಸಹಪ್ರೇಷ್ಠವಿರಹತೀವ್ರತಾಪಧುತಾಶುಭಾಃ।
ಧ್ಯಾನಪ್ರಾಪ್ತಾಚ್ಯುತಾಶ್ಲೇಷನಿರ್ವೃತ್ಯಾ ಕ್ಷೀಣಮಂಗಲಾಃ॥
ತಮೇವ ಪರಮಾತ್ಮಾನಂ ಜಾರಬುದ್ಧ್ಯಾऽಪಿ ಸಂಗತಾಃ।
ಜಹುರ್ಗುಣಮಯಂ ದೇಹಂ ಸದ್ಯಃ ಪ್ರಕ್ಷೀಣಬಂಧನಾಃ॥ -ಭಾಗ.(೧೦/೨೭/೯-೧೧)

೧. ಗೋಪ್ಯಃ ಕಿಮಾಚರದಯಂ ಕುಶಲಂ ಸ್ಮ ವೇಣುರ್ದಾಮೋದರಾಧರಸುಧಾಸರಸಾಗ್ರ್ಯಗೇಯಮ್।
ಭುಂಕ್ತೇ ಸ್ವಯಂ ಯದವಶಿಷ್ಟರಸಂ ಹ್ರದಿನ್ಯೋ ಹೃಷ್ಯತ್ತ್ವಚೋऽಶ್ರು ಮುಮುಚುಸ್ತರವಃ ಸದರ್ಭಾಃ॥
ನದ್ಯಸ್ತದಾ ತದುಪಧಾರ್ಯ ಮುಕುಂದಗೀತಮಾವರ್ತಲಕ್ಷಿತಮನೋಭವಭಗ್ನವೇಗಾಃ।
ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇರ್ಗೃಹ್ಣಂತಿ ಪಾದಯುಗಲಂ ಕಮಲೋಪಹಾರಾಃ॥
-ಭಾಗ.(೧೦/೧೯/೧೦,೧೬)

೨. ಶ್ರೀಕೃಷ್ಣದರ್ಶನಮೇವ ನೇತ್ರಾಲಂಕಾರೋ ನಾನ್ಯ ಇತಿ ನಿಶ್ಚಿತ್ಯೇವೇತಿ ಭಾವಃ। -ವ್ಯಾ.

೩. ಪಾದಸೇವಾಕರಣಸಮಯೇ ಶ್ರೀಕೃಷ್ಣಪಾದಭೂಷಣಾನಾಂ ಕರಸಂಬಂಧಾದಿತಿ ಭಾವಃ। -ವ್ಯಾ.

### ಆನಂದಪೂರ್ಣನಾದ ಕೃಷ್ಣನ ಹಿತೋಕ್ತಿ

ಆನಂದಪೂರ್ಣತಾಂ ಕೃಷ್ಣಃ ಸ್ವಾನಾಂ ಸಂದರ್ಶಯನ್ ವಿಭುಃ ।
ಆನತಾ ಅಪಿ ತಾಃ ಪ್ರೀತಾ ಮಾನಿನೀರಿತ್ಯಚೀಕಥತ್ ॥ ೫೪ ॥

ಪ್ರಭುವಾದ ಶ್ರೀಕೃಷ್ಣನು ತಾನು ಆನಂದಪೂರ್ಣ ಎಂದು ಚೆನ್ನಾಗಿ ತಿಳಿಸಿಕೊಡಲೆಂದು, ಆ ಗೋಪಿಯರು ಪ್ರೀತಿಯಿಂದ ತನ್ನ ಪಾದಗಳಿಗೆ ಎರಗಿದ್ದರೂ ಹೀಗೆಂದನು.

### ತಂದೆತಾಯಿಗಳನ್ನು ಸೇವಿಸಲು ಆದೇಶ

[೧]ಪಿತೃಭರ್ತೃಜನನ್ಯಾದೇಃ ಪರಿಚರ್ಯಾ ಯತೋಽರ್ಥದಾ ।
ವ್ರಜತ ವ್ರಜಮೇವಾತಃ ಕುರುತ ಸ್ಮರತಾಂ ಹಿತಮ್ ॥ ೫೫ ॥

"[೨]ತಂದೆ, ಗಂಡ, ತಾಯಿ ಮೊದಲಾದವರ ಸೇವೆಯು ಪುರುಷಾರ್ಥಕ್ಕೆ ಸಾಧನ. ಆದ್ದರಿಂದ ನೀವು ವ್ರಜಕ್ಕೆ ತೆರಳಿರಿ. ನಿಮ್ಮನ್ನು ನೆನೆಯುವ ಅವರಿಗೆ [೩]ಹಿತವನ್ನುಂಟುಮಾಡಿರಿ".

### ಗೋಪಿಯರ ಮಾರ್ಮಿಕ ಉತ್ತರ

ಯದೀಶ ತೇಷಾಂ ಹಿತಮೇವ ಕಾರ್ಯಂ
ತದಾಽಂಗ ನಾಜ್ಞಾಪಯ ಗಂತುಮಸ್ಮಾನ್ ।
ವಿಯೋಗದಗ್ಧೈರ್ಬತ ನಃ ಶರೀರೈ-
ರ್ಮಹೀಂ ನ ತಾಂ ಪ್ರೇತಮಹೀಂ ವಿಧೇಹಿ [೪] ॥ ೫೬ ॥

"ಪ್ರಿಯನಾದ ಶ್ರೀಕೃಷ್ಣ ! ನೀನು ಅವರಿಗೆ ಹಿತವೆಸಗುವುದನ್ನೇ ಕಾರ್ಯ ಎಂದು ಭಾವಿಸುವುದಾದಲ್ಲಿ ನಮ್ಮನ್ನು ತೆರಳಲು ಆದೇಶಿಸಬೇಡ; ಅಯ್ಯೋ ! ಅಗಲುವಿಕೆಯಿಂದ ಸುಡುವ ನಮ್ಮ [೫]ದೇಹಗಳಿಂದ ಅಲ್ಲಿಯ ಭೂಮಿಯನ್ನು ಪ್ರೇತಭೂಮಿಯಾನ್ನಾಗಿಸದಿರು".

---

೧. ಪಿತ್ರಾದೀನಾಂ ಹಿತಂ ಕುರುತ ಆಚರತ ಇತ್ಯಚೀಕಥದಿತಿ ಪೂರ್ವೇಣಾನ್ವಯಃ । –ವ್ಯಾ.

೨. ಮಾತೃದೇವೋ ಭವ, ಪಿತೃದೇವೋ ಭವ ಮೊದಲಾದ ವೇದವಾಕ್ಯಗಳಿಗೆ ಇದು ವಿವರಣೆಯಂತಿದೆ.

೩.. ಪತಿರ್ಹಿ ದೇವೋ ನಾರೀಣಾಂ ಪತಿರ್ಬಂಧುಃ ಪತಿರ್ಗತಿಃ ।
ಪತ್ಯಾ ಸಮಾ ಗತಿರ್ನಾಸ್ತಿ ದೈವತಂ ವಾ ಯಥಾ ಪತಿಃ ॥ –ಮಹಾಭಾರತ (೧೩/೧೪೬/೫೫)
ಪುತ್ರಃ ಸಖಾ ವಾ ಭ್ರಾತಾ ವಾ ಪಿತಾ ವಾ ಯದಿ ವಾ ಗುರುಃ ।
ರಿಪುಸ್ಥಾನೇಷು ವರ್ತಂತೋ ಹಾತವ್ಯಾ ಭೂತಿಮಿಚ್ಛತಾ ॥ –ಮಹಾಭಾರತ (೧/೧೪೦/೫೨)

೪. ಆಕ್ಷೇಪಾಲಂಕಾರಃ । –ವ್ಯಾ.

೫. ಮೈವಂ ವಿಭೋಽರ್ಹತಿ ಭವಾನ್ ಗದಿತುಂ ನೃಶಂಸಂ ಸಂತ್ಯಜ್ಯ ಸರ್ವವಿಷಯಾಂಸ್ತವ ಪಾದಮೂಲಮ್ ।
ಭಕ್ತ್ಯಾ ಭಜೇಮ ದುರವಗ್ರಹ ಮಾ ತ್ಯಜಾಸ್ಮಾನ್ ದೇವೋ ಯಥಾದಿಪುರುಷೋ ಭಜತೋ ಮುಮುಕ್ಷೂನ್ ॥

ವಿ. : ೧. ಶ್ರೀಕೃಷ್ಣನ ಸನ್ನಿಧಿಯನ್ನು ತೊರೆದು ಹಾಗೆ ತೆರಳಿದರೆ ಅವರು ಅಗಲುವಿಕೆಯ ನೋವಿನಿಂದ ಸಾಯುವುದು ನಿಶ್ಚಿತ; ಆದರಿಂದ ಪಿತೃ ಮೊದಲಾದವರ ಬಳಿಯಲ್ಲಿ ಬರೀ ಪ್ರೇತದೇಹಗಳೇ ಸೇರಿದಂತಾಗಿ ಅವರಿಗೆ [೧]ನಲಿವಿನ ಬದಲು ನೋವೇ ಹೆಚ್ಚುವುದು ಎಂಬುದು ಇಲ್ಲಿಯ ಭಾವ.

೨. ಶ್ರೀಕೃಷ್ಣನ ಅಗಲುವಿಕೆಯಿಂದ ಅವರು ಸರ್ವಥಾ ಬದುಕಿರಲಾರರು ಎಂಬುದು ಇಲ್ಲಿಯ ಮುಖ್ಯತಾತ್ಪರ್ಯ ; ಪ್ರೇತಮಹೀ – ರುದ್ರಭೂಮಿ.

### ಪತಿ ಮೊದಲಾದವರ ಸೇವೆಯ ಫಲ

ಪತ್ಯಾದಿಸೇವಾಽಪಿ ಭವತ್ಪ್ರಸಾದ-
ಪ್ರಾಪ್ತ್ಯರ್ಥಮೇವೇತಿ ವದಂತಿ ಸಂತಃ।[೨]
ತ್ವತ್ಪಾದಮೂಲಂ ವಿಧಿನೋಪನೀತಾಃ
ಕಸ್ಮಾನ್ಮುಧಾಽಽಜ್ಞಾಪಯಸೀಶ ಗಂತುಮ್ ॥ ೫೯ ॥

---

ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್ ।
ಅಸ್ತ್ವೇವ ತತ್ ತದಪಿ ದೇವ ವರೇ ತ್ವಯೀಶೇ ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಂಧುರಾತ್ಮಾ ॥
ಕುರ್ವಂತಿ ಹಿ ತ್ವಯಿ ರತಿಂ ಕುಶಲಾಃ ಸ್ವ ಆತ್ಮನ್ ನಿತ್ಯಪ್ರಿಯೇ ಪತಿಸುತಾದಿಭಿರಾರ್ತಿದೈಃ ಕಿಮ್ ।
ತನ್ನಃ ಪ್ರಸೀದ ವರದೇಶ್ವರ ಮಾ ಸ್ಮ ಛಿಂದ್ಯಾ ಆಶಾಂ ಧೃತಾಂ ತ್ವಯಿ ಪರಾಮರವಿಂದನೇತ್ರ ॥
ಚಿತ್ತಂ ಸುಖೇನ ಭವತಾಽಪಹೃತಂ ಗೃಹೇಷು ಯನ್ನಿರ್ವಿಶತ್ಯುತ ಕರಾವಪಿ ಗೃಹ್ಯಕೃತ್ಯೇ ।
ಪಾದೌ ಪದಂ ನ ಚಲತಸ್ತವ ಪಾದಮೂಲಾದ್ಯಾಮಃ ಕಥಂ ವ್ರಜಮಥೋ ಕರವಾಮ ಕಿಂ ವಾ ॥
ಸಿಂಚಾಂಗ ನಸ್ತ್ವದಧರಾಮೃತಪೂರಕೇಣ ಹಾಸಾವಲೋಕಕಲಗೀತಜಹೃಚ್ಛಯಾಗ್ನಿಮ್ ।
ನೋ ಚೇದ್ವಯಂ ವಿರಹಜಾಗ್ನ್ಯುಪಯುಕ್ತದೇಹಾ ಧ್ಯಾನೇನ ಯಾಮ ಪದಯೋಃ ಪದವೀಂ ಸಖೇ ತೇ ॥
ಯರ್ಹ್ಯಂಬುಜಾಕ್ಷ ತವ ಪಾದತಲಂ ರಮಾಯಾ ದತ್ತಕ್ಷಣಂ ಕ್ವಚಿದರಣ್ಯಜನಪ್ರಿಯಸ್ಯ ।
ಅಸ್ಪ್ರಾಕ್ಷ್ಮ ತತ್ಪ್ರಭೃತಿ ನಾನ್ಯಸಮಕ್ಷಮಂಗ ಸ್ಥಾತುಂ ತ್ವಯಾ ವಿರಹಿತಾ ಬತ ಪಾರಯಾಮಃ ॥
ಶ್ರೀರ್ಯತ್ಪದಾಂಬುಜರಜಶ್ಚಕಮೇ ತುಲಸ್ಯಾ ಲಬ್ಧ್ವಾಽಪಿ ವಕ್ಷಸಿ ಪದಂ ಕಿಲ ಭೃತ್ಯಜುಷ್ಟಮ್ ।
ಯಸ್ಯಾಃ ಸ್ವವೀಕ್ಷಣಕೃತೇಽನ್ಯಸುರಪ್ರಯಾಸಸ್ತದ್ವದ್ವಯಂ ಚ ತವ ಪಾದರಜಃಪ್ರಪನ್ನಾಃ ॥
ತನ್ನಃ ಪ್ರಸೀದ ವೃಜಿನಾರ್ದನ ತೇಽಂಘ್ರಿಮೂಲಂ ಪ್ರಾಪ್ತಾ ವಿಸೃಜ್ಯ ವಸತೀಸ್ತ್ವದುಪಾಸನಾಶಾಃ ।
ತ್ವತ್ಸುಂದರಸ್ಮಿತನಿರೀಕ್ಷಣತೀವ್ರಕಾಮತಪ್ತಾತ್ಮನಾ ಪುರುಷಭೂಷಣ ದೇಹಿ ದಾಸ್ಯಮ್ ॥
ವೀಕ್ಷ್ಯಾಲಕಾವೃತಮುಖಂ ತವ ಕುಂಡಲಶ್ರೀಗಂಡಸ್ಥಲಾಧರಸುಧಂ ಹಸಿತಾವಲೋಕಮ್ ।
ದತ್ತಾಭಯಂ ಚ ಭುಜದಂಡಯುಗಂ ವಿಲೋಕ್ಯ ವಕ್ಷಃ ಶ್ರಿಯೈಕರಮಣಂ ಚ ಭವಾಮ ದಾಸ್ಯಃ ॥
ಕಾ ಸ್ತ್ರ್ಯಂಗ ತೇ ಕಲಪದಾಮೃತವೇಣುಗೀತಸಮ್ಮೋಹಿತಾಽಽರ್ಯಚರಿತಾನ್ನ ಚಲೇತ್ ತ್ರಿಲೋಕ್ಯಾಮ್ ।
ತ್ರೈಲೋಕ್ಯಸೌಭಗಮಿದಂ ಚ ನಿರೀಕ್ಷ್ಯ ರೂಪಂ ಯದ್ಗೋದ್ವಿಜದ್ರುಮಮೃಗಾಃ ಪುಲಕಾನ್ಯಬಿಭ್ರನ್ ॥
-ಭಾಗ.(೧೦/೨೯/೩೧-೪೦)

೧. ವ್ರಜೇತಿ ವಚನಶ್ರವಣಮಾತ್ರೇಣ ಅಂಕುರಿತೋ ವಿಯೋಗಾಗ್ನಿರ್ಮಾರ್ಗೇ ಕಿಂಚಿತ್ಕಿಂಚಿದಭಿವೃದ್ಧಃ ಗೃಹಂ ಪ್ರತಿ ಗಮನೇ ನೈರಾಶ್ಯಾತ್ ಸಮ್ಯಗಭಿವೃದ್ಧೋಽಸ್ಮಾನ್ ಧಕ್ಷತಿ । ತದಾ ಬಹುಸಂಖ್ಯಾಕಾಸ್ಮದ್ದೇಹದಾನೇನ ಸಾ ಮಹೀ ತ್ಯಾಜ್ಯೈವ ಸ್ಯಾದಿತಿ ಭಾವಃ। -ವ್ಯಾ.

೨. ಅತ್ರಾಪಿ ಆಕ್ಷೇಪಾಲಂಕಾರಃ। -ವ್ಯಾ.

ಪತಿ ಮೊದಲಾದವರ ಸೇವೆಯೂ ಸಹ ನಿನ್ನ ಒಲುಮೆಯನ್ನು ಪಡೆಯಲೋಸುಗ ಎಂದೇ ಸಜ್ಜನರು ಹೇಳುವರು; ದೈವವಶಾತ್ ನಿನ್ನ ಪಾದಸನ್ನಿಧಿಗೆ ಬಂದಿರುವ ನಮ್ಮನ್ನು ಎಲೈ ಸ್ವಾಮಿಯಾದ ಶ್ರೀಕೃಷ್ಣ! ಮರಳಲು ಏತಕ್ಕೆ ಸುಮ್ಮನೆ ಆದೇಶಿಸುತ್ತಿರುವಿ?

ವಿ. : ಪತಿ ಮೊದಲಾದವರ ಸೇವೆಯು ಶ್ರೀಹರಿಯ ಪ್ರಸಾದಕ್ಕೆ ಸಾಧನ ಎಂಬ ಕಾರಣಕ್ಕಾಗಿ ವಿಹಿತವಾಗಿವೆ. ಆದರೆ ಈಗ ಶ್ರೀಕೃಷ್ಣನ ಒಲುಮೆಯೇ ದೊರೆತಿರುವಾಗ, ಅವುಗಳ ಅಗತ್ಯವೆಲ್ಲಿದೆ? ಎಂದರ್ಥ.[೧] ಸಿದ್ಧಿಯೇ ದೊರೆತಾಗ ಸಾಧನದ ಅಗತ್ಯವೆಲ್ಲಿದೆ? ಎಂದು ತಾತ್ಪರ್ಯ; ಮುಧಾ-ವೃಥಾ.

### ಶ್ರೀಹರಿಯೇ ನಿಜವಾದ ತಂದೆ, ತಾಯಿ ಇತ್ಯಾದಿ

ನಾನಾಯೋನಿಷು ಸಂಭವೇ ಸತಿ ಕತಿ ಶ್ರೀನಾಥ ನೋ ಮಾತೃತಾಂ
ಮಾನ್ಯತ್ವಂ ಪಿತೃತಾಂ ಪ್ರಿಯತ್ವಮಗಮಂಸ್ತತ್ ಕುತ್ರ ಕುರ್ಮೋಽರ್ಚನಮ್ ।
ವೈರಂ ವಾ ಕತಿವಾರಮೇಷು ನ ಕೃತಂ ವಿಶ್ವಾಂತರಾತ್ಮನ್ ವಿಭೋ
ತನ್ನಿತ್ಯಂ ಪಿತರಂ ಪತಿಂ ಚ ಜನನೀಂ ತ್ವಾಮೇವ ಸೇವಾಮಹೇ[೨] ॥ ೫೮ ॥

"ಎಲೈ ಶ್ರೀಪತಿಯಾದ ಶ್ರೀಕೃಷ್ಣನೇ ! ಬಗೆಬಗೆಯ ಯೋನಿಗಳಲ್ಲಿ ಹುಟ್ಟಿಬಂದಿರುವಾಗ ನಮಗೆ ಎಷ್ಟು ಜನರು ಮಾತೃತ್ವ, ಮಾನ್ಯತ್ವ [೩]ಪಿತೃತ್ವ, ಭರ್ತೃತ್ವಗಳನ್ನು ಹೊಂದಿರುವರಲ್ಲ; ಅವರಲ್ಲಿ ಯಾರನ್ನು ಪೂಜಿಸುವುದು? ಅವರಲ್ಲಿ ನಾವು [೪]ವೈರವನ್ನಾದರೂ ಎಷ್ಟು ಸಲ ಮಾಡಿರುವೆವೋ ? ಆದ್ದರಿಂದ ಎಲೈ ವಿಶ್ವದ ಅಂತರ್ಯಾಮಿಯಾದ ಶ್ರೀಕೃಷ್ಣನೇ! ನಿತ್ಯವೂ ಅಂತಹ ತಂದೆ, ಪತಿ, ತಾಯಿಯಾಗಿರುವ ನಿನ್ನನ್ನೇ ನಾವು ಸೇವಿಸುವೆವು".

ವಿ. : ೧. ಅನೇಕ ಜನ್ಮಗಳು ಕಳೆದಿರುವಾಗ ಯಾವ ಜನ್ಮದ ತಂದೆತಾಯಿಗಳ ಬಳಿಗೆ ತೆರಳುವುದು, ಅವರನ್ನು ಆದರಿಸುವುದು, ಅವರಲ್ಲಿ ಎಷ್ಟೋ ಸಲ ವೈರಭಾವವು ಸಹ ಉಂಟಾಗಿರಬಹುದು. [೫]ಆದ್ದರಿಂದ ಸದಾ ತಂದೆ, ಪತಿ, ತಾಯಿಯೆನ್ನಿಸುವ ಹಿರಿಮೆ ಶ್ರೀಹರಿಯದೇ ಹೊರತು ಇತರರದಲ್ಲ. [೬]ಆದ್ದರಿಂದ ತಾವು ಅವನನ್ನು ತೊರೆದು ಹೋಗುವುದು ಅಸಾಧ್ಯ ಎಂದು ತಿಳಿಸುತ್ತಿರುವರು ಎಂದು ತಿಳಿಯಬೇಕು.

---

೧. ನಿಷ್ಪನ್ನಫಲಂ ಪ್ರತಿ ಪರಸ್ಪರಸಾಧನವಿಧ್ಯನುಶಾಸನಸ್ಯ ವ್ಯರ್ಥತ್ವಾದಿತಿ ಭಾವಃ। -ವ್ಯಾ.

೨. ಕಾವ್ಯಾಲಿಂಗಮಲಂಕಾರಃ। -ವ್ಯಾ.

೩. ಪಿತೃತ್ವಾದೇರ್ವ್ಯಭಿಚಾರಿತ್ವಾದಿತಿ ಭಾವಃ। -ವ್ಯಾ.

೪. ಬಹುಧಾ ವೈರಕರಣಸ್ಯ ಸಂಭಾವಿತತ್ವಾದಿತಿ ಭಾವಃ। -ವ್ಯಾ.

೫. ನ ಕೇವಲಂ ಪಿತೃತ್ವಾದೇರ್ವ್ಯಭಿಚರಿತತ್ವಾತ್ ತತ್ಸೇವಾ ವ್ಯರ್ಥಾ ಕಿಂತ್ವಿದಾನೀಂತನಪಿತ್ರಾದಿಸೇವಾಽಪಿ ಏತಜ್ಜನ್ಮನಿ ಪಿತೃತ್ವಂ ಪ್ರಾಪ್ತಸ್ಯೈವ ಜನ್ಮಾಂತರೇ ಶತ್ರುತ್ವಪ್ರಾಪ್ತೇಃ ಸಂಭಾವಿತತ್ವೇನ ತದಾನೀಂತನವೈರಸ್ಯ ಚ ತುಲ್ಯಾಯವ್ಯಯತ್ವಾದಪೀತ್ಯಾಹುಃ। -ವ್ಯಾ.

೬. ಪೂರ್ವೋಕ್ತದೋಷದ್ವಯಾಭಾವಾದಿತಿ ಭಾವಃ। -ವ್ಯಾ.

೨. ಇದು ಶ್ರೀಜಯತೀರ್ಥರ ಈ ಕೆಳಗಿನ ವಚನದಂತಿದೆ ಎಂಬುದು ಗಮನಾರ್ಹ : ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್।(ವಿಷ್ಣುತತ್ತ್ವವಿನಿರ್ಣಯಟೀಕಾ)

### ಶ್ರೀಹರಿಯೇ ಲೋಕದ ತಂದೆ, ತಾಯಿ ಇತ್ಯಾದಿ

[೧]ಜಗತ್ಪಿತಾ ತ್ವಂ ನ ಪಿತಾ ಕಿಮಾಸಾಂ
ಜಗತ್ಪ್ರಸೂತಿರ್ಜನನೀ ನ ಕಿಂ ನಃ।
ಜಗತ್ಪತಿಃ ಕಿಂ ನ ಪತಿಃ ಸಖೇ ನ-
ಸ್ತದನ್ಯಜುಷ್ಟ್ಯಾಽಲಮರಿಷ್ಟವೃಷ್ಟ್ಯಾ ॥ ೫೯ ॥

ಸಖನೇ! ಜಗಜ್ಜನಕನಾದ ನೀನು ನಮಗೂ ಜನಕನಲ್ಲವೆ? ಜಗತ್ತಿನ ತಾಯಿಯಾದ ನೀನು ನಮಗೂ ತಾಯಿಯಲ್ಲವೆ? ಜಗತ್ಪತಿಯಾದ ನೀನು ನಮಗೂ ಪತಿಯೇ ಅಲ್ಲವೆ! ಆದ್ದರಿಂದ ಅನಿಷ್ಟ ಪರಂಪರೆಗೆ ಕಾರಣವಾಗುವ ಇತರರ ಸೇವೆಯ ಗೊಡವೆ ನಮಗೆ ಬೇಕಿಲ್ಲ.

ವಿ.: ೧. ತಂದೆ, ತಾಯಿ, ಪತಿ ಮೊದಲಾದವರ ಸೇವೆ ಕರ್ತವ್ಯವೇನೋ ನಿಜ. ಆದರೆ ಮೂಲತಃ ಜಗತ್ತಿನ ತಂದೆ, ತಾಯಿ, ಪತಿ ಮೊದಲಾದ ಸಕಲವೂ ಶ್ರೀಹರಿಯೇ ಆದ್ದರಿಂದ ಅವನ ಸೇವೆಗಿಂತ ಮಿಗಿಲಾದ ಬೇರಾವ [೨]ಕರ್ತವ್ಯವೂ ನಮಗಿಲ್ಲ ಎಂಬ ವಿಶೇಷಾಂಶವನ್ನು ಗೋಪಿ-ಯರು ಈ ಮೂಲಕ ವಿಜ್ಞಾಪಿಸಿಕೊಂಡಿರುವರು.

೨. ಮುಖ್ಯಪಿತೃ ಮೊದಲಾಗಿ ಶ್ರೀಕೃಷ್ಣನೇ ಇರುವಾಗ ಅವನ ಹೊರತು ಇತರರ ಸೇವೆ ಮಾರಕವೇ ಹೊರತು ತಾರಕವಲ್ಲ ಎಂಬ ಸಂದೇಶವೂ ಇಲ್ಲಿದೆ.

### ಶ್ರೀಹರಿಯೇ ನಿಜವಾದ ಕಾಂತ

ಕಾಂತಃ ಸ ಏವ ಯಃ ಸ್ಥೈರ್ಯಶೌರ್ಯಸೌಂದರ್ಯಸಾಗರಃ।
ಸುಖಸ್ಯಾಂತಕರಂ ಕಾಂತಮಪರಂ ತರ್ಕಯಾಮಹೇ ॥ ೬೦ ॥

ಯಾವನು ಸ್ಥೈರ್ಯ, ಶೌರ್ಯ, ಸೌಂದರ್ಯಗಳ ಸಾಗರನೋ ಅವನೇ ನಿಜವಾದ ಕಾಂತ; ಬೇರೆಯವನನ್ನು ಸುಖಕ್ಕೆ ಕೊನೆನೀಡುವ ಕಾಂತನೆಂದೇ ನಾವು ತರ್ಕಿಸುವೆವು.

ವಿ. : ೧. ಕಾಂತ ಎಂದರೆ ಪತಿ, ಮನೋಹರ ಇತ್ಯಾದಿ ಅನೇಕ ಅರ್ಥಗಳು. ಆ ಅರ್ಥದಲ್ಲಿ ನಿಜವಾದ ಕಾಂತ ಎಂದರೆ ಶ್ರೀಹರಿಯೇ ಹೊರತು ಇತರರಲ್ಲ. ಉಳಿದವರಿಗೆ [೩]ಕಾಂತ

---

೧. ತ್ವತ್ಸಹಜಪತ್ನ್ಯಾ ಅಪಿ ಲಕ್ಷ್ಮ್ಯಾಃ ಸ್ವೇತರಸರ್ವಕರ್ತಾ ತ್ವಂ ಕರ್ತೈವೇತಿ ಯುಕ್ತೇಶ್ಚ ತ್ವಯಿ ಪಿತೃತ್ವಂ ಪತಿತ್ವಂ ಚ ನ ವಿರುದ್ಧಮಿತಿ ಗೋಪೀನಾಂ ಹೃದಯಮ್। -ವ್ಯಾ.

೨. ತ್ವತ್ಪರಿತ್ಯಾಗ ಏವ ಪಿತ್ರಾದಿಪರಿತ್ಯಾಗದೋಷಾಪತ್ತೇರಿತಿ ಭಾವಃ। -ವ್ಯಾ.
ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ ॥ -ಭಾ.(೪/೯/೧೬)

೩. ಕಂ ಸುಖಂ ತಸ್ಯಾಂತೋ ನಾಶೋ ಯಸ್ಮಾದಿತಿ ವ್ಯುತ್ಪತ್ತೇರಿತಿ ಭಾವಃ। -ವ್ಯಾ.

(ಕ-ಸುಖ+ಅಂತ-ನಾಶ) ಉಳಿದವರಿಗೆ ಕಾಂತ ಎಂಬ ಹೆಸರು ಸುಖನಾಶಕ ಎಂಬ ಅರ್ಥದಲ್ಲಿ ಅನ್ವಯಿಸೀತೇ ಹೊರತು ಮುಖ್ಯಾರ್ಥದಲ್ಲಲ್ಲ ಎಂಬ ಇಲ್ಲಿಯ ಚಮತ್ಕಾರ ಅತ್ಯಂತ ರೋಚಕ.

೨. ಇತರ ಸ್ತ್ರೀಯರಿಗೆ ಅವರವರ ಪತಿಗಳ ಸೇವೆ ವಿಹಿತವಾದರೂ ಮುಖ್ಯವಾಗಿ ಅದು ಅವರ ಅಂತರ್ಯಾಮಿಯಾದ ಶ್ರೀಹರಿಯ ಸೇವೆ ಎಂಬ ಅರ್ಥದಲ್ಲಿ ಸಾರ್ಥಕ; ಆದರೆ ಗೋಪಿಕಾಸ್ತ್ರೀಯರಲ್ಲಿ ರಮಾವೇಶವಿರುವುದರಿಂದ ಅವರಿಗೆ ಶ್ರೀಹರಿಯೇ ಕಾಂತ ಎಂಬುದು ಉಚಿತವಾದ ಅರ್ಥವೇ ಆಗಿದೆ.

## ಸಾರಭೋಗ ಶ್ರೀಹರಿಯದು

ಯಃ ಸಾರಭಾಗಮನುಭೂಯ ಶರೀರಭಾಜಾಂ
ಶಿಷ್ಟಂ ಪ್ರಯಚ್ಛಸಿ ಕಿಲಾರಸಮಲ್ಪಭೋಗ್ಯಮ್ ।
ದುಃಖಾತಿದೂರ ಗತಪಾರ ಸುಖೈಕಭೋಕ್ತು-
ಸ್ತಸ್ಯೇಶ ಯೋಗ್ಯಮಖಿಲಂ ತವ ತರ್ಕಯಾಮಃ ॥ ೬೧ ॥

ನೀನು ವಿಷಯಗಳ ಸಾರವನ್ನು ಸ್ವೀಕರಿಸಿ, ಉಳಿದ ನೀರಸವಾದ ಅಲ್ಪ ವಿಷಯಗಳನ್ನು ಪ್ರಾಣಿಗಳಿಗೆ ನೀಡುವವನು; ನೀನು ದುಃಖಕ್ಕೆ ಅತಿದೂರನಾದವನು; ಮಹಿಮೆಗೆ ಕೊನೆಯಿಲ್ಲದವನು. ಅಂತಹ [೧]ಸುಖಮಾತ್ರಭೋಕ್ತೃವಾದ ನಿನಗೆ 'ಎಲೈ ಸ್ವಾಮಿಯಾದ ಶ್ರೀಕೃಷ್ಣನೇ! ಸಕಲವೂ ಯೋಗ್ಯವಾಗಿದೆ ಎಂದು ನಾವು ತರ್ಕಿಸುವೆವು'.

ವಿ.: [೨]ಸಕಲ ಸಾರಭೋಕ್ತೃವೂ ಶ್ರೀಹರಿಯೇ ಆದ್ದರಿಂದ ಅವನಿಗೆ ತಮ್ಮನ್ನು ಸಮರ್ಪಿಸಿ-ಕೊಳ್ಳುವುದು ಅತ್ಯಂತ ಯೋಗ್ಯ. ಇತರರು ಏನಿದ್ದರೂ ಶ್ರೀಹರಿಯು ಅನುಗ್ರಹಿಸುವ ಅವರವರಿಗೆ ಉಚಿತವಾದ ಭೋಗವೇ ಹೊರತು ಮುಖ್ಯಾರ್ಥದ ಭೋಗವಲ್ಲ ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

## ಶ್ರೀಕೃಷ್ಣ-ಗೋಪಿಯರ ಸಲ್ಲಾಪ

ಧರ್ಮೋ ನ ವೋಽಯಂ ಶ್ರುತಿಸಂಗತಾಕ್ಷ್ಯೋ
ಧರ್ಮೋ ನವೋಽಯಂ ಶ್ರುತಿಸಂಗತಾಕ್ಷ ।
ಮಾಽನ್ಯಂ ಭಜಧ್ವಂ ರಮಣಂ ವಿಹಾಯ
ಮಾನ್ಯಂ ಭಜಾಮೋ ರಮಣಂ ವಿಹಾಯ ॥ ೬೨ ॥

---

೧. ''ಶುಭಂ ಪಿಬತ್ಯಸೌ ನಿತ್ಯಮ್'' ಇತಿ ಸ್ಮೃತೇಃ। -ವ್ಯಾ.

೨. ಅಖಿಲಸಾರಭೋಕ್ತೃತ್ವಾತ್ತ್ವತ್ತಿಭಿರಸ್ಮಾಭಿಃ ಸಹ ಕ್ರಿಯಮಾಣಭೋಗಸ್ಯಾಪಿ ಮುಖ್ಯತಃ ತ್ವಮೇವ ಭೋಕ್ತೇತಿ । ವಯಮಪಿ ತವೈವ ಭೋಗ್ಯಾ ಇತ್ಯಸ್ಮನ್ನಿಷೇಧಸ್ತವ ನ ಯುಕ್ತ ಇತಿ ಭಾವಃ। -ವ್ಯಾ.

(ಕೃಷ್ಣ) "ಎಲೈ ವಿಶಾಲಾಕ್ಷಿಯರೇ! ನಿಮಗೆ ಇದು [೧] ಧರ್ಮವಾದುದಲ್ಲ"; (ಗೋಪಿಯರು) "ಎಲೈ ಪುಂಡರೀಕಾಕ್ಷ! ಇದು ನವೀನವಾದ ಧರ್ಮವೇ ಆಗಿದೆ"; (ಕೃಷ್ಣ) "ನಿಮ್ಮ ಪತಿಯನ್ನು ಬಿಟ್ಟು ನೀವು ಇತರರನ್ನು ಸೇವಿಸುವುದು ತರವಲ್ಲ"; (ಗೋಪಿಯರು) "ನಾವು ಪತಿಯನ್ನು ತೊರೆದು ಜಗನ್ಮಾನ್ಯನಾದ ನಿನ್ನನ್ನೇ ಭಜಿಸುವೆವಲ್ಲವೇ".

ವಿ. : ೧. ಈ ಶ್ಲೋಕದಲ್ಲಿ ಅಪೂರ್ವವಾದ ಪ್ರಶ್ನೋತ್ತರಗಳಲ್ಲಿ ಗೋಪಿಯರ ದಿವ್ಯಜ್ಞಾನವು ನಿರೂಪಿತವಾಗಿದೆ.

೨. [೨] ಧರ್ಮವಲ್ಲ ಎಂಬುದು ಶ್ರೀಕೃಷ್ಣನ ವಾದವಾದರೆ, ಅದು ಹೊಸತಾದ ಧರ್ಮವೇ ಆಗಿದೆ ಎಂಬುದು ಗೋಪಿಯರ ಉತ್ತರ; ಪತಿಯನ್ನು ತೊರೆದು ಇತರರ ಅಭಿಲಾಷೆ ಅಯುಕ್ತ ಎಂಬುದು [೩] ಶ್ರೀಕೃಷ್ಣನ ವಾದವಾದರೆ ನಿಜಕ್ಕೂ ಜಗನ್ಮಾನ್ಯನಾದ [೪] ಶ್ರೀಕೃಷ್ಣನೇ ಮುಖ್ಯಪತಿ ಎಂಬುದು ಗೋಪಿಯರ ಉತ್ತರ.

೩. 'ಶ್ರುತಿಸಂಗತಾಕ್ಷ್ಯಃ'[೫] ಎಂಬುದಕ್ಕೆ, ಕಿವಿಯೊಂದಿಗೆ ಜೊತೆಗೂಡುವಂತಿದ್ದ ವಿಶಾಲವಾದ ನೇತ್ರದವರು ಎಂದೂ, ವೇದಗಳಿಂದ ಒಡಗೂಡಿದ ಕಣ್ಣುಗಳನ್ನು ಹೊಂದಿದವರು ಎಂದೂ, 'ಶ್ರುತಿಸಂಗತಾಕ್ಷ'[೬] ಎಂಬುದಕ್ಕೆ ಕಿವಿಯವರೆಗೂ ವಿಸ್ತರಿಸಿದ ಕಣ್ಣುಳ್ಳವನು ಎಂದೂ ಅರ್ಥವು ವಿವಕ್ಷಿತ.

೪. ಇಲ್ಲಿ 'ನವಃ', ಎಂಬುದು ಶ್ರೀಕೃಷ್ಣನ ವಚನದಲ್ಲಿ 'ನ' 'ವಃ' ಎಂಬ ವಿಭಾಗ ಮಾಡಿ ಗೋಪಿಯರ ಉತ್ತರದಲ್ಲಿ ನವಃ ಎಂಬುದಾಗಿ ಒಂದು ಪದವಾಗಿ ಬಂದಿದೆ.

೫. ಅದರಂತೆ ಮಾ ಅನ್ಯಂ ಎಂಬುದಾಗಿ [೭] ಶ್ರೀಕೃಷ್ಣನ ವಚನದಲ್ಲಿ ವಿಭಾಗವಾದರೆ ಮಾನ್ಯಂ ಎಂಬುದು ಗೋಪಿಯರ ಉತ್ತರದಲ್ಲಿನ ಪದ.

---

೧. ದುಶ್ಶೀಲೋ ದುರ್ಭಗೋ ವೃದ್ಧೋ ಜಡೋ ರೋಗ್ಯಧನೋಽಪಿ ವಾ।
ಪತಿಃ ಸ್ತ್ರೀಭಿರ್ನ ಹಾತವ್ಯೋ ಲೋಕೇ ಪ್ಸುಚಿರಪಾತಕೀ॥
ಅಸ್ವರ್ಗ್ಯಮಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಮ್।
ಜುಗುಪ್ಸಿತಂ ಚ ಸರ್ವತ್ರ ಔಪಪತ್ಯಂ ಕುಲಸ್ತ್ರಿಯಃ॥
ಶ್ರವಣಾದ್ದರ್ಶನಾದ್ಧ್ಯಾನಾನ್ಮಯಿ ಭಾವೋಽನುಕೀರ್ತನಾತ್।
ನ ತಥಾ ಸನ್ನಿಕರ್ಷೇಣ ಪ್ರತಿಯಾತ ತತೋ ಗೃಹಾನ್॥ -ಭಾಗ.(೧೦/೨೭/೨೫-೨೭)

೨. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಇತಿ(ಗೀ.೧೮/೬೬)ಪ್ರಮಾಣಪ್ರಸಿದ್ಧತ್ವಾದಿತಿ ಭಾವಃ।-ವ್ಯಾ.

೩. ರಮಣಂ ವಿಹಾಯ ಮಾನ್ಯಂ ಜಗತ್ಪೂಜ್ಯಂ ಮಾಮೇವ ಭಜಧ್ವಂ ಔಪಪತ್ಯನಿಷೇಧಸ್ತು ಲೌಕಿಕಪುರುಷ-ನಿಷೇಧಪರ ಇತಿ ಹೃದಯಮ್। -ವ್ಯಾ.

೪. 'ಜುಗುಪ್ಸಿತಂ ಚ ಸರ್ವತ್ರ ತ್ವೌಪಪತ್ಯಂ ಕುಲಸ್ತ್ರಿಯಃ'(ಭಾಗ.೧೦/೨೭/೨೬)ಇತ್ಯಾದ್ಯಾಗಮಜ್ಞಾ ಇತ್ಯರ್ಥಃ। -ವ್ಯಾ.

೫. ಹೇ ಶ್ರುತಿಸಂಗತಾಕ್ಷ್ಯಃ ಶ್ರುತಿಭಿರ್ವೇದೈಃ ಸಂಗತಾನಿ ಸಂಬದ್ಧಾನಿ ಅಕ್ಷೀಣಿ ಯಾಸಾಂ ತಾಸ್ತಾಸಾಂ ಸಂಬುದ್ಧಿಃ।-ವ್ಯಾ.

೬. ಶ್ರುತಿಭ್ಯಾಂ ಶ್ರೋತ್ರಾಭ್ಯಾಂ ಸಂಗತೇ ಅಕ್ಷಿಣೀ ಯಸ್ಯ ಸ ತಥಾ। ಹೇ ಶ್ರುತಿಸಂಗತಾಕ್ಷ ಕರ್ಣಾಂತಾಯತಲೋಚನ ಶ್ರೀಕೃಷ್ಣ। - ವ್ಯಾ.

೭. ಇತಿ ಕೃಷ್ಣೋಕ್ತಾಃ ಗೋಪ್ಯಃ ಶ್ರೀಕೃಷ್ಣಸ್ಯಾಭಿಸಂಧಿಮುದ್ಘಾಟಯಂತಿ। -ವ್ಯಾ.

### ಧರ್ಮಾಧರ್ಮಗಳ ವಿವೇಚನೆ

ಹಿತಾಹಿತಾಜ್ಞಾ ಬತ ಯೂಯಮಂಗನಾ
ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ।
ಹಿತಾಹಿತಜ್ಞಾ ವಯಮಚ್ಯುತ ಪ್ರಭೋ
ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ॥ ೬೩ ॥

(ಕೃಷ್ಣ)''ಎಲೈ ಗೋಪಿಯರೇ ! ನೀವು ಒಳಿತುಕೆಡುಕುಗಳನ್ನು ಬಲ್ಲವರಲ್ಲ; ಏಕೆಂದರೆ ನಿಮ್ಮ ಬುದ್ಧಿ ಅಧರ್ಮದಲ್ಲೇ ನೆಟ್ಟಿದೆ'. (ಗೋಪಿಯರು) ''ಪ್ರಭು ಅಚ್ಯುತ! ನಾವು ಹಿತ ಅಹಿತಗಳನ್ನು ಬಲ್ಲವರೇ ಸರಿ; ಏಕೆಂದರೆ ನಮ್ಮ ಬುದ್ಧಿಯು ''ಅ-ಧರ್ಮ''(ವಿಷ್ಣುಧರ್ಮ)-ದಲ್ಲಿ ಅಚಲವಾಗಿಯೇ ಇದೆಯಲ್ಲವೆ !

ವಿ. : ೧. ಹಿತ ಅಹಿತಗಳನ್ನು ಬಲ್ಲವರಲ್ಲ ಎಂಬ ಶ್ರೀಕೃಷ್ಣನ ಮಾತಿಗೆ ಪ್ರತಿಯಾಗಿ ನಾವು ಹಿತ ಅಹಿತಗಳನ್ನು ಬಲ್ಲವರೇ ಆಗಿರುವೆವು ಎಂಬುದು [೧] ಗೋಪಿಯರ ವಾದ; ಅಧರ್ಮೇ ಎಂಬುದು ಶ್ರೀಕೃಷ್ಣನ ಮಾತಿನಲ್ಲಿ ಅಧರ್ಮ ಎಂಬ ಅರ್ಥವನ್ನು ಕೊಟ್ಟರೆ ಗೋಪಿಯರ ಉತ್ತರದಲ್ಲಿ ಅ-ಧರ್ಮ (ವಿಷ್ಣುವನ್ನು ಮೆಚ್ಚಿಸುವ ಧರ್ಮ) ಎಂಬ ಅರ್ಥವನ್ನು ಕೊಡುವುದು. ಹೀಗೆ ಉಕ್ತಿ ಪ್ರತ್ಯುಕ್ತಿಗಳ ಸೊಬಗಿನ ಇಲ್ಲಿಯ ಅಲಂಕಾರ ವಾಕೋವಾಕ್ಯ ಎಂಬುದು.

೨. 'ಅ'ಎಂದರೆ ವಿಷ್ಣು; ಅ ಇತಿ ಬ್ರಹ್ಮ [೨]; ಅಕ್ಷರಾಣಾಮಕಾರೋಽಸ್ಮಿ(ಗೀತಾ.೧೦/೩೩).

### ಅದೃಶ್ಯನಾದ ಶ್ರೀಕೃಷ್ಣ

ವಾಗ್ವೈಖರೀಮಿವ ನಿರೀಕ್ಷ್ಯ ಸ ಬಲ್ಲವೀನಾಂ
ಪ್ರೀತಃ [೩] ಪ್ರಿಯೋಕ್ತಿಪರಿರಂಭಣಚುಂಬನಾದ್ಯೈಃ ।
ಸುಪ್ತಂ ಪ್ರಬೋಧ್ಯ ಮದನಂ ಸಮಭೂದದೃಶ್ಯಃ
ಸತ್ಯಾಂ ವಿಧಾತುಮಿವ ಕಾಮಿವಿದೂರತಾಂ ಸ್ವಾಮ್ ॥ ೬೪ ॥

---

೧. ''ಜನಿಷ್ಯತೇ ತತ್ಪ್ರಿಯಾರ್ಥಂ ಸಂಭವಂತು ಸುರಸ್ತ್ರಿಯಃ'' ಇತಿ ಭಾಗವತ(೧೦/೧/೨೩.) ವಚನಾದಿತಿ ಭಾವಃ।
-ವ್ಯಾ.

೨. ಐತರೇಯೋಪನಿಷತ್ (೧೩./೮/೬)

೩.. ಬಾಹುಪ್ರಸಾರಪರಿರಂಭಕರಾಲಕೋರುನೀವಿಸ್ತನಾಲಭನನರ್ಮಕರಾಗ್ರಪಾತೈಃ ।
ಕ್ಷ್ವೇಲಾವಲೋಕಹಸಿತೈರ್ವ್ರಜಸುಂದರೀಣಾಮುತ್ತಂಭಯನ್ ರತಿಪತಿಂ ರಮಯಾಂಚಕಾರ ॥
-ಭಾಗ.(೧೦/೨೭/೪೬)

[1]ಗೋಪಿಯರ ಇಂತಹ ವಾಗ್ವೈಖರಿಯನ್ನು ಕಂಡು, ಪ್ರೀತನಾದ ಶ್ರೀಕೃಷ್ಣ ಅವರಿಗೆ ತನ್ನ ಪ್ರಿಯವಾದ ಮಾತು, ಗಾಢ ಆಲಿಂಗನ ಹಾಗೂ ಚುಂಬನಾದಿಗಳ ಮೂಲಕ ಸುಪ್ತವಾಗಿದ್ದ ಕಾಮವನ್ನು ಉದ್ರೇಕಿಸಿ, ತಾನು ಕಾಮಿಗಳಿಗೆ ದೊರಕದವನು ಎಂಬ ಪ್ರಮೇಯವನ್ನು ಸತ್ಯಮಾಡಲೋ ಎಂಬಂತೆ ಅದೃಶ್ಯನಾಗಿಬಿಟ್ಟನು.

ವಿ. : ೧. ಗೋಪಿಯರಿಗೆ ಮೊದಲು ಒಂದು ಬಗೆಯಲ್ಲಿ ಒಲಿದಂತೆ ಕಂಡರೂ, ಕೂಡಲೇ ಅದೃಶ್ಯನಾಗುವ ಮೂಲಕ ತಾನು ಕಾಮಿಗಳಿಗೆ ದೊರೆಯುವವನಲ್ಲ ಎಂಬ ಪ್ರಮೇಯವನ್ನು ಸಾರಿದ ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

೨. ಇದರಿಂದ **ಗೋಪ್ಯಃ ಕಾಮಾತ್** ಎಂಬ ಶ್ರೀಮದ್ಭಾಗವತದ ವಾಕ್ಯಕ್ಕೆ ಅದರ ತಾತ್ಪರ್ಯದಲ್ಲಿ ಬಂದಿರುವಂತೆ ಕಾಮಮೂಲವಾದ ನಿರ್ಮಲಭಕ್ತಿಯಿಂದ ಎಂಬ ಅರ್ಥವೇ ವಿವಕ್ಷಿತ; ಕೇವಲ ಕಾಮ ಎಂಬ ಅರ್ಥವಲ್ಲ ಎಂಬ ವಿಶೇಷಾಂಶ ನಿರೂಪಿತವಾಯಿತು ಎಂದು ತಿಳಿಯಬೇಕು.

೩. ಪರಿರಂಭಣ - ಆಲಿಂಗನ; ವಾಗ್ವೈಖರೀ - ವಾಕ್ಪ್ರೌಢಿಮೆ; ಅಪತ್ಯ - ಮಕ್ಕಳು.

**ಗೋಪಿಯರು ಮಾಡಿದ ಶ್ರೀಕೃಷ್ಣನ ಅನ್ವೇಷಣೆ**

**ತಾಃ [2]ಪತ್ಯಪತ್ಯಭವನೇಷು [3]ವಿರಕ್ತಚಿತ್ತಾಃ**
**ಶ್ರೀಪುಂಡರೀಕನಯನೇಕ್ಷಣಕಾರ್ಯಸಕ್ತಾಃ।**
**ಆರಣ್ಯಕೇಷು ಮುನಿವರ್ಗ ಇವಾತಿಮುಗ್ಧಾ-**
**ಶ್ಚೇರುರ್ವಿಮೃಗ್ಯ ಬಹುಧಾ ತಮರಣ್ಯಕೇಷು[4] ॥ ೬೫ ॥**

ಗಂಡ, ಮಕ್ಕಳು ಹಾಗೂ ಗೃಹಗಳಲ್ಲಿ ವಿರಕ್ತಮನಸ್ಕರಾದ ಅತಿಮುಗ್ಧರಾದ ಆ ಗೋಪಿಯರು ಪುಂಡರೀಕಾಕ್ಷನಾದ ಶ್ರೀಕೃಷ್ಣನನ್ನು ಕಾಣುವ ಕಾರ್ಯದಲ್ಲಿಯೇ ತೊಡಗಿದವರಾಗಿ, ಆರಣ್ಯಕಗಳಲ್ಲಿ ಮುನಿಗಳ ಗುಂಪು ಹೇಗೋ ಹಾಗೆ, ಅವನನ್ನು ಅರಣ್ಯಗಳಲ್ಲಿ ಬಹುವಾಗಿ ಹುಡುಕುತ್ತಾ ಸಂಚರಿಸಿದರು.

---

೧. ಶಾಂತಾವಸ್ಥಾಯಾಂ ತಾಭಿಃ ಸಹ ಸಂಭಾಷಣಂ ಕೃತ್ವಾ ತಾಸಾಂ ಕಾಮಿತಾಯಾಂ ಸತ್ಯಾಂ ಅದೃಶ್ಯತ್ವೇ ಸ್ವಸ್ಯ ಕಾಮಿವಿದೂರತ್ವಂ ಸ್ಪಷ್ಟಂ ಭವತೀತಿ ಭಾವಃ। -ವ್ಯಾ.

೨. ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್।
ಅಸ್ತ್ವೇವ ತತ್ ತದಪಿ ದೇವವರೇ ತ್ವಯೀಶೇ ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಾಂಧವಾತ್ಮಾ॥
-ಭಾಗ.(೧೦/೨೭/೩೨)

೩. ವಿರಕ್ತಚಿತ್ತಃ ವೈರಾಗ್ಯರೂಪಪ್ರಥಮಸಾಧನವಾನ್ ಶ್ರೀಪುಂಡರೀಕನಯನೇಕ್ಷಣಕಾರ್ಯಸಕ್ತಃ ಅಪರೋಕ್ಷ-ಜ್ಞಾನಾರ್ಥೀತ್ಯರ್ಥಃ। -ವ್ಯಾ.

೪. ಗಾಯಂತ್ಯ ಉಚ್ಚೈರಮುಮೇವ ಸಂಗತಾ ವಿಚೇರುರುನ್ಮತ್ತಕವದ್ ವನಾದ್ ವನಮ್।
ಪಪ್ರಚ್ಛುರಾಕಾಶವದಂತರಂ ಬಹಿರ್ಭೂತೇಷು ಸಂತಂ ಪುರುಷಂ ವನಸ್ಪತೀನ್॥ -ಭಾಗ.(೧೦/೩೦/೪)

ವಿ. : ೧. ಅದೃಶ್ಯನಾದ ಶ್ರೀಕೃಷ್ಣನನ್ನು ಗೋಪಿಯರು ಬಗೆಬಗೆಯಾಗಿ ಹುಡುಕುವ ಕಾರ್ಯದಲ್ಲಿ ತೊಡಗಿದ್ದನ್ನು ಇಲ್ಲಿ ಮುನಿಗಳು ಶ್ರೀಹರಿಯ ಮಹಿಮೆಯನ್ನು ಅನ್ವೇಷಿಸುವ ಕಾರ್ಯಕ್ಕೆ ಹೋಲಿಸಿರುವರು.

೨. ಇದರಿಂದ ಗೋಪಿಯರು ಶ್ರೀಕೃಷ್ಣನ ಮಹಾಮಹಿಮೆಯನ್ನು ಬಲ್ಲ ದಿವ್ಯಜ್ಞಾನಿಗಳೇ ಹೊರತು ಲೋಕದ ಸಾಮಾನ್ಯಸ್ತ್ರೀಯರಂತೆ ಕೇವಲ ಕಾಮನೆಯಿಂದ ಕೂಡಿದವರಾಗಿರಲಿಲ್ಲ ಎಂಬ ವಿಶೇಷಾಂಶ ಸೂಚಿತ.

೩. ಆರಣ್ಯಕಗಳು ಎಂದರೆ ಮಂತ್ರ, ಬ್ರಾಹ್ಮಣ, ಆರಣ್ಯಕ ಹಾಗೂ ಉಪನಿಷತ್ತು ಎಂಬ ವೈದಿಕ ಸಾಹಿತ್ಯದ ನಾಲ್ಕು ಪ್ರಭೇದಗಳಲ್ಲಿ ಒಂದಾದ ಆರಣ್ಯಕಗಳು ಎಂದರ್ಥ. ಮತ್ತೊಂದು ಅರ್ಥದಲ್ಲಿ ಅರಣ್ಯಗಳು ಎಂದರ್ಥ. ಮೊದಲ ಅರ್ಥದಲ್ಲಿ ಅದು ಮುನಿಗಳಿಗೂ, ಎರಡನೇ ಅರ್ಥದಲ್ಲಿ ಗೋಪಿಯರಿಗೂ ಅನ್ವಯಿಸುವುದು; ಪೂಗ - ಸಮೂಹ.

೪. ಇಲ್ಲಿಯ ಪತ್ಯಪತ್ಯಭವನೇಷು ವಿರಕ್ತಚಿತ್ತಾಃ ಎಂಬ ಮಾತು ಗೋಪೀಗೀತೆಯಲ್ಲಿನ ಪತಿಸುತಾನ್ವಯಾನ್ ಭ್ರಾತೃಬಾಂಧವಾನತಿವಿಲಂಘ್ಯ ತೇ ಹ್ಯಚ್ಯುತಾಗತಾಃ ಎಂಬ ಮಾತಿನ ವಿವರಣರೂಪವಾಗಿದೆ.

### ಗೋಪಿಯರ ಬಗೆಬಗೆಯ ಅವಸ್ಥೆಗಳು

**ಸಮಮುದಿತವಿಮೋಹಾವಸ್ಥಯಾ ಕ್ವಾಪಿ ಮುಗ್ಧಾಃ**
**ಸಮುದಿತಘನಚಿಂತಾವಸ್ಥಯಾ ಕ್ವಾಪಿ ಶಾಂತಾಃ।**
**ವಶಯಿತುಮಿವ ಕಾಂತಂ ಯೋಗಿಪೂಗೈಕಚಿಂತ್ಯಂ**
**ಮಧುರವಚನದಕ್ಷಾಸ್ತಂ ಜಗುಸ್ತಾಃ ಪರೋಕ್ಷಮ್ ॥ ೬೬ ॥**

ಕೆಲವು ಗೋಪಿಯರು ಜೊತೆಯಲ್ಲೇ ಕಾಣಿಸಿಕೊಂಡ ಉನ್ಮಾದಾವಸ್ಥೆಯಿಂದಾಗಿ ಮುಗ್ಧ-ರಾದರು; ಕೆಲವರು ಕಾಣಿಸಿಕೊಂಡ ಹೆಚ್ಚಿನ ಚಿಂತೆಯ ಪರಿಸ್ಥಿತಿಯಿಂದಾಗಿ ಶಾಂತರಾದರು. ಯೋಗಿಗಳ ಗುಂಪಿಗೆ ಮಾತ್ರವೇ ದೊರೆಯುವ ಮನೋಹರನಾದ ಆ ಶ್ರೀಕೃಷ್ಣನನ್ನು ಒಲಿಸಿಕೊಳ್ಳಲೆಂದು ಮಧುರ ವಚನದಲ್ಲಿ ನಿಪುಣರಾದ ಅವರು ಅದೃಶ್ಯನಾದ ಅವನನ್ನು ಕುರಿತು ಹಾಡತೊಡಗಿದರು.

ವಿ. : ೧. ಶ್ರೀಹರಿಯನ್ನು ಚಿಂತಿಸುವವರು ಮುಗ್ಧರು, ಶಾಂತರು ಆದ ಮಹನೀಯರು. ಇಲ್ಲಿ ಗೋಪಿಯರು ಮುಗ್ಧೆಯರು ಹಾಗೂ ಶಾಂತರೂ ಆಗಿದ್ದರಿಂದ ಅವರ ಶ್ರೀಕೃಷ್ಣನ ಹುಡುಕುವಿಕೆಯು ಮುನಿಗಳು ಮಾಡುವ ಬ್ರಹ್ಮಜಿಜ್ಞಾಸೆಯಂತಿದ್ದಿತು ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

೨. ಗೋಪಿಯರು ಹಾಗೆ ಶ್ರೀಕೃಷ್ಣನನ್ನು ಒಲಿಸಲೆಂದು ಹಾಡಿದ ಗೀತೆ ಗೋಪೀಗೀತೆ ಎಂಬುದಾಗಿ[೧] ಶ್ರೀಮದ್ಭಾಗವತ(೧೦/೨೯)ದಲ್ಲಿಸುಪ್ರಸಿದ್ಧವಾಗಿದೆ.

---

೧. ಗೋಪೀಗೀತೆಯ ಪೂರ್ಣಪಾಠ ಹೀಗಿದೆ :

ಜಯತಿ ತೇಽಧಿಕಂ ಜನ್ಮನಾ ವ್ರಜಃ ಶ್ರಯತ ಇಂದಿರಾ ಸಾಧು ತತ್ರ ಹಿ ।
ದಯಿತ ದೃಶ್ಯತಾಂ ತ್ವಾಂ ದಿದೃಕ್ಷತಾಂ ತ್ವಯಿ ಧೃತಾಸವಸ್ತ್ವಾ ವಿಚಿನ್ವತೇ ॥ ೧ ॥
ವ್ರಜಜನಾರ್ತಿಹನ್ ವೀರಯೋಷಿತಾಂ ನಿಜಜನಸ್ಮಯಧ್ವಂಸನಸ್ಮಿತ ।
ಭಜಸಖೇ ಭವೇ ಕಿಂಕರೀಃ ಸ್ಮ ನೋ ಜಲರುಹಾನನಂ ಚಾರು ದರ್ಶಯನ್ ॥೨॥
ಶರದುದಾಶಯೇ ಸಾಧು ಜಾತಸತ್ಸರಸಿಜೋದರಶ್ರೀಮುಷಾ ದೃಶಾ ।
ಸುರತನಾಥ ತೇ ಶುಲ್ಕದಾಸಿಕಾ ವರದ ನಿಘ್ನತೋ ನೇಹ ಕಿಂ ವಧಃ ॥ ೩ ॥
ವಿಷಜಲಾಶಯಾದ್ವ್ಯಾಲರಾಕ್ಷಸಾದ್ವರ್ಷಮಾರುತಾದ್ವೈದ್ಯುತಾನಲಾತ್ ।
ವೃಷಮಯಾದ್ವ್ಯಯಾದ್ವಿಶ್ವತೋಮುಖಾದ್ವೃಷಭ ತೇ ವಯಂ ರಕ್ಷಿತಾ ಮುಹುಃ ॥ ೪ ॥
ನ ಖಲು ಗೋಪಿಕಾನಂದನೋ ಭವಾನಖಿಲದೇಹಿನಾಮಂತರಾತ್ಮದೃಕ್ ।
ವಿಖನಸಾರ್ಚಿತೋ ವಿಶ್ವಗುಪ್ತಯೇ ಸಖಿ ಉದೇಯಿವಾನ್ ಸಾತ್ವತಾಂ ಕುಲೇ ॥ ೫ ॥
ವಿರಚಿತಾಭಯಂ ವೃಷ್ಣಿವರ್ಯ ತೇ ಶರಣಮೀಯುಷಾಂ ಸಂಸೃತೇರ್ಭಯಾತ್ ।
ಕರಸರೋರುಹಂ ಕಾಂತ ಕಾಮದಂ ಶಿರಸಿ ಧೇಹಿ ನಃ ಶ್ರೀಕರಗ್ರಹಮ್ ॥ ೬ ॥
ಪ್ರಣತದೇಹಿನಾಂ ಪಾಪಕರ್ಶನಂ ತೃಣಚರಾನುಗಂ ಶ್ರೀನಿಕೇತನಮ್ ।
ಫಣಿಫಣಾರ್ಪಿತಂ ತೇ ಪದಾಂಬುಜಂ ಕೃಣು ಕುಚೇಷು ನಃ ಕೃಂಧಿ ಹೃಚ್ಛಯಮ್ ॥ ೭ ॥
ಮಧುರಯಾ ಗಿರಾ ವಲ್ಗುವಾಕ್ಯಯಾ ಬುಧಮನೋಜ್ಞಯಾ ಪುಷ್ಕರೇಕ್ಷಣ ।
ವಿಧಿಕರೀರಿಮಾ ವೀರ ಮುಹ್ಯತೀರಧರಸೀಧುನಾಽಽಪ್ಯಾಯಯಸ್ವ ನಃ ॥ ೮ ॥
ತವ ಕಥಾಮೃತಂ ತಪ್ತಜೀವನಂ ಕವಿಭಿರೀಡಿತಂ ಕಲ್ಮಷಾಪಹಮ್ ।
ಶ್ರವಣಮಂಗಲಂ ಶ್ರೀಮದಾತತಂ ಭುವಿ ಗೃಣಂತಿ ತೇ ಭೂರಿದಾ ಜನಾಃ ॥ ೯ ॥
ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ ವಿಹರಣಂ ಚ ತೇ ಧ್ಯಾನಮಂಗಲಮ್ ।
ರಹಸಿ ಸಂವಿದೋ ಯಾ ಹೃದಿಸ್ಪೃಶಃ ಕುಹಕ ನೋ ಮನಃ ಕ್ಷೋಭಯಂತಿ ಹಿ ॥ ೧೦ ॥
ಚಲಸಿ ಯದ್ ವ್ರಜಾಚ್ಚಾರಯನ್ ಪಶೂನ್ ನಲಿನಸುಂದರಂ ನಾಥ ತೇ ಪದಮ್ ।
ಶಿಲತೃಣಾಂಕುರೈಃ ಸೀದತೀತಿ ನಃ ಕಲಿಲತಾಂ ಮನಃ ಕಾಂತ ಗಚ್ಛತಿ ॥ ೧೧ ॥
ದಿನಪರಿಕ್ಷಯೇ ನೀಲಕುಂತಲೈರ್ವನರುಹಾನನಂ ಬಿಭ್ರದಾವೃತಮ್ ।
ವನರಜಸ್ವಲಂ ದರ್ಶಯನ್ ಮುಹುಃ ಮನಸಿ ನಃ ಸ್ಮರಂ ವೀರ ಯಚ್ಛಸಿ ॥ ೧೨ ॥
ಪ್ರಣತಕಾಮದಂ ಪದ್ಮಜಾರ್ಚಿತಂ ಧರಣಿಮಂಡನಂ ಧ್ಯೇಯಮಾಪದಿ ।
ಚರಣಪಂಕಜಂ ಶಂತಮಂ ಚ ತೇ ರಮಣ ನಸ್ತನೇಷ್ವರ್ಪಯಾಧಿಹನ್ ॥ ೧೩ ॥
ಸುರತವರ್ಧನಂ ಶೋಕನಾಶನಂ ಸ್ವರಿತವೇಣುನಾ ಸುಷ್ಠು ಚುಂಬಿತಮ್ ।
ಇತರರಾಗವಿಸ್ಮಾರಣಂ ನೃಣಾಂ ವಿತರ ವೀರ ನಸ್ತೇಽಧರಾಮೃತಮ್ ॥ ೧೪ ॥
ಅಟತಿ ಯದ್ಭವಾನಹ್ನಿ ಕಾನನಂ ತ್ರುಟಿ ಯುಗಾಯತೇ ತ್ವಾಮಪಶ್ಯತಾಮ್ ।
ಕುಟಿಲಕುಂತಲಂ ಶ್ರೀಮುಖಂ ಚ ತೇ ಜಡವದೀಕ್ಷತಾಂ ಪಕ್ಷ್ಮಕೃದ್ದೃಶಾಮ್ ॥ ೧೫ ॥
ಪತಿಸುತಾನ್ವಯಭ್ರಾತೃಬಾಂಧವಾನತಿವಿಲಂಘ್ಯ ತೇ ಹ್ಯಚ್ಯುತಾಗತಾಃ ।
ಗತಿವಿದಸ್ತವೋದ್ಗೀತಮೋಹಿತಾಃ ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥ ೧೬ ॥

### ಸರ್ಗೋಪಸಂಹಾರ

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಶ್ಚ ಷಷ್ಠೋ ಮುದಾಮ್ ॥ ೬೭ ॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಷಷ್ಠಃ ಸರ್ಗಃ ॥ ೬ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದುಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ, ಈ ಕೃತಿಯಲ್ಲಿ ಆನಂದಗಳ ಆರನೆಯ ಸರ್ಗವು ಮುಕ್ತಾಯವಾಯಿತು.

*****

---

ರಹಸಿ ಸಂವಿದಂ ಹೃಚ್ಛಯೋದಯಂ ಪ್ರಹಸಿತಾನನಂ ಪ್ರೇಮವೀಕ್ಷಣಮ್ ।
ಬೃಹದುರಃಶ್ರಿಯೋ ೀರ ವೀಕ್ಷ್ಯ ತೇ ಮುಹುರತಿಸ್ಪೃಹಾ ಮುಹ್ಯತೇ ಮನಃ ॥ ೧೭ ॥
ವ್ರಜವನೌಕಸಾಂ ವ್ಯಕ್ತಿರಂಗ ತೇ ವೃಜಿನಹಂತ್ರ್ಯಲಂ ವಿಶ್ವಮಂಗಲಮ್ ।
ಭಜ ಮನಾಕ್ ಚ ನಸ್ತ್ವತ್ಸ್ಪೃಹಾತ್ಮನಾಂ ಸ್ವಜನಹೃದ್ರುಜಾಂ ಯನ್ನಿಷೂದನಮ್ ॥ ೧೮ ॥
ಶ್ರೀಶುಕ ಉವಾಚ
ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥ ೧೯ ॥
ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।
ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥ ೨೦ ॥

# ೭. ಸಪ್ತಮಃ ಸರ್ಗಃ

(ಗೋಪಿಯರ ವಿಲಾಪ - ೧; ಅಶ್ವತ್ಥದ ಪ್ರಾರ್ಥನೆ - ೨-೬; ತುಲಸಿ ಮೊದಲಾದವರ ಪ್ರಾರ್ಥನೆ - ೭-೧೩; ಪದ್ಮಿನಿಯ ಪ್ರಾರ್ಥನೆ - ೧೪-೧೬; ಪದ್ಮದ ಪ್ರಾರ್ಥನೆ - ೧೭,೧೮; ಚೂತಾದಿಗಳ ಪ್ರಾರ್ಥನೆ - ೧೯-೨೩; ಅಶೋಕದ ಪ್ರಾರ್ಥನೆ - ೨೪-೨೬; ಮುರಳಿಯ ಪ್ರಾರ್ಥನೆ - ೨೭,೨೮; ವೃಂದಾವನದ ಪ್ರಾರ್ಥನೆ - ೩೦,೩೧; ಕೃಷ್ಣಸಾರದ ಪ್ರಾರ್ಥನೆ - ೪೧; ಗೋಪಿಯರ ವಿಲಾಪದ ವರ್ಣನೆ -೪೨-೫೨; ಪುನಃ ಗೋಪಿಯರಿಂದ ಶ್ರೀಕೃಷ್ಣನ ಪ್ರಾರ್ಥನೆ - ೫೩-೬೪; ಸರ್ಗೋಪಸಂಹಾರ - ೬೫)

### ಗೋಪಿಯರ ವಿಲಾಪ

ಯದುತಿಲಕ ಗತೋಽಸ್ಮಾನ್ ಧೈರ್ಯಮಾತ್ರೇಣ ಹಿತ್ವಾ
ತ್ಯಜಸಿ ಕಥಮಯಾಂಚಾಪ್ರಾಪ್ತಸಂಗಂ ನ ಚೇತ್ ತ್ವಮ್ ।
ತದಿದಮುಚಿತಮಸ್ಯ ಶ್ರೀಭೃತೋ ಯತ್ಸಮರ್ಥಾ
ಚರಣಕಮಲಧೂಲಿಸ್ತನ್ವಿ ತನ್ವೀಂ ವಿಧಾತುಮ್ ॥ ೧ ॥

(ಒಬ್ಬ ಗೋಪಿ)"ಎಲೈ ಯದುಕುಲತಿಲಕನಾದ ಶ್ರೀಕೃಷ್ಣ ! ಕೇವಲ ಧೈರ್ಯದಿಂದಲೇ ನಮ್ಮನ್ನು ಬಿಟ್ಟು ಹೋಗಿರುವಿ; ಇಲ್ಲವಾದಲ್ಲಿ ಅಯಾಚಿತವಾಗಿ ದೊರೆತ ಸಂಗವನ್ನು ನೀನು ಹೇಗೆ ತೊರೆಯುತ್ತಿದ್ದಿ?" (ಇನ್ನೊಬ್ಬ ಗೋಪಿ)"ಕೃಶಾಂಗಿ! ಲಕ್ಷ್ಮೀಪತಿಯಾದ ಇವನಿಗೆ ಇದು ಉಚಿತವೇ ಸರಿ; ಏಕೆಂದರೆ ಇವನ ಚರಣಕಮಲದ ಧೂಳು ನಾರಿಯನ್ನಾಗಿಸಲು ಸಮರ್ಥವಾಯಿತಲ್ಲವೆ !".

ವಿ. : ೧. ಶ್ರೀಕೃಷ್ಣನು ಮರೆಯಾದುದನ್ನು ಕಂಡು ನೋವಿನಿಂದ ಗೋಪಿಯೊಬ್ಬಳು ಹೇಳುವ ಮಾತಿದು. ಕೃಷ್ಣನು ತಾವಾಗಿ ಬಂದ [೧]ತಮ್ಮನ್ನು ತೊರೆದಿರುವುದು ಕೇವಲ ಧಾರ್ಷ್ಟ್ಯದಿಂದ ಮಾತ್ರ. ನಿಜಕ್ಕೂ ಅವನಿಗೆ ತಮ್ಮ ಮೇಲೆ ಒಲವಿದೆ[೨] ಎಂಬುದು ಒಬ್ಬ ಗೋಪಿಯ ಭಾವವಾದರೆ, ಮತ್ತೊಂದು ಬಗೆಯಲ್ಲಿ ಅವನು ವಕ್ಷಃಸ್ಥಳದಲ್ಲಿ ಮಹಾಲಕ್ಷ್ಮಿಯನ್ನು ಧರಿಸಿದವ, ಎಂದರೆ ಅಸಾಧಾರಣ ಸಿರಿವಂತ; ಶ್ರೀಮಂತರು ಏನನ್ನು ಮಾಡಲು ಸಮರ್ಥರೇ ಅಲ್ಲವೇ ! ಎಂಬುದು ಇನ್ನೊಬ್ಬ ಗೋಪಿ ನೀಡಿದ ಉತ್ತರದ ಭಾವ.

೨. ಮೇಲ್ನೋಟಕ್ಕೆ ಇದು ಶ್ರೀಕೃಷ್ಣನ ನಿಂದೆಯಂತೆ ಕಂಡರೆ ವಾಸ್ತವವಾಗಿ ವಕ್ಷಃಸ್ಥಳದಲ್ಲಿ ಸದಾ ಲಕ್ಷ್ಮಿಯನ್ನೇ ಹೊತ್ತ ಶ್ರೀಪತಿಯಾದ ಅವನಿಗೆ ತಮ್ಮಿಂದಾಗಬೇಕಾದ್ದೇನು ಎಂಬ ತಾತ್ತ್ವಿಕ ಚಿಂತನೆಯೂ ಆಗಿದೆ ಎಂಬುದು [೩]ಗಮನಾರ್ಹ.

---

೧. ಯಥಾ ತ್ವದ್ವಿರಹಾಸಹಿಷ್ಣುತ್ವಮಸ್ಮಾಕಂ ತಥಾಽಸ್ಮದ್ವಿರಹಾಸಹಿಷ್ಣುತ್ವಂ ತವಾಪ್ಯಸ್ತೀತಿ ಭಾವಃ। -ವ್ಯಾ.

೨. ನ ಚೇದೇವಂ ನ ಚೇತ್ ತ್ವಮಯಾಂಚಾಪ್ರಾಪ್ತಸಂಗಮ್ ಅಪ್ರಾರ್ಥನಾಲಬ್ಧಸುಂದರೀಸಂಬಂಧಂ ಕಥಂ ತ್ಯಜಸಿ "ಸ್ವಯಮೇವಾಗತಾ ವರಾ" ಇತ್ಯುಕ್ತೇಃ। -ವ್ಯಾ.

೩.. ಉರಸಿ ಶ್ರಿಯಂ ಬಿಭರ್ತೀತಿ ಶ್ರೀಭೃತ್ ತಸ್ಯ ಶ್ರೀಕೃಷ್ಣಸ್ಯ ತದಿದಮಸ್ಮತ್ಪರಿತ್ಯಾಗಲಕ್ಷಣಂ ಕಾರ್ಯಂ ಉಚಿತಂ ಯುಕ್ತಮೇವ ಲಕ್ಷ್ಮೀಪತೇಃ ಕಿಂ ತ್ವಯೇತಿ ಭಾವಃ। -ವ್ಯಾ.

೩. 'ಚರಣಕಮಲದ ಧೂಳಿ ನಾರಿಯನ್ನಾಗಿಸುವುದು' ಎಂಬ ಮಾತು [೧]ರಾಮಾಯಣದಲ್ಲಿನ ಅಹಲ್ಯೋದ್ಧಾರದ ಪ್ರಸಂಗದ ವಿವರವಾಗಿದೆ[೨]. ಶ್ರೀರಾಮನೇ ಶ್ರೀಕೃಷ್ಣ ಎನ್ನುವ ಮೂಲಕ ಶ್ರೀಹರಿಯ ರೂಪರೂಪಗಳಿಗೆ ಅಭೇದವು ಸಹ ಸೂಚಿತ.

೪. ಕೇವಲ ಚರಣಸ್ಪರ್ಶದಿಂದ ಶಿಲೆಯನ್ನೂ ನಾರಿಯನ್ನಾಗಿಸುವ ಶ್ರೀಕೃಷ್ಣನಿಗೆ ತಮ್ಮಿಂದ ಆಗಬೇಕಾದ್ದು ಏನೂ ಇಲ್ಲ ಎಂದು ಭಾವ[೩].

## ಅಶ್ವತ್ಥದ ಪ್ರಾರ್ಥನೆ

**[೪]ಅಶ್ವತ್ಥದ್ರುಮ ನಃ ಪ್ರಿಯಃ ಕಿಲ ಭವನ್ಮಧ್ಯೇ[೫] ಸದಾ ವರ್ತತೇ**
**ತಸ್ಮೈ ಜ್ಞಾಪಯ ಬಲ್ಲವೀಜನದಶಾಂ ಕಷ್ಟಾಮದೃಷ್ಟಪ್ರಿಯಾಮ್ ।**
**ನೋ ಚೇತ್ ತ್ವದ್ಧೃದಿ ಲಗ್ನಮಗ್ನಿಮಥವಾ ತ್ವತ್ಸಂಸ್ಥಿತಿಂ ತೇಽಭಿಧಾಂ**
**ನೋ ದೇಹ್ಯಂಗ ವಿಯೋಗರೋಗರಹಿತಾಂ ತ್ವಂ ಮರ್ತ್ಯತಾಮಾಶ್ರಯ ॥ ೨ ॥**

''ಎಲೈ ಅಶ್ವತ್ಥವೃಕ್ಷವೇ ! ನಮ್ಮ ಪ್ರಿಯನಾದ ಶ್ರೀಕೃಷ್ಣ ನಿನ್ನ ಒಡಲಲ್ಲಿ ಸದಾ ನೆಲೆಸಿರುವನಲ್ಲವೆ! ಪ್ರಿಯನಾದ ಅವನನ್ನು ಕಾಣದ ಈ ಗೋಪಿಕಾಸ್ತ್ರೀಯರ ದುರವಸ್ಥೆಯನ್ನು ಅವನಿಗೆ ಅರುಹು. ಇಲ್ಲವಾದಲ್ಲಿ ನಿನ್ನ ಒಡಲಲ್ಲಿ ನೆಲೆಸಿದ ಅಗ್ನಿಯನ್ನು ನಮಗೆ ನೀಡು; ಅಥವಾ

---

೧. ರಾಮಾವತಾರೇ ಶಿಲೀಭೂತಾಯಾ ಯೋಷಿತ್ಕರಣಾತ್ । ಅನೇನ ರಾಮ ಏವ ಕೃಷ್ಣ ಇತಿ ಸೂಚ್ಯತೇ। ಪಾದಧೂಲಿ-ಮಾತ್ರೇಣಾಸ್ಮತ್ತೋಽಪ್ಯಧಿಕಸ್ತ್ರೀಕರಣಸಮರ್ಥಸ್ಯ ಕಿಮಸ್ಮಾಭಿಃ ಕೃತ್ಯಮಿತಿ ಭಾವಃ। -ವ್ಯಾ.

೨. ಅಥೋ ಅಹಲ್ಯಾಂ ಪತಿನಾಽಭಿಶಾಪ್ತಂ ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಮ್ ।
ಸ್ವದರ್ಶನಾನ್ಮಾನುಷತಾಮುಪೇತಾಂ ಸುಯೋಜಯಾಮಾಸ ಸ ಗೌತಮೇನ॥
ಬಲಂ ಸ್ವಭಕ್ತೇರಧಿಕಂ ಪ್ರಕಾಶಯನ್ನನುಗ್ರಹಂ ಚ ತ್ರಿದಶೇಷ್ವತುಲ್ಯಂ।
ಅನನ್ಯಭಕ್ತಾಂ ಚ ಸುರೇಶಕಾಂಕ್ಷಯಾ ವಿಧಾಯ ನಾರೀಂ ಪ್ರಯಯೌ ತಯಾಽರ್ಚಿತಃ॥
- ಮ. ಭಾ. ತಾ. ನಿ (೪/೧೦, ೧೧)

ಪಾತಿವ್ರತ್ಯಪರಿಕ್ಷಯಾಖ್ಯಲಲನಾದೋಷಾಂಕುರಚ್ಛೇದನಂ
ಪಾಷಾಣೀಕೃತಗೌತಮಾರ್ಯವನಿತಾವಿಜ್ಞಾನದಾನಕ್ಷಮಮ್ ।
ಸಾಮ್ರಾಜ್ಯೋಚಿತಭೋಗ್ಯಭೋಗವಿರಸಂ ಶ್ರೀರಾಮ ತೇಽಂಘ್ರಿಂ ಶ್ರಯೇ
ನೈರ್ಮಲ್ಯಾಯ ನಿರಂತರಸ್ಮೃತಿಕೃತೇ ವೈರಾಗ್ಯಭಾಗ್ಯಾಯ ಚ॥ -ತೀರ್ಥಪ್ರಬಂಧ(೪/೨೮)

೩. ಮಹಾಭಾರತತಾತ್ಪರ್ಯನಿರ್ಣಯ ಹಾಗೂ ವಾಲ್ಮೀಕಿರಾಮಾಯಣದ ಉಲ್ಲೇಖದಂತೆ ಗೌತಮಶಾಪದಿಂದಾಗಿ ಇತರರ ಕಣ್ಣುಗಳಿಗೆ ಅಗೋಚರಳಾಗಿದ್ದ ಅಹಲ್ಯೆಯನ್ನು ಶ್ರೀರಾಮ ಶಾಪ ಪರಿಹರಿಸಿ, ಪುನಃ ಗೋಚರಳಾಗುವಂತೆ ಮಾಡಿದ ಎಂದು ತಿಳಿಯುವುದು. ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ ಮ.ಭಾ.ತಾ.ನಿ. ಅನುವಾದ(೪/೧೦)ದಲ್ಲಿ ಕೊಡಲಾಗಿದೆ.

೪. **ದೃಷ್ಟೋ ವಃ ಕಚ್ಚಿದಶ್ವತ್ಥ ಪ್ಲಕ್ಷ ನ್ಯಗ್ರೋಧ ಕಿಂಶುಕ ।**
**ನಂದಸೂನುರಿಹಾಗಾತ್ ಕಿಂ ಸಹ ಹಾಸಾವಲೋಕನೈಃ ॥** -ಭಾಗ.(೧೦/೨೮/೫)

೫. ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ।
ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ॥ - ಬ್ರಹ್ಮಾಂಡಪುರಾಣ

ಅಗಲುವಿಕೆ ಎಂಬ ರೋಗವಿರದ ನಿನ್ನ ಹೆಸರನ್ನಾದರೋ ನಮಗೆ ಕೊಡು ಅಥವಾ ಮನುಷ್ಯತ್ವವನ್ನು ಹೊಂದು''.

ವಿ. : ೧. ಶ್ರೀಕೃಷ್ಣನ ಅನ್ವೇಷಣೆಗೆ ತೊಡಗಿದ ಗೋಪಿಯರು ಮಾರ್ಗದಲ್ಲಿ ಕಂಡ ಅಶ್ವತ್ಥ-ವೃಕ್ಷವನ್ನು ಶ್ರೀಕೃಷ್ಣನ ಬಗ್ಗೆ ಹೀಗೆ ಕೇಳಿಕೊಳ್ಳುತ್ತಿರುವರು.

೨. ಅಶ್ವತ್ಥವೃಕ್ಷದಲ್ಲಿ ಶ್ರೀಕೃಷ್ಣನ ವಿಭೂತಿರೂಪವಿರುವ ವಿಷಯ ಭಗವದ್ಗೀತೆಯಲ್ಲಿ ಬಂದಿದೆ: **ಅಶ್ವತ್ಥಃ ಸರ್ವವೃಕ್ಷಾಣಾಮ್**-ಗೀತಾ(೧೦/೨೭). ಅದರಲ್ಲೂ ಅದರ ಮಧ್ಯಭಾಗದಲ್ಲಿ ಶ್ರೀಕೃಷ್ಣನ ವಿಶೇಷ ಸನ್ನಿಧಾನ ಎಂಬುದು ಪುರಾಣವಾಕ್ಯ: [1]**ಮಧ್ಯತೋ ವಿಷ್ಣುರೂಪಿಣೇ** (ಬ್ರಹ್ಮಾಂಡ- ಪುರಾಣಾಂತರ್ಗತ ಅಶ್ವತ್ಥನಾರಾಯಣಸ್ತೋತ್ರದ ವಚನ); **ಮಧ್ಯಸ್ಥಕೃಷ್ಣ ಪರಿಪಾಲಯ ಭಕ್ತವರ್ಗಮ್** (೧/೬೯) ಎಂಬ ತೀರ್ಥಪ್ರಬಂಧದ ಮಾತು ಸಹ ಇದೇ ತೆರನಾಗಿದೆ. ಇದನ್ನು ಆಧರಿಸಿ, ಈ ಪ್ರಾರ್ಥನೆ ಹೊರಟಿದೆ. ತನ್ನ [2]ಮಧ್ಯದಲ್ಲಿ ಸದಾ ಶ್ರೀಕೃಷ್ಣನನ್ನು ಹೊಂದಿರುವುದರಿಂದ ಶ್ರೀಕೃಷ್ಣನ ಇರವು ಅದಕ್ಕೆ ತಿಳಿದಿದೆ ಎಂಬ ಭಾವನೆಯಿಂದ ಅವರು ಹೀಗೆ ಕೇಳಿಕೊಂಡಿರುವರು ಎಂದು ತಿಳಿಯಬೇಕು.

೩. [3]ಅಶ್ವತ್ಥದ ಒಡಲಲ್ಲಿ ಅಗ್ನಿ ಇರುವುದು ವಹ್ನಿಗರ್ಭ[4] ಎಂಬ ಪದದಿಂದ ತಿಳಿಯುವುದು; ಆದ್ದರಿಂದ ಅವರು ಶ್ರೀಕೃಷ್ಣನ ವಿಯೋಗಕ್ಕಿಂತ ಅಗ್ನಿಯಲ್ಲಿ ದೇಹ ತೊರೆಯುವುದೇ ಲೇಸು ಎಂಬ ಭಾವದಿಂದ ಹೀಗೆ ಕೇಳುತ್ತಿರುವರು ಎಂದರ್ಥ.

೪. ಅದರ ಇರುವಿಕೆ ಎಂದರೆ ಜಡತ್ವ. ಶ್ರೀಕೃಷ್ಣನನ್ನು ತೊರೆದು ಬದುಕುವುದಕ್ಕಿಂತ ವೃಕ್ಷದಂತೆ ಸ್ಥಾವರವಾಗುವುದೇ ಯೋಗ್ಯ ಎಂಬುದು ಇದರ ಹಿಂದಿನ ಭಾವ.

೫. ಅಶ್ವತ್ಥದ ಹೆಸರು ಎಂದರೆ ಭಗವದ್ಗೀತೆಯ ಭಾಷ್ಯಾದಿಗಳಲ್ಲಿ ಬಂದಿರುವಂತೆ ''[5]ಶ್ವಃ ಅಪಿ ಪೂರ್ವವತ್ ನ ತಿಷ್ಠತಿ ಇತಿ ಅಶ್ವತ್ಥಃ'' ಎಂದರೆ ನಾಳೆ ಇಲ್ಲದಿರುವುದು ಎಂದರ್ಥ. ಇದರಿಂದ ''ನಾಳೆ ಬದುಕಿರದಂತೆ ಮಾಡು'' ಎಂದು ಭಾವ.

೬. ಶ್ರೀಕೃಷ್ಣನ ಇರವನ್ನು ತಿಳಿಸದೆ, ತಮಗೆ ಸಾವನ್ನು ಕೊಡದಿದ್ದಲ್ಲಿ ನೀನು ಸಹ ಮನುಷ್ಯತ್ವವನ್ನು ಹೊಂದು ಎಂಬುದು ಅವರು ನೀಡಿದ ಶಾಪ ಎಂಬುದು ಇದರ ಕೊನೆಯ ಪಾದದ ಭಾವ.

---

೧. ಕಿಲೇತ್ಯನೇನ ''ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ । ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮ'' ಇತಿ ಸ್ಮಾರ್ತಪ್ರಸಿದ್ಧಿಂ ದ್ಯೋತಯತಿ । -ವ್ಯಾ.

೨. ಭವನ್ಮಧ್ಯೇ ವರ್ತತ ಇತ್ಯನೇನ ಉಕ್ತವಚನೇ ರೂಪಶಬ್ದಸ್ಯ ಪ್ರತಿಮಾರ್ಥಕತ್ವಮುಕ್ತಂ ಭವತಿ । -ವ್ಯಾ.

೩.. ಇದಂ ಚ ವಿಶೇಷಣಂ ಸರ್ವತ್ರ ಸಂಬಧ್ಯತೇ । ತ್ವದ್ದತ್ತಾಗ್ನಿನಾಽಸ್ಮಾಕಂ ಭಸ್ಮೀಭಾವೇ ತರುತ್ವಾವಸ್ಥಾಯಾಂ ವಾ ಶ್ವೋ ನ ತಿಷ್ಠತೀತ್ಯಶ್ವತ್ಥ ಇತಿ ನಾಮಧಾರಣೇ ವಾ ಅದ್ಯೈವ ಮರಣಪ್ರಾಪ್ತ್ಯಾ ವಿಯೋಗಸ್ಯಾಕಿಂಚಿತ್ಕರತ್ವಾದಿತಿ ಭಾವಃ । -ವ್ಯಾ.

೪. ವಹ್ನಿಗರ್ಭಃ ಶಮೀಗರ್ಭ ಇತ್ಯಶ್ವತ್ಥಸ್ಯಾಗ್ನಿಗರ್ಭತ್ವೋಕ್ತೇರಿತಿ ಭಾವಃ । -ವ್ಯಾ.

೫. ಶ್ವೋ ನ ತಿಷ್ಠತೀತ್ಯಶ್ವತ್ಥ ಇತ್ಯತ್ರ ವಹ್ನಿರಶ್ವರೂಪೇಣಾತ್ರ ತಿಷ್ಠತೀತ್ಯಶ್ವತ್ಥಃ । ಇತಿ ನೈಘಂಟುಕನಿರುಕ್ತವನ್ನಿರುಕ್ತತ್ವಾ-ತ್ಸಕಾರಲೋಪಃ । -ವ್ಯಾ.

೭. ಹೀಗೆ ಅಶ್ವತ್ಥದ ಬಗ್ಗೆ ಬಂದಿರುವ ಅನೇಕ ಉಲ್ಲೇಖಗಳು ಅದು ವೃಕ್ಷಗಳಲ್ಲಿ ಶ್ರೇಷ್ಠವಾದುದು, ಶ್ರೀಕೃಷ್ಣನ ವಿಭೂತಿರೂಪ ಹೊಂದಿರುವಂತಹುದು, ಅಗ್ನಿಯನ್ನು ಒಡಲಲ್ಲಿ ಹೊಂದಿರುವುದು ಮೊದಲಾದ ಅನೇಕ ವಿವರಗಳನ್ನು ನೀಡುವುದರೊಂದಿಗೆ ಗೋಪಿಯರು ಅದರ ಬಗ್ಗೆ ಹೊಂದಿರುವ ಜ್ಞಾನವನ್ನು ತಿಳಿಸುತ್ತದೆ; ಮುಖ್ಯವಾಗಿ ಶ್ರೀಕೃಷ್ಣನನ್ನು ಅಗಲಿ ಬದುಕಿರುವುದಕ್ಕಿಂತ [೧]ಸಾಯುವುದೇ ಲೇಸು ಎಂಬ ಅತ್ಯಂತ ತಾತ್ತ್ವಿಕವಾದ ಮಹತ್ತ್ವವನ್ನು ಇದು ತಿಳಿಸುತ್ತದೆ; **ದ್ರುಮ** - ವೃಕ್ಷ; **ಬಲ್ಲವೀ** - ಗೋಪೀ; **ಅಭಿಧಾ** - ಹೆಸರು.

### ಅಶ್ವತ್ಥ ನೀಡುವ ಫಲ

**ಮೂಲಾಸೇಚನಪೂರ್ವಕಂ ಪರಿಸರಂಸ್ತ್ವಾಮಾರ್ದ್ರವಸ್ತ್ರಃ ಪುಮಾನ್**
**ಸ್ವಾಭೀಷ್ಟಂ ಲಭತೇ ಕಿಲ ಪ್ರತಿವನಂ ವಿಷ್ವಕ್ ಚರಂತೀರ್ಬತ ।**
**ಕಾಯಕ್ಲೇಶವಶಾತ್ ಸಮುತ್ಥಿತಘನಸ್ವೇದಾಂಬುನಾಽಽದ್ರಾಂಬರಾ-**
**ಶ್ಚಾಸ್ರೌಘೈಃ ಕಿಮುಪೇಕ್ಷಸೇ ವಿದಧತೀರಾದ್ರಾಂ ಭವದ್ವೇದಿಕಾಮ್ [೨] ॥ ೩ ॥**

"ಒದ್ದೆ ಬಟ್ಟೆಯಲ್ಲಿ ನಿನ್ನನ್ನು ಪ್ರದಕ್ಷಿಣೆ ಮಾಡಿ, ನಿನ್ನ ಬುಡಕ್ಕೆ ನೀರೆರೆಯುವ ಮನುಷ್ಯನು ತನ್ನ ಅಭಿಲಾಷೆಯನ್ನು ಈಡೇರಿಸಿಕೊಳ್ಳುವನಲ್ಲವೆ! ಪ್ರತಿವನದಲ್ಲೂ ಸುತ್ತಲೂ ಅಲೆಯುತ್ತ ದೇಹದಲ್ಲಿನ ಶ್ರಮದಿಂದಾಗಿ ಹುಟ್ಟಿದ ನಿಬಿಡವಾದ ಬೆವರುಹನಿಗಳಿಂದ ವಸ್ತ್ರತೊಯ್ದವರಾಗಿ, ಕಣ್ಣೀರಿನಿಂದ ನಿನ್ನ ವೇದಿಕೆಯನ್ನು ತೇವಗೊಳ್ಳುವಂತೆ ಮಾಡುತ್ತಿರುವ ನಮ್ಮನ್ನೇತಕ್ಕೆ ಕಡೆಗಣಿಸುತ್ತಿರುವಿ?"

ವಿ. : ೧. ಅಶ್ವತ್ಥದ ಪ್ರಾರ್ಥನೆಯು ಈ ಶ್ಲೋಕದಲ್ಲಿ ಮುಂದುವರೆದಿದೆ.

೨. ಮಿಂದು ಒದ್ದೆ ಬಟ್ಟೆಯನ್ನುಟ್ಟು ಅಶ್ವತ್ಥಕ್ಕೆ ನೀರೆರೆದು ಪ್ರದಕ್ಷಿಣೆಮಾಡುವವರಿಗೆ ಅಭೀಷ್ಟಪ್ರಾಪ್ತಿ ನಿಶ್ಚಿತ ಎಂಬುದು [೩]ಪುರಾಣಪ್ರಸಿದ್ಧಿ.

೩. ಗೋಪಿಯರು ಕೃಷ್ಣಾನ್ವೇಷಣೆಗಾಗಿ ಕಾಡಿನಲ್ಲಿ ಸುತ್ತುತ್ತಿರುವುದರಿಂದ ಅಲ್ಲಿರುವ ವೃಕ್ಷಗಳಲ್ಲಿ ಅಶ್ವತ್ಥವು ಸಹ ಸೇರಿರುವುದರಿಂದ ಅದರ ಪ್ರದಕ್ಷಿಣೆ ಆದಂತಾಗಿದೆ. ಅಲೆಯುವ ಶ್ರಮದಿಂದ ಉಂಟಾದ ಬೆವರ ಹನಿಗಳಿಂದ ಅವರ ವಸ್ತ್ರಗಳು ತೊಯ್ದಿರುವುದರಿಂದ ಅವರು ಒದ್ದೆ ವಸ್ತ್ರವನ್ನೂ ಧರಿಸಿದಂತಾಗಿದೆ. ಅವರ ಕಣ್ಣುಗಳಿಂದ ಸುರಿಯುವ ನೀರು ನೆಲಕ್ಕೆ ಸುರಿದು

---

೧. ಶ್ರೀಕೃಷ್ಣಕೃಪಾವಿಧುರಾಣಾಂ ಮರಣಂ ವಾ ವರಮಿತಿ ಭಾವಃ। –ವ್ಯಾ.
೨. ಅತ್ರ ಮೂಲಾಸೇಚನಾದ್ಯಸಂಬಂಧೇಽಪಿ ಸಂಬಂಧೋಕ್ತ್ಯಾ ಸಂಬಂಧಾತಿಶಯೋಕ್ತ್ಯಲಂಕಾರಃ। –ವ್ಯಾ.
ಕಿಂ ಶಬ್ದೇನೋಪೇಕ್ಷಾಂ ನ ಕುರ್ವಿತ್ಯಾಕ್ಷೇಪಾತ್ ಆಕ್ಷೇಪಾಲಂಕಾರೇಣ ಸಂಕೀರ್ಯತೇ। –ವ್ಯಾ.
೩.. ವರ್ಧಿತೈಃ ಸೇವಿತೈಃ ಕಿಂ ತೈಃ ಸತ್ಯಶ್ವತ್ಥೇಽನ್ಯಪಾದಪೈಃ।
ವರ್ಧಿತೋ ನರಕಾದ್ರಕ್ಷೇತ್ ಸ್ಪೃಷ್ಟೋಽರಿಷ್ಟಾನಿ ಹಂತಿ ಯಃ। – ಇತಿ ಸ್ಮೃತ್ಯುಕ್ತಿಃ।

ಅದು ಅಶ್ವತ್ಥವೃಕ್ಷದ ಬುಡಕ್ಕೂ ಹರಿದಿದೆ. ಹೀಗೆ ಅಶ್ವತ್ಥವೃಕ್ಷಕ್ಕೆ ನೀರೆರೆಯುವಂತಹ[೧] ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿದಂತಾಗಿದೆ. ಆದ್ದರಿಂದ ಅವರ ಮನೋಭಿಲಾಷೆಯಾದ ಶ್ರೀಕೃಷ್ಣನ ಸಂಗಮವನ್ನು ಅದು ಈಡೇರಿಸಬೇಕು ಎಂಬುದು ಅವರ ಹೃದಯ.

೪. ಗೋಪಿಯರ ವಿರಹಾವಸ್ಥೆಯಲ್ಲಿನ ಆ ಸಹಜಸ್ಥಿತಿಯನ್ನು ಪ್ರದಕ್ಷಿಣೆ ಮೊದಲಾದ ರೂಪದ ಸೇವೆ ಎಂಬ ಇಲ್ಲಿಯ ಕಾವ್ಯಮಯ ನಿರೂಪಣೆ ಅತ್ಯಂತ ರೋಚಕವಾದುದು.

### ಅಶ್ವತ್ಥದಿಂದ ನಿರಾಶರಾದ ಗೋಪಿಯರು

**ನ ವದತಿ ಬತ ಸಖ್ಯೋ ನಃ ಪ್ರಿಯಂ ವಿಪ್ರಿಯಂ ವಾ**
**ನ ದಿಶತಿ ಫಲಮಿಷ್ಟಂ ಸ್ವೈರಮಾರಾಧಿತೋಽಪಿ ।**
**ಹರಿಚರಣವಿದೂರಾಃ ಕೋ ನು ಸಂಭಾಷಯೇನ್ನಃ**
**ಸುಕೃತಮಪಿ ತದಾಜ್ಞಾರೂಪಮಾಪಾದಯೇತ್ ಕಿಮ್[೨] ॥ ೪ ॥**

(ಒಬ್ಬ ಗೋಪಿ)"ಗೆಳತಿಯರೇ ! ಇದು ನಮಗೆ ಪ್ರಿಯವನ್ನೂ ನುಡಿಯುತ್ತಿಲ್ಲ; ಅಪ್ರಿಯ-ವನ್ನೂ ನುಡಿಯುತ್ತಿಲ್ಲ. ಎಷ್ಟು ಸೇವಿಸಿದರೂ ಇಷ್ಟವಾದ ಫಲವನ್ನು ನೀಡುತ್ತಿಲ್ಲ"; (ಇತರ ಗೋಪಿಯರು)"ಹರಿಪಾದಕ್ಕೆ ವಿಮುಖರಾದ ನಮ್ಮನ್ನು ಯಾರು ತಾನೆ ಮಾತನಾಡಿಸಿ-ಯಾರು? ಅವನ ಆದೇಶವನ್ನು ಕೇಳುವ ಪುಣ್ಯವನ್ನಾದರೂ ಸಹ ಇದು ನಮಗೆ ನೀಡೀತೇ?"

ವಿ. : ೧. ಅಶ್ವತ್ಥವೃಕ್ಷವು ಸಹಜವಾಗಿಯೇ ಅವರೊಂದಿಗೆ ಮಾತನಾಡಲಿಲ್ಲ; ಆದರೆ ಅದನ್ನು ಗೋಪಿಯರು ಹೀಗೆ ಅರ್ಥೈಸಿಕೊಂಡರು ಎಂದು ನಿರೂಪಿಸಿರುವರು.

೨. ಅಶ್ವತ್ಥವು ಅವರೊಂದಿಗೆ ಮಾತನಾಡಲಿಲ್ಲ, ಅವರ ಅಭಿಲಾಷೆಯನ್ನು ಪೂರೈಸಲಿಲ್ಲ, ಅದಕ್ಕೆ ಕಾರಣ ಅವರೀಗ ಕೃಷ್ಣನ ಸನ್ನಿಧಾನದಿಂದ ದೂರಾದವರು. ಇದರಿಂದ ಶ್ರೀಹರಿಪಾದ ವಿಮುಖರಾದವರಿಗೆ ಯಾರಿಂದಲೂ ಮನ್ನಣೆ ಲಭಿಸದು ಎಂಬ ವಿಶೇಷ ಪ್ರಮೇಯ ನಿರೂಪಿತ: **ಹರಿವಿಮುಖಃ ಸರ್ವಜನವೈಮುಖ್ಯಂ ಪ್ರಾಪ್ನೋತೀತಿ ಭಾವಃ ।**-ವ್ಯಾ.

### ಅಶ್ವತ್ಥಕ್ಕೆ ಗೋಪಿಯರು ನೀಡಿದ ಶಾಪ

**ಪ್ರೇಷ್ಠಂ ಸ್ವಾಂತರಸಂಸ್ಥಿತಂ ನ ದಿಶತೀತ್ಯಾರ್ತಾಃ ಸಮಸ್ತಾ ಭೃಶಂ**
**ಕೋಪಾಚ್ಛಾಪಮಯೋಜಯನ್ನಿವ ಸತಾಂ ಸ್ಯಾತ್ ತ್ವತ್ಫಲಂ ನಿಷ್ಫಲಮ್ ।**

---

೧. ಆರ್ದ್ರಾಂ ಕ್ಲಿನ್ನಾಂ ವಿದಧತೀಃ ಕುರ್ವತೀಃ ನ ಕೇವಲಂ ಮೂಲಮಾತ್ರಸ್ಯಾಸೇಚನಂ ಕೃತಂ ಕಿಂತ್ವಾಧಾರಬಂಧಸ್ಯಾಪೀತಿ ಭಾವಃ । -ವ್ಯಾ.
ಏವಂ ಸಾಂಗಂ ಪ್ರದಕ್ಷಿಣಕರ್ಮ ಚರತೀರ್ನಃ ಕಿಂ ಕಿಮರ್ಥಮುಪೇಕ್ಷಸೇ ಶ್ರೀಕೃಷ್ಣಸಂದರ್ಶನಲಕ್ಷಣಫಲಂ ಕಿಮರ್ಥಂ ನ ದದಾಸೀತಿ ಭಾವಃ । -ವ್ಯಾ.

೨. ವಿಭಾವನಮಲಂಕಾರಃ । -ವ್ಯಾ.

**ವಿಷ್ಠಾತ್ತೋ ಜನಿರಸ್ತು ತೇ ನಿಶಿ ತವ ಚ್ಛಾಯಾ ವಿಗೇಯಾಽಸ್ತ್ವಿಯಂ**
**ಕ್ರೂರಸ್ತೇ ಹೃದಿ ವಹ್ನಿರಸ್ತು [೧]ನ ಸದಾ ಸ್ಪರ್ಶಸ್ಯ ಯೋಗ್ಯೋ ಭವ ॥ ೫ ॥**

ತನ್ನ ಒಡಲಲ್ಲಿನ ಪ್ರಿಯತಮನಾದ ಶ್ರೀಕೃಷ್ಣನನ್ನು ತಮಗೆ ತೋರಿಸಿಕೊಡಲಿಲ್ಲ ಎಂಬ ನೋವಿನಿಂದ ಬಹಳ ಕೋಪಗೊಂಡ ಅವರೆಲ್ಲರೂ ಶಾಪ ನೀಡಿದಂತಾಯಿತು : ''ನಿನ್ನ ಹಣ್ಣುಗಳು ಸಜ್ಜನರಿಗೆ ನಿಷ್ಪ್ರಯೋಜನವೆನ್ನಿಸಲಿ, ನಿನಗೆ [೨]ಕಾಗೆಯ ಮಲದಿಂದ ಹುಟ್ಟು ಒದಗಲಿ, ರಾತ್ರಿಯಲ್ಲಿ ನಿನ್ನ ಈ ನೆರಳು ಯಾರಿಗೂ ಸೇವ್ಯವೆನ್ನಿಸದಿರಲಿ, ನಿನ್ನ ಒಡಲಲ್ಲಿ ಕ್ರೂರವಾದ ಅಗ್ನಿ ತುಂಬಲಿ, ನೀನು ಸದಾ ಸ್ಪರ್ಶಕ್ಕೆ ಯೋಗ್ಯನೆನ್ನಿಸದೇ ಇರು''.

ವಿ. : ೧. ಅಶ್ವತ್ಥವೃಕ್ಷದ ಫಲ ಸಜ್ಜನರಿಗೆ ವಿಹಿತವಲ್ಲ; ಅದರ ಬೀಜ ಫಲಿಸುವುದು ಕಾಗೆಯ ಮಲದಿಂದ ಬಂದಾಗ ಮಾತ್ರ. [೩]ರಾತ್ರಿಯಲ್ಲಿ ಅಶ್ವತ್ಥವೃಕ್ಷದ ನೆರಳು ನಿಷಿದ್ಧ. ಆ ವೃಕ್ಷದ ಒಡಲಲ್ಲಿ ಅಗ್ನಿ ತುಂಬಿರುವುದು. ಶನಿವಾರದಂದು ಹೊರತು ಇತರ ದಿನಗಳಲ್ಲಿ ಅದನ್ನು [೪]ಸ್ಪರ್ಶಿಸುವುದು ನಿಷಿದ್ಧ ಎಂಬುದು ಪುರಾಣಗಳಲ್ಲಿ ಪ್ರಸಿದ್ಧವಾದ ವಿಚಾರ : **ಅಶ್ವತ್ಥಂ ಮಂದವಾರೇ ಚ ಸಮುದ್ರಂ ಪರ್ವಣಿ ಸ್ಪೃಶೇತ್ । (ಸ್ಮೃತಿ)**

೨. ಅದೆಲ್ಲಾ ಅದಕ್ಕೆ ಉಂಟಾಗಿರುವುದು ತಮಗೆ ಶ್ರೀಕೃಷ್ಣನನ್ನು ಅದು ತೋರಿಸಿಕೊಡಲಿಲ್ಲ ಎಂಬ ಕಾರಣದಿಂದ ಗೋಪಿಯರು ನೀಡಿದ ಶಾಪದ ಫಲವೇ ಇದ್ದಿರಬೇಕು ಎಂಬುದು ಇಲ್ಲಿಯ [೫]ಉತ್ಪ್ರೇಕ್ಷೆ.

೩.. ತಮಗೆ ಕಾರ್ಯ ಆಗಬೇಕೆಂದು ಅಶ್ವತ್ಥವನ್ನು ಸ್ತುತಿಸಿದ ಗೋಪಿಯರು ಅದು ಈಡೇರ-ದಿದ್ದಾಗ ಅದನ್ನು ನಿಂದಿಸತೊಡಗಿದರು ಎಂಬ ಇಲ್ಲಿನ ವಿವರ ಕಾರ್ಯಸಾಧನೆಗಾಗಿ ಹೊಗಳುವುದು ಅದು ಈಡೇರದಿದ್ದಾಗ ತೆಗಳುವುದು [೬]ಜನರ ಸ್ವಭಾವ ಎಂಬ ಲೋಕನೀತಿ-ಯನ್ನು ತಿಳಿಸುವುದು.

---

೧. ಮಂದವಾರೇ ಸದಾ ಹ್ಯೇನಂ ಲಕ್ಷ್ಮೀರತ್ರಾಗಮಿಷ್ಯತಿ ।
ಅಸ್ಪೃಶ್ಯೋಽಸೌ ಭವೇತ್ ತಸ್ಮಾನ್ಮಂದರವಾರಂ ವಿನಾ ಕಿಲ ॥ – ಪದ್ಮಪುರಾಣ (೧೬೦)

೨. ''ಕಾಕವಿಷ್ಠಾಸಮುದ್ಭವಃ'' ಇತ್ಯುಕ್ತೇಃ –ವ್ಯಾ.

೩.. ''ದಿವಾ ಬಿಭೀತಕಚ್ಛಾಯಾ ರಾತ್ರಾವಶ್ವತ್ಥಸಂಭವಾ ।
ದಿವಾನಿಶಿ ನರಛಾಯಾ ಹಂತಿ ಪುಣ್ಯಂ ಪುರಾಕೃತಮ್ ॥'' ಇತಿ ವಚನಾದಿತಿ ಭಾವಃ । –ವ್ಯಾ.
ನಿಶೀತ್ಯನೇನ ರಾತ್ರೌ ಸ್ವೇಷ್ಟಾಪ್ರದಾನೇನ ನಿಶ್ಯೇವ ಛಾಯಾಯಾಃ ವಿಗೇಯತ್ವರೂಪಶಾಪಪ್ರದಾನಾದ್ಗೋಪೀಭಿರಪಿ ಅಪರಾಧಾನುಸಾರಿದಂಡಃ ಕೃತ ಇತಿ ದ್ಯೋತ್ಯತೇ । –ವ್ಯಾ.

೪. ಕುಪಿತಸ್ತ್ರೀಣಾಮಿಯಂ ಜಾತಿಃ । ಸದಾ ಸರ್ವದಾ ಸ್ಪರ್ಶಸ್ಯ ಯೋಗ್ಯೋ ನ ಭವ ಅಸ್ಪೃಶ್ಯೋ ಭವೇತ್ಯರ್ಥಃ ।
ಅಶ್ವತ್ಥಸಾಗರೌ ಸೇವ್ಯೌ ನ ಸ್ಪಷ್ಟವ್ಯೌ ಕದಾಚನ'' ಇತಿ ಸ್ಮೃತೇಃ । –ವ್ಯಾ.

೫. ಉಚ್ಛ್ರಾಣಾಶ್ವತ್ಥಸ್ವಭಾವಾಭ್ಯಾಂ ಗುಣದೋಷತ್ವಕಲ್ಪನಯಾ ಸ್ತುತಿಶಾಪಪರ್ಯವಸಾನಾತ್ ಉತ್ಪ್ರೇಕ್ಷಾಲಂಕಾರಃ । –ವ್ಯಾ.

೬. ಅನೇನ ಕಾರ್ಯಾರ್ಥಿತಯಾ ಅಗುಣಮಪಿ ಗುಣೀಕೃತ್ಯ ಸ್ತವನಾತ್ ತದಸಿದ್ಧಾವದೋಷಮಪಿ ದೋಷೀಕೃತ್ಯಾಭಿ-ಶಾಪಪ್ರದಾನಾದ್ಗೋಪೀನಾಂ ಕೃಷ್ಣದರ್ಶನಕಾರ್ಯೇ ಆಗ್ರಹಾತಿಶಯೋ ವರ್ಣಿತೋ ಭವತಿ । –ವ್ಯಾ.

೪. [1]ಮುಂದೆ ಬರುವ ಇಂತಹ ಇತರ ಪ್ರಸಂಗಗಳಲ್ಲೂ ಇವನ್ನು ಹೀಗೆಯೇ ಗ್ರಹಿಸಬೇಕು.

### ಮುಂದುವರೆದ ಗೋಪಿಯರ ಶಾಪ

ಅಸ್ಮಾಕಂ ನಹಿ ಯಃ ಶೃಣೋತಿ ವಚನಂ ಪ್ರತ್ಯುತ್ತರಂ ವಕ್ತಿ ನೋ
ಮೂಕೋಽಸೌ ಬಧಿರಾಗ್ರಣೀಶ್ಚ ಭವತು ಸ್ವಾಂತಸ್ಥಿತೋಽಪ್ಯಚ್ಯುತಃ ।
ನೈತದ್ದೃಷ್ಟಿಪಥಂ ಪ್ರಯಾತು ರಮಣಂ ಯೋ ದರ್ಶಯೇನ್ನೈವ ನ-
ಸ್ತತ್ರಾಶ್ವೇ ವಸತಾದಸೌ ದ್ವಿಜಕುಲೇ ಯಃ ಪ್ರೇತ್ಯ ನ ಸ್ವರ್ಗತಃ ॥ ೬ ॥

ಇವನು ನಮ್ಮ ಮಾತನ್ನು ಆಲಿಸುತ್ತಿಲ್ಲ; ಪ್ರತ್ಯುತ್ತರವನ್ನು ನೀಡುತ್ತಿಲ್ಲ; ಇವನು ಮೂಕನಾಗಲಿ; ಮಹಾಕಿವುಡನೂ ಆಗಲಿ; ನಮಗೆ ಪ್ರಿಯನಾದ ಶ್ರೀಕೃಷ್ಣನನ್ನು ತೋರಿಸಿಕೊಡದ ಇವನಿಗೆ ಅಚ್ಯುತನಾದ ಶ್ರೀಹರಿಯು ಒಡಲಲ್ಲೇ ನೆಲೆಸಿದ್ದರೂ ಕಾಣಿಸದಂತಾಗಲಿ; ಬ್ರಾಹ್ಮಣಕುಲದಲ್ಲಿ ಸತ್ತ ಬಳಿಕ ಸದ್ಗತಿ ಪಡೆಯದವನು ಇವನೊಡನೆ ನೆಲೆಸುವಂತಾಗಲಿ.

ವಿ. : ೧. ಅಶ್ವತ್ಥವು ಒಂದು ವೃಕ್ಷ. ಅದು ಇತರರ ಮಾತನ್ನು ಕೇಳದು, ಪ್ರತ್ಯುತ್ತರವನ್ನೂ ನೀಡದು; ಅದರೊಳಗೆ ಶ್ರೀಹರಿಯು ನೆಲೆಸಿದ್ದರೂ ಅವನಿಗೆ ಕಾಣಿಸದು; [2]ಸದ್ಗತಿಗೆ ತೆರಳದ ಬ್ರಾಹ್ಮಣ ಬ್ರಹ್ಮರಾಕ್ಷಸನಾಗಿ ಅಶ್ವತ್ಥವೃಕ್ಷದಲ್ಲಿ ನೆಲೆಸುವನು ಎಂಬುದು ಪುರಾಣಪ್ರಸಿದ್ಧಿ.

೨. ಅವೆಲ್ಲಾ ಗೋಪಿಯರು ನೀಡಿದ ಶಾಪದ ಫಲ ಎಂದು ಇಲ್ಲಿ ಉತ್ಪ್ರೇಕ್ಷಿಸಿಲಾಗಿದೆ; ಸ್ವಾಂತ – ಮನಸ್ಸು.

### ಜಾಜಿ, ಮಲ್ಲಿಗೆ, ತುಲಸಿ ಮೊದಲಾದವುಗಳ ಪ್ರಾರ್ಥನೆ

ಹೇ ಜಾತಿ ಮಾಲತಿ ತುಲಸ್ಯಯಿ ಮಲ್ಲಿಕೇಽಗ್ರ್ಯೇ
ಯೋಗಂ ಸಮಾದಿಶತ ಯೋಗಿಜನಪ್ರಿಯಸ್ಯ ।
ಯರ್ಹ್ಯೇಕಜನ್ಮನಿ ಕದಾಪಿ ತದಂಘ್ರಿಸಂಗೋ
ಯುಷ್ಮಭ್ಯಮಾಭಿರಬಲಾಭಿರದಾಯಿ ಸಾಧ್ವ್ಯಃ ॥ ೭ ॥

"ಎಲೈ ಜಾಜಿ! ಮಾಲತಿ! ಶ್ರೇಷ್ಠಳಾದ ತುಲಸಿ! ಮಲ್ಲಿಗೆ! ಅಬಲೆಯರಾದ ನಾವು ಎಂದಾದರೂ, ಯಾವುದಾದರೂ ಒಂದು ಜನ್ಮದಲ್ಲಿ ಅವನ ಪಾದಗಳಿಗೆ ನಿಮ್ಮ ಸಂಗವನ್ನು ಉಂಟುಮಾಡಿದ್ದೆವಾದಲ್ಲಿ, ಸಾಧ್ವಿಯರೇ! ನೀವು ಯೋಗಿಜನಪ್ರಿಯನಾದ ಶ್ರೀಹರಿಯ ಸಂಪರ್ಕವನ್ನು ನಮಗೆ ಕಲ್ಪಿಸಿರಿ".

---

೧. ಏವಮುತ್ತರತ್ರಾಪಿ ದ್ರಷ್ಟವ್ಯಮ್ । -ವ್ಯಾ.

೨. ಯಃ ದ್ವಿಜಕುಲೇ ಪ್ರೇತ್ಯ ಮೃತ್ವಾ ಸ್ವಃ ಸ್ವರ್ಗಂ ನ ಗತಃ ಪಿಶಾಚತ್ವಂ ಪ್ರಾಪ್ತಃ ಬ್ರಹ್ಮರಾಕ್ಷಸಸ್ತಸ್ಯಾತ್ರಯೋ ಭವತು ನಾತ್ರಾಸ್ಮಾಭಿಃ ಸ್ಥಾತವ್ಯಮಿತ್ಯರ್ಥಃ । ಅಶ್ವತ್ಥಮೂಲೇ ಬ್ರಹ್ಮರಾಕ್ಷಸಸ್ತಿಷ್ಠತೀತಿ ಭಾವಃ । -ವ್ಯಾ.

ವಿ. : ೧. ಅಶ್ವತ್ಥದ ಅನಂತರ ಜಾಜಿ ಮೊದಲಾದವುಗಳ ಬಳಿಗೆ ತೆರಳಿ ಗೋಪಿಯರು ತಮ್ಮ ಕೋರಿಕೆಯನ್ನು ಮುಂದಿಡುತ್ತಿರುವರು.

೨. [೧]ತಾವು ಯಾವ ಜನ್ಮದಲ್ಲಾದರೂ ಅವುಗಳ ಪುಷ್ಪಗಳಿಂದ ಶ್ರೀಹರಿಯನ್ನು ಆರಾಧಿಸಿದ್ದಲ್ಲಿ ಆ ಪುಣ್ಯದ ಫಲದಿಂದ ಶ್ರೀಕೃಷ್ಣನ ಸಂಪರ್ಕ ತಮಗೆ ಲಭಿಸಲಿ ಎಂಬುದು ಅವರ ಪ್ರಾರ್ಥನೆಯ ಭಾವ.

೩. ಇದರಿಂದ ಶ್ರೀಹರಿಗೆ ಪುಷ್ಪಾರ್ಚನೆ ಸಲ್ಲಿಸುವುದು ಮುಂದೊಮ್ಮೆ ಅವನೊಂದಿಗೆ ನೆಲೆಸುವ ಮುಕ್ತಿಗೆ ಕಾರಣವಾಗುವುದು ಎಂಬ ಸಂದೇಶವು ಸೂಚಿತ.

### ತುಲಸಿಯ ಪ್ರಾರ್ಥನೆ

**[೨]ತುಲಸಿ[೩] ಮಿಲಸಿ ಕೃಷ್ಣಾಂಘ್ರ್ಯಂಬುಜೇ ಪುಣ್ಯಭೂಜೇ**
**ವರಯ ವರಯತೀಂದ್ರೈರ್ವಂದಿತೇಽಸ್ಮಾನ್ ವಯಸ್ಯಾಃ।**
**ಮನಸಿ ಮನಸಿಜಾದೇರ್ನಿರ್ವೃತಿಂ ನಿರ್ಮಿಮೀತೇ**
**ವನಜವನಜಗಂಧೋಽಪ್ಯಂತರೇಣಾಂಬ ನ ತ್ವಾಮ್ ॥ ೮ ॥**

''ಪುಣ್ಯಭೂಮಿಯಲ್ಲಿ ಜನಿಸಿದ, ಮಹಾಯತಿಶ್ರೇಷ್ಠರಿಂದ ಅಭಿವಂದಿತಳಾದ ಶ್ರೀತುಲಸಿಯೇ! ನಮಗೆ ನೀನು ಒಲಿ; ಗೆಳತಿಯರಾದ ನಮ್ಮನ್ನು ಶ್ರೀಕೃಷ್ಣನ ಪಾದಕಮಲದೆಡೆಗೆ ಕರೆದೊಯ್ಯಿ. ಅಮ್ಮ! ಕಮಲವೃಂದಗಳಿಂದ ಹೊರಹೊಮ್ಮುವ ಪರಿಮಳವೂ ಸಹ ನೀನಿಲ್ಲವಾದಲ್ಲಿ ಮನ್ಮಥಜನಕನಾದ ಶ್ರೀಕೃಷ್ಣನ ಮನಸ್ಸಿನಲ್ಲಿ ಸಂತೋಷವನ್ನು ಉಂಟುಮಾಡಲಾರದು''.

ವಿ. : ೧. [೪]ತುಲಸಿಯ ವಿಶೇಷವಾದ ಮಹಿಮೆ ಇಲ್ಲಿ ಉಕ್ತವಾಗಿದೆ.

೨. ಪುಷ್ಪಗಳಲ್ಲಿ ಕಮಲಪುಷ್ಪಗಳಿಗೆ ಅಗ್ರಸ್ಥಾನ; ಆದರೆ ತುಲಸಿಯಿಲ್ಲದೆ ಕೇವಲ ಕಮಲಪುಷ್ಪಗಳಿಂದ ಪೂಜಿಸಿದರೂ ಶ್ರೀಹರಿಯು ಅವುಗಳನ್ನು ಸ್ವೀಕರಿಸನು.

---

೧. ಉಪಕಾರಸ್ಯ ಪ್ರತ್ಯುಪಕಾರಚಾರಿತಾರ್ಥ್ಯಾದಿತಿ ಬಾಹ್ಯೋ ಭಾವಃ। ಆಂತರಸ್ತು ಜನ್ಮಾಂತರೇ ಪುಷ್ಪೈಃ ಶ್ರೀಕೃಷ್ಣಃ ಸಮಾರಾಧಿತಶ್ಚೇತ್ ಸ ಲಭ್ಯತಾಮಿತಿ। -ವ್ಯಾ.

೨. ಕಚ್ಚಿತ್ ತುಲಸಿ ಕಲ್ಯಾಣಿ ಗೋವಿಂದಚರಣಪ್ರಿಯೇ।
ಸಹ ತ್ವಾಲಿಕುಲೈರ್ಬಿಭ್ರದ್ ದೃಷ್ಟಸ್ತೇಽತಿಪ್ರಿಯೋಽಚ್ಯುತಃ॥ -ಭಾಗ.(೧೦/೨೮/೭)

೩. ಉಪಕರ್ಣಮಮುಷ್ಯ ಭಾಸಿತಾ ತುಲಸೀ ಮಂತ್ರಯತೀವ ಲಾಲಿತಾ।
ಮಮ ನಾಥ ಪದಂ ನ ಮತ್ಪರಾಜ್ಜಲಜಾದ್ಯಾನಿ ಹರೇಯುರಿತ್ಯಲಮ್॥ - ಸುಮಧ್ವವಿಜಯ (೭/೪೨)

೪. ಕೃಷ್ಣಸ್ಯ ಮನಸಿ ಚಿತ್ತೇ ನಿರ್ವೃತಿಂ ಸುಖಂ ನ ನಿರ್ಮಿಮೀತೇ ನ ಜನಯತಿ ತುಲಸೀಂ ವಿನಾ ಕೇವಲಪುಷ್ಪೈ-ರ್ವಿಷ್ಣ್ವರ್ಚನಸ್ಯ ನಿಷಿದ್ಧತ್ವಾದಿತಿ ಭಾವಃ। -ವ್ಯಾ.
ತ್ವತ್ಪತ್ರರಹಿತಂ ಯತ್ತು ಪತ್ರಂ ವಾ ಪುಷ್ಪಮೇವ ವಾ।
ಸುವರ್ಣೇನ ಕೃತಂ ಪುಷ್ಪಂ ರಜತಂ ರತ್ನಮೇವ ವಾ॥
ಮಮ ಪಾದಾಬ್ಜಪೂಜಾಯಾಮನರ್ಹಂ ಭವತಿ ಧ್ರುವಮ್॥ -ಸ್ಮೃತಿಃ

೩. ಇದರಂತೆ ಇತರ ಪದಾರ್ಥಗಳು ಸಹ ತುಲಸಿ ಸಹಿತವಾಗಿಲ್ಲದಿದ್ದಲ್ಲಿ ಶ್ರೀಹರಿಯು ಸ್ವೀಕರಿಸನು ಎಂಬುದು ಒಟ್ಟು ಭಾವ: ಒಲ್ಲನೋ ಹರಿ ಕೊಳ್ಳನೋ । ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ –ಶ್ರೀಪುರಂದರದಾಸರು ; ಭೂಜ – ವೃಕ್ಷ; ವಯಸ್ಯಾ – ಗೆಳತಿ.

೪. ಮನಸಿಜ – ಕಾಮ; ವನಜ – ಕಮಲ; ವನ – ನೀರು, ಗುಂಪು; ನಿರ್ವೃತಿ – ಸಂತೋಷ; ಮನಸಿಜಾದಿ – ಮನಸಿಜ + ಆದಿ – ಮನ್ಮಥನಿಗೆ ಜನಕನಾದವನು.

### ಪುನಃ ಜಾಜಿ ಮೊದಲಾದವುಗಳ ಪ್ರಾರ್ಥನೆ

**ವೃಂದಾವನಂ ಕಿಲ ವನಂ ಭವದೀಯವಾಸ-**
**ಶ್ಚಾಂದ್ರಪ್ರಮೋದಕರಚಾರುಕರಾಭಿರಾಮಮ್ ।**
**ಕಂದರ್ಪಬಾಣದಲಿತಂ ಬತ ಯೂಯಮಾಸಾಂ**
**ವೃಂದಂ ವೃಥಾ ಕುರುಥ ಹಾ ವ್ರಜಸುಂದರೀಣಾಮ್ ॥ ೯ ॥**

"ಅಮ್ಮ ! ಚಂದ್ರನ ಆಹ್ಲಾದಕರವಾದ ರಮ್ಯಕಿರಣಗಳಿಂದ ಶೋಭಿಸುವಂತಹ ಈ ವೃಂದಾ-ವನವೆಂಬ ವನವು ನಿಮಗೆ ವಾಸಸ್ಥಾನವಾಗಿದೆ; ನೀವು ಈ ಗೋಕುಲದ ಚೆಲುವೆಯರ ಹಿಂಡನ್ನು ಸುಮ್ಮನೆ ಮನ್ಮಥನ ಬಾಣಗಳಿಂದ ಘಾಸಿಗೊಳಿಸುತ್ತಿರುವಿರಿ! ಅಯ್ಯೋ !".

ವಿ. : ೧. [೧]ವೃಂದಾವನದಂತಹ ರಮ್ಯ ಪ್ರದೇಶದಲ್ಲಿ ನೆಲೆಸಿದ, ಜಾಜಿ ಮೊದಲಾದ ವೃಕ್ಷಗಳು ಅಲ್ಲಿಯ ನಿವಾಸಿಗಳಾದ ಗೋಪಿಯರ ಮನಸ್ಸಿಗೆ ನೋವುಂಟುಮಾಡದಿರಲಿ ಎಂಬಲ್ಲಿ ಒಂದೇ ಸ್ಥಳದಲ್ಲಿ ನೆಲೆಸಿದ ಜನರು ಪರಸ್ಪರರಿಗೆ ನೋವುಂಟುಮಾಡುವುದು ಅನುಚಿತ ಎಂಬ [೨]ಲೋಕನೀತಿ ನಿರೂಪಿತವಾಗಿದೆ.

೨. [೩]ಸುಂದರವಾದ ವೃಂದಕ್ಕೆ ರಕ್ಷಣೆ ನೀಡುವ ಆ ವೃಂದಾವನದಲ್ಲಿ ಸುಂದರಿಯರಾದ ಗೋಪಿಯರ ರಕ್ಷಣೆ ಆಗದಿರುವುದು ಅದಕ್ಕೆ ಶೋಭೆ ನೀಡುವಂತಹುದಲ್ಲ ಎಂಬ ಭಾವವೂ ಸೂಚಿತ; ಚಾರುಕರ – ಮನೋಹರ ಕಿರಣ; ಕಂದರ್ಪ – ಮನ್ಮಥ.

### ಗೋಪಿಯರಿಂದ ಪುಷ್ಪಪೂಜೆಯ ಆಮಿಷ

**ನಃ ಸಂದಿಶಂತು ನಯನೋತ್ಸವಮಚ್ಯುತಂ ತಂ**
**ನಕ್ರಾತಿಭೀತಗಜಗೀತಚರಿತ್ರಜಾತಮ್ ।**

---

೧. ಯದ್ಯಪಿ ವೃಂದಾಯಾಃ ಸ್ತ್ರಿಯೋ ವನಂ ವೃಂದಾವನಮಿತಿ ವಸ್ತುಸ್ಥಿತಿಃ । ತಥಾಪಿ ವಿಮೋಹಾದ್ವಾ ಕಾರ್ಯಾರ್ಥಿ-ತಯಾ ವಾ ವೃಂದಸ್ಯಾವನಂ ಯಸ್ಮಾದಿತಿ ಪದಚ್ಛೇದಾದಿಯಮುಕ್ತಿಃ । –ವ್ಯಾ.

೨. ಉತ್ತಮಾಃ ಸ್ವಕುಲಾನುಸಾರೇಣ ಕಾರ್ಯಂ ಕುರ್ವಂತೀತಿ ಭಾವಃ । –ವ್ಯಾ.

೩. ಭವನ್ಮಾತೃಸ್ಥಾನೀಯಸ್ಯಾಪಿ ವನಸ್ಯ ವೃಂದರಕ್ಷಕತ್ವಂ ಕಿಲ ಕಿಮು ಭವತೀನಾಮಪೀತಿ ಭಾವಃ । –ವ್ಯಾ.

ಪಶ್ಚಾತ್ ತದಂಘ್ರಿಯುಗಲೇ ವಿನಿವೇಶ್ಯ ಕುರ್ಮಃ
ಪದ್ಮಾಸನಾದಿಸುರಸಂಚಯಸತ್ಕೃತಾ ವಃ ॥ ೧೦ ॥

''ಮೊಸಳೆಗೆ ಬಹಳ ಅಂಜಿದ ಗಜೇಂದ್ರನಿಂದ ಹಾಡಲ್ಪಟ್ಟ ಮಹಿಮೆ ಶ್ರೀಹರಿಯದು; ಕಣ್ಣಿಗೆ ಹಬ್ಬ ಎನ್ನಿಸುವ ಅವನನ್ನು ನಮಗೆ ನೀಡಿರಿ; ಆ ಬಳಿಕ ನಾವು ನಿಮ್ಮನ್ನು ಅವನ ಎರಡೂ ಪಾದ-ಗಳಿಗೆ ಸಮರ್ಪಿಸಿ, ನಿಮ್ಮನ್ನು ಬ್ರಹ್ಮಾದಿದೇವವೃಂದಗಳಿಂದ ಮಾನಿತರನ್ನಾಗಿ ಮಾಡಿಬಿಡುವೆವು''.

ವಿ. : ೧. ಶ್ರೀಕೃಷ್ಣ ಸಂದರ್ಶನದ ಭಾಗ್ಯವನ್ನು ನೀಡಿದಲ್ಲಿ ಆ ಪುಷ್ಪಗಳಿಂದ ಅವನಿಗೆ ಪೂಜೆ ಸಲ್ಲಿಸುವೆವು ಎಂಬುದು ಅವರ [೧]ಭಾವ.

೨. ಶ್ರೀಹರಿಗೆ ಅರ್ಪಿತವಾದ ಪುಷ್ಪ ಮೊದಲಾದ [೨]ನಿರ್ಮಾಲ್ಯಗಳು ಮಾತ್ರವೇ ಬ್ರಹ್ಮಾದಿ-ಗಳಿಗೂ ಪೂಜ್ಯ ; ಅವರು ಅವುಗಳನ್ನು ಮಾತ್ರ ಸ್ವೀಕರಿಸುವರು ಎಂಬ ವಿಶೇಷಾಂಶವು ಇಲ್ಲಿ [೩]ಸೂಚಿತ ; ಸಂಚಯ – ಸಮೂಹ.

## ಮುಂದುವರೆದ ಪುಷ್ಪಪೂಜೆಯ ಆಮಿಷ

ಬತ ನತಜನಬಂಧುಂ ಸಾಂದ್ರಸೌಂದರ್ಯಸಿಂಧುಂ
ಯದುನೃಪಕುಲಸಾರಂ ಯಚ್ಛತೋದಾರಹಾರಮ್ ।
ತದನು ಶಿರಸಿ ಯುಷ್ಮಾನ್ ಧಾರಯಾಮಃ ಕೃತೇಷ್ಟಾಃ
ಪರಮಪದಯುಗಾಬ್ಜೇ ಪೂರಯಾಮಃ ಪ್ರಹೃಷ್ಟಾಃ ॥ ೧೧ ॥

''ಅಮ್ಮ ! ನಮಿಸುವ ಜನರಿಗೆ ಬಂಧುವಾದ, ನಿಬಿಡಸೌಂದರ್ಯದ ನಿಧಿಯಾದ, ಯದುರಾಜನ ವಂಶದಲ್ಲಿ ಶ್ರೇಷ್ಠನಾದ, ಉತ್ಕೃಷ್ಟವಾದ ಮಾಲೆಗಳನ್ನು ಧರಿಸಿದ, ಶ್ರೀಕೃಷ್ಣನನ್ನು ನಮಗೆ ತೋರಿಸಿರಿ; ಆ ಬಳಿಕ ಅಭಿಲಾಷೆ ತೀರಿ ಬಹಳವಾಗಿ ನಲಿಯುವ ನಾವು ಸರ್ವೋತ್ತಮನಾದ ಶ್ರೀಹರಿಯ ಎರಡು ಪಾದಕಮಲಗಳಲ್ಲಿ ನಿಮ್ಮನ್ನು ಸಮರ್ಪಿಸುವೆವು ; ನಮ್ಮ ಮುಡಿಯಲ್ಲಿ ಧರಿಸುವೆವು.''

ವಿ. : ೧. ಅಭಿಲಾಷೆ ತೀರಿದಲ್ಲಿ [೪]ಶ್ರೀಕೃಷ್ಣನಿಗೆ ಪುಷ್ಪಾರ್ಚನೆ ಸಲ್ಲಿಸಿ, ಆ ಬಳಿಕ ಆ ನಿರ್ಮಾಲ್ಯ-ವನ್ನು ಶಿರಸಾ ಧರಿಸುವೆವು ಎಂಬುದು ಅವರ ಭಾವ.

---

೧. ಅನೇನ ಮಂದಬುದ್ಧಿತ್ವಾನ್ನಾಸ್ಮದುಪೇಕ್ಷಾ ಕರ್ತವ್ಯೇತಿ ಸೂಚ್ಯತೇ । –ವ್ಯಾ.

೨. ಅಸ್ಮಾಭಿಃ ಶ್ರೀಕೃಷ್ಣಪಾದಾರ್ಪಣೇ ಕೃತೇ ಬ್ರಹ್ಮಾದಯೋ ದೇವಾಃ ಹರಿನಿರ್ಮಾಲ್ಯಬುದ್ಧ್ಯಾ ಶಿರಸಾ ಧಾರಯಿಷ್ಯಂತೀತಿ ಮಹಾನುಪಕಾರೋ ಭವತೀತಿ ಭಾವಃ । –ವ್ಯಾ.

೩. ಯದ್ಯಪಿ ಪೂರ್ವಸ್ಮಿನ್ ಶ್ಲೋಕೇಽಪ್ಯುಪಕಾರೋ ನಿವೇದಿತಃ ತಥಾಪಿ ತಸ್ಯಾತೀತತ್ವೇನ ತಮನುಸೃತ್ಯ ಕಾರ್ಯ-ಕರಣಮುತ್ತಮಸ್ವಭಾವ ಇತಿ ನಾಸೌ ಮಧ್ಯಕೋಟೌ ನಿವೇಶಿತಃ । ಅತ ಏವಾತ್ರ ಪಶ್ಚಾದಿತ್ಯುಕ್ತಮ್ । –ವ್ಯಾ.

೪. ಶ್ರೀಕೃಷ್ಣಪ್ರಾಪ್ತ್ಯನಂತರಂ ಶ್ರೀಕೃಷ್ಣಾಯ ಸಮರ್ಪ್ಯ ಶೃಂಗಾರಾರ್ಥಂ ಕಬರೀಷು ಧಾರಯಾಮ ಇತಿ ಹೃದಯಮ್ । –ವ್ಯಾ.

೨. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರಮಾಡುವ[೧] ಪ್ರಲೋಭನೆಯನ್ನು ಈ ಮೂಲಕ ಅವುಗಳಿಗೆ ನೀಡುತ್ತಿರುವರು ಎಂಬುದು ಗಮನಾರ್ಹ.

### ಜಾಜಿ ಮೊದಲಾದವುಗಳಿಂದ ನಿರಾಶರಾದ ಗೋಪಿಯರು

ಗಚ್ಛಂತು ಪತ್ಯುರ್ಗತಿಮಾಸು ನೈತಾ
ವಕ್ಷ್ಯಂತಿ ಗಾಢಂ ಪರಿರಂಭಣೇ ನಃ।
ಸ್ವಾಯಾಸಮಾಶಂಕ್ಯ ತದೀಯಗೇಯ-
ಮಾಲಾಃ ಸಮಾಲಂಬ್ಯ ಕೃತಾಂಗಸಂಗಾಃ [೨] ॥ ೧೨ ॥

ಶ್ರೀಕೃಷ್ಣನು ನಮ್ಮನ್ನು ಗಾಢವಾಗಿ ಆಲಿಂಗಿಸಿದಲ್ಲಿ ತಮಗೆ ಶ್ರಮವಾದೀತೆಂಬ ಶಂಕೆಯಿಂದ ಅವನನ್ನು ಆಶ್ರಯಿಸಿ ಅವನ ಅಂಗಸಂಗವನ್ನು ಪಡೆದ ಈ ಸ್ತುತ್ಯವಾದ ಮಾಲೆಗಳು ಪತಿಯಾದ ಅವನ ಹಾದಿಯನ್ನು ನಮಗೆ ತಿಳಿಸುತ್ತಿಲ್ಲ; ನಡೆಯಿರಿ.

ವಿ. : ೧. ಆ ಜಾಜಿ ಮೊದಲಾದ ಪುಷ್ಪಗಳು ಉತ್ತರ ನೀಡದಿರಲು ಕಾರಣವನ್ನು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ.

೨. [೩] ಒಂದು ವೇಳೆ ಅವು ಶ್ರೀಕೃಷ್ಣನ ಇರವನ್ನು ತಮಗೆ ತಿಳಿಸಿ, ಅದರಿಂದ ಶ್ರೀಕೃಷ್ಣನನ್ನು ತಾವು ಪಡೆದು ಅವನನ್ನು ಗಾಢವಾಗಿ ಆಲಿಂಗಿಸಿದಾಗ, ಶ್ರೀಕೃಷ್ಣನ ವಕ್ಷಃಸ್ಥಳವನ್ನು ಅಲಂಕರಿಸಿರುವ ಅವು ನುಜ್ಜುಗುಜ್ಜಾಗುವ ಅಪಾಯವನ್ನು ಗಮನಿಸಿಯೋ ಎಂಬಂತೆ ಅವು ಅವನ ಇರವನ್ನು ತಿಳಿಸದೆ ಮೌನವಹಿಸಿವೆ ಎಂದರ್ಥ; ಪರಿರಂಭಣ – ಆಲಿಂಗನ.

೩. ಒಬ್ಬ ಸ್ತ್ರೀ ತನ್ನ ಪತಿಯ ಇರವನ್ನು ತನ್ನ ಸವತಿಯರಿಗೆ ನಿಶ್ಚಿತವಾಗಿಯೂ ತಿಳಿಸಳು; ಅವರು ಇವನನ್ನು ಪಡೆಯುವುದು ತನಗೆ ಹಾನಿಕರ ಎಂಬ [೪] ಭಾವವೇ ಅದಕ್ಕೆ ಕಾರಣ. ಇದರಿಂದ ಪುಷ್ಪಮಾಲೆಗಳು ಸಹ ಶ್ರೀಕೃಷ್ಣನ ಸಂಪರ್ಕ ಪಡೆಯುವ ಮೂಲಕ ಗೋಪಿಯರಿಗೆ ಸವತಿಯ-ರಾಗಿರುವುದರಿಂದ ಅವನ ಇರವನ್ನು ಅವು ತಿಳಿಸುತ್ತಿಲ್ಲ ಎಂಬುದು ಇಲ್ಲಿಯ ಧ್ವನಿ.

### ಶ್ರೀಕೃಷ್ಣನಲ್ಲಿ ಪ್ರಾರ್ಥನೆ

ಅನ್ಯಾಂಚನಾನ್ಮುಕುಲಿತಂ ಸರಸೀರುಹಾಸ್ಯ-
ಮನ್ವೇತಿ ಮಂದಮರುತಾ ಚಲಿತಂ ದ್ವಿರೇಫಃ।

---

೧. ಶಿರಸಾ ಧಾರಣಲಕ್ಷಣಃ ಪ್ರತ್ಯುಪಕಾರಃ ಪ್ರಾತೀತಿಕಃ। –ವ್ಯಾ.

೨. ತರುತ್ಸ್ವಾದವಚನೇ ಆಯಾಸಶಂಕಾಯಾ ನಿಮಿತ್ತತ್ವಕಲ್ಪನಾತ್ ವಿಭಾವನಾಲಂಕಾರಃ। –ವ್ಯಾ.

೩. ಅಸ್ಮಾಕಂ ಪರಿರಂಭಣೇ ಆಲಿಂಗನೇ ಶ್ರೀಕೃಷ್ಣೇನ ಕೃತೇ ಸತಿ ಸ್ವಾಯಾಸಂ ಸ್ವಪ್ರಯಾಸಂ ಉಭಯೋರಂಗಸಂಗೇನ ಮಧ್ಯಸ್ಥಿತಾನಾಂ ಜೂರ್ಣೀಭಾವೇನ ಸ್ವರೂಪಹಾನಿಮಿತ್ಯರ್ಥಃ। –ವ್ಯಾ.

೪. ಕಲ್ಪನಮಪಿ ವಿಮೋಹೇನೇತಿ ಭ್ರಮಮೂಲಕಃ। ಅನೇನ ಶ್ರೀಕೃಷ್ಣೋ ಲಭ್ಯತೇ ಚೇದ್ದೃಢಂ ಪರಿರಂಭಣಂ ಕರಿಷ್ಯಾಮ ಇತಿ ಗೋಪೀನಾಂ ರಣರಣಿಕಾ ವ್ಯಜ್ಯತೇ। –ವ್ಯಾ.

ಸನ್ನಾಥ ಪಶ್ಯ ಸದಯಾಗ್ರಗ ಸಾಧುವಶ್ಯ
ಕಿಂ ನಃ ಪರಿತ್ಯಜಸಿ ಖಿನ್ನಹೃದಸ್ತ್ವದರ್ಥೇ ॥ ೧೩ ॥

ಮತ್ತೊಂದು ಬಳ್ಳಿಯ ಬಳಿಗೆ ತೆರಳಿದ್ದರಿಂದಾಗಿ ಮುದುಡಿದ, ಮಂದಮಾರುತದಿಂದ ಚಲಿಸಿದ, ಕಮಲದ ಮುಖದತ್ತ ದುಂಬಿಯು ಧಾವಿಸುತ್ತಿದೆ; "ಎಲೈ ಸ್ವಾಮಿ ! ನೋಡು; ಕರುಣಾಳುಗಳಲ್ಲಿ ಶ್ರೇಷ್ಠನಾದವನೇ ! ಸಜ್ಜನರಿಗೆ ಒಲಿಯುವವನೇ ! ನಿನಗಾಗಿ ಖಿನ್ನಮನಸ್ಕ-ರಾಗಿರುವ ನಮ್ಮನ್ನೇಕೆ ನೀನು ತೊರೆಯುತ್ತಿರುವಿ?".

ವಿ. : ೧. ಮುದುಡಿದ ತಾವರೆಯನ್ನೂ ಸಹ ದುಂಬಿಯು ಆಸ್ವಾದಿಸಲು ತೆರಳುತ್ತದೆ; ಆದರೆ ನಾವು ನಿನಗಾಗಿ ಅರಳಿರುವವರು, ಅಂತಹ ನಮ್ಮನ್ನು ನೀನೇಕೆ ತೊರೆಯುತ್ತಿರುವಿ, ಎಂಬುದು ಗೋಪಿಯರ ಭಾವ.

೨. [1]ಕೋಪಮಾಡಿಕೊಂಡವನನ್ನು ಸಹ ಪ್ರೀತಿಪಾತ್ರರಾದವರು ತೊರೆಯಲಾರರು. ನಾವಂತೂ ವಿಶೇಷ ಅನುರಾಗವನ್ನೇ ಹೊಂದಿರುವವರು ಎಂದ ಮೇಲೆ ನಮ್ಮನ್ನು ತೊರೆ-ಯುವುದು ಅನುಚಿತ ಎಂಬುದು ಅವರ ಪ್ರಾರ್ಥನೆ; ದ್ವಿರೇಫ - ಭ್ರಮರ.

## ಪದ್ಮಿನಿಯ ಪ್ರಾರ್ಥನೆ

ಹೇ ಪದ್ಮಿನಿ ಪ್ರಿಯಮುದೀರಯ ಪೀವರಾಂಸಂ
ನಾರಾಯಣಃ ಸ ತು ತವಾಸ್ಯುದರೇ ನಿಗೂಢಃ ।
ತ್ವಂ ಹಿ ಸ್ವಭಾವಮಧುರೇತಿ ಬತಾರ್ಥ್ಯಸೇಽಂಬ
ನೋ ಚೇದ್ದೃಗಂಬುನಿಕರೈಃ ಕಲುಷಾ ಖಲು ಸ್ಯಾಃ ॥ ೧೪ ॥

"ಎಲೈ ಪದ್ಮಗಳ ಕೊಳವೇ ! ತುಂಬುತೋಳಿನ ಪ್ರಿಯನಾದ ಶ್ರೀಕೃಷ್ಣನ ಇರವನ್ನು ನಮಗೆ ತಿಳಿಸು; ಅವನಾದರೋ ನಾರಾಯಣ; ನಿನ್ನ ಒಡಲಿನಲ್ಲಿ ಅಡಗಿಕೊಂಡಿರುವನು ; ನೀನು ಸ್ವಭಾವತಃ ಮಧುರಳಾದವಳು. ಅಮ್ಮ ! ಅದಕ್ಕಾಗಿ ನಾವು ನಿನ್ನನ್ನು ಬೇಡುತ್ತಿರುವೆವು. ಇಲ್ಲವಾದಲ್ಲಿ ನಮ್ಮ ಕಣ್ಣೀರಿನ ಹನಿಗಳ ಧಾರೆಗಳಿಂದ ನೀನು ಮಲಿನಳಾಗುವುದು ನಿಶ್ಚಿತ".

ವಿ. : ೧. ಪದ್ಮಗಳು ನೆಲೆಸಿರುವಲ್ಲಿ ಶ್ರೀಹರಿಯು ನೆಲೆಸಿರುವನು: ಯತ್ರ ಪದ್ಮವನಾನಿ ಚ .. ತತ್ರ ಸನ್ನಿಹಿತೋ ಹರಿಃ ; ಜಲವು ಶ್ರೀಹರಿಯ ವಿಶೇಷ ಸನ್ನಿಧಾನದ ಸ್ಥಳ ಎಂಬುದು [2]ಶಾಸ್ತ್ರಪ್ರಸಿದ್ಧ; ಆ ಹಿನ್ನೆಲೆಯಲ್ಲಿ ಈ ಮಾತುಗಳು ರೋಚಕವಾಗಿವೆ.

---

೧. ಸತ್ಪ್ರೀತಿತ್ವಾತ್ ಕೃಪಾಯುಕ್ತತ್ವಾತ್ ತ್ವತ್ಸಂಗಾಭಿಮುಖೀನಾಂ ಅಸ್ಮಾಕಂ ಪರಿತ್ಯಾಗೋ ನೋಚಿತ ಇತಿ ಭಾವಃ । -ವ್ಯಾ.
೨. "ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥" ಇತಿ (ಮನುಸ್ಮೃತಿಃ - ೧೦/೧) -ವ್ಯಾ.

೨. ಶ್ರೀಕೃಷ್ಣನನ್ನು ತೋರಿಸಿಕೊಡದಿದ್ದಲ್ಲಿ ಗೋಪಿಯರ ದುಃಖವು ಉಮ್ಮಳಿಸುವುದರಿಂದ ಸುರಿವ ಅವರ ಬಿಸಿಯಾದ ಕಣ್ಣೀರು ಸರೋವರದಲ್ಲಿ ಬಿದ್ದು ಅದರ [೧]ಮಾಧುರ್ಯಕ್ಕೆ ಕುಂದುಂಟಾಗು- ವುದು ಎಂಬ ಮಾತಿನಲ್ಲಿ ಶ್ರೀಕೃಷ್ಣನ ವಿಯೋಗದಿಂದ ಗೋಪಿಯರಿಗಾಗಿರುವ ದುಃಖಾತಿಶಯವು ವರ್ಣಿತವಾಗಿದೆ; ಅಂಸ – ಹೆಗಲು; ದೃಗಂಬು – ಕಣ್ಣೀರು.

### ಪದ್ಮಿನಿಗೆ ಗೋಪಿಯರು ಒಡ್ಡಿದ ಆಮಿಷ

ಪತ್ಯಾ ಸಮಂ ತವ ಜಲೇ ವಿಮಲೇ ವಿಹೃತ್ಯ
ಕುರ್ಮಃ ಕುಚೌಘಕೃತಕುಂಕುಮರಂಜಿತಾಂ ತ್ವಾಮ್ ।
ಮುಗ್ಧಪ್ರಸನ್ನಮುಖಸಾರಸಶೋಭಮಾನಾಂ
ಸ್ವರ್ಮುಕ್ತಪುಷ್ಪನಿಕರೈಃ ಪರಿತಃ ಸುಪೂರ್ಣಾಮ್ ॥ ೧೫ ॥

ನಿನ್ನ ನಿರ್ಮಲವಾದ ಜಲದಲ್ಲಿ ಪತಿಯಾದ ಕೃಷ್ಣನೊಂದಿಗೆ ವಿಹರಿಸಿ, ನಿನ್ನನ್ನು ನಾವು ನಮ್ಮ ಸ್ತನಗಳ ಸಮೂಹದಲ್ಲಿ ಧರಿಸಿದ ಕುಂಕುಮದಿಂದ ರಂಜಿತವನ್ನಾಗಿ ಮಾಡುವೆವು; ಮನೋ-ಹರವಾದ ಪ್ರಸನ್ನಮುಖಕಮಲಗಳಿಂದ ಶೋಭಿಸುವವಳನ್ನಾಗಿಸುವೆವು; ಸ್ವರ್ಗದಿಂದ ಸುರಿಸುವ ಪುಷ್ಪವೃಂದಗಳಿಂದ ಎಲ್ಲೆಡೆ ತುಂಬಿಹೋದವಳನ್ನಾಗಿಸುವೆವು.

ವಿ. : ೧. ಶ್ರೀಕೃಷ್ಣನು ದೊರೆತಲ್ಲಿ ಅವನೊಂದಿಗೆ ಕಮಲಪುಷ್ಪಗಳೂ ಬೆಳೆತಿರುವ ಜಲದಲ್ಲಿ ಜಲವಿಹಾರಮಾಡುವ ತಮ್ಮ ಸಂಕಲ್ಪವನ್ನು ಈ ಮೂಲಕ ವಿಜ್ಞಾಪಿಸಿರುವರು; ಹೀಗೆ ಮಾಡುವ ಸೂಚನೆ ಈ ಮುನ್ನವೇ ಬಂದಿರುವುದು ಗಮನಾರ್ಹ :

ಸರಃ ಪ್ರಸನ್ನಂ ನಿಶಿ ಸಾರಸೌಘೈಃ ಸ ಕಾಮಿನೀಭಿಃ ಸಹ ಸಂಪ್ರವಿಶ್ಯ ।
ಕರಿಷ್ಯತೀಶೋ ಮುಖಪದ್ಮಪುಂಜೈರಲಂಕೃತಂ ಮಾಮಿತಿ ಶಂಸತೀವ ॥-ರು.ವಿ.(೧/೩೯)

೨. [೨]ಶ್ರೀಕೃಷ್ಣನು ಜಲಕ್ರೀಡೆಗೆ ತೊಡಗಿದಾಗ ದೇವತೆಗಳೂ ಸಂಭ್ರಮದಿಂದ ಅದ್ವಿತೀಯ ಪುಷ್ಪವೃಷ್ಟಿ ಸುರಿಸುವರು ಎಂಬ ಅಂಶವೂ ಇಲ್ಲಿ ಸೂಚಿತ ; ಸಾರಸ – ಕಮಲ.

### ಪದ್ಮಿನಿಯಿಂದಾದ ನಿರಾಸೆ

ನೈಷಾ ನವಾಂಬುದತನುಂ ಕಥಯೇನ್ನಿಜಂ ನಃ
ಸ್ವೀಯಪ್ರವಾಹಭರಧಿಕ್ಕೃತಲೋಕವಾರ್ತಾ ।

---

೧. ಅಪಾಂ ಮಧುರಸಸ್ಯ ಸ್ವಾಭಾವಿಕತ್ವಾದ್ರಸಾಂತರಸ್ಯೌಪಾಧಿಕತ್ವಾದಿತಿ ಭಾವಃ। -ವ್ಯಾ.
ಅಸ್ಮಚ್ಛೋಕಾಶ್ರುಪ್ರವಾಹಸ್ಯೋಷ್ಣತ್ವೇನ ತವ ಮಾಧುರ್ಯಹಾನಿಃ ಸ್ಯಾದಿತಿ ಭಾವಃ। -ವ್ಯಾ.
೨. ಸ್ವರ್ಮುಕ್ತೇತ್ಯಾದಿನಾ ಸ್ತ್ರೀಕ್ರೀಡಾಸಮಯೇ ಬ್ರಹ್ಮಾದಿದೇವೈಃ ಪುಷ್ಪವರ್ಷಸ್ಯ ಕ್ರಿಯಮಾಣತ್ವಾತ್ ಶ್ರೀಕೃಷ್ಣಸ್ಯ ಸಾಕ್ಷಾತ್ಪರಬ್ರಹ್ಮತ್ವಂ ದ್ಯೋತ್ಯತೇ। -ವ್ಯಾ.

ಸಾ ಚುಂಬಿತಾಖಿಲಸರೋರುಹಕೋಮಲಾಸ್ಯಾ
ಭೃಂಗಾವಲೀಭಿರಿತರಾರ್ತಿಮಜಾನತೀ ಯಾ ॥ ೧೬ ॥

ತನ್ನ ಪ್ರವಾಹದ ರಭಸದಿಂದಾಗಿ ಸಕಲಲೋಕವಾರ್ತೆಯನ್ನು ಕಡೆಗಣಿಸಿರುವ, ದುಂಬಿಗಳು ಮುತ್ತಿಕ್ಕುವ ಸಕಲಕಮಲಗಳೆಂಬ ಕೋಮಲಮುಖದವಳಾದ, ಇತರರ ನೋವನ್ನು ಅರಿಯದ ಈ ಪದ್ಮಿನಿಯು ನೂತನಮೇಘದಂತಹ ದೇಹದ ನಮ್ಮ ಶ್ರೀಕೃಷ್ಣನ ಬಗ್ಗೆ ನಮಗೆ ಏನನ್ನೂ ತಿಳಿಸಳು.

ವಿ. : ೧. ಪದ್ಮಿನಿಯು ಒಂದೆಡೆ ಲೋಕವಾರ್ತೆಯನ್ನು ತೊರೆದವಳು; ಮತ್ತೊಂದು ಕಡೆ ದುಂಬಿಗಳಿಂದ ಮುತ್ತಿಡಲ್ಪಡುವ ಕಮಲದಂತಹ ಕೋಮಲಮುಖದವಳು. ಹೀಗೆ ಈ ಕಾರಣದಿಂದ ಅವಳಿಗೆ ಇತರರ ನೋವು ತಿಳಿಯುವಂತೆಯೇ ಇಲ್ಲ. ಆದ್ದರಿಂದ ನೊಂದ ಗೋಪಿಯರಿಗೆ ಅವಳು ಕೃಷ್ಣನ ವಾರ್ತೆಯನ್ನು ತಿಳಿಸಿ, ನಲಿವುಂಟುಮಾಡುವ ಸ್ಥಿತಿಯಲ್ಲಿ[1] ಇಲ್ಲ ಎಂದು ಭಾವ. ಬಂಜೆಗೆ ಪ್ರಸವವೇದನೆ[2] ಎಂತು ತಾನೆ ಅರ್ಥವಾದೀತು ಎಂಬ ರೀತಿಯಲ್ಲಿ ಈ ಮಾತು ಬಂದಿದೆ.

೨. ಶ್ರೀಕೃಷ್ಣಭಕ್ತರು ಸದಾ ನಲಿವಿನಿಂದ ತುಂಬಿದವರು ಎಂಬುದು ಇಲ್ಲಿಯ ಒಟ್ಟು ಭಾವ. ಇದು ಒಂದು ರೀತಿಯಲ್ಲಿ 'ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ' (೬/೩.) ಎಂಬ ಗೀತಾವಾಕ್ಯಕ್ಕೆ ನಿದರ್ಶನದಂತಿದೆ.

### ಪದ್ಮಗಳ ಪ್ರಾರ್ಥನೆ

ಪದ್ಮಾನಿ ಶಂಸತ ಪಯೋಬ್ಧಿಸುತಾಕಲತ್ರಂ
ಯುಷ್ಮದ್ವನೇಷು ವಸತೀತಿ ವದಂತಿ ಸಂತಃ ।
ಕುಕ್ಷಿಸ್ಥಿತಾಯ ವಿಧಯೇಽಪರಥಾ ಲಲಾಟ-
ಲೇಖಾಂ ಸ್ಮ ಜೀವನಕೃತೇ ರಚಿತಾಂ ವಿಮಾರ್ಷ್ಟುಮ್ ॥ ೧೭ ॥

''ಎಲೈ ಕಮಲಗಳೇ! ಕ್ಷೀರಸಾಗರಜಾತೆಯಾದ ಮಹಾಲಕ್ಷ್ಮಿಯ ಪತಿಯಾದ ಶ್ರೀಕೃಷ್ಣನ ಬಗ್ಗೆ ನಮಗೆ ತಿಳಿಸಿರಿ; ಅವನು ನಿಮ್ಮ ವನಗಳಲ್ಲಿ ನೆಲೆಸಿರುವನು ಎಂಬುದಾಗಿ ಸಂತರು

---

೧. ಅತೋಽಸ್ಮತ್ಪ್ರಯೋಜನಮತ್ರ ನ ಭವತ್ಯತೋಽನ್ಯತ್ರ ಗಚ್ಛಾಮ ಇತಿ ಭಾವಃ। -ವ್ಯಾ.

೨. ''ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಮ್'' ಇತಿ ನ್ಯಾಯಾತ್ ಸ್ವಯಂ ಸುಖಿತಯಾ ಪರ-ದುಃಖಾನಾಭಿಜ್ಞೇತ್ಯರ್ಥಃ। -ವ್ಯಾ.

ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್।
ನಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಮ್ ॥ ಇತಿ ಸೂಕ್ತಿ।

ಸ್ತ್ರೀಯಪ್ರವಾಹಭರೇತ್ಯಾದಿನಾ ಐಶ್ವರ್ಯಮತ್ತಃ ಪುರುಷಃ ನ ಕೇವಲಂ ಪರೈಃ ಸಾರ್ಧಂ ನ ವದತಿ ಕಿಂತು ಪರೇಷಾಂ ವಚನಮಪಿ ನ ಶೃಣೋತೀತಿ ದ್ಯೋತ್ಯತೇ। -ವ್ಯಾ.

ಹೇಳುವರು. ಅಥವಾ ನಮ್ಮನ್ನು ಉಳಿಸಲೆಂದು ನಿಮ್ಮ ಉದರದಲ್ಲಿ ನೆಲೆಸಿರುವ ಬ್ರಹ್ಮ-ದೇವರಿಗೆ ನಮ್ಮ ಹಣೆಯಲ್ಲಿ ಬರೆದಿರುವ ಬರಹವನ್ನು ತಿದ್ದಲಾದರೂ ತಿಳಿಸಿರಿ".

ವಿ. : ೧. ಪದ್ಮವನಗಳಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನ ಎಂಬ [೧]ಶಾಸ್ತ್ರವಾಣಿಯನ್ನು ಆಧರಿಸಿ ಇಲ್ಲಿಯ ವರ್ಣನೆ ಪ್ರವೃತ್ತವಾಗಿದೆ. ಶ್ರೀಕೃಷ್ಣನ ದರ್ಶನವಿಲ್ಲದೆ ತಾವು ಬದುಕುವುದು [೨]ಅಸಾಧ್ಯ ಎಂಬ ಮತ್ತೊಂದು ಸಂದೇಶವನ್ನು ಅವರು ಇಲ್ಲಿ ತಿಳಿಸಿರುವರು.

೨. ಹಣೆಬರಹ ಎಂದರೆ ವಿಧಿಲಿಖಿತ ಎಂದರ್ಥ; ಅದನ್ನು ಬದಲಿಸುವ ಶಕ್ತಿ ಬ್ರಹ್ಮದೇವರಿಗಷ್ಟೆ ಹೊರತು ಇತರರಿಗಲ್ಲ ಎಂಬ ವಿಶೇಷಾಂಶವು ಇದರಿಂದ ಸೂಚಿತ; ಇದರಿಂದ ಹಣೆಬರಹದ ಬಂಧನ ಬ್ರಹ್ಮವಾಯುಗಳಿಗೆ ಸರ್ವಥಾ ಇಲ್ಲ ಎಂಬ ತತ್ತ್ವವು ಸಹ ಸೂಚಿತ.

### ಪದ್ಮಗಳು ಲಕ್ಷ್ಮಿಯ ಸವತಿಯರು

ಇಮಾನಿ ಲಕ್ಷ್ಮ್ಯಾಃ ಕಿಲ ನಃ ಸಪತ್ನ್ಯಾಃ
ಸಮಾನನಾಮಾನಿ ಸದಾ ಗೃಹಾಣಿ ।
ಅಸ್ತ್ರಾಣಿ ಚಾಸ್ಮಾನ್ ದ್ವಿಷತಸ್ತದೀಯ-
ಪುತ್ರಸ್ಯ ತದ್ಗಚ್ಛತ ದೇಶಮನ್ಯಮ್ ॥ ೧೮ ॥

ಈ ಕಮಲಗಳು ನಮ್ಮ ಸವತಿಯಾದ ಮಹಾಲಕ್ಷ್ಮಿಯ ಹೆಸರನ್ನೇ ಹೊಂದಿರುವಂತಹವು; ಸದಾ ಅವಳಿಗೆ ನೆಲೆ ಎನ್ನಿಸಿರುವವು; ನಮ್ಮನ್ನು ದ್ವೇಷಿಸುವ ಅವಳ ಪುತ್ರನಾದ ಕಾಮನ ಅಸ್ತ್ರಗಳೂ ಆಗಿವೆ; ಆದ್ದರಿಂದ ನಾವು ಬೇರೆಡೆಗೆ ತೆರಳೋಣ.

ವಿ. : ೧. ಪದ್ಮಗಳು ಉತ್ತರಿಸದಿದ್ದಾಗ ಗೋಪಿಯರು ಅದನ್ನು ಅರ್ಥೈಸಿಕೊಂಡ ರೀತಿ ಇಲ್ಲಿ ನಿರೂಪಿತವಾಗಿದೆ. ತಾವು ಕೇಳುತ್ತಿರುವ ಕಮಲಗಳು [೩]ಮಹಾಲಕ್ಷ್ಮಿಯ 'ಪದ್ಮಾ' ಎಂಬ ಹೆಸರನ್ನು ಹೊಂದಿವೆ; ಅವಳಿಗೆ ನೆಲೆಯೂ ಆಗಿವೆ (ಪದ್ಮಾಲಯಾ); ಅವಳಂತೂ ತಮಗೆ ಸವತಿ. ಆದ್ದರಿಂದ ಅವುಗಳಿಂದ ಶ್ರೀಕೃಷ್ಣನ ಇರವನ್ನು ತಿಳಿಯಲು [೪]ಅಸಾಧ್ಯ ಎಂದರ್ಥ.

---

೧. "ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥" ಇತಿ ವಚನಾದಿತಿ ಭಾವಃ । -ವ್ಯಾ.

೨. ಕಥಯತ ಶ್ರೀಕೃಷ್ಣವಿರಹಂ ಸೋಢ್ವಾ ಕ್ಷಣಮಾತ್ರಮಪಿ ಜೀವನಾನ್ಮರಣಮೇವ ವರಮಿತಿ ಭಾವಃ । -ವ್ಯಾ.

೩. 'ಲಕ್ಷ್ಮ್ಯಾಃ ವಾಚಾಂ ಪದ್ಮಾಲಯಾಂ ಪದ್ಮಾಮ್' ಇತಿ ಲಕ್ಷ್ಮ್ಯಷ್ಟೋತ್ತರಶತನಾಮಸ್ತೋತ್ರೇ ।
ಅರವಿಂದಮಶೋಕಂ ಚ ಚೂತಂ ಚ ನವಮಲ್ಲಿಕಾ ।
ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ ॥ -ಅಮರಕೋಶ

೪. ಅತೋಽಸ್ಮತ್ಪ್ರಯೋಜನಮತ್ರ ನ ಭವತೀತಿ ಭಾವಃ । -ವ್ಯಾ.

೨. ಇನ್ನು ತಮ್ಮನ್ನು ಪೀಡಿಸುತ್ತಿರುವ [1]ಕಾಮನಂತೂ ಲಕ್ಷ್ಮಿಯ ತನಯ. ಕಮಲಗಳಂತೂ ಅವನ ಅಸ್ತ್ರ; ಆದರಿಂದಾಗಿ ಈ ಕಮಲಗಳು ಅವನ ಇರವನ್ನು ಸರ್ವಥಾ ತಿಳಿಸವು ಎಂಬುದು ಇಲ್ಲಿಯ ಮತ್ತೊಂದು ವಿಶೇಷಾಂಶ.

### ಚೂತ ಮೊದಲಾದವುಗಳ ಪ್ರಾರ್ಥನೆ

ಹೇ [2]ಚೂತ ಕೃಷ್ಣಪದವೀಂ ವದ ನಃ ಕೃಶಾನಾಂ
ಹೇ ನಾರಿಕೇಲ ಪನಸಾಮ್ಲ ಪರಾನ್ ಹಿ ಯೂಯಮ್ ।
ಪುಷ್ಣೀಥ ಪುಷ್ಪಫಲವಲ್ಕಲಮೂಲಪತ್ರ-
ಚ್ಛಾಯಾಸಮುಲ್ಲಸಿತಪಲ್ಲವಕೋಟರಾದ್ಯೈಃ ॥ ೧೯ ॥

''ಎಲೈ ಮಾವೇ ! ಸೊರಗಿದ ನಮಗೆ ಕೃಷ್ಣನ ಹಾದಿಯನ್ನು ತಿಳಿಸು''; ''ಎಲೈ ನಾರಿಕೇಳವೇ! ಹಲಸೇ ! ಹುಣಸೆಯೇ ! ನೀವಾದರೂ ಅವನ ಮಾರ್ಗವನ್ನು ತಿಳಿಸಿ; ನೀವು ನಿಮ್ಮ ಪುಷ್ಪ, ಫಲ, ವಲ್ಕಲ, ಬೇರು, ಎಲೆ, ನೆರಳು, ಹೊಳೆಯುವ ಚಿಗುರು ಹಾಗೂ ಪೊಟರೆ ಮೊದಲಾದವುಗಳಿಂದ ಇತರರನ್ನು ಪೋಷಿಸುವವರಲ್ಲವೆ'' !

ವಿ. : ೧. ಮರಗಿಡಗಳ ಸ್ವಭಾವ ಪರೋಪಕಾರಮಾಡುವುದು. ಅವುಗಳಲ್ಲಿನ ಎಲೆ, ಹಣ್ಣು ಬೇರು, ತೊಗಟೆ, ಎಸಳು ಹಾಗೂ ಪೊಟರೆಗಳೂ ಸಹ ಇತರರ ಉಪಯೋಗಕ್ಕೆ ಅಗತ್ಯವಾದವುಗಳು; ಆದ್ದರಿಂದ ಅವು ತಮಗೂ ಸಹ ಶ್ರೀಕೃಷ್ಣನ ಮಾರ್ಗವನ್ನು ತಿಳಿಸುವ ಮೂಲಕ ಉಪಕರಿಸಲಿ ಎಂಬುದು ಅವರ ಬೇಡಿಕೆ; ವಲ್ಕಲ - ತೊಗಟೆ; ಚೂತ - ಮಾವು; ಪನಸ - ಹಲಸು.

೨. ಇದರಲ್ಲಿ [3]ವೃಕ್ಷಗಳು ಬಗೆಬಗೆಯ ರೀತಿಯಲ್ಲಿ ಜನರಿಗೆ ಪ್ರಯೋಜನಕಾರಿಯಾಗಿರುವ ವಿಷಯ ನಿರೂಪಿತವಾಗಿದೆ ; ಪರೋಪಕಾರಾಯ ಫಲಂತಿ ವೃಕ್ಷಾಃ ಎಂಬ ಸೂಕ್ತಿಯ ವಿವರಣೆ-ಯಂತಿರುವುದು ಇದರ ವೈಶಿಷ್ಟ್ಯ.

### ತಿಂತ್ರಿಣಿ, ನಾರಿಕೇಳಗಳ ದೋಷಗಳು

ತಿಂತ್ರಿಣ್ಯಾಸ್ವ ಯತಃ ಫಲಾನ್ಯಪಿ ಸದಾ ವಕ್ತ್ರಾಣಿ ತೇ ಪ್ರಾಣಿನಾಂ
ಸಾ ತ್ವಂ ತಾಡನಕರ್ಮಸೂಪಕುರುಷೇ ಕಿಂ ನಾರಿಕೇಲೇನ ನಃ ।

---

೧. ನ ಹಿ ಶತ್ರುಸಂಬಂಧಿನೋಽಸ್ಮತ್ಪ್ರಯೋಜನಂ ಸಿದ್ಧ್ಯತೀತಿ ಭಾವಃ । -ವ್ಯಾ.

೨. ಚೂತಪ್ರಿಯಾಲಪನಸಾಸನಕೋವಿದಾರಜಂಬ್ವರ್ಕಬಿಲ್ವಬಕುಲಾಮ್ರಕದಂಬನೀಪಾಃ ।
ಯೇಽನ್ಯೇ ಪರಾರ್ಥಭವಿನೋ ಯಮುನೋಪಕೂಲಾಃ ಶಂಸಂತು ಕೃಷ್ಣಪದವೀಂ ರಹಿತಾತ್ಮನಾಂ ನಃ ॥
-ಭಾ.(೧೦/೨೮/೯)

೩. ಸರ್ವಸ್ಸ್ವೈರಪಿ ಪರಪೋಷಣಂ ಕುರ್ವತಾಂ ವಾಙ್ಮಾತ್ರೇಣಾಸ್ಮತ್ಪ್ರಯೋಜನಸಾಧನೇ ಕಃ ಪ್ರಯಾಸ ಇತಿ ಭಾವಃ । -ವ್ಯಾ.

ಮಸ್ತೇ ಯಃ ಫಲಮಭ್ರಚುಂಬಿನಿ ನರಾಲಭ್ಯೇ ತ್ವಚಾ ಪಕ್ಷಿಣಾಽ-
ಪ್ಯಗ್ರಾಹ್ಯಂ ದಧದಧ್ವನೀನಮೃತಿದಂ ಶಸ್ತ್ರೇಣ ಸಾಧ್ಯಂ ಬಲಾತ್ ॥ ೨೦ ॥

''ಎಲೈ ಹುಣಸೆಯೇ ! ಸುಮ್ಮನಿರು; ನಿನ್ನ ಹಣ್ಣುಗಳೂ ಸಹ ಯಾವಾಗಲೂ ವಕ್ರವಾಗಿರುವವು; ಹಾಗೂ ಪ್ರಾಣಿಗಳನ್ನು ಹೊಡೆಯುವ ಕೆಲಸಗಳಲ್ಲಿ ನೆರವಾಗುವವಳು ನೀನು; ನಮಗೆ ನಾರಿಕೇಳದಿಂದ ಆಗುವುದೇನಿದೆ? ಅದು ಮನುಷ್ಯರಿಗೆ ಎಟುಕದ ಗಗನಚುಂಬಿಯಾದ ತನ್ನ ತುದಿಯಲ್ಲಿ ಫಲವನ್ನು ಹೊಂದಿರುವುದು; ತೊಗಟೆಯಿಂದಾಗಿ ಅದು ಪಕ್ಷಿಗಳಿಗೂ ಗ್ರಾಹ್ಯವಾಗುವಂತಹುದಲ್ಲ, ಹಾದಿಹೋಕರ ತಲೆಯ ಮೇಲೆ ಬಿದ್ದು ಪ್ರಾಣವನ್ನೇ ತೆಗೆಯುವಂತಿರುವವು; ಅದನ್ನು ತೆಗೆದುಕೊಳ್ಳಲಂತೂ ಶಸ್ತ್ರವೇ ಬೇಕಲ್ಲವೆ !

ವಿ. : ೧. [೧]ಹುಣಸೆಯು ವಕ್ರಾಕಾರದ ಹಣ್ಣು, ವಕ್ರಸ್ವಭಾವದ ಅದು ಎಂದೂ ಇತರರಿಗೆ ಉಪಕಾರಮಾಡದು ಎಂದರ್ಥ. ಅಲ್ಲದೆ, ಅದರ ಬೀಜಗಳು ಇತರರನ್ನು ಹೊಡೆಯಲಷ್ಟೆ ಉಪಯುಕ್ತ; ಬೇರೆ ಕೆಲಸಕ್ಕಲ್ಲ. ತೆಂಗಂತೂ ಬರಿಕೈಗೆ ಎಟುಕದಂತಹ ಎತ್ತರದ ಫಲಗಳನ್ನು ಕೊಡುವಂತಹುದು; ಅದರ ದಪ್ಪಚರ್ಮದಿಂದಾಗಿ ಪಕ್ಷಿಗಳಿಗೂ ಅದು ಬೇಕೆನ್ನಿಸದು; ಅಲ್ಲದೆ, ಅದರಿಂದ [೨]ಕೆಳಕ್ಕೆ ಬೀಳುವ ಎಳನೀರು ಮೊದಲಾದವು ಕೆಳಗೆ ಅಂದರೆ, ಇತರರ ತಲೆಯ ಮೇಲೆ ಬಿದ್ದಲ್ಲಿ ಅವರಿಗೂ ಅಪಾಯಕರ. ಹೀಗೆ ಇತರರಿಗೆ ಪ್ರತಿಕೂಲವಾದಂತಹ ಆ ಹುಣಸೆ, ತೆಂಗು ಮೊದಲಾದಂತಹ ವೃಕ್ಷಗಳಿಂದ ತಮಗೆ ಪ್ರಯೋಜನವಾಗದು ಎಂಬುದು ಅವರ ತೀರ್ಮಾನ-ವಾಗಿದ್ದಿತು ಎಂದರ್ಥ. ಮಸ್ತ- ತಲೆ.

೨. ಈ ಶ್ಲೋಕದಲ್ಲಿ ಹುಣಸೆ ಹಾಗೂ ತೆಂಗುಗಳ ವಿಶೇಷತೆಯನ್ನು ಸಹ ತಿಳಿಸಿರುವರು. ಅದರಂತೆ ಬೇಡಿದವರಿಗೆ ಉಪಯುಕ್ತವೆನ್ನಿಸದ, ರಾಜಾದಿಗಳ ಪಾಲಾಗುವ ಧನವನ್ನು ಸಂಗ್ರಹಿಸುವ ನಿಷ್ಠುರಸ್ವಭಾವದ ಲೋಭಿಗಳ ಸ್ವಭಾವವು ಸಹ ನಿರೂಪಿತವಾಗಿದೆ ಎಂಬುದು ಗಮನಾರ್ಹ: ಅನೇನ ಯಾಚಕಾನುಪಕಾರೀ ರಾಜಾದ್ಯಪಹಾರ್ಯವಿತ್ತಸಂಗ್ರಹೀ ನಿಷ್ಠುರ-ಪ್ರಕೃತಿರ್ಲುಬ್ಧೋ ಧ್ವನ್ಯತೇ । -ವ್ಯಾ.

೩. ಹುಣಸೆ, ತೆಂಗು, ಮೊದಲಾದವುಗಳು ಮೇಧ್ಯ ವೃಕ್ಷಗಳು ಎಂಬ ಮಾಹಿತಿಯು ಇದರಲ್ಲಿದೆ; ತಿಂತ್ರಿಣೀ – ಹುಣಸೆ; ಆಸ್ವ – ಸುಮ್ಮನಿರು; ಅಭ್ರಚುಂಬಿ – ಗಗನಚುಂಬಿ.

### ಹಲಸು ಮೊದಲಾದವುಗಳಿಗೆ ಗೋಪಿಯರ ಶಾಪ

ಯಃ ಪಕ್ವಂ ಫಲಸಮ್ಮಿತಂ ಭುವಿ ಗತೈರಜ್ಞೇಯಮಾವೇಷ್ಟಿತಂ
ಧತ್ತೇ ದುರ್ಜರಕಂಟಕೈಃ ಸ ಪನಸಃ ಪ್ರಾಕ್ ಕಾಕಭೋಗ್ಯೋ ಧ್ರುವಮ್ ।

---

೧. ತಿಂತ್ರಿಣೀಫಲಾನಾಂ ವಕ್ರತ್ವಾದಿತಿ ಭಾವಃ। -ವ್ಯಾ.
೨. ಮೃತಿದಂ ಮರಣಪ್ರದಂ ಸ್ವಚ್ಛಾಯಾಶ್ರಿತಾನಾಂ ಉಪರಿಪತನಾದಿತಿ ಭಾವಃ। -ವ್ಯಾ.

ಚೂತೋऽಯಂ ಫಲಪುಷ್ಪತೋಷಿತಖಗಃ ಸ್ವೋಪಾಂತಗಾನಾಂ ನೃಣಾಂ
ಪಕ್ವಾನಿ ಪ್ರದಿಶನ್ ಸ ಚಾಪಿ ಮನಸಸ್ತೋಷಾಯ ನ ಸ್ಯಾತ್ ಸಖಿ ॥ ೨೧ ॥

ಭೂಮಿಯಲ್ಲಿ ಜನರಿಗೆ ತಿಳಿಯಲಾಗದಂತೆ ಗಟ್ಟಿಮುಳ್ಳುಗಳಿಂದ ಮುಚ್ಚಿಹೋಗಿರುವ ಮಾಗಿದ ಹಾಗೂ ಹೂಗದ ಹಣ್ಣುಗಳನ್ನು ಹೊಂದಿರುವ ಈ ಹಲಸನ್ನು ನಿಶ್ಚಿತವಾಗಿ ಮೊದಲು ಕಾಗೆಗಳು ತಿನ್ನುವಂತಾಗಲಿ; ಗೆಳತಿ! ತನ್ನ ಹಣ್ಣುಹೂವುಗಳಿಂದ ಪಕ್ಷಿಗಳಿಗೆ ಮುದನೀಡುವ, ತನ್ನ ಬಳಿಸಾರುವ ಜನರಿಗೆ ಪಕ್ವವಾದ ಹಣ್ಣುಗಳನ್ನು ನೀಡುವ, ಈ ಮಾವು ಸಹ ನಮ್ಮ ಮನಸ್ಸಿಗೆ ಮುದ ನೀಡಲಾರದು.

ವಿ. : ೧. ಹಲಸು ವಿಚಿತ್ರಬಗೆಯ ವೃಕ್ಷ. ಅದರ ಹಣ್ಣು ಹಣ್ಣಾದರೂ ಕೂಡಲೇ ಗೋಚರಿಸು-ವುದಿಲ್ಲ; ಮೇಲೆ ಮುಳ್ಳುಗಳು ತುಂಬಿರುವುದರಿಂದ ಅದು ಕೂಡಲೇ ತಿನ್ನಲು ಸಾಧ್ಯವಾಗುವುದಿಲ್ಲ; ಜೊತೆಗೆ ಅದರ [1]ಹಣ್ಣನ್ನು ಮೊದಲು ಕಾಗೆಗಳು ತಿನ್ನುತ್ತವೆ ಎಂಬುದು ಪ್ರಸಿದ್ಧಿ; ಹಲಸಿನ ಈ ಬಗೆಯ ಸ್ವರೂಪವನ್ನು ವಿವರಿಸುತ್ತಲೇ ಅಂತಹ ವೃಕ್ಷವು ತಮ್ಮ ಕಾರ್ಯವನ್ನು ಸಾಧಿಸಿಕೊಡಲಾರದು ಎಂದು ಗೋಪಿಯರು ತೆಗಳುವುದು ಇಲ್ಲಿಯ ಸ್ವಾರಸ್ಯ.

೨. ಮಾವು ಮತ್ತೊಂದು ಬಗೆಯ ವೃಕ್ಷ. ಅದರ ನೆರಳು, ಹಣ್ಣು ಮೊದಲಾಗಿ ಎಲ್ಲವೂ ಸಹ ಪ್ರಾಣಿಗಳಂತೆ ಮನುಷ್ಯರಿಗೂ ಪ್ರಯೋಜನಕರ; ಆದರೆ ಅದು ಸಹ ಈ ಸಮಯದಲ್ಲಿ ಗೋಪಿಯರಿಗೆ ಅಪೇಕ್ಷಿತವಾದ ಶ್ರೀಕೃಷ್ಣನ ಸುಳಿವನ್ನು ನೀಡುತ್ತಿಲ್ಲ; ಇಂತಹ ಉಪಯೋಗ-ಕಾರಿಯಾದ ವೃಕ್ಷವೂ ಸಹ ತಮ್ಮ ಪಾಲಿಗೆ [2]ನಿರುಪಯುಕ್ತವೆನಿಸಿದ್ದು ಗೋಪಿಯರ ಮನಸ್ಸಿಗಾದ ಕೃಷ್ಣವಿರಹದ ಒತ್ತಡವನ್ನು ವಿವರಿಸುತ್ತದೆ.

## ಮಾವಿನ ದೋಷ

ಕಂದರ್ಪಮಂತ್ರಿಣಿ ಸಮೀಯುಷಿ ಯಃ ಸರಾಗ-
ಸ್ತತ್ಪಕ್ಷಪಾತಿಪಿಕಗಾಯಕಹರ್ಷಹೇತುಃ ।
ತದ್ಬಂದಿನಃ ಶುಕಚಯಸ್ಯ ಸಖಾ ತದೀಯ-
ಬಾಣೌಘಜನ್ಮಧರಣೀ ಸ ಹಿ ಚೂತ ಏವ ॥ ೨೨ ॥

ಕಂದರ್ಪಸಚಿವನಾದ ವಸಂತವು ಆಗಮಿಸಿದಾಗ, ಚಿಗುರುಗಳಿಂದ ಕೆಂಪಾಗಿ, ಅವನ ಪಕ್ಷಪಾತಿಯಾದ ಹಾಡುವ ಕೋಗಿಲೆಗೆ ಹರ್ಷಕ್ಕೆ ಕಾರಣವೆನ್ನಿಸುವ, ಅವನ ಹೊಗಳುಭಟ-ರಂತಿರುವ ಗಿಳಿಗಳ ಹಿಂಡಿಗೆ ಮಿತ್ರನಾಗಿರುವ, ಆ ಮಾವೇ ಮನ್ಮಥನ ಬಾಣಗಳ ಸಾಲಿಗೆ ಜನ್ಮಭೂಮಿಯಾಗಿದೆ, ಅಲ್ಲವೇ !

---

೧. ವೃಕ್ಷೇ ಪಕ್ವಸ್ಯ ಪನಸಫಲಸ್ಯ ಪ್ರಾಕ್ ಕಾಕಭೋಗ್ಯತ್ವನಿಯಮಾದಿತಿ ಭಾವಃ। -ವ್ಯಾ.

೨. ಅತ್ರಾಪಿ ಪೂರ್ವವಲ್ಲುಬ್ಧೋ ಧ್ವನ್ಯತೇ। -ವ್ಯಾ.

ವಿ. : ೧. ಮಾವು ವಸಂತಕಾಲದಲ್ಲಿ ಚಿಗುರಿ ಆಕರ್ಷಕವೆನ್ನಿಸುವುದು; ಕೋಗಿಲೆಗಳು ಹರ್ಷ-ದಿಂದ ಧ್ವನಿಗಯ್ಯುವುವು. ಗಿಳಿಗಳ ಹಿಂಡುಗಳು ಆಲಾಪನೆಗೆ ತೊಡಗುವವು; ಅದರ ಹೂವಂತೂ [1]ಮನ್ಮಥನ ಬಾಣವೇ ಸರಿ. ಹೀಗೆ ಕಾಮನಿಗೆ ಅತ್ಯಾಪ್ತನಾಗಿರುವ ಈ ಚೂತ ತಮಗೆ ಶ್ರೀಕೃಷ್ಣನನ್ನು ತೋರಿಸದಿರುವ ಮೂಲಕ ಅಹಿತಕಾರಿಯೇ ಆಗಿರುವನು ಎಂಬುದು ಗೋಪಿಯರ ಭಾವ.

೨. ವಸಂತವು ತನ್ನ ಫಲಕಾರ್ಯಕ್ಕೆ ನೆರವು ನೀಡುವುದರಿಂದ ಅದು ಮಾವಿಗೆ ಸಚಿವನಿದ್ದಂತೆ; ಆಗ ಕೂಗುವ ಕೋಗಿಲೆಯು ಅದಕ್ಕೆ ಪಕ್ಷಪಾತಿಯಿದ್ದಂತೆ; ಆಗ ಉಲಿಯುವ ಗಿಳಿಗಳಂತೂ ಅದರ ಹೊಗಳುಭಟರೇ; ಹೀಗೆ ಮಾವಿಗೆ ಅವು ಪೂರಕವಾಗಿರುವುದನ್ನು ಇಲ್ಲಿ ವರ್ಣಿಸಿರುವ ರೀತಿ ತುಂಬಾ ಮನೋಜ್ಞವಾದುದು; ಗಿಳಿಗಳು ಉಲಿಯುವುದನ್ನು ಹೊಗಳುಭಟರ ಕೆಲಸ ಎಂಬ ಇಲ್ಲಿಯ ಕಲ್ಪನೆ ಅಮೋಘವಾದುದು.

### ಮಾಧವಿಯ ಪ್ರಾರ್ಥನೆ

[2]ಹೇ ಮಾಧವಿ ಪ್ರಾಂತನಿಗೂಢವಲ್ಲಿ
ಶ್ರೀಮಾನಿನೀಮಾನದಮಾದಿಶೇಹ ।
ದೇಹಿ ತ್ವದೀಯಾಂ ಸ್ಥಿತಿಮೇವ ನೋ ಚೇ-
ನ್ನಾಮ್ನಾಽಪಿ ಯತ್ರಾಸ್ತಿ ಹಿ ಮಾಧವೀತ್ವಮ್ ॥ ೨೩ ॥

"ಎಲೈ ಮಾಧವಿ ! ಸಮೀಪದಲ್ಲಿ ಬಳ್ಳಿಗಳು ಹಬ್ಬಿಕೊಂಡಿರುವವಳು ನೀನು; ಮಹಾಲಕ್ಷ್ಮಿಗೂ ಉಲ್ಲಾಸನೀಡುವ ಶ್ರೀಕೃಷ್ಣನನ್ನು ನಮಗೀಗ ತೋರಿಸಿಕೊಡು; ಇಲ್ಲವಾದಲ್ಲಿ ನಿನ್ನ ಸ್ಥಿತಿ-ಯನ್ನಾದರೂ ನೀಡು; ಮಾಧವೀ ಎಂಬ ನಿನ್ನಲ್ಲಿ ಹೆಸರಿನಿಂದಾದರೂ ಅವನು ನೆಲೆಸಿರುವನಲ್ಲವೆ !"

ವಿ. : ೧. ಮಾಧವಿ ಎಂಬುದು ಒಂದು ಬಗೆಯ ಬಳ್ಳಿ; ಮಾಧವನಾದ ಶ್ರೀಕೃಷ್ಣನನ್ನು ನೆನಪಿಸುವ ಹೆಸರು ಅದರದು; ಮಾಧವನನ್ನು ತೋರಿಸದಿದ್ದರೂ ಸರಿ, ಅವನ ಹೆಸರನ್ನು ಹೊಂದಿರುವ ಅದರ ಸ್ಥಿತಿಯಾದರೂ ತಮಗೆ ಲಭಿಸಲಿ ಎಂದು ಕೇಳಿಕೊಳ್ಳುವ ಮೂಲಕ ಆ ಬಳ್ಳಿಯ ಹೆಸರು ಶ್ರೀಕೃಷ್ಣನ ಸ್ಮರಣೆಗೆ ಸಾಧನವಾದುದು ಎಂಬ ತತ್ತ್ವವನ್ನು ಗೋಪಿಯರು ತಿಳಿಸಿರುವರು. ಅದರಂತೆ [3]ಹೆಸರಿನ ಮೂಲಕವಾದರೂ ತಾವು ಕೃಷ್ಣನಿಗೆ ಸಂಬಂಧಿಸಿ-ದವರಾಗಬೇಕು ಎಂಬುದು ಗೋಪಿಯರ ಅಪೇಕ್ಷೆ ಇದರಲ್ಲಿ ವ್ಯಕ್ತವಾಗಿದೆ.

---

೧. ಅಸ್ಮದ್ವಿರೋಧಿಮದನಪರಿವಾರಸ್ಯ ಸರ್ವಸ್ಯ ಸಹಾಯಭೂತತ್ವಾನ್ಮನಸ್ತೋಷಾಯ ನ ಸ್ಯಾದಿತಿ ಭಾವಃ । -ವ್ಯಾ.

೨. ಪತ್ನ್ಯತೇಹ ಲತಾ ಬಾಹೂನಪ್ಯಾಶ್ಲಿಷ್ಟಾ ವನಸ್ಪತೇಃ ।
ನೂನಂ ತತ್ಕರಜಸ್ಪರ್ಶಾದ್ ಬಿಭ್ರತ್ಯುತ್ಪುಲಕಾನ್ಯಹೋ ॥ -ಭಾಗ.(೧೦/೨೮/೧೨)

೩. ಮಾಧವಸ್ಯೇಮಾಃ ಮಾಧವ್ಯ ಇತಿ ವ್ಯುತ್ಪತ್ತೇಃ । ನಾಮ್ನಾ ವಾ ತದೀಯಾ ಭವಾಮ ಇತ್ಯಾಶಯಃ । -ವ್ಯಾ.

೨. ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರವಾಗದ ಮಾನವಜನ್ಮಕ್ಕಿಂತ ಗಿಡಬಳ್ಳಿಗಳ ಜನ್ಮವೇ ಮೇಲು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ; ವಲ್ಲಿ - ಬಳ್ಳಿ.

### ಅಶೋಕವು ಸಹ ನಿಷ್ಪ್ರಯೋಜಕ

[೧]ಅಶೋಕ ಏಷೋಽಪರವೇದನಾಜ್ಞಃ
[೨]ಪದಾಹತೇರೇವ ಪರೋಪಕರ್ತಾ ।
ನ ಕಾರ್ಯಕಾರೀ ಶಿಥಿಲಾತ್ಮನಾಂ ನ-
ಸ್ತತೋಽಪರತ್ರ ಪ್ರತಿಯಾತ ಸಖ್ಯಃ ॥ ೨೪ ॥

ಈ ಅಶೋಕವಂತೂ ಇತರರ ಶೋಕವನ್ನು ಅರಿಯಲಾರದಂತಹುದು; ಕಾಲಿನಿಂದ ಒದ್ದಾಗಲೇ ಇತರರಿಗೆ ಉಪಕಾರಮಾಡುವಂತಹುದು ಇದು; ಗಲಿತದೇಹರಾದ ನಮಗೆ ಇದರಿಂದ ಕೆಲಸವಾಗದು; ಆದ್ದರಿಂದ ಗೆಳತಿಯರೇ ! ಬೇರೆಡೆಗೆ ನಡೆಯಿರಿ.

ವಿ.: ಅಶೋಕವು ಇತರ ವೃಕ್ಷಗಳಂತೆ ಜಡವಾದುದು; [೩]ಸ್ತ್ರೀಯರು ಎಡಗಾಲಿನಿಂದ ಒದ್ದಾಗಲೇ ಅದು ಹೂಬಿಡುವುದು ಎಂಬುದು ಪ್ರಸಿದ್ಧ; ಜಡವಾದ ಅದಕ್ಕೆ ತಮ್ಮ ವೇದನೆ ತಿಳಿಯುವಂತಿಲ್ಲ; ಕೃಷ್ಣನನ್ನು ಹುಡುಕಿ ಆಯಾಸಗೊಂಡಿರುವ ತಾವು ಅದಕ್ಕೆ ಕಾಲಿನಿಂದ ಒದೆಯುವ ಶಕ್ತಿಯನ್ನೂ ಹೊಂದಿಲ್ಲ; ಹೀಗೆ ಅದರಿಂದ ತಮ್ಮ ಕಾರ್ಯವಾಗುವ ಸಂಭವವಿಲ್ಲ ಎನ್ನುವ ಮೂಲಕ ಗೋಪಿಯರು ಅಲ್ಲಿಂದ ಬೇರೆಡೆಗೆ ತೆರಳುವ ತೀರ್ಮಾನ ಕೈಗೊಂಡರು ಎಂದರ್ಥ.

### ಪಾರಿಜಾತದ ಪ್ರಾರ್ಥನೆ

ಹೇ ಪಾರಿಜಾತ ಸುರಸಂಸದಿ ಗೀತ ದಾತಃ
ಶ್ರೀನಂದನಂದನಮುದೀರಯ ಸಿದ್ಧಗಮ್ಯಮ್ ।
ರತ್ನಾನಿ ರಾಸ್ಯುರುವಿಧಾನಿ ಕಿಲಾಶ್ರಿತಾನಾ-
ಮಸ್ಮಭ್ಯಮಚ್ಯುತಹರಿನ್ಮಣಿಮೇವ ದೇಹಿ[೪] ॥ ೨೫ ॥

---

೧. ಕಚ್ಚಿತ್ ಕುರವಕಾಶೋಕ ನಾಗ ಪುನ್ನಾಗ ಚಂಪಕ ।
ರಾಮಾನುಜೋ ಮಾನಿನೀನಾಂ ದೋಗ್ಧಾ ನಂದಸ್ಯ ಚಾತ್ಮಜಃ ॥ -ಭಾಗ.(೧೦/೨೮/೬)
೨. ಪಾದಾಘಾತಾದಶೋಕಂ ವಿಕಸತಿ - ಸಾಹಿತ್ಯದರ್ಪಣ; ಪಾದಾಹತಃ ಪ್ರಮದಯಾ ವಿಕಸತ್ಯಶೋಕಃ ಇತಿ ಅನ್ಯತ್ರ -ವ್ಯಾ.
ಸನೂಪುರರವೇಣ ಶ್ರೀಚರಣೇನಾಭಿತಾಡನಮ್ ।
ದೋಹದಂ ತದಶೋಕಸ್ಯ ತತಃ ಪುಷ್ಪೋದ್ಗಮೋ ಭವೇತ್ ॥ - ನೈಷಧೀಯ
೩. ಸ್ತ್ರೀವಾಮಪಾದತಾಡನಾದಶೋಕಃ ಪುಷ್ಪಿತೋ ಭವತೀತಿ ದೋಹದೇ ಕಥಿತತ್ವಾದಿತಿ ಭಾವಃ। -ವ್ಯಾ.
೪. ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್ ।
ಸಹಿತಂ ಸಮಾದಿಪದತಾನನಗೈಃ ಪರಿಭೂಷಯಂತಿ ತದಹೋ ಋತವಃ ॥ -ಸುಮಧ್ವವಿಜಯ(೧೧/೩.೮)

''ದೇವಸಭೆಯು ಹಾಡಿ ಹೊಗಳುವ, ಕೊಡುವ ಸ್ವಭಾವದ ಎಲೈ ಪಾರಿಜಾತವೇ ! ನಮಗೆ ಸಿದ್ಧರು ಪಡೆಯುವಂತಹ ನಂದತನಯನಾದ ಶ್ರೀಕೃಷ್ಣನನ್ನು ತಿಳಿಸು; ನೀನು ಆಶ್ರಯಿಸಿದವರಿಗೆ ಬಹುಬಗೆಯ ರತ್ನಗಳನ್ನು ನೀಡುವಿ, ಅಲ್ಲವೆ! ನಮಗಂತೂ ಶ್ರೀಕೃಷ್ಣನೆಂಬ ಇಂದ್ರನೀಲಮಣಿಯನ್ನೇ ನೀಡಿಬಿಡು''.

ವಿ. : ೧. ಪಾರಿಜಾತವು ಮಂದಾರ, ಕಲ್ಪವೃಕ್ಷಗಳಂತೆ ಬೇಡಿದ್ದನ್ನು ನೀಡುವ ದೇವವೃಕ್ಷ; ಬಹುಬಗೆಯ ರತ್ನಗಳನ್ನು ನೀಡುವುದು ಅದರ ವಿಶೇಷ ಎಂಬುದನ್ನು ತಿಳಿಸುತ್ತಾ ತಮಗಂತೂ [೧]ಇತರ ರತ್ನಗಳ ಮೇಲೆ ಅಪೇಕ್ಷೆಯಿಲ್ಲ; ಶ್ರೀಕೃಷ್ಣನೆಂಬ ಇಂದ್ರನೀಲಮಣಿಯನ್ನೇ ನೀಡು ಎಂದು ಕೇಳಿಕೊಳ್ಳುವ ಮೂಲಕ ತಾವು ಕಾಮ್ಯಫಲಾಪೇಕ್ಷಿಗಳಲ್ಲ; ನಿಷ್ಕಾಮಭಕ್ತಿಯನ್ನು ಮಾಡುವ ಶ್ರೇಷ್ಠ ಚೇತನರು ಎಂಬ ವಿಶೇಷಾಂಶವನ್ನು ಸೂಚಿಸಿರುವರು; ಸಂಸತ್-ಸಭೆ; ಹರಿನ್ಮಣಿ-ಇಂದ್ರನೀಲಮಣಿ.

೨. ಇದು ಈ ಕೆಳಗಿನ ತೀರ್ಥಪ್ರಬಂಧದ ಶ್ಲೋಕವನ್ನು ಹೋಲುವುದು ಗಮನಾರ್ಹ :

ಯಾಚೇ ವರದರಾಜ ತ್ವಾಂ ಕಾಂಚೀಶೇಹ ನ ಕಿಂಚನ ।
ಚೇತನಾಚೇತನಜಗದ್ವರಂ ತ್ವಾಮೇವ ದೇಹಿ ಮೇ ॥ -(೩./೩.೨)

## ಪಾರಿಜಾತದಿಂದಲೂ ದೊರಕದ ಉತ್ತರ

ತದಂಘ್ರಿಲಾಭೇನ ನಿಜಾವಮಾನ-
ವಿಶಂಕಿಚೇತಾ ನ ದಿಶೇನ್ನಿಜಂ ನಃ ।
ಸಹೋದರೋಽಯಂ ನನು ಸಿಂಧುಪುತ್ರ್ಯಾಃ
ಸಹಸ್ರನೇತ್ರಾರ್ಹಣದೃಪ್ತವೃತ್ತಿಃ ॥ ೨೬ ॥

''ಶ್ರೀಕೃಷ್ಣನ ಪಾದ ತಮಗೆ ಲಭಿಸಿದಲ್ಲಿ ನಾವು ತನ್ನನ್ನು ಉಪೇಕ್ಷಿಸಬಹುದು ಎಂದು ಮನಸ್ಸಿನಲ್ಲಿ ಸಂದೇಹಿಸಿ ಈ ಪಾರಿಜಾತ ನಮಗೆ ಶ್ರೀಕೃಷ್ಣನ ಇರವನ್ನು ತೋರಿಸುತ್ತಿಲ್ಲ; ಇದು ಆ ಸಾಗರಜಾತೆಯಾದ ಮಹಾಲಕ್ಷ್ಮಿಯ ಒಡಹುಟ್ಟಿದ್ದಲ್ಲವೆ! ಇದಕ್ಕೆ ಸಾವಿರಕಣ್ಣಿನ ಇಂದ್ರನು ತನ್ನನ್ನು ಆದರಿಸುವನೆಂಬ ಸೊಕ್ಕು ಬೇರೆ.''

ವಿ. : ೧. ಪಾರಿಜಾತವು ಅವರ ಬೇಡಿಕೆಯನ್ನು ಈಡೇರಿಸದೇ ಹೋದಾಗ ಅದರ ಕಾರಣ-ವನ್ನು ಹೀಗೆ ಉತ್ಪ್ರೇಕ್ಷಿಸಿರುವರು. ಶ್ರೀಕೃಷ್ಣನನ್ನು ತೋರಿದಲ್ಲಿ ಅವನ ಪಾದವನ್ನು ಆರಾಧಿಸುವ ಮೂಲಕ ತಾವು ಕೃತಕೃತ್ಯರಾಗುವುದರಿಂದ ಪುನಃ ಈ ಪಾರಿಜಾತದ ಕಡೆಗೆ ಬರುವ ಅಗತ್ಯವಿರು-

---

ಪಂಚೈತೇ ದೇವತರವೋ ಮಂದಾರಃ ಪಾರಿಜಾತಕಃ ।
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಮ್ ॥ -ಅಮರಕೋಶ

೧. ಏವೇತ್ಯನೇನ ತದತಿರಿಕ್ತರತ್ನಾಶಾರಾಹಿತ್ಯೇನ ವೈರಾಗ್ಯಂ ವ್ಯಜ್ಯತೇ । -ವ್ಯಾ.

ವುದಿಲ್ಲ ಅದರಿಂದ ತನ್ನ ಹಿರಿಮೆಗೆ ಕುಂದುಂಟಾದೀತು ಎಂಬ ಭಾವದಿಂದ ಅದು ತಮಗೆ ಶ್ರೀಕೃಷ್ಣನ ಸುಳಿವನ್ನು ನೀಡುತ್ತಿಲ್ಲ ಎಂಬುದು ಅವರ ಭಾವ.

೨. [೧]ಪಾರಿಜಾತವು ಮಹಾಲಕ್ಷ್ಮಿಯಂತೆ ಕ್ಷೀರಸಮುದ್ರಮಥನಕಾಲದಲ್ಲಿ ಪ್ರಕಟವಾದ ವೃಕ್ಷ. ಎಂದರೆ ಮಹಾಲಕ್ಷ್ಮಿಗೆ ಒಡಹುಟ್ಟಿದ್ದು ಎಂದಾಗುವುದು; ಆದ್ದರಿಂದ ಇದು ಸಹ ಅವಳ ಪಕ್ಷಪಾತಿಯೇ; ಶ್ರೀಕೃಷ್ಣನನ್ನು ತಮಗೆ ತೋರಿಸಿದಲ್ಲಿ ಮಹಾಲಕ್ಷ್ಮಿಯ ಅಪ್ರೀತಿ ಉಂಟಾದೀತು ಎಂಬ ಭಯದಿಂದ ಅದು ತಮಗೆ ಕೃಷ್ಣನ ಇರವನ್ನು ತಿಳಿಸುತ್ತಿಲ್ಲ ಎಂಬುದು ಮತ್ತೊಂದು ಬಗೆಯ ಕಾರಣ;

೩.. ದೇವವೃಕ್ಷವಾದ ಅದನ್ನು ಇಂದ್ರನು ಗೌರವಿಸುವನು. ಅಂತಹ ಉನ್ನತಗೌರವ ಪಡೆದ ಅದಕ್ಕೆ ಸಹಜವಾಗಿಯೇ ಗರ್ವ ಹೆಚ್ಚಿದೆ; ಆದ್ದರಿಂದ ಇಂದ್ರನಿಗಿಂತ ತುಂಬಾ ಕಡಿಮೆಯವರಾದ ತಮ್ಮ ಕೋರಿಕೆಯನ್ನು ಅದು ಮನ್ನಿಸುತ್ತಿಲ್ಲ ಎಂಬುದು ಇನ್ನೊಂದು ಕಾರಣ.

೪. ಇದರಲ್ಲಿ ಪಾರಿಜಾತವು ಕ್ಷೀರಸಾಗರದಲ್ಲಿ ಜನಿಸಿದಂತಹುದು; ಕೇಳಿದ್ದನ್ನು ಕೊಡುವಂತಹುದು; ಇಂದ್ರನಿಂದ ಆದರಿಸಲ್ಪಟ್ಟಿರುವಂತಹುದು ಎಂಬ ಅನೇಕ ವಿಶೇಷಾಂಶಗಳು ಸೂಚಿತವಾಗಿವೆ; ಸಿಂಧುಪುತ್ರೀ - ಸಾಗರಜಾತೆ, ಮಹಾಲಕ್ಷ್ಮಿ.

೫. ಶ್ರೀಕೃಷ್ಣನ ಪಾದದ ಭಜನೆ ಪಾರಿಜಾತಾದಿಗಳ ಪ್ರಾಪ್ತಿಗಿಂತಲೂ ಅತ್ಯಂತ ಮಿಗಿಲಾದುದು ಎಂಬ [೨]ವಿಶೇಷಾಂಶ ಇಲ್ಲಿ ಸೂಚಿತ: ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ।-ಭಾಗ.(೧೦/೩೭/೨)

### ಶ್ರೀಕೃಷ್ಣನ ಪ್ರಾರ್ಥನೆ

ಗೀತೇನ ತೇ ಗೀಷ್ಪತಿಶರ್ವಪೂರ್ವ-
ಗೀರ್ವಾಣವರ್ಯಾಃ ಕಿಲ ನಮ್ರಭಾವಮ್ ।
ನೀತಾಸ್ತದಸ್ಮಾನ್ ಸ್ವವಶೇ ವಿಧಾತು-
ಮೇತಾವತಾ ಕಿಂ ಕಮನೀಯಮೂರ್ತೇ ॥ ೨೭ ॥

---

೧. ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದ್ರನವತ್ ।
ಸಹಿತಂ ಸಮಾದಿಪದತಾನನಗೈಃ ಪರಿಭೂಷಯಂತಿ ತದಹೋ ಋತವಃ ॥ - ಮಧ್ವವಿಜಯ (೧೧/೩೮)
ಪಂಚೈತೇ ದೇವತರವೋ ಮಂದಾರಃ ಪಾರಿಜಾತಕಃ ।
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಮ್ ॥ - ಇತಿ

೨. ಪಾರಿಜಾತಾದಪಿ ಶ್ರೀಕೃಷ್ಣಾಂಘ್ರೇಃ ಸಹಸ್ರಗುಣಿತಫಲದಾತೃತ್ವಮಸ್ತೀತಿ ಭಾವಃ । -ವ್ಯಾ.
ಕಾಮಧೇನು ಸುಕಲ್ಪತರು ಚಿಂತಾಮಣಿಗಳಮರೇಂದ್ರಲೋಕದಿ
ಕಾಮಿತಾರ್ಥಗಳೀವವಲ್ಲದೆ ಸೇವೆಮಾಳ್ಪರಿಗೆ ।
ಶ್ರೀಮುಕುಂದನ ಪರಮಮಂಗಳನಾಮ ನರಕಸ್ಥರನು ಸಲಹಿತು
ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹದು ॥ -ಹರಿಕಥಾಮೃತಸಾರ(೨/೨೧)

"ಎಲೈ ಮೋಹನಾಂಗನಾದ ಶ್ರೀಕೃಷ್ಣ ! ನಿನ್ನ ಗಾನಕ್ಕೆ ವಾಕ್ಪತಿಯಾದ ಬ್ರಹ್ಮ, ಶಿವ ಮೊದಲಾದ ದೇವಶ್ರೇಷ್ಠರೂ ಸಹ ಮಣಿದಿರುವರು; ನಮ್ಮನ್ನು ನಿನ್ನ ವಶದಲ್ಲಿರಿಸಿಕೊಳ್ಳಲು ಇದೆಲ್ಲ ನಿನಗೆ ಬೇಕಿತ್ತೆ?".

ವಿ. : ೧. ಶ್ರೀಕೃಷ್ಣನ ಗಾನ ಬ್ರಹ್ಮಾದಿದೇವತೆಗಳೂ ಭಕ್ತಿಭಾವದಿಂದ ಗೌರವಿಸುವ ಅಪೂರ್ವತೆಯಿಂದ ಕೂಡಿತ್ತು ಎಂಬ [೧] ಭಾಗವತದ ನಿರೂಪಣೆಯನ್ನು ಆಧರಿಸಿದ ವಿವರ ಇದಾಗಿದೆ.

೨. ಕೇವಲ ಗಾನದಿಂದಲೇ [೨] ಪರವಶರನ್ನಾಗಿಸುವ ಶ್ರೀಕೃಷ್ಣನಿಗೆ ಅದೃಶ್ಯನಾಗುವುದು, ದೂರ ತೆರಳುವುದು, ಮೊದಲಾದ ಇತರ ಕಾರ್ಯಗಳು ಅನಗತ್ಯ ಎಂಬುದು ಇಲ್ಲಿಯ ಭಾವ; ಗೀಷ್ಪತಿ - ವಾಣೀಪತಿ, ಬ್ರಹ್ಮ; ಗೀರ್ವಾಣ - ದೇವತೆ; ಕಮನೀಯ - ಮನೋಹರ.

೩. ಕಿಂ ಎಂಬುದು ಆಕ್ಷೇಪಾರ್ಥದ ಪ್ರಯೋಗ :

ಆಕ್ಷಿಪ್ಯತೇ ಕಿಮಿತ್ಯೇತತ್ ಯತೋಽಲ್ಪಫಲತಾ ಭವೇತ್ ।
ವಸ್ತುನೋ ಯತ್ರ ಚಾಲ್ಪತ್ವಂ ಪುಂಸೋ ವಾ ನೇತಿ ಚೋಚ್ಯತೇ ॥

- ಪ್ರಕಾಶಸಂಹಿತಾ (ಭಾಗವತತಾತ್ಪರ್ಯ)

### ಮುರಳಿಗೆ ಬೆದರಿಕೆ

ಮುರಲಿ ಮುರರಿಪುಂ ತಂ ಮೋಹನಂ ಶಂಸ ಹಂಸಾ-
ಭ್ಯುದಯಮುದಯದಿಂದುಶ್ರೀಮುಖಂ ವೀತಶೋಕಮ್ ।
ವಿರಹದಹನಭಾಸಾ ನಿರ್ದಹಾಮೋಽತ್ರ ನೋ ಚೇತ್
ತರುಣಿ ಕುಲಮಿದಂ ತೇ ಹಂತ ವೃಂದಾವನಾಂತೇ ॥ ೨೮ ॥

"ಎಲೈ ಮುರಳಿಯೇ ! ಪರಮಹಂಸರಿಗೂ ಉನ್ನತಿ ನೀಡುವ, ಉದಿಸುವ ಚಂದ್ರಕಾಂತಿಯ ಚೆಲುಮೊಗದ, ಶೋಕರಹಿತನಾದ ಆ ಮುರವೈರಿಯಾದ ಶ್ರೀಕೃಷ್ಣನನ್ನು ನಮಗೆ ತಿಳಿಸಿಕೊಡು. ತರುಣಿ ! ಇಲ್ಲವಾದಲ್ಲಿ ನಾವು ಅಗಲುವಿಕೆಯ ಅಗ್ನಿಜ್ವಾಲೆಯಿಂದ ವೃಂದಾವನದಲ್ಲಿರುವ ನಿನ್ನ ಈ ಕುಲವನ್ನೇ ಸುಟ್ಟುಹಾಕುವೆವು".

ವಿ. : ೧. ಕೋರಿಕೆಯ ತಂತ್ರವನ್ನು ಕೈಬಿಟ್ಟು ಬೆದರಿಕೆಯ ತಂತ್ರಕ್ಕೆ ಗೋಪಿಯರು ಕೈಹಾಕಿರುವುದು ಇಲ್ಲಿ ಸ್ಪಷ್ಟ; ಇಂದು - ಚಂದ್ರ; ಇಂದುಶ್ರೀ - ಚಂದ್ರಕಾಂತಿ.

---

೧. ಕಿಲೇತ್ಯನೇನ "ಶರ್ವಶಕ್ರಪರಮೇಷ್ಠಿಪುರೋಗಾಃ ಕವಯ ಆನತಕಂಧರಗಾತ್ರಾಃ" ಇತಿ ಪುರಾಣಪ್ರಸಿದ್ಧಿಂ (ಭಾಗ. ೧೦/೩೩/೧೫) ದ್ಯೋತಯತಿ । -ವ್ಯಾ.

೨. ತತ್ ತಸ್ಮಾತ್ ಕಾರಣಾತ್ ಅಸ್ಮಾನ್ ಸ್ವವಶೇ ವಿಧಾತುಂ ಕರ್ತುಮೇತಾವತಾ ಅದೃಶ್ಯತ್ವದೂರಗಮನಾದಿನಾ ಕಿಂ ಪ್ರಯೋಜನಮ್ । -ವ್ಯಾ.

೨. ಶ್ರೀಕೃಷ್ಣನನ್ನು ತಾವು ಹಾಗೆ ಬಯಸಲು ಅವನು ಪರಮಹಂಸರಿಗೂ ನಲಿವು ನೀಡುವ ಮಹನೀಯ; ಚಂದ್ರನ ಕಾಂತಿಯಂತಹ ಸುಂದರಮುಖದವನು; ಲೋಕಮೋಹಕ, ಸದಾ ದುಃಖದೂರ ಮೊದಲಾದ ಕಾರಣಗಳನ್ನು ಇಲ್ಲಿ ನೀಡಿರುವುದು ಗಮನಾರ್ಹ.

೩. ಇಲ್ಲಿ ಮುರಲಿಯ ಕುಲ ಎಂದರೆ ಬಿದಿರುಮೆಳೆಗಳು ಎಂದರ್ಥ. ಅವು ಕಾಡ್ಗಿಚ್ಚಿಗೆ ಸುಟ್ಟುಬೂದಿಯಾಗುವುದು ಪ್ರಸಿದ್ಧ; ತಮ್ಮನ್ನು ಕಾಡುತ್ತಿರುವ ಶ್ರೀಕೃಷ್ಣನ ಅಗಲುವಿಕೆಯ ವಹ್ನಿಯಿಂದಲೇ ಅದನ್ನು ಸುಟ್ಟುಹಾಕುವುದಾಗಿ ಅವರ ಬೆದರಿಕೆ[೧].

೪. ಇದು ರಾಮಾಯಣದ ಸುಂದರಕಾಂಡದಲ್ಲಿ ಹನುಮಂತನು ರಾವಣನಿಗೆ ನೀಡುವ ಎಚ್ಚರಿಕೆಯ ಮಾತಿನಂತಿರುವುದು ಗಮನಾರ್ಹ: ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ। ಮ.ಭಾ.ತಾ.ನಿ.(೭/೩೯).

೫. ಇದರಲ್ಲಿ ಶ್ರೀಕೃಷ್ಣನ ಬಗ್ಗೆ ಬಲ್ಲ ಜ್ಞಾನಿಗಳೂ ಅವನ ಹಿರಿಮೆಯನ್ನು ಇತರರಿಗೆ ಉಪದೇಶಿಸುವ ಮೂಲಕ ಉಪಕಾರ ಮಾಡಬೇಕು; ಇಲ್ಲವಾದಲ್ಲಿ ಅವರ ಜ್ಞಾನಾದಿ ಸಾಧನಗಳು ನಿರರ್ಥಕವೆನ್ನಿಸುವವು ಎಂಬ ಸಂದೇಶವೂ ಅಡಗಿದೆ; ವಿರಹದಹನ - ವಿರಹಾಗ್ನಿ.

### ವೃಂದಾವನದ ಪ್ರಾರ್ಥನೆ

**ಹೇ ವೃಂದಾವನ ಕೃಷ್ಣವರ್ತ್ಮ ವದ ನೋ ನೋ ಚೇತ್ ಪುಮಾಂಸಂ ಹಿ ತಂ**
**ದಾಸ್ಯಾಮಃ ಪ್ರಿಯವಿಪ್ರಯೋಗಜನಿತಂ ತೇನ ತ್ವದೀಯೋದಯೈಃ।**
**ಸಾಕಂ ಪ್ರಜ್ವಲಿತೇಽಂಗ ಗೋಪಲಲನಾಭಾಸ್ವಚ್ಚಕೋರೀಚಯೇ**
**ಲೋಕೇ ನಾಮ ನಿರರ್ಥಕಂ ತವ ಪುನಃ ಕೋ ವಾ ಕವಿಃ ಕೀರ್ತಯೇತ್ ॥೨೯॥**

"ಎಲೈ ವೃಂದಾವನವೇ! ನಮಗೆ ಆ ಕೃಷ್ಣನ ಹಾದಿಯನ್ನು ತಿಳಿಸು; ಇಲ್ಲವಾದಲ್ಲಿ ನಾವು ಪ್ರಿಯನಾದ ಅವನ ವಿಯೋಗದಿಂದ ಹುಟ್ಟಿರುವ ಪುರುಷನಾದ ಆ ಅಗ್ನಿಯನ್ನೇ ನಿನಗೆ ನೀಡಿಬಿಡುವೆವು; ಅದರಿಂದ ನಿನ್ನಲ್ಲಿನ ಸಮಸ್ತ ಸಂಪತ್ತಿನೊಂದಿಗೆ, ಗೋಪಿಯರು ಎಂಬ ಹೊಳೆಯುವ ಚಕೋರಪಕ್ಷಿಗಳ ಹಿಂಡು ಸಹ ಉರಿದುಹೋದಾಗ ನಿನ್ನ ನಿರರ್ಥಕವಾದ ಹೆಸರನ್ನು ಲೋಕದಲ್ಲಿ ಯಾವ ಕವಿಯು ತಾನೆ ಹಾಡಿ ಹೊಗಳಿಯಾನು?".

ವಿ. : ೧. ಕೃಷ್ಣವರ್ತ್ಮ ಎಂಬ ಪದಕ್ಕೆ ಕೃಷ್ಣನ ಹಾದಿ ಎಂಬುದು ನಪುಂಸಕಲಿಂಗದ ಅರ್ಥವಾದರೆ, ಧೂಮಧ್ವಜನಾದ ಅಗ್ನಿ ಎಂಬುದು ಪುಲ್ಲಿಂಗದ ಅರ್ಥ. ಇದರಿಂದ ಕೃಷ್ಣನ ಹಾದಿ ತಿಳಿಸದಿದ್ದಲ್ಲಿ ನಿನ್ನನ್ನು ಬೆಂಕಿಗೆ ಆಹುತಿಯಾಗಿ ನೀಡುವೆವು ಎಂಬ ಭಾವ ಸ್ಫುಟಪಡುವುದು (ಶ್ಲೇಷಾಲಂಕಾರ);

---

೧. ತ್ವಂ ತು ಸದಾ ಶ್ರೀಕೃಷ್ಣಸಂಯೋಗಿನೀ ನಾಸ್ಮಾಭಿಶ್ಚಾಲಯಿತುಮಪಿ ಶಕ್ಯಾ ಕುಲನಾಶಭಯಾದೇವ ಶಂಸೇತಿ ಭಾವಃ। -ವ್ಯಾ.

೨. ಒಬ್ಬನ ಕೀರ್ತಿ ಬೆಳಗುವುದು ಅದನ್ನು ಕವಿಯೊಬ್ಬ ಕೊಂಡಾಡಿದಾಗ ಮಾತ್ರ; ವೃಂದಾವನದ ಕೀರ್ತಿ ಬೆಳಗುವುದು ಅದರಲ್ಲಿಯ ಚಕೋರಪಕ್ಷಿಗಳ ಧ್ವನಿಗೆ; ವೃಂದಾವನವು ಭಸ್ಮವಾದಾಗ ಅದರಲ್ಲಿನ ಗೋಪಿಯರೆಂಬ ಚಕೋರಗಳು ಅಳಿಯುವುದರಿಂದ ವೃಂದಾವನವನ್ನು ಹೊಗಳುವ ಕವಿಗಳೇ ಇಲ್ಲದಂತಾಗುವುದು; ಅದರಿಂದ ವೃಂದಾವನದ ಕೀರ್ತಿ ನಶಿಸುವುದು ಎಂದರ್ಥ.

೩.. ಇದು ಸಹ ಹಿಂದಿನ ಶ್ಲೋಕದಲ್ಲಿ ಬಂದಿರುವಂತೆ ಮತ್ತೊಂದು ಬಗೆಯ ಬೆದರಿಕೆಯ ತಂತ್ರ ಎಂದು ತಿಳಿಯಬೇಕು.

೪. ವನವೆಂಬುದು ಸಾರ್ಥಕವಾಗುವುದು ವೃಕ್ಷಗಳಿದ್ದಾಗ; ಅದರಲ್ಲೂ ಉರಿಯುವ ಅಗ್ನಿಯಿಂದ ವೃಕ್ಷಗಳೇ ನಾಶವಾದಲ್ಲಿ ವನವೆಲ್ಲಿ ಉಳಿದೀತು? ಆದ್ದರಿಂದ ವೃಂದಾವನದ ಸಂರಕ್ಷಣೆಗೆ[೧] ಗೋಗೋಪಗೋಪೀವೃಂದದ ಉಳಿವು ಅತ್ಯಗತ್ಯ ಎಂಬ ಭಾವವೂ ಇಲ್ಲಿದೆ.

೫. ಇದರಿಂದ ಭಗವನ್ಮಹಿಮೆ ಪ್ರಕಟವಾಗುವುದು ಜ್ಞಾನಿಗಳ ವಚನಗಳಿಂದ; ಆದ್ದರಿಂದ ಜ್ಞಾನಿಗಳ ಸಂರಕ್ಷಣೆ ಅತ್ಯಗತ್ಯವಾದ ಮಹತ್ಕಾರ್ಯ ಎಂಬ ಸಂದೇಶವು ಸಹ ಸೂಚಿತ.

### ವೃಕ್ಷಗಳ ಬಗ್ಗೆ ಗೋಪಿಯರ ಸಲ್ಲಾಪ

**ಸಖಿ ತರುರಯಮಜ್ಞೋ ನೈವ ಜಾನಾತಿ ಕೃಷ್ಣಂ**
**[೨]ಕಿಮಿತಿ ವಿಧಿನಿದೇಶಾಜ್ಞಾನಶೂನ್ಯೋ ಹಿ ವೃಕ್ಷಃ।**
**ಯದುತಿಲಕವಿಯೋಗಾದಸ್ತು ಮೇ ಜ್ಞಾನಹಾನಿ-**
**ರ್ಗತವಿರಹಭಯಸ್ಯ ಜ್ಞಾನಹಾನಿಃ ಕುತೋಽಸ್ಯ ॥ ೩೦ ॥**

(ಒಬ್ಬ ಗೋಪಿ) ''ಗೆಳತಿ ! ತಿಳುವಳಿಕೆ ಇಲ್ಲದ ಈ ವೃಕ್ಷವು ಶ್ರೀಕೃಷ್ಣನನ್ನು ಸರ್ವಥಾ ಅರಿತಿಲ್ಲ''; (ಇನ್ನೊಬ್ಬ ಗೋಪಿ) ''ಅದು ಹೇಗೆ?'' (ಮೊದಲ ಗೋಪಿ) ''ಬ್ರಹ್ಮನ ಆದೇಶದಿಂದಾಗಿ ಈ ವೃಕ್ಷವು ಜ್ಞಾನಶೂನ್ಯವಾಗಿದೆ''; (ಎರಡನೆಯ ಗೋಪಿ) ''ಯದುಕುಲತಿಲಕನಾದ ಶ್ರೀಕೃಷ್ಣನ ಅಗಲುವಿಕೆಯಿಂದ ನನಗೆ ಜ್ಞಾನಹಾನಿಯಾಗಲಿ; ಜ್ಞಾನವೇ ಇಲ್ಲದ ಇದಕ್ಕೆ ವಿರಹದ ಭಯವೂ ಇಲ್ಲ, ಎಂದ ಮೇಲೆ ಇದಕ್ಕೆಂತು ಜ್ಞಾನಹಾನಿಯಾದೀತು?

ವಿ. : ೧. ಗೋಪಿಯರಿಬ್ಬರ ಸಂಭಾಷಣೆಯ ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣನ ಮಹಿಮೆಯು ನಿರೂಪಿತವಾಗಿದೆ.

---

೧. ಪ್ರಜ್ವಲಿತೇ ಸತಿ ಪುನಸ್ತವ ನಿರರ್ಥಕಂ ಅರ್ಥರಹಿತಂ ವೃಕ್ಷಾದಿದಾಹೇ ಸತಿ ಬಹುವೃಕ್ಷಸಮೂಹಾತ್ಮಕವನತ್ವಾಯೋಗಾದಿತಿ ಭಾವಃ। -ವ್ಯಾ.

೨. ಕಿಂ ತೇ ಕೃತಂ ಕ್ಷಿತಿ ತಪೋ ಬತ ಕೇಶವಾಂಘ್ರಿಸ್ಪರ್ಶೋತ್ಸವೋತ್ಪುಲಕಿತಾಂಗರುಹೈರ್ವಿಭಾಸಿ।
ಅಪ್ಯಂಘ್ರಿಸಂಭವ ಉರುಕ್ರಮವಿಕ್ರಮಾದ್ ವಾ ಆಹೋ ವರಾಹವಪುಷಾ ಪರಿರಂಭಣೇನ॥
-ಭಾಗ.(೧೦/೨೮/೧೦)

೨. ವೃಕ್ಷವು ಜ್ಞಾನಶೂನ್ಯವಾಗಿರುವುದು ಅದು ಜಡ(ಸ್ಥಾವರಜೀವಿ)ವಾದ್ದರಿಂದ ಜಡಕ್ಕೆ ಜ್ಞಾನವಿರದು ಎಂಬುದು ವಿಧಿನಿಯಮ; ಆದರೆ ಗೋಪಿಯು ಶ್ರೀಕೃಷ್ಣನ ವಿರಹದ ನೋವಿನಿಂದಾಗಿ ಎಚ್ಚರತಪ್ಪಿರುವುದರಿಂದ ತಾನೂ ಸಹ ಜ್ಞಾನಶೂನ್ಯಳೇ ಎನ್ನುವ ಮೂಲಕ ಶ್ರೀಕೃಷ್ಣನ ಅರಿವಿಲ್ಲದವರು ಜಡಗಳಂತಾಗಿರುವ ನಿರ್ಭಾಗ್ಯರು ಎಂಬ ಭಾವ ನಿರೂಪಿತವಾಗಿದೆ.

೩. ಶ್ರೀಕೃಷ್ಣನ ಅರಿವೊಂದೇ ಜ್ಞಾನ ; ಅದಲ್ಲದೆ ಇತರ ವಸ್ತುಗಳ ಬಗೆಗಿನ ಸರ್ವಜ್ಞತ್ವವೂ ಸಹ ಜಡತ್ವದಂತೆಯೇ ಸರಿ ಎಂಬ ಇಲ್ಲಿಯ ತತ್ತ್ವ ಅತ್ಯಂತ ಮಾರ್ಮಿಕವಾದುದು: ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ। - (ವಿಷ್ಣುತತ್ತ್ವವಿನಿರ್ಣಯ)

### ಚಂದ್ರನ ಬಗ್ಗೆ ಗೋಪಿಯರ ಸಲ್ಲಾಪ

ಸಖಿ ಕಥಯ ಸ ಕೋಽಯಂ ತನ್ವಿ ಪೀಯೂಷರಶ್ಮಿ-
ರ್ದಿಶತಿ ಕಥಮುದಗ್ರಂ ತರ್ಹಿ ಮೇ ಕಾಲಕೂಟಮ್ ।
ಹರಿರಿವ ಪದಮಾತ್ರಶ್ಲಾಘ್ಯಧರ್ಮಾಃ ಸ ನೂನಂ
ವಹತಿ ಗರಮಗೌರಂ ಹ್ರಾಸಭಾಗೇಷ ಚಂದ್ರಃ ॥ ೩೧ ॥

(ಒಬ್ಬ ಗೋಪಿ)"ಎಲೈ ಗೆಳತಿ! ಇವನಾರು?"; (ಇನ್ನೊಬ್ಬ ಗೋಪಿ)"ಸುಂದರಿ, ಇವನು ಅಮೃತಕಿರಣನಾದ ಚಂದ್ರ"; (ಮೊದಲಿನ ಗೋಪಿ) "ಹಾಗಿದ್ದಲ್ಲಿ ಇವನೇಕೆ ನನಗೆ ತೀಕ್ಷ್ಣವಾದ ಕಾಲಕೂಟವನ್ನು ನೀಡುತ್ತಿರುವನು?"; (ಇನ್ನೊಬ್ಬ ಗೋಪಿ)"ಅವನು ಹರಿಯಂತೆ ಹೆಸರಿನಿಂದ ಮಾತ್ರವೇ ಪ್ರಶಂಸೆಗೆ ಅರ್ಹನಾದವನು; ಇವನು ತನ್ನಲ್ಲಿ ಬಿಳಿಯಲ್ಲದ ವಿಷವನ್ನು ಹೊಂದಿರುವನು; ಅದಕ್ಕೆಂದೇ ಈ ಚಂದ್ರನು ಹ್ರಾಸವನ್ನು ಹೊಂದುತ್ತಿರುವನು".

ವಿ. : ೧. ಶ್ರೀಕೃಷ್ಣನ ವಿರಹದಿಂದ ಚಂದ್ರನ ಅಮೃತಕಿರಣಗಳೂ ಸಹ ಗೋಪಿಯರ ಪಾಲಿಗೆ ಕಾಲಕೂಟವಿಷದಷ್ಟು ದುಃಖಕರವಾಗಿದ್ದವು ಎಂಬುದು ಇಲ್ಲಿಯ ಭಾವ; ಗರ - ವಿಷ.

೨. ಚಂದ್ರನಲ್ಲಿಯ ಕಳಂಕವನ್ನು ಅವನಲ್ಲಿಯ ಈ ತೆರನಾದ ವಿಷಕ್ಕೆ ಸಂಕೇತ ಎಂಬ ಇಲ್ಲಿಯ ಧ್ವನಿ ಅತ್ಯಂತ ರೋಚಕವಾದುದು; ಪೀಯೂಷ-ಅಮೃತ; ಪೀಯೂಷರಶ್ಮಿ - ಅಮೃತಕಿರಣ.

### ಯಾಮಿನಿಯ ಪ್ರಾರ್ಥನೆ

ಧನ್ಯೇ ಯಾಮಿನಿ ಕಾಮಿನೀವ ಶಶಿನಂ ಸಾನಂದಮಾಚುಂಬ್ಯ ಯಾ
ಮಾನ್ಯೈಸ್ತಸ್ಯ ಕರೈಃ ಸುಧಾರಸಧರೈರಾಲಿಂಗಿತಾಂಗೀ ಸದಾ ।

ವಿಶ್ಲೇಷಾಚ್ಚಕಿತಾಽನುಯಾಸಿ ಬತ ತಂ ದೇಶಾಂತರೇ ಪ್ರಸ್ಥಿತಂ
ಕೃಷ್ಣಾಯಾಧ್ವನಿ ಶಂಸ ಕಂಜನಯನಾಯಾಸ್ಮನ್ಮನೋವೇದನಾಮ್[೧] ॥ ೩೨ ॥

"ಎಲೈ ಕೃತಾರ್ಥೆಯಾದ ರಜನಿ ! ನೀನು ಕಾಮುಕಸ್ತ್ರೀಯಂತೆ ಆನಂದದಿಂದ ಚಂದ್ರನನ್ನು ಚುಂಬಿಸಿರುವಿ. ಅವನ ಮಾನನೀಯವಾದ ಅಮೃತಹೊತ್ತಿರುವ ಕೈಗಳಿಂದ ಸದಾ ಆಲಿಂಗಿತ ದೇಹಳಾಗಿರುವಿ. ದೇಶಾಂತರಕ್ಕೆ ಹೊರಟು ನಿಂತಿರುವ ಅವನ ಅಗಲುವಿಕೆಗೆ ಅಂಜಿದ ನೀನು ಅವನೊಂದಿಗೆ ತೆರಳಲು ಹೊರಟಿರುವಿ. ಮಾರ್ಗದಲ್ಲಿ ಕಮಲನೇತ್ರನಾದ ಶ್ರೀಕೃಷ್ಣನಿಗೆ ನಮ್ಮ ಮನೋವ್ಯಥೆಯನ್ನು ತಿಳಿಸಿಬಿಡು".

ವಿ. : [೨]ರಾತ್ರಿಯಲ್ಲಿ ಚಂದ್ರನಿರುವುದನ್ನು ಇಲ್ಲಿ ಕಾವ್ಯಮಯವಾಗಿ ನಿರೂಪಿಸಿರುವರು. ಚಂದ್ರನು ರಾತ್ರಿಯಲ್ಲಿ ಎಡೆಬಿಡದೆ ಇರುವುದನ್ನು ಅವನ ಆಲಿಂಗನ ಎಂದು ಕರೆದಿರುವರು. ಚಂದ್ರನೊಂದಿಗೆ ರಾತ್ರಿಯು ತೆರಳುವುದನ್ನು ಅವನ ಅಗಲುವಿಕೆಯನ್ನು ಸಹಿಸದೆ, ಅವಳು ಅವನನ್ನು ಹಿಂಬಾಲಿಸಿದಂತಿದೆ ಎಂದಿರುವರು; ಯಾಮಿನೀ-ರಾತ್ರಿ; ಕಂಜನಯನ-ಪುಂಡರೀಕಾಕ್ಷ.

### ಯಾಮಿನಿಯ ದೋಷ

ನಿಶಾಚರಾಃ ಪ್ರಾಣಹರಾಶ್ಚ ಚೋರಾ-
ಶ್ಚರಂತಿ ಯಸ್ಯಾಂ ನ ಬುಧಾಃ ಸುಬೋಧಾಃ ।
ಸ್ವಯಂ ಚ ಕೃಷ್ಣಾಪ್ರಿಯಸೌಭಗಾ ಯಾ
ಕಿಮಸ್ಮದಾನಂದಕರೀಯಮಾರ್ಯಾಃ ॥ ೩೩ ॥

ಎಲೈ ಗೋಪಿಯರೇ ! ಈ ರಾತ್ರಿಯಲ್ಲಿ ಸಂಚರಿಸುವುದು ರಾಕ್ಷಸರು, ಕೊಲೆಗೆಡುಕರು ಹಾಗೂ ಕಳ್ಳರೇ ಹೊರತು ಬುದ್ಧಿಶಾಲಿಗಳಾದ ಜ್ಞಾನಿಗಳಲ್ಲ. ಕೃಷ್ಣಪಕ್ಷದಲ್ಲಿ ಸ್ವತಃ ರೋಚಕವೆನ್ನಿಸದ ಕಾಂತಿಯ ಈ ರಾತ್ರಿಯು ನಮಗೆಂತು ಆನಂದವನ್ನುಂಟುಮಾಡೀತು?

ವಿ. : ೧. ಕೃಷ್ಣಪಕ್ಷದಲ್ಲಿ ಬೆಳದಿಂಗಳಿರದ ಕಾರಣದಿಂದ ಆ ರಾತ್ರಿಗಳು ಆಹ್ಲಾದಕರವೆನ್ನಿಸವು. ಅದರಂತೆ ಕೃಷ್ಣನ ಪಕ್ಷದಲ್ಲಿ ಶೋಭಿಸದ ಈ ರಾತ್ರಿ ತಮಗೆ ಕೃಷ್ಣನ ಬಗ್ಗೆ ಸುಳಿವು ನೀಡಿ ಸಂತೋಷಪಡಿಸುವುದು ಅಶಕ್ಯ ಎಂಬುದು ಇಲ್ಲಿಯ ಧ್ವನಿ.

೨. ಕೃಷ್ಣಪಕ್ಷಕ್ಕೆ ವಿರೋಧಿಯಾದ ಈ ಸುಂದರರಾತ್ರಿಯು ತಮಗೆ ಆನಂದನೀಡುವುದು ಅಸಾಧ್ಯ ಎನ್ನುವ ಮೂಲಕ ಕೃಷ್ಣಪಕ್ಷದಲ್ಲಿ ಶೋಭಿಸದವರು ಎಂದೂ ಇತರರಿಗೆ ಆನಂದನೀಡಲಾರರು ಎಂಬ ಸಂದೇಶವನ್ನೂ ಸೂಚಿಸಿರುವರು.

---

೧. ಅತ ಏವ ಭ್ರಮಾಲಂಕಾರಸ್ಯ ವ್ಯಂಗ್ಯತಾ । -ವ್ಯಾ.

೨. ಅನೇನ ಶ್ರೀಕೃಷ್ಣವಿರಹಾನ್ನಿತಂಬಗೌರವೇಣ ಗಮನೇ ಆಯಾಸವಿಶೇಷಾಚ್ಚ ಅತೀತಾ ಅಲ್ಪಾಽಪಿ ರಾತ್ರಿರ್ಬಹ್ವೀ ಉರ್ವರಿತಾ ಬಹ್ವೀ ಅಪ್ಯಲ್ಪೀಯಸೀತಿ ತಾಸಾಂ ಭ್ರಮೋ ವ್ಯಜ್ಯತೇ । -ವ್ಯಾ.

**ಯಮುನೆಯ ಪ್ರಾರ್ಥನೆ**

**ಕಾಲಿಂದಿ ತಂ ಕಥಯ ಕಂಜದಲಾಯತಾಕ್ಷಂ**
**ನಾಮ್ನಾ ಗುಣೇನ ಸದೃಶೀ ನನು ನಂದಸೂನೋಃ।**
**ಬ್ರಹ್ಮಣ್ಯದೇವಮೃಷಯಃ ಸಖಿ ಶಾಂತಗಮ್ಯಂ**
**ಬ್ರಹ್ಮಹ್ರದೇ ಕೃತಗೃಹಂ ಬ್ರುವತೇ ಭವತ್ಯಾಃ॥ ೩೪ ॥**

"ಎಲೈ ಗೆಳತಿಯಾದ ಯಮುನೆಯೇ ! ನೀನು ಆ ನಂದನ ಮಗನಾದ ಆ ಶ್ರೀಕೃಷ್ಣನಿಗೆ ಹೆಸರಿನಲ್ಲೂ ಗುಣದಲ್ಲೂ ಅನುರೂಪಳಾದವಳು; ಅಲ್ಲವೇ ! ತಾವರೆಯ ದಳದಂತೆ ವಿಶಾಲನೇತ್ರದ ಅವನು ಎಲ್ಲಿರುವನು? ತಿಳಿಸು. ಬ್ರಾಹ್ಮಣರಿಗೆ ಪ್ರಿಯನೂ, ಶಾಂತರಿಗೆ ದೊರೆ- ಯುವವನೂ, ಆದ ಅವನು ನಿನ್ನ ಬ್ರಹ್ಮಹ್ರದದಲ್ಲಿ ನೆಲೆಸಿದವನು ಎಂಬುದಾಗಿ ಋಷಿಗಳು ಹೇಳುವರು".

ವಿ. : ೧. ಯಮುನೆಗೆ ಮತ್ತೊಂದು ಹೆಸರು ಶ್ರೀಕೃಷ್ಣಾ ಎಂದು; ಇದರಿಂದ ಅದು ಹೆಸರಿನೊಂದಿಗೆ ಶ್ರೀಕೃಷ್ಣನ ಸಾದೃಶ್ಯವನ್ನು ಹೊಂದಿದಂತಾಯಿತು; ಅಲ್ಲದೆ ಅದರ ನೀರು ಕಪ್ಪು; ಅದು ತ್ರಿವೇಣೀ ಸಂಗಮದಲ್ಲಿ ಶುಭ್ರವರ್ಣದ ಗಂಗೆಯೊಂದಿಗೆ ಸೇರುವ ಸಮಯದಲ್ಲಿ ಸ್ಪಷ್ಟವಾಗಿ ಗೋಚರವಾಗುವುದು; ಶ್ರೀಕೃಷ್ಣನದೂ ಸಹ ಕೃಷ್ಣವರ್ಣ. ಅದರಿಂದ ಬಣ್ಣದಲ್ಲೂ ಅದು ಅವನನ್ನು ಹೋಲುವುದು; ಹೀಗೆ ಹೆಸರು ಹಾಗೂ ಬಣ್ಣ ಎರಡರಲ್ಲೂ ಶ್ರೀಕೃಷ್ಣನ ಸಾದೃಶ್ಯಹೊಂದಿರುವುದರಿಂದ ಅದಕ್ಕೆ ಶ್ರೀಕೃಷ್ಣನ ಇರುವಿಕೆ ತಿಳಿದಿದೆ ಎಂದು ಸ್ಫುಟಪಡುವುದು.

೨. [1]ಬ್ರಹ್ಮಹ್ರದ ಎಂಬುದು ಶ್ರೀಕೃಷ್ಣನು ಅಕ್ರೂರನಿಗೆ ವಿಶೇಷದರ್ಶನ ನೀಡಿದಂತಹ ಯಮುನೆಯ ವಿಶೇಷಸ್ಥಳ; ಕಾಲಿಂದೀ – ಯಮುನಾ.

**ಯಮುನೆಯು ಮಾಡುವ ಅಪೂರ್ವ ಉಪಕಾರ**

**ಕಾಲಿಂದಿ ತ್ವಮಘಾನ್ವಿತಾನಪಿ ಸತಃ ಕೃತ್ವಾ ಪವಿತ್ರಾತ್ಮನೋ**
**ಗಂತುಂ ನೈವ ಕದಾಪಿ ಮುಂಚಸಿ ತವ ಭ್ರಾತುರ್ನಿಕೇತಂ ಪ್ರತಿ।**
**ಕಿಂತು ಕ್ಷೀರಪಯೋಽಬ್ಧಿವಾಸನಿರತಾನ್ ಪ್ರೀತಾ ಕರೋಷ್ಯಾಶ್ರಿತಾನ್**
**ಸ್ನಿಗ್ಧೇ ಭರ್ತರಿ ಕಾಮಿನೀಜನರುಚಿಸ್ತತ್ಕ್ಷ ಏವ ಹ್ಯಲಮ್[2] ॥ ೩೫ ॥**

---

೧. ಬ್ರಹ್ಮಹ್ರದೇ ಬ್ರಹ್ಮಹ್ರದಾಖ್ಯತೀರ್ಥೇ ಅಕ್ರೂರಾಯ ಶ್ರೀಕೃಷ್ಣಃ ಸ್ವಾತ್ಮಾನಂ ಯತ್ರಾದರ್ಶಯತ್ ತಸ್ಯ ನಾಮ ಬ್ರಹ್ಮಹ್ರದ ಇತಿ। -ವ್ಯಾ.

೨. ಈ ಶ್ಲೋಕವು ಯಥಾವತ್ತಾಗಿ ಶ್ರೀವಾದಿರಾಜರ ತೀರ್ಥಪ್ರಬಂಧ(೭/೩.೫)ದಲ್ಲಿಯೂ ಕಂಡುಬರುವುದು; ಅದಕ್ಕೂ ಸಹ ಶ್ರೀನಾರಾಯಣಾಚಾರ್ಯರ ವ್ಯಾಖ್ಯಾನ ಉಪಲಬ್ಧವಿದ್ದು , ಆದರ ಪೂರ್ಣಪಾಠ ಹೀಗಿದೆ : ಕಾಲಿಂದೀತಿ – "ಹೇ ಕಾಲಿಂದಿ ! ತ್ವಂ ಅಘೇನ ಪಾಪೇನಾನ್ವಿತಾನ್ ಯುಕ್ತಾನಪಿ ಸತಃ ಸಜ್ಜನಾನ್ ಪವಿತ್ರಾತ್ಮನಃ ಪೂತಾತ್ಮನಃ ಕೃತ್ವಾ ತತ್ರ ಭ್ರಾತುರ್ಯಮಸ್ಯ ನಿಕೇತಂ ಪ್ರತಿ ಗೃಹಂ ಪ್ರತಿ ಗಂತುಮೇವ ನ ಮುಂಚಸಿ। ಯಾತನಾ ತು ದೂರತೋಽಪಾಸ್ತೇತಿ ಭಾವಃ। ಕಿಂತು ಪ್ರೀತಾ ತ್ವಾಮಾಶ್ರಿತಾನ್ ತಾನ್ ಕ್ಷೀರಪಯೋಽಬ್ಧಿವಾಸನಿರತಾನ್ ಕ್ಷೀರ-

ಯಮುನೆ ! ನೀನು ಪಾಪದಿಂದ ಕೂಡಿದ ಸಜ್ಜನರನ್ನೂ ಸಹ ಪವಿತ್ರಾತ್ಮರನ್ನಾಗಿಸಿ, ಅವರನ್ನು ಎಂದೂ ನಿನ್ನ ಸೋದರನಾದ ಯಮನ ಮನೆಗೆ ತೆರಳಲು ಬಿಡಲಾರೆ; ಬದಲಿಗೆ ಪ್ರೀತಳಾಗುವ ನೀನು ಆಶ್ರಿತರಾದ ಅವರನ್ನು ಕ್ಷೀರಸಾಗರದಲ್ಲಿ ಸದಾ ನೆಲೆಸುವಂತೆ ಮಾಡುವಿ. ಪತಿಯು ಒಲಿದ ಸ್ತ್ರೀಜನರ ಪ್ರೀತಿಯು ಅವನ ಕಡೆಗೇ ಇರುವುದು ನಿಶ್ಚಿತ; ಅಲ್ಲವೆ !

ವಿ. : ೧. ಯಮುನೆಯು ಸೂರ್ಯಪುತ್ರಿ. ಯಮನು ಸೂರ್ಯಪುತ್ರ. ಆದ್ದರಿಂದ ಯಮುನೆ ಯಮನ ಸೋದರಿ ಎಂದಾಗುವುದು. ಯಮುನೆಯಲ್ಲಿ ಮಿಂದವರಿಗೆ ನರಕದ ಭಯ ತಪ್ಪಿ ಕ್ರಮವಾಗಿ ಜ್ಞಾನದ್ವಾರಾ ಮುಕ್ತಿ ಲಭಿಸುವುದು ಎಂಬ ವಿಶೇಷಾಂಶ ಇಲ್ಲಿ ಸೂಚಿತ-ವಾಗಿದೆ.

೨. ತನ್ನನ್ನು ನಂಬಿದವರನ್ನು[1] ಯಮುನೆಯು ಯಮಲೋಕಕ್ಕೆ ಕಳುಹಿಸದೆ, ವಿಷ್ಣುಲೋಕಕ್ಕೇ ಕಳುಹಿಸುವಳು ಎಂಬುದು ಇಲ್ಲಿಯ ಭಾವ. ಯಮನು ಯಮುನೆಯ ಸೋದರನಾದರೆ, ಕೃಷ್ಣ ಕಾಳಿಂದೀಪತಿ. ಸೋದರನಾದ ಯಮನ ಬಳಿಗೆ ಕಳುಹಿಸುವ ಬದಲು, ಪತಿಯಾದ ಕೃಷ್ಣನ ಮನೆಗೆ ಕಳುಹಿಸುವ ಮೂಲಕ ಪತಿವ್ರತಾ ಸ್ತ್ರೀಗೆ ತವರು ಮನೆಗಿಂತ ಗಂಡನ ಮನೆಯೇ ಪ್ರಿಯ ಎಂಬ ವಿಶೇಷ ಸಂದೇಶವನ್ನು ಯಮುನೆಯು ಸೂಚಿಸುತ್ತಿರುವಳು ಎಂಬ ವಿಶೇಷಾಂಶ ಇಲ್ಲಿದೆ.

೩. ಯಮುನಾ ಮೊದಲಾದ ತೀರ್ಥಗಳ ಸ್ನಾನ ಮುಂದೆ ಕ್ರಮವಾಗಿ ಗುರೂಪದೇಶ ಪ್ರಾಪ್ತಿಯ ಮೂಲಕ ಹರಿಪ್ರಸಾದಕ್ಕೆ ಕಾರಣವಾಗಿ , ಜ್ಞಾನದ್ವಾರಾ ಮುಕ್ತಿಗೆ ಸಾಧನ ಎಂಬುದು ಇಲ್ಲಿಯ ಮುಖ್ಯ ಭಾವ; ಇದು ಶ್ರೀಮದಾಚಾರ್ಯರ ಗೀತಾಭಾಷ್ಯದಲ್ಲಿ ಬಂದಿರುವ ತೀರ್ಥಯಾತ್ರೆಯ ಮಹತ್ತ್ವವನ್ನು[2] ವಿವರಿಸುವ ಅಪೂರ್ವಶ್ಲೋಕವಾಗಿದೆ.

---

ಸಮುದ್ರಮಧ್ಯಸ್ಥಶ್ವೇತದ್ವೀಪವಾಸಿನಃ ಕರೋಷಿ । ಕಾಲಿಂದೀನಿಷೇವಣಾನಂತರಂ ನರಕಾದರ್ಶನಂ ಕರ್ಮಕ್ಷಯಃ ಸಾಕ್ಷಾನ್ಮುಕ್ತಿಶ್ಚ ಭವತೀತಿ ಭಾವಃ । ತಥಾಹಿ ಭರ್ತರಿ ಸ್ನಿಗ್ಧೇ ಸ್ನೇಹಯುಕ್ತೇ ಸತಿ । ಕ್ಷೀರಸಮುದ್ರಸ್ಯ ತು ಚಿಕ್ಕಣತಾಖ್ಯಗುಣಯುಕ್ತತ್ವಾತ್ ಸ್ನಿಗ್ಧ ಇತ್ಯುಕ್ತಮ್ । ಅತ ಏವ ಶ್ಲಿಷ್ಟಗರ್ಭೋಽರ್ಥಾಂತರವಿನ್ಯಾಸಃ । ಕಾಮಿನೀನಾಂ ಕಾಮವತೀನಾಂ ನಾರೀಣಾಂ ಜನಸ್ಯ ರುಚಿಃ ಪ್ರೀತಿರಲಮತ್ಯರ್ಥಂ ತಸ್ಯ ಭರ್ತುಃ ಪಕ್ಷ ಏವ ಹಿ ಭರ್ತೃಪ್ರೇಮಾತಿಜನ್ಮಸುಖಾಭಿಜ್ಞತ್ವಾತ್ । ಅಸ್ಮಾಕಮಪಿ ಭರ್ತಾರಂ ದಿಶೇತಿ ಭಾವಃ । ಶ್ವೇತದ್ವೀಪಂ ಪ್ರತಿ ಪ್ರೇಷಣೇನ ಶ್ರೀಕೃಷ್ಣಸಂಘಟಕತ್ವಶಕ್ತಿರಸ್ತೀತಿ ಧ್ವನ್ಯತೇ । ಪೂರ್ವಾರ್ಧೇನ ಶ್ರೀಕೃಷ್ಣವಿರಹೇಣ ತ್ವತ್ತೀರಸ್ಥಾನಾಮಸ್ಮಾಕಂ ಯಮಲೋಕಪ್ರಾಪ್ತಿರಪಿ ತ್ವಯಾ ಪರಿಹಾರ್ಯಾ । ಶ್ರೀಕೃಷ್ಣಸಂಗಮಪ್ರತಿಬಂಧಕದುರಿತಧ್ವಂಸೋಽಪಿ ಕಾರ್ಯ ಇತಿ ಧ್ವನ್ಯತೇ ।'' ಇತಿ ।

೧. ಶ್ವೇತದ್ವೀಪಂ ಪ್ರತಿ ಪ್ರೇಷಣೇನ ಶ್ರೀಕೃಷ್ಣಸಂಘಟಕತ್ವಶಕ್ತಿರಸ್ತೀತಿ ಧ್ವನ್ಯತೇ । ಪೂರ್ವಾರ್ಧೇನ ಶ್ರೀಕೃಷ್ಣವಿರಹೇಣ ತ್ವತ್ತೀರಸ್ಥಾನಾಮಸ್ಮಾಕಂ ಯಮಲೋಕಪ್ರಾಪ್ತಿರಪಿ ತ್ವಯಾ ಪರಿಹಾರ್ಯಾ । ಶ್ರೀಕೃಷ್ಣಸಂಗಮಪ್ರತಿಬಂಧಕದುರಿತ-ಧ್ವಂಸೋಽಪಿ ಕಾರ್ಯ ಇತಿ ಧ್ವನ್ಯತೇ । -ವ್ಯಾ.

೨. ಯತ್ರ ಚ ತೀರ್ಥಾದ್ಯೇವ ಮುಕ್ತಿಸಾಧನಮುಚ್ಯತೇ –
ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥

## ಮುಂದುವರೆದ ಯಮುನೆಯ ಪ್ರಾರ್ಥನೆ

ರಂಗತ್ತರಂಗಚಯಸಂಗತವಾಯುನಾ ತ್ವಂ
ಮಾಂಗಲ್ಯದಾ ಕಿಲ ಸಮೀಪಕೃತಾಲಯಾನಾಮ್ ।
ಭೃಂಗೀರಿವಾಂತಿಕವನೇ ತವ ಸಂಚರಂತೀಃ
ಸಂಗೀತಕೃಷ್ಣಚರಿತಾಃ ಕಿಮುಪೇಕ್ಷಸೇ ನಃ ॥ ೩೬ ॥

ಚಲಿಸುವ ಅಲೆಗಳ ಸಾಲುಗಳ ಮೇಲೆ ಬೀಸಿಬರುವ ಗಾಳಿಯಿಂದಾಗಿ ನೀನು ಬಳಿಯಲ್ಲಿ ಬೀಡುಬಿಟ್ಟಿರುವ ಜನತೆಗೆ ಮಂಗಲವನ್ನು ಕರುಣಿಸುವವಳಲ್ಲವೆ ! ದುಂಬಿಗಳಂತೆ ನಿನ್ನ ಬಳಿಯ ವನಗಳಲ್ಲಿ ಅಲೆಯುತ್ತಿರುವ ಹಾಗೂ ಕೃಷ್ಣನ ಮಹಿಮೆಗಳನ್ನು ಪರಿಪರಿಯಾಗಿ ಹಾಡುತ್ತಿರುವ ನಮ್ಮನ್ನೇಕೆ ಉಪೇಕ್ಷಿಸುತ್ತಿರುವಿ ?

ವಿ. : ೧. ಕೇವಲ ತನ್ನ ಮೇಲೆ ಬೀಸಿಬರುವ ಗಾಳಿಯ ಸಂಪರ್ಕದಿಂದಲೇ ತನ್ನ ಬಳಿ ನೆಲೆಸಿದ ಜನತೆಗೆ ಒಳಿತು ಮಾಡುವವಳು ಯಮುನೆ, ಇನ್ನು ಅಲ್ಲಿಯ ವನಗಳಲ್ಲೇ ಕೃಷ್ಣನ ಚರಿತ್ರೆಯನ್ನು ದುಂಬಿಗಳಂತೆ ಹಾಡುವ ಜನರನ್ನು ಅವಳು ಸರ್ವಥಾ ಉಪೇಕ್ಷಿಸಲಾರಳು ಎಂದರ್ಥ. ಭೃಂಗೀ - ಹೆಣ್ಣುದುಂಬಿ.

---

- ಇತ್ಯಾದೌ, ತತ್ರ ಪಾಪಾದಿಮುಕ್ತಿಃ । ಸ್ತುತಿಪರತಾ ಚ । ತತ್ರಾಪಿ ಕುತ್ರಚಿತ್ ಜ್ಞಾನಸಾಧನತ್ವಮೇವೋಚ್ಯತೇಽನ್ಯಥಾ ಮುಕ್ತಿಂ ನಿಷಿಧ್ಯ,
ಬ್ರಹ್ಮಜ್ಞಾನಂ ವಿನಾ ಮುಕ್ತಿರ್ನ ಕಥಂಚಿದಪೀಷ್ಯತೇ ।
ಪ್ರಯಾಗಾದೇಸ್ತು ಯಾ ಮುಕ್ತಿ ಜ್ಞಾನೋಪಾಯತ್ವಮೇವ ಹಿ ॥ ಇತ್ಯಾದೌ ।
ನ ಚ ತೀರ್ಥಸ್ತುತಿವಾಕ್ಯಾನಿ ತತ್ಸ್ವಾರ್ವೇಽಪ್ಯುಕ್ತಂ ಜ್ಞಾನನಿಯಮಂ ಘ್ನಂತಿ । ಯಥಾ ಕಂಚಿದ್ದಕ್ಷಂ ಭೃತ್ಯಂ ಪ್ರತ್ಯುಕ್ತಾನಿ 'ಅಯಮೇವ ಹಿ ರಾಜಾ ಕಿಂ ರಾಜ್ಞಾ' ಇತ್ಯಾದೀನಿ ।
ಯಥಾಽಽಹ ಭಗವಾನ್ –
ಯಾನಿ ತೀರ್ಥಾದಿವಾಕ್ಯಾನಿ ಕರ್ಮಾದಿವಿಷಯಾಣಿ ಚ ।
ಸ್ತಾವಕಾನ್ಯೇನ ತಾನಿ ಸ್ಯುರಜ್ಞಾನಾಂ ಮೋಹಕಾನಿ ವಾ ॥
ಭವೇನ್ಮೋಕ್ಷಸ್ತು ಮದ್ದೃಷ್ಟೇರ್ನಾನ್ಯತಸ್ತು ಕಥಂಚನ ॥ ಇತಿ ನಾರದೀಯೇ ॥
ಅತೋಽಪರೋಕ್ಷಜ್ಞಾನಾದೇವ ಮೋಕ್ಷಃ । ಕರ್ಮ ತು ತತ್ಸಾಧನಮೇವ ॥ -ಗೀತಾಭಾಷ್ಯ(೩./೨೦)
ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥ -ಮ.ಭಾ.ತಾ.ನಿ. (೧/೯೯)
'ತೀರ್ಥಶಬ್ದೋ ಮುಖ್ಯತಃ ಪಾವನೇಷು ವರ್ತತೇ । ನಾನ್ಯತ್ರ । ತತ್ರ ಪ್ರಯೋಗಸ್ತು ನ ತತ್ತ್ವವಿದಾಂ ಮನೋಜ್ಞಃ । ತಾದೃಶಾಸ್ತು ಭಗವತ್ತತ್ತ್ವವಿದೋ ಭಾಗವತಾ ಏವ । ಅತಸ್ತೇಭ್ಯಃ ಉಪದೇಶಾದ್ಯರ್ಥಂ ತದನ್ವೇಷಣಾಯ ಅಟನಮೇವ ತೀರ್ಥಾಟನಂ ನಾಮ । ತದೇವ ಕರ್ತವ್ಯಂ ಕುಶಲೇನ, ನ ತು ಮೂಢಾಭಿಮತತೀರ್ಥಾಟನಮಿತಿ ॥
-ಶ್ರೀವಿಷ್ಣುತೀರ್ಥರು (ಭಾಗವತಸಾರೋದ್ಧಾರ)

## ಮಂದಮಾರುತದ ಪ್ರಾರ್ಥನೆ

ಹೇ ಮಂದಮಾರುತ ಮುಕುಂದಪದಾಬ್ಜಗಂಧ-
ಶ್ರೀಮಾನನೀಯ ತಮಿಹಾನಯ ಮಾನ್ಯಗಮ್ಯಮ್ ।
ನೋ ಚೇದ್ಬಹಿರ್ನಯ ತವಾಂಗ ಸಮಾನಜಾತಿಂ
ಪ್ರಾಣಂ ಹೃದಿ ಸ್ಥಿತಮಥಾರ್ಪಯ ಕೃಷ್ಣಪಾದೇ ॥ ೩೭ ॥

ಎಲೈ ಮಂದಾನಿಲವೇ ! ಮುಕುಂದನಾದ ಶ್ರೀಕೃಷ್ಣನ ಪಾದಕಮಲದ ಪರಿಮಳದ ಕಾಂತಿ-ಯಿಂದ ಮಾನ್ಯನಾದವನೇ ! ಮಾನ್ಯರಿಂದ ಹೊಂದಲ್ಪಡುವ ಆ ಶ್ರೀಕೃಷ್ಣನನ್ನು ಇಲ್ಲಿಗೆ ಕರೆದು ತಾ; ಅಯ್ಯ! ಇಲ್ಲವಾದಲ್ಲಿ ನಮ್ಮ ಹೃದಯದಲ್ಲಿ ನೆಲೆಸಿರುವ ನಿನ್ನ ಸಮಾನಜಾತಿಯವನಾದ ಪ್ರಾಣನನ್ನು ಹೊರಕ್ಕೆ ಕರೆದೊಯ್ಯಿ; ಆ ಬಳಿಕ ಶ್ರೀಕೃಷ್ಣನ ಪಾದದಲ್ಲಿ ಒಪ್ಪಿಸಿಬಿಡು.

ವಿ. : ೧. ಇದರಲ್ಲಿ ಹೊರಗಿನ ಗಾಳಿಗೂ ಪ್ರಾಣವಾಯುವಿಗೂ ಇರುವ ವ್ಯತ್ಯಾಸವನ್ನು ನಿರೂಪಿಸುತ್ತಾ ಅವರಿಬ್ಬರೂ ಒಂದೇ ಜಾತಿಯವರು ಎಂದು ತಿಳಿಸಿರುವರು; ಹೊರಗಿರುವುದು ಭೂತವಾಯುವಾದರೆ ಒಳಗಿರುವ ಪ್ರಾಣವಾಯು ಮುಖ್ಯಪ್ರಾಣ ಎಂಬುದು ವಿಶೇಷ.

೨. ಶ್ರೀಕೃಷ್ಣನನ್ನು ಅಗಲಿ ಬದುಕುವುದಕ್ಕಿಂತ ಪ್ರಾಣತೊರೆಯುವುದೇ ಲೇಸು ಎಂಬುದು ಇಲ್ಲಿಯ ಮುಖ್ಯಭಾವ : "ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ" ಎಂಬ ಶ್ರೀಕನಕದಾಸರ ಮಾತು ಇದರ ವಿವರಣೆಯಂತಿದೆ. ಅವರು ಈ ಕೃತಿಕಾರರಾದ ಶ್ರೀವಾದಿರಾಜರ ಪ್ರಿಯಭಕ್ತರು ಎಂಬುದು "ತ್ರಿವಿಕ್ರಮದಾಸಸ್ಯ ದಾಸ" ಎಂಬ ಅವರ ಮೋಹನತರಂಗಿಣೀ-ಕೃತಿಯ ವಚನದಿಂದ ತಿಳಿಯುವುದು.

೩. [1]ಪ್ರಾಣತೊರೆಯುವ ಉದ್ದೇಶವೂ ಸಹ ಮುಂದೆ ಶ್ರೀಕೃಷ್ಣನ ಪಾದವನ್ನು ಸೇರುವ ಸದುದ್ದೇಶವೇ ಹೊರತು ಆತ್ಮಹತ್ಯಾರೂಪವಾದ ನಿಷಿದ್ಧ ಕಾರ್ಯವಲ್ಲ ಎಂಬ ಇಲ್ಲಿಯ ಮತ್ತೊಂದು ಅಂಶವೂ ರೋಚಕವಾದುದು.

## ಮುಂದುವರೆದ ಮಂದಮಾರುತದ ಪ್ರಾರ್ಥನೆ

ಅತೀಂದ್ರಿಯಸ್ಯಾಮಿತವಿಕ್ರಮಸ್ಯ
ಪ್ರದರ್ಶಯಸ್ಯಂಗ ಪದಾಬ್ಜಗಂಧಮ್ ।
ಅಪೇಕ್ಷಸೇ ಕಿಂ ಪರಮಸ್ಯ ಸಾಮ್ಯ-
ಮದೃಶ್ಯ ದೃಶ್ಯಾತ್ಮವಿಶೇಷಧರ್ಮಾನ್ ॥ ೩೮ ॥

---

೧. ಅನೇನ ಮರಣಾನಂತರಮಪಿ ಶ್ರೀಕೃಷ್ಣಸಂಬಂಧಾಭಿಲಾಪೋ ಧ್ವನ್ಯತೇ । -ವ್ಯಾ.

ಪ್ರತ್ಯಕ್ಷಗಮ್ಯವಾದ ವಿಶೇಷಧರ್ಮವನ್ನು ಹೊಂದಿರುವ ಅದೃಶ್ಯನಾದ ಮಂದಾನಿಲವೇ! ಅತೀಂದ್ರಿಯನೂ, ಅಮಿತವಿಕ್ರಮನೂ ಆದ ಶ್ರೀಕೃಷ್ಣನ ಪಾದಕಮಲದ ಪರಿಮಳವನ್ನು ತೋರುತ್ತಿರುವಿ; ಈ ಮೂಲಕ ಸರ್ವೋತ್ತಮನಾದ ಅವನ ಸಾಮ್ಯವನ್ನು ಬಯಸಿರುವೆ ಏನು?

ವಿ.: ೧. ವಾಯುವು ಕಣ್ಣಿಗೆ ಕಾಣದು; ಆದರೆ ಅದರ [1]ಸ್ಪರ್ಶವು ಚರ್ಮಕ್ಕೆ ಗೋಚರಿಸುವುದು ಎಂದರೆ ಅದರ ಸ್ವರೂಪ ಅದೃಶ್ಯವಾದರೆ ಅದರ ಸ್ಪರ್ಶವು ಪ್ರತ್ಯಕ್ಷಗಮ್ಯ. ಶ್ರೀಹರಿಯು ಹಾಗೆಯೇ; ಅವನು ಅಯೋಗ್ಯರಿಗೆ ಸರ್ವಥಾ ಅಗಮ್ಯನಾದರೆ ಯೋಗ್ಯರಿಗೆ ಮಾತ್ರ ಯಥಾಯೋಗ್ಯವಾಗಿ ಪ್ರತ್ಯಕ್ಷ ಗೋಚರಿಸುವವನು; ಇದರಿಂದ ವಾಯುವಿಗೆ ಒಂದು ರೀತಿಯಲ್ಲಿ ಶ್ರೀಹರಿಯ ಸಾಮ್ಯ ಬಂದಂತಾಯಿತು ಎಂಬುದು ಇಲ್ಲಿಯ ಭಾವ.

೨. [2]ಆದರೆ ವಾಯುವು ಎಲ್ಲರಿಗೂ ಸಹ ದೃಶ್ಯ ಅದೃಶ್ಯ ಎರಡೂ ಆಗಿರುವನು. ಆದರೆ ಶ್ರೀಹರಿಯು ಯೋಗ್ಯರಿಗೆ ಮಾತ್ರ ದೃಶ್ಯ; ಅಯೋಗ್ಯರಿಗೆ ಅದೃಶ್ಯ ಎಂಬುದು ಮುಖ್ಯವ್ಯತ್ಯಾಸ. ಆದ್ದರಿಂದ ವಾಯುವಿಗೆ ಶ್ರೀಕೃಷ್ಣನ ಸಾಮ್ಯ ಸರ್ವಥಾ ಲಭಿಸದು ಎಂಬುದು ಇಲ್ಲಿಯ ಮತ್ತೊಂದು ಭಾವ.

೩.. ಶ್ರೀವಾಯುದೇವರಂತಹ ಜೀವೋತ್ತಮರಿಗೆ ಸಹ ಹೀಗೆ ಶ್ರೀಹರಿಯೊಂದಿಗೆ ಸರ್ವಸಾಮ್ಯವು ಲಭಿಸದಿರುವಾಗ ಶ್ರೀಹರಿಯೊಂದಿಗೆ ಸರ್ವಮುಕ್ತರಿಗೂ ಆನಂದಸಾಮ್ಯ ಹೇಳುವ 'ವಿಶಿಷ್ಟಾದ್ವೈತಮತ'ವು ಅತ್ಯಂತ ಅಯುಕ್ತ ಎಂಬ ಧ್ವನಿಯನ್ನು ಸಹ ಇಲ್ಲಿ ಗುರುತಿಸಬಹುದು.

## ಪಕ್ಷಿಗಳ ಪ್ರಾರ್ಥನೆ

**ಹೇ ಪಕ್ಷಿಣಃ ಕೃಷ್ಣಮುದೀರಯಧ್ವಂ**
**ಪಾಪಾಪಹಂ ಪಾವನಪಾವನಂ ತಮ್ ।**
**ನೋ ಚೇದ್ಬವತ್ಕಂಠವಿಶೋಷಣೈರ್ನಃ**
**ಶ್ರೋತ್ರಸ್ಯ ಶಲ್ಯೋಪಮಿತೈಃ ಕಿಮೇತೈಃ ॥ ೩೯ ॥**

---

೧. ಅಚೇತನಃ ಸ್ಪರ್ಶಗಮ್ಯಃ। —ಕಾಠಕೋಪನಿಶದ್ಭಾಷ್ಯ
ವಾಯುಸ್ಪರ್ಶೋಽಪಿ ತ್ವಚೋ ವಿಷಯಃ। —ಪ್ರಮಾಣಪದ್ಧತಿ

೨. ಸ್ವರೂಪೇಣಾತೀಂದ್ರಿಯತ್ವಂ ಧರ್ಮೇಣೈಂದ್ರಿಯಕತ್ವಮಿತಿ ತ್ವದೀಯೋಽರ್ಧಜರತೀಯನ್ಯಾಯಃ ಯೋಗ್ಯಾನಾಂ ಸುಗುಣತಯಾ ದೃಶ್ಯರೂಪಸ್ಯಾಯೋಗ್ಯಾನಾಂ ಸರ್ವಾತ್ಮನಾಽದೃಶ್ಯಸ್ಯಾಸ್ತ್ರತ್ಪಕ್ಷಸ್ಯ ನ ಸಂಯೋಜನೀಯ ಇತಿ ಬಾವಃ। —ವಾ..

ಎಲೈ ಪಕ್ಷಿಗಳೇ ! ಪಾಪ ಪರಿಹರಿಸುವಂತಹ [೧]ಪಾವನಕ್ಕೂ ಪಾವನನಾದ ಆ ಶ್ರೀಕೃಷ್ಣನನ್ನು ತಿಳಿಸಿಕೊಡಿರಿ; ಇಲ್ಲವಾದಲ್ಲಿ ಕಿವಿಗೆ ಶಲ್ಯಪ್ರಾಯವಾದಂತಹ ನಿಮ್ಮ ಈ ಕಂಠಶೋಷಣೆಯಿಂದ ನಮಗೆ ಏನಾಗಬೇಕಿದೆ?

ವಿ. : ೧. ಪಕ್ಷಿಗಳು ಚಿಲಿಪಿಲಿಗುಟ್ಟುವುದು ಸ್ವಾಭಾವಿಕ; ಆ ಚಿಲಿಪಿಲಿ ಧ್ವನಿಯಲ್ಲೂ ಶ್ರೀಕೃಷ್ಣನ ವಿಷಯ ಕೇಳುವ ಕಾತರ ಗೋಪಿಯರಿಗೆ; ಈ ಮೂಲಕವಾಗಿ ಮನುಷ್ಯರ ಪ್ರತಿಯೊಂದು ಮಾತೂ ಸಹ ಶ್ರೀಹರಿಯ ಮಹಿಮೆಯನ್ನು ಪ್ರತಿಪಾದಿಸುವಂತಿರಬೇಕು. ಇಲ್ಲವಾದಲ್ಲಿ ಪಕ್ಷಿಗಳ ಕಿಲಕಿಲಧ್ವನಿಗಿಂತಲೂ ಕೀಳೆನ್ನಿಸುವವು ಎಂಬ ಸಂದೇಶವು ನಿರೂಪಿತ.

೨. ಶ್ರೀಹರಿಯ ಮಹಿಮೆಯನ್ನು ತಿಳಿಸದ ಪಕ್ಷಿಗಳ ಧ್ವನಿ [೨]ಕರ್ಣಕಠೋರವೆನ್ನಿಸುವಂತೆ ಭಗವನ್ಮಹಿಮಾಪ್ರತಿಪಾದಕವಲ್ಲದ ಸಕಲ ಶಬ್ದವೂ ಸಹ ಕರ್ಣಕಠೋರ ಎಂದೇ ತಿಳಿಯಬೇಕು.

೩. ಶ್ರೀಕೃಷ್ಣನನ್ನು ತಿಳಿಸಿಕೊಡದ ಪಕ್ಷಿಗಳ ಚಿಲಿಪಿಲಿಗಳೇ ಅನರ್ಥಕರ ಎಂದ ಮೇಲೆ ಹರಿವಾರ್ತೆಗೆ ದೂರಾದ ಮನುಷ್ಯರ ಮಾತುಗಳು ಎಷ್ಟು ಅನರ್ಥಕರ ಎಂಬುದು ಕೈಮುತ್ಯಸಿದ್ಧ.

## ಕೋಗಿಲೆಯ ಪ್ರಾರ್ಥನೆ

**ಸ್ವರೇಣ ಸ್ಮಾರಯನ್ ಶೌರಿಂ ಪ್ರಯಚ್ಛತಿ ನ ನಃ ಸಖಿ ।**
**ಪರಪುಷ್ಟಃ ಸ ವಿಸ್ಪಷ್ಟಂ ಪೋಷ್ಟುರ್ವೈ ವಿಪ್ರಲಂಭಕಃ ॥ ೪೦ ॥**

ಗೆಳತಿ ! ತನ್ನ ಧ್ವನಿಯಿಂದ ಶ್ರೀಕೃಷ್ಣನ ನೆನಪು ತರುತ್ತಿರುವ ಈ ಕೋಗಿಲೆ ಅವನ ಬಗ್ಗೆ ನಮಗೆ ತಿಳಿಸದು; ಇದು ಹೇಳಿ ಕೇಳಿ ಪರಪುಷ್ಟ; ತನ್ನನ್ನು ಪೋಷಣೆ ಮಾಡಿದವರಿಗೇ ಸ್ಫುಟವಾಗಿ ವಂಚನೆಮಾಡುವ ಸ್ವಭಾವದ್ದು; ಅಲ್ಲವೆ !

ವಿ. : ೧. ತನ್ನ ಇಂಪಾದ ಧ್ವನಿಯಿಂದ ಶ್ರೀಕೃಷ್ಣನ ಧ್ವನಿಯನ್ನು ಜ್ಞಾಪಿಸುವ ಹಿರಿಮೆ ಕೋಗಿಲೆಯದು; ಕೋಗಿಲೆಕಂಠ ಎಂಬುದು ಪ್ರಸಿದ್ಧವಾದ ಲೋಕರೂಢಿಯ ಮಾತು. ಆದರೆ ಇದರ ಸ್ವಭಾವ ಮಾತ್ರ ನಂಬಲು ಯೋಗ್ಯವಾದುದಲ್ಲ; ಏಕೆಂದರೆ ಕೋಗಿಲೆಯ ಮರಿಯಾಗಿ ಹುಟ್ಟಿದರೂ ಬೆಳೆಯುವುದು ಕಾಗೆಗಳ ಗುಂಪಿನಲ್ಲೇ; ಅದಕ್ಕೆ ಅದನ್ನು ಪರಭೃತ, ಪರಪುಷ್ಟ ಎಂದು ಕರೆಯುವರು.

೨. [೩]ತನ್ನನ್ನು ಪೋಷಿಸಿದ ಕಾಗೆಗಳಿಗೆ ದ್ರೋಹಬಗೆದು ಮರಳಿ ತನ್ನ ಹಿಂಡಿಗೆ ಮರಳುವ ಈ [೪]ವಂಚನೆ ಬುದ್ಧಿಯ ಕೋಗಿಲೆ ಕೃಷ್ಣನನ್ನು ತಿಳಿಸುವುದು ದೂರದ ಮಾತೇ ಸರಿ, ಎಂಬುದು ಅವರ ಆರೋಪ; ವಿಪ್ರಲಂಭಕ – ವಂಚಕ.

---

೧. ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್ । –ವಿಷ್ಣುಸಹಸ್ರನಾಮಸ್ತೋತ್ರ

೨. ಶಲ್ಯೋಪಮಿತೈಃ ವಕ್ತ್ರಶರೋಪಮೈರೇತೈರ್ವ್ಯರ್ಥಾಸ್ವರೈಃ ಕಿಂ ಉಭಯೇಷಾಮಪ್ಯನಿಷ್ಟಪ್ರಾಪ್ತೇರಿತಿ ಭಾವಃ । –ವ್ಯಾ.

೩. ಪಕ್ಷೋತ್ಪತ್ತಿಪರ್ಯಂತಂ ಕಾಕೈಃ ಪೋಷಿತಸ್ತದನಂತರಂ ತಾನ್ ವಂಚಯಿತ್ವಾ ಅನ್ಯತ್ರ ಗಚ್ಛತೀತಿ ಪ್ರಸಿದ್ಧಿಃ । –ವ್ಯಾ.

೪. ಅನೇನ ಪರಾನ್ನೋಪಜೀವೀ ಲುಬ್ಧೋ ಧ್ವನ್ಯತೇ । –ವ್ಯಾ.

## ಕೃಷ್ಣಸಾರದ ಪ್ರಾರ್ಥನೆ

ಹೇ ಕೃಷ್ಣಸಾರ ಕೃತಕೌತುಕಮಾತ್ಮದೃಷ್ಟೇಃ
[೧]ಶ್ರೀಕೃಷ್ಣವರ್ಷ್ಮ ಕಿಮಲಕ್ಷಿ ಭರಂ ಬಿಭರ್ಷಿ ।
ನೇತ್ರೋದಯಸ್ಯ ಮುರಲೀರವರಂಜಿತಸ್ಯ
ಶ್ರೋತ್ರಸ್ಯ ಚೋನ್ನತಿರಿಯಂ ಭವತಶ್ಚಕಾಸ್ತಿ ॥ ೪೧ ॥

ಎಲೈ ಕೃಷ್ಣಸಾರವೇ ! ನಿನ್ನ ಕಣ್ಣುಗಳು ಅರಳಿವೆ; ಅವನ ಕೊಳಲಿನ ಧ್ವನಿಯಿಂದ ರಂಜಿಸುವ ನಿನ್ನ ಕಿವಿಗಳು ನಿಮಿರಿ ಹೊಳೆಯುತ್ತಿವೆ. ಹೀಗೆ ನಲಿವಿನಿಂದ ಸಂಭ್ರಮಿಸುವ ನೀನು ನೋಟಕ್ಕೆ ಅಚ್ಚರಿ ಮೂಡಿಸುವಂತಹ ಶ್ರೀಕೃಷ್ಣನ ವಿಗ್ರಹವನ್ನೇನಾದರೂ ಕಂಡೆಯೇನು?

ವಿ. : ೧. [೨]ಈ ವರೆಗಿನ ಪದ್ಯಗಳಲ್ಲಿ ವೃಕ್ಷ ಮೊದಲಾದವುಗಳನ್ನು ಶ್ರೀಕೃಷ್ಣನ ಬಗ್ಗೆ ವಿಚಾರಿಸುವ ಗೋಪಿಯರಿಗೆ ಮೋಹಾವಸ್ಥೆ ಒದಗಿರುವುದು ಸುಸ್ಪಷ್ಟವಾಗಿದೆ, ಈ ಪದ್ಯದಲ್ಲಿ ಅವರ ಅನನ್ಯ ಭಕ್ತಿಯೋಗವು ನಿರೂಪಿತವಾಗಿದೆ.

೨. ಜಿಂಕೆಗಳ ಕಿವಿಗಳು ಮೇಲಕ್ಕೆ ಚಾಚಿಕೊಂಡಿರುವುದು ಸಹಜ. ಅದರಂತೆ ಕಣ್ಣುಗಳು ವಿಶಾಲವಾಗಿರುವುದೂ ಸಹ; ಇದನ್ನು ಗೋಪಿಯರು ಶ್ರೀಕೃಷ್ಣನನ್ನು ಕಂಡಿದ್ದರಿಂದಾಗಿ ಅವುಗಳ ಕಣ್ಣು ಅಗಲಗೊಂಡಿವೆ; ಕೃಷ್ಣನ ವೇಣುಗಾನದ ಇಂಪಿನಿಂದಾಗಿ ಕಿವಿಗಳು ಚಾಚಿಕೊಂಡಿರುವವು ಎಂಬುದಾಗಿ ಭಾವಿಸಿ, ಹೀಗೆ ಪ್ರಶ್ನಿಸುತ್ತಿರುವರು ಎಂದು ತಿಳಿಯಬೇಕು.

೩. ಇದರಿಂದ ಗೋಪಿಯರಿಗೆ ಕಿವಿ ನಿಮಿರಲು, ಕಣ್ಣು ಅಗಲಗೊಳ್ಳಲು ಸಹ ಕೃಷ್ಣನ ಸಂಪರ್ಕವೇ ಮುಖ್ಯಕಾರಣ ಎಂಬ ವಿಶಿಷ್ಟ ಭಕ್ತಿಯೋಗವು ನಿರೂಪಿತವಾಯಿತು ಎಂದು [೩]ತಿಳಿಯಬೇಕು.

## ಶ್ರೀಕೃಷ್ಣನ ಬಗ್ಗೆ ಮತ್ತೊಬ್ಬ ಗೋಪಿಯ ಅಳಲು

ಯದಿ ನಿಗಮವಿದೂರಸ್ತ್ವಂ ನೃಣಾಂ ದೂರದೂರೋ
ಹೃದಯಕಮಲತಃ ಕಿಂ ನಾಥ ನಾಪೈಷಿ ತರ್ಹಿ ।

---

೧. ಅಪ್ಯೇಣಪತ್ನ್ಯುಪಗತಃ ಪ್ರಿಯಯೇಹ ಗಾತ್ರೈಸ್ತನ್ವನ್ ದೃಶಾಂ ಸಖಿ ಸುನಿರ್ವೃತಿಮಿಚ್ಯುತೋ ವಃ ।
ಕಾಂತಾಂಗಸಂಗಕುಚಕುಂಕುಮರಂಜಿತಾಯಾಃ ಕುಂದಸ್ರಜಃ ಕುಲಪತೇರಿಹ ವಾತಿ ಗಂಧಃ ॥
ಬಾಹುಂ ಪ್ರಿಯಾಂಸ ಉಪಧಾಯ ಗೃಹೀತಪದ್ಮೋ ರಾಮಾನುಜಸ್ತುಲಸಿಕಾಲಿಕುಲೈರ್ಮದಾಂಧೈಃ ।
ಅನ್ವೀಯಮಾನ ಇಹ ವಸ್ತರವಃ ಪ್ರಣಾಮಂ ಕಿಂ ವಾಽಭಿನಂದತಿ ಚರನ್ ಪ್ರಣಯಾವಲೋಕೈಃ ॥
–ಭಾಗವತ (೧೦/೩೦/೧೧,೧೨)

೨. ಇತಃ ಪೂರ್ವತನಪದ್ಯೇಷು ವೃಕ್ಷಾದೀನಾಮಾಮಂತ್ರಣಾತ್ ಪ್ರಾಯೋ ಮೋಹಾವಸ್ಥಾ । ಉನ್ಮಾದಶ್ಚಿತ್ತವೈಕಲ್ಯಾದಿತ್ಯುಕ್ತೇಃ । –ವ್ಯಾ.

೩. ಅನೇನ ಶ್ರೀಕೃಷ್ಣವಿಲಾಸದರ್ಶನಂ ವಿನಾ ನಯನಾದ್ಯುತ್ಫುಲ್ಲಕಾರಣಮನ್ಯಂ ನಾಸ್ತೀತ್ಯನನ್ಯಭಕ್ತಿಯೋಗೋ ಧ್ವನ್ಯತೇ । –ವ್ಯಾ.

ತರುಣಿ ತನುವಿಯೋಗಃ ಕಿಂ ಮತಸ್ತೇ ಮನೋಜ್ಞೇ
ಪ್ರಿಯಪುರುಷವಿಯೋಗಾದ್ದುಸ್ಸಹಂ ತಂ ನ ಮನ್ಯೇ ॥ ೪೨ ॥

(ಗೋಪಿ)"ಎಲೈ ಕೃಷ್ಣ ! ನೀನು ವೇದಗಳಿಗೂ ಸಾಕಲ್ಯೇನ ಗೋಚರಿಸದವನು; ಮನುಷ್ಯ-ರಿಗಂತೂ ಅತ್ಯಂತದೂರನಾದವನು; ಎಂದ ಮೇಲೆ, ಸ್ವಾಮಿ! ನಮ್ಮ ಹೃದಯಕಮಲದಿಂದ ನೀನೇಕೆ ದೂರ ಹೋಗುತ್ತಿಲ್ಲ?"; (ಮತ್ತೊಬ್ಬ ಗೋಪಿ)"ಎಲೈ ಮೆಚ್ಚಿನ ತರುಣಿಯೇ ! ಇದರಿಂದ ನೀನು ದೇಹ ತೊರೆಯಬಯಸಿರುವೆ ಏನು?"; (ಮೊದಲ ಗೋಪಿ)"ಪ್ರಿಯ-ಪುರುಷನಾದ ಶ್ರೀಕೃಷ್ಣನ ಅಗಲುವಿಕೆಗಿಂತ ಅದೇನು ಸಹಿಸಲಾಗದ್ದಲ್ಲ ಎಂದು ಭಾವಿಸುವೆ."

ವಿ. : ೧. ಹೃದಯದಿಂದ ಶ್ರೀಕೃಷ್ಣನನ್ನು ಬಿಟ್ಟಿರಲಾಗದ ಗೋಪಿ ಮತ್ತೊಂದು ಬಗೆಯಿಂದ ತನ್ನ ಅಳಲನ್ನು ತೋಡಿಕೊಳ್ಳುತ್ತಿರುವಳು. ವೇದಗಳಿಗೆ, ಜ್ಞಾನಿಗಳಿಗೆ ಮೊದಲಾಗಿ ಎಲ್ಲರಿಗೂ ದೂರನಾದ ಶ್ರೀಕೃಷ್ಣ ತಮ್ಮ ಹೃದಯದಿಂದೇಕೆ ದೂರವಾಗುತ್ತಿಲ್ಲ? ಎಂಬುದು ಅವಳ ಚಿಂತನೆ.

೨. ಶ್ರೀಕೃಷ್ಣನು ಹೃದಯದಿಂದ ದೂರಾಗುವುದರ ಪರಿಣಾಮ ಮರಣ ಎಂಬುದು ಶಾಸ್ತ್ರಗಳ ವಾಣಿ : ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ -(ಭಾರತ); ಶ್ರೀಕೃಷ್ಣನನ್ನು ಅಗಲಿರುವ ನೋವಿಗಿಂತ [1]ದೇಹತೊರೆಯುವ ನೋವೇ ಮೇಲು ಎಂಬುದು ಅವಳ ಆಶಯ.

೩.. ಗೋಪಿಯರ ಈ ಮಾತಿನಲ್ಲಿ ಶ್ರೀಕೃಷ್ಣನು ವೇದಾದಿ ಸಕಲ ಶಾಸ್ತ್ರಗಳಿಗೂ ಅಗೋಚರ-ನಾದವನು; ಅವನನ್ನು ಬಿಟ್ಟಿರುವುದು ಎಂದರೆ ಮರಣವೇ ಸರಿ ಮೊದಲಾದ ಅನೇಕ ಪ್ರಮೇಯಗಳು [2]ನಿರೂಪಿತವಾಗಿವೆ.

## ಗೋಪಿಯರ ಪರಸ್ಪರ ಸಲ್ಲಾಪ

ತ್ವಯಿ ನ ವಹತಿ ಮಾನಂ ನ ಪ್ರಗಲ್ಭೇತಿ ಕೃಷ್ಣೋ
ಯದಜನಿ ತನುಕಾರ್ಶ್ಯಂ ದೈನ್ಯಮಂತಃ ಕ್ಷಣೇನ।
ನ ಹಿ ಸಖಿ ಮಮ ದೈನ್ಯಂ ದೀನನಾಥಪ್ರಯುಕ್ತಂ
ಕೃಶತರನಿಖಿಲಾಂಗ್ಯಾಃ ಕಿಂತು ವಿಶ್ಲೇಷವಹ್ನೇಃ ॥ ೪೩ ॥

(ಗೋಪಿ)"ಎಲೈ ತರುಣಿ! ಕ್ಷಣಮಾತ್ರದಲ್ಲಿ ಮನಸ್ಸಿನಲ್ಲಿ ದೀನತೆಯನ್ನೂ, ದೇಹದಲ್ಲಿ ಕೃಶತ್ವವನ್ನೂ ಹೊಂದಿರುವ ನೀನು ಅಂತಹ ಜಾಣೆ ಏನಲ್ಲ ಎಂಬ ಕಾರಣದಿಂದ ಅವನು ನಿನ್ನ ಬಗ್ಗೆ ಆದರ ಹೊಂದಿಲ್ಲ"; (ಇನ್ನೊಬ್ಬ ಗೋಪಿ)"ತೆಳುವಾದ ಇಡೀ ದೇಹದ ತಾನು

---

೧. ಶ್ರೀಕೃಷ್ಣಕೃಪಾರಹಿತಾನಾಂ ಮರಣಮೇವ ವರಮಿತಿ ಭಾವಃ। -ವ್ಯಾ.
ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್। -ದ್ವಾದಶಸ್ತೋತ್ರ (೧೧/೭)
೨. ಹೃದಯಾತ್ ಕೃಷ್ಣಾಪಹರಣಸ್ಯ "ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರ" ಇತಿ ಸ್ಮೃತೇಸ್ತಸ್ಯಾ ಮರಣ-ರೂಪತ್ವಾದಿತಿ ಭಾವಃ। -ವ್ಯಾ.

ಹೀಗೆ ದೀನಳಾಗಿರುವುದು ಆ ದೀನನಾಥನಾದ ಶ್ರೀಕೃಷ್ಣನಿಂದಾಗಿ ಅಲ್ಲ; ಆದರೆ ಅವನ ಅಗಲುವಿಕೆಯ ಬೆಂಕಿಯಿಂದಾಗಿಯೇ".

ವಿ. : ೧. ಕೃಶಶರೀರವು ಸ್ತ್ರೀಯರಿಗೆ ಭೂಷಣ; ಚೆಲುವೆಯರಾದ ಗೋಪಿಯರು ಸಹಜವಾಗಿಯೇ ಕೃಶದೇಹದವರಾಗಿದ್ದವರು ಎಂಬುದನ್ನು ಹೀಗೆ ಕಾವ್ಯಮಯವಾಗಿ ನಿರೂಪಿಸಲಾಗಿದೆ.

೨. [೧]ಸ್ವಭಾವತಃ ಕೃಶರಾದ ಗೋಪಿಯರು ಮತ್ತಷ್ಟು ಕೃಶರಾಗಲು ಶ್ರೀಕೃಷ್ಣನ ವಿಯೋಗ ಕಾರಣವಾಗಿತ್ತು. ಆದರೆ ಅದನ್ನು ತಿಳಿಸಿ, ದೀನತೆಯನ್ನು ಮರೆಮಾಡಿಕೊಳ್ಳಲೆಂದು ಗೋಪಿಯರು ಅದಕ್ಕೆ ಶ್ರೀಕೃಷ್ಣನೇನೂ ಕಾರಣನಲ್ಲ. ಅವನ [೨]ಅಗಲುವಿಕೆಯ ನೋವೇ ಮುಖ್ಯಕಾರಣ ಎಂದು ತಿಳಿಸಿರುವರು. ಅರ್ಥ ಎರಡೂ ಒಂದೇ ಆದರೂ ತಿಳಿಸುವ ರೀತಿಯಲ್ಲಿ ಅವರಿಗಿದ್ದ ಕೃಷ್ಣನ ಮೇಲಿದ್ದ ಅನುರಾಗಾತಿಶಯವು ನಿರೂಪಿತವಾಗಿರುವುದು ವಿಶೇಷ; ಪ್ರಗಲ್ಭಾ- ಪ್ರೌಢೆ.

### ಶ್ರೀಕೃಷ್ಣನನ್ನು ಮರೆಯಲಾಗದ ಗೋಪಿಯರು

**ಅನೃತಲಪಿತಮೇನಂ ನಾರ್ಥಯಧ್ವಂ ತಥಾ ತ-**
**ದ್ವಿದಧತಿ ಬತ ಚೇತಃ ಪ್ರಾರ್ಥನಾಶೀಲಮೇತೇ ।**
**ಪರಭೃತಶುಕಭೃಂಗಾ ಗೀತವಾಕ್ಯಾಲಕಾಭಾಃ**
**ಪಥಿ ಪಥಿ ಪರಮಸ್ಯ ಶ್ರೀಮುಖಶ್ರೀಶ್ಚ ಚಂದ್ರಃ ॥ ೪೪ ॥**

(ಒಬ್ಬ ಗೋಪಿ)"ಸುಳ್ಳುಮಾತಿನ ಶ್ರೀಕೃಷ್ಣನನ್ನು ಬೇಡಿಕೊಳ್ಳದಿರಿ"; (ಇತರ ಗೋಪಿಯರು)"ಅದೇನೋ ಸರಿ, ಆದರೆ ಅವನ ಗಾನ, ಮಾತು ಹಾಗೂ ಮುಂಗುರುಳುಗಳನ್ನು ಹೋಲುವ ಕೋಗಿಲೆ, ಗಿಳಿ, ಹಾಗೂ ಭ್ರಮರಗಳು ಮತ್ತು ಸರ್ವೋತ್ತಮನಾದ ಅವನ ಮುಖಕಾಂತಿಯನ್ನು ಹೊಂದಿರುವ ಚಂದ್ರ, ಇವರು ದಾರಿಯುದ್ದಕ್ಕೂ ನಮ್ಮ ಮನಸ್ಸನ್ನು ಹಾಗೆ ಬೇಡಿಕೊಳ್ಳುವಂತೆ ಮಾಡುತ್ತಿವೆಯಲ್ಲ! ಅಯ್ಯೋ!".

ವಿ. : ೧. ನಿರಾಶೆಯಿಂದಾಗಿ ಶ್ರೀಕೃಷ್ಣನನ್ನು ಮರೆಯಹೊರಟರೂ ಸಹ ದಾರಿಯುದ್ದಕ್ಕೂ ಕಂಡುಬರುತ್ತಿದ್ದ ಕೋಗಿಲೆ ಮೊದಲಾದವುಗಳು ಹಾಗೂ ಚಂದ್ರ ಶ್ರೀಕೃಷ್ಣನ ನೆನಪನ್ನು ಮತ್ತೆ ಮತ್ತೆ ಉಂಟುಮಾಡುತ್ತಾ ಅವನನ್ನು ಮರೆಯದಂತೆ ಮಾಡುತ್ತಿವೆ ಎಂಬುದು ಇಲ್ಲಿಯ ಭಾವ.

೨. ಇದರಿಂದ ಕೋಗಿಲೆಯ ಗಾನ, ಗಿಳಿಗಳ ಮಾತು, ಭ್ರಮರಗಳ ಸಾಲುಗಳು ಹಾಗೂ ಗಗನದಲ್ಲಿ ಹೊಳೆಯುವ ಚಂದ್ರ ಇವರೆಲ್ಲಾ ಶ್ರೀಹರಿಸ್ಮರಣೆಗೆ ಸಾಧನವಾಗುವ ಸಹಜ ಪ್ರತೀಕಗಳು ಎಂಬ ಅಪೂರ್ವ ಶಾಸ್ತ್ರಾರ್ಥ ಧ್ವನಿತವಾಗಿದೆ.

---

೧. ಅನೇನ ಸ್ವಧೀರತಾಪ್ರದರ್ಶನಾಯ ಶ್ರೀಕೃಷ್ಣಂ ಧಿಕ್ಕರ್ತುಂ ಕಾಮನಯಾಽಪಿ ಘಟಕುಟ್ಯೇಪ್ರಭಾತದೃಷ್ಟಾಂತೇನ ವಾಚೋ ಭಂಗ್ಯಂತರೇಣ ಶ್ರೀಕೃಷ್ಣಮೇವ ಹೇತೂಕೃತ್ಯ ಸ್ವಪ್ರೇಮಾತಿಶಯಃ ಪ್ರದರ್ಶಿತೋ ಭವತಿ । -ವ್ಯಾ.

೨. ಶ್ರೀಕೃಷ್ಣಾವಜ್ಞಾಕರಣೋದ್ಯೋಗಾತ್ ಸ್ವಪ್ನಮವಜ್ಞಾನೇ ಅಕೌಶಲ್ಯಾಚ್ಚ ಮಧ್ಯೇಯಂ ನಾಯಿಕೇತಿ ಜ್ಞಾತವ್ಯಮ್ । -ವ್ಯಾ.

೩.. ಶ್ರೀಕೃಷ್ಣನ ಧ್ವನಿ ಕೋಗಿಲೆಯಂತಹುದು, ಅವನ ಮಾತು ಗಿಳಿಗಳಂತಹುದು, ಅವನ ಹಣೆಯ ಮೇಲೆ ಹಾರಾಡುವ ಮುಂಗುರುಳುಗಳು ಭ್ರಮರಗಳ ಸಾಲುಗಳಂತಹವು, ಚಂದ್ರ ಅವನ ಮುಖದ ಕಾಂತಿಯನ್ನು ಹೋಲುವವನು, ಎಂಬ ಅಂಶ ನಿರೂಪಿತವಾಗಿ ಅವೆಲ್ಲವೂ ಶ್ರೀಕೃಷ್ಣನ ಚಿಂತನೆಗೆ ಅಪೂರ್ವರೀತಿಯಲ್ಲಿ ನೆರವಾಗುವವು ಎಂಬ ಸಂದೇಶವು ಇದರಿಂದ ಸೂಚಿತವಾಗುವುದು; ಅನೃತ – ಸುಳ್ಳು; ಪರಭೃತ – ಕೋಗಿಲೆ.

**ಮುಂದುವರೆದ ಗೋಪಿಯರ ಸಲ್ಲಾಪ**

**ರಮಣಿ ರುಚಿರರೂಪಃ ಕಿಂ ನು ದೂರೇ ತವಾಸೀ-**
**ನ್ನಹಿ ನಹಿ ಮಮ ಪುಣ್ಯಂ ತನ್ನಿದೂರೇ ಪ್ರಯಾತಮ್ ।**
**ಬತ ಯದುಕುಲನಾಥಃ ಸ ತ್ವಯಾ ಮೃಗ್ಯತೇ ಕಿಂ**
**ನಹಿ ಸಖಿ ಸಹ ನೀತಂ ಚಿತ್ತಮನ್ವೇಷಯಾಮಿ ॥ ೪೫ ॥**

(ಒಬ್ಬ ಗೋಪಿ)"ರಮಣಿ ! ಮನೋಹರರೂಪದ ಆ ಶ್ರೀಕೃಷ್ಣನು ನಿನ್ನಿಂದ ದೂರವಾಗಿ ಬಿಟ್ಟನೇ?"; (ಇನ್ನೊಬ್ಬ ಗೋಪಿ) "ಇಲ್ಲ, ಇಲ್ಲ; ನನ್ನ ಪುಣ್ಯವೇ ದೂರಕ್ಕೆ ಸರಿಯಿತು"; (ಒಬ್ಬ ಗೋಪಿ)"ಅಯ್ಯೋ ! ಆ ಯದುಕುಲದ ಒಡೆಯನಾದ ಶ್ರೀಕೃಷ್ಣನನ್ನು ನೀನು ಹುಡುಕುತ್ತಿರುವೆಯೇನು?"; (ಇನ್ನೊಬ್ಬ ಗೋಪಿ) "ಗೆಳತಿ! ಇಲ್ಲ, ಇಲ್ಲ, ಅವನು ಕದ್ದೊಯ್ದ ನನ್ನ ಮನಸ್ಸನ್ನು ಹುಡುಕುತ್ತಿರುವೆನು".

ವಿ. : ೧.ಶ್ರೀಕೃಷ್ಣನಿಗಾಗಿ ಹಂಬಲಿಸುವ ಒಬ್ಬ ಗೋಪಿಯು ಅದನ್ನು ಮರೆಮಾಚಲು ಮಾಡುವ [೧]ಪ್ರಯತ್ನ ಇಲ್ಲಿ ಸುಂದರವಾಗಿ ನಿರೂಪಿತವಾಗಿದೆ. ಶ್ರೀಕೃಷ್ಣನೇನೂ ದೂರಾಗಿಲ್ಲ; ತನ್ನ ಪುಣ್ಯವೇ ಹೋಗಿದೆ, ಅವನನ್ನೇನು ಹುಡುಕುತ್ತಿಲ್ಲ; ಅವನ ಹಿಂದೆ ಹೋದ ಮನಸ್ಸನ್ನೇ ಹುಡುಕುತ್ತಿರುವೆ ಎಂಬ ಮಾತಿನಲ್ಲಿನ ಅವಳ ಮರೆಮಾಚುವ ಪ್ರಯತ್ನ ಇನ್ನೂ ಹೆಚ್ಚಾಗಿ ಅವಳಲ್ಲಿನ ಶ್ರೀಕೃಷ್ಣನ ಬಗೆಗಿನ ಹಂಬಲವನ್ನು ಬಯಲು ಮಾಡುವುದು ಇಲ್ಲಿಯ ವಿಶೇಷ.

೨. [೨]ಶ್ರೀಕೃಷ್ಣನು ದೂರಾಗುವುದು ಎಂದರೆ ಪುಣ್ಯವೇ ನಷ್ಟವಾಗುವುದು ಎಂಬ ಮಾತಿನಲ್ಲಿ ಪುಣ್ಯಶೀಲರಿಗೆ ಮಾತ್ರ ಶ್ರೀಹರಿಯು ಲಭಿಸುವನು ಎಂಬ ಪ್ರಮೇಯ ನಿರೂಪಿತವಾದರೆ, ಶ್ರೀಕೃಷ್ಣನೊಂದಿಗೆ ಮನಸ್ಸು ತೆರಳಿದೆ ಎಂಬ ಮಾತಿನಲ್ಲಿ ಮನಸ್ಸು ಶ್ರೀಕೃಷ್ಣನನ್ನು ಬಿಟ್ಟಿರಲಾರದು

---

೧. ನ ಹಿ ಶ್ರೀಕೃಷ್ಣಾನ್ವೇಷಣಂ ನ ಕ್ರಿಯತೇ। ಕಿಂತು ಸಹ ಶ್ರೀಕೃಷ್ಣೇನ ಸಾಕಂ ನೀತಂ ಮನೋಽನ್ವೇಷಯಾಮಿ ಮೃಗ-ಯಾಮಿ। ಅತ್ರಾಪಿ ಪೂರ್ವವದ್ವಸ್ತ್ವತಿಶಯಾದಿಕಂ ದ್ಯೋತ್ಯಮೂಹ್ಯಮ್। -ವ್ಯಾ.

ಪರಿಹಾಸಪ್ರಲಾಪಾದಿಷ್ವನರ್ಥಾ ವಾಕ್ ಕ್ವಚಿತ್ ಭವೇತ್। -ಭಾಗವತತಾತ್ಪರ್ಯೋದ್ಧೃತಶಬ್ದನಿರ್ಣಯ(೫/೨/೭)
ಸಂತಾಪಕ್ರೋಧರಾಗಾದಿಷ್ವನರ್ಥಕವಚಃ ಕ್ವಚಿತ್। -ಭಾಗವತತಾತ್ಪರ್ಯೋದ್ಧೃತಶಬ್ದನಿರ್ಣಯ(೬/೪/೫೮)

೨. ತಥಾ ಚೈತದುಪಹಾಸಪರಿಹಾರಾಯ ವಾಚೋಭಂಗ್ಯಾ ಸ್ವಾಹಂಕಾರಂ ರಕ್ಷಿತುಮುದ್ಯುಕ್ತಾಯಾ ಅಪಿ ಪುಣ್ಯ-ಹೀನಾಯಾ ಮಮ ಕಥಂ ಸ ಲಭ್ಯ ಇತಿ ಪುಣ್ಯಹೀನತ್ವಶ್ರೀಕೃಷ್ಣವಿಯುಕ್ತತ್ವಾಭ್ಯಾಂ ದೈನ್ಯಪ್ರದರ್ಶನೇನ ಸುತರಾ-ಮಹಂಕಾರಪ್ರಚ್ಯುತಿರೇವ ಕೃತಾ ಭವತೀತಿ ಕೃಷ್ಣಾಖ್ಯವಸ್ತ್ವತಿಶಯಃ ಸ್ವಪ್ರೇಮಾತಿಶಯಶ್ಚ ದ್ಯೋತ್ಯತೇ। -ವ್ಯಾ.

ಎಂಬ ಪ್ರಮೇಯ ನಿರೂಪಿತವಾಗಿದೆ. ಹೀಗೆ ಗೋಪಿಯರ ಪ್ರತಿಮಾತಿನಲ್ಲೂ ಶಾಸ್ತ್ರಾರ್ಥ ತುಂಬಿರುವುದು ಗಮನಾರ್ಹ.

## ಗಟ್ಟಿಮಾಡಿಕೊಳ್ಳಲಾಗದ ಗೋಪಿಯರ ಮನಸ್ಸು

**ವಿತನುತ ಬತ ಸಖ್ಯಃ ಸುಸ್ಥಿರಂ ಚಿತ್ತಮಸ್ಮ-**
**ನ್ಮೃದುಲಹೃದವಲೋಕ್ಯ ಸ್ಥೈರ್ಯಮಾಲಂಬಯತ್ ಸಃ ।**
**ಅನುವನಮಯಿ ಕಾಂತಂ ಸಂಚರಂತಂ ಸಮಂತಾ-**
**ದನುಸರದನುರಕ್ತಂ ಕಾರಯೇತ್ ಕಃ ಸ್ಥಿರಂ ತತ್ ॥ ೪೬ ॥**

(ಒಬ್ಬ ಗೋಪಿ)"ಅಯ್ಯೊ! ಸಖಿಯರೇ ! ಮನಸ್ಸನ್ನು ಗಟ್ಟಿಮಾಡಿಕೊಳ್ಳಿ; ಆ ಶ್ರೀಕೃಷ್ಣ ನಮ್ಮ ಮೃದು ಮನಸ್ಸನ್ನು ಕಂಡು, ಹಠ ಮಾಡುತ್ತಿರುವನು"; (ಇನ್ನೊಬ್ಬ ಗೋಪಿ) "ಎಲೈ! ವನವನಗಳಲ್ಲಿ ಎಲ್ಲೆಲ್ಲೂ ಓಡಾಡುವ ಮನೋಹರನಾದ ಆ ಶ್ರೀಕೃಷ್ಣನನ್ನು ಅನುಸರಿಸುವ ಅನುರಕ್ತವಾದ ಆ ಮನಸ್ಸನ್ನು ಯಾರು ತಾನೇ ಗಟ್ಟಿಮಾಡಿಕೊಂಡಾರು?"

## ಬ್ರಹ್ಮನು ಸಹ ಶ್ರೀಕೃಷ್ಣನ ಆದೇಶವನ್ನೇ ಪಾಲಿಸುವವನು

**ಸ ವಿಧಿರಪಿ ನಿದೇಶಂ ತಸ್ಯ ನೂನಂ ವಿಧತ್ತೇ**
**ವಿರಹದಹನಶಾಂತಿಂ ಯನ್ನ ಮೂರ್ಛಾಂ ದದಾತಿ ।**
**ಅಪಿ ನಿಶಿ ಹೃದಯಾಂತಃ ಕೃಷ್ಣಸಂಶ್ಲೇಷಶಂಕೀ**
**ನ ದಿಶತಿ ಚ ಸುಷುಪ್ತಿಂ ಹಾ ಹತಾಃ ಕಿಂ ವಿಧೇಯಮ್ ॥ ೪೭ ॥**

ಆ ವಿಧಿಯು ಸಹ ಆ ಶ್ರೀಕೃಷ್ಣನ ಆಣತಿಯನ್ನೇ ಪಾಲಿಸುತ್ತಿರುವಂತಿದೆ; ಏಕೆಂದರೆ ನಮ್ಮ ಅಗಲುವಿಕೆಯ ಜ್ವಾಲೆಯನ್ನು ಪರಿಹರಿಸಲೆಂದು ಮೂರ್ಛೆಯನ್ನೂ ಸಹ ಅವನು ನಮಗೆ ನೀಡುತ್ತಿಲ್ಲ. ಅಲ್ಲದೆ ಮನಸ್ಸಿನೊಳಗೆ ನಾವು ಶ್ರೀಕೃಷ್ಣನನ್ನು ಆಲಿಂಗಿಸಿಕೊಳ್ಳುವ ಶಂಕೆಯಿಂದ ಅವನು ನಮಗೆ ರಾತ್ರಿಯಲ್ಲಿ ನಿದ್ರೆಯನ್ನು ಸಹ ನೀಡುತ್ತಿಲ್ಲ; ಅಯ್ಯೋ, ನಾವು ಸತ್ತೆವು, ಈಗೇನು ಮಾಡುವುದು?

ವಿ. : ೧. ಶ್ರೀಕೃಷ್ಣನ ಅಗಲುವಿಕೆಯಿಂದ ತಪಿಸುತ್ತಿರುವ ಅವರಿಗೆ ಮೂರ್ಛೆಯಾಗಲೀ ನಿದ್ರೆ-ಯಾಗಲಿ ಬರುತ್ತಿಲ್ಲ ಎಂಬುದು ಇಲ್ಲಿಯ ಮುಖ್ಯಾಂಶ.

೨. ನಿದ್ರೆ, ಮೂರ್ಛೆಗಳು ಸಹ ದೈವಾಧೀನವೇ ಹೊರತು ಜೀವನ ಕೈಯಲ್ಲಿಲ್ಲ ಎಂಬುದನ್ನು 'ಆ ವಿಧಿಯು ಅವನನ್ನು ನೀಡುತ್ತಿಲ್ಲ' ಎಂಬ ಮಾತಿನಿಂದ ಸೂಚಿಸಿರುವರು.

೩. ಶ್ರೀಕೃಷ್ಣನ ಆಣತಿಯನ್ನು [1]ಬ್ರಹ್ಮ ಪಾಲಿಸುತ್ತಿರುವನು ಎಂಬ ಮಾತಿನಿಂದ 'ಶ್ರೀಕೃಷ್ಣನು ಸರ್ವೋತ್ತಮ, ಬ್ರಹ್ಮದೇವರು ಅವನ ಆಜ್ಞಾವರ್ತಿಗಳು' ಎಂಬ ಪ್ರಮೇಯವೂ ನಿರೂಪಿತ.

### ಶ್ರೀಕೃಷ್ಣನ ದರ್ಶನಕ್ಕೆ ಅರ್ಹತೆ

ಯದಿ ಮಧುರಮಪಾಯಿ ಸ್ವೀಯಗಾಥಾಮೃತಂ ಪ್ರಾಕ್
ಸ್ಫುರದಧರಸುಧಾಂ ಸ್ವಾಂ ತರ್ಹಿ ಯಚ್ಛೇನ್ಮುಕುಂದಃ ।
ಕ್ವಚಿದಪಿ ನಿಜಧಾಮ ಸ್ಥಾವರಂ ಜಂಗಮಂ ವಾ
ಯದಿ ವಿಮಲಮದರ್ಶಿ ಸ್ವಂ ತದಾ ದರ್ಶಯೇನ್ನಃ ॥ ೪೮ ॥

ನಾವು ಹಿಂದೆ ಅವನ ಮಧುರವಾದ ಕಥಾಮೃತವನ್ನು ಪಾನಮಾಡಿದ್ದೆವಾದಲ್ಲಿ, ಮುಕುಂದ-ನಾದ ಅವನು ನಮಗೆ ತನ್ನ ಹೊಳೆಯುವ ಅಧರಾಮೃತವನ್ನು ನೀಡುತ್ತಿದ್ದನು; ಎಲ್ಲಾದರೂ ಅವನ ನಿರ್ಮಲ ನೆಲೆಯಾದ ಜಡ ಅಥವಾ ಚೇತನ ಪ್ರತಿಮೆಯನ್ನು ನಾವು ಕಂಡಿದ್ದೆವಾದಲ್ಲಿ ಅವನು ತನ್ನನ್ನು ನಮಗೆ ಕಾಣಿಸಿಕೊಡುತ್ತಿದ್ದನು.

ವಿ. : ೧. [2]ಶ್ರೀಕೃಷ್ಣಕಥಾಮೃತಪಾನದ ಪುಣ್ಯದಿಂದ ಅವನು ಲಭಿಸುವನು; ಅವನ ವಿಗ್ರಹ-ದರ್ಶನವು ಅವನ ದರ್ಶನಕ್ಕೆ ಸಾಧನ ಎಂಬ ವಿಶೇಷಾಂಶ ಇಲ್ಲಿ ನಿರೂಪಿತ.

೨. ಇವುಗಳನ್ನು ಮಾಡದವರಿಗೆ ಅವನು ಲಭಿಸುವುದು ದುರ್ಲಭ ಎಂಬುದು ಇಲ್ಲಿಯ ಸಂದೇಶ.

### ಗೋಪಿಯರು ದೇಹತೊರೆಯದಿರಲು ಕಾರಣ

ಕರರುಹಪದಭಾಸ್ವದ್ಗಾತ್ರವಿಶ್ಲೇಷಭೀತ್ಯಾ
ನ ಮೃತಿರನುಮತಾ ನಃ ಕೃಷ್ಣ ತೇಽದರ್ಶನಾಚ್ಚ ।
ಅಸುಭೃತಿರಪಿ ತಸ್ಮಾತ್ ಸೌಮ್ಯ ಸೌಂದರ್ಯಧಾಮ-
ನ್ನಧಿಗಹನಮುಭಾಭ್ಯಾಂ ಬದ್ಧಕಂಠಾ ಇವ ಸ್ಮಃ ॥ ೪೯ ॥

ಎಲೈ ಸೌಮ್ಯನೇ ! ನಿನ್ನ ಉಗುರುಗಳ ಗುರುತಿನಿಂದ ಹೊಳೆಯುವ [3]ಶರೀರದ ಅಗಲು-ವಿಕೆಯ ಭಯದಿಂದ ನಮಗೆ ಸಾಯಲು ಮನಸ್ಸಾಗುತ್ತಿಲ್ಲ; ಹಾಗೂ ನೀನು ಕಾಣದಾಗಿರು-

---

೧. ಕೇನಚಿದ್ವ್ಯಾಜೇನ ಶ್ರೀಕೃಷ್ಣಸ್ಯ ಬ್ರಹ್ಮಾದಿನಿಯಾಮಕತ್ವರೂಪಮಹಾಮಾಹಾತ್ಮ್ಯಮೇವ ಕಥಿತಂ ಭವತಿ । ಅನೇನ ಜಾಗರಾವಸ್ಥಾ ದರ್ಶಿತಾ । "ಪ್ರಿಯಾನವಾಪ್ತ್ಯಾ ತಚ್ಚಿತ್ತಸಾತತ್ಯಾಜ್ಜಾಗರೋ ಯಥಾ" ಇತ್ಯುಕ್ತೇಃ । -ವ್ಯಾ.

೨. ಶ್ರೀಕೃಷ್ಣಕಥಾಕಥನಾದಿನಾ ಪುಣ್ಯಮಸ್ತಿ ಚೇತ್ಕೃಷ್ಣೋ ಲಭ್ಯತಾಮಿತಿ ಹೃದಯಮ್ । -ವ್ಯಾ.

೩. ಶರೀರಲೋಭಾನ್ನ ಮೃತಿರನಿಷ್ಟಾ ಕಿಂತು ತವ ವಿಲಾಸಚಿಹ್ನಲೋಭಾದಿತಿ ವದಂತೀಭಿಃ ಕೃಷ್ಣಸ್ನೇಹಾತಿಶಯಃ ಪ್ರದರ್ಶಿತೋ ಭವತಿ । ಏವಮುತ್ತರತ್ರಾಪಿ ದ್ರಷ್ಟವ್ಯಮ್ । -ವ್ಯಾ.

ವುದರಿಂದ ನಾವು ಜೀವಹಿಡಿದುಕೊಳ್ಳಲೂ ಸಾಧ್ಯವಾಗುತ್ತಿಲ್ಲ. ಎಲೈ ಸೌಂದರ್ಯದ ನಿಧಿಯೇ ! ಈ ಎರಡರಿಂದಾಗಿ ನಾವು ಈ ಕಾಡಿನಲ್ಲಿ ಕತ್ತು ಬಿಗಿದಂತಾಗಿರುವೆವು.

ವಿ. : ೧. ತಮ್ಮ ದೇಹದಲ್ಲಿ ಶ್ರೀಕೃಷ್ಣನ ಉಗುರಿನ ಗುರುತು ಉಂಟಾಗಿರುವುದರಿಂದ ಅದನ್ನು ತೊರೆಯುವುದು ಸಾಧ್ಯವಾಗುತ್ತಿಲ್ಲ. ಆದರೆ ಅವನು ಕಾಣೆಯಾಗಿರುವುದರಿಂದ ಬದುಕಲು ಸಹ ಸಾಧ್ಯವಾಗುತ್ತಿಲ್ಲ; ಹೀಗೆ ಇಕ್ಕಟ್ಟಿನಲ್ಲಿ ತಮ್ಮ ಸ್ಥಿತಿ ಇದೆ ಎಂಬುದು ಗೋಪಿಯರ ಭಾವ.

೨. ಆತ್ಮಹತ್ಯೆಗೆ ಬಯಸುವವರು ಈ ಚಿಂತನೆಯನ್ನು ಅಳವಡಿಸಿಕೊಳ್ಳಬೇಕು ; ಸಾಧನ-ದೇಹವಾದ್ದರಿಂದ ಎಂತಹ ಆಪತ್ತು ಒದಗಿದಾಗಲೂ ಅದನ್ನು ತೊರೆಯುವುದು ತರವಲ್ಲ ಎಂಬುದು ಇಲ್ಲಿನ ಮುಖ್ಯ ತತ್ತ್ವ[೧]; ಕರರುಹ – ಉಗುರು; ವಿಶ್ಲೇಷ – ವಿಯೋಗ.

### ಶ್ರೀಕೃಷ್ಣನಲ್ಲಿ ಬಗೆಬಗೆಯ ಪ್ರಾರ್ಥನೆ

**ನಯನಗನಲಿನೇಷುಂ ಕಾಂತವಕ್ತ್ರೇಂದುಕಾಂತ್ಯಾ**
**ನವಪದರವಿಭಾಸಾ[೨] ನಃ ಕುಚಸ್ಥೋತ್ಪಲೇಷುಮ್ ।**
**ಶಮಯ ಸದಯ ಗಾಢಾಲಿಂಗನೇನಾರ್ಧಗಾತ್ರೀ-**
**ರ್ವಿರಚಯ ತವ ದಾಸೀಸ್ತೇನ ಕಂದರ್ಪದರ್ಪಮ್[೩] ॥ ೫೦ ॥**

ಶ್ರೀಕೃಷ್ಣ! ಕಣ್ಣಿನ ಬಳಿಯ ಮನ್ಮಥನ ಪದ್ಮಬಾಣವನ್ನು ನಿನ್ನ ಮನೋಹರವಾದ ಮುಖಚಂದ್ರನ ಕಾಂತಿಯಿಂದ ಶಮನಗೊಳಿಸು; ನಮ್ಮ ಸ್ತನಗಳಲ್ಲಿನ ಕನ್ನೈದಿಲೆಯ ಬಾಣವನ್ನು ನಿನ್ನ ಪಾದವೆಂಬ ಉದಿಸುವ ಸೂರ್ಯಕಾಂತಿಯಿಂದ ಶಮನಗೊಳಿಸು; ಎಲೈ ಕರುಣಾಳುವೇ! ಗಾಢಾಲಿಂಗನದಿಂದ ನಿನ್ನ ದಾಸಿಯರಾದ ನಮ್ಮನ್ನು ಅರ್ಧದೇಹದವ-ರನ್ನಾಗಿಸು; ಆ ಮೂಲಕ ಆ ಕಾಮನ ಸೊಕ್ಕನ್ನು ಅಡಗಿಸಿಬಿಡು.

ವಿ. : ೧. ಕಮಲ ಹಾಗೂ ಕನ್ನೈದಿಲೆಗಳು ಕಾಮನ ಪಂಚಬಾಣಗಳಲ್ಲಿ ಎರಡು ಎಂಬುದಾಗಿ ಪ್ರಸಿದ್ಧ; ಕಮಲವನ್ನು ಬಾಡಿಸಲು ಚಂದ್ರೋದಯ ಅಗತ್ಯವಾದರೆ, ಕನ್ನೈದಿಲೆಯನ್ನು ಮುದುಡಿಸಲು ಸೂರ್ಯೋದಯ ಅಗತ್ಯ; ಶ್ರೀಕೃಷ್ಣನ ಮುಖವು ಚಂದ್ರನಂತಿದ್ದು ಕಮಲಬಾಣಕ್ಕೆ ಪರಿಹಾರವಾದರೆ ಅವನ ಪಾದಗಳು ಸೂರ್ಯನಂತೆ ಕೆಂಪಾಗಿದ್ದು ಕನ್ನೈದಿಲೆಯ ಬಾಣಕ್ಕೆ

---

೧. ಮತಿಪೂರ್ವಂ ದೇಹಹಾನಾತ್ ಪಾಪಂ ಮಹದವಾಪ್ಯತೇ ।
ಧರ್ಮಾರ್ಥಕಾಮಮೋಕ್ಷಾಣಾಂ ಸಾಧನಂ ದೇಹತೋಽಸ್ತಿ ಯತ್ ॥ –ಮ.ಭಾ.ತಾ.ನಿ.(೨೭/೧೨೩.)

೨. ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ । – ದ್ವಾದಶಸ್ತೋತ್ರ (೧/೨)

೩.. ಅತ ಏವ ವಿಭಾವನಾಲಂಕಾರೇಣ ವಸ್ತುಸೂಚನಮ್ । –ವ್ಯಾ.

ಪರಿಹಾರವಾಗಿದೆ; ಇದರಿಂದ ಕೃಷ್ಣನ ಮುಖ ಹಾಗೂ ಪಾದಗಳ ಚಿಂತನೆಯಿಂದ ಕುತ್ಸಿತಕಾಮವು [೧]ಶಮನ [೨]ಹೊಂದುವುದು ಎಂದು ಭಾವ.

೨. ಶ್ರೀಕೃಷ್ಣನ ಗಾಢಾಲಿಂಗನದಿಂದ ತಮಗೆ ಅರ್ಧನಾರೀಶ್ವರನಾದ ಶಿವನ ಕಾಂತಿ ಲಭಿಸುವುದು; ಶಿವನ ಹಣೆಗಣ್ಣಿನ ಅಗ್ನಿಗೆ ಕಾಮ ಭಸ್ಮವಾದದ್ದು ಸುಪ್ರಸಿದ್ಧ ; ಈ ಸಮಯದಲ್ಲಿ ಅನೇಕ ಗೋಪಿಯರು ಕೃಷ್ಣಾಲಿಂಗನದಿಂದಾಗಿ ಅರ್ಧನಾರೀಶ್ವರನಂತೆ ಕಂಗೊಳಿಸುವುದರಿಂದ ಕಾಮನ ಉಪಟಳ ನಶಿಸುವುದು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು.

೩. ಒಬ್ಬ ಅರ್ಧನಾರೀಶ್ವರನಾದ ಶಿವನಿಂದಲೇ ಕಾಮ ಅಳಿದಿರುವಾಗ, ಇಂತಹ ಅಸಂಖ್ಯ ಅರ್ಧನಾರೀಶ್ವರರಿರುವಾಗ, ಕಾಮನೆಂತು ಉಳಿದಾನು ? ಎಂಬುದು ಇಲ್ಲಿಯ ಭಾವ[೩].

## ಶ್ರೀಕೃಷ್ಣನ ಪ್ರಾರ್ಥನೆ

**ಅಯಿ ರಮಣ ಮುರಾರೇ ಸುಂದರೀಕಾಂತ ಶೌರೇ**
**ನರಕಮಥನ ಕೃಷ್ಣ ಪ್ರೌಢ ವಾರಾಶಿಧಿಷ್ಣ ।**
**ಕರಜಿತಸುರವೃಕ್ಷಾಹಂಕೃತಾತ್ಮೀಯಶಿಕ್ಷ**
**ಸ್ವಕವಿಜಯಸಹಾಯ ಧ್ವಸ್ತಧರ್ಮಾಂತರಾಯ ॥ ೫೧ ॥**

ಎಲೈ ರಮಣನಾದ ಮುರಾರಿಯೇ ! ಸುಂದರಿಯಾದ ಮಹಾಲಕ್ಷ್ಮಿಯ ಪತಿಯೇ ! ಶೂರ-ರಾಜನ ಮೊಮ್ಮಗನಾದ ಶ್ರೀಕೃಷ್ಣನೇ! ನರಕದಿಂದ ಪಾರುಮಾಡುವವನೇ ! ಪ್ರೌಢನಾದವನೇ! ಕ್ಷೀರಾಬ್ಧಿಮಂದಿರನೇ ! ಕೊಡುಗೆಯಲ್ಲಿ ಕಲ್ಪವೃಕ್ಷವನ್ನು ಮೀರಿದವನೇ ! ಅಹಂಕಾರಪಡುವ ನಿನ್ನವರನ್ನು ಶಿಕ್ಷಿಸುವವನೆ! ನಿನ್ನ ಭಕ್ತರ ವಿಜಯಕ್ಕೆ ಕಾರಣನಾಗುವವನೇ! ಧರ್ಮದ ವಿಘ್ನಗಳನ್ನು ಪರಿಹರಿಸುವವನೇ ! (ನೀನು ನಮ್ಮನ್ನು ಅನುಗ್ರಹಿಸು).

ವಿ. : ೧. ಇದರಲ್ಲಿ [೪]ಶ್ರೀಕೃಷ್ಣನಿಂದ ಮುಂದೆ ನಡೆಯುವ ಮುರಾಸುರ ವಧೆ, ನರಕಾಸುರ ವಧೆ, ಪಾರಿಜಾತಾಪಹರಣ, ಆ ಕಾಲದಲ್ಲಿ ನಡೆದ ಇಂದ್ರಾದಿಗಳ [೫]ಶಿಕ್ಷಣ, ದ್ವಾರಕೆಯ

---

೧. ಅಸ್ಮತ್ಪೂರ್ಣಕಾಮೋದ್ರೇಕಸ್ತವ ಗಾಢಾಲಿಂಗನಾವಧಿರಿತಿ ಭಾವಃ । ಅನೇನ ತ್ರಪಾನಾಶಾವಸ್ಥಾ ಸೂಚಿತಾ । "ಮಾನತ್ಯಾಗಸ್ತ್ರಪಾನಾಶೋ ಗೌರವಾಗಣನಾ ಯಥಾ"ಇತ್ಯುಕ್ತೇಃ । -ವ್ಯಾ.

೨. ಫಣಿಫಣಾರ್ಪಿತಂ ತೇ ಪದಾಂಬುಜಂ ಕೃಣು ಕುಚೇಷು ನಃ ಕೃಂಧಿ ಹೃಚ್ಛಯಮ್ । -ಗೋಪಿಗೀತ

೩. ತೇನ ಬಹುಸಂಖ್ಯಾಕಾರ್ಧನಾರೀಶ್ವರಪ್ರತೀತ್ಯಾ ಏಕಸ್ಮಾದಪ್ಯರ್ಧನಾರೀಶ್ವರಾದ್ಬಿಭ್ಯತಃ ಕಂದರ್ಪಸ್ಯ ದರ್ಪಂ ಗರ್ವಂ ಶಮಯ । -ವ್ಯಾ.

೪. ಜ್ಞಾನಿಪ್ರಿಯಸ್ತ್ವಮತೀತಾನಾಗತಜ್ಞಾನವತೀರಸ್ಮಾನ್ನೋಪೇಕ್ಷಸ್ವೇತಿ ಭಾವಃ । -ವ್ಯಾ.

೫. ಅನೇನ ಪಾರಿಜಾತಾಪಹಾರಕಾಲೇ ಅಹಂಕಾರೇಣ ಯುದ್ಧಾರ್ಥಮಾಗತಾನಾಂ ದೇವಾನಾಮಾಗಾಮಿನೀ ಶಿಕ್ಷಾ ದ್ಯೋತ್ಯತೇ । -ವ್ಯಾ.

ನಿರ್ಮಾಣ, ಯುದ್ಧದಲ್ಲಿ ಅರ್ಜುನನಿಗೆ ಸಾರಥಿಯಾಗುವಿಕೆ[೧], [೨]ಧರ್ಮರಾಜನಿಗೆ ಒದಗಿದ ವಿಘ್ನಗಳನ್ನು ಪರಿಹರಿಸುವಿಕೆ [೩]ಮೊದಲಾದ ಅನೇಕ ಕಾರ್ಯಗಳು ಸೂಚಿತವಾಗಿವೆ ಎಂಬುದು ವಿಶೇಷ; ವಾರಾಶಿ - ಕ್ಷೀರಸಮುದ್ರ.

೨. 'ಶೌರಿ' ಎಂಬುದಕ್ಕೆ ಶೂರರಾಜನ ಮಗನಾದ [೪]ವಸುದೇವನ ಪುತ್ರ ಎಂದು ಮೇಲ್ನೋಟದ ಅರ್ಥ. ಮುಖ್ಯವಾಗಿ ಇದು ವಿಷ್ಣುಸಹಸ್ರನಾಮದ ಪದ: "ಶೌರಿಃ (ಶೂರಃ - ಪಾ.) ಶೂರಜನೇಶ್ವರಃ". ಇದನ್ನು ನೇರವಾಗಿಯೇ ಶ್ರೀಕೃಷ್ಣನಿಗೆ ಅನ್ವಯಿಸುವದನ್ನಾಗಿಯೂ ಅರ್ಥಮಾಡಿಕೊಳ್ಳಬಹುದು.

### ಶ್ರೀಕೃಷ್ಣನು ಕಾಣದಿರಲು ಕಾರಣ

ವೃಕ್ಷೇಷು[೫] ಪಕ್ಷಿಷು ಮೃಗೇಷು ವಿಚಾರಯಂತೀಃ
ಪ್ರೇಕ್ಷ್ಯ ಪ್ರಮುಗ್ಧಹೃದಯಾಃ ಶ್ರುತತತ್ತ್ವಕಾಂತೀಃ ।
ಆವಿರ್ಬುಭೂಷುರಪಿ ರಮ್ಯತದೀಯವಾಕ್ಯ-
ಭಾವಂ ಪುನರ್ವಿವಿದಿಷುಃ ಸ ತದಾ ತಿರೋऽಭೂತ್ ॥ ೫೨ ॥

ಮರಗಳಲ್ಲಿ, ಪಕ್ಷಿಗಳಲ್ಲಿ, ಮೃಗಗಳಲ್ಲಿ - ಹೀಗೆ ತನ್ನ ಬಗ್ಗೆ ವಿಚಾರಿಸುತ್ತಾ ಮೈಮರೆತಿದ್ದ ತತ್ತ್ವಜ್ಞಾನಿಗಳ ಸೊಬಗನ್ನು ಹೊಂದಿದ್ದ ಅವರನ್ನು ನೋಡಿ, ಕಾಣಿಸಿಕೊಳ್ಳಲು ಬಯಸಿದರೂ ಸಹ ಆಗ ಆ ಶ್ರೀಕೃಷ್ಣನು ಅವರ ಮನೋಹರವಾದ ಮಾತುಗಳ ಭಾವವನ್ನು ಮತ್ತಷ್ಟು ತಿಳಿಯಲು ಬಯಸಿದವನಾಗಿ ಪುನಃ ಮರೆಯಾಗಿಬಿಟ್ಟನು.

---

೧. ಅನೇನ ಸ್ವಭಕ್ತಸ್ಯ ವಿಜಯಸ್ಯಾರ್ಜುನಸ್ಯ ಸಾರಥ್ಯಕರಣಮನಾಗತಂ ಸೂಚಿತಮ್ । -ವ್ಯಾ.

೨. ಅನೇನ ಧರ್ಮಸ್ಯ ಯುಧಿಷ್ಠಿರಸ್ಯ ಅಂತರಾಯಭೂತದುರ್ಯೋಧನಸೇನಾಸಂಹಾರೋऽಪ್ಯಾಗಾಮೀ ಸೂಚಿತಃ । -ವ್ಯಾ.

೩. ಅನೇನ ಸಮುದ್ರಮಧ್ಯೇ ದ್ವಾರಾವತೀನಿರ್ಮಾಣಸ್ಯಾನಾಗತಸ್ಯ ಜ್ಞಾನಮ್ । -ವ್ಯಾ.

೪. ಇದಾನೀಂ ನಂದಸೂನುತಯಾ ಪ್ರತೀಯಮಾನಸ್ತ್ವಂ ವಸ್ತುಗತ್ಯಾ ವಸುದೇವಸೂನುರಿತ್ಯತೀತಜ್ಞಾನಮ್ । -ವ್ಯಾ.

೫. ಏವಂ ಕೃಷ್ಣಂ ಪೃಚ್ಛಮಾನಾ ವೃಂದಾವನಲತಾಸ್ತರೂನ್ ।
ವ್ಯಚಕ್ಷತ ವನೋದ್ದೇಶೇ ಪದಾನಿ ಪರಮಾತ್ಮನಃ ॥
ಪದಾನಿ ವ್ಯಕ್ತಮೇತಾನಿ ನಂದಸೂನೋರ್ಮಹಾತ್ಮನಃ ।
ಲಕ್ಷ್ಯಂತೇ ಹಿ ಧ್ವಜಾಂಭೋಜವಜ್ರಾಂಕುಶಲತಾದಿಭಿಃ ॥
ತೈಸ್ತೈಃ ಪದೈಸ್ತತ್ಪದವೀಮನ್ವಿಚ್ಛಂತ್ಯೋऽಗ್ರತೋऽಬಲಾಃ ।
ವಧ್ವಾಃ ಪದೈಃ ಸುಪೃಕ್ತಾನಿ ವಿಲೋಕ್ಯಾರ್ತಾಃ ಸಮಬ್ರುವನ್ ॥
ಕಸ್ಯಾಃ ಪದಾನಿ ಚೈತಾನಿ ಯಾತಾಯಾಃ ನಂದಸೂನುನಾ ।
ಅಂಸನ್ಯಸ್ತಪ್ರಕೋಷ್ಠಾಯಾಃ ಕರಿಣ್ಯಾಃ ಕರಿಣಾ ಯಥಾ ॥
ಅನಯಾऽऽರಾಧಿತೋ ನೂನಂ ಭಗವಾನ್ ಹರಿರೀಶ್ವರಃ ।
ಯನ್ನೋ ವಿಹಾಯ ಗೋವಿಂದಃ ಪ್ರೀತೋ ಯಾಮನಯದ್ ರಹಃ ॥ -ಭಾಗ.(೧೦/೨೮/೧೩-೧೮)

ವಿ. : ೧. ಗೋಪಿಯರ ಅಂತಹ ಪರಿಸ್ಥಿತಿಯನ್ನು ಕಂಡು ಕೃಷ್ಣನಿಗೆ ದರ್ಶನ ನೀಡಬೇಕೆನ್ನಿಸಿದರೂ ಅವರ ಮಾತಿನಲ್ಲಿನ ಸ್ವಾರಸ್ಯವನ್ನು ಗಮನಿಸಿ, ಅವುಗಳನ್ನು ಇನ್ನಷ್ಟು ಕೇಳಿಸಿಕೊಳ್ಳಲೋ ಎಂಬಂತೆ ಶ್ರೀಕೃಷ್ಣನು ಪುನಃ ಅದೃಶ್ಯನಾಗಿಯೇ ಇದ್ದುಬಿಟ್ಟನು.

೨. ಶ್ರೀಕೃಷ್ಣನು ಅಂತಹ ಗೋಪಿಯರ ಆರ್ತಭಾವಕ್ಕೂ ಒಲಿಯದೆ ಇರಲು ಕಾರಣ, ಅವನ ಕಠಿಣಹೃದಯಕ್ಕೆ ದ್ಯೋತಕ ಎಂಬಂತೆ ಮೇಲ್ನೋಟಕ್ಕೆ ಕಂಡರೂ ವಾಸ್ತವವಾಗಿ ಅವರ ಮಾತುಗಳನ್ನು ಮತ್ತಷ್ಟು ಕೇಳಿಸಿಕೊಳ್ಳಲೋ ಎಂಬಂತೆ ಕೃಷ್ಣನು ದರ್ಶನವನ್ನು ನೀಡಲಿಲ್ಲ ಎಂಬುದು ಅವನ ಕಾರುಣ್ಯಕ್ಕೆ ದ್ಯೋತಕ ಎಂಬುದು ಇಲ್ಲಿಯ ಭಾವ.

೩. ಇಲ್ಲಿ ಮತ್ತಷ್ಟು ಕೇಳಿಸಿಕೊಳ್ಳುವುದು ಎಂದರೆ ಅವರ ಭಕ್ತಿ ಮತ್ತಷ್ಟು ಪರಿಪಾಕಗೊಳ್ಳಲು ಅವಕಾಶವನ್ನು ನೀಡುವುದು ಎಂದರ್ಥ.

### ಶ್ರೀಕೃಷ್ಣನು ತೋರಿದ ಕಾಮಿಗಳ ನೀತಿ

**ಕಾಮಿನೀತಿ ಜಿತಾಪದ್ಯಾಂ ನಿನಾಯ ಸುಖಯನ್ ಸುಖೀ ।**
**ಕಾಮಿನೀತಿಜಿತಾ ಪದ್ಯಾಂ ಕಾಂಚಿದಾಸಾದ್ಯ ಸೋಜ್ಝಿತಾ [೧] ॥ ೫೩ ॥**

ದುಃಖರಹಿತನಾದ ಶ್ರೀಕೃಷ್ಣನು ತನ್ನಲ್ಲಿ ಅನುರಾಗವುಳ್ಳವಳು ಎಂಬ ಕಾರಣದಿಂದ ಗೋಪಿಯೊಬ್ಬಳನ್ನು ಕರೆದೊಯ್ದು ಆನಂದಪಡಿಸಿದ; ಕಾಮಿಗಳ ರೀತಿಯನ್ನು ಮೆಟ್ಟಿನಿಂತ ಅವನು ಬೇರೊಂದು ಮಾರ್ಗವೊಂದನ್ನು ಹಿಡಿದು, ಆ ಬಳಿಕ ಅವಳನ್ನು ತೊರೆದ.

ವಿ. : ೧. [೨]ಶ್ರೀಕೃಷ್ಣನು ಒಬ್ಬ ಗೋಪಿಯೊಂದಿಗೆ ವಿಹರಿಸಿದ್ದು ಅವಳು ಭಕ್ತಳೆಂಬ ಕಾರಣದಿಂದ; ಆ ಬಳಿಕ ಅವಳನ್ನು ತೊರೆದದ್ದು ತಾನು ಯಾರನ್ನೂ ಅವಲಂಬಿಸದ ಸ್ವರತ ಎಂಬುದನ್ನು ತೋರಿಸಲು ಎಂದು ಭಾವ.

೨. ಮೇಲ್ನೋಟಕ್ಕೆ ನಂಬಿದವರನ್ನು ಕೈಬಿಡುವ ಕಾಮುಕಜನರ ರೀತಿಯಂತೆ ಕಾಣುವ ಇದು ವಾಸ್ತವವಾಗಿ ಶ್ರೀಕೃಷ್ಣನ ಭಕ್ತವಾತ್ಸಲ್ಯ ಹಾಗೂ ಸ್ವರತತ್ವರೂಪ ಮಹಾಮಹಿಮೆಯನ್ನು ಸ್ಫುಟಪಡಿಸುವ ಪ್ರಸಂಗ ಎಂದು ಭಾವ (ಯಮಕಾಲಂಕಾರ-ಆದಿಪಾದ).

೩. ಕಾಮಿನೀ ಇತಿ ; ಕಾಮಿನೀತಿ ಎಂಬುದಾಗಿ ಪೂರ್ವಾರ್ಧ ಹಾಗೂ ಉತ್ತರಾರ್ಧಗಳಲ್ಲಿ ಪದವಿಭಾಗ.

---

೧. ಯಮಕಾಲಂಕಾರಃ; ಅರ್ಥಾಲಂಕಾರಸ್ತು ಸ್ವಭಾವಾದಿರ್ಯಥಾಸಂಭವಮೂಹ್ಯಃ। -ವ್ಯಾ.
ಅಸ್ಮಿನ್ ಶ್ಲೋಕೇ ಆದಿಪಾದಯಮಕಮ್। -ವ್ಯಾ.

೨. ಜಿತಾಪತ್ಸುಖೀತ್ಯನೇನ ಪರಾರ್ಥಮೇವ ಕೃಷ್ಣಸ್ಯ ಪ್ರವೃತ್ತಿಃ ನ ತು ಸ್ವದುಃಖಪರಿಹಾರಾಯ ಸುಖಪ್ರಾಪ್ತಯೇ ವೇತಿ ದ್ಯೋತ್ಯತೇ। -ವ್ಯಾ. ; 'ನ ಪ್ರಯೋಜನವತ್ತ್ವಾತ್' -ಬ್ರಹ್ಮಸೂತ್ರ (೨/೧/೩೩.)

## ಶ್ರೀಕೃಷ್ಣನನ್ನು ಅನುಸರಿಸಿ ನಡೆದ ಗೋಪಿ

[1]ಸಾಽರಸಾಽಸಾರಸಂಸಾರೇ ಸಸಾರ ಸುರಸೂರಸಮ್ ।
ಸುಸಾರಸರಸಾರೋರಃಸರಸೀಸರಸಾರಸೀ [2]॥ ೫೪ ॥

ಪದಚ್ಛೇದ : ಸಾ ಅರಸಾ ಅಸಾರಸಂಸಾರೇ ಸಸಾರ ಸುರಸೂರಸಮ್ ಸುಸಾರಸರಸಾರೋರಃ-ಸರಸೀಸರಸಾರಸೀ.

ಅಸಾರವಾದ ಸಂಸಾರದಲ್ಲಿ ಅಭಿಲಾಷೆ ತೊರೆದ ಆ ಗೋಪಿಯು ತನ್ನ ವಕ್ಷಸ್ಥಳದಲ್ಲಿ ಸುರ-ಮಾತೆಯಾದ ಮಹಾಲಕ್ಷ್ಮಿಯನ್ನು ಧರಿಸಿದಂತಹ ಶ್ರೀಕೃಷ್ಣನನ್ನು ಅನುಸರಿಸಿ ನಡೆದಳು; ಅತ್ಯಂತಶ್ರೇಷ್ಠವಾದ ಮುತ್ತಿನ ಸರಗಳಿಂದ ಉತ್ತಮವಾದ [3]ಹೃದಯವೆಂಬ ಸರೋ-ವರದಲ್ಲಿನ ಜಲದಲ್ಲಿ ಸಂಚರಿಸುವ ಸಾರಸಪಕ್ಷಿಯಂತೆ (ಇದು ಎರಡು ಅಕ್ಷರಗಳ ಯಮಕ).

## ಶ್ರೀಕೃಷ್ಣನನ್ನು ಕಾಣಲು ಗೋಪಿಯ ಕಾತರ

ಅಲಕ್ಷಯಂತೀ ಸ್ಮರತಾತಮೇನಂ
ಹೃದಾಽಽತ್ತಖೇದಾ ಸ್ಮರತಾ ತಮೇನಮ್ ।
ಜಗಾದ ಸೌಮ್ಯಂ ನಯ ನಾತಿದೂರಂ
ವಿಧೇ ನ ಕುರ್ಯಾ ನಯನಾತಿದೂರಮ್ ॥ ೫೫ ॥

ಮನ್ಮಥಜನಕನಾದ ಶ್ರೀಕೃಷ್ಣನನ್ನು ಕಾಣದವಳಾದ ಒಬ್ಬಳು ಮರೆಯಲ್ಲಿದ್ದ ಅವನನ್ನು ಮನಸ್ಸಿನಲ್ಲಿ ಚಿಂತಿಸುತ್ತಾ ದುಃಖಹೊಂದಿದವಳಾಗಿ ನುಡಿದಳು: ''ಎಲೈ ವಿಧಿಯೇ ! ಸೌಮ್ಯನಾದ ಶ್ರೀಕೃಷ್ಣನನ್ನು ನನ್ನಿಂದ ದೂರಕ್ಕೆ ಒಯ್ಯದಿರು; ಕಣ್ಣುಗಳಿಗೆ ಬಹಳವಾಗಿ ದೂರ ಮಾಡದಿರು''.

ವಿ. : ೧. ಈ ಶ್ಲೋಕದಲ್ಲಿನ ಒಂದನೇ ಹಾಗೂ ಎರಡನೇ ಪಾದಗಳ ಹಾಗೂ ೩. ಹಾಗೂ ೪ನೇ ಪಾದಗಳ ಉತ್ತರಾರ್ಧದಲ್ಲಿ ಸ್ಮರತಾತಮೇನಂ ಹಾಗೂ ನಯನಾತಿದೂರಂ ಎಂಬಲ್ಲಿ ಯಮಕಾಲಂಕಾರ.

೨. **ನಯ ನ - ಅತಿದೂರಂ; ನಯನ - ಅತಿದೂರಮ್** ಎಂಬುದಾಗಿ ೩. ಹಾಗೂ ೪ನೇ ಪಾದಗಳಲ್ಲಿನ '**ನಯನಾತಿದೂರಮ್**' ಎಂಬುದಕ್ಕೆ ಪದ ಹಾಗೂ ಶಬ್ದಗಳ ವಿಭಾಗ.

೩.. 'ಸೌಮ್ಯ' ಎಂಬುದಕ್ಕೆ ಚಂದ್ರವಂಶದಲ್ಲಿ ಅವತರಿಸಿದವನು ಎಂಬ ಅರ್ಥವೂ ವಿವಕ್ಷಿತ.

---

೧. ಸಾರಸೇತಿಪಾಠೇ ಕುಚಾಖ್ಯಕಮಲಕೋಶವತೀತ್ಯರ್ಥಃ। -ವ್ಯಾ.
೨. ದ್ವ್ಯಕ್ಷರಯಮಕಮಿದಮ್ । -ವ್ಯಾ.
೩.. ದ್ರುತಗಮನವಶಾತ್ ವಕ್ಷಸಿ ಪತಿತಶಿರೋಲಂಕಾರಭೂತಕಮಲವತೀತಿ ವಾ। -ವ್ಯಾ.

### ಸಹಿಸಲಾಗದ ಶ್ರೀಕೃಷ್ಣನ ವಿರಹ

ಕಾಂತೋಪಮಾನೇನ ದಿವಾಽಪಿ ಕುಟ್ಯಾ-
ಮಂತರ್ಹಿತಂ ಕಾಲಭತೇಜಸಾ ಯಮ್ ।
ಸ್ವಾಂತೇ ಬಿಭರ್ಮೀಶ ವಿನೇಹ ತಂ ತ್ವಾ-
ಮಂತರ್ಹಿತಂ ಕಾ ಲಭತೇಽಜ ಸಾಯಮ್[೧] ॥ ೫೬ ॥

[೨]ಎಲವೋ ಈಶನಾದ ಶ್ರೀಕೃಷ್ಣ! ಹಗಲಲ್ಲೇ ಮನೆಯಲ್ಲಿ ಅಡಗಿ ಕಾಣೆಯಾಗಿರುವ ಮರಿಯಾನೆಯ ಹೋಲಿಕೆಯ ತೇಜಸ್ಸಿನ ನಿನ್ನನ್ನು ಮನಸ್ಸಿನಲ್ಲಿ ಧರಿಸಿರುವೆನು; ಈ ಕಾಡಿನಲ್ಲಿ ಸಂಜೆಯ ಸಮಯದಲ್ಲಿ ನಿನ್ನ ಹೊರತು, ಎಲೈ ಹುಟ್ಟಿಲ್ಲದ ಶ್ರೀಕೃಷ್ಣನೇ ! ಯಾವ ಸ್ತ್ರೀಯು ತಾನೇ ಮನಸ್ಸಿನಲ್ಲಿ ಸುಖವನ್ನು ಪಡೆದಾಳು? (ಕಲಭ - ಮರಿಯಾನೆ; ಸ್ವಾಂತ-ಮನಸ್ಸು).

### ಭೂಮಿಗೆ ಪ್ರಾರ್ಥನೆ

ರಾಸಿ [೩]ಸಾರೋಽಸಿ ಸುರಸಮೇಹಿ ಹೇ ಮಹಿ ಮಾಮಿಹ ।
ದಾಸೀಂ ಸಸಾದಾಂ ಸದಸಿ ವೇದವಾದವಿದೋ ವದ ॥ ೫೭ ॥

ಎಲೈ ಈಶನಾದ ಶ್ರೀಕೃಷ್ಣನೇ ! ನೀನು ಶ್ರೇಷ್ಠನಾಗಿರುವಿ. ಏಕೆಂದರೆ, ನೀನು ಶೃಂಗಾರರಸವನ್ನು ನೀಡುತ್ತಿರುವಿ; ಆದ್ದರಿಂದ ಬಾ; ಎಲೈ ಪೃಥ್ವಿಯೇ! ಈ ವನದಲ್ಲಿ ದಾಸಿಯಾಗಿರುವ ದುಃಖಯುಕ್ತಳಾದ ನನ್ನ ಬಗ್ಗೆ ವೇದವಾದವನ್ನು ಬಲ್ಲ ಶ್ರೀಕೃಷ್ಣನ ಸಭೆಯಲ್ಲಿ ವಿವರಿಸು.

ವಿ. : ಮಹಿ - ಎಲೈ ಪೃಥ್ವಿಯೇ; ಸಸಾದಾಂ - ದುಃಖಸಹಿತಳಾದ ಎಂದರ್ಥ; (ದ್ವ್ಯಕ್ಷರ ಪಾದೋಪೇತ ಯಮಕ).

### ದುಂಬಿಯ ನಿದರ್ಶನದಿಂದ ಪ್ರಾರ್ಥನೆ

ಮಧುಪಾಲಿರೀಶ ಸರಸಾ ಸರಸಾ-
ಮುಪಕಂಠಮೇತ್ಯ ಮುದಿತಾಮುದಿತಾ ।
ಅನುಯಾತಿ ಪಶ್ಯ ಸಭಯಾ ಸಭಯಾ-
ಮನುನೀಯ ಚಾಲಿಮಧುನಾ ಮಧುನಾ[೪] ॥ ೫೮ ॥

---

೧. ಮಧ್ಯಾಂತಪಾದಯಮಕಮಿದಮ್ । -ವ್ಯಾ.

೨. ಅನೇನ ಚಿತ್ತಾಸಕ್ತಿಲಕ್ಷಣಾ ಅವಸ್ಥಾ ದರ್ಶಿತಾ । ''ಚಿತ್ತಾಸಕ್ತಿರ್ಮುಹುಶ್ಚಿಂತಾ ಪ್ರತಿಕೃತ್ಯಾದಿಭಿರ್ಯಥಾ'' ಇತ್ಯುಕ್ತತ್ವಾತ್ -ವ್ಯಾ.

೩.. ರಸಃ ಸಾರೋ ವರಶ್ಚೇತಿ ಸರ್ವೇ ಪರ್ಯಾಯವಾಚಕಾಃ । -ಛಾಂದೋಗ್ಯೋಪನಿಷದ್ಭಾಷ್ಯ(೧/೮/೧)

೪. ಪ್ರಮಿತಾಕ್ಷರಾವೃತ್ತಮ್ -ವ್ಯಾ.

ಎಲೈ ಈಶನಾದ ಶ್ರೀಕೃಷ್ಣ ! ಸ್ನೇಹಭರಿತವಾದ ದುಂಬಿಗಳ ಸಾಲು ಸರೋವರಗಳ ಬಳಿಯಲ್ಲಿ ಮಕರಂದದಿಂದ ಮುದಗೊಂಡ ಹಾಗೂ (ಅಲ್ಲಿಯ ಅನುಷ್ಠಾನನಿರತರಾದ ಬ್ರಾಹ್ಮಣರ ಗುಂಪಿನಿಂದ) ಭಯಗೊಂಡ ಗೆಳತಿಯಾದ ಭೃಂಗಿಯನ್ನು ಸಾಂತ್ವನಪಡಿಸಿ, ಮೇಲಕ್ಕೆ ಹಾರಿ ಹೋಗಿ ಈಗ ಅನುಸರಿಸಿ ಬರುತ್ತಿರುವುದು, ನೋಡು.

ವಿ.:೧. ದುಂಬಿಯಂತಹ ಚಿಕ್ಕ ಪಕ್ಷಿಯೂ ಸಹ ತನ್ನ ಪ್ರಿಯೆಯನ್ನು ಸಾಂತ್ವನಪಡಿಸುತ್ತಿರುವಾಗ ಸರ್ವೋತ್ತಮನಾದ ಶ್ರೀಕೃಷ್ಣ ತನ್ನಲ್ಲಿ ಅನುರಕ್ತಳಾದ ಗೋಪಿಯನ್ನು ತೊರೆಯುವುದು ತರವಲ್ಲ ಎಂದು ಭಾವ.

೨. ಇದು ಚತುಷ್ಪಾದಾಂತ ಯಮಕ ಶ್ಲೋಕ ; ಮಧುಪ ಆಲಿ - ದುಂಬಿಗಳ ಸಾಲು ; ಮುದಿತಾಂ ಉದಿತಾ; ಆಲಿಂ ಅಧುನಾ; ಎಂಬುದಾಗಿ ಮುದಿತಾಮುದಿತಾ ಹಾಗೂ ಆಲಿಮಧುನಾ ಎಂಬುದಕ್ಕೆ ಪದವಿಭಾಗ.

### ಕೃಷ್ಣನ ಬಗ್ಗೆ ಅನುರಾಗವು ಅನಿವಾರ್ಯ

ನಗಾಯತಾಕಾಶಮಿತಾಗಸಾನು
ಸಮೇತ್ಯ ಪುಂಸ್ಕೋಕಿಲಸುಸ್ವನೇನ ।
ನ ಗಾಯತಾ ಕಾ ಶಮಿತಾಗಸಾ ನು
ತ್ವಯಾ ಮೃಗಾಕ್ಷೀ ವಿಮದೀಕೃತಾಂಗ[1] ॥ ೫೯ ॥

ಎಲೈ ಪ್ರಿಯನಾದ ಶ್ರೀಕೃಷ್ಣ! ವೃಕ್ಷಗಳಿಂದ ತುಂಬಿದ ವಿಶಾಲವಾದ ಗಗನವನ್ನು ತಲುಪಿ, ಈ ಗೋವರ್ಧನಪರ್ವತದ ತಪ್ಪಲಿನಲ್ಲಿ ಗಾನಮಾಡುವಂತಹ ಗಂಡುಕೋಗಿಲೆಯಂತಹ [2]ಮಧುರಧ್ವನಿಯಿಂದಾಗಿ, ಅಪರಾಧಮುಕ್ತನಾದ ನಿನ್ನ ಬಗ್ಗೆ, ಯಾವ ಹರಿಣಾಕ್ಷಿಯು ತಾನೆ ಬಿಗುಮಾನವನ್ನು ತೊರೆಯದಿದ್ದಾಳು ?

### ಮನ್ಮಥನ ಪ್ರಾರ್ಥನೆ

ಕಂದರ್ಪ ಸರ್ಪತಲ್ಪಸ್ಯ ನಂದನಾನಂದಕಾರಣ ।
ತಂ ದೇಶಂ ನಯ ಮಾಂ ಯತ್ರ ಬಂಧುರಾಸ್ತೇ ಸತಾಂ ಹರಿಃ ॥ ೬೦ ॥

ಶೇಷಶಾಯಿಯಾದ ಶ್ರೀಕೃಷ್ಣನ ಪುತ್ರನಾದ ಎಲವೋ ಮನ್ಮಥನೇ ! ಆನಂದಕ್ಕೆ ಕಾರಣನಾದವನೇ ! ನನ್ನನ್ನು ಸಜ್ಜನರ ಬಂಧುವಾದ ಶ್ರೀಹರಿಯು ಎಲ್ಲಿ ಇರುವನೋ, ಆ ಸ್ಥಳಕ್ಕೆ ಕರೆದೊಯ್ಯಿ.

---

೧. ಇದಮಪಿ ಆದಿಪಾದದ್ವಯಯಮಕಮ್ । -ವ್ಯಾ.

೨. ಗಾನಶ್ರವಣೇನಾಸ್ಮನ್ಮನಸಿ ಸ್ಥಿತಃ ಸರ್ವೋಽಪಿ ಗರ್ವೋ ಗತಃ ತತ್ಕಿಮದರ್ಶನೇನೇತಿ ಭಾವಃ । -ವ್ಯಾ.

### ಮತ್ತೊಂದು ಬಗೆಯಲ್ಲಿ ಕಾಮನ ಪ್ರಾರ್ಥನೆ

**ರಮಾ ನಯಾಹಂಕೃತಿದೂರವೃತ್ತಿ-**
**ರಮಾನಯಾಽಹಂಕೃತಿದೂರವೃತ್ತಿಃ।**
**ರಮಾ ನ ಯಾಽಹಂ ಕೃತಿದೂರವೃತ್ತಿ-**
**ರಮಾನಯಾಹಂಕೃತಿದೂರವೃತ್ತಿಃ[1] ॥ ೬೧ ॥**

ಪದಚ್ಛೇದ : ರಮಾ ನಯ ಅಹಂ ಕೃತಿದೂರವೃತ್ತಿಃ ಅಮಾನಯಾ ಅಹಂಕೃತಿದೂರವೃತ್ತಿಃ ರಮಾ ನ ಯಾ ಅಹಂ ಕೃತಿದೂರವೃತ್ತಿಃ ಅಮಾನಯಾಹಂಕೃತಿದೂರವೃತ್ತಿಃ.

ಎಲೈ ಕಾಮನೇ ! ನಾನು ಗಮನಾದಿ ವ್ಯಾಪಾರಗಳನ್ನು ದೂರಮಾಡಿಕೊಂಡವಳಾಗಿರುವೆ, ಅದರಿಂದಾಗಿಯೇ, ಅಹಂಕಾರ ತೊರೆದಿರುವ ನನ್ನನ್ನು ಅಹಂಕಾರಕ್ಕೆ ಹೊರತಾದ ವರ್ತನೆಯ ನೀನು ರಮಣನಾದ ಶ್ರೀಕೃಷ್ಣನ ಬಳಿಗೆ ತಲುಪಿಸು ; ಅಪ್ರಾಕೃತಸ್ವರೂಪಳಾದ ಅದರಿಂದಾಗಿಯೇ ಅಜ್ಞಾನ, ಅನ್ಯಾಯ, ಅಹಂಕಾರಗಳಿಗೆ ಹೊರತಾದ ಅಂತಃಕರಣದ ಮಹಾಲಕ್ಷ್ಮಿ ಏನೂ ನಾನಲ್ಲ.

ವಿ. : ೧. ಗೋಪಿಯು ತನ್ನ ಮಾತಿನಲ್ಲಿ ಮಹಾಲಕ್ಷ್ಮಿಯು ಅಪ್ರಾಕೃತ ಶರೀರದವಳು; ಆದ್ದರಿಂದ ಅವರಿಗೆ ಅಹಂಕಾರಾದಿ ಯಾವ ದೋಷಗಳು ಸರ್ವಥಾ ಇರವು. ಆದರೆ ಪ್ರಾಕೃತಶರೀರದ ತಮಗೆ ಅವು ಒಮ್ಮೊಮ್ಮೆ ಬರುವುದು ಸಹಜ; ಅದನ್ನು ಮನ್ನಿಸಿ ತಮ್ಮನ್ನು ಸ್ವೀಕರಿಸಬೇಕು ಎಂದು ಪ್ರಾರ್ಥಿಸಿಕೊಳ್ಳುತ್ತಿರುವಳು.

೨. ಅಮಾನಯಾಹಂಕೃತಿದೂರವೃತ್ತಿಃ-ಅಮಾ(ಅವಿದ್ಯೆ), ಅನಯ(ಅನ್ಯಾಯ), ಅಹಂಕೃತಿ (ಅಹಂಕಾರ), ದೂರವೃತ್ತಿಃ

### ಶ್ರೀಕೃಷ್ಣನ ಪ್ರಾರ್ಥನೆ

**ತತಾತತಾತೀತತತ್ತ್ವತಿತಾತೊಽತತೇ ತು ತತ್ ।**
**ತತ್ತಾತೌತಾತಿತೇತೀ ತೇಽತಾತಾತೀತೇ ತತೋಽತ್ತಿ ತಾಮ್ ॥ ೬೨ ॥**

ಪದಚ್ಛೇದ: ತತಾತತಾತೀತತತ್ತ್ವತಿತಾತಃ ಅತತೇ ತು ತತ್ ತತ್ತಾತೌತಾತಿತೇತೀ ತೇ ಅತಾತ ಅತೀತೇ ತತಃ ಅತ್ತಿ ತಾಮ್.

ಎಲೈ ತಂದೆ, ತಾಯಿಗಳಿಲ್ಲದ ಶ್ರೀಕೃಷ್ಣ ! ನೀನು ವ್ಯಾಪ್ತವಾದ ಗಗನ ಮೊದಲಾದವುಗಳನ್ನು ವ್ಯಾಪ್ತವಲ್ಲದ ಪೃಥಿವ್ಯಾದಿಗಳನ್ನು, ಅತಿಶಯವಾಗಿ ನಿನ್ನ ಬಳಿಗೆ ಆಗಮಿಸಿದ ಮುಕ್ತನನ್ನು ,

---

೧. ಪಾದಚತುಷ್ಟಯಸ್ಯಾಪ್ಯೇಕಪ್ರಕಾರತ್ವಾತ್ ಸಂಪೂರ್ಣಚತುಷ್ಪಾದಯಮಕಮ್ । -ವ್ಯಾ.

ಎಲೈ ಈಶನಾದ ಶ್ರೀಕೃಷ್ಣ ! ಸ್ನೇಹಭರಿತವಾದ ದುಂಬಿಗಳ ಸಾಲು ಸರೋವರಗಳ ಬಳಿಯಲ್ಲಿ ಮಕರಂದದಿಂದ ಮುದಗೊಂಡ ಹಾಗೂ (ಅಲ್ಲಿಯ ಅನುಷ್ಠಾನನಿರತರಾದ ಬ್ರಾಹ್ಮಣರ ಗುಂಪಿನಿಂದ) ಭಯಗೊಂಡ ಗೆಳತಿಯಾದ ಭೃಂಗಿಯನ್ನು ಸಾಂತ್ವನಪಡಿಸಿ, ಮೇಲಕ್ಕೆ ಹಾರಿ ಹೋಗಿ ಈಗ ಅನುಸರಿಸಿ ಬರುತ್ತಿರುವುದು, ನೋಡು.

ವಿ. : ೧. ದುಂಬಿಯಂತಹ ಚಿಕ್ಕ ಪಕ್ಷಿಯೂ ಸಹ ತನ್ನ ಪ್ರಿಯೆಯನ್ನು ಸಾಂತ್ವನಪಡಿಸುತ್ತಿರುವಾಗ ಸರ್ವೋತ್ತಮನಾದ ಶ್ರೀಕೃಷ್ಣ ತನ್ನಲ್ಲಿ ಅನುರಕ್ತಳಾದ ಗೋಪಿಯನ್ನು ತೊರೆಯುವುದು ತರವಲ್ಲ ಎಂದು ಭಾವ.

೨. ಇದು ಚತುಷ್ಪಾದಾಂತ ಯಮಕ ಶ್ಲೋಕ ; ಮಧುಪ ಆಲಿ - ದುಂಬಿಗಳ ಸಾಲು ; ಮುದಿತಾಂ ಉದಿತಾ; ಆಲಿಂ ಅಧುನಾ; ಎಂಬುದಾಗಿ ಮುದಿತಾಮುದಿತಾ ಹಾಗೂ ಆಲಿಮಧುನಾ ಎಂಬುದಕ್ಕೆ ಪದವಿಭಾಗ.

### ಕೃಷ್ಣನ ಬಗ್ಗೆ ಅನುರಾಗವು ಅನಿವಾರ್ಯ

ನಗಾಯತಾಕಾಶಮಿತಾಗಸಾನು
ಸಮೇತ್ಯ ಪುಂಸ್ಕೋಕಿಲಸುಸ್ವನೇನ ।
ನ ಗಾಯತಾ ಕಾ ಶಮಿತಾಗಸಾ ನು
ತ್ವಯಾ ಮೃಗಾಕ್ಷೀ ವಿಮದೀಕೃತಾಂಗ[೧] ॥ ೫೯ ॥

ಎಲೈ ಪ್ರಿಯನಾದ ಶ್ರೀಕೃಷ್ಣ! ವೃಕ್ಷಗಳಿಂದ ತುಂಬಿದ ವಿಶಾಲವಾದ ಗಗನವನ್ನು ತಲುಪಿ, ಈ ಗೋವರ್ಧನಪರ್ವತದ ತಪ್ಪಲಿನಲ್ಲಿ ಗಾನಮಾಡುವಂತಹ ಗಂಡುಕೋಗಿಲೆಯಂತಹ [೨]ಮಧುರಧ್ವನಿಯಿಂದಾಗಿ, ಅಪರಾಧಮುಕ್ತನಾದ ನಿನ್ನ ಬಗ್ಗೆ , ಯಾವ ಹರಿಣಾಕ್ಷಿಯು ತಾನೆ ಬಿಗುಮಾನವನ್ನು ತೊರೆಯದಿದ್ದಾಳು ?

### ಮನ್ಮಥನ ಪ್ರಾರ್ಥನೆ

ಕಂದರ್ಪ ಸರ್ಪತಲ್ಪಸ್ಯ ನಂದನಾನಂದಕಾರಣ ।
ತಂ ದೇಶಂ ನಯ ಮಾಂ ಯತ್ರ ಬಂಧುರಾಸ್ತೇ ಸತಾಂ ಹರಿಃ ॥ ೬೦ ॥

ಶೇಷಶಾಯಿಯಾದ ಶ್ರೀಕೃಷ್ಣನ ಪುತ್ರನಾದ ಎಲವೋ ಮನ್ಮಥನೇ ! ಆನಂದಕ್ಕೆ ಕಾರಣನಾದವನೇ ! ನನ್ನನ್ನು ಸಜ್ಜನರ ಬಂಧುವಾದ ಶ್ರೀಹರಿಯು ಎಲ್ಲಿ ಇರುವನೋ, ಆ ಸ್ಥಳಕ್ಕೆ ಕರೆದೊಯ್ಯಿ.

---

೧. ಇದಮಪಿ ಆದಿಪಾದದ್ವಯಯಮಕಮ್ । -ವ್ಯಾ.
೨. ಗಾನಶ್ರವಣೇನಾಸ್ಮನ್ಮನಸಿ ಸ್ಥಿತಃ ಸರ್ವೋಽಪಿ ಗರ್ವೋ ಗತಃ ತತ್ಕಿಮುದರ್ಶನೇನೇತಿ ಭಾವಃ । -ವ್ಯಾ.

### ಮತ್ತೊಂದು ಬಗೆಯಲ್ಲಿ ಕಾಮನ ಪ್ರಾರ್ಥನೆ

ರಮಾ ನಯಾಹಂಕೃತಿದೂರವೃತ್ತಿ-
ರಮಾನಯಾಽಹಂಕೃತಿದೂರವೃತ್ತಿಃ ।
ರಮಾ ನ ಯಾಽಹಂ ಕೃತಿದೂರವೃತ್ತಿ-
ರಮಾನಯಾಹಂಕೃತಿದೂರವೃತ್ತಿಃ[1] ॥ ೬೧ ॥

ಪದಚ್ಛೇದ : ರಮಾ ನಯ ಅಹಂ ಕೃತಿದೂರವೃತ್ತಿಃ ಅಮಾನಯಾ ಅಹಂಕೃತಿದೂರವೃತ್ತಿಃ ರಮಾ ನ ಯಾ ಅಹಂ ಕೃತಿದೂರವೃತ್ತಿಃ ಅಮಾನಯಾಹಂಕೃತಿದೂರವೃತ್ತಿಃ.

ಎಲೈ ಕಾಮನೇ ! ನಾನು ಗಮನಾದಿ ವ್ಯಾಪಾರಗಳನ್ನು ದೂರಮಾಡಿಕೊಂಡವಳಾಗಿರುವೆ, ಅದರಿಂದಾಗಿಯೇ, ಅಹಂಕಾರ ತೊರೆದಿರುವ ನನ್ನನ್ನು ಅಹಂಕಾರಕ್ಕೆ ಹೊರತಾದ ವರ್ತನೆಯ ನೀನು ರಮಣನಾದ ಶ್ರೀಕೃಷ್ಣನ ಬಳಿಗೆ ತಲುಪಿಸು ; ಅಪ್ರಾಕೃತಸ್ವರೂಪಳಾದ ಅದರಿಂದಾಗಿಯೇ ಅಜ್ಞಾನ, ಅನ್ಯಾಯ, ಅಹಂಕಾರಗಳಿಗೆ ಹೊರತಾದ ಅಂತಃಕರಣದ ಮಹಾಲಕ್ಷ್ಮಿ ಏನೂ ನಾನಲ್ಲ.

ವಿ. : ೧. ಗೋಪಿಯು ತನ್ನ ಮಾತಿನಲ್ಲಿ ಮಹಾಲಕ್ಷ್ಮಿಯು ಅಪ್ರಾಕೃತ ಶರೀರದವಳು; ಆದ್ದರಿಂದ ಅವರಿಗೆ ಅಹಂಕಾರಾದಿ ಯಾವ ದೋಷಗಳು ಸರ್ವಥಾ ಇರವು. ಆದರೆ ಪ್ರಾಕೃತಶರೀರದ ತಮಗೆ ಅವು ಒಮ್ಮೊಮ್ಮೆ ಬರುವುದು ಸಹಜ; ಅದನ್ನು ಮನ್ನಿಸಿ ತಮ್ಮನ್ನು ಸ್ವೀಕರಿಸಬೇಕು ಎಂದು ಪ್ರಾರ್ಥಿಸಿಕೊಳ್ಳುತ್ತಿರುವಳು.

೨. ಅಮಾನಯಾಹಂಕೃತಿದೂರವೃತ್ತಿಃ-ಅಮಾ(ಅವಿದ್ಯೆ), ಅನಯ(ಅನ್ಯಾಯ), ಅಹಂಕೃತಿ (ಅಹಂಕಾರ), ದೂರವೃತ್ತಿಃ

### ಶ್ರೀಕೃಷ್ಣನ ಪ್ರಾರ್ಥನೆ

ತತಾತತಾತೀತತತ್ತ್ವತತಿತಾತೋಽತತೇ ತು ತತ್ ।
ತತ್ತಾತೌತಾತಿತೇತೀ ತೇಽತಾತಾತೀತೇ ತತೋಽತ್ತಿ ತಾಮ್ ॥ ೬೨ ॥

ಪದಚ್ಛೇದ: ತತಾತತಾತೀತತತ್ತ್ವತತಿತಾತಃ ಅತತೇ ತು ತತ್ ತತ್ತಾತೌತಾತಿತೇತೀ ತೇ ಅತಾತ ಅತೀತೇ ತತಃ ಅತ್ತಿ ತಾಮ್.

ಎಲೈ ತಂದೆ, ತಾಯಿಗಳಿಲ್ಲದ ಶ್ರೀಕೃಷ್ಣ! ನೀನು ವ್ಯಾಪ್ತವಾದ ಗಗನ ಮೊದಲಾದವುಗಳನ್ನು, ವ್ಯಾಪ್ತವಲ್ಲದ ಪೃಥಿವ್ಯಾದಿಗಳನ್ನು, ಅತಿಶಯವಾಗಿ ನಿನ್ನ ಬಳಿಗೆ ಆಗಮಿಸಿದ ಮುಕ್ತನನ್ನು ,

---

೧. ಪಾದಚತುಷ್ಟಯಸ್ಯಾಪ್ಯೇಕಪ್ರಕಾರತ್ವಾತ್ ಸಂಪೂರ್ಣಚತುಷ್ಪಾದಯಮಕಮ್ । -ವ್ಯಾ.

ಮುಕ್ತಾಮುಕ್ತ ಪ್ರಪಂಚದ ಅವುಗಳ ಸಮೂಹದ ಜನಕನಾಗಿ ನಿಯಾಮಕನಾಗಿ, ವ್ಯಾಪಿಸಿರುವವನು. ಅದರಂತೆ ಹಿಂದೆ ಹೇಳಿದ ತತ್ತ್ವಸಮುದಾಯವನ್ನು ಸಂಹರಿಸುವವನೂ ನೀನೇ; ಇದರಿಂದ ನಿನಗೆ ಜಗತ್ತಿನೊಂದಿಗೆ ಐಕ್ಯವಾಗಲಿ, ಮೀಮಾಂಸಕರು ಹೇಳುವ ನಿರೀಶ್ವರತ್ವವಾಗಲಿ, ಸರ್ವಥಾ ಅಸಂಭಾವಿತ ಎಂದಾಗುವುದು[೧].

ಅಧರಾಮೃತಂ ಪ್ರದಿಶ ತೇ ದಿಶತೇ
ತನುಮರ್ಪಯೇ ವಿಹರತೇಹ ರತೇ ।
ವಿಹಿತೇ ಹತಿಂ ವಿರಚಯೇಽರಚಯೇ
ಸ್ಫುಟಮಿತ್ಯದಾಯಿ ಭವತಾಽಭವತಾ ॥ ೬೩ ॥

ಎಲೈ ಶ್ರೀಕೃಷ್ಣ ! ನಿನ್ನ ಅಧರಾಮೃತವನ್ನು ನೀಡು; ಹಾಗೆ ನೀಡಿದಲ್ಲಿ ನಾನು ನಿನಗೆ ನನ್ನ ದೇಹವನ್ನೇ ಒಪ್ಪಿಸುವೆ. ನೀನು ನನ್ನೊಂದಿಗೆ ವಿಹರಿಸಿದಾಗ, ನನ್ನ ಪಾಪಗಳೆಲ್ಲಾ ಧ್ವಂಸಗೊಳ್ಳುವವು. ಇದರಿಂದಾಗಿ ನನಗೆ ಇಂತಹ ನಿನ್ನಿಂದಾಗಿ ಸಂಸಾರವೇ ಕೊನೆಗೊಂಡು ಮುಕ್ತಿಯು ಸ್ಫುಟವಾಗಿ ಲಭಿಸುವುದು; (ಅಭವತಾ - ಮುಕ್ತತ್ವ)[೨].

ಶ್ರೀಕೃಷ್ಣನ ವಿರಹದಿಂದ ಮೂರ್ಛಿತಳಾದ ಗೋಪಿ

ಇತ್ಥಂ ಗಿರಾ ಕಾಽಪಿ ತಮರ್ಚಯಂತೀ
ಯಂ ತೀವ್ರಯೋಗೈರ್ಮುನಯೋಽಗುರಂತೇ ।
ರಂತೇತಿ ಮತ್ವಾ ಗಲಿತಾತ್ಮಹಾರಾ
ಹಾ ರಾಮ ಕೃಷ್ಣೇತ್ಯಪತಚ್ಛುಚಾರ್ತಾ ॥ ೬೪ ॥

ತೀವ್ರಯೋಗಗಳಿಂದ ಮುನಿಗಳು ಕೊನೆಯಲ್ಲಿ ಪಡೆಯುವಂತಹ ಆ ಶ್ರೀಕೃಷ್ಣನನ್ನು ಹೀಗೆ ಮಾತಿನಿಂದಲೂ ಪೂಜಿಸತೊಡಗಿದ ಒಬ್ಬಳು ಕೃಷ್ಣನು ರತಿಶೀಲ ಎಂಬುದಾಗಿ ಭಾವಿಸಿ,

---

೧. ಅನೇನ ತವಾನುತ್ಪನ್ನತ್ವಾಜ್ಜಗತಃ ಉತ್ಪನ್ನತ್ವಾತ್ ತವ ಸ್ರಷ್ಟೃತ್ವಾಜ್ಜಗತಃ ಸೃಜ್ಯತ್ವಾದ್ಭವತೋ ನಿಯಾಮಕತ್ವಾಜ್ಜಗತೋ ನಿಯಮ್ಯತ್ವಾತ್ತವ ಸಂಹರ್ತೃತ್ವಾಜ್ಜಗತಃ ಸಂಹಾರ್ಯತ್ವಾತ್ ಉತ್ಪನ್ನಾನುತ್ಪನ್ನಯೋಃ ಸೃಜ್ಯಸ್ರಷ್ಟ್ರೋಃ ನಿಯಮ್ಯನಿಯಾಮಕಯೋಃ ಸಂಹರ್ತೃಸಂಹಾರ್ಯಯೋಶ್ಚ ಭೇದಾವಶ್ಯಂಭಾವಾದಿತಿ ತಾದಾತ್ಮ್ಯನಿರಾಸೇ ಯುಕ್ತಿಚತುಷ್ಟಯಮುಕ್ತಂ ಭವತಿ । ಅತೀತ ಪದೇನ ಮುಕ್ತಾನಾಂ ಗ್ರಹಣಾತ್ ತನ್ನಿಯಾಮಕತ್ವಾನ್ಮುಕ್ತಾಮುಕ್ತಭೇದಸ್ಯಾವಿದ್ಯಾನಿವೃತ್ತಿರೂಪಮುಕ್ತಿಕಾಲೀನತ್ವೇನಾವಿದ್ಯಕತ್ವಂ ನೇತಿ ಚೋಕ್ತಂ ಭವತಿ । ಸೃಷ್ಟಿನಿಯಮನಸಂಹಾರಾಣಾಂ ಕಾರ್ಯತ್ವೇನ ಸಕರ್ತೃಕತ್ವಾವಶ್ಯಂಭಾವಾದ್ವ್ಯಾಪ್ತಗಗನಾದಿಕರ್ತೃತ್ವಸ್ಯಾಸ್ಮದಾದಿಷ್ವಸಂಭವಾತ್ ಕರ್ತುರೀಶ್ವರಸ್ಯ ಸಿದ್ಧ್ಯಾ ನಿರೀಶ್ವರತ್ವಂ ಚ ನಿರಸ್ತಂ ಭವತಿ । ಅತ ಏವ ತತ್ತ್ವೇತ್ಯುಕ್ತಮ್ । ತತ್ತ್ವಪದೇನಾನಾರೋಪಿತತತ್ತ್ವರೂಪಜಗತ್ಸತ್ಯತ್ವಂ ಸೂಚಿತಮ್ । ಉಪಪಾದನಂ ತೂತ್ತರತ್ರ ಕರಿಷ್ಯತ ಇತ್ಯಲಮ್ ॥ - ವ್ಯಾ.

೨. ಅಂತತಃ ಸರ್ವಪಾಪಕ್ಷಯೇಣ ಮೋಕ್ಷಸ್ಯಾವಶ್ಯಂಭಾವಾದಿತಿ ಭಾವಃ । -ವ್ಯಾ.

ತಾನು ಧರಿಸಿದ್ದ ಹಾರಗಳು ಕಳಚಿ ಬೀಳುವವಳಾಗಿ[೧], "ಹೇ ರಾಮ ! ಹೇ ಕೃಷ್ಣ!" ಎಂದು ದುಃಖದಿಂದ ಪೀಡಿತಳಾಗಿ, ಧರೆಗುರುಳಿದಳು.

ವಿ. : ಈ ಶ್ಲೋಕದಲ್ಲಿ ಮೊದಲ ಮೂರು ಪಾದಗಳ ಕೊನೆಯ ಎರಡು ಅಕ್ಷರಗಳು ಅನಂತರದ ಪಾದಗಳ ಮೊದಲ ಎರಡು ಅಕ್ಷರಗಳಗಿರುವುದು ವಿಶೇಷ.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಸಪ್ತಮಃ ॥ ೬೫ ॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಸಪ್ತಮಃ ಸರ್ಗಃ ॥೭॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಏಳನೆಯ ಸರ್ಗವು ಮುಕ್ತಾಯವಾಯಿತು.

*****

೧. ಅನೇನ ಮೂರ್ಛಾವಸ್ಥಾ ದರ್ಶಿತಾ । "ಮುಹುರಿಂದ್ರಿಯವೈಕಲ್ಯಾನ್ಮೂರ್ಛಾ ಜ್ಞಾನಕ್ಷಯೇ ಸತಿ" ಇತ್ಯುಕ್ತೇಃ ।
–ವ್ಯಾ.

# ೮. ಅಷ್ಟಮಃ ಸರ್ಗಃ

(ಗೋಪಿಯರ ಪ್ರಲಾಪ - ೧-೩೩; ಮಾಯಾವಾದಿಗಳ ಖಂಡನೆ - ೩೪, ೩೫; ಶ್ರೀಕೃಷ್ಣನ ವರ್ಣನೆ - ೩೬-೩೮; ಗೋಪಿಯರ ಕಾತರತೆ - ೩೯-೪೫; ಶ್ರೀಕೃಷ್ಣದರ್ಶನ, ರಾಸಕ್ರೀಡೆಯ ಆರಂಭ : ೪೬-೬೧; ಸರ್ಗೋಪಸಂಹಾರ - ೬೨)

ಜಂಝಾನಿಲವಾದ ಮಲಯಮಾರುತ

[೧]ವಿರಹವಹ್ನಿಬಲಾ ಮಲಯಾನಿಲಾ
ಜಗದಿವಾಖಿಲಧಾಮ ಲಯಾನಿಲಾಃ ।
ಚಲತಿ ವೀಕ್ಷ್ಯ ಭಿಯಾಽಮಲ [೨]ಯಾನಿಲಾ
ಬತ [೩]ತುದಂತಿತರಾಮಲಯಾನಿಲಾಃ[೪] ॥ ೧ ॥

---

೧. ತತಶ್ಚಾಂತರ್ದಧೇ ಕೃಷ್ಣಃ ಸಾ ವಧೂರನ್ವತಪ್ಯತ ।
ಹಾ ನಾಥ ರಮಣ ಪ್ರೇಷ್ಠ ಕ್ವಾಸಿ ಕ್ವಾಸಿ ಮಹಾಭುಜ ।
ದಾಸ್ಯಾಸ್ತೇ ಕೃಪಣಾಯಾ ಮೇ ಸಖೇ ದರ್ಶಯ ಸನ್ನಿಧಿಮ್ ॥
ಅನ್ವಿಚ್ಛಂತ್ಯೋ ಭಗವತೋ ಮಾರ್ಗಂ ಗೋಪ್ಯೋಽವಿದೂರತಃ ।
ದದೃಶುಃ ಪ್ರಿಯವಿಶ್ಲಿಷ್ಟಾಂ ಮೋಹಿತಾಂ ದುಃಖಿತಾಂ ಸತೀಮ್ ॥
ತಯಾ ಕಥಿತಮಾಕರ್ಣ್ಯ ಮಾನಪ್ರಾಪ್ತಿಂ ಚ ಮಾಧವಾತ್ ।
ಅವಮಾನಂ ಚ ದೌರಾತ್ಮ್ಯಾದ್ ವಿಸ್ಮಯಂ ಪರಮಂ ಯಯುಃ ॥ -ಭಾಗ.(೧೦/೨೮/೩೧-೩೩)

೨. ಅನೇನ ವಿಷಯದ್ವೇಷಾವಸ್ಥಾ ಸೂಚಿತಾ । -ವ್ಯಾ.

೩. ಪ್ರಿಯವಾದಿನೀ ವೃತ್ತಮ್ । -ವ್ಯಾ.

೪. ಶ್ರೀಸತ್ಯಧರ್ಮತೀರ್ಥರಿಂದ ರಚಿತವಾದ 'ಕವಿಕಂಠಮಣಿ' ಎಂಬ ಕೃತಿಯಲ್ಲಿ ರುಕ್ಮಿಣೀಶವಿಜಯದ ಈ ಸರ್ಗದ ಪ್ರಭಾವವನ್ನು ಗುರುತಿಸಬಹುದು (ವಿವರಗಳಿಗೆ ನಮ್ಮ ಪ್ರಕಾಶನದ 'ಶ್ರೀಸತ್ಯಧರ್ಮತೀರ್ಥಕೃತಿಮಂಜರೀ' ಎಂಬ ಕೃತಿಯನ್ನು ನೋಡಬಹುದು) :
ಶ್ರೀಮಾನ್ ರ(ಲ)ಘುಪೋಽರ(ಲ)ಘುಪಃ ಸದಯಃ ಸದಯೋ ಗುಣೈಕಖನಿರೀಶಃ ।
ಮಮತಾಮಮತಾಂ ನ ದಿಶೇತ್ ಪ್ರದಿಶೇತ್ ಸಕಲಾಸು ಕಲಾಸು ದೃಶಂ ಸದೃಶೀಮ್ ॥
ಕಮಲಂ ವಿಮಲಂ ಕುರುತೇ ಕುರುತೇ ಕವಿಭಿಃ ಕವಿಭಿಃ ಸರಸೀ ಸ ರಸೀ ।
ವಿರುತೋ ರವಿರಾವಿರಮನ್ ಕ್ವ ವಸನ್ ಅಪಿ ಸನ್ನವಿತಾ ಸವಿತಾ ಭವಿತಾ ॥
ಅಧುನಾ ವಿಧುನಾ ವಿಧುತಾ ಮಧುತಾ ಸರಸೇ ವಿರಸೇ ದಯಿತೇ ಮಯಿ ಮೇ ।
ಮದನೇ ಮದನೇಷಣಪೇಷಣಕೇ ಕರುಣಾಂ ಮುರಭಿದ್ವಿತರಾತಿತರಾಮ್ ॥
ಸರಸೇ ಸುರಶೇಖರ ಇತ್ಯಮಲೇ ಶಮಲೇ ಶಮಲೇಖಕೃತೇ ವಿಕೃತೇ ।
ವಿಭವೇ ಭವದಾವಿರಭೂತ್ ಭುವಿ ಯನ್ ಅಮಮೌಪಯಿಕಂ ಚ ಮಮೌ ಮನಸಿ ॥
ಸ್ಮರತಃ ಸ್ಮರತೋಽಪ್ಯವನೇ ನವನೇ ಯದುಪೋ ಯದುಪೋತಪದೋ ವಿಪದಃ ।
ವಿತುದನ್ನ ತು ದಂಭವತೋ ಭವತೋ ಮನುಜಾನ್ನನು ಜಾತುತರಾಂ ತಿರಯೇತ್ ॥
ಜನನೇ ಜನನೇತುರುಪಾನುಪಮೇ ಸತಿ ಸತ್ಯಪಿ ಮೇ ಕಪಿಮೇಲನವಾನ್ ।
ನಹಿ ನಹ್ಯತಿ ಮಾ ಕೃಪಯಾಽನಪಯಾ ಸರಮಾಪರಮೇ ವರಮಾಪರಮಃ ॥

ಪತಿತಂ ಪತಿತಂ ಚರಣೇ ಚ ರಣೇಽವತಿ ಮಾವತಿ ಮಾ ವಿಷಮಾ ನ ಸಮೇ।
ಇತಿ ಯನ್ಮತಿಮದ್ವಚನಂ ನ ಚ ನೋ ವಿಷಯೇ ವಿಷಯೇಽನೃತಮಾಸ ಋತಮ್ ॥
ಅಚಲಂ ನ ಚಲನ್ ಧೃತಿಮಾನ್ ಧೃತವಾನ್ ಅವನೇ ಸ ವನೇ ಜ್ವಲಿತಂ ಜ್ವಲನಮ್।
ಅಪಿಬಚ್ಚ ಬತ ಸ್ವವಧೂರಧುನಾ ಕಿಮುಪೈಕ್ಷತ ವೀಕ್ಷಿತಮೋಕ್ಷಸುಖಃ ॥
ಜನನೀ ಜನನೀತಿಕೃತೇ ಸುಕೃತಾತ್ ಜನಕೋ ಜನಕೋಽಪಿ ವೃತಾನುವೃತಃ।
ನ ರಮಾ ನರಮಾನಸಮುನ್ನಮುದೇ ಕ್ವ ವಯಂ ಕ್ವವಯಸ್ತವ ನಸ್ತವನಮ್ ॥
ನ ವಿನಾಥ ವಿನಾಥಗಮಂ ಸುಗಮಂ ಸುಖಿನೀ ಸಖಿನೀತಿಯುತೇಽಪ್ಯಯುತೇ।
ವಿಷಯೇ ವಿಷಮೇಷುಮಹಂ ವಿಷಹೇ ಕಥಯಾಂಬ ಕಥಂ ಖಗಮಾಧ್ವಸುಖಮ್ ॥
ವಿಧುತೋಽಸಿ ವಿಧೋ ಧವಮಾಧವಯಾ ರಚಯಾರಚಯಾತಿಕಮಂತಿಕಗಮ್।
ಸತಿ ನಿರ್ಮತಿಕೇ ತ್ವಯಿ ಸಂಶಯಿತಃ ಸ ಹರಿರ್ಧುರಿ ಸೇತಿ ದಶಾಂ ಪ್ರದಿಶೇತ್ ॥
ಅವನಂ ಪವನಾತನುಷೇ ತನುಷಃ ಸುಹಿತೇಟ್ ಸಹಿತೋ ಮಮ ಚೇನ್ನ ಚ ಚೇತ್।
ಉಪಯಾಹ್ಯಪಯಾಹಿ ಹೃದೋಽಪ್ಯಸುಹೃತ್ ತ್ಯಜ ವಾ ಭಜ ಗಾಮಿಹ ಹಂಪದಮ್ ॥
ವಿಜನೇ ನಿಜನೇಮಿದಲೈರ್ದಲಯನ್ ಧುರಿ ವೈರಿಜನಂ ನಿಜಮಾವ ಇತಿ।
ಗದ ಭೋ ಗದಪೂರ್ವಜ ಮೇ ವಿರಹೋಽಪಿ ರಹೋ ನ ತಯಾಽಽಮಯಕೃನ್ಮಮ ಯಃ॥
ಅನುಜಸ್ಯ ನಿಜಸ್ಯ ಮತೇನ ಯತೋ ನ ಕುಲಂ ನ ಕುಲಾರಿವರೋಽಣುತರಮ್।
ಅಶಿತುಂ ಶ್ವಸಿತಂ ತ್ಯಜತೀತ್ಯಜತಾ ಗಲಿತಾಂಗಲತಾ ಕ್ವ ಪುರಃ ಸರಣಿಃ ॥
ಮೃಗಯಸ್ಯಯಿ ಕಿಂ ಮೃಗದೃಗ್ ಗದ ಮೇ ನಯನಾನಯನೋರಮಣೋ ರಮಣೆ।
ನ ಹಿತೋ ಹಿತತಃ ಶ್ರುತಿಮರ್ಥವತೀಂ ಸ ಹಿ ಸಿಂಹವಿಲೋಕನಯೇನ ನಯೀ॥
ರಮಣೀ ರಮಣಾತಿತರಾಮಿತರಾಃ ಸುಖಯನ್ ಸುಖಮೇಹಿ ಶುಭಂ ಭವತು।
ನ ಪರಾಧಮಗಾಂ ನಪರಾಧಮವತ್ ಸ್ಮೃತಿಗಾಂ ಕುರು ವಾ ಕುರು ಮಾಂ ಸ್ಮೃತಿಗಾಮ್ ॥
ಯದಿ ತಾಸ್ತದಿತಾ ವನತೇವನಕೃತ್ ಪ್ರಥಿಮಾಃ ಪ್ರಥಿಮಾನಬಲಾ ಅಬಲಾಃ।
ನ ವಯೋ ನ ವಯೋಗಮನೇನ ವಿನಾ ನ ಗುಣೋ ನ ಗಣೋ ನ ಕುಲಂ ನ ಕುಲಮ್ ॥
ಅನುವೇಣು ನವೇಽಣುನಿವಾಸವನೇ ಜಘನೇನ ಘನೇನ ಲಸಂತ್ಯಲಸಾ।
ಚಲಿತುಂ ವ ಲತಾ ರಹಿತಾ ಹರಿಣಾ ಹರಿಣಾಕ್ಷ್ಯನುಗೇನ ನಗೇನ ವಿನಾ॥
ಕಲಲಂ ಕಿಲ ಲಕ್ಷ್ಯತು ಈಕ್ಷಣತಸ್ತ್ವಯಿ ಮಯ್ಯಸಿ ಚೇತ್ ಸದಯಾಭ್ಯುದಯಾ।
ನ ಬಹಿರ್ಹಯ ಹೇತ್ಯಗದದ್ಗದಿತಾಂ ವರಬುದ್ಬುದವಾಗಿನಯುಜ್ಯದದಃ॥
ಸಮುದಸ್ಯ ಪತಿಂ ಸಮುದಸ್ವ ಪತಿಂ ವೃತವತ್ಯಸಿ ನೌ ಸುಖಮೇವ ಸಖಿ।
ಪ್ರಮದೇ ನಭಿದೇತ್ಯಗದದ್ಗದಿತಾ ಧವ ಉದ್ಧವವಾನ್ ಕಿಲ ತೇಽಸ್ತ್ಯಬಲೇ॥
ಯದಿವೋ ಸ ದಿವೋಪಗತಃ ಪ್ರಗತಃ ಸುಕೃತಂ ಫಲಿತಂ ವಿಕೃತಂ ಗಲಿತಮ್।
ವಿಷಯೋ ನಿಮಿಷೋ ನ ಚ ತದ್ವಚಸಃ ತದುರುರ್ಮದುರುರ್ಗದ ಕಿಂ ಗದನಾತ್ ॥
ನ ಹಿಮಾಂಶುಸುವಂಶಭವೋ ವಿಭವಂ ತದರೇರ್ವದ ರೇ ಚ ರವೇಃ ಸಮವೇತ್।
ವದ ಸದ್ವದನೇ ಸುಗುಣೇ ಶೃಣು ಮೇ ಸ ತದನ್ವಯಜಾತ್ಯುದರಾನ್ವಯಯುಕ್ ॥
ಸಮುಮಸ್ತು ಸಮಸ್ತುಕರಃ ಸುಕರಃ ಗತಮತ್ಸರ ಮತ್ಸರನೋ ಹಿ ಬಹಿಃ।
ಇತಿ ಸನ್ಮತಿಕಾಂ ರಮಣೀಂ ರಮಣೋ ರಮಯನ್ ಶಮಯನ್ನರತಿಂ ಸ್ವರತಃ॥
ಸ್ಮರ ಸಂಸ್ಮರ ನಾದ್ಯ ಸಮುದ್ಯತ ನೋ ಭವ ಸಮುದ್ಯತ ಇತ್ಯಬಲಾಬಲಃ।
ಉಚಿತಂ ರಚಿತಂ ಧವಮಾಧವಯಾ ಪರದಾರುತಮೇತದಲಂ ಚ ಚಲಮ್ ॥

ಪದಚ್ಛೇದ : ವಿರಹವಹ್ನಿಬಲಾಃ ಮಲಯಾನಿಲಾಃ ಜಗತ್ ಇವ ಅಖಿಲಧಾಮ ಲಯಾನಿಲಾಃ ಚಲತಿ ವೀಕ್ಷ್ಯ ಭಿಯಾ ಅಮಲ ಯಾನ್ ಇಲಾ ಬತ ತುದಂತಿತರಾಂ ಅಲಯಾನಿಲಾಃ

ಎಲೈ ನಿರ್ದೋಷನಾದ ಶ್ರೀಕೃಷ್ಣನೇ ! ಯಾವ ಮಲಯಮಾರುತವನ್ನು ಕಂಡು ಭೂಮಿಯೂ ಸಹ ಕಂಪಿಸುವುದೋ, ಅಂತಹ ಜಂಝಾನಿಲವು ವಿರಹಜ್ವಾಲೆಯಿಂದ ಬೆಂದ ನಮಗೆ ಪ್ರಳಯಕಾಲದ ವಾಯುವಿನಂತಾಗಿದೆ ; ಹಿತಕರವೆನ್ನಿಸಬೇಕಾದ ಈ ಮಲಯಮಾರುತಗಳು ಸಹ ನಮ್ಮನ್ನು ಬಹಳವಾಗಿ ವ್ಯಥೆಪಡಿಸುತ್ತಿವೆ.

### ಶ್ರೀಕೃಷ್ಣನಿಂದಾದ ಬಗೆಬಗೆಯ ರಕ್ಷಣೆಗಳು

ದೇವೇಶ ದೇವೇಽಶನಿವರ್ಷಹೇತೌ
ಪಾತಾಽಸಿ ಪಾತಾಸಿತಘಾತಕಲ್ಪೇ[೧] ।
ದಾವೇಽಷ್ಟದಾವೇಷ್ಟಯತೀಹ ಯೋಽಭೂ-
ರ್ಮಾ ನಃ ಸಮಾನಃ ಸ ನಿಜೇತ್ಯಜಾದ್ಯ[೨] ॥ ೨ ॥

ಪದಚ್ಛೇದ: ದೇವೇಶ ದೇವೇ ಅಶನಿವರ್ಷಹೇತೌ ಪಾತಾ ಅಸಿ ಪಾತಾಸಿತಘಾತಕಲ್ಪೇ ದಾವೇ ಅಷ್ಟದ ಆವೇಷ್ಟಯತಿ ಇಹ ಯಃ ಅಭೂಃ ಮಾ ನಃ ಸಮಾನಃ ಸಃ ನಿಜೇ ತ್ಯಜ ಅದ್ಯ.

---

ಸತಿ ಭೋ ಸತಿ ಹಾಪಘನೇಽತಿಘನೇ ಲವ ಏವ ಲವೇಽಪ್ಯಹಿತೋ ವಿಹಿತಾಮ್ ।
ರಚಯೇತ್ ಸ ಚ ಯೋ ವಿಧಿನಾ ವಿಧಿನಾ ವಪುರಾಪ ಮಮೇತ್ಯಮಮಾನುಪಮಃ ॥
ಯದುದಾರಮತೇ ಸಮುದಾ ರಮತೇಽನಯಯಾಽಪ್ಯನಯೋಷ್ಣಕರೋಷ್ಣವನೇ ।
ಇದಮೇವ ದಮೇ ವದಮೇಽಲಮಲಂ ಪ್ರಹಿಣೋಮಿ ಹಿನೋಮ್ಯಣಿಮಾನಮನಮ್ ॥
ವಿರಹೋಽಪಿ ರಹೋ ಯದಹೋ ನ ಮಹೋ ಮಹತೋ ಮಹತಃ ಪ್ರಬಲಂ ಶಬಲಮ್ ।
ಮಮ ತೇಽಮಿತ ಯನ್ ಮಿತಿದಂ ಚ ಶುಚಾ ಕ್ವ ರತಿಃ ಕ್ವ ಮತಿಃ ಕ್ವ ಪತಿಃ ಕ್ವ ಕೃತಿಃ ॥
ಅನ್ಯತಾಪ್ಯನ್ಯತಂ ನಯತೋಽನಯತೋಽಜ ಗತೌ ಜಗತಿ ತ್ವಯಿ ಮಯ್ಯಹಹ ।
ತದಿವಾವಿರಭೂತ್ ಕುತ ಇತ್ಯಕುತೋಭಯ ಮೇಽಪ್ಯಭಯೋರ್ನತಿರಸ್ತು ನುತಿಃ ॥
ಭುವಿ ದಾಶರಥಿಂ ಕಪಿರಾಪ ಸುಖಂ ಸ ಇವಾಧಿರಥಿಂ ಕೃಪಣೋಽಕೃಪಣಃ ।
ಅಮರಾ ಅಮೃತಂ ಹರಿಮಾಗುರಿಮಾಃ ಲಲನಾ ಕಿಲ ನಾಯಕಮೇತ್ಯ ಸಮಮ್ ॥ ೧-೨೯॥
ಲಸತಾತ್ ಲಲನಾಸುಖಿಕೌತುಕಕೃತ್ ಯದುರಾಟ್ ಚರಿತಾತನುರತ್ನಯುತಾ ।
ಪ್ರಥಮಾಪ್ರಥಮಾರ್ಥಿತದಾಶರಥಿಪ್ರಭುಸಂಪುಟಿಕಾ ಕವಿಕಂಠಮಣಿಃ

೧. ಗೃಹೀತಗ್ರಾಹಿಪಾದಚತುಷ್ಟಯಂ ಯಮಕಮಿದಮ್ । -ವ್ಯಾ.

೨. ಇದಾನೀಂ ತ್ಯಾಗೇ ಪೂರ್ವಮಸ್ಮದ್ರಕ್ಷಾರ್ಥಂ ಕೃತಪ್ರಯಾಸವೈಯ್ಯರ್ಥ್ಯಾಪತ್ತೇರಿತಿ ಭಾವಃ । -ವ್ಯಾ.

೩.. ಗತ್ವಾ ವನಾದ್ ವನಂ ಚಂದ್ರಜ್ಯೋತ್ಸ್ನಾ ಯಾವದ್ ವಿಭಾವ್ಯತೇ ।
ತಮಃಪ್ರವಿಷ್ಟಮಾಲಕ್ಷ್ಯ ತತೋ ನಿವವೃತುಃ ಸ್ತ್ರಿಯಃ ॥
ತನ್ಮನಸ್ಕಾಸ್ತದಾಲಾಪಾಸ್ತದ್ವಿಚೇಷ್ಟಾಸ್ತದಾತ್ಮಿಕಾಃ ।
ತದ್ಗುಣಾನೇವ ಗಾಯಂತ್ಯೋ ನಾತ್ಮಾಗಾರಾಣಿ ಸಸ್ಮರುಃ ॥
ಪುನಃ ಪುಲಿನಮಾಗತ್ಯ ಕಾಲಿಂದ್ಯಾಃ ಕೃಷ್ಣಭಾವನಾಃ ।
ಸಮವೇತಾ ಜಗುಃ ಕೃಷ್ಣಂ ತದಾಗಮನಕಾಂಕ್ಷಿಣೀಃ ॥ -ಭಾಗ.(೧೦/೨೮/೩೪-೩೬)

ಎಲೈ ಅಣಿಮಾದಿ ಅಷ್ಟೈಶ್ವರ್ಯಗಳನ್ನು ನೀಡುವ ದೇವೇಶನಾದ ಶ್ರೀಕೃಷ್ಣನೇ ! ಇಂದ್ರನು ಸಿಡಿಲಿಂದ ಕೂಡಿದ ಮಳೆಯನ್ನು ಸುರಿಸತೊಡಗಿದಾಗ, ಅಪ್ಪಳಿಸಿದ ಖಡ್ಗಪ್ರಹಾರದಂತಹ ಕಾಡ್ಗಿಚ್ಚು ಸುತ್ತಲೂ ಆವರಿಸಿದಾಗ, ಇಲ್ಲಿ ನಮ್ಮನ್ನು ರಕ್ಷಿಸಿದೆ. ತನ್ನ ಭಕ್ತರಲ್ಲಿ ಅಭಿಮಾನವುಳ್ಳ ಅಂತಹ ನೀನು ಈಗ ನಮ್ಮನ್ನು ತೊರೆಯದಿರು.

ವಿ. : ೧. ಇಂದ್ರನು ಸುರಿಸಿದ ಪ್ರಳಯಮೇಘಗಳ ವೃಷ್ಟಿಯಿಂದ, ಕಾಡ್ಗಿಚ್ಚಿನಿಂದ ನಮ್ಮನ್ನು ರಕ್ಷಿಸಿದ ನೀನು ಈಗೇಕೆ ರಕ್ಷಿಸುತ್ತಿಲ್ಲ? ಎಂದರ್ಥ.

೨. ಇದು ಗೋಪೀಗೀತೆಯಲ್ಲಿನ ಈ ಕೆಳಗಿನ ಶ್ಲೋಕದ ವಿವರಣೆಯಾಗಿದೆ :

ವೃಷಮಯಾದ್ಧಯಾತ್ ವಿಶ್ವತೋಮುಖಾದ್ವೃಷಭ ತೇ ವಯಂ ರಕ್ಷಿತಾ ಮುಹುಃ।(೩.)

## ದೋಷಿಗಳಾದ ನಮ್ಮನ್ನು ಪಾಲಿಸು

[೧]ನಾನಾನನಾನನುನ್ನೂನಂ ನೈನೋಽನನ್ನೇಽನ್ನಿನಾಂ ನು ನೌಃ।
ನಾನಾನ್ನನುನ್ನೇನಾನೇನ ನೋನೋ ನೇನ ನ ನೋ ನನು[೨] ॥ ೩ ॥

ಪದಚ್ಛೇದ: ನಾನಾನನಾನನುತ್ ನೂನಂ ನ ಏನಃ ಅನನ್ನೇ ಅನ್ನಿನಾಂ ನು ನೌಃ ನಾನಾನ್ನನುನ್ನೇನ ಅನೇನ ನ ಊನಃ ನಾ ಇನ ನ ನಃ ನನು.

ಎಲೈ ನಾನಾ ಮುಖಗಳನ್ನು ಹೊಂದಿದಂತಹ ಚತುರ್ಮುಖಬ್ರಹ್ಮ ಹಾಗೂ ಮುಖ್ಯಪ್ರಾಣ- ರನ್ನು ಪ್ರೇರಿಸುವವನೇ ! ಎಲೈ ಸ್ವಾಮಿಯಾದ ಶ್ರೀಕೃಷ್ಣನೇ ! ಅನ್ನ ತಿನ್ನುವವರಿಗೆ ಅನನ್ನಪುರುಷನಾದ ನೀನು ನಾವೆಯಂತೆ ರಕ್ಷಕನಾಗಿರುವಿ. ನಾನಾ ಬಗೆಯ ಷಡ್ರಸಾನ್ನ ಗಳಿಂದ ಹುಟ್ಟುವ ದೋಷದಿಂದಾಗಿ ಅನ್ನ ತಿನ್ನುವ ಮನುಷ್ಯರಿಗೆ ದೋಷಗಳು ಇರುವುದು ಸಹಜ; ಅದು ನಮಗೆ ಮಾತ್ರವೇ ಅನ್ವಯಿಸುವಂತಹುದೇನೂ ಅಲ್ಲವಲ್ಲ !

ವಿ. : ೧. ಇಲ್ಲಿ ಗೋಪಿಯರು ಶ್ರೀಕೃಷ್ಣನನ್ನು 'ಅನನ್ನ' – ಪ್ರಾಕೃತಾನ್ನವನ್ನು ಸರ್ವಥಾ ತಿನ್ನದ- ವನು ಎಂದು ಸಂಬೋಧಿಸುತ್ತಾ ಆ ಕಾರಣದಿಂದಲೇ ಅವನು ನಿರ್ದೋಷನಾಗಿರುವನು. ಆದರೆ ತಾವು ಮಾತ್ರ ಅನ್ನ ತಿನ್ನುವ ಗುಂಪಿಗೆ ಸೇರಿದವರಾಗಿರುವುದರಿಂದ ತಪ್ಪು ಮಾಡುವುದು ಸಹಜ. ಅದು ತಮಗೆ ಮಾತ್ರವಲ್ಲದೆ ಅನ್ನ ತಿನ್ನುವ ಇತರ ಎಲ್ಲರಿಗೂ ಅನ್ವಯಿಸುವಂತಹುದೇ ಎಂದ ಮೇಲೆ ತಮ್ಮನ್ನು ಮಾತ್ರ ದೂರ ಮಾಡುವುದೇಕೆ? ಎಂಬುದಾಗಿ ಬೇಡಿಕೊಳ್ಳುತ್ತಿರುವರು.

೨. [೩]ನಾನಾನನರು ನಾನಾ ಆನನರು ಹೆಚ್ಚು ಮುಖವುಳ್ಳವರು ಎಂದರೆ ಚತುರ್ಮುಖ ಬ್ರಹ್ಮ ಹಾಗೂ ಪಂಚಮುಖರಾದ ರುದ್ರದೇವರು ಎಂದರ್ಥ; ಅನ ಎಂದರೆ ಮುಖ್ಯಪ್ರಾಣ.

---

೧. ಇದು ಈ ಕೆಳಗಿನ ಸುಮಧ್ವವಿಜಯದ ಶ್ಲೋಕವನ್ನು ಹೋಲುವುದು ಗಮನಾರ್ಹ:
ನಾನೇನೇನಾನೇನಾನೇನೋನೂನೇನ ನನು ನುನ್ನಾಃ।
ನಾನಾನಾ ನೋ ನೂನಂ ನಾನೇನಾನೂನನಾನುನುನ್ನಃ॥ –ಸುಮಧ್ವವಿಜಯ (೧೦/೬)

೨. ಏಕಾಕ್ಷರಮಿದಮ್ । –ವ್ಯಾ.

೩. ಬ್ರಹ್ಮರುದ್ರಾದೀನಾಮಪಿ ತ್ವತ್ತೇರಣಯೈವ ದೋಷಪರಿಹಾರಃ ಕಿಮಸ್ಮಾಕಮಿತಿ ದ್ಯೋತಯಿತುಮಿದಂ ವಿಶೇಷಣಮ್ । –ವ್ಯಾ.

೩. ಅನನ್ನ ಎಂದರೆ ಶ್ರೀಹರಿ; [೧]ಅನಶ್ನನ್ ಅನ್ಯೋ ಅಭಿಚಾಕಶೀತಿ - (ಮುಂಡಕೋಪನಿಷತ್)

೪. [೨]ಅನ್ನ ತಿನ್ನುವವರು ತಪ್ಪು ಮಾಡುವುದು ಸಹಜ ಎಂಬ ಮಾತು ಲೋಕರೂಢಿಯದೂ ಆಗಿದೆ: [೩]ಮಾನುಷಾನ್ನವನುಂಡು ಜ್ಞಾನಶೂನ್ಯನು ಆದೆ (ಶ್ರೀಜಗನ್ನಾಥದಾಸರು, ತತ್ತ್ವಸುವ್ವಾಲಿ).

೫. ಸಾಮಾನ್ಯವಾಗಿ [೪]ನಿರಾಹಾರವ್ರತವನ್ನು ಕೈಗೊಳ್ಳುವ ಯೋಗಿಗಳಿಗೂ ಸಹ ಒಂದು ಬಗೆಯ ದೋಷ ಇದ್ದೇ ಇರುವುದು; ಎಂದ ಮೇಲೆ ತಮ್ಮ ಪಾಡೇನು? ಎಂಬುದು ಅವರ ಭಾವ.

೬. ಇದು ಏಕಾಕ್ಷರ ಯಮಕಶ್ಲೋಕ.

ಮನಸಾಮಹಿತ ಸ್ವರಮಿತ್ರಹೃದಾ-
ಮನಸಾಮಹಿತಸ್ವರಮಿತ್ರ ಹೃದಾ ।
ಮನಸಾ ಮಹಿತ ಸ್ವರಮಿತ್ರಹೃದಾ-
ಮನಸಾಽಮಹಿತಸ್ವರ ಮಿತ್ರ ಹೃದಾ [೫]॥ ೪ ॥

ಪದಚ್ಛೇದ : ಮನಸಾಂ ಅಹಿತ ಸ್ವರಮಿತ್ರಹೃದಾಂ ಅನಸಾಮಹಿತಸ್ವರಮಿತ್ರ ಹೃದಾ ಮನಸಾ ಮಹಿತ ಸ್ವರಮಿತ್ರಹೃದಾಂ ಅನಸಾ ಅಮಹಿತಸ್ವರ ಮಿತ್ರ ಹೃದಾ.

ಸ್ವರ್ಗಸಾಧನೆಗೆ ವಿರುದ್ಧವಾದ ಮನಸ್ಸನ್ನು ಹೊಂದಿದ [೬]ದೈತ್ಯರ ಮನಸ್ಸುಗಳಿಗೆ ದುಃಖ ನೀಡುವವನೇ, ಹೃದಯದಿಂದ ಮುಖ್ಯಪ್ರಾಣನಿಂದ ಹಾಡಲ್ಪಡುವ ಸಾಮಗಳಿಗೆ ಹಿತಕರವಾದ ಸ್ವರಗಳಿಗೆ ಪ್ರಿಯನಾದವನೇ, ಪ್ರಣವಮಂತ್ರದಲ್ಲಿ ಸ್ನೇಹಯುಕ್ತವಾದ ಹೃದಯವನ್ನು ಹೊಂದಿದ [೭]ಪರಮಹಂಸರ ಮನಸ್ಸಿನಿಂದ ಪೂಜಿತನಾದವನೇ, ಶಕಟಾಸುರನಿಂದ

---

೧. ಅನ್ನರಹಿತಸ್ಯ ಯೋಗಿನೋಽಪಿ ದೋಷಿತ್ವೇ ಸಂಸಾರೋದಧಿಮಗ್ನಾನಾಂ ಅಸ್ಮದಾದೀನಾಂ ಉತ್ತಾರಕಾಭಾವೇನಾ-ನಿರ್ಮೋಕ್ಷಪ್ರಸಂಗ ಇತಿ ಭಾವಃ। -ವ್ಯಾ.

೨. ನೂನಂ ಪ್ರಾಯೇಣ ಅನನ್ನೇ ಅನ್ನರಹಿತೇ ತ್ಯಕ್ತಾಹಾರೇ ಪುರುಷ ಇತ್ಯರ್ಥಃ। ನ ನಾಸ್ತಿ। ಅನ್ನಜನ್ಯಚಿತ್ತವಿಕಾರಾ-ಭಾವಾತ್ ತಸ್ಯೈವ ನಿರ್ದೋಷತ್ವಮಿತಿ ಭಾವಃ। -ವ್ಯಾ.

೩. ''ಮಾನುಷಾನ್ನೋಪಭೋಗೇನ'' (ಮ.ಭಾ.ತಾ.ನಿ. ೧೮/೧೫೩.)ಇತಿ ವಚನಾತ್ ವೇದಶಾಸ್ತ್ರವಿದಃ ದೇವಾಂಶ-ಪುರುಷಸ್ಯಾಪಿ ಅನ್ನಕೃತವಿಕಾರೋಽಸ್ತ್ಯೇವೇತಿ ಭಾವಃ। -ವ್ಯಾ.

೪. ''ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ'' ಇತಿ (ಗೀತಾ ೨/೫೯) ವಚನಾತ್। -ವ್ಯಾ.

೫. ಏಕಪಾದಯಮಕಮಿದಮ್। ತೋಟಕವೃತ್ತಮ್। -ವ್ಯಾ.

೬. ಅನೇನ ತ್ವಯಾ ದುಃಖಂ ದೈತ್ಯಾನಾಮೇವ ದೇಯಂ ನಾಸ್ಮಾಕಮಿತಿ ಸೂಚಿತಮ್। ಹೃದಾ ಹೃದಯೇನ ಅನಸ್ಯ ಶ್ರೀಮುಖ್ಯಪ್ರಾಣಸ್ಯ ಸಾಮಾನಿ ಬೃಹದ್ರಥಂತರಾದೀನಿ ಶ್ರೀಮುಖ್ಯಪ್ರಾಣೇನ ಗೀಯಮಾನಸಾಮಾನಿ ಇತ್ಯರ್ಥಃ। -ವ್ಯಾ.

೭. ಅನೇನ ಸರೂಪತ್ವಸಾವಯವತ್ವಾದಿನಾ ಏಕೈಕಾವಯವಮಾತ್ರಧ್ಯಾನಮಸ್ಮಾಕಮಪ್ಯಸ್ತೀತಿ ಸೂಚಿತಮ್। -ವ್ಯಾ.

ಕರ್ಕಶವಾದ ಸ್ವರವನ್ನು ಹೊರಡಿಸಿದವನೇ, [೧]ಸೂರ್ಯನಂತೆ ಹೊಳೆಯುವ ವಕ್ಷಃಸ್ಥಳವನ್ನು ಹೊಂದಿದ ಎಲೈ ಶ್ರೀಕೃಷ್ಣ! (ನೀನು ನಮ್ಮನ್ನು ಅನುಗ್ರಹಿಸು).

ವಿ. : ೧. [೨]ಶ್ರೀಕೃಷ್ಣನು ದೈತ್ಯರಿಗೆ ದುಃಖನೀಡುವವನು, ತಾವು ದೈತ್ಯರಲ್ಲವಾದ್ದರಿಂದ ತಮಗೆ ದುಃಖನೀಡುವುದು ತರವಲ್ಲ; ಶ್ರೀಕೃಷ್ಣನು [೩]ಮುಖ್ಯಪ್ರಾಣ ಹಾಡುವ ಬೃಹತ್, ರಥಂತರ ಮೊದಲಾದ ಸಾಮಗಳಿಗೆ ಒಲಿಯುವವನು. ಆದರೆ ನಾವು ಮುಖ್ಯಪ್ರಾಣರಂತಹವರೇನಲ್ಲ. ಆದ್ದರಿಂದ ತಮ್ಮನ್ನು ಕೈಬಿಡದೇ ಪಾಲಿಸಬೇಕು ಎಂಬುದು ಅವರ ಭಾವ.

೨. ಇದು ಏಕಪಾದ ಯಮಕ.

### ಗೋಪಿಕೆಯರಲ್ಲಿ ರಮಾವೇಶ

**ವರಯಾಸುರಮೋದಾರೇ ತರಸಾ [೪]ಕಿಂಕರೀರಿಮಾಃ।**
**ವರ ಯಾಸು ರಮೋದಾರೇ ತ್ವಯಿ ನೇದಂ ಗುಣೋಚಿತಮ್ ॥ ೫ ॥**

ಪದಚ್ಛೇದ : ವರಯ ಅಸುರಮೋದಾರೇ ತರಸಾ ಕಿಂಕರೀಃ ಇಮಾಃ ವರ ಯಾಸು ರಮಾ ಉದಾರೇ ತ್ವಯಿ ನ ಇದಂ ಗುಣೋಚಿತಮ್.

ಎಲೈ ಅಸುರರ ನಲಿವನ್ನು ಅಳಿಸುವವನೇ! ನಮ್ಮಲ್ಲಿ ಮಹಾಲಕ್ಷ್ಮಿಯು ನೆಲೆಸಿರುವಳು. ಅಂತಹ ದಾಸಿಯರಾದ ನಮ್ಮನ್ನು ಶೀಘ್ರವಾಗಿ ಸ್ವೀಕರಿಸು; ಎಲೈ ಶ್ರೇಷ್ಠನಾದವನೆ! ಉದಾರನಾದ ನಿನ್ನ ಗುಣಕ್ಕೆ ಇದು ಯೋಗ್ಯವಾದುದಲ್ಲ.

ವಿ. : ೧. ತಮ್ಮಲ್ಲಿ ಆಗ [೫]ರಮಾಸನ್ನಿಧಾನವಿರುವುದರಿಂದ ಶ್ರೀಕೃಷ್ಣ ತಮ್ಮನ್ನು ಸ್ವೀಕರಿಸಲೇ-ಬೇಕು; ಇಲ್ಲವಾದಲ್ಲಿ ರಮಾದೇವಿಯನ್ನೇ ತೊರೆದಂತಾದೀತು ಎಂಬುದು ಅವರ ಭಾವ.

೨. ನಂಬಿದವರನ್ನು ತೊರೆಯುವುದು ಶ್ರೇಷ್ಠರಾದವರಿಗೆ ಶೋಭಿಸದು; ಶ್ರೀಕೃಷ್ಣನಂತೂ ಸರ್ವಶ್ರೇಷ್ಠನಾದವನು; ಅಂತಹವರಿಗೆ ದಾಸಿಯರಾಗಿ ಬಂದ ತಮ್ಮನ್ನು ತೊರೆಯುವುದು ಯೋಗ್ಯವೆನ್ನಿಸದು ಎಂಬ ಮತ್ತೊಂದು ಅಂಶವೂ ಇಲ್ಲಿ ನಿರೂಪಿತವಾಗಿದೆ.

---

೧. ಹೃದಾ ವಕ್ಷಸಾ ಮಿತ್ರ ಇವ। ಸೂರ್ಯವದ್ದೀಪ್ಯಮಾನವಕ್ಷಸ್ಥಲಯುಕ್ತೇತ್ಯರ್ಥಃ। -ವ್ಯಾ.

೨. ''ರುದತಾಽನೇನ ಪಾದೇನ ಕ್ಷಿಪ್ತಮೇತನ್ನ ಸಂಶಯಃ'' ಇತಿ ಭಾಗವತೋಕ್ತೇಃ (೧೦/೭/೯)। -ವ್ಯಾ.

೩.. ಅನೇನ ವೇದಾಭ್ಯಾಸೇನ ತ್ವತ್ಪ್ರೀತಿಸಂಪಾದಕತ್ವಂ ಶ್ರೀಮುಖ್ಯಪ್ರಾಣಸ್ಯೈವ ನಾಸ್ಮಾಕಮಿತಿ ಸೂಚ್ಯತೇ। -ವ್ಯಾ.

೪. ಭಜ ಸಖೇ ಭವೇಃ ಕಿಂಕರೀಃ ಸ್ಮ ನಃ। -ಗೋಪಿಗೀತ (೧೦/೩೧/೬)

೫. ಯಾಸು ರಮೇತ್ಯನೇನ ಶ್ರೀಲಕ್ಷ್ಮೀಸನ್ನಿಧಾನರೂಪಂ ಸ್ವವರಣೇ ಕಾರಣಾಂತರಮ್। ಅಸ್ಮತ್ತ್ಯಾಗೇ ಸ್ವಪರಮಪ್ರಿಯ-ಲಕ್ಷ್ಮೀತ್ಯಾಗೋಽಪಿ ಸ್ಯಾದಿತಿ ಬಾಧಕಂ ಸೂಚಯಂತಿ। -ವ್ಯಾ.

### ಭಕ್ತರ ರಕ್ಷಣೆ ಭಗವಂತನ ಹೊಣೆ

ವೃಣೀತ ದಾಸೀರ್ಯದಿ ನೋ ವನೇ ನಃ
ಕವೀಶ ಗೌರೀಶ ಹೃತಾಽಽತ್ಮವೃತ್ತಾ[೧] ।
ಕವೀಶಗೌರೀಶಹೃತಾತ್ಮವೃತ್ತಾ-
ವೃಣೀ ತದಾಸೀರ್ಯದಿನೋಽವನೇ ನಃ ॥ ೬ ॥

ಪದಚ್ಛೇದ : ವೃಣೀತ ದಾಸೀಃ ಯದಿ ನೋ ವನೇ ನಃ ಕವೀಶ ಗೌಃ ಈಶ ಹೃತಾ ಆತ್ಮವೃತ್ತಾ ಕವೀಶಗೌರೀಶಹೃತ ಆತ್ಮವೃತ್ತೌ ಋಣೀ ತತ್ ಆಸೀಃ ಯತ್ ಇನಃ ಅವನೇ ನಃ.

ಎಲೈ ಜ್ಞಾನಿಗಳಿಗೆ ಒಡೆಯನಾದ ಶ್ರೀಕೃಷ್ಣನೇ! ನೀನೀಗ ಈ ಕಾಡಿನಲ್ಲಿ ದಾಸಿಯರಾದ ನಮ್ಮನ್ನು ಸ್ವೀಕರಿಸೆಯಾದಲ್ಲಿ, ಎಲೈ ಈಶನೇ! ನಿಮ್ಮಿಂದ ಪ್ರವೃತ್ತವಾದಂತಹ ಮಾತನ್ನು ಕೈಬಿಟ್ಟಂತಾಗುವುದು; ಬ್ರಹ್ಮದೇವರು, ಗರುಡದೇವರು, ರುದ್ರದೇವರಿಂದ ಮನಸ್ಸಿನಲ್ಲಿ ಧ್ಯಾನಿಸಲ್ಪಡುವವನೇ, ನೀನು ನಮ್ಮ ರಕ್ಷಣೆಯಲ್ಲಿ ಸಮರ್ಥನಾದವನು. ಆದ್ದರಿಂದ ಹಾಗೆ ಮಾಡದಿದ್ದಲ್ಲಿ ನೀನು ಋಣಿಯಾಗಿ ಬಿಡುವೆ.

ವಿ. : ೧. ಅವತರಿಸುವಾಗ[೨] ರಕ್ಷಣೆ ನೀಡುವುದಾಗಿ ಭರವಸೆ ಇತ್ತಿರುವ ಶ್ರೀಕೃಷ್ಣನು ತಮ್ಮನ್ನೀಗ ಕೈಬಿಟ್ಟಲ್ಲಿ ಆ ಮಾತು ತಪ್ಪಿದಂತಾಗುವುದು; ಅದರಂತೆ ಸರ್ವಸಮರ್ಥನಾದ ಅವನು ರಕ್ಷಣೆ ನೀಡದಿದ್ದಲ್ಲಿ, ಭಕ್ತರ ಪ್ರಾರ್ಥನೆಯ[೩] ಋಣವು ಅವನಲ್ಲಿ ಹಾಗೆಯೇ ಉಳಿದುಕೊಂಡಂತಾಗು-ವುದು; ಈ[೪] ಕಾರಣದಿಂದಾದರೂ ಶ್ರೀಕೃಷ್ಣನು ತಮ್ಮನ್ನು ಸ್ವೀಕರಿಸಲೇಬೇಕು ಎಂಬುದು ಗೋಪಿಯರ ಭಾವ.

೨. **ಕವೀಶಗೌರೀಶಹೃತ** ಎಂಬಲ್ಲಿ ಕ-ವೀಶ-ಗೌರೀಶ-ಹೃತ; ಕ ಎಂದರೆ ಬ್ರಹ್ಮದೇವರು; ವೀಶ ಎಂದರೆ ಪಕ್ಷಿಗಳ ಒಡೆಯನಾದ ಗರುಡ.

### ತೊರೆಯದಿರಲು ಪ್ರಾರ್ಥನೆ

ಜಾನತೀರ್ನಸ್ತವಾಮಾನವೇಷು ಸ್ಥಿತಿಂ
ನ ತ್ಯಜೇಮಾಃ ಪ್ರಭೋ ಮಾ ನವೇಷು ಸ್ಥಿತಿಮ್ ।
ಕುರ್ವಸೌ ಕಿಂ ಪ್ರಿಯಾ ಮಾ ನವೇಷುಃ ಸ್ಥಿತಿಂ
ನೇಹ ಕಿಂತು ಪ್ರಿಯೇಮಾ ನವೇಷುಸ್ಥಿತಿಮ್[೫] ॥ ೭ ॥

---

೧. ತಥಾಪಿ "ಗಾಂ ಪೌರುಷೀಂ ಮೇ ಶೃಣುತ"ಇತಿ ವಚನಾಚ್ಛ್ರೀಕೃಷ್ಣೋಕ್ತ್ಯೈವ ತೇನಾಪಿ ಕಥಾನಾದಾತ್ಮವೃತ್ತೇತ್ಯುಕ್ತಮ್ । -ವ್ಯಾ.
೨. ವಾಗ್ದತ್ತಸ್ಯಾಪ್ರದಾನೇ ಋಣಿತ್ವಸ್ಯ ಸ್ಮೃತಿಸಿದ್ಧತ್ವಾದಿತಿ ಭಾವಃ । -ವ್ಯಾ.
೩. ಸ್ವವಚನವ್ಯಾಘಾತಭಿಯಾಽಸ್ಮಾನ್ ಸ್ವಾನ್ ವರಯೇತಿ ಭಾವಃ । -ವ್ಯಾ.
೪. 'ಸಕೃದಾಹ ದದಾನೀತಿ' (ಮಹಾಭಾರತ, ವನಪರ್ವ, ೨೯೬/೨೬)ಇತಿ ಭಾರತೇ -ವ್ಯಾ.
೫. ಸ್ರಗ್ವಿಣೀವೃತ್ತಮ್ -ವ್ಯಾ.

ಪದಚ್ಛೇದ: ಜಾನತೀಃ ನಃ ತವ ಅಮಾನವೇಷು ಸ್ಥಿತಿಂ ನ ತ್ಯಜ ಇಮಾಃ ಪ್ರಭೋ ಮಾ ನವೇಷು ಸ್ಥಿತಿಂ ಕುರು ಅಸೌ ಕಿಂ ಪ್ರಿಯಾ ಮಾ ನವಾ ಈಷುಃ ಸ್ಥಿತಿಂ ನ ಇಹ ಕಂತು ಪ್ರಿಯ ಇಮಾ ನವೇಷುಸ್ಥಿತಿಮ್.

ಎಲೈ ಪ್ರಭುವಾದ ಶ್ರೀಕೃಷ್ಣನೇ ! ಮಾನವರಲ್ಲದ ದೇವತೆಗಳಲ್ಲಿ ನೆಲೆಸಿರುವವನು ನೀನು ಎಂದು ತಿಳಿದ ನಮ್ಮನ್ನು ತೊರೆಯದಿರು; ನೂತನ ಸ್ತ್ರೀಯರಲ್ಲಿ ಮನಸ್ಸನ್ನು ಹಾಕದಿರು; ನಿನ್ನ ಪ್ರಿಯೆಯಾದ ಮಹಾಲಕ್ಷ್ಮಿಯು ನೂತನಳಾಗಿರುವಳೇನು? ಎಲೈ ಪ್ರಿಯನಾದ ಶ್ರೀಕೃಷ್ಣನೇ ! ಗೋಪಿಯರಾದ ನಾವು ಭೂಲೋಕದಲ್ಲಿ ಇರುವಿಕೆಯನ್ನು ಬಯಸದವರು; ನಾವು ಹೊಸಬಗೆಯ ಬಾಣಗಳಲ್ಲಿ ಬೀಳಬಯಸುವವರು.

ವಿ. : ನಿತ್ಯನೂತನಳಾದ ಮಹಾಲಕ್ಷ್ಮಿಯು ತಮ್ಮಲ್ಲಿ ನೆಲೆಸಿರುವುದರಿಂದ ತಮ್ಮನ್ನು ತಪ್ಪದೆ ಸ್ವೀಕರಿಸಲೇಬೇಕು ಎಂಬುದು ಗೋಪಿಯರ ಆಶಯ. ಇಲ್ಲವಾದಲ್ಲಿ ತಾವು ಬಾಣಗಳಿಂದ ಪೀಡಿತರಾಗಿ ದೇಹ ತೊರೆಯುವುದು ನಿಶ್ಚಯ ಎಂಬುದೂ ಭಾವ.

### ಶ್ರೀಕೃಷ್ಣನ ಅಗಲುವಿಕೆಗಿಂತ ಸಾವೇ ಮೇಲು

**ವ್ರಜೇ ಮಹಂ ತೋಷಸಿತಂ ವಿಕುಂಠಂ**
**ಭಜೇಮ ಚಕ್ಷುರ್ವಿಷಯೇ ತ್ವಯೀಶ।**
**ವ್ರಜೇಮ ಹಂತೋಷಸಿ ತಂ ವಿಕುಂಠಂ**
**ನ ಚೇತ್ ತ್ವದೀಕ್ಷೋತ್ಸವಭಂಗಹೀನಮ್ ॥ ೮ ॥**

ಎಲೈ ಈಶನಾದ ಶ್ರೀಕೃಷ್ಣನೇ ! ನೀನು ಕಣ್ಣಿಗೆ ಕಾಣಿಸಿದರೆ, ಗೋಕುಲದಲ್ಲಿ ನಲಿವಿನಿಂದಲೇ ನೆಲೆಸಿಬಿಡುವೆವು; ಇಲ್ಲವಾದಲ್ಲಿ ಅಂತಹ ನಿನ್ನನ್ನು ಕಾಣುವ ಅಳಿವಿರದ ಉತ್ಸವವನ್ನು ಆಚರಿಸುವೆವು; ಎಂದೂ ಕುಂದಿಲ್ಲದ ವೈಕುಂಠಕ್ಕೆ ನಾವು ಉಷಃಕಾಲದಲ್ಲಿ ತೆರಳಿಬಿಡುವೆವು.

ವಿ.: ೧. [೧]ಶ್ರೀಕೃಷ್ಣನ ದರ್ಶನದ ಭಾಗ್ಯ ಲಭಿಸುವುದಾದಲ್ಲಿ ಬಂಧನವೆನ್ನಿಸುವ ಭೂಲೋಕದ ವಾಸವೇ ಸುಖಕ್ಕರ; ತಪ್ಪಿದಲ್ಲಿ ಮರಣಾನಂತರವಾದರೂ ಅವನನ್ನು ಸದಾ ಕಾಣುವ ಭಾಗ್ಯ-ವಿರುವ ವೈಕುಂಠವಾಸವೇ ಉಚಿತ ಎಂದರ್ಥ.

೨. ಇಲ್ಲಿ ಉಷಸಿ ಎಂದರೆ ಪ್ರಾತಃಕಾಲ ಎಂದರ್ಥ. ಮುಖ್ಯವಾಗಿ ಅದು ಮರಣಾನಂತರದ ಮೋಕ್ಷಪ್ರಾಪ್ತಿಗೆ ಅನ್ವಯಿಸುವಂತೆ ಇಲ್ಲಿ ಪ್ರಯೋಗಿಸಲ್ಪಟ್ಟಿದೆ.

---

೧. ಹಂತ, ಮರಣಾನಂತರಂ ತ್ವದ್ವಿಯೋಗಭಯರಹಿತಂ ತ್ವಲ್ಲೋಕಮೇವ ಗಚ್ಛಾಮೇತಿ ಭಾವಃ। -ವ್ಯಾ.

### ಶ್ರೀಕೃಷ್ಣನಿಲ್ಲದ ಹಗಲು ರಾತ್ರಿಗಿಂತ ಭಯಾನಕ

**ವಿಯೋಗೇ ತವ ಗೋವಿಂದ ದಿವಸೋಽಪಿ ಭಯಂಕರಃ।**
**ಇಯಂ ನಿಶಾ ದಿಶಾವ್ಯಾಪ್ತತಮಿಸ್ರಾ ಕಾಂತ ಕಿಂ ಪುನಃ ॥ ೯ ॥**

ಎಲೈ ಕಾಂತನಾದ ಗೋವಿಂದ! ನಿನ್ನನ್ನು ಅಗಲಿದಾಗ ಹಗಲೂ ಸಹ ಭಯಂಕರವೆನ್ನಿಸುವುದು; ಇನ್ನು ದಿಕ್ಕುದಿಕ್ಕುಗಳಲ್ಲಿ ಕತ್ತಲೆ ಆವರಿಸಿದ ಈ ರಾತ್ರಿಯ ಬಗ್ಗೆ ಹೇಳುವುದೇನಿದೆ?

ವಿ. : ೧. ಶ್ರೀಕೃಷ್ಣನಿಲ್ಲದ ಹಗಲು ರಾತ್ರಿಯಂತೆ ಭಯಂಕರ. ಇನ್ನು ರಾತ್ರಿಯಂತೂ ಊಹಿಸಲೂ ಆಗದಷ್ಟು ಭಯಂಕರ ಎಂದರ್ಥ.

೨. ಇದು ಒಂದು ರೀತಿಯಲ್ಲಿ ಭಗವದ್ಗೀತೆಯ ಈ ಕೆಳಗಿನ ಶ್ಲೋಕದ ಭಾವದಂತಿದೆ :

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ -ಗೀತಾ (೨/೬೯)

೩. ಶ್ರೀಕೃಷ್ಣನಿಲ್ಲದ ರಾತ್ರಿ ಭಯಂಕರ ಎಂಬ ಮಾತಿನಲ್ಲಿ ಕೃಷ್ಣನ ಸ್ಮರಣೆ ಇದ್ದಾಗ ರಾತ್ರಿಯೂ ಹಗಲಿನಂತೆ ಸುಖಕರ ಎಂಬ ಅರ್ಥವು ಧ್ವನಿತವಾಗಿದೆ.

೪. ಶ್ರೀವಿಜಯದಾಸರ ಹರಿಯ ನೆನೆಸಿದ ದಿವಸ ಶುಭಮಂಗಳ ಹರಿಯ ನೆನೆಸದ ದಿವಸ ಅವಮಂಗಳ – ಎಂಬ ಕೃತಿ ಇದರ ವಿವರಣೆಯಂತಿದೆ.

### ತಮ್ಮ ಕೈಬಿಡದಿರಲು ಗೋಪಿಯರ ಪ್ರಾರ್ಥನೆ

**ಸಮಾಯತೇಯಂ ನ ಶರ್ಯೈಃ ಸಮಾಽಯತೇ**
**ಸಮಾಯತೇ ಸ್ವೇಷು ಕಿಲಾಸಮಾಯತೇ।**
**ಸಮಾಯ ತೇನಾಂಗ ನಮಃ ಸಮಾಯ ತೇ**
**ಸ ಮಾ ಯತೇರ್ವರ್ತ್ಮ ಭಜಾಸಮಾಯ ತೇ ॥ ೧೦ ॥**

ಪದಚ್ಛೇದ : ಸಮಾಯತಾ ಇಯಂ ನ ಶರ್ಯೈಃ ಸಮಾ ಆಯತೇ ಸಮಾಯತೇ ಸ್ವೇಷು ಕಿಲ ಅಸಮಾಯತೇ ಸಮಾಯ ತೇನ ಅಂಗ ನಮಃ ಸಮಾಯ ತೇ ಸಃ ಮಾ ಯತೇಃ ವರ್ತ್ಮ ಭಜ ಅಸಮಾಯ ತೇ.

ಎಲೈ ಶ್ರೀಕೃಷ್ಣ ! ಶಲ್ಯಗಳಿಗೆ ಸಮಾನವಾದ ಈ ರಾತ್ರಿಯು ಕಳೆಯುತ್ತಲೇ ಇಲ್ಲವಲ್ಲ. ಎಲೈ ಸಾಟಿಯಿಲ್ಲದ ವ್ಯಾಪ್ತಿಯುಳ್ಳವನೇ, ನೀನು ನಿನ್ನವರಲ್ಲಿ ನಿಷ್ಪಕ್ಷಪಾತಿಯಾಗಿ ನಡೆದುಕೊಳ್ಳುವವನಲ್ಲವೆ! ಎಲೈ ಮಾಯಾವಿಯಾದವನೇ! ಶ್ರೀಕೃಷ್ಣ! ಲಕ್ಷ್ಮೀಸಮೇತನಾದ ನಿನಗೆ ನಮಸ್ಕಾರ; ಎಲೈ ಅನುಪಮಲಾಭಸಂಪನ್ನನೇ ! ನಿನ್ನ ಸಂಬಂಧಿಗಳಾದ ಯತಿಗಳ ಹಾದಿಯನ್ನು ನೀನು ಹಿಡಿಯದಿರು.

ವಿ. : ೧. ಶ್ರೀಕೃಷ್ಣನಿಲ್ಲದ ಆ ರಾತ್ರಿ ಅವರಿಗೆ ಬಹಳ ದೀರ್ಘವೆನ್ನಿಸತೊಡಗಿತ್ತು. ಅದಕ್ಕೆ ಹಿಮಕಾಲದ ಆ ರಾತ್ರಿ ಸಹಜವಾಗಿಯೇ ದೀರ್ಘಕಾಲದ್ದಾಗಿದ್ದುದೂ ಹೊರಗಿನ ಕಾರಣವಾಗಿದ್ದಿತು. ಮುಖ್ಯವಾಗಿ ಪ್ರಿಯನಾದ ಶ್ರೀಕೃಷ್ಣನ ವಿರಹ ಅವರಿಗೆ ಆ ಕಾಲವನ್ನು ಅಸಹನೀಯವನ್ನಾಗಿಸಿತ್ತು ಎಂದರ್ಥ: ತ್ರುಟಿ ಯುಗಾಯತೇ ತ್ವಾಮಪಶ್ಯತಾಮ್ - ಗೋಪಿಗೀತ.

೨. ಹಾಗೆ ಬಯಸಿ ಬಂದ ಸ್ತ್ರೀಯರನ್ನು ತೊರೆಯುವುದು [೧] ಯತಿಗಳ ಲಕ್ಷಣ; ಅವರು ಹಾಗೆ ಮಾಡುವುದಕ್ಕೆ ಅವರಿಗೆ ಪರಮಲಾಭವಾದ ವೈಕುಂಠಪ್ರಾಪ್ತಿಯ ಬಯಕೆ ಇರುವುದು ಕಾರಣ. ಆದರೆ ಶ್ರೀಕೃಷ್ಣ ಆಪ್ತ ಸಮಸ್ತಕಾಮನಾದ ಸಾಕ್ಷಾತ್ ಭಗವಂತ. ಅವನಿಗೆ ಆಗಬೇಕಾದದ್ದು ಏನೂ ಇಲ್ಲ. ಆದ್ದರಿಂದ ಅವನು [೨] ಸನ್ಯಾಸಿಯಂತೆ ವರ್ತಿಸುವುದು ಉಚಿತವಲ್ಲ ಎಂದು ಭಾವ.

೩. ಶ್ರೀಸತ್ಯಧರ್ಮತೀರ್ಥರ ಗೋಪಿಗೀತೆಯ ವ್ಯಾಖ್ಯಾನದಲ್ಲಿ ಇಲ್ಲಿಯ ವಿವರಣೆಯ ಪ್ರಭಾವವನ್ನು ಕಾಣಬಹುದು: ನನು ವಿರಕ್ತಸ್ಯ ಮಮ ಕಿಮಾಸಕ್ತ್ಯೇತ್ಯತ ಆಹುಃ - ತೇ ಯತಿತಾ ಸಂನ್ಯಾಸಿತ್ವಂ ನ ಇತಿ। (ಭಾಗವತಟಿಪ್ಪಣಿ ೧೦/೨೯/೧).

ಶ್ರೀಕೃಷ್ಣನಿಲ್ಲದ ಬದುಕು ನಿಷ್ಕ್ರಿಯ

ಕರೋऽತಿಕಾರ್ಯೋ ದಧಿಮಂಥಸಂಗ-
ಮಪಿ ಸ್ಮ ಕರ್ತುಂ ಯತತೇ ನ ತೇನ।
ತ್ವದಂಘ್ರಿಜುಷ್ಟೇರಪರಂ ಮುರಾರೇ
ಕರೋತಿ ಕಾऽऽಯೋರ್ದಧಿಮಂಥಸಂಗ ॥ ೧೧ ॥

ಪದಚ್ಛೇದ : ಕರಃ ಅತಿಕಾರ್ಯಃ ದಧಿಮಂಥಸಂಗಂ ಅಪಿ ಸ್ಮ ಕರ್ತುಂ ಯತತೇ ನ ತೇನ। ತ್ವದಂಘ್ರಿಜುಷ್ಟೇಃ ಅಪರಂ ಮುರಾರೇ ಕರೋತಿ ಕಾ ಆರ್ಯಾ ಉದಧಿಮಂಥಸಂಗ.

ಎಲೈ ಮುರಾರಿಯೇ! ಸಮುದ್ರಮಥನಕ್ಕೆ ಕಡೆಗೋಲಾದ ಮಂದರವನ್ನು ಹೊತ್ತವನೇ! ಹಿಂದೆ ಬಹಳ ಕೆಲಸಗಳನ್ನು ಮಾಡುತ್ತಿದ್ದ ನಮ್ಮ ಕೈಗೆ ಈಗ ಕಡೆಗೋಲನ್ನು ಸಹ ಹಿಡಿಯಲು ಸಾಧ್ಯವಾಗುತ್ತಿಲ್ಲ; ಆದ್ದರಿಂದ ನಿನ್ನ ಪಾದಸೇವನೆಯ ಹೊರತು ಬೇರೊಂದು ಕಾರ್ಯವನ್ನು ಶ್ರೇಷ್ಠಳಾದ ಸ್ತ್ರೀಯು ಮಾಡಲಾರಳು.

ಶ್ರೀಕೃಷ್ಣನಿಲ್ಲದ ಬದುಕಿಗಿಂತ ಯಮುನೆಯ ಪ್ರವೇಶವೇ ಲೇಸು

ದಯಾऽಂಗ ಯದ್ಯಾಸು ನ ದೀನಬಂಧೋ
ಪ್ರಿಯೇಯಮಾಪ್ಯಾ ಹಿ ನದೀನಬಂಧೋ।

೧. "ಭಿಕ್ಷುಭಿಃ ಶ್ಲಾಘಿತಾ ಮುಧಾ" ಎಂಬುದು ಶ್ರೀಮದ್ಭಾಗವತದಲ್ಲಿನ (೧೦/೬೦/೧೬) ಶ್ರೀಕೃಷ್ಣರುಗ್ಮಿಣೀ-ಪ್ರೇಮಕಲಹಪ್ರಸಂಗದಲ್ಲಿನ ಶ್ರೀಕೃಷ್ಣನ ಮಾತು.

೨. ಅವಾಪ್ತಸಕಲಕಾಮತ್ವೇನ ಸನ್ಯಾಸಿಮಾರ್ಗಾಶ್ರಯಣಸ್ಯಾಪ್ರಯೋಜಕತ್ವಾದಿತಿ ಭಾವಃ। -ವ್ಯಾ.

ಹೃತೋಽರಿರಸ್ಯಾ ಯದಸೌ ಭಗಸ್ಯ
ತವೌಜಸಾ ತೋಯದಸೌಭಗಸ್ಯ ॥ ೧೨ ॥

ಪದಚ್ಛೇದ : ದಯಾ ಅಂಗ ಯದಿ ಆಸು ನ ದೀನಬಂಧೋ ಪ್ರಿಯಾ ಇಯಂ ಆಪ್ಯಾ ಹಿ ನದೀ ಇನಬಂಧೋ ಹೃತಃ ಅರಿಃ ಅಸ್ಯಾಃ ಯತ್ ಅಸೌ ಭಗಸ್ಯ ತವ ಓಜಸಾ ತೋಯದ-ಸೌಭಗಸ್ಯ.

ಎಲೈ ದೀನಬಂಧುವೇ ! ನಿನಗೆ ನಮ್ಮ ಮೇಲೆ ಕರುಣೆ ಇಲ್ಲವಾದಲ್ಲಿ, ನಿನಗೆ ಪ್ರಿಯೆಯಾದ ಈ ಸೂರ್ಯಪುತ್ರಿಯಾದ ಯಮುನಾನದಿಯನ್ನೇ ನಾವು ಹೊಂದಬೇಕಾಗುವುದು; ಏಕೆಂದರೆ ಇವಳ ಸೌಭಾಗ್ಯಕ್ಕೆ ವಿರೋಧಿಯಾಗಿದ್ದ ಕಾಲಿಯನು ನೀಲಮೇಘಶ್ಯಾಮನಾದ ನಿನ್ನ ಸಾಮರ್ಥ್ಯದಿಂದ ಇಲ್ಲಿಂದ ಹೊರ ಹಾಕಲ್ಪಟ್ಟಿರುವನಲ್ಲವೆ !

ವಿ. : ೧. ಶ್ರೀಕೃಷ್ಣನು ಕರುಣಿಸದಿದ್ದಲ್ಲಿ ಗೋಪಿಯರು ಯಮುನೆಯಲ್ಲಿಯೇ ಪ್ರವೇಶಿಸಿ, ದೇಹ ತೊರೆಯುವ ಬಯಕೆಯನ್ನು ವ್ಯಕ್ತಪಡಿಸುತ್ತಿರುವರು.

೨. ಹಾಗೆ ಯಮುನೆಯನ್ನು ಹೊಂದುವುದರಿಂದ ಅವರಿಗೆ ಕಾಲಿಯನಿಗೆ ದೊರೆತಂತೆ, ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾಗುವ ಯೋಗ ಲಭಿಸುವುದು ಎಂಬ ಯೋಚನೆ ಉಂಟಾಗಿರುವುದು ಸ್ಪಷ್ಟ.

ಅಪ್ಸರೆಯರಾದ ತಮ್ಮನ್ನು ಸ್ವೀಕರಿಸಲು ಪ್ರಾರ್ಥನೆ

ಇಹಾಗತಾ ಹಂತ ಸುರಾನುದಾರಾ-
ನಮುಂ ಚ ರಾಮಾವರ ಸಿದ್ಧಭದ್ರಾಃ ।
ವಿಹಾಯ ಲೋಕಂ ತವ ಸಂಗಸಿದ್ಧ್ಯೈ
ನ ಮುಂಚ ರಾಮಾ ವರಸಿದ್ಧಭದ್ರಾಃ ॥ ೧೩ ॥

ಎಲೈ ಬಲರಾಮನ ತಮ್ಮನಾದ ಶ್ರೀಕೃಷ್ಣ! ಶ್ರೇಷ್ಠರಾದ ದೇವತೆಗಳನ್ನು ಹಾಗೆಯೇ ದೇವಲೋಕವನ್ನೂ ಸಹ ತೊರೆದು ನಾವು ನಿನ್ನ ಸಂಗಪ್ರಾಪ್ತಿಗೋಸ್ಕರ ಇಲ್ಲಿಗೆ ಬಂದಿರುವೆವು. ನಮ್ಮಿಂದ ಆರಾಧಿತರಾದ ದೇವತೆಗಳು ನೀಡಿದ ವರದಿಂದ ನಾವು ಮಂಗಲವನ್ನು ಹೊಂದಿದವರಾಗಿರುವೆವು; ದೇವತೆಗಳು ಸಹ ಮೆಚ್ಚುವಂತಹ ಸುಂದರಿಯರಾದ ನಮ್ಮನ್ನು ನೀನು ತೊರೆಯದಿರು.

ವಿ. : ೧. ತಾವು ದೇವತೆಗಳನ್ನು ದೇವಲೋಕವನ್ನೂ ತೊರೆದು ಬಂದವರು ಎಂಬ ಮಾತಿನಿಂದ ತಾವೆಲ್ಲರೂ ದೇವಲೋಕದ ಅಪ್ಸರೆಯರು ಎಂಬ ವಿಷಯವನ್ನು ಗೋಪಿಯರು ಅರಿಕೆಮಾಡಿ-ಕೊಂಡಿರುವರು ಎಂದು ತಿಳಿಯಬೇಕು[೧]; ರಾಮಾವರಃ-ರಾಮಸ್ಯ+ಅವರಃ-ಅನುಜ-ಶ್ರೀಕೃಷ್ಣ.

---

೧. ವಿಮುಕ್ತಾವಪಿ ಕಾಮಿನ್ಯೋ ವಿಷ್ಣುಕಾಮಾ ವ್ರಜಸ್ತ್ರಿಯಃ । -ಭಾಗವತತಾತ್ಪರ್ಯ(೧೦/೨೭/೧೨)
ಕಾಮಭಕ್ತ್ಯಾಪ್ಸರಸ್ತ್ರೀಣಾಮನ್ಯೇಷಾಂ ನೈವ ಕಾಮತಃ । ....

೨. [1]ಪುಣ್ಯಹೀನತ್ವ, ಲಾವಣ್ಯಹೀನತ್ವ ಮೊದಲಾದ ಪರಿತ್ಯಾಗಕ್ಕೆ ಕಾರಣವಾದ ದೋಷವನ್ನು ಹೊಂದಿರದವರು ಎನ್ನುವ ಮೂಲಕ ತಾವು ಸ್ವತಃ ಅವನಿಗಾಗಿ ಧರೆಗಿಳಿದು ಬಂದವರು ಎಂಬ ಕಾರಣದಿಂದಲೂ ಶ್ರೀಕೃಷ್ಣನು ತಮ್ಮನ್ನು ಅನುಗ್ರಹಿಸಬೇಕು ಎಂಬುದು ಅವರ ಭಾವ.

**ಭೀತರಾದ ತಮ್ಮನ್ನು ಪಾಲಿಸಲು ಪ್ರಾರ್ಥನೆ**

**ಉಚಿತೈವ ನಾಥ ಸುದಯಾಸು ದಯಾ**
**ಚಕಿತಾಸು ದುಷ್ಟಭಯದಾಭ ಯದಾ ।**
**ನ ಭವಾಂಸ್ತದಾ ಗೃಹಮದೋಹಮದೋ**
**ಭಯದಂ ಕಿಮುತ್ಸ್ನವನಂ ನ ವನಮ್ ॥ ೧೪ ॥**

ಎಲೈ ಉತ್ತಮದಯಾಶೀಲನಾದ ಶ್ರೀಕೃಷ್ಣ ! ದುಷ್ಟರಿಗೆ ಭಯಂಕರವಾದ ತೇಜಸ್ಸಿನವನೇ ! ಎಲೈ ಸ್ವಾಮಿ ! ಭೀತರಾಗಿರುವ ಈ ನಮ್ಮಲ್ಲಿ ಕರುಣೆ ತೋರುವುದು ಉಚಿತವೇ ಆಗಿದೆ. ನೀನು ಕಾಣೆಯಾದಾಗ ದೋಹನಕ್ರಿಯೆ ಇರದ ನಮ್ಮ ಮನೆಯೂ ಸಹ ನಮಗೆ ಅಂಜಿಕೆ ಹುಟ್ಟಿಸುವಂತಾಗುವುದು; ಇನ್ನು ಉತ್ಕೃಷ್ಟವಾದ ನಿರ್ಝರಜಲದಿಂದ ಕೂಡಿರುವ ಅರಣ್ಯವು ಅಂಜಿಕೆ ಹುಟ್ಟಿಸದಿದ್ದೀತೇ ?

ವಿ : ಶ್ರೀಕೃಷ್ಣನ ವಿರಹದ ನೋವು ಅವರ ಮನೆಕೆಲಸಗಳಿಗೂ ಅಡ್ಡಿಯಾಗುವಂತಾಗಿದೆ ಎಂದರ್ಥ.

**ಗೋಪಿಯರು ಶ್ರೀಕೃಷ್ಣನ ಪಾದಕಮಲದ ದುಂಬಿಗಳು**

**ಭ್ರಮರಂಜಿತಸ್ತವ ಪದಾಬ್ಜಯುಗೇ**
**ಭ್ರಮರಂ ಜಿತಾರಿಕುಲ ನಃ ಸದಯ ।**
**ಹೃದಯಂ ವಿಯುಕ್ತತರುಣೀಸ್ಥಿರತಾ-**
**ಹೃದಯಂ ವಿಭೋಽರ್ದಯತಿ ಭೃಂಗಚಯಃ ॥ ೧೫ ॥**

ಎಲೈ ಶತ್ರುಕುಲವನ್ನು ನಾಶಪಡಿಸಿದವನೇ ! ಕರುಣಾಶೀಲನೇ ! ಸ್ವಾಮಿಯಾದ ಶ್ರೀಕೃಷ್ಣನೇ! ಸುತ್ತಿ ಅಲೆಯುವುದರಿಂದಾಗಿ ಶೋಭೆ ಪಡೆದ ಅಗಲಿದ ತರುಣಿಯರ ಸ್ಥೈರ್ಯವನ್ನು ಕಳೆಯುವ ದುಂಬಿಗಳ ಸಾಲು ನಿನ್ನ ಎರಡು ಪಾದಕಮಲಗಳಲ್ಲಿ ದುಂಬಿಯಂತಾಗಿರುವ ನಮ್ಮ ಹೃದಯವನ್ನು ಘಾಸಿಗೊಳಿಸುತ್ತಿದೆ.

---

ಜಾರತ್ವೇನಾಪ್ಸರಃಸ್ತ್ರೀಣಾಂ ಕಾಸಾಂಚಿದಿತಿ ಯೋಗ್ಯತಾ ॥
-ಭಾಗವತತಾತ್ಪರ್ಯೋದ್ಧೃತ ಭದ್ರಿಕಾವಚನ (೧೦/೨೬/೧೨)

೧. ಪುಣ್ಯಹೀನತ್ವಲಾವಣ್ಯವಿಧುರತ್ವರೂಪತ್ಯಾಗಕಾರಣಾಭಾವಾತ್ ಸ್ವಯಮೇವಾಗತತ್ವರೂಪಾಂಗೀಕಾರಕಾರಣ-ಸದ್ಭಾವಾಚ್ಚೇತಿ ಭಾವಃ । -ವ್ಯಾ.

ವಿ. : ಶತ್ರುಕುಲವನ್ನು ನಾಶಪಡಿಸಿದ ಅವನು ತನ್ನ ಪಾದಕಮಲದಲ್ಲಿ ದುಂಬಿಯಂತಿರುವ ಅವರ ಮನಸ್ಸನ್ನು ಬಿಟ್ಟು ಅಗಲಕೂಡದು ಎಂದು ಭಾವ.

ಶ್ರೀಕೃಷ್ಣನನ್ನು ಕಾಣಲು ಗೋಪಿಯರ ಕಾತರ

ಚರಣಾಂಬುಜಂ ಕರಸರೋಜರುಚಂ
ಕವಿವರ್ಣನಾಕರಸರೋಜರುಚಮ್ ।
ತವ ನಾಭಿಮಚ್ಯುತ ದಿದೃಕ್ಷತಿ ದೃ-
ಗ್ವಿಷಯೇಕ್ಷಯಾ ಸಪದಿ ದೃಕ್‌ಕ್ಷತಿದೃಕ್ ॥ ೧೬ ॥

ಎಲೈ ಅಚ್ಯುತನಾದ ಶ್ರೀಕೃಷ್ಣ! ವಿಷಯಗಳ ದರ್ಶನದಿಂದ ಕೂಡಲೇ ಜ್ಞಾನಶೂನ್ಯವಾಗುವ ನಮ್ಮ ದೃಷ್ಟಿಯು ನಿನ್ನ ಚರಣಕಮಲವನ್ನು, ಕರಪದ್ಮಗಳ ಕಾಂತಿಯನ್ನು, ಕವಿಗಳ ವರ್ಣನೆಗೆ ಆಶ್ರಯವಾದ ಕಮಲದ ಕಾಂತಿಯುಳ್ಳ ಬ್ರಹ್ಮನಿಗೆ ಕಾಂತಿನೀಡುವ ನಿನ್ನ ನಾಭಿಯನ್ನು ಕಾಣಬಯಸುತ್ತಿದೆ.

ಹೃದಯದಲ್ಲಿ ಶ್ರೀಕೃಷ್ಣನ ಪಾದಕಮಲವನ್ನು ಧರಿಸುವ ಗೋಪಿಯರ ಬಯಕೆ

[೧]ಪದಾರವಿಂದಂ ಹೃದಿ ದೇಹಿ ನಃ ಪ್ರಿಯಂ
ಸದಾ ಸ್ಮರನ್ನಿರ್ಮಲದೇಹಿನಃ ಪ್ರಿಯಮ್ ।
ತದೇಹಿ ಶಾಂತಸ್ತವನಂದನೋಽಜ ಯ-
ನ್ನಿಹಂತಿ ಶಾಂತಸ್ತವ ನಂದನೋ ಜಯನ್ ॥ ೧೭ ॥

ಸದಾ ಸ್ಮರಿಸುವ ನಿರ್ಮಲದೇಹದವರಿಗೆ ಪ್ರಿಯವಾದ, ನಮಗೆ ಪ್ರಿಯವಾದ ನಿನ್ನ ಪಾದಕಮಲವನ್ನು ನಮ್ಮ ಹೃದಯದಲ್ಲಿ ಇರಿಸು; ಎಲೈ ಹುಟ್ಟರದ ಶ್ರೀಕೃಷ್ಣ! ಹಮ್ಮು ಅಳಿದ ನಮ್ಮ ಸ್ತೋತ್ರವನ್ನು ಕೇಳಿ ಸಂತೋಷಿಸುವವನೇ ! ನೀನು ಆಗಮಿಸು, ಸ್ವಲ್ಪ ಶಾಂತನಾಗಿರುವ ನಿನ್ನ ಪುತ್ರನಾದ ಕಾಮನು ಈಗ ನಿನ್ನ ಅಗಲುವಿಕೆಯಿಂದಾಗಿ, ಮತ್ತೊಮ್ಮೆ ಗಾಢವಾಗಿ ನಮ್ಮನ್ನು ಕೊಲ್ಲುತ್ತಿರುವನು.

ವಿ. : ವಿರಹದಿಂದಾಗಿ ಕಾಮಬಾಧೆಯು ಉಲ್ಬಣಗೊಳ್ಳುವುದು ವಿಪ್ರಲಂಭಶೃಂಗಾರದ ಮಹತ್ತ್ವಕ್ಕೆ ದ್ಯೋತಕ.

ಚಂಪಕದ ಪ್ರಾರ್ಥನೆ

ನನು ಚಂಪಕಾಚ್ಯುತಪದಾಂಬುಜಯೋ-
ದಯಮಸ್ತಿ ತೇಽಚ್ಯುತಪದಾಂಬುಜಯೋಃ।

೧. ಫಣಿಫಣಾರ್ಪಿತಂ ತೇ ಪದಾಂಬುಜಂ ಕೃಣು ಕುಚೇಷು ನಃ ಕೃಂಧಿ ಹೃಚ್ಛಯಮ್ । – ಭಾ. (೧೦/೩೧/೭)

ಉಚಿತಂ ಚ ಪುಷ್ಪಮಲಿನಾಕಲಿತಂ
ತಮಿಹೇಕ್ಷಯಾಶು ಮಲಿನಾಕಲಿತಮ್ ॥ ೧೮ ॥

ಎಲೈ ಸಂಪಿಗೆಯೇ! ಜಯಕ್ಕೆ ಉನ್ನತಿಯನ್ನು ನೀಡುವಂತಹ ಶ್ರೀಕೃಷ್ಣನ ಪಾದವೆನ್ನಿಸಿದ ಗಗನದಿಂದ ಸುರಿದ ನೀರು ನಿನ್ನಲ್ಲಿ ಉಂಟಲ್ಲವೆ? ಅಚ್ಯುತನಾದ ಶ್ರೀಕೃಷ್ಣನ ಪಾದಪದ್ಮಗಳಿಗೆ ಯೋಗ್ಯವಾದ ದುಂಬಿಗಳು ಆಘ್ರಾಣಿಸದ ಪುಷ್ಪವೂ ಇದೆ, ಅಲ್ಲವೆ? ಆದ್ದರಿಂದ ನೀನು ಶ್ರೀಕೃಷ್ಣನನ್ನು ಅಲಂಕರಿಸುವಿ. ದೋಷಿಗಳಿಂದ ಅರಿಯಲಾಗದ ಆ ಶ್ರೀಕೃಷ್ಣನನ್ನು ಇಲ್ಲಿಗೆ ಕರೆದುತಂದು ತೋರಿಸಿಕೊಡು.

### ಕಾಲಕೂಟದಂತಹ ಶ್ರೀಕೃಷ್ಣನ ಅಗಲುವಿಕೆ

ಅಲಿರಯಂ ನಹಿ ವೇತ್ತಿ ಮಧುದ್ವಿಷಂ
ತದಪಿ ನಾತ್ರ ಶಿವೇಽತ್ತಿ ಮಧು ದ್ವಿಷನ್ ।
ಬಹುಪದೇ ಪ್ರಕೃತಿರ್ವಿಷಮಸ್ಥಿತಿಃ
ಪರಮಿಹಾತನುತೇ ವಿಷಮಸ್ಥಿತಿಃ ॥ ೧೯ ॥

ಈ ದುಂಬಿಯು ಮಧುವೈರಿಯಾದ ಶ್ರೀಕೃಷ್ಣನನ್ನು ಅರಿತಿಲ್ಲ; ಮಂಗಳಕರವಾದ ಈ ಸಂಪಿಗೆ ಹೂವಿನ ಮೇಲೆ ದ್ವೇಷವನ್ನು ಮಾಡುತ್ತಾ ಮಕರಂದವನ್ನು ಆಸ್ವಾದಿಸುತ್ತಿಲ್ಲ; ಬಹು ಸಂಖ್ಯೆಯ ಸ್ತ್ರೀಯರಲ್ಲಿ ಕಣ್ಣು ಹಾಕುವಂತಹ ಈ ಶ್ರೀಕೃಷ್ಣನಿಗೆ ಒಂದೆಡೆ ಪ್ರೀತಿ ಮತ್ತೊಂದೆಡೆ ಅಪ್ರೀತಿ ಎನ್ನುವಂತಹ ಇರುವಿಕೆಯು ಸ್ವಭಾವವೇ ಆಗಿದೆ. ನಮ್ಮ ಬಳಿಯಲ್ಲಿ ಅವನ ಇಲ್ಲದಿರುವಿಕೆಯು ನಮಗೆ ಮಾತ್ರ ಕೇವಲ ಕಾಲಕೂಟವನ್ನೇ ಒದಗಿಸುತ್ತಿದೆ.

### ಕೃಷ್ಣನ ಮುರಲಿಯ ವೈಭವ

ಮುರಲೀ ಮನೋ ವಿಜಯತೇಽಜ ಯತೇ-
ರಪಿ ಮೋಹದಾಗ್ರ್ಯವಲಯೇವ ಲಯೇ ।
ಕಮಲಾ ತವಾಧರಸುಧಾರಸುಧಾಃ
ಪಿಬತಿ ತ್ವದುದ್ಯಮಹಿತಾ ಮಹಿತಾ ॥ ೨೦ ॥

ಯತಿಗಳಿಗೂ ಮೋಹನೀಡುವ ಅಜನಾದ ಶ್ರೀಕೃಷ್ಣನೇ! ನಿನ್ನ ಕಾರ್ಯಕ್ಕೆ ಅನುಕೂಲವಾದ ಈ ಪೂಜಿತವಾದ ಮುರಲಿಯು ನಮ್ಮ ಮನಸ್ಸನ್ನು ಸೆಳೆಯುತ್ತಿದೆ; ಪ್ರಳಯಕಾಲದಲ್ಲಿ ಶ್ರೇಷ್ಠವಾದ ಕೈಬಳೆಗಳಿಂದ ಕೂಡಿದ ಮಹಾಲಕ್ಷ್ಮಿಯಂತೆ ನಿನ್ನ ಅಧರದ ಶೋಭನವಾದ ಧಾರೆಗಳಿಂದ ಕೂಡಿದ ಅಮೃತವನ್ನು ಪಾನಮಾಡುತ್ತಿದೆ.

ವಿ. : ೧. ಇಲ್ಲಿಯ ನಿರೂಪಣೆಯು ಶ್ರೀಕೃಷ್ಣನ ವೇಣುವಿನಲ್ಲಿ ಸಾಕ್ಷಾತ್ ಶ್ರೀದೇವಿಯ ಸನ್ನಿಧಾನ ಎಂಬ ಶ್ರೀಮದ್ಭಾಗವತತಾತ್ಪರ್ಯ(೧೦/೧೯/೧೦)ದ ವಚನವನ್ನು ಆಧರಿಸಿದೆ: ಶ್ರೀದೇವೀ ವೇಣುಮಾಶ್ರಿತ್ಯ ರೇಮೇ ಕೃಷ್ಣಮುಖಾಂಬುಜೇ।

೨. ಇದು ಒಂದು ರೀತಿಯಲ್ಲಿ 'ಮುಹ್ಯಂತಿ ಯಂ ಸೂರಯಃ' (೧/೧/೧) ಎಂಬ ಶ್ರೀಮದ್ಭಾಗವತದ ಮಾತಿನ ವಿವರಣೆಯೂ ಆಗಿದೆ.

### ಉಕ್ಕಿ ಹರಿದ ಯಮುನೆ

ತವ ವೇಣುನಾ ಸುರನತಾ ರಣತಾ
ವಿನತಾ ವಧೂತತಿಜಿತಾತಿಜಿತಾ।
ಯಮುನಾ ಗತಾಂತಿಕಮಲಂ ಕಮಲಂ
ದದತೀವ ತೇ ಕರಮುದಾರ ಮುದಾ ॥ ೨೧ ॥

ಎಲೈ ಉದಾರನಾದ ಶ್ರೀಕೃಷ್ಣ! ಸ್ತ್ರೀವೃಂದವನ್ನು ಗೆಲ್ಲುವ, ಧ್ವನಿಗಯ್ಯುವ ನಿನ್ನ ವೇಣುವಿನಿಂದಾಗಿ ಅತಿಶಯವಾಗಿ ಸೋತ, ಸುರರಿಂದಲೂ ಪೂಜಿತವಾದ ಯಮುನಾನದಿಯು ಹರ್ಷದಿಂದ ನಿನಗೆ ಕಮಲಪುಷ್ಪಗಳನ್ನು ಕಾಣಿಕೆಯಾಗಿ ನೀಡಲೆಂಬಂತೆ ಉಕ್ಕಿ ನಿನ್ನ ಸಮೀಪಕ್ಕೆ ಆಗಮಿಸಿರುವಳು.

ವಿ. : ೧. ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ನದಿಗಳು ಸಹ ತಮ್ಮ ವೇಗವನ್ನು ಕಳೆದುಕೊಂಡವು[೧] ಎಂಬ ಮಾತು ಶ್ರೀಮದ್ಭಾಗವತದಲ್ಲಿ ಬಂದಿದೆ. ಅದನ್ನು ಈ ರೀತಿಯಾಗಿ ಇಲ್ಲಿ ಉತ್ಪ್ರೇಕ್ಷಿಸಲಾಗಿದೆ.

೨. ಯಮುನೆ ಮೊದಲಾದವರೂ ಸಹ ವೇಣುನಾದಕ್ಕೆ ಮುಗ್ಧರಾಗುತ್ತಿರುವಾಗ ತಾವು ಹಾಗೆ ಮೋಹಕ್ಕೊಳಗಾಗುವುದರಲ್ಲಿ ಆಚ್ಚರಿ ಏನಿದೆ ? ಎಂಬುದು ಅವರ ಭಾವ.

### ಮಹಾಲಕ್ಷ್ಮಿಯಂತಹ ಮುರಲಿ

ಕರಜಪ್ರಸಕ್ತ್ಯುರುರುಚಾ ರುರುಚಾ-
ರ್ವವಲೋಕನಾಕಲಿತಯಾಲಿ ತಯಾ।
ಕಮಲಾಽನ್ವಕಾರಿ ರುಚಿರಾರುಚಿರಾ-
ಶ್ಯಪಹಪ್ರಿಯೋಷ್ಠರಸತೀರಸತೀ[೨] ॥ ೨೨ ॥

---

೧. ನದ್ಯಸ್ತದಾ ತದುಪಧಾರ್ಯ ಮುಕುಂದಗೀತಮಾವರ್ತಲಕ್ಷಿತಮನೋಭವಭಗ್ನವೇಗಾಃ।
ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇರ್ಗೃಹ್ಣಂತಿ ಪಾದಯುಗಲಂ ಕಮಲೋಪಹಾರಾಃ॥
- ಭಾಗವತ (೧೦/೧೯/೧೬)

೨. ಏತಾನಿ ವಿಶೇಷಣಾನಿ ವಿಭಕ್ತಿವಿಪರಿಣಾಮೇನ ಉಭಯತ್ರ ದ್ರಷ್ಟವ್ಯಾನಿ। -ವ್ಯಾ.

ಎಲೈ ಸಖಿ ! ಉಗುರುಗಳ ಸಂಪರ್ಕದಿಂದಾಗಿ ಅತಿಶಯವಾಗಿ ಶೋಭಿಸುವ ಕೃಷ್ಣಸಾರಮೃಗದಂತೆ ಮನೋಹರವಾದ ನೋಟವುಳ್ಳ ಆ ವೇಣುವು ಅಸ್ವರಸಧ್ವನಿಗಳ ರಾಶಿಯನ್ನು ಅಡಗಿಸುವ, ಪ್ರಿಯನಾದ ಶ್ರೀಕೃಷ್ಣನ ಅಧರದಲ್ಲಿ ಸುರಿಯುವ ರಸವನ್ನು ಪಾನಮಾಡುವ ಮಹಾಲಕ್ಷ್ಮಿಯನ್ನು ಹೋಲುವುದು.

ವಿ. : ಇಲ್ಲಿಯ ನಿರೂಪಣೆಯು ಶ್ರೀಕೃಷ್ಣನ ವೇಣುವಿನಲ್ಲಿ ಸಾಕ್ಷಾತ್ ಶ್ರೀದೇವಿಯ ಸನ್ನಿಧಾನ ಎಂಬ ಶ್ರೀಮದ್ಭಾಗವತತಾತ್ಪರ್ಯದ ವಚನವನ್ನು ಆಧರಿಸಿದೆ: ಶ್ರೀದೇವೀ ವೇಣುಮಾಶ್ರಿತ್ಯ ರೇಮೇ ಕೃಷ್ಣಮುಖಾಂಬುಜೇ।(೧೦/೧೯/೧೦); ಕರಜ – ಉಗುರು.

## ಮುರಲಿಯ ಪ್ರಾರ್ಥನೆ

ಮುರಲೀಮಮಾನಯ ತವಾಯತವಾ-
ಗ್ಜಿತಚೇತಸಾऽಂತಿಕಮಿತಾಃ ಕಮಿತಾ।
ವಿಸೃಜೇನ್ನಿಜೇऽಭಿನವಧೂರ್ನವಧೂ-
ರ್ನ ಚಕಾಸ್ತಿ ಸಾಧ್ವಿ ವಿನತಾವಿನತಾ ॥ ೨೩ ॥

ಎಲೈ ವೇಣುವೇ ! ಆ ಶ್ರೀಕೃಷ್ಣನನ್ನು ಇಲ್ಲಿಗೆ ಕರೆದು ತಾ. ನಿನ್ನ ವಿಸ್ತೃತವಾದ ಧ್ವನಿಯಿಂದಾಗಿ ಮನಸೆಳೆಯಲ್ಪಟ್ಟ ಕಾರಣದಿಂದ ಇಲ್ಲಿಗೆ ಬಂದಿರುವ ನಮ್ಮನ್ನು ತನ್ನ ಭಕ್ತರಲ್ಲಿ ವಿನೂತನವಾದ ಭಾರಹೊತ್ತಿರುವ ಆ ಶ್ರೀಕೃಷ್ಣನು ಸರ್ವಥಾ ತೊರೆಯನು; ಎಲೈ ಸಾಧುಸ್ವಭಾವದ ಮುರಲಿಯೇ ! ಮಣಿದವರ ಮೇಲೆ ಅಧಿಕಾರ ಚಲಾಯಿಸುವುದು ಶೋಭೆ ತರುವಂತಹುದಲ್ಲ.

## ಶ್ರೀಕೃಷ್ಣನು ತೊರೆದಲ್ಲಿ ಲಕ್ಷ್ಮಿಯು ಇರುವಳೆ !

ವ್ರಜಭೂರಿಯಂ ಭುವಿ ತತಾವಿತತಾऽ-
ಪ್ಯದಭೂತ್ ತವೇಶ್ವರ ಜನೇರಜನೇ।
ಕಮಲಾऽಪಿ ತತ್ರ ಲಸತೇऽಲಸತೇऽ-
ತ್ಯಧುನೋತ್ಸೃಜೇತ್ ಸುರಮಣೇ ರಮಣೇ ॥ ೨೪ ॥

ಎಲೈ ಜನನರಹಿತನಾದ ಶ್ರೀಕೃಷ್ಣನೇ! ಈಶ್ವರನೇ! ನಿನ್ನ ಪ್ರಾದುರ್ಭಾವದಿಂದಾಗಿ ಕುರಿಗಳಿಂದ ಕೂಡಿದ್ದರೂ ಈ ಗೋಕುಲವು ಲೋಕದಲ್ಲಿ ವಿಖ್ಯಾತವಾಯಿತು. ಎಲೈ ಸುರಶ್ರೇಷ್ಠನಾದ ಶ್ರೀಹರಿ! ಮಹಾಲಕ್ಷ್ಮಿಯು ಸಹ ಈ ಗೋಕುಲದಲ್ಲಿ ಕಂಗೊಳಿಸುತ್ತಿರುವಳು. ರಮಣನಾದ ನಿನ್ನಲ್ಲಿ ಆಲಸ್ಯವನ್ನು ಕಂಡು ಈಗ ಆ ಮಹಾಲಕ್ಷ್ಮಿಯು ಸಹ ಇದನ್ನು ತೊರೆದುಬಿಟ್ಟಾಳು.

೧. ನಮ್ರೇಷು ಪ್ರಭುತ್ವದರ್ಶನಮನುಚಿತಮಿತಿ ಭಾವಃ। -ವ್ಯಾ.

ವಿ. : ೧. ಸಾಮಾನ್ಯವೆನ್ನಿಸಿದ ಗೋಕುಲವೂ ಸಹ ಶ್ರೀಕೃಷ್ಣನ ಅವತಾರದಿಂದಾಗಿ ಲೋಕ-ವಿಖ್ಯಾತವಾಯಿತು ಎಂಬ ಈ ಮಾತು ''ಜಯತಿ ತೇಽಧಿಕಂ ಜನ್ಮನಾ ವ್ರಜಃ ಶ್ರಯತ ಇಂದಿರಾ ಸಾಧು ತತ್ರ ಹಿ'' ಎಂಬ ಗೋಪೀಗೀತೆಯ ವಿವರಣೆಯಾಗಿದೆ ; ವೃಂದಾವನಂ ಯದಧಿವಾಸತ ಆಸ ಸಂಧ್ಯಜ್ ಮಾಹೇಂದ್ರಸದ್ಮಸದೃಶಮ್ ।-ಮ.ಭಾ.ತಾ.ನಿ.(೧೪/೭)

೨. ಶ್ರೀಕೃಷ್ಣನ ಪ್ರಾದುರ್ಭಾವದಿಂದಾಗಿ ಲಕ್ಷ್ಮೀನಿವಾಸ ಎನ್ನಿಸಿದ ಗೋಕುಲವು ಶ್ರೀಕೃಷ್ಣ ಮರೆಯಾದರೆ ಪುನಃ ಲಕ್ಷ್ಮೀರಹಿತವಾಗಿ ಸಾಮಾನ್ಯವೆನ್ನಿಸುವ ಸ್ಥಿತಿಗೆ ಮರಳುವುದು ನಿಶ್ಚಿತ. ಹಾಗಾಗದಿರಲು ಶ್ರೀಕೃಷ್ಣನು ಆಗ ದರ್ಶನನೀಡುವುದೊಂದೇ ಪರಿಹಾರ ಎಂಬುದು ಇಲ್ಲಿಯ ಭಾವ; ಸುರಮಣೇ – ಸುರಶ್ರೇಷ್ಠನೇ .

### ಶಾಸ್ತ್ರಸತ್ಯತೆಗಾಗಿ ಅನುಗ್ರಹಿಸಲು ಪ್ರಾರ್ಥನೆ

ವಿಜನೇ ವನೇ ಸ್ವಜನಮುತ್ಸೃಜತ-
ಸ್ತವ ನಾಗಮಂ ಯದಿ ಮನೋ ಮನುತೇ ।
ವಿನಿಹಂಸಿ ಹಂಸನುತಪುಣ್ಯಯಶ-
ಸ್ತವನಾಗಮಂ ಪರಮ ತರ್ಹಿ ತವ ॥ ೨೫ ॥

ಎಲೈ ಸರ್ವೋತ್ತಮನಾದ ಕೃಷ್ಣ! ಈ ನಿರ್ಜನ ಪ್ರದೇಶದಲ್ಲಿ ನಿನ್ನವರನ್ನು ತೊರೆದಿರುವ ನಿನ್ನ ಮನಸ್ಸು, ಆಗಮಿಸುವ ಯೋಚನೆಯನ್ನು ಮಾಡದಿದ್ದಲ್ಲಿ ಯತಿಗಳು ಸ್ತುತಿಸುವಂತಹ ನಿನ್ನ ಪವಿತ್ರವಾದ ಕೀರ್ತಿಯನ್ನು ಕೊಂಡಾಡುವ (ಗೀತಾ)ಶಾಸ್ತ್ರವು ಸುಳ್ಳೆನಿಸಿ ಬಿಡುವುದು.

ವಿ. : ಭಕ್ತರಾದ ತಮ್ಮನ್ನು ತೊರೆಯುವುದರಿಂದ ಶ್ರೀಕೃಷ್ಣನು [೧]ಗೀತೆ(೯/೨೨)ಯಲ್ಲಿ ನೀಡಿರುವ ''ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್'' ಎಂಬ ಭರವಸೆ ಸುಳ್ಳೆನ್ನಿಸಿ ಅದಕ್ಕೆ ಅಪ್ರಾಮಾಣ್ಯ ಉಂಟಾಗುವುದು ; ಹಾಗಾಗದಿರಲು ಶ್ರೀಕೃಷ್ಣನು ದರ್ಶನ ನೀಡುವುದೊಂದೇ ಮಾರ್ಗ ಎಂಬುದು ಅವರ ಭಾವ.

### ಶ್ರೀಕೃಷ್ಣನು ಕೈ ಬಿಟ್ಟಲ್ಲಿ ಯಮಲೋಕವೇ ಗತಿ

ಅಯೋಗಭಿನ್ನಾ ನಯತೀಶಮಾನೀ
ತವಾಂಘ್ರಿದಾಸೀರ್ಬತ ದಂಡಪಾಣಿಃ ।

೧. ''ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್''ಇತ್ಯಾದಿಕಂ ವಿನಿಹಂಸಿ ನಾಶಯಸಿ । ತವ ಭಕ್ತಾನಾಮಸ್ಮಾಕಂ ಪರಿತ್ಯಾಗೇ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮಿತಿ ಪ್ರತಿಜ್ಞಾಯಾ ಹಾನಿರಿತಿ ಭಾವಃ । -ವ್ಯಾ.

ಅಯೋऽಗಭಿನ್ನಾ ನ ಯತೀಶಮಾನೀ
ಹ್ರಿಯೇತ ಕಸ್ತೇನ ಭವದ್ವಿಯೋಗೇ ॥ ೨೬ ॥

ಎಲೈ ಶ್ರೀಕೃಷ್ಣ! ನಾನು ಸಮರ್ಥ ಎಂದು ಭಾವಿಸಿರುವ ದಂಡಪಾಣಿಯಾದ ಯಮನು ನಿನ್ನ ವಿರಹದಿಂದ ನೊಂದಿರುವ ನಿನ್ನ ಪಾದಸೇವಕಿಯರಾದ ನಮ್ಮನ್ನು ತನ್ನ ಲೋಕಕ್ಕೆ ಕರೆದೊಯ್ಯುತ್ತಿರುವನು; ಉಕ್ಕು ಹಾಗೂ ಪರ್ವತಗಳನ್ನು ಸಹ ಭೇದಿಸುವಂತಹ ನಿನ್ನ [೧]ಅಗಲಿಕೆಯು ಒದಗಿದಾಗ ಯೋಗೀಶ್ವರನೆಂದು ಅಭಿಮಾನ ಹೊಂದಿರುವ ಯಾವನು ತಾನೆ ದುಃಖಿಸನು?

## ದೋಷರಹಿತನಾದ ಶ್ರೀಕೃಷ್ಣ

ವಿನಾಶನಾನಾಮಯದೇಹಪುಷ್ಟೇ-
ರನಾದಿತಸ್ತ್ವಂ ಪರಮುಜ್ಝಸೀಶ ।
ವಿನಾಶನಾನಾಮಯದೇಹಪುಷ್ಟೇ-
ರ್ಲಭೇಮಹಿ ತ್ವತ್ತುಲನಾಂ ವಯಂ ಚ ॥ ೨೭ ॥

ಎಲೈ ಈಶನಾದ ಶ್ರೀಕೃಷ್ಣ ! ಅನಾದಿಕಾಲದಿಂದ ಪ್ರಾರಂಭಿಸಿ, ಸಾವು, ಬಗೆಬಗೆಯ ರೋಗಗಳು, ದೇಹಪೋಷಣೆ ಮೊದಲಾದವುಗಳನ್ನು ಹೊಂದದವನು ನೀನು; ಈಗ ನಾವೂ ಸಹ ಭೋಜನ, ಆರೋಗ್ಯ, ದೇಹಪುಷ್ಟಿಗಳನ್ನು ತೊರೆದಿರುವುದರಿಂದ ನಿನ್ನ ಸಾಮ್ಯವನ್ನೇ ಹೊಂದುವೆವು.

ವಿ.: ೧. ಶ್ರೀಕೃಷ್ಣನಿಗೋಸ್ಕರವಾಗಿ ಅವನ ಚಿಂತೆಯಲ್ಲಿಯೇ ಅನಶನಾದಿರೂಪವ್ರತಾದಿಗಳಿಂದ ದೇಹವನ್ನು ತೊರೆಯುವುದರಿಂದ ತಮಗೆ ಮುಕ್ತಿ ಖಚಿತ. ಮುಕ್ತಿಯಲ್ಲಿ ವಿನಾಶ ರೋಗ ಮೊದಲಾದವುಗಳ ಪ್ರಸಕ್ತಿ ಇಲ್ಲವಾದ್ದರಿಂದ ಅದು ಒಂದು ರೀತಿಯಲ್ಲಿ ಶ್ರೀಕೃಷ್ಣನೊಂದಿಗೆ ಸಾಮ್ಯವನ್ನು ಪಡೆಯುವಂತೆಯೇ ಆಗುವುದು ಎಂದು ಗೋಪಿಯರ ಭಾವ.

೨. 'ವಿನಾಶನಾನಾಮಯದೇಹಪುಷ್ಟೇಃ' ಎಂಬುದಕ್ಕೆ ಶ್ರೀಹರಿಗೆ ಅನ್ವಯಿಸುವಂತೆ, 'ವಿನಾಶ-ನಾನಾಮಯ-ದೇಹಪುಷ್ಟೇಃ' - ವಿನಾಶ ಮೃತ್ಯು, ಬಗೆಬಗೆಯ ರೋಗಗಳು ಹಾಗೂ ದೇಹಪೋಷಣೆ ಎಂದು ಅರ್ಥ. ಗೋಪಿಯರ ಪಕ್ಷದಲ್ಲಿ 'ವಿನಾ-ಅಶನ-ಅನಾಮಯದೇಹ ಪುಷ್ಟೇಃ'- ಅಶನ (ಭೋಜನ), ಅನಾಮಯ (ವ್ಯಾಧಿಪರಿಹಾರ) ಹಾಗೂ ದೇಹಪೋಷಣೆಗಳನ್ನು ವಿನಾ (ತೊರೆದು) ಎಂದು ಅರ್ಥ.

---

೧. ಅತಿಸುಂದರಸ್ಯ ತವ ವಿಯೋಗೇ ಸರ್ವೇಷಾಮಪಿ ದಶಮಾವಸ್ಥಾ ಸ್ಯಾದೇವೇತಿ ಭಾವಃ। -ವ್ಯಾ.

## ಜೀವೇಶ್ವರರ ಭೇದದ ಸಮರ್ಥನೆ

ವಿಧಿಶರ್ವಪೂರ್ವಸುಮನಃಸುಮನಃ-
ಸರಸೀನಿವಾಸ ಜಗತಾಜ ಗತಾ ।
ತ್ವದಭಿನ್ನತಾ ತುಹಿನತೋಽಹಿ ನತೋ
ದಹನೋಽಪರೋಽಸದೃಶ ತಾದೃಶತಾ ॥ ೨೮ ॥

ಬ್ರಹ್ಮ, ಶಿವ, ಮೊದಲಾದ ದೇವತೆಗಳ ನಿರ್ಮಲವಾದ ಮಾನಸಸರೋವರದಲ್ಲಿ ನೆಲೆಸಿರುವವನೆ! ಜನ್ಮರಹಿತನಾದವನೆ! ಎಲೈ ಶ್ರೀಕೃಷ್ಣ! ನೀನು ಜಗತ್ತಿನಿಂದ ಅಭೇದ ಹೊಂದಿದವನಲ್ಲ ಎಂಬುದು ನಿರಸ್ತವಾಯಿತು; ಏಕೆಂದರೆ ಯಜ್ಞಮಾಡುವವರು ವಂದಿಸುವಂತಹ ಅಗ್ನಿಯು ಹಿಮದಿಂದ ಬೇರೆಯೇ ಆಗಿದೆಯಲ್ಲವೆ! ಎಲೈ ಸದೃಶರಹಿತನಾದ ಶ್ರೀಕೃಷ್ಣ, ಜೀವ-ಈಶ್ವರ ರೀತಿಯೂ ಸಹ ಅಂತಹುದೇ ಆಗಿರುವುದು.

ವಿ. : ೧. [೧]ತಣ್ಣಗಿನ ಹಿಮವು ಸುಡುವ ಬೆಂಕಿಗಿಂತ ಭಿನ್ನ ಎಂಬುದು ಸರ್ವವೇದ್ಯ ; ಅದರಂತೆ ಬ್ರಹ್ಮಾದಿವಂದ್ಯನಾದ ಶ್ರೀಹರಿಯು ಅವರೆಲ್ಲರಿಗಿಂತ ಭಿನ್ನ ಎಂಬುದು ಸ್ಪಷ್ಟ; ತುಹಿನ – ಹಿಮ.

೨. ಶ್ರೀಹರಿಯು ಹುಟ್ಟು ಮೊದಲಾದವುಗಳು ಇಲ್ಲದವನು. ಅಂತಹ ಅವನಿಂದಲೇ ಜಗತ್ತು ಹುಟ್ಟುಮೊದಲಾದವುಗಳನ್ನುಪಡೆಯುವಂತಹುದು. ಹೀಗೆಪರಸ್ಪರ ವಿರುದ್ಧಗುಣಧರ್ಮಗಳನ್ನು ಹೊಂದಿದ ಎರಡು ಪದಾರ್ಥಗಳು ಬೇರೆಬೇರೆಯೇ ಆಗಿರುವವು ಎಂಬ ನಿಯಮವನ್ನು ಇಲ್ಲಿ ಅನ್ವಯಿಸಿ, [೨]ಜೀವೇಶ್ವರಭೇದವನ್ನು ಸಾಧಿಸಿರುವರು.

## ಮಹಾಲಕ್ಷ್ಮಿಗೂ ಆಸರೆಯಾದ ಶ್ರೀಕೃಷ್ಣ

ಕಮಲಾಸನಾಚ್ಚ ಭವತೋಽಭವತೋ
ಮಹತೀಂದಿರಾ ಕಿಲ ತಯಾ ಲತಯಾ ।
ತರುವದ್ಭವಾನ್ ಪರಿವೃತೋಽರಿವೃತೋ-
ದಯದಾವ ಸೇದಮನು ತೇ ಮನುತೇ[೩] ॥ ೨೯ ॥

---

೧. ಅನೇನ ದಹನತುಹಿನಯೋರ್ದಾರ್ಷ್ಟಾಂತಿಕಾನುಸಾರೇಣ ನಮ್ಯತ್ವಾನಮ್ಯತ್ವರೂಪವಿರುದ್ಧಧರ್ಮಃ ಪ್ರದರ್ಶಿತೋ ಭವತಿ । –ವ್ಯಾ.

೨. ಅನೇನ ಜೀವಪರಮೌ ಪರಸ್ಪರಂ ಭಿನ್ನೌ ವಿರುದ್ಧಧರ್ಮಾಕ್ರಾಂತತ್ವಾತ್ ದಹನತುಹಿನವತ್ ಇಮೌ ಚ ತಾದೃಶೌ ತಸ್ಮಾದ್ಭಿನ್ನಾವಿತಿ ಪಂಚಾವಯವಾನುಮಾನಮುಕ್ತಮ್ । –ವ್ಯಾ.

೩.. ಶ್ರೀವಾದಿರಾಜರು ತಮ್ಮ ಉಪನ್ಯಾಸರತ್ನಮಾಲಾ ಕೃತಿಯಲ್ಲಿ ಈ ಶ್ಲೋಕವನ್ನು ಸಮಗ್ರವಾಗಿ ಉಲ್ಲೇಖಿಸಿ, ತಾವೇ ವಿಶೇಷ ರೀತಿಯಲ್ಲಿ ವ್ಯಾಖ್ಯಾನಿಸಿರುವರು.

ಕಮಲಾಸನಾಚ್ಚ ಭವತೋಽಭವತೋ ಮಹತೀಂದಿರಾ ಕಿಲ ತಯಾ ಲತಯಾ ।

ಮಹಾಲಕ್ಷ್ಮಿಯು ಬ್ರಹ್ಮದೇವರಿಗಿಂತಲೂ, ರುದ್ರದೇವರಿಗಿಂತಲೂ, ಮುಕ್ತರಿಗಿಂತಲೂ

---

**ತರುವದ್ ಭವಾನ್ ಪರಿವೃತೋಽರಿವೃತೋದಯದಾವ ಸೇದಮನು ತೇ ಮನುತೇ ॥**

ಜಡಾಜಡಮುಕ್ತಾಮುಕ್ತಸಕಲಪ್ರಪಂಚಾತ್ ಸವಿಸ್ತರಂ ಶ್ರಿಯೋ ಮಹತ್ತ್ವಂ ನಿರೂಪ್ಯ ತಸ್ಯಾಶ್ಚ ಪತಿತ್ವೇನ ಹರೇರ್ನಿರವಧಿಕಮಹತ್ತ್ವಂ ಪ್ರತಿಪಾದಯಿತುಮಿದಂ ಪದ್ಯಂ ಪ್ರವೃತ್ತಮ್ । ಭವತಃ ತ್ವತ್ತಃ, ಭವತಃ ಜಾಯಮಾನಾತ್ ಭವಾನ್ ನ ಭವತೀತ್ಯಭವಾನ್ ತಸ್ಮಾತ್, ಅಭವತಃ ಭವದ್ವ್ಯತಿರಿಕ್ತಾತ್, ಕಮಲಾಸನಾತ್ ಬ್ರಹ್ಮಣಃ ಕಮಲಾಸನಾದ್ಭವತಃ ಜಾಯಮಾನಾತ್ । ಅಭವತಃ ಭವದ್ವ್ಯತಿರಿಕ್ತಾತ್ ಭವತಃ ಶಿವಾತ್ । ಬ್ರಹ್ಮ-ಶಿವಾಖ್ಯೆ ತದಂತರ್ಯಾಮಿಭಗವದ್ರೂಪವ್ಯವಚ್ಛೇದಾಯೋಭಯತ್ರಾಪ್ಯಭವತ ಇತಿ ವಿಶೇಷಣಮ್ । ಅನೇನ ಬ್ರಹ್ಮಾ ಸ್ವಾಂತರ್ಯಾಮಿಬ್ರಹ್ಮರೂಪಾದ್ಭಿನ್ನಃ ತತ್ಪುತ್ರತ್ವಾತ್, ಶಿವಃ ಸ್ವಾಂತರ್ಯಾಮಿಶಿವರೂಪಾದ್ಭಿನ್ನಃ ತತ್ಪೌತ್ರತ್ವಾದಿತ್ಯನುಮಾನದ್ವಯಂ ಬ್ರಹ್ಮಶಿವಯೋರುಕ್ತಸ್ವಸ್ವಾಂತರ್ಯಾಮಿರೂಪಾದ್ಭಿನ್ನತ್ವೇ ಪ್ರಮಾಣಂ ಸೂಚಿತಮ್ । 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್'ಇತಿ ಶ್ರುತೇಃ, 'ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯ-ಧೀಶ್ವರಃ' ಇತಿ ಸ್ಮೃತೇಃ । ಸ್ವಸ್ವಸ್ರಷ್ಟೃಮೂಲರೂಪಸ್ಯೈವೋಭಯತ್ರಾಪಿ ಪ್ರವೇಶಾನ್ನಾಸಿದ್ಧೋ ಹೇತುಃ। ಕಮಲಾಯಾಃ ಲಕ್ಷ್ಮ್ಯಾಃ ಆಸನಾತ್ ಪತ್ಯಾ ಸಹ ಶಯನೇ ಶಯ್ಯಾರೂಪಾಚ್ಛೇಷಾತ್ । 'ಭೂ ಪ್ರಾಪ್ತೌ' ಇತಿ ಧಾತೋಃ ಭವತಃ ಗಚ್ಛತಃ ಭವತಃ ತವ ಷಷ್ಠ್ಯರ್ಥಭೂತವಾಹಕಭಾವೇನ ವಿದ್ಯಮಾನಾದ್ಗರುಡಾತ್ ಕಾನಾಂ ಜಲಾನಾಂ ಮಲೇನ ಫೇನೇನ ಅಸ್ಯತಿ ನಿರಸ್ಯತಿ ಶತ್ರುಮಿತಿ ಕಮಲಾಸನಃ ಇಂದ್ರಃ ತಸ್ಮಾತ್ ''ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯತ್''(ಋಗ್ವೇದ.೫/೧/೧೬) ಇತಿ ಶ್ರುತೇಃ। ಭವತಃ ತ್ವತ್ತೋ, ಭವತೋ ಜಾಯಮಾನಾತ್ ಕಾಮಾತ್ ಕಮಲಾಸನಾತ್ 'ಪದ್ಮಾಸನಂ ಪದ್ಮಕರಮ್' ಇತಿ ಶ್ರುತ್ಯಾ ಪದ್ಮವಿಷ್ಟರಸೂರ್ಯಾತ್ ಕಮಲಂ ಅಸ್ಯತಿ ಮುದ್ರಣಪ್ರಾಪಣೇನ ನಿರಸ್ಯತೀತಿ, ಕಮಲಾಸನಾತ್ ಚಂದ್ರಾತ್ । ಭವತೋ ಭವತಃ ಶಿವಾದ್ಭವತಃ ಜಾಯಮಾನಾತ್ ವಿನಾಯಕಾತ್ ಷಣ್ಮುಖಾಚ್ಚ ಕಮಲಾಸನಾತ್ ಬ್ರಹ್ಮಣಃ, ಭವತಃ ಜಾಯಮಾನಾನ್ಮರೀಚೇಃ ಭವತೋ ಜಾಯಮಾನಾತ್ ಕಶ್ಯಪಾತ್, ಭವತಃ ತವ, ಮನೋಽನುಕೂಲತಯಾ ವಿದ್ಯಮಾನಾತ್ ದೇವನಾಗಾದಿಸಮೂಹಾತ್ ಭವತಃ ತವ, ಅಭವತಃ ಅನನುಕೂಲಾತ್ ದೈತ್ಯಾದಿದುರ್ಜೀವಸಮೂಹಾಚ್ಚ ಉಕ್ತವ್ಯುತ್ಪತ್ತ್ಯಾ ಕಮಲಾಸನಾತ್ ಸೂರ್ಯಾತ್, ಭವತೋ ಜಾಯಮಾನಾತ್ ಕಮಲಾಸನಾತ್ ಚಂದ್ರಾಚ್ಚ ಭವತಃ ಜಾಯಮಾನಾತ್, ಉಭಯವಂಶಜಾತಚಕ್ರವರ್ತಿಸಮೂಹಾದಿತ್ಯರ್ಥಃ। ಕಮಲಾಸನಾದ್ಭವತಃ ಜಾಯ-ಮಾನಾದ್ವಸಿಷ್ಠನಾರದಾದಿಋಷಿಸಮೂಹಾತ್ ಕಮಲಾಸನಾತ್ ಬ್ರಹ್ಮಣಃ ಉಕ್ತವ್ಯುತ್ಪತ್ತ್ಯಾ, ಕಮಲಾಸನಾತ್ ಸೂರ್ಯಾಚ್ಚ ಭವತಃ ಪ್ರತಿಕಲ್ಪಂ ಜಾಯಮಾನಾನ್ಮಹದಹಂಕಾರಾದೇಃ ಪಾತಾಲರಸಾತಲಾದೇಶ್ಚ ಜಡಪ್ರಪಂಚಾತ್ ಕಮಲಾಸನಾತ್ ಬ್ರಹ್ಮಣಃ, ಭವತಶ್ಚ ಅಭವತಃ ಅಜಾಯಮಾನಾತ್ ಅಪೌರುಷೇಯವೇದಾದೇಃ ಕಮಲಾಸನಾತ್ ಕಮಲಾಸನಾನ್ನಿಮಿತ್ತಾತ್, ತದರ್ಥಮಿತ್ಯರ್ಥಃ । ಭವತಃ ಮೂಲರೂಪಾದ್ವ್ಯಾಸಾದಿರೂಪಾಚ್ಚ ಭವತಃ ಜಾಯಮಾನಾತ್ ಪಂಚರಾತ್ರಭಾರತಪುರಾಣಬ್ರಹ್ಮಸೂತ್ರಾದಿಪೌರುಷೇಯಗ್ರಂಥಸಮೂಹಾತ್ । ಕಮಲಾಯಾಃ ಸಂಪದಃ ಅಸನಾತ್ ನಿರಸನಾತ್, ವೈರಾಗ್ಯಾದಿತ್ಯರ್ಥಃ ಕಶಬ್ದವಾಚ್ಯಶಿರಸೋ ಮಲಭೂತಕೇಶಾನಾಂ ಅಸನಾತ್ ನಿರಸನಾತ್ ಸನ್ಯಾಸಾಶ್ರಮಗ್ರಹಣಾದಿತಿ ಯಾವತ್। ಮುಕ್ತಿಯೋಗ್ಯಜೀವೇಷು ಯಥಾಯೋಗ್ಯಂ ವೈರಾಗ್ಯಸಂಪತ್ತೇರನಂತರಮಿತಿ ಭಾವಃ । ಭವತಃ ತ್ವತ್ತಃ, ತ್ವದಾಜ್ಞಯೇತ್ಯರ್ಥಃ । ಭವತಃ ಭೂಮೌ ಜಾಯಮಾನಾತ್ ಕಮಲಾಸನಾತ್ ಉಕ್ತವಿಧಯಾ ವಿರಕ್ತಾದ್ಯತಿರೂಪಿಣೋ ಭಾವಿಬ್ರಹ್ಮಣೋ ಮಧ್ವಾದ್ ಭವತಃ ಜಾಯಮಾನಸ್ಯ ತತ್ಕೃತಭಾಷ್ಯಾದಿಗ್ರಂಥಸ್ಯ ಭವತಃ ಅನುಭವಿತೃಗಣಾದಿತ್ಯರ್ಥಃ ''ಕಾನೀಂದ್ರಿಯಾಣಿ'' ಇತಿ ಶ್ರುತೇಃ ಕಮಲಾಸನಾತ್ ಕಶಬ್ದವಾಚ್ಯಮನೋಮಲಭೂತಮಿಥ್ಯಾಜ್ಞಾನನಿರಸನಾನ್ಮನನಾದಿತ್ಯರ್ಥಃ । ಲ್ಯಬ್ಲೋಪನಿಮಿತ್ತ-ಪಂಚಮೀಮಪೇಕ್ಷ್ಯ ಕಮಲಾಸನಾತ್ ಕಮಲಾಸನಂ, ಭವತಃ ಭವಂ ಭವತಃ ಶಿವಾತ್ ಭವತಃ ಭವಂತಂ ಜಾಯಮಾನಂ, ಷಣ್ಮುಖವಿನಾಯಕಾದಿಕಂ ಪರದೇವತಾತ್ವೇನಾನಂಗೀಕೃತ್ಯ ಚ ಗುರುತ್ವೇನಾಂಗೀಕೃತ್ಯ ಚ ಭವತ

ಏವ ಭವತಃ ಪರದೇವತಾತ್ವೇನಾನುಭವಾತ್ ಕಮಲಾಸನಾತ್ ಕಮಲಾಯಾ ವಿಷ್ಟರಸ್ಥಾನೀಯವಕ್ಷಸ್ಥಲಾನ್ನಾರಾಯಣಾತ್ ಪ್ರಸಿದ್ಧಕಮಲಾಸನಾಚ್ಚ ಗುರೋಃ ಭವತಃ ಜಾಯಮಾನಾತ್ ಭವತಃ ತವ ಭವತಃ ಭವಾತ್ ಭಕ್ತೇರ್ಭಾವನಾಖ್ಯಧ್ಯಾನಾತ್ ಪ್ರಾಪ್ತ್ಯರ್ಥಧಾತೋರ್ಜ್ಞಾನಾರ್ಥತ್ವಾತ್, ಭವತಃ ಅಪರೋಕ್ಷಜ್ಞಾನಾಚ್ಚ ಭವತೋ ಜಾಯಮಾನಾತ್, ಕಮಲಾಸನಾತ್ ಕಶಬ್ದವಾಚ್ಯಮೌಕ್ತಸುಖಸ್ಯ ಮಲರೂಪದುಃಖೋದರ್ಕಸಾಂಸಾರಿಕಸುಖನಿರಸನಾದನಂತರಂ ಭವತಃ ತವ ಭವತಃ ಸಾಯುಜ್ಯಸಾಮೀಪ್ಯಾದಿಸಂಬಂಧವತ್ತಯಾ ಜಾಯಮಾನಾದ್ಯಥಾಯೋಗ್ಯಂ ಚತುರ್ವಿಧಮುಕ್ತೇಃ ಪಾತ್ರೀಭೂತಾದಿತಿ ಭಾವಃ। ಅಭವತಃ ನ ವಿದ್ಯತೇ ಭವಃ ಸಂಸಾರೋ ಯಸ್ಯೇತಿ ವ್ಯುತ್ಪತ್ತ್ಯಾ ಮುಕ್ತಾತ್ ಪ್ರಾಗುಕ್ತವ್ಯುತ್ಪತ್ತ್ಯೈವ ಕಮಲಾಸನಾದಿಶಬ್ದವಾಚ್ಯಾನ್ಮುಕ್ತಬ್ರಹ್ಮಾದಿಸಜ್ಜೀವಾದಿಸಮೂಹಾದಿತಿ ಯಾವತ್ । ಏವಂ ಚಾಂತರ್ಬಹಿರ್ವರ್ತಿಪ್ರಪಂಚಪ್ರತೀತತ್ವಾದಭೂತಪೂರ್ವತ್ವೈವಿಕ್ರಮಪದತ್ರಯೋಪಮಮಿದಂ ಪದತ್ರಯಮಿತಿ ಜ್ಞಾತವ್ಯಮ್ ।

ಇಂದಿರಾ ಲಕ್ಷ್ಮೀಃ, ಮಹತೀ ಕಿಲ ವಿಷ್ಣುವ್ಯತಿರಿಕ್ತಚೇತನಾಚೇತನಾತ್ಮಕಸಕಲಪ್ರಪಂಚಾದಭ್ಯಧಿಕೇತ್ಯರ್ಥಃ । ಹೇ ಅರಿವೃತೋದಯದಾವ ಕೃಷ್ಣ ಇತರಾವಧ್ಯಕಂಸಾದಿವಧೇನಾಪಿ ಭಗವತಸ್ಸರ್ವೋತ್ತಮತ್ವಾದಿಸೂಚನಾಯೇದಂ ವಿಶೇಷಣಮ್ । ಲತಯಾ ತರುವತ್ ತಯಾ ಲಕ್ಷ್ಮ್ಯಾ ಭವಾನ್ ಪರಿವೃತಃ ಪರಿತಃ ಸರ್ವತೋ ವೃತಃ ಅವತಾರಾದಿಷ್ವಪಿ ಸೇವಾಲೋಲುಪಾ ಸಾ ತ್ವಾಂ ನ ಮುಂಚತೀತ್ಯರ್ಥಃ। ಗುಣತ್ರಯಾದುಪರಿ ವ್ಯಾಪ್ತಾವ್ಯಾಕೃತಮಹಾಕಾಯಸ್ಯ ಹರೇಃ ಶ್ರೀರೇವ ಕಟಕಮುಕುಟಾದ್ಯಾಕಾರೇಣ ಸರ್ವಾಂಗಮಾವೃತ್ಯ ತಿಷ್ಠತೀತಿ ಸೂಚಯಿತುಂ ಪರಿವೃತ ಇತ್ಯುಕ್ತಮ್। ತರುದೃಷ್ಟಾಂತೇನ 'ಯಸ್ಯಾಂಘ್ರಿರೇಣುಂ ಜುಷತೋಽನಭೀಪ್ಸೋಃ' ಇತಿ ಸ್ಮೃತ್ಯುಕ್ತಭಗವತೋ ನೈರಪೇಕ್ಷ್ಯಂ ಸೂಚ್ಯತೇ।

ಏವಂ ಚ ಸಕಲಜಗದುತ್ತಮಲಕ್ಷ್ಮೀತತ್ವಾದಪ್ಯುತ್ತಮತ್ವಾದ್ಭಗವಾನೇವ ನಿರವಧಿಕಸರ್ವೋತ್ತಮ ಇತಿ ಗೋಪೀನಾಂ ಹೃದಯಮ್। ಕಿಲೇತ್ಯನೇನಾಸ್ಮಿನ್ನರ್ಥೇಽಂಭ್ರಣೀಸೂಕ್ತವರ್ಗದ್ವಯಂ,

ಮಯಾಽಪಿ ಬಾಲ್ಯೇ ಸ್ವಪಿತುಃ ಪ್ರಜಾ ದೃಷ್ಟ್ವಾ ಬುಭುಕ್ಷಿತಾಃ।
ದುಃಖಾದಶಕ್ತಯಾ ಪೋಷ್ಟುಂ ಶ್ರಿಯಮಾರಾಧ್ಯ ವೈ ಭೃತಾಃ॥
ತಯಾ ಸಂವರ್ಧಿತಾಭ್ಯಶ್ಚ ಪ್ರಜಾಭ್ಯೋ ಭವದಾದಯಃ।
ವಿಲಸಂತೀಶಶಕ್ರಾದ್ಯಾಃ ಸಸುಹೃನ್ಮಿತ್ರಬಾಂಧವಾಃ॥
ತಯಾ ವಿನಾ ಕ್ವ ದೇವತ್ವಂ ಕ್ವೈಶ್ವರ್ಯಂ ಕ್ವ ಪರಿಗ್ರಹಃ।
ಸರ್ವೇ ಭವಂತಿ ಜೀವಂತೋ ಯಾತನಾಸ್ವಿಹ ಸಂಸ್ಥಿತಾಃ॥
ತಾಮೃತೇ ನೈವ ಧರ್ಮೋಽರ್ಥಃ ಕಾಮಮೋಕ್ಷೌ ವಿದೂರತಃ।
ಕ್ಷುಧಿತಾನಾಂ ದುರ್ಭಗಾನಾಂ ಕುತೋ ಯೋಗಸಮಾಧಯಃ॥
ಸ ಚ ಸಂಸಾರಸಾರೈಕಃ ಸರ್ವಲೋಕೈಕನಾಯಕಃ।
ವಶಗಾ ಕಮಲಾ ಯಸ್ಯ ತ್ಯಕ್ತ್ವಾ ತ್ವಾಮಪಿ ಶಂಕರ॥
ಅನೌದ್ಧತ್ಯೇನ ಶೌಚೇನ ರೂಪೇಣಾರ್ಜವಸಂಪದಾ।
ಸರ್ವಾತಿಶಾಯಿವೀರ್ಯೇಣ ಸಂಪೂರ್ಣಸ್ಯ ಮಹಾತ್ಮನಃ॥
ಕಸ್ತೇನ ಸಮತಾಮೇತಿ ದೇವದೇವೇನ ವಿಷ್ಣುನಾ।
ಯಸ್ಯಾಂಶಾಂಶಾವತಾರೇಣ ವಿನಾ ಸದ್ಯೋ ವಿಲೀಯತೇ॥
ಜಗದೇತತ್ ತಥಾಽಪ್ಯಾಹುರ್ದೋಷಾನಸ್ಯ ವಿಮೋಹಿತಾಃ।
ನಾಸ್ಯ ಜನ್ಮ ಜರಾ ಮೃತ್ಯುರ್ನಾಪ್ರಾಪ್ಯಂ ಸ್ವಾರ್ಥ ಏವ ವಾ॥ (ಪದ್ಮಪುರಾಣೇ) ಉತ್ತರಖಂಡೇ. ೭೧

–ಇತಿ ವಾಸುದೇವಸಹಸ್ರನಾಮ್ನಿ ಪಾರ್ವತೀವಚನರೂಪಸ್ಮೃತಿಂ ಚ ಸೂಚಯತಿ।

ತತ್ರಾಂಭ್ರಣೀಸೂಕ್ತಸ್ಯ ಲಕ್ಷ್ಮೀಸೂಕ್ತತ್ವೇ ನಿರುಕ್ತಮೇವ ಪ್ರಮಾಣಯಂತೋ ಯಥಾಶಕ್ತಿ ಸೂಕ್ತಾರ್ಥಂ ವದಾಮಃ। 'ಅಂಭ್ರಣೀವಾಗಾತ್ಮಾನಂ ತುಷ್ಟಾವೇ'ತಿ ನಿರುಕ್ತಾತ್ ಅಂ ಪರಮಾತ್ಮಾನಂ ಸ್ವಹೃದಿ ಸ್ವಾಭಿಮನ್ಯ-ಮಾನವೇದಪ್ರತಿಪಾದ್ಯತ್ವೇನ ಚ ಬಿಭರ್ತಿ। 'ವೇದಗರ್ಭೋ ವಿಭುರ್ವಿಷ್ಣುಃ ಶ್ರೀಮಾಂಸ್ತ್ರೈಲೋಕ್ಯಭೂಷಣಃ' ಇತಿ ವಿಷ್ಣುನಾಮಸು ಪಾಠಾತ್ ಅಂ ಬಿಭರ್ತಿ ನಯತಿ ಚೇತಿ ವಿಗ್ರಹಃ। ನಯತಿ ವೇದಾಧ್ಯೇತೃಸಜ್ಜನಮನಸ್ಸು ಚೇತಿ ಅಂಭ್ರಣೀಶಬ್ದವಾಚ್ಯಾ ವಾಗ್ವೇದಾಭಿಮಾನಿನೀ ಲಕ್ಷ್ಮೀರಾತ್ಮಾನಂ ತುಷ್ಟಾವ। 'ಅ ಇತಿ ಬ್ರಹ್ಮ' ಇತಿ ಶ್ರುತೇಃ 'ಭೃಞ್ ಭರಣೇ, ಣೀಞ್ ಪ್ರಾಪಣೇ' ಇತಿ ಧಾತೋಶ್ಚ ನಾಪೂರ್ವೋಽಯಮರ್ಥಃ। ರೂಢ್ಯಾ ಅಂಭ್ರಣೀಶಬ್ದವಾಚ್ಯ-ದೇವತಾಯಾಃ ಕಾಪ್ಯಪ್ರಸಿದ್ಧೇಃ । ಉಕ್ತಯೋಗಾಶ್ರಯಣೇನ ಶ್ರೀರೇವಾತ್ರ ಪ್ರತಿಪಾದ್ಯಾ ನ ತು ಸರಸ್ವತೀ । ಅಂಭ್ರಣೀಶಬ್ದವಿರೋಧಾತ್। ಸರಸ್ವತ್ಯಾದೇಃ ಬ್ರಹ್ಮಲಯೇಽಪಿ ವಿದ್ಯಮಾನವೇದಾಭಿಮಾನಿತ್ವಾಯೋಗಾತ್। ತಂ ಬ್ರಹ್ಮಾಣಂ ಕೃಣೋಮಿ। ಅಸ್ಯ ಜಗತಃ ಪಿತರಂ ಸ್ರಷ್ಟಾರಂ ಚತುರ್ಮುಖಂ, ಮೂರ್ಧನ್ ಮೂರ್ಧ್ನಿ, ಸರ್ವ-ಲೋಕೋಪರಿಸ್ಥಿತಸತ್ಯಲೋಕಪರಿಪಾಲನಾಯ। ತಾದರ್ಥ್ಯೇ ಸಪ್ತಮೀ। ಸುವೇ - ಯೋನಿದ್ವಾರಾ ಸೃಜಾಮಿ ಅಪ್ಸ್ವಂತಃ - ಸಮುದ್ರೋದಕಮಧ್ಯೇ । ಮಮ ಯೋನಿಃ - ಭರಣಾದೌ ಹೇತುಭೂತೋ ಭರ್ತಾ ನಾರಾಯಣಸ್ತಿಷ್ಠತಿ ಇತ್ಯಾದಿವಕ್ಷ್ಯಮಾಣಸೂಕ್ತಸ್ಥಬಹ್ವರ್ಥಾನಾಂ ಲಕ್ಷ್ಮ್ಯಾ ಅನ್ಯತ್ರಾಯೋಗಾಚ್ಚ।

ಅಹಂ ರುದ್ರೇಭಿಃ = ಏಕಾದಶರುದ್ರೈಃ ವೇದೋಕ್ತಸಕಲರುದ್ರಪರಿಗ್ರಹಾಯ ಛಾಂದಸಃ ಪ್ರಯೋಗಃ। ವಸುಭಿಃ = ಅಷ್ಟವಸುಭಿಃ ಸಹ ಚರಾಮೀತ್ಯೇಕಾನ್ವಯಃ। ಅತ್ರ ಬಹುಮೂರ್ತೇಃ ಸ್ವಸ್ಯಾಃ ಪ್ರತ್ಯೇಕಂ ಮೂರ್ತಾವಪಿ ಸಹ ಸಂಚಾರಸೂಚನಾಯ ದ್ವಿರಹಂಪದಪ್ರಯೋಗಃ । ಆದಿತ್ಯೈರ್ವಿಶ್ವೇದೇವೈಶ್ಚ ಸಹ ಚರಾಮಿ । ಮಮ ಸಂಚಾರಸಮಯೇ ಏತೇ ಸರ್ವೇ ಮಮಾನುಚರಾಃ ಇತಿ ಭಾವಃ। ಮಿತ್ರಾವರುಣಾ = ಮಿತ್ರಾವರುಣೌ ಉಭಾ = ಉಭೌ, ಇಂದ್ರಾಗ್ನೀ, ಉಭಾ = ಉಭೌ। ಅಶ್ವಿನಾ = ಅಶ್ವಿನೌ ಚ ಬಿಭರ್ಮಿ॥೧॥

ಆಹನಸಂ = ಆಸಮಂತಾತ್ ಹನ್ಯತೇ ಇತಿ ಆಹನಾಃ ಆಸಮಂತಾತ್ ಹನ್ಯಮಾನಸೋಮಲತಾಭಿಮಾನಿನಮಿ-ತ್ಯರ್ಥಃ। ಸೋಮಂ = ಚಂದ್ರಂ; ತ್ವಷ್ಟಾರಂ = ವಿಶ್ವಕರ್ಮಾಣಂ, ತ್ವಷ್ಟೃನಾಮಕಸೂರ್ಯಂ ವಾ, ಪೂಷಣಂ; ಉತ = ಪೋಷಣಂ ಚ । ಭಗಂ = ಭಗನಾಮಕಂ ಚ । ಏತಾವಪಿ ಸೂರ್ಯೌ। ವಿಷ್ಟಿಗೃಹೀತಾನಾಂ ಪೂರ್ವಾಋಚ್ಯುಕ್ತರುದ್ರಾದೀನಾಂ ನ ಮಯಾ ಸಹ ಸಂಚರಣಮ್। ಕಿಂತು ಧನದಾನಾದಿಪೋಷಿತಾನಾಮೇವೇತಿ ಸೂಚನಾಯ ಬಿಭರ್ಮ್ಯೇತ್ಯುತ್ತರಋಚ್ಯಪಿ ಪ್ರಾಗಾದಿತ್ಯಶಬ್ದೋಕ್ತಪೂಷಾದೀನಾಮೇವ ಸರ್ವೋಪಲಕ್ಷಕತಯಾ ಪುನರ್ವಚನಮ್। ಅತ್ರೈವೋಕ್ತೇಂದ್ರಾದೀನಾಂ ಚ ಬಾಲ್ಯತ್ವಾದೇವ ಲಕ್ಷ್ಮ್ಯನುಚರತ್ವಂ ಜ್ಞೇಯಮ್। ಭರಣಂ ಚ ನಾಧಾರಾಧೇಯಭಾವೇನ, ಕಿಂತು ದ್ರವ್ಯದಾನೇನ ಚ ಇತ್ಯಾಹ - ಅಹಮಿತಿ। ಸುಪ್ರಾವ್ಯೇ = ಸುಷ್ಠು ಪ್ರಕರ್ಷೇಣ ರಾಜಾದಿಭ್ಯೋಽಪ್ಯತಿಶಯೇನಾಂತರಪಿ ಸ್ಥಿತ್ವಾ ಇತ್ಯರ್ಥಃ। ಅವ್ಯೇ = ರಕ್ಷಣಯೋಗ್ಯೇ ಇತಿ ಲೋಕತ್ರಯ-ಸಂಗ್ರಾಹಕಮ್ । ಪ್ರಮಾಮನುಪಮೃದ್ಯೈವ ದದಾಮೀತಿ ಸೂಚನಾಯ ಲೋಕ ಇತ್ಯನುಕ್ತ್ವಾ ಅವ್ಯೇ ಇತ್ಯುಕ್ತಮ್ । ಸುನ್ವತೇ = ಸೋಮಸವನಂ ಕುರ್ವತೇ। ಹವಿಷ್ಮತೇ = ಯಜ್ಞಯೋಗ್ಯಬಹ್ವನ್ನವತೇ । ಯಜಮಾನಾಯ = ಬ್ರಹ್ಮೇಂದ್ರಾದಿರೂಪಯಜಮಾನಾಯ ದ್ರವಿಣಂ ದಧಾಮಿ। 'ತೃತೀಯೋಽತಿಶಯೇ' ಇತಿ ಮಹಾವ್ಯಾಕರಣವಚನಾತ್ ಅತಿಶಯೇನ ದದಾಮಿ। ದತ್ತಂ ಚ 'ಡುಧಾಞ್ ಧಾರಣ ಪೋಷಣಯೋಃ' ಇತಿ ಧಾತೋಃ। ದಧಾಮಿ = ಧಾರಯಾಮಿ ಚೋರಾದಿಭಯಂ ನಿವಾರ್ಯ ರಕ್ಷಾಮಿ ವೃದ್ಧ್ಯಾದಿನಾ ಪೋಷಯಾಮಿ ಚ॥೨॥

ರಾಷ್ಟ್ರಾದೇವ ದ್ರವ್ಯಸಂಪತ್ತಿಃ ಕಿಂ ತ್ವಯೇತ್ಯಾಶಂಕಾಂ ವಾರಯಿತುಮಾಹ - ಅಹಂ ರಾಷ್ಟ್ರೀತಿ। ಅಹಂ ರಾಷ್ಟ್ರೀ = ಭೂರೂಪೇಣ ರಾಷ್ಟ್ರಾಭಿಮಾನಿನೀ । ವಸೂನಾಂ = ಧನಧಾನ್ಯರತ್ನಾದೀನಾಮ್ । ಸಂಗಮನೀ = ಸಮ್ಯಕ್ ಪ್ರಾಪಯಂತೀ । ಯಜ್ಞಿಯಾನಾಂ = ವಸೂನಾಂ । ಪ್ರಥಮಾ = ಆದಿಭೂತಾ । ಚಿಕಿತುಷೀ ಕರ್ತ್ರೀ । ಪುಣ್ಯಹೇತುತ್ವಾತ್ ಯಜ್ಞಯೋಗ್ಯವಸೂನಾಮಿತರದ್ರವ್ಯೇಭ್ಯೋಽಪಿ ಆದಿತ ಏವ ಕರ್ತ್ರೀ ಇತ್ಯರ್ಥಃ । ಧನಾದಿದಾನಂ ಚ ನ ತ್ರಿವಿಧಜೀವಾನಾಮೇಕಪ್ರಕಾರೇಣ ಕಿಂತು ತತ್ತದ್ಯೋಗ್ಯತಾಮರ್ಯಾದಯಾ ಇತ್ಯಾಹ -

ತಾಮಿತಿ। ಯಾಽಹಂ ಪುರುತ್ರಾ = ಪುರೂಣಿ ಬ್ರಹ್ಮಾದಿಜಗಂತಿ ಪಾಲಯಂತೀ ತಾಂ, ಮಾ = ಮಾಂ, ದೇವಾಃ ಭೂರಿಸ್ಥಾತ್ರಾಮ್ । ಭೂರೀಣಿ ದ್ರವ್ಯಾಣೀ ಸ್ಥಾತ್ರೀಂ ಸ್ಥಾಪಯಂತೀಂ, ಸ್ಥಿರೀಕುರ್ವಾಣಾಂ ಭೂರಿ = ಬಹುವಿಧದ್ರವ್ಯಂ; ಆ = ತೇಷಾಂ ತೇಷಾಂ ಯೋಗ್ಯತಾಮರ್ಯಾದಯಾ ವೇಶಯಂತೀಂ = ತತ್ತದ್ಗೃಹೇ ಪ್ರವೇಶಯಂತೀಂ; ಉತ್ತಮಾನಾಂ ಗೃಹೇ ಚಿರಕಾಲಸ್ಥಾಯಿ, ಅಧಮಾನಾಮಲ್ಪಕಾಲಸ್ಥಾಯಿ, ಮಿಶ್ರಾಣಾ-ಮುಭಯವಿಧಂ ಚ ವೇಶಯಂತೀಮಿತ್ಯರ್ಥಃ। ವ್ಯದಧುಃ = ಕೃತವಂತಃ। ''ಋತೇ ಭವತ್ಪಾದಪರಾಯಣಾಂ ನ ಮಾಂ ವಿದಂತ್ಯಹಂ ತ್ವದ್ಧೃದಯಾ ಯತೋಽಜಿತ''(ಭಾ.೫.೧೮;೨೨) । ಇತಿ ಭಾಗವತೋಕ್ತಸ್ವಾಭಿಪ್ರಾಯಂ ಸ್ಫೋರಯಿತುಂ 'ಆ' ಇತ್ಯುಪಸರ್ಗಃ॥ ೩. ॥

ಅತ ಏವ ಯೋ ವಿರುದ್ಧತಯಾ ಪಶ್ಯತಿ ಮದುಕ್ತತತ್ತ್ವಾದ್ವೈಪರೀತ್ಯೇನ ಪಶ್ಯತಿ। ಯಃ ಪ್ರಾಣಿತಿ = ಜೀವನಮಾತ್ರಂ ಕೃತ್ವಾ ತಿಷ್ಠತಿ। ಯಃ ಈಂ = ಇತ್ಥಂ। ಉಕ್ತಂ = ಮದುಕ್ತಂ ಸಕಲಂ ತತ್ತ್ವಂ। ಶೃಣೋತಿ = ಶಿಷ್ಯತ್ವೇನ ಶೃಣೋತಿ। ವಾಕ್ಯಖಂಡತ್ರಯಸ್ಯ ಜೀವತ್ರಯಪರತ್ವಸೂಚನಾಯ ತ್ರಿಶೋಽಪಿ ಯಚ್ಛಬ್ದಗ್ರಹಣಮ್ । ಸ ಸರ್ವೋಽಪಿ ಮಯಾ ಅನ್ನಮತ್ತಿ । ಅಯೋಗ್ಯದತ್ತಾನ್ನಸ್ಯ ಬಹುಕಾಲಾಸಂಬಂಧಸೂಚನಾಯ ವಿಸಂಧೀಕರಣಂ । ತಸ್ಯೈವಾದಾವುಕ್ತತ್ವಾತ್ ತದೇವ ಸ್ಪಷ್ಟಯತಿ। ಮಾಂ ಅಮಂತವಃ = ಅವಮಂತಾರಃ ಮಾಂ ಭಗವದೈಶ್ವರ್ಯಂ ಚಾವಮಂತಾರೋ ಯೇ = ತೇ। ಉಪ = ಸಮೀಪೇ। ಕ್ಷಿಯಂತಿ = ಕ್ಷಯಂ ಪ್ರಾಪ್ನುವಂತಿ। ಅಹಂ ಶ್ರದ್ಧಿವಂ = ಶ್ರದ್ಧಾವದ್ಭಿಃ ಪ್ರಾಪ್ಯಂ ವಚನಂ 'ವಾ ಗತಿಗಂಧನಯೋಃ' ಇತಿ ಧಾತೋಃ। ತೇ = ತವ, ವದಾಮಿ। ತತ್ ತ್ವಂ ಶ್ರುಧಿ – ಶ್ರುಣು। ಶ್ರುತ – ತಟಸ್ಥಾ ಅಪಿ ಶ್ರುಣುತ॥ ೪ ॥

ದೇವೇಭಿಃ = ದೇವೈಃ। ಮಾನುಷೇಭಿಃ = ಉತ್ತಮಮಾನುಷೈಶ್ಚ। ಜುಷ್ಟಂ ಇದಂ ವಚನಂ ಅಹಮೇವ ಸ್ವಯಂ ವದಾಮಿ; ನ ತು ಗೀತಾಪಾಠವತ್ ಅನ್ಯವಚನಾನುವಾದರೂಪಮಿದಂ ಯೇನ ವಕ್ಷ್ಯಮಾಣಮಹಿಮಾ ಮಮ ನ ಸಿದ್ಧ್ಯೇತ್ ಇತಿ ಭಾವಃ। ಯಂ ಯುಮುಗ್ರಂ ರುದ್ರಪದಯೋಗ್ಯಂ ಜೀವಂ ಉಗ್ರಂ = ರುದ್ರಂ ಕರ್ತುಂ ಕಾಮಯೇ 'ತಂ ತಂ' ಇತಿ ವೀಪ್ಸಾಬಲಾತ್ ತು 'ಯಂ ಯಂ' ಇತಿ ಲಭ್ಯತೇ । ಕೃಣೋಮೀತಿ ವಿಧಾಯಕಪದಮಹಿಮ್ನಾ ಕರ್ತುಮಿತಿ ಲಭ್ಯತೇ। ಕಾಮನಾಕರಣಯೋರೇಕವಿಷಯತ್ವಾದುಗ್ರಮಿತ್ಯಪಿ ಲಭ್ಯತೇ। ತಂ ತಂ ಉಗ್ರಂ–ರುದ್ರಂ ಕೃಣೋಮಿ। 'ಉಗ್ರಃ ಕಪರ್ದೀ ಶ್ರೀಕಂಠಃ' ಇತ್ಯಭಿಧಾನಾತ್ । ಯಂ ಯಂ ಬ್ರಹ್ಮಾಣಂ ಋಷಿಂ ಸುಮೇಧಸಂ ಚ ಕರ್ತುಂ ಕಾಮಯೇ, ತಂ ತಂ ಬ್ರಹ್ಮಾಣಮೃಷಿಂ ಸುಮೇಧಸಂ ಚ ಕೃಣೋಮೀತಿ ಯೋಜನಾ ದ್ರಷ್ಟವ್ಯಾ। ಅತಿ-ಸಮರ್ಥರುದ್ರಬ್ರಹ್ಮಾದೀನಾಮಪ್ಯುತ್ಪಾದನೇ ಸ್ಥಾಪನೇ ಚ ಅಹಮೇವ ಸಮರ್ಥಾ ಇತಿ ಶ್ರಿಯೋ ಭಾವಃ । ಸ್ವಭರ್ತೃಸಮತಯಾ ಪ್ರಸಿದ್ಧರುದ್ರಬ್ರಹ್ಮಾದೀನಾಂ ಸ್ವತೋಽಪೃಥಃಕರಣಾತ್ ಸ್ವಭರ್ತೃಭಕ್ತೈರತ್ಯಾದರಣೀಯಮಿದಮಿತಿ ಸೂಚನಾಯ ಪ್ರಾಗಸ್ಯ ಪ್ರಶಂಸಾ। ಅತ ಏವ ನ ತುಚ್ಛಾರ್ಥಸ್ಯ ಪ್ರವೇಶಃ। ರುದ್ರಾದಿಸಕಲಸುರಸೇವ್ಯತ್ವಪ್ರತಿಪಾದಕಪೂರ್ವವಾಕ್ಯಾನ್ಯಪ್ರಸ್ತೂಯಾತಿಪ್ರಶಂಸಾಪೂರ್ವಕಮುಕ್ತೇಽಸ್ಮಿನ್ ವಾಕ್ಯೇ ತತೋಽಪ್ಯತಿಶಯಿತಾರ್ಥಸ್ಯೈವ ವಕ್ತವ್ಯತಯಾ ಉಗ್ರೋ ರುದ್ರ ಏವ 'ಬ್ರಹ್ಮಾ ಚತುರ್ಮುಖ ಏವ' 'ಋಷಿಃ ಸರ್ವಜ್ಞಃ' 'ಸುಮೇಧಾಃ – ಅಪರೋಕ್ಷ ಜ್ಞಾನೀ ಪರಮಮುಕ್ತೋ ವಾ' । ಅತ ಏವ ಸುಮೇಧಾಮಿತಿ ಶೋಭನಮೇಧಾತ್ವೋಕ್ತಿಃ। ಏವಂ ಚ ಹರೀತರಸಕಲ ಜಗತ್ಪ್ರವರ್ತಕಯೋಕ್ತಾಯಾಃ ಸ್ವಸ್ಯಾಃ ವಕ್ಷ್ಯಮಾಣಯೋನಿರಪಿ ಹರ್ಯಾಖ್ಯಪರದೇವತೈವ॥ ೫ ॥

ಅಹಂ ಪ್ರಳಯಕಾಲೇ ಬ್ರಹ್ಮದ್ವಿಷೇ = ಬ್ರಹ್ಮಣಃ ಪಂಚಮಶಿರಶ್ಛೇತ್ರೇ ''ಶೃ ಹಿಂಸಾಯಾಂ'' ಇತಿ ಧಾತೋಃ। ಶರವೇ = ಜಗತ್ಸಂಹರ್ತ್ರೇ। ರುದ್ರಾಯ ಹಂತವೇ = ಹಂತುಮೇವ। ''ತುಮರ್ಥೇ ಸೇ ಸೇನಸೇಽಸೇನ್ಕ್ಸೇ ಕಸೇನಧ್ಯೈ ಅಧ್ಯೈನ್ ಕಧ್ಯೈ ಕಧ್ಯೈನ್ ಶಧ್ಯೈ ಶಧ್ಯೈನ್ ತವೈ ತವೇಙ್ ತವೇನ'' ಇತ್ಯನೇನ ಸೂತ್ರೇಣ (೪/೪/೯) ತುಮರ್ಥೇ ತವೈನ್ ಪ್ರತ್ಯಯಃ । ಸ್ವಕೃತರುದ್ರಹನನಾನಂತರಂ ಕಲ್ಪಾಂತರೇ ಶೇಷಪದಪ್ರಾಪ್ತಾವಪಿ ರುದ್ರಪದಸ್ಯ ಸರ್ವಥಾ ತ್ಯಾಗಾತ್ ಹಂತುಮೇವ ಇತ್ಯುಕ್ತಂ । ಮಹಾರುದ್ರಸ್ಯೈವ ಪರಿಗ್ರಹಾಯ ಬ್ರಹ್ಮದ್ವಿಷೇ ಶರವೇ ಇತಿ ವಿಶೇಷಣದ್ವಯಮುಕ್ತಮ್ । ಅತಃ ಪ್ರಾಗುಕ್ತರುದ್ರೋ ಮಹಾರುದ್ರ ಇತಿ ಜ್ಞಾತವ್ಯಮ್ । ಬ್ರಹ್ಮವಧಾತ್ ಜಗದ್ವಧಾಚ್ಚ ಮತ್ಪತ್ಯುಃ ನಾರಾಯಣಸ್ಯೈವ ಅಲೇಪೋ, ನ ರುದ್ರಸ್ಯ ಇತಿ ಸೂಚನಾಯ ವಿಶೇಷಣದ್ವಯಮ್ ।

ಏವಂ ಚ ಮಹತಾಂ ದ್ರೋಹಿಣೋ ಹಿಂಸಾ ಸರ್ವಥಾ ಕಾರ್ಯಾ ಇತಿ ಸೂಚನಾಯ ವಾ ಹಂತುಮೇವ ಇತ್ಯುಕ್ತಮ್। ಧನುಃ ಆತನೋಮಿ = ಆಕರ್ಣಂ ಆಕರ್ಷಯಾಮಿ। ಅಹಂ ಜನಾಯ ಸಮದಂ = ಸಂತೋಷೇಣ ಸಹಿತಂ ಕೈವಲ್ಯಮಪಿ ಕೃಣೋಮಿ । ದ್ಯಾವಾಪೃಥಿವೀ = ದ್ಯಾವಾಪೃಥಿವ್ಯೌ । ಆ = ಸಮ್ಯಕ್ । ವಿವೇಶ = ಅಭಿಮಾನಿತಯಾ ಪ್ರವಿಷ್ಟಾ ಅಸ್ಮಿ॥ ೬ ॥

ಅಸ್ಯ ಪಿತರಂ = ಬ್ರಹ್ಮಾಣಂ, ಮೂರ್ಧನ್ = ಮೂರ್ಧ್ನಿ, ಅಸ್ಯ ಜಗತೋ ಮೂರ್ಧ್ನಿ ಸತ್ಯಲೋಕೇ, ಜಗತೋ ಮೂರ್ಧ್ನಿ ಧರ್ತುಂ ಯೋಗ್ಯಂ ಸರ್ವಾಗ್ರೇಸರಮಿತಿ ವಾ ಅರ್ಥಃ। ಅಹಂ ಸುವೇ। ಸಮುದ್ರೇ ಅಂತಃ ಅಪ್ಸು ಮಧ್ಯೇ ಮಮ ಯೋನಿರಸ್ತಿ । ಸ್ವಪತೇರ್ವಾಮತಃ ಉಕ್ತಸಮಸ್ತಮಹಿಮವತ್ಯಾಃ ಅಪಿ ಮಮ ಸಕಲಚೇಷ್ಟಾಕಾರಣಭೂತಃ ಕಶ್ಚನ ಪುರುಷೋತ್ತಮೋಽಸ್ತಿ। ಅಹಮೇವ ನಿರವಧಿಕಸರ್ವೋತ್ತಮಾ ನ ಭವಾಮಿ ಇತ್ಯರ್ಥಃ । ಅಭಿಮಾನ್ಯಭಿಮನ್ಯಮಾನಯೋಃ ಸಮುದ್ರಜಲಯೋಃ ಉಭಯೋರಪಿ ಆಧಾರತ್ವೋಕ್ತ್ಯಾ ಸರ್ವಾಂತರ್ಯಾಮಿಹರಿರೇವ ಯೋನಿಃ ಇತಿ ಶ್ರಿಯೋ ಹೃದಯಂ। ಪ್ರಾಕ್ ವರುಣಸ್ಯ ಸ್ವಪೋಷ್ಯತ್ವೋಕ್ತ್ಯಾ ಚ ನ ತಸ್ಯ ಅತ್ರ ಪ್ರವೇಶಃ। ಪ್ರಳಯೇ ಸ್ವಪತಿನಾ ಸಹ ಸ್ಥಿತಾಯಾಃ ಸ್ವಸ್ಯಾಃ ಉತ್ಪತ್ತೇರೇವ ಅಸಂಭವಾಚ್ಚ ನಾನ್ಯೋ ಯೋನಿಃ। ಉತ ಅಸ್ಯಾಂ ಋಚಿ ವಕ್ಷ್ಯಮಾಣಸರ್ವಾಧಾರತ್ವಾದೇಃ ಅನ್ಯತ್ರ ಅಸಂಭವಾಚ್ಚ ಸಾಕ್ಷಾತ್ ಸ್ವಸ್ಯಾಃ ಅಪಿ ನಿಯಾಮಕೋ ಹರಿರೇವ ಯೋನಿಃ। ಹರಿರೇವ ಸ್ವೋಕ್ತಶ್ರುತ್ಯುಕ್ತಯೋನಿತ್ವೇ ಹೇತ್ವಂತರಂ ಚಾಹ - ತತ ಇತಿ। ವಿಶ್ವಾ = ವಿಶ್ವಾನಿ ಮದಾದೀನಿ, ಭುವನಾ = ಭುವನಾನಿ, ತತಃ ಮಮ ಯೋನಿಭೂತಾತ್ ನಾರಾಯಣಾತ್ ವಿತಿಷ್ಠೇ = ವಿಶೇಷೇಣ ಧೃತಾನ್ಯಾಸನ್ ಇತಿ ಯಾವತ್ । ಕರತಲಮಿಲಿತಾಮಲಕವಲ್ಲೀಲಯಾ ಧೃತಂ ಇತಿ ಸೂಚನಾಯ ಏಕವಚನಾಂತಕ್ರಿಯಾಪದಪ್ರಯೋಗಃ। ಸ್ವಾತಂತ್ರ್ಯೇಣ ಧಾರಣಂ ತಸ್ಯೈವ ಇತಿ ಸೂಚನಾಯ ವಿ ಇತ್ಯುಪಸರ್ಗಃ। ಅನು ಇತ್ಯನೇನ ಸ್ವೋಕ್ತಾರ್ಥಸ್ಯ ಏಕೋ ದಧಾರ ಇತಿ ಶ್ರುತ್ಯನುಸಾರಿತಾಂ ಸೂಚಯತಿ। ನನು ತ್ವಯಾಽಪಿ ಸಕಲಧಾರಣಂ ಕ್ರಿಯತೇ ಖಲು ಇತ್ಯತ ಆಹ, ಅಹಂ ಚ ಅಮೂಂ = ಪೃಥಿವೀಂ, ದ್ಯಾಮುತ =ದ್ಯಾಂ ಚ, ವರ್ಷ್ಮಣಾ =ದೇಹೇನ, ಉಪ = ಸಮೀಪೇ ಸ್ಪೃಶಾಮಿ ಭಗವತ್ಯೈವ ಧೃತೇ ಜಗತಿ ನಿಮಿತ್ತಮಾತ್ರತಯಾ ಅಹಮಪಿ ಸ್ಪೃಷ್ಟ್ವಾ ತಿಷ್ಠಾಮಿ। ಧಾರಕಸ್ತು ಸ ಏವ। ಪೂರ್ವೋಕ್ತಃ ಸರ್ವೋಽಪಿ ಮೇ ಮಹಿಮಾ ಸ್ವಾತಂತ್ರ್ಯೇಣ ಮದಂತರ್ಯಾಮಿಣಃ ತಸ್ಯೈವ ಇತಿ ಭಾವಃ ॥೭॥

ತತ್ಕೃಪಯಾ ಮಯಿ "ಅನ್ನಂ ಹಿ ಪ್ರಾಣಃ" ಇತಿ ಶ್ರುತೇಃ ಅನ್ನವಸ್ತ್ರಹಿರಣ್ಯಾದಿಪದವಾಚ್ಯಾಯಾಃ ಸ್ವಸ್ಯಾಃ ಪ್ರಾಣಾದ್ಯಾಧಾರತ್ವಸ್ಯ ಸ್ಪಷ್ಟಮುಕ್ತತ್ವಾತ್ ಪ್ರಾಣಪದಪ್ರಯೋಗಾದೇವ ಪ್ರಾಣಿನಾಂ ಪ್ರಾಣಾಧೀನತ್ವಸ್ಯೈವ ಸೂಚಿತತ್ವಾತ್ ಮಮ ಪುತ್ರಸ್ಯ ಮುಖ್ಯಪ್ರಾಣಸ್ಯ ಅಯಂ ಮಹಿಮಾ ನಾನ್ಯಸ್ಯ ಇತ್ಯಾಹ - ವಿಶ್ವಾ ಭುವನಾನಿ ಧರ್ತುಂ ಕರ್ತುಂ ಹರ್ತುಂ ಚಾರಭಮಾಣಾ ಅಹಮೇವ ವಾತ ಇವ ಮುಖ್ಯಪ್ರಾಣ ಇವ ಪ್ರವಾಮಿ ಭಗವದ್ದತ್ತಯಶಸಾ ಜಗತ್ ಪ್ರಕರ್ಷೇಣ ಸುರಭೀಕರೋಮಿ । 'ವಾ ಗತಿಗಂಧನಯೋಃ' ಇತಿ ಧಾತುಃ । ವಿಷ್ಣೋಃ ಬ್ರಹ್ಮಾದ್ಯುತ್ತಮಲಕ್ಷ್ಮೀತತ್ತ್ವಾದಪಿ ಉತ್ತಮತ್ವೇನ ನಿರವಧಿಕಸರ್ವೋತ್ತಮತ್ವಮ್ । ಲಕ್ಷ್ಮ್ಯಾದೀನಾಂ ಚಾಲ್ಪಮಹಿಮತ್ವೇನ ತದ್ಭೃತ್ಯಾನಾಂ ಚ ಸ್ಫೋರಯಂತೀ ಉಪಸಂಹರತಿ - 'ಪರ' ಇತಿ। ಏನಾ = ಅಸ್ಯಾಃ ಪೃಥಿವ್ಯಾಃ = ಪೃಥಿವ್ಯಭಿಮಾನಿಭೂರೂಪಾದಿತ್ಯರ್ಥಃ। ಸುಪಾಂ ಸುಪೋ ಭವಂತ ಇತಿ ವಚನಾತ್ ತೃತೀಯಾ ಪಂಚಮ್ಯರ್ಥೇ। ಬ್ರಹ್ಮಾದ್ಯುತ್ತಮಲಕ್ಷ್ಮೀರೂಪಪತ್ನ್ಯಾಃ ಸರ್ವೋತ್ತಮತ್ವೇ ಪತಿಃ ಸರ್ವೋತ್ತಮಃ ಇತಿ ಭಗವದುತ್ತಮತ್ವಜ್ಞಾಪನೇ ಲಿಂಗತಯಾ ತತೋ ವಿತಿಷ್ಠೇ ಇತ್ಯಾದಿನಾ ಉಪದೇಷ್ಟೃತಯಾ ಚ ಕರಣತ್ವಮಪಿ ಜ್ಞಾಪಯಿತುಂ ತೃತೀಯಾ। ಸಃ ಪರಮಾತ್ಮಾ ಪರಃ = ಉತ್ತಮಃ । ಅಹಂ ತು ಮಹಿನಾ = ಮಹಿಮ್ನಾ; ಏತಾವತೀ ಬಭೂವ = ಇಯತ್ತಾ-ಪರಿಮಾಣವತೀ ಬಭೂವ । ಮದಾದಯಃ ಸರ್ವೇಽಪಿ ಪರಿಚ್ಛಿನ್ನಜ್ಞಾನಸುಖಾದಿಗುಣವಂತಃ, ಭಗವಾಂಸ್ತು ನಿರವಧಿಕಸಕಲಗುಣಪರಿಪೂರ್ಣಃ ಇತಿ ವರ್ಗದ್ವಯಾಭಿಪ್ರಾಯಃ ॥ ೮ ॥ ಸ್ಮೃತೇರರ್ಥಸ್ತು ಸ್ಪಷ್ಟ ಏವ।

ಕೃಷ್ಣಸ್ಯ ಸರ್ವೋತ್ತಮತ್ವೇ ಲಕ್ಷ್ಮೀಮಪಿ ಸಾಕ್ಷಿತ್ವೇನ ಪ್ರಮಾಣಯಂತೀತ್ಯಾಹುಃ। ಸಾ ಇಂದಿರಾ ಇದಂ ಜಗತ್ ತೇ - ತವ ಸಕಾಶಾತ್, ಅನು - ಅನಂತರಂ ನೀಚಮಿತ್ಯರ್ಥಃ, ಮನುತೇ - ಜಾನಾತಿ। ಇದಂ ಚ -

ತ್ವಂ ನ್ಯಸ್ತದಂಡಮುನಿಭಿರ್ಗದಿತಾನುಭಾವ ಆತ್ಮಾಽತ್ಮದಶ್ಚ ಜಗತಾಮಿತಿ ಮೇ ವೃತೋಽಸಿ।
ಹಿತ್ವಾ ಭವದ್ಭ್ರುವದುದೀರಿತಕಾಲಗಂಧಧ್ವಸ್ತಾಶಿಷೋಽಬ್ಜಭವನಾಕಪತೀನ್ ಕುತೋಽನ್ಯಾನ್ ।
ನೂನಂ ತಪೋ ಯತ್ರ ನ ಮನ್ಯುನಿರ್ಜಯೋ ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್ ।
ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ।
ಧರ್ಮಃ ಕ್ವಚಿತ್ ತತ್ರ ನ ಭೂತಸೌಹೃದಂ ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಮ್ ।
ವೀರ್ಯಂ ನ ಪುಂಸೋಽಸ್ತ್ಯಜವೇಗನಿಷ್ಕೃತಂ ನ ಹಿ ದ್ವಿತೀಯೋ ಗುಣಸಂಗವರ್ಜಿತಃ।
ಕ್ವಚಿಚ್ಚಿರಾಯುರ್ನ ಹಿ ಶೀಲಮಂಗಲಂ ಕ್ವಚಿತ್ ತದಪ್ಯಸ್ತಿ ನ ವೇದ್ಯಮಾಯುಷಃ।
ಯತ್ರೋಽಭಯಂ ಕುತ್ರ ಚ ಸೋಽಪ್ಯಮಂಗಲಃ ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಮ್ ॥
ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ ಪದಂ ನಿಜೈಕಾಶ್ರಯಿಸದ್ಗುಣಾಶ್ರಯಮ್ ।
ವವ್ರೇ ವರಂ ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ॥ ೨೨ ॥

ಇತಿ ಭಾಗವತವಚನಾದ್ಯುಕ್ತಸೂಕ್ತಾಚ್ಚಾವಗಮ್ಯತೇ । ಜಗತಾಮಾತ್ಮದಃ - ಆತ್ಮಾನಂ ತ್ರಿವಿಧಜಗತ್ಸ್ವಭಾವಂ ಅಂತೇ ದದಾತೀತಿ ತಥೋಕ್ತಃ। ಅತ ಏವ "ತನುಭೃತ್ಸ್ವಭಾವಸಂಭೂತಯೇ" ಇತ್ಯಾಹುಃ। ಆತ್ಮಾ-ಪರಮಾತ್ಮಾ 'ಸ್ವಭಾವಂ ಪರಮಾತ್ಮನಿ' ಇತಿ ವಚನಾತ್ । ತ್ವಂ ಭವತಃ - ತ್ವತ್ತಃ, ಭವತ್ - ಜಾಯಮಾನಮ್ , ಉದೀರಿತಮ್ -ಉದೀರಣಂ ಯಸ್ಯ ಸ ತಥೋಕ್ತಃ। ತಸ್ಯ ಕಾಲಸ್ಯ ಗಂಧೇನ ಪರನಾಮನಿಮೇಷಕಾಖ್ಯಲೇಶೇನ ಧ್ವಸ್ತಾ ಆಶಿಷಃ, ಅಖಿಲೈಕಸಂಪದೋ ಯೇಷಾಂ ತಾನ್ ಅಬ್ಜೋ ಬ್ರಹ್ಮಾ 'ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ' ಇತಿ ವಚನಾತ್, ಭವಃ-ಶಿವಃ, ನಾಕಪತಿಃ-ಇಂದ್ರಃ, ಬಹುವಚನಬಲಾದೇವಮೇವಾರ್ಥೋ ವಕ್ತವ್ಯಃ । ಹಿತ್ವಾ ಮೇ ಮಯಾ ವೃತೋಽಸಿ । ಅನ್ಯಾನ್ ಹಿತ್ವಾ ವೃತೋಽಸೀತಿ । ಕುತಃ ಕಿಂ ವಕ್ತವ್ಯಮಿತಿ ನಾಶಾಭಾವಂ ಸೂಚಯತಿ । ಯತ್ರ ತಪನಂ, ಯತ್ರ ದಹನಂ, ವಸಿಷ್ಠವಿಶ್ವಾಮಿತ್ರಾದೌ । ತಪ ಸಂತಾಪೇ, ತಪ ಆಲೋಚನೇ, ಇತಿ ಧಾತೋರೌಷ್ಣ್ಯರೂಪಧ್ಯಾನರೂಪಂ ತಪೋ ನೂನಮಸ್ತಿ ಮನ್ಯುನಿಗ್ರಹೋ ನ । ಪ್ರಲಯಕಾಲೇ ದಹನತಪನಯೋರ್ಜಗದ್ದಾಹಕತ್ವವತ್ ಋಷೀಣಾಂ ಶಾಪಾದಿದಾನೇನ ಚ ಮನ್ಯುಫಲದರ್ಶನಾದಿತಿ ಭಾವಃ । ಕ್ವಚಿದ್ -ಬೃಹಸ್ಪತಿಶುಕ್ರಾದೌ ಜ್ಞಾನಂ - ವಿದ್ಯಾಽಸ್ತಿ ತಜ್ಜ್ಞಾನಂ ಸಂಗೇನ-ಧನಾಸಕ್ತ್ಯಾ ವರ್ಜಿತಂ ನ । ದೇವದಾನವಪೌರೋಹಿತ್ಯಾಶ್ರಯಣಾತ್ । ಕಶ್ಚಿತ್-ಬ್ರಹ್ಮಾ ಮಹಾನ್-ಸಕಲಜೀವೇಭ್ಯಃ ಶ್ರೇಷ್ಠಃ। ತಸ್ಯ ಕಾಮನಿರ್ಜಯೋ ನ

ವಾಚಂ ದುಹಿತರಂ ತನ್ವೀಂ ಸ್ವಯಂಭೂರ್ಹರತೀಂ ಮನಃ।
ಅಕಾಮಾಂ ಚಕಮೇ ಕ್ಷತ್ತಃ ಸಕಾಮ ಇತಿ ನಃ ಶ್ರುತಮ್ ॥

-ಇತಿ ಭಾಗವತೇ ಅವಿಹಿತಸ್ವದುಹಿತೃಕಾಮದರ್ಶನಾದಿತಿ ಭಾವಃ ವ್ಯಪಗತೋಽನ್ಯ ಆಶ್ರಯೋ ಯಸ್ಯ ಸೋಽಯಂ ವ್ಯಪಾಶ್ರಯಃ।-

ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ॥

ಇತಿ ವಚನಾತ್ ಇಂದ್ರಾದ್ಯಾಶ್ರಯರುದ್ರಾದಿವತ್ ಅಯಂ ಆಶ್ರಯ ಏವ ಸ್ವಯಂ ಪುನರಾಶ್ರಯಾಂತರಸಾಪೇಕ್ಷೋ ನ ಭವತೀತಿ ಯಾವತ್ । ಪರತಃ - ಪರಮಪುರುಷಾತ್ ಏತಾದೃಶೋ ವ್ಯಪಾಶ್ರಯೋ ಯಸ್ಯ ರುದ್ರಸ್ಯ ಸ ಪರತೋ ವ್ಯಪಾಶ್ರಯಃ । ಸ್ವತಂತ್ರನಾರಾಯಣಮಾಶ್ರಿತ್ಯ ತದ್ಬಲೇನೈವ ಸ್ವವೈರಿಣಂ ಭಸ್ಮಾಸುರಂ ನಾಶಯನ್ ಸ್ವಾತ್ಮಾನಂ ರಕ್ಷಂಶ್ಚೇತಿ ಯಾವತ್ । ಸ ರುದ್ರ ಈಶ್ವರಃ ಕಿಮು - ಈಶ್ವರಶಬ್ದವಾಚ್ಯಸರ್ವೇಶ್ವರತ್ವವಾನ್ ಕಿಮು. ನೈವ। ಭಗವನ್ನಾಮಧಾರಕಯೈವಾಯಮೀಶ್ವರೋ ನತು ಭಗವಾನಿವ ಪರಮಮುಖ್ಯಯಾ ವೃತ್ತ್ಯಾ ತಚ್ಛಬ್ದವಾಚ್ಯ ಇತಿ ಭಾವಃ।

ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ।
ದೇವರ್ಷಿಪಿತೃಗಂಧರ್ವಾ ಮೋಚಿತಃ ಸಂಕಟಾಚ್ಛಿವಃ॥

ಉತ್ತಮಳಾದವಳು. ಶತ್ರುಗಳು ಪಡೆಯುವ ಅಭ್ಯುದಯವನ್ನು ತೊಡೆದುಹಾಕುವಲ್ಲಿ ಕಾಡ್ಗಿಚ್ಚಿನಂತಿರುವ ಎಲೈ ಶ್ರೀಕೃಷ್ಣನೇ ! ನೀನು ಅಂತಹ ಮಹಾಲಕ್ಷ್ಮಿಯಿಂದ ಬಳ್ಳಿಯಂತೆ

---

ಯ ಏವಮವ್ಯಾಕೃತಾಶಕ್ತ್ಯುದನ್ವತಃ ಪರಸ್ಯ ಸಾಕ್ಷಾತ್ಪರಮಾತ್ಮನೋ ಹರೇಃ।
ಗಿರೀಶಮೋಕ್ಷಂ ಕಥಯೇಚ್ಛೃಣೋತಿ ವಾ ವಿಮುಚ್ಯತೇ ಸಂಸೃತಿಭಿಸ್ತಥಾಽರಿಭಿಃ॥

ಇತಿ ಭಾಗವತವಚನಾತ್ ಸಿದ್ಧೋಽಯಮರ್ಥಃ। ಕ್ವಚಿತ್ -ಪರಮೋಽಪಿ ಧರ್ಮೋಽಸ್ತಿ, ಧರ್ಮರಾಜತ್ವಾತ್। ಭೂತಸೌಹೃದಂ ನ। ಕ್ವಚಿತ್ - ಮನುಬಲ್ಯಾದೌ ತ್ಯಾಗಃ -ಸ್ವಾಧಿಕಾರಸಮಾಪ್ತೌ ಮನೂನಾಮೀಶ್ವರಭಯಾದೈಶ್ವರ್ಯತ್ಯಾಗಃ। ಬಲೇಶ್ಚ ವಾಮನಭಯಾದನ್ಯಾಯಾರ್ಜಿತತ್ವೈಲೋಕ್ಯತ್ಯಾಗಃ। ಅತ ಏವ ನ ಮುಕ್ತಿಕಾರಣಮ್। ಅಜಃ -ಕಾಲಃ ತಸ್ಯ ವೇಗೇನ ನಿಷ್ಕೃತಂ-ಅಪರಿಹೃತಂ, ವೀರ್ಯಂ-ಸಾಮರ್ಥ್ಯಂ ಪುಂಸಃ-ಪುಂಮಾತ್ರಸ್ಯ ನ। ದ್ವಿತೀಯಃ-ಭಗವತೋಽನ್ಯಃ ಗುಣಸಂಗವರ್ಜಿತಃ-ಗುಣತ್ರಯನಿಮಿತ್ತಕಕಾಮಕ್ರೋಧಲೋಭಮೋಹಾದಿದೋಷಸಂಗವರ್ಜಿತೋ ನಹಿ। ಇಮೌ ದೋಷೌ ಸಕಲಚೇತನಾವಶೇಷಿತತ್ವಾತ್ ಶೀಲಮಂಗಲಂ - ಪರೋಪಕಾರ ದಯಾಲುತ್ವಾದಿಶೀಲಂ, ದಂಪತ್ಯೋರ್ವೈಧವ್ಯವೈಧುರ್ಯಾದ್ಯಮಂಗಲಹೇತುತ್ವಾನ್ಮಂಗಲಂ ಚ ನಹಿ। ಕ್ವಚಿತ್ - ಕಾಮಾದೌ ತಚ್ಛೀಲಂ ಮಂಗಲಮಸ್ತಿ ಪುತ್ರಪೌತ್ರಾದಿವೃದ್ಧಿಹೇತುತ್ವಾತ್। ಆಯುಷಃ ವೇದ್ಯಂ ಜಾತಕಾದಿನಾ ವೇದನಯೋಗ್ಯಂ ಸ್ವರೂಪಂ ನ। ಇತರದೇವೇಷು ಜೀವತ್ಸ್ವೇವಾಸ್ಯ ಶಿವೇನ ಭಸ್ಮೀಕೃತತ್ವಾತ್। ಯತಃ - ಯತ್ರ ಕುತ್ರಚಿಚ್ಚಂದ್ರಾದೌ ಅಭಯಂ-ಧರ್ಮಶ್ರಮಾದಿಹರಣಮಸ್ತಿ, ಆಹ್ಲಾದಹೇತುತ್ವಾತ್। ಸೋಽಪ್ಯಮಂಗಲಃ - ಸ್ವೋಚ್ಚಬೃಹಸ್ಪತಿದಾರಧರ್ಷಣಾನ್ಮಂಗಲಶೂನ್ಯಃ। ಕಶ್ಚನ - ಇಂದ್ರಃ ಸುಮಂಗಲೋ ಭವತಿ। ಶತಕ್ರತುತ್ವೇನ ವಿಧೂತಸಕಲಪಾಪತ್ವಾತ್ ''ಇಂದ್ರೋ ವೃತ್ರಂ ಹತ್ವಾ ಮಹಾನಭವತ್'' ಇತಿ ಹಿ ಶ್ರುತಿಃ। ಸೋಽಪಿ ಮಾಂ ಕಾಂಕ್ಷತೇ, ಐಶ್ವರ್ಯಾಭಿವೃದ್ಧ್ಯರ್ಥಮ್। ಬ್ರಹ್ಮಾದೀನಾಂ ಸರ್ವೇಷಾಂ ಸ್ವಸಂತಾನತ್ವಾತ್, ವಿಷ್ಣುಭಕ್ತತ್ವಾಚ್ಚ ತೇಷು ವಾತ್ಸಲ್ಯವತೀ ತತ್ತದ್ದೋಷೋದ್ಘಾಟನಸಮಯೇ ವಿಶಿಷ್ಯ ನ ತನ್ನಾಮ ಜಗ್ರಾಹ ಇತಿ ಜ್ಞಾತವ್ಯಮ್। ಏವಮುಕ್ತಪ್ರಕಾರೇಣ ರಮಾ ಸರ್ವಾನ್ ದೇವಾನ್ ವಿಮೃಶ್ಯ ಏಕೈಕಗುಣವತ್ತ್ವೇಽಪಿ ಗುಣಾಂತರರಹಿತವಾನ್ ಇತರಸಾಧಾರಣಗುಣವತಶ್ಚ ವಿಚಾರ್ಯ ಅವ್ಯಭಿಚಾರಿಸದ್ಗುಣಂ ಪ್ರಮೇಯತ್ವಸ್ಯೈವ ವಿವಕ್ಷಿತಸ್ಥಲಾದನ್ಯತ್ರಾಪಿ ವೃತ್ತಿರೇಕೋ ವ್ಯಭಿಚಾರಃ। ಕೃತಕತ್ವಂ ನಿತ್ಯತ್ವಂ ವಿನೇವ ಗುಣಾಂತರಂ ವಿಹಾಯ ಗುಣಾಂತರಸ್ಯಾಪ್ಯವಸ್ಥಿತಿರಪರೋ ವ್ಯಭಿಚಾರಃ। ತದುಭಯವ್ಯಭಿಚಾರರಹಿತಾ ಇತರಸಾಧಾರಣ್ಯೇನಾವರ್ತಮಾನಾಃ ಸಕಲಶುಭಗಣ್ಯೈಃ ಸಹೈವ ವರ್ತಮಾನಾಶ್ಚ ಸದ್ಗುಣಾ ಯಸ್ಯ ತಂ, ಅವ್ಯಭಿಚಾರಿಸದ್ಗುಣಮ್। ಏವಮುಕ್ತಪ್ರಕಾರೇಣ ಭಗವದ್ವ್ಯತಿರಿಕ್ತಂ ಲೋಕೇ ಕ್ವಾಪ್ಯವಿದ್ಯಮಾನಂ ವಿಮೃಶ್ಯ ನಿಜೈಕಾಶ್ರಯಿಸದ್ಗುಣಾಶ್ರಯಂ ನಿಜೈಕಾಶ್ರಯಿಣಃ -ಇತರಸಾಧಾರಣ್ಯಂ ವಿನಾ ಕೇವಲಂ ಸ್ವಸ್ಮಿನ್ನೇವ ವಿದ್ಯಮಾನಾಃ ಸದ್ಗುಣಾಃ ಸರ್ವೇಶ್ವರತ್ವಸರ್ವಕರ್ತೃತ್ವಸ್ವತಂತ್ರತ್ವನಿರವಧಿಕಸರ್ವಜ್ಞತ್ವಪೂರ್ವಾ ಗುಣಾಃ ತೇಷಾಮಾಶ್ರಯಮ್। ತೇ ಚ ಏಕೇನಾಪಿ ಶುಭಗುಣೇನ ವ್ಯಭಿಚಾರವಂತೋ ನ ಕಿಂತು ಸರ್ವಗುಣೈರಪೇಕ್ಷಿತಮ್। ಭಗವದ್ಗುಣಾನಾಂ ಚೇತನತ್ವಾತ್ ಭಗವಾನೇವಾಸ್ಮಾಕಮಾಧಾರೋ ಭವೇತ್, ನ ತ್ವನ್ಯ ಇತ್ಯಪೇಕ್ಷಿತಮ್। ಪದಂ - ಪದ್ಯತ ಇತಿ ವ್ಯುತ್ಪತ್ತ್ಯಾ ಉಕ್ತದ್ವಿವಿಧಗುಣವತ್ತಯಾ ವೇದಪ್ರತಿಪಾದ್ಯಂ ಮುಕುಂದಮೇವ ಅವ್ಯಭಿಚಾರಿಸದ್ಗುಣಂ-ಉಕ್ತವ್ಯಭಿಚಾರದ್ವಯರಹಿತಸದ್ಗುಣವಂತಂ ವಿಮೃಶ್ಯ-ನಿಶ್ಚಿತ್ಯ, ನಿರಪೇಕ್ಷಂ - ಸ್ವಸ್ಮಿನ್ನಪ್ಯಪೇಕ್ಷಾರಹಿತಂ ಈಪ್ಸಿತಂ - ಸರ್ವೈರಪ್ಯಪೇಕ್ಷಿತಂ ತಮೇವ ವರಂ ವವ್ರೇ ಇತಿ ಯೋಜನಾ। ತತ್ರ ''ತ್ವಂ ನ್ಯಸ್ತದಂಡಮುನಿಭಿಃ'' ಇತ್ಯೇಕಂ ಪದ್ಯಂ ಪ್ರಣಯಕಲಹಸಮಯೇ ರುಗ್ಮಿಣೀವಾಕ್ಯಮ್। ''ನೂನಂ ತಪಃ'' ಇತ್ಯಾದಿ ಪದಾನಿ ಸ್ವಯಂವರಸ್ಥಲಲಕ್ಷ್ಮೀವಾಕ್ಯಾನಿ। ತತ್ರಾದ್ಯಪದ್ಯೇಶ್ವನಾಶಸ್ತ್ವೈಶ್ವರ್ಯನಾಶಾಖ್ಯದೋಷದ್ವಯೇನ ಸ್ವನೀಚತ್ವಸ್ಯ ರುಗ್ಮಿಣೀರೂಪಶ್ರಿಯೈವ ಕಥನಾತ್। ಉತ್ತರಪದ್ಯೇಷು ತು ಬ್ರಹ್ಮಾದಿಸಕಲದೇವಾನಾಮಪಿ ವಿವಿಚ್ಯ ಕಾಮಕ್ರೋಧಾದಿದೋಷಗ್ರಸ್ತತ್ವೇನ ಭಗವತ್ಸಕಾಶಾತ್, ನೀಚತ್ವಸ್ಯ ಮೂಲರೂಪಶ್ರಿಯೈವ ಕಥನಾಚ್ಚ ''ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತಿ'' ಇತಿ ಪ್ರಮಿತತ್ವಾತ್ ಸಾ ಇದಂ ಜಗತ ತೇ ಅನುಮನುತ ಇತಿ ಗೋಪೀಭಿರುಕ್ತಂ ಯುಕ್ತಮಿತಿ ಸ್ಥಿತಮ್।

-ಉಪನ್ಯಾಸರತ್ನಮಾಲಾ

ಆಶ್ರಯಿಸಲ್ಪಟ್ಟಿರುವವನಲ್ಲವೆ ! ಆ ಮಹಾಲಕ್ಷ್ಮಿಯು ತನ್ನ ಅಧೀನವಾದ ಸಕಲಜಗತ್ತನ್ನು ಅತ್ಯಂತ ಕಡಿಮೆಯೆಂದು ಬಲ್ಲವಳಲ್ಲವೆ !

ವಿ. : ೧. ಮಹಾಲಕ್ಷ್ಮಿಯು [೧]ಬ್ರಹ್ಮರುದ್ರಾದಿ ದೇವತೆಗಳಿಗಿಂತಲೂ, ಮುಕ್ತರಿಗಿಂತಲೂ ಭಿನ್ನಳು, ಅತ್ಯಂತ ಮಿಗಿಲಾದವಳೂ ಆಗಿರುವಳು; ಅಂತಹ ಮಹಾಲಕ್ಷ್ಮಿಗೂ ಆಸರೆಯಾದವನು ನೀನು ಎಂದ ಮೇಲೆ ನೀನು ಸರ್ವೋತ್ತಮ ಎಂಬುದು ಸ್ಪಷ್ಟ ಎಂಬುದು ಇಲ್ಲಿಯ ಭಾವ.

೨. ಇದು ಋಗ್ವೇದದ ಅಂಭೃಣೀಸೂಕ್ತದ ಅರ್ಥಸಂಗ್ರಹರೂಪವಾದ ಶ್ಲೋಕ.

೩. ಇದಕ್ಕೆ ಸ್ವತಃ ಶ್ರೀವಾದಿರಾಜಸ್ವಾಮಿಗಳೇ ತಮ್ಮ ಉಪನ್ಯಾಸರತ್ನಮಾಲಾ ಎಂಬ ಗ್ರಂಥದಲ್ಲಿ ಅತ್ಯಂತ ವಿಸ್ತಾರವಾದ [೨]ವ್ಯಾಖ್ಯಾನವನ್ನು ಮಾಡಿ, ಇದರಲ್ಲಿನ ಅರ್ಥವೈಭವವನ್ನು ಸ್ಫುಟ-ಪಡಿಸಿರುವರು.

**ಶ್ರೀಕೃಷ್ಣನ ಸರ್ವೋತ್ತಮತ್ವವು ವೇದಗಳಿಂದ ಸಿದ್ಧ**

[೩]ನಿಗಮೋಽಸ್ತಿ ತೇ ಮತಿಮತೋಽತಿಮತೋ
ನಿಖಿಲೇಶ್ವರತ್ವಸಮಯೇಽಸಮಯೇ ।
ತಮಪಿ ತ್ಯಜಂತ್ಯಸುಭೃತಃ ಸುಭೃತಃ
[೪]ಸ್ವನಯಃ ಕುತೋಽಕ್ಷರಹಿತೈರಹಿತೈಃ ॥ ೩೦ ॥

ಎಲೈ ಅನುಪಮನಾದ ಶ್ರೀಕೃಷ್ಣ ! ನಿನ್ನ ಸರ್ವೋತ್ತಮತ್ವಸಿದ್ಧಾಂತದ ವಿಷಯದಲ್ಲಿ ಬುದ್ಧಿ-ಶಾಲಿಯಾದ ಜನರಿಗೆ ಅತ್ಯಂತ ಸಮ್ಮತವಾದ ವೇದವಾಕ್ಯಗಳೂ ಇವೆ. ಹೊಟ್ಟೆ ಹೊರೆಯುವ ಜನರು ಆ ಪ್ರಸಿದ್ಧವಾದ ವೇದವನ್ನು ಸಹ ([೫]''ಅತತ್ತ್ವಾವೇದಕ''ವೆಂದುಬಗೆದು) ತೊರೆಯುವರು. ಪ್ರತ್ಯಕ್ಷವನ್ನು ಒಪ್ಪದ ನಮ್ಮ ವಿರೋಧಿಗಳಾದ ಅವರು ತಮ್ಮ ಸಿದ್ಧಾಂತವನ್ನು ಯಾವ ಪ್ರಮಾಣದಿಂದ ಸಾಧಿಸಿಯಾರು?

---

೧. ಬ್ರಹ್ಮಾದಿಸಕಲಜಗದಭ್ಯಧಿಕಲಕ್ಷ್ಮೀಪತಿತ್ವಂ ಶ್ರೌತಂ ಸರ್ವೋತ್ತಮತ್ವೇ ಕೇವಲವ್ಯತಿರಿಕೀ ಹೇತುಃ ಸೂಚಿತೋ ಭವತೀತ್ಯರ್ಥಃ। -ವ್ಯಾ.

೨. ಈ ಭಾಗವು ಸಮಗ್ರವಾಗಿ ಅನುವಾದದೊಂದಿಗೆ ನಮ್ಮ ಐತರೇಯಪ್ರಕಾಶನದಿಂದ **ಅಂಭೃಣೀಸೂಕ್ತ - ಶ್ರೀವಾದಿರಾಜಸ್ವಾಮಿಗಳ ವ್ಯಾಖ್ಯಾನ ಸಮೇತ**, ಎಂಬುದಾಗಿ ಪ್ರಕಾಶಿತವಾಗಿದೆ.

೩.. ನಿಗಮಃ ಸಾಕ್ಷಾತ್ ಸರ್ವೋತ್ತಮತಾಪ್ರತಿಪಾದಕಃ ''ಏಷ ಸರ್ವೇಶ್ವರಃ (ಗೀತಾ.೧೧/೪೩.)'' । ''ನ ತೇ ವಿಷ್ಣೋ ಜಾಯಮಾನಃ'' । ''ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ'' ಇತ್ಯಾದಿಕೋ ವೇದೋಽಸ್ತಿ। -ವ್ಯಾ.

೪. ಸ್ವನಯಃ ಅದ್ವೈತಾದಿರೂಪಃ ಸ್ವಸಿದ್ಧಾಂತಃ ಕುತಃ ಪ್ರಮಾಣಾತ್ ಸುಭೃತಃ ಸುಷ್ಟು ಧೃತಃ ವೇದತ್ವಾವಿಶೇಷಾದಸ್ಮದೀ-ಯವೇದವತ್ ಸ್ವಾಭಿಮತವೇದಸ್ಯಾಪಿ ತ್ಯಾಗಸಂಭವೇನ ಸ್ವಮತೇಽಪಿ ಪ್ರಮಾಣಾಭಾವಾದಿತಿ ಭಾವಃ। -ವ್ಯಾ.

೫. ಯೇ ಅಸುಭೃತಃ ಪುರುಷಾಃ ತಂ ಪ್ರಸಿದ್ಧಂ ವೇದಮಪಿ ಅತತ್ತ್ವಾವೇದಕತ್ವೋಕ್ತ್ಯಾ ತ್ಯಜಂತಿ ಉಪೇಕ್ಷಂತೇ। - ವ್ಯಾ.

ವಿ. : ೧. ಅತೀಂದ್ರಿಯವಿಷಯಗಳ ಸಾಧನೆಗೆ ಪ್ರತ್ಯಕ್ಷವನ್ನು ಪ್ರಮಾಣವೆಂದು ಮಾಯಾವಾದಿಗಳು ಒಪ್ಪುವುದಿಲ್ಲ; ಅದರಂತೆ ಯುಕ್ತಿಯನ್ನುಸಹ. ಎಂದರೆ ಅಂತಹ ಅತೀಂದ್ರಿಯವಸ್ತುವಿನ ಬಗ್ಗೆ ಆಧಾರವೆಂದರೆ ಅಪೌರುಷೇಯವಾದ ವೇದವಾಕ್ಯಗಳೇ ಸರಿ ಎಂದಾಗುವುದು. ಆದರೆ ಅಂತಹ ವೇದಗಳನ್ನು ಸಹ ಅತತ್ತ್ವಾವೇದಕ ಎಂದು ಕರೆಯುವ ಅವರು ತಮ್ಮ ಮತಕ್ಕೆ ಆಧಾರವನ್ನಾಗಿ ಯಾವ ಪ್ರಮಾಣವನ್ನು ತಾನೆ ಕೊಡಲು ಸಾಧ್ಯ ಎಂದು ಭಾವ.

೨. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಶ್ರೀಮದಾಚಾರ್ಯರ ತತ್ತ್ವೋದ್ಯೋತ ಹಾಗೂ ಅದರ ಶ್ರೀಜಯತೀರ್ಥರ ಟೀಕೆಗಳಿಂದ ತಿಳಿಯಬಹುದು.

### ಜಗತ್ತು ಮಿಥ್ಯೆ ಎಂಬುದು ಸರಿಯಲ್ಲ

**[೧]ಅನೃತಂ ಜಗತ್ ಕಲಯತೇಽಲಯ ತೇ**
**ಯದಿ ಕೋಽಪಿ ಮಾನಸಹಿತಂ ಸ ಹಿತಮ್ ।**
**ರುಚಿರಂ ಕಥಂ ನಿಜನಯೇ ಜನಯೇ-**
**ನ್ನ ಹಿ ರಜ್ಜುಹೇಃ ಕ್ಷತಿರಭೂತಿರಭೂತ್ ॥ ೩೧ ॥**

ಎಲೈ ನಾಶರಹಿತನಾದ ಶ್ರೀಹರಿ ! ಪ್ರಮಾಣದಿಂದ ಕೂಡಿದ ಈ ನಿನ್ನ ಜಗತ್ತನ್ನು [೨]ಮಿಥ್ಯಾಭೂತವಾದುದು ಎಂದು ತಿಳಿಯುವ ವಾದಿಯು ತನ್ನ ಸಿದ್ಧಾಂತದ ವಿಷಯದಲ್ಲಿ ತನಗೆ ಇಷ್ಟವಾದ ಐಕ್ಯ ಮೊದಲಾದವುಗಳನ್ನು ಹೇಗೆ ಸಾಧಿಸಿಯಾನು? ರಜ್ಜುವಿನಲ್ಲಿ ಆರೋಪಿತವಾದ (ಸುಳ್ಳು) ಸರ್ಪದಿಂದ ಮರಣಕ್ಕೆ ಕಾರಣವಾಗುವಂತಹ ಅಮಂಗಲವಾದ ಗಾಯವುಂಟಾಗಲು ಸಾಧ್ಯವೆ?

ವಿ. : ೧. ಸಕಲವನ್ನೂ ಮಿಥ್ಯೆ ಎನ್ನುವ ಮಾಯಾವಾದದಲ್ಲಿ ಸಕಲದಲ್ಲಿ ಸೇರುವ ಪ್ರಮಾಣವೂ ಸಹ ಮಿಥ್ಯೆ ಎನ್ನಿಸುವುದರಿಂದ ಮಾಯಾವಾದಿಯು ತನ್ನ ಮತದ ಸಾಧನೆಗೋಸ್ಕರ ಯಾವ ಆಧಾರವನ್ನೂ ಕೊಡಲು ಸಾಧ್ಯವಾಗುವುದಿಲ್ಲ ಎಂದು ಭಾವ; ಮಿಥ್ಯಾಪ್ರಮಾಣದಿಂದ ಪ್ರಮೇಯದ ಸಾಧನೆ ಎಂತು ಸಾಧ್ಯ ಎಂದರ್ಥ.

---

೧. ನನು ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ಮಿಥ್ಯಾತ್ವಾದ್ಭವದುಕ್ತಭೇದಾದಿಪ್ರಮೇಯಂ ತತ್ಪ್ರತಿಪಾದಕಂ ವೇದಾದಿಪ್ರಮಾಣಂ ವಾ ಕಿಮಪಿ ನಾಸ್ತೀತ್ಯತ ಉಕ್ತಮೇವ ಪ್ರಮೇಯಮುಪಪಾದಯಂತಿ – ಅನೃತಮಿತಿ। –ವ್ಯಾ.

೨. ಯದಿ ಮಿಥ್ಯಾಭೂತಮಪ್ಯರ್ಥಂ ಸಾಧಯೇತ್ ತರ್ಹಿ ರಜ್ಜುಸರ್ಪಾದಪಿ ದಂಶನಂ ಸ್ಯಾದಿತಿ ಭಾವಃ। ಅತೋ ಜ್ಞಾಯತೇ ನ ಮಿಥ್ಯಾಭೂತಮರ್ಥಸಾಧಕಮಿತಿ । ನ ಚ ಪ್ರಾತಿಭಾಸಿಕತ್ವಮೇವ ತತ್ರಾಸಾಧಕತ್ವೇ ತಂತ್ರಮಿತಿ ವಾಚ್ಯಮ್ । ಪ್ರಾತಿಭಾಸಿಕೇ ಅಸತಿ ಚ ಅಸಾಧಕತ್ವಪ್ರಯೋಜಕತಯಾ ಪ್ರಸಿದ್ಧಸ್ಯ ಸ್ವರೂಪಾಭಾವಸ್ಯೈವಾಸಾಧಕತ್ವ ಪ್ರಯೋಜಕತಾಯಾ ವಕ್ತವ್ಯತ್ವಾತ್ ಉಭಯೋಃ ಪ್ರಯೋಜಕತ್ವೇ ಗೌರವಾತ್ । ಇದಮಪಿ ಪ್ರಸಿದ್ಧಿದ್ಯೋತಕೇನ ಹಿ ಶಬ್ದೇನ ಸೂಚಿತಮ್ । –ವ್ಯಾ.

೨. ಇದಕ್ಕೆ ನಿದರ್ಶನವನ್ನಾಗಿ ರಜ್ಜುಸರ್ಪವನ್ನು ನೀಡಿರುವರು. ಹಗ್ಗವನ್ನು ಹಾವು ಎಂದು ತಿಳಿದ ಮಾತ್ರಕ್ಕೆ ಹಗ್ಗವು ಹಾವಿನಂತೆ ಕಚ್ಚಲು ಸಾಧ್ಯವೆ? ಅದರಂತೆ ಮಿಥ್ಯೆಯಾದ ಪ್ರಮಾಣ ಎಂದೂ ಸಹ ಪ್ರಮೇಯವನ್ನು ಸಾಧಿಸಲಾರದು ಎಂದರ್ಥ.

೩. ಕೆಲವರು ಹಗ್ಗವನ್ನು ಹಾವೆಂದೇ ಭ್ರಮಿಸಿ ಸಾಯುವುದೂ ಉಂಟು. ಅಂತಹ ಪ್ರಸಂಗದಲ್ಲೂ ಸಹ ಸಾವಿಗೆ ಕಾರಣವಾದದ್ದು ಸತ್ಯವಾದ ಹಾವಿನ ಜ್ಞಾನವೇ ಹೊರತು [೧] ಹಗ್ಗವಲ್ಲ. ಆದ್ದರಿಂದ ಅಸತ್ತಿಗೆ ಸಾಧಕತ್ವವು ಸರ್ವಥಾ ಅಸಾಧ್ಯ ಎಂದರ್ಥ.

೪. ೩.೧-೩.೫ರ ವರೆಗಿನ ಶ್ಲೋಕಗಳು ಯುಕ್ತಿಮಲ್ಲಿಕಾದಲ್ಲಿ ಬಂದಿರುವ ಮಾಯಾವಾದ ನಿರಸನ ರೂಪವಾದ ಭಾಗಕ್ಕೂ ಉಪಯುಕ್ತವೆನ್ನಿಸುವ ಅಪೂರ್ವ ಶ್ಲೋಕಗಳು.

## ರಜ್ಜುಸರ್ಪವು ಅರ್ಥಕ್ರಿಯಾಕಾರಿಯಲ್ಲ

**ಭಯಹೇತುತಾऽಸ್ಯ ನ ಚ [೨] ಕಂಪಕತೋ-**
**ಭಯಹೇತುತಾऽಸ್ಯ ಚಿತ ಏವ ಪರಮ್ ।**
**ನ ಹಿ ಚಿದ್ಗತೇऽರ್ಥಮಹಿಮಾ ನಿಶಿ ತಾ-**
**ನಹಿಚಿದ್ಗತೇऽರ್ಥ ಇಹ ರಾತಿ ಹಿ ತಾನ್ [೩] ॥ ೩.೨ ॥**

ಈ ರಜ್ಜುಸರ್ಪಕ್ಕೆ [೪] ಭಯ ಹುಟ್ಟಿಸುವ, ನಡುಕ ಹುಟ್ಟಿಸುವ ಶಕ್ತಿಯೂ ಇಲ್ಲ; ಆದರೆ ಆ ರಜ್ಜುಸರ್ಪದ ಜ್ಞಾನಕ್ಕೇ [೫] ಎರಡನ್ನು ಹುಟ್ಟಿಸುವ ಶಕ್ತಿ ಇರುವುದು. ರಾತ್ರಿಯಲ್ಲಿ ನಿದ್ರಿಸಿದ ಮನುಷ್ಯನ ಮೇಲೆ ಆ ನಿಜವಾದ ಸರ್ಪದ ಭಯಕಂಪನಾದಿ ಹೇತುತ್ವವು ಇರುವುದಿಲ್ಲ ಅಲ್ಲವೆ? ರಜ್ಜುವಿನಲ್ಲಿ ಕಾಣುವ ಸರ್ಪವು ಇಲ್ಲದಿದ್ದರೂ ಸರ್ಪದ ಜ್ಞಾನವೇ ಭಯ, ನಡುಕ ಮೊದಲಾದವುಗಳನ್ನು ಉಂಟುಮಾಡುವುದು.

ವಿ. : ೧. ಭಯನಡುಕಾದಿಗಳನ್ನು ಹುಟ್ಟಿಸುವ ಸಾಮರ್ಥ್ಯ ಸರ್ಪದ ಜ್ಞಾನದ್ದೇ ಹೊರತು, ಕೇವಲ ಸರ್ಪದ್ದಲ್ಲ. ಕಚ್ಚುವ ಕಾರ್ಯ ಮಾತ್ರ ಸರ್ಪದಿಂದಲೇ ನಡೆಯುವಂತಹುದು. ಆದ್ದರಿಂದಲೇ ನಿಜವಾದ ಸರ್ಪವು ನಿದ್ರಿಸುವವನ ಮೇಲೆ ಹರಿದಾಡಿದಾಗಲೂ ಅವನಿಗೆ

---

೧. ಸರ್ಪಭ್ರಮಾದಾವಪಿ ಜ್ಞಾನಮಸ್ತ್ಯೇವ ತಾದೃಶಮ್ । – ಅನುವ್ಯಾಖ್ಯಾನ

೨. ಭಯಕಂಪಾದಿಹೇತುತ್ವಂ ರಜ್ಜುಸರ್ಪಸ್ಯಾಸ್ತೀತ್ಯತ ಆಹುಃ । ಭಯೇತಿ । –ವ್ಯಾ.

೩. ಅರ್ಥಸ್ಯ ಪೂರ್ವಪಾದೇ ಅನ್ವಯತೋ ವ್ಯಭಿಚಾರಃ । ಉತ್ತರಪಾದೇ ವ್ಯತಿರೇಕತೋ ವ್ಯಭಿಚಾರಶ್ಚಾಹೇತುತಾ-ಸಮರ್ಥನಾಯ ನಿರೂಪಿತೋ ಭವತಿ । ಅತ ಏವ ತತ್ರಾರ್ಥಮಹಿಮಾ ಅತ್ರ ತು ಗತೇऽರ್ಥ ಇತ್ಯುಕ್ತಮ್ ।–ವ್ಯಾ.

೪. ಅನೇನ ಸತ್ಯಪ್ಯರ್ಥೇ ಜ್ಞಾನಾಭಾವಾನ್ನ ಭಯಕಂಪಾದಿತಿ ವ್ಯತಿರೇಕೋ ದರ್ಶಿತಃ । ಇಹ ರಜ್ಜುಸರ್ಪಸ್ಥಲೇ ಅರ್ಥೇ ಗತೇऽಪಿ ಸರ್ಪರೂಪಾರ್ಥಾಭಾವೇऽಪೀತ್ಯರ್ಥಃ । –ವ್ಯಾ.

೫. ನ ನಾಸ್ತಿ ತರ್ಹಿ ಕುತೋ ಭಯಾದ್ಯುತ್ಪತ್ತಿರಿತ್ಯತ ಆಹುಃ । ಅಸ್ಯ ರಜ್ಜುಸರ್ಪಸ್ಯ ಚಿತ ಏವ ಜ್ಞಾನಸ್ಯೈವ ಭಯಹೇತುತಾ ಭಯಕಂಪಹೇತುತ್ವಮ್ । ಕುತ ಇತ್ಯತಃ ತಯೋರ್ಜ್ಞಾನಕಾರ್ಯತ್ವೇ ಅನ್ವಯವ್ಯತಿರೇಕೌ ದರ್ಶಯಂತಿ ।–ವ್ಯಾ.

ಭಯಾದಿಗಳು ಹುಟ್ಟುವುದಿಲ್ಲ. ಅದರಂತೆ ಹಗ್ಗವನ್ನು ಹಾವು ಎಂಬುದಾಗಿ ತಪ್ಪು ತಿಳಿದಾಗ ಭಯಾದಿಗಳಿಗೆ ಕಾರಣವಾಗುವುದು ಅದು ಹಾವು ಎಂಬ ಜ್ಞಾನವೇ ಹೊರತು ಹಗ್ಗವಲ್ಲ. ಎಂದರೆ ಭಯನಡುಕಾದಿ ಕಾರ್ಯಗಳಿಗೆ ಕಾರಣವಾಗುವುದು ಸತ್ಯವಾದ ಸರ್ಪಜ್ಞಾನವೇ ಹೊರತು, ಕೇವಲ ಹಗ್ಗವಲ್ಲ. ಆದ್ದರಿಂದ ಅಸತ್ತಿಗೆ ಸಾಧಕತ್ವ ಇಲ್ಲ ಎಂಬುದು ಸ್ಪಷ್ಟ ಎಂದು ಭಾವ.

೨. ಅದರಂತೆ ಸರ್ಪದ ತಿಳುವಳಿಕೆ ಇಲ್ಲದ ಚಿಕ್ಕ ಮಕ್ಕಳನ್ನು ಅದನ್ನು ಭಯನಡುಕಗಳಿಲ್ಲದೆ ಹಿಡಿಯಲು ಹೊರಡುವ ನಿದರ್ಶನ ಇದಕ್ಕೆ ಮತ್ತೊಂದು ಬಗೆಯ ಪುರಾವೆಯಾಗಿದೆ.

### ಜೀವೇಶ್ವರಭೇದದ ಸಮರ್ಥನೆ

ಯದಿ [೧]ಭೇದಶೂನ್ಯಮಖಿಲಂ ಮಖಿಲಂ-
ಘ್ಯಸುರಾರ್ದಿತಾ ಸುರಸಭಾಽಽರ ಸಭಾ।
ತವ ಧಾಮ ಕಿಂ ಮುರರಿಪೋಽರರಿಪೋ
ಸ್ತುತಿರಪ್ಯದಾರಚರಿತಾಚರಿತಾ ॥ ೩೩ ॥

ಎಲೈ ದೋಷದೂರನಾದ ಶ್ರೀಕೃಷ್ಣ ! ಎಲೈ ಉದಾರಚರಿತನಾದ ಮುರಾರಿ ! ಈ ಸಮಸ್ತ ಜಗತ್ತು ಭೇದರಹಿತವಾಗಿದ್ದಲ್ಲಿ, ಯಜ್ಞನಾಶಕರಾದ ಅಸುರರಿಂದ ಪೀಡಿತವಾದ ದೇವಸಭೆಯು ಕಾಂತಿಯುಕ್ತವಾದ ನಿನ್ನ ಮಂದಿರಕ್ಕೆ ಏತಕ್ಕೋಸ್ಕರ ಬರುತ್ತಿತ್ತು?[೨] ಸ್ತೋತ್ರವನ್ನಾದರೂ ಸಹ ಏತಕ್ಕೋಸ್ಕರ ಮಾಡುತ್ತಿತ್ತು?

ವಿ. : ದುಷ್ಟರ ವಿನಾಶಕ್ಕಾಗಿ ಅವತರಿಸಲು ಸಮಸ್ತ ದೇವತಾವೃಂದವು ಮಹಾವಿಷ್ಣುವಿನ ಬಳಿಗೆ ತೆರಳಿ, ಸ್ತೋತ್ರಮಾಡಿದ ವಿವರವು ಅವನ ಸರ್ವೋತ್ತಮತ್ವಕ್ಕೆ ಸಾಧಕ ಎಂಬ ಇಲ್ಲಿಯ ವಿವರ ಒಂದನೇ ಸರ್ಗದ ೧೫-೨೩ರ ವರೆಗಿನ ಶ್ಲೋಕಗಳು ಹಾಗೂ ೧೯ನೆಯ ಸರ್ಗದ ೧೩ನೆಯ ಶ್ಲೋಕ[೩]ದಲ್ಲಿ ವಿಶೇಷವಾಗಿ ವಿವರಿಸಲ್ಪಟ್ಟಿದೆ; ಮಖ - ಯಾಜ್ಞಿಕ.

---

೧. ಇದಾನೀಂ ದಶಮಸ್ಕಂಧೋಕ್ತಪ್ರಮೇಯೇನೈವಾಭೇದಂ ದೂಷಯಂತಿ - ಯದೀತಿ। -ವ್ಯಾ.

೨. ಅನೇನ ಭೇದೇ ಗಮ್ಯಗಂತೃಭಾವಸ್ತೋತೃಸ್ತುತ್ಯಭಾವಸಮರ್ಥಾಸಮರ್ಥಭಾವರೂಪಾ ವಿರುದ್ಧಧರ್ಮಾಃ ಸ್ವಾರ್ತಾಃ ಕಥಿತಾ ಭವಂತಿ । "ಜಗಾಮ ಸತ್ರಿನಯನಃ ತೀರಂ ಕ್ಷೀರಪಯೋನಿಧೇಃ"(ಭಾಗ.೧೦/೧/೧೯) ಇತ್ಯಾದೇಃ। -ವ್ಯಾ.

೩. ಕಸ್ಮಾನ್ಮುಹ್ಯಥ ಮಾನವಾ ಮುರಭಿದಃ ಸರ್ವೋತ್ತಮತ್ವೇ ಪುರಾ
ಯಃ ಪದ್ಮಾಸನಧೂರ್ಜಟಿಪ್ರಭೃತಿಭಿಃ ಕಾರ್ಯಾಕ್ಷಮೈಃ ಪ್ರಾರ್ಥಿತಃ।
ಗರ್ಭೇ ಗೀರ್ಭಿರಭಿಷ್ಟುತಃ ಫಣಿಫಣೇ ನೃತ್ಯಂಶ್ಚ ಯಃ ಸೇವಿತಃ
ಸದ್ಭಿರ್ಣುಂ ರಣಯಂಶ್ಚ ನಮ್ರತನುಭಿರ್ಯೋ ವಿಸ್ಮಿತೈರೀಕ್ಷಿತಃ॥ -ರು.ವಿ.(೧೯/೧೩)

## ಮಾಯಾವಾದಿಗಳದು ರಾಸಭ ಸಿದ್ಧಾಂತ

[೧]ಅಮಿತೋರುವಿಕ್ರಮ ತವಾಮತವಾ-
ಗಭಿದಾಂ ವದನ್ [೨]ಖರಮತೇ ರಮತೇ ।
ಕ್ವ ವಿರುದ್ಧಧರ್ಮಜಲಧೀ ಜಲಧೀ-
ಕಲಿತಾಭಿದಾ ಕ್ವ ನಿಜಯೋನಿಜಯೋಃ [೩]॥ ೩೪ ॥

ಅಮಿತ ಮಹಾಪರಾಕ್ರಮಿಯಾದ ಶ್ರೀಕೃಷ್ಣ! ನಿನ್ನೊಂದಿಗೆ [೪]ಐಕ್ಯ ಹೇಳುವವನು ನಿನಗೆ [೫]ಸಮ್ಮತವಲ್ಲದ (ವೇದಾದಿಗಳಿಗೆ ಅಭಿಮತವಲ್ಲದ) ರಾಸಭಸಿದ್ಧಾಂತದಲ್ಲಿ ವಿಹರಿಸು-ವಂತಹವನು. ಪರಸ್ಪರ ವಿರುದ್ಧಧರ್ಮಗಳಿಗೆ ಸಮುದ್ರದಂತಿರುವ, ತಾನಾಗಿಯೇ ಪ್ರಕಟ-ನಾಗುವ ಪರಮಾತ್ಮನಿಗೂ ಹಾಗೂ ಯೋನಿಯಲ್ಲಿ ಹುಟ್ಟಬರುವ [೬]ಜೀವಾತ್ಮರಿಗೂ ಜಡಮತಿಗಳು ಹೇಳುವ ಐಕ್ಯವು ಹೇಗೆ ತಾನೆ ಸಿದ್ಧಿಸೀತು?

ವಿ. : ೧. ಪರಸ್ಪರ ವಿರುದ್ಧ ಧರ್ಮಗಳಿಗೆ ನೆಲೆ ಎನ್ನಿಸಿರುವ ಜೀವಾತ್ಮಪರಮಾತ್ಮರಿಗೆ ಐಕ್ಯ ಹೇಳುವ ಸಿದ್ಧಾಂತವು ರಾಸಭಸಿದ್ಧಾಂತ; ಪರಮಾತ್ಮ ಸದಾ ಜ್ಞಾನಾನಂದಮಯವಾದ ಅಪ್ರಾಕೃತ ದೇಹದವನು, ಜೀವನು ಭೂಮಿಯಲ್ಲಿ ಜನಿಸಿರುವ ಪ್ರಾಕೃತ ದೇಹದವನು; ಇಂತಹ ಅವರಿಬ್ಬರಿಗೆ ಐಕ್ಯಹೇಳುವವರು ಖರಸಿದ್ಧಾಂತದವರು ಎಂದು ಭಾವ[೭]; **ಅಭಿದಾ** – ಐಕ್ಯ; **ಖರ** – ಕತ್ತೆ.

---

೧. ಉಪಪಾದಿತಾಭೇದನಿರಾಸಮುಪಸಂಹರಂತಿ – ಅಮಿತೇತಿ । –ವ್ಯಾ.

೨. ವಾದೀ ಖರಮತೇ ರಾಸಭಸಿದ್ಧಾಂತೇ ರಮತೇ ಐಕ್ಯವಾದೀ ಖರ ಇತ್ಯರ್ಥಃ । –ವ್ಯಾ.

೩.. ಡಲಯೋರಭೇದಾನ್ನ ಯಮಕಭಂಗಃ । –ವ್ಯಾ.

೪. ಅಭಿದಾ ಅಭೇದಃ ಕ್ವ ಅಭೇದಸ್ತ್ವತ್ಯಂತಾಸಂಭವೀತಿ ಭಾವಃ । –ವ್ಯಾ.

೫. ವಿರುದ್ಧಧರ್ಮೈಃ ಪೂರ್ವೋಕ್ತೈಃ ಜಲಧೀ ಇವ ಸಮುದ್ರಾವಿವ ವಿದ್ಯಮಾನೌ ಜೀವಪರಮೌ ಕ್ವ ಪೂರ್ಣತ್ವಾಪೂರ್ಣತ್ವೋಪಜೀವ್ಯತ್ವೋಪಜೀವಕತ್ವಬದ್ಧತ್ವಮುಕ್ತತ್ವಾದ್ಯನಂತವಿರುದ್ಧಧರ್ಮಸಂಗ್ರಹಾಯ ಜಲಧಿಪದಮ್ ।

೬. ಪ್ರಲಯಕಾಲೇಽಪ್ಯಾಯಿನಃ ಶ್ರೀನಾರಾಯಣಸ್ಯ ಸೃಷ್ಟಿಕಾಲಮಾತ್ರವರ್ತಿನೋ ಜೀವಸ್ಯ ಚ ನಿಜಯೋನಿಜತ್ವಾಖ್ಯ ವಿರುದ್ಧಧರ್ಮಾವಪಿ ಬೋಧಯಿತುಮಿದಂ ವಿಶೇಷಣಮ್ । ಜೀವಪರಮಯೋಃ ಜಲಾನಾಂ ಜಡಾನಾಂ ಮೂರ್ಖಾಣಾಮಿತ್ಯರ್ಥಃ । ಧಿಯಾ ಬುದ್ಧ್ಯಾ ಕಲಿತಾ ನಿರೂಪಿತಾ ಜಡೈಃ ಸ್ವಕಪೋಲಕಲ್ಪಿತೇತ್ಯರ್ಥಃ । –ವ್ಯಾ.

೭. ಅಲ್ಪಶಕ್ತಿರಸಾರ್ವಜ್ಞಂ ಪಾರತಂತ್ರ್ಯಮಪೂರ್ಣತಾ ।
ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಯಃ ।
ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾತ್ ಕಥಂಚನ ।
ವದಂತಿ ಶಾಶ್ವತಾವೇತಾವತ ಏವ ಮಹಾಜನಾಃ ॥ ಇತಿ ಮಹಾವಿಷ್ಣುಪುರಾಣೇ । –ಗೀತಾತಾತ್ಪರ್ಯ (೨/೨೧)
ನೈವೈಕ ಏವ ಪುರುಷಃ ಪುರುಷೋತ್ತಮೋಽಸಾವೇಕಃ ಕುತಃ ಸ ಪುರುಷೋ ಯತ ಏವ ಜಾತ್ಯಾ ।
ಅರ್ಥಾಚ್ಛ್ರುತೇಶ್ಚ ಗುಣತೋ ನಿಜರೂಪತಶ್ಚ ನಿತ್ಯಾನ್ಯ ಏವ ಕಥಮಸ್ಮಿ ಸ ಇತ್ಯಪಿ ಸ್ಯಾತ್ ॥–ಮ.ಭಾ.ತಾ.ನಿ.(೧/೨೮)
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ ।
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ ॥ – ಮೋಕ್ಷಧರ್ಮಪರ್ವ, ಮಹಾಭಾರತ (೨೧೮/೩೫)
ಅಲ್ಪಸಂಪೂರ್ಣಶಕ್ತಿತ್ವಾತ್ ಅಲ್ಪಪೂರ್ಣಗುಣತ್ವತಃ ।

೨. 'ದ್ವಾ ಕ್ವಾ ಮಹದಂತರಂ ಗಮಯತಃ' ಎಂಬ ನ್ಯಾಯದಿಂದ ಜೀವಾತ್ಮ-ಪರಮಾತ್ಮರಲ್ಲಿ ಅತ್ಯಂತ ಹೆಚ್ಚಿನ ಭೇದವು ಸ್ಫುಟಪಡುವುದು ಎಂದು ತಿಳಿಯಬೇಕು.

೩. ವೇದವನ್ನು ಅಧ್ಯಯನಮಾಡಿಯೂ ಅದರ ಅರ್ಥವನ್ನು ತಿಳಿಯದವನನ್ನು 'ಬ್ರಾಹ್ಮಣ ಗಾರ್ದಭ(ರಾಸಭ, ಖರ)' ಎಂಬುದಾಗಿ ಶಾಸ್ತ್ರಗಳು ಕರೆದಿವೆ. ಮಾಯಾವಾದಿಗಳು ವೇದಗಳ ಬಹುಭಾಗವನ್ನು 'ಅತತ್ತ್ವಾವೇದಕ' ಅರ್ಥದೊಂದಿಗೆ ಅವುಗಳ ತಾತ್ಪರ್ಯವನ್ನೇ ಅಲ್ಲಗಳೆಯುವ ಮೂಲಕ ಆ ಗುಂಪಿಗೇ ಸೇರುವವರಾದ್ದರಿಂದ ಅವರದು 'ಖರ(ರಾಸಭ)ಸಿದ್ಧಾಂತ' ಎಂಬುದಾಗಿ ಇಲ್ಲಿ ಕರೆದಿರುವರೆಂದು ತಿಳಿಯಬಹುದು.

## ಮಾಯಾವಾದವು ಶಾಸ್ತ್ರಸಮ್ಮತವಲ್ಲ

ಸ್ಮೃತಿಭಾರತಾವ್ರಣಪುರಾಣಪುರಾ-
ತನವೇದಶಾಸ್ತ್ರವಿಭವಂ [೧]ವಿಭವಮ್ ।
ಪರಮಂ ಚ ಮಾನಸಮಯೈಃ ಸಮಯೈ-
ರನೃತಂ ವದನ್ನ ಸುಸಭಾಸು ಸಭಾಃ ॥ ೩೫ ॥

ಸ್ಮೃತಿಗಳು, ಮಹಾಭಾರತ, ನಿರ್ದೋಷವಾದ [೨]ಸಾತ್ವಿಕಪುರಾಣಗಳು, ಸನಾತನವಾದ ಅಪೌರುಷೇಯವಾದ ವೇದಗಳು ಹಾಗೂ ಬ್ರಹ್ಮಮೀಮಾಂಸಾ ಶಾಸ್ತ್ರಗಳ ಸಂಪತ್ತನ್ನು, ಸಂಸಾರರಹಿತನೂ ಸರ್ವೋತ್ತಮನಾದ ಶ್ರೀಹರಿಯನ್ನೂ ತಮ್ಮ ಮನೋವಿಕಾರ-ಮಾತ್ರದಿಂದ ಹುಟ್ಟಿದ ಸಿದ್ಧಾಂತದಿಂದ ಮಿಥ್ಯಾ ಎಂಬುದಾಗಿ ಹೇಳುವ [೩]ಮಾಯಾವಾದಿಯು ಉತ್ತಮಸಭೆಗಳಲ್ಲಿ ಶೋಭಿಸಲಾರನು.

ವಿ. : ಅವ್ರಣ ಎಂದರೆ ನಿರ್ದೋಷ ಎಂದರ್ಥ; [೪]ವೇದಗಳು ಅಪೌರುಷೇಯವಾದ್ದರಿಂದ ಅವು ನಿರ್ದೋಷ ; ಅದರಂತೆ, ಇತಿಹಾಸ ಪುರಾಣಾದಿಗಳು, ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಎಂದು ವೇದಪರಿಗೃಹೀತವಾಗಿರುವುದರಿಂದ ಅವು ಸಹ ನಿರ್ದೋಷವೇ. ಬ್ರಹ್ಮಸೂತ್ರಗಳು ಸರ್ವಶಾಸ್ತ್ರನಿರ್ಣಾಯಕವಾದ್ದರಿಂದ ಅವು ನಿರ್ದೋಷ. ಅವೈದಿಕ ಸಿದ್ಧಾಂತಗಳು

---

ಅಲ್ಪಸಂಪೂರ್ಣದರ್ಶಿತ್ವಾನ್ನ ಸಾಮ್ಯಂ ಜೀವಕೃಷ್ಣಯೋಃ ॥ – ಇತಿ ಬ್ರಹ್ಮಾಂಡೇ (ಭಾ.ತಾ.೧೦/೭೫/೪೨)

೧. ವಿಗತಃ ಭವಃ ಸಂಸಾರೋ ಯಸ್ಮಾತ್ ಸ ವಿಭವಃ ಅವಿದ್ಯಾಬಂಧರಹಿತ ಇತ್ಯರ್ಥಃ । -ವ್ಯಾ.

೨. ಅವ್ರಣಾನಿ ನಿರ್ದೋಷಾಣಿ ಯಾನಿ ಪುರಾಣಾನಿ ಚ ಸಾತ್ವಿಕಪುರಾಣಾನೀತ್ಯರ್ಥಃ । -ವ್ಯಾ.
ಅಸತ್ಪದೇಽಸನ್ ಸದಸದ್ವಿವಿಕ್ತಂ ಮಾಯಾಖ್ಯಯಾ ಸಂವೃತಿಮಭ್ಯಧತ್ತ ।
ಬ್ರಹ್ಮಾಪ್ಯಖಂಡ ಬತ ಶೂನ್ಯಸಿದ್ಧ್ಯೈ ಪ್ರಚ್ಛನ್ನಬೌದ್ಧೋಽಯಮತಃ ಪ್ರಸಿದ್ಧಃ ॥ – ಮಧ್ವವಿಜಯ (೧/೫೧)

೩. ಸಭಾಃ ಭಾಸಾಸಹಿತೋ ನ ನ ಭವತಿ । ಏತಾದೃಶವಾದಿನಂ ಬೌದ್ಧ ಇತಿ ಶ್ರೋತ್ರಿಯಾಃ ತಿರಸ್ಕುರ್ವಂತೀತಿ ಭಾವಃ । -ವ್ಯಾ.

೪. ನ ಚೈತೇಷಾಂ ವಚನಾನಾಮೇವಾಪ್ರಾಮಾಣ್ಯಮ್, ಅಪೌರುಷೇಯತ್ವಾದ್ವೇದಸ್ಯ । "ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ" ಇತಿ ತದ್ಗೃಹೀತ್ವಾಚ್ಚ ॥ -ವಿಷ್ಣುತತ್ತ್ವವಿನಿರ್ಣಯ

ಈ ಯಾವುದೇ ವಿಧವಾದ ನಿರ್ದೋಷತ್ವವನ್ನು ಹೊಂದದೇ ಇರುವುದರಿಂದ ಅವುಗಳ ಸಿದ್ಧಾಂತ ಅಗ್ರಾಹ್ಯ ಎಂದು ಭಾವ.

### ಶ್ರೀಕೃಷ್ಣನಲ್ಲಿ ರಕ್ಷಣೆಗಾಗಿ ಪ್ರಾರ್ಥನೆ

ಫಣಿರಾಜಗರ್ವಶಮನಃ ಶಮನಃ-
ಕ್ಷಯಕಾರಕಃ ಸ ಕುರುತಾತ್ ಕುರುತಾತ್ ।
ಚಕಿತಾತ್ಮನಾಮಿಹ ವನೇ ಹವನೇ
ವಿನುತಃ ಕೃಪಾವಸುಹೃದಾಂ ಸುಹೃದಾಮ್ ॥ ೩೬ ॥

ಸರ್ಪರಾಜನಾದ ಕಾಲಿಯನ ಸೊಕ್ಕನ್ನಡಗಿಸಿದ, ಶಕಟಾಸುರನ ವಿನಾಶವನ್ನು ಗೈದ, ಯಜ್ಞದಲ್ಲಿ ಸಂಸ್ತುತನಾದ, ಆ ಶ್ರೀಕೃಷ್ಣನು ಈ ವನದಲ್ಲಿ ಕುತ್ಸಿತವಾದ ಧ್ವನಿಗಳಿಂದ ಭಯಪಟ್ಟ, ಕೃಪೆ ಎಂಬ ಸಂಪತ್ತನ್ನು ಬಯಸುವ, ಬಂಧುಗಳಾದ ನಮಗೆ ಸುಖವನ್ನು ನೀಡಲಿ.

ವಿ. : ೧. **ಶಮನಃಕ್ಷಯಕಾರಕಃ** ಎಂಬುದಕ್ಕೆ ಶಂ ಅನಃಕ್ಷಯಕಾರಕಃ ಎಂದು ಪದವಿಭಾಗ; ಶಕಟಾಸುರನನ್ನು ಸಂಹರಿಸಿದ ಶ್ರೀಕೃಷ್ಣ ನಮಗೆ ಸುಖನೀಡಲಿ ಎಂದು ಅರ್ಥ.

೨. **ಕು-ರುತಾತ್** - ಕುತ್ಸಿತವಾದ ಗೂಬೆ ಮೊದಲಾದ ಧ್ವನಿಗಳಿಂದ ಎಂದರ್ಥ.

೩.ಕುರುತಾತ್ ಕುರುತಾತ್ ಎಂಬಲ್ಲಿ ಮೊದಲನೆಯದು ಕು-ರುತಾತ್ ಎಂಬುದಾಗಿ ನಾಮಪದವಾದರೆ, ಕುರುತಾತ್ ಎಂಬ ಮತ್ತೊಂದು ಕ್ರಿಯಾಪದ ಎಂದು ತಿಳಿಯಬೇಕು.

### ಶ್ರೀಕೃಷ್ಣನ ಮುಖಕಮಲದ ಹಿರಿಮೆ

ಮುಖಸಾರಸಂ ಚ ಸುರಸಂ ಸುರಸಂ-
ಸ್ತುತಚಾರುಭಾವಯುಗಲಂ ಯುಗಲಮ್ ।
ನಯನಾಬ್ಜಯೋರಜ ಮನೋಜಮನೋ-
ಜಯಿ ಸುಸ್ಮಿತಂ ಹೃದಯತೇಽದಯ ತೇ ॥ ೩೭ ॥

ಎಲೈ ಜನನರಹಿತನಾದ ಶ್ರೀಕೃಷ್ಣ ! ನಿಷ್ಕರುಣಿಯೇ ! ನಿನ್ನ ಮುಖಕಮಲವು ಲಾವಣ್ಯರಸದಿಂದ ತುಂಬಿದೆ; ದೇವತೆಗಳು ಬಹಳವಾಗಿ ಸ್ತುತಿಸುವ ಸೊಬಗನ್ನು ಹೊಂದಿದೆ. ನಿನ್ನ ನೇತ್ರಕಮಲಗಳ ಜೋಡಿಯು ಕಾಮನ ಮನಸ್ಸನ್ನು ಜಯಿಸುತ್ತಿದೆ; ಇದರತ್ತ ನಮ್ಮ ಮನಸ್ಸು ಧಾವಿಸುತ್ತಿದೆ; (ಸಾರಸ - ಕಮಲ ; ನಯನಾಬ್ಜ - ನೇತ್ರಕಮಲ).

## ಗೋಪಿಯರಿಗೆ ಗೋಚರಿಸಿದ ಶ್ರೀಕೃಷ್ಣ

**ಗೋಪೀನಾಂ ಪರಿತಾಪಮಿತ್ಯುಡುಪತಿಃ ಕೃಷ್ಣಾಯ ಶಂಸನ್ನಿವ**
**ಪ್ರಾಪಾಬ್ಧ್ಯಂತಿಕಮಚ್ಯುತೇಂದುರುದಿತಸ್ತತ್ಪುಣ್ಯಪುಂಜಾಚಲಾತ್ ।**
**ವಕ್ಷೋಜಾಖ್ಯಗಿರಿಂ ಕರೈಃ ಪರಿಮೃಜನ್ ನೇತ್ರೋತ್ಪಲಂ ಹರ್ಷಯನ್**
**ಹೃದ್ವ್ಯೋಮಾಪ್ಯನುರಂಜಯನ್ ವಿರಚಯನ್ ವೃದ್ಧಿಂ ಪ್ರಮೋದಾಂಬುಧೇಃ[೧] ೩೮**

ಗೋಪಿಯರ ಈ ತೆರನಾದ ಪರಿತಾಪವನ್ನು ಶ್ರೀಕೃಷ್ಣನಿಗೆ ಅರಿಕೆ ಮಾಡಿಕೊಳ್ಳಲೆಂಬಂತೆ ಚಂದ್ರನು ಸಮುದ್ರದ ಬಳಿಗೆ ತೆರಳಿದ; ಆಗ ಅವರ ಸ್ತನಗಳೆಂಬ ಬೆಟ್ಟವನ್ನು ತನ್ನ ಕೈಗಳಿಂದ ಸ್ಪರ್ಶಿಸುತ್ತಾ ಅವರ ಕನ್ನೈದಿಲೆಯಂತಹ ಕಣ್ಣುಗಳನ್ನು ನಲಿಸುತ್ತಾ, ಹೃದಯಾಕಾಶವನ್ನೂ ರಂಜಿಸುತ್ತಾ, ಆನಂದಕಡಲನ್ನು ಉಕ್ಕೇರಿಸುತ್ತಾ ಚ್ಯುತಿಯಿರದ ಶ್ರೀಕೃಷ್ಣನೆಂಬ ಚಂದ್ರನು ಅವರ ಪುಣ್ಯರಾಶಿಯೆಂಬ ಬೆಟ್ಟದಿಂದ ಉದಿಸಿದ.

ವಿ. : ೧. ಗೋಪಿಯರ ಬಗೆಬಗೆಯ ಭಕ್ತಿಪೂರ್ವಕವಾದ ಪ್ರಾರ್ಥನೆಗೆ ಶ್ರೀಕೃಷ್ಣ ಕೊನೆಗೂ ದರ್ಶನ ನೀಡಿದ ಎಂದು ಭಾವ ; ವಕ್ಷೋಜ –ಸ್ತನ.

೨. ಚಂದ್ರೋದಯದಿಂದ ನಲಿವು ಲಭಿಸುವಂತೆ ಶ್ರೀಕೃಷ್ಣದರ್ಶನದಿಂದ ಗೋಪಿಯರ ಸಂಭ್ರಮ ಅಪಾರವಾಗಿ ಹೆಚ್ಚಿತು ಎಂದು ಭಾವ ; ಉಡು–ನಕ್ಷತ್ರ; ಉಡುಪತಿ–ಚಂದ್ರ .

೩. ಶ್ರೀಕೃಷ್ಣನನ್ನು 'ಅಚ್ಯುತೇಂದುಃ' ಎನ್ನುವ ಮೂಲಕ ಅವನು ಲೋಕದ ಚಂದ್ರನಂತೆ ವೃದ್ಧಿಹ್ರಾಸಾದಿದೋಷಗಳಿರದ[೨] 'ಸದೋದಿತ'ನಾದ ಚಂದ್ರ ಎಂದರ್ಥ.

೪. ಸಮುದ್ರವು ಶ್ರೀಕೃಷ್ಣನ ವಾಸಸ್ಥಾನ ಎಂಬುದು ಅವನು ನಾರಾಯಣ ಎಂಬ ವಿಶೇಷಾಂಶದಿಂದ ಸಿದ್ಧ; ಈ ಹಿನ್ನೆಲೆಯಲ್ಲಿ ಚಂದ್ರನು ಸಮುದ್ರದ ಬಳಿಗೆ ತೆರಳಿದ ಎಂಬ ಮಾತು ಅತ್ಯಂತ ಸ್ವರಸವೆನ್ನಿಸುವುದು.

## ತಾಂಬೂಲಚರ್ವಣ ಮಾಡಿದ ಗೋಪಿ

**ಕಾಚಿನ್ಮುಕುಂದಮುಖಸಾರಸಸೌರಭಾಢ್ಯಂ**
**[೩]ತಾಂಬೂಲಚರ್ವಿತಮಭಕ್ಷಯದಂಬುಜಾಕ್ಷೀ ।**

---

೧. "ವಿನಿಮಯಾಲಂಕಾರಃ" । ಸ ಚ ರೂಪಕೇಣ ಗರ್ಭಿತಃ । –ವ್ಯಾ.

೨. ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪದುರಿಷ್ಟಹಂತಾ ರಾಮಾವತಾರೋ ಹರಿರೀಶಚಂದ್ರಮಾಃ ॥ – ಮ.ಭಾ.ತಾ.ನಿ. (೩./೨)

೩.. ತಾಂಬೂಲಂ ಚ ಮುಕುಂದಚರ್ವಿತಲಸತ್ತಾಂಬೂಲಸಿದ್ಧ್ಯೈ... । –ರು.ವಿ.(೫/೪೬)
ಶ್ರೀಕೃಷ್ಣೋಚ್ಛಿಷ್ಟವೀಟಿಕಾಭಕ್ಷಣೇನೈವ ವಿರಹಜನ್ಯಮದನವೇದನಾ ಪರಿಹೃತೇತ್ಯತಃ ಶ್ರೀಕೃಷ್ಣಸ್ಯ ಸೌಂದರ್ಯಂ ಕಿಂ ವರ್ಣನೀಯಮಿತಿ ಭಾವಃ । –ವ್ಯಾ.

ಅಂತರ್ನಿಲೀನಮದನಾಯುಧಜಾತಘಾತ-
ಶಾಂತಿಂ ವಿಧಾತುಮಿವ ಸಂಚಿತಪುಣ್ಯಶೇಷಾ ॥ ೩೯ ॥

ಪೂರ್ವಾರ್ಜಿತವಾದ ಪುಣ್ಯಶೇಷದಿಂದ ಕೂಡಿದ ಕಮಲನೇತ್ರೆಯಾದ ಒಬ್ಬ ಗೋಪಿಯು, ತನ್ನ ಮನಸ್ಸಿನಲ್ಲಿ ಹುದುಗಿದ ಕಾಮನ ಆಯುಧವಾದ ಬಾಣಗಳಿಂದಾದ ಗಾಯಕ್ಕೆ ಉಪಶಮನಮಾಡಲೋ ಎಂಬಂತೆ ಮುಕುಂದನಾದ ಶ್ರೀಕೃಷ್ಣನ [೧]ಮುಖಾರವಿಂದದ ಪರಿಮಳದಿಂದ ತುಂಬಿದ ತಾಂಬೂಲಚರ್ವಣವನ್ನು ಭಕ್ಷಿಸಿದಳು.

ವಿ. : ಶ್ರೀಕೃಷ್ಣನ ಉಚ್ಛಿಷ್ಟವಾದ ತಾಂಬೂಲದ ಭಕ್ಷಣೆಯಿಂದ ಗೋಪಿಗೆ ಮನಃಶಾಂತಿ ಲಭಿಸಿತು ಎಂದರ್ಥ; ಇದರಿಂದ ಶ್ರೀಹರಿಯ ನೈವೇದ್ಯ ಮೊದಲಾದವುಗಳ ಸ್ವೀಕಾರವು ವಿಷಯಸುಖಗಳ ಬಯಕೆಯನ್ನು ಪರಿಹರಿಸಿ ಮನಸ್ಸಿಗೆ ನೆಮ್ಮದಿ ನೀಡುವುದು ಎಂಬ ವಿಶೇಷಾಂಶ ತಿಳಿಯುವುದು[೨].

ಶ್ರೀಕೃಷ್ಣನ ಕಪೋಲವನ್ನು ಚುಂಬಿಸಿದ ಗೋಪಿ

ಅನ್ಯಾ ತದಂಸಪರಿಲಂಬಿತಪಾಣಿಪದ್ಮಾ
ಧನ್ಯಾ ಸ್ಫುರನ್ಮಕರಕುಂಡಲಶೋಭಿಗಂಡಮ್ ।
ಪ್ರೇಷ್ಠಾಂತರಾಂಕುರಿತರಾಸವಿಲಾಸತೃಷ್ಣಾ-
ಪುಷ್ಟಿಪ್ರದೇವ ಮೃದುಹೃಷ್ಟಮುಖೀ ಚುಚುಂಬೇ ॥ ೪೦ ॥

ಧನ್ಯಳೂ, ಕೋಮಲವಾದ ಹರ್ಷತುಂಬಿದ ಮುಖದವಳೂ, ಆ ಶ್ರೀಕೃಷ್ಣನ ಹೆಗಲನ್ನು ತನ್ನ ಕರಕಮಲಕ್ಕೆ ಆಸರೆ ಮಾಡಿಕೊಂಡವಳೂ ಆದ ಮತ್ತೊಬ್ಬ ಗೋಪಿಯು ಪ್ರಿಯತಮನಾದ ಅವನ ಬಗ್ಗೆ ಮನಸ್ಸಿನಲ್ಲಿ ಅಂಕುರಿಸಿದ ರಾಸಕ್ರೀಡೆಯ ಬಯಕೆಗೆ ಪುಷ್ಟಿಯನ್ನು ನೀಡುವಳೋ ಎಂಬಂತೆ, ಹೊಳೆಯುವ ಮಕರಕುಂಡಲಗಳಿಂದ ಶೋಭಿಸುವ ಶ್ರೀಕೃಷ್ಣನ ಕಪೋಲವನ್ನು ಚುಂಬಿಸಿದಳು.

ಶ್ರೀಕೃಷ್ಣನ ಕುಡಿನೋಟಕ್ಕೆ ಒಳಗಾದ ಗೋಪಿ

ಕಾಚಿಚ್ಚ ದಷ್ಟಮೃದುಲೋಷ್ಠಪುಟೀ ಮುಕುಂದಂ
ತನ್ವೀ ತತಾನ ತರಲಾತ್ಮಕಟಾಕ್ಷಲಕ್ಷ್ಯಮ್ ।

---

೧. ಮುಖಸ್ಥವೀಟಿಕಯಾ ಆಯುಧಘಾತಶಾಂತಿರ್ಭವತೀತಿ ಪ್ರಸಿದ್ಧಿಃ। -ವ್ಯಾ.

೨. ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ।
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥ -ಭಾಗ.(೧೧/೬/೪೬)

ಭ್ರೂಸಂಜ್ಞಯೈವ ರಮಣಂ ಪ್ರತಿ ದರ್ಶಯಂತೀ
ಬಿಂಬೋಷ್ಠಚುಂಬನರುಚಿಂ[೧] ರುಚಿರಾಲಕಾಸ್ಯಮ್ ॥ ೪೧ ॥

ಮತ್ತೊಬ್ಬ ಗೋಪಸುಂದರಿಯು ಮನೋಹರವಾದ ಮುಂಗುರುಳುಗಳಿಂದ ಕೂಡಿದ ಮುಖದ ಶ್ರೀಕೃಷ್ಣನಿಗೆ ತನ್ನ ಬಿಂಬೋಷ್ಠಚುಂಬನದ ಬಯಕೆಯನ್ನು ಹುಬ್ಬಿನ ಸೂಚನೆಯಿಂದಲೇ ಪ್ರಕಟಿಸುತ್ತಾ ತನ್ನ ಮೃದುವಾದ ಓಷ್ಠಪುಟವನ್ನು ಕಚ್ಚಿಕೊಳ್ಳುತ್ತಾ, ಅವನ ಚಂಚಲವಾದ ಕುಡಿನೋಟಕ್ಕೆ ತನ್ನನ್ನು ಗುರಿಮಾಡಿಕೊಂಡಳು.

ಶ್ರೀಕೃಷ್ಣನ ಕರಕಮಲವನ್ನು ಸ್ಪರ್ಶಿಸಿದ ಗೋಪಿ

ನ ಸ್ವೈರಿಣೀತಿ ನಯಕೋವಿದ ಮಯ್ಯುಪೇಕ್ಷಾ
ಯುಕ್ತಾ ತವೇತಿ ತಮಿವ ಪ್ರತಿಬೋಧಯಂತೀ ।
ಪಸ್ಪರ್ಶ [೨] ಪಾಣಿಕಮಲಂ ಸುಖಜಾಶ್ರುಧಾರಾ
ಹಸ್ತೇನ ಹರ್ಷಕರಕಂಕಣಸುಸ್ವನೇನ ॥ ೪೨ ॥

ಮತ್ತೊಬ್ಬ ಗೋಪಿಯು "ಎಲೈ ನೀತಿಕೋವಿದನಾದ ಶ್ರೀಕೃಷ್ಣ! ಸ್ವೈರಿಣೀ ಎಂದು ಭಾವಿಸಿ, ನನ್ನನ್ನು ಉಪೇಕ್ಷಿಸುವುದು ತರವಲ್ಲ" ಎಂದು ಆ ಶ್ರೀಕೃಷ್ಣನಿಗೆ ಅರಿಕೆಮಾಡಿಕೊಳ್ಳಲೋ ಎಂಬಂತೆ ಆನಂದದಿಂದ ಹೊಮ್ಮಿದ ಅಶ್ರುಧಾರೆಗಳಿಂದ ಕೂಡಿದವಳಾಗಿ, [೩]ಹರ್ಷಸೂಚಕ- ವಾದ ಬಳೆಗಳ ಧ್ವನಿಗಳಿಂದ ಕೂಡಿದ ತನ್ನ ಕೈಯಿಂದ ಶ್ರೀಕೃಷ್ಣನ ಕರಕಮಲವನ್ನು ಸ್ಪರ್ಶಿಸಿದಳು.

ಶ್ರೀಕೃಷ್ಣನ ಚರಣಕಮಲವನ್ನು ಸ್ಪರ್ಶಿಸಿದ ಗೋಪಿ

ರತ್ಯುತ್ಸವಾರ್ಹತನುಮಂದಿರಸಂಗಿತುಂಗ-
ವಕ್ಷೋಜಸತ್ಕಲಶಮಂಡನಧೀರಿವಾನ್ಯಾ ।
[೪]ಸಂಯೋಜ್ಯ [೫]ತಚ್ಚರಣಪಲ್ಲವಮಾಶು ಮಾರ-
ಧಿಕ್ಕಾರಚಿಹ್ನಮಖನದ್ಧ್ವಜಮುತ್ಪತಾಕಮ್ ॥ ೪೩ ॥

---

೧. ಪಯಸ್ತದ್ಬಿಂಬೋಷ್ಠಸುಧಾಪ್ತಯೇ... । -ರು.ವಿ.(೫/೪೬)
೨. ಕಿಲೇತ್ಯನೇನ ಪೌರಾಣಿಕೀ ಪ್ರಸಿದ್ಧಿಃ ಸೂಚಿತಾ । ಅನೇನ ಭಾರ್ಯಾತ್ವೋಚಿತಪಾಣಿಗ್ರಹಣಂ ಸೂಚಿತಮ್ ।-ವ್ಯಾ.
ತತ್ರೈಕಾಂಸಗತಂ ಬಾಹುಂ ಕೃಷ್ಣಸ್ಯೋತ್ಪಲಸೌರಭಮ್ ।
ಚಂದನಾಲಿಪ್ತಮಾಘ್ರಾಯ ಹೃಷ್ಟರೋಮಾ ಚುಚುಂಬ ಹ ॥ - ಭಾ. (೧೦/೩೦/೧೩.)
೩.. ಅನೇನ ವಿವಾಹೋಚಿತತೂರ್ಯಸ್ವನಶ್ಚ ಸಂಪಾದಿತಃ । -ವ್ಯಾ.
೪. ಕಿಂಕರಾಣಾಮೇಕೋದ್ದೇಶೇನ ಪ್ರವೃತ್ತಾವನುದ್ದಿಷ್ಟಪ್ರಯೋಜನಾನಂತರಂ ಸಿದ್ಧ್ಯತೀತಿ ದ್ಯೋತಿತಮ್ । -ವ್ಯಾ.
೫. ಶ್ರೀಕೃಷ್ಣಪಾದಸಂಬಂಧಮಾತ್ರೇಣ ಕಾಮಶಾಂತೌ ಸ್ವಕುಚಕುಂಭೋಪರಿದೃಶ್ಯಮಾನತತ್ಪಾದಸ್ಥಪತಾಕಧ್ವಜರೇಖಯಾ ಕಾಮಜಯಸೂಚಕಧ್ವಜಂ ನಿಚಖಾನೇತಿ ಭಾವಃ । -ವ್ಯಾ.

ಬೇರೊಬ್ಬ ಗೋಪಿಯು ಕೃಷ್ಣನೊಡನೆ ನಡೆಸುವ ರತಿಕ್ರೀಡೆಯ ಉತ್ಸವಕ್ಕೆ ತನ್ನ ಶರೀರವನ್ನು ಮನೆಯನ್ನಾಗಿಸಿ ಅದರಲ್ಲಿನ ತನ್ನ ಎರಡು ಸ್ತನಗಳ ರೂಪದ ಪೂರ್ಣಕುಂಭಗಳನ್ನು ಅಲಂಕರಿಸುವ ಬುದ್ಧಿಯುಳ್ಳವಳಾಗಿ, ಅವುಗಳ ಮೇಲಿನ ಶ್ರೀಕೃಷ್ಣನ ಪಾದಗಳನ್ನು ಎಸಳನ್ನಾಗಿ ಜೋಡಿಸಿ, ತಾನು ಕಾಮನನ್ನು ಜಯಿಸಿದ್ದರ ಸಂಕೇತವನ್ನಾಗಿ ಅದರ ಮೇಲೆ ಪತಾಕೆ ಹಾರುವ ಧ್ವಜವನ್ನು ನೆಟ್ಟಳು.

ವಿ. : ಹೀಗೆ ಶ್ರೀಕೃಷ್ಣನ ಪಾದಗಳನ್ನು ಹೃದಯದಲ್ಲಿ ಚಿಂತಿಸಿದುದರಿಂದ ಅವಳಿಗೆ ಕಾಮನ ಮೇಲೆ ಜಯ ಸಾಧಿಸುವಂತಾಯಿತು. ಶ್ರೀಕೃಷ್ಣನ ಪಾದದಲ್ಲಿ ಧ್ವಜಾದಿಗಳ ಚಿಹ್ನೆ ಇರುವುದು ಜಯಸೂಚಕವಾಯಿತು ಎಂದರ್ಥ.

### ಮುನಿಗಳಂತೆ ವರ್ತಿಸಿದ ಗೋಪಿ

**ಅನ್ಯಾ ಚ ತಂ ಹೃದಿ ನಿಧಾಯ ನಿಮೀಲಿತಾಕ್ಷೀ**
**ಧನ್ಯಾ ಪ್ರಿಯಂ ಪುಲಕಶೋಭಿತಸರ್ವಗಾತ್ರೀ ।**
**ಸರ್ವಾಭಿರಾಭಿರನುಭೂತಮಭುಂಕ್ತ ಭೋಗಂ**
**ಕಿಂ ನಾಮ ನಾಸ್ತಿ ಮುನಿಮಾರ್ಗಜುಷಾಂ ಹಿ ಲೋಕೇ ॥ ೪೪ ॥**

ಧನ್ಯಳಾದ ಮತ್ತೊಬ್ಬ ಗೋಪಿಯು ಆ ಪ್ರಿಯನಾದ ಶ್ರೀಕೃಷ್ಣನನ್ನು ತನ್ನ ಹೃದಯದಲ್ಲಿ ಇರಿಸಿಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು, ಇಡೀ ದೇಹದಲ್ಲಿ ರೋಮಾಂಚನ-ಗೊಂಡವಳಾಗಿ, ಇತರ ಸಕಲ ಗೋಪಿಯರಿಂದ ಅನುಭವಿಸಲ್ಪಟ್ಟ ಭೋಗವನ್ನು ಅನುಭವಿಸತೊಡಗಿದಳು; ಮುನಿಗಳ ಹಾದಿಯನ್ನು ಹಿಡಿಯುವ ಜನರಿಗೆ ಲೋಕದಲ್ಲಿ ಯಾವುದು ತಾನೆ ಇಲ್ಲವಾದೀತು?

ವಿ.: ೧. ಹೃದಯದಲ್ಲಿ ಧ್ಯಾನಿಸುವುದು, ಕಣ್ಣುಗಳನ್ನು ಮುಚ್ಚಿಕೊಳ್ಳುವುದು, ಆನಂದದಿಂದ ಪುಲಕಗೊಳ್ಳುವುದು ಮೊದಲಾದವು ಮುನಿಗಳ ಜೀವನದ ರೀತಿ. ಇದರಿಂದ ಅವರಿಗೆ ಲಭಿಸದ್ದು ಯಾವುದೂ ಇರದು ಎಂಬುದು ಇಲ್ಲಿಯ ಭಾವ.

೨. ಪ್ರಸ್ತುತ ಈ ಗೋಪಿಯು [೧]ಮುನಿಗಳಂತೆ ಶ್ರೀಕೃಷ್ಣನನ್ನು ಧ್ಯಾನಧಾರಣಾದಿಗಳ ಮೂಲಕ ಪರಿಪರಿಯಾಗಿ ಸೇವಿಸಿದ್ದರ ಫಲವಾಗಿ ಅವಳಿಗೆ ಸಕಲವಿಧವಾದ ಭೋಗದ ಅನುಭವವೂ ಉಂಟಾಯಿತು ಎಂದು ತಾತ್ಪರ್ಯ.

೧. ಲೋಕೇ ಮುನಿಮಾರ್ಗಜುಷಾಂ ಋಷಿಮಾರ್ಗಸೇವಿನಾಂ ಕಿಂನಾಮ ಫಲಂ ನಾಸ್ತಿ। ಸರ್ವಫಲಮಸ್ತ್ಯೇವೇತ್ಯರ್ಥಃ। ಧ್ಯಾನಧಾರಣಾದೇರ್ಮುನಿಮಾರ್ಗತ್ವಾದಿತಿ ಭಾವಃ। -ವ್ಯಾ.

### ಶ್ರೀಕೃಷ್ಣನ ದರ್ಶನದಿಂದ ಗೋಪಿಯರಿಗೆ ಆದ ಆನಂದ

ನಯನೈರ್ದಧುರ್ಮುಖವಿಧುಂ ಖವಿಧುಂ
ವಿಹಸಂತಮಸ್ಯ ಚರಣೇ ಚ ರಣೇ ।
ಜಯದಾಯಿನಿ ಸ್ತನಯುಗೇನ ಯುಗೇ
ಕ್ಷಣತಾಂ ಶಮಾವಧಿಗತೇಽಧಿಗತೇ ॥ ೪೫ ॥

ಗೋಪಿಯರು ಗಗನದಲ್ಲಿ ಹೊಳೆಯುವ ಚಂದ್ರನನ್ನು ನಗೆಗೀಡುಮಾಡುವ ಶ್ರೀಕೃಷ್ಣನ ಮುಖವೆಂಬ ಚಂದ್ರನನ್ನು ಕಣ್ಣುಗಳಲ್ಲಿ ತುಂಬಿಸಿಕೊಂಡರು; ಹಾಗೂ ಯುದ್ಧದಲ್ಲಿ ಸ್ಮರಿಸಿದವರಿಗೆ ಜಯ ನೀಡುವಂತಹ ಆ ಶ್ರೀಕೃಷ್ಣನ ಪಾದಗಳನ್ನು ಎರಡು ಸ್ತನಗಳಲ್ಲಿ ಧರಿಸಿದರು. ತಮ್ಮ ಗರ್ವಪರಿಹಾರವಾಗುವವರೆಗೂ ಕಾಣೆಯಾಗಿದ್ದ [೧]ಶ್ರೀಕೃಷ್ಣ ಮರಳಿ ಕಾಣುತ್ತಲೇ ಯುಗದಷ್ಟು ಕಾಲವನ್ನು [೨]ಕ್ಷಣಕಾಲವನ್ನಾಗಿ ಭಾವಿಸಿದರು.

### ಗೋಪಿಯರಿಗೆ ಮೋಕ್ಷಾನಂದ ನೀಡಿದ ಶ್ರೀಕೃಷ್ಣ

ಸ್ವಾನಂದಂ ಪ್ರಕಟೀಚಕಾರ ಸುಖದಂ ಸಾಯುಜ್ಯಮಾಲಿಂಗ್ಯ ತಾಃ
ಸಾಧರ್ಮ್ಯಂ ಸ್ವಕೃತಾನುಲೇಪತಿಲಕೈರ್ಮೋಕ್ಷಂ ಹೃದಿಸ್ಥಾವೃತೇಃ ।
ತಾಭಿಃ ಸಸ್ಮಿತಮೀಕ್ಷಿತೋ ಯದುಪತಿಃ ಸಾರೂಪ್ಯಸಾರ್ಷ್ಟೀ ದಿಶನ್
ರಾಸಾಖ್ಯಂ ಚ ತಥೋತ್ಸವಂ ನಹಿ ಕಥಾ ವ್ಯರ್ಥಾ ಪರಬ್ರಹ್ಮಣಃ ॥ ೪೬ ॥

ಆ ಗೋಪಿಯರನ್ನು ಆಲಿಂಗಿಸಿಕೊಂಡು ಶ್ರೀಕೃಷ್ಣ ಅವರಿಗೆ ಸುಖದಾಯಕವಾದ ಸ್ವರೂಪ-ಭೂತವಾದ ಸಾಯುಜ್ಯವೆಂಬ ಮೋಕ್ಷವನ್ನು ನೀಡಿದ. ತನ್ನಿಂದ ಆಗ ಮಾಡಲ್ಪಟ್ಟ ಗಂಧಲೇಪನ[೩], ತಿಲಕಧಾರಣೆಗಳ ಮೂಲಕ ಸಾಧರ್ಮ್ಯವೆಂಬುದನ್ನು ನೀಡಿದ; ಹೃದಯ-ದಲ್ಲಿನ ಪ್ರಕೃತಿರೂಪವಾದ ತೆರೆಯನ್ನು ಸರಿಸಿದ; ಆ ಗೋಪಿಯರಿಂದ ಮಂದಹಾಸದಿಂದ ನೋಡಲ್ಪಟ್ಟ ಯದುಪತಿಯಾದ ಶ್ರೀಕೃಷ್ಣ ರಾಸಲೀಲೆ ಎಂಬ ಉತ್ಸವದಿಂದ ಸಾರೂಪ್ಯ ಮತ್ತು ಸಾರ್ಷ್ಟಿ ಎಂಬ ಮುಕ್ತಿಗಳನ್ನೂ ನೀಡಿದ; ಪರಬ್ರಹ್ಮನ ವಾರ್ತೆ ಎಂದಿಗೂ ನಿರರ್ಥಕವೆನ್ನಿಸದು; ಅಲ್ಲವೆ !

---

೧. ಪ್ರಿಯಾಗಮಸಂತೋಷೇಣ ಮಹಾನಪಿ ಕಾಲೋಽಲ್ಪ ಇವಾಭವದಿತಿ ಭಾವಃ । 	–ವ್ಯಾ.

೨. ಅಹಸ್ತು ಮಾಸಶಬ್ದೋಕ್ತಂ ಯತ್ರ ಚಿಂತಾಯುತಂ ವ್ರಜೇತ್ ।
ಏವಂ ವತ್ಸರಭಾದ್ಯಂ ಚ ವಿಪರೀತೇ ವಿಪರ್ಯಯಃ ॥
– ಭಾಗವತತಾತ್ಪರ್ಯೋದ್ಧೃತ(೪/೧೩./೨) ನಾಮಮಹೋದಧಿವಚನ

೩. ಶ್ರೀಕೃಷ್ಣಾಂಗಾನುಲೇಪನತಿಲಕವತ್ ಗಾಢಾಲಿಂಗನೇ ಸತಿ ತಾಸಾಮಪ್ಯಂಗಾನುಲೇಪನತಿಲಕಾನಾಂ ಜಾತತ್ವಾದಿತಿ ಭಾವಃ । 	–ವ್ಯಾ.

ವಿ. : ೧. ಶ್ರೀಕೃಷ್ಣನಿಗೆ ಸಂಬಂಧಿಸಿದ ಪ್ರತಿಯೊಂದು ಕಾರ್ಯವೂ [1]ಗೋಪಿಯರ ಪಾಲಿಗೆ ಮೋಕ್ಷಾನಂದವನ್ನು ನೀಡುತ್ತಿದ್ದಿತು ಎಂದು ಭಾವ.

೨. ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ ಮತ್ತು ಸಾಯುಜ್ಯ ಎಂಬುವು ನಾಲ್ಕು ವಿಧ [2]ಮುಕ್ತಿಗಳು[3].

೩. [4]ಸಾರ್ಷ್ಟಿ ಎಂಬುದು ಐದನೆ ಬಗೆಯ ಮುಕ್ತಿ; ಸರ್ವಾಂಗ ಸಾಯುಜ್ಯ ಎಂಬುದು ಇದರ ವಿಶೇಷ. ಇದು ಮುಕ್ತಬ್ರಹ್ಮರಿಗೆ ಮಾತ್ರ ಲಭಿಸುವ ವಿಶೇಷ ಮುಕ್ತಿ.

### ರಾಸಕ್ರೀಡೆಗೆ ತೆರಳಿದ ಶ್ರೀಕೃಷ್ಣ

ರಮ್ಯಸ್ಥಲೀಂ ರಾಸಮಹಾಯ ಶೌರಿ-
ರಗಾದಸೌ ಸಾರಜನೀಹಿತಾಯ ।
ಆಸಾಮಭೂದೀಪ್ಸಿತದಾತರೀಶೇ
ರಾಗಾದಸೌ ಸಾ ರಜನೀ ಹಿತಾಯ ॥ ೪೭ ॥

ಆ ಶ್ರೀಕೃಷ್ಣನು ಶ್ರೇಷ್ಠರೀತಿಯಲ್ಲಿ ಜನಿಸಿ ಬಂದಿದ್ದ ಗೋಪಿಯರಿಗೆ ಪ್ರಿಯವಾದ ರಾಸೋತ್ಸವ-ಕ್ಕೆಂದು ರಮ್ಯವಾದ ಪ್ರದೇಶಕ್ಕೆ ತೆರಳಿದ; ಆ ಗೋಪಿಯರ ಅಭಿಲಾಷೆ ಪೂರೈಸುವಂತಹ ಈಶನಾದ ಶ್ರೀಕೃಷ್ಣನಲ್ಲಿ ಸ್ನೇಹದಿಂದಾಗಿ ಆ ರಾತ್ರಿಯು ಹಿತಕಾರಕವಾಯಿತು.

ವಿ. : [5]ಸಾರಜನೀಹಿತಾಯ; ಸಾ ರಜನೀ ಹಿತಾಯ – ಇಲ್ಲಿ ಯಮಕಾಲಂಕಾರ; ಸಾರಜನೀ ಈಹಿತಾಯ – ಶ್ರೇಷ್ಠ ಜನ್ಮವನ್ನು ಪಡೆದಿದ್ದ ಗೋಪಿಯರಿಗೆ ಅಪೇಕ್ಷಿತವಾದ; ಸಾ ರಜನೀ ಹಿತಾಯ – ಆ ರಾತ್ರಿಯು ಹಿತಕರವಾಯಿತು; ಶೌರಿ – ಕೃಷ್ಣ; ರಜನೀ – ರಾತ್ರಿ.

---

೧. ಕೃತ್ವಾ ತಾವಂತಮಾತ್ಮಾನಂ ಯಾವತೀರ್ಗೋಪಯೋಷಿತಃ (ಭಾಗ.೧೦/೩೩/೨೦) ಇತಿ ವಚನಾದಿತಿ ಭಾವಃ। –ವ್ಯಾ.

೨. ಯದ್ಯಪಿ ಸಾಧರ್ಮ್ಯಂ ಸಾರೂಪ್ಯಂ ಚಾನ್ಯೇಷಾಮೇಕಮೇವ ತಥಾಪಿ ಗೋಪೀನಾಂ ಮುಕ್ತಾವಪಿ ಏವಮೇವ ರಾಸಕ್ರೀಡಾದಿವಿಲಾಸಸಂಭವಾತ್ತಮಸಂಖ್ಯರೂಪತ್ವಾಖ್ಯಸಾರೂಪ್ಯಮನ್ಯದೇವೇತಿ ದ್ರಷ್ಟವ್ಯಮ್ । –ವ್ಯಾ.

೩. 'ಆನಂದ ಏವ ಷ ಭವತ್ಯಾನಂದಸ್ಯ ಸಾರ್ಷ್ಟಿತಾಂ ಸಲೋಕತಾಂ ಸಾಯುಜ್ಯಮಾಪ್ನೋತಿ' ಇತಿ ಮಾಧ್ಯಂದಿನಾಯನ ಶ್ರುತಿಃ। ಭಾಗವತತಾತ್ಪರ್ಯ(೧೦/೭೨/೪೯)

ಚತ್ವಾರಿ ತೀರ್ಥಾನಿ ವಿಧಾಯ ಪಾಜಕೇ ಪ್ರಾಬೋಧಿ ತನ್ಮೋಕ್ಷಚತುಷ್ಟಯಪ್ರದಮ್ ।
ರಾಮೇಣ ನೋ ಸಾರ್ಷ್ಟಿದಮಿತ್ಯಸೌ ಮರುತ್ ತೀರ್ಥಂ ಚಕಾರೇತಿ ಮಮಾವಭಾಸತೇ ॥
–ಶ್ರೀಹೃಷೀಕೇಶತೀರ್ಥರು,ಸಂಪ್ರದಾಯಪದ್ಧತಿ(೬)

೪. ಸಾರ್ಷ್ಟಿನಾಮಕಮೋಕ್ಷಮಿತಿ ಧ್ವನಿಃ। –ವ್ಯಾ.

೫. ಸಾರಾ ಶ್ರೇಷ್ಠಾ ಜನಿರುತ್ಪತ್ತಿರ್ಯಾಸಾಂ ತಾಸಾಂ ಗೋಪೀನಾಮೀಹಿತಾಯ ಇಷ್ಟಾಯ। –ವ್ಯಾ.

### ರಾಸಕ್ರೀಡೆಯ ರಮ್ಯವರ್ಣನೆ

**ಕಂಠಾಶ್ಲೇಷಕರಾಗ್ರಪಾತಮಧುರವ್ಯಾಹಾರಮಂದಸ್ಮಿತೈ-**
**ರ್ಲೋಲಾಪಾಂಗನಿರೀಕ್ಷಣೇನ ಮರುತಾ ಗೀತೇನ ಶೀತಾಂಶುನಾ।**
**ಶೃಂಗಾರಂ ರಸಮುಚ್ಚಕೈಃ ಕುಸುಮಿತೇ ವೃಂದಾವನೇ ಪೋಷಯನ್**
**ಗೋಪೀಮಂಡಲಮಂಡಿತಂ ಮಧುಪತೀ ರಾಸೋತ್ಸವಂ ನಿರ್ಮಮೇ ॥೪೮॥**

ಕತ್ತನ್ನು ಬಳಸುವುದು, ನಖಚಿಹ್ನೆಗಳನ್ನು ಮೂಡಿಸುವುದು, ಮಧುರವಾದ ಮಾತುಗಳು, ಕಿರುನಗೆ, ಚಂಚಲ ಕುಡಿನೋಟ, ಮಂದಮಾರುತದ ಸಂಗೀತ, ತಂಪಾದ ಚಂದ್ರ – ಹೀಗೆ ಶೃಂಗಾರರಸಕ್ಕೆ ಪುಷ್ಟಿ ನೀಡುತ್ತ ಪೂರ್ಣ ಅರಳಿದ ಪುಷ್ಪಗಳಿಂದ ಕೂಡಿದ ವೃಂದಾವನದಲ್ಲಿ ಗೋಪಿಯರ ಸಮೂಹದಿಂದ ಅಲಂಕೃತವಾದ ರಾಸೋತ್ಸವವನ್ನು ಮಧುಪತಿಯಾದ ಶ್ರೀಕೃಷ್ಣನು ಮಾಡಿದ; (ಶೀತಾಂಶು – ಚಂದ್ರ).

### ರಾಸಲೀಲೆಯ ಆಂತರ್ಯ

**ಪ್ರೇಷ್ಠಸ್ಯಾಂಸಯುಗಂ ಕರೈರುಭಯತಃ ಪ್ರೇಮೋತ್ಥರೋಮೋದ್ಗಮೈಃ**
**ಸುಷ್ಠ್ವಾಲಿಂಗ್ಯ ಪುನಃ ಪಲಾಯನಭಿಯೇವೌತ್ಸುಕ್ಯತೋ ವೀಕ್ಷತಾಮ್।**
**ಸಿದ್ಧಾನಾಂ ನಯನೈಃ ಸಮಂ ಸಮುದಿತಂ [೧]ಶೃಂಗಾರಸಂಜ್ಞಂ ರಸಂ**
**ಮಧ್ಯಸ್ಥಂ ಮುಮುಚುರ್ಮಿಥೋ ಧೃತಕರಾ ಗಂತುಂ ಬಹಿರ್ನ ಕ್ವಚಿತ್ ॥ ೪೯ ॥**

ಗೋಪಿಯರು, ಶ್ರೀಕೃಷ್ಣನು ಮತ್ತೆ ಪಲಾಯನಮಾಡಿಯಾನು ಎಂಬ ಭಯದಿಂದೆಂಬಂತೆ, ಅನುರಾಗದಿಂದ ಹುಟ್ಟಿದ ರೋಮಾಂಚನಗಳಿಂದ ಕೂಡಿದ ತಮ್ಮ ಕೈಗಳಿಂದ ಪ್ರಿಯತಮನಾದ ಶ್ರೀಕೃಷ್ಣನ ಎರಡು ಹೆಗಲುಗಳನ್ನು ಬಳಸಿ, ಎರಡೂ ಪಕ್ಕಗಳಲ್ಲೂ ಗಾಢವಾಗಿ ಆಲಿಂಗಿಸಿಕೊಂಡು, ಪರಸ್ಪರ ಕೈಹಿಡಿದುಕೊಂಡವರಾಗಿ ಸಿದ್ಧರು ಉತ್ಸುಕತೆಯಿಂದ ನೋಡುತ್ತಿದ್ದ ಕಣ್ಣುಗಳೊಂದಿಗೆ, ಅಭಿವ್ಯಕ್ತಗೊಂಡ ಮಧ್ಯದಲ್ಲಿನ ಶೃಂಗಾರವೆಂಬ ರಸವನ್ನು ಹೊರತೆರಳಲು ಸರ್ವಥಾ ಬಿಡದಾದರು.

ವಿ. : ತಮ್ಮ ಮಧ್ಯೆ ಶ್ರೀಕೃಷ್ಣನನ್ನು ಬಳಸುವ ಮೂಲಕ ಗೋಪಿಯರು ಅವನು ತಮ್ಮಿಂದ ದೂರಾಗಲು ಸಾಧ್ಯವಿಲ್ಲ ಎಂಬ ಭಾವವನ್ನು ಹೊಂದಿದರು ಎಂದರ್ಥ.

---

೧. ಮನೋಹರಸ್ತ್ರೀಪುರುಷವಿಲಾಸೈರುಜ್ಜೃಂಭಿತಃ ಶೃಂಗಾರರಸಃ ರಾಸಮಂಡಲಮಧ್ಯ ಏವ ತಿಷ್ಠತಿ ಸಿದ್ಧಾನಾಂ ನಯನಾನಿ ಚ ತದೀಕ್ಷಣೋತ್ಸುಕಾನಿ ತತ್ರೈವ ತಸ್ಥುರಿತಿ ಭಾವಃ। –ವ್ಯಾ.

### ಶ್ರೀಕೃಷ್ಣನನ್ನು ಬಿಡಲಾಗದ ಗೋಪಿಯರು

ಸ ನೇಷ್ಯತಿ ಪ್ರಾಗಿವ ಕಾಂಚಿದಾಸಾಂ
ಮನೋರಮಾಂ ಶೌರಿರಿತೀವ ಭೀತ್ಯಾ ।
ಪರಸ್ಪರಾಬದ್ಧಮನೋಜ್ಞಹಸ್ತಾ
ವಿರೇಜುರಿಂದೀವರಲೋಚನಾಸ್ತಾಃ ॥ ೫೦ ॥

ಮುಂಚಿನಂತೆ ಆ ಶ್ರೀಕೃಷ್ಣನು ತಮ್ಮಲ್ಲಿನ ಒಬ್ಬ ಚೆಲುವೆಯನ್ನು ಕರೆದೊಯ್ದಾನು, ಎಂಬ ಭೀತಿಯಿಂದಲೋ ಎಂಬಂತೆ ಪರಸ್ಪರ ಹೆಣೆದಿದ್ದ ರಮಣೀಯವಾದ ಕೈಗಳಿಂದ ಕೂಡಿದ ಕನ್ನೈದಿಲೆಗಳಂತಹ ಕಣ್ಣುಗಳ ಅವರು ಬಹಳವಾಗಿ ಶೋಭಿಸಿದರು.

ವಿ. : ಹಿಂದೊಮ್ಮೆ ಶ್ರೀಕೃಷ್ಣ ಹಾಗೆ ಒಬ್ಬ ಗೋಪಿಯೊಂದಿಗೆ ತೆರಳಿದ್ದ ವಿವರ ಈಗಾಗಲೇ ಬಂದಿದೆ[೧].

### ಸಿದ್ಧರೂ ಸಹ ಮರುಳಾದ ರಾಸಕ್ರೀಡೆ

ವಿಷ್ವಗ್ವಿಸರ್ಪಿನಯನಾಃ ಪರಿಮುಚ್ಯಮಾನ-
ವಕ್ಷೋಜವಸ್ತ್ರಕಬರೀಭರಭವ್ಯನೀವ್ಯಃ ।
ಸಿಂಜದ್ವಿಭೂಷಣಗಣಾ ಮಿಷತಾಮಲೌಲ್ಯಂ
ನಾಟ್ಯಚ್ಛಲೇನ ಚರಣೈಃ ಕಣಶೋ ವಿತೇನುಃ ॥ ೫೧ ॥

ಸುತ್ತಲೂ ಹಾಯಿಸಿದ ಕಣ್ಣುಗಳು, ಬಿಚ್ಚುತ್ತಿದ್ದ ಮೊಲೆಗಟ್ಟು, ಮುಡಿ, ಭವ್ಯವಾದ ನೆರಿಗೆಗಳು, ಧ್ವನಿಗೈಯ್ಯುವ ಆಭರಣಸಮೂಹಗಳು - ಇಂತಹ ಆ ಗೋಪಿಯರು ನರ್ತನದ ನೆಪದಿಂದ ತಮ್ಮ ಚರಣಗಳಿಂದ, ಅದನ್ನೆಲ್ಲಾ ಕಾಣುತ್ತಿದ್ದ ಸಿದ್ಧಪುರುಷರ ಧೈರ್ಯವನ್ನು ನುಚ್ಚುನೂರು ಮಾಡಿದರು.

### ಪರವಶರಾದ ಗೋಪಿಯರು

ಕೃಷ್ಣಾಂಸವಿನ್ಯಸ್ತಕರಾಬ್ಜಮಾಲಾ
ಹೃಷ್ಟಾಃ ಸ್ತ್ರಿಯಸ್ತಾ ನನೃತುಃ ಸಲೀಲಾಃ ।
ಆನಂದಮೂರ್ತಿಂ ಪರಿರಭ್ಯ ಮರ್ತ್ಯಃ
ಕೋ ನಾಮ ನೋ ನೃತ್ಯತಿ ಸಿದ್ಧಕೃತ್ಯಃ ॥ ೫೨ ॥

---

೧. ಕಾಮಿನೀತಿ ಜಿತಾಪದ್ಯಾಂ ನಿನಾಯ ಸುಖಯನ್ ಸುಖೀ ।
ಕಾಮಿನೀತಿಜಿತಾ ಪದ್ಯಾಂ ಕಾಂಚಿದಾಸಾದ್ಯ ಸೋಜ್ಝಿತಾ ॥ -ರು.ವಿ.(೭/೫೩.)

ಶ್ರೀಕೃಷ್ಣನ ಹೆಗಲ ಮೇಲೆ ಇರಿಸಿದ್ದ ಕರಕಮಲಗಳ ಮಾಲೆಗಳ ಆ ಆನಂದಭರಿತರಾದ ಸ್ತ್ರೀಯರು ವಿಲಾಸಸಮೇತವಾಗಿ ನರ್ತಿಸತೊಡಗಿದರು; ಆನಂದರೂಪನಾದ ಶ್ರೀಹರಿಯನ್ನು ಆಲಿಂಗಿಸಿಕೊಂಡು ಕೃತಕೃತ್ಯನಾದ ಯಾವ ಮನುಜ ತಾನೇ ಕುಣಿಯದಿದ್ದಾನು?

### ಮಹತ್ಕಾರ್ಯ ಸಾಧಿಸಿದ ಗೋಪಿ

ಆಬಧ್ಯ [೧]ಮುಕ್ತಗಣವಲ್ಲಭಕಂಠಮೇಕಾ
ಬಾಲಾ ವಿಮುಕ್ತಕಬರೀಭರಬಂಧನಾಯ ।
ಚಕ್ರೇ ನ ಯತ್ನಮಲಸಾ ಗುರುಕಾರ್ಯಲಾಭೇ
ಲಘ್ವರ್ಥಸಾಧನಕೃತಿರ್ನಹಿ ದೃಷ್ಟಪೂರ್ವಾ ॥ ೫೩ ॥

ಮುಕ್ತರ ಹಿಂಡುಗಳಿಗೆ ಪ್ರಿಯವೆನ್ನಿಸುವ ಶ್ರೀಕೃಷ್ಣನ ಕಂಠವನ್ನು ಗಾಢವಾಗಿ ತಬ್ಬಿದ ಒಬ್ಬ ಅಲಸಿಯಾದ ಗೋಪಿಯು ತನ್ನ ಬಿಚ್ಚಿದ ಮುಡಿಯನ್ನು ಕಟ್ಟಿಕೊಳ್ಳಲು ಯಾವುದೇ ಯತ್ನವನ್ನು ಮಾಡದಾದಳು; ಹಿರಿದಾದ ಕಾರ್ಯವು ಸಾಧಿಸಿಯಾದ ಮೇಲೆ ಅಲ್ಪಪ್ರಯೋಜನದ ಸಾಧನೆಗಾಗಿ ಪ್ರಯತ್ನಿಸುವುದು ಈ ಮುನ್ನ ಎಲ್ಲೂ ಕಂಡಿಲ್ಲವಷ್ಟೆ!

ವಿ. : ಶ್ರೀಮದ್ಭಾಗವತವನ್ನು ಕೇಳುವ ಸಂಭ್ರಮದಲ್ಲಿ ಜನಕರಾಜನು ತನ್ನ ಮಿಥಿಲಾಪಟ್ಟಣವು ಸುಟ್ಟವಾರ್ತೆಯು ಗೊಂದಲಕ್ಕೊಳಗಾಗದೆ, ಇದ್ದ ಪ್ರಸಂಗವನ್ನು ಇದು ಜ್ಞಾಪಿಸುವುದು :

ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತಿ ।

– ಒಂದು ರೀತಿಯಲ್ಲಿ ಶ್ರೀವಾದಿರಾಜಸ್ವಾಮಿಗಳ ಈ ಮಾತು ಜನಕರಾಜನ ಈ ಪ್ರಸಂಗಕ್ಕೆ ಅಪೂರ್ವವಾದ ವಿವರಣೆಯಂತಿದೆ ಎಂದೂ ಭಾವಿಸಬಹುದು.

### ಶ್ರೀಕೃಷ್ಣನ ಸಂಗದಲ್ಲಿ ಮೈಮರೆತ ಗೋಪಿಯರು

ಕೃಷ್ಣಾಲಿಂಗನಭಂಗಶಂಕಿಹೃದಯಾಃ ಸ್ರಸ್ತಂ ಕಚಂ ಪ್ರಚ್ಯುತಂ
ವಕ್ಷೋಜಾಂಬರಮುದ್ಗತಾಮಪಿ ನ ತಾ ನೀವೀಂ ಬಬಂಧುಃ ಕಿಲ ।
ತದ್ಭರ್ತ್ರಾ ರತಿಸೂಚಕಂ ಮೃಗದೃಶೋ ದೃಷ್ಟ್ವಾ ಪ್ರಹೃಷ್ಟಾನನಾಃ
ರತ್ಯಂತೋಚಿತಕರ್ಮ ಚಕ್ರುರಮತಂ ನೈವೇತಿ ಚೇತೋ ಮಮ ॥ ೫೪ ॥

ಶ್ರೀಕೃಷ್ಣನ ಆಲಿಂಗನವು ತಪ್ಪೀತು ಎಂಬ ಸಂಶಯದ ಮನಸ್ಸಿನ ಅವರು ಬಿಚ್ಚಿದ ಮುಡಿಯನ್ನು, ಜಾರಿದ ಸೆರಗನ್ನು, ಬಿಚ್ಚಿಹೋದ ನೀವಿಯನ್ನು ಸಹ ಕಟ್ಟಿಕೊಳ್ಳಲು

---

೧. ನಿತ್ಯಮುಕ್ತಸ್ಯ ಬಂಧನಲಕ್ಷಣಮಹಾಪ್ರಯೋಜನೇ ಲಬ್ಧೇ ಸದ್ಯೋಮುಕ್ತಮಾತ್ರಕಬರೀಭರಬಂಧನಾಯಾಸಾಯೋಗಾದಿತಿ ಭಾವಃ। –ವ್ಯಾ.

ಮುಂದಾಗಲಿಲ್ಲ; ಪತಿಯಾದ ಶ್ರೀಕೃಷ್ಣನೊಂದಿಗೆ ರತಿಸೂಚಕವಾದ ಅದನ್ನು ಕಂಡು ಅರಳಿದ ಮುಖವುಳ್ಳವರಾಗಿ ಆ ಹರಿಣಾಕ್ಷಿಯರು ತಮಗೆ ಸಮ್ಮತವಲ್ಲದ, ರತಿ ಪೂರೈಸಿದ ಮೇಲೆ ಉಚಿತವೆನ್ನಿಸುವ ಆ ಕಾರ್ಯವನ್ನು ಮಾಡಲೇ ಇಲ್ಲ ಎಂಬುದು ನನ್ನ ಭಾವನೆ.

### ಶ್ರೀಕೃಷ್ಣನ ಕೈಗೆ ಮುತ್ತಿಟ್ಟ ಗೋಪಿ

ಕಾಚಿಚ್ಚುಚುಂಬೇ ಕಮಲೇಕ್ಷಣಸ್ಯ
ಕಾರುಣ್ಯಸಿಂಧೋಃ [೧]ಕರಮಬ್ಜನೇತ್ರಾ ।
ಆಶ್ಲಿಷ್ಯ ಕಂಠಂ ಬತ ಪೂರ್ವವನ್ಮಾಂ
ಸ್ವೀಯಾಂ ನ ಮುಂಚೇತಿ ತಮಂಚಯಂತೀ ॥ ೫೫ ॥

ಕಮಲನಯನೆಯಾದ ಒಬ್ಬ ಗೋಪಿಯು ಕರುಣಾಸಾಗರನೂ, ಪುಂಡರೀಕಾಕ್ಷನೂ ಆದ ಶ್ರೀಕೃಷ್ಣನ ಕಂಠವನ್ನು ಗಾಢವಾಗಿ ಆಲಿಂಗಿಸಿಕೊಂಡು, ಅವನ ಕೈಯನ್ನು ಚುಂಬಿಸ-ತೊಡಗಿದಳು; ಅವನವಳಾದ ತನ್ನನ್ನು ಮುಂಚಿನಂತೆ ತೊರೆಯದಿರು ಎಂದು ಅವನನ್ನು ಪ್ರಾರ್ಥಿಸಿಕೊಳ್ಳಲೋ ಎಂಬಂತೆ.

### ಶ್ರೀಕೃಷ್ಣನಿಂದ ವೀಟಿಕೆಯನ್ನು ಪ್ರಾರ್ಥಿಸಿದ ಗೋಪಿ

ಶ್ರೀಲೋಲಕೋಮಲಕಪೋಲವಿಲಗ್ನಗಂಡ-
ಲೋಲಂ ಕಯಾಽಪ್ಯಬಲಯಾಽಽನನಮನ್ಯವಧ್ವಾಃ ।
ಜಘ್ನೇ ಸ್ವವಕ್ತ್ರಗತವೀಟಿಕಯಾ ತದೇವ
ಕೃಷ್ಣಸ್ಯ ಸೂಚಕಮಭೂದಿವ [೨]ದಿತ್ಸತಸ್ತಾಮ್ ॥ ೫೬ ॥

ಶ್ರೀಲೋಲನಾದ ಶ್ರೀಕೃಷ್ಣನ ಕೋಮಲವಾದ ಕಪೋಲದಲ್ಲಿ ಅಂಟಿಕೊಂಡಿದ್ದ ಮನೋಹರ-ವಾದ ಮತ್ತೊಬ್ಬ ಗೋಪಿಯ ಮುಖಕ್ಕೆ ಒಬ್ಬ ಗೋಪಿಯು ತನ್ನ ಬಾಯಲ್ಲಿದ್ದ ತಾಂಬೂಲ-ದಿಂದ ತಾಡನಮಾಡಿದಳು; ಅದು ಅದನ್ನು ಅವಳಿಗೆ ನೀಡಲು ಬಯಸಿದ್ದ ಆ ಶ್ರೀಕೃಷ್ಣನಿಗೆ ಮಾಡಿದ ಸೂಚನೆಯೂ ಆಯಿತು.

---

೧. ತತ್ರೈಕಾಂಸಗತಂ ಬಾಹುಂ ಕೃಷ್ಣಸ್ಯೋತ್ಪಲಸೌರಭಮ್ ।
ಚಂದನಾಲಿಪ್ತಮಾಘ್ರಾಯ ಹೃಷ್ಟರೋಮಾ ಚುಚುಂಬ ಹ ॥ - ಭಾಗ.(೧೦/೩೩/೧೨)

೨. ಶ್ರೀಕೃಷ್ಣಃ ಸ್ವಕಪೋಲಲಗ್ನಕಪೋಲಾಯಾಃ ತಸ್ಯಾಃ ಸ್ವವಕ್ತ್ರ ವೀಟಕಾಂ ದದಾವಿತಿ ಕಥಾಂತರಂ ಸೂಚಿತಂ ಭವತಿ । 'ಗಂಡೇ ಗಂಡಂ ಸಂದಧತ್ಯಾ ಅಧಾತ್ ತಾಂಬೂಲಚರ್ಚಿತಮ್'ಇತಿ ಕ್ವಚಿತ್ಪಾಠಃ । ಅದಾದಿತಿ ಕ್ವಚಿತ್ । ಪಾಠ-ದ್ವಯಾರ್ಥಸೂಚನಾಯೇತ್ಥಮುದಿತಮ್ । -ವ್ಯಾ.

**ಗೋಪಿಯೊಬ್ಬಳು ಮಾಡಿದ ಅಪೂರ್ವ ಗಾನವಿದ್ಯೆ**

ವಿಲಾಸಮಸ್ಯಾಂ ವರಸಿದ್ಧಸತ್ಕೃತಾ-
ವಿಲಾಽಸಮಸ್ಯಾಂಬರಸಿದ್ಧಸತ್ಕೃತಾ ।
ತತಾನ ವೀಣಾಧ್ವನಿಗಾನವಿದ್ಯಯಾಽಽ-
ತತಾ ನವೀನಾಧ್ವನಿ ಗಾನವಿದ್ಯಯಾ ॥ ೫೭ ॥

ಪದಚ್ಛೇದ : ವಿಲಾಸಂ ಅಸ್ಯಾಂ ವರಸಿದ್ಧಸತ್ಕೃತಾವಿಲಾ ಅಸಮಸ್ಯ ಅಂಬರಸಿದ್ಧಸತ್ಕೃತಾ ತತಾನ ವೀಣಾಧ್ವನಿಗಾನವಿದ್ಯಯಾ ಆತತಾ ನವೀನಾಧ್ವನಿ ಗಾನವಿತ್ ಯಯಾ

ಗೋಪಿಯೊಬ್ಬಳು ಆ ರಾಸಕ್ರೀಡೆಯಲ್ಲಿ ವರದಿಂದ ಲಭಿಸಿದ ಪುಣ್ಯದಿಂದ ಕೂಡಿದ, ಗಗನದಲ್ಲಿನ ಸಿದ್ಧಪುರುಷರಿಂದ ಮಾನಿತವಾದ, ವೀಣೆಯ ಧ್ವನಿಯಂತೆ ಮನೋಹರವಾದ ಗಾನವಿದ್ಯೆಯಿಂದ ಎಲ್ಲೆಡೆಯೂ ತುಂಬಿದ ವಿಲಾಸವನ್ನು [1]ಅಸದೃಶನಾದ ಶ್ರೀಕೃಷ್ಣನಂತೆ ಮಾಡತೊಡಗಿದಳು.

**ಶ್ರೀಕೃಷ್ಣನ ಮುಖವನ್ನು ಚುಂಬಿಸಿದ ಗೋಪಿ**

ಭರ್ತುರ್ಮೃದುಸ್ವರಕೃತಾನುಕೃತಿಃ ಸ್ವಗೀತಂ
ವಿಸ್ತಾರ್ಯ ಹೃದ್ಯಕಲಕಂಠವಧೂರಿವಾದ್ಧಾ ।
ಮುಗ್ಧೀಭವತ್ಸು ಸಕಲೇಷು ಮುಕುಂದವಕ್ತ್ರಂ
ಸ್ನಿಗ್ಧಾ ಚುಚುಂಬ ರಹಸೀವ ವಿಶಂಕಮೇಕಾ ॥ ೫೮ ॥

ಸ್ವಾಮಿಯಾದ ಶ್ರೀಕೃಷ್ಣನ ಮೃದುವಾದ ಸಂಗೀತಧ್ವನಿಯ ಅನುಕರಣೆಯನ್ನು ಮಾಡಿದ ಒಬ್ಬ ಗೋಪಿಯು ಮನೋಹರವಾದ ಹೆಣ್ಣುಕೋಗಿಲೆಯಂತೆ ತನ್ನ ಧ್ವನಿಯನ್ನು ಹಿಗ್ಗಿಸಿ, ಸಕಲ ಜನರು ಬಹಳವಾಗಿ ಮೋಹಗೊಳ್ಳುತ್ತಿರಲು ಏಕಾಂತದಲ್ಲೆಂಬಂತೆ ನಿಶ್ಶಂಕೆಯಿಂದ ಆ ಶ್ರೀಕೃಷ್ಣನ ಮುಖವನ್ನು ಚುಂಬಿಸಿದಳು.

ವಿ. : ತನ್ನ ಸಂಗೀತವಿದ್ಯೆಯನ್ನು ಶ್ರೀಕೃಷ್ಣನ ಸಾನ್ನಿಧ್ಯಪ್ರಾಪ್ತಿಗಾಗಿ ಉಪಯೋಗಿಸಿಕೊಂಡ ಒಬ್ಬ ಗೋಪಿಯ ಕೌಶಲ ಇಲ್ಲಿ ವರ್ಣಿತವಾಗಿದೆ; ಹೀಗೆ ಸಕಲವಿದ್ಯೆಗಳನ್ನು ಸಹ ಶ್ರೀಹರಿಯ ಒಲುಮೆಗಾಗಿ ಉಪಯೋಗಿಸಿಕೊಳ್ಳುವ ಅಪೂರ್ವ ಸಂದೇಶ ಇದರಲ್ಲಿ ನಿರೂಪಿತವಾಗಿದೆ.

**ಶ್ರೀಕೃಷ್ಣನು ಆಪ್ತಕಾಮನೆಂದು ತಿಳಿದ ಗೋಪಿ**

ಕಿಮಾಪ್ತಕಾಮಸ್ಯ ತವಾಭಿರೀಶ
ತಥಾಪಿ ನಸ್ತೋಷಯಸೇ ವಿಲಾಸೈಃ ।

---

೧. "ಕಾಚಿತ್ಸಮಂ ಮುಕುಂದೇನ ಸ್ವರಜಾತೀರಮಿಶ್ರಿತಾಃ । ಉನ್ನಿನ್ಯೇ" (ಭಾಗ.೧೦/೩೩/೧೦)ಇತಿ ಕಥಾಸೂಚನಾರ್ಥಮಿದಮ್ । -ವ್ಯಾ.

ಇತೀರಯಂತೀವ ಕರಂ ಮುರಾರೇಃ
ಸ್ತನೇ ನ್ಯಧಾತ್ ಕಾಪಿ ಬಲೇನ ಬಾಲಾ ॥ ೫೯ ॥

ಪೂರ್ಣಕಾಮನಾದ ನಿನಗೆ ಎಲೈ ಶ್ರೀಕೃಷ್ಣ ನಮ್ಮಿಂದ ಏನಾಗಬೇಕಿದೆ? ಆದರೂ ವಿಲಾಸಗಳಿಂದ ನಮ್ಮನ್ನು ಸಂತೋಷಪಡಿಸುತ್ತಿರುವಿ ಎಂದು ಹೇಳುತ್ತಿರುವಳೋ ಎಂಬಂತೆ ಮುರಾರಿಯಾದ ಶ್ರೀಕೃಷ್ಣನ [೧]ಹಸ್ತವನ್ನು ಒಬ್ಬ ಬಾಲೆಯು ತನ್ನ ಸ್ತನದಲ್ಲಿ ಬಲಾತ್ಕಾರದಿಂದ ಇರಿಸಿಕೊಂಡಳು.

ಶ್ರೀಕಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡ ಗೋಪಿ

ಉರೋಜಯುಗ್ಮಾಂಕಿತಕುಂಕುಮಾಂಕ-
ಮಸಾವಸಾಧಾರಣಮಾತ್ಮಭರ್ತುಃ ।
ಕರೇ ಸ್ಥಿರೀಕೃತ್ಯ ಚಕಾರ ಚಾರುಂ
ತಮನ್ಯಮಾನಿನ್ಯಭಿರುಚ್ಯಯೋಗ್ಯಮ್ ॥ ೬೦ ॥

ಅವಳು ತನ್ನ ಸ್ವಾಮಿಯಾದ ಶ್ರೀಕೃಷ್ಣನ ಕೈಗಳಿಗೆ ತನ್ನ ಎರಡು ಸ್ತನಗಳಿಗೆ ಲೇಪಿತವಾಗಿದ್ದ ಅಸಾಧಾರಣವಾದ ಕುಂಕುಮದ ಗುರುತು ಮೆತ್ತುವಂತೆ ಮಾಡಿ, ಮನೋಹರವಾದ ಅದು ಇತರ ಸ್ತ್ರೀಯರ ಮೆಚ್ಚುಗೆಗೆ ಪಾತ್ರವಾಗದಂತೆ ಮಾಡಿಬಿಟ್ಟಳು.

ಶ್ರೀಕೃಷ್ಣನ ಬಹುರೂಪಗಳಿಂದ ಕಂಗೊಳಿಸಿದ ರಾಸಕ್ರೀಡೆ

ಮುದಾವಹಾ ಭಾಸುರಗೀತಶೋಭಾ
ವಿಭಾತಿ ವೃಂದಾವನರಾಸಲೀಲಾ ।
ಹರೇಶ್ಚ ಮೂರ್ತಿಃ ಶತಶೋಽಂಗನಾಲ್ಯಾ-
ಮುದಾವಹಾಭಾ ಸುರಗೀತಶೋಭಾ ॥ ೬೧ ॥

ಸಂತೋಷನೀಡುವಂತಹ ಸೊಗಸಾದ ಗೀತೆಗಳಿಂದ ಶೋಭಿಸುತ್ತಿದ್ದ ವೃಂದಾವನದಲ್ಲಿನ ಆ ರಾಸಕ್ರೀಡೆಯು ಕಂಗೊಳಿಸಿತು; ಸ್ತ್ರೀಯರ ಸಮೂಹದಲ್ಲಿ ನೀಲಮೇಘದ ಕಾಂತಿಯಿಂದ ಕೂಡಿದ, ದೇವತೆಗಳಿಂದಲೂ ವರ್ಣಿತವಾದ ಶೋಭೆಯ ಶ್ರೀಕೃಷ್ಣನ ಮೂರ್ತಿಯು ಬಹುರೂಪಗಳನ್ನು ಹೊಂದಿದ್ದಾಗಿ ಬಹಳವಾಗಿ ಕಂಗೊಳಿಸಿತು.

ವಿ. : ೧. ಶ್ರೀಕೃಷ್ಣನು ರಾಸಕ್ರೀಡೆಯ ಸಮಯದಲ್ಲಿ ಪ್ರತಿಯೊಬ್ಬ ಗೋಪಿಯ ಜೊತೆಯೂ ಒಂದೊಂದು ರೂಪದಿಂದ ಕಾಣಿಸಿಕೊಂಡು ಅವಳಿಗೆ ಆನಂದ ನೀಡಿದ ಎಂದರ್ಥ. ಹೀಗೆ

---

೧. "ಪಾರ್ಶ್ವಸ್ಥಾಚ್ಯುತಹಸ್ತಾಬ್ಜಂ ಶ್ರಾಂತಾಽಧಾತ್ ಸ್ತನಯೋಃ ಶಿವಮ್"(ಭಾಗ.೧೦/೩೩/೧೪)ಇತಿ ಕಥಾ ಸೂಚನಾಯೇದಮ್। -ವ್ಯಾ.

ಸಮಾನಸಂಖ್ಯೆಯ ರೂಪಗಳನ್ನು ಧರಿಸುವ ಮೂಲಕ ಈ ಪ್ರಸಂಗವು ಹಿಂದೆ (೮/೪೬) ಹೇಳಿದ ಸಾರೂಪ್ಯಕ್ಕೆ[೧] ಮತ್ತೊಂದು ರೀತಿಯ ನಿದರ್ಶನವಾಗಿದೆ ಎಂದೂ ತಿಳಿಯಬಹುದು.

೨. [೨]ಹೀಗೆ ಬಹುರೂಪವನ್ನು ತೋರುವ ಮೂಲಕ ತಾನು ಸಾಕ್ಷಾತ್ ಶ್ರೀಹರಿ ಎಂಬುದನ್ನು ತೋರಿಸಿ, ತನ್ನ ರಾಸಲೀಲೆ ವಂದ್ಯವಾದುದೇ ಹೊರತು ನಿಂದ್ಯವಾದುದಲ್ಲ ಎಂಬುದನ್ನು ಸಾರಿದ[೩].

---

೧. ಅತ ಏವ ಸಾರೂಪ್ಯಮಿತಿ ಪ್ರಾಗುಕ್ತಮ್ - ವ್ಯಾ.

೨. ಶ್ರೀಕೃಷ್ಣಾಂಗಾನುಲೇಪನತಿಲಕವತ್ ಗಾಢಾಲಿಂಗನೇ ಸತಿ ತಾಸಾಮಪ್ಯಂಗಾನುಲೇಪನತಿಲಕಾನಾಂ ಜಾತತ್ವಾದಿತಿ ಭಾವಃ। -ವ್ಯಾ.

೩. ರಾಸಕ್ರೀಡೆಯ ಬಗ್ಗೆ ವಿಷ್ಣುಪುರಾಣದಲ್ಲಿ ಬಂದಿರುವ ಅಪೂರ್ವ ವಿವರ ಹೀಗಿದೆ :

ವನರಾಜಿಂ ತಥಾ ಕೂಜದ್ಭೃಂಗಮಾಲಾಮನೋಹರಾಮ್ ।
ವಿಲೋಕ್ಯ ಸಹ ಗೋಪೀಭಿರ್ಮನಶ್ಚಕ್ರೇ ರತಿಂ ಪ್ರತಿ ॥
ವಿನಾ ರಾಮೇಣ ಮಧುರಮತೀವ ವನಿತಾಪ್ರಿಯಮ್ ।
ಜಗೌ ಕಲಪದಂ ಶೌರಿಸ್ತಾರಮಂದ್ರಕೃತಕ್ರಮಮ್ ॥
ರಮ್ಯಂ ಗೀತಧ್ವನಿಂ ಶ್ರುತ್ವಾ ಸಂತ್ಯಜ್ಯಾವಸಥಾಂಸ್ತದಾ ।
ಆಜಗ್ಮುಸ್ತ್ವರಿತಾ ಗೋಪ್ಯೋ ಯತ್ರಾಸ್ತೇ ಮಧುಸೂದನಃ ॥
ಶನೈಃ ಶನೈರ್ಜಗೌ ಗೋಪೀ ಕಾಚಿತ್ ತಸ್ಯ ಲಯಾನುಗಮ್ ।
ದತ್ತಾವಧಾನಾ ಕಾಚಿಚ್ಚ ತಮೇವ ಮನಸಾಽಸ್ಮರತ್ ॥
ಕಾಚಿತ್ ಕೃಷ್ಣೇತಿ ಕೃಷ್ಣೇತಿ ಪ್ರೋಚ್ಯ ಲಜ್ಜಾಮುಪಾಯಯೌ ।
ಯಯೌ ಚ ಕಾಚಿತ್ ಪ್ರೇಮಾಂಧಾ ತತ್ಪಾರ್ಶ್ವಮವಿಲಂಬಿತಮ್ ॥
ಕಾಚಿದಾವಸಥಸ್ಯಾಂತೇ ಸ್ಥಿತ್ವಾ ದೃಷ್ಟ್ವಾ ಬಹಿರ್ಗುರುಮ್ ।
ತನ್ಮಯತ್ವೇನ ಗೋವಿಂದಂ ದಧ್ಯೌ ಮೀಲಿತಲೋಚನಾ ॥
ತಚ್ಚಿತ್ತವಿಮಲಾಹ್ಲಾದಕ್ಷೀಣಪುಣ್ಯಚಯಾ ತಥಾ ।
ತದಪ್ರಾಪ್ತಿಮಹಾದುಃಖವಿಲೀನಾಶೇಷಪಾತಕಾ ॥
ಚಿಂತಯಂತೀ ಜಗತ್ಸೂತಿಂ ಪರಬ್ರಹ್ಮಸ್ವರೂಪಿಣಮ್ ।
ನಿರುಚ್ಛ್ವಾಸತಯಾ ಮುಕ್ತಿಂ ಗತಾಽನ್ಯಾ ಗೋಪಕನ್ಯಕಾ ॥
ಗೋಪೀಪರಿವೃತೋ ರಾತ್ರಿಂ ಶರಚ್ಚಂದ್ರಮನೋರಮಾಮ್ ।
ಮಾನಯಾಮಾಸ ಗೋವಿಂದೋ ರಾಸಾರಂಭರಸೋತ್ಸುಕಃ ॥
ಗೋಪ್ಯಶ್ಚ ವೃಂದಶಃ ಕೃಷ್ಣಚೇಷ್ಟಾಸ್ವಾಯತ್ತಮೂರ್ತಯಃ ।
ಅನ್ಯದೇಶಂ ಗತೇ ಕೃಷ್ಣೇ ಚೇರುರ್ವೃಂದಾವನಾಂತರಮ್ ॥
ಕೃಷ್ಣೇ ನಿಬದ್ಧಹೃದಯಾ ಇದಮೂಚುಃ ಪರಸ್ಪರಮ್ ॥
ಕೃಷ್ಣೋಽಹಮೇವ ಲಲಿತಂ ವ್ರಜಾಮ್ಯಾಲೋಕ್ಯತಾಂ ಗತಿಃ ।
ಅನ್ಯಾ ಬ್ರವೀತಿ ಕೃಷ್ಣಸ್ಯ ಮಮ ಗೀತಿರ್ನಿಶಮ್ಯತಾಮ್ ॥
ದುಷ್ಟ ಕಾಲಿಯ ತಿಷ್ಠಾತ್ರ ಕೃಷ್ಣೋಽಹಮಿತಿ ಚಾಪರಾ ।
ಬಾಹುಮಾಸ್ಫೋಟ್ಯ ಕೃಷ್ಣಸ್ಯ ಲೀಲಯಾ ಸರ್ವಮಾದದೇ ॥
ಅನ್ಯಾ ಬ್ರವೀತಿ ಭೋ ಗೋಪಾ ನಿಶ್ಶಂಕೈಃ ಸ್ಥೀಯತಾಮಿತಿ ।
ಅಲಂ ವೃಷ್ಟಿಭಯೇನಾತ್ರ ಧೃತೋ ಗೋವರ್ಧನೋ ಮಯಾ ॥

ಧೇನುಕೋಽಯಂ ಮಯಾ ಕ್ಷಿಪ್ತೋ ವಿಚರಂತು ಯಥೇಚ್ಛಯಾ।
ಗಾವೋ ಬ್ರವೀತಿ ಚೈವಾನ್ಯಾ ಕೃಷ್ಣಲೀಲಾನುಸಾರಿಣೀ॥
ಏವಂ ನಾನಾಪ್ರಕಾರಾಸು ಕೃಷ್ಣಚೇಷ್ಟಾಸು ತಾಸ್ತದಾ।
ಗೋಪ್ಯೋ ವ್ಯಗ್ರಾಃ ಸಮಂ ಚೇರೂ ರಮ್ಯಂ ವೃಂದಾವನಾಂತರಮ್॥
ವಿಲೋಕ್ಯೈಕಾ ಭುವಂ ಪ್ರಾಹ ಗೋಪೀ ಗೋಪವರಾಂಗನಾ।
ಪುಲಕಾಂಚಿತಸರ್ವಾಂಗೀ ವಿಕಾಸಿನಯನೋತ್ಪಲಾ॥
ಧ್ವಜವಜ್ರಾಂಕುಶಾಬ್ಜಾಂಕರೇಖಾವಂತ್ಯಾಲಿ ಪಶ್ಯತ।
ಪದಾನ್ಯೇತಾನಿ ಕೃಷ್ಣಸ್ಯ ಲೀಲಾಲಲಿತಗಾಮಿನಃ॥
ಕಾಪಿ ತೇನ ಸಮಾಯಾತಾ ಕೃತಪುಣ್ಯಾ ಮದಾಲಸಾ।
ಪದಾನಿ ತಸ್ಯಾಶ್ಚೈತಾನಿ ಘನಾನ್ಯಲ್ಪತನೂನಿ ಚ॥
ಪುಷ್ಪಾಪಚಯಮತ್ರೋಚ್ಚೈಶ್ಚಕ್ರೇ ದಾಮೋದರೋ ಧ್ರುವಮ್।
ಯೇನಾಗ್ರಾಕ್ರಾಂತಮಾತ್ರಾಣಿ ಪದಾನ್ಯತ್ರ ಮಹಾತ್ಮನಃ॥
ಅತ್ರೋಪವಿಶ್ಯ ವೈ ತೇನ ಕಾಚಿತ್ಪುಷ್ಪೈರಲಂಕೃತಾ।
ಅನ್ಯಜನ್ಮನಿ ಸರ್ವಾತ್ಮಾ ವಿಷ್ಣುರಭ್ಯರ್ಚಿತಸ್ತಯಾ॥
ಪುಷ್ಪಬಂಧನಸಮ್ಮಾನಕೃತಮಾನಾಮಪಾಸ್ಯ ತಾಮ್।
ನಂದಗೋಪಸುತೋ ಯಾತೋ ಮಾರ್ಗೇಣಾನೇನ ಪಶ್ಯತ॥
ಅನುಯಾತೈನಮತ್ರಾನ್ಯಾ ನಿತಂಬಭರಮಂಥರಾ।
ಯಾ ಗಂತವ್ಯೇ ದ್ರುತಂ ಯಾತಿ ನಿಮ್ನಪಾದಾಗ್ರಸಂಸ್ಥಿತಿಃ॥
ಹಸ್ತನ್ಯಸ್ತಾಗ್ರಹಸ್ತೇಯಂ ತೇನ ಯಾತಿ ತಥಾ ಸಖೀ।
ಅನಾಯತ್ತಪದನ್ಯಾಸಾ ಲಕ್ಷ್ಯತೇ ಪದಪದ್ಧತಿಃ॥
ಹಸ್ತಸಂಸ್ಪರ್ಶಮಾತ್ರೇಣ ಧೂರ್ತೇನೈಷಾ ವಿಮಾನಿತಾ।
ನೈರಾಶ್ಯಾನ್ಮಂದಗಾಮಿನ್ಯಾ ನಿವೃತ್ತಂ ಲಕ್ಷ್ಯತೇ ಪದಮ್॥
ನೂನಮುಕ್ತಾ ತ್ವರಾಮೀತಿ ಪುನರೇಷ್ಯಾಮಿ ತೇಽಂತಿಕಮ್।
ತೇನ ಕೃಷ್ಣೇನ ಯೇನೈಷಾ ತ್ವರಿತಾ ಪದಪದ್ಧತಿಃ॥
ಪ್ರವಿಷ್ಟೋ ಗಹನಂ ಕೃಷ್ಣಃ ಪದಮತ್ರ ನ ಲಕ್ಷ್ಯತೇ।
ನಿವರ್ತಧ್ವಂ ಶಶಾಂಕಸ್ಯ ನೈತದ್ದೀಧಿತಿಗೋಚರೇ॥
ನಿವೃತ್ತಾಸ್ತಾಸ್ತದಾ ಗೋಪ್ಯೋ ನಿರಾಶಾಃ ಕೃಷ್ಣದರ್ಶನೇ।
ಯಮುನಾತೀರಮಾಸಾದ್ಯ ಜಗುಸ್ತಚ್ಚರಿತಂ ತಥಾ॥
ತತೋ ದದೃಶುರಾಯಾಂತಂ ವಿಕಾಸಿಮುಖಪಂಕಜಮ್।
ಗೋಪ್ಯಸ್ತ್ರೈಲೋಕ್ಯಗೋಪ್ತಾರಂ ಕೃಷ್ಣಮಕ್ಲಿಷ್ಟಚೇಷ್ಟಿತಮ್॥
ಕಾಚಿದಾಲೋಕ್ಯ ಗೋವಿಂದಮಾಯಾಂತಮತಿಹರ್ಷಿತಾ।
ಕೃಷ್ಣ ಕೃಷ್ಣೇತಿ ಕೃಷ್ಣೇತಿ ಪ್ರಾಹ ನಾನ್ಯದುದೀರಯತ್॥
ಕಾಚಿದ್ಭ್ರೂಭಂಗುರಂ ಕೃತ್ವಾ ಲಲಾಟಫಲಕಂ ಹರಿಮ್।
ವಿಲೋಕ್ಯ ನೇತ್ರಭೃಂಗಾಭ್ಯಾಂ ಪಪೌ ತನ್ಮುಖಪಂಕಜಮ್॥
ಕಾಚಿದಾಲೋಕ್ಯ ಗೋವಿಂದಂ ನಿಮೀಲಿತವಿಲೋಚನಾ।
ತಸ್ಯೈವ ರೂಪಂ ಧ್ಯಾಯಂತೀ ಯೋಗಾರೂಢೇವ ಸಾ ಬಭೌ॥

೩. ಇಲ್ಲಿ ಗೋಪಿಯರ ಸಂಖ್ಯೆಯಷ್ಟೇ ರೂಪಗಳನ್ನು ಶ್ರೀಕೃಷ್ಣ ಧರಿಸಿದ್ದು ಅವನ ಮತ್ತೊಂದು ಬಗೆಯ ವಿಶ್ವರೂಪಪ್ರದರ್ಶನದ ರೀತಿಯನ್ನು ತಿಳಿಯಬಹುದು; ರಾವಣನ ಮೂಲಬಲವನ್ನು ಸಂಹರಿಸುವ ಪ್ರಸಂಗದಲ್ಲಿ ಶ್ರೀರಾಮರೂಪದಿಂದ ಶ್ರೀಹರಿಯು ೩೬,೦೦೦ ಮಹೌಘ ಸಂಖ್ಯೆಯ ರಾಮರೂಪಗಳನ್ನು ಧರಿಸಿದ [೧]ಪ್ರಸಂಗವನ್ನು ಇದು ಹೋಲುವುದು.

## ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಷ್ಟಮೋಽಯಂ ಮುದಾಮ್ ॥೬೨**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಅಷ್ಟಮಃ ಸರ್ಗಃ ॥೮॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದುಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಎಂಟನೆಯ ಸರ್ಗವು ಮುಕ್ತಾಯವಾಯಿತು.

*****

---

ತತಃ ಕಾಂಚಿತ್ ಪ್ರಿಯಾಲಾಪೈಃ ಕಾಂಚಿದ್ಭ್ರೂಭಂಗವೀಕ್ಷಿತೈಃ ।
ನಿನ್ಯೇಽನುನಯಮನ್ಯಾಂ ಚ ಕರಸ್ಪರ್ಶೇನ ಮಾಧವಃ ॥ -ವಿಷ್ಣುಪುರಾಣ (೫/೧೩/೧೫-೪೭)

೧. ತ್ರಿಂಶತ್ಸಹಸ್ರಾಣಿ ಮಹೌಘಕಾನಾಮಕ್ಷೋಹಿಣೀನಾಂ ಸಹಷಟ್ಸಹಸ್ರಮ್ ।
ಕ್ರಮೇಣ ಸಂಯೋಜಯತಾಶು ರಾಮಂ ಸಜ್ಜೀಭವಾನೀತಿ ದಿದೇಶ ರಾವಣಃ ॥
ತದಪ್ರಧೃಷ್ಯಂ ವರತಃ ಸ್ವಯಂಭುವೋ ಯುಗಾಂತಕಾಲಾರ್ಣವಘೂರ್ಣಿತೋಪಮಮ್ ।
ಪ್ರಗೃಹ್ಯ ನಾನಾವಿಧಮಸ್ತ್ರಶಸ್ತ್ರಂ ಬಲಂ ಕಪೀನ್ ಶೀಘ್ರತಮಂ ಜಗಾಮ ॥
ಆಗಚ್ಛಮಾನಂ ತದಪಾರಮೇಯಂ ಬಲಂ ಸುಘೋರಂ ಪ್ರಲಯಾರ್ಣವೋಪಮಮ್ ।
ಭಯಾತ್ ಸಮುದ್ವೀಕ್ಷ್ಯ ವಿಷಣ್ಣಚೇತಸಃ ಕಪಿಪ್ರವೀರಾ ನಿತರಾಂ ಪ್ರದುದ್ರುವುಃ ॥
ವರೋ ಹಿ ದತ್ತೋಽಸ್ಯ ಪುರಾ ಸ್ವಯಂಭುವಾ ಧರಾತಲೇಽಲ್ಪೇಽಪಿ ನಿವಾಸಶಕ್ತಿಃ ।
ಅಜೇಯತಾ ಚೇತ್ಯತ ಏವ ಸಾರ್ಕಜಾಃ ಪ್ಲವಂಗಮಾ ದ್ರಷ್ಟುಮಪಿ ಸ್ಮ ನಾಶಕನ್ ॥
ಪ್ರಗೃಹ್ಯ ರಾಮೋಽಥ ಧನುಃ ಶರಾಂಶ್ಚ ಸಮಂತತಸ್ತಾನವಧೀಚ್ಛರೌಘೈಃ ।
ಸ ಏವ ಸರ್ವತ್ರ ಚ ದೃಶ್ಯಮಾನೋ ವಿದಿಕ್ಷು ದಿಕ್ಷು ಪ್ರಜಘಾನ ಸರ್ವಶಃ ॥
ಕ್ಷಣೇನ ಸರ್ವಾಂಶ್ಚ ನಿಹತ್ಯ ರಾಘವಃ ಪ್ಲವಂಗಮಾನಾಮೃಷಭೈಃ ಸುಪೂಜಿತಃ ।
ಅಭಿಷ್ಟುತಃ ಸರ್ವಸುರೋತ್ತಮೈರ್ಮುದಾ ಭೃಶಂ ಪ್ರಸೂನೋತ್ಕರವರ್ಷಿಭಿಃ ಪ್ರಭುಃ ॥
-ಮಹಾಭಾರತತಾತ್ಪರ್ಯನಿರ್ಣಯ(೮/೧೭೯-೧೮೪)

# ೯. ನವಮಃ ಸರ್ಗಃ

(ರಾಸಕ್ರೀಡೆಯ ವರ್ಣನೆ - ೧-೫೭; ಶ್ರೀಕೃಷ್ಣನಿಗೆ ಜಾರತ್ವಾದಿ ದೋಷಾಭಾವಸಮರ್ಥನೆ - ೫೮-೬೦; ವೃಂದಾವನದ ವರ್ಣನೆ - ೬೧-೬೪; ಸರ್ಗೋಪಸಂಹಾರ - ೬೫)

ರಾರಾಜಿಸಿದ ರಾಸವಿಲಾಸ
ಮಂಡಲೀಕೃತಮನೋರಮರಾಮಾ
ಕುಂಡಲದ್ಯುತಿಸುದೀಪಿತಸೀಮಾ[1] ।

---

೧. ಕೃತ್ವಾ ತಾವಂತಮಾತ್ಮಾನಂ ಯಾವತೀರ್ಗೋಪಯೋಷಿತಃ
ರರಾಮ ಭಗವಾಂಸ್ತಾಭಿರಾತ್ಮಾರಾಮೋಽಪಿ ಲೀಲಯಾ ॥
ಧರ್ಮವ್ಯತಿಕ್ರಮೋ ದೃಷ್ಟ ಈಶ್ವರಾಣಾಂ ಚ ಸಾಹಸಮ್ ।
ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥ -ಭಾಗ.(೧೦/೩೧/೨೧,೩೧)
ತಾಭಿಃ ಪ್ರಸನ್ನಚಿತ್ತಾಭಿರ್ಗೋಪೀಭಿಃ ಸಹ ಸಾದರಮ್ ।
ರರಾಸ ರಾಸಗೋಷ್ಠೀಭಿರುದಾರಚರಿತೋ ಹರಿಃ ॥
ರಾಸಮಂಡಲಬಂಧೋಽಪಿ ಕೃಷ್ಣಪಾರ್ಶ್ವಮನುಜ್ಝತಾ ।
ಗೋಪೀಜನೇನ ನೈವಾಭೂದೇಕಸ್ಥಾನಸ್ಥಿರಾತ್ಮನಾ ॥
ಹಸ್ತೇನ ಗೃಹ್ಯ ಚೈಕೈಕಾಂ ಗೋಪೀನಾಂ ರಾಸಮಂಡಲಮ್ ।
ಚಕಾರ ತತ್ಕರಸ್ಪರ್ಶನಿಮೀಲಿತದೃಶಂ ಹರಿಃ ॥
ತತಃ ಪ್ರವವೃತೇ ರಾಸಶ್ಚಲದ್ವಲಯನಿಸ್ವನಃ ।
ಅನುಯಾತಶರತ್ಕಾವ್ಯಗೇಯಗೀತಿರನುಕ್ರಮಾತ್ ॥
ಕೃಷ್ಣಶ್ಶರಚ್ಚಂದ್ರಮಸಂ ಕೌಮುದೀಂ ಕುಮುದಾಕರಮ್ ।
ಜಗೌ ಗೋಪೀಜನಸ್ತ್ವೇಕಂ ಕೃಷ್ಣನಾಮ ಪುನಃ ಪುನಃ ॥
ಪರಿವೃತ್ತಿಶ್ರಮೇಣೈಕಾ ಚಲದ್ವಲಯಲಾಪಿನೀಮ್ ।
ದದೌ ಬಾಹುಲತಾಂ ಸ್ಕಂಧೇ ಗೋಪೀ ಮಧುನಿಘಾತಿನಃ ॥
ಕಾಚಿತ್ ಪ್ರವಿಲಸದ್ಬಾಹುಃ ಪರಿರಭ್ಯ ಚುಚುಂಬ ತಮ್ ।
ಗೋಪೀ ಗೀತಸ್ತುತಿವ್ಯಾಜಾನ್ನಿಪುಣಾ ಮಧುಸೂದನಮ್ ॥
ಗೋಪೀಕಪೋಲಸಂಶ್ಲೇಷಮಭಿಗಮ್ಯ ಹರೇರ್ಭುಜೌ ।
ಪುಲಕೋದ್ಗಮಸಸ್ಯಾಯ ಸ್ವೇದಾಂಬುಘನತಾಂ ಗತೌ ॥
ರಾಸಗೇಯಂ ಜಗೌ ಕೃಷ್ಣೋ ಯಾವತ್ತಾರತರಧ್ವನಿಃ ।
ಸಾಧು ಕೃಷ್ಣೇತಿ ಕೃಷ್ಣೇತಿ ತಾವತ್ ತಾ ದ್ವಿಗುಣಂ ಜಗುಃ ॥
ಗತೇಽನುಗಮನಂ ಚಕ್ರುರ್ವಲನೇ ಸಮ್ಮುಖಂ ಯಯುಃ ।
ಪ್ರತಿಲೋಮಾನುಲೋಮಾಭ್ಯಾಂ ಭೇಜುರ್ಗೋಪಾಂಗನಾ ಹರಿಮ್ ॥
ಸ ತಥಾ ಸಹ ಗೋಪೀಭೀ ರರಾಸ ಮಧುಸೂದನಃ ।
ಯಥಾಬ್ದಕೋಟಿಪ್ರತಿಮಃ ಕ್ಷಣಸ್ತೇನ ವಿನಾಽಭವತ್ ॥
ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಭಿಸ್ತಥಾ ।
ಕೃಷ್ಣಂ ಗೋಪಾಂಗನಾ ರಾತ್ರೌ ರಮಯಂತಿ ರತಿಪ್ರಿಯಾಃ ॥

ಗಂಡಚುಂಬನಕುತೂಹಲಕಾಮಾ-
ಖಂಡಿತಾನನಸರೋರುಹಧಾಮಾ[೧] ॥ ೧ ॥

ಸುತ್ತಲೂ ನೆರೆದ ಸುಂದರರಮಣಿಯರು, ಅವರ ಓಲೆಗಳ ಕಾಂತಿಯಿಂದ ಬಹಳವಾಗಿ ಬೆಳಗುತ್ತಿದ್ದ ದಿಕ್ಕುಗಳು, ಕೆನ್ನೆಗಳನ್ನು ಚುಂಬಿಸುವ ಕಾತರದ ಬಯಕೆಗಳಿಂದ ತುಂಬಿದ ಮುಖಕಮಲಗಳ ಕಾಂತಿ - ಇದರಿಂದಾಗಿ ಆ ರಾಸಕ್ರೀಡೆಯು ಸರ್ವೋತ್ಕೃಷ್ಟವಾಗಿದ್ದಿತು.

ವಿ. : ೧. ರಾಸಕ್ರೀಡೆಯ ಸ್ಥಳದಲ್ಲಿ ಗೋಪಿಯರು ಸುತ್ತ ನೆರೆದಿದ್ದರು; ಅವರು ಧರಿಸಿದ್ದ ಓಲೆಗಳ ಕಾಂತಿಯಿಂದ ಆ ಪ್ರದೇಶ ಝಗಝಗಿಸುತ್ತಿದ್ದಿತು; ಕೃಷ್ಣನ ಕೆನ್ನೆಯನ್ನು ಮುತ್ತಿಡುವ ಕಾತರದಿಂದ ಅವರ ಮುಖಕಮಲಗಳು ಕಮಲದಂತೆ ಅರಳಿದ್ದವು ಎಂದು ಭಾವ; ರಾಮಾ - ಚೆಲುವೆ; ದ್ಯುತಿ - ಕಾಂತಿ; ಧಾಮ - ಕಾಂತಿ.

೨. ಶ್ಲೋಕ ೧ ರಿಂದ ೧೧ರವರೆಗೆ ಅಂತ್ಯಕುಲಕ[೨].

ರಾಸವಿಲಾಸದ ಹಿರಿಮೆ

ಮುಚ್ಯಮಾನಕಬರೀಭರಬಂಧಃ
ಪ್ರೋಚ್ಯಮಾನರಸದಾತೃಮುಕುಂದಃ ।
ಪ್ರಥ್ಯಮಾನನಖಲಾಂಛನಚಂದ್ರಃ
ಕಥ್ಯಮಾನಹರಿವಿಕ್ರಮವೃಂದಃ ॥ ೨ ॥

ಬಿಚ್ಚುತ್ತಿದ್ದ ಮುಡಿಗಳ ಗಂಟುಗಳು, ಉಚ್ಚರಿಸಲ್ಪಡುತ್ತಿದ್ದ ನಲಿವು ನೀಡುವ ಮುಕುಂದನ ಸ್ತೋತ್ರಗಳು, ಪಸರಿಸುತ್ತಿದ್ದ ನಖಗಳ ಗುರುತಿನ ರೂಪದ ಚಂದ್ರ, ವಿವರಿಸಲ್ಪಡುತ್ತಿದ್ದ ಶ್ರೀಹರಿಯ ಮಹಿಮೆಗಳು - ಇದರಿಂದಾಗಿ ರಾಸೋತ್ಸವವು ಉತ್ಕೃಷ್ಟವಾಗಿದ್ದಿತು.

ವಿ. : ಕಬರೀ - ಮುಡಿ.

---

ಸೋಽಪಿ ಕೈಶೋರಕವಯೋ ಮಾನಯನ್ ಮಧುಸೂದನಃ ।
ರೇಮೇ ತಾಭಿರಮೇಯಾತ್ಮಾ ಕ್ಷಪಾಸು ಕ್ಷಪಿತಾಹಿತಾಃ ॥
ತದ್ಭರ್ತೃಷು ತಥಾ ತಾಸು ಸರ್ವಭೂತೇಷು ಚೇಶ್ವರಃ ।
ಆತ್ಮಸ್ವರೂಪರೂಪೋಽಸೌ ವ್ಯಾಪೀ ವಾಯುರಿವ ಸ್ಥಿತಃ ॥
ಯಥಾ ಸಮಸ್ತಭೂತೇಷು ನಭೋಽಗ್ನಿಃ ಪೃಥಿವೀ ಜಲಮ್ ।
ವಾಯುಶ್ಚಾತ್ಮಾ ತಥೈವಾಸು ವ್ಯಾಪ್ಯ ಸರ್ವಮವಸ್ಥಿತಃ ॥ -ವಿಷ್ಣುಪುರಾಣ (೫/೧೩./೪೮-೬೨)

೧. ಸ್ವಾಗತಾವೃತ್ತಮ್ । - ವ್ಯಾ.

೨. ಯಸ್ಮಿನ್ನಸೌ ರಾಸವಿಲಾಸಃ ಜಯತೀತ್ಯುತ್ತರಕುಲಕಮ್ । - ವ್ಯಾ.

ಸರ್ವರೂ ನಲಿದ ರಾಸವಿಲಾಸ

ಹೃಷ್ಟರೋಮನಿಕರೈರ್ವನಸತ್ತ್ವೈ-
ರ್ದೃಷ್ಟರಮ್ಯವಿಭವೋ ಹೃತಚಿತ್ತೈಃ ।
ತುಷ್ಟನಿರ್ಜರಗಣೈರ್ಗಗನಸ್ಥೈ-
ರ್ವೇಷ್ಟಿತಃ ಸ್ತುತಮುಕುಂದಚರಿತ್ರೈಃ ॥ ೩ ॥

ಅದರಿಂದ ಮನಸ್ಸು ಸೆಳೆಯಲ್ಪಟ್ಟ ಕಾಡಿನ ಪ್ರಾಣಿಗಳು ರೋಮಾಂಚನಗೊಂಡು ಅದರ ರಮ್ಯವೈಭವವನ್ನು ನೋಡತೊಡಗಿದ್ದವು; ಶ್ರೀಕೃಷ್ಣನ ಚರಿತ್ರೆಗಳನ್ನು ಹಾಡುತ್ತಿದ್ದ, ಗಗನದಲ್ಲಿ ನೆರೆದಿದ್ದ ಸಂತುಷ್ಟರಾದ ದೇವತೆಗಳ ಗುಂಪುಗಳಿಂದ ಸುತ್ತುವರಿಯಲ್ಪಟ್ಟಿದ್ದಿತು.

ವಿ. : ವನಸತ್ತ್ವ - ಕಾಡುಪ್ರಾಣಿ ; ನಿರ್ಜರ - ದೇವತೆ.

ರಾಸವಿಲಾಸದ ಬಗೆಬಗೆಯ ಹಿರಿಮೆ

ಚಾರುಪಾದತಲಸನ್ನಖಕಾಂತ್ಯಾಽ-
ಧೀರನೂಪುರರುಚಾ ವಿಚರಂತ್ಯಾ ।
ಸಾರರತ್ನಮಯಮಂಡಪಪಂಕ್ತ್ಯಾ-
ಹಾರಿಭೂಮಿವಿಭವೋ ವಿಲಸಂತ್ಯಾ ॥ ೪ ॥

ಸೊಗಸಾದ ಅಂಗಾಲುಗಳ ಉತ್ತಮ ನಖಗಳ ಕಾಂತಿ; ಚಲಿಸುವ ಕಾಲ್ಗೆಜ್ಜೆಗಳ ಕಾಂತಿ, ಇವು-ಗಳಿಂದಾಗಿ ಶ್ರೇಷ್ಠ ರತ್ನಮಯಮಂಟಪಗಳ ಸಾಲುಗಳನ್ನು ಮೀರಿಸುವ ಪ್ರದೇಶದ ವೈಭವವು ಅಲ್ಲಿ ಥಳಥಳಿಸುತ್ತಿದ್ದಿತು.

ಬ್ರಹ್ಮಾದಿಗಳು ನಲಿದ ರಾಸಲೀಲೆ

ವೇಣುವಾದ್ಯಪಟುನಾ ವ್ರಜನಾರೀ-
ಮಾನದೇನ ಹರಿಣಾಽಂತರಹಾರೀ ।
ಆನತಾಬ್ಜಜನಿಮಾರುತಗೌರೀ-
ಪ್ರಾಣನಾಥನಯನೋತ್ಸವಕಾರೀ ॥ ೫ ॥

ವೇಣುವಾದನದಲ್ಲಿ ನಿಪುಣನಾದ, ಗೋಕುಲದ ನಾರಿಯರಿಗೆ ಮನ್ನಣೆ ತಂದುಕೊಟ್ಟ, ಮನಸ್ಸನ್ನು ಸೆಳೆಯುವ ಶ್ರೀಕೃಷ್ಣನಿಂದಾಗಿ ಅದು ತಲೆಬಾಗಿದ ಬ್ರಹ್ಮ - ವಾಯು - ರುದ್ರರಿಗೆ ನೇತ್ರೋತ್ಸವವನ್ನು ಉಂಟುಮಾಡುತ್ತಿದ್ದಿತು ; (ಅಬ್ಜಜನಿ-ಬ್ರಹ್ಮ ; ಗೌರೀಪ್ರಾಣನಾಥ-ಶಿವ).

ಕೃಷ್ಣನ ಹಿರಿಮೆಗೆ ಸಾಕ್ಷಿಯಾದ ರಾಸಲೀಲೆ

ಪಾದಸಂಚರಣದರ್ಶಿತತಾಲಃ
ಸ್ವಾದುಗೀತವರವಿಭ್ರಮಜಾಲಃ।
ಮೋದಿತದ್ವಿಜಮೃಗಾಂಘ್ರಿಪಶೈಲಃ
ಶ್ರೀಧರೇಕ್ಷಣರಸಾಯನಲೋಲಃ॥ ೬ ॥

ತಾಳಕ್ಕೆ ತಕ್ಕಂತೆ ಗೋಪಿಯರು ಹೆಜ್ಜೆಹಾಕುತ್ತಿದ್ದರು; ಇಂಪಾದ ಹಾಡುಗಳಿಂದ ಶ್ರೇಷ್ಠವಾದ ಬಗೆಬಗೆಯ ವಿಲಾಸಗಳನ್ನು ತೋರುತ್ತಿದ್ದರು; ಪಕ್ಷಿಗಳು, ಪ್ರಾಣಿಗಳು, ಮರಗಳು ಬೆಟ್ಟಗಳು ನಲಿಯುತ್ತಿದ್ದವು; ಶ್ರೀಪತಿಯಾದ ಶ್ರೀಕೃಷ್ಣನ ದರ್ಶನವೆಂಬ ರಸಾಯನದಿಂದ ಅದು ರಮಣೀಯವಾಗಿದ್ದಿತು. (ವಿಭ್ರಮ[೧]-ವಿಲಾಸ).

ಬಗೆಬಗೆಯ ಸೊಬಗಿನ ರಾಸಲೀಲೆ

ಕೃಷ್ಣಮೂರ್ತಿಶತವಾಸವನೀಲಃ
ಪುಷ್ಟಗೋಪತರುಣೀಮಣಿಮಾಲಃ।
ಘೃಷ್ಟಪಾಣಿವರದಾಮವಿಲೋಲ-
ಶ್ಚಿತ್ರಹಾರಸರಹಾರಣಶೀಲಃ॥ ೭ ॥

ಶ್ರೀಕೃಷ್ಣನ ನೂರಾರು ರೂಪಗಳೆಂಬ ಇಂದ್ರನೀಲಮಣಿಗಳು, ತಾರುಣ್ಯ ತುಂಬಿದ ಗೋಪ-ಯುವತಿಯರೆಂಬ ಮಣಿಮಾಲೆಗಳು, ಹೆಣೆದ ಕೈಗಳೆಂಬ ಶ್ರೇಷ್ಠವಾದ ಹಗ್ಗಗಳ ರಮ್ಯತೆ, ಚಿತ್ರವಿಚಿತ್ರವಾದ ಮುತ್ತಿನ ಸರಗಳನ್ನು ಮೀರಿಸುವ ಸೊಬಗು – ಇವುಗಳಿಂದ ಕೂಡಿದ್ದಿತು.

ವಿ. : ೧. 'ಕೃಷ್ಣಮೂರ್ತಿಶತ' ಎಂಬಲ್ಲಿ 'ಶತ' ಎಂಬುದಕ್ಕೆ ಕೇವಲ ನೂರು ಎಂದಲ್ಲದೆ ಬಹು ಎಂದರ್ಥ : 'ಶಬ್ದೋ ಬಹುತ್ವವಚನಃ ಶತಮಿತ್ಯತಶ್ಚ'(ಮ.ಭಾ.ತಾ.ನಿ. ೧/೧೬). ಅಲ್ಲಿ ನೆರೆದಿದ್ದ ಬಹುಸಂಖ್ಯೆಯ ಗೋಪಿಯರೊಂದಿಗೆ ಶ್ರೀಕೃಷ್ಣ ಅಷ್ಟೇ ಸಂಖ್ಯೆಯ ರೂಪಗಳಿಂದ ವಿಹಾರ ಮಾಡಿದ್ದರಿಂದ 'ಬಹು' ಎಂಬ ಅರ್ಥವೇ ಉಚಿತ.

೨. ಪರಸ್ಪರ ಬೆಸೆದುಕೊಂಡಿದ್ದ ತೋಳುಗಳೆಂಬ ಹಗ್ಗದ ಗೋಪಿಯರ ಮಧ್ಯದಲ್ಲಿ ಇದ್ದ ಶ್ರೀಕೃಷ್ಣನ ರೂಪಗಳು ಮಂಡಲಾಕಾರವಾಗಿ ಒಂದರ ಬಳಿಕ ಮತ್ತೊಂದರಂತೆ[೨] ನೆಲೆಸಿದ್ದವು ಎಂದು ಭಾವ.

---

೧. 'ವಿಭ್ರಮಃ ಸಂಶಯೇ ಭ್ರಾಂತೌ ಶೋಭಾಯಾಂ ಚ' ಇತಿ ಯಾದವಃ।

– ಭಾಗ.ಶ್ರೀವಿಜಯಧ್ವಜತೀರ್ಥರ ವ್ಯಾಖ್ಯಾನ (೪/೨೯)

೨. ಅನ್ಯೋನ್ಯಾಬದ್ಧಬಾಹುಸೂತ್ರನದ್ಧಾನಾಂ ಗೋಪೀನಾಂ ಮಧ್ಯೇ ಮಧ್ಯೇ ಸ್ಥಿತಕೃಷ್ಣಮೂರ್ತೀನಾಂ ಚ ಮಂಡಲಾಕಾರತಯಾ ಏಕೈಕಾನಂತರ್ಯೇಣಾವಸ್ಥಾನಾದಿತಿ ಭಾವಃ। –ವ್ಯಾ.

### ರಾಸಲೀಲೆಗೆ ಕೃಷ್ಣನಿಂದ ಲಭಿಸಿದ ವೈಭವ

ಹಾರಭಾಸ್ವದುರಸಾ ಸಕಲಾಶಾ-
ಪೂರಿತಸ್ಮರಶತಾಧಿಕಭಾಸಾ ।
ಶಾರದಾಂಬುಜದೃಶಾ ವರಭೂಷಾ-
ಧಾರಿಣಾऽತಿರುಚಿರಃ ಕಮಲೇಶಾ ॥ ೮ ॥

ಮುತ್ತಿನ ಸರಗಳಿಂದಾಗಿ ಹೊಳೆಯುತ್ತಿದ್ದ ವಕ್ಷಃಸ್ಥಳ, ಸಕಲ ದಿಕ್ಕುಗಳಲ್ಲಿ ತುಂಬಿಹೋದ ಸಾವಿರಾರು ಮನ್ಮಥರನ್ನು ಮೀರಿಸುವ ಕಾಂತಿ, ಶರತ್ಕಾಲದ ಕಮಲಗಳಂತಹ ನೋಟ, ತೊಟ್ಟ ಶ್ರೇಷ್ಠ ಒಡವೆಗಳು - ಇಂತಹ ರಮಾಪತಿಯಾದ ಶ್ರೀಕೃಷ್ಣನಿಂದಾಗಿ ಅದು ಅತ್ಯಂತ ಸೊಗಸಾಗಿದ್ದಿತು.

### ರಾಸಲೀಲೆಯ ಇತರ ಬಗೆಯ ವೈಭವ

ಸಪ್ರಿಯಾಮರವಿಮಾನವಿತಾನ-
ಸ್ತೃಪ್ತಬಂದಿಚಯಮಾನವಿತಾನಃ ।
ಸ್ವಲ್ಪಮೇಘರವಮರ್ದಲಸಾಂದ್ರಃ
ಸ್ವಃಪ್ರಸೂನರುಚಿಮದ್ದಲಸಾಂದ್ರಃ ॥ ೯ ॥

ಅಲ್ಲಿ ಸಪತ್ನೀಕರಾದ ದೇವತೆಗಳ ವಿಮಾನರೂಪದ ಹಾರುಬಟ್ಟೆಗಳು, ಸಂತೃಪ್ತರಾದ ಸ್ತುತಿಪಾಠಕರ ಗುಂಪಿನಂತಹ ಪಕ್ಷಿಗಳ ಗಾನ, ಸಣ್ಣದಾಗಿ ಗುಡುಗುತ್ತಿದ್ದ ಮೋಡಗಳ ಗರ್ಜನೆ-ರೂಪದ ಎಡೆಬಿಡದ ಮದ್ದಲೆಗಳು, ಸ್ವರ್ಗದಿಂದ ಸುರಿಸಲ್ಪಟ್ಟ ಕುಸುಮಗಳ ಕಾಂತಿಯಿಂದ ಕೂಡಿದ ಬಿರಿದ ಹೂವಿನ ದಳಗಳು ತುಂಬಿದ್ದವು ; (ಮರ್ದಲ - ಮದ್ದಳೆ).

### ರಾಸಲೀಲೆಯಲ್ಲಿ ಮಂದಮಾರುತದ ಸೊಬಗು

ಜೃಂಭಮಾಣನವಪಲ್ಲವಶೋಭೇ
ಶಂಬರಾರಿಪಿತೃಪಲ್ಲವಶೋಭೇ ।
ಅಂಬುಜೇऽರ್ಪಿತಹೃದಾ[1] ಹಿಮದಾತ್ರಾ
ಜೃಂಭಿತಶ್ಚ ಮರುತಾऽಹಿಮದಾತ್ರಾ ॥ ೧೦ ॥

ಅರಳುವ ಹೊಸ ಚಿಗುರುಗಳ ಕಾಂತಿಯ ಮನ್ಮಥಜನಕನಾದ ಶ್ರೀಕೃಷ್ಣನ ಪಾದದ ನಸು-ಕಾಂತಿಯ ಕಮಲದ ಮೇಲೆ ಬೀಸಿಬರುತ್ತಿದ್ದ, [2]ತಂಪು ನೀಡುವ, ಬಿಸಿಯನ್ನು ಪರಿಹರಿಸುವ

---

೧. ಅನೇನ ಮಾಂದ್ಯಸೌರಭ್ಯೇ ದರ್ಶಿತೇ । -ವ್ಯಾ.

೨. ಹಿಮಸ್ಯ ಶೀತಸ್ಯ ದಾತಾ । ತೇನ ಅಹಿಃ ಸರ್ಪಃ । 'ಮದಿ ಹರ್ಷೇ' ಇತಿ ಧಾತೋಃ ಮದಾಯ ಹರ್ಷಾಯ ಅತ್ತಾ

ಗಾಳಿಯಿಂದ ಆ ರಾಸೋತ್ಸವವು ಮೆರೆಯುತ್ತಿದ್ದಿತು; (ಶಂಬರಾರಿ - ಶಂಬರ ಎಂಬ ಅಸುರನನ್ನು ಸಂಹರಿಸಿದವನು - ಮನ್ಮಥ).

**ವೇಷಭೂಷಗಳ ವೈಭವದ ರಾಸವಿಲಾಸ**

**ಮಂಜುಶಿಂಜದತಿಭಾಸುರಭೂಷಃ**
**ಕಂಜನಾಭಬಹುಸುಂದರವೇಷಃ।**
**ಅಂಸಲಗ್ನಕರಸಾರಸಪಾಶಃ**
**ಸಂಶ್ರುತೋ ಜಯತಿ ರಾಸವಿಲಾಸಃ॥ ೧೧॥**

ಮಂಜುಳಧ್ವನಿಗೈಯ್ಯುವ ಹೊಳೆಹೊಳೆಯುವ ಭೂಷಣಗಳು, ಪದ್ಮನಾಭನಾದ ಶ್ರೀಕೃಷ್ಣನ ಅತಿ ಚೆಲುವಾದ ರೂಪಗಳು, ಹೆಗಲ ಮೇಲಿರಿಸಿದ ಕರಕಮಲಗಳ ಸರಪಳಿ, ಇಂತಹ ಪ್ರಖ್ಯಾತವಾದ ರಾಸಕ್ರೀಡೆಯು ತುಂಬಾ ಉತ್ಕೃಷ್ಟವಾಗಿದ್ದಿತು; (ಅಹಿಮ - ಉಷ್ಣ).

**ಋಷಿಮುನಿಗಳಿಗೂ ಮಾನ್ಯನಾದ ಶ್ರೀಕೃಷ್ಣ**

**ಪುಂಡರೀಕಮುಖಮುಖ್ಯವಿಕಾಸಃ**
**ಖಂಡಿತಾರಿತಿಮಿರೋರುತರಾಶಃ।**
**ಶೌಂಡಮಧ್ವಕವಿವರ್ಣ್ಯವಿಲಾಸಃ**
**ಪಾಂಡುರಂಗರವಿರತ್ರ ಲಲಾಸ॥ ೧೨॥**

ಪುಂಡರೀಕ ಮೊದಲಾದವರ ವಿಕಾಸಕ್ಕೆ ಕಾರಣವಾಗಿದ್ದ, ಶತ್ರುಗಳೆಂಬ ನಿಬಿಡಾಂಧಕಾರದ ಬಹುಬಗೆಯ ಆಶೆ ಆಕಾಂಕ್ಷೆಗಳನ್ನು ನಾಶಪಡಿಸುತ್ತಿದ್ದ, ಕುಶಲರಾದ ಮಧ್ವಾಚಾರ್ಯರೆಂಬ ಶ್ರೇಷ್ಠಕವಿಗಳಿಂದ ವರ್ಣಿಸಲು ಯೋಗ್ಯವಾದ ವಿಲಾಸಗಳಿಂದ ಕೂಡಿದ, ಶ್ರೀಪಾಂಡುರಂಗ ಎಂಬ ಸೂರ್ಯ ಅಲ್ಲಿ ಕಂಗೊಳಿಸಿದ.

ವಿ. : 'ಪುಂಡರೀಕಮುಖಮುಖ್ಯವಿಕಾಸಃ' ಎಂಬುದಕ್ಕೆ ಕಮಲದಂತಹ ಮುಖದ ಗೋಪಿಯರ ಶ್ರೇಷ್ಠವಿಕಾಸಕ್ಕೆ ಕಾರಣವಾದ ಎಂಬ ಅರ್ಥವೂ ವಿವಕ್ಷಿತ; **ಶೌಂಡ** - ಕುಶಲ.

**ರಾಸಕ್ರೀಡೆಯ ವಿಶೇಷತೆ**

**ಗಾತೃಕೋಕಿಲರವಶ್ರುತಿಪೂರ್ತೌ**
**ಸ್ಫೀತಭೃಂಗನಿನದೈಃ ಶ್ರುತಿಪೂರ್ತೌ।**

---

ಭಕ್ಷಕಃ ಯಸ್ಯ । ಸರ್ಪಾಹಾರೋ ಯೋಗ್ಯ ಇತ್ಯರ್ಥಃ। ಅಹಿಮಂ ಉಷ್ಣಂ ದ್ಯತಿ ಖಂಡಯತೀತ್ಯಹಿಮದಾತಾ ತೇನೇತಿ ವಾ। - ವ್ಯಾ.

ಜಾತು ಯತ್ಪದಮಸಿದ್ಧಮೃಗಾದ್ಯೈ-
ರ್ಧ್ಯಾತಮೇತದಿಹ ಸಿದ್ಧಮೃಗಾದ್ಯೈಃ ॥ ೧೩ ॥

ಹಾಡುವ ಕೋಗಿಲೆಗಳ ಧ್ವನಿಯು ಕಿವಿಗಳಲ್ಲಿ ತುಂಬಿದ್ದಿತು; ಭ್ರಮರಗಳ ಝೇಂಕಾರವು ತಾನ ನೀಡುವುದಾಗಿದ್ದಿತು; ಋಗಾದಿ ವೇದಗಳಿಗೆ ಸಾಕಲ್ಯೇನ ಒಮ್ಮೆಯೂ ಸಿಗದಂತಹ ಕೃಷ್ಣನ ಪಾದದ ಧ್ಯಾನವನ್ನು ಅಲ್ಲಿ ಸಿದ್ಧರು, ಮೃಗಗಳು ಮೊದಲಾದವುಗಳು ಮಾಡುತ್ತಿದ್ದವು[೧].

ವಿ. : ಮೂರನೆಯ ಪಾದದಲ್ಲಿನ[೨] ಅಸಿದ್ಧಮೃಗಾದ್ಯೈಃ ಎಂಬುದಕ್ಕೆ 'ಅಸಿದ್ಧಮ್ ಋಗಾದ್ಯೈಃ' ಎಂಬುದಾಗಿ ಪದಚ್ಛೇದ.

ಕ್ಷೀರಸಾಗರವನ್ನು ಮೀರಿಸಿದ ರಾಸಲೀಲೆ

[೩]ಹಸ್ತಿನೀಶತರಮಾಕೃತಿಪೂರಃ
ಕೃಷ್ಣಮೂರ್ತಿಸುರಪಾದಪಸಾರಃ ।
ಧಿಕ್ಚಕಾರ ಸ ಪಯೋಬ್ಧಿಮುದಾರಃ
ಸುದ್ಯುತಿಸ್ಮಿತಪಯೋಮೃತಧಾರಃ ॥ ೧೪ ॥

ಹಸ್ತಿನೀಜಾತಿಯ ಗೋಪಿಕೆಯರ ರೂಪದ ನೂರಾರು ರಮಾರೂಪಗಳು, ಕೃಷ್ಣನ ರೂಪಗಳು ಎಂಬ ಉತ್ಕೃಷ್ಟವಾದ ದೇವವೃಕ್ಷಗಳು, ಶೋಭನಕಾಂತಿಯ ಉತ್ತಮ ಮಂದಹಾಸರೂಪದ ಅಮೃತಧಾರೆ – ಇವುಗಳಿಂದ ಕೂಡಿದ ಆ ಶ್ರೇಷ್ಠವಾದ ರಾಸಕ್ರೀಡೆಯು ಕ್ಷೀರಸಾಗರವನ್ನು ಮೀರಿಸಿತು.

ವಿ. : ಇಲ್ಲಿಯೂ ಸಹ (೭ನೆಯ ಶ್ಲೋಕದ ವಿವರಣೆಯಲ್ಲಿ ತಿಳಿಸಿದಂತೆ) 'ಹಸ್ತಿನೀಶತರಮಾ-ಕೃತಿಪೂರಃ' ಎಂಬಲ್ಲಿ 'ಶತ' ಎಂಬುದಕ್ಕೆ ಬಹು ಎಂದೇ ಅರ್ಥ ; ಇದರಿಂದ ಶ್ರೀಹರಿಯಂತೆ ಮಹಾಲಕ್ಷ್ಮಿಗೂ ಅನಂತರೂಪಗಳು ಎಂಬ ವಿಶೇಷಾಂಶ ತಿಳಿಯುವುದು; **ಸುರಪಾದಪ** - ದೇವತರು, ಕಲ್ಪವೃಕ್ಷ.

---

೧. ರಾಸೋತ್ಸವೇ ಕೃಷ್ಣಃ ಸಕಲದೃಗ್ವಿಷಯೋಽಭೂದಿತ್ಯರ್ಥಃ । –ವ್ಯಾ.

೨. ಪೃಥುಂ ಸುವೃತಂ ಮಸೃಣಂ ವಿತಸ್ತಿಮಾತ್ರೋನ್ನತಂ ಕೌ ವಿನಿಖನ್ಯ ಶಂಕಮ್ ।
ಆಕ್ರಮ್ಯ ಪದ್ಭ್ಯಾಮಿತರೇತರಂ ತು ಹಸ್ತೈರ್ಭ್ರಮೋಽಯಂ ಖಲು ರಾಸಗೋಷ್ಠಿ॥
– ನೀಲಕಂಠಕೃತ ಹರಿವಂಶ ವ್ಯಾಖ್ಯಾನದಲ್ಲಿನ ಕೋಶವಚನ

೩. ಚಿತ್ರಿಣೀ, ಹಸ್ತಿನೀ, ಶಂಖಿನೀ ಮತ್ತು ಪದ್ಮಿನೀ ಎಂಬುದಾಗಿ ಸ್ತ್ರೀಯರಲ್ಲಿ ನಾಲ್ಕು ವಿಧ; ಹಸ್ತಿನೀಸ್ತ್ರೀಯ ಲಕ್ಷಣ ಹೀಗಿದೆ:
ಸ್ಥೂಲಾಧರಾ ಸ್ಥೂಲನಿತಂಬಭಾಗಾ ಸ್ಥೂಲಾಂಗುಲೀ ಸ್ಥೂಲಕುಚಾ ಸುಶೀಲಾ ।
ಕಾಮೋತ್ಸುಕಾ ಗಾಢರತಿಪ್ರಿಯಾ ಚ ನಿತಂಬಖರ್ವಾ ಖಲು ಹಸ್ತಿನೀ ಸ್ಯಾತ್॥ –ರತಿಮಂಜರೀ

### ವರ್ಣನಾತೀತವಾದ ರಾಸೋತ್ಸವ

ರಾಸೋತ್ಸವಸ್ಯ ಹಿ ರಸಂ ಭುವಿ ವರ್ಣಯೇತ್ ಕಃ
ಶ್ರೀಶೋಡುರಾಜನಿಜಸೌಭಗರಂಜಿತಸ್ಯ ।
ಯದ್ಭೃಂಗಹಂಸಶುಕಕೋಕಿಲಕೇಕಿಮುಖ್ಯಾ
ದ್ರಷ್ಟುಂ ಪ್ರಹೃಷ್ಟಮನಸಃ ಪರಿತಃ ಸಮೀಯುಃ ॥ ೧೫ ॥

ದುಂಬಿಗಳು, ಹಂಸಗಳು, ಗಿಳಿಗಳು, ಕೋಗಿಲೆಗಳು, ನವಿಲುಗಳು ಮೊದಲಾದವುಗಳು ಸಹ ಯಾವುದನ್ನು ಕಾಣಲೆಂದು ಹರ್ಷತುಂಬಿದ ಮನಸ್ಸಿನಿಂದ ಸುತ್ತಲೂ ನೆರೆದವೋ, ಅಂತಹ ಶ್ರೀಶನಾದ ಶ್ರೀಕೃಷ್ಣನೆಂಬ ಚಂದ್ರನ ಸಹಜಕಾಂತಿಯಿಂದ ಬೆಳಗಿದ ಆ ರಾಸಕ್ರೀಡೆಯ ವೈಭವವನ್ನು ಭೂಮಿಯಲ್ಲಿ ಯಾವನು ತಾನೇ ಬಣ್ಣಿಸಿಯಾನು?

ವಿ. : ಪ್ರಾಣಿಗಳಿಗೂ ಆಕರ್ಷಕವೆನ್ನಿಸಿದ ರಾಸಕ್ರೀಡೆಯ ಹಿರಿಮೆ ಇಲ್ಲಿ ವರ್ಣಿತವಾಗಿದೆ. ಉಡುರಾಜ – ಚಂದ್ರ.

### ಮೃಗಪಕ್ಷಿಗಳಿಗೂ ನಲಿವು ನೀಡಿದ ರಾಸಲೀಲೆ

ಯತ್ತಾಂಡವಂ ಪಕ್ಷಿಮೃಗಾಂಘ್ರಿಪಾದ್ರೀ-
ನುದ್ಭೂತಹರ್ಷಾಂಬುದೃಶೋ[1]ಹ್ಯಕಾರ್ಷೀತ್ ।
ಉನ್ನಮ್ರರೋಮ್ಣಃ ಸ ಮದಂತರಂಗೇ
ನರ್ನರ್ತು ಮಾಮೀದೃಶಮೇವ ಕುರ್ವನ್ ॥ ೧೬ ॥

ಯಾರ ನರ್ತನವು ಪಕ್ಷಿಗಳು, ಮೃಗಗಳು, ಮರಗಿಡಗಳು ಹಾಗೂ ಬೆಟ್ಟಗಳನ್ನು ಸಹ ಆನಂದಾಶ್ರುಗಳಿಂದ ಕೂಡಿದ ನೇತ್ರವುಳ್ಳವರನ್ನಾಗಿ, [2]ರೋಮಾಂಚನಗೊಂಡವುಗಳನ್ನಾಗಿ ಮಾಡಿತೋ, ಅಂತಹ ಶ್ರೀಕೃಷ್ಣನು ನನ್ನನ್ನು ಸಹ ಅಂತೆಯೇ ಮಾಡುತ್ತಾ ನನ್ನ ಅಂತರಂಗದಲ್ಲಿ ಕುಣಿದಾಡಲಿ.

ವಿ. : ತಾಂಡವ – ನಾಟ್ಯ. ಶ್ರೀವ್ಯಾಸರಾಜರ 'ತರ್ಕತಾಂಡವ' ಕೃತಿಯ ಹೆಸರಿನಲ್ಲಿ ಬಂದಿರುವ ತಾಂಡವ ಶಬ್ದವೂ ಶ್ರೀಕೃಷ್ಣನ ಈ ಅದ್ಭುತ ತಾಂಡವದ ಸಂಕೇತದಂತೆ ಕಾಣುವುದು; ಶ್ರೀವ್ಯಾಸರಾಜರು ಶ್ರೀಗೋಪಾಲಕೃಷ್ಣನ ವಿಶೇಷ ಆರಾಧಕರು ಎಂಬುದು ಸುಪ್ರಸಿದ್ಧವೇ ಆಗಿದೆ.

---

೧. ಹೀತ್ಯನೇನ "ಹೃಷ್ಟತ್ತ್ವಚೋऽತ್ರು ಮುಮುಚುಸ್ತರವಃ ಸದರ್ಭಾಃ" ಇತಿ ಪುರಾಣಪ್ರಸಿದ್ಧಿಂ ಸೂಚಯತಿ । –ವ್ಯಾ.
೨. ಚಿತ್ತದ್ರವಾಯೋಗ್ಯಪರ್ವತಾದೀನಾಮಪಿ ಚಿತ್ತದ್ರವದಾನಾತ್ ಮಮ ಮಾನುಷಜಾತೇಃ ಚಿತ್ತದ್ರವೋ ನ ದುಷ್ಕರ ಇತಿ ಭಾವಃ। –ವ್ಯಾ.

## ನವಿಲು ಮೊದಲಾದವು ಮಾಡಿದ ಶ್ರೀಕೃಷ್ಣನ ಸೇವೆ

**ಬರ್ಹೀ ತರ್ಹಿ ನನರ್ತ ಯಂ ಪ್ರತಿ ನಗಾಃ ಪುಷ್ಪಂ ಸಮರ್ಪ್ಯಾರ್ಚಯನ್**
**ಸ್ವೈರಂ ಮಂಜುರವಾ ಜಗುರ್ಮಧುಕರಾಃ ಪ್ರೈಕ್ಷಂತ ಸಾಕ್ಷಾನ್ಮೃಗಾಃ ।**
**ಉತ್ಕ್ಷಿಪ್ತೋಚ್ಚಫಣಾಃ ಫಣೀಶ್ವರಗಣಾಃ ಕಂಪೇನ ಯಂ ಪರ್ಯಗುಃ**
**ಸೋಽಯಂ ಶ್ರೀರಮಣೋ ಮಯಾ ರಚಿತಯಾ ಪ್ರೀಣಾತು ದೇವೋಽರ್ಚಯಾ॥**

ಆಗ ಶ್ರೀಕೃಷ್ಣನಿಗಾಗಿ ನವಿಲು ನಾಟ್ಯವಾಡಿತು; ಮರಗಳು ಪುಷ್ಪಗಳನ್ನು ಸಮರ್ಪಿಸಿ ಪೂಜಿಸಿದವು; ದುಂಬಿಗಳು ಸ್ವೇಚ್ಛೆಯಿಂದ ಮಂಜುಲಧ್ವನಿಯಿಂದ ಹಾಡಿದವು; ಜಿಂಕೆಗಳು ಬಿಟ್ಟ ಕಣ್ಣುಗಳಿಂದ ನೋಡತೊಡಗಿದವು; ಹೆಡೆಗಳನ್ನು ಮೇಲೆತ್ತಿಕೊಂಡು ಹಾವುಗಳ ಗುಂಪುಗಳು ತಲೆದೂಗುತ್ತಾ ಸುತ್ತುವರೆದವು; ಅಂತಹ ಲಕ್ಷ್ಮೀರಮಣನಾದ, ಶ್ರೀಕೃಷ್ಣದೇವನು ನಾನು ಮಾಡಿದ ಪೂಜೆಯಿಂದ ಸುಪ್ರೀತನಾಗಲಿ.

ವಿ. : ಇಲ್ಲಿ ಶ್ರೀವಾದಿರಾಜರು ಮಾಡಿದ ಪೂಜೆ ಎಂದರೆ ಅವರು ಮಾಡಿದ ರಾಸಕ್ರೀಡೆಯ ವರ್ಣನೆ ಎಂದರ್ಥ: ಮಯಾ ರಚಿತಯಾ ಅರ್ಚಯಾ ರಾಸಕ್ರೀಡಾವರ್ಣನಲಕ್ಷಣಪೂಜಯಾ। (ವ್ಯಾ.); ಬರ್ಹೀ - ನವಿಲು; ನಗಾಃ - ಮರಗಳು.

## ರಾಸಕ್ರೀಡೆಯ ಸ್ಮರಣೆಯ ಫಲಶ್ರುತಿ

**ರಾಸೋತ್ಸವಸ್ಮರಣಲಾಲಸಮಾನಸಾನಾಂ**
**ನಾಸಹ್ಯಬಂಧಮಿಹ ಮೋಚಯತೀತ್ಯಪೂರ್ವಮ್ ।**
**ಯತ್ಕೇಶಪಕ್ಷಕುಚಕಂಚುಕರಮ್ಯನೀವೀ-**
**ಬಂಧಂ ಸ ವಿಶ್ಲಥಯತೇ ವ್ರಜಬಲ್ಲವೀನಾಮ್ ॥ ೧೮ ॥**

ರಾಸಕ್ರೀಡೆಯ ಸ್ಮರಣೆಯಲ್ಲಿ ಕಾತರಮನಸ್ಕರಾದವರ ಅಪೂರ್ವವಾದ ಸಂಸಾರದ ಕಠಿನಬಂಧನವನ್ನು ಸಹ ಶ್ರೀಕೃಷ್ಣನು ಬಿಡುಗಡೆ ಮಾಡುವನು ಎಂಬುದು ಅಚ್ಚರಿ ಏನಲ್ಲ! ಏಕೆಂದರೆ, ಆ ಪ್ರಸಂಗದಲ್ಲಿ ಶ್ರೀಕೃಷ್ಣನು ಗೋಕುಲದ ಸ್ತ್ರೀಯರ ಮುಡಿ, ಸ್ತನಕಂಚುಕ ಹಾಗೂ ರಮಣೀಯವಾದ ನೀವಿಗಳ ಬಂಧವನ್ನು ಬಿಡುಗಡೆ ಮಾಡಿದನಲ್ಲವೆ !

ವಿ. : ಈ ರಾಸಕ್ರೀಡೆಯಲ್ಲಿ ಮೇಲೆ ಹೇಳಿದಂತೆ ಅನೇಕ ಬಂಧನಗಳನ್ನು ಕಳಚಿ ಹಾಕಿದ ಶ್ರೀಕೃಷ್ಣ ನಮ್ಮ ಒಂದು ಸಂಸಾರಬಂಧನವನ್ನು ಕಳೆಯಲಾರನೆ! ಎಂಬುದು ಇಲ್ಲಿಯ ಧ್ವನಿ[೧].

೧. ಐಕ್ಯೈಕಾಂಗನಾನಿಷ್ಠಬಂಧತ್ರಯಮೋಚಕಸ್ಯ ರಾಸಸ್ಯ ಸ್ಮರತಾಮೇಕಬಂಧಮೋಕ್ಷಣಂ ಕಿಮಾಶ್ಚರ್ಯಮಿತಿ ಭಾವಃ। -ವ್ಯಾ.

### ಜಗತ್ತೇ ಸಂಭ್ರಮಿಸಿದ ರಾಸಲೀಲೆ

ಯಸ್ಮಿನ್ನುದ್ಯತಿ ನಾಗಕೇಕಿನಕುಲಾಃ ಘೇರುಂಡಸಿಂಹದ್ವಿಪಾ
ಗೋಶಾರ್ದೂಲಮೃಗಾಃ ಕಿರಾತವಿಹಗಾ ವೈರಂ ವಿಸೃಜ್ಯ ಸ್ಫುಟಮ್ ।
ಮಿತ್ರಾಮಿತ್ರಕಲತ್ರಪುತ್ರವಿರಸಾಸ್ತಸ್ಥುಃ ಸಮಂ ಷಡ್ರಿಪೂಂ-
ಸ್ತದ್ವೃಂದಾವನರಾಸಮಂಡಲಮಹಃ ಸ್ವಾಂತಸ್ಥಿತಾನ್ ಕೃಂತತು [1] ॥ ೧೯ ॥

ಆ ರಾಸೋತ್ಸವವು ನಡೆದಾಗ ಹಾವುಗಳು, ನವಿಲುಗಳು, ಮುಂಗುಸಿಗಳು, ಭೇರುಂಡಗಳು, ಸಿಂಹಗಳು, ಆನೆಗಳು, ಗೋವುಗಳು, ಹುಲಿಗಳು, ಜಿಂಕೆಗಳು, ಕಿರಾತಪಕ್ಷಿಗಳು, ತಮ್ಮಲ್ಲಿನ ವೈರವನ್ನು ಸಂಪೂರ್ಣವಾಗಿ ತೊರೆದು, ಗೆಳೆಯರು, ಶತ್ರುಗಳು, ಪತ್ನಿಯರು, ಪುತ್ರರು ಮೊದಲಾದವರ ಬಗ್ಗೆ ಆಸಕ್ತಿಯನ್ನು ತೊರೆದು, ಒಟ್ಟಾಗಿ ನಿಂತವು; ಅಂತಹ ಆ ವೃಂದಾವನದಲ್ಲಿ ನಡೆದ ರಾಸಕ್ರೀಡೆಯ ಸೊಬಗು ಮನಸ್ಸಿನಲ್ಲಿ ನೆಲೆಸಿರುವ ಕಾಮಾದಿ [2] ಷಡ್ರಿಪುಗಳನ್ನು ಅಳಿಸಲಿ.

ವಿ. : ಶ್ರೀವಾದಿರಾಜರಂತಹ ಮಹನೀಯರ ಆಸನದ ಕೆಳಗೆ ಆಶ್ರಯ ಪಡೆದ [3] ಇಲಿ ಸರ್ಪಗಳಲ್ಲಿಯೇ ಪರಸ್ಪರ ವೈರ ಮಾಯವಾಗಿ ಮೈತ್ರಿ ಮೂಡಿತು ಎಂಬ ವಿವರ ಅವರ ಚರಿತ್ರೆಯಲ್ಲಿ ದಾಖಲಾಗಿದೆ; ಎಂದ ಮೇಲೆ ಇನ್ನು ಸರ್ವೋತ್ತಮನಾದ ಶ್ರೀಹರಿಯ ರಾಸೋತ್ಸವವು ಹಾಗೆ ಪಶುಪಕ್ಷಿಗಳಲ್ಲಿನ ವೈರಭಾವವನ್ನು ಅಳಿಸಿದ್ದರಲ್ಲಿ ಅಚ್ಚರಿ ಏನಿದೆ? ಎಂದು ತಿಳಿಯಬೇಕು; ಕೇಕಿ - ನವಿಲು; ನಕುಲ - ಮುಂಗುಸಿ; ಘೇರುಂಡ - ಭೇರುಂಡ; ಅಮಿತ್ರ- ಶತ್ರು.

### ರಾಸಲೀಲೆಯ ಶ್ರೀಕೃಷ್ಣನ ಲೀಲಾಭಂಗಿ

ಅಂಸಾಲಂಬಿತಪಾಣಿಪದ್ಮಲಲನಾಸಂಸಕ್ತಪೋಲಸ್ಥಲೀ-
ಸಂಸಕ್ತೋಜ್ಜ್ವಲಗಂಡಮಂಡಲರುಚಂ ಹಂಸಾಸನಾದ್ಯೈಃ ಸ್ತುತಮ್ ।
ವಂಶಸ್ಥಾಪಿತಮಂಗಲಾಂಗುಲಿದಲಂ ಸ್ರಂಸದ್ವಿಭೂಷಾವಲಿಂ
ತಂ ಸೇವೇ ಹರಿನೀಲನೀಲಮಮಲಂ ಸಂಸಾರಸಾರಂ ಹರಿಮ್ ॥ ೨೦ ॥

ತನ್ನ ಹೆಗಲ ಮೇಲೆ ಹಸ್ತಕಮಲಗಳನ್ನಿರಿಸಿದ ಗೋಪಿಯರ ಗುಂಪಿನ ಕೆನ್ನೆಯ ಪ್ರದೇಶಗಳಲ್ಲಿ ಜೋಡಿಸಿದ ಕಪೋಲಪ್ರಾಂತದ ಕಾಂತಿ, ಹಂಸವಾಹನರಾದ ಬ್ರಹ್ಮ ಮೊದಲಾದವರ ಸ್ತುತಿ, ಕೊಳಲಿನ ಮೇಲೆ ತನ್ನ ಮಂಗಳಕರವಾದ ಬೆರಳತುದಿಗಳು, ಜಾರಿಬೀಳುವ ಆಭರಣಗಳ ಸಾಲುಗಳು, ಇಂದ್ರನೀಲದಂತಹ ನೀಲವರ್ಣ, ಇಂತಹ ಸಂಸಾರಕ್ಕೆ ಸಾರಭೂತನಾದ, ದೋಷರಹಿತನಾದ ಶ್ರೀಕೃಷ್ಣನನ್ನು ನಾನು ಸೇವಿಸುವೆನು.

---

೧. ನಾಗೈರ್ಯುಕ್ತಾಃ ಕೇಕಿನ ಇತಿ ಮಧ್ಯಮಪದಲೋಪಿಸಮಾಸಸಂಭವಾತ್ । ಏವಮುತ್ತರತ್ರಾಪಿ । -ವ್ಯಾ.
೨. ಅನೇನ ಕಾಮಲೋಭಮೋಹಮದಾನಾಂ ಪರಿಹಾರಃ ಪ್ರದರ್ಶಿತೋ ಭವತಿ । - ವ್ಯಾ.
೩. ಯಲರುಣಿಭಯಕಂಜಿಲಿ ನಿಮ್ಮಾಸನ ಕೆಳಗಿರೆ ಕಂಡದನುಳುಹಿದ ಕರುಣೆ। ವಾದಿರಾಜ - ಶ್ರೀಜಗನ್ನಾಥದಾಸರು

ವಿ. : ೧. ಶ್ರೀಹರಿಯೇ ಸಂಸಾರಕ್ಕೆ ಸಾರ ಎಂಬ ಇಲ್ಲಿಯ ಮಾತು ಶ್ರೀಕೃಷ್ಣಾಮೃತ-ಮಹಾರ್ಣವದ ಆಧಾರವನ್ನು ಹೊಂದಿದೆ: **ಅಸಾರೇ ಖಲು ಸಂಸಾರೇ ಸಾರಾತ್ ಸಾರತರೋ ಹರಿಃ।** -ಕೃಷ್ಣಾಮೃತ ಮಹಾರ್ಣವ (೭೧).

೨. ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ - ಎಂಬ ಶ್ರೀಪುರಂದರದಾಸರ ಮಾತು ಇಲ್ಲಿ ಗಮನಾರ್ಹ; ಸ್ರಂಸದ್ - ಜಾರುವ ; ಅಂಸ - ಭುಜ; ಹಂಸಾಸನ - ಬ್ರಹ್ಮ.

ಸಂಸಾರಮೋಚಕನಾದ ಶ್ರೀಕೃಷ್ಣ

**ಹಾರಾಧಾರಮನೋಹರೋರಸಿ ಲಸನ್ನಾರೀಕರಾಂಭೋರುಹಂ**
**ತಾರಾಧೀಶಮುಖಂ ವಿಹಾರಸರಸೋದಾರಸ್ಫುರದ್ವೀಕ್ಷಣಮ್ ।**
**ಸ್ಮೇರಂ ಚಾರುಪರಾರ್ಧ್ಯಭೂಷಣಧರಂ ಕಾರುಣ್ಯವಾರಾಂನಿಧಿಂ**
**ಕಾರಾಗಾರಮಿದಂ ವಿಹಾಯ ಭಜ ತಂ ಧಾರಾಧರಶ್ಯಾಮಲಮ್ ॥ ೨೧ ॥**

ಮುತ್ತಿನ ಮಾಲೆಗಳನ್ನು ಧರಿಸಿದ ಮನೋಹರವಾದ ವಕ್ಷಸ್ಥಳದಲ್ಲಿ ಶೋಭಿಸುವ ಗೋಪಸ್ತ್ರೀಯರ ಕರಕಮಲಗಳು, ಚಂದ್ರನಂತಹ ಮುಖ, ಉತ್ಕೃಷ್ಟವಿಹಾರದಿಂದಾಗಿ ರಸಪೂರಿತವಾದ ಹೊಳೆಯುವ ನೋಟ, ಕಿರುನಗೆ, ರಮಣೀಯವಾದ ಶ್ರೇಷ್ಠ ಭೂಷಣಗಳು, ಇಂತಹ ನೀಲಮೇಘದಂತಹ ಶ್ಯಾಮಲವರ್ಣದ ಕರುಣಾಸಾಗರನಾದ ಆ ಶ್ರೀಕೃಷ್ಣನನ್ನು ಈ ಸಂಸಾರವೆಂಬ ಕಾರಾಗೃಹವನ್ನು ತೊರೆದು ಸೇವಿಸಿರಿ.

ವಿ. : ಶ್ರೀಕೃಷ್ಣನ ಸೇವೆಯು ಸಂಸಾರಮೋಚಕ ಎಂದು ಭಾವ ; ತಾರಾಧೀಶ - ಚಂದ್ರ ; ಪರಾರ್ಧ್ಯ - ಶ್ರೇಷ್ಠ (ಅಪಾರ ಬೆಲೆಬಾಳುವ); ಧಾರಾಧರ - ಮೇಘ ; ವಾರಾಂನಿಧಿ - ಸಮುದ್ರ; ಕಾರಾಗಾರ - ಕಾರಾಗೃಹ ; ಅಂಭೋರುಹ -ಕಮಲ.

ಮಹಾರಾಜನ ವೈಭವ

**ವಿಸ್ತೀರ್ಣಾಮರಶಾಖಿರತ್ನಭವನೇ ಛತ್ರಾಯಿತಾಹೀಶ್ವರೇ**
**ಸತ್ಸಿಂಹಾಸನಶೋಭಿಮೂಲವಿಭವೇ ವಿಭ್ರಾಜಮಾನಂ ವಿಭುಮ್ ।**
**ಭೃತ್ಯೈರ್ಬ್ರಹ್ಮಭವಾದಿಭಿಃ ಪರಿವೃತಂ ಸದ್ಬಂದಿಭಿಃ ಸಂಸ್ತುತಂ**
**ಚಿತ್ತೋಪಾಸ್ಯ ವಿಲೋಲಗೋಪಲಲನಾನೇತ್ರಾಂತಸಚ್ಚಾಮರಮ್ ॥ ೨೨ ॥**

ವಿಶಾಲವಾದ ದೇವವೃಕ್ಷಗಳೆಂಬ ರತ್ನಭವನ, ಛತ್ರದಂತೆ ಶೋಭಿಸುವ ಸರ್ಪರಾಜನಾದ ಶೇಷ, ಉತ್ತಮಸಿಂಹಾಸನದಲ್ಲಿ ಕಂಗೊಳಿಸುವ [೧]ಮೂಲದ ವೈಭವ, ಸುತ್ತಲೂ ನೆರೆದ ಬ್ರಹ್ಮ

೧. ನವರತ್ನಮಯಪಾರಿಜಾತಮೂಲಸ್ಯಾಪಿ ರತ್ನಕುಟ್ಟಿಮಾವಶ್ಯಂಭಾವಾದಿತಿ ಭಾವಃ । ವೈಡೂರ್ಯಾದಿರತ್ನಖಚಿತಂ ಕಲ್ಪದ್ರುಮಮೂಲಮಿತಿ ಪ್ರಸಿದ್ಧಿಃ। -ವ್ಯಾ.

ರುದ್ರಾದಿಸೇವಕರು, ಉತ್ತಮ ವಂದಿಮಾಗಧರ ಉತ್ತಮಸ್ತುತಿಪಾಠ, ಚಂಚಲವಾದ ಗೋಪಸ್ತ್ರೀಯರ ಕುಡಿನೋಟಗಳೆಂಬ ಉತ್ತಮ ಚಾಮರಗಳು, ಹೀಗೆ ರಾರಾಜಿಸುವ ಪ್ರಭುವಾದ ಶ್ರೀಕೃಷ್ಣನನ್ನು ಎಲೈ [೧]ಮನಸ್ಸೇ ! ಸೇವಿಸು ; (ಶಾಖಿ – ವೃಕ್ಷ ; ಅಮರಶಾಖಿ – ದೇವತರು, ಕಲ್ಪವೃಕ್ಷ ).

### ವಿಟ್ಠಲನೆಂಬ ರಮ್ಯ ಸರೋವರ

**ಹೇ ಚೇತಃಕ್ಷಿತಿಪಾಲ ಭಕ್ತಿರಮಣೀಯುಕ್ತೋಽಕ್ಷಿಮೀನಾಶ್ರಯೇ**
**ನಾಭ್ಯಾವರ್ತವತಿ ಶ್ರುತಿಹ್ರದಯುತೇ ಕೇಶೌಘಶೈವಾಲಿನಿ ।**
**ಸುಭ್ರೂಸದ್ವಲಿಪಂಕ್ತಿಮಂದಹಸಿತೋತ್ತುಂಗೋರ್ಮಿಫೇನಾವಿಲೇ**
**ಹಸ್ತಾಂಘ್ರ್ಯಬ್ಜಿನಿ ವಿಟ್ಠಲಾಂಗಸರಸೀತೋಯೇ ರಮಸ್ವಾನಿಶಮ್ ॥ ೨೩ ॥**

ಎಲೈ ಮನಸ್ಸೆಂಬ ಭೂಪತಿಯೇ ! ಭಕ್ತಿ ಎಂಬ ರಮಣಿಯ ಜೋಡಿ, ಕಣ್ಣುಗಳ ರೂಪದ ಮೀನುಗಳಿಗೆ ನೆಲೆ, ನಾಭಿಯೆಂಬ ಸುಳಿಗಳು, ಕಿವಿಗಳೆಂಬ ಮಡುಗಳು, ಕೇಶರಾಶಿ ಎಂಬ ಜಲನೀಲಿ, ಉತ್ತಮ ಹುಬ್ಬು , ಉತ್ತಮವಾದ [೨]ಮೂರು ನಿರಿಗಳ ಸಾಲುಗಳ ಹಾಗೂ ಮಂದಹಾಸ ಮತ್ತು ಎತ್ತರವಾದ ಅಲೆಗಳ ರೂಪದ ನೊರೆ, ಕೈಕಾಲುಗಳೆಂಬ ಕಮಲಗಳು, ಇವುಗಳಿಂದ ಕೂಡಿದ ಶ್ರೀವಿಟ್ಠಲನ ದೇಹವೆಂಬ ಸರೋವರದ ಜಲದಲ್ಲಿ ಸದಾ ಕಾಲವೂ ವಿಹರಿಸು.

ವಿ. : ೧. ತೀರ್ಥಪ್ರಬಂಧದ(೧/೧) ಈ ಕೆಳಗಿನ ಶ್ಲೋಕವು ಇದೇ ರೀತಿಯಲ್ಲಿ ಮನಸ್ಸಿಗೆ ಸಂಬೋಧನೆಯ ರೂಪದಲ್ಲಿ ಇರುವುದು ಗಮನಾರ್ಹ :

ಹರಿಕ್ಷೀರಾಂಬುಧೇಃ ಸ್ವೈರಂ ಭವಘರ್ಮರಿಪೋರ್ಮನಃ ।
ವಿಹರಾಹರಹಶ್ಚಿತ್ರಚಾರಿತ್ರಚತುರೋರ್ಮಿಷು ॥

೨. ತೀರ್ಥಪ್ರಬಂಧದಲ್ಲಿ ಶ್ರೀಹರಿಯನ್ನು ಕ್ಷೀರಸಮುದ್ರವೆಂದು ಕರೆದಿದ್ದರೆ, ಇಲ್ಲಿ ಸರೋವರವೆಂದು ಕರೆಯಲಾಗಿದೆ ಎಂಬುದು ವಿಶೇಷ; ಶೈವಾಲ-ಜಲನೀಲಿ(ಪಾಚಿ); ಫೇನ-ನೊರೆ; ವಲಿ-ನಿರಿ.

### ಸೂರ್ಯ, ಚಂದ್ರ ಮೊದಲಾದ ರೂಪದ ಶ್ರೀಕೃಷ್ಣ

**ಹೇ ಹಸ್ತಾಂಬುಜ ವಿಟ್ಠಲಾಂಘ್ರಿತರಣಿಂ ಮಾ ಮುಂಚ ದೃಕ್ಕೈರವ**
**ಶ್ರೀಮಂತಂ ಮುಖಚಂದ್ರಮಸ್ಥಿರಮನಶ್ಚೋರಾಲಕಾಖ್ಯಂ ತಮಃ ।**

---

೧. ಹೇ ಚಿತ್ತ ಚಿಂತಯಸ್ವೇಹ ವಾಸುದೇವಮಹರ್ನಿಶಮ್ ।
ನೂನಂ ಯಶ್ಚಿಂತಿತಃ ಪುಂಸಾಂ ಹಂತಿ ಸಂಸಾರಬಂಧನಮ್ ॥ – ಕೃಷ್ಣಾಮೃತಮಹಾರ್ಣವ (೫೨)

೨. ಸದ್ವಲಿಪಂಕ್ತಿಃ ಸಮೀಚೀನಾ ವಲಿರಾಜಿಃ ತ್ರಿವಲಿರಿತ್ಯರ್ಥಃ । –ವ್ಯಾ.

ಜಿಹ್ವಾದರ್ದುರ ತತ್ಕಥಾಸುಜಲಧಿಂ ವಕ್ಷಃಕವಾಟಂ ಸದಾ
ಹೃದ್ಗೇಹ ಶ್ರುತಿಪಂಜರ ಪ್ರತಿದಿನಂ ಹೃದ್ಯಂ [೧]ಶುಕಸ್ಯೋದಿತಮ್ ॥ ೨೪ ॥

ಎಲೈ [೨]ಹಸ್ತವೆಂಬ ಕಮಲವೇ! ಶ್ರೀವಿಟ್ಠಲನ ಪಾದವೆಂಬ ಸೂರ್ಯನನ್ನು ಬಿಡದಿರು; ಎಲೈ ನೇತ್ರಗಳೆಂಬ [೩]ಕನ್ನೈದಿಲೆಯೇ! ಕಾಂತಿಯುಕ್ತನಾದ ಶ್ರೀಕೃಷ್ಣನ ಮುಖಚಂದ್ರನನ್ನು ಬಿಡದಿರು; ಎಲೈ ಚಂಚಲವಾದ ಮನಸ್ಸೆಂಬ ಚೋರನೇ! ಮುಂಗುರುಳುಗಳು ಎಂಬ ಕೆತ್ತಲೆಯನ್ನು ತೊರೆಯದಿರು; ಎಲೈ ನಾಲಿಗೆ ಎಂಬ ಕಪ್ಪೆಯೇ! ಅವನ ಕಥೆ ಎಂಬ ಮಹಾಸಮುದ್ರವನ್ನು ಬಿಡದಿರು; ಎಲೈ [೪]ಹೃದಯವೆಂಬ ಮಂದಿರವೇ! ಆ ಶ್ರೀಕೃಷ್ಣನ ವಕ್ಷಃಸ್ಥಲ ಎಂಬ ಕವಾಟವನ್ನು ಎಂದೂ ತೊರೆಯದಿರು; ಎಲೈ ಶ್ರೋತ್ರಗಳೆಂಬ ಪಂಜರವೇ! ಪ್ರತಿದಿನವೂ ಮನೋಹರವಾದ ಶುಕನ ಮಾತನ್ನು ಬಿಡದಿರು.

ವಿ. : ೧. ಶ್ರೀಕೃಷ್ಣನ ಚರಣಸೇವೆ, ದರ್ಶನ, ಕೀರ್ತನೆ ಹಾಗೂ ಶ್ರವಣಾದಿಗಳು ಸದಾ ಕರ್ತವ್ಯ ಎಂದು ಭಾವ; ತರಣಿ – ಸೂರ್ಯ; ಕೈರವ – ಕನ್ನೈದಿಲೆ.

೨. ಶುಕವಚನ ಎಂದರೆ ಭಾಗವತ: 'ಶುಕಾಚಾರ್ಯಸ್ಯ ಕೀರಸ್ಯೇತಿ ಧ್ವನಿಃ । ಉದಿತಂ ವಚನಂ ಭಾಗವತಮಿತ್ಯರ್ಥಃ।' (ವ್ಯಾ.).

### ವಿರಕ್ತಿ ತಾಳಲು ಮನಸ್ಸಿಗೆ ಉಪದೇಶ

ಭ್ರಾಂತ ಸ್ವಾಂತ ವಿನಿಂದಿತೈಃ ಕ್ರಿಮಿಶತೈರ್ವಿಷ್ಠಾತಿಪುಷ್ಟೈರ್ವೃತಂ
ಮೂತ್ರಾಮತ್ರಮಮೇಯಪೂಯಮಬಲಾಕಾಯಂ ವಿಗೇಯಂ ತ್ಯಜ ।
ನಿತ್ಯಂ ನಿರ್ಮಲವಿಗ್ರಹಂ ನಿಜವಶಂ ನೀಲೋತ್ಪಲಶ್ಯಾಮಲಂ
ಪ್ರೇಷ್ಠಂ ಸಂಸ್ಮರ ವಿಟ್ಠಲಂ ವ್ರಜವಧೂತೃಷ್ಣಾಸಮುಜ್ಜೃಂಭಕಮ್ ॥ ೨೫ ॥

ಎಲೈ ಭ್ರಾಂತಿಗೊಳಗಾಗಿರುವ [೫]ಮನಸ್ಸೇ! ಮಲದಿಂದ ಪುಷ್ಟಿಪಡೆಯುವ ಹೇಯವಾದ ನೂರಾರು ಕ್ರಿಮಿಗಳಿಂದ ತುಂಬಿದ, ಮೂತ್ರದ ಗೂಡಾದ, ಅಪಾರವಾದ ಕೀವಿನಿಂದ ಕೂಡಿದ ನಿಂದಿತವಾದ ಸ್ತ್ರೀದೇಹದ ಮೋಹವನ್ನು ತೊರೆ; ನಾಶರಹಿತನಾದ, ನಿರ್ಮಲಮೂರ್ತಿಯಾದ, ತನ್ನ ಭಕ್ತರಿಗೆ ವಶನಾಗುವ (ಸ್ವತಂತ್ರನಾದ), ಕನ್ನೈದಿಲೆಯಂತೆ ನೀಲವರ್ಣದ ಅತ್ಯಂತ ಪ್ರೀತಿಗೆ ಪಾತ್ರನಾದ ಗೋಕುಲದ ಸ್ತ್ರೀಯರ ಬಯಕೆಯನ್ನು ಉದ್ರೇಕಿಸುವಂತಹ ಶ್ರೀವಿಟ್ಠಲನನ್ನು ಸದಾ ಬಗೆಬಗೆಯಲ್ಲಿ ಸ್ಮರಿಸುತ್ತಿದ್ದರು.

---

೧. ಉದಿತಂ ವಚನಂ ಭಾಗವತಮಿತ್ಯರ್ಥಃ। –ವ್ಯಾ.
೨. ಹಸ್ತಸ್ಯ ಹರಿಪಾದಾರ್ಚಾಂ ವಿನಾ ಸಾರ್ಥಕ್ಯಾಯೋಗಾತ್ । –ವ್ಯಾ.
೩.. ಹರಿಪಾದಸ್ಯ ಬಾಲಸೂರ್ಯೋಪಮತ್ವಾಚ್ಚೇತ್ಥಮುಕ್ತಿಃ। ಏವಮುತ್ತರತ್ರಾಪಿ ಹೇತುಹೇತುಮದ್ಭಾವೋ ದ್ರಷ್ಟವ್ಯಃ।–ವ್ಯಾ.
೪. ಹರಿಸನ್ನಿಧಾನರಹಿತಹೃದಯಸ್ಯ ಕಲ್ಯಾದಿಪ್ರವೇಶನೇನ ಅಶುದ್ಧತ್ವಪ್ರಾಪ್ತೇಃ। –ವ್ಯಾ.
೫. ಅನೇನ ಪೂರ್ವೋಕ್ತಸಕಲದೋಷವಿರಹಃ ಸೂಚಿತಃ। –ವ್ಯಾ.

ವಿ. : ೧. ಇದು ಶ್ರೀಮದಾಚಾರ್ಯರ 'ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ' ಎಂಬ ದ್ವಾದಶಸ್ತೋತ್ರದ ವಿವರಣೆಯಂತಿರುವ ಶ್ಲೋಕ.

೨. ವಿಗೇಯ – ಹೇಯ ; ಪೂಯ – ಕೀವು ; ಅಮತ್ರ – ಪಾತ್ರೆ ; ಸ್ವಾಂತ – ಮನಸ್ಸು.

### ಶ್ರೀಕೃಷ್ಣ-ಗೋಪಿಯರ ಸಲ್ಲಾಪ

**ಹೃದ್ಯೇತಃ ಕ್ವಗತೋಽಸಿ ನಾಥ ಮೃಗಯಾಂ ಕರ್ತುಂ ಕಥಂ ಸಾ ಪ್ರಭೋ-**
**ರದ್ಯೈವಾಂಕುರಿತಾಂತರೇ ಪರಿಲಸತ್ಕುಂಭೀಂದ್ರಕುಂಭತ್ವಿಷಿ ।**
**ಲುಬ್ಧಾನ್ ಕೇಸರಿಣಸ್ತವ ಸ್ತನತಟೇ ಸ್ಪರ್ಧಾಯುತಾಂಶ್ಚ ದ್ವಿಪಾನ್**
**ಮುಗ್ಧೇ ವೇದ್ಧುಮಿತೀರಯನ್ ಮುರರಿಪುರ್ಬುದ್ಧಿಂ ಸ ದದ್ಯಾನ್ಮಮ ॥ ೨೬ ॥**

(ಗೋಪಿ)''ಎಲೈ ರಮಣೀಯನಾದ ಸ್ವಾಮಿ ಶ್ರೀಕೃಷ್ಣ! ಇಲ್ಲಿಂದ ನೀನು ಎತ್ತ ಹೊರಟೆ?''; (ಶ್ರೀಕೃಷ್ಣ)''ಬೇಟೆಗೆಂದು''; (ಗೋಪಿ) ''ಆ ಬಯಕೆಯು ಸಮರ್ಥನಾದ ನಿನ್ನ ಮನಸ್ಸಿನಲ್ಲಿ ಈ ಸಮಯದಲ್ಲೇ ಹೇಗೆ ಹುಟ್ಟಿತು?''; (ಶ್ರೀಕೃಷ್ಣ)''ಎಲೈ ಮುಗ್ಧೆಯೇ! ಹೊಳೆಯುವಂತಹ ಉತ್ತಮವಾದ ಗಜೇಂದ್ರನ ಕುಂಭಸ್ಥಳದ ಕಾಂತಿಯ ನಿನ್ನ ಸ್ತನಪ್ರಾಂತದಲ್ಲಿ ಆಸಕ್ತಿ ತಳೆದಿರುವ ಸಿಂಹಗಳನ್ನು ಹಾಗೂ ಪ್ರತಿಗಜವೆಂಬ ಬುದ್ಧಿಯಿಂದ ಅಸೂಯೆಪಡುವ ಆನೆಗಳನ್ನು ಹೊಡೆಯಲೆಂದು'' ಎಂದು ನುಡಿದ ಆ ಮುರಾರಿಯಾದ ಶ್ರೀಕೃಷ್ಣನು ನನಗೆ ಬುದ್ಧಿಯನ್ನು ದಯಪಾಲಿಸಲಿ.

ವಿ. : ೧. ಮೃಗಯಾ – ಬೇಟೆ ; ಕುಂಭೀಂದ್ರ – ಆನೆ, ದ್ವಿಪ – ಗಜೇಂದ್ರ.

೨. ಶ್ರೀವಾದಿರಾಜರ ''ಉಕ್ತಿಪ್ರತ್ಯುಕ್ತಿಸ್ತೋತ್ರ'' ಎಂಬ ಕೃತಿಯು ಇಲ್ಲಿಯ ಶ್ರೀಕೃಷ್ಣ-ಗೋಪಿಯರ [೧] ಸಲ್ಲಾಪದಂತಿವೆ ಎಂಬುದು ಗಮನಾರ್ಹ:

---

೧. ಅಂಗುಲ್ಯಾ ಕಃ ಕವಾಟಂ ಪ್ರಹರತಿ ಕುಟಿಲೇ ಮಾಧವಃ ಕಿಂ ವಸಂತೋ
ನೋ ಚಕ್ರೀ ಕಿಂ ಕುಲಾಲೋ ನಹಿ ಧರಣಿಧರಃ ಕಿಂ ದ್ವಿಜಿಹ್ವಃ ಫಣೀಂದ್ರಃ।
ನಾಹಂ ಘೋರಾಹಿಮರ್ದೀ ಖಗಪತಿರಸಿ ಕಿಂ ನೋ ಹರಿಃ ಕಿಂ ಕಪೀಂದ್ರ-
ಸ್ತ್ವಿತ್ಯೇವಂ ಗೋಪಕನ್ಯಾಪ್ರತಿವಚನಜಡಃ ಪಾತು ಮಾಂ ಪದ್ಮನಾಭಃ ॥
ಕೃಷ್ಣ ತ್ವಂ ಕ್ವ ಗತೋಽಸಿ ಚಾದ್ಯ ಮೃಗಯಾಸಕ್ತೋ ವನಾಂತಂ ಗತೋ
ಗಂಧೋಽನ್ಯೋ ವನಪುಷ್ಪಜಃ ಶ್ರಮಜಲಂ ಘರ್ಮಕ್ಷತಂ ಕಂಟಕೈಃ।
ಅಸ್ತ್ವೇವಂ ಮೃಗಯಾ ತು ಕೇನಚಿದಹೋ ದಷ್ಟೋಽಧರೋ ದೃಶ್ಯತೇ
ಶಂಖಾಪೂರಣಮತ್ರ ಕಾರಣಮಿದಂ ಕುರ್ಯಾಂ ಪ್ರಮಾಣಾನಿ ತೇ ॥
ಅಂಭಸ್ತೇ ಶಯನೀಯಮೇತದುದಧೇರ್ಲೀಲೋಪಧಾನಂ ಫಣೀ
ತ್ವತ್ತೇಜಃಪರಮಾಣುರೇಷ ದಹನೋ ಭೃತ್ಯಾಃ ಸಮಸ್ತಾಃ ಸುರಾಃ।
ಕುಕ್ಷಿನ್ಯಸ್ತಸಮಸ್ತಭಾರಜಗತಃ ಕಿಂ ಸ್ಯಾತ್ ತುಲಾರೋಪಣೇ
ವ್ಯರ್ಥಂ ವಾಚ್ಯಮಿದಂ ಸ್ತ್ರಿಯೋಪಹಸಿತಃ ಸ್ಮೇರೋ ಹರಿಃ ಪಾತು ನಃ ॥ –ಉಕ್ತಿಪ್ರತ್ಯುಕ್ತಿಸ್ತೋತ್ರಮ್

## ಕೃಷ್ಣ ಮಾಡಿದ ವಿಚಿತ್ರ ಬೇಟೆ

**ಸಾಜಾತ್ಯೇನ ವರಾಹಸಿಂಹನಿವಹಂ ಸಾಮ್ಯೇನ ತೇ ಚಕ್ಷುಷೋಃ**
**ಸಾರಂಗಾನ್ ವಿಧುಗರ್ವಶಂಕ್ಯಪಿ ಶಶಾನ್ ನಾಮ್ನಾ [೧]ಶಿಖಂಡಿವ್ರಜಮ್ ।**
**ತ್ವತ್ಪುಷ್ಪಾಂಚಿತಕೇಶಹಸ್ತತುಲಯಾ ಸಂತ್ಯಜ್ಯ ಸಖ್ಯಾಗಮಂ**
**ಕೃತ್ವಾ ತ್ವದ್ದುರಿತೇ ಮೃಗಾಕ್ಷಿ ಮೃಗಯಾಮಿತ್ಯಾಲಪನ್ ಪಾತ್ವಸೌ ॥ ೨೭ ॥**

"ಎಲೈ ಗೆಳತಿ! ನನ್ನ ಸಮಾನಜಾತಿಯವು ಎಂಬ ಕಾರಣದಿಂದಾಗಿ ವರಾಹ, ಸಿಂಹಗಳ ಗುಂಪನ್ನು, ನಿನ್ನ ಕಣ್ಣುಗಳ ಹೋಲಿಕೆಯಿಂದಾಗಿ ಜಿಂಕೆಗಳನ್ನು, ಚಂದ್ರನು ಬೀಗಿಯಾನು ಎಂಬ ಶಂಕೆಯಿಂದಾಗಿ ಮೊಲಗಳನ್ನು, ಪುಷ್ಪಗಳಿಂದ ಅಲಂಕೃತವಾದ ನಿನ್ನ ಕೇಶರಾಶಿಗಳ ಹೋಲಿಕೆ ಹಾಗೂ ಹೆಸರಿನ ಸಾಮ್ಯದಿಂದ ನವಿಲುಗಳ ಗುಂಪನ್ನು, ತೊರೆದು ಎಲೈ ಹರಿಣಾಕ್ಷಿಯೇ! ನಿನಗೆ ಕೇಡಾದದ್ದನ್ನು "ಬೇಟೆಯಾಡಿ ಇಲ್ಲಿಗೆ ಬಂದಿರುವೆ" ಎಂದು ನುಡಿದ ಶ್ರೀಕೃಷ್ಣನು ಪಾಲಿಸಲಿ.

ವಿ. : ೧. ಶ್ರೀಕೃಷ್ಣನು ವರಾಹ, ಸಿಂಹ, ಜಿಂಕೆ, ಮೊಲ ಹಾಗೂ ನವಿಲುಗಳನ್ನು ಬೇಟೆಯಾಡದೆ, ಗೋಪಿಯ ಬಳಿಗೆ ಬಂದದ್ದಕ್ಕೆ ಕಾರಣವನ್ನು ಇಲ್ಲಿ ನೀಡಲಾಗಿದೆ.

೨. ವರಾಹ, ಸಿಂಹಗಳದು ಶ್ರೀಕೃಷ್ಣನ ವರಾಹಾವತಾರ, ನರಸಿಂಹಾವತಾರಗಳ ಜಾತಿ; ಜಿಂಕೆಗಳದು ಗೋಪಿಯ ಕಣ್ಣುಗಳ ಹೋಲಿಕೆ; ಮೊಲಗಳ ಬೇಟೆಯಿಂದ ಚಂದ್ರನಿಗೆ ಅಚ್ಚಬಿಳಿಬಣ್ಣ ಬಂದೀತೆಂಬ ಶಂಕೆ; ನವಿಲುಗಳದು ಪುಷ್ಪಾಲಂಕೃತವಾದ ಕೇಶರಾಶಿಯ ಹೋಲಿಕೆ ಹಾಗೂ ಶಿಖಂಡೀ ಎಂಬ ಹೆಸರಿನ ಸಾಮ್ಯದಿಂದಾಗಿ ನಪುಂಸಕತ್ವ; ಹೀಗೆ ಒಂದಲ್ಲ ಒಂದು ರೀತಿಯಲ್ಲಿ ಅವುಗಳು ಬೇಟೆಯಾಡಲು ಯೋಗ್ಯವೆನಿಸಿಲ್ಲ ಎಂಬ ಇಲ್ಲಿಯ ಚಿಂತನೆ ರೋಚಕವಾದುದು.

೩. ಭೂಮಿಯಲ್ಲಿನ ಮೊಲಗಳನ್ನು ಬೇಟೆಯಾಡಿದಾಗ ರಾಮಾಯಣದಲ್ಲಿನ ಜಯಂತ-ವಾಯಸಪ್ರಸಂಗದಂತೆ[೩] ಎಲ್ಲ ಮೊಲಗಳೂ ನಾಶವಾಗಿ ಚಂದ್ರನಲ್ಲಿಯ ಶಶಾಂಕವೂ ಮಾಯವಾಗಿ ಅವನು ಅಚ್ಚಬಿಳಿಬಣ್ಣದವನಾಗಿ ಬೀಗಿಯಾನು[೪] ಎಂಬ ಕಾರಣದಿಂದ ಮೊಲಗಳನ್ನು ಬೇಟೆಯಾಡಲಿಲ್ಲ ಎಂಬುದು ಇಲ್ಲಿಯ ಭಾವ.

---

೧. ನ ಹಿ ವೀರೇಣ ಶಿಖಂಡೀ ಹಂತುಂ ಯೋಗ್ಯ ಇತಿ ಭಾವಃ । -ವ್ಯಾ.

೨. ಅನೇನಾಮೋಘವ್ಯಾಪಾರತ್ವಂ ಸಮಾಹಿತಂ ಭವತಿ । -ವ್ಯಾ.

೩.. ಸ ವಾಯಸಾನಾಮಸುರೋಽಖಿಲಾನಾಂ ವರಾದುಮೇಶಸ್ಯ ಬಭೂವ ಸಾಕ್ಷಿಗಃ ।
ನಿಪಾತಿತೋಽಸೌ ಸಹ ವಾಯಸಾಕ್ಷಿಭಿಸ್ತೃಣೇನ ರಾಮಸ್ಯ ಬಭೂವ ಭಸ್ಮಸಾತ್ ॥ - ಮ.ಭಾ.ತಾ.ನಿ.(೫/೧೩)

೪. ಏಕಂ ಕಾಕಾಸುರಂ ಲಕ್ಷೀಕೃತ್ಯ ಶರಪ್ರಯೋಗೇಽಪಿ ಸಕಲಕಾಕಾನಾಂ ತತ್ಫಲಭೋಗವತ್ ಏಕಂ ಶಶಂ ಲಕ್ಷೀಕೃತ್ಯ ಶರೇ ಪ್ರಯುಕ್ತೇ ಚಂದ್ರಕಲಕ್ಷಕಾಪಾದಕಶಶಸ್ಯಾಪಿ ವಿನಾಶಮಾಶಂಕ್ಯೇತಿ ಭಾವಃ । -ವ್ಯಾ.

### ಗೋಪಿಯರನ್ನು ಕೃಷ್ಣ ಸಾಂತ್ವನಪಡಿಸಿದ ಬಗೆ

ಕಸ್ಮಾನ್ನಾಥ ವಿಹಾಯ ನಸ್ತ್ವಮಗಮಃ ಕರ್ತುಂ ಭವನ್ಮಾರ್ಗಣಂ
ವೃಕ್ಷಾಭ್ಯಂತರವರ್ತಿಚಂದ್ರಮಹಸೋ ಯುಷ್ಮಾನ್ ಶುಕೌಘಾಕ್ಷರಾತ್ ।
ಯುಷ್ಮನ್ಮಂಜುಗಿರಃ ಪಿಕೌಘನಿನದಾನ್ಮುಗ್ಧಾ ಭವತ್ಸುಸ್ವರಾ-
ನಜ್ಞಾತ್ವಾ ಪೃಥಗಿತ್ಯುದೀರ್ಯ ಶಮಯನ್ ಸೌಖ್ಯಂ ಸ ದದ್ಯಾನ್ಮಮ ॥ ೨೮ ॥

(ಗೋಪಿಯರು)''ಎಲೈ ಸ್ವಾಮಿ ಶ್ರೀಕೃಷ್ಣ! ನಮ್ಮನ್ನು ತೊರೆದು ನೀನೇತಕ್ಕೆ ಹೊರಟೆ?''; (ಶ್ರೀಕೃಷ್ಣ)''ಎಲೈ ಮುಗ್ಧೆಯರೇ! ಮರಗಳ ಮಧ್ಯೆ ಇರುತ್ತಿರುವ ಚಂದ್ರನ ಕಾಂತಿಯಿಂದ ನಿಮ್ಮನ್ನು, ಗಿಳಿಗಳ ಹಿಂಡುಗಳ ಮಾತುಗಳಿಂದ ನಿಮ್ಮ ಮಂಜುಳವಾಣಿಯನ್ನು, ಕೋಗಿಲೆಗಳ ಧ್ವನಿಗಳಿಂದ ನಿಮ್ಮ ಇನಿದನಿಗಳನ್ನು ಪ್ರತ್ಯೇಕ ತಿಳಿಯಲಾಗದೆ ನಿಮ್ಮನ್ನು ಹುಡುಕಲೆಂದು ಹಾಗೆ ಹೊರಟೆ'' ಎಂದು ಅವರನ್ನು ಸಾಂತ್ವನಪಡಿಸಿದ ಶ್ರೀಕೃಷ್ಣ ನನಗೆ ಸುಖವನ್ನು ನೀಡಲಿ.

ವಿ. : ೧. ಗೋಪಿಯರದು ಚಂದ್ರನ ಕಾಂತಿ, ಗಿಳಿಹಿಂಡುಗಳ ಮಂಜುಳವಾಣಿ, ಕೋಗಿಲೆಗಳ ಇನಿದನಿ ಎಂಬ ಇಲ್ಲಿಯ ಧ್ವನಿ ಅತ್ಯಂತ ರೋಚಕ; (ಮಾರ್ಗಣಂ-ಅನ್ವೇಷಣೆ).

### ಗೋಪಿಯರ ಕಾಮದ ಫಲಶ್ರುತಿ

ದಂತಕ್ಷತಸ್ಫುರಿತಗಂಡರುಚಃ ಕರಾಬ್ಜ-
ಸಂಬದ್ಧಮಧ್ಯಮಧುರಾಃ ಕುಚಕುಂಭಪಾರ್ಶ್ವೇ ।
ಸಂಜಾತಮಂಜುಲನಖವ್ರಣರಂಜಿತಾಸ್ತಾಃ
[1]ಸಾಂದ್ರಾಪರಾಧಫಲಮಾಪುರಿವೇಂದುಮುಖ್ಯಃ ॥ ೨೯ ॥

ದಂತಕ್ಷತಗಳಿಂದ ಹೊಳೆಯುವ ಕೆನ್ನೆಗಳ ಕಾಂತಿ, ಶ್ರೀಕೃಷ್ಣನ ಕರಕಮಲಗಳು ಬಿಗಿದಿದ್ದ ನಡುವಿನ ಮಾಧುರ್ಯ, ಕುಂಭದಂತಹ ಕುಚಗಳ ಇಕ್ಕೆಲಗಳಲ್ಲಿ ಮೂಡಿದ್ದ ಮನೋಹರವಾದ ಉಗುರಿನ ಗಾಯಗಳ ಶೋಭೆ, ಇವುಗಳಿಂದಾಗಿ ಆ ಚಂದ್ರಮುಖಿಯರು ತಾವು ಮಾಡಿದ (ಅಹಂಕಾರರೂಪ)ಮಹಾಪರಾಧಕ್ಕೆ ತಕ್ಕ ಫಲವನ್ನು ಪಡೆದವರೆಂಬಂತೆ ಕಂಗೊಳಿಸಿದರು ; (ಸಾಂದ್ರ - ದೃಢ).

### ಮನ್ಮಥನಂತಹ ಶ್ರೀಕೃಷ್ಣ

ಪರಭೃತಮಧುಪಾದ್ಯೈಃ ಸೇವಿತೋ ಗಂಧಲುಬ್ಧೈಃ
ಕರಪದಧರಹಾಸಾಪಾಂಗತುಂಗೇಷುಸಂಗಃ ।

---

೧. ಅಪರಾಧಿನಮಪಿ ದಂಶನಬಂಧನನಖತಾಡನಾದಿನಾ ಶಿಕ್ಷಂತಿ ತದ್ವದಿತಿ ಭಾವಃ । -ವ್ಯಾ.

ಸುಲಲಿತವನಮಾಲಾಕಾರ್ಮುಕಾಂಸೋ ವಿರೇಜೇ
ಸ್ಮರ ಇವ ವರರೂಪೀ ದೃಪ್ತಯೋಷಿತ್ಸಹಾಯಃ ॥ ೩೦ ॥

ಪರಿಮಳಕ್ಕೆ ಕಾತರಿಸಿದ ಕೋಗಿಲೆ ದುಂಬಿಗಳು ಮೊದಲಾದವುಗಳಿಂದ ಸೇವಿತನಾದ, ಕೈಗಳು, ಪಾದಗಳು, ತುಟಿಗಳು, ಮಂದಹಾಸ ಹಾಗೂ ಕುಡಿನೋಟಗಳು ಎಂಬ ಉತ್ತುಂಗವಾದ ಬಾಣಗಳನ್ನು ಹೊಂದಿದ, ಸುಲಲಿತವಾದ ವನಮಾಲಾರೂಪದ ಧನುಸ್ಸನ್ನು ಭುಜದಲ್ಲಿ ಧರಿಸಿದ - ಹೀಗೆ ಸೊಕ್ಕಿನ ಗೋಪಸ್ತ್ರೀಯರೊಡನಿದ್ದ ವರರೂಪದ ಮನ್ಮಥನಂತೆ ಶ್ರೀಕೃಷ್ಣ ಕಂಗೊಳಿಸಿದ.

ವಿ. : ೧. ವನಮಾಲೆಯು [೧]ಪಾದದವರೆಗೆ ಅಲಂಕರಿಸುವ ಮಾಲೆ; ಧನುಸ್ಸು ಸಹ ಅಂತಹುದೇ. ಇದರಿಂದಾಗಿ ವನಮಾಲೆಯನ್ನು ಧನುಸ್ಸು ಎಂದು ಕರೆದುದು ಸಮುಚಿತವಾದುದು. **ಕಾರ್ಮುಕ** - ಬಿಲ್ಲು.

೨. 'ಕರ' ಎಂಬುದು ಅಶೋಕದ ಸಂಕೇತ; 'ಪತ್' ಎಂಬುದು ಕಮಲದ ಸಂಕೇತ; ಇದರಂತೆ 'ಅಧರ'ವು ಚೂತಕ್ಕೂ, ಮಂದಹಾಸವು ಮಲ್ಲಿಗೆಗೂ, ಕುಡಿನೋಟವು ಕನ್ನೈದಿಲೆಗೂ ಸಂಕೇತ. ಇದರಿಂದ ಮನ್ಮಥನ ಐದು ಬಾಣಗಳು ಸಹ ಸೂಚಿತವಾಗಿ 'ಸ್ಮರ ಇವ' ಎಂಬ ಉಪಮೆಯು ತುಂಬ ಅರ್ಥವತ್ತಾಗುವುದು.

ಶ್ರೀಕೃಷ್ಣನ ಹಿರಿಮೆ

ನಾಲೀಕಾಗಾರಮಾರತ್ರಿಪುರಹರಮುಖೈರ್ಗೀಯಮಾನಾಽಂಬರಸ್ಥೈ-
ರ್ಮಾಲಾಲಂಕಾರಕಾಂತ್ಯಾ ವಿಘಟಿತಹೃದಯಗ್ರಂಥಿರಿಂದೀವರಾಭಾ ।
ಕಾಲಿಂದೀತೀರಸಂಸ್ಥಾ ಕರಧೃತಮುರಲೀ ಕಾಮಿನೀಕೇಲಿಲೋಲಾ
ಲೀಲಾಪಾಂಗಾವಲೋಕಾ ಲಸತು ಮಮ ಹೃದಿ ಪ್ರೇಯಸೀ ದೇವತಾ ಸಾ ॥೩೧॥

ಗಗನದಲ್ಲಿ ನೆರೆದ ಕಮಲದಲ್ಲಿ ನೆಲೆಸಿದ ಬ್ರಹ್ಮ, ಮನ್ಮಥ, ಶಿವ ಮೊದಲಾದವರು ಹಾಡಿ ಹೊಗಳುವ, ಧರಿಸಿದ ಮಾಲೆಗಳ ಅಲಂಕಾರದ ಕಾಂತಿಯಿಂದ ಹೃದಯದ ಬಂಧನವನ್ನು ಬಿಚ್ಚಿಹಾಕಿದ, ಕನ್ನೈದಿಲೆಯ ಸೊಬಗಿನ, [೨]ಯಮುನೆಯ ತೀರದಲ್ಲಿ ನೆಲೆಸಿದ, ಕೈಯಲ್ಲಿ ವೇಣುವನ್ನು ಹಿಡಿದ, [೩]ಗೋಪಸ್ತ್ರೀಯರೊಂದಿಗೆ ವಿಹಾರದಲ್ಲಿ ತೊಡಗಿದ, ಲೀಲೆಯ ಕುಡಿನೋಟದ, ಅತ್ಯಂತ ಪ್ರಿಯದೇವತೆಯಾದ, ಆ ಶ್ರೀಕೃಷ್ಣನು ನನ್ನ ಹೃದಯದಲ್ಲಿ ಬೆಳಗಲಿ.

---

೧. ಆಪಾದಲಂಬಿನೀ ಮಾಲಾ ವನಮಾಲೇತ್ಯಭಿಧೀಯತೇ । - ಸ್ಮೃತಿ

೨. ಅನೇನ ರಾಸಕ್ರೀಡಾಸ್ಥಲಾತ್ ಯಮುನಾತೀರಂ ಪ್ರತ್ಯಾಗತ ಇತಿ ಸೂಚಿತಮ್ । -ವ್ಯಾ.

೩.. ಮನೋರಮಪುರುಷದರ್ಶನೇ ಕಂಚುಕಗ್ರಂಥಿರ್ವಿಭಿದ್ಯತ ಇತಿ ಪ್ರಸಿದ್ಧಿಃ । -ವ್ಯಾ.

ವಿ. : ನಾಲೀಕ – ಪದ್ಮ ; ನಾಲೀಕಾಗಾರ – ಬ್ರಹ್ಮದೇವರು ; ಮಾರ – ಮನ್ಮಥ ; ಗ್ರಂಥಿ – ಗಂಟು ; ಕೇಲಿ – ಕ್ರೀಡೆ.

### ಶ್ರೀಕೃಷ್ಣನೆಂಬ ವಿಚಿತ್ರ ಮೇಘ

**ಲೀಲಾಸಂಗೀತಮಂಜುಸ್ತನಿತಕೃತರುಚಿಃ ಪುಷ್ಟಿಹೇತುಃ[೧] ಸ್ರವಂತ್ಯಾಃ**
**ಸಾಲೋಕ್ಯಾದ್ಯಂಬುವರ್ಷೀ[೨] ನಿಜತನುಮಹಸಾಽಽಚ್ಛಾದಿತಾರ್ಕೋಡುರಾಜಃ।**
**ಬಾಲಾನೇತ್ರೋತ್ಸವಶ್ರೀರ್ಜಯತಿ ಸುರವರಸ್ತೋಮಹೃದ್ವ್ಯೋಮಧಾಮಾ**
**ನೀಲಾಂಭೋದೋಪಮೋಽಸೌ ವರವಸನತಟಿತ್ಸಾಂದ್ರಮಾಲ್ಯೇಂದ್ರಚಾಪಃ।೩೨।**

ಲೀಲಾಸಂಗೀತರೂಪದ ಮಂಜುಳವಾದ ಗುಡುಗಿನ ಘೋಷದ ಕಾಂತಿಯ, ಸಾಲೋಕ್ಯ ಮೊದಲಾದ ರೂಪದ ಜಲವನ್ನು ಸುರಿಸುತ್ತಾ (ಯಮುನಾ)ನದಿಯ [೩]ಪುಷ್ಟಿಗೆ ಕಾರಣವಾದ, ತನ್ನ ದೇಹದ ಕಾಂತಿಯಿಂದ ಸೂರ್ಯಚಂದ್ರರ ಕಾಂತಿಯನ್ನು ಮಂಕಾಗಿಸುವ, ಗೋಪಿಯರ ಕಣ್ಣುಗಳಿಗೆ ಹಬ್ಬವೆನಿಸಿದ, ಶ್ರೇಷ್ಠದೇವತೆಗಳ ಗುಂಪಿನ ಹೃದಯಾಕಾಶದಲ್ಲಿ ನೆಲೆಸಿದ, ಶ್ರೇಷ್ಠ ಪೀತಾಂಬರವೆಂಬ ಮಿಂಚನ್ನು, ದಟ್ಟವಾದ ಮಾಲೆಗಳ ರೂಪದ ಇಂದ್ರಚಾಪವನ್ನು, ಧರಿಸಿದ ನೀಲಮೇಘದಂತಹ ಆ ಶ್ರೀಕೃಷ್ಣನು ಸರ್ವೋತ್ಕೃಷ್ಟವಾಗಿರುವನು; (ಅಂಭೋದ–ಮೇಘ; ಸ್ರವಂತೀ–ನದಿ ; ಇಂದ್ರಚಾಪ – ಕಾಮನಬಿಲ್ಲು).

ವಿ. : ೧. ಇದೇ ರೀತಿ ಶ್ರೀಕೃಷ್ಣನನ್ನು ಮುಂದೆ ೧೪/೧೨ರಲ್ಲೂ ಮೇಘದೊಂದಿಗೆ ಹೋಲಿಸಿರುವರು.

೨. ಶ್ರೀವಾಸಿಷ್ಠಕೃಷ್ಣರೂಪವನ್ನು ಮೇಘವೆಂದು ಬಣ್ಣಿಸುವ ತೀರ್ಥಪ್ರಬಂಧದ ಶ್ಲೋಕ ಹೀಗಿದೆ :

ಭವಘರ್ಮಭವಾರ್ತಿಘ್ನಃ ಸ ಮತಃ ಸೇವ್ಯತಾಂ ಸತಾ।
ಕೃಷ್ಣದ್ವೈಪಾಯನಘನೋ ಯತ್ರಾಗಾದ್ವಾಯುವರ್ತ್ಮನಾ॥ (೧/೨೭)

೩. ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕೆಯ ಈ ಕೆಳಗಿನ ಶ್ಲೋಕವು ಸಹ ಕೃಷ್ಣನನ್ನು ಮೇಘ ಎಂಬುದಾಗಿ ವರ್ಣಿಸಿದೆ :

ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್।
ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ॥

### ಪಾಪ ಕಳೆಯುವ ಶ್ರೀಕೃಷ್ಣ

**ಯಮುನಾಜಘನನಿವಾಸಂ**
**ಕಮನೀಯಂ ಬ್ರಹ್ಮ ಕಾಮಿನೀಕಲಿತಮ್।**

೧. ಅನೇನ ಕೃಷ್ಣೇ ತೀರಂ ಪ್ರತ್ಯಾಗತೇ ಯಮುನಾಯಾಃ ಹರ್ಷೋದ್ರೇಕೇಣಾಭಿವೃದ್ಧಿರ್ಜಾತೇತಿ ಸೂಚಿತಮ್। –ವ್ಯಾ.
೨. ಸಾಲೋಕ್ಯಸಾಮೀಪ್ಯಾದಿಕಮೇವಾಂಬು ತಾಪಾಪನೋದಿತ್ವಾಜ್ಜಲಂ ವರ್ಷತೀತ್ಯಂಬುವರ್ಷೀ ತಥೋಕ್ತಃ।
೩. ಕೃಷ್ಣಪಾದಸ್ಪರ್ಶಾರ್ಥಂ ಸ್ರೋತೋನಿವೃತ್ತ್ಯಾ ಯಮುನಾಯಾಃ ಅಭಿವೃದ್ಧಿರ್ಜಾತೇತಿ ಹಿ ಭಾಗವತೇ ಪ್ರಸಿದ್ಧಿಃ।–ವ್ಯಾ.

ಶಮಯತ್ವಘಂ ಮದೀಯಂ
ವಿಮೃಶದ್ಯೋಗೀಶಚೇತಸೋ[1] ದೂರಮ್[2] ॥ ೩೩ ॥

ಯಮುನೆಯ ತಟದಲ್ಲಿ ನೆಲೆಸಿರುವ, ಗೋಪಸ್ತ್ರೀಯರು ಒಲ್ಲಂತಹ, ಧ್ಯಾನಿಸುವ ಯೋಗಿಶ್ರೇಷ್ಠರ ಮನಸ್ಸಿಗೂ ನಿಲುಕದ, ಮನೋಹರನಾದ ಆ ಪರಬ್ರಹ್ಮನಾದ ಶ್ರೀಕೃಷ್ಣನು ನನ್ನ ಪಾಪವನ್ನು ತೊಡೆಯಲಿ.

ಮಂಕು ಕಳೆಯುವ ಶ್ರೀಕೃಷ್ಣ

ಶ್ರಾಂತಾಲಿಭಿಃ ಪರಿವೃತೋಽಂಭಸಿ ಗಾಹಮಾನಃ
ಕಾಂತಾಕರೇಣುಸಹಿತಃ ಕನಕೋಜ್ಜ್ವಲಾಂಗಃ।
ಪ್ರಾಂತಸ್ಥಿತಾಬ್ಜಚಯಚುಂಬಿಕರೋ ಮುಕುಂದ-
ದಂತೀ ನಿಕೃಂತತು ಮಮಾಂತರಮೋಹಮೋಚಾಃ ॥ ೩೪ ॥

ಬಸವಳಿದ ದುಂಬಿಗಳು ಸುತ್ತುವರೆದ, ನೀರಿನಲ್ಲಿ ಮಜ್ಜನಗಯ್ಯುತ್ತಿರುವ, ಗೋಪಿಯರೆಂಬ ಹೆಣ್ಣಾನೆಗಳಿಂದ ಒಡಗೂಡಿದ, ಸುವರ್ಣದಂತೆ ಹೊಳೆಯುವ ಅಂಗಾಂಗಗಳ, ಸನಿಹದಲ್ಲಿನ ಕಮಲಪುಷ್ಪಗಳು ಮುತ್ತಿಡುವ ಕೈಗಳ, ಮುಕುಂದನಾದ ಶ್ರೀಕೃಷ್ಣನೆಂಬ ಗಜೇಂದ್ರನು ನನ್ನ ಮನಸ್ಸಿನ ಮಂಕು ಎಂಬ ಬಾಳೆವೃಕ್ಷಗಳನ್ನು ಭೇದಿಸಿ ಹಾಕಲಿ; (ಕರೇಣು - ಹೆಣ್ಣಾನೆ; ಮೋಚಾ - ಬಾಳೆ).

ಯಮುನೆಯನ್ನು ಕೆಂಪಾಗಿಸಿದ ಗೋಪಿಯರ ಅನುರಾಗ

ಅಭಿಗತಿಜಲದಾನಪ್ರೇಮಸಂಶ್ಲೇಷವೇಗಾತ್
ಪ್ರಕಟಿತಕುಚಭಾಗಾ ದೃಶ್ಯಮಾನೋರುದೇಶಾಃ।
ಕಚವಿಗಲಿತಮಾಲ್ಯಾಃ ಸಂಗತೈರಂಗರಾಗೈಃ
ಸರಿತಮಪಿ ಸರಾಗಾಂ ಚಕ್ರುರಾಸಾಂ ಕಿಮನ್ಯೇ ॥ ೩೫ ॥

ಇದಿರಾಗಿ ಬರುವುದು, ನೀರೆರಚುವುದು, ಪ್ರೀತಿಯಿಂದಾಗಿ ಗಾಢವಾಗಿ ಆಲಿಂಗಿಸಿ-ಕೊಳ್ಳುವುದು ಮೊದಲಾದ ಸಂಭ್ರಮದಿಂದಾಗಿ ತಮ್ಮ ಸ್ತನಪ್ರದೇಶವನ್ನು ಪ್ರಕಟಿಸುವ, ತೊಡೆಗಳ ಪ್ರದೇಶವನ್ನು ತೋರುವ, ಮುಡಿಗಳಿಂದ ಉದುರುತ್ತಿದ್ದ ಹೂಮಾಲೆಗಳ ಗೋಪಿಯರು ತೊಡೆದು ಹಾಕಿದ ಅಂಗರಾಗಗಳಿಂದ ಯಮುನಾನದಿಯನ್ನು ಸಹ ಕೆಂಪಾಗಿಸಿದರು; ಇತರರು ಅನುರಾಗ ಹೊಂದುವರೆಂದು ಹೇಳಬೇಕೆ? (ಸಂಶ್ಲೇಷ - ಆಲಿಂಗನ).

---

೧. ಯತೋ ವಾಚೋ ನಿವರ್ತಂತೇಽಪ್ರಾಪ್ಯ ಮನಸಾ ಸಹ। - ಶ್ರುತಿ
೨. ಆರ್ಯಾವೃತ್ತಮ್। -ವ್ಯಾ.

ಗೋಪಿಯಂತಿದ್ದ ಯಮುನೆ

ಸತ್ಕೈರವಾಸ್ಯವಿಭವೋತ್ಪಲಲೋಲನೇತ್ರಾ
ವ್ಯಕ್ತಸ್ತನಾಭಮಧುಪಾಂಕಿತಪದ್ಮಕೋಶಾ।
ಆವರ್ತನಾಭಿರುಚಿರಾ ಯಮುನೋರ್ಮಿಹಸ್ತಾ
ಗೋಪೀವ ಲಕ್ಷ್ಯಜಘನಾಽಸ್ತಿ ಸುಫೇನಹಾಸಾ ॥ ೩೬ ॥

ಅರಳಿದ ಕಮಲಗಳ ರೂಪದ ಮುಖಸಂಪತ್ತು, ಅರಳಿದ ಕೆನ್ನೈದಿಲೆಯ ರೂಪದ ಚಂಚಲ-ನೇತ್ರಗಳು, ಪ್ರಕಟವಾಗಿದ್ದ ಸ್ತನರೂಪದ ದುಂಬಿಯ ಚಿಹ್ನೆಯ ಪದ್ಮಕೋಶ, ಸುಳಿಯ ರೂಪದ ಮನೋಹರವಾದ ನಾಭಿ, ಅಲೆಗಳ ರೂಪದ ಕೈಗಳು, ಪ್ರಕಟವಾಗಿದ್ದ ನಿತಂಬರೂಪದ ತೀರ, ನೊರೆಯರೂಪದ ಮಂದಹಾಸ, ಇವುಗಳಿಂದಾಗಿ ಯಮುನೆಯು ಗೋಪಿಯಂತಿದ್ದಳು.

ಕೆರಳಿದ ಗೋಪಿಯನ್ನು ಕೃಷ್ಣ ಸಾಂತ್ವನಪಡಿಸಿದ ರೀತಿ

ಗಾಢಾಲಿಂಗಿತವಲ್ಲಭಾಮಧಿಜಲಂ ನಿಃಶಬ್ದಭೂಷಾವಲೀ-
ಮಬ್ಜಾಸ್ಯಾಮವಿಮೃಶ್ಯ ಕಾಽಪ್ಯುಪಗತಾ ಸೀತ್ಕಾರನಾದಶ್ರುತೇಃ।
ಕ್ರುದ್ಧಾ ಭ್ರೂದೃಢಚಾಪಲಗ್ನನಯನಪ್ರಾಂತೇಷುಪಾತಾತ್ ಪುರಾ
ಕೃಷ್ಣೇನಾಪರರೂಪಿಣಾ ಶಶಿಮುಖೀ ಸಾಮ್ನಾ ಸಮಾಲಿಂಗಿತಾ ॥ ೩೭ ॥

ಕತ್ತಿನವರೆಗಿನ[೧] ನೀರಿನಲ್ಲಿ ಪ್ರಿಯನಾದ ಕೃಷ್ಣನನ್ನು ಗಾಢವಾಗಿ ಆಲಿಂಗಿಸಿದ, ಧ್ವನಿಗೈಯ್ಯದ ಆಭರಣಗಳ ರಾಶಿಯಿಂದ ಕೂಡಿದ, ಕಮಲಮುಖಿಯಾದ ಗೋಪಿಯನ್ನು ಹುಡುಕಿ ಕಾಣದೆ ಬಳಿಬಂದ ಗೋಪಿಯು ಸೀತ್ಕಾರ ಧ್ವನಿಯನ್ನು ಕೇಳಿ ಕೆರಳಿ, ಹುಬ್ಬುಗಳೆಂಬ ದೃಢವಾದ ಬಿಲ್ಲಿನಲ್ಲಿ ಹೂಡಿದ ಕಣ್ಣುಗಳ ಕುಡಿನೋಟವೆಂಬ ಬಾಣವನ್ನು ಪ್ರಯೋಗಿಸುವ ಮುನ್ನವೇ, ಮತ್ತೊಂದು ರೂಪದ ಕೃಷ್ಣನು ಆ ಚಂದ್ರಮುಖಿಯನ್ನು ಸಾಂತ್ವನದ ನುಡಿಗಳ ಮೂಲಕ ಆಲಿಂಗಿಸಿಕೊಂಡನು.

ಯತಿಗಳಂತೆ ಆರಾಧಿಸಿದ ಗೋಪಿಯರು

ಕರಧೃತದೃತಿತೋಯೈಃ ಸ್ನಾಪಯಿತ್ವಾ ಮುಕುಂದಂ
ಕುಚತಟಗತಗಂಧಾಲಿಪ್ತಮಾಲಿಂಗ್ಯ ಕೃತ್ವಾ।

---

೧. ಅನೇನ ಮುಖಾತಿರಿಕ್ತಾವಯವಾದರ್ಶನೇ ಹೇತುರುಕ್ತೋ ಭವತಿ। -ವ್ಯಾ.

ಶಿರಸಿ ನಿಹಿತಮಾಲ್ಯೈರರ್ಚ್ಯಮಾನರ್ಚುರೇನಂ
ಗತಿಮಿವ ಯತಿಯೋಗ್ಯಾಂ ಸಾಧಯಂತ್ಯೋऽಬಲಾಸ್ತಾಃ ॥ ೩೮ ॥

ಕೈಯಲ್ಲಿ ಹಿಡಿದಿದ್ದ ಪಿಚಕಾರಿಗಳಲ್ಲಿನ ಜಲದಿಂದ ಮುಕುಂದನಾದ ಶ್ರೀಕೃಷ್ಣನನ್ನು ಅಭಿಷೇಕಿಸಿ, ಆಲಿಂಗಿಸಿಕೊಳ್ಳುವ ಮೂಲಕ ಅವನಿಗೆ ತಮ್ಮ ಸ್ತನಪ್ರದೇಶದ ಗಂಧವನ್ನು ಮೆತ್ತುವಂತೆ ಮಾಡಿ, ತಲೆಯಲ್ಲಿ ಮುಡಿದಿದ್ದ ಹೂಗಳಿಂದ ಪೂಜನೀಯನಾದ ಅವನನ್ನು ಆ ಗೋಪಿಯರು ಪೂಜಿಸಿದರು; ಯತಿಗಳಿಗೆ ಲಭಿಸುವಂತಹ ಗತಿಯನ್ನು ಸಾಧಿಸುವವರಂತೆ.

ವಿ. : ಗೋಪಿಯರ ಈ ಶೃಂಗಾರ ಚೇಷ್ಟೆಗಳು ಕೇವಲ ಗ್ರಾಮ್ಯ ಶೃಂಗಾರವಾಗಿರದೆ ಶ್ರೀಕೃಷ್ಣನನ್ನು ಸಾಕ್ಷಾತ್ ಶ್ರೀಹರಿಯೆಂದು ಆರಾಧಿಸುವ ದೈವೀಶೃಂಗಾರವಾಗಿದ್ದವು ಎಂಬುದು ಇಲ್ಲಿಯ ಮುಖ್ಯ ಭಾವ ; ದೃತಿ – ಪಿಚಕಾರಿ.

ಮಹಾಗಜದಂತಹ ಶ್ರೀಕೃಷ್ಣನ ರೀತಿ

ಸಿಕ್ತೋऽಪಿ ರಮ್ಯಲಲನಾಕರಪದ್ಮಪತ್ರೈ-
ರ್ಭೃತ್ಯಾಮರಾವಲಿಸಮರ್ಪಿತಪುಷ್ಪಪುಂಜೇ ।
ವಿಸ್ತೀರ್ಣರೇಣುನಿಕರಂ ದಧದಾತ್ಮನೋऽಂಗೇ
ಹಸ್ತೀಶ್ವರಪ್ರಕೃತಿಮಾರ್ಜಯದೇಷ ದೇವಃ ॥ ೩೯ ॥

ಚೆಲುವೆಯರಾದ ಸ್ತ್ರೀಯರ ಕೈಗಳೆಂಬ ತಾವರೆ ಎಲೆಗಳಿಂದ ಅಭಿಷಿಕ್ತನಾದರೂ, ಸೇವಕರಾದ ದೇವತೆಗಳ ವೃಂದದಿಂದ ಸಮರ್ಪಿತವಾದ ಹೂಗಳ ಸಮೂಹದಲ್ಲಿ ಹರಡಿದ ಹೂಗಳ ಪರಾಗಗಳ ರಾಶಿಯನ್ನು ತನ್ನ ದೇಹದಲ್ಲಿ ಧರಿಸಿದ ಆ ಶ್ರೀಕೃಷ್ಣದೇವನು ಒಂದು [೧]ಮಹಾಗಜದ ರೀತಿಯನ್ನು ಸಂಪಾದಿಸಿಕೊಂಡನು.

ವಿ. : ಆನೆಯು ಸ್ನಾನ ಮಾಡಿದ ಬಳಿಕವೂ ಮೈಮೇಲೆ ಧೂಳನ್ನೆರಚಿಕೊಳ್ಳುವ ಮೂಲಕ ಮತ್ತೊಮ್ಮೆ ಮೀಯುವುದು ವಿಶೇಷ. ಪ್ರಸ್ತುತ ಶ್ರೀಕೃಷ್ಣನು ಸಹ ಗೋಪಿಯರಿಂದ ಅಭಿಷಿಕ್ತನಾಗಿದ್ದರೂ ಹೀಗೆ ಮತ್ತೊಮ್ಮೆ ಹೂಗಳ ಪರಾಗರಾಶಿಯಿಂದ ಅಭಿಷಿಕ್ತನಾದ್ದರಿಂದ ಅವನದು ಮಹಾಗಜದ ರೀತಿಯಾಯಿತು ಎಂದು ಭಾವ.

ಕಮಲದ ಮೇಲೆ ಗೋಪಿಯ ರೋಷ

ದ್ವಿರೇಫಶಾವಾಂಕಿತಶೋಭಿವಕ್ತ್ರಂ
ಕೃತಕ್ಷತಂ ಸುಸ್ವರರಾಜಹಂಸೈಃ ।

---

೧. ಗಜೋऽಪಿ ಸ್ನಾನಾನಂತರಂ ಪುನಃ ಪಾಂಸುದಿಗ್ಧೋ ಭವತೀತಿ ಗಜಸ್ವಭಾವಃ ।''ಕ್ವಚಿನ್ನಿವರ್ತತೇऽಭದ್ರಾತ್ ಕ್ವಚಿಚ್ಚರತಿ ತತ್ಪುನಃ । ಪ್ರಾಯಶ್ಚಿತ್ತಮತೋऽಪಾರ್ಥಂ ಮನ್ಯೇ ಕುಂಜರಶೌಚವತ್'' (ಭಾಗ.೬/೧/೧೦) ಇತ್ಯಾದೌ ಪ್ರಸಿದ್ಧಿಃ । – ವ್ಯಾ

ಮನೋರಮಂ ಸಾರಸಕೋಶಮೇಕಾ
ಘನಸ್ತನಸ್ಪರ್ಧಿ ಚಕರ್ತ ಬಾಲಾ ॥ ೪೦ ॥

ದುಂಬಿಯ ಮರಿಯು ಕುಳಿತಿದ್ದರಿಂದಾಗಿ ತುದಿಯು ಕಂಗೊಳಿಸುತ್ತಿದ್ದ, ರಮ್ಯವಾದ ಧ್ವನಿ-ಗಯ್ಯುವ ರಾಜಹಂಸಗಳಿಂದ ಕುಕ್ಕಲ್ಪಟ್ಟ, ತನ್ನ ಗಟ್ಟಿಸ್ತನಕ್ಕೆ ತೀವ್ರ ಪ್ರತಿಸ್ಪರ್ಧಿಯಂತಿದ್ದ ಸುಂದರವಾದ ಕಮಲದ ಮೊಗ್ಗನ್ನು ಗೋಪಿಯೊಬ್ಬಳು ಚಿವುಟಿಹಾಕಿದಳು; (ಶಾವ - ಮರಿ).

ಕಮಲವನ್ನು ಹೊಸಕಿದ ಗೋಪಿ

ಮಾದ್ಯದ್ದ್ವಿರೇಫೈಃ ಕೃತಗೀತಜಾತಂ
ಪದ್ಮಾಸನೇಷ್ಟಂ ಪವನೇನ ಜುಷ್ಟಮ್ ।
ಪದ್ಮಂ ಸುಗಂಧಿ ನ್ಯಲುನಾತ್ ಸಪತ್ನೀ-
ಸದ್ಮಾಭಿಶಂಕ್ಯೇವ ಮುಕುಂದಯೋಗ್ಯಮ್ ॥ ೪೧ ॥

ಮದಿಸಿದ ದುಂಬಿಗಳ ಝೇಂಕಾರದಿಂದ ಕೂಡಿದ್ದ, ಪದ್ಮಾಸನರಾದ ಬ್ರಹ್ಮದೇವರಿಗೆ ಪ್ರಿಯವಾದ, ವಾಯುವಿನಿಂದ ಸೇವಿತವಾದ, ಪರಿಮಳಭರಿತವಾದ ಕಮಲಪುಷ್ಪವನ್ನು ಮುಕುಂದನಾದ ಶ್ರೀಕೃಷ್ಣನಿಗೆ ಯೋಗ್ಯವಾದ, ತನ್ನ ಸವತಿಯಾದ ಮಹಾಲಕ್ಷ್ಮಿಯ ನೆಲೆ ಎಂಬ ಶಂಕೆಯಿಂದೆಂಬಂತೆ (ಗೋಪಿಯೊಬ್ಬಳು) ಹೊಸಕಿಹಾಕಿದಳು.

ವಿ : ೧. ಕಮಲವು ಮಹಾಲಕ್ಷ್ಮಿಗೆ ನೆಲೆ; ಶ್ರೀಹರಿಯಾದ ಕೃಷ್ಣನಿಗೆ ಅವಳು ಪತ್ನಿ; ಎಂದರೆ ತನಗೆ ಸವತಿಯಿದ್ದಂತೆ; ಎಂದು ಭಾವಿಸಿ, ಮಾತ್ಸರ್ಯದಿಂದೆಂಬಂತೆ ಗೋಪಿಯು ಸುಂದರವಾದ ಕಮಲ-ವನ್ನು ಹೊಸಕಿಹಾಕಿದಳು ಎಂಬಲ್ಲಿ ಸ್ತ್ರೀಸಹಜವಾದ ಸವತಿಮಾತ್ಸರ್ಯದ ನಿರೂಪಣೆ ಬಂದಿದೆ.

೨. ಇಲ್ಲಿ ಪ್ರಸಕ್ತವಾಗಿರುವ 'ಪದ್ಮಾ' ಶ್ರೀಹರಿಯ ಪತ್ನಿ. ಬ್ರಹ್ಮ ಹಾಗೂ ವಾಯು ಅವನ ಪುತ್ರರು ಎಂಬುದು ಗಮನಾರ್ಹ; ಬ್ರಹ್ಮನಿಗೆ ಪ್ರಿಯವಾದ ಹಾಗೂ ವಾಯುವಿನಿಂದ ಸೇವಿತವಾದ ಎಂಬುದು ಕಮಲವು ಮಹಾಲಕ್ಷ್ಮಿಯ ನೆಲೆ ಎಂಬುದಕ್ಕೆ ಪೂರಕವಾದ ನಿರೂಪಣೆ.

ಗೋಪಿಯ ಸವತಿಮಾತ್ಸರ್ಯ

ಶ್ರೀಪತೇರಧರಸೀತ್ಕೃತಿಕಾಲೇ
ಗೋಪಿಕೇಕ್ಷಯತಿ ಮಾಮಿತರೇತಿ ।
ಕೋಪತಪ್ತಹೃದಯೇವ ಸರಾಗಂ
ಕಾಪಿ ಕೋಕನದಮೇತ್ಯ ಜಹಾರ[1] ॥ ೪೨ ॥

---

೧. ಸ್ವಾಗತಾವೃತ್ತಮ್ । -ವ್ಯಾ.

ಶಿರಸಿ ನಿಹಿತಮಾಲ್ಯೈರರ್ಚ್ಯಮಾನರ್ಚುರೇನಂ
ಗತಿಮಿವ ಯತಿಯೋಗ್ಯಾಂ ಸಾಧಯಂತ್ಯೋಽಬಲಾಸ್ತಾಃ ॥ ೩೮ ॥

ಕೈಯಲ್ಲಿ ಹಿಡಿದಿದ್ದ ಪಿಚಕಾರಿಗಳಲ್ಲಿನ ಜಲದಿಂದ ಮುಕುಂದನಾದ ಶ್ರೀಕೃಷ್ಣನನ್ನು ಅಭಿಷೇಕಿಸಿ, ಆಲಿಂಗಿಸಿಕೊಳ್ಳುವ ಮೂಲಕ ಅವನಿಗೆ ತಮ್ಮ ಸ್ತನಪ್ರದೇಶದ ಗಂಧವನ್ನು ಮೆತ್ತುವಂತೆ ಮಾಡಿ, ತಲೆಯಲ್ಲಿ ಮುಡಿದಿದ್ದ ಹೂಗಳಿಂದ ಪೂಜನೀಯನಾದ ಅವನನ್ನು ಆ ಗೋಪಿಯರು ಪೂಜಿಸಿದರು; ಯತಿಗಳಿಗೆ ಲಭಿಸುವಂತಹ ಗತಿಯನ್ನು ಸಾಧಿಸುವವರಂತೆ.

ವಿ. : ಗೋಪಿಯರ ಈ ಶೃಂಗಾರ ಚೇಷ್ಟೆಗಳು ಕೇವಲ ಗ್ರಾಮ್ಯ ಶೃಂಗಾರವಾಗಿರದೆ ಶ್ರೀಕೃಷ್ಣನನ್ನು ಸಾಕ್ಷಾತ್ ಶ್ರೀಹರಿಯೆಂದು ಆರಾಧಿಸುವ ದೈವೀಶೃಂಗಾರವಾಗಿದ್ದವು ಎಂಬುದು ಇಲ್ಲಿಯ ಮುಖ್ಯ ಭಾವ; ದೃತಿ – ಪಿಚಕಾರಿ.

ಮಹಾಗಜದಂತಹ ಶ್ರೀಕೃಷ್ಣನ ರೀತಿ

ಸಿಕ್ತೋಽಪಿ ರಮ್ಯಲಲನಾಕರಪದ್ಮಪತ್ರೈ-
ರ್ಭೃತ್ಯಾಮರಾವಲಿಸಮರ್ಪಿತಪುಷ್ಪಪುಂಜೇ ।
ವಿಸ್ತೀರ್ಣರೇಣುನಿಕರಂ ದಧದಾತ್ಮನೋಽಂಗೇ
ಹಸ್ತೀಶ್ವರಪ್ರಕೃತಿಮಾರ್ಜಯದೇಷ ದೇವಃ ॥ ೩೯ ॥

ಚೆಲುವೆಯರಾದ ಸ್ತ್ರೀಯರ ಕೈಗಳೆಂಬ ತಾವರೆ ಎಲೆಗಳಿಂದ ಅಭಿಷಿಕ್ತನಾದರೂ, ಸೇವಕರಾದ ದೇವತೆಗಳ ವೃಂದದಿಂದ ಸಮರ್ಪಿತವಾದ ಹೂಗಳ ಸಮೂಹದಲ್ಲಿ ಹರಡಿದ ಹೂಗಳ ಪರಾಗಗಳ ರಾಶಿಯನ್ನು ತನ್ನ ದೇಹದಲ್ಲಿ ಧರಿಸಿದ ಆ ಶ್ರೀಕೃಷ್ಣದೇವನು ಒಂದು [೧]ಮಹಾಗಜದ ರೀತಿಯನ್ನು ಸಂಪಾದಿಸಿಕೊಂಡನು.

ವಿ. : ಆನೆಯು ಸ್ನಾನ ಮಾಡಿದ ಬಳಿಕವೂ ಮೈಮೇಲೆ ಧೂಳನ್ನೆರಚಿಕೊಳ್ಳುವ ಮೂಲಕ ಮತ್ತೊಮ್ಮೆ ಮೀಯುವುದು ವಿಶೇಷ. ಪ್ರಸ್ತುತ ಶ್ರೀಕೃಷ್ಣನು ಸಹ ಗೋಪಿಯರಿಂದ ಅಭಿಷಿಕ್ತನಾಗಿದ್ದರೂ ಹೀಗೆ ಮತ್ತೊಮ್ಮೆ ಹೂಗಳ ಪರಾಗರಾಶಿಯಿಂದ ಅಭಿಷಿಕ್ತನಾದ್ದರಿಂದ ಅವನದು ಮಹಾಗಜದ ರೀತಿಯಾಯಿತು ಎಂದು ಭಾವ.

ಕಮಲದ ಮೇಲೆ ಗೋಪಿಯ ರೋಷ

ದ್ವಿರೇಫಶಾವಾಂಕಿತಶೋಭಿವಕ್ತ್ರಂ
ಕೃತಕ್ಷತಂ ಸುಸ್ವರರಾಜಹಂಸೈಃ ।

---

೧. ಗಜೋಽಪಿ ಸ್ನಾನಾನಂತರಂ ಪುನಃ ಪಾಂಸುದಿಗ್ಧೋ ಭವತೀತಿ ಗಜಸ್ವಭಾವಃ ।"ಕ್ವಚಿನ್ನಿವರ್ತತೇಽಭದ್ರಾತ್ ಕ್ವಚಿಚ್ಚರತಿ ತತ್ಪುನಃ । ಪ್ರಾಯಶ್ಚಿತ್ತಮತೋಽಪಾರ್ಥಂ ಮನ್ಯೇ ಕುಂಜರಶೌಚವತ್" (ಭಾಗ.೬/೧/೧೦) ಇತ್ಯಾದೌ ಪ್ರಸಿದ್ಧಿಃ। – ವ್ಯಾ

ಮನೋರಮಂ ಸಾರಸಕೋಶಮೇಕಾ
ಘನಸ್ತನಸ್ಪರ್ಧಿ ಚಕರ್ತ ಬಾಲಾ ॥ ೪೦ ॥

ದುಂಬಿಯ ಮರಿಯು ಕುಳಿತಿದ್ದರಿಂದಾಗಿ ತುದಿಯು ಕಂಗೊಳಿಸುತ್ತಿದ್ದ ರಮ್ಯವಾದ ಧ್ವನಿ-ಗಯ್ಯುವ ರಾಜಹಂಸಗಳಿಂದ ಕುಕ್ಕಲ್ಪಟ್ಟ, ತನ್ನ ಗಟ್ಟಿಸ್ತನಕ್ಕೆ ತೀವ್ರ ಪ್ರತಿಸ್ಪರ್ಧಿಯಂತಿದ್ದ ಸುಂದರವಾದ ಕಮಲದ ಮೊಗ್ಗನ್ನು ಗೋಪಿಯೊಬ್ಬಳು ಚಿವುಟಿಹಾಕಿದಳು; (ಶಾವ - ಮರಿ).

ಕಮಲವನ್ನು ಹೊಸಕಿದ ಗೋಪಿ

ಮಾದ್ಯದ್ದ್ವಿರೇಫೈಃ ಕೃತಗೀತಜಾತಂ
ಪದ್ಮಾಸನೇಷ್ಟಂ ಪವನೇನ ಜುಷ್ಟಮ್ ।
ಪದ್ಮಂ ಸುಗಂಧಿ ನ್ಯಲುನಾತ್ ಸಪತ್ನೀ-
ಸದ್ಮಾಭಿಶಂಕ್ಯೇವ ಮುಕುಂದಯೋಗ್ಯಮ್ ॥ ೪೧ ॥

ಮದಿಸಿದ ದುಂಬಿಗಳ ಝೇಂಕಾರದಿಂದ ಕೂಡಿದ್ದ, ಪದ್ಮಾಸನರಾದ ಬ್ರಹ್ಮದೇವರಿಗೆ ಪ್ರಿಯವಾದ, ವಾಯುವಿನಿಂದ ಸೇವಿತವಾದ, ಪರಿಮಳಭರಿತವಾದ ಕಮಲಪುಷ್ಪವನ್ನು ಮುಕುಂದನಾದ ಶ್ರೀಕೃಷ್ಣನಿಗೆ ಯೋಗ್ಯವಾದ, ತನ್ನ ಸವತಿಯಾದ ಮಹಾಲಕ್ಷ್ಮಿಯ ನೆಲೆ ಎಂಬ ಶಂಕೆಯಿಂದೆಂಬಂತೆ (ಗೋಪಿಯೊಬ್ಬಳು) ಹೊಸಕಿಹಾಕಿದಳು.

ವಿ : ೧. ಕಮಲವು ಮಹಾಲಕ್ಷ್ಮಿಗೆ ನೆಲೆ; ಶ್ರೀಹರಿಯಾದ ಕೃಷ್ಣನಿಗೆ ಅವಳು ಪತ್ನಿ; ಎಂದರೆ ತನಗೆ ಸವತಿಯಿದ್ದಂತೆ; ಎಂದು ಭಾವಿಸಿ, ಮಾತ್ಸರ್ಯದಿಂದೆಂಬಂತೆ ಗೋಪಿಯು ಸುಂದರವಾದ ಕಮಲ-ವನ್ನು ಹೊಸಕಿಹಾಕಿದಳು ಎಂಬಲ್ಲಿ ಸ್ತ್ರೀಸಹಜವಾದ ಸವತಿಮಾತ್ಸರ್ಯದ ನಿರೂಪಣೆ ಬಂದಿದೆ.

೨. ಇಲ್ಲಿ ಪ್ರಸಕ್ತವಾಗಿರುವ 'ಪದ್ಮಾ' ಶ್ರೀಹರಿಯ ಪತ್ನಿ, ಬ್ರಹ್ಮ ಹಾಗೂ ವಾಯು ಅವನ ಪುತ್ರರು ಎಂಬುದು ಗಮನಾರ್ಹ; ಬ್ರಹ್ಮನಿಗೆ ಪ್ರಿಯವಾದ ಹಾಗೂ ವಾಯುವಿನಿಂದ ಸೇವಿತವಾದ ಎಂಬುದು ಕಮಲವು ಮಹಾಲಕ್ಷ್ಮಿಯ ನೆಲೆ ಎಂಬುದಕ್ಕೆ ಪೂರಕವಾದ ನಿರೂಪಣೆ.

ಗೋಪಿಯ ಸವತಿಮಾತ್ಸರ್ಯ

ಶ್ರೀಪತೇರಧರಸೀತ್ಕೃತಿಕಾಲೇ
ಗೋಪಿಕೇಕ್ಷಯತಿ ಮಾಮಿತರೇತಿ ।
ಕೋಪತಪ್ತಹೃದಯೇವ ಸರಾಗಂ
ಕಾಪಿ ಕೋಕನದಮೇತ್ಯ ಜಹಾರ[೧] ॥ ೪೨ ॥

೧. ಸ್ವಾಗತಾವೃತ್ತಮ್ । -ವ್ಯಾ.

ಶ್ರೀಪತಿಯಾದ ಶ್ರೀಕೃಷ್ಣನ ಅಧರಾಮೃತವನ್ನು ತಾನು ಹೀರುವಾಗ ಬೇರೊಬ್ಬ ಗೋಪಿಯು ಅದನ್ನು ನೋಡುತ್ತಿರುವಳು ಎಂಬ ಕೋಪದಿಂದ ಮನಸ್ಸು ಕೆರಳಿದವಳಂತೆ ಗೋಪಿಯೊಬ್ಬಳು ಕೆಂಪು ಕಮಲದ ಬಳಿಗೆ ತೆರಳಿ ಅದನ್ನು ಕಿತ್ತುಹಾಕಿದಳು.

ವಿ. : ಗೋಪಿಯು ಕಮಲಮುಖಿ ಎಂಬುದು ಇಲ್ಲಿಯ ಒಟ್ಟು ಭಾವ.

### ಕಮಲವನ್ನು ಚಿವುಟಿದ ಗೋಪಿ

ದೃಪ್ತಭೃಂಗಸದಪಾಂಗವಿಲೋಲಂ
ಸತ್ಸರೋಜಮಲುನಾತ್ ಕಿಲ ಕಾಚಿತ್ ।
ಸೀತ್ಕರಿಷ್ಯತಿ ಹರಿಃ ಸ ಮದೀಯಂ
ವಕ್ತ್ರಮೇತದಿತಿ ಭೀತಿಯುತೇವ ॥ ೪೩ ॥

ಮದಿಸಿದ ದುಂಬಿ ಎಂಬ ಚೆಲುವಾದ ಕುಡಿನೋಟದಿಂದ ತೊನೆಯುತ್ತಿದ್ದ ಸುಂದರವಾದ ಕಮಲವೊಂದನ್ನು ಕಂಡು ಗೋಪಿಯೊಬ್ಬಳು ಅದನ್ನು ಪ್ರಿಯತಮನಾದ ಶ್ರೀಕೃಷ್ಣನು ತನ್ನ ಮುಖ ಎಂದು ಭಾವಿಸಿ ಚುಂಬಿಸಿಯಾನು, ಎಂಬ ಅಂಜಿಕೆಯಿಂದ ಕೂಡಿದವಳೆಂಬಂತೆ ಕತ್ತರಿಸಿಹಾಕಿದಳು; ಆಶ್ಚರ್ಯ !

### ಕೃಷ್ಣನ ಮುಖವನ್ನು ಆಘ್ರಾಣಿಸಿದ ಗೋಪಿ

ಆಕಂಠಮಂಭಸಿ ಗತಸ್ಯ ಹರೇರ್ಮನೋಜ್ಞ-
ಮಾಸ್ಯಂ ಸಮೀಪಗಸಖೀಜನಜಾತಲಜ್ಜಾ[೧] ।
ನೀಲೋತ್ಪಲಂ ವಿಲಸದೇತದಧೀರಭೃಂಗ-
[೨]ಮಾತಾಮ್ರಕೇಸರಮಿತಿ ಪ್ರವದಂತ್ಯಜಿಘ್ರತ್[೩] ॥ ೪೪ ॥

ಸಮೀಪದಲ್ಲಿ ಸಖೀಜನರು ಇದ್ದ ಕಾರಣದಿಂದ ನಾಚಿದ ಒಬ್ಬ ಗೋಪಿಯು ಕಂಠದವರೆಗೆ ನೀರಿನಲ್ಲಿ ಮುಳುಗಿದ್ದ ಶ್ರೀಕೃಷ್ಣನ ಮನೋಹರವಾದ ಮುಖವನ್ನು, ಹೊಳೆಯುವ ಇದು ಕೆಂಪಾದ ಕೇಸರಗಳು ಚಂಚಲ ಭ್ರಮರಗಳಿಂದ ಕೂಡಿದ ಕನ್ನೈದಿಲೆ ಎಂದು ಹೇಳುತ್ತ ಆಘ್ರಾಣಿಸಿದಳು.

---

೧. ಅನೇನಾನ್ಯಾಚುಂಬಿತತ್ವಂ ಲಜ್ಜಾಕರಣಂ ಸೂಚ್ಯತೇ । ಏತತ್ ದೃಶ್ಯಮಾನಂ ನೀಲೋತ್ಪಲಮಿತಿ ಪ್ರವದಂತೀ ಸತೀ ಅಜಿಘ್ರತ್ ಆಘ್ರಾತವತೀ । -ವ್ಯಾ.

೨. ಆತಾಮ್ರಕೇಸರಂ ಈಷದ್ರಕ್ತಕಿಂಜಲ್ಕಯುಕ್ತಂ ಬಿಂಬೋಷ್ಠರೂಪಕಮೇತತ್ । -ವ್ಯಾ.

೩. ಅನ್ಯಾಚುಂಬಿತಮಪಿ ಕೃಷ್ಣಾಧರಂ ತ್ಯಕ್ತುಮಸಮರ್ಥಾ ನೀಲೋತ್ಪಲಬುದ್ಧ್ಯೈವಾಘ್ರಾತವತೀ ನ ತು ಸಾಪರಾಧಸ್ಯ ಕೃಷ್ಣಸ್ಯ ಮುಖಮಿತಿ ಸ್ವಮಾನಂ ರಕ್ಷಿತವತೀತಿ ಭಾವಃ । -ವ್ಯಾ.

ಕೃಷ್ಣನ ವಿರಹದಿಂದ ನಲುಗಿದ ಗೋಪಿ

ಆರ್ಯಾಯಾಹಿ ಗೃಹಂ ತ್ವಯಾ ವಿರಹಿತಂ ಸಂತ್ಯಜ್ಯ ಸಾ ಸತ್ವರಾ
ದ್ವಾರ್ಯಾಸ್ತೇ ನ ಪುನರ್ವಿವಿಕ್ಷತಿ ತನುಂ ತ್ವದ್ಯೋಗಹೀನಾಮಿವ।
ಚಿತ್ತಂ ತ್ವಚ್ಚರಣೇ ನಿಧಾಯ ವಿವಶಾ ಚಿತ್ರಾರ್ಪಿತೇವ ಪ್ರಭೋ
ನೋ ಚೇತ್ ತತ್ತನುಶಾಖಿನೇಶ ಭವನಂ ಸ್ಯಾದೇವ ತತ್ ಕಾನನಮ್[೧] ॥೪೫॥

ಪೂಜ್ಯನಾದ ಶ್ರೀಕೃಷ್ಣ! ನೀನು ಬಾ ! ನೀನಿಲ್ಲದ ಮನೆಯನ್ನು ತೊರೆದು ಅವಳು ಬಾಗಿಲಲ್ಲಿ ಕಾಯುತ್ತಿರುವಳು; ನೀನಿಲ್ಲದ ದೇಹವನ್ನೆಂಬಂತೆ ಅವಳು ಅದನ್ನು ಪ್ರವೇಶಿಸಲಾರಳು; ಮನಸ್ಸನ್ನು ನಿನ್ನ ಪಾದದಲ್ಲಿಯೇ ತೊಡಗಿಸಿ ಅವಳು ಪರವಶಳಾಗಿ ಚಿತ್ರದಲ್ಲಿ ಬರೆಯಲ್ಪಟ್ಟವಳಂತೆ ನಿಶ್ಚಲಳಾಗಿರುವಳು; ಸಮರ್ಥನಾದ ಸ್ವಾಮಿ! ನೀನು ಬಾರದಿದ್ದಲ್ಲಿ ತನ್ನ ದೇಹರೂಪದ ಮರದಿಂದಾಗಿ ಅವಳ ಮನೆಯು ಅರಣ್ಯವೇ ಆಗಿಬಿಟ್ಟೀತು.

ವಿ. : ೪೫ ರಿಂದ ೪೭ರವರೆಗಿನ ಶ್ಲೋಕಗಳು ದೂತಿಯರ ವಚನಗಳು ಎಂಬ ವಿವರ ಶ್ಲೋಕ ೪೮ರಲ್ಲಿದೆ.

ಕೃಷ್ಣನ ವಿರಹದಿಂದ ಮೈಮರೆತ ಗೋಪಿ

ನಿರ್ಯಾಂತೀ ಪ್ರವಿಶಂತ್ಯದೋ ಗೃಹಮಸೌ ಪ್ರತ್ಯಾಕ್ಷಿಪಂತೀ ಮಮ
ಪ್ರೇಮಾಲಾಪಮಪಿ ಶ್ವಸಂತ್ಯುರುಶುಚಾ ಹಸ್ತೇ ನಿವೇಶ್ಯಾನನಮ್।
ಪಶ್ಯಂತೀ ತವ ವರ್ತ್ಮ ಸಾಶ್ರುನಯನಾ ಮಾಂ ಯಾಚಮಾನಾ ಮುಹು-
ರ್ಮೋಹಂ ಕ್ವಾಪಿ ವಹಂತ್ಯಸೌ ನ ಸದಯಂ ಕಸ್ಯೇಶ ಕುರ್ಯಾನ್ಮನಃ ॥ ೪೬ ॥

ಆ ಮನೆಯಿಂದ ಹೊರಕ್ಕೆ ನಡೆಯುವುದನ್ನು, ಒಳಕ್ಕೆ ಬರುವುದನ್ನು ಮಾಡುವ ಇವಳು ನನ್ನ ಪ್ರೀತಿಯ ಮಾತುಗಳನ್ನು ಕೇಳಿಸಿಕೊಳ್ಳದೆ ಹೆಚ್ಚಿನ ಶೋಕದಿಂದ ನಿಟ್ಟುಸಿರನ್ನು ಬಿಡುತ್ತಿರುವಳು; ಕೈಯಲ್ಲಿ ಮುಖವಿರಿಸಿಕೊಂಡು ನೀರು ತುಂಬಿದ ಕಣ್ಣುಗಳಿಂದ ನಿನ್ನ ಹಾದಿಯನ್ನು ನೋಡುತ್ತ ನನ್ನನ್ನು ಮತ್ತೆ ಮತ್ತೆ ಬೇಡಿಕೊಳ್ಳುತ್ತಾ ಮೂರ್ಛೆಹೋಗುತ್ತಿರುವಳು; ಇವಳ ಬಗ್ಗೆ ಯಾರಿಗೆ ತಾನೆ ಮರುಕ ಹುಟ್ಟದು?

ಸಾಮಾನ್ಯ ಸ್ತ್ರೀಯಂತಾದ ಗೋಪಿ

ಸಾಯಂ ಹೀನ ನ ಹೀಯಂ ಸಾ ಮಾರತಾತ ತತಾ ರಮಾ।
ಕ್ಷೀಣಾऽದೇವವದೇಣಾಕ್ಷೀ ಚಾರುರಾಜ ಜರಾರುಚಾ ॥ ೪೭ ॥

---

೧. ಅನೇನ ದೂತ್ಯಾ ಸ್ವಸ್ಯಾ ಅಪ್ಯಪ್ರವೇಶಃ ಸೂಚಿತಃ। - ವ್ಯಾ.

ಸ್ವಾಮಿ ಶ್ರೀಕೃಷ್ಣ! ನೀನು ಕಾಮನಿಗೆ ತಂದೆ; ಸುಂದರರ ಸಾಮ್ರಾಟ; ಇದಂತು ಸಂಜೆಯ ಸಮಯ; ಈ ಗೋಪಿಕೆಯು ಮಹಾಲಕ್ಷ್ಮಿಯಂತೆ ಸರ್ವತ್ರವ್ಯಾಪ್ತಳಾದವಳೇನಲ್ಲ ; ಈ ಹರಿಣಾಕ್ಷಿಯು ಮುಪ್ಪಡರಿದವಳಂತೆ ಸೊರಗಿ, ಮನುಷ್ಯಸ್ತ್ರೀಯಂತಾಗಿಬಿಟ್ಟಿರುವಳು.

ವಿ. : ೧. ಗೋಪಿಯರು ಮನುಷ್ಯಸ್ತ್ರೀಯರಾಗಿರದೆ, ದೇವಲೋಕದ ಅಪ್ಸರೆಯರಾಗಿದ್ದವರು ಎಂಬ ಪ್ರಮೇಯ[1] ಇದರಿಂದ ಸೂಚಿತ.

೨. ಶ್ರೀಕೃಷ್ಣನನ್ನು ಕಾಣದ ಚಿಂತೆಯಿಂದಾಗಿ ಕಾಲವು ದೀರ್ಘವೆನ್ನಿಸುವುದರಿಂದ ಮುಪ್ಪು ಕವಿದಂತಾಗುವುದು ಎಂಬ ಇಲ್ಲಿಯ ಭಾವ ರೋಚಕವಾದುದು.

೩. ಇದರಿಂದ ಚಿಂತೆಗೊಳಗಾಗುವವರಿಗೆ ಮುಪ್ಪು ಬೇಗ ಒದಗುವುದು; ಆಯುಷ್ಯವು ಕ್ಷೀಣಿಸುವುದು ಎಂಬ ಭಾವವು ಸಹ ಸೂಚಿತ : ಚಿಂತಾ ದಹತಿ ಜೀವಿನಮ್.

೪. ಈ ಶ್ಲೋಕದ ಪ್ರತಿಪಾದದ ಮೊದಲ ನಾಲ್ಕು ಅಕ್ಷರಗಳು ತಿರುಗುಮುರುಗಾಗಿ ಮುಂದಿನ ನಾಲ್ಕು ಅಕ್ಷರಗಳಾಗಿರುವುದನ್ನು ಗಮನಿಸಬೇಕು (ಗತಾಗತಯಮಕ)[2]. ಸುಮಧ್ವವಿಜಯದಲ್ಲಿನ ಇಂತಹುದೇ ಶ್ಲೋಕ ಹೀಗಿದೆ (೧೦/೪೮):

ಸಮಾನಯಾ ಯಾಽನನಽಮಾಸ ಮಾಯಯಾ ತತಯಾಽಯಮಾ ।
ನಯಾಸನಾ ನಾಸ ಯಾ ನ ಯಾತನಾಽಲಲನಾ(ಽ)ತಯಾ ॥

### ಗೋಪಿಯ ಬಳಿಗೆ ಸಖಿಯರು

**ಇತ್ಥಂ ನಿಗದ್ಯ ನಿಗಮಾಕಲಿತಂ ನಯಂತಿ**
**ದೂತ್ಯೋ ವಿತಾನಮಣಿಶೋಭಿಗೃಹಂ ನಿಶಾಸು ।**
**ನೃತ್ತನ್ಮಯೂರಶುಕಕೋಕಿಲಮತ್ತಭೃಂಗ-**
**ತತ್ಯಾದೃತೋಪವನವಾಸಿತಮಂಗನಾಯಾಃ ॥ ೪೮ ॥**

ಹೀಗೆ ನುಡಿಯುತ್ತ ಸಖಿಯರು, ನಿಗಮಗಳಿಗೂ ನಿಲುಕದ ಶ್ರೀಕೃಷ್ಣನನ್ನು ರಾತ್ರಿಸಮಯದಲ್ಲಿ ನರ್ತಿಸುವ ನವಿಲು, ಗಿಳಿ, ಕೋಗಿಲೆ ಹಾಗೂ ಮದಿಸಿದ ದುಂಬಿಗಳ ವೃಂದವು ಸೇವಿಸುವ ಉಪವನದಿಂದ ಸುವಾಸಿತವಾಗಿದ್ದ, ವಿತಾನಮಣಿಗಳಿಂದ ಶೋಭಿಸುವ ಗೋಪಿಯ ಮನೆಗೆ ಕರೆತಂದರು.

### ಗೋಪಿಯೊಬ್ಬಳು ಮಾಡಿದ ವಿಶಿಷ್ಟ ಪೂಜೆ

**ನೇತ್ರಾನಂದಜಲೇನ ಮಂಜುಕಲಶಪ್ರಖ್ಯಸ್ತನಸ್ಥಾಯಿನಾ**
**ಪಾದ್ಯಾರ್ಘ್ಯೇ ಹಿಮವಾರಿಣೇವ ಮಧುಭಿಃ ಸ್ನಾನಂ ಪ್ರಸೂನಸ್ರುತೈಃ ।**

---

೧. ಪರಮಾಪ್ಸರಸಃ ಪುರಾ ಯಾಃ । – ಮ.ಭಾ.ತಾ.ನಿ (೧೩/೫೦)

೨. ಗತಾಗತಯಮಕಮಿದಮ್ । –ವ್ಯಾ.

**ಆಶ್ಲಿಷ್ಯಾಂಗಕಲಾಪರಮ್ಯತಿಲಕಶ್ರೀಖಂಡಲೇಪಾಂಶ್ಚ ಸಾ**
**ಲೋಲೇಕ್ಷೋತ್ಪಲಮಾಲ್ಯಮೋಷ್ಠಜಸುಧಾಂ ಪ್ರಾದಾತ್ ಪ್ರಿಯೇಽಭ್ಯಾಗತೇ॥೪೯॥**

ಪ್ರಿಯತಮನಾದ ಶ್ರೀಕೃಷ್ಣನು ಆಗಮಿಸುತ್ತಲೆ, ಗೋಪಿಯು ಮನೋಹರವಾದ ಕಲಶರೂಪದ ಸ್ತನದ ಮೇಲಿದ್ದ ಹಿಮದ ನೀರಿನಂತಹ ನೇತ್ರದ ಆನಂದಬಾಷ್ಪದಿಂದ ಪಾದ್ಯ-ಅರ್ಘ್ಯಗಳನ್ನು ಸಮರ್ಪಿಸಿದಳು; ಹೂವುಗಳಿಂದ ಸುರಿದ ಮಧುವಿನಿಂದ ಅಭಿಷೇಕಿಸಿದಳು; ಅವನನ್ನು ಆಲಿಂಗಿಸಿಕೊಳ್ಳುವ ಮೂಲಕ ತನ್ನ ಅವಯವಗಳೆಂಬ ಒಡವೆಗಳನ್ನು , ರಮಣೀಯವಾದ ತಿಲಕವನ್ನು, ಶ್ರೀಗಂಧದ ಲೇಪವನ್ನು ಮಾಡಿದಳು; [೧]ಚಂಚಲನೋಟವೆಂಬ ಕನ್ನೈದಿಲೆಯ ಮಾಲೆಯನ್ನು ಹಾಕಿದಳು; ತನ್ನ ಅಧರಾಮೃತವನ್ನು ನೀಡಿದಳು.

ವಿ. : ೧. ಪೂಜೆಗೆ ಅಗತ್ಯವಾದ ಅರ್ಘ್ಯ, ಪಾದ್ಯ, ಅಭಿಷೇಕ, ಆಭರಣ, ತಿಲಕ, ಗಂಧ, ಮಾಲೆ ಹಾಗೂ ನೈವೇದ್ಯಗಳನ್ನು ಗೋಪಿಯು ತನ್ನಲ್ಲಿಯೇ ಸಂಕಲ್ಪಿಸಿ ಮಾಡಿದ ವಿಶಿಷ್ಟರೀತಿಯ ಪೂಜೆಯ ಅಪೂರ್ವ ವಿವರ ಇಲ್ಲಿದೆ.

೨. ಇದು ಮಾನಸಪೂಜೆಗೆ ಅನುಕೂಲಿಸುವಂತಹ ವಿವರಣೆ ಎಂದು ತಿಳಿಯಬಹುದು.

### ಗೋಪಿಯ ಅದ್ಭುತ ಮಂದಹಾಸ

**ಕಾಂತಾನನದ್ಯುತಿನಿವೃತ್ತಕಟಾಕ್ಷಗಂಡ-**
**ಬಿಂಬೋಷ್ಠರಮ್ಯರುಚಿಭಿರ್ಮಿಲಿತಾ ಸ್ಮಿತಶ್ರೀಃ।**
**ಇಂದೀವರಾಂಬುರುಹಕೋಕನದೈಃ ಸುಗಂಧಿ**
**ಸಾಂದ್ರಂ ತಯಾಽನುಕುರುತೇ [೨]ಮಧು ಪೀಯಮಾನಮ್ ॥ ೫೦ ॥**

ಪ್ರಿಯತಮನಾದ ಶ್ರೀಕೃಷ್ಣನ ರಮ್ಯವಾದ ಮುಖದ ಕಾಂತಿಯಿಂದ ಹಿಮ್ಮೆಟ್ಟಿದ ಕುಡಿನೋಟ, ಕೆನ್ನೆ , ಕೆಂಪಾದ ತುಟಿ, ಇವುಗಳ ರಮ್ಯಕಾಂತಿಯಿಂದ ಒಡಗೂಡಿದ ಆವಳ ಕಿರುನಗೆಯ ಕಾಂತಿಯು ಕನ್ನೈದಿಲೆ, ಕಮಲ, ಕೆಂಪುಕಮಲಗಳಿಂದ ಸುರಭಿತವಾದ ಅವಳು ಪಾನ-ಮಾಡುತ್ತಿದ್ದ ಘನಮಧುವನ್ನು ಹೋಲುತ್ತಿದ್ದಿತು.

೧. ಅನೇನ ಪಾದಮಾರಭ್ಯ ಕಂಠಪರ್ಯಂತಂ ತಸ್ಯಾಃ ಕೃಷ್ಣಾವಯವಸೌಂದರ್ಯಾವಲೋಕನಂ ದ್ಯೋತ್ಯತೇ । ಓಷ್ಠಜಸುಧಾಂ ಅಧರಾಮೃತಂ ಚ ಪ್ರಾದಾತ್ ಕೃಷ್ಣಾಯಾದಿಶತ್ । ಅನೇನ ಶೃಂಗಾರವಿಲಾಸಾಃ ನೈವೇದ್ಯಾಂತೋ-ಪಚಾರಾಶ್ಚ ದರ್ಶಿತಾ ಭವಂತಿ । -ವ್ಯಾ.

೨. ಅನೇನ ಕಾವ್ಯೇ ವರ್ಣನೀಯಂ ಮಧುಪಾನಂ ವಸ್ತುತೋಽಭಾವಾದೌತ್ಪ್ರೇಕ್ಷಿಕಂ ವರ್ಣಿತಂ ಭವತಿ । -ವ್ಯಾ.

ವಿ. : ಇದರಲ್ಲಿ ಮಹಾಕಾವ್ಯಕ್ಕೆ ಅಗತ್ಯವಾದ [1]ಮಧುಪಾನದ ವರ್ಣನೆ ಬಂದಿದೆ ; ಕಾವ್ಯದ ಪಾವಿತ್ರ್ಯಕ್ಕೆ ಕುಂದಾಗದಂತೆ ಮಹಾಕಾವ್ಯದ ಅಗತ್ಯವನ್ನೂ ಪೂರೈಸುವ ಶ್ರೀವಾದಿರಾಜರ ಇಂತಹ ಕೌಶಲ ಅತ್ಯಂತ ಅಪೂರ್ವವಾದುದು; ಕೋಕನದ – ಕೆಂಪುಕಮಲ.

### ಆದಿಶೇಷನಂತಿದ್ದ ಹಾಸಿಗೆ

ವಿಷ್ವಗ್ವ್ಯಾಪಿಮಣಿಪ್ರಭಾಭಿಧಪಯಃಸಿಂಧೌ ಸ್ಫುರನ್ಮಂಟಪ-
ಪ್ರಖ್ಯೇ[2] ವೇಶ್ಮನಿ ಭೋಗಿಕಲ್ಪಕಶಿಪೌ ಸಾಕಂ ವ್ರಜಸ್ತ್ರೀಜನೈಃ ।
[3]ಭಿತ್ತಿಶ್ರೀಪತಿಮೌಲಿರತ್ನಮಹಸೋತ್ಸರ್ಪಿಸ್ವರತ್ನಶ್ರಿಯಾ
ಪುಷ್ಟೋನ್ನಮ್ರಫಣತ್ವಿಷಾಂ ಮುಷಿ ಲಸಂಸ್ತುಷ್ಟೋಽಸ್ತ್ವಸೌ ವಿಟ್ಠಲಃ ॥ ೫೧ ॥

ಎಲ್ಲೆಡೆಯೂ ಪಸರಿಸಿದ ಮುತ್ತಿನ ಮಣಿಗಳ ಕಾಂತಿಯ ರೂಪದ ಹಾಲ್ಗಡಲಿನಲ್ಲಿ ಹೊಳೆಯುವ ಮಂಟಪದಂತಹ ಮನೆಯಲ್ಲಿ, ಗೋಡೆ ಹಾಗೂ ಒಳಗೆ ಪವಡಿಸಿದ ಶ್ರೀಕೃಷ್ಣನ ಕಿರೀಟದ ರತ್ನಗಳ ಕಾಂತಿಯಿಂದ ಮೇಲಕ್ಕೆ ಚಿಮ್ಮುವ ತನ್ನ ರತ್ನಗಳ ಕಾಂತಿಯಿಂದ, ಪುಷ್ಟವಾದ ಮೇಲೆತ್ತಿದ ಹೆಡೆಯಂತಹ ಕಾಂತಿಗಳನ್ನು ಮೀರಿಸುವ ಹಾಸಿಗೆಯಲ್ಲಿ ಗೋಪಸ್ತ್ರೀಯರೊಂದಿಗೆ ಕಂಗೊಳಿಸುವ ವಿಟ್ಠಲನು ಪಾಲಿಸಲಿ; (ಕಶಿಪು – ಹಾಸಿಗೆ).

### ಪರವಶಳಾಗಿ ಕೋಪ ಮರೆತ ಗೋಪಿ

ಗೋಪೀ ಕಾಚನ ಧೀರತಾಂ ಹೃದಿ ಬಲಾದಾಲಂಬ್ಯ ರತ್ಯುತ್ಸುಕೇ
ಕೋಪೇನೇವ ನಿಮೀಲ್ಯ ನೇತ್ರಯುಗಲಂ ತಲ್ಪೇ ಶಯಾನಾ ಸಕೃತ್ ।
ಕಾಂತಂ ನಿದ್ರಿತಮಾಕಲಯ್ಯ ಶನಕೈರಾಲಿಂಗ್ಯ ಬಿಂಬಾಧರಂ
ಸೀತ್ಕುರ್ವಂತ್ಯಥ ವೀಕ್ಷಿತಾಽಪಿ ವಿವಶಾ ಮಾನಂ ನ ಸಸ್ಮಾರ ಸಾ ॥ ೫೨ ॥

ಆ ಗೋಪಿಯು ಮನಸ್ಸನ್ನು ಗಟ್ಟಿಮಾಡಿಕೊಂಡವಳಾಗಿ ರತಿಗೆ ಉತ್ಸುಕನಾಗಿದ್ದ ಶ್ರೀಕೃಷ್ಣನ ಮೇಲೆ ಕೋಪದಿಂದೆಂಬಂತೆ ತನ್ನೆರಡು ಕಣ್ಣುಗಳನ್ನು ಮುಚ್ಚಿಕೊಂಡು ಹಾಸಿಗೆಯಲ್ಲಿ ಮಲಗಿದಳು; ಶ್ರೀಕೃಷ್ಣನು ನಿದ್ರಿಸಿದನೆಂದು ಭಾವಿಸಿ, ಮೆಲ್ಲನೆ ಅವನನ್ನು ಆಲಿಂಗಿಸಿಕೊಂಡು ಅವನ ತೊಂಡೆಹಣ್ಣಿನಂತಹ ತುಟಿಗಳನ್ನು ಮುತ್ತಿಡುತ್ತಾ ಅವನು ಅದನ್ನೆಲ್ಲ ನೋಡುತ್ತಿದ್ದರೂ ಮೈಮರೆತವಳಾಗಿ ತಾನು ಕೋಪಗೊಂಡಿದ್ದನ್ನು ಗಮನಿಸಲೇ ಇಲ್ಲ.

---

೧. ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ ।
ಉದ್ಯಾನಸಲಿಲಕ್ರೀಡಾಮಧುಪಾನರಸೋತ್ಸವೈಃ ॥ –ಕಾವ್ಯಾದರ್ಶ(೧/೧೬)

೨. ಗೃಹಬಹಿರ್ಭಿತ್ತಿಖಚಿತಮೌಕ್ತಿಕಕಾಂತಿಃ ಗೃಹಂ ಪರಿತೋ ವ್ಯಾಪಿನೀ ಕ್ಷೀರಸಮುದ್ರವತ್ತಿಷ್ಠತೀತಿ ಭಾವಃ । –ವ್ಯಾ.

೩. ಭಿತ್ತಿಮುಕುಟಕಾಂತೀ ಉಭಯತೋ ಘನೀಭೂತೇ ನಿರ್ಗಂತುಮಸಮರ್ಥಾ ಊರ್ಧ್ವಮೇವ ಲಬ್ಧಾವಸರತಯಾ ಪ್ರಸೃತೇತ್ಯರ್ಥಃ । –ವ್ಯಾ.

### ಗೋಪಿಯನ್ನು ರಮಿಸಿದ ಶ್ರೀಕೃಷ್ಣ

ಗಂತುಂ ಕುತ್ರ ಸಮುದ್ಯತೋಽಸಿ ತರುಣಿ ತ್ವದ್ಧಾಮ ತತ್ಪದ್ಧತಿಃ
ಕಿಂ ತತ್ರಾಸ್ತಿ ಮುಕುಂದ ಮಾನಿನಿ ತವ ಸ್ವಚ್ಛೋರ್ಜಿತಾಭೀಶುನಾ ।
ಕ್ರಾಂತಂ ದ್ವಾರಮಲಕ್ಷಯನ್ ಕೃಶಮಿದಂ ಗಾತ್ರಂ ಚ ತಸ್ಯಾಂತರೇ
ಗಂತಾಸ್ಮೀತ್ಯಭಿಧಾಯ ತನ್ಮೃದುಕರಂ ಗೃಹ್ಣನ್ ಸ ಗೃಹ್ಣಾತು ಮಾಮ್ ॥ ೫೩ ॥

(ಗೋಪಿ)'ಶ್ರೀಕೃಷ್ಣ !ಎಲ್ಲಿಗೆ ತೆರಳಲು ಹವಣಿಸುತ್ತಿರುವಿ?' (ಶ್ರೀಕೃಷ್ಣ) 'ತರುಣಿ ! ನಿನ್ನ ಮನೆಗೆ'. (ಗೋಪಿ) 'ಮುಕುಂದ! ಆ ದಾರಿ ಅಲ್ಲಿದೆಯಾ?' (ಶ್ರೀಕೃಷ್ಣ) 'ಎಲೈ ಹಮ್ಮಿನವಳೆ! ನಿನ್ನ ಧವಳಕಾಂತಿಯಿಂದ ತುಂಬಿದ ಬಾಗಿಲನ್ನು ಹಾಗೂ ಅದರೊಳಗಿನ ನಿನ್ನ ತೆಳುದೇಹವನ್ನು ಕಾಣದೆ ಮುಂದೆ ಹೊರಟೆ! ಹೀಗೆಂದು ಹೇಳಿ, ಅವಳ ಕೋಮಲ ಕೈಯನ್ನು ಹಿಡಿದ ಕೃಷ್ಣನು ನನ್ನನ್ನು ಸ್ವೀಕರಿಸಲಿ.

### ಕೆರಳಿದ ಗೋಪಿಯೊಂದಿಗೆ ಕೃಷ್ಣನ ಸಲ್ಲಾಪ

ಯದ್ಯಾಯಾಸಿ ರಿರಂಸಯೇಶ ಮಹಿತಂ ಮದ್ಧಾಮ ತರ್ಹ್ಯಧ್ವನಿ
ಸ್ನಿಗ್ಧಾಂ ಮಾಮವಲೋಕ್ಯ ಭೀತಪದವೀಂ ಸದ್ಯೋಽಲಭಿಷ್ಠಾಃ ಕುತಃ ।
ಉದ್ವೀಕ್ಷ್ಯ ಸ್ತನಜೃಂಭಿಕುಂಭಯುಗಲಂ ಕುಂಭೀಶ್ವರಾಶಂಕಯಾ
ಪದ್ಮಾಕ್ಷೀತಿ ನಿಗದ್ಯ ಸುಸ್ಮಿತಮುಖೀಂ ಚುಂಬನ್ ಸ ತಾಂ ಜೃಂಭತೇ ॥ ೫೪ ॥

(ಗೋಪಿ)'ನನ್ನೊಂದಿಗೆ ರಮಿಸಲೆಂದು ನನ್ನ ಶೃಂಗಾರಗೊಂಡಿರುವ ಮನೆಗೆ ಬರುತ್ತಿದ್ದೆಯಾದಲ್ಲಿ, ಹಾದಿಯಲ್ಲಿ ಅನುರಕ್ತೆಯಾಗಿರುವ ನನ್ನನ್ನು ಕಂಡು ಕೂಡಲೇ ಅದೇತಕ್ಕೆ ಭೀತನ ಹಾದಿಯನ್ನು ಹಿಡಿದೆ?'; (ಶ್ರೀಕೃಷ್ಣ)'ಕಮಲಾಕ್ಷಿ! ನಿನ್ನ ಸ್ತನಗಳೆಂಬ ಎರಡು ಕುಂಭಸ್ಥಳಗಳನ್ನು ಕಂಡು ಮದ್ದಾನೆಯೆಂಬ ಶಂಕೆಯಿಂದ' ಎಂದು ನುಡಿದು, ನಸುನಗೆ ಬೀರಿದ ಅವಳನ್ನು ಮುದ್ದಿಸಿದ ಶ್ರೀಕೃಷ್ಣನು ಶೋಭಿಸುತ್ತಿರುವನು.

ವಿ. : ಅವಳು ಇನ್ನೇನನ್ನಾದರೂ ಕೇಳಿಯಾಳು, ಎಂದು ಶ್ರೀಕೃಷ್ಣ ಹಾಗೆ ಮುತ್ತಿಕ್ಕಿ ಅವಳನ್ನು ಸುಮ್ಮನಾಗಿಸಿದ ಎಂದು ಭಾವ; ಕುಂಭೀಶ್ವರ – ಗಜೇಂದ್ರ.

### ಗೋಪಿಯನ್ನು ಸಾಂತ್ವನಪಡಿಸಿದ ಕೃಷ್ಣನ ಚತುರೋಕ್ತಿ

ಅನ್ಯಾಚುಂಬನಜಾತಚಿಹ್ನಮಧುನಾ ಬಿಂಬಾಧರೇ ದೃಶ್ಯತೇ
ತನ್ಮಾಂ ರಂಜಯಸೀಶ ಕಿಂ ಪ್ರಿಯಗಿರಾ ಧನ್ಯಾಽಬಲಾ ಸೈವ ಹಿ ।

ಮನ್ಯೂದ್ರಿಕ್ತಹೃದಾ ಮುಹುಃ ಸಖಿ ಭವಚ್ಛೂನ್ಯಾಂ ಸಭಾಂ ಪಶ್ಯತ-
ಸ್ತನ್ಮೇಽಭೂದ್ವರವರ್ಣಿನೀತಿ ಶಮಯನ್ ಮನ್ಮಾನಸೇ ಸ್ಯಾದಸೌ ॥ ೫೫ ॥

(ಗೋಪಿ)''ಈಶನಾದ ಶ್ರೀಕೃಷ್ಣ ! ಬೇರೊಬ್ಬಳ ಚುಂಬನದಿಂದುಂಟಾದ ಗುರುತು ನಿನ್ನ ಕೆಂಪಾದ ತುಟಿಯ ಮೇಲೆ ಈಗ ಕಾಣುತ್ತಿದೆಯಲ್ಲ! ಆದ್ದರಿಂದ ಪ್ರಿಯವಾದ ಮಾತಿನಿಂದ ನನ್ನನ್ನೇಕೆ ಮೆಚ್ಚಿಸುತ್ತಿರುವಿ? ಆ ಹೆಣ್ಣೇ ಪುಣ್ಯವತಿ ! ಅಲ್ಲವೇ !''; (ಶ್ರೀಕೃಷ್ಣ )''ಗೆಳತಿ! ನೀನಿಲ್ಲದ ಸಭೆಯನ್ನು ಕಂಡು ಮತ್ತೆ ಮತ್ತೆ [1]ಕೋಪ ಕೆರಳಿದ ಮನಸ್ಸಿನಿಂದಾಗಿ ಈ ಗುರುತು ನನಗೆ ಆಯಿತು, ಸುಂದರಿ !'' ಎಂದು ಅವಳನ್ನು ಸಾಂತ್ವನಪಡಿಸಿದ ಕೃಷ್ಣನು ನನ್ನ ಮನಸ್ಸಿನಲ್ಲಿ ನೆಲೆಸಲಿ.

### ಶ್ರೀಕೃಷ್ಣನೆಡೆಗೆ ಧಾವಿಸಿದ ಗೋಪಿಯರು

ವೃಂದಾರಣ್ಯನಿಕುಂಜಮಂದಿರಗತಂ ಮಂದಾನಿಲೈರ್ವೀಜಿತಂ
ಚಂದ್ರಾಮಂದಕರೇಣ ಸೇವಿತಪದಂ ಕಂದರ್ಪತಾತಂ ನಿಶಿ ।
ಮಂದಾರಾದಿಲಸತ್ಪ್ರಸೂನನಿಚಯೈರ್ವೃಂದಾರಕಪ್ರೇಷಿತೈಃ
ಸಂದೃಶ್ಯ ಪ್ರಿಯವರ್ತ್ಮ ಗೋಪಲಲನಾವೃಂದಂ ಶನೈಃ ಪದ್ಯತೇ ॥ ೫೬ ॥

ದೇವತೆಗಳು ಸುರಿಸಿದ ಮಂದಾರ ಮೊದಲಾದ ಹೊಳೆಯುವ ಪುಷ್ಪಗಳ ರಾಶಿಯ ಮೂಲಕ ಪ್ರಿಯನಾದ ಕೃಷ್ಣನ ಹಾದಿಯನ್ನು ಕಂಡುಕೊಂಡು, ವೃಂದಾವನದಲ್ಲಿ ಲತಾಗೃಹಗಳಲ್ಲಿದ್ದ ಮಂದಮಾರುತ ಬೀಸುತ್ತಿದ್ದ ಚಂದ್ರನ ತುಂಬು ಬೆಳದಿಂಗಳಿನಿಂದ ಸೇವಿತಪಾದನಾದ ಮಾರಜನಕನಾದ ಅವನನ್ನು ಗೋಪಸ್ತ್ರೀಯರ ಹಿಂಡು ರಾತ್ರಿಯಲ್ಲಿ ಮೆಲ್ಲನೆ ಸಮೀಪಿಸಿತು; (ನಿಕುಂಜ-ಪೊದೆ; ಕಂದರ್ಪ - ಕಾಮ; ಕಂದರ್ಪತಾತ -ಕೃಷ್ಣ).

### ಪೊದೆಯನ್ನೂ ಅರಮನೆಯಂತಾಗಿಸಿದ ಶ್ರೀಕೃಷ್ಣ

ನೃತ್ಯತ್ಕೇಕಿನಿ ಚಿತ್ರಪುಷ್ಪತಿಲಕಾರತ್ನಸ್ಫುರತ್ತೋರಣೈ-
ರ್ವಿಷ್ವಕ್ ಶೋಭಿನಿ ಪಲ್ಲವಾಖ್ಯವಿಲಸತ್ತಲ್ಪೇ ಪ್ರದೀಪತ್ವಿಷಿ ।
ವಿಸ್ತೀರ್ಣೌಷಧಿಭಿಃ ಪ್ರಸೂನವಿಲಸತ್ತಲ್ಪೈರ್ವಿತಾನಪ್ರಭೇ
ಮತ್ತಾಲಿವ್ರಜಗಾಯಕೇ ಹರಿರಭಾತ್ ಕುಂಜೇ ನಿಜಾಂ ರಂಜಯನ್ ॥ ೫೭ ॥

ಕುಣಿಯುತ್ತಿದ್ದ ನವಿಲುಗಳು, ಬಗೆಬಗೆಯ ಪುಷ್ಪಗಳ ತಿಲಕವೃಕ್ಷರೂಪದ ಮಣಿರೂಪದ ಹೊಳೆಯುವ ತೋರಣಗಳು, ಚಿಗುರಿನ ರೂಪದ ಕಂಗೊಳಿಸುವ ಶಯ್ಯೆ, ದೀಪದ ಕಾಂತಿಯುಳ್ಳ ಹರಡಿದ ಜ್ಯೋತಿರ್ಲತೆಗಳು, ಪುಷ್ಪ ಹಾಗೂ ಹೊಳೆಯುವ ಎಲೆಗಳಿಂದಾಗಿ

---

೧. ಕೋಪೇನ ದ್ರಷ್ಟಾರೋ ಹಿ ದಷ್ಟೋಷ್ಠಾ ಭವಂತೀತಿ ಭಾವಃ। -ವ್ಯಾ.

ಹಾರುಬಟ್ಟೆಗಳ ಕಾಂತಿ, ಮದಿಸಿದ ಭ್ರಮರಗಳ ಗುಂಪಿನ ರೂಪದ ಗಾಯಕರು, ಇವುಗಳಿಂದ ಕೂಡಿದ ಎಲ್ಲೆಡೆ ಹೊಳೆಯುವ ಪೊದೆಯಲ್ಲಿ ತನ್ನ ಪ್ರಿಯೆಯನ್ನು ರಂಜಿಸುತ್ತ ಶ್ರೀಕೃಷ್ಣನು ಶೋಭಿಸಿದ.

ವಿ. : ಶ್ರೀಕೃಷ್ಣನಿಂದಾಗಿ ಅಲ್ಲಿಯ ಲತಾಗೃಹಗಳು ಸಹ ಅರಮನೆಗಳ ಶೋಭೆಯನ್ನು ಪಡೆದಿದ್ದವು ಎಂದು ಭಾವ. ಇಲ್ಲಿ 'ನಿಜಾಂ' ಎಂಬ ಪದದಿಂದ ಅವಳಲ್ಲಿ ರಮಾವೇಶವು ವ್ಯಕ್ತವಾದದ್ದು ಸೂಚಿತ.

### ಶ್ರೀಕೃಷ್ಣನು ಜಾರನಲ್ಲ

**ಸ್ನಾತಃ ಸೌಂದರ್ಯನದ್ಯಾಂ ಪರಿಹೃತವಸನೋ ಗೋಪಿಕಾಲೇಪನಶ್ರೀ-**
**ರ್ವಕ್ಷೋಜಾಬ್ಜಾಸನಸ್ಥಃ ಕೃತವನವಸತಿರ್ಹಾರಮಾಲಾಕರಾಗ್ರಃ।**
**ಬಿಭ್ರತ್ಕೇಶೌಘಕಾಶಾನಧರಜನಿಪಯೋಮಾತ್ರವೃತ್ತಿರ್ವಿನಿದ್ರಃ**
**ಪ್ರೇಷ್ಠಃ ಶ್ರೀವಿಟ್ಠಲೋಽಸೌ ಜಯತಿ ಮುನಿಗಣಂ ಜಾರವಾರ್ತಾ ಕುತೋಽಸ್ಯ ೫೮**

ಸೌಂದರ್ಯನದಿಯಲ್ಲಿ ಸ್ನಾನ, ಕಳಚಿದ ವಸ್ತ್ರ , ಗೋಪಿಯರು ಲೇಪಿಸಿದ ಶ್ರೀಗಂಧದ (ಗೋಪೀಚಂದನದ) ಕಾಂತಿ, ಸ್ತನರೂಪದ ಕಮಲಪೀಠದಲ್ಲಿ ಉಪಸ್ಥಿತಿ, ವನದಲ್ಲಿ ವಾಸ, ಕೈಗಳ ತುದಿಯಲ್ಲಿ ಮುತ್ತಿನ ಮಾಲೆಗಳು, ಕೈಯಲ್ಲಿ ಹಿಡಿದ ಗೋಪಿಯರ ಕೇಶರೂಪದ ದರ್ಭೆಗಳು, ಅಧರಾಮೃತ(ಜಲ)ವೇ ಜೀವನೋಪಾಯ, ನಿದ್ರೆಯನ್ನು ತೊರೆದ ಜೀವನ, ಹೀಗಿರುವ ಅತ್ಯಂತ ಪ್ರಿಯನಾದ ವಿಟ್ಠಲನಾದ ಶ್ರೀಕೃಷ್ಣನು ಮುನಿಗಣವನ್ನು ಮೀರಿಸಿರುವನು; ಎಂದ ಮೇಲೆ ಜಾರ ಎಂಬ ಮಾತು ಇವನಿಗೆ ಹೇಗೆ ಒಪ್ಪೀತು!

ವಿ. : ೧. ಶ್ರೀಕೃಷ್ಣನು ಗೋಪೀಜನಜಾರ ಎಂಬ ಮಾತು ಲೋಕರೂಢಿಯದೆ ಹೊರತು ತಾತ್ತ್ವಿಕವಾದುದಲ್ಲ; ಅದು ನಿಜವಾಗಿ ಅವನ ಸರ್ವೋತ್ತಮತ್ತ್ವವನ್ನು ಸಾರುವ ಹಿರಿಮೆ ಎಂದು ಭಾವ; ಕಾಶ – ದರ್ಭೆ.

೨. ಹೀಗೆ ಗೋಪಿಯರು ಶ್ರೀಕೃಷ್ಣನೊಂದಿಗೆ ವಿಹರಿಸುತ್ತಿದ್ದ ಸಮಯದಲ್ಲಿ ಅವರ ಗಂಡಂದಿರಿಗೆ ಅವರ ಪತ್ನಿಯರು ತಮ್ಮ ಜೊತೆಯೇ ಇದ್ದಂತೆ ತೋರುತ್ತಿದ್ದುದರಿಂದ ಅವರು ಕೃಷ್ಣನ ಬಗ್ಗೆ ತಪ್ಪು ತಿಳಿಯುವ ಪ್ರಸಂಗ ಒದಗಲಿಲ್ಲ ಎಂಬ ವಿಶೇಷಾಂಶ ಶ್ರೀಮದ್ಭಾಗವತದಲ್ಲಿದೆ (೧೦/೩೧/೩೯):

ನಾಸೂಯನ್ ನೃಪ ಕೃಷ್ಣಾಯ ಮೋಹಿತಾಸ್ತಸ್ಯ ಮಾಯಯಾ।
ಮನ್ಯಮಾನಾಃ ಸ್ವಪಾರ್ಶ್ವಸ್ಥಾನ್ ಸ್ವಾನ್ ಸ್ವಾನ್ ದಾರಾನ್ ವ್ರಜೌಕಸಃ॥

### ವೃಂದಾವನದಲ್ಲಿನ ಗೋಪಿಯರ ವಿಲಾಸ

ಚುಂಬಂತ್ಯಃ ಸರಸಾಧರಂ ಪುಲಕಿತೈರಂಗೈರ್ಗಲದ್ಭೂಷಣೈ-
ಸ್ತಂ ಗಾಢಂ ಪರಿರಭ್ಯ ಸುಸ್ಮಿತಮುಖಂ ಸೌಂದರ್ಯಸಿಂಧುಂ ಮುದಾ ।
ತುಂಗಾತ್ಮೀಯಮನೋರಮಸ್ತನತಟೇ ಸಂದರ್ಶಿತಾಂಕಂ ನಖೈ-
ರ್ವೃಂದಾರಣ್ಯಮದೋ ನನಂದುರಬಲಾ ಮಂದಾನಿಲೈರ್ಮಂಜುಲಮ್ ॥೫೯॥

ಅವನ ಸರಸಾಧರವನ್ನು ಮುತ್ತಿಡುತ್ತ, ಪುಲಕಗೊಂಡ ಅವಯವಗಳ, ಜಾರಿಬೀಳುತ್ತಿದ್ದ ಆಭರಣಗಳ, ಸುಂದರ ಕಿರುನಗೆಸೂಸುವ ಮುಖದ, ಉಬ್ಬಿದ ತಮ್ಮ ಮನೋಹರವಾದ ಸ್ತನಗಳಲ್ಲಿ ತನ್ನ ಉಗುರುಗಳಿಂದ ಗುರುತನ್ನು ಚೆನ್ನಾಗಿ ಮೂಡಿಸಿದ, ಸೌಂದರ್ಯಸಾಗರನಾದ ಅವನನ್ನು ನಲಿವಿನಿಂದ ಗಾಢವಾಗಿ ಆಲಿಂಗಿಸಿಕೊಂಡು, ಗೋಪಿಯರು ಮಂದಮಾರುತದಿಂದಾಗಿ ಮನೋಹರವಾಗಿದ್ದ ಆ ವೃಂದಾವನವನ್ನು ಕಂಡು ನಲಿದರು; (ತುಂಗ-ಉನ್ನತ).

### ಶ್ರೀಕೃಷ್ಣನೆಂಬ ವಿಚಿತ್ರಸಿಂಹ

ಕಾಂತಾಕದಂಬಕುಚಕುಂಜರಕುಂಭಸಂಗಿ-
ಸಂತಾಪಹಾರಿನಖಮಂಡಲಮಂಡಿತೋಽಲಮ್ ।
ಗಂಡಾನುಷಕ್ತವಿಲಸನ್ಮುಖಚಂದ್ರಚುಂಬೀ
ಕುಂಜೇಷು ಸಂಚರತಿ ಕೃಷ್ಣವಿಚಿತ್ರಸಿಂಹಃ ॥ ೬೦ ॥

ಗೋಪಿಯರ ಗುಂಪಿನ ಆನೆಯ ಕುಂಭದಂತಹ ಸ್ತನಗಳಲ್ಲಿ ಮೂಡಿಸಿದ ಸಂತಾಪ ನೀಗಿಸುವ ಉಗುರುಗಳ ಸಾಲಿನಿಂದ ಬಹಳವಾಗಿ ಕಂಗೊಳಿಸುವ, ತನ್ನ ಕೆನ್ನೆಗೆ ಸೋಕಿದ ಅವರ ಹೊಳೆಯುವ ಚಂದ್ರನಂತಹ ಮುಖವನ್ನು ಚುಂಬಿಸುವ ಶ್ರೀಕೃಷ್ಣನೆಂಬ ವಿಚಿತ್ರವಾದ ಸಿಂಹವು ಪೊದೆಗಳಲ್ಲಿ ಸಂಚರಿಸುತ್ತಿದೆ.

ವಿ: ೧. ಸಿಂಹರಾಶಿಗೂ ಚಂದ್ರನಿಗೂ ಸಂಬಂಧವಿರುವುದರಿಂದ ಇಲ್ಲಿ ಸಿಂಹದ ಸಾಮ್ಯವನ್ನು ಹೇಳಲಾಗಿದೆ. ಸಿಂಹವು ಚಂದ್ರನನ್ನು ಆಶ್ರಯಿಸುವುದು ಅಪೂರ್ವ ಎಂದು[೧] ಭಾವ.

### ಬೃಂದಾವನದ ವೈಭವ

ಕೃಷ್ಣಾಂಘ್ರ್ಯಂಬುಜಲಕ್ಷ್ಮಲಕ್ಷ್ಯಮಖಿಲಂ ಯತ್ರ ಸ್ಥಲಂ ಸಾಚಲಂ
ಸಸ್ತ್ರೀಕಾ ಮುನಯಶ್ಚ ಪಕ್ಷಿಹರಿಣೀಹರ್ಯಕ್ಷವೃಕ್ಷಾದಯಃ ।
ಯತ್ರಾಪಃ ಸುರಸಿಂಧುಸಿಂಧುಮಹಿತಂ ಯಸ್ಮಿನ್ ವ್ರಜಸ್ತ್ರೀವಶಂ
ಶ್ರುತ್ಯಂತಾಂತರಿತಂ ಮಹಃ ಪರಮದೋ ವೃಂದಾವನಂ ಸ್ಯಾನ್ಮುದೇ ॥ ೬೧ ॥

---

೧. ಚಂದ್ರಸಿಂಹರಾಶ್ಯೋಃ ಸಂಬಂಧೋಽಸ್ತೀತಿ ಸಿಂಹಸಾಮ್ಯಮ್ । ಸಿಂಹಶ್ಚಂದ್ರಮಾಶ್ರಯತೀತ್ಯಪೂರ್ವಮಿತಿ ಭಾವಃ । -ವ್ಯಾ.

ಬೆಟ್ಟಗಳಿಂದೊಡಗೂಡಿದ ಸಕಲ ಪ್ರದೇಶಗಳಲ್ಲೂ ಶ್ರೀಕೃಷ್ಣನ ಪಾದಕಮಲಗಳ ಚಿಹ್ನೆಗಳು ಒಡಮೂಡಿದ್ದ, ಸ್ತ್ರೀಯರು, ಪಕ್ಷಿಗಳು, ಜಿಂಕೆಗಳು, ಸಿಂಹಗಳು, ವೃಕಗಳು, ಮೊದಲಾಗಿ ಎಲ್ಲವೂ ಮುನಿಗಳೇ ಆಗಿದ್ದ, ದೇವನದಿಯಾದ ಗಂಗೆ ಹಾಗೂ ಸಮುದ್ರಗಳಿಂದ ಮಾನ್ಯವಾದ ಜಲದಿಂದ ಕೂಡಿದ್ದ, ವೇದಾಂತಗಳಿಗೆ ನಿಲುಕದ ಶ್ರೀಕೃಷ್ಣನೆಂಬ ಪರಂಜ್ಯೋತಿಯು ಗೋಪಿಯರಿಗೆ ವಶನಾಗಿದ್ದ, ಆ ವೃಂದಾವನವು ನಲಿವಿಗೆ ಕಾರಣವಾಗಲಿ.

ವಿ. : ೧. ವೃಂದಾವನದ ಸಕಲ ಪ್ರದೇಶವೂ ಶ್ರೀಕೃಷ್ಣನ ಪಾದಚಿಹ್ನೆಗಳಿಂದ ಕೂಡಿತ್ತು; ಅಲ್ಲಿಯ ಸ್ತ್ರೀಯರು, ಪಶುಪಕ್ಷಿಗಳು ಸಹ ಮುನಿಗಳಂತೆ ಶ್ರೀಕೃಷ್ಣನ ಧ್ಯಾನದಲ್ಲಿ ತೊಡಗಿಕೊಂಡಿದ್ದವು; ಅಲ್ಲಿಯ ಯಮುನಾನದಿ ಶ್ರೀಕೃಷ್ಣನ ಸಂಪರ್ಕದಿಂದಾಗಿ ಗಂಗೆ ಹಾಗೂ ಸಮುದ್ರಗಳಿಂದ ಪೂಜಿತವಾಗಿತ್ತು; ಮುಖ್ಯವಾಗಿ ವೇದಾಂತಗೋಚರ ಪರಬ್ರಹ್ಮನಾದ ಶ್ರೀಕೃಷ್ಣ ಗೋಪಿಯರಿಗೂ ಅನುಗ್ರಹಿಸಿದ್ದ. ಈ ಕಾರಣಗಳಿಂದ ವೃಂದಾವನವು ಅತ್ಯಂತ ಪವಿತ್ರವಾದ ಕ್ಷೇತ್ರ ಎಂದು ಭಾವ.

೨. ಸುರಸಿಂಧು ಎಂದರೆ ದೇವನದಿಯಾದ ಗಂಗೆ; ಸಿಂಧು ಎಂದರೆ ಇಲ್ಲಿ ಯಮುನಾನದಿ; ಇಲ್ಲಿಯ ಸುರಸಿಂಧುಸಿಂಧುಮಹಿತಂ ಎಂಬ ಪದಕ್ಕೆ ಸುರಸಿಂಧುವಾದ ಗಂಗೆ ಹಾಗೂ ಸಮುದ್ರಗಳಂತೆ ಪೂಜಿತ ಎಂಬ ಅರ್ಥವನ್ನೂ ಮಾಡಬಹುದು ; ಹರಿಣೀ – ಜಿಂಕೆ; ಶ್ರುತ್ಯಂತ – ವೇದಾಂತ; ಸಿಂಧು – ನದಿ, ಸಮುದ್ರ; ಸುರಸಿಂಧು–ಗಂಗೆ.

### ವೃಂದಾವನವು ಅತ್ಯಂತ ಸ್ಮರಣೀಯಕ್ಷೇತ್ರ

**ಯತ್ಕುಂಜಾ ಮುರವೈರಿಸಂಗತವಧೂವಿಕ್ರೀಡನೈರ್ವಾಸಿತಾ**
**ಯತ್ಸಂಜಾತಸುರದ್ರುಮೌಘಮಹಸಾ ವಿದ್ಯೋತಿತಾಶಾಮುಖಮ್ ।**
**ಯಚ್ಚಂದ್ರೇಶಸುರೇಶಮುಖ್ಯವಿಬುಧೈಃ ಸಂಸೇವ್ಯಮಾನಂ ಸದಾ**
**[1]ತದ್ವೃಂದಾವನಮಾವಿರಸ್ತು ಸತತಂ ಚಿತ್ತೇ ಪ್ರಮತ್ತೇ ಮಮ ॥ ೬೨ ॥**

ಅಲ್ಲಿಯ ಪೊದೆಗಳು ಮುರವೈರಿಯಾದ ಶ್ರೀಕೃಷ್ಣನ ಅಂಗಸಂಗವನ್ನು ಪಡೆದ ಗೋಪಿಯರ ವಿಹಾರದಿಂದ ಸುವಾಸಿತವಾಗಿದ್ದವು; ಅಲ್ಲಿ ಬೆಳೆದ ದೇವವೃಕ್ಷಗಳ ಕಾಂತಿಯಿಂದ ದಿಕ್ಕುವಿದಿಕ್ಕುಗಳು ಬೆಳಗಿದ್ದವು; ಅದನ್ನು ಚಂದ್ರ, ರುದ್ರ, ಇಂದ್ರ ಮೊದಲಾದ ದೇವತೆಗಳು ಸದಾ ಚೆನ್ನಾಗಿ ಸೇವಿಸುವರು; ಅಂತಹ ವೃಂದಾವನವು ಬಹಳ ಸಂಭ್ರಮಿಸುವ ನನ್ನ ಚಿತ್ತದಲ್ಲಿ ಸದಾ ಪ್ರಕಟಗೊಳ್ಳಲಿ.

---

೧. ವೃಂದಾವನೇ ವಿದ್ಯಮಾನಾನಾಂ ಸ್ತ್ರ್ಯಾದೀನಾಂ ಮುನ್ಯವತಾರತ್ವಾದಿತಿ ಭಾವಃ। -ವ್ಯಾ.

ವಿ. : ಈ ಶ್ಲೋಕದ ಪೂರ್ವಾರ್ಧವು ಸ್ವಲ್ಪ ಪದವ್ಯತ್ಯಾಸದೊಂದಿಗೆ ಹಿಂದಿನ ಶ್ಲೋಕದ ಉತ್ತರಾರ್ಧವು ತೀರ್ಥಪ್ರಬಂಧದಲ್ಲಿ ಪ್ರತ್ಯೇಕಶ್ಲೋಕವಾಗಿ ಕಂಡುಬರುತ್ತದೆ :

ಯತ್ಕುಂಜಾ ಮುರವೈರಿಸಂಗತವಧೂವಿಕ್ರೀಡನೈರ್ವಾಸಿತಾ
ಯತ್ಸಂಜಾತಸುರದ್ರುಮೌಘಮಹಸಾ ವಿದ್ಯೋತಿತಾಶಾಮುಖಮ್ ।
ಯತ್ಪಾಥಃ ಸುರಸಿಂಧುಸಿಂಧುಮಹಿತಂ ಯತ್ರಾಖಿಲೈರ್ಲಕ್ಷಿತಂ
ಶ್ರುತ್ಯಂತಾಂತರಿತಂ ಮಹಃ ಪರಮಹೋ ವೃಂದಾವನಂ ಪಾವನಮ್[೧] ॥ (೨/೩೪)

## ಗೋಪಿಯರನ್ನು ಮೆಚ್ಚಿಸಿದ ಕೃಷ್ಣನ ವಾಕ್ಕೌಶಲ

**ಕಸ್ತ್ವಂ ಕಶ್ಚನ ನಿರ್ಜರೋಽಹಮಿಹ ತೇ ಸ್ವರ್ಗಃ ಕ್ವ ತತ್ ತ್ವದ್ಗೃಹಂ**
**ಪೀಯೂಷಂ ಕ್ವ ತವಾಧರೇಽಸ್ತಿ ಸುಭಗೇ ಕ್ವಾಸ್ತೇ ತವಾನಿದ್ರತಾ ।**
**ತ್ವತ್ಪ್ರೇಮ್ಣಾಂ ಸಖಿ ಚಿಂತಯಾಽನಿಮಿಷತಾ ಕುತ್ರ ಪ್ರಿಯೇ[೨] ಪಶ್ಯತ-**
**ಸ್ತ್ವದ್ರೂಪಂ ತ್ವಿತಿ ಬಲ್ಲವೀಂ ಪ್ರಿಯಗಿರಾ ಚಕ್ರೀ ಸ ಚಕ್ರೇ ನಿಜಾಮ್ ॥ ೬೩ ॥**

(ಗೋಪಿ)'ನೀನಾರು ?'; (ಕೃಷ್ಣ)'ನಾನೊಬ್ಬ ದೇವತೆ !'; (ಗೋಪಿ)'ನಿನ್ನ ಸ್ವರ್ಗ ಎಲ್ಲಿದೆ?'; (ಕೃಷ್ಣ)'ನಿನ್ನ ಮನೆಯೇ'; (ಗೋಪಿ)'ಅಮೃತ ಎಲ್ಲಿದೆ?'; (ಕೃಷ್ಣ)'ಸುಂದರಿ! ನಿನ್ನ ಅಧರದಲ್ಲಿ'; (ಗೋಪಿ)'ನಿನಗೆ ನಿದ್ರೆ ಇಲ್ಲ ಎಂಬುದು ಹೇಗೆ?'; (ಕೃಷ್ಣ)'ಸಖಿ! ಅದು ನಿನ್ನ ಮೇಲಿನ ಪ್ರೀತಿಯ ಚಿಂತೆಯಿಂದಾಗಿ'; (ಗೋಪಿ)'ನೀನು ಎವೆ ಇಕ್ಕದವನೆ?'; (ಕೃಷ್ಣ) 'ಪ್ರಿಯಳೆ! ನಿನ್ನ ರೂಪವನ್ನು ನೋಡುತ್ತಿರುವುದರಿಂದಾಗಿ' – ಹೀಗೆ ಪ್ರಿಯವಚನಗಳಿಂದ ಗೋಪಿಕೆಯನ್ನು ಚಕ್ರಪಾಣಿಯಾದ ಶ್ರೀಕೃಷ್ಣನು ತನ್ನವಳನ್ನಾಗಿ ಮಾಡಿಕೊಂಡ.

---

೧. ವೃಂದಾವನಂ ವರ್ಣಯತಿ । ಯದಿತಿ । ಯತ್ಕುಂಜಾಃ ಯಸ್ಮಿನ್ ವೃಂದಾವನೇ ಕುಂಜಾಃ ಲತಾಗೃಹಾಃ । ''ನಿಕುಂಜ ಕುಂಜೌ ವಾ ಕ್ಲೀಬೇ ಲತಾದಿಪಿಹಿತೋದರೇ'' ಇತ್ಯಮರಃ । ಮುರವೈರಿಸಂಗತವಧೂವಿಕ್ರೀಡನೈಃ ಮುರವೈರಿಣಾ ಶ್ರೀಕೃಷ್ಣೇನ ಸಂಗತಾಃ ಯಾ ವಧ್ವಃ ಗೋಪ್ಯಸ್ತಾಸಾಂ ವಿಕ್ರೀಡನೈಶ್ಚರಿತ್ರೈಃ ವಾಸಿತಾಃ ಪರಿಮಲೀಕೃತಾಃ। ಯತ್ಸಂಜಾತಸುರದ್ರುಮೌಘಮಹಸಾ ಯಸ್ಮಿನ್ ಸಂಜಾತಾಃ ಸುರದ್ರುಮಾಃ ದೇವತರವಃ ಮಂದಾರ-ಪಾರಿಜಾತಾದಯಃ ತೇಷಾಮೋಘಾಃ ಸಮೂಹಾಃ ತೇಷಾಂ ಮಹಸಾ ರತ್ನಮಯಫಲಪುಷ್ಪಾದಿಕಾಂತ್ಯಾ। ''ಕಾಂತ್ಯುತ್ಸವೌ ತು ಮಹಸಿ'' ಇತ್ಯಮರಃ। ವಿದ್ಯೋತಿತಾಶಾಮುಖಂ ವಿದ್ಯೋತಿತಾನಿ ಪ್ರಕಾಶಿತಾನಿ ಆಶಾಮುಖಾನಿ ದಿಙ್ಮುಖಾನಿ ಯಸ್ಯ ತತ್ ತಥೋಕ್ತಮ್ । ಯತ್ಪಾಥಃ ಯಸ್ಮಿನ್ ವೃಂದಾವನೇ ಪಾತುಂ ಯೋಗ್ಯಂ ಪಾಥಃ ಜಲಮ್। ಸುರಸಿಂಧುಸಿಂಧುಮಹಿತಂ ಸುರಸಿಂಧುಃ ಸುರನದೀ, ಸಿಂಧುಸ್ಸಮುದ್ರಸ್ತಾಭ್ಯಾಂ ಮಹಿತಂ ಪೂಜ್ಯಮಧಿಕಪಾವಿತ್ರ್ಯೋಪೇತಮಿತ್ಯರ್ಥಃ । ಯತ್ರ ವೃಂದಾವನೇ । ಶ್ರುತ್ಯಂತಾಂತರಿತಂ ಶ್ರುತ್ಯಂತ ಇತ್ಯುಕ್ತಮ್ । ಅಖಿಲೈಃ ಸ್ತ್ರೀಬಾಲಪಶುಪಕ್ಷ್ಯಾದಿಭಿಃ ಲಕ್ಷಿತಂ ದೃಷ್ಟಮ್ । ಉಪನಿಷದವಿಷಯಸ್ಯ ಸ್ತ್ರೀಬಾಲಪಶುಪಕ್ಷಿಚಕ್ಷುರ್ವಿಷಯತ್ವಮ್ । ಅಹೋ ಆಶ್ಚರ್ಯಮ್ । (ಅತಸ್ತತ್) ವೃಂದಾವನಂ ಪಾವನಂ ಪವಿತ್ರಮ್ ।

–ತೀರ್ಥಪ್ರಬಂಧ, ಗುರುಭಾವಪ್ರಕಾಶಿಕೆ (೨/೩೪)

೨. ಸೌಂದರ್ಯಾತಿಶಯಾತ್ ತ್ವದ್ದರ್ಶನೋತ್ಸುಕಂ ಚಕ್ಷುರ್ನಿಮೇಷಮಪಿ ನ ಸಹತ ಇತಿ ಭಾವಃ। –ವ್ಯಾ.

## ಗೋಪಿಯರೊಂದಿಗೆ ರಮಿಸಿದ ಶ್ರೀಕೃಷ್ಣ

ಪ್ರೀತೇರ್ಲಾಭಮವೇಕ್ಷ್ಯ ಚಿತ್ತಮಪಿ ಯಾ ತಸ್ಮೈ [೧]ದದಾವಂಕಗಾಂ[೨]
ತಾಂ ಕೃತ್ವಾ ರತಿಸಂಗರಸ್ಥಹೃದಯಾಮಾಲಿಂಗ್ಯ [೩]ರಮ್ಯೈರ್ಭುಜೈಃ।
ತಸ್ಯಾ [೪]ದೃಷ್ಟಿಪಥಂ ಗತಂ ಮುಖಮಲಂ ಚಿತ್ತಾಯ ಸಂರೋಚಯನ್
ಕಸ್ತೂರೀತಿಲಕೇನ ಭೂಷಯತಿ ಯಃ ಸ ಸ್ಯಾನ್ಮುದೇ ವಿಟ್ಠಲಃ ॥ ೬೪ ॥

ಪ್ರೀತಿಯು ಲಭಿಸಿದ್ದನ್ನು ಗಮನಿಸಿ, ಗೋಪಿಯೊಬ್ಬಳು ಶ್ರೀಕೃಷ್ಣನಿಗೆ ತನ್ನ ಚಿತ್ತವನ್ನು ಅರ್ಪಿಸಿದಳು; ರತಿಕ್ರೀಡೆಯ ಸಮರಕ್ಕೆ ಮನಸ್ಸು ಹಾಕಿದ ಅವಳನ್ನು ತೊಡೆಯ ಮೇಲೆ ಏರಿಸಿಕೊಂಡನು; ತನ್ನ ಮನೋಹರವಾದ ತೋಳುಗಳಿಂದ ಆಲಿಂಗಿಸಿಕೊಂಡನು; ಕಣ್ಣಿಗೆ ಬಿದ್ದ ಅವಳ ಮುಖವನ್ನು ಮನಸ್ಸಿಗೆ ಹಿತವಾಗುವಂತೆ ಕಸ್ತೂರೀತಿಲಕದಿಂದ ಅಲಂಕರಿಸಿದ ಶ್ರೀಕೃಷ್ಣನು ನಮ್ಮನ್ನು ಪಾಲಿಸಲಿ; (ಸಂಗರ – ಯುದ್ಧ).

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ನವಮಃ ಸರ್ಗೋ ಮುದಾಂ ಸತ್ಕೃತಃ ॥ ೬೫ ॥

ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ನವಮಃ ಸರ್ಗಃ ॥ ೯ ॥

[೫]ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಒಂಭತ್ತನೆಯ ಸರ್ಗವು ಮುಕ್ತಾಯವಾಯಿತು.

*****

---

೧. "ಊರು ತದಸ್ಯ ಯದ್ವೈಶ್ಯಃ" ಇತಿ ಸ್ವಾಂಕಸ್ಯ ವೈಶ್ಯಸ್ಥಾನತ್ವಾದ್ವೈಶ್ಯಧರ್ಮವತೀಂ ತಾಮಂಕಮಾರೋಪ್ಯೇತಿ ಧ್ವನಿಃ।-ವ್ಯಾ.
೨. ಅನೇನ ಬಹುದ್ರವ್ಯಲಾಭಮವೇಕ್ಷ್ಯಾಂತರಸ್ಯಾಪಿ ವಸ್ತುನೋ ದಾನಾದ್ವೈಶ್ಯಧರ್ಮೋಽಪಿ ಧ್ವನ್ಯತೇ । ಕೃಷ್ಣಸ್ಯಾಮಂಕಗಾಂ ಉತ್ಸಂಗಗಾಂ ಕೃತ್ವಾ ಸ್ವಾಂಕಮಾರೋಪ್ಯೇತ್ಯರ್ಥಃ। -ವ್ಯಾ.
೩. ಅತಿಶಯಿತಮನೋಹರಸ್ಯ ಕೃಷ್ಣಸ್ಯ ಸ್ಮರಣಮಾತ್ರೇಣ ಬಹುಸುಖಂ ಲಬ್ಧ್ವಾ ಸದಾ ತಂ ಸಸ್ಮಾರೇತಿ ಭಾವಃ। -ವ್ಯಾ.
೪. "ಚಂದ್ರಮಾ ಮನಸೋ ಜಾತಃ" ಇತಿ ಚಂದ್ರಸ್ಥಾನೇ ಮನಸಿ ಘಟಯಿತ್ವೇತಿ ಧ್ವನಿಃ। -ವ್ಯಾ.
೫. ಏತತ್ಪದ್ಯಂ ವ್ಯಾಖ್ಯಾತಮಪಿ ವ್ಯವಹಿತತ್ವಾತ್ ಪುನರಪಿ ವ್ಯಾಕ್ರಿಯತೇ। -ವ್ಯಾ.

# ೧೦. ದಶಮಃ ಸರ್ಗಃ

(ರಾಸಕ್ರೀಡೆಯ ವರ್ಣನೆಯ ಉಪಸಂಹಾರ - ೧; ಅಜಗರದಿಂದ ನಂದನ ವಿಮೋಚನೆ - ೨,೩; ಶಂಖಚೂಡನ ವಧೆ - ೪,೫; ಅರಿಷ್ಟಾಸುರನ ವಧೆ - ೬-೯; ಅಸುರಸ್ತ್ರೀಯರ ದುರ್ದೆಶೆ - ೧೦; ಕೇಶಿಯ ವಧೆ - ೧೧-೧೫; ನಾರದರಿಂದ ಕಂಸನಿಗೆ ಶ್ರೀಕೃಷ್ಣನ ಜನ್ಮರಹಸ್ಯದ ಕಥನ - ೧೬-೧೯; ನಾರದರಿಂದ ಶ್ರೀಕೃಷ್ಣನ ಪ್ರಾರ್ಥನೆ - ೨೦,೨೧; ಅಕ್ರೂರನ ಪ್ರೇಷಣೆ - ೨೨,೨೩; ಅಕ್ರೂರನ ಕೃಷ್ಣದರ್ಶನಸಂಭ್ರಮ - ೨೪; ಶ್ರೀಕೃಷ್ಣನಿಂದ ಅಕ್ರೂರನ ಸ್ವಾಗತ - ೨೫,೨೬; ಶ್ರೀಕೃಷ್ಣ ಮಾಡಿದ ಕುಶಲಪ್ರಶ್ನೆ - ೨೭; ಅಕ್ರೂರನ ಪ್ರತ್ಯುತ್ತರ - ೨೮-೩೨; ಮಧುರಾಗಮನೋದ್ಯೋಗ - ೩೩; ಗೋಪಿಯರ ವಿಲಾಪ - ೪೭; ಅಕ್ರೂರನಿಂದ ಶ್ರೀಕೃಷ್ಣಸಾಕ್ಷಾತ್ಕಾರ - ೪೮-೬೦; ಭಗವದನುಗ್ರಹ - ೬೧; ಯಮುನಾ- ನದಿಯ ವರ್ಣನೆ - ೬೨; ಮಧುರಾಪ್ರವೇಶ - ೬೩; ಅಕ್ರೂರ ಮಾಡಿದ ಶ್ರೀಕೃಷ್ಣಸ್ತುತಿ - ೬೫-೮೩; ಸರ್ಗೋಪಸಂಹಾರ - ೮೪)

### ಶ್ರೀಕೃಷ್ಣನು ಸೂರ್ಯನಿಗೆ ತೋರಿಸದ ರಾಸಲೀಲೆ

ಇತ್ಥಂ ಸ ರಾತ್ರೌ ವಿವಿಧಾನ್ ವಿಲಾಸಾನ್
ಕೃತ್ವಾ ನಿಶಾಂತೇ ವಿಸಸರ್ಜ ಗೋಪೀಃ।
ಪ್ರೀತ್ಯೈ ವಿಧೋರನ್ವಯಜಃ ಸ್ವಲೀಲಾಂ
ಮಿತ್ರಂ ನ ಸಂದರ್ಶಯತಿ ಸ್ಮ ನೂನಮ್ ॥ ೧ ॥

ಹೀಗೆ ಆ ಶ್ರೀಕೃಷ್ಣನು ರಾತ್ರಿಕಾಲದಲ್ಲಿ ಬಗೆಬಗೆಯ ವಿಲಾಸಗಳನ್ನು ಮಾಡಿ, ರಾತ್ರಿ ಕಳೆದ ಮೇಲೆ ಗೋಪಿಯರನ್ನು ಬೀಳ್ಕೊಟ್ಟ; ಚಂದ್ರನ ಪ್ರೀತಿಗಾಗಿ ಅವನ ವಂಶದಲ್ಲಿ ಅವತರಿಸಿದ ಅವನು ತನ್ನ ಲೀಲೆಯನ್ನು ಸೂರ್ಯನಿಗೆ ತೋರಗೊಡಲಿಲ್ಲ ಎನ್ನಿಸುವುದು.

ವಿ. : ೧.[೧]ರಾಸಕ್ರೀಡೆ ನಡೆದದ್ದು ರಾತ್ರಿಕಾಲದಲ್ಲಿ; ಆದ್ದರಿಂದ ಅದನ್ನು ಸೂರ್ಯ ನೋಡಲಿಲ್ಲ ಎಂಬುದು ಮುಖ್ಯಭಾವ.

೨. ರಾತ್ರಿಕಾಲದಲ್ಲಿ ಕೃಷ್ಣ ಹಾಗೆ ವಿಹರಿಸಿದ್ದು ಆ ಕಾಲದಲ್ಲಿ ಬೆಳಗುವ ಚಂದ್ರನ ಸಂತೋಷಕ್ಕೆಂದು; ಅವನು ಅವತರಿಸಿದ್ದು ಚಂದ್ರವಂಶದಲ್ಲಿ ಅಲ್ಲವೆ!

೩. ಇದರಿಂದ ವಂಶದ ಹಿರಿಯರಿಗೆ ಸಂತೋಷಪಡುವಂತಹ ಕಾರ್ಯವನ್ನೇ ಅನಂತರದವರು ಮಾಡಬೇಕು ಎಂಬ ತತ್ತ್ವವೂ ಸೂಚಿತ; ವಿಧು - ಚಂದ್ರ; ಮಿತ್ರ - ಸೂರ್ಯ.

---

೧. ರಾತ್ರೌ ವಿಲಾಸಕರಣಾತ್ ದಿನೇಶೇನ ನ ದೃಷ್ಟಮಿತಿ ವಸ್ತುಸ್ಥಿತಿಃ। ತತ್ರ ಹೇತೂತ್ಪ್ರೇಕ್ಷಾ। -ವ್ಯಾ.

### ನಂದನನ್ನು ಹಿಡಿದ ಅಜಗರ

ದುರ್ಗಾವನೇ ವ್ರತಧರಂ ನಿಶಿ ನಂದಗೋಪಂ
ಸರ್ಪೋಽಗ್ರಸೀತ್ ಕಿಲ ಬುಭುಕ್ಷಿತಚಿತ್ತವೃತ್ತಿಃ।
ಕೃಷ್ಣಂ ವಿಸೃಜ್ಯ ಸಕಲೇಶ್ವರಮನ್ಯದೈವ-
ಪ್ರತ್ಯರ್ಹಣಾಭಿರತಮಿತ್ಯಹಮೂಹಯಾಮಿ ॥ ೨ ॥

ದುರ್ಗಾವನದಲ್ಲಿ ವ್ರತಹಿಡಿದಿದ್ದ ನಂದಗೋಪನನ್ನು ರಾತ್ರಿಕಾಲದಲ್ಲಿ ಹಸಿವಿನಿಂದ ಪೀಡಿತ-ವಾಗಿದ್ದ ಅಜಗರವೊಂದು ನುಂಗಿಬಿಟ್ಟಿತು; ಅವನು ಸರ್ವೇಶ್ವರನಾದ ಕೃಷ್ಣನನ್ನು ಬಿಟ್ಟು ಅನ್ಯದೇವತೆಯ ಪೂಜೆಗೆಂದು ತೊಡಗಿದವನಾಗಿದ್ದರಿಂದ ಎಂದು ನಾನು ಊಹಿಸುವೆ.

ವಿ. : ೧. ಅನ್ಯದೇವತೆಯನ್ನು [1]ಸರ್ವೋತ್ತಮತ್ವೇನ ಆರಾಧಿಸುವುದು ಅನರ್ಥಕರ ಎಂಬ ತತ್ತ್ವ ಇದರಿಂದ ಸೂಚಿತ; ಇದರಿಂದ ವೈಷ್ಣವರು ಅನ್ಯದೇವತೆಗಳನ್ನು ತಾರತಮ್ಯಕ್ರಮದಲ್ಲಿ ಆರಾಧಿಸುವುದು ಮಾತ್ರವೇ ವಿಹಿತ ಎಂಬ ಭಾವವೂ ಸೂಚಿತ.

೨. ಹೀಗೆ ಅಜಗರ ಹಿಡಿಯುವುದು ಸಾವು, ರೋಗ-ರುಜಿನ ಮೊದಲಾದವುಗಳು ಒದಗುವುದಕ್ಕೆ ಸಂಕೇತ ; ಪ್ರತ್ಯರ್ಹಣ – ಪೂಜೆ.

೩.. ಸತ್ಕಾರ್ಯಗಳನ್ನು ಮಾಡುವಾಗ ಕೆಡುಕು ಸಂಭವಿಸಿದರೆ, ಅಲ್ಲಿ ಉಪಾಸನೆಗೆ ಅಪಚಾರ-ವಾಗಿದೆ ಎಂಬ ರಹಸ್ಯವನ್ನು ತಿಳಿಯಬೇಕು ಎಂಬ ಸೂಚನೆಯೂ ಇಲ್ಲಿದೆ.

### ಅಜಗರನ ಮೋಚನೆ

[2]ಕೃಷ್ಣಃ ಸ್ವದರ್ಶನಸುದರ್ಶನಮೇನಮಾತ್ಮ-
ವಿದ್ಯಾಧರಾನ್ವಯಮಮೂಮುಚದಬ್ಜನೇತ್ರಃ।
ತತ್ಪಾದಪೂತತನುರುತ್ತಮಪೂರುಷಾಂಘ್ರಿ-
ಪ್ರೀತ್ಯೈವ ತಸ್ಯ ಪದಮೇವ ಜಗಾಮ ಸೋಽಪಿ ॥ ೩ ॥

ಪುಂಡರೀಕಾಕ್ಷನಾದ ಶ್ರೀಕೃಷ್ಣನು ತನ್ನ ದರ್ಶನವೆಂಬ ಸಾರ್ಥಕನೋಟ ಹೊಂದಿದ, ಆತ್ಮವಿದ್ಯೆಯನ್ನು ಬಲ್ಲವರ ವಂಶದಲ್ಲಿ ಜನಿಸಿದ ಆ ಅಜಗರನಿಗೆ ಮೋಕ್ಷ ಕರುಣಿಸಿದ; ಸರ್ವೋತ್ತಮ ಪುರುಷನಾದ ಶ್ರೀಕೃಷ್ಣನ ಪಾದದ ಮೇಲಿನ ಭಕ್ತಿಯಿಂದಾಗಿಯೇ, ಅವನ [3]ಪಾದದಿಂದ ಪೂತದೇಹನಾದ ಅವನಾದರೋ, ಅವನ ಲೋಕವನ್ನೇ ಹೊಂದಿದ.

---

೧. ಸರ್ವೋತ್ತಮಂ ಕೃಷ್ಣಂ ವಿಹಾಯಾನ್ಯಭಕ್ತಿಕರಣದೋಷೇಣೈವ ಸರ್ಪೋಽಗ್ರಸೀದಿತ್ಯಹಮೂಹಯಾಮಿ। -ವ್ಯಾ.

೨. ಅಹಂ ವಿದ್ಯಾಧರಃ ಕಶ್ಚಿತ್ ಸುದರ್ಶನ ಇತಿ ಶ್ರುತಃ।
ಶ್ರಿಯಾ ಸ್ವರೂಪಸಂಪತ್ತ್ಯಾ ವಿಮಾನೇನಾಚರಂ ದಿಶಃ॥ -ಭಾಗ.(೧೦/೩೨/೧೨)

೩.. ಪೂರ್ವಂ ಯದಾ ಹ್ಯಜಗರೋ ನಿಜಗಾರ ನಂದಂ ಸರ್ವೇ ನ ಶೇಕುರಥ ತತ್ಪವಿಮೋಕ್ಷಣಾಯ।

ವಿ. : ೧. ಆ ಅಜಗರ ಸುದರ್ಶನನೆಂಬ ವಿದ್ಯಾಧರ; ಅವನು ಬ್ರಹ್ಮವಿದ್ಯೆಯಲ್ಲಿ ಕುಶಲರಾದ ವಂಶದಲ್ಲಿ ಜನಿಸಿದವ ಎಂಬ ವಿವರ ಇಲ್ಲಿ ಸೂಚಿತ.

೨. ಇದರಲ್ಲಿ [೧]ಸುದರ್ಶನ ಎಂಬ ಹೆಸರು ಕೃಷ್ಣನ ಸಂದರ್ಶನ ಮಾಡಿದ ಕಾರಣದಿಂದಾಗಿ ಸಾರ್ಥಕ ಎಂದೂ, ವಿದ್ಯಾಧರ ಎಂಬುದಕ್ಕೆ 'ಆತ್ಮವಿದ್ಯಾಧರ' ಎಂಬ ವಿವರಣೆ ನೀಡುವ ಮೂಲಕ ವಿದ್ಯಾಧರ ಗುಂಪಿನವರು ಬ್ರಹ್ಮವಿದ್ಯಾನಿಪುಣರಾದ ಜ್ಞಾನಿಗಳು ಎಂಬ ಅಂಶ ಇಲ್ಲಿ ರೋಚಕವಾಗಿ ನಿರೂಪಿತವಾಗಿದೆ.

೩. ಶ್ರೀಕೃಷ್ಣನ ಪಾದಸ್ಪರ್ಶದ ಯೋಗದಿಂದಾಗಿ ಅವನಿಗೆ ಕೃಷ್ಣ ನೀಡುವ ವೈಕುಂಠಪದವಿ ಪ್ರಾಪ್ತವಾಯಿತು ಎಂಬ ಫಲಶ್ರುತಿಯೂ ಇಲ್ಲಿ ನಿರೂಪಿತ; (ಪೂತ - ಪವಿತ್ರ).

೪. ಇಲ್ಲಿ ಪ್ರೀತಿ ಎಂದರೆ ಭಕ್ತಿ ಎಂದರ್ಥ :

ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥-ಮ.ಭಾ.ತಾ.ನಿ.(೧/೮೫)

೫. ಗಜೇಂದ್ರನನ್ನು ಹಿಡಿದ ಮೊಸಳೆಯನ್ನು ಮೋಚನೆ ಮಾಡಿದಂತೆ, ನಂದನನ್ನು ಹಿಡಿದ ಅಜಗರನನ್ನೂ ಶ್ರೀಕೃಷ್ಣ ಮೋಚನೆ ಮಾಡಿದ ಎಂಬುದು ಗಮನಿಸಬೇಕಾದ ಅಂಶ. ಇದರಿಂದ ತನ್ನ ಭಕ್ತರನ್ನು ಹಿಡಿದವರನ್ನು ಸಹ ಭಗವಂತ ಮೋಚನೆ ಮಾಡುವನು ಎಂಬ ವಿಶೇಷಾಂಶ ಸೂಚಿತ.

### ಶಂಖಚೂಡನ ಸಂಹಾರ

**ಅಸಹ್ಯನಕ್ತಂಚರನಾಶಕತ್ವಂ**
**ಪ್ರಕಾಶಯನ್ ಸ್ವಾತ್ಮನಿ ವಿದ್ಯಮಾನಮ್ ।**
**ಸ ಶಂಖಚೂಡಂ ದಿತಿಜಂ ನಿಗೂಢಂ**
**ಮಮರ್ದ ಶಾರ್ದೂಲಮಿವ ಕ್ಷಪಾಯಾಮ್ ॥ ೪ ॥**

ಸಹಿಸಲಾಗದ ರಾಕ್ಷಸರನ್ನು ನಾಶಮಾಡುವ ತನ್ನಲ್ಲಿರುವ ಸಾಮರ್ಥ್ಯವನ್ನು ಪ್ರಕಟಿಸಲೆಂದು ಆ ಶ್ರೀಕೃಷ್ಣನು ಶಂಖಚೂಡನೆಂಬ ಗೂಢವೇಷದ ದೈತ್ಯನನ್ನು ರಾತ್ರಿಕಾಲದಲ್ಲಿ ಒಂದು ವ್ಯಾಘ್ರವನ್ನು ಎಂಬಂತೆ ಮರ್ದಿಸಿದ.

---

ಮತ್ಪಾದಸಂಸ್ಪರ್ಶತಃ ಸ ತದಾಽತಿದಿವ್ಯೋ ವಿದ್ಯಾಧರಸ್ತದುದಿತಂ ನಿಖಿಲಂ ಸ್ಮರಂತು ॥
ಪೂರ್ವಂ ಸ ರೂಪಮದತಃ ಪ್ರಜಹಾಸ ವಿಪ್ರಾನ್ ನಿತ್ಯಂ ತಪಃಕೃಶತರಾಂಗಿರಸೋ ವಿರೂಪಾನ್ ।
ತೈಃ ಪ್ರಾಪಿತಃ ಸಪದಿ ಸೋಽಜಗರತ್ವಮೇವ ಮತ್ತೋ ನಿಜಾಂ ತನುಮವಾಪ್ಯ ಜಗಾದ ನಂದಮ್ ॥
ನಾಯಂ ನರೋ ಹರಿರಯಂ ಪರಮಃ ಪರೇಭ್ಯೋ ವಿಶ್ವೇಶ್ವರಃ ಸಕಲಕಾರಣ ಆತ್ಮತಂತ್ರಃ ।
ವಿಜ್ಞಾಯ ಚೈನಮುರುಸಂಸೃತಿತೋ ವಿಮುಕ್ತಾ ಯಾಂತ್ಯಸ್ಯ ಪಾದಯುಗಲಂ ಮುನಯೋ ವಿರಾಗಾಃ ॥
-ಮ.ಭಾ.ತಾ.ನಿ.(೧೪/೧೦೭-೧೦೯)

೧. ಅನೇನ ಪ್ರಸಿದ್ಧಸುದರ್ಶನನಾಮ್ನಃ ಕೃಷ್ಣಸಂಬಂಧೇನಾನ್ವರ್ಥತಾ ಸಂಪಾದಿತಾ । -ವ್ಯಾ.

ವಿ. : ೧. ಗೋಪಿಯರನ್ನು ಅಂಜಿಸಲೆಂದು ಕುದುರೆಯ ವೇಷದಲ್ಲಿ ಬಂದ ಶಂಖಚೂಡ ಎಂಬ ಶಿವನ ವರ ಪಡೆದಿದ್ದ ಕುಬೇರನ ಭೃತ್ಯನನ್ನು ಶ್ರೀಕೃಷ್ಣ ಸಂಹರಿಸಿದ ಪ್ರಸಂಗದ ವಿವರಣೆ ಇದರಲ್ಲಿದೆ.

೨. [೧] ರಾತ್ರಿಯಲ್ಲಿ ಚರಿಸುವ ನಿಶಾಚರನಾದ ಅವನನ್ನು ಸಂಹರಿಸುವ ಮೂಲಕ ತಾನು ರಾತ್ರಿಂಚರರಾದ ಅಸುರರನ್ನು ಸದೆಬಡಿಯುವವನು ಎಂಬ ತತ್ತ್ವವನ್ನು ಶ್ರೀಕೃಷ್ಣ ಪ್ರಕಟಿಸಿದ ಎಂದು ಭಾವ; ನಕ್ತಂಚರ – ನಿಶಾಚರ; ಕ್ಷಪಾ – ರಾತ್ರಿ.

೩.. ಕುಬೇರನ ಭೃತ್ಯರಲ್ಲಿ ಮಣಿಮಂತನಂತಹ ಅಸುರರು ಸಹ ಇರುವುದು ಮಹಾಭಾರತ ಹಾಗೂ [೨] ತಾತ್ಪರ್ಯನಿರ್ಣಯಗಳಿಂದ ಸ್ಪಷ್ಟ ; ಶ್ರೀಭೀಮಸೇನ ಸೌಗಂಧಿಕಪುಷ್ಪ ಹಾಗೂ ಪಂಚವರ್ಣಪುಷ್ಪಗಳ ಪ್ರಸಂಗಗಳಲ್ಲಿ ಕುಬೇರನ ಭೃತ್ಯರಾದ ಅಂತಹ ಕ್ರೋಧವಶರು ಮೊದಲಾದ ಅನೇಕ ಅಸುರರನ್ನು ಸಂಹರಿಸಿದ ವಿವರ ಅಲ್ಲಿ ಬಂದಿದೆ[೩].

**ಬಲರಾಮನಿಗೆ ಶಿರೋಮಣಿಯನ್ನಿತ್ತು ಯಶೋಮಣಿ ಪಡೆದ ಶ್ರೀಕೃಷ್ಣ**

**[೪] ಶಿರೋಮಣಿಂ ತಸ್ಯ ವಧಾದವಾಪ್ತಂ**
**ಬಲಾಯ ದತ್ವಾ ಬುಭುಜೇ ಸ್ವಯಂ ಸಃ।**
**ಯಶೋಮಣಿಂ ಚಂದ್ರಚಯಾತಿಚಾರುಂ**
**ಮನೋಜ್ಞಕಾಂತಾಮಣಿಭಿಃ ಸಮೇತಮ್ ॥ ೫ ॥**

ಆ ಶಂಖಚೂಡನನ್ನು ವಧಿಸಿ ಪಡೆದುಕೊಂಡ ಅವನ ತಲೆಯ ಮೇಲಿದ್ದ ಮಣಿಯನ್ನು ಶ್ರೀಕೃಷ್ಣ ಬಲರಾಮನಿಗೆ ನೀಡಿದ; ತಾನು ಮಾತ್ರ ರೂಪಸಿಯರಾದ ನಾರೀಮಣಿ-ಯರೊಂದಿಗೆ ಕೂಡಿದ ಚಂದ್ರನ ಗುಂಪಿಗಿಂತ ಮಿಗಿಲಾದ ರಮಣೀಯತೆಯನ್ನು ಹೊಂದಿದ ಯಶೋಮಣಿಯನ್ನು ಪಡೆದ.

---

೧. ಅಸ್ಯ ರಾತ್ರಾವೇವ ಚರತೋ ಹನನಾತ್ ರಾತ್ರಿಚರನಾಶಕತ್ವಂ ಪ್ರಕಾಶಿತಮೇವೇತಿ ಭಾವಃ। -ವ್ಯಾ.

೨. ಸಂಪೂರ್ಣಚಂದ್ರಕರರಾಜಿತಸದ್ರಜನ್ಯಾಂ ವೃಂದಾವನೇ ಕುಮುದಕುಂದಸುಗಂಧವಾತೇ।
ಶ್ರುತ್ವಾ ಮುಕುಂದಮುಖನಿಃಸೃತಗೀತಸಾರಂ ಗೋಪಾಂಗನಾ ಮುಮುಹುರತ್ರ ಸಸಾರ ಯಕ್ಷಃ॥
ರುದ್ರಪ್ರಸಾದಕೃತರಕ್ಷ ಉತಾಸ್ಯ ಸಖ್ಯುರ್ಭೃತ್ಯೋ ಬಲೀ ಖರತರೋಽಪಿ ಚ ಶಂಖಚೂಡಃ।
ತಾಃ ಕಾಲಯನ್ ಭಗವತಸ್ತಲತಾಡನೇನ ಮೃತ್ಯುಂ ಜಗಾಮ ಮಣಿಮಸ್ಯ ಜಹಾರ ಕೃಷ್ಣಃ॥
-ಮ.ಭಾ.ತಾ.ನಿ.( ೧೩/೭೬,೭೭)

೩.. ದೇವೇಭ್ಯೋ ಮರಣಾದ್ಭೀತಾ ರಾಕ್ಷಸಾ ವಿತ್ತಪಾಜ್ಞಯಾ।
ತದೀಯಾಂ ನಲಿನೀಂ ತೇ ಹಿ ರಕ್ಷಂತ್ಯಸ್ಯಾಶ್ರಯೋ ಹರಃ। - ಮ.ಭಾ.ತಾ.ನಿ.(೨೨/೩೦೦)

೪. ಶಂಖಚೂಡಂ ನಿಹತ್ಯೈವಂ ಮಣಿಮಾದಾಯ ಭಾಸುರಮ್ ।
ಅಗ್ರಜಾಯಾದದಾತ್ ಪ್ರೀತ್ಯಾ ಪಶ್ಯಂತೀನಾಂ ಚ ಯೋಷಿತಾಮ್ ॥ -ಭಾಗ.(೧೦/೩೨/೩೨)

ವಿ. : ೧. ಶಂಖಚೂಡನ ತಲೆಯಮೇಲಿದ್ದ ಮಣಿಯನ್ನು ಶ್ರೀಕೃಷ್ಣ ಬಲರಾಮನಿಗೆ ನೀಡಿದ ಎಂದು ಭಾವ.

೨. ಬಲರಾಮನಿಗೆ ಹಾಗೆ ಶಿರೋಮಣಿಯನ್ನು ನೀಡುವ ಮೂಲಕ ಶ್ರೀಕೃಷ್ಣನು ಅಪಾರ ಕೀರ್ತಿಯನ್ನು ಪಡೆದ ಎಂಬುದನ್ನು ಯಶೋಮಣಿಯನ್ನು ಪಡೆದ ಎಂಬ ಮಾತಿನಿಂದ ಸೂಚಿಸಿರುವರು. ಇದರಿಂದ ಅಪೂರ್ವವಸ್ತುಗಳನ್ನು ತನ್ನಲ್ಲಿರಿಸಿಕೊಳ್ಳುವುದಕ್ಕಿಂತ ಅವುಗಳನ್ನು ಇತ್ತರರಿಗೆ ನೀಡುವುದು ಹೆಚ್ಚು ಕೀರ್ತಿಕರ ಎಂಬ ಸಂದೇಶವು ಸೂಚಿತ.

೩. ಮಹಾಭಾರತದಲ್ಲಿ ಶ್ರೀಭೀಮಸೇನ ಅಶ್ವತ್ಥಾಮಾಚಾರ್ಯರ ತಲೆಯ ಮೇಲಿದ್ದ ಮಣಿಯನ್ನು ದ್ರೌಪದಿಯ ಮೂಲಕ ಧರ್ಮರಾಜನಿಗೆ ಕೊಡುವ ಮೂಲಕ ಪಡೆದ ಕೀರ್ತಿಯು ಸಹ ಅಪಾರ ಎಂಬ ವಿಷಯವು ಸಹ ಇದೇ ತೆರನಾಗಿದ್ದು, ಶ್ರೀಕೃಷ್ಣನ ಈ ಕಾರ್ಯವೇ ಭೀಮನ ಆ ಕಾರ್ಯಕ್ಕೆ ಸ್ಫೂರ್ತಿ ಎಂದು ತಿಳಿಯಬಹುದು.

೪. ಅಕ್ರೂರ ಕೃತವರ್ಮರು ಕೃಷ್ಣನಿಗೆ ಸಲ್ಲಬೇಕಾದ ಸ್ಯಮಂತಕಮಣಿಯನ್ನು ಸತ್ರಾಜಿತನನ್ನು ಶತಧನ್ವನ ಮೂಲಕ ಕೊಲೆ ಮಾಡಿಸಿ, ತಾವು ಪಡೆದುಕೊಂಡ ಪ್ರಸಂಗವು ಅವರು ಮಾಡಿದ ತಪ್ಪಿಗೆ ನಿದರ್ಶನ ಎಂದು ತಿಳಿಯಬೇಕು.

೫. ಹೀಗೆ ಶಂಖಚೂಡನ ಶಿರೋಮಣಿಯನ್ನು ಶ್ರೀಕೃಷ್ಣ ತಾನು ಇರಿಸಿಕೊಳ್ಳದೆ, ಬಲರಾಮನಿಗೆ ನೀಡಿದ್ದರೂ, ಬಲರಾಮ ಮುಂದೆ ಸ್ಯಮಂತಕಮಣಿಯನ್ನು ಶ್ರೀಕೃಷ್ಣ ತನಗೆ ನೀಡದೆ ವಂಚಿಸಿದ ಎಂದು ತಪ್ಪು ತಿಳಿದದ್ದು ಮಾತ್ರ ದೊಡ್ಡ ವಿಪರ್ಯಾಸ (ಮ.ಭಾ.ತಾ.ನಿ.೧೮/೧೯).

೬. **ಚಂದ್ರಚಯಾತಿಚಾರುಂ** – ಕೀರ್ತಿಯು ಚಂದ್ರರ ಗುಂಪಿನ ಕಾಂತಿಗಿಂತ ಮಿಗಿಲು ಎಂಬ ಮಾತಿನಲ್ಲಿ ಕೀರ್ತಿಯ ಹಿರಿಮೆಯು ಮನೋಹರವಾಗಿ ನಿರೂಪಿತವಾಗಿದೆ.

### ಗೋಕುಲಕ್ಕೆ ಅರಿಷ್ಟಾಸುರನಿಂದಾದ ಅರಿಷ್ಟ

[೧]ಧೂಲೀಪಾಲಿಭಿರಂಬರಂ ಮಲಿನಯನ್ ವಿಷ್ಣೋಃ ಪದಂ ತೋಯದಾನ್
ಲಾಂಗೂಲೇನ ವಿದಾರಯನ್ ಸಮರುಚಸ್ತಜ್ಜನ್ಮಮೂಲಂ ತ್ವಿಷಿ ।
ದೇವೇಂದ್ರಂ ಕಕುದದ್ರಿಣಾ ಖುರಪುಟೈಃ ಪೃಥ್ವೀಂ ಚ ಸ ಕ್ಲೇಶಯ-
ನ್ನಭ್ಯಾಯಾತ್ ಸ್ವವಿಷಾಣಲಕ್ಷ್ಯಮಜಿತಂ ಕುರ್ವನ್ನರಿಷ್ಟಾಸುರಃ[೨] ॥ ೬ ॥

---

೧. ಅಗ್ರನ್ಯಸ್ತವಿಷಾಣಾಗ್ರಃ ಸ್ತಬ್ಧಾಸೃಗ್ಲೋಚನೋಽಚ್ಯುತಮ್ ।
ಕಟಾಕ್ಷಿಪ್ಯಾದ್ರವತ್ ತೂರ್ಣಮಿಂದ್ರಮುಕ್ತೋಽಶನಿರ್ಯಥಾ ॥ –ಭಾಗ.(೧೦/೩೬/೧೧)

೨. ನಾಮ್ನಾಽಪ್ಯರಿಷ್ಟ ಉರುಗಾಯವಿಲೋಮಚೇಷ್ಟೋ ಗೋಷ್ಠಂ ಜಗಾಮ ವೃಷಭಾಕೃತಿರಪ್ಯವಧ್ಯಃ ।
ಶಂಭೋರ್ವರಾದನುಗತಶ್ಚ ಸದೈವ ಕಂಸಂ ಗಾ ಭೀಷಯಂತಮಮುಮಾಹ್ವಯದಾಶು ಕೃಷ್ಣಃ ॥

ತನ್ನ ಗೊರಸುಗಳಿಂದ ಮೇಲೆದ್ದ ಧೂಳಿಯ ರಾಶಿಯಿಂದ ವಿಷ್ಣುಪದವೆನ್ನಿಸಿದ ಗಗನವನ್ನು ಮಲಿನಗೊಳಿಸುತ್ತಾ, ಕೃಷ್ಣನ ಸಮಾನಕಾಂತಿಯ ಮೇಘಗಳನ್ನು ತನ್ನ ಬಾಲದಿಂದ ಸೀಳಿಹಾಕುತ್ತಾ, ಅವನ ಅವತಾರಕ್ಕೆ ನಿಮಿತ್ತ ಎಂಬ ಕಾರಣದಿಂದ ತನ್ನ ಕಕುತ್ ಎಂಬ ಬೆಟ್ಟದಿಂದ ದೇವೇಂದ್ರನನ್ನು, ಖುರಪುಟಗಳಿಂದ ಭೂಮಿಯನ್ನು ಕ್ಲೇಶಪಡಿಸುತ್ತಾ, ಅಜಿತನಾದ ಶ್ರೀಕೃಷ್ಣನನ್ನು ತನ್ನ ಕೋಡುಗಳಿಗೆ ಗುರಿಯಾಗಿಸಿಕೊಂಡು ಅರಿಷ್ಟಾಸುರ ವೇಗದಿಂದ ಧಾವಿಸಿದ.

ವಿ. : ೧. ಶಿವನ ವರ ಹೊಂದಿದ್ದ ಅರಿಷ್ಟಾಸುರನು ಒಂದು ವೃಷಭದ ರೂಪದಲ್ಲಿ ಶ್ರೀಕೃಷ್ಣನ ಮೇಲೆ ಆಕ್ರಮಿಸಿ ಬಂದ ಎಂದರ್ಥ; **ಕಕುತ್**–ಹೆಗಲು; ವಿಷಾಣ–ಕೊಂಬು; ಖುರ–ಗೊರಸು.

೨. ಅವನು ಬರುವ ರಭಸಕ್ಕೆ ಗಗನದಲ್ಲಿ ಧೂಳು ತುಂಬಿತು; ಮೇಘಗಳು ಚದುರಿದವು; ಭೂಮಿಯು ಕಂಗೆಟ್ಟಿತು ಎಂಬುದನ್ನು ಕಾವ್ಯಮಯವಾಗಿ ವರ್ಣಿಸಿರುವರು.

೩. ಅವನು ಗಗನವನ್ನು ಧೂಳಿನಿಂದ ಮಲಿನಗೊಳಿಸಿದ್ದು ಅದು [೧]ವಿಷ್ಣುಪದ ಎಂಬ ಕಾರಣಕ್ಕೆ; ಮೇಘಗಳನ್ನು ಸೀಳಿಹಾಕಿದ್ದು ಅವುಗಳ ಬಣ್ಣ ಕೃಷ್ಣನ ಮೈಬಣ್ಣದಂತೆ ಶ್ಯಾಮಲ ಎಂಬ ಕಾರಣದಿಂದ; ಅವನು ದೇವೇಂದ್ರ ಹಾಗೂ ಭೂಮಿಯನ್ನು ಕ್ಲೇಶಪಡಿಸಿದ್ದು ಕೃಷ್ಣಾವತಾರಕ್ಕೆ ನಿಮಿತ್ತರಾದವರು ಎಂಬ ಕಾರಣದಿಂದ ಎನ್ನುವ ಮೂಲಕ ಅವನು ಮೂಲತಃ [೨]ವಿಷ್ಣು-ವೈಷ್ಣವ ದ್ವೇಷಿಯಾಗಿದ್ದ ಮಹಾದೈತ್ಯ ಎಂಬುದನ್ನು ಸೂಚಿಸಿರುವರು.

### ಆತ್ಮಘಾತಕವಾದ ಅರಿಷ್ಟಾಸುರನ ಪ್ರಯತ್ನ

**ಅಗ್ರೇ ನಿಧಾಯ ಸ್ವವಿಷಾಣಯುಗ್ಮ-**
**ಮುಗ್ರೋಽಚ್ಯುತಂ ಪ್ರತ್ಯಗಮತ್ ಸಹಾಯಮ್ ।**
**ದೋಷ್ಣಾ ತದುತ್ಪಾಟಯತೋ ಮುರಾರೇಃ**
**ಕುರ್ವನ್ ಶಿರೋಭಾರಜಿಹೀರ್ಷಯೇವ ॥ ೭ ॥**

ಉಗ್ರನಾದ ಆ ಅರಿಷ್ಟಾಸುರನು ತನ್ನ ಎರಡು ಕೋಡುಗಳನ್ನು ಮುಂದೆಮಾಡಿಕೊಂಡು ಶ್ರೀಕೃಷ್ಣನ ಮೇಲೆ ಧಾವಿಸಿದ; ಆ ಮೂಲಕ ತನ್ನ ತೋಳಿನಿಂದ ಆ ಕೋಡನ್ನು ಕಿತ್ತಿಹಾಕುವ ಶ್ರೀಕೃಷ್ಣನ ಕಾರ್ಯಕ್ಕೆ ನೆರವಾಗುತ್ತಾ ತನ್ನ ತಲೆಯ ಭಾರವನ್ನು ಪರಿಹರಿಸಿಕೊಳ್ಳಲೋ ಎಂಬಂತೆ.

---

ಸೋಽಪ್ಯಾಸಸಾದ ಹರಿಮುಗ್ರವಿಷಾಣಕೋಟಿಮಗ್ರೇ ನಿಧಾಯ ಜಗೃಹೇಽಸ್ಯ ವಿಷಾಣಮೀಶಃ ।
ಭೂಮೌ ನಿಪಾತ್ಯ ಚ ವೃಷಾಸುರಮುಗ್ರವೀರ್ಯಂ ಯಜ್ಞೇ ಯಥಾ ಪಶುಮಮಾರಯದಗ್ರ್ಯಶಕ್ತಿಃ ॥
–ಮ.ಭಾ.ತಾ.ನಿ.(೧೩/೭೮,೭೯)

೧. ನಿಘಂಟ್ವಾದಿಷು ವಿಷ್ಣುಪದಶಬ್ದಶ್ರವಣಾತ್ ಕೃಷ್ಣಪದಭ್ರಾಂತ್ಯಾ ತಸ್ಮಿನ್ ದ್ವೇಷೇಣ ಮಲಿನಯನ್ನಿತ್ಯುತ್ಪ್ರೇಕ್ಷಾ । –ವ್ಯಾ.
ವಿಯದ್ವಿಷ್ಣುಪದಂ ವಾ ತು ಪುಂಸ್ಯಾಕಾಶವಿಹಾಯಸೀ ॥ –ಇತ್ಯಮರಃ

೨. ಅಯಂ ವಿಷ್ಣುವೈಷ್ಣವದ್ವೇಷೀತ್ಯೇವಮುತ್ಪ್ರೇಕ್ಷಿತುಃ ಕವೇರ್ಹೃದಯಮ್ । –ವ್ಯಾ.

ವಿ. : ೧. ಶ್ರೀಕೃಷ್ಣನು ಅವನನ್ನು ಕೊಂದಿದ್ದು ಅವನ ಕೋಡುಗಳನ್ನು ಕಿತ್ತು ಅಪ್ಪಳಿಸುವ ಮೂಲಕ; ಇವನು ತನ್ನ ಕೋಡುಗಳನ್ನು ಮುಂದೆ ಮಾಡಿಕೊಂಡು ತೆರಳಿದ್ದು ಶ್ರೀಕೃಷ್ಣನ ಆ ಕಾರ್ಯಕ್ಕೆ ಅನುಕೂಲವೇ ಆದ್ದರಿಂದ ಇವನ ರೀತಿ ಅವನಿಗೆ ಸಹಾಯಕವೋ ಎಂಬಂತೆ ಇದ್ದಿತು ಎಂಬುದು ಇಲ್ಲಿಯ ಭಾವ.

೨. ಅರಿಷ್ಟಾಸುರನ ಕೋಡುಗಳು ಅವನ ತಲೆಗೆ ಭಾರವಾಗಿದ್ದವು ಎಂಬ ಮಾತಿನಲ್ಲಿ ಶ್ರೀಹರಿಯ ಸೇವೆಗೆ ಉಪಯುಕ್ತವೆನ್ನಿಸದ ಅಂಗಾಂಗಗಳು ಕೇವಲ ದೇಹಕ್ಕೆ ಭಾರ ಮಾತ್ರ ಎಂಬ ತತ್ತ್ವ ಸೂಚಿತ :

ಭಾರಭೂತೈಃ ಕರೈಃ ಕಾರ್ಯಂ ಕಿಂ ತಸ್ಯ ನೃಪಶೋರ್ದ್ವಿಜಾಃ।
ಯೈರ್ಹಿ ನ ಕ್ರಿಯತೇ ವಿಷ್ಣೋರ್ಗೃಹಸಂಮಾರ್ಜನಾದಿಕಮ್ ॥
-ಕೃಷ್ಣಾಮೃತಮಹಾರ್ಣವ(೮೦)

೩. ಧೇನುಕಾಸುರ ಮೊದಲಾದವರ ಪ್ರಸಂಗಗಳಲ್ಲಿ ಸಹ ಇದೇ ರೀತಿಯಾಗಿ ಆ ಅಸುರರ ಕಾರ್ಯಗಳು ಅವರಿಗೆ ಆತ್ಮಘಾತಕವಾದ ವಿವರ ಬಂದಿದೆ; ಸತ್ಯಸಂಕಲ್ಪನಾದ ಶ್ರೀಹರಿಗೆ ಇವು ಮಾತ್ರವಲ್ಲದೆ ಜಗತ್ತಿನ ಸಮಸ್ತಕಾರ್ಯಗಳೂ ಸಹ ಸರ್ವದಾ ಅವನ ಇಚ್ಛೆಯಂತೆಯೇ ನಡೆಯುವುವು ಎಂಬುದಕ್ಕೆ ಇವುಗಳು ನಿದರ್ಶನ ಮಾತ್ರ ಎಂದು ತಿಳಿಯಬೇಕು.

## ಮೃತ್ಯುವಾಗಿ ಪರಿಣಮಿಸಿದ ಕೋಡುಗಳು

**ಯದುಪತಿಮೃದುಹಸ್ತೇನೋದ್ಧೃತಂ [೧] ಶೃಂಗಯುಗ್ಮಂ**
**ವ್ಯಸುಮಸುರಮಕಾರ್ಷೀತ್ ತತ್ಕ್ಷಣೇನೇತಿ ಯುಕ್ತಮ್ ।**
**ಅಪಿ ಶಿರಸಿ ಧೃತೋ ಯತ್ಸ್ವೀಯ ಏವಾಂತಕಾಲೇ**
**ಕರವಶಮುಪಯಾತಃ ಶತ್ರುತಾಮೇತಿ ಶತ್ರೋಃ ॥ ೮ ॥**

ಶ್ರೀಕೃಷ್ಣನ ಕೋಮಲ ಹಸ್ತದಿಂದ ಕೀಳಲ್ಪಟ್ಟ ಅವನ ಎರಡು ಕೋಡುಗಳು ಆ ಅಸುರನನ್ನು ಕೂಡಲೇ ಅಸುನೀಗುವಂತೆ ಮಾಡಿದವು. ಅದು ಸರಿಯೇ; ಕೊನೆಗಾಲದಲ್ಲಿ ತಲೆಯ ಮೇಲೆ ಕೂಡಿಸಿಕೊಂಡಿದ್ದ ತನ್ನವನೇ ಶತ್ರುವಿನ ಕೈಗೆ ವಶನಾಗಿ ಶತ್ರುಭಾವವನ್ನು ತಳೆಯುವನು.

---

೧. ಗೃಹೀತ್ವಾ ಶೃಂಗಯೋಸ್ತಂ ಯಾ ಅಷ್ಟಾದಶಪದಾನಿ ಸಃ।
ಪ್ರತ್ಯಪೋವಾಹ ಭಗವಾನ್ ಗಜಃ ಪ್ರತಿಗಜಂ ಯಥಾ ॥
ತಮಾಪತಂತಂ ಸ ನಿಗೃಹ್ಯ ಶೃಂಗಯೋಃ ಪದಾ ಸಮಾಕ್ರಮ್ಯ ನಿಪಾತ್ಯ ಭೂತಲೇ।
ನಿಷ್ಪೀಡಯಾಮಾಸ ಯಥಾಽಽರ್ದ್ರಮಂಬರಂ ಕೃತ್ವಾ ವಿಷಾಣೇನ ಜಘಾನ ಸೋಽಪತತ್ ॥
ಅಸೃಗ್ ವಮನ್ ಮೂತ್ರಶಕೃತ್ ಸಮುತ್ಸೃಜನ್ ಕ್ಷಿಪಂಶ್ಚ ಪಾದಾನನಿಮೀಲಿತೇಕ್ಷಣಃ।
ಜಗಾಮ ಕೃಚ್ಛ್ರಂ ನಿರ್ಋತೇರಥ ಕ್ಷಯಂ ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ ॥
-ಭಾಗ.(೧೦/೩೪/೧೨,೧೪,೧೫)

ವಿ. : ೧. ಆ [೧] ಅರಿಷ್ಟಾಸುರನ ತಲೆಯ ಮೇಲೆ ಬೆಳೆದಿದ್ದ ಕೋಡುಗಳೇ ಅವನ ಸಾವಿಗೆ ಕಾರಣ-ವಾದವು ಎಂಬುದರಿಂದ ಧ್ವನಿಸುವ ತತ್ತ್ವವನ್ನು ಇಲ್ಲಿ ನಿರೂಪಿಸಿರುವರು. ಶ್ರೀಕೃಷ್ಣ ಆ ಉಗ್ರಾಸುರನ ತಲೆಯಮೇಲಿನ ಕೋಡುಗಳನ್ನು ಕಿತ್ತು, ಅವುಗಳಿಂದಲೇ ಅವನನ್ನು ಸಂಹರಿಸಿದ ಎಂದರ್ಥ.

೨. ತನಗೆ ಬೇಕಾದವರು ಎಂದು ತಲೆಯ ಮೇಲೆ ಕೂಡಿಸಿಕೊಂಡು ಬೆಳೆಸಿದರೂ, ಶತ್ರುಗಳು ನೀಡುವ ಆಮಿಷಕ್ಕೆ ಒಳಗಾಗುವ ಬಂಧುಜನರೂ ಸಹ ತನ್ನ ಕೆಡುಕಿಗೇ ಕಾರಣವಾಗುವರು ಎಂಬುದು ಇಲ್ಲಿಯ ತತ್ತ್ವ.

**ಅರಿಷ್ಟಕ್ಕೆ ಪುಷ್ಟಿ ಲಭಿಸೀತೆ?**

**ಯದೀಯನಾಮ ಸ್ಮರತಾಂ ಮುನೀನಾ-**
**ಮರಿಷ್ಟಮಾತ್ಯಂತಿಕನಾಶಮೇತಿ ।**
**ತದೇಕನಾಥಂ ವ್ರಜಮೇತ್ಯ ಜೈತ್ರ-**
**ಮರಿಷ್ಟಪುಷ್ಟಿರ್ನಹಿ ದೃಷ್ಟಪೂರ್ವಾ ॥ ೯ ॥**

ಯಾರ ನಾಮವನ್ನು ನೆನೆಯುವ ಮುನಿಗಳ ಅರಿಷ್ಟವೂ ಸಹ ಸಂಪೂರ್ಣ ನಾಶಹೊಂದು-ವುದೋ ಅಂತಹ ಶ್ರೀಕೃಷ್ಣನನ್ನು ಮುಖ್ಯಸ್ವಾಮಿಯಾಗಿ ಹೊಂದಿದ್ದ ಜಯಶೀಲವಾದ ವೃಂದಾವನವನ್ನು ಹೊಕ್ಕ ಅರಿಷ್ಟನಿಗೆ ಅಭಿವೃದ್ಧಿ ಹಿಂದೆಂದೂ ಕಂಡಿಲ್ಲ ಅಲ್ಲವೆ!

ವಿ. : ೧. [೨] ಶ್ರೀಕೃಷ್ಣನ ನಾಮಸ್ಮರಣೆಯಿಂದಲೇ ಸಕಲ ಅರಿಷ್ಟಗಳೂ ನಾಶವಾಗುವಾಗ ಇನ್ನು ಸಾಕ್ಷಾತ್ ಶ್ರೀಕೃಷ್ಣನನ್ನೇ ಎದುರಿಸಿದ ಅರಿಷ್ಟಾಸುರ ಎಂಬ ಹೆಸರಿನ ಆ ಪಾತಕಿಯು ಎಂತು ಬದುಕಿಯಾನು? ಎಂದರ್ಥ; ಅರಿಷ್ಟ - ಕೆಡುಕು.

೨. ಶ್ರೀಕೃಷ್ಣನ [೩] ನಾಮಸ್ಮರಣೆಯು ಸಹ ಸರ್ವಾರಿಷ್ಟನಾಶಕ ಎಂಬುದು ಇಲ್ಲಿಯ ತತ್ತ್ವ.

**ಶ್ರೀಕೃಷ್ಣನ ಪರಾಕ್ರಮದಿಂದ ಅಸುರರಮಣಿಯರಿಗಾದ ವ್ಯಥೆ**

**ಕೃಷ್ಣಸ್ಯ ಪ್ರಥಮಾನವೀರ್ಯತರಣಿಂ ದೃಷ್ಟ್ವಾ ಸಪತ್ನಾಂಗನಾಃ**
**ಚಿಂತಾಕ್ರಾಂತಮನೋರಥಾಃ ಸ್ವನಯನದ್ವಾರಾಽಶ್ರುಧಾರಾ ದಧುಃ ।**
**ಭಾವಿಸ್ವೀಯಪಯೋಧರದ್ವಯಮಹಾಶುಷ್ಕತ್ವಸಂಪ್ರಾಪ್ತಯೇ**
**ಹೃದ್ಯೋದಗ್ರಪಯೋವಿಯೋಗಕರಣೋದ್ಯುಕ್ತಾ ಇವಾರ್ತಾ ಭೃಶಮ್ ॥೧೦॥**

---

೧. ತದೀಯಶೃಂಗೇಣೈವ ತಂ ಜಘಾನೇತಿ ಪುರಾಣಪ್ರಸಿದ್ಧಿಃ ।
೨. ಅಸ್ಯಾಸುರಸ್ಯ ಅಶುಭಸ್ಯ ಚಾರಿಷ್ಟಶಬ್ದವಾಚ್ಯತ್ವಾದಿಯಮುಕ್ತಿಃ । ವ್ಯಾ.
೩. ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।
ತಾವತ್ ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥ - ಕೃಷ್ಣಾಮೃತಮಹಾರ್ಣವ(೧೨)

ಶ್ರೀಕೃಷ್ಣನ ಬೆಳಗುತ್ತಿದ್ದ ಪ್ರತಾಪವೆಂಬ ಸೂರ್ಯನನ್ನು ಕಂಡು ಶತ್ರುಗಳ ಪತ್ನಿಯರು ತಮ್ಮ ಹೃದಯದಲ್ಲಿನ ಹೆಚ್ಚಿನ ನೀರನ್ನು ತೆರವುಗೊಳಿಸುವ ಕಾರ್ಯಕ್ಕೆ ತೊಡಗಿದವರಂತೆ [೧]ಚಿಂತೆ ಕವಿದ ಮನೋರಥವುಳ್ಳವರಾಗಿ, ಮುಂದೆ ಒದಗುವ ತಮ್ಮ ಎರಡು ಪಯೋಧರಗಳ ಮಹಾ-ಶೋಷಣೆಯ ಪ್ರಾಪ್ತಿಗಾಗಿ, ತಮ್ಮ ಕಣ್ಣುಗಳ ಮೂಲಕ [೨]ಅಶ್ರುಧಾರೆಗಳನ್ನು ಸುರಿಸಿದರು.

ವಿ. : ೧. ಶ್ರೀಕೃಷ್ಣನ ಆ ಪ್ರತಾಪದ ಮೇಲಿನ ಅಸೂಯೆಯಿಂದ ಶತ್ರುವರ್ಗದ ನಾರಿಯರು ಸಹ ಅಪಾರ ದುಃಖಕ್ಕೊಳಗಾದ ವಿವರ ಇಲ್ಲಿ ನಿರೂಪಿತವಾಗಿದೆ.

೨. ಪ್ರಥಮಾನ - ಬೆಳಗಿದ ; ಉದಗ್ರ - ಶ್ರೇಷ್ಠ , ಅಧಿಕ.

**ಅಶ್ವರೂಪದಲ್ಲಿ ಆಗಮಿಸಿದ ಕೇಶಿದೈತ್ಯ**

**[೩]ಮುಕುಂದಮಾಜೌ ಪ್ರತಿಯಾಸ್ಯತೋ ಮೇ**
**ನ ಜೀವಿತಾಶಾ ನನು ವಿದ್ಯತೇ ಶ್ವಃ ।**
**ಇತೀವ ನಿಶ್ಚಿತ್ಯ ಜಗಾಮ ಕೇಶೀ**
**ಜವೇನ ನಂದವ್ರಜಮಶ್ವರೂಪೀ ॥ ೧೧ ॥**

''ಶ್ರೀಕೃಷ್ಣನನ್ನು ಯುದ್ಧದಲ್ಲಿ ಎದುರಿಸಿ ಹೊರಟ ನನಗೆ ಬದುಕಿನ ಆಸೆ ನಾಳೆ ಇರದು'' ಎಂದು ನಿಶ್ಚಯಿಸಿಯೋ ಎಂಬಂತೆ, ಕೇಶಿ ಎಂಬ ಅಸುರನು ಅಶ್ವರೂಪವನ್ನು ತಳೆದು ವೇಗದಿಂದ ನಂದಗೋಕುಲಕ್ಕೆ ತೆರಳಿದ.

ವಿ. : ೧. ಕೇಶಿ ಎಂಬ ಅಸುರನು ಅಶ್ವರೂಪವನ್ನು ತಳೆದು ಶ್ರೀಕೃಷ್ಣನನ್ನು ಎದುರಿಸಿದ ಎಂದರ್ಥ; ಆಜಿ - ಯುದ್ಧ.

೨. [೪]ಅಶ್ವ ಎಂದರೆ ಶ್ವಃ ನ - ನಾಳೆ ಇಲ್ಲದ್ದು ಎಂದರ್ಥ; ಅವನು ಆ ರೂಪ ತಳೆದದ್ದು ಅವನಿಗೆ ನಾಳೆ ಇಲ್ಲ; ಎಂದರೆ ಅಂದೇ ಅವನ ಜೀವನದ ಕೊನೆಯ ದಿನ ಎಂಬುದಕ್ಕೆ ಸೂಚಕವಾಗಿತ್ತು ಎಂಬ ಇಲ್ಲಿಯ ನಿರೂಪಣೆ ಅತ್ಯಂತ ರೋಚಕವಾದದ್ದು.

---

೧. ಆಮರಣಂ ಚಿಂತಯಾ ಶರೀರಕಾರ್ಶ್ಯಂ ಪ್ರಾಪುರಿತಿ ಹೃದಯಮ್ । -ವ್ಯಾ.

೨. ಜಲಸ್ಯಾಪಿ ಪಯಃಶಬ್ದವಾಚ್ಯತ್ವಾತ್ ತದಪಸಾರಯಂತ್ಯ ಇವ ತಿಷ್ಯಂತೀತಿ ಭಾವಃ । -ವ್ಯಾ.

೩.. ಸ ಲಬ್ಧಸಂಜ್ಞಃ ಪುನರುತ್ಥಿತೋ ಮುಖಂ ವ್ಯಾದಾಯ ಕೇಶೀ ತರಸಾಽಽಪತದ್ ಹರಿಮ್।
ಸೋಽಪ್ಯಸ್ಯ ವಕ್ತ್ರೇ ಭುಜಮುತ್ತರಂ ಸ್ಮಯನ್ ಪ್ರವೇಶಯಾಮಾಸ ಯಥೋರಗಂ ಬಿಲೇ ॥
ದಂತಾ ನಿಪೇತುರ್ಭಗವದ್ಭುಜಸ್ಪೃಶಸ್ತೇ ಕೇಶಿನಸ್ತಪ್ತಮಯಸ್ಪೃಶೋ ಯಥಾ ।
ಬಾಹುಶ್ಚ ತದ್ದೇಹಗತೋ ಮಹಾತ್ಮನೋ ಯಥಾಽಽಮಯಃ ಸಂವವೃಧೇ ಉಪೇಕ್ಷಿತಃ ॥
ಸಮೇಧಮಾನೇನ ಸ ಕೃಷ್ಣಬಾಹುನಾ ನಿರುದ್ಧವಾಯುಶ್ಚರಣಾಂಶ್ಚ ವಿಕ್ಷಿಪನ್ ।
ಪ್ರಸ್ವಿನ್ನಗಾತ್ರಃ ಪರಿವೃತ್ತಲೋಚನಃ ಪಪಾತ ಲಂಬಂ ವಿಸೃಜನ್ ಕ್ಷಿತೌ ವ್ಯಸುಃ ॥ -ಭಾಗ.(೧೦/೩.೫/೬-೮)

೪. ಶ್ವೋಽಪ್ಯೇಕಪ್ರಕಾರೇಣ ನ ತಿಷ್ಠತೀತ್ಯಶ್ವತ್ಥಃ । -ಗೀತಾಭಾಷ್ಯ(೧೫/೧)
ಅಶ್ವರೂಪೀ ಸನ್ ಶ್ವೋ ನ ವಿದ್ಯತ ಇತ್ಯಶ್ವ ಇತಿ ವ್ಯುತ್ಪತ್ತೇರಿತಿ ಭಾವಃ । -ವ್ಯಾ.

೩. ಶ್ರೀಹರಿಯನ್ನು ಎದುರಿಸಿ ಬದುಕುವವರಿಗೆ ಅಂದೇ ಅಂತ್ಯ ಖಚಿತ; ಅವರಿಗೆ ಉತ್ತಮ ಭವಿಷ್ಯ ಸರ್ವಥಾ ಇರದು ಎಂಬುದು ಇಲ್ಲಿಯ ತತ್ತ್ವ; ಶ್ರೀಹರಿಯನ್ನು ಮರೆಯುವುದೇ ಅನರ್ಥ-ಕರ ಎಂದ ಮೇಲೆ ಅವನನ್ನು ಎದುರಿಸುವುದು ಮಹಾನರ್ಥಕರ ಎಂಬುದು ಇಲ್ಲಿಯ ಧ್ವನಿ.

೪. ಈ ಕೇಶಿ ದಾನವನು ಹಯಗ್ರೀವಾಸುರನ ಅವತಾರ ಎಂಬ ವಿಶೇಷಾಂಶ [೧]ಹರಿವಂಶ ಹಾಗೂ [೨]ನಾರಾಯಣಪಂಡಿತರ ಅಂಶಾವತಾರದಲ್ಲಿದೆ; ಹಯಗ್ರೀವನ ಅವತಾರನಾದ ಅವನು ಹಯದ ರೂಪದಲ್ಲೇ ಬಂದದ್ದು ಅವನ ಸ್ವರೂಪಕ್ಕೂ ಸೂಚಕ ಎಂದೂ ತಿಳಿಯಬಹುದು.

## ಬಾಯಿ ತೆರೆದು ಮೃತ್ಯುವಿನ ಬಾಯಿಗೆ ತುತ್ತಾದ ಕೇಶಿ

ಸ ವಿಸೃತಾಸ್ಯಃ ಕಿಲ ವಿಶ್ವಮೂರ್ತಿಂ
ಗ್ರಸಿಷ್ಣುರಭ್ಯಾಗಮದಗ್ರ್ಯಕೀರ್ತಿಮ್ ।
ಅದೋ ಯದೋರ್ವಂಶಮಣಿಃ ಸ್ವಪಾಣಿಂ
[೩]ನಿವೇಶಯನ್ನೀಪ್ಸಿತಮೇವ ಮೇನೇ ॥ ೧೨ ॥

ಅವನು ಬಾಯ್ತೆರೆದುಕೊಂಡು ಮಹಾಕೀರ್ತಿವಂತನಾದ ವಿಶ್ವಮೂರ್ತಿಯಾದ ಶ್ರೀಕೃಷ್ಣನನ್ನು ನುಂಗಲು ಬಯಸಿ ನುಗ್ಗಿಬಂದ; ಯದುವಂಶಶೇಖರನಾದ ಶ್ರೀಕೃಷ್ಣ ತನ್ನ ಕೈಯನ್ನು ಇರಿಸುತ್ತಾ, ಅದು ತನಗೆ ಬೇಕಾದುದಾಗಿಯೇ ತಿಳಿದ.

ವಿ. : ೧. ಅರಿಷ್ಟಾಸುರನು ಕೋಡು ಮುಂದಿರಿಸಿಕೊಂಡು ಸಾಗಿಸಿದ ಕಾರ್ಯ ಕೃಷ್ಣನ ಅವನ ಸಂಹಾರದ ರೀತಿಗೆ ಅನುಕೂಲವಾಗಿದ್ದಂತೆ, ಈ ಕೇಶಿ ರಾಕ್ಷಸನು ಬಾಯಿ ಅಗಲಿಸಿಕೊಂಡು ಸಾಗಿದ ಕಾರ್ಯವೂ ಸಹ ಅನುಕೂಲಕರವೇ ಆಯಿತು ಎಂದರ್ಥ.

೨. ಭಗವದಿಚ್ಛೆಯ ಸಂಕಲ್ಪಕ್ಕೆ ಅನುಕೂಲವಾಗಿಯೇ ಸಕಲವೂ ನಡೆಯುವಾಗ ಸ್ವತಃ ಭಗವಂತನಾದ ಶ್ರೀಕೃಷ್ಣನ ಇಚ್ಛೆಗೆ ಅನುಗುಣವಾಗಿ ಆ ದೈತ್ಯ ಹಾಗೆ ಸಾಗಿದ್ದು ಅಚ್ಚರಿಯ ಸಂಗತಿಯೇನಲ್ಲ ಎಂಬ ಧ್ವನಿಯೂ ಇಲ್ಲಿದೆ.

೩. ಅರಿಷ್ಟಾಸುರನಿಗೆ ಶಿವನ ವರವಿದ್ದಿತು ಎಂಬ ಉಲ್ಲೇಖ [೪]ಮ.ಭಾ.ತಾ.ನಿ.ದಲ್ಲಿದೆ; ಅಗ್ರ್ಯ - ಶ್ರೇಷ್ಠ.

---

೧. ಯೋಽಪ್ಯಸೌ ಹಯವಿಕ್ರಾಂತೋ ಹಯಗ್ರೀವ ಇತಿ ಸ್ಮೃತಃ ।
ಕೇಶಿನಾಮ ಹಯೋ ಜಾತಃ ಸ ತಸ್ಯೈವ ಜಘನ್ಯಜಃ ॥ -ಹರಿವಂಶಪರ್ವ(೫೪/೭೦)

೨. ಕೇಶಿನಾಮಾಽಸುರಃ ಪೂರ್ವಂ ಹಯಗ್ರೀವೋ ಮಹಾಸುರಃ । ಅಂಶಾವತಾರ (ಶ್ಲೋ.೨೧)

೩. ಪ್ರವೇಶಯನ್ । (ಪಾ.)

೪. .....ವೃಷಭಾಕೃತಿರಪ್ಯವಧ್ಯಃ । ಶಂಭೋರ್ವರಾತ್ - ಮ.ಭಾ.ತಾ.ನಿ(೧೩./೭೮)

### ಶ್ರೀಕೃಷ್ಣನು ಕೇಶಿಯ ಬಾಯಲ್ಲಿ ಕೈ ಇರಿಸಿದ ಮರ್ಮ

ಸ ಕೇಶಿದೈತ್ಯಸ್ಯ ಮುಖೇ ಮುರಾರಿ-
ರ್ನಿವೇಶಯಾಮಾಸ ಕರಂ ಸ್ವಕೀಯಮ್ ।
ತದೀಯಹಾರ್ದಾಂಬರಮಧ್ಯಸಂಸ್ಥ-
ಮಸುಂ ಬಹಿಷ್ಕರ್ತುಮಿವೇಹಮಾನಃ ॥ ೧೩ ॥

ಅವನ ಹೃದಯಾಗಸದ ಮಧ್ಯದಲ್ಲಿ ನೆಲೆಸಿದ ಪ್ರಾಣವನ್ನು ಹೊರತೆಗೆಯಲು ಬಯಸಿದವನಂತೆ ಮುರಾರಿಯಾದ ಶ್ರೀಕೃಷ್ಣನು ಆ [೧]ಕೇಶಿದೈತ್ಯನ ಬಾಯಲ್ಲಿ ತನ್ನ ಕೈಯನ್ನು ತುರುಕಿದ.

ವಿ. : ಶ್ರೀಕೃಷ್ಣನು ಆ ಅಸುರನ ತೆರೆದ ಬಾಯಲ್ಲಿ ತನ್ನ ಹಸ್ತವನ್ನು ಇರಿಸಿದ್ದು ಅವನ ಹೃದಯದಲ್ಲಿನ ಪ್ರಾಣವನ್ನು [೨]ಕೈಹಾಕಿ ತೆಗೆಯಲೋ ಎಂಬಂತೆ ಇದ್ದಿತು ಎಂದರ್ಥ ; ಇದರಿಂದ ಕೃಷ್ಣನ ಆ ಕಾರ್ಯವೇ ಆ ದೈತ್ಯನ ಸಾವಿಗೆ ಕಾರಣವಾಯಿತು ಎಂಬ ವಿಶೇಷಾಂಶ ಸೂಚಿತ.

### ಕೇಶಿಯನ್ನು ಮುಪ್ಪು ಮಾಡಿದ ಶ್ರೀಕೃಷ್ಣನ ಹಸ್ತ

ತದ್ಧೈರ್ಯಂ ಜರಯನ್ ಬಲಂ ಚ ಶಮಯನ್ನಂಗಂ ಮುಹುಃ ಕಂಪಯ -
ನ್ನಕ್ಷೇಭ್ಯೋಽಪಟುತಾಂ ದಿಶನ್ ದೃಢತರಾನ್ ದಂತಾನ್ ಬಲಾತ್ ಪಾಟಯನ್।
ತಚ್ಛ್ವಾಸಂ ಸ್ಖಲಯನ್ ಜರೇವ ಬಹುಶಸ್ತದ್ಯೌವನಂ ದೂರಯನ್
ಹಸ್ತೋಽಸೌ ವವೃಧೇಽಂತರಂತಕಪುರಾತಿಥ್ಯಂ ದ್ವಿಷಃ ಸೂಚಯನ್ ॥ ೧೪ ॥

ಶ್ರೀಕೃಷ್ಣನು ಇರಿಸಿದ ಆ ಹಸ್ತವು ದೇಹಕ್ಕೆ ಅಡರುವ ಮುಪ್ಪು ಹೇಗೋ ಹಾಗೆ ಆ ಅಸುರನ ಧೈರ್ಯವನ್ನು ಅಡಗಿಸಿತು ; ಬಲವನ್ನು ಉಡುಗಿಸಿತು ; ದೇಹವನ್ನು ಬಹಳವಾಗಿ ನಡುಗಿಸಿತು ; ಇಂದ್ರಿಯಗಳ ಶಕ್ತಿಯನ್ನು ಕುಂದಿಸಿತು ; ಗಟ್ಟಿಯಾದ ದಂತಗಳನ್ನು ಬಲಾತ್ಕಾರದಿಂದ ಬೀಳಿಸಿತು ; ಅವನ ಉಸಿರನ್ನು ಕಟ್ಟಿಸಿತು, ಯೌವನವನ್ನು ಬಹುದೂರ ಮಾಡಿತು; ಶತ್ರುವಾದ ಅವನಿಗೆ ಯಮಪುರಿಯ ಆತಿಥ್ಯವನ್ನು ಸೂಚಿಸುತ್ತಾ ಒಳಕ್ಕೆ ಬೆಳೆಯತೊಡಗಿತು.

ವಿ. : ೧. ಶ್ರೀಕೃಷ್ಣನ ಹಸ್ತ ಬೆಳೆದದ್ದನ್ನು ದೇಹವನ್ನು ಆಕ್ರಮಿಸುವ ಮುಪ್ಪಿಗೆ ಇಲ್ಲಿ ಹೋಲಿಸಿರುವರು ; **ಅಕ್ಷ** – ಇಂದ್ರಿಯ ; **ಅಂತಕ** – ಯಮ.

---

೧. ಕೇಶೀ ಚ ಕಂಸವಿಹಿತಸ್ತುರಗಸ್ವರೂಪೋ ಗಿರ್ಯಾತ್ಮಜಾವರಮವಾಪ್ಯ ಸದಾ ವಿಮೃತ್ಯುಃ।
ಪಾಪಃ ಸ ಕೇಶವಮವಾಪ ಮುಖೇಽಸ್ಯ ಬಾಹುಂ ಪ್ರಾವೇಶಯತ್ ಸ ಭಗವಾನ್ ವವೃಧೇಽಸ್ಯ ದೇಹೇ ॥
ತತ್ಖಾದನಾಯ ಕುಮತಿಃ ಸ ಕೃತಪ್ರಯಾಸಃ ಶೀರ್ಣಾಸ್ಯದಂತದಶನಚ್ಛದರುದ್ಧವಾಯುಃ।
ದೀರ್ಣಃ ಪಪಾತ ಚ ಮೃತೋ ಹರಿರಪ್ಯಶೇಷೈರ್ಬ್ರಹ್ಮೇಶಶಕ್ರದಿನಕೃತ್ಪ್ರಮುಖೈಃ ಸ್ತುತೋಽಭೂತ್ ॥
–ಮ.ಭಾ.ತಾ.ನಿ.(೧೩/೮೦,೮೧)

೨. ಹಸ್ತಪ್ರವೇಶಮಾತ್ರೇಣ ತಸ್ಯ ಮರಣಂ ಭವಿಷ್ಯತೀತಿ ಭಾವಃ। –ವ್ಯಾ.

೨. ಮುಪ್ಪು ಸಾವಿಗೆ ಮುನ್ಸೂಚನೆಯಾಗಿರುವಂತೆ[1] ಶ್ರೀಕೃಷ್ಣನ ಹಸ್ತಪ್ರವೇಶಕಾರ್ಯ ಅವನ ಸಾವಿಗೆ ಮುನ್ಸೂಚನೆಯಾಯಿತು ಎಂಬ ಇಲ್ಲಿಯ ಭಾವವು ಅತ್ಯಂತ ರೋಚಕ.

೩. ತ್ರಿವಿಕ್ರಮರೂಪದಲ್ಲಿ ಶ್ರೀಹರಿಯು ಪಾದವನ್ನು ಬೆಳೆಸಿ ತೋರಿದ ಮಹಿಮೆ ಜಗದ್ವಿಖ್ಯಾತವಾಗಿದೆ; ಇಲ್ಲಿ ಶ್ರೀಕೃಷ್ಣರೂಪದ ಅವನು ತನ್ನ ಹಸ್ತವನ್ನು ಬೆಳೆಸಿದ ಮಹಿಮೆ ನಿರೂಪಿತವಾಗಿರುವುದು ವಿಶೇಷ.

### ದೇಹ ತೊರೆದ ಕೇಶಿ

ಸ ಕೃಷ್ಣದೋರ್ದಂಡವರಾಭಿವೃದ್ಧ್ಯಾ
ಖಲಾಗ್ರಗಣ್ಯೋ ವಿಸಸರ್ಜ ಕಾಯಮ್ ।
ಕರೋದಯಾನ್ ವೀಕ್ಷ್ಯ ಪರಸ್ಯ ಜಾತಾ-
ನಸೂನಸೂಯಾಭಿರತಾಸ್ತ್ಯಜಂತಿ ॥ ೧೫ ॥

ಶ್ರೀಕೃಷ್ಣನ ಶ್ರೇಷ್ಠ ತೋಳು ಹಾಗೆ ಬಹಳವಾಗಿ ಬೆಳೆಯುತ್ತಲೇ, ದುಷ್ಟರ ಮುಂದಾಳುವಾದ ಕೇಶಿ ಅಸುರನು ದೇಹವನ್ನು ತೊರೆದ; ಇತರರಿಗೆ ಉಂಟಾಗುವ ಸಂಪತ್ತಿನ ಅಭಿವೃದ್ಧಿಯನ್ನು ಕಂಡು ಹೊಟ್ಟೆಕಿಚ್ಚಿನ ಜನ ತಮ್ಮ ಪ್ರಾಣಗಳನ್ನೇ ತೊರೆಯುವರು.

ವಿ. : ೧. ಇತರರ ಅಭಿವೃದ್ಧಿಯನ್ನು ಸಹಿಸದಿರುವುದು ಮಾತ್ಸರ್ಯ ಎನ್ನಿಸುವುದು. ಅಂತಹ ಮಾತ್ಸರ್ಯ ದುಷ್ಟರ ಪ್ರಧಾನ ಲಕ್ಷಣ; ಮಾತ್ಸರ್ಯಕ್ಕೆ ಮೃತಿಯೇ ಫಲ. ಮಾತ್ಸರ್ಯದ ಮೂರ್ತಿಯಾದ ಆ ಅರಿಷ್ಟಾಸುರ ಹೀಗೆ ಶ್ರೀಕೃಷ್ಣನಿಂದ ಹತನಾದ ಎಂದರ್ಥ.

೨. ಕುಂತಿಯು ಯುಧಿಷ್ಠಿರನನ್ನು ಹೆತ್ತ ವಾರ್ತೆಯನ್ನು ಕೇಳಿಯೇ ಗಾಂಧಾರಿಯು ಹೊಟ್ಟೆಕಿಚ್ಚಿನಿಂದ ತನ್ನ ಒಡಲನ್ನು ಒಡೆದುಕೊಂಡ ರೀತಿ ಇಂತಹುದೇ ಆಗಿದೆ[2]; ಕರ-ಕೈ, ಕಪ್ಪ ಸಂಪತ್ತು; (ಶ್ಲೇಷಾಲಂಕಾರ).

೩. ಇಂತಹ ಅಸೂಯೆಯು ದುರ್ಜನರ ಸ್ವಭಾವವೇ ಆಗಿದೆ ಎಂಬುದು ವಿಶೇಷ.

### ಕಂಸನು ಜಾರಪುತ್ರ

ಅಥೋ ವಿಪಕ್ಷಂ ಕುಶಲೇನ ನಿಂದನ್
ಸುರರ್ಷಿರಭ್ಯೇತ್ಯ ಶಶಂಸ ಕಂಸಮ್[3] ।

---

೧. ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರ ನ ಮುಹ್ಯತಿ ॥ -ಗೀತಾ(೨/೧೩)

೨. ಯಮೇ ಸುತೇ ತು ಕುಂತಿತಃ ಪ್ರಜಾತ ಏವ ಸೌಬಲೀ ।
ಅದಹ್ಯತೇರ್ಷ್ಯಯಾ ಚಿರಂ ಬಭಂಜ ಗರ್ಭಮೇವ ಚ ॥ -ಮ.ಭಾ.ತಾ.ನಿ.(೧೨/೩೪)

೩. ಶೃಣುಧ್ವಮೇತದ್ ವಚನಂ ಮಯೋದಿತಂ ನಿಶಮ್ಯ ಸರ್ವೇ ಹೃದಿ ಧಾರಯಂತು ತತ್ ।
ಯೇನಾಹಮೇತೇಷ್ವಸುಹೃತ್ತ್ವಮಾದಿತಶ್ಚರಾಮಿ ಬಂಧುಷ್ವಪಿ ತಸ್ಯ ಕಾರಣಮ್ ॥

ಪಿತಾ ನ ಸೋಽಯಂ ತವ ಭೋಜರಾಜ-
ಸ್ತ್ವಮಂಗ ಮಾಯಾಮಯಜಾರಜಾತಃ ॥ ೧೬ ॥

ಆ ಬಳಿಕ ದೇವರ್ಷಿಗಳಾದ ನಾರದರು ಕಂಸನ ಬಳಿಗೆ ತೆರಳಿ, ಶತ್ರುಪಕ್ಷದ ಅವನನ್ನು ಜಾಣತನದಿಂದ ನಿಂದಿಸುತ್ತಾ, "ಅಯ್ಯ ! ಈ ಭೋಜರಾಜನಾದ ಉಗ್ರಸೇನ ನಿನ್ನ ತಂದೆಯಲ್ಲ; ನೀನು ಕಪಟವೇಷದ ಜಾರನಿಗೆ ಜನಿಸಿದವನು".

ವಿ. : ೧. ಮೇಲ್ನೋಟಕ್ಕೆ ಕಂಸನನ್ನು ಹೊಗಳಿದಂತೆ ಕಂಡರೂ ವಾಸ್ತವವಾಗಿ ನಾರದರು ಮಾಡಿದ್ದು ಅವನ ನಿಂದೆಯೇ ಆಗಿದೆ. ಅವರು 'ನೀನು ನಿನ್ನ ತಂದೆಯ ಮಗನಲ್ಲ; ಜಾರನಿಗೆ ಜನಿಸಿದವನು' ಎಂಬುದು ನಿಂದೆಯಲ್ಲದೆ ಪ್ರಶಂಸೆ ಎಂತಾದೀತು ?

೨. ಕಂಸನು ಅವನ ತಾಯಿಯಲ್ಲಿ 'ದ್ರುಮಿಳ' ಎಂಬ ಅಸುರನಿಂದ ಜನಿಸಿದವನು ಎಂಬ ವಿವರ [1]ಶ್ರೀಮದ್ಭಾಗವತ, ಹರಿವಂಶ ಹಾಗೂ ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ[2].

---

ಮಾತಾ ಮಮ ಮಹಾಭಾಗಾ ಕದಾಚಿತ್ ಕಮಲೇಕ್ಷಣಾ ।
ವಿಚಚಾರ ಗೃಹೋದ್ಯಾನೇ ಮಂದಮಾರುತವೀಜಿತೇ ॥
ಪ್ರೋತ್ಫುಲ್ಲಾಶೋಕಬಕುಲಪೂಗಪುನ್ನಾಗಶೋಭಿತೇ ।
ಭ್ರಮದ್ಭ್ರಮರಸಂಘಾತೇ ಕೂಜತ್ಕೋಕಿಲಸಂಕುಲೇ ॥
ನೃತ್ಯಚ್ಛಿಖಂಡಿನಿವಹೇ ಮರ್ಕಟಾಟೋಪಸುಂದರೇ ।
ವಸಂತಸಮಯೇ ರಮ್ಯೇ ಸಾಲಮಂಡಲಮಂಡಿತೇ ॥
ಚರಂತೀ ತತ್ರ ಮೇ ಮಾತಾ ಚಿಂತಯಾಮಾಸ ಸುವ್ರತಾ ।
ಭರ್ತಾರಂ ಕಾಮಸಂತಪ್ತಾ ಋತುಸ್ನಾತಾ ಸ್ವಲಂಕೃತಾ ॥
ತತ್ರೈವ ಕಶ್ಚಿದ್ ಗಂಧರ್ವೋ ದ್ರುಮಿಲೋ ನಾಮ ನಾಮತಃ ।
ಚರನ್ನಂತರ್ಹಿತಃ ಕಾಲೇ ದೃಷ್ಟ್ವಾ ತಾಮೇಕಚಾರಿಣೀಮ್ ॥
ವಿಜ್ಞಾಯ ಚಿಂತಿತಂ ತಸ್ಯಾಃ ಸರ್ವಸತ್ತ್ವಾಶಯಾರ್ಥವಿತ್ ।
ಉಗ್ರಸೇನವಪುರ್ಬಿಭ್ರತ್ ಸಸ್ಮಿತಾಲಾಪವೀಕ್ಷಿತಮ್ ॥
ತಾಮಾಸಸಾದ ಕಾಮಾರ್ತಃ ಕಾಮಯಾನಾಂ ಪತಿವ್ರತಾಮ್ ।
ಅಜಾನಮಾನಾ ಸಾಽಶ್ಲಿಷ್ಯ ರೇಮೇ ತೇನ ಸಮಂ ವನೇ ॥
ಭವಾದೃಶೀನಾಂ ಮನುಜಾಂಗನಾನಾಂ ಜಾನೀಹಿ ಭದ್ರೇ ಸುಲಭಾ ವಯಂ ನ ಚ ।
ಜರಾವಿನಾಶಾದ್ಯಖಿಲಾಧಿಭಾಗಿನಾಂ ನೃಣಾಂ ಸುರಾಣಾಂ ಮಹದಂತರಂ ಪ್ರಿಯೇ ॥
ನಿಸ್ಸೇತೋರ್ಭಿನ್ನವೃತ್ತಸ್ಯ ಪಾಪಸ್ಯೋನ್ಮಾರ್ಗವರ್ತಿನಃ ।
ಕ್ರೂರಸ್ತೇ ತನಯೋ ಭೂಯಾತ್ ಸಾಹಸೀ ನಿರ್ದಯೋಽಘೃಣಃ ॥
ನಾನುಗ್ರಾಹ್ಯೋ ದೇವತಾನಾಂ ದ್ವಿಜಾನಾಂ ಚ ತಪಸ್ವಿನಾಮ್ ।
ಇತ್ಥಂ ವದಂತ್ಯಾಂ ತಸ್ಯಾಂ ಸ ಕ್ರುದ್ಧಾಯಾಂ ಶಾಪಶಂಕಿತಃ ॥
ತಾವಕಾನಾಂ ಭವೇಚ್ಛತ್ರುರಿತ್ಯುಕ್ತ್ವಾಽಂತರಧೀಯತ ।
ಗತೇ ತಸ್ಮಿನ್ ಮಹೋದ್ಯಾನಾನ್ಮಾತಾ ಮಮ ತಪಸ್ವಿನೀ ॥-ಭಾಗ.(೧೦/೩.೪/೩.೦,೩.೧-೩.೭,೪೦,೪೫,೪೯,೫೦)

೧. ಅನೇನ ಸ್ವೈರಿಣೀಪುತ್ರಃ ಪರಜಾತ ಇತಿ ಗಾಲೀದ್ವಯಂ ಉಕ್ತಂ ಭವತಿ । -ವ್ಯಾ.

೨. ನ ಚಾಯಮುಗ್ರಸೇನಃ ಸ ಪಿತಾ ತವ ಮಹಾಬಲಃ ।

೩. ನಾರದರು ದೇವರ್ಷಿಗಳಲ್ಲಿ ಉತ್ತಮರು: ದೇವರ್ಷೀಣಾಂ ಚ ನಾರದಃ-ಗೀತಾ(೧೦/೨೬).

**ಕಂಸಾದಿಗಳು ದಾನವರು, ಕೃಷ್ಣನು ಶ್ರೀಹರಿ, ಅವನ ಅನುಯಾಯಿಗಳು ದೇವತೆಗಳು**

ತವಾನುಗಾ ಯೇ ಭುವಿ ದಾನವಾಸ್ತೇ[1]
ತ್ವಮಗ್ರಗಣ್ಯೋಽಸುರಸಂಚಯೇಷು ।
ಸುರೇಶ್ವರೋಽಸೌ ವಸುದೇವಸೂನುಃ
ಸುರಾಶ್ಚ ತತ್ಪಕ್ಷಗತಾಃ ಸಮಸ್ತಾಃ[2] ॥ ೧೭ ॥

ಭೂಮಿಯಲ್ಲಿರುವ ನಿನ್ನ ಅನುಯಾಯಿಗಳಾಗಿರುವವರೆಲ್ಲರೂ ದಾನವರು; ನೀನು ಅಸುರರ ಗುಂಪಿನಲ್ಲಿ ಮೊದಲಿಗನು. ವಸುದೇವಪುತ್ರನಾದ ಈ ಶ್ರೀಕೃಷ್ಣ ದೇವೇಶ್ವರನಾದ ಶ್ರೀಹರಿ; ಹಾಗೂ ಅವನ ಪಕ್ಷದಲ್ಲಿರುವ ಸಕಲರೂ ದೇವತೆಗಳು.

ವಿ. : ನೇರವಾಗಿ ಕಂಸನನ್ನು ಅಸುರರ ಒಡೆಯ ಎಂದು, ಶ್ರೀಕೃಷ್ಣನನ್ನು [3]ಸರ್ವೋತ್ತಮ ಎಂದು ಬಣ್ಣಿಸುವ ನಾರದರ ಇಲ್ಲಿಯ ಕೌಶಲವೂ ಗಮನಾರ್ಹವಾದುದು. ಎಂದರೆ ಈ ಶ್ಲೋಕ-ಗಳು ಕಂಸನ ನಿಂದೆಯಾಗಿರುವಂತೆ ಶ್ರೀಕೃಷ್ಣ ಹಾಗೂ ಅವನ ಭಕ್ತರ ಸ್ತುತಿಯೂ ಆಗಿವೆ ಎಂದರ್ಥ.

**ಕೃಷ್ಣಾವತಾರದ ಅನುವಾದ**

ಧೃತಃ ಸ ಗರ್ಭೇ ವಸುದೇವಪತ್ನ್ಯಾ
ತತಃ ಪ್ರಸೂತಸ್ತವ ಮಂದಿರೇಽಸ್ಮಿನ್ ।
ತ್ವದೀಯಭೀತ್ಯಾಽಽನಕದುಂದುಭಿಸ್ತಂ
ನಿನಾಯ [4]ಮಿತ್ರಾಲಯಮಾಲಯಾತ್ ತೇ ॥ ೧೮ ॥

---

ದ್ರುಮಿಳೋ ನಾಮ ತೇಜಸ್ವೀ ಸೌಭಸ್ಯ ಪತಿರೂರ್ಜಿತಃ ॥.... ಹರಿವಂಶ, ವಿಷ್ಣುಪರ್ವ (೨೮/೫೪-೧೧೨)
ಸ ಔಗ್ರಸೇನೇ ಜನಿತೋಽಸುರೇಣ ಕ್ಷೇತ್ರೇ ಹಿ ತದ್ರೂಪಧರೇಣ ಮಾಯಯಾ ।
ಗಂಧರ್ವಜೇನ ದ್ರುಮಿಳೇನ ನಾಮ್ನಾ ಕಂಸೋ ಜತೋ ಯೇನ ವರಾಜ್ಯಭೋಪತಿಃ ॥-ಮ.ಭಾ.ತಾ.ನಿ(೧೧/೧೯)

೧. ಜ್ಞಾತಯೋ ಬಂಧುಸುಹೃದೋ ಯೇ ಚ ಕಂಸಮನುವ್ರತಾಃ ।
ಅಸುರಾಃ ಸರ್ವೇ ವಿವ್ಯೈತೇ ಲೋಕೋಪದ್ರವಕಾರಿಣಃ ॥ -ಭಾಗ.(೧೦/೨/೧೦)

೨. ನಂದಾದ್ಯಾ ಯೇ ವ್ರಜೇ ಗೋಪಾ ಯಾಶ್ಚಾಮೀಷಾಂ ಚ ಯೋಷಿತಃ ।
ವೃಷ್ಣಯೋ ವಸುದೇವಾದ್ಯಾ ದೇವಕ್ಯಾದ್ಯಾ ಯದುಸ್ತ್ರಿಯಃ ।
ಸರ್ವೇ ವೈ ದೇವತಾಪ್ರಾಯಾ ಉಭಯೋರಪಿ ಭಾರತ ॥ - ಭಾಗ.(೧೦/೨/೮)

೩. ಅನೇನ ಕೃಷ್ಣೋ ನ ಮನುಷ್ಯಮಾತ್ರಃ ಕಿಂತು ದೇವೋತ್ತಮಃ । ತದೀಯಾ ಅಪಿ ನ ಮನುಷ್ಯಮಾತ್ರಾ ಅಪಿ ತು ದೇವಾ ಇತಿ ಸ್ತುತಿರುಕ್ತಾ । -ವ್ಯಾ.

೪. ಯಶೋದಾಯಾಃ ಸುತಾಂ ಕನ್ಯಾಂ ದೇವಕ್ಯಾಃ ಕೃಷ್ಣಮೇವ ಚ ।
ರಾಮಂ ಚ ರೋಹಿಣೀಪುತ್ರಂ ವಸುದೇವೇನ ಬಿಭ್ರತಾ ॥

ಆ [1]ಶ್ರೀಕೃಷ್ಣನು ವಸುದೇವನ ಪತ್ನಿಯಾದ ದೇವಕಿಯ ಗರ್ಭದಲ್ಲಿ ನೆಲೆಸಿ, ಆ ಬಳಿಕ ನಿನ್ನ ಮಂದಿರದಲ್ಲಿ ಜನಿಸಿದ; ಅವನನ್ನು ವಸುದೇವ ನಿನ್ನ ಭಯದಿಂದಾಗಿ ನಿನ್ನ ಮನೆಯಿಂದ ತನ್ನ ಹಿತೈಷಿಯಾದ ನಂದನ ಮನೆಗೆ ಕರೆದೊಯ್ದ.

ವಿ. : ದ್ರುಮಿಳನಿಂದ ಜನಿಸಿದ [2]ಕಂಸನು ಜಾರಪುತ್ರ ಎಂಬುದು ದೋಷವಾಗಿರುವಂತೆ, ಶ್ರೀಕೃಷ್ಣನು ನಂದನ ಸಾಕುಮಗ ಎಂಬುದು ಮಾತ್ರ ಗುಣವೇ ಆಗಿದೆ ಎಂಬುದು ಇಲ್ಲಿಯ ಭಾವ.

ವಸುದೇವದೇವಕಿಯರಿಗೆ ಪುನಃ ಬಂಧನ

ಇತೀರಿತೇ ಶೌರಿವಧೋದ್ಯತಂ ತಂ
ನಿಷಿಧ್ಯ ಬುದ್ಧ್ಯಾ ಸ ತು ದೇವಯೋಗೀ ।
ನ ವಾರಯಾಮಾಸ ತದೀಯಬಂಧಂ
ಮತಂ ಮುಕುಂದಸ್ಯ ತದಾ ವಿಜಾನನ್ ॥ ೧೯ ॥

ಅವರು ಹೀಗೆ ಹೇಳಲು ವಸುದೇವನನ್ನು ಕೊಲ್ಲಲು ಹೊರಟ ಆ ಕಂಸನನ್ನು, ಆ ದೇವರ್ಷಿಗಳಾದ ನಾರದರು ಜಾಣ್ಮೆಯಿಂದ ತಡೆದರು; ಶ್ರೀಕೃಷ್ಣನ ಮತವನ್ನು ಅರಿತಿದ್ದ ಅವರು ಆಗ ಅವನ ಬಂಧನವನ್ನು ಮಾತ್ರ ತಡೆಯಲಿಲ್ಲ.

ವಿ. : ೧. ವಿಷಯ ತಿಳಿದ ಕಂಸನು ವಸುದೇವನನ್ನು ಕೊಲ್ಲ ಹೊರಟಾಗ ನಾರದರು ಅದನ್ನು ತಡೆದರು; ಆದರೆ ಅವನು ವಸುದೇವನನ್ನು ಕಾರಾಗೃಹದಲ್ಲಿ ಹಾಕುವುದನ್ನು ಮಾತ್ರ ತಪ್ಪಿಸಲಿಲ್ಲ ಎಂದರ್ಥ.

೨. ನಾರದರ ಈ ಕೌಶಲವನ್ನು ಸೂಚಿಸಲೆಂದು 'ದೇವಯೋಗೀ' ಎಂಬ ವಿಶೇಷಣವನ್ನು ಅವರಿಗೆ ಬಳಸಲಾಗಿರುವುದು ಗಮನಾರ್ಹ.

ಶಿವನಂತಹ ನಾರದರು

ಋಷಿಸ್ತಮೇವಂ ರಚಿತಾಪರಾಧಂ
ವಿಧಾಯ ಕೃಷ್ಣಾಂತಿಕಮಾಜಗಾಮ ।
ಯಥಾಪರಾಧಂ ಖಲದಂಡಕರ್ತುಃ
ಪುರಃ ಪುರಾರಿಪ್ರತಿಮಸ್ತಮೂಚೇ ॥ ೨೦ ॥

---

ನ್ಯಸ್ತೌ ಸ್ವಮಿತ್ರೇ ನಂದೇ ವೈ ಯಾಭ್ಯಾಂ ತೇ ಪುರುಷಾ ಹತಾಃ । - ಭಾಗ. (೧೦/೩೪/೧೮)

೧. ಕಥಾ ತು ಭಾಗವತಾದೌ (ಭಾ.೧೦/೯೬/೧೬-೧೮) ಸ್ಪಷ್ಟೈವ । -ವ್ಯಾ.

೨. ಅನೇನ ನಂದಪೋಷಿತತ್ವಾನ್ನಂದಸೂನುರಿತಿ ಖ್ಯಾತಿಃ । ನ ತು ತ್ವದ್ವತ್ಪರಜಾತತ್ವಾದಿತಿ ಸೂಚಿತಮ್ । ಇತಿ ಶಶಂಸೇತಿ ಶ್ಲೋಕತ್ರಯಸ್ಯೈಕ ಏವಾನ್ವಯಃ । -ವ್ಯಾ.

ಶಿವನನ್ನು ಹೋಲುವ ಋಷಿಗಳಾದ ನಾರದರು ಹೀಗೆ ಆ ಕಂಸನನ್ನು ಅಪರಾಧವೆಸಗುವಂತೆ ಮಾಡಿ, ಕೃಷ್ಣನ ಬಳಿಗೆ ಬಂದರು. ಅಪರಾಧಕ್ಕೆ ತಕ್ಕಂತೆ ದುಷ್ಟರಿಗೆ ದಂಡನೆ ವಿಧಿಸುವ ಶ್ರೀಕೃಷ್ಣನ ಮುಂದೆ ಕಂಸನ ಬಗ್ಗೆ ಹೀಗೆ ಹೇಳಿದರು.

ವಿ. : ೧. **ಪುರಾರಿಪ್ರತಿಮಃ**-ತ್ರಿಪುರಾರಿಯಾದ ರುದ್ರದೇವರು ಬಾಯಲ್ಲಿ ಪಾಶುಪತಾಗಮ-ದಿಂದ ತನ್ನ ಸರ್ವೋತ್ತಮತ್ವವನ್ನು ಸಾರುತ್ತಿದ್ದರೂ ಹೃದಯದಲ್ಲಿ ಪರಮ ಭಾಗವತರಾಗಿರುವಂತೆ ನಾರದರು ಕಂಸನ ಹಿತೈಷಿಯಂತೆ ವರ್ತಿಸುತ್ತಾ, ಶ್ರೀಕೃಷ್ಣನ ಪರಮಭಕ್ತರಾಗಿದ್ದ ಮಹನೀಯರು ಎಂದು ಭಾವ.

೨. ಸೋದರಮಾವನೆಂಬ ಕಾರಣದಿಂದ ಮಾನ್ಯನಾಗುವಂತಿದ್ದರೂ ಕಂಸನನ್ನು ವಧಾರ್ಹ-ನನ್ನಾಗಿಸಲು, ಅಶರೀರವಾಣಿಯು ದೇವಕಿಯ ಎಂಟನೆಯ ಗರ್ಭವು ಅವನ ಮೃತ್ಯುವೆಂದು ತಿಳಿಸಿ, ಅವನು ಅವರಿಗೆ ದ್ರೋಹ ಬಗೆಯುವಂತೆ ಮಾಡಿದ ಪ್ರಸಂಗ ಇದೇ ತೆರನಾದುದು ಎಂದು ತಿಳಿಯಬಹುದು[೧]; **ಪುರಾರಿ** - ಶಿವ.

೩. ಋಷಿ ಎಂಬುದು 'ಋಷಿರ್ದರ್ಶನಾತ್' ಎಂಬ ಮಾತಿನಿಂದ ಆ ನಾರದರು ಮುಂದಾಗುವುದನ್ನು ಕಾಣಬಲ್ಲ ದಿವ್ಯದೃಷ್ಟಿಯವರಾಗಿದ್ದರು ಎಂಬ ವಿಶೇಷಾರ್ಥ ಸೂಚಿತ.

೪. ರುದ್ರದೇವರು ಶ್ರೀಹರಿಯ ಆದೇಶದಂತೆ ಮೋಹಕವಾದ ಪಾಶುಪತಾದಿಶಾಸ್ತ್ರವನ್ನು ಅಸುರರಿಗೆ ಉಪದೇಶಿಸುವ ವಿವರವು [೨]ಪುರಾಣಗಳಲ್ಲಿ ಪ್ರಸಿದ್ಧವಾಗಿದೆ.

### ನಾರದರಿಂದ ಭವಿಷ್ಯಕಥನ

**ತಥಾಪಿ ಪೂರ್ಣಸ್ಯ ನ ಕೃತ್ಯಮಸ್ತೀ-**
**ತ್ಯಸೌ ಭವಿಷ್ಯತ್ಸಕಲಂ ಬಭಾಷೇ ।**
**[೩]ಋತಂ ವಿಧಾತುಂ ವಚನಂ ಮದೀಯ-**
**ಮಪೀಹ ಕಾರ್ಯಾಣಿ ಕರಿಷ್ಯತೀತಿ ॥ ೨೧ ॥**

ಆದರೂ ಪರಿಪೂರ್ಣನಾದ ಶ್ರೀಕೃಷ್ಣನಿಗೆ ಕರ್ತವ್ಯ ಎಂಬುದು ಯಾವುದೂ ಇಲ್ಲ ಎಂಬ ಕಾರಣದಿಂದ ನನ್ನ ಮಾತನ್ನು ನಿಜವಾಗಿಸಲೆಂದಾದರೂ ಕಾರ್ಯಗಳನ್ನು ಅವನು

---

೧. ವಿನಾಽಪರಾಧಾದ್ಧಿ ನ ತತೋ ಗರೀಯಸೋ ನ ಮಾತುಲೋ ವಧ್ಯತಾಮೇತಿ ವಿಷ್ಣೋಃ ।
ಲೋಕಸ್ಯ ಧರ್ಮಾನನುವರ್ತತೋಽತಃ ಪಿತ್ರೋರ್ವಿರೋಧಾರ್ಥಮುವಾಚ ವಾಯುಃ ॥
- ಮ.ಭಾ.ತಾ.ನಿ.(೧೨/೪)

೨. ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ।
ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ ॥
ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರು ।
ಇತಿ ವಾರಾಹವಚನಮ್ । - ಮ.ಭಾ.ತಾ.ನಿ. (೧/೪೮-೫೦)

೩. ಅತಃ ಪರಂ ನ ಕೃತಂ ಚೇತ್ ಭಕ್ತಸ್ಯಾಸ್ಯ ವಚನಂ ಮಿಥ್ಯಾ ಭವಿಷ್ಯತೀತಿ ಸರ್ವಂ ಕರಿಷ್ಯತೀತಿ ಭಾವಃ । "ಸತ್ಯಂ ವಿಧಾತುಂ ನಿಜಭೃತ್ಯಭಾಷಿತಮ್"(ಭಾ.೭/೮/೧೮) ಇತಿ ಸ್ಮೃತೇಃ । -ವ್ಯಾ.

ಮಾಡುವನು ಎಂಬ ಭಾವದಿಂದ ಮುಂದಾಗುವ ಎಲ್ಲವನ್ನೂ ತಿಳಿಸಿದರು; (ಋತ-ಸತ್ಯ).

ವಿ. : ಭೂಭಾರಹರಣವು ದೇವತೆಗಳಿಗೆ, ನಾರದರಿಗೆ ಇಷ್ಟ; ಆದರೆ ಪೂರ್ಣಕಾಮನಾದ ಶ್ರೀಕೃಷ್ಣನಿಗೆ ಕರ್ತವ್ಯವೆಂಬುದು ಯಾವುದೂ ಇಲ್ಲ ಎಂಬ ಕಾರಣದಿಂದ ನಾರದರು ತಮ್ಮ ವಚನವನ್ನು ಸತ್ಯಮಾಡಲೆಂದಾದರೂ ಅವನು ಕಂಸನನ್ನು ವಧಿಸುವಂತಾಗಲಿ ಎಂಬ ಭಾವನೆಯಿಂದ ಮುಂದಾಗುವುದನ್ನು ಸಹ ನುಡಿದರು ಎಂಬುದು ಇಲ್ಲಿಯ ಭಾವ.

### ಕಂಸನಿಂದ ಅಕ್ರೂರನ ಪ್ರೇಷಣ

ಇತೀರಯಿತ್ವಾಽಬ್ಜಜನೇಃ ಸುತೇ ಗತೇ
ವ್ಯದೃಶ್ಯತಾರಿಪ್ರಹಿತಃ ಶ್ವಫಲ್ಕಜಃ ।
ಮೃಗಾಧಿಪಗ್ರಸ್ತವಿಮುಕ್ತವೀಕ್ಷಿತ-
ಸ್ವವರ್ಗಹೃಷ್ಯನ್ಮೃಗಶಾವವಿಭ್ರಮಃ ॥ ೨೨ ॥

ಹೀಗೆ ವಿಜ್ಞಾಪಿಸಿ, ಬ್ರಹ್ಮಪುತ್ರರಾದ ನಾರದರು ತೆರಳುತ್ತಿದ್ದಂತೆ, ಶತ್ರುವಾದ ಕಂಸನಿಂದ ಕಳುಹಿಸಲ್ಪಟ್ಟ, ಸಿಂಹದ ಕೈಗೆ ಸಿಲುಕಿ ಬಿಡುಗಡೆ ಪಡೆದು ತನ್ನ ಹಿಂಡನ್ನು ಕಂಡು ನಲಿಯುವ ಜಿಂಕೆಯ ಮರಿಯಂತೆ ಸಂಭ್ರಮಿಸಿದ ಅಕ್ರೂರನು ಗೋಕುಲದಲ್ಲಿ ಕಾಣಿಸಿಕೊಂಡ.

ವಿ. : ೧. ಸಿಂಹದ ಕೈಗೆ ಸಿಲುಕಿಕೊಂಡ ಜಿಂಕೆಯ ಮರಿಯು ಅದರಿಂದ ಬಿಡುಗಡೆಗೊಂಡಾಗ ತನ್ನವರ ಗುಂಪನ್ನು ಕಂಡು ನಲಿಯುವಂತೆ ಅಕ್ರೂರನ ಪರಿಸ್ಥಿತಿ ಇದ್ದಿತು ಎಂದರ್ಥ; ಇದರಿಂದ ಕಂಸನ ಬಳಿ ಇದ್ದ ಅಕ್ರೂರನ ಪರಿಸ್ಥಿತಿ ಸಿಂಹದ ಬಾಯಿಗೆ ಸಿಲುಕಿದ ಜಿಂಕೆಯ ಮರಿಯಂತಿದ್ದಿತು; ಅವರಿಂದ ಕಳುಹಿಸಲ್ಪಟ್ಟ ಅವನು ಕೃಷ್ಣಹಾಗೂ ಅವನ ಬಳಿಯ ಗುಂಪನ್ನು ಕಂಡು ಸಂಭ್ರಮದಿಂದ ನಲಿದ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಅಬ್ಜಜನಿ - ಪದ್ಮೋದ್ಭವರಾದ ಬ್ರಹ್ಮದೇವರು; ಮೃಗಾಧಿಪ -ಸಿಂಹ ; ಮೃಗಶಾವ - ಜಿಂಕೆಯ ಮರಿ; ಶ್ವಫಲ್ಕಜ - ಶ್ವಫಲ್ಕ ಎಂಬವನ ಪುತ್ರನಾದ ಅಕ್ರೂರ.

### ಅಕ್ರೂರ ಮಾಡಿದ ಶ್ರೀಕೃಷ್ಣನ ದರ್ಶನ

ವ್ರಜೇ ಸ ಗೋದೋಹನಕರ್ಮಣಿ ಸ್ಥಿತಂ
ನಿಜಂ ಪ್ರಭುಂ ನೀರದನೀಲವಿಗ್ರಹಮ್ ।
ದದರ್ಶ ಸಂದರ್ಶಯಿತುಂ ಸಮುದ್ಯತಂ
ಸ್ವಭಕ್ತಸರ್ವೇಪ್ಸಿತದೋಹದಕ್ಷತಾಮ್ ॥ ೨೩ ॥

ತನ್ನ ಭಕ್ತರ ಸಕಲಾಭೀಷ್ಟಗಳನ್ನು ಕರೆದು ಕೊಡುವ ತನ್ನ ನೈಪುಣ್ಯವನ್ನು ತೋರಿಸಿಕೊಡಲು ಉದ್ಯುಕ್ತನಾಗಿದ್ದ, ಗೋಕುಲದಲ್ಲಿ ಹಸುವನ್ನು ಕರೆಯುವ ಕಾರ್ಯದಲ್ಲಿ ತೊಡಗಿದ್ದ ತನ್ನ ಸ್ವಾಮಿಯಾದ ನೀಲಮೇಘಶ್ಯಾಮವಿಗ್ರಹನಾದ ಶ್ರೀಕೃಷ್ಣನನ್ನು ಅಕ್ರೂರ ಕಂಡ.

ವಿ. : ೧. ಅಕ್ರೂರನು ಶ್ರೀಕೃಷ್ಣನನ್ನು ಕಂಡಾಗ ಶ್ರೀಕೃಷ್ಣನು ಹಸುವನ್ನು ಕರೆಯುವ ಕಾರ್ಯದಲ್ಲಿ ತೊಡಗಿದ್ದ ಎಂದು ಭಾವ; ಶ್ರೀಕೃಷ್ಣನ ಆ ಕಾರ್ಯವು ತನ್ನ ಭಕ್ತರ ಸಕಲ ಅಭಿಲಾಷೆಗಳನ್ನು ಈಡೇರಿಸಿಕೊಡುವ ಭಕ್ತವಾತ್ಸಲ್ಯಕ್ಕೆ ಸೂಚಕ ಎಂಬುದು ಇಲ್ಲಿಯ ವಿವರಣೆ; ನೀರದ – ಮೇಘ.

೨. ಇದು ಧ್ಯೇಯಂ ಸದಾ ಪರಿಭವಘ್ನಮಭೀಷ್ಟದೋಹಮ್ ಎಂಬ ಶ್ರೀಮದ್ಭಾಗವತ (೧೧/೫/೩೩)ವಾಕ್ಯದ ವಿವರಣೆಯಂತಿದೆ.

**ಶ್ರೀಕೃಷ್ಣನ ದರ್ಶನದಿಂದ ಅಕ್ರೂರನಿಗಾದ ಸಂಭ್ರಮ**

**ನನಾಮ ನಾರಾಯಣಮಾದಿಪೂರುಷಂ**
**ನನರ್ತ ನವ್ಯೋತ್ಸವಜಾತಸಂಭ್ರಮಃ।**
**ನನಾದ ನಾನಾದುರಿತೌಘಮರ್ದಯನ್**
**ನನಂದ ನಂದಸ್ಯ ತಪಃಫಲೋದಯಮ್ ॥ ೨೪ ॥**

ಅಕ್ರೂರನು ಆದಿಪುರುಷ ನಾರಾಯಣನಾದ ಆ ಕೃಷ್ಣನಿಗೆ ವಂದಿಸಿದ; ಹೊಸಬಗೆಯಲ್ಲಿ ಕೃಷ್ಣನನ್ನು ಕಂಡ ಉತ್ಸವದ ಸಂಭ್ರಮದಿಂದಾಗಿ ಕುಣಿದಾಡಿದ; ತನ್ನ ಬಗೆಬಗೆಯ ದುರಿತರಾಶಿಯನ್ನು ನೀಗಿಸಿಕೊಂಡು ಗರ್ಜಿಸಿದ. ನಂದಗೋಪನ ತಪಸ್ಸಿನ ಫಲಶ್ರುತಿಯಾದ ಅವನನ್ನು ಅಭಿನಂದಿಸಿದ.

ವಿ. : ಶ್ರೀಕೃಷ್ಣನ ದರ್ಶನದಿಂದ ಅಕ್ರೂರನಿಗಾದ ಸಂಭ್ರಮವನ್ನು ಇಲ್ಲಿ ಬಣ್ಣಿಸಿರುವ ರೀತಿ ಅತ್ಯಂತ ರಮಣೀಯವಾದುದು; ನನಾಮ, ನನರ್ತ, ನನಾದ, ಹಾಗೂ ನನಂದ ಎಂಬಲ್ಲಿನ ನಿರೂಪಣೆಯ ಸೊಬಗು ಹಾಗೂ ಆದಿಪ್ರಾಸ ಅದ್ಭುತವಾದುದು.

**ಅಕ್ರೂರನಿಗೆ ದೊರೆತ ಶ್ರೀಕೃಷ್ಣನ ಆಲಿಂಗನದ ಭಾಗ್ಯ**

**ತಮಾಲಿಲಿಂಗೇ ದೃಢಮಚ್ಯುತಃ ಪ್ರಿಯಂ**
**ಸಶಂಕಮೇಣಾಂಕಶುಚಿಸ್ಮಿತಾನನಃ।**
**ಅನಾದಿಸಿದ್ಧಂ ಭವರೂಪಬಂಧನಂ**
**ತದಾಶ್ರಿತಂ ವಿಶ್ಲಥಯನ್ನಿವಾಂಜಸಾ ॥ ೨೫ ॥**

ಏಣಾಂಕನಾದ ಚಂದ್ರನಂತೆ ನಿರ್ಮಲಮಂದಹಾಸದ ಶ್ರೀಕೃಷ್ಣನು, ಶಂಕೆಗೊಳ-ಗಾಗಿದ್ದ ಪ್ರಿಯನಾದ ಆ ಅಕ್ರೂರನನ್ನು, ಅವನನ್ನು ಆಶ್ರಯಿಸಿದ್ದ ಅನಾದಿಕಾಲದಿಂದ

ಒದಗಿದ್ದ ಸಂಸಾರಬಂಧನವನ್ನು ಚೆನ್ನಾಗಿ ಸಡಿಲಗೊಳಿಸಲೆಂಬಂತೆ ಗಾಢವಾಗಿ ಆಲಿಂಗಿಸಿಕೊಂಡ.

ವಿ. : ೧. ಶ್ರೀಕೃಷ್ಣನು ಅಕ್ರೂರನನ್ನು ಗಾಢವಾಗಿ ಆಲಿಂಗಿಸಿಕೊಂಡ ಪರಿ ಸಂಸಾರಬಂಧನವನ್ನು ಸಡಿಲಗೊಳಿಸುವಂತಿತ್ತು ಎಂಬ ಇಲ್ಲಿಯ ನಿರೂಪಣೆ ಅದ್ಭುತವಾದುದು.

೨. [1]ದೃಢವಾದ ಬಂಧನವನ್ನು ಬಿಡಿಸಲು ಅದಕ್ಕಿಂತ ಬಿಗಿಯಾಗಿ ಹಿಡಿದುಕೊಳ್ಳುವುದು ಸಹಾಯಕ ಎಂಬ ಲೋಕರೂಢಿಯ ಹಿನ್ನೆಲೆಯಲ್ಲಿ ಈ ನಿರೂಪಣೆಯು ಬಂದಿದೆ.

೩. ಇದು ಭಗವಂತ ಹಾಗೂ ಭಗವದ್ಭಕ್ತರ ಆಲಿಂಗನದ ಹಿರಿಮೆಯನ್ನು ಬಣ್ಣಿಸುವ ಅಪೂರ್ವ ರೀತಿಯೂ ಆಗಿದೆ; ಏಣಾಂಕ - ಚಂದ್ರ.

### ಅಕ್ರೂರನನ್ನು ಮಾತನಾಡಿಸಿದ ಶ್ರೀಕೃಷ್ಣ

ಹೀನಂ ಮಹೀನಂ ಮಥಿತುಂ ನಿನೀಷು-
ಮಕ್ರೂರಮಕ್ರೂರಜನಪ್ರಿಯಃ ಸ್ವಮ್ ।
ಗೀರ್ವಾಣಗೀರ್ಬಾಣಗಣಾತಿದೂರೋ
ರಕ್ಷೋಭರಕ್ಷೋಭಕೃದಿತ್ಯವೋಚತ್ ॥ ೨೬ ॥

ಸೌಮ್ಯಜನರಿಗೆ ಪ್ರಿಯನಾದ, ದೇವತೆಗಳ ಮಾತುಗಳೆಂಬ ಬಾಣಗಳ ಸಮೂಹಕ್ಕೂ ಸರ್ವಥಾ ನಿಲುಕದ, ರಾಕ್ಷಸರಿಂದಾದ ಭೂಭಾರವನ್ನು ಪರಿಹರಿಸುವ ಶ್ರೀಕೃಷ್ಣನು ತನ್ನನ್ನು ಭೂಪತಿಯಾದ ನೀಚ ಕಂಸನ ನಿಗ್ರಹಕ್ಕೆಂದು ಕರೆದೊಯ್ಯಲು ಬಯಸಿದ್ದ ಅಕ್ರೂರನನ್ನು ಕುರಿತು ಹೀಗೆಂದ.

ವಿ. : ೧. ಇದರಲ್ಲಿ ಶ್ರೀಕೃಷ್ಣನು ದೇವತೆಗಳ ಮಾತಿಗೂ ನಿಲುಕದ ಮಹಾಮಹಿಮ. ರಾಕ್ಷಸರಿಂದ ಉಂಟಾದ ಭೂಭಾರವನ್ನು ಪರಿಹರಿಸಲೆಂದು ಅವತರಿಸಿದ ಸಾಕ್ಷಾತ್ ಶ್ರೀಹರಿ ಎಂಬ ಅಂಶವನ್ನು ನಿರೂಪಿಸಿರುವರು; **ರಕ್ಷೋಭರ-ಕ್ಷೋಭಕೃತ್** - ರಾಕ್ಷಸರಿಂದ ಉಂಟಾದ ಭೂಭಾರವನ್ನು ಪರಿಹರಿಸುವವನು.

೨. **ಮಹೀನಂ** - ಮಹೀ+ಇನ - ಭೂಮಿಗೆ ಒಡೆಯ, ರಾಜ ಎಂದರ್ಥ; [2]ಗೀರ್ವಾಣಗೀರ್ವಾಣಬಾಣಗಣಾತಿದೂರಃ - ಗೀರ್ವಾಣರಾದ ದೇವತೆಗಳ ಮಾತು ಎಂಬ ಬಾಣಕ್ಕೆ ಅತಿ- ದೂರನಾದ ಎಂದರ್ಥ .

---

೧. ಪೂರ್ವಕೃತರಜ್ಜ್ವಾದಿಬಂಧನಸ್ಯ ತತೋಽಪಿ ದೃಢತರಬಂಧನಾಂತರೇ ಸತಿ ವಿಶ್ಲಥನಂ ಭವತೀತಿ ಲೋಕಸಿದ್ಧಮ್ । -ವ್ಯಾ.

೨. ಗೀರ್ವಾಣಾನಾಂ ದೇವಾನಾಂ ಗಿರ ಏವ ಬಾಣಾಃ ಅತಿವೇಗಿತ್ವಾತ್ ತೇಷಾಂ ಗಣಃ ತಸ್ಯಾತಿದೂರಃ। -ವ್ಯಾ.

### ಕೃಷ್ಣ ಮಾಡಿದ ಲೋಕೋತ್ತರ ಕುಶಲಪ್ರಶ್ನೆ

ಕ್ಷೇಮಃ ಕಿಂ ತವ ನಃ ಪಿತಾ ಚ ಕುಶಲೀ ಸ್ವಾಧ್ಯಾಯತೀರ್ಥಾಪ್ಲುತಿ-
ಸ್ವರ್ಗ್ಯಾರಾಧನಮುಖ್ಯಶೋಭನಕೃತಿರ್ವಿಘ್ನೋಜ್ಝಿತಾ ವರ್ತತೇ ।
ಕಿಂ ಸಂಸಾರವಿಮುಕ್ತಯೇ ಪ್ರಯತಸೇ ಕಂಸಸ್ಯ ಕಾ ವಾ ಸ್ಪೃಹಾ
ಸ ತ್ವಂ ವೇತ್ಸ್ಯಖಿಲಂ ಯದದ್ಯ ಹಿ ಮಯಾ ಕಾರ್ಯಂ ಚ ತಜ್ಜ್ಞಾಪಯ ॥ ೨೭ ॥

ನಿನಗೆ ಕ್ಷೇಮವೇ? ನಮ್ಮ ತಂದೆಯು ಸಹ ಕುಶಲದಿಂದಿರುವನೇ? ವೇದಪಾಠ, ತೀರ್ಥಸ್ನಾನ, ದೇವತಾರಾಧನೆ ಮೊದಲಾದ ಮಂಗಳಕಾರ್ಯಗಳ ಆಚರಣೆಯು ನಿರ್ವಿಘ್ನವಾಗಿ ನಡೆದಿದೆಯಾ? ಸಂಸಾರದಿಂದ ಬಿಡುಗಡೆ ಹೊಂದಲು ಪ್ರಯತ್ನಿಸುತ್ತಿರುವೆಯಾ ? ಕಂಸನ ಬಯಕೆಯಾದರೂ ಏನಾಗಿದೆ? ನೀನು ಅದೆಲ್ಲವನ್ನೂ ಬಲ್ಲವನು; ಈಗ ನನ್ನಿಂದಾಗಬೇಕಾದ ಆ ಕಾರ್ಯವನ್ನು ತಿಳಿಸು.

ವಿ. : ೧. ಶ್ರೀಕೃಷ್ಣನು ಅಕ್ರೂರನನ್ನು ಕುರಿತು ಪ್ರಶ್ನೆ ಮಾಡಿದ ಈ ರೀತಿ ಶ್ರೀವಾದಿರಾಜರ ಅತ್ಯದ್ಭುತ ಆಧ್ಯಾತ್ಮಿಕ ಚಿಂತನೆಗೆ ಶ್ರೇಷ್ಠ ನಿದರ್ಶನ. ಆಗಮಿಸಿದ ಸಾತ್ವಿಕರನ್ನು ಕುರಿತು ಪ್ರಶ್ನಿಸಬೇಕಾದ ರೀತಿಗೆ ಇದೊಂದು ಆದರ್ಶಪ್ರಾಯವಾದ ಶ್ಲೋಕ. ಅಧ್ಯಯನ, ತೀರ್ಥಯಾತ್ರೆ, ದೇವತಾರಾಧನೆಗಳು ಮೋಕ್ಷಸಾಧನೆಗೆ ಜ್ಞಾನದ್ವಾರಾ ನೆರವಾಗುವ ಅಪೂರ್ವಮಂಗಳ ಕಾರ್ಯಗಳು ಎಂಬ ಇಲ್ಲಿಯ ನಿರೂಪಣೆಯೂ ಗಮನಾರ್ಹವಾದುದು. ಪ್ರತಿಯೊಬ್ಬ ಸಾತ್ವಿಕನ ಪ್ರಯತ್ನವು ಸಂಸಾರದಿಂದ ಬಿಡುಗಡೆಗಾಗಿಯೇ ಮೀಸಲಾಗಬೇಕು ಎಂಬ ಇಲ್ಲಿಯ ಭಾವವೂ ಗಮನಾರ್ಹವಾದುದು (ಕ್ಷೇಮ- ಪ್ರಾಪ್ತಸ್ಯ ಪರಿರಕ್ಷಣ; ಲಭಿಸಿದ್ದು ಸುರಕ್ಷಿತವಾಗಿ ಉಳಿದುಕೊಳ್ಳುವುದು ಎಂದರ್ಥ).

೩.. ಪಿತಾ ಎಂಬ ಪದದಿಂದ ತಾಯಿಯಾದ ದೇವಕಿಯು ಉಪಲಕ್ಷಿತ ; ಸ್ವರ್ಗಿ – ದೇವತೆ.

### ಅಕ್ರೂರ ನೀಡಿದ ಅಮೋಘ ಉತ್ತರ

ಕ್ಷೇಮಸ್ತಾವದನಂತ ಹೃತ್ಸರಸಿಜೇ ಯಾವದ್ಭವಾನ್ ವರ್ತತೇ
ಸ್ವೀಯಕ್ಲೇಶವನಾನಲೇ ತ್ವಯಿ ಸತಿ ಕ್ಲೇಶಃ ಕ್ವ ಪಿತ್ರೋಸ್ತವ ।
ಕಿಂತು ತ್ವತ್ಪಿತೃತಾಪವಾದಜನಿತಂ ತಚ್ಛೃಂಖಲಾಬಂಧನಂ
ಚಿಂತಾಸಂತತಿಹೇತುರೇವ ನ ತಯೋಃ ಸಂತಾಪಕಾರಿ ಪ್ರಭೋ ॥ ೨೮ ॥

ಪ್ರಭೋ ಅನಂತನಾದ ಶ್ರೀಕೃಷ್ಣ ! ನೀನು ಹೃದಯಕಮಲದಲ್ಲಿ ನೆಲೆಸಿರುವವರೆಗೂ ಕ್ಷೇಮವೇ ಸರಿ[1]; ನಿನ್ನವರ ಸಂಕಷ್ಟವೆಂಬ ಕಾಡಿಗೆ ಕಿಚ್ಚಿನಂತೆ ನೀನಿರುವಾಗ ನಿನ್ನ ತಂದೆತಾಯಿ-

೧. ಲಾಭಸ್ತೇಷಾಂ ಯಶಸ್ತೇಷಾಂ ಕುತಸ್ತೇಷಾಂ ಪರಾಭವಃ ।
ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ॥ – ಮಹಾಭಾರತ

ಗಳಿಗೆ ಕ್ಲೇಶವೆಲ್ಲಿಯದು? ಆದರೆ ನಿನ್ನ ಹೆತ್ತವರು ಎಂಬ ಅಪವಾದದಿಂದಾಗಿ ಒದಗಿರುವ ಸಂಕೋಲೆಯ ಬಂಧನವು ಸಹ ನಿನ್ನ ನಿರಂತರ ಚಿಂತನೆಗೆ ಕಾರಣವೇ ಆಗಿದ್ದು, ಅವರಿಬ್ಬರಿಗೆ ಸಂತಾಪವನ್ನು ಉಂಟುಮಾಡದ್ದಾಗಿದೆ.

ವಿ. : ೧. ಶ್ರೀಕೃಷ್ಣನ ಚಿಂತನೆಯು ಹೃದಯದಲ್ಲಿ ನಡೆದಾಗ ಕ್ಷೇಮ ನಿಶ್ಚಿತ. ತನ್ನ ಭಕ್ತರ ಸಂಕಷ್ಟಗಳನ್ನೇ ಪರಿಹರಿಸುವ ಶ್ರೀಹರಿಯ ತಂದೆತಾಯಿಗಳೆನ್ನಿಸಿದ ವಸುದೇವದೇವಕಿಯರಿಗೆ ಶೋಕವೆಲ್ಲಿಯದು? ಎಂದರ್ಥ.

೨. ನಾರದರಿಂದ ವಿಷಯ ತಿಳಿದ ಕಂಸನು ದೇವಕೀವಸುದೇವರನ್ನು ಸಂಕೋಲೆಗಳಿಂದ ಬಂಧಿಸಿದ್ದು ಒಂದು ರೀತಿಯಲ್ಲಿ ಅವರಿಗೆ ಅನಿಷ್ಟವೆನ್ನಿಸಿದರೂ ಅದು ಶ್ರೀಕೃಷ್ಣನ ನಿರಂತರ ಸ್ಮರಣೆಗೆ ಕಾರಣವಾಗಿದ್ದರಿಂದ ಕ್ಲೇಶವೆನ್ನಿಸದೆ, ಹಿತವೇ ಆಗಿದೆ ಎಂಬ ಇಲ್ಲಿಯ ಭಾವವೂ ರೋಚಕ; ಶೃಂಖಲಾ – ಸಂಕೋಲೆ.

೩. ಶ್ರೀಹರಿಯ ಸ್ಮರಣೆಗೆ ಕಾರಣವಾಗುವ ಅನಿಷ್ಟವೂ ಸಹ ಇಷ್ಟಪ್ರಾಯವೇ ಆದುದು :

**ವಿಪದಃ ಸಂತು ನಃ ಶಶ್ವತ್ ತತ್ರ ತತ್ರ ಜಗದ್ಗುರೋ ।**
**ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಮ್ ॥**[೧]

– ಎಂಬ ಕುಂತಿಯ ಮಾತಿನ ಭಾವ ಇದರಲ್ಲಿ ಬಂದಿದೆ.

೪. ಕೃಷ್ಣನು ನಿಜಕ್ಕೂ ವಸುದೇವದೇವಕಿಯರ ಮಗನಲ್ಲ; ಹಾಗೆ ತಿಳಿದದ್ದಕ್ಕೆ ಅವರಿಗೆ ಬಂಧನ ಎನ್ನುವ ಮೂಲಕ ಶ್ರೀಹರಿಗೆ ವಸುದೇವ ದೇವಕಿಯರ ಪುತ್ರತ್ವವನ್ನು ತಿಳಿಯುವುದು ಸಹ ಬಂಧಕ ಎಂಬ ತತ್ತ್ವವೂ ಸಹ ಸೂಚಿತ : **ಭಗವತ್ಪಿತೃತ್ವವಾರ್ತಾಽಪಿ ಕ್ಲೇಶಕರೀತಿ ಸೂಚಿತಮ್**–(ವ್ಯಾ).

೫. **ನತಯೋಃ** ಎಂಬುದಕ್ಕೆ ವಿನಮ್ರರಾದ ಅವರಿಗೆ ಸಂತಾಪಕ್ಕೆ ಕಾರಣವಾಗುವುದು ಎಂಬ ಸೂಚನೆಯೂ[೨] ಇದರಲ್ಲಿದೆ.

೬. ಈ ಶ್ಲೋಕದಲ್ಲಿ 'ನೀನು ಕ್ಷೇಮವೆ? ನನ್ನ ತಂದೆತಾಯಿಗಳು ಕ್ಷೇಮದಿಂದಿರುವರೆ?' ಎಂಬ ಶ್ರೀಕೃಷ್ಣನ ಪ್ರಶ್ನೆಗಳಿಗೆ ಅಕ್ರೂರನ ಉತ್ತರ ಬಂದಿದೆ.

## ಮುಂದುವರೆದ ಅಕ್ರೂರನ ಉತ್ತರ

**ತೀರ್ಥಂ ಸೇವಿತಮೇವ ಯತ್ಪದರಜೋ ಜುಷ್ಟಂ ಸುರಾಃ ಸತ್ಕೃತಾ**
**ಯೇನಾಲಿಂಗಿತವಾನಹಂ ತವ ವಪುಶ್ಚೀರ್ಣಾ ಚ ಪುಣ್ಯಕ್ರಿಯಾ ।**

---

ನ ವಾಸುದೇವಭಕ್ತಾನಾಮಶುಭಂ ವಿದ್ಯತೇ ಕ್ವಚಿತ್ ।
ಜನ್ಮಮೃತ್ಯುಜರಾವ್ಯಾಧಿಭಯಂ ನೈವೋಪಜಾಯತೇ ॥ – ವಿಷ್ಣುಸಹಸ್ರನಾಮಸ್ತೋತ್ರ

೧. ಭಾಗವತ(೧/೮/೨೮)

೨. ಹೃದಯಂ ತು ನತಯೋಃ ನಮ್ರಯೋಸ್ತಯೋಃ ಸಂತಾಪಕಾರೀತಿ ಕಂಸಕೃತಾಪರಾಧಸೂಚನಮ್ । –ವ್ಯಾ.

**ಯಲ್ಲಬ್ಧಂ ತವ ದರ್ಶನಂ ಪರಿಚಿತೋ ವೇದಶ್ಚ ಯತ್ ತೇ ಶ್ರುತಂ**
**ಕಲ್ಯಾಣಂ ವಚನಂ ಭವೋಽಪಿ ನ ಭವತ್ಸಾಮೀಪ್ಯಭಾಜೋ ಮಮ ॥ ೨೯ ॥**

ನಿನ್ನ ಪಾದಧೂಳಿಯನ್ನು ಸೇವಿಸಿದ್ದರಿಂದ ತೀರ್ಥವು ಸೇವಿತವೇ ಆಗಿದೆ; ನಾನು ನಿನ್ನ ದೇಹವನ್ನು ಆಲಿಂಗಿಸಿಕೊಂಡಿದ್ದರಿಂದ ದೇವತೆಗಳೆಲ್ಲರ ಪೂಜೆಯೂ ಆಯಿತು; ನಿನ್ನ ದರ್ಶನವು ಲಭಿಸಿದ್ದರಿಂದ ಪುಣ್ಯಕಾರ್ಯವೂ ನಡೆಯಿತು; ನಿನ್ನ ಮಂಗಳಕರವಾದ ಮಾತನ್ನು ಕೇಳಿದ್ದರಿಂದ ವೇದಾಧ್ಯಯನವೂ ಆಯಿತು; ನಿನ್ನ ಸಮೀಪದಲ್ಲಿ ಇರುವುದರಿಂದ ನನಗೆ ಸಂಸಾರವೂ ಇಲ್ಲವಾಯಿತು.

ವಿ. : ೧. ಶ್ರೀಕೃಷ್ಣನ ಪ್ರಶ್ನೆಗೆ ಅಕ್ರೂರನ ಮುಂದುವರೆದ ಉತ್ತರ ಇದರಲ್ಲಿದೆ.

೨. ಶ್ರೀಹರಿಯ ಪಾದಧೂಳಿಯ ಸೇವನೆಯೇ ತೀರ್ಥಯಾತ್ರೆ; ಶ್ರೀಹರಿಯ ಅಂಗಾಂಗಗಳಲ್ಲಿ ಇತರ ಸಕಲ ದೇವತೆಗಳೂ ಆಶ್ರಯಪಡೆದಿರುವುದರಿಂದ ಅವನ ಸ್ಪರ್ಶವು ಸಕಲ ದೇವತೆಗಳಿಗೂ ಆರಾಧನೆ; ಅವನ ದರ್ಶನದಂತಹ ಪುಣ್ಯಕಾರ್ಯವೇ ಬೇರೊಂದಿಲ್ಲ; ಶ್ರೀಹರಿಯ ಮಾತಿನ ಶ್ರವಣವೇ ವೇದಾದಿಗಳ ಅಧ್ಯಯನ; ದೇವರ ಬಳಿ ಇರುವುದೇ ಮೋಕ್ಷ ಎಂಬ ಇಲ್ಲಿಯ ಪ್ರಮೇಯಗಳು ಅತ್ಯಂತ ರೋಚಕವಾದವುಗಳು.

೩.. ಈ ಅನುಸಂಧಾನವಿಲ್ಲದೆ ನಡೆಸುವ ತೀರ್ಥಯಾತ್ರಾದಿ ಇತರ ಸಕಲ ಸಾಧನಗಳೂ ನಿರರ್ಥಕ ಎಂಬ ಸೂಚನೆಯೂ ಇಲ್ಲಿದೆ.

೪. ಶ್ರೀಹರಿಯ ಸಮೀಪವಿರುವುದು ಸಾಮೀಪ್ಯ ಎಂಬ ಮುಕ್ತಿ; ಆದ್ದರಿಂದ ಅದು ಸಂಸಾರದ ಬಿಡುಗಡೆಯೇ ಆಗಿದೆ ಎಂದು ಭಾವ: ಸಾಮೀಪ್ಯಾದೀನಾಂ ಮೋಕ್ಷರೂಪತ್ವಾದಿತಿ ಭಾವಃ (ವ್ಯಾ.)

೫. ಈ ಶ್ಲೋಕದಲ್ಲಿ 'ದೇವತಾರಾಧನೆ ಮೊದಲಾದವುಗಳು ನಿರ್ವಿಘ್ನವಾಗಿ ನಡೆದಿವೆಯೆ? ಹಾಗೂ ಸಂಸಾರದಿಂದ ಬಿಡುಗಡೆಗೆ ಪ್ರಯತ್ನಿಸುತ್ತಿರುವೆಯಾ?' ಎಂಬ ಶ್ರೀಕೃಷ್ಣನ ಪ್ರಶ್ನೆಗಳಿಗೆ ಅಕ್ರೂರನ ಉತ್ತರವಿದೆ.

### ಅಕ್ರೂರನ ಉತ್ತರದ ಉಪಸಂಹಾರ

**ಕಿಂ ವಿಷ್ಣೋ ಬಹುನೋದಿತೇನ ವಿದಿತಂ ವಿಶ್ವಂ ಭವದ್ದರ್ಶನಾ-**
**ಚ್ಚತ್ರುರ್ಮಿತ್ರಮಭೂದ್ಭವೋಽಪಿ ಯದಹಂ ಕಂಸೇನ ಸಂಪ್ರೇಷಿತಃ ।**
**ಅದ್ರಾಕ್ಷಂ ತವ ಸುಂದರಂ ವಪುರಯಂ ಸರ್ವಜ್ಞಚೂಡಾಮಣೇ**
**ಪ್ರಶಸ್ತೇ ನೃವಿಡಂಬನಾಯ ಮಮ ಚ ಪ್ರತ್ಯುಕ್ತಿರೀಶೇದೃಶೀ ॥ ೩೦ ॥**

ಎಲೈ ವಿಷ್ಣುವೇ! ಬಹಳ ಹೇಳುವುದರಿಂದೇನು? ನಿನ್ನ ದರ್ಶನದಿಂದಾಗಿ ವಿಶ್ವವನ್ನೇ ತಿಳಿದಂತಾಯಿತು. ಕಂಸನಿಂದ ನಾನು ಕಳುಹಿಸಲ್ಪಟ್ಟಿರುವುದರಿಂದ ನಿನ್ನ ಈ ಸುಂದರವಾದ

ರೂಪವನ್ನು ನಾನು ಕಾಣುವಂತಾಯಿತು; ಇದರಿಂದಾಗಿ ಶತ್ರುವಾದ ಸಂಸಾರವೂ ಮಿತ್ರನೇ ಆಯಿತು. ಎಲೈ ಸ್ವಾಮಿಯೇ! ಸರ್ವಜ್ಞಶಿರೋಮಣಿಯೇ! ನಿನ್ನ ಈ ಕುಶಲಪ್ರಶ್ನೆಯು ಲೋಕವಿಡಂಬನೆಗೆಂದು ಮಾತ್ರ; ನನ್ನ ಉತ್ತರವೂ ಸಹ ಈ ಬಗೆಯದೇ ಆಗಿದೆ.

ವಿ. : [೧]ಶ್ರೀಕೃಷ್ಣನ ದರ್ಶನವೆಂದರೆ ಅಪರೋಕ್ಷಜ್ಞಾನವೇ; ಅದು ಸರ್ವಜ್ಞತ್ವಕ್ಕೆ ನಿದರ್ಶನ; ಇನ್ನು ಕಂಸ ಕಳುಹಿಸಿದ್ದು ಸಂಸಾರಮಿತ್ರನಾದಂತೆ; ಕಂಸನು ಕಾಮದ ಅಭಿಮಾನಿದೈತ್ಯನಾದ ಕಾಲನೇಮಿಯ ಅವತಾರ; ಅವನು ದೂರ ಕಳುಹಿಸಿಕೊಡುವುದು ಎಂದರೆ [೨]ಕಾಮದಿಂದ ದೂರಾಗುವುದು ಎಂದರೆ ಶ್ರೀಹರಿಗೆ ಹತ್ತಿರವಾಗುವುದು ಎಂದೇ ಅರ್ಥ. ಹೀಗೆ ಕೃಷ್ಣ ದರ್ಶನದ ಬಹುಬಗೆಯ ಅರ್ಥವನ್ನು ಅಕ್ರೂರನ ಮಾತಿನ ನೆಪದಲ್ಲಿ ಸ್ಫುಟಪಡಿಸಿರುವ ಇಲ್ಲಿಯ ನಿರೂಪಣೆ ತುಂಬಾ ಅಪೂರ್ವ; ಇದು ಸಂಸಾರವೆಂಬಂಥ ಭಾಗ್ಯವಿರಲಿ ಎಂಬ ಮಾತಿನ ಭಾವದಂತಿದೆ.

೨. ಈ ಶ್ಲೋಕದಲ್ಲಿ 'ಸಂಸಾರದಿಂದ ಬಿಡುಗಡೆಗೆ ಪ್ರಯತ್ನಿಸುತ್ತಿರುವೆಯಾ?' ಎಂಬ ಶ್ರೀಕೃಷ್ಣನ ಪ್ರಶ್ನೆಗೆ ಉತ್ತರ ಮುಂದುವರೆದಿದೆ.

### ಕಂಸನ ಧನುರುತ್ಸವಕ್ಕೆ ಆಹ್ವಾನ

**ಕಂಸಃ ಸಂಪ್ರತಿ ಕಾರ್ಮುಕೋತ್ಸವಕಥಾವ್ಯಾಜೇನ ತೇ ವಿಪ್ರಿಯಂ**
**ಕರ್ತುಂ ವಾಂಛತಿ ತೇನ ಮಾತುಲಮಹಂ ಸಾರ್ಥಂ ವಿಧಾತುಂ ಭವಾನ್ ।**
**ಗತ್ವಾ ತತ್ರ ವಿಭುರ್ಧುನೋತು ಸಬಲಂ ಶತ್ರುಂ ಪುನಃ [೩]ಪ್ರಸ್ಫುರ-**
**ದ್ಭ್ರೂಚಾಪೋತ್ಸವಮಾರಚಯ್ಯ ಭಜತಾಮಾಧಿಂ ಸಮಾಧಿಪ್ರಿಯಃ ॥ ೩೧ ॥**

ಕಂಸನು ಈಗ ಧನುರುತ್ಸವದ ಪ್ರಸ್ತಾಪದ ನೆಪದಲ್ಲಿ ನಿನಗೆ ವಿರೋಧವನ್ನು ಮಾಡಬಯಸಿ-ರುವನು. ಅದರಿಂದಾಗಿ ಸಮಾಧಿಪ್ರಿಯನೂ, ವಿಭುವೂ ಆದ ನೀನು ನಿನ್ನ ಸೋದರಮಾವನ ಉತ್ಸವವನ್ನು ಸಾರ್ಥಕವನ್ನಾಗಿ ಮಾಡಲೆಂದು ಅಲ್ಲಿಗೆ ಹೋಗಿ, ಸೇನೆಯ ಸಮೇತ ಶತ್ರುವನ್ನು ಸದೆಬಡಿದು, ಆ ಬಳಿಕ ಹೊಳೆಯುವ ಭ್ರೂವಿಲಾಸವೆಂಬ ಧನುರುತ್ಸವವನ್ನು ಮಾಡಿ, ನಿನ್ನ ಭಕ್ತರ ಮನೋವ್ಯಥೆಯನ್ನು ಪರಿಹರಿಸಬೇಕು.

ವಿ. : ೧. 'ಕಂಸನ ಈಗಿನ ಬಯಕೆ ಏನು? ಹಾಗೂ ಈಗ ನನ್ನಿಂದ ಏನಾಗಬೇಕಿದೆ?' ಎಂಬ ಪ್ರಶ್ನೆಗಳಿಗೆ ಇದು ಉತ್ತರವಾಗಿದೆ; **ಕಾರ್ಮುಕ** – ಧನುಸ್ಸು; **ಕಾರ್ಮುಕೋತ್ಸವ** – ಧನುರುತ್ಸವ (ಬಿಲ್ಲುಹಬ್ಬ); **ಮಹ** – ಉತ್ಸವ; **ಆಧಿ** – ಮನೋವ್ಯಥೆ.

---

೧. ವಿಶ್ವವೇದನಫಲಸ್ಯ ತ್ವದ್ದರ್ಶನಾದೇವ ಸಿದ್ಧೇಃ । ಯೇನಾಶ್ರುತಂ ಶ್ರುತಂ ಭವತೀತಿ (ಛಾಂದೋಗ್ಯೋಪನಿಷತ್ ೬/೧/೩.)ಶ್ರುತೇರಿತಿ ಭಾವಃ । ಅಖಿಲಂ ವೇತ್ಸೀತ್ಯಸ್ಯೋತ್ತರಮೇತತ್ । –ವ್ಯಾ.

೨. ಶತ್ರೋರಪಿ ಕಂಸಸ್ಯ ಹಿತಕಾರಿತ್ವಾತ್ ಶತ್ರುರೂಪೋ ಭವೋಽಪ್ಯೇವಮೇವೇತಿ ಭಾವಃ। –ವ್ಯಾ.

೩. ಪುನಸ್ತದ್ವಧಾನಂತರಂ ಸಮಾಧಿಪ್ರಿಯಃ ಭವಾನ್ ಸ್ಫುರದ್ಭ್ರೂಚಾಪೋತ್ಸವಂ ಭ್ರೂವಿಕ್ಷೇಪಧನುರುತ್ಸವಂ ಸಭ್ರೂ-ಭಂಗಾವಲೋಕನಮಿತ್ಯರ್ಥಃ। – ವ್ಯಾ.

೨. ಶ್ರೀಹರಿಯ ಭ್ರೂಭಂಗದ ದರ್ಶನ ಭಕ್ತರಿಗೆ ಸರ್ವೇಷ್ಟಪ್ರದ ಎಂಬ ಸೂಚನೆ ಇಲ್ಲಿದೆ :

ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿಪ್ರತೀಕ್ಷಿತಮ್ ।
ಭ್ರೂಭಂಗಂ ಪಾರಮೇಷ್ಠ್ಯಾದಿಪದದಾಯಿ ವಿಮುಕ್ತಿದಮ್ ॥ ದ್ವಾದಶಸ್ತೋತ್ರ(೧/೧೧)

## ಮಧುರೆಗೆ ಆಗಮಿಸಲು ಅಕ್ರೂರನ ಪ್ರಾರ್ಥನೆ

**ಮಧುರಾ ಮಧುರಾಕೇಶಮಹಸಾ ಮಹಸಾಧಿಕಾ ।**
**ಸಹಸಾ ಸಹ ಸಾಽಽಪ್ಯಾ ಸ್ವೈರ್ಭವತಾ ಭವತಾರಕ ॥ ೩೨ ॥**

ಎಲೈ ಸಂಸಾರತಾರಕನಾದ ಶ್ರೀಕೃಷ್ಣ ! ರಮ್ಯವಾದ ಹುಣ್ಣಿಮೆಯ ಚಂದ್ರನ ಕಾಂತಿಯಿಂದ ಮನೋಲ್ಲಾಸಕ್ಕೆ ಸಾಧಕವಾದ ಆ [೧]ಮಧುರಾಪುರಿಗೆ ನೀನು ನಿನ್ನವರೊಂದಿಗೆ ಕೂಡಲೇ ತೆರಳಬೇಕು.

ವಿ. : ರಾಕೇಶ ಎಂದರೆ ಹುಣ್ಣಿಮೆಯ ಚಂದ್ರ ; ಮಹಸಾಧಿಕಾ (ಮಹಸ್ಯ ಸಾಧಿಕಾ) ಎಂದರೆ ಮನೋಲ್ಲಾಸಕ್ಕೆ ಸಾಧಕವಾದ ಎಂದರ್ಥ.

## ಮಧುರೆಯನ್ನು ಮಧುರವಾಗಿಸಲು ಶ್ರೀಕೃಷ್ಣನ ಸಂಕಲ್ಪ

**ಸ ತತಃ ಸತತಧ್ಯಾನಶುದ್ಧವೃದ್ಧಜನಾಶ್ರಿತಾಮ್ ।**
**ಮಧುರಾಂ ಮಧುರಾಂ ಕರ್ತುಂ ಗಮನಾಯೋಪಚಕ್ರಮೇ ॥ ೩೩ ॥**

ಬಳಿಕ ಆ ಶ್ರೀಕೃಷ್ಣನು ತನ್ನ ನಿರಂತರ ಧ್ಯಾನದಿಂದ ಶುದ್ಧರಾದ ವೃದ್ಧಜನರು ನೆಲೆಸಿದ ಮಧುರೆಯನ್ನು ಮಧುರವನ್ನಾಗಿಸಲೆಂದು ಅಲ್ಲಿಗೆ ತೆರಳಲು ಸಿದ್ಧನಾದನು.

ವಿ. : ೧. ಮಧುರೆಯು ಹೆಸರಿನಿಂದ ಮಧುರೆಯಾಗಿದ್ದರೂ ಕಂಸನ ಆಳ್ವಿಕೆಯಿಂದಾಗಿ ಅದು ನಿಜಕ್ಕೂ ಅಮಧುರೆಯೇ ಆಗಿದ್ದಿತು. ಕಂಸನನ್ನು ಸಂಹರಿಸುವ ಮೂಲಕ ಅದನ್ನು ನಿಜಕ್ಕೂ ಮಧುರೆಯನ್ನಾಗಿಸಲೆಂದೇ ಶ್ರೀಕೃಷ್ಣ ಅಲ್ಲಿಗೆ ಹೊರಟುನಿಂತ ಎಂದರ್ಥ.

೨. ನಿರಂತರಧ್ಯಾನದಿಂದಾಗಿ ಶುದ್ಧಾಂತಃಕರಣರಾದ ಪರಿಪಕ್ವಜನರು ನೆಲೆಸಿದ್ದುದು ಮಧುರೆಗೆ ಶ್ರೀಕೃಷ್ಣ ತೆರಳಲು ಮತ್ತೊಂದು ಮುಖ್ಯಕಾರಣ.

೩. ಒಂದರ್ಥದಲ್ಲಿ ನಮ್ಮ ದೇಹವೇ ಮಧುರಾಪುರಿ; ಕಂಸನಿಂದ ಅಭಿಮನ್ಯವಾದ ಕಾಮ ನೆಲೆಸಿರುವುದರಿಂದ ಇದು ಅಮಧುರ ಎನ್ನಿಸಿದೆ; ಶ್ರೀಕೃಷ್ಣ ಆಗಮಿಸಿದಾಗ ಕಾಮರೂಪದ ಕಂಸ ಅಳಿದು ದೇಹವು ಸಾಧನೆಗೆ ಅಣಿಯಾಗಿ ಮಧುರಾ ಎನ್ನಿಸುವುದು ಎಂಬುದು ಇಲ್ಲಿಯ ತತ್ತ್ವ.

---

೧. ಪೃಷ್ಟೋ ಭಗವತಾ ಸರ್ವಂ ವರ್ಣಯಾಮಾಸ ಮಾಧವಃ ।
ವೈರಾನುಬಂಧಂ ಯದುಷು ವಸುದೇವವಧೋದ್ಯಮಮ್ ॥ -ಭಾಗ.(೧೦/೩೭/೪)

೪. ಹಾಗೆ ಶ್ರೀಕೃಷ್ಣ ಆಗಮಿಸುವಂತಾಗಲು ನಿರಂತರಧ್ಯಾನಾದಿರೂಪ ಸಾಧನವು ಅತ್ಯಗತ್ಯ ಎಂಬ ಸೂಚನೆಯೂ ಇಲ್ಲಿದೆ; ವೃದ್ಧರು ಎಂದರೆ ಜ್ಞಾನಭಕ್ತಿಗಳ ಪರಿಪಾಕ ಹೊಂದಿದ ಶ್ರೇಷ್ಠ ಸಾಧಕರು ಎಂದು ಅರ್ಥ.

### ಗೋಪಿಯರ ವಿಲಾಪ

**ಹರಿಂ ಮಧುಪುರೀಂ ಯಾಂತಂ ವಿಲೋಕ್ಯ ವ್ರಜಯೋಷಿತಃ ।**
**ವಿಲೇಪುರ್ವಿವಿಧಾಲಾಪೈರ್ವಿನಿವರ್ತಯಿತುಂ ಧಿಯಾ ॥ ೩೪ ॥**

ಮಧುರಾಪಟ್ಟಣಕ್ಕೆ ಹೊರಟು ನಿಂತ ಶ್ರೀಕೃಷ್ಣನನ್ನು ಕಂಡು, ಅವನನ್ನು ಹಿಮ್ಮೆಟ್ಟಿಸಲೆಂದು, ಗೋಕುಲದ ನಾರಿಯರು ಮನಸ್ಸಿನಲ್ಲಿ ಬಗೆಬಗೆಯ ಪ್ರಲಾಪಗಳಿಂದ ವಿಲಾಪ ಮಾಡತೊಡಗಿದರು.

### ಮುಂದುವರೆದ ಗೋಪಿಯರ ವಿಲಾಪ

**ರಮ್ಯಾಧರೋಷ್ಠಸುಧಯಾ ರಚಿತಾತ್ಮವೃತ್ತೀ-**
**ರ್ನ ತ್ಯಕ್ತುಮರ್ಹಸಿ ನವಾಂಬುದನೀಲಮೂರ್ತೇ ।**
**ತ್ವತ್ಸಂಗಭಂಗಕರಣೋದ್ಯತಪಾಪಮಂಗ**
**ಶಕ್ನೋತಿ ಹಿ ಕ್ಷಪಯಿತುಂ ತವ ಲೋಚನಾಂತಃ[೧] ॥ ೩೫ ॥**

ಎಲೈ ನೀಲಮೇಘಶ್ಯಾಮಲ ಆಕೃತಿಯ ಶ್ರೀಕೃಷ್ಣ ! ನಿನ್ನ ರಮ್ಯವಾದ ಅಧರಾಮೃತದಿಂದ ಬದುಕಿಕೊಂಡಿರುವ ನಮ್ಮನ್ನು ನೀನು ತೊರೆಯುವುದು ಉಚಿತವಲ್ಲ, ವತ್ಸ ! ನಿನ್ನ ಸಂಗಕ್ಕೆ ಅಡ್ಡಿ ಎನ್ನಿಸುವ ಪಾಪಿಯಾದ ಕಂಸನನ್ನು ಸಂಹರಿಸಲು ನಿನ್ನ ಕುಡಿನೋಟವೇ ಮಹಾಸಮರ್ಥವಾಗಿದೆಯಲ್ಲವೆ !

ವಿ. : ೧. ಕಂಸಾದಿ ಮಹಾಪಾಪಿಗಳ ಸಂಹಾರಕ್ಕೆ ಶ್ರೀಕೃಷ್ಣನ ಕಟಾಕ್ಷ ಒಂದೇ ಸಾಕು ಎಂಬ ಗೋಪಿಯರ ಮಾತು ಅತ್ಯಂತ ಅರ್ಥವತ್ತಾದುದು: 'ನಿಖಿಲಾಘೌಘವಿನಾಶನ ಪರಸೌಖ್ಯ-ಪ್ರದದೃಷ್ಟೇ । ಕರುಣಾಪೂರ್ಣವರಪ್ರದ ಚರಿತಂ ಜ್ಞಾಪಯ ಮೇ ತೇ ।' (ದ್ವಾದಶಸ್ತೋತ್ರ); ಶ್ರೀರಾಮರೂಪದಿಂದ ಕೇವಲ ಕಟಾಕ್ಷಮಾತ್ರದಿಂದಲೇ ಶ್ರೀಹರಿಯು ಸಮುದ್ರವನ್ನು ಸಂಪೂರ್ಣವಾಗಿ ಒಣಗಿಸಿದ [೨]ರಾಮಾಯಣದ ಪ್ರಸಂಗ ಇದಕ್ಕೊಂದು ನಿದರ್ಶನ.

---

೧. ಹೇ ಅಂಗ ವತ್ಸ ತ್ವತ್ಸಂಗಭಂಗಕರಣೋದ್ಯತಂ ಪಾಪಂ ಪಾಪಿಷ್ಠಂ ಕಂಸಂ ತವ ಲೋಚನಾಂತ ಏವ ಕ್ಷಪಯಿತುಂ ಹಂತುಂ ಶಕ್ನೋತಿ ಹಿ । ಕುಪಿತತ್ವತ್ಕಟಾಕ್ಷವೀಕ್ಷಣೇನ ಬ್ರಹ್ಮಾಂಡಮಪಿ ಭಸ್ಮೀಭವತಿ । ಕಿಮು ಕಂಸ ಇತಿ ಭಾವಃ । -ವ್ಯಾ.

೨. ಸ ಕ್ರೋಧದೀಪ್ತನಯನಾಂತಹತಃ ಪರಸ್ಯ ಶೋಷಂ ಕ್ಷಣಾದುಪಗತೋ ದನುಜಾದಿಸತ್ತ್ವೈಃ ।
ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ ಪಾದಾರವಿಂದಮುಪಗಮ್ಯ ಬಭಾಷ ಏತತ್ ॥
-ಮ.ಭಾ.ತಾ.ನಿ.(೮/೧೦)

ಗೋಪಿಯರು ಈ ತತ್ತ್ವವನ್ನು ಕಂಸನ ಸಂಹಾರಕ್ಕಾಗಿ ತಮ್ಮನ್ನು ಬಿಟ್ಟು ಮಥುರೆಗೆ ತೆರಳಬೇಕಿಲ್ಲ ಎಂಬ ಮಾತಿಗೆ ಸಮರ್ಥನೆಯನ್ನಾಗಿ ಬಳಸಿಕೊಂಡಿರುವುದು ವಿಶೇಷ.

೨. ಶ್ರೀಕೃಷ್ಣನ ಸಂಗ ತಪ್ಪಲು ಅವರ ಪಾಪವೇ ಅಡ್ಡಿ; ಆದರೆ ಶ್ರೀಕೃಷ್ಣನ [೧]ಕುಡಿನೋಟ ಬೀಳುತ್ತಲೇ ಎಂತಹ ಪಾಪವೂ ಉಪಶಮನ ಹೊಂದುವುದರಿಂದ ಅವರು ನಿರ್ದೋಷರಾಗಿ ಅವನ ಸಂಗಕ್ಕೆ ಅರ್ಹರಾಗುವರು. ಆದ್ದರಿಂದ ಪಾಪವುಳ್ಳವರು ಎಂಬ ಕಾರಣದಿಂದ ಕೃಷ್ಣ ತಮ್ಮನ್ನು ತೊರೆಯಬೇಕಿಲ್ಲ ಎಂಬುದು ಅವರ ಭಾವ ಎಂಬ ಮತ್ತೊಂದು ಅರ್ಥವನ್ನು ಇದಕ್ಕೆ ತಿಳಿಯಬಹುದು.

### ಹರಿವಾಯುಗಳ ಅವಿನಾಭಾವಸಂಬಂಧ

**ಯಿಯಾಸುಂ ತ್ವಾಂ ಸಮಾಲೋಕ್ಯ ನಃ ಪ್ರಾಣೋಽಪಿ ಯಿಯಾಸತಿ ।**
**ಯುವಯೋರವಿನಾಭಾವಮಕ್ಷ್ಯೈರೀಕ್ಷಾಮಹೇಽಧುನಾ ॥ ೩೬ ॥**

ನೀನು ಹೊರಟು ನಿಂತಿರುವುದನ್ನು ಕಂಡು ನಮ್ಮ ಪ್ರಾಣವೂ ಸಹ ಹೊರಡಬಯಸಿರುವುದು; ನಿಮ್ಮಿಬ್ಬರ ಸಾಹಚರ್ಯನಿಯಮವನ್ನು ನಾವೀಗ ಕಣ್ಣಾರೆ ಕಾಣುತ್ತಿರುವೆವು.

ವಿ. : ೧. ಶ್ರೀಹರಿಯು ಇರುವವರೆಗೆ ಮಾತ್ರ ಪ್ರಾಣವು ದೇಹದಲ್ಲಿರುವುದು ಎಂಬುದು ಶಾಸ್ತ್ರಪ್ರಮೇಯ. ಶ್ರೀಕೃಷ್ಣನು ಮಥುರೆಗೆಂದು ಹೊರಟು ನಿಂತಿರುವಾಗ ಗೋಪಿಯರ ಪ್ರಾಣವೂ ಸಹ ಹೊರಟು ನಿಂತಿರುವುದು ಅವರಿಗೆ ಪ್ರತ್ಯಕ್ಷ ಸಾಕ್ಷಿ ಎಂಬಂತಾಗಿದೆ ಎಂಬುದು ಅವರ ಭಾವ :

ಕಸ್ಮಿನ್ನ್ವಹಮುತ್ಕ್ರಾಂತ ಉತ್ಕ್ರಮಿಷ್ಯಾಮಿ ಕಸ್ಮಿನ್ನ್ವಹಂತ್ವಿತಿ ಸ್ಥಿತೇ ಸ್ಥಾಸ್ಯಾಮೀತ್ಯಾದಿ ಶ್ರುತಿಃ ।
(ಷಟ್ಪ್ರಶ್ನ.ಉ.೬/೨)

ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ । (ಮ.ಭಾ.ತಾ.ನಿ.-೫/೪೬)

೨. ಇದು ''ಆವವನು ದೇಹದೊಳಗಿರಲು ಹರಿ ತಾನಿರುವ, ಆವವನು ತೊಲಗೆ ಹರಿ ತಾ ತೊಲಗುವ'' (ಮಧ್ವನಾಮ) ಎಂಬ ಮಾತಿನ ವಿವರಣೆಯಂತಿದೆ.

### ವಿಧಿಯನ್ನು ಹಳಿದ ಗೋಪಿಯರು

**ಕಿಮು ದುರಿತಮಕಾರಿ ಯೇನ ಕಂಸ-**
**ಪ್ರಕಟಿತಕಾರ್ಮುಕಸಂಭ್ರಮೇ ಶರಾಣಾಮ್ ।**
**ವಿಧಿರಕೃತ ಪದಂ ವಿವೇಕಹೀನೋ**
**ಮೃದುಲಕಲೇವರಮಸ್ಮದೀಯಮಾದೌ [೨]॥ ೩೭ ॥**

---

೧. ಹಿ ಶಬ್ದಃ ''ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ'' (ಭಾಗ. ೯/೬/೪೧) ಇತಿ ಪ್ರಸಿದ್ಧಿಂ ಸೂಚಯತಿ । -ವ್ಯಾ.
೨. ಪುಷ್ಪಿತಾಗ್ರಾವೃತ್ತಮ್ । -ವ್ಯಾ.

ಕಂಸನು ಘೋಷಿಸಿದ ಧನುರುತ್ಸವದ ಸಂಭ್ರಮದಲ್ಲಿ ನಮ್ಮ ಕೋಮಲಶರೀರದ ಮೇಲೆಯೇ ವಿವೇಕಹೀನವಾದ ವಿಧಿ ತನ್ನ ಬಾಣಗಳ ಮೊದಲ ಗುರಿಯನ್ನು ಇರಿಸಿರುವನಲ್ಲ; ಇದಕ್ಕೆ ನಾವು ಎಂತಹ ಪಾಪವನ್ನು ಎಸಗಿದ್ದೆವೋ ಏನೋ?[೧]! (ಕಲೇವರ – ಶರೀರ).

### ಗೋಪಿಯರ ವಿಲಾಪ

**ಅಹೋ ವಿಧೇ ತ್ವದ್ವಚಸಾಽತಿತೃಪ್ತಾ**
**ಯದೂದ್ವಹಾಲಿಂಗನಲುಬ್ಧಚಿತ್ತಾಃ।**
**ತದೀಕ್ಷಣೇನಾಪಿ ಕಥಂ ವಿಹೀನಾ**
**ದಯಾತಿದೂರಾದ್ಯ ಕರೋಷಿ ದೀನಾಃ ॥ ೩೮ ॥**

ಅಯ್ಯೋ ವಿಧಿಯೇ ! ಯದುಶ್ರೇಷ್ಠನಾದ ಶ್ರೀಕೃಷ್ಣನ ಆಲಿಂಗನದ ಅಭಿಲಾಷೆ ಹೊಂದಿದ ಮನಸ್ಸಿನ ನಾವು ನಿನ್ನ ಆಜ್ಞಾರೂಪದ ಮಾತಿನಿಂದ ತುಂಬಾ ಸಂತುಷ್ಟರಾಗಿದ್ದೆವು; ಆದರೆ ಅತ್ಯಂತ ನಿಷ್ಕರುಣಿಯಾದವನೇ ! ಅದೇಕೆ ದೀನರಾದ ನಮ್ಮನ್ನು ಇಂದು ಅವನ ನೋಟಕ್ಕೂ ಎರವನ್ನಾಗಿಸಿರುವಿ ?

ವಿ. : ಕಿಶೋರ ಎಂಬ ದೇವಗಂಧರ್ವನ ಅವತಾರನಾದ ಅಕ್ರೂರನಲ್ಲಿ ಸ್ವಾಯಂಭುವ ಮನುವಿನ ಅಂಶದೊಂದಿಗೆ ಬ್ರಹ್ಮದೇವರ ಆವೇಶವೂ ಇದ್ದದ್ದರಿಂದ ಅವನನ್ನು ಈಗ ಎಲೈ ವಿಧಿಯೇ ! ಎಂದು ಗೋಪಿಯರು ಸಂಬೋಧಿಸುತ್ತಿರುವುದು ಉಚಿತವೇ ಆಗಿದೆ :

**ಸಂಸೇವನಾಯ ಸ ಹರೇರಭವತ್ಪುರೈವ ನಾಮ್ನಾ ಕಿಶೋರ ಇತಿ ಯಃ ಸುರಗಾಯಕೋಽಭೂತ್ ।**
**ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತ ಆವೇಶಯುಕ್ ಕಮಲಜಸ್ಯ ಬಭೂವ ವಿದ್ವಾನ್ ॥**
–ಮಹಾಭಾರತತಾತ್ಪರ್ಯನಿರ್ಣಯ (೧೩/೮೫)

### ಎಂತಹ ಕ್ರೂರಿ ಈ ಅಕ್ರೂರ !

**[೨]ಅಯಮಪಿ ಚ [೩]ವಿರುದ್ಧನಾಮಧೇಯೋ**
**ನಯತಿ ವಿಲಾಪಮುಪೇಕ್ಷ್ಯ ಕಾಮಿನೀನಾಮ್ ।**
**ಪ್ರಿಯಸರಸವಿಲಾಸಮಗ್ರ್ಯವೇಷಂ**
**ಕಮಲದೃಶಂ ಕಮನೀಯಚಾರುಹಾಸಮ್ ॥ ೩೯ ॥**

---

೧. ಕಂಸಕೃತಕಾರ್ಮುಕೋತ್ಸವಾರ್ಥಂ ಕೃಷ್ಣಗಮನೇನ ಅಸ್ಮಾಕಂ ಶರವಿದ್ಧವತ್ ಕ್ಲೇಶೋ ಜಾಯತ ಇತಿ ಭಾವಃ ।–ವ್ಯಾ.
೨. ಮೈತದ್ವಿಧಸ್ಯಾಕರುಣಸ್ಯ ನಾಮ ಭೂದಕ್ರೂರ ಇತ್ಯೇತದತೀವದಾರುಣಃ ।
ಯೋಽಸಾವನಾಶ್ವಾಸ್ಯ ಸುದುಃಖಿತಂ ಜನಂ ಪ್ರಿಯಾತ್ ಪ್ರಿಯಂ ನೇಷ್ಯತಿ ಪಾರಮಧ್ವನಃ ॥
–ಭಾಗ.(೧೦/೩೭/೨೨)
೩. ಅಕ್ರೂರೇ ಚತುರ್ಮುಖಾವೇಶೋಽಸ್ತೀತಿ ಪ್ರಸಿದ್ಧೇಃ । –(ವ್ಯಾ.)
ಅಕ್ರೂರಃ ಸೌಮ್ಯ ಉಚ್ಯತೇ । – ಹೃದಿಧ್ಯಾನಮ್ –ಗೀತಾಭಾಷ್ಯ (೧೭/೧೬)

ಪ್ರಿಯವೂ ಸರಸವೂ ಆದ ವಿಲಾಸಗಳುಳ್ಳ ಉತ್ತಮ ಆಕಾರದ, ತಾವರೆಗಂಗಳ, ಮನಸೆಳೆಯುವ ಕಿರುನಗೆಯ ಶ್ರೀಕೃಷ್ಣನನ್ನು ವಿರುದ್ಧವಾದ ಹೆಸರಿನ ಈ ಅಕ್ರೂರನೂ ಸಹ ನಾರಿಯರಾದ ನಮ್ಮ ವಿಲಾಪವನ್ನೂ ಲೆಕ್ಕಿಸದೆ ಇಲ್ಲಿಂದ ಕರೆದೊಯ್ಯುತ್ತಿರುವನಲ್ಲ!

ವಿ. : ೧. ಶ್ರೀಕೃಷ್ಣನಿಂದ ತಮ್ಮನ್ನು ಅಗಲಿಸುವ ಕಾರ್ಯದಲ್ಲಿ ತೊಡಗಿರುವ ಕ್ರೂರಕಾರ್ಯ-ವನ್ನು ಮಾಡುತ್ತಿರುವ ಅಕ್ರೂರನಿಗೆ ಸೌಮ್ಯ ಎಂಬ ಅರ್ಥದ ಆ ಹೆಸರು ಒಪ್ಪದು ಎಂಬುದು ಅವರ ಭಾವ.

೨. ಕಮನೀಯ – ಮನೋಹರ.

### ಕಂಸಾದಿಗಳಿಗೆ ಗೋಪಿಯರು ನೀಡಿದ ಶಾಪ

**ಭೃತ್ಯೋಽಯಂ ಕಿಮು ಸಂತನೋತು ಸ ಪರಂ ಪ್ರತ್ಯರ್ಥಿಭೂತಃ ಸತಾಂ**
**ಕಂಸಸ್ತದ್ಧನುರುತ್ಸವೋಽಸ್ತು ನಿಹತೋ ಭಗ್ನಂ ಚ ಭೂಯಾದ್ಧನುಃ।**
**ಯೋಽಸ್ಮತ್ಪ್ರಾಣಸಮಂ ವಿಯೋಜಯತಿ ಹಾ ಸ್ಮೇರಾನನಂ ಶ್ರೀಪತಿಂ**
**ತಂ ಪ್ರಾಣೇನ ವಿಯೋಜಯತ್ವತಿಮದಂ ದೇವೋಽಸ್ಮದೀಯೋ ವಿಭುಃ ॥೪೦॥**

ಸೇವಕನಾದ ಇವನಾದರೂ ಏನು ಮಾಡಿಯಾನು? ಆದರೆ ನಿಜಕ್ಕೂ ಸಜ್ಜನರಿಗೆ ವಿರೋಧಿಯಾಗಿರುವವನು ಆ ಕಂಸನೇ; ಅವನ ಬಿಲ್ಲಹಬ್ಬವು ಹಾಳಾಗಲಿ; ಬಿಲ್ಲು ಸಹ ಮುರಿದುಹೋಗಲಿ; ಅಯ್ಯೋ! ಅವನು ನಮಗೆ ಪ್ರಾಣಸಮನಾಗಿರುವ ನಗುಮುಖದ ಲಕ್ಷ್ಮೀಪತಿಯಾದ ಶ್ರೀಕೃಷ್ಣನನ್ನು ದೂರಮಾಡುತ್ತಿರುವನಲ್ಲ! ಬಹಳ ಉನ್ನತ್ತನಾದ ಅವನ ಪ್ರಾಣಗಳನ್ನು ನಮ್ಮ ದೇವರು ದೂರಮಾಡಲಿ.

ವಿ. : ೧. ಕರೆದೊಯ್ಯಲು ಬಂದಿರುವುದು ಅಕ್ರೂರನಾದರೂ ಅದಕ್ಕೆ ಕಾರಣನಾದವನು ಅವನನ್ನು ಹಾಗೆ ಕಳುಹಿಸಿರುವವನು ದುಷ್ಟ ಕಂಸ. ಆದ್ದರಿಂದ ಅವನ ಧನುರುತ್ಸವ ಹಾಳಾಗಲಿ, ಬಿಲ್ಲು ಮುರಿದುಹೋಗಲಿ, ಶ್ರೀಕೃಷ್ಣ ಅವನನ್ನು ಕೊಂದುಹಾಕಲಿ ಎಂದು ಗೋಪಿಯರು ನಿಂದಿಸುತ್ತಿರುವರು.

೨. ಮುಂದೆ ಶ್ರೀಕೃಷ್ಣನಿಂದ ಧನುಸ್ಸು ಮುರಿದು, ಆ ಧನುರುತ್ಸವ ಹಾಳಾಗಿ, ಕಂಸನು ಹತವಾಗುವುದು ಸುಪ್ರಸಿದ್ಧವಾದ ವಿವರ. ಅದನ್ನು ಮುಂಚಿತವಾಗಿಯೇ ಗೋಪಿಯರು ಶಾಪವಚನವೆಂಬಂತೆ ನುಡಿದಿದ್ದರು ಎಂಬುದು ಇಲ್ಲಿಯ ಭಾವ: **ಅನೇನ ಶಾಪವ್ಯಾಜೇನ ಭಾವ್ಯರ್ಥನಿರೂಪಣಮ್** -(ವ್ಯಾ.)

೩. ದೇವರನ್ನು ಸಜ್ಜನರಿಂದ ದೂರಮಾಡುವ ಜನರು ಹೀಗೆ ಸರ್ವನಾಶಕ್ಕೆ ಗುರಿಯಾಗುವರು ಎಂಬುದು ಮುಖ್ಯ ತಾತ್ಪರ್ಯ.

೪. ಇದು ಒಂದರ್ಥದಲ್ಲಿ ಆ ಬಿಲ್ಲುಹಬ್ಬಕ್ಕೆ ಹೊರಟುನಿಂತ ಶ್ರೀಕೃಷ್ಣನಿಗೆ ಗೋಪಿಯರ ಹಾರೈಕೆಯೂ ಆಗಿದೆ : **ಗಚ್ಛತಃ ಕೃಷ್ಣಸ್ಯಾಶೀರ್ವಚನಂ ವಾ ಕೃತಂ ಭವತಿ ।**–(ವ್ಯಾ.)

## ಶ್ರೀಕೃಷ್ಣನಿಗೆ ಗೋಪಿಯರ ಶುಭಾಶಂಸನೆ

**ಜಿಗಮಿಷಸಿ ಮುರಾರೇ ರಾಜಧಾನೀಂ ಯದೀತಃ**
**ಶ್ರುತಿತತಿಜಿತ ಯಾಹಿ ಶ್ರೀಃ ಶುಭಾ ತತ್ರ ತೇಽಸ್ತು ।**
**ಸುಖದ ತದುಪಸರ್ಗಂ ಸೌಮ್ಯ ಸಂಧೇಹಿ ಶೀಘ್ರಂ**
**ಘಟಯ ಘಟಕ ನೋ ಚೇನ್ನಸ್ತ್ವವೈಪೋಪಸರ್ಗಮ್ ॥ ೪೧ ॥**

ಎಲೈ ಮುರಾರಿಯಾದ ಶ್ರೀಕೃಷ್ಣನೇ ! ಶ್ರುತಿಗಳ ಸಮೂಹಕ್ಕೂ ನಿಲುಕದವನೇ ! ನೀನು ಇಲ್ಲಿಂದ ರಾಜಧಾನಿಯಾದ ಮಧುರೆಗೆ ತೆರಳ ಬಯಸಿರುವೆಯಾದಲ್ಲಿ ತೆರಳು; ಅಲ್ಲಿ ನಿನಗೆ ಶುಭಸಂಪತ್ತು ಲಭಿಸಲಿ; ಎಲೈ ಸೌಮ್ಯನೇ ! ಸುಖನೀಡುವವನೇ ! ನೀನು ಬೇಗ ಅದಕ್ಕೆ ಸುಖ ನೀಡುವ ಉಪಸರ್ಗವನ್ನು ಸೇರಿಸಿ ಹಿಂದಿರುಗು. ಎಲೈ ಅಘಟಿತ ಘಟಕನೇ! ಶ್ರೀಕೃಷ್ಣ ಇಲ್ಲವಾದಲ್ಲಿ ನೀನು ನಮ್ಮನ್ನು ನಿನ್ನ ಸಮೀಪದಲ್ಲಿ ಹುಟ್ಟುವಂತೆ ಮಾಡಿಬಿಡು.

ವಿ. : ೧. ಶ್ರೀಕೃಷ್ಣನು ನರಕಾಸುರನ ಮಂತ್ರಿಗಳಲ್ಲಿ ಒಬ್ಬನಾದ ಮುರ ಎಂಬ ಅಸುರನನ್ನು ಮುಂದೆ ಸಂಹರಿಸುವ ಸೂಚನೆ ಈ ಪದದಲ್ಲಿದೆ.

೨. ಶ್ರೀಕೃಷ್ಣನು 'ಶ್ರುತಿತತಿಜಿತ' ಎಂಬುದಕ್ಕೆ ಶ್ರುತಿತತಿಗಳಿಂದ ತಿಳಿಯಲ್ಪಟ್ಟು ಅವುಗಳಿಂದ ಹುಟ್ಟುವ ಜ್ಞಾನದ ಫಲವಾದ ಭಕ್ತಿಗೆ ವಶನಾಗುವನು ಎಂಬುದು ಒಂದು ಬಗೆಯಾದರೆ; ಶ್ರುತಿತತಿಗಳಿಗೂ ಸಿಲುಕದ ಅಗಮ್ಯ ಮಹಿಮ ಎಂಬುದು ಇನ್ನೊಂದು ಬಗೆಯ ಅರ್ಥ: **ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ.** ಶ್ರುತಿತತಿಗಳಿಗೆ ನಿಲುಕದ ನೀನು ನಮ್ಮಂತಹವರಿಗೆ ಎಂತು ವಶನಾಗುವಿ ಎಂಬ ಭಾವವೂ[೧] ಸೂಚಿತ (ಶ್ರುತಿತತಿಃ ಜಿತಾ ಯೇನ).

೩. **ಯಾಹಿ** ಎಂಬುದಕ್ಕೆ 'ಆ' ಎಂಬ ಉಪಸರ್ಗವನ್ನುಸೇರಿಸಿದಾಗ ಆಯಾಹಿ ಎಂದಾಗುವುದು; 'ನೀನು ಆದಷ್ಟು ಬೇಗ ವೃಂದಾವನಕ್ಕೆ ಮರಳಿ ಬಾ' ಎಂಬುದು ಗೋಪಿಯರ ಒಟ್ಟು ಭಾವ.

೪. ಶ್ರೀಕೃಷ್ಣನು ಹಾಗೆ ಮಧುರೆಯಿಂದ ಮರಳಿ ಬರದಿದ್ದಲ್ಲಿ ಗೋಪಿಯರು ತಾವು ಸಾಯುವುದು ನಿಶ್ಚಿತ ಎಂಬುದನ್ನು ಸಹ ಉಪಸರ್ಗ ಎಂಬ ಪದದಿಂದ ಸೂಚಿಸಿರುವರು.

---

೧. ಅನೇನಾಸ್ಮದಾದೀನಾಂ ಕಥಂ ವಶ್ಯ ಇತಿ ಸೂಚಿತಮ್ । – ವ್ಯಾ.

ಶ. [1]ಶ್ರೀಕೃಷ್ಣನು ಹಿಂದಿರುಗಿ ಬರದಿದ್ದಲ್ಲಿ ತಮಗೆ ಸಾವೇ ಹಿತ ಎಂಬುದು ಗೋಪಿಯರ ಭಾವ. ಹೀಗೆ 'ಅಂತಹ ಉಪಸರ್ಗವನ್ನಾಗಲಿ, ಇಂತಹ ಉಪಸರ್ಗವನ್ನಾಗಲೀ ನೀಡು' ಎನ್ನುವ ಮೂಲಕ ಗೋಪಿಯರು ವಾಗ್ವೈಖರಿಯನ್ನು ತೋರಿಸಿಕೊಟ್ಟಿರುವರು; ಇದು ಅವರ ವ್ಯಾಕರಣಶಾಸ್ತ್ರದ ಪಾಂಡಿತ್ಯಕ್ಕೂ ದ್ಯೋತಕ.

### ಅಕ್ರೂರನ ಕಾರ್ಯಕ್ಕೆ ವಿಧಿಯ ನೆರವು

ಪ್ರಿಯಂ ನಿನೀಷೋರ್ನನು ಯಸ್ಯ ಧಾತಾ
ಪಿಪರ್ತಿ ಕಾಂಕ್ಷಾಂ ನಿಜಸೌಖ್ಯದಾತಾ ।
ಸ ಏಷ ಗರ್ಭೀಕೃತಪದ್ಮಜನ್ಮಾ
ಜಿಘೃಕ್ಷತಿ ಶ್ರೀಶಪದಾಂಬುಜನ್ಮ [2] ॥ ೪೨ ॥

ತನ್ನವರಿಗೆ ಸುಖನೀಡುವ ವಿಧಿಯು ಪ್ರಿಯನಾದ ಕೃಷ್ಣನನ್ನು ಇಲ್ಲಿಂದ ಕರೆದೊಯ್ಯುವ ಅಕ್ರೂರನ ಬಯಕೆಯನ್ನೇ ಪೂರೈಸುತ್ತಿರುವನು; ತನ್ನೊಳಗೆ ಬ್ರಹ್ಮನನ್ನು ಹೊಂದಿರುವ ಅಂತಹ ಈ ಅಕ್ರೂರನು ಶ್ರೀಪತಿಯಾದ ಶ್ರೀಕೃಷ್ಣನ ಪಾದಕಮಲವನ್ನು ಹಿಡಿಯ-ಬಯಸುತ್ತಿರುವನು.

ವಿ. : ಇದು ಸಹ ಅಕ್ರೂರನೊಳಗೆ ಬ್ರಹ್ಮದೇವರ ಆವೇಶವನ್ನು ಕುರಿತು ಹೇಳುವ ಮಾತು-ಗಳಾಗಿವೆ[3] ; ಅಂಬು - ನೀರು ; ಅಂಬುಜನ್ಮ - ಕಮಲ.

### ಗೋಪಿಯರನ್ನು ಸಾಂತ್ವನಪಡಿಸಿದ ಶ್ರೀಕೃಷ್ಣ

ಇತಿ ವಿರಹಜಭೀತ್ಯಾ ವೇಪಮಾನಾಃ ಕೃಶಾಂಗೀ-
ರ್ಗಲಿತವಲಯಹಾರಾಶ್ಚಿತ್ರಲೇಖ್ಯಾನುಸಾರಾಃ ।
ಮುರಭಿದಮೃತಕಲ್ಪೈಃ ಪ್ರೀಣಯನ್ ಪ್ರೇಮವಾಕ್ಯೈಃ
ಸಕರುಣಮಸಕೃತ್ ತಾ ವೀಕ್ಷಮಾಣಃ ಪ್ರತಸ್ಥೇ ॥ ೪೩ ॥

---

೧. ಹೇ ಘಟಕ ! ಅಘಟಿತಘಟಕ ಕೃಷ್ಣ ನೋ ಚೇತ್ ಸುಖದಮುಪಸರ್ಗಂ ನ ಸಂದಧಾಸಿ ಚೇತ್ । ನೋऽಸ್ಮಾಕಂ ತವೈವ ಉಪ ಸಮೀಪೇ ಸರ್ಗಂ ಸೃಷ್ಟಿಂ ಘಟಯ ಸಂಪಾದಯ ಅನೇನಾನಾಗಮನೇ ಮರಣಂ ಸೂಚ್ಯತೇ । ತಂ ವಾ ಉಪಸರ್ಗಂ ಇಮಂ ವಾ ಉಪಸರ್ಗಂ ದೇಹೀತಿ ವಾಗ್ವೈಖರೀ ಚ ದರ್ಶಿತಾ । ಅನೇನ ಸ್ವಾಸಾಂ ವೈಯ್ಯಾ-ಕರಣಮರ್ಯಾದಾಭಿಜ್ಞತ್ವಂ ದರ್ಶಿತಮ್ । -ವ್ಯಾ.

೨. ವಿಭಾವನಾಲಂಕಾರಃ । -ವ್ಯಾ.

೩.. ಕಮಲಾಶ್ರಯಣೇನಾಪಿ ಬ್ರಹ್ಮಾವೇಶಂ ದೃಢಯಂತಿ । -ವ್ಯಾ.

ಹೀಗೆ ಅಗಲುವಿಕೆಯಿಂದಾಗುವ ಭಯದಿಂದ ನಡುಗುತ್ತಿದ್ದ, ತೊಟ್ಟ ಬಳೆ ಹಾಗೂ ಹಾರಗಳು ಕಳಚಿಬೀಳುತ್ತಿದ್ದ, ಚಿತ್ರದಲ್ಲಿ ಬರೆಯಲ್ಪಟ್ಟಂತಿದ್ದ, ಕೃಶಾಂಗಿಯರಾದ ಆ ಗೋಪಿಯರನ್ನು ತನ್ನ ಅಮೃತಸದೃಶವಾದ ಪ್ರೇಮವಚನಗಳಿಂದ ಸಂತೋಷಪಡಿಸುತ್ತಾ, ಕರುಣೆಯಿಂದ ಕೂಡಿದವನಾಗಿ, ಅವರನ್ನು ಪುನಃಪುನಃ ನೋಡುತ್ತಾ ಮುರಾರಿಯಾದ ಶ್ರೀಕೃಷ್ಣನು ಹೊರಟುನಿಂತನು.

## ಮಲ್ಲವಿದ್ಯೆ ಹಾಗೂ ಇಭಾರ್ದನವಿದ್ಯೆಯಾದ ಸುರತಕ್ರಿಯೆ

ಪಾದಸ್ಪರ್ಶಕರಗ್ರಹಪ್ರಿಯತಮಾಂಗಾಶ್ಲೇಷಕೇಶಗ್ರಹ-
ಪ್ರೇಕ್ಷಾಧಃಕರಣೋಪರಿಸ್ಥಿತಿಮಿಥೋಮುಷ್ಟ್ಯಾದಿಜುಷ್ಟೇ ರತೇ ।
ಗೋಪೀನಾಂ ಕುಚಕುಂಭಮರ್ದನಕೃತಾ ಮಲ್ಲೇಂದ್ರವಿದ್ಯಾರ್ಜಿತಾ
ಯೇನೇಭಾರ್ದನವೈಖರೀ[೧] ಚ ಸ ಕಥಂ ತಾಸ್ತ್ಯಕ್ತುಮೀಷ್ಟೇ ಪ್ರಭುಃ ॥ ೪೪ ॥

[೨]ಪಾದಸ್ಪರ್ಶ, ಪರಸ್ಪರ ಹಸ್ತಗ್ರಹಣ, ಪ್ರಿಯತಮನಾದ ಕೃಷ್ಣನ ಆಲಿಂಗನ, ಕೇಶಗ್ರಹಣ, ನೋಟ, ಕೆಳಗೆ ಮಾಡುವಿಕೆ, ಮೇಲಿರುವಿಕೆ, ಪರಸ್ಪರ ಮುಷ್ಟಿಗಳನ್ನು ಹಿಡಿದುಕೊಳ್ಳುವುದು ಮೊದಲಾದವುಗಳಿಂದ ಕೂಡಿದ, ಸುರತಕ್ರೀಡೆಯಲ್ಲಿ ಗೋಪಿಯರ ಕುಚಕುಂಭಗಳನ್ನು ಮರ್ದನಮಾಡಿ, ಶ್ರೇಷ್ಠ[೩] ಮಲ್ಲವಿದ್ಯೆಯನ್ನು ಹಾಗೂ ಆನೆಯನ್ನು ಸದೆಬಡಿಯುವ ವೈಖರಿಯನ್ನು ಸಹ ಸಂಪಾದಿಸಿದ[೪] ಶ್ರೀಕೃಷ್ಣ ಅವರನ್ನು ತೊರೆಯಲು ಹೇಗೆ ತಾನೆ ಶಕ್ತನಾದಾನು?

ವಿ. : ೧. ಪಾದಸ್ಪರ್ಶ, ಕರಗ್ರಹ, ಮೊದಲಾದವುಗಳು ಮಲ್ಲವಿದ್ಯೆಯ ಸಂಪಾದನೆಗೆ ನೆರವಾದರೆ, ಕುಚಕುಂಭಮರ್ದನ ಕ್ರಿಯೆಯು ಕುವಲಯಾಪೀಡವೆಂಬ ಆನೆಯ ಮರ್ದನಕ್ಕೆ ನೆರವಾಯಿತು ಎಂಬ ಇಲ್ಲಿಯ ಭಾವ ಲೋಕದೃಷ್ಟಿಯಿಂದ ಮಾತ್ರ ಎಂದು ತಿಳಿಯಬೇಕು.

೨. ಶ್ರೀಕೃಷ್ಣನು ಮಾಡಿದ ಸುರತಕ್ರೀಡೆಯು ಗ್ರಾಮ್ಯ ಸುರತವಾಗದೆ, ಮಲ್ಲವಿದ್ಯೆ, ಆನೆಯನ್ನು ಸದೆಬಡಿಯುವ ವಿದ್ಯೆಯಂತೆ ಮಾನನೀಯವಾದ ಕಾರ್ಯವಾಗಿ ಅವುಗಳಲ್ಲಿ ಗೋಪಿಯರದು [೫]ಗುರುಸ್ಥಾನೀಯವಾದ ಕಾರ್ಯವಾಯಿತು ಎಂಬ ಭಾವವೂ ಇದೆ.

---

೧. ಉದ್ವೀಕ್ಷ್ಯ ಸ್ತನಜೃಂಭಿಕುಂಭಯುಗಲಂ ಕುಂಭೀಶ್ವರಾಶಂಕಯಾ ... – ರು.ವಿ. (೯/೫೪)
೨. ಪಾದಸ್ಪರ್ಶಃ ಕರಗ್ರಹಃ ಅನ್ಯೋನ್ಯಹಸ್ತಗ್ರಹಣಂ ಪ್ರಿಯತಮಸ್ಯ ಅಂಗಸ್ಯ ಮಧ್ಯಾದ್ಯವಯವಸ್ಯಾಶ್ಲೇಷಃ ಕೇಶಗ್ರಹಃ ಕಚಗ್ರಹಣಂ ಪ್ರೇಕ್ಷಾ ಪರಸ್ಪರವೀಕ್ಷಣಂ ಅಧಃಕರಣಂ ಉಪರಿಸ್ಥಿತಿಃ ಬಂಧವಿಶೇಷಃ ಮಿಥೋಮುಷ್ಟಿಃ ಪರಸ್ಪರಮುಷ್ಟ್ಯಾಮುಷ್ಟೀ ಏತದಾದಿಭಿರ್ವಿಲಾಸೈಃ। –ವ್ಯಾ.
೩. ಅನೇನ ಸ್ತ್ರೀಭಿಃ ಸಮಂ ವಿಲಾಸೀಭೂಯ ಸ್ಥಿತೇನಾಪಿ ಕೃಷ್ಣೇನ ಮಧುರಾಯಾಂ ಮಲ್ಲೇಂದ್ರಾದಿಮರ್ದನಾತ್ ತಸ್ಯ ರೇತಃಪಾತಾಭಾವಃ ಸಹಜವಿದ್ಯಾಕೌಶಲ್ಯಂ ಚ ದ್ಯೋತ್ಯತೇ। –ವ್ಯಾ.
೪. ಸ್ವಕೃತವಿಲಾಸಪಾತ್ರೀಭೂತತ್ವಾತ್ ಕೃಷ್ಣಸ್ಯ ಪೌನಃಪುನ್ಯೇನ ಗೋಪೀಷು ದಯೇತಿ ಭಾವಃ। –ವ್ಯಾ.
೫. ಸ ಪ್ರಭುಃ ಶ್ರೀಕೃಷ್ಣಃ ತಾಃ ವಿದ್ಯಾದ್ವಯೇ ಗುರುಸ್ಥಾನೀಯಾಃ ಗೋಪೀಃ ಕಥಂ ತ್ಯಕ್ತುಮೀಷ್ಟೇ ಸಮರ್ಥೋ ಭವತಿ। –ವ್ಯಾ.

## ಗೋಪಿಯರ ಪ್ರಣಯಕ್ಕೆ ಮಣಿಯದ ಕೃಷ್ಣ

ಸ ಬಲ್ಲವೀನಾಂ ಪ್ರಣಯಾಖ್ಯದಾಮ್ನಾ
ನಿಬಧ್ಯಮಾನೋಽಪಿ ರಿಪೂನ್ ಜಿಘಾಂಸುಃ ।
ಜಗಾಮ ಶೌರಿರ್ನ ವಿಜೇತುಕಾಮೋ
ನಿವಾರ್ಯಮಾಣೋಽಪಿ ನಿವರ್ತತೇ ಸ್ಮ ॥ ೪೫ ॥

ಆ ಶ್ರೀಕೃಷ್ಣನು ಗೋಪಸ್ತ್ರೀಯರ ಅನುರಾಗವೆಂಬ ಪಾಶದಿಂದ ಬಿಗಿಯಲ್ಪಡುತ್ತಿದ್ದರೂ ಕಂಸಾದಿ ಶತ್ರುಗಳನ್ನು ಕೊಲ್ಲುವ ಬಯಕೆಯಿಂದ ಹೊರಟನು; ಶತ್ರುಗಳನ್ನು ಗೆಲ್ಲಬಯಸಿದವನು ಯಾವ ಬಗೆಯಲ್ಲಿ ತಡೆದರೂ ಸಹ ಬಲಾತ್ಕಾರವಾಗಿ ಹೊರಟೇಹೊರಡುವನಲ್ಲವೆ !

ವಿ. : ೧. ಶತ್ರುಜಯಕ್ಕೆ ದೃಢನಿಶ್ಚಯವನ್ನು ಹೊಂದಿದವನು ಎಷ್ಟು ತಡೆದರೂ ಸಹ ನಿಲ್ಲದೆ ಹೊರಡುವಂತೆ [1] ಗೋಪಿಯರು ಬಗೆಬಗೆಯಾಗಿ ಕೇಳಿಕೊಂಡರೂ ಸಹ, ಕಂಸಸಂಹಾರಕಾರ್ಯಕ್ಕಾಗಿ ಶ್ರೀಕೃಷ್ಣನು ತೆರಳಿಯೇ ಬಿಟ್ಟ ಎಂದರ್ಥ.

೨. ಇದರಿಂದ ಶತ್ರುಜಯದ ಗುರಿಹೊಂದಿದವನು ಬಂಧುಬಾಂಧವರ ಯಾವುದೇ ಬಗೆಯ ಪ್ರೀತಿಯ ಒತ್ತಡಕ್ಕೂ ಸಿಲುಕದೆ ತನ್ನ ಗುರಿಯನ್ನು ಸಾಧಿಸುವ ವಿವೇಕವನ್ನು ತೋರಿಸಬೇಕು ಎಂಬ ಸಂದೇಶ[2] ಸೂಚಿತ.

೩.. ಹೀಗೆ ಗೋಪಿಯರ ಪ್ರಣಯವಚನಗಳಿಗೆ ಕಿವಿಗೊಡದೆ ನಡೆಯುವ ಮೂಲಕ ಶ್ರೀಕೃಷ್ಣನು ತಾನು ಕಾಮಾದಿದೋಷರಹಿತ ಎಂಬ ವಿಶೇಷಾಂಶವನ್ನು ಸ್ಫುಟಪಡಿಸಿದ ಎಂದೂ ತಿಳಿಯಬೇಕು.

## ಮನೋರಥದೊಂದಿಗೆ ಕೃಷ್ಣರಥವನ್ನು ಹಿಂಬಾಲಿಸಿದ ಗೋಪಿಯರು

ರಥೇನ ದೂರೇ ರಮಣಂ ವ್ರಜಂತಂ
ವ್ರಜಸ್ತ್ರಿಯಸ್ತಂ ಪರಿತೋಽನುಜಗ್ಮುಃ ।
ದೃಗಶ್ವಭಾಜಾ ದೃಢಭಕ್ತಿದಾಮ್ನಾ
[3] ಮನೋರಥೇನಾಮಲಬುದ್ಧಿಯಂತ್ರಾ ॥ ೪೬ ॥

ರಥದೊಂದಿಗೆ ದೂರಕ್ಕೆ ಹೋಗುತ್ತಿದ್ದ ರಮಣನಾದ ಶ್ರೀಕೃಷ್ಣನನ್ನು ಗೋಕುಲದ ಸ್ತ್ರೀಯರು ಕಣ್ಣುಗಳೆಂಬ ಕುದುರೆಗಳನ್ನು ಹೂಡಿದ, ದೃಢವಾದ ಭಕ್ತಿ ಎಂಬ ಹಗ್ಗವನ್ನು ಹೊಂದಿದ,

---

೧. ಅತಿಪ್ರೇಮಾಸ್ಪದೀಭೂತಾ ಅಪಿ ಗೋಪೀಃ ಕಾರ್ಯಾಂತರಗೌರವಾತ್ ತ್ಯಕ್ತ್ವಾ ಗತ ಇತ್ಯಭಿಪ್ರಾಯಃ । -ವ್ಯಾ.

೨. ತಥಾಹಿ । ವಿಜೇತುಕಾಮೋ ಜಯಾರ್ಥೀ ಭಟಃ ನಿವಾರ್ಯಮಾಣೋಽಪಿ ನ ನಿವರ್ತತೇ । ರಜ್ಜ್ವಾದಿನಾ ನಿಬದ್ಧಾ ಅಪಿ ಜಯಾರ್ಥಿನೋ ಭಟಾಃ ಬಲಾದ್ಗಚ್ಛಂತೀತಿ ಲೋಕಸಿದ್ಧಮ್ । -ವ್ಯಾ.

೩.. ಯಾವದಾಲಕ್ಷ್ಯತೇ ಕೇತುರ್ಯಾವದ್ ರೇಣೂ ರಥಸ್ಯ ಚ ।
ಅನುಪ್ರಸ್ಥಾಪಿತಾತ್ಮಾನೋ ಲೇಖ್ಯಾನೀವೋಪತಸ್ಥಿರೇ ॥ -ಭಾಗ.(೧೦/೩೭/೩೨)

ನಿರ್ಮಲವಾದ ಬುದ್ಧಿ ಎಂಬ ಸಾರಥಿಯಿಂದ ಕೂಡಿದ, ಮನೋರಥದೊಂದಿಗೆ ತಾವೂ ಸುತ್ತಲೂ ಹಿಂಬಾಲಿಸಿ ತೆರಳಿದರು.

ವಿ.: ೧. ಹಾಗೆ ತೆರಳಿದ ಶ್ರೀಕೃಷ್ಣನನ್ನು ಗೋಪಿಯರು ಮನಸ್ಸಿನಿಂದಲೇ ಹಿಂಬಾಲಿಸಿ ನಡೆದರು ಎಂದು ಭಾವ; ಯಂತ್ರಾ – ಸಾರಥಿಯಿಂದ.

೨. ಕೃಷ್ಣ ಹೊರಟದ್ದು ರಥದ ಮೂಲಕವಾದರೆ ಇವರು ಹಿಂಬಾಲಿಸಿ ಹೊರಟದ್ದು ಮನೋ-ರಥದ ಮೂಲಕ ಎಂಬುದು ಇಲ್ಲಿಯ ರೋಚಕ ಕಾವ್ಯಾಂಶವಾಗಿದೆ.

೩. ರಥಕ್ಕೆ ಕುದುರೆಗಳು, ಅದಕ್ಕೊಬ್ಬ ಸಾರಥಿ ಹಾಗೂ ಅಶ್ವಗಳನ್ನು ನಿಯಂತ್ರಿಸುವ ಲಗಾಮು ಇರುವಂತೆ ಗೋಪಿಯರ ಮನೋರಥಕ್ಕೆ ಕಣ್ಣುಗಳೇ ಕುದುರೆಗಳು, ದೃಢವಾದ ಭಕ್ತಿಯೇ ಹಗ್ಗ ನಿರ್ಮಲವಾದ ಬುದ್ಧಿಯೇ ಸಾರಥಿಯಾಗಿದ್ದವು ಎಂಬುದು ಇಲ್ಲಿಯ ನಿರೂಪಣೆ.

೪. ಇದು ಕಠೋಪನಿಷತ್ತನ್ನು ಆಧರಿಸಿದ ನಿರೂಪಣೆ :

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।
ಸೋऽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥

## ಯಮುನೆಯ ಮಡುವಿನಲ್ಲಿ ಕಂಡ ಶ್ರೀಕೃಷ್ಣನ ವಿಶಿಷ್ಟರೂಪ

**ನಯನ್ನಸೌ ನಂದಕಿಶೋರಮೀಶಂ**
**ಶ್ವಫಲ್ಕಸೂನುರ್ಯಮುನಾಂಬುಮಧ್ಯೇ ।**
**ದದರ್ಶ ಸೇವಾಫಲರೂಪಮನ್ಯೈ-**
**ರದೃಶ್ಯಮಸ್ಯೈವ ವಿಚಿತ್ರರೂಪಮ್ ॥ ೪೭ ॥**

ನಂದಕಿಶೋರನಾದ ಸ್ವಾಮಿ ಶ್ರೀಕೃಷ್ಣನನ್ನು ಕರೆದೊಯ್ಯುತ್ತಾ ಶ್ವಫಲ್ಕಪುತ್ರನಾದ ಅಕ್ರೂರ ತನ್ನ ಸೇವೆಗೆ ಫಲರೂಪವಾಗಿ ಇತರರಿಗೆ ಕಾಣಲಾರದಂತಹ ಅದೇ ಶ್ರೀಕೃಷ್ಣನ ವಿಚಿತ್ರವಾದ ರೂಪವನ್ನು ಯಮುನೆಯ ನೀರಿನ ಮಧ್ಯದಲ್ಲಿ ಕಂಡ.

ವಿ. : ೧. ಶ್ರೀಕೃಷ್ಣಬಲರಾಮರನ್ನು ತನ್ನೊಂದಿಗೆ ಕರೆದೊಯ್ದ ಅಕ್ರೂರ ಮಾರ್ಗಮಧ್ಯದಲ್ಲಿ ಯಮುನಾತೀರದಲ್ಲಿ ಇಳಿದು ಆ ನದಿಯಲ್ಲಿ ಮಿಂದು, ಅಘಮರ್ಷಣ ಮಾಡುವಾಗ ಶ್ರೀಕೃಷ್ಣ ಅವನಿಗೆ ಶೇಷಶಾಯಿಯಾಗಿ ದರ್ಶನ ನೀಡಿದ ಎಂಬ ಶ್ರೀಮದ್ಭಾಗವತದ ನಿರೂಪಣೆಯ [೧] ತಾತ್ಪರ್ಯ ಇದಾಗಿದೆ.

---

೧. ನಿಮಜ್ಜ್ಯ ತಸ್ಮಿನ್ ಸಲಿಲೇ ಜಪನ್ ಬ್ರಹ್ಮ ಸನಾತನಮ್ ।
ತಾವೇವ ದದೃಶೇऽಕ್ರೂರೋ ರಾಮಕೃಷ್ಣೌ ಸಮನ್ವಿತೌ ॥
ತೌ ರಥಸ್ಥೌ ಕಥಮಿಹ ಸುತಾವಾನಕದುಂದುಭೇಃ ।
ತರ್ಹಿ ಸ್ವಿತ್ ಸ್ಯಂದನೇ ನ ಸ್ತ ಇತ್ಯುನ್ಮಜ್ಜ್ಯ ವ್ಯಚಷ್ಟಸಃ ॥
ತತ್ರಾಪಿ ಚ ಯಥಾಪೂರ್ವಮಾಸೀನೌ ಪುನರೇವ ಸಃ ।
ನ್ಯಮಜ್ಜದ್ ದರ್ಶನಂ ಯನ್ಮೇ ಮೃಷಾ ಕಿಂ ಸಲಿಲೇ ತಯೋಃ ॥
ಭೂಯಸ್ತತ್ರಾಪಿ ಸೋऽದ್ರಾಕ್ಷೀತ್ ಸ್ತೂಯಮಾನಮಹೀಶ್ವರಮ್ । – ಭಾಗ. (೧೦/೩೭/೩೭-೪೦)

೨. ಶ್ರೀಕೃಷ್ಣನನ್ನು ಅನನ್ಯಭಕ್ತಿಯಿಂದ ಸೇವಿಸಿದ ಫಲವಾಗಿ, ಅವನಿಗೆ ಶೇಷಶಾಯಿಯಾದ ಶ್ರೀಕೃಷ್ಣನ ರೂಪವನ್ನು ಸಹ ಕಾಣುವ ಸುಯೋಗ ಲಭಿಸಿತು ಎಂದರ್ಥ.

೩.. ಪ್ರತಿನಿತ್ಯ[೧] ಶೇಷನನ್ನು ಸಂದರ್ಶಿಸುತ್ತಿದ್ದ ಅಕ್ರೂರನಿಗೆ ಆಗ ಶೇಷಶಾಯಿಯಾದ ಶ್ರೀಕೃಷ್ಣನನ್ನೇ ಸಾಕ್ಷಾತ್ತಾಗಿ ನೋಡುವ ಯೋಗ ಲಭಿಸಿತು ಎಂಬುದು ವಿಶೇಷ.

೪. ರಥದಲ್ಲಿ ಕುಳಿತಿದ್ದ ಶ್ರೀಕೃಷ್ಣಬಲರಾಮರಲ್ಲಿ ಬಲರಾಮನು ಆದಿಶೇಷ; ಶ್ರೀಕೃಷ್ಣನು ಶೇಷಶಾಯಿಯಾದ ಸಾಕ್ಷಾತ್ ಶ್ರೀಹರಿ ಎಂಬುದು ಅವನ ಭಾಗ್ಯ.

೫. ಕಿಶೋರನಾಮಕ ದೇವಗಂಧರ್ವನ ಅವತಾರವಾದ ಅಕ್ರೂರನು ನಂದಕಿಶೋರನಾದ ಶ್ರೀಕೃಷ್ಣನನ್ನು ಕಂಡನು ಎಂಬಲ್ಲಿಯ ಸ್ವಾರಸ್ಯ ಗಮನಾರ್ಹವಾದುದು.

### ಶ್ರೀಕೃಷ್ಣದರ್ಶನಕ್ಕೆ ಅಗತ್ಯವಾದ ಸುಕೃತರಾಶಿ

**ಪುಣ್ಯಕ್ಷೇತ್ರನಿವಾಸಿನಾಂ ಸುವಿಮಲಜ್ಞಾನಾನುರಕ್ತಾತ್ಮನಾಂ**
**ಪಾರಂಪರ್ಯಸಮಾಗತಂ ಪ್ರಭುಮಪಿ ಶ್ರೀಕೃಷ್ಣಪಕ್ಷಾಪ್ರಿಯಮ್ ।**
**ದೂರೇಣೋತ್ಸೃಜತಾಂ ಸುಶಾಂತಮನಸಾಂ ತೀರ್ಥಾಟನಂ ಕುರ್ವತಾಂ**
**ವೇದ್ಯಂ ಹೃದ್ಯಮಪಶ್ಯದಂಬುನಿ ಹರೇ ರೂಪಂ ಶ್ವಫಲ್ಕಾತ್ಮಜಃ ॥ ೪೮ ॥**

ಪುಣ್ಯಕ್ಷೇತ್ರದಲ್ಲಿ ನೆಲೆಸಿದವರಿಗೆ, ಅತ್ಯಂತನಿರ್ಮಲವಾದ ಜ್ಞಾನದಲ್ಲಿ ಅನುರಕ್ತ ಮನಸ್ಸಿನವರಿಗೆ, ಶ್ರೀಕೃಷ್ಣನ ಪಕ್ಷಕ್ಕೆ ವಿರೋಧಿಯಾದವನು ಪರಂಪರೆಯಿಂದ ಒಡೆಯನಾಗಿದ್ದರೂ ಅವನನ್ನು ದೂರದಿಂದಲೇ ತೊರೆಯುವವರಿಗೆ, ಪ್ರಶಾಂತಮನಸ್ಸಿನವರಿಗೆ, ತೀರ್ಥಯಾತ್ರೆಯನ್ನು ಮಾಡುವವರಿಗೆ, ಗೋಚರಿಸುವಂತಹ ಶ್ರೀಹರಿಯ ಮನೋಹರವಾದ ರೂಪವನ್ನು ಅಕ್ರೂರನು ನೀರಿನಲ್ಲಿ ಕಂಡನು.

ವಿ. : ೧. ಅಕ್ರೂರನು ಕಂಡಂತಹ ಶ್ರೀಹರಿಯ ರೂಪ ಮಹಾಸಾಧಕರಿಗೆ ಮಾತ್ರ ಗೋಚರಿಸುವಂತಹ ವಿಶಿಷ್ಟರೂಪವಾಗಿತ್ತು ಎಂದು ಭಾವ.

೨. ಇಂತಹ ಭಗವದ್ರೂಪದರ್ಶನಕ್ಕೆ ಪುಣ್ಯಕ್ಷೇತ್ರದ ವಾಸ, ನಿರ್ಮಲ ಜ್ಞಾನಕಾರ್ಯದಲ್ಲಿ ಆಸಕ್ತಿ, ವಿಷ್ಣುದ್ವೇಷಿಗಳ ಸಂಗವನ್ನು ಸರ್ವಾತ್ಮನಾ ತೊರೆಯುವ ದೀಕ್ಷೆ, ಭಗವನ್ನಿಷ್ಠೆ ತೀರ್ಥಯಾತ್ರೆ ಮೊದಲಾದ ಕಾರ್ಯಗಳು ಸಾಧಕ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ಸೊಗಸಾದುದು.

---

೧. ನಿತ್ಯಂ ಹಿ ಶೇಷಮಭಿಪಶ್ಯತಿ ಸಿದ್ಧಮಂತ್ರೋ ದಾನೇಶ್ವರಃ ಸ ತು ತದಾ ದದೃಶೇ ಹರಿಂ ಚ ।
- ಮ.ಭಾ.ತಾ.ನಿ. (೧೩/೯೩.)

೨. ನನ್ವೇತಾದೃಶಾನಾಂ ವೇದ್ಯಂ ಅಕ್ರೂರೇಣ ಕಥಂ ದೃಷ್ಟಮಿತ್ಯತೋಽಕ್ರೂರಸ್ಯಾಪಿ ಮಧುರಾಕ್ಷೇತ್ರವಾಸಿತ್ವಾತ್ ಕೃಷ್ಣೋತ್ತಮತಾಭಿಜ್ಞತ್ವಾತ್ ಕಂಸಾಖ್ಯಪ್ರಭುಪರಿತ್ಯಾಗಾತ್ ಸ್ವಯಮಕ್ರೂರತ್ವಾತ್ ಯಮುನಾತೀರ್ಥಂ ಪ್ರತ್ಯಾಗಮನಾಚ್ಚೋಕ್ತಗುಣವತ್ವಾದಿತಿ ಭಾವಃ । -ವ್ಯಾ.

೩. ಮಧುರೆಯಂತಹ ಪುಣ್ಯಕ್ಷೇತ್ರದಲ್ಲಿ ವಾಸ ಮೊದಲಾದ ಶ್ರೀಕೃಷ್ಣದರ್ಶನಕ್ಕೆ ಅಗತ್ಯವಾದ ಗುಣಗಳನ್ನು ಅಕ್ರೂರ ಹೊಂದಿದ್ದರಿಂದ ಅವನಿಗೆ ಶ್ರೀಕೃಷ್ಣಸಂದರ್ಶನದ ಭಾಗ್ಯ ಲಭಿಸಿತು ಎಂದು ತಾತ್ಪರ್ಯ; ತೀರ್ಥಾಟನ – ತೀರ್ಥಯಾತ್ರೆ; ಹೃದ್ಯ – ಹೃದಯಂಗಮ.

ವಿಹಿತಕರ್ಮಾನುಷ್ಠಾನವು ಅಪರೋಕ್ಷಜ್ಞಾನಿಗೂ ವಿಹಿತ

ಭಕ್ತೋ ನಾಮ ಸ ಏವ ಯಃ ಕರಗತೇ ಕೃಷ್ಣೇಽಪಿ ವೇದೋದಿತಂ
ತತ್ಕರ್ಮಾಚರದೇತದೇವ ದುರಿತಪ್ರಧ್ವಂಸಿ ಕರ್ಮ ಕ್ಷಿತೌ ।
ತೀರ್ಥಂ ಚಾಪಿ ತದೇವ ಜಾತ್ವಪಿ ತಯೋಃ ಸಂಸೇವಯಾ ಶ್ರಾವ್ಯಯಾ-
ದೃಶ್ಯಂ ರೂಪಮದರ್ಶಯನ್ಮುರರಿಪುರ್ದಾಸ್ಯೈಕವಶ್ಯಃ ಪ್ರಭುಃ ॥ ೪೯ ॥

ಕೃಷ್ಣನು ಕೈಗೆ ದೊರೆತಾಗಲೂ ಯಾವನು ವೇದೋಕ್ತಕರ್ಮವನ್ನು ಆಚರಿಸಿದನೋ, ಆ ಅಕ್ರೂರನೇ ನಿಜವಾದ ಭಕ್ತ; ಭೂಮಿಯಲ್ಲಿ ದುರಿತಗಳನ್ನು ಪರಿಹರಿಸುವ ಅಘಮರ್ಷಣ ಕರ್ಮವೆಂದರೆ ಅವನು ಮಾಡಿದ ಅಘಮರ್ಷಣವೇ; ತೀರ್ಥವೆಂದರೆ ಯಮುನೆಯ ಮಧ್ಯದ ಬ್ರಹ್ಮಹ್ರದವೇ; ಒಮ್ಮೆಯಾದರೂ ಶ್ರವಣಾರ್ಹವಾದ ಅವುಗಳ ಭಕ್ತಿಪೂರ್ವಕವಾದ ಸೇವೆಯಿಂದ ಕೈಂಕರ್ಯಕ್ಕೆ ಮಾತ್ರ ವಶನಾಗುವ ಮುರಾರಿಯಾದ ಪ್ರಭು ಶ್ರೀಕೃಷ್ಣನು ತನ್ನ ಅವ್ಯಕ್ತವಾದ ರೂಪವನ್ನು ತೋರಿಸಿದ.

ವಿ. : ೧. ಶ್ರೀಕೃಷ್ಣನು ಪ್ರತ್ಯಕ್ಷ ದರ್ಶನ ನೀಡುತ್ತಿದ್ದಾಗಲೂ ಯಮುನೆಯಲ್ಲಿ ಸ್ನಾನ, ಧ್ಯಾನಾದಿ ಕಾರ್ಯಗಳನ್ನು ಅಕ್ರೂರ ತೊರೆಯಲಿಲ್ಲ; ಅಪರೋಕ್ಷಜ್ಞಾನಿಯಾದರೂ ವಿಹಿತಕರ್ಮವನ್ನು ತಪ್ಪದೆ ಮಾಡಲೇಬೇಕು ಎಂಬ [೧]ವಿಧಿಗೆ ಇದು ನಿದರ್ಶನವಾಯಿತು ಎಂಬುದು ಇಲ್ಲಿಯ ಮುಖ್ಯ ಭಾವ; ಸಹಸ್ರಾಂಶು – ಸೂರ್ಯ.

೨. ಎಂತಹ ದಿವ್ಯಬ್ರಹ್ಮಜ್ಞಾನಿಯೇ ಆದರೂ ಶಾಸ್ತ್ರವಿಹಿತವಾದ [೨]ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸುವುದು ಕಡ್ಡಾಯ ಎಂಬ ಪ್ರಮೇಯ ಅಕ್ರೂರನ ಪ್ರಸಂಗದಿಂದ ತಿಳಿದುಬರುವುದು ಎಂಬ ಇಲ್ಲಿಯ ವಿಶ್ಲೇಷಣೆ ಅಪೂರ್ವವಾದುದು :

ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।
ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥[೩]
ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ್[೪] ॥–ಶ್ರುತಿ

---

೧. ವೇದೋದಿತಂ ''ಅಹರಹಃ ಸಂಧ್ಯಾಮುಪಾಸೀತ'' ಇತಿ ವೇದೋಕ್ತಂ ಮಾಧ್ಯಾಹ್ನಿಕಸಂಧ್ಯಾವಂದನರೂಪಮ್ । –ವ್ಯಾ.

೨. ತತ್ಕರ್ಮ ಕೃಷ್ಣಪೂಜಾತ್ಮಕಂ ಕರ್ಮ ಆಚರತ್ । ತತ್ಕರ್ಮೇತ್ಯನೇನ ನಿತ್ಯನೈಮಿತ್ತಿಕಕರ್ಮಣಾಂ ವಿಷ್ಣುಪೂಜಾತ್ಮಕತ್ವ-ಮಭಿಪ್ರೈತಿ । –ವ್ಯಾ.

೩. ಕೃ.ಮ.(೨೨೫) ಹಾಗೂ ಬ್ರಹ್ಮಸೂತ್ರಭಾಷ್ಯ(೩./೪/೩.೦)ದಲ್ಲಿ ಉದಾಹೃತವಾಗಿರುವ ಹರಿವಂಶದ ವಚನ.

೪. ಇದು ಬ್ರಹ್ಮಸೂತ್ರಭಾಷ್ಯ(೩./೪/೬)ದಲ್ಲಿ ಉದಾಹೃತವಾಗಿರುವ ಕಮಠಶ್ರುತಿಯ ವಚನ; (ಕೃಷ್ಣಾಮೃತ-

೩. ಅಸಂಪ್ರಜ್ಞಾತಸಮಾಧಿಸ್ಥಿತಿಯಲ್ಲಿದ್ದಾಗ ಹೊರತು ಇತರ ಸಮಯಗಳಲ್ಲಿ ವಿಹಿತಕರ್ಮಾನುಷ್ಠಾನ ಅತ್ಯಗತ್ಯ; ಜ್ಞಾನಪೂರ್ವದ ಕರ್ಮ ಅಪರೋಕ್ಷಜ್ಞಾನಕ್ಕೆ ಸಾಧನವಾದರೆ ಜ್ಞಾನಪ್ರಾಪ್ತಿಯ ಅನಂತರದ ಕರ್ಮವು ಮೋಕ್ಷದಲ್ಲಿ ಆನಂದೋನ್ನಾಹಕ್ಕೆ ಸಾಧನ ಎಂಬುದು ತತ್ತ್ವ[೧].

೪. 'ತದವ್ಯಕ್ತಮಾಹ ಹಿ' (೩/೨/೨೩), 'ಅತೋಽನಂತೇನ ತಥಾ ಹಿ ಲಿಂಗಮ್' (೩/೨/೨೬) ಎಂಬ ಬ್ರಹ್ಮಸೂತ್ರಗಳ ಹಾಗೂ ಒಟ್ಟಾಗಿ ಆ ಸೂತ್ರಗಳನ್ನೊಳಗೊಂಡಿರುವ ಅವ್ಯಕ್ತಾಧಿಕರಣಕ್ಕೆ ವಿವರಣೆಯಾಗುವಂತೆ ಈ ಪ್ರಸಂಗವನ್ನು ನಿರೂಪಿಸಿರುವುದು ಇಲ್ಲಿಯ ವೈಶಿಷ್ಟ್ಯ.

### ಅರುಣಸೂರ್ಯನಂತಹ ಶ್ರೀಕೃಷ್ಣನ ಪಾದಕಮಲಗಳು

ಸ ಸಹಸ್ರಸಹಸ್ರಾಂಶುಮರೀಚಿವ್ಯಾಪ್ತದಿಕ್ತಟಮ್ ।
[೨]ಕಮಲಾಕರಪದ್ಮಾರ್ಘ್ಯಚರಣಾರುಣಭಾಸ್ಕರಮ್ ॥ ೫೦ ॥

---

ಮಹಾರ್ಣವ-೨೫೦)

೧. 'ಶುಭೇನಾನಂದವೃದ್ಧಿಃ ಸ್ಯಾತ್ ಹ್ರಾಸಶ್ಚೈವಾಶುಭೇನ ಹಿ ।
ಜ್ಞಾನಿನೋಽಪಿ ಯತಸ್ತೇನ ಕರ್ತವ್ಯಂ ಶುಭಮೇವ ತೈಃ' ॥ - ಅನುವ್ಯಾಖ್ಯಾನ (೪/೧/೨೦೫)

೨. ಸಿದ್ಧೈರ್ಭುಜಂಗಪತಿಭಿರಸುರೈರ್ನತಕಂಧರೈಃ ॥
ಸಹಸ್ರಶಿರಸಂ ದೇವಂ ಸಹಸ್ರಫಣಮೌಲಿನಮ್ ।
ನೀಲಾಂಬರಂ ಬಿಸಶ್ವೇತಂ ಶೃಂಗೈಃ ಶ್ವೇತಮಿವ ಸ್ಥಿತಮ್ ॥
ತಸ್ಯೋತ್ಸಂಗೇ ಘನಶ್ಯಾಮಂ ಪೀತಕೌಶೇಯವಾಸಸಮ್ ।
ಪುರುಷಂ ಚತುರ್ಭುಜಂ ಶಾಂತಂ ಪದ್ಮಪತ್ರಾರುಣೇಕ್ಷಣಮ್ ॥
ಚಾರುಪ್ರಸನ್ನವದನಂ ಚಾರುಹಾಸನಿರೀಕ್ಷಣಮ್ ।
ಸುಭ್ರೂನ್ನಸಂ ಚಾರುಕರ್ಣಂ ಸುಕಪೋಲಾರುಣಾಧರಮ್ ॥
ಪ್ರಲಂಬಪೀವರಭುಜಂ ತುಂಗಾಂಸೋರಃಸ್ಥಲಶ್ರಿಯಮ್ ।
ಕಂಬುಕಂಠಂ ನಿಮ್ನನಾಭಿಂ ವಲಿಮತ್ಪಲ್ಲವೋದರಮ್॥
ಬೃಹತ್ಕಟಿತಟಶ್ರೋಣಿಕರಭೋರುದ್ವಯಾನ್ವಿತಮ್ ।
ಚಾರುಜಾನುಯುಗಂ ಚಾರುಜಂಘಾಯುಗಲಸಂಯುತಮ್ ॥
ತುಂಗಗುಲ್ಫಾರುಣನಖವ್ರಾತದೀಧಿತಿಭಿರ್ವೃತಮ್ ।
ನವಾಂಗುಲ್ಯಂಗುಷ್ಠದಲೈರ್ವಿಲಸತ್ಪಾದಪಂಕಜಮ್ ॥
ಮಹಾರ್ಹಮಣಿವಿಭ್ರಾಜತ್ಕಿರೀಟಕಟಕಾಂಗದೈಃ ।
ಕಟಿಸೂತ್ರಬ್ರಹ್ಮಸೂತ್ರಹಾರನೂಪುರಕುಂಡಲೈಃ ॥
ಭ್ರಾಜಮಾನಂ ಪದ್ಮಕರಂ ಶಂಖಚಕ್ರಗದಾಧರಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್ ॥
ಸುನಂದನಂದಪ್ರಮುಖೈಃ ಪಾರ್ಷದೈಃ ಸನಕಾದಿಭಿಃ ।
ಸುರೇಶೈರ್ಬ್ರಹ್ಮರುದ್ರಾದ್ಯೈರ್ನವಭಿಶ್ಚ ದ್ವಿಜೋತ್ತಮೈಃ ॥

ಆ ಅಕ್ರೂರನು ಅನಂತಸೂರ್ಯಕಿರಣಗಳಿಂದ ದಿಕ್ಕುಗಳನ್ನೆಲ್ಲ ವ್ಯಾಪಿಸಿದ, ಮಹಾಲಕ್ಷ್ಮಿಯು ತನ್ನ ಕರಪದ್ಮಗಳಿಂದ ಓಲೈಸುವ ಉದಯಭಾಸ್ಕರನಂತಹ ಚರಣದ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. : ೧. ೬೯ನೇ ಶ್ಲೋಕದಲ್ಲಿರುವ 'ಐಕ್ಷತ' ಎಂಬ ಕ್ರಿಯಾಪದದೊಂದಿಗೆ ಈ ಶ್ಲೋಕಗಳಿಗೆ (೫೦ ರಿಂದ ೬೮ ಹಾಗೂ ೭೦) ಏಕಾನ್ವಯ.

೨. ಮಹಾಭಾರತತಾತ್ಪರ್ಯನಿರ್ಣಯದ ೯ನೇ ಅಧ್ಯಾಯದ ಶ್ರೀರಾಮಪರಂಧಾಮ ಪ್ರಸಂಗದಲ್ಲಿನ ಶ್ರೀರಾಮನ ಆಶಿರಃಪಾದಪರ್ಯಂತವಾದ[೧] ವರ್ಣನೆಯನ್ನು ಇದು ಜ್ಞಾಪಿಸುತ್ತದೆ.

---

ಪ್ರಹ್ಲಾದನಾರದವಸುಮುಖ್ಯೈರ್ಭಾಗವತೋತ್ತಮೈಃ।
ಸ್ತೂಯಮಾನಂ ಪೃಥಙ್ಮಾರ್ಗೈರ್ವಚೋಭಿರಮಲಾತ್ಮಭಿಃ॥
ಶ್ರಿಯಾ ಪುಷ್ಟ್ಯಾ ಗಿರಾ ಕಾಂತ್ಯಾ ಕೀರ್ತ್ಯಾ ತುಷ್ಟ್ಯೇಳಯಾಽಜಯಾ।
ವಿದ್ಯಯಾಽವಿದ್ಯಯಾ ಶಕ್ತ್ಯಾ ಮಾಯಯಾ ಚ ನಿಷೇವಿತಮ್॥
ವಿಲೋಕ್ಯ ಸುಭೃಶಂ ಪ್ರೀತೋ ಭಕ್ತ್ಯಾ ಪರಮಯಾ ಯುತಃ।
ಹೃಷ್ಯತ್ತನೂರುಹೋ ಭಾವಪರಿಕ್ಲಿನ್ನಾತ್ಮಲೋಚನಃ॥
ಗಿರಾ ಗದ್ಗದಯಾಽಸ್ತೌಷೀತ್ ಸತ್ತ್ವಮಾಲಂಬ್ಯ ಸಾತ್ವತಃ।
ಪ್ರಣಮ್ಯ ಮೂರ್ಧ್ನಾಽವಹಿತಃ ಕೃತಾಂಜಲಿಪುಟಃ ಶನೈಃ॥ -ಭಾ.(೧೦/೩೭/೪೧-೫೩.)
ಯಥಾಽದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾ ವಿಭೋ।
ವಿಶಂತಿ ಸರ್ವತಃ ಸಿಂಧುಂ ತದ್ವತ್ ತ್ವಾಂ ಗತಯೋಽಂತತಃ॥
ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ ಸೂರ್ಯೋ ನಭೋ ನಾಭಿರಥೋ ದಿಶಃ ಶ್ರುತಿಃ।
ದ್ಯೌಃ ಕಂ ಸುರೇಂದ್ರಾಸ್ತವ ಬಾಹವೋಽರ್ಣವಾಃ ಕುಕ್ಷಿರ್ಮರುತ್ ಪ್ರಾಣಬಲಂ ಪ್ರಕಲ್ಪಿತಮ್॥
ರೋಮಾಣಿ ವೃಕ್ಷೌಷಧಯಃ ಶಿರೋರುಹಾ ಮೇಘಾಃ ಪರಸ್ಯಾಸ್ಥಿನಖಾನಿ ತೇಽದ್ರಯಃ।
ನಿಮೇಷಣಂ ರಾತ್ರ್ಯಹನೀ ಪ್ರಜಾಪತಿರ್ಮೇಢ್ರಂ ತು ವೃಷ್ಟಿಸ್ತವ ವೀರ್ಯಮಿಷ್ಯತೇ॥
ತ್ವಯ್ಯವ್ಯಯಾತ್ಮನ್ ಪುರುಷೇ ಪ್ರಕಲ್ಪಿತಾ ಲೋಕಾಃ ಸಪಾಲಾ ಬಹುಜೀವಸಂಕುಲಾಃ।
ಯಥಾ ಜಲೇ ಸಂಜಿಹತೇ ಜಲೌಕಸೋಽಪ್ಯುದುಂಬರೇ ವಾ ಮಶಕಾ ಮನೋಮಯೇ॥
- ಭಾ.(೧೦/೩೮/೧೧,೧೪-೧೬)
ಆಪಸ್ತೇಽಂಘ್ರ್ಯವನೇಜನ್ಯಸ್ತ್ರೀಂಲ್ಲೋಕಾನ್ ಶುಚಯೋಽಪುನನ್।
ಶಿರಸಾಽಧತ್ತ ಯಾಃ ಶರ್ವಃ ಸ್ವರ್ಯಾತಾಃ ಸಗರಾತ್ಮಜಾಃ॥ - ಭಾಗ.(೧೦/೩೯/೧೫)

೧. ಸ ತೈಃ ಸಮಾವೃತೋ ವಿಭುರ್ಯಯೌ ದಿಶಂ ತದೋತ್ತರಾಮ್।
ಅನಂತಸೂರ್ಯದೀಧಿತಿರ್ದುರಂತಸದ್ಗುಣಾರ್ಣವಃ॥
ಸಹಸ್ರಸೂರ್ಯಮಂಡಲಜ್ವಲತ್ಕಿರೀಟಮೂರ್ಧಜಃ।
ಸುನೀಲಕುಂತಲಾವೃತಾಮಿತೇಂದುಕಾಂತಿಸನ್ಮುಖಃ॥
ಸುರಕ್ತಪದ್ಮಲೋಚನಃ ಸುವಿದ್ಯುದಾಭಕುಂಡಲಃ।
ಸುಹಾಸವಿದ್ರುಮಾಧರಃ ಸಮಸ್ತವೇದವಾಗ್ರಸಃ॥
ದಿವಾಕರೌಘಕೌಸ್ತುಭಪ್ರಭಾಸಕೋರುಕಂಧರಃ।
ಸುಪೀವರೋನ್ನತೋರುಸಜ್ಜಗದ್ವರಾಂಸಯುಗ್ಮಕಃ॥
ಸುವೃತ್ತದೀರ್ಘಪೀವರೋಲ್ಲಸದ್ಭುಜದ್ವಯಾಂಕಿತಃ।
ಜಗದ್ವಿಮಥ್ಯ ಸಂಭೃತಃ ಶರೋಽಸ್ಯ ದಕ್ಷಿಣೇ ಕರೇ॥

### ವಜ್ರಾದಿ ರೇಖೆಗಳಿಂದ ಕೂಡಿದ ಅಂಗಾಲುಗಳು

**ವಜ್ರಾಂಕುಶಪತಾಕಾಬ್ಜಲಕ್ಷ್ಯಪಾದತಲೋಜ್ಜ್ವಲಮ್ ।**
**ಭಿನ್ನಪ್ರವಾಲವಿಲಸದಂಗುಲೀದಲಮಂಡಿತಮ್ ॥ ೫೧ ॥**

ವಜ್ರ, ಅಂಕುಶ, ಪತಾಕೆ, ಕಮಲಗಳ ಚಿಹ್ನೆಗಳಿಂದ ಕೂಡಿದ ಅಂಗಾಲಿನಿಂದ ಹೊಳೆಯುವ, ಒಡೆದ ಹವಳದಂತೆ ಹೊಳೆಯುವ ಉತ್ತಮಬೆರಳುಗಳ ಪರ್ವಗಳಿಂದ ಅಲಂಕೃತವಾದ (ಶ್ರೀಕೃಷ್ಣನ ರೂಪವನ್ನು ಕಂಡನು); (ಪ್ರವಾಲ-ಹವಳ).

ವಿ. : ಇದು ಶ್ರೀಮದ್ಭಾಗವತದ ಕಪಿಲಗೀತೆಯಲ್ಲಿನ ಈ ಕೆಳಗಿನ ಶ್ಲೋಕದ ಭಾವವಾಗಿದೆ :

ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।

### ಚಂದ್ರನಂತಹ ಉಗುರುಗಳು - ರತ್ನಖಚಿತ ನೂಪುರಗಳು

**ಪುಷ್ಕಲೇಂದುಸಮಶ್ರೀಮನ್ನಿಷ್ಕಲಂಕನಖಾವಲಿಮ್ ।**
**ಉತ್ತುಂಗರತ್ನಖಚಿತನೂತ್ನನೂಪುರಶೋಭಿತಮ್ ॥ ೫೨ ॥**

ಪೂರ್ಣಚಂದ್ರನಿಗೆ ಸಮನಾದ ಕಾಂತಿಯುಕ್ತವಾದ ಕಳಂಕರಹಿತವಾದ ಉಗುರುಗಳ ಸಾಲುಗಳಿಂದ ಕೂಡಿತ್ತು; ಉನ್ನತವಾದ ರತ್ನಖಚಿತವಾದ ನವೀನನೂಪುರಗಳಿಂದ ಕಂಗೊಳಿಸುತ್ತಿತ್ತು.

---

ಸ್ವಯಂ ಸ ತೇನ ನಿರ್ಮಿತೋ ಹತೌ ಮಧುಶ್ಚ ಕೈಟಭಃ ।
ಶರೇಣ ಯೇನ ವಿಷ್ಣುನಾ ದದೌ ಚ ಲಕ್ಷ್ಮಣಾನುಜೇ ॥
ಸ ಶತ್ರುಸೂದನೋಽವಧೀನ್ಮಧೋಃ ಸುತಂ ರಸಾಹ್ವಯಮ್ ।
ಶರೇಣ ತೇನ ಚಾಕರೋತ್ ಪುರೀಂ ಚ ಮಾಧುರಾಭಿಧಾಮ್ ॥
ಸಮಸ್ತಸಾರಸಂಭವಂ ಶರಂ ದಧಾರ ತಂ ಕರೇ ।
ಸ ವಾಮಬಾಹುನಾ ಧನುರ್ದಧಾರ ಶಾರ್ಙ್ಗಸಂಜ್ಞಿತಮ್ ॥
ಉದಾರಬಾಹುಭೂಷಣಃ ಶುಭಾಂಗದಃ ಸಕಂಕಣಃ ।
ಮಹಾಂಗುಲೀಯಭೂಷಿತಃ ಸುರಕ್ತಸತ್ಕರಾಂಬುಜಃ ॥
ಅನರ್ಘ್ಯರತ್ನಮಾಲಯಾ ವನಾಖ್ಯಯಾ ಚ ಮಾಲಯಾ ।
ವಿಲಾಸಿವಿಸ್ತೃತೋರಸಾ ಬಭಾರ ಚ ಶ್ರಿಯಂ ಪ್ರಭುಃ ॥
ಸ ಭೂತಿವತ್ಸಭೂಷಣಸ್ತನೂದರೇ ವಲಿತ್ರಯೀ ।
ಉದಾರಮಧ್ಯಭೂಷಣೋಲ್ಲಸತ್ತಟಿತ್ಪ್ರಭಾಂಬರಃ ॥
ಕರೀಂದ್ರಸತ್ಕರೋರುಯುಕ್ಸುವೃತ್ತಜಾನುಮಂಡಲಃ ।
ಕ್ರಮಾಲ್ಪವೃತ್ತಜಂಘಕಃ ಸುರಕ್ತಪಾದಪಲ್ಲವಃ ॥
ಲಸದ್ಧರಿನ್ಮಣಿದ್ಯುತೀ ರರಾಜ ರಾಘವೋಽಧಿಕಮ್ ।
ಅಸಂಖ್ಯಸತ್ಸುಖಾರ್ಣವಃ ಸಮಸ್ತಶಕ್ತಿಸತ್ತನುಃ ॥ - ಮ.ಭಾ.ತಾ.ನಿ. (೯/೭೫-೮೭)

## ಅಪೂರ್ವ ಜಂಘೆ - ಜಾನುಗಳು

ಲಕ್ಷ್ಮೀಕರಾಬ್ಜಸಂಸಕ್ತವೃತ್ತಜಂಘಂ ವೃಷಾಕಪಿಮ್ ।
ರತ್ನದರ್ಪಣಸಂಕಾಶಶಸ್ತಜಾನುದ್ವಯಂ ವಿಭುಮ್ ॥ ೫೩ ॥

ಮಹಾಲಕ್ಷ್ಮಿಯ ಕರಕಮಲಗಳಿಂದ ಆಲಿಂಗಿತವಾದ ದುಂಡಾದ ಜಂಘೆಗಳನ್ನು ಹೊಂದಿದ, ರತ್ನಗನ್ನಡಿಯಂತಹ ಪ್ರಶಸ್ತವಾದ ಎರಡು ಮೊಳಕಾಲುಗಳಿಂದ ಕೂಡಿದ, ವೃಷಾಕಪಿಯೂ, ವಿಭುವೂ ಆದ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. : ೧. 'ವೃಷಾಕಪಿ' ಎಂದರೆ ಎಂದರೆ ವಿಷ್ಣು; (ಇಲ್ಲಿ ಕೃಷ್ಣ ಎಂದರ್ಥ). ವಿಷ್ಣುಸಹಸ್ರನಾಮದಲ್ಲಿ ಬಂದಿರುವ ('ವೃಷಾಕಪಿರಮೇಯಾತ್ಮಾ' - ಶ್ಲೋ. ೧೧) ಈ ಪದದ ಅರ್ಥ ಹೀಗಿದೆ:

ಕಪಿರ್ವರಾಹಃ ಶ್ರೇಷ್ಠಶ್ಚ ಧರ್ಮಶ್ಚ ವೃಷ ಉಚ್ಯತೇ ।
ತಸ್ಮಾದ್ವೃಷಾಕಪಿಂ ಪ್ರಾಹ ಕಶ್ಯಪೋ ಮಾಂ ಪ್ರಜಾಪತಿಃ ॥
-ಮಹಾಭಾರತ (ಶಾಂತಿ. ೩೪೨/೮೯)

'ವಿಭು' ಎಂಬುದು ಸಹ ವಿಷ್ಣುಸಹಸ್ರನಾಮದಲ್ಲಿದೆ ('ವಿಶ್ವಭುಗ್ವಿಭುಃ' -ಶ್ಲೋ. ೨೬, ಹುತಭುಗ್ವಿಭುಃ - ಶ್ಲೋ. ೯೪). ಇದರ ಅರ್ಥ ಹೀಗಿದೆ:

ವಿಭು .... ಸ ಹ್ಯೇವ ... ವಿವಿಧೋಽಭವತ್ (ಗೀತಾಭಾಷ್ಯ ೧೦/೧೨)

'ಭ ದೀಪ್ತೌ' ಎಂಬ ಧಾತುಕೋಶದಿಂದ ವಿಶೇಷವಾಗಿ ಪ್ರಕಾಶಿಸುವವನು; ವಿಶಿಷ್ಟವಾದ ರೂಪ ಅವಯವ, ಗುಣ ಹಾಗೂ ಕ್ರಿಯೆಗಳನ್ನು ಹೊಂದಿದವನು - 'ಭೂ ಪ್ರಾಪ್ತೌ' ಎಂದೂ ಅರ್ಥ; ವಿಷ್ಣುಸಹಸ್ರನಾಮಾವಲಿಯು ಸಹಸ್ರರೂಪಾವಲಿಯೂ ಆಗಿರುವುದರಿಂದ 'ವೃಷಾಕಪಿ' ಎಂಬ ರೂಪವೂ, 'ವಿಭು' ಎಂಬ ಹೆಸರಿನ ಎರಡು ರೂಪಗಳೂ ಸಹ (ಒಟ್ಟಾಗಿ ಮೂರು ರೂಪಗಳು) ವಿವಕ್ಷಿತ ಎಂದು ತಿಳಿಯಬಹುದು. ಶ್ರೀಕೃಷ್ಣನ ರೂಪರೂಪಗಳಿಗೆ ಪರಸ್ಪರ ಅಭೇದವನ್ನು ಸಹ ಈ ಪದಗಳಿಂದ ತಿಳಿಯಬಹುದು.

೨. ಜಂಘೆ ಎಂದರೆ ಮೊಣಕಾಲಿನಿಂದ ಪಾದದವರೆಗಿನ ಕಾಲಿನ ಭಾಗ ಎಂದರ್ಥ.

## ಬಾಳೆಕಂಬದಂತಹ ತೊಡೆಗಳು - ಕರಿಕುಂಭದಂತಹ ಕಟಿಗಳು

ಮೃದುವರ್ತುಲಸಂಭಾಸ್ವದ್ರಂಭಾಸ್ತಂಭೋರುಮವ್ಯಯಮ್ ।
ಕರಿಪೋತಲಸತ್ಕುಂಭಸಮರಮ್ಯಕಟಿದ್ವಯಮ್ ॥ ೫೪ ॥

ಕೋಮಲವೂ, ವರ್ತುಲವೂ ಆದ ಹೊಳೆಯುವ ಬಾಳೆಯ ಕಂಬಗಳಂತಹ ತೊಡೆಗಳ, ಬಾಲಗಜದ ಹೊಳೆಯುವ ಕುಂಭಸ್ಥಳಕ್ಕೆ ಸಮನಾದ ರಮಣೀಯವಾದ ಎರಡು ಪಕ್ಕೆಗಳ,

ಹ್ರಾಸರಹಿತನಾದ (ಶ್ರೀಕೃಷ್ಣನ ರೂಪವನ್ನು ಕಂಡನು); (ರಂಭಾ - ಬಾಳೆ; ಕರಿ - ಆನೆ; ಪೋತ - ಮರಿ; ಕಟಿ - ಸೊಂಟ).

**ಹೊಳೆಯುವ ಪೀತಾಂಬರ - ಚಿನ್ನದ ಒಡ್ಯಾಣ**

**ಉದ್ಯದರ್ಕಶತೋದ್ರಿಕ್ತಹೃದ್ಯಕೌಶೇಯವಾಸಸಮ್ ।**
**ವಿಚಿತ್ರರತ್ನಸಂಶೋಭಿಹೈಮಕಾಂಚೀಗುಣದ್ಯುತಿಮ್ ॥ ೫೫ ॥**

ಉದಿಸುವ ನೂರಾರು ಸೂರ್ಯರನ್ನು ಮೀರಿಸುವ ಹೊಳೆಯುವ ರಮಣೀಯವಾದ ಪೀತಾಂಬರವನ್ನು ಧರಿಸಿದ, ವಿಚಿತ್ರವಾದ ರತ್ನಗಳಿಂದ ಬಹಳವಾಗಿ ಕಂಗೊಳಿಸುವ ಚಿನ್ನದ ಒಡ್ಯಾಣದ ಕಾಂತಿಯಿಂದ ಕೂಡಿದ (ಶ್ರೀಕೃಷ್ಣನ ರೂಪವನ್ನು ಕಂಡನು); (ಕೌಶೇಯ - ರೇಷ್ಮೆ; ಕಾಂಚೀಗುಣ - ಒಡ್ಯಾಣ).

**ವಲಿತ್ರಯಗಳ ಉದರ - ಬ್ರಹ್ಮ ಉದಿಸಿದ ನಾಭಿ**

**ಅನೇಕಭುವನಾಧಾರತನೂದರವಲಿತ್ರಯಮ್ ।**
**ವಿರಿಂಚಿಭೃಂಗಶೋಭಾಬ್ಜಸ್ಫುರನ್ನಾಭಿಸರೋವರಮ್ ॥ ೫೬ ॥**

ಅನೇಕ ಲೋಕಗಳಿಗೆ ಆಸರೆಯಾದ ತೆಳುವಾದ ಉದರದಲ್ಲಿ ಮೂರು ನಿರಿಗಳನ್ನು ಹೊಂದಿದ, ಬ್ರಹ್ಮನೆಂಬ ದುಂಬಿಯಿಂದ ಶೋಭಿಸುವ ಕಮಲದಿಂದ ಹೊಳೆಯುವ ನಾಭಿಸರೋವರದಿಂದ ಕೂಡಿದ (ಶ್ರೀಕೃಷ್ಣನ ರೂಪವನ್ನು ಕಂಡನು); (ವಲಿ - ನಿರಿ).

**ವಿಶಾಲವಾದ ವಕ್ಷಸ್ಥಳ**

**ವಲಿಪಲ್ಲವಸತ್ಕಾಂತ್ಯಾ ಜ್ವಲಿತೋದರಬಂಧನಮ್ ।**
**ಕೃಶಮಧ್ಯವಿಶಾಲೋರಃಸ್ಥಲಚರ್ಚಿತಚಂದನಮ್ ॥ ೫೭ ॥**

ಮೂರು ನಿರಿಗಳ ರೂಪದ ಎಸಳುಗಳ ಉತ್ತಮಕಾಂತಿಯಿಂದ ಹೊಳೆಯುವ ಉದರಬಂಧನದಿಂದ ಕೂಡಿದ, ತೆಳುನಡು ಹಾಗೂ ವಿಶಾಲವಾದ ವಕ್ಷಃಸ್ಥಳದಲ್ಲಿ ಶ್ರೀಗಂಧದಿಂದ ಲೇಪಿತನಾದ (ಶ್ರೀಕೃಷ್ಣನ ರೂಪವನ್ನು ಕಂಡನು).

**ಲಕ್ಷ್ಮೀಧರೆಯರಿಂದ ಕೂಡಿದ ಎರಡು ಪಾರ್ಶ್ವಗಳು**

**ಲಕ್ಷ್ಮೀಧರಾಶ್ಲಿಷ್ಟಪುಷ್ಟಪಾರ್ಶ್ವಯುಗ್ಮಂ ಪರಾತ್ಪರಮ್ ।**
**ಅಂಕಸ್ಥಿತರಮಾವಕ್ಷಃಕುಂಕುಮಾಂಕೋಪಲಕ್ಷಿತಮ್[೧] ॥ ೫೮ ॥**

---

೧. 'ಆಲಿಂಗಿತಪ್ರಿಯತಮಾಕುಚಕುಂಕುಮಾಂಕಲಕ್ಷ್ಯಂ ಜಿಗಾಯ ವಸುದೇವಸುತಸ್ಯ ವಕ್ಷಃ' - ರು.ವಿ. (೧೮/೩೦)

[1]ಲಕ್ಷ್ಮೀ ಹಾಗೂ ಧರಾ ಎಂಬ ರಮಾರೂಪಗಳಿಂದ ಆಲಿಂಗಿತವಾದ ಪುಷ್ಟವಾದ ಎರಡು ಪಾರ್ಶ್ವಗಳಿಂದ ಕೂಡಿದ, ತೊಡೆಯ ಮೇಲೆ ಕುಳಿತ ಮಹಾಲಕ್ಷ್ಮಿಯ ವಕ್ಷಃಸ್ಥಳದ ಕುಂಕುಮ ಚಿಹ್ನೆಯಿಂದ ವಿಶಿಷ್ಟನಾದ, ಶ್ರೇಷ್ಠಕ್ಕಿಂತ ಶ್ರೇಷ್ಠನಾದ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. : 'ಪರಾತ್ಪರಮ್' ಎಂಬುದು ಮುಖ್ಯವಾಗಿ ಶ್ರೀಕೃಷ್ಣನಿಗೆ ಅನ್ವಯಿಸುವ ಪದ. ಅದನ್ನು ಇಲ್ಲಿ ರೂಪಕ್ಕೆ ಅನ್ವಯಿಸುವಂತೆ ಅನುವಾದಿಸಲಾಗಿದೆ.

### ಶ್ರೀವತ್ಸ - ವನಮಾಲೆ - ಕೌಸ್ತುಭಮಣಿ

**ಶ್ರೀವತ್ಸವಕ್ಷಸಂ ಶ್ರೀಮದ್ವನಮಾಲಾವಿಭೂಷಿತಮ್ ।**
**ಸ್ಫುರದಿಂದುಸಮಾಮಂದವರಕೌಸ್ತುಭಮಂಡನಮ್ ॥ ೫೯ ॥**

ವಕ್ಷಃಸ್ಥಳದಲ್ಲಿ ಶ್ರೀವತ್ಸವುಳ್ಳ, ಕಾಂತಿಯುಕ್ತವಾದ ವನಮಾಲೆಯಿಂದ ವಿಶೇಷವಾಗಿ ಕಂಗೊಳಿಸುವ, ಹೊಳೆಯುವ ಚಂದ್ರನಂತಹ ಘನವಾದ ಶ್ರೇಷ್ಠಕೌಸ್ತುಭದ ಅಲಂಕಾರವನ್ನು ಹೊಂದಿದ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. : ಅಮಂದ - ಪೂರ್ಣ, ವರ - ಶ್ರೇಷ್ಠ.

### ರತ್ನಖಚಿತ ಅಂಗುಲೀಯಾದಿಗಳು - ಶಂಖಚಕ್ರಾದಿಗಳನ್ನು ಹಿಡಿದ ಕೈಗಳು

**ವಿಲಸದ್ರತ್ನಕಟಕಕಂಕಣೈರಂಗುಲೀಯಕೈಃ ।**
**ಶಂಖಚಕ್ರಗದಾಪದ್ಮೈಶ್ಚಾಂಕಿತಶ್ರೀಕರಾಂಬುಜಮ್ ॥ ೬೦ ॥**

ಬಹಳ ಹೊಳೆಯುವ ರತ್ನದ ಅಂಗದಗಳಿಂದ, ಬಳೆಗಳಿಂದ, ಉಂಗುರಗಳಿಂದ, ಶಂಖ, ಚಕ್ರ, ಗದಾ, ಪದ್ಮಗಳಿಂದ ಅಂಕಿತವಾದ ಕಾಂತಿಯುಕ್ತವಾದ ಕರಕಮಲಗಳನ್ನು ಹೊಂದಿದ (ಶ್ರೀಕೃಷ್ಣನ ರೂಪವನ್ನು ಕಂಡನು); (ಕಟಕ - ಕಡಗ).

### ಶಂಖದಂತಹ ಕಂಠ - ಕಮಲದಂತಹ ಮುಖ

**ತ್ರಿರೇಖಕಂಬುಸಂಕಾಶಸ್ಫುರನ್ನಿಷ್ಕಶಿರೋಧರಮ್ ।**
**ಅಗಣ್ಯಲಾವಣ್ಯಪೂರ್ಣಪ್ರಸನ್ನಮುಖಸಾರಸಮ್ ॥ ೬೧ ॥**

ಮೂರುರೇಖೆಗಳಿಂದ ಕೂಡಿದ ಶಂಖದಂತಹ, ಹೊಳೆಯುವ ನಿಷ್ಕವೆಂಬ ಆಭರಣದಿಂದ ಕೂಡಿದ ಕಂಠದ, ಎಣಿಕೆಗೆ ಮೀರಿದ ಲಾವಣ್ಯದಿಂದ ತುಂಬಿದ ಪ್ರಸನ್ನ ಮುಖಕಮಲದ (ಶ್ರೀಕೃಷ್ಣನ ರೂಪವನ್ನು ಕಂಡನು) (ಕಂಬು - ಶಂಖ).

---

೧. ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ। -ತಂತ್ರಸಾರಸಂಗ್ರಹ(೧/೧೯)

### ಕೆಂಪಾದ ತುಟಿ - ಜಾಜಿಯಂತಹ ದಂತಪಂಕ್ತಿ

**ಅತಿರಕ್ತಮೃದುಸ್ನಿಗ್ಧಪಕ್ವಬಿಂಬನಿಭಾಧರಮ್ ।**
**ಕುಂದಕುಡ್ಮಲಸಂಶೋಭಿದಂತಪಂಕ್ತಿಂ ದಯಾನಿಧಿಮ್ ॥ ೬೨ ॥**

ತುಂಬಾ ಕೆಂಪಾದ ಕೋಮಲವಾದ ಮನೋಹರವಾದ ಮಾಗಿದ ತೊಂಡೆಹಣ್ಣಿನಂತಹ ತುಟಿಗಳನ್ನು ಹೊಂದಿದ, ಜಾಜಿಯಮೊಗ್ಗಿನಂತೆ ಬಹಳವಾಗಿ ಹೊಳೆಯುವ ದಂತಪಂಕ್ತಿಯಿಂದ ಕೂಡಿದ, ದಯಾನಿಧಿಯಾದ (ಶ್ರೀಕೃಷ್ಣನ ರೂಪವನ್ನು ಕಂಡನು); (ಕುಂದ-ಜಾಜಿ; ಕುಡ್ಮಲ-ಮೊಗ್ಗು).

### ಬೆಳದಿಂಗಳಿನಂತಹ ಮಂದಹಾಸ - ಇಂದ್ರನೀಲದಂತಹ ಕೆನ್ನೆಗಳು

**ಚಂದ್ರಿಕಾಸೌಭಗಸ್ಪರ್ಧಿಮಂದಹಾಸಂ ಮನೋಹರಮ್ ।**
**ಹರಿನೀಲಜ್ವಲದ್ವಪ್ರವಿಲಸದ್ಗಂಡಮಂಡಲಮ್ ॥ ೬೩ ॥**

ಬೆಳದಿಂಗಳಿನ ಕಾಂತಿಯನ್ನು ಮೀರಿಸುವ ಮಂದಹಾಸದಿಂದ ಮನೋಹರವಾದ, ಇಂದ್ರನೀಲಮಣಿಯ ಹೊಳೆಯುವ ಭಿತ್ತಿಯಂತೆ ಅತಿಶಯವಾಗಿ ಹೊಳೆಯುವ, ಕಪೋಲ ಪ್ರಾಂತದ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. :ಸೌಭಗ - ಸಂಪತ್ ; ವಪ್ರ - ಭಿತ್ತಿ.

### ಸೂರ್ಯಪ್ರಕಾಶದ ಕುಂಡಲಗಳು - ಸಂಪಿಗೆಯಂತಹ ಮೂಗು

**ತರುಣಾದಿತ್ಯಸಂಕಾಶವರಕುಂಡಲಮಂಡಿತಮ್ ।**
**ಲಸನ್ನಾಸಾಪ್ರಭಾಮುಷ್ಟನವಚಂಪಕಸಂಪದಮ್ ॥ ೬೪ ॥**

ಉದಿಸುವ ಸೂರ್ಯನಂತಹ ಶ್ರೇಷ್ಠ ಕುಂಡಲಗಳಿಂದ ಅಲಂಕೃತನಾದ, ಹೊಳೆಯುವ ಮೂಗಿನ ಕಾಂತಿಯಿಂದ ನೂತನಸಂಪಿಗೆಯ ಸೌಂದರ್ಯವನ್ನು ಮೀರಿಸುವ (ಶ್ರೀಕೃಷ್ಣನ ರೂಪವನ್ನು ಕಂಡನು).

### ಕಮಲದಂತಹ ಕಣ್ಣುಗಳು - ಶಾರ್ಙ್ಗದಂತಹ ಹುಬ್ಬುಗಳು

**ಚಲನ್ಮಧುಕರಾಸಕ್ತಜಲಜೋಪಮಲೋಚನಮ್ ।**
**ಇಂದ್ರನೀಲೋತ್ಪಲಮಯಶಾರ್ಙ್ಗಸೌಂದರ್ಯಜಿದ್ಭ್ರುವಮ್[೧] ॥ ೬೫ ॥**

---

೧. ಶ್ಯಾಮಂ ತ್ರಿವಕ್ರಂ ವಿಧಿಮುಖ್ಯದೇವಸಾಮ್ರಾಜ್ಯವಿಶ್ರಾಣನಹೇತುಲೀಲಮ್ ।
ಕಾಮಾಗ್ರ್ಯಚಾಪಾಕೃತಿ ಕಾಮತಾತಭ್ರೂಮಂಡಲಂ ಖಂಡಯತಾದಘಂ ನಃ ॥ - ರು.ವಿ. (೧೮/೫೭)

ಹಾರಾಡುವ ದುಂಬಿಗಳಿಂದ ಕೂಡಿದ ಕಮಲದಂತಹ ಕಣ್ಣುಗಳ, ಇಂದ್ರನೀಲ ಹಾಗೂ ಕನ್ನೈದಿಲೆಗಳಂತಹ ಶಾರ್ಙ್ಗದ ಸೌಂದರ್ಯವನ್ನು ಮೀರಿಸುವಂತಹ ಹುಬ್ಬುಗಳ (ಶ್ರೀಕೃಷ್ಣನ ರೂಪವನ್ನು ಕಂಡನು).

ವಿ. ಶಾರ್ಙ್ಗ ಎಂಬುದು ಶ್ರೀಕೃಷ್ಣನ ಧನುಸ್ಸಿನ ಹೆಸರು; ಅದಕ್ಕೆ ಸರಸ್ವತೀದೇವಿಯು ಅಭಿಮಾನಿದೇವತೆ: 'ಶಾರ್ಙ್ಗಂ ಚ ವಿದ್ಯಾ' (ಮ.ಭಾ.ತಾ.ನಿ. ೩/೭೪).

**ಭೃಂಗದಂತಹ ಕುಡಿನೋಟ - ರಮ್ಯವಾದ ರತ್ನತಿಲಕ**

**ಶ್ರೀಭೂಮುಖಾಂಬುಜಾಸಕ್ತಲೋಲಾಪಾಂಗಮಧುವ್ರತಮ್ ।**
**ಹೃದ್ಯೋರ್ಧ್ವಪುಂಡ್ರಮಧ್ಯಸ್ಥಸದ್ರತ್ನತಿಲಕೋಜ್ಜ್ವಲಮ್ ॥ ೬೬ ॥**

ಶ್ರೀದೇವಿ-ಭೂದೇವಿಯರ ಮುಖಕಮಲಗಳಲ್ಲಿ ನೆಟ್ಟ ಭೃಂಗದಂತಹ ಚಂಚಲ ಕುಡಿ-ನೋಟದ, ಮನೋಹರವಾದ ಊರ್ಧ್ವಪುಂಡ್ರಗಳ ಮಧ್ಯೆ ಇದ್ದಂತಹ ಶ್ರೇಷ್ಠ ರತ್ನತಿಲಕದಿಂದ ಹೊಳೆಯುವ (ಶ್ರೀಕೃಷ್ಣನ ರೂಪವನ್ನು ಕಂಡನು).

**ಸೂರ್ಯನಂತಹ ಕಿರೀಟ - ಅನರ್ಘ್ಯವಾದ ಹಾರಕೇಯೂರಾದಿಗಳು**

**ಅಲಕಾಸಕ್ತವಿಲಸನ್ಮುಕುಟಾದ್ಭುತಭಾಸ್ಕರಮ್ ।**
**ಅನರ್ಘ್ಯಹಾರಕೇಯೂರನೂಪುರಾದ್ಯೈರ್ವಿರಾಜಿತಮ್ ॥ ೬೭ ॥**

ಮುಂಗುರುಳುಗಳ ಮೇಲೆ ಅದ್ಭುತಸೂರ್ಯನಂತೆ ಹೊಳೆಯುವ ಕಿರೀಟದ, ಅಮೂಲ್ಯ-ವಾದ ಹಾರ, ಕೇಯೂರ, ನೂಪುರ ಮೊದಲಾದವುಗಳಿಂದ ವಿಶೇಷವಾಗಿ ಕಂಗೊಳಿಸುವ (ಶ್ರೀಕೃಷ್ಣನ ರೂಪವನ್ನು ಕಂಡನು).

**ಅನಂತಮನ್ಮಥರ ಲಾವಣ್ಯ - ಸುವರ್ಣಮಂಟಪ - ಕಮಲಪೀಠ**

**ಕಂದರ್ಪಕೋಟಿಲಾವಣ್ಯಮಂದಿರಾಕಾರಮಚ್ಯುತಮ್ ।**
**ಸುವರ್ಣಮಂಟಪಾಂತಃಸ್ಥಂ ಕಮಲಾಮಲವಿಷ್ಟರಮ್ ॥ ೬೮ ॥**

ಕೋಟಿ ಮನ್ಮಥರ ಕಾಂತಿಗೆ ನೆಲೆ ಎನ್ನಿಸಿದ ಆಕೃತಿಯ, ಚಿನ್ನದ ಮಂಟಪದೊಳಗೆ ನೆಲೆಸಿದ, ನಿರ್ಮಲವಾದ ಕಮಲಪೀಠದಿಂದ ಕೂಡಿದ, ನಾಶರಹಿತನಾದ (ಶ್ರೀಕೃಷ್ಣನ ರೂಪವನ್ನು ಕಂಡನು); (ವಿಷ್ಟರ - ಪೀಠ).

ವಿ. 'ಅಚ್ಯುತ'[೧] ಎಂಬುದು 'ಸರ್ವಾದಿರಚ್ಯುತಃ' (ಶ್ಲೋ. ೧೧), 'ಅಚ್ಯುತಃ ಪ್ರಥಿತಃ ಪ್ರಾಣಃ' (ಶ್ಲೋ. ೩೫) ಎಂಬುದಾಗಿ ವಿಷ್ಣುಸಹಸ್ರನಾಮದಲ್ಲಿ ಎರಡು ಬಾರಿ

೧. ಯಸ್ಮಾನ್ನ ಚ್ಯುತಪೂರ್ವೋಽಹಮಚ್ಯುತಸ್ತೇನ ಕರ್ಮಣಾ । - ಮಹಾಭಾರತ (ಶಾಂತಿ. ೩೪೨/೭೧)

ಪ್ರಸ್ತಾಪಿತವಾಗಿದೆ; ಹಿಂದೆ ಹೇಳಿದಂತೆ ಇವು ನಾಮಗಳಾಗಿರುವಂತೆ ರೂಪಗಳೂ ಸಹ ಆಗಿವೆ ಎಂದು ತಿಳಿಯಬೇಕು.

### ಜಗಜ್ಜನ್ಮಾದಿಗಳಿಗೆ ಕಾರಣ - ಶೇಷನ ಹೆಡೆಗಳ ರತ್ನಛತ್ರ

ವಿಶ್ವಸ್ಥೇಮಲಯೋತ್ಪತ್ತಿಮುಕ್ತ್ಯಾದೇರ್ಮುಖ್ಯಕಾರಣಮ್ ।
[೧]ಅಚ್ಛಶೇಷಫಣಾರತ್ನಚ್ಛತ್ರಶೋಭಿತಮೈಕ್ಷತ ॥ ೬೯ ॥

ಜಗತ್ತಿನ ರಕ್ಷಣೆ, ಉತ್ಪತ್ತಿ, ನಾಶ, ಮುಕ್ತಿ ಮೊದಲಾದವುಗಳಿಗೆ ಮುಖ್ಯಕಾರಣನಾದ, ಶುಭ್ರವಾದ ಶೇಷನ ಹೆಡೆಗಳೆಂಬ ರತ್ನಚ್ಛತ್ರಗಳಿಂದ ಭೂಷಿತನಾದ ಶ್ರೀಕೃಷ್ಣನ ರೂಪವನ್ನು ಕಂಡನು.

### ಬ್ರಹ್ಮಾದಿಗಳ ದಿವ್ಯಸ್ತುತಿ

ವಿಧಿಮುಖ್ಯೈಃ ಸುರಗಣೈರ್ಮುದಿತೈರ್ಮುನಿಪುಂಗವೈಃ ।
ಗೀಯಮಾನಂ ದಯಾದೃಷ್ಟಿಕ್ಷಾಲಿತಾಶ್ರಿತಕಲ್ಮಷಮ್ ॥ ೭೦ ॥

ಬ್ರಹ್ಮ ಮೊದಲಾದ ದೇವತೆಗಳ ಗುಂಪುಗಳು, ಸಂತುಷ್ಟರಾದ ಮುನಿಶ್ರೇಷ್ಠರು ಹಾಡುವಂತಹ, ಕರುಣಾದೃಷ್ಟಿಯಿಂದ ತನ್ನನ್ನು ಆಶ್ರಯಿಸಿದವರ ದೋಷವನ್ನು ತೊಡೆದುಹಾಕುವ (ಶ್ರೀಕೃಷ್ಣನ ರೂಪವನ್ನು ಕಂಡನು).

### ಅಕ್ರೂರ ಮಾಡಿದ ದಿವ್ಯಸ್ತುತಿ

ದೃಷ್ಟ್ವಾ ತಮಂಭೋರುಹಪತ್ರನೇತ್ರಂ
ತುಷ್ಟಾವ ತುಷ್ಟಾಖಿಲಚಿತ್ತವೃತ್ತಿಃ ।
ಪಶ್ಚಾತ್ ಸಿಷೇವೇ ರಥಸಂಸ್ಥಿತಂ ತಂ
ಮುಕ್ತೋಽಪಿ ನೈವೋಜ್ಝತಿ ಕೃಷ್ಣಸೇವಾಮ್ ॥ ೭೧ ॥

---

೧. ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ । -ಶ್ರೀಜಯತೀರ್ಥರು (ನ್ಯಾಯಸುಧಾ)
ಸ್ಥೇಮಾ ಸ್ಥೈರ್ಯಂ ರಕ್ಷೇತ್ಯರ್ಥಃ । ಉಕ್ತಂ ಹಿ ಪ್ರುತಪ್ರಕಾಶೇಽಪಿ । 'ಅಖಿಲಭುವನಜನ್ಮಸ್ಥೇಮಭಂಗಾದಿಲೀಲೇ' ಇತಿ ಶ್ರೀಭಾಷ್ಯವ್ಯಾಖ್ಯಾನಾವಸರೇ ಸ್ಥೇಮಾ ಸ್ಥಿತಿರಿತಿ । ಸ್ಥಿತಶಬ್ದಾದಿಮನಿಚ್ಪ್ರತ್ಯತೇ ಪ್ರಿಯಸ್ಥಿರೇತ್ಯಾದಿಸೂತ್ರೇಣ ಸ್ಥಿರಶಬ್ದಸ್ಯ ಸ್ಥಾದೇಶೇ ಆದ್ಗುಣ ಇತಿ ಗುಣೇ ಚ ಸ್ಥೇಮೇತಿ ರೂಪಮ್ । ಯದ್ಯಪಿ ವಾಮನವೃತ್ತ್ಯಾದೌ ಮುಗ್ಧಪ್ರೌಢಸ್ಥಿರಶಬ್ದಾನಾಂ ಪೃಥ್ವ್ಯಾದಿಷ್ವಪಾಠಾತ್ ಪೃಥ್ವಾದಿಭ್ಯ ಇಮನಿಜ್ವೇತ್ಯುಕ್ತೇ ಮನಿಜಪ್ರಾಪ್ತೇರಿಮನಿಜಂತ-ಪ್ರಯೋಗೋಽಸಾಧುರಿತಿ ಉಕ್ತಮ್ । ತಥಾಪಿ ನೈಷಧದ್ವಾದಶಸರ್ಗಸ್ಥಸ್ಯ 'ಯತ್ ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತ್' ಇತ್ಯಸ್ಯ ವ್ಯಾಖ್ಯಾನೇ 'ವರ್ಣದೃಢಾದಿಭ್ಯಃ ಷ್ಯಞ್ ಚ' ಇತಿ ಸೂತ್ರೇ ಚಕಾರೇ-ಣೇಮನಿಜಃ ಸಮುಚಿತತ್ವಾತ್ ಸ್ಥಿರಶಬ್ದಸ್ಯ ದೃಢಾದಿಷು ಪಾಠಾದಿಮನಿಜುಕ್ತತ್ವಾತ್ ಸಾಧುರೇವಾಯಂ ಧ್ಯೇಯಃ ಯದ್ವಾ, ತಿಷ್ಠತೇರೌಣಾದಿಕೇ ಮನಿಚಿ ಗುಣೇ ರೂಪಂ ಸ್ಥೇಮೇತಿ । ಸ್ಥಿತಿರಿತ್ಯರ್ಥಃ । - ಪರಿಮಳ (೧/೧/೧)

ಕಮಲಪತ್ರದಂತಹ ಕಣ್ಣುಗಳ ಶ್ರೀಕೃಷ್ಣನ ರೂಪವನ್ನು ಕಂಡು ಸಂತುಷ್ಟವಾದ ಸಕಲ ಮನೋವೃತ್ತಿಗಳಿಂದ ಕೂಡಿದ ಅಕ್ರೂರನು ರಥದಲ್ಲಿ ಕುಳಿತ ಆ ಶ್ರೀಕೃಷ್ಣನನ್ನು ಸ್ತುತಿಸಿದನು; ಬಳಿಕ ಸೇವಿಸಿದನು; ಮುಕ್ತನಾದವನೂ ಸಹ ಶ್ರೀಕೃಷ್ಣನ ಸೇವೆಯನ್ನು ಸರ್ವಥಾ ತೊರೆಯಲಾರ; ಅಲ್ಲವೆ !

ವಿ. : ಮುಕ್ತರೂ ಸಹ ಸ್ವಾಭಾವಿಕವಾಗಿ ಬಗೆಬಗೆಯ ಹರಿಸೇವಾಕಾರ್ಯಗಳಲ್ಲಿ ತೊಡಗಿರುವ ವಿವರ ಮಹಾಭಾರತತಾತ್ಪರ್ಯನಿರ್ಣಯ (೨/೬೨) ದಲ್ಲಿದೆ :

ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ।
ಕೃಷ್ಣೋ ವನ್ಯೈರಿಜ್ಯತೇ ಸಮ್ಯ್ರಶಾನ್ತೈಃ ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ॥

### ಯಮುನಾನದಿಯ ಸ್ತೋತ್ರ

[೧]ಯಮುನಾ ಸಾ ವಿಜಯತೇ ಯಮಿನಾಂ ಪರಮಪ್ರಿಯಾ।
ಪ್ರದರ್ಶಯತಿ ಯಾ ಕೃಷ್ಣಂ ಸುಧಿಯಃ ಸ್ನಾನಮಾತ್ರತಃ ॥ ೭೨ ॥

ಸ್ನಾನಮಾತ್ರದಿಂದಲೇ ನಿರ್ಮಲಬುದ್ಧಿಯವರಿಗೆ ಶ್ರೀಕೃಷ್ಣನನ್ನು ತೋರಿಸಿಕೊಡುವ, ಜಿತೇಂದ್ರಿಯರಿಗೆ ಪರಮಪ್ರಿಯಳಾದ ಆ ಯಮುನೆಯು ಉತ್ಕೃಷ್ಟಳಾಗಿರುವಳು.

### ಮಧುರೆ ತಲುಪಿದ ಕೃಷ್ಣ

ಮಧುರಾಮುಪಗಮ್ಯಾಥ ಕೃತಸ್ಥಾನಃ ಪುರಾದ್ಬಹಿಃ।
ಪುರತಸ್ತ್ವಂ ಪುರಂ ಯಾಹೀತ್ಯವದದ್ಗಾಂದಿನೀಸುತಮ್ ॥ ೭೩ ॥

ಮಧುರೆಯನ್ನು ಸೇರಿದ ಬಳಿಕ ಊರ ಹೊರಗೆ ನೆಲೆಸಿದ ಶ್ರೀಕೃಷ್ಣನು ''ನೀನು ಮುಂಚಿತವಾಗಿ ಪಟ್ಟಣಕ್ಕೆ ತೆರಳು'' ಎಂಬುದಾಗಿ ಗಾಂದಿನೀಸುತನಾದ ಅಕ್ರೂರನಿಗೆ ತಿಳಿಸಿದ.

ವಿ. : ಗಾಂದಿನೀ – ಗಾಂದಿನಿಯು ಅಕ್ರೂರನ ತಾಯಿ; ಕಾಶಿರಾಜನ ಮಗಳು; ಶ್ವಫಲ್ಕನ ಪತ್ನಿ; ಗರ್ಭದಲ್ಲಿದ್ದಾಗಲೇ ಪ್ರತಿನಿತ್ಯ ಗೋದಾನಮಾಡುವ ವ್ರತವನ್ನು ಹೊಂದಿದ್ದ ಮಹನೀಯಳು. ಅದರ ಪುಣ್ಯದ ಫಲವೆಂಬಂತೆ ಗೋಪಾಲಕೃಷ್ಣನಾದ ಶ್ರೀಹರಿಯನ್ನು ಸಾಕ್ಷಾತ್ತಾಗಿ ಸಂದರ್ಶಿಸುವ

---

೧. ಯಮುನಾ ನದಿಯ ವರ್ಣನೆಯ ಈ ಶ್ಲೋಕವು ಶ್ರೀವಾದಿರಾಜರ ತೀರ್ಥಪ್ರಬಂಧದಲ್ಲಿಯೂ ಬಂದಿದ್ದು ಅದಕ್ಕೂ ಶ್ರೀನಾರಾಯಣಾಚಾರ್ಯರು ವ್ಯಾಖ್ಯಾನವನ್ನು ಬರೆದಿರುವರು:
ಕಾಲಿಂದಿ ತ್ವಮಘಾನ್ವಿತಾನಪಿ ಸತಃ ಕೃತ್ವಾ ಪವಿತ್ರಾತ್ಮನೋ
ಗಂತುಂ ನೈವ ಕದಾऽಪಿ ಮುಂಚಸಿ ತವ ಭ್ರಾತುರ್ನಿಕೇತಂ ಪ್ರತಿ।
ಕಿಂತು ಕ್ಷೀರಪಯೋಧಿವಾಸನಿರತಾನ್ ಪ್ರೀತ್ಯಾ ಕರೋಷ್ಯಾಶ್ರಿತಾನ್
ಸ್ನಿಗ್ಧೇ ಭರ್ತರಿ ಕಾಮಿನೀಜನರುಚಿಃ ತತ್ಕ್ಷ ಏವ ಹ್ಯಲಮ್ ॥ –ರು.ವಿ.(೭/೩.೫), ತೀರ್ಥಪ್ರಬಂಧ (೨/೧೨)

ಭಾಗ್ಯವಂತನಾದ ಅಕ್ರೂರನನ್ನು ಮಗನನ್ನಾಗಿ ಪಡೆದಿದ್ದಳು ಎಂಬುದು [೧]ಹರಿವಂಶದಿಂದ ಸ್ಫುಟ-ಪಡುವುದು.

### ಅಕ್ರೂರ ಮಾಡಿದ ಪ್ರಾರ್ಥನೆ

ಪ್ರಿಯಸಂಗಮವಿಚ್ಛೇದಭಯನಿರ್ವಿಣ್ಣಧೀರಸೌ।
ಗೃಹಪುತ್ರಕಲತ್ರೇಚ್ಛಾರಹಿತೋ ವಕ್ತಿ ಮಾಧವಮ್ ॥ ೭೪ ॥

ಪ್ರಿಯನಾದ ಶ್ರೀಕೃಷ್ಣನ ಸಂಗವು ತಪ್ಪುವುದೆಂಬ ಭಯದಿಂದ ಖಿನ್ನಮನಸ್ಕನಾದ, ಮನೆ, ಮಕ್ಕಳು, ಹೆಂಡತಿಯಲ್ಲಿ ಬಯಕೆಯಿರದ ಆ ಅಕ್ರೂರನು ಮಾಧವನಾದ ಶ್ರೀಕೃಷ್ಣನಿಗೆ ನಿವೇದಿಸಿದ.

### ಸಂಸಾರಸಾಗರಕ್ಕೆ ವಿಷ್ಣುಪಾದವೇ ನೌಕೆ

ಸಂಸಾರಾಸಾರಸಿಂಧೋರ್ಜನಿಮರಣಜರಾದ್ಯೂರ್ಮಿಭಿರ್ಬಾಧಿತಾನಾಂ
ದಾರಾಗಾರಾದಿಭಾರಾಃ ಕಿಮಿಹ ಸುಖಕರಾಃ ಪ್ರೇಮಪಾಶೈರ್ನಿಬದ್ಧಾಃ।
ಕೃಷ್ಣ ತ್ವತ್ಪಾದಪೋತಂ ಪ್ರದಿಶ ತದನಿಶಂ ಸತ್ಪತಾಕಂ ಸಕೇತುಂ
ರಮ್ಯಂ ಕರ್ಮಂದಿಗಮ್ಯಂ ಭವಜಲಧಿಭವತ್ಸ್ವೇದವಿಚ್ಛೇದಹೇತುಮ್ ॥ ೭೫ ॥

ಸಂಸಾರವೆಂಬ ನಿಸ್ಸಾರವಾದ ಈ ಸಾಗರದಲ್ಲಿ ಹುಟ್ಟು, ಸಾವು, ಮುಪ್ಪು ಮೊದಲಾದ ಅಲೆಗಳಿಂದ ನೊಂದವರಿಗೆ ಹೆಂಡತಿ, ಮನೆ ಮೊದಲಾದ ಪ್ರೇಮಪಾಶದಿಂದ ಬಿಗಿದ ಭಾರದ ವಸ್ತುಗಳು ಸುಖನೀಡಬಲ್ಲವೆ? ಎಲೈ ಶ್ರೀಕೃಷ್ಣ! ಉತ್ತಮ ಪತಾಕೆಯಿಂದ ಕೂಡಿದ, ಧ್ವಜವನ್ನು ಹೊಂದಿದ, ಯತಿಗಳಿಗೆ ಲಭಿಸುವ, ಸಂಸಾರಸಾಗರದಿಂದ ಹುಟ್ಟುವ ಬೆವರನ್ನು ಪರಿಹರಿಸಲು ಸಾಧನವಾದ, ಮನೋಹರವಾದ ನಿನ್ನ ಪಾದವೆಂಬ ನಾವೆಯನ್ನು ಸದಾ ನನಗೆ ಒದಗಿಸು.

ವಿ. : ೧. ಸಂಸಾರವು ಒಂದು ಸಮುದ್ರ; ಹುಟ್ಟು, ಸಾವು, ಮುಪ್ಪು ಮೊದಲಾದವು ಅದರ ಅಲೆಗಳು; ಹೆಂಡತಿ ಮನೆ ಮೊದಲಾದವು ಭಾರ ಎನ್ನಿಸುವ ಪದಾರ್ಥಗಳು. ಅದಕ್ಕೆ ಅವುಗಳನ್ನು ಬಿಗಿದಿರುವ ಪಾಶ ಅಭಿಮಾನವೆನ್ನುವಂತಹುದು. ಇಂತಹ ಸಂಸಾರಸಾಗರವನ್ನು ದಾಟಲು ಇರುವ ಏಕಮಾತ್ರ ನಾವೆ ಎಂದರೆ ಶ್ರೀಹರಿಯ ಪಾದ ಮಾತ್ರ ಎಂಬುದು ಇಲ್ಲಿಯ ಭಾವ.

೨. [೨]ಸಂಸಾರಸಮುದ್ರವು ಎಷ್ಟು ಘೋರ ಎಂಬುದರ ರಮ್ಯ ಚಿತ್ರಣ ಇಲ್ಲಿದೆ.

---

೧. ಶ್ವಫಲ್ಕಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ।
ಗಾಂದಿನೀ ನಾಮ ಸಾ ಗಾಂ ತು ದದೌ ವಿಪ್ರೇಷು ನಿತ್ಯಶಃ॥ -ಹರಿವಂಶ(೧/೩.೪/೭)

೨. ಪ್ರಾಗೇವ ಸಮುದ್ರಪತಿತಸ್ಯ ಪುನರ್ಭಾರಪ್ರಕ್ಷೇಪೇ ಸುತರಾಂ ನಿಮಜ್ಜನಪ್ರಸಂಗಾದಿತಿ ಭಾವಃ। -ವ್ಯಾ.

೩. ಸಂಸಾರಸಾಗರದ ಘೋರತೆಯನ್ನು ನಿರೂಪಿಸುವ ಈ ಕೆಳಗಿನ ಶ್ಲೋಕಗಳು ಸಹ ಗಮನಾರ್ಹ :

ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯಜಲಗ್ರಹೈರನುಪಮೈಃ ಕಾಮಾದಿಭಂಗಾಕುಲೇ ।
ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾ ಮಗ್ನರೂಪಂ ಸದಾ ॥
- ಶ್ರೀರಾಘವೇಂದ್ರಸ್ತೋತ್ರ

ನಾನಾವಿಕರ್ಮಜನಿತಾಶುಭಸಾಗರಾಂತಃಸಂಭ್ರಾಮ್ಯತಃ ಪ್ರತಿಹತಸ್ಯ ಷಡೂರ್ಮಿಜಾಲೈಃ ।
ಪುತ್ರಾದಿನಕ್ರನಿಗೃಹೀತಶರೀರಕಸ್ಯ ವಾಸಿಷ್ಠಕೃಷ್ಣ ಮಮ ದೇಹಿ ಕರಾವಲಂಬಮ್ ॥
-ಶ್ರೀವಾಸಿಷ್ಠಕೃಷ್ಣಕರಾವಲಂಬನಸ್ತೋತ್ರ(೩.೬)

೪. ಶ್ರೀಹರಿಯ ಪಾದವು ವಿಚಿತ್ರವಾದ ನೌಕೆ; ಅದಕ್ಕೆ ಸಜ್ಜನರೇ ಪತಾಕೆ ಇತ್ಯಾದಿ ಇಲ್ಲಿಯ ವಿವರಗಳು ಶ್ರೀಮದ್ಭಾಗವತತಾತ್ಪರ್ಯ(೧೦/೩/೩.೨)ದ ಆಧಾರವನ್ನು ಹೊಂದಿವೆ:

ಭಗವತ್ಪಾದಪೋತೋಽಸೌ ನಾನ್ಯಪೋತಸಮೋ ಭವೇತ್ ।
ಸನ್ನಿಧಾಯಾಪಿ ಶಿಷ್ಯೇಷು ತಮೇವ ಪ್ರಾಪ್ನುಯುರ್ಯತಃ ॥ ಇತಿ ವಾಮನೇ ।

ಭಗವತ್ಪಾದನೌಕಾ ಯಾ ನೇಯಂ ನೌಕೋಪಮಾ ಭವೇತ್ ।
ತಯಾ ತೀರ್ತ್ವಾ ತು ತಾಮೇವ ಪ್ರಾಪ್ಯ ತಿಷ್ಠಂತಿ ಯತ್ರ ತತ್ ॥ ಇತಿ ಬ್ರಾಹ್ಮೇ ।

೫. ಶೋಕ, ಮೋಹ, ಮುಪ್ಪು , ಸಾವು, ಹಸಿವು ಹಾಗೂ ಬಾಯಾರಿಕೆ - ಈ ಆರು ಊರ್ಮಿಗಳು : ಶೋಕಮೋಹೌ ಜರಾಮೃತ್ಯೂ ಕ್ಷುತ್ಪಿಪಾಸೇ ಷಡೂರ್ಮಯಃ । - ಸ್ಮೃತಿ.

೬. ಕರ್ಮಂದಿ - ಯತಿ ; ಸ್ವೇದ - ಬೆವರು.

### ಪುಣ್ಯವಿಲ್ಲದವರಿಗೆ ಶ್ರೇಯಸ್ಸೆಲ್ಲಿಯದು !

ಪ್ರಾಯೋ ವ್ರಜಸ್ತ್ರೀಜನದತ್ತಶಾಪೋ
ಮಾಮಸ್ಪೃಶದ್ಯೇನ ಭವಾನ್ ವಿಯುಂಕ್ತೇ ।
ಲಾವಣ್ಯವಾರಾಂನಿಧಿಪೂರ್ಣಮೂರ್ತಿಃ
ಶ್ರೇಯೋ ವಿನಾ ಪುಣ್ಯಮುಪಾರ್ಜಯೇತ್ ಕಃ ॥ ೭೬ ॥

ಗೋಕುಲದ ನಾರಿಯರು ನೀಡಿದ ಶಾಪ ನನಗೆ ತಟ್ಟಿತೆನ್ನಿಸುವುದು. ಅದರಿಂದಾಗಿ ಲಾವಣ್ಯ-ಸಾಗರದಿಂದ ತುಂಬಿದ ರೂಪದ ನೀನು ದೂರಾಗುತ್ತಿರುವಿ; ಪುಣ್ಯವಿಲ್ಲದೆ ಶ್ರೇಯಸ್ಸನ್ನು ಯಾವನು ತಾನೇ ಸಂಪಾದಿಸಿಯಾನು?

ವಿ. : ಇಲ್ಲಿ 'ಶ್ರೇಯಃ' ಎಂಬುದು ಕಠೋಪನಿಷತ್ತಿನಲ್ಲಿ ಬಂದಿರುವ ಪದ. ಪಾರಲೌಕಿಕಸುಖ ಎಂದು ಇದರ ಅರ್ಥ. ಧನದಿಂದ ಪ್ರೇಯಸ್ ಎಂದರೆ ಐಹಿಕಸುಖ ಲಭಿಸೀತು. ಆದರೆ ಶ್ರೇಯಸ್ಸಿಗೆ ಮಾತ್ರ ಪುಣ್ಯವೇ ಸಾಧನ ಎಂಬ ಇಲ್ಲಿಯ ತತ್ತ್ವ ಅತ್ಯಂತರೋಚಕವಾದುದು; ಎಂದರೆ ಧನವು ದಾನಾದಿ ಸತ್ಕಾರ್ಯಗಳಿಂದ ಪುಣ್ಯವಾಗಿ ಪರಿವರ್ತಿತವಾದಾಗ, ಅದು ಪಾರಲೌಕಿಕಸುಖಕ್ಕೆ ಕಾರಣವಾಗುವುದು ಎಂದು ಭಾವ;(ವಾರಾಂನಿಧಿ – ಜಲನಿಧಿ, ಸಮುದ್ರ).

### ವಂದ್ಯವೆನ್ನಿಸುವ ಮೂಕತ್ವಾದಿಗಳು

**ಪುಣ್ಯಶ್ರೇಣ್ಯತಿದೂರಮಪ್ಯನುದಿನಂ ಮೂಕಂ ಸತಾಂ ದೂಷಣೇ-**
**ಷ್ವಂಧಂ ಮೀನದೃಗೀಕ್ಷಣೇಷು ಬಧಿರಂ ತ್ವದ್ಭಿನ್ನಗೋಷ್ಠೀಷು ಮಾಮ್ ।**
**ಪಂಗುಂ ಪಾಪಕರಪ್ರಯಾಣಕರಣೇಽಪಾಣಿಂ ಚ ತತ್ಕರ್ಮಸು**
**ಕ್ಲೀಬಂ ಗ್ರಾಮ್ಯರತೌ ಮುಕುಂದ ಕುರು ಮಾಂ ಮೂಢಂ ತದೀಯಸ್ಮೃತೌ ॥೭೭॥**

ಪುಣ್ಯದ ರಾಶಿಗೆ ನಾನು ಅತ್ಯಂತ ದೂರನಾಗಿದ್ದರೂ ಸಹ ನನ್ನನ್ನು, ಸಜ್ಜನರನ್ನು ನಿಂದಿಸುವ ವಿಷಯದಲ್ಲಿ ಅನುದಿನವೂ ಮೂಕನನ್ನಾಗಿಸು; ಮೀನಾಕ್ಷಿಯರನ್ನು ನೋಡುವ ವಿಷಯದಲ್ಲಿ ಕುರುಡನನ್ನಾಗಿಸು; ನಿನಗೆ ಸಂಬಂಧಿಸದ ಗೋಷ್ಠಿಗಳಲ್ಲಿ ನನ್ನನ್ನು ಕಿವುಡನನ್ನಾಗಿಸು; ಪಾಪಕ್ಕೆ ಕಾರಣವಾಗುವ ಓಡಾಟವನ್ನು ಮಾಡದಂತೆ ನೀನು ನನ್ನನ್ನು ಹೆಳವನನ್ನಾಗಿಸು. ಅಂತಹ ಪಾಪಕಾರ್ಯಗಳಲ್ಲಿ ನನ್ನನ್ನು ಕೈಗಳಿಲ್ಲದವನನ್ನಾಗಿಸು; ನಿಷಿದ್ಧರತಿಯಲ್ಲಿ ನನ್ನನ್ನು ನಪುಂಸಕನನ್ನಾಗಿಸು; ಎಲೈ ಮೋಕ್ಷನೀಡುವಂತಹ ಶ್ರೀಕೃಷ್ಣ! ಅಂತಹವುಗಳ ನೆನಪೂ ಸಹ ನನಗೆ ಬರದಂತೆ ನನ್ನನ್ನು ಮೂಢನನ್ನಾಗಿಸು.

ವಿ. : ೧. ಮೂಕತನ, ಕಿವುಡು, ಕುರುಡು ಮೊದಲಾದವುಗಳು ಸಾಧನೆಗೆ ಅಡ್ಡಿಯಾಗುವ ಪ್ರಬಲ ದೋಷಗಳು; ಆದರೆ ಇಲ್ಲಿ ತಿಳಿಸಿರುವಂತಹ ವಿಷಯಗಳಲ್ಲಿ ಉಂಟಾದಾಗ ಮಾತ್ರ ಅವು ಸಾಧನೆಗೆ ಪೋಷಕವಾಗುವ ಗುಣಗಳೇ ಆಗಿವೆ; ಶ್ರೇಣಿ – ರಾಶಿ; ಕ್ಲೀಬ – ನಪುಂಸಕ.

೨. [1]ಸಜ್ಜನರನ್ನು ದೂಷಿಸದಿರುವುದು, ಸ್ತ್ರೀಯರತ್ತ ನೋಟ ಹಾಕದಿರುವುದು, ಭಗವದ್ವಿಚಾರಕ್ಕೆ ಸಂಬಂಧಿಸದ ಮಾತುಗಳನ್ನು ಆಡದಿರುವುದು, ಪಾಪಕಾರ್ಯಗಳಲ್ಲಿ ತೊಡಗದಿರುವುದು, ಮೋಕ್ಷ ಪ್ರಾಪ್ತಿಗೆ ಅಗತ್ಯವಾದ ಸಾಧನಗಳು ಎಂಬ ಸಂದೇಶವೂ ಇಲ್ಲಿದೆ.

೩.. ತಾನು ಪುಣ್ಯಹೀನ ಎಂದಾದಲ್ಲಿ ಪಾಪದ ಫಲವಾದ ಮೂಕತ್ವಾದಿಗಳನ್ನಾದರೂ ನೀಡು ಎಂದು ಕೇಳಿಕೊಳ್ಳುತ್ತಾ ಅಕ್ರೂರನು ಅಂತಹ ಮೂಕತ್ವಾದಿಗಳೂ ಸಹ ಶ್ರೀಹರಿಪ್ರೀತಿಗೆ ಕಾರಣವಾಗು-ವಂತಿರಬೇಕು ಎಂದು ಕೌಶಲಪೂರ್ಣವಾಗಿ ಪ್ರಾರ್ಥಿಸಿಕೊಂಡಿರುವನು ಎಂಬುದು ವಿಶೇಷ

---

೧. ಮಹಾಪುಣ್ಯಫಲಾನಾಮಪ್ಯೇತೇಷಾಂ ಮೂಕತ್ವಾಂಧತ್ವಬಧಿರತ್ವಾದೀನಾಂ ಆಪಾತತಃ ಪಾಪಫಲತ್ವದೃಷ್ಟ್ಯಾ ಪುಣ್ಯಾಭಾವೇಽಪಿ ದಿಶೇತಿ ವ್ಯಾಜೋಕ್ತಿಃ। -ವ್ಯಾ.

೩. ಸಂಸಾರಸಾಗರದ ಘೋರತೆಯನ್ನು ನಿರೂಪಿಸುವ ಈ ಕೆಳಗಿನ ಶ್ಲೋಕಗಳು ಸಹ ಗಮನಾರ್ಹ :

ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯಜಲಗ್ರಹೈರನುಪಮೈಃ ಕಾಮಾದಿಭಂಗಾಕುಲೇ ।
ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾ ಮಗ್ನರೂಪಂ ಸದಾ ॥
- ಶ್ರೀರಾಘವೇಂದ್ರಸ್ತೋತ್ರ

ನಾನಾವಿಕರ್ಮಜನಿತಾಶುಭಸಾಗರಾಂತಃಸಂಭ್ರಾಮ್ಯತಃ ಪ್ರತಿಹತಸ್ಯ ಷಡೂರ್ಮಿಜಾಲೈಃ।
ಪುತ್ರಾದಿನಕ್ರನಿಗೃಹೀತಶರೀರಕಸ್ಯ ವಾಸಿಷ್ಠಕೃಷ್ಣ ಮಮ ದೇಹಿ ಕರಾವಲಂಬಮ್ ॥
-ಶ್ರೀವಾಸಿಷ್ಠಕೃಷ್ಣಕರಾವಲಂಬನಸ್ತೋತ್ರ(೩೬)

೪. ಶ್ರೀಹರಿಯ ಪಾದವು ವಿಚಿತ್ರವಾದ ನೌಕೆ; ಅದಕ್ಕೆ ಸಜ್ಜನರೇ ಪತಾಕೆ ಇತ್ಯಾದಿ ಇಲ್ಲಿಯ ವಿವರಗಳು ಶ್ರೀಮದ್ಭಾಗವತತಾತ್ಪರ್ಯ(೧೦/೩/೩೨)ದ ಆಧಾರವನ್ನು ಹೊಂದಿವೆ:

ಭಗವತ್ಪಾದಪೋತೋಽಸೌ ನಾನ್ಯಪೋತಸಮೋ ಭವೇತ್ ।
ಸನ್ನಿಧಾಯಾಪಿ ಶಿಷ್ಯೇಷು ತಮೇವ ಪ್ರಾಪ್ನುಯುರ್ಯತಃ ॥ ಇತಿ ವಾಮನೇ ।

ಭಗವತ್ಪಾದನೌಕಾ ಯಾ ನೇಯಂ ನೌಕೋಪಮಾ ಭವೇತ್ ।
ತಯಾ ತೀರ್ತ್ವಾ ತು ತಾಮೇವ ಪ್ರಾಪ್ಯ ತಿಷ್ಠಂತಿ ಯತ್ರ ತತ್ ॥ ಇತಿ ಬ್ರಾಹ್ಮೇ ।

೫. ಶೋಕ, ಮೋಹ, ಮುಪ್ಪು , ಸಾವು, ಹಸಿವು ಹಾಗೂ ಬಾಯಾರಿಕೆ – ಈ ಆರು ಊರ್ಮಿಗಳು : ಶೋಕಮೋಹೌ ಜರಾಮೃತ್ಯೂ ಕ್ಷುತ್ಪಿಪಾಸೇ ಷಡೂರ್ಮಯಃ । – ಸ್ಮೃತಿ.

೬. ಕರ್ಮಂದಿ – ಯತಿ ; ಸ್ವೇದ – ಬೆವರು.

## ಪುಣ್ಯವಿಲ್ಲದವರಿಗೆ ಶ್ರೇಯಸ್ಸೆಲ್ಲಿಯದು !

ಪ್ರಾಯೋ ವ್ರಜಸ್ತ್ರೀಜನದತ್ತಶಾಪೋ
ಮಾಮಸ್ಪೃಶದ್ಯೇನ ಭವಾನ್ ವಿಯುಂಕ್ತೇ ।
ಲಾವಣ್ಯವಾರಾಂನಿಧಿಪೂರ್ಣಮೂರ್ತಿಃ
ಶ್ರೇಯೋ ವಿನಾ ಪುಣ್ಯಮುಪಾರ್ಜಯೇತ್ ಕಃ ॥ ೭೬ ॥

ಗೋಕುಲದ ನಾರಿಯರು ನೀಡಿದ ಶಾಪ ನನಗೆ ತಟ್ಟಿತೆನ್ನಿಸುವುದು. ಅದರಿಂದಾಗಿ ಲಾವಣ್ಯ-ಸಾಗರದಿಂದ ತುಂಬಿದ ರೂಪದ ನೀನು ದೂರಾಗುತ್ತಿರುವಿ; ಪುಣ್ಯವಿಲ್ಲದೆ ಶ್ರೇಯಸ್ಸನ್ನು ಯಾವನು ತಾನೇ ಸಂಪಾದಿಸಿಯಾನು?

ವಿ. : ಇಲ್ಲಿ 'ಶ್ರೇಯಃ' ಎಂಬುದು ಕಠೋಪನಿಷತ್ತಿನಲ್ಲಿ ಬಂದಿರುವ ಪದ. ಪಾರಲೌಕಿಕಸುಖ ಎಂದು ಇದರ ಅರ್ಥ. ಧನದಿಂದ ಪ್ರೇಯಸ್ ಎಂದರೆ ಐಹಿಕಸುಖ ಲಭಿಸೀತು. ಆದರೆ ಶ್ರೇಯಸ್ಸಿಗೆ ಮಾತ್ರ ಪುಣ್ಯವೇ ಸಾಧನ ಎಂಬ ಇಲ್ಲಿಯ ತತ್ತ್ವ ಅತ್ಯಂತರೋಚಕವಾದುದು; ಎಂದರೆ ಧನವು ದಾನಾದಿ ಸತ್ಕಾರ್ಯಗಳಿಂದ ಪುಣ್ಯವಾಗಿ ಪರಿವರ್ತಿತವಾದಾಗ, ಅದು ಪಾರಲೌಕಿಕಸುಖಕ್ಕೆ ಕಾರಣವಾಗುವುದು ಎಂದು ಭಾವ;(ವಾರಾಂನಿಧಿ – ಜಲನಿಧಿ, ಸಮುದ್ರ).

### ವಂದ್ಯವೆನ್ನಿಸುವ ಮೂಕತ್ವಾದಿಗಳು

**ಪುಣ್ಯಶ್ರೇಣ್ಯತಿದೂರಮಪ್ಯನುದಿನಂ ಮೂಕಂ ಸತಾಂ ದೂಷಣೇ-**
**ಷ್ವಂಧಂ ಮೀನದೃಗೀಕ್ಷಣೇಷು ಬಧಿರಂ ತ್ವದ್ಭಿನ್ನಗೋಷ್ಠೀಷು ಮಾಮ್ ।**
**ಪಂಗುಂ ಪಾಪಕರಪ್ರಯಾಣಕರಣೇಽಪಾಣಿಂ ಚ ತತ್ಕರ್ಮಸು**
**ಕ್ಲೀಬಂ ಗ್ರಾಮ್ಯರತೌ ಮುಕುಂದ ಕುರು ಮಾಂ ಮೂಢಂ ತದೀಯಸ್ಮೃತೌ ॥೭೭॥**

ಪುಣ್ಯದ ರಾಶಿಗೆ ನಾನು ಅತ್ಯಂತ ದೂರನಾಗಿದ್ದರೂ ಸಹ ನನ್ನನ್ನು, ಸಜ್ಜನರನ್ನು ನಿಂದಿಸುವ ವಿಷಯದಲ್ಲಿ ಅನುದಿನವೂ ಮೂಕನನ್ನಾಗಿಸು; ಮೀನಾಕ್ಷಿಯರನ್ನು ನೋಡುವ ವಿಷಯದಲ್ಲಿ ಕುರುಡನನ್ನಾಗಿಸು; ನಿನಗೆ ಸಂಬಂಧಿಸದ ಗೋಷ್ಠಿಗಳಲ್ಲಿ ನನ್ನನ್ನು ಕಿವುಡನನ್ನಾಗಿಸು; ಪಾಪಕ್ಕೆ ಕಾರಣವಾಗುವ ಓಡಾಟವನ್ನು ಮಾಡದಂತೆ ನೀನು ನನ್ನನ್ನು ಹೆಳವನನ್ನಾಗಿಸು. ಅಂತಹ ಪಾಪಕಾರ್ಯಗಳಲ್ಲಿ ನನ್ನನ್ನು ಕೈಗಳಿಲ್ಲದವನನ್ನಾಗಿಸು; ನಿಷಿದ್ಧರತಿಯಲ್ಲಿ ನನ್ನನ್ನು ನಪುಂಸಕನನ್ನಾಗಿಸು; ಎಲೈ ಮೋಕ್ಷನೀಡುವಂತಹ ಶ್ರೀಕೃಷ್ಣ ! ಅಂತಹವುಗಳ ನೆನಪೂ ಸಹ ನನಗೆ ಬರದಂತೆ ನನ್ನನ್ನು ಮೂಢನನ್ನಾಗಿಸು.

ವಿ. : ೧. ಮೂಕತನ, ಕಿವುಡು, ಕುರುಡು ಮೊದಲಾದವುಗಳು ಸಾಧನೆಗೆ ಅಡ್ಡಿಯಾಗುವ ಪ್ರಬಲ ದೋಷಗಳು; ಆದರೆ ಇಲ್ಲಿ ತಿಳಿಸಿರುವಂತಹ ವಿಷಯಗಳಲ್ಲಿ ಉಂಟಾದಾಗ ಮಾತ್ರ ಅವು ಸಾಧನೆಗೆ ಪೋಷಕವಾಗುವ ಗುಣಗಳೇ ಆಗಿವೆ; ಶ್ರೇಣಿ – ರಾಶಿ; ಕ್ಲೀಬ – ನಪುಂಸಕ.

೨. [1]ಸಜ್ಜನರನ್ನು ದೂಷಿಸದಿರುವುದು, ಸ್ತ್ರೀಯರತ್ತ ನೋಟ ಹಾಕದಿರುವುದು, ಭಗವದ್ವಿಚಾರಕ್ಕೆ ಸಂಬಂಧಿಸದ ಮಾತುಗಳನ್ನು ಆಡದಿರುವುದು, ಪಾಪಕಾರ್ಯಗಳಲ್ಲಿ ತೊಡಗದಿರುವುದು, ಮೋಕ್ಷ ಪ್ರಾಪ್ತಿಗೆ ಅಗತ್ಯವಾದ ಸಾಧನಗಳು ಎಂಬ ಸಂದೇಶವೂ ಇಲ್ಲಿದೆ.

೩.. ತಾನು ಪುಣ್ಯಹೀನ ಎಂದಾದಲ್ಲಿ ಪಾಪದ ಫಲವಾದ ಮೂಕತ್ವಾದಿಗಳನ್ನಾದರೂ ನೀಡು ಎಂದು ಕೇಳಿಕೊಳ್ಳುತ್ತಾ ಅಕ್ರೂರನು ಅಂತಹ ಮೂಕತ್ವಾದಿಗಳೂ ಸಹ ಶ್ರೀಹರಿಪ್ರೀತಿಗೆ ಕಾರಣವಾಗು-ವಂತಿರಬೇಕು ಎಂದು ಕೌಶಲಪೂರ್ಣವಾಗಿ ಪ್ರಾರ್ಥಿಸಿಕೊಂಡಿರುವನು ಎಂಬುದು ವಿಶೇಷ

---

೧. ಮಹಾಪುಣ್ಯಫಲಾನಾಮಪ್ಯೇತೇಷಾಂ ಮೂಕತ್ವಾಂಧತ್ವಬಧಿರತ್ವಾದೀನಾಂ ಆಪಾತತಃ ಪಾಪಫಲತ್ವದೃಷ್ಟ್ಯಾ ಪುಣ್ಯಾಭಾವೇಽಪಿ ದಿಶೇತಿ ವ್ಯಾಜೋಕ್ತಿಃ। -ವ್ಯಾ.

## ಮೋಕ್ಷಕ್ಕೆ ಕಾರಣವಾಗುವ ದಿವ್ಯ ಕಾಮಾದಿಗಳು

**ಕಾಮಸ್ತೇಽಂಘ್ರಿಯುಗಾರ್ಚನೇಽಮಲಧಿಯಾಂ ಲೋಭಃ ಸುಪುಣ್ಯಾರ್ಜನೇ**
**ಮಾತ್ಸರ್ಯಂ ಚರಿತಾನುಕೀರ್ತನಸುಧಾಪಾನಾನ್ಮದಃ ಶತ್ರುಷು ।**
**ಕ್ರೋಧೋ ಭಕ್ತಜನೇಷು ರಾಗ ಉದಯಾಚ್ಛ್ರೀವಿಟ್ಠಲಾನ್ಯತ್ರ ನೋ**
**ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯ ಶತ್ರುರ್ಭವೇತ್ ॥ ೭೮ ॥**

ಶ್ರೀಕೃಷ್ಣ ನಿನ್ನ [೧]ಪಾದದ್ವಂದ್ವಗಳನ್ನು ಆರಾಧಿಸುವ ವಿಷಯದಲ್ಲಿ ಕಾಮವನ್ನು ನೀಡು; ನಿರ್ಮಲವಾದ ನಿನ್ನ ಸರ್ವೋತ್ತಮತ್ವಾದಿಬುದ್ಧಿಯಲ್ಲಿ [೨]ಲೋಭವನ್ನು ನೀಡು; ಉತ್ತಮ [೩]ಪುಣ್ಯಕಾರ್ಯವನ್ನು ಸಂಪಾದಿಸುವಲ್ಲಿ ಮಾತ್ಸರ್ಯವನ್ನು ಕೊಡು; ನಿನ್ನ [೪]ಚರಿತಾಮೃತವನ್ನು ಪಾನ ಮಾಡುವುದರಿಂದ ಉಂಟಾಗುವ ಮದವನ್ನು ನೀಡು; ನಿನ್ನ ಶತ್ರುಗಳಲ್ಲಿ [೫]ಕ್ರೋಧವು, ನಿನ್ನ ಭಕ್ತಜನರಲ್ಲಿ ಪ್ರೀತಿಯು ಹುಟ್ಟಲಿ; ಎಲೈ ಶ್ರೀವಿಟ್ಠಲ ! ಇತರ ಕಡೆಗಳಲ್ಲಿ ಅವು ಹುಟ್ಟದಿರಲಿ; ಉತ್ತಮರನ್ನು ಆಶ್ರಯಿಸಿದವರಿಗೆ ಶತ್ರುವು [೬]ಶತ್ರುವೆನ್ನಿಸಲಾರನು; ಇತರರಿಗೆ ಶತ್ರುವಾಗುವನು.

ವಿ. : ೧. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಅರಿಷಡ್ವರ್ಗಗಳು ಸಾಮಾನ್ಯವಾಗಿ ಬಂಧಕ; ಆದರೆ ಇಲ್ಲಿ ನಿರೂಪಿತವಾಗಿರುವ ರೀತಿಯಲ್ಲಿ ಅವು ಬಂಧಕವಾಗದೆ ಮೋಚಕವೇ ಆಗುವವು ಎಂದರ್ಥ.

---

೧. ಯಥಾ ಕಾಮೀ ಪುರುಷಃ ವನಿತಾದಿವಿಷಯೇಷ್ವಾಸಕ್ತೋ ಭವತಿ ತಥಾಽಹಮಪಿ ಹರ್ಯರ್ಚನ ಏವಾಸಕ್ತೋ ಭೂಯಾಸಮಿತಿ ಕಾಮಪದಪ್ರಯೋಕ್ತುರ್ಭಾವಃ। –ವ್ಯಾ.

೨. ಯಥಾ ಲೋಭೀ ಯತ್ನೇನ ಧನಮಾರ್ಜಯತಿ ನಾನೋಪಾಯೈಃ ರಕ್ಷತಿ । ಕದಾಽಪಿ ನ ವಿಸೃಜತಿ ಚ । ತಥಾ ವಿಷ್ಣೋಃ ಸರ್ವೋತ್ತಮತ್ವಬುದ್ಧಿಂ ಗುರುಮುಖಾದಾರ್ಜಯಾಮಿ ಶ್ರುತಿಸ್ಮೃತಿಯುಕ್ತಿಭಿಃ ಸರ್ವದಾ ಹೃದಿ ಸ್ಥಿರೀಕರೋಮಿ। ಮರಣೇಽಪಿ ನ ಪರಿತ್ಯಜಾಮೀತಿ ಭಾವಃ। –ವ್ಯಾ.

೩. ಯಥಾ ಮತ್ಸರಗ್ರಸ್ತಃ ಧನವಂತಮನ್ಯಂ ದೃಷ್ಟ್ವಾ ತತೋಽಪ್ಯಧಿಕಧನಂ ಮಯಾಽಽರ್ಜನೀಯಮಿತಿ ಪ್ರಯತ್ನಂ ಕುರ್ಯಾತ್ । ತಥಾ ಮಹಾಪುಣ್ಯೇ ವಿಷಯೇ ಮಮಾಪಿ ಪ್ರಯತ್ನಃ ಸ್ಯಾದಿತಿ ಭಾವಃ। –ವ್ಯಾ.

೪. ಯಥಾ ಮದಾಂಧಃ ನರ್ತನಾದಿತತ್ಕಾರ್ಯವ್ಯತಿರಿಕ್ತೇಷು ಕಾರ್ಯೇಷ್ವನುದ್ಯೋಗೀ ಸ್ಯಾತ್ । ತಥಾ ಮಮಾಪಿ ಹರಿಕಥಾಕಥನಸಂಭ್ರಮಸಮಯೇ ಕಾರ್ಯಾಂತರಸ್ಯಾನುದ್ಯೋಗಃ ಸ್ಯಾದಿತಿ ಭಾವಃ। –ವ್ಯಾ.

೫. ಯಥಾ ಕ್ರುದ್ಧಃ ಸ್ವಶತ್ರುಂ ಸದಾ ಸಂಹರ್ತುಮಿಚ್ಛೇತ್ ತಥಾ ಮಮಾಪಿ ತವ ವಿರೋಧಿಮತಂ ತದವಲಂಬಿನೋ ದುರ್ಜನಾಂಶ್ಚ ಯುಕ್ತಿಭಿಃ ಶಕ್ತಿಭಿಶ್ಚ ಸದಾ ಪರಾಭಾವಯಾಮೀತಿ ಸನ್ನಾಹಃ ಸ್ಯಾದಿತಿ ಭಾವಃ। –ವ್ಯಾ.

೬. ಮಹಾರಾಜಾಂಗೀಕಾರವತಃ ಪುರುಷಸ್ಯ ಶತ್ರವೋಽಪಿ ರಾಜಭೀತ್ಯಾ ಪಾದಾಕ್ರಾಂತಾ ಭವಂತಿ । ಯಥೇಷ್ಟ-ಧನದಾನಾದಿನಾ ಉಪಕುರ್ವಂತಿ ಚ। ತದನಂಗೀಕಾರದಶಾಯಾಂ ಮಾರಯಂತ್ಯೇವ ನೋಪಕುರ್ವಂತಿ। ತಥಾ ಹರ್ಯರ್ಚನೇ ಹರಿಸರ್ವೋತ್ತಮತ್ವಬುದ್ಧೌ ಹರಿವಿಷಯಕಪುಣ್ಯಾರ್ಜನೇ ಹರಿಕಥಾಕಥನೇ ಹರಿದ್ವೇಷಿಷು ದ್ವೇಷೇ ಹರಿಭಕ್ತೇ ಚ ಸ್ನೇಹೇ ಚ ಹರ್ಯಾಖ್ಯಮಹಾರಾಜಸದ್ಭಾವಾದುಕ್ತಕಾಮಾದಯಃ ಸರ್ವೇ ಮಮಾನುಕೂಲಾ ಏವ ಸಂತಃ ಮೋಕ್ಷಾದಿಪುರುಷಾರ್ಥಾನಪಿ ದದ್ಯುಃ। ಇತೋಽನ್ಯತ್ರ ಕಾಮಾದಿಕರಣೇ ಹರ್ಯಾಖ್ಯಮಹಾರಾಜಾ-ನುಗ್ರಹಾಭಾವಾತ್ ಮಾಮಂಧೇತಮಸಿ ಪಾತಯಿತ್ವಾ ಹನ್ಯುರೇವ। ಅತ ಉಕ್ತೈಕೈಕದೇಶೇಷ್ವೇವ ತದಂಗೀಕಾರೋ ನ ಸರ್ವತ್ರೇತಿ ಭಾವಃ। –ವ್ಯಾ.

೨. ಕಾಮಕ್ರೋಧಾದಿಗಳು ಸಹ ಸಾತ್ವಿಕ, ರಾಜಸ ಹಾಗೂ ತಾಮಸ ಎಂಬುದಾಗಿ ಮೂರುಬಗೆ. ತಾಮಸಕಾಮಾದಿಗಳು ನಿಷಿದ್ಧ; ಆದರೆ ಇಲ್ಲಿ ನಿರೂಪಿತವಾಗಿರುವ ಸಾತ್ವಿಕ ಕಾಮಾದಿಗಳು ಸಾಧನೆಗೆ ಅತ್ಯಂತ ಅಗತ್ಯ ಎಂದರ್ಥ.

೩.. ಉತ್ತಮರನ್ನು ಆಶ್ರಯಿಸಿದವರಿಗೆ ಎಂತಹ ಶತ್ರುವೂ ಕೆಡುಕನ್ನು ಉಂಟುಮಾಡಲಾರ. ಇತರರ ವಿಷಯದಲ್ಲಿ ಮಾತ್ರ ಶತ್ರುವಿನಿಂದ ಕೇಡು ತಪ್ಪದು; ಹೀಗೆ ಶ್ರೀಕೃಷ್ಣನ ಪ್ರೀತಿಗೆ ಸಂಬಂಧಿಸಿದಂತೆ ಹುಟ್ಟುವ ಕಾಮಾದಿಗಳು ಮೋಚಕವೇ ಹೊರತು ಬಂಧಕವಲ್ಲ ಎಂದು ಭಾವ.

## ಇಂದ್ರಿಯಾಭಿಮಾನಿಗಳ ಪ್ರಾರ್ಥನೆ

**ರುದ್ರ ತ್ವಂ ಹಿ[೧] ಮನೋಽಭಿಮಾನ್ಯಸಿ ತತಸ್ತ್ವಚ್ಛತ್ರುಮಿತ್ರಂ ಮನೋ**
**ಮಾ ಕುರ್ವಚ್ಯುತಚಿಂತನಾರ್ಚನರತಂ ಕುರ್ವೀಶ ಹೇ ಭಾಸ್ಕರ[೨] ।**
**ಚಕ್ಷುರ್ಮಾನ್ಯಸಿ ತಚ್ಚ ವಿಟ್ಠಲವಪುಃಸಂದರ್ಶನೈಕಾಧ್ವರಂ**
**ಕೃತ್ವಾ ಮಾ ಕುರು ಕೈರವಾಕ್ಷ್ಯನುಚರಂ ಯತ್ ತಾಃ ಸಪತ್ನಾಶ್ರಯಾಃ ॥ ೭೯ ॥**

ಎಲೈ ರುದ್ರನೇ! ನೀನು ಮನಸ್ಸಿಗೆ ಅಭಿಮಾನಿಯಾಗಿರುವಿ; ಆದ್ದರಿಂದ ನನ್ನ ಮನಸ್ಸು ನಿನ್ನ ಶತ್ರುವಾದ ಕಾಮನಿಗೆ ಮಿತ್ರನಾಗುವಂತೆ ಮಾಡದಿರು; ಸದಾ ಅಚ್ಯುತನಾದ [೩]ಶ್ರೀಹರಿಯ ಚಿಂತನೆ ಹಾಗೂ ಪೂಜೆಗಳಲ್ಲಿ ನನ್ನ ಮನಸ್ಸನ್ನು ತೊಡಗಿಸು; ಎಲೈ ಭಾಸ್ಕರ ! ನೀನು ಕಣ್ಣಿಗೆ ಅಭಿಮಾನಿಯಾಗಿರುವಿ; ಅದನ್ನು ವಿಟ್ಠಲನ ರೂಪವನ್ನು ನೋಡುವಂತಹ ಯಜ್ಞರೂಪದ ವ್ಯಾಪಾರದಲ್ಲಿಯೇ ತೊಡಗಿಸಿ, ಕಮಲನೇತ್ರೆಯರನ್ನು ಹಿಂಬಾಲಿಸದಂತೆ ಮಾಡು; ಅವರು ನಿನ್ನ ಶತ್ರುಗಳಿಗೆ ಇಂಬು ನೀಡುವವರಲ್ಲವೆ !

ವಿ. : ೧. ಪ್ರತಿನಿತ್ಯದಲ್ಲಿ ರುದ್ರಾದಿದೇವತೆಗಳಿಗೆ ಸಲ್ಲಿಸುವ ಪ್ರಾರ್ಥನೆಯ ರೀತಿಯನ್ನು ಈ ಶ್ಲೋಕದಿಂದ ಅಳವಡಿಸಿಕೊಳ್ಳಬಹುದು.

೨. ರುದ್ರಾದಿ ಇತರ ದೇವತೆಗಳನ್ನು ಸಹ ಅವರ ಸ್ಥಾನಮಾನಕ್ಕನುಗುಣವಾಗಿ ಪ್ರಾರ್ಥಿಸಿ-ಕೊಳ್ಳುವ ರೀತಿಯನ್ನು ಇದರಿಂದ ತಿಳಿದುಕೊಳ್ಳಬಹುದು.

೩.. ಇದು ಒಂದು ರೀತಿಯಲ್ಲಿ ನಿತ್ಯ ಪಠನೀಯ ಪ್ರಾತಃಶ್ಲೋಕಗಳಲ್ಲಿ ಒಂದಾದ ಈ ಕೆಳಗಿನ ಶ್ಲೋಕದ ವಿವರಣೆಯಂತಿದೆ :

---

೧. ಮನೋಽಭಿಮಾನಿನೋ ರುದ್ರವೀಂದ್ರಶೇಷಾಸ್ತ್ರಯೋಽಪಿ ತು । - ಕಾಠಕೋಪನಿಷದ್ಭಾಷ್ಯ

೨. 'ಚಕ್ಷುಃ ಸೂರ್ಯಶ್ಚಕ್ಷಯತಿ' -ಇತಿ ಗೀತಾತಾತ್ಪರ್ಯನಿರ್ಣಯೋದ್ಧೃತಪ್ರಮಾಣವಚನಮ್ । (೧೩./೨೭)

೩.. ಯದ್ಯಸ್ಮಾತ್ತಾಃ ಕೈರವಾಕ್ಷ್ಯಃ ಸಪತ್ನಾನಾಂ ತವ ವೈರೀಭೂತಕುಮುದಾನಾಂ ಆಶ್ರಯಾಃ ಉಪಮಾನೋಪಮಾನ-ಯೋರೇಕತ್ವಾಭಿಪ್ರಾಯೇಣೋಕ್ತಿರಿಯಮ್ । ತವ ವೈರಿಭೂತಕುಮುದಂ ಸ್ವಚಕ್ಷುಷಿ ನಿಕ್ಷಿಪ್ಯ ರಕ್ಷಂತೀತ್ಯರ್ಥಃಸ್ಯ ಕೈರವಾಕ್ಷಿಪದೇನ ಧ್ವನಿತತ್ವಾತ್ತಾಸ್ವಾದ್ವೈರಿವತ್ ವೈರ್ಯಾಧಾರಭೂತಸ್ಯಾಪಿ ವೈರಪಾತ್ರತ್ವಾದಿತಿ ಭಾವಃ । -ವ್ಯಾ.

ನಮೋ ವಸ್ತಾತ್ತ್ವಿಕಾ ದೇವಾ ವಿಷ್ಣುಭಕ್ತಿಪರಾಯಣಾಃ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥

೪. ತೀರ್ಥಪ್ರಬಂಧ ಮೊದಲಾದ ಕೃತಿಗಳಲ್ಲಿ ಬಂದಿರುವ ಶ್ರೀವಾದಿರಾಜರ ಅನ್ಯದೇವತಾಪರ ಸ್ತೋತ್ರಗಳನ್ನು ಈ ಹಿನ್ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಬೇಕು.

೫. 'ಕೈರವ' ಎಂದರೆ ಕನ್ನೈದಿಲೆ. ಸೂರ್ಯೋದಯದಿಂದ ಅದು ಮುದುಡುವುದರಿಂದ ಅದಕ್ಕೆ ಸೂರ್ಯನು ಶತ್ರು ಎಂದಾಗುವುದು. ಕನ್ನೈದಿಲೆಯಂತಹ ಕಣ್ಣುಗಳನ್ನು ಹೊಂದಿರುವುದರಿಂದ ಸ್ತ್ರೀಯರು (ಕೈರವಾಕ್ಷಿಯರು - ಇಂದೀವರಾಕ್ಷಿಯರು) ಸೂರ್ಯನ ಶತ್ರುಗಳಿಗೆ ಆಸರೆಯಿತ್ತವರು ಎಂಬ ಅರ್ಥ ಧ್ವನಿತವಾಗುವುದು.

### ವಿರಕ್ತಿರಮಣಿಯಿಂದಲೇ ಮೋಕ್ಷವೆಂಬ ಸಂತತಿ

**ಸ್ವಾಮಿನ್ ವಿಟ್ಠಲ ಸಜ್ಜನಶ್ವಶುರತಃ ಪ್ರಾಪ್ತಾಂ ದಿಗಂತಾಂಬರಾ-**
**ಮುತ್ಕ್ರಾಂತಾವಪಿ ಯೋಗಿನೀಂ ಮನನಸಜ್ಜ್ಞಾನಾದಿಭಿರ್ಭೂಷಿತಾಮ್ ।**
**ಮೋಕ್ಷಾಪತ್ಯವತೀಂ ವಿರಕ್ತಿರಮಣೀಂ ಸಂಶ್ಲಿಷ್ಯತೋಽಹರ್ನಿಶಂ**
**ಕಾಲೋ ಗಚ್ಛತು ನಾನ್ಯಥಾ ಕುರು ತದಾ ಕಾಮೋ ಯದಾಲಂಬತೇ ॥ ೮೦ ॥**

[೧]ಸ್ವಾಮಿ ವಿಟ್ಠಲ ! ಸಜ್ಜನನೆಂಬ ಮಾವನಿಂದ ಜನಿಸುವ, ದಿಕ್ಕುಗಳನ್ನೇ ವಸ್ತ್ರಗಳನ್ನಾಗಿ ಉಳ್ಳ, ಮರಣಾನಂತರವೂ ಜೊತೆಯಾಗಿ ಬರುವ, ಮನನ, ಉತ್ತಮಜ್ಞಾನ ಮೊದಲಾದವುಗಳಿಂದ ಭೂಷಿತಳಾದ, ಮುಕ್ತಿ ಎಂಬ ಸಂತತಿಯನ್ನು ಕರುಣಿಸುವ, [೨]ವಿರಕ್ತಿ ಎಂಬ ನಾರಿಯನ್ನು ಹಗಲಿರುಳೂ ಆಲಿಂಗಿಸುತ್ತಲೇ ನನ್ನ [೩]ಕಾಲವು ಕಳೆಯಲಿ, ಬೇರೆ ರೀತಿಯಲ್ಲಿ ಅಲ್ಲ; ಇಲ್ಲವಾದಲ್ಲಿ ಕಾಮ ನನಗೆ ಗಂಟುಬಿದ್ದಾನು !

ವಿ. : ೧. ವಿರಕ್ತಿಯ ವರ್ಣನೆ ಇಲ್ಲಿ ತುಂಬಾ ರಮ್ಯವಾಗಿ ಬಂದಿದೆ.

೨. ವಿರಕ್ತಿಯೇ ಕನ್ಯೆ, ಸಜ್ಜನನೇ ಅವಳ ತಂದೆ, ದಿಕ್ಕುಗಳೇ [೪]ವಸ್ತ್ರ, ಮನನ [೫]ಜ್ಞಾನಾದಿಗಳೇ ಅಲಂಕಾರ, ಮೋಕ್ಷವೇ ಸಂತತಿ, ಅಂತ್ಯಕಾಲದಲ್ಲೂ ವಿರಕ್ತಿಯ ಜೊತೆ; ಹೀಗೆ ವಿರಕ್ತಿಯ

---

೧. ಸ್ವತೋಽಪಿ ಮಹತಾಂ ಪುತ್ರೀಸ್ವಾತಂತ್ರಂ ದೇಶಾಧಿಪತಿನೈವ ನಿವಾರಣೀಯಮಿತ್ಯತಃ ಸ್ವಾಮಿನ್ನಿತಿ ವಿಶೇಷಣಮ್ । -ವ್ಯಾ.
೨. ಕನ್ಯಾಂ ಜನಯಿತಾರೋ ಹಿ ಶ್ವಶುರಾ ಇತ್ಯುಚ್ಯಂತೇ । ಸಜ್ಜನಸಮಾಗಮೇನ ಚ ವಿರಕ್ತಿರುತ್ಪದ್ಯತೇ । ತೇ ಚ ಸಂತಃ ಅತಃ ಸತ್ಕುಲಪ್ರಸೂತಾ ಸ್ವವಿರಕ್ತಿರಮಣೀತಿ ಭಾವಃ। -ವ್ಯಾ.
೩.. "ತದಾಮಿಷಂ ಪರಿತ್ಯಜ್ಯ ಸ ಸುಖಂ ಸಮವಿಂದತ" । -ಭಾ.(೧೧/೯/೨)
೪. ವಸ್ತ್ರಾನ್ನಪಾನಾದ್ಯರ್ಥನೇನ ದುಃಖದಾತ್ರೀಭ್ಯೋ ಲೌಕಿಕನಾರೀಭ್ಯಃ ಅತಿಶಯಸೂಚನಾಯ ರಮಣೀಪದಮ್। ಅಹರ್ನಿಶಂ ಸಂಶ್ಲಿಷ್ಯತಃ ಆಲಿಂಗ್ಯತಃ ಮಮ ಇದಂ ಚಾನಿಷಿದ್ಧತಿಥಿಷು ರಾತ್ರಾವೇವಾಲಿಂಗನಯೋಗ್ಯಾಭ್ಯಃ ಲೌಕಿಕನಾರೀಭ್ಯಃ ಮಹಾತಿಶಯಸೂಚನಾರ್ಥಃ। -ವ್ಯಾ.
೫. "ಅಪ್ರಜಾಂ ದಶಮೇ ವರ್ಷೇ ಸ್ತ್ರೀಪ್ರಜಾಂ ದ್ವಾದಶೇ ತ್ಯಜೇತ್"ಇತಿ ವಚನೇನ ವಂಧ್ಯಾಯಾಃ ಸ್ತ್ರೀಪ್ರಜಾಯಾ-ಶ್ಚಾಸಂಗ್ರಾಹ್ಯತ್ವಾಚ್ಚೇದಮುಕ್ತಮಿತಿ ಭಾವಃ। -ವ್ಯಾ.

ಸ್ವರೂಪವು ಇದರಲ್ಲಿ ಅಪೂರ್ವರೀತಿಯಲ್ಲಿ ನಿರೂಪಿತವಾಗಿದೆ; ಸಜ್ಜನನು ವಿರಕ್ತಿಯ ತಂದೆ ಎಂದರೆ ಸಜ್ಜನರ ಸಹವಾಸದಿಂದ ವಿರಕ್ತಿ ಹುಟ್ಟುವುದು ಎಂದರ್ಥ.

೩. ಇತರ ತರುಣಿಯರು ಜೊತೆಯಿದ್ದಾಗ ಕಾಮ ಹೆಚ್ಚುವುದು; ಆದರೆ ವಿರಕ್ತಿರಮಣಿ ಜೊತೆಗೂಡಿದಾಗ ಕಾಮವು ಅಳಿಯವುದು; ಸಾಧನೆ ಉಳಿಯುವುದು ಹಾಗೂ ಬೆಳೆಯುವುದು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೪. ಇದು ಒಂದು ರೀತಿಯಲ್ಲಿ ಸಂತತಿ ಇಲ್ಲದವರಿಗೆ ಮೋಕ್ಷವಿಲ್ಲ ('ಅಪುತ್ರಸ್ಯ ಗತಿರ್ನಾಸ್ತಿ') ಎಂಬುದಕ್ಕೆ ನೀಡಿದ ಆಧ್ಯಾತ್ಮಿಕವಾದ ವಿವರಣೆಯೂ ಆಗಿದೆ.

### ಭವರೋಗಹರವಾದ ದಿವ್ಯತಾಂಬೂಲ

**ಯಸ್ಮಿನ್ ವಿಟ್ಠಲನಾಮವರ್ಣಯುಗಲಂ ಸತ್ಪರ್ಣಚೂರ್ಣೇ ಪರೋ**
**ವರ್ಣಃ ಪೂಗಫಲಂ ಗುಣೌಘಗಣನಾಕರ್ಪೂರಖಂಡಂ ಮಹತ್ ।**
**ಭಿಕ್ಷುಶ್ಲಾಘ್ಯಮನಂಗವೈರಿ ತದಿದಂ ಸಂಸರ್ಪಿರಾಗಾಪಹಂ**
**ಜಕ್ಷತ್ಸಂಸೃತಿರೋಗಮೇಷ್ಯತಿ ಕಥಂ [೧]ತಾಂಬೂಲಮಾಕಸ್ಮಿಕಮ್ ॥ ೮೧ ॥**

[೨]ವಿಟ್ಠಲ ಎಂಬ ಹೆಸರಿನಲ್ಲಿನ ವಿ ಹಾಗೂ ಠ ಎಂಬ ಎರಡು ವರ್ಣಗಳನ್ನು ಕ್ರಮವಾಗಿ ಎಲೆ ಹಾಗೂ ಸುಣ್ಣವನ್ನಾಗಿಯೂ, ಲ ಎಂಬ ಮೂರನೇ ವರ್ಣವನ್ನು ಅಡಿಕೆಯನ್ನಾಗಿಯೂ ಶ್ರೀಹರಿಯ ಗುಣರಾಶಿಯ ಎಣಿಕೆಯನ್ನು ಶ್ರೇಷ್ಠವಾದ ಕರ್ಪೂರಖಂಡವನ್ನಾಗಿಯೂ ಹೊಂದಿರುವ ಯತಿಗಳಿಗೂ ಪ್ರಶಸ್ತವೆನ್ನಿಸುವ, ಕಾಮನಿಗೆ ಶತ್ರುವೆನ್ನಿಸುವ, ಎರಗುವ ವಿಷಯಗಳ ಮೇಲಿನ ಆಸಕ್ತಿಯನ್ನು ನೀಗಿಸುವ, ಅದ್ಭುತವಾದ ಆಕಸ್ಮಾತ್ ಒದಗಿರುವ ತಾಂಬೂಲವನ್ನು [೩]ಜಗಿಯುವವರಿಗೆ ಸಂಸಾರರೋಗ ಹೇಗೆ ತಾನೇ ಒದಗೀತು?[೪]

---

೧. ತಾಂಬೂಲದ ಲಕ್ಷಣ ಹೀಗಿದೆ :
ತಾಂಬೂಲಂ ಕಟುತಿಕ್ತಮುಷ್ಣಮಧುರಂ ಕ್ಷಾರಂ ಕಷಾಯಾನ್ವಿತಂ
ವಾತಘ್ನಂ ಕೃಮಿನಾಶನಂ ಕಫಹರಂ ದುರ್ಗಂಧನಿರ್ನಾಶನಮ್ ।
ವಕ್ತ್ರಸ್ಯಾಭರಣಂ ವಿಶುದ್ಧಿಕರಣಂ ಕಾಮಾಗ್ನಿಸಂದೀಪನಂ
ತಾಂಬೂಲಸ್ಯ ಸಖೇ ತ್ರಯೋದಶಗುಣಾಃ ಸ್ವರ್ಗೇಽಪಿ ತೇ ದುರ್ಲಭಾಃ ॥ -ಅಭಿಧಾನ

೨. ನಾಮ್ನೈಕದೇಶೇ ನಾಮಕಗ್ರಹಣಮಿತಿ ನ್ಯಾಯಾತ್ ಕ್ರಮುಕಫಲಮ್ । -ವ್ಯಾ.

೩. ಭಿಕ್ಷೂಣಾಮಯೋಗ್ಯತ್ವಾತ್ ಕಾಮೋದ್ದೀಪನಾತ್ ಅಧರರಕ್ತಿಮೋತ್ತೇಜಕತ್ವಾಚ್ಚ ಲೌಕಿಕತಾಂಬೂಲಾದತಿಶಯ-ಸೂಚನಾಯ ವಿಶೇಷಣತ್ರಯಮ್ । -ವ್ಯಾ.

೪. ಆಕಸ್ಮಿಕತ್ವಾತ್ ಸಕಲರೋಗಮೂಲೀಭೂತಸಂಸಾರಾಖ್ಯರೋಗಮೇವಾಪಹಂತೀತಿ ಭಾವಃ । -ವ್ಯಾ.

ವಿ. : ೧. ಈ ಶ್ಲೋಕದಲ್ಲಿ [೧]ತಾಂಬೂಲದ ಬಗ್ಗೆ ಅನೇಕ ವಿವರಗಳು ಅಪೂರ್ವರೀತಿಯಲ್ಲಿ ನಿರೂಪಿತವಾಗಿವೆ.

೨. ತಾಂಬೂಲವು ಅಷ್ಟ ಭೋಗಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ; ದೇವತೆಗಳ ಪೂಜೆಯಲ್ಲಿ ಸಮರ್ಪಣೆಗೆ ವಿಹಿತವಾದ ಉಪಚಾರವಾಗಿಯೂ ಇದು ಪ್ರಸಿದ್ಧ; ಆದರೆ ಲೌಕಿಕ ತಾಂಬೂಲವು [೨]ಯತಿಗಳಿಗೆ ಗ್ರಾಹ್ಯವೆನ್ನಿಸುವಂತಹುದಲ್ಲ; ಗೃಹಸ್ಥರಿಗೂ ಇದು ರಾಗೋತ್ತೇಜಕ-ವಾದ್ದರಿಂದ ಸಂಸಾರದ ಬಿಡುಗಡೆಗೆ ಕಾರಣವಾಗುವಂತಹುದೇನಲ್ಲ; ಆದರೆ ಶ್ರೀಹರಿಯ ವಿಟ್ಠಲ ಎಂಬ ನಾಮವು ಅಪೂರ್ವವಾದಂತಹ ದೈವೀತಾಂಬೂಲವಾಗಿದೆ ಎಂದು ಭಾವ.

೩.. ವಿಠಲ ಎಂಬ ನಾಮದಲ್ಲಿ 'ವಿ' ಎಂಬುದು ಎಲೆ, 'ಠ' ಎಂಬುದು ಸುಣ್ಣ, 'ಲ' ಎಂಬುದು ಕರ್ಪೂರಖಂಡದಿಂದ ಕೂಡಿದ ಅಡಿಕೆ ; ಇದರ ಸೇವನೆಯು ಯತಿಗಳಿಗೂ ವಿಹಿತ; ಫಲವಂತೂ ಸಂಸಾರವೆಂಬ ರೋಗದಿಂದ ಬಿಡುಗಡೆಯೇ ಆಗಿದೆ. **ಚೂರ್ಣ** – ಸುಣ್ಣ; **ಪೂಗಫಲ** – ಅಡಿಕೆ.

೪. ಇದು ಒಂದು ರೀತಿಯಲ್ಲಿ ಶ್ರೀಪುರಂದರದಾಸರ 'ರಾಮನಾಮ ಪಾಯಸಕೆ ಕೃಷ್ಣನಾಮ ಸಕ್ಕರೆ, ವಿಠಲನಾಮ ತುಪ್ಪವ ಬೆರೆಸಿ ಬಾಯಿ ಚಪ್ಪರಿಸಿರೋ' ಎಂಬ ಕೃತಿಗೆ ಪ್ರೇರಣೆಯಂತಿರುವ ಶ್ಲೋಕ ಎನ್ನಬಹುದು.

೫. ತಾಂಬೂಲವನ್ನು ಬಾಯಲ್ಲಿರಿಸಿಕೊಂಡು ಜಗಿದಾಗ ಅದರ ವಿಶೇಷಸವಿಯ ಅನುಭವವಾಗುವುದು. ಅದರಂತೆ 'ವಿಟ್ಠಲ' ಎಂಬ ನಾಮವನ್ನು ಬಾಯಿಂದ ಮತ್ತೆ ಮತ್ತೆ ನುಡಿದಾಗ, ಅದು ಮೋಕ್ಷಕ್ಕೆ ಕಾರಣವಾಗುವುದು ಎಂಬ ಅರ್ಥದಲ್ಲಿ ತಾಂಬೂಲ ಹಾಗೂ ವಿಟ್ಠಲನಾಮಗಳಿಗೆ [೩]ಸಾಮ್ಯವನ್ನು ಇಲ್ಲಿ ನಿರೂಪಿಸಲಾಗಿದೆ.

### ಶ್ರೀಕೃಷ್ಣನ ಪಾದಕಮಲದಲ್ಲಿ ಭ್ರಮರವೆನ್ನಿಸುವ ಮನಸ್ಸು

**ಸ್ವಾಂತಂ ತದೇವ ಯತ್ ತೇಽಂಘ್ರಿಕಮಲೇ [೪]ಚಂಚರೀಕತಿ ।**
**ಸ್ವಾಂತಕಾರೀತರನ್ಮನ್ಯೇ ಭ್ರಮದ್ಭುಜಗಸನ್ನಿಭಮ್ [೫]॥ ೮೨ ॥**

---

೧. ತಾಂಬೂಲೇಽಪಿ ಪರ್ಣಾನಾಂ ಬಹುಲತಯಾ ವಿಶಿಷ್ಟತ್ವಾದ್ವಿವರ್ಣಃ ಪರ್ಣಮ್ । ಠಕಾರಸ್ಯ ಶೂನ್ಯಾರ್ಥಕತ್ವಾತ್ ಚೂರ್ಣತ್ವಮಿತ್ಯರ್ಥಃ । –ವ್ಯಾ.
ವಿಷಯರಾಗಾಪಹಾರಿತ್ವೇಽಪಿ ಹರಿವಿಷಯಕರಾಗೋತ್ತೇಜಕತ್ವಾತ್ ನ ಸರ್ವಥಾ ತಾಂಬೂಲಸಾಮ್ಯಾಭಾವಃ ಕಿಂತ್ವಲೌಕಿಕತಾಂಬೂಲಮೇವೇತಿ ಜ್ಞೇಯಮ್ । –ವ್ಯಾ.

೨. **ಗಂಧಮಾಲ್ಯಾದ್ಯಲಂಕಾರಂ ತಾಂಬೂಲಂ ಶುಕ್ಲವಾಸಸೀ ।**
ದಿವಾಸ್ವಾಪಂ ಚ ಯಾನಂ ಚ ನಿಶ್ಯನ್ನಂ ವರ್ಜಯೇದ್ಯತಿಃ ॥ –ಪೈಠೀನಸೀಸ್ಮೃತಿಃ

೩. ಮುಖೇನಾವರ್ತನಂ ರೋಗಾಪಹನನಂ ಚೋಭಯೋರಪಿ ತಾಂಬೂಲಯೋಃ ಸಮಮ್ । – ವ್ಯಾ.

೪. ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ । –ನ್ಯಾಯಸುಧಾ

೫. ನಾಖಂಡವೃತ್ತ್ಯಾ ತಸ್ಯ ಸ್ವಾಂತಪದವಾಚ್ಯತಾ ಅಪಿ ತು ಸ್ವಸ್ಯಾಂತೋ ಯಸ್ಮಾದಿತಿ ಸ್ವಾಂತಪದವಾಚ್ಯಂ ತದಿತಿ ಭಾವಃ। –ವ್ಯಾ.

ಯಾವುದು ನಿನ್ನ ಪಾದಕಮಲದಲ್ಲಿ ದುಂಬಿಯಂತಾಗುವುದೋ ಅದೇ ನಿಜವಾದ [೧]ಮನಸ್ಸು; ಬೇರೆಯದು ತನಗೆ ನಾಶವನ್ನುಂಟುಮಾಡುವ ಹರಿದಾಡುವ ಹಾವಿನಂತಹುದು ಎಂದು ತಿಳಿಯುವೆ.

### ಅಕ್ರೂರನನ್ನು ಬೀಳ್ಕೊಟ್ಟ ಶ್ರೀಕೃಷ್ಣ

ಇತಿ ಬ್ರುವಂತಮಕ್ರೂರಮಾಶ್ವಾಸ್ಯ ಮಧುರೋಕ್ತಿಭಿಃ ।
ವಿಸಸರ್ಜ ಪ್ರಭೋರಾಜ್ಞಾಂ ವಿಧಿತ್ಸುಃ ಸೋಽಪ್ಯಗಾದ್ಗೃಹಾನ್[೨] ॥ ೮೩ ॥

ಹೀಗೆ ಕೇಳಿಕೊಂಡ ಅಕ್ರೂರನನ್ನು ಮಧುರವಾದ ಮಾತುಗಳಿಂದ ಸಾಂತ್ವನಪಡಿಸಿ ಶ್ರೀಕೃಷ್ಣ ಬೀಳ್ಕೊಟ್ಟ. [೩]ಸ್ವಾಮಿಯ ಆದೇಶವನ್ನು ಪಾಲಿಸಲೆಂದು ಅಕ್ರೂರನೂ ಸಹ ತನ್ನ ಮನೆಗೆ ತೆರಳಿದ.

ರೋಮ್ಣಾಂ ಹರ್ಷಣಕಾರಿಣೆ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ದಶಮಃ ಸರ್ಗೋ ಮುದಾಂ ಸತ್ಕೃತಃ ॥ ೮೪ ॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ದಶಮಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹತ್ತನೆಯ ಸರ್ಗವು ಮುಕ್ತಾಯವಾಯಿತು.

*****

---

೧. ಕಿಂ ತೇನ ಮನಸಾ ಕಾರ್ಯಂ ಯನ್ನ ತಿಷ್ಠತಿ ಕೇಶವೇ ।
ಮನೋ ಮುಕ್ತಿಫಲಾವಾಪ್ತೌ ಕಾರಣಂ ಸುಪ್ರಯೋಜಿತಮ್ ॥ - ಕೃಷ್ಣಾಮೃತಮಹಾರ್ಣವ

೨. ಏವಮುಕ್ತೋ ಭಗವತಾ ಸೋಽಕ್ರೂರೋ ವಿಮನಾ ಇವ ।
ಪುರೀಂ ಪ್ರವಿಶ್ಯ ಕಂಸಾಯ ಕರ್ಮಾವೇದ್ಯ ಗೃಹಂ ಯಯೌ ॥ - ಭಾಗ.(೧೦/೩೯/೧೮)

೩.. ಗೃಹಾನ್ - ಸ್ವಗೃಹಮ್ .... । ಕೃಷ್ಣಾಜ್ಞಾಭಂಗಭಿಯೈವ ಅಗಾತ್ । ನ ತು ಸ್ವಗೃಹಸ್ನೇಹಾದಿತಿ ಭಾವಃ । -ವ್ಯಾ.

# ೧೧. ಏಕಾದಶಃ ಸರ್ಗಃ

(ಮಧುರಾಪ್ರವೇಶ - ೧,೨; ರಜಕನ ಸಂಹಾರ - ೩,೪; ತ್ರಿವಕ್ರೆಯ ಉದ್ಧಾರ - ೫-೧೦; ಶಿವಧನುರ್ಭಂಗ - ೧೧-೧೪; ಸೂರ್ಯಾಸ್ತದ ವರ್ಣನೆ-೧೫, ೧೬; ಕೃಷ್ಣಪರಾಕ್ರಮದ ಶ್ರವಣದಿಂದ ಕಂಸನಿಗುಂಟಾದ ಭಯ - ೧೭-೨೮; ಕುವಲಯಾಪೀಡಾದಿಗಳ ವಧೆ - ೨೯-೩೮; ಶ್ರೀಕೃಷ್ಣಬಲರಾಮರ ರಂಗಪ್ರವೇಶ - ೩೯; ಚಾಣೂರಮುಷ್ಟಿಕರ ವಧೆ - ೪೦-೪೯; ಕಂಸಸೇನೆಯ ಸಂಹಾರ - ೫೦-೫೭; ಪೂತನಾದಿಗಳ ವಧೆಯ ಆಂತರ್ಯ - ೫೮; ಕಂಸವಧೆ-೫೯-೬೩; ವಿಶ್ರಾಂತಿತೀರ್ಥದ ವರ್ಣನೆ - ೬೪; ಸರ್ಗೋಪಸಂಹಾರ - ೬೫)

### ಶ್ರೀಕೃಷ್ಣಬಲರಾಮರ ಮಧುರಾಪ್ರವೇಶ

**ಪ್ರವಿಶ್ಯ[೧] ವ್ರಜತಸ್ತಸ್ಯ ಹೃದಯಾಖ್ಯಪುರೀಂ ಹರಿಃ।**
**ಇನೋದಯೇ ನಿರ್ವಿವಿಶೇ ಮಧುರಾಂ ಮಧುರಾಪುರೀಮ್ ॥ ೧ ॥**

ಶ್ರೀಕೃಷ್ಣನು ಹಾಗೆ ತೆರಳಿದ ಅಕ್ರೂರನ ಹೃದಯವೆಂಬ ಪಟ್ಟಣದಲ್ಲಿ ಪ್ರವೇಶಿಸಿ, ಸೂರ್ಯೋದಯದ ವೇಳೆಗೆ ಮಧುರವಾದ ಮಧುರಾಪುರಿಯನ್ನು ಹೊಕ್ಕನು.

ವಿ. : [೨]ಶ್ರೀಕೃಷ್ಣನನ್ನು ಹೃದಯದಲ್ಲಿ ಸ್ಮರಿಸುತ್ತಲೇ ಅಕ್ರೂರ ತೆರಳಿದ ಎಂದು ಭಾವ; ಇನ - ಸೂರ್ಯ; ಇನೋದಯ - ಸೂರ್ಯೋದಯ.

### ಶ್ರೀಕೃಷ್ಣನ ಮಧುರಾಪ್ರವೇಶದ ವೈಭವ

**ದ್ವಾರಿ ದ್ವಾರಿ ಸ್ವಭಕ್ತಾಹೃತವಿವಿಧಬಲಿರ್ವಾಯುನೋದ್ಯಾನವಾಪೀ-**
**ಪ್ರೋತ್ಫುಲ್ಲಾಂಭೋಜಕುಂದಪ್ರಕರಸುರಭಿಣಾ ಸೇವ್ಯಮಾನೋಽಧಿವರ್ತ್ಮ।**
**ಸಿಕ್ತಾಂ ಸನ್ಮಾರ್ಗನಾಡೀಮವಿಶದುರುಗುಣಃ ಪುಷ್ಪಪೀಯೂಷವೃಷ್ಟ್ಯಾ**
**ಪಾಪವ್ರಾತಂ ದಿಧಕ್ಷುಃ ಪ್ರಥಿತನಿಜಪುರೋಬ್ರಹ್ಮನಾಡೀಮಿವೇಶಃ ॥ ೨ ॥**

ಮಹಾಗುಣವಂತನಾದ ಈಶನಾದ ಶ್ರೀಕೃಷ್ಣನು ಪ್ರತಿದ್ವಾರದಲ್ಲೂ ತನ್ನ ಭಕ್ತರು ಸಮರ್ಪಿಸಿದ ನಾನಾ ಬಗೆಯ ಪೂಜೆಯನ್ನು ಸ್ವೀಕರಿಸಿ, ಉಪವನದಲ್ಲಿನ ಕೊಳಗಳಲ್ಲಿನ ಅರಳಿದ ಕಮಲ, ಜಾಜಿ, ಪುಷ್ಪಗಳ ರಾಶಿಗಳ ಪರಿಮಳದಿಂದ ಕೂಡಿದ ವಾಯುವಿನಿಂದ ದಾರಿಯುದ್ದಕ್ಕೂ ಸೇವಿಸಲ್ಪಡುತ್ತ, ಹೂಗಳೆಂಬ ಅಮೃತವರ್ಷವು ಸುರಿದಿದ್ದ ರಾಜಮಾರ್ಗದ ಪ್ರಣಾಳಿಯನ್ನು,

---

೧. ತತೋಽಪರಾಹ್ಣೇ ಭಗವಾನ್ ಕೃಷ್ಣಃ ಸಂಕರ್ಷಣಾನ್ವಿತಃ।
ಮಧುರಾಂ ಪ್ರಾವಿಶದ್ಗೋಪೈರ್ದಿದೃಕ್ಷುಃ ಪರಿವಾರಿತಃ॥ ಭಾಗ.(೧೦/೩೯/೧೯)

೨. ಶ್ರೀಕೃಷ್ಣಂ ಹೃದಿ ಸ್ಮರನ್ನೇವಾಕ್ರೂರೋ ಗತ ಇತಿ ಭಾವಃ। -ವ್ಯಾ.

ಪ್ರಸಿದ್ಧವಾದ ತನ್ನ ಭಕ್ತರ ಶರೀರವೆಂಬ ಪಟ್ಟಣದ [೧]ಬ್ರಹ್ಮನಾಡಿಯನ್ನೆಂಬಂತೆ ಪಾಪಿಗಳ ಸಮೂಹವನ್ನು ಸುಡಲು ಬಯಸಿದವನಾಗಿ ಪ್ರವೇಶಿಸಿದನು.

ವಿ. : ೧. ಶ್ರೀಕೃಷ್ಣನು ಮಧುರೆಯನ್ನು ಪ್ರವೇಶಿಸುವಾಗ ದಾರಿಯುದ್ದಕ್ಕೂ ಆ ಪಟ್ಟಣದ ನರ-ನಾರಿಯರು ಬಗೆಬಗೆಯ ಪೂಜೆಯನ್ನು ಸಲ್ಲಿಸುತ್ತಿದ್ದರು. ಹಿತಕರವಾಗಿ ಗಾಳಿಯು ಬೀಸುತ್ತಲಿತ್ತು. ಶ್ರೀಕೃಷ್ಣನು ಅದನ್ನು ಪ್ರವೇಶಿಸಿದ್ದು ಬ್ರಹ್ಮನಾಡಿಯನ್ನು ಪ್ರವೇಶಿಸಿದಂತಿತ್ತು ಎಂದರ್ಥ.

೨. [೨]ಕಣ್ಣು ಮೊದಲಾದ ದ್ವಾರಗಳಲ್ಲಿ ಸೂರ್ಯಾದಿ ದೇವತೆಗಳು ಸಮರ್ಪಿಸಿದ ಆಯಾ ಇಂದ್ರಿಯಗಳ ವಿಷಯಗಳನ್ನು ಅನುಭವಿಸುವ ಆನಂದರೂಪವಾದ ಪೂಜೆ, ಪ್ರಾಣ, ಅಪಾನ ಮೊದಲಾದ ರೂಪಗಳಿಂದ ಅಥವಾ [೩]ಪ್ರಾಣಾಯಾಮಾದಿ ರೂಪದ ವಾಯುವಿನ ಸೇವೆ; [೪]ತಲೆಯ ಮೇಲಿನ ವರುಣಮಂಡಲದಿಂದ ಹೊರಹೊಮ್ಮುವ ಅಮೃತವರ್ಷದಿಂದ ತೊಯ್ದ ಬ್ರಹ್ಮಪುರವೆನ್ನಿಸಿದ ತನ್ನ ಭಕ್ತನ ಶರೀರದ [೫]ಬ್ರಹ್ಮನಾಡಿ ಎನಿಸಿದ ಸುಷುಮ್ನಾ ನಾಡಿಯ ಪ್ರವೇಶ, ಹಾಗೂ ವಾಮಕುಕ್ಷಿಯಲ್ಲಿ ನೆಲೆಸಿದ ಪಾಪಪುರುಷನ ಅವಯವ ರೂಪವಾದ ಬ್ರಹ್ಮಹತ್ಯಾದಿ ಪಾಪಗಳ ರಾಶಿ; ಹೀಗೆ ಬ್ರಹ್ಮನಾಡಿ ಪರವಾಗಿ ಅರ್ಥವನ್ನು ಅನ್ವಯಿಸಿಕೊಳ್ಳಬೇಕು ; ಪ್ರಕರ - ಸಮೂಹ ; ವ್ರಾತ - ಸಮೂಹ.

೩. ಶ್ರೀಕೃಷ್ಣನು ಮಧುರೆಯನ್ನು ಪ್ರವೇಶಿಸುವಾಗ ಅಲ್ಲಿನ ಸ್ತ್ರೀಯರು ಅವನ ದರ್ಶನಕ್ಕೆ ಕಾತರಿಸಿ, ಧಾವಿಸಿದ ಪರಿ ಶ್ರೀಮದ್ಭಾಗವತದಲ್ಲಿ ವಿವರವಾಗಿ ವರ್ಣಿತವಾಗಿದೆ :

ಕಾಶ್ಚಿದ್ ವಿಪರ್ಯಕ್ಕೃತವಸ್ತ್ರಭೂಷಣಾ ವಿಸ್ಮೃತ್ಯ ಚೈಕಂ ಯುಗಲೇಷ್ವಥಾಪರಾಃ ।
ಕೃತೈಕವಸ್ತ್ರಶ್ರವಣೈಕನೂಪುರಾ ನಾಂಕ್ತ್ವಾ ದ್ವಿತೀಯಂ ತ್ವಪರಾಶ್ಚ ಲೋಚನಮ್ ॥
ಅಶ್ನಂತ್ಯ ಏಕಾಸ್ತದಪಾಸ್ಯ ಸೋತ್ಸವಾ ಅಭ್ಯಜ್ಯಮಾನಾ ಅಕೃತೋಪಮಜ್ಜನಾಃ ।
ಸ್ವಪಂತ್ಯ ಉತ್ಥಾಯ ನಿಶಮ್ಯ ನಿಃಸ್ವನಂ ನಿಪಾಯಯಂತ್ಯೋಽರ್ಭಮಪೋಹ್ಯ ಮಾತರಃ ॥
-ಭಾಗ.(೧೦/೩೯/೨೫-೨೬)

೧. ಪ್ರಾಣಾಪಾನಾವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ।
ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ।
ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ ॥ ಇತಿ ಭಾರತೇ ॥ - ಭಾ.ತಾ. (೨/೨/೨೧)

೨. ಅನ್ಯತ್ರ ಚಕ್ಷುರಾದಿದ್ವಾರೇಷು ಸೂರ್ಯಾದಿದೇವೈರುಪಹೃತತತ್ತದಿಂದ್ರಿಯಜನ್ಯಸುಖರೂಪಬಲಿಃ । -ವ್ಯಾ.

೩. ಅನ್ಯತ್ರ ವಾಯುನಾ ಪ್ರಾಣಾಪಾನಾದಿರೂಪೇಣ ಪ್ರಾಣಾಯಾಮಾದಿವಾಯುನಾ ವಾ ಸೇವ್ಯಮಾನಃ ಪುಷ್ಪಪೀಯೂಷವೃಷ್ಟ್ಯಾ ಪುಷ್ಪರಸಾಮೃತವೃಷ್ಟ್ಯಾ ಸಿಕ್ತಾಮ್ । -ವ್ಯಾ.

೪. ಅನ್ಯತ್ರ ಮೂರ್ಧ್ನಿ ಸ್ಥಿತವರುಣಮಂಡಲಾತ್ ನಿಃಸೃತಾಮೃತವೃಷ್ಟ್ಯಾ ಸಿಕ್ತಾಮ್ । - ವ್ಯಾ.

೫. ಅನ್ಯತ್ರ ಮೂರ್ಧ್ನಿ ಸ್ಥಿತವರುಣಮಂಡಲಾತ್ ನಿಃಸೃತಾಮೃತವೃಷ್ಟ್ಯಾ ಸಿಕ್ತಾಂ ಪ್ಲಾವಿತಾಂ ಸನ್ಮಾರ್ಗನಾಡೀಂ ರಾಜಮಾರ್ಗಪ್ರನಾಡೀಂ ಪ್ರಥಿತನಿಜಪುರಃ ''ಹೃದಯಂ ಬ್ರಹ್ಮಪುರ''ಮಿತಿ ಶ್ರುತಿಸಿದ್ಧಸ್ವಭಕ್ತಶರೀರಾಖ್ಯಾ ಯಾ ಪೂಃ ಪುರೀ ತಸ್ಯಾಃ ಬ್ರಹ್ಮನಾಡೀಮಿವ ಹೃನ್ಮಧ್ಯಸ್ಥಸುಷುಮ್ನನಾಡೀಮಿವ ಪಾಪವ್ರಾತಂ ಚಾಣೂರಕಂಸಾದಿ-ಪಾಪಸಮೂಹಮ್ । ಅನ್ಯತ್ರ ವಾಮಕುಕ್ಷಿಸ್ಥಪಾಪಪುರುಷಾವಯವಭೂತಬ್ರಹ್ಮಹತ್ಯಾದಿಪಾಪಸಮೂಹಂ ದಿಧಕ್ಷುಃ ದಗ್ಧುಮಿಚ್ಛುಃ ಸನ್ನವಿಶತ್ ಪ್ರವಿವೇಶ । - ವ್ಯಾ.

– ವೃಂದಾವನದಲ್ಲಿ ಕೃಷ್ಣನೆಡೆಗೆ ಹೀಗೆ ಗೋಪಿಯರು ಸಹ ಧಾವಿಸಿದ್ದ ವಿವರ ಈ ಹಿಂದೆ (೬/೫೨,೫೩.) ನಿರೂಪಿತವಾಗಿದೆ.

– (ಕೆಲವರು ವಸ್ತ್ರಗಳ ಜಾಗದಲ್ಲಿ ಭೂಷಣಗಳನ್ನು , ಭೂಷಣಗಳ ಜಾಗದಲ್ಲಿ ವಸ್ತ್ರಗಳನ್ನು ಧರಿಸಿದರು. ಕೆಲವರು ಅವುಗಳಲ್ಲಿ ಒಂದನ್ನಷ್ಟೆ ಧರಿಸಿದರು, ಕೆಲವರು ಒಂಟಿ ವಸ್ತ್ರ ಒಂಟಿ ಓಲೆ, ಒಂಟಿ ಗೆಜ್ಜೆಗಳನ್ನಷ್ಟೆ ಧರಿಸಿದರು. ಕೆಲವರು ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುವುದನ್ನು ಬಿಟ್ಟು ಓಡಿದರು. ಕೆಲವರು ಭೋಜನವನ್ನು ಅರ್ಧಕ್ಕೆ ನಿಲ್ಲಿಸಿ ಓಡಿದರು. ಅಭ್ಯಂಜನವನ್ನು ಅರ್ಧಕ್ಕೆ ನಿಲ್ಲಿಸಿ ಓಡಿದವರು ಮತ್ತೆ ಕೆಲವರು; ಮಲಗಿದ್ದ ಕೆಲವರು ನಿದ್ರೆ ತೊರೆದು ಓಡಿದರೆ, ಕೆಲವರು ಮಗುವಿಗೆ ಹಾಲುಣಿಸುವುದನ್ನು ಬಿಟ್ಟು ಓಡಿದರು ಎಂದು ಭಾವ).

೪. ಮಂತ್ರಜಪಕ್ಕಿಂತ ಪೂರ್ವದಲ್ಲಿ ಪಾಪಪುರುಷನನ್ನು ನಿಗ್ರಹಿಸುವುದು ಶಾಸ್ತ್ರಗಳ ವಿಧಿ; ಅದರಂತೆ ಇಲ್ಲಿ ಶ್ರೀಕೃಷ್ಣನಿಂದ ಪಾಪರಾಶಿಯ ಸಂಕೇತವಾಗಿದ್ದ ಕಂಸಾದಿಗಳನ್ನು ನಿಗ್ರಹಿಸುವ ಕಾರ್ಯ ನಡೆದಿದೆ ಎಂದು ತಿಳಿಯಬೇಕು.

**ರಜಕನ ಬಳಿ ವಸ್ತ್ರ ಕೇಳಿದ ಪೀತಾಂಬರಧಾರಿಯಾದ ಶ್ರೀಕೃಷ್ಣ**

**ರಜಕಂ ರಜಸಾ ಗ್ರಸ್ತಂ ದರ್ಶಯನ್ನಿವ ಸೋಽಧ್ವನಿ ।**
**ವಸನಂ ಪೀತವಸನಃ [೧]ಸಮಯಾಚತ ಸರ್ವವಿತ್ ॥ ೩ ॥**

ಮಾರ್ಗದಲ್ಲಿ ಪೀತಾಂಬರಧಾರಿಯೂ ಸರ್ವಜ್ಞನೂ ಆದ ಆ ಶ್ರೀಕೃಷ್ಣನು, ಅಗಸನು ರಜೋ ಗುಣದಿಂದ ಕೂಡಿದವನು ಎಂದು ತೋರಿಸಿಕೊಡಲೆಂಬಂತೆ ವಸ್ತ್ರವನ್ನು ಬೇಡಿದ.

ವಿ.: ೧. ಶ್ರೀಕೃಷ್ಣನಿಗೆ ಅಗಸ ನೀಡುವ ವಸ್ತ್ರದ ಅಗತ್ಯವಿಲ್ಲ ಎಂಬುದನ್ನು ಸೂಚಿಸಲು ಪೀತವಸನಃ ಎಂಬ ವಿಶೇಷಣವನ್ನು, ರಜಕ ಅವುಗಳನ್ನು ಕೊಡುವಂತಹ ಸಾತ್ವಿಕನೇನಲ್ಲ ಎಂಬುದನ್ನು ಅವನು ಬಲ್ಲ ಎಂಬುದನ್ನು [೨]ಸೂಚಿಸಲು ಸರ್ವವಿತ್ ಎಂಬ ವಿಶೇಷಣವನ್ನು ಬಳಸಿರುವರು; ಪೀತವಸನ – ಪೀತಾಂಬರ.

೨. ಶ್ರೀಕೃಷ್ಣನಿಂದ ಹತನಾದ ಆ ರಜಕನು ಸ್ವರೂಪತಃ ತಮೋಯೋಗ್ಯನೆಂಬುದು ಸ್ಪಷ್ಟ. ಇಲ್ಲಿ 'ರಜಸಾ ಗ್ರಸ್ತಂ' ಎಂದು ಕರೆದಿರುವುದು ಆಗ ಅವನ ದೇಹದಲ್ಲಿ ತುಂಬಿದ್ದ ರಜೋಗುಣವನ್ನು ಸೂಚಿಸಲೆಂದು ಮಾತ್ರ ಎಂದು ತಿಳಿಯಬೇಕು. ಅಂತಹ ಲೋಭವು ರಜೋಗುಣದ ಸಂಕೇತ ಎಂಬ ವಿವರ [೩]ಗೀತೆಯಲ್ಲಿ ಬಂದಿದೆ.

---

೧. ದೇಹ್ಯಾವಯೋಃ ಸಮುಚಿತಾನ್ಯಂಗ ವಾಸಾಂಸಿ ಚಾರ್ಹತೋಃ ।
ಭವಿಷ್ಯತಿ ಪರಂ ಶ್ರೇಯೋ ದಾತುಸ್ತೇ ನಾತ್ರ ಸಂಶಯಃ ॥ –ಭಾಗ.(೧೦/೩೯/೩೨)

೨. ಸ್ವಯಾಂಚಾಭಂಗಕರಣೇ ರಾಜಸೋಽಯಮಿತಿ ಪ್ರದರ್ಶನಾಯ್ಯೆವ ಯಾಂಚಾ ನ ತು ವಸ್ತ್ರಾಭಾವಾದಿತಿ ಭಾವಃ । –ವ್ಯಾ.

೩. ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ – ಗೀತಾ (೧೪/೭)

### ರಜಕನ ವಧೆ

ತತಸ್ತಸ್ಯ ದುರಾಲಾಪಂ ನಿಶಮ್ಯ ಸುದುರಾತ್ಮನಃ।
ಶಿರೋ ಜಹಾರ ಕಿಂ ಕಾಯಂ ಕರೋತ್ವಕೃತಕಿಲ್ಬಿಷಮ್ ॥ ೪ ॥

ಬಳಿಕ ತುಂಬಾ ದುರಾತ್ಮನಾದ ಆ ಅಗಸನ ದುಷ್ಟವಚನವನ್ನು ಕೇಳಿ ಶ್ರೀಕೃಷ್ಣ ಅವನ ತಲೆಯನ್ನು ಕತ್ತರಿಸಿದ ; ಅಪಚಾರವೆಸಗದ ಮುಂಡದ ಭಾಗವು ಏನು ತಾನೆ ಮಾಡೀತು?

ವಿ. : ೧. ಶ್ರೀಕೃಷ್ಣನು [1]ಕೆಟ್ಟ ವಚನಗಳನ್ನು ನುಡಿದ ಅಗಸನ ತಲೆಯನ್ನು ಕತ್ತರಿಸಿದ; ಆದರೆ ಅಂತಹ ಅಪರಾಧ ಮಾಡದಿದ್ದ ಕಾಯವನ್ನು ಮಾತ್ರ ದಂಡಿಸಲಿಲ್ಲ ಎಂಬ ಮಾತಿನಿಂದ ಶ್ರೀಕೃಷ್ಣ ಪಾಪಕ್ಕೆ ಅನುಗುಣವಾಗಿ ಮಾತ್ರವೇ ಶಿಕ್ಷೆ ನೀಡುವವನು, ಸಮ ಎಂಬ ಭಾವ ನಿರೂಪಿತ.

೨. ಈ ಮುನ್ನ ಕಾಲಿಯಮರ್ದನ ಪ್ರಸಂಗದಲ್ಲಿಯೂ(೪/೬೫) ಶ್ರೀಕೃಷ್ಣ ಅವನ ಹೆಡೆಗಳನ್ನು ಮಾತ್ರ ತುಳಿದು, ಬಾಲವನ್ನು ಕೈಲಿ ಹಿಡಿದ ಪ್ರಸಂಗ ಸಹ ಇದರಂತಹುದೇ ಎಂಬುದನ್ನು ಗಮನಿಸಬೇಕು; ಕಾಯ - ಶರೀರ.

### ತ್ರಿವಕ್ರೆಗೆ ಲಭಿಸಿದ ಕೃಷ್ಣದರ್ಶನದ ಭಾಗ್ಯ

ಪಥಿ ಪಥಿ ನವಸೌಧಾಂತಸ್ಥಮುಗ್ಧಾಂಗನಾಭಿಃ
ಕುಸುಮನಿಕರಲಾಜೈಃ[2] ಕೀರ್ಯಮಾಣೋಽಪಿ ಕೃಷ್ಣಃ।
ಅವಿದಿತಗುಣಕರ್ಮೋಪೇತ್ಯ ವವ್ರೇ ತ್ರಿವಕ್ರಾಂ
ಚತುರಪುರುಷಕಾಂಕ್ಷಾ ವಕ್ರಯೋಷಿತ್ಸು ನೂನಮ್ ॥ ೫ ॥

ದಾರಿಯುದ್ದಕ್ಕೂ ಹೊಸ ಉಪ್ಪರಿಗೆಗಳಲ್ಲಿನ ಮುಗ್ಧ ನಾರಿಯರು ಪುಷ್ಪರಾಶಿ ಹಾಗೂ ಲಾಜಗಳನ್ನು ಸುರಿಸುತ್ತಿದ್ದರೂ, ಅರಿಯಲಾಗದ ಗುಣ ಹಾಗೂ ಕರ್ಮಗಳ ಶ್ರೀಕೃಷ್ಣನು ತ್ರಿವಕ್ರೆಯ ಬಳಿಸಾರಿ ಅವಳನ್ನು ಸ್ವೀಕರಿಸಿದ; ನಿಪುಣಪುರುಷರ ಬಯಕೆಯು ನಿಶ್ಚಿತವಾಗಿಯೂ ವಕ್ರಸ್ತ್ರೀಯರಲ್ಲಿಯೇ.

---

ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ।
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ॥ - ಗೀತಾ (೧೪/೧೭)

೧. ಅಕೃತಕಿಲ್ಬಿಷಮಿತ್ಯನೇನ ದುರ್ವಚನಮಾತ್ರಂ ನಿಮಿತ್ತಮಿತ್ಯುಕ್ತಮ್। ನ ತು ಶ್ರೀಕೃಷ್ಣಂ ಪ್ರತಿ ಹಂತುಂ ಹಸ್ತೋದ್ಯೋಗಃ ಕೃತ ಇತಿ ಸೂಚಿತಮ್। - ವ್ಯಾ.

೨. ಪ್ರಾಸಾದಶಿಖರಾರೂಢಾಃ ಪ್ರೀತ್ಯುತ್ಫುಲ್ಲಮುಖಾಂಬುಜಾಃ।
ಅಭ್ಯವರ್ಷನ್ ಸೌಮನಸ್ಯೈಃ ಪ್ರಮದಾ ಬಲಕೇಶವೌ॥
ದಧ್ಯಕ್ಷತೈಃ ಸೋದಪಾತ್ರೈಃ ಸ್ರಗ್ಗಂಧೈರಭ್ಯುಪಾಯನೈಃ।
ತಾವಾನರ್ಚುಃ ಪ್ರಮುದಿತಾಸ್ತತ್ರ ತತ್ರ ದ್ವಿಜಾತಯಃ॥ -ಭಾಗ.(೧೦/೩೯/೨೯,೩೦)

ವಿ. : ೧. ಅಸಂಖ್ಯಸ್ತ್ರೀಯರು ಪುಷ್ಪಾದಿಗಳ ಸಮರ್ಪಣೆಯ ಮೂಲಕ ತನ್ನನ್ನು ಆರಾಧಿಸುತ್ತಿದ್ದರೂ ಶ್ರೀಕೃಷ್ಣ ಅವರನ್ನು ಬಿಟ್ಟು ಒಬ್ಬ ಗೂನಿಯನ್ನು ಮೆಚ್ಚಿ ಹೊರಟ ಎಂಬುದು ಮೇಲ್ನೋಟಕ್ಕೆ ಸಮಂಜಸವೆನ್ನಿಸದ ವಿವರ ; ಆದರೆ ಸಾಮಾನ್ಯವಾಗಿ [೧]ನಿಪುಣ ವ್ಯಕ್ತಿಯು ಇಂತಹ ವಕ್ರಸ್ವಭಾವದ ನಾರಿಯನ್ನೇ ಮೆಚ್ಚುವನು ಎಂಬುದು ಅದಕ್ಕೆ ಲೋಕರೀತಿಯ ಕಾರಣ.

೨. ವಾಸ್ತವವಾಗಿ ಆ [೨]ತ್ರಿವಕ್ರೆಯು ಹಿಂದಿನ ಜನ್ಮದಲ್ಲಿ ಪಿಂಗಳೆ ಎಂಬ ವೇಶ್ಯೆಯಾಗಿದ್ದು ಶ್ರೀಕೃಷ್ಣನನ್ನು ತಪಸ್ಸಿನಿಂದ ಆರಾಧಿಸಿದ್ದ ಪುಣ್ಯವತಿಯಾದ ಒಬ್ಬ ಅಪ್ಸರೆ. ಅದಕ್ಕೆಂದೇ ಶ್ರೀಕೃಷ್ಣ ಅವಳನ್ನು ಅನುಗ್ರಹಿಸಲೆಂದು ಅವಳ ಬಳಿಗೆ ತೆರಳಿದ ಎಂಬುದು ತತ್ತ್ವ ; ನಿಕರ - ಸಮೂಹ.

## ಧನುಸ್ಸಿನಂತೆ ಕಂಗೊಳಿಸಿದ ತ್ರಿವಕ್ರೆ

**ಮುಷ್ಟಿಪ್ರಮಾಣತನುಮಧ್ಯವತೀಂ ಸ್ವಕರ್ಣ-**
**ವಿಶ್ರಾಂತನಿರ್ಮಲಗುಣಾಂ ರುಚಿರಾಂ ತ್ರಿವಕ್ರಾಮ್ ।**
**ವಿಷ್ವಕ್ಪ್ರಯುಕ್ತನಯನಾಂತಶರಾಂ ನಿರೀಕ್ಷ್ಯ**
**ಕೋದಂಡಮುದ್ಧವಕಥಾವಿಷಯಂ ಸ ಮೇನೇ ॥ ೬ ॥**

ಮುಷ್ಟಿಪ್ರಮಾಣದ ತೆಳುವಾದ ನಡು, ತನ್ನ ಕಿವಿಯಾರೆ ಕೇಳಿದ್ದ ಶ್ರೀಕೃಷ್ಣನ ನಿರ್ಮಲಗುಣಗಳ ಚಿಂತನೆ, ಅಪಾರಲಾವಣ್ಯ, ಸುತ್ತಲೂ ಬೀರುತ್ತಿದ್ದ ಕಟಾಕ್ಷರೂಪದ ಬಾಣಗಳು, ಹೀಗಿದ್ದ ಸುಂದರಿಯಾದ ತ್ರಿವಕ್ರೆಯನ್ನು ಕಂಡು ಆ ಶ್ರೀಕೃಷ್ಣನು ಉತ್ಸವಕ್ಕೆ ಕಾರಣವಾದ ಧನುಸ್ಸು ಎಂಬುದಾಗಿ ಭಾವಿಸಿದನು.

ವಿ. : ೧. ಬಾಗಿದ ತ್ರಿವಕ್ರೆಯನ್ನು ಬಾಗಿದ ಧನುಸ್ಸಿಗೆ ಹೋಲಿಸಿರುವುದು ಇಲ್ಲಿಯ ವಿಶೇಷ; ಧನುಸ್ಸಿನ ಮಧ್ಯಭಾಗವು ಮುಷ್ಟಿಗೆ ನಿಲುಕುವಂತಿರುವುದು. ಹಗ್ಗವನ್ನು ಕಿವಿಯವರೆಗೂ ಎಳೆದಾಗ ನೋಡಲು ರಮ್ಯವಾಗಿರುವುದು.

೨. ಬಾಣವನ್ನು ಕಿವಿಯವರೆಗೂ ಎಳೆದಾಗ ಧನುಸ್ಸು ತ್ರಿಕೋನಾಕಾರದಲ್ಲಿ ಬಾಗುವುದು ಅದಕ್ಕೆ ತ್ರಿವಕ್ರೆಯೊಂದಿಗಿರುವ ಸಾಮ್ಯ ಎಂದು ತಿಳಿಯಬೇಕು; ಉದ್ಧವ - ಉದ್ಧವ ಎಂಬ ಯಾದವ ಹಾಗೂ ಉತ್ಸವ ಎಂಬ ಎರಡು ಅರ್ಥಗಳೂ ವಿವಕ್ಷಿತ.

---

೧. ತಥಾಹಿ ಚತುರಪುರುಷಸ್ಯ ಕಾಂಕ್ಷಾ ಇಚ್ಛಾ ವಕ್ರಯೋಷಿತ್ಸು ಕುಟಿಲಾಂಗನಾಸು ಪ್ರಣಯಕೋಪಾದಿನಾ ನಾಂಗೀಕರೋಮೀತಿ ಮನಃಕೌಟಿಲ್ಯವತೀಷು ನೂನಂ ನಿಶ್ಚಯಃ । ಪ್ರೌಢಪುರುಷಾಣಾಂ ವಕ್ರಾಂಗನಾವಶೀಕರಣಚಾತುರ್ಯಸ್ಯ ಸತ್ವಾದಿತಿ ಭಾವಃ । -ವ್ಯಾ.

೨. ಭಗವದ್ಭಾರ್ಯತಾಯೋಗ್ಯಾಃ ಕಾಶ್ಚಿದಪ್ಸರಸಃ ಸ್ತ್ರಿಯಃ ।
ರಮಾವೇಶಾತ್ ಕದಾಚಿತ್ ಸ್ವಸ್ತಾಸ್ವೇಕಾ ಪಿಂಗಲಾಽಭವತ್ ।
ತದನ್ಯಾಸಾಂ ಮಹಾನ್ ದೋಷೋ ಭಗವದ್ಭಾರ್ಯತಾಸ್ಮೃತೌ ॥ -ಭಾಗವತತಾತ್ಪರ್ಯ (೧೧/೮/೩೪)

೨.. ಧನುಸ್ಸನ್ನು ಭಂಗಮಾಡುವುದು ಎಂದರೆ ಮೂರು ಕಡೆ ಬಾಗಿದ ಅದನ್ನು ನೇರಗೊಳಿಸು-ವುದು ಎಂದರ್ಥ; ಅದು ಇಲ್ಲಿ ಮುಂದೆ ತ್ರಿವಕ್ರೆಯನ್ನು ನೇರಗೊಳಿಸುವುದಕ್ಕೆ ಸಂಕೇತ.

## ಅವಕ್ರೆಯಾದ ತ್ರಿವಕ್ರೆ

ಮಧುರವಚನಮಾತ್ರೇಣಾಂಗರಾಗಂ ದದೌ ಯಾ
ಪುಲಕಿತರುಚಿರಾಂಗೀ ಚಂಚಲಾಪಾಂಗಭೃಂಗೀ।
ಅನುಚಿತಮಭಿಧಾನಂ ತ್ಯಾಜಯನ್ ವಾಸುದೇವಃ
ಖಲಕುಲವನದಾವಸ್ತಾಂ ತತಾನರ್ಜುಗಾತ್ರೀಮ್ ॥ ೭ ॥

ಸವಿನುಡಿಗಳನ್ನು ಕೇಳಿದ ಮಾತ್ರಕ್ಕೆ ಗಂಧವನ್ನು ನೀಡಿದ ಪುಲಕಿತ ಸುಂದರದೇಹದ, ಚಂಚಲ ಕುಡಿನೋಟ ರೂಪದ ದುಂಬಿಯನ್ನು ಹೊಂದಿದ್ದ ಆ ತ್ರಿವಕ್ರೆಗೆ[೧] ಉಚಿತವಲ್ಲದ ಹೆಸರನ್ನು ಅಳಿಸಿಹಾಕಲೆಂದು ದುಷ್ಟರ ಕುಲಕ್ಕೆ ದಾವಾಗ್ನಿಯಾದ ಶ್ರೀಕೃಷ್ಣನು ಅವಳನ್ನು ನೇರದೇಹದವಳನ್ನಾಗಿಸಿದ.

ವಿ. : ಸವಿನುಡಿಮಾತ್ರದಿಂದಲೇ ಮೈಯಲ್ಲಿ ಪುಳಕ, ದುಂಬಿಯಂತಹ ಚಂಚಲಕುಡಿನೋಟ ಹಾಗೂ ಗಂಧದಾನ, ಇವು ತ್ರಿವಕ್ರೆಯ ಗುಣಗಳಾಗಿವೆ. ಆದರೆ ಅವಳ ದೇಹಮಾತ್ರ ಬಾಗಿದ್ದಿತು; ಎಂದರೆ ಅವಳಿಗೆ ಒಪ್ಪದಂತಿದ್ದಿತು! ಶ್ರೀಕೃಷ್ಣ ಅವಳ ವಕ್ರತ್ವವನ್ನು ಹೋಗಲಾಡಿಸುವ ಮೂಲಕ ತ್ರಿವಕ್ರೆ ಎಂಬ ಅನುಚಿತವಾದ ಹೆಸರನ್ನು ಬದಲಾಯಿಸಿದ ಎಂದರ್ಥ; ಋಜುಗಾತ್ರೀ – ನೇರದೇಹದವಳು.

## ಶ್ರೀಕೃಷ್ಣನು ತ್ರಿವಕ್ರೆಯನ್ನು ಉದ್ಧರಿಸಿದ ಕೀರ್ತಿ

ಪ್ರಪದನಿಹಿತಪಾದಾಂಭೋಜಪುಲ್ಲಪ್ರಸೂನೋ
ವದನಮುಪಗತೇನ ದ್ವ್ಯಂಗುಲೋತ್ತಾನದೋಷ್ಣಾ।
ಋಜುತನುಮತನೋತ್ ತಾಮುನ್ನಮಯ್ಯ ತ್ರಿವಕ್ರಾಂ
ಚುಬುಕಗತಕರಾಣಾಮಂಚತಾಂ ಕ್ವಾಸ್ತಿ ವಕ್ರಾ ॥ ೮ ॥

ಅವಳ ಮುಂಗಾಲಿನ ಮೇಲೆ ತನ್ನ ಪಾದಗಳೆಂಬ ಅರಳಿದ ಕಮಲಪುಷ್ಪವನ್ನು ಇರಿಸಿದ ಆ ಶ್ರೀಕೃಷ್ಣನು ತ್ರಿವಕ್ರೆಯ ಮುಖದ ಬಳಿ ಎರಡು ಅಂಗುಲಿಗಳನ್ನು ಮೇಲ್ಮುಖವಾಗಿ ಇರಿಸಿದ ಮುಂಗೈಯಿಂದ ಮೇಲೆತ್ತುವ ಮೂಲಕ ಅವಳನ್ನು ನೇರದೇಹದವಳನ್ನಾಗಿಸಿದ; ಗಲ್ಲದ ಮೇಲೆ ಕೈ ಇರಿಸಿ ಮೆಚ್ಚಿಸುವವರಿಗೆ[೨] ಯಾವಳು ತಾನೆ ವಕ್ರೆಯಾದಾಳು ?

---

೧. ಅನುಚಿತಮಭಿಧಾನಂ ತ್ರಿವಕ್ರೇತಿ ನಾಮ । ಪ್ರಿಯೋಕ್ತಿಶ್ರವಣಮಾತ್ರೇಣ ಅಂಗರಾಗಾರ್ಪಣಾತ್ ಏಕತ್ರಾಪ್ಯವಕ್ರಾಯಾಃ ತ್ರಿವಕ್ರತ್ವಮನುಚಿತಮಿತಿ ಭಾವಃ। – ವ್ಯಾ.

೨. ಯಥಾ ವಿಲಾಸೀ ಪ್ರಣಯಕೋಪೇ ವಕ್ರಾಯಾಃ ಪಾದೇ ಪುಷ್ಪಂ ಸಮರ್ಪ್ಯ ವದನಂ ಸಂಗೃಹ್ಯ ಸ್ತುತಾ ಅನುಕೂಲಯತಿ ತಥೇತಿ ಧ್ವನಿಃ। – ವ್ಯಾ.

### ಕರದಂತೆ ವರ್ತಿಸಿದ ಕೃಷ್ಣನ ಕೈ

ವಕ್ರಾಮಪಿ ಚ ತಾಂ ತನ್ವೀಮೃಜ್ವೀಂ ಕೃಷ್ಣಕರೋಽಕರೋತ್ ।
ಅನುಕೂಲಯಿತುಂ ಬಾಲಾಂ ಕರ ಏವ ಹಿ ಕಾರಣಮ್ ॥ ೯ ॥

ವಕ್ರಳಾಗಿದ್ದರೂ ಅವಳನ್ನು ಶ್ರೀಕೃಷ್ಣನ [೧]ಕರವು ನೇರ ದೇಹದವಳನ್ನಾಗುವಂತೆ ಮಾಡಿತು; ಸ್ತ್ರೀಯನ್ನು ಒಲಿಸಿಕೊಳ್ಳಲು ಹೀಗೆ ಕರ(ಕಾಣಿಕೆ)ವೇ ಕಾರಣವಾಗಿದೆಯಲ್ಲವೆ !

ವಿ. : ಮುನಿಸಿಕೊಂಡವರನ್ನು ಮೆಚ್ಚಿಸಲು ಅವರಿಗೆ ಅಪೇಕ್ಷಿತವಾದ ವಸ್ತುವನ್ನು ಕೊಡುವುದೇ ಮುಖ್ಯ ಉಪಾಯ ಎಂದರ್ಥ; ಇಲ್ಲಿ [೨]ಕರ(ಕೈ, ಕಾಣಿಕೆ) ಎಂಬಲ್ಲಿ ಶ್ಲೇಷಾಲಂಕಾರ.

### ಶ್ರೀಹರಿಯ ಪೂಜೆಯ ಫಲ

ಗಂಧಾರ್ಪಣಾದ್ರುಚಿರವೇಷಕೃತೇರ್ಮನೋಜ್ಞ-
ಕುಂದಪ್ರಸೂನರಚಿತಾಮಲಮಾಲ್ಯದಾನಾತ್ ।
ಕುಬ್ಜಾದಯಸ್ತಮಲಭಂತ ಮಹಾಪ್ರಸಾದಂ
[೩]ಕಿಂ ನಾಮ ಸರ್ವವಿಧಿಭಿರ್ವಿಭುಮರ್ಚಯಂತಃ ॥ ೧೦ ॥

ಗಂಧಸಮರ್ಪಣೆಯಿಂದ, ಮನೋಹರವಾದ ಅಲಂಕಾರ ಮಾಡುವುದರಿಂದ, ರಮ್ಯವಾದ ಜಾಜಿಹೂವುಗಳಿಂದ ಕಟ್ಟಿದ ನಿರ್ಮಲವಾದ ಮಾಲೆಯನ್ನು ನೀಡುವುದರಿಂದ, ಕುಬ್ಜೆ ಮೊದಲಾದವರು ಆ ಪರಮಾನುಗ್ರಹವನ್ನು ಪಡೆದುಕೊಂಡರು. ಇನ್ನು ಸಕಲವಿಧಿಗಳಿಂದ ವಿಭುವಾದ ಆ ಶ್ರೀಕೃಷ್ಣನನ್ನು ಅರ್ಚಿಸುವವರು ಅಂತಹ ಮಹಾಪ್ರಸಾದವನ್ನು ಪಡೆಯುವರು ಎಂದು ಹೇಳಬೇಕಿದೆಯೇ?

ವಿ. : ೧. ಕುಬ್ಜೆ ಗಂಧಸಮರ್ಪಣೆಯನ್ನು, ಇತರರು [೪]ಮಾಲಾದಿಗಳ ಸಮರ್ಪಣೆಯನ್ನು ಮಾಡುವ ಮೂಲಕ ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರರಾದರು. ಹೀಗೆ ಒಂದೆರಡು ಬಗೆಯ ಆರಾಧನೆಯಿಂದಲೇ ಶ್ರೀಹರಿಯು ಪರಮಾನುಗ್ರಹ ಮಾಡುವಾಗ ಸಕಲ ಬಗೆಯ ಉಪಚಾರ-ಗಳಿಂದ ಅವನನ್ನು ಪೂಜಿಸುವವರಿಗೆ ಲಭಿಸುವ ಅನುಗ್ರಹವನ್ನು ವರ್ಣಿಸಲು ಅಸಾಧ್ಯ ಎಂದರ್ಥ.

---

೧. ಕರ ಏವ ದ್ರವ್ಯದಾನಮೇವ ಕಾರಣಂ ಹಿ। – ವ್ಯಾ.

೨. ಕರಶಬ್ದಸ್ಯ ಶ್ಲಿಷ್ಟತ್ವಾತ್ ಶ್ಲೇಷಮೂಲೋಽರ್ಥಾಂತರನ್ಯಾಸಃ। – ವ್ಯಾ.

೩.. ಯಾ ದೋಹನೇಽವಹನನೇ ಮಥನೋಪಜಲ್ಪಪ್ರೇಂಖೇಂಖನಾರ್ಭರುದಿತೋಕ್ಷಣಮಜ್ಜನಾದೌ।
ಗಾಯಂತಿ ಚೈನಮನುರಕ್ತಧಿಯೋಽಶ್ರುಕಂಠ್ಯಃ ಪುಣ್ಯಾ ವ್ರಜಸ್ತ್ರಿಯ ಉರುಕ್ರಮಚಿತ್ತಯಾಮಾಃ॥
–ಭಾಗ.(೧೦/೪೨/೧೫)

೪. ಮನೋಜ್ಞಕುಂದಪ್ರಸೂನರಚಿತಸ್ಯಾಮಲಮಾಲ್ಯಸ್ಯ ದಾನಾತ್ ಏಕೈಕೋಪಚಾರಸಮರ್ಪಣಾದಿತಿ ಭಾವಃ। –ವ್ಯಾ.

೨. ಗಂಧಾರ್ಪಣೆ ಮಾಡಿ ಸೇವಿಸಿದವಳು ಕುಬ್ಜೆ ; ಸೊಗಸಾದ ಅಲಂಕಾರ ಸೇವೆಯನ್ನು ಸಲ್ಲಿಸಿದವನು ಒಬ್ಬ ಕ್ಷೌರಿಕ. ಹೂಮಾಲೆಯನ್ನು ಅರ್ಪಿಸಿದವನು ಹೂವಾಡಿಗ ಎಂಬ ವಿವರ ಶ್ರೀಮದ್ಭಾಗವತ ಹಾಗೂ [೧] ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿದೆ.

೩.. ಸಕಲವಿಧಿಗಳು ಎಂದರೆ ಪೂಜಾಪದ್ಧತಿಯಲ್ಲಿ ವಿಹಿತವಾಗಿರುವ ಅರ್ಘ್ಯ,ಪಾದ್ಯ ಮೊದಲಾದ ಷೋಡಶೋಪಚಾರಗಳು [೨] ಎಂದರ್ಥ. ಅರ್ಘ್ಯ - ಪಾದ್ಯ - ಆಚಮನೀಯ - ಮಧುಪರ್ಕ - ಪುನರಾಚಮನೀಯ- ಸ್ನಾನ - ವಸ್ತ್ರ - ಭೂಷಣ - ಯಜ್ಞೋಪವೀತ - ಆಸನ - ಗಂಧ - ಪುಷ್ಪ - ಧೂಪ - ದೀಪ - ನೈವೇದ್ಯ ಹಾಗೂ ನಮಸ್ಕಾರ ಇವು ಷೋಡಶೋ- ಪಚಾರಗಳು; [೩] ಮುಖವಸ್ತ್ರ, ತಾಂಬೂಲ, ದರ್ಪಣ, ಛತ್ರ, ಚಾಮರ ಹಾಗೂ ಪಾದುಕೆಗಳು - ಆರು ಅನೂಪಚಾರಗಳು .

೪. ಈ ಶ್ಲೋಕವು ಶ್ರೀಮದಾಚಾರ್ಯರ ಕೃಷ್ಣಾಮೃತಮಹಾರ್ಣವಕೃತಿಯಲ್ಲಿನ ದೇವ-ಪೂಜೆಯ ಮಹತ್ತ್ವನ್ನು ವಿವರಿಸುವ ಶ್ಲೋಕಗಳ ಸಾರರೂಪದಂತಿರುವ ಶ್ಲೋಕವಾಗಿದೆ.

೫. ಪೂಜೆಯ ಏಕದೇಶವು ಸಹ ವ್ಯರ್ಥವಾಗದು ಎಂಬುದು ಇಲ್ಲಿಯ ಮತ್ತೊಂದು ಬಗೆಯ ಸಂದೇಶ.

## ಶ್ರೀಕೃಷ್ಣನಿಂದ ಶಿವಧನುಸ್ಸಿನ ಭಂಗ

**ರಾಜಾಧ್ವನಾ ಸಮಧಿಗಮ್ಯ ಧನುರ್ನಿವಾಸಂ**
**ಕೋದಂಡಖಂಡನಮಥೋ ಚಕಮೇ ರಮೇಶಃ।**

---

೧. ಗ್ರಾಹ್ಯಾಪಹೇಯರಹಿತೈಕಚಿದಾತ್ಮಸಾಂದ್ರಸ್ವಾನಂದಪೂರ್ಣವಪುರಪ್ಯಯಶೋಷಹೀನಃ।
ಲೋಕಾನ್ ವಿಡಂಬ್ಯ ನರವತ್ ಸಮಲಕ್ತಕಾದ್ಯೈರ್ವಪ್ರಾವಿಭೂಷಿತ ಇವಾಭವದಪ್ರಮೇಯಃ॥
ಮಾಲಾ ಅವಾಪ್ಯ ಚ ಸುದಾಮತ ಆತ್ಮತಂತ್ರಸ್ತಾವಕ್ಷಯೋಽನುಜಗೃಹೇ ನಿಜಪಾರ್ಷದೌ ಹಿ।
ಪೂರ್ವಂ ವಿಕುಂಠಸದನಾದ್ಧರಿಸೇವನಾಯ ಪ್ರಾಪ್ತೌ ಭುವಂ ಮೃಜನಪುಷ್ಪಕರೌ ಪುರಾಽಪಿ॥
ಸರ್ವೇಷ್ಟಪುಷ್ಟಿಮಿಹ ತತ್ರ ಸರೂಪತಾಂ ಚ ಕೃಷ್ಣಸ್ತಯೋರ್ವರಮದಾದಥ ರಾಜಮಾರ್ಗೇ।
ಗಚ್ಛನ್ ದದರ್ಶ ವನಿತಾಂ ನರದೇವಯೋಗ್ಯಮಾದಾಯ ಗಂಧಮಧಿಕಂ ಕುಟಿಲಾಂ ವ್ರಜಂತೀಮ್॥
ತೇನಾರ್ಥಿತಾ ಸಪದಿ ಗಂಧಮದಾತ್ ತ್ರಿವಕ್ರಾ ತೇನಾಗ್ರಜೇನ ಸಹಿತೋ ಭಗವಾನ್ ಲಿಲಿಂಪೇ।
ತಾಂ ಚಾಶ್ವೃಜುತ್ವಮನಯತ್ ಸ ತಯಾಽರ್ಥಿತೋಽಲಮಾಯಾಮಿ ಕಾಲತ ಇತಿ ಪ್ರಹಸನ್ನಮುಂಚತ್॥
- ಮ.ಭಾ.ತಾ.ನಿ.(೧೩./೯೯-೧೦೨)

೨. ಷೋಡಶೋಪಚಾರಗಳು ಹೀಗಿವೆ :
ಅರ್ಘ್ಯ - ಪಾದ್ಯ - ಆಚಮನೀಯ - ಮಧುಪರ್ಕ - ಪುನರಾಚಮನೀಯ- ಸ್ನಾನ - ವಸ್ತ್ರ - ಭೂಷಣ - ಯಜ್ಞೋಪವೀತ - ಆಸನ - ಗಂಧ - ಪುಷ್ಪ - ಧೂಪ - ದೀಪ - ನೈವೇದ್ಯ - ನಮಸ್ಕಾರಾಃ ಷೋಡಶೋಪ-ಚಾರಾಃ। -ಸುಮಧ್ವವಿಜಯಭಾವಪ್ರಕಾಶಿಕಾ (೧೪/೩.೬).

೩.. ಮುಖವಾಸಶ್ಚ ತಾಂಬೂಲಂ ದರ್ಪಣಂ ಛತ್ರಚಾಮರೇ।
ಪಾದುಕೇ ಚೇತಿ ವಿಜ್ಞೇಯಾ ಉಪಚಾರಾಃ ಪರೇ ಬುಧೈಃ॥ -ಇತಿ ಷಡನೂಪಚಾರಾಃ।
-ಸುಮಧ್ವವಿಜಯಭಾವಪ್ರಕಾಶಿಕಾ (೧೪/೩.೬)

ಯುಕ್ತಂ ಹಿ ತತ್ಸಕಲದೈವತಮುಖ್ಯದೇವಃ
ಕೃಷ್ಣಃ ಕಥಂ ಜಡತಮಸ್ಯ ಬಲಿಂ ಸಹೇತ ॥ ೧೧ ॥

ಬಳಿಕ ರಾಜಮಾರ್ಗದಿಂದ ಧನುಸ್ಸನ್ನಿರಿಸಿದ್ದ ಗೃಹಕ್ಕೆ ತೆರಳಿ, ರಮಾಪತಿಯಾದ ಶ್ರೀಕೃಷ್ಣನು ಧನುಸ್ಸನ್ನು ಭಂಗಪಡಿಸಲು ಬಯಸಿದ; ಅದು ಯುಕ್ತವೇ ಸರಿ; ಸಕಲದೇವತೆಗಳಿಗೂ ಮುಖ್ಯದೇವತೆಯಾದ ಆ ಶ್ರೀಕೃಷ್ಣನು ಅತ್ಯಂತ ಜಡವಾದ ಅದರ ಪೂಜೆಯನ್ನು ಎಂತು ತಾನೆ ಸಹಿಸಿಯಾನು ?

ವಿ. : ೧. ಶ್ರೀಕೃಷ್ಣನು ಕಂಸನ ಬಳಿ ಇದ್ದ ಶಿವಧನುಸ್ಸನ್ನು ಭಂಗಮಾಡಿದ ವಿಷಯ ಇಲ್ಲಿ ನಿರೂಪಿತವಾಗಿದೆ.

೨. ಶ್ರೀಕೃಷ್ಣನು ಶಿವಧನುಸ್ಸನ್ನು ಹಾಗೆ ಮುರಿದು ಹಾಕಲು ಅದರಲ್ಲಿ ಕಂಸ 'ಸರ್ವೋತ್ತಮ' ಎಂಬುದಾಗಿ ಶಿವನನ್ನು ಪೂಜಿಸುತ್ತಿದ್ದುದೇ ಕಾರಣ.

೩.. ಧನುಸ್ಸು ಕೇವಲ ಜಡಪದಾರ್ಥವಲ್ಲದೆ, ಅತಿಹೆಚ್ಚಿನ ಜಡ ಎಂಬುದು ಇಲ್ಲಿಯ ಭಾವ.

೪. [೧] ಶಿವಧನುಸ್ಸನ್ನು ಹಾಗೆ ಮುರಿವ ಮೂಲಕ ತಾನು ಶಿವನಿಗಿಂತ ಮಿಗಿಲಾದ ಪರದೇವತೆ ಎಂಬುದನ್ನು ಜಗತ್ತಿಗೆ ಸಾರಿದ ಎಂಬುದನ್ನು ತಿಳಿಯಬೇಕು.

೫. ರಾಮಾಯಣದಲ್ಲಿ ಸೀತಾಸ್ವಯಂವರಕ್ಕಿಂತ ಮುಂಚೆ ಶಿವಧನುರ್ಭಂಗ ನಡೆದಂತೆ ಇಲ್ಲಿ ರುಗ್ಮಿಣೀಸ್ವಯಂವರದ ಮುನ್ನ ಶಿವಧನುರ್ಭಂಗ ನಡೆಯಿತು ಎಂಬುದು ವಿಶೇಷ.

೬. ಹೀಗೆ ಎರಡು ಅವತಾರಗಳಲ್ಲೂ ಶಿವಧನುಸ್ಸನ್ನು ಮುರಿಯುವ ಮೂಲಕ ತಾನು ಸರ್ವೋತ್ತಮ ಎಂಬುದನ್ನು ಶ್ರೀಕೃಷ್ಣ ದೃಢಪಡಿಸಿದ ಎಂಬ ಪ್ರಮೇಯವು ನಿರೂಪಿತ.

೭. ಶ್ರೀಕೃಷ್ಣನ ಹೊರತು [೨] ಇತರರನ್ನು ಸರ್ವೋತ್ತಮತ್ವೇನ ಆರಾಧಿಸುವುದು ಅನಿಷ್ಟಕ್ಕೆ ಕಾರಣ ಎಂಬ ತತ್ತ್ವವು ಸಹ ಇದರಿಂದ ಸೂಚಿತ; ರಾಜಾಧ್ವ- ರಾಜಮಾರ್ಗ.

೮. ಕೇವಲ ದುರ್ಗಾ ಪೂಜೆಗೆಂದು ಹೊರಟಿದ್ದ ನಂದ, ಅಜಗರನಿಂದ ಗ್ರಸ್ತನಾಗಿದ್ದ ವಿವರವು ಸಹ ಇಂತಹುದೇ ಆಗಿದೆ.

ವಕ್ರಮನಸ್ಸಿನವರಿಗೆ ಕೇಡು ತಪ್ಪಿದ್ದಲ್ಲ

ಸದ್ವಂಶಜಾತೋಽಪಿ ಗುಣಾನ್ವಿತೋಽಪಿ
ಶಿಕ್ಷಾನುರೂಪೋಽಪಿ ಸ ತೇನ ಚಾಪಃ ।

---

೧. ಶಿವಭಕ್ತೇನ ಕಂಸೇನ ಧನುಷಿ ಶಿವಸ್ಯೈವ ಪೂಜನಾತ್ ಕೃಷ್ಣಂ ವಿನಾ ದೇವತಾಂತರಪೂಜನಮನಿಷ್ಟಹೇತುರಿತ್ಯೇಕೋ ಭಾವಃ । -ವ್ಯಾ.

೨. ಉತ್ತಮಸ್ಯಾಗ್ರೇ ಅಧಮಪೂಜನಮಧಮಸ್ಯೈವ ವಿನಾಶಹೇತುರಿತ್ಯಪರೋ ಭಾವಃ । -ವ್ಯಾ.

**ಭಗ್ನಃ ಶನೈರ್ವಕ್ರಹೃದೋ ಹಿ ಪುಂಸಃ**
**ಕೋ ವಾ ಗುಣಃ ಕೋವಿದಮಾನಯೋಗ್ಯಃ ॥ ೧೨ ॥**

ಆ ಧನುಸ್ಸು ಉತ್ತಮ ಬಿದಿರಿ(ವಂಶ)ನಿಂದ ಮಾಡಲ್ಪಟ್ಟಿದ್ದಿತು; ಹಗ್ಗ(ಗುಣ)ದಿಂದಲೂ ಕೂಡಿತ್ತು, ಎಳೆಯುವುದು ಮೊದಲಾದ ಕಾರ್ಯಗಳಿಗೆ ಅನುಕೂಲವೂ ಆಗಿತ್ತು; ಆದರೂ ಅದು ಶ್ರೀಕೃಷ್ಣನಿಂದ ಮೆಲ್ಲನೆ ಮುರಿದು ಹೋಯಿತು. ವಕ್ರಮನಸ್ಸಿನ ಪುರುಷನ ಯಾವ ಗುಣವು ತಾನೆ ಜ್ಞಾನಿಗಳ ಮಾನ್ಯತೆಗೆ ಅರ್ಹತೆ ಪಡೆದೀತು?

ವಿ. : ೧. ಧನುರ್ಭಂಗದಿಂದ ಧ್ವನಿತವಾಗುವ ತತ್ತ್ವ ಇದರಲ್ಲಿ ನಿರೂಪಿತವಾಗಿದೆ.

೨. ಉತ್ತಮವಂಶದಲ್ಲಿ ಜನಿಸಿದ್ದರೂ ಜಾತಿ ಮೊದಲಾದ ಇತರ ಸದ್ಗುಣಗಳನ್ನು ಹೊಂದಿದ್ದರೂ ಸಾಕಷ್ಟು ವಿದ್ಯೆಯನ್ನು ಸಂಪಾದಿಸಿದ್ದರೂ ಮನಸ್ಸಿನಲ್ಲಿ ವಕ್ರತೆ ಇರುವವರಿಗೆ ಕೇಡು ತಪ್ಪಿದ್ದಲ್ಲ ಎಂಬುದು ಇಲ್ಲಿಯ ತಾತ್ಪರ್ಯ; ಕೋವಿದ - ಜ್ಞಾನಿ.

೩. [1]ಇಲ್ಲಿ ವಂಶ(ವಂಶ ಹಾಗೂ ಬಿದಿರು), ಗುಣ (ಗುಣ ಹಾಗೂ ಹಗ್ಗ), ಶಿಕ್ಷಾ (ಆಕರ್ಷಣೆ ಹಾಗೂ ವಿದ್ಯೆ) ವಕ್ರಹೃದಃ (ಬಾಗುವಿಕೆ ಹಾಗೂ ಕೆಟ್ಟ ಮನಸ್ಸು) ಎಂಬಲ್ಲಿ ಶ್ಲೇಷಾಲಂಕಾರ.

### ಶ್ರೀಕೃಷ್ಣನು ಧನುಸ್ಸನ್ನು ಭಗ್ನಗೊಳಿಸಿದ ರೀತಿ

**ಕರೇಣೋದ್ಧೃತ್ಯ ಪ್ರಾಗ್ವ್ಯತನುತ ಗುಣಾವೇದನಮಸೌ**
**ಪ್ರಭುಃ ಪಾದಾಘಾತಂ ತದನು ವಿರಚಯ್ಯಾಶ್ವನಮಯತ್ ।**
**ಅಥೋ ಲೀಲಾಬಾಲಃ ಖಲಮಿವ ಧನುರ್ಭಗ್ನಮಕರೋ-**
**ದ್ಬಲಾನ್ನಮ್ರೀಭೂತೇ ಕಿಮಿಹ ಕರುಣಾ ಶುಷ್ಕಹೃದಯೇ [2] ॥ ೧೩ ॥**

ಮೊದಲಿಗೆ ಆ ಧನುಸ್ಸನ್ನು ಕೈಯಿಂದ ಮೇಲೆತ್ತಿ ಪ್ರಭುವಾದ ಶ್ರೀಕೃಷ್ಣನು ಅದರ ಹಗ್ಗವನ್ನು ಕಟ್ಟಿದ. ಬಳಿಕ ಅದನ್ನು ಪಾದದಿಂದ ತುಳಿದು, ಕೂಡಲೇ ಬಾಗಿಸಿದ. ಅನಂತರ ಲೀಲಾಬಾಲಕನಾದ ಅವನು ದುಷ್ಟನನ್ನೆಂಬಂತೆ ಆ ಧನುಸ್ಸನ್ನು ಮುರಿದು ಹಾಕಿದ. ಒತ್ತಾಯಕ್ಕೆ ಮಣಿಯುವ ಹೃದಯಹೀನನ ಬಗ್ಗೆ ಇಲ್ಲಿ ಕರುಣೆ ಎಂತಹುದು?

ವಿ. : ೧. ಶ್ರೀಕೃಷ್ಣನು ಧನುಸ್ಸನ್ನು ಮಣಿಸುತ್ತಾ ಬಾಗಿದವನು ಸಹ ಕೇವಲ ಒತ್ತಾಯದಿಂದ ಆ ಕಾರ್ಯಮಾಡಿದ್ದಲ್ಲಿ ಅದು ಕ್ಷಮೆಗೆ ಅರ್ಹತೆ ಎನ್ನಿಸದು ಎಂಬ ತತ್ತ್ವವನ್ನು ಸೂಚಿಸಿದ ಎಂದರ್ಥ.

---

೧. ತಥಾಹಿ । ಲೋಕೇ ವಕ್ರಹೃದಃ ಕುಟಿಲಚಿತ್ತಸ್ಯ ಪುಂಸಃ ಅಧಿಜ್ಯಧನುಷೋ ವಕ್ರಮಧ್ಯತ್ವಾತ್ ತದರ್ಥಾಂತರನ್ಯಾಸಸ್ಯೋತ್ಥಾನಮಿತಿ ಹೃದಯಮ್ । ಕೋವಿದಮಾನಯೋಗ್ಯಃ ಪಂಡಿತಸತ್ಕಾರಾರ್ಹೋ ಗುಣಃ ಕೋಽಪಿ ನ ಕೋಽಪ್ಯೀರ್ಥಃ। ಕುಟಿಲಚಿತ್ತಸ್ಯ ಜಾತ್ಯಾದಿಗುಣೋ ನ ಶ್ಲಾಘನೀಯ ಇತಿ ಭಾವಃ॥ -ವ್ಯಾ.

೨. ಶಿಖರಿಣೀವೃತ್ತಮ್ । -ವ್ಯಾ.

೨. ಮುಂದೆ ಕಂಸನನ್ನು ಸಹ ಶ್ರೀಕೃಷ್ಣನು ಹೀಗೆಯೇ ಸಂಹರಿಸುವನು ಎಂಬುದಕ್ಕೆ ಇದು ಸೂಚನೆಯಂತಿದೆ.

೩. ಬಿದಿರಿನಿಂದ ಮಾಡಲ್ಪಟ್ಟಿದ್ದ ಆ ಧನುಸ್ಸಿನ ಒಣಗಿದ ಮಧ್ಯಭಾಗ ಮುರಿಯಿತು ಎಂಬುದು ಧನುಸ್ಸಿಗೆ ಅನ್ವಯಿಸುವ ಅರ್ಥ.

### ಧನುರ್ಭಂಗದ ಪರಿಣಾಮ

**ಭಗ್ನಶ್ಚಾಪಃ ಸ್ವಭರ್ತುಃ ಪ್ರತಿಭಯನಿನದೈರ್ಧೈರ್ಯಚೌರ್ಯಂ ತತಾನ**
**ವ್ಯಗ್ರಸ್ವಾಂತಾನ್ ಸ್ವಪಾಲಾನ್ ದೃಢತರಶಕಲದ್ವಂದ್ವಘಾತೈರ್ಜಘಾನ ।**
**ಭಂಗೇನೈವೋಗ್ರಮಲ್ಲಪ್ರಕರಹೃದಿ ಭಯಂ ಭಲ್ಲಕಲ್ಪಂ ಚಖಾನ**
**ದ್ವೈಧೀಭಾವಂ ವಿಪಕ್ಷೇ ವಿರಚಯತಿ ಬತ ಸ್ವೀಯ ಏವ ಸ್ವಶತ್ರುಃ[೧] ॥ ೧೪ ॥**

ಮುರಿದ ಬಿಲ್ಲು ಭಯಂಕರವಾದ ಚಟಚಟ ಧ್ವನಿಗಳಿಂದ ತನ್ನ ಸ್ವಾಮಿಯಾದ ಕಂಸನ ಧೈರ್ಯವನ್ನು ಉಡುಗಿಸಿತು[೨]. ಅತ್ಯಂತಗಾಢವಾದ ಜೋಡಿತುಣುಕುಗಳ ಅಪ್ಪಳಿಸುವಿಕೆ-ಯಿಂದ ಮನಸ್ಸಿನಲ್ಲಿ ವ್ಯಗ್ರರಾಗಿದ್ದ ತನ್ನ ಪಾಲಕಭಟರನ್ನು ಕೊಂದುಹಾಕಿತು. ಮುರಿಯುವುದರಿಂದಲೇ ಭಯಂಕರರಾದ ಮಲ್ಲರ ಗುಂಪಿನ ಮನಸ್ಸಿನಲ್ಲಿ ಭಲ್ಲದಂತೆ ಭಯವನ್ನು ನಾಟಿಸಿತು. ಶತ್ರುಪಕ್ಷದಲ್ಲಿ ಒಡಕನ್ನು ಹುಟ್ಟಿಸುತ್ತಾ ಅದು ತನ್ನವರಿಗೆ ತಾನೇ ಶತ್ರುವಾಯಿತು.

ವಿ. : ೧. ಆ ಬಿಲ್ಲನ್ನು ಮುರಿದ ಪ್ರಸಂಗ ಕಂಸ ಹಾಗೂ ಅವನ ಅನುಯಾಯಿಗಳಿಗೆ ಹುಟ್ಟಿಸಿದ [೩]ಭಯದ ನಿರೂಪಣೆ ಇಲ್ಲಿದೆ ; ಪ್ರಕರ - ಗುಂಪು.

೨. ಹೀಗೆ ಮುರಿದ ಧನುಸ್ಸು [೪]ತನ್ನ ಪಕ್ಷದವರ ಮನಸ್ಸಿಗೇ ಭಯ ಕವಿಸುವ ಮೂಲಕ ಅವರಿಗೇ ಶತ್ರುವೆನ್ನಿಸಿ ಬಿಟ್ಟಿತು ಎಂದರ್ಥ.

೩. ಶತ್ರುವಿಗೆ ಭಯ ಹುಟ್ಟಿಸುವುದು, ಅಪ್ಪಳಿಸಿ ಹೊಡೆಯುವುದು, ಅನಂತರ ಶಸ್ತ್ರವನ್ನು ನಾಟಿಸುವುದು ಎಂಬುದನ್ನು 'ತತಾನ', 'ಜಘಾನ' ಹಾಗೂ 'ಚಖಾನ' ಎಂಬ ಕ್ರಿಯಾಪದಗಳಿಂದ ಇಲ್ಲಿ ತಿಳಿಸಿರುವುದು ವಿಶೇಷ.

---

೧. ಅದ್ಯಾಪಿ ಹಿ ನಯಜ್ಞೈಃ ನೃಪೈರ್ವಿತ್ತದಾನಾದಿನಾ ದುರ್ಗಸ್ಥಾನಾಂ ಅಂತರ್ಭೇದೇ ಕಾರಿತೇ ಸತಿ ತ ಏವ ದುರ್ಗ-ದ್ವಾರಮುಪದಿಶಂತಃ ತತ್ರ ತತ್ರ ದೃಶ್ಯಂತೇ ಇತಿ ಅರ್ಥಾಂತರನ್ಯಾಸಃ। -ವ್ಯಾ.

೨. ಧನುಷೋ ಭಜ್ಯಮಾನಸ್ಯ ಶಬ್ದಃ ಖಂ ರೋದಸೀ ದಿಶಃ ।
ಪೂರಯಾಮಾಸ ಯಂ ಶ್ರುತ್ವಾ ಕಂಸಸ್ತ್ರಾಸಮುಪಾಗಮತ್ ॥ -ಭಾಗ.(೧೦/೪೦/೧೭)

೩. ಭಜ್ಯಮಾನಚಾಪಧ್ವನಿಶ್ರವಣೇನ ಕಂಸಶ್ಚಕಿತ ಆಸೀದಿತಿ ಪುರಾಣಪ್ರಸಿದ್ಧೇಃ। -ವ್ಯಾ.

೪. ಅಹಮೇತಾದೃಶೋಽಪಿ ಭಗ್ನಃ ಕಿಂ ಯೂಯಮಿತಿ ಸ್ವರಾಜಕೀಯಭಟಾನಾಂ ಭೀಷಣೇನೇತಿ ಧ್ವನಿಃ। -ವ್ಯಾ.

### ಸೂರ್ಯಾಸ್ತವಾಗುತ್ತಿದ್ದಂತೆ ಬಂಧುಗೃಹಕ್ಕೆ ಶ್ರೀಕೃಷ್ಣನ ಪಯಣ

**ಇತಿ ವಿವಿಧಚರಿತ್ರಂ ಶ್ರೀಪತೇಸ್ತದ್ವಿಚಿತ್ರಂ**
**ಕಥಯಿತುಮಿವ ಭಾನುಃ ಸಿದ್ಧವಿದ್ಯಾಧರಾಣಾಮ್ ।**
**ಅಗಮದಮಲಮೇರೋರ್ಭಾಗಮನ್ಯಂ ಮುಕುಂದೋಽ-**
**ಪ್ಯಗಣಿತವಿಭವಃ ಸ್ವಂ ಜ್ಞಾತಿಜುಷ್ಟಂ ನಿವಾಸಮ್ ॥ ೧೫ ॥**

ಈ ಎಲ್ಲ ವಿಚಿತ್ರವಾದ ಶ್ರೀಕೃಷ್ಣನ ಬಗೆಬಗೆಯ ಮಹಿಮೆಗಳನ್ನು ಸಿದ್ಧರಿಗೆ, ವಿದ್ಯಾಧರರಿಗೆ ತಿಳಿಸಲೋ ಎಂಬಂತೆ ಸೂರ್ಯನು ನಿರ್ಮಲವಾದ ಮೇರುಪರ್ವತದ ಇನ್ನೊಂದು ಭಾಗಕ್ಕೆ ತೆರಳಿದ; ಎಣಿಕೆಗೆ ಸಿಗದ ಮಹಾಮಹಿಮನಾದ ಮುಕುಂದ ಶ್ರೀಕೃಷ್ಣನು ಸಹ ಬಂಧುಗಳು ನೆರೆದಿದ್ದ ತನ್ನ ನಿವಾಸವನ್ನು ತಲುಪಿದ.

ವಿ. : ೧. ಧನುರ್ಭಂಗದ ಕಾರ್ಯ ಪೂರೈಸುವ ವೇಳೆಗೆ ಸೂರ್ಯ ಮುಳುಗಿದ ಎಂದರ್ಥ. ಬಳಿಕ ಶ್ರೀಕೃಷ್ಣ ಅಲ್ಲಿಂದ ನಂದ ಮೊದಲಾದ ಬಂಧುಗಳು ನೆಲೆಸಿದ್ದ ಸ್ಥಳಕ್ಕೆ ತೆರಳಿದ ಎಂದೂ ಭಾವ; ಜ್ಞಾತಿ – ಬಂಧು.

೨. ಸೂರ್ಯನು ಮೇರುಪರ್ವತದ ಮತ್ತೊಂದು ಭಾಗಕ್ಕೆ ತೆರಳುವುದು ಎಂದರೆ ಅಸ್ತಂಗತ-ನಾಗುವುದು ಎಂದರ್ಥ.

### ಸೂರ್ಯಾಸ್ತದೊಂದಿಗೆ ಕವಿದ ಕತ್ತಲೆ

**ತಮಃ ಸಮಂತಾತ್ ಕಾಷ್ಠಾಸು ಪುಪೂರ ಸ ಗತೋ ರವಿಃ ।**
**ಬಹಿರ್ಗತೋ ಮುಕುಂದೋಽಪಿ ಭಯಾಖ್ಯಂ ತತ್ತ್ವಶತ್ರುಷು [1] ॥ ೧೬ ॥**

ಅಸ್ತಂಗತನಾದ ಸೂರ್ಯ ದಿಕ್ಕುಗಳಲ್ಲಿ ಎಲ್ಲೆಡೆಗಳಲ್ಲಿಯೂ ಕತ್ತಲೆಯನ್ನು ಕವಿಸಿದ; ಪಟ್ಟಣ-ದಿಂದ ಹೊರನಡೆದ ಮುಕುಂದನಾದ ಶ್ರೀಕೃಷ್ಣನು ಸಹ ತನ್ನ ಶತ್ರುಗಳಲ್ಲಿ ಭಯವೆಂಬ ಆ ಕತ್ತಲೆಯನ್ನು ತುಂಬಿಸಿದ.

ವಿ. : [2] ಸೂರ್ಯ ಮುಳುಗಿದ್ದರಿಂದ ಎಲ್ಲೆಡೆ ಕತ್ತಲೆ ಕವಿಯಿತು; ಅದರೊಂದಿಗೆ ಶತ್ರುಗಳ ಹೃದಯದಲ್ಲಿ ಭಯವು ತುಂಬಿ ದಿಕ್ಕು ತೋಚದಂತಾಯಿತು ಎಂದರ್ಥ; ಕಾಷ್ಠಾ – ದಿಕ್ಕು.

### ಶ್ರೀಕೃಷ್ಣನ ದೂತನಂತೆ ವರ್ತಿಸಿದ ಭಯ

**ಔದಾರ್ಯಧೈರ್ಯಶೌರ್ಯಾಣಿ ಗರ್ಹಯನ್ ಸ ಭಯೋಚ್ಚಯಃ ।**
**ಮನೋ ಮಮರ್ದ ಕಂಸಸ್ಯ ಮಧುಸೂದನದೂತವತ್ ॥ ೧೭ ॥**

---

೧. ದೀಪಕಮಲಂಕಾರಃ । –ವ್ಯಾ.
೨. ಧನುರ್ಭಂಗದರ್ಶನೇನ ತಸ್ಯಾಂ ರಾತ್ರೌ ಶತ್ರುಷು ಭಯಮುತ್ಪನ್ನಮಿತಿ ಭಾವಃ । –ವ್ಯಾ.

ಕಂಸನ ಔದಾರ್ಯ, ಧೈರ್ಯ, ಶೌರ್ಯಗಳನ್ನು ತೆಗಳುತ್ತಾ ಆ ಭಯದ ರಾಶಿಯು ಮಧುಸೂದನನಾದ ಶ್ರೀಕೃಷ್ಣನ ರಾಯಭಾರಿಯಂತೆ ಅವನ ಮನಸ್ಸನ್ನು ಹೊಸಕಿತು.

ವಿ. : ೧. ಮಹಾಕಾವ್ಯಕ್ಕೆ ವಿಹಿತವಾಗಿರುವ ಲಕ್ಷಣಗಳಲ್ಲಿ ದೂತವರ್ಣನೆಯೂ ಒಂದಾಗಿದ್ದು ಪ್ರಸ್ತುತ ಈ ಮಹಾಕಾವ್ಯದಲ್ಲಿ ಅದನ್ನು ಇಲ್ಲಿ ಶ್ರೀವಾದಿರಾಜರು ಅತ್ಯಂತ ರೋಚಕವಾಗಿ ಅಳವಡಿಸಿರುವರು[೧].

೨. ಮಧುಸೂದನ ಎಂಬ ಪದದಿಂದ ಶ್ರೀಕೃಷ್ಣನು ಈಗ ಕಂಸಸೂದನನೂ ಆಗುವನು ಎಂಬ ವಿಶೇಷಾಂಶ ಸೂಚಿತ.

### ತಾನು ಕೃಷ್ಣನ ದೂತ ಎಂದು ತಿಳಿಸಿದ ಭಯ

**ಕಸ್ತ್ವಂ ಸೋಽಹಮರೇ ತ್ವದಂತಕತಟಾದಭ್ಯಾಗತೋ ವೈ ಭಟಃ**
**ಪೃಥ್ವ್ಯಾಂ ಕ್ವಾಸ್ತಿ ಮಮಾಂತಕಃ ಸ ಭುವನೇಷ್ವಂತರ್ಬಹಿರ್ವರ್ತತೇ ।**
**ನಾಮಾಪ್ಯಸ್ಯ ನ ದೇವಕೀಸುತ ಇತಿ ಖ್ಯಾತಃ ಸ ತನ್ನಂದನೋ**
**ಧ್ವಸ್ತೋ ಹ್ಯಜ್ಞ ಮೃತಿರ್ನ ತಸ್ಯ ನಿಹತಾಸ್ತೇನ ತ್ವದೀಯಾಃ ಪರಮ್ ॥ ೧೮ ॥**

(ಕಂಸ)"ನೀನಾರು?"; (ಭಯ) "ಎಲವೋ ಶತ್ರುವೇ! ನಿನ್ನ ಮೃತ್ಯುವಿನ ಬಳಿಯಿಂದ ಆಗಮಿಸಿರುವ ಭಟನು ನಾನು"; (ಕಂಸ)"ಈ ಭುವಿಯಲ್ಲಿ ನನಗೆ ಮೃತ್ಯುವಾದವನು ಎಲ್ಲಿರುವನು?" ; (ಭಯ)"ಅವನು ಲೋಕಗಳ ಒಳಗೂ ಹೊರಗೂ ಇರುವನು; (ಕಂಸ)"ಅವನ ಹೆಸರೇ ಇಲ್ಲ ", (ಭಯ)"ದೇವಕೀಪುತ್ರ ಎಂದು ಅವನು ಪ್ರಸಿದ್ಧ"; (ಕಂಸ)"ಅವಳ ಮಗ ಅಳಿದನಲ್ಲ!"; (ಭಯ) "ಎಲವೋ ದಡ್ಡ ! ಅವನಿಗೆ ಸಾವಿಲ್ಲ ; ಕೇವಲ ಅವನಿಂದಲೇ ನಿನ್ನವರೆಲ್ಲಾ ಅಸುನೀಗಿದರು".

ವಿ. : ೧. [೨]ಇಲ್ಲಿ ಕಂಸ ಹಾಗೂ ಭಟನಂತೆ ಬಂದರಗಿದ ಶ್ರೀಕೃಷ್ಣನ ಬಗೆಗಿನ ಭಯಗಳ ಮಧ್ಯೆ ಮಾತುಕತೆಯ ರೂಪದಲ್ಲಿ ಅನೇಕ ವಿವರಗಳನ್ನು ಅಪೂರ್ವ ರೀತಿಯಲ್ಲಿ ನಿರೂಪಿಸಿರುವರು.

೨. [೩]ಶ್ರೀಕೃಷ್ಣನು ಲೋಕದ ಒಳಗೂ ಹೊರಗೂ ವ್ಯಾಪಿಸಿರುವ ಸಾಕ್ಷಾತ್ ಶ್ರೀಹರಿ. ಅವನಿಗೆ ಎಂದೂ ಸಾವಿಲ್ಲ ; ಆವರೆಗೂ ಹತರಾದ ಕಂಸನ ಕಡೆಯವರನ್ನು ಕೊಂದವನೂ ಅವನೇ ಎಂಬುದನ್ನು ಇಲ್ಲಿ ವಿಶಿಷ್ಟರೀತಿಯಲ್ಲಿ ಪ್ರತಿಪಾದಿಸಿರುವರು.

---

೧. ದೂತವರ್ಣನಸ್ಯ ಕಾವ್ಯಾಂಗತ್ವಾತ್ । – ವ್ಯಾ.

೨. ಭಯಜನನಾನಂತರಂ ಭೀತಸ್ಯ ಭಯಾವಸ್ಥಾಯಾಂ ಯದ್ವಚನಂ ತತ್ಸರ್ವಂ ದೂತವಚನತ್ವೇನ ವರ್ಣಿತಮ್ । ಧೈರ್ಯಾವಸ್ಥಾಯಾಂ ಯದ್ವಚನಂ ತತ್ಕಂಸವಚನತ್ವೇನ ವರ್ಣಿತಮ್ । ಏವಮುತ್ತರತ್ರಾಪಿ ಜ್ಞಾತವ್ಯಮ್ ।–ವ್ಯಾ.

೩.. "ಅಸ್ಯಾಸ್ತ್ವಾಮಷ್ಟಮೋ ಗರ್ಭೋ ಹಂತಾ ಯಾಂ ವಹಸೇಽಬುಧ"(ಭಾಗ.೧೦/೧/೩೪)ಇತ್ಯಶರೀರವಾಕ್ ।
–ವ್ಯಾ.

## ಕಂಸನಿಗೆ ಕವಿದ ಮೃತ್ಯುಭಯ

**ಮಲ್ಲಾಃ ಶೈಲಸಮಾ ಬಲಂ ಚ ಜಗತಿ ಪ್ರಖ್ಯಾತಮಸ್ತ್ಯೇವ ಮೇ**
**ಹಸ್ತೀ ಹಸ್ತಿಸಹಸ್ರಸಮ್ಮಿತಬಲಸ್ತತ್ ಕ್ವಾಸ್ತಿ ಮೃತ್ಯುರ್ಮಮ।**
**ರಾಜನ್ ಮೃತ್ಯುರಿವಾಹಮೇವ ಭವತಾಂ ಚಿತ್ತೇ ಸಮುಜ್ಜೃಂಭಿತೋ**
**ದೃಷ್ಟಂ ವಸ್ತು ಭಯಂಕರಂ ವಿರಚಯೇ ಶಂಕಾಸಹಸ್ರಾರ್ಪಕಃ ॥ ೧೯ ॥**

(ಕಂಸ)"ನನ್ನ ಮಲ್ಲರು ಬೆಟ್ಟದಂತಹವರು; ನನ್ನ ಬಲವಂತೂ ಲೋಕದಲ್ಲಿ ವಿಖ್ಯಾತ-ವಾಗಿಯೇ ಇದೆ. ನನ್ನ ಆನೆಯು ಸಾವಿರ ಆನೆಗಳ ಬಲವನ್ನು ಹೊಂದಿರುವಂತಹುದು ಎಂದ ಮೇಲೆ ನನಗೆ ಸಾವೆಲ್ಲಿಯದು?"; (ಭಯ)"ಎಲವೋ ರಾಜನೇ! ನಿನ್ನವರ ಮನಸ್ಸಿನಲ್ಲಿ ಹುಟ್ಟಿರುವ ನಾನೇ ನಿನಗೆ ಮೃತ್ಯುವಿನಂತಿರುವೆ. ನಿನ್ನ ಕಣ್ಣಿಗೆ ಬಿದ್ದ ವಸ್ತುವನ್ನು ಸಾವಿರ ಬಗೆಯ ಸಂಶಯಕ್ಕೆ ಒಳಗಾಗಿಸಿ, [1]ಭಯಂಕರವನ್ನಾಗಿ ಮಾಡಿಬಿಡುವೆನು.

ವಿ. : ಇಲ್ಲಿ ಸಾವಿರ ಆನೆಗಳ ಬಲದ ಆನೆ ಎಂದರೆ ಕುವಲಯಾಪೀಡ ಎಂದರ್ಥ.

## ಶ್ರೀಹರಿಯು ತೊರೆದಾಗ ಎಲ್ಲಿಯ ಬದುಕು ?

**ಯಸ್ಮಿನ್ನುತ್ಸೃಜತಿ ಸ್ವಭಕ್ತನಿಕರೈಃ ಸಾಕಂ ಹೃದೋಕೋ ನೃಣಾಂ**
**ಪ್ರಾಗಂಧಾ ಬಧಿರಾ ವಿವೇಕರಹಿತಾ ಮೂಕಾಯಿತಾಶ್ಚ ಕ್ಷಣಾತ್ ।**
**ಅಂತೇ ಪ್ರೇತಪುರೀಂ ಪ್ರಯಾಂತಿ ಜಗತಾಮೀಶಸ್ಯ ತಸ್ಯಾಗ್ರತಃ**
**ಕಿಂ ಮಲ್ಲೈಃ ಕಿಮು ಹಸ್ತಿನಾಽತಿಬಲಿನಾ ಕಿಂ ವಾ ತ್ವಯಾ ಕಿಂ ಭಟೈಃ ॥ ೨೦ ॥**

(ಭಯ)ತನ್ನ ಭಕ್ತವೃಂದದೊಂದಿಗೆ ಅವನು ಮನುಷ್ಯರ [2]ಹೃದಯಮಂದಿರದಿಂದ ಹೊರನಡೆದರೆ, ಮೊದಲಿಗೆ ಕ್ಷಣದಲ್ಲಿಯೇ ಕುರುಡರು, ಕಿವುಡರು, ಜ್ಞಾನಶೂನ್ಯರು, ಮೂಕರು, ಆಗಿ ಕೊನೆಯಲ್ಲಿ ಯಮಪುರಿಗೆ ತೆರಳುವರು; ಅಂತಹ ಜಗದೀಶನಾದ ಶ್ರೀಕೃಷ್ಣನ ಮುಂದೆ ನಿನ್ನ ಮಲ್ಲರಿಂದೇನು ? ಅತಿಬಲಿಷ್ಠವಾದ ಆನೆಯಿಂದೇನು ? ಅಥವಾ ನಿನ್ನಿಂದೇನು ? ಅಥವಾ ನಿನ್ನ ಭಟರಿಂದಾದರೂ ಏನು ?

ವಿ. : ೧. ತನ್ನ ಪರಾಕ್ರಮದಿಂದ ಮಾತ್ರವಲ್ಲದೆ, ತನ್ನ ಸ್ವಾಮಿಯಾದ ಶ್ರೀಕೃಷ್ಣನ ಸಾಮರ್ಥ್ಯದ ನಿರೂಪಣೆಯಿಂದಲೂ ಭಯರೂಪದ ದೂತನು ಶತ್ರುವಾದ ಕಂಸನನ್ನು ಧಿಕ್ಕರಿಸುತ್ತಿರುವನು ಎಂಬುದು ಇಲ್ಲಿಯ ಮುಖ್ಯವಾದ ಅಂಶ.[3]

---

೧. ಅತಿಭೀತಾನಾಂ ಸ್ತಂಭಾದಾವಪಿ ಶತ್ರುಭ್ರಾಂತ್ಯಾ ಪತನಸ್ಖಲನಾದಿದರ್ಶನಾದಿಯಮುಕ್ತಿಃ । ಮೃತಾದಪ್ಯಧಿಕಾಂ ದುರ್ದಶಾಂ ಭೀತಃ ಪ್ರಾಪ್ನೋತೀತಿ ಭಾವಃ। -ವ್ಯಾ.

೨. ಅನೇನ ಕೃಷ್ಣನಿರ್ಗಮನಫಲಮುಕ್ತಂ ಭವತಿ।"ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ"ಇತಿ ಶ್ರುತೇಃ। -ವ್ಯಾ.

೩.. ಸ್ವಪರಾಕ್ರಮೇಣ ಶತ್ರುಂ ಧಿಕ್ಕೃತ್ಯ ಸ್ವಸ್ವಾಮಿಸಾಮರ್ಥ್ಯೇನಾಪಿ ನಿರಾಕುರ್ವನ್ ಭಯಾಖ್ಯದೂತೋ ವಕ್ತಿ। -ವ್ಯಾ.

೨. ಇಲ್ಲಿ ಕುರುಡರು, ಕಿವುಡರು ಮೊದಲಾದ ಅವಸ್ಥೆಯನ್ನುಂಟುಮಾಡುವ ಮಹಾವಿಷ್ಣುವಿನ ಭಕ್ತಜನರು ಎಂದರೆ ಸೂರ್ಯ, ಚಂದ್ರ, ವಾಯು ಮೊದಲಾದ ಮುಖ್ಯಪ್ರಾಣ ಹಾಗೂ [೧] ಇಂದ್ರಿಯಾದಿಗಳ ಅಭಿಮಾನಿ ದೇವತೆಗಳು ಎಂದು ತಿಳಿಯಬೇಕು.

೩.. ತಾನು ತೊರೆಯುವುದರೊಂದಿಗೆ ಮರಣ ನೀಡುವ ದೇವತೆ ಎಂದರೆ ಪರಬ್ರಹ್ಮನಾದ ಸಾಕ್ಷಾತ್ ಶ್ರೀಹರಿ ಎಂದರ್ಥ.

೪. ಇಂದ್ರಿಯಾಭಿಮಾನಿದೇವತೆಗಳು ದೇಹತೊರೆಯುತ್ತಲೇ ಕುರುಡು, ಕಿವುಡು, ಮೊದಲಾದ ದೋಷಗಳು ಉಂಟಾದರೆ, ಶ್ರೀಹರಿವಾಯುಗಳು ತೊರೆದಾಗ ಮರಣವೇ ನಿಶ್ಚಿತ ಎಂಬುದು ಒಟ್ಟು ಭಾವ : ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ (ಮಹಾಭಾರತ).

## ಭಯದ ನಿರ್ಭೀತಿಯ ವಚನಗಳು

**ಕಿಂ ಭ್ರಾಂತೋಽಸಿ ವಿರುದ್ಧಭಾಷಣಮಿದಂ ಮಾ ಬ್ರೂಹಿ ಭೋ ದುರ್ಮತೇ**
**ಭ್ರಾಂತಿಸ್ತೇ ವಿಪರೀತವಾಗಪಿ ಮನೋ ಯತ್ ತೇ ಮಯಾ ನಿರ್ಜಿತಮ್ ।**
**ಮತ್ಖಡ್ಗಾಭಿಹತಿಂ ಕಿಮಿಚ್ಛಸಿ ಶನೈರ್ಹಸ್ತಾದ್ಗಲಂಶ್ಚಂಚಲಾತ್**
**ಸ ತ್ವಾಮೇವ ಹನಿಷ್ಯತೀಶ್ವರಭಟಂ ಮಾಂ ಹಂತುಮೀಶೋಽಸ್ತಿ ಕಃ ॥ ೨೧ ॥**

(ಕಂಸ)''ಎಲವೋ ದುರ್ಬುದ್ಧಿಯವನೇ! ನಿನಗೆಲ್ಲೋ ಭ್ರಾಂತಿ; ಈ ವಿರುದ್ಧವಚನವನ್ನು ನುಡಿಯದಿರು''; [೨] (ಭಯ)''ನಿನ್ನ ಮನಸ್ಸು ನನ್ನಿಂದ ಸೋತಿದೆ; ಅದರಿಂದಾಗಿ ಭ್ರಾಂತಿಯು, ವಿರುದ್ಧವಚನವೂ ನಿನ್ನದೇ''; (ಕಂಸ) ''ನನ್ನ ಖಡ್ಗದ ಹೊಡೆತವನ್ನು ಬಯಸಿರುವೆಯಾ?''; (ಭಯ)''ನಡುಗುವ ನಿನ್ನ ಕೈಯಿಂದ ಮೆಲ್ಲನೆ ಜಾರುವ ಅದು ನಿನ್ನನ್ನೇ ಕೊಂದುಹಾಕುವುದು; ಸ್ವಾಮಿಯಾದ ಶ್ರೀಹರಿಯ ಭಟನಾದ ನನ್ನನ್ನು ಕೊಲ್ಲಲು ಯಾವನು ತಾನೇ ಶಕ್ತನಾದಾನು?''

## ಭಯದ ಮಹಾಸಾಮರ್ಥ್ಯದ ವರ್ಣನೆ

**ಕ್ಲೀಬಃ ಕಿಂ ಕುರುಷೇ ತ್ವಮಜ್ಞ ಭವತಃ ಕ್ಲೀಬೋಪಮಾಂ ದಿತ್ಸಯಾ**
**ತದ್ಭಾವಂ ಶಿರಸಾ ದಧಾಮಿ ಬಹುನಾ ಕಿಂ ಜಲ್ಪಿತೇನಾಧುನಾ ।**

---

೧. ಅನೇನ ಇಂದ್ರಿಯಾಭಿಮಾನಿದೇವತಾನಿರ್ಗಮನಫಲಮಿತ್ಯುಕ್ತಂ ಭವತಿ । -ವ್ಯಾ.
ಕರಣಾಭಿಮಾನಿ ಸುರರು ದೇಹವ ಬಿಡಲು ಕುರುಡ ಕಿವುಡ ಮೂಕನೆಂದೆನಿಸುವ
ಪರಮ ಮುಖ್ಯಪ್ರಾಣ ತೊಲಗಲಾದೇಹವನು ಅರಿತು ಪೆಣನೆಂದು ಪೇಳ್ವರು ಬುಧಜನ ॥ - ಮಧ್ವನಾಮ

೨. ''ಬ್ರಹ್ಮಣೋಽಪಿ ಭಯಂ ಮತ್ತಃ ದ್ವಿಪರಾರ್ಧಪರಾಯುಷಃ'' ಇತಿ ವಚನಾತ್ । ಕೃಷ್ಣಾದಾಗತಭಯಂ ನ ಕೇನಾಪಿ ಪರಿಹರ್ತುಂ ಶಕ್ಯಮಿತಿ ಭಾವಃ । -ವ್ಯಾ.

**ನಿತ್ಯಂ ಮನ್ನಿಯತಃ ಸ ವಾತಿ ಪವನಃ ಪಾಕಂ ವಿಧತ್ತೇಽನಲಃ**
**ಸೂರ್ಯೋಽಸೌ ಸಮುದೇತಿ ತಂ ಹರಿಮೃತೇ ಸರ್ವಂ ಜಗನ್ಮದ್ವಶಮ್ ॥೨೨॥**

(ಕಂಸ)''ಎಲವೋ ಷಂಡ! ನೀನೇನು ಮಾಡುವೆ?''; (ಭಯ)''ಎಲವೋ ಮತಿಗೇಡಿಯೇ ! ನಿನ್ನನ್ನು ನಪುಂಸಕನಂತಾಗಿಸುವ ಬಯಕೆಯಿಂದ ಆ ನಪುಂಸಕತ್ವವನ್ನು ಶಿರಸಾ ವಹಿಸುವೆನು. ಈಗ ಹೆಚ್ಚು ಹೇಳಿ ಏನು? ಸದಾ ನನ್ನ ನಿಯಂತ್ರಣಕ್ಕೆ ಒಳಪಟ್ಟೇ ಆ ಗಾಳಿಯು ಬೀಸುವುದು, ಅಗ್ನಿಯು ಪಾಕಮಾಡುವುದು, ಈ ಸೂರ್ಯನು ಉದಿಸುವನು; ಆ ಶ್ರೀಹರಿಯ ಹೊರತು ಜಗತ್ತೆಲ್ಲಾ ನನ್ನ ವಶ''.

ವಿ. : ೧. [೧]ಮಹಾವಿಷ್ಣುವಿನ ಭಯಕ್ಕೆ ಅಂಜಿಯೇ ಸೂರ್ಯಾದಿ ಸಕಲ ದೇವತಾವೃಂದವೂ ಸಹ ವರ್ತಿಸುವುದು ಎಂಬ ಉಪನಿಷತ್ತಿನ ಮಾತನ್ನು ಆಧರಿಸಿ, ಈ ಮಾತು ಉಕ್ತವಾಗಿದೆ ಎಂದು ತಿಳಿಯಬೇಕು:''**ಭೀಷಾಽಸ್ಮಾತ್ ವಾತಃ ಪವತೇ ಭೀಷೋದೇತಿ ಸೂರ್ಯಃ**''।

೨. ''**ತದೇಜತಿ ತನ್ನೇಜತಿ**'' ಎಂಬ ಈಶಾವಾಸ್ಯದ ಭಾವವೂ ಇದರಲ್ಲಿ ನಿರೂಪಿತವಾಗಿದೆ.

೩. ಶ್ರೀನಿವಾಸಕಲ್ಯಾಣದ ಪ್ರಸಂಗದಲ್ಲಿ ಇಂದ್ರಾದಿ ದಿಕ್ಪಾಲಕರು, ಶ್ರೀನಿವಾಸನ ದಾಸಾನುದಾಸರಾಗಿ ಸೇವೆಸಲ್ಲಿಸಿದ ವಿವರಗಳು ಇದಕ್ಕೆ ನಿದರ್ಶನದಂತಿವೆ.

೪. ಭಯ ಎಂಬುದು ನಪುಂಸಕಲಿಂಗದ ಪದ ಎಂಬ ಹಿನ್ನೆಲೆಯಲ್ಲಿ ಕಂಸ ಅದನ್ನು ಷಂಡ ಎಂದಿರುವನು ; ಆದರೆ ಕಂಸನು ಪುರುಷನಾದರೂ ಕೃಷ್ಣನ ಭಯದಿಂದಾಗಿ ನಪುಂಸಕನಂತಾಗುವನು; ಅವನನ್ನು ಹಾಗೆ ಮಾಡಲೆಂದೇ ಭಯವು ನಪುಂಸಕತ್ವವನ್ನು ಹೊಂದಿದೆ ಎಂಬುದು ಇಲ್ಲಿಯ ಭಾವ.

೫. ಭಯವು ಶ್ರೀಹರಿಯ ಹೊರತು ಇತರ ಜಗತ್ತೆಲ್ಲಾ ತನ್ನ ವಶ ಎಂದು ಹೇಳುವ ಮೂಲಕ ತಾನು ಬ್ರಹ್ಮಾದಿಗಳಿಗಿಂತ ಮಿಗಿಲು ಹಾಗೂ ಶ್ರೀಹರಿಗಿಂತ ಕಡಿಮೆ ಎಂದು ಸ್ಪಷ್ಟಪಡಿಸಿದೆ ; ಇದರಿಂದ ಅದು ಮಹಾಲಕ್ಷ್ಮಿಯ ಸಂಕೇತ ಎಂದು ತಿಳಿಯುವುದು ; ಈಶಾವಾಸ್ಯೋಪನಿಷತ್ತಿನ 'ಯತ್ಕಿಂಚ ಜಗತ್ಯಾಂ ಜಗತ್'' ಎಂಬ ಮಾತಿನ ಬೆಳಕಿನಲ್ಲಿ ಇದನ್ನು ಅರ್ಥಮಾಡಿಕೊಳ್ಳಬಹುದು.

### ಭಯದಿಂದಾಗುವ ಅನಾಹುತಗಳ ಸರಮಾಲೆ

**ಸತ್ತ್ವಂ ನಿಷ್ಫಲಮಾತನೋಮಿ ಮಲಿನಂ ಖಿನ್ನಂ ಮುಖಂ ವೇಪಥು-**
**ಗ್ರಸ್ತಂ ಗಾತ್ರಮಧೀರಮಕ್ಷಿಯುಗಲಂ ಚಿತ್ತಂ ಚ ಚಿಂತಾಕುಲಮ್ ।**
**ದೈನ್ಯಂ ವಾಚಿ ವಿರಕ್ತತಾಂ ಚ ವಿಭವೇ ತ್ಯಾಗಂ ಚ ಭೋಗಾವಲೇ-**
**ರ್ಲಜ್ಜಾಮಾನಯಶಶ್ಚ್ಯುತಿಂ ವಿರಚಯೇ ಚಿತ್ತೇಽಹಮುಜ್ಜೃಂಭಿತಃ ॥ ೨೩ ॥**

---

೧. ಹರಿರೇಕ ಏವಾಕುತೋಭಯಃ ಅನ್ಯೇ ಯಥಾಯೋಗ್ಯಂ ಸಭಯಾ ಇತಿ ಭಾವಃ। -ವ್ಯಾ.

(ಭಯ)"ಎಲವೋ ಕಂಸ ! ನಿನ್ನ ಮನಸ್ಸಿನಲ್ಲಿ ಹುಟ್ಟಿರುವ ನಾನು ನಿನ್ನ ಸತ್ತ್ವವನ್ನು ವ್ಯರ್ಥವಾಗಿಸುವೆ; ಮುಖವನ್ನು ಮಲಿನಗೊಳಿಸಿ ಮಂಕು ಕವಿಸುವೆ ; ದೇಹದಲ್ಲಿ ನಡುಕ ಹುಟ್ಟಿಸುವೆ; ಕಣ್ಣುಗಳನ್ನು ತಿರುಗಿಸತೊಡಗುವೆ; ಮನಸ್ಸನ್ನು ಚಿಂತೆಯಿಂದ ವ್ಯಗ್ರವಾಗಿಸುವೆ; ಮಾತಿನಲ್ಲಿ ದೈನ್ಯ ಮೂಡಿಸುವೆ; ಐಶ್ವರ್ಯದಲ್ಲಿ ವೈರಾಗ್ಯ ಹುಟ್ಟಿಸುವೆ; ಭೋಗಸಮೂಹಗಳ ಬಗ್ಗೆ ಬಯಕೆ ಕುಗ್ಗಿಸುವೆ; ನಾಚಿಕೆ, ಮರ್ಯಾದೆ, ಕೀರ್ತಿಗಳಿಗೆ ಚ್ಯುತಿಯನ್ನುಂಟು- ಮಾಡುವೆ".

ವಿ. : ವ್ಯಕ್ತಿಗೆ ಭಯವು ಕವಿದಾಗ ಉಂಟಾಗುವ ಅನೇಕ ಬಗೆಯ ವಿರೂಪಗಳ ವಿವರಣೆ ಇದರಲ್ಲಿದೆ. ಭಯಗ್ರಸ್ತನಾದ ವ್ಯಕ್ತಿಯು ಬಗೆಬಗೆಯ ಪರಿಪಾಟಲೆಗೆ ಒಳಗಾಗಿ ಅಪಕೀರ್ತಿಗೆ ಬಲಿಯಾಗುವ ಇಲ್ಲಿಯ ವಿವರ ಅತ್ಯಂತ ರೋಚಕವಾದುದು.

### ಶ್ರೀಕೃಷ್ಣನಿಗೆ ಶರಣಾಗಲು ಭಯದ ಸಂದೇಶ

**ರೇ ರೇ ಮಂದ ಬಹಿಃ ಪ್ರಯಾಹಿ ಯದಿ ಭೋ ಭೋಜೇಶ ಕೃಷ್ಣಾಶ್ರಿತೋ**
**ಭೂಯಾಸ್ತರ್ಹಿ ತಥಾ ಕರೋಮ್ಯಪರಥಾ ತ್ವಾಂ ನೋಭಯತ್ರೋತ್ಸೃಜೇ ।**
**ಧೈರ್ಯಸ್ಥೈರ್ಯಯುತಾಚ್ಯುತಪ್ರಿಯಮನೋ ಮಹ್ಯಂ ನ ವೈ ರೋಚತೇ**
**ಕ್ಷೇಮಾಯಾಭ್ಯುದಯಾಯ ಚ ಪ್ರತಿದಿನಂ ತದ್ವೈರಿಚೇತೋ ಮಮ ॥ ೨೪ ॥**

(ಕಂಸ)"ಎಲ ಎಲವೋ ಮಂದ ! ಇಲ್ಲಿಂದ ಹೊರಕ್ಕೆ ತೆರಳು"; (ಭಯ)"ಎಲವೋ ಭೋಜಪತಿಯಾದ ಕಂಸ ! ನೀನು ಕೃಷ್ಣನಿಗೆ ಶರಣಾದಲ್ಲಿ ಹಾಗೆ ಮಾಡುವೆನು. ಇಲ್ಲವಾದಲ್ಲಿ ನಿನ್ನನ್ನು ಎರಡೂ ಕಡೆಗಳಲ್ಲೂ ಸರ್ವಥಾ ತೊರೆಯೆನು. ಧೈರ್ಯ, ಸ್ಥೈರ್ಯಗಳಿಂದ ತುಂಬಿದ ಶ್ರೀಕೃಷ್ಣನಿಗೆ ಪ್ರಿಯರಾದ ಭಕ್ತಜನರ ಮನಸ್ಸು ನನಗೆ ಹಿಡಿಸದು; ಅವನ ವೈರಿಗಳ ಮನಸ್ಸೇ ಪ್ರತಿದಿನವೂ ನನ್ನ ಕ್ಷೇಮಕ್ಕಾಗಿಯೇ, ಅಭ್ಯುದಯಕ್ಕಾಗಿಯೇ ಇರುವುದು".

ವಿ. : ೧. ಮಹಾವಿಷ್ಣುವನ್ನು ಭಕ್ತಿಯಿಂದ ಆಶ್ರಯಿಸಿದವರಿಗೆ ಮಾತ್ರವೇ [1]ಭಯದ ಭಯ- ವಿರದು ಎಂದರ್ಥ.

೨. ವಿಷ್ಣುಭಕ್ತರ ಮನಸ್ಸಿನಲ್ಲಿ ಸದಾ ಧೈರ್ಯಸ್ಥೈರ್ಯಗಳು ತುಂಬಿರುವುದರಿಂದ ಅವರಿಗೆ ಎಂದೂ ಭಯದ ಪ್ರಸಕ್ತಿ ಇರದು ಎಂದೂ ಭಾವ: ಅಭಯ ಎಂಬುದು ವಿಷ್ಣುಭಕ್ತರ ಪ್ರಪ್ರಥಮವಾದ ವಿಶಿಷ್ಟ ಗುಣ: ಅಭಯಂ ಸತ್ತ್ವಸಂಶುದ್ಧಿಃ..... (ಗೀತಾ ೧೬/೧).

೩. ಭಯವು ಉಳಿಯುವುದು, ಬೆಳೆಯುವುದು ಹರಿದ್ವೇಷಿಗಳ ಮನಸ್ಸಿನಲ್ಲಿ ಮಾತ್ರ ಎನ್ನುವ ಮೂಲಕ [2]ಹರಿದ್ವೇಷಿಗಳಿಗೆ ಭಯವು ಸರ್ವಥಾ ತಪ್ಪಿದ್ದಲ್ಲ ಎಂಬ ಪ್ರಮೇಯ ನಿರೂಪಿತ.

---

೧. "ಭಯೇನ ಭಯಾತ್ಮಕತಾಮ್" ಇತಿ ವಚನಾತ್ । -ವ್ಯಾ.

೨. "ಅಭಿಭೂಯಮಾನಾ ವ್ಯಸನೈರ್ಯಥಾಽಧೋಕ್ಷಜಚೇತಸಃ" ಇತಿ ವಚನಾತ್ । ತಸ್ಯ ಶ್ರೀಕೃಷ್ಣಸ್ಯ ದ್ವೇಷಿಚೇತಃ ಪ್ರತಿದಿನಂ ಮಮ ಕ್ಷೇಮಾಯ ಸ್ಥಿತರಕ್ಷಾಯೈ ಅಭ್ಯುದಯಾಯ ಅಭಿವೃದ್ಧಯೇ ಚ ಭವತಿ । ವಿಷ್ಣುದ್ವೇಷಿಣಾಂ ಪ್ರತಿದಿನಂ ಭಯಾಧಿಕ್ಯಮಿತಿ ಭಾವಃ। -ವ್ಯಾ.

೪. ಉಭಯತ್ರ ಎಂದರೆ ಇಹಲೋಕ ಹಾಗೂ ಪರಲೋಕಗಳಲ್ಲಿ ಎಂದರ್ಥ; ಶ್ರೀಹರಿಯ ದ್ವೇಷಿಗಳಿಗೆ ಇಹದಲ್ಲಿ ಸುಖ ಇರದು; ಪರದಲ್ಲಿ ನರಕದ ಭಯವಂತೂ ನಿಶ್ಚಿತ ಎಂದು ಭಾವ.

### ಹರಿದ್ವೇಷಿಯನ್ನು ಬ್ರಹ್ಮಾದಿಗಳೂ ಕಾಪಿಡರು

ಶಂಭುಂ ಸಂಭಜ ಪದ್ಮಯೋನಿಮಥವಾ ಚಂದ್ರೇಂದ್ರವೀಂದ್ರಾದಿಕಾನ್
ಸ್ವರ್ಗಂ ಗಚ್ಛ ತಮೋ ವ್ರಜ ಪ್ರವಿಶ ವಾ ಪಾತಾಲಮತ್ರೈವ ವಾ ।
ರಕ್ಷಾಂ ಭಿತ್ತಿಸಹಸ್ರವಾರಿಧಿಮಹಾಶೈಲಜ್ವಲತ್ಪಾವಕೈಃ
ಕೃತ್ವಾ ತಿಷ್ಠ ತಥಾಪಿ ಕೃಷ್ಣವಿಮತಂ ತ್ಯಕ್ಷ್ಯಾಮಿ ನ ತ್ವಾಮಹಮ್ ॥ ೨೫ ॥

(ಭಯ)"ಶಿವನನ್ನು ಶರಣು ಹೊಂದು ಅಥವಾ ಬ್ರಹ್ಮನನ್ನೇ ಆರಾಧಿಸು; ಚಂದ್ರ, ಇಂದ್ರ ಗರುಡಾದಿಗಳನ್ನು ಆಶ್ರಯಿಸು; ಸ್ವರ್ಗಕ್ಕೆ ಹೋಗು, ತಮಸ್ಸಿಗಾದರೂ ತೆರಳು, ಪಾತಾಳ-ವನ್ನಾದರೂ ಪ್ರವೇಶಿಸು, ಇಲ್ಲಿಯೇ ಸಾವಿರಾರು ಪ್ರಾಕಾರಗಳ ಮಧ್ಯೆ ಸಾಗರಗಳ, ದೊಡ್ಡಬೆಟ್ಟಗಳ, ಉರಿಯುವ ಅಗ್ನಿಜ್ವಾಲೆಗಳ ಮಧ್ಯೆ ಬೇಕಾದರೂ ರಕ್ಷೆ ಹಾಕಿಸಿಕೊಂಡು ನೆಲೆಸು; ಆದರೂ ಶ್ರೀಕೃಷ್ಣನಿಗೆ ವಿರೋಧಿಯಾದ ನಿನ್ನನ್ನು ಮಾತ್ರ ನಾನು ಸರ್ವಥಾ ತೊರೆಯೆನು."

ವಿ. : ಸರ್ವೋತ್ತಮನಾದ ಶ್ರೀಹರಿಗೆ[೧] ವಿರೋಧಿಯಾದವನನ್ನು ಸಂರಕ್ಷಿಸುವ ಆಸಕ್ತಿಯಾಗಲಿ, ಶಕ್ತಿಯಾಗಲಿ, ಬ್ರಹ್ಮಾದಿ ಸಕಲದೇವತೆಗಳಿಗೂ ಇರದು ಎಂದರ್ಥ. ಅದರಂತೆ ಭೂಮಿಯ ಮೇಲಿನ ಎಂತಹುದರ ರಕ್ಷಣೆಯೂ ಸಹ ಶ್ರೀಕೃಷ್ಣನ ವೈರಿಯನ್ನು ಉಳಿಸದು ಎಂದೂ ಭಾವ ; ವಿ – ಪಕ್ಷಿ; ವೀಂದ್ರ – ಪಕ್ಷಿಶ್ರೇಷ್ಠ, ಗರುಡ.

### ಭೀತನಿಗೆ ಸಮರದಲ್ಲಾಗುವ ದುರ್ಗತಿ

ಯುದ್ಧಾರ್ಥಂ ನ ಕದಾಪಿ ಗಚ್ಛತಿ ಗತೋಽಪ್ಯೋಜಸ್ವಿನಾಂ ಪೃಷ್ಠತ-
ಸ್ತಿಷ್ಠತ್ಯನ್ಯಮವೇಕ್ಷ್ಯ ಶಸ್ತ್ರನಿಕರಂ ಪೃಥ್ವ್ಯಾಂ ಕ್ಷಣೇನೋಜ್ಝತಿ ।
ಶತ್ರುಂ ಸ್ತೌತಿ ತೃಣಾಂಗುಲೀದಲಮದನ್ ಕಂಪೀ ಪತನ್ ಧಾವತಿ
ಸ್ತಬ್ಧೇತ್ಥಂ ಬಹುಲೋಕನಿಂದಿತದಶಾಂ ಸಂಪ್ರಾಪಯಿಷ್ಯಾಮ್ಯಹಮ್ ॥೨೬॥

(ಭಯ)"ಎಲವೋ ! ಸೊಕ್ಕಿನವನೇ ! ನಾನು ಯಾರ ಮನಸ್ಸನ್ನು ಆವರಿಸುವೆನೋ ಅವನೆಂದೂ ಯುದ್ಧಕ್ಕೆ ತೆರಳಲಾರನು; ತೆರಳಿದರೂ ಶೂರರ ಹಿಂದೆ ನಿಲ್ಲುವನು; ಶತ್ರುವನ್ನು ನೋಡುತ್ತಲೇ ಕ್ಷಣದಲ್ಲಿ ಶಸ್ತ್ರವೃಂದವನ್ನು ಭೂಮಿಯ ಮೇಲೆ ಬಿಸುಡುವನು; ಹುಲ್ಲನ್ನು ಬೆರಳುಗಳ ತುದಿಯನ್ನು ಕಚ್ಚುತ್ತಾ ಶತ್ರುವನ್ನು ಸ್ತುತಿಸುವನು; ನಡುಗುವನು; ಬೀಳುತ್ತಾ

೧. ವಿಷ್ಣುದ್ವೇಷಿಣಾ ಯತ್ರ ಕುತ್ರಾಪಿ ಗಮನೇ ಭಯಂ ನ ಮುಂಚತೀತಿ ಭಾವಃ। -ವ್ಯಾ.

ಓಡುವನು; ಹೀಗೆ ಜನರಿಂದ ತುಂಬಾ ನಿಂದಿತವಾದ ಪರಿಸ್ಥಿತಿಗೆ ಅಂತಹವನನ್ನು ನಾನು ತಲುಪಿಸಿ ಬಿಡುವೆನು''.

ವಿ. : [೧]ಭೀರುಸ್ವಭಾವದವನು ಎಂದೂ ಯುದ್ಧಕ್ಕೆ ತೆರಳನು ; ತೆರಳಿದರೂ ಶೂರರ ಹಿಂದೆ ನಿಲ್ಲುವನು; ವೈರಿಗಳು ಆಕ್ರಮಿಸಿ ಬಂದಾಗ ಶಸ್ತ್ರಗಳನ್ನು ಕೆಳಕ್ಕೆ ಹಾಕಿ, ಶರಣು ಹೊಂದುವನು; ಹುಲ್ಲು ಮಣ್ಣುಗಳನ್ನು ತಿನ್ನುವ ಸ್ಥಿತಿಗೆ ಹೋಗುವನು, ನಡುಗುತ್ತಾ ಬೀಳುವುದನ್ನೂ ಲೆಕ್ಕಿಸದೆ ಪಲಾಯನಗೈಯುವನು ಎಂದರ್ಥ.

### ವಿಷ್ಣುದ್ವೇಷಿಗಳಿಗೆ ಸರ್ವಥಾ ಸುಖವಿಲ್ಲ

**ಗಾಥಾ ತಿಷ್ಠತು ಭೂಪ ಸಂಪ್ರತಿ ಭವಾನ್ ನಿದ್ರಾತಿ ಕಿಂ ನಿದ್ರಿತಃ**
**ಸ್ವಪ್ನಂ ಶೋಭನಮೇವ ಪಶ್ಯತಿ ರಿಪುಂ ಕಿಂ ನಾನಿಶಂ ಶಂಕತೇ ।**
**ಧೈರ್ಯಂ ಕಿಂ ಹೃದಿ ಸಂದಧಾತ್ಯನುಚರಾನ್ ಧೀರಾನ್ ಕಿಮುದ್ವೀಕ್ಷ್ಯತೇ**
**ಸ್ವೈರಂ ಮದ್ವಶಮಾನಸಸ್ಯ ಭವತಃ ಸೌಖ್ಯಂ ಕ್ವಸೌಖ್ಯಾರ್ಥಿನಃ ॥ ೨೭ ॥**

''ಎಲವೋ ಭೂಪ ಕಂಸ! ಲೋಕದ ಮಾತು ಹಾಗಿರಲಿ, ನೀನೀಗ ನಿದ್ರಿಸಬಲ್ಲೆಯಾ? ಒಂದು ವೇಳೆ ನಿದ್ರೆ ಬಂದರೂ ಒಳ್ಳೆಯ ಕನಸನ್ನೇ ಕಾಣಬಲ್ಲೆಯಾ? ಸದಾ ಶತ್ರುವನ್ನು ಶಂಕಿಸದೆ ಇರುವೆಯಾ? ಮನಸ್ಸಿನಲ್ಲಿ ಧೈರ್ಯವನ್ನು ಹೊಂದುವೆಯಾ? ನಿನ್ನ ಅನುಚರರನ್ನು ಧೈರ್ಯ ಉಳ್ಳವರನ್ನಾಗಿ ಕಾಣಬಲ್ಲೆಯಾ? ಅನಾಯಾಸವಾಗಿ ನಿನ್ನ ಮನಸ್ಸು ನನ್ನ ವಶವಾಗಿರುವಾಗ ಸೌಖ್ಯವನ್ನು ಬಯಸುವ ನಿನಗೆ ನೆಮ್ಮದಿ ಎಲ್ಲಿಯದು?''.

ವಿ. : ೧. ಕೃಷ್ಣನ ಭಯದಿಂದಾಗಿ ಕಂಸನಿಗೆ ನಿದ್ರೆಯೂ ಬರದು. ಬಂದರೂ ದುಃಸ್ವಪ್ನಗಳ ಕಾಟ ತಪ್ಪಿದ್ದಲ್ಲ; ಅವನಿಗೆ ನಿಶ್ಚಿತವಾದ ಮರಣಸೂಚನೆಗಳು ತಪ್ಪಿದ್ದಲ್ಲ ಎಂದರ್ಥ.

೨. ಇದು ಒಂದು ರೀತಿಯಲ್ಲಿ 'ಭಯಾತ್ ಕಂಸಃ' ಎಂಬ ಶ್ರೀಮದ್ಭಾಗವತದ (೭/೧/೩೨) ಮಾತಿಗೆ ವಿವರಣೆಯಂತಿದೆ; ಕಂಸನಿಗೆ ಶ್ರೀಕೃಷ್ಣನ ಬಗ್ಗೆ ಈ ರೀತಿ ಎಲ್ಲ ಬಗೆಯಲ್ಲೂ ಆವರಿಸುವ ಭಯವು ಹೆಚ್ಚಿನ ಚಿಂತನೆಗೆ ಅವಕಾಶ ಕಲ್ಪಿಸುವ ಮೂಲಕ ಅವನಲ್ಲಿ ಆವಿಷ್ಟನಾಗಿದ್ದ ಭೃಗು ಮುನಿಯ ಸದ್ಗತಿಗೆ ಕಾರಣವಾಗುವುದು ಎಂಬುದು ಇದರ ಧ್ವನಿ.

೩. [೨]ಕಂಸನಿಗೆ ದುಃಸ್ವಪ್ನಗಳು ಮಾತ್ರವಲ್ಲದೆ ಜಾಗ್ರದವಸ್ಥೆಯಲ್ಲಿಯೇ ಮರಣ ಸೂಚಕವಾದ ದುಃಶಕುನಗಳು ಕಾಣತೊಡಗಿದ್ದವು ಎಂಬ ಶ್ರೀಮದ್ಭಾಗವತದ ಉಲ್ಲೇಖ ಇದರಿಂದ ಉಪಲಕ್ಷಿತ ಎಂದು ತಿಳಿಯಬೇಕು.

---

೧. ಕಥಂಚಿಚ್ಛತ್ರುಣಾ ಮುಕ್ತಃ ಕಂಪೀ ಕಂಪವಾನ್ ಪತನ್ ಧಾವತಿ ಪಲಾಯನಂ ಕರೋತಿ । ಪೃಷ್ಠತಃ ಪಲಾಯಮಾನೋಽಪಿ ನ ಸುಖಂ ಲಭತ ಇತಿ ಭಾವಃ। -ವ್ಯಾ.

೨. ಸ್ವಪ್ನಮಿತ್ಯುಪಲಕ್ಷಣಮ್ । ''ಅದರ್ಶನಂ ಸ್ವಶಿರಸಃ ಪ್ರತಿರೂಪೇಷು ಸತ್ಸ್ವಪಿ''(ಭಾಗ.೧೦/೪೨/೨೮)ಇತ್ಯಾದಿ ಭಾಗವತೋಕ್ತಜಾಗ್ರದ್ದೃಷ್ಟಸಮಸ್ತಾನಿಷ್ಟದರ್ಶನಮಪಿ ಗ್ರಾಹ್ಯಮ್ । -ವ್ಯಾ.

### ಕಂಸನ ಶೋಚನೀಯ ಸ್ಥಿತಿ

ಇತ್ಥಂ ಸಾಧ್ವಸಸಂದಿಗ್ಧಬುದ್ಧಿರ್ನಿದ್ರಾಂ ನ ಸೋಽಧ್ಯಗಾತ್ ।
ಲಬ್ಧನಿದ್ರೋಽಪಿ ದುಃಸ್ವಪ್ನೈಃ ಸ್ವಧರ್ೋನ್ನದ್ಧೋ ವ್ಯಬೋದ್ಧ್ಯತ[1] ॥ ೨೮ ॥

ಹೀಗೆ ಭಯಕವಿದು ಜಿದ್ದಿನಿಂದ ಉದ್ವೇಗಕ್ಕೊಳಗಾಗಿ, ಪ್ರಾಣಸಂದೇಹಕ್ಕೊಳಗಾದ ಮನಸ್ಸಿನ ಕಂಸ ನಿದ್ರಿಸದಾದ; ನಿದ್ರೆ ಒದಗಿದಾಗಲೂ ದುಃಸ್ವಪ್ನಗಳಿಂದಾಗಿ ಜಿದ್ದಿನಿಂದೆಂಬಂತೆ ಕೆರಳಿದ ಅವನು ಎಚ್ಚರಕ್ಕೊಳಗಾದ.

ವಿ. : ಇಲ್ಲಿ ಸಂದೇಹ ಎಂದರೆ ಪ್ರಾಣಸಂದೇಹ ಎಂದರ್ಥ; ಸಾಧ್ವಸ - ಭಯ.

### ಸೂರ್ಯೋದಯದ ಬಳಿಕ ಸಭೆಯತ್ತ ಶ್ರೀಕೃಷ್ಣ

ತತಸ್ತಮಿಸ್ರಂ ಪರಿಹರ್ತುಮರ್ಕಃ
ಸಮಾಸಸಾದಾಭ್ರಗರಾಜಮಾರ್ಗಮ್ ।
ಅಸತ್ತಮಿಸ್ರಂ ಸ್ವಕರೈರ್ಜಿಹೀರ್ಷು-
ರ್ಹರಿಶ್ಚ ಗೋಪೈಃ ಸಹ ರಾಜಮಾರ್ಗಮ್ ॥ ೨೯ ॥

ಬಳಿಕ ಕತ್ತಲೆಯನ್ನು ತನ್ನ ಕಿರಣಗಳಿಂದ ಪರಿಹರಿಸಲು ಸೂರ್ಯನು ಗಗನದಲ್ಲಿನ ಚಂದ್ರನ ಮಾರ್ಗವನ್ನು ಪೂರ್ಣವಾಗಿ ತಲುಪಿದ; ದುಷ್ಟರೆಂಬ ಕತ್ತಲೆಯನ್ನು ತನ್ನ ಕೈಗಳಿಂದ ನಾಶಪಡಿಸಲು ಬಯಸಿದವನಾಗಿ ಶ್ರೀಕೃಷ್ಣನೂ ಸಹ ಗೋಪರೊಂದಿಗೆ ರಾಜಬೀದಿಯನ್ನು ತಲುಪಿದ.

ವಿ. : ೧. ಚಂದ್ರನು ಅಸ್ತಂಗತನಾದ ಮೇಲೆ ಗಗನದಲ್ಲಿ ಸೂರ್ಯ ಕಾಣಿಸಿಕೊಂಡ ಎಂದು ಭಾವ; ರಾಜ - ಚಂದ್ರ[2].

---

೧. ಕಂಸಸ್ತು ಧನುಷೋ ಭಂಗಂ ರಕ್ಷಿಣಾಂ ಸ್ವಬಲಸ್ಯ ಚ ।
ವಧಂ ನಿಶಮ್ಯ ಗೋವಿಂದರಾಮವಿಕ್ರೀಡಿತಂ ಪರಮ್ ॥
ದೀರ್ಘಪ್ರಜಾಗರೋ ಭೀತೋ ದುರ್ನಿಮಿತ್ತಾನಿ ದುರ್ಮತಿಃ ।
ಬಹೂನ್ಯಚಷ್ಟೋಭಯಥಾ ಮೃತ್ಯೋರ್ದೌತ್ಯಕರಾಣಿ ಚ ॥
ಅದರ್ಶನಂ ಸ್ವಶಿರಸಃ ಪ್ರತಿರೂಪೇಷು ಸತ್ಸ್ವಪಿ ।
ಅಸತ್ಯಪಿ ದ್ವಿತೀಯೇ ಚ ದ್ವೈರೂಪ್ಯಂ ಜ್ಯೋತಿಷಾಂ ತಥಾ ॥
ಛಿದ್ರಪ್ರತೀತಿಶ್ಛಾಯಾಯಾಂ ಪ್ರಾಣಘೋಷಾನುಪಶ್ರುತಿಃ ।
ಸ್ವರ್ಣಪ್ರತೀತಿರ್ವೃಕ್ಷೇಷು ಸ್ವಪದಾನಾಮದರ್ಶನಮ್ ॥
ಸ್ವಪ್ನೇ ಪ್ರೇತಪರಿಷ್ವಂಗಃ ಖರಯಾನಂ ಬಿಸಾದನಮ್ ।
ಯಾಯಾನ್ನಳದಮಾಲ್ಯೇಕಸ್ತೈಲಾಭ್ಯಕ್ತೋ ದಿಗಂಬರಃ ॥
ಅನ್ಯಾನಿ ಚೇತ್ಥಂಭೂತಾನಿ ಸ್ವಪ್ನಜಾಗರಿತಾನಿ ಚ ।
ಪಶ್ಯನ್ ಮರಣಸಂತ್ರಸ್ತೋ ನಿದ್ರಾಂ ಲೇಭೇ ನ ಚಿಂತಯಾ ॥ - ಭಾಗ. (೧೦/೪೦/೨೪-೨೯)

೨. ''ಸೋಮೋ ರಾಜಾ'' (ಕೌಷೀತಕೀಬ್ರಾಹ್ಮಣೋಪನಿಷತ್ ೪/೩) ಇತಿ ಶ್ರುತಿಃ । - ವ್ಯಾ.

## ಮಾವಟಿಗನಿಗೆ ಶ್ರೀಕೃಷ್ಣ ನೀಡಿದ ಎಚ್ಚರಿಕೆ

ಗಚ್ಛನ್ ವಿಲೋಕ್ಯ ಗಜರಮ್ಯಗತಿಃ ಸ ರಂಗ-
ದ್ವಾರಿ ಸ್ಥಿತೇಭಮಥ ಹಸ್ತಿಪಮಿತ್ಯವೋಚತ್ ।
ಮಾರ್ಗಂ ಪ್ರದೇಹಿ ಕರಿಣಾ ಸಹ ದೂರಮೇಹಿ
ನೋ ಚೇತ್ ಪ್ರಯಾಸ್ಯಸಿ ವಿದೂರಕೃತಾಂತಲೋಕಮ್ ॥ ೩೦ ॥

ಬಳಿಕ ಆನೆಯಂತೆ ರಮ್ಯ ನಡೆಯ ಆ ಶ್ರೀಕೃಷ್ಣನು ಮುಂದೆ ಸಾಗುತ್ತಾ ರಂಗದ ದ್ವಾರದಲ್ಲಿ ನಿಂತಿದ್ದ ಆನೆಯನ್ನು ನೋಡಿ ಅದರ ಮಾವಟಿಗನಿಗೆ ಹೀಗೆ ಹೇಳಿದ; "ದಾರಿ ನೀಡು; ಆನೆಯೊಂದಿಗೆ ದೂರಕ್ಕೆ ಸಾಗು; ಇಲ್ಲವಾದಲ್ಲಿ ಅತ್ಯಂತ ದೂರದ ಯಮಲೋಕಕ್ಕೆ ನಡೆದುಬಿಡುವಿ."

ವಿ. : ೧. ಶ್ರೀಕೃಷ್ಣನು ಹೀಗೆ ಹೇಳುವ ಮೂಲಕ ಅವರು ಬದುಕಲು ಒಂದು ಅವಕಾಶನೀಡಿದ; ಆದರೆ ಅದರ ಪ್ರಯೋಜನ ಪಡೆಯಲು ವಿಫಲರಾದ ಅವರಿಬ್ಬರೂ ದುರಂತವನ್ನು ಕಂಡರು.

೨. ಸ್ವಲ್ಪ ದೂರ ಸರಿಯದಿದ್ದರೆ ಬಹುದೂರಕ್ಕೆ ಕಳುಹಿಸುವೆ ಎಂದರ್ಥ; ದಾರಿಬಿಡದಿದ್ದಲ್ಲಿ ಯಮಪುರಿಗೆ ಅಟ್ಟುವೆ ಎಂದು ಭಾವ.

## ಮಾವಟಿಗನ ಉದ್ಧತ ಉತ್ತರ

ಭೋ [೧]ತಿಷ್ಠ ತಿಷ್ಠ ವನವಾಸಿಜನೈಕಮಾನ್ಯ
ಪ್ರೌಢಿರ್ಬಲಂ ಕುಶಲಮಸ್ತಿ ನ ತಾದೃಶಂ ತೇ ।
ಯಾದೃಗ್ವಿದಗ್ಧಪುರವಾಸಿಜನೇಷು ಶತ್ರು-
ಸಂದರ್ಭಕೇಸರಿಸಮೇಷು ಜಿತಶ್ರಮೇಷು ॥ ೩೧ ॥

"ಎಲವೋ ಕಾಡಿನಲ್ಲಿ ವಾಸಿಸುವ ಜನರಿಂದ ಮಾತ್ರವೇ ಗೌರವಿಸಲ್ಪಡುವ ಕೃಷ್ಣ ! ನಿಲ್ಲು, ನಿಲ್ಲು; ಶತ್ರುಗಳ ಹಿಂಡಿಗೆ ಸಿಂಹಸದೃಶರಾದ, ಆಯಾಸ ತಿಳಿಯದ, ಚತುರರಾದ, ಪಟ್ಟಣವಾಸಿ ಜನರಲ್ಲಿರುವಂತಹ ವಾಕ್ಪ್ರೌಢಿಮೆ, ಬಲ, ಜಾಣತನ ನಿನಗೆಲ್ಲಿವೆ?" (ಸಂದರ್ಭ- ಸಮೂಹ).

## ಶ್ರೀಕೃಷ್ಣನ ಪ್ರತ್ಯುತ್ತರ

ಪ್ರೌಢಿಂ ವಿಚಾರಯತ ಮಂದಮತೇಃ ಸ್ವಹಸ್ತಿ-
ವಿಧ್ವಂಸನೋದ್ಯತಕರಸ್ಯ ವನೇ ನಿವಾಸಃ ।

೧. ಆಕ್ರೋಶೇನ ದ್ವಿರುಕ್ತಿಃ। -ವ್ಯಾ.

ಕಿಂ ದೂಷಣಂ ವಿಮತಕೇಸರಿಸಮ್ಮಿತಾನಾಂ
ಕಿಂ ಭೂಷಣಂ ಪ್ರತಿದಿನಂ ನಗರೇ ನಿವಾಸಃ ॥ ೩೨ ॥

"ಎಲೈ ಜನರೇ! ಅವಿವೇಕಿಯಾದ ಇವನ ಮಾತಿನ ಚಾತುರ್ಯವನ್ನು ನೀವೇ ವಿಚಾರಮಾಡಿರಿ. ಇವನ ಆನೆಯನ್ನು ಹೊಡೆದು ಹಾಕಲೆಂದು ಕೈಯೆತ್ತಿ ಬಂದಿರುವ ಶತ್ರುಗಳ ಪಾಲಿಗೆ ಸಿಂಹದಂತಿರುವ ನಮ್ಮಂತಹವರಿಗೆ ವನದಲ್ಲಿ ನೆಲೆಸುವುದು ದೋಷವೇ? ಪ್ರತಿದಿನದಲ್ಲೂ ನಗರದಲ್ಲೇ ನೆಲೆಸುವುದು ಭೂಷಣವಾದೀತೇ?"

ವಿ. : ೧. ತನ್ನನ್ನು ವನವಾಸಿ ಜನರಿಂದ ಮಾತ್ರವೇ ಮಾನಿತನಾದವನು ಎಂದು ಹಂಗಿಸಿದ ಮಾವಟಿಗನಿಗೆ ಕೃಷ್ಣ ನೀಡಿದ ಪ್ರತ್ಯುತ್ತರ ಇದಾಗಿದೆ. ಮಾವಟಿಗನ ಬಳಿ ಇರುವುದು ಆನೆ. ಆನೆಗೆ ವಿರೋಧಿಯಾದುದು ಸಿಂಹ, ಇವನ ಆನೆಗೆ ಸಿಂಹಪ್ರಾಯನಾದ ತಾನು ಹಾಗೆ ಕಾಡಿನಲ್ಲಿ ನೆಲೆಸುವುದು ಭೂಷಣವಲ್ಲದೆ ದೂಷಣವೆಂತಾದೀತು? ಎಂಬುದು ಇಲ್ಲಿಯ ಭಾವ. ಸಿಂಹದಂತವರು ನಗರಗಳಲ್ಲಿ ನೆಲೆಸುವುದು ಭೂಷಣವಲ್ಲ ; ಅದೇನಿದ್ದರೂ [೧]ಗ್ರಾಮ-ಸಿಂಹದಂತಹ ಜನರ ಕೃತ್ಯ ಎಂಬ ಇಲ್ಲಿಯ ಧ್ವನಿಯೂ ಅತ್ಯಂತ ರೋಚಕ.

## ಕುವಲಯಾಪೀಡವನ್ನು ಪೀಡಿಸಿದ ಶ್ರೀಕೃಷ್ಣ

ಪ್ರೌಢಿಸ್ತಥಾಽಸ್ತು ಬಲಕೌಶಲಮಸ್ಮದೀಯಂ
ಪಶ್ಯೇತ್ಯುದೀರ್ಯ ತರಸಾ ಕರಿಣಂ ನಿಹತ್ಯ ।
ತಸ್ಯಾಂಘ್ರಿಮಧ್ಯಮಧಿಗಮ್ಯ ವಿಭುರ್ವಿಲಿಲ್ಯೇ
ಹಸ್ತೀ ವ್ಯಕಂಪತ ತದಾ ಜಗೃಹೇ ನ ಶೌರಿಮ್ ॥ ೩೩ ॥

'ನನ್ನ ಪ್ರೌಢಿಮೆಯ ವಿಚಾರ ಹಾಗಿರಲಿ, ನನ್ನ ಬಲ ಹಾಗೂ ಕೌಶಲವನ್ನು ಈಗ ನೋಡು!' ಎಂದು ನುಡಿದು, ಬಲದಿಂದ ಆನೆಯನ್ನು ಹೊಡೆದು ನೋಯಿಸಿ, ಅದರ ಕಾಲುಗಳ ಮಧ್ಯೆ ಅಡಗಿ ಕುಳಿತ; ಆನೆಯು ಸಮರ್ಥನಾದ ಕೃಷ್ಣನ ಪೆಟ್ಟಿಗೆ ಆಗ ಬಹಳವಾಗಿ ನಡುಗಿತು; ಶೌರಿಯಾದ ಶ್ರೀಕೃಷ್ಣನನ್ನು ಹಿಡಿಯದಾಯಿತು.

ವಿ. : ೧. ಇಲ್ಲಿ ನಿಹತ್ಯ ಎಂಬುದಕ್ಕೆ ನೋಯಿಸಿ ಎಂದರ್ಥ (ಹನ ಹಿಂಸಾಗತ್ಯೋಃ); ಕೃಷ್ಣನು ಅದನ್ನು ಕೊಲ್ಲುವ ವಿವರ ಮುಂದೆ ೩೭ನೇ ಶ್ಲೋಕದಲ್ಲಿ ಬರುವುದರಿಂದ ಇಲ್ಲಿ ಹಿಂಸಿಸಿ ಎಂಬ ಅರ್ಥವೇ ವಿಹಿತ.

೧. ನಗರೇ ನಿವಾಸೇ ಸತಿ ಸ್ವೇಷಾಂ ಗ್ರಾಮಸಿಂಹತ್ವಾಪತ್ತೇರ್ದೂಷಣಮೇವೇತಿ ಭಾವಃ। -ವ್ಯಾ.

೨. ಶ್ರೀಕೃಷ್ಣನ ಕೈಯ ಹೊಡೆತದಿಂದ ಆನೆಯು ನಡುಗಿದ್ದು ಅವನ ಬಲಕ್ಕೆ ನಿದರ್ಶನ; ಅದರಂತೆ ಆನೆಗೆ ಅವನನ್ನು ಹಿಡಿಯಲಾಗದ್ದು ಅವನ ಕೌಶಲಕ್ಕೆ [೧]ನಿದರ್ಶನ ಎಂದು ತಿಳಿಯಬೇಕು.

೩. ಇಲ್ಲಿ 'ಶೌರಿ' ಎಂದರೆ ಶೂರರಾಜನ ಮಗನಾದ ವಸುದೇವನ ಪುತ್ರ ಎಂದರ್ಥ; ಮುಖ್ಯವಾಗಿ ಇದು ವಿಷ್ಣುಸಹಸ್ರನಾಮದ ಪದ ('ಶೌರಿಃ ಶೂರಜನೇಶ್ವರಃ'); ಇದರಿಂದ ಶ್ರೀಕೃಷ್ಣ ಸಾಕ್ಷಾತ್ ವಿಷ್ಣು ಎಂಬ ಭಾವ ಸೂಚಿತ.

### ಆನೆಯ ದಂತಗಳನ್ನು ಶಿಥಿಲಗೊಳಿಸಿದ ಶ್ರೀಕೃಷ್ಣ

ಪುಚ್ಛೇ ಪ್ರಗೃಹ್ಯ ಪುರುಸತ್ತ್ವಮಮುಂ ಪುನಶ್ಚ
ಕೃಷ್ಣಶ್ಚಕರ್ಷ ಬಹುದೂರಮಪಾರಶಕ್ತಿಃ ।
ಧಾವನ್ ವಿಭುರ್ನಿಜವಿಪಾತವಿಶಂಕಿನೋಽಸ್ಯ
ಭೂಲಗ್ನದಂತಯುಗಲಂ ಶಿಥಿಲೀಚಕಾರ ॥ ೩೪ ॥

ಮಹಾಸಾಮರ್ಥ್ಯ ಹೊಂದಿದ್ದ ಆ ಆನೆಯ ಬಾಲವನ್ನು ಹಿಡಿದು ಅಪಾರ ಶಕ್ತಿಯ ಶ್ರೀಕೃಷ್ಣ ಮತ್ತೆ ಬಹುದೂರಕ್ಕೆ ಎಳೆದ; ಅದರ ಮುಂದೆ ಓಡುತ್ತಾ ಪ್ರಭುವಾದ ಅವನು, ತಾನು ಬೀಳಬಹುದೆಂದು ಭಾವಿಸಿದ ಆ ಆನೆಯ ಭೂಮಿಗೆ ಅಪ್ಪಳಿಸಿದ ಎರಡು ದಂತಗಳನ್ನು ಶಿಥಿಲಗೊಳಿಸಿದ.

ವಿ. : ೧. ಇದರಿಂದಲೂ ಶ್ರೀಕೃಷ್ಣನ ಬಲಕೌಶಲಗಳು [೨]ಪ್ರದರ್ಶಿತ.

೨. ಶ್ರೀಕೃಷ್ಣನು ಕಾಲಿಯನ ಬಾಲವನ್ನು ಹಿಡಿದದ್ದು ಅವನ ಉದ್ಧಾರದ ಸಂಕೇತವಾಯಿತು. ಆದರೆ ಈ ಆನೆಯ ಬಾಲವನ್ನು ಹಿಡಿದದ್ದು ಅದರ ವಿನಾಶಕ್ಕೆ ಕಾರಣವಾಯಿತು. ಕಾಲಿಯನ ಬಾಲದಲ್ಲಿ ವಿಷವಿರದದ್ದು ಅದರ ಉದ್ಧಾರಕ್ಕೆ ಕಾರಣವಾದರೆ, ಬಾಲದಲ್ಲೂ ದುಷ್ಟತನ ತುಂಬಿದ್ದ ಸ್ವಭಾವತಃ ತಾಮಸನಾಗಿದ್ದುದು ಈ ಕುವಲಯಾಪೀಡದ ರೀತಿಯಾಗಿತ್ತು. ಅದಕ್ಕೆಂದೇ ಬಾಲಹಿಡಿದು ಭಗವಂತ ಬಡಿದುಹಾಕಿದ.

೩. ದುರ್ಜನರಿಗೆ ಮೈಯೆಲ್ಲ ವಿಷ ಎಂಬ ಸೂಕ್ತಿಯು ಇಲ್ಲಿ ಗಮನಾರ್ಹವಾಗಿದೆ:

ತಕ್ಷಕಸ್ಯ ವಿಷಂ ದಂತೇ ಮಕ್ಷಿಕಾಯಾ ವಿಷಂ ಶಿರಃ ।
ವೃಶ್ಚಿಕಸ್ಯ ವಿಷಂ ಪುಚ್ಛಂ ಸರ್ವಾಂಗೇ ದುರ್ಜನೋ ವಿಷಮ್ ॥

– ಚಾಣಕ್ಯನೀತಿ (೧೭/೮)

---

೧. ತದಾ ಕೃಷ್ಣಕರತಾಡನೇ ಸತಿ ಹಸ್ತೀ ವ್ಯಕಂಪತ । ಅನೇನ ಬಲಂ ಪ್ರದರ್ಶಿತಮ್ । ಶೌರಿಂ ಕೃಷ್ಣಂ ನ ಜಗೃಹೇ ನ ಗೃಹೀತವಾನ್ । ಅನೇನ ಕೌಶಲಂ ಪ್ರದರ್ಶಿತಂ ಭವತಿ । – ವ್ಯಾ.

೨. ಶ್ರೀಕೃಷ್ಣಃ ಪುರುಸತ್ತ್ವಮಮುಂ ಗಜಂ ಪುಚ್ಛೇ ಪ್ರಗೃಹ್ಯ ಬಹುದೂರಂ ಚಕರ್ಷ । ಅನೇನಾಪಿ ಬಲಂ ಪ್ರದರ್ಶಿತಮ್ । ... ದಂತಮೂಲಯೋಃ ಶೈಥಿಲ್ಯಂ ಸಂಪಾದಯಾಮಾಸ । ಅನೇನ ಕೌಶಲಂ ಪ್ರದರ್ಶಿತಮ್ । – ವ್ಯಾ.

೪. ಸ್ವಭಾವತಃ ದುಷ್ಟರನ್ನು ಭಗವಂತ ಪೂರ್ಣವಾಗಿಯೇ ಶಿಕ್ಷಿಸುವನು ಎಂದು ಭಾವ.

**ಆನೆಯನ್ನು ಪೀಡಿಸಿದ ಶ್ರೀಕೃಷ್ಣನ ವೈಭವ**

**ಕೃಷ್ಣಂ ವಿಶಂಕ್ಯ ಪತಿತಂ ಭುವಿ ಸಂಹತಾತ್ಮ-**
**ದಂತಾನುಷಕ್ತಬಹುಧೂಲಿರಿಭೋ ವಿರೇಜೇ ।**
**ಸಿದ್ಧಾತ್ತಬುದ್ಧ್ಯುಚಿತಸಿದ್ಧಿರಿವಾಂಬರಸ್ಥ-**
**ಸಿದ್ಧೇಶ್ವರಸ್ತುತಿಗಿರಾ ಪಥಿ ವರ್ಣ್ಯಮಾನಃ ॥ ೩೫ ॥**

ಶ್ರೀಕೃಷ್ಣನು ಭೂಮಿಯ ಮೇಲೆ ಬಿದ್ದನೆಂದು ಭ್ರಮಿಸಿ ಭೂಮಿಗೆ ತನ್ನ ದಂತಗಳನ್ನು ಅಪ್ಪಳಿಸಿ, ಬಹಳವಾಗಿ ಧೂಳನ್ನು ಮೆತ್ತಿಸಿಕೊಂಡ ಆನೆಯು, ತನಗೆ ಹುಟ್ಟಿದ ಬುದ್ಧಿಗೆ ಅನುಗುಣವಾದ ಫಲ ಅದಕ್ಕೆ ಲಭಿಸಿತು ಎಂಬುದಾಗಿ ಗಗನದಲ್ಲಿ ನೆರೆದಿದ್ದ ಸಿದ್ಧೇಶ್ವರರ ಶ್ರೀಕೃಷ್ಣನ ಸ್ತುತಿಪರ ಮಾತಿನಿಂದ ದಾರಿಯಲ್ಲಿ ವರ್ಣಿತವಾಗಿ ಕಂಗೊಳಿಸಿತು.

ವಿ. : ೧. ಶ್ರೀಕೃಷ್ಣ ಬಿದ್ದನೆಂದು ತಿಳಿದು, ಅವನನ್ನು ತಿವಿಯಲೆಂದು ಆ ಕುವಲಯಾಪೀಡವು ಜೋರಾಗಿ ತನ್ನ ದಂತಗಳಿಂದ ತಿವಿದಾಗ ಭೂಮಿಯಿಂದ ಮೇಲೆದ್ದ ಧೂಳು ಆನೆಯನ್ನು ಮುಸುಕಿತು; ಶ್ರೀಕೃಷ್ಣನ ಬಗ್ಗೆ ತಪ್ಪು ತಿಳಿದ ಆನೆಯ ಮುಖಕ್ಕೆ ಧೂಳಿ ಕವಿದದ್ದು ತಕ್ಕ ಪ್ರತಿಫಲ ಎಂದು ಭಾವಿಸಿ, ಸಿದ್ಧರು ಕೃಷ್ಣನನ್ನು ಸ್ತುತಿಸಿದರು; (ಇಭ - ಆನೆ).

೨. ಸುಮಧ್ವವಿಜಯದಲ್ಲಿ ಸೂರ್ಯಗ್ರಹಣವೊಂದರ ನಿಮಿತ್ತ ಸಮುದ್ರಸ್ನಾನಕ್ಕೆಂದು ತೆರಳಿದ್ದ ಶ್ರೀಮದಾಚಾರ್ಯರನ್ನು ಮೂಢಜನರು ಇತರರಂತೆ ಅವರೂ ಸಹ ಅಲೆಯ ಹೊಡೆತಕ್ಕೆ ಕೆಳಕ್ಕೆ ಬೀಳುವನೆಂದು ಭಾವಿಸಿ, ಅಪಹಾಸ್ಯಮಾಡಿದ ಪ್ರಸಂಗವು ಇಂತಹುದೇ[೧] ಆಗಿದೆ. ಆಗ ಶ್ರೀಮದಾಚಾರ್ಯರು ತಮ್ಮ ನೋಟಮಾತ್ರದಿಂದಲೇ ಭೋರ್ಗರೆಯುತ್ತಿದ್ದ ಸಮುದ್ರವನ್ನು ಕೆರೆಯಂತೆ ತಟಸ್ಥವನ್ನಾಗಿಸಿದ ಮಹಿಮೆಯು ಅಲ್ಲಿ ವರ್ಣಿತವಾಗಿದೆ[೨].

**ಮಾವಟಿಗನಿಗೆ ಮೃತ್ಯುವಾದ ಆನೆಯ ದಂತಗಳು**

**ಇತ್ಥಂ ಪ್ರದರ್ಶ್ಯ ಬಲಕೌಶಲಮಂಬುಜಾಕ್ಷಃ**
**ಪದ್ಭ್ಯಾಂ ಪ್ರಪೀಡ್ಯ ತರಸಾ ಕರಿಣಂ ಮಮರ್ದ ।**

---

೧. ಮಜ್ಜಂತಂ ಪೃಥುಲಹರೀನಿಗೂಢಮೂರ್ತಿಂ ಸಂಪೂರ್ಣಪ್ರಮತಿಮಸಜ್ಜನೋ ಜಹಾಸ ।
ಯೋ ಲೋಕತ್ರಯವಿಜಯೀ ಗುರುಃ ಪ್ರಸಿದ್ಧಃ ಸೋಽಯಂ ಹಾ ಪತತಿ ಲಘೂರ್ಮಿಲೀಲಯೇತಿ ॥
ನೀಚಾನಾಮವಚವಚಾಂಸ್ಯಜೀಗಣನ್ನೋ ದಭ್ರಾಣಾಂ ಕ್ಷುಭಿತಕರಾಣ್ಯದಭ್ರಸಂಖ್ಯಃ ।
ಕ್ರೋಷ್ಟೂನಾಂ ಶ್ವಕಲಕಲಪ್ರದಂ ವಿರಾವಂ ಪಂಚಾಸ್ಯೋ ನ ಹಿ ಗಣಯೇದುದಾರವೀರ್ಯಃ ॥
-ಸು.ವಿ. (೧೬/೨೧,೨೨)

೨. ಜನ್ಮಸ್ಥಿತ್ಯವಸಿತಿದಾಯಿನಂ ಕಟಾಕ್ಷಂ ಲೋಕಾನಾಮಘಟಯದಂಬುಧೌ ಬೃಹದ್ಧೀಃ ।
ಆಕ್ರಾಂತೋಽಧಿಕಗುರುಣಾ ಸ ತೇನ ತಾವನ್ಮುಂಚನ್ ಸಂಚಲನಮಭೂತ್ ತಟಾಕದೇಶ್ಯಃ ॥-ಸು.ವಿ.(೧೬/೨೫.)

೨. ಶ್ರೀಕೃಷ್ಣನ ಕೈಯ ಹೊಡೆತದಿಂದ ಆನೆಯು ನಡುಗಿದ್ದು ಅವನ ಬಲಕ್ಕೆ ನಿದರ್ಶನ; ಅದರಂತೆ ಆನೆಗೆ ಅವನನ್ನು ಹಿಡಿಯಲಾಗದ್ದು ಅವನ ಕೌಶಲಕ್ಕೆ [೧]ನಿದರ್ಶನ ಎಂದು ತಿಳಿಯಬೇಕು.

೩. ಇಲ್ಲಿ 'ಶೌರಿ' ಎಂದರೆ ಶೂರರಾಜನ ಮಗನಾದ ವಸುದೇವನ ಪುತ್ರ ಎಂದರ್ಥ; ಮುಖ್ಯವಾಗಿ ಇದು ವಿಷ್ಣುಸಹಸ್ರನಾಮದ ಪದ ('ಶೌರಿಃ ಶೂರಜನೇಶ್ವರಃ'); ಇದರಿಂದ ಶ್ರೀಕೃಷ್ಣ ಸಾಕ್ಷಾತ್ ವಿಷ್ಣು ಎಂಬ ಭಾವ ಸೂಚಿತ.

ಆನೆಯ ದಂತಗಳನ್ನು ಶಿಥಿಲಗೊಳಿಸಿದ ಶ್ರೀಕೃಷ್ಣ

ಪುಚ್ಛೇ ಪ್ರಗೃಹ್ಯ ಪುರುಸತ್ತ್ವಮಮುಂ ಪುನಶ್ಚ
ಕೃಷ್ಣಶ್ಚಕರ್ಷ ಬಹುದೂರಮಪಾರಶಕ್ತಿಃ।
ಧಾವನ್ ವಿಭುರ್ನಿಜವಿಪಾತವಿಶಂಕಿನೋಽಸ್ಯ
ಭೂಲಗ್ನದಂತಯುಗಲಂ ಶಿಥಿಲೀಚಕಾರ॥ ೩೪ ॥

ಮಹಾಸಾಮರ್ಥ್ಯ ಹೊಂದಿದ್ದ ಆ ಆನೆಯ ಬಾಲವನ್ನು ಹಿಡಿದು ಅಪಾರ ಶಕ್ತಿಯ ಶ್ರೀಕೃಷ್ಣ ಮತ್ತೆ ಬಹುದೂರಕ್ಕೆ ಎಳೆದ; ಅದರ ಮುಂದೆ ಓಡುತ್ತಾ ಪ್ರಭುವಾದ ಅವನು, ತಾನು ಬೀಳಬಹುದೆಂದು ಭಾವಿಸಿದ ಆ ಆನೆಯ ಭೂಮಿಗೆ ಅಪ್ಪಳಿಸಿದ ಎರಡು ದಂತಗಳನ್ನು ಶಿಥಿಲಗೊಳಿಸಿದ.

ವಿ.: ೧. ಇದರಿಂದಲೂ ಶ್ರೀಕೃಷ್ಣನ ಬಲಕೌಶಲಗಳು [೨]ಪ್ರದರ್ಶಿತ.

೨. ಶ್ರೀಕೃಷ್ಣನು ಕಾಲಿಯನ ಬಾಲವನ್ನು ಹಿಡಿದದ್ದು ಅವನ ಉದ್ಧಾರದ ಸಂಕೇತವಾಯಿತು. ಆದರೆ ಈ ಆನೆಯ ಬಾಲವನ್ನು ಹಿಡಿದದ್ದು ಅದರ ವಿನಾಶಕ್ಕೆ ಕಾರಣವಾಯಿತು. ಕಾಲಿಯನ ಬಾಲದಲ್ಲಿ ವಿಷವಿರದದ್ದು ಅದರ ಉದ್ಧಾರಕ್ಕೆ ಕಾರಣವಾದರೆ, ಬಾಲದಲ್ಲೂ ದುಷ್ಟತನ ತುಂಬಿದ್ದ ಸ್ವಭಾವತಃ ತಾಮಸನಾಗಿದ್ದುದು ಈ ಕುವಲಯಾಪೀಡದ ರೀತಿಯಾಗಿತ್ತು. ಅದಕ್ಕೆಂದೇ ಬಾಲಹಿಡಿದು ಭಗವಂತ ಬಡಿದುಹಾಕಿದ.

೩. ದುರ್ಜನರಿಗೆ ಮೈಯೆಲ್ಲ ವಿಷ ಎಂಬ ಸೂಕ್ತಿಯು ಇಲ್ಲಿ ಗಮನಾರ್ಹವಾಗಿದೆ:

ತಕ್ಷಕಸ್ಯ ವಿಷಂ ದಂತೇ ಮಕ್ಷಿಕಾಯಾ ವಿಷಂ ಶಿರಃ।
ವೃಶ್ಚಿಕಸ್ಯ ವಿಷಂ ಪುಚ್ಛಂ ಸರ್ವಾಂಗೇ ದುರ್ಜನೋ ವಿಷಮ್॥

– ಚಾಣಕ್ಯನೀತಿ (೧೭/೮)

---

೧. ತದಾ ಕೃಷ್ಣಕರತಾಡನೇ ಸತಿ ಹಸ್ತೀ ವ್ಯಕಂಪತ। ಅನೇನ ಬಲಂ ಪ್ರದರ್ಶಿತಮ್। ಶೌರಿಂ ಕೃಷ್ಣಂ ನ ಜಗೃಹೇ ನ ಗೃಹೀತವಾನ್। ಅನೇನ ಕೌಶಲಂ ಪ್ರದರ್ಶಿತಂ ಭವತಿ। – ವ್ಯಾ.

೨. ಶ್ರೀಕೃಷ್ಣಃ ಪುರುಸತ್ತ್ವಮಮುಂ ಗಜಂ ಪುಚ್ಛೇ ಪ್ರಗೃಹ್ಯ ಬಹುದೂರಂ ಚಕರ್ಷ। ಅನೇನಾಪಿ ಬಲಂ ಪ್ರದರ್ಶಿತಮ್। ... ದಂತಮೂಲಯೋಃ ಶೈಥಿಲ್ಯಂ ಸಂಪಾದಯಾಮಾಸ। ಅನೇನ ಕೌಶಲಂ ಪ್ರದರ್ಶಿತಮ್। – ವ್ಯಾ.

೪. ಸ್ವಭಾವತಃ ದುಷ್ಟರನ್ನು ಭಗವಂತ ಪೂರ್ಣವಾಗಿಯೇ ಶಿಕ್ಷಿಸುವನು ಎಂದು ಭಾವ.

**ಆನೆಯನ್ನು ಪೀಡಿಸಿದ ಶ್ರೀಕೃಷ್ಣನ ವೈಭವ**

ಕೃಷ್ಣಂ ವಿಶಂಕ್ಯ ಪತಿತಂ ಭುವಿ ಸಂಹತಾತ್ಮ-
ದಂತಾನುಷಕ್ತಬಹುಧೂಲಿರಿಭೋ ವಿರೇಜೇ ।
ಸಿದ್ಧಾರ್ತ್ಥಬುದ್ಧ್ಯುಚಿತಸಿದ್ಧಿರಿವಾಂಬರಸ್ಥ-
ಸಿದ್ಧೇಶ್ವರಸ್ತುತಿಗಿರಾ ಪಥಿ ವರ್ಣ್ಯಮಾನಃ ॥ ೩೫ ॥

ಶ್ರೀಕೃಷ್ಣನು ಭೂಮಿಯ ಮೇಲೆ ಬಿದ್ದನೆಂದು ಭ್ರಮಿಸಿ ಭೂಮಿಗೆ ತನ್ನ ದಂತಗಳನ್ನು ಅಪ್ಪಳಿಸಿ, ಬಹಳವಾಗಿ ಧೂಳನ್ನು ಮೆತ್ತಿಸಿಕೊಂಡ ಆನೆಯು, ತನಗೆ ಹುಟ್ಟಿದ ಬುದ್ಧಿಗೆ ಅನುಗುಣವಾದ ಫಲ ಅದಕ್ಕೆ ಲಭಿಸಿತು ಎಂಬುದಾಗಿ ಗಗನದಲ್ಲಿ ನೆರೆದಿದ್ದ ಸಿದ್ಧೇಶ್ವರರ ಶ್ರೀಕೃಷ್ಣನ ಸ್ತುತಿಪರ ಮಾತಿನಿಂದ ದಾರಿಯಲ್ಲಿ ವರ್ಣಿತವಾಗಿ ಕಂಗೊಳಿಸಿತು.

ವಿ. : ೧. ಶ್ರೀಕೃಷ್ಣ ಬಿದ್ದನೆಂದು ತಿಳಿದು, ಅವನನ್ನು ತಿವಿಯಲೆಂದು ಆ ಕುವಲಯಾಪೀಡವು ಜೋರಾಗಿ ತನ್ನ ದಂತಗಳಿಂದ ತಿವಿದಾಗ ಭೂಮಿಯಿಂದ ಮೇಲೆದ್ದ ಧೂಳು ಆನೆಯನ್ನು ಮುಸುಕಿತು; ಶ್ರೀಕೃಷ್ಣನ ಬಗ್ಗೆ ತಪ್ಪು ತಿಳಿದ ಆನೆಯ ಮುಖಕ್ಕೆ ಧೂಳಿ ಕವಿದದ್ದು ತಕ್ಕ ಪ್ರತಿಫಲ ಎಂದು ಭಾವಿಸಿ, ಸಿದ್ಧರು ಕೃಷ್ಣನನ್ನು ಸ್ತುತಿಸಿದರು; (ಇಭ - ಆನೆ).

೨. ಸುಮಧ್ವವಿಜಯದಲ್ಲಿ ಸೂರ್ಯಗ್ರಹಣವೊಂದರ ನಿಮಿತ್ತ ಸಮುದ್ರಸ್ನಾನಕ್ಕೆಂದು ತೆರಳಿದ್ದ ಶ್ರೀಮದಾಚಾರ್ಯರನ್ನು ಮೂಢಜನರು ಇತರರಂತೆ ಅವರೂ ಸಹ ಅಲೆಯ ಹೊಡೆತಕ್ಕೆ ಕೆಳಕ್ಕೆ ಬೀಳುವರೆಂದು ಭಾವಿಸಿ, ಅಪಹಾಸ್ಯಮಾಡಿದ ಪ್ರಸಂಗವು ಇಂತಹುದೇ[1] ಆಗಿದೆ. ಆಗ ಶ್ರೀಮದಾಚಾರ್ಯರು ತಮ್ಮ ನೋಟಮಾತ್ರದಿಂದಲೇ ಭೋರ್ಗರೆಯುತ್ತಿದ್ದ ಸಮುದ್ರವನ್ನು ಕೆರೆಯಂತೆ ತಟಸ್ಥವನ್ನಾಗಿಸಿದ ಮಹಿಮೆಯು ಅಲ್ಲಿ ವರ್ಣಿತವಾಗಿದೆ[2].

**ಮಾವಟಿಗನಿಗೆ ಮೃತ್ಯುವಾದ ಆನೆಯ ದಂತಗಳು**

ಇತ್ಥಂ ಪ್ರದರ್ಶ್ಯ ಬಲಕೌಶಲಮಂಬುಜಾಕ್ಷಃ
ಪದ್ಭ್ಯಾಂ ಪ್ರಪೀಡ್ಯ ತರಸಾ ಕರಿಣಂ ಮಮರ್ದ ।

೧. ಮಜ್ಜಂತಂ ಪೃಥುಲಹರೀನಿಗೂಢಮೂರ್ತಿಂ ಸಂಪೂರ್ಣಪ್ರಮತಿಮಸಜ್ಜನೋ ಜಹಾಸ ।
ಯೋ ಲೋಕತ್ರಯವಿಜಯೀ ಗುರುಃ ಪ್ರಸಿದ್ಧಃ ಸೋऽಯಂ ಹಾ ಪತತಿ ಲಘೂರ್ಮಿಲೀಲಯೇತಿ ॥
ನೀಚಾನಾಮವಚವಚಾಂಸ್ಯಜೀಗಣನ್ನೋ ದಭ್ರಾಣಾಂ ಕ್ಷುಭಿತಕರಾಣ್ಯದಭ್ರಸಂಖ್ಯಃ ।
ಕ್ರೋಷ್ಟೂನಾಂ ಶ್ವಕಲಕಲಪ್ರದಂ ವಿರಾವಂ ಪಂಚಾಸ್ಯೋ ನ ಹಿ ಗಣಯೇದುದಾರವೀರ್ಯಃ ॥
-ಸು.ವಿ. (೧೬/೨೧,೨೨)

೨. ಜನ್ಮಸ್ಥಿತ್ಯವಸಿತಿದಾಯಿನಂ ಕಟಾಕ್ಷಂ ಲೋಕಾನಾಮಘಟಯದಂಬುಧೌ ಬೃಹದ್ಧೀಃ ।
ಆಕ್ರಾಂತೋऽಧಿಕಗುರುಣಾ ಸ ತೇನ ತಾವನ್ನುಂಚನ್ ಸಂಚಲನಮಭೂತ್ ತಟಾಕದೇಶ್ಯಃ ॥-ಸು.ವಿ.(೧೬/೨೫.)

**ಉತ್ಪಾತತದ್ಧವಲದಂತಕರಃ ಕ್ಷಣೇನ**
**ತತ್ಸಾಮಿನಂ ತದನುಗಾಂಶ್ಚ ಸ ಲೀಲಯೈವ ॥ ೩೬ ॥**

ಹೀಗೆ ಪುಂಡರೀಕಾಕ್ಷನಾದ ಶ್ರೀಕೃಷ್ಣ ತನ್ನ ಬಲ ಹಾಗೂ ಕೌಶಲಗಳನ್ನು ತೋರಿಸಿಕೊಟ್ಟು, ತನ್ನ ಎರಡೂ ಕಾಲುಗಳಿಂದ ಆನೆಯನ್ನು ವೇಗದಿಂದ ಒದ್ದು ಮರ್ದಿಸಿದ; ಅದರ ಅಚ್ಚ ಬಿಳಿಯಾದ ಎರಡು ದಂತಗಳನ್ನು ಕಿತ್ತು ಕೈಯಲ್ಲಿ ಹಿಡಿದು ಕ್ಷಣಮಾತ್ರದಲ್ಲಿ ಅದರ ಮಾವಟಿಗನನ್ನು ಅವನ ಅನುಯಾಯಿಗಳನ್ನೂ ಲೀಲೆಯಿಂದಲೇ ಮರ್ದಿಸಿದ.

ವಿ. : ೧. ಆ ಆನೆ ಹಾಗೂ ಅದರ ಮಾವಟಿಗ ಇಬ್ಬರಿಗೂ ಶಿವನ ವರ ಇದ್ದಿತು ಎಂಬ ವಿಶೇಷಾಂಶ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ (೧೩/೧೧೨-೧೧೫)[೧].

೨. ಜಲದಲ್ಲಿದ್ದ ಕಾಲಿಯನನ್ನು ಮರ್ದಿಸಿ ಕಾಲಿಯಮರ್ದನನಾದ ಶ್ರೀಕೃಷ್ಣ ಇಲ್ಲಿ ನೆಲದಲ್ಲಿದ್ದ ಗಜವನ್ನು ಮರ್ದಿಸಿ ಗಜಮರ್ದನನೂ ಆದ ಎಂಬುದು ಇಲ್ಲಿಯ ಭಾವ.

### ಶ್ರೀಕೃಷ್ಣನ ಪಾದಾಘಾತಕ್ಕೆ ಅಸುನೀಗಿದ ಆನೆ

**ಪಾದಪ್ರಹಾರವಿವಶಃ ಕಿಲ ವಾರಣೋಽಸೌ**
**ಕುರ್ವನ್ ಪಪಾತ ಭುವಿ ನಾಮ ಗುಣಾನುಕೂಲಮ್ ।**
**ತಸ್ಯಾಂಘ್ರಿಸಂಗಿಸಹಜಾಂಕುಶರಮ್ಯರೇಖಾ-**
**ಶಂಕೀವ ಕಂಪಿತಮಹೀಧರಭೂಪ್ರದೇಶಃ ॥ ೩೭ ॥**

ಶ್ರೀಕೃಷ್ಣನ ಪಾದದ ಹೊಡೆತಕ್ಕೆ ಮೈಮರೆತ ಆ ಆನೆಯು ಅವನ ಪಾದದಲ್ಲಿದ್ದ ಸಹಜವಾದ ಅಂಕುಶದ ರಮ್ಯ ರೇಖೆಗಳಿಗೆ ಅಂಜಿತೋ ಎಂಬಂತೆ, ತನ್ನ ಹೆಸರನ್ನು ನಡತೆಗೆ ಅನುಗುಣವಾಗಿಸುತ್ತ ಪರ್ವತಗಳಿಂದ ಒಡಗೂಡಿದ ಭೂಪ್ರದೇಶವನ್ನು ಪೀಡಿಸಿ ಭೂಮಿಯ ಮೇಲೆ ಬಿದ್ದಿತು.

ವಿ. : ೧.ಶ್ರೀಕೃಷ್ಣನ ಪಾದದಲ್ಲಿ ಅಂಕುಶರೇಖೆ ಇರುವುದು ಶ್ರೀಮದ್ಭಾಗವತಾದಿಗಳಲ್ಲಿ ಪ್ರಸಿದ್ಧ: **ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।** (೩/೨೮/೨೧)

---

೧. ಆಯನ್ ಜಗದ್ಗುರುತಮೋ ಬಲಿನಂ ಗಜೇಂದ್ರಂ ರುದ್ರಪ್ರಸಾದಪರಿರಕ್ಷಿತಮಾಶ್ವಪಶ್ಯತ್ ।
ದುಷ್ಟೋರುರಂಗಮುಖಸಂಸ್ಥಿತಮೀಕ್ಷ್ಯ ಚೈಭ್ಯಂ ಪಾಪಾಪಯಾಹಿ ನಚಿರಾದಿತಿ ವಾಚಮೂಚೇ ॥
ಕ್ಷಿಪ್ತಃ ಸ ಈಶ್ವರತಮೇನ ಗಿರೀಶಲಬ್ಧಾದ್ದೃಪ್ತೋ ವರಾಜ್ಜಗತಿ ಸರ್ವಜನೈರವಧ್ಯಃ ।
ನಾಗಂ ತ್ವವಧ್ಯಮಭಿಯಾಪಯತೇ ತತೋಽಗ್ರೇ ಪಾಪೋ ದುರಂತಮಹಿಮಂ ಪ್ರತಿ ವಾಸುದೇವಮ್ ॥
ನಾಗಂ ಸಸಾದಿನಮವಧ್ಯಮಸೌ ನಿಹತ್ಯ ಸ್ಕಂಧೇ ವಿಷಾಣಮವಸಜ್ಜ್ಯ ಸಹಾಗ್ರಜೇನ ।
ನಾಗೇಂದ್ರಸಾಂದ್ರಮದಬಿಂದುಭಿರಂಚಿತಾಂಗಃ ಪೂರ್ಣಾತ್ಮಶಕ್ತಿರಮಲಃ ಪ್ರವಿವೇಶ ರಂಗಮ್ ॥

೨. ಆನೆಗೆ ಅಂಕುಶದ ನಿಯಂತ್ರಣ ಎಂಬುದು ಸುಪ್ರಸಿದ್ಧ; ಇದರಿಂದಾಗಿ ಶ್ರೀಕೃಷ್ಣನ ಪಾದದಲ್ಲಿನ ಅಂಕುಶದ ದರ್ಶನ ಅದಕ್ಕೆ ಭೀತಿ ಹುಟ್ಟಿಸಿತು ಎಂದು ಭಾವ. ಆನೆಯದು ವರಬಲದ ಪರಾಕ್ರಮವಾದರೆ, ಅದನ್ನು ತನ್ನ ಪಾದದಲ್ಲಿನ ಅಂಕುಶರೇಖೆಯ ದರ್ಶನಮಾತ್ರದಿಂದಲೇ ಮಣಿಸಿದ ಶ್ರೀಕೃಷ್ಣನ ವಿಜಯ ಸ್ವಾಭಾವಿಕವಾಗಿದ್ದಿತು ಎಂಬುದು ವಿಶೇಷ.

೩. ಹೀಗೆ ಭೂಮಿಯನ್ನು ನಡುಗಿಸಿದ ಆ ಕುವಲಯಾಪೀಡವು ಭೂಮಿಗೆ ಒರಗಿದ್ದು ಭೂಮಿಯನ್ನು ಪೀಡಿಸಿದ ಕಂಸನು ಭೂಮಿಗೆ ಒರಗುವುದಕ್ಕೆ ಮುನ್ಸೂಚನೆಯಾಯಿತು ಎಂಬ ಧ್ವನಿಯನ್ನೂ ಇಲ್ಲಿ ಗುರುತಿಸಬಹುದು.

### ನರಸಿಂಹನಂತೆ ಕಂಗೊಳಿಸಿದ ಶ್ರೀಕೃಷ್ಣ

**ಅಂಸಸ್ಥದಂತಪರಿಶೋಭಿತರಕ್ತಬಿಂದು-**
**ಸಂಸಿಕ್ತನಿರ್ಮಲತನುರ್ಹರಿರಾಬಭಾಸೇ ।**
**ರಕ್ಷೋವಿದಾರಣವಿಲಾಸಧೃತಾಂತ್ರಮಾಲಾ-**
**ವಕ್ಷಃಸ್ಥಲಾದ್ಭುತನೃಸಿಂಹ ಇವ ದ್ವಿಪಾರಿಃ ॥ ೩೮ ॥**

ಆನೆಯನ್ನು ಕೊಂದ, ತನ್ನ ಹೆಗಲ ಮೇಲಿದ್ದ ದಂತಗಳಿಂದ ವಸರಿದ ಬಹಳವಾಗಿ ಶೋಭಿಸುವ ರಕ್ತದ ಹನಿಗಳಿಂದ ಸಿಂಪಡಿಸಲ್ಪಟ್ಟ ನಿರ್ಮಲದೇಹದ ಶ್ರೀಕೃಷ್ಣನು ರಾಕ್ಷಸನಾದ ಹಿರಣ್ಯಕಶಿಪುವನ್ನು ಸೀಳಿ, ಲೀಲೆಗೆಂದು ಎದೆಯ ಮೇಲೆ ಕರುಳಮಾಲೆಯನ್ನು ಧರಿಸಿದ ಅದ್ಭುತನರಸಿಂಹನಂತೆ ಬಹಳವಾಗಿ ಕಂಗೊಳಿಸಿದ.

ವಿ. : ೧. ಇಲ್ಲಿ ಕುವಲಯಾಪೀಡವನ್ನು ಕೊಂದ ಶ್ರೀಕೃಷ್ಣನನ್ನು ಹಿರಣ್ಯಕಶಿಪುವನ್ನು ಕೊಂದ ನರಸಿಂಹನಿಗೆ ಹೋಲಿಸಿರುವರು. ಶ್ರೀಕೃಷ್ಣನ ಮೈಮೇಲೆ ಆನೆಯ ದಂತದಿಂದ ಸುರಿದ ರಕ್ತದ ಹನಿಗಳು ತುಂಬಿದ್ದಂತೆ ನರಸಿಂಹನ ಮೈಮೇಲೆ ಹಿರಣ್ಯಕಶಿಪುವನ್ನು ಸೀಳಿ ಧರಿಸಿದ ಕರುಳಗಳ ಮಾಲೆ ಶೋಭಿಸುತ್ತಿತ್ತು ಎಂದಿರುವರು; **ಆಂತ್ರಮಾಲಾ** – ಕರುಳಮಾಲೆ; **ದ್ವಿಪ** – ಆನೆ.

೨. ಕುವಲಯಾಪೀಡದ ಸಂಹಾರ ನರಸಿಂಹರೂಪದಿಂದ ಮಾಡಿದ ಹಿರಣ್ಯಕಶಿಪುವಿನ ಸಂಹಾರವನ್ನು ಜ್ಞಾಪಿಸುವಂತಿತ್ತು ಎಂಬುದು ಇಲ್ಲಿಯ ಭಾವ.

೩. ಹಿರಣ್ಯಕಶಿಪುವು ಭೂಮಂಡಲಕ್ಕೆ ಪೀಡಕನಾಗಿದ್ದಂತೆ ಈ ಕುವಲಯಾಪೀಡವೆಂಬ ಆನೆಯು ಭೂವಲಯಕ್ಕೆ ಪೀಡಕವಾಗಿದ್ದಿತು. ಅವನು ನರಸಿಂಹನಿಂದ ಹತನಾದರೆ, ಈ ಆನೆಯು ನರಸಿಂಹನಾದ ಶ್ರೀಕೃಷ್ಣನಿಂದ ಹತವಾಯಿತು ಎಂದರ್ಥ.

೪. ದುಃಶಾಸನನನ್ನು ಸಂಹರಿಸಿದ ಭೀಮಸೇನನೂ ಸಹ ಹೀಗೆ ನರಸಿಂಹನಂತೆ ಕಂಗೊಳಿಸಿದ ವಿವರ ಮಹಾಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಸೂಚಿತ; **'ವೀರನರಹರಿಯ ಲೀಲೆಯ ತೋರಿದ'** (ಶ್ರೀಶ್ರೀಪಾದರಾಜರು – ಮಧ್ವನಾಮ).

ಏಕದಂತನಂತೆ ಕಂಗೊಳಿಸಿದ ಶ್ರೀಕೃಷ್ಣಬಲರಾಮರು

ಲೋಕದ್ವಯಸುಖವ್ಯೂಹಪ್ರತ್ಯೂಹೌ ದ್ವಿಷತಾಮಿವ ।
ಏಕೈಕದಂತಾವಶ್ರಾಂತೌ ರಂಗಂ[೧] ವಿವಿಶತುರ್ವಿಭೂ[೨] ॥ ೩೯ ॥

ಶತ್ರುಗಳ ಪಾಲಿಗೆ ಎರಡೂ ಲೋಕಗಳಲ್ಲಿನ ಸುಖದ ರಾಶಿಗೆ ವಿಘ್ನಗಳೋ ಎಂಬಂತೆ ಒಂದೊಂದು ದಂತವನ್ನು ಕೈಯಲ್ಲಿ ಹಿಡಿದ, ಬಳಲಿಕೆ ಇರದ ಸಮರ್ಥರಾದ ಆ ಶ್ರೀಕೃಷ್ಣಬಲರಾಮರು ರಂಗವನ್ನು ಪ್ರವೇಶಿಸಿದರು.

ವಿ. : ೧.[೩] ಗಣೇಶ ಏಕದಂತ ಎಂದು ಪ್ರಸಿದ್ಧ; ಕೈಯಲ್ಲಿ ಒಂದೊಂದು ದಂತಗಳನ್ನು ಹಿಡಿದಿದ್ದ ಕೃಷ್ಣ ಬಲರಾಮರು ಕಂಸನ ಪಾಲಿಗೆ ವಿಘ್ನದಾಯಕರಾದ ಇಬ್ಬರು ಗಣೇಶರಂತೆ ಶೋಭಿಸುತ್ತಿದ್ದರು ಎಂಬ ಇಲ್ಲಿಯ ಧ್ವನಿ ಅತ್ಯಂತ ರೋಚಕವಾದುದು; ಪ್ರತ್ಯೂಹ – ವಿಘ್ನ.

೨. ಗಣೇಶ ದುಷ್ಟರಿಗೆ ವಿಘ್ನಪ್ರದಾಯಕ; ಶಿಷ್ಟರಿಗೆ ವಿಘ್ನವಿನಾಶಕ ಎಂಬ ಮಹತ್ತ್ವದ[೪] ಹಿನ್ನೆಲೆಯಲ್ಲಿ ಈ ವರ್ಣನೆ ಬಂದಿದೆ.

೩. ಹಾಗೆ ಬಲರಾಮನ ಸಮೇತ ಆ ರಂಗದೊಳಗೆ ಪ್ರವೇಶಿಸಿದ ಶ್ರೀಕೃಷ್ಣನು ಮಲ್ಲರಿಗೆ ವಜ್ರವಾಗಿ, ಮನುಷ್ಯರಿಗೆ ಚಕ್ರವರ್ತಿಯಾಗಿ, ನಾರಿಯರಿಗೆ ರೂಪತಳೆದು ಬಂದ ಮನ್ಮಥನಾಗಿ, ಗೋಪರಿಗೆ ಬಂಧುವಾಗಿ, ದುಷ್ಟರಾಜರಿಗೆ ಶಾಸಕನಾಗಿ, ತನ್ನ ತಂದೆತಾಯಿಗಳಿಗೆ ಮಗುವಾಗಿ, ಕಂಸನಿಗೆ ಬ್ರಹ್ಮ ವಿಧಿಸಿದ ಮೃತ್ಯುವಾಗಿ, ಯೋಗಿಗಳಿಗೆ ಪರತತ್ತ್ವವಾಗಿ, ಯಾದವರಿಗೆ ಗತಿಯಾಗಿ ಸದಾ ಕಂಗೊಳಿಸಿದ ಎಂಬ ಅಪೂರ್ವವರ್ಣನೆ ಶ್ರೀಮದ್ಭಾಗವತದಲ್ಲಿದೆ[೫].

---

೧. ಅಥ ಕೃಷ್ಣಶ್ಚ ರಾಮಶ್ಚ ಕೃತಶೌಚೌ ಪರಂತಪೌ ।
ಮಲ್ಲದುಂದುಭಿನಿರ್ಘೋಷಂ ಶ್ರುತ್ವಾ ದ್ರಷ್ಟುಮುಪೇಯತುಃ ॥ – ಭಾಗ (೧೦/೪೦/೧)

೨. ನಿರೀಕ್ಷ್ಯ ತಾವುತ್ತಮಪುರುಷೌ ಜನಾ ಅವಸ್ಥಿತಾ ನಾಗರರಾಷ್ಟ್ರಕಾ ನೃಪ ।
ಪ್ರಹರ್ಷವೇಗೋತ್ಕಲಿತೇಕ್ಷಣಾನನಾಃ ಪಪುರ್ನ ತೃಪ್ತಾ ನಯನೈಸ್ತದಾನನಮ್ ॥
ಪಿಬಂತ ಇವ ಚಕ್ಷುರ್ಭ್ಯಾಂ ಲಿಹಂತ ಇವ ಜಿಹ್ವಯಾ ।
ಜಿಘ್ರಂತ ಇವ ನಾಸಾಭ್ಯಾಂ ಶ್ಲಿಷ್ಯಂತ ಇವ ಬಾಹುಭಿಃ ॥ –ಭಾಗ.(೧೦/೪೧/೨೦,೨೧)

೩.. "ಅಪ್ಯೇಕದಂತಹೇರಂಬಲಂಬೋದರಗಜಾನನಾಃ"(ಅಮರಕೋಶ) ಇತಿ ವಿನಾಯಕಸ್ಯಾಪ್ಯೇಕದಂತತ್ವಾತ್ ತಥಾ ಭೂತಾವಿವ ದ್ವೌ ವಿನಾಯಕಾವಿವ ಸ್ಥಿತಾವಿತಿ ಭಾವಃ। –ವ್ಯಾ.

೪. ದುಷ್ಟಾನಾಂ ವಿಘ್ನಕರ್ತಾ ಸುಚರಿತಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿ ಗೌರೀತನೂಜಃ ॥ –ತೀರ್ಥಪ್ರಬಂಧ (೧/೮೩)

೫. ಮಲ್ಲಾನಾಮಶನಿರ್ನೃಣಾಂ ನರವರಃ ಸ್ತ್ರೀಣಾಂ ಸ್ಮರೋ ಮೂರ್ತಿಮಾನ್
ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭೃತಾಂ ಶಾಸ್ತಾ ಸ್ವಪಿತ್ರೋಃ ಶಿಶುಃ ।
ಮೃತ್ಯುರ್ಭೋಜಪತೇರ್ವಿರಾಡವಿದುಷಾಂ ತತ್ತ್ವಂ ಪರಂ ಯೋಗಿನಾಂ

## ಮಲ್ಲರೊಂದಿಗೆ ಶ್ರೀಕೃಷ್ಣಬಲರಾಮರ ಯುದ್ಧ

**ತತಃ ಪ್ರವವೃತೇ ಯುದ್ಧಂ ಮಲ್ಲಾಭ್ಯಾಂ ರಾಮಕೃಷ್ಣಯೋಃ ।**
**ಗಜಾಭ್ಯಾಮಿವ ಮತ್ತಾಭ್ಯಾಂ ಖ್ಯಾತಯೋಃ ಸಿಂಹಯೋಸ್ತಯೋಃ ॥ ೪೦ ॥**

ಬಳಿಕ ವಿಖ್ಯಾತರಾದ ಆ ಬಲರಾಮ ಮತ್ತು ಕೃಷ್ಣರಿಗೆ ಎರಡು ಮದಿಸಿದ ಗಜಗಳೊಂದಿಗೆ ಎರಡು ಸಿಂಹಗಳಿಗೆ ಹೇಗೋ ಹಾಗೆ, ಆ ಇಬ್ಬರು ಮಲ್ಲರೊಂದಿಗೆ ಯುದ್ಧವು ನಡೆಯಿತು.

ವಿ. : ೧. ಇಲ್ಲಿ ಬಲರಾಮಕೃಷ್ಣರನ್ನು ಸಿಂಹಗಳಿಗೂ ಚಾಣೂರಮುಷ್ಟಿಕರನ್ನು ಆನೆಗಳಿಗೂ ಹೋಲಿಸಲಾಗಿದೆ; ಅವರಿಬ್ಬರ ಮುಂದೆ ಆ ಮಲ್ಲರು ಅದೆಷ್ಟು ದುರ್ಬಲರು ಎಂಬ ಧ್ವನಿಯೂ ಈ ಉಪಮೆಯಲ್ಲಿದೆ.

೨. ಅಗಷ್ಟೇ ಕುವಲಯಾಪೀಡ ಆನೆಯನ್ನು ಸಂಹರಿಸಿದ ಕೃಷ್ಣನು ಈ ಮಲ್ಲರೂಪದ ಗಜಗಳನ್ನು ಸಂಹರಿಸುವುದು ಖಚಿತ ಎಂಬ ಸೂಚನೆಯನ್ನು ಸಿಂಹದ ಉಪಮೆಯ ಮೂಲಕ ನೀಡಿರುವರು.

**ಸ್ವಭಕ್ತಿರಿವ ಸಂಸಾರಂ ಕೃಷ್ಣಶ್ಚಾಣೂರಮಭ್ಯಗಾತ್ ।**
**ತಜ್ಜ್ಞಾನಮಿವ ಪಾಪೌಘಂ ಮುಷ್ಟಿಕಂ ರೋಹಿಣೀಸುತಃ ॥ ೪೧ ॥**

ಶ್ರೀಕೃಷ್ಣನು ತನ್ನ ಭಕ್ತಿಯು ಸಂಸಾರವನ್ನು ಹೇಗೋ ಹಾಗೆ ಚಾಣೂರನನ್ನು ಎದುರಿಸಿದ; ಅವನ ಜ್ಞಾನವು ಪಾಪರಾಶಿಯನ್ನೆಂಬಂತೆ ಬಲರಾಮನು ಮುಷ್ಟಿಕನನ್ನು ಎದುರಿಸಿದ.

ವಿ. : ಇಲ್ಲಿ ಭಕ್ತಿಯು ಸಂಸಾರದ ಪರಿಹಾರಕ್ಕೂ, ಜ್ಞಾನವು ಪಾಪರಾಶಿಯನ್ನು ತಡೆಯುವುದಕ್ಕೂ ಸಾಧನ ಎಂಬ ಪ್ರಮೇಯ ನಿರೂಪಿತವಾಗಿದೆ. [೧]ಭಕ್ತಿಯು ಸಂಸಾರಮೋಚಕ; ಆದ್ದರಿಂದ ಮುಕ್ತಿನೀಡುವ ಶ್ರೀಕೃಷ್ಣನನ್ನು ಭಕ್ತಿಗೂ, ಜ್ಞಾನವು ಪಾಪನಾಶಕ; ಆದ್ದರಿಂದ ಬಲರಾಮನನ್ನು ಜ್ಞಾನಕ್ಕೂ ಹೋಲಿಸಿರುವುದು ಅತ್ಯಂತ ಔಚಿತ್ಯಪೂರ್ಣವಾದುದು.

**ಅಪಿ ವಿವಿಧತದೀಯಾಭ್ಯಾಸಕೌಶಲ್ಯಮಾಸೀತ್**
**ಫಣಿಪತಿಯದುಪತ್ಯೋರಗ್ರತೋಽವ್ಯಗ್ರಮತ್ಯೋಃ ।**
**ಗತಫಲಮತಿಯತ್ನಾಭ್ಯಸ್ತವಿದ್ಯಾಽನವಸ್ಥಾ**
**ಫಲತಿ ಸಹಜತೇಜೋಬುದ್ಧಿಭಾಜಾಂ ಕಿಮಗ್ರೇ ॥ ೪೨ ॥**

ಚಾಣೂರಮುಷ್ಟಿಕರ ಬಗೆಬಗೆಯ ಅಭ್ಯಾಸ ಹಾಗೂ ನೈಪುಣ್ಯಗಳು ಸಹ ಅನುದ್ವಿಗ್ನಬುದ್ಧಿಯ ಆ ಕೃಷ್ಣಬಲರಾಮರ ಮುಂದೆ ನಿಷ್ಫಲವಾದವು; ಬಹಳ ಪ್ರಯತ್ನದಿಂದ ಸಂಪಾದಿತವಾದ

---

ವೃಷ್ಣೀನಾಂ ಚ ಗತಿಃ ಸದೈವ ಶುಶುಭೇ ರಂಗೇಽಚ್ಯುತಃ ಸಾಗ್ರಜಃ ॥ -ಭಾಗ.(೧೦/೪೧/೧೭)

೧. ''ಮಯಿ ಭಕ್ತಿರ್ಹಿ ಲೋಕಾನಾಮಮೃತತ್ವಾಯ ಕಲ್ಪತೇ'' ।(ಭಾಗ.೧೦/೮೨/೪೪) ''ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽತಥಾ'' (ಗೀತಾ ೪/೩೭)ಇತ್ಯಾದ್ಯುಕ್ತಮಾಹಾತ್ಮ್ಯಮ್ । ಏತಾದೃಶಸ್ಯ ಕೃಷ್ಣಸ್ಯ ನೇಮೌ ಪ್ರತಿಭಟಾವಿತಿ ಚ ಖ್ಯಾಪಯಿತುಮೇವಂ ದೃಷ್ಟಾಂತೋಕ್ತಿಃ । -ವ್ಯಾ.

ವ್ಯವಸ್ಥಿತವಲ್ಲದ ವಿದ್ಯೆಯು ಸಹಜ ತೇಜಸ್ಸು ಹಾಗೂ ಬುದ್ಧಿಗಳನ್ನು ಹೊಂದಿದವರ ಮುಂದೆ ಫಲಿಸೀತೆ?

ವಿ. : ೧. [1]ಕೇವಲ ಪ್ರಯತ್ನದಿಂದ ಲಭಿಸಿದ ವಿದ್ಯೆಯು ಸಹಜ ಪ್ರತಿಭೆಯ ಮುಂದೆ ಯಶ ಗಳಿಸದು ಎಂದರ್ಥ; ಪ್ರಯತ್ನಪೂರ್ವಕ ಒದಗಿದ ವಿದ್ಯೆಯು ವಿಸ್ಮರಣೆ ಮೊದಲಾದ ದೋಷಗಳಿಗೆ ಒಳಗಾಗುವುದು; ಆದರೆ ಸಹಜ ಪ್ರತಿಭೆಗೆ ಅಂತಹ ಅಡೆತಡೆಗಳು ಇಲ್ಲದಿರುವುದರಿಂದ ಅಪರಿಮಿತವೆನ್ನಿಸುವ ಅದು ನಿಶ್ಚಿತವಾಗಿಯೂ ಗೆಲ್ಲುವುದು ಎಂದರ್ಥ.

೨. ಭೀಮನದು ಸಹಜ ಬಲ; ದುರ್ಯೋಧನನದು ಅಭ್ಯಾಸದ ಬಲ; ಅದರಿಂದಾಗಿಯೇ ಭೀಮನಿಂದ ದುರ್ಯೋಧನ ನೆಲಕಚ್ಚಿದ ಎಂಬ [2]ಮಹಾಭಾರತದ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು; ಶ್ರೀವಾದಿರಾಜಸ್ವಾಮಿಗಳ ಈ ಮಾತು ಅದಕ್ಕೆ ವಿವರಣೆಯಂತಿದೆ ಎಂಬುದು ಗಮನಾರ್ಹ.

### ಶ್ರೀಕೃಷ್ಣ-ಬಲರಾಮರ ಮುಂದೆ ಚಾಣೂರ-ಮುಷ್ಟಿಕರ ವ್ಯರ್ಥಪ್ರಯತ್ನ

**ಅಂಗಾಲಿಂಗನತತ್ಪರಸ್ಯ ಚರಣಸ್ಪರ್ಶೋದ್ಯತಸ್ಯಾಪ್ಯಲಂ**
**ನಮ್ರಸ್ಯ ಸ್ವಮುಪೇಯುಷೋಽಪಿ ಪರಿತಶ್ಚಾಣೂರನಾಮ್ನೋ ವಶೇ।**
**ಕೃಷ್ಣೋಽಭೂನ್ನ ಚ ಮುಷ್ಟಿಕಸ್ಯ ಸಮರೇ ಸಂಕರ್ಷಣಃ ಸತ್ಕೃತಿಂ**
**ದುಷ್ಟೈರಾಚರಿತಾಂ ಕಿಮತ್ರ ಮತಿಮಾನ್ ಮೃತ್ಯುಪ್ರದಾಂ ವಿಶ್ವಸೇತ್ ॥ ೪೩ ॥**

ಯುದ್ಧದಲ್ಲಿ ತನ್ನ ಶರೀರವನ್ನು ತಬ್ಬಲು ತೊಡಗಿದರೂ, ತನ್ನ ಪಾದಗಳನ್ನು ಹಿಡಿಯಲು ಬಹಳವಾಗಿ ಉದ್ಯುಕ್ತನಾದರೂ, ಬಹಳವಾಗಿ ಬಾಗಿದರೂ, ಸುತ್ತಲೂ ತನ್ನ ಬಳಿ ಸಾರಿದರೂ ಚಾಣೂರ ಎಂಬವನಿಗೆ ಶ್ರೀಕೃಷ್ಣನು ವಶನಾಗಲಿಲ್ಲ. ಅದರಂತೆ ಬಲರಾಮನೂ ಸಹ ಮುಷ್ಟಿಕನ ವಶನಾಗಲಿಲ್ಲ. ದುಷ್ಟರು ಕಪಟದಿಂದ ಮಾಡುವ, ಸಾವಿಗೆ ಕಾರಣವಾಗುವ ಸತ್ಕಾರವನ್ನು ಬುದ್ಧಿವಂತನಾದವನು ಲೋಕದಲ್ಲಿ ನಂಬಿಯಾನೇ?

ವಿ. : ೧. ಮಲ್ಲಯುದ್ಧದಲ್ಲಿ ಪ್ರತಿಮಲ್ಲನಾದವನು ತನ್ನನ್ನು ಎದುರಿಸಿಬಂದವನನ್ನು ತಬ್ಬಿ ಹಿಡಿಯುವುದು, ಬೀಳಿಸಲೆಂದು ಪಾದಗಳನ್ನು ಹಿಡಿಯುವುದು, ಅದಕ್ಕಾಗಿ ಬಾಗುವುದು ಮೊದಲಾದವುಗಳನ್ನು ಮಾಡುವುದು ಸಹಜ. ಅದರಂತೆ ಇಲ್ಲಿ ಚಾಣೂರ ಕೃಷ್ಣನ ಮುಂದೆ ಪ್ರದಕ್ಷಿಣೆ ಮಾಡಿದ. ಮೇಲ್ನೋಟಕ್ಕೆ ಆ ಕಾರ್ಯ ಅವನು ಕೃಷ್ಣನನ್ನು ತಬ್ಬಲೆಂದು, ಪಾದಗಳನ್ನು ಸ್ಪರ್ಶಿಸಲೆಂದು ನಮಸ್ಕರಿಸಲೆಂದು ಯತ್ನಿಸುತ್ತಿರುವಂತೆ ಕಾಣುತ್ತಿತ್ತು. ಆದರೆ ಅದು ಕೃಷ್ಣನ

---

೧. ಅಭ್ಯಸ್ತವಿದ್ಯಾಯಾಃ ವಿಸ್ಮರಣಸಂಭವಾತ್ ಪರಿಮಿತತ್ವಾಚ್ಚ । ಸ್ವಾಭಾವಿಕವಿದ್ಯಾಯಾಃ ಅಪರಿಮಿತತ್ವಾದ್ವಿಸ್ಮರಣಾಸಂಭವಾಚ್ಚೇತಿ ಭಾವಃ। –ವ್ಯಾ.

೨. ಆಹ ಶಿಕ್ಷಾಮಪ್ಯನೂನಾಂ ಯತ್ನಂ ದುರ್ಯೋಧನೇಽಧಿಕಮ್ ।
ನ ಹಿ ಭೀಮೋಽತಿಪ್ರಯತ್ನಂ ಕುರ್ಯಾದಿತಿ ಗುಣೋ ಹ್ಯಯಮ್ ॥ – ಮ.ಭಾ.ತಾ.ನಿ.(೨೮/೬೬)

ಒಲುಮೆಗೆ ಕಾರಣವಾಗದೆ, ನಿಗ್ರಹಕ್ಕೆ ಕಾರಣವಾಯಿತು ಎಂಬಲ್ಲಿನ ಶಾಸ್ತ್ರಚಿಂತನೆ ಅತ್ಯಪೂರ್ವವಾದುದು.

೨. ಇದರಿಂದ ಸ್ವರೂಪತಃ ಯೋಗ್ಯರಲ್ಲದವರು ಕೃಷ್ಣನಿಗೆ ಮಾಡುವ [೧]ನಮಸ್ಕಾರಾದಿ ಸತ್ಕಾರ್ಯಗಳು ಸಹ ಸದ್ಗತಿಗೆ ಬದಲಾಗಿ ದುರ್ಗತಿಗೇ ಕಾರಣವಾಗುವವು ಎಂಬ ತತ್ತ್ವ ನಿರೂಪಿತ. ಮೂಲತಃ ಇಂತಹ ಕಪಟಿಗಳದು ಕೊಲ್ಲುವ ದುರುದ್ದೇಶವಾಗಿರುವುದೇ ಹೊರತು ಆದರಿಸುವ ಸದುದ್ದೇಶವಾಗಿರುವುದಿಲ್ಲ ಎಂಬುದೇ ಇದಕ್ಕೆ ಕಾರಣ; **ಉದರವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ** (ಶ್ರೀಪುರಂದರದಾಸರು)ಎಂಬ ದಾಸವಾಣಿಯು ಇಂತಹ ಡಂಭಾಚಾರವನ್ನು ಕುರಿತ ಟೀಕೆಯಾಗಿದೆ ಎಂದು ತಿಳಿಯಬಹುದು.

೩. ಪೂತನಿಯು ಶ್ರೀಕೃಷ್ಣನಿಗೆ ಸ್ತನ್ಯಪ್ರಾಶನಮಾಡಿಸಿದ ಪ್ರಸಂಗವೂ ಸಹ ಇದೇ ರೀತಿಯ ದ್ವೇಷದ ಕಾರ್ಯವೇ ಆಗಿದ್ದಿತು ಎಂಬ ಹಿಂದಿನ [೨]ಉಲ್ಲೇಖವನ್ನು ಇಲ್ಲಿ ಗಮನಿಸಬಹುದು.

೪. ಶ್ರೀಕೃಷ್ಣನಿಗೆ ದುರ್ಯೋಧನ ಏರ್ಪಡಿಸಿದ್ದ ವೈಭವದ ಆತಿಥ್ಯವೂ ಸಹ ಈ ರೀತಿಯಲ್ಲಿ ದುರುದ್ದೇಶಪೂರ್ವಕವಾಗಿದ್ದರಿಂದ ಅದು ಕೃಷ್ಣನಿಗೆ ಮೆಚ್ಚಿಗೆಯಾಗದೆ, ದುರ್ಯೋಧನನ ದುರಂತಕ್ಕೆ ಕಾರಣವಾಯಿತು ಎಂದು ತಿಳಿಯಬೇಕು.

೫. ನಂಬದವನನ್ನು ನಂಬಕೂಡದು. ನಂಬಿದವನನ್ನೂ ಬಹಳ ನಂಬಕೂಡದು[೩] ಎಂಬುದು ಇಲ್ಲಿಯ ಸೂಚನೆ.

### ವಿಫಲವಾದ ಚಾಣೂರನ ಪ್ರಯತ್ನ

**ಅಶನಿಸಮಕಠೋರಮಲ್ಲಘಾತೋ**
**ಮೃದುನಿ ಹರೇರಫಲಃ ಕಲೇವರೇಽಭೂತ್ ।**
**ಮೃದುಸರಸಕವೇಃ ಪುರಃ ಕಿಮೀಡ್ಯಾ**
**ಕಠಿನಪದಪ್ರಿಯಕಾವ್ಯಕಾರಶೀಲಾ ॥ ೪೪ ॥**

ವಜ್ರಪ್ರಹಾರದಂತಹ ಕಠೋರವಾದ ಚಾಣೂರಮಲ್ಲನ ಪೆಟ್ಟು ಮೃದುವಾದ ಶ್ರೀಕೃಷ್ಣನ ದೇಹದ ಮೇಲೆ ವ್ಯರ್ಥವಾಯಿತು; ಮೃದುಶಬ್ದಗಳನ್ನು ಪ್ರಯೋಗಿಸುವ ಸರಸಕವಿಯ ಮುಂದೆ ಕರ್ಕಶಪದಗಳನ್ನು ಮೆಚ್ಚುವ ಕವಿಯ ರೀತಿಯು ಮನ್ನಣೆ ಪಡೆದೀತೇ?

---

೧. ದುಷ್ಟೈರ್ವಂಚನಯಾ ಪರಾಘಾತಕೈರಾಚರಿತಾಮ್ । ಅತ ಏವ ಮೃತ್ಯುಪ್ರದಾಂ ಸತ್ಕೃತಿಮ್ ಆಲಿಂಗನ-ಭೋಜನಸತ್ಕಾರಂ ಅತ್ರ ಲೋಕೇ ಮತಿಮಾನ್ ಬುದ್ಧಿಮಾನ್ ವಿಶ್ವಸೇತ್ ಕಿಮ್ । ನ ವಿಶ್ವಸೇದಿತ್ಯರ್ಥಃ । -ವ್ಯಾ.

೨. ವಿದ್ವೇಷಮೂಲಸ್ಮರಣೇನ ತುಷ್ಟಿರಿತ್ಯಪ್ಯವದ್ಯಂ ನ ಜಹಾತಿ ಪಕ್ಷಃ ।
ಹಿಂಸಾರ್ಥಮಾಲಿಂಗಯತಸ್ತರಕ್ಷೋಃ ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ ॥ -ರು.ವಿ.(೨/೪೫)

೩. ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ । -ಹರಿವಂಶ(★★);ಭಾರತ (೫/೩೮/೯)

ವಿ. : ೧. [1]ವರಕವಿಗಳ ಮುಂದೆ ನರಕವಿಗಳ ವಿದ್ಯೆ ಶೋಭಿಸದಿರುವಂತೆ ಆ ಚಾಣೂರನ ಕೌಶಲ ಶ್ರೀಕೃಷ್ಣನ ಮುಂದೆ ವ್ಯರ್ಥವಾಯಿತು ಎಂದರ್ಥ.

೨. ವರಕವಿಗಳ ಕೃತಿಯ ಸೊಬಗು ಎಂದೂ ಸಹ ಪ್ರಯತ್ನಪೂರ್ವಕ ರಚಿಸುವ ನರಕವಿಗಳ ಕೃತಿಗೆ ಲಭಿಸದು ಎಂಬ ಇಲ್ಲಿಯ ನಿರೂಪಣೆ ಅಪೂರ್ವವಾದುದು.

೩. ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು ಎಂಬ ಶ್ರೀಕನಕದಾಸರ ವಾಣಿ ಇದರ ವಿವರಣೆಯಂತಿದೆ; ಶ್ರೀಕನಕದಾಸರು ತಮ್ಮನ್ನು ಶ್ರೀವಾದಿರಾಜಸ್ವಾಮಿಗಳ ಶಿಷ್ಯರು ಎಂದು ಹೇಳಿಕೊಂಡಿರುವುದು ಇಲ್ಲಿ ಗಮನಾರ್ಹ: ತ್ರಿವಿಕ್ರಮದಾಸಸ್ಯ ದಾಸ (ಮೋಹನತರಂಗಿಣೀ); ಇದು ಅದಕ್ಕೆ ಗಮಕ ಎಂದು ತಿಳಿಯಬಹುದು.

೪. ಈ ಮೂಲಕವಾಗಿ ಶ್ರೀವಾದಿರಾಜರು ತಮ್ಮದು ಮೃದುಸರಸಕಾವ್ಯ; ಮಾಘ ಮೊದಲಾದವರದು ಕಠಿಣಪದಪ್ರಿಯಕಾವ್ಯ ಎಂಬ ಸೂಚನೆಯನ್ನು ಮಾಡಿರುವರು ಎಂದು ತಿಳಿಯಬಹುದು.

### ಶ್ರೀಕೃಷ್ಣನಿಂದ ಹತನಾದ ಚಾಣೂರ

**ತಲ್ಲಭ್ಯಾಂ ಜಯಕಾಮಿನೀಮಿವ ಲಷನ್ ಪಾದೌ ಗೃಹೀತ್ವಾ ರಿಪೋ-**
**ಸ್ತತ್ಕಾಲಾರ್ಹಮಿವ ಭ್ರಮಂ ಪ್ರತಿದಿಶನ್ ತಂ ಭ್ರಾಮಯಿತ್ವಾ ಮುಹುಃ।**
**ತನ್ಮೂರ್ಧಾನಮತಾಡಯತ್ ಕ್ಷಿತಿತಲೇ ದುಷ್ಟೇಭಪಂಚಾನನ-**
**ಸ್ತಸ್ಯಾಭ್ಯಾಸಸಮೇಧಿತಾಂ ಕಠಿನತಾಂ ಪಶ್ಯನ್ನಿವಾಂಗೇ ದ್ವಿಷಃ॥ ೪೫॥**

ದುಷ್ಟರೆಂಬ ಗಜಗಳಿಗೆ ಸಿಂಹದಂತಹ ಶ್ರೀಕೃಷ್ಣನು ಶತ್ರುವಾದ ಆ ಚಾಣೂರನಿಗೆ ಲಭಿಸುವ [2]ಜಯಲಕ್ಷ್ಮಿಯನ್ನು ಬಯಸಿಯೋ ಎಂಬಂತೆ ಅವನ ಎರಡೂ ಕಾಲುಗಳನ್ನು ಹಿಡಿದು, ಆ ಕಾಲಕ್ಕೆ ಉಚಿತವಾದ ಭ್ರಮೆಯನ್ನು ಹುಟ್ಟಿಸಲೆಂದು ಅವನನ್ನು ಮತ್ತೆ ಮತ್ತೆ ಗಿರಗಿರನೆ ತಿರುಗಿಸಿ, (ಮಲ್ಲಯುದ್ಧದ) ಅಭ್ಯಾಸದಿಂದ ವರ್ಧಿಸಿದಂತಹ ಅವನ ಕಾಠಿನ್ಯವನ್ನು ಅವನ ಅಂಗದಲ್ಲಿ ಕಾಣಲೋ ಎಂಬಂತೆ ಭೂಮಿಯ ಮೇಲೆ ಅವನ ತಲೆಯನ್ನು ಅಪ್ಪಳಿಸಿದ; (ಪಂಚಾನನ – ಸಿಂಹ; ಇಭ – ಆನೆ).

---

೧. ಅತ ಏವ ''ನೀರಸತರುರಿಹ ವಿಲಸತಿ ಪುರತಃ'' ಇತಿ ಮೃದುಕಾವ್ಯಕಾರಾಗ್ರೇ ''ಶುಷ್ಕೋ ವೃಕ್ಷಸ್ತಿಷ್ಠತ್ಯಗ್ರೇ'' ಇತಿ ಕಠೋರಕವಿತಾಂ ಸಂತೋ ನ ಮಾನಯಂತಿ। ನಿದರ್ಶನಾಲಂಕಾರಃ। –ವ್ಯಾ.

೨. ಕನ್ಯಾರ್ಥಿನೋ ಹಿ ಪಾದಗ್ರಹಣಾದಿನಾ ಸ್ನೇಹಂ ಸಂಘಟ್ಟಯಂತಿ । ತತ್ಕಾಲಾರ್ಹಂ ಅಸುರವಧಕಾಲಾರ್ಹಂ ಕನ್ಯಾನಯನಕಾಲಾರ್ಹಂ ಚ। .... ಕನ್ಯಾಪಕ್ಷೇ ದಾತುಃ ಚಿತ್ತವೈಕಲ್ಯಂ ಚ ಪ್ರತಿದಿಶನ್ನಿವ ...। –ವ್ಯಾ.

### ಕಾಯಿಯಂತೆ ಒಡೆದ ಚಾಣೂರನ ತಲೆ

ಬಾಲಮಲ್ಲಕರಚೂರ್ಣಿತಭಾಸ್ವ-
ನ್ನಾರಿಕೇಲತುಲನಾಂ ಸ ಜಗಾಮ ।
ಅನ್ಯಲೋಕಗಮನೋದ್ಯತಭೀತೋ-
ತ್ತಂಸಕಂಸಪರಿಪಂಥಿಸುಶಾಂತ್ಯೈ ॥ ೪೬ ॥

ಬೇರೆ ಲೋಕಕ್ಕೆ ತೆರಳಲು ಸಿದ್ಧನಾಗಿದ್ದ, ಬಹಳವಾಗಿ ಅಂಜಿದ್ದ, ಕಂಸನ ವಿಘ್ನ ಪರಿಹಾರಕ್ಕೆಂದು, ಬಾಲಜಟ್ಟಿಯಾದ ಶ್ರೀಕೃಷ್ಣನ ಕೈಯಿಂದ ಪುಡಿಯಾದ ಹೊಳೆಯುವ ತೆಂಗಿನಕಾಯಿಯ ಹೋಲಿಕೆಯನ್ನು ಆ ಚಾಣೂರನ ತಲೆಯು ಹೊಂದಿತು.

ವಿ. : ನಿರ್ವಿಘ್ನ ಪ್ರಯಾಣಕ್ಕೆಂದು ತೆಂಗಿನಕಾಯಿಯನ್ನು ಒಡೆಯುವಂತೆ [೧]ಕಂಸನ ಪರಲೋಕಯಾತ್ರೆಯು ನಿರ್ವಿಘ್ನವಾಗಿ ಸಾಗಲಿ ಎಂಬ ಭಾವನೆಯಿಂದಲೋ ಎಂಬಂತೆ ಚಾಣೂರ ಮಲ್ಲನ ತಲೆಯನ್ನು ಶ್ರೀಕೃಷ್ಣ ಪುಡಿಗೈದ ಎಂದರ್ಥ.

### ತನ್ನ ಸೋದರರ ಸಾವಿನ ಸೇಡು ತೀರಿಸಿದ ಕೃಷ್ಣ

ಪದೋಃ ಪ್ರಗೃಹ್ಯ ಪ್ರಸಭಂ ನಿಪಾತ್ಯ
ಸಂಚೂರ್ಣಯನ್ ಮಲ್ಲವರಂ ಧರಣ್ಯಾಮ್ ।
ಸಹೋದರೋನ್ಮೂಲನಕರ್ಮಯೋಗ್ಯ-
ಪ್ರತಿಕ್ರಿಯಾಂ ಪೌಢಪತಿಃ ಪ್ರಚಕ್ರೇ ॥ ೪೭ ॥

ಎರಡೂ ಕಾಲುಗಳನ್ನು ಹಿಡಿದು, ಬಲಾತ್ಕಾರದಿಂದ ನೆಲಕ್ಕೆ ಬೀಳಿಸಿ, ಆ ಮಹಾಜಟ್ಟಿಯನ್ನು ಪುಡಿಗೈಯುತ್ತಾ ಪೌಢರಿಗೆ ಒಡೆಯನಾದ ಶ್ರೀಕೃಷ್ಣನು ತನ್ನ ಸಹೋದರರನ್ನು ಕೊಂದುಹಾಕಿದ ಕಂಸನ ಕಾರ್ಯಕ್ಕೆ ಯೋಗ್ಯ ಪ್ರತಿಕ್ರಿಯೆಯನ್ನು ಮಾಡಿದ.

ವಿ. : ದೇವಕಿಯ ಮೊದಲ ಆರು ಮಕ್ಕಳನ್ನು ನಿಷ್ಕರುಣೆಯಿಂದ [೨]ಕೊಂದುಹಾಕಿದ ಕಂಸನ ಕಾರ್ಯಕ್ಕೆ ಪ್ರತ್ಯುತ್ತರದಂತೆ ಶ್ರೀಕೃಷ್ಣನ ಆ ಚಾಣೂರವಧೆಯ ಕಾರ್ಯವು ಶೋಭಿಸಿತು ಎಂದರ್ಥ.

---

೧. ಯಥಾ ರಾಜ್ಞೋ ಯಾತ್ರಾದೌ ವಿಘ್ನಪರಿಹಾರಾಯ ತದಾಶ್ರಿತಾ ಮಲ್ಲಾ ನಾರಿಕೇಲಫಲಾನಿ ಚೂರ್ಣಯಂತಿ ತಥೇತ್ಯರ್ಥಃ। -ವ್ಯಾ.

೨. ಯೇ ಸಾಧೂನ್ ನಿರಪರಾಧಾನ್ ವೃಥಾ ಬಾಧಂತೇ ತೇಷಾಂ ಹರಿರೇವ ಬಾಧಕೋ ಭವತೀತಿ ಭಾವಃ। -ವ್ಯಾ.

### ಬಲರಾಮನಿಂದ ಮುಷ್ಟಿಕನ ವಧೆ

ಬಲಸ್ಯ ತಲಘಾತೇನ ನಷ್ಟಂ ಮುಷ್ಟಿಕಮೀಕ್ಷಿತುಮ್ ।
ಹ್ರಿಯೇವ ಚೂರ್ಣಿತಂ ರೇಜೇ ಚಾಣೂರಸ್ಯ ಶಿರಃ ಪುರಾ ॥ ೪೮ ॥

ಬಲರಾಮನ ಅಂಗೈ ಪೆಟ್ಟಿನಿಂದ ನಾಶವಾಗುವ ಮುಷ್ಟಿಕನನ್ನು ಕಾಣಲು ನಾಚಿಕೆಯಿಂದೆಂಬಂತೆ ಆ ಮುನ್ನವೇ ಚಾಣೂರನ ತಲೆಯು ಪುಡಿಯಾಗಿ ಶೋಭಿಸಿತು.

### ಮುಷ್ಟಿಕನನ್ನು ಅಂಗೈಯಿಂದ ಕೊಲ್ಲಲು ಕಾರಣ

ನ ಮನ್ಮುಷ್ಟಿಪ್ರಹಾರಸ್ಯ ಲಕ್ಷ್ಯೋಽಯಮಿತಿ ಲಕ್ಷಯನ್ ।
ರಾಮಸ್ತಂ[1] ತಲಘಾತೇನ ಜಘಾನಾಪಾರ್ಥನಾಮಕಮ್ ॥ ೪೯ ॥

ಇವನು ನನ್ನ ಮುಷ್ಟಿಯ ಪೆಟ್ಟಿಗೆ ಯೋಗ್ಯನಲ್ಲ ಎಂದು ಭಾವಿಸಿಯೋ ಎಂಬಂತೆ ಬಲರಾಮನು ಅನುಚಿತವಾದ ಹೆಸರನ್ನು ಹೊಂದಿದ್ದ ಅವನನ್ನು ಅಂಗೈ ಪೆಟ್ಟಿನಿಂದಲೇ ಕೊಂದುಹಾಕಿದ.

ವಿ. : ೧. ಹೆಸರು ಮುಷ್ಟಿಕ ಎಂದಿದ್ದರೂ ಅವನಿಗೆ ಬಲರಾಮನ ಮುಷ್ಟಿಯ ಹೊಡೆತವನ್ನು ಸಹ ತಾಳಿಕೊಳ್ಳುವ ಯೋಗ್ಯತೆಯೂ ಇರಲಿಲ್ಲ ಎಂಬುದು ಇಲ್ಲಿಯ ಮುಖ್ಯಭಾವ.

೨. ಮುಷ್ಟಿಕಾಸುರನನ್ನು ಕೊಲ್ಲಲು ಬಲರಾಮನು ಮುಷ್ಟಿಪ್ರಹಾರವನ್ನೂ ಸಹ ಹಾಕುವ ಅಗತ್ಯ ಉಂಟಾಗಲಿಲ್ಲ ಎಂಬಲ್ಲಿ ಬಲರಾಮನ ಅಪಾರಸಾಮರ್ಥ್ಯದ ನಿರೂಪಣೆ ಬಂದಿದೆ.

### ಕಂಸನ ಕಂಠಶೋಷಣೆ

ಕೃಷ್ಣಂ ಮನ್ನಗರಾದ್ಬಹಿಷ್ಕುರುತ ತತ್ಸಖ್ಯೈಃ ಸಮಂ ಮದ್ಭಟಾ
ನಂದಂ[2] ಮಾರಯತಾಶು ಮರ್ದಯತ ತಂ ಹೀನೋಗ್ರಸೇನಂ ಭುವಿ ।
ಕಂಸೇನೇತ್ಥಮುದೀರಿತೇಽಖಿಲಖಲಶ್ರೇಣೀವನೋಗ್ರಾನಲ-
ಸ್ತಸ್ಯಾಜ್ಞಾಧರವಜ್ಜಗಾಮ ಸುಜನಸ್ತೋಮಾಂತಕಸ್ಯಾಂತಿಕಮ್ ॥ ೫೦ ॥

---

೧. ತತ್ರೈವ ಮುಷ್ಟಿಕಃ ಪೂರ್ವಂ ಸ್ವಮುಷ್ಟ್ಯಾಽಭಿಹತೇನ ವೈ ।
ಬಲಭದ್ರೇಣ ಬಲಿನಾ ತಲೇನಾಭಿಹತೋ ಭೃಶಮ್ ॥
ಪ್ರವೇಪಿತಃ ಸ ರುಧಿರಮುದ್ವಮನ್ ಮುಖತೋಽರ್ದಿತಃ ।
ವ್ಯಸುಃ ಪಪಾತೋರ್ವ್ಯುಪಸ್ಥೇ ವಾತಾಹತ ಇವಾಂಘ್ರಿಪಃ ॥ -ಭಾಗ.(೧೦/೪೨/೨೨.-೨೪)

೨. ಏವಂ ನಂದಂ ಮಾರಯತೇತ್ಯತ್ರ ಕಂಸಭಟಾನಾಂ ಪ್ರಥಮಮೇವ ಮೃತತ್ವಾತ್ ಭಟಾ ಇತಿ ಸ್ವಭಟಾನ್ ಪ್ರತಿ ಆದೇಶಾಸಂಭವಾತ್ ಭಟಾನಾಮಾನಂದಂ ಭಟಾನಂದಮಿತ್ಯೇವಾರ್ಥೋ ಲಭ್ಯತೇ । - ವ್ಯಾ.

''ಎಲೈ ನನ್ನ ಭಟರೇ ! ಕೃಷ್ಣನನ್ನು ಅವನ ಪಕ್ಷದವರೊಂದಿಗೆ ನನ್ನ ಪಟ್ಟಣದಿಂದ ಹೊರಹಾಕಿರಿ; ಕೂಡಲೇ ನಂದನನ್ನು ಕೊಂದುಹಾಕಿರಿ; ಭೂಮಿಯಲ್ಲಿ ಆ ಕೀಳು ಉಗ್ರಸೇನನನ್ನು ಮರ್ದಿಸಿರಿ'' ಕಂಸ ಹೀಗೆ ಹೇಳುತ್ತಿದ್ದಂತೆಯೇ ಸಕಲದುಷ್ಟ ಸಮುದಾಯವೆಂಬ ಕಾಡಿಗೆ ಭಯಂಕರ ಕಿಚ್ಚಿನಂತಹ ಶ್ರೀಕೃಷ್ಣನು ಆ ಸಜ್ಜನವೃಂದಕ್ಕೆ ಯಮಸದೃಶನಾಗಿದ್ದ ಕಂಸನ ಬಳಿಗೆ ಅವನ ಆಜ್ಞಾಧಾರಕನೆಂಬಂತೆ ತೆರಳಿದ.

ವಿ. : ೧. ಇಲ್ಲಿ ಕಂಸನ ನಗರ ಎಂದರೆ ಅವನ ದೇಹ; ನಂದ ಎಂದರೆ ಅವನ ಸಮೃದ್ಧಿ; ಹೀನೋಗ್ರಸೇನ ಎಂದರೆ ಉಗ್ರವಾದ ಸೇನೆಯಿಂದ ಹೀನನಾದ ಅವನೇ. ಒಟ್ಟಾಗಿ ಇದು ಕಂಸ ತನ್ನ ನಾಶಕ್ಕೆ ಕೃಷ್ಣನಿಗೆ ನೀಡಿದ ಆಹ್ವಾನವೇ ಆಗಿದ್ದಿತು. ಅದಕ್ಕೆಂದೇ ಕೃಷ್ಣ ಅದನ್ನು ನಡೆಸಲೆಂದು ತೆರಳಿದ ಎಂಬುದನ್ನು '**ಆಜ್ಞಾಧರವತ್**' ಎಂಬ ಮಾತಿನಿಂದ ತಿಳಿಸಿರುವರು; ಸ್ತೋಮ-ಸಮೂಹ.

೨. ಈ ಸರ್ಗದ ೬೧ನೆಯ ಶ್ಲೋಕದಲ್ಲಿ ಇದರ ಬಗ್ಗೆ ಹೆಚ್ಚಿನ ವಿವರಣೆ ಬಂದಿದೆ.

೩. ಕಂಸನ ಆದೇಶವು ಅವನಿಗೆ ಆತ್ಮಘಾತಕ ಪ್ರಯತ್ನವಾಯಿತು ಎಂದು ಭಾವ.

### ಶ್ರೀಕೃಷ್ಣನ ಮುಂದೆ ದಿಕ್ಕೆಟ್ಟ ಕಂಸನ ಸೇನೆ

**ತದಾ ಮದಾಂಧಾಃ ಪರಿವವ್ರುರೇನಂ**
**ಚಮೂಭಿರನ್ಯೇ ಚತುರಂಗಿಣೀಭಿಃ ।**
**ಯಥಾ ಪತಂಗಾ ಜ್ವಲನಂ ಜ್ವಲಂತಂ**
**[1]ತಮಃಸಮೂಹಸ್ತರಣಿಂ ಯಥಾ ವಾ ॥ ೫೧ ॥**

ಆಗ ಮದಾಂಧರಾದ ಇತರ ಕಂಸಭಟರು ಚತುರಂಗಗಳಿಂದ ಕೂಡಿದ ಸೇನೆಗಳಿಂದ ಪತಂಗಗಳು ಜ್ವಲಿಸುವ ಬೆಂಕಿಯನ್ನು ಹೇಗೋ, ಅಥವಾ ಕತ್ತಲೆಯ ರಾಶಿಯು ಸೂರ್ಯನನ್ನು ಹೇಗೋ ಹಾಗೆ ಆ ಕೃಷ್ಣನನ್ನು ಸುತ್ತುವರೆದರು; (**ಚಮೂ** - ಸೇನೆ).

ವಿ. : ೧. [2]ಶ್ರೀಕೃಷ್ಣನನ್ನು ಕಂಸಭಟರು ಮುತ್ತಿದ ಪ್ರಸಂಗವು ಪತಂಗಗಳು ಉರಿಯುವ ಬೆಂಕಿಯೊಳಗೆ ನುಗ್ಗಿದಂತೆ, ಕತ್ತಲೆಯ ರಾಶಿಯು ಸೂರ್ಯನನ್ನು ಕವಿಯುವ ಪ್ರಯತ್ನ ಮಾಡಿದಂತೆ ಆತ್ಮನಾಶಕವಾಗಿದ್ದಿತು ಎಂಬ ಇಲ್ಲಿಯ ಉಪಮೆ ಆ ಪ್ರಸಂಗವನ್ನು ತುಂಬಾ ರೋಚಕವಾಗಿ ಬಣ್ಣಿಸಿದೆ; **ತರಣಿ** - ಸೂರ್ಯ.

---

೧. ಭಾನುಂ ಯಥಾ ತಮ ಉಪೇತ್ಯ ಸುಯೋಗಕಾಮಮ್ । -ಮ.ಭಾ.ತಾ.ನಿ.(೫/೨೫)
೨. ಅನೇನ ಕಂಸಸೇನಾಯಾ ಏವ ಪರಾಭವೋ ನ ತು ಶ್ರೀಕೃಷ್ಣಸ್ಯೇತಿ ಸೂಚಿತಮ್ । -ವ್ಯಾ.

### ರಥಸಮರ್ಪಣೆಯ ಮೂಲಕ ಇಂದ್ರ ಮಾಡಿದ ಸೇವೆ

ರಣೇ ಪದಾಭ್ಯಾಂ ಚರತೋ ಮುರಾರೇಃ
ರಥಂ ಸಸೂತಂ ಸ ಸಹಸ್ರನೇತ್ರಃ ।
[೧]ಸಮಾದಿಶತ್ ಸ್ವಾಭ್ಯುದಯಪ್ರದಸ್ಯ
ಪರಸ್ಯ ಸೇವಾಂ ಭುವಿ ಕರ್ತುಕಾಮಃ ॥ ೫೨ ॥

ಯುದ್ಧದಲ್ಲಿ ಪಾದಚಾರಿಯಾಗಿ ಸಂಚರಿಸುತ್ತಿದ್ದ ತನಗೆ ಅಭ್ಯುದಯ ನೀಡುವ ಸರ್ವೋತ್ತಮನಾದ ಮುರಾರಿಯಾದ ಶ್ರೀಕೃಷ್ಣನಿಗೆ ಸಹಸ್ರನೇತ್ರನಾದ ಆ ದೇವೇಂದ್ರನು, ಭೂಮಿಯಲ್ಲಿ ಸೇವೆಯನ್ನು ಮಾಡಬಯಸಿದವನಾಗಿ ತನ್ನ ರಥವನ್ನು ಸಾರಥಿಯ ಸಮೇತವಾಗಿ ಕಳುಹಿಸಿಕೊಟ್ಟನು.

ವಿ. : ೧.ತಮ್ಮ ಪ್ರಾರ್ಥನೆಯಂತೆ ಕಂಸಾದಿಗಳ ನಿಗ್ರಹಕ್ಕೋಸ್ಕರವಾಗಿ ಅವತರಿಸಿದ ಶ್ರೀಕೃಷ್ಣನಿಗೆ ಸೇವೆ ಸಲ್ಲಿಸುವುದು ತನ್ನ ಕರ್ತವ್ಯ ಎಂಬ ತಿಳುವಳಿಕೆಯಿಂದ ಇಂದ್ರ ಹಾಗೆ ತನ್ನ ರಥವನ್ನು ಕಳುಹಿಸಿ ಕೃತಾರ್ಥನಾದ ಎಂದು ತಿಳಿಯಬೇಕು.

೨. ಶ್ರೀಕೃಷ್ಣನನ್ನು ಸರ್ವೋತ್ತಮ ಎಂದು ಕರೆಯುವ ಮೂಲಕ ಇಂದ್ರಾದಿ ಇತರ ಯಾರ ಸೇವೆಯ ಅಗತ್ಯವೂ ಸಹ ಅವನಿಗಿಲ್ಲ ಎಂಬ ತತ್ತ್ವವನ್ನು ಸೂಚಿಸಿರುವರು.

೩.. ರಾವಣವಧೆಯ ಪ್ರಸಂಗದಲ್ಲಿ ಸಹ ದೇವೇಂದ್ರನು ಈ ರೀತಿಯಲ್ಲಿ ರಥಸಮರ್ಪಣೆಯ ಸೇವೆಯನ್ನು ಸಲ್ಲಿಸಿದ ವಿವರ [೨]ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ.

### ಭುವಿಗಿಳಿದ ರಥದ ಸಂಕೇತ

ಅಥೋ ರಥಾಗ್ರ್ಯೋಽವತತಾರ ತಾರಾ-
ವೃತಃ ಶಶೀವಾತಿವಿಚಿತ್ರರತ್ನಃ ।
ಮುಕುಂದಸಂದರ್ಶನಧೂತಪಾಪಂ
ಮುನಿಂ ಖಲಾನ್ನೇತುಮಿವೋರ್ಧ್ವಲೋಕಮ್ ॥ ೫೩ ॥

ಬಳಿಕ ನಕ್ಷತ್ರಗಳಿಂದ ಸುತ್ತುವರೆದ ಚಂದ್ರನಂತೆ ವಿಚಿತ್ರರತ್ನಗಳಿಂದ ಕೂಡಿದ ಶ್ರೇಷ್ಠವಾದ ರಥವು ಭೂಮಿಗೆ ಇಳಿದುಬಂದಿತು; ಮುಕುಂದನಾದ ಶ್ರೀಕೃಷ್ಣನ ಸಂದರ್ಶನದಿಂದ

---

೧. ಜಾನನ್ನಪೀಶ್ವರಮನಂತಬಲಂ ಮಹೇಂದ್ರಃ ಕೃಷ್ಣಂ ರಥಂ ನಿಜಮಯಾಪಯದಾಯುಧಾಢ್ಯಮ್ ।
ಶುಶ್ರೂಷಣಾಯ ಪರಮಸ್ಯ ಯಥಾ ಸಮುದ್ರಮರ್ಘ್ಯೇಣ ಪೂರಯತಿ ಪೂರ್ಣಜಲಂ ಜನೋಽಯಮ್ ॥
-ಮ.ಭಾ.ತಾ.ನಿ.(೧೩./೧೨೫)

೨. ಸಮ್ಮಾನಯನ್ ರಾಘವಮಾದಿಪೂರುಷಂ ನಿರ್ಯಾತಯಾಮಾಸ ರಥಂ ಪುರಂದರಃ ।
ಸಹಾಯುಧಂ ಮಾತಲಿಸಂಗೃಹೀತಂ ಸಮಾರುರೋಹಾಶು ಸ ಲಕ್ಷ್ಮಣಾಗ್ರಜಃ ॥ -ಮ.ಭಾ.ತಾ.ನಿ.(೮/೨೦೭)

ಪಾಪಮುಕ್ತನೆನ್ನಿಸುವ ಭೃಗುಮುನಿಯನ್ನು ದುಷ್ಟನಾದ ಕಂಸನಿಂದ ಬಿಡುಗಡೆ ಮಾಡಿ ಊರ್ಧ್ವಲೋಕಕ್ಕೆ ಕರೆದೊಯ್ಯಲೋ ಎಂಬಂತೆ.

ವಿ. : ೧. ಕಂಸನಲ್ಲಿ ಭೃಗುಮುನಿಯ ಆವೇಶವಿದ್ದಿತು ಎಂಬ ವಿವರ ಶ್ರೀಮದ್ಭಾಗವತ-ತಾತ್ಪರ್ಯನಿರ್ಣಯದಲ್ಲಿ ಬಂದಿದೆ. ಕಂಸನ ಸಂಹಾರದ ಮೂಲಕ ಭೃಗುಮುನಿಗಳಿಗೆ ಅವನ ಸಹವಾಸ ಮುಕ್ತಾಯವಾಗಿ ತಮ್ಮ ಮೂಲರೂಪವನ್ನು ಸೇರಿಕೊಳ್ಳುವ ಅವಕಾಶ ಅವರಿಗೆ ಲಭಿಸುವುದು ಎಂಬ ಪ್ರಮೇಯವನ್ನು ಆಧರಿಸಿ, ಇಲ್ಲಿಯ[೧] ಉತ್ಪ್ರೇಕ್ಷೆ ರೂಪುಗೊಂಡಿದೆ.

೨. ಕೃಷ್ಣನ ಸಂದರ್ಶನದ ಮೂಲಕ ಭೃಗುಮುನಿಗೆ ಒದಗಿದ್ದ ಕಂಸನೊಂದಿಗೆ ನೆಲಸಬೇಕಾಗಿದ್ದ ಪಾಪವು ಪರಿಹಾರವಾಗಿ ಅವರಿಗೆ ತಮ್ಮ ಮೂಲರೂಪವನ್ನು ಸೇರಿಕೊಳ್ಳುವ ಅವಕಾಶ ಲಭಿಸುವುದು ಎಂದರ್ಥ.

### ಇಂದ್ರ ಮಾಡಿದ ಶ್ರೀಕೃಷ್ಣನ ವಿಶೇಷ ಸೇವೆ

**ಸಹಸ್ರನೇತ್ರೋಽನಿಮಿಷಪ್ರಭುಃ ಸಃ**
**ಶತಕ್ರತುರ್ವಜ್ರಧರೋ ಹಿ ಲೋಕೇ ।**
**ಸುಪಾವನೀಂ ಯಃ ಶತಧಾರಧುರ್ಯಾಂ**
**ಹರೇಃ ಸಪರ್ಯಾಂ ಕ್ಷಣಶಃ ಕರೋತಿ ॥ ೫೪ ॥**

[೨]ದೇವತೆಗಳಿಗೆ ಒಡೆಯನಾದ ಸಹಸ್ರನೇತ್ರನಾದ ಆ ದೇವೇಂದ್ರನು ಲೋಕದಲ್ಲಿ ಶತಕ್ರತು ಹಾಗೂ ವಜ್ರಪಾಣಿ ಎನ್ನಿಸಿರುವನಲ್ಲವೆ ! ಅವನು ಪಾವನವಾದ ಹಾಗೂ ಸೇವಕರಿಗೆ ವಜ್ರಕವಚದಂತಹ ಶ್ರೀಹರಿಯ ಪೂಜೆಯನ್ನು ಪ್ರತಿಕ್ಷಣದಲ್ಲೂ ಮಾಡುತ್ತಿರುವನು.

ವಿ. : ಶ್ರೀಹರಿಯ ಸೇವೆಯು ವಜ್ರಕವಚದಂತೆ ತಾರಕ ಎಂದರ್ಥ; **ಶತಧಾರ** – ವಜ್ರ ; **ಅನಿಮಿಷ** – ದೇವತೆ ; **ಅನಿಮಿಷಪ್ರಭು** – ದೇವತೆಗಳ ರಾಜ.

### ಶ್ರೀಕೃಷ್ಣನಿಂದಾದ ಕಂಸಸೇನೆಯ ವಿನಾಶ

**ರಥಂ ಸಮಾರುಹ್ಯ ಸಪತ್ನಸೇನಾಂ**
**ಜಘಾನ ಹಸ್ತ್ಯಶ್ವಪದಾತಿಪೀನಾಮ್ ।**

---

೧. "ಕಂಸಾವಿಷ್ಟೋ ಭೃಗುಃ ಸ್ವಯಮ್"(ಭಾಗವತತಾತ್ಪರ್ಯೋದ್ಧೃತಪ್ರಮಾಣವಚನ-೭/೧/೩.೧) ಇತಿ ವಚನಾತ್ । ಖಲಾತ್ ದುಷ್ಟಕಂಸಾತ್ ಊರ್ಧ್ವಲೋಕಂ ನೇತುಮಿವಾವತತಾರ । -ವ್ಯಾ.

೨. ಅನೇನ ಶತಕ್ರತುತ್ವಮುಪಪಾದಿತಮ್ । ... ಅನೇನ ವಜ್ರಧರತ್ವಮುಪಪಾದಿತಮ್ । ... ಅನೇನ ಸಹಸ್ರಕಾರ್ಯಾಣಾಂ ಯುಗಪತ್ಪ್ರತೀಕ್ಷಣಾತ್ ಸಹಸ್ರನೇತ್ರತ್ವಮನಿಮಿಷಪ್ರಭುತ್ವಂ ಚೋಪಪಾದಿತಮ್ । -ವ್ಯಾ.

ಪರಿಸ್ಥಿತಾತ್ಮೀಯಮನೋರಥಸ್ಥೋ
ದುರಿಷ್ಟಸೇನಾಮಪಿ ದೇವದೇವಃ ॥ ೫೫ ॥

ದೇವದೇವನಾದ ಶ್ರೀಕೃಷ್ಣನು ರಥವನ್ನೇರಿ, ಆನೆ ಕುದುರೆ ಪದಾತಿಗಳಿಂದ ತುಂಬಿದ್ದ ಶತ್ರುವಾದ ಕಂಸನ ಸೇನೆಯನ್ನು ಸಂಹರಿಸಿದ ; ಸುತ್ತಲೂ ನೆರೆದಿದ್ದ ತನ್ನವರ ಮನೋರಥದಲ್ಲಿ ನೆಲೆಸಿದ ಅವನು ತನ್ನವರ ದುರಿತಗಳ ಹಿಂಡನ್ನು ಸಹ ತರಿದ.

ವಿ. : ೧. [೧]ಕಂಸನ ಸೇನೆಯನ್ನು ಸದೆಬಡಿಯುತ್ತಿದ್ದ ಕೃಷ್ಣನ ಮಹಿಮೆಯ ದರ್ಶನದಿಂದ ಅಲ್ಲಿದ್ದ ಸಕಲ ಸಜ್ಜನರ ಪಾಪಗಳು ನಾಶಗೊಂಡವು ಎಂದರ್ಥ; ಸಪತ್ನ-ವೈರಿ; ಪದಾತಿ-ಕಾಲಾಳು.

೨. ಕಂಸನ ಒಟ್ಟು ಸೇನೆ ಇಪ್ಪತ್ತು ಅಕ್ಷೋಹಿಣಿಯಷ್ಟು ಅಪಾರವಾಗಿತ್ತು. ಅದಕ್ಕೆ ಶಿವನಿಂದ ಅವಧ್ಯತ್ವ ವರವೂ ಇತ್ತು ಎಂಬುದು ವಿಶೇಷ :

**ಅಕ್ಷೋಹಿಣೀಗಣಿತಮಸ್ಯ ಬಲಂ ಚ ವಿಂಶದಾಸೀದಸಹ್ಯಮುರುವೀರ್ಯಮನನ್ಯವಧ್ಯಮ್ ।**
**ಶಂಭೋರ್ವರಾದಪಿ .................... ॥** -ಮ.ಭಾ.ತಾ.ನಿ.(೧೨./೧೦೯)

೩.. ಹಾಗೆ ಶತ್ರುಗಳ ಕೈಕಾಲು ಮೊದಲಾದ ಸಕಲ ಅವಯವಗಳನ್ನೂ ಶ್ರೀಕೃಷ್ಣನು ಕತ್ತರಿಸಿದ್ದು ಆ ಪಾಪಿಗಳು ಬ್ರಹ್ಮನು ನಿರಾಕಾರ ಎಂಬುದಾಗಿ ವಾದಿಸುತ್ತಿದ್ದುದಕ್ಕೆ ತಕ್ಕ ಫಲದಂತಿತ್ತು ಎಂಬ ಮುಂದಿನ ಶ್ಲೋಕ(೧೪/೧೧)ದ ವಿವರಣೆಯನ್ನು ಇಲ್ಲಿಯೂ ತಿಳಿಯಬಹುದು.

### ಶ್ರೀಕೃಷ್ಣನಿಂದ ಕಂಸನ ಅನುಯಾಯಿಗಳು ಕಂಡ ದುರಂತ

ಶರೈಃ ಕರೋರ್ವಂಘ್ರಿಶಿರೋಧರಾದೀಂ-
ಶ್ಚಕರ್ತ ಶಸ್ತ್ರಾಸ್ತ್ರವಿದಾಂ ರಿಪೂಣಾಮ್ ।
ಸ್ವಯಂ ಮುದೋನ್ಮೀಲಿತಲೋಚನಾಂತ-
ಶರೈಸ್ತದಾಽತಾಡ್ಯತ ಕಾಮಿನೀನಾಮ್ ॥ ೫೬ ॥

ಶ್ರೀಕೃಷ್ಣನು ಬಾಣಗಳಿಂದ ಶಸ್ತ್ರಾಸ್ತ್ರಗಳನ್ನು ಬಲ್ಲವರಾಗಿದ್ದ ಶತ್ರುಗಳ ಕೈ, ತೊಡೆ, ಕಾಲು ಹಾಗೂ ಕತ್ತು ಮೊದಲಾದವುಗಳನ್ನು ಕತ್ತರಿಸಿ ಹಾಕಿದ; ಆಗ ನಲಿವಿನಿಂದ ಅರಳಿದ ಕಾಮಿನಿಯರ ಕುಡಿನೋಟಗಳ ರೂಪದ ಬಾಣಗಳಿಂದ ಅವನು ಸ್ವಯಂ ತಾಡಿತನೂ ಆದ.

ವಿ. : ಕೃಷ್ಣನ ಬಾಣಗಳು ಶತ್ರುಗಳನ್ನು ನಾಶಪಡಿಸುತ್ತಿದ್ದುದನ್ನು ಕಂಡು ಅಲ್ಲಿ ನೆರೆದಿದ್ದ ಕಾಮಿನಿಯರ ಕುಡಿನೋಟಗಳು ಅವನತ್ತಲೇ ನೆಟ್ಟವು ಎಂದರ್ಥ.

---

೧. ತದಾ ಶ್ರೀಕೃಷ್ಣದ್ರಷ್ಟೄಣಾಂ ಸಜ್ಜನಾನಾಂ ಸಮಸ್ತಪಾಪಕ್ಷಯೋ ಜಾತ ಇತಿ ಭಾವಃ। -ವ್ಯಾ.

ಶ್ರೀಕೃಷ್ಣನ ಸಾಮರ್ಥ್ಯದಿಂದ ಮಾತಲಿಗಾದ ಹರ್ಷವಿಶೇಷ

ಚಿರಂ ಪುರಾ ವೈಷ್ಣವಸೇವನೇನ
ಮುಕುಂದಸಾಮೀಪ್ಯಫಲಂ ಪ್ರಪನ್ನಃ।
ಸ ಮಾತಲಿಸ್ತಸ್ಯ ವಿಚಿತ್ರವೀರ್ಯ-
ಮಭೂನ್ನಿರೀಕ್ಷ್ಯೋಭಯಥಾಽಪಿ [೧]ಸೂತಃ ॥ ೫೭ ॥

ಹಿಂದೆ ಬಹುಕಾಲ ಮಾಡಿದ ವೈಷ್ಣವನಾದ ದೇವೇಂದ್ರನ ಸೇವೆಯಿಂದಾಗಿ ಮುಕುಂದನಾದ ಶ್ರೀಕೃಷ್ಣನ ಸಮೀಪ ನೆಲೆಸುವ ಫಲವನ್ನು ಪಡೆದ ಆ ಮಾತಲಿಯು ಆ ಶ್ರೀಕೃಷ್ಣನ ವಿಚಿತ್ರ-ವಾದ ಸಾಮರ್ಥ್ಯವನ್ನು ಕಣ್ಣಾರೆ ಕಂಡು, ಎರಡು ರೀತಿಯಲ್ಲೂ ಸೂತನೇ ಆಗಿಬಿಟ್ಟ.

ವಿ. : ೧. ಸೂತ ಎಂಬುದಕ್ಕೆ ಸಾರಥಿ ಹಾಗೂ ವಂದಿ ಎಂಬ ಎರಡು ಅರ್ಥಗಳು ಉಂಟು. ಶ್ರೀಕೃಷ್ಣನಿಗೆ ಸಾರಥಿಯಾಗಿ ಕುಳಿತು ಅವನ ಮಹಾಮಹಿಮೆಯನ್ನು ಕಂಡ ಮಾತಲಿ, ಆ ಸಮಯದಲ್ಲಿ ಅವನ ಮಹಿಮೆಯನ್ನು ಹಾಡಿ ಹೊಗಳುವ ಮತ್ತೊಂದು ರೀತಿಯ ಸೂತನೂ ಆದ ಎಂಬುದು ಇಲ್ಲಿಯ ಸ್ವಾರಸ್ಯ.

೨. ಶ್ರೀಕೃಷ್ಣನ ಬಳಿ ಹಾಗೆ ನೆಲೆಸುವ ಭಾಗ್ಯ ಅವನಿಗೆ ಲಭಿಸಲು ಆ ಮುನ್ನ ಅವನು ವಿಷ್ಣುಭಕ್ತನಾದ ಇಂದ್ರನನ್ನು ಬಹುಕಾಲ ಸೇವಿಸಿದ್ದೇ ಕಾರಣವಾಗಿತ್ತು ಎಂದು ತಿಳಿಸುವ ಮೂಲಕ ವೈಷ್ಣವರ ಸೇವೆ ಶ್ರೀಹರಿಯ ಸಾಮೀಪ್ಯವನ್ನು ಅಂದರೆ ಮುಕ್ತಿಯನ್ನು ದೊರಕಿಸಿಕೊಡುವ ಶ್ರೇಷ್ಠ ಸಾಧನಗಳಲ್ಲೊಂದು ಎಂಬ ಪ್ರಮೇಯವನ್ನು ಸೂಚಿಸಿರುವರು: ಮಹತ್ಸೇವಾಂ ದ್ವಾರಮಾ-ಹುರ್ವಿಮುಕ್ತೇಃ -ಶ್ರೀಮದ್ಭಾಗವತ (೫/೫/೨).

ಕೊನೆಯಲ್ಲಿ ಕಂಸನ ಸಂಹಾರಕ್ಕೆ ಕಾರಣ

ಧಾತ್ರೀಂ ಪ್ರಾಕ್ ಪರಿಪೋಷಣಾಯ ಪತಗಂ ವಾತಂ ವಿಲಾಸಾಯ ತಾನ್
ವತ್ಸಾನೋವೃಷಧೇನುಕಾದಿದಿತಿಜಾಂಸ್ತದ್ಬಾರವೋಢಾನಿವ।
ಅಶ್ವೇಭೌ ರಜಕಂ ಚ ಮಾತುಲಕೃತೇ ಸಂಪ್ರೇಷ್ಯ ಮಲ್ಲಾಂಶ್ಚ ತ-
ತ್ಸೇನಾಂ ಪ್ರೇಷಯತಿ ಸ್ಮ ಗಾಢತಮಸೇ ಸಂಪ್ರೇಷಯಿಷ್ಯನ್ ಕ್ರಮಾತ್ ॥ ೫೮ ॥

ಶ್ರೀಕೃಷ್ಣನು ಸೋದರಮಾವನಾದ ಕಂಸನನ್ನು ಕ್ರಮವಾಗಿ ಅಂಧಂತಮಸ್ಸಿಗೆ ಕಳುಹಿಸಿಕೊಡುತ್ತಾ ಮೊದಲಿಗೆ ಅವನ ಪೋಷಣೆಗೆಂದು ಪೂತನಿಯನ್ನು, ಅವನ ವಿಲಾಸಕ್ಕೆಂದು ಬಕಾಸುರನನ್ನು

೧. ಸೂತಸ್ತು ಸಾರಥೌ ತಕ್ಷ್ಣಿ ಕ್ಷತ್ರಿಯಾತ್ ಬ್ರಾಹ್ಮಣೀಸುತೇ।
ವಂದಿಪಾರದಯೋಃ ಪುಂಸಿ ಪ್ರಸೂತೇ ಪ್ರೇರಿತೇ ತ್ರಿಷು॥ - ಮೇದಿನೀಕೋಶ

ಹಾಗೂ ತೃಣಾವರ್ತನನ್ನು, ಭಾರವಾಹಕರನ್ನಾಗಿ ವತ್ಸಾಸುರ, ಶಕಟಾಸುರ, ವೃಷಭಾಸುರ, ಧೇನುಕಾಸುರ ಮೊದಲಾದ ದೈತ್ಯರನ್ನು, ಕುದುರೆ ಹಾಗೂ ಆನೆಗಳನ್ನು ಹಾಗೂ ರಜಕನನ್ನು, ಮಲ್ಲರನ್ನು, ಕಳುಹಿಸಿಕೊಟ್ಟು ಈಗ ಸೇನೆಯನ್ನು ಕಳುಹಿಸಿಕೊಟ್ಟನು.

ವಿ. : ೧. ಶ್ರೀಕೃಷ್ಣನಿಂದ ಹತನಾಗುವ ಕಂಸ ಸಪರಿವಾರನಾಗಿ ತಮಸ್ಸಿಗೆ ತೆರಳಿದ ಎಂದರ್ಥ.

೨. ಶ್ರೀಕೃಷ್ಣನು ಆ ಮುನ್ನ ಪೂತನಿಯನ್ನು ಕೊಂದದ್ದು ಅವನ ಪೋಷಣೆಗೆ ಎಂಬಂತೆ. ಬಕಾಸುರಾದಿಗಳನ್ನು ಕೊಂದದ್ದು ಅವನ ವಿಲಾಸಕ್ಕೆ ಎಂಬಂತೆ; ಆನೆ(ಕುವಲಯಾಪೀಡ) ಕುದುರೆ(ಕೇಶಿ)ಗಳನ್ನು ಕೊಂದದ್ದು ಅವನ ಸಂಚಾರಕ್ಕೆ ಎಂಬಂತೆ, ಅಗಸನನ್ನು ಕೊಂದದ್ದು ಅವನ ಪರಿಚರ್ಯೆಗಾಗಿ, ಇತರ ಸೈನ್ಯವನ್ನು ನಾಶಪಡಿಸಿದ್ದು ಅವನ ಸೇವೆಗಾಗಿ, ಆ ಮುನ್ನ ಹತರಾದ [೧] ಅವರೆಲ್ಲರೂ ಕಂಸನಂತೆ ಅಂಧಂತಮಸ್ಸಿಗೇ ತೆರಳಿರುವರು ಎಂದು ಸೂಚಿಸಿರುವರು.

೩. ಇದು ದುಷ್ಟರು ತಾವು ಮಾತ್ರವಲ್ಲದೆ ತಮ್ಮ ಪರಿವಾರವನ್ನು ಸಹ ತಮಸ್ಸಿಗೆ ಕರೆದೊಯ್ಯುವ ಪರಮಪಾಪಿಗಳು ಎಂಬ ತತ್ತ್ವವು ಸೂಚಿತ: **ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ ।**– (ಭಾಗವತ. ೫/೫/೨); ಇಭ – ಆನೆ.

೪. ಬಕಪಕ್ಷಿಯು ಹಾರುವುದು ; ತೃಣಾವರ್ತನು ಸುಂಟರಗಾಳಿ; ಆದ್ದರಿಂದ ಅವರಿಬ್ಬರನ್ನೂ ವಿಹಾರಕ್ಕೆಂದು ಕಳುಹಿಸಿದ; ವತ್ಸಾಸುರ, ವೃಷಭಾಸುರ, ಧೇನುಕಾಸುರ, ಕುದುರೆ ಹಾಗೂ ಆನೆ – ಈ ಐವರೂ ಪ್ರಾಣಿಗಳಾದ್ದರಿಂದ ಭಾರಹೊರಲು ಅರ್ಹರೆನ್ನಿಸುವರು; ರಜಕ –ಅಗಸ, ಬಟ್ಟೆ ಒಗೆಯುವ ಕಾರ್ಯದ ಮೂಲಕ ಸೇವಕನೆನ್ನಿಸುವನು.

೫. ಬಕಾಸುರನ ವಧೆಯ ಪ್ರಸಂಗದಲ್ಲಿ ಸಹ ಇದೇ ಭಾವದ ವಿವರಣೆ ಬಂದಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು[೨].

೬. ಈ ಶ್ಲೋಕವು ಮಹಾಭಾರತತಾತ್ಪರ್ಯನಿರ್ಣಯದ ಈ ಕೆಳಗಿನ ಶ್ಲೋಕಕ್ಕೆ ಅಪೂರ್ವ ವಿವರಣೆಯಂತಿದೆ :

> ದ್ವೇಷಾತ್ ಸ ಸರ್ವಜಗದೇಕಗುರೋಃ ಸ್ವಕೀಯೈಃ
> ಪೂರ್ವಂ ಪ್ರಮಾಪಿತಜನೈಃ ಸಹಿತಃ ಸಮಸ್ತೈಃ ।
> ಧಾತ್ರ್ಯಾದಿಭಿಃ ಪ್ರತಿಯಯೌ ಕುಮತಿಸ್ತಮೋಽಂಧ-
> ಮನ್ಯೇಽಪಿ ಚೈವಮುಪಯಾಂತಿ ಹರಾವಭಕ್ತಾಃ ॥ (೧೩/೧೩೨)

---

೧. ಅಶ್ವೇಭೌ ಕೇಶಿಕುವಲಯಾಪೀಡೌ ರಜಕಮಲ್ಲಾಂಶ್ಚ ಸಂಪ್ರೇಷ್ಯ ತತ್ಸೇನಾಂ ಕಂಸಸೇನಾಂ ಸಂಪ್ರೇಷಯತಿ ಸ್ಮ । ಶ್ರೀಕೃಷ್ಣನಿಹತಾಃ ಕಂಸಸಂಬಂಧಿನಃ ಸರ್ವೇಽಪ್ಯಂಧಂತಮಃ ಪ್ರಾಪ್ತಾ ಇತಿ ಭಾವಃ । –ವ್ಯಾ.

೨. ಪ್ರಾಗ್ಬಾಲಗ್ರಹರೂಪಿಣೀಂ ಸ ಶಕಟೇ ಸಂಕಲ್ಪ್ಯ ರಜ್ಜುಗ್ರಹಾಂ
ತದ್ವಾಹಾನ್ ಖರಕೇಶಿವತ್ಸವೃಷಭಾನ್ ನಿಃಶೇಷದೈತ್ಯಾಸುವತ್ ।
ಸಂಯೋಜ್ಯಾನಿಲರೂಪದೈತ್ಯಮಧುನಾ ತಚ್ಛಿಷ್ಣಮತ್ಯದ್ಭುತಂ
ಕೃಷ್ಣಃ ಪ್ರೇಷಯತೀವ ಹಸ್ತಗಬಕೋ ಗಾಢಂ ತಮಃ ಪ್ರಾಪಯನ್ ॥ –ರು.ವಿ.(೪/೩೪)

### ಹೆಸರನ್ನು ಸಾರ್ಥಕಮಾಡಿಕೊಂಡ ರಂಗಭೂಮಿ

ವಿಸ್ತೀರ್ಣೈರ್ವರಹಾರಚಾಮರಸಿತಚ್ಛತ್ರಾದಿವಿತ್ತೈಃ ಸಿತಾ
ನೀಲಾ ಸ್ರಸ್ತಕಚಾಸಿನೀಲಮಣಿಭಿಃ ಸಾ ರಂಗಭೂಮಿರ್ಮೃಧೇ।
ರಕ್ತಾ ರಕ್ತಚಯೇನ ಹೈಮಕವಚಾಕಲ್ಪೈಶ್ಚ ಪೀತಾಽಽತ್ಮನೋ
ನಾಮಾಸೃಕ್ಸರಿದೋಘಮಗ್ನಕುಣಪಾ ಚಕ್ರೇಽನುಕೂಲಂ ತದಾ ॥ ೫೯ ॥

ವಿಶಾಲವಾದ ಶ್ರೇಷ್ಠ ಹಾರಗಳು, ಚಾಮರಗಳು, ಶ್ವೇತಚ್ಛತ್ರ ಮೊದಲಾದ ವೈಭವಗಳಿಂದ ಬಿಳಿಯಾಗಿಯೂ, ಬಿಚ್ಚಿದ ಮುಡಿ, ಖಡ್ಗ, ಇಂದ್ರನೀಲಮಣಿಗಳಿಂದಾಗಿ ನೀಲವರ್ಣ-ದ್ದಾಗಿಯೂ, ರಕ್ತದ ಪ್ರವಾಹದಿಂದಾಗಿ ಕೆಂಪಾಗಿಯೂ, ಚಿನ್ನದ ಕವಚ ಆಭರಣಗಳಿಂದಾಗಿ ಹಳದಿಯಾಗಿಯೂ, ರಕ್ತದ ನದಿಯ ಪ್ರವಾಹದಲ್ಲಿ ಮುಳುಗಿದ ಶವಗಳಿಂದ ಕೂಡಿದ ಆ ರಣಾಂಗಣವು ಆಗ ಯುದ್ಧದಲ್ಲಿ ತನ್ನ ರಂಗಭೂಮಿಯೆಂಬ ಹೆಸರನ್ನು ಅನುಕೂಲ ವನ್ನಾಗಿಸಿಕೊಂಡಿತು.

ವಿ.:೧. ರಂಗಭೂಮಿ ಎಂದರೆ ಬಹುಬಗೆಯ ಬಣ್ಣಗಳಿಂದ ಕೂಡಿದ ರಂಗುರಂಗಾದ ಭೂಮಿ. ಆಗ ನಡೆದ ಯುದ್ಧದಲ್ಲಿ ಮೇಲೆ ತಿಳಿಸಿದಂತೆ ಬಿಳಿ, ನೀಲಿ, ಕೆಂಪು, ಹಳದಿ ಬಣ್ಣಗಳು ಕಾಣಿಸಿ-ಕೊಂಡಿದ್ದರಿಂದ ಅದು [೧]ರಂಗಭೂಮಿ ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡಿತು ಎಂದರ್ಥ.

೨.. ಸಿತ – ಬಿಳಿ ; ಅಸೃಕ್ – ರಕ್ತ ; ಮೃಧೇ – ಯುದ್ಧದಲ್ಲಿ.

### ಕಂಸನನ್ನು ಆಕ್ರಮಿಸಿದ ಶ್ರೀಕೃಷ್ಣ

ಕೋಪಾಟೋಪವಶೇನ ರಕ್ತನಯನಂ ತಂ ಖಡ್ಗಚರ್ಮೋಲ್ಲಸ-
ತ್ಪಾಣಿಂ [೨]ಪಾಪಮಿವೋತ್ಪತಂತಮಮತಂ ಮೂರ್ಧ್ನಿ ಪ್ರಗೃಹ್ಯ ಪ್ರಭುಃ।
ಪೃಥ್ವೀಮೇತ್ಯ ನಿಪಾತ್ಯ ವಿಸ್ಪೃತಕಚಂ ತ್ರಸ್ತಂ ಚಕರ್ಷಾಚ್ಯುತಃ
ಪ್ರೇಮಪ್ರಾವಿಲಸಾಧುಸಂಘನಯನೈಃ ಸಾನಂದಮಾಲೋಕಿತಃ ॥ ೬೦ ॥

ಕೋಪಾಟೋಪಕ್ಕೆ ವಶನಾಗಿ ಕೆಂಪಾದ ಕಣ್ಣುಗಳಿಂದ ಕೂಡಿದ್ದ, ಕೈಯಲ್ಲಿ ಖಡ್ಗ, ಗುರಾಣಿ-ಗಳಿಂದ ಹೊಳೆಯುವ ಕೈಗಳ ಪಾಪಪುರುಷನಂತೆ ಧಾವಿಸಿಬಂದ ಶತ್ರುವಾದ ಕಂಸನನ್ನು ತಲೆಯಲ್ಲಿ

---

೧. ನನು ಕುಣಪಾದೀನಾಮಮಂಗಲಾದೀನಾಂ ಸತ್ತ್ವಾತ್ ಕಥಂ ರಂಗಭೂಮಿತ್ವಮಿತ್ಯತ ಆಹ । ಅಸೃಕ್ಸರಿತಾಂ ರಕ್ತನದೀನಾಂ ಓಘೇ ಪ್ರವಾಹೇ ಮಗ್ನಾಃ ಕುಣಪಾಃ ಯಸ್ಯಾಂ ಸಾ ತಥೋಕ್ತಾ। ಬಹುರಕ್ತಪ್ರವಾಹೇ ಭಾರವಶಾತ್ ಕುಣಪಾನಾಂ ಮಗ್ನತ್ವೇನ ಅದರ್ಶನಾದಿತಿ ಭಾವಃ। -ವ್ಯಾ.

೨. "ರಕ್ತಶ್ಮಶ್ರುವಿಲೋಚನಮ್" । "ಖಡ್ಗಚರ್ಮಧರಂ ಕೃಷ್ಣಮ್"ಇತಿ ವಚನಾತ್ । -ವ್ಯಾ.
ಪಾಪಪುರುಷಸ್ಯಾಪ್ಯೇತಾದೃಶತ್ವಾತ್ ಮೂರ್ಧ್ನಿ ಪ್ರಗೃಹ್ಯ ಪೃಥಿವೀಮೇತ್ಯ ಕಂಸಂ ನಿಪಾತ್ಯ ವಿಸ್ಪೃತಕಚಂ ವಿಸ್ತೀರ್ಣ-ಕೇಶಂ ತ್ರಸ್ತಂ ಭೀತಂ ಅಮತಂ ಶತ್ರುಂ ಕಂಸಂ ಪ್ರೇಮ್ಣಾ ಸ್ನೇಹೇನ ಪ್ರಾವಿಲಾನಿ ಆರ್ದ್ರಾಣಿ ಸಾಧುಸಂಘನಯನಾನಿ ತೈಃ। ಸಾನಂದಂ ಯಥಾ ತಥಾ ಆಲೋಕಿತಃ ಸನ್ ಚಕರ್ಷ ಇತಸ್ತತಶ್ಚ ಕರ್ಷಣಂ ಕೃತವಾನ್। -ವ್ಯಾ.

ಹಿಡಿದು, ಭೂಮಿಗೆ ಎಳೆತಂದು ಬೀಳಿಸಿ, ಮುಡಿ ಹರಡಿದ, ಭೀತನಾದ ಅವನನ್ನು, ಪ್ರೀತಿಯಿಂದ ಆರ್ದ್ರವಾದ ಸಜ್ಜನ ಸಮುದಾಯವು ಕಣ್ಣುಗಳಿಂದ ನಲಿವಿನಿಂದ ನೋಡುತ್ತಿದ್ದಂತೆಯೇ ಆ ಅಚ್ಯುತನಾದ ಸಮರ್ಥನಾದ ಶ್ರೀಕೃಷ್ಣ ಎಳೆದಾಡಿದ ; (ಪ್ರಾವಿಲ - ತೋಯ್ದು).

ವಿ. : ಕಂಸನ ಆಗಿನ ಪರಿಸ್ಥಿತಿ ಪಾಪಪುರುಷ ಚಿಂತನೆಗೆ ವಿಹಿತವಾದ ಲಕ್ಷಣಗಳಿಂದ ಕೂಡಿತ್ತು ಎನ್ನುವ ಮೂಲಕ ಕಂಸನು ಮೂರ್ತಿತಳೆದ ಪಾಪಪುರುಷನಂತೆ ಕಾಣುತ್ತಿದ್ದ ಎಂಬುದನ್ನು ತಿಳಿಸಿರುವರು:

ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ ।
ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ॥
ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ ।
ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ।
ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ವಾಮೇ ವಿಚಿಂತಯೇತ್ ॥

-ವಾಯುಪುರಾಣ, ಮಾಘಮಾಹಾತ್ಮ್ಯ

## ಹತನಾದ ಕಂಸ

**ಕೃಷ್ಣೋಽಥೋ ಬಹಿರಾಜಗಾಮ ನಗರಾತ್ ಕಂಸಸ್ಯ ದೇಹಾಭಿಧಾ-**
**ಚ್ಚಕ್ಷುಃಶ್ರೋತ್ರಮುಖಾಕ್ಷಿಪಾಲನಪರೈಃ ಸ್ವೀಯೈಃ ಸಮೇತಃ ಸುರೈಃ ।**
**ನಷ್ಟಾನಿಷ್ಟಜನಾನ್ ನಿರೀಕ್ಷ್ಯ ವಿಮತಂ ದೃಷ್ಟ್ವಾಽತಿಪುಷ್ಟಂ ಭಟಾ-**
**ನಂದೋಽಪಿ ಕ್ಷಯಮೇಯಿವಾನ್ ಸ ಚ ಖಲೋ ಹೀನೋಗ್ರಸೇನೋ ಹತಃ[೧] ॥**

ಬಳಿಕ ಕೃಷ್ಣನು, ಕಂಸನ ದೇಹವೆಂಬ ನಗರದಿಂದ, ತನ್ನವರಾದ ಕಣ್ಣು, ಕಿವಿ, ಮುಖ ಮೊದಲಾದ ಇಂದ್ರಿಯಗಳ ಅಭಿಮಾನಿದೇವತೆಗಳ ಸಮೇತ ಹೊರನಡೆದ. ತನ್ನ ಇಷ್ಟಜನರು ಹತರಾದದ್ದನ್ನು, ತನ್ನ ಹಗೆಯಾದ ಕೃಷ್ಣನು ಬಹಳವಾಗಿ ವಿಜೃಂಭಿಸುತ್ತಿದ್ದುದನ್ನು ಕಂಡು ಅವನ ಭಟರ ಆನಂದವೂ ಸಹ ನಾಶ ಹೊಂದಿತು; ಹೀಗೆ ತನ್ನ ಉಗ್ರವಾದ ಸೇನೆಯನ್ನು ಕಳೆದುಕೊಂಡ ಆ ದುಷ್ಟ ಕಂಸ ಹತನಾದ.

---

೧. ನಿಃಶೇಷತೋ ವಿನಿಹತೇ ಸ್ವಬಲೇ ಸ ಕಂಸಶ್ಚರ್ಮಾಸಿಪಾಣಿರಭಿಯಾತುಮಿಯೇಷ ಕೃಷ್ಣಮ್ ।
ತಾವತ್ ತಮೇವ ಭಗವಂತಮಭಿಪ್ರಯಾಂತಮುತ್ತುಂಗಮಂಚಶಿರಸಿ ಪ್ರದದರ್ಶ ವೀರಮ್ ॥
ತಂ ಶ್ಯೇನವೇಗಮಭಿತಃ ಪ್ರತಿಸಂಚರಂತಂ ನಿಶ್ಛಿದ್ರಮಾಶು ಜಗೃಹೇ ಭಗವಾನ್ ಪ್ರಸಹ್ಯ ।
ಕೇಶೇಷು ಚೈನಮಭಿಮೃಶ್ಯ ಕರೇಣ ವಾಮೇನೋದ್ಧೃತ್ಯ ದಕ್ಷಿಣಕರೇಣ ಜಘಾನ ಕೇಽಸ್ಯ ॥
ಸಂಚಾಲಿತೇನ ಮುಕುಟೇನ ವಿಕುಂಡಲೇನ ಕರ್ಣದ್ವಯೇನ ವಿಗತಾಭರಣೋರಸಾ ಚ ।
ಸ್ರಸ್ತಾಂಬರೇಣ ಜಘನೇನ ಸುಶೋಚ್ಯರೂಪಃ ಕಂಸೋ ಬಭೂವ ನರಸಿಂಹಕರಾಗ್ರಸಂಸ್ಥಃ ॥
ಉತ್ಕೃಷ್ಯ ತಂ ಸುರಪತಿಃ ಪರಮೋಚ್ಚಮಂಚಾದನ್ಯೈರಜೇಯಮತಿವೀರ್ಯಬಲೋಪಪನ್ನಮ್ ।
ಅಬ್ಜೋದ್ಭವೇಶವರಗುಪ್ತಮನಂತಶಕ್ತಿರ್ಭೂಮೌ ನಿಪಾತ್ಯ ಸ ದದೌ ಪದಯೋಃ ಪ್ರಹಾರಮ್ ॥

-ಮ.ಭಾ.ತಾ.ನಿ.(೧೩/೧೨೭ - ೧೩೦)

ವಿ. : ೧. ಕೃಷ್ಣನು ಕಂಸನ ದೇಹದಿಂದ ಹೊರಬಂದ ಎನ್ನುವ ಮೂಲಕ ಕಂಸನು ಮೃತನಾದ ಎಂಬ ಪ್ರಮೇಯ ತಿಳಿಯುತ್ತದೆ. ದೇಹ ಅಳಿಯುವುದು ಆದರಿಂದ ಹರಿವಾಯುಗಳು ಹೊರಹೊರಟಗಲೇ ಎಂಬ ಶಾಸ್ತ್ರವಾಣಿಯ ನಿರೂಪಣೆ ಇದಾಗಿದೆ : ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ (ಮಹಾಭಾರತ).

೨. ಕಣ್ಣು ಮೊದಲಾದವುಗಳ ಪಾಲಕರಾದ ಶ್ರೀಕೃಷ್ಣನ ಅನುಚರರು ಎಂದರೆ ಸೂರ್ಯ ಮೊದಲಾದ ತತ್ತ್ವಾಭಿಮಾನಿದೇವತೆಗಳು ಎಂದರ್ಥ; ಅಕ್ಷಿ - ಇಂದ್ರಿಯ.

೩. ಈ ಶ್ಲೋಕವು ಈ ಸರ್ಗದಲ್ಲಿನ ಶ್ಲೋಕ ೫೦ರ ವಿವರಣೆಯಂತಿದೆ.

### ತಮಸ್ಸಿಗೆ ಕಂಸ - ವೈಕುಂಠಕ್ಕೆ ಭೃಗುಮುನಿ

[1]ಕಂಸೋಽಂತರ್ವೃತಗರ್ವಪರ್ವತವರಃ ಪೋತಸ್ಯ ಘಾತಾಹತೋ
ವಕ್ತ್ರಂ ದರ್ಶಯಿತುಂ ಸುಲಜ್ಜಿತ ಇವ ಪ್ರಾಪೋಗ್ರಮಂಧಂತಮಃ ।
ಅನ್ಯಃ[2] ಶ್ರೀರಮಣಸ್ಯ ಧಾಮ ಸುಮಹಸ್ತೋಮಂ ಜಗಾಮ ದ್ವಿಷಾ
ಯುಕ್ತಂ ಮಾಂ ಹರಿರಗ್ರಹೀತ್ ಕರುಣಯೇತ್ಯಾಶ್ರಾವ್ಯಭವ್ಯೋತ್ಸವಃ ॥ ೬೨ ॥

ತನ್ನೊಳಗೆ ಗರ್ವವೆಂಬ ಮಹಾಪರ್ವತವನ್ನು ಹುದುಗಿಸಿಕೊಂಡಿದ್ದ ಕಂಸ ಒಬ್ಬ ಬಾಲಕನ ಪೆಟ್ಟಿಗೆ ಮೃತನಾಗಿ ತನ್ನ ಮುಖವನ್ನು ತೋರಿಸಲು ಬಹಳ ನಾಚಿದವನೆಂಬಂತೆ ಉಗ್ರವಾದ ಅಂಧಂತಮಸ್ಸಿಗೆ ತೆರಳಿದ; (ಅವನೊಳಗಿದ್ದ) ಮತ್ತೊಬ್ಬನು, ತನ್ನ ವೈರಿಯೊಂದಿಗೆ ಕೂಡಿದ್ದ ನನ್ನನ್ನು ಶ್ರೀಹರಿಯು ಕರುಣೆಯಿಂದ ಸ್ವೀಕರಿಸಿದ ಎಂದು ಶ್ರವಣೀಯವಾದ, ಭವ್ಯವಾದ ಉತ್ಸವದಿಂದ ಕೂಡಿದವನಾಗಿ ಶ್ರೀಹರಿಯ ಲೋಕಕ್ಕೆ ತೆರಳಿದ.

ವಿ. : ೧. ಕಂಸನು ಅಂಧಂತಮಸ್ಸಿಗೆ ತೆರಳಿದರೆ, ಅವನೊಳಗೆ ಆವಿಷ್ಟರಾಗಿದ್ದ [3]ಭೃಗುಮುನಿ ವೈಕುಂಠಕ್ಕೆ ತೆರಳಿದರು ಎಂದರ್ಥ; ಪೋತ - ಶಿಶು.

೨. 'ದ್ವಿಷಾ ಯುಕ್ತಂ ಮಾಂ' ಎಂಬ ಮಾತಿನಲ್ಲಿ ಪೂತನಿಯ ಸಂಹಾರದ ಪ್ರಸಂಗದಲ್ಲಿ ಬಂದಿರುವ ವಿಚಾರದ ಸಂಗ್ರಹವನ್ನು ಕಾಣಬಹುದು:

---

೧. ಸ ನಿತ್ಯದೋದ್ವಿಗ್ನಧಿಯಾ ತಮೀಶ್ವರಂ ಪಿಬನ್ನದನ್ ವಾ ವಿಚರನ್ ಸ್ವಪನ್ ಶ್ವಸನ್ ।
ದದರ್ಶ ಚಕ್ರಾಯುಧಮಗ್ರತೋ ಯತಸ್ತದೇವ ರೂಪಂ ದುರವಾಪಮಾಪ ॥ -ಭಾಗ(೧೦/೪೨/೩೭)

೨. ದೇಹೇ ತು ಯೋಽಭವದಮುಷ್ಯ ರಮೇಶಬಂಧುರ್ವಾಯುಃ ಸ ಕೃಷ್ಣತನುಮಾಶ್ರಯದನ್ಯಪಾಪಮ್ ।
ದೈತ್ಯಂ ಚಕರ್ಷ ಹರಿರತ್ರ ಶರೀರಸಂಸ್ಥಂ ಪಶ್ಯತ್ಸು ಕಂಜಜಮುಖೇಷು ಸುರೇಷ್ವನಂತಃ ॥
-ಮ.ಭಾ.ತಾ.ನಿ.(೧೩./೧೩.೧)

೩. ಯಥಾ ಮಹೋತ್ಸವೇ ವೀಥ್ಯಾಂ ಸ್ವಾತ್ಮಾನಮಾಘೋಷಯಂತಿ ತಥೇತಿ ಭಾವಃ। -ವ್ಯಾ.

ವಿದ್ವೇಷಿಜೀವಕೃತಸಂಗಮಪಿ ಸ್ವಭಕ್ತಂ ಕೃಷ್ಣೋ ವ್ಯಮೋಚಯದಹೋ ಕರುಣಾಂಬುರಾಶಿಃ।
ಕಿನ್ನಾಮ ತದ್ರಹಿತಭಕ್ತಜನಾನಿತಿ ಸ್ಮ ಕೈಮುತ್ಯಮೂಹಯತ ಸತ್ಯವತೀಸುತೋಕ್ತ್ಯಾ ॥ (೨/೫೮)

೩. ತಮಸ್ಸಿನಲ್ಲಿ ಅಲ್ಲಿಯವರು ತಮ್ಮನ್ನು ಪರಸ್ಪರ ಕಾಣದಷ್ಟು ಕತ್ತಲೆ ತುಂಬಿರುವುದು ಎಂಬುದನ್ನು 'ಅಂಧಂತಮಃ' ಎಂಬ ಪದದಿಂದ ಸೂಚಿಸಿರುವರು[೧].

೪. ಶ್ರೀವಾದಿರಾಜರ ಭೂಗೋಳನಿರ್ಣಯದಲ್ಲಿ ಅಂಧಂತಮಸ್ಸಿನ ವಿಶೇಷವರ್ಣನೆಯು ಬಂದಿದೆ[೨].

**ಕಂಸನ ಶವವನ್ನು ತಬ್ಬಿ ಗೋಳಾಡಿದ ಅವನ ಪತ್ನಿ**

**ಸಂಚೂರ್ಣಿತಾಂಗಾನ್ ಕತಿಚಿತ್ ಸ ಹತ್ವಾ**
**ಭಿನ್ನಾಂಗಸಂಧೀಂಶ್ಚ ತಥಾ ನ ಕಂಸಮ್ ।**

---

೧. ಪರಸ್ಪರದರ್ಶನಶೂನ್ಯಂ ತಮಃ ... । - ವ್ಯಾ.

೨. ಶಿಲಾಭೂತತಮೋರೂಪಂ ಹಿಮಾನೀವ ಶಿಲಾತ್ಮಿಕಾ ॥
ನ ಚೇದ್ದ್ವಾರಂ ಕುತಶ್ಚಕ್ಷೇ ಚಕ್ರೇಣ ಯದುಪುಂಗವಃ।
ಅನಾದಿಕಾಲತಃ ಪ್ರಾಪ್ತಾಃ ಕಲ್ಯಾದ್ಯಾಸ್ತತ್ರ ದಾನವಾಃ॥
ಅಸಂಖ್ಯಾತಾಃ ಕಿಲಾಶ್ನಂತಿ ಯಾತನಾಸ್ತೀವ್ರವೇದನಾಃ।
ಲಯೇಽಪಿ ಮುಕ್ತಿವದಿದಂ ವಿಷ್ಣ್ವಕ್ತಿಷ್ಪತ್ಯನಶ್ವರಮ್ ॥
ತದ್ವಾ ಜೀವಾ ಏವ ತದಾ ವಿಶಂತಿ ಜಠರಂ ಹರೇಃ।
ತತ್ರಾಪಿ ದುಃಖರೂಪತ್ವಾದಕ್ಷಿಕುಕ್ಷಿಶಿರೋವ್ಯಥಾಃ॥
ಆಧಿವ್ಯಾಧೀಂಶ್ಚ ಬಹವೋ ಭುಂಕ್ತೇ ಸ್ವಶರೀರಗಾನ್ ।
ಹರ್ಯಾಜ್ಞಯಾ ಸೃಷ್ಟಿಕಾಲೇ ಪತಂತ್ಯತ್ರ ಕಿಲಾಖಿಲಾಃ॥
ಅಗ್ನಿಶಸ್ತ್ರಶಿಲಾಕ್ಷೇಪರೂಕ್ಷಪಕ್ಷಿಕೃತಾ ವ್ಯಥಾಃ।
ವಿಣ್ಮೂತ್ರಪೂಯಕಲಿಲತಮಃಕೂಪೇಷ್ವನೇಕಧಾ॥
ನಾನಾವಿಧಾ ಯಾತನಾಶ್ಚ ಪುನರ್ಭೋಕ್ತುಂ ಹಿ ಪೂರ್ವವತ್ ।
ಯದ್ಯಪ್ಯಂಧೇ ತಮಸ್ಯಸ್ಮಿನ್ ಪತಿತಾಃ ಪಾಪಿನೋ ಜನಾಃ॥
ನಿತ್ಯದುಃಖಾತ್ಮಕಾ ಮಿಥ್ಯಾಜ್ಞಾನಮಾತ್ರಸ್ವರೂಪಿಣಃ।
ಅಚ್ಛೇದ್ಯಾಭೇದ್ಯದೇಹತ್ವಾತ್ ತಥಾಽಪ್ಯಸ್ತ್ರಾದಿಪಾತನೈಃ॥
ವಜ್ರಕಲ್ಪಜಲೂಕಾದಿರದನೈಃ ಪಾವಕೋಷ್ಣಗಾ।
ಶಿಲಾಪಾತೈಃ ಪೂಯಮೂತ್ರಮಲದುರ್ಗಂಧತೋಽಪಿ ಚ॥
ರುದತಾಂ ಕ್ರೂರಶಬ್ದೈಶ್ಚ ತಿಕ್ತಾತ್ಯುಷ್ಣರಸಾದಿನಾ।
ವಕ್ತ್ರನೇತ್ರಶ್ರೋತ್ರನಾಸಾಗಾತ್ರೇಷು ಚ ಪುನಃ ಪುನಃ॥
ವ್ಯಕ್ತೀಭವಂತಿ ನಿತ್ಯಾನಿ ದುಃಖಾನ್ಯೇವ ಕ್ಷಣೇ ಕ್ಷಣೇ।
ಮುಕ್ತಾನಾಂ ಮೌಕ್ತವಿಷಯೈರ್ವ್ಯಕ್ತಾನೇಕಪ್ರಮೋದವತ್ ॥
ತತ್ಪಂಚಕಷ್ಟಮಿಥ್ಯಾಪರ್ಯುತ್ಪಂಚೇಂದ್ರಿಯದುಃಖದಮ್ ।
ರುದತಾಂ ಕ್ರೂರಶಬ್ದೈಶ್ಚ ಕ್ರೂರಶಸ್ತ್ರಾದಿದರ್ಶನೈಃ॥
ಕ್ರೂರಗಂಧೈಃ ಕ್ರೂರರಸೈಃ ಕ್ರೂರಾಸ್ತ್ರಸ್ಪರ್ಶನೈರಪಿ। - ಭೂಗೋಳವರ್ಣನೆ (೮೧-೯೩.)

ಜಘಾನ ಕಾಯಂ ಪರಿರಭ್ಯ ದೋರ್ಭ್ಯಾಂ
[1]ಪತ್ನ್ಯಾ ರುದಂತ್ಯಾ ಇವ ದರ್ಶಯಿಷ್ಯನ್ ॥ ೬೩ ॥

ಕೆಲವರನ್ನು ಪುಡಿಪುಡಿಯಾದ ಅವಯವಗಳನ್ನುಳ್ಳವರಾಗಿ, ಛಿನ್ನಭಿನ್ನವಾದ ಕೀಲುಗಳುಳ್ಳವರನ್ನಾಗಿ ಸಂಹರಿಸಿದ ಶ್ರೀಕೃಷ್ಣನು ಕಂಸನನ್ನು ಹಾಗೆ ಕೊಲ್ಲಲಿಲ್ಲ; ಎರಡೂ ತೋಳುಗಳಿಂದ ತಬ್ಬಿ ರೋದಿಸುವ ಅವನ ಪತ್ನಿಯೊಂದಿಗೆ ಕಂಸನ ದೇಹವನ್ನು ಜಗತ್ತಿಗೆ ತೋರಿಸಲೋ ಎಂಬಂತೆ.

ವಿ. : ೧. ಚಾಣೂರಾದಿ ಕಂಸನ ಭೃತ್ಯರನ್ನು ಛಿನ್ನಭಿನ್ನರನ್ನಾಗಿ ಸಂಹರಿಸಿದ್ದ ಶ್ರೀಕೃಷ್ಣನು [2]ಕಂಸನನ್ನು ಹಾಗೆ ತುಂಡರಿಸದೆ ಬಿಟ್ಟದ್ದು ಅವನ ಪತ್ನಿ ಅವನನ್ನು ತಬ್ಬಿ ಗೋಳಾಡುವುದನ್ನು ಜಗತ್ತು ಕಂಡು ಪಾಠ ಕಲಿಯಲಿ ಎಂಬ ಉದ್ದೇಶದಿಂದ ಎಂದರ್ಥ.

೨. ಭೀಮಸೇನನು ದುರ್ಯೋಧನಾದಿ ಕೌರವರನ್ನು ಛಿನ್ನಭಿನ್ನರನ್ನಾಗಿ ಮಾಡದೆ, ಎದೆ ಬಗೆದು, ತೊಡೆಮುರಿದು, ಸಂಹರಿಸಲು ಸಹ ಇದೇ ರೀತಿಯ ಕಾರಣವನ್ನು ಊಹಿಸಬಹುದು ; ಶ್ರೀಕೃಷ್ಣ ದ್ರೌಪದಿಗೆ ವಚನನೀಡಿದ್ದು ದುರ್ಯೋಧನಾದಿಗಳ ಪತ್ನಿಯರು ಮುಕ್ತಕೇಶಿಯರಾಗಿ ಅವರ ಗಂಡಂದಿರ ಶವಗಳನ್ನು ತಬ್ಬಿಕೊಂಡು ರೋದಿಸುವುದನ್ನು ತೋರಿಸುವುದಾಗಿ ಎಂದೇ ಆಗಿದ್ದಿತಲ್ಲವೆ :

ರೋದಿಷ್ಯಂತಿ ಸ್ತ್ರಿಯೋ ಹ್ಯೇವಂ ಯೇಷಾಂ ಕ್ರುದ್ಧಾಽಸಿ ಭಾಮಿನಿ ।
ಭೀಭತ್ಸುಶರಸಂಛಿನ್ನಾನ್ ಶೋಣಿತೌಘಪರಿಪ್ಲುತಾನ್ ।
ನಿಹತಾನ್ ವಲ್ಲಭಾನ್ ವೀಕ್ಷ್ಯ ಶಯಾನಾನ್ ವಸುಧಾತಲೇ ॥
–ಮಹಾಭಾರತ (ವನ.೧೨/೧೨೮)

೩. ಕಂಸವಧೆಯಿಂದ ತಿಳಿಯುವ ಸಂದೇಶವನ್ನು ಶ್ರೀಮದಾಚಾರ್ಯರು ಹೀಗೆ ಸ್ಫುಟಪಡಿಸಿರುವರು :

ದ್ವೇಷಾತ್ ಸ ಸರ್ವಜಗದೇಕಗುರೋಃ ಸ್ವಕೀಯೈಃ ಪೂರ್ವಂ ಪ್ರಮಾಪಿತಜನೈಃ ಸಹಿತಃ ಸಮಸ್ತೈಃ ।
ಧಾತ್ರ್ಯಾದಿಭಿಃ ಪ್ರತಿಯಯೌ ಕುಮತಿಸ್ತಮೋಽಂಧಮನ್ಯೇಽಪಿ ಚೈವಮುಪಯಾಂತಿ ಹರಾವಭಕ್ತಾಃ ॥
ನಿತ್ಯಾತಿದುಃಖಮನಿವೃತ್ತಿಸುಖವ್ಯಪೇತಮಂಧಂತಮೋ ನಿಯತಮೇತಿ ಹರಾವಭಕ್ತಃ ।
ಭಕ್ತೋಽಪಿ ಕಂಜಜಗಿರೀಶಮುಖೇಷು ಸರ್ವಧರ್ಮಾರ್ಣವೋಽಪಿ ನಿಖಿಲಾಗಮನಿರ್ಣಯೇನ ॥
ಯೋ ವೇತ್ತಿ ನಿಶ್ಚಿತಮತಿರ್ಹರಿಮಬ್ಜಜೇಶಪೂರ್ವಾಖಿಲಸ್ಯ ಜಗತಃ ಸಕಲೇಽಪಿ ಕಾಲೇ ।
ಸೃಷ್ಟಿಸ್ಥಿತಿಪ್ರಲಯಮೋಕ್ಷದಮಾತ್ಮತಂತ್ರಂ ಲಕ್ಷ್ಮ್ಯಾ ಅಪೀಶಮತಿಭಕ್ತಿಯುತಃ ಸ ಮುಚ್ಯೇತ್ ॥
ತಸ್ಮಾದನಂತಗುಣಪೂರ್ಣಮಮುಂ ರಮೇಶಂ ನಿಶ್ಚಿತ್ಯ ದೋಷರಹಿತಂ ಪರಯೈವ ಭಕ್ತ್ಯಾ ।
ವಿಜ್ಞಾಯ ದೈವತಗಣಾಂಶ್ಚ ಯಥಾಕ್ರಮೇಣ ಭಕ್ತ್ಯಾ ಹರೇರಿತಿ ಸದೈವ ಭಜೇತ ಧೀರಃ ॥

---

೧. ತೇಷಾಂ ಸ್ತ್ರಿಯೋ ಮಹಾರಾಜ ಸುಹೃನ್ಮರಣದುಃಖಿತಾಃ ।
ತತ್ರಾಭೀಯುರ್ವಿನಿಘ್ನಂತ್ಯಃ ಸ್ವಶೀರ್ಷಾಣ್ಯಶ್ರುಲೋಚನಾಃ ॥
ಶಯಾನಾನ್ ವೀರಶಯ್ಯಾಯಾಂ ಪತೀನಾಲಿಂಗ್ಯ ಶೋಚತೀಃ ।
ವಿಲೇಪುಃ ಸುಸ್ವರಂ ನಾರ್ಯೋ ವಿಸೃಜಂತ್ಯೋ ಮುಹುಃ ಶುಚಃ ॥ –ಭಾಗ. (೧೦/೪೨/೪೩,೪೪)

೨. ಮಂಚಾತ್ ಅಧಃ ಪತನವೇಗೇನೈವ ಕಂಸಂ ಗತಾಸುಂ ಚಕಾರೇತಿ ಭಾವಃ । –ವ್ಯಾ.

ನಿಹತ್ಯ ಕಂಸಮೋಜಸಾ ವಿಧಾತೃಶಂಭುಪೂರ್ವಕೈಃ।
ಸ್ತುತಃ ಪ್ರಸೂನವರ್ಷಿಭಿರ್ಮುಮೋದ ಕೇಶವೋಽಧಿಕಮ್ ॥
ಸದೈವ ಮೋದರೂಪಿಣೋ ಮುದೋಕ್ತಿರಸ್ಯ ಲೌಕಿಕೀ।
ಯಥೋದಯೋ ರವೇರ್ಭವೇತ್ ಸದೋದಿತಸ್ಯ ಲೋಕತಃ॥

ಅನಂತಚಿತ್ಸುಖಾರ್ಣವಃ ಸದೋದಿತೈಕರೂಪಕಃ।
ಸಮಸ್ತದೋಷವರ್ಜಿತೋ ಹರಿರ್ಗುಣಾತ್ಮಕಃ ಸದಾ॥ -ಮ.ಭಾ.ತಾ.ನಿ.(೧೩/೧೩.೨-೧೩.೮)

## ವಿಶ್ರಾಂತಿತೀರ್ಥದಲ್ಲಿ ಶ್ರೀಕೃಷ್ಣ

**ಯಮಿವೃಂದಮನಶ್ಚಂದ್ರಃ ಶ್ರಮಂ ಪರಿಹರನ್ನಿವ।**
**ಯಮುನಾಕೂಲಮಗಮದ್ವಿಮಲೀಕರ್ತುಮಂಜಸಾ ॥ ೬೪ ॥**

ಮುನಿವೃಂದದ ಮನಸ್ಸಿಗೆ ಚಂದ್ರನಂತಹ ಶ್ರೀಕೃಷ್ಣನು ಶ್ರಮವನ್ನು ಪರಿಹರಿಸಿಕೊಳ್ಳಲೋ ಎಂಬಂತೆ ಅದನ್ನು ಚೆನ್ನಾಗಿ ನಿರ್ಮಲಗೊಳಿಸಲೆಂದು ಯಮುನಾ ತೀರಕ್ಕೆ ತೆರಳಿದ.

ವಿ. : ೧. ಶ್ರೀಕೃಷ್ಣನು ಕಂಸನನ್ನು ಸಂಹರಿಸಿದ ಬಳಿಕ ಯಮುನಾ ತೀರಕ್ಕೆ ತೆರಳಿದ ಎಂದರ್ಥ. ಮೇಲ್ನೋಟಕ್ಕೆ ಅದು ಶ್ರಮ ಪರಿಹರಿಸಿಕೊಳ್ಳಲು ಮಾಡಿದ ಕೆಲಸ ಎಂಬಂತೆ ಕಾಣುವುದು ; ಅದನ್ನು ಪಾವನಗೊಳಿಸುವುದು ಶ್ರೀಕೃಷ್ಣನ ಮುಖ್ಯ ಉದ್ದೇಶವಾಗಿದ್ದಿತು ಎಂದು ಭಾವ.

೨. ಶ್ರೀಮನ್ಮಧ್ವಾಚಾರ್ಯರು ವಿವಿಧ ತೀರ್ಥಗಳಲ್ಲಿ ಸ್ನಾನ ಮಾಡುತ್ತಿದ್ದುದೂ ಸಹ ಇದೇ ರೀತಿಯಲ್ಲಿ ಅವುಗಳ ಶುದ್ಧೀಕರಣ ಪ್ರಕ್ರಿಯೆಯಾಗಿದ್ದಿತು ಎಂಬ ಮಾತು ಸುಮಧ್ವವಿಜಯದಲ್ಲಿದೆ:

ಬುದ್ಧಿಶುದ್ಧಿಕರಗೋನಿಕರಾಢ್ಯಂ ತೀರ್ಥಜಾತಮುಭಯಂ ಚ ಧರಣ್ಯಾಮ್ ।
ಆತ್ಮಮಜ್ಜನತ ಏವ ನಿಕಾಮಂ ಪರ್ಯಶೋಧಯದಮಂದಮನೀಷಃ॥ (೬/೩.೫)

೩.. ಶ್ರೀಕೃಷ್ಣನು ಮುನಿವೃಂದಕ್ಕೆ ಆನಂದನೀಡುವ ಚಂದ್ರನಂತಹವನು. ಚಂದ್ರನ ಬೆಳದಿಂಗಳಿನಿಂದ ಇತರರ ಶ್ರಮವೇ ಪರಿಹಾರವಾಗುವಾಗ ಸ್ವತಃ ಚಂದ್ರಸದೃಶನಾದ ಕೃಷ್ಣನಿಗೆ ಶ್ರಮವು ಸರ್ವಥಾ ಇಲ್ಲ ಎಂಬುದನ್ನು 'ಯಮಿವೃಂದಮನಶ್ಚಂದ್ರಃ' ಎಂಬ ಪದದಿಂದ ಸೂಚಿಸಿರುವರು.

೪. ಶ್ರೀಕೃಷ್ಣನು ಹಾಗೆ ಸಂದರ್ಶಿಸಿದ ಯಮುನಾ ತೀರದ ಪ್ರದೇಶವು ವಿಶ್ರಾಂತಿತೀರ್ಥ (ವಿಶ್ರಾಮ್‌ಘಾಟ್) ಎಂದು ಪ್ರಸಿದ್ಧವಾಗಿದೆ; ಯಮಿ - ಯತಿ ,ಮುನಿ ; ಕೂಲ - ತೀರ.

೫. ವಾಸಿಷ್ಠಕೃಷ್ಣರೂಪದಿಂದ ಯಮುನಾದ್ವೀಪದಲ್ಲಿ ಅವತರಿಸಿದ್ದ ಶ್ರೀಹರಿಯು ಯಾದವಕೃಷ್ಣರೂಪದಿಂದ ಯಮುನಾನದಿಯಲ್ಲಿ ಬಗೆಬಗೆಯಲ್ಲಿ ವಿಹರಿಸಿದ್ದು ಅಪೂರ್ವಸಂಗತಿ; ಕೃಷ್ಣರೂಪದಿಂದ ಕಾಲೀಯಮಥನ ಮೊದಲಾದವುಗಳ ಮೂಲಕ ಯಮುನೆಯನ್ನು ನಿರ್ಮಲಗೊಳಿಸಿದ ಅವನು ವ್ಯಾಸರೂಪದಿಂದ ಯಮುನೆಯ ಸಂಕೇತದಂತಿದ್ದ ಶಾಸ್ತ್ರಪ್ರಪಂಚವನ್ನು ಪರಿಶುದ್ಧಗೊಳಿಸಿದ; ಹೀಗೆ ಈ ಎರಡುರೂಪಗಳ ಕಾರ್ಯವೂ ಒಂದೇ ತೆರನಾಗಿರುವುದು ವಿಶೇಷ.

೬. ಆ ತೀರ್ಥವನ್ನು ಸಂದರ್ಶಿಸುವ ಭಕ್ತಜನರ ಪಾಪಗಳು ವಿಶ್ರಾಂತಿ ಪಡೆಯುವವು ಎಂಬುದನ್ನು ಆ ಹೆಸರು ಸೂಚಿಸುವುದು ಎಂಬ ವಿಶೇಷಾಂಶ ತೀರ್ಥಪ್ರಬಂಧದಲ್ಲಿದೆ :

ಸಂಸಾರಸಂಸರಣಖೇದವಿಭೇದಕಾರಿ ಕಂಸಾರಿಸಶ್ರಿತತಟೀಗತಚಾರುವಾರಿ ।
ವಿಶ್ರಾಂತಿತೀರ್ಥಮಮಲಂ ಹರಿಲೋಕವಾಸವಿಶ್ರಾಂತಿದಂ ದಿಶತು ನಃ ಸಕಲೇಪ್ಸಿತಾನಿ ॥
ಮಖಕೋಟಿಸಹಸ್ರಾಣಾಂ ಮುಖಂ ಮ್ಲಾನಯತೋ ಮುಹುಃ ।
ಅಘಶ್ರಾಂತಿಕರಸ್ಯಾಸ್ಯ ಕಥಂ ವಿಶ್ರಾಂತಿತೀರ್ಥತಾ ॥ -ತೀರ್ಥಪ್ರಬಂಧ (೨/೩.೨,೩.೩.)

## ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮೇಕಾದಶಃ ॥ ೬೫ ॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಏಕಾದಶಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹನ್ನೊಂದನೆಯ ಸರ್ಗವು ಮುಕ್ತಾಯವಾಯಿತು.

*****

# ೧೨. ದ್ವಾದಶಃ ಸರ್ಗಃ

(ಉಗ್ರಸೇನನಿಗೆ ರಾಜ್ಯಪ್ರಾಪ್ತಿ - ೧-೬; ಶ್ರೀಕೃಷ್ಣನ ಮಹಿಮೆ - ೭-೧೦; ಮಧುರೆಯ ವರ್ಣನೆ - ೧೧, ೧೨; ವಸುದೇವದೇವಕಿಯರಿಗೆ ಸಾಂತ್ವನ - ೧೩-೧೭; ಶ್ರೀಕೃಷ್ಣ - ಬಲರಾಮರ ಉಪನಯನ - ೧೮-೨೮; ಶ್ರೀಕೃಷ್ಣಬಲರಾಮರ ಗುರುಕುಲವಾಸ - ೨೯,೩೦; ಗುರುಪುತ್ರೋಜ್ಜೀವನ - ೩೧-೩೮; ಮಧುರೆಯ ವರ್ಣನೆ - ೩೮; ಅಮಾತ್ಯರು ಉಪದೇಶಿಸಿದ ರಾಜನೀತಿ-೪೯-೬೯; ಸರ್ಗೋಪಸಂಹಾರ - ೭೦)

### ಉಗ್ರಸೇನನಿಗೆ ಪಟ್ಟಾಭಿಷೇಕ

ತತಃ ಸದಸ್ಯುಗ್ರಸೇನಮಾಹೂಯ ಮಧುರಾಪತಿಃ ।
ಯದೂನಾಮಧಿಪಂ ಚಕ್ರೇ ಮುದಾ ಪ್ರಣತವತ್ಸಲಃ ॥ ೧ ॥

ಬಳಿಕ ಮಧುರಾಧೀಶನಾದ ಭಕ್ತವತ್ಸಲನಾದ ಶ್ರೀಕೃಷ್ಣ ಮುದದಿಂದ ಸಭೆಗೆ ಉಗ್ರಸೇನನನ್ನು ಕರೆತರಿಸಿ, ಅವನನ್ನು ಯಾದವರ ರಾಜನನ್ನಾಗಿ ಮಾಡಿದ; (ಸದಸ್-ಸಭೆ; ಅಧಿಪ-ರಾಜ).

### ಶಾಸ್ತ್ರಸಾಮ್ರಾಜ್ಯವೇ ನಿಜವಾದ ಸಾಮ್ರಾಜ್ಯ

ರಾಜ್ಯಂ ಮೇ ತವ ಶಾಸ್ತ್ರಮೇವ ನಿಯಮಾಃ ಸೇನಾ ತಿತಿಕ್ಷಾಽಂಗನಾ
ನಿತ್ಯಂ ಭಕ್ತಿವಿರಕ್ತಿದೈನ್ಯಶಮನಜ್ಞಾನಾದಿಲಾಭೋ ಧನಮ್[1] ।
ಮಚ್ಛ್ರೋತ್ರಾಂತಿಕಸಂಗತೇ ತವ ಯಶೋಧಾರೇ ಸ್ಫುರಚ್ಚಾಮರೇ
ಛತ್ರಂ ಮೂರ್ಧ್ನಿ ಕೃತಂ ಭವಾತಪಹರಂ ಹಸ್ತಾರವಿಂದಂ ತವ ॥ ೨ ॥

ನಿನ್ನ ಶಾಸ್ತ್ರವೇ ನನಗೆ ರಾಜ್ಯ ; ವೈಷ್ಣವವ್ರತಗಳೇ ಸೇನೆ; ಸಹನೆಯೇ ನಾರಿ; ಸದಾ ಭಕ್ತಿ , ವಿರಕ್ತಿ, ದೈನ್ಯ-ಕಳೆಯುವ-ಜ್ಞಾನ ಮೊದಲಾದವುಗಳ ಪ್ರಾಪ್ತಿಯೇ ಸಂಪತ್ತು ; ನನ್ನ ಕಿವಿಗೆ ಬೀಳುವ ನಿನ್ನ ಯಶೋಧಾರೆಯೇ ಹೊಳೆಯುವ ಚಾಮರಗಳು ; ನನ್ನ ತಲೆಯ ಮೇಲೆ ಇರಿಸಿರುವ, ಭವದ ಬೇಗೆಯನ್ನು ಪರಿಹರಿಸುವ ನಿನ್ನ ಕರಾರವಿಂದವೇ ನನಗೆ ಶ್ವೇತಚ್ಛತ್ರ[2].

ವಿ. : ೧. ಶ್ರೀಕೃಷ್ಣಾನುಗ್ರಹದಿಂದ ರಾಜ್ಯಪಡೆದ ಉಗ್ರಸೇನ ತನಗೆ ಆ ರಾಜ್ಯದ ಪ್ರಾಪ್ತಿಗಿಂತಲೂ ಮಿಗಿಲಾದದ್ದು ಶ್ರೀಕೃಷ್ಣನ ದಯೆ ಎಂಬುದನ್ನು ಬಗೆಬಗೆಯಾಗಿ ನಿರೂಪಿಸುವ ಪರಿ ಇಲ್ಲಿದೆ[3]:

---

೧. ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥ -ಗೀತಾಭಾಷ್ಯೋದ್ಧೃತ (೬/೯) ಮನುಸ್ಮೃತಿವಚನ

೨. ಈ ಕೃತಿಯ ಕೊನೆಯಲ್ಲಿ 'ಸ್ವಹಸ್ತಕಮಲಚ್ಛತ್ರಂ ಪ್ರದದ್ಯಾತ್ ಪ್ರಭುಃ' (೧೯/೩೯) ಎಂದು ತಿಳಿಸಿರುವುದನ್ನು ಇಲ್ಲಿ ಗಮನಿಸಬಹುದು.

೩. ಯಥಾ ರಾಜ್ಯಾಧಿಪತಿಃ ಜಗತ್ಪೂಜ್ಯಃ ಏವಂ ವೇದಾಂತಾಭ್ಯಾಸೀ ಸರ್ವಜನಪೂಜ್ಯ ಇತಿ ಭಾವಃ । -ವ್ಯಾ.

೨. ಭೌತಿಕ ರಾಜ್ಯಕ್ಕಿಂತ ಶಾಸ್ತ್ರ ಸಾಮ್ರಾಜ್ಯ ಮಿಗಿಲು; [೧]ಸೇನೆಯು ಭೌತಿಕರಾಜ್ಯವನ್ನು ಸಾಧಿಸಿಕೊಡುವಂತೆ ವ್ರತನಿಯಮಗಳು ಅಂತಃಕರಣಶುದ್ಧಿಗೆ ನೆರವಾಗಿ ಶಾಸ್ತ್ರಸಾಮ್ರಾಜ್ಯವನ್ನು ಸಾಧಿಸಿ ಕೊಡುವ ಸಾಧನಗಳು. [೨]ಸಹನಶೀಲನಾದವನಿಗೆ ಪತ್ನಿಯೊಂದಿಗೆ ಹೇಗೋ ಹಾಗೆ ಸದಾ ಸುಖ; [೩]ಧನವುಳ್ಳವರಿಗೆ ದಾರಿದ್ರ್ಯಾದಿ ಕ್ಲೇಶಗಳು ಇರದಿರುವಂತೆ ಭಕ್ತಿ, ವಿರಕ್ತಿ, ಜ್ಞಾನ ಮೊದಲಾದ ಸಂಪತ್ತನ್ನು ಹೊಂದಿದವರಿಗೆ ಎಂದೂ ಕ್ಲೇಶಗಳಿರವು. ನಿರ್ಮಲವಾದ ಕೀರ್ತಿಯು [೪]ರಾಜಚಿಹ್ನೆಯಾದ ಹೊಳೆಯುವ ಚಾಮರಗಳಂತೆ ಶೋಭಿಸುವುದು; ಶ್ರೀಕೃಷ್ಣನ ಹಸ್ತಕಮಲದ ಆಸರೆಯೇ ಭವತಾಪ ನೀಗುವ ಶ್ವೇತಚ್ಛತ್ರ ಎಂಬುದು ಇಲ್ಲಿಯ ಭಾವ.

೩. ಆಧ್ಯಾತ್ಮಿಕ ಸಂಪತ್ತು ಲೌಕಿಕ ಸಂಪತ್ತಿಗಿಂತ [೫]ಅದೆಷ್ಟು ಮಿಗಿಲು ಎಂಬುದನ್ನು ಇಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ. ಇಂತಹ ಆಧ್ಯಾತ್ಮಿಕ ಸಂಪತ್ತನ್ನು ಪಡೆದವರು ಚಕ್ರವರ್ತಿಗಳಂತೆ ಮಾನ್ಯರು ಎಂದರ್ಥ ; ನಿಯಮಾಃ - ವ್ರತಗಳು; ತಿತಿಕ್ಷಾ - ಸಹನೆ.

**ತ್ವತ್ಕ್ಷೇತ್ರಂ ಮಮ ದುರ್ಗಮಾರ್ಯಕರುಣಾ ವರ್ಮ ತ್ವದಂಘ್ರಿಧ್ವಜಾ-**
**ಸಕ್ತಃ ಸೌಮ್ಯ ಮನೋರಥೋ ಮಮ ರಥಶ್ಛಂದಾಂಸ್ಯಮಂದಾ ಹಯಾಃ ।**
**ಪ್ರಾಣಃ ಸಾರಥಿರಾಯುಧಂ ತ್ವದಭಿಧಾ ಜೇಯಃ ಕಲಿಸ್ತದ್ಭಟಾಃ**
**ಷಟ್ ತೇಷಾಂ ನಗರೀ ಚ ಸಂಸೃತಿರಥೋ ಲಭ್ಯಾ ವಿಮುಕ್ತಿಃ ಪುರೀ ॥ ೩ ॥**

ಎಲೈ ಸೌಮ್ಯ ! ನಿನ್ನ ಕ್ಷೇತ್ರವೇ ನನಗೆ ಕೋಟೆ; ಗುರುಹಿರಿಯರ ಕರುಣೆಯೇ ಕವಚ; ನಿನ್ನ ಪಾದಕಮಲಗಳೆಂಬ ಧ್ವಜದಲ್ಲಿ ಆಸಕ್ತವಾದ ಮನೋರಥವೇ ನನಗೆ ರಥವು; ನಾಲ್ಕು ವೇದಗಳೇ ಶೀಘ್ರಗಾಮಿಯಾದ ಕುದುರೆಗಳು; ಮುಖ್ಯಪ್ರಾಣನೇ ಸಾರಥಿ; ನಿನ್ನ ನಾಮವೇ ಆಯುಧ; ಕಲಿಯೇ ಜಯಿಸಬೇಕಾದ ಶತ್ರು; (ಕಾಮಕ್ರೋಧಾದಿಗಳೆಂಬ) ಆರು ಜನರು ಅವನ ಭಟರು; ಸಂಸಾರವೇ ಆ ಶತ್ರುಗಳ ಪಟ್ಟಣ; ಮುಕ್ತಿಯೇ ನಾನು ಪಡೆಯಬೇಕಾದ ನಗರ.

ವಿ. : ೧. [೬]ಕೋಟೆಯಲ್ಲಿ ನೆಲೆಸಿದವನಿಗೆ ಶತ್ರುಗಳಿಂದ ಆಪತ್ತು ಒದಗದಿರುವಂತೆ ವೈಷ್ಣವ-ಕ್ಷೇತ್ರಗಳಲ್ಲಿ ನೆಲೆಸುವವರಿಗೆ ಶತ್ರುಗಳ ಭಯವಿರದು; [೭]ಗುರುಹಿರಿಯರ ಕರುಣೆಯ ಕವಚ

---

೧. ಯಥಾ ಸೇನಯಾ ರಾಜ್ಯಸಿದ್ಧಿಃ ತಥಾ ನಿಯಮೇನ ಶುದ್ಧಾಂತಃಕರಣಸ್ಯ ಶಾಸ್ತ್ರಸಂಪತ್ತಿರಿತಿ ಭಾವಃ। -ವ್ಯಾ.
೨. ಯಥಾ ನಾರ್ಯಾಮಭಿರತಸ್ಯ ಸುಖಂ ತಥಾ ಸಹನಶೀಲಸ್ಯ ಸರ್ವದಾ ಸುಖಮೇವೇತಿ ಭಾವಃ। -ವ್ಯಾ.
೩. ಯಥಾ ಧನವತಾಂ ನ ದಾರಿದ್ರ್ಯಾದಿಕ್ಲೇಶಃ ತಥಾ ವಿರಕ್ತ್ಯಾದಿಮತಾಂ ನ ಕುತಶ್ಚಿತ್ಕ್ಲೇಶ ಇತಿ ಭಾವಃ। -ವ್ಯಾ.
೪. ಯಥಾ ಚಾಮರಂ ರಾಜ್ಯಚಿಹ್ನಂ ಏವಂ ವೇದವಿಚಾರಚಿಹ್ನಂ ಗುರುಮುಖಾತ್ ಶ್ರೀಕೃಷ್ಣಸ್ಯ ಮಾಹಾತ್ಮ್ಯಶ್ರವಣಮೇವ। -ವ್ಯಾ.
೫. ನ ತು ನೈರ್ಗುಣ್ಯಶ್ರವಣಮಿತಿ ಭಾವಃ। -ವ್ಯಾ.
೬. ಯಥಾ ದುರ್ಗಾಶ್ರಿತಸ್ಯ ನ ಶತ್ರುಕೃತವಿಘ್ನಃ। ತಥಾ ವಿಷ್ಣುಕ್ಷೇತ್ರಮಾಶ್ರಿತ್ಯ ಸದ್ವಿದ್ಯಾಮಭ್ಯಸತಃ ಮೇ ನ ವಿಘ್ನಮಿತಿ ಭಾವಃ। -ವ್ಯಾ.
೭. ಯಥಾ ಕವಚಂ ನ ಶತ್ರುಶರೈಸ್ತಾಡ್ಯತೇ ತಥಾ ಗುರುಕೃಪಾವಾನ್ನ ಕಾಮಾದ್ಯುಪದ್ರವೈರಭಿಭೂಯತ ಇತಿ ಭಾವಃ। -ವ್ಯಾ.

ಧರಿಸಿದವರಿಗೆ ಕಾಮಾದಿಗಳ ಉಪದ್ರವವಿರದು; ಸಂಚಾರಕ್ಕೆ ರಥ ಅಗತ್ಯವಿರುವಂತೆ [೧]ಹರಿಚರಣಗಳ ಸ್ಮರಣೆಯ ಮನೋರಥವೇ ಇಷ್ಟಾರ್ಥಸಿದ್ಧಿಯ ಸಾಧನ; [೨]ರಥವು ಸಾಗಲು ಕುದುರೆಗಳಿರುವಂತೆ ನಾಲ್ಕು ವೇದಗಳು ಮನೋರಥಕ್ಕೆ ಕುದುರೆಗಳು; [೩]ಮುಖ್ಯಪ್ರಾಣನೇ ಮಾರ್ಗದರ್ಶಕನಾದ ಸಾರಥಿ; ಕಲಿಯೇ ಎದುರಾಳಿ; ಕಾಮಾದಿ ಅರಿಷಡ್ವರ್ಗಗಳು ಕಲಿಯ ಭಟರು; ಸಂಸಾರವೇ ಶತ್ರುವಿನ ನೆಲೆ; ಮೋಕ್ಷವೇ ತಲುಪಬೇಕಾದ ನಗರ.

೨. ಹಿಂದಿನ ಶ್ಲೋಕದಲ್ಲಿನ ಆಧ್ಯಾತ್ಮದ ಸಾಮ್ರಾಜ್ಯದ ವಿವರ ಇದರಲ್ಲಿ ಮುಂದುವರೆದಿದೆ.

೩.. ಉಗ್ರಸೇನನ ನೆಪದಲ್ಲಿ ಸಾಧಕರು ಹೊಂದಬೇಕಾದ ಅನುಸಂಧಾನದ ಪ್ರಕ್ರಿಯೆ ಇಲ್ಲಿ ಸೊಗಸಾಗಿ ನಿರೂಪಿತವಾಗಿದೆ.

೪. ಮತ್ತೊಂದು ರೀತಿಯಲ್ಲಿ ಇದು ''ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ'' ಎಂಬ ಮಾತಿಗೆ ನಿರೂಪಣೆಯಂತಿದೆ ; ಶ್ರೀಕೃಷ್ಣನ ವಾಕ್ಸುಧೆಯನ್ನು ಶ್ರವಣ-ಮಾಡಿದ ಉಗ್ರಸೇನ ಅವನ ಆದೇಶದಂತೆ ವಸುಧೆಯನ್ನು ಪಾಲಿಸಿದ ವಿಶೇಷ ಹಿರಿಮೆಯನ್ನು ಹೊಂದಿದವನು ಎಂಬುದು ಗಮನಾರ್ಹ.

೫. ಪ್ರಾಣಃ ಸಾರಥಿಃ ಎಂಬುದು ವಿಜ್ಞಾನಸಾರಥಿರ್ಯಸ್ತು ಎಂಬ ಕಠೋಪನಿಷತ್ತಿನ ಮಾತನ್ನು ಆಧರಿಸಿದೆ; ಪ್ರಕಾಶಸಂಹಿತೆಯಲ್ಲಿ ಸೂತ್ರನಾಮಕ ಶ್ರೀವಾಯುದೇವರೇ ಶ್ರೀಹರಿಯ ಸಾರಥಿ ಎಂಬ ಸ್ಪಷ್ಟವಚನವೂ ಇದೆ: **ರಥಿಕಂ ಶ್ರೀಹರಿಂ ಧ್ಯಾಯೇದ್ಯಂತಾರಂ ಸೂತ್ರನಾಮಕಮ್** ಹರಿಕಥಾಮೃತಸಾರದ **'ಮಾತರಿಶ್ವನು ದೇಹರಥದೊಳು ಸೂತನಾಗಿಹ ಸರ್ವಕಾಲದಿ ಶ್ರೀತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ'** ಎಂಬ ಮಾತು ಇವುಗಳ ಭಾವವಾಗಿದೆ. ಇದರಿಂದಾಗಿ **'ವಾದಿರಾಜರ ಕೋಶಕೊಪ್ಪುವ ಹರಿಕಥಾಮೃತಸಾರ'** ಎಂಬ ಮಾತು ಅರ್ಥವತ್ತಾದುದು ಎನ್ನಿಸುವುದು.

೬. ವಾಯುದೇವರು ಜ್ಞಾನಾಭಿಮಾನಿ ಎಂದು ತಂತ್ರಸಾರಸಂಗ್ರಹದಲ್ಲಿದೆ (೧/೫೩.); ಅದರಿಂದ 'ವಿಜ್ಞಾನಸಾರಥಿ' ಎಂಬುದಕ್ಕೆ ವಾಯುದೇವರು ಸಾರಥಿ ಎಂದು ಅರ್ಥವಾಗುವುದು.

**ಭಗವಂತನು ಗುಣಪೂರ್ಣ - ಭಕ್ತರು ಭಕ್ತಿಪೂರ್ಣರು**

**ಯಥಾ ತ್ವಂ ಸತತಂ ಪೂರ್ಣಃ ಸಾಮ್ರಾಜ್ಯಂ ನೇಚ್ಛಸಿ ಪ್ರಭೋ ।**
**ತಥಾ ತ್ವತ್ಸೇವಯಾ ಪೂರ್ಣಾ ವಯಮಪ್ಯಬ್ಜಲೋಚನ ॥ ೪ ॥**

---

೧. ಯಥಾ ರಥವಾನ್ಸರ್ವತ್ರಾಕುಂಠಿತಗತಿಃ ತಥಾ ಹರಿಚರಣಸ್ಮರಣವಾನಪೀತಿ ಭಾವಃ। -ವ್ಯಾ.

೨. ಯಥಾ ಹಯಾಃ ರಥಂ ಸನ್ಮಾರ್ಗೇ ಪ್ರವರ್ತಯಂತಿ । ತಥಾ ಜ್ಞಾತಾರ್ಥಾಃ ವೇದಾಃ ಮನೋರಥಮಿತಿ ಭಾವಃ। -ವ್ಯಾ.

೩.. ಸಾರಥಿಃ ಸೂತೋ ಪ್ರಾಣಃ ಮುಖ್ಯಪ್ರಾಣಃ ಯಥಾ ಸಾರಥಿಃ ಹಯಧುರಂಧರಃ ತಥಾ ಪ್ರಾಣೋಽಪಿ ಭಾಷ್ಯಾದಿನಾ ವೇದೋಪೋದ್ಬಲಕ ಇತಿ ಭಾವಃ। -ವ್ಯಾ.

ಎಲೈ ಪ್ರಭುವೇ ! ಪುಂಡರೀಕಾಕ್ಷ ! ಶ್ರೀಕೃಷ್ಣ ನೀನು ಸದಾ ಪೂರ್ಣನಾಗಿದ್ದು ಸಾಮ್ರಾಜ್ಯವನ್ನು ಬಯಸದಿರುವಂತೆ ನಿನ್ನ ಸೇವೆಯಿಂದ ಪೂರ್ಣರಾದ ನಾವೂ ಸಹ ರಾಜ್ಯವನ್ನು ಬಯಸಲಾರೆವು.

ವಿ. : ಶ್ರೀಹರಿಯು ಜ್ಞಾನಾನಂದಾದಿ ಅನಂತ ಗುಣಪರಿಪೂರ್ಣ, ಅವನ ಭಕ್ತರು ಅವನ ಪೂರ್ಣಸೇವೆ ಮಾಡುವ ಮೂಲಕ ಯಥಾಯೋಗ್ಯ ಪೂರ್ಣತೆಯನ್ನು ಸಂಪಾದಿಸಿಕೊಳ್ಳಬೇಕು ಎಂಬುದು ಇಲ್ಲಿಯ ವಿವರಣೆ.

### ಉಗ್ರಸೇನನು ರಾಜ್ಯ ಸ್ವೀಕರಿಸಲು ಕಾರಣ

**ಯೇ ತ್ವಾಂ ಶಾಸ್ತ್ರವಿಚಾರವಿಸ್ತೃತಧಿಯಃ ಶ್ರೇಯಸ್ಕರಂ ಶ್ರೀಕರಂ**
**ಸೇವಂತೇ ಪುಲಕಾಂಕಿತಾಂಗಮುದಿತಪ್ರೇಮಾಶ್ರುಧಾರಾಧರಾಃ ।**
**ತೇಷಾಂ ನೈಹಿಕಸಂಪದಸ್ತಿ ವಿದುಷಾಮಿತ್ಯಜ್ಞಗೀತಾಂ ಕಥಾಂ**
**ನಾಥೋನ್ಮೂಲಯಿತುಂ ಕರೋಮಿ ಗದಿತಂ ನ ಸ್ಯಾನ್ಮದೋ ಮೇ ಯದಿ ॥ ೫ ॥**

ಸ್ವಾಮಿ ! ಶಾಸ್ತ್ರಚಿಂತನೆಯಿಂದ ವಿಶಾಲವಾದ ಬುದ್ಧಿಯುಳ್ಳವರಾಗಿ, ಶ್ರೇಯಸ್ಕರನೂ ಶ್ರೀಕರನೂ ಆದ ನಿನ್ನನ್ನು ಪುಲಕಗೊಳ್ಳುವ ಅಂಗಗಳಿಂದ, ಹುಟ್ಟಿದ ಪ್ರೀತಿಯ ಪ್ರೇಮಾಶ್ರುಧಾರೆಯಿಂದ ಕೂಡಿ ಸೇವಿಸುವ ಜ್ಞಾನಿಗಳಿಗೆ ಐಹಿಕ ಸಂಪತ್ತು ಇರದು ಎಂಬ ಅಜ್ಞರು ನುಡಿಯುವ ಮಾತನ್ನು ಬುಡಸಮೇತ ಕಿತ್ತು ಹಾಕಲೆಂದು ನಾನು ನಿನ್ನ ಆದೇಶವನ್ನು ಪಾಲಿಸುವೆ ; ಆದರೆ ನನಗೆ ಅದರಿಂದ ಮದ ಮಾತ್ರ ಉಂಟಾಗದಿರಲಿ.

ವಿ. : ೧. ಉಗ್ರಸೇನ ಶ್ರೀಕೃಷ್ಣ ನೀಡಿದ ರಾಜ್ಯವನ್ನು ಸ್ವೀಕರಿಸುವ ಕಾರಣವನ್ನು ಇಲ್ಲಿ ನಿರೂಪಿಸಲಾಗಿದೆ.

೨. ಭೌತಿಕ ಸಂಪತ್ತನ್ನು ನಶ್ವರವೆಂದು ಹೀಗೆ ವರ್ಣಿಸಿಯೂ ಉಗ್ರಸೇನ ಅದನ್ನು ಸ್ವೀಕರಿಸಲು, ಈ ಹಿನ್ನೆಲೆಯು ಕಾರಣ ಎಂದರ್ಥ.

೩.. ಹರಿಭಕ್ತರಿಗೆ ಭೂಲೋಕದ ಸುಖವಿರದು, ಅವರದೇನಿದ್ದರೂ ಪರಲೋಕದ ಸುಖ ಎಂಬ ತಪ್ಪು ಕಲ್ಪನೆ ಅವಿವೇಕಿಗಳಲ್ಲಿರುವುದು. ಆದರೆ ಅವರಿಗೆ ಪಾರತ್ರಿಕ ಸುಖದಂತೆ ಐಹಿಕ ಸುಖವೂ ಇತರರಿಗಿಂತ ಮಿಗಿಲಾಗಿಯೇ ಲಭಿಸುವುದು ಎಂಬ ಶಾಸ್ತ್ರತತ್ತ್ವವನ್ನು ಸ್ಫುಟಪಡಿಸುವ ಮಾತು ಇದಾಗಿದೆ :

> ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
> ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ -ಗೀತಾ(೨/೪೬)

### ಶ್ರೀಕೃಷ್ಣನು ರಾಜನಾಗದಿರಲು ಕಾರಣ

**ಉಗ್ರಸೇನಂ ಯದುಪತಿಂ ಚಕ್ರೇ ಚಕ್ರಧರಃ ಕಿಲ।**
**ಯದುಮಾತ್ರಾಧಿಪತ್ಯೇನ ತಸ್ಯ ವಿಶ್ವೇಶ್ವರಸ್ಯ ಕಿಮ್ ॥ ೬ ॥**

ಚಕ್ರಪಾಣಿಯಾದ ಶ್ರೀಕೃಷ್ಣನು ಉಗ್ರಸೇನನನ್ನು ಯಾದವರ ಅಧಿಪತಿಯನ್ನಾಗಿ ಮಾತ್ರ ಮಾಡಿದ; ವಿಶ್ವೇಶ್ವರನಾದ ಅವನಿಗೆ ಕೇವಲ ಯಾದವರ ಒಡೆತನದಿಂದ ಆಗುವುದೇನಿದೆ!

ವಿ. : ೧. ಕಂಸನನ್ನು ಸಂಹರಿಸಿದ ಶ್ರೀಕೃಷ್ಣ ಯಾದವ ಸಿಂಹಾಸನವನ್ನು ತಾನೇ ಅಲಂಕರಿಸದೆ ಉಗ್ರಸೇನನಿಗೆ ನೀಡಿದ್ದಕ್ಕೆ ಮತ್ತೊಂದು ಬಗೆಯಲ್ಲಿ ಇಲ್ಲಿ ಕಾರಣ ನಿರೂಪಿತವಾಗಿದೆ.

೨. [1]ಇಡೀ ವಿಶ್ವಕ್ಕೇ ಅಧಿಪತಿಯಾದ ಅವನಿಗೆ ಅದರ ಏಕದೇಶವಾದ ಯಾದವರ ಅಧಿಪತಿಯಾಗಿ ಏನು ಲಾಭ ? ರಾಷ್ಟ್ರಪತಿಯಾದವನು ಗ್ರಾಮಪಂಚಾಯಿತಿ ಮೊದಲಾದವುಗಳಿಗೆ ಅಧ್ಯಕ್ಷನಾಗುವುದು ಹೇಗೆ ಭೂಷಣವಲ್ಲವೋ ಹಾಗೆ, ಎಂದು ತಿಳಿಯಬೇಕು.

೩. ಶ್ರೀಹರಿಯು ಶ್ರೀಕೃಷ್ಣಾವತಾರದಲ್ಲಿ ಅರಸನೆನ್ನಿಸದಿರಲು ವಿಶೇಷಕಾರಣವನ್ನು ಇಲ್ಲಿ ನೀಡಲಾಗಿದೆ.

೪. ಇದರಂತೆಯೇ ಜರಾಸಂಧನನ್ನು ಸಂಹರಿಸಿ ಅವನ ಮಗ ಸಹದೇವನಿಗೆ , ಶೃಗಾಲ-ವಾಸುದೇವನನ್ನು ಸಂಹರಿಸಿ ಅವನ ಮಗ ಶಕ್ರದೇವನಿಗೆ , ಅದರಂತೆ ನರಕಾಸುರನನ್ನು ಸಂಹರಿಸಿ ಅವನ ಮಗ ಭಗದತ್ತನಿಗೆ ರಾಜ್ಯವನ್ನು ನೀಡಿದ ಪ್ರಸಂಗಗಳನ್ನು ಸಹ ಅರ್ಥಮಾಡಿಕೊಳ್ಳಬೇಕು.

### ಪರಿಪೂರ್ಣನಿಗೆ ಫಲಾಶೆ ಎಲ್ಲಿಯದು ?

**ಸ ಕೃಷ್ಣಃ ಕಂಸವಿಧ್ವಂಸೀ ತತ್ಪಿತ್ರೇ ತನ್ಮಹೀಂ ದದೌ।**
**[2]ಪರಾರ್ಥೈಕಫಲಃ ಸಾಕ್ಷಾತ್ ಪುರಾಣಪುರುಷೋ ಹ್ಯಸೌ ॥ ೭ ॥**

ಕಂಸನನ್ನು ಸಂಹರಿಸಿದ ಆ ಶ್ರೀಕೃಷ್ಣನು ಆ ರಾಜ್ಯವನ್ನು ಅವನ ತಂದೆ ಉಗ್ರಸೇನನಿಗೆ ನೀಡಿದ; ಅವನು ಕೇವಲ ಪರಹಿತವನ್ನೇ ಬಯಸುವ ಸಾಕ್ಷಾತ್ ಪುರಾಣಪುರುಷನೇ ಅಲ್ಲವೇ !

ವಿ. : ೧. ಭಗವದ್ಭಕ್ತನಾದವನೇ ಸ್ವಾರ್ಥವನ್ನು ಬಯಸದಿರುವಾಗ (ಮಾ ಫಲೇಷು ಕದಾಚನ[3]) ಸ್ವತಃ [4]ಭಗವಂತನೇ ಆದ ಶ್ರೀಕೃಷ್ಣ ರಾಜ್ಯವನ್ನೆಂತು ಬಯಸಿಯಾನು ? ಎಂದರ್ಥ.

---

೧. ನ ಹಿ ಸಾರ್ವಭೌಮಃ ಏಕಗ್ರಾಮಾಧಿಪತ್ಯಂ ವಾಂಛತೀತಿ ಭಾವಃ। -ವ್ಯಾ.

೨. 'ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ' -ಗೀತಾ(೩/೨೨)
'ಆಸ್ಮದಿಷ್ಟೈಕಕಾರ್ಯಾಯ ಪೂರ್ಣಾಯ ಹರಯೇ ನಮಃ' -ದ್ವಾದಶಸ್ತೋತ್ರ(೨/೯)
ಈಶ್ವರಪ್ರವೃತ್ತೇಃ ಸರ್ವತ್ರ ಸ್ವಪ್ರಯೋಜನಹೀನತ್ವಾತ್ -ತತ್ತ್ವನಿರ್ಣಯಟೀಕಾ

೩.. ಗೀತಾ(೨/೪೭)

೪. ಮಹಾಪ್ರಯತ್ನಸಾಧ್ಯಜಗತ್ಸೃಷ್ಟ್ಯಾದಿಕಮಪಿ ಯಸ್ಯ ಪರಾರ್ಥಂ ತಸ್ಯೇದಂ ನ ಸ್ವಾರ್ಥಮಿತಿ ಕಿಂ ವಾಚ್ಯಮಿತಿ ಭಾವಃ। -ವ್ಯಾ.

೨. ಇದು ಒಂದು ರೀತಿಯಲ್ಲಿ "[೧]ನ ಪ್ರಯೋಜನವತ್ತ್ವಾತ್" ಸೂತ್ರದ ಅರ್ಥವೇ ಆಗಿದೆ.

### ಭಕ್ತರ ಮಾತು ನಡೆಸುವ ಭಗವಂತ

**ತ್ವದುಕ್ತಿಕಾರಿಣಃ ಸರ್ವೇ ವಯಮಿತ್ಯಬ್ರವೀದ್ಧರಿಃ।**
**ಭಕ್ತಮಾತ್ರೋಕ್ತಕರ್ತುಸ್ತತ್ ಕಿಮಪೂರ್ವಂ ಕೃಪಾಂಬುಧೇಃ ॥ ೮ ॥**

"ನಾವೆಲ್ಲರೂ ನಿನ್ನ ಮಾತಿನಂತೆ ನಡೆಯುವವರು" ಎಂದು ಶ್ರೀಕೃಷ್ಣ ನುಡಿದ; ಸಾಮಾನ್ಯಭಕ್ತರ ಮಾತನ್ನೂ ನಡೆಸುವ ಆ ಕರುಣಾಸಾಗರನಿಗೆ ಇದೇನೂ ಅಪೂರ್ವವಲ್ಲ.

ವಿ. : ೧. ಸಾಮಾನ್ಯಭಕ್ತರ ಮಾತನ್ನೇ ನಡೆಸುವ ಶ್ರೀಕೃಷ್ಣನಿಗೆ ಉಗ್ರಸೇನ ಮೊದಲಾದ ಶ್ರೇಷ್ಠ ಭಕ್ತರ ಮಾತನ್ನು ನಡೆಸುವುದು ಅಚ್ಚರಿಯ ಮಾತೇನಲ್ಲ ಎಂದರ್ಥ.

೨. [೨]ಇಲ್ಲಿ ಭಕ್ತರ ಮಾತನ್ನು ನಡೆಸುವುದು ಎಂದರೆ ಅನುಗ್ರಹಿಸುವುದು ಎಂದು ಅರ್ಥವೇ ಹೊರತು ಆದೇಶವನ್ನು ತಲೆಬಾಗಿ ನಡೆಸುವುದು ಎಂದಲ್ಲ ಎಂದು ತಿಳಿಯಬೇಕು.

### ಉಗ್ರಸೇನನ ಸೇನೆಯಲ್ಲಿ ಶ್ರೀಕೃಷ್ಣ

**ಸೇನಾಮಧ್ಯಗತಾ ರಾಜನ್ ವಯಮಿತ್ಯಾಹ ಮಾಧವಃ।**
**ವಿಶ್ವಮಧ್ಯಗತಸ್ಯಾಸ್ಯ ಸೇನಾಂತಃ ಕಿಂ ನು ದೂಷಣಮ್ ॥ ೯ ॥**

"ರಾಜನೇ! ನಾವು ನಿನ್ನ ಸೇನೆಯ ಮಧ್ಯದಲ್ಲಿ ಇರುವವರು" ಎಂಬುದಾಗಿ ಲಕ್ಷ್ಮೀಪತಿಯಾದ ಶ್ರೀಕೃಷ್ಣ ನುಡಿದ; ಜಗತ್ತಿನ ಮಧ್ಯೆ ಇರುವ ಅವನಿಗೆ ಸೇನೆಯ ಮಧ್ಯೆ ಇರುವುದು ದೂಷಣವಾದೀತೇ !

ವಿ. : ೧. ಮೇಲ್ನೋಟಕ್ಕೆ ಇದು ಶ್ರೀಕೃಷ್ಣನು ಇತರ ಸೈನಿಕರಂತೆ ತಾನೂ ಒಬ್ಬ ಸೈನಿಕ ಎಂಬ ಅರ್ಥ ನೀಡುವುದು; ಆದರೆ ಇಲ್ಲಿ ಮಧ್ಯ ಎಂಬುದಕ್ಕೆ ಅಂತರ್ಯಾಮಿಯಾಗಿ ಎಂಬುದು ಮುಖ್ಯಾರ್ಥ.

೨. ಇದನ್ನು ಜಗತ್ತಿನ ಅಂತರ್ಯಾಮಿಯಾದ ಅವನಿಗೆ ಸೇನೆಯ ಮಧ್ಯೆ ಇರುವುದು ದೂಷಣವಲ್ಲ ಎಂಬ ಮಾತಿನಿಂದ ಸ್ಪಷ್ಟಪಡಿಸಿರುವರು.

೩.. [೩]ಶ್ರೀಕೃಷ್ಣನು ತತ್ತದಾಕಾರವನ್ನು ಧರಿಸಿ ಸಕಲ ಜಗತ್ತಿನೊಳಗೂ ನೆಲೆಸಿರುವ ಪರಮಪುರುಷ ಎಂಬುದು ಇದರ ಮುಖ್ಯಭಾವ.

---

೧. ಬ್ರಹ್ಮಸೂತ್ರ(೨/೧/೩೩)
೨. ವಾತ್ಸಲ್ಯೇನ ಪ್ರವೃತ್ತೇಸ್ತದಪಿ ನೇಹಾನ್ಯಾಯ್ಯಮಿತಿ ಭಾವಃ। -ವ್ಯಾ.
೩.. ತತ್ತದಾಕಾರೇಣ ಸಕಲಜಗದಂತಃಪ್ರವಿಷ್ಟಸ್ಯ ನಾಯಮಪಿ ದೋಷ ಇತಿ ಭಾವಃ। -ವ್ಯಾ.

### ಶ್ರೀಕೃಷ್ಣನ ವಿವಿಧ ಕಾರ್ಯಗಳ ಫಲಚಿಂತನೆ

**[1]ವಕ್ರಂ ಸರ್ವಮವಕ್ರಯತ್ವನುದಿನಂ ಕುಬ್ಜಾತನೂಜ್ಜೃಂಭಕೋ**
**ಮಲ್ಲಾನಾಂ ಲಯಕೃದ್ಧುನೋತು ಸ ರಿಪೂನ್ ಕಂಸಸ್ಯ ಹಿಂಸಾಕರಃ।**
**ಬಂಧೂನ್ ಬಂಧಕರಾನ್ ವಿಯೋಜಯತು ಮೇ ರಮ್ಯಾಂ ಧುರಂ ಮಾಧುರಃ**
**ಸಂದದ್ಯಾದ್ಧರಿರಂತರರಂಗವಿಭವಂ ರಂಗಸ್ಥಲೀರಂಜಕಃ[2] ॥ ೧೦ ॥**

ತ್ರಿವಕ್ರೆಯ ದೇಹವನ್ನು ನೇರಮಾಡಿದ ಶ್ರೀಕೃಷ್ಣ ಅನುದಿನವೂ ನಮ್ಮ ಸಕಲ ವಕ್ರತೆಯನ್ನೂ ಸರಿಪಡಿಸಲಿ; ಮಲ್ಲರನ್ನು ಸದೆಬಡಿದ ಆ ಶ್ರೀಕೃಷ್ಣ ಶತ್ರುಗಳನ್ನು ಅಳಿಸಿಹಾಕಲಿ; ಕಂಸನಿಗೆ ಹಿಂಸೆ ಮಾಡಿದ ಅವನು ಬಂಧವನ್ನುಂಟು ಮಾಡುವ ಬಂಧುಗಳನ್ನು ದೂರಮಾಡಲಿ; ಮಧುರೆಯನ್ನು ಪಾಲಿಸಿದ ಅವನು ನನಗೆ ರಮಣೀಯವಾದ ಹೊರೆಯನ್ನು ಹೊರಿಸಲಿ; ರಂಗಸ್ಥಳವನ್ನು ಅಲಂಕರಿಸಿದ ಅವನು ನನಗೆ ಅಂತರಂಗದ ಸಂಪತ್ತನ್ನು ನೀಡಲಿ.

ವಿ. : ೧. ಶ್ರೀಕೃಷ್ಣನು ತ್ರಿವಕ್ರೆಯ ವಕ್ರತ್ವವನ್ನು ಪರಿಹರಿಸಿದವನು, ಚಾಣೂರಾದಿ ಮಲ್ಲರನ್ನು ಸದೆಬಡಿದವನು, ಕಂಸನನ್ನು ಕೊಂದವನು, ಮಧುರೆಯನ್ನು ಪಾಲಿಸಿದವನು, ರಂಗಸ್ಥಳವನ್ನು ಅಲಂಕರಿಸಿದವನು ಎಂಬ ತತ್ತ್ವಗಳನ್ನು ನಮ್ಮ ಆತ್ಮೋದ್ಧಾರಕ್ಕೆ ಅಳವಡಿಸಿಕೊಳ್ಳಬೇಕಾದ ರೀತಿಯನ್ನು ಈ ರೀತಿಯಾದ ಪ್ರಾರ್ಥನೆಯ ಮೂಲಕ ತೋರಿಸಿಕೊಟ್ಟಿರುವರು.

೨. ನಮ್ಮಲ್ಲಿ ಬಗೆಬಗೆಯ ವಕ್ರತ್ವವಿದೆ; ಅಸಂಖ್ಯ ಶತ್ರುಗಳೂ ಇರುವರು; ಪೀಡಕವಾದ ಬಂಧುವರ್ಗವೂ ಇರುವುದು; ಅವುಗಳನ್ನು ಇಂತಹ ಮಹಿಮಾಶಾಲಿಯಾದ ಶ್ರೀಕೃಷ್ಣ ಪರಿಹರಿಸುವನು ಎಂದರ್ಥ.

೩.. ಇಲ್ಲಿ ರಮ್ಯವಾದ ಹೊರೆ ಎಂದರೆ, ವ್ಯಾಖ್ಯಾನಾದಿ ಜ್ಞಾನಕಾರ್ಯದ ಅವಕಾಶ ಎಂದರ್ಥ: **ಧುರಂ ವ್ಯಾಖ್ಯಾನಾದಿಭಾರಮ್ ।** -ವ್ಯಾ.

### ಶ್ರೀಕೃಷ್ಣನಿಂದ ಮಹತ್‌ಕ್ಷೇತ್ರವಾದ ಮಧುರೆ

**ಮಧುರಾ ಮಧುರಾ ಯೇನ ಸಮಭೂತ್ ಸಮಭೂಜ್ಜಿತಾ ।**
**ಸ್ಮರತ ಸ್ಮರತಾತಂ ತಂ ಮಹತಾಮಹತಾರ್ಥದಮ್ ॥ ೧೧ ॥**

---

೧. ಧರ್ಮಾದ್ಯೋಽಜನಿ ಧರ್ಮ ಏವ ಸ ರತಿಂ ದದ್ಯಾತ್ ಸ್ವಯೋಗಶ್ರಿಯಂ
ಯೋಗಭ್ಯಾಸರತಃ ಸ್ಮರಾದಿವಿಜಯಂ ಕಂದರ್ಪದರ್ಪಾಪಹ।
ಉತ್ತುಂಗಾದ್ರಿಗತಃ ಸಮೋಚ್ಚಪದವೀಂ ಯೋಷಿತ್ಕದಂಬೋಷು ನಃ
ಪುತ್ರೀವನ್ನತಿಮುರ್ವಶೀಜಯಿತಾ ನಾರಾಯಣಃ ಸದ್ಗುಣಾನ್ ॥ - ತೀರ್ಥಪ್ರಬಂಧ (೨/೪೨)

೨. ಹೇತುರಲಂಕಾರಃ -ವ್ಯಾ.

ಮನೋಹರವಾದ ಮಧುರಾಪುರಿಯು ಶ್ರೀಕೃಷ್ಣನಿಂದ ಅಸದೃಶಕ್ಷೇತ್ರವೆನ್ನಿಸಿತು; ಮಹಾತ್ಮರಿಗೆ ಎಂದೂ ಅಳಿಯದ ಪುರುಷಾರ್ಥವನ್ನು ನೀಡುವ, ಕಾಮಜನಕನಾದ ಅವನನ್ನು ಸ್ಮರಿಸಿರಿ.

ವಿ. : ೧. ಉನ್ನತ ವ್ಯಕ್ತಿತ್ವದ ಮಹಾತ್ಮರು ಬಯಸುವ ಪುರುಷಾರ್ಥಗಳನ್ನು ನೀಡುವುದು ಶ್ರೀಹರಿಯ ಕಾರುಣ್ಯ; ಆದ್ದರಿಂದ ಜ್ಞಾನಿಗಳ ಮೂಲಕ ಭಗವದಾರಾಧನೆಯು ವಿಶೇಷ ಸಿದ್ಧಿಕರ ಎಂಬ ಸೂಚನೆ ಇದರಲ್ಲಿದೆ: ಉನ್ನತಪ್ರಾರ್ಥಿತಾಶೇಷಸಂಸಾಧಕಮ್ (ದ್ವಾದಶಸ್ತೋತ್ರ)

೨. ಮಧುರೆಯು ಮಹಾಕ್ಷೇತ್ರಗಳಲ್ಲೊಂದು ಎಂಬುದಾಗಿ ಸುಪ್ರಸಿದ್ಧ :

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ ॥ (ಪುರಾಣವಾಕ್ಯ)

## ಮಧುರೆಯ ಮಾಹಾತ್ಮ್ಯ

**ಕೃಷ್ಣೋದಾರವಿಹಾರಖಂಡಿತಮಲಂ ಯಸ್ಯಾಂ ಜಲಂ ಮಂಗಲಂ**
**ತತ್ಪಾದಾಂಬುಜಲಕ್ಷ್ಮಲಕ್ಷ್ಯವಿಭವಾ ಧನ್ಯಸ್ಥಲೀ ಯತ್ಸ್ಥಲೀ ।**
**ಯದ್ಗೇಹಾನಿ ಕೃತಸ್ಪೃಹಾಣಿ ರಮಯಾ ನಿತ್ಯಂ ಸ್ವಭರ್ತುಃ ಸ್ಥಿತೇಃ**
**ದದ್ಯಾತ್ ಸಾ ಮಧುರಾ ಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ ॥ ೧೨ ॥**

ಮಧುರೆಯ ಜಲವು ಶ್ರೀಕೃಷ್ಣನ ಶ್ರೇಷ್ಠ ವಿಹಾರದಿಂದಾಗಿ ದೋಷವಳಿದು ಮಂಗಳಕರವೆನ್ನಿಸಿದೆ; ಅವನ ಪಾದಕಮಲದ ಚಿಹ್ನೆಗಳಿಂದ ಸಂಪತ್ತನ್ನು ಸೂಚಿಸುವ ಅಲ್ಲಿಯ ಸ್ಥಳವು ಧನ್ಯಸ್ಥಳವೆನ್ನಿಸಿದೆ; ತನ್ನ ಸ್ವಾಮಿಯಾದ ಶ್ರೀಹರಿಯು ನಿತ್ಯನೆಲೆಸಿರುವುದರಿಂದ ಅಲ್ಲಿಯ ಮನೆಗಳು ಮಹಾಲಕ್ಷ್ಮಿಯು ಸಹ ಅಪೇಕ್ಷಿಸುವಂತಾಗಿವೆ; ಅಂತಹ ಮಂಗಳಕರವಾದ ಮಧುರಾಪುರಿಯು ನಮಗೆ ಬಹಳವಾದ ಶ್ರೇಯಸ್ಸನ್ನು ಕರುಣಿಸಲಿ.

ವಿ. : ೧. ಶ್ರೀಕೃಷ್ಣನ ವಿಹಾರದಿಂದಾಗಿ ಮಧುರೆಯ ಬಳಿಯ ಯಮುನೆಯ ಜಲ ಅತ್ಯಂತ ಪವಿತ್ರ. ಅವನ ಪಾದಚಿಹ್ನೆಗಳಿಂದಾಗಿ ಅಲ್ಲಿಯ ನೆಲ ಅತ್ಯಂತ ಧನ್ಯ. ಕೃಷ್ಣನ ನೆಲೆಯಿಂದಾಗಿ ಅಲ್ಲಿಯ ಮನೆಗಳು ಸದಾ ಸಂಪದ್ಭರಿತ. ಇಂತಹ ಮಧುರೆಯ ಚಿಂತನೆಯೂ ನಮಗೆ ಮಂಗಳಕರ ಎಂದು ಭಾವ; ಇದು ಈ ಕೆಳಗಿನ ಮ.ಭಾ.ತಾ.ನಿ.(೧೪/೭)ಶ್ಲೋಕದ ಭಾವದಂತಿದೆ:

ಕೃಷ್ಣಾಶ್ರಯೋ ವಸತಿ ಯತ್ರ ಜನೋಽಪಿ ತತ್ರ ವೃದ್ಧಿರ್ಭವೇತ್ ಕಿಮು ರಮಾಧಿಪತೇರ್ನಿವಾಸೇ ।
ವೃಂದಾವನಂ ಯದಧಿವಾಸತ ಆಸ ಸಂಧ್ಯಜ್ ಮಾಹೇಂದ್ರಸದ್ಮಸದೃಶಂ ಕಿಮು ತತ್ರ ಪುರ್ಯಾಮ್॥

೨. ತೀರ್ಥಪ್ರಬಂಧದ ಮಧುರೆಯ ವರ್ಣನೆಯ ಪ್ರಸಂಗದ ಶ್ಲೋಕದ ಕೊನೆಯ ಪಾದವು ಇದೇ ತೆರನಾಗಿದೆ[1].

---

೧. ಸೇನಾ ಯತ್ರ ವಿರಕ್ತ ವೈಷ್ಣವಜನಾ ನಾಮಾಯುಧಂ ಶ್ರೀಪತೇಃ
ಕಾಮಾದ್ಯೈಃ ಸಹಿತಃ ಕಲಿಃ ಕಿಲ ರಿಪುರ್ಯತ್ರಾನ್ವಹಂ ಹನ್ಯತೇ ।

## ತಂದೆತಾಯಿಗಳನ್ನು ಸಾಂತ್ವನಪಡಿಸಿದ ಶ್ರೀಕೃಷ್ಣ

**ಜಗತ್ಪಿತ್ರಾಽಥ ಪಿತರೌ ಮೃದುಭಾಷಣಪೂರ್ವಕಮ್ ।**
**ನತೌ ನ ತೌ ಪುತ್ರಬುದ್ಧಿಂ ಚಕ್ರತುಶ್ಚಕ್ರಿಣೀಶ್ವರೇ ॥ ೧೩ ॥**

ಬಳಿಕ ಜಗತ್ತಿನ ತಂದೆಯಾದ ಶ್ರೀಕೃಷ್ಣನಿಂದ ಮೆಲುಮಾತಿನ ಮೂಲಕ ವಂದಿತರಾದ ತಂದೆತಾಯಿಗಳಾದ ವಸುದೇವ-ದೇವಕಿಯರು ಆ ಚಕ್ರಪಾಣಿಯಾದ ಸರ್ವೇಶ್ವರನಾದ ಶ್ರೀಕೃಷ್ಣನ ಬಗ್ಗೆ ತಮ್ಮ ಮಗ ಎಂಬ ಭಾವವನ್ನು ತಳೆಯಲಿಲ್ಲ.

ವಿ. : ೧. ಶ್ರೀಕೃಷ್ಣನು ಸರ್ವೇಶ್ವರನಾಗಿದ್ದರೂ ಲೋಕಧರ್ಮವನ್ನು ಸಂರಕ್ಷಿಸಲೆಂದು ತಂದೆ-ತಾಯಿಗಳೆನ್ನಿಸಿದ ವಸುದೇವದೇವಕಿಯರಿಗೆ ನಮಸ್ಕರಿಸಿದ ಎಂದರ್ಥ.

೨. [1]ಶ್ರೀಕೃಷ್ಣನ ಮಹಿಮೆಯನ್ನು ಕಣ್ಣಾರೆ ಕಂಡಿದ್ದ ವಸುದೇವ ದೇವಕಿಯರು ಕೃಷ್ಣನು ಹಾಗೆ ನಮಸ್ಕರಿಸಿದರೂ ಅವನು ತಮ್ಮ ಮಗನೆಂದು ತಪ್ಪು ತಿಳಿಯದೆ ಅವನನ್ನು ಸರ್ವೋತ್ತಮನಾದ ಶ್ರೀಹರಿ ಎಂಬುದಾಗಿಯೇ ಚಿಂತಿಸಿದರು ಎಂದರ್ಥ; ಇದಕ್ಕೆ ಅವತಾರಕಾಲದಲ್ಲಿ ಅವರು ಅವನ ಚತುರ್ಭುಜಾದಿಗಳಿಂದ ಕೂಡಿದ ದಿವ್ಯರೂಪವನ್ನು ಕಂಡಿದ್ದರ (೧/೫೨) ಸ್ಮರಣೆಯೂ ಕಾರಣವಾಗಿತ್ತು ಎಂದೂ ತಿಳಿಯಬೇಕು; ಚಕ್ರೀ - ಕೃಷ್ಣ.

## ಶ್ರೀಕೃಷ್ಣ ವಸುದೇವದೇವಕಿಯರಿಗೆ ಪುನಃ ಕವಿಸಿದ ಮಾಯೆ

**ವಿಮುಚ್ಯ ನಿಗಡಾದೀಶಃ ಸ್ಮಿತವಕ್ತ್ರಃ ಪ್ರಿಯಂ ವದನ್ ।**
**ಕೃತಸ್ನೇಹೋಽಥ ನಿಗಡಂ [2]ಮಾಯಾಮಯಮಯೋಜಯತ್ ॥೧೪॥**

ಬಂಧನದಿಂದ ಬಿಡುಗಡೆ ಮಾಡಿ ಮಂದಸ್ಮಿತಮುಖದ ಈಶನಾದ ಶ್ರೀಕೃಷ್ಣನು ಪ್ರೀತಿಯ ಮಾತುಗಳನ್ನಾಡುತ್ತಾ ಆದರ ತೋರುತ್ತಾ ಮಾಯಾಮಯವಾದ ಬಂಧನವನ್ನು ಅವರಿಗೆ ಮತ್ತೆ ತೊಡಿಸಿದ.

ವಿ. : ೧. ಒಂದು ಕ್ಷಣ ಕೃಷ್ಣನನ್ನು ಹಾಗೆ ಸರಿಯಾಗಿ ಅರ್ಥಮಾಡಿಕೊಂಡರೂ ಕೃಷ್ಣನ ಮಾಯೆಯಿಂದಾಗಿ ಮುಂದೆ ವಸುದೇವದೇವಕಿಯರಿಗೆ ಅವನು ತಮ್ಮ ಮಗ ಎಂಬ ತಪ್ಪು ತಿಳುವಳಿಕೆ ಹುಟ್ಟಿಯೇ ಬಿಟ್ಟಿತು ಎಂದರ್ಥ.

---

ಪ್ರಾಕಾರಾದಿ ಚ ಯತ್ರ ತೀರ್ಥನಿಚಯಃ ಕರ್ಮಾಪಿ ವರ್ಮಾಮಲಂ
**ದದ್ಯಾತ್ ಸಾ ಮಧುರಾ ಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ ॥** - ತೀರ್ಥಪ್ರಬಂಧ (೨/೩.೧)

೧. ಅವತಾರಸಮಯೇ ಚತುರ್ಭುಜಮೂಲಮೂರ್ತೇರೇವ ದೃಷ್ಟತ್ವೇನ ತತ್ಸಂಸ್ಕಾರಸ್ಯ ಜಾಗರೂಕತ್ವಾತ್ ನತಾವಪಿ ಪರದೇವತಾಬುದ್ಧ್ಯಾ ಆಲಿಂಗನಾದಿಕಂ ನ ಚಕ್ರತುರಿತಿ ಭಾವಃ । -ವ್ಯಾ.

೨. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ । -ಗೀತಾ (೭/೧೪)

೨. ಕಂಸನ ಸಂಕೋಲೆಯ ಬಂಧನವನ್ನು ಬಿಡಿಸಿದ ಕೃಷ್ಣ ಈ ನಮಸ್ಕಾರದ ಬಂಧನವನ್ನು ತೊಡಿಸಿದ ಎಂದು ಭಾವ ; ನಿಗಡ -ಸಂಕೋಲೆ.

### ಧರ್ಮಶಿಕ್ಷಕನ ಲೋಕವಿಡಂಬನೆ

**ಅಥ ಧರ್ಮಪಥಾಧ್ಯಕ್ಷೋ ಜಗದೇ ಜಗದೇಕರಾಟ್ ।**
**ವಾರ್ತಯಾಽಹಂ [೧]ಭವತ್ಪುತ್ರೋ ಯಶ್ಚಕಾರ ನ ವಾಂ ಹಿತಮ್ ॥ ೧೫ ॥**

ಬಳಿಕ ಧರ್ಮಮಾರ್ಗಕ್ಕೆ ಒಡೆಯನಾದ, ಜಗತ್ತಿನ ಮುಖ್ಯಸ್ವಾಮಿಯಾದ ಶ್ರೀಕೃಷ್ಣನು "ನಿಮ್ಮ ಹಿತವನ್ನು ಮಾಡದ ನಾನು ಹೆಸರಿಗಷ್ಟೆ ನಿಮ್ಮ ಮಗ" ಎಂದ.

ವಿ. : ೧. [೨]ಇಂತಹ ತನ್ನ ಮಾತಿನ ಮೂಲಕ ಶ್ರೀಕೃಷ್ಣ ತಂದೆ ತಾಯಿಗಳ ಹಿತವನ್ನು ಬಯಸದ-ವನು ಸರ್ವಥಾ ಪುತ್ರನೆನ್ನಿಸನು ಎಂಬ ಸೂಚನೆಯನ್ನೂ ನೀಡಿದನು ಎಂದು ತಿಳಿಯಬೇಕು : 'ಯಃ ಪ್ರೀಣಯೇತ್ ಸುಚರಿತ್ರೈಃ ಪಿತರಂ ಸ ಪುತ್ರಃ'- ಮಾರ್ಕಂಡೇಯಪುರಾಣ

೨. 'ತಾನು ಹೆಸರಿಗೆ ಮಾತ್ರ ಅವರ ಪುತ್ರ' ಎಂಬ ಶ್ರೀಕೃಷ್ಣನ ಮಾತು ಇಲ್ಲಿ ಗಮನಾರ್ಹ ; ಇದರಿಂದ ತಾನು ನಿಜಕ್ಕೂ ವಸುದೇವದೇವಕಿಯರಿಂದ ಜನಿಸಿದವನಲ್ಲ ಎಂಬ ತತ್ತ್ವವು ಸೂಚಿತ.

### ವಸುದೇವನ ಧನ್ಯಭಾವ

**ಸರ್ವಂ ತಾತ ಕೃತಂ ತ್ವಯಾ ಯದುದಿತಂ ಪ್ರೀತ್ಯಾಽಸ್ಮದೀಯಾನ್ವಯೇ**
**ತೇನೇದಂ ತಿಲಕೀಬಭೂವ ಹಿ ಕುಲಂ ಕೀರ್ತಿಶ್ಚ ಮೇ ವಿಸ್ತೃತಾ ।**
**ಯೇನಾನೇಕಖಲಾನ್ ನಿಹತ್ಯ ಬಲಿನಂ ಕಂಸಂ ಚ ವಂಶದ್ರುಹಂ**
**ಬಂಧಗ್ರಂಥಿರಯಂ ವ್ಯಯೋಜಿ ದಯಯಾ ಕಿಂ ಕಿಂ ಕೃತಂ ನ ತ್ವಯಾ ॥೧೬॥**

"ಮಗು! ಪುತ್ರನು ಮಾಡಬೇಕಾದ್ದನ್ನೆಲ್ಲ ನೀನು ಮಾಡಿರುವಿ; ಪ್ರೀತಿಯಿಂದ ನಮ್ಮ ವಂಶದಲ್ಲಿ ಅವತರಿಸಿದ್ದರಿಂದ ನಮ್ಮ ಈ ವಂಶವು ತಿಲಕಪ್ರಾಯವೆನ್ನಿಸಿತು. ನನ್ನ ಕೀರ್ತಿಯು ಸಹ ವಿಸ್ತಾರಗೊಂಡಿತು. ಅನೇಕ ದುಷ್ಟರನ್ನು ಸಂಹರಿಸಿ, ವಂಶಕ್ಕೆ ಕೇಡುಬಗೆದ ಬಲಶಾಲಿಯಾದ

---

೧. ಸರ್ವಾರ್ಥಸಂಭವೋ ದೇಹೋ ಜನಿತಃ ಪೋಷಿತೋ ಯತಃ ।
ನ ತಯೋರ್ಯಾತಿ ನಿರ್ವೇಶಂ ಪಿತ್ರೋರ್ಮರ್ತ್ಯಃ ಶತಾಯುಷಾ ॥ -ಭಾಗ.(೧೦/೪೫/೫)
ಯಸ್ತಯೋರಾತ್ಮಜಃ ಕಲ್ಪ ಆತ್ಮನಾ ಚ ಧನೇನ ಚ ।
ವೃತ್ತಿಂ ನ ದದ್ಯಾತ್ ತಂ ಪ್ರೇತ್ಯ ಸ್ವಮಾಂಸಂ ಖಾದಯಂತಿ ಹಿ ॥
ಮಾತರಂ ಪಿತರಂ ವೃದ್ಧಂ ಭಾರ್ಯಾಂ ಸಾಧ್ವೀಂ ಸುತಂ ಶಿಶುಮ್ ।
ಗುರುಂ ವಿಪ್ರಂ ಪ್ರಪನ್ನಂ ಚ ಕಲ್ಪೋಽಬಿಭ್ರಚ್ಛ್ವಸನ್ ಮೃತಃ ॥
ಸ ಪಿತಾ ಸಾ ಚ ಜನನೀ ಯೌ ಪುಷ್ಣೀತಾಂ ಸ್ವಪುತ್ರವತ್ ।
ಶಿಶೂನ್ ಬಂಧುಭಿರುತ್ಸೃಷ್ಟಾನಕಲ್ಪೈಃ ಪೋಷರಕ್ಷಣೇ ॥ -ಭಾಗ.(೧೦/೪೫/೬,೭,೨೨)

೨. ಪುತ್ರೇಣ ಕರ್ತವ್ಯಂ ಕಿಮಪಿ ನೋ ಕೃತಮಿತಿ ಆಪಾತತಃ ಲೋಕಾಃ ಪುತ್ರ ಇತಿ ವದಂತಿ ವಸ್ತುತೋ ನಾಹಂ ಭವತ್ಪುತ್ರ ಇತಿ ಹೃದಯಮ್ । -ವ್ಯಾ.

ಕಂಸನನ್ನು ಸಹ ಕೊಂದು ನಮ್ಮ ಬಂಧನದ ಗಂಟನ್ನು ಕರುಣೆಯಿಂದ ಬಿಡಿಸಿದ ನೀನು ಏನನ್ನು ತಾನೆ ಮಾಡಿಲ್ಲ ?''

ವಿ. : ೧. ಮೇಲ್ನೋಟಕ್ಕೆ ಶ್ರೀಕೃಷ್ಣನು ಅವರ ಬಳಿಯಲ್ಲಿದ್ದು ಹಿತವನ್ನೆಸಗಿಲ್ಲ ಎಂಬಂತೆ ಕಾಣು-ವುದು; ಆದರೆ ಅವನು ಯದುವಂಶದಲ್ಲಿ ಅವತರಿಸಿದ್ದರಿಂದ ವಂಶವೇ ಪಾವನವಾಯಿತು. ವಾಸುದೇವನಾದ ಶ್ರೀಕೃಷ್ಣನಿಂದ [೧]ವಸುದೇವನ ಕೀರ್ತಿ ವಿಶಾಲಗೊಂಡು, ಆನಕದುಂದುಭಿ ಎಂಬ ಅವನ ಹೆಸರು ಸಾರ್ಥಕವಾಯಿತು. ಕಂಸನಂತಹ ಮಹಾಕೇಡಿಗನ ಸಂಹಾರದಿಂದಾಗಿ, ಲೋಕ ಸುಖವನ್ನು ಕಂಡಿತು; ವಸುದೇವದೇವಕಿಯರ ಬಂಧನವೂ ಪರಿಹಾರವಾಯಿತು, ಎಂಬುದು ನಿಜಕ್ಕೂ ಅವನಿಂದಾದ ಮಹೋಪಕಾರ ಎಂದರ್ಥ.

೨. ಇದರಿಂದ ತಂದೆ ತಾಯಿಗಳಿಗೆ ಹಿತವೆಸಗುವುದು ಎಂದರೆ ಅವರೊಡನೆ ಮನೆಯಲ್ಲೇ ಇರುವುದು ಎಂದರ್ಥವಲ್ಲ; ಅವರಿಗೆ ಅಪ್ರಿಯವಾದದ್ದನ್ನು ಪರಿಹರಿಸುವುದು, ಪ್ರಿಯವಾದದ್ದನ್ನು ಒದಗಿಸುವುದು ಎಂಬ ವಿಶೇಷಾರ್ಥವು ಸೂಚಿತ.

## ದೇವಕಿಯ ಪರಮಾನಂದ

**ಅಂಬಾ ತಂ ಪರಿರಭ್ಯ ಫುಲ್ಲಕರಸನ್ಮಾಲ್ಯೇನ ತಸ್ಯಾರ್ಚನಂ**
**ನೇತ್ರಾನಂದಜಲೇನ ಸಿಂಚನಮುರೋಜೋದ್ಯತ್ಪಯೋಧಾರಯಾ ।**
**ನೈವೇದ್ಯಂ ಚ ನಿವೇದ್ಯ ವೀಕ್ಷಣಲಸನ್ನೀರಾಜನಂ ಶೋಭನಂ**
**ಭಾವಿಸ್ವೀಯವಿಮುಕ್ತಿಕಲ್ಪಲತಿಕಾಬೀಜಂ ನಿಜಂ ನಿರ್ಮಮೇ ॥ ೧೭ ॥**

ತಾಯಿಯಾದ ದೇವಕಿಯು ಕೃಷ್ಣನನ್ನು ತಬ್ಬಿಕೊಂಡು ಅರಳಿದ ಕೈಗಳೆಂಬ ಉತ್ತಮ ಮಾಲೆಗಳಿಂದ ಅವನನ್ನು ಪೂಜಿಸಿದಳು ; ಕಂಗಳ ಆನಂದಾಶ್ರುಗಳಿಂದ ಅಭಿಷೇಕಿಸಿದಳು ; ಸ್ತನಗಳಿಂದ ಉಕ್ಕಿಬಂದ ಹಾಲಿನ ಧಾರೆಯಿಂದ ನೈವೇದ್ಯವನ್ನು ಸಮರ್ಪಿಸಿದಳು. ಹೊಳೆಯುವ ನೋಟವೆಂಬ ಮಂಗಳ ನೀರಾಜನವನ್ನು ಮಾಡಿದಳು. ಹೀಗೆ ಮುಂದೆ ಲಭಿಸುವ ತನ್ನ ವಿಶೇಷ ಮೋಕ್ಷವೆಂಬ ಕಲ್ಪವೃಕ್ಷಕ್ಕೆ ಬೀಜಾರೋಪಣೆಯನ್ನು ಮಾಡಿಕೊಂಡಳು.

ವಿ. : ೧. ದೇವಕಿಯು ಹೀಗೆ ಕೃಷ್ಣನನ್ನು ಆರಾಧಿಸಿದ್ದು ನಿಜವಾದ ಅರ್ಥದಲ್ಲಿ ಪೂಜೆ-ಯಾಯಿತು ಎಂದು ತಿಳಿಸುವ ಮೂಲಕ ಮಾನಸಪೂಜೆಯ ರೀತಿಯನ್ನು ತಿಳಿಸಿಕೊಟ್ಟಿರುವರು.

೨. ಹೀಗೆ ನಡೆದಾಗ ಮಾತ್ರವೇ ನಿಜವಾದ ಅರ್ಥದಲ್ಲಿ ಪೂಜೆ ಸಾರ್ಥಕ; ಇಂತಹ ಪೂಜೆಯೇ ಮೋಕ್ಷಕ್ಕೆ ಸಾಧಕ ಎಂಬ ತತ್ತ್ವ ಇಲ್ಲಿ ನಿರೂಪಿತ.

---

೧. ವಾಸುದೇವ ಇತಿ ಸಾದರಂ ಸರ್ವೈರಭ್ಯಸ್ಯಮಾನತ್ವಾದಿತಿ ಭಾವಃ । –ವ್ಯಾ.

೩. ಮಾಲಾ ಸಮರ್ಪಣೆ, ಅಭಿಷೇಕ, ನೈವೇದ್ಯ ಹಾಗೂ ನೀರಾಜನ ಎಂಬ ಪೂಜೆಯ ಮುಖ್ಯಾಂಶಗಳ ನೈಜ ಸ್ವರೂಪ ಇಲ್ಲಿ ನಿರೂಪಿತವಾಗಿದೆ.

### ಶ್ರೀಕೃಷ್ಣಬಲರಾಮರಿಗೆ ಉಪನಯನ

ವ್ರಜೇ ಗೃಹಸ್ಥೋಚಿತರಮ್ಯಲೀಲಾಃ
ಪ್ರಚಕ್ರತುರ್ಯೌ ಸಮಮಂಗನಾಭಿಃ ।
ಅಥೋಪನೀತೌ ವಿಧಿನೋಪನೀತೌ
ಸುತೌ ವಿತೇನೇ ಕಿಲ ಶೂರಸೂನುಃ ॥ ೧೮ ॥

ಬಳಿಕ, ಬಳಿಗೆ ಬಂದ, ಗೋಕುಲದಲ್ಲಿ ಗೃಹಸ್ಥರಿಗೆ ಉಚಿತವಾದ ಮನೋಹರವಾದ ಲೀಲೆಗಳನ್ನು ನಾರಿಯರೊಂದಿಗೆ ಮಾಡಿದ್ದ ತನ್ನ ಪುತ್ರರಾದ ಕೃಷ್ಣಬಲರಾಮರಿಗೆ ಶೂರಪುತ್ರನಾದ ವಸುದೇವ ವಿಧ್ಯುಕ್ತವಾಗಿ ಉಪನಯನ ಮಾಡಿದ.

ವಿ. : ೧. ಉಪನಯನವಾದ ಮೇಲೆ ವಿವಾಹವಾಗುವುದು, ವಿವಾಹವಾಗಿ ಗೃಹಸ್ಥಧರ್ಮ-ವನ್ನು ಪಾಲಿಸುವುದು ಶಾಸ್ತ್ರವಿಧಿ; ಆದರೆ ಕೃಷ್ಣಬಲರಾಮರು ಆ ಮುನ್ನವೇ ಗೋಕುಲದಲ್ಲಿದ್ದಾಗ ಗೋಪಿಯರೊಂದಿಗೆ ವಿಹರಿಸಿ ಸಂತತಿಯನ್ನು ಪಡೆದು ಗೃಹಸ್ಥಧರ್ಮವನ್ನು ಪಾಲಿಸಿದವ-ರಾಗಿದ್ದರು; ಅವರಿಗೆ ಈಗ ಉಪನಯನವನ್ನು ಮಾಡಿದ್ದು ಎಂತಹ ಆಶ್ಚರ್ಯ ಎಂದು ಭಾವ.

೨. ವಾಸ್ತವವಾಗಿ ದೇವತೆಗಳಿಗೆ ಸಕಲವರ್ಣಾಶ್ರಮಧರ್ಮಗಳು[೧] ಸದಾ ವಿಹಿತ; ಇನ್ನು ಶ್ರೀಕೃಷ್ಣನಂತೂ ಸಾಕ್ಷಾತ್ ಪರದೇವತೆಯಾದ ಶ್ರೀಹರಿ; ಆದ್ದರಿಂದ ಅವನಿಗೆ ಇಂತಹ ಲೋಕ-ರೀತಿಯ ಧರ್ಮಗಳು ಅನ್ವಯಿಸುವುದಿಲ್ಲ ಎಂಬುದು ಒಳಗಿನ ಭಾವ[೨].

### ಶ್ರೀಕೃಷ್ಣನ ಉಪನಯನಕ್ಕಾಗಿ ಧಾವಿಸಿದ ಮುನಿಗಳು

ಮುನಯ ಉಪಯಯುರ್ಮಹೇಕ್ಷಣೋತ್ಸುಕಾ
ಧೃತನಿಯಮಾಃ ಕಿಲ ಸರ್ವತಃ ಸಮೇತಾಃ ।
ಜನಿಮಿವ ಪರಿಹರ್ತುಮುತ್ತರತ್ರ
ಹ್ಯುಪನಯನಾದಿನಿದಾನಮಾಪ್ತಕಾಮಾಃ ॥ ೧೯ ॥

---

೧. ನ ಚಾಶ್ರಮದ್ವಯಮೇವ ದೇವಾನಾಮ್।'ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ ಸರ್ವಾಶ್ರಮಾಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಇತಿ ಕೌಂಠರವ್ಯಶ್ರುತೌ ಯತಿತ್ವದೃಷ್ಟಾಂತೇನಾನ್ಯೇಷಾಮಪ್ಯುಪದೇಶಾತ್ ॥ -ಬ್ರಹ್ಮಸೂತ್ರಭಾಷ್ಯ(೩./೪/೪೮)

೨. ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ -ಗೀತಾ(೪/೧೪)

ಆ ಶ್ರೀಕೃಷ್ಣನ ಉತ್ಸವವನ್ನು ನೋಡುವ ಕಾತರದಿಂದ ನಿಯಮಶೀಲರಾದ, ಆಪ್ತಕಾಮರಾದ ಮುನಿಗಳು ಎಲ್ಲೆಡೆಗಳಿಂದಲೂ ಒಟ್ಟಾಗಿ ಧಾವಿಸಿದರು; ಮುಂದೆ ತಮಗೆ ಉಪನಯನ ಮೊದಲಾದ ಸಂಸ್ಕಾರಗಳಿಗೆ ಕಾರಣವಾಗುವ ಮರುಹುಟ್ಟನ್ನು ಪರಿಹರಿಸಿಕೊಳ್ಳಲೋ ಎಂಬಂತೆ.

ವಿ. : ೧. ಋಷಿಗಳು ಹಾಗೆ ಧಾವಿಸಲು ಶ್ರೀಕೃಷ್ಣನ ಆ ಉಪನಯನ ಮಹೋತ್ಸವದ ದರ್ಶನ ಮುಕ್ತಿಗೆ ಕಾರಣವಾಗುವುದು ಎಂಬ ಭಾವದಿಂದ ಎಂಬುದು ಇಲ್ಲಿಯ ತಾತ್ಪರ್ಯ.

೨. ಎಂತಹ [1]ವ್ರತಶೀಲರೂ ಸಹ ಮಹಾವಿಷ್ಣುವಿನ ಉತ್ಸವಾದಿಗಳ ದರ್ಶನವನ್ನು ಮಾಡುವುದು ವೈಷ್ಣವ ಧರ್ಮ ಎಂಬುದಕ್ಕೆ ಸಹ ಇದು ಸೂಚಕ ; ನಿದಾನ – ಮೂಲಕಾರಣ.

೩. ಶ್ರೀಕೃಷ್ಣನ ಉಪನಯನಮಹೋತ್ಸವ ದರ್ಶನದಿಂದ ತಮಗೆ ಮುಂದೆ ಉಪನಯನಾದಿಗಳು ಒದಗುವಂತಹ ಮರುಹುಟ್ಟು ಬಾರದಂತಾಗುವುದು ಎಂಬ ಇಲ್ಲಿಯ ಸ್ವಾರಸ್ಯ ಗಮನಾರ್ಹ.

**ವಾದ್ಯಘೋಷ – ದೇವತೆಗಳ ಸಂಭ್ರಮ**

**ವಾದ್ಯಾನಿ ನೇದುರ್ಮುನಯಶ್ಚ ಮಂತ್ರಾ-**
**ನುಚ್ಚಾರಯಂತಃ ಸಹ ಬಂದಿವೃಂದೈಃ।**
**ವೃಂದಾರಕಾಣಾಂ ಸ್ತುತಯಶ್ಚ ರಮ್ಯ-**
**ಗಂಧರ್ವಗೀತೈಃ ಸಹ ನಾಕಿಲೋಕೇ ॥ ೨೦ ॥**

ವಾದ್ಯಗಳು ಮೊಳಗಿದವು; ವಂದಿಮಾಗಧರ ಹಿಂಡಿನೊಂದಿಗೆ ಮುನಿಗಳು ಮಂತ್ರಗಳನ್ನು ಉಚ್ಚರಿಸುತ್ತಾ ಧ್ವನಿಗೈದರು; ದೇವಲೋಕದಲ್ಲಿ ಮನೋಹರವಾದ ಗಂಧರ್ವರ ಗೀತೆಗಳೊಂದಿಗೆ ದೇವತೆಗಳ ಸ್ತೋತ್ರಗಳೂ ಸಹ ಧ್ವನಿಗೈದವು.

ವಿ. : ೧. ಸರ್ವೋತ್ತಮನಾದ ಶ್ರೀಕೃಷ್ಣನ ಆ ಉಪನಯನ ಮಹೋತ್ಸವವು ಭೂಲೋಕದ ಸಜ್ಜನರಿಗೆಮಾತ್ರವಲ್ಲದೆ ದೇವಲೋಕದ ದೇವತೆಗಳು ಮೊದಲಾದವರಿಗೂ ಮಹೋತ್ಸವವೆನ್ನಿಸಿತು ಎಂದು ಭಾವ.

೨. ಜೀವೋತ್ತಮರಾದ ಶ್ರೀಮದಾಚಾರ್ಯರ ಉಪನಯನವನ್ನು ಸಹ ಹೀಗೆ ದೇವತೆಗಳು ಅಭಿನಂದಿಸಿದ ವಿವರ ಸುಮಧ್ವವಿಜಯದಲ್ಲಿದೆ (೩/೩೩-೩೭).[2]

---

೧. ಶ್ರೀಕೃಷ್ಣೋಪನಯನದರ್ಶನೇ ಸತ್ಯಪುನರ್ಭವ ಏವ ಭವತೀತಿ ಭಾವಃ । ಧೃತನಿಯಮಾ ಇತ್ಯನೇನ ಮಹಾವ್ರತಧರೈರಪಿ ವಿಷ್ಣೂತ್ಸವದರ್ಶನಾದಿವೈಷ್ಣವಧರ್ಮಾಃ ಅನುಷ್ಠೇಯಾ ಇತಿ ಸೂಚಿತಮ್ । –ವ್ಯಾ.

೨. ವಿವಿಧವೇದತಯಾ ವಿಜಿಹೀರ್ಷವೋ ವದನರಂಗಪದೇಽಸ್ಯ ಚಿರಾಯ ಯಾಃ।
ಸುರವರಪ್ರಮದಾ ಅಪಿ ಸತ್ಪ್ರಿಯಾ ಅಭಿನನಂದುರಹೋ ವಿಯತೋ ಮಹಮ್॥
ವಿಹಿತಸಾಧನಸಾಧಿತಸತ್ಕ್ರಿಯೋ ಜ್ವಲನಮುಜ್ಜ್ವಲಧೀರ್ಜ್ವಲಯನ್ನಯಮ್ ।
ಉಪನಿನಾಯ ಸುತಂ ಸುಕುಮಾರಕಂ ಕುಶಲಿನಂ ಕುಶಲೀಕೃತಶೀರ್ಷಕಮ್ ॥

೩.. ಇಲ್ಲಿಯೂ ಸಹ ಶ್ರೀಕೃಷ್ಣನ ಉಪನಯನದ ಸಮಯದಲ್ಲಿ ದೇವತೆಗಳು ಸಂಭ್ರಮ, ಮೊದಲಾದವುಗಳನ್ನು ಹೊಂದಿದ ವಿವರಗಳನ್ನು ಅನ್ವಯಿಸಿಕೊಳ್ಳಬೇಕು. ಸರ್ವೋತ್ತಮ ಹಾಗೂ ಜೀವೋತ್ತಮರಾದ ಶ್ರೀಹರಿವಾಯುಗಳ ಉಪನಯನಾದಿಕಾರ್ಯಗಳು ಕೇವಲ ಲೋಕವಿಡಂಬನೆ ಎಂಬುದು ಮುಖ್ಯತಾತ್ಪರ್ಯ.

### ನಾರಿಯರ ಸಂಭ್ರಮ - ತ್ರಿವಕ್ರೆಯ ಚಿಂತೆ

**ನಾರ್ಯಃ ಸಮಸ್ತಾ ನಯನೋತ್ಸವಂ ತಂ**
**ರಕ್ತಾಕ್ಷತೈ ರಾಗಯುತಾ ಮುಕುಂದಮ್ ।**
**ಅವಾಕಿರಂಸ್ತತ್ಪರಿರಂಭಣೋತ್ಕಾ**
**[೧]ಕುಬ್ಜಾ ದುರಂತಾಂ ಧ್ರುವಮಾಪ ಚಿಂತಾಮ್ ॥ ೨೧ ॥**

ಸಮಸ್ತ ನಾರಿಯರು ಭಕ್ತಿಯುತರಾಗಿ ಕಣ್ಣಿಗೆ ಹಬ್ಬವೆನ್ನಿಸುವ ಆ ಮುಕುಂದನಾದ ಕೃಷ್ಣನ ಮೇಲೆ ಕೆಂಪು ಅಕ್ಷತೆಗಳನ್ನು ಸುರಿಸಿದರು; ಆದರೆ ಕೃಷ್ಣನ ಆಲಿಂಗನದ ಕಾತರವನ್ನು ಹೊಂದಿದ್ದ ತ್ರಿವಕ್ರೆಯು ನಿಶ್ಚಿತವಾಗಿ ಕೊನೆಯಿಲ್ಲದ ಚಿಂತೆಗೊಳಗಾದಳು.

ವಿ. : ೧. ಕೃಷ್ಣನು ತನ್ನನ್ನು ಸ್ವೀಕರಿಸುವ ವಚನ ನೀಡಿದ್ದರಿಂದ ತ್ರಿವಕ್ರೆ ಅವನಿಗಾಗಿ ಕಾಯುತ್ತಿದ್ದಳು; ಆದರೆ ಕೃಷ್ಣ ಹೀಗೆ ಉಪನೀತನಾಗಿ, ಬ್ರಹ್ಮಚಾರಿಯಾದ್ದರಿಂದ ಅವನ ಸಂಗ ತನಗೆ ಎಟುಕದು ಎಂಬ ಭಾವದಿಂದ ಚಿಂತೆಗೀಡಾದಳು ಎಂದರ್ಥ.

೨. ಇಲ್ಲಿನ ರಕ್ತಾಕ್ಷತೈಃ ಎಂಬ ಪದದಲ್ಲಿ ಬಂದಿರುವ ಕೆಂಪು ಅಕ್ಷತೆ ಎಂಬ ಮಾತು ಕೆಂಪು ಬಣ್ಣದ ಅಕ್ಷತೆಗಳು ಶ್ರೇಷ್ಠ ಎಂಬುದನ್ನು ಸೂಚಿಸುವಂತಿವೆ.

### ಶ್ರೀಕೃಷ್ಣಬಲರಾಮರ ಕೊರಳಲ್ಲಿ ಶೋಭಿಸಿದ ಯಜ್ಞೋಪವೀತ

**ಅಂಬಾಯಾಃ[೨] ಪಿತುರಂಚತಾಮಪಿ ಸತಾಂ ಸತ್ಪ್ರೇಮದಾಮೋಪಮಂ**
**ಸಂಬದ್ಧಂ ವಿಶದಂ ಗಲೇ ತ್ರಿಗುಣಿತಂ ಯಜ್ಞೋಪವೀತಂ ತಯೋಃ ।**

---

ಪರಿಚರಾಗ್ನಿಗುರೂ ಚರಿತವ್ರತಃ ಸುಚರಣಃ ಪಠ ಸಾಧು ಸದಾಗಮಾನ್ ।
ಇತಿ ಗುರೋಸ್ತ್ರಿಜಗದ್ಗುರುಶಿಕ್ಷಣೇ ಸ್ಫುಟಮಹಾಸಿ ಸುರೈಃ ಕೃತಸಾಕ್ಷಿಭಿಃ ॥
ಜಿತಕುಮಾರಗುಣಂ ಸುಕುಮಾರಕಂ ನಿಜಕುಮಾರಮವೇಕ್ಷ್ಯ ನಿರಂತರಮ್ ।
ಸಮುಚಿತಾಚರಣೇ ಚತುರಂ ಸ್ವತಃ ಕ್ಷಿತಿಸುರೋ ಮುದಮಾಯತ ಶಿಕ್ಷಯನ್॥
ಸಪಟಖಂಡಮಕಿಂಚನವತ್ ಕ್ವಚಿತ್ ಸ್ವವಿಭವಾನುಚಿತಂ ಚರಣಾದಿಕಮ್ ।
ಭುವನಭರ್ತುರಹೋ ಸ್ವನಿಗೂಹನಂ ಸುರಸಭಾಸು ಕುತೂಹಲಮಾತನೋತ್ ॥

೧. ಉಪರಿಕರಿಷ್ಯಮಾಣಕುಬ್ಜಾರತ್ಯಾಽಪಿ ಇದಂ ನಟನಮೇವೇತಿ ಭಾವಃ । -ವ್ಯಾ.

೨. ಅಂಬಾದಿತ್ರಿವರ್ಗಕೃತಪ್ರೇಮ್ಣಾಮಪಿ ತ್ರ್ಯಾತ್ಮಕತ್ವಾತ್ ಶ್ರೀಕೃಷ್ಣರಾಮವಿಷಯಕತ್ವೇನ ತತ್ಸಂಬಂಧಿತ್ವಾಚ್ಚೋ-ಪವೀತಸಾಮ್ಯಮಿತಿ ಭಾವಃ । -ವ್ಯಾ.

**ರೇಜೇ ತದ್ವಿಲಸದ್ಗುಣೈರ್ಬಹುಗುಣೈರಂತರ್ಗರಿಷ್ಠಂ ತ್ರಯಂ**
**ಸ್ತೋತ್ರಸ್ತವ್ಯತಯಾ ತದಾಶ್ರಯಯುತಂ ಸ್ವಚ್ಛಂ ಶ್ರುತೀನಾಮಿವ ॥ ೨೨ ॥**

ತಾಯಿಯಾದ ದೇವಕಿಯ, ತಂದೆಯಾದ ವಸುದೇವನ ಹಾಗೂ ಪೂಜಿಸತೊಡಗಿದ ಸಜ್ಜನರ ಮಹಾಪ್ರೀತಿಯ ಪಾಶದ ಸಂಕೇತದಂತೆ ಶ್ರೀಕೃಷ್ಣ-ಬಲರಾಮರ ಕೊರಳಲ್ಲಿ ಹಾಕಲ್ಪಟ್ಟ ಮೂರು ಎಳೆಗಳ ಆ ಯಜ್ಞೋಪವೀತವು, ಪ್ರತ್ಯೇಕವಾಗಿ ಅನಂತವಾದ ಹೊಳೆಯುವ ಜ್ಞಾನಾನಂದಾದಿ ಬಹುಗುಣಗಳಿಂದಾಗಿ ಒಳಗೆ ದೃಢವಾದ[1], ಸ್ತೋತ್ರ ಮತ್ತು ಸ್ತವ್ಯ ರೂಪದಿಂದ ಶ್ರೀಕೃಷ್ಣ-ಬಲರಾಮರನ್ನು ಆಶ್ರಯಿಸಿದ ನಿರ್ಮಲವಾದ ಮೂರು ವೇದಗಳಂತೆ ಶೋಭಿಸಿತು.

ವಿ. : ೧. ಮೂರು ಎಳೆಗಳ ಯಜ್ಞೋಪವೀತವು ಮೂರು ವೇದಗಳಂತೆ ಶೋಭಿಸಿತು ಎಂದರ್ಥ.

೨. ಇದು ಯಜ್ಞೋಪವೀತವು ವೇದತ್ರಯದ ಸಂಕೇತ ಎಂಬುದರ ವಿವರಣೆಯೂ ಆಗಿದೆ; ಇಲ್ಲಿ ಸ್ತೋತೃವಾಗಿ ಆದಿಶೇಷನಾದ ಬಲರಾಮನು, ಸ್ತವ್ಯನಾಗಿ ಸಾಕ್ಷಾತ್ ಶ್ರೀಹರಿಯಾದ ಶ್ರೀಕೃಷ್ಣನು ವಿವಕ್ಷಿತ.

೩.. [2]ಸಕಲವೇದಪಾರಂಗತನಾದ ಬಲರಾಮನಿಗೂ, ಸಕಲವೇದಪ್ರತಿಪಾದ್ಯನಾದ ಶ್ರೀಕೃಷ್ಣನಿಗೂ ಆ ಯಜ್ಞೋಪವೀತಧಾರಣೆ ಕೇವಲ ಲೋಕದೃಷ್ಟಿಯಿಂದ ಮಾತ್ರ ಎಂಬ ಸೂಚನೆಯು ಇಲ್ಲಿದೆ.

### ಶ್ರೀಕೃಷ್ಣನ ಉಪನಯನದಿಂದ ಅಗ್ನಿದೇವನಿಗಾದ ವಿಶೇಷ ಸಂಭ್ರಮ

**ಲೋಕಂ ವಿಡಂಬಯಿತುಮೇವಮಿಹೋಪನೀತಃ**
**ಸತ್ಯಾಂ ಕರಿಷ್ಯತಿ ಹರಿರ್ಮದಪತ್ಯವಾಂಛಾಮ್[3] ।**

---

೧. ನೈರ್ಗುಣ್ಯಸಾಧಕಕುತರ್ಕೈರನಪೋಹ್ಯಮಿತ್ಯರ್ಥಃ। -ವ್ಯಾ.

೨. ಸಕಲವೇದಪಾರಂಗತಸ್ಯ ಬಲಸ್ಯ ಸಕಲವೇದಪ್ರತಿಪಾದ್ಯಸ್ಯ ಶ್ರೀಕೃಷ್ಣಸ್ಯೇದಾನೀಂ ಕೃತೋಪವೀತಧಾರಣಂ ನಟನಮೇವೇತಿ ಭಾವಃ। -ವ್ಯಾ.

೩.. ಅಗ್ನಿಪುತ್ರಾ ಮಹಾತ್ಮಾನಸ್ತಪಸಾ ಸ್ತ್ರೀತ್ವಮಾಪಿರೇ ।
ಭರ್ತಾರಂ ಚ ಜಗದ್ಯೋನಿಂ ವಾಸುದೇವಮಜಂ ವಿಭುಮ್ ॥
– ಭಾಗವತತಾತ್ಪರ್ಯೋದ್ಧೃತ ಮಹಾಕೂರ್ಮಪುರಾಣದ ವಚನ (೧/೧೦/೩.೧)

ಪುತ್ರಾ ಅಗ್ನೇಃ ಪೂರ್ವಮಾಸಂಸ್ತ್ವತೇಽಥ ಸ್ತ್ರೀತ್ವಪ್ರಾಪ್ತ್ಯೈ ಚಕ್ರುರುಗ್ರಂ ತಪಶ್ಚ ।
ಭಾರ್ಯಾರ್ತ್ವಾರ್ಥೇ ವಾಸುದೇವಸ್ಯ ಯೋಷಿತ್ತನುಂ ತಾಸಾಮಿಚ್ಛತೀನಾಂ ಸಮೀರಃ ॥
ಆದಾದ್ವರಂ ತಪಸಾಽಽರಾಧಿತಃ ಸ ಸ್ತ್ರೀಭೂತಾಸ್ತೇ ಬದರೀಂ ಸಂಪ್ರಜಗ್ಮುಃ ।
ನಾರಾಯಣಂ ತತ್ರ ಶುಶ್ರೂಷಮಾಣಾಃ ಪ್ರಾಪ್ಯಾಪ್ಸರಸ್ತ್ವಂ ರಾಜಕುಲೇಷು ಜಾತಾಃ ॥
ಕಾಶ್ಚಿತ್ ಸ್ವರ್ಗೇ ತಾ ನಿಶಾಮ್ಯೈವ ಕೃಷ್ಣಂ ವವ್ರುಃ ಪತಿಂ ಸರ್ವಗುಣಾಭಿರಾಮಮ್ ॥

ಇತ್ಥಂ ಪ್ರಹೃಷ್ಟಹೃದಿವಾಗ್ನಿರಸೌ ವಿಶಂಕೋ
ಜಜ್ವಾಲ ಯಜ್ವವರಮಂತ್ರಹುತೈರ್ಹವಿರ್ಭಿಃ ॥ ೨೩ ॥

ಲೋಕವನ್ನು ಅನುಕರಣೆ ಮಾಡಲೆಂದೇ ಶ್ರೀಕೃಷ್ಣ ಇಲ್ಲಿ ಹೀಗೆ ಉಪನೀತನಾಗಿರುವನು ; ನನ್ನ ಮಕ್ಕಳ ಬಯಕೆಯನ್ನು ಇವನು ಈಡೇರಿಸುವನು; ಹೀಗೆ ಬಹಳ ತೃಪ್ತಮನಸ್ಸಿನವನಂತೆ ಆ ಅಗ್ನಿಯು ನಿಶ್ಶಂಕೆಯಿಂದ ಶ್ರೇಷ್ಠ ಯಾಜ್ಞಿಕರು ಮಂತ್ರಪೂರ್ವಕ ಹೋಮಿಸಿದ ಹವಿಸ್ಸುಗಳಿಂದ ಪ್ರಜ್ವಲಿಸತೊಡಗಿದ.

ವಿ. : ೧. ಶ್ರೀಕೃಷ್ಣನ ಉಪನಯನ ಮಹೋತ್ಸವದ ಅಂಗವಾಗಿ ನಡೆದ ಹೋಮಕಾರ್ಯ-ದಲ್ಲಿ ಅಗ್ನಿಯು ಪ್ರಜ್ವಲಿಸಿ ಉರಿಯಿತು ಎಂದು ತಾತ್ಪರ್ಯ.

೨. ಮುಂದೆ ಶ್ರೀಕೃಷ್ಣನು ವಿವಾಹವಾಗುವ ನರಕಾಸುರನ ಬಂದಿಗಳಾಗಿದ್ದ ಸ್ತ್ರೀಯರು ವಾಸ್ತವವಾಗಿ [1]ಅಗ್ನಿಯ ಪುತ್ರರು; ಶ್ರೀಕೃಷ್ಣ ಹೀಗೆ ಉಪನೀತನಾದದ್ದು ಅವನು ಮುಂದೆ ವಿವಾಹಿತನಾಗುವುದಕ್ಕೆ ಸಂಕೇತ. ಇದರಿಂದ ತನ್ನ ಮಕ್ಕಳ ಬಯಕೆ ಈಡೇರುವುದು ಎಂಬ ಸಂಭ್ರಮ ಅಗ್ನಿಗೆ ಆಗ ಉಂಟಾಯಿತು ಎಂಬ ಇಲ್ಲಿಯ ಉತ್ಪ್ರೇಕ್ಷೆ ಅತ್ಯಂತ ರೋಚಕ ; ಯಜ್ವಾ-ಯಾಜ್ಞಿಕ.

### ಪ್ರಾರ್ಥನೆಯಾದ ಗರ್ಗಾಚಾರ್ಯರ ಉಪದೇಶ

ಆಚಾರ್ಯಃ ಸಕಲವಿದೇ ಪುರಾಣಪುಂಸೇ
ಗಾಯತ್ರೀಮನುಮದಿಶನ್ಮಮೇತ್ಥಮೂಹಃ ।
ತದ್ವ್ಯಾಜಾತ್ ತವ ಗುಣಚಿಂತಕಾಯ ಮಹ್ಯಂ
ಸದ್ಬುದ್ಧಿಂ ದಿಶ ದಯಯೇತ್ಯಸೌ ಯಯಾಚೇ ॥ ೨೪ ॥

ಸಕಲವನ್ನು ಬಲ್ಲವನೂ, ಪುರಾಣಪುರುಷನೂ ಆದ ಶ್ರೀಕೃಷ್ಣನಿಗೆ ಗರ್ಗಾಚಾರ್ಯರು ಗಾಯತ್ರೀಮಂತ್ರವನ್ನು ಉಪದೇಶಮಾಡಿದರು ; ಆ ನೆಪದಲ್ಲಿ ನಿನ್ನ ಗುಣಗಳನ್ನು ಚಿಂತಿಸುವ ನನಗೆ ಕೃಪೆಯಿಂದ ಸದ್ಬುದ್ಧಿಯನ್ನು ನೀಡು ಎಂಬುದಾಗಿ ಅವರು ಬೇಡಿಕೊಂಡರು ಎಂದು ನನ್ನ ಊಹೆ.

ವಿ. : ೧. ಗರ್ಗಾಚಾರ್ಯರು ಗಾಯತ್ರೀಮಂತ್ರವನ್ನು ಉಪದೇಶಮಾಡುವ ನೆಪದಲ್ಲಿ ಶ್ರೀಕೃಷ್ಣಸ್ತೋತ್ರವನ್ನು ಮಾಡುತ್ತ ತಮಗೆ ಸದ್ಬುದ್ಧಿಯನ್ನು ನೀಡು ಎಂದು ಪ್ರಾರ್ಥಿಸಿಕೊಂಡರು ಎಂದು ತಾತ್ಪರ್ಯ; ಗಾಯತ್ರೀ ಮಂತ್ರವನ್ನು ಯಾರೇ ಪಠಿಸಿದರು ಅದು ಭಗವಸ್ತುತಿಯೇ ಆಗಿರುವುದು ಎಂಬುದು ಇಲ್ಲಿಯ ವಿಶೇಷ ಪ್ರಮೇಯ.

-ಮ.ಭಾ.ತಾ.ನಿ.(೨೦/೧೧೨-೧೧೪)

---

೧. ಅಗ್ನಿಕುಮಾರಾಃ ಖಲು ಶ್ರೀಕೃಷ್ಣಪತ್ನೀನಾಂ ಷೋಡಶಸಹಸ್ರಾಣೀತಿ ಪೌರಾಣಿಕಪ್ರಸಿದ್ಧಿಃ । -ವ್ಯಾ.

೨. ಎಂದರೆ ಅವರು ಮಾಡಿದ್ದು ಉಪದೇಶವಾಗದೆ ಪ್ರಾರ್ಥನೆಯಾಯಿತು ಎಂದರ್ಥ. ನೇರವಾಗಿ ಕೃಷ್ಣನ ಮುಂದೆಯೇ ಹಾಗೆ ಗಾಯತ್ರಿಯನ್ನು ಉಚ್ಚರಿಸುವ ಸುಯೋಗ ಗರ್ಗಾಚಾರ್ಯರದಾಗಿದ್ದಿತು ಎಂಬುದು ಗಮನಾರ್ಹ ; ಮನು – ಮಂತ್ರ.

## ವಸುದೇವ ಮಾಡಿದ ಅಪೂರ್ವ ಗೋದಾನ

**ಇತಃ ಪರಂ ಶ್ರೌತಪಥಸ್ಥಿತೋಽಯಂ**
**ನ ಯಾತಿ ಗೋಪಾಲಕಬಾಲಲೀಲಾಮ್ ।**
**ಇತೀವ ಶೌರಿಃ ಸಹ ದಕ್ಷಿಣಾಭಿ-**
**ರ್ದದೌ ಮುದಾ ಗಾಃ ಸುಭಗಾ ಮುನಿಭ್ಯಃ ॥ ೨೫ ॥**

ಇನ್ನು ಮುಂದೆ ವೈದಿಕಮಾರ್ಗದಲ್ಲಿ ನಡೆಯುವ ಶ್ರೀಕೃಷ್ಣನು ಗೋಪಾಲಕ ಬಾಲಲೀಲೆಯನ್ನು ಮಾಡಲಾರ ಎಂಬ ಭಾವದಿಂದೆಂಬಂತೆ ಶೂರನ ಮಗನಾದ ವಸುದೇವನು ಲಕ್ಷಣಯುಕ್ತವಾದ ಗೋವುಗಳನ್ನು ದಕ್ಷಿಣೆ ಸಮೇತವಾಗಿ ಮುನಿಗಳಿಗೆ ಆನಂದದಿಂದ ದಾನ ನೀಡಿದ.

ವಿ. : ೧. ಕೃಷ್ಣಾವತಾರಕಾಲದಲ್ಲಿ ತಾನು ಸಂಕಲ್ಪಿಸಿದ್ದ ಗೋದಾನ ಕಾರ್ಯವನ್ನು ವಸುದೇವ ಈ[1] ಉಪನಯನ ಕಾರ್ಯದಲ್ಲಿ ಪೂರೈಸಿದ ಎಂದರ್ಥ.

೨. ಉಪನಯನ ಮೊದಲಾದ ಸಂಸ್ಕಾರಗಳ ಸಂದರ್ಭದಲ್ಲಿ ಹೀಗೆ ಗೋದಾನಮಾಡುವುದು ವಿಹಿತ ಎಂಬ ತತ್ತ್ವವೂ ಇದರಿಂದ ಸೂಚಿತ.

೩. ಉಪನಯನದ ಬಳಿಕ ವೇದಾಧ್ಯಯನದಲ್ಲಿ ತೊಡಗಿಕೊಳ್ಳುವ ವಟು ಆ ಮುಂಚಿನಂತೆ ಆಟಪಾಟಗಳಲ್ಲಿ ತೊಡಗುವಂತಿಲ್ಲ ಎಂಬ ಪ್ರಮೇಯವೂ ಇದರಿಂದ ಸೂಚಿತ.

೪. ಗೋಕುಲದಲ್ಲಿದ್ದಾಗ ವೈಶ್ಯನಾದ ನಂದನ ಪುತ್ರನೆನ್ನಿಸಿ ಗೋಪಾಲಕನಾಗಿದ್ದ ಶ್ರೀಕೃಷ್ಣ ಕ್ಷತ್ರಿಯನಾದ ವಸುದೇವನ ಪುತ್ರನೆಂದು ಪ್ರಕಟನಾಗುವ ಮೂಲಕ ಗೋಪಾಲಕವೃತ್ತಿಯನ್ನು ತೊರೆದ ಎಂಬ ಧ್ವನಿಯನ್ನೂ ಇಲ್ಲಿ ಗುರುತಿಸಬಹುದು.

೫. ಕೃಷ್ಣಾವತಾರ ಕಾಲದಲ್ಲಿ ನಂದಗೋಪನು ಮಾಡಿದ್ದ ಗೋದಾನದ ವಿವರ ಹಿಂದೆ (೨/೧೬ರಲ್ಲಿ) ಬಂದಿದೆ.

---

೧. ಶ್ರೀಕೃಷ್ಣಾವತಾರಸಮಯೇ ಸಂಕಲ್ಪಿತಗೋಪ್ರದಾನಂ ಕೃತವಾನಿತ್ಯರ್ಥಃ । –ವ್ಯಾ.
**ಕೃಷ್ಣಾವತಾರೋತ್ಸವಸಂಭ್ರಮೋಽಸ್ಪೃಶನ್ಮುದಾ ದ್ವಿಜೇಭ್ಯೋಽಯುತಮಾಪ್ಲುತೋ ಗವಾಮ್ ॥**
– ಭಾಗ.(೧೦/೩/೧೧)

### ಶ್ರೀವೇದವ್ಯಾಸರಂತೆ ಕಂಗೊಳಿಸಿದ ಶ್ರೀಕೃಷ್ಣ

ಯಜ್ಞೋಪವೀತೋಜ್ಜ್ವಲಕಂಠದೇಶಃ
ಕೃಷ್ಣಾಜಿನಶ್ರೀರ್ಮುನಿಸಂಘಮಾನ್ಯಃ ।
ಪ್ರಾಣಪ್ರಣೇತಾ ಧೃತತರ್ಕಮುದ್ರೋ
ಧ್ಯಾಯನ್ ಮನುಂ ವ್ಯಾಸ ಇವಾನ್ವಶಿಕ್ಷತ್ ॥ ೨೬ ॥

ಯಜ್ಞೋಪವೀತದಿಂದ ಹೊಳೆಯುವ ಉಜ್ಜ್ವಲವಾದ ಕಂಠಪ್ರದೇಶ, ಕೃಷ್ಣಾಜಿನದ ಕಾಂತಿ, ಮುನಿವೃಂದಗಳು ಸಲ್ಲಿಸುತ್ತಿದ್ದ ಪೂಜೆ, ಪ್ರಾಣಾಯಾಮದ ಆಚರಣೆ, ಕೈಯಲ್ಲಿ ತರ್ಕ(ಜ್ಞಾನ) ಮುದ್ರೆ, ಮಂತ್ರದ ಧ್ಯಾನ - ಇವುಗಳಿಂದ ಕೂಡಿದ ಶ್ರೀಕೃಷ್ಣನು ಶ್ರೀವೇದವ್ಯಾಸರಂತೆ ಗಾಯತ್ರೀಮಂತ್ರವನ್ನು ಜಪಿಸಿದ.

ವಿ. : ೧. ಉಪನೀತನಾದ ಶ್ರೀಕೃಷ್ಣ ಗಾಯತ್ರೀಮಂತ್ರ ಜಪಿಸುತ್ತಾ ತನ್ನ ವೇದವ್ಯಾಸರೂಪವನ್ನು ಜ್ಞಾಪಿಸುತ್ತಿದ್ದ ಎಂದು ಭಾವ.

೨. ತಂತ್ರಸಾರಸಂಗ್ರಹದಲ್ಲಿ ಬಂದಿರುವ ಶ್ರೀವೇದವ್ಯಾಸರ ಧ್ಯಾನಶ್ಲೋಕವನ್ನು ಅನ್ವಯಿಸಿ-ಕೊಂಡಾಗ ಇದರ ಸ್ವಾರಸ್ಯ ತಿಳಿಯುವುದು :

ವಿಜ್ಞಾನರೋಚಿಃಪರಿಪೂರ್ತಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಮ್ ।
ತರ್ಕಾಭಯೇತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ॥

೩. ಇಲ್ಲಿ "ಪ್ರಾಣಪ್ರಣೇತಾ[1] ಎಂಬುದಕ್ಕೆ ಶ್ರೀಮುಖ್ಯಪ್ರಾಣನಿಗೂ, ಅವನ ಅವತಾರರಾದ ಶ್ರೀಮಧ್ವಾಚಾರ್ಯರಿಗೂ ಪ್ರೇರಕನಾದ ಮಹಾವಿಷ್ಣು ಎಂಬ ಅರ್ಥವು ವಿವಕ್ಷಿತ.

೪. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ವ್ಯಾಸಾವತಾರ ನಿರೂಪಣೆಯ ಪ್ರಸಂಗದಲ್ಲಿನ ಶ್ಲೋಕಗಳನ್ನು ಸಹ ಇಲ್ಲಿ ಗಮನಿಸಬಹುದು[2].

---

೧. ಅನ್ಯತ್ರ ಪ್ರಾಣಾಪರರೂಪಸ್ಯ ಶ್ರೀಮಧ್ವಾಚಾರ್ಯಸ್ಯ ಪ್ರಣೇತಾ ವ್ಯಾಖ್ಯಾತಾ । -ವ್ಯಾ.

೨. ದ್ವೀಪೇ ಭಗಿನ್ಯಾಸ್ತು ಯಮಸ್ಯ ವಿಶ್ವಕೃತ್ ಪ್ರಕಾಶತೇ ಜ್ಞಾನಮರೀಚಿಮಂಡಲಃ ।
ಪ್ರಭಾಸಯನ್ನಂಡಬಹಿಸ್ತಥಾಽಂತಃ ಸಹಸ್ರಲಕ್ಷಾಮಿತಭಾನುದೀಧಿತಿಃ ॥
ಅಗಣ್ಯದಿವ್ಯೋರುಗುಣಾರ್ಣವಃ ಪ್ರಭುಃ ಸಮಸ್ತವಿದ್ಯಾಧಿಪತಿರ್ಜಗದ್ಗುರುಃ ।
ಅನಂತಶಕ್ತಿರ್ಜಗದೀಶ್ವರೇಶ್ವರಃ ಸಮಸ್ತದೋಷಾತಿವಿದೂರವಿಗ್ರಹಃ ॥
ಶುಭಮರತಕವರ್ಣೋ ರಕ್ತಪಾದಾಬ್ಜನೇತ್ರಾಧರಕರನಖರಸನಾಗ್ರಶ್ಚಕ್ರಶಂಖಾಬ್ಜರೇಖಃ ।
ರವಿಕರವರಗೌರಂ ಚರ್ಮ ಚೈಣಂ ವಸಾನಸ್ತಟಿದಮಲಜಟಾಸಂದೀಪ್ತಚೂಡಂ ದಧಾನಃ ॥
ವಿಸ್ತೀರ್ಣವಕ್ಷಾಃ ಕಮಲಾಯತಾಕ್ಷೋ ಬೃಹದ್ಭುಜಃ ಕಂಬುಸಮಾನಕಂಠಃ ।
ಸಮಸ್ತವೇದಾನ್ ಮುಖತಃ ಸಮುದ್ಗಿರನ್ನನಂತಚಂದ್ರಾಧಿಕಕಾಂತಿಸನ್ಮುಖಃ ॥

### ಶ್ರೀಕೃಷ್ಣ ಪ್ರತಿನಿತ್ಯ ಮಾಡಿದ ಅಗ್ನಿಕಾರ್ಯ

ದಿನೇ ದಿನೇಽಗ್ನೌ ಸಮಿಧೋ ಜುಹಾವ
ತಥಾ ಶ್ರುತೀನಾಂ ಜನನೀಂ ಜಜಾಪ ।
ಸ್ವಕುಕ್ಷಿಪೂರ್ತೌ ನ ರತಿರ್ಹಿ ಕಸ್ಯ
ನಿಜಾನುಭಾವಸ್ಮರಣೋತ್ಸವೇ ಚ ॥ ೨೭ ॥

ಶ್ರೀಕೃಷ್ಣನು ಪ್ರತಿದಿನವೂ ಅಗ್ನಿಯಲ್ಲಿ ಸಮಿತ್ತುಗಳನ್ನು ಹೋಮಿಸಿದ; ಅದರಂತೆ [೧]ವೇದಮಾತೆ ಎನಿಸಿದ ಗಾಯತ್ರಿಯನ್ನು ಜಪಿಸಿದ; ತನ್ನ ಹೊಟ್ಟೆ ತುಂಬಿಸಿಕೊಳ್ಳುವಲ್ಲೂ, ತನ್ನ ಹಿರಿಮೆಯನ್ನು ಜ್ಞಾಪಿಸಿಕೊಳ್ಳುವ ಸಂಭ್ರಮದಲ್ಲೂ, ಯಾರಿಗೆ ತಾನೇ ಆಸಕ್ತಿ ಇರದು ?

ವಿ. : ೧. ಉಪನೀತನಾದ ಶ್ರೀಕೃಷ್ಣ ಪ್ರತಿನಿತ್ಯ ತಪ್ಪದೆ ಅಗ್ನಿಕಾರ್ಯವನ್ನೂ ಗಾಯತ್ರಿಮಂತ್ರಜಪವನ್ನೂ ಮಾಡುತ್ತಾ ಬ್ರಹ್ಮಚರ್ಯಧರ್ಮವನ್ನು ಪಾಲಿಸಿದ ಎಂದು ಭಾವ.

೨. ಅಗ್ನಿಕಾರ್ಯವೆಂದರೆ ಅಗ್ನ್ಯಂತರ್ಗತನಾದ ಪರಶುರಾಮನಿಗೆ ಸಮರ್ಪಣೆ. ಆ ಪರಶುರಾಮನು ಸ್ವತಃ ತಾನೇ ಆದವ. ಇದರಿಂದ ಕೃಷ್ಣ ಮಾಡುತ್ತಿದ್ದ ಅಗ್ನಿಕಾರ್ಯ ತನ್ನ ಹೊಟ್ಟೆ ತುಂಬಿಸಿಕೊಳ್ಳುವ ಕಾರ್ಯವಾಗಿತ್ತು ಎಂದಾಗುವುದು; ಅಗ್ನಿಕಾರ್ಯವು ಶ್ರೀಹರಿಗೆ ಭೋಜನ ಮಾಡಿಸುವಂತಹ ಮಹತ್ಕಾರ್ಯ ಎಂಬ ತತ್ತ್ವವು ಸಹ ಇದರಿಂದ ಸೂಚಿತ.

೩. [೨]ಗಾಯತ್ರೀಜಪವೆಂದರೆ ಶ್ರೀಕೃಷ್ಣನ ಮೂಲರೂಪವಾದ ಶ್ರೀನಾರಾಯಣನ ಗುಣಗಳ ವರ್ಣನೆ. ಶ್ರೀಕೃಷ್ಣ ಗಾಯತ್ರೀ ಜಪಮಾಡುತ್ತಿದ್ದುದು ತನ್ನ ಅನಂತಗುಣಗಳ ಚಿಂತನೆಯನ್ನೇ ಮಾಡುವ ಕಾರ್ಯದಂತಿತ್ತು. ಈ ಮೂಲಕ ಭಗವದ್ಗುಣಚಿಂತನೆಯೇ ಗಾಯತ್ರೀಮಂತ್ರದ ಮುಖ್ಯ ಆಂತರ್ಯ ಎಂದು ಭಾವ ; ಅನುಭಾವ - ಮಾಹಾತ್ಮ್ಯ.

೪. ಪ್ರತಿನಿತ್ಯದ ಊಟ ಹಾಗೂ ತನ್ನ ಸಾಧನೆಗಳ ಸ್ಮರಣೆ ಪ್ರತಿಯೊಬ್ಬನಿಗೂ ಸಹಜ; ಅದರಂತೆ ಶ್ರೀಕೃಷ್ಣನ ಅಗ್ನಿಕಾರ್ಯ, ಜಪಗಳು ಅವನಿಗೆ ಸಹಜ ಕಾರ್ಯಗಳಾಗಿದ್ದವು ಎಂದು ತಾತ್ಪರ್ಯ.

### ಶ್ರೀಕೃಷ್ಣನ ಉಪನಯನದ ಫಲಶ್ರುತಿ

ತಂ ಬ್ರಹ್ಮಚರ್ಯವ್ರತಧುರ್ಯಮಾರ್ಯಾಃ
ಸಂದೃಶ್ಯ ಹೃಷ್ಟಾಃ ಪರಮಬ್ಧಿಪುತ್ರೀ ।

---

ಪ್ರಬೋಧಮುದ್ರಾಭಯದೋರ್ದ್ವಯಾನ್ವಿತೋ ಯಜ್ಞೋಪವೀತಾಜಿನಮೇಖಲೋಲ್ಲಸನ್ ।
ದೃಶಾ ಮಹಾಜ್ಞಾನಭುಜಂಗದಷ್ಟಮುಜ್ಜೀವಯಾನೋ ಜಗದತ್ಯರೋಚತ ॥ -ಮ.ಭಾ.ತಾ.ನಿ.(೧೦/೫೧-೫೫)

೧. ವೇದಮಾತಾ ತು ಗಾಯತ್ರೀ... । ಗಾಯತ್ರೀ ವೇದಮಾತಾಽಸಿ...। -ಸ್ಮೃತಿ

೨. ಅನೇನ ಗಾಯತ್ರೀ ಶ್ರೀಕೃಷ್ಣಮಾಹಾತ್ಮ್ಯಪ್ರತಿಪಾದಿಕೇತಿ ಜ್ಞಾಯತೇ। -ವ್ಯಾ.

ವಕ್ಷಃಸ್ಥಲಸ್ಥಾ ತ್ರಪಯಾಽಽಕುಲಾಽಽಸೀ-
ದಭ್ಯರ್ಥ್ಯಮಾನೌ ಚ ದಿನೇಶವಹ್ನೀ ॥ ೨೮ ॥

ಬ್ರಹ್ಮಚರ್ಯವ್ರತವನ್ನು ಕೈಗೊಂಡ ಶ್ರೀಕೃಷ್ಣನನ್ನು ಕಂಡು ಜ್ಞಾನಿಗಳು ಬಹಳವಾಗಿ ಹರ್ಷಿಸಿದರು; ಆದರೆ ಅವನ ವಕ್ಷಃಸ್ಥಳದಲ್ಲಿ ನೆಲೆಸಿದ ಮಹಾಲಕ್ಷ್ಮಿಯು ಮಾತ್ರ ಲಜ್ಜೆಯಿಂದ ವಿಷಾದಗೊಂಡಳು; ಶ್ರೀಕೃಷ್ಣನಿಂದ ಪ್ರಾರ್ಥಿತರಾದ ಸೂರ್ಯ ಮತ್ತು ಅಗ್ನಿಗಳು ಸಹ ಲಜ್ಜೆಯಿಂದ ವಿಷಣ್ಣರಾದರು.

ವಿ. : ೧. ಶ್ರೀಕೃಷ್ಣನ ಬ್ರಹ್ಮಚರ್ಯವ್ರತ ಋಷಿಮುನಿಗಳಿಗೆ ಅತ್ಯಂತ ಹರ್ಷದಾಯಕವಾಗಿತ್ತು. ಶ್ರೀಕೃಷ್ಣನ ಆ ವ್ರತದ ಆಚರಣೆ ತಮಗೆ ಶಿಕ್ಷಣಪ್ರಾಯವಾಗಿದ್ದರಿಂದ ಅವರಿಗೆ ಸಂಭ್ರಮವೆನಿಸಿತ್ತು ಎಂದರ್ಥ.

೨. ಶ್ರೀಕೃಷ್ಣನ ಬ್ರಹ್ಮಚರ್ಯ ಮಹಾಲಕ್ಷ್ಮಿಗೆ ಮಾತ್ರ ಅಷ್ಟಾಗಿ ಸಂತೋಷ ನೀಡಲಿಲ್ಲ. [೧]ಬ್ರಹ್ಮಚಾರಿಯೊಂದಿಗೆ ಯುವತಿಯು ನೆಲೆಸುವುದು ಲಜ್ಜಾಸ್ಪದವಾದ ವಿಷಯ. ಆದರೆ ನಿತ್ಯಾವಿಯೋಗಿನಿಯಾದ ಮಹಾಲಕ್ಷ್ಮಿಯು ಶ್ರೀಕೃಷ್ಣನ ವಕ್ಷಃಸ್ಥಳದಲ್ಲೇ ನೆಲೆಸಿದ್ದರಿಂದ ಲೋಕದೃಷ್ಟಿಯಲ್ಲಿ ಅದು ಲಜ್ಜಾಸ್ಪದವಾಗಿತ್ತು ಎಂದು ಅರ್ಥ; ಬ್ರಹ್ಮಚರ್ಯಾಶ್ರಮದ ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿಯೂ ಮಹಾಲಕ್ಷ್ಮಿಯು ನೆಲೆಸಿದ್ದಳು ಎಂಬುದು ಮುಖ್ಯ ಭಾವ.

೩. ಬ್ರಹ್ಮಚಾರಿಗಳ ಅಗ್ನಿಕಾರ್ಯವೆಂದರೆ ಅಗ್ನಿಯ ಪ್ರಾರ್ಥನೆ: **ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ**; ಅದರಂತೆ ಸೂರ್ಯಾಂತರ್ಗತ ಶ್ರೀಹರಿಗೆ ಅರ್ಘ್ಯ ಎಂದರೆ ಸೂರ್ಯನ ಪ್ರಾರ್ಥನೆ : "**ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ**". ಆದರೆ ಶ್ರೀಕೃಷ್ಣನಿಂದ ಹಾಗೆ ಪ್ರಾರ್ಥಿಸಿಕೊಳ್ಳಲು[೨] ಅಗ್ನಿ ಹಾಗೂ ಸೂರ್ಯರಿಗೆ ನಾಚಿಕೆಯಾಗುತ್ತಿತ್ತು; ನಾಚಿಕೆಯಿಂದ ವಿಷಾದ ಉಂಟಾಗುತ್ತಿತ್ತು ಎಂದರ್ಥ.

೪. ಶ್ರೀಕೃಷ್ಣ ಸೂರ್ಯ ಹಾಗೂ ಅಗ್ನಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿ, ಅವರ ಕಾರ್ಯಗಳನ್ನು ಮಾಡಿಸುವ ಸಾಕ್ಷಾತ್ ಶ್ರೀಹರಿ ಎಂಬ ತತ್ತ್ವವು ಇಲ್ಲಿ ಧ್ವನಿತ; ತ್ರಪಾ - ನಾಚಿಕೆ.

## ಶ್ರೀಕೃಷ್ಣಬಲರಾಮರ ಗುರುಕುಲಗಮನ

ಗುರೋರ್ಗೃಹಂ ಸರ್ವವಿದಗ್ರಗಣ್ಯಾ-
ವುಪೇಯತುಸ್ತೌ [೩]ಸಮಿಧಃ ಸಮರ್ಪ್ಯ ।

---

೧. ಬ್ರಹ್ಮಚರ್ಯವ್ರತನಿಷ್ಠಪುರುಷವಕ್ಷಸಿ ತರುಣೀನಾಂ ಸ್ಥಿತಿರ್ಲಜ್ಜಾಕರೀತಿ ಭಾವಃ । -ವ್ಯಾ.

೨. ದಾಸಾನುದಾಸಯೋಸ್ತಯೋಃ ಸ್ವಾಮಿನಾ ಶ್ರೀಕೃಷ್ಣೇನ ಕ್ರಿಯಮಾಣಂ ಪ್ರಾರ್ಥನಂ ಕಥಂ ನ ಲಜ್ಜಾಕರೀತಿ ಭಾವಃ ।-ವ್ಯಾ.

೩. ಧರ್ಮೋ ಹಿ ಸರ್ವವಿದುಷಾಮಪಿ ದೈವತಾನಾಂ ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ ।
ಜ್ಞಾನಾದಿಗೂಹನಮುತಾಧ್ಯಯನಾದಿರತ್ರ ತಜ್ಜ್ಞಾಪನಾಥಮವಸದ್ಭಗವಾನ್ ಗುರೌ ಚ ॥ - ಮ.ಭಾ.ತಾ.ನಿ.(೧೪/೪)

ಭವಾನ್ ಭವಾರಣ್ಯಮಿದಂ ಚಿದಗ್ನಾ-
ವತಃ ಪರಂ ನಿರ್ದಹತಾದಿತೀವ ॥ ೨೯ ॥

ತಾವು ಇನ್ನು ಮುಂದೆ ಜ್ಞಾನಾಗ್ನಿಯಲ್ಲಿ ಸಂಸಾರದ ಕಾಡನ್ನು ಸುಟ್ಟುಹಾಕಬೇಕು ಎಂಬಂತೆ ಸಮಿತ್ತುಗಳನ್ನು ಸಮರ್ಪಿಸಿ ಸರ್ವಜ್ಞರಲ್ಲಿ ಅಗ್ರಗಣ್ಯರಾದ ಶ್ರೀಕೃಷ್ಣಬಲರಾಮರು ಗುರುವಿನ ಗೃಹವನ್ನು ತಲುಪಿದರು.

ವಿ. : ೧. ಶ್ರೀಕೃಷ್ಣ ಬಲರಾಮರು ಸಾಕ್ಷಾತ್ ಶ್ರೀಹರಿ ಹಾಗೂ ಆದಿಶೇಷ; ಶ್ರೀಹರಿ ಮುಖ್ಯತಃ ಸರ್ವಜ್ಞನಾದರೆ ಬಲರಾಮದೇವರು ಅನಂತರದ ಒಂದು ಹಂತದಲ್ಲಿ ಸರ್ವಜ್ಞರು. ಬಲ-ರಾಮನಲ್ಲಿ ಆವೇಶ ಮಾಡಿದ್ದು ಶುಕ್ಲಕೇಶರೂಪದ ಸಾಕ್ಷಾತ್ ಶ್ರೀಹರಿಯೇ ಎಂಬುದು ಮತ್ತೊಂದು ವಿಶೇಷ. ಅವರಿಗೆ ಸಾಂದೀಪನಿಗಳ ಬಳಿ ಅಧ್ಯಯನ ಮಾಡುವ ಅಗತ್ಯ ಸ್ವಲ್ಪವೂ ಇರಲಿಲ್ಲ ಎಂಬುದನ್ನು ಇದರಿಂದ ಸೂಚಿಸಿರುವರು. ಅವರು ಹಾಗೆ ಮಾಡಿದ್ದು ಕೇವಲ ಲೋಕವಿಡಂಬನೆ ಹಾಗೂ ಅಸುರಮೋಹನಕ್ಕಾಗಿ ಎಂಬುದು ಅಲ್ಲಿಯ ತತ್ತ್ವ.

೨. ಶ್ರೀಕೃಷ್ಣನು ಶ್ರೀಹರಿ; ಸಕಲರಿಗೂ ಜ್ಞಾನದಾಯಕನು ಅವನೇ. ಆದಿಶೇಷ ವ್ಯಾಖ್ಯಾನ-ದೇವತೆ ಎಂಬ ಶಾಸ್ತ್ರವಚನಗಳ ಹಿನ್ನೆಲೆಯಲ್ಲಿ ಇದರ ಸ್ವಾರಸ್ಯ ತೆರೆದುಕೊಳ್ಳುವುದು.

೩. [೧]ಸಮಿತ್ಪಾಣಿಗಳಾಗಿ ಗುರುಕುಲವಾಸಕ್ಕೆ ತೆರಳುವುದು ಶಾಸ್ತ್ರದ ಆದೇಶ : ಸಮಿತ್ಪಾಣಿಃ **ಶ್ರೋತ್ರಿಯಂ ಬ್ರಹ್ಮನಿಷ್ಠಮ್**. ಅದರ ಉದ್ದೇಶ ಅಗ್ನಿಕಾರ್ಯಾದಿ ಯಜ್ಞಕಾರ್ಯಗಳಿಗೆ ಉಪಯುಕ್ತವಾಗಲಿ ಎಂದು. ಮುಖ್ಯವಾಗಿ ಅಂತಹ ಯಜ್ಞಕಾರ್ಯ ಜ್ಞಾನಪ್ರಾಪ್ತಿಗೆ ಸಾಧನವಾಗಿ, ಸಂಸಾರದ ಕಾಡನ್ನೇ ಬೂದಿಗಯ್ಯುವುದು ಎಂಬುದು ತತ್ತ್ವ.

೪. ಸಮಿತ್ತುಗಳನ್ನು ಒಪ್ಪಿಸಿದ ಉದ್ದೇಶ ಗುರುಗಳಿಗೆ ವಿಶೇಷ ಜ್ಞಾನಪ್ರಾಪ್ತಿಯಾಗಿ ಸದ್ಗತಿ ಲಭಿಸಲಿ ಎಂಬುದು ಇಲ್ಲಿಯ ಮತ್ತೊಂದು ಬಗೆಯ ಸೂಚನೆ.

### ಶ್ರೀಕೃಷ್ಣಬಲರಾಮರ ಗುರುಕುಲವಾಸದ ಅವಧಿ

ಅಥೋ ಚತುಃಷಷ್ಟಿದಿನೈಃ [೨]ಸ ತಾವತ್
ಕಲಾಃ ಪ್ರಜಗ್ರಾಹ ಬಲಶ್ಚ ಧೀಮಾನ್ ।
[೩]ಗುರೋಸ್ತತೋಽಪ್ಯಲ್ಪದಿನೈರ್ಯದಾಸಾಂ
ಸಕೃತ್ ಸಮುಚ್ಚಾರಣಮಪ್ಯಶಕ್ಯಮ್ ॥ ೩೦ ॥

---

೧. ವಿದ್ಯಾಭ್ಯಾಸವ್ಯಾಜೇನ ತಸ್ಯ ಗುರೋರ್ಮೋಕ್ಷಮೇವ ದಾತುಂ ಗತಾವಿತಿ ಭಾವಃ । -ವ್ಯಾ.

೨. ಸಂತತಂ ಚಿಂತಯೇತ್ಕಂಠಂ ಭಾಸ್ವತ್ಕೌಸ್ತುಭ ಭಾಸಕಮ್ ।
ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ॥ - ದ್ವಾದಶಸ್ತೋತ್ರ

೩. ಸರ್ವಂ ತದಮರಶ್ರೇಷ್ಠೌ ಸರ್ವವಿದ್ಯಾಪ್ರವರ್ತಕೌ ।
ಸಕೃನ್ನಿಗದಮಾತ್ರೇಣ ತೌ ಸಂಜಗೃಹತುರ್ನೃಪ ॥
ಅಹೋರಾತ್ರೈಶ್ಚತುಃಷಷ್ಟ್ಯಾ ಸಂಯಾತೌ ತಾವತೀಃ ಕಲಾಃ ।
ಗುರುದಕ್ಷಿಣಯಾಽಽಚಾರ್ಯಂ ಛಂದಯಾಮಾಸತುರ್ನೃಪ ॥ -ಭಾಗ.(೧೦/೪೩/೩೫-೩೬)

ಬಳಿಕ ಅಲ್ಲಿ ಶ್ರೀಕೃಷ್ಣ ಅರವತ್ತುನಾಲ್ಕು ದಿನಗಳಲ್ಲಿ (ಸಕಲ)ಕಲಾವಿದ್ಯೆಗಳನ್ನೂ ಅಧ್ಯಯನ ಮಾಡಿದ; ಧೀಮಂತನಾದ ಬಲರಾಮನೂ ಸಹ; ಗುರುಗಳಾದ ಸಾಂದೀಪಿನಿ ಆಚಾರ್ಯರಿಗೆ ಅದಕ್ಕಿಂತಲೂ ಕಡಿಮೆ ದಿನಗಳಲ್ಲಿ ಆ ವಿದ್ಯೆಗಳನ್ನು ಒಂದು ಬಾರಿ ಸಹ ಉಚ್ಚರಿಸಲು ಸಾಧ್ಯವಿರಲಿಲ್ಲ.

ವಿ. : ೧. ಶ್ರೀಕೃಷ್ಣ-ಬಲರಾಮರು ಲೋಕದೃಷ್ಟಿಯಲ್ಲಿ ಒಟ್ಟು ೬೪ ದಿನಗಳ ಕಾಲ ಸಾಂದೀಪಿನಿ ಆಚಾರ್ಯರ ಬಳಿಯಲ್ಲಿ ಗುರುಕುಲ ವಾಸ ಮಾಡಿದರು ಎಂದರ್ಥ.

೨. ೬೪ ವಿದ್ಯೆಗಳ ಅಧ್ಯಯನವೂ ಸಹ ಅಗತ್ಯ[೧] ಎಂಬುದನ್ನು ಆ ಮೂಲಕ ಅವರು ಜಗತ್ತಿಗೆ ತೋರಿಸಿಕೊಟ್ಟರು ಎಂದೂ ಭಾವ.

೩. ಸಾಂದೀಪಿನಿಗಳು ೬೪ ದಿನಗಳಲ್ಲಿ ೬೪ ವಿದ್ಯೆಗಳನ್ನು ಉಪದೇಶಿಸುವಷ್ಟು ಸಮರ್ಥರಾದ ಜ್ಞಾನಿಗಳಾಗಿದ್ದರು ಎಂಬುದೂ ಗಮನಾರ್ಹ.

೪. [೨]ಒಂದು ದಿನಕ್ಕೆ ಒಂದು ವಿದ್ಯೆಯಂತೆ ೬೪ ದಿನಗಳಲ್ಲಿ ೬೪ ವಿದ್ಯೆಗಳ ಅಧ್ಯಯನ ಪೂರೈಸಿತು; ಶ್ರೀಕೃಷ್ಣ ಬಲರಾಮರಿಗೆ ಲೋಕದೃಷ್ಟಿಯಲ್ಲೂ ಅಷ್ಟು ದಿನಗಳ ಕಾಲ ಅಲ್ಲಿ ನೆಲೆಸುವ ಅಗತ್ಯವಿರಲಿಲ್ಲ. ಆದರೆ ಅದಕ್ಕಿಂತ ಕಡಿಮೆ ಅವಧಿಯಲ್ಲಿ ಆ ವಿದ್ಯೆಗಳನ್ನೆಲ್ಲಾ ಉಪದೇಶಿಸುವ ಸಾಮರ್ಥ್ಯ ಸಾಂದೀಪಿನೀ ಆಚಾರ್ಯರಿಗೆ ಇರಲಿಲ್ಲ ಎಂಬುದೇ ಅದಕ್ಕೆ ಮುಖ್ಯಕಾರಣವಾಗಿತ್ತು ಎಂದರ್ಥ.

೫. ಇದೇ ರೀತಿಯಾಗಿ ಶ್ರೀಮದಾಚಾರ್ಯರಿಂದ ತ್ರಿವಿಕ್ರಮಪಂಡಿತಾಚಾರ್ಯರು ವಾದಕಥೆಯಲ್ಲಿ ಪರಾಭವಗೊಂಡ ಪ್ರಸಂಗವನ್ನು ಸಹ ಅರ್ಥಮಾಡಿಕೊಳ್ಳಬೇಕು. ಶ್ರೀಮದಾ-ಚಾರ್ಯರ ಉಪದೇಶವನ್ನು ಅರ್ಥಮಾಡಿಕೊಳ್ಳಲು ತ್ರಿವಿಕ್ರಮಪಂಡಿತರಿಗೆ ೧೫ ದಿವಸಗಳ ಅವಧಿ ಅಗತ್ಯವಾಗಿತ್ತು; ಆದರೆ, ಶ್ರೀಮದಾಚಾರ್ಯರಿಗೆ ಮಾತ್ರ ಅದರ ಅಗತ್ಯ ಸರ್ವಥಾ ಇರಲಿಲ್ಲ ಎಂದರ್ಥ. ಸಾಂದೀಪಿನೀ ಪ್ರಸಂಗವು ಗುರುಗಳ ಮಿತಿಗೆ ನಿದರ್ಶನವಾಗಿದ್ದರೆ, ತ್ರಿವಿಕ್ರಮಪಂಡಿತರ ಪ್ರಸಂಗವು ಶಿಷ್ಯರ ಮಿತಿಗೆ ನಿದರ್ಶನವಾಗಿದ್ದಿತು ಎಂಬುದು ವಿಶೇಷ.

## ಗುರುಗಳು ಬಯಸಿದ ದಕ್ಷಿಣೆ

**ಗುರುಂ ತತೋಽಪೃಚ್ಛದುಪಾಯನಂ[೩] ದಿಶನ್**
**ಸುತಂ ಯಯಾಚೇ ವಿಮಲೀಕೃತಾನ್ವಯಃ ।**

---

೧. ಯಾವುದೇ ಒಂದು ಶಾಸ್ತ್ರದ ಸಮಗ್ರ ಪರಿಜ್ಞಾನಕ್ಕೆ ತತ್ಸಂಬಂಧಿಯಾದ ಇತರ ಸಕಲ ಶಾಸ್ತ್ರಗಳ ಅಧ್ಯಯನವು ಅಗತ್ಯ ಎಂಬ ಪ್ರಮೇಯ ಇದರಿಂದ ಸೂಚಿತ :
ಏಕಂ ಚ ತತ್ತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ।
ನ ಸಮರ್ಥೋಽ ಮಹೇಂದ್ರೋಽಪಿ ತಸ್ಮಾತ್ ಸರ್ವತ್ರ ಜಿಜ್ಞಾಸೇತ್ ॥ ಇತಿ ಸ್ಕಾಂದೇ। -ಗೀತಾಭಾಷ್ಯ (೪/೯)

೨. ಗುರ್ವಶಕ್ತ್ಯೈವ ತಾವಂತಿ ದಿನಾನಿ ಲಗ್ನಾನಿ। ನ ಶಿಷ್ಯಯೋರಶಕ್ತ್ಯೇತಿ ಭಾವಃ। -ವ್ಯಾ.

೩. ಆಚಾರ್ಯಾಯ ಪ್ರಿಯಂ ಧನಮಾಹೃತ್ಯ -ತೈತ್ತಿರೀಯೋಪನಿತ್

ಮುಹುರ್ಮುರಾರೇಃ ಸದಯಾವಲೋಕನೈ-
ಸ್ತಮಪ್ಯವದ್ಯಾತ್ ಪರಿಪಾಲಯನ್ನಿವ ॥ ೩೧ ॥

ಬಳಿಕ ಗುರುಗಳಿಗೆ ದಕ್ಷಿಣೆಯನ್ನು ನೀಡಲೆಂದು ಕೃಷ್ಣನು ಕೇಳಿದ. ಮತ್ತೆ ಮತ್ತೆ ಮುರಾರಿಯಾದ ಶ್ರೀಕೃಷ್ಣನ ಕೃಪಾಪೂರಿತನೋಟಗಳಿಂದ ವಂಶವನ್ನು ಪಾವನಮಾಡಿದ ಗುರುಗಳಾದ ಸಾಂದೀಪಿನಿಗಳು (ತಮ್ಮ ಮೃತ)ಪುತ್ರನನ್ನು (ಬದುಕಿಸಿಕೊಡಲು) ಕೇಳಿಕೊಂಡರು; ಶ್ರೀಕೃಷ್ಣನ ದಯಾಪೂರ್ಣನೋಟಗಳಿಂದ ಅವನನ್ನು ಸಹ ಪಾಪದಿಂದ ಪರಿಪಾಲಿಸಲೋ ಎಂಬಂತೆ.

ವಿ. : ೧. ಗುರುಕುಲವಾಸದ ಕೊನೆಯಲ್ಲಿ ಗುರುದಕ್ಷಿಣೆ ನೀಡುವುದು ಅಗತ್ಯ ಕರ್ತವ್ಯ ಎಂಬ ತತ್ತ್ವವೂ ಇಲ್ಲಿ ಸೂಚಿತ ; ಅವದ್ಯ - ದೋಷ.

೨. ಶ್ರೀಕೃಷ್ಣನು ಸಾಕ್ಷಾತ್ ಶ್ರೀಹರಿ ಎಂಬುದನ್ನು ಆ ವೇಳೆಗೆ ಮನಗಂಡಿದ್ದ ಗುರುಗಳು ಎಂದೋ ಮೃತನಾಗಿದ್ದ ತಮ್ಮ ಮಗನನ್ನು ಬದುಕಿಸಿಕೊಡಲು ಕೇಳಿಕೊಂಡರು. ಹಾಗೆ ಬದುಕುವ ಅವನು ಶ್ರೀಕೃಷ್ಣನ ಕರುಣೆಗೆ ಪಾತ್ರನಾಗಿ ಉದ್ಧೃತನಾಗಲಿ, ತಮ್ಮ ವಂಶ ಪಾವನವಾಗಲಿ ಎಂಬುದು ಅವರ ಉದ್ದೇಶವಾಗಿತ್ತು ಎಂದು ಉತ್ಪ್ರೇಕ್ಷಿಸುವ ಮೂಲಕ ಗುರುಗಳ ಪುತ್ರಪ್ರಾಪ್ತಿಯ ಬಯಕೆ ಕೇವಲ ಕಾಮ್ಯಕರ್ಮವಾಗಿರದೆ ವಿಶೇಷ ಹರಿಪ್ರೀತಿಕರವಾದ ಸತ್ಕರ್ಮವೇ ಆಗಿತ್ತು ಎಂಬ ತತ್ತ್ವವೂ ಸೂಚಿತ.

೩. ಶ್ರೀಮದಾಚಾರ್ಯರು ಸಹ ಹುಟ್ಟಿದಾರಭ್ಯ ಬರುತ್ತಿದ್ದ ತಲೆನೋವಿನಿಂದಾಗಿ ಮೃತ-ಪ್ರಾಯನಂತಿದ್ದ ತಮ್ಮ ಗುರುಪುತ್ರನ ತಲೆನೋವನ್ನು ಸಂಪೂರ್ಣವಾಗಿ ಪರಿಹರಿಸಿದ ಪ್ರಸಂಗವು[1] ಶ್ರೀಕೃಷ್ಣನು ಗುರುದಕ್ಷಿಣೆಯನ್ನು ನೀಡಿದ ಈ ಪ್ರಸಂಗ ಇದರಂತೆಯೇ ಇದೆ; ಶ್ರೀಮದಾಚಾರ್ಯರ ಆಗಿನ ಹೆಸರೂ ಸಹ ವಾಸುದೇವ ಎಂದೇ ಆಗಿತ್ತು ಎಂಬುದು ಗಮನಾರ್ಹ. ಐತರೇಯೋಪನಿಷತ್ತಿನ ಅಂತರಾರ್ಥವನ್ನು ತಿಳಿಸಿದ್ದು ಅವರು ನೀಡಿದ ಇನ್ನೂ ಮುಖ್ಯವಾದ ಗುರುದಕ್ಷಿಣೆ[2].

ಪಾಂಚಜನ್ಯ ಪಡೆದ ಶ್ರೀಕೃಷ್ಣ

ಸುತಂ ವಿಜಾನನ್ನಪಿ ಮೃತ್ಯುನೀತಂ
ಸ ಶಂಖದೈತ್ಯಂ ವಿನಿಹಂತುಕಾಮಃ।

---

೧. ಪ್ರಿಯವಯಸ್ಯಶಿರೋಗುರುವೇದನಾಮಶಮಯತ್ ಸಹಜಾಮಪಿ ದುಃಸಹಾಮ್।
ಸ ವಿಪಿನೇ ವಿಜನೇ ಮುಖವಾಯುನಾ ಶ್ರವಣಗೋಚರಿತೇನ ಕದಾಚನ॥ -ಸು.ವಿ.(೩/೫೨.)

೨. ಸಾಕ್ಷಾದಥೋಪನಿಷದೋ ವಿಭುರೈತರೇಯ್ಯಾಃ ಪಾಠಚ್ಛಲೇನ ವಿಜನೇಽರ್ಥರಸಾನ್ ಬ್ರುವಾಣಃ।
ಅಧ್ಯಾಪಕಾಯ ವಿತತಾರ ವಿಮೋಕ್ಷಬೀಜಂ ಗೋವಿಂದಭಕ್ತಿಮುಚಿತಾಂ ಗುರುದಕ್ಷಿಣಾಂ ಸಃ॥-ಸು.ವಿ.(೩/೫೫)

**ಸಮುದ್ರಮಾಸಾದ್ಯ ನಿಹತ್ಯ ರಕ್ಷೋ**
**ಲಸದ್ಯಶಃಸಮ್ಮಿತಮಾಪ ಶಂಖಮ್ ॥ ೩೨ ॥**

ಗುರುಪುತ್ರನು ಮೃತ್ಯುವಶನಾಗಿರುವುದನ್ನು ತಿಳಿದೂ ಸಹ ಶ್ರೀಕೃಷ್ಣ ಶಂಖದೈತ್ಯನನ್ನು ಸಂಹರಿಸಲು ಬಯಸಿದವನಾಗಿ, ಸಮುದ್ರಕ್ಕೆ ತೆರಳಿ, ಆ ರಾಕ್ಷಸನನ್ನು ಕೊಂದು, ತನ್ನ ಹೊಳೆಯುವ ಕೀರ್ತಿಯಂತಿದ್ದ ಶಂಖವನ್ನು ಪಡೆದುಕೊಂಡ.

ವಿ. : ೧. ಶ್ರೀಕೃಷ್ಣ ಪಂಚಜನರಲ್ಲಿ ಒಬ್ಬನಾದ ಶಂಖದೈತ್ಯನನ್ನು ಸಂಹರಿಸಿ, ಶಂಖವೊಂದನ್ನು ಪಡೆದುಕೊಂಡ. ಅದರಲ್ಲಿ ಅವನ ಶಂಖವಾದ ಪಾಂಚಜನ್ಯದ ಸನ್ನಿಧಾನ ವಿಶೇಷ.

೨. ಶಂಖವು ಬಿಳಿ, ಅದರಂತೆ ಕೀರ್ತಿಯು ಸಹ ಆಹ್ಲಾದದಾಯಕ; ಈ ಅರ್ಥದಲ್ಲಿ ಕೀರ್ತಿಯನ್ನು ಶಂಖವೆಂದು ಕರೆದಿರುವುದು ಸಮುಚಿತವಾದುದು ಎಂದು ತಿಳಿಯಬೇಕು.

೩.. ಶ್ರೀಕೃಷ್ಣನು ನೇರವಾಗಿ ಯಮನ ಬಳಿಗೆ ತೆರಳಿ, ಗುರುಪುತ್ರನನ್ನು ಕರೆತರದೆ, ಸಮುದ್ರಕ್ಕೆ ತೆರಳಿದ್ದಕ್ಕೆ ಕಾರಣವನ್ನು ಸಹ ಇಲ್ಲಿ ತಿಳಿಸಿರುವರು ; ಎಂದರೆ ಆ ನೆಪದಲ್ಲಿ ಶಂಖದೈತ್ಯನನ್ನು ಸಂಹರಿಸುವುದು ಶ್ರೀಕೃಷ್ಣನ ಉದ್ದೇಶವಾಗಿದ್ದಿತು ಎಂದರ್ಥ.

### ಶ್ರೀಕೃಷ್ಣ ಮಾಡಿದ ಪಂಚಜನರ ವಧೆ

**ಸ [೧]ಪಂಚಜನದೇಹಸ್ಥಾನ್ ಪ್ರಾಣಾನ್ ನಿಷ್ಕಾಸ್ಯ ಪಂಚ ಚ ।**
**ಅಪಂಚಜನಮಾತೇನೇ ಸಾಕಂ ತೇನ ಪಯೋನಿಧಿಮ್ ॥ ೩೩ ॥**

ಆ ಶ್ರೀಕೃಷ್ಣನು ಪಂಚಜನ ಎಂಬ ಹೆಸರಿನ ಅಸುರನ ದೇಹದಲ್ಲಿದ್ದ ಪಂಚ ಪ್ರಾಣಗಳನ್ನು ಹೊರ ಹಾಕಿ ಅವನನ್ನು ಹಾಗೂ ಅವನೊಂದಿಗೆ ಆ ಸಮುದ್ರವನ್ನು ಅಪಂಚಜನವನ್ನಾಗಿಸಿದನು.

ವಿ. : ೧. ಶ್ರೀಕೃಷ್ಣನು ಪಂಚಜನ ಅಸುರನನ್ನು ಸಂಹರಿಸಿದ ಕಾರ್ಯದ ಹಿರಿಮೆಯ ವರ್ಣನೆ ಇದರಲ್ಲಿದೆ.

೨. [೨]ಪಂಚಜನನ ದೇಹದಲ್ಲಿ ಇದ್ದ ಪಂಚ ಪ್ರಾಣಗಳನ್ನು ತೆಗೆದು ಹಾಕಿದ್ದರಿಂದ ಪಂಚಜನನು ಮೃತನಾದ ಎಂಬುದು ಮುಖ್ಯಾರ್ಥ.

೩.. ಪಂಚಜನರು ಎಂದರೆ, ಪಂಚಪ್ರಾಣರು ಎಂಬ ಅರ್ಥ ಬ್ರಹ್ಮಸೂತ್ರದಲ್ಲಿದೆ[೩].

---

೧. ನ ವಿದ್ಯತೇ ಪಂಚ ಜನಾಃ ಪಂಚಸಂಖ್ಯಾಕಾ ಜನಾಃ ಪ್ರಾಣಾದಯೋ ಯಸ್ಮಿನ್ನಿತಿ ವ್ಯುತ್ಪತ್ತ್ಯಾ ಉಭಯೋರ-ಪಂಚಜನತ್ವಂ ದ್ರಷ್ಟವ್ಯಮ್ । -ವ್ಯಾ.

೨. 'ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ' ಇತಿ ಶ್ರುತಿಃ। -ವ್ಯಾ.

೩. ಪಂಚ ಪಂಚಜನಾನಾಹ –"ಓಂ ಪ್ರಾಣಾದಯೋ ವಾಕ್ಯಶೇಷಾತ್ ಓಂ", 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ' ಇತಿ ವಾಕ್ಯಶೇಷಾತ್ ॥ -ಬ್ರಹ್ಮಸೂತ್ರ(೧/೪/೧೩.)

ಮುಹುರ್ಮುರಾರೇಃ ಸದಯಾವಲೋಕನೈ-
ಸ್ತಮಪ್ಯವದ್ಯಾತ್ ಪರಿಪಾಲಯನ್ನಿವ ॥ ೩೧ ॥

ಬಳಿಕ ಗುರುಗಳಿಗೆ ದಕ್ಷಿಣೆಯನ್ನು ನೀಡಲೆಂದು ಕೃಷ್ಣನು ಕೇಳಿದ. ಮತ್ತೆ ಮತ್ತೆ ಮುರಾರಿಯಾದ ಶ್ರೀಕೃಷ್ಣನ ಕೃಪಾಪೂರಿತನೋಟಗಳಿಂದ ವಂಶವನ್ನು ಪಾವನಮಾಡಿದ ಗುರುಗಳಾದ ಸಾಂದೀಪಿನಿಗಳು (ತಮ್ಮ ಮೃತ)ಪುತ್ರನನ್ನು (ಬದುಕಿಸಿಕೊಡಲು) ಕೇಳಿಕೊಂಡರು; ಶ್ರೀಕೃಷ್ಣನ ದಯಾಪೂರ್ಣನೋಟಗಳಿಂದ ಅವನನ್ನು ಸಹ ಪಾಪದಿಂದ ಪರಿಪಾಲಿಸಲೋ ಎಂಬಂತೆ.

ವಿ. : ೧. ಗುರುಕುಲವಾಸದ ಕೊನೆಯಲ್ಲಿ ಗುರುದಕ್ಷಿಣೆ ನೀಡುವುದು ಅಗತ್ಯ ಕರ್ತವ್ಯ ಎಂಬ ತತ್ತ್ವವೂ ಇಲ್ಲಿ ಸೂಚಿತ ; ಅವದ್ಯ - ದೋಷ.

೨. ಶ್ರೀಕೃಷ್ಣನು ಸಾಕ್ಷಾತ್ ಶ್ರೀಹರಿ ಎಂಬುದನ್ನು ಆ ವೇಳೆಗೆ ಮನಗಂಡಿದ್ದ ಗುರುಗಳು ಎಂದೋ ಮೃತನಾಗಿದ್ದ ತಮ್ಮ ಮಗನನ್ನು ಬದುಕಿಸಿಕೊಡಲು ಕೇಳಿಕೊಂಡರು. ಹಾಗೆ ಬದುಕುವ ಅವನು ಶ್ರೀಕೃಷ್ಣನ ಕರುಣೆಗೆ ಪಾತ್ರನಾಗಿ ಉದ್ಧೃತನಾಗಲಿ, ತಮ್ಮ ವಂಶ ಪಾವನವಾಗಲಿ ಎಂಬುದು ಅವರ ಉದ್ದೇಶವಾಗಿತ್ತು ಎಂದು ಉತ್ಪ್ರೇಕ್ಷಿಸುವ ಮೂಲಕ ಗುರುಗಳ ಪುತ್ರಪ್ರಾಪ್ತಿಯ ಬಯಕೆ ಕೇವಲ ಕಾಮ್ಯಕರ್ಮವಾಗಿರದೆ ವಿಶೇಷ ಹರಿಪ್ರೀತಿಕರವಾದ ಸತ್ಕರ್ಮವೇ ಆಗಿತ್ತು ಎಂಬ ತತ್ತ್ವವೂ ಸೂಚಿತ.

೩.. ಶ್ರೀಮದಾಚಾರ್ಯರು ಸಹ ಹುಟ್ಟಿದಾರಭ್ಯ ಬರುತ್ತಿದ್ದ ತಲೆನೋವಿನಿಂದಾಗಿ ಮೃತ-ಪ್ರಾಯನಂತಿದ್ದ ತಮ್ಮ ಗುರುಪುತ್ರನ ತಲೆನೋವನ್ನು ಸಂಪೂರ್ಣವಾಗಿ ಪರಿಹರಿಸಿದ ಪ್ರಸಂಗವು ಶ್ರೀಕೃಷ್ಣನು ಗುರುದಕ್ಷಿಣೆಯನ್ನು ನೀಡಿದ ಈ ಪ್ರಸಂಗ ಇದರಂತೆಯೇ ಇದೆ[1]; ಶ್ರೀಮದಾಚಾರ್ಯರ ಆಗಿನ ಹೆಸರೂ ಸಹ ವಾಸುದೇವ ಎಂದೇ ಆಗಿತ್ತು ಎಂಬುದು ಗಮನಾರ್ಹ. ಐತರೇಯೋಪನಿಷತ್ತಿನ ಅಂತರಾರ್ಥವನ್ನು ತಿಳಿಸಿದ್ದು ಅವರು ನೀಡಿದ ಇನ್ನೂ ಮುಖ್ಯವಾದ ಗುರುದಕ್ಷಿಣೆ[2].

ಪಾಂಚಜನ್ಯ ಪಡೆದ ಶ್ರೀಕೃಷ್ಣ

ಸುತಂ ವಿಜಾನನ್ನಪಿ ಮೃತ್ಯುನೀತಂ
ಸ ಶಂಖದೈತ್ಯಂ ವಿನಿಹಂತುಕಾಮಃ ।

---

೧. ಪ್ರಿಯವಯಸ್ಯಶಿರೋಗುರುವೇದನಾಮಶಮಯತ್ ಸಹಜಾಮಪಿ ದುಃಸಹಾಮ್ ।
ಸ ವಿಪಿನೇ ವಿಜನೇ ಮುಖವಾಯುನಾ ಶ್ರವಣಗೋಚರಿತೇನ ಕದಾಚನ ॥ -ಸು.ವಿ.(೩./೫೩.)

೨. ಸಾಕ್ಷಾದಥೋಪನಿಷದೋ ವಿಭುರೈತರೇಯ್ಯಾಃ ಪಾಠಚ್ಛಲೇನ ವಿಜನೇऽರ್ಥರಸಾನ್ ಬ್ರುವಾಣಃ ।
ಅಧ್ಯಾಪಕಾಯ ವಿತತಾರ ವಿಮೋಕ್ಷಬೀಜಂ ಗೋವಿಂದಭಕ್ತಿಮುಚಿತಾಂ ಗುರುದಕ್ಷಿಣಾಂ ಸಃ ॥-ಸು.ವಿ.(೩./೫೫)

**ಸಮುದ್ರಮಾಸಾದ್ಯ ನಿಹತ್ಯ ರಕ್ಷೋ**
**ಲಸದ್ಯಶಃಸಮ್ಮಿತಮಾಪ ಶಂಖಮ್ ॥ ೩೨ ॥**

ಗುರುಪುತ್ರನು ಮೃತ್ಯುವಶನಾಗಿರುವುದನ್ನು ತಿಳಿದೂ ಸಹ ಶ್ರೀಕೃಷ್ಣ ಶಂಖದೈತ್ಯನನ್ನು ಸಂಹರಿಸಲು ಬಯಸಿದವನಾಗಿ, ಸಮುದ್ರಕ್ಕೆ ತೆರಳಿ, ಆ ರಾಕ್ಷಸನನ್ನು ಕೊಂದು, ತನ್ನ ಹೊಳೆಯುವ ಕೀರ್ತಿಯಂತಿದ್ದ ಶಂಖವನ್ನು ಪಡೆದುಕೊಂಡ.

ವಿ. : ೧. ಶ್ರೀಕೃಷ್ಣ ಪಂಚಜನರಲ್ಲಿ ಒಬ್ಬನಾದ ಶಂಖದೈತ್ಯನನ್ನು ಸಂಹರಿಸಿ, ಶಂಖವೊಂದನ್ನು ಪಡೆದುಕೊಂಡ. ಅದರಲ್ಲಿ ಅವನ ಶಂಖವಾದ ಪಾಂಚಜನ್ಯದ ಸನ್ನಿಧಾನ ವಿಶೇಷ.

೨. ಶಂಖವು ಬಿಳಿ, ಅದರಂತೆ ಕೀರ್ತಿಯು ಸಹ ಆಹ್ಲಾದದಾಯಕ; ಈ ಅರ್ಥದಲ್ಲಿ ಕೀರ್ತಿಯನ್ನು ಶಂಖವೆಂದು ಕರೆದಿರುವುದು ಸಮುಚಿತವಾದುದು ಎಂದು ತಿಳಿಯಬೇಕು.

೩. ಶ್ರೀಕೃಷ್ಣನು ನೇರವಾಗಿ ಯಮನ ಬಳಿಗೆ ತೆರಳಿ, ಗುರುಪುತ್ರನನ್ನು ಕರೆತರದೆ, ಸಮುದ್ರಕ್ಕೆ ತೆರಳಿದ್ದಕ್ಕೆ ಕಾರಣವನ್ನು ಸಹ ಇಲ್ಲಿ ತಿಳಿಸಿರುವರು ; ಎಂದರೆ ಆ ನೆಪದಲ್ಲಿ ಶಂಖದೈತ್ಯನನ್ನು ಸಂಹರಿಸುವುದು ಶ್ರೀಕೃಷ್ಣನ ಉದ್ದೇಶವಾಗಿದ್ದಿತು ಎಂದರ್ಥ.

## ಶ್ರೀಕೃಷ್ಣ ಮಾಡಿದ ಪಂಚಜನರ ವಧೆ

**ಸ [೧]ಪಂಚಜನದೇಹಸ್ಥಾನ್ ಪ್ರಾಣಾನ್ ನಿಷ್ಕಾಸ್ಯ ಪಂಚ ಚ।**
**ಅಪಂಚಜನಮಾತೇನೇ ಸಾಕಂ ತೇನ ಪಯೋನಿಧಿಮ್ ॥ ೩೩ ॥**

ಆ ಶ್ರೀಕೃಷ್ಣನು ಪಂಚಜನ ಎಂಬ ಹೆಸರಿನ ಅಸುರನ ದೇಹದಲ್ಲಿದ್ದ ಪಂಚ ಪ್ರಾಣಗಳನ್ನು ಹೊರ ಹಾಕಿ ಅವನನ್ನು ಹಾಗೂ ಅವನೊಂದಿಗೆ ಆ ಸಮುದ್ರವನ್ನು ಅಪಂಚಜನವನ್ನಾಗಿಸಿದನು.

ವಿ. : ೧. ಶ್ರೀಕೃಷ್ಣನು ಪಂಚಜನ ಅಸುರನನ್ನು ಸಂಹರಿಸಿದ ಕಾರ್ಯದ ಹಿರಿಮೆಯ ವರ್ಣನೆ ಇದರಲ್ಲಿದೆ.

೨. [೨]ಪಂಚಜನನ ದೇಹದಲ್ಲಿ ಇದ್ದ ಪಂಚ ಪ್ರಾಣಗಳನ್ನು ತೆಗೆದು ಹಾಕಿದ್ದರಿಂದ ಪಂಚಜನನು ಮೃತನಾದ ಎಂಬುದು ಮುಖ್ಯಾರ್ಥ.

೩. ಪಂಚಜನರು ಎಂದರೆ, ಪಂಚಪ್ರಾಣರು ಎಂಬ ಅರ್ಥ ಬ್ರಹ್ಮಸೂತ್ರದಲ್ಲಿದೆ[೩].

---

೧. ನ ವಿದ್ಯತೇ ಪಂಚ ಜನಾಃ ಪಂಚಸಂಖ್ಯಾಕಾ ಜನಾಃ ಪ್ರಾಣಾದಯೋ ಯಸ್ಮಿನ್ನಿತಿ ವ್ಯುತ್ಪತ್ತ್ಯಾ ಉಭಯೋರ-ಪಂಚಜನತ್ವಂ ದ್ರಷ್ಟವ್ಯಮ್। -ವ್ಯಾ.

೨. 'ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ' ಇತಿ ಶ್ರುತಿಃ। -ವ್ಯಾ.

೩. ಪಂಚ ಪಂಚಜನಾನಾಹ –"ಓಂ ಪ್ರಾಣಾದಯೋ ವಾಕ್ಯಶೇಷಾತ್ ಓಂ", 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ' ಇತಿ ವಾಕ್ಯಶೇಷಾತ್ ॥ -ಬ್ರಹ್ಮಸೂತ್ರ(೧/೪/೧೩.)

೪. ಅವನ ನಿವಾಸದಿಂದಾಗಿ ಸಪಂಚಜನವಾಗಿದ್ದ ಸಮುದ್ರ ಅವನ ನಿಧನದಿಂದ ಅಪಂಚ-ಜನವಾಯಿತು ಎಂದರೆ ಅವನು ಇಲ್ಲದಂತಾಯಿತು; ಅವನಿಂದಾಗುತ್ತಿದ್ದ ಪೀಡೆಯಿಂದ ಅದು ಪಾರಾಯಿತು ಎಂದು ಭಾವ.

೫. ಕಾಲೀಯನ ದಮನದಿಂದ ಯಮುನೆಯು ಪರಿಶುದ್ಧಳಾದಂತೆ ಪಂಚಜನರ ಸಂಹಾರದಿಂದ ಸಮುದ್ರವು ಸಕಲರಿಗೂ ಸುಗಮ್ಯವೆನ್ನಿಸಿತು ಎಂದು ತಿಳಿಯಬೇಕು.

**ಯಮನಿಗೂ ಶಾಸಕನಾದ ಶ್ರೀಕೃಷ್ಣ**

**ಯಮಾಲಯಂ ಪ್ರಾಪ್ಯ ಸ ಕಂಬುಮುದ್ಧೃತಂ**
**[೧]ವಿಭುಃ ಪ್ರದಧ್ಮೌ ರಿಪುದರ್ಪಹಾರಿಣಮ್ ।**
**ಗುರೋಃ ಸುತಂ ದೇಹಿ ನ ಚೇದಿಯಂ ದಶಾ**
**ಭವೇತ್ ತವಾಪೀತಿ ನಿದರ್ಶಯನ್ನಿವ ॥ ೩೪ ॥**

ಯಮಲೋಕವನ್ನು ತಲುಪಿದ ಪ್ರಭುವಾದ ಆ ಶ್ರೀಕೃಷ್ಣನು ತಾನು ಉದ್ಧರಿಸಿ ತಂದಿದ್ದ ರಿಪುಗಳ ಸೊಕ್ಕನ್ನು ಅಡಗಿಸುವ ಪಾಂಚಜನ್ಯ ಶಂಖವನ್ನು ಮೊಳಗಿಸಿದ ; ಗುರುಪುತ್ರನನ್ನು ನೀಡು, ಇಲ್ಲವಾದಲ್ಲಿ ನಿನಗೂ ಸಹ ಇದೇ ಗತಿಯಾದೀತು ಎಂದು ಸೂಚಿಸುವನೋ ಎಂಬಂತೆ.

ವಿ. : ೧. ಶ್ರೀಕೃಷ್ಣನು ಯಮಲೋಕಕ್ಕೆ ತೆರಳಿ ಪಾಂಚಜನ್ಯವನ್ನು ಊದಿದ ಎಂದರ್ಥ.

೨. ಹಾಗೆ ಪಾಂಚಜನ್ಯವನ್ನು ಊದುವ ಮೂಲಕ ಆ ಅಸುರನಿಗಾದ ಪರಾಭವರೂಪ ಗತಿಯೇ ನಿನಗೂ ಆದೀತು ಎಂಬ ಎಚ್ಚರಿಕೆಯ ನುಡಿಯನ್ನು ಯಮದೇವರಿಗೆ ನೀಡಿದ ಎಂಬಲ್ಲಿನ ಸ್ವಾರಸ್ಯ ಗಮನಾರ್ಹ ; ಕಂಬು – ಶಂಖ.

೩. ಯಮನು ನರಕಾಧಿಪತಿಯಾಗಿ ಮಾನ್ಯನಾದ ದೇವತೆ. ಆದರೆ ಸಕಲ ದೇವತೆಗಳಿಗೂ ಮುಖ್ಯ ನಿಯಾಮಕನಾದವನು ಸಾಕ್ಷಾತ್ ಶ್ರೀಹರಿ ಎಂಬ ತತ್ತ್ವ ಇದರಿಂದ ಸೂಚಿತ. ಯಮನಲ್ಲಿ ಯಮ ಎಂಬ ಹೆಸರಿನ ಶ್ರೀಹರಿಯ ವಿಭೂತಿ ರೂಪ ಇರುವುದು ಸುಪ್ರಸಿದ್ಧ: **ಯಮಃ ಸಂಯಮತಾಮಹಮ್** ।-ಗೀತಾ (೧೦/೨೯).

೪. ಶ್ರೀಕೃಷ್ಣನ ಪಾಂಚಜನ್ಯಘೋಷದ ಅದ್ಭುತಪರಿಣಾಮವನ್ನು ವಿವರಿಸುವ ಮಹಾಭಾರತದ ಶ್ಲೋಕ ಹೀಗಿದೆ (ದ್ರೋಣಪರ್ವ. ೭೩/೫೨; ಮ.ಭಾ.ತಾ.ನಿ. ೨೬/೯೨):

---

೧. ತತಃ ಸಂಯಮನೀಂ ನಾಮ ಯಮಸ್ಯ ದಯಿತಾಂ ಪುರೀಮ್ ।
ಗತ್ವಾ ಜನಾರ್ದನಃ ಶಂಖಂ ಪ್ರದಧ್ಮೌ ಸಹಲಾಯುಧಃ ॥
ಶಂಖನಿರ್ಹ್ರಾದಮಾಕರ್ಣ್ಯ ಪ್ರಜಾಸಂಯಮನೋ ಯಮಃ ।
ತಯೋಃ ಸಪರ್ಯಾಂ ಮಹತೀಂ ಚಕ್ರೇ ಭಕ್ತ್ಯುಪಬೃಂಹಿತಃ ॥ –ಭಾಗ.(೧೦/೪೩/೪೩-೪೪)

ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ ಭೃಶಂ ಸುಪೂರ್ಣೋದರನಿಃಸೃತಧ್ವನಿಃ ।
ಜಗದ್ವಿರಿಂಚೇಶಸುರೇಂದ್ರಪೂರ್ವಕಂ ಪ್ರಕಂಪಯಾಮಾಸ ಯುಗಾತ್ಯಯೇ ಯಥಾ ॥

## ಶ್ರೀಕೃಷ್ಣನಿಗೆ ಯಮನ ವಿಜ್ಞಾಪನೆ

ಅಮುಷ್ಯ ಲಕ್ಷ್ಮೀಶಗುರೋಃ ಸುತಸ್ಯ
ಧ್ರುವಂ ವಿಮುಕ್ತಿಃ ಕರಸಂಗತಾಽಭೂತ್ ।
ತ್ವದಾಗಮಾತ್ ಪ್ರಾಗಪಿ ತಂ ಜಿಹಾಸುಂ
ವಿಭುಸ್ತ್ವಮಾಜ್ಞಾಪಯಸೀಶ ಕಿಂ ಮಾಮ್ ॥ ೩೫ ॥

ಲಕ್ಷ್ಮೀಶನಾದ ನಿನಗೆ ಗುರುವೆನ್ನಿಸಿದ ಆ ಸಾಂದೀಪಿನಿಯ ಪುತ್ರನಾದ ಇವನಿಗೆ ನಿಶ್ಚಿತ-ವಾಗಿಯೂ ಮುಕ್ತಿಯು ಕೈವಶವಾಯಿತು; ನೀನು ಇಲ್ಲಿಗೆ ಬರುವ ಮುನ್ನವೇ ಅವನನ್ನು ಇಲ್ಲಿಂದ ಕಳುಹಿಸಿಕೊಡಲು ಸಿದ್ಧವಾಗಿರುವ ನನ್ನನ್ನು ಪ್ರಭುವಾದ ನೀನು ಏತಕ್ಕೋಸ್ಕರ ಆಜ್ಞಾಪಿಸುತ್ತಿರುವಿ?

ವಿ. : ೧. ಕೇವಲ ಯಮಲೋಕದಿಂದ ಮಾತ್ರವಲ್ಲದೆ ಸಂಸಾರದಿಂದಲೇ ಗುರುಪುತ್ರನಿಗೆ ಬಿಡುಗಡೆಯು ಶ್ರೀಕೃಷ್ಣನಿಂದಾಗಿ ಖಚಿತವಾಗಿರುವಾಗ ಯಮಲೋಕದ ಬಿಡುಗಡೆ ಯಾವ ಲೆಕ್ಕ ಎಂದು ಭಾವ.

೨. ನರಕಾಧಿಪತಿಯಾದ ಯಮನು ಹೀಗೆ ಕೃಷ್ಣಭಕ್ತರನ್ನು ಆದರಿಸುವ ಬಗೆಯು ವಿಷ್ಣು-ಸರ್ವೋತ್ತಮತ್ವಕ್ಕೆ ಶ್ರೇಷ್ಠ ನಿದರ್ಶನ. ಅಜಾಮಿಳನ ಪ್ರಸಂಗದಲ್ಲೂ ಹೀಗೆಯೇ ಯಮದೇವರು ತನ್ನ ದೂತರಿಗೆ ವಿಷ್ಣುಭಕ್ತರ ಮಹಿಮೆಯನ್ನು ತಿಳಿಸಿದ ವಿವರ ಶ್ರೀಮದ್ಭಾಗವತ ಮಹಾಪುರಾಣ-ದಲ್ಲಿ ಬಂದಿದೆ[1].

೩.. ವಿಷ್ಣುಭಕ್ತರಿಗೆ ಸರ್ವಥಾ ನರಕದ ಭಯವಿರದು ಎಂಬ ವಿಶೇಷ ಪ್ರಮೇಯ ಇಲ್ಲಿದೆ.

೪. ಶ್ರೀವಿಜಯದಾಸರಂತಹ ಹರಿಭಕ್ತರೇ ಯಮಲೋಕಕ್ಕೆ ತೆರಳಿ, ತಮ್ಮ ಶಿಷ್ಯ ಹಾಗೂ ಸಾಕುಮಗನಾಗಿದ್ದ ಮೋಹನದಾಸರನ್ನು ಬಿಡುಗಡೆಮಾಡಿಸಿದ ವಿವರ ಸುಪ್ರಸಿದ್ಧ. ಇನ್ನು ಸಾಕ್ಷಾತ್ ಶ್ರೀಹರಿಯೇ ಆದ ಶ್ರೀಕೃಷ್ಣ ಹೀಗೆ ಗುರುಪುತ್ರನನ್ನು ಬದುಕಿಸಿ ತಂದಿದ್ದರಲ್ಲಿ ಯಾವ ಅಚ್ಚರಿಯೂ ಇರದು.

---

೧. ತತ್ ಕ್ಷಮ್ಯತಾಂ ಸ ಭಗವಾನ್ ಪುರುಷಃ ಪುರಾಣೋ ನಾರಾಯಣಃ ಸ್ವಪುರುಷೈರ್ಯದಸತ್ಕೃತಂ ನಃ ।
ಸ್ವಾನಾಮಹೋ ನ ವಿದುಷಾಂ ರಚಿತಾಂಜಲೀನಾಂ ಕ್ಷಾಂತಿರ್ಗರೀಯಸಿ ನಮಃ ಪುರುಷಾಯ ಭೂಮ್ನೇ ॥
-ಭಾಗ. (೬/೩./೩.೧)

### ಶ್ರೀಕೃಷ್ಣನಿಂದ ಯಮನಿಗಾದ ಸಂಭ್ರಮ

ಇತೀವ ತತ್ತ್ಯಾಗವಿಶಂಕಮಾನಸೋ
ಯಮಃ ಸಮುಭ್ಯರ್ಚ್ಯ ಸುತಂ ಸಮಾದಿಶತ್ ।
ಅಲಭ್ಯತದ್ದರ್ಶನಜಾತಸಂಭ್ರಮಃ
ಪ್ರಹೃಷ್ಟರೋಮಾ ಪ್ರಣಮನ್ ಮುಹುರ್ಮುಹುಃ ॥ ೩೬ ॥

ಹೀಗೆ (ತನಗೆ ಆದೇಶ ನೀಡುವುದೇಕೆ) ಎಂಬಂತೆ ಗುರುಪುತ್ರನನ್ನು ಬಿಡುಗಡೆಮಾಡುವ ವಿಚಾರದಲ್ಲಿ ನಿಶ್ಶಂಕ ಮನಸ್ಸಿನ ಯಮನು ದುರ್ಲಭವಾದ ಶ್ರೀಕೃಷ್ಣನ ದರ್ಶನದಿಂದ ಸಂಭ್ರಮಭರಿತನಾಗಿ, ರೋಮಾಂಚನಗೊಂಡವನಾಗಿ ಅವನನ್ನು ಪೂಜಿಸಿ, ಪುನಃಪುನಃ ವಂದಿಸುತ್ತಾ ಗುರುಪುತ್ರನನ್ನು ನೀಡಿದನು.

ವಿ. : ೧. ವರುಣಭೃತ್ಯನು ನಂದಗೋಪನನ್ನು ಹಿಡಿದೊಯ್ದಾಗ ಶ್ರೀಕೃಷ್ಣ ವರುಣಲೋಕಕ್ಕೆ ತೆರಳಿ, ವರುಣನಿಂದ ನಂದಗೋಪನನ್ನು ಬಿಡುಗಡೆ ಮಾಡಿತಂದ ಪ್ರಸಂಗವು ಇದೇ ತೆರನಾಗಿದೆ. ಇದರಿಂದ ಶ್ರೀಕೃಷ್ಣನು ಇತರ ಸಕಲರ ಬಂಧನವನ್ನು ಸಹ ಬಿಡಿಸಬಲ್ಲ ಸರ್ವೋತ್ತಮನಾದ ಶ್ರೀಹರಿ ಎಂಬ ವಿಶೇಷಾಂಶ ತಿಳಿಯುವುದು.

೨. ಯಮನು ಮೃತ್ಯುವಿನ ಸಂಕೇತ. ಯಮನಿಂದ ಗುರುಪುತ್ರನ ಬಿಡುಗಡೆ ಮೃತ್ಯು-ಪಾಶದಿಂದ ಸಚ್ಛಾಸ್ತ್ರಾಧ್ಯಯನರತರಾದ ಸಾತ್ತ್ವಿಕರನ್ನು ಬಿಡುಗಡೆಮಾಡುವುದರ ಸಂಕೇತ :

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ (ಗೀತಾ-೧೨/೭)

### ಮಧುರೆಗೆ ಮರಳಿದ ಶ್ರೀಕೃಷ್ಣ

ಸುತಂ ಸಮಾನೀಯ ತತೋಽಂತಕಾಂತಿಕಾತ್
ಪ್ರದಾಯ ಶೌರಿರ್ಗುರವೇ ಸ್ವಕಾಂ ಪುರೀಮ್ ।
ಉಪೇತ್ಯ ಪಿತ್ರೋರಪಿ ದಕ್ಷಿಣಾಮಿವ
ಪ್ರದರ್ಶಯಾಮಾಸ ನಿಜಂ ಸ್ವವಿಗ್ರಹಮ್ ॥ ೩೭ ॥

ಬಳಿಕ ಶ್ರೀಕೃಷ್ಣನು ಗುರುಪುತ್ರನನ್ನು ಯಮನ ಬಳಿಯಿಂದ ಕರೆತಂದು ಗುರುಗಳಿಗೆ ನೀಡಿ, ತನ್ನ ಪಟ್ಟಣವನ್ನು ತಲುಪಿ, ತಂದೆತಾಯಿಗಳಿಗೂ ಸಹ ದಕ್ಷಿಣೆ ಎಂಬಂತೆ ತನ್ನ ನಿಜರೂಪವನ್ನು ತೋರಿದನು.

ವಿ. : ೧. ಗುರುಪುತ್ರನನ್ನು ಬದುಕಿಸಿ, ಅವರಿಗೆ ಹರ್ಷ ನೀಡಿದ ಶ್ರೀಕೃಷ್ಣ ಸಾಕ್ಷಾತ್ ತಾನೇ ಎದುರಿಗೆ ಕಾಣಿಸಿಕೊಂಡು ವಸುದೇವದೇವಕಿಯರಿಗೆ ಅಪಾರ ಆನಂದವನ್ನುಂಟುಮಾಡಿದ ಎಂದರ್ಥ; **ಶೌರಿ** – ಶ್ರೀಕೃಷ್ಣ – ಶೌರಿಃ ಶೂರಜನೇಶ್ವರಃ (ವಿಷ್ಣುಸಹಸ್ರನಾಮ).

೨. [1]ಮೃತಪುತ್ರನ ದರ್ಶನದಿಂದ ಗುರುಗಳಿಗಾನಂದ ವಿಲಕ್ಷಣವಾದ ಆನಂದವು ಮರಳಿ ಬಂದ ಶ್ರೀಕೃಷ್ಣನ ದರ್ಶನದಿಂದ ವಸುದೇವದೇವಕಿಯರಿಗೆ ಆಯಿತು ಎಂದು ಭಾವ.

೩. ಉತ್ತರಬದರಿಯಿಂದ ಆಗಮಿಸಿದ ಶ್ರೀಮಧ್ವಾಚಾರ್ಯರನ್ನು ಕಂಡು ವಿಶಾಲಬದರಿಯಲ್ಲಿ ನೆಲೆಸಿದ್ದ ಸತ್ಯತೀರ್ಥಾದಿ ಶಿಷ್ಯರಿಗೆ ಆದ ಆನಂದ, ಜಾಂಬವಂತನಿಂದ ಸ್ಯಮಂತಕಮಣಿಯನ್ನು ತಂದ ಶ್ರೀಕೃಷ್ಣನ ದರ್ಶನದಿಂದ ಯಾದವರಿಗಾದ ಆನಂದ, ಚೂಡಾಮಣಿಯನ್ನು ತಂದ ಹನುಮಂತನನ್ನು ಕಂಡ ಕಪಿಗಳಿಗಾದ ಆನಂದ, ಸೌಗಂಧಿಕವನ್ನು ತಂದ ಭೀಮನನ್ನು ಕಂಡು ಯುಧಿಷ್ಠಿರಾದಿಗಳಿಗಾದ ಆನಂದ ಈ ಬಗೆಯದೇ ಆಗಿದ್ದಿತು ಎಂದು [2]ಸುಮಧ್ವವಿಜಯದಿಂದ ತಿಳಿಯುವುದು; **ಅಂತಕ** – ಯಮ; **ಅಂತಿಕ** – ಸಮೀಪ.

೪. ಇದು 'ಅಭ್ಯರ್ಚಿತೋ ನೃವಸದಿಷ್ಟಕೃದಾತ್ಮಪಿತ್ರೋಃ' ಎಂಬ ಮಹಾಭಾರತತಾತ್ಪರ್ಯನಿರ್ಣಯವಚನ(೧೪/೫)ದ ವಿವರಣೆಯಂತಿದೆ.

## ಮಧುರೆಯ ವೈಭವ

**ರಾಜಧಾನೀ ಜಯತಿ ಸಾ ಭೋಜವೃಷ್ಣ್ಯಂಧಕಾಶ್ರಿತಾ ।**
**ರಾಜರಾಜಪದತ್ರಾತಾ ರಾಜಾ ಯತ್ರ ರಮಾಪತಿಃ ॥ ೩೮ ॥**

ಭೋಜರು, ವೃಷ್ಣಿಗಳು ಹಾಗೂ ಅಂಧಕರಿಗೆ ನೆಲೆ ಎನ್ನಿಸಿದ ರಾಜಧಾನಿಯಾದ ಆ ಮಧುರೆಯು ಸರ್ವೋತ್ಕೃಷ್ಟವಾದುದು; ಅಲ್ಲಿ ಸಾಕ್ಷಾತ್ತಾಗಿ ರಾಜರಾಜನೆನ್ನಿಸಿದ ಕುಬೇರನಿಗೂ ರಕ್ಷಕನಾದ ಶ್ರೀಲಕ್ಷ್ಮೀಪತಿಯಾದ ಕೃಷ್ಣನೇ ಅಧಿಪತಿಯಾಗಿ ನೆಲೆಸಿರುವನಲ್ಲವೆ!

ವಿ. : ಇದು ಈ ಕೆಳಗಿನ ತೀರ್ಥಪ್ರಬಂಧದ ಶ್ಲೋಕದಂತಿರುವುದು ಗಮನಾರ್ಹ :

**ರಾಜಧಾನೀ ಜಯತಿ ಸಾ ಗಜಗಹ್ವರಸಂಜ್ಞಿತಾ ।**
**ಯತ್ರ ಭಾಂತಿ ಗಜಾ ಮಾಧ್ವರಾದ್ಧಾಂತಧರಣೀಧರಾಃ ॥** -ಪೂರ್ವಪ್ರಬಂಧ(೩/೧೭)

೨. **ರಾಜರಾಜ** – ಕುಬೇರ ('ರಾಜರಾಜೋ ಧನಾಧಿಪಃ' -ಅಮರ).

---

೧. ಯಥಾ ಮೃತಪುತ್ರದರ್ಶನೇನ ಗುರೋಃ ಪ್ರೀತಿರೇವಮೇತಾವತ್ಕಾಲಮದೃಷ್ಟಸ್ವವಿಗ್ರಹದರ್ಶನೇನ ಪಿತ್ರೋರಪಿ ಪ್ರೀತಿರಭೂದಿತಿ ಭಾವಃ । -ವ್ಯಾ.

೨. ವಾನರೇಂದ್ರ ಇವ ತೀರ್ಣವಾರಿಧಿರ್ವಾಸುದೇವ ಇವ ರತ್ನರಾಜವಾನ್ ।
ಭೀಮಸೇನ ಇವ ಸೂನವರ್ಯಹೃನ್ನಿರ್ವೃತಿಂ ಸ್ವಜನಮಾನಿನಾಯ ಸಃ ॥ -ಸುಮಧ್ವವಿಜಯ(೯/೬)

## ಉಗ್ರಸೇನನ ಹಿರಿಮೆ

ಉಗ್ರಸೇನೋ ವಿಜಯತೇ ಸ್ವರ್ಗಿಭಿರ್ಗೀತವೈಭವಃ ।
ಅಗ್ರೇಸರಾ ಯದ್ಧ್ವಜಿನ್ಯಾಮುಗ್ರಾ ರಾಮಾದಯೋ ದ್ವಿಷಾಮ್ ॥ ೩೯ ॥

ಯಾವನ ಸೇನೆಯಲ್ಲಿ ಶತ್ರುಗಳಿಗೆ ಉಗ್ರರೆನ್ನಿಸಿದ ಬಲರಾಮ ಮೊದಲಾದವರು ಪ್ರಮುಖರಾಗಿದ್ದರೋ, ಅಂತಹ, ಸ್ವರ್ಗವಾಸಿಗಳಾದ ದೇವತೆಗಳೂ ಕೊಂಡಾಡುವ ವೈಭವದ ಉಗ್ರಸೇನರಾಜನು ಮಹಾಜಯಶಾಲಿಯಾಗಿರುವನು.

ವಿ. : ಉಗ್ರಸೇನನ ಸೇನೆಯಲ್ಲಿ ಮುಂದಾಳುಗಳಾಗಿ ಬಲರಾಮ ಮೊದಲಾದಂತಹ ಶತ್ರು-ನಾಶಕರಾದ ಮಹನೀಯರು ಸೇರಿರುವುದರಿಂದ ಉಗ್ರಸೇನನ ಸೇನೆ ಶತ್ರುಗಳ ಪಾಲಿಗೆ ಉಗ್ರವೆನ್ನಿಸುವುದು ಸಹಜ ಎಂದು ಭಾವ; ಧ್ವಜಿನೀ – ಸೇನೆ; ಸ್ವರ್ಗಿ – ದೇವತೆ.

## ಮಂತ್ರಿಗಳು ತಿಳಿಸಿದ ರಾಜನೀತಿ

ಹೃದಯಜ್ಞಾ ರಾಜನೀತೇಃ ಸಭಾಯಾಂ ಶಾರ್ಙ್ಗಧನ್ವನಃ ।
ಮಂತ್ರಿಣೋ ಮಂತ್ರತಂತ್ರಜ್ಞಾ ಮಂತ್ರಯಂತೀತ್ಥಮನ್ವಹಮ್ ॥ ೪೦ ॥

ರಾಜನೀತಿಯ ಹೃದಯವನ್ನು ಬಲ್ಲ ಮಂತ್ರ-ತಂತ್ರಜ್ಞರಾದ ಮಂತ್ರಿಗಳು ಆ ಶಾರ್ಙ್ಗ-ಧನ್ವನಾದ ಶ್ರೀಕೃಷ್ಣನ ಸಭೆಯಲ್ಲಿ ಪ್ರತಿದಿನ ಹೀಗೆ ಮಂತ್ರಾಲೋಚನೆ ಮಾಡುತ್ತಿದ್ದರು.

ವಿ. : ೧. ಮಂತ್ರತಂತ್ರಜ್ಞರಾದವರೇ ನಿಜ ಅರ್ಥದಲ್ಲಿ ಮಂತ್ರಿ ಎನ್ನಿಸಲು ಯೋಗ್ಯ ಎಂಬ ವಿಶೇಷಾಂಶ ಇಲ್ಲಿ ಸೂಚಿತ. ಮುಂದಿನ (೪೧-೬೮)ಶ್ಲೋಕಗಳಲ್ಲಿ ರಾಜನೀತಿಯ ನಿರೂಪಣೆಯು ವಿಶಿಷ್ಟರೀತಿಯಲ್ಲಿ ಬಂದಿದೆ.

೨. ಮಂತ್ರ ಎಂದರೆ ಷಾಡ್ಗುಣ್ಯಗಳ ಚಿಂತನೆ; ತಂತ್ರ ಎಂದರೆ ಸಾಮ ಮೊದಲಾದ ಉಪಾಯಗಳು : ಮಂತ್ರಃ ಷಾಡ್ಗುಣ್ಯಚಿಂತನಮ್ । ತಂತ್ರಂ ಸಾಮಾದ್ಯುಪಾಯಃ ॥ –ವ್ಯಾ.

೩. 'ಶಾರ್ಙ್ಗಧನ್ವಾ' ಎಂಬುದು ವಿಷ್ಣುಸಹಸ್ರನಾಮದ ಪದ ('ಶಾರ್ಙ್ಗಧನ್ವಾ ಗದಾಧರಃ').

## ನಿಷ್ಠಾವಂತ ಸೈನಿಕರ ಅಗತ್ಯ

[೧]ರಣೇ ಯದಾಜ್ಞಾಶರಶಂಕಿಚಿತ್ತಾ
ಭಟಾಃ ಪರಾವೃತ್ಯ ನ ಲಕ್ಷಯಂತಿ ।

೧. ಯುದ್ಧಾಭಿಮುಖ್ಯೇನ ಮರಣದ್ವಾರಾ ಸ್ವರ್ಗಂ ಗಚ್ಛಂತಿ ವೇತಿ ಭಾವಃ । ಸ ಏವ ರಾಜಾ ವಿಜಯೀ ವಿಜಯ-ಶೀಲವಾನ್ । ರಾಜ್ಞಃ ಪ್ರಭುಶಕ್ತಿರಾವಶ್ಯಕೀತಿ ಭಾವಃ । –ವ್ಯಾ.

ಜಯಾಂಗನಾಂ ವಾ ದಿವಿಜಾಂಗನಾಂ ವಾ
ಸ್ಪೃಶಂತಿ ರಾಜಾ ವಿಜಯೀ ಸ ಏವ ॥ ೪೧ ॥

ಯಾವ ರಾಜನ ಆದೇಶವೆಂಬ ಬಾಣಕ್ಕೆ ಭಯಪಡುವ ಮನಸ್ಸಿನ ಭಟರು ಯುದ್ಧದಲ್ಲಿ ಹಿಂದಿರುಗಿ ನೋಡರೋ, ಜಯಾಂಗನೆಯನ್ನೋ, ದಿವಿಜಾಂಗನೆಯನ್ನೋ ಪಡೆಯುವರೋ, ಅವನೇ ಜಯಶೀಲನಾಗುವ ರಾಜ.

ವಿ. : ೧. ಯುದ್ಧದಲ್ಲಿ ಗೆಲುವು ಅಥವಾ ಸಾವು ಎಂಬ ವೀರತನದ ಸೈನಿಕರನ್ನು ಹೊಂದಿದ ರಾಜನಿಗೆ ಎಂದೂ ಪರಾಜಯವು ಒದಗದು ಎಂಬುದು ಇಲ್ಲಿನ ಮುಖ್ಯಾಂಶ.

೨. ಜಯಾಂಗನೆ ಎಂದರೆ ಜಯರೂಪದ ನಾರಿ, ದಿವಿಜಾಂಗನೆ ಎಂದರೆ ಸ್ವರ್ಗಲೋಕದ ಸ್ತ್ರೀ. ಗೆದ್ದರೆ ರಾಜ್ಯ, ಸತ್ತರೆ ಸ್ವರ್ಗ ಎಂಬ ಧ್ಯೇಯದ ವೀರಭಟರು ಎಂದರ್ಥ; ಇದು ಈ ಕೆಳಗಿನ ಗೀತೆಯ ಶ್ಲೋಕದ ವಿವರಣೆಯಂತಿದೆ :ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ । (೨/೩೭)

## ರಾಜನ ಯಶಸ್ಸಿನಲ್ಲಿ ಚಾರ ಮೊದಲಾದವರ ಪಾತ್ರ

ಚಾರೇಣ ಯೋ ವೇತ್ತಿ [೧]ರಿಪೋರ್ವಿಚಾರಂ
ಸದಾ ರಣೋಪಸ್ಕರಣಂ ಯುನಕ್ತಿ ।
ಅಗಮ್ಯಭೂಮಿಃ ಪರಿಖಾದಿನಾಽನ್ಯೈಃ
ಸ ಏವ ರಾಜಾ ವಿಜಯೀ ನ ಚಾನ್ಯಃ ॥ ೪೨ ॥

ಯಾವನು ಚಾರರ ಮೂಲಕ ಶತ್ರುಗಳ ವಿಚಾರವನ್ನು ಅರಿಯುವನೋ, ಸದಾ ಯುದ್ಧಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಅಣಿಮಾಡಿಕೊಂಡಿರುವನೋ, ಪರಿಖಾ ಮೊದಲಾದವುಗಳ ಮೂಲಕ ತನ್ನ ರಾಜಧಾನಿಯನ್ನು ರಕ್ಷಿಸಿಕೊಂಡಿರುವನೋ, ಆ ರಾಜನೇ ಜಯಶೀಲನಾಗುವನು; ಬೇರೆಯವನಲ್ಲ.

ವಿ. : ೧. [೨]ರಾಜನು ಯಶಸ್ವಿ ಎನ್ನಿಸಲು ಗೂಢಚಾರರ ಮೂಲಕ ಶತ್ರುಗಳ ವಿವರಗಳನ್ನು ತಿಳಿಯುವುದು, ಸದಾ ಯುದ್ಧ ಸಾಮಗ್ರಿಗಳನ್ನು ಸಿದ್ಧಪಡಿಸಿಟ್ಟುಕೊಂಡಿರುವುದು ; ತನ್ನ ರಾಜ್ಯಕ್ಕೆ ಶತ್ರುಗಳಿಂದ ಯಾವುದೇ ಕೆಡುಕು ಉಂಟಾಗದಂತೆ ಎಚ್ಚರವಹಿಸುವುದು ಅತ್ಯಗತ್ಯ ಎಂಬುದು ಇಲ್ಲಿಯ ಭಾವ.

---

೧. 'ಚಾರೈಃ ಪಶ್ಯಂತಿ ರಾಜಾನಃ' ; 'ರಾಜಾನಶ್ಚಾರಚಕ್ಷುಷಃ' । –ಮಹಾಭಾರತ (ಉದ್ಯೋಗಪರ್ವ★★)

೨. ವಿಜಿಗೀಷುಣಾ ಪರವೃತ್ತಾಂತಜ್ಞೇನ ಸ್ವಶಕ್ತ್ಯುಪಚಯವತಾಽಪಿ ಭಾವ್ಯಮಿತಿ ಭಾವಃ। –ವ್ಯಾ.

೨. ಪರಿಖಾ ಎಂದರೆ ಪಟ್ಟಣವನ್ನು ಸುತ್ತುವರೆಯುವ ಕಂದಕ ಎಂದರ್ಥ; ಆಳದ ಕಂದಕದಲ್ಲಿ ತುಂಬಿದ ನೀರು ಹಾಗೂ ಮೊಸಳೆ ಮೊದಲಾದ ಕ್ರೂರಪ್ರಾಣಿಗಳಿಂದಾಗಿ ಶತ್ರುಗಳಿಗೆ ದಾಟಲು ಅಶಕ್ಯ ಎಂದೆನಿಸುವುದು.

### ಮಂತ್ರಾಲೋಚನೆಯ ಮಹತ್ತ್ವ

ಸ್ವಸಂಸದಿ ಪ್ರೌಢಜನೇಷು ಮಂತ್ರಿ-
ವರೇಷು ನೀತ್ಯಾಗಮತತ್ತ್ವವಿತ್ಸು ।
ವಿಚಾರ್ಯ ಕುರ್ಯಾದ್ದ್ವಿಷತಾಮುಪಾಯೈ-
ರ್ಮಿಥೋ ವಿಭೇದಂ ಸುಖಭಾಕ್ ಸ ಭೂಪಃ ॥ ೪೩ ॥

ತನ್ನ ಸಭೆಗಳಲ್ಲಿ ಪ್ರೌಢಜನರೊಂದಿಗೂ, ನೀತಿಶಾಸ್ತ್ರದ ತತ್ತ್ವವನ್ನು ಬಲ್ಲ ಮಂತ್ರಿಶ್ರೇಷ್ಠರೊಂದಿಗೂ ಮಂತ್ರಾಲೋಚನೆ ನಡೆಸಿ, ಉಪಾಯಗಳಿಂದ ಶತ್ರುಗಳಲ್ಲಿ ಪರಸ್ಪರ ಒಡುಕು ಹುಟ್ಟಿಸುವ ಆ ರಾಜನು ಸುಖಕ್ಕೆ ಪಾತ್ರನೆನ್ನಿಸುವನು.

ವಿ. : ರಾಜನೀತಿಯ ಆರು ಶ್ರೇಷ್ಠ ಉಪಾಯಗಳಲ್ಲಿ ಭೇದ ಎಂಬುದು ಒಂದು. ಇಲ್ಲಿ ಭೇದ ಎಂದರೆ ಒಡುಕು ಎಂದರ್ಥ. ಪಂಚತಂತ್ರದಲ್ಲಿ ಮಿತ್ರಭೇದ ಎಂಬುದು ಹೇಗೋ ಹಾಗೆ. ಶತ್ರುರಾಜರಲ್ಲಿ ಒಡುಕು ಹುಟ್ಟಿಸಿದಾಗ ಅವರ ಬಲವು ಕುಂದಿ, ಯುದ್ಧದಲ್ಲಿ ತಾನು ಜಯಶೀಲನಾಗುವ ಅವಕಾಶ ಹೆಚ್ಚುವುದು ಎಂಬುದು ಇದರ ಮುಖ್ಯ ಫಲ.

### ಆಲಸ್ಯವು ಅನರ್ಥಕರ

[೧]ಉತ್ಸಾಹಸಂಗತಾ ನೀತಿಃ ಸೂತೇ ನರವರೋಚಿತೌ[೨] ।
[೩]ಕೀರ್ತಿಪ್ರತಾಪೌ[೪] ರಾಜೇಂದ್ರ ತತ್ರಾಲಸ್ಯಂ ಪ್ರತೀಪಕೃತ್ ॥ ೪೪ ॥

ಉತ್ಸಾಹದಿಂದ ಒಡಗೂಡಿದ ನೀತಿಯು ರಾಜೋಚಿತವಾದ ಕೀರ್ತಿ ಹಾಗೂ ಪ್ರತಾಪಗಳನ್ನು ನೀಡುವವು. ಎಲೈ ರಾಜಶ್ರೇಷ್ಠನೇ ! ಆ ವಿಷಯದಲ್ಲಿ ಆಲಸ್ಯವು ವಿರೋಧವೆಸಗುವುದು; (ಪ್ರತೀಪ - ವಿರೋಧ).

---

೧. ಪ್ರಕಾಶತಪನಾಹ್ಲಾದನಶಕ್ತಯಸ್ತಿಸ್ರಃ ಆಹ್ಲಾದನಂ ವೃಷ್ಟ್ಯಾ, ಉತ್ಸಾಹಮಂತ್ರಪ್ರಭುತ್ವಶಕ್ತಯಶ್ಚ।
-ಸುಮಧ್ವವಿಜಯ, ಭಾವಪ್ರಕಾಶಿಕಾ (೧೪/೧೪)

೨. ಋತುಕಾಲೇ ಪುರುಷಸಂಗತಸ್ತ್ರೀವತ್ ಉತ್ಸಾಹಸಂಗತ್ಯೈವ ನೀತಿಃ ಫಲತೀತಿ ಭಾವಃ। -ವ್ಯಾ.

೩. ವಾಚಾ ಇದಂ ಕರ್ತವ್ಯಂ ನ ಕರ್ತವ್ಯಮಿತಿ ನೀತಿಪಾಠಂ ಕರೋತಿ । ತಾದೃಶಂ ಪ್ರಯತ್ನಂ ನ ಕುರುತೇ ಚೇತ್ ಕಾರ್ಯಸಿದ್ಧಿರ್ನ ಭವತೀತಿ ಭಾವಃ। -ವ್ಯಾ.

೪. ಏವಂ ಕೀರ್ತಿಶಬ್ದಸ್ಯ ಸ್ತ್ರೀಲಿಂಗತ್ವಾತ್ ಪ್ರತಾಪಶಬ್ದಸ್ಯ ಪುಂಲಿಂಗತ್ವಾತ್ ತಯೋಃ ಕುಮಾರೀಕುಮಾರಸಾಮ್ಯಮ್ । ಪ್ರಾಯಃ ಸ್ತ್ರೀಣಾಂ ಸ್ವಪತ್ಯಾಪೇಕ್ಷಿತ್ವಾತ್ಪುಂಸಃ ಪುಮಪತ್ಯಾಪೇಕ್ಷಿತ್ವಾಚ್ಚ ನೀತ್ಯಾ ಕೀರ್ತಿಃ ಉತ್ಸಾಹಾತ್ಪ್ರತಾಪ ಇತಿ ವಿವೇಕೋ ದ್ರಷ್ಟವ್ಯಃ। -ವ್ಯಾ.

ವಿ. : ಉತ್ಸಾಹವು ಸಿದ್ಧಿದಾಯಕ, ಆಲಸ್ಯ ಸರ್ವಾರ್ಥನಾಶಕ ಎಂದು ಭಾವ :

ಸೋತ್ಸಾಹಸ್ಯಾಸ್ತಿ ಲೋಕೇಷು ನ ಕಿಂಚಿದಪಿ ದುರ್ಲಭಮ್ ।

- ವಾಲ್ಮೀಕಿರಾಮಾಯಣ (೪/೧/೧೨೩.)

## ಸಾಮಾದಿ ಚತುರುಪಾಯಗಳ ಅಗತ್ಯ

ಸಾಮಾದ್ಯುಪಾಯಾವಸರಜ್ಞಾನಶೂನ್ಯಸ್ಯ ಶೂರತಾ ।
ಆಮ್ನಾಯಾರ್ಥಾಪರಿಸ್ಫೂರ್ತೇಃ ಸಾಮರ್ಥ್ಯಮಿವ ವಾದಿನಃ ॥ ೪೫ ॥

ಸಾಮ ಮೊದಲಾದ ಉಪಾಯಗಳ ಪ್ರಸಂಗದ ತಿಳುವಳಿಕೆ ಇಲ್ಲದ ರಾಜರ ಶೂರತ್ವವು ವೇದಾರ್ಥದ ಪರಿಸ್ಫೂರ್ತಿಯಿಲ್ಲದ ವಾದಿಯ ಸಾಮರ್ಥ್ಯದಂತಾಗುವುದು.

ವಿ. : ೧. ಸಾಮ, ದಾನ, ಭೇದ, ದಂಡ ಎಂಬುದಾಗಿ ನಾಲ್ಕು ಕಾರ್ಯಸಿದ್ಧಿಯ ಉಪಾಯಗಳು ಎಂಬುದಾಗಿ ರಾಜನೀತಿಯಲ್ಲಿ ವಿಹಿತವಾಗಿವೆ. ಅವುಗಳನ್ನು ಕಾಲೋಚಿತವಾಗಿ ಪ್ರಯೋಗಿಸುವುದು ಸಿದ್ಧಿಗೆ ಕಾರಣ. [1]ಇಲ್ಲವಾದಲ್ಲಿ ಅವುಗಳಿಂದ ಅರ್ಥಸಿದ್ಧಿಯ ಬದಲು ಅನರ್ಥವೇ ಉಂಟಾಗುವುದು ಎಂದರ್ಥ.

೨. [2]ಶಾಸ್ತ್ರ ಚರ್ಚೆಯ ಪ್ರಸಂಗದಲ್ಲಿ ವೇದಾರ್ಥಗಳ ಪರಿಸ್ಫುರಣೆಯಾಗದಿದ್ದಲ್ಲಿ ವಾದಿಯು ಎಷ್ಟೇ ಕುಶಲನಾಗಿದ್ದರೂ ಜಯವನ್ನು ಸಾಧಿಸಲು ಅಸಮರ್ಥನೆನ್ನಿಸುವನೋ ಹಾಗೆ ಎಂಬ ಮಾತಿನಲ್ಲಿ ವೇದಶಾಸ್ತ್ರಗಳ ಹಿನ್ನೆಲೆಯಲ್ಲಿ ನಡೆಯುವ ಶಾಸ್ತ್ರಾರ್ಥವೇ ಸಾರ್ಥಕ ಎಂಬ ವಿಶೇಷಾಂಶ ಸೂಚಿತ.

## ಸಂಧಿ-ನಿಗ್ರಹಾದಿಗಳ ಅಗತ್ಯ

ಯಃ ಸಂಧಿಮುಖ್ಯಾಮಲನೀತಿಕಾಲ-
ಮಜ್ಞಾನ್ಯವಿಜ್ಞಾಯ ರಣಂ ವಿಧತ್ತೇ ।
ಷಣ್ಣಿಗ್ರಹಾಣಾಂ ಸಮಯಾನಭಿಜ್ಞ-
ವಾದೀವ ಸಂಸತ್ಸು ಸ ಯಾತ್ಯಕೀರ್ತಿಮ್ ॥ ೪೬ ॥

ಸಂಧಿಯೇ ಮೊದಲಾದ ನಿರ್ಮಲವಾದ ರಾಜನೀತಿಯ ಸಮಯವನ್ನು ತಿಳಿಯದೆ ಯುದ್ಧಕ್ಕೆ ತೊಡಗುವ ಅಜ್ಞಾನಿಯಾದ ರಾಜನು, ವಿದ್ವತ್ಸಭೆಗಳಲ್ಲಿ ಆರು ನಿಗ್ರಹ ಸ್ಥಾನಗಳ ಪ್ರಯೋಗದ ಕಾಲವನ್ನು ಅರಿಯದ ವಾದಿಯಂತೆ ಅಪಕೀರ್ತಿಯನ್ನು ಹೊಂದುವನು.

---

೧. ಕ್ರಮವಿಪರ್ಯಾಸೋ ಅಪ್ರಾಪ್ತಕಾಲಮ್ । ಯಥಾ ಕೃತಕತ್ವಾದನಿತ್ಯಃ ಶಬ್ದ ಇತ್ಯಾದಿ । - ಪ್ರಮಾಣಪದ್ಧತಿ

೨. ಯಥಾಽಯಂ ವಾದೀ ಅಪ್ರಾಪ್ತಕಾಲತ್ವಾದಿನಾ ನಿಗೃಹ್ಯತೇ ತಥಾಽಯಮಪಿ ರಾಜಾ ಶತ್ರುಭಿಃ ನಿಗೃಹ್ಯತ ಇತಿ ಭಾವಃ । -ವ್ಯಾ.

ವಿ. : ೧. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಹಾಗೂ ಸಂಶ್ರಯ ಎಂಬ ಆರು ರಾಜನೀತಿಯ ಷಡ್ಗುಣಗಳು ಎಂಬುದಾಗಿ ಸುಪ್ರಸಿದ್ಧ. ಈ ಆರನ್ನು ಸಮಯೋಚಿತವಾಗಿ ಪ್ರಯೋಗಿಸಿದಾಗ ಯಶಸ್ಸು ಖಚಿತ ಎಂದರ್ಥ:

ಸಂಧಿಂ ಚ ವಿಗ್ರಹಂ ಚೈವ ಯಾನಮಾಸನಮೇವ ಚ ।
ದ್ವೈಧೀಭಾವಂ ಸಂಶ್ರಯಂ ಚ ಷಡ್ಗುಣಾನ್ ಕವಯೋ ವಿದುಃ [೧]॥

೨. [೨]ಅದರಂತೆ ವಿರೋಧ, ಅಸಂಗತಿ, ನ್ಯೂನ, ಅಧಿಕ, ಸಂವಾದ, ಹಾಗೂ ಅನುಕ್ತಿ ಎಂಬ ಆರು [೩]ನಿಗ್ರಹಸ್ಥಾನಗಳು ಶಾಸ್ತ್ರ ಚರ್ಚೆಯಲ್ಲಿ ಪ್ರಸಿದ್ಧ. ಈ ಆರೂ ಸಹ ಕಥಾದೋಷಗಳು ಎಂಬುದಾಗಿ [೪]ಕಥಾಲಕ್ಷಣಾದಿ ಗ್ರಂಥಗಳಲ್ಲಿ ಉಕ್ತವಾಗಿವೆ. [೫]ಇವುಗಳ ಪ್ರಯೋಗವನ್ನು ಅರಿಯದ ವಾದಿಯು ಸಭೆಯಲ್ಲಿ ಸ್ವತಃ ತಾನೇ ನಿಗ್ರಹಕ್ಕೆ ಗುರಿಯಾಗುವ ಮೂಲಕ ಅಪಕೀರ್ತಿಗೆ ಗುರಿಯಾಗುವನು ಎಂದರ್ಥ.

೩. ಶಾಸ್ತ್ರ ಚರ್ಚೆಯನ್ನು ಹೀಗೆ ವಾಗ್ಯುದ್ಧವೆಂದು ಸೂಚಿಸುವ ಮೂಲಕ ರಾಜರಿಗೆ ಬಾಹುಯುದ್ಧದಂತೆ ವಿಪ್ರರಿಗೆ ವಾಗ್ಯುದ್ಧವು ವಿಹಿತ ಎಂಬ ತತ್ತ್ವವು ಸಹ ನಿರೂಪಿತ.

## ಶತ್ರುಜಯಕ್ಕೆ ಅಗತ್ಯವಾದ ಪ್ರಕಾರಗಳು

ನಾನಾಪ್ರಕಾರೈರ್ದಶದಿಕ್ಷು ಶತ್ರೂನ್
ಯೋ ನೈವ ಜೇತುಂ ಯತತೇ ಕ್ಷಿತೀಶಃ ।
ಬತಾವಶೀಭೂತದಶೇಂದ್ರಿಯೌಘೋ
ವ್ರತೀವ ನಾಸೌ ಸುಖಭಾಕ್ ಕದಾಽಪಿ ॥ ೪೭ ॥

---

೧. ಸುಮಧ್ವವಿಜಯ ಭಾವಪ್ರಕಾಶಿಕಾ (೧೪/೧೪)

೨. ಏಕಸ್ಮಿನ್ ನಿಗ್ರಹಸ್ಥಾನೇ ಪ್ರಾಪ್ತೇ ತದನುದ್ಭಾವ್ಯ ನಿಗ್ರಹಾಂತರಂ ಸಮುದ್ಭಾವಯನ್ನಿರನುಯೋಜ್ಯಾನುಯೋಗೇನ ಸ ವಾದೀ ಯಥಾ ಪ್ರತಿವಾದಿನಾ ನಿಗೃಹ್ಯತೇ । ಏವಂ ಸ್ವಸಾಮರ್ಥ್ಯದಶಾಯಾಂ ಪ್ರಾಪ್ತಂ ಸಂಧಿಮಕೃತ್ವಾ ಯಃ ವಿಗ್ರಹಾದಿಕಂ ಕುರುತೇ ಸೋಽಪಿ ಶತ್ರುಣಾ ನಿಗೃಹ್ಯತ ಇತಿ ಭಾವಃ । -ವ್ಯಾ.

೩. ತತ್ರ ಯೋಗ್ಯತಾಭಾವೋ ವಿರೋಧಃ । ಆಕಾಂಕ್ಷಾವಿರಹೋಽಸಂಗತಿಃ । ಅವಶ್ಯವಕ್ತವ್ಯಸ್ಯೈಕದೇಶಮಾತ್ರವಚನಂ ನ್ಯೂನಮ್ । ಸನ್ನಿಧ್ಯಭಾವವಿಶೇಷಃ । ಆಕಾಂಕ್ಷಿತಸ್ಯೈವಾನ್ಯೇನ ಕೃತಕಾರ್ಯಸ್ಯ ವಚನಮಾಧಿಕ್ಯಮ್ ।.... ವಿಪ್ರತಿಪನ್ನಪ್ರಮೇಯಾಂಗೀಕಾರಃ ಸಂವಾದಃ । ಪರಬೋಧನಾರ್ಥಸ್ಯಾವಶ್ಯಂವಕ್ತವ್ಯಸ್ಯಾವಚನಮನುಕ್ತಿಃ ।
-ಪ್ರಮಾಣಪದ್ಧತಿ

೪. ವಿರೋಧಾಸಂಗತಿನ್ಯೂನತೂಷ್ಣೀಂಭಾವಾದಿಕೈರ್ಜಿತಃ ॥ -ಕಥಾಲಕ್ಷಣ(೧೮)
ವಿರೋಧಶ್ಚ ತಥಾಽಧಿಕ್ಯಂ ನ್ಯೂನತಾಽಸಂಗತಿಸ್ತಥಾ ।
ಉಪಪತ್ತಿದೋಷಾ ವಿಜ್ಞೇಯಾ ವಿರೋಧಶ್ಚ ಸ್ವತೋಽನ್ಯತಃ ॥
ಜನಕಸ್ಯಾತ್ಯಯೋ ಜಾತಿಃ ಸ್ವಸ್ಯ ವಾಽನ್ಯಸ್ಯ ವಾ ಭವೇತ್ ।
ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್ ।
ನಿಗ್ರಹಾ ಏತ ಏವ ಸ್ಯುಃ ಸಂವಾದಾನುಕ್ತಿಸಂಯುತಾಃ ॥ -ವಿಷ್ಣುತತ್ತ್ವವಿನಿರ್ಣಯ

೫. ಅತನ್ನಿಗ್ರಹಪ್ರಾಪ್ತೌ ತನ್ನಿಗ್ರಹೋದ್ಭಾವನಂ ನಿರನುಯೋಜ್ಯಾನುಯೋಗಃ । ಸ ಚತುರ್ವಿಧಃ ;ಛಲಮ್, ಜಾತಿಃ, ಹಾನ್ಯಾದ್ಯಾಭಾಸಃ, ಅಪ್ರಾಪ್ತಕಾಲೇ ಗ್ರಹಣಂ ಚೇತಿ । - ಪ್ರಮಾಣಪದ್ಧತಿ ।

ಹತ್ತುದಿಕ್ಕಿನಲ್ಲಿನ ಶತ್ರುಗಳನ್ನು ನಾನಾ ಪ್ರಕಾರಗಳಿಂದ ಗೆಲ್ಲಲು ಪ್ರಯತ್ನಿಸದ ರಾಜನು ಹತ್ತುಇಂದ್ರಿಯಗಳ ಸಮೂಹವನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದ ಯತಿಯಂತೆ ಎಂದೂ ಸಹ ಸುಖಕ್ಕೆ ಪಾತ್ರನೆನ್ನಿಸಲಾರನು, ಇದು ನಿಶ್ಚಿತ.

ವಿ. : ೧. ಹತ್ತು ದಿಕ್ಕಿನ ಶತ್ರುಗಳನ್ನು ಗೆಲ್ಲುವುದು ಚಕ್ರವರ್ತಿಗೆ ಅಗತ್ಯವಾಗಿರುವಂತೆ ಐದು [೧]ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಎಂಬ ಹತ್ತು ಇಂದ್ರಿಯಗಳನ್ನು ಗೆಲ್ಲುವುದು ಸಾಧಕನಿಗೆ ಅಗತ್ಯ. ಶತ್ರುನಿಗ್ರಹ ಮಾಡದ ರಾಜನು ಸುಖಿಯಾಗನು. ಅದರಂತೆ ಇಂದ್ರಿಯ-ನಿಗ್ರಹವಿಲ್ಲದ ಸಾಧಕನು ಸರ್ವನಾಶ ಹೊಂದುವನು ಎಂದರ್ಥ.

೨. ದಶರಥ ಎಂಬ ಪದವೂ ಸಹ ಇದೇ ಅರ್ಥವನ್ನು ಕೊಡುವಂತಹುದು: 'ದಶೇಂದ್ರಿಯ-ರೂಪ-ಅಶ್ವಯುಕ್ತೋ ರಥೋ ಯಸ್ಯ ಸಃ' – ಹತ್ತು ಇಂದ್ರಿಯಗಳನ್ನು ಹೊಂದಿರುವಂತಹ ದೇಹ ರೂಪದ ರಥವನ್ನು ಹತೋಟಿಯಲ್ಲಿಟ್ಟುಕೊಂಡಿರುವವನು ಎಂದು ಅದರ ಅರ್ಥ.

೩.. ವ್ರತೀ ಎಂದರೆ ಸಂನ್ಯಾಸಿ ; ಇಲ್ಲಿ ಸಾಧಕ ಎಂದರ್ಥ ; ಓಘ – ಸಮೂಹ.

### ರಾಜನ ಯಶಸ್ಸಿನಲ್ಲಿ ಆಯುಧಗಳ ಪಾತ್ರ

**ಯತ್ಸೈನ್ಯಕುಂತಾಃ ಸ್ವಸಪತ್ನಚಿಂತಾಂ**
**ಶಾರ್ದೂಲದಂತಾ ಇವ ಸಾಧಯಂತಿ ।**
**ಸ್ವರಾಷ್ಟ್ರಸಂತೋಷಮಪಿ ಸ್ವತಂತೌ**
**ತದೀಯದಂಷ್ಟ್ರಾ ಇವ ಸೋಽವನೀಶಃ ॥ ೪೮ ॥**

ಯಾರ ಸೈನ್ಯದಲ್ಲಿನ ಕುಂತ ಎಂಬ ಆಯುಧಗಳು ತನ್ನ ಶತ್ರುಗಳಿಗೆ ಹುಲಿಯ ದಂತಗಳಂತೆ ಚಿಂತೆಯನ್ನು ಉಂಟುಮಾಡುವವೋ, ತನ್ನ ಮರಿಗಳಿಗೆ ಹೇಗೋ ಹಾಗೆ ತನ್ನ ರಾಷ್ಟ್ರಕ್ಕೆ ಸಂತೋಷವನ್ನುಂಟುಮಾಡುವವೋ, ಅವನೇ ನಿಜವಾದ ಭೂಪಾಲನು.

ವಿ. : [೨]ಕುಂತ ಎಂಬ ಆಯುಧವು ಹುಲಿಯ ದಂತದಂತೆ ಶತ್ರುಗಳಿಗೆ ಮಾರಕ. ಆದರೆ ಆ ಹುಲಿಯ ದಂತಗಳು ಅದರ ಮರಿಗಳಿಗೆ ಮಾತ್ರ ತಾರಕ. ಅದರಂತೆ [೩]ರಾಜನ ಸೈನಿಕರ

---

೧. ಯಥಾ ರಸನಾದಿಜ್ಞಾನೇಂದ್ರಿಯಾಣಾಂ ಚ ಜಯಾಭಾವೇ ಅಭಕ್ಷ್ಯಭಕ್ಷಣಾಗಮ್ಯಾಗಮನಾದಿದುಷ್ಕರ್ಮಪ್ರಾಪ್ತ್ಯಾ ಇಹ ಅಪಯಶಸಾ ಪರತ್ರ ನರಕಪ್ರಾಪ್ತ್ಯಾ ಚ ಯಥಾ ವ್ರತೀ ದುಃಖಭಾಗೀ ತಥೇತಿ ಭಾವಃ। –ವ್ಯಾ.

೨. ಯಥಾ ಕ್ರೂರಾ ಅಪಿ ಶಾರ್ದೂಲದಂಷ್ಟ್ರಾಃ ಸ್ವಶಿಶುವಿಷಯೇ ಸುಖಕರಾಃ । "ವ್ಯಾಘ್ರೀ ಹರೇದ್ಯಥಾ ಪುತ್ರಂ **ದಂಷ್ಟ್ರಾಭ್ಯಾಂ ನ ಚ ಪೀಡಯೇತ್**"(ಪಾಣಿನೀಯಶಿಕ್ಷಾ)ಇತಿ ವಚನಾತ್ । –ವ್ಯಾ.
ಯಥಾ ವ್ಯಾಘ್ರೀ ಹರೇತ್ ಪೋತಂ ದಂಷ್ಟ್ರಾಭ್ಯಾಂ ನ ತು ಪೀಡಯೇತ್ ।
ಭೀತಾ ಪತನಭೇದಾಭ್ಯಾಂ ತದ್ವದ್ವರ್ಣಾನ್ ಪ್ರಯೋಜಯೇತ್ ॥ – ಸು.ವಿ.ಭಾವಪ್ರಕಾಶಿಕಾ (೧೨/೩.೧)

೩.. ಏವಮಸ್ಮಾಕಂ ರಾಜಭಟಕರಸ್ಥಕುಂತೇಷು ಸತ್ಸು ನ ಶತ್ರುಭ್ಯೋ ಭಯಮಸ್ತೀತಿ ವಿವೃತಗೃಹದ್ವಾರಾಃ ಸಂತಃ ರಾಷ್ಟ್ರೇಷು ಸುಖನಿದ್ರಾಂ ಕುರ್ವಂತೀತಿ ಭಾವಃ। ಸ ಏವ ತಾದೃಶ ಏವಾವನೀಶಃ ರಾಜಾ ನಾನ್ಯಃ ಪ್ರಜಾಕ್ಷೋಭ-ಕೃದ್ಭೃತ್ಯೋಪೇತ ಇತ್ಯರ್ಥಃ। –ವ್ಯಾ.

ಆಯುಧಗಳು ಶತ್ರುಗಳ ಪಾಲಿಗೆ ಮಾರಕವಾಗಿಯೂ ತನ್ನವರ ಪಾಲಿಗೆ ತಾರಕವಾಗಿಯೂ ವರ್ತಿಸಬೇಕು ಎಂದರ್ಥ; ಅವನಿ - ಭೂಮಿ; ಅವನೀಶ - ಭೂಪಾಲ - ರಾಜ.

### ಆಯುಧಗಳಲ್ಲಿ ಬಾಣದ ವಿಶೇಷ

**ರಾಜನ್ ಮುಕ್ತೋಽಪಿ ತೇ ಬಾಣೋ ನಿಹಂತಿ ದಿಶಿ ದಿಶ್ಯರೀನ್ ।**
**ಗುಣಸಂಗಸ್ಯಾರ್ಜವಸ್ಯ ವಂಶಸ್ಯ ಹಿ ಫಲಂ ಚ ತತ್ ॥ ೪೯ ॥**

ಎಲೈ ರಾಜನೇ! ಬಿಟ್ಟ ನಿನ್ನ ಬಾಣವು ದಿಕ್ಕುದಿಕ್ಕುಗಳಲ್ಲಿನ ಶತ್ರುಗಳನ್ನು ನಾಶಪಡಿಸುವುದು; ಗುಣ(ಹಗ್ಗ)ದಿಂದ ಕೂಡಿದ ಋಜುವಾದ ವಂಶ(ಬಿದಿರಿನ)ದ ಫಲ ಅದೇ ಆಗಿರುವುದು.

ವಿ. :೧. ಇಲ್ಲಿ ಗುಣ ಆರ್ಜವ ಹಾಗೂ ವಂಶ ಎಂಬಲ್ಲಿ ಶ್ಲೇಷಾಲಂಕಾರ. ಬಿಲ್ಲಿನಲ್ಲಿ ಹೂಡಿದ ನೇರವಾದ ಬಾಣವು ಶತ್ರುಗಳನ್ನು ಸದೆಬಡಿಯುವಂತೆ ಗುಣಗಳಿಂದ ಕೂಡಿದ ಋಜುನಡತೆಯ ಸದ್ವಂಶದಲ್ಲಿ ಜನಿಸಿದವರಿಗೆ [1]ಕಾಮಾದಿ ಶತ್ರುಗಳ ಜಯವು ನಿಶ್ಚಿತ ಎಂದರ್ಥ.

೨. ಸಜ್ಜನರ ಸಂಸರ್ಗದಿಂದಾಗಿ ಶುದ್ಧಮನಸ್ಸು, ಕುಲೀನತೆ ಮೊದಲಾದ ಗುಣಗಳಿಂದ ಕೂಡಿದ ಪುರುಷನು ತನ್ನ ಒಡೆಯನಿಂದ ಪರಿತ್ಯಕ್ತನಾದರೂ ಸ್ವಾಮಿಕಾರ್ಯವನ್ನು ಸಾಧಿಸುವನು; ಆದ್ದರಿಂದ ಅಂತಹ ಸ್ವಾಮಿನಿಷ್ಠೆಯ ಜನರನ್ನು ರಾಜನು ಸಂಪಾದಿಸಬೇಕು ಎಂದು ಭಾವ.

### ಸೂರ್ಯಚಂದ್ರರ ರೀತಿಯಲ್ಲಿ ನಡೆದ ರಾಜ್ಯಭಾರ

**ಪಾಂಥಾನ್ ಸಮಂತಾದ್ದಿವಸೇ ದಿನೇಶ-**
**ಪ್ರಖ್ಯೋ ರಜನ್ಯಾಂ ರಜನೀಶಕಲ್ಪಃ[2] ।**
**ಯಸ್ತಸ್ಕರೇಭ್ಯೋಽವತಿ ದುಷ್ಕರಾಜ್ಞಃ**
**ಸ ಏವ ಕೀರ್ತ್ಯೈತಿ ದಿಶಾಮುಪಾಂತಮ್ ॥ ೫೦ ॥**

ಪಯಣಿಗರನ್ನು ಹಗಲಿನಲ್ಲಿ ಎಲ್ಲೆಡೆಗಳಲ್ಲಿ ದಿನೇಶನಾದ ಸೂರ್ಯನಂತೆಯೂ, ರಾತ್ರಿಯಲ್ಲಿ ರಜನೀಶನಾದ ಚಂದ್ರನಂತೆಯೂ ಯಾವ ರಾಜನು ಕಳ್ಳರಿಂದ ರಕ್ಷಿಸುವನೋ, ಕಠಿಣ ಶಾಸನದ ಆ ರಾಜನೇ ದಿಗಂತದವರೆಗೂ ಕೀರ್ತಿಯನ್ನು ಹೊಂದುವನು.

ವಿ. : ೧. ಹಗಲಿನಲ್ಲಿ ಸೂರ್ಯನಂತೆ ಎಂದರೆ ಕಠಿಣ ಶಾಸನವನ್ನು ಮಾಡುವ ಮೂಲಕ ರಾಜನು ಜನಗಳನ್ನು ನಿಯಂತ್ರಿಸಬೇಕು ಎಂದರ್ಥ; ಅದರಂತೆ ರಾತ್ರಿಯಲ್ಲಿ [3]ಚಂದ್ರನಂತೆ

---

೧. ಸಜ್ಜನಸಂಸರ್ಗಶುದ್ಧಮನಸ್ಕತ್ವಕುಲೀನತ್ವಾದಿಗುಣಯುಕ್ತಃ ಪುರುಷಃ ಸ್ವಸ್ವಾಮಿನಾ ಪರಿತ್ಯಕ್ತೋಽಪಿ ಸ್ವಾಮಿಕಾರ್ಯಂ ಸಾಧಯತೀತ್ಯತ್ರ ಶರೋ ದೃಷ್ಟಾಂತ ಇತ್ಯತೋ ತಾದೃಶಪುರುಷಾಃ ರಾಜ್ಞಾ ಸಂಪಾದನೀಯಾ ಇತಿ ಭಾವಃ। -ವ್ಯಾ.

೨. ವಿಧೌ ಪ್ರಶಾಂತೇಽಭ್ಯುದಿತೇ ಜನೋಽಯಮಭುಂಕ್ತ ಭೋಗಾನ್ ಪುನರುಷ್ಣಭಾನೌ।
ಕರೋತಿ ಧರ್ಮಾಂಶ್ಚಕಿತಸ್ತಥಾ ತದ್ಬಿಭೇತಿ ಸರ್ವಃ ಪರುಷಾನ್ನ ಶಾಂತಾತ್ ॥ -ರು.ವಿ.(೨/೨೨)

೩.. ಯಥಾ ತಮಸಿ ಸಂಚರಂತಃ ಚೋರಾಃ ಚಂದ್ರೋದಯೇ ಸತಿ ಬಿಭ್ಯಂತಿ । ತಥಾ ಚಂಡಶಾಸನಾತ್ ರಾಜ್ಞಃ ರಾತ್ರಾವಪಿ ಚೋರಾ ಬಿಭ್ಯಂತೀತಿ ಭಾವಃ। -ವ್ಯಾ.

ಎನ್ನುವ ಮೂಲಕ ತನ್ನ ಜನರಿಗೆ ಸುಖಸಂತೋಷಗಳನ್ನು ನೀಡುವ ಮೂಲಕ ರಾಜ್ಯಭಾರವನ್ನು ಮಾಡಬೇಕು ಎಂಬ ಅರ್ಥವು ಸೂಚಿತ ; ಪಾಂಥ - ಪಥಿಕ ; ದಿನೇಶ - ಸೂರ್ಯ.

೨. ಸೂರ್ಯಚಂದ್ರರಂತೆ ರಾಜನು ತನ್ನ ಪ್ರಜೆಗಳ ವಿಷಯದಲ್ಲಿ ವರ್ತಿಸಬೇಕು ಎಂದರ್ಥ.

೩.. ಒಂದರ್ಥದಲ್ಲಿ ಪುರಾಣಪ್ರಪಂಚದಲ್ಲಿ ನಿರೂಪಿತವಾಗಿರುವ ಸೂರ್ಯವಂಶ ಹಾಗೂ ಚಂದ್ರವಂಶದ ರಾಜರ ವಿವರಕ್ಕೆ ಇದು ವ್ಯಾಖ್ಯಾನದಂತಿರುವ ಮಾತು.

೪. ಪ್ರಯಾಣಿಕರನ್ನು ಹಗಲಿನಲ್ಲಿ ಸೂರ್ಯನ ಬೆಳಕು ರಕ್ಷಿಸಿದರೆ ರಾತ್ರಿಯಲ್ಲಿ ಚಂದ್ರನ ಬೆಳದಿಂಗಳು ರಕ್ಷಿಸುವುದು ಎಂದೂ ಭಾವ ; ತಸ್ಕರ - ಕಳ್ಳ ; ರಜನೀಶ - ಚಂದ್ರ.

### ರಾಜ್ಯಪಾಲನೆಯಲ್ಲಿ ನ್ಯಾಯದ ಮಹತ್ತ್ವ

**[೧]ನ್ಯಾಯಂ ಸಂಗೃಹ್ಯ ನೃಪತಿರನ್ಯಾಯಂ ಯಸ್ತು ಸಂತ್ಯಜೇತ್ ।**
**ಪದೇ ಪದೇ ತಮನ್ಯಾಯಃ ಸನ್ನಮ್ಯಾಭ್ಯರ್ಥಯಿಷ್ಯತೇ ॥ ೫೧ ॥**

ನ್ಯಾಯವನ್ನು ಹಿಡಿದು ಯಾವ ರಾಜನು ಅನ್ಯಾಯವನ್ನು ತೊರೆಯುವನೋ ಆ ರಾಜನನ್ನು ಅನ್ಯಾಯವು ಹೆಜ್ಜೆಹೆಜ್ಜೆಗೂ ಮಣಿಯುತ್ತ ಬೇಡಿಕೊಳ್ಳುವುದು.

ವಿ. : ರಾಜನಿಂದ ಬಹಿಷ್ಕರಿಸಲ್ಪಡುವ ವ್ಯಕ್ತಿಯು ತನ್ನನ್ನು ಹಾಗೆ ಮಾಡದಿರಲು ರಾಜನ ಚರಣಗಳಿಗೆ ಎರಗಿ ಬೇಡಿಕೊಳ್ಳುವಂತೆ ಅನ್ಯಾಯವನ್ನು ತೊರೆಯುವ ರಾಜನನ್ನು ಅನ್ಯಾಯವು ಶರಣು ಹೊಂದಿ ಅವನ ವಶವರ್ತಿಯಾಗುವುದು ಎಂದರ್ಥ.

### ಹಗಲಿನ ಸೂರ್ಯ, ರಾತ್ರಿಯ ಚಂದ್ರನಂತೆ ರಾಜನ ವರ್ತನೆ

**ದಿನೇ ದಿನೇಶಪ್ರಖ್ಯೋ ಯೋ ರಾತ್ರೌ ರಾತ್ರೀಶಸನ್ನಿಭಃ ।**
**ಕಾಪಥೇಭ್ಯಃ ಪ್ರಜಾ ರುಂಧೇ ಸ ರಾಜಾ ಸ ವಿಶಾಮಿನಃ ॥ ೫೨ ॥**

ಹಗಲಿನಲ್ಲಿ ದಿನದ ಒಡೆಯನಾದ ಸೂರ್ಯನಂತೆಯೂ, ರಾತ್ರಿಯಲ್ಲಿ ರಾತ್ರಿಯ ಒಡೆಯನಾದ ಚಂದ್ರನಂತೆಯೂ, ಯಾವನು ದುರ್ಮಾರ್ಗಗಳಿಂದ ಪ್ರಜೆಗಳನ್ನು ರಕ್ಷಿಸುವನೋ ಆ ರಾಜನು ಪ್ರಜೆಗಳಿಗೆ ಸ್ವಾಮಿ ಎನ್ನಿಸುವನು; (ರಾತ್ರೀಶ - ಚಂದ್ರ).

ವಿ. : ೧. [೨]ಇದೂ ಸಹ ಪುರಾಣಪ್ರೋಕ್ತವಾದ ಸೂರ್ಯವಂಶ ಹಾಗೂ ಚಂದ್ರವಂಶದ ರಾಜರುಗಳ ಮಹಿಮೆಯನ್ನು ವಿವರಿಸುವ ಶ್ಲೋಕದಂತಿದೆ; ಕಾಪಥ-ಕೆಟ್ಟದಾರಿ; ವಿಶಾಂ-ಪ್ರಜೆಗಳ.

---

೧. ಯಥಾ ರಾಜ್ಞಾ ಪರಿತ್ಯಕ್ತಃ ಪುರುಷಃ ಮಾಂ ಪರಿಪಾಲಯೇತಿ ನತ್ವಾ ಪ್ರಾರ್ಥಯತೇ ಏವಂ ಪರಿತ್ಯಕ್ತಃ ಸ ಅನ್ಯಾಯಃ ತಮಭ್ಯರ್ಥಯತೇ ಇತ್ಯಾಪಾತಚಮತ್ಕಾರಃ । -ವ್ಯಾ.

೨. ಚಂದ್ರಸೂರ್ಯಸಾಮ್ಯಾತ್ ಚಂದ್ರಸೂರ್ಯವಾಚಕೌ ರಾಜೇನಶಬ್ದೌ ಅಸ್ಯಾಪ್ಯುಚಿತಾವಿತಿ ಭಾವಃ । -ವ್ಯಾ.

೨. ಈ ಸರ್ಗದ ೫೦ನೆಯ ಶ್ಲೋಕದಲ್ಲಿ ಬಂದಿರುವ ವಿಷಯಕ್ಕೆ ಇದು ಒಂದು ರೀತಿಯಲ್ಲಿ ವಿವರಣೆಯಂತಿದೆ.

### ಕ್ಲೇಶಕ್ಕೆ ಅಂಜುವುದು ಅನಗತ್ಯ

**ಪ್ರಾಯೇಣ ಧನವಾನೇವ ಜಾಯತೇ ಕ್ಲೇಶವಾನಪಿ ।**
**ಫಲವಾನೇವ ಹಿ ತರುಃ ಕಂಟಕೈರುಪರುಧ್ಯತೇ ॥ ೫೩ ॥**

ಸಾಮಾನ್ಯವಾಗಿ ಧನವಂತನಾದವನೇ ಹೆಚ್ಚು ಕ್ಲೇಶಕ್ಕೆ ಒಳಗಾಗುವನು; ಮುಳ್ಳಿನ ಬೇಲಿ ಹಾಕಿ ರಕ್ಷಿಸುವುದು ಹಣ್ಣಿನ ಮರವನ್ನೇ ಅಲ್ಲವೆ !

ವಿ. : ೧. ಧನವಂತನಿಗೆ ಹೆಚ್ಚು ಕ್ಲೇಶ ಎಂಬುದನ್ನು ಇಲ್ಲಿ ಅಪೂರ್ವ ರೀತಿಯಲ್ಲಿ ತಿಳಿಸಿ-ರುವರು. ಬೇಲಿ ಹಾಕಿ ರಕ್ಷಿಸುವುದು ಹಣ್ಣಿನ ಮರಗಳನ್ನೇ ಹೊರತು ಇತರ ಮರಗಳನ್ನಲ್ಲ. ಅದರಂತೆ ಆಪತ್ತುಗಳು ಎರಗುವುದು ಧನವಂತನಿಗೇ ಹೊರತು ದರಿದ್ರರಿಗಲ್ಲ ಎಂದರ್ಥ.

೨. ಇದು ಗುಣವಂತರಿಗೆ ಹೆಚ್ಚು ಕಷ್ಟ ಎಂಬ ಲೋಕಾನುಭವಕ್ಕೂ ವಿವರಣೆ ನೀಡುವ ಶ್ಲೋಕವಾಗಿದೆ. ಕಳ್ಳಕಾಕರ ಭಯ ಹಣವಂತನಿಗೆ ಹೇಗೋ ಹಾಗೆ ದುಷ್ಟಜನರ ಭಯ ಗುಣವಂತರಿಗೆ ಹೆಚ್ಚು ಎಂಬುದು ಇಲ್ಲಿಯ ಭಾವ.

### ರಾಜ್ಯಪಾಲನೆಯಲ್ಲಿ ದಾನದ ಪಾತ್ರ

**ಕಾಲೇ ಕಾಲೇ ಧನಂ ನೂನಮರ್ಥಿಭ್ಯೋ ವಿತರೇದ್ಧಿ ಯಃ ।**
**ಮುಚ್ಯತೇ ಸರ್ವದುಃಖೇಭ್ಯಃ ಕಂಟಕೇಭ್ಯ ಇವ ದ್ರುಮಃ ॥ ೫೪ ॥**

ಬೇಡುವವರಿಗೆ ಕಾಲಕಾಲದಲ್ಲಿ ಯಾವ ರಾಜನು ಸಂಪತ್ತನ್ನು ನಿಶ್ಚಿತವಾಗಿ ವಿತರಣೆ ಮಾಡುವನೋ ಅಂತಹವನು ಕಂಟಕಗಳಿಂದ ಮರಗಳು ಹೇಗೋ ಹಾಗೆ ಸಕಲದುಃಖಗಳಿಂದ ಬಿಡುಗಡೆಹೊಂದುವನು.

ವಿ. : ೧. ಹಣ್ಣಿನ ಮರಕ್ಕೆ ಬೇಲಿ ಹಾಕುವುದು ಅದರಲ್ಲಿ ಹಣ್ಣುಗಳು ಇರುವವರೆಗೆ ಮಾತ್ರ. ಅದರಂತೆ ಧನವಂತನಿಗೆ ಕಳ್ಳಕಾಕರ ಭಯ ಇರುವುದು ಅವನಲ್ಲಿ ಹಣ ಇರುವವರೆಗೆ ಮಾತ್ರ. ಹಣ್ಣನ್ನು ನೀಡಿಯಾದ ಮೇಲೆ ಮರಕ್ಕೆ ಬೇಲಿಯನ್ನು ತೆಗೆದುಹಾಕುವಂತೆ ಸತ್ಪಾತ್ರರಿಗೆ ದಾನನೀಡಿ ಕೃತಾರ್ಥನಾಗುವವನಿಗೆ ಕಂಟಕಗಳು ಪರಿಹಾರವಾಗುವವು ಎಂದರ್ಥ.

೨. ಹಣವಂತರು ಆಪತ್ತುಗಳಿಂದ ಪರಿಹಾರ ಹೊಂದಲು ದೇಶ, ಕಾಲಕ್ಕನುಗುಣವಾಗಿ ತಮ್ಮ ಸಂಪತ್ತನ್ನು ಸತ್ಪಾತ್ರರಲ್ಲಿ ವಿತರಣೆ ಮಾಡುವುದು ಶ್ರೇಷ್ಠ ಉಪಾಯ ಎಂಬ ತತ್ತ್ವ ಇದರಿಂದ ಸೂಚಿತ; ಅದರಂತೆ ಗುಣವಂತರು ಜ್ಞಾನಧನವನ್ನು ಯೋಗ್ಯರಿಗೆ ಉಪದೇಶಿಸುವುದು ಸಕಲ ತಾಪತ್ರಯಗಳ ಪರಿಹಾರಕ್ಕೆ ವಿಹಿತವಾದ ಅತ್ಯುತ್ತಮ ಉಪಾಯ ಎಂದು ತಿಳಿಯಬೇಕು.

### ಸಂಪತ್ತಿನಿಂದ ಕೀರ್ತಿ-ಶಸ್ತ್ರಾಸ್ತ್ರಗಳಿಂದ ಶೌರ್ಯ

**ವಿತ್ತೈಃ ಕೀರ್ತಿಂ ಶರ್ಯೈಃ ಶೌರ್ಯಂ ಪ್ರತ್ಯಹಂ ಯಃ ಸಮಾರ್ಜಯೇತ್ ।**
**ಸ ಏವ ಧನವಾನ್ ಸಮ್ರಾಡನ್ಯಂ ಮನ್ಯೇ ಹ್ಯಕಿಂಚನಮ್ ॥ ೫೫ ॥**

ಸಂಪತ್ತಿನಿಂದ ಕೀರ್ತಿಯನ್ನು , ಶಸ್ತ್ರಾಸ್ತ್ರಗಳಿಂದ ಶೌರ್ಯವನ್ನು ಅನುದಿನವೂ ಯಾವನು ಸಂಪಾದಿಸುವನೋ ಆ ರಾಜನೇ ಧನವಂತ; ಹಾಗಲ್ಲದವನನ್ನು ದರಿದ್ರನೆಂದೇ ಭಾವಿಸುವೆನು.

ವಿ. : ೧. [1]ಸಂಪತ್ತನ್ನು ದಾನಮಾಡುವುದರಿಂದ ಕೀರ್ತಿ ಲಭಿಸುವುದು. ಶಸ್ತ್ರಾಸ್ತ್ರಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುವುದರಿಂದ ಶೂರತನ ಬೆಳಕಿಗೆ ಬರುವುದು ; ಆದ್ದರಿಂದ ರಾಜನು ಯಥೇಚ್ಛವಾಗಿ ದಾನನೀಡುವುದನ್ನು ಶತ್ರುಗಳನ್ನು ನಿಗ್ರಹಿಸುವುದನ್ನು ತಪ್ಪದೆ ಮಾಡಲೇಬೇಕು ಎಂದರ್ಥ.

೨. ಸಂಪತ್ತನ್ನು ದಾನನೀಡುವ ಮೂಲಕ ನಿಜವಾದ ಅರ್ಥದಲ್ಲಿ ಶ್ರೀಮಂತ ಎನ್ನಿಸಿಕೊಳ್ಳಬೇಕು ಎಂದು ಭಾವ. ದಾನಧರ್ಮ ಮಾಡದ ರಾಜನು ಚಕ್ರವರ್ತಿಯಾಗಿದ್ದರೂ ಸಹ ದರಿದ್ರನೆಂದೇ ತಿಳಿಯಬೇಕು ಎಂದರ್ಥ.

### ಅಡಗಿಸಿಡುವ ಹಣ ಮಣ್ಣುಪಾಲೇ ಸರಿ

**ಅರ್ಥಿಭ್ಯೋಽರ್ಥಮನಾದಿಶ್ಯ ಯಸ್ತನ್ನಿಕ್ಷಿಪತಿ ಕ್ಷಿತೌ ।**
**ಮೃತ್ಸ್ನಾಂ ಸ್ವಯೋಗ್ಯಾಮಾದಾಯ ವಿತ್ತಂ ಭೂಮ್ಯೈ ಪ್ರದತ್ತವಾನ್ ॥ ೫೬ ॥**

ಬೇಡುವವರಿಗೆ ಹಣವನ್ನು ನೀಡದೆ ಯಾವನು ಅದನ್ನು ಭೂಮಿಯಲ್ಲಿ ಅಡಗಿಸಿಡುವನೋ ಅಂತಹವನು ತನಗೆ ಉಚಿತವಾದ ಮಣ್ಣನ್ನಷ್ಟೇ ತೆಗೆದುಕೊಂಡು ಧನವನ್ನು ಭೂಮಿಗೆ ನೀಡುವಂತಹವನೇ ಸರಿ.

ವಿ. : ೧. ಹಣವನ್ನು ಭೂಮಿಯಲ್ಲಿ ಬಚ್ಚಿಡುವುದು ಎಂದರೆ ಸಂಪತ್ತನ್ನು ಸದ್ವಿನಿಯೋಗ ಮಾಡದೆ ವ್ಯರ್ಥವಾಗಿ ಕೂಡಿಡುವುದು ಎಂದರ್ಥ. ಆ ರೀತಿ ಕೂಡಿಡುವುದು ಮಣ್ಣನ್ನು ಪಡೆದು ಸಂಪತ್ತನ್ನು ಭೂಮಿ ಪಾಲು ಮಾಡುವ ಅವಿವೇಕವೇ ಸರಿ ಎಂಬ ಭಾವ ಸೂಚಿತ.

೨. ಯಥಾಶಕ್ತಿ ಸತ್ಪಾತ್ರರಿಗೆ ದಾನಮಾಡದವರಿಗೆ [2]ಸೂಚೀಮುಖ ಎಂಬ ನರಕವು ಲಭಿಸುವ ವಿವರ ಶ್ರೀಮದ್ಭಾಗವತದಲ್ಲಿ ಬಂದಿದೆ[3].

---

೧. ಕೀರ್ತಿಪ್ರತಾಪಾವೇವ ರಾಜ್ಞೋ ಧನಮ್ । ನ ವಣಿಜಾಮಿವ ಧನಂ ಧನಮಿತಿ ಭಾವಃ । -ವ್ಯಾ.

೨. ಏತಾದೃಶಲುಬ್ಧಮುಖೇ ಧೂಲೀಪಾತೋ ಭವತೀತಿ ಭಾವಃ । -ವ್ಯಾ.

೩. ಯಸ್ತ್ವಿಹ ವಾ ಅರ್ಥಾಭಿಮತಿರಹಂಕೃತಿಃ ತಿರ್ಯಕ್ಪ್ರೇಕ್ಷಣಃ ಸರ್ವತಶ್ಶಂಕೀ ವ್ಯಯವಿನಾಶಚಿಂತಯಾ ಪರಿ- ಶುಷ್ಯಮಾಣಹೃದಯವದನೋ ನಿರ್ವೃತಿಮನುಪಗತೋ ಗ್ರಹ ಇವಾರ್ಥಮನುರಕ್ಷತಿ ಸ ಪಾಪೀ ಪ್ರೇತ್ಯ ತತ್ಸಂಪಾ-

ಭಕ್ತಿ, ಧರ್ಮಶ್ರದ್ಧೆ, ಭಾಗವತರಲ್ಲಿ ಗೌರವ ಇಲ್ಲದ ರಾಜ್ಯವು ಕಂಸನ ಸಂಸಾರವೆ ಸರಿ

ಸರ್ವೇಶೇ ಭುವಿ ಯಸ್ಯ ಭಕ್ತಿರಮಲಾ ನೈವೈತದಾಜ್ಞಾತ್ಮಕೇ
ಧರ್ಮೇ ವಾ ನ ರತಿಸ್ತದಾಶ್ರಿತಜನೇ ಸನ್ಮಾನಲೇಶೋಽಪಿ ವಾ ।
ದುಷ್ಟಪ್ರೀತಿರತಸ್ಯ ನಿಷ್ಠುರಗಿರೋ ದುರ್ಮಂತ್ರದತ್ತಶ್ರುತೇಃ
ಸಾಮ್ರಾಜ್ಯಂ ನಿಜವಂಶಪಾಂಸನಕೃತೇಃ ಕಂಸಸ್ಯ ಸಂಸಾರವತ್ ॥ ೫೭ ॥

ಭೂಮಿಯಲ್ಲಿ ಸರ್ವೇಶ್ವರನಾದ ಶ್ರೀಕೃಷ್ಣನಲ್ಲಿ ಯಾವನಿಗೆ ನಿರ್ಮಲವಾದ ಭಕ್ತಿ ಇರದೋ, ಅವನ ಆದೇಶ ರೂಪವಾದ ಧರ್ಮದಲ್ಲಿ ಆಸಕ್ತಿ ಇರದೋ, ಅವನನ್ನು ಆಶ್ರಯಿಸಿದ ಭಕ್ತಜನತೆಯಲ್ಲಿ ಲೇಶವಾದರೂ ಆದರವಿರದೋ, ಅಂತಹ ದುಷ್ಟರಲ್ಲಿ ಪ್ರೀತಿ ತೋರುವ ನಿಷ್ಠುರ ಮಾತಿನ, ಕೆಟ್ಟ ಆಲೋಚನೆಗಳಿಗೆ ಕಿವಿಗೊಡುವ, ರಾಜನಿಗೆ ಸಾಮ್ರಾಜ್ಯ ಲಭಿಸುವುದು ತನ್ನ ವಂಶವನ್ನು ಹಾಳುಮಾಡುವಂತಹ ಕಂಸನ ಸಂಸಾರದಂತೆ ಕುಲನಾಶಕ.

ವಿ. : ೧. ಶ್ರೀಕೃಷ್ಣನಲ್ಲಿ ಭಕ್ತಿ , ಅವನ ಆಜ್ಞಾರೂಪವಾದ ಧರ್ಮಾನುಷ್ಠಾನದಲ್ಲಿ ಆಸಕ್ತಿ, ಅವನ ಭಕ್ತಜನರಲ್ಲಿ ಆದರ, ದುರ್ಜನರ ಮೇಲೆ ದ್ವೇಷ, ಹಿತಮಿತವಾದ ಮಾತು, ಕೆಟ್ಟ ಜನರ ಮಾತಿಗೆ ಕಿವಿಗೊಡದಿರುವಿಕೆ, ಇವೆಲ್ಲ ಮೋಕ್ಷಕ್ಕೆ ಶ್ರೇಷ್ಠ ಸಾಧನಗಳು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಇದಕ್ಕೆ ವಿರುದ್ಧವಾಗಿ ಶ್ರೀಹರಿಯಲ್ಲಿ ದ್ವೇಷ, ಧರ್ಮದಲ್ಲಿ ಅನಾದರ, ಹರಿಭಕ್ತರಲ್ಲಿ ದ್ರೋಹ, ದುರ್ಜನರ ಮೇಲೆ ಪ್ರೀತಿ, ನಿಷ್ಠುರ ನುಡಿ ಹಾಗೂ ಕೆಟ್ಟ ಮಾತುಗಳಿಗೆ ಕಿವಿಗೊಡುವ ಸ್ವಭಾವ ಇವೆಲ್ಲ ಸಂಸಾರಕ್ಕೆ ಕಾರಣವಾಗುವ ಅಪಾಯಗಳು; ಕಂಸ ಇದಕ್ಕೆ ಉತ್ತಮ ನಿದರ್ಶನ ಎಂದು ತಿಳಿಯಬೇಕು; ಪಾಂಸನ – ನಾಶ.

೩.. ಈ ಶ್ಲೋಕದಲ್ಲಿನ ವಿವಿಧಗುಣಗಳನ್ನು ಮುಂದಿನ ಶ್ಲೋಕಗಳಲ್ಲಿ ಕ್ರಮವಾಗಿ ವಿವರಿಸಿರುವರು.

### ವಿಷ್ಣುಭಕ್ತಿಯ ಫಲ ಶ್ರೀಮಹಾಲಕ್ಷ್ಮಿಯ ಅನುಗ್ರಹ

ವಿಷ್ಣುಭಕ್ತಿರತಂ ಭೂಪಂ ನೈವ ತ್ಯಕ್ಷ್ಯತಿ ತತ್ಪ್ರಿಯಾ ।
ತದ್ದ್ವೇಷಿಣಿ ನ ಸಾ ಸ್ಥಾತುಮುತ್ಸಹತೇ ಪತಿವ್ರತಾ ॥ ೫೮ ॥

ವಿಷ್ಣುಭಕ್ತಿಯಲ್ಲಿ ದೀಕ್ಷಿತನಾಗುವ ರಾಜನನ್ನು ಪರಮಪತಿವ್ರತೆಯಾದ ವಿಷ್ಣುಪ್ರಿಯೆಯಾದ [೧]ಮಹಾಲಕ್ಷ್ಮಿಯು ಎಂದೂ ತೊರೆಯಳು; ವಿಷ್ಣುದ್ವೇಷಿಯಾದವನಲ್ಲಿ ಅವಳು ಎಂದೂ ನೆಲೆಸಲು ಬಯಸಳು.

---

ದನೋತ್ಕರ್ಷಣಸಂರಕ್ಷಣಶಮಲಗ್ರಹಃ ಸೂಚೀಮುಖೇ ನರಕೇ ನಿಪತತಿ ಯತ್ರ ಹ ವಿತ್ತಗ್ರಹಂ ಪಾಪಪುರುಷಂ ಧರ್ಮರಾಜಪುರುಷಾ ವಾಯಕಾ ಇವ ಸರ್ವತೋಽಂಗೇಷು ಸೂತ್ರೈಃ ಪರಿವಯಂತಿ ॥ -ಭಾಗ.(೫/೨೪/೩.೮)

೧. ಪತಿವ್ರತಾ ನಾರೀ ಸ್ವಭರ್ತೃದ್ವೇಷಿನಿಕಟೇ ನ ತಿಷ್ಠತೀತಿ ಲೋಕಸಿದ್ಧಮಿತಿ ಭಾವಃ । -ವ್ಯಾ.

ವಿ. : ೧. ವಿಷ್ಣುಭಕ್ತರಲ್ಲಿ ಸ್ಥಿರವಾದ ಸಂಪತ್ತು ನೆಲೆಸುವುದು; ಹರಿದ್ವೇಷಿಗಳಲ್ಲಿ ನಿಜವಾದ ಸಂಪತ್ತು ಎಂದೂ ಇರದು ಎಂಬುದು ಇಲ್ಲಿಯ ಭಾವ.

೨. ಹಾಗೆ ವಿಷ್ಣುಭಕ್ತರಲ್ಲಿ ನೆಲೆಸಲು, ವಿಷ್ಣುದ್ವೇಷಿಗಳನ್ನು ತೊರೆಯಲು, ಮಹಾಲಕ್ಷ್ಮಿಯು ಪರಮಪತಿವ್ರತೆಯಾಗಿರುವುದೇ ಕಾರಣ ಎಂಬುದು ವಿಶೇಷ.

೩. [೧]ತನ್ನಲ್ಲಿ ಭಕ್ತಿಯನ್ನು ಮಾಡಿದರೂ, ಅವಳ ಪತಿಯಾದ ನಾರಾಯಣನಲ್ಲಿ ದ್ವೇಷ-ಮಾಡುವವರ ಬಳಿಗೆ ಮಹಾಲಕ್ಷ್ಮಿಯು ಬರಲಾರಳು ಎಂಬುದನ್ನು ಭಗವದ್ಗೀತೆಯ ೧೨ನೆಯ ಅಧ್ಯಾಯ ಹಾಗೂ ಅದರಿಂದ ರಚಿತವಾಗಿರುವ ಮಧ್ವಭಾಷ್ಯ ಹಾಗೂ ತಾತ್ಪರ್ಯನಿರ್ಣಯ-ಗಳಲ್ಲಿ ವಿವರವಾಗಿ ಪ್ರತಿಪಾದಿತವಾಗಿದೆ. ತನ್ನನ್ನು ಆರಾಧಿಸಿಯೂ ಹರಿಯನ್ನು ಆರಾಧಿಸದವರನ್ನು ಮಹಾಲಕ್ಷ್ಮಿಯು ಸ್ವತಃ ದ್ವೇಷಿಸುವಳು ಎಂಬ ವಿಶೇಷಾಂಶವೂ ಅಲ್ಲಿದೆ[೨].

## ಧರ್ಮತೊರೆದವನನ್ನು ಯಮಧರ್ಮ ತೊರೆಯನು

[೩]ಧರ್ಮದ್ವಿತೀಯಂ ನೃಪತಿಂ ಧರ್ಮೋಽನ್ಯೋ ನೈವ ಪೀಡಯೇತ್ ।
ಅನ್ಯಥಾಽಪ್ರತಿಮಲ್ಲೋಽಸೌ ಸಾನ್ವಯಂ ಸಂಹರಿಷ್ಯತಿ ॥ ೫೯ ॥

ಧರ್ಮದ ಸಹಾಯ ಪಡೆಯುವ ರಾಜನನ್ನು ಯಮಧರ್ಮನು ಸರ್ವಥಾ ಪೀಡಿಸನು. ತಪ್ಪಿ ನಡೆಯುವವನನ್ನು ಎದುರಾಳಿಯೇ ಇಲ್ಲದ ಅವನು ವಂಶ ಸಮೇತ ನಾಶಗೈಯ್ಯುವನು.

ವಿ. : ೧. [೪]**ಅನ್ಯಧರ್ಮ** - ಯಮಧರ್ಮ ; **ಅಪ್ರತಿಮಲ್ಲ** - ಎದುರಾಳಿ ಇಲ್ಲದವನು.

೨. ಇದು **ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ** (ಭಾರತ, ವನಪರ್ವ ೩೧೪/೧೨೮) ಎಂಬ ಶಾಸ್ತ್ರವಚನದ ವಿವರಣೆ.

---

೧. ಅನೇನ "ಸರ್ವೇಶೇ ಭುವಿ ಯಸ್ಯ ಭಕ್ತಿರಮಲಾ" ಇತಿ ಪೂರ್ವಪದ್ಯೋಕ್ತವಿಷ್ಣುಭಕ್ತೇರಾವಶ್ಯಕತ್ವಮುಪಪಾದಿ- ತಮ್ । -ವ್ಯಾ.

೨. ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ -ಗೀತಾ (೧೨/೫)
ಕ್ಲೇಶೋಽಧಿಕತರಸ್ತೇಷಾಂ ಪೃಥಕ್ ಶ್ರಿಯಮುಪಾಸತಾಮ್ । - ಗೀತಾಭಾಷ್ಯ (೧೨/೫)
ಧರ್ಮನಿತ್ಯೇ ಮಹಾಬುದ್ಧೌ ಬ್ರಹ್ಮಣ್ಯೇ ಸತ್ಯವಾದಿನಿ ।
ಪ್ರಶ್ರಿತೇ ದಾನಶೀಲೇ ಚ ಸದೈವ ನಿವಸಾಮ್ಯಹಮ್ ॥ -ಮೋಕ್ಷಧರ್ಮ (ಮ.ಭಾ.೨೨೮/೨೭)
ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಾಂ ವ್ರಜೇತ್ ॥ -ಪರಮಶ್ರುತಿ (ಗೀತಾತಾತ್ಪರ್ಯ,೧೨/೩.)

೩. ಅನ್ಯಥಾ ವೈಷ್ಣವಧರ್ಮಸಹಾಯಾಭಾವೇಽಪ್ರತಿಮಲ್ಲಃ ಸ್ವಭೀಷಕವೈಷ್ಣವಧರ್ಮಾಖ್ಯಪ್ರತಿಭಟರಹಿತಃ ಅಸೌ ಯಮಃ ಸಾನ್ವಯಂ ಸಕುಲಂ ನೃಪತಿಂ ಸಂಹರಿಷ್ಯತಿ । ಅನೇನ ಪ್ರಾಕ್ತನಪದ್ಯೋಕ್ತಧರ್ಮರತೇರಾವಶ್ಯಕತ್ವಮು-ಪಪಾದಿತಮ್ । -ವ್ಯಾ.

೪. ಮಹಾಮಲ್ಲೇ ಸ್ವಸಮೀಪವರ್ತಿನಿ ಸತಿ ಯಥಾ ನ ಮಲ್ಲಾಂತರಾದ್ಭಯಮ್ । ತಥಾ ಸಕಲಪಾಪಪರಿಹಾರಕವೈಷ್ಣವ ಧರ್ಮೋಪೇತಸ್ಯ ನ ಯಮಾಖ್ಯಧರ್ಮಾತ್ ಭಯಮಿತಿ ಭಾವಃ । -ವ್ಯಾ.

**ವೈಷ್ಣವನಿಂದೆಯು ಸಂಪನ್ನಾಶಕ**

**ವಿಷ್ಣೋರರ್ಭಕಸಂಕಾಶಾನ್ ವೈಷ್ಣವಾನ್ ಯಸ್ತು ನಿಂದತಿ ।**
**ತತ್ರಾಪಿ ನ ಸ್ಥಿರಾ ಶ್ರೀಃ ಸ್ಯಾತ್ ಪುತ್ರದ್ವೇಷಿಣಿ ಮಾತೃವತ್ ॥ ೬೦ ॥**

ವಿಷ್ಣುವಿನ ಮಕ್ಕಳಂತಹ ವೈಷ್ಣವರನ್ನು ಯಾವನು ನಿಂದಿಸುವನೋ ಅಂತಹವನಲ್ಲೂ ಸಹ ಮಹಾ-ಲಕ್ಷ್ಮಿಯು ನೆಲೆಸಲಾರಳು; ಪುತ್ರರನ್ನು ದ್ವೇಷಿಸುವವರ ಬಳಿ ತಾಯಿ ಹೇಗೆ ನೆಲೆಸಳೋ ಹಾಗೆ.

ವಿ. : ೧. [೧]ಮಹಾವಿಷ್ಣುವು ಮಹಾಲಕ್ಷ್ಮಿಗೆ ಪತಿಯಾದರೆ ವಿಷ್ಣುಭಕ್ತರೆಲ್ಲಾ ಅವರ ಮಕ್ಕಳಿದ್ದಂತೆ. ಆದ್ದರಿಂದಲೇ ವೈಷ್ಣವರ ದ್ವೇಷ ಎಂಬುದು ಲಕ್ಷ್ಮೀನಾರಾಯಣರ ಪುತ್ರರ ದ್ವೇಷದಂತೆ ಅಪಾಯಕರ ಎಂಬುದು ಇಲ್ಲಿಯ ಭಾವ ; ಅರ್ಭಕ – ಶಿಶು.

೨. ಇದು ಈ ಕೆಳಗಿನ ಶ್ಲೋಕಗಳ ವಿವರಣೆಯಂತಿದೆ :

ಹರಿರೇವ ಜಗತ್ಪಿತೃಮಾತೃಗತಿಃ –(ದ್ವಾದಶಸ್ತೋತ್ರ)
ಮಾತಾ ಚ ಕಮಲಾ ದೇವೀ ಪಿತಾ ದೇವೋ ಜನಾರ್ದನಃ ।
ಬಾಂಧವಾ ವಿಷ್ಣುಭಕ್ತಾಶ್ಚ ಸ್ವದೇಶೋ ಭುವನತ್ರಯಮ್ ॥

**ದುರ್ಜನರ ಸಂಗ ಮಾರಕ**

**ದುಷ್ಟಪ್ರೀತಿರತಂ ಭೂಪಂ ದೋಷೋऽಪಿ ಸ್ಪೃಶತಿ ಕ್ರಮಾತ್ ।**
**ದೋಷಿಣಂ ಗುಣಲುಬ್ಧಾ ಶ್ರೀರ್ನಾಶ್ರಯೇದಿತಿ ಮೇ ಮತಿಃ ॥ ೬೧ ॥**

ದುಷ್ಟರಲ್ಲಿ ಸ್ನೇಹ ಹೊಂದುವ ರಾಜನನ್ನು ಕ್ರಮವಾಗಿ ದೋಷ ಆವರಿಸುವುದು; ಗುಣವನ್ನು ಮೆಚ್ಚುವ ಮಹಾಲಕ್ಷ್ಮಿಯು ದೋಷಿಯನ್ನು ಆಶ್ರಯಿಸಳು ಎಂದು ನನ್ನ ಮತಿ.

ವಿ. : ೧. [೨]ಮಹಾಲಕ್ಷ್ಮಿಯು ಬ್ರಹ್ಮಾದಿ ದೇವತೆಗಳಿಗಿಂತ ಮಿಗಿಲಾದ ಗುಣವತಿ. ಆದರಿಂದಾಗಿ ಅವಳು ಮೆಚ್ಚುವುದು ಗುಣವಂತರನ್ನೇ ಹೊರತು ದೋಷಿಗಳನ್ನಲ್ಲ. ದುರ್ಜನರ ಸಹವಾಸ ಮಾಡುವವರೂ ಸಹ ದೋಷಿಗಳೇ ಆದ್ದರಿಂದ ಮಹಾಲಕ್ಷ್ಮಿಯು ಅವರಲ್ಲಿ ನೆಲೆಸಳು ಎಂದರ್ಥ.

೨. ಮಹಾಲಕ್ಷ್ಮಿಯು ಹೀಗೆ ಗುಣವನ್ನು ಮೆಚ್ಚುವವಳಾದ್ದರಿಂದಲೇ ಅನಂತಕಲ್ಯಾಣಗುಣಪರಿಪೂರ್ಣನಾದ್ದರಿಂದ ಶ್ರೀಮನ್ನಾರಾಯಣನ ಪತ್ನಿಯಾಗಿರುವಳು ಎಂಬ ಭಾವವು ಇಲ್ಲಿ ಸೂಚಿತ. ಶ್ರೀಮದ್ಭಾಗವತದ ಅಷ್ಟಮಸ್ಕಂಧದಲ್ಲಿನ ಲಕ್ಷ್ಮೀಸ್ವಯಂವರದ ಪ್ರಸಂಗ ಇದಕ್ಕೆ ಉತ್ತಮ ನಿದರ್ಶನ[೩].

---

೧. ವಿಷ್ಣ್ವರ್ಭಕಸಮಾನಾನಾಂ ತೇಷಾಂ ವಿಷ್ಣುಪತ್ನ್ಯಾ ಲಕ್ಷ್ಮ್ಯಾ ಅಪಿ ಪುತ್ರಸಮತ್ವಾದಿತಿ ಭಾವಃ । ಅನೇನ ಪೂರ್ವೋಕ್ತ ವೈಷ್ಣವಸಮ್ಮಾನಃ ಸಮರ್ಥಿತೋ ಭವತಿ । –ವ್ಯಾ.

೨. ಅನೇನ ಪ್ರಾಗುಕ್ತದುರ್ಜನಸಂಸರ್ಗದೋಷಸ್ಯ ಹೇಯತ್ವಮುಪಪಾದಿತಮ್ । –ವ್ಯಾ.

೩. ವಿಲೋಕಯಂತೀ ನಿರವದ್ಯಮಾತ್ಮನಃ ಪದಂ ಧ್ರುವಂ ಚಾವ್ಯಭಿಚಾರಿಸದ್ಗುಣಮ್ ।
ಗಂಧರ್ವಯಕ್ಷಾಸುರಸಿದ್ಧಚಾರಣತ್ರೈವಿಷ್ಟಪೇಯಾದಿಷು ನಾನ್ವವಿಂದತ ॥

### ಮೃದುವಾದ ಮಾತು ಸಹ ಸಂಪತ್ತಿಗೆ ಆಗತ್ಯ

**ಕಠೋರಗಿರಮುತ್ಸೃಜ್ಯ ವೃಣೋತ್ಯಪರಮಿಂದಿರಾ ।**
**ಘನಂ ಪುರೋಗ್ರಸ್ತನಿತಾದ್ವಿಹಾಯೇವ ತಟಿದ್ದಿಶಃ ॥ ೬೨ ॥**

ಕಠಿನಮಾತಿನವನನ್ನು ತೊರೆದು ಮೃದು ಮಾತಿನವನಿಗೆ ಮಹಾಲಕ್ಷ್ಮಿಯು ಒಲಿಯುವಳು; ಉಗ್ರವಾದ ಸಿಡಿಲಿಗಿಂತ ಮುಂಚೆ ಮಿಂಚು ಮೋಡವನ್ನು ಬಿಟ್ಟು ದಿಕ್ಕುಗಳಲ್ಲಿ ಪಸರಿಸುವಂತೆ.

ವಿ. : ೧. ಮೋಡದ ಗುಡುಗಿಗಿಂತ ಮುನ್ನವೇ ಮಿಂಚು ಹೊಳೆಯುವುದು ಲೋಕ ಸಿದ್ಧ. ಅದನ್ನು ಆಧರಿಸಿದ ನಿದರ್ಶನ ಇದಾಗಿದೆ.

೨. [1]ಗುಡುಗುವ ಮೋಡವನ್ನು ತೊರೆದು ಇತರ ಕಡೆ ಮಿಂಚು ಕಾಣಿಸಿಕೊಳ್ಳುವಂತೆ ನಿಷ್ಠುರ ನುಡಿಯ ಜನಗಳನ್ನು ತೊರೆದು ಮಹಾಲಕ್ಷ್ಮಿಯು ಮೃದುಮಾತಿನ ಜನರನ್ನು ಅನುಗ್ರಹಿಸುವಳು ಎಂದರ್ಥ.

೩. ಶ್ರೀಮನ್ಮಹಾಭಾರತದ ವಿದುರನೀತಿಯಲ್ಲಿನ ಈ ಮಾತು ಸಹ ಗಮನಾರ್ಹ :

ಅಭ್ಯಾವಹತಿ ಕಲ್ಯಾಣಂ ವಿವಿಧಂ ವಾಕ್ ಸುಭಾಷಿತಾ ।
ಸೈವ ದುರ್ಭಾಷಿತಾ ರಾಜನ್ನನರ್ಥಾಯೋಪಪದ್ಯತೇ ॥ - (೫/೩೪/೭೮)

೪. ಈ ಕೆಳಗಿನ ಸುಭಾಷಿತ ಇಲ್ಲಿ ಗಮನಾರ್ಹವಾಗಿದೆ :

ಲಕ್ಷ್ಮೀರ್ವಸತಿ ಜಿಹ್ವಾಗ್ರೇ ಜಿಹ್ವಾಗ್ರೇ ಮಿತ್ರಬಾಂಧವಾಃ ।
ಜಿಹ್ವಾಗ್ರೇ ಬಂಧನಂ ಪ್ರಾಪ್ತಂ ಜಿಹ್ವಾಗ್ರೇ ಮರಣಂ ಧ್ರುವಮ್ ॥

### ಕೆಟ್ಟ ಮಂತ್ರಾಲೋಚನೆಯು ಆತ್ಮಘಾತಕ

**ಸನ್ಮಂತ್ರಶೀರ್ಣೋ ದುರ್ಮಂತ್ರಃ ಪ್ರಯೋಕ್ತಾರಂ ಕ್ಷಿಣೋತಿ ಹಿ[2] ।**
**ಯಥಾ ನೃಸಿಂಹಸೂರ್ಯಾಗ್ರೇ ಬೈರವಃ ಕೈರವದ್ಯುತಿಃ ॥ ೬೩ ॥**

---

ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್ ।
ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ ॥
ಧರ್ಮಃ ಕ್ವಚಿತ್ ತಸ್ಯ ನ ಭೂತಸೌಹೃದಂ ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಮ್ ।
ವೀರ್ಯಂ ನ ಪುಂಸೋಽಸ್ತ್ಯಜವೇಗನಿಷ್ಕೃತಂ ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥
ಕ್ವಚಿಚ್ಚಿರಾಯುರ್ನ ಹಿ ಶೀಲಮಂಗಲಂ ಕ್ವಚಿತ್ ತದಪ್ಯಸ್ತಿ ನ ವೇದ್ಯಮಾಯುಷಃ ।
ಯತ್ರೋಭಯಂ ಕುತ್ರ ಚ ಸೋಽಪ್ಯಮಂಗಲಃ ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಮ್ ॥
ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ ಪರಂ ನಿಜೈಕಾಶ್ರಯಿಸದ್ಗುಣಾಶ್ರಯಮ್ ।
ವವ್ರೇ ವರಂ ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ॥-ಭಾಗ.(೮/೮/೧೮-೨೨)

೧. ಅನೇನ ಪೂರ್ವೋಕ್ತನಿಷ್ಠುರವಚನಸ್ಯ ಹೇಯತ್ವಮುಪಪಾದಿತಮ್ । -ವ್ಯಾ.

೨. ಕೋ ನಾಮ ಸತ್ಸು ವಿಷಮಃ ಪ್ರಭವೇತ್ ಸುಖಾಯ । -ಮ.ಭಾ.ತಾ.ನಿ. (೧೯/೪೫)

ಉತ್ತಮ ಮಂತ್ರಾಲೋಚನೆಗೆ ನಶಿಸುವ ಕೆಟ್ಟ ಮಂತ್ರಾಲೋಚನೆಯು, ಅದನ್ನು ಪ್ರಯೋಗಿಸುವವನನ್ನು ಸರ್ವಥಾ ನಾಶಮಾಡುವುದು; ನರಸಿಂಹನೆಂಬ ಸೂರ್ಯನ ಮುಂದೆ ಭೈರವಮಂತ್ರವು ನೈದಿಲೆಯ ಕಾಂತಿಯನ್ನು ಹೊಂದುವಂತೆ.

ವಿ. : ೧. [೧]ನರಸಿಂಹಮಂತ್ರ ವೈಷ್ಣವಮಂತ್ರಗಳಲ್ಲಿ ವಿಶಿಷ್ಟವೆನ್ನಿಸಿರುವ ಮಂತ್ರ. ಆ ಮಂತ್ರದ ಮುಂದೆ ವಾಮಾಚಾರದ ಭೈರವಮಂತ್ರ ಮೊದಲಾದವು ವ್ಯರ್ಥವೆನ್ನಿಸಿ, ಪ್ರಯೋಗಿಸಿದವರನ್ನೇ ನಾಶಮಾಡುವುದು ಎಂಬ ವಿಶೇಷಾಂಶ ಇಲ್ಲಿದೆ.

೨. ಹಿರಣ್ಯಕಶಿಪುವಿನ ಎಲ್ಲ ಬಗೆಯ ಉಪಾಯಗಳು ನರಸಿಂಹದೇವರ ಮುಂದೆ ವಿಫಲವೆನ್ನಿಸಿರುವಂತೆ ಭಗವಂತನಿಗೆ ವಿರುದ್ಧವಾದ ಸಕಲ ಕೆಟ್ಟ ಮಂತ್ರಗಳು ಪ್ರಯೋಗಿಸಿದವರನ್ನೇ ನಾಶಮಾಡುವುದು ಖಚಿತ ಎಂದರ್ಥ.

೩. 'ಕೈರವ' ಎಂದರೆ ನೀಲಕಮಲ. ಚಂದ್ರನ ಬೆಳಕಿಗೆ ಅರಳುವ ಅದು, ಸೂರ್ಯನ ಬೆಳಕಿಗೆ ಮುದುಡುವುದು. ಅದರಂತೆ ನರಸಿಂಹಮಂತ್ರದ ಮುಂದೆ ಭೈರವಮಂತ್ರವು ಸೂರ್ಯನ ಮುಂದೆ ನೀಲಕಮಲದಂತೆ ವಿಫಲವಾಗುವುದು ಎಂದರ್ಥ.

೪. ವಾಮಾಚಾರಕ್ಕೂ ಸದಾಚಾರಕ್ಕೂ ಇರುವ ವ್ಯತ್ಯಾಸವೆಂದರೆ ಇದೇ; ಸದಾಚಾರ ತಾರಕವಾದರೆ ವಾಮಾಚಾರವು ಮಾರಕ.

### ಪ್ರಜೆಗಳ ಮೆಚ್ಚುಗೆ ರಾಜನಿಗೆ ಕಲ್ಯಾಣಕರ

**ಪ್ರಜಾ ಯಂ ನ ಪ್ರಶಂಸಂತಿ ನ ಸ್ತುತಶ್ಚಾರ್ಥಿಭಿಶ್ಚ ಯಃ।**
**ವಿಷಯಾಸಕ್ತಕುಮತೇರ್ನ ಸುಖಂ ತಸ್ಯ ಭೂಪತೇಃ ॥ ೬೪ ॥**

ಪ್ರಜೆಗಳು ಯಾರನ್ನು ಶ್ಲಾಘಿಸಲಾರರೋ ಯಾವನನ್ನು ಅರ್ಥಿಗಳು ಕೊಂಡಾಡಲಾರರೋ ಅಂತಹ ವಿಷಯಾಸಕ್ತನಾದ ಕೇಡುಬುದ್ಧಿಯ ಆ ರಾಜನಿಗೆ ನೆಮ್ಮದಿ ಇರದು.

ವಿ. : ಪ್ರಜೆಗಳು ಮೆಚ್ಚುವುದು, ಅರ್ಥಿಗಳು ಕೊಂಡಾಡುವುದು ರಾಜನ ಯಶಸ್ಸಿನ ಸಂಕೇತ ಎಂದರ್ಥ.

### ಪ್ರಜಾಪೀಡನೆಯು ಅನರ್ಥಕರ

**ಪ್ರಜಾನಾಂ ಪೀಡನಂ ಕೃತ್ವಾ ಯೋ ಲುಬ್ಧೋ ಧನಮಾರ್ಜಯೇತ್।**
**ವಿಕ್ರೀಯ ಸ್ವಸುತಾನೇವ ಸ ವೈ ಸಂಚಿನುತೇ ವಸು ॥ ೬೫ ॥**

---

೧. ಭೈರವಃ ಭೈರವಮಂತ್ರಃ ಯಥಾ ಸ್ವಪ್ರಯೋಕ್ತಾರಮೇವ ನಾಶಯತಿ ತಥೇತ್ಯರ್ಥಃ । ಮಹಾಮಂತ್ರಜ್ಞೇಷು ಪ್ರಯುಕ್ತಾ ಕೃತ್ಯಾ ಪರಾವೃತ್ಯ ಪ್ರಯೋಕ್ತೃಘಾತಿನೀತಿ ಕಾಶಿರಾಜಪುತ್ರಸುದಕ್ಷಿಣಾದೌ ಪ್ರಸಿದ್ಧಮ್ । ಅನೇನ ಪೂರ್ವೋಕ್ತದುರ್ಮಂತ್ರಶ್ರವಣಸ್ಯಾನರ್ಥಹೇತುತ್ವಮುಕ್ತಂ ಭವತಿ। -ವ್ಯಾ.

ಪ್ರಜೆಗಳಿಗೆ ಪೀಡೆಯನ್ನುಂಟುಮಾಡಿ ದುರಾಸೆಯ ಯಾವ ರಾಜನು ಧನವನ್ನು ಸಂಪಾದಿಸುವನೋ ಅಂತಹವನು ತನ್ನ ಮಕ್ಕಳನ್ನೇ ಮಾರಾಟ ಮಾಡಿ ದ್ರವ್ಯವನ್ನು ಗಳಿಸುವಂತಹ ನೀಚನೇ ಸರಿ.

ವಿ. : ೧. [೧]ಪ್ರಜೆಗಳ ಸುಖವು ಯಾವುದೇ ಸಂಪತ್ತಿಗಿಂತ ಮಿಗಿಲು ಎಂಬುದು ಇಲ್ಲಿಯ ಭಾವ. ಸಂಪತ್ತಿಗಾಗಿ ಪ್ರಜೆಗಳನ್ನು ಪೀಡಿಸುವುದು ಸ್ವಂತಮಕ್ಕಳನ್ನೇ ಮಾರಿ ಧನ ಸಂಪಾದಿಸು-ವಂತಹ ಕೀಳುಪ್ರವೃತ್ತಿ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಪ್ರಜೆಗಳ ಪಾಲಿಗೆ ರಾಜ ಸ್ವತಃ ತಂದೆ ಇದ್ದಂತೆ ಎಂಬ ಇಲ್ಲಿ ಭಾವ ಮಾರ್ಮಿಕವಾದುದು.

**ಪ್ರಜಾರಂಜಕನಿಗೆ ಸಂತತಿ – ಪ್ರಜಾಪೀಡಕನಿಗೆ ಸಂತತಿಹೀನತೆ**

**ಪ್ರಜಾಪರಂಪರಾಮೇತಿ ಪ್ರಜಾರಂಜನಕೃನ್ನೃಪಃ ।**
**ಪೀಡಿತಾ ಸಾ ಸನಾಮ್ನೀಂ ತಾಂ ನೋತ್ಪಾದಯತಿ ತತ್ಕುಲೇ ॥ ೬೬ ॥**

ಪ್ರಜೆಗಳಿಗೆ ಸಂತೋಷವುಂಟುಮಾಡುವ ರಾಜನು ಪುತ್ರಪೌತ್ರಾದಿ ರೂಪವಾದ ಸಂತಾನ ಪರಂಪರೆಯನ್ನೇ ಹೊಂದುವನು; ಪ್ರಜೆಗಳ ಪೀಡನೆಯು ಅದೇ ಹೆಸರನ್ನು ಹೊಂದಿರುವ ಪ್ರಜೆ(ಸಂತತಿ)ಯನ್ನು ಅವನ ವಂಶದಲ್ಲಿ ಹುಟ್ಟಿಸಲಾರದು.

ವಿ. : ೧. ಪ್ರಜೆಗಳ ಹಿತಬಯಸುವ ರಾಜನಿಗೆ ಸತ್ಸಂತತಿಯು ಲಭಿಸಿ ನಿರಂತರ ಅವನ ವಂಶ ಬೆಳೆಯುವುದು ಎಂದರ್ಥ.

೨. [೨]ಪ್ರಜಾಪೀಡಕನಾದ ರಾಜನು ಸಂತತಿ ಹೀನನಾಗಿ, ನಾಶಹೊಂದುವನು ಎಂದೂ ಭಾವ; ಪ್ರಜಾಪೀಡಕರಾದ ದುರ್ಯೋಧನಾದಿ ಕುಪುತ್ರರನ್ನು ಪಡೆದ ಧೃತರಾಷ್ಟ್ರನ ವಂಶ ನಿರ್ವಂಶವಾದದ್ದು ಇದಕ್ಕೆ ಶ್ರೇಷ್ಠ ನಿದರ್ಶನ ಎಂದು ತಿಳಿಯಬಹುದು. ಪ್ರಜಾ – ಪ್ರಜೆಗಳು ಹಾಗೂ ಸಂತತಿ ಎಂಬ ಎರಡು ಅರ್ಥಗಳು ವಿವಕ್ಷಿತ.

೩. ಇದು ರಾಮಾಯಣದಲ್ಲಿನ ಹನುಮಂತನ ವಚನದ ವಿವರಣೆಯಂತಿದೆ :

ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ[೩] ।

೪. ಇದು ಇದೇ ಸರ್ಗದ ೫೭ನೆಯ ಶ್ಲೋಕದ 'ಕಂಸಸ್ಯ ಸಂಸಾರವತ್' ಎಂಬ ಮಾತಿಗೆ ವಿವರಣೆಯಂತಿದೆ.

---

೧. 'ಪ್ರಜಾ ಸ್ಯಾತ್ ಸಂತತೌ ಜನೇ' ಇತ್ಯಭಿಧಾನಾತ್ಸುತೋಪಮಾತ್ವಮಿತಿ ಭಾವಃ। –ವ್ಯಾ.

೨. ಯಥಾ ನಿಷ್ಕಾಸಿತೋ ಯಾಚಕಃ ಸ್ವನಿಷ್ಕಾಸಪ್ರಕಾರದರ್ಶನೇನ ಯಾಚಕಾಂತರಂ ನಿವರ್ತಯತಿ ತಥಾ ಪೀಡಿತೋ ಪ್ರಜಾ ಪ್ರಜಾಂತರಮಪಿ ನಿವರ್ತಯತೀತಿ ಭಾವಃ। –ವ್ಯಾ.

೩.. ಮ.ಭಾ.ತಾ.ನಿ.(೭/೩೯)

### ಅತಿಥಿಯನ್ನು ತೊರೆದವನಿಗೆ ತಿಥಿಯೇ ಗತಿ

ಅಪೂಜಿತೋಽತಿಥಿಃ ಸ್ವೀಯಮತಿಥಿತ್ವಮಪಾರ್ಥಕಮ್ ।
ಸಮರ್ಪಯತಿ ತತ್ತಿಥ್ಯಾಮಪೂಜ್ಯತ್ವಮಿವಾರ್ಪಯನ್ ॥ ೬೭ ॥

ಉಚಿತ ರೀತಿಯಲ್ಲಿ ಸತ್ಕರಿಸಲ್ಪಡದ ಅತಿಥಿಯು ತನ್ನ ಅರ್ಥಕಳೆದುಕೊಳ್ಳುವ ಅತಿಥಿತ್ವವನ್ನು ತನಗೆ ಅವಮಾನ ಮಾಡಿದವನ ತಿಥಿಯಂದು ಅಪೂಜ್ಯತ್ವವನ್ನು ಎಂಬಂತೆ ನೀಡುವನು.

ವಿ. : ೧. [೧]‘ಅತಿಥಿ’ ಎಂದರೆ ಆಹ್ವಾನವಿಲ್ಲದೆ ಆಗಮಿಸುವವನು; ಎಂದರೆ, ಅನಾಹೂತರಾಗಿ ಆಗಮಿಸುವವನು ಎಂದರ್ಥ.

೨. ಅತಿಥಿಗಳನ್ನು ಆದರಿಸದಿದ್ದಲ್ಲಿ ದೇವತೆಗಳು ಮಾತ್ರವಲ್ಲದೆ ಪಿತೃದೇವತೆಗಳು ಸಹ ಕೆರಳುವರು; ಎಂದರೆ, ಅತಿಥಿ ಸತ್ಕಾರವನ್ನು ಮಾಡದವನ ತಿಥಿಗಳೆಲ್ಲ ಸತ್ಕಾರ್ಯಗಳಿಂದ ರಹಿತವಾಗಿ ವ್ಯರ್ಥವಾಗಿ ಬಿಡುವವು ಎಂದರ್ಥ.

### ವಿಷಯಗಳು ವಿಷಸದೃಶ

ವಿಷಯೇಷೂಪಭುಕ್ತೇಷು ತೃತೀಯೋಂಽಶೋಽಸ್ಯ ಜೀರ್ಯತೇ ।
ಶಿಷ್ಟಂ ತು ವಿಷಸಾರೂಪ್ಯಾತ್ ಕಷ್ಟಾಯ ಪರಿಕಲ್ಪ್ಯತೇ ॥ ೬೮ ॥

ವಿಷಯಗಳು ಭೋಗಿಸಲ್ಪಡುತ್ತಿದ್ದಂತೆ ಅದರ ಮೂರನೆಯ ಭಾಗವು ಇಲ್ಲವಾಗುವುದು; ಉಳಿದದ್ದಾದರೋ ವಿಷಕ್ಕೆ ಸಾರೂಪ್ಯವನ್ನು ಹೊಂದಿದ್ದಾಗಿ ಅವನ ಕ್ಲೇಶಕ್ಕೆ ಕಾರಣವಾಗುವುದು.

ವಿ. : ೧. ವಿಷಯ ಎಂಬ ಪದದಲ್ಲಿನ ಮೂರು ಅಕ್ಷರಗಳಲ್ಲಿ ಕೇವಲ ಭೌತಿಕ ಸುಖವನ್ನು ಅನುಭವಿಸುವವನಿಗೆ ಕೊನೆಯ ಅಕ್ಷರವು ಇಲ್ಲದಂತಾಗಿ ಮೊದಲ ಎರಡು ಅಕ್ಷರಗಳು ಎಂದರೆ ವಿಷ ಎಂಬುದು ಮಾತ್ರವೇ [೨]ಉಳಿದುಕೊಳ್ಳುವುದು. ಅದರಿಂದಾಗಿ ಅವನು ಕ್ಲೇಶಕ್ಕೊಳಗಾಗುವನು ಎಂದರ್ಥ.

೨. ಈ ಕೆಳಗಿನ ಸುಭಾಷಿತ ಇದರ ಭಾವದಂತಿದೆ :

ವಿಷಸ್ಯ ವಿಷಯಾಣಾಂ ಚ ದೂರಮತ್ಯಂತಮಂತರಮ್ ।
ಉಪಭುಕ್ತಂ ವಿಷಂ ಹಂತಿ ವಿಷಯಾಃ ಸ್ಮರಣಾದಪಿ ॥

### ರಾಜನೀತಿಯ ಉಪಸಂಹಾರ

ಇತ್ಯಾದ್ಯಮಾತ್ಯವರ್ಗೋಕ್ತನೀತ್ಯಾ ಪೃಥ್ವೀಂ ಸ ಪಾಲಯನ್ ।
ಭಕ್ತಿಂ ಮುಕುಂದೇ ಬಿಭ್ರಾಣಸ್ತತ್ಯಾಜ ವಿಷಯಸ್ಪೃಹಾಮ್ ॥ ೬೯ ॥

---

೧. ತಿಥಯೋಽತಿಥಯಃ ವ್ಯರ್ಥತಿಥಯ ಇತ್ಯಪೂಜಿತಾತಿಥೇರ್ಮರ್ತ್ಯಸ್ಯ ತಿಥೀನಾಮತಿಥಿತ್ವಂ ದದ್ಯಾದಿತಿ ಭಾವಃ। –ವ್ಯಾ.

೨. ಅವಶಿಷ್ಟವರ್ಣದ್ವಯಸ್ಯ ವಿಷವಾಚಕತ್ವಾದ್ವಿಷಸಾರೂಪ್ಯಮಿತಿ ಭಾವಃ। –ವ್ಯಾ.

ಇದೇ ಮೊದಲಾಗಿ ಅಮಾತ್ಯಜನತೆಯು ತಿಳಿಸಿಕೊಟ್ಟ ನೀತಿಗೆ ಅನುಗುಣವಾಗಿ ಉಗ್ರಸೇನನು ಭೂಮಿಯನ್ನು ಪಾಲಿಸುತ್ತಾ, ಮುಕುಂದನಾದ ಶ್ರೀಕೃಷ್ಣನಲ್ಲಿ ಭಕ್ತಿಯನ್ನು ಹೊಂದಿದವನಾಗಿ ವಿಷಯಭೋಗಗಳಲ್ಲಿ ಆಸಕ್ತಿಯನ್ನು ತೊರೆದನು; (ಸ್ಪೃಹಾ - ಅಭಿಲಾಷೆ).

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣೆ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ದ್ವಾದಶಃ ॥ ೭೦ ॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ದ್ವಾದಶಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶ-ವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹನ್ನೆರಡನೆಯ ಸರ್ಗವು ಮುಕ್ತಾಯವಾಯಿತು.

# ೧೩. ತ್ರಯೋದಶಃ ಸರ್ಗಃ

(ಉದ್ಧವನ ಗೋಕುಲಗಮನಕ್ಕೆ ಆದೇಶ - ೧-೨; ಉದ್ಧವನ ಗೋಕುಲಪ್ರವೇಶ - ೩-೧೨; ನಂದಗೋಪನಿಂದ ಉದ್ಧವನ ಸ್ವಾಗತ - ೧೩-೧೬; ಉದ್ಧವನಿಂದ ಗೋಪಿಯರ ವೈಕ್ಲವ್ಯದರ್ಶನ - ೧೭-೨೭; ಭ್ರಮರಗೀತೆ - ೨೮-೩೬; ಉದ್ಧವನ ಮಥುರಾಗಮನ - ಜರಾಸಂಧನ ಸಮರೋದ್ಯಮ - ೩೮-೪೦; ಜರಾಸಂಧನಿಂದ ಮಥುರೆಯ ಆಕ್ರಮಣ -೪೧-೪೩; ಕೃಷ್ಣನ ಸಂಗ್ರಾಮದ ವೈಭವ - ೪೪-೬೪; ಸರ್ಗೋಪಸಂಹಾರ - ೬೫)

ಗೋಪಿಯರನ್ನು,ನಂದಗೋಪ-ಯಶೋದೆಯರನ್ನು ಸಂತೈಸಲು ಶ್ರೀಕೃಷ್ಣನ ಸಂಕಲ್ಪ

ನಿಜಾಗಮಾಶಾಧೃತಜೀವನಾನಾಂ
ವ್ರಜಾಂಗನಾನಾಂ ಹೃದಿ ಖೇದಶಂಕೀ ।
ಇಮಾಂ ಸ್ಥಿತಿಂ ಸ್ವಸ್ಯ ನಿಶಮ್ಯ ರಮ್ಯಾಂ
ಸ್ವಸೂನುತಾಶಾಪಗಮಾಚ್ಚ ಪಿತ್ರೋಃ ॥ ೧ ॥

ತನ್ನ ರಮ್ಯವಾದ ಬ್ರಹ್ಮಚರ್ಯಾಶ್ರಮದ ವಿವರವನ್ನು ಕೇಳಿ ತನ್ನ ಬರುವಿಕೆಯ ಆಸೆಯಲ್ಲಿ ಜೀವಹಿಡಿದಿದ್ದ ಗೋಕುಲದ ಸ್ತ್ರೀಯರಿಗೆ ಹಾಗೂ ಕೃಷ್ಣ ತಮ್ಮ ಮಗ ಎಂಬ ಆಶೆಯನ್ನು ತೊರೆದಿದ್ದ ತಂದೆತಾಯಿಗಳಾದ ನಂದಗೋಪ-ಯಶೋದೆಯರಿಗೆ ಮನಸ್ಸಿನಲ್ಲಿ ನೋವುಂಟಾಗುವುದನ್ನು ಚಿಂತಿಸಿದ ಶ್ರೀಕೃಷ್ಣನು ಉದ್ಧವನನ್ನು ಕಳುಹಿಸಿಕೊಟ್ಟ.

ವಿ. : ಶ್ಲೋಕ ೧ ಮತ್ತು ೨ ಯುಗ್ಮ; ಆದ್ದರಿಂದ ಏಕಾನ್ವಯ.

ಗೋಕುಲಕ್ಕೆ ತೆರಳಲು ಉದ್ಧವನಿಗೆ ಶ್ರೀಕೃಷ್ಣನ ಆದೇಶ

ವ್ರಜಂ ವ್ರಜೇತ್ಯಾದಿಶದುದ್ಧವಂ ಸ್ವಂ
ವ್ರಜೇಶ್ವರೋऽಥಾತ್ಮವಿಯೋಗವಹ್ನೇಃ ।
ಪ್ರತಪ್ತಮುಜ್ಜೀವಯಿತುಂ ಸ್ವವರ್ಗಂ
ಸುಖಾರ್ಥಸಂದೇಶಸುಧಾಪ್ರವಾಹೈಃ ॥ ೨ ॥

ತನ್ನ ಅಗಲುವಿಕೆಯ ಬೆಂಕಿಯಿಂದ ಬಹಳವಾಗಿ ಬೆಂದ ತನ್ನ ಭಕ್ತವರ್ಗವನ್ನು ತನ್ನ ಸುಖನೀಡುವ ಸಂದೇಶವೆಂಬ ಅಮೃತಪ್ರವಾಹಗಳಿಂದ ಬದುಕಿಸಲೆಂದು "ನೀನು ವ್ರಜಕ್ಕೆ ತೆರಳು" ಎಂಬುದಾಗಿ ತನ್ನವನಾದ ಉದ್ಧವನಿಗೆ ವ್ರಜದ ಸ್ವಾಮಿಯಾದ ಶ್ರೀಕೃಷ್ಣನು ಆದೇಶಿಸಿದ.

ವಿ. : ೧. ಶ್ರೀಕೃಷ್ಣನು ಉಪನೀತನಾದದ್ದನ್ನು ತಿಳಿದ ಗೋಪಿಯರು ಅವನಿನ್ನು ತಮಗೆ ದೊರಕಲಾರ ಎಂದು ಹತಾಶರಾಗುವರು. ಅದರಂತೆ ಕೃಷ್ಣ ತಮ್ಮ ಮಗನಲ್ಲ ಎಂಬುದನ್ನು ತಿಳಿದ

ನಂದಗೋಪ ಯಶೋದೆಯರು ಸಹ ದುಃಖಕ್ಕೊಳಗಾಗುವರು. ಅವರ ದುಃಖವನ್ನು ಪ್ರಿಯವಚನಗಳ ಮೂಲಕ ಪರಿಹರಿಸಲೆಂದು ಕೃಷ್ಣ ಉದ್ಧವನನ್ನು ಗೋಕುಲಕ್ಕೆ ಕಳುಹಿಸಿಕೊಟ್ಟ ಎಂದರ್ಥ.

೨. ಶ್ಲೋಕ ೧, ೨ ಯುಗ್ಮ ಎಂದು ತಿಳಿಯಬೇಕು.

### ಗೋಕುಲಕ್ಕೆ ತೆರಳಿದ ಉದ್ಧವ

ಸ ಚ ಪ್ರಿಯಾಯೋಗಸಮುತ್ಥಸಾಧ್ವಸಂ
ತದೀಯಸಂದೇಶವರೈರ್ವಿದೂರಯನ್ ।
ಪ್ರಪನ್ನವಾತ್ಸಲ್ಯಮದೋ ಮಧುದ್ವಿಷಃ
ಸ್ಮರನ್ ಶ್ರಮಂ ವರ್ತ್ಮನಿ ವಿಸ್ಮರನ್ ಯಯೌ ॥ ೩ ॥

ಆ ಉದ್ಧವನೂ ಸಹ ಆ ಶ್ರೀಕೃಷ್ಣನ ಹಿರಿದಾದ ಸಂದೇಶಗಳ ಮೂಲಕ ಪ್ರಿಯನಾದ ಅವನ ಅಗಲುವಿಕೆಯಿಂದ ಉಂಟಾದ ಭಯವನ್ನು ದೂರಮಾಡಲೆಂದು, ಮಧುಸೂದನನಾದ ಆ ಶ್ರೀಕೃಷ್ಣನ ಭಕ್ತವಾತ್ಸಲ್ಯವನ್ನು ನೆನೆಯುತ್ತಾ, ಮಾರ್ಗದಲ್ಲಿ ಆಯಾಸವನ್ನು ಗಮನಿಸದೆ ತೆರಳಿದ.

ವಿ. : ಶ್ರೀಕೃಷ್ಣನ ಆ ಸಂದೇಶದ ಮೂಲಕ ಗೋಪಗೋಪಿಯರ ನೋವು ಪರಿಹಾರವಾಗುವುದು ಎಂಬ ಉದಾರಭಾವದಿಂದ ಶ್ರೀಕೃಷ್ಣ ಕಳುಹಿಸಿರುವುದನ್ನು ಸ್ಮರಿಸಿಕೊಂಡು ಮಾರ್ಗಾಯಾಸವನ್ನು ಸಹ ಗಮನಿಸದೆ ಉದ್ಧವ ಗೋಕುಲಕ್ಕೆ ತೆರಳಿದ ಎಂದು ಭಾವ; ಅದಃ - ಅದನ್ನು.

### ಗೋಕುಲವನ್ನು ಕಂಡ ಉದ್ಧವ

ನಿಶಾಮುಖೇ ಗೋನಿಕುರಂಬಮೀಶಿತು-
ರ್ವ್ರಜಂ ವಿಶನ್ ಸೋಽಥ ದದರ್ಶ ಮಂಡಿತಮ್ ।
ಪರಿಸ್ಫುರದ್ವೇಣುವಿನೋದವೇದಿತ-
ಸ್ವಭರ್ತೃಲೀಲಾರಸಗೋಪಬಾಲಕೈಃ ॥ ೪ ॥

ಬಳಿಕ ಸಂಜೆಯ ವೇಳೆಗೆ ಗೋಕುಲವನ್ನು ಪ್ರವೇಶಿಸಿದ ಆ ಉದ್ಧವನು, ಹೊಳೆಯುವ ಕೊಳಲಿನ ವಿನೋದದಿಂದ ತಮ್ಮ ಸ್ವಾಮಿಯಾದ, ಈಶನಾದ ಶ್ರೀಕೃಷ್ಣನ ಲೀಲಾರಸಗಳನ್ನು ತಿಳಿಸುವ ಗೋಪಬಾಲಕರಿಂದ ಶೋಭಿತವಾಗಿದ್ದ ಗೋವುಗಳ ಸಮೂಹವನ್ನು ಕಂಡನು.

ವಿ. : ಕೃಷ್ಣನ ಅನುಪಸ್ಥಿತಿಯಲ್ಲಿ ಗೋಪರು ಅವನ ಲೀಲೆಗಳನ್ನೇ ಸ್ಮರಿಸುತ್ತ ಜೀವನವನ್ನು ಸಾರ್ಥಕವಾಗಿ ಕಳೆಯುತ್ತಿದ್ದರು ಎಂದು ಭಾವ ; ನಿಕುರಂಬ - ಸಮೂಹ.

ಗೋವು ಸೂಚಿಸಿದ ಸಂದೇಶ

ಉತ್ಕ್ಷಿಪ್ತಪುಚ್ಛಮುದಿತಾಲ್ಪರವಾಭಿರಾಮಂ
ವತ್ಸಂ ಸ್ಮ ಧಾವನವಿಲಾಸವಿಕಂಪಿತಾಂಗಮ್ ।
ವೀಕ್ಷ್ಯಾನುಧಾವನಪರಾಧ್ವನಿ ಗೌಃ ಸ್ವವರ್ಗ-
ಮನ್ವೇತು ಕೃಷ್ಣ ಇತಿ ವಕ್ತಿ ತದೋದ್ಧವಾಯ ॥ ೫ ॥

ಆಗ ಮಾರ್ಗದಲ್ಲಿ ಬಾಲ ಮೇಲೆತ್ತಿ, ಹೊಮ್ಮಿದ ಸಣ್ಣಧ್ವನಿಯಿಂದ ಮನೋಹರವಾದ, ಅತ್ತಿತ್ತ ಸಂಚರಿಸುವ ಲೀಲೆಯಿಂದ ಅವಯವಗಳು ನಲುಗುತ್ತಿದ್ದ ಕರುವನ್ನು ನೋಡಿ, ಹಿಂಬಾಲಿಸಿಬಂದ ಗೋವು ಶ್ರೀಕೃಷ್ಣನು ತನ್ನವರ ಗುಂಪನ್ನು ಇದರಂತೆ ಅನುಸರಿಸಿಬರಲಿ ಎಂದು ಉದ್ಧವನಿಗೆ ಹೇಳುತ್ತಿದ್ದಿತ್ತು.

ವಿ. : ಕರುವನ್ನು ಸಾಂತ್ವನಗೊಳಿಸಲೆಂದು ಅದರತ್ತ ಸಾಗಿದ ಗೋವು ಶ್ರೀಕೃಷ್ಣನು ಸಹ ತನ್ನ ಭಕ್ತಜನರನ್ನು ಇದೇ ತೆರನಾಗಿ ಆಗಮಿಸಲಿ ಎಂಬುದಾಗಿ ಉದ್ಧವನಿಗೆ ಸೂಚನೆ ನೀಡುವಂತಿತ್ತು ಎಂದು ಭಾವ.

ಉದ್ಧವ ಸ್ಮರಿಸಿಕೊಂಡ ಶ್ರೀಕೃಷ್ಣನ ಬಾಲಲೀಲಾ ವೈಭವ

ಗೋಧೂಲಿಧೂಸರಮನೋಜ್ಞಶರೀರಕಾಂತೀನ್
ಗೋಪಾನ್ ನಿರೀಕ್ಷ್ಯ ಕರಸಂಗತವೇಣುಶೃಂಗಾನ್ ।
ಕೃಷ್ಣಸ್ಯ ಶೈಶವವಿಲಾಸಮನುಸ್ಮರನ್ ಸ
ಮೋದಾಂಬುಪೂರ್ಣನಯನಃ ಪುಲಕಾಂಕಿತೋಽಭೂತ್ ॥ ೬ ॥

ಗೋಧೂಳಿ ಮೆತ್ತಿದ ಮನೋಹರ ದೇಹಕಾಂತಿಯಿಂದ ಕೂಡಿದ, ಕೈಯಲ್ಲಿ ವೇಣು-ಶೃಂಗವೆಂಬ ವಾದ್ಯಗಳನ್ನು ಹಿಡಿದಿದ್ದ ಗೋಪರನ್ನು ಕಂಡು ಆ ಉದ್ಧವನು ಶ್ರೀಕೃಷ್ಣನ ಬಾಲಲೀಲೆಗಳನ್ನು ಸ್ಮರಿಸಿಕೊಳ್ಳುತ್ತಾ ಆನಂದಾಶ್ರುಗಳಿಂದ ತುಂಬಿದ ಕಣ್ಣುಳ್ಳವನಾಗಿ ರೋಮಾಂಚನಗೊಂಡನು; (ಮೋದಾಂಬು - ಆನಂದಾಶ್ರು).

ಉದ್ಧವನನ್ನು ಶ್ರೀಕೃಷ್ಣನೆಂದು ತಿಳಿದ ಗೋವುಗಳು

ತಾಃ ಕೃಷ್ಣಭುಕ್ತವರಭೂಷಣವಸ್ತ್ರಮಾಲ್ಯಂ
ಭೃತ್ಯಂ ನಿರೀಕ್ಷ್ಯ ನಿಜನಾಥಧಿಯೇವ ಗಾವಃ ।

ಉನ್ನಮ್ರಕಂಧರಮುದೀರಿತಕರ್ಣಯುಗ್ಮಂ
ಪಶ್ಯಂತ್ಯ ಉದ್ಧವಮನೋಽಭ್ಯುದಯಂ ವಿತೇನುಃ ॥ ೭ ॥

ಆ ಗೋವುಗಳು ಶ್ರೀಕೃಷ್ಣನ ನಿರ್ಮಾಲ್ಯವಾದ ಶ್ರೇಷ್ಠವಾದ ಆಭರಣ, ವಸ್ತ್ರ, ಮಾಲೆಗಳನ್ನು ಧರಿಸಿದ್ದ ಕೃಷ್ಣಭೃತ್ಯನಾದ ಉದ್ಧವನನ್ನು ಕಂಡು ತಮ್ಮ ಸ್ವಾಮಿಯಾದ ಶ್ರೀಕೃಷ್ಣನೆಂಬ ಬುದ್ಧಿಯಿಂದ ಕತ್ತನ್ನು ಮೇಲೆತ್ತಿ ಎರಡೂ ಕಿವಿಗಳನ್ನು ಅಗಲಿಸಿಕೊಂಡು ನೋಡುತ್ತಾ ಉದ್ಧವನ ಮನಸ್ಸಿಗೆ ಬಹಳವಾದ ಉಲ್ಲಾಸವನ್ನು ಉಂಟುಮಾಡಿದವು.

ವಿ. : ೧. ಶ್ರೀಕೃಷ್ಣ ಧರಿಸಿದ್ದ ನಿರ್ಮಾಲ್ಯಧಾರಣೆಯಿಂದಾಗಿ, ಉದ್ಧವನ ದರ್ಶನ ಕೃಷ್ಣನನ್ನು ಜ್ಞಾಪಿಸುವಂತಿತ್ತು ಎಂದರ್ಥ.

೨. ಶ್ರೀಹರಿಯ ನಿರ್ಮಾಲ್ಯಾದಿಗಳ ಧಾರಣೆಯಿಂದ ದೇಹದಲ್ಲಿ ವಿಶೇಷವಾದ ಭಗವತ್ಸ-ನ್ನಿಧಾನವು[೧] ಉಂಟಾಗುವುದು ಎಂಬ ಭಾವ ಸೂಚಿತ.

೩. ಉದ್ಧವನು ಶ್ರೀಕೃಷ್ಣನ ನಿರ್ಮಾಲ್ಯಾದಿಗಳನ್ನು ಧರಿಸಿದುದಕ್ಕೆ ಈ ಕೆಳಗಿನ ಶ್ರೀಮದ್ಭಾಗವತದ ಶ್ಲೋಕ ಆಧಾರವಾಗಿದೆ (ಭಾಗ. ೧೧/೬/೪೬):

ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ।
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥

ಉದ್ಧವನ ದರ್ಶನದಿಂದ ಗೋಕುಲಕ್ಕಾದ ಉತ್ಸವ

ದಿದೇಶ ಯಂ ಪ್ರೀತಮನಾಃ ಸ್ವವರ್ಗೇ
ನಿಜಂ ವ್ರಜಂ ಪ್ರತ್ಯರವಿಂದನೇತ್ರಃ।
ವಿವೇಶ ಸೋಽಪ್ಯುದ್ಧವಮೇವ ದೂರಾ-
ನ್ನಿವೇಶಯನ್ ದ್ರಷ್ಟೃವಿಲೋಚನೇಷು ॥ ೮ ॥

ತನ್ನವರಲ್ಲಿ ಸಂತುಷ್ಟಮನಸ್ಸಿನಿಂದ ಪುಂಡರೀಕಾಕ್ಷನಾದ ಶ್ರೀಕೃಷ್ಣನು ತನ್ನ ಗೋಕುಲಕ್ಕೆಂದು ಕಳುಹಿಸಿದ್ದ ಆ ಉದ್ಧವನೂ ಸಹ ದೂರದಿಂದ ನೋಡುವವರ ಕಣ್ಣುಗಳಲ್ಲಿ ಹಿರಿದಾದ ಉತ್ಸವವನ್ನೇ ಉಂಟುಮಾಡುತ್ತಾ ಗೋಕುಲವನ್ನು ಪ್ರವೇಶಿಸಿದ.

ವಿ. :೧. [೨]ಶ್ರೀಕೃಷ್ಣನ ಪ್ರತಿನಿಧಿಯಾಗಿ ಆಗಮಿಸಿದ್ದ ಉದ್ಧವನ ದರ್ಶನವೂ ಸಹ ಗೋಕುಲದ ಜನತೆಗೆ ಅಪಾರ ಹರ್ಷವನ್ನುಂಟುಮಾಡಿತು ಎಂದರ್ಥ; ಉದ್ಧವ - ಉದ್ಧವ ಹಾಗೂ ಉತ್ಸವ.

---

೧. ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ।
ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ॥ -ಕೃಷ್ಣಾಮೃತಮಹಾರ್ಣವ(೪೩.)

೨. ಉದ್ಧವದ್ರಷ್ಟೄಣಾಂ ನೇತ್ರೋತ್ಸವೋ ಜಾತ ಇತಿ ಭಾವಃ। -ವ್ಯಾ.

೨. ಸರ್ಗ ೧೧ರ ಶ್ಲೋಕ ೬ರಲ್ಲೂ ಸಹ ಇದೇ ರೀತಿಯಾಗಿ ಉದ್ಧವ ಎಂಬುದು ಶ್ಲೇಷವಾಗಿ ಪ್ರಯೋಗಿಸಲ್ಪಟ್ಟಿರುವುದು ಗಮನಾರ್ಹ.

ಮನೆಮನೆಗಳಲ್ಲೂ ನಡೆದಿದ್ದ ಶ್ರೀಕೃಷ್ಣಕಥಾಸಂಭ್ರಮ

ಗೃಹೇ ಗೃಹೇ ಕೃಷ್ಣಕಥಾಮೃತಾತತಂ
ತದರ್ಚನಾಯಾಹೃತಧೂಪವಾಸಿತಮ್ ।
ಸ್ರಗಂಬರಾಲಂಕೃತಿಚಂದನಾದಿಭಿ-
[೧]ರ್ವಿಭೂಷಿತಸ್ತ್ರೀಪುರುಷಂ ತದರ್ಪಿತೈಃ ॥ ೯ ॥

ಮನೆಮನೆಗಳಲ್ಲಿ ಶ್ರೀಕೃಷ್ಣನ ಕಥಾಮೃತವು ತುಂಬಿದ್ದ , ಅವನ ಪೂಜೆಗೆಂದು ತಂದ ಧೂಪದಿಂದ ಸುವಾಸಿತವಾಗಿದ್ದ, ಅವನಿಗೆ ಸಮರ್ಪಿಸಿದ್ದ ಮಾಲೆ, ವಸ್ತ್ರ, ಆಭರಣ, ಗಂಧ ಮೊದಲಾದವುಗಳಿಂದ ಅಲಂಕೃತರಾಗಿದ್ದ ಸ್ತ್ರೀಪುರುಷರಿಂದ ಕೂಡಿದ್ದ (ಗೋಕುಲವನ್ನು ಉದ್ಧವನು ತಲುಪಿದನು).

ವಿ. : ೧. ವೈಷ್ಣವರ ಆದರ್ಶಗೃಹದ ರಮ್ಯಚಿತ್ರಣ ಇದರಲ್ಲಿದೆ.

೨. ಶ್ಲೋಕ ೯ ರಿಂದ ೧೨ರವರೆಗೆ ಅಂತ್ಯ ಕುಲಕ.

ಶ್ರೀಕೃಷ್ಣನ ಕಿಂಕರರಂತೆ ಕಂಡ ಗಿಳಿ ಮೊದಲಾದವುಗಳು

ಶುಕೈರ್ಹರೇರ್ನಾಮ ಗೃಣದ್ಭಿರಾವೃತಂ
ಪಿಕೈಶ್ಚ ತದ್ವೇಣುರವಾನುವಾದಿಭಿಃ ।
ಮುಕುಂದಪಾದಾಂಬುಜಶೋಭಿನೀರಜ-
ಸ್ಥಿರದ್ವಿರೇಫೈರ್ಹರಿಕಿಂಕರಪ್ರಭೈಃ ॥ ೧೦ ॥

ಶ್ರೀಹರಿಯ ಕಿಂಕರರಂತಿದ್ದ, ಹರಿನಾಮವನ್ನು ಉಚ್ಚರಿಸುತ್ತಿದ್ದ ಗಿಳಿಗಳಿಂದಲೂ, ಅವನ ವೇಣುಧ್ವನಿಯನ್ನು ಅನುಕರಿಸುತ್ತಿದ್ದ ಕೋಗಿಲೆಗಳಿಂದಲೂ, ಮುಕುಂದನಾದ ಶ್ರೀಕೃಷ್ಣನ ಪಾದಕಮಲದಂತೆ ಶೋಭಿಸುವ ಕಮಲಗಳಲ್ಲಿ ನೆಲೆಸಿದ್ದ [೨]ಭ್ರಮರಗಳಿಂದಲೂ, ತುಂಬಿದ್ದ (ಗೋಕುಲವನ್ನು ಉದ್ಧವನು ತಲುಪಿದನು).

---

೧. ವಿಭೂಷಿತಸ್ತ್ರೀಪುರುಷಂ ಗೋಕುಲಮಾಪೇತ್ಯಂತ್ಯಕುಲಕಮೇತತ್ । -ವ್ಯಾ.

೨. ವಿಷ್ಣುಪಾದಾಂಬುಜಸಾಮ್ಯಾದೇವ ಸ್ಥಿರಾಃ। ನ ತು ಮಕರಂದಾತಿಶಯೇನೇತಿ ಭಾವಃ। ಅತ ಏವ ಹರಿಕಿಂಕರಪ್ರಭೈ-ರೇತ್ಯೈಃ ಶುಕಾದಿಭಿರಾವೃತಂ ಗೋಕುಲಮಾಪೇತ್ಯನ್ವಯಃ। -ವ್ಯಾ.

ವಿ. : ೧. ವೃಂದಾವನ ಪ್ರಾಂತದ ಗಿಳಿಗಳು, ಕೋಗಿಲೆಗಳು ಹಾಗೂ ದುಂಬಿಗಳು ಸಹ ಶ್ರೀಕೃಷ್ಣನ ಕಿಂಕರರಂತೆ ಅವನ ನಾಮೋಚ್ಚಾರಣೆ, ಅವನ ವೇಣುನಿನಾದದ ಧ್ವನಿ ಹಾಗೂ ಅವನ ಪಾದಕಮಲಗಳಲ್ಲಿ ಆಸಕ್ತಿಯನ್ನು ಹೊಂದಿದವುಗಳಾಗಿದ್ದವು ಎಂದು ಭಾವ.

೨. ವೈಷ್ಣವರ ಮನೆಯ ಪರಿಸರದ ಪಶುಪಕ್ಷಿಗಳು ಸಹ ಹರಿದಾಸರಂತೆ ನಾಮೋಚ್ಚಾರಣೆ ಮೊದಲಾದವುಗಳನ್ನು ಮಾಡುವವು ಎಂದು ಭಾವ.

೩. ಶ್ಲೋಕ ೯ ರಿಂದ ೧೨ರ ವರೆಗೆ ಕುಲಕ.

**ಶ್ರೀಕೃಷ್ಣನ ಸ್ವಾಗತಕ್ಕೆ ಅಣಿಯಾಗಿದ್ದ ಗೋಕುಲ**

**ಸದಾ ಮುಕುಂದಾಗಮನಾಭಿಶಂಕಯಾ**
**ಸುಪೂರ್ಣಕುಂಭೈಃ ಶುಭತೋರಣಧ್ವಜೈಃ।**
**ಅಲಂಕೃತದ್ವಾರಚಯಂ ಫಲೋಚ್ಚಯೈ-**
**ರ್ವಿಚಿತ್ರರಂಗಾವಲಿಭಿಶ್ಚ ರಂಜಿತಮ್ ॥ ೧೧ ॥**

ಮುಕುಂದನಾದ ಶ್ರೀಕೃಷ್ಣನ ಆಗಮನದ ನಿರೀಕ್ಷೆಯಲ್ಲಿ ಉತ್ತಮಪೂರ್ಣಕುಂಭ-ಗಳಿಂದಲೂ, ಮಂಗಲಕರವಾದ ತೋರಣಧ್ವಜಗಳಿಂದಲೂ, ಹಣ್ಣುಗಳ ರಾಶಿಗಳಿಂದಲೂ, ವಿಚಿತ್ರವಾದ ರಂಗೋಲಿಗಳಿಂದಲೂ ಸದಾ ಅಲಂಕೃತವಾಗಿದ್ದ ದ್ವಾರಗಳ ಸಮೂಹಗಳಿಂದ ಕೂಡಿದ್ದ(ಗೋಕುಲವನ್ನು ಉದ್ಧವನು ತಲುಪಿದನು).

ವಿ. : ೧. ಶ್ರೀಕೃಷ್ಣನ ಆಗಮನದ ನಿರೀಕ್ಷೆಯಿಂದ ಅವನ ಸ್ವಾಗತಕ್ಕಾಗಿ ಸದಾ ಸಿದ್ಧವಾಗಿದ್ದ ಗೋಕುಲದ ಈ ಪರಿಕಲ್ಪನೆ ಸಾಧನೆಯ ಬಗ್ಗೆ ಬೀರುವ ಬೆಳಕು ಅಪಾರವಾದುದು.

೨. ಹರಿದರ್ಶನದ ನಿರೀಕ್ಷೆಯಲ್ಲಿ ಕಳೆಯುವ ಜೀವನವೇ ನಿಜವಾದ ಜೀವನ ಎಂಬ ತತ್ತ್ವ ಇದರಲ್ಲಿ ನಿರೂಪಿತವಾಗಿದೆ ; **ಚಯ** – ಸಮೂಹ.

**ಗೋಕುಲಕ್ಕಿದ್ದ ಆಶಾಕಿರಣ**

**ಮುಕುಂದವೀಕ್ಷಾಫಲಕಾಮ್ಯಯಾಽನ್ವಹಂ**
**ತ್ರಿಕಾಲಚೀರ್ಣದ್ವಿಜದೇವತಾರ್ಚನೈಃ।**
**ತದೀಯಲೀಲಾಮೃತಪೂರ್ಣಸತ್ಕಥಾ-**
**ಧೃತಾಸುಭಿಃ ಸಂಕುಲಮಾಪ ಗೋಕುಲಮ್ ॥ ೧೨ ॥**

ಕೃಷ್ಣನ ದರ್ಶನ ಫಲದ ಬಯಕೆಯಿಂದಾಗಿ ಪ್ರತಿದಿನವೂ ತ್ರಿಕಾಲಗಳಲ್ಲಿಯೂ ಬ್ರಾಹ್ಮಣರ ಹಾಗೂ ದೇವತೆಗಳ ಪೂಜೆಯನ್ನು ಮಾಡುತ್ತಿದ್ದ, ಅವನ ಲೀಲಾಮೃತದಿಂದ ತುಂಬಿದ್ದ

ಸತ್ಕಥೆಗಳಿಂದಾಗಿ ಜೀವ ಹಿಡಿದುಕೊಂಡಿದ್ದ ಜನರಿಂದ ತುಂಬಿದ್ದ ಗೋಕುಲವನ್ನು ಉದ್ಧವನು ತಲುಪಿದನು.

ವಿ. : ಶ್ರೀಕೃಷ್ಣನ ನಿರ್ಮಾಲ್ಯಾದಿಗಳ ಧಾರಣೆ, ಅವನ ಸ್ವಾಗತಕ್ಕಾಗಿ ಮನೆಮನೆಗಳಲ್ಲಿ ಸಂಭ್ರಮದ ಅಲಂಕಾರ, ಪ್ರತಿನಿತ್ಯವೂ ತ್ರಿಕಾಲಗಳಲ್ಲಿಯೂ ಬ್ರಾಹ್ಮಣಪೂಜೆ, ದೇವಪೂಜೆ ಹಾಗೂ ಶ್ರೀಕೃಷ್ಣನ ಮಹಿಮೆಯ ವರ್ಣನೆಯ ಕಥೆಗಳನ್ನೇ ತಮ್ಮ ಜೀವನದ ಮುಖ್ಯ ಆಧಾರ ಎಂದು ಭಾವಿಸುವ ಜನಗಳ ಬಳಿಗೆ ಶ್ರೀಕೃಷ್ಣನ ಸಂದೇಶ ಹೊತ್ತ ಉದ್ಧವನಂತಹ ಜ್ಞಾನಿಗಳು ಆಗಮಿಸುವರು ಎಂದು ಭಾವ; ಅಸು - ಪ್ರಾಣ.

### ನಂದನ ಮನೆಯನ್ನು ಪ್ರವೇಶಿಸಿದ ಉದ್ಧವ

ತತೋ ವಿವೇಶ ನಂದಸ್ಯ ಸದನಂ ಸಹಸೋದ್ಧವಃ।
ಅನ್ಯೇಷಾಮಪಿ ಚೇತಃಸು ನ್ಯಯುಂಕ್ತ ಪರಮುದ್ಧವಮ್ ॥ ೧೩ ॥

[1]ಆ ಬಳಿಕ ಕೂಡಲೇ ಉದ್ಧವನು ನಂದನ ಮನೆಯನ್ನು ಪ್ರವೇಶಿಸಿದ; ಇತರರ ಮನಸ್ಸುಗಳಲ್ಲೂ ಸಹ ದೊಡ್ಡ ಉತ್ಸವವನ್ನು ಉಂಟುಮಾಡಿದ.

### ಉದ್ಧವನಿಗೆ ನಂದನಿಂದ ದೊರೆತ ಸ್ವಾಗತ

ತಮರ್ಚಯಾಮಾಸ ಸ ನಂದಗೋಪಃ
ಸ್ವನಂದನಾಂಘ್ರ್ಯಂಬುಜಲುಬ್ಧಭೃಂಗಮ್ ।
ತಥಾಹಿ ಲಕ್ಷ್ಮೀಶಪದೈಕಭಕ್ತಾ-
ಸ್ತದನ್ಯದರ್ಚಂತಿ ತದೀಯಬುದ್ಧ್ಯಾ[3] ॥ ೧೪ ॥

ತನ್ನ ಪುತ್ರನಾದ ಶ್ರೀಕೃಷ್ಣನ ಪಾದಕಮಲದಲ್ಲಿ ಆಸಕ್ತವಾದ ದುಂಬಿಯಂತಿದ್ದ ಆ ಉದ್ಧವನನ್ನು ಆ ನಂದಗೋಪನು ಪೂಜಿಸಿದ; ಅದು ಸರಿಯೇ, [2]ಲಕ್ಷ್ಮೀಪತಿಯಾದ ಶ್ರೀಹರಿಯಲ್ಲಿಯೇ ಮುಖ್ಯಭಕ್ತಿಯನ್ನು ಮಾಡುವಂತಹವರು ಅವನ ಕಡೆಯವರು ಎಂಬ ಬುದ್ಧಿಯಿಂದ ಇತರರನ್ನು ಪೂಜಿಸುವರು.

---

೧. ಪೂರ್ವಂ ದೂರಾದ್ದರ್ಶನೇನ ದೃಷ್ಟ್ಯುತ್ಸವೋ ಜಾತ ಇದಾನೀಂ ಸರ್ವೇಷಾಂ ಮನಃಸು ಮಹಾನುತ್ಸವೋ ಜಾತ ಇತ್ಯರ್ಥಃ। -ವ್ಯಾ.

೨. ರಮಾಬ್ರಹ್ಮಾದಯಸ್ತಸ್ಯ ಪರಿವಾರತಯೈವ ತು। - ಸದಾಚಾರಸ್ಮೃತಿ
ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾಃ ಪ್ರಧಾನತಃ॥ -ಅನುವ್ಯಾಖ್ಯಾನ (೧/೧/೧೩.೬)

೩.. ಕೃಷ್ಣಾದ್ಭಿನ್ನಂ ಜಗತ್ ತದೀಯಬುದ್ಧ್ಯಾ ತದ್ಭೃತ್ಯಬುದ್ಧ್ಯಾ ಅರ್ಚಂತಿ ಅರ್ಚಯಂತಿ ಹಿ। ನ ತು ತತ್ತ್ವೇನ ಸ್ವಾತಂತ್ರ್ಯೇಣ ವಾ ಪೂಜಯಂತೀತಿ ಭಾವಃ। -ವ್ಯಾ.

ವಿ. : ಸರ್ವೋತ್ತಮನಾದ ಶ್ರೀಕೃಷ್ಣನನ್ನು ಆದರಿಸುವಂತೆಯೇ ಅವನ ಭಕ್ತಜನರನ್ನೂ ಸಹ ತಾರತಮ್ಯಕ್ರಮದಲ್ಲಿ ಆದರಿಸುವುದು ವೈಷ್ಣವರ ಮುಖ್ಯ ಕರ್ತವ್ಯ ಎಂಬ ತತ್ತ್ವವು ಇಲ್ಲಿದೆ.

### ಶ್ರೀಕೃಷ್ಣನ ಕೃಪೆಯನ್ನು ಕೇಳಿ ಆನಂದಭರಿತರಾದ ನಂದ-ಯಶೋದೆಯರು

ಕೃಪಾಂ ಹರೇರಾತ್ಮನಿ ವರ್ಣ್ಯಮಾನಾಂ
ನಿಶಮ್ಯ ನಂದಃ ಸಹ ಜಾಯಯಾಽಭೂತ್ ।
ಪ್ರಹೃಷ್ಟರೋಮಾ ಪ್ರತಿರುದ್ಧಕಂಠಃ
ಪ್ರಹರ್ಷವಾರ್ಯಂಕಿತಲೋಲನೇತ್ರಃ ॥ ೧೫ ॥

ಉದ್ಧವನು ಬಣ್ಣಿಸಿದ ತನ್ನಲ್ಲಿನ ಶ್ರೀಕೃಷ್ಣನ ಕೃಪೆಯನ್ನು ಕೇಳಿ, ನಂದನು ಪತ್ನಿಯಾದ ಯಶೋದೆಯೊಂದಿಗೆ ರೋಮಾಂಚನಗೊಂಡ; ಅವನ ಕೊರಳು ಬಿಗಿದು ಬಂದಿತು; ಚಂಚಲನೇತ್ರಗಳಲ್ಲಿ ಆನಂದಾಶ್ರುಗಳು ಕಾಣಿಸಿಕೊಂಡವು (ಪ್ರಹರ್ಷವಾರಿ - ಆನಂದಾಶ್ರು).

### ಉದ್ಧವನಿಂದ ಯಶೋದೆಯ ಸಾಂತ್ವನ

ವಿಜೃಂಭಿತೇ ಯಸ್ಯ ಮುಖೇ ಸತೀಯ-
ಮಪಶ್ಯದಾತ್ಮಾನಮಿದಂ[೧] ಜಗಚ್ಚ ।
ವಿಯೋಗವಾರ್ತಾಮಮುನೋತ್ಸೃಜಧ್ವಂ
ಪರಂ ಪರಂಬ್ರಹ್ಮಧಿಯಾ ಭಜಧ್ವಮ್ ॥ ೧೬ ॥

---

೧. ಸ ಪ್ರಾಕೃತಂ ಶಿಶುಮಾತ್ಮನಮುಚ್ಚೈರ್ವಿಜಾನಂತ್ಯಾ ಮಾತುರಾದರ್ಶನಾಯ ।
ವಿಜೃಂಭಮಾಣೋಽಖಿಲಮಾತ್ಮಸಂಸ್ಥಂ ಪ್ರದರ್ಶಯಾಮಾಸ ಕದಾಚಿದೀಶಃ ॥
ಸಾಂಡಂ ಮಹಾಭೂತಮನೋಭಿಮಾನಮಹತ್ತ್ವಕೃತ್ಯಾವೃತಮಬ್ಜಜಾದಿಭಿಃ ।
ಸುರೈಃ ಶಿವೇತ್ಯೈರ್ನರದೈತ್ಯಸಂಘೈರ್ಯುತಂ ದದರ್ಶಾಸ್ಯ ತನೌ ಯಶೋದಾ ॥
- ಮ.ಭಾ.ತಾ.ನಿ (೧೨/೧೧೪,೧೧೫)

ಏಕದಾಽರ್ಭಕಮಾದಾಯ ಸಾಂಕಮಾರೋಪ್ಯ ಭಾಮಿನಿ ।
ಪ್ರಸ್ರುತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ ॥
ಪೀತಪ್ರಾಯಸ್ಯ ಜನನೀ ಸಾ ತಸ್ಯ ರುಚಿರಸ್ಮಿತಮ್ ।
ಮುಖಂ ಲಾಲಯತೀ ರಾಜನ್ ಜೃಂಭತೋ ದದೃಶೇ ಇದಮ್ ॥
ಖಂ ರೋದಸೀ ಜ್ಯೋತಿರನೀಕಮಾಶಾಃ ಭೂತಾನಿ ಯಾನಿ ಸ್ಥಿರಜಂಗಮಾನಿ ।
ಸಾ ವೀಕ್ಷ್ಯ ವಿಶ್ವಂ ಸಹಸಾ ರಾಜನ್ ಸಂಜಾವೇಪಥುಃ ।
ಸಮ್ಮೀಲ್ಯ ಮೃಗಶಾವಾಕ್ಷೀ ನೇತ್ರೇ ಆಸೀತ್ ಸುವಿಸ್ಮಿತಾ ॥ - ಭಾಗವತ (೧೦/೮/೩೬-೩೭)

ಆಕಳಿಸಲೆಂದು ತೆರೆದ ಯಾರ ಬಾಯಲ್ಲಿ ಈ ಮಹಾಸತಿಯಾದ ಯಶೋದೆಯು ತನ್ನನ್ನು ಈ ಜಗತ್ತನ್ನು ಕಣ್ಣಾರೆ ಕಂಡಿದ್ದಳೋ ಅಂತಹ ಶ್ರೀಕೃಷ್ಣನ ಅಗಲುವಿಕೆಯ ಚಿಂತೆಯನ್ನು ತೊರೆಯಿರಿ; ಕೇವಲ ಪರಬ್ರಹ್ಮ ಎಂಬ ಬುದ್ಧಿಯಿಂದ ಆರಾಧಿಸಿರಿ.

ವಿ. : ಇದರಲ್ಲಿ ಹಿಂದೊಮ್ಮೆ (೩/೧೬,೧೭) ಶ್ರೀಕೃಷ್ಣ ಆಕಳಿಸಲೆಂದು ಬಾಯ್ತೆರೆದಾಗ ಅವನ ಬಾಯಲ್ಲಿ ಯಶೋದೆಯು ನವಾವರಣದಿಂದ ಕೂಡಿದ ಬ್ರಹ್ಮಾಂಡವನ್ನು ಹಾಗೂ ತನ್ನನ್ನೂ ಕಂಡ ವಿವರ ಬಂದಿದೆ.

### ಮುನಿಗಳ ಆಶ್ರಮದಂತಿದ್ದ ಗೋಪಿಯರ ಮನೆಗಳು

ಸ ನಂದಮಾನಂದನಿಧಿಂ ವಿಧಾಯ
ಜಗಾಮ ಗೋಪೀಜನಮಂದಿರಾಣಿ ।
ಸುದುಷ್ಕರೋಗ್ರವ್ರತಕರ್ಶಿತಾಂಗ-
ಮುನೀಂದ್ರವೃಂದಾಶ್ರಮಸಮ್ಮಿತಾನಿ ॥ ೧೭ ॥

ಆ ಉದ್ಧವನು ನಂದನನ್ನು ಆನಂದದ ನಿಧಿಯನ್ನಾಗಿ ಮಾಡಿ, ಅತ್ಯಂತದುಷ್ಕರವಾದ ತೀವ್ರ ವ್ರತಗಳಿಂದ ಕೃಶಗೊಂಡ ಅವಯವಗಳ ಮುನಿಶ್ರೇಷ್ಠರ ಸಮೂಹಗಳ ಆಶ್ರಮದಂತಿದ್ದ ಗೋಪೀಜನರ ಮಂದಿರಗಳಿಗೆ ತೆರಳಿದ.

ವಿ. : ೧. ಗೋಪಿಯರ ಮನೆಗಳು ಋಷ್ಯಾಶ್ರಮದಂತೆ ಕಂಗೊಳಿಸುತ್ತಿದ್ದವು ಎಂದರ್ಥ.

೨. ಇದರಿಂದ ಗೋಪಿಯರು ಕೇವಲ ಕಾಮನೆಯಿಂದಷ್ಟೇ ಶ್ರೀಕೃಷ್ಣನನ್ನು ಆರಾಧಿಸಿದವರಲ್ಲ; ಮುನಿಗಳು ಸರ್ವೋತ್ತಮನೆಂದು ಶ್ರೀಹರಿಯನ್ನು ಬಗೆಬಗೆಯ ಕಠಿಣ ವ್ರತ ಮೊದಲಾದ ಸಾಧನೆಗಳಿಂದ ಆರಾಧಿಸುವಂತೆ ಗೋಪಿಯರು ಸಾಕ್ಷಾತ್ ಪರಬ್ರಹ್ಮನೆಂದು ತಿಳಿದೇ ಆರಾಧಿಸಿದ ದೈವೀಸಂಪತ್ತಿನ ಖಣಿಗಳಾಗಿದ್ದರು ಎಂಬ ವಿಶೇಷಾಂಶ ತಿಳಿಯುವುದು.

### ಗೋಪಿಯರು ಕೈಗೊಂಡಿದ್ದ ಅಧಃಶಯನವ್ರತ - ತಾಂಬೂಲತ್ಯಾಗವ್ರತ

ಕಾಚಿನ್ಮುಕುಂದೇನ ಸಹೈವ ಶಯ್ಯಾಂ
ಪ್ರಾಪ್ತುಂ ಬತಾಧಃಶಯನವ್ರತಸ್ಥಾ ।
ತಜ್ಜುಷ್ಟತಾಂಬೂಲಫಲಾಯ ಧನ್ಯಾ
ತತ್ಯಾಜ ತಾಂಬೂಲರುಚಿಂ ಕಿಲಾನ್ಯಾ ॥ ೧೮ ॥

ಅಬ್ಬ! ಒಬ್ಬ ಗೋಪಿಯು ಮುಕುಂದನಾದ ಶ್ರೀಕೃಷ್ಣನೊಂದಿಗೆ ಜೊತೆಯಾಗಿಯೇ ಮಲಗುವ ಬಯಕೆಯಿಂದ ಬರೀ ನೆಲದ ಮೇಲೆಯೇ ಮಲಗುವ ವ್ರತವನ್ನು

ಕೈಗೊಂಡಿದ್ದಳು. ಮತ್ತೊಬ್ಬಳು ಅವನಿಂದ ಸೇವಿತವಾದ ತಾಂಬೂಲವೆಂಬ ಫಲಕ್ಕಾಗಿ ತಾಂಬೂಲದಲ್ಲಿ ಅಭಿರುಚಿಯನ್ನು ತೊರೆದಿದ್ದ ಧನ್ಯೆಯಾಗಿದ್ದಳು; ಅಲ್ಲವೆ!

ವಿ. : ೧. ಅಧಃಶಯನ ವ್ರತ, ತಾಂಬೂಲವರ್ಜನ ವ್ರತ ಮೊದಲಾದ ವ್ರತಗಳನ್ನು ಅವರು ಮಾಡುತ್ತಿದ್ದರು ಎಂದರ್ಥ. ಅಂತಹ ವ್ರತಗಳಿಗೆ ಲಭಿಸುವ ಯೋಗ್ಯತೆಗನುಗುಣವಾದ ಫಲದ ನಿರೂಪಣೆಯು ಸಹ ಇಲ್ಲಿ ಬಂದಿದೆ.

೨. [1]ಇದು ಹಿಂದಿನ ಶ್ಲೋಕದಲ್ಲಿ ಬಂದ ಮುನಿಶ್ರೇಷ್ಠರಿಂದ ಮಾಡಲ್ಪಡುವ ಕಠಿಣವ್ರತಗಳ ವಿವರಣೆಯಾಗಿದೆ.

## ಗೋಪಿಯರ ಅನಶನವ್ರತ, ಶಯನವ್ರತ

ತದುಕ್ತಶೇಷೋದನಲುಬ್ಧಚಿತ್ತಾ
ನಿತ್ಯಂ ಕಿಲೈಕಾನಶನವ್ರತಸ್ಥಾ।
ಸ್ವಪ್ನೇऽಪಿ ತತ್ಸಂಗಮಿವಾಪ್ತುಕಾಮಾ
[2]ಸ್ವಸ್ಥಾऽಪಿ ಶೇತೇ ಕಿಲ ಕಾऽಪಿ ದೀನಾ ॥ ೧೯ ॥

ಒಬ್ಬ ಗೋಪಿಯು ಶ್ರೀಕೃಷ್ಣ ತಿಂದು ಉಳಿಸಿದ ಅನ್ನದಲ್ಲಿ ಬಯಕೆಯುಳ್ಳ ಮನಸ್ಸಿನವಳಾಗಿ ಸದಾ ಉಪವಾಸವ್ರತದಲ್ಲಿ ತೊಡಗಿದ್ದಳಲ್ಲವೆ ! ದೀನಳಾದ ಮತ್ತೊಬ್ಬಳು ಸ್ವಪ್ನದಲ್ಲಾದರೂ ಅವನ ಸಂಗವನ್ನು ಹೊಂದುವ ಬಯಕೆಯಿಂದೆಂಬಂತೆ ಆರೋಗ್ಯವತಿಯೇ ಆಗಿದ್ದರೂ ಮಲಗಿ ಬಿಟ್ಟಿದ್ದಳು.

ವಿ. : ೧. ಶ್ರೀಕೃಷ್ಣನ ನೈವೇದ್ಯಶೇಷದ ಮೇಲಿನ ಆಕಾಂಕ್ಷೆಯಿಂದ ಉಪವಾಸವ್ರತವನ್ನು ಕೈಗೊಂಡಿದ್ದಳು ಎಂಬ ಇಲ್ಲಿಯ ನಿರೂಪಣೆಯಲ್ಲಿ ಉಪವಾಸವ್ರತದ ಮುಖ್ಯ ಉದ್ದೇಶವು ಸೂಚಿತವಾಗಿದೆ; ಎಂದರೆ ಏಕಾದಶ್ಯಾದಿವ್ರತಗಳ ಆಚರಣೆಯ ಮುಖ್ಯ ಉದ್ದೇಶ ಶ್ರೀಹರಿಯ ನೈವೇದ್ಯ ಶೇಷಾನ್ನಸ್ವೀಕಾರದೀಕ್ಷೆಯ ಉದಾತ್ತತೆಯನ್ನು ಹೊಂದಿರಬೇಕು ಎಂದರ್ಥ.

೨. ಅನಶನವ್ರತ – ಉಪವಾಸ ವ್ರತ; ಓದನ – ಅನ್ನ.

---

೧. ಶ್ರೀಕೃಷ್ಣವಿಯೋಗಜವಿಷಯದ್ವೇಷಾವಸ್ಥಯಾ ಕೃತಸ್ಯಾಪಿ ಅಧಃಶಯನಸ್ಯ ತಾಂಬೂಲಪರಿತ್ಯಾಗಸ್ಯ ಚ ಮುನಿವ್ರತಸಾಧಾರಣ್ಯಾತ್ ಮುನೀಂದ್ರವೃಂದಾಶ್ರಮಸಂಮಿತಾನೀತಿ ಪ್ರಾಗುಕ್ತಮ್ । ಏವಮುತ್ತರತ್ರಾಪಿ ದ್ರಷ್ಟವ್ಯಮ್ । -ವ್ಯಾ.

೨. ಗೃಹಕಾರ್ಯಂ ತ್ಯಕ್ತ್ವಾ ಸರ್ವದಾ ಶಯನಂ ವಿರಹಿಣೀನಾಂ ಸ್ವಭಾವಃ। -ವ್ಯಾ.

ಶ್ರೀಕೃಷ್ಣನನ್ನೇ ಪತಿಯೆಂದು ಚಿಂತಿಸಿದ ಮತ್ತೊಬ್ಬ ಗೋಪಿ

ಕಾಂತಂ ಹರಿಂ ತತ್ಪ್ರಭವಂ ಕುಮಾರಂ
ತಜ್ಜುಷ್ಟಗೇಹಂ ಗೃಹಮೂಹಮಾನಾ ।
ಪತ್ಯುರ್ನ ಪೂಜಾಂ ನ ಚ ಪುತ್ರರಕ್ಷಾಂ
ಕೃತ್ಯಂ ನ ಗೃಹ್ಯಂ ವಿತನೋತಿ ತನ್ವೀ ॥ ೨೦ ॥

ಒಬ್ಬ ತೆಳುದೇಹದ ಗೋಪಿಯು ಪತಿಯೇ ಶ್ರೀಕೃಷ್ಣನೇ, ಅವನ ಮಗನೇ ತನ್ನ ಮಗ, ಅವನು ನೆಲೆಸಿದ್ದುದೇ ತನ್ನ ಮನೆ ಎಂದು ಕಲ್ಪಿಸಿಕೊಳ್ಳುತ್ತಾ ತನ್ನ ಪತಿಯ ಪೂಜೆಯನ್ನಾಗಲೀ, ಮಗನ ರಕ್ಷಣೆಯನ್ನಾಗಲೀ, ಗೃಹಕೃತ್ಯವನ್ನಾಗಲೀ ಮಾಡದವಳಾಗಿದ್ದಳು.

ವಿ. : ೧. ಶ್ರೀಕೃಷ್ಣನ ಆರಾಧನೆಯಲ್ಲಿ ಮಗ್ನಳಾದ ಮತ್ತೊಬ್ಬ ಗೋಪಿಯು ಗಂಡ-ಮಕ್ಕಳು ಹಾಗೂ ಮನೆಕೆಲಸದ ಯೋಚನೆಯನ್ನೂ ಕೈಬಿಟ್ಟಿದ್ದಳು ಎಂದರ್ಥ. ಇದು ಗೋಪೀಗೀತೆಯಲ್ಲಿ ಬಂದ **ಪತಿಸುತಾನ್ವಯಭ್ರಾತೃಬಾಂಧವಾನತಿವಿಲಂಘ್ಯ ತೇ ಹ್ಯಚ್ಯುತಾಗತಾಃ** ಎಂಬ ಮಾತಿನ ವಿವರಣೆಯಂತಿದೆ.

೨. ಶ್ರೀಹರಿಪ್ರೀತಿಗಾಗಿ ಪತಿಸೇವೆ, ಮಕ್ಕಳ ಪಾಲನೆ, ಗೃಹಕೃತ್ಯಗಳನ್ನು ಸ್ತ್ರೀಯರು ಮಾಡಬೇಕೆಂಬುದು ಶಾಸ್ತ್ರದ ವಿಧಿ ; ಆದರೆ ಸಾಕ್ಷಾತ್ ಕೃಷ್ಣನಿಗಾಗಿಯೇ ಅವೆಲ್ಲವನ್ನೂ ತೊರೆದಿದ್ದುದು ಈ ಗೋಪಿಯ ರೀತಿಯಾಗಿದ್ದಿತು. ಇದರಿಂದ ಇವಳು ರಮಾವೇಶದಿಂದಾಗಿ ಶ್ರೀಕೃಷ್ಣನೇ ಪತಿ ಎಂಬುದಾಗಿ ಆರಾಧಿಸುವ ವಿಶೇಷ ಅರ್ಹತೆ ಪಡೆದಿದ್ದವಳು ಎಂದರ್ಥ.

೩. ರಮಾವೇಶದಿಂದ ಇತರ ಸ್ತ್ರೀಯರು ಹೀಗೆ ಶ್ರೀಹರಿಯನ್ನೇ ತಮ್ಮ ಪತಿ ಎಂಬುದಾಗಿ ಆರಾಧಿಸುವುದು ಶಾಸ್ತ್ರ ಸಮ್ಮತವಲ್ಲ ಎಂಬ ವಿವರ ಶ್ರೀಮದ್ಭಾಗವತ ತಾತ್ಪರ್ಯದಲ್ಲಿದೆ : **ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ** - (೭/೧೨/೩೦)

ಮುಡಿಕಟ್ಟದ ವ್ರತದ ಗೋಪಿ

ರತಾವಸಾನೇ ಮುರಜಿತ್ಕರೇಣ
ನಿಬದ್ಧುಮೇಕೋಜ್ಝಿತಕೇಶಬಂಧಾ ।
ತದೈವ ತತ್ಸಂಹಿತಭೂಷಣೇಚ್ಛಾ
ನ ಭೂಷಣಂ ಕಾಽಪಿ ಬಿಭರ್ತಿ ಬಾಲಾ ॥ ೨೧ ॥

ಸುರತದ ಅನಂತರ ಮುರಾರಿಯಾದ ಶ್ರೀಕೃಷ್ಣನೇ ತನ್ನ ಕೈಯಿಂದ ಕಟ್ಟಲಿ ಎಂಬ ಕಾರಣದಿಂದ ಮುಡಿಕಟ್ಟುವುದನ್ನೇ ಒಬ್ಬಳು ತೊರೆದಿದ್ದಳು; ಆಗಲೇ ಶ್ರೀಕೃಷ್ಣ ತನಗೆ ಆಭರಣ ತೊಡಿಸಲಿ ಎಂಬ ಬಯಕೆಯಿಂದ ಆಭರಣ ತೊಡುವುದನ್ನೇ ಮತ್ತೊಬ್ಬ ಗೋಪಬಾಲೆಯು ತೊರೆದಿದ್ದಳು.

ವಿ. : ೧. ಒಬ್ಬ ಗೋಪಿಯ ವ್ರತ ಮುಡಿ ಕಟ್ಟುವುದನ್ನು ತೊರೆಯುವುದಾಗಿದ್ದರೆ, ಮತ್ತೊಬ್ಬಳದು ಆಭರಣ ತ್ಯಾಗದ ವ್ರತವಾಗಿದ್ದಿತು ಎಂದರ್ಥ.

೨. ದ್ರೌಪದೀದೇವಿಯು ದುಶ್ಯಾಸನ ಕೈಹಾಕಿದ ಮುಡಿಯನ್ನು ಅವರೆಲ್ಲರ ವಿನಾಶದ ವರೆಗೂ ಮರಳಿ ಕಟ್ಟದ ವ್ರತವನ್ನು ಹೊಂದಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು[೧].

**ರಾಸಕ್ರೀಡೆಯ ಅನುಗ್ರಹಕ್ಕೆ ತುಲಸಿಯ ಪ್ರಾರ್ಥನೆ**

ಪ್ರದಕ್ಷಿಣೀಕೃತ್ಯ ದಿನೇ ದಿನೇಽನ್ಯಾಃ
ಸ್ವಧಾಮವೃಂದಾವನಮರ್ಥಯಂತೇ ।
ವಿಕಸ್ವರಕ್ಷ್ಮಾರುಹಪುಂಜಮಂಜು-
ಮುಕುಂದವೃಂದಾವನರಾಸಲೀಲಾಮ್[೨] ॥ ೨೨ ॥

ಇತರ ಗೋಪಿಯರು ತಮ್ಮ ಮನೆಯಲ್ಲಿನ ತುಲಸಿ ವೃಂದಾವನವನ್ನು ದಿನದಿನವೂ ಪ್ರದಕ್ಷಿಣೆ ಮಾಡುತ್ತಾ ಹೊಳೆಯುವ ವೃಕ್ಷಗಳ ಗುಂಪಿನಿಂದ ಕೂಡಿದ ಮನೋಹರವಾದ ಶ್ರೀಕೃಷ್ಣನ ವೃಂದಾವನದಲ್ಲಿ ನಡೆದ ರಾಸಕ್ರೀಡೆಯನ್ನು ಪ್ರಾರ್ಥಿಸಿಕೊಳ್ಳುತ್ತಿದ್ದರು.

**ಗೋಪಿಯೊಬ್ಬಳು ಕೈಗೊಂಡಿದ್ದ ಮೌನವ್ರತ**

ನಿಜೈರ್ಜನನ್ಯಾ ಜನಕೇನ ಸಾಕಂ
ನ ಭಾಷತೇ ಕಿಂಚನ ಕಾಽಪಿ ಗೋಪೀ ।
ಪ್ರಿಯೇಣ ಸಾರ್ಧಂ ಬತ ರಮ್ಯಗೋಷ್ಠೀ-
ಮಕುರ್ವತೀ ಕಿಂ ವಚಸೇತಿ ದೀನಾ ॥ ೨೩ ॥

ಪ್ರಿಯನಾದ ಶ್ರೀಕೃಷ್ಣನೊಂದಿಗೆ ರಮ್ಯ ಮಾತುಕತೆಗಳನ್ನು ಮಾಡಲಾಗದ ತಾನು ಇತರರೊಂದಿಗೆ ಏಕೆ ಮಾತನಾಡುವುದು? ಎಂದು ದೀನಳಾದ ಮತ್ತೊಬ್ಬ ಗೋಪಿಯು ತನ್ನ ಜನರೊಂದಿಗಾಗಲಿ, ತಾಯಿಯೊಂದಿಗಾಗಲಿ, ತಂದೆಯೊಂದಿಗಾಗಲಿ ಏನನ್ನೂ ಮಾತನಾಡುತ್ತಿರಲಿಲ್ಲ.

ವಿ. : ಈ ಗೋಪಿಯದು ಮೌನವ್ರತವಾಗಿದ್ದಿತು ಎಂದರ್ಥ; ಒಂದರ್ಥದಲ್ಲಿ ಇದು ''ಪ್ರಲಾಪಸ್ಯ ಚ ವರ್ಜನೇ'' ಮ.ಭಾ.ತಾ.ನಿ.(೨/೧೫೯)ಎಂಬ ಭೀಮಸೇನನ ಆದರ್ಶವನ್ನು ಹೋಲುವುದು.

---

೧. ಆಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ ।
ಮುಕ್ತಕೇಶಾ ಭವಿಷ್ಯಂತಿ ಧಾರ್ತರಾಷ್ಟ್ರಸ್ತ್ರಿಯಸ್ತ್ವಿತಿ — ಮ.ಭಾ.ತಾ.ನಿ (೨೧/೪೦೨)

೨. ರಾಸಲೀಲಾಯಾಶ್ಚ ಪ್ರದಕ್ಷಿಣಾಕಾರತ್ವಾತ್ ಸಾಮ್ಯೇನ ಫಲತ್ವೋಕ್ತಿಃ । —ವ್ಯಾ.

ಮಂದಮಾರುತವನ್ನು ಸಹಿಸದ ಮತ್ತೊಬ್ಬ ಗೋಪಿ

ಮಂದಾನಿಲಂ ಚಂದನರಮ್ಯಗಂಧಿ-
ಮಿಂದೀವರಾಕ್ಷೀ ಸಹತೇ ನ ಕಾಚಿತ್ ।
ವಿಶ್ಲೇಷವಹ್ನೇರ್ದಹತೋ ನಿಜಾಂಗಂ
ವೃದ್ಧಿಂ ವಿದಧ್ಯಾದಿತಿ ಚಿಂತಯೇವ ॥ ೨೪ ॥

ಕನ್ನೈದಿಲೆಯ ಕಣ್ಣಿನ ಮತ್ತೊಬ್ಬಳು ತನ್ನ ದೇಹವನ್ನು ಸುಡುವ ಅಗಲುವಿಕೆಯ ಬೆಂಕಿಯನ್ನು ಮತ್ತಷ್ಟು ಹೆಚ್ಚಿಸೀತು ಎಂಬ ಚಿಂತೆಯಿಂದೆಂಬಂತೆ, ಶ್ರೀಗಂಧದ ರಮ್ಯಪರಿಮಳದ ಮಂದಮಾರುತವನ್ನು ಸಹಿಸದವಳಾಗಿದ್ದಳು.

ವಿ. : ಗಾಳಿ ಬೀಸಿದಾಗ ಬೆಂಕಿ ಪ್ರಜ್ವಲಿಸುವುದು; ಶ್ರೀಕೃಷ್ಣನ ವಿರಹಾಗ್ನಿಯು ಮಂದ-ಮಾರುತದಿಂದ ಹೆಚ್ಚದಿರಲಿ ಎಂಬ ಕಾರಣದಿಂದ ಅವಳು ಹಾಗೆ ವರ್ತಿಸುತ್ತಿದ್ದಳು ಎಂಬ ಭಾವ ಅತ್ಯಂತ ರೋಚಕವಾದುದು.

ಇನ್ನೊಬ್ಬ ಗೋಪಿಯ ಮತ್ತೊಂದು ಬಗೆಯ ಮೌನವ್ರತ

ಆಲಾಪಮಾಲ್ಯಾಃ ಪ್ರಿಯಮಪ್ಯಪಾರ್ಥ-
ಮಾಲೋಚ್ಯ ಬಾಲಾ ನಹಿ ಶುಶ್ರುವೇऽನ್ಯಾ ।
ಸೇಯಂ ಮುಕುಂದಾಗಮನಂ ವದಂತೀ
ಜಾತೇದೃಶೀತ್ಯುತ್ಥಿತತೀವ್ರತಾಪಾ ॥ ೨೫ ॥

ಮತ್ತೊಬ್ಬಳು, ''ಶ್ರೀಕೃಷ್ಣನ ಆಗಮನವನ್ನು ತಿಳಿಸುವ ಇವಳು ಹೀಗೆ ಇತರ ವಿಚಾರಗಳನ್ನು ತಿಳಿಸುವಂತಾಗಿರುವಳಲ್ಲ'' ಎಂಬ ತೀವ್ರ ನೋವಿನಿಂದಾಗಿ, ತನ್ನ ಗೆಳತಿಯ ಪ್ರಿಯವಾದ ಮಾತನ್ನು ಸಹ ಅರ್ಥಹೀನ ಎಂಬ ಕಾರಣದಿಂದ ಕೇಳುವ ಗೋಜಿಗೆ ಹೋಗದವಳಾಗಿದ್ದಳು.

ವಿ. : ಆ ಮುನ್ನ ಕೃಷ್ಣನ ಆಗಮನವಾರ್ತೆಯನ್ನು ತಿಳಿಸುವಳು ಎಂಬ ಕಾರಣದಿಂದ ತನ್ನ ಸಖಿಯ ಮಾತನ್ನು ಕೇಳುತ್ತಿದ್ದಳು; ಶ್ರೀಕೃಷ್ಣನ ಅಗಲುವಿಕೆಯ ಸಂದರ್ಭದಲ್ಲಿ ಅಂತಹ ಮಾತು ಕೇಳಲಾರದು ಎಂಬ ಭಾವದಿಂದ ಆ ಗೋಪಿಯು ತನ್ನ ಸಖಿಯ ಮಾತನ್ನು ಸಹ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ ಎಂದರ್ಥ.

ಕರ್ಪೂರ ಕುಂಕುಮಾದಿಗಳನ್ನು ಬಯಸದಾಗಿದ್ದ ಇನ್ನೊಬ್ಬ ಗೋಪಿ

ಕರ್ಪೂರಕುಂಕುಮಲಸನ್ಮೃಗನಾಭಿಶೋಭಿ
ನೇಚ್ಛತ್ಯಹೋ ಮಲಯಜಾಮಲಚೂರ್ಣಮನ್ಯಾ ।

ಕೃಷ್ಣಾಂಗಸಂಗಿ ತದಲಂ ಪರಿರಭ್ಯ ದೋರ್ಭ್ಯಾಂ
ಧರ್ತುಂ ಧಿಯೇವ ವರವೈಷ್ಣವವರ್ಗಯೋಗ್ಯಮ್ ॥ ೨೬ ॥

ಮತ್ತೊಬ್ಬ ಗೋಪಿಯು ಶ್ರೀಕೃಷ್ಣನಿಂದ ಸೇವಿತವಾದ ಶ್ರೇಷ್ಠ ವೈಷ್ಣವರ ಗುಂಪಿಗೆ ಯೋಗ್ಯವಾದ ಆ ಶ್ರೀಗಂಧದ ಚೂರ್ಣವನ್ನು ಅವನನ್ನು ತನ್ನ ಕೈಗಳಿಂದ ಗಾಢವಾಗಿ ಆಲಿಂಗಿಸಿಕೊಂಡು ಧರಿಸಿಕೊಳ್ಳಬೇಕು ಎಂಬ ಬುದ್ಧಿಯಿಂದಲೋ ಎಂಬಂತೆ ಕರ್ಪೂರ, ಕುಂಕುಮ ಹಾಗೂ ಹೊಳೆಯುವ ಮೃಗನಾಭಿಗಳಿಂದ ಶೋಭಿಸುವ ಮಲಯದಲ್ಲಿ ಹುಟ್ಟುವ ಶ್ರೀಗಂಧದ ಚೂರ್ಣವನ್ನು ಬಯಸದವಳಾಗಿದ್ದಳು; ಆಶ್ಚರ್ಯ !

ವಿ. : ೧. ಶ್ರೀಕೃಷ್ಣನ ಈ ನಿರ್ಮಾಲ್ಯ ಗಂಧಮಾತ್ರವೇ ಅವಳಿಗೆ ಪ್ರಿಯವಾಗಿದ್ದಿತು; ಹಾಗಿಲ್ಲದ ನೂತನ ಗಂಧದ ಬಗ್ಗೆ ಅವಳಿಗೆ ಅಪೇಕ್ಷೆ ಇರಲೇ ಇಲ್ಲ ಎಂದರ್ಥ.

೨. ಭೋಗ್ಯವಸ್ತುಗಳು ಎಷ್ಟೇ ಆಕರ್ಷಕವಾಗಿದ್ದರೂ ಶ್ರೀಹರಿಗೆ ಸಮರ್ಪಿತವಾಗದಿದ್ದಲ್ಲಿ ಅವೆಲ್ಲ ಹೇಯ ಎಂಬ ತತ್ತ್ವ ಇಲ್ಲಿ ನಿರೂಪಿತವಾಗಿದೆ.

### ಹೂವನ್ನು ಮೆಚ್ಚದಾಗಿದ್ದ ಗೋಪಿ

ಕೀರೇಂದುಕೋಕಿಲಮಧುವ್ರತಮಾನ್ಯಗಂಧ-
ಪುಷ್ಪಾಣಿ ಕಾಪಿ ನ ಹೃದೋ ವಿಷಯೀಕರೋತಿ ।
ಕೃಷ್ಣೋಕ್ತಿಸನ್ಮುಖಮೃದುಸ್ವರಕುಂತಲಾಂಗ-
ಸೌರಭ್ಯಸಂಗತತದೀಯಸಮಸ್ತವೃತ್ತಿಃ ॥ ೨೭ ॥

ಒಬ್ಬ ಗೋಪಿಯು ಶ್ರೀಕೃಷ್ಣನ ಮಾತು, ಅವನ ಸುಂದರ ಮುಖ, ಕೋಮಲ ಧ್ವನಿ, ಮುಂಗುರುಳುಗಳು, ದೇಹದ ಪರಿಮಳ ಮೊದಲಾದ ಅವನಿಗೆ ಸಂಬಂಧಿಸಿದ ಸಕಲವೃತ್ತಿಗಳಲ್ಲೇ ತಲ್ಲೀನಳಾಗಿ, ಗಿಳಿ, ಚಂದ್ರ, ಕೋಗಿಲೆ, ದುಂಬಿಗಳಿಂದ ಮಾನ್ಯವಾದ ಪರಿಮಳವನ್ನು ಹೊಂದಿದ ಹೂವುಗಳನ್ನು ಮನಸ್ಸಿಗೆ ತಾರದವಳಾಗಿದ್ದಳು.

ವಿ. : [೧]ಶ್ರೀಕೃಷ್ಣನ ಮಾತು ಗಿಳಿಯಂತೆ; ಅವನ ಮುಖ ಚಂದ್ರನಂತೆ; ಅವನ ಸ್ವರ ಕೋಗಿಲೆ-ಯಂತೆ; ಅವನ ಮುಂಗುರುಳುಗಳು ಭ್ರಮರಗಳಂತೆ; ದೇಹದ ಪರಿಮಳ ಶ್ರೀಗಂಧದಂತೆ ಎಂಬುದನ್ನು ಮನಗಂಡಿದ್ದ ಗೋಪಿಗೆ ಶ್ರೀಕೃಷ್ಣನಿಲ್ಲದ ಅವು ಯಾವುವೂ ಸಹ ಬೇಕೆನಿಸುತ್ತಿರಲಿಲ್ಲ ಎಂದರ್ಥ.

---

೧. ವಿಯುಕ್ತಭರ್ತೃಪ್ರಿಯೋಕ್ತ್ಯಾ ಹಿ ಸ್ಮಾರಕತಯಾ ವಿರಹಕ್ಲೇಶೋದ್ಬೋಧಕತ್ವಾನ್ನ ಸಹತ ಇತಿ ಭಾವಃ। ವಿಷಯದ್ವೇಷಂ ಶ್ರೀಕೃಷ್ಣಸಂಬಂಧಿಫಲೋತ್ಸುಕತಯಾ ಚಕ್ರುರಿತ್ಯುಕ್ತ್ಯಾ ಸರ್ವತ್ರೋತ್ಪ್ರೇಕ್ಷಾ ದ್ರಷ್ಟವ್ಯಾ। -ವ್ಯಾ.

## ಉದ್ಧವನನ್ನು ದುಂಬಿಯಂತೆ ತಿಳಿದ ಗೋಪಿಯರ ಮಾತು

ಕೃಷ್ಣಾಂಘ್ರಿಭೃಂಗಂ ತಂ ವೀಕ್ಷ್ಯ ಲಜ್ಜಾಕ್ಲೇಶವಶಂಗತಾಃ ।
ಶ್ಲಿಷ್ಟೋಕ್ತ್ಯೋಚುಸ್ತಥಾ ಭೃಂಗಂ ಲಕ್ಷೀಕೃತ್ಯಾನ್ಯಮಗ್ರತಃ ॥ ೨೮ ॥

ಶ್ರೀಕೃಷ್ಣನ ಪಾದಕಮಲದ ಭ್ರಮರದಂತಿದ್ದ ಆ ಉದ್ಧವನನ್ನು ಕಂಡು ನಾಚಿಕೆ ಹಾಗೂ ದುಃಖಗಳಿಗೆ ವಶರಾದ ಆ ಗೋಪಿಯರು ಎದುರಿನಲ್ಲಿದ್ದ ದುಂಬಿಯೊಂದನ್ನು ಗುರಿಮಾಡಿ-ಕೊಂಡು ಶ್ಲಿಷ್ಟೋಕ್ತಿಯಿಂದ ಹೀಗೆ ಮಾತನಾಡತೊಡಗಿದರು.

ವಿ. : ೧. ಇಲ್ಲಿಂದ ೩೬ರವರೆಗಿನ ಶ್ಲೋಕಗಳಲ್ಲಿ ಶ್ರೀಮದ್ಭಾಗವತದ ಭ್ರಮರಗೀತೆಯ ಭಾವವು[೧] ನಿರೂಪಿತವಾಗಿದೆ.

---

೧. ಭ್ರಮರಗೀತಾ
ಕಾಚಿನ್ಮಧುಕರಂ ದೃಷ್ಟ್ವಾ ಧ್ಯಾಯಂತೀ ಕೃಷ್ಣಸಂಗಮಮ್ ।
ಪ್ರಿಯಪ್ರಸ್ಥಾಪಿತಂ ದೂತಂ ಕಲ್ಪಯಿತ್ವೇದಮಬ್ರವೀತ್ ॥
ಗೋಪ್ಯುವಾಚ :
ಮಧುಪ ಕಿತವ ಬಂಧೋ ಮಾ ಸ್ಪೃಶಾಸ್ಮಾನ್ ಸಪತ್ನ್ಯಾಃ ಕುಚವಿಲುಲಿತಮಾಲಾಕುಂಕುಮಶ್ಮಶ್ರುಭಿಸ್ತ್ವಮ್ ।
ವಹತು ಮಧುಪತಿಸ್ತನ್ಮಾನಿನೀನಾಂ ಪ್ರಸಾದಂ ಯದುಸದಸಿ ವಿಡಂಬ್ಯಂ ಯಸ್ಯ ದೂತಸ್ತ್ವಮೀದೃಕ್ ॥
ಸಕೃದಧರಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ ಸುಮನಸ ಇವ ಸದ್ಯಃ ಕಸ್ತ್ಯಜೇಸ್ಮಾಂ ಭವಾದೃಕ್ ।
ಪರಿಚರತಿ ಕಥಂ ತತ್ಪಾದಪದ್ಮಂ ತು ಪದ್ಮಾ ಹ್ಯಪಿ ಬತ ಹೃತಚೇತಾ ಉತ್ತಮಶ್ಲೋಕಜಲ್ಪೈಃ ॥
ಕಿಮಿಹ ಬಹುಷಡಂಘ್ರೇ ಗಾಯಸಿ ತ್ವಂ ಯದೂನಾಮಧಿಪತಿಮಗೃಹಾಣಾಮಗ್ರತೋ ನಃ ಪುರಾಣಮ್ ।
ವಿಜಯಸಖಸಖೀನಾಂ ಗಾಯತಾಂ ತತ್ಪ್ರಸಂಗಃ ಕ್ಷಪಿತಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ ॥
ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ ಕಪಟರುಚಿರಹಾಸಭ್ರೂವಿಜೃಂಭಸ್ಯ ಯಾಃ ಸ್ಯುಃ ।
ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ ಅಪಿ ಚ ಕೃಪಣಪಕ್ಷೇ ಹ್ಯುತ್ತಮಶ್ಲೋಕಶಬ್ದಃ ॥
ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈರಲಮನುನಯಸಾರ್ವೈರ್ಯಾಹಿ ದೌತ್ಯೇ ಮುಕುಂದಮ್ ।
ಸ್ವಕೃತ ಇಹ ವಿಸೃಷ್ಟಾಪತ್ಯಪತ್ಯಾಪ್ತಲೋಕಾ ವ್ಯಸೃಜದಕೃತಚೇತಾಃ ಕಿಂ ನು ಸಂಧೇಯಮಸ್ಮಿನ್ ॥
ಮೃಗಯುರಿವ ಕಪೀಂದ್ರಂ ವಿವ್ಯಧೇ ಯಃ ಕಿರಾತಃ ಸ್ತ್ರಿಯಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯಾನಾಮ್ ।
ಬಲಿಮುಪಿ ಬಿಲವಾಸಂ ವೇದವಿದ್ವರ್ಗವಂದ್ಯಸ್ತದಲಮಸಿತಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ॥
ಯದನುಚರಿತಲೀಲಾಕರ್ಣಪೀಯೂಷವಿಪ್ರುಟ್ ಸಕೃದದನವಿಧೂತದ್ವಂದ್ವಧರ್ಮಾವಿನಷ್ಟಾಃ ।
ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯದೀನಾ ಬಹವ ಇಹ ವಿಹಂಗಾ ಭೈಕ್ಷ್ಯಚರ್ಯಾಂ ಚರಂತಿ ॥
ವಯಮೃತಮಿಹ ಜಿಹ್ಮಂ ವ್ಯಾಹೃತಂ ಶ್ರದ್ದಧಾನಾಃ ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ।
ದದೃಶಿಮ ಸಕೃದೇತತ್ತನ್ನಖಸ್ಪರ್ಶತೀವ್ರಸ್ತನರುಜಪರಮಾರ್ತಿಂ ಭಣ್ಯತಾಮಸ್ಯ ವಾರ್ತಾ ॥
ಪ್ರಿಯಸಖ ಪುನರಾಗಾಃ ಪ್ರೇಯಸಾ ಪ್ರೇಷಿತಸ್ತ್ವಂ ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ।
ನಯಸಿ ಕಥಮಿಹಾಸ್ಮಾನ್ ದುಸ್ತ್ಯಜಂ ಬಂಧುಪಾರ್ಶ್ವಂ ಸತತಮುರಸಿ ಸೌಮ್ಯ ಶ್ರೀವಧೂಃ ಸಾಕಮಾಸ್ತೇ ॥
ಅಪಿ ಬತ ಮಧುಪುರ್ಯಾಮಾರ್ಯಪುತ್ರೋಽಧುನಾಽಽಸ್ತೇ ಸ್ಮರತಿ ಸ ಪಿತೃಗೇಹಂ ಸೌಮ್ಯ ಬಂಧೂಂಶ್ಚ ಗೋಪಾನ್ ।
ಕ್ವಚಿದಪಿ ಸ ಕಥಂ ನಃ ಕಿಂಕರೀಣಾಂ ಗೃಹೀತೋ ಭುಜಮಗರುಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾ ನು ॥
-ಭಾಗ. (೧೦/೪೭/೧೨-೨೧)

೨. ಭ್ರಮರವನ್ನು ಉದ್ದೇಶಿಸಿ ಉದ್ಧವನಿಗೆ ನುಡಿಯುವ ಗೋಪಿಯರ ಈ ಮಾತುಗಳನ್ನು ಭ್ರಮರಗಳಿಗೂ ಸಹ ಯಥೋಚಿತವಾಗಿ ಅನ್ವಯಿಸಿಕೊಳ್ಳಬೇಕು.

೩. ಲಜ್ಜೆ ಹಾಗೂ ನಿಷ್ಠುರನುಡಿಗಳಿಂದ ಆಗುವ ಕ್ಲೇಶದಿಂದಾಗಿ ಅವರು ನೇರವಾಗಿ ನುಡಿಯದೆ, ಭ್ರಮರವನ್ನುದ್ದೇಶಿಸಿ, ಮಾತನಾಡಿದರು ಎಂದು ಭಾವ : 'ಸಾಕ್ಷಾದ್ವಚನೇ ಲಜ್ಜಾ ನಿಷ್ಠುರೋಕ್ತೌ ಕ್ಲೇಶಃ ಕಾರಣಮಿತಿ ದ್ರಷ್ಟವ್ಯಮ್' । –ವ್ಯಾ.

ಭ್ರಮರಗೀತೆ – ಶ್ರೀಕೃಷ್ಣವಿರಹದ ಬೇಗೆಗೆ ಬೆಂದ ಗೋಪಿಯರು

ಮಧುಪ ಚರಸಿ ಕಸ್ಮಾದಸ್ಮದಗ್ರೇ ತ್ವಮಗ್ರ್ಯ-
ದ್ವಿರದವರದಮೂರ್ಧಾರೋಹಯೋಗ್ಯೋಽಸಿ ನೂನಮ್ ।
ವಿಷಮವಿರಹವಹ್ನೌ ನಿರ್ದಹತ್ಯಸ್ಮದಂಗಂ
ಕಿಮಿಹ ಪತಿತುಮಿಚ್ಛಸ್ಯಜ್ಞ ದೂರೇ ಪ್ರಯಾಹಿ ॥ ೨೯ ॥

ಎಲೈ ಭ್ರಮರವೇ ! ನೀನೇಕೆ ನಮ್ಮೆದುರು ಅಲೆಯುತ್ತಿರುವಿ? ನೀನು ಶ್ರೇಷ್ಠವಾದ ಗಜೇಂದ್ರನಿಗೆ ವರ ನೀಡಿದ ಶ್ರೀಕೃಷ್ಣನ ಶಿರಸ್ಸನ್ನೇರಲು ಯೋಗ್ಯನಾದವನು; ಇದು ನಿಶ್ಚಯ. ನಮ್ಮ ದೇಹವನ್ನು ಸುಟ್ಟುಹಾಕುತ್ತಿರುವ ಸಹಿಸಲಾಗದ ಅಗಲುವಿಕೆಯ ನೋವಿನ ಬೆಂಕಿಯಲ್ಲಿ ನೀನು ಬೀಳಲು ಬಯಸಿರುವಿಯೇನು? ಎಲೈ ತಿಳಿಗೇಡಿಯೇ ! ದೂರಕ್ಕೆ ತೆರಳು.

ವಿ. : ೧. ಸುಡುವ ಬೆಂಕಿಯ ಸಂಗ ಮಾಡಿದಾಗ ಭ್ರಮರವು ಸುಟ್ಟುಹೋಗುವುದು ಖಚಿತ; ಗೋಪಿಯರಾದರೂ ಈಗ ಶ್ರೀಕೃಷ್ಣನ ಅಗಲುವಿಕೆಯ [೧]ಬೆಂಕಿಯಲ್ಲಿ ನೋಯುತ್ತಿರುವರು; ಅವರ ಬಳಿಗೆ ತೆರಳಿದಲ್ಲಿ ದುಂಬಿಗೆ ಆ ಬಿಸಿ ತಗಲುವುದರಿಂದ ಅದರ ಅಳಿವು ಖಚಿತ ಎಂದು ಭಾವ.

೨. ಇಲ್ಲಿ ಮಧುಪ ಎಂದರೆ ಉದ್ಧವ; ಅವರಿಗೆ ಒದಗಿರುವ ವಿಯೋಗವಹ್ನಿ ಶ್ರೀಕೃಷ್ಣನವಿರಹ; ಉದ್ಧವನ ಸಾಂತ್ವನದ ನುಡಿಗಳನ್ನು ಕೇಳುವ ಸ್ಥಿತಿಯಲ್ಲಿ ಅವರು ಇಲ್ಲ ಎಂಬುದು ಅವರ ವಿರಹಾಗ್ನಿಯಲ್ಲಿ ಸುಟ್ಟುಹೋಗುವನು ಎಂಬ ಬೆದರಿಕೆಯ ಭಾವ.

ಭ್ರಮರಗೀತೆ – ಗೋಪಿಯರಿಗೆ ಗ್ರಹಗತಿಯಂತೆ ಕಂಡ ಉದ್ಧವ

ಸದಸಿ ಸುಮನಸಾಂ ತ್ವಂ ಪ್ರೌಢಿಮಾದರ್ಶಯಾಲಂ
ವಿಧುರವಿವಿಧಯೋಷಿತ್ತಾಪಮಾಪಾದಯೇಃ ಕಿಮ್ ।

೧. ವಿರಹಾಗ್ನೇರುತ್ಕಟತ್ವೇನಾಸ್ಮತ್ಸಮೀಪೇ ಸಂಚರತಸ್ತವಾಪಿ ದಾಹೋ ಭವೇದಿತಿ ಮೋಹಾವಸ್ಥೋಪೋದ್ವಲಿತೇತಿ ಭಾವಃ। –ವ್ಯಾ.

[೧]ಗ್ರಹಗತಿರಿಯಮಾರ್ಯಾ ಯತ್ಪುರಸ್ತಾದಯಂ ನೋ
ವಸತಿ ವಸತಿಪುತ್ರಾಮಿತ್ರವಾರ್ತೋಜ್ಝಿತಾನಾಮ್ ॥ ೩೦ ॥

ನೀನೀಗ ದೇವತೆಗಳ ಸಭೆಯಲ್ಲಿ ನಿನ್ನ ಕೌಶಲವನ್ನು ಬಹಳವಾಗಿ ತೋರಿಸಿಕೊ; ಚಂದ್ರಸೂರ್ಯರಂತೆ ಇರುವ ಎಲೈ ಉದ್ಧವನೇ! ಸ್ತ್ರೀಯರಾದ ನಮಗೆ ತಾಪವನ್ನು ಉಂಟುಮಾಡುತ್ತಿರುವಿಯೇನು? ಎಲೈ ಉತ್ತಮ ಸ್ತ್ರೀಯರೇ ! ಮನೆ, ಮಕ್ಕಳು, ಶತ್ರುಗಳು ಮೊದಲಾದವರ ವಿಚಾರವನ್ನು ತೊರೆದ ನಮ್ಮೆದುರಿನಲ್ಲಿ ಇವನು ನಿಂತಿರುವುದು ನಮ್ಮ ಗ್ರಹಚಾರವೇ ಸರಿ.

ವಿ. : ೧. [೨]ಉದ್ಧವನು ಸುರಗುರುವಾದ ವಾಚಸ್ಪತಿ ಎನ್ನಿಸಿದ ಬೃಹಸ್ಪತಿಯ ಅವತಾರವಾದ್ದರಿಂದ ದೇವಸಭೆಯಲ್ಲಿ ನಿನ್ನ ಕೌಶಲವನ್ನು ತೋರಿಸು ಎಂಬ ಮಾತು ಉಚಿತವಾಗಿದೆ; ಬೃಹಸ್ಪತಿಯು ಗುರುಗ್ರಹದ ಅಭಿಮಾನಿದೇವತೆಯೂ ಆಗಿರುವನು ಎಂಬುದು ಇದರ ಔಚಿತ್ಯವನ್ನು ಹೆಚ್ಚಿಸುವುದು.

೨. [೩]ಬೃಹಸ್ಪತಿ(ಗುರು)ಯು ನವಗ್ರಹಗಳಲ್ಲಿ ಒಬ್ಬ ; ಅವನು ಸಂಚರಿಸುವುದು ವರ್ಷಕ್ಕೆ ಒಂದು ರಾಶಿ, ಆದ್ದರಿಂದ ನೀನೀಗ ತೆರಳು ಎಂದರೂ ಸಹ ಅವನು ತೆರಳುತ್ತಿಲ್ಲ.

೩.. [೪]ಬಗೆಬಗೆಯ ವಿರಹಿಣಿ ಸ್ತ್ರೀಯರಿಗೆ ಭ್ರಮರ ದರ್ಶನ ಉದ್ದೀಪನಕಾರಿ ಎಂದೂ ಭಾವ.

೪. [೫]ಅಂತಹ ನೋವಿನ ಸಮಯದಲ್ಲಿ ಗುರುವಿನ ಅವತಾರವಾದ ಬೃಹಸ್ಪತಿ ಬಂದಿರುವುದು ಬರಗಾಲದಲ್ಲಿ ಅಧಿಕಮಾಸ ಎಂಬಂತೆ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

## ಭ್ರಮರಗೀತೆ - ಗುರುವಿನಂತೆ ಉಪದೇಶಿಸುತ್ತಿರುವ ಉದ್ಧವ

ವರುಣದಿಶಿ ಗತೋಽಪಿ ಸ್ವೈರಮುದ್ಯಾತಿ ಸೋಽಪಿ
ಬತ ದಿಶಿ ಬಲಭೇತ್ತುಃ ಕಾಮದಃ ಕಾಮಿನೀನಾಮ್ ।
[೬]ಗುರುರಿವ ಸಖಿ ಕರ್ಣೋಪಾಂತಮಭ್ಯೇತ್ಯ ಗೀತಂ
ಹರಿಪದಕೃತವೃತ್ತಿಃ ಶ್ರಾವಯತ್ಯೇಷ ಧೀರಃ ॥ ೩೧ ॥

---

೧. ಇಯಮಿತಿ ಸ್ತ್ರೀಲಿಂಗನಿರ್ದೇಶಃ "ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ" ಇತಿವತ್ ವಿಶೇಷ್ಯಪ್ರಾಧಾನ್ಯವಿವಕ್ಷಯಾ। -ವ್ಯಾ.
೨. ಉದ್ಧವಸ್ಯ ಸುರಗುರುತ್ವಾದಿತಿ ಭಾವಃ। -ವ್ಯಾ.
೩.. ಉದ್ಧವಸ್ಯ ಬೃಹಸ್ಪತ್ಯವತಾರತ್ವೇನ ಆದಿತ್ಯಾದಿಗ್ರಹನವಕೇ ಪಠಿತತ್ವಾದಿತ್ಯರ್ಥಃ। -ವ್ಯಾ.
೪. ಅಸ್ಮಾಕಂ ಗ್ರಹಚಾರಃ। ದುರದೃಷ್ಟಮಿತ್ಯಾಕ್ರೋಶಃ। -ವ್ಯಾ.
೫. ಗ್ರಹಸ್ಯ ನವಗ್ರಹಮಧ್ಯೇ ಪಠಿತಸ್ಯ ಬೃಹಸ್ಪತೇರ್ಯಾಗತಿರೇಕವರ್ಷಪರ್ಯಂತಾ ಏಕರಾಶೌ ಸ್ಥಿತೇರಸ್ಯ ಸ್ವಭಾವತ್ವಾತ್ ಗಚ್ಛೇತ್ಯುಕ್ತೇಽಪಿ ನ ಗಚ್ಛತೀತಿ ಹೃದಯಮ್। -ವ್ಯಾ.
೬. ಗುರುರಿವೋಪದೇಷ್ಟೇವ। ಕರ್ಣೋಪಾಂತೇ ಝುಂಕಾರಂ ಕರೋತೀತಿ ಭಾವಃ। -ವ್ಯಾ

ಎಲ್ಲೆ ಗೆಳತಿ ! ಕಾಮಿನಿಯರಾದ ನಮಗೆ ಕಾಮದನಾದ ಇವನು ಶ್ರೀಕೃಷ್ಣನ ಬಗ್ಗೆ ಕಾಮೋದ್ರೇಕವನ್ನು ಉಂಟುಮಾಡುವವನಾಗಿ ವರುಣನ ದಿಕ್ಕಾದ ಪಶ್ಚಿಮಕ್ಕೆ ತೆರಳಿದರೂ ಬಲವೈರಿಯಾದ ಇಂದ್ರನ ದಿಕ್ಕಿನಲ್ಲಿ ಉದಿಸಿಬಿಡುವನು. ಅಯ್ಯೋ, ಶ್ರೀಕೃಷ್ಣಭಕ್ತನಾದ ಈ ಧೀರನಾದ ಉದ್ಧವನು ಗುರುವಿನಂತೆ ನಮ್ಮ ಕಿವಿಯ ಬಳಿಗೆ ಬಂದು ಶ್ರೀಕೃಷ್ಣನ ಸಂದೇಶರೂಪವಾದ ಗಾನವನ್ನು ಗುಂಯ್‌ಗುಡುತ್ತಿರುವನು.

ವಿ. : ಬಲ ಎಂಬ ರಾಕ್ಷಸನನ್ನು ಸಂಹರಿಸಿದ್ದರಿಂದಾಗಿ ಇಂದ್ರನಿಗೆ **ಬಲಭಿತ್, ಬಲಭೇತ್ತೃ** ಎಂದು ಹೆಸರು ; **ಬಲಭೇತ್ತಾ** - ಇಂದ್ರ.

**ಭ್ರಮರಗೀತೆ - ಉದ್ಧವನ ಬಗ್ಗೆ ಗೋಪಿಯರ ಗೊಂದಲ**

**ಗಗನಚರ ಕಿಮಸ್ಮತ್ಸನ್ನಿಧೌ ತೇಽಸ್ತಿ ಕೃತ್ಯಂ**
**ಹರಿಪದಮುಪಯಾಯಾ ದೂರಮಸ್ಮದ್ವ್ರಜಸ್ಯ ।**
**[1]ಸಮರುಚಿಮಲಕಾಲ್ಯಾ [2]ವಕ್ರಯಾ ನಂದಸೂನೋಃ**
**ಕಥಯ ಕಥಮಿಹ ತ್ವಾಂ ಸಂಭಜಾಮಸ್ತ್ಯಜಾಮಃ ॥ ೩೨ ॥**

ಎಲವೋ ಗಗನಗಾಮಿ ! ನಿನಗೆ ನಮ್ಮ ಬಳಿ ಏನು ಕೆಲಸವಿದೆ? ನಮ್ಮ ಗೋಕುಲಕ್ಕೆ ದೂರವಿರುವ ಶ್ರೀಹರಿಯ ಚರಣದ ಬಳಿಗೆ ತೆರಳಿಬಿಡು. ನಂದತನಯನಾದ ಶ್ರೀಕೃಷ್ಣನ ವಕ್ರವಾದ ಮುಂಗುರುಳುಗಳ ಸಾಲಿಗೆ ಸದೃಶವಾದ ಕಾಂತಿಯ ನಿನ್ನನ್ನು ನಾವು ಒಲ್ಲೈಸುವುದೋ, ತೊರೆಯುವುದೋ ನೀನೇ ಹೇಳಿಬಿಡು.

ವಿ. : ೧. ಉದ್ಧವನು ಕೃಷ್ಣನಲ್ಲನಾದ್ದರಿಂದ ಅವನನ್ನು ಕೃಷ್ಣನಂತೆ ಸ್ವೀಕರಿಸುವಂತಿಲ್ಲ. ಆದರೆ ಕೃಷ್ಣಭಕ್ತನಾದ್ದರಿಂದ ಅವನನ್ನು ತೊರೆಯುವಂತೆಯೂ ಇಲ್ಲ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಶಬ್ದತತ್ತ್ವಕ್ಕೆ[3] ಅಭಿಮಾನಿಯಾಗಿ, ಶ್ರೀಕೃಷ್ಣನ ಬಲಪಾದದ ಅಂಗುಷ್ಠದಲ್ಲಿ ನೆಲೆಸಿರುವ ನೀನು ಅಲ್ಲಿಗೇ ತೆರಳಿಬಿಡು ಎಂದರ್ಥ; ತತ್ತ್ವನ್ಯಾಸದಲ್ಲಿ ಶಬ್ದತತ್ತ್ವಕ್ಕೆ ಅಭಿಮಾನಿಯಾದ ಬೃಹಸ್ಪತಿಯನ್ನು ಶ್ರೀಹರಿಯ ಬಲಪಾದದ ಹೆಬ್ಬೆರಳಿನಲ್ಲಿ ಚಿಂತಿಸಬೇಕು ಎಂಬ ಕ್ರಮವನ್ನು ಆಧರಿಸಿ ಈ ಮಾತು ಬಂದಿದೆ ಎಂದು ತಿಳಿಯಬೇಕು; ದುಂಬಿಯು ಗಗನದಲ್ಲಿ ಸಂಚರಿಸುವುದು; ಅದರಂತೆ ಗುರುಗ್ರಹವೂ ಸಹ; ಗುರುವಿನ ಅವತಾರನಾದ ಉದ್ಧವನನ್ನು ಈ ಹಿನ್ನೆಲೆಯಲ್ಲಿ 'ಗಗನಚರ' ಎಂದಿರುವುದು ಸೂಕ್ತವಾದುದು.

---

೧. ಶ್ರೀಕೃಷ್ಣಭಿನ್ನತಯಾ ಅಂತತ ಆಲಿಂಗನಾದಿಫಲಾಭಾವೇನ ಭಜನಾಯೋಗಾದಿತಿ ಭಾವಃ । -ವ್ಯಾ

೨. ಅಸ್ಮತ್ಪ್ರಿಯಕೃಷ್ಣಸ್ಯ ಕುಟಲಾಲಕೌಪಮ್ಯಾನ್ನ ತ್ಯಕ್ತುಂ ಶಕ್ತಾಃ ಮನ್ಮಥೋದ್ದೀಪಕತ್ವಾನ್ನಾಂಗೀಕರ್ತುಂ ಚ ಶಕ್ತಾ ಇತ್ಯರ್ಥಃ । -ವ್ಯಾ

೩. ಶಬ್ದತತ್ತ್ವಾಭಿಮಾನಿತಯಾ ದಕ್ಷಿಣಪಾದಾಂಗುಷ್ಠಸ್ಥಿತಸ್ತ್ವಂ ತತ್ರೈವ ಯಾಹೀತಿ ಭಾವಃ । - ವ್ಯಾ.

[೧]ಗ್ರಹಗತಿರಿಯಮಾರ್ಯಾ ಯತ್ಪುರಸ್ತಾದಯಂ ನೋ
ವಸತಿ ವಸತಿಪುತ್ರಾಮಿತ್ರವಾರ್ತೋಜ್ಝಿತಾನಾಮ್ ॥ ೩೦ ॥

ನೀನೀಗ ದೇವತೆಗಳ ಸಭೆಯಲ್ಲಿ ನಿನ್ನ ಕೌಶಲವನ್ನು ಬಹಳವಾಗಿ ತೋರಿಸಿಕೊ; ಚಂದ್ರಸೂರ್ಯರಂತೆ ಇರುವ ಎಲೈ ಉದ್ಧವನೇ! ಸ್ತ್ರೀಯರಾದ ನಮಗೆ ತಾಪವನ್ನು ಉಂಟುಮಾಡುತ್ತಿರುವಿಯೇನು? ಎಲೈ ಉತ್ತಮ ಸ್ತ್ರೀಯರೇ ! ಮನೆ, ಮಕ್ಕಳು, ಶತ್ರುಗಳು ಮೊದಲಾದವರ ವಿಚಾರವನ್ನು ತೊರೆದ ನಮ್ಮೆದುರಿನಲ್ಲಿ ಇವನು ನಿಂತಿರುವುದು ನಮ್ಮ ಗ್ರಹಚಾರವೇ ಸರಿ.

ವಿ. : ೧. [೨]ಉದ್ಧವನು ಸುರಗುರುವಾದ ವಾಚಸ್ಪತಿ ಎನ್ನಿಸಿದ ಬೃಹಸ್ಪತಿಯ ಅವತಾರವಾದ್ದರಿಂದ ದೇವಸಭೆಯಲ್ಲಿ ನಿನ್ನ ಕೌಶಲವನ್ನು ತೋರಿಸು ಎಂಬ ಮಾತು ಉಚಿತವಾಗಿದೆ; ಬೃಹಸ್ಪತಿಯು ಗುರುಗ್ರಹದ ಅಭಿಮಾನಿದೇವತೆಯೂ ಆಗಿರುವನು ಎಂಬುದು ಇದರ ಔಚಿತ್ಯವನ್ನು ಹೆಚ್ಚಿಸುವುದು.

೨. [೩]ಬೃಹಸ್ಪತಿ(ಗುರು)ಯು ನವಗ್ರಹಗಳಲ್ಲಿ ಒಬ್ಬ ; ಅವನು ಸಂಚರಿಸುವುದು ವರ್ಷಕ್ಕೆ ಒಂದು ರಾಶಿ, ಆದ್ದರಿಂದ ನೀನೀಗ ತೆರಳು ಎಂದರೂ ಸಹ ಅವನು ತೆರಳುತ್ತಿಲ್ಲ.

೩.. [೪]ಬಗೆಬಗೆಯ ವಿರಹಿಣಿ ಸ್ತ್ರೀಯರಿಗೆ ಭ್ರಮರ ದರ್ಶನ ಉದ್ದೀಪನಕಾರಿ ಎಂದೂ ಭಾವ.

೪. [೫]ಅಂತಹ ನೋವಿನ ಸಮಯದಲ್ಲಿ ಗುರುವಿನ ಅವತಾರವಾದ ಬೃಹಸ್ಪತಿ ಬಂದಿರುವುದು ಬರಗಾಲದಲ್ಲಿ ಅಧಿಕಮಾಸ ಎಂಬಂತೆ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

### ಭ್ರಮರಗೀತೆ - ಗುರುವಿನಂತೆ ಉಪದೇಶಿಸುತ್ತಿರುವ ಉದ್ಧವ

ವರುಣದಿಶಿ ಗತೋಽಪಿ ಸ್ವೈರಮುದ್ಯಾತಿ ಸೋಽಪಿ
ಬತ ದಿಶಿ ಬಲಭೇತ್ತುಃ ಕಾಮದಃ ಕಾಮಿನೀನಾಮ್ ।
[೬]ಗುರುರಿವ ಸಖಿ ಕರ್ಣೋಪಾಂತಮಭ್ಯೇತ್ಯ ಗೀತಂ
ಹರಿಪದಕೃತವೃತ್ತಿಃ ಶ್ರಾವಯತ್ಯೇಷ ಧೀರಃ ॥ ೩೧ ॥

---

೧. ಇಯಮಿತಿ ಸ್ತ್ರೀಲಿಂಗನಿರ್ದೇಶಃ "ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ"ಇತಿವತ್ ವಿಶೇಷ್ಯಪ್ರಾಧಾನ್ಯವಿವಕ್ಷಯಾ। -ವ್ಯಾ.
೨. ಉದ್ಧವಸ್ಯ ಸುರಗುರುತ್ವಾದಿತಿ ಭಾವಃ। -ವ್ಯಾ.
೩.. ಉದ್ಧವಸ್ಯ ಬೃಹಸ್ಪತ್ಯವತಾರತ್ವೇನ ಆದಿತ್ಯಾದಿಗ್ರಹನವಕೇ ಪಠಿತತ್ವಾದಿತ್ಯರ್ಥಃ। -ವ್ಯಾ.
೪. ಅಸ್ಮಾಕಂ ಗ್ರಹಚಾರಃ। ದುರದೃಷ್ಟಮಿತ್ಯಾಕ್ರೋಶಃ। -ವ್ಯಾ.
೫. ಗ್ರಹಸ್ಯ ನವಗ್ರಹಮಧ್ಯೇ ಪಠಿತಸ್ಯ ಬೃಹಸ್ಪತೇರ್ಯಾಗತಿರೇಕವರ್ಷಪರ್ಯಂತಾ ಏಕರಾಶೌ ಸ್ಥಿತೇರಸ್ಯ ಸ್ವಭಾವತ್ವಾತ್ ಗಚ್ಛೇತ್ಯುಕ್ತೇಽಪಿ ನ ಗಚ್ಛತೀತಿ ಹೃದಯಮ್। -ವ್ಯಾ.
೬. ಗುರುರಿವೋಪದೇಷ್ಟೇವ। ಕರ್ಣೋಪಾಂತೇ ಝುಂಕಾರಂ ಕರೋತೀತಿ ಭಾವಃ। -ವ್ಯಾ

ಎಲೈ ಗೆಳತಿ ! ಕಾಮಿನಿಯರಾದ ನಮಗೆ ಕಾಮದನಾದ ಇವನು ಶ್ರೀಕೃಷ್ಣನ ಬಗ್ಗೆ ಕಾಮೋದ್ರೇಕವನ್ನು ಉಂಟುಮಾಡುವವನಾಗಿ ವರುಣನ ದಿಕ್ಕಾದ ಪಶ್ಚಿಮಕ್ಕೆ ತೆರಳಿದರೂ ಬಲವೈರಿಯಾದ ಇಂದ್ರನ ದಿಕ್ಕಿನಲ್ಲಿ ಉದಿಸಿಬಿಡುವನು. ಅಯ್ಯೋ, ಶ್ರೀಕೃಷ್ಣಭಕ್ತನಾದ ಈ ಧೀರನಾದ ಉದ್ಧವನು ಗುರುವಿನಂತೆ ನಮ್ಮ ಕಿವಿಯ ಬಳಿಗೆ ಬಂದು ಶ್ರೀಕೃಷ್ಣನ ಸಂದೇಶರೂಪವಾದ ಗಾನವನ್ನು ಗುಂಯ್‌ಗುಡುತ್ತಿರುವನು.

ವಿ. : ಬಲ ಎಂಬ ರಾಕ್ಷಸನನ್ನು ಸಂಹರಿಸಿದ್ದರಿಂದಾಗಿ ಇಂದ್ರನಿಗೆ ಬಲಭಿತ್, ಬಲಭೇತೃ ಎಂದು ಹೆಸರು ; ಬಲಭೇತ್ತಾ - ಇಂದ್ರ.

**ಭ್ರಮರಗೀತೆ - ಉದ್ಧವನ ಬಗ್ಗೆ ಗೋಪಿಯರ ಗೊಂದಲ**

**ಗಗನಚರ ಕಿಮಸ್ಮತ್ಸನ್ನಿಧೌ ತೇಽಸ್ತಿ ಕೃತ್ಯಂ**
**ಹರಿಪದಮುಪಯಾಯಾ ದೂರಮಸ್ಮದ್ವ್ರಜಸ್ಯ ।**
**[1]ಸಮರುಚಿಮಲಕಾಲ್ಯಾ [2]ವಕ್ರಯಾ ನಂದಸೂನೋಃ**
**ಕಥಯ ಕಥಮಿಹ ತ್ವಾಂ ಸಂಭಜಾಮಸ್ತ್ಯಜಾಮಃ ॥ ೩೨ ॥**

ಎಲವೋ ಗಗನಗಾಮಿ ! ನಿನಗೆ ನಮ್ಮ ಬಳಿ ಏನು ಕೆಲಸವಿದೆ? ನಮ್ಮ ಗೋಕುಲಕ್ಕೆ ದೂರವಿರುವ ಶ್ರೀಹರಿಯ ಚರಣದ ಬಳಿಗೆ ತೆರಳಿಬಿಡು. ನಂದತನಯನಾದ ಶ್ರೀಕೃಷ್ಣನ ವಕ್ರವಾದ ಮುಂಗುರುಳುಗಳ ಸಾಲಿಗೆ ಸದೃಶವಾದ ಕಾಂತಿಯ ನಿನ್ನನ್ನು ನಾವು ಓಲೈಸುವುದೋ, ತೊರೆಯುವುದೋ ನೀನೇ ಹೇಳಿಬಿಡು.

ವಿ. : ೧. ಉದ್ಧವನು ಕೃಷ್ಣನಲ್ಲನಾದ್ದರಿಂದ ಅವನನ್ನು ಕೃಷ್ಣನಂತೆ ಸ್ವೀಕರಿಸುವಂತಿಲ್ಲ, ಆದರೆ ಕೃಷ್ಣಭಕ್ತನಾದ್ದರಿಂದ ಅವನನ್ನು ತೊರೆಯುವಂತೆಯೂ ಇಲ್ಲ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೨. ಶಬ್ದತತ್ತ್ವಕ್ಕೆ[3] ಅಭಿಮಾನಿಯಾಗಿ, ಶ್ರೀಕೃಷ್ಣನ ಬಲಪಾದದ ಅಂಗುಷ್ಠದಲ್ಲಿ ನೆಲೆಸಿರುವ ನೀನು ಅಲ್ಲಿಗೇ ತೆರಳಿಬಿಡು ಎಂದರ್ಥ; ತತ್ತ್ವನ್ಯಾಸದಲ್ಲಿ ಶಬ್ದತತ್ತ್ವಕ್ಕೆ ಅಭಿಮಾನಿಯಾದ ಬೃಹಸ್ಪತಿಯನ್ನು ಶ್ರೀಹರಿಯ ಬಲಪಾದದ ಹೆಬ್ಬೆರಳಿನಲ್ಲಿ ಚಿಂತಿಸಬೇಕು ಎಂಬ ಕ್ರಮವನ್ನು ಆಧರಿಸಿ ಈ ಮಾತು ಬಂದಿದೆ ಎಂದು ತಿಳಿಯಬೇಕು; ದುಂಬಿಯು ಗಗನದಲ್ಲಿ ಸಂಚರಿಸುವುದು; ಅದರಂತೆ ಗುರುಗ್ರಹವೂ ಸಹ; ಗುರುವಿನ ಅವತಾರನಾದ ಉದ್ಧವನನ್ನು ಈ ಹಿನ್ನೆಲೆಯಲ್ಲಿ 'ಗಗನಚರ' ಎಂದಿರುವುದು ಸೂಕ್ತವಾದುದು.

---

೧. ಶ್ರೀಕೃಷ್ಣಭಿನ್ನತಯಾ ಅಂತತ ಆಲಿಂಗನಾದಿಫಲಾಭಾವೇನ ಭಜನಾಯೋಗಾದಿತಿ ಭಾವಃ । -ವ್ಯಾ

೨. ಅಸ್ಮತ್ಪ್ರಿಯಕೃಷ್ಣಸ್ಯ ಕುಟಲಾಲಕೌಪಮ್ಯಾನ್ನ ತ್ಯಕ್ತುಂ ಶಕ್ತಾಃ ಮನ್ಮಥೋದ್ದೀಪಕತ್ವಾನ್ನಾಂಗೀಕರ್ತುಂ ಚ ಶಕ್ತಾ ಇತ್ಯರ್ಥಃ । -ವ್ಯಾ

೩. ಶಬ್ದತತ್ತ್ವಾಭಿಮಾನಿತಯಾ ದಕ್ಷಿಣಪಾದಾಂಗುಷ್ಠಸ್ಥಿತಸ್ತ್ವಂ ತತ್ರೈವ ಯಾಹೀತಿ ಭಾವಃ । - ವ್ಯಾ.

ಭ್ರಮರಗೀತೆ - ಕೃಷ್ಣನಂತೆ ಭ್ರಮರದ ರೀತಿಯ ಉದ್ಧವ

ವನಭವನಗತಾನಾಂ ದರ್ಶಯಿತ್ವಾ ಸ್ವರೂಪಂ
ಕತಿಪಯದಿನಮಧ್ಯೇ ಮಾಧವೋಽಸೌ ತ್ವದೀಯಃ।
ನ ದಿಶತಿ ಪುನರೀಕ್ಷಾಂ ಹಂತ [1]ತಸ್ಯಾನುವರ್ತೀ
[2]ತ್ವಮಪಿ ಚಪಲ ತಾದೃಕ್ ಕಿಂ [3]ತದಸ್ಮಾಸು ಮೈತ್ರ್ಯಾ ॥ ೩೩ ॥

ಆ ನಿನ್ನ ಮಾಧವನಾದ ಶ್ರೀಕೃಷ್ಣ ಕಾಡಿನ ಮನೆಗಳಲ್ಲಿ ನೆಲೆಸಿದ್ದ ನಮಗೆ ಕೆಲವು ದಿನಗಳ ಮಧ್ಯದಲ್ಲಿ ತನ್ನ ಸ್ವರೂಪವನ್ನು ತೋರಿಸಿ, ಮರಳಿ ಕಣ್ಣಿಗೆ ಬೀಳದಂತಾಗಿರುವನು. ಅಯ್ಯೋ, ಎಲೈ ಚಂಚಲನೆ! ಅವನ ಅನುಚರನಾದ ನೀನು ಸಹ ಅಂಥವನೇ ಆಗಿರುವಿ. ನಮ್ಮಲ್ಲಿ ಮೈತ್ರಿಯಿಂದ ಏನಾಗಬೇಕಿದೆ?

ವಿ. : [4]ಶ್ರೀಕೃಷ್ಣನು ಕೆಲವು ದಿವಸಗಳು ತಮ್ಮೊಂದಿಗಿದ್ದು ದೂರ ತೆರಳಿದ್ದರಿಂದ ಚಂಚಲ ಎಂದಾಗುವುದು; ಕೃಷ್ಣನ್ನು ಹೋಲುವ ಭೃಂಗವೂ ಸಹ ಹೂವಿನಿಂದ ಹೂವಿಗೆ ಹಾರುವ ಸ್ವಭಾವದಾದ್ದರಿಂದ ಅದನ್ನು ಸಹ ನೆಚ್ಚುವಂತಿರಲ್ಲ ; ಈ ಮಾತಿನಿಂದ ಶ್ರೀಕೃಷ್ಣ ಭಕ್ತರೂ ಸಹ ಶ್ರೀಕೃಷ್ಣನಂತೆ ಸುಮನಃಪ್ರಿಯರು ಎಂಬ ಭಾವ ಸೂಚಿತ ; ಮೈತ್ರೀ - ಸ್ನೇಹ.

ಭ್ರಮರಗೀತೆ - ವೀರರಿಗೆ ಗುರುವಿನಂತಿರುವ ಭ್ರಮರ

ಅಯಿ ಸಖಿ ಚರತೋಽಸ್ಯ ಸ್ವೈರಮಸ್ಮತ್ಪುರಸ್ತಾ-
ನ್ಮರುದಪಿ ಸಹಕಾರೀ ಸಾಧಯತ್ಯಗ್ರ್ಯಶಕ್ತಿಮ್।
ಅಭಿಮುಖಮನುಪಾರ್ಶ್ವಂ ವಿಷ್ವಗೂರ್ಧ್ವಂ ತಥಾಽಧ-
ಶ್ಚರಣಚತುರಶೀಲಃ ಶಿಕ್ಷಯೇದೇಷ ವೀರಾನ್ ॥ ೩೪ ॥

ಎಲೈ ಗೆಳತಿ! ನಮ್ಮೆದುರು ಮನಬಂದಂತೆ ಹಾರಾಡುತ್ತಿರುವ ಇವನಿಗೆ ಗಾಳಿಯೂ ಸಹ ಸಹಕಾರಿಯಾಗಿದ್ದು ಹೆಚ್ಚಿನ ಶಕ್ತಿಯನ್ನು ತಂದುಕೊಡುತ್ತಿದೆ; ಎದುರಾಗಿ, ಎರಡು ಪಕ್ಕಗಳಲ್ಲಿ ಸುತ್ತಲೂ, ಅದರಂತೆ ಮೇಲೂ ಕೆಳಗೂ ತಿರುಗುವಲ್ಲಿ ಚತುರಸ್ವಭಾವದ ಇವನು ವೀರರಿಗೆ ಗುರುವಾಗಿ ಕಲಿಸಿಕೊಡುತ್ತಿರುವನು.

---

೧. ಶ್ರೀಕೃಷ್ಣಸ್ಯಾನುವರ್ತೀ ಅನುಚರಸ್ತ್ವಮಪಿ ತಾದೃಕ್ ತತ್ಸದೃಶಃ ಕದಾಚಿದ್ವ್ಯೋಮ್ನಿ ದೃಶ್ಯಮಾನೋಽಪಿ ಅಸ್ತಂಗತೋ ನ ದೃಶ್ಯತ ಇತಿ ಭಾವಃ। -ವ್ಯಾ.

೨. ತ್ವಮಪಿ ತಾದೃಗಸ್ಥಿರಃ ವರ್ಷಾಕಾಲಾದೌ ಸೌಲ್ಲಾಸಭೃಂಗಸಂಚಾರಾಭಾವಾದಿತಿ ಭಾವಃ. -ವ್ಯಾ.

೩.. ತತ್ತಸ್ಮಾದಸ್ಮಾಸು ಮೈತ್ರ್ಯಾ ಕಿಮ್। ವಸಂತಸಖಿಸ್ಮರೋನ್ಮಥಿತಚಿತ್ತಾಸು ಮೈತ್ರ್ಯಂ ವಿರುದ್ಧಮಿತಿ ಭಾವಃ। -ವ್ಯಾ.

೪. ಅಸ್ಥಿರಸ್ಯಾಸ್ಯ ಮೈತ್ರ್ಯಾ ಪ್ರಯೋಜನಂ ನಾಸ್ತೀತ್ಯರ್ಥಃ। -ವ್ಯಾ.

ವಿ. : ೧. [೧]ಭ್ರಮರವು ಮೇಲೆ ಕೆಳಗೆ, ಸುತ್ತ ಮುತ್ತ ಹೀಗೆ ಬಗೆಬಗೆಯಾಗಿ ಸಂಚರಿಸುವುದು ಅದರಂತೆ ಶ್ರೀಕೃಷ್ಣನ ಸಂದೇಶ ಹೊತ್ತು ಬಂದಿರುವ ಉದ್ಧವನೂ ಸಹ ಚಂಚಲಸ್ವಭಾವದವನೇ ಆಗಿರುವನು ಎಂಬುದು ಅವರ ಭಾವ.

೨. ಗಾಳಿಯಿಂದಾಗಿ ದುಂಬಿಯ ಶಕ್ತಿ ಹೆಚ್ಚಿದೆ ಎಂಬ ಮಾತಿನಲ್ಲಿ ಉದ್ಧವನಲ್ಲಿ ಆವೇಶಿಸಿದ [೨]ವಾಯುದೇವರ ಶಕ್ತಿ ಸಾಮರ್ಥ್ಯದಿಂದಾಗಿ ವಿಶೇಷ ಶಕ್ತಿ ತುಂಬಿದೆ ಎಂದರ್ಥ.

೩.. ಉದ್ಧವನ ಮತ್ತೊಂದು ರೂಪವಾದ ದ್ರೋಣಾಚಾರ್ಯರು ಭಗವದಿಚ್ಛೆಯಿಂದ ಕ್ಷಾತ್ರಧರ್ಮವನ್ನು ಹಿಡಿದವರಾಗಿ ಕುರುಕ್ಷೇತ್ರಯುದ್ಧದಲ್ಲೂ ಪಾಲ್ಗೊಂಡರು. ಆದರಿಂದಾಗಿ ಎಡ ಬಲ, ಮೇಲೆ ಕೆಳಗೆ ಮೊದಲಾಗಿ ವಿವಿಧರೀತಿಯ ಪಟ್ಟುಗಳನ್ನು ಅವರು ತೋರಿಸಿದವರು. ಹಾಗೆ ತೋರಿಸುತ್ತಾ ಅರ್ಜುನ ಮೊದಲಾದ ವೀರರಿಗ ಕಲಿಸಿಕೊಟ್ಟವರೂ ಸಹ. ಈ ಹಿನ್ನೆಲೆಯಲ್ಲಿ 'ಶಿಕ್ಷಯೇದೇಷ ವೀರಾನ್' ಎಂಬ ಇಲ್ಲಿಯ ಮಾತು ಔಚಿತ್ಯಪೂರ್ಣವಾದುದು.

**ದೇವೇಂದ್ರನೂ ಮೆಚ್ಚುವ ರಮ್ಯಭ್ರಮರಗೀತೆ**

**[೩]ಸುರಪತಿರಪಿ ನೂನಂ ಗಾನಮೇತನ್ನಿಶಮ್ಯ**
**ಪ್ರಿಯನಿನದ ಮಹಿಷ್ಯಾ [೪]ಮಾನಯಿಷ್ಯತ್ಯವಶ್ಯಮ್ ।**
**[೫]ಸಮಮಮಲ ವಿಲೋಕ್ಯ ತ್ವದ್ವಶಃ ಶಿಷ್ಯವತ್ ಸ್ಯಾತ್**
**ಕಿಮಿಹ [೬]ಫಲಮಿದಾನೀಂ ಗಾಯತೋಽಪ್ಯಸ್ಮದಗ್ರೇ ॥ ೩೫ ॥**

ಎಲೈ ಇಂಪಾದ ಧ್ವನಿಯವನೇ ! ನಿರ್ಮಲಸ್ವಭಾವದವನೇ ! ನಿನ್ನ ಈ ಗಾಯನವನ್ನು ಕೇಳಿ, ದೇವತೆಗಳ ಒಡೆಯನಾದ ಇಂದ್ರನೂ ಸಹ ತನ್ನ ಪಟ್ಟದ ರಾಣಿಯಾದ ಶಚೀದೇವಿಗೆ

---

೧. ಚಂಚರೀಕಸ್ಯಾಭಿಮುಖಪಾರ್ಶ್ವಂ ವಿಷ್ವಗೂರ್ಧ್ವಮಧಶ್ಚ ಸಂಚರಣಸ್ವಭಾವೇನ ವೀರಾಭ್ಯಾಸಶಿಕ್ಷಕಗುರುತ್ವಮುತ್ಪ್ರೇಕ್ಷಿತಮಿತಿ ದ್ರಷ್ಟವ್ಯಮ್ । -ವ್ಯಾ.

೨. ಬೃಹಸ್ಪತಿಃ ಪೂರ್ವಮಭೂದ್ಧರೇಃ ಪದಂ ಸಂಸೇವಿತುಂ ಪವನಾವೇಶಯುಕ್ತಃ ।
ಸ ಉದ್ಧವೋ ನಾಮ ಯದುಪ್ರವೀರಾಜ್ಜಾತೋ ವಿದ್ವಾನುಪಗವನಾಮಧೇಯಾತ್ ॥
-ಮ.ಭಾ.ತಾ.ನಿ.(೧೨/೧೦೦)
ಮುಖ್ಯಪ್ರಾಣಾವೇಶಮಹಿಮ್ನಾ ಅನ್ಯೇಭ್ಯ ಆಧಿಕ್ಯೇನ ಶ್ರೀಕೃಷ್ಣಸಖ್ಯಾದಿಕಮುದ್ಧವಸ್ಯಾಭೂದಿತಿ ಭಾವಃ । -ವ್ಯಾ.

೩.. ರತಿಮನುಗುರವೋ ದಕ್ಷಶಚ್ಯೌ ಚ ಪಾಂತು(ತಾರತಮ್ಯಸ್ತೋತ್ರಮ್)ಇತಿ ವಚನಾತ್ । -ವ್ಯಾ.

೪. ಇಂದ್ರಮಾನಿತಸ್ಯಾಸ್ತ್ರಃ ಕಿಂ ಫಲಂ ಭವತೀತಿ ಭಾವಃ । ಅಥವಾ ವಯಮಪಿ ಯದಾಽಪ್ಸರಸೋ ಭೂತ್ವಾ ಸ್ವರ್ಗಸ್ಥಿತಾಸ್ತದಾ ತವ ಸನ್ಮಾನಃ ಕೃತಃ । ಧವಸ್ಯೇಂದ್ರಸ್ಯಾಸ್ಮದನುಕೂಲತ್ವಾತ್ ಶ್ರೀಕೃಷ್ಣಸ್ಯ ಭರ್ತೃತಯಾ ಸ್ನೇಹಸ್ಯಾಸಂಪಾದಿತತ್ವೇನ ವಿರಹಭಯಾಭಾವಾಚ್ಚ । ಇದಾನೀಂ ತು ಭರ್ತೃತಯಾ ಸಂಪಾದಿತಶ್ರೀಕೃಷ್ಣವಿರಹೇಣ ದುಃಖಿತೇಭ್ಯೋ ಗೋಪೀಭ್ಯಸ್ತವ ಕಿಮಪಿ ಪ್ರಯೋಜನಂ ನ ಭವತೀತಿ ಭಾವಃ । -ವ್ಯಾ.

೫. ಶಚ್ಯಾ ಸಮಂ ಸಾರ್ಧಂ ವಿಲಾಸದಶಾಯಾಮಪೀತ್ಯರ್ಥಃ । ತ್ವಾಂ ವಿಲೋಕ್ಯ ಮಾನಯಿಷ್ಯತಿ ಆಲಂಬನಭೂತಯೋರಿಂದ್ರಶಚ್ಯೋಃ ಭೃಂಗಸ್ಯ ತವ ಉದ್ದೀಪನವಿಭಾವತ್ವಾದಿತಿ ಭಾವಃ । -ವ್ಯಾ.

೬. ವಿಷಯದ್ವೇಷೇಣ ಕರ್ಣಕಬರ್ಯೋರ್ಃ ಪುಷ್ಪಾಲಂಕಾರಾದ್ಯಭಾವಾತ್ ಮಕರಂದಪಾನಮಪಿ ನ ಲಭ್ಯತ ಇತಿ ಭಾವಃ । -ವ್ಯಾ.

ಸಮನಾದ ನಿನ್ನನ್ನು ಅಗತ್ಯವಾಗಿ ಆದರಿಸುವನು; ನಿನ್ನನ್ನು ಕಂಡು ಅವನು ಶಿಷ್ಯನಂತೆ ನಿನಗೆ ವಶವಾಗಿಬಿಡುವನು; ನಮ್ಮೆದುರು ಹೀಗೆ ನೀನು ಹಾಡುವುದರಿಂದ ಏನು ತಾನೆ ಫಲ ?

ವಿ:. ೧. ಭ್ರಮರದ್ದು ಇಂದ್ರನು ಮೆಚ್ಚುವ ಗಾಯನ ಎಂಬುದು ಒಂದು ರೀತಿಯ ಅರ್ಥ. ಭ್ರಮರದಿಂದ ಸೂಚಿತನಾದ ಉದ್ಧವನ ಮೂಲರೂಪನಾದ ಬೃಹಸ್ಪತಿಯ ಮಾತನ್ನು ಕೇಳಿದ ಇಂದ್ರದೇವರು, ಅವರನ್ನು ಪಟ್ಟಮಹಿಷಿಯಾದ ಶಚಿಯ ಸಮೇನಾಗಿ ಆದರಿಸುವನು. ಅದರೊಂದಿಗೆ ಶಿಷ್ಯನಂತೆ ಇವರ ವಶವರ್ತಿಯೂ ಆಗುವನು ಎಂದು ಭಾವ.

೨. ಇಂದ್ರದೇವರು ಸ್ವರೂಪದಲ್ಲಿ ಬೃಹಸ್ಪತ್ಯಾಚಾರ್ಯರಿಗಿಂತ ಉತ್ತಮರೇ ಆದರೂ, ಅವರದು ಗುರುಪದವಿ ಎಂಬ ಕಾರಣದಿಂದ ಶಿಷ್ಯರಂತೆ ವರ್ತಿಸುವರು ಎಂಬುದನ್ನು 'ಶಿಷ್ಯವತ್' ಎಂಬ ಪದದಿಂದ ಸೂಚಿಸಿರುವರು:

ಸ್ವಾವರಾಣಾಂ ಗುರುತ್ವಂ ಚ ಭವೇತ್ ಕಾರಣತಃ ಕ್ವಚಿತ್ ॥ ಮ.ಭಾ.ತಾ.ನಿ (೧/೧೨೬)

೩. ಇಂದ್ರದೇವರು ಪದವಿ ಹಾಗೂ ಅಪಾರಸಂಪತ್ತಿನಿಂದಾಗಿ ಉತ್ತಮರೀತಿಯ ಸತ್ಕಾರವನ್ನು ಮಾಡುವರು. ಅದರಿಂದ ತುಂಬಾ ಪ್ರಯೋಜನವಿದೆ. ಆದರೆ ಗೋಪಿಯರು ಅಂಥವರಲ್ಲ. ಆದ್ದರಿಂದ ಅವರ ಮುಂದೆ ಹಾಡುವುದು ವ್ಯರ್ಥ ಎಂಬುದು ಇಲ್ಲಿಯ ವಿಶೇಷಾಂಶ.

೪. ಇಲ್ಲಿನ 'ಮಹಿಷ್ಯಾ' ಎಂಬುದನ್ನು ಉದ್ಧವನ ಪಕ್ಷದಲ್ಲಿ 'ಮಹಿಷ್ಯಾಃ' ಎಂಬುದಾಗಿ ಷಷ್ಠೀವಿಭಕ್ತಿಯಲ್ಲೂ, ಭೃಂಗಪಕ್ಷದಲ್ಲಿ 'ಮಹಿಷ್ಯಾ' ಎಂದು ತೃತೀಯಾವಿಭಕ್ತಿಯಲ್ಲೂ ಅನ್ವಯಿಸಿಕೊಳ್ಳಬೇಕು.

### ಮಾಧವ ಪಕ್ಷಪಾತಿಯಾದ ಭ್ರಮರ

ಅಪಿ ಮಧುಕರ ವಿದ್ಮೋ ಮಾಧವೇ ಪಕ್ಷಪಾತೀ[೧]
[೨]ಕುಜರವಿಜಯಿಚಾಪೇ[೩] ತಸ್ಯ ಜೀವಾಯಿತೋಽಸಿ ।
ವಿರಚಯ ವಿವಶಂ ತಂ ನಃ ಸಮೀಪೇ [೪]ವಸಂತಂ[೫]
ವಿವಿಧರಸವಿಲಾಸಶ್ರೇಣಿವಿಶ್ರಾಣನಜ್ಞಮ್ ॥ ೩೬ ॥

---

೧. ದ್ರೋಣರೂಪೇಣ ಸಕಲವಿದ್ಯಾಪ್ರದಾನೇನಾತಿಪ್ರಿಯೋಽಸೀತ್ಯರ್ಥಃ। -ವ್ಯಾ.
೨. ಕುಜರವಿಜಯಿಚಾಪೇ ತಸ್ಯ ಕೌ ಭೂಮೌ ಜಾತಃ ಕುಜಃ ಸ ಚಾಸೌ ರವಿಶ್ಚ ಭೂಮಾವುತ್ಪನ್ನಃ ಸೂರ್ಯರೂಪೀ ಕರ್ಣ ಇತ್ಯರ್ಥಃ। ... ಕುತ್ಸಿತಾ ಜರಾ ಯೇಷ್ವಾಂ ತೇ ಕುಜರಾಃ। ಜರಾಂ ಕುತ್ಸಯಂತಃ ಯುವಾನ ಇತ್ಯರ್ಥಃ। ತಾನ್ ವಿಜಯತ ಇತಿ ತಥೋಕ್ತಃ। -ವ್ಯಾ.
೩. "ಧನುಃ ಪುಷ್ಪಂ ಮೌರ್ವೀ ಮಧುಕರಮಯೀ" ಇತ್ಯುಕ್ತೇಃ। -ವ್ಯಾ.
೪. ವಸಂತಸ್ಯ ಕುಸುಮಾಕರತ್ವಾದಿತಿ ಭಾವಃ। -ವ್ಯಾ.
೫. ಸ ಉದ್ಧವಃ ತಂ ಕೃಷ್ಣಂ ಆನೇಷ್ಯತೀತ್ಯಾಶಯಾ ವಸಂತಕಾಲಾಭ್ಯರ್ಥನಮಿತಿ ಭಾವಃ। -ವ್ಯಾ.

ಎಲೈ [೧]ಮಧುಕರನೇ ! ನಮಗೆ ತಿಳಿಯಿತು. ನೀನು ಆ ಮಾಧವನ ಪಕ್ಷಪಾತಿಯೇ ಹೌದು. ಭೂಮಿಯಲ್ಲಿ ಜನಿಸಿರುವ ಕರ್ಣನನ್ನು ಗೆಲ್ಲುವಂತಹ ಬಿಲ್ಲನ್ನು ಹಿಡಿದಿರುವ ಆ ಅರ್ಜುನನಿಗೆ ನೀನು ಪ್ರಾಣಸಮಾನನಾಗಿರುವಿ. ಬಗೆಬಗೆಯ ರಸಗಳ ವಿಲಾಸಗಳ ಶ್ರೇಣಿಯ ವಿತರಣೆಯಲ್ಲಿ ಕುಶಲನಾದ ಅವನನ್ನು ಮೈಮರೆತು ನಮ್ಮ ಬಳಿಯಲ್ಲಿ ನೆಲೆಸಿಬಿಡುವಂತೆ ಮಾಡಿಬಿಡು.

ವಿ:. ೧. ಇಲ್ಲಿಯ ಅರ್ಜುನನಿಗೆ ಪ್ರಾಣಸಮಾನ ಎಂಬ ಮಾತು ಉದ್ಧವನ ದ್ರೋಣರೂಪಕ್ಕೆ ಅನ್ವಯಿಸುವಂತಹುದು.

೨. 'ಮಾಧವ' (ಕೃಷ್ಣ ವಸಂತ) ಹಾಗೂ 'ವಸಂತ' (ವಸಂತಋತು, ನೆಲೆಸಿರುವವನು) ಎಂಬಲ್ಲಿ ಶ್ಲೇಷ.

### ಮಧುರೆಗೆ ಮರಳಿದ ಉದ್ಧವ

ವಿತನ್ಯಮಾನಸ್ವಪ್ರೇಷ್ಠವಿಯೋಗಾರ್ತೀರಥೋದ್ಧವಃ ।
ಪ್ರಿಯೋಕ್ತಿಭಿಃ ಪ್ರೀಣಯಿತ್ವಾ ಪ್ರಯಯೌ ಕೃಷ್ಣಸನ್ನಿಧಿಮ್ ॥ ೩೭ ॥

ಆ ಬಳಿಕ ಉದ್ಧವನು ತಮಗೆ ಪ್ರಿಯನಾದ ಶ್ರೀಕೃಷ್ಣನ ಅಗಲುವಿಕೆಯ ನೋವನ್ನು ಬಗೆಬಗೆಯಾಗಿ ಬಣ್ಣಿಸಿದ ಗೋಪಿಯರನ್ನು ಪ್ರಿಯನಾದ ಕೃಷ್ಣನ ಸಂದೇಶ ವಚನಗಳಿಂದ ಸಂತೋಷಪಡಿಸಿ, ಶ್ರೀಕೃಷ್ಣನ ಸನ್ನಿಧಿಗೆ ಮರಳಿದನು.

### ಜರಾಸಂಧನ ಬಳಿಗೆ ಅಸ್ತಿ

ಕಂಸೇ ಬಲೈಃ ಸಹ ಮೃತೇ ಸತಿ ಯಾಽವಶಿಷ್ಟಾ
ವಂಶಂ ಸ್ವಮಾತುರಪಿ ತಾದೃಶಮಸ್ತಿನಾಮ್ನೀ ।
ಕೃತ್ವೋಚಿತಂ ವಿದಧತೀವ ನಿಜಾಭಿಧಾನಂ
ಪಿತ್ರೇ ನ್ಯವೇದಯದಥಾಚ್ಯುತಕೃತ್ಯಮಾರ್ತಾ ॥ ೩೮ ॥

ಕಂಸನು ಸೇನೆಯೊಂದಿಗೆ ಮೃತಿ ಹೊಂದಿದ ಮೇಲೆ ಉಳಿದುಕೊಂಡಿದ್ದ ಅಸ್ತಿ ಎಂಬುವಳು ಆರ್ತಳಾಗಿ ತನ್ನ ತಾಯಿಯ ವಂಶವನ್ನೂ ಸಹ ಅದರಂತೆಯೇ ಮಾಡಿ ತನ್ನ ಹೆಸರನ್ನು ಸಾರ್ಥಕಮಾಡಿಕೊಳ್ಳಲೋ ಎಂಬಂತೆ ಅಚ್ಯುತನಾದ ಶ್ರೀಕೃಷ್ಣ ಮಾಡಿದ್ದನ್ನು ತಂದೆಯಾದ ಜರಾಸಂಧನಿಗೆ ನಿವೇದಿಸಿಕೊಂಡಳು.

---

೧. ಮಧು ನಾಮ ಸುಖಂ ವಿಂದ್ಯಾನ್ಮಾಧುರ್ಯಂ ಸುಖಹೇತುತಾ ।
ಸುಖೇ ರತಿರ್ವಾ ಸಂಪ್ರೋಕ್ತಾ ಶಬ್ದತತ್ತ್ವವಿಚಕ್ಷಣೈಃ ॥ -ಶಬ್ದನಿರ್ಣಯ, ಭಾಗವತತಾತ್ಪರ್ಯ(೧೧/೭/೪೫)

ವಿ. : ೧. ಅಸ್ತಿ ಎಂಬುವಳು ಜರಾಸಂಧನ ಮಗಳು ; ಕಂಸನ ಪತ್ನಿ. ಅಸ್ತಿ ಎಂದರೆ ವಂಶದಲ್ಲಿ ತಾನೊಬ್ಬಳೇ ಉಳಿಯುವವಳು ಎಂಬರ್ಥದಲ್ಲಿ ಗಂಡನ ಮನೆಯನ್ನಂತೂ ಇಲ್ಲವಾಗಿಸಿದಳು ಅದರಂತೆ ತವರುಮನೆಯನ್ನೂ ಸಹ ಇಲ್ಲವಾಗಿಸಿ, ತಾನೊಬ್ಬಳೇ ಉಳಿದುಕೊಳ್ಳುವಂತಾಗಲು ಅವಳು ಜರಾಸಂಧನ ಬಳಿಗೆ ತೆರಳಿದಳು.

೨. [೧]ಶ್ರೀಕೃಷ್ಣನನ್ನು ಅಚ್ಯುತ ಎಂದು ಕರೆಯುವ ಮೂಲಕ ಅವನಿಗೆ ಜರಾಸಂಧಾದಿ ಯಾರಿಂದಲೂ ಸಹ ಸರ್ವಥಾ ಯಾವ ಬಗೆಯ ಚ್ಯುತಿಯೂ ಸಹ ಎಂದೂ ಇಲ್ಲ ಎಂಬ ಅರ್ಥ ಸೂಚಿತ.

೩. ಕಂಸನ ಪತ್ನಿಯರಾದ ಅಸ್ತಿ ಹಾಗೂ ಪ್ರಾಸ್ತಿ ಎಂಬ ಇಬ್ಬರು ಜರಾಸಂಧನ ಪುತ್ರಿಯರು ಎಂಬ ವಿವರ [೨]ಶ್ರೀಮದ್ಭಾಗವತ ಹಾಗೂ [೩]ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ; ಆದ್ದರಿಂದ ಇಲ್ಲಿಯ ಅಸ್ತಿ ಎಂಬುದು ಪ್ರಾಸ್ತಿಗೆ ಉಪಲಕ್ಷಣ ಎಂದು ತಿಳಿಯಬೇಕು.

೪. ಇದು ಒಂದು ರೀತಿಯಲ್ಲಿ ತನಗೆ ಶ್ರೀರಾಮಲಕ್ಷ್ಮಣರಿಂದಾದ ಕಿವಿಮೂಗುಗಳ ಛೇದನಕಾರ್ಯವನ್ನು ಅಣ್ಣನಾದ ರಾವಣನಿಗೆ ತಿಳಿಸಿದ ಶೂರ್ಪನಖಿಯ ಪ್ರಸಂಗದಂತಿದೆ; ಅದು ರಾವಣನ ಸರ್ವನಾಶಕ್ಕೆ ನಾಂದಿಹಾಡಿದಂತೆ ಇದು ಜರಾಸಂಧನ ಸರ್ವನಾಶಕ್ಕೆ ಬರೆದ ಮುನ್ನುಡಿಯಾಯಿತು ಎಂದು ತಿಳಿಯಬಹುದು.

## ಮಧುರೆಯ ಮೇಲೆ ಜರಾಸಂಧನ ಆಕ್ರಮಣ

**ಸ ಮಾಗಧಃ ಸಾಧಿತಸೈನ್ಯಸಿಂಧು-**
**ರ್ಮದಾಂಧಬುದ್ಧಿರ್ಮಧುರಾಂ ಜಗಾಮ ।**
**ಅನೇಕದೇಶಾಶ್ರಿತಭೂಮಿಭಾರ-**
**ಹರಸ್ಯ ಸಾರಥ್ಯಕೃದಚ್ಯುತಸ್ಯ ॥ ೩೯ ॥**

ಸೊಕ್ಕಿನಿಂದಾಗಿ ಬುದ್ಧಿಯು ಕುರುಡಾದ ಆ ಜರಾಸಂಧನು ಸೇನಾಸಮುದ್ರವನ್ನು ಸಂಪಾದಿಸಿಕೊಂಡು ಬೇರೆ ಬೇರೆ ದೇಶಗಳಲ್ಲಿ ನೆಲೆಸಿದ್ದ ಭೂಮಿಗೆ ಭಾರವಾದವರನ್ನು ನಾಶಮಾಡುವ ಅಚ್ಯುತನಾದ ಶ್ರೀಕೃಷ್ಣನಿಗೆ ಸಹಾಯಮಾಡುವವನಂತೆ ಮಧುರೆಯತ್ತ ಸಾಗಿದ.

---

೧. ಅಚ್ಯುತಸ್ಯೇತ್ಯನೇನ ಜರಾಸಂಧಾಗಮನೇಽಪಿ ಶ್ರೀಕೃಷ್ಣಸ್ಯ ನ ಚ್ಯುತಿರಿತಿ ಸೂಚಿತಮ್ । -ವ್ಯಾ.

೨. ಅಸ್ತಿಪ್ರಾಸ್ತೀತಿ ಕಂಸಸ್ಯ ಮಹಿಷ್ಯೌ ಭರತರ್ಷಭ ।
ಹತೇ ಭರ್ತರಿ ದುಃಖಾರ್ತೇ ಈಯತುಃ ಸ್ಮಪಿತುರ್ಗೃಹಾನ್ ॥
ಪಿತ್ರೇ ಮಗಧರಾಜಾಯ ಜರಾಸಂಧಾಯ ದುಃಖಿತೇ ।
ವೇದಯಾಂಚಕ್ರತುಃ ಸರ್ವಮಾತ್ಮವೈರೂಪ್ಯಕಾರಣಮ್ ॥ -ಭಾಗ.(೧೦/೪೯/೧,೨)

೩. ರಕ್ಷತ್ಯಜೇ ತ್ರಿಜಗತಾಂ ಪರಿರಕ್ಷಕೇಽಸ್ಮಿನ್ ಸರ್ವಾನ್ ಯದೂನ್ ಮಗಧರಾಜಸುತೇ ಸ್ವಭರ್ತುಃ ।
ಕೃಷ್ಣಾನ್ನೃತಿಂ ಪಿತುರವಾಪ್ಯ ಸಮೀಪಮಸ್ತಿಪ್ರಾಸ್ತೀ ಶಶಂಸತುರತೀವ ಚ ದುಃಖಿತೇಽಸ್ಮೈ ॥
-ಮ.ಭಾ.ತಾ.ನಿ.(೧೪/೯)

ವಿ. : ೧. ತನ್ನ ಮಗಳಾದ ಅಸ್ತಿಯ ಮಾತನ್ನು ಕೇಳಿಕೊಂಡು ಜರಾಸಂಧ ಅಪಾರ ಸೇನೆಯನ್ನು ತೆಗೆದುಕೊಂಡು ಶ್ರೀಕೃಷ್ಣನನ್ನು ಆಕ್ರಮಿಸಲೆಂದು ಮಧುರೆಗೆ ತೆರಳಿದ ಎಂದರ್ಥ.

೨. [1]ಶ್ರೀಕೃಷ್ಣನು ಅವತರಿಸಿದ್ದು ಭೂಭಾರಹರಣಕ್ಕಾಗಿ; ಜರಾಸಂಧ ಅಂತಹ ಅಪಾರ ಸೇನೆಯೊಂದಿಗೆ ಕೃಷ್ಣನಿದ್ದ ಸ್ಥಳಕ್ಕೆ ಹೊರಟದ್ದು ಕೃಷ್ಣನ ಆ ಕಾರ್ಯಕ್ಕೆ ಸೇವೆ ಸಲ್ಲಿಸುವಂತಿತ್ತು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ.

೩. ಜರಾಸಂಧ ಒಯ್ದಿದ್ದ ಆ ಸೇನೆಯೆಲ್ಲಾ ಶ್ರೀಕೃಷ್ಣನಿಂದ ಹತವಾಗುವುದು ನಿಶ್ಚಯ ಎಂಬ ಸೂಚನೆಯು ಇಲ್ಲಿದೆ.

೪. ಜರಾಸಂಧ ಹಾಗೆ ಒಯ್ದ ಸೇನೆ ಒಟ್ಟು ೨೩ ಅಕ್ಷೋಹಿಣಿಯಾಗಿತ್ತು. ಆ ರೀತಿ ಅವನು ಒಟ್ಟು ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ತೆರಳಿದ್ದು ೧೮ ಬಾರಿ. ಪ್ರತಿಬಾರಿಯೂ ಸೇನೆಯ ಸಂಖ್ಯೆ ೨೩ ಅಕ್ಷೋಹಿಣಿಯೇ ಆಗಿತ್ತು ಎಂಬುದು ವಿಶೇಷ. ಇದರಿಂದಾಗಿ ಒಟ್ಟು ಜರಾಸಂಧನ ಹತವಾದ ಸೇನೆಯ ಸಂಖ್ಯೆ ೨೩×೧೮=೪೧೪ ಅಕ್ಷೋಹಿಣಿ. ಇದರಿಂದಾಗಿ ಭೂಭಾರ ಗಣನೀಯ ಸಂಖ್ಯೆಯಲ್ಲಿ ಪರಿಹಾರವಾಯಿತು ಎಂದು ತಿಳಿಯಬೇಕು.

೫. ಜಗತ್ತಿನ ಸಕಲರೂ ಸಹ ಯಾವುದೇ ರೀತಿಯ ಕಾರ್ಯವನ್ನೆಸಗಿದರೂ ಅದು ಒಟ್ಟಾಗಿ ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿಯೇ ಇರುವುದು ಎಂಬ ಮಹಾಪ್ರಮೇಯ ಇದರಿಂದ ಸೂಚಿತ.

೬. ಜರಾಸಂಧನ ಈ ರೀತಿಯಾದ ಆಕ್ರಮಣವು ಶ್ರೀಕೃಷ್ಣನ ಭೂಭಾರಹರಣಕಾರ್ಯಕ್ಕೆ ಅನುಕೂಲವೇ ಆಯಿತು ಎಂಬ ಮಾತು ಅರಿಷ್ಟಾಸುರ, ಶಂಖಚೂಡ, ಕೇಶಿ ಮೊದಲಾದವರ ಪ್ರಸಂಗಗಳಂತಹುದು ಎಂಬುದು ಗಮನಾರ್ಹ.

### ಜರಾಸಂಧನ ಸೈನ್ಯ ಸಂಭಾರ

**ಗಜೈ ರಥೌಘೈರ್ಗಗನಂ ಸ್ಪೃಶದ್ಭಿ-**
**ರ್ಭಟೈರ್ಹಯೈರ್ಭಾಸುರಭೂಷಣೌಘೈಃ ।**
**ಜಗಾಮ ಜಾಮಾತೃಪಥೇನ ತಸ್ಮೈ**
**ಚಮೂಮಮುಂ ಪ್ರೇಷಯಿತುಂ ಧಿಯೇವ ॥ ೪೦ ॥**

ಹೊಳೆಯುವ ಆಭರಣಗಳ ರಾಶಿಯಿಂದ ಕೂಡಿದ್ದ ಗಗನವನ್ನು ಮುಟ್ಟುವಂತಿದ್ದ ಆನೆಗಳು, ರಥದ ಸಾಲುಗಳು, ಭಟರು ಹಾಗೂ ಕುದುರೆಗಳಿಂದ ಕೂಡಿಕೊಂಡು, ಆ ಸೈನ್ಯವನ್ನೆಲ್ಲಾ ಅಳಿಯನಾದ ಆ ಕಂಸನಿಗೋಸ್ಕರವಾಗಿ ಅವನ ಹಾದಿಯಲ್ಲೇ ಕಳುಹಿಸುವ ಬುದ್ಧಿಯಿಂದೆಂಬಂತೆ ಆ ಜರಾಸಂಧನು ಸಾಗಿದ.

---

೧. ಜರಾಸಂಧಾನೀತಾನಾಂ ಸರ್ವೇಷಾಂ ಸೈನ್ಯಾನಾಂ ಮಧುರಾಯಾಂ ಸಂಹಾರೋ ಭವಿಷ್ಯತೀತಿ ಭಾವಃ । -ವ್ಯಾ.

ವಿ. : ೧. [1]ಜರಾಸಂಧ ಹಾಗೆ ತೆರಳಿದ್ದು ಅದನ್ನೆಲ್ಲಾ ತನ್ನ ಅಳಿಯನಾದ ಕಂಸನೊಂದಿಗೆ ಯಮಪುರಿಗೆ ಮುಂದೆ ಕ್ರಮವಾಗಿ ಅಂಧಃತಮಸ್ಸಿಗೆ ಅಟ್ಟಲೆಂದರ್ಥ; ಮುಂದೆ ನಡೆದದ್ದೂ ಹಾಗೆಯೇ.

೨. ಜರಾಸಂಧ ಅಷ್ಟು ಅಪಾರ ಸಂಖ್ಯೆಯ ಸೇನೆಯ ನಾಶಕ್ಕೆ ಕಾರಣವಾಗುವ ಮೂಲಕ ಗಳಿಸಿದ ಪಾಪ ಅದೆಷ್ಟು ಅಗಾಧ ಎಂಬ ಸೂಚನೆಯೂ ಇದರಲ್ಲಿದೆ; ಜಾಮಾತೃ - ಅಳಿಯ.

೩. ಸರ್ಗ ೧೧ರ ೫೧ನೆಯ ಶ್ಲೋಕದಲ್ಲಿನ ವಿವರಗಳು ಇದರಂತೆಯೇ ಇವೆ:

**ಜರಾಸಂಧನು ಮಾಡಿದ ಮಧುರೆಯ ವಿನಾಶ**

**[2]ಕುಂತೈಃ ಕುಠಾರೈಃ ಕುದ್ದಾಲೈರ್ಬಭಂಜುರ್ಭಗವತ್ಪುರೀಮ್ ।**
**ಆದ್ಯಾಮುಪನಿಷದ್ವಿದ್ಯಾಂ ಕುತರ್ಕೈರಿವ ವಾದಿನಃ ॥ ೪೧ ॥**

ದುರ್ವಾದಿಗಳು ಕುತರ್ಕಗಳಿಂದ ಅನಾದಿಯಾದ ಉಪನಿಷದ್ವಿದ್ಯೆಯನ್ನು ಹೇಗೋ ಹಾಗೆ ಆ ಜರಾಸಂಧನ ಸೈನಿಕರು ಕುಂತ, ಕುಠಾರ, ಗುದ್ದಲಿ ಮೊದಲಾದವುಗಳಿಂದ ಭಗವಂತನಾದ ಶ್ರೀಕೃಷ್ಣನ ಪಟ್ಟಣವಾದ ಮಧುರೆಯನ್ನು ಭಗ್ನಗೊಳಿಸತೊಡಗಿದರು.

ವಿ. : ೧. ಜರಾಸಂಧನ ಸೇನೆ ಬಗೆಬಗೆಯ ಆಯುಧಗಳಿಂದ ಮಧುರಾಪುರಿಯನ್ನು ನಾಶಪಡಿಸಲು ಮಾಡಿದ ಪ್ರಯತ್ನವನ್ನು, ಇಲ್ಲಿ ಕುತರ್ಕಗಳಿಂದ ವೇದಾದಿ ಶಾಸ್ತ್ರಪ್ರಪಂಚವನ್ನು ಅಲ್ಲಗಳೆಯುವ ದುರ್ವಾದಿಗಳ ಪ್ರಯತ್ನಕ್ಕೆ ಹೋಲಿಸಿರುವರು.

೨. ಅನಾದಿಯಾದ ಅಪೌರುಷೇಯವಾದ ವೇದವಿದ್ಯೆಯು ಯಾವ ಕುತರ್ಕಗಳಿಗೂ ಮಣಿಯುವಂತಹುದಲ್ಲ; ಅದರಂತೆ ಶ್ರೀಕೃಷ್ಣನ ಮಧುರಾಪುರಿಯು ಯಾವುದೇ ಶತ್ರುವಿನ ಎಂತಹ ಆಯುಧಕ್ಕೂ ಸಹ ನಾಶವಾಗದ ಅಭೇದ್ಯ ಪಟ್ಟಣ ಎಂಬ ಸೂಚನೆಯೂ ಇಲ್ಲಿದೆ.

೩. [3]ಅಪೌರುಷೇಯವಾದ ವೇದವಿದ್ಯೆಯು ಸ್ವತಃಪ್ರಮಾಣವೆನ್ನಿಸಿರುವ ನಿರ್ದುಷ್ಟವಾದ ಶಾಸ್ತ್ರ. ಆಧಾರರಹಿತವಾದ ತರ್ಕಗಳು ಕುತರ್ಕಗಳು. ಅಂತಹ ಸಚ್ಛಾಸ್ತ್ರವನ್ನು ಕುತರ್ಕಗಳಿಂದ ಅಲ್ಲಗಳೆಯುವುದು ಅವಿವೇಕ ಎಂದು ಭಾವ : **ಶುಷ್ಕತರ್ಕಂ ತು ವರ್ಜಯೇತ್** ।(ಬ್ರಹ್ಮಸೂತ್ರ ಭಾಷ್ಯ)

---

೧. ಕಂಸೋ ಯತ್ರಾಂಧೇತಮಸಿ ಗತಃ ತತ್ರೇಯಂ ಸೇನಾಽಪಿ ಗಮಿಷ್ಯತೀತಿ ಭಾವಃ। -ವ್ಯಾ.

೨. ಕುಂತೈಃ ಕುಠಾರೈಃ ಕುದ್ದಾಲೈರ್ದಂಡಭಾರೈಶ್ಚ ಘೋರಿಭಿಃ।
ಕರ್ಷಣಸ್ಥೈಶ್ಚ ಪಾಷಾಣೈರ್ಬಭಂಜ ಪರಿತಃ ಪುರಮ್ ॥ - ಭಾಗ. (೧೦/೫೧/೨೪)

೩. ವಾದಿನೋ ದುರ್ವಾದಿನಃ ಕುತರ್ಕೈಃ ಕುತ್ಸಿತತರ್ಕೈಃ ಆದ್ಯಾಮನಾದಿಭೂತಾಂ ಉಪನಿಷದ್ವಿದ್ಯಾಮಿವ। -ವ್ಯಾ.

೪. ಇಲ್ಲಿ ಕುಂತ ಕುಠಾರ ಕುದ್ದಾಲ ಹಾಗೂ ಕುತರ್ಕ ಎಂಬಲ್ಲಿನ ಪದಪ್ರಯೋಗವು ಅತ್ಯಂತ ಔಚಿತ್ಯಪೂರ್ಣವಾದುದು; ಇದರಿಂದ ಕುಂತಾದಿ ಆಯುಧಗಳು ಕುತರ್ಕದ ಸಂಕೇತ ಎಂಬ ಧ್ವನಿ ಸೂಚಿತ.

**ಮುಂದುವರೆದ ಜರಾಸಂಧನ ದುಷ್ಕೃತ್ಯ**

**ಉಪವನಮುಪವೇದಪ್ರಾಯಮುನ್ಮೂಲಯಂತಃ**
**ಸುಕೃತಸಮಮುದಾರಂ ದ್ವಾರಮಾರಾದ್ಬಭಂಜುಃ।**
**ಪ್ರತಿಭಯವರಶಕ್ತ್ಯಾದ್ಯೂರ್ಜಿತಾಧಾರಯುಕ್ತಾಃ**
**ಖಲಮತಿಹೃತಚಿತ್ತಾ ದೂಷ್ಯದುರ್ಮಂತ್ರದೃಪ್ತಾಃ ॥ ೪೨ ॥**

ಜರಾಸಂಧನ ಕಡೆಯವರು ಪ್ರತಿವೀರರಿಗೆ ಭಯಹುಟ್ಟಿಸುವಂತಹ ವರಗಳನ್ನು, ಶಕ್ತಿ ಮೊದಲಾದ ಮಹತ್ತರವಾದ ಆಸರೆಯನ್ನು ಹೊಂದಿದವರು; ದುರ್ಬುದ್ಧಿಯಿಂದಾಗಿ ಮನಸ್ಸು ಕೆಡಿಸಿಕೊಂಡವರು; ನಿಂದಿತವಾದಂತಹ ಕೆಟ್ಟ ವಿಚಾರಗಳಿಂದ ಸೊಕ್ಕಿದವರು; ಅವರು ಉಪವೇದದಂತಿದ್ದ ಉಪವನವನ್ನು ಸಮೂಲವಾಗಿ ಕಿತ್ತೆಸೆಯುತ್ತಾ ಸುಕೃತದಂತಹ ಶ್ರೇಷ್ಠವಾದ ಗೋಪುರದ್ವಾರವನ್ನು ಅದರ ಸಮೀಪಕ್ಕೆ ಬಂದು ಧ್ವಂಸಮಾಡಿದರು.

ವಿ. : ೧. ಜರಾಸಂಧನ ಸೈನಿಕರು ಮಧುರಾಪುರಿಯ ಉಪವನಗಳನ್ನು, ಮಹಾದ್ವಾರಗಳನ್ನು ಸಹ ನಾಶಪಡಿಸುವ ಕಾರ್ಯದಲ್ಲಿ ತೊಡಗಿದರು ಎಂದರ್ಥ.

೨. ಉಪವೇದಗಳು ಎಂದರೆ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಶಸ್ತ್ರಶಾಸ್ತ್ರಗಳು ಎಂದರ್ಥ.

೩. [1]ದುರ್ಮಂತ್ರಗಳು ಎಂದರೆ ಭೈರವೀ, ಕುಕ್ಕುಟ ಮೊದಲಾದವುಗಳು.

೪. ಪುಣ್ಯವು ಸದ್ಗತಿಯ ಮಹಾದ್ವಾರವಾಗಿರುವುದರಿಂದ ಅದನ್ನು ಮಧುರೆಯ ಹೆಬ್ಬಾಗಿಲು ಎಂದು ಕರೆದಿರುವುದು ಉಚಿತವಾಗಿದೆ.

೫. ಪ್ರತಿಭಯವರಶಕ್ತಿ ಎಂಬುದಕ್ಕೆ ಪ್ರತಿವೀರರಿಗೆ ಭಯಹುಟ್ಟಿಸುವಂತಹ ರುದ್ರಾದಿ ದೇವತೆಗಳ ವರಗಳ ಶಕ್ತಿ ಎಂಬ ಅರ್ಥವು ವಿವಕ್ಷಿತ.

೬. ಜರಾಸಂಧನು ಮಿಥ್ಯಾಜ್ಞಾನಕ್ಕೆ ಅಭಿಮಾನಿ ಎನ್ನಿಸಿದ [2]ವಿಪ್ರಚಿತ್ತಿ ಎಂಬ ದೈತ್ಯನ ಅವತಾರ; ಆದ್ದರಿಂದ ಅವನನ್ನು ಹಾಗೂ ಅವನ ಸೇನೆಯನ್ನು ಮಿಥ್ಯಾಜ್ಞಾನಕ್ಕೆ ಕಾರಣವಾಗುವ ದುರ್ವಾದಿಗಳಿಗೆ ಹೋಲಿಸಿರುವುದು ಅತ್ಯಂತ [3]ಉಚಿತವಾದುದು.

---

೧. ಅನ್ಯತ್ರ ಪ್ರತಿಭಯೋ ಭಯಂಕರೋ ವರೋ ಯಾಭ್ಯಸ್ತಾಃ ಶಕ್ತ್ಯಾದಯೋ ದುರ್ದೇವತಾಃ । ಆದಿಪದೇನ ಭೈರವೀಕುಕ್ಕುಟಾದಯೋ ಗೃಹ್ಯಂತೇ। -ವ್ಯಾ.

೨. ಸ ವಿಪ್ರಚಿತ್ತಿಶ್ಚ ಜರಾಸುತೋಽಭೂದ್ವರಾದ್ವಿಧಾತುರ್ಗಿರಿಶಸ್ಯ ಚೈವ।
ಸರ್ವೈರಜೇಯೋ ಬಲಮುತ್ತಮಂ ತಜ್ಜ್ಞಾತ್ವೈವ ಕಂಸಸ್ಯ ಮುದಾ ಸುತೇ ದದೌ ॥ಮ.ಭಾ.ತಾ.ನಿ.(೧೧/೨೦೧)

೩.. ಜರಾಸಂಧಭಟಾಃ ಉಪವೇದಪ್ರಾಯಮಾಯುರ್ವೇದಧನುರ್ವೇದಗಾಂಧರ್ವವೇದಶಸ್ತ್ರಶಾಸ್ತ್ರೋಪವೇದ-ಸಮಮುಪವನಂ ಆರಾಮಂ ಉನ್ಮೂಲಯಂತಃ ಸಂತೋ ಮಧುರಾಯಾ ಉಪನಿಷತ್ತ್ವಾಮ್ಯಸ್ಯೋಕ್ತತ್ವಾತ್ತತ್ಸಮೀಪ-ಸ್ಥೋಪವನಾನಾಮುಪವೇದಪ್ರಾಯತ್ವಾದಿತಿ ಭಾವಃ। -ವ್ಯಾ.

೭. ಜರಾಸಂಧನ ಸೈನಿಕರ ಮತಿ, ಅವರ ಚಿಂತನೆ ಹಾಗೂ ವರ ಎಲ್ಲವೂ ಸಹ ಅತ್ಯಂತ ಹೇಯ ಎಂದು ತಿಳಿಸುವ ಮೂಲಕ ದುಷ್ಟರ ಸಾಧನೆಯ ರೀತಿ ವಿವರಿಸಲ್ಪಟ್ಟಿದೆ ಎಂದು ತಿಳಿಯಬೇಕು.

೮. ಶ್ರೀಮದಾಚಾರ್ಯರ ಹಿರಿಮೆಯನ್ನು ಸಹಿಸದ ಮಾಯಾವಾದಿಗಳು ಇದೇ ತೆರನಾಗಿ ಅವರ ಮೇಲೆ ಕುಮಂತ್ರ ಮೊದಲಾದವುಗಳನ್ನು ಪ್ರಯೊಗಿಸಿದ ಸುಮಧ್ವವಿಜಯದ ವಿವರ ಇಲ್ಲಿ ಗಮನಾರ್ಹ : ಪಾಲನವಶೀಕರಣಸ್ತಂಭನವಿದ್ವೇಷಣೋಚ್ಚಾಟನಮಾರಣಾನಿ ಷಟ್ಕರ್ಮಾಣಿ। (ಭಾವಪ್ರಕಾಶಿಕಾ)[೧]

### ದುರ್ವಾದಿಗಳ ರೀತಿಯ ದುಷ್ಟರ ಪ್ರಯತ್ನ

**ಬಾಧ್ಯಾಂ ತಾಂ ಸಹ ನಿಶ್ಚಲಾರ್ಥನಿಕರೈಃ ಕ್ರುದ್ಧಾಃ ಖಲಾ ನಿರ್ಗುಣಾ-**
**ಗಾರಾಮಂತರಹೋ ವಿಧಾತುಮಮತಾ ಯತ್ನಂ ವಿತೇನುಃ ಕಿಲ ।**
**ಕೃಷ್ಣೇನಾಪಿ ಸಮುಜ್ಝಿತಾಂ ಸಮಯಿನೋ ಯುಕ್ತ್ಯಾಽಽತ್ಮಪಕ್ಷೇಽಂಜಸಾ**
**ಕೃತ್ಸ್ನೈಕ್ಯಂ ಸಮಯೋಜಯನ್ ಗತಭಯಾ ದುರ್ಭಾಷ್ಯಪುಂಜೈರಪಿ ॥ ೪೩ ॥**

ಕೆರಳಿದ ಶ್ರೀಕೃಷ್ಣನ ವಿರೋಧಿಗಳಾದ ಆ ದುಷ್ಟರು, ಶ್ರೀಕೃಷ್ಣನನ್ನು ನಿರ್ಗುಣಗಳಿಗೆ ಆಕರ ಎಂಬುದಾಗಿ ಮಾಡಲು ಯತ್ನವನ್ನು ಮಾಡಗೊಡಗಿದರು; ಅಬ್ಬ! ಭಯ ತೊರೆದ ಅವರು ಸಮಯವನ್ನು ಸಾಧಿಸಿ ಶ್ರೀಕೃಷ್ಣನಿಂದ ವಿರಹಿತವನ್ನಾಗಿ ಮಾಡಲೆಂದು ದುರ್ಭಾಷ್ಯಗಳ ಗುಂಪಿನಿಂದ ಐಕ್ಯವನ್ನು ಸಾಧಿಸಿ, ತಮ್ಮ ಪಕ್ಷದೊಂದಿಗೆ ಚೆನ್ನಾಗಿ ಯೋಜನೆ ಮಾಡತೊಡಗಿದರು. ಆ ಮಧುರಾಪುರಿಯನ್ನು ಅದರಲ್ಲಿನ ಶಾಶ್ವತವಾದ ಸಂಪತ್ತಿನ ಸಮೂಹಗಳೊಂದಿಗೆ ಬಾಧಿತವನ್ನಾಗಿಸಲು, ಉಪನಿಷದ್ವಿದ್ಯೆಯನ್ನು ಮಿಥ್ಯೆ ಎಂದು ಸಾಧಿ-ಸತೊಡಗಿದರು; ಗುಣಪೂರ್ಣನೆಂದು ಸಾಧಿಸುವ ಅದನ್ನು ಒಳಗೆ ನಿರ್ಗುಣ ಪ್ರತಿಪಾದಕ ಎಂದು ಹೇಳತೊಡಗಿದರು. ಕೃಷ್ಣನನ್ನು ಇಲ್ಲದಂತಾಗಿಸುವ ಯತ್ನಕ್ಕೆ ತೊಡಗಿದರು. ತಮ್ಮ ದುರ್ಭಾಷ್ಯಗಳ ಸಮೂಹದಿಂದ ಅವುಗಳನ್ನು ಕಲುಷಿತಗೊಳಿಸಿದರು.

(ದುರ್ವಾದಿಗಳು ಕೆರಳಿದವರಾಗಿ, ಬಗೆಬಗೆಯ ಉಪಾಯಗಳಿಂದ ಪ್ರಮಾಣಗಳಿಂದ ಸತ್ಯವೆಂಬುದಾಗಿ ನಿಶ್ಚಿತವಾದ ಸಕಲ ಜಗತ್ತನ್ನು ಸಹ ಬಾಧ್ಯ ಎಂದು ಸಾಧಿಸತೊಡಗಿದರು; ಶ್ರುತಿಗಳ ಅಂತರಾರ್ಥವು ಬ್ರಹ್ಮನ ನಿರ್ಗುಣತ್ವ ಎಂದು ವಾದಿಸತೊಡಗಿದರು; ಶಬಲಬ್ರಹ್ಮನೆನ್ನಿಸಿದ, ಕೃಷ್ಣನ್ನನು ಸಹ ಸುಳ್ಳೆಂದು ಸಾರಿದರು; ತಮ್ಮ ಪಕ್ಷದಲ್ಲಿ ನಿರ್ಭೀತಿಯಿಂದ ದುರ್ಭಾಷ್ಯಗಳ ಗುಂಪಿನಿಂದ ಶ್ರುತಿವಾಕ್ಯಗಳಿಗೆ ಐಕ್ಯ ಎಂಬ ಅರ್ಥವನ್ನೇ ಕೂಡಿಸತೊಡಗಿದರು).

---

೧. ಯದ್ಯದ್ದೃತಂ ಕರ್ಕಶೈರ್ಗೌಣತರ್ಕೈ ರುದ್ಧಂ ಸಾಧ್ಯಂ ನೈವ ಭಾತ್ಯಸ್ತು ತಾವತ್ ।
ಷಟ್ಕರ್ಮಜ್ಞೈರ್ದಿವ್ಯಮಂತ್ರೌಷಧಾಢ್ಯೈರೇತೈರ್ಗುಪ್ತಾನ್ ನೋ ನ ಜೇತಾ ಹಿ ಕಶ್ಚಿತ್ ॥ -ಸು.ವಿ.(೧೨/೨೦)

೨. ಕೃತ್ಸ್ನೇತ್ಯನೇನ ಸ್ವಕಟಕೇ ವಿದ್ಯಮಾನಾನಾಂ ಬಲಾದಾನೀತಾನಾಂ ಸಜ್ಜೀವಾನಾಂ ದಂಡಭೀತ್ಯೈವೈಕಮತ್ಯಮಿತಿ ಧ್ವನಯತಿ । -ವ್ಯಾ.

ವಿ. : ೧. ಪ್ರತಿವಾದಿಗಳು ಜಗತ್ತು ಮಿಥ್ಯೆ, ಬ್ರಹ್ಮಜ್ಞಾನದಿಂದ ಬಾಧ್ಯ, ಬ್ರಹ್ಮ ನಿರ್ಗುಣ; ಜಗತ್ತಿಗೆ ಸ್ವಾಮಿಯಾದ ಶ್ರೀಕೃಷ್ಣ ಎಂಬುವನು ಇಲ್ಲ ಮೊದಲಾದ ಅರ್ಥಬರುವಂತೆ (ಬ್ರಹ್ಮಸೂತ್ರಾದಿ ಶಾಸ್ತ್ರಗಳನ್ನು ಕಲುಷಿತಗೊಳಿಸುವಂತೆ ಜರಾಸಂಧನ ಸೈನಿಕರು ಮಧುರೆಯಲ್ಲಿನ ಪದಾರ್ಥಗಳನ್ನು ನಾಶಪಡಿಸಿದರು, ಮನೆಗಳನ್ನೆಲ್ಲಾ ಬರಿದಾಗಿಸಿದರು; ಶ್ರೀಕೃಷ್ಣನನ್ನು ಇಲ್ಲವಾಗಿಸುವ) ಪ್ರಯತ್ನವನ್ನು ನಡೆಸಿದರು ಎಂದರ್ಥ.

೨. ಇಲ್ಲಿಯ ದುರ್ಭಾಷ್ಯ ಪುಂಜ ಎಂಬುದಕ್ಕೆ ೩೨ ಉಪನಿಷತ್ತುಗಳಿಗೆ ಆಪಾತರಣೀಯವಾದ ಪೂರ್ವೋತ್ತರವಿರುದ್ಧವಾದ ೩೨ ದುರ್ಭಾಷ್ಯಗಳು ಎಂಬ ಅರ್ಥವನ್ನು, ೨೧ ದುರ್ಭಾಷ್ಯಗಳು ಎಂಬ ಅರ್ಥವನ್ನು ವ್ಯಾಖ್ಯಾನಕಾರರು ಬರೆದಿರುವರು :

ಅನ್ಯತ್ರ ದ್ವಾತ್ರಿಂಶದ್ದುರ್ಭಾಷ್ಯಪುಂಜೈಃ ಸಮಯೋಜಯನ್ ದ್ವಾತ್ರಿಂಶದುಪನಿಷದಾಮಾ-
ಪಾತರಮಣೀಯಪೂರ್ವೋತ್ತರವಿರುದ್ಧಾರ್ಥಕದ್ವಾತ್ರಿಂಶದ್ದುರ್ಭಾಷ್ಯಾಣ್ಯಪಿ ಚಕ್ರುರಿತ್ಯರ್ಥಃ।
ಯದ್ವಾ ಏಕವಿಂಶತಿಕುಭಾಷ್ಯೈಃ ಸಮಯೋಜಯನ್ನಿತ್ಯರ್ಥಃ। -ವ್ಯಾ.

೩. ವ್ಯಾಖ್ಯಾನದಲ್ಲಿಯ ೩೨ ಉಪನಿಷತ್ತುಗಳು ಹಾಗೂ ಅವುಗಳ ದುರ್ಭಾಷ್ಯಗಳು ಎಂಬ ಉಲ್ಲೇಖ ಗಮನಾರ್ಹವಾದುದು; ಆದರೆ ಅವುಗಳ ಬಗ್ಗೆ ಹೆಚ್ಚಿನ ವಿವರಗಳು ಸಂಶೋಧನೆಯಿಂದ ತಿಳಿಯಬೇಕಾಗಿದೆ.

### ಶ್ರೀಕೃಷ್ಣನು ಮಾಡಿದ ಮಧುರೆಯ ರಕ್ಷಣೆ

**ಕೃಷ್ಣೋಽಪಿ ಸ್ವಚಮೂಂ ಸುವರ್ಣಖಚಿತಾಂ ಕೃತ್ವಾ ಚತುರ್ಧಾ ಪ್ರಭು-**
**ಸ್ತತ್ರಾಗ್ರ್ಯಾಂಶ್ಚತುರೋ ವಿಧಾಯ ನಗರೀರಕ್ಷಾರ್ಥಮೀಶೋಽದಿಶತ್।**
**ಭಾಸ್ವತ್ಸೂತ್ರಚಮೂಮಿವೋಪನಿಷದಾಂ ರಕ್ಷಾರ್ಥಮತ್ಯೂರ್ಜಿತಾ-**
**ಮಧ್ಯಾಯೈಃ ಸಹಿತಾಂ ಚತುರ್ಭಿರಮಲೈಸ್ತನ್ಮಾನಪಾದೋಜ್ಜ್ವಲೈಃ[೧] ॥ ೪೪ ॥**

ಪ್ರಭುವೂ, ಸಮರ್ಥನೂ ಆದ ಶ್ರೀಕೃಷ್ಣನಾದರೋ ಸುವರ್ಣದಿಂದ ಖಚಿತವಾದ ತನ್ನ ಸೇನೆಯನ್ನು ನಾಲ್ಕು ಭಾಗ ಮಾಡಿ, ಶ್ರೇಷ್ಠರಾದ ನಾಲ್ವರನ್ನು ಸೇನಾನಾಯಕರನ್ನಾಗಿ ಮಾಡಿ, ಪಟ್ಟಣದ ರಕ್ಷಣೆಗೆಂದು ಆದೇಶಿಸಿದನು; ಅಷ್ಟೇ ಸಂಖ್ಯೆಯ ಪಾದಗಳಿಂದ ಶೋಭಿಸುವ, ನಿರ್ಮಲವಾದ ನಾಲ್ಕು ಅಧ್ಯಾಯಗಳಿಂದ ಸಹಿತವಾದ ಅತ್ಯುತ್ಕೃಷ್ಟವಾದ ಬ್ರಹ್ಮಸೂತ್ರಗಳೆಂಬ ಸೇನೆಯನ್ನು ಉಪನಿಷತ್ತುಗಳ ರಕ್ಷಣೆಗಾಗಿ ಹೇಗೋ, ಹಾಗೆ.

ವಿ. : ೧. ಪ್ರತಿವಾದಿಗಳ ವಿನಾಶಕ್ಕಾಗಿ ಶ್ರೀಕೃಷ್ಣ ತನ್ನ ಸೇನೆಯನ್ನು ೪ ಭಾಗಗಳಾಗಿ ವಿಂಗಡಿಸಿದ. ಅದರ ರಕ್ಷಣೆಗೆಂದು ಬ್ರಹ್ಮಸೂತ್ರಗಳಂತಿದ್ದ ತನ್ನ ಸೇನೆಯನ್ನು ಕಳುಹಿಸಿದ ಎಂದರ್ಥ.

೨. ಇದು ಒಂದು ರೀತಿಯಲ್ಲಿ ವಾಸಿಷ್ಠಕೃಷ್ಣರೂಪದಿಂದ ಶ್ರೀಕೃಷ್ಣನು ವೇದಗಳನ್ನು ೪ ಭಾಗಗಳಾಗಿ ವಿಂಗಡಿಸಿ ಅವುಗಳ ಅರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿ, ದುರ್ಮತ-

---

೧. ಶ್ಲಿಷ್ಟಗರ್ಭಿತೇಯಮುಪಮಾ। -ವ್ಯಾ.

ಗಳನ್ನು ನಾಶಪಡಿಸಿದ ಪ್ರಸಂಗವನ್ನು ಹೋಲುವುದು ಎಂಬ ಇಲ್ಲಿನ ಚಿಂತನೆ ಅತ್ಯಂತ ಅಪೂರ್ವವಾದುದು.

೩. [1]ಬ್ರಹ್ಮಸೂತ್ರಗಳು ಉಪನಿಷದ್ವಿದ್ಯೆಯ ರಕ್ಷಣೆಗೋಸ್ಕರ ರಚಿತವಾದ ಶಾಸ್ತ್ರ ಎಂದು ತಿಳಿಸುವ ಮೂಲಕ ಅದು ಅನುಗ್ರಾಹಕ ಶಾಸ್ತ್ರವಾದ್ದರಿಂದ ಮುಖ್ಯಾರ್ಥದಲ್ಲಿ ಪರವಿದ್ಯೆಯಾಗಿದೆ ಎಂಬ ವಿಶೇಷಾಂಶವು ಇಲ್ಲಿ ಸೂಚಿತ ; ಊರ್ಜಿತ - ಉತ್ಕೃಷ್ಟ

೪. [2]ಸೇನೆಯಲ್ಲಿ ಸುವರ್ಣಾಭರಣಗಳಿಂದ ಅಲಂಕೃತರಾದ ಸೈನಿಕರು ಮೊದಲಾದವರು ಇದ್ದಂತೆ ಶಾಸ್ತ್ರವಿದ್ಯೆಯು ಸುವರ್ಣಗಳಿಂದ ಅಲಂಕೃತವಾದುದು ಎಂಬ ಭಾವವೂ ಇಲ್ಲಿದೆ.

### ಮಧ್ವರ ಮನೋರಥದಂತಹ ಶ್ರೀಕೃಷ್ಣನ ರಥ

**ಪಕ್ಷೀಂದ್ರಾಯತನಃ ಪರಸ್ಯ ವಸತಿರ್ವೃಷ್ಣಿಪ್ರಮೋದೋಽಭ್ಯಗಾ-**
**ದ್ವಿಖ್ಯಾತಾಶ್ವಚತುಷ್ಟಯಃ [3]ಕಿಲ ರಥೋ ವಿಭ್ರಾಜಮಾನಧ್ವಜಃ।**

---

೧. ಉಪನಿಷದಾಂ ರಕ್ಷಾರ್ಥಂ ಶ್ರೀಕೃಷ್ಣೋ ವೇದವ್ಯಾಸ ಇವ ಆದಿಶದಿತಿ ಸಂಬಂಧಃ। -ವ್ಯಾ.

೨. ಮಧುರಾಪುರೀರಕ್ಷಾರ್ಥಂ ಯದುಸೇನಾ ಉಪನಿಷತ್ಪುರೀರಕ್ಷಾರ್ಥಂ ಸೂತ್ರಸೇನಾ ಸುವರ್ಣಾಲಂಕಾರ-ಖಚಿತತ್ವಮೇಕತ್ರ ಶೋಭನವರ್ಣಾಖ್ಯಾಲಂಕಾರಖಚಿತತ್ವಮನ್ಯತ್ರೇತಿ ವಿವೇಕೋ ದ್ರಷ್ಟವ್ಯಃ। -ವ್ಯಾ.

೩. ಏವಂ ಧ್ಯಾಯತಿ ಗೋವಿಂದೇ ಆಕಾಶಾತ್ ಸೂರ್ಯವರ್ಚಸೌ।
ರಥಾವುಪಸ್ಥಿತೌ ಸದ್ಯಃ ಸಸೂತೌ ಸಪರಿಚ್ಛದೌ ॥ -ಭಾಗ..(೧೦/೫೦/೧೧)

ಏತಸ್ಮಿನ್ನೇವ ಕಾಲೇ ತು ಗಗನಾತ್ ಸೂರ್ಯವರ್ಚಸೌ।
ರಥಾವುಪಸ್ಥಿತೌ ಸದ್ಯಃ ಸಸೂತೌ ಸಪರಿಚ್ಛದೌ ॥
ಆಯುಧಾನಿ ಚ ದಿವ್ಯಾನಿ ಪುರಾಣಾನಿ ಯದೃಚ್ಛಯಾ।
ಚಕ್ರಂ ಸುದರ್ಶನಂ ಘೋರಂ ಸಹಸ್ರಾರಂ ಮನೋರಮಮ್ ॥
ಗದಾ ಕೌಮೋದಕೀ ಗುರ್ವೀ ನಾಮ್ನಾ ಕೌಮೋದಕೀ ಶುಭಾ।
ತ್ರಿನತಂ ಕಾರ್ಮುಕಶ್ರೇಷ್ಠಂ ಶಾರ್ಙ್ಗಸಂಜ್ಞಂ ಗುಣಾನ್ವಿತಮ್ ॥
ತೀಕ್ಷ್ಣಧಾರಃ ಶಿತಮುಖಃ ಖಡ್ಗೋ ನಂದಕಸಂಜ್ಞಿತಃ।
ಲಘೂ ಶರಚಿತೌ ರಮ್ಯೌ ತೂಣೀ ಚಾಕ್ಷಯಸಾಯಕೌ ॥
ತುರಗಾಃ ಶೈಬ್ಯಸುಗ್ರೀವಮೇಘಪುಷ್ಪಬಲಾಹಕಾಃ।
ಹಲಂ ಚ ಬಲಭದ್ರಸ್ಯ ಮುಸಲಂ ಚ ದೃಢಂ ಗುರು ॥
ಇತ್ಯೇತಾನ್ಯಾಯುಧಾನ್ಯಾಜೌ ಗಗನಾದಾಗತಾನಿ ಸಃ।
ದೃಷ್ಟ್ವಾ ರಾಜನ್ ಹೃಷೀಕೇಶಃ ಸಂಕರ್ಷಣಮಥಾಬ್ರವೀತ್ ॥ - ಭಾಗ.(೧೦/೪೯/೨೨-೨೭)

ತಸ್ಯೇಚ್ಛಯೈವ ಪೃಥಿವೀಮವತೇರುರಾಶು ತಸ್ಯಾಯುಧಾನಿ ಸಬಲಸ್ಯ ಸುಭಾಸ್ವರಾಣಿ।
ಶಾರ್ಙ್ಗಾಸಿಚಕ್ರದರತೂಣಗದಾಃ ಸ್ವಕೀಯಾ ಜಗ್ರಾಹ ದಾರುಕಗೃಹೀತರಥೇ ಸ್ಥಿತಃ ಸಃ ॥
ಆರುಹ್ಯ ಭೂಮಯರಥಂ ಪ್ರತಿಯುಕ್ತಮಶ್ವೈರ್ವೇದಾತ್ಮಕೈರ್ಧನುರಧಿಜ್ಯಮಥ ಪ್ರಗೃಹ್ಯ।
ಶಾರ್ಙ್ಗಂ ಶರಾಂಶ್ಚ ನಿಶಿತಾನ್ ಮಗಧಾಧಿರಾಜಮುಗ್ರಂ ನೃಪೇಂದ್ರಸಹಿತಂ ಪ್ರಯಯೌ ಜವೇನ ॥
ರಾಮಃ ಪ್ರಗೃಹ್ಯ ಮುಸಲಂ ಸ ಹಲಂ ಚ ಯಾನಮಾಸ್ಥಾಯ ಸಾಯಕಶರಾಸನತೂಣಯುಕ್ತಃ।
ಸೈನ್ಯಂ ಜರಾಸುತಸುರಕ್ಷಿತಮಭ್ಯಧಾವದ್ಧರ್ಷಾನ್ನದನ್ನುರುಬಲೋಽರಿಬಲೈರಧೃಷ್ಯಃ ॥
-ಮ.ಭಾ.ತಾ.ನಿ.(೧೪/೨೧-೨೩.)

[1]ಮಧ್ವಸ್ಯೇವ ಮನೋರಥೋ ನಿಗಮಸಂಬದ್ಧಃ ಖಗೇಂದ್ರಾವೃತೋ
ವಿಷ್ಣೋರ್ಧಾಮ ತದಂಘ್ರಿಕೇತುನಿಲಯಃ ಸೂತ್ರೌಘಪುಷ್ಟಿಪ್ರದಃ [2] ॥ ೪೫ ॥

ಧ್ವಜದಲ್ಲಿ ಪಕ್ಷಿಶ್ರೇಷ್ಠನಾದ ಗರುಡ, ಸರ್ವೋತ್ತಮನಾದ ಶ್ರೀಕೃಷ್ಣನ ಉಪಸ್ಥಿತಿ, ವಿಖ್ಯಾತವಾದ ನಾಲ್ಕು ಕುದುರೆಗಳು, ಹೊಳೆಹೊಳೆಯುವ ಧ್ವಜ, ಯಾದವರಿಗೆ ಆನಂದ ನೀಡುವ ಇಂತಹ ಶ್ರೀಕೃಷ್ಣನ ರಥವು, ವೇದಗಳಿಗೆ ಸಂಬಂಧ ಹೊಂದಿದ ಪಕ್ಷಿರಾಜ ಗರುಡನಿಂದ ಆವೃತವಾದ, ವಿಷ್ಣುವಿನ ನೆಲೆಯಾದ, ಬ್ರಹ್ಮಸೂತ್ರಗಳ ಗುಂಪಿಗೆ ಪುಷ್ಟಿನೀಡುವಂತಹ, ಅವನ ಪಾದವನ್ನು ಧ್ವಜವನ್ನಾಗಿ ಹೊಂದಿದ ಶ್ರೀಮಧ್ವಾಚಾರ್ಯರ ಮನೋರಥದಂತೆ ಆಗಮಿಸಿತು.

ವಿ. : ಸರ್ಗ ೧೦, ಶ್ಲೋ.೪೬ ಹಾಗೂ ಸರ್ಗ ೧೧ ಶ್ಲೋ.೫೫ಗಳಲ್ಲಿಯು ಇದರಂತೆಯೆ ರಥ-ಮನೋರಥಗಳ ಪ್ರಸ್ತಾಪ ಬಂದಿರುವುದು ಗಮನಾರ್ಹವಾಗಿದೆ. ಖಗ-ಪಕ್ಷಿ; ಖಗೇಂದ್ರ, ಪಕ್ಷೀಂದ್ರ – ಗರುಡ.

### ಧರೆಗಿಳಿದ ಕೌಮೋದಕೀ ಹಾಗೂ ಶಂಖ

ಕೌಮೋದಕೀ ವಾದನಿವಿಷ್ಟಮಧ್ವ-
ವಾಚಃ ಸಮಾ ಪ್ರಾದುರಭೂದ್ಧರಣ್ಯಾಮ್ ।
ಕಂಬುರ್ಗುರೋರ್ಮಂಜುನಿನಾದಕಂಠ-
ಕಾಂತಿಃ ಸಮಸ್ತಾಗಮಗಾನಕರ್ತುಃ ॥ ೪೬ ॥

ವಾದಕ್ಕೆ ತೊಡಗಿದ ಮಧ್ವಾಚಾರ್ಯರ ಮಾತಿಗೆ ಸಮವಾಗಿದ್ದ ಕೌಮೋದಕೀ ಗದೆಯು ಭೂಮಿಯಲ್ಲಿ ಕಾಣಿಸಿಕೊಂಡಿತು; ಸಮಸ್ತಶಾಸ್ತ್ರಗಳನ್ನು ಗಾನಮಾಡುವ ಗುರುಗಳಾದ ಮಧ್ವಾಚಾರ್ಯರ ಮನೋಹರವಾದ ಧ್ವನಿಯನ್ನು ಹೊರಡಿಸುವ ಕಂಠದ ಕಾಂತಿಯ ಶಂಖವು ಧರೆಯಲ್ಲಿ ಕಾಣಿಸಿತು.

ವಿ. : ೧. ಶ್ರೀಕೃಷ್ಣನು ಹಾಗೆ ಯುದ್ಧಕ್ಕೆ ತೆರಳಿದಾಗ ಅವನ ಸಂಕಲ್ಪಮಾತ್ರದಿಂದ ಅವನ ಆಯುಧಗಳಾದ ಗದೆ, ಶಂಖ ಮೊದಲಾದವುಗಳು ಭೂಮಿಗಿಳಿದು ಬಂದವು

೨. ಶ್ರೀಕೃಷ್ಣನ ಕೌಮೋದಕೀ ಗದೆಯು ಶ್ರೀಮಧ್ವಾಚಾರ್ಯರ ವಾಕ್ಪ್ರಹಾರದಂತೆ ಇತ್ತು . ಶ್ರೀಮಧ್ವಾಚಾರ್ಯರ ಕಂಠದ ಕಾಂತಿಯನ್ನು ಪಾಂಚಜನ್ಯ ಹೋಲುತ್ತಿದ್ದಿತು ಎಂದು ಭಾವ.

---

೧. ಸೂತ್ರೌಘಪುಷ್ಟಿದಃ ಬ್ರಹ್ಮಸೂತ್ರಸಮೂಹಸ್ಯಾರ್ಥಪುಷ್ಟಿದಃ ಮಧ್ವಸ್ಯ ಶ್ರೀಮಧ್ವಾಚಾರ್ಯಸ್ಯ ಮನೋರಥ ಇವ ಭಾಷ್ಯಕರಣೋದ್ಯುಕ್ತಮನೋರಥ ಇವೇತ್ಯರ್ಥಃ । -ವ್ಯಾ.

೨. ಇಯಮಪಿ ಸಮಗ್ರೋಪಮಾ । -ವ್ಯಾ.

೩. ಶ್ರೀಮಧ್ವಾಚಾರ್ಯರ ಮಾತುಗಳು ಪ್ರತಿವಾದಿಗಳ ಪಾಲಿಗೆ ಗದಾಪ್ರಹಾರದಂತೆಯೂ, ಅವರ ಕಂಠವು ತನ್ನ ಮಂಜುಳಧ್ವನಿಯಿಂದಾಗಿ ಶಂಖದಂತೆಯೂ ಕಂಗೊಳಿಸುತ್ತಿದ್ದವು ಎಂದರ್ಥ.

೪. ಶ್ರೀಕೃಷ್ಣನ ಗದೆಗೆ ವಾಯುದೇವರು ಅಭಿಮಾನಿದೇವತೆ: ಯಸ್ಯ ಗದಾ ಪವಮಾನಃ -(ಯಮಕಭಾರತ); ಗದಾ ತು ವಾಯುಃ -(ಮ.ಭಾ.ತಾ.ನಿ. ೩/೭೪)

೫. ಪಾಂಚಜನ್ಯಶಂಖಕ್ಕೆ ಶ್ರೀರೂಪದ ಮಹಾಲಕ್ಷ್ಮಿ ಅಭಿಮಾನಿದೇವತೆ : ಶ್ರೀರಿತಿ ಯಾಂ ವದಂತಿ ಸತ್ತಾತ್ಮಿಕಾ ಶಂಖಮ್-ಮ.ಭಾ.ತಾ.ನಿ.(೩/೭೩)

೬. ಶ್ರೀಮನ್ಮಧ್ವಾಚಾರ್ಯರನ್ನು "ಸಮಸ್ತಾಗಮಗಾನಕರ್ತೃ" ಎಂಬುದಾಗಿ ಇಲ್ಲಿ ಉಲ್ಲೇಖಿಸಿರುವುದು ಗಮನಾರ್ಹ; ಹನುಮದ್ರೂಪದಿಂದ ಅವರು ಹಾಗೆ ಸಮಸ್ತ ಶಾಸ್ತ್ರಗಳನ್ನು ಗಾನಮಾಡಿದ ವಿವರ ಮಹಾಭಾರತತಾತ್ಪರ್ಯನಿರ್ಣಯ(೯/ ೧೨೧)ದಲ್ಲಿ ಬಂದಿದೆ :

ಇತ್ಥಂ ಸ ಗಾಯಂಚ್ಛತಕೋಟಿವಿಸ್ತರಂ ರಾಮಾಯಣಂ ಭಾರತಪಂಚರಾತ್ರಮ್ ।
ವೇದಾಂಶ್ಚ ಸರ್ವಾನ್ ಸಹಿತಬ್ರಹ್ಮಸೂತ್ರಾನ್ ವ್ಯಾಚಕ್ಷಾಣೋ ನಿತ್ಯಸುಖೋದ್ಬರೋಽಭೂತ್ ॥

೭. ಶ್ರೀಮಧ್ವಾಚಾರ್ಯರ ಅಪ್ರತಿಮ ಗಾನಕೌಶಲದ ಉಲ್ಲೇಖ [೧]ತತ್ತ್ವಪ್ರದೀಪ ಹಾಗೂ [೨]ಮಧ್ವವಿಜಯಗಳಲ್ಲಿ ಬಂದಿದೆ.

## ಮಧ್ವಸಿದ್ಧಾಂತದಂತಹ ಸುದರ್ಶನದ ಆಗಮನ

ವ್ಯಕ್ತಾಭೇದ್ಯಸಹಸ್ರವಕ್ತ್ರರುಚಿರಂ ನಿತ್ಯಂ ಮುರಾರೇಃ ಪ್ರಿಯಂ
[೩]ಮುಕ್ತಿದ್ವಾರಮಹೀಶಮುಖ್ಯವಿಬುಧೈರ್ಗೀತಂ ತಮಿಸ್ರಾಪಹಮ್ ।
ದೈತ್ಯಧ್ವಂಸಿ ಸುದರ್ಶನಂ [೪]ದಿನಕರೋದ್ರಿಕ್ತಂ ದಿಗಂತಾತತಂ
ಪೃಥ್ವ್ಯಾಂ ಮಧ್ವಸುದರ್ಶನಪ್ರತಿಕೃತಿಃ ಪ್ರಾದೃಶ್ಯತ ಪ್ರೋಜ್ಜ್ವಲಮ್ [೫] ॥ ೪೭ ॥

---

೧. ಗಂಧರ್ವವಿದ್ಯಾನಿಪುಣಸ್ಯ ನಿತ್ಯಂ ಗಂಧರ್ವವರ್ಯೈರನುಗೀತಕೀರ್ತೇಃ ।
ಕಲಾಶ್ಚ ಶೇಷಾ ಹೃದಯೇ ಗುರೋರ್ನಃ ಕರೋಲ್ಲಸತ್ಕಂದುಕವದ್ವಿಭಾಂತಿ ॥ -ತತ್ತ್ವಪ್ರದೀಪ

೨. ಅಯಮೇವ ಗೋವಿಷಯತೋಽಪಿ ಸದಸಿ ಜನತಾರ್ಥಿತೋ ಜವಾತ್ ।
ಪುಷ್ಪಮುತ ಫಲಮಹೋ ವಿದಧೇ ಜನಸುಪ್ತಿದಾನುಪಮಗಾನಸಂಪದಾ ॥ -ಸುಮಧ್ವವಿಜಯ(೧೦/೫೩.)
- ಶ್ರೀಮದಾಚಾರ್ಯರು ಗಾನಶಾಸ್ತ್ರವನ್ನು ಕುರಿತ ಕೃತಿಯೊಂದನ್ನು ಸಹ ರಚಿಸಿರುವ ಉಲ್ಲೇಖ ಭಾವಪ್ರಕಾಶಿಕೆಯಲ್ಲಿದೆ:
ದಿವ್ಯಗೇಯವಿದಗ್ದೋಽಸೌ ಸರ್ವಜ್ಞ ಇತಿ ಯಾಚಿತಃ ।
ವಿದ್ವದ್ಭಿರತ್ರ ಕೃತವಾನ್ ಗಾನಶಾಸ್ತ್ರಂ ಸುದುರ್ಲಭಮ್ ॥

೩.. ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ।
ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ॥ -ವರಾಹಪುರಾಣ

೪. ಅಪಿ ತ್ರಿಲೋಕ್ಯಾ ಬಹಿರುಲ್ಲಸಂತೀ ತಮೋ ಹರಂತೀ ಮುಹುರಾಂತರಂ ಚ ।
ದಿಶ್ಯಾದ್ಧ್ವಶಂ ನೋ ವಿಶದಾಂ ಜಯಂತೀ ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥ -ಸು.ವಿ.(೧/೩.)

೫. ಶ್ಲಿಷ್ಟೋಪಮಯೋಃ ಸಂಕರಃ । -ವ್ಯಾ.

ಪ್ರಕಟಗೊಂಡ ಅಭೇದ್ಯವಾದ ಸಾವಿರ ಅಲಗುಗಳಿಂದ ಶೋಭಿಸುವ, ಸದಾ ಮುರಾರಿಯಾದ ಶ್ರೀಕೃಷ್ಣನಿಗೆ ಪ್ರಿಯವಾದ, ಮುಕ್ತಿಗೆ ದ್ವಾರವೆನ್ನಿಸಿದ, ಶೇಷದೇವರೇ ಮೊದಲಾದ ದೇವತೆಗಳು ಕೊಂಡಾಡುವ, ಕತ್ತಲೆಯನ್ನು ಪರಿಹರಿಸುವ, ದೈತ್ಯರನ್ನು ನಾಶಪಡಿಸುವ, ಸೂರ್ಯನಿಗಿಂತ ಮಿಗಿಲಾದ, ದಿಗಂತವನ್ನು ವ್ಯಾಪಿಸಿದ, ಶ್ರೀಮಧ್ವಾಚಾರ್ಯರ ನಿರ್ಮಲ ದರ್ಶನದ ಪ್ರತಿಕೃತಿಯಂತಹ ಉಜ್ಜ್ವಲವಾದ ಸುದರ್ಶನಚಕ್ರವು ಭೂಮಿಯಲ್ಲಿ ಸ್ಫುಟವಾಗಿ ಕಾಣಿಸಿಕೊಂಡಿತು.

ವಿ. : ೧. ಗದೆ ಹಾಗೂ ಶಂಖಗಳಂತೆ ಶ್ರೀಕೃಷ್ಣನ ಚಕ್ರವೂ ಸಹ ಭೂಮಿಗಿಳಿದು ಬಂದಿತು ಎಂದರ್ಥ.

೨. [೧]ಸುದರ್ಶನಚಕ್ರವನ್ನು ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತಕ್ಕೆ ಹೋಲಿಸಿರುವುದು ಅತ್ಯಂತ ಗಮನಾರ್ಹ(ಸುದರ್ಶನ- ಶೋಭನಸಿದ್ಧಾಂತ).

೩. [೨]ಶ್ರೀಮಧ್ವಾಚಾರ್ಯರ ಸಿದ್ಧಾಂತವು ಅಭೇದ್ಯವಾದ ವಚನಗಳಿಂದ [೩]ಕೂಡಿರುವಂತಹುದು. ಮಹಾವಿಷ್ಣುವಿಗೆ ಅತ್ಯಂತ ಪ್ರಿಯವಾದುದು; ಮುಕ್ತಿಗೆ [೪]ಮಹಾದ್ವಾರವೆನ್ನಿಸಿರುವುದು; ಶೇಷನೇ ಮೊದಲಾದ ದೇವತೆಗಳಿಂದ [೫]ಶ್ಲಾಘ್ಯವಾಗಿರುವುದು, ಅಜ್ಞಾನದ ಕತ್ತಲೆಯನ್ನು ನಾಶಪಡಿಸುವುದು, ಸೂರ್ಯನಿಗಿಂತ ಮಿಗಿಲಾಗಿ ಬೆಳಗುವುದು, ದಿಕ್ಕುದಿಕ್ಕುಗಳಲ್ಲಿ ವ್ಯಾಪಿಸಿರುವುದು ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

೪. ಮಹಾವಿಷ್ಣುವಿನ ಸುದರ್ಶನಚಕ್ರಕ್ಕೆ ದುರ್ಗಾರೂಪದ ಮಹಾಲಕ್ಷ್ಮಿಯು ಅಭಿಮಾನಿದೇವತೆ : **ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ** ।- ಮ.ಭಾ.ತಾ.ನಿ.(೩/೭೩.); ಆದ್ದರಿಂದ ಅದಕ್ಕೆ ಶ್ರೀಕೃಷ್ಣನಿಗೆ ಪ್ರಿಯ, ಮುಕ್ತಿಗೆ ದ್ವಾರ, ಶೇಷದೇವರು ಮುಂತಾದವರಿಂದ ವಂದ್ಯ ; ತಮೋನಾಶಕ, ದೈತ್ಯಸಂಹಾರಕ ಮೊದಲಾದ ವಿಶೇಷಣಗಳು ಉಚಿತವೆನ್ನಿಸುವವು.

### ಭಾಷ್ಯ ಅನುವ್ಯಾಖ್ಯಾನಗಳಂತಹ ಎರಡು ಬತ್ತಳಿಕೆಗಳು

**ಕೃಷ್ಣಶ್ಶೈಷ್ಯಸಮರ್ಥನೇಽತಿಚತುರೈಸ್ತದ್ಭಿನ್ನಲೋಕೇ ಭಿದಾಂ**
**ನಿತ್ಯಂ ಸಾಧಯಿತುಂ ಕ್ಷಮೈರ್ಮತಿಮತಾಽಪ್ಯಚ್ಛೇದ್ಯಹೃದ್ಯಾತ್ಮಭಿಃ।**

---

೧. ಮಧ್ವಸ್ಯ ಶ್ರೀಮಧ್ವಾಚಾರ್ಯಸ್ಯ ಸುದರ್ಶನಂ ಸತ್ಸಿದ್ಧಾಂತಸ್ತದೇವ ಪ್ರತಿಕೃತಿರುಪಮಾ ಯಸ್ಯ ಸ ತಥೋಕ್ತಂ ಈದೃಶಂ ಸುದರ್ಶನಂ ಚಕ್ರಂ ಪೃಥಿವ್ಯಾಂ ಪ್ರಾದೃಶ್ಯತ। -ವ್ಯಾ.

೨. ಏಕವಿಂಶತಿಕುಭಾಷ್ಯದೂಷಕಂ ಬ್ರಹ್ಮಸೂತ್ರಗಣಭಾಷ್ಯಮದ್ಭುತಮ್ ।
ಅಪ್ಯದೂಷ್ಯಮತನೋದನಂತಧೀರ್ಭೂತಭಾವಿಭವದಾತ್ಮಭಿಃ ಕ್ವಚಿತ್ ॥ -ಸು.ವಿ.(೯/೧೨)

೩. ವ್ಯಕ್ತಾನ್ಯಭೇದ್ಯಾನಿ ಸಹಸ್ರವಕ್ತ್ರಾಣಿ ವಕ್ತ್ರಸ್ಥಾನೀಯಾನ್ಯಪರಾಣಿ ತೈಃ ರುಚಿರಂ ಮನೋಹರಮ್ । ಶಾಸ್ತ್ರಪಕ್ಷೇ ಬಹ್ವಾವೃತ್ತ್ಯಾ ಯೋಜನಾದೇಕೈಕಂ ವಾಕ್ಯಂ ಸಹಸ್ರಮುಖಮಿತ್ಯರ್ಥಃ। -ವ್ಯಾ.

೪. ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥ -ಸು.ವಿ.(೧೧/೭೯)

೫. ಪ್ರಚುರಾಂತರಪ್ರವಚನಂ ಫಣಿರಾಡುಪಶುಶ್ರುವಾನ್ ಸಸನಕಾದಿಮುನಿಃ।
ಗಗನೇಽಲ್ಪದೃಷ್ಟವಪುರತ್ರ ಜನೈಸ್ತ್ವರಿತಂ ನಿಲೀನರುಚಿರಾಪ ಪದಮ್ ॥ -ಸು.ವಿ.(೧೧/೧)

ವಿಖ್ಯಾತೈಃ ಶರಸಂಚಯೈಃ ಸುರುಚಿರಂ ಪ್ರಾಪ್ತಂ ನಿಷಂಗದ್ವಯಂ
ಭಾಸ್ವನ್ಮಾನಸಹಸ್ರಭಾಷ್ಯಸದನುವ್ಯಾಖ್ಯಾನಕಲ್ಪಂ ತದಾ ॥ ೪೮ ॥

ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಸಮರ್ಥಿಸುವ ಕಾರ್ಯದಲ್ಲಿ ಅತ್ಯಂತ ಚತುರವಾದ, ಅವನಿಂದ ಭಿನ್ನವಾದ ಜಗತ್ತಿನಲ್ಲಿ ಭೇದವನ್ನು ಸಾಧಿಸಲು ಸದಾ ಸಮರ್ಥವಾದ, ಎಂತಹ ಬುದ್ಧಿವಂತನಿಂದಲೂ ಭೇದಿಸಲಾಗದ ಸ್ವರೂಪದಿಂದ ಕೂಡಿದ, ಪ್ರಖ್ಯಾತವಾದ ಬಾಣಗಳ ಗುಂಪಿನಿಂದ ಕೂಡಿ ತುಂಬಾ ಮನೋಹರವಾದ, ಹೊಳೆಯುವ ಸಹಸ್ರಾರು ಪ್ರಮಾಣಗಳಿಂದ ಸಹಿತವಾದ ಭಾಷ್ಯ ಹಾಗೂ ಉತ್ತಮ ಅನುವ್ಯಾಖ್ಯಾನದಂತಹ, ಎರಡು ಬತ್ತಳಿಕೆಗಳು ಆಗ ಆಗಮಿಸಿದವು.

ವಿ. : ೧. ಈ ಶ್ಲೋಕದಲ್ಲಿ ಹಿಂದೆ ತಿಳಿಸಿದಂತೆ ಚಕ್ರ, ಶಂಖ ಮೊದಲಾದವುಗಳೊಂದಿಗೆ ಬಾಣಗಳಿಂದ ತುಂಬಿದ ಬತ್ತಳಿಕೆಗಳೂ ಸಹ ಇಳಿದುಬಂದ ವಿವರ ಬಂದಿದೆ.

೨. ಆ ಎರಡು ಬತ್ತಳಿಕೆಗಳನ್ನು ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ ಹಾಗೂ ಅನುವ್ಯಾಖ್ಯಾನಗಳಿಗೆ ಹೋಲಿಸಿರುವುದು ಅತ್ಯಂತ ಮಾರ್ಮಿಕವಾದುದು. ಬತ್ತಳಿಕೆಗಳಲ್ಲಿ ಬಾಣಗಳು ತುಂಬಿರುವಂತೆ ಆ ಎರಡು ಗ್ರಂಥಗಳಲ್ಲಿ ಅತ್ಯಂತ ಅಪೂರ್ವವಾದಂತಹ ಯುಕ್ತಿಗಳು ತುಂಬಿರುವವು ಎಂದು ತಿಳಿಸಿರುವರು. ಶ್ರೀಕೃಷ್ಣನ ಬತ್ತಳಿಕೆಯಲ್ಲಿನ ಬಾಣಗಳು ಅಕ್ಷಯವಾಗಿರುವಂತೆ ಭಾಷ್ಯ ಅನುವ್ಯಾಖ್ಯಾನದಂತಿರುವ ಯುಕ್ತಿಗಳು ಸಹ ಅಕ್ಷಯ ಎಂದು ಭಾವ :

ಅನಂತದೋಷದುಷ್ಟಂ ಚ ಹೇಯಂ ಮಾಯಾಮತಂ ಶುಭೈಃ । -(ಅನುವ್ಯಾಖ್ಯಾನ)
ಅತೋ ಅನಂತದೋಷದುಷ್ಟತ್ವಾತ್ ಗ್ರಂಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ ॥
-(ವಿಷ್ಣುತತ್ತ್ವವಿನಿರ್ಣಯ)

೩. ಬಾಣಗಳಂತೆ ಪ್ರಮಾಣಗಳು ಸಹ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಸಾಧಿಸುವವು. ಪಂಚಭೇದಗಳನ್ನು ಸಮರ್ಥಿಸುವವು; ಎಂತಹ ಬುದ್ಧಿವಂತನಾದ ಪ್ರತಿವಾದಿಯಿಂದಲೂ ಉತ್ತರಿಸಲು ಅಶಕ್ಯವಾದವು ಎಂಬುದು ಇಲ್ಲಿಯ ಭಾವ.

೪. ೧೧ನೇ ಸರ್ಗದ ಶ್ಲೋಕ ೧೨ರಲ್ಲಿ ಶಿವಧನುಸ್ಸು ಶ್ರೀಕೃಷ್ಣನಿಂದ ಭಗ್ನವಾದ ವಿವರ ಬಂದಿದ್ದರೆ, ಇಲ್ಲಿಯ ಧನುಸ್ಸು ಶ್ರೀಕೃಷ್ಣನ ಕರಕಮಲದ ಆಸರೆಯಿಂದಾಗಿ ಅಭೇದ್ಯವಾಗಿದೆ ಎಂಬುದು ಗಮನಿಸಬೇಕಾದ ಅಂಶ.

ಇಳಿದು ಬಂದ ಶಾರ್ಙ್ಗಧನುಸ್ಸು

[೧]ಸದ್ವಂಶಜಾತಂ ಸುಗುಣಂ ಮುಕುಂದ-
ಹಸ್ತಾಂಬುಜಾಧಾರಮಭೇದ್ಯಮನ್ಯೈಃ ।

---

೧. ಸದ್ವಂಶಜಾತಂ ಸಮೀಚೀನವೇಣುಪ್ರಭವಮ್ । ಯದ್ಯಪಿ ಶಾರ್ಙ್ಗಂ ಶೃಂಗಜನ್ಯಂ ತಥಾಽಪಿ ಧನುರ್ಜಾತಿತ್ವಾತ್ಸಮೀಚೀನವಂಶವತ್ ವರ್ತುಲಾಕಾರೇಣ ನಿರ್ಮಿತತ್ವಾತ್ಶೃಂಗಾಚ್ಛರೋ ಜಾಯತ ಇತಿ ವಚನಾತ್ ಕಾರ್ಯಕಾರಣಯೋರಭೇದಾದ್ವಾ ಸದ್ವಂಶಜಾತಮಿತ್ಯುಕ್ತಮ್ । -ವ್ಯಾ.

ಶಾರ್ಙ್ಗಂ ಸತಾಂ ವೃಂದಮಿವಾವಿರಾಸೀ-
ನ್ಮಾನೋಪಮಾನೇಷುಭಿರನ್ಯಜಿಷ್ಣು ॥ ೪೯ ॥

ಉತ್ತಮವಾದ ವಂಶದಿಂದಾದ, ಉತ್ತಮವಾದ ಗುಣ(ಜ್ಯಾ)ವನ್ನು ಹೊಂದಿದ, ಮುಕುಂದನಾದ ಶ್ರೀಕೃಷ್ಣನ ಕರಕಮಲವನ್ನು ಆಶ್ರಯಿಸಿದ, ಇತರರಿಂದ ಅಭೇದ್ಯವಾದ, ಸಜ್ಜನರ ವೃಂದದಂತಿದ್ದ , ಪ್ರಮಾಣಗಳಂತಹ ಬಾಣಗಳಿಂದ ಇತರರನ್ನು ಜಯಿಸುವಂತಹ, ಶಾರ್ಙ್ಗ ಧನುಸ್ಸು ಆವಿರ್ಭವಿಸಿತು.

ವಿ. : ೧. ಬಿಲ್ಲನ್ನು ಬಿದಿರಿನಿಂದ ಮಾಡುವರು. ಉತ್ತಮವಾದ ಹಗ್ಗದಿಂದ ಕಟ್ಟುವರು; ಶಾರ್ಙ್ಗಧನುಸ್ಸು ಸಹ ಹಾಗೆ ಉತ್ತಮವಾದ ಜ್ಯಾವನ್ನು ಹೊಂದಿದ್ದಿತು ಎಂದರ್ಥ.

೨. ಸಜ್ಜನರು ಸಹ ಉತ್ತಮ ವಂಶದಲ್ಲಿ ಜನಿಸುವರು; ಶ್ರೇಷ್ಠಗುಣಗಳಿಂದ ಕೂಡಿರುವರು ಎಂಬಲ್ಲಿ ಶ್ಲೇಷಾಲಂಕಾರವಿದೆ.

೩. ಶಾರ್ಙ್ಗಧನುಸ್ಸಿಗೆ ಸರಸ್ವತೀ ಅಭಿಮಾನಿದೇವತೆ: ಶಾರ್ಙ್ಗಂ ಚ ವಿದ್ಯಾ ।-(ಮ.ಭಾ.ತಾ.ನಿ. ೩/೭೪)

### ನಂದಕಖಡ್ಗದ ಹಿರಿಮೆ

ದ್ವಿಡ್ವರ್ಗದೈನ್ಯಕರನಂದಕಸಂಜ್ಞಿತಾಸಿಂ
ಭಕ್ತೌಘನಂದಕಮಸಾವುರರೀಚಕಾರ ।
ಸದ್ವಾದಿನಾಂ ಸಮಯಮುದ್ಧತಶತ್ರುವರ್ಗ-
ವಿಧ್ವಂಸನಂ ಸ್ವಜನಹರ್ಷಕರಂ ಯುಧೀವ ॥ ೫೦ ॥

ದ್ವೇಷಿಗಳ ಗುಂಪಿಗೆ ದೀನತೆಯನ್ನು ಉಂಟುಮಾಡುವ, ಸ್ವಜನರಿಗೆ ಹರ್ಷ ನೀಡುವ, ನಂದಕ ಎಂಬ ಹೆಸರಿನ ಖಡ್ಗವನ್ನು ಶ್ರೀಕೃಷ್ಣನು, ವಾಕ್ಸಮರದಲ್ಲಿ ಭಕ್ತಸಮುದಾಯಕ್ಕೆ ಆನಂದ ನೀಡುವ, ಉನ್ಮತ್ತರಾದ ಶತ್ರುಗಳ ಸಮುದಾಯವನ್ನು ಸಂಪೂರ್ಣಧ್ವಂಸಗೈಯ್ಯುವ, ಶ್ರೀಮದಾಚಾರ್ಯರ ಪಕ್ಷದ ವಾದಿಗಳ ಪ್ರತಿಜ್ಞೆಯನ್ನೆಂಬಂತೆ ಕೈಗೆತ್ತಿಕೊಂಡ.

ವಿ. : ೧. ನಂದಕ ಎಂಬುದು ಶ್ರೀಕೃಷ್ಣನ ಖಡ್ಗದ ಹೆಸರು ; ಇದಕ್ಕೆ ರಮಾದೇವಿ ಅಭಿಮಾನಿ-ದೇವತೆ : ರಮೈವ ಖಡ್ಗಃ -(ಮ.ಭಾ.ತಾ.ನಿ.೩/೭೪)

೨. ಹಾಗೆ ಇಳಿದು ಬಂದ ತನ್ನ ಆಯುಧಗಳಲ್ಲಿ ನಂದಕ ಖಡ್ಗವನ್ನು ಕೈಗೆತ್ತಿಕೊಂಡ ಎಂದರ್ಥ.

### ಕೃಷ್ಣಭಟರಿಂದ ಜರಾಸಂಧನ ಸೈನಿಕರ ನಾಶ

ಶ್ರುತ್ಯಂತವಿಶ್ರಾಂತಶರೌಘಯುಕ್ತಿ-
ಶೂರಾ ಹರೇಃ ಪಕ್ಷಧರಾ ವಿಧಾಯ ।

ಸಿದ್ಧಾಂತಮತ್ಯೂರ್ಜಿತಪೂರ್ವಪಕ್ಷಂ
ಜಘ್ನುಃ ಕ್ರಮೇಣೋತ್ತರಪಕ್ಷಮಂತೇ ॥ ೫೧ ॥

ಕಿವಿಯ ಸಮೀಪದಲ್ಲಿರಿಸಿದ ಬಾಣಗಳ ಸಮೂಹದ ಯೋಜನೆಯಿಂದ ಶೂರರಾದ ಶ್ರೀಕೃಷ್ಣನ ಪಕ್ಷವಹಿಸಿದ ಭಟರು ಅತಿಯಾಗಿ ಬೆಳೆದ ಪೂರ್ವದಿಕ್ಕಿನಲ್ಲಿದ್ದ ಶತ್ರುಪಕ್ಷವನ್ನು ನಾಶವುಳ್ಳದ್ದನ್ನಾಗಿ ಮಾಡಿ ಕೊನೆಯಲ್ಲಿ ಉತ್ತರದ್ವಾರದಲ್ಲಿದ್ದ ಶತ್ರುಪಕ್ಷವನ್ನು ಕ್ರಮವಾಗಿ ಕೊಂದರು. (ವೇದಾಂತವನ್ನು ಆಶ್ರಯಿಸಿದ ಬಾಣಗಳ ಸಮೂಹಗಳಂತಹ ಯುಕ್ತಿಗಳಲ್ಲಿ ಶೂರರಾದ ವೈಷ್ಣವರು ಅತಿಪ್ರಬಲರಾದ ಪ್ರತಿವಾದಿಗಳು ಪೂರ್ವಪಕ್ಷೀಕರಿಸಿದ್ದನ್ನೇ ಸಿದ್ಧಾಂತವನ್ನಾಗಿಸಿ ಅವರು ಸಿದ್ಧಾಂತಮಾಡಿದ್ದ ಪಕ್ಷವನ್ನು ಕ್ರಮವಾಗಿ ನಿರಾಕರಿಸಿದರು).

ವಿ. : ೧. [1]ಸಿದ್ಧಾಂತ ಎಂಬುದಕ್ಕೆ ಕೊನೆ ಉಳ್ಳದ್ದು ಹಾಗೂ ಕೊನೆಗೆ ಉಳಿಯುವಂತಹದ್ದು ಎಂಬ ಎರಡು ಅರ್ಥಗಳು ವಿವಕ್ಷಿತ.

೨. ಇದು ಒಂದುರೀತಿಯಲ್ಲಿ ಈ ಕೃತಿಯ ಪ್ರಾರಂಭ ಶ್ಲೋಕ(೧/೧)ದಲ್ಲಿನ ಪೂರ್ವಪಕ್ಷಾಸುರೈಃ, ಸಿದ್ಧಾಂತೋಕ್ತಿಸುರೇಶ್ವರೈಃ ಎಂಬ ಮಾತುಗಳಿಗೆ ವಿವರಣೆಯಂತಿದೆ.

### ಕೃಷ್ಣಭಟರಿಗೆ ಶಂಖಧ್ವನಿಯಿಂದಾದ ಸ್ಫೂರ್ತಿ

ಆಪ್ಯಾಯಿತಾಃ ಕಿಲ ಮುರಾಂತಕಮುಖ್ಯವಾತ-
[2]ಸಂಜಾತಶಂಖಮಧುರಶ್ರುತಿರಮ್ಯಶಬ್ದೈಃ ।
ಶತ್ರೂನ್ ನಿಹತ್ಯ ಸಮರೇ ಪರಿತಃ ಪುರೀಂ ತಾಂ
ಚಕ್ರುರ್ಮುಕುಂದಗುಣವರ್ಣನಶೋಭಮಾನಾಮ್ ॥ ೫೨ ॥

ಮುರವೈರಿಯಾದ ಶ್ರೀಕೃಷ್ಣನ ಮುಖದಿಂದ ಬಂದ ವಾಯುವಿನಿಂದ ಹುಟ್ಟಿದ ಗಾಳಿಯಿಂದ ತುಂಬಿಸಲ್ಪಟ್ಟ ಶಂಖದ ಮಧುರವಾದ ಶ್ರವಣರಮಣೀಯವಾದ ಶಬ್ದಗಳಿಂದ ಉತ್ತೇಜನ ಪಡೆದ ಶ್ರೀಕೃಷ್ಣನ ಭಟರು ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ, ಆ ಮಧುರಾಪುರಿಯನ್ನು ಮುಕುಂದನಾದ ಶ್ರೀಕೃಷ್ಣನ ಗುಣಗಳ ವರ್ಣನೆಯಿಂದ ಕಂಗೊಳಿಸುವುದನ್ನಾಗಿ ಮಾಡಿದರು.

---

೧. ತವ ಪ್ರಮಾಣೀಕೃತ 'ನೇಹ ನಾನಾ' ಇತ್ಯಾದಿ (ಕಠೋಪನಿಷತ್-೪/೧೧, ಬೃಹದಾರಣ್ಯಕೋಪನಿಷತ್-೪/೪/೧೯) ವಾಕ್ಯಾನಾಂ ಪೂರ್ವೋತ್ತರವಿರೋಧಂ ಪ್ರದರ್ಶ್ಯ ನಿರಾಕೃತವಂತಃ। -ವ್ಯಾ.

೨. ಮುರಾಂತಕಸ್ಯ ಸಂಬಂಧೀ ಮುಖ್ಯವಾತೋ ಮುಖ್ಯಪ್ರಾಣಸ್ತಸ್ಮಾತ್ಸಂಜಾತಸ್ತದವಾತರರೂಪಃ ಶ್ರೀಮದಾಚಾರ್ಯಸ್ತಸ್ಯ ಶಂಖವತ್ ಶಂಖನಾದವನ್ಮಧುರೈಃ ಶ್ರುತಿರಮ್ಯೈರ್ವೇದವಚನೇನ ರಮ್ಯೈಃ ಶ್ಲಾಘ್ಯೈಃ ಶಬ್ದೈಃ ವ್ಯಾಖ್ಯಾನಾದಿಷು ಪ್ರಯುಜ್ಯಮಾನವಾಕ್ಯೈರಾಪ್ಯಾಯಿತಾಃ ಯುಕ್ತಿಪುಷ್ಟಿಂ ಪ್ರಾಪಿತಾಸ್ತಚ್ಛಿಷ್ಯಾಃ ಸಮರೇ ವಾದಯುದ್ಧೇ ಶತ್ರೂನ್ಮಾಯಿನೋ ನಿಹತ್ಯ ನಿರ್ಜಿತ್ಯ ತಾಂ ಪುರೀಮುಪನಿಷದಂ ಪರಿತಃ ಸರ್ವತ್ರ ಮುಕುಂದಗುಣವರ್ಣನೇನ ಶೋಭಮಾನಾಂ ಚಕ್ರುಃ। ಸಕಲಾಮುಪನಿಷದಂ ಶ್ರೀಕೃಷ್ಣಗುಣಪ್ರತಿಪಾದಿಕಾಂ ಚಕ್ರುರಿತ್ಯರ್ಥಃ। -ವ್ಯಾ.

(ಮುರಾರಿಯಾದ ಶ್ರೀಕೃಷ್ಣನ ಸಂಬಂಧಿಯಾದ ಮುಖ್ಯಪ್ರಾಣನ ಅವತಾರರೂಪರಾದ ಶ್ರೀಮಧ್ವಾಚಾರ್ಯರ ಶಂಖನಾದದಂತೆ ಶ್ರವಣಮಧುರವಾದ ಶ್ಲಾಘ್ಯವಾದ ಶಬ್ದಗಳಿಂದ ಉತ್ತೇಜಿತರಾದ ಅವರ ಶಿಷ್ಯರು ವಾದಯುದ್ಧದಲ್ಲಿ ಮಾಯಾವಾದಿಗಳನ್ನು ಗೆದ್ದು , ಉಪನಿಷತ್ ಎಂಬ ಪಟ್ಟಣವನ್ನು ಎಲ್ಲೆಡೆಗಳಲ್ಲೂ ಸಹ ಮುಕುಂದನ ಗುಣವರ್ಣನೆಯಿಂದ ಶೋಭಾಯಮಾನವನ್ನಾಗಿ ಮಾಡಿದರು).

ವಿ. : ೧. ಶ್ರೀಕೃಷ್ಣನ ಪಾಂಚಜನ್ಯಶಂಖದ [೧]ಧ್ವನಿಯು ಶತ್ರುಗಳಿಗೆ ಭಯಂಕರವಾಗಿದ್ದಂತೆ ಅವನ ಪಕ್ಷದವರಿಗೆ ಉತ್ತೇಜನಕರವಾಗಿದ್ದಿತು ಎಂದರ್ಥ.

೨. ಶ್ರೀಕೃಷ್ಣನ ಶಂಖಧ್ವನಿಯ ಸ್ಫೂರ್ತಿಯಿಂದ ಕೃಷ್ಣಪಕ್ಷದವರಿಗೆ ಜರಾಸಂಧನ ಸೈನ್ಯದ ಮೇಲೆ ವಿಜಯವನ್ನು ಸಾಧಿಸಲು ಸಾಧ್ಯವಾಯಿತು ಎಂದರ್ಥ.

೩. ಶಂಖದ ಘೋಷ ಸಚ್ಛಾಸ್ತ್ರ ಘೋಷದ ಸಂಕೇತ. ಸಚ್ಛಾಸ್ತ್ರವಚನಗಳ ಸ್ಫೂರ್ತಿಯಿಂದ ಹರಿಭಕ್ತರಾದವರು ದುರ್ಮತಗಳನ್ನು ಅನಾಯಾಸದಿಂದ ಖಂಡಿಸುವರು ಎಂಬ ಭಾವವೂ ಇಲ್ಲಿ ಸೂಚಿತ:ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್-ಗೀತಾ(೧/೧೯).

## ಶ್ರೀಕೃಷ್ಣನ ಬಾಣದ ಹಿರಿಮೆ

ಕೃಷ್ಣಾಂಗಸಂಗ್ಯುಜ್ಜ್ವಲಶಾರ್ಙ್ಗಜನ್ಮಾ
ಸತ್ಪಕ್ಷಪಾತೇನ ಗೃಹೀತವೇಗಃ ।
ಏಕೋಽಪಿ ನಾನಾವದನೈಃ ಸಮಂತಾ-
ದ್ಯುದ್ಧ್ಯನ್ನಸೌ ಮಧ್ವ ಇವಾಸ್ತಿ ಬಾಣಃ[೨] ॥ ೩೩ ॥

ಶ್ರೀಕೃಷ್ಣನ ಅಂಗಸಂಗದಿಂದಾಗಿ ಪ್ರಕಾಶಮಾನವಾಗಿದ್ದ ಶಾರ್ಙ್ಗದಿಂದ ಹೊರಹೊಮ್ಮಿದ, ಉತ್ತಮ ರೆಕ್ಕೆಗಳಿಂದಾಗಿ ವೇಗ ಪಡೆದುಕೊಂಡ, ಶ್ರೀಕೃಷ್ಣನು ಪ್ರಯೋಗಿಸಿದ ಆ ಬಾಣವು ಒಂದೇ ಆಗಿದ್ದರೂ ಅನೇಕ ಮುಖಗಳಿಂದ ಎಲ್ಲೆಡೆಗಳಿಂದಲೂ ಯುದ್ಧಮಾಡುತ್ತಾ ಶ್ರೀಮಧ್ವಾಚಾರ್ಯರಂತೆ ಇರುವುದು.

ವಿ. : ೧. ಶ್ರೀಕೃಷ್ಣನು ಪ್ರಯೋಗಿಸಿದ ಒಂದೊಂದು ಬಾಣವೂ ಸಹ ಅನೇಕ ಬಗೆಗಳಲ್ಲಿ ಶತ್ರುಗಳನ್ನು ನಾಶಪಡಿಸುತ್ತಿತ್ತು ಎಂದರ್ಥ.

---

೧. ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ ಭೃಶಂ ಸುಪೂರ್ಣೋದರನಿಸ್ಸೃತಧ್ವನಿಃ ।
ಜಗದ್ವಿರಿಂಚೇಶಸುರೇಂದ್ರಪೂರ್ವಕಂ ಪ್ರಕಂಪಯಾಮಾಸ ಯುಗಾತ್ಯಯೇ ಯಥಾ ॥
-ಮ.ಭಾ.ತಾ.ನಿ.(೨೬/೯೨)

೨. ಪಂಚಾತ್ಮಕೋ ಮಾರುತ ಏವ ಬಾಣಃ । -ಮ.ಭಾ.ತಾ.ನಿ.(೨./೭೬)
ಕರ್ಣಾಂತಮಾನೀಯ ಗುಣಗ್ರಹೀತ್ರಾ ರಾಮೇಣ ಮುಕ್ತೋ ರಣಕೋವಿದೇನ ।
ಸ್ಫುರನ್ನಸೌ ವೈರಿಭಯಂಕರೋಽಭೂತ್ ಸತ್ಪಕ್ಷಪಾತೀ ಪ್ರದರೋ ಯಥಾಽಗ್ರ್ಯಃ ॥ -ಸುಮಧ್ವವಿಜಯ(೧/೧೪)

೨. ಒಬ್ಬ ಮಧ್ವಾಚಾರ್ಯರು ಅನೇಕ ವಾದಿಗಳನ್ನು ಅನೇಕ ಮುಖವಾಗಿ ಸೋಲಿಸುತ್ತಿದ್ದರು ಎಂಬುದನ್ನು ಆ ಬಾಣವನ್ನು ಅವರಿಗೆ ಹೋಲಿಸುವ ಮೂಲಕ ತಿಳಿಸಿರುವರು.

೩. [1]ಪ್ರಾಣಾಪಾನಾದಿ ಪಂಚರೂಪದ ವಾಯುದೇವರೇ ಶ್ರೀಹರಿಯ ಕೈಯಲ್ಲಿನ ಬಾಣಕ್ಕೆ ಅಭಿಮಾನಿದೇವತೆ ಎಂಬ ವಿವರ ಮಹಾಭಾರತತಾತ್ಪರ್ಯನಿರ್ಣಯ(೩/೭೬)ದಲ್ಲಿದೆ: **ಪಂಚಾತ್ಮಕೋ ಮಾರುತ ಏವ ಬಾಣಃ**

೪. ಬಾಣದ ಅಭಿಮಾನಿದೇವತೆಗಳಾದ ವಾಯುದೇವರು ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ ಎಂಬ ಪಂಚ ರೂಪಗಳನ್ನು ಹೊಂದಿರುವಂತೆ ಆ ಬಾಣವೂ ಸಹ ಅನೇಕ ಮುಖದಿಂದ ಶತ್ರುಗಳನ್ನು ಸಂಹರಿಸಿತು ಎಂಬ ಅಂಶ ಸೂಚಿತ.

**ಅಯಃಸ್ಥಿರಾಪ್ಯಾsರಿಭಟೈರಸಹ್ಯಃ**
**ಸುವರ್ಣಶೋಭೀ ಶುಭವಂಶಜನ್ಮಾ ।**
**ದಿಗಷ್ಟಕವ್ಯಾಪ್ತತನುಃ ಸಮಂತಾ-**
**ಜ್ಜಿಗಾಯ ಮಾಯಾವಿನಿಕಾಯಮಾಜೌ ॥ ೫೪ ॥**

ತುದಿಯಲ್ಲಿನ ಉಕ್ಕಿನಿಂದಾಗಿ ದಾರ್ಢ್ಯ ಹೊಂದಿ, ಶತ್ರುಭಟರಿಗೆ ಸಹಿಸಲಸಾಧ್ಯವಾಗಿದ್ದ , ಉತ್ತಮ ವರ್ಣದಿಂದ ಶೋಭಿಸುವ, ಒಳ್ಳೆಯ ಬಿಲ್ಲಿನಲ್ಲಿ ಹೂಡಿದ್ದ, ಎಂಟು ದಿಕ್ಕುಗಳಲ್ಲೂ ವ್ಯಾಪಿಸಿದ ದೇಹದ ಆ ಬಾಣವು ಮಾಯಾವಿಗಳ ಗುಂಪನ್ನು ಯುದ್ಧದಲ್ಲಿ ಎಲ್ಲೆಡೆಗಳಿಂದಲೂ ಪರಾಭವಗೊಳಿಸಿತು.

ವಿ. : ಶ್ರೀಮಧ್ವಾಚಾರ್ಯರು ಶ್ರೇಷ್ಠವರ್ಣಗಳಿಂದ ಶೋಭಿಸುವವರೂ, ಉತ್ತಮ ವಂಶದಲ್ಲಿ ಹುಟ್ಟಿದವರೂ, ಎಂಟು ದಿಕ್ಕುಗಳಲ್ಲಿ ವ್ಯಾಪಿಸಿದವರೂ, ಮಾಯಾವಾದಿಗಳನ್ನು ಸಕಲ ಬಗೆಗಳಲ್ಲೂ ಸದೆಬಡಿದವರೂ ಆದವರು ಎಂಬ ಅರ್ಥವು ಇದರಿಂದ ಸೂಚಿತ ; ನಿಕಾಯ – ಸಮೂಹ.

ಮಧ್ವರಂತೆ ಕಂಗೊಳಿಸಿದ ಬಾಣ

**ನತ್ಯುದ್ಯತಾನಾಂ ನಯವಾಕ್ಯಭಾಜಾಂ**
**ನ್ಯಸ್ತಾಯುಧಾನಾಂ ನಿಕುರಂಬಮಾಜೌ ।**
**ಹಿತ್ವೋದ್ಧತಾನೇವ ಜಯನ್ ಸ [2]ಪೂರ್ಣ-**
**ಮತ್ಯಾಹ್ವಯಾರ್ಹಾಚರಣಂ ಬಿಭರ್ತಿ ॥ ೫೫ ॥**

---

೧. ಮುಖ್ಯಪ್ರಾಣಾತ್ಮಕಮಧ್ವಸ್ಯ ಲಕ್ಷ್ಮೀಪುತ್ರತ್ವಾದಿತಿ(ದಶಪ್ರಮತಿಂ ಜನಯಂತ ದೋಷಣಃ । -ಬಳಿತ್ಥಾಸೂಕ್ತಮ್) ಭಾವಃ। -ವ್ಯಾ.

೨. ಆಚಾರ್ಯಪಕ್ಷೇ ಪೂರ್ಣಪ್ರಜ್ಞಾಖ್ಯಾ ಸುಪ್ರಸಿದ್ಧಾ। -ವ್ಯಾ.
ವೀರದೃಷ್ಟಿಕೃತಸಿಂಹವಿಭ್ರಮಃ ಶಾಂತದೃಷ್ಟಿಕೃತಶಾಂತಸಮುದ್ರಃ।
ತತ್ರ ತತ್ರ ಪಥಿ ಪಥ್ಯವಿಭ್ರಮಃ ಪರ್ವತಾದವತತಾರ ಸರ್ವಧೀಃ॥ -ಸುಮಧ್ವವಿಜಯ (೯/೫)

ಯುದ್ಧದಲ್ಲಿ ನಮಸ್ಕರಿಸಲು ತೊಡಗಿದ, ದೀನವಚನಗಳನ್ನು ನುಡಿದ, ಆಯುಧಗಳನ್ನು ಕೆಳಕ್ಕಿರಿಸಿದ ಭಟರ ಗುಂಪನ್ನು ಬಿಟ್ಟು ಉನ್ನತ್ತರಾದವರನ್ನು ಮಾತ್ರವೇ ಸದೆಬಡಿಯುತ್ತಾ ಆ ಬಾಣವು ಪೂರ್ಣಪ್ರಜ್ಞ ಎಂಬ ಹೆಸರಿಗೆ ಉಚಿತವಾದ ನಡತೆಯನ್ನೇ ಹೊಂದಿತು.

ವಿ. : ೧. [೧]ಶ್ರೀಮಧ್ವಾಚಾರ್ಯರು ತಮಗೆ ಶರಣಾದವರನ್ನು, ಯುಕ್ತಿಯುಕ್ತವಾಗಿ ವಾದಿಸಿ ಪರಾಭವಗೊಂಡವರನ್ನು ಅನುಗ್ರಹಿಸಿ ಇತರರನ್ನು ಮಾತ್ರ ಪರಾಭವಗೊಳಿಸಿದರು ಎಂಬ ಅರ್ಥ ಇದರಿಂದ ಸೂಚಿತ ; ನಿಕುರಂಬ – ಸಮೂಹ.

೨. ತ್ರಿವಿಕ್ರಮಪಂಡಿತಾಚಾರ್ಯರು ಮೊದಲಾದವರು ಶ್ರೀಮಧ್ವಾಚಾರ್ಯರ ಶಿಷ್ಯತ್ವ-ವಹಿಸಿದವರಿಗೆ ನಿದರ್ಶನವಾದರೆ, ವಾದಿಸಿಂಹ, ಬುದ್ಧಿಸಾಗರ ಮೊದಲಾದವರು ಪರಾಭವ-ಗೊಂಡವರಿಗೆ ನಿದರ್ಶನ.

೩. ಅಚ್ಯುತಪ್ರೇಕ್ಷರು ವಾದಿಸಿಂಹ, ಬುದ್ಧಿಸಾಗರರ ನಿಗ್ರಹಕ್ಕೆ ಶ್ರೀಮಧ್ವಾಚಾರ್ಯರನ್ನು ಬಾಣವೆಂಬಂತೆ ಸನ್ನದ್ಧರನ್ನಾಗಿ ಮಾಡಿಕೊಂಡರು ಎಂಬ ಸುಮಧ್ವವಿಜಯದ ಉಲ್ಲೇಖದ ಹಿನ್ನೆಲೆಯಲ್ಲಿ ಈ ಮಾತಿನ ವಿಶೇಷಾರ್ಥ ತೆರೆದುಕೊಂಡಿರುವುದು: **ನಿಶಾತಮಾದತ್ತಸುಖ-ತೀರ್ಥಮಾರ್ಗಣಮ್** ।(೫/೯)

### ಮಧ್ವಬಾಣದ ಪೂರ್ವಾಪರ

**ಹೃನ್ಮಧ್ಯಾಲಯತಃ ಸ ನಿರ್ಗತತನುಃ ಪೃಥ್ವೀಭುಜಾಮಚ್ಯುತ-**
**ಪ್ರೇಕ್ಷಾವಾಪ್ತಮಹೋದಯಃ ಪವನವದ್ವಿಖ್ಯಾತವೇಗಃ ಕ್ಷಿತೌ ।**
**ಸಚ್ಛಾಸ್ತ್ರೋದಿತಕೃಷ್ಣವಿಕ್ರಮಚಯಂ ವಿಖ್ಯಾಪಯನ್ ಸ್ವರ್ಗಿಣಾಂ**
**ಸುಪ್ರೀತಿಂ ಜನಯನ್ ಮುರಾಂತಕಚಮೂಂ ಪುಷ್ಣನ್ನಜೈಷೀದ್ದ್ವಿಷಃ ॥ ೫೬ ॥**

ಆ ಬಾಣವು, ಪೃಥ್ವೀಪತಿಗಳಾದ ಶತ್ರುರಾಜರ ಹೃದಯದ ಮಧ್ಯವನ್ನು ಸೀಳಿ, ಹೊರಬಂದ, ಗುರಿತಪ್ಪದ ನೋಟದಿಂದಾಗಿ ಅಮೋಘವೆನ್ನಿಸುವ ಅಭ್ಯುದಯವನ್ನು ಪಡೆದ, ವಾಯುವಿನಂತೆ ವಿಖ್ಯಾತವೇಗವನ್ನು ಹೊಂದಿದ, ಸಚ್ಛಾಸ್ತ್ರದಲ್ಲಿ ತಿಳಿಸಿದ ಶ್ರೀಕೃಷ್ಣನ ವಿಕ್ರಮವೃಂದವನ್ನು ತಿಳಿಸಿ-ಕೊಡುತ್ತ, ಸ್ವರ್ಗದಲ್ಲಿನ ದೇವತೆಗಳಿಗೂ ಅತಿಶಯಪ್ರೀತಿಯನ್ನು ಹುಟ್ಟಿಸುತ್ತ, ಮುರಾರಿಯಾದ ಶ್ರೀಕೃಷ್ಣನ ಸೇನೆಗೆ ಪುಷ್ಟಿಯನ್ನು ನೀಡುತ್ತಾ ಭೂಮಿಯಲ್ಲಿ ವೈರಿಗಳನ್ನು ಜಯಿಸಿತು.

(ಮಧ್ವಗೇಹರಿಂದ ಅವತರಿಸಿದ ಶರೀರದ, ಅಚ್ಯುತಪ್ರೇಕ್ಷರಿಂದ ವಿಶೇಷವಾದ ಉದಯ(ಸನ್ಯಾಸ)ವನ್ನು ಹೊಂದಿದಂತಹ, ಆ ಬಾಣದಂತಹ ಶ್ರೀಮಧ್ವಾಚಾರ್ಯರು ವಾಯುವಿನಂತೆ ವಿಖ್ಯಾತವಾದ ವೇಗವನ್ನು ಉಳ್ಳವರಾಗಿ ಭೂಮಿಯಲ್ಲಿ ಸಚ್ಛಾಸ್ತ್ರದಲ್ಲಿ

---

೧. ಅನೇನ ಶರಣಂ ರಣೇ ಯಾತಾ ಏತಾದೃಶಾ ನ ಹಂತವ್ಯಾ ಇತಿ ಯುದ್ಧಧರ್ಮೋಽಪಿ ಪ್ರದರ್ಶಿತಃ । –ವ್ಯಾ.

ಉಕ್ತವಾದ ಶ್ರೀಕೃಷ್ಣನ ಪರಾಕ್ರಮದ ರಾಶಿಯನ್ನು ಪ್ರಕಟಗೊಳಿಸುತ್ತಾ ದೇವತೆಗಳಿಗೆ ಸುಪ್ರೀತಿಯನ್ನು ಹುಟ್ಟಿಸುತ್ತಾ, ಶ್ರೀಕೃಷ್ಣನ ಸೈನಿಕರಿಗೆ ವಿಶೇಷವಾದ ಪುಷ್ಟಿಯನ್ನು ನೀಡುತ್ತ, ವಿರೋಧಿಗಳಾದ ಮಾಯಾವಾದಿಗಳ ಹೃದಯವನ್ನು ಭೇದಿಸಿದರು).

ವಿ. : ೧. [1]ಶ್ರೀಮಧ್ವಾಚಾರ್ಯರು ಮಧ್ಯಗೇಹರ ನಿಮಿತ್ತದಿಂದ ಅವತರಿಸಿದವರು, ಅಚ್ಯುತ-ಪ್ರೇಕ್ಷರಿಂದ [2]ಸನ್ಯಾಸಸ್ವೀಕರಿಸಿದವರು, ಸಚ್ಛಾಸ್ತ್ರದಲ್ಲಿ ಬಂದಿರುವ ಶ್ರೀಹರಿಯ ಮಹಿಮೆಗಳನ್ನು ಸಾರಿದವರು, ದೇವತೆಗಳಿಗೂ ಮುದನೀಡಿದವರು, ವೈಷ್ಣವರಿಗೆ ಹರ್ಷ ಉಕ್ಕಿಸಿದವರು, ದ್ವೇಷಿಗಳನ್ನು ಸದೆಬಡಿದವರು ಎಂಬ ವಿಶೇಷಾಂಶಗಳು ಇದರಲ್ಲಿ ಸೂಚಿತ.

೨. ಶ್ರೀಮಧ್ವಾಚಾರ್ಯರನ್ನು ಶ್ರೀಕೃಷ್ಣ ಪ್ರಯೋಗಿಸಿದ ಬಾಣ ಎಂಬ ರೂಪಕವು ಇದರಲ್ಲಿ ಮುಂದುವರೆದಿದೆ.

೩. ಶ್ರೀರಾಮನ ಒಂದು ಬಾಣವು ವಾಲಿಯನ್ನು ಸಂಹರಿಸಿದ್ದು, ತಾಳವೃಕ್ಷರೂಪದ ಅಸುರ-ರನ್ನು ನಾಶಪಡಿಸಿದ್ದು, ರಾವಣನ ಹೃದಯವನ್ನು ಭೇದಿಸಿ ಸಂಹರಿಸಿದ್ದು, ಶತ್ರುಘ್ನನ ಮೂಲಕ ಲವಣಾಸುರನನ್ನು ಕೊಂದದ್ದು, ವಾಲ್ಮೀಕಿರಾಮಾಯಣದಲ್ಲಿ ಸುಪ್ರಸಿದ್ಧ.

### ಮಧ್ವಬಾಣವು ಸಾಧಿಸಿದ ಮಹತ್ಕಾರ್ಯ

ಶಸ್ತ್ರೈರಸ್ತ್ರಗಣೈಃ ಶರೈರರಿಧೃತೈರ್ವೇಧಂ ವಿಭೇದಂ ಭಿದಾಂ
ಕೃಷ್ಣೇ ಸ್ವಾಗಮಕೌಶಲೈಃ ಪರಿಹರನ್ ಸ್ವಾನಂದಮಾತ್ರಾಕೃತಿಮ್ ।
ನಿರ್ಬಾಧಾಂ ಪ್ರತಿಪಾದಯನ್ನವಯವಾನ್ ನಿತ್ಯಾಂಶ್ಚ ವಿಜ್ಞಾಪಯನ್
ಯುಧ್ಯಗ್ರಾಹ್ಯಮತೀಂದ್ರಿಯಂ ವ್ಯತನುತಾಗಣ್ಯಪ್ರತಾಪಂ ಪ್ರಭುಮ್ ॥ ೫೭ ॥

ಯುದ್ಧದಲ್ಲಿ ಕೃಷ್ಣನಿಗೆ ಶತ್ರುಗಳು ಹಿಡಿದಿದ್ದ ಶಸ್ತ್ರಗಳಿಂದ, ಅಸ್ತ್ರಸಮೂಹಗಳಿಂದ, ಬಾಣಗಳಿಂದ ವೇಧ, ಭೇದ, ಭೇದಗಳು ಉಂಟಾಗಲಿಲ್ಲ ಎಂಬುದನ್ನು ತಮ್ಮ ಶಾಸ್ತ್ರಗಳಿಂದ ಕೌಶಲಪೂರ್ಣವಾಗಿ ಸಾಧಿಸುತ್ತಾ ಅವನನ್ನು ಸ್ವರೂಪಾನಂದ ಮಾತ್ರವೇ ದೇಹವನ್ನಾಗಿ ಉಳ್ಳವನು ಎಂಬುದನ್ನು ಬಾಧಕವಿಲ್ಲದಂತೆ ಪ್ರತಿಪಾದಿಸುತ್ತಾ ಅವನ ಅವಯವಗಳೂ ಸಹ ನಿತ್ಯ ಎಂದು ತಿಳಿಸಿಕೊಡುತ್ತಾ, ಅವನು ಅಗ್ರಾಹ್ಯ, [3]ಅತೀಂದ್ರಿಯ, ಗಣನೆಗೆ ಮೀರಿದ ಪ್ರತಾಪಶಾಲಿಯಾದ ಪ್ರಭು ಎಂಬುದಾಗಿ ಸಾರಿತು.

---

೧. ಆಚಾರ್ಯೋಽಪಿ ಮಧ್ಯಾಲಯತಃ ಮಧ್ಯಗೇಹಾಖ್ಯಬ್ರಾಹ್ಮಣಾಜ್ಜಾತಃ । -ವ್ಯಾ.

೨. ಅಚ್ಯುತಪ್ರೇಕ್ಷಾಖ್ಯಯತೀಶ್ವರಾತ್ ಅವಾಪ್ತಃ ಮಹೋದಯಃ ಸಂನ್ಯಾಸಲಕ್ಷಣಾಭ್ಯುದಯೋ ಯಸ್ಯ ಸ ತಥಾ । -ವ್ಯಾ.

೩. ''ನೇಂದ್ರಿಯಾಣಿ ನಾನುಮಾನಮ್''(ತತ್ತ್ವನಿರ್ಣಯೋದ್ಧೃತಪಿಪ್ಪಲಾದಶ್ರುತಿಃ)ಇತಿ ಶ್ರುತೇಃ ವ್ಯತನುತೇತಿ । ಅತ್ರಾಪಿ ಸ್ವಾಗಮಕೌಶಲೈರಿತ್ಯನುಸಂಧೇಯಮ್ । -ವ್ಯಾ.

ಟಿ. : ೧. [೧]ಶ್ರೀಕೃಷ್ಣನು ಪ್ರಯೋಗಿಸಿದ ಬಾಣವು ಶತ್ರುಗಳನ್ನು ಸಂಪೂರ್ಣವಾಗಿ ಸದೆಬಡಿಯುತ್ತಾ ಶ್ರೀಕೃಷ್ಣ ಅಚ್ಛೇದ್ಯ ಅಭೇದ್ಯನಾದವನು ಎಂಬುದನ್ನು ದೃಢಪಡಿಸಿತು. ಅವನದು ಜ್ಞಾನಾನಂದಮಯವಾದ ಅಪ್ರಾಕೃತ ದೇಹ ಎಂದು ಸಾರಿತು. ಅವನ ಅವಯವಗಳಿಗೆ ಎಂದೂ ಕುಂದಿಲ್ಲ ಎಂಬುದನ್ನು ತಿಳಿಸಿಕೊಟ್ಟಿತು. ಒಟ್ಟಾಗಿ ಅವನು ಅಗ್ರಾಹ್ಯ, ಅತೀಂದ್ರಿಯ, ಅಗಣ್ಯ ಪ್ರತಾಪ ಎಂಬುದನ್ನು ದೃಢಪಡಿಸಿತು.

೨. ಇಲ್ಲಿ ಬಾಣ ಮಾಡಿದ ಕಾರ್ಯವನ್ನೇ ಶ್ರೀಮಧ್ವಾಚಾರ್ಯರು ಮಾಡಿದರು ಎಂದು ತಿಳಿಸುವ ಮೂಲಕ ವಾಯುದೇವರು ಶ್ರೀಹರಿಯ ಬಾಣ ಎಂಬ ಶಾಸ್ತ್ರವಾಣಿಯ ಭಾವವನ್ನು ಅತ್ಯಂತ ಕೌಶಲಪೂರ್ಣವಾಗಿ ನಿರೂಪಿಸಲಾಗಿದೆ.

### ಮಧ್ವಬಾಣವು ಸಾಧಿಸಿದ ಅದ್ಭುತ

**ಹೃಷ್ಟಾಂ ಸ ಕೃಷ್ಣಸ್ಯ ಚಮೂಂ ವಿತನ್ವನ್**
**ದುಷ್ಟಾನ್ ವಿನಷ್ಟಾನ್ ವಿಶಿಖೋ ವಿಧಾಯ ।**
**ತುಷ್ಟೈಃ ಸುರೈರ್ವ್ಯೋಮಚರೈರ್ಮುರಾರೇಃ**
**ಸ್ಪಷ್ಟೀಚಕಾರೋತ್ತಮತಾಂ ಜಿತಾರೇಃ ॥ ೫೮ ॥**

ಆ ಬಾಣವು ಕೃಷ್ಣನ ಸೇನೆಯನ್ನು ಹರ್ಷವುಳ್ಳದ್ದನ್ನಾಗಿ ಮಾಡುತ್ತ, ದುಷ್ಟರನ್ನು ನಾಶಗೊಳಿಸುತ್ತ, ಗಗನಚಾರಿಗಳಾದ ದೇವತೆಗಳಿಂದ ಸ್ತುತಿಸಲ್ಪಡುತ್ತ, ಶತ್ರುವನ್ನು ಜಯಿಸಿದ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಸ್ಫುಟಗೊಳಿಸಿತು.

ಟಿ. : ೧. ಜರಾಸಂಧನ ಸೇನೆಯಲ್ಲಿದ್ದ ದೇವಗಂಧರ್ವರ ಅವತಾರರಾದ ರಾಜರುಗಳು ಶ್ರೀಕೃಷ್ಣನಿಂದ ಪರಾಭವಗೊಂಡದ್ದು ಶ್ರೀಹರಿಯ ಸರ್ವೋತ್ತಮತ್ವಕ್ಕೆ ದ್ಯೋತಕವಾಯಿತು ಎಂದರ್ಥ ; ವಿಶಿಖ - ಬಾಣ; ಶಿಖಾರಹಿತ, ಯತಿ, ಶ್ರೀಮಧ್ವಾಚಾರ್ಯರು(ಶ್ಲೇಷಾಲಂಕಾರ).

೨. [೨]ಜರಾಸಂಧನಿಗೆ ಬ್ರಹ್ಮ, ಶಿವ, ದುರ್ವಾಸರು ಹಾಗೂ ಚಂಡಕೌಶಿಕರ ವರಗಳಿದ್ದವು. ದ್ರುಪದ, ವಿರಾಟ, ಶಲ್ಯ, ಬಾಹ್ಲೀಕ, ಮೊದಲಾದವರು ದೇವಾಂಶಸಂಭೂತರಾದ ರಾಜರು, ಅವನನ್ನು ಹಿಂಬಾಲಿಸಿ ಬಂದಿದ್ದರು; ಶ್ರೀಕೃಷ್ಣ ಅವರನ್ನೆಲ್ಲ ಹಾಗೆ ಲೀಲಾಜಾಲವಾಗಿ ಜಯಿಸಿದ್ದು ಅವನ ಸರ್ವೋತ್ತಮತ್ವಕ್ಕೆ ನಿದರ್ಶನವೆನ್ನಿಸಿತು ಎಂದರ್ಥ.

---

೧. "ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದನಾರ್ತವತ್ । ಪ್ರದರ್ಶಯತಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್" । (ಮ.ಭಾ.ತಾ.ನಿ.೧೧/೯೬) "ಅಚ್ಛೇದ್ಯೋಽಯಮದಾಹ್ಯೋಽಯಮ್" (ಗೀತಾ.೨/೨೪)ಇತ್ಯಾದಿಶಾಸ್ತ್ರಂ ತಸ್ಯ ಕೌಶಲ್ಯೈಃ ನಿರವಕಾಶತ್ವಾದಿಕೌಶಲ್ಯೈಃ। -ವ್ಯಾ.

೨. ಜರಾಸಂಧಾಹೃತಸೇನಾಮಧ್ಯೇ ದೇವಗಂಧರ್ವಾವತಾರಾತ್ಮಕಭೂಪಾನಾಂ ವಿದ್ಯಮಾನತ್ವಾತ್ತೇಷಾಂ ಸರ್ವೇಷಾಂ ಜಯೇನ ಶ್ರೀಕೃಷ್ಣಸ್ಯ ಸರ್ವೋತ್ತಮತ್ವಂ ಸ್ಪಷ್ಟೀಭವತೀತಿ ಭಾವಃ। -ವ್ಯಾ.

**ಪುರಾಣವಾಕ್ಯದಂತೆ ಉಗ್ರಸೇನನ ಪ್ರಸ್ತಾವ**

**ಪೌರಾಣಿಕಂ ವಾಕ್ಯಮಿವೋಗ್ರಸೇನ-**
**ಮಗ್ರೇ ಜರಾಸೂನುರಸೌ ಜಹಾಸ ।**
**ಜೀವೇಶಯೋರ್ಭೇದಮಿವಾತ್ಮಯುಕ್ತ್ಯಾ**
**ಭೇದಂ ಸ ಚಾಸಾಧಯದಸ್ಯ ಚಾಪೇ ॥ ೫೯ ॥**

ಪುರಾಣದ ವಾಕ್ಯದಂತೆ ಮೊದಲಿಗೆ ಎದುರಿಸಿ ಬಂದ ಉಗ್ರಸೇನನನ್ನು, ಜರಾಸಂಧ ಅಪಹಾಸ ಮಾಡಿದ. ಉಗ್ರಸೇನನಾದರೋ ತನ್ನ ಯುಕ್ತಿಯಿಂದ ಜೀವೇಶರಲ್ಲಿನ ಭೇದವನ್ನು ಸಾಧಿಸುವವನಂತೆ ಅವನ ಧನುಸ್ಸನ್ನು ಮುರಿದುಹಾಕಿದ.

ವಿ. : ೧. ಶ್ರೀಕೃಷ್ಣ ಜರಾಸಂಧನನ್ನು ಕೆರಳಿಸಲೆಂದು ಮೊದಲಿಗೆ ಉಗ್ರಸೇನನನ್ನು ಯುದ್ಧಕ್ಕೆ ಕಳುಹಿಸಿದ ವಿವರ [1]ಶ್ರೀಮದ್ಭಾಗವತಾದಿಗಳಲ್ಲಿದೆ ; ಮೇಲ್ನೋಟಕ್ಕೆ ಅದು ವಾದದಲ್ಲಿ ಮೊದಲಿಗೆ ಪುರಾಣ ವಾಕ್ಯವನ್ನು ಉದಾಹರಿಸಿದಂತೆ ಕಾಣುವುದು.

೨. ಜನಿಸಿದಾರಭ್ಯ ಜರಾಸೂನುವಾದ ಜರಾಸಂಧನು ವಯೋಧರ್ಮದಿಂದಾಗಿ ಉಗ್ರನಾಗಿದ್ದ ಉಗ್ರಸೇನನನ್ನು 'ಮುದುಕ' ಎಂಬುದಾಗಿ ಅಪಹಾಸ್ಯಮಾಡಿದ್ದು ಎಂತಹ ವಿಪರ್ಯಾಸ ಎಂಬ ಧ್ವನಿಯನ್ನು ಇದರಲ್ಲಿ ಗುರುತಿಸಬಹುದು.

೩. ಶ್ರೀಮಧ್ವಾಚಾರ್ಯರು ಉದಾಹರಿಸುವ ಪುರಾಣವಾಕ್ಯಗಳನ್ನು ಪ್ರತಿವಾದಿಗಳು [2]ಅಪಹಾಸ್ಯಮಾಡುವುದುಂಟು. ಅದನ್ನು ಈ ಮಾತಿನಿಂದ ಸೂಚಿಸಿರುವರು; ಪುರಾಣವನ್ನು ಲೋಕರೂಢಿಯಂತೆ ಹಳೆಯ ಶಾಸ್ತ್ರ ಎಂದು ಅಜ್ಞರು ಅಪಹಾಸಮಾಡುವರು ಎಂಬುದು ಇಲ್ಲಿಯ ಉಗ್ರಸೇನನನ್ನು ಮುದುಕ ಎಂದಂತೆ.

೩. [3]ಆದರೆ ಉಗ್ರಸೇನ ಜರಾಸಂಧನ ಅಪಹಾಸವನ್ನು ಲೆಕ್ಕಿಸದೆ, ಅವನ ಧನುಸ್ಸನ್ನು ತುಂಡರಿಸಿದ ಎಂಬುದನ್ನು ಲಘುವಾಗಿ ಪರಿಗಣಿಸುವ ಪುರಾಣವಾಕ್ಯವು ಪ್ರತಿವಾದಿಗಳ ವಾದ-ಸರಣಿಯನ್ನು ಖಂಡಿಸುವುದು ಎಂದು ತಿಳಿಸಿರುವರು , (ಭಾಗವತ -೧೧/೧೧/೬) :

**ಸುಪರ್ಣಾವೇತೌ ಸಹಿತೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ ।**
**ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥**

---

೧. ತಂ ವೈ ಚುಕೋಪಯಿಷುರಗ್ರತ ಉಗ್ರಸೇನಂ ಕೃಷ್ಣೋ ನಿಧಾಯ ಸಮಗಾತ್ ಸ್ವಯಮಸ್ಯ ಪಶ್ಚಾತ್ ।
ದೃಷ್ಟ್ವಾಽಗ್ರತೋ ಮಗಧರಾಟ್ ಸ್ಥಿತಮುಗ್ರಸೇನಂ ಕೋಪಾಜ್ಜ್ವಲತ್ತನುರಿದಂ ವಚನಂ ಬಭಾಷೇ ॥
-ಮ.ಭಾ.ತಾ.ನಿ.(೧೪/೨೫)

೨. "ತ್ವಂ ಜೀರ್ಣವಸ್ತುಸದೃಶ" (ಮ.ಭಾ.ತಾ.ನಿ.೧೪/೨೬)ಇತ್ಯಾದಿ ಪರಿಹಾಸವಚನೈರುಪಹಾಸಂ ಕೃತವಾನ್ । -ವ್ಯಾ.

೩.. ಅನೇನ ಯುದ್ಧವರ್ಣನಂ ಭೇದವಾದಶ್ಚ ಸಮರ್ಥಿತೋ ಭವತಿ । -ವ್ಯಾ.

ಗುಣೋಜ್ಝಿತಂ ಶ್ರೀರಮಣಂ ವಿಧಾತುಂ
ಶರೋऽರಿವರ್ಗಂ ಯತಮಾನಮಾಶು ।
ಗುಣೈರ್ವಿಹೀನಂ ವಿರಚಯ್ಯ ಕೃಷ್ಣ-
ಮನಂತಸಂಚಿಂತ್ಯಗುಣಂ[೧] ವಿತೇನೇ ॥ ೬೦ ॥

ಶ್ರೀಕೃಷ್ಣನ ಧನುಸ್ಸಿನ ಹಗ್ಗವನ್ನು ಕತ್ತರಿಸಲೆಂದು ಪ್ರಯತ್ನಿಸಿದ ಶತ್ರುಗಳ ಸಮುದಾಯವನ್ನು ಶ್ರೀಕೃಷ್ಣನ ಬಾಣವು ಹಗ್ಗವಿಲ್ಲದಂತೆ ಮಾಡಿ, ಶ್ರೀಕೃಷ್ಣನು ಅನಂತವಾದ ಉತ್ತಮಚಿಂತನೆಗೆ ಯೋಗ್ಯವಾದ ಗುಣಗಳಿಂದ ಪೂರ್ಣನಾದವನು ಎಂಬುದನ್ನು ಕೂಡಲೇ ಸಾಧಿಸಿತು.

ವಿ. : ಗುಣ ಎಂಬಲ್ಲಿ ಗುಣಗಳು ಹಾಗೂ ಹಗ್ಗ ಎಂಬ ಎರಡು ಅರ್ಥಗಳು ವಿವಕ್ಷಿತ (ಶ್ಲೇಷಾಲಂಕಾರ). ಯುದ್ಧದಲ್ಲಿ ಶ್ರೀಕೃಷ್ಣನ ಧನುಸ್ಸಿನ ಹಗ್ಗವನ್ನು ಕತ್ತರಿಸುವುದು ಶತ್ರುಗಳ ಗುರಿಯಾಗಿದ್ದಂತೆ , ಬ್ರಹ್ಮನನ್ನು ನಿರ್ಗುಣ ಎಂದು ಸಾಧಿಸುವುದು ವಾದದಲ್ಲಿ ಪ್ರತಿವಾದಿಗಳ ಗುರಿ. ಆದರೆ ಶ್ರೀಮಧ್ವಾಚಾರ್ಯರೆಂಬ ಬಾಣವು ಆ ಶತ್ರುಗಳ ಗುಂಪಿನಲ್ಲೇ ವಾದಕ್ಕೆ ಅಗತ್ಯವಾದ ಗುಣಗಳು ಇಲ್ಲ ಎಂದು ತೋರಿಸುವ ಮೂಲಕ ಶ್ರೀಕೃಷ್ಣನು ಅಚ್ಛೇದ್ಯ ಅಭೇದ್ಯವಾದಂತಹ ಅನಂತಾನಂತ ಸ್ವಾಭಾವಿಕ ಗುಣಸಂಪನ್ನ ಎಂಬುದನ್ನು ಸಾಧಿಸಿತೋರಿಸಿದರು ಎಂದರ್ಥ.

### ಮಧ್ವಬಾಣವು ಸಾಧಿಸಿದ ಕಾರ್ಯ

ಅಂಧಾನಾಮಪಿ ಕೃಷ್ಣಸದ್ಗುಣಮಣಿಂ ಸಂದರ್ಶಯಿತ್ವಾ ಜಗ-
ದ್ವಂದ್ಯಾಂ ಕೀರ್ತಿವಧೂಂ ಪರಾನಲಸಮಾಂ ಸಂಧಾಯ ಲೋಕತ್ರಯೇ ।
ಸಾಂದ್ರೇ ರಕ್ತಜಲೇ ಚ ರತ್ನದೃಷದಾಂ ವೃಂದಂ ಸ ಸಂಪ್ಲಾವಯನ್
ಛಂದೋऽನ್ವರ್ಥಮಲಂ ಸಮರ್ಥ್ಯ ಸುಧಿಯಾಂ ಸಂದೇಹಮಾಶ್ವಚ್ಛಿನತ್ ॥೬೧॥

ಶ್ರೀಮನ್ಮಧ್ವಾಚಾರ್ಯರೆಂಬ ಬಾಣವು ಕುರುಡರಿಗೂ ಸಹ ಕೃಷ್ಣನ ಸದ್ಗುಣಗಳೆಂಬ ಮಣಿಗಳನ್ನು ಚೆನ್ನಾಗಿ ತೋರಿಸಿಕೊಟ್ಟಿತು, ಮೂರು ಲೋಕಗಳಲ್ಲೂ ಜಗತ್ತೇ ಮಣಿಯು-ವಂತಹ ಶತ್ರುಗಳ ಪಾಲಿಗೆ ಅಗ್ನಿಸದೃಶವಾದ ಕೀರ್ತಿಯೆಂಬ ನಾರಿಯನ್ನು ನೆಲೆಗೊಳಿಸಿತು, ದಟ್ಟವಾದ ರಕ್ತವೆಂಬ ಜಲದಲ್ಲಿ ರತ್ನಗಳೆಂಬ ಕಲ್ಲುಗಳ ರಾಶಿಯನ್ನು ತೇಲಿಸಿ ಹಾಕಿಸಿತು, ವೇದವಾಕ್ಯವನ್ನು ಅನ್ವರ್ಥಕವನ್ನಾಗಿ ಚೆನ್ನಾಗಿ ಸಮರ್ಥಿಸಿ, ನಿರ್ಮಲಬುದ್ಧಿಯ ಜನರ ಸಂದೇಹವನ್ನು ಕೂಡಲೇ ಪರಿಹರಿಸಿತು.(ಶ್ರೀಕೃಷ್ಣನ ಬಾಣವು ಮೂರ್ಖರಿಗೂ ಶ್ರೀಕೃಷ್ಣನ ಶೌರ್ಯ, ಧೈರ್ಯ, ಪರಾಕ್ರಮ ಮೊದಲಾದ ಸದ್ಗುಣಗಳೆಂಬ ರತ್ನಗಳನ್ನು ತೋರಿಸಿ-

೧. ಪರಾऽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । -ಶ್ವೇತಾಶ್ವತರೋಪನಿಷತ್

ಕೊಟ್ಟಿತು. ಲೋಕದಲ್ಲೇ ಸ್ತುತ್ಯವಾದಂತಹ ಶತ್ರುಸೇನೆಗೆ ಬೆಂಕಿಯಂತಹ ಶ್ರೀಕೃಷ್ಣನ ಕೀರ್ತಿಯನ್ನು ನೆಲೆಗೊಳಿಸಿತು; ಯುದ್ಧದಲ್ಲಿ ಹರಿದ ರಕ್ತದ ಪ್ರವಾಹಗಳಲ್ಲಿ ಶತ್ರುಗಳ ರತ್ನಖಚಿತವಾದಂತಹ ಕಿರೀಟ ಮೊದಲಾದ ಭೂಷಣಗಳನ್ನು ತೇಲಿಸಿತು).

ವಿ. : ೧. ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನು ಗುಣಪೂರ್ಣ ಎಂಬುದನ್ನು ಮಹಾ-ಮೂರ್ಖರಿಗೂ ಅರ್ಥವಾಗುವ ರೀತಿಯಲ್ಲಿ ಸಾಧಿಸಿ ತೋರಿಸಿದರು; ಶ್ರೀಮನ್ಮಧ್ವಾಚಾರ್ಯರ ಅವತಾರಕಾರ್ಯದ ಸಂಗ್ರಹನಿರೂಪಣೆ ಇದರಲ್ಲಿ ಬಂದಿದೆ.

೨. [೧]ಮೂರ್ಖರಿಗೆ ಮಣಿಯನ್ನು ತೋರಿಸುವುದು ಅಸಾಧ್ಯವಾದ ಕಾರ್ಯ; ಕುರುಡನಿಗೆ ಸೂರ್ಯನ ದರ್ಶನವನ್ನು ಮಾಡಿಸುವುದು ಹೇಗೋ ಹಾಗೆ. ಆದರೆ ಶ್ರೀಮಧ್ವಾಚಾರ್ಯರು ಹೀಗೆ ಮೂರ್ಖರಿಗೂ ಶ್ರೀಕೃಷ್ಣನ ಸದ್ಗುಣಮಣಿಗಳನ್ನು ಸ್ಫುಟಮಾಡಿ ಕೊಟ್ಟಿದ್ದರಿಂದ ಅದು ತಮಗೆ ಶಕ್ಯ ಎಂದು ಸಾಧಿಸಿತೋರಿಸಿದರು ಎಂದರ್ಥ.

೩.. [೨]ವೇದಗಳಲ್ಲಿ ಬರುವ 'ಅಂಧೋ ಮಣಿಮವಿಂದತ್, ಯೋಷಿತಮಗ್ನಿಂ ಧ್ಯಾಯೀತ, ಗ್ರಾವಾಣಃ ಪ್ಲವಂತೇ'' ಎಂಬ ವಾಕ್ಯಗಳನ್ನು ಸತ್ಯಮಾಡಿ ತೋರಿಸಿದರು ಎಂದರ್ಥ.

೪. [೩]ಒಂದರ್ಥದಲ್ಲಿ ಇದು ಸಮಸ್ಯಾಪೂರ್ತಿಯ ಶ್ಲೋಕದಂತಿದೆ ಎಂದು ತಿಳಿಯಬೇಕು. ಹಿಂದೆಯೂ ಈ ಬಗೆಯ ಶ್ಲೋಕ ಬಂದಿರುವುದು ಗಮನಾರ್ಹ: ಶಿರೋಃ ಕರೇ ಹಸ್ತಿಸಹಸ್ರಮಸ್ತಿ (೬/೧೨.)

## ಮಧ್ವಬಾಣವು ಸಾಧಿಸಿದ ಪಂಚಭೇದ

**ಶಸ್ತ್ರಾಸ್ತ್ರಪ್ರಕರೇಷು ಶಾರ್ಙ್ಗಧರತೋ ಭೇದಂ ದ್ವಿಪಾಶ್ವದ್ವಿಪ-**
**ದ್ವರ್ಗೇಷ್ವಾತ್ತಶರಾಸನಾನ್ಮುರಭಿದೋ ನಿರ್ಭಿನ್ನಗಾತ್ರೇಷು ಚ ।**
**ಮೃತ್ಯೋರ್ಲೋಕಮಿತೇಷು ತಂ ಸ್ವಜನತಃ ಕಾಯಾನ್ನಿಥಃ ಖಂಡಿತೇ**
**ಹಸ್ತಾದೌ ಯುಧಿ ಸಾಧಯನ್ ಸ ವಿದಧೇ ವ್ಯಕ್ತಂ ಭಿದಾಂ ಪಂಚಕಮ್ ॥ ೬೨ ॥**

ಆ ಮಧ್ವ ಬಾಣವು ಯುದ್ಧದಲ್ಲಿ ಶಸ್ತ್ರಾಸ್ತ್ರಗಳ ಸಮೂಹದಲ್ಲಿ ಶಾರ್ಙ್ಗಪಾಣಿಯಾದ ಮುರಾರಿಯಾದ ಶ್ರೀಕೃಷ್ಣನಿಂದ ಭೇದವನ್ನು, ಆನೆ, ಕುದುರೆ ಹಾಗೂ ಪದಾತಿಗಳ ಗುಂಪುಗಳಲ್ಲಿ ಬಿಲ್ಲು ಹಿಡಿದ ಆ ಶ್ರೀಕೃಷ್ಣನಿಂದ ಭೇದನಕಾರ್ಯವನ್ನು, ಮೃತ್ಯುಲೋಕವನ್ನು

೧. ಅನೇನ 'ಯೋಷಿತಮಗ್ನಿಂ ಧ್ಯಾಯೀತ' ( ) ಇತಿ ವಾಕ್ಯಸ್ಯಾನುಪಪನ್ನಾರ್ಥತತಾಽಪ್ರಾಮಾಣ್ಯಾಶಂಕಾ ನಿರಸ್ತಾ ಭವತಿ । -ವ್ಯಾ.

೨. ಅನೇನಾ''ಅಂಧೋ ಮಣಿಮವಿಂದತ್''(ತೈತ್ತಿರೀಯಾರಣ್ಯಕ.೧/೧೧/೫)ಇತ್ಯಾದಿ ವೇದವಾಕ್ಯಸ್ಯಾನುಪಪನ್ನಾರ್ಥತಯಾಽಪ್ರಾಮಾಣ್ಯಶಂಕಾ ನಿರಸ್ತಾ । -ವ್ಯಾ.

೩.. ಅನೇನ ''ಗ್ರಾವಾಣಃ ಪ್ಲವಂತ'' ಇತಿ ವಾಕ್ಯಸ್ಯಾನುಪಪನ್ನಾರ್ಥತಯಾಽಪ್ರಾಮಾಣ್ಯಶಂಕಾ ನಿರಸ್ತಾ । -ವ್ಯಾ.

ಹೊಂದಿದವರಿಗೆ ಅವರ ಬಂಧುವರ್ಗದಿಂದ ಭೇದವನ್ನು, ಶತ್ರುಗಳ ದೇಹದಿಂದ ಕೈ ಮೊದಲಾದವುಗಳು ಪರಸ್ಪರ ಖಂಡಿಸುವುದನ್ನು ಸಾಧಿಸುತ್ತಾ ಪಂಚಭೇದಗಳನ್ನು ಸ್ಫುಟ-ಪಡಿಸಿತು.

ವಿ. : ೧. ಶ್ರೀಕೃಷ್ಣ ಬಿಟ್ಟ ಬಾಣದಿಂದ ಜರಾಸಂಧನ ಸೇನೆಯಲ್ಲಿದ್ದ ಆನೆ, ಕುದುರೆ, ಪದಾತಿಗಳು ಎಲ್ಲ ರೀತಿಯಲ್ಲೂ ವಿನಾಶವನ್ನು ಕಂಡವು ಎಂಬುದು ಮುಖ್ಯಭಾವ.

೨. ಭೇದ ಎಂದರೆ ಹೊಡೆಯುವುದು, ಸೀಳುವುದು ಎಂದರ್ಥ. ಬಾಣವು ಹಾಗೆ ಭೇದಿಸುವ ಮೂಲಕ ಪಂಚವಿಧವಾದ [೧]ಭೇದವನ್ನು ಸ್ಫುಟಪಡಿಸಿತು ಎಂದರ್ಥ.

೩. [೨]ಶ್ರೀಕೃಷ್ಣನ ಕೈಯಲ್ಲಿನ ಬಾಣವೆಂದರೆ ವಾಯುದೇವರು; ಅದರಲ್ಲೂ ವಿಶೇಷವಾಗಿ ಇಲ್ಲಿ ಪ್ರಸಕ್ತವಾಗಿರುವ ಶ್ರೀಮಧ್ವರೂಪ. ಶ್ರೀಮಧ್ವರೂಪದಿಂದ ಪಂಚಭೇದಗಳ ಸಾಧನೆ ಅದ್ಭುತ-ರೀತಿಯಲ್ಲಿ ನಡೆಯಿತು ಎಂಬುದು ಇಲ್ಲಿಯ ಮುಖ್ಯಧ್ವನಿ.

೪. ಶರಾಸನ - ಧನುಸ್ಸು; ದ್ವಿಪ - ಆನೆ; ದ್ವಿಷತ್ - ಕಾಲಾಳು.

## ಮಧ್ವಶಿಷ್ಯರ ಪರಾಕ್ರಮ

ಅರಿಪ್ರಯುಕ್ತೈರ್ಯುಧಿ ತೈಃ ಶರೌಘೈ-
ರ್ಹರಿಪ್ರಿಯಾಸ್ತದ್ಧ್ವಜಿನೀಂ ನಿಜಘ್ನುಃ।
ಸ್ವಪಕ್ಷಮಾಸಾಧ್ಯ ಪರೋಕ್ತವಾಕ್ಯೈ-
ರ್ವಿಪಕ್ಷಪಕ್ಷಾನಿವ ಮಧ್ವಶಿಷ್ಯಾಃ[೩] ॥ ೬೩ ॥

ಯುದ್ಧದಲ್ಲಿ ಶತ್ರುಗಳು ಪ್ರಯೋಗಿಸಿದ ಬಾಣವೃಂದಗಳಿಂದ ಹರಿಪ್ರಿಯರಾದ ಸೈನಿಕರು ಜರಾಸಂಧನ ಆ ಸೇನೆಯನ್ನು ಸಂಪೂರ್ಣ ನಾಶಪಡಿಸಿದರು; ಮಧ್ವಶಿಷ್ಯರು ಪ್ರತಿವಾದಿಗಳು ನುಡಿಯುವ ವಾಕ್ಯಗಳಿಂದಲೇ ತಮ್ಮ ಪಕ್ಷವನ್ನು ಚೆನ್ನಾಗಿ ಸಾಧಿಸಿ ಪ್ರತಿವಾದಿಗಳ ಪಕ್ಷವನ್ನು ನಾಶಪಡಿಸುವಂತೆ.

---

೧. ಭೇದಪಂಚಕಂ ತು :
ಜೀವೇಶಯೋರ್ಭಿದಾ ಚೈವ ಜೀವಭೇದಃ ಪರಸ್ಪರಮ್ ।
ಜಡೇಶಯೋರ್ಭಿದಾ ಚೈವ ಜಡಜೀವಭಿದಾ ತಥಾ ।
ಜಡಾನಾಂ ಚ ಮಿಥೋ ಭೇದಃ ಸತ್ಯೋಽಯಂ ಭೇದಪಂಚಕಃ ॥ - ಇತಿ ವಾಕ್ಯಾದವಗಂತವ್ಯ ಇತಿ । -ವ್ಯಾ.

೨. ಅನೇನ ನಷ್ಟದೇಹೇಭ್ಯೋ ವೀರಸ್ವರ್ಗಸ್ಥಾನಾಂ ನಷ್ಟಜೀವಾನಾಂ ಭೇದಃ ಪ್ರದರ್ಶಿತಃ । -ವ್ಯಾ.

೩. ಮಧ್ವಪ್ರಶಿಷ್ಯಾ ಬಹವಃ ಶಿಷ್ಯಾ ಏಷಾಂ ಮುಹುಸ್ತಥಾ ।
ಅಲಂಚಕ್ರುರಲಂ ಪೃಥ್ವೀಂ ಸರ್ವೇ ಸದ್ಗುಣಭೂಷಣಾಃ ॥
ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ ।
ಸರ್ವೇ ದುರ್ವಾದಿದುರ್ವಾದಕಾಂಡಖಂಡನಮಂಡನಾಃ ॥ - ಸುಮಧ್ವವಿಜಯ (೧೫/೧೩೨,೧೩೩)

ವಿ. : ೧. ಶ್ರೀಕೃಷ್ಣನ ಸೇನೆಯಲ್ಲಿ ಇದ್ದ ಭಟರು ಜರಾಸಂಧನ ಸೈನಿಕರು ಪ್ರಯೋಗಿಸಿದ ಬಾಣ ಮೊದಲಾದ ಆಯುಧಗಳನ್ನು ಅವರ ಮೇಲೆಯೇ ಪ್ರಯೋಗಿಸಿ ನಾಶಪಡಿಸಿದರು ಎಂದರ್ಥ.

೨. [1]ಈ ಪ್ರಸಂಗವನ್ನು ಮಧ್ವಶಿಷ್ಯರು ಪ್ರತಿವಾದಿಗಳ ಮಾತುಗಳನ್ನೇ ಪ್ರತ್ಯುತ್ತರವೆಂಬಂತೆ ಮರಳಿ ಪ್ರಯೋಗಿಸುವ ಕೌಶಲಕ್ಕೆ ಹೋಲಿಸಿರುವುದು ವಿಶೇಷ; ಧ್ವಜಿನೀ – ಸೇನೆ.

೩. ಇದು ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಶ್ಚ ದೂಷಣಮ್ ಎಂಬ ಶಾಸ್ತ್ರನೀತಿಗೆ ಶ್ರೇಷ್ಠ ನಿದರ್ಶನ.

**ಪ್ರಾಣಾಯೋಗಪಲಾಯನಪ್ರಪತನಾಘಾತಾರ್ತಿವಿತ್ತವ್ಯಯ-**
**ಸ್ವೇದಾಸ್ರೋದಯವಕ್ತ್ರನೈಲ್ಯಭಯದುಷ್ಕೀರ್ತ್ಯಾದಿವಿಶ್ವಂ ಯುಧಿ ।**
**[2]ಸತ್ಯಂ ಶತ್ರುಚಯೇಷು ಚಕ್ರುರಖಿಲಂ ಯದ್ಬ್ರಹ್ಮಸಾಕ್ಷಾತ್ಕೃತೇ-**
**ರ್ಲಬ್ಧಂ ತದ್ವಿಪರೀತಮಾತ್ಮಸು ತತಃ ಸಿದ್ಧಂ ಮುರಾರೇರ್ಭಟಾಃ ॥ ೬೪ ॥**

ಮುರಾರಿಯಾದ ಶ್ರೀಕೃಷ್ಣನ ಸೈನಿಕರು ಯುದ್ಧದಲ್ಲಿ ಪ್ರಾಣ ತೆಗೆಯುವುದು, ಪಲಾಯನಗೈಸುವುದು, ಉರುಳಿ ಬೀಳಿಸುವುದು, ಹೊಡೆಯುವುದು, ನೋಯಿಸುವುದು, ವಿತ್ತವ್ಯಯ, ಬೆವರು, ಕಣ್ಣಲ್ಲಿ ನೀರು ಬರಿಸುವುದು, ಮುಖದಲ್ಲಿ ಕಪ್ಪು, ಭಯ, ಅಪಕೀರ್ತಿ ಮೊದಲಾದ ಸಕಲವನ್ನೂ ಶತ್ರುಗಳ ಸಮೂಹಗಳಲ್ಲಿ ಉಂಟುಮಾಡಿದರು; ಅದಕ್ಕೆ ವಿರುದ್ಧವಾದುದನ್ನು ತಮ್ಮಲ್ಲಿ ಸಿದ್ಧವನ್ನಾಗಿ ಮಾಡಿಕೊಂಡರು. ಪರಬ್ರಹ್ಮನಾದ ಶ್ರೀಕೃಷ್ಣನ ಸಾಕ್ಷಾತ್ ದರ್ಶನದ ಬಳಿಕ ಲಭಿಸಿದ ಅವೆಲ್ಲವೂ ಸತ್ಯ ಎಂಬುದಾಗಿ ನಿರೂಪಿಸಿದರು.

ವಿ. : ೧. ಶ್ರೀಕೃಷ್ಣನ ಸೈನಿಕರು ಜರಾಸಂಧನ ಸೈನಿಕರಲ್ಲಿ ಸಕಲಬಗೆಯ ದುಃಖವನ್ನು ಉಂಟುಮಾಡಿ ಅದರ ಅನುಭವ ಸತ್ಯವೆಂದು ಮಾಡಿಕೊಡುವ ಮೂಲಕ ವಿಶ್ವಮಿಥ್ಯಾತ್ವವಾದವು ಸರಿಯಾದುದಲ್ಲ ಎಂದು ಸಾಧಿಸಿದರು ಎಂದರ್ಥ.

೨. ಬ್ರಹ್ಮಸಾಕ್ಷಾತ್ಕಾರದ ಬಳಿದ ವಿಶ್ವವು ಮಿಥ್ಯೆ ಎಂದು ಸಿದ್ಧವಾಗುವುದು ಎಂಬ ಮಾಯಾವಾದಿಗಳ ವಾದವನ್ನು ಶ್ರೀಕೃಷ್ಣನ ಬಾಣ ಯುದ್ಧದಲ್ಲಿ ಜರಾಸಂಧನ ಸೈನಿಕರಿಗೆ ಸಾವು

---

೧. ಪ್ರೌಢಾಸ್ತತ್ತ್ವವಾದಿನಃ ಪರೋಕ್ತವಾಕ್ಯೈರೇವ ಪರಾನ್ ದೂಷಯಂತೀತಿ ಭಾವಃ । –ವ್ಯಾ.

೨. ಮಧ್ವಶಿಷ್ಯಾಸ್ತು । ಪರಬ್ರಹ್ಮರೂಪಶ್ರೀಕೃಷ್ಣಸಾಕ್ಷಾತ್ಕಾರವತಾ ಸರ್ವಜ್ಞಮುನಿನಾ ಸಾಧಿತತ್ವಾದ್ಬಾಧಾಭಾವರೂಪ-ಪ್ರಪಂಚಸ್ಯ ಪಾರಮಾರ್ಥಿಕಸತ್ಯತಾಂ ಸಾಧಿತವಂತಃ । ನ ಚ ಕೃಷ್ಣೋಽಪಿ ನ ಬ್ರಹ್ಮೇತಿ ವಾಚ್ಯಮ್ । ಬೃಹಬೃಹಿ-ವೃದ್ಧಾವಿತಿ ಧಾತ್ವರ್ಥಭೂತವೃದ್ಧಿರೂಪಗುಣವತಿ ಶೈಶವದಶಾಯಾಂ ಪ್ರಪಂಚೋದರೇ ಪಾರ್ಥಸಾರಥ್ಯಕರಣ-ದಶಾಯಾಮಪಿ "ನಾಂತಂ ನ ಮಧ್ಯಂ ನ ಪುನಸ್ತವಾದಿಮ್" (ಗೀ.೧೧/೧೬) ಇತ್ಯುಕ್ತಕೃಷ್ಣ ಏವ ಸಂಭವಾತ್ । "ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾ" ಇತಿ ಶ್ರುತೇಃ ಧಾತುವ್ಯಾಖ್ಯಾನರೂಪಸ್ಮೃತೇಶ್ಚೈಕಾ-ರ್ಥ್ಯಾಯ ಬಹುಗುಣಾವೃದ್ಧತ್ವರೂಪಪರಬ್ರಹ್ಮಶಬ್ದಾರ್ಥಭೂತಬ್ರಹ್ಮತ್ವಸ್ಯಾಪಿ "ಮಯ್ಯನಂತಗುಣೇ" (ಭಾಗ.೬/೪/೪೮) "ಗುಣಕರ್ಮಾಭಿಧಾನಾನಿ ಸಂತಿ ಮೇಽಂಗ ಸಹಸ್ರಶ" (ಭಾಗ.೧೦/೫೧/೩೭) ಇತ್ಯಾದಿವಾಕ್ಯಾರ್ಥರೂಪಕೃಷ್ಣ ಏವ ಸಂಭವಾದಿತ್ಯುಕ್ತಂ ಭವತಿ । –ವ್ಯಾ.

ಮೊದಲಾದ ಅನರ್ಥಪರಂಪರೆಯನ್ನು ಉಂಟುಮಾಡುವ ಮೂಲಕ ಖಂಡಿಸಿತು ಎಂದರ್ಥ; ಎಂದರೆ ಶ್ರೀಕೃಷ್ಣನನ್ನು ಕಾಣುತ್ತಲೇ ಅವನಿಂದ ಅವರೆಲ್ಲಾ ಅಂತಹ ದುಃಸ್ಥಿತಿಯನ್ನು ಹೊಂದುವಂತಾಯಿತು. ಶ್ರೀಕೃಷ್ಣನು ಸಾಕ್ಷಾತ್ ಪರಬ್ರಹ್ಮ ಅವನ ದರ್ಶನವಾದ ಬಳಿಕವೂ ಅವರಿಗೆ ಅಂತಹ ಅನರ್ಥ ಉಂಟಾಗಿ ಅವರೆಲ್ಲಾ ನೋಯುವಂತಾಯಿತು. ಬ್ರಹ್ಮಸಾಕ್ಷಾತ್ಕಾರದ ಬಳಿಕ ವಿಶ್ವವು ಬಾಧಿತವಾಗದು ಎಂಬುದಕ್ಕೆ ಇದು ಶ್ರೇಷ್ಠನಿದರ್ಶನವಾಯಿತು ಎಂದರ್ಥ.

೩. ಜರಾಸಂಧನ ಸೈನಿಕರಿಗೆ ನೋವಿನ ಅನುಭವವನ್ನು ನೀಡುವ ಮೂಲಕವೇ ವಿಶ್ವವು ಅಬಾಧ್ಯ ಎಂದು ತೋರಿಸಲು, ನಲಿವಿಗಿಂತ ನೋವಿನ ಅನುಭವ ಹೆಚ್ಚು ಪರಿಣಾಮಕಾರಿ ಎಂಬ ಶ್ರೀಮದಾಚಾರ್ಯರ ಮಾತಿಗೆ ನಿದರ್ಶನ : ನ ದುಃಖಾನುಭವಃ ಕ್ವಾಪಿ ಮಿಥ್ಯಾನುಭವತಾಂ ವ್ರಜೇತ್ । (ಅನುವ್ಯಾಖ್ಯಾನ)

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತೋಽಯಮಭೂತ್ತ್ರಯೋದಶಮಿತಃ ಸರ್ಗೋ ಮುದಾಂ ಸ್ವರ್ಗಿಷು ॥**

ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ತ್ರಯೋದಶಃ ಸರ್ಗಃ ॥೧೩॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಕೃತಿಯಲ್ಲಿ ಹದಿಮೂರನೆಯ ಸರ್ಗವು ಮುಕ್ತಾಯವಾಯಿತು.

*****

# ೧೪. ಚತುರ್ದಶಃ ಸರ್ಗಃ

(ಜರಾಸಂಧನ ಪರಾಭವ - ೧-೧೬; ಪುನಃ ಪುನಃ ಅವನ ಪರಾಭವ - ೧೭-೩೧; ದ್ವಾರಕಾನಿರ್ಮಾಣ - ೩೧, ೩೨; ಕಾಲಯವನನ ವಧೆ - ೩೩-೩೬; ಮುಚುಕುಂದನ ಉದ್ಧಾರ - ೩೭; ಶ್ರೀಕೃಷ್ಣನಿಗೆ ರುಗ್ಮಿಣಿಯ ಪತ್ರಸಂದೇಶ - ೩೮-೪೨; ಶ್ರೀಕೃಷ್ಣನ ವಿದರ್ಭಗಮನ - ೪೩-೪೭; ಕೃಷ್ಣದರ್ಶನದಿಂದ ಜನತೆಗಾದ ಸಂಭ್ರಮ - ೪೮-೬೨; ರುಗ್ಮಿಣಿಯ ಕುಲದೇವತಾಯಾತ್ರೆ - ೬೩,೬೪; ಜರಾಸಂಧಾದಿಗಳ ಪರಾಜಯ - ೬೫-೬೭; ರುಗ್ಮಿಣೀ ಹರಣ - ೬೮-೬೯; ಸರ್ಗೋಪಸಂಹಾರ - ೭೦)

ಜರಾಸಂಧನ ಸೈನ್ಯದೊಂದಿಗೆ ಅಖಂಡಾರ್ಥವನ್ನೂ ಖಂಡಿಸಿದ ಶ್ರೀಕೃಷ್ಣಭೃತ್ಯರು

ಛತ್ರಂ ಧ್ವಜಂ ಚಾಮರಚರ್ಮವರ್ಮ-
ಹಸ್ತ್ಯಶ್ವಪತ್ತ್ಯಾದಿಸಮಸ್ತವಿತ್ತಮ್[1] ।
ಕೃತ್ವಾ ಸಖಂಡಂ ಯುಧಿ ಕೃಷ್ಣಭೃತ್ಯಾ-
ಶ್ಚಕ್ರುರ್ಹ್ಯಖಂಡಾರ್ಥಮವಿದ್ಯಮಾನಮ್ ॥ ೧ ॥

ಶ್ರೀಕೃಷ್ಣಭಟರು ಯುದ್ಧದಲ್ಲಿ ಛತ್ರ, ಧ್ವಜ, ಚಾಮರ, ಗುರಾಣಿ, ಕವಚ, ಆನೆ, ಕುದುರೆ, ಪದಾತಿ ಮೊದಲಾದ ಸಮಸ್ತ ಶತ್ರುಸಂಪತ್ತನ್ನು ಖಂಡಿಸಿ ಹಾಕಿ, ಅಖಂಡಾರ್ಥವು ಇರುವುದು ಸರ್ವಥಾ ಅಸಾಧ್ಯ ಎಂಬುದನ್ನು ಸಾಧಿಸಿತೋರಿಸಿದರು.

ವಿ. : ೧. [2]ಅವರ ಸೈನ್ಯವನ್ನೆಲ್ಲಾ ಖಂಡಿಸುವ ಮೂಲಕ ಮಾಯಾವಾದಿಗಳ ಅಖಂಡಾರ್ಥ-ಪರಿಕಲ್ಪನೆಯನ್ನು ಖಂಡಿಸಿದರು ಎಂದರ್ಥ ; ಪತ್ತಿ - ಪದಾತಿ.

೨. ಜರಾಸಂಧನು ವಿಪ್ರಚಿತ್ತಿ ಎಂಬ ಅಸುರನ ಅವತಾರ. ವಿಪ್ರಚಿತ್ತಿಯು ಮಿಥ್ಯಾಜ್ಞಾನದ ಅಭಿಮಾನಿದೈತ್ಯ. ಆದ್ದರಿಂದ ಅವನೊಂದಿಗೆ ನಡೆದ ಯುದ್ಧವನ್ನು ಮಿಥ್ಯಾಜ್ಞಾನದೊಂದಿಗೆ ನಡೆದ ಸಂಘರ್ಷ ಎಂದು ಇಲ್ಲಿ ವರ್ಣಿಸಿರುವುದು ಅತ್ಯಂತ ಸಮುಚಿತ.

ಅವಿದ್ಯೆಯು ಅಭಾವಸ್ವರೂಪ

ಸಂಗ್ರಾಮಕೌಶಲ್ಯಚಿದುಜ್ಝಿತಾನಾಂ
ಭಂಗಂ ಸಮಾಲಿಂಗ್ಯ ಸುಮೂರ್ಛಿತಾನಾಮ್ ।

---

೧. ಛಿನ್ನಾಯುಧಧ್ವಜಪತಾಕರಥಾಶ್ವಸೂತವರ್ಮಾಣ ಉಗ್ರಶರತಾಡಿತಭಿನ್ನಗಾತ್ರಾಃ ।
ಸ್ರಸ್ತಾಂಬರಾಭರಣಮೂರ್ಧಜಮಾಲ್ಯಹೀನಾ ರಕ್ತಂ ವಮಂತ ಉರು ದುದ್ರುವುರಾಶು ಭೀತಾಃ ॥
-ಮ.ಭಾ.ತಾ.ನಿ.(೧೪/೩.೩.)

೨. ತತ್ತ್ವವಾದಿನಃ ಬ್ರಹ್ಮಣಃ ಸತ್ಯತ್ವಸರ್ವಜ್ಞತ್ವಾದಿಗುಣವೈಶಿಷ್ಟ್ಯರೂಪಸಖಂಡತ್ವಸಂಪಾದನೇನ ಮಾಯಾವಾದ್ಯಭಿಮತಾಖಂಡತ್ವಮವಿದ್ಯಮಾನಂ ಚಕ್ರುರಿತಿ ಭಾವಃ । -ವ್ಯಾ.

ಸಿದ್ಧಾಮವಿದ್ಯಾಂ[೧] ವಿದಧುರ್ವಿಪಕ್ಷೇ
ವಿಜ್ಞಪ್ತ್ಯಭಾವಾಕೃತಿಮೇವ ಯುದ್ಧೇ ॥ ೨ ॥

ಸಮರಕೌಶಲ್ಯದ ಅರಿವನ್ನು ಹೊಂದದೆ ಇದ್ದ, ಪೆಟ್ಟು ತಿಂದು ಗಾಢಮೂರ್ಛೆಗೆ ಒಳಗಾಗಿದ್ದ ಜರಾಸಂಧನ ಸೈನಿಕರ ಪಾಲಿಗೆ ಆ ಯುದ್ಧದಲ್ಲಿ ಅವರ ಅವಿದ್ಯೆಯು ಜ್ಞಾನಾಭಾವರೂಪವೇ ಆದುದು ಎಂಬುದನ್ನು ದೃಢವಾಗಿಸಿದರು.

ವಿ. : [೨]ಅವಿದ್ಯೆಯು ಭಾವರೂಪವಾದದು ಎಂಬುದು ಮಾಯಾವಾದಿಗಳ ವಾದ. ಆದರೆ ಯುದ್ಧದಲ್ಲಿ ಜರಾಸಂಧನ ಸೈನಿಕರಿಗೆ ಉಂಟಾಗಿದ್ದುದು ಭಾವರೂಪದ ವಿನಾಶವೇ ಆಗಿತ್ತು ಎಂದು ತಿಳಿಸುವ ಮೂಲಕ ಭಾವರೂಪ ಅಜ್ಞಾನದ ಪರಿಕಲ್ಪನೆ ಸರಿಯಾದುದಲ್ಲ ಎಂಬುದಾಗಿ ಸಾಧಿಸಿ ತೋರಿಸಿದರು.

### ಸದಸದ್ವಿಲಕ್ಷಣತ್ವವಾದದ ಖಂಡನೆ

ಪಲಾಯನಂ ಯೇ ವಿದಧುರ್ನೃಪಾಂಸ್ತಾನ್
ವಿಧಾಯ ಸತ್ಕೋಟಿಷು ಕೃಷ್ಣಭೃತ್ಯಾಃ ।
ಅನ್ಯಾನಸತ್ಕೋಟಿಷು ಸನ್ನಿವೇಶ್ಯ
ಶೂನ್ಯಂ ಪ್ರಚಕ್ರುಃ ಸದಸದ್ವಿಭಿನ್ನಮ್ ॥ ೩ ॥

ಶ್ರೀಕೃಷ್ಣನ ಭಟರು ಯುದ್ಧದಲ್ಲಿ ಪಲಾಯನ ಮಾಡಿದ ಆ ರಾಜರನ್ನು ಸಜ್ಜನರ ಗುಂಪಿನಲ್ಲಿಯೂ, ಇತರರನ್ನು ಅಸಜ್ಜನರ ಗುಂಪಿನಲ್ಲಿಯೂ ಸೇರಿಸಿ, ಸದಸದ್ವಿಲಕ್ಷಣ ಎಂಬುದನ್ನು ಶೂನ್ಯವನ್ನಾಗಿ ಮಾಡಿದರು.

ವಿ. : ೧. ಜರಾಸಂಧನ ಗುಂಪಿಗೆ ಸೇರಿದ ರಾಜರಲ್ಲಿ ಎರಡು ಬಗೆ. ಕೆಲವರು ಕೃಷ್ಣನನ್ನು ಎದುರಿಸಿ ನಿಲ್ಲಲಾರದೆ ಪಲಾಯನಗೈದವರು; ಅವರು ಬದುಕಿದ ಗುಂಪಿಗೆ ಸೇರಿದವರು. ಮತ್ತೊಂದು ರೀತಿಯಲ್ಲಿ ಅವರು ಸಜ್ಜನರ ಗುಂಪಿಗೆ ಸೇರಿದವರು ಎಂದರ್ಥ.

೨. ಹಾಗೆ ಪಲಾಯನ ಮಾಡದೆ ಯುದ್ಧವನ್ನೇ ಮುಂದುವರೆಸಿ, ಪ್ರಾಣಕಳೆದುಕೊಂಡು ಸತ್ತವರ ಗುಂಪಿಗೆ ಸೇರಿದವರು ಎರಡನೆಯ ಬಗೆ. ಎಂದರೆ ಅವರು ಅಸಜ್ಜನರು ಎಂದರ್ಥ.

೩.. ಮೂರನೆಯ ಬಗೆ ಎಂಬುದು ಇಲ್ಲ ಎಂಬುದು ಗಮನಾರ್ಹ. ಇದರಿಂದ ಸತ್ ಹಾಗೂ ಅಸತ್ ಎಂಬ ಎರಡು ಬಗೆಯ ವಿಭಾಗ ಮಾತ್ರವೇ ಸತ್ಯ. ಸದಸದ್ವಿಲಕ್ಷಣ ಎಂಬ ಮಾಯಾವಾದಿಗಳ ಪರಿಕಲ್ಪನೆ ಅತ್ಯಂತ ತಪ್ಪು ಕಲ್ಪನೆ ಎಂಬುದು ಸ್ಫುಟವಾಗುವುದು; ಕೋಟಿ – ಪಕ್ಷ.

---

೧. ಈಷಜ್ಜ್ಞಾನಾನುಕೂಲಂ ಹ್ಯಜ್ಞಾನಂ ಭಾವರೂಪಾಜ್ಞಾನಮಿತಿ ಮಾಯಾವಾದಿನೋ ವದಂತಿ । ಜರಾಸಂಧ- ಸೈನ್ಯೇಷು ಸ್ವಜ್ಞಾನಸ್ಯ ಪ್ರತಿಯೋಗಿಭೂತಪ್ಯರಿಜ್ಞಾನಸ್ಯ ಚ ಸರ್ವಥಾಽಭಾವಾತ್ ಜ್ಞಾನಾಭಾವಮೇವಾಜ್ಞಾನಮಿತಿ ಭಾವಃ। -ವ್ಯಾ.

೨. ತತ್ತ್ವವಾದಿನಸ್ತು ಇತರಾಸಾಧ್ಯಯುದ್ಧಚಮತ್ಕಾರವತಿ ಶ್ರೀಕೃಷ್ಣೇ ಸರ್ವಥಾಽಜ್ಞಾನಸ್ಯಾಭಾವಾನ್ನ ಭಾವರೂಪಾ- ಜ್ಞಾನಸ್ಯಾವಸರಃ । ಇತರೇಷು ಯೋಗ್ಯೇಷು ಜೀವೇಷು ಮಾಯಾಜವನಿಕಾಛನ್ನತ್ವೇನ ಕುಡ್ಯಾವೃತಘಟಸ್ಯೇ- ವೇದಾನೀಂ ಭಗವದಪರೋಕ್ಷಜ್ಞಾನಾದೇರಭಾವಃ ಮಾಯಾಪಗಮೇಽಪಿ ಸಾಮಸ್ತ್ಯೇನ ಜ್ಞಾನಾಭಾವ ಏವೇತಿ ಅಯೋಗ್ಯೇಷು ಸರ್ವಥಾ ಭಗವನ್ಮಾಹಾತ್ಮ್ಯಜ್ಞಾನಾಭಾವ ಏವೇತಿ ಭಾವರೂಪಾಜ್ಞಾನಾನವಸರ ಇತಿ ಸಾಧಿತವಂತಃ। -ವ್ಯಾ.

೪. ಸರ್ಗ ೧೩.ರ ೫೫ನೇ ಶ್ಲೋಕದಲ್ಲಿನ ವಿವರಗಳನ್ನು ಇಲ್ಲಿ ಅನ್ವಯಿಸಿಕೊಳ್ಳಬಹುದು.

### ಜೀವೇಶ್ವರಭೇದ ಹಾಗೂ ಜೀವಜೀವಭೇದಗಳ ಸಮರ್ಥನೆ

ತೇ ಬ್ರಹ್ಮಣಃ ಶಾರ್ಙ್ಗಧರಾದ್ವಿಭಿನ್ನಾ-
ನಾಹೂಯ ಹೇಯಾನಪಿ ಗರ್ವಿಣಸ್ತಾನ್ ।
ಸ್ವೇಭ್ಯೋಽಪಿ ಭಿನ್ನಾನ್ ವಿರಚಯ್ಯ ಯುದ್ಧೇ
ಧಾನುಷ್ಕಚೂಡಾಮಣಯೋ ನಿಜಘ್ನುಃ ॥ ೪ ॥

ಧನುರ್ಧಾರಿಗಳಲ್ಲಿ ಶ್ರೇಷ್ಠರೆನ್ನಿಸಿದ ಶ್ರೀಕೃಷ್ಣನ ಕಡೆಯವರು ಪರಬ್ರಹ್ಮನಾದ ಶಾರ್ಙ್ಗ-ಪಾಣಿಯಾದ ಶ್ರೀಕೃಷ್ಣನಿಂದ ಪೆಟ್ಟುತಿಂದಿದ್ದ ಸೊಕ್ಕಿದ ಜನರನ್ನು ಅವರು ಹೇಯರಾಗಿದ್ದರೂ ಆಹ್ವಾನಿಸಿ, ಯುದ್ಧದಲ್ಲಿ ತಮ್ಮಿಂದಲೂ ಭಿನ್ನರಾಗುವಂತೆ ಮಾಡಿ ನಾಶಮಾಡಿದರು.

ವಿ. : ೧. ಜರಾಸಂಧನ ಸೈನಿಕರನ್ನು ಹಾಗೆ ಘಾಸಿಗೊಳಿಸುವ ಮೂಲಕ ಶ್ರೀಕೃಷ್ಣನ ಸೈನಿಕರು ಜೀವೇಶ್ವರಭೇದವನ್ನು ಸಮರ್ಥಿಸಿದರು; ಅದರಂತೆ ಜೀವಜೀವಭೇದ ಹಾಗೂ ಸಾತ್ವಿಕತಾಮಸ ಪ್ರಭೇದಗಳು ಸಹ ಈ ಪ್ರಸಂಗದಿಂದ ನಿರೂಪಿತವಾದವು ಎಂದು ಭಾವ.

೨. ಯುದ್ಧದ ಪ್ರಸಂಗವು ವಾಕ್ಯಾರ್ಥ ಪ್ರಸಂಗದಲ್ಲಿ ಹೇಗೋ ಹಾಗೆ, ಜೀವೇಶ್ವರಾದಿ ಭೇದಗಳನ್ನು ನಿರೂಪಿಸುವ ತಾತ್ವಿಕ ಪ್ರಸಂಗವಾಯಿತು ಎಂಬ ಇಲ್ಲಿಯ ನಿರೂಪಣೆ ಅತ್ಯಂತ ರೋಚಕ.

### ಬ್ರಹ್ಮನ ಅವಾಚ್ಯತ್ವದ ಖಂಡನೆ

ಸುರರ್ಷಿಸಿದ್ಧಸ್ತುತಿಭಿಃ ಸಮಂತಾತ್
ಸಮುತ್ಥಿತಾಭಿಃ ಸಮದೂಷಯಂಸ್ತೇ ।
ಅನನ್ಯಯೋಗ್ಯಾಭಿರವಾಚ್ಯಭಾವಂ
ಮುಕುಂದಮುಖ್ಯಾರ್ಥಪರಾಭಿರಸ್ಯ ॥ ೫ ॥

ಎಲ್ಲೆಡೆಗಳಿಂದಲೂ ಹೊರಹೊಮ್ಮಿದ, ಇತರರಿಗೆ ಸರ್ವಥಾ ಅನ್ವಯಿಸದೆ ಮುಕುಂದನನ್ನೇ ಪ್ರತಿಪಾದಿಸುವಂತಹ ಮುಖ್ಯಾರ್ಥವನ್ನು ಹೊಂದಿದ, ದೇವತೆಗಳ, ಋಷಿಗಳ ಹಾಗೂ ಸಿದ್ಧರ ಸ್ತುತಿಗಳಿಂದ ಅವನು ಅವಾಚ್ಯ ಎಂಬ ಭಾವವನ್ನು ಅವರು ಚೆನ್ನಾಗಿ ಖಂಡಿಸಿದರು.

ವಿ. : ೧. [೧]ಶ್ರೀಕೃಷ್ಣನನ್ನು ಕುರಿತು ದೇವತೆಗಳು ಮೊದಲಾದವರು ಮಾಡಿದ ಸ್ತೋತ್ರ "ಅವನು ಅವಾಚ್ಯ" ಎಂಬ ಮಾಯಾವಾದಿಗಳ ಕಲ್ಪನೆಗೆ ಶ್ರೇಷ್ಠವಾದ ಉತ್ತರವಾಗಿದ್ದಿತು ಎಂದು ಭಾವ.

೨. ಅವು ಕೇವಲ ವಿಷ್ಣುಪರವಾದ ಸ್ತೋತ್ರಗಳೇ ಆದ್ದರಿಂದ ಗೌಣವೆಂದು ಸಾಧಿಸಲು ಅವಕಾಶ ಸರ್ವಥಾ ಇಲ್ಲವಾಗಿತ್ತು ಎಂದೂ ಅರ್ಥ.

---

೧. "ಸರ್ವೋತ್ತಮ ಸರ್ವಜ್ಞಚೂಡಾಮಣೇ ಭಗ್ನಜರಾಸಂಧ"ಇತ್ಯಾದಿಶ್ರೀಕೃಷ್ಣಪುಣ್ಯನಾಮಸ್ತುತಿಭಿಃ। -ವ್ಯಾ.

## ಏಕಲವ್ಯನ ಪರಾಭವ

ಭಸ್ಮೀಭೂತಮಿವಾರಚಯ್ಯ ಗಿರಿಶೋ ಯಂ ಬಾಹ್ಯದೃಷ್ಟ್ಯಾ ಪುನ-
ಶ್ಚಿತ್ತಾಂತಃಸ್ಥಿತಮಾರ್ಪಯದ್ಗಿರಿಸುತಾಗರ್ಭೇ ಹ್ಯನೇಕಾನನಮ್ ।
ತಂ [1]ಪಂಚಾವಯವೇಷುಮಂಗರುಚಿರಂ ಸೃಷ್ಟ್ವಾಽಗ್ರ್ಯತರ್ಕೋಪಮಂ
ಛಂದೋಬಾಹ್ಯಕುತರ್ಕಕಲ್ಪಮಜಯತ್ ತೇನೈಕಲವ್ಯಂ ವಿಭುಃ ॥ ೬ ॥

ಬಾಹ್ಯನೋಟದಿಂದ ಭಸ್ಮೀಭೂತನಂತೆ ಮಾಡಿದ್ದ ಚಿತ್ತದಲ್ಲಿ ನೆಲೆಸಿದ್ದ ಕಾಮನನ್ನು ಗಿರಿಶನಾದ ಶ್ರೀರುದ್ರದೇವರು ಪುನಃ ಗಿರಿಸುತೆಯಾದ ಪಾರ್ವತಿಯ ಗರ್ಭದಲ್ಲಿ ಅನೇಕ ಮುಖದವನನ್ನಾಗಿ ಇರಿಸಿದರಲ್ಲವೆ! ಅಂತಹ ಪಂಚಾವಯವಗಳು ಎಂಬ ಮನೋಹರವಾದ ಬಾಣಗಳಿಂದ ಕೂಡಿದ ಶ್ರೇಷ್ಠತರ್ಕದಂತಿದ್ದ [2]ಪ್ರದ್ಯುಮ್ನನನ್ನು ಸೃಷ್ಟಿಸಿ, ಅವನಿಂದ ವೇದವಿರುದ್ಧವಾದ ಕುತರ್ಕದಂತಿದ್ದ ಆ ಏಕಲವ್ಯನನ್ನು ವಿಭುವಾದ ಶ್ರೀಕೃಷ್ಣನು ಜಯಿಸಿದನು.

ವಿ. : ೧. [3]ಶ್ರೀರುದ್ರದೇವರಿಂದ ಭಸ್ಮೀಭೂತನಾದ ಕಾಮ ಪುನಃ ಶಿವಪಾರ್ವತಿಯರ ಮಗ-ನಾಗಿ ಷಣ್ಮುಖನೆಂಬ ರೂಪದಿಂದ ಜನಿಸಿದ್ದು ಸುಪ್ರಸಿದ್ಧ.

೨. [4]ಕಾಮನಿಗೆ ಐದು ಬಾಣಗಳು ಎಂಬುದು ಪ್ರಸಿದ್ಧಿ. ವಾದಿಗಳನ್ನು ಖಂಡಿಸಲು ಉಪಯುಕ್ತವಾದ ಪರಾರ್ಥಾನುಮಾನಕ್ಕೆ ಐದು ಅವಯವಗಳು ಎಂಬುದೂ ಪ್ರಸಿದ್ಧವೇ. ಹಾಗೆ ಐದು ಅವಯವಗಳನ್ನು ಹೊಂದಿ ರೂಪತಳೆದು ಬಂದಿದ್ದ [5]ಕಾಮನಂತೆ ಕಂಗೊಳಿಸುತ್ತಿದ್ದವು

---

೧. ಸುದರ್ಶನಶ್ಚ ಭರತಃ ಪ್ರದ್ಯುಮ್ನಃ ಸ್ಕಂದ ಏವ ಚ ।
ಸನತ್ಕುಮಾರಃ ಕಾಮಶ್ಚೇತ್ಯೇಕ ಏವ ವ್ಯವಸ್ಥಿತಃ ॥ -ಪೈಂಗಿಶ್ರುತಿ(ಬೃಹದಾರಣ್ಯಕಭಾಷ್ಯ -೩./೫)

೨. ಭೀತೇನ ತೇನ ಸಮರಂ ಭಗವಾನನಿಚ್ಛನ್ ಪ್ರದ್ಯುಮ್ನಮಾಶ್ವಸೃಜದಾತ್ಮಸುತಂ ಮನೋಜಮ್ ।
ಪ್ರದ್ಯುಮ್ನ ಏನಮಭಿಯಾಯ ಮಹಾಸ್ತ್ರಜಾಲೈ ರಾಮಸ್ತು ಮಾಗಧಮಥಾತ್ಮರಥಂ ನಿನಾಯ ॥
ಯುಧ್ವಾ ಚಿರಂ ರಣಮುಖೇ ಭಗವತ್ಸುತೋಽಸೌ ಚಕ್ರೇ ನಿರಾಯುಧಮಮುಂ ಸ್ಥಿರಮೇಕಲವ್ಯಮ್ ।
-ಮ.ಭಾ.ತಾ.ನಿ.(೧೪/೩೯,೪೦)

೩. "ತ್ವಂ ಚ ರುದ್ರ★" ಇತ್ಯಾದಿ ಹರ್ಯಾಜ್ಞಾಶೃಂಖಲಾಬದ್ಧತ್ವೇನ ಆಪಾತತ ಏವ ನ ತು ಮನಃಪೂರ್ವಕ-ಮಿತ್ಯರ್ಥಃ । -ವ್ಯಾ.
★ ಮ.ಭಾ.ತಾ.ನಿರ್ಣಯೋದ್ಧೃತ ವರಾಹಪುರಾಣವಚನ - (೧/೪೮,೪೯)

೪. ಕಾಮನು ಷಣ್ಮುಖನ ಅವತಾರ : "ಯಂ ಸ್ಕಾಂದ ಇತ್ಯವಕ್ಷ್ಯತ್"
"ಅಸೂತ ಯಂ ಜಾಂಬವತೀ ವ್ರತಾಢ್ಯಾ
ದೇವಂ ಗುಹಂ ಯೋಧಿಂಬಿಕಯಾ ಧೃತೋಧಿಗ್ರೇ" - ಶ್ರೀಮದ್ಭಾಗವತ (೩./೧/೬೦)
ಅಥಾಪ ಸಾಂಬನಾಮಕಂ ಸುತಂ ಚ ರೋಹಿಣೀ ಹರೇಃ ।
ಚತುರ್ಮುಖಾಂಶಸಂಯುತಂ ಕುಮಾರಮೇವ ಷಣ್ಮುಖಮ್ - ಮ.ಭಾ.ತಾ.ನಿ(೧೭/೨೨೦)

೫. ಪ್ರದ್ಯುಮ್ನೋಽಥ ಗದಾಪಾಣಿರೇಕಲವ್ಯಂ ಜಘಾನ ಹ ।
ತತಃ ಕ್ರುದ್ಧೋ ಮಹಾಬಾಹುಃ ಪ್ರದ್ಯುಮ್ನೋ ಯಾದವೇಶ್ವರಃ ।
ಆಜಘ್ನೇ ಮುಷ್ಟಿನಾ ತಂ ತು ಜರಾಸಂಧಸ್ಯ ಪಶ್ಯತಃ ॥ - ಹರಿವಂಶ(ವ್ಯಾ.)

ಎಂದರ್ಥ ; ಪಂಚೇಷು – ಪಂಚಬಾಣ – ಪಂಚಾವಯವ – [೧]ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಹಾಗೂ ನಿಗಮನ – ಮನ್ಮಥ.

೩. ಶ್ರೀಕೃಷ್ಣನನ್ನು ಎದುರಿಸಿ ಬಂದ ಏಕಲವ್ಯನು ವೇದವಿರುದ್ಧವಾದ ಕುತರ್ಕದಂತೆ ಹೇಯ-ನಾಗಿದ್ದನು ಎಂಬ ಇಲ್ಲಿಯ ಸೂಚನೆಯೂ ಗಮನಾರ್ಹ.

೪. ಮಣಿಮಂತನೆಂಬ ದೈತ್ಯನೇ ಏಕಲವ್ಯನಾಗಿ ಜನಿಸಿ ಬಂದಿದ್ದ ವಿವರವು[೨] ತಾತ್ಪರ್ಯ-ನಿರ್ಣಯದಲ್ಲಿ (೧೪/೪೦)ಉಕ್ತವಾಗಿದೆ : ಅಂಶೇನ ಯೋ ಭುವಮಗಾನ್ಮಣಿಮಾನಿತಿ ಸ್ಮ ಸ ಕ್ರೋಧತಂತ್ರಕಗಣೇಷ್ವಧಿಪೋ ನಿಷಾದಃ.

### ಶ್ರೀಕೃಷ್ಣನಿಂದ ಪ್ರದ್ಯುಮ್ನನ ಸೃಷ್ಟಿ

ರಣೇ ಕ್ಷಣೇನಾಂಗಜಮುಜ್ಜ್ವಲಾಂಗೈಃ
ಸಮಂ ಸಮುತ್ಪಾದ್ಯ ಸ ಸರ್ವಶಕ್ತಿಃ ।
ಭವಾನುಭಾವಾಗತತತ್ಪಿತೃತ್ವ-
ಪ್ರಥಾಂ ಶ್ರಿತಾತ್ಮೀಯಗತಿರ್ವ್ಯತಿ ಸ್ಮ ॥ ೭ ॥

ಹೊಳೆಯುವ ಅವಯವಗಳಿಂದ ಕೂಡಿದ ಪ್ರದ್ಯುಮ್ನನನ್ನು ಯುದ್ಧದಲ್ಲಿ ಕ್ಷಣಮಾತ್ರದಲ್ಲಿ ಸೃಷ್ಟಿಮಾಡಿ, ತನ್ನನ್ನು ಆಶ್ರಯಿಸಿದವರಿಗೆ ಆಸರೆ ನೀಡುವ, ಸರ್ವಶಕ್ತನಾದ ಆ ಶ್ರೀಕೃಷ್ಣನು ಶಿವನ ಅನುಗ್ರಹದಿಂದ ಪ್ರದ್ಯುಮ್ನನಿಗೆ ತಾನು ತಂದೆ ಎನಿಸಿಕೊಳ್ಳುವಂತಾಯಿತು ಎಂಬ ಪ್ರತೀತಿಯನ್ನು ಖಂಡಿಸಿದ.

ವಿ. : ೧. ಶ್ರೀಕೃಷ್ಣ ಹೀಗೆ ಕೈಲಾಸಯಾತ್ರೆ ಮೊದಲಾದ ಪ್ರಸಂಗಗಳಿಗಿಂತ ಮುಂಚಿತವಾಗಿಯೇ ಪ್ರದ್ಯುಮ್ನನನ್ನು ಅದ್ಭುತವಾದ ರೀತಿಯಲ್ಲಿ ಸೃಷ್ಟಿಸುವ ಮೂಲಕ ಅವನು ಶಿವನ ಅನುಗ್ರಹದಿಂದ ಸಂತತಿಯನ್ನು ಪಡೆದ ಎಂಬ ಪ್ರಸಿದ್ಧಿಯನ್ನು ಖಂಡಿಸಿದ ಎಂದರ್ಥ.

೨. ಶಿವನನ್ನು ಕುರಿತು ಶ್ರೀಕೃಷ್ಣ ತಪಸ್ಸು ಮಾಡಿ ಅವನ ಅನುಗ್ರಹದಿಂದ ಪ್ರದ್ಯುಮ್ನನನ್ನು ಪಡೆದ ಎಂಬುದು ಹರಿವಂಶ ಮೊದಲಾದ ಗ್ರಂಥಗಳಲ್ಲಿ ಮೇಲ್ನೋಟಕ್ಕೆ ಕಂಡುಬರುವ ಅಂಶ.

---

೧. ಪಕ್ಷವಚನಂ ಪ್ರತಿಜ್ಞಾ – ಯಥಾ ಪರ್ವತೋಽಗ್ನಿಮಾನಿತಿ । ಸಾಧನತ್ವಖ್ಯಾಪಕವಿಭಕ್ತ್ಯಂತಂ ಲಿಂಗವಚನಂ ಹೇತುಃ – ಯಥಾ ಧೂಮವತ್ವಾದಿತಿ । ಸಮ್ಯಗ್ವ್ಯಾಪ್ತಿಪ್ರದರ್ಶನಪೂರ್ವಕಂ ದೃಷ್ಟಾಂತಾಭಿಧಾನಮುದಾಹರಣಂ .... । ದೃಷ್ಟಾಂತೇ ಪ್ರಸಿದ್ಧಾಬಿನಾಭಾವಸ್ಯ ಲಿಂಗಸ್ಯ ಪಕ್ಷೇ ವ್ಯಾಪ್ತಿಖ್ಯಾಪಕಂ ವಚನಮುಪನಯಃ .... । ಪುನಃ ಸಹೇತುಕಂ ಪಕ್ಷವಚನಂ ನಿಗಮನಂ – ಯಥಾ ತಸ್ಮಾತ್ ಪರ್ವತೋಽಗ್ನಿಮಾನಿತಿ । – ಪ್ರಮಾಣಪದ್ಧತಿ

೨.''ಇದಂ ಭದ್ರೇ ತ್ವಯಾ ಗೋಪ್ಯಂ ಪಾತ್ಯಂ ಸ್ವಾರ್ಥೈಕಸಿದ್ಧಯೇ''★ ಉಮಾಂ ಪ್ರತಿ ಮಹೇಶ್ವರವಚನಮ್ (೭೧/೨.೦೬)ಇತಿ ವಚನಾದಂತರೇಽವಧಾರಯ । –ವ್ಯಾ.

★ ಪದ್ಮಪುರಾಣಾಂತರ್ಗತ ವಾಸುದೇವಸಹಸ್ರನಾಮಸ್ತೋತ್ರ

ವಾಸ್ತವವಾಗಿ ಬಹುವರ್ಷಗಳಷ್ಟು ಮುಂಚಿತವಾಗಿಯೇ ಹೀಗೆ ಪ್ರದ್ಯುಮ್ನನನ್ನು ಸ್ವತಃ [1]ಸೃಷ್ಟಿ-ಮಾಡಿ ತೋರಿಸುವ ಮೂಲಕ ಕೈಲಾಸಯಾತ್ರೆ ಪ್ರಸಂಗವು ಕೇವಲ ಅಸುರಜನಮೋಹಕ ಎಂಬ ತತ್ತ್ವವನ್ನು ತೋರಿಸಿದ ಎಂದು ಭಾವ.

ಬ್ರಹ್ಮಾಪರೋಕ್ಷದಿಂದ ಜಗತ್ತು ಬಾಧ್ಯವಲ್ಲ

ಈಶಾಪರೋಕ್ಷಸಮಕಾಲಮಶೇಷವಿದ್ಯಾ-
ಬಾಧ್ಯಂ ಪ್ರಸಾಧ್ಯ ಸಕಲಂ ತದಿದಂ ದ್ವಿಷತ್ಸು।
ಶ್ರೀಶಾರ್ಙ್ಗಪಾಣಿಚರಣೇ ನಿಖಿಲಂ ಸಮರ್ಪ್ಯ
ಸ್ವೋಪಾರ್ಜಿತಂ ಸಮಲಭಂತ ಮಹಾಪ್ರಸಾದಮ್ ॥ ೮ ॥

ಶ್ರೀಕೃಷ್ಣನ ಭಟರು ಬ್ರಹ್ಮಾಪರೋಕ್ಷವಾಗುತ್ತಿದ್ದಂತೆ ಮಾಯಾ ಅವಿದ್ಯಾ ಮೊದಲಾದವುಗಳಿಂದ ಸಕಲವಿಶ್ವದಲ್ಲಿನ ಇದಾವುದೂ ಬಾಧಿತವಾಗದು ಎಂದು ವಿರೋಧಿಗಳಿಗೆ ಚೆನ್ನಾಗಿ ನಿರೂಪಿಸಿಕೊಟ್ಟು ಶ್ರೀಶಾರ್ಙ್ಗಪಾಣಿಯಾದ ಶ್ರೀಕೃಷ್ಣನ ಚರಣದಲ್ಲಿ ತಾವು ಸಂಪಾದಿಸಿದ ಸಮಸ್ತವನ್ನೂ ಸಮರ್ಪಿಸಿ ಅವನ ಪರಮಾನುಗ್ರಹಕ್ಕೆ ಪಾತ್ರರಾದರು.

ವಿ. : ೧. ಬ್ರಹ್ಮಾಪರೋಕ್ಷವಾಗುತ್ತಲೇ ಸಕಲವಿಶ್ವವೂ ಬಾಧಿತವಾಗುವುದು ಎಂಬುದು ಮಾಯಾವಾದಿಗಳ ನಿಲುವು. ಆದರೆ ಪರಬ್ರಹ್ಮನಾದ ಶ್ರೀಕೃಷ್ಣನ ದರ್ಶನದ ನಂತರವೂ ಸಕಲ ವಸ್ತುಗಳು ಮುಂಚಿನಂತೆಯೇ ಇರುವವೆಂಬುದನ್ನು ತೋರಿಸುವ ಮೂಲಕ ಅದು ಸರಿಯಲ್ಲ ಎಂಬ ವಿಚಾರವನ್ನು ಶ್ರೀಕೃಷ್ಣನ ಭೃತ್ಯರು ಸಾಧಿಸಿದರು ಎಂದರ್ಥ.

೨. ಇಲ್ಲಿ [2]ಮಹಾಪ್ರಸಾದ ಎಂದರೆ ಮೋಕ್ಷ ಎಂದರ್ಥ.

ಜಾತ್ಯುತ್ತರದಂತಹ ಜರಾಸಂಧನ ಗದಾಪ್ರಹಾರ

ಸಂಪ್ರೇಷ್ಯ ಶೈವೀಂ ಪ್ರಥಮಂ ಗದಾಂ ಯೋ
ಜರಾಭಿಧಾನಾಂ ಜನನೀಂ ಜಘಾನ।
ಜಾತ್ಯುತ್ತರೇಣೈವ ಪರಾಜಿತೋಽಭೂ-
ದಾತ್ಮೋದಿತವ್ಯಾಹತಿಹೇತುನಾಽಸೌ ॥ ೯ ॥

---

೧. ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥
ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು।
ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರಾಧರಾ ॥
ಇತಿ ವಾಕ್ಯಮೃತಂ ಕರ್ತುಮಭಿಪ್ರಾಯಂ ವಿಜಜ್ಞುಷೀ।
ಪ್ರೀತ್ಯರ್ಥಂ ವಾಸುದೇವಸ್ಯ ರುಗ್ಮಿಣೀ ವಾಕ್ಯಮಬ್ರವೀತ್ ॥
ಜಾತೇಽಪಿ ಪುತ್ರೇ ಪುತ್ರಾರ್ಥಂ ಸಾ ಹಿ ವೇದ ಮನೋಗತಮ್।
ಪುತ್ರೋ ಮೇ ಬಲವಾನ್ ದೇವಃ ಸ್ಯಾತ್ ಸರ್ವಾಸ್ತ್ರವಿದುತ್ತಮಃ ॥ -ಮ.ಭಾ.ತಾ.ನಿ.(೨೨/೧೫೩.-೧೫೬)

೨. ಮಹಾಪ್ರಸಾದಂ ಮೋಕ್ಷಲಕ್ಷಣಪ್ರಸಾದಂ ಸಮಲಭಂತ। -ವ್ಯಾ.

ಶಿವ ನೀಡಿದ್ದ ಗದೆಯನ್ನು ಪ್ರಯೋಗಿಸಿ, ಆ ಜರಾಸಂಧನು ಜರೆ ಎಂಬ ಹೆಸರಿನ ತನ್ನ ತಾಯಿಯನ್ನು ಮೊದಲೇ ಕೊಂದ; ಇದರಿಂದಾಗಿ, ತಾನೇ ಹೇಳಿದ ಸ್ವವ್ಯಾಹತಿ ಎಂಬ ಹೇತುವಿನಿಂದ ಜಾತ್ಯುತ್ತರದಿಂದ ಹೇಗೋ ಹಾಗೆ ಪರಾಭವ ಹೊಂದಿದ.

ವಿ. : ೧. [೧]ಜಾತಿ ಎಂದರೆ ಸ್ವವ್ಯಾಹತಿ ಎಂದರ್ಥ. ಜರಾಸಂಧ ಶಿವನು ನೀಡಿದ್ದ ಗದೆಯಿಂದ ತನ್ನ ತಾಯಿಯನ್ನೇ ಕೊಂದಿದ್ದರಿಂದ ಅವನು ಕೃಷ್ಣನನ್ನು ಎದುರಿಸಿದ ಪ್ರಸಂಗ ಜಾತ್ಯುತ್ತರದಂತೆ [೨]ಸೋಲಿಗೆ ಕಾರಣವಾಯಿತು ಎಂದರ್ಥ.

೨. [೨]ಜಾತಿ ಎಂಬುದರ ಲಕ್ಷಣ ಪ್ರಮಾಣಲಕ್ಷಣ ಅದರ ಟೀಕೆ, ವಿಷ್ಣುತತ್ತ್ವನಿರ್ಣಯ ಹಾಗೂ ಅದರ ಟೀಕೆ ಹಾಗೂ ಪ್ರಮಾಣಪದ್ಧತಿ ಗ್ರಂಥಗಳಲ್ಲಿ ನಿರೂಪಿತವಾಗಿದೆ.

### ಆರೂ ನಿಗ್ರಹಸ್ಥಾನಗಳಿಂದ ಪರಾಭವಗೊಂಡ ಜರಾಸಂಧನ ಸೇನೆ

**[೪]ಸಂವಾದಂ ಕಿಲ ಕೇಽಪಿ ಬಭ್ರುರಪರೇಽನುಕ್ತಿಂ[೫] ಶರೈಸ್ತಾಡಿತಾ**
**ನಿರ್ಯಾಂತಃ ಕಟಕಾನ್ನಿರುಂಧತಿ ನಿಜೇ ಕ್ರುದ್ಧಾ[೬] ವಿರೋಧಂ ಪರೇ ।**

---

೧. ಜನಕಸ್ಯಾತ್ಮಯೋ ಜಾತಿಃ ಸ್ವಸ್ಯ ವಾಽನ್ಯಸ್ಯ ವಾ ಭವೇತ್ । ಸ್ವಸ್ಯಾರ್ಥಸ್ಯ ಪ್ರಕಾಶನಾತ್ ॥
-ತತ್ತ್ವನಿರ್ಣಯೋದ್ಧೃತಬ್ರಹ್ಮತರ್ಕವಚನ

೨. ಕ್ಷುಬ್ಧೋಽತಿಕೋಪವಶತಃ ಸ್ವಗದಾಮಮೋಘಾಂ ದತ್ತಾಂ ಶಿವೇನ ಜಗೃಹೇ ಶಿವಭಕ್ತವಂದ್ಯಃ ।
ಶೈವಾಗಮಾಖಿಲವಿದತ್ರ ಚ ಸುಸ್ಥಿರೋಽಸೌ ಚಿಕ್ಷೇಪ ಯೋಜನಶತಂ ಸ ತು ತಾಂ ಪರಸ್ಮೈ ॥
ಅರ್ವಾಕ್ ಪಪಾತ ಚ ಗದಾ ಮಧುರಾಪ್ರದೇಶಾತ್ ಸಾ ಯೋಜನೇನ ಯದಿಮಂ ಪ್ರಜಗಾದ ಪೃಷ್ಟಃ ।
ಏಕೋತ್ತರಾಮಪಿ ಶತಾಚ್ಛತಯೋಜನೇತಿ ದೇವರ್ಷಿರತ್ರ ಮಧುರಾಂ ಭಗವತ್ಪ್ರಿಯಾರ್ಥೇ ॥
ಶಕ್ತಸ್ಯ ಚಾಪಿ ಹಿ ಗದಾಪ್ರತಿಘಾತನೇ ತು ಶುಶ್ರೂಷಣಂ ಮದುಚಿತಂ ತ್ವಿತಿ ಚಿಂತಯಾನಃ ।
ವಿಷ್ಣೋರ್ಮುನಿಃ ಸ ನಿಜಗಾದ ಹ ಯೋಜನೋನಂ ಮಾರ್ಗಂ ಪುರೋ ಭಗವತೋ ಮಗಧೇಶಪೃಷ್ಟಃ ॥
ಕ್ಷಿಪ್ತಾ ತು ಸಾ ಭಗವತೋಽಥ ಗದಾ ಜರಾಖ್ಯಾಂ ತತ್ಸಂಧಿನೀಮಸುಭಿರಾಶು ವಿಯೋಜ್ಯ ಪಾಪಾಮ್ ।
ಮತ್ಯಾಶನೀಂ ಭಗವತಃ ಪುನರಾಜ್ಞಯೈವ ಯಾತಾ ಗಿರೀಶಸದನಂ ಮಗಧಂ ವಿಸೃಜ್ಯ ॥
ರಾಜಾ ಸ್ವಮಾತೃತ ಉತೋ ಗದಯಾ ಚ ಹೀನಃ ಕ್ರೋಧಾತ್ ಸಮಸ್ತನೃಪತೀನಭಿಸನ್ನಿಪಾತ್ಯ ।
ಅಕ್ಷೌಹಿಣೀತ್ರ್ಯಧಿಕವಿಂಶಯುತೋಽತಿವೇಲಂ ದರ್ಪೋದ್ಧತಃ ಸಪದಿ ಕೃಷ್ಣಪುರೀಂ ಜಗಾಮ ॥
-ಮ.ಭಾ.ತಾ.ನಿ. (೧೪/೧೧-೧೫)

೩.. ಸ್ವವ್ಯಾಘಾತಾದಿಕಮುತ್ತರಂ ಜಾತಿರಿತಿ ಹಿ ಜಾತಿಲಕ್ಷಣಮ್ ಅಯಮಪಿ ಸ್ವಗದಯಾ ಸ್ವಮಾತರಮೇವ ಹಿಂಸಿತವಾನಿತಿ ಜಾತಿರೂಪನಿಗ್ರಹಸ್ಥಾನಂ ಪ್ರಾಪ್ಯೈವೇತಿ ಭಾವಃ । -ವ್ಯಾ.
ಜಾತಿರ್ನ ಮೇಯೇ ಮಾನಾಪೇಕ್ಷೇತ್ಯಾದಿಕಾ । ಮೇಯೇ ಮಾನಾಪೇಕ್ಷಾಽಸ್ತೀತಿ ತೇನೈವ ನ್ಯಾಯೇನ ಸಿದ್ಧತ್ವಾತ್ ಮಾನವಿರೋಧಶ್ಚ । - ಪ್ರಮಾಣಲಕ್ಷಣ

೪. ವಿಪ್ರತಿಪನ್ನಪ್ರಮೇಯಾಂಗೀಕಾರಃ ಸಂವಾದಃ । -ಪ್ರಮಾಣಪದ್ಧತಿ

೫. ಪರಬೋಧನಾರ್ಥಸ್ಯಾವಶ್ಯಂ ವಕ್ತವ್ಯಸ್ಯಾವಚನಮನುಕ್ತಿಃ । -ಪ್ರಮಾಣಪದ್ಧತಿ

೬. ಯೋಗ್ಯತಾಭಾವೋ ವಿರೋಧಃ । -ಪ್ರಮಾಣಪದ್ಧತಿ

**ಧ್ವಸ್ತಾಃ ಕೇಚಿದಸಂಗತಿಂ[೧] ನಿಜಜನ್ಯೈಃ ಸರ್ವೇ ಜಯೈರ್ನ್ಯೂನತಾ[೨]-**
**ಮಾಧಿಕ್ಯಂ[೩] ಹತಿಭಿಃ ಪರಾಜಿತಮಭೂದಿತ್ಥಂ ತದದ್ವೈತಿವತ್ ॥ ೧೦ ॥**

ಜರಾಸಂಧನ ಸೇನೆಯಲ್ಲಿ ಕೆಲವರು ಸಂವಾದವನ್ನು ಹೊಂದಿದರು. ಬಾಣಗಳಿಂದ ಹೊಡೆಯಲ್ಪಟ್ಟ ಇತರರು ಅನುಕ್ತಿಯನ್ನು ಹೊಂದಿದರು. ಸೇನಾಮುಖದಿಂದ ಹೊರಹೊರಡುತ್ತಾ ತಮ್ಮವರಿಂದಲೇ ತಡೆಯಲ್ಪಟ್ಟ ಕೆಲವರು ಕೋಪಗೊಂಡವರಾಗಿ, ಎದುರಿಸಿ ನಿಂತರು. ಪೆಟ್ಟುತಿಂದ ಬೇರೆ ಕೆಲವರು ತಮ್ಮ ಜನರೊಂದಿಗೆ ಸಂಗತಿಯನ್ನು ತೊರೆದರು. ಎಲ್ಲರಿಗೂ ಜಯ ಎಂಬುದಂತು ನ್ಯೂನವೇ ಆಗಿತ್ತು. ಪೆಟ್ಟಿನ ಸಂಖ್ಯೆಯಲ್ಲಿ ಆಧಿಕ್ಯವುಂಟಾಯಿತು; ಹೀಗೆ ಅವನ ಸೇನೆಯು ಅದ್ವೈತಿಯಂತೆ ಪರಾಭವಗೊಂಡಿತು.

ವಿ. : ೧. ಸಂವಾದ, ಅನುಕ್ತಿ , ವಿರೋಧ, ಅಸಂಗತಿ, ನ್ಯೂನ ಹಾಗೂ ಅಧಿಕ ಎಂಬ ಆರೂ ಕಥೆಯಲ್ಲಿ ನಿಗ್ರಹಸ್ಥಾನಗಳು. ಪ್ರಸ್ತುತ ಶ್ರೀಕೃಷ್ಣನೊಂದಿಗೆ ನಡೆದ ಜರಾಸಂಧನ ಯುದ್ಧದಲ್ಲಿ ಪರಾಜಯಕ್ಕೆ ಕಾರಣವಾಗುವ ಈ ಆರೂ ಸಹ ಉಂಟಾದವು ಎಂಬುದನ್ನು ಅಪೂರ್ವರೀತಿಯಲ್ಲಿ ಇಲ್ಲಿ ವಿವರಿಸಲಾಗಿದೆ.

೨. [೪]ಕೆಲವರು ಕೃಷ್ಣನ ಹಿರಿಮೆಯನ್ನು ಒಪ್ಪಿ ಶರಣಾದ್ದರಿಂದ ಅವರದು ಸಂವಾದವಾಯಿತು. ಕೆಲವರು ಕೃಷ್ಣನ ಬಾಣಗಳ ಪೆಟ್ಟಿಗೆ ಮೃತರಾದ್ದರಿಂದ ಮಾತುನಿಂತವರಾಗಿ ಅನುಕ್ತಿಗೊಳಗಾದರು; [೫]ಸೋತು ಓಡತೊಡಗಿದ ಕೆಲವರಿಗೆ ಅವರ ಕಡೆಯವರೇ ಅಡ್ಡಿಮಾಡಿದಾಗ ಅವರಲ್ಲಿ ಪರಸ್ಪರ ವಿರೋಧ ಉಂಟಾಗತೊಡಗಿತು. ಸೋತ ಕೆಲವರು ತಮ್ಮ ಜನರ ಸಂಗತಿಯನ್ನು ತೊರೆದದ್ದು ಅಸಂಗತಿ ಎನ್ನಿಸಿತು. ಜಯ ಎಂಬುದು ಅವರಲ್ಲಿ ಇರಲಿಲ್ಲವಾದ್ದರಿಂದ ನ್ಯೂನತೆಯು ಕಂಡುಬಂದಿತು. ಪೆಟ್ಟಿನ ಸಂಖ್ಯೆಯಲ್ಲಿ ಆಧಿಕ್ಯವು ಉಂಟಾಯಿತು ಎಂದರ್ಥ.

೩.. [೬]ಶ್ರೀಕೃಷ್ಣ-ಜರಾಸಂಧರ ಯುದ್ಧವನ್ನು ವಾದಿ ಪ್ರತಿವಾದಿಗಳ ವಾಗ್ಯುದ್ಧಕ್ಕೆ ಹೋಲಿಸುವ ಮೂಲಕ ಇಲ್ಲಿ ಶಾಸ್ತ್ರಪ್ರಕ್ರಿಯೆಗಳ ಪರಿಚಯ ಹಾಗೂ ಅವುಗಳ ಪ್ರಾಯೋಗಿಕವಾದ ಮಹತ್ತ್ವ ಎರಡೂ ಸಹ ಸ್ಫುಟವಾಗುವಂತಿವೆ ಎಂಬುದು ಗಮನಾರ್ಹ ; ಕಟಕ - ಸೇನಾಮುಖ.

---

೧. ಆಕಾಂಕ್ಷಾವಿರಹೋಽಸಂಗತಿಃ। -ಪ್ರಮಾಣಪದ್ಧತಿ

೨. ಅವಶ್ಯವಕ್ತವ್ಯಸ್ಯ ಏಕದೇಶಮಾತ್ರವಚನಂ ನ್ಯೂನಮ್। ಸನ್ನಿಧ್ಯಭಾವವಿಶೇಷಃ। - ಪ್ರಮಾಣಪದ್ಧತಿ

೩.. ಆಕಾಂಕ್ಷಿತಸ್ಯೈವಾನ್ಯೇನ ಕೃತಕಾರ್ಯಸ್ಯ ವಚನಂ ಆಧಿಕ್ಯಮ್। - ಪ್ರಮಾಣಪದ್ಧತಿ

೪. ''ಕೇಚಿನ್ಮಾಧವಮಾಸಾದ್ಯ ವಿಜಯಸ್ವೇತಿ ಚಾಬ್ರುವನ್'' ಇತಿ ಭಾಗವತೋಕ್ತ ಪ್ರಕಾರೇಣ। -ವ್ಯಾ.

೫. ಸಂವಾದಾನುಕ್ತೀ ವಿರೋಧಾಸಂಗತೀ ನ್ಯೂನಾಧಿಕ್ಯೇ ಚೇತಿ ಷಡೇವ ನಿಗ್ರಹಸ್ಥಾನಾನೀತ್ಯಾಚಾರ್ಯಪಕ್ಷಮ-ವಲಂಬ್ಯೇತ್ಥಮುಕ್ತಮಿತಿ ಧ್ಯೇಯಮ್। -ವ್ಯಾ.

ವಿರೋಧಾಸಂಗತೀ ನ್ಯೂನಾಧಿಕೇ ಸಂವಾದಾನುಕ್ತೀ ಇತಿ ಷಡೇವ ನಿಗ್ರಹಸ್ಥಾನಾನಿ। -ಪ್ರಮಾಣಪದ್ಧತಿ

೬. ವಾದೇ ತು ಆಕಾಂಕ್ಷಾವಿರಹೋಽಸಂಗತಿರಿತ್ಯುಕ್ತಲಕ್ಷಣಕಾಕಾಂಕ್ಷಾವಿರಹರೂಪಾಸಂಗತಿಲಕ್ಷಣಂ ನಿಗ್ರಹ-ಸ್ಥಾನಮಿತ್ಯರ್ಥಃ। -ವ್ಯಾ.

### ನಿರಾಕಾರಮತದ ದುರಂತ

**ಸಂಚೂರ್ಣಿತಾಂಗಾಃ ಸಮರೇ ಶರೌಘೈಃ**
**ಸಂಭಿನ್ನಪಾದೋದರಕಂಠಹಸ್ತಾಃ ।**
**ವಿರೇಜುರಶ್ನಂತ ಇವಾಸೃಗಬ್ಧೌ**
**ಫಲಂ ನಿರಾಕಾರಮತಸ್ಯ ತಾವತ್ ॥ ೧೧ ॥**

ಯುದ್ಧದಲ್ಲಿ ಶ್ರೀಕೃಷ್ಣನ ಬಾಣಗಳ ಪ್ರವಾಹಗಳಿಂದ ಜರಾಸಂಧನ ಸೈನಿಕರ ಅವಯವಗಳು ಪುಡಿಯಾದವು. ಕಾಲುಗಳು, ಉದರ, ಕಂಠ ಹಾಗೂ ಕೈಗಳು ತುಂಡಾದವು. ರಕ್ತದ ಸಮುದ್ರದಲ್ಲಿ ಬಿದ್ದು ತಾವು ಹರಡಿದ್ದ ಬ್ರಹ್ಮನು ನಿರಾಕಾರನು ಎಂಬ ಮತದ ಫಲವನ್ನು ಅನುಭವಿಸುವವರಂತೆ ಅವರು ಆಗ ಮೆರೆದರು.

ವಿ. : ೧. ಬ್ರಹ್ಮನು ನಿರಾಕಾರ ಎಂಬುದು ಅದ್ವೈತಿಗಳ ವಾದ. ಜರಾಸಂಧನ ಸೇನೆ ಅಂತಹುದೇ ಆಗಿತ್ತು. ಆ ಸೇನೆಯಲ್ಲಿ ಜನ ಕೈಕಾಲುಗಳನ್ನು ಕಳೆದುಕೊಳ್ಳುವ ಮೂಲಕ ವಿರೂಪರಾದರು. ಅದು ಬ್ರಹ್ಮನು ನಿರಾಕಾರ ಎಂಬುದಾಗಿ ಅವರು ನಂಬಿದ್ದ ಮತಕ್ಕೆ ತಕ್ಕುದಾದ ಫಲವೇ ಆಗಿತ್ತು ಎಂದರ್ಥ.

೨. ಬ್ರಹ್ಮನು ನಿರಾಕಾರ ಎಂದು ವಾದಿಸುವವರು ತಮ್ಮ ಅವಯವಗಳನ್ನು ಕಳೆದುಕೊಳ್ಳುವ ಮೂಲಕ ಅಪಾರ ದುಃಖಕ್ಕೀಡಾಗುವರು ಎಂಬುದು ಇಲ್ಲಿಯ ತತ್ತ್ವ.

೩.. ಉಪಾಸನೆಗೆ ತಕ್ಕ ಫಲ ಎಂಬುದು ಇಲ್ಲಿಯ ಮುಖ್ಯಪ್ರಮೇಯ :

ತಂ ಯಥಾ ಯಥಾ ಉಪಾಸತೇ ತಥೈವ ಭವತಿ । – ಉಪನಿಷತ್

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ॥ – ಗೀತಾ (೪/೧೧)

### ಕೃಷ್ಣಮೇಘವು ಶತ್ರುಸೇನೆಯನ್ನು ಧೂಳಿಪಟ ಮಾಡಿದ ಬಗೆ

**ಸ್ವಾಂಗಾಚ್ಛಾದಿತಶತ್ರುಶೌರ್ಯತರಣಿಃ ಶಾರ್ಙ್ಗೇಂದ್ರಚಾಪೋಜ್ಜ್ವಲಃ**
**ಶ್ರೀದೇವೀಸ್ಥಿರವಿದ್ಯುದದ್ಭುತರಥಶ್ರೀಮತ್ಸಮೀರೇರಿತಃ ।**
**ಕಾವ್ಯೋದ್ಗೀತಕಥಃ ಶರೌಘಕರಕಾವರ್ಷೈಃ ಸ ಕೃಷ್ಣಾಂಬುದೋ**
**ರಾಜನ್ಯಾನನಪಾಣಿಪಾದಕಮಲವ್ರಾತಾನಲಾವೀತ್ ಕ್ಷಣೇ ॥ ೧೨ ॥**

ತನ್ನ ಚತುರಂಗಸೇನೆ ಎಂಬ ದೇಹದಿಂದ ಶತ್ರುಗಳ ಶೌರ್ಯವೆಂಬ ಸೂರ್ಯನನ್ನು ಮರೆಮಾಡಿದ, ಶಾರ್ಙ್ಗವೆಂಬ ಕಾಮನಬಿಲ್ಲಿನಿಂದ ಹೊಳೆಯುವ, ಮಹಾಲಕ್ಷ್ಮಿ ಎಂಬ ಸ್ಥಿರವಾದ ಮಿಂಚಿನಿಂದ ಕೂಡಿದ, ಅದ್ಭುತ ರಥರೂಪದ ಕಾಂತಿಯುಕ್ತವಾದ

ಶ್ರೀವಾಯುದೇವರಿಂದ ಪ್ರೇರಿತವಾದ, ಕಾವ್ಯಗಳು ಕೊಂಡಾಡುವಂತಹ ಮಹಿಮೆಯ ಆ ಶ್ರೀಕೃಷ್ಣನೆಂಬ ಮೇಘವು ಬಾಣಗಳ ಪ್ರವಾಹವೆಂಬ ಆಲಿಕಲ್ಲುಗಳ ಸುರಿಮಳೆಯಿಂದ ಕ್ಷತ್ರಿಯರ ಮುಖ, ಹಸ್ತ ಹಾಗೂ ಪಾದಗಳೆಂಬ ಕಮಲಗಳ ಸಮುದಾಯವನ್ನು ಒಂದೇ ಕ್ಷಣದಲ್ಲಿ ತುಂಡರಿಸಿತು.

ವಿ. : ೧. ಶ್ರೀಕೃಷ್ಣನೇ ಮೇಘ, ಅದರಿಂದ ಶತ್ರುಗಳ ಪರಾಕ್ರಮವೆಂಬ ಸೂರ್ಯನ ಮರೆಮಾಚುವಿಕೆ, ಶಾರ್ಙ್ಗವೆಂಬ ಧನುಸ್ಸೇ ಕಾಮನಬಿಲ್ಲು, ಮಹಾಲಕ್ಷ್ಮಿಯೇ ಸ್ಥಿರವಾದ ಮಿಂಚು, ವಾಯುದೇವರೇ ಅದ್ಭುತ ರಥ, ಬಾಣಗಳ ಪ್ರವಾಹವೇ ಆಲಿಕಲ್ಲುಗಳು, ಕ್ಷತ್ರಿಯರ ಮುಖ, ಹಸ್ತ, ಪಾದಗಳೇ ಕಮಲಗಳು ಎಂಬ ಇಲ್ಲಿಯ ರೂಪಕಾಲಂಕಾರ ಅತ್ಯಂತ ಮನೋಜ್ಞವಾದುದು.

೨. ಇದೇ ರೀತಿ ಶ್ರೀಕೃಷ್ಣನನ್ನು ಶ್ಲೋಕ ೯/೩೨ರಲ್ಲೂ ಮೇಘದೊಂದಿಗೆ ಹೋಲಿಸಿರುವುದನ್ನು ಗಮನಿಸಬೇಕು.

೩. ಮೋಡ ಅಡ್ಡ ಬಂದಾಗ ಸೂರ್ಯ ಕಾಣದೇ ಹೋಗುವಂತೆ ಶ್ರೀಕೃಷ್ಣನ ಅದ್ಭುತ ಆಕೃತಿಯಿಂದ ಶತ್ರುಗಳ ಶೌರ್ಯವೆಂಬ ಸೂರ್ಯ ಮರೆಯಾದ ಎನ್ನುವ ಮೂಲಕ ಶ್ರೀಕೃಷ್ಣನ ಅಪಾರ ಮಹಿಮೆ ಸೂಚಿತ.

೪. ಮೋಡದಲ್ಲಿ ಬೆಳಗುವ ಮಿಂಚು ಕ್ಷಣಕಾಲದ್ದು; ಆದರೆ ಶ್ರೀದೇವಿ ಸದಾ ಹೊಳೆಯುವ ಮಿಂಚು ಎಂಬಲ್ಲಿ ಅವರ ವಿಶೇಷತೆ ನಿರೂಪಿತವಾಗಿದೆ. ಸಮೀರನೇ ಸಾರಥಿ ಎನ್ನುವ ಮೂಲಕ ಶ್ರೀಕೃಷ್ಣನನ್ನು ಹೊಂದಿಸುವ ಹಿರಿಮೆ ವಾಯುದೇವರದು ಮಾತ್ರ ಎನ್ನುವ ವಿಶೇಷಾಂಶ ಸೂಚಿತ.

೫. ಸಾಮಾನ್ಯವಾಗಿ ಮುಖ, ಕೈ, ಪಾದಗಳನ್ನು ಕಮಲ ಎಂದು ವರ್ಣಿಸುವುದು ಕಾವ್ಯದ ವೈಖರಿ. ಅದರ ಹಿನ್ನೆಲೆಯಲ್ಲಿ ಜರಾಸಂಧನ ಅನುಯಾಯಿಗಳಾಗಿ ಬಂದಿದ್ದ ರಾಜರ ಮುಖಾದಿಗಳನ್ನು ಕಮಲ ಎಂದಿರುವುದು ಉಚಿತ.

೬. ಆಲಿಕಲ್ಲಿನ ಭಾರೀಮಳೆಗೆ ಕಮಲಗಳು ಮುದುಡುವಂತೆ ಶ್ರೀಕೃಷ್ಣಮೇಘದಿಂದ ಶತ್ರುಗಳ ಪರಾಕ್ರಮವು ಕುಂದಿ ಅವರ ಮುಖ ಮೊದಲಾದವುಗಳು ಕಾಂತಿಹೀನವಾಗುತ್ತಿದ್ದವು ಎಂದು ಭಾವ.

೭. ನೀಲಮೇಘಶ್ಯಾಮನಾದ ಶ್ರೀಕೃಷ್ಣನನ್ನು ನೀಲಮೇಘ ಎಂದು ನಿರೂಪಿಸುವ ಇಲ್ಲಿಯ ರೂಪಕ ಅತ್ಯಂತ ಸಮುಚಿತ ; ಕರಕ – ಆಲಿಕಲ್ಲು ;

೮. ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕೆಯ ಈ ಕೆಳಗಿನ ಶ್ಲೋಕದ ಭಾವವನ್ನು ಇದರಲ್ಲಿ ಕಾಣಬಹುದು :

**ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ ।**
**ಕೃಷ್ಣಮೇಘಃ ಕೃಪಾವೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥** – ತಾತ್ಪರ್ಯಚಂದ್ರಿಕಾ

೯. ಶ್ರೀವಾದಿರಾಜರು ತಮ್ಮ ತೀರ್ಥಪ್ರಬಂಧದಲ್ಲಿ ಶ್ರೀವೇದವ್ಯಾಸರೂಪವನ್ನು ಮೇಘ ಎಂದು ಕರೆದಿರುವುದು ಸಹ ಇಲ್ಲಿ ಗಮನಾರ್ಹವಾಗಿದೆ.

ಭವಧರ್ಮಭವಾರ್ತಿಘ್ನಃ ಸ ಮತಃ ಸೇವ್ಯತಾಂ ಸತಾ ॥
ಕೃಷ್ಣದ್ವೈಪಾಯನಘನೋ ಯತ್ರಗಾದ್ವಾಯುವರ್ತ್ಮನಾ ॥ - ತೀರ್ಥ ಪ್ರಬಂಧ ೧/೨೭

## ಶತ್ರುಸೇನೆಯ ಮೇಲೆ ಬಲರಾಮ ಮಾಡಿದ ಅದ್ಭುತ ಕೃಷಿ

**ಮುಹುಃ ಸಮಾಕೃಷ್ಯ ರಣಾವನೌ ರಿಪೂನ್**
**ಕಠೋರಮೃತ್ಪಿಂಡಸಮಾನ್ ಪ್ರಚೂರ್ಣಯನ್ ।**
**ಹಲಾಯುಧಃ ಸನ್ಮುಸಲೋ ಹ್ಯಸಾಧಯ-**
**ದ್ಯಶೋಽಂಕುರಾನ್ ಶೌರ್ಯಮನೋಜ್ಞಬೀಜಜಾನ್ ॥ ೧೩ ॥**

ಹಲಾಯುಧನಾದ ಬಲರಾಮ ಯುದ್ಧಭೂಮಿಯಲ್ಲಿ ಶತ್ರುಗಳನ್ನು ಮತ್ತೆ ಮತ್ತೆ ಸೆಳೆದ; ಉತ್ತಮ ಮುಸಲಾಯುಧನಾದ ಅವನು ಗಟ್ಟಿಯಾದ ಮಣ್ಣಿನ ಹೆಂಟೆಯಂತಿದ್ದ ಅವರನ್ನು ಚೆನ್ನಾಗಿ ಪುಡಿಗೈದ; ಶೌರ್ಯವೆಂಬ ಮನೋಜ್ಞವಾದ ಬೀಜದಿಂದ ಹೊರಹೊಮ್ಮುವಂತಹ ಯಶಸ್ಸು ಎಂಬ ಅಂಕುರಗಳನ್ನು ಬೆಳೆಸಿಯೇ ತೋರಿಸಿದ.

ವಿ. : ೧. ಶ್ರೀಕೃಷ್ಣನನ್ನು ಅನುಕರಿಸಿ, ಬಲರಾಮನೂ ಸಹ ಶತ್ರುಗಳನ್ನು ಮಣ್ಣ ಹೆಂಟೆಗಳಂತೆ ಪುಡಿಗಯ್ಯುತ್ತಾ ಅಪಾರವಾದ ಕೀರ್ತಿಗೆ ಪಾತ್ರನಾದ ಎಂದರ್ಥ. ಶೌರ್ಯವೆಂಬ ಹಿರಿಮೆ ಇಲ್ಲವಾದಲ್ಲಿ ಸತ್ಕೀರ್ತಿಯು ಲಭಿಸದು ಎಂಬ ಭಾವವೂ ಇಲ್ಲಿದೆ.

೨. ಈ ಶ್ಲೋಕದಲ್ಲಿನ ಬಲರಾಮನ ಕೃಷಿಗೆ ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣ ತರಿಸಿದ ಮಳೆಯೂ ನೆರವಾಯಿತು.

೩.. ತೀರ್ಥಪ್ರಬಂಧದಲ್ಲಿನ ಕುರುಕ್ಷೇತ್ರವರ್ಣನೆಯ ಪ್ರಸಂಗದ ಈ ಕೆಳಗಿನ ಶ್ಲೋಕವೂ ಇದೇ ಭಾವವನ್ನು ಹೊಂದಿರುವುದು ಗಮನಾರ್ಹ:

ಶ್ರೀಭೀಮಸೇನಕರಕಂಜಗದಾಪ್ರಹಾರೈಶ್ಚೂರ್ಣೀಕೃತಾಶ್ವಗಜಪತ್ತಿಮೃದುಗ್ರಪಿಂಡಮ್ ।
ಉತ್ಪಾತಪಾತ್ಯಶರಸಸ್ಯಪದಂ ಕುರೂಣಾಂ ಕ್ಷೇತ್ರಂ ದಿಶಾಸು ವಿತತಾನ ಸುಕೀರ್ತಿಧಾನ್ಯಮ್ ॥
- ತೀರ್ಥಪ್ರಬಂಧ (೨/೩೮)

## ಶ್ರೀಕೃಷ್ಣನನ್ನು ಮುತ್ತಿದ ಶಿಶುಪಾಲಾದಿಗಳು

**ತತಶ್ಚೈದ್ಯಃ ಕ್ರುದ್ಧಃ ಕರಧೃತಧನುರ್ಮಾರ್ಗಣಗಣಾನ್**
**ವಿಭೌ ವರ್ಷನ್ ವಿಷ್ಣೋಃ ಪ್ರಶಿಖವಿಶಿಖೈರ್ಗ್ಲಾನಿಮಗಮತ್ ।**
**ತದಾ ಭೂಪಾಃ ಕೋಪೋಜ್ಜ್ವಲಿತವದನಾಃ ಕಾರ್ಮುಕಕರಾಃ**
**ಪರೀಯುಃ ಪಾಪಾಂಧಾಃ ಪರಮಪುರುಷಂ ಪಾವಕಮಿವ ॥ ೧೪ ॥**

ಬಳಿಕ ಕೆರಳಿದ ಶಿಶುಪಾಲನು ಕೈಯಲ್ಲಿ ಧನುಸ್ಸನ್ನು ಹಿಡಿದು ಬಾಣಗಳ ರಾಶಿಯನ್ನು ಶ್ರೀಕೃಷ್ಣನ ಮೇಲೆ ಸುರಿಸುತ್ತಾ ಮಹಾವಿಷ್ಣುವಾದ ಅವನ ಕೂರಲಗಿನ ಬಾಣಗಳಿಂದ ಗ್ಲಾನಿಗೊಳಗಾದ. ಆಗ ರಾಜರು ಕೋಪದಿಂದ ಉರಿಯುವ ಮುಖವುಳ್ಳವರಾಗಿ, ಕೈಯಲ್ಲಿ ಬಿಲ್ಲುಗಳನ್ನು ಹಿಡಿದು, ಪಾಪದಿಂದ ಕುರುಡಾದವರಾಗಿ ಪರಮಪುರುಷನಾದ ಶ್ರೀಕೃಷ್ಣನನ್ನು ಬೆಂಕಿಯನ್ನು ಹೇಗೋ ಹಾಗೆ ಸುತ್ತುವರೆದರು.

ವಿ. : ೧. ರಾಜರ ಗುಂಪು ಶ್ರೀಕೃಷ್ಣನನ್ನು ಆಕ್ರಮಿಸಲೆಂದು ಸುತ್ತುವರೆದಿದ್ದು ಬೆಂಕಿಯ ಸುತ್ತ ಪಾಪಗಳ ರಾಶಿ ನೆರೆದಂತೆ ಇದ್ದಿತು ಎಂದು ಭಾವ; ಬೆಂಕಿಯನ್ನು ಮುತ್ತುವ ಪತಂಗಗಳು ಸುಟ್ಟು ಬೂದಿಯಾಗುವಂತೆ ಶ್ರೀಕೃಷ್ಣನನ್ನು ಆಕ್ರಮಿಸಿದ ಅವರೆಲ್ಲ ಹತರಾದರು ಎಂದರ್ಥ.

೨. ಪಾಪನಾಶಕನಾದ ಶ್ರೀಕೃಷ್ಣನನ್ನು ಸುತ್ತುವರೆದ ಆ ಪಾಪಿಗಳು ಸುಟ್ಟು ಬೂದಿಯಾದರು ಎಂಬುದು ಮಥಿತಾರ್ಥ.

### ಶ್ರೀಕೃಷ್ಣದ್ವೇಷಿಗಳಿಗಾದ ದುರ್ಗತಿ

ಕೃಷ್ಣೋಽಪಿ ವಕ್ಷಸಿ ಮುಖೇ ದ್ವಿಷತಾಂ ಲಲಾಟೇ
ಲಗ್ನೈಃ ಶರೈರ್ಲಸಿತಲಾಂಛನಚಿತ್ರಪತ್ರೈಃ ।
ಸ್ವಧ್ಯಾನಕೀರ್ತನಸದೂರ್ಧ್ವಲಲಾಮಶೂನ್ಯಾನ್
ಸಾರ್ಥಾಭಿಧಾನಕೃತ ಶೋಣಿತಶೋಣಗಾತ್ರಾನ್ ॥ ೧೫ ॥

ಶ್ರೀಕೃಷ್ಣನಾದರೋ ದ್ವೇಷಿಗಳ ಎದೆಯಲ್ಲಿ, ಮುಖದಲ್ಲಿ, ಹಣೆಯಲ್ಲಿ ನೆಟ್ಟ ಹೊಳೆಯುವ ಲಾಂಛನಗಳಿಂದ ಚಿತ್ರವಾದ ಪತ್ರಗಳಿಂದ ಕೂಡಿದ ತನ್ನ ಬಾಣಗಳಿಂದ ತನ್ನ ಧ್ಯಾನ, ಕೀರ್ತನ ಹಾಗೂ ಉತ್ತಮ ಊರ್ಧ್ವಪುಂಡ್ರಗಳಿಂದ ರಹಿತರಾಗಿದ್ದ ಅವರನ್ನು ಅರ್ಥವತ್ತಾದ ಹೆಸರಿನವರಾಗುವಂತೆ ರಕ್ತರಂಜಿತದೇಹದವರನ್ನಾಗಿ ಮಾಡಿದ.

ವಿ : ೧. ಊರ್ಧ್ವಪುಂಡ್ರ ಮೊದಲಾದ ವೈಷ್ಣವಚಿಹ್ನೆಗಳನ್ನು ಧರಿಸದವರು ಶ್ರೀಕೃಷ್ಣನಿಂದ ಹಾಗೆ ವಿಶಿಷ್ಟರೀತಿಯಲ್ಲಿ ಹತರಾದರು ಎಂದರ್ಥ ; ಶೋಣಿತ – ರಕ್ತ ; ಶೋಣ – ಕೆಂಪು.

೨. ಹೃದಯದಲ್ಲಿ ಧ್ಯಾನ, ಮುಖದಲ್ಲಿ ನಾಮೋಚ್ಚಾರಣೆ, ಲಲಾಟದಲ್ಲಿ ಊರ್ಧ್ವಪುಂಡ್ರಗಳನ್ನು ಧರಿಸಿರುವುದು ವೈಷ್ಣವರ ಕರ್ತವ್ಯ ಎಂಬ ಸೂಚನೆಯು ಇಲ್ಲಿದೆ; ಅಭಿಧಾ – ಹೆಸರು.

೩.. ಸಾವಿಗೆ ಸಿದ್ಧರಾದ ರಾಜರು ಇನ್ನು ಪ್ರಜೆಗಳನ್ನು ರಂಜಿಸಲಾಗದಂತಾಗಿದ್ದರೂ ರಕ್ತರಂಜಿತವಾದ ದೇಹವುಳ್ಳ ಕಾರಣದಿಂದಾದರೂ ತಮ್ಮ ರಾಜ ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡರು ಎಂಬುದು ಇಲ್ಲಿಯ ಭಾವ.

ಶ್ರೀಕೃಷ್ಣಬಲರಾಮರಿಂದ ಪರಾಜಿತರಾದ ಶಿಶುಪಾಲಜರಾಸಂಧರು

ಮಾದ್ಯಂತಂ ಶಿಶುಪಾಲಮೇತ್ಯ ಮಧುಜಿಚ್ಛಾರ್ಙ್ಗಚ್ಯುತೈಃ ಸಾಯಕೈ-
ಶ್ಚಾಪಚ್ಛತ್ರಕಿರೀಟಕೇತುರಹಿತಂ ಚಕ್ರೇ ಶಿಶೂನಾಂ ಪ್ರಭುಮ್ ।
ರಾಮಶ್ಚೂರ್ಣಿತವಾಜಿಸಾರಥಿರಥಂ ಕೃತ್ವಾ ಜರಾಸಂಹಿತ-
ಪ್ರಾಯಂ ಮಾಗಧಮಾಗೃಹೀತಮಪಿ ತಂ ವಾಚಾ ಮುಮೋಚ ಪ್ರಭೋಃ ॥೧೬॥

ಉನ್ಮತ್ತನಾದ ಶಿಶುಪಾಲನನ್ನು ಸಮೀಪಿಸಿ ಮಧುಸೂದನನಾದ ಶ್ರೀಕೃಷ್ಣ ಶಾರ್ಙ್ಗಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಬಿಲ್ಲು, ಛತ್ರ , ಕಿರೀಟ ಹಾಗೂ ಧ್ವಜಗಳು ಇಲ್ಲದವನನ್ನಾಗಿಸಿ ಅವನನ್ನು ಶಿಶುಗಳ ಪ್ರಭುವನ್ನಾಗಿಯೇ ಮಾಡಿದ. ಬಲರಾಮನು ಜರಾಸಂಧನ ಕುದುರೆ, ಸಾರಥಿ, ರಥಗಳನ್ನು ಪುಡಿಗೈದು, ಮುಪ್ಪಡರಿದವನನ್ನಾಗಿ ಮಾಡಿ, ಶ್ರೀಕೃಷ್ಣನ ಮಾತಿನಿಂದಾಗಿ ಬಿಟ್ಟುಬಿಟ್ಟ

ವಿ : ೧. ಶಿಶುಪಾಲನು ಶ್ರೀಕೃಷ್ಣನ ಹೊಡೆತಕ್ಕೆ ತನ್ನ ಹೆಸರಿಗೆ ತಕ್ಕಂತೆ ಕೇವಲ ಶಿಶುಗಳಿಗೆ ಪಾಲಕ ಎನ್ನುವ ಅಪಹಾಸಕ್ಕೆ ಗುರಿಯಾಗುವಂತಾದ ಎಂದೂ, ಬಲರಾಮನ ಹೊಡೆತಕ್ಕೆ ಸಿಕ್ಕ ಜರಾಸಂಧ ತನ್ನ ಹೆಸರಿಗೆ ತಕ್ಕಂತೆ ಮುಪ್ಪಡರಿದವನೇ ಆದ ಎಂದೂ ಭಾವ.

೨. ಶಿಶುಪಾಲನ ಧ್ವಜ ಮೊದಲಾದವುಗಳನ್ನು ಕತ್ತರಿಸುವ ಮೂಲಕ ಕೃಷ್ಣ ಅವನು ರಾಜಚಿಹ್ನೆಗಳಿಗೆ ಯೋಗ್ಯನಲ್ಲ ಎಂಬುದನ್ನು ಸಾರಿದ ಎಂಬ ಸೂಚನೆಯು ಇಲ್ಲಿದೆ.

ಮರಳಿ ಬಂದ ಜರಾಸಂಧ

ಪುನಶ್ಚ ತಾವತೀಂ ಸೇನಾಂ ಸಂಪಾದ್ಯ ಸ ತು ದುರ್ಮತಿಃ ।
ಮಧುರಾಂ ವಿಧುರೀಕರ್ತುಂ ಪರಂ ಪಾರಮುಪಾಗಮತ್[೧] ॥ ೧೭ ॥

ಮತ್ತೆ ಅದೇ ಪ್ರಮಾಣದ ಸೇನೆಯನ್ನು ಸಂಪಾದಿಸಿಕೊಂಡು, ಆ ಕೇಡುಬುದ್ಧಿಯ ಜರಾಸಂಧನು ಮಧುರಾಪಟ್ಟಣವನ್ನು ಒಡೆಯನಿಲ್ಲದ್ದನ್ನಾಗಿ ಮಾಡಲೆಂದು ಯಮುನಾ-ನದಿಯ ಮತ್ತೊಂದು ತೀರಕ್ಕೆ ಆಗಮಿಸಿದ.

---

೧. ತೈಃ ಪ್ರೇರಿತಾ ನೃಪತಯಃ ಪಿತರಶ್ಚ ತೇಷಾಂ ಸಾಕಂ ಬೃಹದ್ರಥಸುತೇನ ಹರೇಃ ಸಕಾಶಮ್ ।
ಯುದ್ಧಾಯ ಜಗ್ಮುರಮುನಾಽಷ್ಟದಶೇಷು ಯುದ್ಧೇಷ್ವತ್ಯಂತಭಗ್ನಬಲದರ್ಪಮದಾ ನಿವೃತ್ತಾಃ ॥
-ಮ.ಭಾ.ತಾ.ನಿ (೧೪/೮೩.)

ದಶ ಚಾಷ್ಟೌ ಚ ಸಂಗ್ರಾಮಾನೇವಮತ್ಯಂತದುರ್ಮದಃ ।
ಯದುಭಿರ್ಮಾಗಧೋ ರಾಜಾ ಚಕ್ರೇ ಕೃಷ್ಣಪುರೋಗಮೈಃ ॥
ಸರ್ವೇಷ್ವೇತೇಷು ಯುದ್ಧೇಷು ಯಾದವೈಃ ಸ ಪರಾಜಿತಃ ।
ಅಪಕ್ರಾಂತೋ ಜರಾಸಂಧಃ ಸ್ವಲ್ಪಸೈನ್ಯೈರ್ಬಲಾಧಿಕಃ ॥
ನ ತದ್ಬಲಂ ಯಾದವಾನಾಂ ವಿಜಿತಂ ಯದನೇಕಶಃ ।
ತತ್ ತು ಸನ್ನಿಧಿಮಾಹಾತ್ಮ್ಯಂ ವಿಷ್ಣೋರಂಶಸ್ಯ ಚಕ್ರಿಣಃ ॥ – ವಿಷ್ಣುಪುರಾಣ (೫/೨೨/೧೧೨-೧೧೪)

ವಿ : ಜರಾಸಂಧ ಪ್ರತಿಬಾರಿಯೂ ಸಹ ಇಪ್ಪತ್ಮೂರು ಅಕ್ಷೋಹಿಣೀ ಸೇನೆಯೊಂದಿಗೆ ಶ್ರೀಕೃಷ್ಣನನ್ನು ಎದುರಿಸಿ ಬರುತ್ತಿದ್ದ ಎನ್ನುವ ವಿವರ ಶ್ರೀಮದ್ಭಾಗವತಾದಿಪುರಾಣಗಳಲ್ಲಿಯೂ, ಮಹಾಭಾರತತಾತ್ಪರ್ಯನಿರ್ಣಯದಲ್ಲೂ ಬಂದಿದೆ. ಹೀಗೆ ಅವನು ಬಂದದ್ದು, ಬಂದು ಸೋತದ್ದು ಒಟ್ಟು೧೮ ಬಾರಿ.

### ಪುಣ್ಯನದಿಯ ಬಳಿ ಜರಾಸಂಧನ ಪಾಪಕಾರ್ಯ

**ಅಪಿ ಪುಣ್ಯನದೀತೀರಮುಪವ್ರಜ್ಯ ಸ ಮಾಗಧಃ ।**
**ಅಮೂಮುದದ್ಗಿಯಮಾನೋ ವಿಮುಗ್ಧಪ್ರಕೃತಿರ್ಹಿ ಸಾ ॥ ೧೮ ॥**

ಯಮುನೆಯಂತಹ ಪುಣ್ಯನದಿಯ ತೀರಕ್ಕೆ ಬಂದಿದ್ದವನಾಗಿದ್ದರೂ ಸಹ ಆ ಜರಾಸಂಧನು ಬಂದಿಗಳಿಂದ ಹೊಗಳಿಸಿಕೊಳ್ಳುತ್ತಾ ಸಂಭ್ರಮಿಸಿದ; ಅದು ಮೂರ್ಖರ ಸ್ವಭಾವವೇ ಆಗಿದೆಯಲ್ಲವೆ!

ವಿ : ೧. ಯಮುನಾ ನದಿಯಂತಹ ಪುಣ್ಯನದಿಯ ಬಳಿ ಇದ್ದರೂ ಜರಾಸಂಧನಿಗೆ ಸ್ನಾನಾದಿ-ಗಳಿಂದ ಅದರ ಸದುಪಯೋಗ ಪಡೆಯುವ ಬುದ್ಧಿ ಬರಲಿಲ್ಲ ; ಆಗಲೂ ಅವನಿಗೆ ತನ್ನ ಹೊಗಳಿಕೆಯಷ್ಟೇ ಪ್ರಿಯವಾಗಿತ್ತು ಎನ್ನುವ ಮೂಲಕ ಪುಣ್ಯನದಿಯ ಪ್ರಯೋಜನವನ್ನು ಪಡೆಯದ ಅಂತಹವರ ರೀತಿ ಅವರ ಸ್ವಭಾವದಲ್ಲೇ ಅಡಗಿರುವ ದೋಷ ಎಂಬ ತತ್ತ್ವ ಇದರಿಂದ ಸೂಚಿತ; ಇಲ್ಲಿ 'ಮೂಢರು' ಎಂದರೆ ಮಿಥ್ಯಾಜ್ಞಾನಿಗಳು[1] ಎಂದರ್ಥ.

೨. ಜರಾಸಂಧ ಹಾಗೆ ಮರಳಿ ಆಕ್ರಮಣ ನಡೆಸಿದ್ದು ಆ ಬಳಿಕ ಮೂರನೆಯ ತಿಂಗಳಿನಲ್ಲಿ[2].

### ಸೂರ್ಯಾಸ್ತದ ವರ್ಣನೆ

**ಕುಹಕಸ್ಯ ಕುಬುದ್ಧಿಂ ತಾಮಭಿವೀಕ್ಷ್ಯೇವ ಭಾಸ್ಕರಃ ।**
**ಕುಪಿತಸ್ತದ್ವಿಘಾತಾರ್ಥಂ ಪರದೇಶಮಪೀಪದತ್ ॥ ೧೯ ॥**

ವಂಚಕನ ಆ ದುರ್ಬುದ್ಧಿಯನ್ನು ಕಂಡೋ ಎಂಬಂತೆ ಕೆರಳಿದ ಸೂರ್ಯ ಅದನ್ನು ಬಗ್ಗುಬಡಿಯಲೋ ಎಂಬಂತೆ ಮತ್ತೊಂದು ದೇಶಕ್ಕೆ ತೆರಳಿದ.

ವಿ : ಸೂರ್ಯನು ಅಸ್ತಂಗತನಾದ ಎಂದರ್ಥ; 'ಪರದೇಶಮಪೀಪದತ್' ಎಂಬ ಇಲ್ಲಿಯ ಮಾತಿನಿಂದ ಸೂರ್ಯನು ಅಸ್ತಂಗತನಾಗುವುದು ಎಂದರೆ ಬೇರೆ ದೇಶಕ್ಕೆ ತೆರಳುವುದು ಎಂಬ

---

೧. ವಿಮುಗ್ಧಾನಾಂ ಮಿಥ್ಯಾಜ್ಞಾನಿನಾಮ್ । - ಪ್ರಾ.

೨. ತೃತೀಯೇ ಮಾಸಿ ಭೂಯಶ್ಚ ರಾಜಾ ಬಾರ್ಹದ್ರಥೋ ಬಲೀ ।
ದಿವಾನಿಶಂ ತಪ್ಯಮಾನಃ ಸ್ಮರನ್ ಪೂರ್ವಪರಾಭವಮ್ ॥ -ಭಾಗ.(೧೦/೫೦/೧)

ವಿಶೇಷಾರ್ಥ ತಿಳಿಯುವುದು. ಇದು ಇಂದಿನ ವೈಜ್ಞಾನಿಕಚಿಂತನೆಗೂ ಅನುಗುಣವಾದ ನಿರೂಪಣೆಯಾಗಿದ್ದು ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದ ಈ ಕೆಳಗಿನ ವಚನಕ್ಕೆ ಸಂವಾದಿಯೂ ಆಗಿದೆ:

ಸದೈವ ಮೋದರೂಪಿಣೋ ಮುದೋಕ್ತಿರಸ್ಯ ಲೌಕಿಕೀ ।
ಯಥೋದಯೋ ರವೇರ್ಭವೇತ್ ಸದೋದಿತಸ್ಯ ಲೋಕತಃ ॥ (೧೩/೧೩೭)

ಶ್ರೀಜಯತೀರ್ಥರ ಷಟ್ಪ್ರಶ್ನೋಪನಿಷದ್ಭಾಷ್ಯಟೀಕೆಯಲ್ಲಿಯ ಈ ಕೆಳಗಿನ ಮಾತೂ ಇದೇ ಅರ್ಥವನ್ನು ತಿಳಿಸುತ್ತದೆ– 'ಅತ್ರಾಸ್ತಮಯೇಽಪಿ ದೇಶಾಂತರೇ ಪೃಥಗ್ದರ್ಶನಾದಿನಾಽಽದಿತ್ಯರಶ್ಮೀನಾ- ಮುದಯಾಸ್ತಮಯಯೋರವಿಶೇಷಾತ್'.

ಪುನಃ ಯುದ್ಧಕ್ಕೆ ತೆರಳಿದ ಶ್ರೀಕೃಷ್ಣ

ಅಥೋಷಃಸಮಯೇ [೧]ಶೌರೀ ರಥಮಾರುಹ್ಯ ನಿರ್ಯಯೌ ।
ಸವಿತೇವ ಸಹ ಸ್ವೀಯೈರ್ನಿಶಾಚರಬಲಾಂತಕಃ ॥ ೨೦ ॥

ಬಳಿಕ ಉಷಃಕಾಲದಲ್ಲಿ ನಿಶಾಚರರ ಬಲವನ್ನು ಅಳಿಸುವಂತಹ ಶೌರಿಯಾದ ಶ್ರೀಕೃಷ್ಣನು ತನ್ನವರೊಂದಿಗೆ ರಥವನ್ನೇರಿ ಸೂರ್ಯನಂತೆ (ಯುದ್ಧಕ್ಕೆ) ತೆರಳಿದ.

ವಿ : ೧. ಸೂರ್ಯೋದಯವಾಗುತ್ತಿದ್ದಂತೆ ಗೂಬೆ ಮೊದಲಾದ ಪ್ರಾಣಿಗಳು, ಕಳ್ಳಕಾಕರರು ತಮ್ಮ ಚಟುವಟಿಕೆಗಳನ್ನು ಕಳೆದುಕೊಳ್ಳುವಂತೆ ಶ್ರೀಕೃಷ್ಣನ ಆಗಮನದಿಂದ ರಕ್ಕಸರ ಸೊಕ್ಕು ಅಡಗುತ್ತಿದ್ದಿತು ಎಂದರ್ಥ.

೨. ಅಗಾಧವಾದ ಕತ್ತಲೆಯು ಒಬ್ಬ ಸೂರ್ಯನಿಂದಲೇ ನಾಶ ಹೊಂದುವಂತೆ ಒಬ್ಬ ಶ್ರೀಕೃಷ್ಣ- ನಿಂದಲೇ ಜರಾಸಂಧನ ಸೇನೆ ನಾಶ ಹೊಂದುವುದು ಎಂಬ ಪ್ರಮೇಯವೂ ಇದರಿಂದ ಸೂಚಿತ.

ಶ್ರೀಕೃಷ್ಣನು ಪ್ರಕಟಿಸಿದ ರಾಜನೀತಿ

ರಾಜನೀತಿಂ ಪ್ರಕಟಯನ್ ರಾಜೀವನಯನಸ್ತ್ರಿಧಾ ।
ಅಮೇಯವಿಭವಃ ಸ್ವೀಯಾಮಯೂಯುಜದನೀಕಿನೀಮ್ ॥ ೨೧ ॥

ಅರಿಯಲಾಗದ ಮಹಿಮೆಯ ಪುಂಡರೀಕಾಕ್ಷನಾದ ಶ್ರೀಕೃಷ್ಣನು ರಾಜನೀತಿಯನ್ನು ತೋರಿಸಿಕೊಡಲೆಂದು ತನ್ನ ಸೇನೆಯನ್ನು ಮೂರು ಭಾಗವಾಗಿ ಯೋಜಿಸಿದನು.

---

೧. ಶೌರಿಃ ಶೂರಜನೇಶ್ವರಃ - ವಿಷ್ಣುಸಹಸ್ರನಾಮ

ವಿ : [೧]ಅಲ್ಪಸೇನೆಯ ರಾಜನು, ದೊಡ್ಡ ಸೇನೆಯ ಶತ್ರುವನ್ನು ಉಪಾಯದಿಂದ ಗೆಲ್ಲಬೇಕು ಎಂಬ ರಾಜನೀತಿಯನ್ನು ತಿಳಿಸಿಕೊಡಲೆಂದು ಶ್ರೀಕೃಷ್ಣ ಹಾಗೆ ತನ್ನ ಸೇನೆಯನ್ನು ಮೂರುಭಾಗವಾಗಿ ವಿಂಗಡಿಸಿಕೊಂಡು ಜರಾಸಂಧನ ಮೇಲೆ ಆಕ್ರಮಣ ನಡೆಸಿದ ಎಂದರ್ಥ.

### ಶ್ರೀಕೃಷ್ಣನ ವೈಭವದ ಪ್ರಯಾಣಮುಹೂರ್ತ

**ಸೂರ್ಯೇಣೋದಯಶೈಲಮೂರ್ಧ್ನಿ ಲಸತಾ ಶೌರ್ಯೋನ್ನತಿಂ ಶ್ರೀಪತೇ-**
**ಸ್ತತ್ಪೋಷ್ಯೋದಯಮಂಬುಜೈರ್ಮಧುಕರೈಸ್ತದ್ವಂದಿನಾಂ ಸಂಪದಮ್ ।**
**ಧ್ವಸ್ತೈಃ ಸಂತಮಸೈಶ್ಚ ತಾಮಸದಶಾಂ ನೀಡೇ ಕ್ವಣದ್ಭಿಃ ಖಗೈ-**
**ರ್ವೇಶ್ಮಾಂತಃ ಪರವೈಭವಂ ಪ್ರಕಟಯನ್ ಸ ಸ್ಯಾನ್ಮುಹೂರ್ತೋ ಮುದೇ ॥೨೨॥**

ಆ ಸಮಯದಲ್ಲಿ ಉದಯಪರ್ವತದ ಶಿಖರದಲ್ಲಿ ಕಂಗೊಳಿಸಿದ ಸೂರ್ಯನು ಶ್ರೀಕೃಷ್ಣನ ಅಪಾರ ಶೌರ್ಯವನ್ನು ಸೂಚಿಸುತ್ತಿದ್ದ; ಅರಳಿದ ಕಮಲಗಳು ಆ ಶ್ರೀಕೃಷ್ಣನ ಭಕ್ತರ ಅಭ್ಯುದಯವನ್ನು ಸಾರುತ್ತಿದ್ದವು; ದುಂಬಿಗಳು ಅವನನ್ನು ಕೊಂಡಾಡುವವರ ಸಂಪತ್ತನ್ನು ಸೂಚಿಸುತ್ತಿದ್ದವು; ಅಳಿದ ಕತ್ತಲೆ ತಾಮಸರಿಗೊದಗುವ ಗತಿಯನ್ನು ಸೂಚಿಸುತ್ತಿತ್ತು; ಗೂಡುಗಳಲ್ಲಿ ಧ್ವನಿಗಯ್ಯುತ್ತಿದ್ದ ಪಕ್ಷಿಗಳು ಮನೆಯೊಳಗಿನ ಶತ್ರುಗಳ ಸನ್ನಾಹವನ್ನು ಪ್ರಕಟಿಸುತ್ತಿದ್ದವು. ಇಂತಹ ಆ ಮುಹೂರ್ತವು ನಲಿವಿಗೆ ಕಾರಣವಾಗಲಿ.

ವಿ : ೧. [೨]ಶ್ರೀಕೃಷ್ಣನು ಕೈಗೊಂಡ ಪ್ರಯಾಣದ ಮುಹೂರ್ತವನ್ನು ಇಲ್ಲಿ ವರ್ಣಿಸಿರುವರು.

೨. ಶ್ರೀಕೃಷ್ಣನ ಪ್ರಯಾಣಕಾಲಕ್ಕೆ ಸೂರ್ಯನು ಉದಿಸುತ್ತಿದ್ದ; ಕಮಲಗಳು ಅರಳುತ್ತಿದ್ದವು; ವಂದಿಮಾಗಧರು ಸ್ತುತಿಸುತ್ತಿದ್ದರು; ಕತ್ತಲೆಯು ಮರೆಯಾಗುತ್ತಿದ್ದಿತು; ಗೂಡುಗಳಲ್ಲಿ ಪಕ್ಷಿಗಳು ಧ್ವನಿಗಯ್ಯುತ್ತಿದ್ದವು ಎಂದರೆ ಇಂತಹ ಮುಹೂರ್ತದಲ್ಲಿನ ಪ್ರಯಾಣ ಅತ್ಯಂತ ಶುಭಕರ ಎಂದರ್ಥ ; ನೀಡ - ಗೂಡು ; ವೇಶ್ಮ - ಗೃಹ.

೩.. ಅದು ಹೇಗೆ ಶುಭಕರ ಎನ್ನುವುದನ್ನು ಕ್ರಮವಾಗಿ ತಿಳಿಸುವುದೂ ಸಹ ಇಲ್ಲಿಯ ವೈಶಿಷ್ಟ್ಯ. ಆಗ ಉದಿಸಿದ ಸೂರ್ಯ ಶ್ರೀಕೃಷ್ಣನ ಅಪಾರ ಶೌರ್ಯಕ್ಕೆ ಸಂಕೇತವಾಗಿದ್ದ, ಅರಳಿದ ಕಮಲಗಳು, ಸಜ್ಜನರ ಅಭ್ಯುದಯಕ್ಕೆ ಸಂಕೇತವಾಗಿದ್ದು, ಧ್ವನಿಗಯ್ಯುತ್ತಿದ್ದ ದುಂಬಿಗಳು ಅವನ ಸ್ತುತಿಪಾಠಕರಿಗೆ ಲಭಿಸುವ ಸಂಪತ್ತನ್ನು ಸೂಚಿಸುತ್ತಿದ್ದವು; ಅಳಿದ ಕತ್ತಲೆಯು ತಾಮಸರಿಗೆ ದೊರೆಯುವ

---

೧. ಸ್ವೀಯಾಂ ಅನೀಕಿನೀಂ ಚಮೂಂ ತ್ರಿಧಾ ಅಗ್ರೇ ಪಾರ್ಶ್ವದ್ವಯೇ ಚಾಯೂಯುಜತ್ ಪ್ರೇಷಿತವಾನಿತ್ಯರ್ಥಃ।
-ವ್ಯಾ.

೨. "ರಾತ್ರೌ ಚೋರಪ್ರಸಂಗೇನ ವಂಚಿತೋಽಸ್ಮಿ ದುರಾತ್ಮನಾ"ಇತಿ। ಭಾಗವತಸ್ಥಜರಾಸಂಧವಚನಸ್ಯಾಪ್ರಾಮಾಣ್ಯ-ಪ್ರದರ್ಶನಾಯ ಶ್ರೀಕೃಷ್ಣಪ್ರಯಾಣಮುಹೂರ್ತಂ ವರ್ಣಯತಿ।

ಅಂಧಂತಮಸ್ಸಿಗೆ ಸಂಕೇತವಾಗಿ, ಗೂಡಿನೊಳಗೆ ಧ್ವನಿಗಯ್ಯುತ್ತಿದ್ದ ಪಕ್ಷಿಗಳು ಶತ್ರುಗಳ ಕುಗ್ಗಿದ ವೈಭವವನ್ನು ಸೂಚಿಸುತ್ತಿದ್ದವು. ಹೀಗೆ ಆ ಮುಹೂರ್ತವು ಅಪೂರ್ವವಾಗಿದ್ದಿತು ಎಂದು ಭಾವ.

### ಗಾಯತ್ರಿಯಂತಹ ಶ್ರೀಕೃಷ್ಣಸೇನೆ

**ತ್ರಿಷು ಸ್ಥಾನೇಷು ವಿಸ್ತೀರ್ಣಾ ಮಧುಸೂದನವಾಹಿನೀ ।**
**ತ್ರಿಪದೀ ವೇದಮಾತೇವ ರಿಪುಸೇನಾಮಹನ್ ಕ್ಷಣಾತ್ ॥ ೨೩ ॥**

ಮೂರು ಸ್ಥಳಗಳಲ್ಲಿ ವಿಶಾಲವಾಗಿ ಹರಡಿದ್ದ ಮಧುಸೂದನನಾದ ಶ್ರೀಕೃಷ್ಣನ ಸೇನೆಯು ಮೂರು ಪಾದಗಳ ವೇದಮಾತೆಯಾದ ಗಾಯತ್ರಿಯಂತೆ ಕ್ಷಣಮಾತ್ರದಲ್ಲಿ ಶತ್ರುಸೇನೆಯನ್ನು ಕೊಂದುಹಾಕಿತು.

ವಿ : ೧. ಮೂರು ಸ್ಥಳಗಳಲ್ಲಿ ಎಂದರೆ ಮುಂಭಾಗ ಹಾಗೂ ಎರಡು ಪಾರ್ಶ್ವಗಳಲ್ಲಿ ಎಂದರ್ಥ.

೨. ವೇದಮಾತೆಯಾದ ತ್ರಿಪದೀ ಎಂದರೆ ಗಾಯತ್ರೀಮಂತ್ರ ಎಂದರ್ಥ : **ವೇದಮಾತಾ ತು ಗಾಯತ್ರೀ; ಗಾಯತ್ರೀ ತ್ರಿಪದಾ.**

೩. ಸೂರ್ಯಾರ್ಘ್ಯದ ಸಮಯದಲ್ಲಿ ಗಾಯತ್ರೀಯಿಂದ ಅಭಿಮಂತ್ರಿತವಾದ ಜಲವು ಶಸ್ತ್ರಾಸ್ತ್ರವಾಹನ ಸಮೇತರನ್ನಾಗಿ ಮಂದೇಹರೆಂಬ ರಾಕ್ಷಸರನ್ನು ಕೊಂದುಹಾಕುವುದು ಎಂಬುದು [1]ಮಹಾಭಾರತಾದಿಗಳಲ್ಲಿ ಬಂದಿರುವ ವಿವರ. [2]ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣನ ಸೇನೆಯನ್ನು ಗಾಯತ್ರೀಗೆ ಹೋಲಿಸುವ ಮೂಲಕ ಶತ್ರುವಾದ ಜರಾಸಂಧನ ಸೇನೆಯನ್ನು ಸಂಪೂರ್ಣ ನಾಶಗೈದಿತು ಎಂಬ ವಿವರವನ್ನು ತಿಳಿಸಿರುವರು.

೪. ಮುಖ್ಯವಾಗಿ ಇಲ್ಲಿ ಗಾಯತ್ರೀ ಮಂತ್ರವು ಆಸುರೀಶಕ್ತಿಗಳನ್ನು ದಮನ ಮಾಡುವ ಮಹಾಮಂತ್ರ ಎಂಬ ವಿಶೇಷಾಂಶ ನಿರೂಪಿತವಾಗಿದೆ.

೬. ನಾರಾಯಣಾಸ್ತ್ರ, ಬ್ರಹ್ಮಾಸ್ತ್ರಗಳಿಗೆ ವಿಹಿತವಾದ ಮಂತ್ರವು ಈ ಗಾಯತ್ರೀಮಂತ್ರವೇ ಆಗಿದೆ ಎಂಬುದು ಗಾಯತ್ರಿಯ ಶತ್ರುನಾಶಕತ್ವಕ್ಕೆ ದ್ಯೋತಕ.

### ತಾಪತ್ರಯಗಳಂತಹ ಶ್ರೀಕೃಷ್ಣಭಟರ ಬಾಣಗಳು

**ಅಮೂಮುಚನ್ ಶರವ್ರಾತಮಮತೇಷು ಹರೇರ್ಭಟಾಃ ।**
**ಖಲೇಷು ತ್ರಿದಶಾಧೀಶಾ ಜ್ವಲತ್ತಾಪತ್ರಯಂ ಯಥಾ ॥ ೨೪ ॥**

---

೧. ಸಮಾಹಿತೋ ಜಪೇತ್ ತಸ್ಮಾತ್ ಸಾವಿತ್ರ್ಯಾ ಚಾಭಿಮಂತ್ರ್ಯ ಚ ।
ಮಂದೇಹಾನಾಂ ವಿನಾಶಾಯ ರಕ್ಷಸಾಂ ನಿಕ್ಷಿಪೇಜ್ಜಲಮ್ ॥ –ಮಹಾಭಾರತ (ಆಶ್ವ.೯೨)

೨. ತಾ ಏತಾ ಆಪೋ ವಜ್ರೀಭೂತ್ವಾ ತಾನಿ ರಕ್ಷಾಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪತೀತಿ ಶ್ರುತೇಃ । –ವ್ಯಾ.

ದೇವಶ್ರೇಷ್ಠರು ಪ್ರಜ್ವಲಿಸುವ ತಾಪತ್ರಯಗಳನ್ನು ದುರ್ಜನರ ಮೇಲೆ ಹೇಗೋ ಹಾಗೆ ಶ್ರೀಕೃಷ್ಣನ ಸೈನಿಕರು ಶತ್ರುಗಳ ಮೇಲೆ ಬಾಣಗಳ ರಾಶಿಯನ್ನು ಪ್ರಯೋಗಿಸಿದರು.

ವಿ : ೧. ದುರ್ಜನರಿಗೆ ದೇವತೆಗಳು ತಾಪತ್ರಯ ನೀಡುವ ಮೂಲಕ ಹಿಂಸಿಸುವರು ಎಂದರ್ಥ.

೨. ತಾಪತ್ರಯಗಳು ಎಂದರೆ ಮೂರು ತಾಪಗಳು : ೧. ಆಧ್ಯಾತ್ಮಿಕ (ಮನಸ್ಸಿನ ಚಿಂತೆ ಇತ್ಯಾದಿಗಳು), ೨. ಆಧಿಭೌತಿಕ (ದೇಹಕ್ಕೆ ಸಂಬಂಧಿಸಿದ ರೋಗರುಜಿನಗಳು ಇತ್ಯಾದಿ), ಹಾಗೂ ೩. ಆಧಿದೈವಿಕ (ಅತಿವೃಷ್ಟಿ ಅನಾವೃಷ್ಟಿ, ಭೂಕಂಪ, ಕ್ಷಾಮ ಮೊದಲಾದವುಗಳು):

> ತಾಪತ್ರಯೇಣ ಆಧ್ಯಾತ್ಮಿಕಾಧಿದೈವಿಕಾಧಿಭೌತಿಕತಾಪತ್ರಯೇಣ ತಥಾ ಕಾಯಿಕ-ವಾಚಿಕಮಾನಸಿಕಪ್ರಾಪ್ತತಾಪತ್ರಯೇಣ, ಪುತ್ರೇಷಣವಿತ್ತೇಷಣದಾರೇಷಣಜನ್ಯ ತಾಪತ್ರಯೇಣ ವಾ, ಗರ್ಭವಾಸಜನ್ಮಮರಣಾದಿಜನ್ಯತಾಪತ್ರಯೇಣ ವಾ, ಸ್ವರ್ಗಮರ್ತ್ಯನರಕವಾಸಜನ್ಯತಾಪತ್ರಯೇಣ ವಾ, ಭಗವದ್ವಿಸ್ಮರಣದುಷ್ಟಸಂಸ-ರ್ಗಸತ್ಸಂಗರಾಹಿತ್ಯಜನ್ಯತಾಪತ್ರಯೇಣ ವಾ[1] ।

### ಪುಣ್ಯನದಿಯ ತೀರದಲ್ಲಿ ಜರಾಸಂಧನ ಸೇನೆಯ ಪಾಪಕಾರ್ಯ

**ಪ್ರಮತ್ತಾ ಧ್ವಜಿನೀ ಶತ್ರೋರ್ಯಮುನಾತೀರಗಾಽಪ್ಯಭೂತ್ ।**
**ಅಸತಾಂ ಪುಣ್ಯಸರಿದಪ್ಯನಿಷ್ಟಸ್ಯ ಹಿ ಕಾರಣಮ್ ॥ ೨೫ ॥**

ಯಮುನಾತೀರದಲ್ಲಿದ್ದರೂ ಶತ್ರುವಾದ ಜರಾಸಂಧನ ಸೇನೆ ಮೈಮರೆತೇ ಇದ್ದಿತು; ಅಸಜ್ಜನರಿಗೆ ಪುಣ್ಯನದಿಯೂ ಸಹ ಅನಿಷ್ಟಕ್ಕೇ ಕಾರಣವಾಗುವುದಲ್ಲವೆ !

ವಿ : ೧. ಯಮುನಾತೀರದಂತಹ ಪವಿತ್ರಸ್ಥಳದಲ್ಲಿದ್ದರೂ ಜರಾಸಂಧನ ಸೈನಿಕರು ಮದ್ಯ-ಪಾನಾದಿಗಳನ್ನು ಮಾಡಿ ಮೈಮರೆತಿದ್ದರೇ ಹೊರತು ಸ್ನಾನ, ಪೂಜಾದಿಗಳ ಮೂಲಕ ಅದನ್ನು ಸಾರ್ಥಕಪಡಿಸಿಕೊಳ್ಳಲಿಲ್ಲ ಎಂದರ್ಥ.

೨. ಇದರಿಂದ ಅಯೋಗ್ಯರ ಪುಣ್ಯಸಂಪಾದಿಸುವ ತೀರ್ಥಯಾತ್ರೆ ಮೊದಲಾದವುಗಳಲ್ಲೂ ಸಹ ಪಾಪವೃದ್ಧಿಗೆ ಸಾಧನವೇ ಹೊರತು ಪುಣ್ಯವೃದ್ಧಿಗಲ್ಲ ಎಂಬ ತತ್ತ್ವ ಸೂಚಿತ.

೩. ಸಾಮಾನ್ಯವಾಗಿ ಇಂದಿನ ಜನರ ತೀರ್ಥಯಾತ್ರೆಗಳು ತೀರ್ಥಕ್ಷೇತ್ರಗಳನ್ನು ಕಲುಷಿತ-ಗೊಳಿಸುವಂತಹ ಪಾಪಕಾರ್ಯದಲ್ಲಿಯೇ ಪರ್ಯವಸಾನಗೊಳ್ಳುವುದು ಗುಟ್ಟಿನ ಸಂಗತಿ-ಯೇನಲ್ಲ; ಹಾಗೆ ಪುಣ್ಯತೀರ್ಥಗಳಲ್ಲಿ ಮಾಡುವ ಪಾಪಕಾರ್ಯವು ವಜ್ರಲೇಪದಂತೆ ಶಾಶ್ವತ-ವಾಗುವುದು ಎಂದು ತಿಳಿಯಬೇಕು :

> ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ ।
> ಪುಣ್ಯಕ್ಷೇತ್ರೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥

---

೧. ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರ ಕೃಷ್ಣಾಮೃತಮಹಾರ್ಣವವ್ಯಾಖ್ಯಾನ

### ಜರಾಸಂಧನ ಸೇನೆಯ ಮೇಲೆ ಶ್ರೀಕೃಷ್ಣನ ಬಾಣಗಳ ಮಹಾಸಾಗರ

**ಶರ್ರೈರಪಾರೈಸ್ತತ್ಸೈನ್ಯಂ ಚತುರಂಗಂ ಸ ಪೂರಯನ್ ।**
**ಮಮೇಷುವಾರಿಧೇರ್ನಾಲಂ ತವ ಸೇನೇತಿ ಶಂಸತಿ ॥ ೨೬ ॥**

ಶ್ರೀಕೃಷ್ಣ ತನ್ನ ಅಸಂಖ್ಯವಾದ ಬಾಣಗಳಿಂದ ಶತ್ರುವಾದ ಜರಾಸಂಧನ ಚತುರಂಗ ಸೇನೆಯನ್ನೂ ತುಂಬಿಸುತ್ತ, ''ನನ್ನ ಬಾಣಗಳ ಸಾಗರಕ್ಕೆ ನಿನ್ನ ಸೇನೆ ಸಾಲದು'' ಎಂಬ ಸಂದೇಶವನ್ನು ನೀಡಿದನು.

ವಿ : ೧. ಜರಾಸಂಧನ ಸೈನಿಕರಿಗಿಂತ ಶ್ರೀಕೃಷ್ಣ ಪ್ರಯೋಗಿಸಿದ ಬಾಣಗಳ ಸಂಖ್ಯೆಯೇ ಮಿಗಿಲಾಗಿತ್ತು ಎಂಬ ವಿಶೇಷಾಂಶ ಇಲ್ಲಿದೆ; ಇಷು-ಬಾಣ; ಇಷುವಾರಿಧಿ-ಬಾಣಗಳ ಸಮುದ್ರ.

೨. ಶ್ರೀಕೃಷ್ಣನ ಕೈಯಲ್ಲಿನ ಬಾಣ ಎಂಬುದು ವಾಯುದೇವರ ಸಂಕೇತ. ಶ್ರೀಹರಿಯು ತನ್ನ ದ್ವೇಷಿಗಳನ್ನು ಶ್ರೀವಾಯುದೇವರ ಮೂಲಕ ಸದೆಬಡಿಯುವನು ಎಂಬುದಕ್ಕೂ ಇದು ಸೂಚಕ.

೩. ಶ್ರೀಕೃಷ್ಣ ಒಬ್ಬೊಬ್ಬ ಸೈನಿಕನ ಮೇಲೆ ಹತ್ತತ್ತು ಬಾಣಗಳನ್ನೂ, ಒಂದೊಂದು ಕುದುರೆಯ ಮೇಲೆ ನೂರು ನೂರು ಬಾಣಗಳನ್ನೂ, ಒಂದೊಂದು ರಥದ ಮೇಲೆ ೧೦೦೦ ಬಾಣಗಳನ್ನೂ ಒಂದೊಂದು ಆನೆಯ ಮೇಲೆ ೧೦,೦೦೦ ಬಾಣಗಳನ್ನೂ ಪ್ರಯೋಗಿಸಿದ ಎಂಬ ವಿವರ [1]ಶ್ರೀಮದ್ಭಾಗವತ ಮಹಾಪುರಾಣ(೧೦/೫೧/೩೭)ದಲ್ಲಿದೆ :

ಏಕೈಕಸ್ಮಿನ್ ದಶ ದಶ ಭಟೇ ಚಾಶ್ವೇ ಶತಂ ಶತಮ್ ।
ರಥೇ ರಥೇ ಚ ಸಾಹಸ್ರಮಯುತಂ ಚ ಗಜೇ ಗಜೇ ॥

ರಥೇ ರಥೇ ಚ ಸಾಹಸ್ರಮಯುತಂ ಚ ಗಜೇ ಗಜೇ ।
ಅದೃಶ್ಯಂತ ಪರಾನೀಕೇ ತದದ್ಭುತಮಿವಾಭವತ್ ॥-ಭಾಗ.(೧೦/೫೧/೩೮)

### ಅನಂತ ಕೈಗಳ ಶ್ರೀಕೃಷ್ಣ

**ಶಾರ್ಙ್ಗಂ ಬಿಭ್ರನ್ನಿಷಂಗಾನ್ನಿಶಿತಶರಚಯಾನಾದದಾನೋ ಮುಹುರ್ಜ್ಯಾ-**
**ಮಾಕರ್ಣಾಂತಂ ವಿಕರ್ಷನ್ ಪ್ರಬಲರಿಪುವಪುಃ ಪೂರಯನ್ ಮಾರ್ಗಣೌಘೈಃ ।**
**ಅನ್ವಾತಂಕಂ ಸ್ವಶಂಖಂ ರಣಧುರಿ ರಣಯನ್ನಂಘ್ರಿಮೂಲೇ ನತಾನಾಂ**
**ತನ್ವನ್ ದೋಷ್ಣಾಽಭಯಂ ಚ ಪ್ರಥಯತಿ ಮುರಜಿದ್ವಿಶ್ವತಃಪಾಣಿತಾಂ ಸ್ವಾಮ್॥೨೭॥**

ಶಾರ್ಙ್ಗವನ್ನು ಕೈಯಲ್ಲಿ ಹಿಡಿದು ಬತ್ತಳಿಕೆಯಿಂದ ಅತ್ಯಂತ ಹರಿತವಾದ ಬಾಣಗಳ ಸಮೂಹಗಳನ್ನು ಕೈಗೆತ್ತಿಕೊಳ್ಳುವುದು, ಧನುಸ್ಸಿನ ಹಗ್ಗವನ್ನು ಕಿವಿಯವರೆಗೆ ಮತ್ತೆ ಮತ್ತೆ

---

೧. ತತ್ರ ತೌ ಚತುರೋ ಮಾಸಾನುಷಿತ್ವಾ ಭರತರ್ಷಭ ।
ಮಹತ್ಯಾ ಸೇನಯಾ ಸಾರ್ಧಂ ಜಗ್ಮತುರ್ಮಧುರಾಂ ಪುರೀಮ್ ॥ -ಭಾಗ.(೧೦/೫೩/೨೧)

ಎಳೆಯುವುದು, ಪ್ರಬಲರಾದ ಶತ್ರುಗಳ ದೇಹವನ್ನು ಬಾಣಗಳ ಪ್ರವಾಹಗಳಿಂದ ತುಂಬಿಸುವುದು, ಶತ್ರುಗಳಿಗೆ ಭಯ ಹುಟ್ಟಿಸುವಂತೆ ತನ್ನ ಶಂಖವನ್ನು ಆ ಯುದ್ಧರಂಗದಲ್ಲಿ ಮೊಳಗಿಸುವುದು, ತನ್ನ ಚರಣಗಳಿಗೆರಗಿದ ಜನರಿಗೆ ತೋಳಿನಿಂದ ಅಭಯವನ್ನು ನೀಡುವುದು; ಇವುಗಳ ಮೂಲಕ ಮುರಾರಿಯಾದ ಶ್ರೀಕೃಷ್ಣ ತಾನು ಅನಂತ ಕೈಗಳುಳ್ಳವನು ಎಂಬುದನ್ನು ಸ್ಫುಟಪಡಿಸಿದ.

ವಿ : ೧. ಶ್ರೀಕೃಷ್ಣ ಹೀಗೆ ಬಗೆಬಗೆಯ ಕಾರ್ಯಗಳನ್ನು ಏಕಕಾಲದಲ್ಲಿ ಮಾಡುವ ಮೂಲಕ ತಾನು ಅನಂತ ಕೈಗಳವನು ಎಂಬ ತತ್ತ್ವವನ್ನು ಸಾರಿದ ಎಂದರ್ಥ: ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುಃ (ಶ್ರುತಿ)

೨. ಶ್ರೀಹರಿಯು ಅನಂತ ಕಣ್ಣಿನವನು, ಅನಂತ ಪಾದಗಳವನು, ಅನಂತ ಮುಖದವನೂ ಆಗಿರುವಂತೆ ಅನಂತ ತೋಳಿನವನೂ ಆಗಿರುವನು ಎಂಬುದು ಶಾಸ್ತ್ರಗಳ ಘೋಷಣೆ. ಅದಕ್ಕೆ ಇದು ನಿದರ್ಶನ ಎಂಬುದು ಇಲ್ಲಿಯ ಭಾವ; ಮಾರ್ಗಣ - ಬಾಣ.

### ಪಾಪಗಳಿಗೆ ತಕ್ಕ ಫಲ ನೀಡಿದ ಶ್ರೀಕೃಷ್ಣ

**ಯೇ ಸಂಧ್ಯಾಸಮಯೇಽಪಿ ಭಾಸ್ವದುದಯೇ ನಿದ್ರಾಂ[೧] ದ್ವಿಷೋಽಚೀಕರಂ-**
**ಸ್ತೇಭ್ಯೋಽದೀದಿಶದಚ್ಯುತಃ ಶುಭಕೃತೇಃ ಸಾಕ್ಷೀ ಸುದೀರ್ಘಾಂ ಹಿ ತಾಮ್ ।**
**ಯೈರೀಕ್ಷಾ ನ ಕೃತಾ ರವೇಃ ಕುಮತಿಭಿಸ್ತೇಷಾಂ ದೃಶೋಽಮೀಲಯತ್**
**ಯೇ ಶುದ್ಧಾಂಬುನಿ ನೋ ಮಮಜ್ಜುರಹಿತಾಂಸ್ತಾಂಶ್ಶೋಣಿತೇಽಮಜ್ಜಯತ್ ॥೨೮॥**

ಶುಭಕರ್ಮಗಳಿಗೆ ಸಾಕ್ಷಿಯಾದ ಅಚ್ಯುತನಾದ ಶ್ರೀಕೃಷ್ಣ ಯಾರು ಸಂಧ್ಯಾಕಾಲದಲ್ಲೂ, ಸೂರ್ಯೋದಯದ ಸಮಯದಲ್ಲೂ ಮಲಗಿದ್ದರೋ ಅಂತಹ ದ್ವೇಷಿಗಳಿಗೆ ಸುದೀರ್ಘ-ವಾದ ನಿದ್ರೆಯನ್ನೇ ಉಂಟುಮಾಡಿದ; ಯಾರು ಸೂರ್ಯನ ದರ್ಶನಮಾಡಿಲ್ಲವೋ ಅಂತಹ ದುರ್ಬುದ್ಧಿಯ ಜನರ ಕಣ್ಣುಗಳನ್ನು ಮುಚ್ಚಿಸಿದ; ಯಾರು ನಿರ್ಮಲವಾದ ತೀರ್ಥದಲ್ಲಿ ಮಜ್ಜನ ಮಾಡಿಲ್ಲವೋ ಅಂತಹ ಶತ್ರುಗಳನ್ನು ರಕ್ತದಲ್ಲಿ ಮುಳುಗಿಸಿದ.

ವಿ : ಸಂಧ್ಯಾಕಾಲದಲ್ಲಿ ಸಂಧ್ಯಾವಂದನೆಯು ವಿಹಿತ; ಹಾಗೆ ಸಂಧ್ಯಾವಂದನೆ ಮಾಡದೆ ಮಲಗಿದವರಿಗೆ ಶಾಶ್ವತ ನಿದ್ರೆಯೇ ಫಲ. ಸೂರ್ಯಾರ್ಘ್ಯದ ಸಮಯದಲ್ಲಿ ಸೂರ್ಯಾಂತರ್ಗತನಾದ ಭಾರತೀರಮಣ ಮುಖ್ಯಪ್ರಾಣ ಅಂತರ್ಗತನಾದ ಶ್ರೀಹರಿಯನ್ನು ಧ್ಯಾನಿಸುವುದು ಕರ್ತವ್ಯ. ಹಾಗೆ ಮಾಡದವರಿಗೆ ಅಂಧತ್ವ ಪ್ರಾಪ್ತಿ ಎನ್ನುವುದು ಫಲ. ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದು

೧. ನಿದ್ರಾ ಚೈವ ಸುನಿದ್ರಾ ಚ ದ್ವಿಧಾ ನಿದ್ರಾ ಪ್ರಕೀರ್ತಿತಾ ।
ತತ್ರ ನಿದ್ರಾ ಭವೇನ್ನಿತ್ಯಾ ಸುನಿದ್ರಾ ಮೃತಿಕಾಲಗಾ ॥ -ಭಾ.ತಾ.(೧೧/೨೮/೨)

ಜ್ಞಾನಸಾಧನೆಯ ಮಾರ್ಗಗಳಲ್ಲಿ ಒಂದು; ಹಾಗೆ ಮಾಡದವರು ರಕ್ತದ ಮಡುವಿನಲ್ಲಿ ಬೀಳುವ ದುರಂತಕ್ಕೆ ಗುರಿಯಾಗುವರು ಎಂದು ಭಾವ. ಶ್ರೀಕೃಷ್ಣನಿಂದ ಹತರಾದವರೆಲ್ಲಾ ಇಂತಹ ದುಷ್ಕರ್ಮಗಳಿಗೆ ಪಾತ್ರರಾಗಿದ್ದ ತಾಮಸ ಜನರೇ ಆಗಿದ್ದರು ಎಂಬ ಸೂಚನೆಯು ಇಲ್ಲಿದೆ.

### ಯುದ್ಧದಲ್ಲೂ ಗೋಚರಿಸಿದ ಜೀವತ್ರೈವಿಧ್ಯ

**ಪಾದಾಬ್ಜೇ ಸ್ವಮನೀನಮನ್ ಕತಿಪಯೇ ಮೂರ್ಧಾನಮಾತ್ಮೇಶಿತುಃ**
**ಶಾರ್ಙ್ಗಾನ್ಮುಕ್ತಶರೈರ್ವಿಶೀರ್ಣತನವಃ ಕೇಽಪ್ಯಾತ್ಮನೋಽಮೀಮರನ್ ।**
**ಅನ್ಯೇ ಕೇಽಪಿ ಹರಿಂ ಜರಾಸುತಮಪಿ ತ್ಯಕ್ತ್ವಾ ತತೋ ದುದ್ರುವು-**
**ರ್ಜೀವಾನಾಂ ತ್ರಿತಯೇನ ಸಂಚಿತದಶಾಂ ಸಂದರ್ಶಯಂತೋ ಯುಧಿ ॥೨೯॥**

ಯುದ್ಧದಲ್ಲಿ ಜೀವರ ತ್ರೈವಿಧ್ಯಕ್ಕೆ ತಕ್ಕಂತೆ ಒದಗುವ ಪರಿಸ್ಥಿತಿಯನ್ನು ತೋರಿಸಿಕೊಡುತ್ತಾ ತಮ್ಮ ಸ್ವಾಮಿಯಾದ ಶ್ರೀಕೃಷ್ಣನ ಪಾದಕಮಲದಲ್ಲಿ ಕೆಲವರು ತಮ್ಮ ಶಿರಸ್ಸನ್ನು ಮಣಿಸಿದರು; ಮತ್ತೆ ಕೆಲವರು ಶ್ರೀಕೃಷ್ಣನ ಶಾರ್ಙ್ಗಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ದೇಹ ಸೀಳಿದವರಾಗಿ ಮರಣಹೊಂದಿದರು; ಮತ್ತೆ ಕೆಲವರು ಶ್ರೀಕೃಷ್ಣನನ್ನೂ ಹಾಗೆಯೇ ಜರಾಸಂಧನನ್ನೂ ತೊರೆದು ಅಲ್ಲಿಂದ ಪಲಾಯನ ಗೈದರು.

ವಿ : ೧. ಆಗ ನಡೆದ ಯುದ್ದದಲ್ಲಿ ಶ್ರೀಕೃಷ್ಣನ ಹಿರಿಮೆಯನ್ನು ಮನಗಂಡ ಕೆಲವು ಶತ್ರುಪಕ್ಷದವರು ಅವನಿಗೆ ಶರಣಾದರು[1]; ಮತ್ತೆ ಕೆಲವರು ಅವನ ಬಾಣಗಳಿಗೆ ಹತರಾದರು; ಇನ್ನೂ ಕೆಲವರು ಅಲ್ಲಿಂದ ಪಲಾಯನ ಮಾಡಿದರು. ಶ್ರೀಕೃಷ್ಣನಿಗೆ ಶರಣಾದವರು ಸಾತ್ವಿಕರು; ಮೃತಿಹೊಂದಿದವರು ತಾಮಸರು; ಪಲಾಯನಗೈದವರು ರಾಜಸರು; ಹೀಗೆ ಆ ಮೂರು ವಿಧದವರು ಜೀವತ್ರೈವಿಧ್ಯಕ್ಕೆ[2] ನಿದರ್ಶನವಾಗಿ ಗೋಚರಿಸಿದರು ಎಂದರ್ಥ.

---

೧. ಕೇಚಿದ್ದತಾಃ ಸಮಾಪೇತುರ್ಭಯಾತ್ ಕೇಚಿಚ್ಚ ದುದ್ರುವುಃ ।
ಕೇಚಿದಾತ್ತಪ್ರಹರಣಾಸ್ತ್ವಾಭಿಸಸ್ರುರರೀನ್ ರಣೇ ॥
ಕೇಚಿದ್ವಿಭಿನ್ನವರ್ಮಾಣಶ್ಛಿನ್ನಪಾದೋರುಬಾಹವಃ ।
ರಿಪೂನೇವಾಭ್ಯವರ್ತಂತ ಕ್ರೋದೋದ್ವೃತ್ತಾರುಣೇಕ್ಷಣಾಃ ॥
ಕೇಚಿದ್ ಹಯಾನಪರ್ಯಾಣಾನಾರುಹ್ಯ ದೃಢವಿಕ್ರಮಾಃ ।
ಮರ್ದಯಂತೋ ರಿಪೂನ್ ಯುದ್ಧೇ ವಿಮಲಂ ಲೇಭಿರೇ ಯಶಃ ॥
ರಾಜಾನಃ ಸಹಸೋದ್ಬುಧ್ಯ ದೃಷ್ಟ್ವಾ ಸೈನಿಕಸಂಕ್ಷಯಮ್ ।
ವಿನಾ ರಣೋಪಸ್ಕರಣಂ ಚಕ್ರುಃ ಕೇಚನ ಸಂಗರಮ್ ॥
ಕೇಚಿದ್ವಿಸೃಜ್ಯ ಶಿಬಿರಂ ವಿವಿಶುರ್ಗಹನಂ ವನಮ್ ।
ಕೇಚಿನ್ಮಾಗಧಮಾಸಾದ್ಯ ವಿಜಯಸ್ವೇತಿ ಚಾಬ್ರುವನ್ ॥
ರಥೇನೈಕೇನ ಗೋವಿಂದಃ ಪ್ರವಿಶ್ಯ ರಿಪುವಾಹಿನೀಮ್ ।
ಜಘಾನ ಸುಬಹೂನ್ ವೀರಾನ್ ಸಾಯುಧಾನ್ ಸರಣೋದ್ಯಮಾನ್ ॥ -ಭಾಗ.(೧೦/೫೦/೨೧-೨೬)

೨. ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ ।
ತತ್ರ ದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ॥

೨. ಹೀಗೆ ಜೀವತ್ರೈವಿಧ್ಯವು ಅಂತಹ ಪ್ರಸಂಗದಲ್ಲೂ ಗೋಚರಿಸುವುದು ಎಂದರೆ ಅದು ಶಾಸ್ತ್ರಸಿದ್ಧವಾದ ಮಹಾಪ್ರಮೇಯದಲ್ಲೊಂದು ಎಂಬುದು ಸ್ಫುಟಪಡುವುದು.

೩. ಶ್ರೀಕೃಷ್ಣನಿಗೆ ಮಣಿಯುವುದು ಸಾತ್ತ್ವಿಕತೆ : ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್ । -(ಕಥಾಲಕ್ಷಣ); [1]ಶ್ರೀಕೃಷ್ಣನಿಂದ ಮೃತರಾದವರು ತಾಮಸರು; ವಿಷ್ಣುದ್ವೇಷ ತಾಮಸ ಸ್ವಭಾವದ ಮುಖ್ಯಲಕ್ಷಣ ; ಕೃಷ್ಣ ಹಾಗೂ ಜರಾಸಂಧ ಇಬ್ಬರನ್ನೂ ತೊರೆದು ಓಡಿದವರು ರಾಜಸರು; ಅವರದು ಕೃಷ್ಣಭಕ್ತಿಯೂ ಆಗಿರಲಿಲ್ಲ , ಕೃಷ್ಣದ್ವೇಷವೂ ಆಗಿರಲಿಲ್ಲ. ಹೀಗೆ ಜೀವತ್ರೈವಿಧ್ಯವೆಂಬ ಪ್ರಮೇಯವು ಸ್ಫುಟಪಡುವುದು ಎಂದು ತಿಳಿಯಬೇಕು.

## ಜರಾಸಂಧನನ್ನು ಶ್ರೀಕೃಷ್ಣ ಕೊಲ್ಲದಿರಲು ಕಾರಣ

**ಯೋ [2]ಮಾಗಧಸ್ಯ ಸಾಧರ್ಮ್ಯಮಾಪನ್ನಾನಪಿ ನಾವಧೀತ್ ।**
**ಸ ಮಾಗಧವಧಂ ಹೀನಂ ಮೇನೇ ವೀರಶಿರೋಮಣಿಃ ॥ ೩೦ ॥**

ಶರಣುಬಂದು ವಂದಿಮಾಗಧನ (ಹೊಗಳುಭಟನ) ಸಾಧರ್ಮ್ಯವನ್ನು ಹೊಂದಿದವರನ್ನು ಸಹ ಶ್ರೀಕೃಷ್ಣನು ಕೊಲ್ಲಲಿಲ್ಲ; ಅಂತಹ ವೀರಶಿರೋಮಣಿಯಾದ ಅವನು ಮಾಗಧನನ್ನು ಕೊಲ್ಲುವುದನ್ನು ಹೀನ ಕಾರ್ಯ ಎಂದು ಭಾವಿಸಿದ.

ವಿ : ೧. ಶ್ರೀಕೃಷ್ಣನು ಜರಾಸಂಧನನ್ನು ಸಂಹರಿಸದಿರಲು ವಿಶಿಷ್ಟರೀತಿಯಲ್ಲಿ ಕಾರಣವನ್ನು ಇಲ್ಲಿ ತಿಳಿಸಿರುವರು.

೨. ಮಾಗಧ ಎಂದರೆ ವಂದಿಮಾಗಧರಲ್ಲಿ ಸ್ತುತಿಪಾಠಕನಾದವನು ಎಂದರ್ಥ. ಸ್ತುತಿ-ಮಾಡುವುದು ಶರಣಾಗತಿಯ ಲಕ್ಷಣ; ಅದರಿಂದಾಗಿ ಸ್ತುತಿಮಾಡುವವರನ್ನು ಕೊಲ್ಲದಿರುವುದು ಸಹಜ. ಜರಾಸಂಧ ಮಗಧದೇಶದ ದೊರೆಯಾದ್ದರಿಂದ ಮಾಗಧ ಎನ್ನಿಸಿದವನು. ಇದರಿಂದ ಸ್ತುತಿಪಾಠಕರ ಸಾಮ್ಯ ಅವನಿಗೆ ಬಂದಂತಾಯಿತು. ಆದ್ದರಿಂದ ಅವನನ್ನು ಸಂಹರಿಸುವುದು

---

ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾಃ ಸದೈವ ಹಿ ।
ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ॥ -ಮ.ಭಾ.ತಾ.ನಿ(೧/೮೬-೮೭)ಭವಿಷ್ಯತ್ಪರ್ವವಚನ
ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ -ಗೀತಾ.(೧೭/೨)
ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ -ಗೀತಾ.(೧೪/೧೮)

೧. ಯೇ ಪಾಂಡವಾನಾಮಭವನ್ ಸಹಾಯಾ ದೇವಾಶ್ಚ ದೇವಾನುಚರಾಃ ಸಮಸ್ತಾಃ ।
ಅನ್ಯೇ ತು ಸರ್ವೇಽಪ್ಯಸುರಾ ಹಿ ಮಧ್ಯಮಾ ಯೇ ಮಾನುಷಾಸ್ತೇ ಚಲಬುದ್ಧಿವೃತ್ತಯಃ ॥
ಲಿಂಗಂ ಸುರಾಣಾಂ ಹಿ ಸದೈವ ಭಕ್ತಿರ್ವಿಷ್ಣೌ ತದನ್ಯೇಷು ಚ ತತ್ತ್ವತೋಽಪತಾ ।
ಅತೋಽತ್ರ ಯೇ ಯೇ(ಽ)ಪರಿಭಕ್ತಿತತ್ಪರಾಸ್ತೇ ತೇ(ಽ)ಸುರಾಸ್ತದ್ವಿರತಾ ವಿಶೇಷತಃ ॥
-ಮ.ಭಾ.ತಾ.ನಿ.(೧೧/ ೨೩.೪, ೨೩.೫)

೨. ವಂದೀ ತು ಸ್ತುತಿಪಾಠಕಃ - ಮಾಗಧೋ ಮಧುಕಃ । - ವೈಜಯಂತೀ

ಶರಣಾಗತರನ್ನು ಸಂಹರಿಸುವಂತಹ ಹೀನಕಾರ್ಯ ಎಂದಾಗುವುದು; ಅದಕ್ಕೆಂದೇ ಶ್ರೀಕೃಷ್ಣ ಅವನನ್ನು ತಾನೇ ಸಂಹರಿಸಲಿಲ್ಲ ಎಂದು ಭಾವ.

೩.. ಶಿವಭಕ್ತಾಗ್ರೇಸರನಾದ ಜರಾಸಂಧನನ್ನು ಸಾಕ್ಷಾತ್ ಮಹಾವಿಷ್ಣುವೇ ಆದ ತಾನು ಸಂಹರಿಸುವುದು ಅನುಚಿತ. ತನ್ನ ಭಕ್ತಾಗ್ರೇಸರನಾದ ಭೀಮಸೇನನಿಂದ ಕೊಲ್ಲಿಸುವುದು ಸಮುಚಿತ ಎಂಬುದು ಶ್ರೀಕೃಷ್ಣನ ಸಂಕಲ್ಪವಾಗಿತ್ತು ಎಂಬುದು ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಬಂದಿರುವ [೧] ಮುಖ್ಯಕಾರಣ ಎಂದು ತಿಳಿಯಬೇಕು.

## ದ್ವಾರಕೆಯ ನಿರ್ಮಾಣ

ಸ ಇತ್ಥಮಾಜೌ [೨] ಬಹುವಾರಮೇನಂ
ವಿಜಿತ್ಯ ಬಾರ್ಹದ್ರಥಮುಗ್ರಸೇನಮ್ ।
[೩] ಪುರಂ [೪] ಹಿರಣ್ಯಾಮಲರತ್ನಚಿತ್ರ-
ಮರಿಂದಮೋಽಚೀಕರದಬ್ಧಿಮಧ್ಯೇ ॥ ೩೧ ॥

ಶತ್ರುಗಳನ್ನು ನಿಗ್ರಹಿಸುವ ಆ ಶ್ರೀಕೃಷ್ಣನು ಹೀಗೆ ಯುದ್ಧದಲ್ಲಿ ಉಗ್ರವಾದ ಸೇನೆಯಿಂದ ಕೂಡಿದ ಆ ಜರಾಸಂಧನನ್ನು ಅನೇಕ ಬಾರಿ ಪರಾಭವಗೊಳಿಸಿ, ಚಿನ್ನ ಹಾಗೂ ನಿರ್ಮಲವಾದ ರತ್ನಗಳಿಂದಾಗಿ ಮನೋಹರವಾಗಿದ್ದ ದ್ವಾರಕಾಪಟ್ಟಣವನ್ನು ಸಮುದ್ರ ಮಧ್ಯದಲ್ಲಿ ನಿರ್ಮಾಣಮಾಡಿಸಿದನು.

---

೧. ಭಯಂ ನ ಕಾರ್ಯಮೇವ ತೇ ಮಯಾ ಹತಃ ಸ ನೇತಿ ಹ ।
ಮಯಾ ಹಿ ನೀತಿಹೇತುತಃ ಸ್ವಯಂ ನ ಹನ್ಯತೇ ರಿಪುಃ ॥
ಸ ಶರ್ವಸಂಶ್ರಯಾಗ್ರಣೀರ್ಮದಾಶ್ರಯೋತ್ತಮೇನ ತು ।
ನಿಹನ್ಯತೇ ಯದಾ ತದಾ ಪ್ರಕಾಶಿತಂ ಹಿ ಮೇ ಬಲಮ್ ॥
ಅತೋ ನ ಶಂಕಿತಂ ಮನಃ ಕುರುಷ್ವ ಭೂಪ ತೇ ಕ್ವಚಿತ್ ।
ಪ್ರದರ್ಶಯಾಮಿ ತೇಽನುಜೌ ನಿಹತ್ಯ ಮಾಗಧೇಶ್ವರಮ್ ॥ -ಮ.ಭಾ.ತಾ.ನಿ.(೨೧/೧೧೭-೧೧೯)

೨. ಯುದ್ಧಾಯ ಜಗ್ಮುರಮುನಾಽಷ್ಟದಶೇಷು ಯುದ್ಧೇಷ್ವತ್ಯಂತಭಗ್ನಬಲದರ್ಪಮದಾ ನಿವೃತ್ತಾಃ ॥ -ಮ.ಭಾ.ತಾ.ನಿ

೩.. ಮಾಗಧೋಽಪಿ ನ ಹಂತವ್ಯೋ ಭೂಯಃ ಕರ್ತಾ ಬಲೋದ್ಯಮಮ್ । -ಭಾಗ.(೧೦/೪೯/೮)
ತೇನ ಸಾರ್ಧಮಭೂದ್ ಯುದ್ಧಂ ಸಪ್ತಾಹಂ ರಾಮಕೃಷ್ಣಯೋಃ ।
ತದಾ ಪರಾಜಿತೋ ಯುದ್ಧೇ ಮಾಗಧೋ ಬಹುಸೈನಿಕಃ ॥
ಸ್ತೂಯಮಾನೌ ವಿವಿಶತುಃ ಸಾನುಗೌ ಮಧುರಾಂ ಪುರೀಮ್ ।
ಏವಂ ಸಪ್ತದಶಕೃತ್ವಸ್ತಾವದಕ್ಷೌಹಿಣೀಬಲಃ ॥
ಹತೇಷು ತೇಷ್ವನೀಕೇಷು ತ್ಯಕ್ತೋಽಯಾದರಿಭಿರ್ನೃಪ ।
ಅಷ್ಟಾದಶಮಸಂಗ್ರಾಮೇ ಆಗಾಮಿನಿ ತದಂತರಾ ॥ -ಭಾಗ.(೧೦/೫೦./೨೨.,೨೫,೨೭)

೪. ದ್ವಾರಕೆಯ ವರ್ಣನೆಯು ಶ್ರೀಮನ್ಮಹಾಭಾರತ, ಹರಿವಂಶ, ಶ್ರೀಮದ್ಭಾಗವತ, ವಿಷ್ಣುಪುರಾಣ, ಸ್ಕಂಧಪುರಾಣ ಮೊದಲಾದ ಅನೇಕ ಮೂಲಗ್ರಂಥಗಳಲ್ಲಿ ವಿವರವಾಗಿ ಬಂದಿದೆ ; ಅವುಗಳ ಸಂಗ್ರಹವನ್ನು ಉಡುಪಿ ಶ್ರೀಫಲಿಮಾರುಮಠದ ಶ್ರೀವಿದ್ಯಾಮಾನ್ಯಪ್ರಕಾಶನದಿಂದ ಪ್ರಕಾಶಿತವಾಗಿರುವ ನನ್ನ 'ದ್ವಾರಕಾಮಾಹಾತ್ಮ್ಯ' ಎಂಬ ಕೃತಿಯಲ್ಲಿ ಕೊಡಲಾಗಿದೆ.

ವಿ : ೧. ಜರಾಸಂಧನು ಒಟ್ಟು ೧೮ ಬಾರಿ ಶ್ರೀಕೃಷ್ಣನಿಂದ ಪರಾಭವ ಹೊಂದಿದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ.

೨. ದ್ವಾರಕೆಯ ವರ್ಣನೆಯು ೧೭ನೆಯ ಸರ್ಗದಲ್ಲಿ ವಿವರವಾಗಿ ಬಂದಿದೆ (ಶ್ಲೋಕ. ೨೬-೭೦).

## ದ್ವಾರಕೆಗೆ ಬಂದ ಮಧುರೆಯ ಜನರು

ನಿಧಾಯ ತಸ್ಯಾಂ ಮಧುರಾಪುರಸ್ಥಾನ್
ನಿಜಾನ್ ಕ್ಷಣೇನಾಪರಿಮೇಯಶಕ್ತಿಃ ।
ವಿದುದ್ರುವೇಽಥೋ ಯವನಂ ದಿಧಕ್ಷುಃ
[೧]ಸ್ವಭಕ್ತಹರ್ಯಕ್ಷದರೀಮರಿಘ್ನಃ ॥ ೩೨ ॥

ಬಳಿಕ ಆ ಮಧುರಾಪಟ್ಟಣದಲ್ಲಿನ ತನ್ನ ಜನರನ್ನೆಲ್ಲಾ ಕ್ಷಣಮಾತ್ರದಲ್ಲಿ ದ್ವಾರಕಾಪಟ್ಟಣದಲ್ಲಿ ನೆಲೆಗೊಳಿಸಿ, ಯಾರೂ ಅರಿಯಲಾಗದ ಶಕ್ತಿಸಂಪನ್ನನಾದ, ಶತ್ರುಸಂಹಾರಕನಾದ ಶ್ರೀಕೃಷ್ಣನು ಕಾಲಯವನನನ್ನು ಸುಟ್ಟುಹಾಕಲೆಂದು ತನ್ನ ಭಕ್ತನಾದ ಮುಚುಕುಂದನೆಂಬ ಸಿಂಹದ ಗುಹೆಯತ್ತ ಓಡತೊಡಗಿದನು.

---

೧. ಅಂತಃ ಸಮುದ್ರೇ ನಗರಂ ಕೃಷ್ಣೋಽದ್ಭುತಮಚೀಕರತ್ ।
ದೃಶ್ಯತೇ ಯತ್ರ ಹಿ ತ್ವಾಷ್ಟ್ರಂ ವಿಜ್ಞಾನಂ ಶಿಲ್ಪನೈಪುಣಮ್ ॥
ರಥ್ಯಾಚತ್ವರವೀಥೀಭಿರ್ಯಥಾವಾಸ್ತು ವಿನಿರ್ಮಿತಮ್ ।
ಸುರದ್ರುಮಲತೋದ್ಯಾನವಿಚಿತ್ರೋಪವನಾನ್ವಿತಮ್ ॥
ಹೇಮಶೃಂಗೈರ್ದಿವಸ್ಪೃಗ್ಭಿಃ ಸ್ಫಾಟಿಕಾಟ್ಟಾಲಗೋಪುರೈಃ ।
ರಾಜತಾರಪುಟೈಃ ಕೋಷ್ಠೈರ್ಜುಷ್ಟಂ ಹೇಮನ್ವಲಂಕೃತೈಃ ॥
ರತ್ನಕೂಟೈರ್ಗೃಹೈರ್ಹೇಮೈರ್ಮಹಾಮರಕತಸ್ಥಲೈಃ ।
ವಾಸ್ತೋಷ್ಪತೀನಾಂ ಚ ಗೃಹೈರ್ವಲಭೀಭಿಶ್ಚ ನಿರ್ಮಿತಮ್ ॥
ಚಾತುರ್ವರ್ಣ್ಯಜನಾಕೀರ್ಣಂ ಯದೂನಾಂ ಚ ಗೃಹೈರ್ಲಸತ್ ।
ಸುಧರ್ಮಾ ಪಾರಿಜಾತಂ ಚ ಮಹೇಂದ್ರಃ ಪ್ರಾಹಿಣೋದ್ಧರೇಃ ॥
ಯತ್ರ ಚಾವಸ್ಥಿತೋ ಮರ್ತ್ಯೋ ಮರ್ತ್ಯಧರ್ಮೈರ್ನ ಯುಜ್ಯತೇ ।
ಯತ್ ಪ್ರಿಯಂ ದೇವದೇವಸ್ಯ ವಿಷ್ಣೋಃ ಕ್ಷೀರೋದವಾಸಿನಃ ॥
ಶ್ಯಾಮೈಕಕರ್ಣಾನ್ ವರುಣೋ ಹಯಾನ್ ಶುಕ್ಲಾನ್ ಮನೋಜವಾನ್ ।
ದದೌ ಸಹಸ್ರಸಂಖ್ಯಾಕಾನ್ ದೇವದೇವಾಯ ತೋಯರಾಟ್ ॥
ಅಷ್ಟೌ ನಿಧಿಪತಿಃ ಕೋಶಾನ್ ರತ್ನಪೂರ್ಣಾನವಿಕ್ಷಯಾನ್ ।
ತಥಾಽನ್ಯೇ ಲೋಕಪಾಲಾಶ್ಚ ದದುಃ ಸ್ವಾಧಿಕೃತಂ ಧನಮ್ ॥
ಪದ್ಮಶ್ಚೈವ ಮಹಾಪದ್ಮೋ ಮತ್ಸ್ಯಕೂರ್ಮೌ ತಥೌದಕಃ ।
ನೀಲೋ ಮುಕುಂದಃ ಶಂಖಶ್ಚ ನಿಧಯೋಽಷ್ಟೌ ಪ್ರಕೀರ್ತಿತಾಃ ॥
ಯದ್ ಯದ್ ಭಗವತಾ ದತ್ತಮಾಧಿಪತ್ಯಂ ಸ್ವಸಿದ್ಧಯೇ ।
ಸರ್ವಂ ಪ್ರತ್ಯರ್ಪಯಾಮಾಸುರ್ಹರೌ ಭೂಮಿಗತೇ ನೃಪ ॥ -ಭಾಗ.(೧೦/೫೦./೫೦-೫೬)

ವಿ : ೧. ದ್ವಾರಕಾಪಟ್ಟಣದ ನಿರ್ಮಾಣ ಅದ್ಭುತಕಾರ್ಯವಾಗಿದ್ದಂತೆ ಕ್ಷಣಮಾತ್ರದಲ್ಲಿ ಮಧುರೆಯ ಜನರನ್ನೆಲ್ಲಾ ದ್ವಾರಕೆಗೆ ಸ್ಥಳಾಂತರಿಸಿದ ಶ್ರೀಕೃಷ್ಣನ ಕಾರ್ಯವೂ ಸಹ ಅದ್ಭುತವೇ ಆಗಿದ್ದಿತು ಎಂದು ಭಾವ.

೨. ಮುಚುಕುಂದ ಬದರೀಕ್ಷೇತ್ರದ ಬಳಿಯ ಗುಹೆಯೊಂದರಲ್ಲಿ ನಿದ್ರಿಸಿದ್ದ. ಗುಹೆಯಲ್ಲಿ ವಾಸಿಸುವುದು ಸಿಂಹ; ಮುಚುಕುಂದ ಹಾಗೆ ಗುಹೆಯಲ್ಲಿ ನೆಲೆಸಿದ್ದರಿಂದ ಅವನನ್ನು ಸಿಂಹ ಎಂದಿರುವುದು ಅತ್ಯಂತ ಉಚಿತವಾಗಿದೆ.

೩. ಮೇಲ್ನೋಟಕ್ಕೆ ಕೃಷ್ಣ ಕಾಲಯವನನಿಗೆ ಅಂಜಿ ಓಡಿದಂತೆ ಕಂಡರೂ ವಾಸ್ತವವಾಗಿ ಅವನನ್ನು ಮುಚುಕುಂದನ ಮೂಲಕ ಸಂಹರಿಸುವ ಸಂಕಲ್ಪ ಅದರ ಮುಖ್ಯ ಹಿನ್ನೆಲೆಯಾಗಿತ್ತು ಎಂಬುದು ಇಲ್ಲಿಯ ಸೂಚನೆ ; ಹರ್ಯಕ್ಷ - ಸಿಂಹ ; ದರೀ - ಗುಹೆ.

### ಪಲಾಯನದ ನಾಟಕಮಾಡಿದ ಶ್ರೀಕೃಷ್ಣ

**ಪರಾಙ್ಮುಖೋಽಸೌ ಪರಮಃ ಪಲಾಯನ್**
**ಖಲಾಗ್ರತಃ ಕಂಜದಲಾಯತಾಕ್ಷಃ ।**
**ದುರಾತ್ಮನಾಂ ವಕ್ತ್ರನಿರೀಕ್ಷಣಂ ಸ್ವೈ-**
**ರ್ಜನೈರ್ನ ಕಾರ್ಯಂ ತ್ವಿತಿ ಶಂಸತಿ ಸ್ಮ ॥ ೩೩ ॥**

ಪುಂಡರೀಕಾಕ್ಷನಾದ, ಸರ್ವೋತ್ತಮನಾದ ಶ್ರೀಕೃಷ್ಣನು ಆ ದುಷ್ಟನಾದ ಕಾಲಯವನನ ಎದುರಿನಿಂದ ಮುಖ ತಿರುಗಿಸದೆ ಓಡುವ ಮೂಲಕ ತನ್ನ ಜನರು ದುರಾತ್ಮರ ಮುಖವನ್ನು ನೋಡುವ ಕಾರ್ಯವನ್ನು ಸಹ ಮಾಡಕೂಡದು ಎಂಬ ತತ್ತ್ವವನ್ನು ಸೂಚಿಸಿದನು.

ವಿ : ೧. ಕಾಲಯವನನಿಗೆ ಬೆನ್ನು ಮಾಡಿ ಓಡುವ ಮೂಲಕ ಶ್ರೀಕೃಷ್ಣ ತನ್ನ ಭಕ್ತರು ದುಷ್ಟ-ಜನರತ್ತ ಮುಖಮಾಡಿ ನೋಡಲೂ ಕೂಡದು ಎಂಬ ಸಂದೇಶವನ್ನು ನೀಡಿದ ಎಂದರ್ಥ.

೨. ದುಷ್ಟಜನರ ಸಂಗ ನಿಷಿದ್ಧ ಎಂಬುದು ಪ್ರಸಿದ್ಧ ; ಅವರ ಮುಖಾವಲೋಕನವೂ ನಿಷಿದ್ಧ ಎಂಬುದು ಇಲ್ಲಿ ಸೂಚಿತವಾಗಿರುವ ವಿಶೇಷ ಪ್ರಮೇಯ.

೩. ಊರ್ಧ್ವಪುಂಡ್ರ ಧರಿಸದವರ ಮುಖಾವಲೋಕನವು ಸಹ ಪಾಪಕರ ಎಂಬ ಕೃಷ್ಣಾಮೃತ-ಮಹಾರ್ಣವದ ವಚನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು :

ಊರ್ಧ್ವಪುಂಡ್ರವಿಹೀನಸ್ಯ ಶ್ಮಶಾನಸದೃಶಂ ಮುಖಮ್ ।
ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ (೨೨೩)

### ಅವೈಷ್ಣವರೊಂದಿಗೆ ಸಲ್ಲಾಪವೂ ನಿಷಿದ್ಧ

**ಅಧಿಕ್ಷಿಪ್ತೋಽಪಿ ತೇನಾಧ್ವನ್ಯದತ್ತೋತ್ತರ ಈಶ್ವರಃ ।**
**ಅಸಲ್ಲಾಪಮಸದ್ವರ್ಗ್ಯೈಃ ಸತಾಂ ಸಂಶಿಕ್ಷಯನ್ನಿವ ॥ ೩೪ ॥**

ದುಷ್ಟಜನರೊಂದಿಗೆ ಮಾತು ಉಚಿತವಲ್ಲ ಎಂಬುದನ್ನು ಸಜ್ಜನರಿಗೆ ತಿಳಿಸಿಕೊಡಲೋ ಎಂಬಂತೆ ಆ ಕಾಲಯವನನು ಮಾರ್ಗಮಧ್ಯದಲ್ಲಿ ಬಹಳವಾಗಿ ನಿಂದಿಸಿದರೂ ಸಹ ಈಶ್ವರನಾದ ಶ್ರೀಕೃಷ್ಣ ಅವನಿಗೆ ಉತ್ತರ ನೀಡಲಿಲ್ಲ.

ವಿ : ೧. ದುರ್ಜನರ ಮುಖದರ್ಶನ ಮಾತ್ರವಲ್ಲದೆ ಅವರೊಂದಿಗೆ ಮಾತುಕತೆ ಸಹ ನಿಷಿದ್ಧ ಎಂಬ ಮತ್ತೊಂದು ಪ್ರಮೇಯ ಇಲ್ಲಿ ಸೂಚಿತವಾಗಿದೆ.

೨. ಅಯೋಗ್ಯಜನರು ಮಾಡುವ ನಿಂದೆಯನ್ನು ಸಹ ಔದಾಸೀನ್ಯದಿಂದ ಕಾಣಬೇಕು ಎಂಬ ಸೂಚನೆಯೂ ಇಲ್ಲಿದೆ; ನರಿಗಳ ಊಳಿಡುವಿಕೆಯನ್ನು ಸಿಂಹವೆಂತು ಲೆಕ್ಕಿಸೀತು ಎಂಬ ಸುಮಧ್ವವಿಜಯದ ಮಾತು ಇಲ್ಲಿ ಸ್ಮರಣೀಯ: ಕ್ರೋಷ್ಟೂನಾಂ ಶ್ವಕಲಕಲಪ್ರದಂ ವಿರಾವಂ ಪಂಚಾಸ್ಯೋ ನ ಹಿ ಗಣಯೇದುದಾರವೀರ್ಯಃ (೧೬/೨೨).

**ಮುಚುಕುಂದನನ್ನು ಮುಕುಂದ ಎಂದು ತಿಳಿದ ಮೂರ್ಖ ಕಾಲಯವನ**

**[೧]ನಿದ್ರಾಲೋರ್ಮುಚುಕುಂದಭೂವರಮಣೇರ್ವಿದ್ಯೋತಮಾನಾಂ ಗುಹಾ-**
**ಮಧ್ಯಾಸೀನಮಗಮ್ಯಮಲ್ಪಮತಿಭಿಃ ಶುದ್ಧಂ ಪ್ರಬುದ್ಧಂ ಸ್ವತಃ।**
**ಹೃದ್ವ್ಯೋಮಸ್ಥಿತಮುಗ್ಧಜೀವನಿಕರಾದ್ದುರ್ಧೀರಭಿನ್ನಂ ವದ-**
**ನ್ನದ್ವೈತೀವ ನೃಪಾತ್ ಸ ಭೇದರಹಿತಂ ಬುದ್ಧ್ವಾಽನ್ವಮಂಸ್ತಾಸುರಃ ॥ ೩೫ ॥**

ನಿದ್ರಿಸಿದ್ದ ಮುಚುಕುಂದ ಎಂಬ ರಾಜನ ಶೋಭಾಯಮಾನವಾದ ಗುಹೆಯಲ್ಲಿ ನೆಲೆಸಿದ್ದ ಮಂದಮತಿಗಳು ತಿಳಿಯಲಾಗದ ಸ್ವತಃ ಶುದ್ಧನೂ ಸದಾ ಪ್ರಬುದ್ಧನೂ ಆದ ಶ್ರೀಕೃಷ್ಣನನ್ನು

---

೧. ಪುರಾ ದೇವಾಸುರೇ ಯುದ್ಧೇ ಕೃತಕರ್ಮಾ ಮಹಾಬಲಃ।
ವರೇಣ ಛಂದಿತೋ ದೇವೈರ್ನಿದ್ರಾಮೇವ ಗೃಹೀತವಾನ್।
ಶ್ರಾಂತಸ್ಯ ತಸ್ಯ ವಾಗೇವಂ ತದಾ ಪ್ರಾದುರಭೂತ್ ಕಿಲ।
ಪ್ರಸುಪ್ತಂ ಬೋಧಯೇದ್ಯೋ ಮಾಂ ತದ್ದಹೇಯಮಹಂ ಸುರಾಃ।
ಚಕ್ಷುಷಾ ಕ್ರೋಧದೀಪ್ತೇನೇತ್ಯೇವಮಾಹ ಪುನಃ ಪುನಃ।
ಏವಮಸ್ತ್ವಿತಿ ತಂ ಶಕ್ರ ಉವಾಚ ತ್ರಿದಶೈಃ ಸಹ।
ಸ ಸುರೈರಭ್ಯನುಜ್ಞಾತೋ ಮಾನುಷಂ ಲೋಕಮಾಗತಃ।
ಸ ಪರ್ವತಗುಹಾಂ ಕಾಂಚಿತ್ ಪ್ರವಿಶ್ಯ ಶ್ರಮಕರ್ಶಿತಃ।
ಸುಷ್ವಾಪ ಕಾಲಮೇತಂ ವೈ ಯಾವತ್ ಕೃಷ್ಣಸ್ಯ ದರ್ಶನಮ್।
ತತ್ಸರ್ವಂ ವಾಸುದೇವಸ್ಯ ನಾರದೇನ ನಿವೇದಿತಮ್।
ವರದಾನಂ ಚ ದೇವೇಭ್ಯಸ್ತೇಜಸ್ತಸ್ಯ ಚ ಭೂಪತೇಃ।
ಅನುಗಮ್ಯಮಾನಃ ಕೃಷ್ಣಸ್ತು ತೇನ ಮ್ಲೇಚ್ಛೇನ ಶತ್ರುಣಾ।
ತಾಂ ಗುಹಾಂ ಮುಚುಕುಂದಸ್ಯ ಪ್ರವಿವೇಶ ವಿನೀತವಾನ್।
ಶಿರಃಸ್ಥಾನೇ ತು ರಾಜರ್ಷೇರ್ಮುಚುಕುಂದಸ್ಯ ಕೇಶವಃ।
ಸಂದರ್ಶನಪಥಂ ತ್ಯಕ್ತ್ವಾ ತಸ್ಥೌ ಬುದ್ಧಿಮತಾಂ ವರಃ' ಇತಿ। – ಹರಿವಂಶ

ಹೃದಯಾಕಾಶದಲ್ಲಿ ನೆಲೆಸಿರುವ ಮುಗ್ಧರಾದ ಜೀವಸಮುದಾಯಕ್ಕಿಂತ ಭಿನ್ನನಾದವನಲ್ಲ ಎಂಬುದಾಗಿ ಹೇಳುವ ಅದ್ವೈತಿಯಂತೆ ಆ ದುಷ್ಟನಾದ ಕಾಲಯವನನು ಮುಚುಕುಂದ-ನಿಂದ ಭಿನ್ನನಲ್ಲ ಎಂದು ಭಾವಿಸಿದನು.

ವಿ : ೧. ಮುಚುಕುಂದ ಮಲಗಿದ್ದ ಗುಹೆಯನ್ನು ಪ್ರವೇಶಿಸಿದ ಶ್ರೀಕೃಷ್ಣನನ್ನು ಕಾಣಲಾಗದ ಕಾಲಯವನನು ಅಲ್ಲಿ ಮಲಗಿದ್ದ ಮುಚುಕುಂದನನ್ನೇ ಮುಕುಂದ ಎಂದು ಭಾವಿಸುವ ಮೂಲಕ ಹೃದಯಗುಹೆಯಲ್ಲಿ ನೆಲೆಸಿದ ಶ್ರೀಹರಿಯನ್ನು ಜೀವ ಎಂದು ತಿಳಿಯುವ ಅದ್ವೈತಿಯಂತಹವನು ಎಂದರ್ಥ.

೨. ಮುಚುಕುಂದನನ್ನು ಮುಕುಂದ ಎಂದು ತಿಳಿಯುವುದು ಸಾಮಾನ್ಯ ಅಪಚಾರವಾಗದೆ ಜೀವೇಶ್ವರ ಅಭೇದವನ್ನು ಚಿಂತಿಸುವಂತಹ ಅದ್ವೈತಮತದ ಅನುಸರಣೆಯೇ ಆಯಿತು ಎಂಬುದು ಇಲ್ಲಿಯ ಭಾವ.

೩.. ಇಂತಹ ತಪ್ಪು ತಿಳುವಳಿಕೆಯೇ ಕಾಲಯವನನ ವಿನಾಶಕ್ಕೆ ಕಾರಣವಾಯಿತು ಎಂಬ ಸೂಚನೆಯೂ ಇಲ್ಲಿದೆ : ಮಿಥ್ಯಾಜ್ಞಾನೇನ ಚ ತಮಃ - (ಅಣುಭಾಷ್ಯ)

### ಜೀವೇಶ್ವರೈಕ್ಯವು ಶುಕಮುನಿಗಳಿಗೆ ಸಮ್ಮತವಲ್ಲ

ಐಕ್ಯಂ ಸಿಸಾಧಯಿಷಿತಂ ಯದಿ ತತ್ ಕಿಮರ್ಥಂ
ರಕ್ಷೋಽಚ್ಯುತತ್ವಮತಿ ರಾಜ್ಞಿ ಶುಕೋ ನ ಸೇಹೇ ।
ಅಸ್ಮ್ಯಚ್ಯುತೋಽಹಮಿತಿ[೧] ದಿಕ್ಷು ವಿಘೋಷಯಂತಂ
ಕಸ್ಮಾತ್ ಸ ಪೌಂಡ್ರಕಮಗರ್ಹಯದರ್ಹಣೀಯಃ ॥ ೩೬ ॥

ಶ್ರೀಶುಕಮುನಿಗಳಿಗೆ ಐಕ್ಯವನ್ನೇ ಸಾಧಿಸುವ ಉದ್ದೇಶವಿದ್ದಲ್ಲಿ ಏತಕ್ಕಾಗಿ ಆ ರಾಕ್ಷಸನಿಗಿದ್ದ ಮುಚುಕುಂದನೊಂದಿಗೆ ಶ್ರೀಕೃಷ್ಣನ ಐಕ್ಯಭಾವವನ್ನು ಸಹಿಸದವರಾದರು? 'ನಾನೇ ಅಚ್ಯುತ' ಎಂದು ದಿಕ್ಕುಗಳಲ್ಲಿ ಘೋಷಣೆ ಮಾಡುತ್ತಿದ್ದ ಪೌಂಡ್ರಕವಾಸುದೇವನನ್ನು ಆ ಪೂಜ್ಯರಾದ [೨]ಶುಕಮುನಿಗಳು ಏತಕ್ಕಾಗಿ ತೆಗಳುತ್ತಿದ್ದರು.

---

೧. ವಾಸುದೇವೋಽವತೀರ್ಣೋಽಹಮೇಕ ಏವ ನ ಚಾಪರಃ ।
ಭೂತಾನಾಮನುಕಂಪಾರ್ಥಂ ತ್ವಂ ತು ಮಿಥ್ಯಾಭಿಧಾಂ ತ್ಯಜ ॥
ಯಾನಿ ತ್ವಮಸ್ಮಚ್ಚಿಹ್ನಾನಿ ಮೌಢ್ಯಾದ್ಬಿಭರ್ಷಿ ಸಾತ್ವತ ।
ತ್ಯಕ್ತ್ವೈಹಿ ಮಾಂ ತ್ವಂ ಶರಣಂ ನೋ ಚೇತ್ ದೇಹಿ ಮಮಾಹವಮ್ ॥ - ಭಾಗ.(೧೦/೬೬/೧೮,೧೯)

೨. ಅಹಂ ಬ್ರಹ್ಮೇತಿ ವೇನಸ್ತು ಧ್ಯಾಯನ್ನಾಪಾಧರಂ ತಮಃ ।
ತದ್ವಾರಾಧ್ದಾಂತೋ ಮಹೀಂ ವ್ಯಾಪ್ತೋ ಭೇಯರ್ಾ ಖ್ಯಾಪಯತೋಽನಿಶಮ್ ॥
ಅಸುರಾ ರಾಕ್ಷಸಾಶ್ಚೈವ ಪಿಶಾಚಾಸ್ತತ್ಪಥಿ ಸ್ಥಿತಾಃ ।

ವಿ : ಕಾಲಯವನನು ಮುಚುಕುಂದನನ್ನು ಶ್ರೀಕೃಷ್ಣ ಎಂದು ತಿಳಿದದ್ದು ಸರಿಯೇ ಎನ್ನಿಸುವುದಾಗಿದ್ದಲ್ಲಿ ಅವನನ್ನು ಮೂಢ ಎಂದು ಏತಕ್ಕಾಗಿ ಕರೆಯುತ್ತಿದ್ದರು ಹಾಗೂ [1]ನಾನೇ ನಿಜವಾದ ವಾಸುದೇವ ಎಂದು ಹೇಳಿಕೊಳ್ಳುತ್ತಿದ್ದ ಪೌಂಡ್ರಕವಾಸುದೇವನನ್ನು ಮೂರ್ಖನೆಂದು ಏತಕ್ಕೆ ಉಲ್ಲೇಖಿಸುತ್ತಿದ್ದರು; ಆದ್ದರಿಂದ [2]ಕಾಲಯವನನದು ಅಕ್ಷಮ್ಯ ಅಪರಾಧ ಎಂಬುದು ನಿಶ್ಚಿತ ಎಂದರ್ಥ.

## ಕಾಲಯವನನ ಸಂಹಾರ - ಮುಚುಕುಂದನ ಉದ್ಧಾರ

**ಪ್ರದಾಹ್ಯ ನಯನಾಗ್ನಿನಾ ಯವನಕಾನನಂ ಭೂಪತೇ-**
**ರ್ಭವಾಖ್ಯಗಹನಂ ಪುನಃ ಸ್ವಪದಪದ್ಮವೀಕ್ಷಾಗ್ನಿನಾ ।**
**ವಿನಾಶ್ಯ ಮುಚುಕುಂದಹೃತ್ಸರಸಿಜಾತಭಾನುಃ ಶನೈ-**
**ರಿಯಾಯ ಪುರಮಾತ್ಮನೋ ಜಲಧಿಮಧ್ಯರತ್ನಾಯಿತಾಮ್[3] ॥ ೩೭ ॥**

ಶ್ರೀಕೃಷ್ಣನು ಆ ಮುಚುಕುಂದರಾಜನ ನೇತ್ರಾಗ್ನಿಯಿಂದ ಕಾಲಯವನನೆಂಬ ಕಾಡನ್ನು ಭಸ್ಮಮಾಡಿಸಿದ ; ತನ್ನ ಪಾದಕಮಲವನ್ನು ಕಂಡ ಜ್ಞಾನಾಗ್ನಿಯಿಂದ ಆ ರಾಜನ ಸಂಸಾರವೆಂಬ ಕಾಡನ್ನು ಸಹ ಬೂದಿಮಾಡಿದ ; ಮುಚುಕುಂದರಾಜನ ಹೃದಯಕಮಲದ ಸೂರ್ಯನಾದ ಅವನು ಸಮುದ್ರಮಧ್ಯದಲ್ಲಿ ರತ್ನದಂತೆ ಕಂಗೊಳಿಸುತ್ತಿದ್ದ ತನ್ನ ಪಟ್ಟಣಕ್ಕೆ ಮೆಲ್ಲನೆ ತೆರಳಿದ.

ವಿ : ೧. ಕಾಲಯವನನು ಮುಚುಕುಂದರಾಜನ ನೇತ್ರಾಗ್ನಿಗೆ ಭಸ್ಮವಾದ; ಮುಚುಕುಂದ-ರಾಜನ ಸಂಸಾರವೆಂಬ ಕಾಡು ಶ್ರೀಕೃಷ್ಣದರ್ಶನರೂಪವಾದ ಜ್ಞಾನಾಗ್ನಿಗೆ ಬೂದಿಯಾಯಿತು; ಗುಹೆಯಲ್ಲಿ ಮಲಗಿದ್ದ ಮುಚುಕುಂದನಿಗೆ ಅವನ ಹೃದಯಗುಹೆಯಲ್ಲಿ ನೆಲೆಸಿದ್ದ ತನ್ನ ಬಿಂಬರೂಪವನ್ನು ಶ್ರೀಕೃಷ್ಣ ತೋರಿಸಿ ಅವನನ್ನು ಉದ್ಧಾರಮಾಡಿದ ಎಂಬುದು ಇಲ್ಲಿಯ ಮುಖ್ಯಭಾವ ; ಸರಸಿಜಾತ - ಕಮಲ.

೨. ದ್ವಾರಕೆಯನ್ನು ಸಮುದ್ರಮಧ್ಯದ ರತ್ನ ಎಂದು ಕರೆದಿರುವುದು ಅಪೂರ್ವ ; ಸಮುದ್ರವೇ ರತ್ನಾಕರ - ದ್ವಾರಕೆಯು ರತ್ನಾಕರದ ಮಧ್ಯದ ರತ್ನ ಎಂಬ ಮಾತು ಅತ್ಯಂತ ರೋಚಕ.

---

ಭೂಮೌ ತತ್ತ್ವಥುನಾ ಸರ್ವಂ ನಿರಸ್ತಂ ಮಹಿತಾತ್ಮನಾ ।
ಪುನಃ ಕಲಿಯುಗೇ ಪ್ರಾಪ್ತ ಅಷ್ಟಾವಿಂಶತಿಮೇ ಮನೋಃ ।
ವೈವಸ್ವತಸ್ಯ ಸಮಯೇ ಜಾತಾಃ ಕ್ರೋಧವಶಾ ಭುವಿ ।
ಖ್ಯಾಪಯಂತಿ ದುರಾತ್ಮನೋ ಮಣಿಮಾಂಸ್ತತ್ಪುರಃಸರಃ ॥ -ಭವಿಷ್ಯತ್ಪುರಾಣ.ಭಾಗವತತಾತ್ಪರ್ಯ(೪/೧೩./೨೨)

೧. ''ಸ್ತೋಭಿತೋ ಬಾಲವಾಕ್ಯೇನ ಮೇನೇ ಸ್ವಾತ್ಮಾನಮಚ್ಯುತಮ್ । ಕಥಿತಂ ತದುಪಾಕರ್ಣ್ಯ''ಇತ್ಯಾದೌ ನಿಂದಿತವಾನ್ ಪ್ರಸಂಗಾದಿದಮುಕ್ತಮ್ । -ವ್ಯಾ.

೨. ''ಇತಿ ಮತ್ವಾಽಚ್ಯುತಂ ಮೂಢಃ ಸ್ವಪದಾ ತಮತಾಡಯತ್'' ಇತಿ ಭಾಗವತೇ (೧೦/೫/೧೦) ।

೩.. ಪೃಥ್ವೀವೃತ್ತಮ್ । -ವ್ಯಾ.

## ಶ್ರೀಕೃಷ್ಣನಿಗೆ ರುಗ್ಮಿಣಿಯ ಪತ್ರವನ್ನು ತಲುಪಿಸಿದ ಬ್ರಾಹ್ಮಣ

[೧]ನಿಜೈಃ ಸಹ ದ್ವಾರವತ್ಯಾಂ ನಿವಸತ್ಯಂಬುಜೇಕ್ಷಣೇ।
ಅಜಯಾ ಪ್ರೇಷಿತಂ ಪತ್ರಂ ದ್ವಿಜಃ ಕಶ್ಚಿದುಪಾಹರತ್ ॥ ೩೮ ॥

ಪುಂಡರೀಕಾಕ್ಷನಾದ ಶ್ರೀಕೃಷ್ಣ ತನ್ನವರೊಂದಿಗೆ ದ್ವಾರಾವತಿಯಲ್ಲಿ ನೆಲೆಸಿದ್ದಾಗ ಮಹಾಲಕ್ಷ್ಮಿ-ಯಾದ ರುಗ್ಮಿಣಿಯು ಕಳುಹಿಸಿದ ಪತ್ರವನ್ನು ಬ್ರಾಹ್ಮಣನೊಬ್ಬ ತಂದು ನೀಡಿದ.

ವಿ : ೧. ಆ ವೇಳೆಗೆ ರುಗ್ಮಿಣಿಯನ್ನು ಶಿಶುಪಾಲನಿಗೆ ಧಾರೆಯೆರೆಯಬೇಕೆಂಬ ಯೋಜನೆ-ಯನ್ನು ರುಗ್ಮಿಣಿಯ ಅಣ್ಣ ರುಗ್ಮಿ ಜರಾಸಂಧನ ಸೂಚನೆಯಂತೆ ಹೆಣೆದಿದ್ದ. ಅದಕ್ಕೆ ಬಲವಂತದಿಂದ ತನ್ನ ತಂದೆಯಾದ ಭೀಷ್ಮಕನನ್ನೂ ಒಪ್ಪಿಸಿದ್ದ. ರುಗ್ಮಿಣಿಯು ಸ್ವತಃ ಅವರನ್ನೆಲ್ಲಾ ನಿಗ್ರಹಿಸಬಲ್ಲ ಮಹಾಮಹಿಮಳಾಗಿದ್ದರೂ ಶ್ರೀಕೃಷ್ಣನ ಹಿರಿಮೆಯನ್ನು ಜಗತ್ತಿಗೆ ಸಾರುವ ಉದ್ದೇಶದಿಂದ ಆ ರೀತಿಯಾಗಿ ಬ್ರಾಹ್ಮಣನ ಮೂಲಕ ಪತ್ರವನ್ನು ಕಳುಹಿಸಿಕೊಟ್ಟಿದ್ದಳು.

೨. ಕನ್ಯೆಯು ಮೆಚ್ಚಿದ ಯೋಗ್ಯ ವರನನ್ನು ನಿರಾಕರಿಸುವ ಪೋಷಕರ ಇಂತಹ ರೀತಿಯನ್ನು ಉಪಾಯದಿಂದ ಗೆಲ್ಲುವ ತಂತ್ರವನ್ನೂ ಸಹ ರುಗ್ಮಿಣಿಯು ಈ ಪ್ರಸಂಗದ ಮೂಲಕ ಸೂಚಿಸಿರುವನು ಎಂದು ತಿಳಿಯಬೇಕು.

೩.. ಹನುಮಂತನು ತಾನೇ ರಾವಣಾದಿಗಳ ನಿಗ್ರಹಕ್ಕೆ ಸಮರ್ಥನಾಗಿದ್ದರೂ ಆ ಕಾರ್ಯವನ್ನು ಶ್ರೀರಾಮದೇವರಿಗೆ ಮೀಸಲಿಟ್ಟಂತೆ ಈ ಪ್ರಸಂಗ ಎಂದು ತಿಳಿಯಬೇಕು.

## ರುಗ್ಮಿಣಿಯ ಪತ್ರದ ವಿವರಗಳು

ಧನ್ಯಾಽಬಲಾ ಸಾ ವಿಭವೇ ಭವೇದ್ಯಾ
ವೇದ್ಯಾಯ ಭೂಮ್ನೇ ಪುರುಷಾಯ ಸಾಮ್ನಾ।
ಸಾಮ್ನಾಯಶಾಸ್ತ್ರೋದಿತಧರ್ಮಪಾತ್ರೇ
ಪಾತ್ರೇಷು ದತ್ತಾತ್ಮಪದಾಯ ದತ್ತಾ ॥ ೩೯ ॥

ಸಾಮಗಾನದಿಂದ ಪ್ರತಿಪಾದ್ಯನೂ, ಪರಿಪೂರ್ಣನೂ, ವೇದಸಮೇತವಾದ ಬ್ರಹ್ಮ-ಮೀಮಾಂಸಾಶಾಸ್ತ್ರದಿಂದ ಪ್ರತಿಪಾದಿತವಾದ ಧರ್ಮವನ್ನು ಪಾಲಿಸುವ ಪ್ರಭುವೂ ಸುಜೀವಿಗಳಿಗೆ ತನ್ನ ಸ್ಥಾನವಾದ ವೈಕುಂಠವನ್ನು ನೀಡುವವನೂ ಆದ ಪರಮಪುರುಷನಾದ ವಿಭುವಾದ ಶ್ರೀಕೃಷ್ಣನಿಗೆ ತನ್ನನ್ನು ಸಮರ್ಪಿಸಿಕೊಳ್ಳುವ ಕನ್ಯೆಯು ಅತ್ಯಂತ ಧನ್ಯಳು.

---

೧. ಏವಂ ಸಂಪೃಷ್ಟಸಂಪ್ರಶ್ನೋ ಬ್ರಾಹ್ಮಣಃ ಪರಮೇಷ್ಠಿನಾ।
ವಿಧಾಯ ಲಿಖಿತಂ ಪತ್ರಂ ಪಾದಯೋಃ ಪ್ರಣನಾಮ್ ತಮ್ ॥ -ಭಾಗ.(೧೦/೫೨/೩೯)

ವಿ : ೧. ರುಗ್ಮಿಣಿಯು ಮೆಚ್ಚಿದ ಶ್ರೀಕೃಷ್ಣ ಸರ್ವೋತ್ತಮನಾದ ಸಾಕ್ಷಾತ್ ಶ್ರೀಹರಿ. ಹೀಗೆ ಉತ್ತಮನಾದ ವರನೊಂದಿಗೆ ಸಂಬಂಧ ಬೆಳೆಸಿಕೊಳ್ಳುವ ಕನ್ಯೆಯ ರೀತಿ ಶ್ಲಾಘ್ಯ ಎಂಬ ಧ್ವನಿಯೂ ಇಲ್ಲಿದೆ.

೨. ಶ್ರೀಕೃಷ್ಣನು ಸಾಮಗಾನದಿಂದ ಪ್ರತಿಪಾದ್ಯ ಎಂದರೆ ಸಾಮವೇದೋಪಲಕ್ಷಿತವಾದ ಸಕಲ ವೇದ ಪ್ರತಿಪಾದ್ಯ ಎಂದೂ ಅರ್ಥ; ಸಾಮಗಾನಲೋಲ ಎಂಬುದು ಶ್ರೀಹರಿಯ ಒಂದು ಮಹಾವೈಶಿಷ್ಟ್ಯವೂ ಆಗಿದೆ.

೩.. ಆಮ್ನಾಯ ಎಂದರೆ ವೇದ; ಎಂದೂ ಪಾಠದಲ್ಲೂ ಸಹ ವ್ಯತ್ಯಾಸವಿಲ್ಲದ್ದರಿಂದ ವೇದಗಳಿಗೆ ಆ ಹೆಸರು : ಆಮ್ನಾಯೋಽನನ್ಯಥಾಪಾಠಾತ್ ; ಶಾಸ್ತ್ರ ಎಂದರೆ ಬ್ರಹ್ಮಮೀಮಾಂಸಾಶಾಸ್ತ್ರ.

೪. ಮಹಾಲಕ್ಷ್ಮಿಯನ್ನು ಅಬಲಾ ಎನ್ನುವ ಮೂಲಕ ಅವರು ಅಸ್ವತಂತ್ರರು ಎಂಬ ವಿಶೇಷಾಂಶವೂ ಸೂಚಿತ; ಅ ಎಂದರೆ ವಿಷ್ಣು ; ವಿಷ್ಣುವನ್ನೇ ಸಾಕ್ಷಾತ್ತಾಗಿ ಬಲ ಹೊಂದಿರುವ ಕಾರಣದಿಂದಲೂ ರುಗ್ಮಿಣೀದೇವಿಗೆ ಅಬಲಾ ಎಂಬ ಹೆಸರು ಸಾರ್ಥಕ ಎಂದು ತಿಳಿಯಬೇಕು.

೫. ಪುರುಷ ಎಂದರೆ ಪೂರ್ಣಷಡ್ಗುಣ ಎಂದರ್ಥ. ಪಾತ್ರರು ಎಂದರೆ ಅನುಗ್ರಹಕ್ಕೆ ಅರ್ಹರು; ಮುಕ್ತಿಗೆ ಯೋಗ್ಯರು ಎಂದರ್ಥ.

### ಶತ್ರುಗಳನ್ನು ಸಂಹರಿಸಿ ತನ್ನನ್ನು ಸ್ವೀಕರಿಸಲು ಪ್ರಾರ್ಥನೆ

**ಕುರ್ವಂತಿ ಕಾಮವಶಗಾ ಮಯಿ ಚಿತ್ತಮನ್ಯೇ**
**ಕುರ್ವಂತಿಕಾಗತಯಮಾನುಚರಾನ್ ರಣೇ ತಾನ್ ।**
**ದೇಹ್ಯಂಗಜಾಕೃತಿಶತೋರ್ಜಿತರಮ್ಯರೂಪ**
**ದೇಹ್ಯಂಗಜಾತನಿಲಯಾಂಘ್ರಿಸರೋಜಸೇವಾಮ್ ॥ ೪೦ ॥**

ಎಲೈ ಆನಂದಪೂರ್ಣನಾದ ಶ್ರೀಕೃಷ್ಣ ಕಾಮವಶರಾದ ಕೆಲವರು ನನ್ನಲ್ಲಿ ಮನಸ್ಸು ಹಾಕಿರುವರು; ಬಳಿಗೆ ಬರುವ ಅವರನ್ನು ನೀನು ಯುದ್ಧದಲ್ಲಿ ಯಮನ ಅನುಚರರನ್ನಾಗಿ ಮಾಡು; ಅನಂತ ಮನ್ಮಥರ ರೂಪವನ್ನು ಮೀರಿಸಿದ ಸುಂದರರೂಪನಾದ ಶ್ರೀಕೃಷ್ಣನೇ! ಜೀವಿಗಳ ದೇಹದ ಸಮುದಾಯದಲ್ಲಿ ನೆಲೆಸಿರುವವನೇ! ನಿನ್ನ ಪಾದಕಮಲಗಳ ಸೇವೆಯನ್ನು ನೀಡು.

ವಿ : ೧. ಅಂಗಜ ಎಂದರೆ ಕಾಮ; ದೇಹ್ಯಂಗಜಾತನಿಲಯ ಎಂದರೆ ಪ್ರಾಣಿಗಳ ಶರೀರದ ಗುಂಪುಗಳಲ್ಲಿ ನೆಲೆಸಿರುವವನು ಎಂದರ್ಥ; (ಕುರು + ಅಂತಿಕಾಗತಯಮಾನುಚರಾನ್).

೨. ಅಂಗಜಾಕೃತಿಶತ ಎಂದರೆ ಅನಂತ ಮನ್ಮಥರಿಗಿಂತ ಮಿಗಿಲಾದ ಎಂದರ್ಥ: 'ಸಾಕ್ಷಾನ್ಮಥಮನ್ಮಥಃ' ; ಇಲ್ಲಿ ಶತ ಎಂಬುದು ಅನಂತ ಎಂಬ ಅರ್ಥದಲ್ಲಿ ಸೂಕ್ತವೆನ್ನಿಸುವುದು[೧].

---

೧. ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ -ಗೀತಾ(೧೧/ ೧೨).

### ತನ್ನನ್ನು ಕರೆದೊಯ್ಯಲು ರುಗ್ಮಿಣಿಯ ಪ್ರಾರ್ಥನೆ

**ಭವತಾಪಹರಾಪಾಂಗ ಭವತಾಽಪಹೃತೈವ ಧೀಃ।**
**ಚರಣಾಂಕಕೃತಾಂಕಾಂ ಮಾಂ ಚ ರಣಾಂಗಣತೋ ನಯ ॥ ೪೧ ॥**

ಸಂಸಾರದ ಬೇಗೆಯನ್ನು ಪರಿಹರಿಸುವಂತಹ ಕುಡಿನೋಟದವನೇ ! ನಿನ್ನಿಂದಮಾತ್ರವೇ ನನ್ನ ಮನಸ್ಸು ಅಪಹರಿಸಲ್ಪಟ್ಟಿದೆ ; ನಿನ್ನ ಪಾದಚಿಹ್ನೆಗಳಾದ ಧ್ವಜಾದಿಗಳಿಂದ ಕೂಡಿದ ನನ್ನನ್ನು ನೀನು ರಣಾಂಗಣದಿಂದ ಕರೆದುಕೊಂಡು ಹೋಗು.

ವಿ : ೧. ಇಲ್ಲಿ ಭವತಾ, ಭವತಾ, ಚರಣ, ಚರಣ ಎಂಬಲ್ಲಿ ಯಮಕಾಲಂಕಾರ ; '**ಚರಣಾಂಕಕೃತಾಂಕಾಂ**' ಎಂಬುದಕ್ಕೆ ವಕ್ಷಸ್ಥಳದ ಗಂಧಾದಿಗಳಲ್ಲಿ, ಧ್ವಜಾದಿ ಪಾದಚಿಹ್ನೆಗಳಿಂದ ಕೂಡಿದ ಎಂದರ್ಥ.

೨. ಲೋಕದೃಷ್ಟಿಯಲ್ಲಿ ನಾರದರ ಬಾಯಿಂದ ಶ್ರೀಕೃಷ್ಣನ ವರ್ಣನೆಯನ್ನು ಕೇಳಿದಂದಿನಿಂದ ಶ್ರೀಕೃಷ್ಣನಲ್ಲಿ ರುಗ್ಮಿಣಿಯ ಮನಸ್ಸು ನೆಟ್ಟಿದೆ ಎಂದರ್ಥ. ಅನಾದಿಕಾಲದಿಂದಲೂ ರುಗ್ಮಿಣಿಯು ನಾರಾಯಣನ ಪತ್ನಿ ಎಂಬುದು ವಸ್ತುಸ್ಥಿತಿ; ಇದು **ಚರಣಾಂಕಕೃತಾಂಕ** ಎಂಬುದರಿಂದ ಸೂಚನೆ.

೩.. ಅಯೋಗ್ಯರು ತಾವಾಗಿ ತನ್ನನ್ನು ಶ್ರೀಕೃಷ್ಣನಿಗೆ ಸಮರ್ಪಿಸುವವರಲ್ಲದವರಾದ್ದರಿಂದ ಯುದ್ಧದಲ್ಲಿ ಅವರನ್ನು ಪರಾಭವಗೊಳಿಸಿಯೇ ತನ್ನನ್ನು ಸ್ವೀಕರಿಸಬೇಕು ಎಂದರ್ಥ. ಇದರಿಂದ ಅಯೋಗ್ಯರ ಸಂಪತ್ತನ್ನು ಅವರಿಗೆ ನೋವು ಮೊದಲಾದ ಇತರ ಅಪಾಯಗಳನ್ನು ಉಂಟುಮಾಡಿಯೇ ಭಗವಂತ ಸ್ವೀಕರಿಸುವನು ಎಂಬ ಸೂಚನೆ ಇಲ್ಲಿದೆ.

### ಬ್ರಹ್ಮರುದ್ರಾದಿಗಳು ಸರ್ವೋತ್ತಮರಲ್ಲ ; ಶ್ರೀಕೃಷ್ಣನೇ ಸರ್ವೋತ್ತಮ

**ಧಿಕ್ಕೃತ್ಯಾಹಮುಮೇಶಹಂಸಗಮನೌ ಸ್ವರ್ಗೇಶ್ವರಾಗ್ನೀ ಭವ-**
**ತ್ಸೂಕ್ತಾಸಕ್ತಹೃದಂಗ ಲೋಕಮಖಿಲಂ ದೇವೌಘಮಾನ್ಯಾನ್ ಮುನೀನ್ ।**
**ಸಚ್ಛಾಸ್ತ್ರಾಧ್ವನಿ ಕೋವಿದಾನಪಿ ಬುಧಾಂಸ್ತ್ವಯ್ಯೇವ ಯತ್ಸಸ್ಪೃಹಾ**
**ವಿಶ್ವಾಧೀಶ್ವರತಾಂ ಭವಘ್ನ ಭವತಸ್ತನ್ನಿಶ್ಚಿನೋಮಿ ಪ್ರಭೋ ॥೪೨॥**

ಎಲೈ ಸಂಸಾರವನ್ನು ಪರಿಹರಿಸುವವನೇ! ಉಮಾಪತಿಯಾದ ಶಿವ ಹಾಗೂ ಹಂಸವಾಹನರಾದ ಬ್ರಹ್ಮರನ್ನೂ, ಸ್ವರ್ಗಾಧಿಪತಿಯಾದ ಇಂದ್ರ ಹಾಗೂ ಅಗ್ನಿಯನ್ನೂ, ದೇವಸಮೂಹದಿಂದ ಮಾನಿತರಾದ ಮುನಿಗಳನ್ನೂ, ಸಚ್ಛಾಸ್ತ್ರದ ಹಾದಿಯಲ್ಲಿ ಕೋವಿದರಾದ ಜ್ಞಾನಿಗಳನ್ನೂ ತೊರೆದು, ನಿನ್ನ ಸೂಕ್ತದಲ್ಲಿ ಆಸಕ್ತ ಮನಸ್ಸಿನವಳಾದ ನಾನು, ನೀನು ಸಕಲ ಜಗತ್ತಿನ ಒಡೆಯ ಎಂಬುದನ್ನು ನಿಶ್ಚೈಸಿಕೊಂಡಿರುವೆನು.

ವಿ : ೧. ಬ್ರಹ್ಮ ಶಿವ ಇಂದ್ರ ಅಗ್ನಿ ಮೊದಲಾದ ಸಕಲದೇವತೆಗಳನ್ನೂ ಮುನಿಗಳನ್ನೂ, ಜ್ಞಾನಿಗಳನ್ನೂ ನಿಯಂತ್ರಿಸುವ ಒಡತಿಯು ಮಹಾಲಕ್ಷ್ಮಿ ಎಂಬುದು ಇಲ್ಲಿಯ ಮುಖ್ಯಭಾವ.

೨. [1] ಅಂತಹ ಮಹಾಲಕ್ಷ್ಮಿಯಾದ ರುಗ್ಮಿಣಿಯಿಂದ ಆದರಿಸಲ್ಪಡುವ ಶ್ರೀಕೃಷ್ಣನು ಸಾಕ್ಷಾತ್ ಸರ್ವೋತ್ತಮನಾದ ಶ್ರೀಹರಿ[2] ಎಂದೂ ಅರ್ಥ; ಸ್ವರ್ಗೇಶ್ವರ - ದೇವತೆಗಳ ಒಡೆಯ - ಇಂದ್ರ.

೩. ಇದು ಒಂದು ರೀತಿಯಲ್ಲಿ ಅಂಭ್ರಣೀಸೂಕ್ತದ ಅರ್ಥ ಎಂಬುದನ್ನು ವ್ಯಾಖ್ಯಾನದಲ್ಲಿ ಸ್ಫುಟವಾಗಿ[3] ನಿರೂಪಿಸಿರುವರು.

## ಪುತ್ರಪೌತ್ರಾದಿಗಳಾದ ಬ್ರಹ್ಮಾದಿಗಳು

**ಶಂಭುಃ ಪುತ್ರಸಮಃ ಸ ಮೇ ಪುರರಿಪುಃ ಪೌತ್ರಃ ಶಶೀ ಸೋದರಃ**
**ಸಿಂಧುರ್ಮೇ ಜನಕಾಯಿತೋ ಮಧುಸಖೋ ಮತ್ಸೂನುಕಲ್ಪಃ ಪ್ರಭೋ ।**
**ಅಂಬಾಽಹಂ ಸಕಲಸ್ಯ ಚೇತಿ ಕಮಲಾ ಕೃಷ್ಣೈಕಲಗ್ನಂ ಮನೋ-**
**ಭೃಂಗಂ ದರ್ಶಯಿತುಂ ಕೃತೋಗ್ರಶಪಥಾ ಸ್ವಂ ರೂಪಮಸ್ಪಷ್ಟಯತ್ ॥ ೪೩ ॥**

ಬ್ರಹ್ಮನು ಮಗನಿದ್ದಂತೆ ; ಶಿವನು ನನಗೆ ಮೊಮ್ಮಗ, ಚಂದ್ರ ಸಹೋದರ, ಸಿಂಧುರಾಜನಾದ ವರುಣ ತಂದೆಯಂತಹವನು. ಮನ್ಮಥನು ನನಗೆ ಪುತ್ರಕಲ್ಪನು. ಎಲೈ ಪ್ರಭುವಾದ ಶ್ರೀಕೃಷ್ಣ! ನಾನು ಸಕಲರಿಗೂ ತಾಯಿ; ಆದ್ದರಿಂದ ತನ್ನ ಮನಸ್ಸೆಂಬ ದುಂಬಿಯು ಕೃಷ್ಣನಲ್ಲಿಯೇ ನೆಟ್ಟಿದೆ ಎಂಬುದನ್ನು ತೋರಿಸಿಕೊಡಲೆಂದು ಮಹಾಲಕ್ಷ್ಮಿಯಾದ ರುಗ್ಮಿಣಿಯು ಕಠೋರಶಪಥವನ್ನು ಮಾಡಿ ತನ್ನ ಸ್ವರೂಪವನ್ನು ಸ್ಪಷ್ಟಪಡಿಸಿದಳು.

ವಿ : ೧. ರುಗ್ಮಿಣಿಯು ತನ್ನ ಈ ಮಾತಿನಲ್ಲಿ ತಾನು ಬ್ರಹ್ಮರುದ್ರಾದಿಗಳ ತಾಯಿ ಎಂಬ ಕಾರಣದಿಂದ ತನಗೆ ಶ್ರೀಕೃಷ್ಣನೊಬ್ಬನೇ ಪತಿ ಎಂಬುದನ್ನು ಮಾರ್ಮಿಕವಾಗಿ ತಿಳಿಸಿರುವಳು. '

---

೧. ಹೃದಯಂ ತು ಭವತೂಕ್ತಂ ಅಂಭ್ರಣೀಸೂಕ್ತಂ ಲಕ್ಷ್ಮೀಸೂಕ್ತಸ್ಯಾಪ್ಯಂತತೋ ವಿಷ್ಣುಮಹಿಮಾಪ್ರತಿಪಾದಕತ್ವಾತ್ । -ವ್ಯಾ.
ವೇದೈಶ್ಚ ಸರ್ವೈರಹಮೇವ ವೇದ್ಯಃ ಇತಿ । -ಗೀತಾ.(೧೫/೧೬)
ದೇವತಾಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ।
ಋತೇ ತತ್ರ ಪ್ರಸಿದ್ಧಾಶ್ಚ ದೇವತಾ ಶ್ರೀಸ್ತಥಾಽತ್ರ ಚ॥
ಋತೇ ಪ್ರಸಿದ್ಧಾ ಬ್ರಹ್ಮೈವ ತತಸ್ತೇನ ಕ್ರಮೇಣ ಚ।
ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ॥ - ಋಗ್ಭಾಷ್ಯ (ವ್ಯಾ.)

೨. ಸರ್ವೋತ್ತಮತ್ವಾತ್ ತ್ವಮೇವ ಮತ್ಸ್ಪೃಹಾವಿಷಯೋ ಮಾಂ ನ ವರಯಸಿ ಚೇದೇತದ್ವೇದಪ್ರಾಮಾಣ್ಯಂ ಭಜ್ಯೇತೇತಿ ಭಾವಃ। -ವ್ಯಾ.

೩. "ಅಹಂ ರುದ್ರಾಯ ಧನುರಾತನೋಮಿ । ಅಹಂ ಸುವೇ ಪಿತರಮಸ್ಯ । ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಮ್" ಇತಿ ಧಿಕ್ಕೃತಯೋರ್ಮತ್ತೋಽಪ್ಯವರತ್ವಮೇವ। -ವ್ಯಾ.
"ಬಿಭರ್ಮ್ಯಹಮಿಂದ್ರಾಗ್ನೀ" ಇತ್ಯತ್ರ ಧಿಕ್ಕೃತ್ಯ ತಯೋಃ ಪೋಷ್ಯತ್ವೇನ ಸ್ವತೋಽವರತ್ವಮಿತಿ ಭಾವಃ । "ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತಿ ಮಯಾ ಸೋಽನ್ನಮತ್ತಿ" ಇತಿ। -ವ್ಯಾ.

೨. [೧]ಬ್ರಹ್ಮದೇವರು ಶ್ರೀಹರಿಯ ನಾಭಿಕಮಲದಲ್ಲಿ ಜನಿಸಿದವರು. ಆ ಕಮಲಕ್ಕೆ ಸಾಕ್ಷಾತ್ ಅಭಿಮಾನಿನಿ ಮಹಾಲಕ್ಷ್ಮಿ; ಆದ್ದರಿಂದ ಅವರನ್ನು ಸಾಕ್ಷಾತ್ ಪುತ್ರ ಎನ್ನದೆ ಪುತ್ರಸಮ ಎಂದಿರುವರು ಎಂದು ತಿಳಿಯಬೇಕು.

೩. ಮಹಾಲಕ್ಷ್ಮಿಯು ಸಾಗರದಿಂದ ಪ್ರಾದುರ್ಭವಿಸಿದರು; ವರುಣ ಸಾಗರಕ್ಕೆ ಅಭಿಮಾನಿ ಅದರಿಂದಾಗಿ ಅವನು ಒಂದು ರೀತಿಯಲ್ಲಿ ಮಹಾಲಕ್ಷ್ಮಿಗೆ ತಂದೆ ಎನ್ನಿಸುವನು. ವಾಸ್ತವವಾಗಿ ಮಹಾಲಕ್ಷ್ಮಿಯು ಪ್ರಾದುರ್ಭೂತಳಾದವಳೇ ಹೊರತು ಜನಿಸಿಬಂದವಳಲ್ಲ. ಆದ್ದರಿಂದ ಮಹಾಲಕ್ಷ್ಮಿಯು ಸಮುದ್ರಪುತ್ರಿ ಎಂಬುದು ಲೋಕಪ್ರವಾದವೇ ಹೊರತು ವಸ್ತುಸ್ಥಿತಿಯಲ್ಲವೆಂಬುದನ್ನು ಜನಕಾಯಿತಃ ಎಂಬ ಪದದಿಂದ ತಿಳಿಸಿರುವರು.

೫. ಶ್ರೀಕೃಷ್ಣನ ಪಾದವು ಸದಾ ಕಮಲ. ಅದರಲ್ಲಿ ಆಸಕ್ತವಾಗಿರುವ ಮಹಾಲಕ್ಷ್ಮಿಯ ಮನಸ್ಸು ಭೃಂಗ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ಮನೋಜ್ಞವಾದುದು.

### ಮಹಾವಿಷ್ಣು ಒಬ್ಬನೇ ಅಚ್ಯುತ

**ನಿತ್ಯಾನಂದಚಿದಾಕೃತಿಂ ಯದುಪತೇ ತ್ವಾಮೇವ ಮನ್ಯೇ ಪತಿಂ**
**ಯತ್ ತೇಽಸ್ಯ್ಯಚ್ಯುತನಾಮ ವಿಶ್ವವಿದಿತಂ ವೀರಾಗ್ರ್ಯ ಗಾನನ್ಯಗಮ್ ।**
**ತಚ್ಚಿನ್ಮಾತ್ರಸಮೀಕ್ಷಯಾ ಯದಿ ತದಾ ಸರ್ವೇಽಪಿ ಕಿಂ ನಾಚ್ಯುತಾ[೨]**
**ಯದ್ಯೇತಚ್ಚಿರಕಾಲಸಂಸ್ಥಿತಿಕೃತಂ ಪುತ್ರೇ ತವ ಸ್ಯಾತ್ ತದಾ ॥ ೪೪ ॥**

ಎಲೈ ಯದುಪತಿಯಾದ ಶ್ರೀಕೃಷ್ಣನೇ ! ನಿತ್ಯ ಆನಂದ-ಜ್ಞಾನದೇಹನಾದ ನಿನ್ನನ್ನೇ ನಾನು ಪತಿಯನ್ನಾಗಿ ಭಾವಿಸಿರುವೆನು. ಏಕೆಂದರೆ ಅಚ್ಯುತ ಎಂಬ ವಿಶ್ವವಿಖ್ಯಾತವಾದ ಹೆಸರು ಎಲೈ ವೀರಶ್ರೇಷ್ಠನೇ, ನಿನಗೆ ಮಾತ್ರವೇ ಇದೆ ಇತರರಿಗಲ್ಲ. ಅಚ್ಯುತತ್ತ್ವ ಪ್ರಸಿದ್ಧಿ ಎಂಬ ಅದು ಕೇವಲ ಜ್ಞಾನಾನಂದದ ಸ್ವರೂಪರಾದ ಇತರರ ದೃಷ್ಟಿಯಿಂದ ಹೇಳಿದ್ದಲ್ಲ, ಹಾಗಿದ್ದಲ್ಲಿ ಎಲ್ಲರೂ ಅಚ್ಯುತರೇ ಆಗುತ್ತಿದ್ದರು. ಅಲ್ಲದೆ ಅತಿದೀರ್ಘಕಾಲ ನೆಲೆಸುವ ಅರ್ಥದಲ್ಲೂ ನಿನ್ನ ಮಗ, ಬ್ರಹ್ಮದೇವರಿಗೂ ಆ ಹೆಸರು ಬರುತ್ತಿತ್ತು.

ವಿ : ೧. ಶ್ರೀಕೃಷ್ಣನನ್ನೇ ತಾನು ಪತಿಯನ್ನಾಗಿ ಹೊಂದಲು ಇಲ್ಲಿ ಮುಖ್ಯಕಾರಣವನ್ನು ರುಗ್ಮಿಣಿಯು ನೀಡಿರುವಳು. ತಾನು ಬ್ರಹ್ಮರುದ್ರರಿಗೂ ಒಡತಿಯಾದ ನಿತ್ಯಮುಕ್ತಳು. ಎಂದರೆ

---

೧. ಚತುರ್ಮುಖಮಾತೃತ್ವಂ ಸಮುದ್ರಸಹೋದರೀತ್ವಂ ಲೋಕಮಾತೃತ್ವಾದಿಕಂ ಲಕ್ಷ್ಮ್ಯಾಃ ಪ್ರಸಿದ್ಧಮೇವ। ಲಕ್ಷ್ಮ್ಯಾ ಅಪ್ರಾಕೃತವಿಗ್ರಹತ್ವೇನ ಸ್ವಭಾವತಃ ಉತ್ಪತ್ತ್ಯಭಾವಾತ್ । ಸಹಜರೇತಸೋ ವಿಕಾರಾಭಾವಾಚ್ಚ ಪುತ್ರಸಮಃ ಜನಕಾಯಿತ ಇತ್ಯುಕ್ತಮ್ ॥

೨. ಇದು 'ತ್ವಯ್ಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ' ಎಂಬ ಶ್ರೀಮದ್ಭಾಗವತವಚನದ ಭಾವವಾಗಿದೆ.

ಸರ್ವಥಾ ನಾಶರಹಿತಳು. ಅಂತಹವಳು ಯಾವ ಬಗೆಯಲ್ಲೂ ನಾಶವಿಲ್ಲದ ಪತಿಯನ್ನು ಹೊಂದು-ವುದೇ ಉಚಿತ. ಅಂತಹ ಪತಿಯಾದವನು ಶ್ರೀಕೃಷ್ಣನೊಬ್ಬನೇ ಎಂಬುದು ಇಲ್ಲಿಯ ಭಾವ.

೨. [೧]ಕೇವಲ ನಾಶಾಭಾವರೂಪವಾದ ನಿತ್ಯತ್ವವೊಂದೇ ಅಚ್ಯುತತ್ವವಲ್ಲ. ಅದರಂತೆ ಅತಿದೀರ್ಘಕಾಲದ ವರೆಗಿನ ದೇಹವೂ ಸಹ ಅಚ್ಯುತತ್ವವಲ್ಲ. ಜ್ಞಾನಾನಂದಾತ್ಮಕವಾದ ಸ್ವರೂಪದೇಹದ ನಿತ್ಯತ್ವವೇ ಇಲ್ಲಿ ವಿವಕ್ಷಿತ. ಇಂತಹ ಅಚ್ಯುತತ್ವವು ಶ್ರೀಹರಿಯೇ ಹೊರತು ಇತರ ಯಾರಿಗೂ ಇಲ್ಲ ಎಂಬುದು ಇಲ್ಲಿಯ ಮುಖ್ಯಭಾವ.'

೩. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಹಾಗೂ ಅಪೂರ್ಣತೆ ಎಂಬುದಾಗಿ ನಾಶವು ನಾಲ್ಕು ಬಗೆ; ಇವುಗಳಲ್ಲಿ ಯಾವ ಬಗೆಯ ನಾಶವೂ ಸಹ ಶ್ರೀಹರಿಗೆ ಸರ್ವಥಾ ಇಲ್ಲ ಎಂಬುದು ವಿಶೇಷ:

ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥ -ಗೀತಾಭಾಷ್ಯ(೨/೧೮)

### ಪ್ರಳಯದಲ್ಲೂ ಅಳಿಯದ ಶ್ರೀಹರಿ

**ಶೇಷೇಽಂಗ ಶೇಷೇ ಯದಶೇಷಮಂತೇ**
**ಬಿಭ್ರತ್ತ್ವಮಭ್ರದ್ಯುತಿರಾತ್ಮಗರ್ಭೇ ।**
**ಆನಂದಸಾಂದ್ರಾಕೃತಿಮಚ್ಯುತಂ ತ್ವಾಂ**
**ಶ್ರೀಶಂ ತದೀಶಂ ವರಯಾಮಿ ನಾನ್ಯಮ್ ॥ ೪೫ ॥**

ಪೂಜ್ಯನೇ! ನೀಲಮೇಘಶ್ಯಾಮನಾದ ನೀನು ಕೊನೆಯಲ್ಲಿ ಸಕಲವನ್ನೂ ನಿನ್ನ ಒಡಲಲ್ಲಿ ಧರಿಸಿ-ಕೊಂಡು, ಶೇಷನ ಮೇಲೆ ಪವಡಿಸುವಿ; ಅಂತಹ ಆನಂದದಿಂದ ತುಂಬಿದ ದೇಹದ ಅಚ್ಯುತನಾದ ಲಕ್ಷ್ಮೀಪತಿಯಾದ ನಿನ್ನನ್ನು ನಾನು ವರಿಸುವೆನೇ ಹೊರತು ಬೇರೆ ಯಾರನ್ನೂ ಅಲ್ಲ.

ವಿ : ಪ್ರಳಯಕಾಲದಲ್ಲಿ ಎಲ್ಲವೂ ನಾಶವಾದರೂ ಸಹ ಶ್ರೀಹರಿಯು ಮಾತ್ರ ಸಕಲವನ್ನೂ ತನ್ನ ಒಡಲಲ್ಲಿರಿಸಿಕೊಂಡು ಅಚ್ಯುತನಾಗಿರುವನು. ಅದರಂತೆ ಮಹಾಲಕ್ಷ್ಮಿಯು ಸಹ ಅವನೊಂದಿಗೆ ಜೊತೆಯಾಗಿ ಅಂತೆಯೇ ಇರುವಳು. ಅಂತಹ ಮಹಾಲಕ್ಷ್ಮಿಯೇ ತಾನಾಗಿರುವುದರಿಂದ ತಾನು ಅಚ್ಯುತನಾದ ಶ್ರೀಕೃಷ್ಣನನ್ನೇ ವರಿಸುವುದು ಸಹಜ ಎಂದರ್ಥ.

---

೧. ಅವಸ್ಥಾನೇನ ಕೃತಂ ಯದಿ ತದಾ ಏವ ಪುತ್ರೇ ದ್ವಿಪರಾರ್ಧಾಯುಷಿ ಚತುರ್ಮುಖೇಽಚ್ಯುತನಾಮ ಸ್ಯಾತ್ । ಇತರೇಭ್ಯೋ ದೇಹಬಹುಕಾಲಾವಸ್ಥಾನಸ್ಯ ತತ್ರ ವಿದ್ಯಮಾನತ್ವಾದಿತಿ ಭಾವಃ । ತಸ್ಮಾತ್ತತ್ಸ್ಥಾಂತರಸ್ಯಾನುಪಪನ್ನ-ತ್ವಾದ್ದೇಹನಿತ್ಯತಾಪ್ರಯುಕ್ತಂ ತವಾಚ್ಯುತನಾಮೇತಿ ಫಲಿತೋಽರ್ಥಃ। -ವ್ಯಾ.

೨. [1]ಬ್ರಹ್ಮದೇವರು ಶ್ರೀಹರಿಯ ನಾಭಿಕಮಲದಲ್ಲಿ ಜನಸಿದವರು. ಆ ಕಮಲಕ್ಕೆ ಸಾಕ್ಷಾತ್ ಅಭಿಮಾನಿನಿ ಮಹಾಲಕ್ಷ್ಮಿ; ಆದ್ದರಿಂದ ಅವರನ್ನು ಸಾಕ್ಷಾತ್ ಪುತ್ರ ಎನ್ನದೆ ಪುತ್ರಸಮ ಎಂದಿರುವರು ಎಂದು ತಿಳಿಯಬೇಕು.

೩. ಮಹಾಲಕ್ಷ್ಮಿಯು ಸಾಗರದಿಂದ ಪ್ರಾದುರ್ಭವಿಸಿದರು; ವರುಣ ಸಾಗರಕ್ಕೆ ಅಭಿಮಾನಿ ಆದರಿಂದಾಗಿ ಅವನು ಒಂದು ರೀತಿಯಲ್ಲಿ ಮಹಾಲಕ್ಷ್ಮಿಗೆ ತಂದೆ ಎನ್ನಿಸುವನು. ವಾಸ್ತವವಾಗಿ ಮಹಾಲಕ್ಷ್ಮಿಯು ಪ್ರಾದುರ್ಭೂತಳಾದವಳೇ ಹೊರತು ಜನಿಸಿಬಂದವಳಲ್ಲ. ಆದ್ದರಿಂದ ಮಹಾಲಕ್ಷ್ಮಿಯು ಸಮುದ್ರಪುತ್ರಿ ಎಂಬುದು ಲೋಕಪ್ರವಾದವೇ ಹೊರತು ವಸ್ತುಸ್ಥಿತಿಯಲ್ಲಎಂಬುದನ್ನು **ಜನಕಾಯಿತಃ** ಎಂಬ ಪದದಿಂದ ತಿಳಿಸಿರುವರು.

೫. ಶ್ರೀಕೃಷ್ಣನ ಪಾದವು ಸದಾ ಕಮಲ. ಅದರಲ್ಲಿ ಆಸಕ್ತವಾಗಿರುವ ಮಹಾಲಕ್ಷ್ಮಿಯ ಮನಸ್ಸು ಭೃಂಗ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ಮನೋಜ್ಞವಾದುದು.

## ಮಹಾವಿಷ್ಣು ಒಬ್ಬನೇ ಅಚ್ಯುತ

**ನಿತ್ಯಾನಂದಚಿದಾಕೃತಿಂ ಯದುಪತೇ ತ್ವಾಮೇವ ಮನ್ಯೇ ಪತಿಂ**
**ಯತ್ ತೇಽಸ್ಯಚ್ಯುತನಾಮ ವಿಶ್ವವಿದಿತಂ ವೀರಾಗ್ರ್ಯ ಗಾನನ್ಯಗಮ್ ।**
**ತಚ್ಚಿನ್ಮಾತ್ರಸಮೀಕ್ಷಯಾ ಯದಿ ತದಾ ಸರ್ವೇಽಪಿ ಕಿಂ ನಾಚ್ಯುತಾ[2]**
**ಯದ್ಯೇತಚ್ಚಿರಕಾಲಸಂಸ್ಥಿತಿಕೃತಂ ಪುತ್ರೇ ತವ ಸ್ಯಾತ್ ತದಾ ॥ ೪೪ ॥**

ಎಲೈ ಯದುಪತಿಯಾದ ಶ್ರೀಕೃಷ್ಣನೇ ! ನಿತ್ಯ ಆನಂದ-ಜ್ಞಾನದೇಹನಾದ ನಿನ್ನನ್ನೇ ನಾನು ಪತಿಯನ್ನಾಗಿ ಭಾವಿಸಿರುವೆನು. ಏಕೆಂದರೆ ಅಚ್ಯುತ ಎಂಬ ವಿಶ್ವವಿಖ್ಯಾತವಾದ ಹೆಸರು ಎಲೈ ವೀರಶ್ರೇಷ್ಠನೇ, ನಿನಗೆ ಮಾತ್ರವೇ ಇದೆ ಇತರರಿಗಲ್ಲ. ಅಚ್ಯುತತ್ತ್ವ ಪ್ರಸಿದ್ಧಿ ಎಂಬ ಅದು ಕೇವಲ ಜ್ಞಾನಾನಂದದ ಸ್ವರೂಪರಾದ ಇತರರ ದೃಷ್ಟಿಯಿಂದ ಹೇಳಿದ್ದಲ್ಲ. ಹಾಗಿದ್ದಲ್ಲಿ ಎಲ್ಲರೂ ಅಚ್ಯುತರೇ ಆಗುತ್ತಿದ್ದರು. ಅಲ್ಲದೆ ಅತಿದೀರ್ಘಕಾಲ ನೆಲೆಸುವ ಅರ್ಥದಲ್ಲೂ ನಿನ್ನ ಮಗ, ಬ್ರಹ್ಮದೇವರಿಗೂ ಆ ಹೆಸರು ಬರುತ್ತಿತ್ತು.

ವಿ : ೧. ಶ್ರೀಕೃಷ್ಣನನ್ನೇ ತಾನು ಪತಿಯನ್ನಾಗಿ ಹೊಂದಲು ಇಲ್ಲಿ ಮುಖ್ಯಕಾರಣವನ್ನು ರುಗ್ಮಿಣಿಯು ನೀಡಿರುವಳು. ತಾನು ಬ್ರಹ್ಮರುದ್ರರಿಗೂ ಒಡತಿಯಾದ ನಿತ್ಯಮುಕ್ತಳು. ಎಂದರೆ

---

೧. ಚತುರ್ಮುಖಮಾತೃತ್ವಂ ಸಮುದ್ರಸಹೋದರೀತ್ವಂ ಲೋಕಮಾತೃತ್ವಾದಿಕಂ ಲಕ್ಷ್ಮ್ಯಾಃ ಪ್ರಸಿದ್ಧಮೇವ। ಲಕ್ಷ್ಮ್ಯಾ ಅಪ್ರಾಕೃತವಿಗ್ರಹತ್ವೇನ ಸ್ವಭಾವತಃ ಉತ್ಪತ್ತ್ಯಭಾವಾತ್ । ಸಹಜರೇತಸೋ ವಿಕಾರಾಭಾವಾಚ್ಚ ಪುತ್ರಸಮಃ ಜನಕಾಯಿತ ಇತ್ಯುಕ್ತಮ್ ॥

೨. ಇದು 'ತ್ವಯ್ಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ' ಎಂಬ ಶ್ರೀಮದ್ಭಾಗವತವಚನದ ಭಾವವಾಗಿದೆ.

ಸರ್ವಥಾ ನಾಶರಹಿತಳು. ಅಂತಹವಳು ಯಾವ ಬಗೆಯಲ್ಲೂ ನಾಶವಿಲ್ಲದ ಪತಿಯನ್ನು ಹೊಂದು-ವುದೇ ಉಚಿತ. ಅಂತಹ ಪತಿಯಾದವನು ಶ್ರೀಕೃಷ್ಣನೊಬ್ಬನೇ ಎಂಬುದು ಇಲ್ಲಿಯ ಭಾವ.

೨. [೧]ಕೇವಲ ನಾಶಾಭಾವರೂಪವಾದ ನಿತ್ಯತ್ವವೊಂದೇ ಅಚ್ಯುತತ್ವವಲ್ಲ. ಅದರಂತೆ ಅತಿದೀರ್ಘಕಾಲದ ವರೆಗಿನ ದೇಹವೂ ಸಹ ಅಚ್ಯುತತ್ವವಲ್ಲ. ಜ್ಞಾನಾನಂದಾತ್ಮಕವಾದ ಸ್ವರೂಪದೇಹದ ನಿತ್ಯತ್ವವೇ ಇಲ್ಲಿ ವಿವಕ್ಷಿತ. ಇಂತಹ ಅಚ್ಯುತತ್ವವು ಶ್ರೀಹರಿಯೇ ಹೊರತು ಇತರ ಯಾರಿಗೂ ಇಲ್ಲ ಎಂಬುದು ಇಲ್ಲಿಯ ಮುಖ್ಯಭಾವ.'

೩. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಹಾಗೂ ಅಪೂರ್ಣತೆ ಎಂಬುದಾಗಿ ನಾಶವು ನಾಲ್ಕು ಬಗೆ; ಇವುಗಳಲ್ಲಿ ಯಾವ ಬಗೆಯ ನಾಶವೂ ಸಹ ಶ್ರೀಹರಿಗೆ ಸರ್ವಥಾ ಇಲ್ಲ ಎಂಬುದು ವಿಶೇಷ:

ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥ -ಗೀತಾಭಾಷ್ಯ(೨/೧೮)

## ಪ್ರಳಯದಲ್ಲೂ ಅಳಿಯದ ಶ್ರೀಹರಿ

**ಶೇಷೇಽಂಗ ಶೇಷೇ ಯದಶೇಷಮಂತೇ**
**ಬಿಭ್ರತ್ತ್ವಮಭ್ರದ್ಯುತಿರಾತ್ಮಗರ್ಭೇ ।**
**ಆನಂದಸಾಂದ್ರಾಕೃತಿಮಚ್ಯುತಂ ತ್ವಾಂ**
**ಶ್ರೀಶಂ ತದೀಶಂ ವರಯಾಮಿ ನಾನ್ಯಮ್ ॥ ೪೫ ॥**

ಪೂಜ್ಯನೇ! ನೀಲಮೇಘಶ್ಯಾಮನಾದ ನೀನು ಕೊನೆಯಲ್ಲಿ ಸಕಲವನ್ನೂ ನಿನ್ನ ಒಡಲಲ್ಲಿ ಧರಿಸಿ-ಕೊಂಡು, ಶೇಷನ ಮೇಲೆ ಪವಡಿಸುವಿ; ಅಂತಹ ಆನಂದದಿಂದ ತುಂಬಿದ ದೇಹದ ಅಚ್ಯುತನಾದ ಲಕ್ಷ್ಮೀಪತಿಯಾದ ನಿನ್ನನ್ನು ನಾನು ವರಿಸುವೆನೇ ಹೊರತು ಬೇರೆ ಯಾರನ್ನೂ ಅಲ್ಲ.

ವಿ : ಪ್ರಳಯಕಾಲದಲ್ಲಿ ಎಲ್ಲವೂ ನಾಶವಾದರೂ ಸಹ ಶ್ರೀಹರಿಯು ಮಾತ್ರ ಸಕಲವನ್ನೂ ತನ್ನ ಒಡಲಲ್ಲಿರಿಸಿಕೊಂಡು ಅಚ್ಯುತನಾಗಿರುವನು. ಅದರಂತೆ ಮಹಾಲಕ್ಷ್ಮಿಯು ಸಹ ಅವನೊಂದಿಗೆ ಜೊತೆಯಾಗಿ ಅಂತೆಯೇ ಇರುವಳು. ಅಂತಹ ಮಹಾಲಕ್ಷ್ಮಿಯೇ ತಾನಾಗಿರುವುದರಿಂದ ತಾನು ಅಚ್ಯುತನಾದ ಶ್ರೀಕೃಷ್ಣನನ್ನೇ ವರಿಸುವುದು ಸಹಜ ಎಂದರ್ಥ.

---

೧. ಅವಸ್ಥಾನೇನ ಕೃತಂ ಯದಿ ತದಾ ಏವ ಪುತ್ರೇ ದ್ವಿಪರಾರ್ಧಾಯುಷಿ ಚತುರ್ಮುಖೇಽಚ್ಯುತನಾಮ ಸ್ಯಾತ್ । ಇತರೇಭ್ಯೋ ದೇಹಬಹುಕಾಲಾವಸ್ಥಾನಸ್ಯ ತತ್ರ ವಿದ್ಯಮಾನತ್ವಾದಿತಿ ಭಾವಃ । ತಸ್ಮಾತ್ತಸ್ಥಾಂತರಸ್ಯಾನುಪಪನ್ನ-ತ್ವಾದ್ದೇಹನಿತ್ಯತಾಪ್ರಯುಕ್ತಂ ತವಾಚ್ಯುತನಾಮೇತಿ ಫಲಿತೋಽರ್ಥಃ। -ವ್ಯಾ.

ಶ್ರೀಹರಿಯ ಮುಂದೆ ಅಣುವೆನ್ನಿಸುವ ಬ್ರಹ್ಮಾಂಡ

ದಶಾವೃತೀದಂ ಕಿಲ ಪದ್ಮಜಾಂಡ-
ಮನೇಕಧಾ ಯಸ್ಯ ಹಿ ರೋಮಕೂಪೇ ।
ಪರಾಣುವತ್ ತಿಷ್ಠತಿ ಪಂಚಭೂತ-
ಭವಃ ಕಥಂ ತಸ್ಯ ತವಾಂಗ ದೇಹಃ ॥ ೪೬ ॥

ಪ್ರಿಯನೇ ! ಹತ್ತು ಆವರಣಗಳಿಂದ ಕೂಡಿದ ಈ ಬ್ರಹ್ಮಾಂಡ ಯಾವ ನಿನ್ನ ರೋಮಕೂಪದಲ್ಲಿ ಪರಮಾಣುವಿನಂತೆ ಇರುವುದೋ, ಅಂತಹ ನಿನಗೆ ಪಂಚಭೂತಗಳಿಂದ ಉಂಟಾಗುವ ದೇಹವೆಲ್ಲಿಯದು? ; (ಪದ್ಮಜಾಂಡ - ಬ್ರಹ್ಮಾಂಡ).

ವಿ : ೧.[1]ಸಮಸ್ತ ಪ್ರಾಕೃತಪ್ರಪಂಚವು ಶ್ರೀಹರಿಯ ರೋಮಕೂಪದಲ್ಲಿ ನೆಲೆಸುವಷ್ಟು ಚಿಕ್ಕದಾಗಿರುವಾಗ ಶ್ರೀಹರಿಯ ವ್ಯಾಪ್ತ ದೇಹ ಅದೆಂತು ಪಂಚಭೂತಗಳ ನಿರ್ಮಾಣವಾಗಿರಲು ಸಾಧ್ಯ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು ; ಆವೃತಿ - ಆವರಣ.

೨. ದಶಾವರಣಗಳ ವಿವರ ಹೀಗಿದೆ :

ಸಾಂಡಂ ಮಹಾಭೂತಮನೋಭಿಮಾನಮಹತ್ಪ್ರಕೃತ್ಯಾ ವೃತಮಬ್ಜಜಾದಿಭಿಃ ।
ಸುರೈಃ ಶಿವೇತ್ಯೈರ್ನರದೈತ್ಯಸಂಘೈರ್ಯುತಂ ದದರ್ಶಾಸ್ಯ ತನೌ ಯಶೋದಾ ॥
-ಮ.ಭಾ.ತಾ.ನಿ.(೧೨/೧೧೪)

ರುಗ್ಮಿಣಿಯ ವಿಶೇಷ ಪ್ರಾರ್ಥನೆ

ಗೋಪೀರಗೋಪೀಃ ಕಿಲ[2] ಲೋಕನಾಥ
ಸ್ವಾಪಚ್ಛಿದಾಪಾದನವಿಕ್ರಮೌಘ ।
ಏವಂ ವಿಭೋ ವಂಚಿತದುರ್ದಶಾಂ ಮಾಂ
ಸ್ವೀಯಾಂ ದಯಾವಾರಿನಿಧೇ ವಿಧೇಹಿ ॥ ೪೭ ॥

ಎಲೈ ಲೋಕನಾಥನಾದ ಶ್ರೀಕೃಷ್ಣ ! ನಿನ್ನವರ ಆಪತ್ತನ್ನು ಪರಿಹರಿಸುವಂತಹ ಪರಾಕ್ರಮ-ರಾಶಿಯೇ ! ಕರುಣಾಸಾಗರನೇ ! ನೀನು ಗೋಪಿಕಾಸ್ತ್ರೀಯರನ್ನು ಪಾಲಿಸಿದೆಯಲ್ಲವೆ ! ಹಾಗೆಯೇ ನನ್ನನ್ನು ದುರ್ದೆಸೆಯಿಂದ ಪಾರು ಮಾಡು.

---

೧. "ಸಾಂಡಕೋಶೋ ಬಹಿರಯಂ ಪಂಚಾಶತ್ಕೋಟಿವಿಸ್ತೃತಃ । ದಶೋತ್ತರಾಧಿಕೈರ್ಯತ್ರ ಪ್ರವಿಷ್ಟಃ ಪರಮಾಣುವತ್ । ಲಕ್ಷ್ಯಂತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ" ಇತಿ ಪುರಾಣಪ್ರಸಿದ್ಧಿಂ ದ್ಯೋತಯತಿ । -ವ್ಯಾ.
ಸಾಂಡಂ ಮಹಾಭೂತಮಾನೋಭಿಮಾನಮಹತ್ಪ್ರಕೃತ್ಯಾ ವೃತಮಬ್ಜಜಾದಿಭಿಃ ।
ಸುರೈಃ ಶಿವೇತ್ಯೈರ್ನರದೈತ್ಯಸಂಘೈರ್ಯುತಂ ದದರ್ಶಾಸ್ಯ ತನೌ ಯಶೋದಾ ॥ -ಮ.ಭಾ.ತಾ.ನಿ(೧೨/೧೧೪)

೨. ಕಿಲೇತ್ಯನೇನ ಅಪ್ಸರೋರೂಪತಯಾ ಸ್ವೈರಿಣೀರಪಿ ಗೋಪೀರಂಗೀಕೃತವಾನಸೀತ್ಯಸ್ವರಸಂ ಸೂಚಯತಿ । -ವ್ಯಾ.

ವಿ : ಶಿಶುಪಾಲಾದಿಗಳಿಂದ ಮಹಾಲಕ್ಷ್ಮಿಯಾದ ರುಗ್ಮಿಣೀದೇವಿಗೆ ಯಾವ ತರನಾದ ಆಪತ್ತು ಸರ್ವಥಾ ಒದಗದು. ಆದರೂ ಹೀಗೆ ಪ್ರಾರ್ಥಿಸುವ ಮೂಲಕ ರುಗ್ಮಿಣಿಯು ಲೋಕಶಿಕ್ಷಣವನ್ನು ಮಾಡಿರುವರು ಎಂದು ತಿಳಿಯಬೇಕು.

### ಶ್ರೀಕೃಷ್ಣರುಗ್ಮಿಣಿಯರು ನಿತ್ಯ ದಂಪತಿಗಳು

**ಕಿಂ ರುಗ್ಮಿಣಾ ಭೀಷ್ಮಕೇಣ ಕಿಮನ್ಯೈರ್ನೃಪಸಂಜ್ಞಿತೈಃ ।**
**ಅನಾದಿಸಿದ್ಧಾಂ ಮಾಂ ಜಾಯಾಂ ನಯತಸ್ತೇ ಪ್ರಯೋಜನಮ್ ॥ ೪೮ ॥**

ಅನಾದಿಕಾಲದ ಪತ್ನಿಯಾದ ನನ್ನನ್ನು ಕರೆದೊಯ್ಯುವುದರಿಂದ ನಿನಗೆ ರುಗ್ಮಿಯಿಂದಾಗಲಿ, ಭೀಷ್ಮಕನಿಂದಾಗಲಿ, ಇತರ ರಾಜರಿಂದಾಗಲಿ ಏನಾದೀತು ?[೧]

ವಿ : [೨]ರುಗ್ಮಿ ಮೊದಲಾದವರು ಹೆಸರಿಗೆ ಮಾತ್ರ ರಾಜರು ಎನ್ನುವ ಮೂಲಕ ಲೋಕನಾಶಕರಾದ ಅವರು ನಿಜ ಅರ್ಥದಲ್ಲಿ ರಾಜರೆನ್ನಿಸಲಾರರು ಎಂಬ ಭಾವ ನಿರೂಪಿತ. ರುಗ್ಮಿಯು ನರಭಕ್ಷಕನಾದ ಇಲ್ವಲರಾಕ್ಷಸನ ಅವತಾರನಾದ್ದರಿಂದ ಅವನು ಲೋಕಪೀಡಕನೆಂಬುದು ಮುಖ್ಯವಾದ ರೀತಿಯಲ್ಲಿ ಸಿದ್ಧ. ಆದರೆ ಭೀಷ್ಮಕನು ಮಿತ್ರನಾಮಕ ಸೂರ್ಯನ ಅವತಾರನಾದರೂ ಅವನಲ್ಲಿ ಲೋಕಪೀಡಕನಾದ [೩]ರಾಹು ಎಂಬ ಅಸುರನ ಅಂಶದ ವಿವಕ್ಷೆಯಿಂದ ಈ ಮಾತು ಬಂದಿದೆ ಎಂದು ತಿಳಿಯಬೇಕು.

### ಶ್ರೀಕೃಷ್ಣನ ಪಾದಕಮಲಗಳ ಪೂಜೆಯನ್ನು ನೀಡಲು ಪ್ರಾರ್ಥನೆ

**ನಯೇಶ ಮಾಮನ್ಯಜನೈರಭೋಗ್ಯಾಂ**
**ತ್ವದಂಘ್ರಿಯುಗ್ಮಾರ್ಚನಕರ್ಮಯೋಗ್ಯಾಮ್ ।**
**ಇಮಾಮವಸ್ಥಾಮವಧೂಯ ನೋ ಚೇ-**
**ದ್ಭವಾಮಿ ಭೂಮ್ನೋ ಹೃದಯಸ್ಯ ಯೋಗ್ಯಾ ॥ ೪೯ ॥**

---

೧. ರುಗ್ಮ್ಯಾದೀನಾಮನಂಗೀಕಾರಸ್ತ್ವಪ್ರಯೋಜಕ ಇತಿ ಭಾವಃ । -ವ್ಯಾ.

೨. ನಯತಸ್ತೇ ಪ್ರಯೋಜನಂ ರುಗ್ಮಿಣಾ ಭೀಷ್ಮಕೇಣ ನೃಪಸಂಜ್ಞಿತೈರನ್ಯೈಃ ಕಿಂ ನೃಪಸಂಜ್ಞಿತೈರಿತ್ಯನೇನ ಪುರುಷಾದರೂಪಾಣಾಂ ತೇಷಾಂ ನೃಪಾಲನರೂಪಯೋಗಾಯೋಗಂ ಸೂಚಯತಿ । -ವ್ಯಾ.

ಭೂಮಿರ್ದೃಪ್ತನೃಪವ್ಯಾಜದೈತ್ಯಾನೀಕಶತಾಯುತೈಃ ।
ಆಕ್ರಾಂತಾ ಭೂರಿಭಾರೇಣ ಬ್ರಹ್ಮಾಣಂ ಶರಣಂ ಯಯೌ ॥ ಭಾಗವತ (೧೦/೧/೧೭)

೩. ಯಃ ಪೂರ್ವಮಾಸ ದಿತಿಜೋ ನರಹೇಲ್ವಲಾಖ್ಯೋ ರುಗ್ಮೀತಿ ನಾಮ ಚ ಬಭೂವ ಸ ಕುಂಡಿನೇಶಃ ॥
ಭಾಗೇತ ಏವ ತನಯಸ್ಯ ಸ ಏವ ಪಷ್ಠೇ ರ್ನಾಮ್ನಾ ಶುಚೇಃ ಸ ತು ಪಿತಾಽಸ್ಯ ಹಿ ಮಿತ್ರಭಾಗಃ ।
ರಾಹ್ವಂಶಯುಕ್ತದನುಜೌ ಕ್ರಥಕೈಶಿಕಾಖ್ಯೌ ಭಾಗೌ ತಥಾಽಗ್ನಿಸುತಯೋಃ ಪವಮಾನಶುಂಧ್ಯೋಃ ॥
-ಮ.ಭಾ.ತಾ.ನಿ.(೧೪/೯೦,೯೧)

ಎಲೈ ಸ್ವಾಮಿ ! ನನ್ನನ್ನು ನೀನು ಈ ಪರಿಸ್ಥಿತಿಯಿಂದ ಪಾರುಮಾಡಿ, ಇತರ ಜನರಿಗೆ ಲಭಿಸಲಾಗದ, ನಿನ್ನ ಎರಡು ಪಾದಕಮಲಗಳ ಅರ್ಚನ ಕಾರ್ಯದಲ್ಲಿ ಅರ್ಹಳನ್ನಾಗಿ ಮಾಡು; ಇಲ್ಲವಾದಲ್ಲಿ ನಾನು ಈ ರೂಪವನ್ನು ತೊರೆದು ಪೂರ್ಣನಾದ ನಿನ್ನ ಹೃದಯದ ವಾಸಕ್ಕೆ ಯೋಗ್ಯಳೆನ್ನಿಸುವೆನು.

ವಿ : [೧]ನೀನು ನನ್ನನ್ನು ಕರೆದೊಯ್ದು ವಿವಾಹವಾಗದಿದ್ದಲ್ಲಿ ನಾನು ದೇಹವನ್ನು ತೊರೆದು ಜನ್ಮಾಂತರದಲ್ಲಾಗಲೀ, ನಿನ್ನ ಪತ್ನಿಯಾಗುವೆ ಎಂಬುದು ಮೇಲ್ನೋಟದ ಅರ್ಥ. ವಾಸ್ತವವಾಗಿ ರುಗ್ಮಿಣೀರೂಪಳಾದ ನನ್ನನ್ನು ನೀನು ಕರೆದೊಯ್ಯದಿದ್ದರೇನಂತೆ ! ನಾನು ಶ್ರೀರೂಪದಿಂದ ಪೂರ್ಣನಾದ ನಿನ್ನ ಹೃದಯದಲ್ಲಿ ಯಾವಾಗಲೂ ನೆಲೆಸಿಯೇ ಇರುವೆನಲ್ಲವೆ ! ಎಂಬುದು ಒಳಗಿನ ಅರ್ಥ.

### ಸಾನುರಾಗಾವಲೋಕನವನ್ನು ನೀಡಲು ಪ್ರಾರ್ಥನೆ

ದಿಶಾಸುನಾಥೇಕ್ಷಣಮಾಶ್ರಿತಾಯಾ
ಮುಕುಂದ ಸೌಂದರ್ಯಸಮುದ್ರಸಾಂದ್ರ ।
ದಿಶಾಸು ನಾಥೇಕ್ಷಣಮಾಶ್ರಿತಾಯಾ-
ಸ್ತದೀಯಭಾಗ್ಯಸ್ಯ ನ ಚೇಚ್ಚರಂತೀ ॥ ೫೦ ॥

ಎಲೈ ಸೌಂದರ್ಯಸಮುದ್ರದಿಂದ ತುಂಬಿದವನೇ! ಪ್ರಾಣನಾಥನೇ! ಮುಕುಂದ ಶ್ರೀಕೃಷ್ಣ! ಆಶ್ರಿತಳಾದ ನನಗೆ ನಿನ್ನ ದರ್ಶನವನ್ನು ನೀಡು, ಇಲ್ಲವಾದಲ್ಲಿ ದಿಕ್ಕುಗಳಲ್ಲಿ ಸ್ವಾಮಿಯಾದ ನಿನ್ನನ್ನು ಕಾಣುವ ಬಯಕೆಯಿಂದ ಅಲೆಯುವಂತಹ ಸ್ತ್ರೀಯಭಾಗ್ಯವನ್ನಾದರೂ ನೀಡು ಎಂದು ಪ್ರಾರ್ಥಿಸುವೆನು.

ವಿ. : ದಿಶ + ಅಸುನಾಥ ; ದಿಶಾಸು + ನಾಥ.. ಎಂದು ಪದಚ್ಛೇದ

### ಐಕ್ಯಚಿಂತನೆಯು ಅನಿಷ್ಟಕರ

ತ್ವದೈಕ್ಯಮಂತಃ ಸ್ಮರತಾಂ ಜನಾನಾಂ
ಭವತ್ಯನಿಷ್ಟಂ ಕಿಲ ದೈತ್ಯಜುಷ್ಟಮ್ ।
ತ್ವದೇಕಪತ್ನೀಮಭಿಕಾಂಕ್ಷತಸ್ತ-
ದುಪೇಕ್ಷಿತುಂ ನಾರ್ಹಸಿ ತಾನಿಮಾಂಸ್ತ್ವಮ್ ॥ ೫೧ ॥

---

೧. ದೇಹಂ ತ್ಯಕ್ತ್ವಾ ಜನ್ಮಾಂತರೇ ತವ ಚಿತ್ತಸ್ಯ ಯೋಗ್ಯಾ ಭವಾಮೀತಿ ಲೌಕಿಕೋಽರ್ಥಃ । ವಸ್ತುತಸ್ತು ರುಗ್ಮಿಣೀರೂಪಾಂ ಮಾಂ ನ ವರಯಸಿ ಚೇಚ್ಛ್ರೀರೂಪತಯಾ ತವ ವಕ್ಷಸ್ಯೇವ ಸ್ಥಾಸ್ಯಾಮೀತಿ ಹೃದಯಮ್ ॥ -ವ್ಯಾ.

ಮನಸ್ಸಿನೊಳಗೆ ನಿನ್ನೊಂದಿಗೆ ಐಕ್ಯವನ್ನು ಚಿಂತಿಸುವ ಜನರಿಗೆ, ದೈತ್ಯರಿಗೆ ಲಭಿಸುವ ಅನಿಷ್ಟವೇ ಲಭಿಸುವುದಲ್ಲವೆ; ಆದ್ದರಿಂದ ನಿನಗೆ ಮಾತ್ರವೇ ಪತ್ನಿಯಾಗಿರುವ ನನ್ನನ್ನು ಬಯಸುತ್ತಿರು-ವಂತಹ ಈ ಶಿಶುಪಾಲಾದಿಗಳನ್ನು ನೀನು ಕಡೆಗಣಿಸುವುದು ತರವಲ್ಲ.

ವಿ : ಶ್ರೀಹರಿಯೊಂದಿಗೆ ಐಕ್ಯಚಿಂತನೆಯು ಅಂಧಂತಮಸ್ಸಿಗೆ ಸಾಧನವಾಗುವಂತೆ ವಿಷ್ಣುಪತ್ನಿ-ಯಾದ ರುಗ್ಮಿಣಿಯನ್ನು ಬಯಸುವುದು ಸಹ ಐಕ್ಯಚಿಂತನೆಯಾದಂತೆಯೇ ಲೆಕ್ಕ ಅಥವಾ ಅದಕ್ಕಿಂತಲೂ ಹೆಚ್ಚಿನ ಅಪರಾಧ ಎಂದರ್ಥ.

### ಶ್ರೀಕೃಷ್ಣರುಗ್ಮಿಣಿಯರು ಅನಾದಿ ದಂಪತಿಗಳು

ತ್ವಮಂಗ ಲಕ್ಷ್ಮೀರಮಣಃ ಸ್ವತಂತ್ರ-
ಸ್ತ್ವದೀಯಜಾಯಾ ಕಮಲಾऽಹಮಸ್ಮಿ ।
ಅಸಜ್ಜನಾನಾಮಭಿಮಾನಹಾನಿಂ
ಮದರ್ಥಿತಾಯಾಶ್ಛಲತೋ ವಿಧತ್ಸ್ವ ॥ ೫೨ ॥

ಪ್ರಿಯನೇ! ನೀನು ಸ್ವತಂತ್ರನಾದ ಲಕ್ಷ್ಮೀರಮಣ; ನಾನಂತೂ ನಿನ್ನ ಪತ್ನಿಯಾದ ಮಹಾಲಕ್ಷ್ಮಿಯೇ ಆಗಿರುವೆನು. ನನ್ನನ್ನು ಬಯಸಿದವರು ಎಂಬ ನೆಪದಿಂದ ದುರ್ಜನ-ರಾದವರ ಅಭಿಮಾನಕ್ಕೆ ಹಾನಿಯನ್ನು ನೀನು ಉಂಟುಮಾಡು.

### ಪತ್ರ ಓದಿ ರಥ ಏರಿದ ಶ್ರೀಕೃಷ್ಣ

ಇತಿ ಪತ್ರಗತಾಲಾಪಂ ಸಮಾಲೋಕ್ಯ ಸ ಮಾಧವಃ ।
ರಥಮಾರುಹ್ಯ ತರಸಾ ಪ್ರತಸ್ಥೇ ಯತ್ರ ಸಾ ಪ್ರಿಯಾ[೧] ॥ ೫೩ ॥

---

೧. ಶ್ರೀಮದ್ಭಾಗವತದಲ್ಲಿ ದಾಖಲಾಗಿರುವಂತೆ ಶ್ರೀರುಗ್ಮಿಣೀದೇವಿಯ ಪತ್ರದ ಪೂರ್ಣಪಾಠ ಹೀಗಿದೆ:

ಶ್ರುತ್ವಾ ಗುಣಾನ್ ಭುವನಸುಂದರ ಶೃಣ್ವತಾಂ ತೇ ನಿರ್ವಿಶ್ಯ ಕರ್ಣವಿವರಂ ಹರತೋಽಂಗ ತಾಪಮ್ ।
ರೂಪಂ ದೃಶಾಂ ದೃಶಿಮತಾಮಖಿಲಾರ್ಥಲಾಭಂ ತ್ವಯ್ಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ ॥
ಕಾ ತ್ವಾ ಮುಕುಂದ ಮಹತೀ ಕುಲಶೀಲರೂಪವಿದ್ಯಾವಯೋದ್ರವಿಣಧಾಮಭಿರಾತ್ಮತುಲ್ಯಮ್ ।
ಧೀರಾ ಪತಿಂ ಕುಲವತೀ ನ ವೃಣೀತ ಕನ್ಯಾ ಕಾಲೇ ನೃಸಿಂಹ ನರಲೋಕಮನೋಭಿರಾಮಮ್ ॥
ತನ್ಮೇ ಭವಾನ್ ಖಲು ವೃತಃ ಪತಿರಂಗ ಜಾಯಾಮಾತ್ಮಾರ್ಪಿತಶ್ಚ ಭವತೋಽತ್ರ ವಿಭೋ ವಿಧೇಹಿ ।
ಮಾ ವೀರಭಾಗಮಭಿಮರ್ಶತು ಚೈದ್ಯ ಆರಾದ್ಗೋಮಾಯುವನ್ಮೃಗಪತೇರ್ಬಲಿಮಂಬುಜಾಕ್ಷ ॥
ಪೂರ್ತೇಷ್ಟದತ್ತನಿಯಮವ್ರತದೇವವಿಪ್ರಗುರ್ವರ್ಚನಾದಿಭಿರಲಂ ಭಗವಾನ್ ಪರೇಶಃ ।
ಆರಾಧಿತೋ ಯದಿ ಗದಾಗ್ರಜ ಏತ್ಯ ಪಾಣಿಂ ಗೃಹ್ಣಾತು ಮೇ ನ ದಮಘೋಷಸುತಾದಯೋಽನ್ಯೇ ॥

ಈ ರೀತಿಯಾದ ಪತ್ರದಲ್ಲಿನ ಸಂದೇಶವನ್ನು ನೋಡಿ, ಲಕ್ಷ್ಮೀರಮಣನಾದ ಶ್ರೀಕೃಷ್ಣ ಕೂಡಲೇ ರಥವನ್ನೇರಿ ತನ್ನ ಪ್ರಿಯೆಯಾದ ರುಗ್ಮಿಣಿಯು ನೆಲೆಸಿದ್ದ ಸ್ಥಳಕ್ಕೆ ತೆರಳಿದನು.

### ವಿದರ್ಭವನ್ನು ತಲುಪಿದ ಶ್ರೀಕೃಷ್ಣ

ಸಂದೇಶಂ ಭೀಷ್ಮಕನ್ಯಾಯಾಃ ಸಂದೃಶ್ಯ ಕಮಲೇಕ್ಷಣಃ ।
ತಂ ದೇಶಂ ದಯಯಾऽಗಚ್ಛನ್ಮಂದಸ್ಮಿತಮುಖೋऽಚ್ಯುತಃ ॥ ೫೪ ॥

ಭೀಷ್ಮಕಪುತ್ರಿಯಾದ ರುಗ್ಮಿಣೀದೇವಿಯ ಸಂದೇಶವನ್ನು ನೋಡಿ, ಪುಂಡರೀಕಾಕ್ಷನಾದ ಅಚ್ಯುತನಾದ ಶ್ರೀಕೃಷ್ಣನು ಕೃಪೆಯಿಂದ ಆ ಸ್ಥಳಕ್ಕೆ ಕಿರುನಗೆಯ ಮುಖದಿಂದ ತೆರಳಿದ.

### ರುಗ್ಮಿಣಿಯ ಪಾಣಿಗ್ರಹಣಕ್ಕೆ ಸಂಕೇತವಾದ ವಿಪ್ರನ ಪಾಣಿಗ್ರಹಣ

ಭೈಷ್ಮೀಕರಗ್ರಹಣಮೇಷ ಕರಿಷ್ಯತೀತಿ
ವಕ್ತವ್ಯಮಸ್ತಿ ಕಿಮಿಹಾಶ್ರಿತಪಕ್ಷಪಾತೀ ।
ಯದ್ಬ್ರಾಹ್ಮಣಸ್ಯ ಸದಯಃ ಕರಪಲ್ಲವೇನ
ಪ್ರತ್ಯಗ್ರಹೀದ್ವಚನಮಾತ್ರಹೃತೋऽಪಿ [೧] ಹಸ್ತಮ್ ॥ ೫೫ ॥

ರುಗ್ಮಿಣೀದೇವಿಯ ಸಂದೇಶವನ್ನು ತಂದಿದ್ದ ಬ್ರಾಹ್ಮಣನ ಕೈಯನ್ನು ಸಹ ಕರುಣೆಯಿಂದ ಶ್ರೀಕೃಷ್ಣ ತನ್ನ ಕರಪಲ್ಲವದಿಂದ ಹಿಡಿದುಕೊಂಡ ಎಂದಮೇಲೆ ಆಶ್ರಿತಪಕ್ಷಪಾತಿಯಾದ ಅವನು ರುಗ್ಮಿಣೀದೇವಿಯ ಪಾಣಿಗ್ರಹಣವನ್ನು ಮಾಡುವನು ಎಂದು ಹೇಳಬೇಕೆ !

ವಿ : ೧. ರುಗ್ಮಿಣಿಯು ಕಳುಹಿಸಿದ ಬ್ರಾಹ್ಮಣನ ಕೈಯನ್ನೇ ಹಿಡಿದ ಕೃಷ್ಣ ರುಗ್ಮಿಣಿಯ ಕೈಯನ್ನು ಹಿಡಿಯದಿರುವನೆ ! ಎಂದು ಭಾವ.

---

ಶ್ವೋಭಾವಿನಿ ತ್ವಮಜಿತೋದ್ವಹನೇ ವಿದರ್ಭಾನ್ ಗುಪ್ತಾನ್ ಸಮೇತ್ಯ ಪೃತನಾಪತಿಭಿಃ ಸಮೇತ್ಯೈಃ ।
ನಿರ್ಮಥ್ಯ ಚೈದ್ಯಮಗಧೇಂದ್ರಬಲಂ ಪ್ರಸಹ್ಯ ಮಾಂ ರಾಕ್ಷಸೇನ ವಿಧಿನೋದ್ವಹ ವೀರ್ಯಶುಲ್ಕಾಮ್ ॥
ಅಂತಃಪುರಾಂತರಚರಾನ್ನವಿಹತ್ಯ ಬಂಧೂಂಸ್ತ್ವಾಮುದ್ವಹೇ ಕಥಮಿತಿ ಪ್ರವದಾಮ್ಯುಪಾಯಮ್ ।
ಪೂರ್ವೇದ್ಯುರಸ್ತಿ ಮಹತೀಕುಲದೇವಿಯಾತ್ರಾ ಯಸ್ಯಾಂ ಬಹಿರ್ನವವಧೂರ್ಗಿರಿಜಾಮುಪೇಯಾತ್ ॥
ತತ್ರೈತ್ಯ ಮಾಂ ರಥಪದಾತಿಗಜಾಶ್ವಯುಕ್ತಃ ಸಮ್ಮಥ್ಯ ಸಾಲ್ವಮಗಧಾನ್ ಸಹಚೇದಿಭೂಪಾನ್ ।
ಆದಾಯ ಮಾಂ ಸಹಚರೀಭಿರಥೋ ರಮೇಶೋ ಗೃಹ್ಣಾತು ಪಾಣಿಮುಪನೀಯ ಪುರೀಂ ಸ್ವಕೀಯಾಮ್ ॥
ಯಸ್ಯಾಂಘ್ರಿಪಂಕಜರಜಃಸ್ನಪನಂ ಮಹಾಂತೋ ವಾಂಛಂತ್ಯುಮಾಪತಿರಿವಾತ್ಮತಮೋಪಹತ್ಯೈ ।
ಯರ್ಹ್ಯಂಬುಜಾಕ್ಷ ನ ಲಭೇಯ ಭವತ್ಪ್ರಸಾದಂ ಜಹ್ಯಾಮಸೂನ್ ವ್ರತಕೃಶಾ ಶತಜನ್ಮಭಿಃ ಸ್ಯಾಮ್ ॥
ಇತಿ ಪತ್ರಗತಂ ವಿಷ್ಣುಂ ವಿಮೃಶ್ಯ ಮಧುಸೂಧನಃ ।
ಸಂದೇಶಂ ರಾಜಕನ್ಯಾಯಾಸ್ತಂ ಬ್ರಾಹ್ಮಣಮಪೃಕ್ಷತ ॥ -ಭಾಗ.(೧೦/೫೭/೩೬-೪೫)

೧. ತಂ ಭುಕ್ತವಂತಂ ವಿಶ್ರಾಂತಮುಪಗಮ್ಯ ಸತಾಂ ಗತಿಃ ।
ಪಾಣಿನಾऽಭಿಮೃಶನ್ ಪಾದಾವವ್ಯಗ್ರಸ್ತಮಪೃಚ್ಛತ ॥ -ಭಾಗ.(೧೦/೫೭/೨೭)

೨. ರುಗ್ಮಿಣಿಯು ಶ್ರುತಿತತಿಗಳ ಅಭಿಮಾನಿಯಾದ ಮಹಾಲಕ್ಷ್ಮಿ. ಅವಳು ಕಳುಹಿಸಿದ ಬ್ರಾಹ್ಮಣ ಎಂದರೆ ಬ್ರಹ್ಮಜ್ಞಾನಿ. ಶಾಸ್ತ್ರಾಧ್ಯಯನದ ಮೂಲಕ ಶ್ರೀಹರಿಯನ್ನು ಆರಾಧಿಸುವವನ ಕೈಯನ್ನು ಶ್ರೀಹರಿಯು ಕೈಹಿಡಿಯುವುದು ನಿಶ್ಚಿತ ಎಂಬ ತತ್ತ್ವ ಇಲ್ಲಿ ಸೂಚಿತ.

### ಸೂರ್ಯೋದಯದಂತಾದ ಶ್ರೀಕೃಷ್ಣನ ಆಗಮನ

ಉದ್ಯನ್ಮರೀಚಿಶತಭಾಸಿತಸರ್ವದೇಶಃ
ಪದ್ಮೋದಯಾಯ ಸ ನಿಶಾಚರಘೂಕಶೋಕಮ್ ।
ಪುಷ್ಣನ್ ಲಲಾಸ ದಿನರಾಡಿವ ಪೂರ್ವಸಿಂಧೋಃ
ಸಚ್ಚಕ್ರಮಾನಿತಗತಿರ್ಹಿ ತದೋಪಕಂಠೇ ॥ ೫೬ ॥

ಪ್ರಕಾಶಮಾನವಾದ ಸಹಸ್ರಾರು ಕಿರಣಗಳಿಂದ ಸಕಲದೇಶಗಳನ್ನೂ ಬೆಳಗುತ್ತಾ, ಮಹಾಲಕ್ಷ್ಮಿಯೆಂಬ ಕಮಲದ ಅಭ್ಯುದಯಕ್ಕೆಂದು ರಕ್ಕಸರೆಂಬ ಗೂಬೆಗಳಿಗೆ ಶೋಕವನ್ನು ಹೆಚ್ಚಿಸುತ್ತಾ ಸಜ್ಜನವೃಂದವು ಗೌರವಿಸಿದ ಆಗಮನದ ಆ ಶ್ರೀಕೃಷ್ಣನು, ಸೂರ್ಯನು ಪೂರ್ವಸಮುದ್ರದಲ್ಲೆಂಬಂತೆ ಕಂಗೊಳಿಸಿದ.

ವಿ : ೧. ಬ್ರಾಹ್ಮಣನ ಮೂಲಕ ರುಗ್ಮಿಣಿಯ ಸಂದೇಶವನ್ನು ಆಲಿಸಿದ ಶ್ರೀಕೃಷ್ಣ ಅಲ್ಲಿಂದ ತೆರಳಲು ಸನ್ನದ್ಧನಾದ ವಿವರವನ್ನು ಸೂರ್ಯೋದಯಕ್ಕೆ ಹೋಲಿಸುತ್ತಾ ತಿಳಿಸಿರುವರು.

೨. ಸೂರ್ಯನ ಉದಯ ದಿಕ್ಕುಗಳನ್ನು ಬೆಳಗಿಸುವುದು, ಕಮಲಗಳನ್ನು ಅರಳಿಸುವುದು, ಗೂಬೆಗಳ ಶೋಕವನ್ನು ಹೆಚ್ಚಿಸುವುದು, ಚಕ್ರವಾಕ ಪಕ್ಷಿಗಳಿಗೆ ನಲಿವು ನೀಡುವುದು; ಅದರಂತೆ ಶ್ರೀಕೃಷ್ಣನ ಆಗಮನದಿಂದ ಸಕಲ ದೇಶಗಳು ಹರ್ಷಿಸಿದವು. ರುಗ್ಮಿಣಿಗೆ ಅಭ್ಯುದಯ ಒದಗಿತು. ರಕ್ಕಸರಿಗೆ ನೋವು ಹೆಚ್ಚಿತು ಎಂದರ್ಥ ; ಮರೀಚಿ - ಕಿರಣ ; ಘೂಕ - ಗೂಬೆ.

೩. ಪದ್ಮೋದಯ, ಸಚ್ಚಕ್ರಮಾನಿತಗತಿ ಎಂಬಲ್ಲಿ ಶ್ಲೇಷಾಲಂಕಾರ ; ನಿಶಾಚರಘೂಕ ಎಂಬಲ್ಲಿ ರೂಪಕಾಲಂಕಾರ.

### ಪಟ್ಟಣವನ್ನು ಪ್ರವೇಶಿಸದ ಶ್ರೀಕೃಷ್ಣ

ದುಷ್ಟೌಘಪೂರ್ಣಾಂ ನಗರೀಂ ಪ್ರವೇಷ್ಟುಂ
ಕೃಷ್ಣೋ ಹ್ಯನಿಚ್ಛನ್ ಬಹಿರೇವ ವಾಸಮ್ ।
ಚಕ್ರೇ ಸ್ಥಲೀ ನಾಗರಿಕೈರ್ವೃತಾ ಸಾ
ತದೀಕ್ಷಣೋತ್ಕೈರಜಯತ್ ಪುರೀಂ ತಾಮ್ ॥ ೫೭ ॥

ದುರ್ಜನರ ಗುಂಪುಗಳಿಂದ ತುಂಬಿದ ಆ ಪಟ್ಟಣವನ್ನು ಪ್ರವೇಶಿಸಲು ಬಯಸದೆ ಶ್ರೀಕೃಷ್ಣ ಊರಹೊರಗೆ ನೆಲೆಸಿದ; ಅವನ ದರ್ಶನಕ್ಕೆ ಕಾತರರಾಗಿದ್ದ ಪಟ್ಟಣವಾಸಿಗಳಿಂದ ತುಂಬಿಹೋಗಿದ್ದ ಆ ಸ್ಥಳವು ಪಟ್ಟಣವನ್ನು ಮೀರಿಸಿತು.

ವಿ : ೧. [1]ಶ್ರೀಕೃಷ್ಣನು ಭೀಷ್ಮಕನ ರಾಜಧಾನಿಯಾದ ಆ ಕುಂಡಿನನಗರವನ್ನು ಪ್ರವೇಶಿಸದೆ ಅದರ ಹೊರವಲಯದಲ್ಲಿಯೇ ನೆಲೆಸಿದ ಎಂದರ್ಥ.

೨. ಶ್ರೀಕೃಷ್ಣ ಹಾಗೆ ಮಾಡುವ ಮೂಲಕ ದುಷ್ಟಜನರು ನೆರೆದ ಸ್ಥಳವು ಪಟ್ಟಣವೇ ಆಗಿದ್ದರೂ ಪ್ರವೇಶಕ್ಕೆ ಅನರ್ಹ ಎಂಬ ತತ್ತ್ವವನ್ನು ಸೂಚಿಸಿದ ಎಂದು ತಿಳಿಯಬೇಕು. ಶ್ರೀಮದ್ಭಾಗವತದಲ್ಲಿ ಬಂದಿರುವಂತೆ ಪಟ್ಟಣವಾಸವೇ ಸಾತ್ತ್ವಿಕವೆನ್ನಿಸದು ಎಂಬ ವಿವರವು ಗಮನಾರ್ಹ: **ವನಂ ತು ಸಾತ್ತ್ವಿಕೋ ವಾಸಃ।** (೧೧/೨೫/೨೫)

೩. ಆದರೆ ಶ್ರೀಕೃಷ್ಣನ ಸನ್ನಿಧಾನದಿಂದಾಗಿ ಅವಳು ನೆಲೆಸಿದ್ದ ಆ ಪ್ರದೇಶವೇ ಪಟ್ಟಣಕ್ಕಿಂತ ಹೆಚ್ಚಿನ ಶೋಭೆಯನ್ನು ಪಡೆಯಿತು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ. ಸಾಕ್ಷಾತ್ ಶ್ರೀಹರಿಯೇ ಆದ ಅವನು ನೆಲೆಸಿದಾಗ ಸಕಲ ಬಗೆಯ ವೈಭವವೂ ಅಲ್ಲಿ ನೆಲೆಸುವುದು ಸಹಜ ಎಂದು ಭಾವ; ಶ್ರೀಕೃಷ್ಣ ನೆಲೆಸಿದ ವೃಂದಾವನವೇ ಇಂದ್ರಸದನದಂತಾಗಿದ್ದಿತ್ತು. ಸುರಲೋಕಕ್ಕಿಂತ ಮಿಗಿಲಾಗಿದ್ದಿತು ಎಂಬ ಮಹಾಭಾರತತಾತ್ಪರ್ಯನಿರ್ಣಯ(೧೪/೭)ದ ವಚನ ಇಲ್ಲಿ ಸ್ಮರಣೀಯ : **ವೃಂದಾವನಂ ಯದಧಿವಾಸತ ಆಸ ಸಂಧ್ಯಜ್ ಮಾಹೇಂದ್ರಸದ್ಮಸದೃಶಮ್.**

**ಶ್ರೀಕೃಷ್ಣನನ್ನು ಅಭಿನಂದಿಸಿದ ಪುರವಾಸಿಗಳು**

**ಶೌರಿಂ ತದೋಪಾಯನಪಾಣಯಸ್ತ-**
**ಮಾಲೋಕ್ಯ ಸೌಂದರ್ಯಸಮುದ್ರಸಾಂದ್ರಮ್ ।**
**ವೀರಾನಪಾರ್ಥಾನಪರಾನುಪೇಕ್ಷ್ಯ**
**ಪೌರಾಃ ಸದಾರಾಃ ಕಿಲ ತೇ ಪ್ರಚಕ್ರುಃ ॥ ೫೮ ॥**

ಆಗ ಕೈಯಲ್ಲಿ ಕಾಣಿಕೆಗಳನ್ನು ಹಿಡಿದಿದ್ದ ಸಪತ್ನೀಕರಾದ ಆ ಪಟ್ಟಣಿಗರು ಸೌಂದರ್ಯದ ನಿಬಿಡಸಾಗರನಾಗಿದ್ದ ಶ್ರೀಕೃಷ್ಣನನ್ನು ಕಂಡು ಇತರ ವೀರರನ್ನು ಉಪೇಕ್ಷಿಸಿ, ಅವರು ವ್ಯರ್ಥವೆಂಬುದಾಗಿ ಭಾವಿಸಿದರು.

ವಿ : ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ಆ ಜನರು ಶ್ರೀಕೃಷ್ಣನೇ ರುಗ್ಮಿಣಿಗೆ ತಕ್ಕ ವರ ಎಂಬ ಖಚಿತ ಭಾವವನ್ನು ಹೊಂದಿ ಆಗಮಿಸಿದ್ದ ಶಿಶುಪಾಲಾದಿಗಳನ್ನು ಅನರ್ಹರು ಎಂಬುದಾಗಿ [2]ನಿಶ್ಚೈಸಿಕೊಂಡರು ಎಂದರ್ಥ.

---

೧. ನಗರಾದಪ್ಯಧಿಕಂ ಕೃಷ್ಣಾಧಿಷ್ಠಿತಸ್ಥಲೀ ಶುಶುಭ ಇತ್ಯರ್ಥಃ। -ವ್ಯಾ.

೨. ಶ್ರೀಕೃಷ್ಣಂ ಪ್ರಶಂಸದ್ಭಿಃ ಪೌರೈರೇವ ಶ್ರೀಕೃಷ್ಣಸ್ಪರ್ಧಿನಶ್ಚೈದ್ಯಾದೀನುಪೇಕ್ಷ್ಯೈವ ಧಿಕ್ಕೃತ್ಯ ಶ್ರೀಕೃಷ್ಣಕಾರ್ಯಂ ಸಾಧಿತಮಿತಿ ಭಾವಃ। -ವ್ಯಾ.

## ಮನ್ಮಥನನ್ನು, ಸೂರ್ಯಚಂದ್ರರನ್ನು ಮೀರಿಸಿದ ಶ್ರೀಕೃಷ್ಣ

ನಾಯಂ ಸ್ಮರಃ ಶ್ಯಾಮಲಕೋಮಲಾಂಗೋ
ನಾಯಂ ಶಶೀ ವೀತಕಲಂಕಶಂಕಃ।
ನಾಯಂ ರವಿರ್ಲೋಕದೃಗಾರ್ತಿಹಾರೀ
ಸೋಽಯಂ ಪುರಾಣಃ ಪುರುಷೋಽದ್ವಿತೀಯಃ ॥ ೫೯ ॥

ಶ್ಯಾಮಲವರ್ಣದ ಕೋಮಲದೇಹದ ಇವನು (ಅನಂಗನಾದ) ಮನ್ಮಥನಲ್ಲ ; ಕಲಂಕ-ಲೇಶವೂ ಇರದ ಇವನು ಚಂದ್ರನೂ ಅಲ್ಲ ; ಜನರ ಕಣ್ಣುಗಳ ಬೇಗೆಯನ್ನು ನೀಗಿಸುವ ಇವನು ಸೂರ್ಯನೂ ಅಲ್ಲ; ಇವನು ಅದ್ವಿತೀಯನಾದ ಪುರಾಣಪುರುಷನಾದ ಶ್ರೀಹರಿಯೇ ಸರಿ.

ವಿ : ೧. ಶ್ರೀಕೃಷ್ಣನನ್ನು ಕಾಣುತ್ತಲೇ ಅವನ ಹಿರಿಮೆಯನ್ನು ಬಗೆಬಗೆಯಾಗಿ ಅರಿತ ಆ ಪಟ್ಟಣವಾಸಿ ಜನರ ಚಿಂತನೆಯ ಕ್ರಮ ಇಲ್ಲಿ ನಿರೂಪಿತವಾಗಿದೆ.

೨. ಶ್ರೀಕೃಷ್ಣನು ಮನ್ಮಥ, ಚಂದ್ರ ಸೂರ್ಯರಿಗಿಂತ ವಿಲಕ್ಷಣನೂ ಅತ್ಯುತ್ತಮನೂ ಆದವನೆಂಬುದನ್ನು ಇಲ್ಲಿ ವಿಶಿಷ್ಟರೀತಿಯಲ್ಲಿ ತಿಳಿಸಿರುವರು.

೩.. [೧]ಶ್ರೀಕೃಷ್ಣ ತುಂಬಾ ಸುಂದರ ಆದರೆ ಮನ್ಮಥನಲ್ಲ; ಮನ್ಮಥನು ಅನಂಗನಲ್ಲವೆ! ಶ್ರೀಕೃಷ್ಣನು ಅಪಾರ ತಂಪು ನೀಡುವ ಮಹನೀಯ ಆದರೆ ಯಾವುದೇ ವಿಧವಾದ ಕಲಂಕವು ಇಲ್ಲದ್ದರಿಂದ ಅವನು ಚಂದ್ರನಲ್ಲ; ಚಂದ್ರನಲ್ಲಿ ಒಂದು ಕಪ್ಪು ಕಲೆ ಇರುವುದಲ್ಲವೆ! ಶ್ರೀಕೃಷ್ಣ ನೀಡುವ ಬೆಳಕು ಅಪಾರವಾದುದು; ಆದರೆ ಅವನು ಸೂರ್ಯನಲ್ಲ , ಸೂರ್ಯನ ಬಿಸಿಲು ಬೇಗೆಯನ್ನು ಉಂಟುಮಾಡುವುದಲ್ಲವೆ ! ಎಂಬುದು ಇಲ್ಲಿಯ ನಿರೂಪಣೆಯ ಬಗೆ.

೪. ಇದು ಸುಮಧ್ವವಿಜಯದಲ್ಲಿ ಉತ್ತರಬದರಿಯಲ್ಲಿ ನೆಲೆಸಿದ್ದ ಋಷಿಮುನಿಗಳು ಅಲ್ಲಿಗೆ ಆಗಮಿಸಿದ ಶ್ರೀಮಧ್ವಾಚಾರ್ಯರನ್ನು ಕಾಣುತ್ತಲೇ ಚಿಂತಿಸಿದ ಬಗೆಯನ್ನು ತಿಳಿಸುವ ಈ ಕೆಳಗಿನ ಶ್ಲೋಕವನ್ನು ಜ್ಞಾಪಿಸುತ್ತದೆ :

ಅತಿಶಾಂತವಪುರ್ನಿಶಾಕರಃ ಸ್ವಯಮೇಕಾಂತಖರೋ ಹಿ ದಿವಾಕರಃ।

-ಸು.ವಿ.(೭/೭)

೫. ಶ್ರೀಕೃಷ್ಣನು ಇಲ್ಲಿ ಸೂರ್ಯಚಂದ್ರರಿಗಿಂತ ಮಾತ್ರವಲ್ಲದೆ, ಬ್ರಹ್ಮಾದಿ ಸಕಲರಿಗಿಂತಲೂ ಭಿನ್ನನಾದ ಸರ್ವೋತ್ತಮ ಎಂಬುದು ಒಟ್ಟು ಭಾವ; ನರಸಿಂಹ ಎಂಬಲ್ಲಿ ನರರಿಗಿಂತ, ಮೃಗ-

---

೧. ತಸ್ಯೋಷ್ಣಕಿರಣತಯಾ ತಾಪನಕ್ಲೇಶಕತ್ವಾದಿತಿ ಭಾವಃ। ಸೋಽಯಮದ್ವಿತೀಯಃ ಅಸದೃಶಃ ಪುರಾಣಃ ಪುರುಷ ಏವ ವ್ಯತಿರೇಕಾಲಂಕಾರಃ। -ವ್ಯಾ.

ಗಳಿಗಿಂತ ಮಾತ್ರವಲ್ಲದೆ ಸಕಲರಿಗಿಂತ ಎಂಬ ಅರ್ಥವು ಹೇಗೆ ವಿವಕ್ಷಿತವೋ ಹಾಗೆ ಎಂದು ತಿಳಿಯಬೇಕು.

**ಶ್ರೀಕೃಷ್ಣರುಗ್ಮಿಣಿಯರ ಯೋಗವನ್ನು ಹಾರೈಸಿದ ಪಟ್ಟಣಿಗರು**

ಶ್ರೀರೇವ ಸಾ ಭೀಷ್ಮಸುತಾ ಮನೋಜ್ಞಾ
ಶ್ರೀವಲ್ಲಭೋಽಯಂ ಸುಭಗಾಗ್ರಗಣ್ಯಃ।
ಏತೌ ಸಮೇತೌ ಭವತಾಮಿತೀಮೇ
ಧಾತಾರಮಾತ್ಮೇಷ್ಟದಮರ್ಥಯಂತೇ[1] ॥ ೬೦ ॥

ಆ ಭೀಷ್ಮಕಪುತ್ರಿಯಾದ ಸುಂದರಿಯಾದ ರುಗ್ಮಿಣಿಯು ಸಾಕ್ಷಾತ್ ಮಹಾಲಕ್ಷ್ಮಿಯೇ. ಮಹಾ ಐಶ್ವರ್ಯಶಾಲಿಗಳಲ್ಲಿ ಅಗ್ರೇಸರನಾದ ಈ ಶ್ರೀಕೃಷ್ಣನಂತೂ ಸಾಕ್ಷಾತ್ ಲಕ್ಷ್ಮೀಪತಿಯೇ; ಇವರೀರ್ವರು ಜೊತೆಯಾಗಲಿ ಎಂಬುದಾಗಿ ತಮ್ಮ ಮನೋಭೀಷ್ಟವನ್ನು ಪೂರೈಸುವ ವಿಧಿಯನ್ನು ಆ ಜನರು ಬೇಡಿಕೊಂಡರು.

ವಿ : ೧. ಶ್ರೀಕೃಷ್ಣರುಗ್ಮಿಣಿಯರು ಸಾಕ್ಷಾತ್ ಲಕ್ಷ್ಮೀನಾರಾಯಣರೇ ಆಗಿದ್ದು ಅವರ ಜೋಡಿ ಅನುಪಮ ಎಂಬುದು ಇಲ್ಲಿಯ ಭಾವ.

೨. ಅದರ ಸಾರ್ಥಕತೆಯನ್ನು ಕಂಡ ಆ ಜನರಿಗೆ ಆ ಸ್ವಯಂವರವು ಅವರೀರ್ವರ ಕಲ್ಯಾಣದಲ್ಲಿ ಪರ್ಯವಸಾನವಾಗಬೇಕೇ ಹೊರತು ಸರ್ವಥಾ ತಪ್ಪಕೂಡದು ಎಂಬ ಭಾವ ಹುಟ್ಟಿದ್ದನ್ನು ವರ್ಣಿಸುವ ವಿಶಿಷ್ಟರೀತಿ ಇಲ್ಲಿದೆ.

೩.. ಹೀಗೆ ಸಾಮಾನ್ಯಜನರಿಗೂ ತಿಳಿಯುವ ಅವರ ಅನುರೂಪತೆಯನ್ನು ಜರಾಸಂಧ ನೇತೃತ್ವದ ಚೈದ್ಯ ಮೊದಲಾದವರು ಗಮನಿಸದೆ, ತಮ್ಮ ಅವಿವೇಕವನ್ನು ಸ್ಥಿರಪಡಿಸಿಕೊಂಡರು ಎಂಬ ಸೂಚನೆಯು ಇಲ್ಲಿದೆ.

**ಸುವರ್ಣರತ್ನಗಳಂತಹ ಶ್ರೀಕೃಷ್ಣರುಗ್ಮಿಣಿಯರು**

ಗೃಹ್ಣಾತಿ ಯರ್ಹ್ಯೇಣದೃಶೀಕರಂ ನಃ
ಪುಣ್ಯೇನ ಸೋಽಯಂ ಪುರುಷಾಗ್ರಗಣ್ಯಃ।

---

೧. ಕೃಷ್ಣಮಾಗತಮಾಕರ್ಣ್ಯ ವಿದರ್ಭಪುರವಾಸಿನಃ।
ಆಗತ್ಯ ನೇತ್ರಾಂಜಲಿಭಿಃ ಪಪುಸ್ತನ್ಮುಖಪಂಕಜಮ್ ॥
ಅಸ್ಯೈವ ಭಾರ್ಯಾ ಭವಿತುಂ ರುಗ್ಮಿಣ್ಯರ್ಹತಿ ನಾಪರಾ ॥
ಅಸಾವಪ್ಯನವದ್ಯಾತ್ಮಾ ಭೈಷ್ಮ್ಯಾಃ ಸಮುಚಿತಃ ಪತಿಃ।
ಕಿಂಚಿತ್ ಸುಚರಿತಂ ಯನ್ನಸ್ತೇನ ತುಷ್ಟಸ್ತ್ರಿಲೋಕಕೃತ್।
ಅನುಗೃಹ್ಣಾತು ಗೃಹ್ಣಾತು ವೈದರ್ಭ್ಯಾಃ ಪಾಣಿಮಚ್ಯುತಃ ॥
ಏವಂ ಪ್ರೇಮಕಲಾಬದ್ಧಾ ವದಂತಿ ಸ್ಮ ಪುರೌಕಸಃ ॥ - ಭಾಗ.(೧೦/೫೮/೩೭-೪೦)

ಸ್ವರ್ಣೇ ತದಾ ನೀಲಮಣಿಂ ಸಮೇತಂ
ಮನ್ಯಾಮಹೇ ಲೋಹಮಥೋಽನ್ಯಥಾ ಚೇತ್ ॥ ೬೧ ॥

ನಮ್ಮ ಪುಣ್ಯದಿಂದಾಗಿ ಈ ಪುರುಷಶ್ರೇಷ್ಠನಾದ ಶ್ರೀಕೃಷ್ಣನು ಈ ಹರಿಣಾಕ್ಷಿಯಾದ ರುಗ್ಮಿಣಿಯ ಕೈಯನ್ನು ಹಿಡಿಯುವುದಾದಲ್ಲಿ ನಾವು ಇಂದ್ರನೀಲಮಣಿಯು ಸುವರ್ಣದಲ್ಲಿ ಖಚಿತ-ವಾದಂತಾಗುವುದು; ಇಲ್ಲವಾದಲ್ಲಿ ಆ ಮಣಿಗೆ ಕಬ್ಬಿಣದ ಕವಚ ಹಾಕಿದಂತೆಯೇ ಸರಿ.

ವಿ : ಶ್ರೀಕೃಷ್ಣ-ರುಗ್ಮಿಣಿಯರ ಜೋಡಿ ಸುವರ್ಣರತ್ನಗಳ ಮಿಲನದಂತೆ ಅತ್ಯಂತ ಸಾರ್ಥಕ ಎಂದರ್ಥ. ಶ್ರೀಕೃಷ್ಣನ ಹೊರತು ರುಗ್ಮಿಣಿಯ ಕೈಹಿಡಿಯ ಬಯಸುವ ಜನರು ಕಬ್ಬಿಣದಂತೆ ಸರ್ವಥಾ ವಿಷಮರೆನ್ನಿಸುವುದು ನಿಶ್ಚಿತ ಎಂದರ್ಥ.

ಶ್ರೀಕೃಷ್ಣನ ಕರುಣಾಕಟಾಕ್ಷಕ್ಕೆ ಪಾತ್ರರಾದ ಪಟ್ಟಣಿಗರು

ಇತ್ಥಂ ಗೃಣಂತಃ ಕಿಲ ವೃಂದಶಸ್ತಂ
ನತ್ವಾ ಮುಕುಂದಂ ನಯನೈಃ ಪಪುಸ್ತೇ ।
ಕೃಷ್ಣೋಽಪಿ ಸರ್ವಾನ್ ಸದಯಾವಲೋಕೈ-
ರ್ಮುಗ್ಧಸ್ಮಿತೋಽರಂಜಯದಂಜಸಾ ತಾನ್ ॥ ೬೨ ॥

ಹೀಗೆ ಕೊಂಡಾಡುತ್ತಾ ಆ ಜನರು ಗುಂಪುಗುಂಪಾಗಿ ಶ್ರೀಕೃಷ್ಣನನ್ನು ವಂದಿಸಿ, ತಮ್ಮ ಕಣ್ಣುಗಳಿಂದ ಅವನನ್ನು ಹೀರಿದರು; ಶ್ರೀಕೃಷ್ಣನಾದರೋ ಅವರೆಲ್ಲರನ್ನೂ ತನ್ನ ದಯಾ-ಪೂರ್ಣನೋಟಗಳಿಂದ ನೋಡುತ್ತಾ ಮುಗ್ಧನಗೆಯನ್ನು ಸೂಸುತ್ತಾ ಬಹಳವಾಗಿ ಸಂತೋಷಪಡಿಸಿದ.

ವಿ : ಶ್ರೀಕೃಷ್ಣನ ಸೌಂದರ್ಯವನ್ನು ಅವರು ಹೀಗೆ ಹೀರಿದರು ಎಂಬುದು ಮಹಾಭಾರತ-ತಾತ್ಪರ್ಯನಿರ್ಣಯದಲ್ಲಿನ ಈ ಕೆಳಗಿನ ಶ್ಲೋಕವನ್ನು ಹೋಲುವುದು : ಪಪುರ್ನಿತಾಂತಂ ಸರಸಾಕ್ಷಿಭೃಂಗೈರ್ವರಾನನಾಬ್ಜಂ ಪುರುಷೋತ್ತಮಸ್ಯ । (೪/೧೨)

ರುಗ್ಮಿಣಿ ಮಾಡಿದ ಕುಲದೇವಿಯಾತ್ರೆ

ಚಲತ್ಪತಾಕೋಜ್ಜ್ವಲಚಾಮರೌಘಾಂ
ಪರಿಸ್ಫುರಚ್ಛತ್ರಸಹಸ್ರಶೋಭಾಮ್ ।
ವಿಚಿತ್ರತೂರ್ಯಧ್ವನಿಪೂರಿತಾಶಾ-
ಮಥೋ ವಿತೇನುಃ ಕುಲದೇವಿಯಾತ್ರಾಮ್[೧] ॥ ೬೩ ॥

---

೧. ಪೂರ್ವೇದ್ಯುರಸ್ತಿ ಮಹತೀ ಕುಲದೇವಿಯಾತ್ರಾ । -ಭಾಗ. (೧೦/೫೨/೪೨)

ಆ ಬಳಿಕ ಹಾರುವ ಪತಾಕೆಗಳಿಂದ ಶೋಭಿಸುವ ಚಾಮರಗಳ ಸಾಲಿನಿಂದ ಕೂಡಿದ, ಕಂಗೊಳಿಸುವ ಸಹಸ್ರಾರು ಶ್ವೇತಚ್ಛತ್ರಗಳ ಶೋಭೆಯನ್ನು ಹೊಂದಿದ, ಬಗೆಬಗೆಯ ವಾದ್ಯಗಳ ಧ್ವನಿಗಳಿಂದ ಗಗನವನ್ನು ಆವರಿಸಿದ, ಕುಲದೇವತಾಯಾತ್ರೆಯನ್ನು ನಡೆಸಿದರು.

ವಿ : ರುಗ್ಮಿಣಿಯ ವಿವಾಹದ ಮುನ್ನ ನಡೆದ ಕುಲದೇವತಾಯಾತ್ರೆಯ ವಿವರ ಇಲ್ಲಿದೆ. ಆ ಸ್ಥಳದಲ್ಲಿ ಆಗಲೇ ಶ್ರೀಕೃಷ್ಣ ಬಂದು ನೆಲೆಸಿದ್ದ; ತೂರ್ಯ – ವಾದ್ಯ.

### ಗೃಹದೇವನಾದ ಶ್ರೀಕೃಷ್ಣನತ್ತ ರುಗ್ಮಿಣಿ

ಸ್ವಜನಕಗೃಹದೇವಂ ಪೌತ್ರಮಾರಾಧ್ಯ ಭೈಷ್ಮೀ
ನಿಜಮಥ ಗೃಹದೇವಂ ಮಾಧವಂ ದ್ರಷ್ಟುಕಾಮಾ ।
ಅಪಿ ಪುರಮಭಿಯಾಂತೀ ಸಾ ರಥಂ ನಾರುರೋಹ
[1]ಪ್ರಿಯಚರಣಸಕಾಶಂ ತೇವನೇನ[2] ವ್ರಜಂತೀ ॥ ೬೪ ॥

ತನ್ನ ತಂದೆಯ ಮನೆದೇವರಾದ ತನ್ನ ಪೌತ್ರ ಶಿವನನ್ನು ಆರಾಧಿಸಿದ ರುಗ್ಮಿಣಿಯು ತನ್ನ ಮನೆದೇವರಾದ ಶ್ರೀಕೃಷ್ಣನನ್ನು ಕಾಣಬಯಸಿದವಳಾಗಿ, ಪಟ್ಟಣದತ್ತ ಹೊರಟಿದ್ದರೂ ತನ್ನ ಪ್ರಿಯನಾದ ಶ್ರೀಕೃಷ್ಣನ ಪಾದಸನ್ನಿಧಿಗೆ ಕಾಲ್ನಡಿಗೆಯಿಂದಲೇ ಹೊರಡಲೆಂದು ರಥವನ್ನು ಏರಲಿಲ್ಲ.

ವಿ : ೧. ಶ್ರೀಕೃಷ್ಣನು ಹಾಗೆ ಸಂದರ್ಶಿಸಿದ್ದು ಶಿವ-ಪಾರ್ವತಿಯರ ಸನ್ನಿಧಾನವಿದ್ದ ದೇವಸ್ಥಾನ. ಅದು ಹೆಸರಿಗೆ ತಂದೆ ಎನ್ನಿಸಿಕೊಂಡಿದ್ದ ಭೀಷ್ಮಕರಾಜನ [3] ಕುಲದೇವತೆ. ಆದರೆ ಮಹಾಲಕ್ಷ್ಮಿಯಾದ ತನ್ನ ಕುಲದೇವತೆಯೆಂದರೆ ಸಾಕ್ಷಾತ್ ಶ್ರೀಕೃಷ್ಣನೇ ಎಂಬುದನ್ನು ತಿಳಿಸಲು ಮೊದಲಿಗೆ ಆ ದೇವಸ್ಥಾನವನ್ನು ಸಂದರ್ಶಿಸಿದ ರುಗ್ಮಿಣಿಯು ಶ್ರೀಕೃಷ್ಣನ ಬಳಿಗೆ ತೆರಳಿದಳು ಎಂದರ್ಥ.

೨. ರುಗ್ಮಿಣಿಯು ಆಗ ರಥವನ್ನೇರದೆ ಕಾಲ್ನಡಿಗೆಯಿಂದಲೇ ತೆರಳುವ ಮೂಲಕ ತನ್ನ ದೇವರಾದ ಶ್ರೀಕೃಷ್ಣನ ಬಳಿಗೆ ರಥದಲ್ಲಿ ತೆರಳುವುದು ಉಚಿತವಲ್ಲ ಎಂಬುದನ್ನು ತೋರಿಸಿಕೊಟ್ಟಳು ಎಂದೂ ಅರ್ಥ ; ತೇವನ – ಕಾಲ್ನಡಿಗೆ.

೩.. ದೇವಸ್ಥಾನಕ್ಕೆ ತೆರಳುವಾಗ ಕಾಲ್ನಡಿಗೆಯಲ್ಲಿ ಬಂದಿದ್ದ ರುಗ್ಮಿಣಿಯು ಹಿಂದಿರುಗುವಾಗ ರಥವನ್ನೇರಬಹುದಿತ್ತು . ಆದರೆ ತನ್ನ ನಿಜದೇವರಾದ ಶ್ರೀಕೃಷ್ಣನ ಬಳಿಗೆ ತೆರಳಲೆಂದು ಆಗಲೂ ರಥವನ್ನೇರದೇ ಕಾಲ್ನಡಿಗೆಯಲ್ಲೇ ತೆರಳಿದಳು ಎಂಬ ವಿಶೇಷಾಂಶ ಇಲ್ಲಿದೆ.

---

೧. ಪದ್ಭ್ಯಾಂ ವಿನಿರ್ಯಯೌ ದ್ರಷ್ಟುಂ ಭವಾನ್ಯಾಃ ಪಾದಪಂಕಜಮ್ ।
ಸಾ ಚಾನುಧ್ಯಾಯತೀ ಸಮ್ಯಕ್ ಮುಕುಂದಚರಣಾಂಬುಜಮ್ ॥ –ಭಾಗ.(೧೦/೫೩/೪೧)

೨. ಪದಾ ಚಲಂತೀಂ ಕಲಹಂಸಗಾಮಿನೀಮ್ । –ಭಾಗ.(೧೦/೫೩/೫೫)

೩.. ಔಪಚಾರಿಕಗೃಹದೇವಯಾತ್ರಾಯಾಂ ಪಾದಚಾರೋ ವಿಹಿತಃ ಕಿಮು ಸ್ವಾಭಾವಿಕಗೃಹದೇವಯಾತ್ರಾಯಾಮಿತಿ ಮತ್ವೈವ ರಥಾರೋಹಣಂ ನ ಕೃತವತೀ। ಅನ್ಯಥಾ ಪುರಾಭಿಗಮನೇ ರಥಾರೋಹಸ್ಯೋಚಿತತ್ವಾದಿತಿ ಭಾವಃ। –ವ್ಯಾ.

೪. ಬ್ರಹ್ಮ ಕೃಷ್ಣನ ಪುತ್ರ, ಶಿವ ಬ್ರಹ್ಮನ ಪುತ್ರ ; ಆದ್ದರಿಂದ ಕೃಷ್ಣರುಗ್ಮಿಣಿಯರಿಗೆ ಪೌತ್ರ ಎಂಬುದು ಸಮುಚಿತ ಎಂದು ತಿಳಿಯಬೇಕು.

### ರುಗ್ಮಿಣಿಯು ಮಾಡಿದ ಶ್ರೀಕೃಷ್ಣನ ಸಂದರ್ಶನ

ಅಲಸವಿಲಸದಕ್ಷಿಸ್ತಂಭಿತಾನ್ಯಾಕ್ಷವೃತ್ತಿ[೧]-
ರ್ಜಲಜಕುಲಜಗಂಧಸ್ಪರ್ಧಿಸೌರಭ್ಯಸಾಂದ್ರಾ ।
ವದನಮದನಶಸ್ತ್ರಾSಗಣ್ಯಲಾವಣ್ಯಚಿತ್ರಾ
[೨]ಗಜಗತಿರಜತಾತಂ ಭೀಷ್ಮಪುತ್ರ್ಯೈಕ್ಷತೈನಮ್[೩] ॥ ೬೫ ॥

ತನ್ನ ಹೊಳೆಯುವ ನೆಟ್ಟನೋಟದಿಂದ ಇತರರ ನೋಟವನ್ನು ತನ್ನೆಡೆಗೆ ಸೆಳೆದ, ಕಮಲಗಳ ರಾಶಿಯಿಂದ ಹೊರಹೊಮ್ಮುವ ಪರಿಮಳವನ್ನು ಮೀರಿಸುವ ಸುವಾಸನೆಯಿಂದ ತುಂಬಿದ, ಮುಖವೆಂಬ ಮನ್ಮಥನ ಶಸ್ತ್ರದ, ಅಗಣಿತವಾದ ಲಾವಣ್ಯದಿಂದ ವಿಚಿತ್ರಳಾದ, ಗಜಗಮನೆಯಾದ ರುಗ್ಮಿಣಿಯು ಬ್ರಹ್ಮನ ತಂದೆಯಾದ ಆ ಶ್ರೀಕೃಷ್ಣನನ್ನು ನೋಡಿದಳು.

### ರುಗ್ಮಿಣಿಯನ್ನು ಕಂಡು ಮೂರ್ಛಿತರಾದ ರಾಜರು

ಕೃಷ್ಣೇನ ನೇಯಾ ಜನನೀ ಮಮೇಯ-
ಮಿತ್ಯುತ್ಸುಕೋSಸೌ ಸ್ಮರ ಏವ ನೂನಮ್ ।
ಮೂರ್ಛಾವಶಾನಾತ್ಮಶರೈರಕಾರ್ಷೀತ್
[೪]ತದ್ದೃಷ್ಟಿಜನ್ಮಾ ಸಕಲಾನ್ ನೃಪಾಲಾನ್ ॥ ೬೬ ॥

---

೧. "ವಲಿತಂ ತು ಪ್ರವೃತ್ತಂ ಸ್ಯಾತ್ ಪುನಸ್ತತ್ರಾವಲೋಕನಮ್" ಇತ್ಯುಕ್ತತ್ವಾತ್ । -ವ್ಯಾ.

೨. ಅಧುನಾSಪಿ ಶ್ರೀಕೃಷ್ಣೋ ಮಾಂ ನೇತುಂ ನಾಗಮಿಷ್ಯತ್ ಕಿಮಿತಿ ಶ್ರೀಕೃಷ್ಣಂ ದೃಷ್ಟವತೀತಿ ಭಾವಃ। ಗಜಗತಿರಿತ್ಯನೇನ ಶ್ರೀಕೃಷ್ಣಾಗಮನಪ್ರತ್ಯಾಶಯಾ ಗತೇರತಿಮಾಂದ್ಯಂ ದ್ಯೋತ್ಯತೇ। -ವ್ಯಾ.

೩.. ಏವಂ ಶನೈಃ ಪ್ರಚಲತೀ ಪದಪದ್ಮಕೋಶೈಃ ಪ್ರಾಪ್ತಿಂ ತದಾ ಭಗವತಃ ಪ್ರಸಮೀಕ್ಷಮಾಣಾ ।
ಉತ್ಸಾರ್ಯ ವಾಮಕರಜೈರಲಕಾನಪಾಂಗೈಃ ಪ್ರಾಪ್ತಹ್ರಿಯೈಕ್ಷತ ನೃಪಾನ್ ದದೃಶೇSಚ್ಯುತಂ ಸಾ ॥
-ಭಾಗ. (೧೦/೫೮/೫೭)

೪. ವಿಲೋಕ್ಯ ವೀರಾ ಮುಮುಹುಃ ಸಮಾಗತಾ ಯಶಸ್ವಿನಸ್ತತ್ಕೃತಹೃಚ್ಛಯಾರ್ದಿತಾಃ।
ಯಾಂ ವೀಕ್ಷ್ಯ ತೇ ನೃಪತಯಸ್ತದುದಾರಹಾಸವ್ರೀಳಾವಲೋಕಹೃತಚೇತಸ ಉಜ್ಝಿತಾಸ್ತ್ರಾಃ॥
ಪೇತುಃ ಕ್ಷಿತೌ ಗಜರಥಾಶ್ವಗತಾ ವಿಮೂಢಾ ಯಾತ್ರಾಚ್ಛಲೇನ ಹರಯೇSರ್ಪಯತೀಂ ಸ್ವಶೋಭಾಮ್ ।
ಏವಂ ಶನೈಶ್ಚಲಯತೀ ಪದಪದ್ಮಕೋಶೈಃ ಪ್ರಾಪ್ತಿಂ ತದಾ ಭಗವತಃ ಪ್ರಸಮೀಕ್ಷಮಾಣಾ ॥
-ಭಾಗ.(೧೦/೫೮/೫೫-೫೭)

ತನ್ನ ತಾಯಿಯಾದ ಈ ರುಗ್ಮಿಣಿಯನ್ನು ಶ್ರೀಕೃಷ್ಣನೇ ಕರೆದೊಯ್ಯಬೇಕು ಎಂಬ ಉತ್ಸುಕತೆಯಿಂದ ಅವಳ ದರ್ಶನಮಾತ್ರದಿಂದ ಜನಿಸಿದ ಮನ್ಮಥನು ಸಕಲರಾಜರನ್ನೂ ತನ್ನ ಬಾಣಗಳಿಂದ ಮೋಹಪರವಶವನ್ನಾಗಿಸಿದನು.

ವಿ : ಕಾಮನು ಕೃಷ್ಣಪುತ್ರ ಎಂದರೆ ರುಗ್ಮಿಣಿಯ ಪುತ್ರನೂ ಹೌದು; ಮುಂದಂತೂ ಅವರೀರ್ವರ ಪುತ್ರನಾಗಿ ಪ್ರದ್ಯುಮ್ನರೂಪದಿಂದ ಅವತರಿಸಿದ; ಅವನು ಈಗ ತನ್ನ ತಾಯಿಯಾದ ರುಗ್ಮಿಣಿಯತ್ತ ಅಲ್ಲಿ 'ನೆರೆದಿದ್ದ ರಾಜರು ದೃಷ್ಟಿ ಹಾಕದಿರಲೆಂದು ಅವನು ತನ್ನ ಬಾಣಗಳನ್ನು ಪ್ರಯೋಗಿಸಿ, ಅವರೆಲ್ಲರನ್ನೂ ಮೂರ್ಛಿತರನ್ನಾಗಿಸಿದ; ಎಂದರೆ ರುಗ್ಮಿಣಿಯ ದರ್ಶನಮಾತ್ರದಿಂದಲೇ ಕಾಮಪೀಡಿತರಾದ ಅಲ್ಲಿ ನೆರೆದಿದ್ದ ರಾಜರು ಮೂರ್ಛೆಗೊಳಗಾದರು ಎಂದರ್ಥ.

ರುಗ್ಮಿಣಿಯನ್ನು ತನ್ನ ರಥವನ್ನೇರಿಸಿಕೊಂಡ ಶ್ರೀಕೃಷ್ಣ

ತದನು ಮದನಮಂದೀಭೂತಚಿತ್ತೇಷು ಭೂಪೇ-
ಷ್ವವಿದಿತಗತಿರುದ್ಯದ್ರೋಮರಾಜಿಂ ಪ್ರಹರ್ಷಾತ್ ।
ವಿಕಸಿತನಯನಾಬ್ಜೋದ್ಭೂತಹರ್ಷಾಂಬುಧಾರಾಂ
ನಿಜರಥಮಧಿರೋಪ್ಯ ಸ್ವಾಂ ಪ್ರಪೇದೇ ಸ್ವತಂತ್ರಃ ॥ ೬೭ ॥

ಆ ಬಳಿಕ ಕಾಮನಿಂದಾಗಿ, ಆ ರಾಜರೆಲ್ಲಾ ಹಾಗೆ ಚಿತ್ತಸ್ವಾಸ್ಥ್ಯವನ್ನು ಕಳೆದುಕೊಳ್ಳಲು, ಅವರಿಗೆ ತಿಳಿಯದಂತೆ ಅಲ್ಲಿಗೆ ಆಗಮಿಸಿದ ಸ್ವತಂತ್ರನಾದ ಶ್ರೀಕೃಷ್ಣನು ರೋಮಾಂಚನಗೊಂಡಿದ್ದ, ಅರಳಿದ ಕಣ್ಣುಗಳಿಂದ ಹೊರಹೊಮ್ಮಿದ ಆನಂದಾಶ್ರುಗಳ ಧಾರೆಯನ್ನು ಹೊಂದಿದ್ದ ತನ್ನ ಪತ್ನಿಯಾದ ರುಗ್ಮಿಣಿಯನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಅಲ್ಲಿಂದ ಹೊರಟುಬಿಟ್ಟನು.

ಶ್ರೀಕೃಷ್ಣರುಗ್ಮಿಣಿಯರ ಸಹಜ ವಿವಾಹ

ಪುನರ್ವಿವಾಹೇನ ಕಿಮಿಂದಿರಾಯಾ
ಇತೀವ ಲಕ್ಷ್ಮೀರಮಣಃ ಸ ಕೃಷ್ಣಃ ।
ಅಪಾಂಗದೂತೀವಿನಿವೇದಿತಾತ್ಮ-
ಮನೋಽನುರಾಗಾಮತನೋತ್ ಸುಯೋಗಾಮ್ ॥ ೬೮ ॥

ತನ್ನ ನಿತ್ಯಪತ್ನಿಯಾದ ಮಹಾಲಕ್ಷ್ಮಿ ರುಗ್ಮಿಣಿಯನ್ನು ಮತ್ತೇಕೆ ವಿವಾಹಮಾಡಿಕೊಳ್ಳುವುದು ಎಂಬಂತೆ ಆ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ತನ್ನ ಕುಡಿನೋಟವೆಂಬ ದಾಸಿಯಿಂದ ತನ್ನ ಮನೋಽನುರಾಗವನ್ನು ಅರಿಕೆಮಾಡಿಕೊಂಡ ಆ ರುಗ್ಮಿಣಿಯನ್ನು ಜೊತೆಮಾಡಿಕೊಂಡನು.

ವಿ : ೧. ಶ್ರೀಕೃಷ್ಣನು ವಿವಾಹದ ಮುನ್ನವೇ ರುಗ್ಮಿಣಿಯನ್ನು ಹೇಗೆ ಜೊತೆಗೆ ಕರೆದೊಯ್ದ ಎಂಬ ಪ್ರಶ್ನೆಗೆ ಇಲ್ಲಿ ತಾತ್ತ್ವಿಕವಾದ ಉತ್ತರವನ್ನು ಕಾಣಬಹುದು.

೨. ಶ್ರೀಕೃಷ್ಣರುಗ್ಮಿಣಿಯರು ಅನಾದಿನಿತ್ಯದಂಪತಿಗಳಾದ ಸಾಕ್ಷಾತ್ ಶ್ರೀಲಕ್ಷ್ಮೀನಾರಾಯಣರೇ ಆಗಿರವರು; ಎಂದರೆ ಈಗಲೂ ಅವರು ದಂಪತಿಗಳೇ. ಆದ್ದರಿಂದ ವಿವಾಹಮಾಡಿಕೊಳ್ಳುವ ಅಗತ್ಯವನ್ನು ಕಾಣದೆ ಶ್ರೀಕೃಷ್ಣ ಹಾಗೆ ರುಗ್ಮಿಣಿಯನ್ನು ತನ್ನ ಜೊತೆಗೆ ಕರೆದೊಯ್ದ ಎಂದು ಭಾವ.

### ಪಾಣಿಗ್ರಹಣಕ್ಕಿಂತ ಮಿಗಿಲೆನ್ನಿಸಿದ ವಿವಾಹೋತ್ಸವ

**ಕೃಷ್ಣಾಸ್ಯೇಂದುಸಮೀಪಲಗ್ನಮುದಿತಭ್ರಾಜತ್ಕಪೋಲಾ ಪ್ರಭೋ-**
**ರ್ಹಸ್ತಾಂಭೋಜಯುಗೇನ ವೇಷ್ಟಿತಲಸನ್ಮಧ್ಯಾ ಭಿಯೇವಾಂಜಸಾ ।**
**ಭರ್ತ್ರಂಸದ್ವಯಸಂಹಿತಾಯತಭುಜಾ ಮೋದಾಂಬುಧೌ ಮಗ್ನಧೀಃ**
**ಸಾ ಪಾಣಿಗ್ರಹಣಾದಪೀಮಮಧಿಕಂ ಮೇನೇ ವಿವಾಹೋತ್ಸವಮ್ ॥ ೬೯ ॥**

ಶ್ರೀಕೃಷ್ಣನ ಮುಖಚಂದ್ರನ ಹತ್ತಿರದಲ್ಲಿ ಕೂಡಿದ ನಲಿವಿನಿಂದಾಗಿ ಹೊಳೆಯುವ ಕೆನ್ನೆಗಳು, ಪ್ರಭುವಾದ ಅವನ ಎರಡು ಕರಕಮಲಗಳಿಂದ ಬರಸೆಳೆಯಲ್ಪಟ್ಟ ಹೊಳೆಯುವ ನಡು, ಅಂಜಿಕೆಯಿಂದೆಂಬಂತೆ ಪತಿಯಾದ ಅವನ ಎರಡು ಭುಜಗಳ ಮೇಲೆ ಇರಿಸಿದ ತನ್ನ ನೀಳವಾದ ಕೈಗಳು, ಇಂತಹ ರುಗ್ಮಿಣಿಯು ಆನಂದಸಮುದ್ರದಲ್ಲಿ ಮುಳುಗಿದ ಮನಸ್ಸಿನವಳಾಗಿ, ಪಾಣಿಗ್ರಹಣಕ್ಕಿಂತ ಈ ವಿವಾಹಮಹೋತ್ಸವವು ಮಿಗಿಲಾದುದು ಎಂದು ಭಾವಿಸಿದಳು.

ವಿ : ೧. ಶ್ರೀಕೃಷ್ಣ ಹಾಗೆ ರುಗ್ಮಿಣಿಯನ್ನು ಕರೆದೊಯ್ದ ರೀತಿ ವಿವಾಹಮಹೋತ್ಸವಕ್ಕಿಂತ ಮಿಗಿಲಾದ ಮಹೋತ್ಸವವಾಗಿದ್ದಿತು ಎಂದರ್ಥ.

೨. ಹಿಂದಿನ ಶ್ಲೋಕದಲ್ಲಿ ತಿಳಿಸಿದಂತೆ ಅವರಿಬ್ಬರು ನಿತ್ಯ ದಂಪತಿಗಳಾದ್ದರಿಂದ ಅವರು ಹಾಗೆ ಜೊತೆ ಇದ್ದದ್ದು ಮೇಲ್ನೋಟದ ವಿವಾಹದ ಮಹೋತ್ಸವಕ್ಕಿಂತ ಹೆಚ್ಚು ಸಂಭ್ರಮವನ್ನುಂಟು-ಮಾಡಿತು ಎಂದು ಭಾವ.

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**

ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತೋಽಯಮಭೂಚ್ಚತುರ್ದಶಮಿತಃ ಸರ್ಗೋ ಮುದಾಂ ಸ್ವರ್ಗಿಷು ॥೭೦॥

ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಚತುರ್ದಶಃ ಸರ್ಗಃ ॥೧೪॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹದಿನಾಲ್ಕನೆಯ ಸರ್ಗವು ಮುಕ್ತಾಯವಾಯಿತು.

****

# ೧೫. ಪಂಚದಶಃ ಸರ್ಗಃ

(ಪುನಃ ಜರಾಸಂಧಾದಿಗಳ ಪರಾಭವ - ೧-೮ ; ರುಗ್ಮಿಯ ಪರಾಭವ -೯,೧೦; ಶ್ರೀಕೃಷ್ಣ- ರುಗ್ಮಿಣಿಯರ ದ್ವಾರಕಾಗಮನ - ೧೧-೧೩; ಮೂಲಮಾಧವಕ್ಷೇತ್ರ-ವರ್ಣನೆ - ೧೪; ಪ್ರಯಾಣವೈಭವ-೧೫-೨೩; ಸಮುದ್ರವರ್ಣನೆ - ೨೪,೨೫; ಮೂಲಮಾಧವಕ್ಷೇತ್ರದಲ್ಲಿ ನಡೆದ ವಾಙ್ನಿಶ್ಚಯ - ೨೬-೫೨; ಶ್ರೀಕೃಷ್ಣನ ಕಾಶೀಯಾತ್ರೆ, ಇತ್ಯಾದಿ - ೫೩-೬೧; ಸರ್ಗೋಪಸಂಹಾರ - ೬೨)

### ಕತ್ತಲೆಯು ಸೂರ್ಯನನ್ನೆಂಬಂತೆ ಶ್ರೀಕೃಷ್ಣನ ಮೇಲೆ ದುಷ್ಟರ ಆಕ್ರಮಣ

**ತರಣಿಮಿವ ತಮಸ್ತಮನ್ವಧಾವನ್**
**ಮದನವಶಾಃ ಕಿಲ ಮಾನಿನೋ ಮಹೀಶಾಃ।**
**ವಿಷಮಮೃಗದೃಶೀವಿಯೋಗರೋಗಾತ್**
**ಸ್ವತನುಮಿವೋಜ್ಝಿತುಮುದ್ಯತಾಃ ಪುರಸ್ತಾತ್ ॥ ೧ ॥**

ಕಾಮನಿಗೆ ವಶರಾದ, ಅಹಂಕಾರಿಗಳಾದ ರಾಜರು, ಆ ಮುನ್ನ ತಮಗೆ ಸಲ್ಲದ ಜಿಂಕೆಯ ಕಂಗಳ ರುಗ್ಮಿಣಿಯ ವಿಯೋಗವೆಂಬ ರೋಗದಿಂದಾಗಿ ತಮ್ಮ ದೇಹವನ್ನು ತೊರೆಯಲು ಸಿದ್ಧರಾದವರೋ ಎಂಬಂತೆ ಆ ಶ್ರೀಕೃಷ್ಣನನ್ನು ಕತ್ತಲೆಯು ಸೂರ್ಯನನ್ನು ಇದಿರಿಸಿ ಹೊರಟಂತೆ ಹೊರಟರು.

ವಿ : ೧. ಆ ರಾಜರು ಶ್ರೀಕೃಷ್ಣನನ್ನು ಎದುರಿಸಿ ಹೊರಟದ್ದು ಕತ್ತಲೆಯು ಸೂರ್ಯನನ್ನು ಎದುರಿಸಿ ಹೊರಟಂತೆ ಆತ್ಮಘಾತಕ ಪ್ರವೃತ್ತಿಯಾಗಿದ್ದಿತು ಎಂದರ್ಥ.

೨. ತನ್ನ ಪ್ರೇಯಸಿಯ ವಿಯೋಗವನ್ನು ಸಹಿಸದ ಕಾಮುಕನಾದವನು ತನ್ನ ಪ್ರಾಣ-ಕಳೆದುಕೊಳ್ಳಲು ಉದ್ಯೋಗ ನಡೆಸಿದಂತೆ, ರುಗ್ಮಿಣಿಯನ್ನು ಪಡೆಯಲಾಗದ ಅವರ ಸ್ಥಿತಿ ಮರಣದತ್ತ ಸಾಗಿದ್ದಿತು ಎಂದರ್ಥ.

೩.. ಕತ್ತಲೆಯು ಸೂರ್ಯನನ್ನು ಎದುರಿಸುವ ಆತ್ಮನಾಶಕವಾದ ಇಲ್ಲಿಯ ನಿದರ್ಶನಕ್ಕೆ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಶ್ರೀಮದಾಚಾರ್ಯರ ಮಾತು ಪ್ರೇರಕ ಎಂದು ತಿಳಿಯಬಹುದು: **ಭಾನುಂ ಯಥಾ ತಮ ಉಪೇತ್ಯ ಸುಯೋಗಕಾಮಮ್ ।** (೫/೨೫);

೪. ೧೧ನೆಯ ಸರ್ಗದ ೫೧ನೆಯ [1]ಶ್ಲೋಕದಲ್ಲೂ ಈ ಭಾವ ಬಂದಿದೆ.

---

೧. ತದಾ ಮದಾಂಧಾಃ ಪರಿವವ್ರುರೇನಂ ಚಮೂಭಿರನ್ಯೇ ಚತುರಂಗಿಣೀಭಿಃ।
ಯಥಾ ಪತಂಗಾ ಜ್ವಲನಂ ಜ್ವಲಂತಂ ತಮಃಸಮೂಹಸ್ತರಣಿಂ ಯಥಾ ವಾ ॥

## ರುಗ್ಮಿಣಿಯ ಕಾಮುಕರಿಗೆ ತಕ್ಕ ದುರ್ಗತಿ

**ಯೇ ಭೈಷ್ಮ್ಯಾಃ ಪರಿರಂಭಣಂ ಚಕಮಿರೇ ತೇಷಾಂ ಭುಜಾಂಶ್ಚಿಚ್ಛಿದು-**
**ರ್ಯೇ ವಾ ತನ್ಮುಖಚಂದ್ರಚುಂಬನರುಚಿಂ ತೇಷಾಂ ಶಿರಾಂಸಿ ದ್ವಿಷಾಮ್ ।**
**ಯೇ ತಲ್ಪೇ ಶಯನಂ ತಯಾ ಸಹ ಖಲಾ ಲೋಕಾಂಬಯಾ ಸಂಗರೇ**
**ಪ್ರೇತೈಃ ಸಾರ್ಧಮಶೀಶಯನ್ ಹರಿಭಟಾಸ್ತಾನ್ ದುರ್ಮದಾನ್ ಸಾಯಕೈಃ[೧] ॥೨॥**

ಯುದ್ಧದಲ್ಲಿ ಶ್ರೀಕೃಷ್ಣನ ಸೈನಿಕರು ಬಾಣಗಳಿಂದ, ಯಾರು ರುಗ್ಮಿಣಿಯ ಆಲಿಂಗನವನ್ನು ಬಯಸಿದ್ದರೋ ಅಂತಹವರ ತೋಳುಗಳನ್ನು ಕತ್ತರಿಸಿದರು; ಯಾರು ರುಗ್ಮಿಣಿಯ ಮುಖಚಂದ್ರನನ್ನು ಚುಂಬಿಸಲು ಬಯಸಿದ್ದರೋ ಅಂತಹ ಶತ್ರುಗಳ ಶಿರಸ್ಸುಗಳನ್ನು ತರಿದರು; ಯಾರು ಲೋಕಮಾತೆಯಾದ ರುಗ್ಮಿಣಿಯೊಂದಿಗೆ ಶಯನದಲ್ಲಿ ಜೊತೆಯಾಗಿ ಮಲಗುವ ಹಂಬಲವನ್ನು ಹೊಂದಿದ್ದರೋ ಅಂತಹ ದುರ್ಮದಾಂಧರನ್ನು ಪ್ರೇತಗಳೊಂದಿಗೆ ಮಲಗುವಂತೆ ಮಾಡಿದರು.

ವಿ : ೧. ರುಗ್ಮಿಣಿಯ ಬಗ್ಗೆ ಸಲ್ಲದ ಬಯಕೆಯನ್ನು ಹೊಂದಿದ್ದವರಿಗೆಲ್ಲಾ ಶ್ರೀಕೃಷ್ಣನ ಭಟರು ಅದಕ್ಕೆ ಉಚಿತವಾದಂತಹ ಶಿಕ್ಷೆಯನ್ನು ನೀಡಿದರು ಎಂದರ್ಥ ; ಲೋಕಾಂಬಾ - ಜಗದಂಬೆ.

೨. ಸ್ವೋತ್ತಮಸ್ತ್ರೀಯ ಕಾಮನೆಯೇ ಮಹಾಪಾತಕ. ಅದರಲ್ಲೂ ದೇವತಾಸ್ತ್ರೀಯರ ಬಗೆಗಿನ ಕಾಮನೆ ಇನ್ನೂ ಹೆಚ್ಚು ಅಪಚಾರ; ಅದರಲ್ಲೂ ಮಹಾದೇವತಾಸ್ತ್ರೀಯರ ಕಾಮನೆ ಎಂದೂ ತೊಡೆಯಲಾಗದ ಮಹಾಪಾತಕ ; ಶ್ರೀಹರಿವಾಯುಗಳ ಪತ್ನಿಯರನ್ನು ಬಯಸುವುದಂತೂ ಅಂಧಂತಮಸ್ಸಿನ ನಿಶ್ಚಿತಹಾದಿ ಎಂಬ ವಿಶೇಷ ವಿವರಗಳು ಶ್ರೀಮದ್ಭಾಗವತತಾತ್ಪರ್ಯನಿರ್ಣಯ ಹಾಗೂ ಮಹಾಭಾರತ ತಾತ್ಪರ್ಯನಿರ್ಣಯಗಳಲ್ಲಿ ಬಂದಿವೆ[೨].

---

೧. ಉತ್ಪ್ರೇಕ್ಷಾಲಂಕಾರಃ । -ವ್ಯಾ.

೨. ಪರದಾರದೃಶಿಃ ಪ್ರೋಕ್ತಾ ಕ್ಷುದ್ರಪಾತಕಸಂಜ್ಞಿತಾ ।
ಉಪಪಾತಕಂ ತದ್ಗತಿಶ್ಚ ವರ್ಣಬಾಹ್ಯೇಷು ಪಾತಕಮ್ ।
ಮಹಾಪಾತಕಸಂಜ್ಞಂ ತು ಪಿತ್ರಾದೇರ್ದಾರಧರ್ಷಣಮ್ ।
ದಾರದೃಷ್ಟಿಃ ಸ್ವೋತ್ತಮಾನಾಂ ಮಾನುಷಾಣಾಂ ಸ್ವಭಾವತಃ ।
ಸುಮಹಾಪಾತಕಂ ಪ್ರೋಕ್ತಂ ತದ್ಗತಿಃ ಸುಮಹತ್ತರಃ ।
ಋಷಿದಾರೇಷು ಮನಸೋ ಗತಿರೇವ ತತೋಽಧಿಕಾ ।
ದೇವದಾರಾಭಿಕಾಮಾನಾಂ ಸಂಗಿಸಂಗಸ್ತತೋಽಧಿಕಃ ।
ಕಿಮು ವಿಷ್ಣೋಸ್ತತೋ ಯೋಷಿತ್ಸಂಗಸ್ಯ ವ್ಯತ್ಯಯಸ್ಥಿತೇಃ ।
ನ ಸಮಂ ಪಾತಕಂ ಕ್ವಾಪಿ ನ ಹಿ ಸ್ವಸ್ತ್ರ್ಯಭಿಕಾಮತಃ ।
ಅವಜ್ಞಾತಾ ಮಾಧವಾದೇಸ್ತಸ್ಮಾತ್ತಂ ದೂರತಸ್ತ್ಯಜೇತ್ ।
ಮಾನುಷೇಷು ತು ದುಃಖಿತ್ವಂ ಕ್ಷುದ್ರಪಾಪಫಲಂ ಸ್ಮೃತಮ್ ।
ಪಾಪಾತ್ತು ವರ್ಣಬಾಹ್ಯತ್ವಂ ತಿರ್ಯಗ್ಯೋನಿಗತಿಸ್ತಥಾ ।

### ಕೃಷ್ಣರುಗ್ಮಿಣಿಯರದು ನಿತ್ಯದಾಂಪತ್ಯ

ಸಾಹಾಯ್ಯಂ ಕ್ವ ಚಕಾರ ಶಂಭುದಯಿತಾ ತದ್ವೈರಿಮಾತುಃ ಕಥಂ
ದೇವ್ಯಾಃ ಶ್ರೀಪತಿವಿಪ್ರಯೋಗಮಹರತ್ ತದ್ವಿಪ್ರಯೋಗೋಽಪಿ ವಾ ।
ಕಿಂತು ಶ್ರೀಪತಿರೇವ ತಾಂ ಸ್ವವಿರಹಾಯೋಗ್ಯಾಂ ಸಮವ್ಯಾಪಿನೀಂ
ನಿನ್ಯೇಽಶ್ಲೇಷಕಥಾಂ ಖಲೈಃ ಸಹ ಮುಹುಃ ಶಿಕ್ಷನ್ ಸ ರಕ್ಷನ್ ಶ್ರುತಿಮ್ ॥ ೩ ॥

ಶಿವನ ವೈರಿಯಾದ ಕಾಮನಿಗೆ ತಾಯಿಯಾದ ರುಗ್ಮಿಣಿಗೆ ಶಿವಪತ್ನಿಯಾದ ಪಾರ್ವತಿಯು ಸಹಾಯವನ್ನು ಎಲ್ಲಿ ಮಾಡಿದಳು? ರುಗ್ಮಿಣಿಯೊಂದಿಗೆ ಶ್ರೀಕೃಷ್ಣನ ವಿಯೋಗವನ್ನು ಆ ವಿಪ್ರನಯೋಗವು ಹೇಗೆ ತಾನೇ ಪರಿಹರಿಸೀತು ? ಆದರೆ ಸ್ವತಃ ಲಕ್ಷ್ಮೀಪತಿಯಾದ ಶ್ರೀಕೃಷ್ಣನೇ ತನ್ನ ವಿರಹಕ್ಕೆ ಎಂದೂ ಅರ್ಹಳಲ್ಲದ ತನ್ನೊಂದಿಗೆ ಸಮವ್ಯಾಪ್ತಿಯನ್ನು ಹೊಂದಿದ ರುಗ್ಮಿಣಿಯನ್ನು ತಾನೇ ಕರೆದೊಯ್ದನು; ಆ ಮೂಲಕ ದುಷ್ಟರೊಂದಿಗೆ ತಾನು ಒಡಗೂಡನು ಎಂಬುದನ್ನು ತಿಳಿಸಿದ, ಶ್ರುತಿಯನ್ನು ಸಂರಕ್ಷಿಸಿದ.

ವಿ. : ೧. ರುಗ್ಮಿಣಿಗೆ ಕೃಷ್ಣನೊಂದಿಗೆ ಯೋಗವಾಗಲು ಪಾರ್ವತಿಯ ಅನುಗ್ರಹ ಕಾರಣ-ವಾಯಿತು ಎಂಬ ಅವಿವೇಕಿಗಳ ಕಲ್ಪನೆಯನ್ನು ಈ ಶ್ಲೋಕದಲ್ಲಿ ಸಮರ್ಥವಾಗಿ ನಿರಾಕರಿಸಿ-ರುವರು.

೨. ನಿಜಕ್ಕೂ ಶ್ರೀಕೃಷ್ಣ ರುಗ್ಮಿಣಿಯರು [1]ದೇಶತಃ ಕಾಲತಃ ಸಮವ್ಯಾಪ್ತಿಯನ್ನು ಹೊಂದಿದವರು ಎಂದರೆ ಅವರದು ಅನಾದ್ಯನಂತಕಾಲದ ನಿತ್ಯ ದಾಂಪತ್ಯ ಎಂದರ್ಥ; ಎಂದ ಮೇಲೆ ಅವರಿಗೆ

---

ಸಹಸ್ರವರ್ಷನರಕಂ ಕ್ಷುದ್ರಪಾತಕಜಂ ಫಲಮ್ ।
ಉಪಪಾತಕತಶ್ಚಾಪಿ ನರಕಂ ಯುಗಮಾತ್ರಕಮ್ ।
ಚತುರ್ಯುಗಾವಸಾನಂ ತು ಪಾತಕಸ್ಯ ಫಲಂ ಸ್ಮೃತಮ್ ।
ಮಹಾಪಾತಕಜನ್ಯಂ ಚ ಕಲ್ಪಾವಧಿ ಸಮೀರಿತಮ್ ।
ಸುಮಹಾಪಾತಕಾಚ್ಚಾಪಿ ಯಾವದ್ಬ್ರಹ್ಮಲಯೋ ಭವೇತ್ ।
ತತ್ಪರಾಣಾಂ ಪಾತಕಾನಾಂ ಫಲಮಂಧಂತಮಃ ಸ್ಮೃತಮ್ ।
ಅಧೋಽಧೋ ದುಃಖಬಹುಲಂ ವಿಷ್ಣುದಾರಾಭಿಮರ್ಶನಾತ್ ।
ವಧಾದಪಿ ಹಿ ದಾರಾಣಾಂ ಧರ್ಷಣಂ ಕೋಪಕಾರಣಮ್ ।
ತಸ್ಮಾದ್ದೇವ್ಯಃ ಸದಾ ವಂದ್ಯಾ ಅಗ್ನಿವನ್ನಾಭಿಕಾಮತಃ' ಇತಿ ಧರ್ಮತತ್ತ್ವೇ ॥
– ಭಾಗವತತಾತ್ಪರ್ಯನಿರ್ಣಯ (೧೧/೧೪/೩೦)

ಧರ್ಮೋ ಗುಣೋತ್ತಮಾನಾಂ ತು ಸ್ಮೃತ್ಯೈವಾಂಧಂ ತಮೋ ವ್ರಜೇತ್ ।
ಗುಣಸರ್ವಸ್ವಹಾನಿಃ ಸ್ಯಾದುತ್ತರೋತ್ತರತೋಽತ್ರ ಚ ।
ಅಧೋಽಧೋಽಧಿಕದೋಷಃ ಸ್ಯಾತ್ ಸ್ತ್ರೀಣಾಮನ್ಯತ್ರ ಮಧ್ಯತಃ ॥ -ಮ.ಭಾ.ತಾ.ನಿ.(೨೯/೫೪)

೧. ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸ ಸಮನಾ ॥ ಇತಿ ತದ್ವ್ಯಾಖ್ಯಮ್ । -ವ್ಯಾ.
ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ॥-ಇತಿ ಚ ತತ್ರೈವ(೪/೨/೧೦) ಇತಿ ಸಮವ್ಯಾಪ್ತಿಮತೀಮ್ ।-ವ್ಯಾ.

ವಿಯೋಗದ ಪ್ರಸಕ್ತಿಯೇ ಇಲ್ಲ; ಇನ್ನು ಯೋಗ ಮಾಡುವ ಅಗತ್ಯವೆಲ್ಲಿದೆ? ಇದನ್ನು ತೋರಿಸಲೆಂದೇ ಶ್ರೀಕೃಷ್ಣನು ರುಗ್ಮಿಣಿಯನ್ನು ತಾನಾಗಿಯೇ ಕರೆದೊಯ್ಯುತ್ತಾ ಅವರಿಬ್ಬರಿಗೆ [೧]ಸಮವ್ಯಾಪ್ತಿಯನ್ನು ಹೇಳುವ ಶ್ರುತಿಯ ಪ್ರಾಮಾಣ್ಯವನ್ನು ತೋರಿಸಿಕೊಟ್ಟನು ಎಂದು ಭಾವ.

೩.. [೨]ಶಿವ ಕಾಮನ ವೈರಿ; ಪಾರ್ವತಿ ಶಿವನ ಪತ್ನಿ ಎಂದರೆ ಪಾರ್ವತಿಗೆ ರುಗ್ಮಿಣಿಯು ವೈರಿಯ ತಾಯಿ; ಅಂತಹವಳಿಗೆ ಎಂದಾದರೂ ಸಹಾಯವನ್ನು ಪಾರ್ವತಿಯು ಮಾಡಲು ಸಾಧ್ಯವೆ? ಎನ್ನುವುದು ಇಲ್ಲಿಯ ಯುಕ್ತಿ. ತಮ್ಮ ಯುಕ್ತಿಮಲ್ಲಿಕೆಯಂತಹ ಅಮೋಘ ಕೃತಿಯಿಂದ ಯುಕ್ತಿರಾಜರೇ ಎಂದು ಪ್ರಸಿದ್ಧರಾದ ಶ್ರೀವಾದಿರಾಜಸ್ವಾಮಿಗಳ ಈ ಯುಕ್ತಿ ಅತ್ಯಂತ ರೋಚಕವಾದುದು.

### ಸೀತೆಯನ್ನು ಪಡೆದ ಶ್ರೀರಾಮನಂತೆ ರುಗ್ಮಿಣಿಯನ್ನು ಪಡೆದ ಶ್ರೀಕೃಷ್ಣ

**ರಕ್ತಾಂಭೋನಿಚಯೇ ಗಜಾದ್ರಿನಿಕರೈರಾಬಧ್ಯ ಸೇತುಂ ಹತೈಃ**
**ಸುಗ್ರೀವೋದ್ಧತಸೈನ್ಯಮಾತ್ರಬಲವಾನ್ ಶ್ರೀಪೂರ್ವರಾಮೋ ಯುಧಿ।**
**ಪ್ರಾಚೀನಾವನಿಜಾಂ ನಿನಾಯ ಸ ನಿಜಾಮವ್ಯಗ್ರವಕ್ತ್ರಾಂಬುಜಾಂ**
**ಜಿತ್ವಾ ಪ್ರಾಕ್ತನರಾವಣಂ ಹತಬಲಂ ತಲ್ಲಗ್ನಚಿತ್ತಂ ಖಲಮ್ ॥ ೪ ॥**

ರಕ್ತವೆಂಬ ಸಮುದ್ರಕ್ಕೆ ಸತ್ತ ಆನೆಗಳೆಂಬ ಬೆಟ್ಟಗಳ ಸಾಲುಗಳಿಂದ ಸೇತುವೆಯನ್ನು ನಿರ್ಮಿಸಿ, ಸುಗ್ರೀವನ ಉಬ್ಬಿದ ಸೇನೆಯನ್ನು ಮಾತ್ರವೇ ಬಲವನ್ನಾಗಿ ಹೊಂದಿದ್ದ, ಹಿಂದೆ ಶ್ರೀರಾಮನೇ ಆದ ಶ್ರೀಕೃಷ್ಣ ಹಿಂದಿನ ರಾವಣನಾಗಿದ್ದ ಅವಳಲ್ಲಿ ಮನಸ್ಸನ್ನಿರಿಸಿದ್ದ ದುಷ್ಟ ಶಿಶುಪಾಲನನ್ನು ಅವನ ಸೇನೆಯನ್ನು ಯುದ್ಧದಲ್ಲಿ ಸಂಹರಿಸಿ ತನ್ನ ಪತ್ನಿಯೇ ಆದ ಪ್ರಸನ್ನ ಮುಖಕಮಲದ ಹಿಂದೆ ಸೀತೆಯಾಗಿದ್ದ ಆ ರುಗ್ಮಿಣಿಯನ್ನು ಕರೆದೊಯ್ದನು.

ವಿ. : ೧. ಶ್ರೀಕೃಷ್ಣನು ಆನೆ ಮೊದಲಾದವುಗಳನ್ನು ಹೊಂದಿದ್ದ ಶಿಶುಪಾಲನ ಸೇನೆಯನ್ನು ಸಂಹರಿಸಿ, ರುಗ್ಮಿಣಿಯನ್ನು ತನ್ನೊಂದಿಗೆ ಕರೆದೊಯ್ದನು ಎಂಬುದು ಇಲ್ಲಿಯ ಭಾವ.

೨. ಶ್ರೀಕೃಷ್ಣ ಹಿಂದಿನ ಅವತಾರದಲ್ಲಿ ಶ್ರೀರಾಮ; ರುಗ್ಮಿಣಿ ಶ್ರೀರಾಮಪತ್ನಿಯಾದ ಸೀತಾದೇವಿ. ಶಿಶುಪಾಲ ರಾವಣ; ಶ್ರೀರಾಮನು ಸೇತುವೆಯನ್ನು ನಿರ್ಮಿಸಿ, ರಾವಣನನ್ನು ಸಂಹರಿಸಿ, ಸೀತೆಯನ್ನು ಕರೆದೊಯ್ದ ಪ್ರಸಂಗವನ್ನು ಇದು ಜ್ಞಾಪಿಸುವುದು ಎಂಬುದನ್ನು ಇಲ್ಲಿ ವಿಶಿಷ್ಟ ರೀತಿಯಲ್ಲಿ ನಿರೂಪಿಸಿರುವರು; **ಅಂಭೋನಿಚಯ** – ಸಮುದ್ರ; **ಅವನಿಜಾ** – ಸೀತಾ.

---

೧. ಸಮವ್ಯಾಪಿನೀಂ "ಯತ್ರ ಕೃಷ್ಣಸ್ತತ್ರ ಸಾ", "ಯತ್ರ ಸಾ ತತ್ರ ಸಃ" ಇತಿ ಸಮವ್ಯಾಪ್ತಿಮತೀಮ್ । ಅತ ಏವ ಸ್ವವಿರಹಾಯೋಗ್ಯಾಮ್ । –ವ್ಯಾ.
ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥ –ಬ್ರಹ್ಮಸೂತ್ರ (೪/೨/೭)

೨. ಸ್ವಭರ್ತುರನಿಷ್ಟಂ ಭಾರ್ಯಾ ಸಾಧಯತೀತ್ಯೇತದಯುಕ್ತಮಿತಿ ಭಾವಃ। –ವ್ಯಾ.

೩. ಈ ಮೂಲಕ ರಾಮಾಯಣ, ಮಹಾಭಾರತಗಳ ಪರಸ್ಪರ ಸಂಬಂಧವನ್ನು ಹೀಗೆ ವಿವೇಚಿಸುವ ಶ್ರೀಮದಾಚಾರ್ಯರ [೧]ವೈಶಿಷ್ಟ್ಯವನ್ನು ಶ್ರೀವಾದಿರಾಜರು ಹೀಗೆ ಸ್ಫುಟಪಡಿಸಿರು- ವರು ಎಂದು ತಿಳಿಯಬಹುದು.

೪. ಜಯನು ರಾವಣನಾಗಿದ್ದಾಗ ಸೀತಾಪಹರಣದ ಕಾರ್ಯಕ್ಕೆ ಪ್ರಯತ್ನಿಸಿದ್ದಕ್ಕೆ ಪ್ರತಿಫಲ- ವೆಂಬಂತೆ ಅವನ ಈ ಶಿಶುಪಾಲಜನ್ಮದಲ್ಲಿ ರುಗ್ಮಿಣಿಯ ಬಗ್ಗೆ ಹತಾಶನಾಗುವಂತೆ ಆಯಿತು ಎಂಬ ಸೂಚನೆಯೂ ಇಲ್ಲಿದೆ.

೫. ಅಲ್ಲಿ ಶ್ರೀರಾಮನು ನಿರ್ಮಿಸಿದ್ದು ಸಮುದ್ರಕ್ಕೆ ಸೇತುವೆ; ಇಲ್ಲಿ [೨]ರಕ್ತದ ಪ್ರವಾಹವೇ ಸಮುದ್ರವಾಗಿತ್ತು; ಸೇತುನಿರ್ಮಾಣಕ್ಕೆ ಬೆಟ್ಟಗಳನ್ನು ಉಪಯೋಗಿಸಿದಂತೆ, ಇಲ್ಲಿ ಸತ್ತ [೩]ಆನೆಗಳ ದೇಹವೇ ಅಂತಹ ಬೆಟ್ಟಗಳ ಪಾತ್ರವನ್ನು ನಿರ್ವಹಿಸಿದ್ದವು ಎಂದು ತಾತ್ಪರ್ಯ.

೬. ಇಲ್ಲಿಯ ಪೂರ್ವರಾಮ ಎಂಬ ಪದ ಶ್ರೀಹರಿವಾಯುಸ್ತುತಿ(ಶ್ಲೋ.೨೫)ಯಲ್ಲಿನ ಪೂರ್ವಭೀಮ ಎಂಬ ಪದವನ್ನು ಜ್ಞಾಪಿಸುವುದು (ಪೂರ್ವಭೀಮಾಜ್ಞಯಾ ತೇ..)

## ಶ್ರೀಕೃಷ್ಣನ ಮುಂದೆ ದಿಕ್ಕೆಟ್ಟ ಜರಾಸಂಧನ ಸೇನೆ

**ಅಹಯೀದಹಯೀ ಕಶ್ಚಿದನಂಸೀದಪರೋಽಚ್ಯುತಮ್ ।**
**ನಾಕ್ರಮೀದಪರೋ ವಿದ್ಧೋ ವಿಕ್ರಮಾರ್ಕೋದಯೇ ಹರೇಃ ॥ ೫ ॥**

ಶ್ರೀಕೃಷ್ಣನ ಪರಾಕ್ರಮವೆಂಬ ಸೂರ್ಯ ಕಾಣಿಸಿಕೊಂಡಾಗ ಶತ್ರುಸೇನೆಯಲ್ಲಿ ಕೆಲವು ಅಶ್ವಾ- ರೋಹಿಗಳು ತಮ್ಮ ಕುದುರೆಗಳಿಂದ ಇಳಿದು ಪಲಾಯನ ಮಾಡಿದರು; ಮತ್ತೆ ಕೆಲವರು ಅವನಿಗೆ ಶರಣಾದರು; ಇನ್ನು ಕೆಲವರು ಅವನಿಂದ ಪೆಟ್ಟುತಿಂದು ಮುಂದೆ ಹೆಜ್ಜೆ ಇಡದಾದರು.

ವಿ. : ೧. ಶ್ರೀಕೃಷ್ಣನ ಪರಾಕ್ರಮಕ್ಕೆ ಶತ್ರುಗಳು ಪರಾಭವಗೊಂಡ ಬಗೆಯನ್ನು ಇಲ್ಲಿ ತಿಳಿಸಿರುವರು.

೨. ಪಲಾಯಗೈದವರು ರಾಜಸರು; ಶರಣಾದವರು ಸಾತ್ವಿಕರು; ಪೆಟ್ಟುತಿಂದು ನಿಶ್ಚೇಷ್ಟ- ರಾದವರು ತಾಮಸರು – ಹೀಗೆ ಆ ಗುಂಪಿನಲ್ಲಿ ಮೂರು ಬಗೆಯ ಜೀವರೂ ಇದ್ದರು. ಆದ್ದರಿಂದ ಜೀವತ್ರೈವಿಧ್ಯವು ಶಾಸ್ತ್ರಸಿದ್ಧವಾದ ಮಹಾಪ್ರಮೇಯಗಳಲ್ಲೊಂದು ಎನ್ನುವುದು ಸಿದ್ಧವಾಗುವುದು.

---

೧. ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಮಹಾಭಾರತತಾತ್ಪರ್ಯನಿರ್ಣಯ – ಕನ್ನಡ ಅನುವಾದ ಸಮೇತ' ಕೃತಿಯಲ್ಲಿ ನೋಡಬಹುದು.

೨. ರಕ್ತಾಂಭೋನಿಚಯೇ ಶೋಣಿತಸಮುದ್ರೇ ಸೇತುಮಾಬಧ್ಯ ಆಗತಾನಾಂ ಗಜಾನಾಂ ಕ್ರಮೇಣೈವ ಹಿಂಸನಾತ್ ತದ್ದೇಹಾನಾಂ ಸೇತುತ್ವಮಿತಿ ಭಾವಃ । –ವ್ಯಾ.

೩.. ರುಗ್ಮಿಣಃ ಗಜಪತಿತ್ವಾತ್ ಗಜಾ ಏವ ಬಹವೋ ಹತಾ ಇತಿ ಭಾವಃ । –ವ್ಯಾ.

೩.. ಈ ಬಗೆಯ ವಿವರಣೆ ಹಿಂದಿನ ಸರ್ಗದಲ್ಲಿ ಮತ್ತೊಂದು ಬಗೆಯಲ್ಲಿ ಬಂದದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು (೧೪/೨೯).

### ಶ್ರೀಕೃಷ್ಣನ ವಿವಾಹರಂಗದಂತಾದ ಯುದ್ಧರಂಗ

ಹುತ್ವಾ ಶತ್ರುಸಮೂಹಮುನ್ಮುಖಶಿಖಿಸ್ವೀಯಪ್ರತಾಪಾನಲೇ
ಕೃತ್ವಾ ರಕ್ತರಸಾರ್ದ್ರತಾಮಪಿ ಶರಭ್ರಾಜದ್ದೃತಿಶ್ರೇಣಿಭಿಃ ।
ಸ್ವಸ್ಥಪ್ರೇಷಿತಪುಷ್ಪಲಾಜನಿಕರಾಕೀರ್ಣಃ ಕ್ಷಿತೀಶಾರ್ಪಿತೈ-
ರ್ವಿತ್ತೈಸ್ತತ್ಸಮಯೋಚಿತೈಃ ಸಹ ನಿಜಾಂ ನಿನ್ಯೇ ನಿಸರ್ಗಪ್ರಿಯಾಮ್ ॥ ೬ ॥

ಶ್ರೀಕೃಷ್ಣನು ಊರ್ಧ್ವಮುಖವಾಗಿ ಜ್ವಲಿಸುವ ತನ್ನ ಪ್ರತಾಪವೆಂಬ ಅಗ್ನಿಯಲ್ಲಿ ಸಮಿತ್ತುಗಳಂತಿದ್ದ ಶತ್ರುಸೇನೆಯನ್ನು ತನ್ನ ಬಾಣಗಳಿಂದ ಹೋಮಿಸಿದನು; ಬಾಣಗಳೆಂಬ ಹೊಳೆಯುವ ಪಿಚಕಾರಿಗಳಿಂದ ಆ ಸೇನೆಯ ಮೇಲೆ ರಕ್ತದ ಓಕುಳಿಯನ್ನು ಆಡಿದನು. ಸ್ವರ್ಗದಲ್ಲಿನ ದೇವತೆಗಳು ಸುರಿಸಿದ ಪುಷ್ಪಗಳೆಂಬ ಲಾಜಗಳಿಂದ ಸುರಿಯಲ್ಪಟ್ಟವನಾಗಿ, ಆ ಸಮಯಕ್ಕೆ ರಾಜರು ಅರ್ಪಿಸಿದ ಉಚಿತವಾದ ಸಂಪತ್ತಿನಿಂದ ತನಗೆ ಸ್ವಭಾವತಃ ಪ್ರಿಯಳಾದ ರುಗ್ಮಿಣಿಯನ್ನು ಅಲ್ಲಿಂದ ಕರೆದೊಯ್ದನು.

ವಿ. : [೧]ವಿವಾಹಕ್ಕೆ ಮುನ್ನ, ಓಕುಳಿಯಾಟ, ಲಾಜಗಳ ಅರ್ಪಣೆ, ಹಾಗೂ ಉಡುಗೊರೆಗಳ ಸಮರ್ಪಣೆ ನಡೆಯುವುದು ವಿಧಿ; ಇಲ್ಲಿ ಶ್ರೀಕೃಷ್ಣನು ಶತ್ರುಗಳ ಸೇನೆಯನ್ನು ಹೋಮಿಸಿದ; ರಕ್ತದ ಓಕುಳಿಯನ್ನಾಡಿದ; ದೇವತೆಗಳ ಪುಷ್ಪವೃಷ್ಟಿಗಳ ಲಾಜಗಳಿಂದ ಪೂಜಿತನಾದ; ಅಲ್ಲಿ ನೆರೆದಿದ್ದ ರಾಜರು ತಮಗೆ ಯೋಗ್ಯರೀತಿಯಲ್ಲಿ ಸಮರ್ಪಿಸಿದ ವಸ್ತುಗಳನ್ನು ಉಡುಗೊರೆಯಾಗಿ ಪಡೆದ ಎಂದು ತಿಳಿಸುವ ಮೂಲಕ ಆ ವಿವಾಹದ ವಿಧಿಗಳನ್ನು ಪಾಲಿಸಿದ ಎಂಬ ಪ್ರಮೇಯ ನಿರೂಪಿತವಾಗಿದೆ; ನಿಸರ್ಗ - ಸ್ವಭಾವ; ದೃತಿ - ಪಿಚಕಾರಿ.

### ಶ್ರೀಕೃಷ್ಣನನ್ನು ಎದುರಿಸಿದ ಶತ್ರುಸೇನೆಯ ದುರ್ಗತಿ

ಕೃಷ್ಣೇ ಸ್ವಾಂ ದಯಿತಾಂ ನಯತ್ಯುರುಬಲೇ ತದ್ಬಂಧುಯೋಗ್ಯಾಂ ದಶಾ-
ಮಾಪನ್ನಾ ಇವ ಭೂಭುಜೋಽಂತಕಪುರೀಮನ್ವಾಗತಾ ವೈ ಗತಾಃ ।
ಅನ್ಯೇ ಖಿನ್ನಮುಖಾ ದೃಗಂಬು ಸಸೃಜುಃ ಕೇಚಿಚ್ಚ ಮೂರ್ಛಾಂ ಶ್ರಿತಾ-
ಶ್ಛೈದ್ಯಾದ್ಯಾ ಮಲಿನಾನನಾ ಗತಗಿರಶ್ಚಿಂತಾಂ ದುರಂತಾಂ ಯಯುಃ ॥ ೭ ॥

ಮಹಾಬಲಶಾಲಿಯಾದ ಶ್ರೀಕೃಷ್ಣನು ಹಾಗೆ ತನ್ನ ಪ್ರಿಯೆಯಾದ ರುಗ್ಮಿಣಿಯನ್ನು ಕರೆದೊಯ್ಯುತ್ತಿರಲು, ಹಿಂಬಾಲಿಸಿ ಬಂದ ಕೆಲವು ರಾಜರು ರುಗ್ಮಿಣಿಯ ಬಂಧುಗಳಿಗೆ

೧. ಯಥಾ ವಿವಾಹೋತ್ಸವೇ ಕುಂಕುಮೋದಕಸೇಕೇನ ರಕ್ತತಾ ಭವತಿ ತಥೇತ್ಯರ್ಥಃ । -ವ್ಯಾ.

ಉಚಿತವಾದ ಗತಿಯನ್ನು ಹೊಂದಿದವರಂತೆ ಯಮಪುರಿಗೆ ತೆರಳಿದರು. ಇತರರು ಬಾಡಿದ ಮುಖದವರಾಗಿ ಕಣ್ಣೀರು ಸುರಿಸಿದರು. ಕೆಲವರಂತೂ ಮೂರ್ಛೆಗೊಳಗಾದರು; ಶಿಶುಪಾಲ ಮೊದಲಾದವರು ಮಾತು ಹೊರಡದವರಾಗಿ ಕೊನೆಯಿಲ್ಲದ ಚಿಂತೆಗೊಳಗಾದರು.

ವಿ. : ೧.[೧] ಶ್ರೀಕೃಷ್ಣರುಗ್ಮಿಣಿಯರ ವಿವಾಹವನ್ನು ತಪ್ಪಿಸಲೆಂದು ಪ್ರಯತ್ನಿಸಿದವರ ಗತಿ ದುರಂತ-ಮಯವಾಯಿತು ಎಂದು ಭಾವ; ದೃಗಂಬು - ಕಣ್ಣೀರು; ಅಂತಕ - ಯಮ.

೨. ಇದರಂತೆ ಸಂಪತ್ತನ್ನು ಭಗವಂತನಿಗೆ ಸಮರ್ಪಿಸುವ ಸಜ್ಜನರ ಕಾರ್ಯಕ್ಕೆ ವಿಘ್ನವೆಸಗುವ ಜನರೂ ಸಹ ದುರಂತವನ್ನೇ ಕಾಣುವರು ಎಂಬುದು ಇಲ್ಲಿಯ ಸಂದೇಶ.

### ಜಗದಂಬೆಯ ದ್ರೋಹದ ಫಲವಾದ ಶತ್ರುಸೇನೆಯ ಪರಾಭವ

**ನ ಕೃಷ್ಣೋ ನಾಪಿ ತತ್ಸೇನಾ ಜಘಾನ ರಿಪುವಾಹಿನೀಮ್ ।**
**ಜನನೀದ್ರೋಹಕೃಚ್ಚೈದ್ಯಪಕ್ಷಪಾತೇನ ಸಾ ಹತಾ ॥ ೮ ॥**

ಶತ್ರುಸೇನೆಯನ್ನು ಕೊಂದದ್ದು ಕೃಷ್ಣನಲ್ಲ; ಅವನ ಸೇನೆಯೂ ಅಲ್ಲ; ತಾಯಿಗೆ ದ್ರೋಹಬಗೆದ ಶಿಶುಪಾಲನ ಪಕ್ಷವನ್ನು ವಹಿಸಿದ್ದರಿಂದ ಅದು ಅಳಿಯಿತು.

ವಿ. : ೧. ಶತ್ರುಸೇನೆಯು ಅಳಿಯಲು ಅದು ಶಿಶುಪಾಲನಂತಹ ಶ್ರೀಕೃಷ್ಣ ರುಗ್ಮಿಣಿಯರ ದ್ವೇಷಿಯ ಪಕ್ಷವನ್ನು ವಹಿಸಿದ್ದೇ ಕಾರಣ ಎಂದರ್ಥ. ಇದರಿಂದ ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ ಎಂಬ ಶ್ರೀಮದ್ಭಾಗವತ (೫/೫/೨)ವಾಕ್ಯದ ಅರ್ಥ ಸ್ಫುಟವಾಗುವುದು.

೨. ಭಗವದ್ದ್ರೋಹಿಗಳಿಗೆ ಬೇರಾರೂ ಶಿಕ್ಷಣೆ ನೀಡಬೇಕಿಲ್ಲ; ಅವರ ಪಾಪವೇ ಅವರ ಅಳಿವಿಗೆ ಕಾರಣವಾಗುವುದು ಎಂಬುದು ಇಲ್ಲಿಯ ಸಂದೇಶ :

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥** - ಗೀತಾ (೨/೧೬)

೩. ಇದರ ಸಾರರೂಪದಂತಿರುವ ಶ್ರೀಸತ್ಯಧರ್ಮತೀರ್ಥರ ಸೂಕ್ತಿಯೊಂದು ಹೀಗಿದೆ :

**ಸತಾಂ ಕೃತ್ವಾ ತು ಸಂತೋಷಂ ವರಂ ದೇಹೀತಿ ನೋ ವದೇತ್ ।**
**ಸತಾಂ ಕೃತ್ವಾ ತು ಸಂತಾಪಂ ಶಾಪಂ ದೇಹೀತಿ ನೋ ವದೇತ್ ॥**

ಸಜ್ಜನರಿಗೆ ಉಂಟುಮಾಡುವ ಪ್ರೀತಿ ತಾನಾಗಿಯೇ ಸತ್ಫಲವನ್ನು ನೀಡುವುದು. ಅದರಂತೆ ಅವರಿಗೆ ಮಾಡುವ ದ್ರೋಹವೂ ತಾನಾಗಿಯೇ ಕೆಡುಕನ್ನು ಉಂಟುಮಾಡುವುದು; ಅವುಗಳಿಗೆ ಪ್ರತ್ಯೇಕ ವರಶಾಪಗಳ ಅಗತ್ಯವಿಲ್ಲ ಎಂದರ್ಥ.

---

೧. ಯಥಾ ಸುಹೃದೋಽತ್ಯಂತಬಂಧುವಿಯೋಗೇ ಸತಿ ಮರಣಂ ಪ್ರಾಪ್ನುವಂತಿ ತಥೇತ್ಯರ್ಥಃ । -ವ್ಯಾ.

### ಶ್ರೀಕೃಷ್ಣನಿಂದ ರುಗ್ಮಿಯ ಪರಾಭವ

ರುಗ್ಮೀ ಸ ರುಗ್ಮೀವ ಯದಾ ವಿರೋಧಂ
ಚಕ್ರೇ ತದಾ ಚಕ್ರಧರಃ ಸ ರೌಗ್ಮಮ್ ।
ಛಿತ್ವಾ ಧನುಸ್ತಸ್ಯ [1]ಮುಹುರ್ಭವಿಷ್ಯ-
ದುದ್ಯೋಗಮುತ್ಥಾಪಯತಿ ಸ್ಮ ದೇವಃ ॥ ೯ ॥

ಧನವಂತನಂತೆ ಸೊಕ್ಕಿದ ಆ ರುಗ್ಮಿಯು ಚಕ್ರಪಾಣಿಯಾದ ಶ್ರೀಕೃಷ್ಣನಿಗೆ ಯಾವಾಗ ವಿರೋಧವನ್ನು ಬಗೆದನೋ ಆಗಲೇ ಆ ಶ್ರೀಕೃಷ್ಣ ಅವನ ಸುವರ್ಣಖಚಿತವಾದ ಬಿಲ್ಲನ್ನು ಅನೇಕ ಬಾರಿ ಕತ್ತರಿಸಿ, ಮುಂದೆ ಅವನು ಧನುಃಪ್ರಾಪ್ತಿಗೋಸ್ಕರ ಶಿವನನ್ನು ಕುರಿತು ತಪಸ್ಸನ್ನು ಮಾಡುವ ಕಾರ್ಯಕ್ಕೆ ನಾಂದಿ ಹಾಡಿದ.

ವಿ. : ಶ್ರೀಕೃಷ್ಣನಿಂದ ಇಲ್ಲಿ ಪರಾಭವಗೊಂಡ ರುಗ್ಮಿ ಮುಂದೆ ಶಿವನನ್ನು ಕುರಿತು, ವಿಶಿಷ್ಟವಾದ ಧನುಸ್ಸನ್ನು ಪಡೆಯಲೆಂದು ತಪಸ್ಸನ್ನು ಮಾಡಿದನು ಎಂಬುದು [2]ಶ್ರೀಮದ್ಭಾಗವತಾದಿಗಳಲ್ಲಿ ಬಂದಿರುವ ನಿರೂಪಣೆ. ರುಗ್ಮಿಯ ಆ ಕಾರ್ಯಕ್ಕೆ ಸೂಚಕವೆಂಬಂತೆ ಶ್ರೀಕೃಷ್ಣ ಅವನ ಧನುಸ್ಸನ್ನು ಕತ್ತರಿಸಿದ ಎನ್ನುವ ಮೂಲಕ ಶ್ರೀಕೃಷ್ಣನು ಭೂತಭವಿಷ್ಯದ್ವರ್ತಮಾನವನ್ನು ಬಲ್ಲ ಸರ್ವಜ್ಞನಾದ ಪರಮಪುರುಷ ಎಂಬ ಪ್ರಮೇಯವನ್ನು ನಿರೂಪಿಸಿರುವರು; ರುಗ್ಮ - ಚಿನ್ನ; ರೌಗ್ಮ - ಚಿನ್ನದ.

### ನಿರ್ಭಾಗ್ಯ ರುಗ್ಮಿಯ ದುರ್ಗತಿ

ಅಚೀಕ್ಲೃಪನ್ಮುಂಡಿತಮೂರ್ಧಜಂ ತಂ
ಶಚೀಪತಿಸ್ತುತ್ಯಕೃತಿರ್ಮುರಾರಿಃ ।
ಉಪೇಕ್ಷ್ಯ ಯದ್ಗೇಹಮಗಾದ್ಧಿ ಲಕ್ಷ್ಮೀ-
ಸ್ತದೇತದಸ್ಯಾನುಗುಣಂ ಖಲಸ್ಯ ॥ ೧೦ ॥

ಶಚೀಪತಿಯಾದ ಇಂದ್ರನು ಸ್ತುತಿಸುವ ಕಾರ್ಯಗಳನ್ನೆಸಗುವ ಶ್ರೀಕೃಷ್ಣನು ಆ ರುಗ್ಮಿಯ ತಲೆಯನ್ನು ಬೋಳಿಸಿದ; ಅವನ ಮನೆಯನ್ನು ತೊರೆದು ಮಹಾಲಕ್ಷ್ಮಿಯಾದ ರುಗ್ಮಿಣಿಯು ನಿರ್ಗಮಿಸಿದ ಆ ದುಷ್ಟನಿಗೆ ಅವೆಲ್ಲ ಅನುಗುಣವೇ ಆದ ಕಾರ್ಯವಾಗಿತ್ತು.

---

೧. ಮುಹುರ್ಧನುಃಶತಚ್ಛೇದೇ ಸತಿ ಅಕ್ಷಯ್ಯಧನುಃಪ್ರಾಪ್ತ್ಯರ್ಥಂ ತಪಃಕರಣೇನಾನುಭೂತಬಹುತರಕ್ಲೇಶಂ ಏನಂ ಪಶ್ಚಾತ್ಸ್ಮಾರಯಿಷ್ಯಾಮೀತಿ ಬುದ್ಧ್ಯಾ ಧನುರೇವಾಚ್ಛಿನದಿತಿ ಭಾವಃ। -ವ್ಯಾ.

೨. ತತ್ರ ರುಗ್ಮೀ ನ ಯುಯುಧೇ ಸಹದೇವೇನ ವೀರ್ಯವಾನ್ ।
ಜಿತಃ ಕೃಷ್ಣೇನ ಪೂರ್ವಂ ತು ಶರ್ವಾದಾಪ ಧನುರ್ವರಮ್ ॥
ತಪಸಾ ತೋಷಿತಾತ್ ಕೃಷ್ಣಾದನ್ಯಾನೇವಾಮುನಾಽಖಿಲಾನ್ ।
ವಿಜೇಷ್ಯಸಿ ಯದಾ ಕೃಷ್ಣವಿರೋಧಸ್ತೇ ತದಾ ಧನುಃ ।
ಮಾಮೇಷ್ಯತೀತಿ ತೇನೋಕ್ತೋ ನ ವ್ಯರುಧ್ಯತ ಕೇಶವೇ ॥ -ಮ.ಭಾ.ತಾ.ನಿ.(೨೧/೨೧೦,೨೧೧)

ವಿ. : ೧. ರುಗ್ಮಿಯನ್ನು ಶ್ರೀಕೃಷ್ಣನು ಪಂಚಚೂಡನನ್ನಾಗಿ ಮಾಡಿ ವಿರೂಪಗೊಳಿಸಿದ ಎಂಬುದು ಶ್ರೀಮದ್ಭಾಗವತದ ನಿರೂಪಣೆ. ಅದಕ್ಕೆ ಕಾರಣವನ್ನು ಇಲ್ಲಿ ತಿಳಿಸಿರುವರು.

೨. ರುಗ್ಮಿಣಿಯು ಸಾಕ್ಷಾತ್ ಮಹಾಲಕ್ಷ್ಮಿ; ಅವರು ಹೊರಬಂದ ಮೇಲೆ ರುಗ್ಮಿಯ ಗತಿ ಸರ್ವನಾಶಕ್ಕೆ ಗುರಿಯಾಯಿತು ಎಂದು ಭಾವ ; ಮೂರ್ಧಜ – ಕೇಶ.

೩. ಭಾಗ್ಯ ಕಳೆದುಕೊಂಡವರು ಮುಂದೆ ತಲೆಬೋಳಿಸಿಕೊಂಡು (ಕಪಟ) [೧]ಸಂನ್ಯಾಸಿಗಳಾಗುವುದು ಲೋಕರೀತಿ ಎಂಬುದು ಇಲ್ಲಿಯ ಯುಕ್ತಿ.

**ರುಗ್ಮಿಣಿಯನ್ನು ಹಿಂಬಾಲಿಸಿದ ಸಾವಿರಗಟ್ಟಲೆ ಜಯಕಾಮಿನಿಯರು**

**ಸಹಸ್ರಸಂಖ್ಯಾವನಿಪಾಲಭಂಗ-**
**ಸಮುತ್ಥಭಾಸ್ವಜ್ಜಯಕಾಮಿನೀಭಿಃ ।**
**ಸಹಾತ್ಮದಾಸೀಭಿರನನ್ಯಕಾಂತಾ**
**ಜಗಾಮ ಸಾ ಚಂಚಲಲೋಚನಾಂತಾ ॥ ೧೧ ॥**

ಸಾವಿರಗಟ್ಟಲೆ ರಾಜರ ಪರಾಭವದ ಮೂಲಕ ಉಂಟಾದ ಉಜ್ಜ್ವಲವಾದ ಜಯರೂಪದ ಕಾಮಿನಿಯರೊಂದಿಗೂ, ತನ್ನ ದಾಸಿಯರೊಂದಿಗೆ ಕೂಡಿಕೊಂಡು, ಶ್ರೀಕೃಷ್ಣನ ಹೊರತು ಬೇರಾರಿಗೂ ಪತ್ನಿಯಾಗದ ಚಂಚಲ ಕುಡಿನೋಟದ ಆ ರುಗ್ಮಿಣಿಯು ಶ್ರೀಕೃಷ್ಣನೊಂದಿಗೆ ತೆರಳಿದಳು.

ವಿ. : ೧. [೨]ರಾಜಕುಮಾರಿಯಾದ ರುಗ್ಮಿಣಿಯು ಶ್ರೀಕೃಷ್ಣನೊಂದಿಗೆ ಯಾವ ದಾಸಿಯರೂ ಇಲ್ಲದೆ ತೆರಳಿದ್ದು ಅವರ ವೈಭವಕ್ಕೆ ಶೋಭೆ ತರದು ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವಿದೆ.

೨. ಹೊರಗೆ ಕಾಣುವಂತೆ ಅವರ ಹಿಂದೆ ದಾಸಿಯರು ಇರಲಿಲ್ಲವೆಂಬುದು ನಿಜ; ಆದರೆ ಅಪಾರ ಸಂಖ್ಯೆಯ ರಾಜರ ಪರಾಭವದಿಂದಾಗಿ ಜಯಿಸಿದ ಜಯಲಕ್ಷ್ಮೀಸ್ವರೂಪದ ಅಸಂಖ್ಯ ಕಿಂಕರಿಯರು ರುಗ್ಮಿಣಿಯೊಂದಿಗೆ ಇದ್ದದ್ದರಿಂದ ಅವರದು ರಾಜವೈಭವದ ಪ್ರಯಾಣ-ವಾಗಿದ್ದಿತೇ ಹೊರತು ಸಾಮಾನ್ಯವೆನ್ನಿಸುವಂತಹುದಾಗಿರಲಿಲ್ಲ ಎಂಬುದು ಇಲ್ಲಿಯ ಭಾವ.

೩. ಶ್ರೀಕೃಷ್ಣನು ಮಧುರೆಯಿಂದ ಗೋಕುಲಕ್ಕೆ ತೆರಳಿದ ರೀತಿಯೂ ಸಹ ಇದೇ ರೀತಿ ವೈಭವಪೂರ್ಣವಾಗಿದ್ದಿತು ಎಂಬ ಈ ಮುಂಚಿನ ವಿವರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು (ರು.ವಿ.೧/೬೬)

೪. ಅನನ್ಯಕಾಂತಾ ಎಂದರೆ ಬೇರಾರಿಗೂ ಮಡದಿಯಾಗದೆ ಕೇವಲ ಮಹಾವಿಷ್ಣುವಿಗಷ್ಟೇ ಮಡದಿಯಾಗುವ ಮಹಾಹಿರಿಮೆ ಮಹಾಲಕ್ಷ್ಮಿಯದು ಎಂದರ್ಥ.

---

೧. ಗತಶ್ರಿಯೋ ಹಿ ಸಂನ್ಯಾಸಾದಿನಾ ಮುಂಡಿತಕೇಶಾ ಭವಂತೀತ್ಯರ್ಥಃ। –ವ್ಯಾ.

೨. ಯಥಾ ರಾಜಕುಮಾರೀ ದಾಸೀಸಹಸ್ರೇಣ ಸಹ ಗಚ್ಛತಿ ತಥೇತಿ ಭಾವಃ। –ವ್ಯಾ.

### ಶ್ರೀಕೃಷ್ಣನಿಂದ ರುಗ್ಮಿಯ ಪರಾಭವ

ರುಗ್ಮೀ ಸ ರುಗ್ಮೀವ ಯದಾ ವಿರೋಧಂ
ಚಕ್ರೇ ತದಾ ಚಕ್ರಧರಃ ಸ ರೌಗ್ಮಮ್ ।
ಛಿತ್ವಾ ಧನುಸ್ತಸ್ಯ [೧]ಮುಹುರ್ಭವಿಷ್ಯ-
ದುದ್ಯೋಗಮುತ್ಥಾಪಯತಿ ಸ್ಮ ದೇವಃ ॥ ೯ ॥

ಧನವಂತನಂತೆ ಸೊಕ್ಕಿದ ಆ ರುಗ್ಮಿಯು ಚಕ್ರಪಾಣಿಯಾದ ಶ್ರೀಕೃಷ್ಣನಿಗೆ ಯಾವಾಗ ವಿರೋಧವನ್ನು ಬಗೆದನೋ ಆಗಲೇ ಆ ಶ್ರೀಕೃಷ್ಣ ಅವನ ಸುವರ್ಣಖಚಿತವಾದ ಬಿಲ್ಲನ್ನು ಅನೇಕ ಬಾರಿ ಕತ್ತರಿಸಿ, ಮುಂದೆ ಅವನು ಧನುಃಪ್ರಾಪ್ತಿಗೋಸ್ಕರ ಶಿವನನ್ನು ಕುರಿತು ತಪಸ್ಸನ್ನು ಮಾಡುವ ಕಾರ್ಯಕ್ಕೆ ನಾಂದಿ ಹಾಡಿದ.

ವಿ. : ಶ್ರೀಕೃಷ್ಣನಿಂದ ಇಲ್ಲಿ ಪರಾಭವಗೊಂಡ ರುಗ್ಮಿ ಮುಂದೆ ಶಿವನನ್ನು ಕುರಿತು, ವಿಶಿಷ್ಟವಾದ ಧನುಸ್ಸನ್ನು ಪಡೆಯಲೆಂದು ತಪಸ್ಸನ್ನು ಮಾಡಿದನು ಎಂಬುದು [೨]ಶ್ರೀಮದ್ಭಾಗವತಾದಿಗಳಲ್ಲಿ ಬಂದಿರುವ ನಿರೂಪಣೆ. ರುಗ್ಮಿಯ ಆ ಕಾರ್ಯಕ್ಕೆ ಸೂಚಕವೆಂಬಂತೆ ಶ್ರೀಕೃಷ್ಣ ಅವನ ಧನುಸ್ಸನ್ನು ಕತ್ತರಿಸಿದ ಎನ್ನುವ ಮೂಲಕ ಶ್ರೀಕೃಷ್ಣನು ಭೂತಭವಿಷ್ಯದ್ವರ್ತಮಾನವನ್ನು ಬಲ್ಲ ಸರ್ವಜ್ಞನಾದ ಪರಮಪುರುಷ ಎಂಬ ಪ್ರಮೇಯವನ್ನು ನಿರೂಪಿಸಿರುವರು; ರುಗ್ಮ – ಚಿನ್ನ; ರೌಗ್ಮ – ಚಿನ್ನದ.

### ನಿರ್ಭಾಗ್ಯ ರುಗ್ಮಿಯ ದುರ್ಗತಿ

ಅಚೀಕ್ಲೃಪನ್ಮುಂಡಿತಮೂರ್ಧಜಂ ತಂ
ಶಚೀಪತಿಸ್ತುತ್ಯಕೃತಿರ್ಮುರಾರಿಃ ।
ಉಪೇಕ್ಷ್ಯ ಯದ್ಗೇಹಮಗಾದ್ಧಿ ಲಕ್ಷ್ಮೀ-
ಸ್ತದೇತದಸ್ಯಾನುಗುಣಂ ಖಲಸ್ಯ ॥ ೧೦ ॥

ಶಚೀಪತಿಯಾದ ಇಂದ್ರನು ಸ್ತುತಿಸುವ ಕಾರ್ಯಗಳನ್ನೆಸಗುವ ಶ್ರೀಕೃಷ್ಣನು ಆ ರುಗ್ಮಿಯ ತಲೆಯನ್ನು ಬೋಳಿಸಿದ; ಅವನ ಮನೆಯನ್ನು ತೊರೆದು ಮಹಾಲಕ್ಷ್ಮಿಯಾದ ರುಗ್ಮಿಣಿಯು ನಿರ್ಗಮಿಸಿದ ಆ ದುಷ್ಟನಿಗೆ ಅವೆಲ್ಲ ಅನುಗುಣವೇ ಆದ ಕಾರ್ಯವಾಗಿತ್ತು.

---

೧. ಮುಹುರ್ಧನುಃಶತಚ್ಛೇದೇ ಸತಿ ಅಕ್ಷಯ್ಯಧನುಃಪ್ರಾಪ್ತ್ಯರ್ಥಂ ತಪಃಕರಣೇನಾನುಭೂತಬಹುತರಕ್ಲೇಶಂ ಏನಂ ಪಶ್ಚಾತ್ಸ್ಮಾರಯಿಷ್ಯಾಮೀತಿ ಬುದ್ಧ್ಯಾ ಧನುರೇವಾಚ್ಛಿನದಿತಿ ಭಾವಃ । –ವ್ಯಾ.

೨. ತತ್ರ ರುಗ್ಮೀ ನ ಯುಯುಧೇ ಸಹದೇವೇನ ವೀರ್ಯವಾನ್ ।
ಜಿತಃ ಕೃಷ್ಣೇನ ಪೂರ್ವಂ ತು ಶರ್ವಾದಾಪ ಧನುರ್ವರಮ್ ॥
ತಪಸಾ ತೋಷಿತಾತ್ ಕೃಷ್ಣಾದನ್ಯಾನೇವಾಮುನಾಽಖಿಲಾನ್ ।
ವಿಜೇಷ್ಯಸಿ ಯದಾ ಕೃಷ್ಣವಿರೋಧಸ್ತೇ ತದಾ ಧನುಃ ।
ಮಾಮೇಷ್ಯತೀತಿ ತೇನೋಕ್ತೋ ನ ವ್ಯರುಧ್ಯತ ಕೇಶವೇ ॥ –ಮ.ಭಾ.ತಾ.ನಿ.(೨೧/೨೧೦,೨೧೧)

ವಿ. : ೧. ರುಗ್ಮಿಯನ್ನು ಶ್ರೀಕೃಷ್ಣನು ಪಂಚಚೂಡನನ್ನಾಗಿ ಮಾಡಿ ವಿರೂಪಗೊಳಿಸಿದ ಎಂಬುದು ಶ್ರೀಮದ್ಭಾಗವತದ ನಿರೂಪಣೆ. ಅದಕ್ಕೆ ಕಾರಣವನ್ನು ಇಲ್ಲಿ ತಿಳಿಸಿರುವರು.

೨. ರುಗ್ಮಿಣಿಯು ಸಾಕ್ಷಾತ್ ಮಹಾಲಕ್ಷ್ಮಿ; ಅವರು ಹೊರಬಂದ ಮೇಲೆ ರುಗ್ಮಿಯ ಗತಿ ಸರ್ವನಾಶಕ್ಕೆ ಗುರಿಯಾಯಿತು ಎಂದು ಭಾವ; ಮೂರ್ಧಜ – ಕೇಶ.

೩. ಭಾಗ್ಯ ಕಳೆದುಕೊಂಡವರು ಮುಂದೆ ತಲೆಬೋಳಿಸಿಕೊಂಡು (ಕಪಟ) [೧]ಸಂನ್ಯಾಸಿಗಳಾಗುವುದು ಲೋಕರೀತಿ ಎಂಬುದು ಇಲ್ಲಿಯ ಯುಕ್ತಿ.

**ರುಗ್ಮಿಣಿಯನ್ನು ಹಿಂಬಾಲಿಸಿದ ಸಾವಿರಗಟ್ಟಲೆ ಜಯಕಾಮಿನಿಯರು**

**ಸಹಸ್ರಸಂಖ್ಯಾವನಿಪಾಲಭಂಗ-**
**ಸಮುತ್ಥಭಾಸ್ವಜ್ಜಯಕಾಮಿನೀಭಿಃ ।**
**ಸಹಾತ್ಮದಾಸೀಭಿರನನ್ಯಕಾಂತಾ**
**ಜಗಾಮ ಸಾ ಚಂಚಲಲೋಚನಾಂತಾ ॥ ೧೧ ॥**

ಸಾವಿರಗಟ್ಟಲೆ ರಾಜರ ಪರಾಭವದ ಮೂಲಕ ಉಂಟಾದ ಉಜ್ಜ್ವಲವಾದ ಜಯರೂಪದ ಕಾಮಿನಿಯರೊಂದಿಗೂ, ತನ್ನ ದಾಸಿಯರೊಂದಿಗೆ ಕೂಡಿಕೊಂಡು, ಶ್ರೀಕೃಷ್ಣನ ಹೊರತು ಬೇರಾರಿಗೂ ಪತ್ನಿಯಾಗದ ಚಂಚಲ ಕುಡಿನೋಟದ ಆ ರುಗ್ಮಿಣಿಯು ಶ್ರೀಕೃಷ್ಣನೊಂದಿಗೆ ತೆರಳಿದಳು.

ವಿ. : ೧. [೨]ರಾಜಕುಮಾರಿಯಾದ ರುಗ್ಮಿಣಿಯು ಶ್ರೀಕೃಷ್ಣನೊಂದಿಗೆ ಯಾವ ದಾಸಿಯರೂ ಇಲ್ಲದೆ ತೆರಳಿದ್ದು ಅವರ ವೈಭವಕ್ಕೆ ಶೋಭೆ ತರದು ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವಿದೆ.

೨. ಹೊರಗೆ ಕಾಣುವಂತೆ ಅವರ ಹಿಂದೆ ದಾಸಿಯರು ಇರಲಿಲ್ಲವೆಂಬುದು ನಿಜ; ಆದರೆ ಅಪಾರ ಸಂಖ್ಯೆಯ ರಾಜರ ಪರಾಭವದಿಂದಾಗಿ ಜಯಿಸಿದ ಜಯಲಕ್ಷ್ಮೀಸ್ವರೂಪದ ಅಸಂಖ್ಯ ಕಿಂಕರಿಯರು ರುಗ್ಮಿಣಿಯೊಂದಿಗೆ ಇದ್ದದ್ದರಿಂದ ಅವರದು ರಾಜವೈಭವದ ಪ್ರಯಾಣ-ವಾಗಿದ್ದಿತೇ ಹೊರತು ಸಾಮಾನ್ಯವೆನ್ನಿಸುವಂತಹುದಾಗಿರಲಿಲ್ಲ ಎಂಬುದು ಇಲ್ಲಿಯ ಭಾವ.

೩. ಶ್ರೀಕೃಷ್ಣನು ಮಧುರೆಯಿಂದ ಗೋಕುಲಕ್ಕೆ ತೆರಳಿದ ರೀತಿಯೂ ಸಹ ಇದೇ ರೀತಿ ವೈಭವಪೂರ್ಣವಾಗಿದ್ದಿತು ಎಂಬ ಈ ಮುಂಚಿನ ವಿವರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು (ರು.ವಿ.೧/೬೬)

೪. ಅನನ್ಯಕಾಂತಾ ಎಂದರೆ ಬೇರಾರಿಗೂ ಮಡದಿಯಾಗದೆ ಕೇವಲ ಮಹಾವಿಷ್ಣುವಿಗಷ್ಟೇ ಮಡದಿಯಾಗುವ ಮಹಾಹಿರಿಮೆ ಮಹಾಲಕ್ಷ್ಮಿಯದು ಎಂದರ್ಥ.

---

೧. ಗತಶ್ರಿಯೋ ಹಿ ಸಂನ್ಯಾಸಾದಿನಾ ಮುಂಡಿತಕೇಶಾ ಭವಂತೀತ್ಯರ್ಥಃ। -ವ್ಯಾ.
೨. ಯಥಾ ರಾಜಕುಮಾರೀ ದಾಸೀಸಹಸ್ರೇಣ ಸಹ ಗಚ್ಛತಿ ತಥೇತಿ ಭಾವಃ। -ವ್ಯಾ.

೫. ಆತ್ಮದಾಸೀಭಿಃ ಎಂಬ ಪದದಿಂದ ರುಗ್ಮಿಣಿಯೊಂದಿಗಿದ್ದ ಆ ವಿಶಿಷ್ಟ ನಿತ್ಯ ಜಯಸ್ವರೂಪದ ಕಾಮಿನಿಯರು ತಾತ್ಕಾಲಿಕಸ್ವರೂಪದವರಾಗಿರದೆ ಸದಾ ಇರುವ ನಿತ್ಯದಾಸಿಯರು ಎಂಬ [1]ಭಾವವೂ ಸೂಚಿತ.

### ಜೊತೆಗೂಡಿದ ಆನೆ, ಕುದುರೆ ಮೊದಲಾದವುಗಳು

**ತದ್ಯೋಧಾ ಜಯಕಾಮಿನೀಜನಯುತಾ ಗರ್ಜಂತಿ ಧೈರ್ಯೋರ್ಜಿತಾಃ**
**ಯುದ್ಧಾಪ್ತಾ ವಡವಾ ನಿರೀಕ್ಷ್ಯ ತುರಗಾ ಹ್ರೇಷಾಂ ಮುಹುಸ್ತನ್ವತೇ।**
**ಹಸ್ತೀಂದ್ರಾಃ ಕರಿಣೀಃ ಸಮೇತ್ಯ ಪರಿತಃ ಕುರ್ವಂತ್ಯಹೋ ಬೃಂಹಿತಂ**
**ಭಕ್ತಾಭೀಷ್ಟಕರೋ ಹರಿರ್ನನು ಪುರಾ ಸ್ವೀಯಾನ್ ಸಜಾಯಾನ್ ವ್ಯಧಾತ್ ॥೧೨॥**

ಶ್ರೀಕೃಷ್ಣನ ಕಡೆಯ ಭಟರು ಜಯವೆಂಬ ಕಾಮಿನೀಜನರಿಂದ ಕೂಡಿದವರಾಗಿ ಧೈರ್ಯದಿಂದ ಉಬ್ಬಿ ಗರ್ಜಿಸುತ್ತಿದ್ದರು. ಯುದ್ಧದಲ್ಲಿ ಗೆದ್ದು ತಂದ ಹೆಣ್ಣು ಕುದುರೆಗಳನ್ನು ಕಂಡು ಗಂಡು ಕುದುರೆಗಳು ಹೇಷಾರವವನ್ನು ಮತ್ತೆ ಮತ್ತೆ ಮಾಡತೊಡಗಿದವು. ಶ್ರೇಷ್ಠವಾದ ಆನೆಗಳು ಹೆಣ್ಣಾನೆಗಳನ್ನು ಸುತ್ತುವರೆದು ಸಂಭ್ರಮದ ಗರ್ಜನೆಯನ್ನು ಮಾಡತೊಡಗಿದವು. ಭಕ್ತಾಭೀಷ್ಟಪ್ರದಾಯಕ ಶ್ರೀಹರಿಯು ಹೀಗೆ ತನ್ನವರನ್ನು ತನ್ನ ವಿವಾಹಕ್ಕಿಂತ ಮುಂಚಿತವಾಗಿ ಸಪತ್ನೀಕರನ್ನಾಗಿ ಮಾಡಿದನಲ್ಲವೆ ! ಆಶ್ಚರ್ಯ!

ವಿ. : ೧. ಶ್ರೀಕೃಷ್ಣನು ಈ ರೀತಿಯಾಗಿ ತನ್ನ ಸೇನೆಯಲ್ಲಿದ್ದ ಭಟರು, ಕುದುರೆಗಳು ಹಾಗೂ ಆನೆಗಳಿಗೆ ಜೋಡಿಗಳನ್ನು ಏರ್ಪಡಿಸುತ್ತಾ ಅವರಿಗೆಲ್ಲಾ ತನ್ನ ವಿವಾಹಕ್ಕಿಂತ ಮುಂಚಿತವಾಗಿಯೇ ವಿವಾಹಮಾಡಿಸುವಂತಹ ಅಪೂರ್ವಕಾರ್ಯವನ್ನು ಮಾಡಿದ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು.

೨. ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ ತನ್ನನ್ನು ಅವಲಂಬಿಸಿದವರಿಗೆ ತನಗಿಂತ ಮುಂಚಿತವಾಗಿಯೇ ಭೋಜನಮಾಡಿಸಬೇಕು ಎಂಬ ಕರ್ತವ್ಯವನ್ನು ಮನೆಯ ಯಜಮಾನನಿಗೆ ತಿಳಿಸಿರುವರು. [2]ಜಗತ್ತಿಗೆ ಯಜಮಾನನಾದ ಶ್ರೀಕೃಷ್ಣ ಈ ಸಮಯದಲ್ಲಿ ಹೀಗೆ ತನ್ನವರಿಗೆ ತನಗಿಂತ ಮುಂಚಿತವಾಗಿಯೇ ವಿವಾಹ ಮಾಡಿಸುವ ಮೂಲಕ ಭೋಜನದೊಂದಿಗೆ ಇತರ ಕಾರ್ಯಗಳಲ್ಲೂ ತನ್ನ ಆಶ್ರಿತಜನರಿಗೆ ಆದ್ಯತೆ ನೀಡಬೇಕು ಎಂಬ ವಿಶೇಷ ಪ್ರಮೇಯವನ್ನು ಸೂಚಿಸಿದ ಎಂದು ತಿಳಿಯಬೇಕು; ವಡವಾ – ಹೆಣ್ಣುಕುದುರೆ.

---

೧. ಆತ್ಮದಾಸೀಭಿರಿತ್ಯನೇನ ಶ್ರೀಕಟಾಕ್ಷಜಯವತಾಂ ಈದೃಶ್ಯಃ ಕಾಮಿನ್ಯಃ ಸ್ವಯಮೇವಾಯಾಸ್ಯಂತೀತ್ಯರ್ಥೋಽವಗಮ್ಯತೇ । ''ಯದಪಾಂಗಲೇಶಮಾಶ್ರಿತ್ಯ ವಿಶ್ವವಿಜಯಂ ವಿಸೃಜತ್ಯಚಿಂತ್ಯಾ ಶ್ರೀಃ''(ದ್ವಾದಶಸ್ತೋತ್ರ.೭/೨)ಇತಿ ವಚನಾತ್ । - ವ್ಯಾ.

೨. ಭುಕ್ತಶೇಷಂ ಭಗವತೋ ಭೃತ್ಯಾತಿಥಿಪುರಸ್ಸರಃ।
ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಂಸ್ತದ್ಗತಮಾನಸಃ॥ -ಸದಾಚಾರಸ್ಮೃತಿ(ಶ್ಲೋ.೧೫)

## ರುಗ್ಮಿಣೀಸಮೇತ ಶ್ರೀಕೃಷ್ಣನ ದ್ವಾರಕಾಪ್ರವೇಶ

ಅಲಂಕೃತಾಂ ನಿಜಪುರೀಂ ಜಲಜಾಯತಲೋಚನಃ।
ಹಯಹಸ್ತಿರಥೋಪೇತಃ ಪ್ರಿಯಯಾ ಸಹಿತೋಽವಿಶತ್ ॥ ೧೩ ॥

ತಾವರೆಯಂತೆ ವಿಶಾಲನೇತ್ರನಾದ ಶ್ರೀಕೃಷ್ಣನು ಕುದುರೆ, ಆನೆ, ರಥಗಳೊಂದಿಗೆ ಸಮೇತನಾಗಿ, ಶೃಂಗಾರಗೊಂಡಿದ್ದ ತನ್ನ ದ್ವಾರಕಾಪುರಿಯನ್ನು ಪ್ರಿಯೆಯಾದ ರುಗ್ಮಿಣಿಯೊಂದಿಗೆ ಪ್ರವೇಶಿಸಿದ.

## ಕಲ್ಯಾಣಕ್ಕಾಗಿ ಮೂಲಮಾಧವಕ್ಷೇತ್ರ

ಕರಂ ಜಿಘೃಕ್ಷುರ್ವೈದರ್ಭ್ಯಾಃ ಶರಣ್ಯೋಽಥ ಯಥಾವಿಧಿ।
ಪ್ರಿಯಯಾ ಬಂಧುಭಿಃ ಸಾರ್ಧಂ ಪ್ರಯಯೌ ಮೂಲಮಾಧವಮ್ ॥ ೧೪ ॥

ಅನಂತರ ರುಗ್ಮಿಣಿಯ ಪಾಣಿಗ್ರಹಣವನ್ನು ವಿಧ್ಯುಕ್ತವಾಗಿ ಮಾಡಬಯಸಿದ, ಸರ್ವಲೋಕಕ್ಕೆ ಆಸರೆಯಾದ ಶ್ರೀಕೃಷ್ಣನು ಬಂಧುಗಳೊಂದಿಗೆ ಒಡಗೂಡಿ ಮೂಲಮಾಧವಕ್ಷೇತ್ರಕ್ಕೆ ತೆರಳಿದ.

ವಿ. : ೧. ಶ್ರೀಕೃಷ್ಣನು ತಾನು ರುಗ್ಮಿಣಿಯ ಅನಾದಿನಿತ್ಯನಾದ ಪತಿಯಾಗಿದ್ದರೂ ಸಹ ಲೋಕಕ್ಕೆ ವಿವಾಹಾದಿ ಸಂಸ್ಕಾರಾದಿಗಳು ಶಾಸ್ತ್ರವಿಧಿಗನುಗುಣವಾಗಿಯೇ ನಡೆಯಬೇಕು ಎಂಬ ನಿಯಮವನ್ನು ತೋರಿಸಿಕೊಡಲೆಂದು ಶಾಸ್ತ್ರೋಕ್ತರೀತಿಯಲ್ಲಿ ವಿವಾಹಕಾರ್ಯಕ್ಕೆ ಸಿದ್ಧನಾದ ಎಂದರ್ಥ.

೨. ಮೂಲಮಾಧವ[1] ಎಂಬುದು ಶ್ರೀಕೃಷ್ಣ-ರುಗ್ಮಿಣಿಯರಿಗೆ ವಿವಾಹನಡೆದಂತಹ ದ್ವಾರಕೆಯ ಒಂದು ಸ್ಥಳ ಎಂಬುದಾಗಿ ದ್ವಾರಾವತೀಕಲ್ಪದಲ್ಲಿದೆ ಎಂಬ ವಿವರ ವ್ಯಾಖ್ಯಾನದಲ್ಲಿದೆ: ಮೂಲಮಾಧವಾಖ್ಯಕ್ಷೇತ್ರೇ ರುಗ್ಮಿಣೀವಿವಾಹೋ ಜಾತ ಇತಿ ದ್ವಾರವತೀಕಲ್ಪೋಕ್ತಾನುಸಾರೇಣೇದಮುದಿತಮ್ ।-ವ್ಯಾ.

## ಶ್ರೀಕೃಷ್ಣನ ಬೆಂಬಿಡದ ದ್ವಾರಕೆ

ಗಚ್ಛಂತಮಾಸ್ಥಾಪಯತೀವ ಕೃಷ್ಣಂ
ದ್ವಾರಾವತೀ ತತ್ಕೃತರಮ್ಯಶೋಭಾ।
ಕಾಂತ್ಯೋಲ್ಲಸಂತ್ಯೋಭಯಭಾಗಹೇಮ್ನಾಂ
ದ್ವಾರ್ಯಂಚಲೇನಾಭಿಮುಖೇ ಮುರಾರೇಃ ॥ ೧೫ ॥

---

೧. ಪ್ರಭಾಸದಿಂದ ದ್ವಾರಕೆಯತ್ತ ಸಾಗುವ ಮಾರ್ಗದಲ್ಲಿ ಮಾಧವಪುರ (ಮಧುವನ) ಎಂಬ ಸ್ಥಳವೊಂದಿದ್ದು ಶ್ರೀಕೃಷ್ಣರುಗ್ಮಿಣಿಯರ ಕಲ್ಯಾಣ ನಡೆದದ್ದು ಅಲ್ಲಿಯೇ ಎಂದು ಪ್ರತೀತಿ; ಪ್ರಾಯಃ ಈ ಸ್ಥಳವೇ ಮೂಲಮಾಧವಕ್ಷೇತ್ರ ಆಗಿದ್ದಿರಬಹುದು. ಅದು ಸಮುದ್ರತೀರದ ಸ್ಥಳ ಎಂಬ ಇಲ್ಲಿಯ ಉಲ್ಲೇಖಕ್ಕೆ ಆ ಸ್ಥಳವು ಸಮುದ್ರತೀರದ್ದೇ ಆಗಿರುವುದು ಗಮಕ ಎನ್ನಿಸುವಂತಿದೆ.

ಶ್ರೀಕೃಷ್ಣನಿಂದ ಅಪಾರವಾದ ಶೋಭೆಪಡೆದಂತಹ ದ್ವಾರಕೆಯು ಅಲ್ಲಿಂದ ತೆರಳುತ್ತಿದ್ದ ಶ್ರೀಕೃಷ್ಣನನ್ನು ಎದುರಿಗೆ ಕಂಗೊಳಿಸುವಂತಹ ದ್ವಾರದ ಇಕ್ಕೆಲಗಳ ಚಿನ್ನದ ಕಾಂತಿಯಿಂದ ಮಹಾದ್ವಾರದಲ್ಲಿ ವಸ್ತ್ರದ ಬೀಸುವಿಕೆಯ ಮೂಲಕ ತಡೆಯುತ್ತಿದೆಯೋ ಎಂಬಂತೆ ಕಂಡಿತು.

ವಿ. : ೧. [೧] ಶ್ರೀಕೃಷ್ಣನು ತನ್ನಿಂದ ದೂರತೆರಳುವುದು ಬೇಡ ಎಂಬ ಭಾವದಿಂದಲೋ ಎಂಬಂತೆ ದ್ವಾರಕೆಯ ಪತಾಕೆ ಹಾರಾಡುತ್ತಿದ್ದಿತು ಎಂದರ್ಥ.

೨. ದ್ವಾರಕೆಯ ಶ್ರೀಕೃಷ್ಣದೇವಸ್ಥಾನದ ಮೇಲೆ ಪತಾಕೆಯೊಂದು ಹಾರಾಡುವುದನ್ನು ಗಮನಿಸಬಹುದು. ಇದು ಇತರ ದೇವಸ್ಥಾನಗಳಲ್ಲಿ ಕಂಡುಬರದಿರುವಂತಹ ವಿಶೇಷತೆ. ಇದು ದ್ವಾರಕೆಗೆ ತೆರಳುವವರಿಗೆ ಐದಾರು ಕಿ.ಮೀ. ದೂರದ ಮುನ್ನವೇ ಗೋಚರಿಸುವಂತಹ ಪತಾಕೆ. ಅದು ಗೋಚರಿಸುತ್ತಲೇ ವಾಹನಾದಿಗಳಿಂದ ಕೆಳಕ್ಕಿಳಿದು ಒಮ್ಮೆ ಸಾಷ್ಟಾಂಗ ವಂದಿಸಿ ದ್ವಾರಕೆಯತ್ತ ಪ್ರಯಾಣವನ್ನು ಮುಂದುವರಿಸಬೇಕು ಎಂದು ದ್ವಾರಕಾಯಾತ್ರೆಯ ವಿಧಿ ಎಂಬುದು ಅಲ್ಲಿಯ ಸಂಪ್ರದಾಯ.

೩..ಶ್ರೀವಾದಿರಾಜಸ್ವಾಮಿಗಳ ಪ್ರಸ್ತುತ ಮಾತು ಈ ಯಾತ್ರಾವಿಧಿಯನ್ನು ಕುರಿತಾದದ್ದು ಎನ್ನುವಂತಿದೆ; **ಅಂಚಲ** – ಬೀಸುವಿಕೆ.

### ಶ್ರೀಕೃಷ್ಣನ ವಿರಹದಿಂದ ಮಂಕಾದ ದ್ವಾರಕೆ

**ಕೃಷ್ಣೇ ಬಲಾದ್ವ್ರಜತಿ ಸಾ ದ್ರವದಿಂದುಕಾಂತ್ಯೈ-**
**ಸ್ತನ್ಮಂದಹಾಸನವಚಂದ್ರಿಕಯಾಽಶ್ರುಧಾರಾಮ್ ।**
**ತತ್ಸೈನ್ಯಸಂಭ್ರಮಸಮುತ್ಥರಜೋಭಿರಾಸ್ಯ-**
**ಮಾಲಿನ್ಯಮುದ್ಗತವಚಾ ರಭಸಾ ಬಭಾರ ॥ ೧೬ ॥**

ಶ್ರೀಕೃಷ್ಣನು ಬಲಾತ್ಕಾರದಿಂದ ಅಲ್ಲಿಂದ ಹೊರಟುನಿಂತಾಗ ಆ ದ್ವಾರಕೆಯು ಅವನ ಮಂದಹಾಸವೆಂಬ ಹೊಸಬೆಳದಿಂಗಳಿನಿಂದ ಸುರಿದ ಚಂದ್ರನಂತಹ ಮನೋಹರವಾದ ಅಶ್ರುಧಾರೆಯನ್ನು ಹೊಂದಿತು; ಎಲ್ಲರೂ ತೆರಳಿದ್ದರಿಂದ ವಾಗ್ವ್ಯಾಪಾರವನ್ನು ತೊರೆದವಳಂತೆ ಆ ಸೈನ್ಯದ ಓಡಾಟದಿಂದ ಮೇಲೆದ್ದ ಧೂಳಿಗಳಿಂದ ಮುಖದಲ್ಲಿ ಕಾಂತಿಹೀನತೆಯನ್ನು ಹೊಂದಿತು.

ವಿ. : ೧. ಶ್ರೀಕೃಷ್ಣನ ವಿರಹವನ್ನು ತಾಳಲಾರದೆ ದ್ವಾರಕೆಯು ದುಃಖಿಸುವಂತೆ ಕಾಣಿಸುತ್ತಿದ್ದಿತು ಎಂದರ್ಥ.

೨. ಮಂದಹಾಸವೇ ಬೆಳದಿಂಗಳು, ಸೈನ್ಯದ ಓಡಾಟದಿಂದ ಮೇಲೆದ್ದ ಧೂಳೇ ಮುಖಕ್ಕೆ ಕವಿದ ಮಂಕು ಎಂಬಲ್ಲಿ ರೂಪಕಾಲಂಕಾರವಿದೆ.

---

೧. ಯಥಾ ಪ್ರಿಯಾ ಗಚ್ಛಂತಂ ಪ್ರಿಯಂ ಚೈಲಾಂಚಲೇನ ಬಧ್ವಾ ಗಂತುಂ ನ ಮುಂಚತಿ ತಥೇತ್ಯರ್ಥಃ। –ವ್ಯಾ.

೩. [1]ಪ್ರಿಯನ ಅಗಲುವಿಕೆಯನ್ನು ಸಹಿಸದ ಪ್ರೇಯಸಿಯ ವಿರಹದಂತೆ ದ್ವಾರಕೆಯ ಸ್ಥಿತಿ ಇದ್ದಿತು ಎಂದು ತಾತ್ಪರ್ಯ.

೪. ಶ್ರೀರಾಮನ ವಿಯೋಗದಿಂದ ಅಯೋಧ್ಯೆಯು ಸಹ ಹೀಗೆ ಪರಿತಪಿಸಿದ ವಿವರ [2]ತೀರ್ಥಪ್ರಬಂಧದಲ್ಲಿದೆ.

### ಶ್ರೀಕೃಷ್ಣನನ್ನು ಅನುಸರಿಸಿದಂತೆ ಕಂಡ ದ್ವಾರಕೆ

ಭರ್ತುಸ್ತತಃ ಪ್ರತಿಕೃತಿಂ ಸ್ಫುರದಾತ್ಮವಪ್ರ-
ಲಗ್ನೋಚ್ಚರತ್ನನಿಕರೇಷು ನಿಧಾಯ ದೀನಾ ।
ತಸ್ಥಾವಿವಾಥ ಫಲಿತಾಚ್ಯುತಭೂಷಣೇಷು
ವಿಶ್ಲೇಷಶಂಕಿಹೃದಯಾಽನುಯಯಾವಿವೇಶಮ್ ॥ ೧೭ ॥

ಆ ಬಳಿಕ ಸ್ವಾಮಿಯಾದ ಶ್ರೀಕೃಷ್ಣನ ಪ್ರತಿಬಿಂಬವನ್ನು ಹೊಳೆಯುವ ತನ್ನ ಪ್ರಾಕಾರಗಳಲ್ಲಿನ ಖಚಿತವಾದ ರತ್ನಗಳ ಶ್ರೇಷ್ಠವಾದ ಸಾಲುಗಳಲ್ಲಿ ಇರಿಸಿಕೊಂಡು, ದೀನವಾದ ಆ ದ್ವಾರಕೆಯು ಅವನ ಭೂಷಣಗಳಲ್ಲಿ ಪ್ರತಿಫಲಿತವಾಗಿ ಅವನ ವಿರಹವನ್ನು ಶಂಕಿಸಿ, ಅವನನ್ನು ಹಿಂಬಾಲಿಸಿ ತೆರಳುತ್ತಿರುವಂತಿದೆ.

ವಿ. : ೧. ಶ್ರೀಕೃಷ್ಣನ ಪ್ರತಿಬಿಂಬವು ದ್ವಾರಕೆಯ ರತ್ನಖಚಿತವಾದ ಪ್ರಾಕಾರಗಳಲ್ಲಿ ಗೋಚರಿಸುತ್ತಿದ್ದುದು ಅವಳ ಹೃದಯದಲ್ಲಿ ಕೃಷ್ಣ ನೆಲೆಸಿದ್ದಂತೆ ಆಗಿದ್ದಿತು ಎಂದೂ ಶ್ರೀಕೃಷ್ಣ ಧರಿಸಿದ ಆಭರಣಗಳಲ್ಲಿ ದ್ವಾರಕೆಯ ಪ್ರತಿಬಿಂಬ ಗೋಚರಿಸುತ್ತಿದ್ದುದರಿಂದ ಅದೂ ಸಹ ಆ ಮೂಲಕ ಶ್ರೀಕೃಷ್ಣನೊಂದಿಗೆ ತೆರಳುತ್ತಿದ್ದಂತೆಯೂ ಕಾಣುತ್ತಿದ್ದಿತು ಎಂಬ ಇಲ್ಲಿಯ ಕಾವ್ಯ ನಿರೂಪಣೆ ಅತ್ಯಂತ ಭವ್ಯವಾದುದು ; ವಿಶ್ಲೇಷ – ವಿಯೋಗ.

೨. ದ್ವಾರಕೆಯು ರತ್ನಖಚಿತವಾದ ಚಿನ್ನದ ಪಟ್ಟಣ ಎಂಬ ಶ್ರೀಮದ್ಭಾಗವತಾದಿಗಳ ಉಲ್ಲೇಖವನ್ನು ಗಮನಿಸಿದವರಿಗೆ ಇಲ್ಲಿಯ ಕಾವ್ಯಸೌಂದರ್ಯ ಅರ್ಥವಾಗುವುದು.

### ದ್ವಾರಕೆಯ ರಾಜಮಾರ್ಗದ ವರ್ಣನೆ

ಚಲತ್ಪತಾಕಾನಿಲನಿರ್ಮಲೀಕೃತೇ
ರಥೌಘಚಕ್ರಾವಲಿಭಿಃ ಸಮೀಕೃತೇ ।
ಸುರಾಲಿಮುಕ್ತಾಮಲಪುಷ್ಪಲಾಂಛಿತೇ
ಗಜೇಂದ್ರದಾನಾಂಬುಕದಂಬಸಿಂಚಿತೇ ॥ ೧೮ ॥

---

೧. ಅನೇನ ತತ್ಕಾಲೇ ವಿಯುಕ್ತಸ್ತ್ರೀಸ್ವಭಾವೋ ಧ್ವನ್ಯತೇ । -ವ್ಯಾ.

೨. ಅಯೋಧ್ಯಾ ನಾಮ ನಗರೀ ಭಾತಿ ಸಾಧ್ವೀ ವಧೂರಿವ ।
ವನಂ ಗತಸ್ಯಾಪಿ ತಸ್ಯ ಪಾದುಕೇ ಯಾಽಕರೋತ್ ಪತಿಮ್ ॥ -ಉತ್ತರಪ್ರಬಂಧ(೨/೩೫)

ದ್ವಾರಕೆಯ ರಾಜಮಾರ್ಗವು [೧]ಹಾರಾಡುವ ಪತಾಕೆಗಳಿಂದ ಬೀಸಿಬರುವ ಗಾಳಿಯಿಂದ ನಿರ್ಮಲವಾಗಿದ್ದಿತು, ರಥಗಳ ಗುಂಪಿನ ಚಕ್ರಗಳ ಸಾಲುಗಳಿಂದ ಸಮತಟ್ಟಾಗಿದ್ದಿತು; ದೇವತೆಗಳೆಂಬ ಗುಂಪುಗಳು ಸುರಿಸಿದ ಮುತ್ತಿನಂತಹ ನಿರ್ಮಲವಾದ ಪುಷ್ಪಗಳಿಂದ ತುಂಬಿದ್ದಿತು; ಶ್ರೇಷ್ಠ ಆನೆಗಳ ಮದಜಲಗಳ ರಾಶಿಯಿಂದ ಸಿಂಪಡಿಸಲ್ಪಟ್ಟಿತ್ತು.

### ಅಶ್ವಗಳಿಂದ ಭೂಷಿತವಾದ ರಾಜಮಾರ್ಗ

ವರಾಶ್ವವಾರೋಚ್ಚಯಸೂಚಿತೈರ್ಹಯೈ-
ರಿತಸ್ತತೋ ಮಂಡಲಧಾವನೋದ್ಯತೈಃ।
ಪರಿಸ್ಫುರದ್ಭೂಷಣಚಾಮರೋಜ್ಜ್ವಲೈ-
ರ್ವಿರಾಜಿತೇ ಹ್ರೇಷಿತಭೂಷಿತಾನನೈಃ॥ ೧೯ ॥

ಕುದುರೆಗಳು ಅತ್ತಿತ್ತ ಮಂಡಲಾಕಾರವಾಗಿ ಓಡಲು ತೊಡಗಿದ್ದವು, ಶ್ರೇಷ್ಠವಾದ ಅಶ್ವಾರೋಹಿಗಳ ಹಿಂಡಿನಿಂದ ಕೂಡಿದ್ದವು, ಹೊಳೆಹೊಳೆಯುವ ಭೂಷಣಗಳಿಂದಲೂ, ಬೀಸುವ ಚಾಮರಗಳಿಂದಲೂ ಕಂಗೊಳಿಸುತ್ತಿದ್ದವು, ಹೇಷಾರವದಿಂದ ಕೂಡಿದ್ದ ಮುಖಗಳಿಂದ ಶೋಭಿಸುತ್ತಿದ್ದವು; (ಅಶ್ವವಾರ - ಅಶ್ವಾರೋಹಿ ; ಹ್ರೇಷಿತ - ಹೇಷಾರವ).

### ಗಜವರ್ಗದಿಂದಾಗಿ ಶೋಭಿಸುತ್ತಿದ್ದ ರಾಜಮಾರ್ಗ

ಪಾರ್ಶ್ವದ್ವಯಸ್ಥೇಭಕದಂಬರಂಗಿ-
ಕುಂಭೈಃ ಸಮೇತೇ ಕಲಶೋಪಮಾನೈಃ।
ಅನ್ಯೋನ್ಯಸಕ್ತೋನ್ಮುಖಕುಂಚಿತಾಗ್ರ-
ಹಸ್ತೈಶ್ಚ ನೀಲೋತ್ಪಲತೋರಣಾಭೈಃ॥ ೨೦ ॥

ಪೂರ್ಣಕುಂಭಗಳಂತಿದ್ದಂತಹ ಇಕ್ಕೆಲಗಳಲ್ಲೂ ನೆರೆದಿದ್ದ ಆನೆಗಳ ಸಾಲುಗಳ, ರಂಗುರಂಗಾದ ಕುಂಭಗಳಿಂದ ಕೂಡಿದ್ದಿತು; ಆ ಆನೆಗಳು ಪರಸ್ಪರ ಹೆಣೆದಿದ್ದ ಮೇಲ್ಮುಖವಾದ ತುದಿಯು ಬಾಗಿದ್ದ ಸೊಂಡಿಲುಗಳಿಂದಾಗಿ, ಕನ್ನೈದಿಲೆಗಳ ತೋರಣಗಳ ಶೋಭೆಯನ್ನು ಹೊಂದಿದ್ದವು.

### ರಂಗಕಾಂತಿಯನ್ನು ಮೀರಿಸಿದ ರಾಜಮಾರ್ಗ

ವಿಚಿತ್ರರತ್ನೋಜ್ಜ್ವಲಭೂಷಣೌಘೈಃ
ಪಾದಾಂಬುಜೈಃ ಪ್ರಾಹುಣಿಕಾಂಗನಾನಾಮ್।

---

೧. ಯಥಾ ಭವತಿ ತಥಾ ಯಯಾವಿತ್ಯುತ್ತರಶ್ಲೋಕೇನಾನ್ವಯಃ। -ವ್ಯಾ.

ರಂಗಪ್ರಭಾಂ ಮುಷ್ಣತಿ ರಾಜಮಾರ್ಗೇ
ಮಂದಂ ಯಯೌ ಮನ್ಮಥಕೋಟಿರೂಪಃ ॥ ೨೧ ॥

ವಿವಾಹಕ್ಕೆಂದು ಆಗಮಿಸಿದ್ದ ಸ್ತ್ರೀಯರ ವಿಚಿತ್ರವಾದ ರತ್ನಗಳಿಂದ ಹೊಳೆಯುತ್ತಿದ್ದ ಭೂಷಣಗಳ ರಾಶಿಗಳಿಂದ ಕೂಡಿದ್ದ ಪಾದಕಮಲಗಳಿಂದ, ರಂಗಮಂಟಪದ ಕಾಂತಿಯನ್ನು ಮೀರಿಸುತ್ತಿದ್ದ ರಾಜಮಾರ್ಗದಲ್ಲಿ ಕೋಟಿಮನ್ಮಥರೂಪದ ಆ ಶ್ರೀಕೃಷ್ಣನು ಮೆಲ್ಲಗೆ ನಡೆದನು.

### ಸಮುದ್ರದಂತಹ ಶ್ರೀಕೃಷ್ಣನ ಸೇನೆ

ಮಧ್ಯಸ್ಥಾಪಿತಮಾಧವಾ ಸ್ಮಿತಲಸತ್ಫೇನಾ ಚಲಚ್ಚಾಮರ-
ವ್ರಾತೋರ್ಮಿರ್ವಿತತಾತಪತ್ರಕಮಠಾ ಹಸ್ತ್ಯಶ್ವಪತ್ತ್ಯಾವೃತಾ ।
ವೀಣಾವೇಣುನಿನಾದಗರ್ಜಿತಯುತಾ ವಾರ್ಧೇಃ ಸಮಾ ಸಾ ಚಮೂ-
ರಾಚ್ಛನ್ನಾನಿಮಿಷಾಂತರಾಗತಮಹೀಪಾಲೌಘಸೇನಾಸರಿತ್ ॥ ೨೨ ॥

ಮಧ್ಯದಲ್ಲಿ ನೆಲೆಸಿದ್ದ ಶ್ರೀಕೃಷ್ಣ, ಮಂದಹಾಸರೂಪದ ಹೊಳೆಯುವ ನೊರೆ, ಬೀಸುವ ಚಾಮರವೃಂದಗಳೆಂಬ ಅಲೆಗಳು, ಹರಡಿದ ಛತ್ರಗಳೆಂಬ ಆಮೆಗಳು, ಎಲ್ಲೆಡೆಯು ತುಂಬಿದ್ದ ಆನೆ, ಕುದುರೆ ಪದಾತಿಗಳ ಸಮೂಹ ಹಾಗೂ ವೀಣೆ, ಕೊಳಲುಗಳ ನಿನಾದವೆಂಬ ಗರ್ಜನೆ, ಮನುಷ್ಯರೂಪದಲ್ಲಿ ಕಾಣದಂತಿದ್ದ ದೇವತೆಗಳು, ಮಧ್ಯದಲ್ಲಿ ಆಗಮಿಸುತ್ತಿದ್ದ ರಾಜರ ಸೇನೆ ಎಂಬ ನದಿಗಳು, ಹೀಗೆ ಆ ಸೇನೆಯು ಸಮುದ್ರದಂತಿದ್ದಿತು.

ವಿ. : ೧. ಸಮುದ್ರದಲ್ಲಿ ಮಧ್ಯೆ ಶ್ರೀಹರಿ, ಹೊಳೆಯುವ ನೊರೆ, ಅಲೆಗಳ ರಾಶಿ, ಆಮೆಗಳು, ಮೀನುಗಳು, ಗಂಭೀರವಾದ ಘೋಷ ಹಾಗೂ ಅಸಂಖ್ಯವಾದ ನದಿಗಳು, ಮೊದಲಾದವುಗಳು ಇರುವಂತೆ ಆ ಸೇನಾ ಸಮುದ್ರದಲ್ಲಿ ಮಧ್ಯದಲ್ಲಿ ಶ್ರೀಹರಿಯೇ ಆದ ಶ್ರೀಕೃಷ್ಣ ಮಂದಹಾಸವೆಂಬ ನೊರೆ, ಬೀಸುವ ಚಾಮರಗಳೆಂಬ ಅಲೆಗಳು, ಛತ್ರರೂಪದ ಆಮೆಗಳು, ವೀಣೆ ಮೊದಲಾದ ಧ್ವನಿಗಳ ರೂಪದ ಘೋಷ, ಮನುಷ್ಯರೂಪದ ಅಸಂಖ್ಯದೇವತೆಗಳು, ರಾಜರುಗಳ ಸೇನೆ ಎಂಬ ನದಿಗಳು ಇದ್ದವು ಎಂದರ್ಥ; ವ್ರಾತ - ಸಮೂಹ; ಅನಿಮಿಷ-ದೇವತೆಗಳು, ಮೀನುಗಳು; ಕಮಠ- ಆಮೆ; ವಾರ್ಧಿ-ಸಮುದ್ರ.

೨. ಸೇನೆಯು ಅಪಾರವಾಗಿದ್ದಿತು ಎಂಬುದನ್ನು ಸೂಚಿಸಲು ಸೇನಾಸಮುದ್ರ ಎಂದು ಕರೆಯುವುದು ಸುಪ್ರಸಿದ್ಧ. ಪ್ರಸ್ತುತ ಶ್ರೀಕೃಷ್ಣನ ಸೈನ್ಯವು ಸಮುದ್ರದಂತೆ ಇತ್ತು ಎಂಬುದನ್ನು ಅಪೂರ್ವ ರೂಪಕದಿಂದ ತಿಳಿಸಿರುವುದು ಇಲ್ಲಿಯ ವೈಶಿಷ್ಟ್ಯ.

### ಗಗನಚುಂಬಿಯಾದ ಸೇನೆಯ ಧೂಳಿ

ಲಕ್ಷ್ಮೀಶವಾಹರಥಹಸ್ತಿಭಟೌಘವೇಗಾ-
ಜ್ಜಾತಂ ವ್ರಜತ್ ತ್ರಿದಿವಮಾತ್ತರಯಂ ರಜಸ್ತತ್ ।
ಕೃಷ್ಣಾನುಷಂಗಿಚಿದಚೇತನಸಂಗಭಾಜೋ
ವಕ್ತಿ ತ್ರಿವಿಷ್ಟಪಗತಿಂ ಗತಮೇಧಸೋಽಪಿ ॥ ೨೩ ॥

ಲಕ್ಷ್ಮೀಶನಾದ ಶ್ರೀಕೃಷ್ಣನ ವಾಹನಗಳಾದ ರಥ, ಆನೆ ಹಾಗೂ ಭಟರ ಸಮೂಹದ ವೇಗದಿಂದ ಉಂಟಾದ ಆ ಧೂಳಿಯು ಕೃಷ್ಣನ ಸಂಗಕ್ಕೊಳಗಾದ ಜಡ, ಚೇತನಗಳ ಸಂಪರ್ಕಕ್ಕೆ ಬಂದಂತಹ ವಿವೇಕರಹಿತನಿಗೂ ಸ್ವರ್ಗಲೋಕದ ಪ್ರಾಪ್ತಿಯನ್ನು ತಿಳಿಸಿಕೊಡುವುದು.

ವಿ. : ೧. ಶ್ರೀಕೃಷ್ಣನ ಸಂಪರ್ಕಹೊಂದಿದ, ಚೇತನ ಅಥವಾ ಜಡದ ಸಂಪರ್ಕಕ್ಕೊಳಗಾದ ಜ್ಞಾನರಹಿತನಿಗೂ ಸದ್ಗತಿ ಪ್ರಾಪ್ತಿ ನಿಶ್ಚಿತ ಎಂದು ಭಾವ; ತ್ರಿದಿವ – ಸ್ವರ್ಗ; ತ್ರಿವಿಷ್ಟಪ – ಸ್ವರ್ಗ.

೨. [೧]ಇಲ್ಲಿ ಶ್ರೀಕೃಷ್ಣನ ಸನ್ನಿಧಾನ ಇರುವ ಚೇತನರು ಎಂದರೆ ಭಗವದ್ಭಕ್ತರಾದ ಸಜ್ಜನರು ಎಂದೂ ಅಚೇತನ ವಸ್ತುಗಳು ಎಂದರೆ ಸಾಲಿಗ್ರಾಮ ಮೊದಲಾದವು ಎಂದೂ ಅರ್ಥ.

೩. [೨]ಶ್ರೀಕೃಷ್ಣನ ಸೇನೆಗಳಲ್ಲಿ ಆನೆ, ಕುದುರೆ ಹಾಗೂ ಭಟರು ಚೇತನಗಳಾದರೆ , ರಥಗಳು ಅಚೇತನ. ಅವುಗಳ ಸಂಚಾರದಿಂದ ಹುಟ್ಟಿದ ಧೂಳು ಮೇಲ್ಮುಖವಾಗಿ ವೇಗದಿಂದ ಧಾವಿಸುತ್ತಿದ್ದುದು ಆ ಧೂಳಿಗೆ ಕಾರಣವಾದ ಆನೆ ಮೊದಲಾದವುಗಳು ಸದ್ಗತಿ ಹೊಂದುವುದಕ್ಕೆ ಸೂಚನೆ ಎಂಬಂತಿದ್ದಿತು ಎಂಬುದು ಇಲ್ಲಿಯ ತಾತ್ಪರ್ಯ.

### ಶ್ರೀಕೃಷ್ಣನನ್ನು ಪೂಜಿಸುವಂತೆ ಕಂಡ ಸಾಗರ

ವಿಚಿತ್ರರತ್ನದ್ಯುತಿರಂಗಕಾಂತ್ಯಾ
ಸುಮೌಕ್ತಿಕೌಘಾಕ್ಷತಲಾಜರಾಜ್ಯಾ ।
[೩]ಮಂದಾನಿಲಾಖ್ಯವ್ಯಜನೈಃ ಸ್ವತೀರೇ
ಸಿಂಧುಃ ಸ್ವಜಾಮಾತರಮರ್ಚತೀವ ॥ ೨೪ ॥

ತನ್ನಲ್ಲಿನ ಬಗೆಬಗೆಯ ರತ್ನಗಳ ಕಾಂತಿಯಿಂದ ಉಂಟಾದ ರಂಗಕಾಂತಿ, ಉತ್ತಮ ಮುತ್ತಿನ ಸಾಲುಗಳ ರೂಪದ ಅಕ್ಷತೆ ಹಾಗೂ ಲಾಜಗಳ ಕಾಂತಿ, ಮಂದಾನಿಲ ರೂಪದ ವ್ಯಜನ,

---

೧. ಕೃಷ್ಣಾನುಷಂಗಿಣೌ ಚಿದಚೇತನೌ ಸಜ್ಜನಸಾಲಿಗ್ರಾಮೌ । –ವ್ಯಾ.

೨. ಹಸ್ತ್ಯಶ್ವಪದಾತೀನಾಂ ಚೇತನರೂಪತ್ವಾತ್ ರಥಸ್ಯಾಚೇತನತ್ವಾತ್ ಉಭಯೋರಪಿ ಶ್ರೀಕೃಷ್ಣಸೇನಾಂಗತ್ವೇನ ತದನುಷಂಗಿತ್ವಾದುತ್ಪನ್ನರಜಸೋ ಜಡತ್ವೇನ ಬುದ್ಧಿರಹಿತತ್ವಾಚ್ಚೈವಂ ನಿದರ್ಶನಮ್ । –ವ್ಯಾ.

೩. ಮಂದಾನಿಲಾಖ್ಯವ್ಯಜನೈರಿತ್ಯನೇನ ಪ್ರತಿಪದಂ ಮಂದಾನಿಲಾಗಮಃ ಸೂಚ್ಯತೇ । –ವ್ಯಾ.

ಇವುಗಳಿಂದಾಗಿ ಸಮುದ್ರವು ತನ್ನ ತೀರದಲ್ಲಿ ಇದ್ದ ತನ್ನ ಅಳಿಯನಾದ ಶ್ರೀಕೃಷ್ಣನನ್ನು ಅರ್ಚಿಸುತ್ತಿರುವಂತಿತ್ತು.

ವಿ. : ತನ್ನಲ್ಲಿ ಪ್ರಾದುರ್ಭವಿಸಿದ ಮಹಾಲಕ್ಷ್ಮಿಯ ಸ್ವಯಂವರವನ್ನು ವರುಣ ಶ್ರೀಹರಿಯೊಂದಿಗೆ ಮಾಡಿದ ವಿವರ ಶ್ರೀಮದ್ಭಾಗವತದಲ್ಲಿ ಸುಪ್ರಸಿದ್ಧ. ಆ ಹಿನ್ನೆಲೆಯಲ್ಲಿ ಶ್ರೀಕೃಷ್ಣನನ್ನು ಸಮುದ್ರದ ಅಳಿಯ ಎಂದು ಇಲ್ಲಿ ಕರೆಯಲಾಗಿದೆ.

## ಶ್ರೀಕೃಷ್ಣನ ಮಾರ್ಗದಲ್ಲಿ ಹಾಸು ವಸ್ತ್ರಗಳನ್ನು ಹರಡುವಂತೆ ಕಂಡ ಸಮುದ್ರ

ತುಂಗೈಸ್ತರಂಗೈರ್ಧೃತಶಂಖಚಕ್ರೈಃ
ಕೀರ್ಣಂ ಪಯಃಫೇನಸಿತಂ ವಿತನ್ವನ್ ।
ಹಸ್ತೈರ್ಮುರಾರೇರ್ವ್ರಜತೋಽಧಿ -
ಮಾರ್ಗಂ ವಸ್ತ್ರಾಣಿ ವಿಸ್ತಾರಯತೀವ ವಾರ್ಧಿಃ ॥ ೨೫ ॥

ಶಂಖ-ಚಕ್ರಗಳನ್ನು ಧರಿಸಿದ ಎತ್ತರದ ಅಲೆಗಳಿಂದ ಕೂಡಿದ ಸಮುದ್ರವು, ನೊರೆಯಿಂದ ಶುಭ್ರವಾದ ನೀರನ್ನು ಹರಡುತ್ತಾ , ಮಾರ್ಗದಲ್ಲಿ ಸಾಗುತ್ತಿದ್ದ ಮುರಾರಿಯಾದ ಶ್ರೀಕೃಷ್ಣನಿಗೆ ತನ್ನ ಹಸ್ತಗಳಿಂದ ವಸ್ತ್ರಗಳನ್ನು ಬಿಡಿಸಿ ಹಾಸುವಂತೆ ಕಾಣುತ್ತಿದ್ದಿತು.

ವಿ. : ೧. [1]ದ್ವಾರಕೆಯ ಬಳಿ ಸಮುದ್ರದಲ್ಲಿನ ಚಕ್ರತೀರ್ಥವೆಂಬ ಗೋಮತೀ ಸಮುದ್ರ ಸಂಗಮ ಸ್ಥಳದಲ್ಲಿ ಅಸಂಖ್ಯವಾಗಿ ಚಕ್ರಾಂಕಿತಗಳು ಹಾಗೂ ಶಂಖಗಳು ದೊರೆಯುವುದು ಸುಪ್ರಸಿದ್ಧ. ಅವುಗಳಿಂದ ಕೂಡಿದ ಎತ್ತರದ ಅಲೆಗಳು ಚಕ್ರ-ಶಂಖ ಧರಿಸಿ ತೋಳುಗಳಂತೆ ಶೋಭಿಸಿದವು ಎಂದರ್ಥ.

೨. ತೋಳುಗಳ ಹಾಗೂ ಉಪಲಕ್ಷಿತ ಅಂಗಗಳ ಮೇಲೆ ವೈಷ್ಣವ ಲಾಂಛನಗಳಾದ ಚಕ್ರ-ಶಂಖಗಳನ್ನು ಧರಿಸಿಯೇ ಶ್ರೀಹರಿಯನ್ನು [2]ಆರಾಧಿಸಬೇಕು ಎಂಬ ತತ್ತ್ವವು ಇಲ್ಲಿ ಸೂಚಿತ.

೩. ಸಮುದ್ರದ ಅಲೆಗಳನ್ನು ಹಸ್ತಗಳಿಗೆ ಹೋಲಿಸುವುದು ಕಾವ್ಯಗಳಲ್ಲಿ ಪ್ರಸಿದ್ಧ [3].

---

೧. ದ್ವಾರವತ್ಯಾಃ ಸಮೀಪೇ ಸಮುದ್ರಾತ್ ಶಂಖಚಕ್ರಾಂಕಯೋರುತ್ತತ್ತೇರಿದಮುದಿತಮ್ । -ವ್ಯಾ.
ಚಕ್ರತೀರ್ಥಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ ।
ಯಚ್ಛಿಲಾಮಪಿ ಸಂಗೇನ ವಿಧತ್ತೇ ವಿಶ್ವವಂದಿತಾಮ್ ॥ -ತೀರ್ಥಪ್ರಬಂಧ (೧/೯೫)

೨. ಶಂಖಚಕ್ರಧರ್ರೈರಿತಿ ವೈಷ್ಣವಧರ್ಮೋ ದ್ಯೋತ್ಯತೇ । -ವ್ಯಾ.

೩. ಮಾಮ್ಯೈನಂ ಭವನಗುರುಂ ವಿನಿಂದತೇತ್ಥಂ ನಿರ್ಭತ್ಸ್ಯಾರ್ಭ್ಯಪತದಿವೋತ್ತರಂಗಹಸ್ತಃ ।
ಸಂಕ್ಷೋಭೀ ಘನಘನಘೋಷಘೋರವೇಷಃ ಸಂರಂಭಿ ಖಲದಮನಾಯ ಸಿಂಧುರಾಜಃ ॥- ಸು.ವಿ.(೧೬/೧೩)

### ವಿವಾಹಮಂಟಪದಂತಿದ್ದ ಉಪವನ

ನೀಲಾಶ್ಮದ್ಯುತಿಪತ್ರಶೋಭಿಭಿರಧೋವ್ಯಾಲಂಬಿಪುಷ್ಪಸ್ಫುರ-
ನ್ಮುಕ್ತಾದಾಮಭಿರುಲ್ಲಸತ್ಕಿಸಲಯಶ್ರೇಣೀವಿತಾನೋಜ್ಜ್ವಲೈಃ ।
ಸಿಂಧುಪ್ರೇಷಿತರತ್ನಸಂಹಿತತಲೈರ್ವೃಕ್ಷೈಃ ಸುವರ್ಣೋನ್ನತ-
ಸ್ತಂಭಾಂಗೈರ್ಮಣಿಮಂಡಪಾನುಕೃತಿಭಿರ್ಯುಕ್ತಂ ಸಮಾನಾಯತೈಃ ॥೨೬॥

ವಿಷ್ವಗ್ಲಂಬಿಫಲೋಚ್ಚಯಂ ಕಲಪಿಕೈರಾರಬ್ಧಗೀತಂ ವನಂ
ಗರ್ಜದ್ವಾರಿಧಿಮರ್ದಲಂ ಶುಕವಚಸ್ತೋತ್ರಂ ಸ್ವತನ್ವೀಕ್ಷಯಾ ।
ನೃತ್ಯತ್ಕೇಕಿನಟೀಮನೋಜ್ಞಮಲಿಗೀರ್ವೀಣಾನಿನಾದಂ ಪತ-
ತ್ಪುಷ್ಪೌಘಾಕ್ಷತಲಾಜವೃಂದಮವಿಶನ್ಮಾಂಗಲ್ಯವೇಶ್ಮೋಪಮಮ್ ॥ ೨೭ ॥

ಇಂದ್ರನೀಲಮಣಿಯ ಕಾಂತಿಯ ಎಲೆಗಳ ಶೋಭೆ, ಇಳಿಬಿದ್ದ ಪುಷ್ಪಗಳ ರೂಪದ ಹೊಳೆಯುವ ಮುತ್ತಿನ ಹಗ್ಗಗಳು, ಕಂಗೊಳಿಸುವ ಚಿಗುರುಗಳ ಸಾಲುಗಳ ರೂಪದ ವಿತಾನ, ಸಮುದ್ರರಾಜ ಕಳುಹಿಸಿದ ರತ್ನಖಚಿತವಾದ ತಲಗಳು, ಸಮಾನಪ್ರಮಾಣದ ಸುವರ್ಣ ಉನ್ನತ ಸ್ತಂಭಗಳಂತಹ ಮಣಿಮಂಟಪವನ್ನು ಹೋಲುವ ವೃಕ್ಷಗಳಿಂದ ಕೂಡಿದ, ಸುತ್ತಲೂ ಇಳಿ ಬಿದ್ದಂತಹ ಹಣ್ಣಿನ ರಾಶಿಗಳು, ಹಾಡಲುತೊಡಗಿದ್ದ ಮನೋಹರವಾದ ಕೋಗಿಲೆಗಳು ಹಾಡುತ್ತಿದ್ದ ಗೀತೆಗಳು, ಘರ್ಜಿಸುವ ಮೇಘಗಳ ರೂಪದ ಮದ್ದಲೆಗಳು, ಗಿಳಿಗಳ ಉಲಿತ ರೂಪದ ಸ್ತುತಿಗಳು, ದುಂಬಿಗಳ ಝೇಂಕಾರ ರೂಪದ ವೀಣಾ ನಿನಾದ, ಕೆಳಕ್ಕೆ ಸುರಿಯುವ ಪುಷ್ಪಗಳ ರಾಶಿಯ ರೂಪದ ಅಕ್ಷತೆ, ಲಾಜಗಳ ರಾಶಿ, ಇವುಗಳಿಂದ ಕೂಡಿ ತನ್ನ ಆಕೃತಿಯನ್ನು ಕಂಡು ನರ್ತಿಸತೊಡಗಿದ್ದ ನವಿಲುಗಳ ರೂಪದ ನರ್ತಕಿಯರಿಂದಾಗಿ ಮನೋಹರವಾಗಿದ್ದ ವಿವಾಹ ಮಂಟಪದಂತಿದ್ದ ವನವನ್ನು ಶ್ರೀಕೃಷ್ಣನು ಪ್ರವೇಶಿಸಿದನು.

ವಿ. : ೧. ಸಮುದ್ರತೀರದ ವನದ ಪರಿಸರವೇ ಸಹಜವಾದ ವಿವಾಹಮಂಟಪದ ಶೋಭೆಯನ್ನು ಹೊಂದಿದ್ದಿತು ಎಂದರ್ಥ.

೨. ಇಂದ್ರನೀಲಮಣಿಗಳು, ಮುತ್ತಿನ ಮಾಲೆಗಳು, ವಿತಾನಗಳು, ರತ್ನಗಳು, ಬಗೆಬಗೆಯ ಹಣ್ಣುಗಳು, ಮಂಗಳಕರವಾದ ಸಂಗೀತ, ಮದ್ದಲೆಯ ಧ್ವನಿ, ಸ್ತೋತ್ರಗಳು, ನರ್ತಕಿಯರ ನರ್ತನ,, ವೀಣಾ ನಿನಾದ, ಲಾಜ, ಅಕ್ಷತೆಗಳು, ವಿವಾಹ ಮಂಟಪಕ್ಕೆ ಶೋಭೆ ನೀಡುವ ಮಂಗಲಕರ ಪದಾರ್ಥಗಳು. ಅವೆಲ್ಲವೂ ಸಹ ಆ ವನದಲ್ಲಿನ ಎಲೆ, ಹೂವು, ಎಸಳು, ವೃಕ್ಷಗಳು, ಹಣ್ಣುಗಳು, ಕೋಗಿಲೆಗಳ ಗಾನ, ಮೇಘಗಳ ಘರ್ಜನೆ, ಗಿಳಿಗಳ ಮಾತು, ನವಿಲುಗಳ ಕುಣಿತ, ದುಂಬಿಗಳ ಝೇಂಕಾರ, ಬೀಳುತ್ತಿದ್ದ ಪುಷ್ಪಗಳು ಇವುಗಳ ರೂಪದಲ್ಲಿ ಆ ವನದಲ್ಲಿ ನೆಲೆಸಿತ್ತು ಎಂದು ಭಾವ.

೩.. ನೀಲಾಶ್ಮ-ಇಂದ್ರನೀಲಮಣಿ; ಕಿಸಲಯ – ಪಲ್ಲವ; ಕಲಪಿಕಗಳು-ಮಂಜುಲಧ್ವನಿಯ ಕೋಗಿಲೆಗಳು.

### ಮೂಲಮಾಧವಕ್ಷೇತ್ರದ ಹಿರಿಮೆ

ಯದಿಂದಿರಾಯಾಸ್ತದಭೂದ್ಧಿ ಮೂಲಂ
ಪ್ರಿಯಾಂಗಸಂಶ್ಲೇಷಮಹೋತ್ಸವಶ್ರಿಯಃ।
ತತಸ್ತದಾರ್ಯಾಃ ಪ್ರವದಂತಿ ನೂನಂ
ಸ್ಥಲಂ ಸ್ಥಲಜ್ಞಾ ಭುವಿ ಮೂಲಮಾಧವಮ್ ॥ ೨೮ ॥

[೧]ಮಹಾಲಕ್ಷ್ಮಿಯಾದ ರುಗ್ಮಿಣಿಗೆ ಪ್ರಿಯನಾದ ಶ್ರೀಕೃಷ್ಣನ ಆಲಿಂಗನ ಮಹೋತ್ಸವದ ಸಂಪತ್ತಿಗೆ ಮೂಲವಾದ ಆ ಸ್ಥಳವನ್ನು, ಭೂಮಿಯಲ್ಲಿ ಆ ಸ್ಥಳದ ಮಹಿಮೆಯನ್ನು ಬಲ್ಲ ವಿದ್ವಾಂಸರು ಮೂಲಮಾಧವ ಎಂದು ಕರೆಯುವರು.

ವಿ. : ಶ್ರೀಕೃಷ್ಣ-ರುಗ್ಮಿಣಿಯರಿಗೆ ವಿವಾಹನಡೆದ ಆ ಸ್ಥಳ "ಮೂಲಮಾಧವ" ಎಂಬ ಕ್ಷೇತ್ರ.

### ಸಮುದ್ರದ ಅರ್ಥವತ್ತಾದ ಘೋಷ

ಆಸನ್ ನೃಪಾಃ ಕೇಚನ ಭೀಷ್ಮಪುತ್ರ್ಯಾಃ
ಪಕ್ಷೇ ಸದಾರಾ ಅಪರೇ ಮುರಾರೇಃ।
ವಾರ್ಧಿಸ್ತದಾ ಗರ್ಜತಿ ವಾರಿಜಾಕ್ಷ್ಯಾಃ
ಪಕ್ಷೇಽಹಮೇವೇತಿ ವದನ್ನಿವೋಚ್ಚೈಃ ॥ ೨೯ ॥

ಕೆಲವು ರಾಜರು ಆಗ ಸಪತ್ನೀಕರಾಗಿ ಭೀಷ್ಮಕಪುತ್ರಿಯಾದ ರುಗ್ಮಿಣಿಯ ಪಕ್ಷ ವಹಿಸಿದರು; ಮತ್ತೆ ಕೆಲವರು ಮುರಾರಿಯಾದ ಶ್ರೀಕೃಷ್ಣನ ಪಕ್ಷವನ್ನು ವಹಿಸಿದರು; ಆಗ ಸಮುದ್ರವು ಕಮಲಾಕ್ಷಿಯಾದ ರುಗ್ಮಿಣಿಯ ಪಕ್ಷದಲ್ಲಿ ನಾನೇ ಇರುವೆನು ಎಂಬುದಾಗಿ ಗಟ್ಟಿಯಾಗಿ, ತಿಳಿಸುವುದೋ ಎಂಬಂತೆ ಭೋರ್ಗರೆಯತೊಡಗಿತು.

ವಿ. : ೧. ವಾಙ್ನಿಶ್ಚಯ ಮೊದಲಾದ ವಿವಾಹದ ಕಾರ್ಯಗಳು ನಡೆಯತೊಡಗಿದಂತೆ ಅಲ್ಲಿದ್ದ ಕೆಲವು ರಾಜರು ರುಗ್ಮಿಣಿಯ ಪಕ್ಷದವರು ಮತ್ತೆ ಕೆಲವರು ಶ್ರೀಕೃಷ್ಣನ ಪಕ್ಷದವರು ಎಂಬುದಾಗಿ, ಆ ಕಾರ್ಯದಲ್ಲಿ ಪಾಲ್ಗೊಂಡರು ಎಂದರ್ಥ; ಭೀಷ್ಮ - ಭೀಷ್ಮಕ.

೨. ಆ ಸಮಯದಲ್ಲಿ ಸಮುದ್ರವು ಭೋರ್ಗರೆಯುತ್ತಿದ್ದುದು ರುಗ್ಮಿಣಿಯ ಪಕ್ಷದಲ್ಲಿ ಇರುವುದು ತಾನೇ ಎಂದು ಸೂಚಿಸುವಂತಿದ್ದಿತು; ಎಂದರೆ ರುಗ್ಮಿಣಿಯು ಮಹಾಲಕ್ಷ್ಮಿಯಾದ್ದರಿಂದ ಮಹಾಲಕ್ಷ್ಮಿಯು ಕ್ಷೀರಸಮುದ್ರಮಥನದ ಸಂದರ್ಭದಲ್ಲಿ ಪ್ರಾದುರ್ಭೂತರಾದವರಾದ್ದರಿಂದ

೧. ಮಾಯಾಃ ಲಕ್ಷ್ಮ್ಯಾಃ ಧವಸ್ಯ ಪತ್ಯುಃ ಮೂಲಂ ಮೂಲಮಾಧವಮಿತಿ ವ್ಯುತ್ಪತ್ತೇರಿತಿ ಭಾವಃ। -ವ್ಯಾ.

ಒಂದರ್ಥದಲ್ಲಿ ಸಮುದ್ರರಾಜನ ವರುಣನ ಪುತ್ರಿಯಿದ್ದಂತೆ; ಅದನ್ನು ಸೂಚಿಸಲೋ ಎಂಬಂತೆ ಸಮುದ್ರ ರುಗ್ಮಿಣಿಯ ಪಕ್ಷದಲ್ಲಿ ಪಿತೃಸ್ಥಾನದಲ್ಲಿ ತಾನೇ ಇರುವುದರಿಂದ ಇತರರು ಆ ಪಕ್ಷವನ್ನು ವಹಿಸುವುದು ಏತಕ್ಕೆ ? ಎಂದು ಸೂಚಿಸುವಂತೆ ಇದ್ದಿತು ಎಂದು ಭಾವ.

ವಾಙ್ನಿಶ್ಚಯದ ಸಿದ್ಧತೆ

ರತ್ನೌಘಪೂರ್ಣರವಿವರ್ಣಸುವರ್ಣಪಾತ್ರೇ
ಸತ್ಕರ್ಣಪತ್ರಮುಖಶೋಭನವಸ್ತುರಾಶಿಮ್ ।
ವಿಸ್ತೀರ್ಯ ಶಂಖಪಟಹಧ್ವನಿಪೂರಿತಾಶಾ
ಜಗ್ಮುರ್ವಧೂಗೃಹಮಥೋತ್ಸವನಿರ್ಣಯಾಯ ॥ ೩೦ ॥

ಬಳಿಕ ರತ್ನಗಳ ರಾಶಿಯಿಂದ ತುಂಬಿ ಸೂರ್ಯನಂತೆ ಬೆಳಗುವ ಸುವರ್ಣಪಾತ್ರೆಯಲ್ಲಿ ಉತ್ತಮವಾದ ಓಲೆ ಮೊದಲಾದ ಮಂಗಳ ವಸ್ತುಗಳ ರಾಶಿಯನ್ನಿರಿಸಿಕೊಂಡು ಶಂಖ, ಭೇರಿಗಳ ಧ್ವನಿಗಳಿಂದ ದಿಕ್ಕುಗಳನ್ನು ತುಂಬಿಸುತ್ತಾ ಆ ಮಹೋತ್ಸವದ ನಿರ್ಣಯಕ್ಕಾಗಿ ಅವರು ವಧೂಗೃಹಕ್ಕೆ ತೆರಳಿದರು.

ವಿ. : ೧. ವಿವಾಹದ ಮೊದಲ ಕಾರ್ಯವಾದ ವಾಙ್ನಿಶ್ಚಯಕ್ಕೆಂದು ಶ್ರೀಕೃಷ್ಣನ ಪಕ್ಷ ವಹಿಸಿದ್ದವರು ರುಗ್ಮಿಣಿಯ ಪಕ್ಷವಹಿಸಿದ್ದವರ ಬಳಿಗೆ ಸುವರ್ಣಪಾತ್ರೆಯಲ್ಲಿ ಮಂಗಳ ವಸ್ತು-ಗಳನ್ನಿರಿಸಿಕೊಂಡು ಬಗೆಬಗೆಯ ವಾದ್ಯವಿಶೇಷಗಳೊಂದಿಗೆ ತೆರಳಿದರು ಎಂದರ್ಥ.

೨. ಕರ್ಣಪತ್ರ- ತಾಟಂಕ, ಕರ್ಣಾಭರಣವಾದ ಓಲೆ ಇತ್ಯಾದಿ.

ದುರ್ಘಟವೆನ್ನಿಸಿದ ಘಟನೆ

ವಿವಿಚ್ಯ ಸರ್ವಾಂಗವಿಚಾರಕಾಲೇ
ತಯೋಃ ಸಮಂತಾದ್ಘಟನಾ ಕಿಲಾಸೀತ್ ।
ಸುಪೀನದೇವೀಸ್ತನಮಧ್ಯದೇಶೇ
ಸುದುರ್ಲಭಾ ಸಾ ಪರಮಚ್ಯುತಸ್ಯ ॥ ೩೧ ॥

ವಿವಾಹಕ್ಕೆ ಅವಶ್ಯವಾದ ಸಕಲ ಅಂಗಗಳನ್ನು ಪ್ರತ್ಯೇಕವಾಗಿ ವಿಚಾರಮಾಡಿದ ಕಾಲದಲ್ಲಿ ಅವರಿಬ್ಬರಿಗೂ ಎಲ್ಲ ರೀತಿಯಲ್ಲೂ ಘಟನೆ ನಡೆಯಿತು; ಆದರೆ ಅದು ಉಬ್ಬಿದ ರುಗ್ಮಿಣಿಯ ಸ್ತನಗಳ ಮಧ್ಯಪ್ರದೇಶದಲ್ಲಿ ಶ್ರೀಕೃಷ್ಣನಿಗೆ ತುಂಬಾ ದುರ್ಘಟವೆನ್ನಿಸಿತು.

ಕನ್ಯಾರ್ಥಿಗಳಾದ ವರನ ಕಡೆಯವರು

ಕನ್ಯಾಮಿಮಾಂ ಕನಕದಾಮಕದಂಬಗೌರೀಂ
ಧನ್ಯಾಂ ದಿಶಂತು ಹರಯೇ ಹರಿನೀಲಭಾಸೇ ।

ಯುಕ್ತಸ್ತಯಾಽಯಮುದವಾಹ ಇವಾತ್ತವಿದ್ಯು-
ದ್ವಿಷ್ವಕ್ ಕರಿಷ್ಯತಿ ಸಮಸ್ತಪುಮರ್ಥವರ್ಷಮ್ ॥ ೩೨ ॥

ಚಿನ್ನದ ಮಾಲೆಯಂತೆ, ಕದಂಬಪುಷ್ಪದಂತೆ, ಗೌರವರ್ಣದ ಈ ಧನ್ಯೆಯಾದ ಕನ್ಯೆ ರುಗ್ಮಿಣಿಯನ್ನು ಇಂದ್ರನೀಲಮಣಿಯ ಕಾಂತಿಯ ಶ್ರೀಕೃಷ್ಣನಿಗೆ ನೀಡಬೇಕು; ಅವಳಿಂದ ಕೂಡಿದ ಅವನು ಮಿಂಚಿನೊಂದಿಗೆ ಕೂಡಿದ ಮೇಘದಂತೆ ಎಲ್ಲೆಡೆಗಳಲ್ಲೂ ಸಮಸ್ತ ಪುರುಷಾರ್ಥಗಳ ಮಳೆಗರೆಯುವನು.

ವಿ. : ೧. ಮಿಂಚಿನಿಂದ ಕೂಡಿದ ಮೋಡ ಮಳೆ ಸುರಿಸುವಂತೆ ರುಗ್ಮಿಣೀ ಸಮೇತನಾಗುವ ಶ್ರೀಕೃಷ್ಣನು ಭಕ್ತರಿಗೆ ಸಮಸ್ತ ಅಭಿಲಾಷೆಗಳನ್ನು ಸುರಿಸುವನು ಎಂದರ್ಥ; ಉದವಾಹ – ಮೇಘ.

೨. ರುಗ್ಮಿಣಿಯನ್ನು ಮಿಂಚಿಗೂ, ಶ್ರೀಕೃಷ್ಣನನ್ನು ಮೋಡಕ್ಕೂ ಹೋಲಿಸಲಾಗಿದೆ. ಲಕ್ಷ್ಮೀ-ನಾರಾಯಣರ ಆರಾಧನೆಯಿಂದ ರುಗ್ಮಿಣೀಕಲ್ಯಾಣ ಮೊದಲಾದ ಕಲ್ಯಾಣಕಾರ್ಯಗಳಿಂದ ಭಕ್ತರ ಸಕಲ ಅಭಿಲಾಷೆಗಳು ಈಡೇರುವವು ಎಂಬ ತತ್ತ್ವ ಇಲ್ಲಿ ಸೂಚಿತ; ಪುಮರ್ಥ – ಪುರುಷಾರ್ಥ.

### ವರ-ಕನ್ಯೆಯರ ವಂಶಶುದ್ಧಿ

ವೈದರ್ಭವಂಶೋದಧಿಜಾತರತ್ನ-
ಮಿಯಂ ಸತೀ ಸೋಽಪ್ಯುಡುನಾಯಕಸ್ಯ ।
ಕುಲೋದ್ಭವಾಲಂಕೃತಿರೇತಯೋಸ್ತತ್
ಪರಂಪರಾಯೋಗ್ಯಮವೈತ ಯೋಗಮ್ ॥ ೩೩ ॥

ಭೀಷ್ಮಕನ ವಂಶವೆಂಬ ಸಾಗರದಲ್ಲಿ ಉದ್ಭವಿಸಿದ ರತ್ನ ಈ ರುಗ್ಮಿಣಿ; ಆ ಕೃಷ್ಣನಂತೂ ನಕ್ಷತ್ರರಾಜನಾದ ಚಂದ್ರವಂಶದಲ್ಲಿ ಹುಟ್ಟಿದವರಿಗೆ ಭೂಷಣಪ್ರಾಯನು; ಆದ್ದರಿಂದ ಅವರಿಬ್ಬರ ಯೋಗವು ಅವರ ಪರಂಪರೆಗೆ ಯೋಗ್ಯ ಎಂಬುದಾಗಿ ತಿಳಿಯಿರಿ.

ವಿ. : ೧. [೧]ರುಗ್ಮಿಣಿಯನ್ನು ರತ್ನ ಎನ್ನುವ ಮೂಲಕ ಕನ್ಯಾರತ್ನ ಎಂಬ ಪದದ ಸಾರ್ಥಕ್ಯ ನಿರೂಪಿತ; ಅದರಂತೆ ಚಂದ್ರವಂಶಕ್ಕೆ ಭೂಷಣ ಎಂಬುದರ ಮೂಲಕ ಶ್ರೀಕೃಷ್ಣನ ಹಿರಿಮೆಯು ಸೂಚಿತ. ಹೀಗೆ ಕನ್ಯಾ ಹಾಗೂ ವರ ಇಬ್ಬರು ಸತ್ಕುಲದಲ್ಲಿ ಜನಿಸಿದವರಾಗಿದ್ದರೆ ಮಾತ್ರ ಅಂತಹ ವಿವಾಹಕ್ಕೆ ಪಾವಿತ್ರ್ಯ ಎಂಬುದು ಇಲ್ಲಿಯ ಮುಖ್ಯಭಾವ.

---

೧. ಕ್ಷೀರಸಮುದ್ರಜಾತತ್ವೇನ ರುಗ್ಮಿಣ್ಯಾಃ ಲಕ್ಷ್ಮೀತ್ವೋಕ್ತ್ಯಾ ಸೋಮಕುಲೋದ್ಭವಾನಾಂ ಪುರುಷಾಣಾಂ ಅಲಂಕೃತಿರಿತಿ ಪುರುಷೋತ್ತಮತ್ವೋಕ್ತ್ಯಾ ಲಕ್ಷ್ಮೀನಾರಾಯಣಯೋಃ ಮೂಲರೂಪಯೋರ್ಗಾಖ್ಯಪರಂಪರಾಯೋಗೋಽಪರಃ । ರತ್ನಮಲಂಕೃತಿರಿತ್ಯನೇನ ರತ್ನಸ್ಯ ಸುವರ್ಣಾಭರಣಸ್ಯೇವ ಮನೋಹರಸ್ತ್ರೀಪುರುಷಯೋರೇವ ಸಾಕ್ಷಾನ್ಮಿಥೋಯೋಗ ಏಕ ಇತಿ ತ್ರೇಧಾ ಸಂಬಂಧಘಟನಾ ಪ್ರದರ್ಶಿತೇತಿ ಜ್ಞಾತವ್ಯಮ್ । –ವ್ಯಾ.

೨. ಇದನ್ನು ಗಮನಿಸದೆ ನಡೆಯುವ ವಿವಾಹಗಳು ಅನುರೂಪವೆನ್ನಿಸದೆ, ಲೋಕಕಲ್ಯಾಣಕ್ಕೆ ಕಾರಣವಾಗವು ಎಂಬ ತತ್ತ್ವವು ಇಲ್ಲಿ ಸೂಚಿತ.

### ಶ್ರೀಕೃಷ್ಣರುಗ್ಮಿಣಿಯರ ಪರಸ್ಪರ ಅನುರೂಪತೆ

**ಪದ್ಮಾಲಯಾ ಸಾ ಕಿಲ ಪಾವನಾಂಗೀ**
**ನಾರಾಯಣೋಽಯಂ ನವನೀರದಾಭಃ ।**
**ತೇನಾನಯೋಃ ಸುಸ್ಥಿರಮೇವ ಯೋಗಂ**
**ಮನ್ಯಾಮಹೇಽನ್ಯೋನ್ಯವಿಭೂತಿಹೇತುಮ್ ॥ ೩೪ ॥**

ಈ ಪಾವನ ದೇಹದ ರುಗ್ಮಿಣಿಯು ಸಾಕ್ಷಾತ್ ಪದ್ಮವಾಸಿನಿಯಾದ ಮಹಾಲಕ್ಷ್ಮಿ; ಈ ನೀಲ-ಮೇಘಶ್ಯಾಮನಾದ ಶ್ರೀಕೃಷ್ಣನಂತೂ ಸಾಕ್ಷಾತ್ ನಾರಾಯಣನೇ ! ಆದ್ದರಿಂದ ಇವರಿಬ್ಬರ ಯೋಗವು ಪರಸ್ಪರರ ಅಭ್ಯುದಯಕ್ಕೆ ಕಾರಣವಾದ ಸುಸ್ಥಿರವಾದ ಯೋಗ ಎಂದೇ ಭಾವಿಸುವೆವು.

ವಿ. : ೧. ಶ್ರೀಕೃಷ್ಣ-ರುಗ್ಮಿಣಿಯರ ಯೋಗದ ಅನುರೂಪತೆಯನ್ನು ಇಲ್ಲಿ ಮತ್ತೊಂದು ಬಗೆಯಲ್ಲಿ ವಿವರಿಸಲಾಗಿದೆ. ಕಮಲ ಹಾಗೂ ಮೇಘಗಳಿಗೆ, ಪರಸ್ಪರ ಶೋಭೆ ಎನ್ನಿಸುವಂತೆ ರುಗ್ಮಿಣಿ-ಕೃಷ್ಣರ ಯೋಗ ಪರಸ್ಪರ ಭೂಷಕ ಎಂದು ಭಾವ.

೨. [೧]ಕಮಲಗಳು ನೀರಿನಲ್ಲಿ ಬೆಳೆದು ಶೋಭಿಸಲು ಸರೋವರದಲ್ಲಿ ನೀರಿನ ಅಗತ್ಯವಿದೆ. ಅದನ್ನು ಪೂರೈಸುವ ಹಿರಿಮೆ ಮೇಘದ್ದು ; ಅದರಂತೆ ರುಗ್ಮಿಣಿಯ ಸಕಲ ಹಿರಿಮೆಗೂ ಸರ್ವತಂತ್ರಸ್ವತಂತ್ರನಾದ ಶ್ರೀಕೃಷ್ಣನೇ ಮೂಲ ಎಂಬ ಭಾವವು ಇಲ್ಲಿದೆ.

೩. [೨]ಮೇಲ್ನೋಟಕ್ಕೆ ಇಲ್ಲಿ ನೀರು ಮತ್ತು ಕಮಲಗಳಿಗೆ ಪರಸ್ಪರ ಭೂಷಕತ್ವ ನಿರೂಪಿತವಾಗಿರುವಂತೆ ಕಂಡರೂ ವಾಸ್ತವವಾಗಿ ಕಮಲದ ಅಸ್ತಿತ್ವಕ್ಕೆ ಜಲ ನೀಡುವ ಮೇಘ ಉಪಜೀವ್ಯ ಎನ್ನಿಸುವುದು; ಆದರೆ ಮೇಘಕ್ಕೆ ಕಮಲ ಸರ್ವಥಾ ಉಪಜೀವ್ಯವಲ್ಲ ಎಂಬುದು ವಸ್ತುಸ್ಥಿತಿ; ಅದರಂತೆ ನಾರಾಯಣನು ಸ್ವರತ ಎಂಬ ತತ್ತ್ವವು ಸೂಚಿತ.

೪. **ಪಾವನಾಂಗೀ** - ರುಗ್ಮಿಣಿಯು ಮಹಾಲಕ್ಷ್ಮಿಯ ಸಾಕ್ಷಾದ್ರೂಪವೇ ಆದ್ದರಿಂದ ಅದು ಅಪ್ರಾಕೃತರೂಪ ಎಂದರ್ಥ ; ಇದರಿಂದ ನಾರಾಯಣನ ಸಕಲ ಅವತಾರಗಳಂತೆ ಮಹಾಲಕ್ಷ್ಮಿಯ ಸಕಲ ಅವತಾರಗಳೂ ಸಹ ಅಪ್ರಾಕೃತ ಹಾಗೂ ಪರಿಪೂರ್ಣ ಎಂಬ ವಿಶೇಷಾಂಶ ಸೂಚಿತ.

---

೧. ಪದ್ಮಸ್ಯ ಜಲಶೋಭಾಕಾರಿತ್ವಮಾತ್ರಮ್ । ಜಲಸ್ಯ ತು ಪದ್ಮೋಪಜೀವಕತ್ವೇನ ವರತ್ವಂ ದ್ಯೋತ್ಯತೇ । -ವ್ಯಾ.

೨. ನವನೀರದಾಭ ಇತ್ಯನೇನ ನೀರದಂ ಪ್ರತಿ ಸ್ಪರ್ಧಿತಯಾ ಶ್ರೀಕೃಷ್ಣಸ್ಯ ತದಪಹಾರಕತ್ವೇನ ಪದ್ಮಾನಿಷ್ಟಾಪಹಾರಕತ್ವೇ ಧ್ವನಿಃ ರುಗ್ಮಿಣೀವೈರಿನಾಶಕತ್ವಂ ಚ ದ್ಯೋತ್ಯತೇ । -ವ್ಯಾ.

ಕನ್ಯೆಯ ಕಡೆಯವರು ಮುಂದಿಟ್ಟ ಬೇಡಿಕೆ

ಆರ್ಯಃ ಸ್ವಭಾರ್ಯಾಂ ಯದಿ ಭಾರಕಾರ್ಯೇ
ನೈವೋಪದಿಶ್ಯಾನ್ನ ಪುನಃ ಕದಾಽಪಿ ।
ಏನಾಂ ತ್ಯಜೇಜ್ಜಾತ್ವಪಿ ನಾತ್ರ ಕುಪ್ಯೇ-
ದ್ಗೃಹ್ಣಾತು ತರ್ಹ್ಯಬ್ಜಮುಖೀಕರಂ ನಃ ॥ ೩೫ ॥

ಪೂಜ್ಯನಾದ ಶ್ರೀಕೃಷ್ಣನು ತನ್ನ ಪತ್ನಿಯಾದ ಶ್ರೀರುಗ್ಮಿಣಿಯನ್ನು ಹೆಚ್ಚು ಭಾರದ ಕಾರ್ಯದಲ್ಲಿ ಎಂದೂ ತೊಡಗಿಸಕೂಡದು, ಅವಳನ್ನು ಎಂದಿಗೂ ಸಹ ಬಿಟ್ಟಿರಕೂಡದು, ಅವಳ ಮೇಲೆ ಒಮ್ಮೆಯು ಕೋಪಿಸಿಕೊಳ್ಳಬಾರದು, ಹಾಗಿದ್ದಲ್ಲಿ ಮಾತ್ರ ಅವನು ಈ ನಮ್ಮ ಕಮಲಮುಖಿಯಾದ ರುಗ್ಮಿಣಿಯ ಕೈಯನ್ನು ಹಿಡಿಯಲಿ.

ವಿ. : ರುಗ್ಮಿಣಿಯನ್ನು ಶ್ರೀಕೃಷ್ಣ ಪಾಣಿಗ್ರಹಣ ಮಾಡಲು, ಇಲ್ಲಿ ಮೂರು ವಿಧವಾದ ಕೋರಿಕೆಗಳನ್ನು ಮುಂದಿಡಲಾಗಿದೆ: ಮೊದಲನೆಯದು, ಹೆಚ್ಚು ಭಾರದ ಕಾರ್ಯವನ್ನು ಒಪ್ಪಿಸಕೂಡದು, ಎರಡನೆಯದು ಎಂದೂ ಬಿಟ್ಟಿರಕೂಡದು, ಮೂರನೆಯದು ಎಂದೂ ಕೋಪಿಸಿಕೊಳ್ಳಕೂಡದು ಎಂದು.

ಕನ್ಯೆಯ ಕಡೆಯವರು ಮುಂದಿಟ್ಟ ಮತ್ತೆ ಕೆಲವು ಬೇಡಿಕೆಗಳು

ಸಂದೇಶಮಾತ್ರಮಭಿವೀಕ್ಷ್ಯ ಹರೇ ಗೃಹಂ ನಃ
ಸಂಪ್ರೇಷಯಿಷ್ಯಸಿ ಕರಿಷ್ಯಸಿ ನಾನ್ಯಪತ್ನೀಮ್ ।
ಬಂಧೂನ್ ಸ್ಮರಿಷ್ಯಸಿ ವಿಭೋ ಯದಿ ವಿಶ್ವದೋ ನ-
ಸ್ತ್ವಾಂ ತರ್ಹಿ ವಲ್ಗುವದನಾ ವರಯೇದ್ವರಿಷ್ಠಮ್ ॥ ೩೬ ॥

ಎಲೈ ವಿಭುವಾದ ಶ್ರೀಹರಿಯೇ ! ಸಕಲವನ್ನು ನೀಡುವ ನೀನು ನಮ್ಮ ಸಂದೇಶವನ್ನು ನೋಡಿದೊಡನೆಯೇ ನಮ್ಮ ಮನೆಗೆ ಇವಳನ್ನು ಕಳುಹಿಸಿಕೊಡಬೇಕು; ಇನ್ನೊಬ್ಬಳನ್ನು ವರಿಸಕೂಡದು; ಅದರಂತೆ ಬಂಧುಗಳಾದ ನಮ್ಮನ್ನು ನೀನು ಸ್ಮರಿಸುತ್ತಿರಬೇಕು; ಹಾಗಿದ್ದಲ್ಲಿ ಈ ಮನೋಹರ ಮುಖದ ರುಗ್ಮಿಣಿಯು ಸರ್ವೋತ್ತಮನಾದ ನಿನ್ನನ್ನು ವರಿಸುವಳು.

ವಿ. : ೧. ಇದರಲ್ಲಿ ಮತ್ತೆ ಮೂರು ಕೋರಿಕೆಗಳು ನಿರೂಪಿತವಾಗಿವೆ. ಮೊದಲನೆಯದು ತವರು ಮನೆಗೆ ರುಗ್ಮಿಣಿಯನ್ನು ಅವಳ ಮನೆಯವರು ಅಪೇಕ್ಷಿಸಿ ಕೋರುತ್ತಲೇ ಕಳುಹಿಸಿ-ಕೊಡುವುದು, ಇನ್ನೊಬ್ಬ ಪತ್ನಿಯನ್ನು ಹೊಂದದಿರುವುದು ಹಾಗೂ ಹಾಗೆ ವಿವಾಹ ಮಾಡಿಕೊಡುವ ಬಂಧುಜನರನ್ನು ಸದಾ ಸ್ಮರಿಸುವುದು; ವಲ್ಗು – ಮನೋಹರ.

೨. ಈ ಆರು ಕೋರಿಕೆಗಳಿಗೆ ಸೂಕ್ತವಾದ ಉತ್ತರಗಳನ್ನು ಮುಂದಿನ ಶ್ಲೋಕಗಳಲ್ಲಿ ಕಾಣಬಹುದು.

### ರುಗ್ಮಿಣಿಯು ನಿರ್ವಹಿಸಬೇಕಾದ ಕಾರ್ಯ

**[೧]ಬ್ರಹ್ಮಾಂಡಾಖ್ಯಗೃಹಂ ಚತುರ್ದಶಲಸತ್ಪ್ರಾಸಾದಶೋಭಂ ಹರೇಃ**
**ಸಾಧ್ವೀಯಂ ಸತತಂ ವಿಚಾರಯತು ತನ್ಮಧ್ಯೇ ಗೃಹಸ್ಯೋಚಿತಮ್ ।**
**ಸ್ವರ್ಣಾದ್ರಿಕ್ಷಿತಿಧಾನ್ಯರತ್ನಲವಣಕ್ಷೀರೇಕ್ಷುಸರ್ಪಿರ್ದಧಿ-**
**ಸ್ವಾದೂದಾದಿ ಸುತಾಂಶ್ಚ [೨]ಪದ್ಮಜಮುಖಾಂಸ್ತೇಷಾಂ ಧುರಂ ಮಂದಿರಮ್॥೩೭॥**

ಹದಿನಾಲ್ಕು ಶೋಭಾಯಮಾನ ಪ್ರಾಸಾದಗಳಿಂದ ಕಂಗೊಳಿಸುವ ಬ್ರಹ್ಮಾಂಡವೇ ಶ್ರೀಕೃಷ್ಣನ ಮನೆ; ಅದರ ಮಧ್ಯದಲ್ಲಿ ಮನೆಗೆ ಯೋಗ್ಯವಾದ ಸುವರ್ಣಪರ್ವತವಾದ ಮೇರು, ಭೂಮಿ, ಧಾನ್ಯಗಳು, ರತ್ನಗಳು, ಲವಣ, ಕ್ಷೀರ, ಇಕ್ಷುರಸ, ತುಪ್ಪ, ಮೊಸರು ಹಾಗೂ ಶುದ್ಧೋದಕ ಮೊದಲಾದವು ಹಾಗೂ ಬ್ರಹ್ಮದೇವರೇ ಮೊದಲಾದ ಮಕ್ಕಳು; ಅವರ ಭಾರವನ್ನು ಹಾಗೂ ಮಂದಿರಗಳನ್ನು ಇವಳು ಸದಾ ನೋಡಿಕೊಳ್ಳಬೇಕು.

ವಿ. : ೧. ಬ್ರಹ್ಮಾಂಡವೇ ಶ್ರೀಹರಿಯ ಮನೆ, ಅದಕ್ಕೆ ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹಾತಳ ಹಾಗೂ ಪಾತಾಳ ಎಂಬ ಏಳು ಅಧೋಲೋಕಗಳು; ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಂ ಎಂಬ ಮೇಲಿನ ಏಳು ಲೋಕಗಳು. ಹೀಗೆ ಒಟ್ಟು೧೪ ಉಪ್ಪರಿಗೆಗಳು. ಮೇರುಪರ್ವತ, ಭೂಮಿ, ಧಾನ್ಯ, ರತ್ನಗಳು, ಲವಣ ಮೊದಲಾದ ಏಳು ಸಮುದ್ರಗಳು, ಬ್ರಹ್ಮರುದ್ರಾದಿ ದೇವತೆಗಳೆಲ್ಲಾ ಪುತ್ರಪೌತ್ರಾದಿಗಳು, ಅವರ ಸತ್ಯಲೋಕಾದಿಮಂದಿರಗಳು, ಇವುಗಳನ್ನು ಸದಾ ನೋಡಿಕೊಂಡರೆ ಸಾಕು; ಅವಷ್ಟೇ ರುಗ್ಮಿಣಿಯ ಕೆಲಸ ಎಂಬಲ್ಲಿ ರುಗ್ಮಿಣಿ ಇಡೀ ವಿಶ್ವದ ತಾಯಿಯಾಗಿ ಸರ್ವರನ್ನೂ ಸದಾ ಸಂರಕ್ಷಿಸಬೇಕು ಎಂಬ ಭಾವ ಅಡಗಿದೆ.

೨. ಈ ಕೆಳಗಿನ ಮಂಗಳಾಷ್ಟಕದ ಶ್ಲೋಕ ಇದರ ವಿವರಣೆಯಂತಿದೆ :

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥

---

೧. ಬ್ರಹ್ಮಾಂಡಾದೀನಾಮೇತೇಷಾಂ ಸಂಪದ್ರೂಪತ್ವೇನಾಸ್ಯಾಶ್ಚ ಸಂಪದಭಿಮಾನಿತ್ವೇನೈವ ತದ್ವಿಚಾರ್ಯಮಿತಿ ಭಾವಃ। -ವ್ಯಾ.

೨. ಪದ್ಮಜಮುಖಾನ್ ಸುತಾಂಶ್ಚ ಹರೇಃ ಸರ್ವಸ್ರಷ್ಟೃತ್ವಾದಸ್ಯಾಶ್ಚ ಲೋಕಮಾತೃತ್ವಾದಿತಿ ಭಾವಃ। -ವ್ಯಾ.

**ಕುಡಿನೋಟದಿಂದ ಜಗತ್ತಿನ ಆಗುಹೋಗುಗಳನ್ನು ನಿರ್ವಹಿಸುವ ಮಹಾಕನ್ಯೆ**

ಕಾರ್ಯಂ ಗೃಹಿಣ್ಯಾ ಗೃಹಕೃತ್ಯಮೇತ-
ನ್ನೋ ಭಾರಕಾರ್ಯನ್ಯಜನೈರಸಾಧ್ಯಮ್ ।
ತನ್ವೀ ತದೇತತ್ ಸಕಲಂ [೧]ಸ್ವಲೋಲ-
ಲೀಲಾಕಟಾಕ್ಷೇಣ ಕರಿಷ್ಯತೀಯಮ್ ॥ ೩೮ ॥

ಗೃಹಿಣಿಗೆ ಇಂತಹ ಮನೆಯ ಕೆಲಸವು ಕರ್ತವ್ಯವಾಗಿದೆ. ಇದು ಇವಳಿಗೆ ಭಾರವೇನಲ್ಲ ; ಆದರೆ ಇತರರಿಗೆ ಮಾತ್ರ ಅಶಕ್ಯವೆ! ಈ ಸುಂದರಿಯು ತನ್ನ ಚಂಚಲ ಲೀಲಾಕಟಾಕ್ಷದಿಂದಲೇ ಈ ಎಲ್ಲವನ್ನೂ ಮಾಡಿಬಿಡುವಳು.

ವಿ. : ೧. ರುಗ್ಮಿಣಿಯ ಕಡೆಯವರು ಕೊಟ್ಟ ಉತ್ತರ ಇದಾಗಿದೆ. ಇದು ಇತರರಿಗೆ ಸರ್ವಥಾ ಅಸಾಧ್ಯವಾದ ಕಾರ್ಯ. ಮಹಾಲಕ್ಷ್ಮಿಯಾದ ರುಗ್ಮಿಣಿಗೆ ಮಾತ್ರ ಕಡೆಗಣ್ಣ ಕುಡಿ-ನೋಟದಿಂದಲೇ ಲೀಲಾಜಾಲವಾಗಿ ಪೂರೈಸುವ ಕಾರ್ಯ ಎಂಬುದು ಇಲ್ಲಿಯ ಭಾವ.

೨. ಇದು ಈ ಕೆಳಗಿನ ದ್ವಾದಶಸ್ತೋತ್ರ (೭/೧)ದ ಭಾವವಾಗಿದೆ :

ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ ।
ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

೩. ಇದು ಮತ್ತೊಂದು ರೀತಿಯಲ್ಲಿ ಮಹಾಲಕ್ಷ್ಮಿಯ ಮಾಹಾತ್ಮ್ಯಪ್ರತಿಪಾದಕವಾದ ಅಂಭೃಣೀ ಸೂಕ್ತ ಮೊದಲಾದ ಸಕಲ ವೇದವಚನಗಳ ಹಾಗೂ ಸ್ಮೃತಿವಚನಗಳ ಭಾವವಾಗಿದೆ.

**ವಧೂವರರ ನಿತ್ಯಸನ್ನಿಧಿಗೆ ಪ್ರಾರ್ಥನೆ**

ನೈನಾಂ ಸಂಸದಿ ಸಂತ್ಯಜೇನ್ನ ರಹಸಿ ಸ್ವೈರಾವತಾರೇಷು ವಾ
ಸ್ನಾನಾಭ್ಯಂಜನಭೋಜನಾದಿವಿವಿಧಕ್ರೀಡಾಸು ವಾಽಸ್ಯೈ ದಿಶೇತ್ ।
ಸ್ವಾಂಗಾಶ್ಲೇಷಸುಖಂ [೨]ವಿಭೂಷಣಗತಂ ಬಿಂಬೋಷ್ಠಜಂ ಚಾಮೃತಂ
ವಂಶಾದ್ಯಾಶ್ರಿತಮೇತಯಾ ವಿರಹಿತಂ [೩]ದೇಶಂ ಪರಂ ಸಂತ್ಯಜೇತ್ ॥ ೩೯ ॥

---

೧. ಸ್ವಲೋಲಲೀಲಾಕಟಾಕ್ಷೇಣ ಸ್ವಚಂಚಲಾಪಾಂಗಕಟಾಕ್ಷನಿರೀಕ್ಷಣಮಾತ್ರೇಣ ಕರಿಷ್ಯತಿ । "ವಿಶ್ವಸ್ಥಿತಿಪ್ರಲಯಸರ್ಗ-ಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ । ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ"(ದ್ವಾದಶಸ್ತೋತ್ರ-೭/೧)ಇತ್ಯುಕ್ತೇಃ । ಭಾರಕಾರ್ಯೇ ನೈವೋಪ-ದಿಶ್ಯಾದಿತ್ಯಸ್ಯೇದಮುತ್ತರಮ್ । -ವ್ಯಾ.

೨. ಲಕ್ಷ್ಮ್ಯಾ ಏವ ಭೂಷಣಾಕಾರತಯಾ ಸ್ಥಿತತ್ವಾದಿತಿ ಭಾವಃ। -ವ್ಯಾ.

೩. ದೇಶತಃ ಕಾಲತಶ್ಚ ರುಗ್ಮಿಣ್ಯಾ ಸಮವ್ಯಾಪ್ತೇರಿತಿ ಭಾವಃ। -ವ್ಯಾ.

ಶ್ರೀಕೃಷ್ಣ ಇವಳನ್ನು ಸಭೆಗಳಲ್ಲಿಯೂ ಸಹ ಬಿಟ್ಟಿರಕೂಡದು; ಅದರಂತೆ ಏಕಾಂತದಲ್ಲೂ ಸಹ; ತಾನು ಸ್ವೇಚ್ಛೆಯಿಂದ ಸ್ವೀಕರಿಸುವ ಅವತಾರಗಳಲ್ಲೂ ಇವಳೊಂದಿಗೇ ಇರಬೇಕು. ಸ್ನಾನ, ಅಭ್ಯಂಜನ, ಭೋಜನ ಮೊದಲಾದ ವಿವಿಧ ಕ್ರೀಡೆಗಳಲ್ಲೂ ಇವನು ತನ್ನ ಆಲಿಂಗನ ಸುಖವನ್ನು ಇವಳಿಗೆ ನೀಡಬೇಕು. ಆಭರಣಗಳಲ್ಲಿರುವ ಬಿಂಬೋಷ್ಠದಲ್ಲಿರುವ ಅಮೃತವನ್ನು ಹಾಗೂ ಕೊಳಲು ಮೊದಲಾದವುಗಳಲ್ಲಿನ ಅಮೃತವನ್ನು ಸದಾ ನೀಡಬೇಕು. ಇವಳಿರದ ಸ್ಥಳದಲ್ಲಿ ಅವನು ಸಹ ಇರಲೇಕೂಡದು.

ವಿ. : ೧. [೧]ಲಕ್ಷ್ಮೀನಾರಾಯಣರು ನಿತ್ಯ ಅವಿಯೋಗಿಗಳು ಎಂಬ ಮಹಾಪ್ರಮೇಯದ ಅಪೂರ್ವ ನಿರೂಪಣೆ ಇಲ್ಲಿದೆ.

೨. 'ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೋ' - ಎಂಬ ಶ್ರೀಪುರಂದರದಾಸರ ಕೃತಿಯಲ್ಲಿ ಇದರ ಭಾವವನ್ನು ಕಾಣಬಹುದು.

೩. [೨]ಮೂಲರೂಪದಂತೆ ಅವತಾರರೂಪಗಳಲ್ಲೂ ಮಹಾಲಕ್ಷ್ಮಿಯು ಅದಕ್ಕೆ ಅನುರೂಪ-ವಾದ ಮತ್ತೊಂದು ರೂಪದೊಂದಿಗೆ ಶ್ರೀಹರಿಯ ಸಂಗಡವೇ ಸದಾ ಇರುವರು ಎಂಬ ಇಲ್ಲಿಯ ಪ್ರಮೇಯವೂ ಗಮನಾರ್ಹ ; ಆಶ್ಲೇಷ – ಆಲಿಂಗನ.

### ರುಗ್ಮಿಣಿಯ ಬಗ್ಗೆ ಎಂದೂ ಕೋಪಿಸಿಕೊಳ್ಳದ ಶ್ರೀಕೃಷ್ಣ

**ಕ್ರುದ್ಧೋಽಪಿ ಸರ್ವಭುವನಾಯ ನ ಭೀಷ್ಮಪುತ್ರ್ಯಾಂ**
**ಕ್ರೋಧಂ ಕರಿಷ್ಯತಿ ಪರಂ ಪರಿರಭ್ಯ ದೋರ್ಭ್ಯಾಮ್ ।**
**ಏನಾಂ ತದಾಽಪಿ ರಮಯೇತ್ ಕಿಲ ಕೋಮಲಾಂಗೀಂ**
**ಕೋಪೋಽಸ್ಯ ತತ್ರ ಯ ಇಮಾಂ ಕಲಯೇದ್ವಿಯುಕ್ತಾಮ್ ॥ ೪೦ ॥**

ಈ ಶ್ರೀಕೃಷ್ಣನು ಸಕಲ ಲೋಕಗಳ ಮೇಲೆ ಕೋಪಗೊಂಡರೂ ಸಹ ಈ ಭೀಷ್ಮಕ ಪುತ್ರಿಯಾದ ರುಗ್ಮಿಣೀದೇವಿಯಲ್ಲಿ ಮಾತ್ರ ಎಂದೂ ಕೋಪ ಮಾಡಿಕೊಳ್ಳಲಾರ; ಬದಲಾಗಿ ಅವಳನ್ನು ಸದಾ ತನ್ನ ತೋಳುಗಳಿಂದ ಆಲಿಂಗಿಸಿಕೊಂಡು ಆ ಸಮಯದಲ್ಲೂ ಈ ಕೋಮಲಾಂಗಿಯನ್ನು ಸಂತೋಷಪಡಿಸುವನು. ಇವಳು ತನ್ನಿಂದ ಅಗಲಿ ಇರುವಳು ಎಂದು ತಿಳಿಯುವವರ ಮೇಲೆ ಮಾತ್ರ ಇವನು ಕೋಪಮಾಡಿಕೊಳ್ಳುವನು.

ವಿ. : ೧. ಪ್ರಳಯಕಾಲದಲ್ಲಿ ಬ್ರಹ್ಮರುದ್ರಾದಿ ದೇವತೆಗಳನ್ನು ಸಹ ಜಠರದಲ್ಲಿ ಇರಿಸಿ-ಕೊಳ್ಳುವನು ಎಂಬುದು ಸಕಲ ಲೋಕಗಳ ಮೇಲೂ ಕೋಪಗೊಳ್ಳುವುದು ಎಂಬುದರ ಅರ್ಥ.

---

೧. ಸಶ್ರೀಕತಯಾ ಅಭಿಷೇಕಾದಿಸರ್ವಪೂಜಾಸ್ವೀಕಾರಾದಿತಿ ಭಾವಃ। -ವ್ಯಾ.
೨. ಸೀತಾದಿರೂಪೇಣ ಲಕ್ಷ್ಮ್ಯಾ ಅಪಿ ಸಹಾವತಾರಾದಿತಿ ಭಾವಃ। -ವ್ಯಾ.

೨. ಆಗಲೂ ಎಂದರೆ ಅಂತಹ ಪ್ರಳಯಕಾಲದಲ್ಲೂ ಸಹ ಮಹಾಲಕ್ಷ್ಮಿಯೊಂದಿಗೆ ಆಲಿಂಗಿತನಾಗಿರುವನು ಎಂಬುದರಿಂದ ಮಹಾಲಕ್ಷ್ಮಿಗೆ ಲಯವಿಲ್ಲ ಎಂದರೆ ಶ್ರೀಹರಿಗೆ ಅತ್ಯಂತ ಸಮೀಪದಲ್ಲಿರುವುದೇ ಅವರಿಗೆ ಲಯ ಹೊರತು ಇತರರಂತೆ ದೇಹ ವಿಯೋಗರೂಪ ಲಯ ಸರ್ವಥಾ ಇಲ್ಲ ಎಂಬುದು ಇಲ್ಲಿಯ ಪ್ರಮೇಯ, ಮ.ಭಾ.ತಾ.ನಿ.(೧/೨):

**ಆಸೀದುದಾರಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ ಸ ಏಕಃ।**
**ಸಂಶಾಂತಸಂವಿದಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ ॥**

೩. ಮಹಾಲಕ್ಷ್ಮಿಗೆ ಶ್ರೀಹರಿಯೊಂದಿಗೆ ವಿಯೋಗ ಚಿಂತಿಸುವವರು ಎಂದರೆ ಸೀತಾರೂಪದ ಮಹಾಲಕ್ಷ್ಮಿಗೆ ಶ್ರೀರಾಮರೂಪದ ಶ್ರೀಹರಿಯೊಂದಿಗೆ ಅಗಲುವಿಕೆಯನ್ನು ಚಿಂತಿಸುವ ಸುರಾಣಕರು ಮೊದಲಾದ ದೈತ್ಯರು[೧] ಎಂದರ್ಥ.

೪. ಶ್ರೀಕೃಷ್ಣನು ರುಗ್ಮಿಣಿಯ ಬಗ್ಗೆ ಎಂದೂ ಕೋಪಿಸಿಕೊಳ್ಳನು ಎಂಬ ಇಲ್ಲಿಯ ವಿವರವು ದಶಮಸ್ಕಂಧದಲ್ಲಿ ಮುಂದೆ ನಿರೂಪಿತವಾಗಿರುವ ಶ್ರೀಕೃಷ್ಣರುಗ್ಮಿಣಿಯರ ಪ್ರಣಯಕಲಹಕ್ಕೆ ಅನ್ವಯಿಸುವ ವಿವರಣೆಯೂ ಆಗಿದೆ.

**ಕೇಶಂ ಪ್ರಗೃಹ್ಯ ಕರಜೈಃ ಕುಚಕುಂಭಪಾರ್ಶ್ವೇ**
**ಕುರ್ವನ್ ವ್ರಣಾನಿ ಮೃದುಲೋಷ್ಠಪುಟಂ ಸ ದಂಶನ್ ।**

---

೧. ಲಕ್ಷ್ಮ್ಯಾಃ ವಿಯೋಗಂ ವದತಃ ಸುರಾಣಕಾದೇಃ ತಮೋದಾನಾದಿತಿ ಭಾವಃ । ಅವಿದ್ಯಮಾನವಿಯೋಗಜ್ಞಾತರಿ ಕೋಪ ಇತ್ಯುಕ್ತ್ಯಾ ಅಸ್ಯಾಂ ಕದಾಪಿ ನ ಕ್ರೋಧ ಇತಿ ಸೂಚಿತಮ್ । -ವ್ಯಾ.
ಅಥ ಕೇಚಿದಾಸುರಸುರಾಃ ಸುರಾಣಕಾಃ ಇತ್ಯುರುಪ್ರಥಿತಪೌರುಷಾಃ ಪುರಾ ।
ತೇ ತಪಃ ಸುಮಹದಾಸ್ಥಿತಾ ವಿಭುಂ ಪದ್ಮಸಂಭವಮವೇತ್ಯ(ಕ್ಷ್ಯ) ಚೋಚಿರೇ ॥
ಭೂರಿಪಾಪಕೃತಿನೋಽಪಿ ನಿಶ್ಚಯಾನ್ಮುಕ್ತಿಮಾಪ್ನುಮ ಉದಾರಸದ್ಗುಣ ।
ಇತ್ಯುದೀರಿತಮಜೋಽವಧಾರ್ಯ ತಾನ್ಯಾಹ ಚ ಪ್ರಹಸಿತಾನನಃ ಪ್ರಭುಃ ॥
ಯಾವದೇವ ರಮಯಾ ರಮೇಶ್ವರಂ ನೋ ವಿಯೋಜಯಥ ಸದ್ಗುಣಾರ್ಣವಮ್ ।
ತಾವದುಚ್ಚಮಪಿ ದುಷ್ಕೃತಂ ಭವನ್ಮೋಕ್ಷಮಾರ್ಗಪರಿಪಂಥಿ ನೋ ಭವೇತ್ ।
ಇತ್ಯುದೀರಿತಮವೇತ್ಯ ತೇಽಸುರಾಃ ಕ್ಷಿಪ್ರಮೋಕ್ಷಗಮನೋತ್ಸುಕಾಃ ಕ್ಷಿತೌ ।
ಸಾಧನೋಪಚಯಕಾಂಕ್ಷಿಣೋ ಹರೌ ಶಾಸತಿ ಕ್ಷಿತಿಮಶೇಷತೋಽಭವನ್ ॥
ತಾನನಾದಿಕೃತದೋಷಸಂಚಯೈರ್ಮೋಕ್ಷಮಾರ್ಗಗತಿಯೋಗ್ಯತೋಜ್ಝಿತಾನ್ ।
ಮೈಥಿಲಸ್ಯ ತನಯಾ ವ್ಯಚಾಲಯನ್ಮಾಯಯಾ ಸ್ವತನುವಾ ಸ್ವಮಾರ್ಗತಃ ॥
ಆಜ್ಞಯೈವ ಹರೇಸ್ತು ಮಾಯಯಾ ಮೋಹಿತಾಸ್ತು ದಿತಿಜಾ ವ್ಯನಿಂದಯನ್ ।
ರಾಘವೋ ನಿಶಿಚರಾಹೃತಾಂ ಪುನರ್ಜಾನಕೀಂ ಜಗೃಹ ಇತ್ಯನೇಕಶಃ ॥
ಬ್ರಹ್ಮವಾಕ್ಯಮೃತಮೇವ ಕಾರಯನ್ ಪಾತಯಂಸ್ತಮಸಿ ಚಾಂಧ ಅಸುರಾನ್ ।
ನಿತ್ಯಮೇವ ಸಹಿತೋಽಪಿ ಸೀತಯಾ ಸೋಽಜ್ಞಸಾಕ್ಷಿಕಮಭೂದ್ವಿಯುಕ್ತವತ್ ॥
ತೇನ ಚಾಂಧತಮ ಈಯುರಾಸುರಾಃ ......................................। - ಮ.ಭಾ.ತಾ.ನಿ.(೯/೨೭-೩೪)

ದಂತಕ್ಷತಂ [೧]ವಿರಚಯೇದ್ದಯಿತಃ [೨]ಸ್ವಪುಂಸಾಂ
ಕ್ರೋಧಂ ತದಾ ನ ಕಲಯಧ್ವಮಸೌ ವಿಲಾಸಃ ॥ ೪೧ ॥

ತನ್ನ ಭಕ್ತರಿಗೆ ಪ್ರಿಯನಾದ ಶ್ರೀಕೃಷ್ಣನು ರುಗ್ಮಿಣಿಯ ತಲೆಗೂದಲು ಹಿಡಿದು ತನ್ನ ಉಗುರುಗಳಿಂದ ಕುಚಕುಂಭಪಾರ್ಶ್ವದಲ್ಲಿ ವ್ರಣಗಳನ್ನು ಮಾಡುತ್ತಾ ಮೃದುವಾದ ತುಟಿಯನ್ನು ಕಚ್ಚಿ ದಂತಕ್ಷತವನ್ನು ಮಾಡುವನು; ಆಗ ಕೋಪಿಸಿಕೊಂಡನೆಂದು ನೀವು ತಿಳಿಯಕೂಡದು; ಇದು ವಿನೋದ ಮಾತ್ರ ; (ಕರಜ - ಉಗುರು).

## ನಿಷ್ಕಿಂಚನರೆನ್ನಿಸುವ ಹರಿಭಕ್ತರು

[೩]ಪ್ರಾಯಃ ಸ ನ ಪ್ರೇಷಯತಿ ಸ್ವಭಕ್ತ-
ಗೇಹೇಷ್ವಿಮಾಂ ತೇಽಪಿ ನ ತಾಂ ಲಷಂತಿ ।
ಅಥ ಪ್ರದತ್ತಾಮಪಿ ತಾಮಿದಾನೀಂ
ಧೀರಾಃ ಪರಾವೃತ್ಯ ನ ಕಿಂ ದಿಶಧ್ವಮ್ ॥ ೪೨ ॥

ಸಾಮಾನ್ಯವಾಗಿ ಇವನು ತನ್ನ ಭಕ್ತರ ಮನೆಗಳಿಗೆ ಇವಳನ್ನು ಕಳುಹಿಸಿಕೊಡುವುದಿಲ್ಲ; ಅದರಂತೆ ಅವರೂ ಸಹ ಮಹಾಲಕ್ಷ್ಮಿಯನ್ನು ಬಯಸುವುದಿಲ್ಲ; ಒಂದು ವೇಳೆ ಇವಳನ್ನು ಭಕ್ತರಿಗೆ [೪]ನೀಡಿದರೂ ಧೀರರಾದ ಅವರು ಇವನಿಗೇ ಮರಳಿ ಒಪ್ಪಿಸಿ ಬಿಡುವರು ಅಲ್ಲವೆ !

ವಿ. : ೧. ಶ್ರೀಹರಿಯು ತನ್ನ ಭಕ್ತರಿಗೆ ಸಾಮಾನ್ಯವಾಗಿ ಸಂಪತ್ತನ್ನು ನೀಡುವುದಿಲ್ಲ ಎಂಬುದರ ಭಾವ ಇದಾಗಿದೆ: ನಿಷ್ಕಿಂಚನಜನಪ್ರಿಯಃ ಎಂಬ ಶ್ರೀಮದ್ಭಾಗವತದ ವಿವರಣೆಯೂ ಇದರಲ್ಲಿದೆ. ಅದಕ್ಕೆ ಶ್ರೀವಾದಿರಾಜಸ್ವಾಮಿಗಳು [೫]ಸರಸಭಾರತೀವಿಲಾಸದಲ್ಲಿ ಅತ್ಯಂತ ಅಪೂರ್ವವಾದ ಅರ್ಥಗಳನ್ನು ತಿಳಿಸಿರುವರು.

---

೧. ''ದಾರಾನ್ಸುತಾನ್ ಪ್ರಿಯಾನ್ಪ್ರಾಣಾನ್ಪರಸ್ಮೈ ಸನ್ನಿವೇದಯೇತ್'' (ಭಾಗ.೧೧/೩./೨೮)

೨. ತೇಽಪಿ ಭಕ್ತಾ ಅಪಿ ತಾಂ ಸಂಪದಂ ನ ಲಷಂತಿ ನ ವಾಂಛಂತಿ । ''ತಥಾಪಿ ಮತ್ಪರಾ ರಾಜನ್ನೈವ ವಾಂಛತಿ ಕಿಂಚನ'' ಇತಿ ವಚನಾತ್ । -ವ್ಯಾ.

೩.. ಶ್ರೀಕೃಷ್ಣಃ ಸ್ವಭಕ್ತಗೇಹೇಷು ಪ್ರಾಯಃ ಇಮಾಂ ಶ್ರೀಂ ರುಗ್ಮಿಣೀಂ ನ ಪ್ರೇಷಯತಿ । ''ತಂ ಭ್ರಂಶಯಾಮಿ ಸಂಪದ್ಭ್ಯೋ ಯಸ್ಯ ಚೇಚ್ಛಾಮ್ಯನುಗ್ರಹಮ್''(ಭಾಗ.೧೦/೨೭/೧೬)ಇತಿ ವಚನಾತ್ । -ವ್ಯಾ.

೪. ''ಆಚಂಡಾಲಾದಿಕಪ್ರಾಪ್ಯದ್ವಾರಕಾನಿಧಿಕೋಟಿಕೃತ್''ಇತಿ ವಚನಾತ್ । (ಪದ್ಮಪುರಾಣಾಂತರ್ಗತ ವಾಸುದೇವ ಸಹಸ್ರನಾಮವಚನಮ್; ಉತ್ತರಖಂಡ. ೭೧/೨೬೭) - ವ್ಯಾ.

೫. ಯತಶ್ಚ ಬ್ರಹ್ಮರುದ್ರಾದ್ಯಾ ದೇವಾಃ ಸರ್ವೇ ದಿಗೀಶ್ವರಾಃ ।
ಕೃತಾಸ್ತ್ವಯಾ ನಿಜಜನಾಃ ಸರ್ವಯಜ್ಞಭುಜೋಽಪಿ ಚ ॥
ಯಸ್ಮಾದೇಷಾಂ ಮಹಾಭಾಗ್ಯವತಾಂ ಕಿಂಚಿದ್ಧನಂ ಚ ನ ।
ಅತೋ ನಿಷ್ಕಿಂಚನಜನಪ್ರಿಯಶ್ಚಾಸಿ ತ್ವಮಚ್ಯುತ ॥ ಸರಸಭಾರತೀವಿಲಾಸ(೪/೨೩.,೨೪)

೨. ಒಂದು ವೇಳೆ ಭಕ್ತರಿಗೆ ಶ್ರೀಹರಿಯು ಸಂಪತ್ತನ್ನು ನೀಡಿದರೂ ಅವರು ಅವೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸುವರೇ ಹೊರತು ತಮಗೆ ಸೇರಿದ್ದೆಂದು ತಪ್ಪಾಗಿ ತಿಳಿಯುವ ಅವಿವೇಕವನ್ನು ಸರ್ವಥಾ ಮಾಡಲಾರರು ಎಂಬ ಭಾವವು ಇಲ್ಲಿದೆ.

೩. ತವರುಮನೆಯವರು ಕರೆದಕೂಡಲೇ ಶ್ರೀಕೃಷ್ಣ ರುಗ್ಮಿಣಿಯನ್ನು ತಮ್ಮ ಮನೆಗೆ ಕಳುಹಿಸಿಕೊಡಬೇಕು ಎಂಬ [೧] ಕೋರಿಕೆಗೆ ಉತ್ತರ ಇದಾಗಿದೆ.

### ರುಗ್ಮಿಣಿಯು ಶ್ರೀಕೃಷ್ಣನ ನಿಜಪತ್ನೀ

**ನೈವಾನ್ಯಾಂ[೨] ವರಯೇತ್ ಕನ್ಯಾಂ ಪೂರ್ಣೋಽಯಂ ಪುರುಷಾಗ್ರಣೀಃ ।**
**ವೃತೋಽಪ್ಯನ್ಯಾಂಗನಾದೇಹೇ ರಮಯೇತ್ ಪ್ರೇಯಸೀಮಿಮಾಮ್ ॥ ೪೩ ॥**

ಸ್ವಯಂ ಪೂರ್ಣನಾದ ಪುರುಷೋತ್ತಮನಾದ ಶ್ರೀಕೃಷ್ಣನು ಬೇರೊಬ್ಬ ಕನ್ಯೆಯನ್ನು ಎಂದೂ ವರಿಸಲಾರ. ಅವರೇನಾದರೂ ಇವನನ್ನು ವರಿಸಿದಲ್ಲಿ ಅವರ ದೇಹದೊಳಗೆ ಆವೇಶಿಸಿರುವ ತನ್ನ ಪ್ರಿಯೆಯಾದ ಇವಳೊಂದಿಗೇ ರಮಿಸುವನು.

ವಿ. : ೧. ರಮಾವೇಶ ಇರದವರನ್ನು ಶ್ರೀಹರಿ ಸರ್ವಥಾ ತನ್ನ ಪತ್ನೀತ್ವೇನ ಸ್ವೀಕರಿಸಲಾರ ಎಂದು ಭಾವ.

೨. ಇದು ಷೋಡಶಸ್ತ್ರೀಸಹಸ್ರೇಶಃ, ಗೋಪೀಜನಪ್ರಿಯ, ಷಣ್ಮಹಿಷೀಪತಿ ಮೊದಲಾದ ಶ್ರೀಕೃಷ್ಣನ ಹಿರಿಮೆಗೆ ನೀಡಿದ ವಿವರಣೆಯಾಗಿದೆ ಎಂದು ತಿಳಿಯಬೇಕು.

### ಶ್ರೀಕೃಷ್ಣನದು ಸದಾ ಪೂರ್ಣಪ್ರತ್ಯಕ್ಷ

**ಸದಾಪರೋಕ್ಷೀಕೃತಸರ್ವವಿಶ್ವಃ**
**ಕಥಂ ಸ್ಮರೇದ್ವಃ ಸ್ಮರಣೀಯಶೀಲಃ ।**
**ತಥಾಽಪಿ ಯುಷ್ಮಾಸು ಕೃಪಾಂ ಸ ಕುರ್ಯಾತ್**
**ಸ್ಮೃತೇಃ ಫಲಂ ಸ್ವಾಂಘ್ರಿಯುಗಾಶ್ರಯೇಷು ॥ ೪೪ ॥**

ಸದಾ ಎಲ್ಲವನ್ನೂ ಸಾಕ್ಷಾತ್ತಾಗಿ ನೋಡುವ ಈ ಶ್ರೀಕೃಷ್ಣನು ಇತರರಿಂದ ಸ್ಮರಿಸಲ್ಪಡಬೇಕಾದವನೇ ಹೊರತು ಇತರರನ್ನು ಸ್ಮರಿಸುವ ಅಗತ್ಯವಿಲ್ಲದವನು ; ಆದರೂ ಇವನು ತನ್ನ ಪಾದದ್ವಯ-ಗಳನ್ನು ಆಶ್ರಯಿಸಿದ ನಿಮ್ಮ ಮೇಲೆ ಸ್ಮರಣೆಯ ಫಲವಾಗಿ ದಯೆ ತೋರುವುದು ನಿಶ್ಚಿತ.

---

೧. ಅನೇನಾನುಭೂಯಮಾನಾಸು ಸರ್ವಾಸು ಲಕ್ಷ್ಮೀಸನ್ನಿಧಾನಾದಿತಿ ಭಾವಃ । "ಕರಿಷ್ಯತಿ ನಾನ್ಯಪತ್ನೀಮ್" ಇತ್ಯಸ್ಯೋತ್ತರಮ್ । -ವ್ಯಾ.

೨. ಋತೇ ರಮಾಂ ಜಾತು ಮಮಾಂಗಸಂಗಯೋಗ್ಯಾಂಗನಾ ನೈವ ಸುರಾಲಯೇಽಪಿ ॥
-ಮ.ಭಾ.ತಾ.ನಿ.(೧೧/೧೨೬)

ವಿ. : ೧. ನೆನಪಿಸಿಕೊಳ್ಳುವುದು ಮರೆತವರಿಗಷ್ಟೇ ಶೋಭಿಸುವ ಕಾರ್ಯ; ಶ್ರೀಕೃಷ್ಣ ಸದಾ ಸರ್ವವಿಶ್ವವನ್ನೂ ಸಾಕ್ಷಾತ್ತಾಗೇ ನೋಡುವುದರಿಂದ ಅವನಿಗೆ ಸ್ಮರಣೆಯ ಅಗತ್ಯವೇ ಇಲ್ಲ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ :

ಸ್ವಪರಗತಾಶೇಷವಿಷಯಕಂ ಈಶ್ವರಜ್ಞಾನಮ್ । - (ಪ್ರಮಾಣಲಕ್ಷಣ)
ಸೂರ್ಯಪ್ರಭಾವದಖಿಲಂ ಭಾಸಯಂತೀ ನಿರಂತರಾ । - (ಅನುವ್ಯಾಖ್ಯಾನ ೪/೨/೧೯)

೨. ತನಗೆ ಇತರರ ಸ್ಮರಣೆಯ ಅಗತ್ಯವಿಲ್ಲವಾದರೂ ಅವನ ಸ್ಮರಣೆಯ ಅಗತ್ಯ ಸರ್ವರಿಗೂ ಇದ್ದೇ ಇದೆ ಅದಕ್ಕೆ ಫಲವಾಗಿ ಅವನು ಕರುಣೆ ತೋರುವುದು ನಿಶ್ಚಿತ ಎನ್ನುವ ಮೂಲಕ ಅವನ ಕಾರುಣ್ಯವು ವರ್ಣಿತವಾಗಿದೆ.

೩.. ರುಗ್ಮಿಣೀಕಲ್ಯಾಣವನ್ನು ಮಾಡಿಕೊಡುವ ತಮ್ಮನ್ನು ಎಂದೂ ಮರೆಯಕೂಡದು ಎಂಬ ರುಗ್ಮಿಣೀಪಕ್ಷದವರ ಮಾತಿಗೆ ಇದು ಉತ್ತರವಾಗಿದೆ.

### ಪರಿಪೂರ್ಣನಿಗೆ ಎಂತಹ ದಕ್ಷಿಣೆ

ನ ಪಾರಿಬರ್ಹಂ ಬಹು ದಾತುಮೀಶಾ
ರಥಾಶ್ವಹಸ್ತ್ಯಾದಿಬಲಾನಿ ಚಾಸ್ಮೈ ।
ಇಮಾಂ ಪರಂ ಪದ್ಮಮುಖೀಂ ದಿಶಾಮ-
ಸ್ತಿಥಿಜ್ಞಮಾಹೂಯ ತಿಥಿರ್ವಿಚಾರ್ಯತಾಮ್ ॥ ೪೫ ॥

ನಾವು ಇವನಿಗೆ ರಥ, ಕುದುರೆ, ಆನೆ, ಮೊದಲಾದ ಸೇನೆಯ ಕಾಣಿಕೆಯನ್ನು ಬಹಳವಾಗಿ ನೀಡಲು ಸಮರ್ಥರಲ್ಲ; ಆದರೆ ಈ ಕಮಲಮುಖಿಯಾದ ರುಗ್ಮಿಣಿಯನ್ನು ಮಾತ್ರ ಧಾರೆ-ಯೆರೆಯುವೆವು. ತಿಥಿಗಳ ಬಗ್ಗೆ ಪರಿಜ್ಞಾನವುಳ್ಳ ದೈವಜ್ಞರನ್ನು ಕರೆಸಿ, ವಿವಾಹದ ತಿಥಿಯನ್ನು ನಿರ್ಣಯಿಸಿರಿ.

ವಿ. : ೧. ಸ್ವಯಂ ಪರಿಪೂರ್ಣನಾದ ಶ್ರೀಕೃಷ್ಣನಿಗೆ ಯಾವುದೇ ವಿಧವಾದ ಕಾಣಿಕೆಯನ್ನು ನೀಡುವ ಸಾಮರ್ಥ್ಯ ಇತರರಿಗಿಲ್ಲ ಎಂಬುದು ಇಲ್ಲಿಯ ಭಾವ; ಪಾರಿಬರ್ಹ - ಉಡುಗೊರೆ.

೨. ಬದಲಾಗಿ, ತಮ್ಮಲ್ಲಿನ ಯತ್ಕಿಂಚಿತ್ ಸಂಪತ್ತನ್ನು ಶ್ರೀಕೃಷ್ಣನಿಗೆ ಸಮರ್ಪಿಸುವುದೇ ಅವನಿಗೆ ಭಕ್ತರು ಸಲ್ಲಿಸಬಹುದಾದ ಸೇವೆ ಎಂಬ ಭಾವವು ಇಲ್ಲಿದೆ.

### ವರದಕ್ಷಿಣೆ ಬಯಸದ ಶ್ರೀಕೃಷ್ಣ

ನ ಪಾರಿಬರ್ಹಂ ಸ ವೃಣೋತಿ ಪೂರ್ಣ-
ಸುಖಃ ಪರಂ ಕಾಂಕ್ಷತಿ ತತ್ಕಟಾಕ್ಷಮ್ ।

ವಿರಿಂಚವೈರಿಂಚಮುಖಾಮರಾಣಾ-
ಮಗಣ್ಯಭಾಗ್ಯಂ ಹಿ ಯತೋ ಬಭೂವ ॥ ೪೬ ॥

ಪೂರ್ಣಸುಖಿಯಾದ ಅವನು ಯಾವುದೇ ಕಾಣಿಕೆಯನ್ನು ಸಹ ಬಯಸಲಾರ; ಆದರೆ ಅವನ ಕುಡಿನೋಟವನ್ನು ಮಾತ್ರ ಬ್ರಹ್ಮ, ಶಿವ ಮೊದಲಾದ ಇತರ ಸಕಲ ದೇವತೆಗಳು ಸದಾ ಬಯಸುವರು; ಅವರಿಗೆ ಅಗಣಿತವಾದ ಭಾಗ್ಯವು ಲಭಿಸಿರುವುದು ಅದರಿಂದಲೇ ಅಲ್ಲವೆ !

ಶ್ರೀಕೃಷ್ಣರುಗ್ಮಿಣಿಯರಿಗೆ ಸದಾ ಸುಮುಹೂರ್ತವೇ

ಯದ್ವಕ್ತ್ರೇ ವಿಧುಮಾಮನಂತಿ ಸುಬುಧಂ ಮುಗ್ಧಸ್ಮಿತೇ ಹಸ್ತಯೋ-
ರುದ್ಯದ್ವ್ಯೋಮಮಣಿಂ ಗುರುಂ ಕಟಿತಟೇ ಮಧ್ಯಂ ಚ ಕಾವ್ಯಾಸ್ಪದಮ್ ।
ಯತ್ಪಾದಸ್ಪೃಶಿ ಮಂಗಲಂ ಪದತಲೇ ಕೇತುಂ ಗತೌ ಮಂದಗಂ
ಯದ್ರೋಚಿಶ್ಚಕಿತಂ ತಮಸ್ತದನಯೋರ್ನಿತ್ಯಂ ಮುಹೂರ್ತೋದಯಃ ॥ ೪೭ ॥

ಶ್ರೀಕೃಷ್ಣನ ಮುಖದಲ್ಲಿ ಚಂದ್ರ, ಮನೋಹರವಾದ ಮಂದಹಾಸದಲ್ಲಿ ಬುಧ, ಎರಡು ತೋಳುಗಳಲ್ಲಿ ಉದಿಸುವ ಸೂರ್ಯ, ಅವನ ಕಟಿಪ್ರದೇಶದಲ್ಲಿ ಗುರು, ಮಧ್ಯಭಾಗದಲ್ಲಿ ಶುಕ್ರ, ಪಾದಸ್ಪರ್ಶದಲ್ಲಿ ಮಂಗಳ, ಅಂಗಾಲಿನಲ್ಲಿ ಕೇತು, ನಡೆಯಲ್ಲಿ ಶನೈಶ್ಚರ, ಎಂಬುದಾಗಿ ಜ್ಞಾನಿಗಳು ತಿಳಿಯುವರು. ಅವನ ಕಾಂತಿಗೆ ರಾಹುವು ಅಂಜುವನು, ಆದ್ದರಿಂದ ಇವರಿಬ್ಬರಿಗೂ ಸದಾ ಸುಮುಹೂರ್ತವೇ ಅಲ್ಲವೆ !

ವಿ. : ೧. ವಿವಾಹಾದಿ ಶುಭಕಾರ್ಯಗಳಿಗೆ ಐದು ಶುಭ ಗ್ರಹಗಳು ಉಚ್ಚಸ್ಥಾನದಲ್ಲಿ ಇರಬೇಕು; ಇತರ ನಾಲ್ಕು ಅಶುಭ ಗ್ರಹಗಳು ನೀಚಸ್ಥಾನದಲ್ಲಿ ಇರಬೇಕು. ಪ್ರಸ್ತುತ ಶ್ರೀಕೃಷ್ಣ ರುಗ್ಮಿಣಿಯ ವಿಷಯದಲ್ಲಿ ಇದು ಪರಿಪೂರ್ಣವಾಗಿರುವುದರಿಂದ ಅವರ ಕಲ್ಯಾಣಕ್ಕೆ ಸದಾ ಸುಮುಹೂರ್ತವೇ ಎಂದರ್ಥ; ತಮಃ - ರಾಹು; ಮಂದಗ - ಶನೈಶ್ಚರ.

೨. ಮುಖದಲ್ಲಿ ಚಂದ್ರ ಎಂದರೆ ಶ್ರೀಕೃಷ್ಣನ ಮುಖದ್ದು ಚಂದ್ರನ ಕಾಂತಿ, ಮಂದಹಾಸದಲ್ಲಿ ಬುಧ ಎಂದರೆ ಸೌಮ್ಯ; ಬುಧನು ಸೋಮಪುತ್ರನಾದ್ದರಿಂದ ಅವನಿಗೆ ಆ ಹೆಸರು; ಎರಡೂ ತೋಳುಗಳೂ ಅಪಾರ ಕಾಂತಿಯಿಂದ ಹೊಳೆಯುವುದರಿಂದ ಸೂರ್ಯನಂತಿವೆ. ಕಟಿಪ್ರದೇಶವು ವಿಶಾಲವಾಗಿದ್ದು ಗುರು ಎನ್ನಿಸಿದೆ. ಮಧ್ಯಭಾಗ ಕಾವ್ಯದ ವಿಷಯವಾಗುವ ಮೂಲಕ ಶ್ರೇಷ್ಠವೆನ್ನಿಸಿದೆ. ಅವನ ಪಾದಸ್ಪರ್ಶ ಮಂಗಳಗಳಿಗೆ ನೆಲೆಯಾಗಿದೆ; ಅಂಗಾಲಿನಲ್ಲಿ ಧ್ವಜ ಚಿಹ್ನೆ ಇದೆ. ಶ್ರೀಕೃಷ್ಣನ ಮಂದಗತಿ ಶನೈಶ್ಚರನನ್ನು ಜ್ಞಾಪಿಸುತ್ತದೆ. ಕತ್ತಲೆಯ ಸಂಕೇತವಾದ ರಾಹು ಶ್ರೀಕೃಷ್ಣ-ರುಗ್ಮಿಣಿಯರನ್ನು ನೋಡುತ್ತಲೇ ಪಲಾಯನಗೈಯುವನು. ಹೀಗೆ ಲಕ್ಷ್ಮೀನಾರಾಯಣರ ಹಿರಿಮೆ ಇರುವುದರಿಂದ ಅವರ ವಿವಾಹಕ್ಕೆ ಶುಭಮುಹೂರ್ತ ನಿರೀಕ್ಷಣೆ ಅನಗತ್ಯ ಎಂದು ಭಾವ.

೩. [೧]ಶ್ರೀಲಕ್ಷ್ಮೀನಾರಾಯಣರ ಸ್ಮರಣೆಯೇ ಮಹಾಪುಣ್ಯಕರವಾಗಿರುವಾಗ, ಸಾಕ್ಷಾತ್ ಅವರಿಬ್ಬರ ವಿವಾಹ ಸ್ವತಃ ಮಹಾಪುಣ್ಯಕರವಾದ ಉತ್ಸವವಾಗಿದ್ದು, ಅದಕ್ಕೆ ಬೇರಾವ ಮುಹೂರ್ತದ ಅಗತ್ಯವೂ ಇರದು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು :

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಙ್ಘ್ರಿಯುಗಂ ಸ್ಮರಾಮಿ ॥

## ಶ್ರೀಕೃಷ್ಣನಿಗೆ ಸದಾ ಚಂದ್ರಬಲ, ತಾರಾಬಲಗಳು

ಯದೀಯವೀಕ್ಷಾವಿಷಯಸ್ಯ ನಿತ್ಯಂ
ವಿಧೋರ್ಬಲಂ ತಾರಬಲಂ ಚ ಸುಷ್ಠು ।
ಯದೀಯತಾರಂ ಜಪತಸ್ತದಸ್ಯ
ಸದಾ ಮುಹೂರ್ತೋದಯಮೇವ ಮನ್ಯೇ ॥ ೪೮ ॥

ಶ್ರೀಕೃಷ್ಣರುಗ್ಮಿಣಿಯರ ಕೃಪೆಗೆ ಪಾತ್ರನಾಗುವವನಿಗೆ ಸದಾ ಪೂರ್ಣವಾದ ಚಂದ್ರನ ಬಲ; ಅವನನ್ನು ಪ್ರತಿಪಾದಿಸುವ ಪ್ರಣವ ಮಂತ್ರವನ್ನು ಜಪಿಸುವವನಿಗೆ ಸಹ ಸದಾ ತಾರಾಬಲ; ಅಂತಹ ಶ್ರೀಕೃಷ್ಣನಿಗೆ ಸದಾ ಸುಮುಹೂರ್ತವೇ ಎಂದು ನಾನು ಭಾವಿಸುವೆನು.

ವಿ. : ೧. ಲಕ್ಷ್ಮೀನಾರಾಯಣರ ಅನುಗ್ರಹಕ್ಕೆ ಪಾತ್ರನಾಗುವವನಿಗೆ ಪ್ರತ್ಯೇಕ ಶುಭಮುಹೂರ್ತದ ಅಗತ್ಯವಿಲ್ಲದಿರುವಾಗ ಸ್ವತಃ ಲಕ್ಷ್ಮೀನಾರಾಯಣರಾದ ಶ್ರೀಕೃಷ್ಣ-ರುಗ್ಮಿಣಿಯರ ವಿವಾಹಕ್ಕೆ ಸುಮುಹೂರ್ತದ ಚಿಂತೆ ಅನಗತ್ಯ ಎಂಬ ಭಾವ ಇಲ್ಲಿ ಮುಂದುವರೆದಿದೆ.

೨. [೨]ಸಾಮಾನ್ಯವಾಗಿ ಶುಭಕಾರ್ಯಗಳಿಗೆ ಚಂದ್ರಬಲ, ತಾರಾಬಲವನ್ನು ನೋಡುವುದು ವಿಹಿತ. ಆದರೆ ಮೇಲೆ ಹೇಳಿದ ಕಾರಣದಿಂದಾಗಿ ಇವರ ವಿವಾಹಕ್ಕೆ ಅದು ಅನಗತ್ಯ ಎಂದರ್ಥ.

೩. ಶ್ರೀಕೃಷ್ಣನ ನೋಟದಲ್ಲಿ ಚಂದ್ರನ ಕಾಂತಿ, ಆದ್ದರಿಂದ ಅವನ ಕೃಪೆಗೆ ಪಾತ್ರರಾದವರಿಗೆ ಅದೇ ಚಂದ್ರಬಲ. ಪ್ರಣವಮಂತ್ರಕ್ಕೆ ತಾರ ಎಂದು ಹೆಸರು, ಪ್ರಣವಮಂತ್ರವನ್ನು ಜಪಿಸುವವರಿಗೇ ತಾರಾಬಲ ಇರುವಾಗ ಇನ್ನು ಆ ಮಂತ್ರಪ್ರತಿಪಾದ್ಯನಾದ ಶ್ರೀಕೃಷ್ಣನಿಗೆ ತಾರಾಬಲ ಎಂದು ಪ್ರತ್ಯೇಕ ಹೇಳಬೇಕೆ ಎಂದರ್ಥ.

## ಶ್ರೀಕೃಷ್ಣನ ಸಮಾಗಮಕ್ಕೆ ಕಾತರಿಸಿದ ರುಗ್ಮಿಣಿ

ದ್ವಿತ್ರೈರ್ದಿನೈರಂತರಿತಾಽಪಿ ಸಾಽಭೂ-
ಜ್ಜ್ಯೋತಿಷ್ಪಥಜ್ಞೋಕ್ತತಿಥಿಃ ಕ್ಷಣಾಭಾ ।

---

೧. ತಸ್ಮಾತ್ ಕಾರಣಾದನಯೋಃ ರುಗ್ಮಿಣೀಕೃಷ್ಣಯೋಃ ನಿತ್ಯಂ ಮುಹೂರ್ತೋದಯಃ । ಮಹಶುಭಲಕ್ಷಣಸಂಪನ್ನಯೋರನಯೋಃ ಕಿಂ ಮುಹೂರ್ತವಿಚಾರೇಣೇತಿ ಹೃದಯಮ್ । -ವ್ಯಾ.

೨. ''ಸೂರ್ಯಾಚಂದ್ರಮಸಾವಸ್ಯ ಚಕ್ಷುಷೀ'' ಇತಿ ಶ್ರುತೇಃ । ವೀಕ್ಷಾಯಾಶ್ಚಂದ್ರಾಶ್ರಿತತ್ವಾದಿತಿ ಭಾವಃ । -ವ್ಯಾ.

ಉದ್ಯನ್ಮಹರ್ಧಿಂ ಮಿಷತಾಂ ಜನಾನಾಂ
ಭೈಷ್ಮ್ಯಾಸ್ತು ಕಲ್ಪಾಯುತಸಂಮಿತಾ[೧]ऽऽಸೀತ್ ॥ ೪೯ ॥

ದೈವಜ್ಞರು ತಿಳಿಸಿದ ವಿವಾಹದ ತಿಥಿಗೆ ಇನ್ನೂ ಎರಡು ಮೂರು ದಿನಗಳ ಅಂತರವಿದ್ದರೂ ವಿವಾಹಕ್ಕಾಗಿ ಸಂಪಾದಿತವಾಗಿದ್ದ ಸಾಮಗ್ರಿಗಳ ರಾಶಿಯನ್ನು ಕಂಡ ಜನರಿಗೆ ಅದು ಒಂದು ಕ್ಷಣದಂತೆ ಕಳೆಯಿತು; ಆದರೆ ರುಗ್ಮಿಣೀದೇವಿಗೆ ಮಾತ್ರ ಅದು ಹತ್ತುಸಾವಿರ ಕಲ್ಪದಷ್ಟು ದೊಡ್ಡದೆನ್ನಿಸುವಂತಾಗಿತ್ತು.

ವಿ. : ೧. ಜ್ಯೋತಿಷ್ಕರು ನಿಗದಿಪಡಿಸಿದ್ದ ಮುಹೂರ್ತಕ್ಕೆ ಇನ್ನೂ ಕೆಲವು ದಿನಗಳ ಅಂತರ-ವಿದ್ದರೂ ಅಲ್ಲಿಯ ಅಪಾರ ಸಿದ್ಧತೆಗಳನ್ನು ನೋಡುತ್ತಾ ಮೈಮರೆತ ಜನರಿಗೆ ಆ ಕಾಲ ಕ್ಷಣದಷ್ಟು ಬೇಗ ಕಳೆಯಿತು ಎಂದರ್ಥ; **ಋದ್ಧಿಃ** – ಅಭಿವೃದ್ಧಿ; **ಅಯುತ** – ಹತ್ತುಸಾವಿರ.

೨. ಮಹಾಲಕ್ಷ್ಮಿಯಾದ ರುಗ್ಮಿಣಿಗೆ ಲೋಕದೃಷ್ಟಿಯಲ್ಲಿ ಪಾಣಿಗ್ರಹಣಕ್ಕೆ ಅಷ್ಟು ಅಂತರ-ವಿದ್ದದ್ದರಿಂದ ಅದನ್ನು ಬಯಸಿದ್ದ ಅವರಿಗೆ ಅದು [೨] ಹತ್ತುಸಾವಿರಕಲ್ಪದಷ್ಟು ಸುದೀರ್ಘವೆನ್ನಿಸಿತು.

೩. ನಲಿವಿನ ಸಂದರ್ಭದಲ್ಲಿ ಕಾಲ ಬೇಗ ಕಳೆದಂತೆ ತೋರುವುದು; ನೋವಿನ ಸಂದರ್ಭದಲ್ಲಿ ಅದು ಸುದೀರ್ಘವೆನ್ನಿಸುವುದು ಎಂಬುದು ಶಾಸ್ತ್ರಸಿದ್ಧವಾದ ವಿಚಾರ : **ಅಹಸ್ತು ಮಾಸಶಬ್ದೋಕ್ತಃ ಯತ್ರ ಚಿಂತಾಯುತಂ ವ್ರಜೇತ್ ।** (ಶ್ರೀಮದ್ಭಾಗವತತಾತ್ಪರ್ಯನಿರ್ಣಯದಲ್ಲಿ ಉಕ್ತವಾದ ನಾಮಮಹೋದಧಿ ವಚನ)

೪. ಒಂದೇ ಕಾಲ ವಿಭಿನ್ನ ಅಧಿಕಾರಿಗಳಿಗೆ ಭಿನ್ನಭಿನ್ನವಾಗಿ ತೋರಿದ ಇಲ್ಲಿಯ ವರ್ಣನೆ ಅತ್ಯಂತ ಮನೋಜ್ಞವಾದುದು.

### ವಿವಾಹದ ನಿಶ್ಚಯ ತಾಂಬೂಲ

ತಾಂಬೂಲಪತ್ರಂ ಕಿಲ ಪೂಗಯುಕ್ತ-
ಮಾಸೀದ್ವಿವಾಹೋತ್ಸವನಿರ್ಣಯಾಯ ।
ಚೇತಃ ಸುನಿಶ್ಚಾಯಯತಿ ಸ್ಮ ಯೂನಾಂ
ಮಾಂಗಲ್ಯದೀಕ್ಷೋತ್ಸವಮೇತದೇವ ॥ ೫೦ ॥

---

೧. ತ್ರುಟಿ ಯುಗಾಯತೇ ತ್ವಾಮಪಶ್ಯತಾಮ್ – ಭಾಗವತ ೧೦/೩೧/೧೫

೨. ಕಲ್ಪಾನಾಂ ಅಯುತೇನ ಸಮಾನೀಕೃತಾ ಆಸೀತ್ ತಾವತ್ಪರ್ಯಂತಂ ಶ್ರೀಕೃಷ್ಣಕರಗ್ರಹಣಪ್ರತ್ಯೂಹಹೇತುತ್ವಾದಿತಿ ಭಾವಃ । –ವ್ಯಾ.

ವಿವಾಹಮಹೋತ್ಸವದ ನಿರ್ಣಯಕ್ಕಾಗಿ ಅಡಕೆಯೊಂದಿಗೆ ಕೂಡಿದ ತಾಂಬೂಲಪತ್ರದ ವಿನಿಯೋಗದ ಕಾರ್ಯ ನಡೆಯಿತು ; ತರುಣರ ಮನಸ್ಸುಗಳಲ್ಲಿ ಇದೇ ಮಾಂಗಲ್ಯದೀಕ್ಷೆಯ ಉತ್ಸವವನ್ನು ಗಟ್ಟಿಮಾಡುವುದು.

ವಿ. : ವಿವಾಹದ ನಿಶ್ಚಯತಾಂಬೂಲಕಾರ್ಯ ನಡೆಯಿತು ಎಂದರ್ಥ.

### ಮಂಗಳದ್ರವ್ಯಗಳ ವಿನಿಮಯ

ತತಃ ಕ್ರಮೇಣೋಭಯವರ್ಗನಾರ್ಯೋ
ಗೃಹೇ ಗೃಹೇ ತೈಲಯುತಾಂ ಹರಿದ್ರಾಮ್ ।
ದದುರ್ವಿವಾಹೋತ್ಸವಮೂಲಭೂತಾಂ
ಪರಸ್ಪರಂ ಸ್ನೇಹಮಿವಾರ್ಪಯಂತ್ಯಃ ॥ ೫೧ ॥

ಬಳಿಕ ಕ್ರಮವಾಗಿ, ಎರಡೂ ಗುಂಪುಗಳ ಸ್ತ್ರೀಯರು ವಿವಾಹಮಹೋತ್ಸವಕ್ಕೆ ಮೂಲಭೂತವಾದ ಎಣ್ಣೆಯಿಂದ ಕೂಡಿದ ಅರಿಶಿನವನ್ನು ಪರಸ್ಪರರ ಸ್ನೇಹವನ್ನೆಂಬಂತೆ ಮನೆಮನೆಗಳಲ್ಲೂ ಹಂಚಿಕೊಂಡರು.

ವಿ. : [1]ತೈಲಕ್ಕೆ ಸ್ನೇಹ ಎಂಬ ಮತ್ತೊಂದು ಅರ್ಥವು ಇರುವುದರಿಂದ ಆ ತೈಲದ ವಿನಿಯೋಗವು ಸ್ನೇಹವಿನಿಯೋಗದಂತೆ ಇದ್ದಿತು ಎಂಬ ಈ ಉತ್ಪ್ರೇಕ್ಷೆಯಲ್ಲಿ ಅಪೂರ್ವ ಶ್ಲೇಷಾಲಂಕಾರವಿದೆ.

### ನಾಂದೀಸ್ಥಾಪನೆ

ಕನ್ಯಾವರೌ ಚಕ್ರತುರರ್ಥಕಾಮಾ-
ವನ್ಯೇದ್ಯುರರ್ಚಾಂ ಪಿತೃದೇವತಾನಾಮ್ ।
ಮನ್ಯೇಽಹಮನ್ಯೋನ್ಯಮಮೂ ತದಗ್ರೇ
ಚೀರ್ಣೋತ್ಸವೌ ಸಂಪ್ರತಿ [2]ಜಾತಲಜ್ಜೌ ॥ ೫೨ ॥

ಕನ್ಯಾವರರಾದ ರುಗ್ಮಿಣೀಕೃಷ್ಣರು ಪುರುಷಾರ್ಥವನ್ನು ಬಯಸಿದವರಾಗಿ ಬೇರೊಂದು ದಿನದಲ್ಲಿ ಪಿತೃದೇವತೆಗಳ ಪೂಜೆಯನ್ನು ಪೂರೈಸಿದರು. ಆ ಮುನ್ನವೆ ವಿವಾಹ ಪೂರೈಸಿದ್ದ ಅವರಿಬ್ಬರು ಈಗ ಅವರೆದುರು ಮತ್ತೆ ವಿವಾಹವಾಗಲು ಲಜ್ಜೆಹೊಂದಿದವರಾದರು ಎಂದು ನಾನು ಭಾವಿಸುವೆ.

---

೧. ತೈಲಸ್ಯ ಸ್ನೇಹಶಬ್ದವಾಚ್ಯತ್ವಾದಿತಿ ಶ್ಲಿಷ್ಟಮೂಲೇಯಮುತ್ಪ್ರೇಕ್ಷಾ । -ವ್ಯಾ.
೨. ಕ್ಷೀರಸಮುದ್ರಮಥನಾನಂತರಂ ದೇವತಾಸಭಾಮಧ್ಯೇ ವಿವಾಹಸ್ಯ ಜಾತತ್ವಾದಿತಿ ಭಾವಃ । -ವ್ಯಾ.

ವಿ. ೧ : ವಿವಾಹಮಹೋತ್ಸವದ ಅಂಗವಾದ ನಾಂದೀಮುಖದ ಕಾರ್ಯ ನಡೆಯಿತು ಎಂದರ್ಥ.

೨. ಲಕ್ಷ್ಮೀನಾರಾಯಣರಾದ ಶ್ರೀಕೃಷ್ಣರುಗ್ಮಿಣಿಯರು ನಿತ್ಯದಂಪತಿಗಳು. ಲೋಕದ ದೃಷ್ಟಿಯಲ್ಲೂ ಆ ಮುನ್ನವೇ ಸಮುದ್ರಮಥನ ಕಾಲದಲ್ಲಿ ವಿವಾಹವಾಗಿದ್ದವರು. ಈಗ ಮತ್ತೊಮ್ಮೆ ವಿವಾಹವಾಗುವುದನ್ನು ನೋಡಿ ಭಕ್ತಜನತೆ ಅಚ್ಚರಿ ವ್ಯಕ್ತಪಡಿಸಿಯಾರು ಎಂಬುದಾಗಿ ಲಜ್ಜೆ ಹೊಂದಿದವರೆಂದು ಭಾವ.

೩. ಲಕ್ಷ್ಮೀನಾರಾಯಣರಿಗೆ ಮೂಲರೂಪದಂತೆ ಅವತಾರರೂಪದಲ್ಲೂ ಸಹ ಯಾವುದೇ ವ್ಯತ್ಯಾಸವಿಲ್ಲ ಎಂಬ ಪ್ರಮೇಯದ ಹಿನ್ನೆಲೆಯಲ್ಲಿ ಈ ಮಾತಿನ ಸ್ವಾರಸ್ಯ ತಿಳಿಯುವುದು.

### ಸ್ನಾತಕನಾದ ಶ್ರೀಕೃಷ್ಣ

**ಅಥ ಸ್ನಾತಕಸಾಧರ್ಮ್ಯಂ ಸಂಪ್ರಾಪ್ಯ ಯದುನಂದನಃ ।**
**ಸ್ನಾತುಂ ಜಿಗಮಿಷುಸ್ತೀರ್ಥಂ ಪ್ರೀತ್ಯೇತ್ಥಂ ಪ್ರತ್ಯಷಿಧ್ಯತ ॥ ೫೩ ॥**

ಬಳಿಕ ಸ್ನಾತಕವ್ರತವನ್ನು ಹೊಂದಿದ ಯದುನಂದನನಾದ ಶ್ರೀಕೃಷ್ಣ ತೀರ್ಥಯಾತ್ರೆಗೆಂದು ತೆರಳಬಯಸಿದವನಾದ; ಅವನನ್ನು ಪ್ರೀತಿಯಿಂದ ಹೀಗೆ ತಡೆದರು.

ವಿ. : ವಿವಾಹದ ಅಂಗವಾದ ಕಾಶೀಯಾತ್ರೆಯ ವಿವರಣೆ ಇಲ್ಲಿದೆ.

### ಶ್ರೀಕೃಷ್ಣನ ಕಾಶೀಯಾತ್ರೆ

**ಪರಿಹೃತಭವಪಾಶ ಶ್ರೀಶ ಮಾ ಯಾಹಿ ಶೌರೇ**
**ತ್ರಿಭುವನಪರಿಗೀತಂ ತೀರ್ಥಜಾತಂ ತ್ವಯೀಶೇ ।**
**ವ್ರಜತಿ ಸಕಲಮಾಸೀತ್ ಪೃಷ್ಠತಃ ಸ್ಪಷ್ಟಯುಷ್ಮ-**
**ಚ್ಚರಣವರಣಭೂಮ್ಯಾಂ ಕ್ವಾಸ್ತಿ ತೀರ್ಥಂ ತ್ವದಗ್ರೇ ॥ ೫೪ ॥**

ಸಂಸಾರಪಾಶವನ್ನು ಪರಿಹರಿಸುವವನೇ ! ಲಕ್ಷ್ಮೀಪತಿಯೇ ! ಶೌರಿಯೇ ! ಶ್ರೀಕೃಷ್ಣ! ನಿನ್ನಲ್ಲಿಯೇ ಮೂರು ಲೋಕಗಳೂ ಕೊಂಡಾಡುವ ಸಕಲ ತೀರ್ಥಗಳೂ ನೆಲೆಸಿವೆ. ನೀನು ತೀರ್ಥಯಾತ್ರೆಗೆಂದು ಮುಂದಕ್ಕೆ ತೆರಳುವಾಗ, ಸಕಲ ತೀರ್ಥಗಳು ನಿನ್ನ ಪಾದಸ್ಪರ್ಶಕ್ಕೆ ಅರ್ಹತೆ ಪಡೆದ ಭೂಮಿಯಲ್ಲಿ ಹಿಂಬಾಲಿಸಿ ತೆರಳುವವು ಎಂದ ಮೇಲೆ ನಿನ್ನ ಮುಂದೆ ಯಾವ ತೀರ್ಥವು ತಾನೆ ಇದ್ದೀತು ?

ವಿ. : ೧. [1]ಶ್ರೀಹರಿಯ ಹಿಂದೆ ಸಕಲ ತೀರ್ಥಗಳು ಧಾವಿಸುವವು; ಅವನಂತೂ ತೀರ್ಥಪಾದ; ಎಲ್ಲ ತೀರ್ಥಗಳೂ ಅವನ ಹಿಂದೆ ಇರುವಾಗ, ಮುಂದೆ ತೆರಳುವ ಅವನಿಗೆ ಸ್ನಾನಕ್ಕೆಂದು ಯಾವ ತೀರ್ಥ ತಾನೆ ದೊರೆತೀತು ! ಎಂದು ಭಾವ.

೨. ಇದು ಪುರಂದರದಾಸರ ಈ ಕೆಳಗಿನ ಮಾತನ್ನು ಜ್ಞಾಪಿಸುವುದು :

ಎಲ್ಲಿ ಹರಿಕಥಾಪ್ರಸಂಗವೋ ।
ಅಲ್ಲಿ ಗಂಗಾ ಯಮುನಾ ಗೋದಾ ಸಿಂಧು ಸರಸ್ವತೀ ।
ಎಲ್ಲ ನದಿಗಳು ಬಂದು ಎಣೆಯಾಗಿ ನಿಲ್ಲುವವು ।
ವಲ್ಲಭ ಶ್ರೀಪುರಂದರವಿಠಲ ಮೆಚ್ಚುವನು ॥

೩. ಶ್ರೀಕೃಷ್ಣನು ಸ್ವತಃ 'ತೀರ್ಥಪಾದ[2]'ನಾಗಿರುವಾಗ ಅವನ ಹಿಂದೆ ಬೇರಾವ ತೀರ್ಥವಿರಲು ಸಾಧ್ಯ ಎಂದು ಭಾವ.

### ಭಕ್ತರು ಮಾಡುವ ಅಭಿಷೇಕವೇ ಸಕಲ ತೀರ್ಥಸ್ನಾನ

ಯರ್ಹೀಶ ತೇ ಸಕಲತೀರ್ಥನಿಷೇವಣೇಚ್ಛಾ
ತರ್ಹಿ ತ್ವದೀಯಮುನಯಃ ಕಿಲ ತತ್ರ ತತ್ರ ।
ತ್ವಾಂ ಸ್ನಾಪಯಂತಿ ಜಲಮಧ್ಯಗತಂ ವಿವೇಕೈಃ
ಕುರ್ವಂತಿ ತತ್ತವ ಕಿಮದ್ಯ ವಿಧೇಯಮಸ್ತಿ ॥ ೫೫ ॥

ನಿನಗೆ ಸಕಲ ತೀರ್ಥಗಳ ಸೇವನೆಯ ಅಪೇಕ್ಷೆ ಇದ್ದಲ್ಲಿ ನಿನ್ನ ಭಕ್ತರಾದ ಮುನಿಜನರು ಅಲ್ಲಲ್ಲಿ ನಿನ್ನನ್ನು ಜಲದ ಮಧ್ಯೆ ಇರಿಸಿ, ಧ್ಯಾನಪೂರ್ವಕವಾಗಿ ಅಭಿಷೇಕ ಮಾಡುವರು. ಆದ್ದರಿಂದ ನಿನಗೆ ಈಗ ಆ ಕರ್ತವ್ಯವು ಉಳಿದಿದೆಯೇನು?

ವಿ. : ೧. ಶ್ರೀಹರಿಗೆ ಭಕ್ತಜನರು ಪ್ರತಿನಿತ್ಯ ಕಲಶಗಳಲ್ಲಿ ಸಮಸ್ತತೀರ್ಥಗಳನ್ನು ಆವಾಹಿಸಿ ಪೂಜಿಸುವುದು ಒಂದು ಬಗೆಯಾದರೆ, ಸ್ನಾನಕಾಲದಲ್ಲಿ ಅಘಮರ್ಷಣ ಸೂಕ್ತವನ್ನು ಸ್ಮರಿಸುತ್ತಾ ಅಂತರ್ಯಾಮಿಯಾದ ಶ್ರೀಹರಿಗೆ ಅಭಿಷೇಕ ಸಲ್ಲಿಸುವುದು ಮತ್ತೊಂದು ಬಗೆ; ಹೀಗೆ ಎರಡು ಬಗೆಗಳಿಂದಲೂ ಭಕ್ತಜನರು ಶ್ರೀಕೃಷ್ಣನಿಗೆ ತೀರ್ಥಸ್ನಾನವನ್ನು ಸಮರ್ಪಿಸಿ ಪೂಜಿಸುತ್ತಿರುವಾಗ ಅವನಿಗೆ ಪ್ರತ್ಯೇಕ ತೀರ್ಥಯಾತ್ರೆಯ ಅಗತ್ಯವೆಲ್ಲಿದೆ ಎಂದರ್ಥ.

---

೧. ಸ್ಥಿತಪಾದೇ ಮಾನುಷಾಕಾರತ್ವಾತ್ ಪಾದಸ್ಯ ಶ್ರೀವಿಷ್ಣುಪಾದತ್ವಜ್ಞಾಪಕಧ್ವಜಾದ್ಯಸಾಧಾರಣಚಿಹ್ನಾನಾಂ ಸ್ಪಷ್ಟಮಿತರಾದೃಶ್ಯತಯಾ ತೀರ್ಥಬುದ್ಧ್ಯಭಾವೇನ ಲೋಕರಂಜನಾರ್ಥಂ ಯಾತ್ರಾಂ ನ ಕುರ್ಯಾದತಸ್ತಿಷ್ಠೇತಿ ಭಾವಃ ।–ವ್ಯಾ.

೨. ಪುಣ್ಯಶ್ಲೋಕಃ ತೀರ್ಥಪಾದಃ – ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರ

ವಿ. [೧]ಇದರಿಂದ ಪ್ರತಿನಿತ್ಯದ ಸ್ನಾನಕಾಲದಲ್ಲಿ ಅಘಮರ್ಷಣಸೂಕ್ತದಿಂದ ಹಾಗೂ ದೇವ-ಪೂಜಾಕಾಲದಲ್ಲಿ ಕಲಶೋದಕದಿಂದ ಶ್ರೀಹರಿಯನ್ನು ತಪ್ಪದೇ ಪೂಜಿಸುವುದು ಭಗವದ್ಭಕ್ತರ ಮುಖ್ಯಕರ್ತವ್ಯ ಎಂಬ ಪ್ರಮೇಯ ಇಲ್ಲಿ ಸೂಚಿತ[೨].

**ಶ್ರೀಕೃಷ್ಣನ ಗುಣಕೀರ್ತನಾದಿಗಳಲ್ಲಿಯೇ ಸಕಲ ತೀರ್ಥಗಳ ಸನ್ನಿಧಾನ**

**ಯತ್ರ ತ್ವದೀಯಗುಣಕೀರ್ತನನರ್ತನಾದಿ**
**ತತ್ರೈವ ತೀರ್ಥನಿಕರಾಃ [೩]ಕಿಲ ಸಂವಸಂತಿ ।**
**ಯತ್ರಾರ್ಪಯಂತಿ ಸುಜನಾಃ ಸುಕೃತಂ ಸಮಸ್ತಂ**
**ತಸ್ಯೇಶ ತೇ [೪]ಸಕಲಮಾಕಲಯಾಮಿ ಪೂರ್ಣಮ್ ॥ ೫೬ ॥**

ಈಶ! ಎಲ್ಲಿ ನಿನ್ನ ಗುಣಗಳ ಕೀರ್ತನ, ನರ್ತನ ಮೊದಲಾದವುಗಳು ನಡೆಯುವವೋ ಅಲ್ಲಿಯೇ ಸಕಲ ತೀರ್ಥಸಮೂಹಗಳು ನೆಲೆಸಿಬಿಡುವವು ಅಲ್ಲವೆ! ಸಕಲ ಸುಜನರು ನಿನ್ನಲ್ಲಿ ಸಕಲ ಪುಣ್ಯವನ್ನೂ ಸಮರ್ಪಿಸುವರು. ಅಂತಹ ನಿನಗೆ ಸಕಲವೂ ಸಹ ಸದಾ ಪೂರ್ಣವೇ ಆಗಿದೆ ಎಂದು ನಾನು ತಿಳಿಯುವೆ.

ವಿ. : ಶ್ರೀಹರಿಯ ಗುಣಕೀರ್ತನಾದಿಗಳು ನಡೆಯುವ ಸ್ಥಳಗಳಲ್ಲಿಯೇ ಸಕಲ ತೀರ್ಥ-ಕ್ಷೇತ್ರಗಳು ಕೂಡಲೇ ಬಂದು ನೆಲೆಸುವಾಗ ಇನ್ನು ಸಾಕ್ಷಾತ್ ಶ್ರೀಹರಿಯೇ ಬಂದು ನೆಲೆಸಿರುವಲ್ಲಿ ಬೇರಾವ ತೀರ್ಥಗಳ ಆವಶ್ಯಕತೆ ಇದೆ ಎಂದರ್ಥ.

**ಸಕಲತೀರ್ಥಗಳಿಗೂ ತೀರ್ಥತ್ವಪ್ರದನು ಶ್ರೀಕೃಷ್ಣ**

**ಗಂಗಾದಿತೀರ್ಥನಿಕರಾಃ [೫]ಕಿಲ [೬]ಯತ್ಪದಾಬ್ಜ-**
**ಸಂಗಾತ್ ಪುನಂತಿ ಭುವಿ ತಾನಪಿ ಪಾವಯಂತಿ ।**

---

೧. ಅಘಮರ್ಷಣಸ್ನಾನಾವಸರೇ 'ಋತಂ ಚ' ಇತ್ಯಾದಿಮಂತ್ರೈಃ ಜಲಾಂತಃ ಸನ್ನಿಧಾಪಯಂತಿ । ತತ್ತಸ್ಮಾದದ್ಯೇದಾನೀಂ ತವ ವಿಧೇಯಂ ಕರ್ತವ್ಯಂ ಕಿಮಸ್ತಿ ನ ಕಿಮಪೀತ್ಯರ್ಥಃ । -ವ್ಯಾ.

೨. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥
ಇವೇ ಮೊದಲಾದ ಕಲಶಪೂಜಾ ಮಂತ್ರಗಳಲ್ಲಿ ಸಕಲ ತೀರ್ಥಕ್ಷೇತ್ರಗಳ ಆವಾಹನೆಯು ನಡೆದಿರುವುದು ಎಂಬ ಭಾವದಿಂದ ಈ ಮಾತು ಬಂದಿದೆ.

೩.. ಕಿಲೇತ್ಯನೇನ "ಸರ್ವಾಣಿ ತೀರ್ಥಾನಿ ವಸಂತಿ ತತ್ರ ಯತ್ರಾಚ್ಯುತೋದಾರಕಥಾಪ್ರಸಂಗಃ" ಇತಿ ಪುರಾಣಪ್ರಸಿದ್ಧಿರ್ದ್ಯೋತ್ಯತ ಇತಿ । -ವ್ಯಾ.

೪. "ಕರೋತಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತ್ ತತ್"(ಭಾ.೧೧/೨/೩೬)ಇತಿ ವಚನಾತ್ । ಹೇ ಹರೇ ಈಶ ತೇ ತವ ಸಕಲಂ ಕೃತ್ಯಂ ಪೂರ್ಣಂ ಆಕಲಯಾಮಿ ಕೃತಕೃತ್ಯೋ ಭವಾನೀತ್ಯರ್ಥಃ । -ವ್ಯಾ.

೫. ಕಿಲೇತ್ಯನೇನ "ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಃಸ್ಥೇನ ಗದಾಭೃತಾ"ಇತಿ ವಚನಂ ಸ್ಮಾರಯಂತಿ ।

೬. ಯಾ ವೈ ಲಸಚ್ಛ್ರೀತುಲಸೀವಿಮಿಶ್ರಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ' (ಭಾ.೧/೧೯/೬)ಇತಿ ವಚನಾತ್ ।

ಅಂಗಾನುಷಂಗಕರಣಾದ್ಭವದಂತರಂಗಾಃ
ಕಿಂ ಗಾಹನೇನ ತವ ತೀರ್ಥಚಯೇಷು ತಸ್ಯ ॥ ೫೭ ॥

ಗಂಗಾದಿ ಸಕಲತೀರ್ಥಸಮೂಹಗಳು ಯಾವ ನಿನ್ನ ಪಾದಕಮಲದ ಸಂಗದಿಂದಾಗಿ ಇತರರನ್ನು ಭೂಮಿಯಲ್ಲಿ ಪಾವನಗೊಳಿಸುವವೋ, ಅಂತಹ ತೀರ್ಥಗಳನ್ನು ಸಹ ನಿನಗೆ ತಮ್ಮ ಶರೀರವನ್ನು ಒಪ್ಪಿಸುವಂತಹ ಅಂತರಂಗಭಕ್ತರು ಪಾವನಗೊಳಿಸುವರು; ಅಂತಹ ನಿನಗೆ [1] ತೀರ್ಥಸಮೂಹಗಳಲ್ಲಿ ಮಿಂದೇನಾಗಬೇಕಿದೆ! (ಗಾಹನ, ಅವಗಾಹನ - ಸ್ನಾನ).

ಯದ್ರೋಮಕೂಪಮಪಿ ಪೂರಯಿತುಂ ನ ಶೇಕು-
ರ್ಬ್ರಹ್ಮಾಂಡಖರ್ಪರಶತಾಯುತಕೋಟಯೋऽಪಿ।
ಗಂಗಾऽಪಿ ಯಚ್ಚರಣಸನ್ನಖಸೇಕಮಾತ್ರಂ
ತತ್ ಕ್ವಾಸ್ತಿ ಮಜ್ಜನವಿಧೌ ತವ ತೀರ್ಥಮುರ್ವ್ಯಾಮ್ ॥ ೫೮ ॥

ನೂರು, ಹತ್ತುಸಾವಿರ, ಕೋಟಿಗಟ್ಟಲೆ ಬ್ರಹ್ಮಾಂಡಖರ್ಪರಗಳು ಸಹ ನಿನ್ನ [2] ರೋಮಕೂಪ ಒಂದನ್ನು ಸಹ ತುಂಬಿಸಲು ಶಕ್ತವಾಗಿಲ್ಲ; ಗಂಗೆಯು ಸಹ ನಿನ್ನ ಪಾದದ ಉಗುರನ್ನು ತೊಳೆದ ತೀರ್ಥಮಾತ್ರವೇ ಆಗಿದೆ; ಅಂತಹ ನಿನಗೆ ಸ್ನಾನಕ್ಕೆ ಸಾಕಾಗುವಂತಹ ತೀರ್ಥವು ಭೂಮಿಯಲ್ಲೆಲ್ಲಿದೆ?

### ರುಗ್ಮಿಣಿಯ ಅಂಗಾಂಗಗಳಲ್ಲಿಯೇ ಸಕಲತೀರ್ಥಗಳು

ಭ್ರೂಕಾಶೀಂ ವರನಾಭಿಮಾನಸವತೀಂ ಹಾರಾವಲೀಜಾಹ್ನವೀಮ್
ನೀವೀದಿವ್ಯಸರಸ್ವತೀಂ ಪ್ರವಿಲಸದ್ರೋಮಾಲಿಸೂರ್ಯಾತ್ಮಜಾಮ್।
ಕಾಂಚೀಶೋಭಿಕಟಿಂ ಕುಚೋಚ್ಚಬದರೀಂ ನೇತ್ರಾಂತಯುಗ್ಮಪ್ರಭಾ-
ಕಾವೇರ್ಯಂತರಗಾಸ್ಯಚಂದ್ರಸರಸೀಂ ಯಾತ್ರಾऽಸ್ತು ಭೈಷ್ಮೀಂ ಪ್ರತಿ ॥ ೫೯ ॥

ರುಗ್ಮಿಣಿಯ ಹುಬ್ಬುಗಳೆ ಕಾಶಿ, ಶ್ರೇಷ್ಠ ನಾಭಿಯೆ ಮಾನಸಸರೋವರ, ಮುತ್ತಿನ ಮಾಲೆಗಳೆ ಗಂಗೆ, ನೀವಿಯೇ ದಿವ್ಯ ಸರಸ್ವತಿ, ಝುಗಝುಗಿಸುವ ರೋಮಾವಲಿಗಳೆ ಯಮುನೆ, ಶೋಭಿಸುವ ಕಟಿಯೆ ಕಂಚಿ, ಸ್ತನಗಳೆ ಉನ್ನತ ಬದರಿ, ಕಟಾಕ್ಷಗಳ ಹೊಳಪೇ ಕಾವೇರಿ, ಅವುಗಳ ಮಧ್ಯದಲ್ಲಿ ಚಂದ್ರಪುಷ್ಕರಿಣಿ; ಇಂತಹ ರುಗ್ಮಿಣಿಯತ್ತ ನೀನು ನಡೆ.

---

೧. ತಸ್ಯ ತೀರ್ಥಪವಿತ್ರೀಕರಣಸಮರ್ಥಪಾದಸ್ಯ ಸ್ವಸನ್ನಿಧಾನೋಪೇತಸ್ಪರ್ಶಮಾತ್ರೇಣಾಪಿ ತೀರ್ಥಪವಿತ್ರೀಕರಣಸಮರ್ಥಸ್ಯ ತವ ತೀರ್ಥಚಯೇಷು ಗಾಹನೇನ ಕಿಂ ನ ಕಿಮಪಿ ಪ್ರಯೋಜನಮಿತ್ಯರ್ಥಃ। -ವ್ಯಾ.

೨. ರೋಮಮಾತ್ರಮಪಿ ಮಜ್ಜಯಿತುಂ ತೀರ್ಥಂ ನ ಪಶ್ಯಾಮೀತಿ ಭಾವಃ। -ವ್ಯಾ.

ವಿ. : ೧. ರುಗ್ಮಿಣೀದೇವಿಯಲ್ಲಿ ಸಕಲ ತೀರ್ಥಕ್ಷೇತ್ರಗಳು ನೆಲೆಸಿರುವುದರಿಂದ ಅವುಗಳತ್ತ ಸಾಗದೆ, ರುಗ್ಮಿಣಿಯ ಬಳಿಗೆ ತೆರಳುವುದು ಅತ್ಯಂತ ಸೂಕ್ತ ಎಂಬುದು ಇಲ್ಲಿಯ ಭಾವ.

೨. [೧]ಸರ್ವೋತ್ತಮನಾದ ಶ್ರೀಕೃಷ್ಣನಲ್ಲಿ ಹೇಗೋ ಹಾಗೆ ಮಹಾಲಕ್ಷ್ಮಿಯಲ್ಲೂ ಸಕಲ ತೀರ್ಥಕ್ಷೇತ್ರಗಳು ಸದಾ ನೆಲೆಸಿವೆ ಎಂಬುದು ಇಲ್ಲಿಯ ಮುಖ್ಯಭಾವ.

### ರುಗ್ಮಿಣಿಯ ಪಾಣಿಗ್ರಹಣವೇ ನಿಜವಾದ ಕಾಶೀಯಾತ್ರೆ

ಕ್ಷೇತ್ರೇ ತ್ವಮಸ್ಮಿನ್ ಪರಿಗೃಹ್ಯ ಬೈಷ್ಮ್ಯಾಃ
ಪಾಣಿಂ ಜಗತ್ಯಪ್ರತಿಮಂ ತದೇತತ್ ।
ತೀರ್ಥಂ ವಿಧೇಹೀಶ ನ ಕೃಷ್ಣ ಯಾತ್ರಾಂ
ವ್ಯಾಪ್ತಸ್ಯ ತೇ ಸಂಪ್ರತಿ ನಂದಯಾಮಃ ॥ ೬೦ ॥

ನೀನು ಈ ಕ್ಷೇತ್ರದಲ್ಲಿ ರುಗ್ಮಿಣಿಯ ಕೈಹಿಡಿಯುವ ಮೂಲಕ ಇದನ್ನು ಜಗತ್ತಿನಲ್ಲಿ ಸಾಟಿಯಿಲ್ಲದ ತೀರ್ಥವನ್ನಾಗಿಸು; ಆದರೆ ಹೇ ಕೃಷ್ಣ! ಎಲ್ಲೆಡೆ ನೆಲೆಸಿರುವ ನೀನು ಈ ಯಾತ್ರೆ ಕೈಗೊಳ್ಳುವುದನ್ನು ಮಾತ್ರ ನಾವು ಮೆಚ್ಚಲಾರೆವು.

ವಿ. : ೧. [೩]ಸರ್ವತ್ರ ವ್ಯಾಪ್ತನಾದ ಶ್ರೀಹರಿಗೆ ಯಾತ್ರೆಗಾಗಿ ಮತ್ತೊಂದೆಡೆ ಹೋಗುವುದು ಎಂದರೆ ಅಸಂಭಾವಿತ ಎಂದಾಗುವುದು ಎಂದು ಭಾವ.

೨. [೩]ಶ್ರೀಕೃಷ್ಣ ರುಗ್ಮಿಣಿಯ ಕೈಹಿಡಿದ ಕ್ಷೇತ್ರ ಎಂಬ ಕಾರಣದಿಂದ ಈ ಕ್ಷೇತ್ರ ಲೋಕದಲ್ಲಿ ಅಪ್ರತಿಮವೆನ್ನಿಸುವುದು ಎಂದು ಭಾವ.

### ಗ್ರಹಶಾಂತಿಕರ್ಮ

ನಿತ್ಯಂ ನಿಜೋರುಸ್ಥಿತಭೀಷ್ಮಪುತ್ರೀ-
ನೃತ್ಯದ್ಘನೋತ್ತುಂಗಕುಚಗ್ರಹಸ್ಯ ।
ಪ್ರತ್ಯೂಹಶಾಂತೀರಿವ ಕಾಂಕ್ಷಮಾಣ-
ಶ್ಚಕ್ರೇ ಸ ಶೌರಿರ್ಗ್ರಹಶಾಂತಿಕರ್ಮ[೪] ॥ ೬೧ ॥

---

೧. ಏಕತ್ರೈವ ಸಕಲತೀರ್ಥನಿಷೇವಣಸ್ಯ ಲಾಭಾದಿತಿ ಭಾವಃ। -ವ್ಯಾ.

೨. ಅತ್ರೈವ ರುಗ್ಮಿಣೀವಿವಾಹೋತ್ಸವೇ ಸತ್ಯಸ್ತ್ರೈವ ಸಕಲತೀರ್ಥೋತ್ತಮತ್ವಪ್ರಾಪ್ತೇರಿತಿ ಭಾವಃ। -ವ್ಯಾ.

೩.. ಕಥಂಚಿತ್ಸ್ವಶಕ್ತ್ಯಾ ಚಲನಸಂಭವೇಽಪಿ ಯತ್ರ ಜಿಗಮಿಷಾ ತತ್ರಾಪಿ ವ್ಯಾಪ್ತತಯಾ ತವಾವಸ್ಥಿತೇಃ ಕಿಂ ಯಾತ್ರಯೇತಿ ಭಾವಃ। -ವ್ಯಾ.

೪. ಗ್ರಹಶಾಂತಿಕರ್ಮಣಿ ಕೃತೇ ಕುಚಗ್ರಹಣವಿಘ್ನಶಾಂತಿರ್ಭವಿಷ್ಯತೀತ್ಯಭಿಪ್ರಾಯೇಣ ಗೃಹಶಾಂತಿಕರ್ಮ ಕೃತಮಿತ್ಯುಪಹಾಸಃ। ಅನೇನ ಸಕಲದೇವತಾಪೂಜ್ಯಸ್ಯ ಕೃಷ್ಣಸ್ಯ ಗ್ರಹಪೂಜಾಕರಣಮೌಪಚಾರಿಕಮಿತಿ ದ್ಯೋತ್ಯತೇ। -ವ್ಯಾ.

ಸದಾ ತನ್ನ ತೊಡೆಯಲ್ಲಿ ಮಂಡಿಸಿದ ರುಗ್ಮಿಣಿಯ ಘನವಾದ ಉತ್ತುಂಗ ಸ್ತನಗಳ ಗ್ರಹಣಕ್ಕೆ ಒದಗುವ ವಿಘ್ನಗಳ ಶಾಂತಿಕ್ರಿಯೆಯನ್ನು ಬಯಸಿಯೋ ಎಂಬಂತೆ ಶ್ರೀಕೃಷ್ಣನು ಗ್ರಹಶಾಂತಿ-ಕರ್ಮವನ್ನು ಮಾಡಿದನು.

### ಸರ್ಗೋಪಸಂಹಾರ

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸರ್ಗಃ ಪಂಚದಶೋ ಮುದಾಮಯಮಭೂತ್ ಸ್ವರ್ಗೀಶ್ವರಾಣಾಂ ಕುಲೇ॥೬೨॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಪಂಚದಶಃ ಸರ್ಗಃ ॥೧೫॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶ-ವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹದಿನೈದನೆಯ ಸರ್ಗವು ಮುಕ್ತಾಯವಾಯಿತು.

# ೧೬. ಷೋಡಶಃ ಸರ್ಗಃ

(ರುಗ್ಮಿಣೀಸ್ವಯಂವರದ ವರ್ಣನೆ - ೧-೩೭; ಮಾಲಾರ್ಪಣೆ - ೩೮-೪೪, ವಿವಾಹಸಂಭ್ರಮ - ೪೫-೪೮; ದ್ವಾರಕಾಪ್ರವೇಶ - ೫೦; ಸಮುದ್ರವರ್ಣನೆ - ೫೧-೬೧; ಸರ್ಗೋಪಸಂಹಾರ - ೬೨)

ಸ್ವಯಂವರ ಪ್ರಸಂಗದಲ್ಲಿ ರುಗ್ಮಿಣಿಗೆ ನುಡಿದ ಸಖಿ

ಸ್ವಯಂವರಸಮುದ್ಯೋಗೇ ಸ್ವಯಂಭುಪ್ರಮುಖಾನ್ ಸುರಾನ್ ।
ಸಮಾಗತಾನ್ ಸಮೀಕ್ಷ್ಯೇತ್ಥಂ ಬಭಾಷೇ [೧]ರುಗ್ಮಿಣೀಂ ಸಖೀ ॥ ೧ ॥

ಸ್ವಯಂವರದಂತಹ ಮಹತ್ಕಾರ್ಯಕ್ಕೆ ಆಗಮಿಸಿದ್ದ ಬ್ರಹ್ಮ ಮೊದಲಾದಂತಹ ದೇವತೆಗಳನ್ನು ನೋಡಿ, ರುಗ್ಮಿಣಿಯನ್ನು ಕುರಿತು ಸಖಿಯು ಹೀಗೆಂದಳು.

ವಿ. : ೧. ಸ್ವಯಂವರ ಪ್ರಸಂಗದ ನೆಪದಲ್ಲಿ ಬ್ರಹ್ಮಾದಿ ದೇವತೆಗಳ ವಿಶಿಷ್ಟರೀತಿಯ ಪರಿಚಯ, ದೇವತಾತಾರತಮ್ಯ ಮೊದಲಾದವುಗಳ ಅಪೂರ್ವ ನಿರೂಪಣೆ ಇಲ್ಲಿಯ ಶ್ಲೋಕಗಳಲ್ಲಿ ಬಂದಿದೆ.

೨. ಇಲ್ಲಿ ಪ್ರಸ್ತುತಳಾದ ಸಖಿಯು ಬೇರಾರು ಆಗಿರದೇ ರುಗ್ಮಿಣಿಯ ವಿವೇಕವೇ ಆಗಿತ್ತು ಎಂಬ ವಿವರ ಮುಂದೆ ಬಂದಿದೆ: ವಿವೇಕಸಖ್ಯೇತಿ ವಿಬೋಧಿತಾ ಸಾ। (೧೬/೩೩)

ಪದ್ಮೋದ್ಭವರಾಗಿ ಬ್ರಹ್ಮದೇವರು

ಕಲ್ಪಾದಿವಾರ್ಷು ಕಮನೀಯಫಣೀಂದ್ರತಲ್ಪೇ
ಲಕ್ಷ್ಮ್ಯಾ ಸಹಾದಿಪುರುಷಸ್ಯ ಕೃತಾಲಯಸ್ಯ ।
ಮುಕ್ತೌಘಸೇವಿತಪದಃ ಕಿಲ ನಾಭಿದೇಶಾತ್
ಪದ್ಮಂ ಪುರಾಽಜನಿ ತತಃ ಸಖಿ ಪದ್ಮಯೋನಿಃ ॥ ೨ ॥

ಬ್ರಹ್ಮಕಲ್ಪದ ಆದಿಭಾಗದ ಜಲದಲ್ಲಿ ಮನೋಹರವಾದ ನಾಗರಾಜನಾದ ಶೇಷನ ಹಾಸಿಗೆಯ ಮೇಲೆ ಮಹಾಲಕ್ಷ್ಮಿಯೊಂದಿಗೆ ನೆಲೆಸಿದ, ಮುಕ್ತರ ಸಮೂಹವು ಆರಾಧಿಸುವ ಪಾದ-ಕಮಲನಾದ ಶ್ರೀಹರಿಯ ನಾಭಿಪ್ರದೇಶದಿಂದ ಪದ್ಮವೊಂದು ಹಿಂದೆ ಪ್ರಕಟವಾಯಿತು; ಅದರಿಂದ ಜನಿಸಿದ್ದರಿಂದ ಇವರು 'ಎಲೈ ಗೆಳತಿ ! ಪದ್ಮಯೋನಿ ಎನ್ನಿಸಿರುವರು'.

೧. ರುಗ್ಮಿಣೀ ಸ್ವವಿವಾಹದರ್ಶನಾರ್ಥಮಾಗತಾನ್ ವೀಕ್ಷ್ಯ ಸ್ವಬುದ್ಧ್ಯಾ ಇತ್ಥಂ ವಿಚಾರಿತಮತೀತ್ಯಭಿಪ್ರಾಯಃ। -ವ್ಯಾ.

ವಿ. : [೧]ಮೊದಲಿಗೆ ಬ್ರಹ್ಮದೇವರ ವರ್ಣನೆಯನ್ನು ಮಾಡುತ್ತಿರುವರು. ಬ್ರಹ್ಮದೇವರು ಶ್ರೀಹರಿಯ ನಾಭಿಕಮಲದಿಂದ ಜನಿಸಿದ ಹಿರಿಮೆ ಉಳ್ಳವರು. ಅದಕ್ಕಾಗಿಯೇ ಅವರಿಗೆ ಪದ್ಮ-ಯೋನಿ ಎಂಬ ವಿಶೇಷ ಹೆಸರು; ಕಲ್ಪಾದಿವಾರ್ಘ - ಪ್ರಳಯೋದಕ; ಪದ್ಮಯೋನಿ - ಬ್ರಹ್ಮ.

### ಆತ್ಮಯೋನಿ, ವೇದಗರ್ಭ ಎನ್ನಿಸಿದ ಬ್ರಹ್ಮದೇವರು

**ಆತ್ಮಾಭಿಧಃ ಸ್ವಯಮಿತಿ ಪ್ರಥಿತೋ ಹ್ಯವಾಚ್ಯ-**
**ಸ್ತಾತೋಽಸ್ಯ ಯನ್ಮುರರಿಪುಸ್ತದಮುಂ ಮುನೀಂದ್ರಾಃ ।**
**ಖ್ಯಾತ್ವಾ ಸ್ವಯಂಭುವಮಜಂ ವಿದುರಾತ್ಮಯೋನಿಂ**
**ಚೇತಃಸ್ಥಿತಶ್ರುತಿತತಿಂ ಸಖಿ ವೇದಗರ್ಭಮ್ ॥ ೩ ॥**

ಸಖಿ! ಅ ಎಂಬ ಶಬ್ದದಿಂದ ವಾಚ್ಯನಾದ ಶ್ರೀಹರಿಗೆ ಸ್ವಯಂ, ಆತ್ಮಾ ಎಂಬ ಹೆಸರುಗಳು ಪ್ರಸಿದ್ಧವಾಗಿದೆ. ಮುರಾರಿಯಾದ ಅವನು ಈ ಬ್ರಹ್ಮದೇವರಿಗೆ ತಂದೆಯಾದವನು. ಆದ್ದರಿಂದ ಮುನಿಶ್ರೇಷ್ಠರು ಬ್ರಹ್ಮದೇವರನ್ನು ಸ್ವಯಂಭೂ ಎಂದೂ, ಅಜ ಎಂದೂ, ಆತ್ಮಯೋನಿ ಎಂದೂ ಕರೆಯುವರು; ಮನಸ್ಸಿನಲ್ಲಿ ಸಮಸ್ತವೇದವೃಂದವನ್ನು ಹೊಂದಿರುವುದರಿಂದ ಇವರಿಗೆ ವೇದಗರ್ಭ ಎಂದೂ ತಿಳಿಯುವುದು.

ವಿ. : ೧. [೨]ಬ್ರಹ್ಮದೇವರಿಗೆ ಅಜ, ಆತ್ಮಯೋನಿ, ಸ್ವಯಂಭೂ, ವೇದಗರ್ಭ ಮೊದಲಾದ-ವುಗಳು ಇತರ ವಿಶೇಷ ನಾಮಗಳು. ಅದಕ್ಕೆ ಕಾರಣವನ್ನು ಇಲ್ಲಿ ತಿಳಿಸಿರುವರು:

ಬ್ರಹ್ಮಾಽಽತ್ಮಭೂಃ ಸುರಜ್ಯೇಷ್ಠಃ ಸ್ವಯಂಭೂಶ್ಚತುರಾನನಃ -(ಅಮರಕೋಶ)

೨. ಶ್ರೀಹರಿಗೆ ಸ್ವಯಂ ಎಂದು ಹೆಸರು; ಅವರ ಪುತ್ರನಾದ್ದರಿಂದ ಅವರಿಗೆ ಸ್ವಯಂಭೂ ಎನ್ನುವರು. ಅದರಂತೆ ಶ್ರೀಹರಿಗೆ ಆತ್ಮಾ ಎಂದು ಹೆಸರು; ಅದಕ್ಕಾಗಿ ಅವರ ಪುತ್ರನಾದ ಅವರಿಗೆ ಆತ್ಮಯೋನಿ ಎಂದು ಹೆಸರು. ಬ್ರಹ್ಮದೇವರ ಮನಸ್ಸಿನಲ್ಲಿ ಸದಾ ಸಕಲವೇದಗಳು ಸ್ಫುರಿ-ಸುವುದರಿಂದ ಅವರಿಗೆ ವೇದಗರ್ಭ ಎಂಬ ಹೆಸರು ಸಾರ್ಥಕ.

### ಬ್ರಹ್ಮ ಮಾಡಿದ ವಿಶಿಷ್ಟ ತಪಸ್ಸು

**ಮಹೋರ್ಮಿಸಂಘಾತಶತಾತತಾಂಭ-**
**ಸ್ಯದೃಷ್ಟಸದ್ವಿಷ್ಟರಪದ್ಮಮೂಲಃ ।**

---

೧. ಅನೇನ ನಾರಾಯಣೋತ್ಪನ್ನತ್ವೇನ ತತ್ಸದೃಶತ್ವಾಭಾವಾನಂಗೀಕಾರೇಽಸ್ವರಸಬೀಜಂ ಸೂಚಿತಮ್ । -ವ್ಯಾ.

೨. ಅನ್ಯಥಾ 'ಪದ್ಮಯೋನಿರ್ನಾಭಿಜನ್ಮಾ ಅಂಡಜಃ' ಇತ್ಯಾದಿಜನ್ಮಪ್ರತಿಪಾದಕನಿರವಕಾಶಶಬ್ದವಿರೋಧಾದಿತಿ ಭಾವಃ । -ವ್ಯಾ.

ವಿಧಿರ್ವಿಧಿಜ್ಞೋ ವಿಜಿತಾಕ್ಷವೃತ್ತಿ-
ಸ್ತಪಃ[೧] ಸ ತೇಪೇ ಪಿತರಂ ದಿದೃಕ್ಷುಃ ॥ ೪ ॥

ಸಹಸ್ರಾರು ಮಹೋರ್ಮಿಗಳ ಸಾಲುಗಳಿಂದ ತುಂಬಿದ ಪ್ರಳಯಜಲದಲ್ಲಿ ತಾವು ಜನಿಸಿದ ಪದ್ಮದ ಬುಡವನ್ನು ಕಾಣಲಾಗದೆ, ಬ್ರಹ್ಮದೇವರು ಸಕಲ ಇಂದ್ರಿಯಗಳನ್ನು ನಿಗ್ರಹಿಸಿದವರಾಗಿ ತಮ್ಮ ತಂದೆಯಾದ ಶ್ರೀಹರಿಯನ್ನು ಕಾಣಬಯಸಿದವರಾಗಿ ತಪಸ್ಸನ್ನು ಆಚರಿಸಿದರು.

ವಿ. : ೧. ಸೃಷ್ಟಿಯ ಪ್ರಾರಂಭದಲ್ಲಿ ಶ್ರೀಹರಿಯ ನಾಭಿಕಮಲದಲ್ಲಿ ಜನಿಸಿದ ಶ್ರೀಬ್ರಹ್ಮದೇವರು ತಾವು ಕುಳಿತಿದ್ದ ಕಮಲದ ಬುಡವನ್ನು ಕಾಣಲಾಗದೆ, ಅದರ ದರ್ಶನಕ್ಕಾಗಿ, ತಮ್ಮ ತಂದೆಯಾದ ಶ್ರೀಹರಿಯನ್ನು ಕಾಣಬಯಸಿ, ವಿಶೇಷವಾದ ತಪಸ್ಸನ್ನು ಆಚರಿಸಿದರು ಎಂಬ [೨]ಶ್ರೀಮದ್ಭಾಗವತ ಪುರಾಣದ ವಿವರವನ್ನು ಆಧರಿಸಿದ ವಿಷಯ ಇದಾಗಿದೆ ; ವಿಷ್ಟರ – ಪೀಠ.

೨. ಸುತ್ತಲೂ ತನ್ನ ತಂದೆಯಾದ ಶ್ರೀಹರಿಯನ್ನು ಕಾಣಬಯಸಿದ ಬ್ರಹ್ಮದೇವರಿಗೆ ''ತಪ ತಪ'' ಎಂಬ ಮಾತು ಕೇಳಿಸಿತು ಎಂದೂ ಅದರಿಂದ ಬ್ರಹ್ಮದೇವರು ಹತ್ತು ಸಾವಿರ ವರ್ಷಗಳ

---

೧. ದಿವ್ಯಂ ಸಹಸ್ರಾಬ್ದಮಮೋಘದರ್ಶನೋ ಜಿತಾನಿಲಾತ್ಮಾ ವಿಜಿತೋಭಯೇಂದ್ರಿಯಃ ।
ಅತಪ್ಯತ ಸ್ಮಾಖಿಲಲೋಕತಾಪನಂ ತಪಸ್ತಪೀಯಾಂಸ್ತಪತಾಂ ಸಮಾಹಿತಃ ॥ -ಭಾಗ. (೨/೯/೮)

೨. ಬ್ರಹ್ಮದೇವರು ಸಂದರ್ಶಿಸಿದ ವೈಕುಂಠದ ವರ್ಣನೆ ಶ್ರೀಮದ್ಭಾಗವತದಲ್ಲಿ ಈ ತೆರನಾಗಿದೆ:
ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ ॥
ಶ್ಯಾಮಾವದಾತಾಃ ಶತಪತ್ರಲೋಚನಾಃ ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।
ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥
ಪ್ರವಾಳವೈಢೂರ್ಯಮೃಣಾಲವರ್ಚಸಾಂ ಪರಿಸ್ಫುರತ್ಕುಂಡಲಮೌಳಿಮಾಲಿನಾಮ್ ।
ವಿದ್ಯೋತಮಾನಪ್ರಮದೋತ್ತಮಾಭಿಃ ಸವಿದ್ಯುದಭ್ರಾವಳಿಭಿರ್ಯಥಾ ನಭಃ ॥
ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ ಕರೋತಿ ಮಾನಂ ಬಹುಧಾ ವಿಭೂತಿಭಿಃ ।
ಪ್ರೇಂಖಶ್ರಿತಾ ಯಾ ಕುಸುಮಾಕರಾನುಗೈರ್ವಿಗೀಯಮಾನಾ ಪ್ರಿಯಕರ್ಮ ಗಾಯತೀ ॥
ದದರ್ಶ ತತ್ರಾಖಿಲಸಾತ್ವತಾಂ ಪತಿಂ ಶ್ರಿಯಃಪತಿಂ ಯಜ್ಞಪತಿಂ ಜಗತ್ಪತಿಮ್ ।
ಸುನಂದನಂದಪ್ರಬಲಾರ್ಹಣಾದಿಭಿಃ ಸ್ವಪಾರ್ಷದಮುಖ್ಯೈಃ ಪರಿಸೇವಿತಂ ವಿಭುಮ್ ॥
ಭೃತ್ಯಪ್ರಸಾದಾಭಿಮುಖಂ ದೃಗಾಸವೈಃ ಪ್ರಸನ್ನಹಾಸಾರುಣಲೋಚನಾನನಮ್ ।
ಕಿರೀಟಿನಂ ಕುಂಡಲಿನಂ ಚತುರ್ಭುಜಂ ಪೀತಾಂಶುಕಂ ವಕ್ಷಸಿ ಲಕ್ಷಿತಂ ಶ್ರಿಯಾ ॥
ಅಧ್ಯರ್ಹಣೀಯಾಸನಮಾಸ್ಥಿತಂ ಪರಂ ವೃತಂ ಚತುಷ್ಷೋಡಶಪಂಚಶಕ್ತಿಭಿಃ ।
ಯುಕ್ತಂ ಭಗೈಃ ಸ್ವೈರಿತರತ್ರ ಚಾಧ್ರುವೈಃ ಸ್ವ ಏವ ಧಾಮನ್ ರಮಮಾಣಮೀಶ್ವರಮ್ ॥
ತದ್ದರ್ಶನಾಹ್ಲಾದಪರಿಪ್ಲುತಾಂತರೋ ಹೃಷ್ಯತ್ತನುಃ ಪ್ರೇಮಭರಾಶ್ರುಲೋಚನಃ ।
ನನಾಮ ಪಾದಾಂಬುಜಮಸ್ಯ ವಿಶ್ವಸೃಗ್ ಯತ್ ಪಾರಮಹಂಸ್ಯೇನ ಪಥಾಽಧಿಗಮ್ಯತೇ ॥
ತಂ ಪ್ರೀಯಮಾಣಂ ಸಮುಪಸ್ಥಿತಂ ಕವಿಂ ಪ್ರಜಾವಿಸರ್ಗೇ ನಿಜಶಾಸನಾರ್ಹಣಮ್ ।
ಬಭಾಷ ಈಷತ್ಸ್ಮಿತಶೋಚಿಷಾ ಗಿರಾ ಪ್ರಿಯಃ ಪ್ರಿಯಂ ಪ್ರೀತಮನಾಃ ಕರೇ ಸ್ಪೃಶನ್ ॥
-ಭಾಗ.(೨/೯/೧೦-೧೮)

ಕಾಲ ತಪಸ್ಸನ್ನಾಚರಿಸಿ, ಶ್ರೀಹರಿಯ ವಿಶೇಷ ದರ್ಶನವನ್ನು ಪಡೆದು ಧನ್ಯರಾದರೆಂದು ಸಹ ಶ್ರೀಮದ್ಭಾಗವತದಲ್ಲಿದೆ.

### ಬ್ರಹ್ಮದೇವರಿಗೆ ಪರಬ್ರಹ್ಮದರ್ಶನ

ಅಥಾಂಬುಕಲ್ಲೋಲವಿಲೋಲಡೋಲಾಂ-
ತರಸ್ಥನಾಗಾಧಿಪಭೋಗಶಯ್ಯಾಮ್ ।
ಫಣಾಸಹಸ್ರಾಮಲರತ್ನರಶ್ಮಿ-
ತೃಣೀಕೃತಾರ್ಕೋಡುಪಲಕ್ಷಲಕ್ಷ್ಮೀಮ್ ॥ ೫ ॥

ಆ ಬಳಿಕ ಬ್ರಹ್ಮದೇವರು ಪ್ರಳಯೋದಕದಲ್ಲಿನ ಮಹಾತರಂಗಗಳಲ್ಲಿ ತೂಗುವ ಉಯ್ಯಾಲೆಯ ಮಧ್ಯದಲ್ಲಿ ನೆಲೆಸಿದ್ದ ಶೇಷನ ಮೇಲೆ ಒರಗಿದ್ದ, ಸಾವಿರ ಹೆಡೆಗಳ ಮೇಲಿನ ನಿರ್ಮಲವಾದ ರತ್ನಗಳ ಕಿರಣಗಳನ್ನು ತೃಣದಂತಾಗಿಸುವ ಲಕ್ಷಗಟ್ಟಲೆ ಸೂರ್ಯಚಂದ್ರರಂತಹ ಕಾಂತಿಯ ಶ್ರೀಹರಿಯನ್ನು ಕಂಡರು.

ವಿ. : ಬ್ರಹ್ಮದೇವರು ದರ್ಶನಮಾಡಿದ ಶ್ರೀಹರಿಯ ವಿಶೇಷರೂಪದ ವಿವರ ಇಲ್ಲಿದೆ.

### ಲಕ್ಷ್ಮೀನಾರಾಯಣರ ಸಂದರ್ಶನ

ಅಪಶ್ಯದಸ್ಯಾಂ ಸಹ ಸಿಂಧುಪುತ್ರ್ಯಾ
ಶಯಾನಮಂಭೋಜವಿಶಾಲನೇತ್ರಮ್ ।
ಮನೋಜ್ಞದೋರ್ದಂಡಸಹಸ್ರಭಾಸಂ
ಪ್ರವಾಲಮೃದ್ವಂಘ್ರ್ಯರುಣೀಕೃತಾಶಮ್ ॥ ೬ ॥

ಆ ಶೇಷನ ಒಡಲಿನಲ್ಲಿ ಸಾಗರಜಾತೆಯಾದ ಮಹಾಲಕ್ಷ್ಮಿಯೊಂದಿಗೆ ಪವಡಿಸಿದ್ದ ಪುಂಡರೀಕ-ದಂತಹ ವಿಶಾಲನೇತ್ರಗಳ, ಮನೋಹರವಾದ ಸಾವಿರಾರು ತೋಳುಗಳಿಂದ ಕಂಗೊಳಿಸುವ ಹವಳದಂತಹ ಮೃದುವಾದ ಪಾದಗಳಿಂದ ದಿಕ್ಕುಗಳನ್ನು ಕೆಂಪಾಗಿಸಿದ ಶ್ರೀಹರಿಯನ್ನು ಕಂಡರು.

### ಇಂದ್ರನೀಲಮಣಿಯ ಪರ್ವತದಂತಹ ಶ್ರೀಹರಿ

ಸುವರ್ಣವರ್ಣಾಂಬರಶೋಭಿಮಧ್ಯ-
ಮಗಣ್ಯಲಾವಣ್ಯಸಮುದ್ರಹೃದ್ಯಮ್[೧] ।

---

೧. 'ಮುಕ್ತೌಘಸೇವಿತಪದಃ' (ರು.ವಿ.೧೬/೨) ಇತ್ಯುಕ್ತತ್ವಾನ್ಮುಕ್ತೋಽಯಂ ಶೇಷ ಇತಿ ದ್ರಷ್ಟವ್ಯಮ್ । -ವ್ಯಾ.

ವಿಶಾಲನೀಲಾಚಲಕಲ್ಪಮಲ್ಪ-
ಸ್ಮಿತಾನನಾಧಃಕೃತಚಂದ್ರದರ್ಪಮ್ ॥ ೭ ॥

ಬಂಗಾರ ಬಣ್ಣದ ವಸ್ತ್ರದಿಂದ ಶೋಭಿಸುವ ನಡುವಿನ, ಅಗಣಿತವಾದ ಲಾವಣ್ಯ ಸಾಗರದಂತೆ ಮನೋಹರನಾದ, ವಿಶಾಲವಾದ ನೀಲಪರ್ವತದಂತಿದ್ದ , ಮಂದಹಾಸದಿಂದ ಚಂದ್ರನ ಹಮ್ಮನ್ನು ಮಣಿಸುತ್ತಿದ್ದ ಶ್ರೀಹರಿಯನ್ನು ಕಂಡರು.

ವಿ. : ಸುವರ್ಣವರ್ಣಾಂಬರ – ಪೀತಾಂಬರ.

ಅನಂತಸೂರ್ಯಪ್ರಕಾಶದ ಶ್ರೀಹರಿ

ಪರಿಸ್ಫುರತ್ಕುಂಡಲಹಾರಕಾಂಚೀ-
ಕಿರೀಟಮುದ್ರಾಂಗದನೂಪುರಾದ್ಯೈಃ ।
ವಿರಾಜಿತಂ ತಿಗ್ಮಮರೀಚಿರೋಚಿಃ-
ಶರೀರಸಂಭಾಸಿತಸರ್ವದೇಶಮ್ ॥ ೮ ॥

ಥಳಥಳಿಸುವ ಕುಂಡಲಗಳು, ಹಾರಗಳಿಂದ ಕೂಡಿದ ಒಡ್ಯಾಣ, ಕಿರೀಟ, ಮುದ್ರೆಯುಂಗುರ, ಅಂಗದ, ನೂಪುರ, ಮೊದಲಾದವುಗಳಿಂದ ಕಂಗೊಳಿಸುವ, ತೀಕ್ಷ್ಣ ಕಿರಣನಾದ ಸೂರ್ಯ-ನಂತಹ ಕಾಂತಿಯ, ತನ್ನ ದೇಹದಿಂದ ಸಕಲ ಪ್ರದೇಶಗಳನ್ನೂ ಬೆಳಗಿಸುವ, ಶ್ರೀಹರಿಯನ್ನು ಕಂಡರು ; (ತಿಗ್ಮಮರೀಚಿ – ಉಷ್ಣಕಿರಣ, ಸೂರ್ಯ).

ಬ್ರಹ್ಮೇಂದ್ರಾದಿ ಪರಿವಾರದ ಶ್ರೀಹರಿ

ವಿಶಾಲವಕ್ಷಃಸ್ಥಲಶೋಭಿರತ್ನಂ
ವಿಮುಕ್ತಶಕ್ರಾರ್ಕವಿರಿಂಚಮುಖ್ಯೈಃ ।
ವಿಚಿತ್ರಭೂಷಾವಲಿಭೂಷಿತಾಂಗೈ-
ರ್ವಿವೃದ್ಧಭಕ್ತ್ಯಾऽವನತೈಃ ಪರೀತಮ್ ॥ ೯ ॥

ವಿಶಾಲವಾದ ವಕ್ಷಃಸ್ಥಳದಲ್ಲಿ ಶೋಭಿಸುವ ಕೌಸ್ತುಭಮಣಿ, ಬಗೆಬಗೆಯ ಆಭರಣಗಳ ಸಾಲುಗಳಿಂದ ಶೋಭಿಸುವ ಅವಯವಗಳ, ಉಕ್ಕಿದ ಭಕ್ತಿಯಿಂದಾಗಿ ಸುತ್ತಲೂ ಬಾಗಿ ನೆರೆದ ಮುಕ್ತರಾದ ಇಂದ್ರ, ಸೂರ್ಯ, ಬ್ರಹ್ಮ ಮೊದಲಾದ ದೇವತಾಪರಿವಾರದಿಂದ ಕೂಡಿದ ಶ್ರೀಹರಿಯನ್ನು ಕಂಡರು.

### ಚಕ್ರವರ್ತಿಯಂತಹ ನಾರಾಯಣ

ಉನ್ನಾಲಾಬ್ಜವರಾತಪತ್ರಮಹಿರಾಡುನ್ನಮ್ರಸಿಂಹಾಸನಂ
ಸನ್ನದ್ಧೋರ್ಜಿತಮುಕ್ತಭೃತ್ಯನಿಕರಂ ಮಾನ್ಯೋರ್ಮಿಸಚ್ಚಾಮರಮ್ ।
ತನ್ನಾದಾಭಿಧದುಂದುಭಿಂ [೧]ಶುಭಯಶಶ್ಶಿಷ್ಟೋಕ್ತಿಭಿರ್ಬಂದಿವತ್
ತನ್ನಾರಾಯಣಚಕ್ರವರ್ತಿನಮಸಾವುನ್ಮೀಲಿತಾಕ್ಷಂ ವ್ಯಧಾತ್ ॥ ೧೦ ॥

ಹೊರಹೊಮ್ಮಿದ ನಾಳದ ಕಮಲರೂಪದ ಶ್ರೇಷ್ಠ ಶ್ವೇತಚ್ಛತ್ರ, ನಾಗರಾಜನಾದ ಶೇಷನೆಂಬ ಬಾಗಿದ ಸಿಂಹಾಸನ, ಸನ್ನದ್ಧರಾಗಿದ್ದ ಮಹಾಶ್ರೇಷ್ಠರಾದ ಮುಕ್ತರೆಂಬ ಸೇವಕವೃಂದ, ಅಲೆಗಳ ರೂಪದ ಮಾನ್ಯವಾದ ಚಾಮರ, ಅಲೆಗಳ ಭೋರ್ಗರೆತವೆಂಬ ದುಂದುಭಿಧ್ವನಿ, ವಂದಿಗಳ ಮಂಗಳಕರವಾದ ಕೀರ್ತಿಯನ್ನು ವರ್ಣಿಸುವ ಮಾತುಗಳು, ಇಂತಹ ನಾರಾಯಣನೆಂಬ ಚಕ್ರವರ್ತಿಯನ್ನು ಆ ಬ್ರಹ್ಮದೇವರು ಕಣ್ತೆರೆದು ನೋಡುವಂತೆ ಮಾಡಿದರು.

ವಿ. : ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಶ್ರೀಹರಿಯದು ಆ ಪ್ರಳಯಕಾಲದಲ್ಲೂ ಚಕ್ರವರ್ತಿಯ ವೈಭವವಾಗಿದ್ದಿತು ಎಂದರ್ಥ.

### ಬ್ರಹ್ಮದೇವರ ಅದ್ಭುತ ಸೃಷ್ಟಿಕಾರ್ಯ

ರಮಾರಮೇಶಾನುಗೃಹೀತ ಏಷಃ
ಕ್ರಮಾತ್ [೨]ಸಸರ್ಜಾಗ್ರ ಇದಂ ಸಮಸ್ತಮ್ ।
ಸದಾಽಚ್ಯುತಾಂಘ್ರಿಸ್ಮರಣೇನ[೩] ಧನ್ಯ-
ಸ್ತದೀಯಭಕ್ತೇಷ್ವಯಮಗ್ರಗಣ್ಯಃ ॥ ೧೧ ॥

ಲಕ್ಷ್ಮೀನಾರಾಯಣರಿಂದ ಅನುಗೃಹೀತರಾದ ಇವರು ಮುಂದೆ ಕ್ರಮವಾಗಿ ಇದೆಲ್ಲವನ್ನೂ ಸೃಷ್ಟಿಮಾಡಿದರು; ಸದಾಕಾಲ ಅಚ್ಯುತನಾದ ಶ್ರೀಹರಿಯ ಪಾದಸ್ಮರಣೆಯಿಂದ ಧನ್ಯರಾದ ಇವರು ಅವನ ಭಕ್ತರಲ್ಲಿ ಅಗ್ರಗಣ್ಯರಾಗಿರುವರು.

### ಜೀವೋತ್ತಮ ಮುಖ್ಯಪ್ರಾಣ

ಅಯಂ ಸಖಿ ಪ್ರಾಣಗಣಾಧಿನಾಥಃ
ಸ್ವಯಂಭುವಾ ಸರ್ವಗುಣ್ಯೈಃ ಸಮಾನಃ ।

---

೧. ಸುದರ್ಶನಧಾರಿಣಿ ನಾರಾಯಣೇ ಚಕ್ರಂ ವರ್ತಯತೀತಿ ವ್ಯುತ್ಪತ್ತ್ಯಾ ಸಾಕ್ಷಾದೇವ ಚಕ್ರವರ್ತಿತ್ವಸ್ಯ ಸ್ವಭಾವಸಿದ್ಧತ್ವಾ-ದೇಕಾಂತೇಽಪಿ ಚಕ್ರವರ್ತಿನಶ್ಚಿಹ್ನಂ ನ ಮುಂಚತೀತಿ ಭಾವಃ । -ವ್ಯಾ.

೨. ''ಸೃಜಾಮಿ ತನ್ನಿಯುಕ್ತೋಽಹಮ್''(ಭಾಗ.೨/೬/೩೧)ಇತಿ ವಚನಾತ್ ।

೩.. ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ । -ಇತಿ ನಾರದಂ ಪ್ರತಿ ಬ್ರಹ್ಮವಚನಮ್ (ಭಾಗ.೨/೬/೩.೩.)

ಶಿವಾದಿದೇವಾ ವ್ಯವದಂತ ಪೂರ್ವಂ
ತತೋಽಸ್ಯ ಸತ್ತ್ವಂ ಪ್ರಕಟೀಬಭೂವ ॥ ೧೨ ॥

ಗೆಳತಿ ! ಇವನು ಪ್ರಾಣಗಣಕ್ಕೆ ಅಧಿಪತಿಯಾದ ಮುಖ್ಯಪ್ರಾಣ; ಬ್ರಹ್ಮನಿಗೆ ಸಕಲ ಗುಣಗಳಲ್ಲೂ ಸಮಾನ; ಹಿಂದೆ ಶಿವ ಮೊದಲಾದ ದೇವತೆಗಳು ವಿವಾದಕ್ಕೆ ತೊಡಗಿದರು; ಆಗ ಇವನ ಹಿರಿಮೆ ಬೆಳಕಿಗೆ ಬಂದಿತು.

ವಿ. : ೧. [೧]ಪದಪ್ರಯುಕ್ತವಾದ ಕಿಂಚಿದಾಧಿಕ್ಯ ಬ್ರಹ್ಮದೇವರಿಗಿದ್ದರೂ [೨]ಸ್ವರೂಪತಃ ಬ್ರಹ್ಮ ವಾಯುಗಳು ಸರ್ವರೀತಿಯಲ್ಲೂ ಸಮಾನರು ಎಂಬುದು ವಿಶೇಷಾಂಶ.

೨. ಶಿವ ಮೊದಲಾದ ದೇವತೆಗಳು ಮಾಡಿದ ವಿವಾದ ಅಹಂಶ್ರೇಯೋವಿವಾದ ಎಂಬುದಾಗಿ [೩]ಉಪನಿಷತ್ತುಗಳಲ್ಲಿ ಪ್ರಸಿದ್ಧ. ಅದು ಒಂದೆಡೆ ಅಸುರಮೋಹಕವಾದರೆ ಮತ್ತೊಂದೆಡೆ ವಾಯುಜೀವೋತ್ತಮತ್ವನಿರ್ಣಯಕ್ಕಾಗಿ, ಲೋಕೋಪಕಾರಕ್ಕಾಗಿ ದೇವತೆಗಳು ನಡೆಸಿದ ಲೀಲಾವಿವಾದ; ಶ್ರೀವಾಯುದೇವರ ಹಿರಿಮೆಯನ್ನು ಸಾರುವ ಈ ಪ್ರಸಂಗವು ಸುಪ್ರಸಿದ್ಧವಾಗಿರುವ ದಶೋಪನಿಷತ್ತುಗಳಲ್ಲಿ ಒಟ್ಟು ೬ ಉಪನಿಷತ್ತುಗಳಲ್ಲಿ ನಿರೂಪಿತವಾಗಿದೆ.

ನಿರಂತರ ಹಂಸಮಂತ್ರಜಪದ ಹಿರಿಮೆ

ಹರೇರ್ಮನುಂ ಜೀವನಿಕಾಯಕಾಯೇ
ಜಪನ್ನಯಂ ಜೀವಯತೀಹ ವಿಶ್ವಮ್ ।
ನಿಜಾಂಕಮಾರೋಪ್ಯ[೪] ಕಿಲೈನಮಾರ್ಯೇ
ಜಗತ್ಪತಿರ್ಜಾತಸುಖಂ ವಿಧತ್ತೇ ॥ ೧೩ ॥

ಈ ಮುಖ್ಯಪ್ರಾಣನು ಜೀವಕೋಟಿಯ ದೇಹಗಳಲ್ಲಿ ಶ್ರೀಹರಿಯ ಹಂಸಮಂತ್ರವನ್ನು ಜಪಿಸುತ್ತಾ ಸಮಸ್ತ ಜಗತ್ತನ್ನು ಬದುಕಿಸಿರುವನು; ಇವನನ್ನು ಜಗತ್ಪತಿಯಾದ ಶ್ರೀಹರಿಯು ತನ್ನ ತೊಡೆಯಮೇಲೆ ಏರಿಸಿಕೊಂಡು ಆನಂದಪಡಿಸುವನು.

---

೧. "ತತ್ಪ್ರಾಣೇ ಉತ್ಕ್ರಾಂತೇಽಪದ್ಯತ ತತ್ಪ್ರಾಣೇ ಪ್ರಪನ್ನ ಉದತಿಷ್ಠತ । ತಂ ದೇವಾ ಅಬ್ರುವನ್ । ತ್ವಮುಕ್ಥಮಸಿ" (ಐತರೇಯೋಪನಿಷತ್-೧/೪) ಇತಿ ಶ್ರುತೇಃ ।

೨. ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಮ್ । ಮ.ಭಾ.ತಾ.ನಿ.(೭/೩೩)

೩.. "ಅಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರುವನ್" (ಐತರೇಯೋಪನಿಷತ್-೧/೪) ಇತಿ ಶ್ರುತೇಃ ।

೪. 'ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಮ್' - ತಂತ್ರಸಾರಸಂಗ್ರಹ(೪/೬೯)

ವಿ. : ೧. ಶ್ರೀವಾಯುದೇವರು ಹೀಗೆ ಪ್ರತಿಯೊಬ್ಬ ಜೀವಿಯಲ್ಲೂ ಒಂದು ದಿನಕ್ಕೆ ಮಾಡುವ ಹಂಸಮಂತ್ರಜಪದ ಸಂಖ್ಯೆ ಒಟ್ಟು ೨೧,೬೦೦: ಏಕವಿಂಶತ್ಸಹಸ್ರಾತ್ತಾ ಸಷಟ್ಶತಮಹರ್ನಿಶಮ್। - (ತಂತ್ರಸಾರ ಸಂಗ್ರಹ)[೧]

೨. [೨]ಶ್ರೀಹರಿಯು ತನ್ನ ತೊಡೆಯಮೇಲೆ ವಾಯುದೇವರನ್ನು ಕೂಡಿಸಿಕೊಳ್ಳುವ ಮೂಲಕ ಅವರು ತನ್ನ ಪುತ್ರ , ತನಗೆ ಅತ್ಯಂತ ಪ್ರಿಯ ಎಂಬುದನ್ನು ಸೂಚಿಸಿರುವರು; ಶ್ರೀಹರಿಯು ಈ ಕಾರಣದಿಂದಾಗಿ **ಈರಾಂಕ** ಎಂಬುದಾಗಿ ಪ್ರಸಿದ್ಧನಾಗಿರುವನು.

೩.. [೩]ಮಂತ್ರಜಪವು ದಾಸ್ಯ, ಭಕ್ತಿ , ಚಿಂತನೆ, ಧ್ಯಾನ ಮೊದಲಾದ ಅನೇಕ ಕಾರ್ಯಗಳಿಗೆ ಉಪಲಕ್ಷಕ.

೪. ಈ ರೀತಿಯಾದ ಹಂಸಮಂತ್ರ ಜಪದ ವಿಶೇಷತೆ ಶ್ರೀವಾಯುದೇವರ ಜೀವೋತ್ತಮತ್ತ್ವಕ್ಕೆ ಸಾಧಕ ಎಂಬ ಉಪಪಾದನೆ [೪]ಸರಸಭಾರತೀವಿಲಾಸದಲ್ಲಿದೆ.

---

೧. ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ।
ಏಕವಿಂಶತ್ಸಹಸ್ರಾತ್ಮಾ ಸಷಟ್ಶತಮಹರ್ನಿಶಮ್ ॥ - ತಂತ್ರಸಾರಸಂಗ್ರಹ (೪/೨೨)
ಆರು ಮೂರೆರಡೊಂದು ಸಾವಿರ ಮೂರೆರಡುಶತಶ್ವಾಸಜಪಗಳ
ಮೂರುವಿಧಜೀವರೊಳಗಬ್ಜಜಕಲ್ಪಪರಿಯಂತ।
ತಾ ರಚಿಸಿ ಸಾತ್ತ್ವರಿಗೆ ಸುಖ ಸಂಸಾರ ಮಿಶ್ರರಿಗಧಮಜನರಿಗ-
ಪಾರದುಃಖಗಳೀವ ಗುರು ಪವಮಾನ ಸಲಹೆಮ್ಮ ॥ - ಹರಿಕಥಾಮೃತಸಾರ (೧/೪)
೨. ''ಅಚ್ಯುತಾಂಕೇ ಸ್ವಾಸೀನಮ್''(ತಂತ್ರಸಾರಸಂಗ್ರಹ ವಚನ - ೪/೬೬)ಇತಿ ಮುಖ್ಯಪ್ರಾಣಧ್ಯಾನಾದಿತಿ ಭಾವಃ।
೩.. ಹಂಸಮಂತ್ರಸ್ಯ ಶ್ವಾಸೋಚ್ಛ್ವಾಸರೂಪತ್ವಾದಿತಿ ಭಾವಃ। -ವ್ಯಾ.
ಅತ್ರ ವಿಷ್ಣುಮನುಜಾಪಕತ್ವೇನ ತದ್ದಾಸತ್ವಂ ತಲ್ಲಾಲನಾರ್ಹಶಿಶುತ್ವಂ ಚಾಸ್ವರಸಬೀಜಮ್। -ವ್ಯಾ.
೪. ಅಪಿ ಚಾನಂತಜೀವಾನಾಂ ಭವದ್ಭೂತಭವಿಷ್ಯತಾಮ್।
ಹೃದಿ ಸ್ಥಿತ್ವಾ ಪಂಚರೂಪೀ ಯಸ್ಯ ಮಂತ್ರತ್ರಯಂ ಸುಧೀಃ॥
ಅಹರ್ನಿಶಂ ಚೈಕವಿಂಶತ್ಸಹಸ್ರಂ ಷಟ್ಶತಾಧಿಕಮ್।
ಯಥಾ ಭವತಿ ಮಾನೇನ ತಥಾಽನೂನತಯಾ ಜಪನ್ ॥
ಮುಖ್ಯಪ್ರಾಣೋ ಮಮ ಗುರುಸ್ತಸ್ಯ ಹಂಸಾತ್ಮನೋ ಹರೇಃ।
ಮುಖ್ಯದಾಸೋಽಭವನ್ನಿತ್ಯಮಿತ್ಥಂ ವಿಷ್ಣೋರ್ಮಹಾಮನುಮ್ ॥
ಅಹರ್ನಿಶಂ ಚ ಜಪತಃ ಸ್ಯಾತ್ ಕದಾ ಮತಿರನ್ಯಥಾ।
ಹರೌ ಕದಾಚಿತ್ ಸ್ಪರ್ಧಾಽಸ್ಯ ಯದಿ ಸ್ಯಾನ್ನ ಜಪೇತ್ ಸದಾ॥
ಜಪಾಭಾವೇಽಪಿ ನಷ್ಟಂ ಸ್ಯಾಜ್ಜಗದೇತಚ್ಚರಾಚರಮ್।
ಏವಂ ಚ ಜೀವನಾರ್ಥೀ ಯಃ ಸ ವಾಯೋಶ್ಚ ಶ್ರಿಯಃಪತೇಃ ॥
ಮತ್ಯೈಕ್ಯಂ ಪೋಷಯೇನ್ನಿತ್ಯಂ ದೂಷಯೇನ್ನ ಕದಾಚನ।
ದಿನೇ ದಿನೇಽಪ್ಯಸಂಖ್ಯಾತನಾನಾಜೀವೇಷ್ವಹರ್ನಿಶಮ್ ॥
ಅನಂತಾನಂತಧಾ ವಿಷ್ಣೋರ್ಮನುಮೇತಮನುತ್ತಮಮ್।
ಜಪನ್ನಯಂ ವಾಯುದೇವಃ ಸರ್ವಜೀವೋತ್ತಮೋ ನ ಕಿಮ್ ॥ -ಸರಸಭಾರತೀವಿಲಾಸ (೮/೭೨-೭೮)

ಪರಮಭಾಗವತಧರ್ಮದ ಭಾವಿಬ್ರಹ್ಮ

ಕ್ವಚಿದ್ಧಿ ರಕ್ಷೋವಶತಾ ಸುರಾಣಾಂ
ಭವೇದಮುಷ್ಮಿನ್ನ ಕದಾಪಿ ಸಾಽಸ್ತಿ ।
ಅಯಂ ಕಿಲಾಚ್ಛಿನ್ನಮುಕುಂದಧರ್ಮೋ[೧]
ವಿರಿಂಚತಾಮೇಷ್ಯತಿ ಭಾವಿಕಲ್ಪೇ ॥ ೧೪ ॥

ಕೆಲವೊಮ್ಮೆ ಇತರ ದೇವತೆಗಳಿಗೆ ಅಸುರಾವೇಶ ಒದಗುವುದುಂಟು; ಆದರೆ ಇವರಲ್ಲಿ ಮಾತ್ರ ಅದು ಎಂದೂ ಬಾರದು; ಇವರು ಅಚ್ಛಿನ್ನ ಭಾಗವತಧರ್ಮರತರಾಗಿದ್ದು ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವರು.

ವಿ. : ೧. [೨]ಲಕ್ಷ್ಮೀನಾರಾಯಣರ ಅನಂತರದ ಚೇತನರಾಶಿಯಲ್ಲಿ ಬ್ರಹ್ಮವಾಯುಗಳ ಸ್ಥಾನ ತುಂಬಾ ಹಿರಿದು; ಯಾವ ಕಾರಣದಿಂದಲೂ, ಯಾವುದೇ ರೀತಿಯಲ್ಲೂ ಅಸುರಾವೇಶಕ್ಕೆ ಸರ್ವಥಾ ಒಳಗಾಗದ ಮಹಿಮೆ ಇವರದು. ಅದಕ್ಕಾಗಿ **ಆಖಣಾಶ್ಮಸಮ** ಎಂಬ ವಿಶೇಷ ನಾಮ ಇವರಿಗೆ ಇದೆ : **ಪ್ರಾಣಸ್ಯ ನಾಸುರಾವೇಶ ಆಖಣಾಶ್ಮಸಮೋ ಹಿ ಸಃ।**- (ಛಾಂದೋಗ್ಯಭಾಷ್ಯ)

೨. ಇದರಿಂದಾಗಿ ಪರಶುಕ್ಲತ್ರಯರಲ್ಲಿ ಬ್ರಹ್ಮವಾಯುಗಳು ದ್ವಿತೀಯರು ಎನ್ನಿಸಿರುವರು. ಮಹಾಲಕ್ಷ್ಮಿಯು ಮೊದಲನೆಯವರಾದರೆ, ಸರಸ್ವತಿಭಾರತಿಯರು ಮೂರನೆಯವರು.

೩. ಶಿವಾದಿ ದೇವತೆಗಳು ಒಮ್ಮೊಮ್ಮೆ ಧರ್ಮ ತಪ್ಪುವ ವಿವರಗಳನ್ನು ಮಹಾಭಾರತ, ರಾಮಾಯಣಾದಿಗಳಲ್ಲಿ ಕಾಣಬಹುದು. ಮಹಾಭಾರತ ಕಾಲದಲ್ಲಿ ಹಾಗೆ ಅವರು ದಾರಿತಪ್ಪಿದ ವಿವರಗಳ ಸಂಗ್ರಹ ನಿರೂಪಣೆ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ೧೮ನೆಯ ಅಧ್ಯಾಯದಲ್ಲಿ ಬಂದಿದೆ[೩].

೪. ಮುಂದಿನ ಬ್ರಹ್ಮಕಲ್ಪದಲ್ಲಿ ಶ್ರೀವಾಯುದೇವರು ಬ್ರಹ್ಮಪದವಿಗೆ ಬರುವ ವಿವರ ವಾಲ್ಮೀಕಿ ರಾಮಾಯಣದಲ್ಲೂ ಬಂದಿದೆ : **ಸೋಽಯಂ ನವವ್ಯಾಕರಣಾರ್ಥವೇತ್ತಾ ಬ್ರಹ್ಮಾ ಭವಿಷ್ಯತ್ಯಪಿ ತೇ ಪ್ರಸಾದಾತ್** (೭/೩೬/೪೭)

೫. **ಮುಕುಂದಧರ್ಮ** ಎಂದರೆ ಭಾಗವತಧರ್ಮ ಎಂದರ್ಥ.

ಕಾಲಕೂಟ ಕುಡಿದ ಮೋಕ್ಷಕೊಡಿಸುವ ಜಗದ್ಗುರು

ಪಯೋಽಬ್ಧಿಜಂ ದುರ್ವಿಷಹಂ ವಿಷಂ ಪ್ರಾಕ್
ಸ್ವಯಂ ಪಪೌ ನಷ್ಟಜವಂ ಶಿವೋಽಲ್ಪಮ್ ।

---

೧. ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ವೃಕೋದರಃ। - ಮ.ಭಾ.ತಾ.ನಿ.(೧೮/೪)

೨. "ತಂ ವಾ ಹಾಸುರಾ ಋತ್ವಾ ವಿದಧ್ವಸುಃ"(ಛಾಂದೋಗ್ಯೋಪನಿಷತ್) ಇತಿ ಶ್ರುತೇಃ।

೩. ಮ.ಭಾ.ತಾ.ನಿ.(೧೮/೨೫)

ವಿಮುಕ್ತಿಮಪ್ಯೇಷ ಹರೇರ್ನಿದೇಶಾತ್
ಪ್ರಿಯಾಯ ದಾತುಂ ಪ್ರಭುರಂಬುಜಾಕ್ಷಿ ॥ ೧೫ ॥

ಹೇ ಅಂಬುಜಾಕ್ಷೀ! ಕ್ಷೀರಸಾಗರದಲ್ಲಿ ಉದ್ಭವಿಸಿದ ದುಸ್ಸಹವಾದ ವಿಷವನ್ನು ಹಿಂದೆ ಈ ವಾಯುವು ಸ್ವಯಂ ಪಾನಮಾಡಿದ. ಶಕ್ತಿ ಕುಂದಿದ್ದ ಅದರ ಅಲ್ಪಭಾಗವನ್ನು ಮಾತ್ರ ಶಿವ ಕುಡಿದ; ಶ್ರೀಹರಿಯ ಆದೇಶದಂತೆ ತನ್ನ ಪ್ರಿಯರಾದವರಿಗೆ ಮುಕ್ತಿಯನ್ನು ಸಹ ನೀಡಬಲ್ಲ ಪ್ರಭು ಇವನು.

ವಿ. : ೧. ಸಮುದ್ರಮಥನದಲ್ಲಿ ಹುಟ್ಟಿದ ಕಾಲಕೂಟವಿಷವನ್ನು ಶ್ರೀಹರಿಯ ಆದೇಶದಂತೆ ಸ್ವೀಕರಿಸಿ, ಅದರ ಅತಿಚಿಕ್ಕಭಾಗವೊಂದನ್ನು ಕೈಗೆತ್ತಿಕೊಂಡು, ಅದರ ಸಾಮರ್ಥ್ಯವನ್ನು ಕುಗ್ಗಿಸಿ, ಅದರಲ್ಲಿಯ ಸ್ವಲ್ಪಭಾಗವನ್ನು ಮಾತ್ರ ವಾಯುದೇವರು ರುದ್ರದೇವರಿಗೆ ನೀಡಿದ ವಿವರ ಋಗ್ಭಾಷ್ಯ, [1]ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಭಾಗವತತಾತ್ಪರ್ಯನಿರ್ಣಯ-ಗಳಲ್ಲಿ [2]ಪ್ರಮಾಣಪುರಸ್ಸರವಾಗಿ ನಿರೂಪಿತವಾಗಿದೆ :

ವಾಯುರಸ್ಮಾ ಉಪಾಮಂಥತ್ಪಿನಷ್ಟಿ ಸ್ಮಾ ಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ ॥ -ಋ.(೧೦/೧೩೬/೭)

೨. [3]ವಾಯುದೇವರು ದುರ್ಬಲಗೊಳಿಸಿ ನೀಡಿದ ಅತ್ಯಲ್ಪ ಪ್ರಮಾಣದ ವಿಷವನ್ನು ಸಹ ರುದ್ರದೇವರು ಜೀರ್ಣಿಸಿಕೊಳ್ಳಲಾಗದೆ, ಶಿರೋವೇದನೆಯನ್ನು ಹೊಂದಿ, ಮೂರ್ಛಿತರಾಗಿ, ಶ್ರೀಹರಿವಾಯುಗಳ ಅನುಗ್ರಹದಿಂದ ಅದರಿಂದ ಬಿಡುಗಡೆ ಹೊಂದಿದ ವಿವರ ಪುರಾಣಗಳಲ್ಲಿ ಬಂದಿದೆ; ಅಂದಿನಿಂದ ಅವರು ನೀಲಕಂಠ ಎಂಬುದಾಗಿ ಪ್ರಸಿದ್ಧರಾದದ್ದು ಸುಪ್ರಸಿದ್ಧ.

---

೧. ಶ್ರಾಂತೇಷು ತೇಷ್ವೇಕ ಉರುಕ್ರಮಸ್ತ್ವಂ ಸುಧಾರಸಾಪ್ತ್ಯೈ ಮುದಿತೋ ಹ್ಯಮಥ್ನಾಃ ।
ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ ॥
ಕಲೇಃ ಸ್ವರೂಪಂ ತದತೀವ ದುಃಸಹಂ ವರಾದ್ವಿಧಾತುಃ ಸಕಲೈಶ್ಚ ದುಃಸ್ಪೃಶಮ್ ।
ಕರೇ ವಿಮಥ್ಯಾಸ್ತಬಲಂ ವಿಧಾಯ ದದೌ ಸ ಕಿಂಚಿದ್ಗಿರಿಶಾಯ ವಾಯುಃ ॥
ಸ ತತ್ ಪಿಬನ್ ಕಂಠಗತೇನ ತೇನ ನಿಪಾತಿತೋ ಮೂರ್ಛಿತ ಆಶು ರುದ್ರಃ ।
ಹರೇಃ ಕರಸ್ಪರ್ಶಬಲಾತ್ ಸ ಸಂಜ್ಞಾಮವಾಪ ನೀಲೋಽಸ್ಯ ಗಲಸ್ತದಾಽಽಸೀತ್॥
ಅಥ ತ್ವದಾಜ್ಞಾಂ ಪುರತೋ ನಿಧಾಯ ನಿಧಾಯ ಪಾತ್ರೇ ತಪನೀಯರೂಪೇ ।
ಸ್ವಯಂ ತ್ವನಿರ್ಮಥ್ಯ ಬಲೋಪಪನ್ನಂ ಪಪೌ ಸ ವಾಯುಸ್ತದುತಾಸ್ಯ ಜೀರ್ಣಮ್ ॥
ಅತ್ಯಲ್ಪಪಾನಾಚ್ಚ ಬಭೂವ ಶೂಲಾ ಶಿವಸ್ಯ ಶೀರ್ಷ್ಣಶ್ಚ ಕರಾವಶಿಷ್ಟಮ್ ।
ಅಭೂತ್ ಕಲಿಃ ಸರ್ವಜಗತ್ಸುಪೂರ್ಣಂ ಪೀತ್ವಾ ವಿಕಾರೋ ನ ಬಭೂವ ವಾಯೋಃ ॥
-ಮ.ಭಾ.ತಾ.ನಿ.(೧೦/೧೩-೧೭)

೨. 'ರುದ್ರಸ್ಯ ಯಶಸೋಽರ್ಥಾಯ ಸ್ವಯಂ ವಿಷ್ಣುರ್ವಿಷಂ ಪ್ರಭುಃ ।
ನ ಸಂಜಹ್ರೇ ಸಮರ್ಥೋಽಪಿ ವಾಯುಂ ಚೋಚೇ ಪ್ರಶಾಂತಯೇ ॥' -ಭಾ.ತಾ.(೮/೭/೧೯)

೩.. ಈ ಪ್ರಸಂಗ ಶ್ರೀವಾದಿರಾಜಶ್ರೀಚರಣರಿಂದ ಅವರ ಮಹಾಭಾರತತಾತ್ಪರ್ಯನಿರ್ಣಯ ಭಾವಪ್ರಕಾಶಿಕೆಯಲ್ಲಿ ವಿವರವಾಗಿ ವ್ಯಾಖ್ಯಾನಿಸಲ್ಪಟ್ಟಿದೆ.

೩. ಶ್ರೀಹರಿಯ ಆದೇಶದಂತೆ ಮುಕ್ತಿಯನ್ನು ಸಹ ನೀಡಬಲ್ಲ ಹಿರಿಮೆ ಶ್ರೀವಾಯುದೇವರದು: ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ[೧] । - ಮ.ಭಾ.ತಾ.ನಿ.(೧/೭೮).

## ವಾಯುದೇವರ ರೂಪತ್ರಯ

ಇಹಾವತೀರ್ಯಾಥ ಹನೂಮದಾಖ್ಯೋ[೨]
ವ್ಯಧತ್ತ ಸೇವಾಂ ಸ ತು ಭೀಮರೂಪಃ ।
ವಿಭೋರ್ವಿಧತ್ತೇಽದ್ಯ ಸ[೩] ಮಧ್ವರೂಪೀ
ವಿಧಾಸ್ಯತೇಽನ್ಯೈಸ್ತ್ರಿದಶೈರಸಾಧ್ಯಾಮ್[೪] ॥ ೧೬ ॥

ಈ ಲೋಕದಲ್ಲಿ ಹನುಮಂತ ಎಂಬ ಹೆಸರಿನಿಂದ ಅವತರಿಸಿ, ಶ್ರೀಹರಿಗೆ ಸೇವೆ ಸಲ್ಲಿಸಿದ; ಭೀಮರೂಪದಿಂದ ಈಗ ಶ್ರೀಹರಿಯ ವಿಶೇಷ ಸೇವೆ ಸಲ್ಲಿಸುತ್ತಿರುವನು ; ಮುಂದೆ ಮಧ್ವ-ರೂಪಿಯಾಗಿ ಇತರ ದೇವತೆಗಳಿಂದಲೂ ಮಾಡಲಾಗದ ಕಾರ್ಯಗಳನ್ನು ಮಾಡುವನು.

ವಿ. : ಹನುಮದ್ರೂಪದ ಮಹತ್ಕಾರ್ಯಗಳೆಂದರೆ ಸಮುದ್ರತರಣ, ಲಂಕಾದಹನ, ಸಂಜೀವಾನಯನ ಮೊದಲಾದವುಗಳು, ಭೀಮರೂಪದಿಂದ ಮಾಡಿದ ಶ್ರೀಹರಿಗೆ ಪ್ರಿಯವಾದ ಕಾರ್ಯಗಳು ಎಂದರೆ ಜರಾಸಂಧವಧೆ, ದುರ್ಯೋಧನವಧೆ ಮೊದಲಾದವುಗಳು. ಶ್ರೀಮಧ್ವ-ರೂಪದ ಮಹತ್ಕಾರ್ಯಗಳು ಎಂದರೆ ಬ್ರಹ್ಮಸೂತ್ರಭಾಷ್ಯರಚನೆ, ಮಹಾಭಾರತತಾತ್ಪರ್ಯ-ನಿರ್ಣಯ ರಚನೆ, ಶ್ರೀಕೃಷ್ಣಪ್ರತಿಷ್ಠಾಪನೆ ಮೊದಲಾದವುಗಳು ಎಂದು ತಿಳಿಯಬೇಕು.

---

೧. ಸ್ವಭಕ್ತಂ ಮಾಮುದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ದೀನಂ ದೂನಮನಾಥಂ ಶರಣಾಗತಮೇನಮುದ್ಧರೇತಿ ವಿಜ್ಞಾಪನಕರ್ತ್ಯಣಾಮ್ ।
-ಶ್ರೀರಾಘವೇಂದ್ರಸ್ವಾಮಿಗಳು(ಪ್ರಾತಃಸಂಕಲ್ಪಗದ್ಯ)

೨. ಪ್ರಥಮೋ ಹನುಮಾನ್ ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ -ಮ.ಭಾ.ತಾ.ನಿ.(೨/೧೨೯) ಭವಿಷ್ಯತ್ಪರ್ವ
ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ
ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ - ಶ್ರೀಮದಾಚಾರ್ಯವಚನ

೩.. ಅದ್ಯಾಪಿ ಬದರೀಶೈಲೇ ಬದರೀಷಂಡಮಂಡಿತೇ ।
ಮಧ್ಯೇ ಮುನೀನಾಮಧ್ಯಾಸ್ತೇ ವಿದ್ವಾನ್ ವ್ಯಾಸಸ್ಯ ಸನ್ನಿಧೌ ॥ - ಸರಸಭಾರತೀವಿಲಾಸ(೭/೧೦)

೪. ಆಜ್ಞಾಮನ್ಯೈರಧಾರ್ಯಾಮ್...। - ವಾಯುಸ್ತುತಿ (ಶ್ಲೋ.೩.೮)
ಸರ್ವಜ್ಞಮನ್ಯಮನವೇಕ್ಷ್ಯ ಸ ಕಾರ್ಯವೀರ್ಯಮ್ । -ಸುಮಧ್ವವಿಜಯ(೨/೨)

ಬ್ರಹ್ಮವಾಯುಗಳನ್ನು ಮಕ್ಕಳಂತೆ ಕಂಡ ರುಗ್ಮಿಣಿ

ಸ್ವಬುದ್ಧಿಸಖ್ಯೇತ್ಥಮುದೀರಿತಾ ಸಾ
ಕೃಪಾಕಟಾಕ್ಷೇಣ ನಿರೀಕ್ಷ್ಯ ಭೈಷ್ಮೀ ।
ನಿಜಾಂಘ್ರಿಪದ್ಮಾವನತೌ ಸುತೌ ತೌ
ಸ್ವಕಾಂತಮೇತತ್ಪ್ರಭುಮೇವ ಮೇನೇ ॥ ೧೭ ॥

ತನ್ನ ಬುದ್ಧಿ ಎಂಬ ಸಖಿಯಿಂದ ಹೀಗೆ ಉಕ್ತಳಾದ ಆ ರುಗ್ಮಿಣಿಯು ಅವರನ್ನು ಕರುಣಾ-ಕಟಾಕ್ಷದಿಂದ ದಿಟ್ಟಿಸಿ, ತನ್ನ ಪಾದಕಮಲಕ್ಕೆ ಮಣಿದ ಆ ಇಬ್ಬರು ತನ್ನ ಪುತ್ರರು ಹಾಗೂ ತನ್ನ ಪತಿಯಾದ ಶ್ರೀನಾರಾಯಣನು ಅವರಿಬ್ಬರ ಸ್ವಾಮಿ ಎಂಬುದಾಗಿ ತಿಳಿದಳು.

ವಿ. : ಬ್ರಹ್ಮವಾಯುಗಳು ಲಕ್ಷ್ಮೀನಾರಾಯಣರ ಪುತ್ರರು; ಕೃಷ್ಣ-ರುಗ್ಮಿಣಿಯರೇ ಲಕ್ಷ್ಮೀ-ನಾರಾಯಣರು ಎಂಬುದು ಇಲ್ಲಿಯ ಭಾವ.

ಪರಸ್ಪರ ಸಮಾನರಾದ ಗರುಡ,ಶೇಷ,ರುದ್ರರು

ಭವೋಽಯಮಬ್ಜಾಸನಲಬ್ಧಜನ್ಮಾ
ವಿಹಂಗರಾಜೋಽಯಮಹೀಶ್ವರೋಽಯಮ್ ।
ಸಮಾನವಿಜ್ಞಾನಬಲಪ್ರಮೋದಾ
ಮುಕುಂದಸೇವಾಭಿರತಾಃ [೧]ಕಿಲೈತೇ ॥ ೧೮ ॥

ಕಮಲಾಸನರಾದ ಬ್ರಹ್ಮದೇವರಿಂದ ಜನಿಸಿದ ಶಿವ ಇವನು; ಇವನು ಪಕ್ಷಿರಾಜನಾದ ಗರುಡ; ಇವನು ನಾಗರಾಜನಾದ ಶೇಷ; ಈ ಮೂವರೂ ಸಮಾನವಾದ ಜ್ಞಾನ, ಬಲ, ಆನಂದಗಳನ್ನು ಉಳ್ಳವರು ಹಾಗೂ ಮುಕುಂದನಾದ ಶ್ರೀಹರಿಯ ಸೇವೆಯಲ್ಲೇ ತೊಡಗಿ-ಕೊಂಡವರು; (ಅಬ್ಜಾಸನ - ಬ್ರಹ್ಮ).

ವಿ. : ೧. ಬ್ರಹ್ಮವಾಯುಗಳ ಅನಂತರದ ಸ್ಥಾನ ತಾರತಮ್ಯದಲ್ಲಿ ಗರುಡ, ಶೇಷ, ರುದ್ರರದು. ಇವರು ಮೂವರೂ ಸಮಾನರು ಎಂಬುದು ವಿಶೇಷ ; ಹೀಗೆ ಇವರು ವಾವೆಯಲ್ಲಿ ತನ್ನ ಮೊಮ್ಮಕ್ಕಳಾಗುವುದರಿಂದ ಅವರೊಂದಿಗೆ ಸ್ವಯಂವರ ಅತ್ಯಂತ ಅನುಚಿತ ಎಂಬುದು ಸೂಚಿತ.

೨. ಇದರಲ್ಲಿನ ಅಬ್ಜಾಸನಲಬ್ಧಜನ್ಮಾ ಎಂಬುದು ಶಿವನಂತೆ ಶೇಷಗರುಡರಿಗೂ ಅನ್ವಯಿಸುವ ವಿಶೇಷಣವಾಗಿದೆ :

ಗರುಡಶೇಷಶಶಾಂಕದಳಶೇಖರರ ಜನಕ ಜಗದ್ಗುರುವೇ ತ್ವಚ್ಚರಣ-
ಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ । -ಹರಿಕಥಾಮೃತಸಾರ(೧/೩.)

---

೧. ಕಿಲೇತ್ಯನೇನಾತ್ರಾಸ್ವರಸಬೀಜಂ ಸ್ಪಷ್ಟಮ್ । -ವ್ಯಾ.

೩. ಈ ಮೂವರೂ ಬ್ರಹ್ಮದೇವರ ಪುತ್ರರಾಗಿರುವಂತೆ ಭಾವಿ ಬ್ರಹ್ಮದೇವರಾದ ವಾಯು - ದೇವರಿಗೂ ಸಹ ಪುತ್ರರಾದವರು ಎಂಬ ಮತ್ತೊಂದು ವಿಶೇಷವನ್ನು ಇಲ್ಲಿ ತಿಳಿಯಬೇಕು :

ಯಸ್ಯಾಃ ಪ್ರಸಾದಾತ್ ಪರಮಂ ವಿದಂತಿ ಶೇಷಃ ಸುಪರ್ಣೋ ಗಿರಿಶಃ ಸುರೇಂದ್ರಃ ।
ಮಾತಾ ಚ ಏಷಾಂ ಪ್ರಥಮೈವ ಭಾರತೀ ಸಾ ದ್ರೌಪದೀ ನಾಮ ಬಭೂವ ಭೂಮೌ ॥
ಯಾ ಮಾರುತಾದ್ಗರ್ಭಮವಾಪ ಪೂರ್ವಂ ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।
ಚತುರ್ಮುಖಾಭಾನ್ ಚತುರಃ ಕುಮಾರಾನ್ ಸಾ ದ್ರೌಪದೀ ನಾಮ ಬಭೂವ ಭೂಮೌ ॥
-ಮ.ಭಾ.ತಾ.ನಿ.(೨/೧೭೦,೧೭೧)

### ತ್ರಿಪುರಾರಿಯಾದ ಶಿವ

**ಶರ್ವಃ ಸುಪರ್ವರಿಪುಗರ್ವವಿಭೇದದಕ್ಷಃ**
**ಪೂರ್ವಂ ಪುರತ್ರಯಮಯಂ ಕಿಲ ದೇವ್ಯಜೈಷೀತ್ ।**
**ಹರ್ಯಂಘ್ರಿತೀರ್ಥಪರಿಪೂರ್ಣಕಪರ್ದಮೇನಂ**
**ಗೌರ್ಯತ್ಯಸಾಧ್ಯಮಪಿ ತಂ ವಶಯಾಂಬಭೂವ ॥ ೧೯ ॥**

ಈ ಶಿವನು ದೇವತೆಗಳಿಗೆ ಶತ್ರುಗಳಾದ ಅಸುರರ ಸೊಕ್ಕನ್ನು ಅಡಗಿಸುವಲ್ಲಿ ನಿಪುಣ ; ಹಿಂದೆ ಇವನು ತ್ರಿಪುರಾಸುರರನ್ನು ಪರಾಭವಗೊಳಿಸಿದನಲ್ಲವೆ ! ಅಮ್ಮ ದೇವಿ ! ಶ್ರೀಹರಿಯ ಪಾದಕಮಲದ ಪುಣ್ಯತೀರ್ಥವಾದ ಗಂಗೆಯನ್ನು ತನ್ನ ಜಟೆಯಲ್ಲಿ ತುಂಬಿಸಿಕೊಂಡಿರುವ, ಒಲಿಸಲು ಸುಲಭಸಾಧ್ಯವಲ್ಲದ ಇವನನ್ನು ಪಾರ್ವತಿಯು ತನ್ನ ವಶನಾಗುವಂತೆ ಮಾಡಿ-ಕೊಂಡಳು.

ವಿ. : ೧. ಇದರಲ್ಲಿ ಶಿವನ ಹಿರಿಮೆ ನಿರೂಪಿತವಾಗಿದೆ. ಶಿವ ಮೇಲ್ನೋಟಕ್ಕೆ ಅಸುರರಿಗೆ ವರನೀಡುವ ದೇವತೆಯಂತೆ ಕಂಡರೂ ವಾಸ್ತವವಾಗಿ ಅಸುರರನ್ನು ಸದೆಬಡಿಯುವಲ್ಲಿ ಅತ್ಯಂತ ನಿಪುಣ. ಅದಕ್ಕೆ ಅತ್ಯುತ್ತಮ ನಿದರ್ಶನವೆಂದರೆ ತ್ರಿಪುರಾಸುರರ ಸಂಹಾರಕಾರ್ಯ. ಅದರಿಂದಾಗಿ ಪುರಾರಿ, ತ್ರಿಪುರಾರಿ ಎಂಬುದಾಗಿ ಶಿವ ಪ್ರಸಿದ್ಧ; [1]ಸುಪರ್ವರು ಎಂದರೆ ದೇವತೆಗಳು ಎಂದರ್ಥ; ಶರ್ವ - ಶಿವ;, ಕಪರ್ದ - ಜಟೆ.

೨. [2]ವಿಷ್ಣುಪಾದೋದಕವಾದ ಗಂಗೆಯನ್ನು ಸದಾ ಜಟೆಯಲ್ಲಿ ಧರಿಸಿ ಗಂಗಾಧರ ಎನ್ನಿಸಿರುವ ಮತ್ತೊಂದು ಹಿರಿಮೆಯೂ ಶಿವನದಾಗಿದೆ. ಇದರಿಂದಾಗಿ ಶಿವ ಅವರಿಬ್ಬರ

---

೧. ಸುಪರ್ವಾಣಃ ಸುಮನಸಸ್ತ್ರಿದಿವೇಶಾ ದಿವೌಕಸಃ। -ಅಮರಕೋಶ

೨. ಅತ್ರ ಶ್ರೀವಿಷ್ಣುಪಾದೋದಕಧಾರಣಂ ಸ್ತ್ರ್ಯಂತರಪರಿಗ್ರಹಶ್ಚಾಪ್ಸರಸಬೀಜಮ್ । ಗೌರೀತ್ಯನೇನ ಪರಿಗೃಹೀತಸ್ತ್ರ್ಯಂತರಸ್ಯಾತಿಸೌಂದರ್ಯಂ ಅಪ್ಸರಸಬೀಜಂ ಚ ದ್ಯೋತ್ಯತೇ । ಅತಿಸೌಂದರ್ಯವದ್ವನಿತಾಂತರೋಪೇತಸ್ಯಾಪ್ಯ ಇತಿ ಭಾವಃ। -ವ್ಯಾ.

ಮೊಮ್ಮಗ ಮಾತ್ರವಲ್ಲದೆ, ದಾಸಾನುದಾಸನೂ ಆಗಿರುವನು ಎಂಬ ಅರ್ಥವಿಶೇಷವು ಧ್ವನಿಸುವುದು.

೩.. ಪಾರ್ವತಿಯು ಶಿವನನ್ನು ಆರಾಧಿಸಿ, ಒಲಿಸಿದಳು; ಇಲ್ಲಿ ಶಿವನನ್ನು ವಶಮಾಡಿಕೊಂಡಳು ಎಂದರೆ ಭಕ್ತಿಭಾವದಿಂದ ಮೆಚ್ಚಿಸಿದಳು ಎಂದರ್ಥ. ಚಿಕ್ಕವರು ದೊಡ್ಡವರನ್ನು ವಶಮಾಡಿ-ಕೊಳ್ಳುವುದು ಎಂಬುದಕ್ಕೆ ಇದೇ ಶಾಸ್ತ್ರೀಯವಾದ ಅರ್ಥ.

**ಭೂಮಿಯನ್ನು ಹೊತ್ತ ಆದಿಶೇಷ**

**ಪುಚ್ಛೇನ ಕಚ್ಛಪತನೋಃ ಪವನಸ್ಯ ಪೃಷ್ಠ-**
**ಮಚ್ಛೋಽವಲಂಬ್ಯ ಸರಿದರ್ಣವಶೈಲಪೂರ್ಣಾಮ್ ।**
**[೧]ಸಿದ್ಧಾರ್ಥಖಂಡಮಿವ ಕುಂಡಲಿರಾಟ್ ಸುಪೃಥ್ವೀಂ**
**ಪೃಥ್ವೀಮಯಂ ಕಿಲ ಬಿಭರ್ತಿ ಫಣಾತಪತ್ರೇ ॥ ೨೦ ॥**

ತನ್ನ ಪುಚ್ಛದಿಂದ ಕೂರ್ಮರೂಪದ ವಾಯುದೇವರ ಪೃಷ್ಠವನ್ನು ಅವಲಂಬಿಸಿರುವ ಶುಭ್ರವರ್ಣದ ನಾಗರಾಜನಾದ ಈ ಶೇಷನು ನದೀ, ಸಮುದ್ರ, ಬೆಟ್ಟಗಳಿಂದ ಒಡಗೂಡಿದ ವಿಶಾಲವಾದ ಇಡೀ ಭೂಮಿಯನ್ನು ತನ್ನ ಹೆಡೆ ಎಂಬ ಆತಪತ್ರದಲ್ಲಿ ಸಾಸಿವೆಯ ಕಾಳಿನಂತೆ ಧರಿಸಿರುವನು.

ವಿ. : ೧. [೨]ಶೇಷದೇವರ ವಿಶೇಷ ವರ್ಣನೆ ಇದರಲ್ಲಿದೆ. ಒಂದೆಡೆ ವಾಯುದೇವರ ಆಸರೆ-ಯನ್ನು ನೇರವಾಗಿ ಪಡೆದವನು; ಮತ್ತೊಂದೆಡೆ ಇಡೀ ಭೂಮಿಯನ್ನು ತನ್ನ ಒಂದು ಹೆಡೆಯ ಮೇಲೆ ಒಂದು ಸಾಸುವೆ ಕಾಳಿನಷ್ಟು ಅನಾಯಾಸದಿಂದ ಧರಿಸಿದವನು ಎಂಬುದು ಶೇಷದೇವರ ಒಟ್ಟು ಹಿರಿಮೆ; **ಕುಂಡಲಿ** – ನಾಗ.

೨. ಶ್ರೀಮದ್ಭಾಗವತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಶೇಷನು ಹೀಗೆ ಭೂಮಿಯನ್ನು ಧರಿಸಿರುವ ವಿವರ ನಿರೂಪಿತವಾಗಿದೆ.

**೩.. ಆವ ಕಚ್ಛಪರೂಪದಿಂದಲಂಡೋದಕದಿ ಓವಿ ಧರಿಸಿಹ ಶೇಷ ಮೂರುತಿಯನು ।**

– ಶ್ರೀಮಧ್ವನಾಮ.

---

೧. ತಸ್ಯ ಮೂಲದೇಶೋ ತ್ರಿಂಶದ್ಯೋಜನಸಹಸ್ರಾಂತರ ಆಸ್ತೇ ಯಾ ವೈ ಕಲಾ ಭಗವತಸ್ತಾಮಸೀ ಸಮಾಖ್ಯಾತಾಽನಂತ ಇತಿ ಸಾತ್ವತೀಯಾ ದ್ರಷ್ಟೃದೃಶ್ಯಯೋಃ ಸನ್ನಿಕರ್ಷಣಮಹಮಿತ್ಯಭಿಮಾನಲಕ್ಷಣಂ ಯಂ ಸಂಕರ್ಷಣಮಿತ್ಯಾಚಕ್ಷತೇ। ತಸ್ಯೇದಂ ಕ್ಷಿತಿಮಂಡಲಂ ಭಗವತೋಽನಂತಮೂರ್ತೇಃ ಸಹಸ್ರಶಿರಸ ಏಕಸ್ಮಿನ್ನೇವ ಶಿರಸಿ ಧ್ರಿಯಮಾಣಂ ಸಿದ್ಧಾರ್ಥ ಇವ ಲಕ್ಷ್ಯತೇ। –ಭಾಗ.(೫/೨೪/೩.೨)
ಸಹಸ್ರಮೂರ್ಧ್ನೋಽಸ್ಯ ಬತ್ತೈಕಮೂರ್ಧನಿ ಸಸಪ್ತಪಾತಾಲಗಿರೀಂದ್ರಸಾಗರಾ।
ಧರಾಽಖಿಲೇಯಂ ನನು ಸರ್ಷಪಾಯತಿ ಪ್ರಸಹ್ಯ ಕೋ ನಾಮ ಹರೇತ್ ತಮೇನಮ್ ॥–ಮ.ಭಾ.ತಾ.ನಿ.(೮/೮೮)

೨. ಏತಾದೃಶೋಽಪಿ ಶ್ರೀಕೃಷ್ಣಪುತ್ರವಾಯುಕೂರ್ಮಾಶ್ರಯ ಇತ್ಯತ್ರಾಸ್ವರಸಬೀಜಮ್ । –ವ್ಯಾ.

## ಕೃಷ್ಣನಿಗೆ ಕಿರೀಟ ಸಮರ್ಪಿಸಿದ ಗರುಡ

ಸೋಽಯಂ ಗರುಜ್ಜನಿಮರುಜ್ಜವಚಾಲಿತಾದ್ರಿ-
ದ್ವೀಪಾಂಬುರಾಶಿರಹಿವರ್ಣ್ಯಬಲಃ ಸುಪರ್ಣಃ ।
ಪ್ರಾದಾನ್ನಿಯುಧ್ಯ ಬಲಿನಾ ಬಲಿನಾ ಸಮಂ ಯೋ
ಗೋಮಂತಮೂರ್ಧ್ನಿ[1] ಮುಕುಟಂ ನಿಜದೇವತಾಯೈ ॥ ೨೧ ॥

ತನ್ನ ರೆಕ್ಕೆಗಳಿಂದ ಬೀಸುವ ಗಾಳಿಯ ವೇಗದಿಂದ ಬೆಟ್ಟಗಳನ್ನು, ದ್ವೀಪಗಳನ್ನು, ಸಮುದ್ರ-ಗಳನ್ನು ನಲುಗಿಸುವ, ಸರ್ಪಗಳು ಕೊಂಡಾಡುವಂತಹ ಬಲವನ್ನು ಹೊಂದಿರುವ ಈ

---

೧. ಏತಸ್ಮಿನ್ ಏವ ಕಾಲೇ ತು ಕ್ಷೀರೋದೇ ಸಾಗರೋತ್ತಮೇ ।
ನಿವಾಸೇ ದೇವದೇವಸ್ಯ ಶಂಖಚಕ್ರಗದಾಭೃತಃ ॥
ಉಪಾಸೀನೋ ಮಹಾಬಾಹುಃ ಶ್ರೀಮಾನ್ ವೈರೋಚನೋ ಬಲಿಃ ।
ಜಹಾರ ದೇವದೇವಸ್ಯ ಕಿರೀಟಂ ರತ್ನಚಿತ್ರಿತಮ್ ॥
ಇಂದ್ರನೀಲಸಹಸ್ರಾಢ್ಯಂ ಗೋಮೇದಕಶತಾಚಿತಮ್ ।
ಪದ್ಮರಾಗಮಹಾನೀಲಮುಕ್ತಾಫಲವಿರಾಜಿತಮ್ ॥
ಪುಷ್ಯರಾಗಪ್ರವಾಲಾಢ್ಯಂ ದಿವ್ಯಕಾಂಚನನಿರ್ಮಿತಮ್ ।
ಹೃತಂ ದಾನವವೀರೇಣ ವಿದಿತ್ವಾ ಪುರಪಾಲಕಃ ।
ತಮನ್ವಧಾವತ್ ತ್ವರಿತಂ ವೈನತೇಯೋ ವಿಹಂಗರಾಟ್ ॥
ತಮಂತರೇ ಸಮಾಸಾದ್ಯ ದಾನವೇಂದ್ರಂ ದುರಾಸದಮ್ ।
ಕೃತ್ವಾ ಯುದ್ಧಂ ಮಹಾಘೋರಂ ಜಿತ್ವಾ ದಾನವಪುಂಗವಮ್ ॥
ಗೃಹೀತ್ವಾ ರತ್ನನಿಚಯಂ ಕಿರೀಟಂ ಭಾಸ್ಕರೋಪಮಮ್ ।
ಆಗಚ್ಛನ್ ದದೃಶೇ ದೇವಂ ದೇವಕೀನಂದನಂ ಹರಿಮ್ ॥
ವಸಂತಂ ಸಾಗ್ರಜಂ ರಮ್ಯೇ ಗೋಮಂತೇ ಪರ್ವತೋಪಮೇ ।
ತಸ್ಯ ಮೂರ್ಧ್ನಿ ನಿಧಾಯಾಶು ಕಿರೀಟಂ ದಿವ್ಯಭೂಷಣಮ್ ।
ಪ್ರಣಮ್ಯ ಪಾದಯೋರ್ಮೂರ್ಧ್ನಾ ಸ್ತೋತುಂ ತಮುಪಚಕ್ರಮೇ ॥ -ಭಾಗ.(೧೦/೫೩./೭-೧೩.)

'ಬಹೂನಿ ಸ್ಥಾನಜಾತಾನಿ ಕೃಷ್ಣಸ್ಯ ಕ್ಷೀರಸಾಗರೇ ।
ಕಾನಿಚಿನ್ಮುಕ್ತಗಮ್ಯಾನಿ ನಾಮುಕ್ತೈಸ್ತ್ರಿದಶೈರಪಿ ।
ಗಂತುಂ ಶಕ್ಯಾನ್ಯಥಾನ್ಯಾನಿ ಗಮ್ಯಾನ್ಯನ್ಯೈರಪಿ ಕ್ವಚಿತ್ ।
ತತ್ರ ದೇವಾಶ್ಚ ಯೋಗೀಂದ್ರಾ ಭಕ್ತಾಶ್ಚಾನ್ಯೇ ಜನಾರ್ದನಮ್ ।
ಗತ್ವಾಽರ್ಚಯಂತಿ ದೇವೇಶಂ ಬಲಿಸ್ತತ್ರಾಗಮತ್ ಕ್ವಚಿತ್ ।
ತಸ್ಯ ತತ್ರಾಸುರಾವೇಶಾತ್ ಪಾಪಬುದ್ಧಿರಜಾಯತ ।
ತದ್ವ್ಯಕ್ತ್ಯರ್ಥಂ ಜಗನ್ನಾಥಃ ಶಿಶ್ಯೇ ಸುಪ್ತವದವ್ಯಯಃ ।
ತದಾ ಸ ಪಾಪಯಾ ಬುದ್ಧ್ಯಾ ಕಿರೀಟಮಹರದ್ವಿಭೋಃ ।
ತಂ ಜಿತ್ವಾ ಗರುಡಸ್ತತ್ತು ಹೃತ್ವಾ ಗೋಮಂತಮಾವ್ರಜತ್ ।
ತತ್ರ ಕೃಷ್ಣಸ್ಯ ಶಿರಸಿ ಕಿರೀಟಮಮುಚತ್ ಪ್ರಭೋಃ' ಇತಿ ಮಾತ್ಸ್ಯೇ ॥ – ಭಾ.ತಾ.(೧೦/೫೩./೮)

ಮೊಮ್ಮಗ ಮಾತ್ರವಲ್ಲದೆ, ದಾಸಾನುದಾಸನೂ ಆಗಿರುವನು ಎಂಬ ಅರ್ಥವಿಶೇಷವು ಧ್ವನಿಸುವುದು.

೩.. ಪಾರ್ವತಿಯು ಶಿವನನ್ನು ಆರಾಧಿಸಿ, ಒಲಿಸಿದಳು; ಇಲ್ಲಿ ಶಿವನನ್ನು ವಶಮಾಡಿಕೊಂಡಳು ಎಂದರೆ ಭಕ್ತಿಭಾವದಿಂದ ಮೆಚ್ಚಿಸಿದಳು ಎಂದರ್ಥ. ಚಿಕ್ಕವರು ದೊಡ್ಡವರನ್ನು ವಶಮಾಡಿಕೊಳ್ಳುವುದು ಎಂಬುದಕ್ಕೆ ಇದೇ ಶಾಸ್ತ್ರೀಯವಾದ ಅರ್ಥ.

### ಭೂಮಿಯನ್ನು ಹೊತ್ತ ಆದಿಶೇಷ

**ಪುಚ್ಛೇನ ಕಚ್ಛಪತನೋಃ ಪವನಸ್ಯ ಪೃಷ್ಠ-**
**ಮಚ್ಛೋಽವಲಂಬ್ಯ ಸರಿದರ್ಣವಶೈಲಪೂರ್ಣಾಮ್ ।**
**[೧]ಸಿದ್ಧಾರ್ಥಖಂಡಮಿವ ಕುಂಡಲಿರಾಟ್ ಸುಪೃಥ್ವೀಂ**
**ಪೃಥ್ವೀಮಯಂ ಕಿಲ ಬಿಭರ್ತಿ ಫಣಾತಪತ್ರೇ ॥ ೨೦ ॥**

ತನ್ನ ಪುಚ್ಛದಿಂದ ಕೂರ್ಮರೂಪದ ವಾಯುದೇವರ ಪೃಷ್ಠವನ್ನು ಅವಲಂಬಿಸಿರುವ ಶುಭ್ರವರ್ಣದ ನಾಗರಾಜನಾದ ಈ ಶೇಷನು ನದೀ, ಸಮುದ್ರ, ಬೆಟ್ಟಗಳಿಂದ ಒಡಗೂಡಿದ ವಿಶಾಲವಾದ ಇಡೀ ಭೂಮಿಯನ್ನು ತನ್ನ ಹೆಡೆ ಎಂಬ ಆತಪತ್ರದಲ್ಲಿ ಸಾಸಿವೆಯ ಕಾಳಿನಂತೆ ಧರಿಸಿರುವನು.

ವಿ. : ೧. [೨]ಶೇಷದೇವರ ವಿಶೇಷ ವರ್ಣನೆ ಇದರಲ್ಲಿದೆ. ಒಂದೆಡೆ ವಾಯುದೇವರ ಆಸರೆಯನ್ನು ನೇರವಾಗಿ ಪಡೆದವನು; ಮತ್ತೊಂದೆಡೆ ಇಡೀ ಭೂಮಿಯನ್ನು ತನ್ನ ಒಂದು ಹೆಡೆಯ ಮೇಲೆ ಒಂದು ಸಾಸುವೆ ಕಾಳಿನಷ್ಟು ಅನಾಯಾಸದಿಂದ ಧರಿಸಿದವನು ಎಂಬುದು ಶೇಷದೇವರ ಒಟ್ಟು ಹಿರಿಮೆ; **ಕುಂಡಲಿ** – ನಾಗ.

೨. ಶ್ರೀಮದ್ಭಾಗವತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಶೇಷನು ಹೀಗೆ ಭೂಮಿಯನ್ನು ಧರಿಸಿರುವ ವಿವರ ನಿರೂಪಿತವಾಗಿದೆ.

೩.. **ಆವ ಕಚ್ಛಪರೂಪದಿಂದಲಂಡೋದಕದಿ ಓವಿ ಧರಿಸಿಹ ಶೇಷ ಮೂರುತಿಯನು ।**
– ಶ್ರೀಮಧ್ವನಾಮ.

---

೧. ತಸ್ಯ ಮೂಲದೇಶೋ ತ್ರಿಂಶದ್ಯೋಜನಸಹಸ್ರಾಂತರ ಆಸ್ತೇ ಯಾ ವೈ ಕಲಾ ಭಗವತಸ್ತಾಮಸೀ ಸಮಾಖ್ಯಾತಾಽನಂತ ಇತಿ ಸಾತ್ವತೀಯಾ ದ್ರಷ್ಟೃದೃಶ್ಯಯೋಃ ಸನ್ನಿಕರ್ಷಣಮಹಮಿತ್ಯಭಿಮಾನಲಕ್ಷಣಂ ಯಂ ಸಂಕರ್ಷಣಮಿತ್ಯಾಚಕ್ಷತೇ। ತಸ್ಯೇದಂ ಕ್ಷಿತಿಮಂಡಲಂ ಭಗವತೋಽನಂತಮೂರ್ತೇಃ ಸಹಸ್ರಶಿರಸ ಏಕಸ್ಮಿನ್ನೇವ ಶಿರಸಿ ಧ್ರಿಯಮಾಣಂ ಸಿದ್ಧಾರ್ಥ ಇವ ಲಕ್ಷ್ಯತೇ। -ಭಾಗ.(೫/೨೪/೩.೨)
ಸಹಸ್ರಮೂರ್ಧ್ನೋಽಸ್ಯ ಬತೈಕಮೂರ್ಧನಿ ಸಸಪ್ತಪಾತಾಲಗಿರೀಂದ್ರಸಾಗರಾ।
ಧರಾಽಖಿಲೇಯಂ ನನು ಸರ್ಷಪಾಯತಿ ಪ್ರಸಹ್ಯ ಕೋ ನಾಮ ಹರೇತ್ ತಮೇನಮ್ ॥-ಮ.ಭಾ.ತಾ.ನಿ.(೮/೮೮)

೨. ಏತಾದೃಶೋಽಪಿ ಶ್ರೀಕೃಷ್ಣಪುತ್ರವಾಯುಕೂರ್ಮಾಶ್ರಯ ಇತ್ಯತ್ರಾಸ್ಸರಸಬೀಜಮ್ । -ವ್ಯಾ.

## ಕೃಷ್ಣನಿಗೆ ಕಿರೀಟ ಸಮರ್ಪಿಸಿದ ಗರುಡ

ಸೋಽಯಂ ಗರುಜ್ಜನಿಮರುಜ್ಜವಚಾಲಿತಾದ್ರಿ-
ದ್ವೀಪಾಂಬುರಾಶಿರಹಿವರ್ಣ್ಯಬಲಃ ಸುಪರ್ಣಃ।
ಪ್ರಾದಾನ್ನಿಯುಧ್ಯ ಬಲಿನಾ ಬಲಿನಾ ಸಮಂ ಯೋ
ಗೋಮಂತಮೂರ್ಧ್ನಿ[1] ಮುಕುಟಂ ನಿಜದೇವತಾಯೈ ॥ ೨೧ ॥

ತನ್ನ ರೆಕ್ಕೆಗಳಿಂದ ಬೀಸುವ ಗಾಳಿಯ ವೇಗದಿಂದ ಬೆಟ್ಟಗಳನ್ನು, ದ್ವೀಪಗಳನ್ನು, ಸಮುದ್ರ-ಗಳನ್ನು ನಲುಗಿಸುವ, ಸರ್ಪಗಳು ಕೊಂಡಾಡುವಂತಹ ಬಲವನ್ನು ಹೊಂದಿರುವ ಈ

---

೧. ಏತಸ್ಮಿನ್ ಏವ ಕಾಲೇ ತು ಕ್ಷೀರೋದೇ ಸಾಗರೋತ್ತಮೇ।
ನಿವಾಸೇ ದೇವದೇವಸ್ಯ ಶಂಖಚಕ್ರಗದಾಭೃತಃ॥
ಉಪಾಸೀನೋ ಮಹಾಬಾಹುಃ ಶ್ರೀಮಾನ್ ವೈರೋಚನೋ ಬಲಿಃ।
ಜಹಾರ ದೇವದೇವಸ್ಯ ಕಿರೀಟಂ ರತ್ನಚಿತ್ರಿತಮ್ ॥
ಇಂದ್ರನೀಲಸಹಸ್ರಾಢ್ಯಂ ಗೋಮೇದಕಶತಾಚಿತಮ್ ।
ಪದ್ಮರಾಗಮಹಾನೀಲಮುಕ್ತಾಫಲವಿರಾಜಿತಮ್ ॥
ಪುಷ್ಯರಾಗಪ್ರವಾಲಾಢ್ಯಂ ದಿವ್ಯಕಾಂಚನನಿರ್ಮಿತಮ್ ।
ಹೃತಂ ದಾನವವೀರೇಣ ವಿದಿತ್ವಾ ಪುರಪಾಲಕಃ।
ತಮನ್ವಧಾವತ್ ತ್ವರಿತಂ ವೈನತೇಯೋ ವಿಹಂಗರಾಟ್ ॥
ತಮಂತರೇ ಸಮಾಸಾದ್ಯ ದಾನವೇಂದ್ರಂ ದುರಾಸದಮ್ ।
ಕೃತ್ವಾ ಯುದ್ಧಂ ಮಹಾಘೋರಂ ಜಿತ್ವಾ ದಾನವಪುಂಗವಮ್ ॥
ಗೃಹೀತ್ವಾ ರತ್ನನಿಚಯಂ ಕಿರೀಟಂ ಭಾಸ್ಕರೋಪಮಮ್ ।
ಆಗಚ್ಛನ್ ದದೃಶೇ ದೇವಂ ದೇವಕೀನಂದನಂ ಹರಿಮ್ ॥
ವಸಂತಂ ಸಾಗ್ರಜಂ ರಮ್ಯೇ ಗೋಮಂತೇ ಪರ್ವತೋಪಮೇ।
ತಸ್ಯ ಮೂರ್ಧ್ನಿ ನಿಧಾಯಾಶು ಕಿರೀಟಂ ದಿವ್ಯಭೂಷಣಮ್ ।
ಪ್ರಣಮ್ಯ ಪಾದಯೋರ್ಮೂರ್ಧ್ನಾ ಸ್ತೋತುಂ ತಮುಪಚಕ್ರಮೇ॥ -ಭಾಗ.(೧೦/೫೩/೭-೧೩)

'ಬಹೂನಿ ಸ್ಥಾನಜಾತಾನಿ ಕೃಷ್ಣಸ್ಯ ಕ್ಷೀರಸಾಗರೇ।
ಕಾನಿಚಿನ್ಮುಕ್ತಗಮ್ಯಾನಿ ನಾಮುಕ್ತೈಸ್ತ್ರಿದಶೈರಪಿ।
ಗಂತುಂ ಶಕ್ಯಾನ್ಯಥಾನ್ಯಾನಿ ಗಮ್ಯಾನ್ಯನ್ಯೈರಪಿ ಕ್ವಚಿತ್ ।
ತತ್ರ ದೇವಾಶ್ಚ ಯೋಗೀಂದ್ರಾ ಭಕ್ತಾಶ್ಚಾನ್ಯೇ ಜನಾರ್ದನಮ್ ।
ಗತ್ವಾಽರ್ಚಯಂತಿ ದೇವೇಶಂ ಬಲಿಸ್ತತ್ರಾಗಮತ್ ಕ್ವಚಿತ್ ।
ತಸ್ಯ ತತ್ರಾಸುರಾವೇಶಾತ್ ಪಾಪಬುದ್ಧಿರಜಾಯತ।
ತದ್ವ್ಯಕ್ತ್ಯರ್ಥಂ ಜಗನ್ನಾಥಃ ಶಿಶ್ಯೇ ಸುಪ್ತವದವ್ಯಯಃ।
ತದಾ ಸ ಪಾಪಯಾ ಬುದ್ಧ್ಯಾ ಕಿರೀಟಮಹರದ್ವಿಭೋಃ।
ತಂ ಜಿತ್ವಾ ಗರುಡಸ್ತತ್ತು ಹೃತ್ವಾ ಗೋಮಂತಮಾವ್ರಜತ್ ।
ತತ್ರ ಕೃಷ್ಣಸ್ಯ ಶಿರಸಿ ಕಿರೀಟಮಮುಚತ್ ಪ್ರಭೋಃ' ಇತಿ ಮಾತ್ಸ್ಯೇ॥ – ಭಾ.ತಾ.(೧೦/೫೩/೮)

ಬ್ರಹ್ಮವಾಯುಗಳನ್ನು ಮಕ್ಕಳಂತೆ ಕಂಡ ರುಗ್ಮಿಣಿ

ಸ್ವಬುದ್ಧಿಸಖ್ಯೇತ್ಥಮುದೀರಿತಾ ಸಾ
ಕೃಪಾಕಟಾಕ್ಷೇಣ ನಿರೀಕ್ಷ್ಯ ಭೈಷ್ಮೀ ।
ನಿಜಾಂಘ್ರಿಪದ್ಮಾವನತೌ ಸುತೌ ತೌ
ಸ್ವಕಾಂತಮೇತತ್ಪ್ರಭುಮೇವ ಮೇನೇ ॥ ೧೭ ॥

ತನ್ನ ಬುದ್ಧಿ ಎಂಬ ಸಖಿಯಿಂದ ಹೀಗೆ ಉಕ್ತಳಾದ ಆ ರುಗ್ಮಿಣಿಯು ಅವರನ್ನು ಕರುಣಾ-ಕಟಾಕ್ಷದಿಂದ ದಿಟ್ಟಿಸಿ, ತನ್ನ ಪಾದಕಮಲಕ್ಕೆ ಮಣಿದ ಆ ಇಬ್ಬರು ತನ್ನ ಪುತ್ರರು ಹಾಗೂ ತನ್ನ ಪತಿಯಾದ ಶ್ರೀನಾರಾಯಣನು ಅವರಿಬ್ಬರ ಸ್ವಾಮಿ ಎಂಬುದಾಗಿ ತಿಳಿದಳು.

ವಿ. : ಬ್ರಹ್ಮವಾಯುಗಳು ಲಕ್ಷ್ಮೀನಾರಾಯಣರ ಪುತ್ರರು; ಕೃಷ್ಣ-ರುಗ್ಮಿಣಿಯರೇ ಲಕ್ಷ್ಮೀ-ನಾರಾಯಣರು ಎಂಬುದು ಇಲ್ಲಿಯ ಭಾವ.

ಪರಸ್ಪರ ಸಮಾನರಾದ ಗರುಡ,ಶೇಷ,ರುದ್ರರು

ಭವೋಽಯಮಬ್ಜಾಸನಲಬ್ಧಜನ್ಮಾ
ವಿಹಂಗರಾಜೋಽಯಮಹೀಶ್ವರೋಽಯಮ್ ।
ಸಮಾನವಿಜ್ಞಾನಬಲಪ್ರಮೋದಾ
ಮುಕುಂದಸೇವಾಭಿರತಾಃ [೧] ಕಿಲೈತೇ ॥ ೧೮ ॥

ಕಮಲಾಸನರಾದ ಬ್ರಹ್ಮದೇವರಿಂದ ಜನಿಸಿದ ಶಿವ ಇವನು; ಇವನು ಪಕ್ಷಿರಾಜನಾದ ಗರುಡ; ಇವನು ನಾಗರಾಜನಾದ ಶೇಷ; ಈ ಮೂವರೂ ಸಮಾನವಾದ ಜ್ಞಾನ, ಬಲ, ಆನಂದಗಳನ್ನು ಉಳ್ಳವರು ಹಾಗೂ ಮುಕುಂದನಾದ ಶ್ರೀಹರಿಯ ಸೇವೆಯಲ್ಲೇ ತೊಡಗಿ-ಕೊಂಡವರು; (ಅಬ್ಜಾಸನ - ಬ್ರಹ್ಮ).

ವಿ. : ೧. ಬ್ರಹ್ಮವಾಯುಗಳ ಅನಂತರದ ಸ್ಥಾನ ತಾರತಮ್ಯದಲ್ಲಿ ಗರುಡ, ಶೇಷ, ರುದ್ರರದು. ಇವರು ಮೂವರೂ ಸಮಾನರು ಎಂಬುದು ವಿಶೇಷ ; ಹೀಗೆ ಇವರು ವಾವೆಯಲ್ಲಿ ತನ್ನ ಮೊಮ್ಮಕ್ಕಳಾಗುವುದರಿಂದ ಅವರೊಂದಿಗೆ ಸ್ವಯಂವರ ಅತ್ಯಂತ ಅನುಚಿತ ಎಂಬುದು ಸೂಚಿತ.

೨. ಇದರಲ್ಲಿನ ಅಬ್ಜಾಸನಲಬ್ಧಜನ್ಮಾ ಎಂಬುದು ಶಿವನಂತೆ ಶೇಷಗರುಡರಿಗೂ ಅನ್ವಯಿಸುವ ವಿಶೇಷಣವಾಗಿದೆ :

ಗರುಡಶೇಷಶಶಾಂಕದಶಶೇಖರರ ಜನಕ ಜಗದ್ಗುರುವೇ ತ್ವಚ್ಚರಣ-
ಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ । -ಹರಿಕಥಾಮೃತಸಾರ(೧/೩.)

---

೧. ಕಿಲೇತ್ಯನೇನಾತ್ರಾಸ್ಯ ರಸಬೀಜಂ ಸಪ್ತಮ್ । -ವ್ಯಾ.

ಗರುಡನು ಹಿಂದೆ ಬಲಿಷ್ಠನಾದ ಬಲಿಚಕ್ರವರ್ತಿಯೊಂದಿಗೆ ದ್ವಂದ್ವಯುದ್ಧ ಮಾಡಿ, ಗೋಮಂತಪರ್ವತದ ಮೇಲಿದ್ದ ತನ್ನ ಸ್ವಾಮಿಯಾದ ಶ್ರೀಕೃಷ್ಣನಿಗೆ ಕಿರೀಟವನ್ನು ಸಮರ್ಪಿಸಿದ.

ವಿ. : ೧. ಈ ಪದ್ಯದಲ್ಲಿ ಗರುಡನ ಮಹಿಮೆ ವರ್ಣಿತವಾಗಿದೆ.

೨. ತನ್ನ ರೆಕ್ಕೆಗಳ ಹೊಡೆತದಿಂದಲೇ ಬೆಟ್ಟಗಳನ್ನು, ಸಮುದ್ರಗಳನ್ನು , ಉಲ್ಲೋಲಕಲ್ಲೋಲಗೊಳಿಸುವ ಆ ವಿಶಿಷ್ಟವಾದ ಬಲ ಗರುಡದೇವರದು ; **ಅಂಬುರಾಶಿ** – ಜಲರಾಶಿ, ಸಮುದ್ರ.

೩. ಶ್ರೀಕೃಷ್ಣಬಲರಾಮರ ಸಮೇತ ಗೋಮಂತಪರ್ವತದಲ್ಲಿದ್ದಾಗ ಶ್ರೀಕೃಷ್ಣನ ಮೂಲರೂಪವಾದ ನಾರಾಯಣನ ಕಿರೀಟವನ್ನು ಅಪಹರಿಸಿದ ಬಲಿಚಕ್ರವರ್ತಿಯನ್ನು ಯುದ್ಧದಲ್ಲಿ ಸೋಲಿಸಿ, ಆ ಕಿರೀಟವನ್ನು ಶ್ರೀಕೃಷ್ಣ ರೂಪದ ಶ್ರೀಹರಿಗೆ ಸಮರ್ಪಿಸಿದ ವಿಶಿಷ್ಟ ಸೇವೆ ಗರುಡನದು. ಈ ಬಗ್ಗೆ[೧] ಹೆಚ್ಚಿನ ವಿವರಗಳು ಶ್ರೀಮದ್ಭಾಗವತ, ಹರಿವಂಶ ಹಾಗೂ ಮಹಾಭಾರತತಾತ್ಪರ್ಯ-ನಿರ್ಣಯಗಳಲ್ಲಿ ಬಂದಿವೆ.

೪.ಇಂದ್ರದೇವರು ಗರುಡನ ಮೇಲೆ ಅಮೃತಾಹರಣ ಪ್ರಸಂಗದಲ್ಲಿ ವಜ್ರಾಯುಧದಿಂದ ಅಪ್ಪಳಿಸಿದಾಗ ಗರುಡ ಅದಕ್ಕೆ ಯಾವ ರೀತಿಯಲ್ಲೂ ಮಣಿಯದೆ, ವಜ್ರಾಯುಧವು ಶ್ರೀನಾರಾಯಣ ಕವಚ ಮಂತ್ರಸಿದ್ಧನಾದ ದಧೀಚಿಮಹರ್ಷಿಯ ಅಸ್ಥಿಗಳಿಂದ ನಿರ್ಮಿತ ಎಂಬ ಕಾರಣದಿಂದಾಗಿ ಅದನ್ನು ಗೌರವಿಸಲೆಂದು ತನ್ನ ರೆಕ್ಕೆಯಲ್ಲಿನ ಒಂದು ಗರಿಯನ್ನು ಮಾತ್ರ

---

೧. ಬಲಿನಾ ಶ್ರೀವಿಷ್ಣುಮುಕುಟಾಪಹಾರಿಣಾ ಮಹಾಬಲಿನಾ ಸಮಂ ನಿಯುಧ್ಯ ಗೋಮಂತಮೂರ್ಧ್ನಿ ಗೋಮಂತಾಖ್ಯಪರ್ವತಾಗ್ರೇ ನಿಜದೇವತಾಯೈ ಸ್ವಸ್ವಾಮಿನೇ ಶ್ರೀಕೃಷ್ಣಾಯ ಮುಕುಟಂ ಪ್ರಾದಾತ್ । ಕಥಾ ತು ಭಾಗವತಾದೌ (ಹರಿವಂಶೇ-೨/೩೭-೪೮) ಸ್ಪಷ್ಟಾ ದ್ರಷ್ಟವ್ಯಾ । ಅತ್ರಾನ್ಯಸೇವಾಕಾರಿತ್ವಂ ಶ್ರೀವಿಷ್ಣುಪರದೇವತಾ-ಕಾತ್ವಂ ಚಾಸ್ವರಸಬೀಜಮ್ ।
ತದಾ ದುಗ್ಧಾಬ್ಧೌ ಸಂಸ್ತುತಿಸ್ಥೈಃ ಸುರಾದ್ಯೈಃ ಪೂಜಾಂ ಪ್ರಾಪ್ತುಂ ಸ್ಥಾನಮೇಷಾಂ ಚ ಯೋಗ್ಯಮ್ ।
ಮುಕ್ತಸ್ಥಾನಾದಾಪ ನಾರಾಯಣೋಽಜೋ ಬಲಿಶ್ಚಾಗಾತ್ ತತ್ರ ಸಂದ್ರಷ್ಟುಮೀಶಮ್॥
ತತ್ರಾಸುರಾವೇಶಮಮುಷ್ಯ ವಿಷ್ಣುಃ ಸಂದರ್ಶಯನ್ ಸುಪ್ತಿಹೀನೋಽಪಿ ನಿತ್ಯಮ್ ।
ಸಂಸುಪ್ತವಚ್ಚೈಶ್ಯ ಉದಾರಕರ್ಮಾ ಸಂಜ್ಞಾಯೈ ದೇವಾನಾಂ ಮುಖಮೀಕ್ಷ್ಯಾಪ್ರಮೇಯಃ॥
ದೇವಾಶ್ಚ ತದ್ಭಾವವಿದೋಽಖಿಲಾಶ್ಚ ನಿಮೀಲಿತಾಕ್ಷಾಃ ಶಯನೇಷು ಶಿಶ್ಯಿರೇ ।
ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟಮಾದಾಯಾಗಾಜ್ಜಹಸುಸ್ತತ್ರ ದೇವಾಃ ॥
ನಾರಾಯಣೇ ಸರ್ವದೇವೈಃ ಸಮೇತೇ ಬ್ರಹ್ಮಾದಿಭಿರ್ಹಾಸಮಾನೇ ಸುಪರ್ಣಃ ।
ಗತ್ವಾ ಪಾತಾಲಂ ಯುಧಿ ಜಿತ್ವಾ ಬಲಿಂ ಚ ಕಿರೀಟಮಾದಾಯಾಭ್ಯಯಾದ್ಯತ್ರ ಕೃಷ್ಣಃ॥
ತತ್ ತಸ್ಯ ಶೀರ್ಷ್ಣಿ ಪ್ರತಿಮುಚ್ಯ ನತ್ವಾ ಖಗಃ ಸ್ತುತ್ವಾ ದೇವದೇವಂ ರಮೇಶಮ್ ।
ಸ್ಮೃತ ಆಗಚ್ಛೇತ್ಯೇವ ವಿಸರ್ಜಿತೋಽಮುನಾ ಯಯೌ ದುಗ್ಧಾಬ್ಧಿಂ ಯತ್ರ ನಾರಾಯಣೋಽಸೌ॥
ಕಿರೀಟಂ ತತ್ ಕೃಷ್ಣಮೂರ್ಧ್ನಿ ಪ್ರವಿಷ್ಟಂ ತತ್ತುಲ್ಯಮಾಸೀತ್ ತಸ್ಯ ರೂಪೇಷ್ವಭೇದಾತ್ ।
ತದಿಚ್ಛಯಾ ಚೈವ ನಾರಾಯಣಸ್ಯ ಶೀರ್ಷ್ಣ್ಯಪ್ಯಾಸೀದ್ಯುಗಪದ್ದುಗ್ಧವಾರ್ಧೌ ॥ -ಮ.ಭಾ.ತಾ.ನಿ.(೧೬/೪-೯)

ಉದುರಿಸಿದ. ಅಂದಿನಿಂದ ಗರುಡನಿಗೆ 'ಸುಪರ್ಣ' ಎಂಬ ಹೆಸರು ಪ್ರಸಿದ್ಧವಾಯಿತು ಎಂಬ ವಿಶೇಷಾಂಶ ಮಹಾಭಾರತದಲ್ಲಿದೆ[1].

೫. ಇದರಿಂದ ವಜ್ರಾಯುಧಕ್ಕೂ ಮಣಿಯದ ಅಪ್ರತಿಮ ಮಹಾಪರಾಕ್ರಮಿ ಗರುಡ ಎಂಬ ಪ್ರಮೇಯ ತಿಳಿಯುವುದು. ಇದರಂತೆ ಗರುಡನಿಗಿಂತ ಮಿಗಿಲಾದ ಹನುಮಂತನ ಇಂದ್ರದೇವರ ವಜ್ರಾಯುಧದ ಪೆಟ್ಟಿಗೆ ತನ್ನ ಹನುವೂ ಘಾಸಿಗೊಳ್ಳದೆ ಹನುಮಂತ ಎನ್ನಿಸಿದ ವಿಶೇಷ ವಿವರ ವಾಲ್ಮೀಕಿ ರಾಮಾಯಣದಲ್ಲಿದೆ[2].

## ಮುಕ್ತಿಮಾರ್ಗವೆನ್ನಿಸಿದ ಶೇಷಗರುಡರು

ಸ ವಿಷ್ಣುವಾಹತ್ವಮವಾಪ ತಾರ್ಕ್ಷ್ಯ-
ಸ್ತಪೋಭಿರಪ್ಯನ್ಯಸುರೈರಸಾಧ್ಯಮ್ ।
ತದೀಯತಲ್ಪತ್ವಮಹೀಶ್ವರೋಽಯಂ
ವಿಮುಕ್ತಿಮಾರ್ಗೌ ಕಿಲ ತೌ ಸುರಾಣಾಮ್ ॥ ೨೨ ॥

ಈ ಗರುಡನು ತಪಸ್ಸುಗಳಿಂದಲೂ ಸಹ ಇತರ ಸುರರಿಗೆ ಸರ್ವಥಾ ನಿಲುಕದ ವಿಷ್ಣುವಾಹನ-ನಾಗುವ ಹಿರಿಮೆಯನ್ನು ಪಡೆದನು; ನಾಗರಾಜನಾದ ಶೇಷ ಆ ವಿಷ್ಣುವಿನ ಹಾಸಿಗೆ ಎನ್ನಿಸಿದನು. ಇವರಿಬ್ಬರು ದೇವತೆಗಳಿಗೆ ಮುಕ್ತಿಮಾರ್ಗ ಎನ್ನಿಸುವರು.

ವಿ. : ೧. ವಿಷ್ಣುವಿಗೆ ವಾಹನ ಎನ್ನಿಸಿದ್ದು ಗರುಡನ ಸಾಧನೆಯಾದರೆ, ಹಾಸಿಗೆ ಎನ್ನಿಸಿದ್ದು ಶೇಷನ ಸಾಧನೆ ಎಂದು ಭಾವ. ಇದು ದ್ವಾದಶಸ್ತೋತ್ರದ ಕೆಳಗಿನ ೨ ಶ್ಲೋಕಗಳ ಸಾರವಾಗಿದೆ :

ತತ್ಪಾದಪಂಕಜಮಹಾಸನತಾಮವಾಪ ಶರ್ವಾದಿವಂದ್ಯಚರಣೋ ಯದಪಾಂಗಲೇಶಮ್ ।
ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥
ನಾಗಾರಿರುಗ್ರಬಲಪೌರುಷ ಆಪ ವಿಷ್ಣೋರ್ವಾಹತ್ವಮುತ್ತಮಜವೋ ಯದಪಾಂಗಲೇಶಮ್ ।
ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ -(೭/ ೭,೮)

---

೧. ನ ಚ ವಜ್ರನಿಪಾತೇನ ರುಜಾ ಮೇಽಸ್ತೀಹ ಕಾಚನ ।
ಏವಮುಕ್ತ್ವಾ ತತಃ ಪತ್ರಮುತ್ಸಸರ್ಜ ಸ ಪಕ್ಷಿರಾಟ್ ॥ - ಮಹಾಭಾರತ (ಆದಿಪರ್ವ ೩೩/೨೨)

೨. ಮತ್ಕರೋತ್ಸೃಷ್ಟವಜ್ರೇಣ ಹನುರಸ್ಯ ಯಥಾಽಹತಃ ।
ನಾಮ್ನಾ ವೈ ಕಪಿಶಾರ್ದೂಲೋ ಭವಿತಾ ಹನುಮಾನಿತಿ ॥ -ವಾಲ್ಮೀಕಿರಾಮಾಯಣ(೭/೩೬/೧೧)

ಭಂಗೇ ಪ್ರಸಕ್ತೇಽಪಿ ನ ಭಂಗಮವಾಪ ಹನುಃ ಶಿಶೋರ್ಯದ್ಧನುಮಾನತೋಽಯಮ್ ।
ಉಕ್ತ್ವೇತ್ಥಮಮ್ಲಾನಸರೋಜಮಾಲಾಂ ದಿವ್ಯಾಂ ಮಹೇಂದ್ರೋ ನಿದಧೇ ತದಂಸೇ ॥
-ಸಂಗ್ರಹರಾಮಾಯಣ,ಕಿಷ್ಕಿಂಧಾಕಾಂಡ, ಪ್ರಥಮಸರ್ಗ(೨೩)

೩. ಈ ಮೂವರೂ ಬ್ರಹ್ಮದೇವರ ಪುತ್ರರಾಗಿರುವಂತೆ ಭಾವಿ ಬ್ರಹ್ಮದೇವರಾದ ವಾಯು - ದೇವರಿಗೂ ಸಹ ಪುತ್ರರಾದವರು ಎಂಬ ಮತ್ತೊಂದು ವಿಶೇಷವನ್ನು ಇಲ್ಲಿ ತಿಳಿಯಬೇಕು :

ಯಸ್ಯಾಃ ಪ್ರಸಾದಾತ್ ಪರಮಂ ವಿದಂತಿ ಶೇಷಃ ಸುಪರ್ಣೋ ಗಿರಿಶಃ ಸುರೇಂದ್ರಃ ।
ಮಾತಾ ಚ ವಿಷಾಂ ಪ್ರಥಮೈವ ಭಾರತೀ ಸಾ ದ್ರೌಪದೀ ನಾಮ ಬಭೂವ ಭೂಮೌ ॥
ಯಾ ಮಾರುತಾದ್ಗರ್ಭಮವಾಪ ಪೂರ್ವಂ ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।
ಚತುರ್ಮುಖಾಭಾನ್ ಚತುರಃ ಕುಮಾರಾನ್ ಸಾ ದ್ರೌಪದೀ ನಾಮ ಬಭೂವ ಭೂಮೌ ॥
-ಮ.ಭಾ.ತಾ.ನಿ.(೨/೧೭೦,೧೭೧)

## ತ್ರಿಪುರಾರಿಯಾದ ಶಿವ

**ಶರ್ವಃ ಸುಪರ್ವರಿಪುಗರ್ವವಿಭೇದದಕ್ಷಃ**
**ಪೂರ್ವಂ ಪುರತ್ರಯಮಯಂ ಕಿಲ ದೇವ್ಯಜೈಷೀತ್ ।**
**ಹರ್ಯಂಘ್ರಿತೀರ್ಥಪರಿಪೂರ್ಣಕಪರ್ದಮೇನಂ**
**ಗೌರ್ಯತ್ಯಸಾಧ್ಯಮಪಿ ತಂ ವಶಯಾಂಬಭೂವ ॥ ೧೯ ॥**

ಈ ಶಿವನು ದೇವತೆಗಳಿಗೆ ಶತ್ರುಗಳಾದ ಅಸುರರ ಸೊಕ್ಕನ್ನು ಅಡಗಿಸುವಲ್ಲಿ ನಿಪುಣ ; ಹಿಂದೆ ಇವನು ತ್ರಿಪುರಾಸುರನನ್ನು ಪರಾಭವಗೊಳಿಸಿದನಲ್ಲವೆ ! ಅಮ್ಮ ದೇವಿ ! ಶ್ರೀಹರಿಯ ಪಾದಕಮಲದ ಪುಣ್ಯತೀರ್ಥವಾದ ಗಂಗೆಯನ್ನು ತನ್ನ ಜಟೆಯಲ್ಲಿ ತುಂಬಿಸಿಕೊಂಡಿರುವ, ಒಲಿಸಲು ಸುಲಭಸಾಧ್ಯವಲ್ಲದ ಇವನನ್ನು ಪಾರ್ವತಿಯು ತನ್ನ ವಶನಾಗುವಂತೆ ಮಾಡಿ-ಕೊಂಡಳು.

ವಿ. : ೧. ಇದರಲ್ಲಿ ಶಿವನ ಹಿರಿಮೆ ನಿರೂಪಿತವಾಗಿದೆ. ಶಿವ ಮೇಲ್ನೋಟಕ್ಕೆ ಅಸುರರಿಗೆ ವರನೀಡುವ ದೇವತೆಯಂತೆ ಕಂಡರೂ ವಾಸ್ತವವಾಗಿ ಅಸುರರನ್ನು ಸದೆಬಡಿಯುವಲ್ಲಿ ಅತ್ಯಂತ ನಿಪುಣ. ಅದಕ್ಕೆ ಅತ್ಯುತ್ತಮ ನಿದರ್ಶನವೆಂದರೆ ತ್ರಿಪುರಾಸುರರ ಸಂಹಾರಕಾರ್ಯ. ಅದರಿಂದಾಗಿ ಪುರಾರಿ, ತ್ರಿಪುರಾರಿ ಎಂಬುದಾಗಿ ಶಿವ ಪ್ರಸಿದ್ಧ; [೧]ಸುಪರ್ವರು ಎಂದರೆ ದೇವತೆಗಳು ಎಂದರ್ಥ; ಶರ್ವ - ಶಿವ;, ಕಪರ್ದ - ಜಟೆ.

೨. [೨]ವಿಷ್ಣುಪಾದೋದಕವಾದ ಗಂಗೆಯನ್ನು ಸದಾ ಜಟೆಯಲ್ಲಿ ಧರಿಸಿ ಗಂಗಾಧರ ಎನ್ನಿಸಿರುವ ಮತ್ತೊಂದು ಹಿರಿಮೆಯೂ ಶಿವನದಾಗಿದೆ. ಇದರಿಂದಾಗಿ ಶಿವ ಅವರಿಬ್ಬರ

---

೧. ಸುಪರ್ವಾಣಃ ಸುಮನಸಸ್ತ್ರಿದಿವೇಶಾ ದಿವೌಕಸಃ । -ಅಮರಕೋಶ

೨. ಅತ್ರ ಶ್ರೀವಿಷ್ಣುಪಾದೋದಕಧಾರಣಂ ಸ್ತ್ರ್ಯಂತರಪರಿಗ್ರಹಶಾಸ್ತ್ರರಸಬೀಜಮ್ । ಗೌರೀತ್ಯನೇನ ಪರಿಗೃಹೀತಸ್ತ್ರ್ಯಂತರಸ್ಯಾತಿಸೌಂದರ್ಯಂ ಅಸ್ವರಸಬೀಜಂ ಚ ದ್ಯೋತ್ಯತೇ । ಅತಿಸೌಂದರ್ಯವದ್ವನಿತಾಂತರೋಪೇತಸ್ಯಾಪ್ಯ ಇತಿ ಭಾವಃ । -ವ್ಯಾ.

ಗರುಡನು ಹಿಂದೆ ಬಲಿಷ್ಠನಾದ ಬಲಿಚಕ್ರವರ್ತಿಯೊಂದಿಗೆ ದ್ವಂದ್ವಯುದ್ಧ ಮಾಡಿ, ಗೋಮಂತಪರ್ವತದ ಮೇಲಿದ್ದ ತನ್ನ ಸ್ವಾಮಿಯಾದ ಶ್ರೀಕೃಷ್ಣನಿಗೆ ಕಿರೀಟವನ್ನು ಸಮರ್ಪಿಸಿದ.

ವಿ. : ೧. ಈ ಪದ್ಯದಲ್ಲಿ ಗರುಡನ ಮಹಿಮೆ ವರ್ಣಿತವಾಗಿದೆ.

೨. ತನ್ನ ರೆಕ್ಕೆಗಳ ಹೊಡತದಿಂದಲೇ ಬೆಟ್ಟಗಳನ್ನು ಸಮುದ್ರಗಳನ್ನು, ಉಲ್ಲೋಲಕಲ್ಲೋಲಗೊಳಿಸುವ ಆ ವಿಶಿಷ್ಟವಾದ ಬಲ ಗರುಡದೇವರದು; ಅಂಬುರಾಶಿ – ಜಲರಾಶಿ, ಸಮುದ್ರ.

೩. ಶ್ರೀಕೃಷ್ಣ ಬಲರಾಮರ ಸಮೇತ ಗೋಮಂತಪರ್ವತದಲ್ಲಿದ್ದಾಗ ಶ್ರೀಕೃಷ್ಣನ ಮೂಲರೂಪವಾದ ನಾರಾಯಣನ ಕಿರೀಟವನ್ನು ಅಪಹರಿಸಿದ ಬಲಿಚಕ್ರವರ್ತಿಯನ್ನು ಯುದ್ಧದಲ್ಲಿ ಸೋಲಿಸಿ, ಆ ಕಿರೀಟವನ್ನು ಶ್ರೀಕೃಷ್ಣ ರೂಪದ ಶ್ರೀಹರಿಗೆ ಸಮರ್ಪಿಸಿದ ವಿಶಿಷ್ಟ ಸೇವೆ ಗರುಡನದು. ಈ ಬಗ್ಗೆ ಹೆಚ್ಚಿನ ವಿವರಗಳು ಶ್ರೀಮದ್ಭಾಗವತ, ಹರಿವಂಶ ಹಾಗೂ ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಬಂದಿವೆ.

೪. ಇಂದ್ರದೇವರು ಗರುಡನ ಮೇಲೆ ಅಮೃತಾಹರಣ ಪ್ರಸಂಗದಲ್ಲಿ ವಜ್ರಾಯುಧದಿಂದ ಅಪ್ಪಳಿಸಿದಾಗ ಗರುಡ ಅದಕ್ಕೆ ಯಾವ ರೀತಿಯಲ್ಲೂ ಮಣಿಯದೆ, ವಜ್ರಾಯುಧವು ಶ್ರೀನಾರಾಯಣ ಕವಚ ಮಂತ್ರಸಿದ್ಧನಾದ ದಧೀಚಿಮಹರ್ಷಿಯ ಅಸ್ಥಿಗಳಿಂದ ನಿರ್ಮಿತ ಎಂಬ ಕಾರಣದಿಂದಾಗಿ ಅದನ್ನು ಗೌರವಿಸಲೆಂದು ತನ್ನ ರೆಕ್ಕೆಯಲ್ಲಿನ ಒಂದು ಗರಿಯನ್ನು ಮಾತ್ರ

---

೧. ಬಲಿನಾ ಶ್ರೀವಿಷ್ಣುಮುಕುಟಾಪಹಾರಿಣಾ ಮಹಾಬಲಿನಾ ಸಮಂ ನಿಯುಧ್ಯ ಗೋಮಂತಮೂರ್ಧ್ನಿ ಗೋಮಂತಾಖ್ಯಪರ್ವತಾಗ್ರೇ ನಿಜದೇವತಾಯೈ ಸ್ವಸ್ವಾಮಿನೇ ಶ್ರೀಕೃಷ್ಣಾಯ ಮುಕುಟಂ ಪ್ರಾದಾತ್ । ಕಥಾ ತು ಭಾಗವತಾದೌ (ಹರಿವಂಶೇ-೨/೩.೭-೪೮) ಸ್ಪಷ್ಟಾ ದ್ರಷ್ಟವ್ಯಾ । ಅತ್ರಾನ್ಯಸೇವಾಕಾರಿತ್ವಂ ಶ್ರೀವಿಷ್ಣುಪರದೇವತಾಕಾತ್ವಂ ಚಾಸ್ವರಸಬೀಜಮ್ ।

ತದಾ ದುಗ್ಧಾಬ್ಧೌ ಸಂಸ್ತುತಿಸ್ಥೈಃ ಸುರಾದ್ಯೈಃ ಪೂಜಾಂ ಪ್ರಾಪ್ತುಂ ಸ್ಥಾನಮೇಷಾಂ ಚ ಯೋಗ್ಯಮ್ ।
ಮುಕ್ತಸ್ಥಾನಾದಾಪ ನಾರಾಯಣೋಽಜೋ ಬಲಿಶ್ಚಾಗಾತ್ ತತ್ರ ಸಂದ್ರಷ್ಟುಮೀಶಮ್॥
ತತ್ರಾಸುರಾವೇಶಮಮುಷ್ಯ ವಿಷ್ಣುಃ ಸಂದರ್ಶಯನ್ ಸುಪ್ತಿಹೀನೋಽಪಿ ನಿತ್ಯಮ್ ।
ಸಂಸುಪ್ತವಚ್ಚೇಶ್ವ ಉದಾರಕರ್ಮಾ ಸಂಜ್ಞಾಯೈ ದೇವಾನಾಂ ಮುಖಮೀಕ್ಷ್ಯಾಪ್ರಮೇಯಃ ॥
ದೇವಾಶ್ಚ ತದ್ಭಾವವಿದೋಽಖಿಲಾಶ್ಚ ನಿಮೀಲಿತಾಕ್ಷಾಃ ಶಯನೇಷು ಶಿಶ್ಯಿರೇ ।
ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟಮಾದಾಯಾಗಾಜ್ಜಹಸುಸ್ತತ್ರ ದೇವಾಃ ॥
ನಾರಾಯಣೇ ಸರ್ವದೇವೈಃ ಸಮೇತೇ ಬ್ರಹ್ಮಾದಿಭಿರ್ಹಾಸಮಾನೇ ಸುಪರ್ಣಃ ।
ಗತ್ವಾ ಪಾತಾಲಂ ಯುಧಿ ಜಿತ್ವಾ ಬಲಿಂ ಚ ಕಿರೀಟಮಾದಾಯಾಭ್ಯಯಾದ್ಯತ್ರ ಕೃಷ್ಣಃ ॥
ತತ್ ತಸ್ಯ ಶೀರ್ಷ್ಣಿ ಪ್ರತಿಮುಚ್ಯ ನತ್ವಾ ಖಗಃ ಸ್ತುತ್ವಾ ದೇವದೇವಂ ರಮೇಶಮ್ ।
ಸ್ತುತ ಆಗಚ್ಛೇತ್ಯೇವ ವಿಸರ್ಜಿತೋಽಮುನಾ ಯಯೌ ದುಗ್ಧಾಬ್ಧಿಂ ಯತ್ರ ನಾರಾಯಣೋಽಸೌ ॥
ಕಿರೀಟಂ ತತ್ ಕೃಷ್ಣಮೂರ್ಧ್ನಿ ಪ್ರವಿಷ್ಟಂ ತತ್ತುಲ್ಯಮಾಸೀತ್ ತಸ್ಯ ರೂಪೇಷ್ವಭೇದಾತ್ ।
ತದಿಚ್ಛಯಾ ಚೈವ ನಾರಾಯಣಸ್ಯ ಶೀರ್ಷ್ಣ್ಯಪ್ಯಾಸೀದ್ಯುಗಪದುದ್ಗತಾರ್ಥ್ಯೌ ॥ -ಮ.ಭಾ.ತಾ.ನಿ.(೧೬/೪-೯)

ಉದುರಿಸಿದ. ಅಂದಿನಿಂದ ಗರುಡನಿಗೆ 'ಸುಪರ್ಣ' ಎಂಬ ಹೆಸರು ಪ್ರಸಿದ್ಧವಾಯಿತು ಎಂಬ ವಿಶೇಷಾಂಶ ಮಹಾಭಾರತದಲ್ಲಿದೆ[೧].

೫. ಇದರಿಂದ ವಜ್ರಾಯುಧಕ್ಕೂ ಮಣಿಯದ ಅಪ್ರತಿಮ ಮಹಾಪರಾಕ್ರಮಿ ಗರುಡ ಎಂಬ ಪ್ರಮೇಯ ತಿಳಿಯುವುದು. ಇದರಂತೆ ಗರುಡನಿಗಿಂತ ಮಿಗಿಲಾದ ಹನುಮಂತನ ಇಂದ್ರದೇವರ ವಜ್ರಾಯುಧದ ಪೆಟ್ಟಿಗೆ ತನ್ನ ಹನುವೂ ಘಾಸಿಗೊಳ್ಳದೆ ಹನುಮಂತ ಎನ್ನಿಸಿದ ವಿಶೇಷ ವಿವರ ವಾಲ್ಮೀಕಿ ರಾಮಾಯಣದಲ್ಲಿದೆ[೨].

### ಮುಕ್ತಿಮಾರ್ಗವೆನ್ನಿಸಿದ ಶೇಷಗರುಡರು

ಸ ವಿಷ್ಣುವಾಹತ್ವಮವಾಪ ತಾರ್ಕ್ಷ್ಯ-
ಸ್ತಪೋಭಿರಪ್ಯನ್ಯಸುರೈರಸಾಧ್ಯಮ್ ।
ತದೀಯತಲ್ಪತ್ವಮಹೀಶ್ವರೋಽಯಂ
ವಿಮುಕ್ತಿಮಾರ್ಗೌ ಕಿಲ ತೌ ಸುರಾಣಾಮ್ ॥ ೨೨ ॥

ಈ ಗರುಡನು ತಪಸ್ಸುಗಳಿಂದಲೂ ಸಹ ಇತರ ಸುರರಿಗೆ ಸರ್ವಥಾ ನಿಲುಕದ ವಿಷ್ಣುವಾಹನ-ನಾಗುವ ಹಿರಿಮೆಯನ್ನು ಪಡೆದನು; ನಾಗರಾಜನಾದ ಶೇಷ ಆ ವಿಷ್ಣುವಿನ ಹಾಸಿಗೆ ಎನ್ನಿಸಿದನು. ಇವರಿಬ್ಬರು ದೇವತೆಗಳಿಗೆ ಮುಕ್ತಿಮಾರ್ಗ ಎನ್ನಿಸುವರು.

ವಿ. : ೧. ವಿಷ್ಣುವಿಗೆ ವಾಹನ ಎನ್ನಿಸಿದ್ದು ಗರುಡನ ಸಾಧನೆಯಾದರೆ, ಹಾಸಿಗೆ ಎನ್ನಿಸಿದ್ದು ಶೇಷನ ಸಾಧನೆ ಎಂದು ಭಾವ. ಇದು ದ್ವಾದಶಸ್ತೋತ್ರದ ಕೆಳಗಿನ ೨ ಶ್ಲೋಕಗಳ ಸಾರವಾಗಿದೆ :

ತತ್ಪಾದಪಂಕಜಮಹಾಸನತಾಮವಾಪ ಶರ್ವಾದಿವಂದ್ಯಚರಣೋ ಯದಪಾಂಗಲೇಶಮ್ ।
ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥
ನಾಗಾರಿರುಗ್ರಬಲಪೌರುಷ ಆಪ ವಿಷ್ಣೋರ್ವಾಹತ್ವಮುತ್ತಮಜವೋ ಯದಪಾಂಗಲೇಶಮ್ ।
ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ -(೭/ ೭,೮)

---

೧. ನ ಚ ವಜ್ರನಿಪಾತೇನ ರುಜಾ ಮೇಽಸ್ತೀಹ ಕಾಚನ ।
ಏವಮುಕ್ತ್ವಾ ತತಃ ಪತ್ರಮುತ್ಸಸರ್ಜ ಸ ಪಕ್ಷಿರಾಟ್ ॥ - ಮಹಾಭಾರತ (ಆದಿಪರ್ವ ೩೩/೨೨)

೨. ಮತ್ಕರೋತ್ಸೃಷ್ಟವಜ್ರೇಣ ಹನುರಸ್ಯ ಯಥಾಽಹತಃ ।
ನಾಮ್ನಾ ವೈ ಕಪಿಶಾರ್ದೂಲೋ ಭವಿತಾ ಹನುಮಾನಿತಿ ॥ -ವಾಲ್ಮೀಕಿರಾಮಾಯಣ(೭/೩೬/೧೧)

ಭಂಗೇ ಪ್ರಸಕ್ತೇಽಪಿ ನ ಭಂಗಮಾಪ ಹನುಃ ಶಿಶೋರ್ಯದ್ಧನುಮಾನತೋಽಯಮ್ ।
ಉತ್ಕ್ಷಿಪ್ತಮಮ್ಲಾನಸರೋಜಮಾಲಾಂ ದಿವ್ಯಾಂ ಮಹೇಂದ್ರೋ ನಿದಧೇ ತದಂಸೇ ॥
-ಸಂಗ್ರಹರಾಮಾಯಣ, ಕಿಷ್ಕಿಂಧಾಕಾಂಡ, ಪ್ರಥಮಸರ್ಗ(೨೩)

೨. [೧]ದೇವತೆಗಳ ಮಾರ್ಗವು ಶೇಷಮಾರ್ಗ, ಗರುಡಮಾರ್ಗ ಎಂಬುದಾಗಿ ಎರಡುಬಗೆ ಎಂಬ ವಿವರ ಬ್ರಹ್ಮಸೂತ್ರಭಾಷ್ಯ ಹಾಗೂ ಅನುವ್ಯಾಖ್ಯಾನಗಳಲ್ಲಿ[೨]ವರ್ಣಿತವಾಗಿದೆ.

೩. ಅನ್ಯಸುರೈರಸಾಧ್ಯಮ್ ಎಂಬ ವಿಶೇಷಣವು ಶೇಷಗರುಡರಿಬ್ಬರಿಗೂ ಸಮಾನವಾಗಿ ಅನ್ವಯಿಸುವ ವಿಶೇಷಣಗಳು.

### ಗರುಡಶೇಷರುದ್ರರಿಂದ ವಂದಿತನಾದ ಶ್ರೀಹರಿ

ಗರುತ್ಮದಂಸಾಚಲನೀಲಮೇಘಂ
ಫಣೀಂದ್ರಹಾರೋಚ್ಚಯನೀಲರತ್ನಮ್ ।
ಉಮೇಶಹಂಸಪ್ರಿಯಪಾದಪದ್ಮಂ
ಪತಿಂ ಸತೀ ಸಾ ಚಕಮೇ ರಮೇಶಮ್ ॥ ೨೩ ॥

ಗರುಡನ ಹೆಗಲೆಂಬ ಬೆಟ್ಟದ ಮೇಲೆ ಕಂಗೊಳಿಸುವ ನೀಲಮೇಘದಂತಹ, ಸರ್ಪರಾಜನಾದ ಶೇಷನೆಂಬ ಮುತ್ತಿನ ಹಾರಗಳ ಮಧ್ಯೆ ನೀಲಮಣಿಯಂತೆ ಕಂಗೊಳಿಸುವ, ಉಮಾಪತಿ-ಯಾದ ಶಿವ ಎಂಬ ಹಂಸಪಕ್ಷಿಗೆ ಪ್ರಿಯವಾದ ಪಾದಪದ್ಮಗಳನ್ನು ಹೊಂದಿರುವ ರಮಾ-ಪತಿಯಾದ ಶ್ರೀಕೃಷ್ಣನನ್ನು ಆ ರುಗ್ಮಿಣೀದೇವಿಯು ಪತಿಯನ್ನಾಗಿ ವರಿಸಬಯಸಿದಳು.

ವಿ. : ೧. ಈ ವರೆಗೆ ಗರುಡಶೇಷರುದ್ರರ ಮಹಿಮೆಯನ್ನು ನಿರೂಪಿಸಿ, ಅವರೆಲ್ಲರ ಆರಾಧ್ಯ ದೇವತೆಯಾದ ಶ್ರೀಕೃಷ್ಣನನ್ನು ರುಗ್ಮಿಣಿಯು ತನ್ನ ಪತಿಯಾಗಿ ವರಿಸಿದಳು ಎಂದು ತಿಳಿಸುವ ಮೂಲಕ ಹರಿಸರ್ವೋತ್ತಮತ್ವವು ನಿರೂಪಿತವಾಯಿತು.

೨. ಎತ್ತರದ ಗರುಡನನ್ನು ಬೆಟ್ಟ ಎಂದೂ, ಶುಭ್ರವರ್ಣದ ಶೇಷನನ್ನು ಮುತ್ತಿನಹಾರಗಳ ಗುಚ್ಛ ಎಂದೂ, ಗೌರವರ್ಣದ ಶಿವನನ್ನು ಹಂಸ ಎಂದೂ, ಶ್ರೀಕೃಷ್ಣನನ್ನು ನೀಲಮೇಘ, ಇಂದ್ರನೀಲ-ಮಣಿ, ಹಾಗೂ ಕಮಲದಂತಹ ಪಾದವುಳ್ಳವ ಎಂದು ತಿಳಿಸುವ ಇಲ್ಲಿನ ರೂಪಕಗಳು ಅತ್ಯಂತ ರೋಚಕ.

### ದೇವೇಂದ್ರನ ಹಿರಿಮೆ

ತ್ರಿವಿಷ್ಟಪೇಶೋಽಯಮಭೂದ್ಬಲಾರಿ-
ಸ್ತ್ರಿವಿಕ್ರಮಶ್ರೀಚರಣಪ್ರಸಾದಾತ್ ।

---

೧. ಕಿಲೇತ್ಯನೇನ ಕೇಚನ ದೇವಾಃ ಗರುಡಮಾವಿಶ್ಯ ವಿಮುಕ್ತಿಂ ಗಚ್ಛಂತಿ । ಕೇಚನ ಶೇಷಮಾವಿಶ್ಯೇತಿ ಶಾಸ್ತ್ರಪ್ರಸಿದ್ಧಿಂ ದ್ಯೋತಯತಿ । -ವ್ಯಾ.

೨. ವಿವರಗಳಿಗೆ ಸರ್ಗ(೪/೬೦)ಶ್ಲೋಕದ ವಿವರಣೆಗಳನ್ನು ನೋಡಬಹುದು.

ವಿಮಥ್ನತಾ ತೇನ ಪಯಃ ಪಯೋಧಿಂ
ವಿಚಿತ್ರಸೌಭಾಗ್ಯವೃತಃ ಕೃತೋಽಸೌ ॥ ೨೪ ॥

ಸ್ವರ್ಗಾಧಿಪತಿಯಾದ ಈ ದೇವೇಂದ್ರನು ತ್ರಿವಿಕ್ರಮನಾದ ಶ್ರೀಹರಿಯ ಶ್ರೀಚರಣಗಳ ಅನುಗ್ರಹದಿಂದ ಬಲಾಸುರನನ್ನು ಸಂಹರಿಸುವಂತಾದ; ಇವನು ಕ್ಷೀರಸಾಗರವನ್ನು ಮಥಿಸಿ-ದಾಗ ಅದರಿಂದ ಉದ್ಭವಿಸಿದ ಬಗೆಬಗೆಯ ಸೌಭಾಗ್ಯಗಳು ಇವನನ್ನು ಅರಸಿ ಬಂದವು.

ವಿ. : ಇಂದ್ರನ ಹಿರಿಮೆಯಲ್ಲಿ ಸ್ವರ್ಗಾಧಿಪತ್ಯ ಹಾಗೂ ಬಲಾಸುರ ಸಂಹಾರಕಾರ್ಯಗಳು ಕಿರೀಟಪ್ರಾಯವಾಗಿವೆ. ಅವುಗಳ ವರ್ಣನೆ ಇಲ್ಲಿ ಬಂದಿದೆ. ಕ್ಷೀರಸಮುದ್ರಮಥನದ ಕಾರ್ಯವು ಇಂದ್ರದೇವರ ನಾಯಕತ್ವದಲ್ಲಿ ನಡೆಯಿತು. ಆಗ ಉದ್ಭವಿಸಿದ ಪಾರಿಜಾತಾದಿ ಅಪಾರ ಸಂಪತ್ತಿನ ಭಾಗ ಇಂದ್ರನ ಬಳಿ ಸೇರಿದವು ಎಂದು ಭಾವ; ಇಂದ್ರ ಶಬ್ದದ ಅರ್ಥವೂ ಸಹ ಪರಮೈಶ್ವರ್ಯ ಯುಕ್ತ ಎಂದೇ ಆಗಿದೆ; ಇದಿ ಪರಮೈಶ್ವರ್ಯೇ; ತ್ರಿವಿಷ್ಟಪ - ಸ್ವರ್ಗ; ಬಲಾರಿ - ಬಲ ಎಂಬ ಅಸುರನನ್ನು ಸಂಹರಿಸಿದ್ದರಿಂದ ಇಂದ್ರನಿಗೆ ಬಲಾರಿ ಎಂದು ಹೆಸರು.

### ಇಂದ್ರನ ಮಹಾವೈಭವ

ಕಲ್ಪದ್ರುಮಃ ಕರಿವರಃ ಕವಿವರ್ಣ್ಯವಾಜೀ
ನಿತ್ಯಂ ವಶೇಽಸ್ಯ ಕಿಲ ದೇವಿ ಸಭಾಂ ಸ ದೈವೀಮ್ ।
ಮಧ್ಯೇ ಮಹಾಸನಗತಃ ಪರಿಪಾತ್ಯಜಸ್ರ-
ಮಿಂದ್ರೋಽಯಮಿಂದ್ರಪದಯೋಗ್ಯಮಹಾವಿಭೂತಿಃ ॥ ೨೫ ॥

ಹೇ ದೇವಿ! ಕಲ್ಪವೃಕ್ಷ, ಶ್ರೇಷ್ಠ ಆನೆಯಾದ ಐರಾವತ, ಜ್ಞಾನಿಗಳು ಬಣ್ಣಿಸುವ ಉಚ್ಚೈಃಶ್ರವಸ್ ಎಂಬ ಕುದುರೆ - ಇವು ಸದಾ ಇವನ ವಶದಲ್ಲಿರುವುವು; ದೇವಸಭೆಯಲ್ಲಿ ಮಧ್ಯದಲ್ಲಿ ಸಿಂಹಾಸನದಲ್ಲಿ ಕುಳಿತು ಸದಾ ಲೋಕಗಳನ್ನು ಪಾಲಿಸುವ ಈ ಇಂದ್ರನು ಇಂದ್ರಪದಕ್ಕೆ ಉಚಿತವಾದಂತಹ ಮಹದೈಶ್ವರ್ಯವನ್ನು ಹೊಂದಿರುವನು.

ವಿ. : ೧. ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ, ಮಂದಾರ, ಪಾರಿಜಾತ ಮೊದಲಾದ ವೈಭವಗಳು ಇಂದ್ರನ ಹಿರಿಮೆಯ ಒಂದು ಮುಖವಾದರೆ ಮತ್ತೊಂದು ಮಹಿಮೆ ಅಪಾರ ಐಶ್ವರ್ಯದಿಂದ ಕೂಡಿರುವುದು; ಇಂದ್ರ ಎಂಬ ಹೆಸರೇ ಆ ಪದವಿಯ ಹಿರಿಮೆಯನ್ನು ಸಾರುವುದು (ಇದಿ ಪರಮೈಶ್ವರ್ಯೇ); ವಾಜಿ-ಕುದುರೆ; ದ್ರುಮ-ವೃಕ್ಷ; ಕಲ್ಪದ್ರುಮ - ಕಲ್ಪವೃಕ್ಷ.

೨. ಐರಾವತ ಮೊದಲಾದವುಗಳಲ್ಲಿ ಮಹಾವಿಷ್ಣುವಿನ ವಿಭೂತಿರೂಪ ಇರುವ ವಿವರ ಭಗವದ್ಗೀತೆಯಲ್ಲಿ ಬಂದಿದೆ: ಐರಾವತಂ ಗಜೇಂದ್ರಾಣಾಂ (೧೦/೨೭); ಉಚ್ಚೈಃಶ್ರವಸ-ಮಶ್ವಾನಾಂ ವಿದ್ಧಿ ಮಾಮಮೃತೋಪಮಮ್ ।(೧೦/೨೭)

### ಗುರು ಮೊದಲಾದ ದೇವತೆಗಳು

ಅಯಂ ಸುರಾಣಾಂ ಗುರುರೇಷ ಧರ್ಮಃ
ಸುಧಾಕರೋಽಸೌ ಸ ಸಹಸ್ರರಶ್ಮಿಃ।
ಅಯಂ ಚ ರತ್ನಾಕರಶಬ್ದಿತೋಽಗ್ರ್ಯೇ
ಮಹತ್ತ್ವಮೇಷಾಮಭಿಧೈವ ವಕ್ತಿ ॥ ೨೬ ॥

ಹೇ ಶ್ರೇಷ್ಠಳಾದ ರುಗ್ಮಿಣೀ! ಇವನು ದೇವತೆಗಳ ಗುರುವಾದ ಬೃಹಸ್ಪತಿ; ಇವನು ಯಮಧರ್ಮ; ಇವನು ಅಮೃತಕಿರಣನಾದ ಚಂದ್ರ, ಇವನು ಸಹಸ್ರಕಿರಣನಾದ ಸೂರ್ಯ; ಇವನು ರತ್ನಾಕರ ಎಂಬ ಹೆಸರಿಗೆ ಪಾತ್ರನಾದ ವರುಣ, ಇವರ ಹಿರಿಮೆಗಳನ್ನು ಅವರ ಹೆಸರುಗಳೇ ತಿಳಿಸುವವು.

ವಿ. : ೧. ಬೃಹಸ್ಪತಿ ಮೊದಲಾದವರ ಹಿರಿಮೆಯು ಅವರ ಹೆಸರಿನಲ್ಲಿಯೇ ಸೂಚಿತ ಎಂಬುದು ಇಲ್ಲಿಯ ಅರ್ಥ. ಆದರೆ ಈ ಎಲ್ಲ ಹೆಸರುಗಳೂ ಸಹ ಅತ್ಯಂತ ಮುಖ್ಯವಾಗಿ ಶ್ರೀಹರಿಯನ್ನು ವರ್ಣಿಸುವುದರಿಂದ ಅವನ ಹಿರಿಮೆ ಉಳಿದೆಲ್ಲರಿಗಿಂತಲೂ ಅತ್ಯಂತ ಹಿರಿದಾದ ನಿರವಧಿಕ ಪರಮೈಶ್ವರ್ಯ ಎಂಬ ಸೂಚನೆಯು ಇಲ್ಲಿದೆ; ಸುಧಾಕರ – ಚಂದ್ರ.

೨. 'ಯೋ ದೇವಾನಾಂ ನಾಮಧಾ ಏಕ ಏವ' ಎಂಬ ಶ್ರುತಿಯಿಂದ ತಿಳಿಯುವಂತೆ ಮುಖ್ಯ-ವಾಗಿ ಸಕಲ ನಾಮಗಳು ಸಹ ಶ್ರೀವಿಷ್ಣುವಾಚಕ. ಆದ್ದರಿಂದ ಬೃಹಸ್ಪತಿ ಮೊದಲಾದ ಹೆಸರುಗಳು ಸಕಲ ವಿದ್ಯಾಪತಿ ಮೊದಲಾದ ಅರ್ಥದಲ್ಲಿ ಶ್ರೀವಿಷ್ಣುವಿನ ಮಹಿಮೆಯನ್ನೇ ಸೂಚಿಸುವವು ಎಂಬ ಪ್ರಮೇಯವು ಇದರಿಂದ ತಿಳಿಯುವುದು.

### ದೇವತೆಗಳ ಹಿರಿಮೆ

ಇಮೇ ಸುರಾಃ ಶ್ರೀಪತಿನಿತ್ಯಸೇವಾ-
ವಿಯೋಗಭೀತ್ಯಾಽನಿಮಿಷಾ ವಿನಿದ್ರಾಃ।
ಪ್ರಪೇದಿರೇ ತತ್ಕರುಣಾಪ್ರಭೂತ-
ಸುಧಾರಸಾಸ್ವಾದನತೋಽಮರತ್ವಮ್ ॥ ೨೭ ॥

ಈ ಸುರರೆಲ್ಲಾ ಶ್ರೀಹರಿಯ ನಿತ್ಯಸೇವೆಗೆ ಅಡ್ಡಿಯಾದೀತೆಂಬ ಅಂಜಿಕೆಯಿಂದ ಸದಾ ಎವೆ-ಯಿಕ್ಕದವರು, ನಿದ್ರೆ ಮಾಡದವರು ಆಗಿರುವರು. ಅವನ ಕರುಣೆಯಿಂದ ಲಭಿಸಿದ ಅಮೃತರಸದ ಸವಿಯಿಂದಾಗಿ ಇವರು ಅಮರತ್ವವನ್ನು ಪಡೆದಿರುವರು.

ವಿ. : ೧. ದೇವತೆಗಳಿಗೆ ಅನಿಮಿಷರು, ವಿನಿದ್ರರು, ಅಮರರು ಎಂಬ ಪ್ರಸಿದ್ಧ ಹೆಸರುಗಳ ಸ್ವಾರಸ್ಯ ಇಲ್ಲಿ ನಿರೂಪಿತವಾಗಿದೆ; ಅನಿಮಿಷರು - ದೇವತೆಗಳು[೧].

೨. ರೆಪ್ಪೆ ಹಾಕಿದಲ್ಲಿ ಎಲ್ಲಿ ಶ್ರೀಹರಿಯ ದರ್ಶನಕ್ಕೆ ಅಡ್ಡಿಯಾದಿತೋ ಎಂಬ ಕಾರಣದಿಂದ ಅವರು ಎವೆಯಿಕ್ಕುವುದಿಲ್ಲ; ಅದೇ ಕಾರಣಕ್ಕಾಗಿ ನಿದ್ರೆಯನ್ನೂ ಮಾಡುವುದಿಲ್ಲ; ಶ್ರೀಹರಿಯು ಧನ್ವಂತರಿ ರೂಪದಿಂದ ನೀಡಿದ ಅಮೃತದಿಂದಾಗಿ ಅವರು ಅಮರರೂ ಆಗಿ ಮಾನ್ಯರಾಗಿರುವರು.

### ಶ್ರೀಕೃಷ್ಣನ ಬಳಿಗೆ ನಡೆದ ರುಗ್ಮಿಣಿ

ಮರುತ್ವದತ್ಯುಚ್ಚ್ರಿತಭಾಗ್ಯಹೇತುಂ
ಸುರೌಘಸಂಜೀವನಮೂಲಭೂತಮ್ ।
ನರಾಂಸ್ತೃಣೀಕೃತ್ಯ ಜಗಾಮ ಭೈಷ್ಮೀ
ಪರಿಸ್ಫುರದ್ಭೂಷಣಭೂಷಣಾಂಗೀ ॥ ೨೮ ॥

ನರರನ್ನೆಲ್ಲಾ ತೃಣಸಮಾನರನ್ನಾಗಿ ಕಂಡು ಹೊಳೆಹೊಳೆಯುವ ಭೂಷಣಗಳಿಂದ ಅಲಂಕೃತ-ಳಾದ ರುಗ್ಮಿಣೀದೇವಿಯು ಇಂದ್ರನಿಗೆ ಪರಮೈಶ್ವರ್ಯಕ್ಕೆ ಕಾರಣನಾದವನೂ, ದೇವವೃಂದದ ಸಂಜೀವನಕ್ಕೆ ಮೂಲಕಾರಣನೂ ಆದ ಶ್ರೀಕೃಷ್ಣನತ್ತ ತೆರಳಿದಳು; (ಮರುತ್ವಾನ್-ಇಂದ್ರ).

ವಿ. : ೧. ದೇವವೃಂದವನ್ನೇ ತನಗೆ ಉಚಿತ ವರವಲ್ಲ ಎಂದು ತೊರೆದ ರುಗ್ಮಿಣೀದೇವಿಯು ಅಲ್ಲಿ ನೆರೆದಿದ್ದ ಮನುಷ್ಯರತ್ತ ಕಣ್ಣೆತ್ತಿಯೂ ನೋಡದೆ ಶ್ರೀಕೃಷ್ಣನತ್ತ ತೆರಳಿದಳು ಎಂದರ್ಥ.

### ಗುಣಸಮುದ್ರನಾದ ಶ್ರೀಕೃಷ್ಣ

ಅಯಂ ಮುಕುಂದಃ ಸಖಿ ಚಿತ್ಪ್ರಮೋದ-
ಮಯಾವ್ಯಯಾಂಗೋಽಖಿಲದೋಷಶೂನ್ಯಃ ।
ಅವಾತರದ್ವಿಶ್ವಜನಸ್ಯ ಗುಪ್ತ್ಯೈ
ಗುಣಾಂಬುರಾಶಿಃ ಕಿಲ ಭೂತಲೇಽಸ್ಮಿನ್ ॥ ೨೯ ॥

ಎಲೈ ಸಖಿ ! ಇವನು ಜ್ಞಾನಾನಂದಮಯವಾದ ಅವ್ಯಯದೇಹದ ಮುಕುಂದ; ಸಕಲ ದೋಷಗಳಿಂದ ರಹಿತನಾದವನು; ಗುಣಸಾಗರನಾದ ಇವನು ಲೋಕದ ಜನತೆಯ ಸಂರಕ್ಷಣೆಗೆಂದು ಈ ಭೂತಳದಲ್ಲಿ ಅವತರಿಸಿ ಬಂದಿರುವನು.

ವಿ. : ೧.ಈ ವರೆಗೆ ಬ್ರಹ್ಮವಾಯು ಮೊದಲಾದ ಇತರ ದೇವತೆಗಳ ಬಗ್ಗೆ ಅನೇಕ ವಿವರಗಳನ್ನು ನೀಡಿದ ಶ್ರೀವಾದಿರಾಜಸ್ವಾಮಿಗಳು ಇಲ್ಲಿಂದ ಮುಂದೆ ರುಗ್ಮಿಣಿಯ ಸಖಿಯೊಂದಿಗಿನ

---

೧. ಸುರಮತ್ಯಾವನಿಮಿಷೌ । - ಅಮರಕೋಶ

ಸಮಾಲೋಚನೆಯ ಕ್ರಮವನ್ನು ಮುಂದುವರೆಸುತ್ತಾ ಶ್ರೀಹರಿಯ ಬಗೆಬಗೆಯ ಮಹಿಮೆಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುತ್ತಿರುವರು.

೨. ಶ್ರೀಹರಿಯು ಜ್ಞಾನಾನಂದಮಯವಾದ ಶಾಶ್ವತ ದಿವ್ಯಾಕೃತಿಯನ್ನು ಹೊಂದಿರುವವನು, ಸಕಲ ದೋಷದೂರ, ಗುಣಸಾಗರ; ಅವನ ಅವತಾರವು ಕೇವಲ ಲೋಕಸಂರಕ್ಷಣೆಗೆಂದು ಮಾತ್ರ ಎಂಬುದು ಇಲ್ಲಿಯ ಮುಖ್ಯಭಾವ ; ಚಿತ್ - ಜ್ಞಾನ ; ಪ್ರಮೋದ - ಆನಂದ.

೩.. ವಿಶ್ವಜನರು ಎಂಬುದಕ್ಕೆ ವಾಯುದೇವರಿಗೆ ಸಂಬಂಧಿಸಿದ ಸಜ್ಜನರು ಎಂಬ ಅರ್ಥವು ವಿವಕ್ಷಿತ : 'ವಿಶ್ವೋ ವಾಯುಃ ಸಮುದ್ದಿಷ್ಟಃ'

## ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣ

**ಜಗಜ್ಜನಿಸ್ಥೇಮಲಯಾದಿಧರ್ಮಾ**
**ಭವಂತ್ಯಮುಷ್ಮಾತ್ ಕಿಲ ಶಾಸ್ತ್ರಯೋನೇಃ।**
**ಅಮುಷ್ಯ ಸಾಮ್ಯಂ ಕತಮಃ ಸುರಾಣಾ-**
**ಮುಪೈತಿ ಯದ್ರೋಮಸು ವಿಶ್ವಕೋಶಾಃ ॥ ೩೦ ॥**

ಶಾಸ್ತ್ರಗಮ್ಯನಾದ ಇವನಿಂದ ಜಗತ್ತಿನ ಸೃಷ್ಟಿ , ಸ್ಥಿತಿ, ಲಯ ಮೊದಲಾದ ಕಾರ್ಯಗಳು ನಡೆಯುವವು; ರೋಮದಲ್ಲಿ ಬ್ರಹ್ಮಾಂಡಗಳನ್ನು ಹೊಂದಿರುವ ಇವನೊಂದಿಗೆ ಸಾಮ್ಯವನ್ನು ದೇವತೆಗಳಲ್ಲಿ ಯಾವನು ತಾನೆ ಹೊಂದಿಯಾನು?

ವಿ. : ೧. ಶ್ರೀಹರಿಯು ಜಗತ್ತಿನ ಜನ್ಮಾದಿ ಸಕಲ ಕಾರ್ಯಗಳಿಗೂ ಸ್ವತಂತ್ರ ಕಾರಣ; ಅವನನ್ನು ತಿಳಿಯಲು ಶಾಸ್ತ್ರಗಳೇ ಪ್ರಧಾನವಾದ ಆಕರ; ಅವನ ರೋಮಕೂಪಗಳಲ್ಲೂ ಬ್ರಹ್ಮಾಂಡಗಳು ನೆಲೆಸಿವೆ. ಅವನಿಗೆ [1]ಸಮನಾದವರು ಬೇರಾರೂ ಇಲ್ಲ ಎಂದರ್ಥ.

೨. ಇದು ಜನ್ಮಾದ್ಯಸ್ಯ ಯತಃ, ಶಾಸ್ತ್ರಯೋನಿತ್ವಾತ್ ಎಂಬ [2]ಬ್ರಹ್ಮಸೂತ್ರಗಳ ಭಾವ-ಸಂಗ್ರಹವಾಗಿದೆ ; ವಿಶ್ವಕೋಶ - ಬ್ರಹ್ಮಾಂಡ.

೩.. ವಿಶ್ವಕೋಶಗಳು ಎಂದರೆ ಬ್ರಹ್ಮಾಂಡಗಳು ಎಂದರ್ಥ : ಯಸ್ಮಿನ್ ಪರೇಽನ್ಯೇಪ್ಯಜ-ಜೀವಕೋಶಾಃ ಸಹಸ್ರಶೋ ಯತ್ರ ವಯಂ ಭ್ರಮಾಮಃ। - ಭಾಗ.(೯/೬/೪೫)

---

೧. ಏತಾದೃಶಮಾಹಾಮಾಹಾತ್ಮ್ಯಸ್ಯಾನ್ಯತ್ರಾಭಾವಾದಿತಿ ಭಾವಃ। -ವ್ಯಾ.

೨. ಅನೇನ ಉಕ್ತವಕ್ಷ್ಯಮಾಣಶ್ರೀಕೃಷ್ಣಮಾಹಾತ್ಮ್ಯಪ್ರತಿಪಾದಕಶಾಸ್ತ್ರಂ ಪ್ರಮಾಣಮುಕ್ತಂ ಭವತಿ। ''ಜನ್ಮಾದ್ಯಸ್ಯ ಯತಃ'' (ಬ್ರಹ್ಮಸೂತ್ರ-೧/೧/೨);''ಶಾಸ್ತ್ರಯೋನಿತ್ವಾತ್''(ಬ್ರಹ್ಮಸೂತ್ರ-೧/೧/೩.)। ಇತ್ಯಾದಿಸೂತ್ರಮುಖ್ಯಾರ್ಥೋಽಯಮಿತಿ ಸೂಚ್ಯತೇ। ವ್ಯಾ.

## ಸಮಸ್ತ ಶಾಸ್ತ್ರಪ್ರತಿಪಾದ್ಯನಾದ ಲಕ್ಷ್ಮೀಪತಿ

ಸಮಸ್ತವೇದಾಃ ಕಿಲ ಸೇತಿಹಾಸಾಃ
ಪುರಾಣಯುಕ್ತಾಃ ಸ್ಮೃತಿಭಿಃ [೧]ಸಹೈನಮ್ ।
ಸಮಾನಶೂನ್ಯಂ ಪ್ರಭುಮಾಮನಂತಿ
ಪ್ರಮಥ್ಯ ಯೋಽಬ್ಧಿಂ ಲಭತೇ ಸ್ಮ ಲಕ್ಷ್ಮೀಮ್ ॥ ೩೧ ॥

ಇತಿಹಾಸಗಳೊಂದಿಗೆ ಸಮೇತವಾದ, ಪುರಾಣಗಳಿಂದ ಒಡಗೂಡಿದ, ಸ್ಮೃತಿಗಳನ್ನು ಒಳಗೊಂಡ ಸಮಸ್ತ ವೇದಗಳೂ ಇವನನ್ನು ಸಮಾನರಹಿತನಾದ ಸರ್ವಸ್ವಾಮಿ ಎಂಬು- ದಾಗಿ ಸಾರುವವು; ಸಮುದ್ರವನ್ನು ಮಥಿಸಿ ಮಹಾಲಕ್ಷ್ಮಿಯನ್ನು ಪಡೆದವನೂ ಇವನೇ.

ವಿ. : ೧. ಶ್ರೀಹರಿಯ ಸರ್ವೋತ್ತಮತ್ವವು ಸಕಲ ಇತಿಹಾಸ, ಪುರಾಣಗಳ, ಶ್ರುತಿ-ಸ್ಮೃತಿಗಳ ಮಹಾತಾತ್ಪರ್ಯ ಎಂದು ಭಾವ (ಮ.ಭಾ.ತಾ.ನಿ.-೧/೨೨):

ಅಥೋಽಯಮೇವ ನಿಖಿಲೈರಪಿ ವೇದವಾಕ್ಯೈ ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।
ಅನ್ಯೈಶ್ಚ ಶಾಸ್ತ್ರವಚನೈಃ ಸಹ ತತ್ತ್ವಸೂತ್ರೈರ್ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥

೨. ಸಮುದ್ರಮಥನ ಕಾಲದಲ್ಲಿ ಮಹಾಲಕ್ಷ್ಮಿಯು ಪ್ರಾದುರ್ಭವಿಸಿದ್ದು ಸುಪ್ರಸಿದ್ಧ; ಅದಕ್ಕೆ ಕಾರಣವಾದ ಮಥನಕಾರ್ಯವನ್ನು ಪ್ರಧಾನವಾಗಿ ಮಾಡಿದವನು ಸಾಕ್ಷಾತ್ ಅಜಿತರೂಪದ ಶ್ರೀಹರಿ ಎಂಬ ವಿವರವೂ ಇಲ್ಲಿ ಸೂಚಿತ[೨].

೩. ಒಂದು ರೀತಿಯಲ್ಲಿ ಇದು ಶ್ರೀಹರಿಯು ತನ್ನ ಪತ್ನಿಯಾದ ಮಹಾಲಕ್ಷ್ಮಿಯನ್ನು ಮತ್ತೊಮ್ಮೆ ಮರಳಿ ಪಡೆದ ಅಪೂರ್ವ ಪ್ರಸಂಗ ಎಂಬು ಭಾವ.

## ಅವತರಿಸಿ ಭೂಭಾರ ಪರಿಹರಿಸುವ ಶ್ರೀಕೃಷ್ಣ

ಯದೀಯಪಾದೋಽಂಡಕಟಾಹಭೇದೀ
ವಿಧಾತೃಹಸ್ತಾರ್ಹಣಸಾರವೇದೀ ।

---

೧. ವೇದೇ ರಾಮಾಯಣೇ ಚೈವ ಪುರಾಣೇ ಭಾರತ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ -ಹರಿವಂಶ
ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ -ಭಾರತ

೨. ''ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ'' (ಋ.೭/೯೯/೨) ।
''ನಾಸ್ತಿ ನಾರಾಯಣಸಮಮ್'' -ಮ.ಭಾ.ತಾ.ನಿ.ಉದ್ಧೃತ ಭಾರತವಚನ - ೧/೧/೧೧;P.P.S.Sastry Edition

ಸಮಾಲೋಚನೆಯ ಕ್ರಮವನ್ನು ಮುಂದುವರೆಸುತ್ತಾ ಶ್ರೀಹರಿಯ ಬಗೆಬಗೆಯ ಮಹಿಮೆಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುತ್ತಿರುವರು.

೨. ಶ್ರೀಹರಿಯು ಜ್ಞಾನಾನಂದಮಯವಾದ ಶಾಶ್ವತ ದಿವ್ಯಾಕೃತಿಯನ್ನು ಹೊಂದಿರುವವನು, ಸಕಲ ದೋಷದೂರ, ಗುಣಸಾಗರ; ಅವನ ಅವತಾರವು ಕೇವಲ ಲೋಕಸಂರಕ್ಷಣೆಗೆಂದು ಮಾತ್ರ ಎಂಬುದು ಇಲ್ಲಿಯ ಮುಖ್ಯಭಾವ ; ಚಿತ್ - ಜ್ಞಾನ ; ಪ್ರಮೋದ - ಆನಂದ.

೩. ವಿಶ್ವಜನರು ಎಂಬುದಕ್ಕೆ ವಾಯುದೇವರಿಗೆ ಸಂಬಂಧಿಸಿದ ಸಜ್ಜನರು ಎಂಬ ಅರ್ಥವು ವಿವಕ್ಷಿತ : 'ವಿಶ್ವೋ ವಾಯುಃ ಸಮುದ್ದಿಷ್ಟಃ'

## ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣ

ಜಗಜ್ಜನಿಸ್ಥೇಮಲಯಾದಿಧರ್ಮಾ
ಭವಂತ್ಯಮುಷ್ಮಾತ್ ಕಿಲ ಶಾಸ್ತ್ರಯೋನೇಃ ।
ಅಮುಷ್ಯ ಸಾಮ್ಯಂ ಕತಮಃ ಸುರಾಣಾ-
ಮುಪೈತಿ ಯದ್ರೋಮಸು ವಿಶ್ವಕೋಶಾಃ ॥ ೩೦ ॥

ಶಾಸ್ತ್ರಗಮ್ಯನಾದ ಇವನಿಂದ ಜಗತ್ತಿನ ಸೃಷ್ಟಿ , ಸ್ಥಿತಿ, ಲಯ ಮೊದಲಾದ ಕಾರ್ಯಗಳು ನಡೆಯುವವು; ರೋಮದಲ್ಲಿ ಬ್ರಹ್ಮಾಂಡಗಳನ್ನು ಹೊಂದಿರುವ ಇವನೊಂದಿಗೆ ಸಾಮ್ಯವನ್ನು ದೇವತೆಗಳಲ್ಲಿ ಯಾವನು ತಾನೆ ಹೊಂದಿಯಾನು?

ವಿ. : ೧. ಶ್ರೀಹರಿಯು ಜಗತ್ತಿನ ಜನ್ಮಾದಿ ಸಕಲ ಕಾರ್ಯಗಳಿಗೂ ಸ್ವತಂತ್ರ ಕಾರಣ; ಅವನನ್ನು ತಿಳಿಯಲು ಶಾಸ್ತ್ರಗಳೇ ಪ್ರಧಾನವಾದ ಆಕರ; ಅವನ ರೋಮಕೂಪಗಳಲ್ಲೂ ಬ್ರಹ್ಮಾಂಡಗಳು ನೆಲೆಸಿವೆ. ಅವನಿಗೆ [೧]ಸಮನಾದವರು ಬೇರಾರೂ ಇಲ್ಲ ಎಂದರ್ಥ.

೨. ಇದು ಜನ್ಮಾದ್ಯಸ್ಯ ಯತಃ, ಶಾಸ್ತ್ರಯೋನಿತ್ವಾತ್ ಎಂಬ [೨]ಬ್ರಹ್ಮಸೂತ್ರಗಳ ಭಾವ-ಸಂಗ್ರಹವಾಗಿದೆ ; ವಿಶ್ವಕೋಶ - ಬ್ರಹ್ಮಾಂಡ.

೩. ವಿಶ್ವಕೋಶಗಳು ಎಂದರೆ ಬ್ರಹ್ಮಾಂಡಗಳು ಎಂದರ್ಥ : ಯಸ್ಮಿನ್ ಪರೇಽನ್ಯೇಪ್ಯಜ-ಜೀವಕೋಶಾಃ ಸಹಸ್ರಶೋ ಯತ್ರ ವಯಂ ಭ್ರಮಾಮಃ । - ಭಾಗ.(೯/೬/೪೫)

---

೧. ಏತಾದೃಶಮಾಹಾಮಾಹಾತ್ಮ್ಯಸ್ಯಾನ್ಯತ್ರಾಭಾವಾದಿತಿ ಭಾವಃ । -ವ್ಯಾ.

೨. ಅನೇನ ಉಕ್ತವಕ್ಷ್ಯಮಾಣಶ್ರೀಕೃಷ್ಣಮಾಹಾತ್ಮ್ಯಪ್ರತಿಪಾದಕಶಾಸ್ತ್ರಂ ಪ್ರಮಾಣಮುಕ್ತಂ ಭವತಿ । ''ಜನ್ಮಾದ್ಯಸ್ಯ ಯತಃ'' (ಬ್ರಹ್ಮಸೂತ್ರ-೧/೧/೨);''ಶಾಸ್ತ್ರಯೋನಿತ್ವಾತ್''(ಬ್ರಹ್ಮಸೂತ್ರ-೧/೧/೩.) । ಇತ್ಯಾದಿಸೂತ್ರಮುಖ್ಯಾರ್ಥೋಽಯಮಿತಿ ಸೂಚ್ಯತೇ । ವ್ಯಾ.

### ಸಮಸ್ತ ಶಾಸ್ತ್ರಪ್ರತಿಪಾದ್ಯನಾದ ಲಕ್ಷ್ಮೀಪತಿ

ಸಮಸ್ತವೇದಾಃ ಕಿಲ ಸೇತಿಹಾಸಾಃ
ಪುರಾಣಯುಕ್ತಾಃ ಸ್ಮೃತಿಭಿಃ [೧]ಸಹೈನಮ್ ।
ಸಮಾನಶೂನ್ಯಂ ಪ್ರಭುಮಾಮನಂತಿ
ಪ್ರಮಥ್ಯ ಯೋಽಬ್ಧಿಂ ಲಭತೇ ಸ್ಮ ಲಕ್ಷ್ಮೀಮ್ ॥ ೩೧ ॥

ಇತಿಹಾಸಗಳೊಂದಿಗೆ ಸಮೇತವಾದ, ಪುರಾಣಗಳಿಂದ ಒಡಗೂಡಿದ, ಸ್ಮೃತಿಗಳನ್ನು ಒಳಗೊಂಡ ಸಮಸ್ತ ವೇದಗಳೂ ಇವನನ್ನು ಸಮಾನರಹಿತನಾದ ಸರ್ವಸ್ವಾಮಿ ಎಂಬು-ದಾಗಿ ಸಾರುವವು; ಸಮುದ್ರವನ್ನು ಮಥಿಸಿ ಮಹಾಲಕ್ಷ್ಮಿಯನ್ನು ಪಡೆದವನೂ ಇವನೇ.

ವಿ. : ೧. ಶ್ರೀಹರಿಯ ಸರ್ವೋತ್ತಮತ್ವವು ಸಕಲ ಇತಿಹಾಸ, ಪುರಾಣಗಳ, ಶ್ರುತಿ-ಸ್ಮೃತಿಗಳ ಮಹಾತಾತ್ಪರ್ಯ ಎಂದು ಭಾವ (ಮ.ಭಾ.ತಾ.ನಿ.-೧/೨೨):

ಅರ್ಥೋಽಯಮೇವ ನಿಖಿಲೈರಪಿ ವೇದವಾಕ್ಯೈ ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।
ಅನ್ಯೈಶ್ಚ ಶಾಸ್ತ್ರವಚನೈಃ ಸಹ ತತ್ತ್ವಸೂತ್ರೈರ್ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥

೨. ಸಮುದ್ರಮಥನ ಕಾಲದಲ್ಲಿ ಮಹಾಲಕ್ಷ್ಮಿಯು ಪ್ರಾದುರ್ಭವಿಸಿದ್ದು ಸುಪ್ರಸಿದ್ಧ; ಅದಕ್ಕೆ ಕಾರಣವಾದ ಮಥನಕಾರ್ಯವನ್ನು ಪ್ರಧಾನವಾಗಿ ಮಾಡಿದವನು ಸಾಕ್ಷಾತ್ ಅಜಿತರೂಪದ ಶ್ರೀಹರಿ ಎಂಬ ವಿವರವೂ ಇಲ್ಲಿ ಸೂಚಿತ[೨].

೩. ಒಂದು ರೀತಿಯಲ್ಲಿ ಇದು ಶ್ರೀಹರಿಯು ತನ್ನ ಪತ್ನಿಯಾದ ಮಹಾಲಕ್ಷ್ಮಿಯನ್ನು ಮತ್ತೊಮ್ಮೆ ಮರಳಿ ಪಡೆದ ಅಪೂರ್ವ ಪ್ರಸಂಗ ಎಂಬು ಭಾವ.

### ಅವತರಿಸಿ ಭೂಭಾರ ಪರಿಹರಿಸುವ ಶ್ರೀಕೃಷ್ಣ

ಯದೀಯಪಾದೋಽಂಡಕಟಾಹಭೇದೀ
ವಿಧಾತೃಹಸ್ತಾರ್ಹಣಸಾರವೇದೀ ।

---

೧. ವೇದೇ ರಾಮಾಯಣೇ ಚೈವ ಪುರಾಣೇ ಭಾರತ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ -ಹರಿವಂಶ

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ -ಭಾರತ

೨. "ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ" (ಋ.೭/೯೯/೨) ।
"ನಾಸ್ತಿ ನಾರಾಯಣಸಮಮ್" -ಮ.ಭಾ.ತಾ.ನಿ.ಉದ್ಧೃತ ಭಾರತವಚನ - ೧/೧/೧೧;P.P.S.Sastry Edition

ಮೃಗಾಕ್ಷಿ ಸೋಽಯಂ ವಿವಿಧಾವತಾರ-
ವಿಯೋಜಿತಾತ್ಯುದ್ಧತಭೂಮಿಭಾರಃ ॥ ೩೨ ॥

ಹರಿಣಾಕ್ಷಿ! ಇವನ ಪಾದವು ಬ್ರಹ್ಮಾಂಡಕಟಾಹವನ್ನು ಸೀಳಿತು; ಬ್ರಹ್ಮದೇವರು ಸಮರ್ಪಿಸಿದ ಮಹಾಪೂಜೆಯನ್ನು ಸ್ವೀಕರಿಸಿತು; ಇವನು ವಿವಿಧ ಅವತಾರಗಳನ್ನು ಧರಿಸಿ, ಭೂಮಿಯ ಮಹಾಅತಿಶಯಿತವಾದ ಭಾರವನ್ನು ಪರಿಹರಿಸಿದನು.

### ಶ್ರೀಕೃಷ್ಣನನ್ನು ಕಂಡ ರುಗ್ಮಿಣಿಯ ಹರ್ಷೋದ್ರೇಕ

ವಿವೇಕಸಖ್ಯೇತಿ ವಿಬೋಧಿತಾ ಸಾ
ಬಭೂವ ತೂಷ್ಣೀಂ ಕಮಲಾಽಽತ್ತಮಾಲಾ ।
ಪ್ರಹರ್ಷಚಿಹ್ನಾನಿ ಪರಂ ತದೋಚುಃ
ಪ್ರಭುಂ ತಮಾಕಾಂಕ್ಷತಿ ರುಗ್ಮಿಣೀತಿ ॥ ೩೩ ॥

ವಿವೇಕವೆಂಬ ಸಖಿಯಿಂದ ಹೀಗೆ ತಿಳಿಸಲ್ಪಟ್ಟ ರುಗ್ಮಿಣಿಯು ಕೈಯಲ್ಲಿ ಮಾಲೆ ಹಿಡಿದು ಸುಮ್ಮನೆ ನಿಂತಳು; ಆದರೆ ಅವಳ ದೇಹದಲ್ಲಿ ಕಾಣಿಸಿಕೊಂಡ ರೋಮಾಂಚನಗಳು ಅವಳು ಶ್ರೀಕೃಷ್ಣನನ್ನು ತನ್ನ ಸ್ವಾಮಿಯನ್ನಾಗಿ ಬಯಸಿರುವಳು ಎಂಬುದನ್ನು ಸೂಚಿಸತೊಡಗಿದ್ದವು.

### ಅಂತಃಪಟಧಾರಣೆ

ತಯೋರ್ಮುಹೂರ್ತಾವಧಿ ಮಧ್ಯದತ್ತ-
ಪಟಂ ವಿನಿರ್ಭಿದ್ಯ ಮಿಥಃ ಸ್ಪೃಶಂತ್ಯಃ ।
ಪ್ರಭಾಃ ಸದಾಽಖಂಡಿತಯೋಗಭಾಗ್ಯಂ
ವಿಬೋಧಯಂತಿ ಸ್ಮ ವಿವೇಕಭಾಜಃ ॥ ೩೪ ॥

ಅವರಿಬ್ಬರ ಮಧ್ಯೆ ಒಂದು ಮುಹೂರ್ತಕಾಲ ಅಡ್ಡ ಹಿಡಿದಿದ್ದ ಪರದೆಯಿಂದ ಹೊರ-ಹೊಮ್ಮುತ್ತಿದ್ದ ದಿವ್ಯ ಕಿರಣಗಳು ಅವರಿಬ್ಬರಿಗೂ ಎಂದೂ ವಿಯೋಗವಿರದ ಒಡನಾಟದ ಭಾಗ್ಯವನ್ನು ವಿವೇಕಿಗಳಿಗೆ ಸ್ಫುಟವಾಗಿ ತಿಳಿಸಿಕೊಡುತ್ತಿದ್ದವು.

ವಿ. : ೧. ಅಕ್ಷತೆ ಕಾರ್ಯಕ್ಕಿಂತ ಮುಂಚಿತವಾಗಿ ಶ್ರೀಕೃಷ್ಣ-ರುಗ್ಮಿಣಿಯರ ಮಧ್ಯೆ ಅಂತಃಪಟ ಹಿಡಿದಿದ್ದ ವಿವರ ಇದರಲ್ಲಿದೆ.

೨. ಆ ಸಮಯದಲ್ಲಿ ಮಂಗಲಾಷ್ಟಕಾದಿಗಳ ಪಠನ ಯುಕ್ತವೆಂಬುದನ್ನು ಸೂಚಿಸಲು ಆ ಕಾರ್ಯ ಒಂದು ಮುಹೂರ್ತಕಾಲ ನಡೆದಿತ್ತು ಎಂಬ ವಿವರವೂ ಬಂದಿದೆ.

೩. ಹಾಗೆ ಮಧ್ಯೆ ಪರದೆ ಇದ್ದರೂ ಅವರಿಬ್ಬರ ದೇಹಗಳಿಂದ ಆ ಪರದೆಯನ್ನು ಭೇದಿಸಿ ಹೊರಹೊಮ್ಮುತ್ತಿದ್ದ ದಿವ್ಯ ಪ್ರಕಾಶವು ಅವರಿಬ್ಬರ ಯೋಗಕ್ಕೆ ಯಾವಕಾಲಕ್ಕೂ ಯಾವುದೇ ಬಗೆಯ ತಡೆಯೂ ಇರದು ಎಂದರೆ ಅವರು ನಿತ್ಯಾವಿಯೋಗಿ ದಂಪತಿಗಳು ಎಂಬುದನ್ನು ಸೂಚಿಸುತ್ತಿತ್ತು ಎಂದರ್ಥ.

೪. ಲಕ್ಷ್ಮೀನಾರಾಯಣರ ಕಾಂತಿಯನ್ನು ಮರೆಮಾಚುವಂತಹ ತೆರೆ ವಿಶ್ವದಲ್ಲೇ ದುರ್ಲಭ ಎಂಬ ಇಲ್ಲಿಯ ತತ್ತ್ವ ಅವರಿಬ್ಬರಿಗೂ ಎಂದೂ ಅಜ್ಞಾನಾದಿ ಆವರಣಗಳು ಸರ್ವಥಾ ಇಲ್ಲ ಎಂಬ ವಿಶೇಷಾಂಶವನ್ನು ಸೂಚಿಸುವುದು.

೫. ಮುಹೂರ್ತಾವಧಿ ಎಂಬುದಕ್ಕೆ ಮುಹೂರ್ತನಿರೀಕ್ಷಣೆಯ ಕಾಲದ ವರೆಗೆ ಎಂದು ಅರ್ಥ.

### ಸೀತಾರಾಮರಂತಹ ರುಗ್ಮಿಣೀಕೃಷ್ಣರು

ಸೀತಾಸ್ವಯಂವರಮಹೋತ್ಸವಗಾನಕಾಲೇ
ಜಾತೌ ರಮಾಪುಲಕಮಾಧವಮಂದಹಾಸೌ ।
ಸಾ ಜಾನಕೀಯಮಯಮೇವ ಹಿ ರಾಮಚಂದ್ರಃ
ಕಿಂ ತನ್ಮುಹೂರ್ತಕಥಯೇತಿ ಹಿ ಶಂಸತಃ ಸ್ಮ ॥ ೩೫ ॥

ಆ ಸಮಯದಲ್ಲಿ ಸೀತಾಸ್ವಯಂವರ ಮಹೋತ್ಸವದ ವರ್ಣನೆಯು ನಡೆದಾಗ ಅದರಿಂದ ಉಂಟಾದ ರುಗ್ಮಿಣಿದೇವಿಯ ಪುಲಕ ಹಾಗೂ ಶ್ರೀಕೃಷ್ಣನ ಮಂದಹಾಸಗಳು ಅವಳೇ ಜಾನಕಿ ಇವನೇ ಶ್ರೀರಾಮಚಂದ್ರ; ಇನ್ನು ಮುಹುರ್ತದ ಗೊಡವೆ ಏಕೆ ? ಎಂದು ಸೂಚಿಸು-ವಂತಿದ್ದವು.

ವಿ. : ೧. ಆ ಸಮಯದಲ್ಲಿ ಸೀತಾರಾಮ ಮಂಗಲಾಷ್ಟಕದ ಪಠನ ನಡೆಯಿತು ಎಂದರ್ಥ. ಸೀತಾರಾಮರು ಲಕ್ಷ್ಮೀನಾರಾಯಣರೇ ಆದ ರುಗ್ಮಿಣೀಕೃಷ್ಣರು ಎಂಬುದನ್ನು ಅವರ ರೋಮಾಂಚನ, ಮಂದಹಾಸಗಳೇ ಸೂಚಿಸುತ್ತಿದ್ದವು ಎಂದು ಭಾವ.

೨. ವಿವಾಹಕಾಲದಲ್ಲಿ ವಧೂವರರಲ್ಲಿ ಲಕ್ಷ್ಮೀನಾರಾಯಣರನ್ನು ಚಿಂತಿಸುವ ಕಾರ್ಯಕ್ಕೆ ಅನುಕೂಲಿಸುವಂತೆ ಮಂಗಲಾಷ್ಟಕಾದಿಗಳ ಪಠನೆ ಅತ್ಯಂತ ವಿಹಿತ ಎಂಬ ತತ್ತ್ವ ಇಲ್ಲಿ ಸೂಚಿತ.

### ಶ್ರೀಕೃಷ್ಣರುಗ್ಮಿಣಿಯರ ನಿರೀಕ್ಷಣ ಕಾರ್ಯ

ಆಸೀತ್ ಪರಸ್ಪರನಿರೀಕ್ಷಣಕರ್ಮಕಾಲೇ
ಭೈಷ್ಮೀಮುಖಾಂಬುಜಗತಂ ನಯನಂ ಮುರಾರೇಃ ।

ಮೃಗಾಕ್ಷಿ ಸೋಽಯಂ ವಿವಿಧಾವತಾರ-
ವಿಯೋಜಿತಾತ್ಯುದ್ಧತಭೂಮಿಭಾರಃ ॥ ೩೨ ॥

ಹರಿಣಾಕ್ಷಿ! ಇವನ ಪಾದವು ಬ್ರಹ್ಮಾಂಡಕಟಾಹವನ್ನು ಸೀಳಿತು; ಬ್ರಹ್ಮದೇವರು ಸಮರ್ಪಿಸಿದ ಮಹಾಪೂಜೆಯನ್ನು ಸ್ವೀಕರಿಸಿತು; ಇವನು ವಿವಿಧ ಅವತಾರಗಳನ್ನು ಧರಿಸಿ, ಭೂಮಿಯ ಮಹಾಅತಿಶಯಿತವಾದ ಭಾರವನ್ನು ಪರಿಹರಿಸಿದನು.

### ಶ್ರೀಕೃಷ್ಣನನ್ನು ಕಂಡ ರುಗ್ಮಿಣಿಯ ಹರ್ಷೋದ್ರೇಕ

ವಿವೇಕಸಖ್ಯೇತಿ ವಿಬೋಧಿತಾ ಸಾ
ಬಭೂವ ತೂಷ್ಣೀಂ ಕಮಲಾಽಽತ್ತಮಾಲಾ ।
ಪ್ರಹರ್ಷಚಿಹ್ನಾನಿ ಪರಂ ತದೋಚುಃ
ಪ್ರಭುಂ ತಮಾಕಾಂಕ್ಷತಿ ರುಗ್ಮಿಣೀತಿ ॥ ೩೩ ॥

ವಿವೇಕವೆಂಬ ಸಖಿಯಿಂದ ಹೀಗೆ ತಿಳಿಸಲ್ಪಟ್ಟ ರುಗ್ಮಿಣಿಯು ಕೈಯಲ್ಲಿ ಮಾಲೆ ಹಿಡಿದು ಸುಮ್ಮನೆ ನಿಂತಳು; ಆದರೆ ಅವಳ ದೇಹದಲ್ಲಿ ಕಾಣಿಸಿಕೊಂಡ ರೋಮಾಂಚನಗಳು ಅವಳು ಶ್ರೀಕೃಷ್ಣನನ್ನು ತನ್ನ ಸ್ವಾಮಿಯನ್ನಾಗಿ ಬಯಸಿರುವಳು ಎಂಬುದನ್ನು ಸೂಚಿಸತೊಡಗಿದ್ದವು.

### ಅಂತಃಪಟಧಾರಣೆ

ತಯೋರ್ಮುಹೂರ್ತಾವಧಿ ಮಧ್ಯದತ್ತ-
ಪಟಂ ವಿನಿರ್ಭಿದ್ಯ ಮಿಥಃ ಸ್ಪೃಶಂತ್ಯಃ ।
ಪ್ರಭಾಃ ಸದಾಽಖಂಡಿತಯೋಗಭಾಗ್ಯಂ
ವಿಬೋಧಯಂತಿ ಸ್ಮ ವಿವೇಕಭಾಜಃ ॥ ೩೪ ॥

ಅವರಿಬ್ಬರ ಮಧ್ಯೆ ಒಂದು ಮುಹೂರ್ತಕಾಲ ಅಡ್ಡ ಹಿಡಿದಿದ್ದ ಪರದೆಯಿಂದ ಹೊರ-ಹೊಮ್ಮುತ್ತಿದ್ದ ದಿವ್ಯ ಕಿರಣಗಳು ಅವರಿಬ್ಬರಿಗೂ ಎಂದೂ ವಿಯೋಗವಿರದ ಒಡನಾಟದ ಭಾಗ್ಯವನ್ನು ವಿವೇಕಿಗಳಿಗೆ ಸ್ಫುಟವಾಗಿ ತಿಳಿಸಿಕೊಡುತ್ತಿದ್ದವು.

ವಿ. : ೧. ಅಕ್ಷತೆ ಕಾರ್ಯಕ್ಕಿಂತ ಮುಂಚಿತವಾಗಿ ಶ್ರೀಕೃಷ್ಣ-ರುಗ್ಮಿಣಿಯರ ಮಧ್ಯೆ ಅಂತಃಪಟ ಹಿಡಿದಿದ್ದ ವಿವರ ಇದರಲ್ಲಿದೆ.

೨. ಆ ಸಮಯದಲ್ಲಿ ಮಂಗಲಾಷ್ಟಕಾದಿಗಳ ಪಠನ ಯುಕ್ತವೆಂಬುದನ್ನು ಸೂಚಿಸಲು ಆ ಕಾರ್ಯ ಒಂದು ಮುಹೂರ್ತಕಾಲ ನಡೆದಿತ್ತು ಎಂಬ ವಿವರವೂ ಬಂದಿದೆ.

೩. ಹಾಗೆ ಮಧ್ಯೆ ಪರದೆ ಇದ್ದರೂ ಅವರಿಬ್ಬರ ದೇಹಗಳಿಂದ ಆ ಪರದೆಯನ್ನು ಭೇದಿಸಿ ಹೊರಹೊಮ್ಮುತ್ತಿದ್ದ ದಿವ್ಯ ಪ್ರಕಾಶವು ಅವರಿಬ್ಬರ ಯೋಗಕ್ಕೆ ಯಾವಕಾಲಕ್ಕೂ ಯಾವುದೇ ಬಗೆಯ ತಡೆಯೂ ಇರದು ಎಂದರೆ ಅವರು ನಿತ್ಯಾವಿಯೋಗಿ ದಂಪತಿಗಳು ಎಂಬುದನ್ನು ಸೂಚಿಸುತ್ತಿತ್ತು ಎಂದರ್ಥ.

೪. ಲಕ್ಷ್ಮೀನಾರಾಯಣರ ಕಾಂತಿಯನ್ನು ಮರೆಮಾಚುವಂತಹ ತೆರೆ ವಿಶ್ವದಲ್ಲೇ ದುರ್ಲಭ ಎಂಬ ಇಲ್ಲಿಯ ತತ್ತ್ವ ಅವರಿಬ್ಬರಿಗೂ ಎಂದೂ ಅಜ್ಞಾನಾದಿ ಆವರಣಗಳು ಸರ್ವಥಾ ಇಲ್ಲ ಎಂಬ ವಿಶೇಷಾಂಶವನ್ನು ಸೂಚಿಸುವುದು.

೫. ಮುಹೂರ್ತಾವಧಿ ಎಂಬುದಕ್ಕೆ ಮುಹೂರ್ತನಿರೀಕ್ಷಣೆಯ ಕಾಲದ ವರೆಗೆ ಎಂದು ಅರ್ಥ.

### ಸೀತಾರಾಮರಂತಹ ರುಗ್ಮಿಣೀಕೃಷ್ಣರು

**ಸೀತಾಸ್ವಯಂವರಮಹೋತ್ಸವಗಾನಕಾಲೇ**
**ಜಾತೌ ರಮಾಪುಲಕಮಾಧವಮಂದಹಾಸೌ ।**
**ಸಾ ಜಾನಕೀಯಮಯಮೇವ ಹಿ ರಾಮಚಂದ್ರಃ**
**ಕಿಂ ತನ್ಮುಹೂರ್ತಕಥಯೇತಿ ಹಿ ಶಂಸತಃ ಸ್ಮ ॥ ೩೫ ॥**

ಆ ಸಮಯದಲ್ಲಿ ಸೀತಾಸ್ವಯಂವರ ಮಹೋತ್ಸವದ ವರ್ಣನೆಯು ನಡೆದಾಗ ಅದರಿಂದ ಉಂಟಾದ ರುಗ್ಮಿಣಿದೇವಿಯ ಪುಲಕ ಹಾಗೂ ಶ್ರೀಕೃಷ್ಣನ ಮಂದಹಾಸಗಳು ಅವಳೇ ಜಾನಕಿ ಇವನೇ ಶ್ರೀರಾಮಚಂದ್ರ; ಇನ್ನು ಮುಹುರ್ತದ ಗೊಡವೆ ಏಕೆ ? ಎಂದು ಸೂಚಿಸು-ವಂತಿದ್ದವು.

ವಿ. : ೧. ಆ ಸಮಯದಲ್ಲಿ ಸೀತಾರಾಮ ಮಂಗಲಾಷ್ಟಕದ ಪಠನ ನಡೆಯಿತು ಎಂದರ್ಥ. ಸೀತಾರಾಮರು ಲಕ್ಷ್ಮೀನಾರಾಯಣರೇ ಆದ ರುಗ್ಮಿಣೀಕೃಷ್ಣರು ಎಂಬುದನ್ನು ಅವರ ರೋಮಾಂಚನ, ಮಂದಹಾಸಗಳೇ ಸೂಚಿಸುತ್ತಿದ್ದವು ಎಂದು ಭಾವ.

೨. ವಿವಾಹಕಾಲದಲ್ಲಿ ವಧೂವರರಲ್ಲಿ ಲಕ್ಷ್ಮೀನಾರಾಯಣರನ್ನು ಚಿಂತಿಸುವ ಕಾರ್ಯಕ್ಕೆ ಅನುಕೂಲಿಸುವಂತೆ ಮಂಗಲಾಷ್ಟಕಾದಿಗಳ ಪಠನೆ ಅತ್ಯಂತ ವಿಹಿತ ಎಂಬ ತತ್ತ್ವ ಇಲ್ಲಿ ಸೂಚಿತ.

### ಶ್ರೀಕೃಷ್ಣರುಗ್ಮಿಣಿಯರ ನಿರೀಕ್ಷಣ ಕಾರ್ಯ

**ಆಸೀತ್ ಪರಸ್ಪರನಿರೀಕ್ಷಣಕರ್ಮಕಾಲೇ**
**ಭೈಷ್ಮೀಮುಖಾಂಬುಜಗತಂ ನಯನಂ ಮುರಾರೇಃ ।**

ತಸ್ಯಾಶ್ಚ ನಾಭಿಸರಸೀನಿಲಯಂ ತದೇತ-
ದ್ಯುಕ್ತಂ ಯದರ್ಕದೃಗಸಾವಿಯಮುತ್ಪಲಾಕ್ಷೀ ॥ ೩೬ ॥

ಆ ಸಮಯದಲ್ಲಿ ಅವರಿಬ್ಬರೂ ಪರಸ್ಪರ ನಿರೀಕ್ಷಣಕಾರ್ಯದಲ್ಲಿ ತೊಡಗಿದ್ದಾಗ ಶ್ರೀಕೃಷ್ಣನ ನೋಟ ರುಗ್ಮಿಣಿಯ ಮುಖಕಮಲದಲ್ಲಿ ನೆಟ್ಟಿತ್ತು; ರುಗ್ಮಿಣಿಯ ನೋಟವು ಶ್ರೀಕೃಷ್ಣನ ನಾಭಿಕಮಲದಲ್ಲಿ ನೆಟ್ಟಿತ್ತು; ಅವನು ಸೂರ್ಯನ ಕಣ್ಣಿನವನು. ಇವಳು ಕಮಲನೇತ್ರೆ; ಆದ್ದರಿಂದ ಆ ರೀತಿಯ ನೋಟ ಅವರಿಬ್ಬರಿಗೂ ಯುಕ್ತವೇ ಆಗಿದ್ದಿತು.

ವಿ. : ೧. ಶ್ರೀಕೃಷ್ಣನ ನೇತ್ರಗಳನ್ನು ಆಶ್ರಯಿಸಿ ಸೂರ್ಯ ಇರುವನು (ಚಕ್ಷೋಃ ಸೂರ್ಯೋ ಅಜಾಯತ). ಅವನ ನಾಭಿಯಲ್ಲಿ ಕಮಲವಿರುವುದು. ಅದರಂತೆ ರುಗ್ಮಿಣಿಯ ಕಣ್ಣುಗಳು ಕಮಲದಂತಹವು. ಶ್ರೀಕೃಷ್ಣ ಹಾಗೂ ರುಗ್ಮಿಣಿಯರ ಪರಸ್ಪರ ನೋಟ ಸೂರ್ಯ ಹಾಗೂ ಕಮಲಗಳ ಸಂಬಂಧದಂತೆ ಸಹಜವಾಗಿದ್ದಿತು ಎಂದು ಭಾವ.

೨. ಕಮಲವು ತನ್ನ ವಿಕಾಸಕ್ಕೆ ಸೂರ್ಯನನ್ನು ನಿರೀಕ್ಷಿಸುವಂತೆ ರುಗ್ಮಿಣಿಯು ತನ್ನ ನಲಿವಿಗಾಗಿ ಶ್ರೀಕೃಷ್ಣನನ್ನು ದಿಟ್ಟಿಸಿದಳು ಎಂದರ್ಥ.

### ರುಗ್ಮಿಣಿಗೆ ವಶನಾದ ಶ್ರೀಕೃಷ್ಣ

ಗುಡಾನ್ವಿತಾಭಿಃ ಶುಭಜೀರಿಕಾಭಿಃ
ಪರಸ್ಪರಂ ವರ್ಷತಿ ಬಂಧುವರ್ಗೇ ।
ವಕ್ಷಃಸ್ಥಿತಾಂಭೋಧಿಸುತಾಜಿತಸ್ತ-
ತ್ಪಕ್ಷ್ಯೈಃ ಪ್ರಯುಕ್ತಂ ಪ್ರಥಮಂ ಬಭಾರ ॥ ೩೭ ॥

ಬೆಲ್ಲದಿಂದ ಕೂಡಿದ ಮಂಗಳಕರವಾದ ಜೀರಿಗೆಗಳನ್ನು ಬಂಧುಗಳ ಗುಂಪು ಪರಸ್ಪರ ಎರಚಿಕೊಳ್ಳುತ್ತಿದ್ದಾಗ ತನ್ನ ವಕ್ಷಃಸ್ಥಳದಲ್ಲಿ ನೆಲೆಸಿದ ಮಹಾಲಕ್ಷ್ಮೀರೂಪಳಾದ ರುಗ್ಮಿಣಿಯಿಂದ ತಾನು ಪರಾಜಿತನಾದವನು ಎಂದು ತಿಳಿಸಲೆಂದು ಶ್ರೀಕೃಷ್ಣ ಅವಳ ಪಕ್ಷದವರೇ ಅರ್ಪಿಸಿದ ಜೀರಿಗೆಗಳನ್ನೇ ಮೊದಲಿಗೆ ಧರಿಸಿದನು.

ವಿ. : ೧. [೧]ಅಂತಃಪಟ ತೆಗೆಯುವ ಸಂದರ್ಭದಲ್ಲಿ ವಧೂವರರು ಹಾಗೂ ಅವರ ಸಂಬಂಧಿಕರು ಜೀರಿಗೆಬೆಲ್ಲವನ್ನು ಒಬ್ಬರ ಮೇಲೊಬ್ಬರು ಸ್ಪರ್ಧೆಯಿಂದೆಂಬಂತೆ ಎರಚುವುದು ವಿವಾಹದ ವಿಧಿಗಳ್ಲೊಂದು; ಅದರ ವಿವರಣೆ ಇಲ್ಲಿ ಬಂದಿದೆ.

---

೧. ವಧೂವರಯೋರ್ಮಧ್ಯೇ ಪುರುಷಪ್ರಯುಕ್ತಂ ಜೀರಿಕಾದಿಕಂ ಪ್ರಥಮಂ ಕನ್ಯೋಪರಿ ಪತತಿ ಚೇತ್ ಪುರುಷೋ ಜಯವಾನ್ ಕನ್ಯಾಪ್ರಯುಕ್ತಂ ಪುರುಷೋಪರಿ ಪತತಿ ಚೇತ್ ಕನ್ಯಾ ಜಯವತೀತಿ ಲೋಕಪ್ರವಾದಃ। -ವ್ಯಾ.

೨. ಆ ಸಮಯದಲ್ಲಿ ಮೊದಲು ಹಾಗೆ ಎರಚಿದವರು ಜೀವನದಲ್ಲಿ ಮೇಲುಗೈ ಸಾಧಿಸುವರು ಎಂಬುದು ಲೋಕಪ್ರವಾದ. ಶ್ರೀಕೃಷ್ಣನು ರುಗ್ಮಿಣಿಯ ಕಡೆಯವರು ಜೀರಿಗೆ ಬೆಲ್ಲವನ್ನು ಹಾಕಲು ಅವಕಾಶ ನೀಡುವ ಮೂಲಕ ತಾನು ರುಗ್ಮಿಣಿಗೆ ಸೋತವನು ಎಂಬಂತೆ ವರ್ತಿಸಿದ ಎಂದರ್ಥ.

೩. ಇಲ್ಲಿ ಶ್ರೀಕೃಷ್ಣನು ರುಗ್ಮಿಣಿಗೆ ಸೋಲುವುದು ಎಂದರೆ ರುಗ್ಮಿಣಿಯ ಅನುರಾಗಕ್ಕೆ ಒಲಿಯುವುದು ಎಂದು ಅರ್ಥವೇ ಹೊರತು ಹೆಂಡತಿಗೆ ವಶವರ್ತಿಯಾಗಿ ವರ್ತಿಸುವ ದುರ್ಬಲ ಪುರುಷನ ರೀತಿಯಲ್ಲಿ ಎಂದು ಸರ್ವಥಾ ತಿಳಿಯಕೂಡದು.

೪. ಹೆಂಡತಿಯು ಅತ್ಯಂತ ಸಾತ್ವಿಕ ಭಾವದಿಂದ ತನ್ನ ಗಂಡನನ್ನು ಮೆಚ್ಚಿಸಿದರೆ ಅವನು ಅವಳ ಮಾತನ್ನು ನಡೆಸುವುದು ಸಹಜ ಎಂಬ ತತ್ತ್ವ ಇಲ್ಲಿ ನಿರೂಪಿತವಾಗಿದೆ; ಬದಲಿಗೆ ವಶೀಕರಣ ಮೊದಲಾದ ಸಲ್ಲದ ಮಾರ್ಗಗಳಿಂದ ಪತಿಯನ್ನು ವಶಪಡಿಸಿಕೊಳ್ಳುವ ಕಾರ್ಯ ಶಾಸ್ತ್ರಗಳಲ್ಲಿ ನಿಂದಿತವಾಗಿದೆ.

### ಶ್ರೀಕೃಷ್ಣ ರುಗ್ಮಿಣಿಗೆ ತೊಡಿಸಿದ ಕಂಚುಕ

**ಆಕಂಠಮಾಪಾದತಲಾನ್ಮುರಾರೇ-**
**ರ್ನೇತ್ರಾಂತನೀಲೋತ್ಪಲಚಾರುಮಾಲಾಮ್ ।**
**ಶ್ರೀಃ ಸಂದಧೇ ತತ್ಕ್ಷಣಹೃಷ್ಟರೋಮ-**
**ಸತ್ಕಂಚುಕಂ ಶ್ರೀಪತಿರಾತ್ಮಪತ್ನ್ಯಾಮ್ ॥ ೩೮ ॥**

ಶ್ರೀಕೃಷ್ಣನ ಕಂಠದಿಂದ ಪ್ರಾರಂಭಿಸಿ, ಪಾದತಲದ ವರೆಗೆ ರುಗ್ಮಿಣಿಯು ತನ್ನ ಕುಡಿನೋಟವೆಂಬ ಕನ್ನೈದಿಲೆಯ ಮಂಜುಳ ಮಾಲೆಯನ್ನು ತೊಡಿಸಿದಳು. ಶ್ರೀಕೃಷ್ಣನೂ ಸಹ ತನ್ನ ಪತ್ನಿಯಾದ ರುಗ್ಮಿಣೀದೇವಿಗೆ ಆ ಕ್ಷಣದಲ್ಲಿ ರೋಮಾಂಚನವೆಂಬ ಉತ್ತಮವಾದ ಕಂಚುಕವನ್ನು ತೊಡಿಸಿದ.

ವಿ. : ೧. [೧] ವಿವಾಹಕಾಲದಲ್ಲಿ ಕನ್ಯೆಯು ಕೊರಳಿಗೆ ಮಾಲೆಯನ್ನೂ, ವರನು ಕನ್ಯೆಗೆ ಕಂಚುಕ ಮೊದಲಾದವುಗಳನ್ನೂ ತೊಡಿಸಬೇಕು ಎಂಬುದು ವಿಧಿ. ಅದಕ್ಕನುಗುಣವಾಗಿ ಶ್ರೀಕೃಷ್ಣರುಗ್ಮಿಣಿಯರು ಲೋಕವಿಲಕ್ಷಣರೀತಿಯಲ್ಲಿ ಆ ಕಾರ್ಯವನ್ನು ಮಾಡಿದರು ಎಂಬುದು ಇಲ್ಲಿಯ ಭಾವ.

೨. ರುಗ್ಮಿಣಿಯ ಕುಡಿನೋಟವೇ ಶ್ರೀಕೃಷ್ಣನಿಗೆ ಮಾಲೆಯಂತಾದರೆ, ಶ್ರೀಕೃಷ್ಣನು ಉಂಟುಮಾಡಿದ ರೋಮಾಂಚನವೇ ರುಗ್ಮಿಣಿಗೆ ಕಂಚುಕವಾಯಿತು ಎಂದರ್ಥ.

---

೧. ವಿವಾಹಕಾಲೇ ಕನ್ಯಯಾ ಮಾಲಾ ದಾತವ್ಯಾ । ವರೇಣ ಕಂಚುಕಾದಿಕಂ ತ್ವಿತಿ ತದುಭಯಮಲೌಕಿಕಯೋಃ ಸ್ತ್ರೀಪುರುಷಯೋರಲೌಕಿಕಮೇವ ಭವೇದಿತ್ಯಾಶಯೇನ ಏವಂ ಕೃತಮಿತಿ ಭಾವಃ। -ವ್ಯಾ.

ಅವರ ಹೆಸರಿನಿಂದಲೇ ತಿಳಿಯುವ ಶಿವಾದಿ ದೇವತೆಗಳ ದೋಷಗಳು

**ಉಗ್ರೋಽಯಂ ಸಖಿ ಚಂಚಲೋಽಯಮಮಲೇ ಸೋಽಯಂ ರಮೇ ಗೂಢಪಾ-**
**ದ್ವೃದ್ಧೋಽಸೌ ಜ್ವಲನೋಽಯಮೇಷ ತಪನಃ ಸದ್ವಕ್ರತುಂಡೋ ಹ್ಯಸೌ ।**
**ಮುಗ್ಧೋಽದಂತಕ ಏಷ ದೇವಿ ಜಲರಾಟ್ ಗೋತ್ರಾಸಹೋಽಸೌ ಕ್ಷಿತಾ-**
**ವಿತ್ಯಾದ್ಯಾಭಿಧಯೈವ ಧಿಕ್ಕೃತಸುರಾ ಶ್ರೀರಾಸಸಾದಾಚ್ಯುತಮ್ ॥ ೩೯ ॥**

ಎಲೈ ಗೆಳತಿ ! ಇವನು ಉಗ್ರ(ಶಿವ); ಇವನು ಚಂಚಲ(ವಾಯು); ಇವನು ಕಾಲಿಲ್ಲದವನು (ಶೇಷ); ಇವನು ವೃದ್ಧ (ಬ್ರಹ್ಮದೇವರು); ಇವನು ಸುಟ್ಟುಹಾಕುವವನು (ಅಗ್ನಿ); ಇವನು ಬೇಗೆ ನೀಡುವವನು(ಸೂರ್ಯ); ಇವನು ಸೊಟ್ಟಮುಖದವನು(ಗರುಡ); ಇವನು ಹಲ್ಲಿಲ್ಲದವನು (ಪೂಷ); ಇವನು ಜಲ(ಡ)ಚಕ್ರವರ್ತಿ(ವರುಣ); ಇವನು ಕುಲವಿಲ್ಲದವನು (ಇಂದ್ರ)(ಪರ್ವತವಿರೋಧಿ); ಈ ರೀತಿಯಾಗಿ ಅವರ ಹೆಸರುಗಳಿಂದಲೇ ಅವರು ತನಗೆ ಅನುರೂಪರಲ್ಲ ಎಂಬುದನ್ನು ಸೂಚಿಸುತ್ತಾ ರುಗ್ಮಿಣಿಯು ಕೃಷ್ಣನ ಬಳಿ ಸಾರಿದಳು.

ವಿ. : ೧. ಈ ಶ್ಲೋಕದಲ್ಲಿ ವಿಷ್ಣುಭಿನ್ನರಾದ ಸಕಲ ಮುಖ್ಯದೇವತೆಗಳ ಅಸಾಮಂಜಸ್ಯವು ನಿರೂಪಿತವಾಗಿದೆ.

೨. ಒಂದು ರೀತಿಯಲ್ಲಿ ಇದು **ಪತ್ಯುರಸಾಮಂಜಸ್ಯಾತ್** ಎಂಬ ಸೂತ್ರದ ವಿವರಣೆಯೂ ಆಗಿದ್ದು ವಿಷ್ಣುಸರ್ವೋತ್ತಮತ್ವವನ್ನು ದೃಢಪಡಿಸುತ್ತದೆ.

೩. ಅದರಂತೆ ಇಲ್ಲಿ ಸೂಚಿತವಾದ ಯಾವುದೇ ಬಗೆಯ ದೋಷಗಳೂ ಸಹ ಶ್ರೀಕೃಷ್ಣನಲ್ಲಿ ಇಲ್ಲ ಎಂಬುದನ್ನು ಅಚ್ಯುತ ಎಂಬ ಪದದಿಂದ ಸೂಚಿಸುತ್ತಾ ಅವನು ಸಕಲ ದೋಷದೂರ ಎಂಬ ಮಹಾಪ್ರಮೇಯವನ್ನು ಸ್ಫುಟಪಡಿಸುತ್ತದೆ.

೪. ಈ ಮೂಲಕವಾಗಿ ವರನಿಗೆ ಕುಂದುಂಟುಮಾಡುವ ದೋಷಗಳು ಸಹ ಇದರಲ್ಲಿ ಕೌಶಲಪೂರ್ಣವಾಗಿ ನಿರೂಪಿತವಾಗಿದೆ. ಎಂದರೆ ವರನಾಗುವವನು ಉಗ್ರನಾಗಿರಕೂಡದು, ಚಂಚಲಮನಸ್ಕನಾಗಿರಕೂಡದು, ಲಕ್ಷಣವಾದ ಕೈಕಾಲುಗಳನ್ನು ಹೊಂದಿರಬೇಕು, ಹೆಚ್ಚು ವಯಸ್ಸಿನವನಾಗಿರಕೂಡದು; ಸಿಡುಕಿನ ಸ್ವಭಾವದವನಾಗಿರಕೂಡದು, ಮನಸ್ಸಿಗೆ ನೋವುಂಟು ಮಾಡುವವನಾಗಿರಕೂಡದು; ಲಕ್ಷಣವಾದ ಮುಖ ಹೊಂದಿರಬೇಕು, ದಂತಗಳು ವಿಹಿತರೀತಿ-ಯಲ್ಲಿರಬೇಕು, ವಿವೇಕಿಯಾಗಿರಬೇಕು, ಸತ್ಕುಲಪ್ರಸೂತನಾಗಿರಬೇಕು ಎಂಬವು ಇಲ್ಲಿ ಸೂಚಿತವಾಗಿರುವ ವರನ ಮುಖ್ಯ ಲಕ್ಷಣಗಳು ಎಂದು ತಿಳಿಯಬೇಕು.

೫. ಶ್ರೀಪುರಂದರದಾಸರ ಈ ಕೆಳಗಿನ ಉಗಾಭೋಗದಲ್ಲಿ ಇದೇ ರೀತಿಯ ಭಾವ ಕಂಡುಬರುವುದು :

ಬೆನಕನ ನಾನೊಲ್ಲೆನವ್ವ ತುಲಕಿ ಆಡುವನ
ಷಣ್ಮುಖನನೊಲ್ಲೆನವ್ವ ಹಲವು ಬಾಯವನ
ಇಂದ್ರನ ನಾನೊಲ್ಲೆನವ್ವ ಮೈಯೆಲ್ಲ ಕಣ್ಣವನ
ಚಂದ್ರನ ನಾನೊಲ್ಲೆನವ್ವ ಕಳೆಗುಂದುವವನ
ರವಿಯ ನಾನೊಲ್ಲೆನವ್ವ ಉರಿದು ಮೂಡುವನ
ಹರನ ನಾನೊಲ್ಲೆನವ್ವ ಮರುಳುಗೊಂಬುವನ
ಧರೆಗತಿಚೆಲುವನು ಜಗಕೆಲ್ಲ ಒಡೆಯನು
ತಂದು ತೋರೆ ನಮ್ಮ ಪುರಂದರವಿಠಲನ ॥

## ಬ್ರಹ್ಮಾದಿಗಳು ಶ್ರೀಹರಿಯ ಉಪಾಸಕರು

**ವೇಧಾ ವೈದಿಕಮೌಲಿರೇಷ ಪವನೋ ಮಂತ್ರಂ ಜಪನ್ ಸಂತತಂ**
**ಶರ್ವೋಽಸೌ ಸುವಿರಕ್ತಧೀಃ ಸ ಮಘವಾ ವ್ಯಾಪಾರಭಾರಾಕುಲಃ ।**
**ಸೂರ್ಯಃ ಪರ್ಯಟನಪ್ರಿಯಃ ಸ ತು ಶಶೀ ದೋಷಾಕರೋಽಸೌ ಸ್ಮರೋಽ-**
**ನಂಗಶ್ಚೇತ್ಯಖಿಲಾನುಪೇಕ್ಷ್ಯ ಕಮಲಾ ವವ್ರೇ ಯದೂನಾಂಪತಿಮ್ ॥ ೪೦ ॥**

ಬ್ರಹ್ಮನು ವೈದಿಕಶಿರೋಮಣಿ, ಮುಖ್ಯಪ್ರಾಣ ಸದಾ ಮಂತ್ರಜಪದಲ್ಲಿ ತೊಡಗಿದವನು, ಈ ಶಿವನಂತೂ ಮಹಾವೈರಾಗ್ಯಶಾಲಿ, ಇಂದ್ರನೋ ಬಹುಬಗೆಯ ಕಾರ್ಯಗಳಲ್ಲಿ ತೊಡಗಿ-ಕೊಂಡವನು, ಸೂರ್ಯನು ಸದಾ ಸಂಚಾರಪ್ರಿಯ, ನಿಶಾಚರನಾದ ಚಂದ್ರನು ಕಲಂಕ ಉಳ್ಳವನು, ಕಾಮನಂತೂ ದೇಹರಹಿತ; ಹೀಗೆ ಇತರ ಎಲ್ಲ ದೇವತೆಗಳನ್ನು ಕಡೆಗಣಿಸಿ ರುಗ್ಮಿಣಿ ಯದುಪತಿಯಾದ ಶ್ರೀಕೃಷ್ಣನನ್ನು ಪತಿಯನ್ನಾಗಿ ವರಿಸಿದಳು.

ವಿ. : ೧. ಇದರಲ್ಲೂ ಸಹ ಇತರ ದೇವತೆಗಳ ಹಿರಿಮೆಯೊಂದಿಗೆ ಅವರು ನಿರ್ದೋಷರಲ್ಲ ಎಂಬ ಅಂಶವು ಸಹ ನಿರೂಪಿತವಾಗಿದೆ.

೨. ಮತ್ತೊಂದು ಬಗೆಯಲ್ಲಿ ವರನಾದವನಲ್ಲಿ ಇರಬೇಕಾದ ಕೆಲವು ವಿಶೇಷ ಗುಣಗಳನ್ನೂ ಸಹ ಸೂಚಿಸಿರುವರು. ವರನು ತುಂಬಾ ವೈದಿಕನಾಗಿರುವುದು, ಸದಾ ಮಂತ್ರಜಪದಲ್ಲೇ ತೊಡಗುವುದು, ವಿಶೇಷ ವೈರಾಗ್ಯಶಾಲಿಯಾಗುವುದು, ಹೆಚ್ಚಿನ ಕೆಲಸಗಳಲ್ಲಿ ತೊಡಗಿಕೊಳ್ಳು-ವುದು, ಸದಾ ಸಂಚಾರಿಯಾಗಿರುವುದು, ತಪ್ಪುಗಳನ್ನು ಎಸಗುವುದು, ಯೋಗ್ಯರೀತಿಯ ದೇಹಸೌಷ್ಠವ ಹೊಂದದಿರುವುದು, ಹಿತವಾದ ದಾಂಪತ್ಯಕ್ಕೆ ಅಷ್ಟಾಗಿ ವಿಹಿತವಲ್ಲ ಎಂಬುದು ಇಲ್ಲಿಯ ಸೂಚನೆ.

೩. ಶ್ರೀಪುರಂದರದಾಸರ "ಒಲ್ಲೆನೆ ವೈದಿಕ ಗಂಡನ, ಮುಪ್ಪಿನ ಗಂಡನು ಬೇಡಕ್ಕ" ಇತ್ಯಾದಿ ದೇವರ ನಾಮಗಳು ಇದರ ವಿವರಣೆಯಂತಿವೆ (ವೇಧಾಃ - ಬ್ರಹ್ಮದೇವರು; ಮಘವಾ- ಇಂದ್ರದೇವರು).

೪. ಆದರೆ ಇಂತಹ ಗುಣಗಳು ಸಾಧಕರಿಗೆ ಅತ್ಯಗತ್ಯ. ಆದ್ದರಿಂದ ಬ್ರಹ್ಮಾದಿಗಳು ಶ್ರೀಹರಿಭಕ್ತಿಯ ಸಾಧಕರೇ ಹೊರತು ಶ್ರೀಹರಿಯಂತೆ ಸಿದ್ಧರಲ್ಲ; ತಾನಂತೂ ನಿತ್ಯಮುಕ್ತಳು ಎಂದ ಮೇಲೆ ಮುಕ್ತರಲ್ಲದವರನ್ನು ವರಿಸುವುದು ಸರ್ವಥಾ ಅನುಚಿತ. ನಿತ್ಯಮುಕ್ತನಾದ ಶ್ರೀಹರಿಯೇ ತನಗೆ ತಕ್ಕ ವರ ಎಂದು ರುಗ್ಮಿಣಿಯು ಸೂಚಿಸಿದಳು ಎಂದು ತಿಳಿಯಬೇಕು.

## ಬ್ರಹ್ಮಾದಿಗಳು ಶ್ರೀಹರಿಯ ಪುತ್ರಪೌತ್ರಾದಿ ಪರಿವಾರ

**ಪುತ್ರೋ[೧] ಯಸ್ಯ ಸ ಪದ್ಮಭೂಃ ಫಣಿಪತಿಃ ಶಯ್ಯಾ ಖಗೇಶೋ ರಥಃ**
**ಶಂಭುರ್ಯಚ್ಚರಣಾಂಬುಮೌಲಿರಗಭಿತ್ ತದ್ದತ್ತಸಾಮ್ರಾಜ್ಯಭುಕ್ ।**
**ನಿತ್ಯಂ ಯತ್ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂ-**
**ಸ್ತಂ ವರ್ಯಂ ವರಯಾಂಬಭೂವ ಸುದತೀ ಸಾ ದ್ವಾರಕಾನಾಯಕಮ್ ॥ ೪೧ ॥**

ಕಮಲೋದ್ಭವನಾದ ಬ್ರಹ್ಮನು ಇವನಿಗೆ ಮಗ, ನಾಗರಾಜನಾದ ಶೇಷ ಇವನಿಗೆ ಹಾಸಿಗೆ; ಗರುಡನು ರಥ, ಶಿವನು ಇವನ ಪಾದೋದಕವನ್ನು ಧರಿಸಿದವನು, ಇಂದ್ರನು ಇವನಿತ್ತ ಸಾಮ್ರಾಜ್ಯವನ್ನು ಆಳುವವನು, ಸೂರ್ಯಚಂದ್ರರು ಸದಾ ಇವನ ಪಾದಾ(ವಿಷ್ಣುಪಾದ, ಗಗನ)ವಲಂಬಿಗಳು, ಮಹಾಲಕ್ಷ್ಮಿಯು ಇವನ ಪ್ರಿಯೆ, ಇಂತಹ ಸರ್ವೋತ್ತಮನೇ ತನ್ನ ಪತಿ ಎಂಬುದಾಗಿ ಸುಂದರಿಯಾದ ರುಗ್ಮಿಣಿಯು ದ್ವಾರಕಾಧೀಶನಾದ ಶ್ರೀಕೃಷ್ಣನನ್ನು ವರಿಸಿದಳು.

ವಿ. : ಈ ಶ್ಲೋಕದಲ್ಲೂ ಇತರ ದೇವತೆಗಳ ಇತಿಮಿತಿಗಳು ನಿರೂಪಿತವಾಗಿವೆ. ಪುತ್ರ, ಪೌತ್ರ, ಭೃತ್ಯ, ಮೊದಲಾದವರು ಎಂದೂ ಸಹ ತನಗಿಂತ ಉತ್ತಮರೆನ್ನಿಸಲಾರರು ಎಂದರೆ ಅವರು ವರರಾಗುವುದು ಅಶಕ್ಯ. ಅವರೆಲ್ಲರಿಗೂ ಸ್ವಾಮಿಯಾದ ಶ್ರೀಹರಿಯೇ ತನಗೆ ಪತಿ ಎಂದು

---

೧. ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥ - ಶ್ರೀಜಯತೀರ್ಥರು(ತತ್ತ್ವನಿರ್ಣಯಟೀಕಾ)
ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ ।
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ ॥
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ ಹರಿರ್ಮಂಗಲಮ್ ॥ - ಮಂಗಲಾಷ್ಟಕಮ್

ರುಗ್ಮಿಣಿಯು ಹೀಗೆ ಸ್ಫುಟಪಡಿಸಿದಳು ಎಂದರ್ಥ; ಅಗಭಿತ್-ಇಂದ್ರ ; ವಿಧು-ಚಂದ್ರ; ಸುದತಿ - ಸುಂದರಿ .

### ಸಕಲವಿಧ ಪುಷ್ಪಗಳಿಂದ ಪೂಜಿತನಾಗುವ ಶ್ರೀಹರಿಯ ವೈಭವ

**ಯಾ ವೈ ಚಂಪಕಸಂಪದಾಽಬ್ಜವಸತೇರ್ದೂರ್ವಾಶ್ರಿಯಾ ಸ್ವಾತ್ಮನಃ**
**ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜಕಾಂತ್ಯಾ ವಿಧೋಃ।**
**ಸನ್ನೀಲೋತ್ಪಲಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾಽಮತಾ**
**ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥ ೪೨ ॥**

ರುಗ್ಮಿಣಿಯ ಕೈಯಲ್ಲಿ ಹಿಡಿದಿದ್ದ ಮಾಲೆಯು ಸಂಪಿಗೆ ಹೂಗಳನ್ನು ಹೊಂದಿದ್ದರಿಂದ ಬ್ರಹ್ಮನಿಗೆ ಅನುಚಿತವಾಗಿತ್ತು. ಅದರಲ್ಲಿದ್ದ ಗರಿಕೆಗಳಿಂದಾಗಿ ಅದನ್ನು ತಾನೂ ಧರಿಸುವಂತಿರಲಿಲ್ಲ. ಅದರಲ್ಲಿನ ಕೇದಿಗೆ ಹೂವು ಶಿವನಿಗೆ ಹಿಡಿಸದು; ಅದರಲ್ಲಿನ ಕಮಲಗಳು ಚಂದ್ರನಿಗೆ ಮೆಚ್ಚುಗೆಯಾಗವು, ಕನ್ನೈದಿಲೆಗಳು ಸೂರ್ಯನಿಗೆ ಅಪ್ರಿಯ; ತುಲಸಿಯು ಗಣೇಶನಿಗೆ ನಿಷಿದ್ಧ; ಆದ್ದರಿಂದ ಶ್ರೀಹರಿಗೆ ಮಾತ್ರವೇ ಅದು ಅತ್ಯಂತ ಸಮುಚಿತವಾಗಿ ಶೋಭಿಸತೊಡಗಿತ್ತು.

ವಿ. : ೧. [೧]ಬ್ರಹ್ಮಾದಿ ದೇವತೆಗಳ ಪೂಜೆಗೆ ವಿಹಿತವಲ್ಲದ ಪುಷ್ಪಗಳ ವಿವರ ಈ ಶ್ಲೋಕದಲ್ಲಿ ನಿರೂಪಿತವಾಗಿದೆ.

೨. ಬ್ರಹ್ಮದೇವರಿಗೆ ಸಂಪಿಗೆ, ದುರ್ಗಾದೇವಿಗೆ ಗರಿಕೆ, ಶಿವನಿಗೆ ಕೇದಿಗೆ, ಚಂದ್ರನಿಗೆ ಕಮಲ, ಸೂರ್ಯನಿಗೆ ಕನ್ನೈದಿಲೆ, ಗಣೇಶನಿಗೆ ತುಳಸಿ ನಿಷಿದ್ಧ ಎಂಬ ಸ್ಮೃತಿವಾಕ್ಯಗಳಿಗೆ ಇದು ನಿದರ್ಶನ.

೩. ಇದಕ್ಕೆ ಆಧಾರವಾದ ಪ್ರಮಾಣವಚನಗಳು ಹೀಗಿವೆ :

ದುರ್ವಾಭಿರ್ನಾರ್ಚಯೇದ್ ದುರ್ಗಾಂ ನ ಕೇತಕ್ಯಾ ಚ ಶಂಕರಮ್ ।
ನಾಕ್ಷತ್ರೈರರ್ಚಯೇದ್ವಿಷ್ಣುಂ ನ ತುಲಸ್ಯಾ ವಿನಾಯಕಮ್ ॥ - ಇತಿ ಸ್ಮೃತಿಃ

ಕೇತಕೀಭವಪುಷ್ಪೈಶ್ಚ ನೈವಾರ್ಚ್ಯಃ ಶಂಕರಸ್ತಥಾ ।
- ಪದ್ಮಪುರಾಣ (ಉ.ಖಂ. ೧೩/೨೬)

೪. ಕೃತ್ತಿವಸನ - ಶಿವ; ದುರ್ವಾ - ಗರಿಕೆ ; ಹೇರಂಬ - ಗಣೇಶ ; ಕೇತಕಿ - ಕೇದಿಗೆ.

---

೧. ಉರ್ವಾರುಕಪಲಾಶೋತ್ಥೈಃ ಪುಷ್ಪೈಃ ಕುರ್ಯಾನ್ನಮಾರ್ಚನಮ್ ।
ಮಹಾಪರಾಧಾನ್ ಜಾನೀಹಿ ದ್ವಾತ್ರಿಂಶನ್ನ ಕ್ಷಮಾಪಿತಾನ್ ॥ - ವಾರಾಹ
ಅಕರ್ಮಣ್ಯಪ್ರಸೂನಾರ್ಚಾ - ಯೋಗದೀಪಿಕಾ(೩./೬೩.)

### ರುಗ್ಮಿಣಿಯಿಂದ ಶ್ರೀಕೃಷ್ಣನಿಗೆ ಮಾಲಾಸಮರ್ಪಣೆ

ಹರೇಃ ಪ್ರಸಾದೈಕಭುಜಾಂ ಸುರಾಣಾ-
ಮಿಮಾಂ ಪ್ರದಾಸ್ಯಾಮಿ ಕಥಂ ತ್ವಿತೀವ ।
ರಮಾ ಪ್ರಮೋದೋತ್ಥಿತರೋಮರಾಜಿಃ
ಸಮರ್ಪಯಾಮಾಸ[೧] ಮುಕುಂದಕಂಠೇ ॥ ೪೩ ॥

ಶ್ರೀಹರಿಗೆ ಸಮರ್ಪಿಸಿದ ನಿರ್ಮಾಲ್ಯವನ್ನು ಮಾತ್ರ ಸ್ವೀಕರಿಸುವ ಇತರ ದೇವತೆಗಳಿಗೆ ಎಂತು ತಾನೆ ಸಮರ್ಪಿಸಲು ಸಾಧ್ಯ ಎಂಬ ಭಾವದಿಂದೆಂಬಂತೆ ಆನಂದದಿಂದ ರೋಮಾಂಚನ-ಗೊಂಡ ರುಗ್ಮಿಣಿಯು ಆ ಮಾಲೆಯನ್ನು ಶ್ರೀಕೃಷ್ಣನ ಕಂಠದಲ್ಲಿ ಸಮರ್ಪಿಸಿದಳು.

ವಿ. : [೨]ಇತರ ದೇವತೆಗಳಿಗೆ ಶ್ರೀಹರಿಯ ನಿರ್ಮಾಲ್ಯ ಮಾತ್ರ ಪ್ರಿಯ; ಇತರ ಸಕಲವೂ ಅಪ್ರಿಯವೇ; ರುಗ್ಮಿಣಿಯ ಕೈಯಲ್ಲಿ ಹಿಡಿದಿದ್ದ ಮಾಲೆಯು ನಿರ್ಮಾಲ್ಯವಲ್ಲವಾದ್ದರಿಂದ ಇತರ ದೇವತೆಗಳಾರೂ ಅದನ್ನು ಬಯಸಲಾರರು; ನಿರ್ಮಾಲ್ಯವಲ್ಲದ ಮಾಲೆಗೆ ಶ್ರೀಕೃಷ್ಣನೊಬ್ಬನೇ ಅರ್ಹ ಎಂಬುದು ಇಲ್ಲಿಯ ಇನ್ನೂ ಹೆಚ್ಚಿನ ಮುಖ್ಯತತ್ತ್ವ.

### ರುಗ್ಮಿಣಿಯು ಶ್ರೀಕೃಷ್ಣನಿಗೆ ಸಲ್ಲಿಸಿದ ಅತ್ಯಪೂರ್ವವಾದ ಪೂಜೆ

ಸಾ ಧಾರಾಂಬುಕದಂಬಕೇನ ಸಹ ಸುಪ್ರೇಮಾಶ್ರುಧಾರಾಂ ಹರೇ-
ರ್ಭ್ರಾಜನ್ಮಾಲಿಕಯಾ ಸಮಂ ಪ್ರಣಯಸನ್ಮಾಲಾಂ ಸುನೀರಾಜನಮ್ ।
ನೇತ್ರಾಂತೇನ ಶುಚಿಸ್ಮಿತಾಮೃತರಸೈರ್ನೈವೇದ್ಯಮಾವೇದ್ಯ ತ-
ತ್ಪಾರ್ಶ್ವಂ ಮಂದಮುಪಾಶ್ರಯತ್ ಫಲಮಿವ ವ್ಯಾಲೋಲಹಾರೋಜ್ಜ್ವಲಾ ॥೪೪॥

ಅಲುಗುವ ಮಾಲೆಗಳಿಂದ ಬೆಳಗುವ ಆ ರುಗ್ಮಿಣಿಯು ಧಾರೋದಕವೆಂಬ ಜಲಧಾರೆ-ಯೊಂದಿಗೆ ಪ್ರೇಮಾಶ್ರುಧಾರೆಯನ್ನು ಸುರಿಸುತ್ತಾ ಕೈಯಲ್ಲಿನ ಹೊಳೆಯುವ ಮಾಲೆಯೊಂದಿಗೆ ಪ್ರೀತಿ ಎಂಬ ಉತ್ತಮ ಮಾಲೆಯನ್ನು, ತನ್ನ ಕುಡಿನೋಟವೆಂಬ ಮಹಾನೀರಾಜನವನ್ನು ನಿರ್ಮಲಮಂದಹಾಸವೆಂಬ ಅಮೃತರಸದ ನೈವೇದ್ಯವನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಅದರ ಫಲವೋ ಎಂಬಂತೆ ಮೆಲ್ಲನೆ ಅವನ ಪಕ್ಕದಲ್ಲಿ ತಾನೇ ನೆಲೆಸಿದಳು.

ವಿ. : ಇದರಲ್ಲಿ ರುಗ್ಮಿಣಿಯು ಶ್ರೀಹರಿಗೆ ಸಲ್ಲಿಸಿದ ಪೂಜಾದಿಗಳು ಹಾಗೂ ಅವುಗಳ ಫಲಶ್ರುತಿಯು ನಿರೂಪಿತವಾಗಿದೆ.

---

೧. ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾಮಮ್ಲಾನಪದ್ಮಾಂ ಜಲಜಾಯತಾಕ್ಷೀ ।
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ ತದಂಸ ಆಸಜ್ಯ ಚ ಪಾರ್ಶ್ವತೋಽಭವತ್ ॥ -ಮ.ಭಾ.ತಾ.ನಿ.(೪/೨೮)

೨. "ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾಂತರಮ್" - ಸ್ಮೃತಿ।

## ಶ್ರೀಕೃಷ್ಣರುಗ್ಮಿಣಿಯರ ವಿವಾಹ ಸಂಭ್ರಮ

ನಾರ್ಯೋಽಕ್ಷತಾನ್ ಪ್ರವವೃಷುರ್ನವಕುಂಕುಮಾಭಾನ್
ಸಂಗೀತಮಂಗಲಕಥಾಃ ಸಮಲಂಕೃತಾಂಗ್ಯಃ।
ಸೌವರ್ಣವಿಷ್ಟರಗತೌ ಸದಯೈರಪಾಂಗೈಃ
ಕನ್ಯಾವರೌ ಚ ಫಲಮಕ್ಷಯಮೇವ ತಾಸಾಮ್ ॥ ೪೫ ॥

ಚೆನ್ನಾಗಿ ಸಿಂಗರಿಸಿಕೊಂಡಿದ್ದ, ಸಂಗೀತದ ಮಂಗಲ ಕಥೆಗಳನ್ನು ಹಾಡುತ್ತಿದ್ದ ನಾರಿಯರು ಹೊಸಕುಂಕುಮದಂತೆ ಹೊಳೆಯುತ್ತಿದ್ದ ಅಕ್ಷತೆಗಳನ್ನು ಅವರಿಬ್ಬರ ಮೇಲೆ ಸುರಿಸಿದರು. ಚಿನ್ನದ ಪೀಠದಲ್ಲಿ ಮಂಡಿಸಿದ್ದ ಶ್ರೀಕೃಷ್ಣ-ರುಗ್ಮಿಣಿಯರೆಂಬ ವಧೂವರರು ಅವರಿಗೆ ಕರುಣೆ ತುಂಬಿದ ಕುಡಿನೋಟಗಳ ಮೂಲಕ ಅಕ್ಷಯವಾದ ಫಲವಾದ ಮೋಕ್ಷವನ್ನೇ ಕರುಣಿಸಿದರು.

ವಿ: ೧. ನಾರಿಯರು ಶ್ರೀಕೃಷ್ಣರುಗ್ಮಿಣಿಯರ ಮೇಲೆ ಅಕ್ಷತೆಗಳ ಮಳೆ ಸುರಿಸಿದರೆ, ಶ್ರೀಕೃಷ್ಣ-ರುಗ್ಮಿಣಿಯರು ಅವರ ಕುಡಿನೋಟಗಳ ರೂಪದಲ್ಲಿ ಮೋಕ್ಷವನ್ನೇ ಕರುಣಿಸಿದರು ಎಂದರ್ಥ.

೨. ಅಕ್ಷತೆಗಳು ಕೆಂಪು ಎಂಬ ಇಲ್ಲಿಯ ನಿರೂಪಣೆ ಗಮನಾರ್ಹ; ಶ್ರೀಲಕ್ಷ್ಮೀನಾರಾಯಣರಾದ ಶ್ರೀಕೃಷ್ಣರುಗ್ಮಿಣಿಯರು ಮೋಕ್ಷ ನೀಡುವವರು ಎಂಬ ಇಲ್ಲಿಯ ವಿಶೇಷಾಂಶವೂ ಗಮನಾರ್ಹ.

## ವಿವಾಹಾಂಗವಾದ ಲಾಜಾಹೋಮ

ಗೃಹೀತಪಾಣೀ ಕಿಲ ಚಕ್ರತುಸ್ತೌ
ಪ್ರದಕ್ಷಿಣಂ ಲಾಜಸಮೇಧಿತಾಗ್ನೇಃ।
ವಧೂವರೌ ರಮ್ಯರಹಸ್ಯಗೋಷ್ಠ್ಯಾಂ
ವಿಧಾತುಮಾತ್ಮೀಯಮಿವಾಸ್ಯಗಂ ತಮ್ ॥ ೪೬ ॥

ವಧೂವರರಾದ ಶ್ರೀಕೃಷ್ಣರುಗ್ಮಿಣಿಯರು ಪರಸ್ಪರ ಕೈಹಿಡಿದುಕೊಂಡು ಲಾಜಗಳ ಹೋಮದಿಂದ ಪ್ರಜ್ವಲಿಸುತ್ತಿದ್ದ ಅಗ್ನಿಗೆ ಪ್ರದಕ್ಷಿಣೆಗೈದರು; ರಮ್ಯವಾದ ಏಕಾಂತಗೋಷ್ಠಿಯಲ್ಲಿ ಅವನನ್ನು ತಮ್ಮ [1]ಮುಖದಲ್ಲಿ ಆತ್ಮೀಯನನ್ನಾಗಿ ಇರಿಸಿಕೊಳ್ಳಲೋ ಎಂಬಂತೆ.

ವಿ. : ಧಾರೆಯ ಅನಂತರದ ಮುಖ್ಯಕಾರ್ಯಗಳಲ್ಲಿ ಒಂದಾದ ಲಾಜಾಹೋಮದ ವಿವರ ಇಲ್ಲಿ ಬಂದಿದೆ.

---

೧. "ಮುಖಾದಿಂದ್ರಶ್ಚಾಗ್ನಿಶ್ಚ" ಇತಿ ಶ್ರುತಿಃ।

## ನಾಗಬಲಿ ಕಾರ್ಯ

ತತಶ್ಚತುರ್ಥೇ ದಿವಸೇ ಕಿಲೈತೌ
ಚಿರಂ ರತೌ ತಲ್ಪತನೌ ಫಣೀಂದ್ರೇ ।
ವಿಲಂಬಿನಿ ಕ್ಷ್ಮಾಂ೧ ವಹತೇತಿ ನೂನಂ
ಪ್ರಚಕ್ರತುರ್ನಾಗಬಲಿಂ ಪ್ರಹೃಷ್ಟೌ ॥ ೪೭ ॥

ಆ ಬಳಿಕ ನಾಲ್ಕನೇ ದಿವಸದಲ್ಲಿ ವಧೂವರರಾದ ಕೃಷ್ಣರುಗ್ಮಿಣಿಯರು ನಾಗರಾಜನಾದ ಶೇಷನ ದೇಹವೆಂಬ ತಲ್ಪದಲ್ಲಿ ಬಹುಕಾಲ ವಿಹರಿಸಿದರು; ಆ ಸಮಯದಲ್ಲಿ ನೀವು ಭೂಮಿಯನ್ನು ಹೊತ್ತಿರಿ ಎಂದು ತಿಳಿಸಿಲೋ ಎಂಬಂತೆ ತುಂಬಾ ಹರ್ಷಿತರಾದ ಅವರಿಬ್ಬರು ನಾಗಬಲಿಯನ್ನು ನೆರವೇರಿಸಿದರು.

ವಿ. : ೧ [೧] ವಿವಾಹಾಂಗವಾದ ನಾಗಬಲಿ ಎಂಬ ವಿಧಿಯ ವಿವರಣೆ ಇದರಲ್ಲಿ ಬಂದಿದೆ.

೨. ಶೇಷ ಹಾಗೂ ದಿಗ್ಗಜಗಳು ಭೂಮಿಯನ್ನು ಹೊತ್ತಿವೆ ಎಂಬ ಪೌರಾಣಿಕ ವಿವರಗಳ ಹಿನ್ನೆಲೆಯಲ್ಲಿ ಈ ನಿರೂಪಣೆ ಅತ್ಯಂತ ರೋಚಕವಾಗಿದೆ.

## ರುಗ್ಮಿಣೆಯು ಶ್ರೀಕೃಷ್ಣನಿಗೆ ಸಮರ್ಪಿಸಿದ ಸರ್ವಸೇವೆ

ಸಾ ಮಂದಸ್ಮಿತಮೌಕ್ತಿಕೇನ ಸದಪಾಂಗಾಖ್ಯೈರ್ಹಯೈ೨ರ್ಹೃತ್ಪುರಾ
ವಕ್ಷೋಜದ್ವಿರದೇನ ಕಾಯಕನಕೇನೋದ್ಭೂತರೋಮಾನುಗೈಃ ।
ತತ್ಸಂಸಕ್ತಮನೋರಥೇನ ವಿವಿಧಾಂಗಶ್ರೀವಿಚಿತ್ರಾಂಬರೈ-
ಸ್ತದ್ಯೋಗ್ಯಾಮೃತಸಾಧನಾಧರಭುವಾ ಸಂತರ್ಪಯಾಮಾಸ ತಮ್ ॥ ೪೮ ॥

ರುಗ್ಮಿಣಿಯು ತನ್ನ ಕಿರುನಗೆ ಎಂಬ ಮುತ್ತಿನಿಂದ, ಉತ್ತಮ ಕುಡಿನೋಟಗಳೆಂಬ ಕುದುರೆ-ಗಳಿಂದ, ಹೃದಯವೆಂಬ ಪುರದಿಂದ, ವಕ್ಷೋಜಗಳೆಂಬ ಆನೆಯಿಂದ, ದೇಹವೆಂಬ ಚಿನ್ನ-ದಿಂದ, ಕಾಣಿಸಿಕೊಂಡ ರೋಮಾಂಚನವೆಂಬ ಭೃತ್ಯರಿಂದ, ಅವನಲ್ಲೇ ನೆಟ್ಟ ಮನಸ್ಸು ಎಂಬ ರಥದಿಂದ, ಬಗೆಬಗೆಯ ಅಂಗಕಾಂತಿ ಎಂಬ ವಿಚಿತ್ರ ವಸ್ತ್ರಗಳಿಂದ, ಅವನಿಗೆ ಯೋಗ್ಯವಾದ ಅಮೃತಕ್ಕೆ ಸಾಧನವಾದ ಅಧರದಿಂದ, ಆ ಶ್ರೀಕೃಷ್ಣನನ್ನು ಸಂತೋಷಪಡಿಸಿದಳು.

---

೧. ದಿಗ್ಗಜೈರ್ಯುಷ್ಮಾಭಿಃ ಸಹ ಭೂಮಂಡಲಧಾರಿಶೇಷೇ ಅಸ್ಮದ್ಭೋಗಾರ್ಥಂ ತಲ್ಪತಯಾ ಭೂಮೇರುಪರ್ಯೇವ ಸ್ಥಿತೇ ಸತಿ ಯೂಯಮೌದಾಸೀನ್ಯಂ ವಿಹಾಯ ಕ್ಷ್ಮಾಂ ಧಾರಯತೇತಿ ಧಿಯಾ ತದ್ಬಲಿರಿತಿ ಉತ್ಪ್ರೇಕ್ಷಾ । -ವ್ಯಾ.

೨. ಸರ್ವಪ್ರಲಯೇಽಪಿ "ಲಕ್ಷ್ಮೀಭುಜಾಂತರಗತಃ" (ಮ.ಭಾ.ತಾ.ನಿ.-೧/೨) ಇತ್ಯುಕ್ತ್ಯಾ ಹರೇರ್ಲಕ್ಷ್ಮೀವಕ್ಷಸ್ಯವಸ್ಥಿತೇಃ । -ವ್ಯಾ.

ವಿ. : ೧. [೧]ಶ್ರೀಕೃಷ್ಣನಿಗೆ ಉಚಿತವಾದ ಸಮಸ್ತ ರಾಜೋಪಚಾರಗಳನ್ನು ರುಗ್ಮಿಣಿಯು ಅತ್ಯಂತ ವಿಲಕ್ಷಣ ಎನ್ನಿಸುವ ಸಹಜ ರೀತಿಯಲ್ಲಿಯೇ ಸಮರ್ಪಿಸಿದಳು ಎಂದರ್ಥ.

೨. ಇಂತಹ ಅನನ್ಯಸಾಧ್ಯವಾದ ಸೇವೆಯಿಂದಾಗಿಯೇ ಮಹಾಲಕ್ಷ್ಮಿಯು ಇತರ ಸಕಲರ ಸೇವೆಯನ್ನು ಸಹ ಅನಂತ ಪಟ್ಟು ಮೀರಿಸುವಳು ಎಂಬ ವಿಶೇಷಾಂಶವನ್ನು ಇಲ್ಲಿ ಗುರುತಿಸ-ಬಹುದು; ದ್ವಿರದ – ಆನೆ.

೩. ಇತರ ಸಾಧನಗಳು ಬಾಹ್ಯ ಹಾಗೂ ಪ್ರಳಯಕಾಲದಲ್ಲಿ ಇರಲು ಅಶಕ್ಯ ; ಆದರೆ ರುಗ್ಮಿಣಿಯು ಸಮರ್ಪಿಸಿದ ಸಾಧನಗಳು ಮಾತ್ರ ಅನಾದಿಯಿಂದ ಅನಂತಕಾಲದವರೆಗೂ ಪರಿಪೂರ್ಣವಾಗಿ ಲಭಿಸುವಂತಹವು. ಆದ್ದರಿಂದ ಅವರ ಸೇವೆ ಪರಿಪೂರ್ಣವಾದ ನಿತ್ಯಸೇವೆ ಎಂಬ ಹಿರಿಮೆಯು ಇದರಿಂದ ಸ್ಫುಟಪಡುವುದು.

### ವಧೂವರರಂತೆ ಕಂಗೊಳಿಸಿದ ನರನಾರಿಯರ ಸಂಭ್ರಮ

ಜ್ವಲತ್ಕಲಾಪಾಃ ಸ್ಫುರದಂಗಲೇಪಾ
ವಿಚಿತ್ರವಸ್ತ್ರಾಃ ಸ್ಮಿತಶೋಭಿವಕ್ತ್ರಾಃ ।
ಸ್ವಯಂವರೇ ತತ್ರ ನರಾಶ್ಚ ನಾರ್ಯೋ
ವಧೂವರಾಭಾಃ ಕಿಲ ಸಂಚರಂತಿ ॥ ೪೯ ॥

ಝುಗಝುಗಿಸುವ ಆಭರಣಗಳು, ಹೊಳೆಯುವ ಅಂಗಲೇಪಗಳು, ಬಗೆಬಗೆಯ ವಸ್ತ್ರಗಳು, ಮಂದಹಾಸದಿಂದ ಕಂಗೊಳಿಸುವ ಮುಖಗಳು, ಹೀಗಿದ್ದ ಸ್ವಯಂವರ ಮಂಟಪದಲ್ಲಿಯ ಪುರುಷರು ಹಾಗೂ ಸ್ತ್ರೀಯರು ಸ್ವತಃ ವಧೂವರರಂತೆ ಕಂಗೊಳಿಸುತ್ತಾ ಅಲ್ಲಿ ಓಡಾಡುತ್ತಿದ್ದರು.

ವಿ. : ೧. ಶ್ರೀಕೃಷ್ಣರುಗ್ಮಿಣಿಯರ ಸ್ವಯಂವರದ ಆ ಪರ್ವಕಾಲವು ಅಲ್ಲಿ ನೆರೆದಿದ್ದ ನರನಾರಿಯರಿಗೆಲ್ಲಾ ತಾವೇ ವಧೂವರರು ಎಂಬಂತಹ ಅಪರಿಮಿತ ಉತ್ಸಾಹವನ್ನು ಉಂಟು-ಮಾಡಿತ್ತು ಎಂದರ್ಥ; ಕಲಾಪ – ಬ್ರಾಹ್ಮಣ.

೨. ಹೀಗೆ ಭಗವದುತ್ಸವವನ್ನೇ ತಮ್ಮ ಉತ್ಸವ ಎಂದು ಭಾವಿಸುವುದೇ ವಿವಾಹಾದಿ ಸಕಲ ಸತ್ಕಾರ್ಯಗಳ ಹಿಂದಿನ ಅನುಸಂಧಾನಕ್ರಮ ಎಂಬ ಸೂಚನೆಯು ಇಲ್ಲಿದೆ.

---

೧. ಶ್ರೀಕೃಷ್ಣಾಂತಃಪುರದಾಸೀ ಚ ಸ್ವಯಮೇವೇತ್ಯತಃ ಸ್ವಾಂಗೇಷು ತಾನ್ಯೂಢ್ವಾ ಕಾಲೇ ಕಾಲೇ ಸ್ವಭರ್ತುರರ್ಪಯತೀತಿ ಭಾವಃ। –ವ್ಯಾ.

ದುರ್ಗಮ ದುರ್ಗವನ್ನು ಪ್ರವೇಶಿಸಿದ ಕೃಷ್ಣರುಗ್ಮಿಣಿಯರು

ಸ್ವರ್ಗಿಭಿರ್ಗೀಯಮಾನಃ ಸ್ವಂ ದುರ್ಗಮಾವಿಶ್ಯ ದುರ್ಗಮಮ್ ।
ಭಗ್ನದುರ್ಜನದರ್ಪೋಽಸೌ ರುಗ್ಮಿಣೀರಮಣೋ ಬಭೌ ॥ ೫೦ ॥

ದುರ್ಜನರ ಸೊಕ್ಕಡಗಿಸಿದ ರುಗ್ಮಿಣೀರಮಣನಾದ ಶ್ರೀಕೃಷ್ಣನು ದೇವತೆಗಳಿಂದ ಕೊಂಡಾಡಲ್ಪಡುತ್ತಾ ತನ್ನ ದುರ್ಗಮವಾದ ದುರ್ಗವನ್ನು ಪ್ರವೇಶಿಸಿ ಶೋಭಿಸಿದನು.

ಭೂಮಿಗೆ ವಸ್ತ್ರದಂತೆ ಕಂಗೊಳಿಸಿದ ಸಮುದ್ರ

ಸ್ವಫೇನಕಾಂತ್ಯಾ ಸಿತಪಾರ್ಶ್ವಯುಗ್ಮಃ
ಶಿಖಾಭಿರೌರ್ವಸ್ಯ ಸುಪೀತಮಧ್ಯಃ ।
ಸಿತೇತರೋಽನ್ಯತ್ರ ಸ ಭೂತಧಾತ್ರ್ಯಾ
ವಿಚಿತ್ರವಸ್ತ್ರಶ್ರಿಯಮಾತನೋತಿ ॥ ೫೧ ॥

ತನ್ನ ನೊರೆಯ ಕಾಂತಿಯಿಂದಾಗಿ ಬಿಳಿದಾದ ಎರಡು ಪಾರ್ಶ್ವಗಳ, ಬಡವಾಗ್ನಿಯ ಜ್ವಾಲೆಗಳಿಂದಾಗಿ ಮಧ್ಯದಲ್ಲಿ ಪೀತವರ್ಣದ, ಉಳಿದಂತೆ ಬಿಳಿದಾದ ಆ ಸಮುದ್ರವು ಭೂಮಿಗೆ ವಿಚಿತ್ರವಾದ ವಸ್ತ್ರದಂತಹ ಕಾಂತಿಯನ್ನು ಉಂಟುಮಾಡಿತು.

ವಿ. : ೧. ಭೂಮಿಯನ್ನು ಸುತ್ತುವರೆದಿದ್ದ ಸಮುದ್ರವು ಭೂಮಿಗೆ ತೊಡಿಸಿದ ವಸ್ತ್ರದಂತೆ ಶೋಭಿಸುತ್ತಿದ್ದಿತು ಎಂದು ಭಾವ.

೨. ಇದು ಸಮುದ್ರವಸನೇ ದೇವಿ ಎಂಬ ಭೂದೇವಿಯ ಪ್ರಾರ್ಥನಾಶ್ಲೋಕವನ್ನು ಆಧರಿಸಿದ ವರ್ಣನೆ.

ಸಂಪತ್ತಿನೊಂದಿಗೆ ಹೆಚ್ಚುವ ಲೋಭದ ಸಂಕೇತವಾದ ಸಮುದ್ರ

ಅಸಹ್ಯವಹ್ನಿವ್ಯಥಿತೋಽಪಿ ವಾರ್ಧಿ-
ರನಂತರತ್ನಾನ್ಯುದರೇ ಪಿಧಾಯ ।
ನ ಜಾತು ಪಾನೀಯಮಪಿ ಪ್ರದತ್ತೇ
ಧನಸ್ಯ ಲಾಭಾದಧಿಕೋ ಹಿ ಲೋಭಃ ॥ ೫೨ ॥

ಸಹಿಸಲಾಗದ ಬಡಬಾಗ್ನಿಯಿಂದ ಸಂಕಟಕ್ಕೀಡಾಗಿದ್ದರೂ ತನ್ನ ಒಡಲಲ್ಲಿ ಅನಂತ ರತ್ನಗಳನ್ನು ಅಡಗಿಸಿಕೊಂಡ ಸಮುದ್ರವು ಕುಡಿಯಲು ನೀರನ್ನು ಸಹ ನೀಡುತ್ತಿಲ್ಲ; ಸಂಪತ್ತು ಹೆಚ್ಚಿದಂತೆ ಲೋಭವೂ ಹೆಚ್ಚುವುದಲ್ಲವೆ !

ವಿ. : ೧. [1]ದಾರಿದ್ರ್ಯವಿದ್ದಾಗ ಇದ್ದದ್ದರಲ್ಲಿಯೇ ಅತಿಥಿಸತ್ಕಾರಗಳನ್ನು ಮಾಡುವ ವ್ಯಕ್ತಿ ಸಂಪತ್ತು ಬರತೊಡಗಿದಂತೆ ಲೋಭವನ್ನು ಬೆಳೆಸಿಕೊಂಡು ಆತಿಥ್ಯದಲ್ಲಿ ಲೋಭವನ್ನು ಮಾಡುವುದು ಲೋಕರೂಢಿ. ಸಾಮಾನ್ಯವಾಗಿ ಶ್ರೀಮಂತರು ದಾನಧರ್ಮ ಮಾಡುವುದು ಕಡಿಮೆಯೇ ಎಂಬ ಸೂಚನೆಯು ಇಲ್ಲಿದೆ; ವಾರ್ಧಿ – ಸಮುದ್ರ.

೨. ಸಮುದ್ರವು ರತ್ನಾಕರ ಎಂದೇ ಪ್ರಸಿದ್ಧ; ಎಂದರೆ ಅವನ ಶ್ರೀಮಂತಿಕೆ ಊಹಾತೀತ-ವಾದುದು; ಆದರಂತೆ ಲೋಭವು ಸಹ ಅಪಾರವಾಗಿಯೇ ಇದೆ. ಆದರಿಂದಾಗಿಯೇ ತನ್ನ ಬಳಿ ಬಂದವರಿಗೆ ಅದು ಕುಡಿಯಲು ನೀರನ್ನು ಸಹ ನೀಡದು ಎಂದರ್ಥ.

೩. ಸಮುದ್ರದ ನೀರು ಉಪ್ಪು ಎಂಬುದನ್ನು ಅತ್ಯಂತ ಧ್ವನಿಪೂರ್ಣವಾಗಿ ವಿವರಿಸಿರುವ ಇಲ್ಲಿಯ ಕೌಶಲ ತುಂಬಾ ರೋಚಕವಾದುದು.

### ಉಕ್ಕೇರುವ ಸಮುದ್ರದ ಸಂದೇಶ

ಸರಿತ್ಪತಿಸ್ತನ್ಮುಖತೋ ಹಿ ವೇಲಾಂ
ವಿಲಂಘಯತ್ಯತ್ರ ವಿವೇಕಹೀನಃ ।
ತಥಾ ಹಿ ನಾರ್ಯಾ ಸಹ ಸಂಗತಾನಾಂ
ಕುತೋ ವಿವೇಕಃ ಕುತ ಏವ ವೇಲಾ ॥ ೫೩ ॥

ನದಿಗಳ ಒಡೆಯನಾದ ಸಮುದ್ರವು ವಿವೇಕವನ್ನು ತೊರೆದು ಮೇಲ್ಭಾಗದಲ್ಲಿ ತೀರವನ್ನು ಮೀರಿ, ಉಕ್ಕುವುದು; ಅದು ಸರಿಯೇ ! ಸ್ತ್ರೀಯರ ಒಡನಾಟ ಉಳ್ಳವರಿಗೆ ವಿವೇಕ ಎಲ್ಲಿಯದು ? ನೀತಿನಿಯಮಗಳಾದರೂ ಎಲ್ಲಿಯವು ?

ವಿ. : ೧. [2]ಸ್ತ್ರೀಸಂಗಮ ಬಯಸಿದವರಿಗೆ ಯಾವುದೇ ಶಾಸ್ತ್ರಗಳ ವಿಧಿನಿಷೇಧಗಳಾಗಲೀ, ದೇಶಕಾಲಾದಿಗಳ ಪರಿವೆಯಾಗಲೀ, ಸರ್ವಥಾ ಇರದು ಎಂದರ್ಥ.

೨. ಪ್ರಕೃತದಲ್ಲಿ ಅನೇಕ ನದಿಗಳಿಂದ ಒಡಗೂಡಿರುವ ಸಮುದ್ರವು ಹಾಗೆ ಮೇರೆ ಮೀರಿ ವರ್ತಿಸುವುದು ಸಹಜ ಎಂದರ್ಥ; ನದಿಗಳು ಪತ್ನಿಯರು, ಸಮುದ್ರ ನದಿಗಳ ಪತಿ ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಈ ಮಾತಿನ ಸೊಗಸು ತಿಳಿಯುವುದು.

### ಸಮುದ್ರ

ಬಹೂಪಭೋಗ್ಯಾಽಪಿ ಸರಿತ್ಸಮುದ್ರ-
ತಟೇ ನ ಸಾ ಕಂಟಕಿತೋಪಕಂಠಾ ।

---

೧. "ಲಾಭಾಲ್ಲೋಭೋ ವಿವರ್ಧತೇ" ಇತ್ಯುಕ್ತೇಃ। -ವ್ಯಾ.

೨. ಸ್ತ್ರೀಸಂಗಮನೇನೋದ್ರಿಕ್ತಕಾಮಾನಾಂ ತಿಥ್ಯಾದಿಮರ್ಯಾದಾ ಧರ್ಮಾಧರ್ಮವಿಚಾರಶ್ಚ ನಾಸ್ತೀತಿ ಭಾವಃ। -ವ್ಯಾ.

ರಹಸ್ಯುಪಾಹೂಯ ವಿಟಾನ್ ಸ್ವಭರ್ತೃ-
ತಟೇ ಸದಾಚಾರಪರಾ ಹಿ ಕಾಶ್ಚಿತ್ ॥ ೫೪ ॥

ನದಿಯು ತನ್ನ ಉಗಮಸ್ಥಾನದಲ್ಲಿ ಸ್ನಾನಪಾನಾದಿಗಳ ಮೂಲಕ ಬಹುಜನರ ಉಪಭೋಗಕ್ಕೆ ಅರ್ಹಳೆನಿಸಿದಳು; ಸಮುದ್ರತೀರದಲ್ಲಿ, ಅನೇಕ ಬಗೆಯ ಕಂಟಕಗಳಿಗೆ ಒಳಗಾಗುವುದರಿಂದ ಹಾಗೆ ಉಪಭೋಗಕ್ಕೆ ಅರ್ಹಳೆನಿಸಳು; ಕೆಲವು ಸ್ತ್ರೀಯರು ಏಕಾಂತದಲ್ಲಿ ವಿಟರನ್ನು ಆಹ್ವಾನಿಸಿ ತನ್ನ ಪತಿಯ ಸಮೀಪದಲ್ಲಿ ಮಾತ್ರವೇ ಸನ್ನಡತೆಯಿಂದ ವರ್ತಿಸುವರಲ್ಲವೆ !

ವಿ. : ೧. ಇತರ ಸ್ಥಳಗಳಲ್ಲಿ ಸ್ನಾನಪಾನಾದಿಗಳಿಗೆ ಅತ್ಯಂತ ಉಪಯುಕ್ತವೆನ್ನಿಸುವ ನದಿಗಳು ಸಮುದ್ರ ಸೇರುವ ಸಮಯದಲ್ಲಿ ಮಾತ್ರ ಅವುಗಳಿಗೆ ಉಪಯುಕ್ತವೆನ್ನಿಸವು ಎಂಬ ಸುಪ್ರಸಿದ್ಧ ವಿಚಾರವನ್ನು ಹೀಗೆ ತಿಳಿಸಿರುವರು.

೨. ಕಾಮುಕ ಸ್ತ್ರೀಯರು ಗಂಡನು ಬಳಿಯಲ್ಲಿಲ್ಲದಾಗ ವಿಟರೊಂದಿಗೆ ವಿಹರಿಸಿ, ಅವನು ಜೊತೆಯಲ್ಲಿದ್ದಾಗ ಮಾತ್ರ ಪತಿವ್ರತೆಯರಂತೆ ವರ್ತಿಸುವ ಪ್ರಸಂಗಕ್ಕೆ ಇದನ್ನು ಹೋಲಿಸಿರುವರು.

೩. ಸ್ತ್ರೀಯರಿಗೆ ಇದು ನಿಂದ್ಯವಾದರೂ ನದಿಗೆ ಮಾತ್ರ ಭೂಷಣವೇ ಆಗಿದೆ ಎಂಬುದು ವಿಶೇಷ.

### ಸಮುದ್ರ ಉಕ್ಕೇರಲು ಕಾರಣ

ಸ್ವೀಯಾಶಾಯುವತಿಮುಪೇತ್ಯ ರಾಗಭಾಜ-
ಸ್ತೋಯೇಶಃ ಸುಹೃದಪಿ ವೀಕ್ಷ್ಯ ನಾಶಮಿಂದೋಃ ।
ಆನಂದಾದನಿಶಮುಪೈತಿ ವೃದ್ಧಿಮುಚ್ಚೈ-
ರೇಕಸ್ಯಾಮಭಿರತಿಮಿಚ್ಛತೋಃ[೧] ಕ್ವ ಮೈತ್ರೀ ॥ ೫೫ ॥

ತನ್ನ ದಿಕ್ಕು ಎಂಬ ಯುವತಿಯನ್ನು ಒಡಗೂಡಿದ ಜಲಾಧಿಪತಿಯಾದ ವರುಣನು ಚಂದ್ರನಿಗೆ ಹಿತೈಷಿಯಾಗಿದ್ದರೂ ಕೆಂಪಾದ ಚಂದ್ರ ಮುಳುಗುವುದನ್ನು ಕಂಡು, ಆನಂದದಿಂದ ಸದಾ ಉಕ್ಕೇರುವನು; ಒಬ್ಬಳಲ್ಲೇ ಮನಸ್ಸನ್ನು ಹಾಕಿದವರಿಗೆ ಸ್ನೇಹವೆಲ್ಲಿಯದು !

ವಿ. : ೧. ಒಬ್ಬ ಸ್ತ್ರೀಯಲ್ಲೇ ಅನುರಕ್ತರಾಗುವ ಇಬ್ಬರು ಪುರುಷರಲ್ಲಿ ಮೂಡುವುದು ದ್ವೇಷವೇ ಹೊರತು ಸ್ನೇಹವಲ್ಲ.

---

೧. ಸುಂದೋಪಸುಂದೌ ಭ್ರಾತರೌ ಬ್ರಹ್ಮವಾಕ್ಯಾತ್ ಪರಸ್ಪರಾದನ್ಯತೋ ನೈವ ವಧ್ಯೌ ।
ತಿಲೋತ್ತಮಾರ್ಥೇ ನಿಹತೌ ಪರಸ್ಪರಂ ತಯೋರ್ವಧಾರ್ಥೇ ಸೃಷ್ಟಯಾ ತೇನ ದೈತ್ಯೌ ॥
-ಮ.ಭಾ.ತಾ.ನಿ(೨೦/೧೪೦)

೨. ಇಲ್ಲಿ ಆಶಾ(ದಿಕ್) ಎಂಬುದೇ ಯುವತಿ; ಸಮುದ್ರ ಹಾಗೂ ಚಂದ್ರ ಇಬ್ಬರೂ ಅವಳನ್ನು ಬಯಸುವವರು; ಚಂದ್ರ ಮುಳುಗಿದಾಗ ಅದಕ್ಕೆಂದೇ ಸಮುದ್ರ ಉಕ್ಕೇರಿ ಸಂಭ್ರಮಿಸುವುದು ಎಂದರ್ಥ; ಅನಿಶಂ - ಸದಾ.

### ಸಮುದ್ರದ ಅಪೂರ್ವ ಗಾಂಭೀರ್ಯ

ಅಂತಃ ಕೃತಾಂತೋಪಮವಾಡವಾಗ್ನಿ-
ಸಂತಪ್ತಗಾತ್ರೋऽಪಿ ಮುದೇವ ಗರ್ಜನ್ ।
ಫೇನಸ್ಮಿತಶ್ರೀರ್ಗಗನಸ್ಪೃಗೂರ್ಮಿ-
ರ್ಗಾಂಭೀರ್ಯಮಾವೇದಯತೀವ ವಾರ್ಧಿಃ ॥ ೫೬ ॥

ತನ್ನೊಳಗೆ ಯಮಸದೃಶವಾದ ಬಡವಾಗ್ನಿಯಿಂದ ದೇಹ ಸುಡುತ್ತಿದ್ದರೂ ನಲಿವಿನಿಂದಲೋ ಎಂಬಂತೆ ಭೋರ್ಗರೆಯುತ್ತಾ ತನ್ನ ನೊರೆಯ ರೂಪದ ಕಾಂತಿಯಿಂದ ಗಗನಚುಂಬಿಯಾದ ಅಲೆಗಳ ಸಮುದ್ರವು ಗಾಂಭೀರ್ಯವನ್ನು ತೋರ್ಪಡಿಸುತ್ತಿರುವಂತಿದೆ.

ವಿ. : ೧. ಸಮುದ್ರದ ಗಾಂಭೀರ್ಯ ಅಂತಹ ವಿಶಿಷ್ಟ ಸನ್ನಿವೇಶದಲ್ಲೂ ಕುಂದಿಲ್ಲ ಎಂಬುದು ಇಲ್ಲಿಯ ಭಾವ; ವಾಡವಾಗ್ನಿ - ಬಡವಾನಲ.

೨. ಶ್ರೇಷ್ಠವ್ಯಕ್ತಿಗಳು ಮನಸ್ಸಿನೊಳಗೆ ಎಂತಹ ಸಂಕಟ ತುಂಬಿದ್ದರೂ ತಮ್ಮ ಗಾಂಭೀರ್ಯವನ್ನು ಕಳೆದುಕೊಳ್ಳುವುದಿಲ್ಲ ಎಂಬ ತತ್ತ್ವ ಇಲ್ಲಿದೆ.

### ಶ್ರೀಕೃಷ್ಣನಿಂದಾಗಿ ಅಕಲಂಕವೆನ್ನಿಸಿದ ಸಮುದ್ರ

ಅಸೇವ್ಯತಾಂ ದೋಷಿಸಖಿತ್ವಜಾತಾಂ
ಜಹಾರ ಕೃಷ್ಣಃ ಸ್ವಗೃಹಸ್ಯ ಸಿಂಧೋಃ ।
ಇತಿ ಸ್ಮ ಚಿತ್ರಂ ನ ಯತಸ್ತದಿಷ್ಟಾ
ಹರಂತಿ ಪಾಪಾನಿ ಮಹಾಂತಿ ಹೃಷ್ಟಾಃ ॥ ೫೭ ॥

ರಾತ್ರಿ ಎಂಬ ಗೆಳತಿಯನ್ನು ಹೊಂದಿದ ಚಂದ್ರನ ಒಡನಾಟದಿಂದಾಗಿ ಒದಗಿದ ತನ್ನ ವಾಸಸ್ಥಾನವಾದ ಸಮುದ್ರದ ಸೇವಾನರ್ಹತೆಯನ್ನು ಶ್ರೀಕೃಷ್ಣ ಪರಿಹರಿಸಿದ ಎಂಬುದು ಆಚ್ಚರಿಯೇನಲ್ಲ; ಏಕೆಂದರೆ ಅವನ ಪ್ರಿಯರಾದ ಭಕ್ತರು ಸಹ ಪ್ರಸನ್ನರಾದಾಗ ಮಹಾ-ಪಾತಕಗಳನ್ನು ಪರಿಹರಿಸುವರಲ್ಲವೆ !

ವಿ. : ೧. ರಾತ್ರಿ ಕಾಲದಲ್ಲಿ ಸಮುದ್ರ ಚಂದ್ರನೊಂದಿಗೆ ಇರುವನು. ಆದರೆ ಚಂದ್ರ ರಾತ್ರಿಯ ಒಡನಾಟದಿಂದಾಗಿ ಕಲಂಕಿ ಎನ್ನಿಸುವನು; ಆದರೂ ಶ್ರೀಕೃಷ್ಣನ ಸನ್ನಿಧಾನದಿಂದಾಗಿ ಅಂತಹ

ಕಲಂಕಿಯಾದ ಚಂದ್ರನ ಸಹವಾಸವಿದ್ದರೂ ಸಮುದ್ರಕ್ಕೆ ಸೇವಾನರ್ಹತೆ ಉಂಟಾಗಲಿಲ್ಲ; ಇದಕ್ಕೆ ಕಾರಣವಾದದ್ದು ಶ್ರೀಕೃಷ್ಣನ ಸನ್ನಿಧಾನ ಎಂದರ್ಥ.

೨. ಶ್ರೀಕೃಷ್ಣ ಭಕ್ತರೇ ತಮ್ಮ ಆಶ್ರಿತಜನರ [೧]ಮಹಾಪಾತಕಗಳನ್ನು ಸಹ ಪರಿಹರಿಸುವ ಸಾಮರ್ಥ್ಯ ಹೊಂದಿರುವಾಗ ಸ್ವತಃ ಭಗವಂತನಾದ ಶ್ರೀಕೃಷ್ಣ ಹಾಗೆ ಸಮುದ್ರಕ್ಕೆ ದೋಷ ಒದಗದಂತೆ ಪಾಲಿಸಿದ್ದು ಆಶ್ಚರ್ಯದ ಸಂಗತಿಯೇನಲ್ಲ ಎಂದು ಭಾವ.

ಸರ್ವದಾ ಅಜೇಯನಾದ ಶ್ರೀಕೃಷ್ಣ

ಪುರಾಽಪ್ಯಜೇಯೋ ಮುರಜಿತ್ ಕಿಲಾತ್ರ
ಪುರೀಂ ವಿಧಾಯಾಭವದತ್ಯಜೇಯಃ ।
ಮಮೇತ್ಥಮಾಭಾತಿ ಕಲತ್ರವಸ್ತ್ರ-
ಕೃತಾಲಯಂ ಕಃ ಖಲು ಜೇತುಕಾಮಃ ॥ ೫೮ ॥

ಆ ಮುನ್ನವೇ ಅಜೇಯನಾಗಿದ್ದ ಮುರಾರಿಯಾದ ಶ್ರೀಕೃಷ್ಣ ಸಮುದ್ರ ಮಧ್ಯದ ಆ ದ್ವಾರಕೆಯಲ್ಲಿ ನೆಲೆಸಿ, ಇನ್ನೂ ಹೆಚ್ಚು ಅಜೇಯನೆನಿಸಿದನು; ನನಗೆ ಹೀಗೆನ್ನಿಸುವುದು : "ತನ್ನ ಪತ್ನಿಯ ಸೆರಗಿನ ಹಿಂದೆ ಅಡಗಿಕೊಂಡವನನ್ನು ಯಾವನು ತಾನೆ ಗೆಲ್ಲ ಬಯಸಿಯಾನು?"

ವಿ. : ೧. ಸಮುದ್ರದುರ್ಗದಿಂದಾಗಿ ಶ್ರೀಕೃಷ್ಣನ ಅಜೇಯತ್ವ ಇನ್ನೂ ಹೆಚ್ಚಾಗಿ ತಿಳಿಯು-ವಂತಾಯಿತು ಎಂಬುದು ಇಲ್ಲಿಯ ಮುಖ್ಯಾರ್ಥ.

೨. ಭೂಮಿ ಶ್ರೀಕೃಷ್ಣನ ಪತ್ನಿ ; ಸಮುದ್ರ ಅದು ಧರಿಸಿದ ವಸ್ತ್ರ; ದ್ವಾರಕೆ ಸಮುದ್ರ ಮಧ್ಯದ ಪಟ್ಟಣ, ಅದರಲ್ಲಿ ನೆಲೆಸಿದ ಶ್ರೀಕೃಷ್ಣ ತನ್ನ ಪತ್ನಿಯ ಸೆರಗಿನ ಹಿಂದೆ ಅಡಗಿಕೊಂಡ ಪುರುಷನಂತೆ ಕಾಣುವನು ಎಂಬುದು ಕಲ್ಪನೆ. ಹಾಗೆ ಪುರುಷ ಅಡಗಿಕೊಂಡಾಗ ಅವನ ಶತ್ರುಗಳು ಆಕ್ರಮಿಸಲು ಬಯಸದೆ ಹೋಗುವುದು ಸಹಜ; ಪ್ರಸ್ತುತ ದ್ವಾರಕೆಯಲ್ಲಿ ನೆಲೆಸಿದ ಶ್ರೀಕೃಷ್ಣನ ಮೇಲೆ ಅವನ ಶತ್ರುಗಳಾದ ಜರಾಸಂಧಾದಿಗಳು ಆಕ್ರಮಣ ಮಾಡಲಾರರು ಎಂಬುದು ಒಟ್ಟು ತಾತ್ಪರ್ಯ.

ಸಮುದ್ರದ ವರ್ಣನೆ

ಸ ರಮ್ಯಫೇನಾಸವಶೋಭಿವಕ್ತ್ರ-
ಸ್ತರಂಗಹಸ್ತೈರ್ಜಘನಂ ನದೀನಾಮ್ ।
ವಿಧೂದಯೇ ಸಂಸ್ಪೃಶತೀಂದುದೃಷ್ಟ್ಯಾ
ನ ಕಸ್ಯ ಕಾಮಃ ಸರಸಸ್ಯ ಹಿ ಸ್ಯಾತ್ ॥ ೫೯ ॥

ಆ ಸಮುದ್ರವು ರಮ್ಯವಾದ ನೊರೆ ಎಂಬ ಮದ್ಯದಿಂದ ಶೋಭಿಸುವ ಮುಖವುಳ್ಳವನಾಗಿ, ನದಿಗಳ ಜಘನಗಳನ್ನು ತನ್ನ ಅಲೆಗಳೆಂಬ ಹಸ್ತಗಳಿಂದ ಚಂದ್ರೋದಯ ಸಮಯದಲ್ಲಿ ಚಂದ್ರ-

---

೧. 'ಸಬಾಲಸ್ತ್ರೀಜಲಕ್ರೀಡಾಮೃತವಾಪೀಕೃತಾರ್ಣವಃ' (ಪದ್ಮಪುರಾಣ)ವಾಸುದೇವಸಹಸ್ರನಾಮಸ್ತೋತ್ರ - ೩./೭೧/೨೬೮)

ನೆಂದು ಭ್ರಮಿಸಿ ಸ್ಪರ್ಶಿಸಿದ; ರಸಿಕನಾದವನಿಗೆ ಕಾಮವು ಎಂತು ಒದಗದೆ ಇದ್ದೀತು ! (ಆಸವ-ಮದ್ಯ)

ಶ್ರೀಕೃಷ್ಣನಂತೆ ಕಂಗೊಳಿಸಿದ ಸಮುದ್ರ

ಸಿತೇತರಃ ಪೀತಕೃಶಾನುಮಧ್ಯಃ
ಸಹಸ್ರಶಃ ಶ್ಲಿಷ್ಟತನುರ್ನದೀಭಿಃ ।
ಅನೇಕಯೋಷಿತ್ಪರಿತೋಷದಾಯೀ
ಸ ಪೀತವಾಸಾ ಇವ ಭಾಸತೇಽಬ್ಧಿಃ[೧] ॥ ೬೦ ॥

ಬಣ್ಣದಲ್ಲಿ ಕಪ್ಪು, ಮಧ್ಯದಲ್ಲಿ ಹಳದಿ ಬಣ್ಣದ ಅಗ್ನಿ, ಸಾವಿರಾರು ನದಿಗಳೊಂದಿಗೆ ಒಡನಾಟ, ಹೀಗೆ ಆ ಸಮುದ್ರವು ಅನೇಕ ಸ್ತ್ರೀಯರಿಗೆ ಸಂತೋಷ ಉಂಟುಮಾಡುತ್ತಾ ಪೀತಾಂಬರ-ಧಾರಿಯಾದ ಶ್ರೀಕೃಷ್ಣನಂತೆ ಕಂಗೊಳಿಸಿತು.

ವಿ. : ೧. ಇಲ್ಲಿ ಸಮುದ್ರವನ್ನು ಶ್ರೀಕೃಷ್ಣನಿಗೆ ಹೋಲಿಸಲಾಗಿದೆ.

೨. ಶ್ರೀಕೃಷ್ಣನನ್ನು ಸಮುದ್ರಕ್ಕೆ ಹೋಲಿಸುವ, ಇದಕ್ಕೆ ಮೂಲವೆನ್ನಿಸುವ ಮಹಾಭಾರತ ತಾತ್ಪರ್ಯನಿರ್ಣಯದ ವಾಕ್ಯ ಹೀಗಿದೆ : ಕೃಷ್ಣಾವತಾರೋ ಹರಿರೇಕಸಾಗರಃ ॥ (೨/೩)

ದ್ವಾರಕೆಯನ್ನು ಸಮೀಪಿಸಿದ ಮುನಿವರ್ಯರು

ವರ್ತ್ಮನೀತ್ಥಂ ವಾರಿರಾಶಿಂ ವರ್ಣಯಂತೋ ಮುನೀಶ್ವರಾಃ ।
ಸಮೇತ್ಯ ತಾಂ ದ್ವಾರವತೀಂ ಮುದಾ ಕೃಷ್ಣಮುಪಾಸತೇ ॥ ೬೧ ॥

ದಾರಿಯಲ್ಲಿ ಹೀಗೆ ಜಲನಿಧಿಯಾದ ಸಮುದ್ರವನ್ನು ವರ್ಣಿಸುತ್ತಾ ಮುನಿಶ್ರೇಷ್ಠರು ಆ ದ್ವಾರಕೆಯನ್ನು ಸೇರಿ ಆನಂದದಿಂದ ಶ್ರೀಕೃಷ್ಣನನ್ನು ಉಪಾಸನೆ ಮಾಡತೊಡಗಿದರು.

ಸರ್ಗೋಪಸಂಹಾರ

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಸುತರಾಂ ಸರ್ಗೋ ಮುದಾಂ ಷೋಡಶಃ ॥೬೨॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಷೋಡಶಃ ಸರ್ಗಃ ॥ ೧೬ ॥

*****

೧. ಸರಸಾಮಸ್ಮಿ ಸಾಗರಃ - ಇತಿ ಗೀತಾ(೧೦/೨೪)

# ೧೭. ಸಪ್ತದಶಃ ಸರ್ಗಃ

(ಮುನಿಗಳಿಂದ ಕೃಷ್ಣಸ್ತುತಿ-೧-೨೫; ದ್ವಾರಕಾವರ್ಣನೆ-೨೬-೭೦; ಸರ್ಗೋಪಸಂಹಾರ - ೭೧)

## ನಾರಾಯಣ-ಕೃಷ್ಣರೂಪಗಳ ವರ್ಣನೆ

ಸ್ವಭಜಕಾಬ್ಜಕುಲೋದಯಹೇತವೇ
ಜಲನಿಧೌ ವರಭೋಗಿನಿಕೇತನೇ ।
ಭವಮಹಾನಲಮುಕ್ತಭಯಾನುಗ-
ಚ್ಛವಿಪದೇಽವಿಪದೇ[೧] ಲಸತೇ ನಮಃ ॥ ೧ ॥

ತನ್ನನ್ನು ಆರಾಧಿಸುವ ಋಜುಗಣದ ಸೃಷ್ಟಿಗೆ ಕಾರಣನಾದ, ಸಂಸಾರವೆಂಬ ಕಾಡ್ಗಿಚ್ಚಿನ ಭಯದಿಂದ ಬಿಡುಗಡೆ ಹೊಂದಿದ ಮುಕ್ತಸೇವಕರ ಕಾಂತಿಯನ್ನು ಹೊಂದಿದ, ಪ್ರಳಯ-ಸಮುದ್ರದಲ್ಲಿ ಶ್ರೇಷ್ಠನಾದ ಮುಕ್ತಶೇಷನ ಮೇಲೆ ಕಂಗೊಳಿಸುವ, ವಿಪತ್ತುಗಳಿಂದ ರಹಿತನಾದ, ನಾರಾಯಣನಿಗೆ ನಮಸ್ಕಾರವು (ನಾರಾಯಣರೂಪ).

ತನ್ನನ್ನು ಆರಾಧಿಸುವ ಚಂದ್ರವಂಶದ ಅಭ್ಯುದಯಕ್ಕೆ ಕಾರಣನಾದ, ಸಮುದ್ರದಲ್ಲಿ ಶ್ರೇಷ್ಠವಾದ ಭೋಗಿಗಳ ನೆಲೆಯಾದ, ಶಿವನ ದ್ವಾರಕೆಯ ನಾಶಕ್ಕೆಂದು ಪ್ರಯೋಗಿಸಲ್ಪಟ್ಟ ಕೃತ್ಯಾರೂಪದ ಅಗ್ನಿಯ ಭಯದಿಂದ ಮುಕ್ತರಾದ ತನ್ನ ಸೇವಕರಾದ ಯಾದವರ ಕಾಂತಿಗೆ ನೆಲೆಯೆನ್ನಿಸಿದ ದ್ವಾರಾವತೀ ಪಟ್ಟಣದಲ್ಲಿ ಕಂಗೊಳಿಸುವ, ವಿಪದ್ರಹಿತನಾದ ಶ್ರೀಕೃಷ್ಣನಿಗೆ ನಮಸ್ಕಾರವು (ಕೃಷ್ಣರೂಪ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ[೨] ಮೂಲನಾರಾಯಣರೂಪ ಹಾಗೂ ಕೃಷ್ಣರೂಪಗಳಿಗೆ ಅನ್ವಯಿಸುವ ವರ್ಣನೆ ಬಂದಿದೆ.

೨. ಇಲ್ಲಿ ನಾರಾಯಣಪಕ್ಷದಲ್ಲಿ[೩] ಅಬ್ಜಕುಲ ಎಂದರೆ ಋಜುಗಣ ಎಂದರ್ಥ; ಭೋಗಿ ಎಂದರೆ ಮುಕ್ತಶೇಷ ಎಂದೂ ಅವಿಪದೇ ಎಂದರೆ ಜನನ ಮರಣಾದಿ ವಿಪದ್ರಹಿತ, ಸೃಷ್ಟ್ಯಾದಿಕಾರ್ಯಗಳಿಂದ ಉಂಟಾಗುವ ಆಯಾಸರಹಿತ ಎಂದೂ ಅರ್ಥ.

೩. ಕೃಷ್ಣಪಕ್ಷದಲ್ಲಿ ಅಬ್ಜಕುಲ ಎಂದರೆ ಚಂದ್ರವಂಶ ಎಂದೂ ಭೋಗಿಗಳು ಎಂದರೆ ಸುಖಿಗಳು ಎಂದೂ ಭವಮಹಾನಲಮುಕ್ತಭಯರು ಎಂದರೆ ಕಾಶಿರಾಜನ ಇಷ್ಟದೇವತೆಯಾದ ಶಿವನ

---

೧. ಅವಿಪದೇ ಜನನಮರಣಾದಿವಿಪದ್ರಹಿತಾಯ । ಸೃಷ್ಟ್ಯಾದಿನಾ ಆಯಾಸರಹಿತಾಯ ವಾ । ನಾರಾಯಣಾಯ ನಮ ಇತಿ । - ವ್ಯಾ.

೨. ಏಕಾರ್ಥೇನ ತತ್ತದವತಾರಾನ್ ಏಕಾರ್ಥೇನ ಸರ್ವಪದ್ಯೇಷು ಶ್ರೀಕೃಷ್ಣಕಥಾಂ ಚತುರ್ವಿಂಶತಿಪದ್ಯೈಃ ಋಷಿವಾಕ್ಯತಯಾ ವರ್ಣಯಿಷ್ಯನ್ ಆದೌ ಮೂಲರೂಪಂ ಚ ಏಕೋಕ್ತ್ಯಾ ವರ್ಣಯತಿ - ವ್ಯಾ.

೩. ''ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ''ಇತಿ ಶ್ರುತೇಃ । -ವ್ಯಾ.

ದ್ವಾರಕಾನಾಶಕ್ಕೋಸ್ಕರ ಪ್ರಯೋಗಿಸಲ್ಪಟ್ಟ ಕೃತ್ಯಾರೂಪದ ಅಗ್ನಿಯ ಭಯದಿಂದ ಬಿಡುಗಡೆ ಕಂಡ ಯಾದವರು ಎಂದೂ, ಅವಿಪದೇ ಎಂಬುದಕ್ಕೆ ವಿಪದ್ರಹಿತನು ಅಥವಾ [೧]ಗರುಡನ ಮೇಲೆ ಪಾದಗಳನ್ನಿರಿಸಿದವನು, ಗರುಡವಾಹನ ಎಂದೂ ಅರ್ಥ (ಅಬ್ಜ- ಶ್ಲೇಷಾಲಂಕಾರ).

### ಕಪಿಲ-ಕೃಷ್ಣರೂಪಗಳ ವರ್ಣನೆ

[೨]ಕುಶಕೃತಸ್ಥಲಸಿದ್ಧಪುರೀಶ್ವರಂ
[೩]ಕಠಿನತತ್ತ್ವಗತಿಶ್ರಮದಾಯುಧಮ್ ।
ಜನಕಕರ್ದಮಶೋಭಿಗೃಹಾಂಗಣೇ
ಮುನಿಜನಾ ನಿಜನಾಥಮಮುಂ ಜಗುಃ ॥ ೨ ॥

ಕುಶಗಳಿಂದ ನಿರ್ಮಿತವಾದ ಸಿದ್ಧಪುರೀ ಎಂಬ ಕಪಿಲಾಶ್ರಮಕ್ಕೆ ಒಡೆಯನಾದ, ದುರ್ಬೋಧವಾದ ತತ್ತ್ವಗಳ ಪರಿಜ್ಞಾನಕ್ಕೆ ಅಡ್ಡಿಯಾಗುವ ಖೇದವನ್ನು ಪರಿಹರಿಸುವ ಆಯುಧವನ್ನು ಹೊಂದಿರುವ, ಪ್ರಜಾಪತಿಯಾದ ಕರ್ದಮರ ಶೋಭಿಸುವ ಗೃಹಾಂಗಣದಲ್ಲಿ ನೆಲೆಸಿದ ಈ ಕಪಿಲ ಎಂಬ ತಮ್ಮ ಸ್ವಾಮಿಯನ್ನು ಮುನಿಜನರು ಕೊಂಡಾಡುವರು (ಕಪಿಲರೂಪ).

[೪]ಕುಶನೆಂಬ ಅಸುರನು ನಿರ್ಮಿಸಿದ್ದ ಸ್ಥಳದಲ್ಲಿ ನಿರ್ಮಿತವಾದ ದ್ವಾರಕೆಗೆ ಒಡೆಯನೆನ್ನಿಸಿದ, ಒರಟು ಚರ್ಮದ ಆ ಕುಶಾಸುರನಿಗೆ ಅತ್ಯಂತ ಶ್ರಮನೀಡುವಂತಹ ಆಯುಧವನ್ನು ಹೊಂದಿದ, ಈ ಶ್ರೀಕೃಷ್ಣನನ್ನು ಜನಕನಾದ ನಂದಗೋಪನ ಕೆಸರಿನಿಂದ ಶೋಭಿಸುವ ಮನೆಯಂಗಳದಲ್ಲಿ ನೆಲೆಸಿದ ತಮ್ಮ ಸ್ವಾಮಿ ಎಂಬುದಾಗಿ ಮುನಿಜನರು ಕೊಂಡಾಡುವರು (ಕೃಷ್ಣರೂಪ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಕಪಿಲಾವತಾರ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

---

೧. ಅಥವಾ ವಿಃ ಪಕ್ಷೀ ಗರುಡಃ ತಸ್ಮಿನ್ ಪದೌ ಚರಣೌ ಯಸ್ಯ ತಸ್ಮೈ । ಪದಾದಯಃ ಪೃಥಕ್ಶಬ್ದಾ ಇತ್ಯೇಕೇ । ಗರುಡವಾಹನಾಯೇತ್ಯರ್ಥಃ। - ವ್ಯಾ.

೨. ಸುತಪೋರುಚೇರಯಮಪಾಪಕರ್ದಮಾನ್ನನು ಮಾನವೀತನಯತಾಮುಪೇಯಿವಾನ್ ।
ಸಮಯೇನ ಭೂರಿನಿಜಭಕ್ತಿಪೂರಿತಾನ್ ಸಮಜೀಜನತ್ ಸುಮನಸಃ ಸ ದೇವರಾಟ್ ॥ -ಸು.ವಿ.(೮/೩೬)
ಕುಶಕೃತೇತಿ। ಕೃಶೈರ್ದರ್ಭೈಃ ಕೃತಂ ಸ್ಥಲಂ ಯಸ್ಯಾಂ ಸಾ ಸಿದ್ಧಪುರೀ ನಾಮ ಕಶ್ಚನ ಕಪಿಲಾಶ್ರಮಃ ಋಷ್ಯಾಶ್ರಮತ್ವೇನ ಪರಿತಃ ಕುಶಕೃತಸ್ಥಲೇತ್ಯರ್ಥಃ।

೩. ಕಠಿಣಾನಾಂ ದುರ್ಬೋಧಾನಾಂ ತತ್ತ್ವಾನಾಂ ಗತಿರವಗತಿಃ ತಸ್ಯಾಃ ಶ್ರಮಃ ಅಜ್ಞಾನವಿಪರೀತಜ್ಞಾನಜನ್ಯಃ ಖೇದಃ ತಂ ದ್ಯತಿ ಖಂಡಯತೀತಿ ಕಠಿಣತತ್ತ್ವಗತಿಶ್ರಮದಮ್ । ತಚ್ಚ ತತ್ ಆಯುಧಶ್ಚ। ತತ್ತ್ವಮಾರ್ಗಜ್ಞಾನವಿಘ್ನಛೇದನೇ ಆಯುಧರೂಪಮಿತ್ಯರ್ಥಃ। - ವ್ಯಾ.
ಕಠಿಣಾ ಯಾ ತಸ್ಯ ಕುಶದೈತ್ಯಸ್ಯ ತ್ವಕ್ ಕಠಿಣತ್ವಕ್ । - ವ್ಯಾ.

೪. ಕುಶನಾಮ ದೈತ್ಯಂ ಹತ್ವಾ ಕುಶಸ್ಥಲ್ಯಾಂ ದ್ವಾರವತೀನಿರ್ಮಾಣಂ ಕೃತವಾನಿತಿ ಪೌರಾಣಿಕೀ ಕಥಾ। - ವ್ಯಾ.

೨. [೧]ಕಪಿಲಾವತಾರಪಕ್ಷದಲ್ಲಿ 'ಕುಶ-ಕೃತಸ್ಥಲ-ಸಿದ್ಧಪುರೀಶ್ವರಮ್' ಎಂದೂ, 'ಕಠಿನ-ತತ್ತ್ವ-ಗತಿ-ಶ್ರಮದಾಯುಧಮ್' ಎಂದೂ; ಕೃಷ್ಣಪಕ್ಷದಲ್ಲಿ 'ಕುಶಕೃತ-ಸ್ಥಲ-ಸಿದ್ಧ-ಪುರೀಶ್ವರಮ್' ಎಂದೂ, 'ಕಠಿನ-ತತ್-ತ್ವಕ್-ಅತಿಶ್ರಮದಾಯುಧಮ್' ಎಂದೂ ಅರ್ಥಮಾಡಿಕೊಳ್ಳಬೇಕು.

೩. 'ಜನಕಕರ್ದಮಶೋಭಿಗೃಹಾಂಗಣೇ' ಎಂಬುದಕ್ಕೆ ತಂದೆಯಾದ ಕರ್ದಮರ ಶೋಭಿಸುವ ಗೃಹಾಂಗಣದಲ್ಲಿ ಇರುವ ಎಂದು ಕಪಿಲಪಕ್ಷಕ್ಕೂ, ತಂದೆ ಎನ್ನಿಸಿದ ನಂದಗೋಪನ ಗೋಮೂತ್ರಾದಿ ಸಂಪರ್ಕದಿಂದ ಉಂಟಾದ ಕೆಸರಿನಿಂದ ಶೋಭಿಸುವ ಮನೆಯಲ್ಲಿ ನೆಲೆಸಿದ ಎಂದು ಕೃಷ್ಣಪಕ್ಷಕ್ಕೂ ಅರ್ಥಮಾಡಿಕೊಳ್ಳಬೇಕು.

೪. ಇದರಂತೆ ಮುಂದಿನ ಶ್ಲೋಕದಲ್ಲಿಯೂ ತಾಪಸ ಮೊದಲಾದ ಶ್ರೀಹರಿಯ ಅವತಾರಗಳೊಂದಿಗೆ [೨]ಶ್ರೀಕೃಷ್ಣಾವತಾರ ಕಥೆಯೂ ಮುಂದುವರೆದಿದೆ.

೫. ಸುಮಧ್ವವಿಜಯದ ಅಷ್ಟಮಸರ್ಗದಲ್ಲಿನ ವಿವಿಧ ಭಗವದವತಾರಗಳ ವರ್ಣನೆಯ ಪ್ರಸಂಗದ ಶ್ಲೋಕಗಳ (೩-೨೪) ಛಾಯೆಯನ್ನು ಇಲ್ಲಿಯ ಶ್ಲೋಕಗಳಲ್ಲಿ (೧-೨೪) ಕಾಣಬಹುದು; ಆಯಾ ಅವತಾರಗಳಿಗೆ ಅನ್ವಯಿಸುವ ಇಲ್ಲಿಯ ಶ್ಲೋಕಗಳಿಗೆ ಸಂಬಂಧಿಸಿದಂತಿರುವ ಸುಮಧ್ವವಿಜಯದ ಶ್ಲೋಕಗಳ ಅಡಿಟಿಪ್ಪಣಿಗಳಲ್ಲಿ ಕೊಡಲಾಗಿದೆ.

೬. [೩]ತ್ರಿವಿಕ್ರಮರೂಪಿಯಾದ ಶ್ರೀಹರಿಯಿಂದ ಶಾರ್ಙ್ಗಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣದಿಂದ ಪ್ರತಿಬಾರಿಯೂ ಛಿನ್ನ ಸರ್ವಾಂಗನಾಗುತ್ತಿದ್ದ ಕುಶನೆಂಬ ದೈತ್ಯ ತನಗಿದ್ದ ಶಿವನ ವರದಿಂದಾಗಿ ಪುನಃ ಪುನಃ ಬದುಕುತ್ತಿದ್ದ; ಆಗ ತನ್ನ ಬಾಣದ ಪೆಟ್ಟಿನಿಂದ ಸರ್ವಾಂಗ ಛಿನ್ನನಾದ ಅವನನ್ನು ಶೇಷನ ಕೈಯಲ್ಲಿನ ನೇಗಿಲಿನಿಂದ ಸಿದ್ಧವಾದ ಕಂದಕದಲ್ಲಿ ಬೀಳಿಸಿ, ಅವನ ಮೇಲೆ ಕುಶೇಶ್ವರ ಎಂಬ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಿದಾಗ ಲಿಂಗಕ್ಕೆ ಭಂಗವಾದೀತೆಂಬ ಭಯದಿಂದ ಮೇಲೇಳದ ಆ ದೈತ್ಯ ಹಾಗೆಯೇ ಮಲಗಿದ್ದು ಮೃತನಾದ ಎಂಬ ಪೌರಾಣಿಕ ಕಥೆಯ ಸೂಚನೆ **ಗತಿಶ್ರಮದಾಯುಧಂ**[೪] ಎಂಬ ಪದದಲ್ಲಿದೆ.

---

೧. ಕಪಿಲಾವತಾರಕಥಯಾ ಸಹ ಶ್ರೀಕೃಷ್ಣಕಥಾಂ ವರ್ಣಯತಿ । - ವ್ಯಾ.
ಅನೇನ ಕಪಿಲಾವತಾರ ವರ್ಣನಂ ತತ್ಫಲಂ ಅವತಾರಪ್ರಯೋಜನಂ ತತ್ತ್ವನಿರೂಪಣಂ ಚ ಕೃತಮಿತಿ ಬೋಧ್ಯಮ್ ।- ವ್ಯಾ.

೨. ಕೃಷ್ಣಾವತಾರಪಕ್ಷೇ ತು । ಕುಶೋ ನಾಮ ದೈತ್ಯಃ ತೇನ ಕೃತಂ ಸ್ಥಲಂ ಸ್ಥಾನಮ್ । ಕುಶಸ್ಥಲೀತ್ಯರ್ಥಃ । ತತ್ರ ಸಿದ್ಧಾ ಸಂಪನ್ನಾ ಪುರೀ ದ್ವಾರವತೀ ತಸ್ಯಾಃ ಈಶ್ವರಮ್ । -ವ್ಯಾ.

೩. ಏವಮುತ್ತರತ್ರಾಪಿ ಭಿನ್ನಾಭಿನ್ನಾ ಸಕಲಾಽಪಿ ಶ್ರೀಕೃಷ್ಣಕಥಾ ವರ್ಣಿತಾ । ಅರ್ಥಾಂತರೇಣ ತು ಮೂಲರೂಪಮಾರಭ್ಯ ಸಕಲಾವತಾರಕಥಾ ಚ ವರ್ಣಿತೇತಿ ಚತುರ್ವಿಂಶತಿಶ್ಲೋಕಾತ್ಮಕಮಿದಮೇಕೈಕಂ ಚಿತ್ರಕಾವ್ಯಮಿತಿ ದ್ರಷ್ಟವ್ಯಮ್ ।
ತ್ರಿವಿಕ್ರಮಾವತಾರೇ ಯೇನ ಶಾರ್ಙ್ಗಶರೇಣ ಕುಶಾಂಗತ್ವಕ್ ಛಿನ್ನಃ ಸ ಏವ ಶರಃ ಕೃಷ್ಣಕರೇಽಪ್ಯಸ್ತೀತಿ ಭಾವಃ ।
ಇದಾನೀಂ ಸರ್ವೋತ್ಕೃಷ್ಟತ್ವೇನ ದ್ವಾರಕಾನಾಥಂ ಗಾಯಂತೀತಿ ಕಿಂ ವಕ್ತವ್ಯಮಿತಿ ಭಾವಃ । -ವ್ಯಾ.
ತ್ರಿವಿಕ್ರಮೋ ವಿಜಯತೇ ತ್ರಯೀವಿಖ್ಯಾತವಿಕ್ರಮಃ ।
ಯಃ ಕುಶಂ ದಮಯಿತ್ವೇಮಾಂ ಚಕ್ರೇ ವಿಪ್ರಕುಶಸ್ಥಲೀಮ್ ॥ -ತೀರ್ಥಪ್ರಬಂಧ (೧/೯೧)

೪. ತ್ರಿವಿಕ್ರಮರೂಪಿಣಾ ಹರಿಣಾ ಶಾರ್ಙ್ಗಮುಕ್ತಶರೇಣ ವಾರಂ ವಾರಂ ಛಿನ್ನಸರ್ವಾಂಗಃ ಸಃ ಕುಶದೈತ್ಯಃ ಸ್ವಕುಲದೇವಶಿವಕೃಪಯಾ ಪುನಃಪುನರುಜ್ಜೀವಿತಶ್ಚ ನ ಮಮಾರ ಕಿಲ । ತತಸ್ತಂ ದೈತ್ಯಂ ಶಾರ್ಙ್ಗಶರಘಾತೇನ

## ನಾರಾಯಣ-ಕೃಷ್ಣರೂಪಗಳ ವರ್ಣನೆ

ಯಮಜನಿಂ ಭಜ ತಾಪಸವಿಗ್ರಹಂ
ಪ್ರಕಟಿತಂ ನಿಜಚಿದ್ಘನಮೂರ್ತಿತಃ[೧] ।
ನರಧೃತಂ ಗಿರಿಮೂರ್ಧನಿ ಯತ್ಪದಂ
ವಿಲಸತೇ ಲಸತೇಡ್ಯನಖೇಂದುನಾ ॥ ೩ ॥

ಯಮನಿಂದ ಅವತರಿಸಿದ, ತನ್ನ ಬಗ್ಗೆ ಸರಿಯಾದ ಜ್ಞಾನವನ್ನು ಹೊಂದಿದ್ದ ಮೂರ್ತಿ ಎಂಬವಳಿಂದ ಪ್ರಕಟಿತವಾದ, ನರನಿಂದ ವಂದಿತನಾದ, ತಾಪಸರೂಪದ, ಶತಶೃಂಗಪರ್ವತದ ಶಿಖರದಲ್ಲಿ ಹೊಳೆಯುವ, ಶ್ರೀನಾರಾಯಣ ಎಂಬ ರೂಪದ ಪಾದವು, ಸ್ತುತ್ಯವಾದ ನಖಚಂದ್ರನಿಂದ ಶೋಭಿಸುತ್ತಿರುವುದು (ನಾರಾಯಣರೂಪ).

ಎಲೈ ಮುನಿಗಳೇ! ಶ್ರೀಕೃಷ್ಣನು ತನ್ನ ಸ್ವಾಭಾವಿಕವಾದ, ಜ್ಞಾನಮಯವಾದ ಮೂಲ-ರೂಪದಿಂದ ಪ್ರಕಟಿತವಾದ ರೂಪವನ್ನು ಹೊಂದಿದನು; ಸ್ತೋತ್ರರೂಪವಾದ ಮಾತಿನಲ್ಲಿ ಬಾಗಿದ ಶಿರಸ್ಸಿನ ಮೇಲೆ ಅರ್ಜುನನಿಂದ ಅವನು ಧರಿಸಲ್ಪಟ್ಟನು; ಅವನ ಪಾದವು ಶೋಭಾಯಮಾನವಾದ, ಸ್ತುತವಾದ, ನಖಚಂದ್ರನಿಂದ ವಿಶೇಷವಾಗಿ ಶೋಭಿಸುವುದು (ಕೃಷ್ಣರೂಪ).

ವಿ : ೧. ಈ ಶ್ಲೋಕದಲ್ಲಿ ಶ್ರೀಹರಿಯ ಅವತಾರವಾದ ನಾರಾಯಣರೂಪ[೨] ಹಾಗೂ ಕೃಷ್ಣರೂಪಗಳಿಗೆ ಅನ್ವಯಿಸುವ ವರ್ಣನೆ ಬಂದಿದೆ.

೨. ಶ್ರೀನಾರಾಯಣ ರೂಪವು ದಕ್ಷಪುತ್ರಿಯಾದ [೩]ಮೂರ್ತಿದೇವಿಯಲ್ಲಿ ಯಮದೇವರ ನಿಮಿತ್ತದಿಂದ ಪ್ರಾದುರ್ಭವಿಸಿದ ರೂಪ.

೩. ನಾರಾಯಣಪಕ್ಷಕ್ಕೆ 'ಯಮ-ಜನಿಂ', 'ನಿಜ-ಚಿತ್-ಘನ-ಮೂರ್ತಿತಃ ಪ್ರಕಟಿತಂ', 'ತಾಪಸ-ವಿಗ್ರಹಂ' ಎಂದೂ ಕೃಷ್ಣಪಕ್ಷಕ್ಕೆ 'ಯಂ ಅಜನಿಂ', 'ಭಜತ-ಅಪ-ಸ-ವಿಗ್ರಹಂ', 'ನಿಜ-ಚಿದ್ಘನ-ಮೂರ್ತಿತಃ ಪ್ರಕಟಿತಂ' ಎಂದೂ ಅರ್ಥಮಾಡಿಕೊಳ್ಳಬೇಕು.

---

ಶ್ರಾಂತಸರ್ವಾಂಗಂ ಶೇಷಕರಸ್ಥಹಲೇನ ಕೃತಪರಿಖಾಯಾಂ ಸ್ಥಾಪಯಿತ್ವಾ, ಉಪರಿ ಕುಶೇಶ್ವರಾಖ್ಯಶಿವಲಿಂಗೇ ಪ್ರತಿಷ್ಠಿತೇ ಸತಿ ಲಿಂಗಭಂಗಭಯೇನ ಸ್ವೋತ್ಥಾನಮಸಹಮಾನಃ ತತ್ರೈವ ಮಮಾರೇತಿ ಪೌರಾಣಿಕೀಂ ಕಥಾಂ ಸೂಚಯಿತುಂ ಗತಿಶ್ರಮದಾಯುಧಮಿತ್ಯುಕ್ತಮ್ । -ವ್ಯಾ.

೧. ಅತಿದುರ್ಜಯೇಂದ್ರಿಯಜಯಾದಿರೂಪಿಣಾ ತಪಸಾ ವಸಂತಮಿವ ಸಂತತಂ ವನೇ ।
ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಮಪ್ಯನಾರತಮ್ ॥ -ಸು.ವಿ.(೮/೮)
ಉದಪಾದಿ ಧರ್ಮತನಯೋ ಹ್ಯಯಂ ಹರಿರ್ನರದೇವಸೋದರ ಉದಾರವಿಕ್ರಮಃ ।
ಅಪಿ ಕೃಷ್ಣ ಇತ್ಯಭಿಹಿತೋ ಮುದೇ ಸತಾಂ ಸ್ವಯಮೇವ ಯಸ್ಯ ಸಹಜೋ ವ್ಯಜಾಯತ ॥ -ಸು.ವಿ.(೮/೪೦)

೨. "ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತು ತೇ ಸರ್ವತ ಏವ ಸರ್ವ" ಗೀ.(೧೧/೪೦) ಇತ್ಯಾದಿನಾ ನಮಸ್ಕೃತಮ್ । -ವ್ಯಾ.

೩. ಶತಶೃಂಗಪರ್ವತೇ ಧರ್ಮಾತ್ ಮೂರ್ತ್ಯಾಂ ನಾರಾಯಣೋಽವತತಾರೇತಿ ಪೌರಾಣಿಕೀ ಕಥಾ । -ವ್ಯಾ.
ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ ನಾರಾಯಣೋ ನರ ಇತಿ ಸ್ವತಪಃಪ್ರಭಾವಃ । -ಭಾಗ(೨/೭/೬)

೪. “ನರಧೃತಂ” ಎಂಬ ಪದಕ್ಕೆ ನಾರಾಯಣಪಕ್ಷದಲ್ಲಿ ನರ ಎಂಬ ಅವತಾರದ ಶೇಷನಿಂದ ಧೃತ ಎಂದೂ, “ಗಿರಿಮೂರ್ಧನಿ” ಎಂಬುದಕ್ಕೆ ನಾರಾಯಣಾಶ್ರಮದ ಬಳಿಯ ಶತಶೃಂಗ-ಪರ್ವತದ ಶಿಖರದಲ್ಲಿ ಎಂದೂ, ಕೃಷ್ಣಪಕ್ಷದಲ್ಲಿ “ನರಧೃತ” ಎಂಬ ಪದಕ್ಕೆ ನರನ ಅಂಶದಿಂದ ಕೂಡಿದ ಅರ್ಜುನನಿಂದ ಧೃತ ಎಂದೂ, “ಗಿರಿಮೂರ್ಧನಿ” ಎಂಬುದಕ್ಕೆ ಸ್ತುತಿರೂಪವಾದ ಮಾತುಗಳ ಮುಖ್ಯ ಪ್ರತಿಪಾದ್ಯ ಎಂದೂ ಅರ್ಥಮಾಡಿಕೊಳ್ಳಬೇಕು.

೫. ಈ ಸರ್ಗದ ಮೊದಲಶ್ಲೋಕದಲ್ಲಿ ಶ್ರೀಕೃಷ್ಣನು ಚಂದ್ರವಂಶದಲ್ಲಿ ಅವತರಿಸಿದ್ದು ಯಾದವರೊಂದಿಗೆ ನೆಲೆಸೆದ್ದು ತಿಳಿಸಲ್ಪಟ್ಟಿತು. ದ್ವಿತೀಯ ಪದ್ಯದಲ್ಲಿ ದ್ವಾರಕೆಯ ನಿರ್ಮಾಣ ಹಾಗೂ ಬಾಲಲೀಲೆಗಳು ವರ್ಣಿತವಾದವು. ಈ ಮೂರನೆಯ ಪದ್ಯದಲ್ಲಿ ಶ್ರೀಕೃಷ್ಣನದು ಶುಕ್ಲಶೋಣಿತದಿಂದ ನಿರ್ಮಿತವಲ್ಲದ ಜ್ಞಾನಮಯಶರೀರ ಎಂಬ ವಿಶೇಷಾಂಶವು ಸಯುಕ್ತಿಕವಾಗಿ ನಿರೂಪಿತವಾಯಿತು. ಮುಂದೆಯು ಸಹ ಇದೇ ರೀತಿಯಾಗಿ ಶ್ರೀಕೃಷ್ಣಕಥೆಯು ಇತರ ಅವತಾರಜಗಳ ಕಥೆಯೊಂದಿಗೆ ಜೊತೆಜೊತೆಯಾಗಿಯೇ ಉಕ್ತವಾಗಿದೆ ಎಂದು ತಿಳಿಯಬೇಕು[೧].

೬. ಮುಂದೆಯೂ ಸಹ ಇದೇ ರೀತಿಯಾಗಿ ಶ್ರೀಕೃಷ್ಣರೂಪದೊಂದಿಗೆ ಇತರರೂಪದ ವರ್ಣನೆಯನ್ನೂ ಅರ್ಥಮಾಡಿಕೊಳ್ಳಬೇಕು.

೭. ಇನ್ನೊಂದು ರೀತಿಯಲ್ಲಿ ಶ್ರೀಹರಿಯ ಮೂಲರೂಪದಿಂದ ಆರಂಭಿಸಿ ಸಕಲ ರೂಪಗಳ ಕಥೆಯೂ ಸಹ ಈ ಸರ್ಗದ ಮೊದಲ ೨೪ ಶ್ಲೋಕಗಳಲ್ಲಿ ವರ್ಣಿತವಾಗಿದ್ದು ಈ ಭಾಗವೇ ಒಂದು ಚಿತ್ರಕಾವ್ಯವಾಗಿದೆ ಎಂದು ತಿಳಿಯಬೇಕು.

## ದತ್ತಾತ್ರೇಯ-ಕೃಷ್ಣರೂಪಗಳ ವರ್ಣನೆ

೨ವಿಮಲದತ್ತಪದಃ ೩ಪ್ರಣತಾರ್ಜುನಾ-
ಭ್ಯುದಯಹೇತುರಮಾನವಯೋಗಧೃತ್ ।

---

೧. ಪ್ರಥಮಶ್ಲೋಕೇ ಸೋಮವಂಶಾದುತ್ಪತ್ತಿಃ ಯಾದವೈಃ ಸಹ ದ್ವಾರವತ್ಯಾಂ ನಿವಾಸಃ ಕಥಿತಃ । ದ್ವಿತೀಯಪದ್ಯೇ ದ್ವಾರವತೀನಿರ್ಮಾಣಪ್ರಕಾರಃ ಬಾಲಲೀಲಾ ಚ ವರ್ಣಿತಾ। ತೃತೀಯಪದ್ಯೇಽಸ್ಮಿನ್ ಶುಕ್ಲಶೋಣಿತಾದುತ್ಪತ್ತ್ಯಭಾವಃ ಜ್ಞಾನಮಯಶರೀರತ್ವಂ ಚೇತಿ ಸಯುಕ್ತಿಕಂ ತಾತ್ಪರ್ಯಂ ಕಥಿತಮ್ । ಏವಮುಕ್ತರತ್ರಾಪಿ ಭಿನ್ನಾಭಿನ್ನ ಸಕಲಾಽಪಿ ಶ್ರೀಕೃಷ್ಣಕಥಾ ವರ್ಣಿತಾ । ಅರ್ಥಾಂತರೇಣ ತು ಮೂಲರೂಪಮಾರಭ್ಯ ಸಕಲಾವತಾರಕಥಾ ಚ ವರ್ಣಿತೇತಿ ಚತುರ್ವಿಂಶತಿಶ್ಲೋಕಾತ್ಮಕಮಿದಮೇವೇಕಂ ಚಿತ್ರಕಾವ್ಯಮಿತಿ ದ್ರಷ್ಟವ್ಯಮ್ । – ವ್ಯಾ.

೨. ಸುಜನಾಯ ದತ್ತಪದ ಆತ್ಮಶುದ್ಧಿದಃ ಸುಕುಮಾರರೂಪ್ಯಭವದೇಷ ಶಾಶ್ವತಃ।
ಅನಸೂಯಯಾ ಶುಚಿಮನೀಷಯಾ ಧೃತಃ ಪರಮಾದರೇಣ ಮುನಿಪುಂಗವೋಢಯಾ ॥ –ಸು.ವಿ.(೮/೩೮)

೩. ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪೇತ್ಯಾದಿನಾ ॥ –ಗೀತಾ.(೧೧/೧೫,೧೬)

ಹೃದಿ ಧೃತಃ ಸುಧಿಯಾ೧ ಹ್ಯನಸೂಯಯಾ
ಸ ಭವತಾದ್ಭವತಾಪಹರೋ ಮಮ ॥ ೪ ॥

ಶರಣು ಬಂದ ಕಾರ್ತವೀರ್ಯಾರ್ಜುನನ ಅಭ್ಯುದಯಕ್ಕೆ ಕಾರಣವಾದ, ಅಮಾನುಷವಾದ ಯೋಗವನ್ನು ಧರಿಸಿದ, ನಿರ್ಮಲಮನಸ್ಸಿನ ಅನಸೂಯೆಯಿಂದ ಹೃದಯದಲ್ಲಿ ಚಿಂತಿತವಾದ, ನಿರ್ಮಲವಾದ ದತ್ತ ಎಂಬ ಹೆಸರಿನ ಶ್ರೀಹರಿಯ ರೂಪವು ನನಗೆ ಭವತಾಪನೀಗಿಸುವುದಾಗಿ ಆಗಲಿ (ದತ್ತಾತ್ರೇಯಪಕ್ಷ).

ನಿರ್ಮಲವಾದ ಭಕ್ತನಿಗೆ ದ್ವಾರವತೀ ಎಂಬ ನೆಲೆಯನ್ನು ನೀಡಿದ, ಶರಣು ಬಂದ ಅರ್ಜುನನ ಅಭ್ಯುದಯಕ್ಕೆ ಕಾರಣನಾದ, ಅಸಂಖ್ಯವಾದ ಪಕ್ಷಿಗಳಿಗೆ ನೆಲೆಯಾದ ಗೋವರ್ಧನಗಿರಿಯನ್ನು ಎತ್ತಿಹಿಡಿದ, ಅಸೂಯೆ ತೊರೆದ ನಿರ್ಮಲಜ್ಞಾನದ ಭಕ್ತರಿಂದ ಹೃದಯದಲ್ಲಿ ಚಿಂತಿತನಾದ ಆ ಶ್ರೀಕೃಷ್ಣನು ನನಗೆ ಭವತಾಪನೀಗಿಸುವವನಾಗಿ ಆಗಲಿ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ದತ್ತಾತ್ರೇಯರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ದತ್ತಾತ್ರೇಯ ರೂಪವು ಅತ್ರಿ-ಅನಸೂಯರ ನಿಮಿತ್ತ ಪ್ರಾದುರ್ಭಾವಗೊಂಡ ರೂಪ; ಸಾಕ್ಷಾತ್ ವಿಷ್ಣುವೇ ದತ್ತಾತ್ರೇಯ ಎಂಬುದು ವಿಶೇಷ; ಕೆಲವರು ತಿಳಿದಿರುವಂತೆ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳ ಐಕ್ಯವನ್ನು ತೋರುವ ರೂಪವಲ್ಲ. ಇದು ಯೋಗಪ್ರವರ್ತಕವಾದ ರೂಪ ಎಂಬ ಮತ್ತೊಂದು ವಿಶೇಷವು ಅಮಾನವಯೋಗಧೃತ್ ಎಂಬ ಪದದಿಂದ ಸೂಚಿತ. ೨ಶ್ರೀಮದಾಚಾರ್ಯರು ತಮ್ಮ ಸರ್ವಮೂಲಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ''ಇತಿ ದತ್ತಾತ್ರೇಯಯೋಗೇ'' ಎಂಬುದಾಗಿ ಉಲ್ಲೇಖಿಸಿರುವುದು ಅತ್ಯಂತ ಗಮನಾರ್ಹ.

೩. ದತ್ತಾತ್ರೇಯಪಕ್ಷಕ್ಕೆ 'ವಿಮಲ-ದತ್ತ-ಪದಃ', 'ಅಮಾನವ-ಯೋಗ-ಧೃತ್' ಎಂದೂ, ಕೃಷ್ಣಪಕ್ಷಕ್ಕೆ 'ವಿಮಲದತ್ತ-ಪದಃ', 'ಅ-ಮಾನ-ವಯೋ-ಅಗ-ಧೃತ್' ಎಂದೂ ಅನ್ವಯ.

---

೧. ''ಚಕ್ರಾಂಕಿತಾಃ ಪ್ರವೇಷ್ಟವ್ಯಾಃ ಯಾವದಾಗಮನಂ ಮಮ'' ।
''ನಾಮುದ್ರಿತಾಃ ಪ್ರವೇಷ್ಟವ್ಯಾ ಯಾವದಾಗಮನಂ ಮಮ'' ಇತಿ ವಚನಾತ್ । -ವ್ಯಾ.
ನ ಚಾಮುದ್ರಃ ಪ್ರವೇಷ್ಟವ್ಯೋ ದ್ವಾರಪಾಲಸ್ಯ ಪಶ್ಯತಃ ।
ಯಾವದಾಗಮನಂ ಮಹ್ಯಂ ತಾವದೇವಂ ಭವಿಷ್ಯತಿ ॥ ಹರಿವಂಶ(೧೩/೧೪/೨೫)
ನ ಚಾಮುದ್ರೋಽಭಿನಿರ್ಯಾತಿ ನ ಚಾಮುದ್ರಃ ಪ್ರವೇಶ್ಯತೇ ॥ ಭಾರತ -ವನ.(೧೫/೧೯)

೨. ಯದೋರ್ವಂಶೇ ಚಕ್ರವರ್ತೀ ಕಾರ್ತವೀರ್ಯಾರ್ಜುನೋಽಭವತ್ ।
ವಿಷ್ಣೋರ್ದತ್ತಾತ್ರೇಯನಾಮ್ನಃ ಪ್ರಸಾದಾದ್ಯೋಗವೀರ್ಯವಾನ್ ॥ -ಮ.ಭಾ.ತಾ.ನಿ(೧೧/೩)
ಹೈಹಯಾನಾಮಧಿಪತಿರರ್ಜುನಃ ಕ್ಷತ್ರಿಯರ್ಷಭಃ ।
ದತ್ತಂ ನಾರಾಯಣಸ್ಯಾಂಶಮಾರಾಧ್ಯ ಪರಿಕರ್ಮಭಿಃ ॥ ಇತ್ಯಾದಿ -ಭಾಗ.(೯/೧೫/೧೭)

೪. ''ನರಧೃತಂ'' ಎಂಬ ಪದಕ್ಕೆ ನಾರಾಯಣಪಕ್ಷದಲ್ಲಿ ನರ ಎಂಬ ಅವತಾರದ ಶೇಷನಿಂದ ಧೃತ ಎಂದೂ, ''ಗಿರಿಮೂರ್ಧನಿ'' ಎಂಬುದಕ್ಕೆ ನಾರಾಯಣಾಶ್ರಮದ ಬಳಿಯ ಶತಶೃಂಗ-ಪರ್ವತದ ಶಿಖರದಲ್ಲಿ ಎಂದೂ, ಕೃಷ್ಣಪಕ್ಷದಲ್ಲಿ ''ನರಧೃತ'' ಎಂಬ ಪದಕ್ಕೆ ನರನ ಅಂಶದಿಂದ ಕೂಡಿದ ಅರ್ಜುನನಿಂದ ಧೃತ ಎಂದೂ, ''ಗಿರಿಮೂರ್ಧನಿ'' ಎಂಬುದಕ್ಕೆ ಸ್ತುತಿರೂಪವಾದ ಮಾತುಗಳ ಮುಖ್ಯ ಪ್ರತಿಪಾದ್ಯ ಎಂದೂ ಅರ್ಥಮಾಡಿಕೊಳ್ಳಬೇಕು.

೫. ಈ ಸರ್ಗದ ಮೊದಲಶ್ಲೋಕದಲ್ಲಿ ಶ್ರೀಕೃಷ್ಣನು ಚಂದ್ರವಂಶದಲ್ಲಿ ಅವತರಿಸಿದ್ದು ಯಾದವರೊಂದಿಗೆ ನೆಲೆಸೆದ್ದು ತಿಳಿಸಲ್ಪಟ್ಟಿತು. ದ್ವಿತೀಯ ಪದ್ಯದಲ್ಲಿ ದ್ವಾರಕೆಯ ನಿರ್ಮಾಣ ಹಾಗೂ ಬಾಲಲೀಲೆಗಳು ವರ್ಣಿತವಾದವು. ಈ ಮೂರನೆಯ ಪದ್ಯದಲ್ಲಿ ಶ್ರೀಕೃಷ್ಣನದು ಶುಕ್ಲಶೋಣಿತದಿಂದ ನಿರ್ಮಿತವಲ್ಲದ ಜ್ಞಾನಮಯಶರೀರ ಎಂಬ ವಿಶೇಷಾಂಶವು ಸಯುಕ್ತಿಕವಾಗಿ ನಿರೂಪಿತವಾಯಿತು. ಮುಂದೆಯು ಸಹ ಇದೇ ರೀತಿಯಾಗಿ ಶ್ರೀಕೃಷ್ಣಕಥೆಯು ಇತರ ಅವತಾರಜಗಳ ಕಥೆಯೊಂದಿಗೆ ಜೊತೆಜೊತೆಯಾಗಿಯೇ ಉಕ್ತವಾಗಿದೆ ಎಂದು ತಿಳಿಯಬೇಕು[೧].

೬. ಮುಂದೆಯೂ ಸಹ ಇದೇ ರೀತಿಯಾಗಿ ಶ್ರೀಕೃಷ್ಣರೂಪದೊಂದಿಗೆ ಇತರರೂಪದ ವರ್ಣನೆಯನ್ನೂ ಅರ್ಥಮಾಡಿಕೊಳ್ಳಬೇಕು.

೭. ಇನ್ನೊಂದು ರೀತಿಯಲ್ಲಿ ಶ್ರೀಹರಿಯ ಮೂಲರೂಪದಿಂದ ಆರಂಭಿಸಿ ಸಕಲ ರೂಪಗಳ ಕಥೆಯೂ ಸಹ ಈ ಸರ್ಗದ ಮೊದಲ ೨೪ ಶ್ಲೋಕಗಳಲ್ಲಿ ವರ್ಣಿತವಾಗಿದ್ದು ಈ ಭಾಗವೇ ಒಂದು ಚಿತ್ರಕಾವ್ಯವಾಗಿದೆ ಎಂದು ತಿಳಿಯಬೇಕು.

### ದತ್ತಾತ್ರೇಯ-ಕೃಷ್ಣರೂಪಗಳ ವರ್ಣನೆ

೨ವಿಮಲದತ್ತಪದಃ ೩ಪ್ರಣತಾರ್ಜುನಾ-<br>
ಭ್ಯುದಯಹೇತುರಮಾನವಯೋಗಧೃತ್ ।

---

೧. ಪ್ರಥಮಶ್ಲೋಕೇ ಸೋಮವಂಶಾದುತ್ಪತ್ತಿಃ ಯಾದವೈಃ ಸಹ ದ್ವಾರವತ್ಯಾಂ ನಿವಾಸಃ ಕಥಿತಃ । ದ್ವಿತೀಯಪದ್ಯೇ ದ್ವಾರವತೀನಿರ್ಮಾಣಪ್ರಕಾರಃ ಬಾಲಲೀಲಾ ಚ ವರ್ಣಿತಾ । ತೃತೀಯಪದ್ಯೇಽಸ್ಮಿನ್ ಶುಕ್ಲಶೋಣಿತಾದುತ್ಪತ್ತ್ಯಭಾವಃ ಜ್ಞಾನಮಯಶರೀರತ್ವಂ ಚೇತಿ ಸಯುಕ್ತಿಕಂ ತಾತ್ಪರ್ಯಂ ಕಥಿತಮ್ । ಏವಮುಕ್ತರತ್ರಾಪಿ ಭಿನ್ನಾಭಿನ್ನ ಸಕಲಾಽಪಿ ಶ್ರೀಕೃಷ್ಣಕಥಾ ವರ್ಣಿತಾ । ಅರ್ಥಾಂತರೇಣ ತು ಮೂಲರೂಪಮಾರಭ್ಯ ಸಕಲಾವತಾರಕಥಾ ಚ ವರ್ಣಿತೇತಿ ಚತುರ್ವಿಂಶತಿಶ್ಲೋಕಾತ್ಮಕಮಿದಮೇವೇಕಂ ಚಿತ್ರಕಾವ್ಯಮಿತಿ ದ್ರಷ್ಟವ್ಯಮ್ । - ವ್ಯಾ.

೨. ಸುಜನಾಯ ದತ್ತಪದ ಆತ್ಮಶುದ್ಧಿದಃ ಸುಕುಮಾರರೂಪ್ಯಭವದೇಷ ಶಾಶ್ವತಃ ।<br>
ಅನಸೂಯಯಾ ಶುಚಿಮನೀಷಯಾ ಧೃತಃ ಪರಮಾದರೇಣ ಮುನಿಪುಂಗವೋಢಯಾ ॥ -ಸು.ವಿ.(೮/೩೮)

೩.. ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।<br>
ಬ್ರಹ್ಮಾಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ।<br>
ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪೇತ್ಯಾದಿನಾ ॥ -ಗೀತಾ.(೧೧/೧೫,೧೬)

ಹೃದಿ ಧೃತಃ ಸುಧಿಯಾಗಿ ಹ್ಯನಸೂಯಯಾ
ಸ ಭವತಾದ್ಭವತಾಪಹರೋ ಮಮ ॥ ೪ ॥

ಶರಣು ಬಂದ ಕಾರ್ತವೀರ್ಯಾರ್ಜುನನ ಅಭ್ಯುದಯಕ್ಕೆ ಕಾರಣವಾದ, ಅಮಾನುಷವಾದ ಯೋಗವನ್ನು ಧರಿಸಿದ, ನಿರ್ಮಲಮನಸ್ಸಿನ ಅನಸೂಯೆಯಿಂದ ಹೃದಯದಲ್ಲಿ ಚಿಂತಿತವಾದ, ನಿರ್ಮಲವಾದ ದತ್ತ ಎಂಬ ಹೆಸರಿನ ಶ್ರೀಹರಿಯ ರೂಪವು ನನಗೆ ಭವತಾಪನೀಗಿಸುವುದಾಗಿ ಆಗಲಿ (ದತ್ತಾತ್ರೇಯಪಕ್ಷ).

ನಿರ್ಮಲವಾದ ಭಕ್ತನಿಗೆ ದ್ವಾರವತೀ ಎಂಬ ನೆಲೆಯನ್ನು ನೀಡಿದ, ಶರಣು ಬಂದ ಅರ್ಜುನನ ಅಭ್ಯುದಯಕ್ಕೆ ಕಾರಣನಾದ, ಅಸಂಖ್ಯವಾದ ಪಕ್ಷಿಗಳಿಗೆ ನೆಲೆಯಾದ ಗೋವರ್ಧನಗಿರಿಯನ್ನು ಎತ್ತಿಹಿಡಿದ, ಅಸೂಯೆ ತೊರೆದ ನಿರ್ಮಲಜ್ಞಾನದ ಭಕ್ತರಿಂದ ಹೃದಯದಲ್ಲಿ ಚಿಂತಿತನಾದ ಆ ಶ್ರೀಕೃಷ್ಣನು ನನಗೆ ಭವತಾಪನೀಗಿಸುವವನಾಗಿ ಆಗಲಿ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ದತ್ತಾತ್ರೇಯರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ದತ್ತಾತ್ರೇಯ ರೂಪವು ಅತ್ರಿ-ಅನಸೂಯರ ನಿಮಿತ್ತ ಪ್ರಾದುರ್ಭಾವಗೊಂಡ ರೂಪ; ಸಾಕ್ಷಾತ್ ವಿಷ್ಣುವೇ ದತ್ತಾತ್ರೇಯ ಎಂಬುದು ವಿಶೇಷ; ಕೆಲವರು ತಿಳಿದಿರುವಂತೆ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳ ಐಕ್ಯವನ್ನು ತೋರುವ ರೂಪವಲ್ಲ. ಇದು ಯೋಗಪ್ರವರ್ತಕವಾದ ರೂಪ ಎಂಬ ಮತ್ತೊಂದು ವಿಶೇಷವು ಅಮಾನವಯೋಗಧೃತ್ ಎಂಬ ಪದದಿಂದ ಸೂಚಿತ. ಶ್ರೀಮದಾಚಾರ್ಯರು ತಮ್ಮ ಸರ್ವಮೂಲಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ''ಇತಿ ದತ್ತಾತ್ರೇಯಯೋಗೇ'' ಎಂಬುದಾಗಿ ಉಲ್ಲೇಖಿಸಿರುವುದು ಅತ್ಯಂತ ಗಮನಾರ್ಹ.

೩. ದತ್ತಾತ್ರೇಯಪಕ್ಷಕ್ಕೆ 'ವಿಮಲ-ದತ್ತ-ಪದಃ', 'ಅಮಾನವ-ಯೋಗ-ಧೃತ್' ಎಂದೂ, ಕೃಷ್ಣಪಕ್ಷಕ್ಕೆ 'ವಿಮಲದತ್ತ-ಪದಃ', 'ಅ-ಮಾನ-ವಯೋ-ಅಗ-ಧೃತ್' ಎಂದೂ ಅನ್ವಯ.

---

೧. ''ಚಕ್ರಾಂಕಿತಾಃ ಪ್ರವೇಷ್ಟವ್ಯಾಃ ಯಾವದಾಗಮನಂ ಮಮ'' ।
''ನಾಮುದ್ರಿತಾಃ ಪ್ರವೇಷ್ಟವ್ಯಾ ಯಾವದಾಗಮನಂ ಮಮ'' ಇತಿ ವಚನಾತ್ । -ವ್ಯಾ.
ನ ಚಾಮುದ್ರಃ ಪ್ರವೇಷ್ಟವ್ಯೋ ದ್ವಾರಪಾಲಸ್ಯ ಪಶ್ಯತಃ ।
ಯಾವದಾಗಮನಂ ಮಹ್ಯಂ ತಾವದೇವಂ ಭವಿಷ್ಯತಿ ॥ ಹರಿವಂಶ(೧೩/೧೪/೨೫)
ನ ಚಾಮುದ್ರೋಽಭಿನಿರ್ಯಾತಿ ನ ಚಾಮುದ್ರಃ ಪ್ರವೇಶ್ಯತೇ ॥ ಭಾರತ -ವನ.(೧೫/೧೯)

೨. ಯದೋರ್ವಂಶೇ ಚಕ್ರವರ್ತೀ ಕಾರ್ತವೀರ್ಯಾರ್ಜುನೋಽಭವತ್ ।
ವಿಷ್ಣೋರ್ದತ್ತಾತ್ರೇಯನಾಮ್ನಃ ಪ್ರಸಾದಾದ್ಯೋಗವೀರ್ಯವಾನ್ ॥ -ಮ.ಭಾ.ತಾ.ನಿ(೧೧/೩)
ಹೈಹಯಾನಾಮಧಿಮತಿರರ್ಜುನಃ ಕ್ಷತ್ರಿಯರ್ಷಭಃ ।
ದತ್ತಂ ನಾರಾಯಣಸ್ಯಾಂಶಮಾರಾಧ್ಯ ಪರಿಕರ್ಮಭಿಃ ॥ ಇತ್ಯಾದಿ -ಭಾಗ.(೯/೧೫/೧೭)

೪. ದತ್ತಾತ್ರೇಯ ಪಕ್ಷದಲ್ಲಿ 'ಪ್ರಣತಾರ್ಜುನ' ಎಂಬಲ್ಲಿ ಅರ್ಜುನ ಎಂಬುದಕ್ಕೆ ಕಾರ್ತವೀರ್ಯಾರ್ಜುನ ಎಂದೂ, 'ಅನಸೂಯಯಾ' ಎಂಬುದಕ್ಕೆ ಅನಸೂಯೆ ಎಂಬ ಅತ್ರಿ ಪತ್ನೀ ಎಂದೂ; ಕೃಷ್ಣಪಕ್ಷದಲ್ಲಿ ಅರ್ಜುನ ಎಂಬುದಕ್ಕೆ ಭೀಮಾನುಜ ಅರ್ಜುನ ಎಂದೂ, 'ಅನಸೂಯಯಾ' ಎಂಬಲ್ಲಿ ಅಸೂಯೆ ತೋರೆದ ಜ್ಞಾನದಿಂದ ಎಂಬುದಾಗಿಯೂ ಅನ್ವಯ.

### ಋಷಭ-ಕೃಷ್ಣರೂಪಗಳ ವರ್ಣನೆ

[೧]ಭರತಶಾಸ್ತ್ರವಿಶಾರದತಾಕರಂ
ಪ್ರಿಯಕೃತಂ ಪಿತೃವನ್ನವಯೋಗಿನಾಮ್[೨] ।
ಯಮೃಷಭಂ ಸುಮತಿರ್ಹಿ ಜಯಂತ್ಯಗಾತ್[೩]
ಸುಮಧುರಾ[೪] [೫]ಮಧುರಾಧಿಪಮಂತಿಕೇ ॥ ೫ ॥

ತನ್ನ ಪುತ್ರನಾದ ಭರತನಿಗೆ ಶಾಸ್ತ್ರಪ್ರಾವೀಣ್ಯವನ್ನು ತಂದುಕೊಟ್ಟ, ಒಂಭತ್ತು ಜನ ಯೋಗಿಗಳಿಗೆ ತಂದೆಯಂತೆ ಪ್ರಿಯವನ್ನೆಸಗಿದ, ಹಿತನುಡಿಯುವವರಲ್ಲಿ ಅಧಿಪನಾದ ಋಷಭ ಎಂಬ ರೂಪವನ್ನು ಸುಮತಿಯೂ ಮನೋಹರಳೂ ಆದ ಜಯಂತಿಯು ಸಮೀಪಿಸಿದಳು. (ಋಷಭಪಕ್ಷ).

ನಾಟ್ಯಶಾಸ್ತ್ರದಲ್ಲಿ ನೈಪುಣ್ಯಕ್ಕೆ ಆಕರವೆನ್ನಿಸಿದ, ತಂದೆಯಂತೆ ನೂತನಯೋಗಾಭ್ಯಾಸಿಗಳಿಗೆ ಅಭೀಷ್ಟವನ್ನು ನೀಡಿದ, ಮಧುರೆಗೆ ಒಡೆಯನಾದಂತಹ ಶ್ರೇಷ್ಠನಾದ ಶ್ರೀಕೃಷ್ಣನನ್ನು ಸುಮಧುರವಾದ ವಿಷಯಾದಿಗಳನ್ನು ಮೆಟ್ಟಿನಿಲ್ಲುವಂತಹ ನಿರ್ಮಲವಾದ ಬುದ್ಧಿಯು ಸಮೀಪಿಸಿತು. (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಋಷಭರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

---

೧. ದಯಿತಃ ಸತಾಮೃಷಭ ಏಷ ಭೂಧರೋ ವಪುರುದ್ವಹನ್ ಪರಮಹಂಸಲಕ್ಷಣಮ್ ।
ವ್ಯಹರದ್ವಲಕ್ಷತಮಪಕ್ಷಶೋಭನಂ ಪರತತ್ತ್ವಲಿಪ್ಸುಸನಕಾದಿವಂದಿತಃ ॥ -ಸುಮಧ್ವವಿಜಯ(೮/೩೯)

೨. ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ।
ಆವಿರ್ಹೋತ್ರೋऽಥ ದ್ರುಮಿಲಶ್ಚಮಸಃ ಕರಭಾಜನಃ ॥ -ಭಾಗ.(೧೧/೨/೨೧)

೩. ಮದ್ಯಾದಿದುರ್ವಿಷಯೇಷ್ವನಾಸಕ್ತಾ ವ್ರತಾದಿಸತ್ಕರ್ಮಸ್ವಾಸಕ್ತಾ ಚ ಬುದ್ಧಿಃ ಶ್ರೀಕೃಷ್ಣಂ ವಿಷಯೀಕರೋತಿ. ನಾನ್ಯೇತ್ಯರ್ಥಃ। - ವ್ಯಾ.

೪. ಯದ್ವಾ ಆಧಿರ್ಮಾನಸೀ ವ್ಯಥಾ ತಾಂ ಪಾತಿ ವರ್ಧಯತೀತ್ಯಾಧಿಪಮ್ । ರಾಗೋದ್ರೇಕಾತ್ ಸೇವಿತಮಪಿ ಪಶ್ಚಾತ್ತಾಪಕಾರೀತ್ಯರ್ಥ । ಸುಮಧು ಶೋಭನಂ ಮದ್ಯಂ ರಾಮಸ್ಯ ದಶರಥೇರ್ಧುರಾ ವ್ಯಾಪಾರೇಣ ವನವಾಸ-ಕಂದಮೂಲಫಲಾಹಾರಾದಿವ್ರತಚರ್ಯಯೇತ್ಯರ್ಥಃ। - ವ್ಯಾ

೫. ಮಧುರಾಯಾಂ ಪ್ರಾಕ್ಕಂಸಭಯೇನ ಶ್ರೀಕೃಷ್ಣಸ್ಮರಣಾದೌ ಶಂಕಿತಚಿತ್ತಾಃ ಸಂತಃ ಕಂಸಂ ಹತ್ವಾ ಶ್ರೀಕೃಷ್ಣೇ ಮಧುರಾಧಿಪೇ ಜಾತೇ ಸತಿ ನಿಃಶಂಕಂ ಧ್ಯಾನಗಾನಾದಿನಾ ಸ್ವಮನಸ್ತನ್ನಿಷ್ಠಮೇವ ಕೃತವಂತ ಇತಿ ಭಾವಃ। - ವ್ಯಾ.

೨. [೧]ಋಷಭರೂಪವು ಕಪಿಲವ್ಯಾಸಾದಿ ರೂಪಗಳಂತೆ ಸಾಕ್ಷಾದ್ರೂಪಗಳಲ್ಲೊಂದು; ಇದು ನಾಭಿ ಹಾಗೂ ಮೇರುದೇವಿಯರ [೨]ಪುತ್ರತ್ವೇನ ಅವತಾರಮಾಡಿದ ರೂಪ. ಭರತ ಮೊದಲಾದ ನೂರು ಪುತ್ರರನ್ನು ಪಡೆದು, ಸನ್ಮಾರ್ಗದಲ್ಲಿ ತೊಡಗಿಸಿದ ರೂಪ. ಆ ನೂರರಲ್ಲಿ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಳ, ಚಮಸ ಹಾಗೂ ಕರಭಾಜನ ಎಂಬ ನವಯೋಗಿಗಳು ಜಾಯಂತೇಯರು ಎಂದು ಪ್ರಸಿದ್ಧರಾಗಿ ನಿಮಿ ರಾಜನಿಗೆ ತತ್ತ್ವೋಪದೇಶ ಮಾಡಿದ ವಿವರ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ ಬಂದಿದೆ.

೩. ಋಷಭಪಕ್ಷದಲ್ಲಿ '[೩]ಭರತ-ಶಾಸ್ತ್ರವಿಶಾರದತಾ-ಕರಂ' ಎಂಬುದಾಗಿಯೂ, ಕೃಷ್ಣಪಕ್ಷದಲ್ಲಿ 'ಭರತಶಾಸ್ತ್ರ-ವಿಶಾರದತಾ-ಆಕರಂ' ಎಂಬುದಾಗಿಯೂ ಅನ್ವಯ.

೪. ಋಷಭರೂಪದ ಶ್ರೀಹರಿಗೆ ಜಯಂತಿರೂಪದ ಮಹಾಲಕ್ಷ್ಮಿಯು ಪತ್ನಿ ಎಂಬ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ.

೫. ಋಷಭರೂಪದಿಂದ ತನ್ನ ಪುತ್ರರಾದ ಭರತಾದಿ ೧೦೦ ಜನರಿಗೆ ತತ್ತ್ವೋಪದೇಶ ಮಾಡಿದ; ಅದು ಋಷಭಗೀತಾ ಎಂದು ಪ್ರಸಿದ್ಧವಾಗಿದೆ; ಶ್ರೀಕೃಷ್ಣರೂಪದಿಂದ ಭರತನ [೪]ನಾಟ್ಯಶಾಸ್ತ್ರ ಮೊದಲಾದವುಗಳಿಗೆ ಆಕರವಾಗುವಂತೆ ನರ್ತಿಸಿದ.

## ಶಿಂಶುಮಾರ-ಕೃಷ್ಣರೂಪಗಳ ವರ್ಣನೆ

ಜನಕದೋಷಮುಪೇತ್ಯ ಸ ಶರ್ವರೀ-
ತ್ಯನುಭವಂ ಜನನೀಮಪಿ ಹರ್ಷಯನ್ ।
ಘಟಯತೇ ದೃಶಿ [೫]ಬಾಲವಪುಃ ಸ್ಫುರ-
ತ್ಸುರಸದೋ ರಸದೋಹಕೃದನ್ವಹಮ್ ॥ ೬ ॥

ಶಿಂಶುಮಾರರೂಪವು ದೋಷ ಎಂಬ ಪ್ರಜಾಪತಿಯ ಹೃದಯವನ್ನು ಪ್ರವೇಶಿಸಿ, ಬಳಿಕ ಶರ್ವರೀ ಎಂಬ ತನ್ನ ಜನನಿಗೆ ಹರ್ಷನೀಡುತ್ತಾ, ದಿನೇದಿನೇ ಅದ್ಭುತಕಾರ್ಯಗಳನ್ನು

---

೧. ಋಷಭ ಇಂದ್ರದತ್ತಾಂ ಜಯಂತೀಂ ನಾಮ ಪತ್ನೀಂ ಉವಾಹ (ಭಾಗ.೫/೪/೮) ಇತಿ ಪೌರಾಣಿಕೀ ಕಥಾ। -ವ್ಯಾ.

೨. ಪಿತೃವನ್ನವಯೋಗಿನಾಂ ನೂತನಯೋಗಾಭ್ಯಾಸವತಾಂ ಪ್ರಿಯಕೃತಮ್ ಅಭೀಷ್ಟಕಾರಿಣಮ್ । ನೂತನಯೋಗಾಭ್ಯಾಸಕಾರಿಣಾಮುಪನೀತಾನಾಮಂತಃಕರಣಶುದ್ಧ್ಯಾದಿಪ್ರದಮಿತ್ಯರ್ಥಃ । ಉಪನಯನಾನಂತರಂ ಪ್ರಥಮಂ ಶ್ರೀಕೃಷ್ಣಮಂತ್ರಸ್ಯೈವ ಲೋಕೇ ಉಪದೇಶಾದಿದಮುಕ್ತಮ್। - ವ್ಯಾ.

೩. ಅತ್ರ ಭರತಶಾಸ್ತ್ರೇತ್ಯಾದಿನಾ ವಿಶೇಷಣದ್ವಯೇನಾವತಾರಪ್ರಯೋಜನಸ್ಯ ಋಷಭ ಇತಿ ನಾಮ್ನಃ ಜಯಂತೀತಿ ಭಾರ್ಯಾಯಾಃ ಮಧುರಾಧಿಪ ಇತಿ ಶಾಂತಾವತಾರತ್ವಸ್ಯ ಚ ಕಥನಂ ಕೃತಮಿತಿ ದ್ರಷ್ಟವ್ಯಮ್। - ವ್ಯಾ.

೪. ವೃಂದಾವನೇ ವಿಚಿತ್ರನಾಟ್ಯಕರಣಾದಿತಿ ಭಾವಃ। - ವ್ಯಾ.

೫. ಕರ್ದಮಶೋಭಿಗೃಹಾಂಗಣ ಇತಿ ಶ್ಲೋಕಸೂಚಿತಾ ಬಾಲಲೀಲಾ ಅನೇನ ಶ್ಲೋಕೇನ ಪ್ರಪಂಚಿತೇತಿ ದ್ರಷ್ಟವ್ಯಮ್। -ವ್ಯಾ.

ಮಾಡುತ್ತಾ, ತನ್ನ ಶರೀರದ ಬಾಲದಲ್ಲಿ ಹೊಳೆಯುವ ಶುಕ್ರಾದಿ ಗ್ರಹದೇವತೆಗಳ ಸಭೆಯನ್ನು ಜನರ ಕಣ್ಣಿಗೆ ತೋರಿಸಿದ. (ಶಿಂಶುಮಾರಪಕ್ಷ).

ದಿನದಿನವೂ ಹೊಳೆಯುವ ದೇವಸಭೆಗೆ ಸ್ವರ್ಗಸಂಬಂಧಿಯೂದ ಸುಖವನ್ನು ಸುರಿಸುವ ಶಿಶುರೂಪಿಯಾದ ಶ್ರೀಕೃಷ್ಣನು ತಂದೆಯಾದ ನಂದಗೋಪನ ಕೈ ಸೇರಿ ಲಾಲಿತನಾದ; ತಾಯಿಯಾದ ಯಶೋದೆಗೂ ಹರ್ಷನೀಡುತ್ತಾ ಅವಳಿಗೆ ಶಿವನ ರೀತಿಯನ್ನು ಅನುಭವಕ್ಕೆ ತಂದುಕೊಟ್ಟನು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ [೧]ಶಿಂಶುಮಾರರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಶಿಂಶುಮಾರರೂಪವು ದೋಷ ಹಾಗೂ ಶರ್ವರೀ ಎಂಬ ದಂಪತಿಗಳನ್ನು ನಿಮಿತ್ತಮಾಡಿಕೊಂಡು ಅವತರಿಸಿದ ರೂಪ. ಸಮಸ್ತ ಗ್ರಹಗಳನ್ನೊಳಗೊಂಡ ಜ್ಯೋತಿಶ್ಚಕ್ರವನ್ನು ಧರಿಸಿರುವ ರೂಪ ಎಂಬುದು ಈ ರೂಪದ ವಿಶೇಷ[೨].

೩. 'ಜನಕದೋಷಂ' ಎಂಬುದಕ್ಕೆ ತಂದೆಯಾದ ದೋಷ ಎಂಬ ಪ್ರಜಾಪತಿಯನ್ನು ಎಂದೂ '[೩]ಶರ್ವರೀ-ಇತಿ' ಎಂಬುದಾಗಿ ಶರ್ವರಿ ಎಂಬ ಜನನಿಯನ್ನು ಎಂದು ಶಿಂಶುಮಾರಪಕ್ಷಕ್ಕೂ, 'ಜನಕ-ದೋಷಂ', 'ಶರ್ವ-ರೀತಿ' ಎಂಬುದಾಗಿ ಕೃಷ್ಣಪಕ್ಷಕ್ಕೂ ಅನ್ವಯ. 'ಬಾಲ-ವಪುಃ' ಎಂಬುದಾಗಿ ಬಾಲೇ ವಪುಷಿ ಎಂಬುದಾಗಿ ಶಿಂಶುಮಾರಪಕ್ಷಕ್ಕೂ, ಶಿಶುರೂಪೀ ಎಂಬುದಾಗಿ ಕೃಷ್ಣಪಕ್ಷಕ್ಕೂ ಅನ್ವಯ.

೪. [೪]ಶರ್ವರೀತಿ ಎಂಬುದಕ್ಕೆ ಶಿವನ ರೀತಿ ಎಂದರೆ ದಿಗಂಬರತ್ವ, ಧೂಳು ಮೆತ್ತಿಕೊಳ್ಳುವಿಕೆ, ಜಟೆಯನ್ನು ಹೊಂದಿರುವಿಕೆ, ಹಣೆಯಲ್ಲಿ ಅಶ್ವತ್ಥಪತ್ರಾಕೃತಿಯಂತೆ ಚಿನ್ನದಿಂದ ಮಾಡಲ್ಪಟ್ಟ ಲಲಾಟಾಭರಣವನ್ನು ಮೂರನೇ ಕಣ್ಣಿನಂತೆ ಧರಿಸುವುದು ಮೊದಲಾದವು ಎಂದು ಅರ್ಥ.

೫. [೫]'ಕರ್ದಮಶೋಭಿಗೃಹಾಂಗಣೇ' (ಶ್ಲೋಕ ೨) ಎಂದು ಹಿಂದೆ ಸೂಚಿತವಾದ ಬಾಲ-ಲೀಲೆಯ ವಿವರಣೆ ಇದರಲ್ಲಿ ಬಂದಿದೆ ಎಂದು ತಿಳಿಯಬಹುದು.

---

೧. ಶಿಂಶುಮಾರಪುಚ್ಛಶರೀರಾಶ್ರಿತಂ ಜ್ಯೋತಿಶ್ಚಕ್ರಂ ಪ್ರವರ್ತತ ಇತಿ ಪೌರಾಣಿಕೀ(ಭಾಗ.೫/೨೩./೪) ಪ್ರಸಿದ್ಧಿಃ।

೨. ಅತ್ರಾಪಿ ಶಿಂಶುಮಾರಾವತಾರಪ್ರಯೋಜನಂ ಮಾತಾಪಿತೃನಾಮ ಚ ಕಥಿತಮಿತಿ ದ್ರಷ್ಟವ್ಯಮ್। -ವ್ಯಾ.

೩. ದೋಷಾಖ್ಯಪ್ರಜೇಶ್ವಾತ್ ಶರ್ವರೀನಾಮ್ನ್ಯಾಂ ತತಂತ್ಯಾಂ ಶಿಂಶುಮಾರೋऽವತೀರ್ಣ ಇತಿ ಪೌರಾಣಿಕೀ ಕಥಾ। - ವ್ಯಾ.

೪. ಶರ್ವಸ್ಯ ಶಿವಸ್ಯ ರೀತಿಃ ಪ್ರಕಾರಃ ದಿಗಂಬರತ್ವಧೂಲೀಧೂಸರತ್ವಜಟಿಲತ್ವಲಲಾಟಲಂಬ್ಯಶ್ವತ್ಥಪತ್ರಾಕೃತಿಸುವರ್ಣ-ನಿರ್ಮಿತಲಲಾಟಾಭರಣೇನ ತ್ರಿನೇತ್ರತ್ವಾದ್ಯಾಕಾರೇಣೇತ್ಯರ್ಥಃ। - ವ್ಯಾ.

೫. ಕರ್ದಮಶೋಭಿಗೃಹಾಂಗಣ ಇತಿ ಶ್ಲೋಕಸೂಚಿತಾ ಬಾಲಲೀಲಾ ಅನೇನ ಶ್ಲೋಕೇನ ಪ್ರಪಂಚಿತೇತಿ ದ್ರಷ್ಟವ್ಯಮ್। - ವ್ಯಾ.

### [೧]ಧನ್ವಂತರಿ-ಕೃಷ್ಣರೂಪಗಳ ವರ್ಣನೆ

ವಿಜನಿತಾಪದವದ್ಯವನಾಯ ಯೋ
ಹ್ಯಗದಪಾಣಿರಭೂಚ್ಛಮದಾಯಕಃ।
ಉದಧಿರತ್ನಮಮುಂ ಸಹಜಶ್ರಿಯಂ
ಹೃದಿ ಭಜೇದಿಭಜೇಡ್ಯಗತಿಂ[೨] ಕೃತೀ ॥ ೭ ॥

ವಿಶೇಷವಾಗಿ ಹುಟ್ಟುವ ಆಪತ್ತಿನ ರೂಪದ ದೋಷಗಳ ಕಾಡನ್ನು ಔಷಧಪಾಣಿಯಾಗಿ ಉಪಶಮನಗೊಳಿಸುವ, ಕ್ಷೀರಸಮುದ್ರಕ್ಕೆ ರತ್ನಪ್ರಾಯನಾದ, ಲಕ್ಷ್ಮಿಯೊಂದಿಗೆ ಪ್ರಾದುರ್ಭವಿಸಿದ, ಮರಿಯಾನೆಯಂತೆ ನಡೆದಾಡುವ ಈ ಧನ್ವಂತರಿಯನ್ನು ಕುಶಲನಾದವನು ಹೃದಯದಲ್ಲಿ ಭಜಿಸಬೇಕು (ಧನ್ವಂತರಿಪಕ್ಷ).

ಮರಿಪಕ್ಷಿಗಳನ್ನು ಕೊಂದುಹಾಕುವವನಂತೆ ಕೈಯಲ್ಲಿ ಗದೆಯನ್ನು ಹಿಡಿಯದೆ ಕಾಲಯವನನಿಗೆ ಮೃತ್ಯುವನ್ನು ನೀಡುವ, ಸಹಜಕಾಂತಿಯ, ಕುವಲಯಾಪೀಡ ಎಂಬ ಆನೆಯಿಂದ ಸ್ತುತಿಸಲ್ಪಟ್ಟ ಗಮನವುಳ್ಳ, ಸಮುದ್ರಕ್ಕೆ ಅಲಂಕಾರಭೂತನಾದ ಶ್ರೀಕೃಷ್ಣನನ್ನು ಕುಶಲನಾದವನು ಹೃದಯದಲ್ಲಿ ಭಜಿಸಬೇಕು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಧನ್ವಂತರಿರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಧನ್ವಂತರಿರೂಪವು [೩]ರೋಗಪರಿಹಾರಕವಾದ ಔಷಧವನ್ನು ಕೈಯಲ್ಲಿ ಹಿಡಿದಿರುವ ರೂಪ. ಸಮುದ್ರದಲ್ಲಿ ಪ್ರಾದುರ್ಭವಿಸುವ ಮೂಲಕ ಅದಕ್ಕೆ ಶೋಭೆ ನೀಡಿದ ರೂಪ, ಮಹಾಲಕ್ಷ್ಮಿಯೊಂದಿಗೆ ಪ್ರಾದುರ್ಭವಿಸಿದ ರೂಪ ಎಂಬ ಅನೇಕ ವಿಶೇಷಾಂಶಗಳು ಇದರಲ್ಲಿ ನಿರೂಪಿತವಾಗಿವೆ.

೩. ಶ್ರೀಕೃಷ್ಣನು ಕಾಲಯವನನನ್ನು ಯಾವ ಆಯುಧವನ್ನೂ ಕೈಯಲ್ಲಿ ಹಿಡಿಯದೇ ಮುಚುಕುಂದನ ನೇತ್ರಾಗ್ನಿಯಿಂದ ನಾಶಪಡಿಸಿದ ಹಾಗೂ ಕಂಸನ ಕುವಲಯಾಪೀಡ ಎಂಬ ಆನೆಯನ್ನು ಅದು ಮೆಚ್ಚುವಂತೆ ಪೀಡಿಸಿದ; ಎಂಬ ವಿಷಯಗಳು ಸಹ ಇದರಲ್ಲಿ ನಿರೂಪಿತವಾಗಿವೆ.

---

೧. ಸುಬೃಹತ್ಪಯೋಧರಮಿಥಃಪ್ರಸಂಹತಿಪ್ರಕಟೀಭವತ್ಪರಮಯೌವನಾಕೃತಿಃ।
ಅಸುರಾಹಿತಾಂ ವರವಿಲಾಸಿನೀತನುಃ ಪ್ರದದಾವಮುಷ್ಯ ಸುರರಾಶಯೇ ಸುಧಾಮ್ ॥ -ಸು.ವಿ.(೮/೩.೭)

೨. ಇಭಜೇನ ಇಭಾತ್ ಜಾತಃ ತೇನ ಕುವಲಪೀಡಾಖ್ಯಗಜೇನ ಈಡ್ಯಾ ಸ್ತುತ್ಯಾ ಗತಿಃ ತದಗ್ರೇ ಸಂಚಾರೋ ಯಸ್ಯ ಸ ತಥೋಕ್ತಃ। ಯದ್ಯಪ್ಯಸೌ ದುಷ್ಟತ್ವಾನ್ನ ಸ್ತೌತಿ ತಥಾಪಿ ಕೌಶಲವಶಾತ್ ಸ್ತುತಿರಿತ್ಯರ್ಥಃ। - ವ್ಯಾ.

೩. ವಾತಾಪಿತ್ತಶ್ಲೇಷ್ಮದೋಷತ್ರಯಾಣಿ ವಿಜನಿತಾಪದವದ್ಯಾನಿ ತಾನ್ಯೇವ ವನಂ ತಸ್ಯೈ ಶಮದಾಯಕಃ ನಾಶಪ್ರದೋಽಭೂತ್। ಧನ್ವಂತರೇರ್ವೈದ್ಯಶಾಸ್ತ್ರಪ್ರವರ್ತಕತ್ವಾದವತಾರಪ್ರಯೋಜನಮುಕ್ತಂ ಭವತಿ। - ವ್ಯಾ

೪. 'ವಿಜನಿತ-ಆಪತ್-ಅವದ್ಯ-ವನಾಯ', 'ಅಗದ-ಪಾಣೆಃ', 'ಇಭಜೇಡ್ಯಗತಿಂ' ಎಂದು ಧನ್ವಂತರಿಪಕ್ಷಕ್ಕೂ, 'ವಿಜನಿ-ತಾಪದವತ್-ಯವನಾಯ', '[1]ಅ-ಗದಪಾಣೆಃ', 'ಇಭ-ಜ-ಈಡ್ಯಗತಿಂ' ಎಂದು ಕೃಷ್ಣಪಕ್ಷಕ್ಕೂ ಅನ್ವಯ.

೫. ಯವನಾಯ ಎಂಬುದನ್ನು ಕಾಲಯವನಾಯ ಎಂಬುದಾಗಿ 'ನಾಮೈಕದೇಶೇ ನಾಮಗ್ರಹಣನ್ಯಾಯ'ದಿಂದ ಅರ್ಥಮಾಡಿಕೊಳ್ಳಬೇಕು.

೬. ಕುವಲಯಾಪೀಡ ಎಂಬ ದುಷ್ಟಗಜವು ಶ್ರೀಕೃಷ್ಣನನ್ನು ಕೊಂಡಾಡುವುದು ಎಂದರೆ ಶತ್ರುವಾದ ಅದು ಸಹ ಶ್ರೀಕೃಷ್ಣನ ಆಕ್ರಮಣದ ರೀತಿಯನ್ನು ಮೆಚ್ಚಲೇಬೇಕಾಗುವುದು ಎಂದು ಅರ್ಥ; ಭಕ್ತಿಯಿಂದ ಸ್ತುತಿಸುವುದು ಎಂಬ ಅರ್ಥದಲ್ಲಲ್ಲ.

### ಹಯಗ್ರೀವ-ಕೃಷ್ಣರೂಪಗಳ ವರ್ಣನೆ

[2]ಮಧುರಯಾ ಜಿತದಾನವ ಸದ್ಗಿರಾ
ವಶನಿಕಾಯ ಗತಾಗಮಸಾಧಕ ।
ನರತುರಂಗಮಹರ್ಷಕರಾಕೃತೇ
[3]ಭವಗತಾವಗತಾಖಿಲ ಪಾಹಿ ನಃ ॥ ೮ ॥

ಮಧು ಎಂಬ ದಾನವನ ವೇಗಕ್ಕೆ ವಶನಾಗದ, ದಾನವರ ಸಭೆ ಎಂಬ ಬೆಟ್ಟದ ನಾಶಕ್ಕೆ ವಜ್ರದೇಹಿಯಾದ, ದಾನವರಿಂದ ಅಪಹರಿಸಲ್ಪಟ್ಟ ವೇದಗಳನ್ನು ಮರಳಿ ತಂದಿತ್ತ, ಹಯಗ್ರೀವ ಎಂಬ ಆನಂದಕರವಾದ ರೂಪದ, ನಿತ್ಯಮುಕ್ತನಾದ, ಎಲ್ಲವನ್ನೂ ಬಲ್ಲ ಶ್ರೀಹರಿಯೇ! ನಮ್ಮನ್ನು ಪಾಲಿಸು (ಹಯಗ್ರೀವಪಕ್ಷ).

ಮನೋಹರವಾದ ಸಮೀಚೀನ ವಚನದಿಂದ ದಾನವನನ್ನು ವಂಚಿಸಿದ, ತನ್ನ ಭಕ್ತರಾದ ಪಾಂಡವರ ಸಮೂಹಕ್ಕೆ ಪರರಿಂದ ಅಪಹೃತವಾದ ರಾಜ್ಯಾದಿಗಳನ್ನು ಪುನಃ ತಂದಿತ್ತ, ಅರ್ಜುನನ ಕುದುರೆಗಳಿಗೆ[4] ಹರ್ಷ ಉಂಟುಮಾಡುವ ಆಕೃತಿಯ, ಭೂಲೋಕಕ್ಕೆ

---

೧. ನ ವಿದ್ಯತೇ ಗದಾ ಯಸ್ಯ ಸೋಽಗದಃ ಪಾಣಿರ್ಯಸ್ಯ ಸೋಽಗದಪಾಣಿಃ ಸನ್ । 'ನಿಶ್ಚಕ್ರಾಮ ನಿರಾಯುಧಃ' ಇತಿ ವಚನಾತ್ । - ವ್ಯಾ.

೨. ಚತುರಾನನಾಯ ಚತುರಃ ಪುರಾಽಽಗಮಾನ್ ಪ್ರದದಾವಸಾವನಿಮಿಷೇಶ್ವರಃ ಪ್ರಭುಃ ।
ವಿನಿಹತ್ಯ ಹಿ ಶ್ರುತಿಮುಷಂ ಪುರಾತನಂ ವಪುಷೋದ್ಧೃತಂ ಹಯಮುಖೇನ ಸದ್ರಿಪುಮ್ ॥ -ಸು.ವಿ.(೮/೧೪)
ಹಯಮುಖೇನ ವಪುಷಾ ಉದ್ಧತಮಸುರಂ ನಿಹತ್ಯ । ಸುರೇಶ್ವರೋ ಹಯಗ್ರೀವೇಣ ವಪುಷಾ ಮಧುಮ್ ।
- (ಭಾ.ಪ್ರ.)

೩. ಮಾತಾಪಿತ್ರೋರಭಾವಾತ್ ತನ್ಮೂರ್ತೇರ್ವರ್ಣನಮವತಾರಪ್ರಯೋಜನಂ ಚೋಕ್ತಮ್ । - ವ್ಯಾ.

೪. ಸಾರಥೀಭೂಯ ಲಾಲಿತಪಾರ್ಥರಥಾಶ್ವೇತ್ಯರ್ಥಃ । - ವ್ಯಾ.

ಬಂದಿದ್ದರೂ ಪೂರ್ಣತ್ವಾದಿಗಳಿಂದ ದೂರಾಗದ ಶ್ರೀಕೃಷ್ಣನೇ! ನಮ್ಮನ್ನು ಪಾಲಿಸು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಹಯಗ್ರೀವರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಹಯಗ್ರೀವಪಕ್ಷದಲ್ಲಿ [೧]ಮಧು ಎಂಬ ದಾನವನನ್ನು ಸಂಹರಿಸಿದ, ದೈತ್ಯವೃಂದಕ್ಕೆ [೨]ವಜ್ರಸದೃಶನಾದ, ದಾನವರಿಂದ ಅಪಹೃತವಾದ ವೇದಗಳನ್ನು ತಂದಿತ್ತ, ನಿತ್ಯಮುಕ್ತನಾದ, ಸರ್ವಜ್ಞನಾದ ಶ್ರೀಹರಿ ಎಂದು ಅರ್ಥ.

೩. ಶ್ರೀಕೃಷ್ಣಪಕ್ಷದಲ್ಲಿ ಮಧುರವಚನದಿಂದ ದುರ್ಯೋಧನನನ್ನು ವಂಚಿಸಿ ಪಾಂಡವರಿಗೆ ಮರಳಿ ರಾಜ್ಯ ತಂದಿತ್ತ, ಅರ್ಜುನನ ಕುದುರೆಗಳಿಗೆ ನಲಿವು ನೀಡಿದ, ಅವತಾರದಲ್ಲೂ ಮೂಲರೂಪದ ಸಕಲ ಗುಣಗಳನ್ನೂ ಹೊಂದಿದ ಮಹಿಮೆ ಉಳ್ಳವನು ಎಂದು ಅರ್ಥ.

೪. 'ಮಧು-ರಯ-ಅಜಿತ', 'ದಾನವ-ಸತ್-ಗಿರೌ - ಅಶನಿ-ಕಾಯ', 'ನರತುರಂಗಮ - ಹರ್ಷಕರ-ಆಕೃತೇ', 'ಭವ-ಗತ', 'ಅವಗತ-ಅಖಿಲ' ಎಂಬುದಾಗಿ ಹಯಗ್ರೀವಪಕ್ಷಕ್ಕೂ, 'ಮಧುರಯಾ-ಜಿತ-ದಾನವ' 'ಸದ್ಗಿರಾ' 'ವಶ-ನಿಕಾಯ', 'ನರ-ತುರಂಗಮ-ಹರ್ಷಕರ-ಆಕೃತೇ', 'ಭವಗತೌ-ಅಗತ-ಅಖಿಲ' ಎಂಬುದಾಗಿ ಶ್ರೀಕೃಷ್ಣಪಕ್ಷಕ್ಕೂ ಅನ್ವಯ.

೫. [೩]ಹಿಂದಿನ ಶ್ಲೋಕದಲ್ಲಿ ಕಾಲಯವನನ ವಧೆಯ ಪ್ರಕಾರವು ವರ್ಣಿತವಾಗಿದ್ದರೆ ಈ ಶ್ಲೋಕದಲ್ಲಿ ಭಾರತಕಥೆಯು ವರ್ಣಿತವಾಗಿದೆ ಎಂದು ತಿಳಿಯಬೇಕು.

### ಪಾಂಡುರಂಗ-ಕೃಷ್ಣರೂಪಗಳ ವರ್ಣನೆ

ಪ್ರಣತವಿಪ್ರಜನಾಮ ಯತೋಽಕರೋ-
ನ್ನನು ಜಲಾಂತರವರ್ತಿ ನಿಜಾಸ್ಪದಮ್ ।
ವಿಮಲಭೀಮರಥೀಪ್ಸಿತದಾಯಕಃ
ಸ್ವವಿಜಿತೋಽವಿಜಿತೋಽಪ್ಯಯಮಚ್ಯುತಃ ॥ ೯ ॥

[೪]ಪುಂಡರೀಕತೀರ್ಥದ ಜಲದ ಮಧ್ಯದಲ್ಲಿನ ತನ್ನ ಮನೆಯನ್ನು ಪ್ರಣತನಾದ ಬ್ರಾಹ್ಮಣನ ಹೆಸರುಳ್ಳದ್ದನ್ನಾಗಿಸಿದ, ನಿರ್ಮಲವಾದ ಭೀಮರಥೀ ನದಿಗೆ ಅಭೀಪ್ಸಿತವಾದ ವರವನ್ನು

---

೧. ಯುದ್ಧೇ ಅತಿವೇಗವತಾ ಮಧುನಾಮಕದೈತ್ಯೇನ ಜೇತುಮಶಕ್ಯೇತ್ಯರ್ಥಃ। - ವ್ಯಾ.

೨. ದೈತ್ಯಪರ್ವತಧ್ವಂಸೇ ವಜ್ರಕಲ್ಪಾವಯವೇತ್ಯರ್ಥಃ । ಅಂಕೇ ನಿಕ್ಷಿಪ್ಯ ಮುಷ್ಟಿನೈವ ಮಧುಕೈಟಭಯೋರ್ಮರ್ದನಾತ್ । ಗತಃ ಮಧುಕೈಟಭಾಹೃತಃ ಆಗಮೋ ವೇದಸ್ತಸ್ಯ ಸಾಧಕ । - ವ್ಯಾ.

೩. ಪೂರ್ವಶ್ಲೋಕೇ ಕಾಲಯವನವಧಪ್ರಕಾರೋ ವರ್ಣಿತಃ। ಅತ್ರ ಭಾರತಕಥೇತಿ ವಿವೇಕಃ। - ವ್ಯಾ.

೪. ಪುಂಡರೀಕಃ ತಸ್ಮಾತ್ ಜಾತಂ ನಾಮ ಪುಂಡರೀಕದೇವಾಲಯ ಇತ್ಯಾಭಿಧಾ। - ವ್ಯಾ.

೪. 'ವಿಜನಿತ-ಆಪತ್-ಅವದ್ಯ-ವನಾಯ', 'ಅಗದ-ಪಾಣೇಃ', 'ಇಭಜೇಡ್ಯಗತಿಂ' ಎಂದು ಧನ್ವಂತರಿಪಕ್ಷಕ್ಕೂ, 'ವಿಜನಿ-ತಾಪದವತ್-ಯವನಾಯ', '[೧]ಅ-ಗದಪಾಣೇಃ', 'ಇಭ-ಜ-ಈಡ್ಯಗತಿಂ' ಎಂದು ಕೃಷ್ಣಪಕ್ಷಕ್ಕೂ ಅನ್ವಯ.

೫. ಯವನಾಯ ಎಂಬುದನ್ನು ಕಾಲಯವನಾಯ ಎಂಬುದಾಗಿ 'ನಾಮೈಕದೇಶೇ ನಾಮಗ್ರಹಣನ್ಯಾಯ'ದಿಂದ ಅರ್ಥಮಾಡಿಕೊಳ್ಳಬೇಕು.

೬. ಕುವಲಯಾಪೀಡ ಎಂಬ ದುಷ್ಟಗಜವು ಶ್ರೀಕೃಷ್ಣನನ್ನು ಕೊಂಡಾಡುವುದು ಎಂದರೆ ಶತ್ರುವಾದ ಅದು ಸಹ ಶ್ರೀಕೃಷ್ಣನ ಆಕ್ರಮಣದ ರೀತಿಯನ್ನು ಮೆಚ್ಚಲೇಬೇಕಾಗುವುದು ಎಂದು ಅರ್ಥ; ಭಕ್ತಿಯಿಂದ ಸ್ತುತಿಸುವುದು ಎಂಬ ಅರ್ಥದಲ್ಲಲ್ಲ.

## ಹಯಗ್ರೀವ-ಕೃಷ್ಣರೂಪಗಳ ವರ್ಣನೆ

[೨]ಮಧುರಯಾ ಜಿತದಾನವ ಸದ್ಗಿರಾ
ವಶನಿಕಾಯ ಗತಾಗಮಸಾಧಕ ।
ನರತುರಂಗಮಹರ್ಷಕರಾಕೃತೇ
[೩]ಭವಗತಾವಗತಾಖಿಲ ಪಾಹಿ ನಃ ॥ ೮ ॥

ಮಧು ಎಂಬ ದಾನವನ ವೇಗಕ್ಕೆ ವಶನಾಗದ, ದಾನವರ ಸಭೆ ಎಂಬ ಬೆಟ್ಟದ ನಾಶಕ್ಕೆ ವಜ್ರದೇಹಿಯಾದ, ದಾನವರಿಂದ ಅಪಹರಿಸಲ್ಪಟ್ಟ ವೇದಗಳನ್ನು ಮರಳಿ ತಂದಿತ್ತ, ಹಯಗ್ರೀವ ಎಂಬ ಆನಂದಕರವಾದ ರೂಪದ, ನಿತ್ಯಮುಕ್ತನಾದ, ಎಲ್ಲವನ್ನೂ ಬಲ್ಲ ಶ್ರೀಹರಿಯೇ! ನಮ್ಮನ್ನು ಪಾಲಿಸು (ಹಯಗ್ರೀವಪಕ್ಷ).

ಮನೋಹರವಾದ ಸಮೀಚೀನ ವಚನದಿಂದ ದಾನವನನ್ನು ವಂಚಿಸಿದ, ತನ್ನ ಭಕ್ತರಾದ ಪಾಂಡವರ ಸಮೂಹಕ್ಕೆ ಪರರಿಂದ ಅಪಹೃತವಾದ ರಾಜ್ಯಾದಿಗಳನ್ನು ಪುನಃ ತಂದಿತ್ತ, ಅರ್ಜುನನ ಕುದುರೆಗಳಿಗೆ[೪] ಹರ್ಷ ಉಂಟುಮಾಡುವ ಆಕೃತಿಯ, ಭೂಲೋಕಕ್ಕೆ

---

೧. ನ ವಿದ್ಯತೇ ಗದಾ ಯಸ್ಯ ಸೋಽಗದಃ ಪಾಣಿರ್ಯಸ್ಯ ಸೋಽಗದಪಾಣಿಃ ಸನ್ । 'ನಿಶ್ಚಕ್ರಾಮ ನಿರಾಯುಧಃ' ಇತಿ ವಚನಾತ್ । - ವ್ಯಾ.

೨. ಚತುರಾನನಾಯ ಚತುರಃ ಪುರಾಽಽಗಮಾನ್ ಪ್ರದದಾವಸಾವನಿಮಿಷೇಶ್ವರಃ ಪ್ರಭುಃ ।
ವಿನಿಹತ್ಯ ಹಿ ಶ್ರುತಿಮುಷಂ ಪುರಾತನಂ ವಪುಷೋದ್ಧತಂ ಹಯಮುಖೇನ ಸದ್ರಿಪುಮ್ ॥ -ಸು.ವಿ.(೮/೧೪)
ಹಯಮುಖೇನ ವಪುಷಾ ಉದ್ಧತಮಸುರಂ ನಿಹತ್ಯ । ಸುರೇಶ್ವರೋ ಹಯಗ್ರೀವೇನ ವಪುಷಾ ಮಧುಮ್ ।
- (ಭಾ.ಪ್ರ.)

೩. ಮಾತಾಪಿತ್ರೋರಭಾವಾತ್ ತನ್ಮೂರ್ತೇರ್ವರ್ಣನಮವತಾರಪ್ರಯೋಜನಂ ಚೋಕ್ತಮ್ । - ವ್ಯಾ.

೪. ಸಾರಥೀಭೂಯ ಲಾಲಿತಪಾರ್ಥರಥಾಶ್ವೇತ್ಯರ್ಥಃ । - ವ್ಯಾ.

ಬಂದಿದ್ದರೂ ಪೂರ್ಣತ್ವಾದಿಗಳಿಂದ ದೂರಾಗದ ಶ್ರೀಕೃಷ್ಣನೇ! ನಮ್ಮನ್ನು ಪಾಲಿಸು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಹಯಗ್ರೀವರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಹಯಗ್ರೀವಪಕ್ಷದಲ್ಲಿ [೧]ಮಧು ಎಂಬ ದಾನವನನ್ನು ಸಂಹರಿಸಿದ, ದೈತ್ಯವೃಂದಕ್ಕೆ [೨]ವಜ್ರಸದೃಶನಾದ, ದಾನವರಿಂದ ಅಪಹೃತವಾದ ವೇದಗಳನ್ನು ತಂದಿತ್ತ, ನಿತ್ಯಮುಕ್ತನಾದ, ಸರ್ವಜ್ಞನಾದ ಶ್ರೀಹರಿ ಎಂದು ಅರ್ಥ.

೩. ಶ್ರೀಕೃಷ್ಣಪಕ್ಷದಲ್ಲಿ ಮಧುರವಚನದಿಂದ ದುರ್ಯೋಧನನನ್ನು ವಂಚಿಸಿ ಪಾಂಡವರಿಗೆ ಮರಳಿ ರಾಜ್ಯ ತಂದಿತ್ತ, ಅರ್ಜುನನ ಕುದುರೆಗಳಿಗೆ ನಲಿವು ನೀಡಿದ, ಅವತಾರದಲ್ಲೂ ಮೂಲರೂಪದ ಸಕಲ ಗುಣಗಳನ್ನೂ ಹೊಂದಿದ ಮಹಿಮೆ ಉಳ್ಳವನು ಎಂದು ಅರ್ಥ.

೪. 'ಮಧು-ರಯ-ಅಜಿತ', 'ದಾನವ-ಸತ್-ಗಿರೌ - ಅಶನಿ-ಕಾಯ', 'ನರತುರಂಗಮ - ಹರ್ಷಕರ-ಆಕೃತೇ', 'ಭವ-ಗತ', 'ಅವಗತ-ಅಖಿಲ' ಎಂಬುದಾಗಿ ಹಯಗ್ರೀವಪಕ್ಷಕ್ಕೂ, 'ಮಧುರಯಾ-ಜಿತ-ದಾನವ' 'ಸದ್ಗಿರಾ' 'ವಶ-ನಿಕಾಯ', 'ನರ-ತುರಂಗಮ-ಹರ್ಷಕರ-ಆಕೃತೇ', 'ಭವಗತೌ-ಅಗತ-ಅಖಿಲ' ಎಂಬುದಾಗಿ ಶ್ರೀಕೃಷ್ಣಪಕ್ಷಕ್ಕೂ ಅನ್ವಯ.

೫. [೩]ಹಿಂದಿನ ಶ್ಲೋಕದಲ್ಲಿ ಕಾಲಯವನನ ವಧೆಯ ಪ್ರಕಾರವು ವರ್ಣಿತವಾಗಿದ್ದರೆ ಈ ಶ್ಲೋಕದಲ್ಲಿ ಭಾರತಕಥೆಯು ವರ್ಣಿತವಾಗಿದೆ ಎಂದು ತಿಳಿಯಬೇಕು.

### ಪಾಂಡುರಂಗ-ಕೃಷ್ಣರೂಪಗಳ ವರ್ಣನೆ

ಪ್ರಣತವಿಪ್ರಜನಾಮ ಯತೋऽಕರೋ-
ನ್ನನು ಜಲಾಂತರವರ್ತಿ ನಿಜಾಸ್ಪದಮ್ ।
ವಿಮಲಭೀಮರಥೀಪ್ಸಿತದಾಯಕಃ
ಸ್ವವಿಜಿತೋऽವಿಜಿತೋऽಪ್ಯಯಮಚ್ಯುತಃ ॥ ೯ ॥

[೪]ಪುಂಡರೀಕತೀರ್ಥದ ಜಲದ ಮಧ್ಯದಲ್ಲಿನ ತನ್ನ ಮನೆಯನ್ನು ಪ್ರಣತನಾದ ಬ್ರಾಹ್ಮಣನ ಹೆಸರುಳ್ಳದ್ದನ್ನಾಗಿಸಿದ, ನಿರ್ಮಲವಾದ ಭೀಮರಥೀ ನದಿಗೆ ಅಭೀಪ್ಸಿತವಾದ ವರವನ್ನು

---

೧. ಯುದ್ಧೇ ಅತಿವೇಗವತಾ ಮಧುನಾಮಕದೈತ್ಯೇನ ಜೇತುಮಶಕ್ಯೇತ್ಯರ್ಥಃ। - ವ್ಯಾ.

೨. ದೈತ್ಯಪರ್ವತಧ್ವಂಸೇ ವಜ್ರಕಲ್ಪಾವಯವೇತ್ಯರ್ಥಃ । ಅಂಕೇ ನಿಕ್ಷಿಪ್ಯ ಮುಷ್ಟಿನೈವ ಮಧುಕೈಟಭಯೋರ್ಮರ್ದನಾತ್ । ಗತಃ ಮಧುಕೈಟಭಾಹೃತಃ ಆಗಮೋ ವೇದಸ್ತಸ್ಯ ಸಾಧಕ। - ವ್ಯಾ.

೩. ಪೂರ್ವಶ್ಲೋಕೇ ಕಾಲಯವನವಧಪ್ರಕಾರೋ ವರ್ಣಿತಃ। ಅತ್ರ ಭಾರತಕಥೇತಿ ವಿವೇಕಃ। - ವ್ಯಾ.

೪. ಪುಂಡರೀಕಃ ತಸ್ಮಾತ್ ಜಾತಂ ನಾಮ ಪುಂಡರೀಕದೇವಾಲಯ ಇತ್ಯಾಭಿಧಾ। - ವ್ಯಾ.

ನೀಡಿದ, ಅಚ್ಯುತನಾದ ಈ ಪಾಂಡುರಂಗನು ಯಾರಿಂದಲೂ ಗೆಲ್ಲಲಾಗದವನಾಗಿದ್ದರೂ ಸ್ವೇಚ್ಛೆಯಿಂದ ಭಕ್ತರಿಗೆ ವಶನಾಗುವನು (ಪಾಂಡುರಂಗಪಕ್ಷ).

ನಮಿಸಿದ ವಿಪ್ರಜನರ ಉಪದ್ರವವನ್ನು ಪರಿಹರಿಸಲೆಂದು ಸಮುದ್ರಜಲದ ಮಧ್ಯದಲ್ಲಿ ತನ್ನ ಪಟ್ಟಣವನ್ನು ನಿರ್ಮಿಸಿದ, [1]ಅಚ್ಛಿನ್ನಧರ್ಮನಾದ ಭೀಮಸೇನನೆಂಬ ಮಹಾರಥಿಕನಿಗೆ ಅಭೀಷ್ಟಪ್ರದನಾದ ಅಚ್ಯುತನಾದ ಈ ಶ್ರೀಕೃಷ್ಣನು ವೈರಿಜನರಿಗೆ ಸೋಲದವನಾದರೂ ತನ್ನ ಭಕ್ತರಿಗೆ ವಶನಾಗಿರುವನು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಭೀಮರಥೀತೀರದಲ್ಲಿ ನೆಲೆಸಿರುವ ಪುಂಡರೀಕ-ವರದನಾದ [2]ಶ್ರೀಪಾಂಡುರಂಗರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಪಾಂಡುರಂಗರೂಪದ ಶ್ರೀಹರಿಯು ಪುಂಡರೀಕವರದನಾಗಿ ಭೀಮರಥೀತೀರದಲ್ಲಿ ನೆಲೆಸಿರುವ ಭಕ್ತವತ್ಸಲ ಎಂಬುದು ಪಾಂಡುರಂಗಪರವಾದ ಅರ್ಥವಾದರೆ, ಮಧುರಾಪುರದ ಜನರಿಗೆ ಕಾಲಯವನನಿಂದ ಉಂಟಾದ ಉಪದ್ರವವನ್ನು ಸಮುದ್ರಮಧ್ಯದಲ್ಲಿ ದ್ವಾರಕಾಪಟ್ಟಣವನ್ನು ನಿರ್ಮಿಸುವ ಮೂಲಕ ಪರಿಹರಿಸಿದ [3]ಭೀಮಸೇನನಿಗೆ ಅತ್ಯಂತ ಪ್ರಿಯನಾದವನು ಎಂಬುದು ಕೃಷ್ಣಪರವಾದ ಅರ್ಥ.

೩. ‘ಪ್ರಣತ-ವಿಪ್ರಜ-ನಾಮ ಯತಃ’, ‘[4]ವಿಮಲ-ಭೀಮರಥೀ-ಈಪ್ಸಿತ-ದಾಯಕಃ’ ಎಂದುಪಾಂಡುರಂಗಪಕ್ಷಕ್ಕೂ, ‘ಪ್ರಣತ-ವಿಪ್ರ-ಜನ-ಆಮಯತಃ’, ‘ವಿ-ಮಲ-ಭೀಮ-ರಥಿ -ಈಪ್ಸಿತ-ದಾಯಕಃ’ ಎಂದು ಕೃಷ್ಣಪಕ್ಷಕ್ಕೂ ಅನ್ವಯ.

---

೧. ನನು ವಿಮಲಃ ಅಚ್ಛಿನ್ನಧರ್ಮಃ ಭೀಮಃ ಭೀಮಸೇನ ಏವ ರಥೀ ಮಹಾರಥಿಕಃ । ತಸ್ಯಾಭೀಪ್ಸಿತದಾಯಕಃ ಅಯಮಚ್ಯುತಃ ಶ್ರೀಕೃಷ್ಣಃ ಅವಿಜಿತೋಽಪಿ ವೈರಿಜನೈರಜಿತೋಽಪಿ ಸ್ವವಿಜಿತಃ ಭೀಮಸೇನಾಖ್ಯನಿರ್ಮಲ-ಭಕ್ತಾಭೀಷ್ಟದಾಯಕತ್ವಾತ್ ಸ್ವಭಕ್ತವಿಜಿತ ಇತಿ ಭಾವಃ । -ವ್ಯಾ.
ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ । -ಭಾಗ.(೯/೪/೬೩)
ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ವೃಕೋದರಃ । -ಮ.ಭಾ.ತಾ.ನಿ.(೧೮/೪)

೨. ಸ್ವಕೀಯಸ್ಥಲಮಪಿ ಪುಂಡರೀಕನಾಮಸಮನ್ವಿತನಾಮ್ನಾ ಪ್ರಥಯಾಮಾಸ । - ವ್ಯಾ.

೩. ಭೀಮಸೇನಾಖ್ಯ ನಿರ್ಮಲ ಭಕ್ತಾಭೀಷ್ಟದಾಯಕತ್ವಾತ್ ಸ್ವಭಕ್ತವಿಜಿತ ಇತಿ ಭಾವಃ । - ವ್ಯಾ.

೪. ತೀರೇ ಸತ್ಸರಿತಸ್ತಿರಸ್ಕೃತಧನಾಸಕ್ತಿರ್ವಿರಕ್ತಿಪ್ರಿಯಃ
ಪಾದಾಂಭೋಜಮಿದಂ ಮದಂಕಸಹಿತಃ ಸಂಚಿಂತಯಾಂತರ್ಹೃದಿ ।
ಪಶ್ಚಾತ್ ತೇ ಕಟಿಮಾತ್ರ ಏವ ಭವಿತಾ ಸಂಸಾರವಾರ್ಧಿರ್ನ ಚೇತ್
ಶಿಕ್ಷಾಮೀತಿ ಹಿ ಲಕ್ಷಯತ್ಯನುದಿನಂ ಸ್ವಾವಸ್ಥಯಾ ವಿಟ್ಠಲಃ ॥
ಪಾಪಾವಲೀಪಾಟನಪಟ್ವಪಾಂಗಃ ಶ್ರೀಪಾಣಿಪದ್ಮಾಂಚಿತಜಾನುಜಂಘಃ ।
ಗೋಪಾಲಬಾಲಃ ಕೃಪಯಾ ಸ್ವಯಂ ನಃ ಶ್ರೀಪಾಂಡುರಂಗೋ ಭವತು ಪ್ರಸನ್ನಃ ॥
ಪಾಪಾಪನೋದನಪಟು ಪ್ರಿಯಭೃತ್ಯಭೃಂಗೈಃ ಪೇಪೀಯಮಾನಶುಭಸುಂದರತಾರಸಾರ್ದ್ರಮ್ ।
ತಾಪತ್ರಯೋಪಶಮನಂ ತರುಣಾರ್ಕವರ್ಣಂ ಗೋಪಾಲಬಾಲಚರಣಾಂಬುರುಹಂ ಶ್ರಿತೋಽಸ್ಮಿ ॥
- ತೀರ್ಥಪ್ರಬಂಧ(೨/೬-೮)

**ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು ಹಾಗೂ ಕೃಷ್ಣರೂಪಗಳ ವರ್ಣನೆ**

ರುಚಿರ ಕೇಶವ ಶಂಬರಧಾಮ[೧] ತೇ
ಲಸತಿ ಮಾರಮಣೋऽಸಿ ಸಮಾಕೃತೇ।
ಸಕಲಗೋಕುಲಪಾಲಕ ದುಷ್ಕೃತಿಂ
ಪರಿಹರಾರಿಹರಾಖಿಲವಾಸ[೨] ನಃ॥ ೧೦ ॥

ಎಲೈ ಮನೋರನಾದ ಕೇಶವನೇ ! ನಿನ್ನ ಜಲಮಂದಿರವು ಬಹಳವಾಗಿ ಶೋಭಿಸುತ್ತಿದೆ ([೩]ನಾರಾಯಣ); ಸಕಲ ಅವತಾರಗಳಲ್ಲೂ ಸಮನಾಗಿರುವವನೇ! ನೀನು [೪]ಮಾಧವನಾಗಿರುವಿ. ಸಕಲ ಗೋಕುಲಗಳ ಪಾಲಕನಾಗಿರುವಿ ([೫]ಗೋವಿಂದ); ಶತ್ರುಸಂಹಾರಕನೇ ! ಎಲ್ಲೆಡೆಗಳಲ್ಲಿ ನೆಲೆಸಿರುವವನೇ ([೬]ವಿಷ್ಣು) ! ನಮ್ಮ ದುಷ್ಕರ್ಮವನ್ನು ಪರಿಹರಿಸು (ಕೇಶವಾದಿಪಕ್ಷ).

ಎಲೈ ಮನೋರನಾದ ಕೇಶಗಳುಳ್ಳವನೇ ! ಮನ್ಮಥನ ಮನಸ್ಸಿಗೆ ಖಡ್ಗಸಮವಾದ ಆಕಾರವುಳ್ಳವನೇ ಶ್ರೀಕೃಷ್ಣನೇ ! ನಿನ್ನ ಅಧೀನವಾಗಿರುವ ಉತ್ತಮ ದ್ವಾರವತೀಮಂದಿರವು ಶೋಭಿಸುತ್ತಿದೆ; ಸಕಲ ಗೋಕುಲಕ್ಕೂ ಪಾಲಕನಾದವನೇ ! ಸ್ಥಿರವಾದ ಧಾಮವುಳ್ಳವನೇ ! ನೀನು ನಮ್ಮ ಪಾಪವನ್ನು ಪರಿಹರಿಸು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ [೭]ಕೇಶವಾದಿರೂಪಗಳ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. 'ರುಚಿರ–ಕೇಶವ', 'ಶಂಬರಧಾಮ', '[೮]ಮಾರಮಣಃ', 'ಸಕಲಗೋಕುಲಪಾಲಕ', 'ಅಖಿಲವಾಸ' ಎಂಬ ಪದಗಳಲ್ಲಿ ಕ್ರಮವಾಗಿ ಕೇಶವ, ನಾರಾಯಣ, ಮಾಧವ, ಗೋವಿಂದ ಹಾಗೂ ವಿಷ್ಣು ಎಂಬ ಐದು ರೂಪಗಳ ವರ್ಣನೆ ಇದೆ.

---

೧. ವರಧಾಮ ಉತ್ತಮದ್ವಾರವತೀಮಂದಿರಂ ಲಸತಿ। ವಬಯೋರಭೇದಾತ್ ಪೂರ್ವತ್ರ ಬಕಾರಃ। – ವ್ಯಾ.

೨. ಅದ್ಯಾಪಿ ಸಮುದ್ರಾಂತಃ ಭಗವನ್ಮಂದಿರಮ್ ಅವಿನಷ್ಟಂ ಸದಸ್ತೀತಿ ಪೌರಾಣಿಕೀ ವಾರ್ತಾ। – ವ್ಯಾ.

೩.. ಅನೇನ ನಾರಾಯಣೋತ್ಯುಕ್ತಂ ಭವತಿ। – ವ್ಯಾ

೪. ಮಾಯಾಃ ಧವಃ ಪತಿರಿತಿ ವ್ಯುತ್ಪತ್ತ್ಯಾ ಮಾಧವೇತ್ಯುಕ್ತಂ ಭವತಿ। – ವ್ಯಾ.

೫. ಗಾಃ ಶಬ್ದಾನ್ ವಿಂದತೇ ಪ್ರಾಪ್ನೋತಿ ಪಾಲಯತೀತಿ ವ್ಯುತ್ಪತ್ತ್ಯಾ ಗವಾಂ ಶಬ್ದಾನಾಂ ವಿಂದ ಇತಿ ವ್ಯುತ್ಪತ್ತ್ಯಾ ಗೋವಿಂದೇತ್ಯುಕ್ತಂ ಭವತಿ। – ವ್ಯಾ.

೬. ಅನೇನ ವಿಷಲೃ ವ್ಯಾಪ್ತಾವಿತಿ ಧಾತೋಃ ವಿಷ್ಣೋ ಇತ್ಯುಕ್ತಂ ಭವತಿ। – ವ್ಯಾ

೭. ಕಂದರ್ಪಾದಪ್ಯನಂತಗುಣಿತಸೌಂದರ್ಯೇತ್ಯರ್ಥಃ। (ಸಾಕ್ಷಾನ್ಮನ್ಮಥಮನ್ಮಥಃ –ಭಾ.೧೦/೩೧/೨೧) –ವ್ಯಾ.

೮. ಮಾರಸ್ಯ ಮನ್ಮಥಸ್ಯ ಮನಸಃ ಅಸಿಸಮಾ ಖಡ್ಗಸಮಾ ಆಕೃತಿರ್ಯಸ್ಯ ತಸ್ಯ ಸಂಬುದ್ಧಿಃ ಕಂದರ್ಪಾದಪ್ಯನಂತಗುಣಿತ ಸೌಂದರ್ಯೇತ್ಯರ್ಥಃ ಪೂರ್ವತ್ರ ರಮಣೇತ್ಯೇಕಪದತ್ವಾಣ್ಣತ್ವಮ್ । ಅತ್ರ ಮಾರಸ್ಯ ಮನ ಇತಿ ಭಿನ್ನಪದತ್ವಾಣ್ಣತ್ವಾಭಾವಃ। – ವ್ಯಾ.

೩. ಕೃಷ್ಣಪಕ್ಷದಲ್ಲಿ 'ರುಚಿರಕೇಶ-ವ' ಎಂದು ಅನ್ವಯ; ಅಖಿಲವಾಸ ಎಂಬ ಪದದಿಂದ ಈಗಲೂ ಸಮುದ್ರಮಧ್ಯದಲ್ಲಿ ಶ್ರೀಕೃಷ್ಣಮಂದಿರವು ಅಚ್ಚಳಿಯದೇ ಉಳಿದುಕೊಂಡಿದೆ ಎಂಬ ಪೌರಾಣಿಕಪ್ರಸಿದ್ಧಿ ಸೂಚಿತ.[೧]

## ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ ಹಾಗೂ ಕೃಷ್ಣರೂಪಗಳ ವರ್ಣನೆ

ಮಧುಮದಕ್ಷಯ ಮಾಲ್ಯಸುವಿಸ್ಪತೇ
ಕುಜನಮಾನಸಮಾಪ್ತಿದವಿಕ್ರಮ ।
ಸುಖದ ವಾಮನ ಸೋಮರಸಾರ್ಥಿಷು
[೨]ಶ್ರಿಯಮುದಾಯ ಮುದಾऽऽರ್ಜಯಸೇऽವನೌ ॥ ೧೧ ॥

ಎಲೈ ಮಧುವಿನ ಸೊಕ್ಕಡಗಿಸಿದವನೇ (ಮಧುಸೂದನ) ! ಲಕ್ಷ್ಮಿಯೆಂಬ ಗೆಳತಿಯಾದ ದುಂಬಿಯ ಪ್ರಾಣಗಳನ್ನು ಅರಳಿಸುವವನೇ ! ಭೂಮಿಯ ಮೇಲಿನ ಜನರ ಪರಿಮಾಣವನ್ನು ಅಳೆದ ತ್ರಿವಿಕ್ರಮನೇ ! ಸೋಮರಸವನ್ನು ಬಯಸುವ ದೇವತೆಗಳಿಗೆ ಸುಖನೀಡುವ ವಾಮನನೇ, ಅವಾಪ್ತಸಮಸ್ತಕಾಮನೇ ! ನೀನು ಭೂಮಿಯಲ್ಲಿ ಶ್ರೀಯನ್ನು (ಸಂಪತ್ತನ್ನು) ಧರಿಸಿರುವಿ (ಶ್ರೀಧರ) (ಮಧುಸೂದನಾದಿಪಕ್ಷ).

ಮಧುಯುಕ್ತವಾದ ಅಕ್ಷಯಮಾಲೆಯುಳ್ಳವನೇ (ವನಮಾಲಾಧರನೇ) ! ದುರ್ಜನರ ಅಹಂಕಾರವನ್ನು ತೊಡೆದುಹಾಕುವ ಪರಾಕ್ರಮ ಉಳ್ಳವನೇ ! ದೇವತೆಗಳಿಗೆ ನೆರವಾಗುವಂತಹ ಜನರಲ್ಲಿ ಪ್ರೀತಿರಹಿತರಾದ ದುರ್ಜನರ ಸುಖಕ್ಕೆ ಕಾಡ್ಗಿಚ್ಚಿನಂಥವನೇ ! ಅವಾಪ್ತಸಮಸ್ತಕಾಮನೇ ! ಶ್ರೀಕೃಷ್ಣನೇ ಭೂಮಿಯಲ್ಲಿ ನಲಿವಿನಿಂದ ಸಂಪತ್ತನ್ನು ಗಳಿಸಿದವನಾಗಿರುವಿ. (ಕೃಷ್ಣಪಕ್ಷ).

ವಿ. : ೧. [೩]ಈ ಶ್ಲೋಕದಲ್ಲಿ ಶ್ರೀಹರಿಯ ಮಧುಸೂದನಾದಿರೂಪಗಳ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

---

೧. ಅದ್ಯಾಪಿ ಸಮುದ್ರಾಂತಃ ಭಗವನ್ಮಂದಿರಮವಿನಷ್ಟಂ ಸದಸ್ತೀತಿ ಪೌರಾಣಿಕೀ ವಾರ್ತಾ । -ವ್ಯಾ.
ವರ್ಜಯಿತ್ವಾ ಮಹಾರಾಜ ಶ್ರೀಮದ್ಭಗವದಾಲಯಮ್ । -ಭಾಗ.(೧೧/೩೧/೨೩)

೨. ಅಥವಾ ಶ್ರೀಯಂ ದ್ವಾರವತೀಸಂಪದಮ್ ಉದಾಯ ಸಮುದ್ರೋದಕಾಯ ದಾತುಮ್ ಆರ್ಜಯಸೇ। ಅಂತೇ ಸಮುದ್ರಃ ಪ್ಲಾವಯಿಷ್ಯತೀತಿ ವಚನಾತ್ । ಪೂರ್ವೋಕ್ತಪೂರ್ಣತ್ವದ್ರವ್ಯಾರ್ಜನಯೋರ್ವಿರೋಧಪರಿಹಾರಯೇಯಂ ಯೋಜನಾ । ಸಕಲದೇಶಸ್ಥಿತಂ ದ್ರವ್ಯಂ ಸಮುದ್ರೇ ಸ್ಥಾಪಯಿತುಂ ದ್ವಾರಕಾಯಾಂ ಸಂಪತ್ ಸ್ಥಾಪಯಸೀತಿ ಭಾವಃ। - ವ್ಯಾ.

೩. ಅತ್ರಾಪಿ ಶ್ಲೋಕೇ ಮಾಲ್ಯಸುವಿಸ್ಪತೇತ್ಯತ್ರ ಡಲಯೋರಭೇದಾತ್ ಮಾಲ್ಯಸುವಿಸ್ಪತೇ। ಪಾಠಭೇದೇऽರ್ಥದ್ವಯಸಿದ್ಧಿರ್ದ್ರಷ್ಟವ್ಯಾ। -ವ್ಯಾ.

೨. [೧]'ಮಧುಮದಕ್ಷಯ-ಮಾಲ್ಯಸುವಿಸ್ಮೃತೇ', 'ಕು-ಜನ-ಮಾನ-ಸಮಾಪ್ತಿ-ದ-ವಿಕ್ರಮ' 'ಸುಖದ - ವಾಮನ - ಸೋಮ-ರಸ-ಅರ್ಥಿಷು' ಎಂದು ಮಧುಸೂದನಾದಿಪಕ್ಷಕ್ಕೂ, 'ಮಧುಮತ್-ಅಕ್ಷಯಮಾಲ್ಯ-ಸುವಿಸ್ಮೃತೇ', 'ಕುಜನ-ಮಾನ-ಸಮಾಪ್ತಿದವಿಕ್ರಮ', 'ಸುಖ-ದವ-ಅಮನಸೋ-ಅಮರ-ಸಾರ್ಥಿಷು' ಎಂದು ಕೃಷ್ಣಪಕ್ಷಕ್ಕೂ ಅನ್ವಯ.

೩. ಶ್ರಿಯಂ ಉದಾಯ ಆರ್ಜಯಸೇ - ದ್ವಾರಕೆಯ ಸಂಪತ್ತನ್ನು ಸಮುದ್ರದಲ್ಲಿ ನೆಲೆಗೊಳಿಸಲೆಂದು ಸಂಪಾದಿಸಿರುವಿ ಎಂದರ್ಥ; ಕೊನೆಯಲ್ಲಿ ದ್ವಾರಕೆಯ ಸಮಸ್ತ ಸಂಪತ್ತನ್ನೂ ಶ್ರೀಕೃಷ್ಣನು ಸಮುದ್ರದಲ್ಲಿ ಮುಳುಗಿಸುವನು ಎಂಬರ್ಥದಲ್ಲಿ ಇದು ಉಚಿತ.

## ಹೃಷೀಕೇಶ, ಪದ್ಮನಾಭ, ದಾಮೋದರ ಹಾಗೂ ಕೃಷ್ಣರೂಪಗಳ ವರ್ಣನೆ

ಕರಣಪಾಲನಶೀಲ ನತೇ ಸ್ಥಿತಿಂ
ಜಲಜನಾಭ ವದಂತಿ [೨]ಕಮಾಶ್ರಿತಾಃ।
ವಿದುರಮೀ ವರದಾಮಧರೋದರ
ಪ್ರಿಯಜುಷೋ[೩]ಽಯಜುಷೋಽಗ್ನಿಬಲಾನಿವ॥ ೧೨ ॥

ಎಲೈ ಇಂದ್ರಿಯಗಳನ್ನು ಪಾಲಿಸುವ ಸ್ವಭಾವದವನೇ (ಹೃಷೀಕೇಶನೇ) ! ಎಲೈ ಪದ್ಮನಾಭನೇ! ಮುಖ್ಯಪ್ರಾಣನನ್ನು ಆಶ್ರಯಿಸಿದ ಭಕ್ತಜನರಲ್ಲಿ ನಿನ್ನ ಸನ್ನಿಧಾನವಿರುವುದೆಂದು ಹೇಳುವರು; ಶ್ರೇಷ್ಠವಾದ ಹಗ್ಗವನ್ನು ಧರಿಸಿದ ಉದರ ಉಳ್ಳವನೇ (ದಾಮೋದರನೇ)! ನಿನಗೆ ಪ್ರಿಯಕರವಾದ ಕರ್ಮಮೊದಲಾದವುಗಳನ್ನು ಸೇವಿಸುವ ನಿನ್ನ ಭಕ್ತಜನರು ನಿನ್ನ ಪ್ರಣತಜನರಲ್ಲಿ ನಿನ್ನ ಸನ್ನಿಧಾನವನ್ನು ಯಜುರ್ವೇದವನ್ನು ಅಧ್ಯಯನ ಮಾಡಿದವರು ಯಜ್ಞಗಳನ್ನು ಹೇಗೋ ಹಾಗೆ ತಿಳಿಯುವರು (ಹೃಷೀಕೇಶಾದಿಪಕ್ಷ).

ಎಲೈ ಸೃಷ್ಟಿ ಸ್ಥಿತಿಗಳನ್ನು ಮಾಡುವ ಸ್ವಭಾವದವನೇ! [೪]ಭೀಮಸೇನನಿಗೋಸ್ಕರ ಜರಾಸಂಧನೊಂದಿಗೆ ಯುದ್ಧವನ್ನು ಪೂರೈಸದೇ ಇದ್ದವನೇ! ನಿನ್ನನ್ನು ಆಶ್ರಯಿಸಿದ ನಿನ್ನ ಸಮೀಪದಲ್ಲಿನ ಶಿಶ್ನೋದರ ಪರಾಯಣರಾದ ಮೂರ್ಖಜನರು ಅಭೀಷ್ಟ ನೀಡುವ ನಿನ್ನ ಇರುವುಕೆಯನ್ನು ಅರಿಯಲಾರರು; ಯಜುರ್ವೇದವನ್ನು ಅಧ್ಯಯನ ಮಾಡದವರು ಯಜ್ಞಗಳನ್ನು ಹೇಗೋ ಹಾಗೆ. (ಕೃಷ್ಣಪಕ್ಷ).

---

೧. ಮಧುರಮದಕ್ಷಯಮಾಲ್ಯಸುವಿಸ್ಮೃತೇ ಆಕಂಠಮ್ ಆಪಾದಂ ಚಾಲಂಬಮಾನಾಮ್ಲಾನವನಮಾಲಾಸಹಿತಾ ಇತ್ಯರ್ಥಃ। - ವ್ಯಾ.

೨. ಕಂ ಮುಖ್ಯಪ್ರಾಣಂ। 'ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಽಂಬುನೋಃ' ಇತ್ಯಮರಃ। ಆಶ್ರಿತಾಃ ಮದ್ವಮತಾನುಸಾರಿಣ ಇತ್ಯರ್ಥಃ। - ವ್ಯಾ

೩.. ಕಥಮಿವ ಅಯಜುಷಃ ಯಜುರ್ವೇದಾಭ್ಯಾಸರಹಿತಾ ಅಗ್ನಿಬಲೀನಿವ। - ವ್ಯಾ.

೪. ಕಾಯ ಮಾರುತಾಯ ಭೀಮಾರ್ಥಮಿತ್ಯರ್ಥಃ। ರಣಂ ಜರಾಸಂಧಯುದ್ಧಂ ತಸ್ಯ ಪಾಲನಶೀಲನ ಅಸಮಾಪ್ತಿಕರ। ಭೀಮಸೇನಾಯ ಯಶೋದಾನಾಯಾಹಿಂಸಿತಜರಾಸಂಧೇತ್ಯರ್ಥಃ। - ವ್ಯಾ.

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಹೃಷೀಕೇಶಾದಿರೂಪಗಳ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಇದಕ್ಕೆ ಅತ್ಯಂತ ವಿಸ್ತೃತವಾದ ವ್ಯಾಖ್ಯಾನವನ್ನು ಸ್ವತಃ ಶ್ರೀವಾದಿರಾಜಸ್ವಾಮಿಗಳು ತಮ್ಮ 'ಉಪನ್ಯಾಸರತ್ನಮಾಲಾ' ಎಂಬ ಕೃತಿಯಲ್ಲಿ ಒಂದು ಉಪನ್ಯಾಸವನ್ನಾಗಿ ವಿವರಿಸಿರುವರು; ಅದನ್ನು ಇಲ್ಲಿ ಸಮಗ್ರವಾಗಿ ನೀಡಲಾಗಿದೆ.

೩. 'ಕರಣ-ಪಾಲನ-ಶೀಲ', 'ನತೇ - ಸ್ಥಿತಿಂ', 'ವರ-ದಾಮ-ಧರ-ಉದರ' ಎಂದು ಹೃಷೀಕೇಶಾದಿಪಕ್ಷದಲ್ಲೂ, '[1]ಕ-ರಣ-ಪಾಲನ-ಶೀಲ', 'ನ-ತೇ ಸ್ಥಿತಿಂ', 'ವರದಾಂ-ಅಧರ-

---

೧. ಕರಣಪಾಲನಶೀಲ ನ ತೇ ಸ್ಥಿತಿಂ ಜಲಜನಾಭ ವದಂತಿ ಕಮಾಶ್ರಿತಾಃ।
ವಿದುರಮೌ ವರದಾಮಧರೋದರಪ್ರಿಯಜುಷೋ ಯಜುಷೋಽಗ್ನಿಬಲೀನಿವ ॥
ಇತಿ ರುಗ್ಮಿಣೀಶವಿಜಯಸ್ಥಂ ಪದ್ಯಮ್। ಅನೇನ ಹಿ ಪದ್ಯೇನ ತ್ರಿವಿಧಜೀವಾನಾಂ ಸ್ವಭಾವತ್ರಯಂ ತದುಚಿತಫಲತ್ರಯಂ ಚೋಕ್ತಮ್। ತಥಾಹಿ। ಕರಣಪಾಲನಶೀಲ-ಸೃಷ್ಟಿರಕ್ಷಣಸ್ವಭಾವ, ಹೇ ಜಲಜನಾಭ- ಕೃಷ್ಣ! ವರದಾಮಧರೋದರ-ಪ್ರಿಯಜುಷಃ-ಪ್ರಾಜ್ಯಾತ್ರಾ ವರೇಣ ದಾಮ್ನಾ ಬದ್ಧೋದರಸ್ಯ ತವ ಪ್ರಿಯಜುಷಃ ಪ್ರಿಯಮೇವ ಕುರ್ವಾಣಾಃ, ಜಲಾಃ - ಜಡಾಃ, ಜನಾಃ-ಮೂರ್ಖಜನಾಃ ದುರ್ಜನಾ ಯೇಭ್ಯಸ್ತೇ ಜಡೀಕೃತ - ದುರ್ಜನಾ ಇತ್ಯರ್ಥಃ। ಅಮೀ-ದ್ವಾರಕಾಸ್ಥಿತಾಃ ಪರಮವೈಷ್ಣವಾಃ ನತೇ-ನಮ್ರೇ ರಮಾಬ್ರಹ್ಮಾದಿಚೇತನಜನೇ ಅಧಿಕರಣೇ, ಸ್ಥಿತಿಂ - ನಿಯಾಮಕತಯಾಽವಸ್ಥಾನಂ ಷ್ಠಾ ಗತಿನಿವೃತ್ತಾವಿತಿ ಧಾತೋರಾಧಾರಾಧೇಯಭಾವೇನ ಹೃದ್ಯಸ್ಥಾನಂ ಮುಕ್ತಾವಪಿ ನ ನಿವರ್ತತ ಇತಿ ಸೂಚಯಿತುಂ "ವಿತನ್ವತಾಽಜಸ್ಯ ಸತೀಂ ಸ್ಥಿತಿಂ ಹೃದಿ" ಇತಿ ಸ್ಪಷ್ಟಭಾಗವತವಾಕ್ಯಮುಕ್ತಾರ್ಥೇ ಪ್ರಮಾಣೀಕರ್ತುಂ ಚ ಸ್ಥಿತಿಮಿತ್ಯುಕ್ತಮ್। ವದಂತಿ-ಸ್ವಶಿಷ್ಯಾನ್ ಪ್ರತ್ಯುಪದಿಶಂತಿ, ವಿದುಶ್ಚ-ಮುಕ್ತೌ ಸಂಸಾರೇ ಚ ರಮಾಬ್ರಹ್ಮಾದಿಸರ್ವಚೇತನಾನಾಂ ಭಗವಾನ್ ನಿಯಾಮಕತಯಾ ಸರ್ವದಾ ಸರ್ವೋತ್ತಮ ಏವಾಧಾರಾಧೇಯತಯಾ ತೇಷಾಂ ಹೃದಿ ಸ್ಥಿತ ಏವ ನ ತು ಕದಾಪ್ಯೈತ್ಯೈರೇಕೀಭೂತಶ್ಚೇತಿ ಜಾನಂತಿ ಉಪದಿಶಂತಿ ಚ। ಕಥಮಿವ, ಯಜುಷಃ -ಯಜುರ್ವೇದಾತ್ ಅಗ್ನಿಬಲಾನಿವ -ಯಜ್ಞಾನಿವ ಯಜುರ್ವೇದಸ್ಯ ಯಜ್ಞತಂತ್ರತ್ವಾದಿತಿ ತಜ್ಜೀವಾನಾಂ ಸ್ವಭಾವಃ ಕಥಿತಃ। **ಭವತಃ** - ವೈಕುಂಠಾದಿಲೋಕತ್ರಯಸ್ಥಿತಸ್ಯ ತವ ಅಂತಿಕಂ ಸಮೀಪಂ, ಆಶ್ರಿತಾಃ-ಸಮ್ಯಕ್ ಶ್ರಿತಾಃ ಸಾಯುಜ್ಯಂ ಚ ಸೂಚಯಿತುಮಾಂಙ್ಇತ್ಯುಪಸರ್ಗಃ। ಅಸ್ತಿ ಭವತ್ಯೋಸ್ಸರ್ವತ್ರಾನ್ವ-ಯಾತ್ ಭವಿಷ್ಯಂತೀತಿ ತೇಷಾಂ ಫಲಂ ಚೋಕ್ತಮಿತ್ಯೇಕಾ ಯೋಜನಾ ॥ ೧ ॥
**ಭವಃ** - ಶಿವಃ, ದಂತೀ - ವಿನಾಯಕಃ, ಕಃ-ಬ್ರಹ್ಮಾ ಸೂರ್ಯಶ್ಚ ಮಾ - ಶಕ್ತಿರೂಪಾ ಲಕ್ಷ್ಮೀಃ ಭವದಂತಿಕಮಾಃ, ತಾ ಏವ ಆ ಸಮ್ಯಕ್ ಪರದೇವತಾತ್ವೇನ ಶ್ರಿತಾಃ ಶೈವ -ಗಾಣಪತ್ಯ-ಬ್ರಾಹ್ಮ-ಸೌರ-ಶಾಕ್ತಾದಿ ದುರ್ಮತಾವಲಂಬಿನಃ ತ ಐಹಿಕಸಂಪದಾ ಅಧರೋದರಪ್ರಿಯಜುಷಃ - ಉದರಾದಧರಸ್ಯ ಶಿಶ್ನಸ್ಯ ಉದರಸ್ಯ ಚ ಪ್ರಿಯಂ ಕುರ್ವಾಣಾಃ, ಜಲಜನಾಃ-ಮೂರ್ಖಜನಾಃ ಮಿಥ್ಯಾಜ್ಞಾನಿನಃ, ಅಯಜುಷಃ-ಯಜುರ್ವೇದರಹಿತಾಃ, ಅಗ್ನಿಬಲಾನಿವ-ಯಜ್ಞಾನಿವ ತೇ-ತವ, ವರದಾಂ ಸ್ಥಿತಿಂ-ಸರ್ವೋತ್ತಮತ್ವಂ, ನ ವಿದುರಿತ್ಯಧಮಜೀವಸ್ವಭಾವೋ ದರ್ಶಿತಃ। **ಭವನ್** ಸರ್ವದಾ ವರ್ತಮಾನಃ **ಅಂತೋ**-ನಾಶಃ ಶಸ್ತ್ರಾದ್ಯಸ್ತ್ರಪಾತೇನ ಹಿಂಸೇತ್ಯರ್ಥಃ। ಸೋಽಸ್ಯ ವರ್ತತ ಇತಿ ಭವದಂತಿಂ, ತಚ್ಚ ತತ್ಕಂ-ಶಿರಶ್ಚ ಭವದಂತಿಕಂ ಜಾತ್ಯೇಕವಚನಂ, ಅಂಧೇ ತಮಸಿ ಪಾತೇ ಸತಿ ನಾನಾಶಸ್ತ್ರಘಾತೈಃ ಸದಾ ತಾಡ್ಯಮಾನಾನಿ ಸ್ವರೂಪಭೂತಶಿರಾಂಸೀತ್ಯರ್ಥಃ। ಆ ಸಮ್ಯಕ್ ಆ ಅನಂತಕಾಲಪರ್ಯಂತಂ ಚ ಶ್ರಿತಾ ಭವಿಷ್ಯಂತೀತ್ಯಧಮಜೀವಾನಾಂ ಫಲಂ ಚೋಕ್ತಮಿತಿ ದ್ವಿತೀಯಾ ಯೋಜನಾ ॥ ೨ ॥
**ಅಧರೋದರಪ್ರಿಯಜುಷಃ** - ಶಿಶ್ನೋದರಪರಾಯಣಾಃ, ಜಲಜನಾಃ-ಕದಾಚಿಜ್ಜಲಾ ಮಿಥ್ಯಾಜ್ಞಾನಿನಃ ಕದಾಚಿಜ್ಜಾನಂತೀತಿ ಜನಾಃ ತತ್ತ್ವಜ್ಞಾನಿನಶ್ಚ ಸಂತಃ ಕದಾಚಿದ್ವೈಷ್ಣವಸಮಾಗಮೇ ಸತಿ ಭವತೋಽಂತಿ - ಕಮಾಶ್ರಿತಾಸ್ತ್ವಾಮೇವ ಸೇವಮಾನಾ ಇತಿ ಯಾವತ್। ಕದಾಚಿನ್ಮಿಥ್ಯಾಜ್ಞಾನಿನಾಂ ಸಮಾಗಮೇ ಶೈವಸಮಾಗಮೇ

ಭವಂ, ಗಾಣಪತ್ಯಸಮಾಗಮೇ ದಂತಿನಂ, ಬ್ರಾಹ್ಮಸೌರಸಮಾಗಮೇ ಕಂ, ಶಾಕ್ತಸಮಾಗಮೇ ಮಾಂ, ಚಾऽऽಶ್ರಿತಾ ಇತಿ ಕೃತ್ವಾ ತೇ ವರದಾಂ ಸ್ಥಿತಿಂ– ಅವಸ್ಥಾಂ ಯಜುಷೋऽಗ್ನಿಬಲಾನಿವ ವಿದುಃ ಕದಾಚಿಜ್ಜಾನಂತಿ ಆಯಜುಷೋऽಗ್ನಿಬಲಾನಿವ ವಿದುಃ ಕದಾಚಿನ್ನ ಜಾನಂತೀತ್ಯರ್ಥಃ। ಜ್ಞಾನಸ್ಯೈವ ಕಾದಾಚಿತ್ಕತ್ವಾತ್ ವಿಷಯಭೋಗ ಏವ ತೇಷಾಂ ಭೂಯಾನಿತಿ ಜ್ಞಾಪನಾಯಾಧರೋದರಪ್ರಿಯಜುಷ ಇತಿ ಪ್ರಾಗ್ವಿಶೇಷಣಮುಕ್ತಮ್ । ಅನೇನ ಮಧ್ಯಮಜೀವಾನಾಂ ಸ್ವಭಾವೋ ವರ್ಣಿತಃ । ಉದರಪ್ರಿಯಂ ಸುಖಂ ತಸ್ಮಾದಧರಮಧಮಂ ದುಃಖಂ, "ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್" ಇತಿ ವಚನಾತ್ ಸುಖಾದಧಸ್ತಾದ್ವಿದ್ಯಮಾನಂ ಜುಷಂತ ಇತಿ ತೇ ತಥೋಕ್ತಾಃ । ಜ್ಞಾನಾನುಸಾರೇಣ ಲಿಂಗಭಂಗೇ ಜಾತೇऽಪಿ ಸ್ವಸ್ವರೂಪಭೂತಸುಖದುಃಖೇ ಕ್ರಮೇಣ ಭುಂಜಾನಾ ಇತ್ಯರ್ಥಃ । ಏತದೇವ ಸ್ಪಷ್ಟಯಿತುಮುಕ್ತಂ ಭವದಂತಿಕಮಾಶ್ರಿತಾ ಇತಿ । ಭವನ್– ಜಾಯಮಾನಃ ಅಂತೋ ಅವಸಾನಮಸ್ತೀತಿ ಭವದಂತಿ ತಚ್ಚ ತತ್ಕಂ ಸುಖಂ–ಭವದಂತಿಕಂ ಸ್ವಾನುಭವಸಮಯೇ ವ್ಯಕ್ತಾತ್ಮನಾ ಸ್ಥಿತಂ ದುಃಖಾನುಭವಸಮಯೇ। ಈಷೇಚ್ಛಯಾ ಶಕ್ತಾತ್ಮನಾ ಸ್ಥಿತಂ ಚೇತ್ಯರ್ಥಃ। ಆ ಸಮಂತಾತ್ ಸರ್ವತ್ರೈತ್ಯರ್ಥೇ। "ತ್ರಿದಿವನಿರಯಭೂಗೋಚರಾನ್"– ಇತ್ಯುಕ್ತೇಃ । ಲಿಂಗಭಂಗಾನಂತರಮಪಿ ಸ್ವರ್ಗಸ್ಥಿತಾವನಿತ್ಯಕೇವಲಸುಖಾನುಭವಿತೃಸ್ವರ್ಗಿವತ್ ಸ್ವರೂಪಭೂತ ಸುಖಮೇವಾನುಭವಂತೋ ನರಕಸ್ಥಿತಿದಶಾಯಾಮನಿತ್ಯದುಃಖಮಾತ್ರಾನುಭವಿತೃನಾರಕಿವತ್ ಸ್ವರೂಪಭೂತದುಃಖಮೇವಾಶ್ನಂತೋ ಭೂಸ್ಥಿತಿದಶಾಯಾಮನಿತ್ಯಸುಖದುಃಖಭೋಕ್ತೃಭೂಸ್ಥಮನುಷ್ಯಾದಿವತ್ ಕದಾಚಿತ್ಸ್ವರೂಪಸುಖಂ ಕದಾಚಿತ್ಸ್ವರೂಪದುಃಖಂ ಚಾನುಭವಂತ ಇತಿ ಮಧ್ಯಮಜೀವಾನಾಂ ಫಲಂ ಸ್ಥಾನಂ ಚೋಕ್ತಂ ಭವತೀತಿ ತೃತೀಯಾ ಯೋಜನಾ ॥ ೩ ॥

ಸಮುದಾಯಾಭಿಪ್ರಾಯಸ್ತು ಕೇವಲಂ ಸರ್ವೋತ್ತಮವಿಷ್ಣುಭಕ್ತಾಸ್ಸ್ವರೂಪಭೂತನಿತ್ಯಸುಖಮಾತ್ರಾನುಭವಿನ ಊರ್ಧ್ವಲೋಕಸ್ಥಾಶ್ಚೇತಿ ತ್ರೇಧಾऽಪ್ಯುತ್ತಮಜೀವಾ ಉತ್ತಮಾಃ । ಅಧಮಜೀವಾಸ್ತು ವಿಷ್ಣೋರಧಮ–ಜೀವಾನುವರ್ತಿನಃ ಸ್ವರೂಪಭೂತದುಃಖಮಾತ್ರಾನುಭವಿನಃ ಸರ್ವತೋऽಪ್ಯವಾಚೀನೇ ತಮಸ್ಯೇವ ಸ್ಥಿತಾ ಇತಿ ತ್ರೇಧಾऽಪ್ಯಧಮಜೀವಾ ಅಧಮಾಃ । ಮಧ್ಯಮಜೀವಾಸ್ತು ಕದಾಚಿತ್ಸರ್ವೋತ್ತಮಂ ವಿಷ್ಣುಂ ಕದಾಚಿತ್ತತೋऽ–ಧಮಾನ್ ರಮಾದೀಂಶ್ಚ ಪರದೇವತಾತ್ವೇನ ಸೇವಮಾನಾಃ ಸ್ವರೂಪಭೂತಸುಖದುಃಖಾಖ್ಯಮಧ್ಯಮಫಲಾನುಭವಿನಃ ಸ್ವರ್ಗನರಕಭೂಲೋಕಾಖ್ಯಮಧ್ಯಮಸ್ಥಾನಸ್ಥಿತಾಶ್ಚೇತಿ ತ್ರೇಧಾऽಪಿ ಮಧ್ಯಮಜೀವಾ ಮಧ್ಯಮಾ ಇತಿ ವಿವೇಚನೀಯಮ್ । ನಚ ವಾಚ್ಯಂ ಪದಚಮತ್ಕಾರಲಬ್ಧೋऽಪ್ಯಯಂ ತ್ರಿವಿಧೋऽರ್ಥಃ ಪ್ರಮಾಣಾಭಾವಾತ್ ಕಥಮಾದರಣೀಯ ಇತಿ । ಯೌಕ್ತಿಕೇನ ಯುಕ್ತಿಸಿದ್ಧೇऽರ್ಥೇ ಪೃಥಕ್ಪ್ರಮಾಣಾನಪೇಕ್ಷಣಾತ್ । ತಥಾಹಿ – ಅಸ್ತಿ ತಾವನ್ಮುಕ್ತಾಶ್ಚೇತನಾಃ ನಿತ್ಯಸುಖಮಾತ್ರಾನುಭವರೂಪಾ ಇತಿ ಪರಸ್ಯಾಪಿ ಮತಮ್ । ಚೇತನಸ್ವರೂಪಭೂತನಿತ್ಯ–ಸುಖಾನುಭವಾತ್ಮಿಕಾ ಮುಕ್ತಿಶ್ಚ 'ವಿದ್ಯೈವ ತು ನಿರ್ಧಾರಣಾತ್' ಇತಿ ಬ್ರಹ್ಮಸೂತ್ರೇಣ ಯಥೇಚ್ಛಸಂಭವದನ್ವಯಮೇ–ವಕಾರಂ ಪುರಸ್ಕೃತ್ಯಾಗತಾಂ 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಇತಿ ಸ್ಮೃತಿಮಪೇಕ್ಷ್ಯ ಸ್ವೋಕ್ತವಿದ್ಯಾಖ್ಯಸಾಧನಂ ನಿರ್ಧಾರಯತಃ ಸೂತ್ರಕೃತೋऽಭಿಪ್ರೇತಯಾ ಅಯೋಗವ್ಯವಚ್ಛೇದಾನ್ಯಯೋಗವ್ಯವಚ್ಛೇ–ದಾತ್ಯಂತಾಯೋಗವ್ಯವಚ್ಛೇದಾಖ್ಯಾರ್ಥತ್ರಯಸಾಧಾರಣಮೇವಕಾರಂ ವಿಹಾಯ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಇತಿ ಸಾಕ್ಷಾತ್ ತದರ್ಥಭೂತಸ್ವಾಪೇಕ್ಷಿತಾನ್ಯಯೋಗವ್ಯವಚ್ಛೇದಮೇವ ಸ್ಪಷ್ಟಂ ಸ್ವೀಕೃತವತ್ಯಾ ಅತ ಏವ ನಿರವಕಾಶಯಾ "ತಮೇವಂ ವಿದ್ವಾನ್" ಇತಿ ಶ್ರುತ್ಯಾ ಚ ತಂ "ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಇತಿ ಸೂಕ್ತಾಂತೇ ಸ್ಪಷ್ಟದೃಷ್ಟಲಿಂಗಂ ಪುರುನಾಮಕನಾರಾಯಣಂ ಏವಂ –'ಉತಾಮೃತತ್ವಸ್ಯೇಶಾನಃ'। 'ಅತೋ ಜ್ಯಾಯಾಂಶ್ಚ ಪೂರುಷಃ' – ಇತ್ಯಾದಿನಾऽಸ್ಮಿನ್ನೇವ ಸೂಕ್ತೇ ಸ್ಪಷ್ಟಮುಕ್ತಸರ್ವೋತ್ತಮತ್ವಾದಿಪ್ರಕಾರೇಣ ವಿದ್ವಾನಮೃತೋ ಭವತೀತಿ ವಿಷ್ಣುಸರ್ವೋತ್ತಮತ್ವಜ್ಞಾನಾಖ್ಯತತ್ವಜ್ಞಾನಸಾಧ್ಯತ್ವಮಪಿ ಸಿದ್ಧಮ್। ಏವಂ ಚ ಸರ್ವತೋऽಪ್ಯೂರ್ಧ್ವಗತಿರೂಪಮುಕ್ತೇಃ ಸಾಕ್ಷಾದ್ವಿ–ರುದ್ಧೇ ಸರ್ವತೋऽಪ್ಯಧೋಗತಿರೂಪೇऽಂಧೇತಮಸಿ ಪತಿತಾ ಜೀವಾಃ ಮುಕ್ತಿವಿರುದ್ಧನಿತ್ಯದುಃಖಮಾತ್ರಾನುಭವಾತ್ಮಕಾಃ ಬಲಾದ್ವಕ್ತವ್ಯಾಃ। ಸಾ ಚ ತೇಷಾಂ ಗತಿಃ ಮುಕ್ತಿಸಾಧನತ್ವೇನೋಕ್ತವಿಷ್ಣುಸರ್ವೋತ್ತಮತ್ವಜ್ಞಾನರೂಪತ್ವಜ್ಞಾನಾತ್ ವಿಪ–ರೀತಶಿವಸರ್ವೋತ್ತಮತ್ವಜ್ಞಾನಾದಿರೂಪಮಿಥ್ಯಾಜ್ಞಾನಸಾಧ್ಯಾ ಚ ತದ್ವದೇವ

ಬಲಾದ್ವಾಚ್ಯಾ। ನ ಚ ತಾದೃಶೀ ಗತಿರೇವ ನಾಸ್ತೀತಿ ವಾಚ್ಯಮ್ - ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ । ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ಇತಿ ಗೀತಾಯಾಂ ಸತ್ತ್ವಸ್ಥಾ ಇತ್ಯಾದಿತ್ರಿವಿಧಜೀವಸ್ವಭಾವಾನಾಂ ಚ ಸ್ಪಷ್ಟಮುಕ್ತೇಃ। ನ ಚ ತಾಮಸಾನಾಮೇವ ಕದಾಚಿತ್ಸಾತ್ತ್ವಿಕತ್ವಸಂಭವಾದನಿಯತೇಯಂ ಗತಿರಿತಿ ವಾಚ್ಯಮ್। ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ। ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು॥ - ಇತಿ ತತ್ರೈವ ಗತಿತ್ರಯಸ್ಯಾಪಿ ಭಗವತೈವೋತ್ತಮಮಧ್ಯಮಾಧಮಾಖ್ಯತ್ರಿವಿಧಜೀವಸ್ವಭಾವಸಂಭೂತತ್ವಕಥನೇನ ಕದಾಪ್ಯನ್ಯಥಾಕರ್ತುಮಶಕ್ಯತ್ವಾತ್। ನ ಹಿ ಸ್ವಾಭಾವಿಕಸ್ಯಾಪಿ ಕದಾಚಿದಭಾವಃ ಸಂಭವತಿ। ತಥಾಚ 'ಮಧ್ಯೇ ತಿಷ್ಠಂತಿ ರಾಜಸಾಃ' ಇತ್ಯುಕ್ತಮಧ್ಯಮಜೀವಾಶ್ಚ ಮುಕ್ತಿತಮೋಯೋಗ್ಯೋತ್ತಮಾಧಮಜೀವವತ್ ಕದಾಚಿದುತ್ತಮತ್ವಸ್ಯ ಕದಾಚಿದಧಮತ್ವಸ್ಯ ಚ ಮಧ್ಯಮತ್ವೇನ ಸ್ವರೂಪಭೂತಸುಖದುಃಖಾನುಭವಾತ್ಮಕಾಃ ನ್ಯಾಯಸಾಮ್ಯಾದೇವಾನಿಚ್ಛತಾಽಪಿ ವಾಚ್ಯಾಃ। ಅತ ಏವ ಸಾ ಗತಿಃ ಕಾದಾಚಿತ್ಕೋಕ್ತೋಭಯವಿಧಸಾಧನಸಾಧ್ಯಾ ಚ ಸಿದ್ಧೇತಿ ಸ್ವೋಕ್ತಾರ್ಥೋ ಯೌಕ್ತಿಕ ಇತಿ ಮನ್ಯಾಮಹೇ।

ಸತ್ಕರ್ಮಸಾಧ್ಯಾಯಾಮತ ಏವ 'ನಾಸ್ತ್ಯಕೃತಃ ಕೃತೇನ' ಇತಿ ಸಮುಕ್ತೇಃ ಕರ್ಮಾಸಾಧ್ಯನಿತ್ಯಪುರುಷಾರ್ಥಮೋಕ್ಷವಿಲಕ್ಷಣತ್ವೇನಾನಿತ್ಯಾಯಾಂ ಸ್ವರ್ಗಾಖ್ಯೋರ್ಧ್ವಗತಾವನಿತ್ಯಕೇವಲಸುಖೇನ ಸುಖಿತಾವತ್ತದ್ವಿರುದ್ಧದುಷ್ಕರ್ಮಸಾಧ್ಯಾಯಾಮತ ಏವಾನಿತ್ಯಾಯಾಂ ಭೂಮ್ಯಾಖ್ಯಮಧ್ಯಮಗತಾವನಿತ್ಯಾಭ್ಯಾಂ ಸುಖದುಃಖಾಭ್ಯಾಂ ಸುಖಿತಾದುಃಖಿತಾವಚ್ಚ ತತ್ತ್ವಜ್ಞಾನಸಾಧ್ಯಾಯಾಮತ ಏವ ನಿತ್ಯಾಯಾಂ 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' ಇತ್ಯಾದಿಶ್ರುತ್ಯಾ 'ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ' ಇತ್ಯಾದಿಸ್ಮೃತ್ಯಾ ಚ ತತ್ತ್ವಜ್ಞಾನಿಶ್ರೇಷ್ಠಸುರಾದಿಪ್ರಾಪ್ಯತ್ವೇನೋಕ್ತಾಯಾಂ ಸ್ವರ್ಗಾದಪ್ಯೂರ್ಧ್ವಗತ್ಯಾಂ ಮುಕ್ತಾವತೋಽಪ್ಯಾಧಿಕ್ಯಾವಶ್ಯಂಭಾವೇನ ನಿತ್ಯಾದುಃಖನಿತ್ಯಸುಖರೂಪತಾಂ ಕಥಂ ನ ಯುಕ್ತಿರುತ್ತೇಜಯೇತ್ । 'ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಇತಿ ಶ್ರುತ್ಯಾ 'ಅವಿದ್ಯಾಂ' ವಿದ್ಯಾಪದೋದಿತತ್ತ್ವಜ್ಞಾನವಿರುದ್ಧವಿದ್ಯಾಂ ಮಿಥ್ಯಾಜ್ಞಾನಮಿತಿ ಯಾವತ್। ಉಪಾಸತೇ - ಸೇವತೇ ತತ್ರೈವಾದರಂ ಕುರ್ವಂತೀತ್ಯರ್ಥಃ। ತೇಽಂಧಂತಮಃ ಪ್ರವಿಶಂತೀತಿ ಮಿಥ್ಯಾಜ್ಞಾನಸಾಧ್ಯತಯಾ ಸ್ಪಷ್ಟಮುಕ್ತಾಯಾಂ ಅಸ್ತಿ ತಾವತ್ತವಾಪಿ ಮತೇ ಮಿಥ್ಯಾಜ್ಞಾನಂ ತ್ವದಭಿಲಷಿತತತ್ತ್ವಜ್ಞಾನಾನಿರ್ಮೋಕ್ಷಪ್ರಸಂಗಾತ್ ಸಾಮಗ್ರೀವೈಯರ್ಥ್ಯಾಯೋಗಾಚ್ಚ। ನಾಪಿ ನರಕಮಾತ್ರಫಲಮ್। ತತ್ತ್ವಜ್ಞಾನಸ್ಯಾಪಿ ಸ್ವರ್ಗಮಾತ್ರಫಲತ್ವಾಪಾತಾದಿತಿ ಯುಕ್ತ್ಯಾ ಚ ಮಿಥ್ಯಾಜ್ಞಾನಸಾಧ್ಯತ್ವಯೋಗ್ಯಾಯಾಮತ ಏವ ನಿತ್ಯಾಯಾಂ 'ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾಽಽವೃತಾಃ' ಇತ್ಯಾದಿಶ್ರುತ್ಯಾ ಮಿಥ್ಯಾಜ್ಞಾನಿಶ್ರೇಷ್ಠಾಸುರಾದಿಪ್ರಾಪ್ಯತ್ವೇನೋಕ್ತಾಯಾಮತ ಏವ ನರಕಾದಪ್ಯಧಮತ್ವಯೋಗ್ಯಾಯಾಂ 'ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್'ಇತಿ ಸೂತ್ರೇ "ಏತೇಽಶುಭಕೃತಃ ಸಂಯಮನೇ ಪ್ರಪತಂತಿ ತತ್ರ ಹ ಯೇ ಪರದ್ವಿಷೋ ಗುರುದ್ವಿಷಃ ಶ್ರುತಿದ್ವಿಷಸ್ತದವಮಂತಾರಃ ಶಠಾ ಮೂರ್ಖಾ ಇತಿ ತೇ ವೈ ತತೋಽವರುಹ್ಯ ತಮಸಿ ಪ್ರಪತಂತಿ ನೈವೈತ ಉತ್ತಿಷ್ಠಂತೇಽಪಿ ಕರ್ಹಿಚಿದ್ವಾತ್ರ ವಾ ಏತದಿತ್ಯಾಹುರಥ ಯೇಽನ್ಯೇ ಬ್ರಹ್ಮದ್ವಿಷಃ ಸ್ತೇನಾಃ ಸುರಾಪಾ ಇತಿ ತೇ ವೈ ತದನುಭೂಯೇಮಂ ಲೋಕಮನುವ್ರಜಂತಿ" ಇತಿ ಸೂತ್ರಸೂಚಿತಶ್ರುತೌ ಚ ಸ್ಪಷ್ಟಂ ಪುನಃ ಸಂಯಮಿನ್ಯಾಮೇವ ಯಾತನಾಭೋಕ್ತೃಜೀವೇಭ್ಯ ಇತರೇಷಾಂ ವಿಸ್ತೀರ್ಣಯಾತನಾನಾಂ ಜೀವಾನಾಂ ಮಧ್ಯೇ ಕೇವಲಮಿಥ್ಯಾಜ್ಞಾನಾತ್ ಪರಮನರಕಾದಧಮತ್ವೇನೋಕ್ತಾಯಾಂ ತಮೋರೂಪದುರ್ಗತೌ ತತೋಽಪ್ಯಾಧಿಕ್ಯಾವಶ್ಯಂಭಾವೇನ ತತ್ರ ಪತಿತಾನಾಮಸುರ್ಯಾ ಇತಿ ಶ್ರೌತಪದಸೂಚಿತಾಸುರಾದೀನಾಂ ನಿತ್ಯಾಸುಖನಿತ್ಯದುಃಖರೂಪತಾಂ ಕಥಂ ನ ಯುಕ್ತಿರುತ್ತೇಜಯೇತ್। ಇತರೇಷಾಂ ಕೇವಲಮಿಥ್ಯಾಜ್ಞಾನಿನಾಂ ಚೇತ್ಯರ್ಥಃ। ಉಭಯವಿಧಜ್ಞಾನಸಾಧ್ಯಾಯಾಮತ ಏವ ನಿತ್ಯಾಯಾಮ್, ಉತ್ತಮಾಧಮಗತ್ಯೋರ್ಮಧ್ಯಭಾಗಸ್ಥಿತಗೀತೋಕ್ತಮಧ್ಯಮಗತೌ ಚ ಸ್ಥಿತಾನಾಮುತ್ತಮಾಧಮಜೀವಾಭ್ಯಾಂ ವೈಸಾದೃಶ್ಯಾಯ ಕರ್ಮಸಾಧ್ಯಸ್ವರ್ಗಾದಿರೂಪಜೀವಫಲತೋ ವೈಸಾದೃಶ್ಯಾಯ ಚ ನಿತ್ಯಸುಖದುಃಖಸ್ವರೂಪತಾಂ ಕಥಂ ನ ಯುಕ್ತಿರುತ್ತೇಜಯೇತ್ । ಸದಸನ್ಮಿಶ್ರರೂಪಕರ್ಮಣಾಮವೈಯರ್ಥ್ಯಾಯ ಚ ನಿತ್ಯಸುಖದುಃಖಸ್ವರೂಪತಾಂ ಕಥಂ ನ ಯುಕ್ತಿರುತ್ತೇಜಯೇತ್ । ಸದಸನ್ಮಿಶ್ರರೂಪಕರ್ಮಣಾಮವೈಯರ್ಥ್ಯಾಯ ತತ್ಫಲತ್ರೈವಿಧ್ಯಸ್ಯಾವಶ್ಯಕತ್ವೇ

ಸದಸನ್ಮಿಶ್ರರೂಪಜ್ಞಾನಾನಾಮಪಿ ತ್ರೈವಿಧ್ಯಂ ಕುತೋ ನಾಪತೇತ್ । ನ ಹ್ಯಪೇಕ್ಷಾವಿಷಯತ್ವೇನ ಪ್ರದ್ದತ್ತಣಾದಿಕಮಪಿ ಪಶೂನಾಮರ್ಥೇ ಸೃಜನ್ ಭಗವಾನ್ ಕಿಮಪ್ಯಫಲಂ ನಿರ್ಮಿಮೀತೇ । ಅತಸ್ತತ್ತ್ವವಿದಗ್ರೇಸರೋ ಮಧ್ವಗುರುರ್ನ ಯುಕ್ತಿವಿಧುರಂ ಕದಾಪ್ಯವದತ್ । ಕಿಂಚ, ದೇವಾದಯಃ ಸಜ್ಜನಾ ನಿಯಮೇನ ಪುಣ್ಯಶೀಲಾ ಹರ್ಯೇಕ-ಪರಾಯಣಾಶ್ಚೇದಾನೀಂ ದೃಶ್ಯಂತೇ । ಕದಾಚಿತ್ ಕಿಂಚಿತ್ತೇಷ್ವಪಿ ದೃಶ್ಯಮಾನಮವಶ್ಯಂ ಸ್ಫಟಿಕೇ ಲೌಹಿತ್ಯಮಿವ ತದಾವಿಷ್ಟಾಸುರೈರೇವ ಕೃತಮಿತಿ ತತ್ಪಾಪಪರಂಪರಾಮೂಲಮೇವ ನ ಸ್ವಾಭಾವಿಕಮ್ । ಸ್ಫಟಿಕಲೌಹಿತ್ಯಂ ಸ್ಫಟಿಕಾವಯ-ವಲೌಹಿತ್ಯಪರಂಪರಾಮೂಲತೋ ನ ಕುಚೋದ್ಯಾವಕಾಶಃ। ದೈತ್ಯಾದಯೋ ದುರ್ಜನಾಶ್ಚ ನಿಯಮೇನ ಪಾಪಶೀಲಾಃ ಶಿವಾದಿಭಜಕಾಶ್ಚೇದಾನೀಂ ದೃಶ್ಯಂತೇ। ಮನುಷ್ಯಾಶ್ಚ ಪ್ರಾಯಃ ಪುಣ್ಯಪಾಪಾಭ್ಯೋಭಯಸ್ವಭಾವಾಸ್ತತ್ರ ತತ್ರ ಗಮನೇ ಸತಿ ತಾಂ ತಾಂ ದೇವತಾಮೇವ ಸೇವಮಾನಾ ಇದಾನೀಂ ಕರ್ಮಣಃ ಸರ್ವೋತ್ಪತ್ತಿಮನ್ನಿಮಿತ್ತಕಾರಣತ್ವಾತ್ ಪಾಪೇನ ಪುಣ್ಯಾಜನನಾತ್, ಪುಣ್ಯೇನ ಪಾಪಾಜನನಾಚ್ಚ ಇದಾನೀಂ ಪುಣ್ಯಶೀಲಾ ಇದಾನೀಂ ಕ್ರಿಯಮಾಣಸ್ವಪುಣ್ಯಾಜನನಾಯ ಪೂರ್ವಜನ್ಮನಿ ಪುಣ್ಯಶೀಲಾಃ ತತಸ್ತತಃ ಪೂರ್ವಮಪ್ಯೇವಮಿತ್ಯನಾದೌ ಕಾಲೇ ಚ ಪುಣ್ಯಕರಣಸ್ವಭಾವತ ಏವ ಕಥಂ ನ ಸ್ವಭಾವತ ಏವೋತ್ತಮಾಃ। ಅನಯೈವ ದಿಶಾ ಅಧಮಾಃ ಕಥಂ ನ ಸ್ವಭಾವತ ಏವಾಧಮಾಃ। ಮಧ್ಯಮಾಶ್ಚ ಕಥಂ ನ ಸ್ವಭಾವತ ಏವ ಮಧ್ಯಮಾಃ । ಮನುಷ್ಯೇಷ್ವಪಿ ಪುಣ್ಯೈಕರತಾ ಹರಿಪರಾಯಣಾಃ ಕೇಚಿದಿದಾನೀಂ ದೃಶ್ಯಂತೇ । ತ ಉತ್ತಮಕೋಟೌ ಪ್ರವಿಶಂತಿ । ಪಾಪೈಕರತಾಸ್ತೂಕ್ತಯುಕ್ತ್ಯಾ ಘೋರತಮಾಧಮಕೋಟೌ ಪ್ರವಿಶಂತಿ । ದೇವಾದಿಷ್ವೇವಾಭಿನಿವೇಶವಂತಶ್ಚ ಮಧ್ಯಮಕೋಟಾವಿತ್ಯಪಿ ವಿವೇಕೋ ದ್ರಷ್ಟವ್ಯಃ। ಏವಂ ಚ ಜೀವತ್ರಯಸ್ಯೋತ-ಮತ್ವಾದಿವಿರುದ್ಧತ್ರಿವಿಧಸ್ವಭಾವಸ್ಯ ಚೈಕವಿಧಫಲಾಯೋಗಾತ್ಸ್ವಭಾವತ್ರಯೋಚಿತಂ ಫಲತ್ರಯಂ ಚ ಕಥಂ ನ ಯುಕ್ತೇಃ ಪ್ರಭಾವಃ ಸಂಭಾವಯೇತ್ । ಅತ ಏವ ಮಧ್ಯಮಜೀವಾನಾಂ ನ ಲಿಂಗದೇಹಭಂಗೋಽಸ್ತೀತಿ ಮಂದಾಶಂಕಾಽಪಿ ನ ಯುಕ್ತಿಸಹಾ। ಉತ್ತಮಾಧಮಸಾಮಗ್ರೀವ ಮಧ್ಯಮಸ್ಯಾಪಿ ಸಾಮಗ್ರೀಕೃತಲಿಂಗದೇಹಭಂಗಾತ್ ಸ್ವಾಭಾವಿಕೇ ತತ್ಸ್ವರೂಪಸುಖದುಃಖೇ ಅನುಭಾವಯೇದೇವ ಸಾಮಗ್ರ್ಯಾಃ ಕಾರ್ಯಾರ್ಜಕತ್ವನಿಯಮಸ್ಯ ಸರ್ವವಾದಿಭಿರಂಗೀ- ಕೃತತ್ವಾತ್ । ಅನ್ಯಥಾ ಕೃತಹಾನಿಪ್ರಸಂಗಾತ್ । ಕಥಂ ಚಾನ್ಯಥಾಽನಿತ್ಯಾಭ್ಯಾಂ ಸುಖದುಃಖಾಭ್ಯಾಂ ತೇಷಾಂ ನಿತ್ಯಸಂಸಾರಿತ್ವಮ್? ನ ಹಿ ಪ್ರವಾಹತೋಽನಿತ್ಯಾ ಘಟಾದ್ಯಾ ನಿತ್ಯಾ ಇತ್ಯುಚ್ಯಂತೇ। ಏವಂ ಚ 'ತನುಭೃತ್ಸ್ವಭಾವಸಂಭೂತಯೇ'' ''ಸುಖದುಃಖಮಧ್ಯಸಂಪ್ರಾಪ್ತಯೇ'' ''ನಿತ್ಯಂ ಯಯುಃ'' ''ಅಸುರಾಸ್ತು ತಮೋ ಘೋರಂ ಯದಿ ತತ್ರೈವ ಮಧ್ಯಮಾಃ । ಮಧ್ಯಮಾಂ ಗತಿಮೇವಾಪುಃ'' ಇತ್ಯಾದ್ಯಾಃ ಪ್ರಾಚಾಂ ವಾಚೋಽಪಿ ಸಮಾಹಿತಾಃ । ''ಅನ್ಯಥಾಽನುಪಪತ್ತಿಶ್ಚಾಸ್ಯ ಸಮಾಧಾನಮ್''ಇತ್ಯುಪಲಕ್ಷಣಮ್ । ಭೂತಚತುಷ್ಟಯಸ್ಯ ತನ್ಮಾತ್ರಾಚತುಷ್ಟಯಸ್ಯ ಚ ಮುಖತೋಽನುಕ್ತ್ಯೋಪೇಕ್ಷಿತತ್ವೇನ ಚ ಭಗವದಧೀನತ್ವೇನಾವರತ್ವಮಿತ್ಯಪಿ ಜ್ಞೇಯಮ್। ''ನಾಸದಾಸೀನ್ನೋ ಸದಾಸೀತ್'' ಇತ್ಯನೇನ ''ನಾಸದಾಸೀನ್ನೋ ಸದಾಸೀತ್ ತದಾನೀಂ ನಾಸೀದ್ರಜೋ ನೋ ವ್ಯೋಮಾಪರೋ ಯತ್ । ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಮ್ । ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತ'' ಇತಿ ಶ್ರುತಿಖಂಡತ್ರಯಂ ಗೃಹ್ಯತೇ॥ ''ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ'' ಇತಿ ಸ್ಮೃತೇಸ್ಸತ್ಪದೇನ ಪೃಥಿವ್ಯಪ್ತೇಜೋರೂಪಂ ಭೂತತ್ರಯಂ - ಅಸತ್ಪದೇನ ವಾಯ್ವಾಕಾಶಭೂತದ್ವಯಂ ಚ ಗ್ರಾಹ್ಯಮಿತಿ ಭಾವೇನಾಹ ''ಪಂಚಭೂತಾನಿ ನಾಸುಃ''ಇತಿ। ರಜಃಪದಂ ಸತ್ವತಮಸೋರುಪಲಕ್ಷಣಮಿತಿ ಭಾವೇನಾಹ ''ಗುಣತ್ರಯಂ'' ಇತಿ ದೇಹಲೀದೀಪನ್ಯಾಯೇನೋಭಯಸಂಗ್ರ-ಹಾರ್ಥಂ ಶ್ರುತೌ ಮಧ್ಯಪತಿತಂ ರಜ ಏವ ಗೃಹೀತಮಿತಿ ಜ್ಞೇಯಮ್ । ಪರ ಇತಿ ವದತಾ ''ಪೃ ಪಾಲನಪೂರಣಯೋಃ''ಇತಿ ಧಾತೋಃ ಕರ್ತ್ರರ್ಥೇ ಅಸುನ್ಪ್ರತ್ಯಯೇ ಕೃತೇ ಸತಿ ಪರ ಇತಿ ಸಕಾರಾಂತಂ ಪದಮಿತಿ ಸೂಚಿತಮ್ । ''ನ ಮೃತ್ಯುರಾಸೀತ್''ಇತಿ ಶ್ರುತಿಖಂಡಸ್ಯಾರ್ಥಮಾಹ ''ಮೃತ್ಯುಃ'' ಇತ್ಯಾದಿನಾ । ಪ್ರಕೃಷ್ಟಂ ಕೇತಃ ಕೇತನಂ ಚಿಹ್ನಮಸಾಧಾರಣಧರ್ಮ ಇತಿ ಭಾವೇನಾಹ ''ದಿವಾರಾತ್ರ್ಯೋಶ್ಚ ಪ್ರಭಾವಃ'' ಇತಿ। ''ಕಿಮಾವರೀವಃ'' ಇತಿ ಶ್ರುತಿಖಂಡಸ್ಯಾರ್ಥ ''ಮಾಹೈತದಭಾವಾತ್''ಇತ್ಯಾದಿನಾ । ಅವಾತಮಿತ್ಯಸ್ಯಾರ್ಥೋ 'ನಿವಾತಮ್' ಇತಿ । ಸ್ವಧಯೇತ್ಯಸ್ಯಾರ್ಥಕಥನಂ ''ಸ್ವಸಾಮರ್ಥ್ಯೇನ''ಇತಿ। ಧೀಯತೇ ಧಾರ್ಯತೇ ಅನಯಾ ಸರ್ವಂ ಜಗದಿತಿ ವ್ಯುತ್ಪತ್ತ್ಯಾ

ಸ್ವಧಾಪದೇನ ಸ್ವಸಾಮರ್ಥ್ಯಮುಚ್ಯತೇ ಇತಿ ಭಾವಃ। ಅನೀದಿತ್ಯಸ್ಯಾರ್ಥಕಥನಮ್ "ಅಚೇಷ್ಟತ" ಇತಿ। "ಅನ ಚೇಷ್ಟಾಯಾಮ್"ಇತಿ ಧಾತೋಃ ಲುಙ್ ರೂಪಮಿದಮ್। "ತಸ್ಮಾದನ್ಯತ್ಪರ ಆಸ" ಇತ್ಯತ್ರ ಪರ ಉತ್ತಮಮಿತ್ಯರ್ಥಃ। ಅನ್ಯತ್ವಾರ್ಥಕಥನೇ ಪ್ರಾಗುಕ್ತಾನ್ಯಪದೇನ ಪೌನರುಕ್ತ್ಯಾಪತ್ತೇಃ। "ವಿಕೃತರೂಪವಿನಾಶ" ಇತ್ಯಸ್ಯ ವಿಕೃತರೂಪಸ್ಯ ವಿನಾಶ ಇತ್ಯರ್ಥಃ। ಆದಿಪದೇನಾನುಪಕಾರಿತ್ವಂ ಗೃಹ್ಯತೇ। ತಮೋಭಿಮಾನಿತ್ವಾತ್ "ತಮು ಗ್ಲಾನೌ" ಇತಿ ಧಾತೋಃ ದುರ್ಗಾರೂಪೇಣ ಜಗತ್ಸಂಹರ್ತೃತ್ವಾಚ್ಚ ಶ್ರೀರೂಪಂ ಸಲಿಲಂ ತಮಃಪದೇನೋಚ್ಯತೇ। ಪ್ರಕೃಷ್ಟಂ ಕೇತಃ ಕೇತನಂ ನಿಕೇತನಂ ಸ್ಥಾನಂ ಯಸ್ಯೇತಿ ವ್ಯುತ್ಪತ್ತಿಮಾಶ್ರಿತ್ಯಾಹ "ಅಪರಿಮಿತಮ್"ಇತಿ। ಪ್ರಕೃತ್ಯಾಖ್ಯಂ ಶ್ರೀರೂಪಪ್ರಕೃತ್ಯಾಖ್ಯ-ಮಿತ್ಯರ್ಥಃ। ಗೂಳ್ಹಂ ಗೂಢಮಿತ್ಯಸ್ಯಾರ್ಥಕಥನಂ "ಗೂಹಿತಮ್" ಇತಿ। "ಪ್ರಪಂಚಸ್ಯ ಬ್ರಹ್ಮಾನನ್ಯತ್ವೇ ಪ್ರಮಾಣಾಭಾವಾತ್" ಇತ್ಯುಪಲಕ್ಷಣಮ್। ಏವಂ ಸತ್ಯಾದಿಪದೋಲ್ಲಂಘನೇ ಕಾರಣಾಭಾವಾದಲ್ಪಾಕ್ಷರತ್ವಾಚ್ಚ ವಾಚಾದಿಶಬ್ದೇಭ್ಯ ಇತ್ಯೇವ ಸೂತ್ರಪ್ರವೃತ್ತಿಪ್ರಸಂಗ ಇತ್ಯಪಿ ದ್ರಷ್ಟವ್ಯಮ್। "ಪ್ರಮಾಣವಿರುದ್ಧಂ ಚ" ಇತ್ಯುಪಲಕ್ಷಣಮ್। ಬ್ರಹ್ಮಾತ್ಮಕಪದೇನೈಕತ್ರ ಬಾಧಃ। ಅನ್ಯತ್ರಾಭೇದ ಇತಿ ವಿರಮ್ಯವ್ಯಾಪಾರಪ್ರಸಂಗಶ್ಚ। "ಲೋಕಸಿದ್ಧತ್ವಾತ್"ಇತ್ಯಸ್ಯ ಏಕಾಕಿರಾಜಾಪೇಕ್ಷಯಾ ಸ್ವಾಧೀನಚತುರಂಗಸೈನ್ಯಸಹಿತಸ್ಯ ರಾಜ್ಞೋ ಮಹಿಮದರ್ಶನಾದಿತಿ ಭಾವಃ। "ಶರೀರೇಂದ್ರಿಯಪ್ರಾಣಾದಿಃ"ಇತಿ ವದತಾ ಸೂತ್ರಗತಾದಿಪದೇನ ಶರೀರೇಂದ್ರಿಯಾದಿಕಂ ಗೃಹ್ಯತ ಇತಿ ಸೂಚಿತಮ್॥ "ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್"ಇತಿ ವಕ್ಷ್ಯಮಾಣಸೂತ್ರಸ್ಯಾಯಮಭಿಸಂಧಿಃ। ಅನ್ಯಥಾಽನುಮಿತೌ ಪ್ರಕೃತ್ಯುಪಸರ್ಜನಪುರುಷಾನುಮಿತೌ ಕ್ರಿಯಮಾಣಾಯಾಂ ಚ ಜಾನಾತೀತಿ ಜ್ಞೋ ಜೀವಃ। ತಸ್ಯ ಶಕ್ತಿವಿಯೋಗಾತ್ ಶರೀರಪ್ರವೇಶ ಏವ ಸ್ವತಃ ಶಕ್ತ್ಯಭಾವಾತ್। ಭಾವಂ ಚಾನ್ಯತ್ರಾಪಿ ಸ್ವತ ಏವ ಪ್ರವೃತ್ತಿಸಂಭವಾತ್ ಶರೀರಪ್ರವೇಶವೈಯ-ರ್ಥ್ಯಮಿತ್ಯುಭಯಥಾಽಪಿ ಜೀವಕರ್ತೃತ್ವಂ ನ ಘಟತೇ ಇತಿ॥ "ಪುನರಾಶಂಕೋದಯಾತ್" ಇತಿ ವದತಾ "ಯಥಾ ಪ್ರಾಣಾತ್"ಇತಿ ಸೂತ್ರೇ ಪ್ರಾಕ್ ಭಗವತೋಽನುಪ್ರವೇಶಃ ಕಥಿತಃ। ಸ ಮಾಽಸ್ತು। ಜೀವಾನುಪ್ರವಿಷ್ಟಮೇವ ಶರೀರಂ ಪ್ರವರ್ತತಾಮಿತಿ ಪುನರಾಶಂಕ್ಯೋದಯ ಇತಿ ಸೂಚಿತಮ್। "ವಿದ್ಯತೇ ಚ ತೇ ಜೀವ" ಇತ್ಯತ್ರ ಬಹುಕಾಲಂ ಹಿತಾಕರಣಮಹಿತಕರಣಂ ಚೇತ್ಯಸ್ಯ ಸುಖೇನ ಜೀವಾಮೀತಿ ಯದ್ಧಿತಂ ತಸ್ಯಾಕರಣಂ ಮಧ್ಯ ಏವ ಮರಣಾತ್। ಭುಂಜಾನಸ್ಯ ಯದೃಚ್ಛಯಾ ಸ್ವಜಿಹ್ವಾದಂಶನಾದಿಕಂ ಯದಹಿತಂ ತಸ್ಯ ಕರಣಂ ಚೇತ್ಯರ್ಥಃ। "ಇಂಗಯತ್ಯಂಗಮಂಗಾನಿ"ಇತ್ಯತ್ರ ಕೃತ್ರಿಮಪ್ರತಿಮಾಯಾ ಏಕೈಕಾವಯವಚಲನಮಾತ್ರೇ ಅಪೇಕ್ಷಿತೇ ತದಂಗಮೇವೇಂಗಯತಿ। ನರ್ತನವಿಶೇಷಾದೌ ಸರ್ವಾಂಗಚಾಲನೇ ಅಪೇಕ್ಷಿತೇ ಅಂಗಾನೀಂಗಯತೀತಿ ಸಂಬಂಧಃ। "ಅನ್ನಂ ರಸಾದಿರೂಪೇಣ" ಇತ್ಯತ್ರ ಗೋಭಿರ್ಭುಕ್ತತೃಣಾದಿರೂಪಮನ್ನಂ ತದುದರೇ ತಿಷ್ಠತಿ। ತಸ್ಯಾನ್ನಸ್ಯ ರಸಂ" "ವ್ಯಾನಃ ಸರ್ವಶರೀರಗಃ" ಇತಿ ವಚನಾತ್ ನಾಡೀಸ್ಥಿತೋ ವ್ಯಾನಃ ಅಧೋಭಾಗೇ ಆನಯತಿ। ಏವಂ ನಾರೀಭಿರ್ಭುಕ್ತಮನ್ನಂ ತದುದರೇ ತಿಷ್ಠತಿ। ತಸ್ಯ ಚ ರಸಂ ಊರ್ಧ್ವನಾಡೀದ್ವಾರಾ ತಾಸಾಂ ಸ್ತನದ್ವಯೇ ಪ್ರವೇಶ-ಯತಿ। ಗವಾಂ ನಾರೀಣಾಂ ಚಾಂತರಸ್ವಾತಂತ್ರ್ಯಾನ್ನ ತತ್ಕರ್ತೃತ್ವಮಿತಿ ಭಾವಃ। "ಕಾರ್ಯೋಪಸಂಹಾರಕರ್ತೃತ್ವಾನು ಪಪತ್ತೇಃ" ಇತ್ಯುಪಲಕ್ಷಣಮ್। ಕೃಷೀವಲಾನಾಂ ಯೋದ್ಧ್ರೂಣಾಂ ರಾಜ್ಞಾಂ ವಣಿಜಾಂ ಚ ಮಧ್ಯೇ ಕಾರ್ಯವಿಚ್ಛೇದ-ದರ್ಶನಾದಿತ್ಯಪಿ ದ್ರಷ್ಟವ್ಯಮ್। "ತಸ್ಯಾ ಅನುಪಲಬ್ಧಿಬಾಧಿತತ್ವಾತ್" ಇತ್ಯತ್ರ ತಸ್ಯಾ ಈಶ್ವರಸಾಧಕಶ್ರುತೇರನುಪಲಬ್ಧಿಃ ಕ್ವಾಪಿ ಕೇನಾಪಿ ಈಶ್ವರಸ್ಯಾನುಪಲಂಭಸ್ತದ್ಬಾಧಿತತ್ವಾದಿತ್ಯರ್ಥಃ। ನ ತು ಶ್ರುತೇರೇವಾನುಪಲಂಭಃ। "ತಚ್ಚ ಪ್ರತಿಪಾದಿತಮ್" ಇತ್ಯತ್ರಾಭಿಮಾನ್ಯಧಿಕರಣೇ ಇತಿ ಶೇಷಃ। "ಅವಿಚಾರಿತರಮಣೀಯಾಽವಿದ್ಯಾ" ಇತ್ಯತ್ರಾವಿಚಾರಿತೇ ಸತಿ ರಮಣೀಯಾ, ವಿಚಾರಿತೇ ಸತಿ ಅಂತತೋಽಘಟಿತಬಹುಪ್ರಮೇಯಘಟಿತೇತ್ಯರ್ಥಃ। ಸೇಶ್ವರವಾದೇಽಪಿ ನಿರವಯವತ್ವಶಬ್ದವ್ಯಾಕೋಪಸ್ಯ ಕಃ ಪರಿಹಾರ ಇತ್ಯತೋಽಪೀದಮುದಿತಮ್। "ಯದ್ಧಿ ಯುಕ್ತ್ಯಾ" ಇತಿ ಈಶ್ವರಸ್ಯಾ-ಘಟಿತಘಟಕತ್ವಶಕ್ತೇರೀಶಶಬ್ದೇನೈವ ಸೂಚಿತತ್ವಾತ್। ಅನೀಶಸ್ಯ ತು ಜೀವಸ್ಯೇಶ್ವರವಿಷಯಕಾಜ್ಞಾನಮಾತ್ರಾತ್ ಸ್ವವಿನಾಶೇ ಪ್ರಾಪ್ತೇ ಸ್ವಾತ್ಮಾನಮೇವ ರಕ್ಷಿತುಮಪ್ಯಸಮರ್ಥಸ್ಯ ಜೀವಸ್ಯ ತದಸಂಭವಾದಿತಿ ಭಾವಃ। "ಯೋಽಸೌ ವಿರುದ್ಧಃ" ಇತ್ಯತ್ರಾಣುತ್ವಮಹತ್ವೇ ಯೌಗಪದ್ಯೇನ ಕಥ್ಯಮಾನೇ ಯಃ ಪರಮಾತ್ಮಾ ಲೋಕದೃಷ್ಟ್ಯಾ ವಿರುದ್ಧಃ, ವಿರೋಧವಾನ್ "ಅಣೋರಣೀಯಾನ್ಮಹತೋ ಮಹೀಯಾನ್" ಇತ್ಯಾದಿಪ್ರಮಾಣೈರವಿರುದ್ಧಃ। ಲೋಕದೃಷ್ಟ್ಯಾ

ಉದರ' ಎಂದು ಕೃಷ್ಣಪಕ್ಷದಲ್ಲೂ ಅನ್ವಯ. 'ಅಗ್ನಿಬಲಾನ್' ಎಂದರೆ ಯಜ್ಞಗಳನ್ನು ಎಂದರ್ಥ; ಇದಕ್ಕೆ 'ಅಗ್ನಿಬಲೀನಿವ' ಎಂಬ ಪಾಠಾಂತರವೂ ಇದೆ.

---

ಮನುಃ ಮನನಯೋಗ್ಯಃ "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" "ನಾಹಂ ವಿದಾಮ್ಯಹಮಮೀ ಮುನಯಃ ಸುರೇಶಾಃ" ಇತ್ಯಾದಿಪ್ರಮಾಣೈರಮನುಃ, ಮನನಾಯೋಗ್ಯಃ, ಲೋಕದೃಷ್ಟ್ಯಾ, ವಾಕ್ ವಕ್ತುಂ ಯೋಗ್ಯಃ "ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ"। "ಯತೋ ವಾಚೋ ನಿವರ್ತಂತೇ" ಇತ್ಯಾದಿಪ್ರಮಾಣೈರವಾಕ್ ವಕ್ತುಮಯೋಗ್ಯಃ । ಲೋಕದೃಷ್ಟ್ಯಾ ಇಂದ್ರಃ "ಅರ್ಶ ಆದ್ಯಚ್" ಇಂದ್ರವಾನ್ । ಕೃಷ್ಣರಾಮಾದ್ಯವತಾರೇಷು ವಿಶ್ವಾಮಿತ್ರನಾರದಾದೀನಾಮಭಿವಾದನದರ್ಶನಾತ್ । "ಮತ್ತಃ ಪರತರಂ ನಾನ್ಯತ್" "ನ ದೈವಂ ಕೇಶವಾತ್ಪರಮ್" ಇತ್ಯಾದಿಪ್ರಮಾಣೈರನಿಂದ್ರಃ ನ ವಿದ್ಯತೇ ಇಂದ್ರೋ ಯಸ್ಯೇತಿ ವಿಗ್ರಹಃ । ಲೋಕದೃಷ್ಟ್ಯಾ ಪ್ರವೃತ್ತಿಃ ಪ್ರವರ್ತಕತ್ವಾತ್ "ನಾಹಂ ಕಿಂಚಿದುಪಾಶ್ರಿತಃ" ಇತ್ಯಾದಿಪ್ರಮಾಣೈರಪ್ರವೃತ್ತಿರಿತಿ ಯೋಜನಾ । "ನ ಹಿ ಶಬ್ದೈಕಸಮಧಿಗಮ್ಯ" ಇತ್ಯನೇನ ಯಥಾ ಶಬ್ದೋ ವಕ್ತಿ। ತಥೈವ ಸೋऽಂಗೀಕಾರ್ಯಃ॥ ನತು ಲೋಕದೃಷ್ಟ್ಯಾ ವಿರೋಧಃ ಶಂಕನೀಯ ಇತಿ ಸೂಚಿತಮ್ । "ಸರ್ವೋಪೇತಾ ಚ" ಇತ್ಯತ್ರ ಸರ್ವವಿಷಯಿಣ್ಯಃ ಸರ್ವದಾ ವಿದ್ಯಮಾನಾಶ್ಚ ಸರ್ವಾಃ ಶಕ್ತಯಸ್ತಾಭಿಃ ಶಕ್ತಿಭಿರುಪೇತೇತ್ಯರ್ಥಃ । "ಶ್ರುತ್ಯನುಸಾರೇಣ ಸ್ತ್ರೀಲಿಂಗಪ್ರಯೋಗಃ" ಇತ್ಯತ್ರ "ಆತ್ಮಾ ಹಿ"ಇತಿ ಪ್ರಾಗಾತ್ಮನಃ ಪ್ರಸ್ತುತತ್ವಾತ್ । ಅತ್ರಾಪಿ ಸರ್ವೋಪೇತ ಇತ್ಯೇವ ವಕ್ತವ್ಯಮ್ । ಸ್ತ್ರೀಲಿಂಗಪದಪ್ರಯೋಗಸ್ತು "ಸರ್ವೋಪೇತಾ"ಇತಿ ಶ್ರುತ್ಯನುಸಾರಾತ್ "ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿತದೈರಯೇಥಾಮ್" ಇತಿ ಶ್ರುತಿಃ ಸ್ಪಷ್ಟಂ ಜೀವಾನಾಂ ತ್ರೈವಿಧ್ಯಮಾಹ – "ಹೇ ಇಂದ್ರಾವಿಷ್ಣೂ ಉಭಾ ಉಭೌ ಯುವಾಂ ಜಿಗ್ಯಥುಃ ಸರ್ವಾನಸುರಾನ್ ಜಿತವಂತಾವಭೂತಾಮ್" । ನ ಪರಾಜಯೇಥೇ ಕದಾಪಿ ಪರಾಜಯಂ ನಾಪ್ನುಥಃ । ಏನೋರೇನಯೋರ್ಯುವಯೋರ್ಮಧ್ಯೇ ಕತರಶ್ಚ ಕಶ್ಚನ ನ ಪರಾಜಿಗ್ಯೇ ಪರಾಜಯಂ ನಾಪ । ಹೇ ವಿಷ್ಣೋ ಇಂದ್ರಶ್ಚ ತ್ವಂ ಚೇತ್ಯುಭೌ ಅಪಸ್ಪೃಧೇಥಾಂ ದೈತ್ಯೈಃ ಸಹ ಸ್ಪರ್ಧಾಮಕೃಷಾಥಾಂ ಇತಿ ಯತ್ತತ್ ತೇನ ದೈತ್ಯೈಃ ಸಹ ಸ್ಪರ್ಧಾಕರಣೇನ ಸ್ಪರ್ಧಾಂ ಕೃತ್ವಾ ತದ್ಬಲೇನೇತ್ಯರ್ಥಃ । ಸಹಸ್ರಮನಂತಾನಂತಜೀವಾನ್ ವಿಶೇಷೇಣ ವಿವಿಧತಯಾ ವಿರುದ್ಧತಯಾ ಚೇತಿ ತ್ರೇಧಾ ಐರಯೇಥಾಂ ಪ್ರೇರಣಾಮಕುರ್ವಾಥಾಮ್ । ಉತ್ತಮಜೀವೇಷು ಬ್ರಹ್ಮಾದಿಷು ಹರಿಸರ್ವೋತ್ತಮತ್ವಬುದ್ಧಿಂ ಚೇತಿ ತ್ರೇಧಾ ಐರಯೇಥಾಮ್ । ಅಧಮೇಷು ಪುನಃ ಪುನಃ ವಿರೋಧಮೇವ ಐರಯೇಥಾಮ್ । ಮಧ್ಯಮಜೀವೇಷು ದೈತ್ಯವಧಾದಿಸಮಯೇ ಹರೇಸ್ಸರ್ವೋತ್ತಮತ್ವಬುದ್ಧಿಂ ವಧಾತ್ ಪ್ರಾಕ್ ತೇಷಾಂ ಶಿವದತ್ತಸಂಪದ್ದರ್ಶನೇ ಸತಿ ಜರಾಸಂಧಾದಿಯುದ್ಧೇಷು ಕದಾಚಿಲ್ಲೀಲಯಾ ಯುವಯೋಃ ಪಲಾಯನೇ ಚ ಸತಿ ವರದಾತ್ರ್ಯಣಾಂ ಶಿವಾದೀನಾಂ ಸರ್ವೋತ್ತಮತ್ವಬುದ್ಧಿಂ ಚೇತಿ ತ್ರೇಧಾ ಐರಯೇಥಾಮ್ । ಯದ್ವಾ ಶಿವಾದೀನಾಂ ವರಾದನ್ಯೈರವಧ್ಯದೈತ್ಯೈಃ ಸಹ ಯುವಯೋಃ ತತ್ಕೃತಜಗದುಪದ್ರವದರ್ಶನೇನ ಪ್ರಥಮಂ ಸಹಿಷ್ಣುತ್ವರೂಪಸ್ಪರ್ಧಾ ವಾಜಾಯತ । ನತು ತದ್ವೈವ ತ್ವಧೋऽಪಿ ಕೃತ ಇತಿ ಯತ್ತಸ್ಮಾತ್ ತೈರೇವೋಪದ್ರುತಾನಾಂ ತೇಷಾಂ ವರದಾಯಕಾನಾಂ ಬ್ರಹ್ಮಶಿವಾದೀನಾಮವಧ್ಯತದ್ವಧೇ ಸಮರ್ಥಯೋಃ ಸರ್ವೋತ್ತಮಯೋರ್ಯುವಯೋಃ ಪೃಥಿವ್ಯಾದೌ ಅವತಾರೇ ಸತಿ ಸಹಾವತಾರಾದೌ ಚ ವಿಶೇಷೇಣ ಬುದ್ಧಿಮೈರಯೇಥಾಮ್ । ದೈತ್ಯಾದೀನಾಂ ತು ಅವತೀರ್ಣೇ ಸ್ವಸ್ಮಿನ್ ಸ್ವಭಕ್ತೇಷು ಪಾಂಡವಾದಿಷು ಚ ಪುನಃ ಪುನರ್ವಿರೋಧಕರಣಾಯ ಮತಿಮೈರಯೇಥಾಮ್ । ಮಧ್ಯಮಜೀವಾನಾಂ ತು ಪ್ರಾಕ್ ದೈತ್ಯಾನಾಂ ಪ್ರಾಬಲ್ಯೇ ಪರಾಜಯೇ ಚ ಸತಿ ತೈಃ ಸಹ ಸಖ್ಯೇನ ವರದಾಯಕಶಿವಾದೀನಾಮುತ್ಕರ್ಷಬುದ್ಧಿಂ ಪುನಸ್ತೈರೇವೋಪದ್ರುತಾನಾಂ ತವ ಪ್ರಾರ್ಥನೇ ಸತಿ ತೇಷ್ವಪಕರ್ಷಬುದ್ಧಿಂ ಯುಷ್ಮದುತ್ಕರ್ಷೇ ಬುದ್ಧಿಂ ಚೇತಿ ವಿವಿಧಮೈರಯೇಥಾಮಿತಿ ಶ್ಲೋಕೋಕ್ತಃ ಸರ್ವೋऽಪ್ಯರ್ಥಃ ಕಥಂ ನ ಶ್ಲೋಕ್ಯಃ ಇತಿ ಸರ್ವಮವದಾತಮ್ ॥ ತಸ್ಮಾದ್ವಿರುದ್ಧೇ ಗತೀ ಪರಿಜಿಹೀರ್ಷತಾ ಅನುಕೂಲಾಂ ಸ್ವಯೋಗ್ಯಗತಿಂ ಮುಕ್ತಿಂ ಪ್ರೇಪ್ಸುನಾ ಚ ಹರೇಸ್ತತ್ತ್ವನಿರ್ಣಾಯಕೇಷೂಕ್ತದಶೋಪನ್ಯಾಸೇಷು ಶ್ರದ್ಧಾವತಾ ಭಾವ್ಯಮ್ । ಅತಃ ಪೂರ್ಣಮತಿನಾ ಯತಿನಾ ನಿರೂಪಿತ ಏವ ಶಾಸ್ತ್ರಾರ್ಥ ಇತಿ ಸ್ಥಿತಮ್ । ಇತಿ ಫಲೋಪನ್ಯಾಸಃ।

ವಾದಿರಾಜೇನ ರಚಿತಾ ಮಾಲೇಯಂ ವಿಮಲಾ ಸದಾ ।
ಸದಯೇ ಹೃದಯೇ ಧಾರ್ಯಾ ಹರಿಣಾ ಭವವೈರಿಣಾ ॥

## [1]ವೇದವ್ಯಾಸ-ಕೃಷ್ಣರೂಪಗಳ ವರ್ಣನೆ

[2]ಶುಭಸಮುದ್ರಕರಂ ಭಜತಾಂ ಮುದೇ
ಪ್ರಿಯಮೃಗಾಜಿನತಾಽಖಿಲದೇವತಮ್[3] ।
ವರಯತೇ ಸ್ಥಿರಭೂತಿಮಹೋ ಮುಹು-
ರ್ವಿಭಜತೇ ಭಜತೇಽತ್ಯರುಚಿಪ್ರದಾ[4] ॥ ೧೩ ॥

ಅಖಿಲವನ್ನೂ ನೀಡುವ ಬ್ರಹ್ಮವಿದ್ಯೆಯನ್ನೆಂಬಂತೆ ಕೃಷ್ಣಾಜಿನ ಧರಿಸುವುದನ್ನು ಬಹಳವಾಗಿ ಮೆಚ್ಚುವ, ತಮ್ಮ ಅಂಗದಿಂದ ಅದನ್ನು ಬೇರೆಮಾಡುವುದನ್ನು ಸ್ವಲ್ಪವೂ ಮೆಚ್ಚದ, ಸೇವಿಸುವ ಶುಕ ಮೊದಲಾದವರ ಸಂತೋಷಕ್ಕೆಂದು ಶುಭಕರವಾದ ಮುದ್ರೆಗಳಿಂದ ಕೂಡಿದ ಕೈಗಳುಳ್ಳ, ಉತ್ತಮಯತಿಗಳಾದ ಶ್ರೀಮಧ್ವಾಚಾರ್ಯರಿಗೆ ಸ್ಥಿರವಾದ ಜ್ಞಾನಸಂಪತ್ತನ್ನು ನೀಡುವ ವೇದವ್ಯಾಸರನ್ನು ಪುನಃಪುನಃ ಭಜಿಸಬೇಕು (ವೇದವ್ಯಾಸಪಕ್ಷ).

ತನ್ನನ್ನು ಸೇವಿಸುವ ಯಾದವರ (ಸ್ನಾನಪಾನಾದಿ) ನಲಿವಿಗೋಸ್ಕರ ದ್ವಾರಕೆಯ ಸುತ್ತಲೂ ಸಮುದ್ರವನ್ನು ಅಮೃತಮಯವನ್ನಾಗಿಸಿದವನೂ, ಯುದ್ಧದಲ್ಲಿ ಸಕಲ ದೇವತೆಗಳಿಂದ ವಂದಿತನೂ, ಪ್ರಿಯನೂ ಎಂದು ಪ್ರತಿಪಾದಿಸುವ, ಭಸ್ಮಧಾರಿಯಾದ ಶಿವನ ಮಾಹಾತ್ಮ್ಯವನ್ನು ಸೇವಿಸುವವರಿಗೆ ತುಂಬಾ ಅಪ್ರೀತಿಕರವಾದ ಋಗ್ವೇದದ ಮಾತು ಶ್ರೀಕೃಷ್ಣನಿಂದ ಶಿವನನ್ನು ಬೇರೆಯಾದವನೆಂದು ಸ್ಥಾಪಿಸುವುದು; ಆಶ್ಚರ್ಯ ! (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ [5]ಶ್ರೀವಾಸಿಷ್ಠಕೃಷ್ಣರೂಪದ ವರ್ಣನೆಯೊಂದಿಗೆ ಶ್ರೀಯಾದವಕೃಷ್ಣರೂಪದ ವರ್ಣನೆ ಬಂದಿದೆ.

೨. 'ಶುಭ-ಸ-ಮುದ್ರಕರಂ ಭಜತಾಂ ಮುದೇ ಪ್ರಿಯ-ಮೃಗ-ಅಜಿನತಾ ಅಖಿಲದಾ ಇವ ತಂ ವರಯತೇ: ಸ್ಥಿರಭೂತಿಂ ಅಹೋ ಮುಹುಃ ವಿಭಜತೇ ಭಜತೇ ಅತ್ಯರುಚಿಪ್ರದಾ'

---

೧. ಕಥಯಂತ್ಯಮುಂ ಪರಶುಭಾಸಮಾನಗೋಹತಮರ್ತ್ಯದೇವತಮಸಂ ಮುಹುರ್ಮುಹುಃ।
ಜಗತಾಂ ಹಿತಂ ಹರಿಮಿವಾಪರಂ ಹರಿಂ ಗುರುಶಕ್ತಿತಾಪಸವರಾನ್ವಯೋದ್ಭವಮ್ ॥ -ಸು.ವಿ. (೮/೧೮)

೨. ಶುಭಸಮುದ್ರಕರಂ ದ್ವಾರಕಾಯಾಂ ಪರಿತಃ ಅಮೃತಸಮುದ್ರಕರಮಿತ್ಯರ್ಥಃ। - ವ್ಯಾ.

೩. ಅಖಿಲೋ ಅವಿನಿಷ್ಟಃ ಮೋಕ್ಷಸ್ತಂ ದದಾತೀತ್ಯಖಿಲದಾ ಬ್ರಹ್ಮವಿದ್ಯೇವ। ಯಥಾ ಬ್ರಹ್ಮವಿದ್ಯಾ ನ ಮುಂಚತಿ ತಥಾ ಪ್ರಿಯಮೃಗಾಜಿನತಾಽಪಿ ನ ಮುಂಚತೀತಿ ಭಾವಃ। - ವ್ಯಾ.

೪. ಅತ್ಯರುಚಿಪ್ರದಾ ಅಪ್ರೀತಿದಾ ಋಕ್ 'ನ ತೇ ವಿಷ್ಣೋ ಜಾಯಮಾನಃ' 'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಮ್' 'ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋ' ಇತ್ಯಾದಿ ಋಗ್ವೇದವಾಗಿತ್ಯರ್ಥಃ। ವರಯತೇ ವೃಣೋತಿ ಪ್ರತಿಪಾದಯತೀತ್ಯರ್ಥಃ । ಆಜೌ ಸರ್ವದೇವತಾಜಯೇ ಸತೀದೃಶವೇದವಾಕ್ಯಾನಾಂ ಶ್ರೀಕೃಷ್ಣಪ್ರತಿಪಾದನೇ ಅವಕಾಶೋ ಜಾತ ಇತ್ಯರ್ಥಃ। - ವ್ಯಾ.

೫. "ಚರ್ಮ ಚೈಣಂ ವಸಾನಃ"(ಮ.ಭಾ.ತಾ.ನಿ.-೧೦/೫೩)ಇತ್ಯುಕ್ತೇಃ ವೇದವ್ಯಾಸಃ ಸದಾ ಕೃಷ್ಣಾಜಿನಧಾರೀತ್ಯರ್ಥಃ। -ವ್ಯಾ.

ಎಂದು ವೇದವ್ಯಾಸಪಕ್ಷದಲ್ಲೂ, 'ಶುಭ-ಸಮುದ್ರ-ಕರಂ ಭಜತಾಂ ಮುದೇ ಪ್ರಿಯಂ ಋಕ್ ಆಜಿ-ನತ-ಅಖಿಲದೇವತಂ ವರಯತೇ [1] ಸ್ಥಿರ-ಭೂತಿ-ಮಹಃ ಮುಹುಃ ವಿಭಜತೇ ಭಜತೇ ಅತ್ಯರುಚಿಪ್ರದಾ' ಎಂದು ಕೃಷ್ಣಪಕ್ಷದಲ್ಲೂ ಅನ್ವಯ.

೩. 'ವರಯತೇಃ' ಎಂಬುದು ವೇದವ್ಯಾಸಪಕ್ಷದಲ್ಲಿ ಅನ್ವಯವಾದರೆ, 'ವರಯತೇ ಎಂಬುದು ಕೃಷ್ಣಪಕ್ಷದಲ್ಲಿ ಅನ್ವಯ.

೪. ಶ್ರೀವೇದವ್ಯಾಸರೂಪವು ಕೃಷ್ಣಾಜಿನವನ್ನು ಧರಿಸಿದ ರೂಪ ಎಂಬ ಚಿಂತನೆ ವಿಹಿತ ಎಂಬುದನ್ನು ಶ್ರೀವೇದವ್ಯಾಸರು ಕೃಷ್ಣಾಜಿನರಹಿತವಾಗಿ ತನ್ನನ್ನು ಚಿಂತಿಸುವುದನ್ನು ಮೆಚ್ಚಲಾರರು ಎನ್ನುವ ಮೂಲಕ ತಿಳಿಸಿರುವರು; ಅದು ಅವರಿಗೆ ಹಾಗೆ ಅತ್ಯಂತ ಪ್ರಿಯವಾಗಲು ಅದು ಸಕಲೇಷ್ಟಗಳನ್ನೂ ನೀಡುವ ಬ್ರಹ್ಮವಿದ್ಯೆಯ ಸಂಕೇತದಂತಿರುವುದು ಎಂಬ ವಿಶೇಷಾಂಶವು ಇಲ್ಲಿ ಸೂಚಿತ. ಇದು ಸುಮಧ್ವವಿಜಯದಲ್ಲಿ ಶ್ರೀವೇದವ್ಯಾಸರು ಧರಿಸಿರುವ ಬ್ರಹ್ಮಸೂತ್ರ (ಯಜ್ಞೋಪವೀತ)ವನ್ನು ಬ್ರಹ್ಮಸೂತ್ರಕ್ಕೆ ಹೋಲಿಸಿರುವ ಹಿನ್ನೆಲೆಯಲ್ಲಿ ಈ ಚಿಂತನೆ ಅತ್ಯಂತ ಸಮೀಚೀನವೆನ್ನಿಸುವುದು[2].

೫. ಶ್ರೀಕೃಷ್ಣನು ದ್ವಾರಕೆಯ ನಿರ್ಮಾಣದ ಬಳಿಕ ಅದರ ಸುತ್ತಲಿನ ಸಮುದ್ರವನ್ನು ಅಮೃತಮಯವನ್ನಾಗಿಸಿದ ವಿಶಿಷ್ಟ ಮಾಹಾತ್ಮ್ಯ ಅವನ ಸರ್ವೋತ್ತಮತ್ವಕ್ಕೆ ಸಾಧಕ[3].

೬. ಪರಬ್ರಹ್ಮನಾದ ಶ್ರೀಕೃಷ್ಣನ ಅನುಗ್ರಹದಿಂದಲೇ ರುದ್ರದೇವರು ತಮ್ಮ ಪದವಿಯನ್ನು ಪಡೆದುಕೊಂಡರು ಎಂಬ ಋಗ್ವೇದದ ಮಾತು ಅವರು ಹರಿಯಾದ ಶ್ರೀಕೃಷ್ಣನಿಂದ ಅತ್ಯಂತ ಭಿನ್ನರು ಎಂಬ ಪ್ರಮೇಯವನ್ನು ಪ್ರತಿಪಾದಿಸುವುದು; ಎಂಬದು ಹರಿಹರರ ಅಭೇದವಾದಿಗಳಿಗೆ ನೀಡಿದ ಉತ್ತರವಾಗಿದೆ.

## ಉಡುಪಿ ಶ್ರೀಕೃಷ್ಣರೂಪ-ಕೃಷ್ಣರೂಪಗಳ ವರ್ಣನೆ

ಭಜಕಭಾವಿವಿರಿಂಚಕೃತೇ ಪ್ರಿಯ-
ಪ್ರಣಯಪಾಶವೃತಸ್ತ್ವಮಥೇಷ್ಯಸಿ[4] ।

---

೧. ಸ್ಥಿರಭೂತಿಂ ಶಿವಂ ಮುಹುರ್ವಿಭಜತೇ ಶ್ರೀಕೃಷ್ಣಾದ್ಭಿನ್ನಂ ಕರೋತ್ಯಹೋ । 'ಏದೇ ಹಿ ರುದ್ರೋ ರುದ್ರಿಯಂ ಮಹಿತ್ವಮ್' ಇತ್ಯಾದಿನಾ ರುದ್ರಂ ಶ್ರೀಕೃಷ್ಣಾದ್ಭಿನ್ನಂ ಪ್ರತಿಪಾದಯತೀತ್ಯರ್ಥಃ। - ವ್ಯಾ.

೨. ಹೃದಯೇ ಕೃತಸಜ್ಜನೋದಯೇ ಸುವಿಶಾಲೇ ವಿಮಲೇ ಮನೋಹರೇ।
ಉಭಯಂ ವಹತಿ ತ್ರಯೀಮಯಂ ಭಗವಾನ್ ಬ್ರಹ್ಮಸುಸೂತ್ರಮುತ್ತಮಮ್ ॥ - ಸು.ವಿ (೭/೩೩)

೩. ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಮ್। - ಮ.ಭಾ.ತಾ.ನಿ. (೧೭/೧೧೪)

೪. ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ ಗೋಪಾಲಬಾಲಲಲನಾಕರಪೂಜನಂ ಚ।
ವಾರ್ಧಿಂ ವಧೂಗೃಹಮತೀತ್ಯ ಸ ಮಧ್ವನಾಥೋ ಯತ್ರಾಸ್ತಿ ತದ್ರಜತಪೀಠಪುರಂ ಗರೀಯಃ॥
- ತೀರ್ಥಪ್ರಬಂಧ (೧/೯)

ತದವನಿಂ ಶಿವರೂಪ್ಯಮಿತೋಽಬ್ಧಿಗಃ
[೧]ಕುಮತಿನಾಮತಿನಾಶನದಂಡಧೃತ್ ॥ ೧೪ ॥

ತನ್ನನ್ನು ಆರಾಧಿಸುವ ಪ್ರಿಯಭಕ್ತರಲ್ಲಿ ಪ್ರೀತಿಯುಳ್ಳವನೇ, ಪಾಶವನ್ನು ಹಿಡಿದವನೇ, ದುರ್ಬುದ್ಧಿಯ ಜನರನ್ನು ಅತಿಶಯವಾಗಿ ನಾಶಪಡಿಸುವ ದಂಡವನ್ನು ಇನ್ನೊಂದು ಹಸ್ತದಿಂದ ಧರಿಸಿದವನೇ! ಭಾವಿ ಬ್ರಹ್ಮರಾದ ಶ್ರೀಮಧ್ವಾಚಾರ್ಯರಿಗಾಗಿ ನೀನು ದ್ವಾರವತಿಯಿಂದ ಸಮುದ್ರಮಾರ್ಗದಲ್ಲಿ ಅವರ ಜನ್ಮಭೂಮಿಯಾದ ಉಡುಪಿಗೆ ಆಗಮಿಸುವಿ (ಉಡುಪಿಕೃಷ್ಣಪಕ್ಷ).

ಅತ್ಯಂತ ಲಾವಣ್ಯರೂಪದವನೇ! [೨]ಕಂಸ ಮೊದಲಾದ ದುರ್ಬುದ್ಧಿಯವರಿಂದ ಅರಿಯಲಾಗದವನೇ! ಅಜ್ಞಾನವನ್ನು ನಾಶಪಡಿಸುವಂತಹ ದಂಡನೆ ಮಾಡುವವನೇ! ನೀನು ಈಗ ಹೇಗೋ ಹಾಗೆ ಬ್ರಹ್ಮದೇವರ ಮುಂದೆ ಬರಲಿರುವ ದಿನದಲ್ಲಿ ಮೂಲರೂಪದಿಂದ ಕ್ಷೀರಸಮುದ್ರಶಾಯಿಯಾಗಿರುವ ನೀನು ಭಜನೆ ಮಾಡುವ ಭಾವಿಬ್ರಹ್ಮರಿಗಾಗಿ ಭೂಮಿಯ ಮೇಲಿರುವ ಭಕ್ತಜನರ ಪ್ರೀತಿಯ ಪಾಶಕ್ಕೆ ಸಿಲುಕಿ ಆ ಭಕ್ತರು ನೆಲೆಸಿರುವ ಭೂಮಿಗೆ ಆಗಮಿಸುವಿ (ಕೃಷ್ಣಪಕ್ಷ).

ವಿ.: ೧. ಈ ಶ್ಲೋಕದಲ್ಲಿ ಶ್ರೀಹರಿಯ ಉಡುಪಿಕೃಷ್ಣರೂಪದ ಹಾಗೂ ಶ್ರೀಯಾದವ-ಕೃಷ್ಣರೂಪದ[೩] ವರ್ಣನೆ ಬಂದಿದೆ.

೨. ಉಡುಪಿಯ ಕೃಷ್ಣನ ಪರವಾಗಿ ಅವನು ಅವನು ಭಕ್ತರಲ್ಲಿ ಪ್ರೀತಿಯುಳ್ಳವನು, ಒಂದು ಕೈಯಲ್ಲಿ ಪಾಶ ಹಿಡಿದವನು, ಇನ್ನೊಂದು ಕೈಯಲ್ಲಿ ದುರ್ಬುದ್ಧಿಯ ಜನರಿಗೆ ಅತಿಶಯನಾಶವುಂಟುಮಾಡುವ ದಂಡ ಹಿಡಿದವನು, ಭಾವಿಬ್ರಹ್ಮರಾದ ಶ್ರೀಮಧ್ವಾ-ಚಾರ್ಯರಿಗಾಗಿ ಸಮುದ್ರಮಾರ್ಗವಾಗಿ ಅವರ ಅವತಾರಕ್ಷೇತ್ರವಾದ ಉಡುಪಿಗೆ ಆಗಮಿಸುವವನು ಎಂದು ಅರ್ಥ.

---

ಮರುದ್ರೂಪೇ ಗುರೌ ಪ್ರೇಮ್ಣಾ ಹರಿರ್ದ್ವಾರವತೀ ಪುರಾತ್ ।
ನಾವಾ ಸೇವಾತುರಂ ದ್ರಷ್ಟುಕಾಮೋ ದಾಮೋದರಃ ಪ್ರಭುಃ ।
ಆದಾಯಾಯಾಸಹೃತ್ ಸ್ವಾನಾಮಿತಿ ಸರ್ವಸ್ಯ ಸಂಮತಮ್ ॥ –ಸರಸಭಾರತೀವಿಲಾಸಃ (೭/೧೮,೧೯)

೧. ಶ್ರೀಕೃಷ್ಣಕರಸ್ಥದಿವ್ಯಾಯುಧದರ್ಶನೇನಾಸ್ಮಾಕಂ ಸರ್ವಕಾರ್ಯಮಭೂದಿತಿ ದೇವಾನಾಂ ಮನೋರಥ-ಪೂರ್ತಿರ್ಜಾಯತ ಇತಿ ಭಾವಃ । – ವ್ಯಾ.

೨. ಇತರಾಸಾದ್ಯಕಂಸಾದಿಶಿಕ್ಷಣೇ ಸತಿ ತ್ವಮಪ್ಯೇಕೋ ಮನುಷ್ಯ ಇತಿ ಅಜ್ಞಾನಂ ವಿವೇಕವತಾಮ್ ಪ್ರಣಶ್ಯತೀತ್ಯರ್ಥಃ । – ವ್ಯಾ.

೩. ತದವನಿಂ ತಸ್ಯ ಶ್ರೀಮಧ್ವಾಚಾರ್ಯಸ್ಯ ಜನ್ಮಭೂಮಿಂ ಶಿವರೂಪ್ಯಂ ಶಿವರೂಪ್ಯಾಖ್ಯಂ ಗ್ರಾಮಮ್ । ತದ್ದೇಶಭಾಷಾಯಾಂ ಶಿವಬೆಲ್ಲೀತಿ ಪ್ರಸಿದ್ಧಮಿತಿ । ಏಷ್ಯಸಿ ಗಮಿಷ್ಯಸಿ । ರೂಪ್ಯಪೀಠಪುರಾಧಿವಾಸಿನಃ ಶ್ರೀಕೃಷ್ಣಸ್ಯ ಮಹಿಮಾ ವರ್ಣಿತಃ । –ವ್ಯಾ.
ಶಿವರೂಪ್ಯನಾಮಾ ಶಿವವಲ್ಲೀತ್ಯಪಭ್ರಷ್ಟಭಾಷಾಯಾಮ್ । –ಸುಮಧ್ವವಿಜಯ ಭಾವಪ್ರಕಾಶಿಕಾ(೨/೧೦)

೩. ಯಾದವಕೃಷ್ಣನ ಪರವಾಗಿ – ಶ್ರೀಕೃಷ್ಣನು ಅತಿಶಯಲಾವಣ್ಯದ ರೂಪ ಉಳ್ಳವನು, ಕಂಸ ಜರಾಸಂಧಾದಿಗಳಿಂದ ತಿಳಿಯಲ್ಪಡದ ಅವನು ಅಜ್ಞಾನವನ್ನು ಪರಿಹರಿಸಲೆಂದು ದಂಡನೆಯನ್ನು ಮಾಡುವನು; ಮೂಲರೂಪದಲ್ಲಿ ಕ್ಷೀರಸಾಗರಶಾಯಿಯಾದ ಅವನು ಭಕ್ತರಾದ ಭಾವಿಬ್ರಹ್ಮ ವಾಯುದೇವರಿಗಾಗಿ ಭೂಮಿಯಲ್ಲಿ ನೆಲೆಸಿರುವ ಭಕ್ತಜನರ ಮೇಲಿನ ಪ್ರೀತಿಯ ಪಾಶಕ್ಕೆ ಒಳಗಾಗಿ ಅವರ ನೆಲೆಯಾದ ಭೂಮಿಗೆ ಪ್ರತಿ ಬ್ರಹ್ಮದೇವರ ದಿನದಲ್ಲೂ ಅವತರಿಸುವವನು ಎಂದು ಅರ್ಥ.

೪. 'ಭಜಕ–ಭಾವಿ–ವಿರಿಂಚ–ಕೃತೇ ಪ್ರಿಯಪ್ರಣಯ–ಪಾಶವೃತಃ ತ್ವಂ ಅಥ–ಏಷ್ಯಸಿ ತದವನಿಂ ಶಿವರೂಪ್ಯಂ – ಇತಃ ಅಬ್ಧಿಗಃ – ಕುಮತಿನಾಂ – ಅತಿನಾಶನದಂಡಧೃತ್' ಎಂಬುದಾಗಿ ಉಡುಪಿಕೃಷ್ಣಪಕ್ಷಕ್ಕೂ, 'ಭಜಕಭಾವಿವಿರಿಂಚಕೃತೇ ಪ್ರಿಯಪ್ರಣಯಪಾಶವೃತಃ ತ್ವಂ ಅಥ ಏಷ್ಯಸಿ ತದವನಿಂ ಶಿವರೂಪೀ ಅಮಿತಃ ಅಬ್ಧಿಗಃ ಕುಮತಿನಾ ಅಮತಿನಾಶನದಂಡಧೃತ್' ಎಂಬುದಾಗಿ ಯಾದವಕೃಷ್ಣಪಕ್ಷಕ್ಕೂ ಅನ್ವಯ.

೫. ಶ್ರೀಮದಾಚಾರ್ಯರು ಮೊದಲು ಅವತರಿಸಿದ್ದು ಉಡುಪಿಯಲ್ಲಿ ಎಂಬುದು ವಾಯುಸ್ತುತಿ ಹಾಗೂ ಸುಮಧ್ವವಿಜಯಗಳಿಂದ ಸ್ಪಷ್ಟ[೧]. ಆದ್ದರಿಂದ ಅವರ ಜನ್ಮಭೂಮಿಯಾದ ಶಿವರೂಪ್ಯ ಎಂದರೆ ಉಡುಪಿ ಎಂಬ ಅರ್ಥ ಸೂಕ್ತವೆನ್ನಿಸುವುದು.

೬. ಶ್ರೀಕೃಷ್ಣಾವತಾರವು ಬ್ರಹ್ಮದೇವರ ಪ್ರತಿ ದಿನಕಲ್ಪದಲ್ಲೂ ಆಗುವುದೆಂಬ ವ್ಯಾಖ್ಯಾನದಲ್ಲಿಯ ವಿಶೇಷಾಂಶ ಗಮನಾರ್ಹ[೨].

### [೩]ಮತ್ಸ್ಯರೂಪ-ಕೃಷ್ಣರೂಪಗಳ ವರ್ಣನೆ

ಭುವನವಾಸ್ಯನಿಶಂ ಮನುಸಂಸ್ತುತೋ
[೪]ವಿಧಿವಿರೋಧಿವಿನಾಶಕೃದನ್ವಹಮ್ ।
ಅನಿಮಿಷಪ್ರಭುರಾಗಮಹರ್ಷದೋ
ನಿಜವಶೋ ಜವಶೋಭಿತಸಾಗರಃ[೫] ॥ ೧೫ ॥

ಸದಾ ಜಲದಲ್ಲಿ ವಾಸಿಸುವ, ಬ್ರಹ್ಮದೇವರ ಪ್ರತಿದಿನದಲ್ಲೂ ವೈವಸ್ವತಮನುವಿನಿಂದ ಚೆನ್ನಾಗಿ ಸ್ತುತಿಸಲ್ಪಡುವ, ಬ್ರಹ್ಮದೇವರ ವಿರೋಧಿಗಳನ್ನು ಸದೆಬಡಿಯುವ, ವೇದಗಳನ್ನು ತಂದುಕೊಡುವ

---

೧. ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ ರೂಪ್ಯಪೀಠಾಭಿಧಾನೇ । – ವಾಯುಸ್ತುತಿ (೩೯)
ಅಂಶೇನ ವಾಯುರವತೀರ್ಯ ಸ ರೂಪ್ಯಪೀಠೇ । – ಸು.ವಿ.(೨/೨೪)

೨. ಬ್ರಹ್ಮಣೋ ದಿನೇ ದಿನೇಽಪ್ಯೇವಮೇವಾವತಾರಂ ಕರಿಷ್ಯಸೀತ್ಯರ್ಥಃ । – ವ್ಯಾ.

೩. ಚತುರಾನನಾಯ ಚತುರಃ ಪುರಾಽಽಗಮಾನ್ ಪ್ರದದಾವಸಾವನಿಮಿಷೇಶ್ವರಃ ಪ್ರಭುಃ ।
ವಿನಿಹತ್ಯ ಹಿ ಶ್ರುತಿಮುಷಂ ಪುರಾತನಂ ವಪುಷೋದ್ಧತಂ ಹಯಮುಖೇನ ಸದ್ರಿಪುಮ್ ॥ –ಸು.ವಿ.(೮/೧೪)

೪. ವಿಧೇರ್ಬ್ರಹ್ಮಣಃ ವಿರೋಧಿನಃ ತನ್ಮುಖಸ್ಥವೇದಾಪಹಾರಿದೈತ್ಯಸ್ಯವಿನಾಶಕೃತ್ ಆಗಮಾನಾಂ ವೇದಾನಾಂ ಹರ್ಷದಃ । ದೈತ್ಯಾಪಹೃತಾನ್ ವೇದಾನಾನೀಯ ಪುನಃ ಪ್ರಚಾರಕರಣೇನ ತೇಷಾಂ ಹರ್ಷದ ಇತ್ಯರ್ಥಃ । –ವ್ಯಾ.

೫. ತ್ವರಯಾ ಇತಸ್ತತೋ ಗಮನೇ ಸತಿ ಸ್ವಕಾಂತ್ಯಾ ಸಮುದ್ರಸ್ಯಾಪಿ ಶೋಭಾಂ ಜನಯನ್ನಿತ್ಯರ್ಥಃ । – ವ್ಯಾ.

ಮೂಲಕ ಹರ್ಷನೀಡುವ ವೇಗದಿಂದ ಪ್ರಳಯಸಮುದ್ರಕ್ಕೆ ಶೋಭೆನೀಡುವ, ಮೀನುಗಳಿಗೆ ಪ್ರಭುವಾದ, ಮತ್ಸ್ಯರೂಪದ ಶ್ರೀಹರಿಯು ತನ್ನ ಭಕ್ತರಿಗೆ ವಶನಾಗುವವನಾಗಲಿ (ಮತ್ಸ್ಯಪಕ್ಷ).

ಸದಾ ಲೋಕಗಳಲ್ಲಿ ನೆಲೆಸಿರುವ, ಸದಾ ಕೃಷ್ಣಮಂತ್ರದಿಂದ ಸ್ತುತಿಸಲ್ಪಡುವ, ವಿಹಿತವಾದ ರಾಜಸೂಯಯಜ್ಞಾದಿ ಸತ್ಕರ್ಮಾನುಷ್ಠಾನಕ್ಕೆ ವಿರೋಧಿಗಳಾದ ಜರಾಸಂಧಾದಿ ದೈತ್ಯರನ್ನು ನಾಶಪಡಿಸುವ, ಇಂದ್ರಪ್ರಸ್ಥಕ್ಕೆ ಆಗಮಿಸುವ ಮೂಲಕ ಪಾಂಡವರಿಗೆ ಹರ್ಷಪ್ರದನಾದ, ಪುನಃ ಮರಳುತ್ತ ತನ್ನ ಗಮನದ ವೇಗದಿಂದ ಸಾಗರಕ್ಕೆ ಶೋಭೆ ನೀಡುವ, ದೇವತೆಗಳ ಪ್ರಭುವಾದ ಶ್ರೀಕೃಷ್ಣನು ತನ್ನ ಭಕ್ತರಿಗೆ ವಶನಾಗುವವನಾಗಲಿ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಮತ್ಸ್ಯರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಇಲ್ಲಿಂದ ೨೪ನೇ ಶ್ಲೋಕದವರೆಗೆ ಕ್ರಮವಾಗಿ ಮತ್ಸ್ಯಾದಿ ದಶಾವತಾರಗಳ ವರ್ಣನೆ ಬಂದಿದೆ.

೩. ಇಲ್ಲಿ ಮತ್ಸ್ಯಪಕ್ಷಕ್ಕೆ 'ಭುವನ'[1] ಎಂಬುದಕ್ಕೆ ಜಲ ಎಂದೂ ಮನು ಎಂಬುದಕ್ಕೆ ವೈವಸ್ವತಮನು ಎಂದೂ ವಿಧಿ ಎಂಬುದಕ್ಕೆ ಬ್ರಹ್ಮ ಎಂದೂ ಅನಿಮಿಷ ಎಂಬುದಕ್ಕೆ ಮತ್ಸ್ಯ ಎಂದೂ ಆಗಮ ಎಂಬುದಕ್ಕೆ ವೇದ ಎಂದೂ ಅರ್ಥ; ಕೃಷ್ಣಪಕ್ಷಕ್ಕೆ ಭುವನ ಎಂಬುದಕ್ಕೆ ಲೋಕ ಎಂದೂ ಮನು ಎಂಬುದಕ್ಕೆ ಕೃಷ್ಣಮಂತ್ರ ಎಂದೂ ವಿಧಿ ಎಂಬುದಕ್ಕೆ ವಿಹಿತವಾದ ರಾಜಸೂಯಾದಿ ಸತ್ಕರ್ಮಾನುಷ್ಠಾನ ಎಂದೂ [2]ಅನಿಮಿಷ ಎಂಬುದಕ್ಕೆ ದೇವತೆ ಎಂದೂ, ಆಗಮ ಎಂಬುದಕ್ಕೆ ಆಗಮನ ಎಂದೂ ಅರ್ಥ.

## ಕೂರ್ಮರೂಪ-ಕೃಷ್ಣರೂಪಗಳ ವರ್ಣನೆ

[3]ಭುಜಗದಿಕ್ಕರಿಭಾರಜಶೋಕಹೃತ್[4]
ಸುರಮನೋರಥಪೂರಣಕಾರಣಃ ।

---

೧. 'ಭುವನಂ ಚಾಂಬುಲೋಕೇಷು' ಇತಿ ರತ್ನಮಾಲಾ । – ವ್ಯಾ.
ಜೀವನಂ ಭುವನಂ ವನಮ್ । – ಅಮರಕೋಶ.

೨. 'ಅನಿಮಿಸಶ್ಚಾನಿಮೇಷೌ ದ್ವಾವೇತೌ ಸುರಮತ್ಸ್ಯಯೋಃ' ಇತಿ ರತ್ನಮಾಲಾ – ವ್ಯಾ.

೩. ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ ।
ವಿದಧೇ ವರಾಹವಪುಷಾಽಮುನೋರ್ಮಿಮತ್ಸ್ಯತಿಸಿಂಧುಕಚ್ಛಪತಯಾಽಪ್ತರಕ್ಷಿಣಾ ॥ –ಸು.ವಿ.(೮/೧೫)
ವೀಚಿಮದ್ವ್ಯಾಪ್ತಿಕೇ ಸಮುದ್ರೇ ಕೂರ್ಮತಯಾ । ಗರ್ಭೀಭಾವಜನನವೃದ್ಧಿಪರಿಣಾಮಾಪಕ್ಷಯವಿನಾಶಾಖ್ಯೋರ್ಮಿಮತ್ಸಂಸೃತಿಸಮುದ್ರಸ್ಯ ಕಚ್ಛಂ ಮೋಕ್ಷಂ ಚ ಪಾತಿ । – ಸು.ವಿ.(ಭಾ.ಪ್ರ.)
ಕೂರ್ಮಸ್ವರೂಪಕ ಮಂದರಧಾರಿನ್ ಲೋಕವಿಧಾರಕ ದೇವವರೇಣ್ಯ । –ದ್ವಾದಶಸ್ತೋತ್ರ (೬/೨)
ಸುರದಿತಿಜಸುಬಲವಿಲುಲಿತಮಂದರಧರ ವರಕೂರ್ಮ ಹೇ ಭವ ಮಮ ಶರಣಮ್। –ದ್ವಾದಶಸ್ತೋತ್ರ(೯/೬)

೪. ಭೂಭಾರಹರಣಾರ್ಥಮವತೀರ್ಣಸ್ಯಾಮೋಘಚಕ್ರಗದಾದ್ಯಾಯುಧವತಃ ಬಹುವಾರಂ ಬಹುತರಜರಾಸಂಧ-ಸೇನಾಸಂಹಾರಂ ಕೃತವತಃ ಬಾಲ್ಯೇಽಪಿ ಗಿರ್ಯುದ್ಧರಣಸಮರ್ಥಸ್ಯ ಶ್ರೀಕೃಷ್ಣಸ್ಯ ಶತ್ರುಭಯಾದಿಹಾಗಮನಂ ನೇತಿ ಸೂಚನಾಯ ವಿಶೇಷಣಪಂಚಕಮ್ । – ವ್ಯಾ.

[೧]ಸ್ವಮತವಾರಿನಿಧೇರ್ಮಥನೇ ಪಟು-
ರ್ಗಿರಿಧರೋಽರಿಧರೋಽಯಮಿಹಾಗತಃ ॥೧೬॥

ಆದಿಶೇಷನಿಗೂ ದಿಗ್ಗಜಗಳಿಗೂ ಭೂಮಿ, ಬೆಟ್ಟ ಮೊದಲಾದವುಗಳ ಭಾರದಿಂದ ಉಂಟಾದ ಶೋಕವನ್ನು ಪರಿಹರಿಸುವ, ದೇವತೆಗಳ ಅಮೃತಪಾನದ ಬಯಕೆಯನ್ನು ಪೂರೈಸಲು ಕಾರಣನಾದ, ತನಗೆ ಸಮ್ಮತವಾದ ಕ್ಷೀರಸಮುದ್ರ ಮಥನದಲ್ಲಿ ಸಮರ್ಥನಾದ, ಮಂದರ ಪರ್ವತವನ್ನು ಧರಿಸಿದ, ಚಕ್ರಪಾಣಿಯಾದ ಈ ಕೂರ್ಮರೂಪಿಯಾದ ಶ್ರೀಹರಿಯು ಈ ಕ್ಷೀರಸಮುದ್ರಪ್ರದೇಶಕ್ಕೆ ಬಂದವನಾದನು (ಕೂರ್ಮಪಕ್ಷ).

ಶೇಷನಿಗೂ ದಿಗ್ಗಜಗಳಿಗೂ ಭೂಭಾರಭೂತರಾದ ದೈತ್ಯರ ಸಂಹಾರದ ಮೂಲಕ ಶೋಕವನ್ನು ಪರಿಹರಿಸಿದ, ದೇವತೆಗಳ ಬಯಕೆಯನ್ನು ಪೂರೈಸಲು ಕಾರಣವಾದ ಚಕ್ರಾದಿ ಆಯುಧಸಮೂಹವನ್ನು ಹೊಂದಿದ, ತನಗೆ ಸಮ್ಮತರಲ್ಲದ ದೈತ್ಯರೂಪದ ಸಮುದ್ರದ ಮಥನಕಾರ್ಯದಲ್ಲಿ ಸಮರ್ಥನಾದ, ಗೋವರ್ಧನಗಿರಿಯನ್ನು ಧರಿಸಿದ, ಚಕ್ರಪಾಣಿಯಾದ ಈ ಶ್ರೀಕೃಷ್ಣನು ದ್ವಾರಾವತಿಗೆ ಆಗಮಿಸಿರುವನು. (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಕೂರ್ಮರೂಪದ ಹಾಗೂ ಶ್ರೀಕೃಷ್ಣರೂಪದ[೨] ವರ್ಣನೆ ಬಂದಿದೆ.

೨. [೩]ಕೂರ್ಮರೂಪದಿಂದ ಶ್ರೀಹರಿಯು ಬ್ರಹ್ಮಾಂಡವನ್ನು ಧರಿಸಿರುವುದರಿಂದ ಆದಿ-ಶೇಷನಿಗೂ, ದಿಗ್ಗಜಗಳಿಗೂ ಆ ಭಾರ ಹೊರುವ ಶೋಕ ಪರಿಹಾರವಾಗಿದೆ ಎಂಬುದು ಕೂರ್ಮರೂಪಕ್ಕೆ ಅನ್ವಯಿಸುವ ವಿಶೇಷಾಂಶ[೪].

---

೧. ಸ್ವಪೃಷ್ಠೇನ ಗಿರೇರ್ಧಾರಣಾಭಾವೇ ಮಥನಾಸಂಭವಾತ್ ಕೂರ್ಮ ಏವ ಮಥನೇ ನಿರ್ಮಥನೇ ಪಟುರಿತ್ಯಾಶಯಾತ್ । – ವ್ಯಾ.

೨. ಅಯಂ ಶ್ರೀಕೃಷ್ಣಃ ಇಹ ದ್ವಾರವತ್ಯಾಮಾಗತಃ ಭೂಭಾರಹರಣಾರ್ಥಮವತೀರ್ಣಸ್ಯಾಮೋಘಚಕ್ರಗದಾದ್ಯಾ-ಯುಧವತಃ ಬಹುವಾರಂ ಬಹುತರಜರಾಸಂಧಸೇನಾಸಂಹಾರಂ ಕೃತವತಃ ಬಾಲ್ಯೇಽಪಿ ಗಿರ್ಯುದ್ಧರಣಸಮರ್ಥಸ್ಯ ಶ್ರೀಕೃಷ್ಣಸ್ಯ ಶತ್ರುಭಯಾದಿಹಾಗಮನಂ ನೇತಿ ಸೂಚನಾಯ ವಿಶೇಷಣಪಂಚಕಮ್ । –ವ್ಯಾ.

೩. ಬಹುಭಾರವಶಾಜ್ಜಲೇ ನಿಮಜ್ಜತಾಂ ಶೇಷದಿಗ್ಗಜಾಹೀನಾಮ್ ಆಧಾರತಯಾ ವಾಯುಕೂರ್ಮೇ ಅಂತರ್ಯಾವಿಽಕೂರ್ಮರೂಪೇಣಾವಸ್ಥಾನಾದಿತಿ ಭಾವಃ । – ವ್ಯಾ.

೪. ಅಥಾತಿಭಾರಾದವಿಶತ್ ಸುಕಾಂಚನೋ ಗಿರಿಃ ಸ ಪಾತಾಲಮಥ ತ್ವಮೇವ ।
ತಂ ಕಚ್ಛಪಾತ್ಮಾ ತ್ವಭರಃ ಸ್ವಪೃಷ್ಠೇ ಹ್ಯನನ್ಯಧಾರ್ಯಂ ಪುರುಲೀಲಯೈವ ॥ ಸು.ವಿ(೧೦/೧೧)
ಸುರಾಸುರಾಣಾಮುದಧಿಂ ವಿಮಥ್ನತಾಂ ದಧಾರ ಪೃಷ್ಠೇನ ಗಿರಿಂ ಸ ಮಂದರಮ್ ।
ವರಪ್ರದಾನಾದಪರೈರಧಾರ್ಯಂ ಹರಸ್ಯ ಕೂರ್ಮೋ ಬೃಹದಂಡವೋಢಾ ॥ ಸು.ವಿ.(೩/೪೪)
ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ॥
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ ।

೩. ಶ್ರೀಕೃಷ್ಣರೂಪದಿಂದ ಭೂಭಾರಭೂತವಾದ ದೈತ್ಯವೃಂದವನ್ನು ಸಂಹರಿಸಿದ್ದರಿಂದ ಆದಿಶೇಷನಿಗೂ, ದಿಗ್ಗಜಗಳಿಗೂ ಭಾರ ಕಡಿಮೆಯಾಯಿತು ಎಂಬುದು ಕೃಷ್ಣರೂಪಕ್ಕೆ ಅನ್ವಯಿಸುವ ವಿಶೇಷಾಂಶ[೧].

## ವರಾಹರೂಪ-ಕೃಷ್ಣರೂಪಗಳ ವರ್ಣನೆ

[೨]ಸ್ವವಶಗೋ ರಿಪುಭೀಷಣಚೇಷ್ಟಿತೋ
ವರವರಾಹತಯಾ ದವಕೃದ್ದ್ವಿಷಾಮ್ ।
ಮಖಸಹಾಯಕೃತಿರ್ಧರಯಾಽರ್ಚಿತಃ
ಕಮಲಯಾಽಮಲಯಾಽಯಮಹೋ ವೃತಃ ॥ ೧೭ ॥

ಭೂಮಿಯನ್ನು ತನ್ನ ಅಧೀನದಲ್ಲಿ ಇರಿಸಿಕೊಂಡಿರುವ, ತನ್ನ ಶತ್ರುವಾದ ಹಿರಣ್ಯಾಕ್ಷನಿಗೆ ಭಯಹುಟ್ಟಿಸುವ ಕಾರ್ಯ ಮಾಡಿದ, ಶ್ರೇಷ್ಠವಾದ ವರಾಹರೂಪದಿಂದ ದೈತ್ಯರನ್ನು ಭಸ್ಮಮಾಡಿದ, ಯಜ್ಞಕ್ಕೆ ಸಾಧನವೆನ್ನಿಸಿದ ಕುಶಾದಿಗಳನ್ನು ತನ್ನ ಅಂಗದಿಂದ ಹುಟ್ಟಿಸಿದ, ಭೂದೇವಿಯಿಂದ ಆರಾಧಿತನಾದ, ಈ ವರಾಹರೂಪದ ಶ್ರೀಹರಿಯು ನಿರ್ಮಲೆಯಾದ ಮಹಾಲಕ್ಷ್ಮಿಯಿಂದ ವರಿಸಲ್ಪಟ್ಟವನಾಗಿರುವನು. ಅದ್ಭುತ ! (ವರಾಹಪಕ್ಷ).

ತನ್ನ ಅಧೀನದಲ್ಲಿದ್ದ ಗೋವುಗಳಿಗೆ ವಿರೋಧಿಗಳಾದ ಹುಲಿ, ಕಾಡುಕೋಣ ಮೊದಲಾದವುಗಳಿಗೆ ಭಯಂಕರವೆನ್ನಿಸುವ ನಡತೆಯ, ದೈತ್ಯರಿಗಿದ್ದ ಶ್ರೇಷ್ಠರಾದ ರುದ್ರಾದಿಗಳ ವರಗಳಿಂದ ಯಾದವರನ್ನು ಪಾಲಿಸಿದ, ರಾಜಸೂಯಯಾಗಕ್ಕೆ ಸಹಾಯವನ್ನು ಮಾಡಿದ, ಯೋಗ್ಯರಾದ ಪಾಂಡವರಿಗೆ ಸಂಪತ್ತನ್ನು ಒದಗಿಸಿದಂತಹ, ಭೂದೇವಿಯಿಂದ ಪೂಜಿತನಾದ ಈ ಶ್ರೀಕೃಷ್ಣನು ರುಗ್ಮಿಣಿಯಿಂದ ವರಿಸಲ್ಪಟ್ಟವನಾಗಿರುವನು. ಆಶ್ಚರ್ಯ! (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ವರಾಹರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

---

ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ॥ – ವೈಭವೇ (ಬೃಹದ್ಭಾಷ್ಯ)
ಸ ಏಷ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ॥ ಇತಿ ಪ್ರಭಂಜನೇ । – (ಬೃಹದ್ಭಾಷ್ಯ)

೧. ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ ।
ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥
ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥ – ಕೃಷ್ಣಾರ್ಘ್ಯಮಂತ್ರ. – ಜಯಂತೀನಿರ್ಣಯ

೨. ಶ್ರೀಕೃಷ್ಣವಶಾನಾಂ ಯಾದವಾನಾಂ ರುದ್ರಾದಿವರೋಽಕಿಂಚಿತ್ಕರ ಇತಿ ಭಾವಃ । – ವ್ಯಾ.

೨. 'ವರವರಾಹತಯಾ' ಎಂಬುದಾಗಿ ವರಾಹಪಕ್ಷಕ್ಕೂ, 'ವರವರ-ಅಹತ-ಯಾದವ-ಕೃತ್' ಎಂಬುದಾಗಿ ಕೃಷ್ಣಪಕ್ಷಕ್ಕೂ ಅನ್ವಯ.

### [೧]ನರಸಿಂಹರೂಪ-ಕೃಷ್ಣರೂಪಗಳ ವರ್ಣನೆ

[೨]ಅರಿಹಿರಣ್ಯಕಸಂಕ್ಷಯಕಾರಕಂ
ನರಮೃಗಾಧಿಪಮದ್ಭುತಚೇಷ್ಟಿತಮ್ ।
[೩]ಅಘಕೃದಿಂದ್ರಕೃತಾರ್ಚನತೋಷಿತಂ
ಭಜ ಮನೋ[೪]ಽಜಮನೋಹರವಿಕ್ರಮಮ್ ॥ ೧೮ ॥

ಶತ್ರುವಾದ ಹಿರಣ್ಯಕಶಿಪುವಿಗೆ ಅಳಿವನ್ನುಂಟುಮಾಡಿದ, ಅದ್ಭುತಕಾರ್ಯದ, [೫]ವೃತ್ರಹತ್ಯಾ-ರೂಪವಾದ ಪಾಪವೆಸಗಿದ ಇಂದ್ರನಿಂದ ಪೂಜಿತನಾದ, ಬ್ರಹ್ಮದೇವರಿಗೆ ಮನೋಹರವಾದ ಪ್ರತಾಪದಿಂದ ಕೂಡಿದ, ನರಸಿಂಹರೂಪದ ಶ್ರೀಹರಿಯನ್ನು ಎಲೈ ಮನಸ್ಸೇ ! ಭಜಿಸು (ನರಸಿಂಹಪಕ್ಷ).

ಶತ್ರುಗಳ ಹಿರಣ್ಯಾದಿರೂಪ ಸಂಪತ್ತನ್ನು ನಾಶಪಡಿಸಿದ, ಅದ್ಭುತವಾದ ಲೀಲೆಗಳನ್ನು ತೋರಿದ, ಅಪರಾಧವೆಸಗಿದ ಇಂದ್ರನಿಂದ ಪೂಜಿತನಾಗಿ ಸಂತೋಷಪಟ್ಟ, ಮನ್ಮಥನಿಗೂ ಮನೋಹರವಾದ ಗಮನವುಳ್ಳ ಪುರುಷೋತ್ತಮನಾದ ಶ್ರೀಕೃಷ್ಣನನ್ನು ಎಲೈ ಮನಸ್ಸೇ ! ಸೇವಿಸು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ನರಸಿಂಹರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

---

೧. ನರಸಿಂಹ ಏಷ ವಿದದಾರ ದಾರುಣಂ ಪ್ರತಿಘೋದಯೇ ನಖರಚಕ್ರತೇಜಸಾ ।
ಸ್ವರಿಪುಂ ಕ್ಷಣೇನ ಸರಸಃ ಸ್ಫುರತ್ತನುಂ ಪೃಥುಸತ್ತ್ವಮಿಷ್ಟಜನಭೀತಿಭಂಜನಃ ॥ -ಸು.ವಿ.(೮/೧೬)
ನರಸಿಂಹಃ ಪುರುಷೋತ್ತಮಶ್ಚ । -ಸು.ವಿ.(ಭಾ.ಪ್ರ.)

೨. ಅರೀಣಾಂ ಶತ್ರೂಣಾಂ ದುರ್ಯೋಧನಾದೀನಾಂ ಹಿರಣ್ಯಮೇವ ಸುವರ್ಣಮೇವ ಹಿರಣ್ಯಕಂ ತಸ್ಯ ಸಂಕ್ಷಯಕಾರಕಂ ದುರ್ಯೋಧನಾದೀನಾಂ ಸಂಪದ್ವಿನಾಶಕಮಿತ್ಯರ್ಥಃ। - ವ್ಯಾ.

೩. ಅಘಕೃತ್ ವೃತ್ರಹತ್ಯಾರೂಪಪಾಪಕೃತ್ ಇಂದ್ರಸ್ತೇನ ಕೃತಂ ಅರ್ಚನಂ ಭಜನಂ ತೇನ ತೋಷಿತಂ ವೃತ್ರಹತ್ಯಾ ದೋಷಪರಿಹಾರಾಯ ಇಂದ್ರೇಣ ನೃಸಿಂಹಾರ್ಚನಂ ಕೃತಮಿತಿ ಪುರಾಣೇ ಪ್ರಸಿದ್ಧಮ್ । -ವ್ಯಾ.
ಸ್ಮರಣಾತ್ ತು ನೃಸಿಂಹಸ್ಯ ಶಕ್ರೋ ಮುಕ್ತೋ ಬೃಹದ್ವಧಾತ್ ।
ಹಿರಣ್ಯಕಹೃತಾಶ್ಚಾಪಿ ತಥೈವಾಪ್ಸರಸಾಂ ಗಣಾಃ ॥ -ಇತಿ ಭಾಗವತತಾತ್ಪರ್ಯೋದ್ಧೃತ ಭವಭಂಜನವಚನಮ್

೪. ಅಜಃ ಶಂಭೌ ವಿಷ್ಣುಧಾತ್ರೋಃ ಕಾಮೇ ಛಾಗೇ ರಘೋಃ ಸುತೇ ಇತಿ ರತ್ನಮಾಲಾ - ವ್ಯಾ.

೫. ವೃತ್ರಹತ್ಯಾದೋಷಪರಿಹಾರಾಯ ಇಂದ್ರೇಣ ನೃಸಿಂಹಾರ್ಚನಂ ಕೃತಮಿತಿ ಪುರಾಣೇ ಪ್ರಸಿದ್ಧಮ್ । - ವ್ಯಾ.

೨. 'ಅಜಮನೋಹರವಿಕ್ರಮಂ' ಎಂಬಲ್ಲಿ 'ಅಜ' ಎಂಬುದಕ್ಕೆ ನರಸಿಂಹ ಪಕ್ಷದಲ್ಲಿ ಬ್ರಹ್ಮ ಎಂದು, ಕೃಷ್ಣಪಕ್ಷದಲ್ಲಿ ಮನ್ಮಥ ಎಂದೂ ಅರ್ಥ.

### [1]ವಾಮನರೂಪ-ಕೃಷ್ಣರೂಪಗಳ ವರ್ಣನೆ

ಬಲಹೃದಾರ್ತಿಹರೋಽನುಜನಿಃ ಪ್ರಭು-
ರ್ಬಲಿಪರಾಜಯಕೃಜ್ಜಯಕೃತ್ ಸತಾಮ್ ।
ಅವನಿಜಾತಪಲಾಶಸುದಂಡಧೃಕ್[2]
ಭುವನಪಾವನಪಾದಸರೋರುಹಃ ॥ ೧೯ ॥

ಬಲನಾಮಕ ಅಸುರನನ್ನು ಸದೆಬಡಿದ, ಇಂದ್ರನ ನೋವನ್ನು ಪರಿಹರಿಸಿದ, ಇಂದ್ರನಿಗೆ, ತಮ್ಮನಾದ ಬಲಿಚಕ್ರವರ್ತಿಗೆ ಪರಾಜಯವನ್ನುಂಟುಮಾಡಿದ, ದೇವತೆಗಳಿಗೆ ಜಯವನ್ನುಂಟುಮಾಡಿದ, ಭೂಮಿಯಲ್ಲಿ ಪ್ರಾದುರ್ಭವಿಸಿದ, ಪಲಾಶದ ದಂಡವನ್ನು ಧರಿಸಿದ, ಲೋಕಗಳನ್ನು ತನ್ನ ಪಾದತೊಳೆದ ನೀರಿನಿಂದ ಪಾವನಗೊಳಿಸಿದ ಪಾದಕಮಲದ, ವಾಮನ ರೂಪದ ಶ್ರೀಹರಿಯು ನಮ್ಮ ಪ್ರಭುವಾಗಿರುವನು (ವಾಮನಪಕ್ಷ).

ಬಲರಾಮನ ಹೃದಯದಲ್ಲಿ ಇದ್ದ ನೋವನ್ನು ಪರಿಹರಿಸಿದ, ಅವನಿಗೆ ಅನುಜನಾದ, ಬಲಿಷ್ಠರಾದ ಕಂಸಾದಿಗಳಿಗೆ ಪರಾಭವವನ್ನುಂಟುಮಾಡಿದ, ಸಜ್ಜನರಾದ ಪಾಂಡವರಿಗೆ ಜಯವನ್ನು ತಂದುಕೊಟ್ಟ, ಭೂಮಿಯಲ್ಲಿ ಜನಿಸಿದ್ದ ರಾಕ್ಷಸರನ್ನು ಬಹಳವಾಗಿ ದಂಡಿಸಿದ, ಲೋಕಗಳನ್ನು ಪಾಲಿಸುವ, ಅರ್ಜುನನನ್ನು ಸಂರಕ್ಷಿಸಿದ, ಭುವನಪಾವನವಾದ ಪಾದಕಮಲದ, ಶ್ರೀಕೃಷ್ಣನು ನಮಗೆ ಸ್ವಾಮಿಯಾಗಿರುವನು (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ವಾಮನರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. 'ಬಲ' ಎಂಬುದಕ್ಕೆ ವಾಮನ ಪಕ್ಷದಲ್ಲಿ ಬಲ ಎಂಬ ಅಸುರನೆಂದು, ಕೃಷ್ಣಪಕ್ಷದಲ್ಲಿ ಬಲರಾಮ ಎಂದೂ, 'ಬಲಿಪರಾಭವಕೃತ್' ಎಂಬುದಕ್ಕೆ ವಾಮನಪಕ್ಷದಲ್ಲಿ ಬಲಿಚಕ್ರವರ್ತಿಯನ್ನು ಪರಾಭವಗೊಳಿಸಿದ ಎಂದೂ, ಕೃಷ್ಣಪಕ್ಷದಲ್ಲಿ ಬಲಿಷ್ಠರಾದ ದುರ್ಯೋಧನಾದಿಗಳನ್ನು ಪರಾಭವಗೊಳಿಸಿದ ಎಂದೂ 'ಅವನಿಜಾತಪಲಾಶಸುದಂಡಧೃಕ್' ಎಂಬುದಕ್ಕೆ ವಾಮನಪಕ್ಷದಲ್ಲಿ ಭೂಮಿಯಲ್ಲಿ ಪ್ರಾದುರ್ಭವಿಸಿ ವಟುರೂಪದಲ್ಲಿ

---

೧. ಅಪಿ ವಾಮನೋ ಲಲಿತಬಾಲ್ಯವಾನಯಂ ಪ್ರತಿಭಾಬಲೇನ ಕೃತದೈತ್ಯಕೌತುಕಃ ।
ಉಪಧೇರಧಃಕೃತಬಲೀಂದ್ರಶಾತ್ರವಃ ಸ್ವಜನಾಯ ಕೇವಲಮದಾತ್ ಪರಂ ಪದಮ್ ॥ -ಸು.ವಿ.(೮/೧೭)
ವಾಮನರೂಪಕೋಽಪಿ ಅಧಃಕೃತಬಲಿನಾಮಕಾಸುರಃ ಸ್ವಜನಾಯ ಇಂದ್ರಾಯ ಪದಮದಾತ್।-ಸು.ವಿ.(ಭಾ.ಪ್ರ.)

೨. ಶಾಖಾರೂಪಾದ್ದಂಡಾತ್ ಸಾಕ್ಷಾದ್ಭೂಮಿಜಾತಸ್ಯ ಪಲಾಶದಂಡಸ್ಯ ಮುಖ್ಯತೋ ಧಾರ್ಯತ್ವಾದವನಿಜಾತೇತ್ಯುಕ್ತಮ್ । ಭುವನಾನಿ ಲೋಕಾನ್ ಸ್ವಪಾದಪ್ರಕ್ಷಾಲನೋದಕೇನ ಪಾವಯತೀತಿ ಭುನಪಾವನಮ್ । - ವ್ಯಾ.

ಪಲಾಶದಂಡವನ್ನು ಕೈಯಲ್ಲಿ ಹಿಡಿದ ಎಂದೂ, ಕೃಷ್ಣಪಕ್ಷದಲ್ಲಿ ಭೂಮಿಯಲ್ಲಿ ಜನಿಸಿದ್ದ ರಾಕ್ಷಸರನ್ನು ಬಹಳವಾಗಿ ದಂಡಿಸಿದ್ದ ಎಂದೂ, 'ಭುವನಪಾವನ' ಎಂಬುದಕ್ಕೆ ವಾಮನಪಕ್ಷದಲ್ಲಿ ಲೋಕಪಾವನ ಎಂದೂ, ಕೃಷ್ಣಪಕ್ಷದಲ್ಲಿ ಭುವನವನ್ನು ಪಾಲಿಸಿದ ಅರ್ಜುನನನ್ನು ಸಂರಕ್ಷಿಸಿದವನು ಎಂದೂ ಅರ್ಥ.

೩. ತಲೆಯ ಬಳಿ ಕುಳಿತ ದುರ್ಯೋಧನನನ್ನು ಬಿಟ್ಟು ಪಾದಗಳ ಬಳಿ ಕುಳಿತ ಅರ್ಜುನನನ್ನು ಸಂರಕ್ಷಿಸಿದ ಎಂಬ ಅರ್ಥವನ್ನು 'ಭುವನಪಾವನಪಾದಸರೋರುಹಃ' ಎಂಬ ಪದದಿಂದ ಸೂಚಿಸಿರುವರು[೧].

### [೨]ಪರಶುರಾಮರೂಪ-ಕೃಷ್ಣರೂಪಗಳ ವರ್ಣನೆ

ಯುಧಿ ಸಹಸ್ರಕರೋರ್ಜಿತಬಾಣಹೃ-
ತ್ಪರಶುರರ್ಜುನಸತ್ಕ್ಷಿತಿದಾಯಕಃ ।
ಕುಭರಸಂಹರಣೋಗ್ರರಣಾಗ್ರಣೀ-
ರ್ದ್ವಿಜಭವೋ[೩]ऽಜಭವೋನ್ನತಿದಾಯಕಃ[೪] ॥ ೨೦ ॥

ಯುದ್ಧದಲ್ಲಿ ಸಾವಿರ ಕೈಗಳ ಕಾರ್ತವೀರ್ಯಾರ್ಜುನನ ಬಾಣಗಳನ್ನು ಕೊಡಲಿಯಿಂದ ತುಂಡರಿಸಿದ[೫] ಪರಶುರಾಮನು, ಕಾರ್ತವೀರ್ಯಾರ್ಜುನನಿಗೆ ಸಂಪೂರ್ಣವಿನಾಶವನ್ನು

---

೧. ಶಿರೋದೇಶೇ ಸ್ಥಿತದುರ್ಯೋಧನಂ ತ್ಯಕ್ತ್ವಾ ಪಾದಯೋಃ ಸಮೀಪೇ ಸ್ಥಿತತ್ವೇನಾರ್ಜುನಸ್ಯ ರಕ್ಷಣಾದಿತಿ ಭಾವಃ । - ವ್ಯಾ.

೨. ಕಥಯಂತ್ಯಮುಂ ಪರಶುಭಾಸಮಾನಗೋಹತಮರ್ತ್ಯದೇವತಮಸಂ ಮುಹುರ್ಮುಹುಃ ।
ಜಗತಾಂ ಹಿತಂ ಹರಿಮಿವಾಪರಂ ಹರಿಂ ಗುರುಶಕ್ತಿತಾಪಸವರಾನ್ವಯೋದ್ಭವಮ್ ॥ - ಸು.ವಿ. (೮/೧೮)
ಅಮುಂ ಮಹಾಶಕ್ತೇಸ್ತಾಪಸವರಸ್ಯ ಭೃಗೋರನ್ವಯೋದ್ಭವಂ ಶ್ರೀರಾಮಂ ಕಥಯಂತಿ । ತ್ರಿಲೋಕಗುರೋಃ ಶಕ್ತಿತಾಪಸವರಸ್ಯ ಚ ಶ್ರೀವೇದವ್ಯಾಸಂ ಹರಿಮಿವ ಅರ್ಕಮಿವ । ಪರಶುರೇವ ಭಾಸಮಾನರಶ್ಮಿರಸ್ಯ ಮರ್ತ್ಯದೇವಾ ರಾಜಾನ ಏವ ತಮಃ । ಪರಾಃ ಶುಭಾಶ್ಚಾಸಮಾನಾಶ್ಚ ಗಾವೋ ವಾಚಃ । ಮರ್ತ್ಯಾನಾಂ ದೇವಾನಾಂ ತಮಸ್ತ್ವಜ್ಞಾನಮ್ ॥ -ಸು.ವಿ.(೮/೧೮)(ಭಾ.ಪ್ರ.)

೩. ಶ್ರೀಕೃಷ್ಣಃ ಅಜಾತ್ ಬ್ರಹ್ಮಣಃ ಭವತೀತ್ಯಜಭವಃ ಶಿವಸ್ತಸ್ಯೋನ್ನತಿದಾಯಕಃ ಕೈಲಾಸಯಾತ್ರಾಯಾಂ ಶೈಷ್ಟ್ಯಪ್ರದಃ ।
ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥
ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು ।
ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರಾಧರಾ ॥ -ಪದ್ಮಪುರಾಣ(೭೧/೧೦೭, ೧೦೭)
ಅಜಭವಯೋರ್ಬ್ರಹ್ಮಶಿವಯೋಃ ಉತ್ಕೃಷ್ಟಾ ನತಯಃ ಸ್ವಚರಣನಮಸ್ಕಾರಾಃ ತಾಸಾಂ ಪ್ರದಾಯಕಃ ದೇವಕೀ-ಗರ್ಭಮಾರಭ್ಯ ಅವತಾರಸ್ಯ ಸಮಾಪ್ತಿಪರ್ಯಂತಂ ಕ್ಷಣೇ ಕ್ಷಣೇ ಶ್ರೀಕೃಷ್ಣಪರಾಕ್ರಮದರ್ಶನೇನ ಬ್ರಹ್ಮರುದ್ರಯೋಃ ಶ್ರೀಕೃಷ್ಣನಮಸ್ಕಾರೇಣೈವ ಕಾಲೋ ಗತ ಇತಿ ಭಾವಃ । -ವ್ಯಾ.

೪. "ಶಿವಾಖಿಲಜ್ಞಾನದಾತಾ" ಇತಿ ಪರಶುರಾಮನಾಮಸು ಪಾಠಾತ್ ।
ಪದ್ಮಪುರಾಣಾಂತರ್ಗತ ವಾಸುದೇವಸಹಸ್ರನಾಮಸ್ತೋತ್ರ ಉತ್ತರಖಂಡ - (೭೧/೨೧೦)

೫. ಭಾಣಾನ್ ಛಿತ್ವಾ ಅಂತೇ ತಸ್ಯಾಪಿ ಖಂಡನಂ ಕೃತವಾನಿತಿ ಭಾವಃ । - ವ್ಯಾ.

ಉಂಟುಮಾಡಿದ; ಭೂಮಿಯನ್ನು ಪಾಲಿಸುವ [1]ಕ್ಷತ್ರಿಯರ ವಿನಾಶವನ್ನು ಮಾಡಿದ; ಉಗ್ರವಾದ ಯುದ್ಧದಲ್ಲಿ ಅಗ್ರೇಸರನಾದ; ಬ್ರಾಹ್ಮಣಕುಲದಲ್ಲಿ ಪ್ರಾದುರ್ಭವಿಸಿದ; ಬ್ರಹ್ಮರುದ್ರರಿಗೆ ಉನ್ನತಿಯನ್ನು ಕರುಣಿಸಿದ (ಪರಶುರಾಮಪಕ್ಷ).

ಯುದ್ಧದಲ್ಲಿ ಸಾವಿರ ಕೈಗಳ ಬಾಣಾಸುರನ ಹೃದಯದಲ್ಲಿ ಕೊಡಲಿಯಂತೆ ಬಾಣಗಳನ್ನು ಪ್ರಯೋಗಿಸಿದ, [2]ಅರ್ಜುನನಿಗೆ ರಾಜ್ಯನೀಡಿದ, ಭೂಭಾರವನ್ನು ಪರಿಹರಿಸುವ ಉಗ್ರಯುದ್ಧದಲ್ಲಿ ಅಗ್ರೇಸರನಾದ, ಬ್ರಾಹ್ಮಣರಿಗೆ ಮಂಗಲವನ್ನುಂಟುಮಾಡಿದ ಶ್ರೀಕೃಷ್ಣನು ಬ್ರಹ್ಮನಿಂದ ಜನಿಸಿದ ಶಿವನಿಗೆ ಕೈಲಾಸಯಾತ್ರೆಯ ಪ್ರಸಂಗದಲ್ಲಿ ಹಿರಿಮೆಯನ್ನು ತಂದುಕೊಟ್ಟ, ಬ್ರಹ್ಮರುದ್ರರಿಗೆ ತನ್ನ ಚರಣಗಳಿಗೆ ನಮಸ್ಕಾರಮಾಡುವ ಅವಕಾಶವನ್ನು ನೀಡಿದ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಪರಶುರಾಮರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಪರಶುರಾಮಪಕ್ಷದಲ್ಲಿ 'ಸಹಸ್ರಕರ' ಎಂಬುದಕ್ಕೆ ಕಾರ್ತವೀರ್ಯಾರ್ಜುನ ಎಂದೂ ಕೃಷ್ಣಪಕ್ಷದಲ್ಲಿ ಬಾಣಾಸುರ ಎಂದೂ, ಪರಶುರಾಮಪಕ್ಷದಲ್ಲಿ 'ಅರ್ಜುನ' ಎಂಬುದಕ್ಕೆ ಕಾರ್ತವೀರ್ಯಾರ್ಜುನ ಎಂದೂ, ಕೃಷ್ಣಪಕ್ಷದಲ್ಲಿ ಭೀಮಾನುಜ ಅರ್ಜುನ ಎಂದೂ, ಪರಶುರಾಮಪಕ್ಷದಲ್ಲಿ 'ದ್ವಿಜಭವ' ಎಂಬುದಕ್ಕೆ ಬ್ರಾಹ್ಮಣರೂಪದಲ್ಲಿ ಪ್ರಾದುರ್ಭವಿಸಿದ ಎಂದೂ, ಕೃಷ್ಣಪಕ್ಷದಲ್ಲಿ ಬ್ರಾಹ್ಮಣರಿಗೆ ಕಲ್ಯಾಣ ಉಂಟುಮಾಡಿದ ಎಂದೂ ಅರ್ಥ.

## ಶ್ರೀರಾಮರೂಪ-ಕೃಷ್ಣರೂಪಗಳ ವರ್ಣನೆ

ಅಹಿಮಕಾಂತಿಮತಃ ಕಲಯಾ ಕುಲಂ
ವ್ಯತನುತಾಧಿಕಭೂಷಿತಮಂಜಸಾ ।
ಅಭಯಮನ್ಯದಶಾಸ್ಯಸುಖಂಡನಃ
[3]ಕ್ಷಿತಿಸುತಾತಿಸುತಾಪಭಿದಾಕೃತಿಃ ॥ ೨೧ ॥

ಉಷ್ಣಕಿರಣನಾದ ಸೂರ್ಯನ ವಂಶವನ್ನು ತನ್ನ ಅವತಾರದಿಂದ ಅತಿಶಯವಾಗಿ ಭೂಷಿತವನ್ನಾಗಿ ಮಾಡಿದ, ಶತ್ರುವಾದ ದಶಶಿರ ರಾವಣನ ವಿನಾಶವನ್ನು ಮಾಡಿ, ಭೂಮಿಜೆಯಾದ ಜಾನಕಿಯ ಅತಿಶಯವಾದ ಮಹಾತಾಪವನ್ನು ಪರಿಹರಿಸಿದ ಶ್ರೀರಾಮನು

---

೧. ತ್ರಿಃಸಪ್ತಕೃತ್ವಃ ಕ್ಷತ್ರಿಯೈಃ ಸಹ ಕೃತಸಂಗರ ಇತ್ಯರ್ಥಃ । – ವ್ಯಾ.

೨. ಪ್ರಾಕ್ ಪ್ರಣತಾರ್ಜುನಾಭ್ಯುದಯೇ ಹೇತುರಿತ್ಯತ್ರೋಕ್ತಾಭ್ಯುದಯಸ್ಯಾತ್ರ ಕ್ಷಿತಿಪದೇನ ಸ್ಪಷ್ಟೀಕರಣಾನ್ನ ಪೌನರುಕ್ತ್ಯಮ್ । – ವ್ಯಾ.

೩. ಭಕ್ತತ್ವಾದಪರಾಧಿನಮಪಿ ತಮಹತ್ವಾ ನೃತ್ಯವ್ಯಾಜೇನ ಶಿರಸಿ ಕೃತಸ್ವಪಾದಲಾಂಛನೈಃ ಕಾಲಿಯನಾಗಂ ಗರುಡಭಯರಹಿತಂ ಕೃತ್ವಾ ಸ್ವಸ್ಥಾನಂ ಪ್ರತ್ಯೇವ ಪ್ರೇಷಿತವಾನಿತಿ ಭಾವಃ । – ವ್ಯಾ.

ಲೋಕಕ್ಕೆ ಪೂರ್ಣವಾಗಿ [೧]ಅಭಯವನ್ನುಂಟುಮಾಡಿದನು (ರಾಮಪಕ್ಷ).

---

೧. ಕರುಣಾಕರಃ ಸ ವಸುದೇವಮೋದದೋ ಭಗವಾನ್ ಪುರಾಹಿಮಕರಾನ್ವಯೇಽಭವತ್ ।
ಜಿತವಾನ್ ದಿಶೋ ದಶರಥೋಽಗ್ರ್ಯಸಂಪದೋ ಜನಕೋ ಬಭೂವ ಭುವಿ ಯಸ್ಯ ವೈರಿಹಾ ॥
ಭುಜಗೇಶ್ವರೋಽಪಿ ಭುವನೇಶ್ವರಪ್ರಿಯಃ ಸಮಜನ್ಯಥಾರಿದರಜನ್ಮ ಭುವ್ಯಭೂತ್ ।
ತಮಮುಷ್ಯ ಕಾಂತಿವಿಜಿತೇಂದುಮಗ್ರಜಂ ರಮಣೀಯಮಾಹುರಿಹ ರಾಮನಾಮಕಮ್ ॥
ಜನಕೇನ ಸೋಽಥ ವಿರಹಾಸಹಿಷ್ಣುನಾ ಮುಹುರೀಕ್ಷಿತೋ ವನಮನೀಯತ ಪ್ರಭುಃ ।
ಚಕಿತೇನ ದುಷ್ಟಜನತಸ್ತಪಸ್ವಿನಾ ತತ ಆಸುರೀಂ ನಿಶಿಚರೀಂ ಜಘಾನ ಸಃ ॥
ಮುನಿಸಪ್ತತಂತುಕೃತವೈರಬಂಧನಂ ಕಟುಕೇಶ್ಯರಿಷ್ಟಪದಮುಖ್ಯದುರ್ಜನಮ್ ।
ಕ್ಷಪಯಂತಮುದ್ಯತಸುಬಾಹುಮಾಹವೇ ತಮಥಾಭ್ಯನಂದದಮರಾದಿಸದ್ಗಣಃ ॥
ಸ ವನೇ ವಿಕಸ್ವರಗುಣಸ್ವರದ್ವಿಜೇ ಸ್ಫುರಿತೇ ಚರನ್ ಸಕಲಗೋಕುಲಪ್ರಿಯಃ ।
ಇತಕಾಮತಾಪಸರಸಾರ್ದ್ರಧೀಗಿರಃ ಪ್ರತಿಲಾಲಯನ್ನರಮತೈಷ ಸುಂದರೀಃ ॥
ಸಹಜಾನ್ವಿತಃ ಸಕಲಮಿತ್ರಸಂಯುತೋ ಮಧುರಾಂ ಪುರೀಂ ಜನಕವಲ್ಲಭಾಂ ಗತಃ ।
ಪ್ರವಿಶನ್ನಿಮಾಂ ಸ ಜಗದೇಕಸುಂದರೋ ನರನಾರ್ಯುದಾರನಯನೋತ್ಸವೋಽಭವತ್ ॥
ಅಥ ಖಂಡಿತೇಶ್ವರಧನುಃ ಸ ಲೀಲಯಾ ಕ್ಷಪಿತೋಗ್ರಸೇನನೃಪಪುತ್ರಪೌರುಷಃ ।
ಸಮುಪಾಸ್ಯ ವಿಪ್ರಗುರುಮಬ್ಜಭೂಗುರುಃ ಸ್ವಜನಾನಮೋದಯದಮೇಯತೇಜಸಾ ॥
ಕಮಲಾಮಯಂ ಕಮಲಪತ್ರಲೋಚನಾಂ ಭುವಮಾಗತಾಂ ನೃಪಸುತಾಂ ಗೃಹೀತವಾನ್ ।
ನಿಜಲೀಲಯಾ ವಿಜಿತರಾಜಶಾತ್ರವೋ ಮುದಮಾಪದಾಪ್ಯ ಪುರಮಬ್ಧಿದುರ್ಗಮಮ್॥
ಸ ಜಗಾಮ ಮಾತೃಜನತುಷ್ಟಯೇ ಕಿಲ ತ್ವರಿತೋ(ಽ)ವನಂ ವಿದಧದೀಪ್ಸಿತಂ ಸತಾಮ್ ।
ಸಹ ಭಾರ್ಯಯಾಽಪಿ ಶುಭಯಾ ಮಹಾಜಯಧ್ವಜಲಕ್ಷ್ಮಣಾಗ್ರ್ಯಸುಹೃದಾ ವಿನಾಽಮುದಾ ॥
ಸಮತೀತಪರ್ವತಪುರೋಗದುರ್ಗಮಃ ಖರದೂಷಣಾದಿಸುಜನದ್ವಿಷೋ ಬಹೂನ್ ।
ಸ ನಿಹತ್ಯ ವಿಶ್ವಭಯದಂ ಸುದುಸ್ಸಹಂ ನರಕಂ ಮಹಾತಮ ಉಪಾನಯತ್ಕ್ರಮಾತ್ ॥
ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ ಪ್ರಿಯಯಾ ಪ್ರಿಯೋ ಭುವನಮಾನ್ಯಯಾ ಸಮಮ್ ।
ಭೃಶಮಾಕುಲೀಕೃತಮದಪ್ರಮಾದವತ್ಸುರಪಾರಿಜಾತಹೃದವಾಪ ಧಾಮ ಸಃ ॥
ಹರಿತಾಮಧೀಶನರದೇವಮಂಡಲಂ ದಶಕಂ ವಿಜಿತ್ಯ ಪರಭೀಷಣಂ ಮುಹುಃ ।
ಸ್ಫುರಿತಾಮಿಹ ಪ್ರಿಯತಮಾಂ ನಿಜಶ್ರಿಯಂ ಭಗವಾನುಪೈಕ್ಷತ ಹರಂತಮಪ್ರಿಯಮ್ ॥
ಅಭಿವಂದಿತಃ ಪವನನಂದನಾದಿಭಿಃ ಸ ಕದಾಚಿದಿಂದ್ರಸುತವರ್ಧಕೋ ಗವಾ ।
ನಿಜರಾಜ್ಯಮಾತ್ಮದಯಿತಾಯ ದತ್ತವಾನ್ ಹರಿಸೂನವೇ ಹತವಿಪಕ್ಷಮುತ್ತಮಮ್ ॥
ಮುದಮಾಪ್ಯ ತತ್ರ ದಯಿತೋರುವಾರ್ತಯಾ ಮಧುಹಾ ಮರುತ್ಸುತಮುಖಪ್ರವೃತ್ತಯಾ ।
ಹರಿತಿಗ್ಮಚಕ್ರಲಸಿತೋಽಬ್ಧಿಮಧ್ಯಗಂ ಪ್ರಯಯೌ ಸ ಪುಣ್ಯಜನಸೇವಿತಂ ಪುರಮ್ ॥
ಪೃಥುಕುಂಭಕರ್ಣಗಜರಾಜಮುದ್ಧತಂ ಸಸಹೋದರಂ ಸವಿಬುಧೇಂದ್ರಶಾತ್ರವಮ್ ।
ಧರಣೀಭರಂ ಪೃಥುಲಚಕ್ರಮಕ್ಷಿಣೋನ್ನಿಶಿತೇಷುಚಕ್ರಕೃತವಿಕ್ರಮಃ ಪ್ರಭುಃ ॥
ಅಥ ಭಾರ್ಯಯಾ ಹುತವಹಂ ಪ್ರವಿಷ್ಟಯಾ ಸಹಿತಃ ಸಹೋದರಪುರಃಸರೈರಪಿ ।
ಅಯಮಾಪ್ಯ ಧಾಮ ಚಿರಮಿಷ್ಟದಃ ಸತಾಂ ನಿಜಮೂಲರೂಪಪರಮೈಕ್ಯಮೇಯಿವಾನ್ ॥-ಸು.ವಿ.(೮/೧೯-೩೪)

ಸವಸೂನಾಂ ದೇವಾನಾಂ ಮೋದದಃ ಪೂರ್ವಮಹಿಮಕರಾನ್ವಯೇಽಭವತ್ ಶ್ರೀರಾಮಃ । ಯಸ್ಯ ಜನಕೋ ದಶರಥಃ। ಸ ಹಿಮಕರಾನ್ವಯೇಽಭವತ್ ಶ್ರೀಕೃಷ್ಣಃ । ಯಸ್ಯ ರಥೋ ದಶ ದಿಶೋ ಜಿತವಾನ್ । ಅಗ್ರ್ಯಾಣಾಂ ಸಂಪದಾಂ ಜನಕೋ ಬಭೂವ ॥ -ಸು.ವಿ.(೮/೧೯)(ಭಾ.ಪ್ರ.)

ಅಥ ಶಂಖಚಕ್ರಜನ್ಮ ಭರತಶತ್ರುಘ್ನತ್ವೇನ ಅರೀಣಾಂ ಭಯಜನ್ಮ ಚ । ತಮಮುಷ್ಯ ಲಕ್ಷ್ಮಣಸ್ಯಾಗ್ರಜಂ ಶ್ರೀರಾಮಮಾಹುಃ। ಅಮುಷ್ಯ ಶ್ರೀಕೃಷ್ಣಸ್ಯ ಚ। -ಸು.ವಿ.(ಭಾ.ಪ್ರ.-೮/೨೦)

ತಪಸ್ವಿನಾ ವಿಶ್ವಾಮಿತ್ರೇಣ ವನಮನೀಯತ । ಜನಕೇನ ಮುಹುರಾದೃತಃ । ಜನಕೇನಾನೀಯತ । ದುಷ್ಟಜನೋ

ಶ್ರೀಕೃಷ್ಣನು ಕ್ಷಿತಿಸುತನಾದ ನರಕಾಸುರನಿಗೆ ಅತಿಶಯ ಕ್ಲೇಶವನ್ನುಂಟುಮಾಡುವ ಶಿರಶ್ಛೇದಕಾರ್ಯವನ್ನು ಮಾಡಿದ; ಶತ್ರುಗಳ ಅವಸ್ಥೆಗೆ ಆಯುಧವಾದ ಪ್ರಾಣಗಳನ್ನು ನಾಶಮಾಡಿದ; ಹೆಡೆಗಳ ಮೇಲೆ ನರ್ತಿಸುವ ಮೂಲಕ ಹಿಂಸೆಪಡಿಸಿ ಕಾಳೀಯಸರ್ಪವನ್ನು ತೇಜೋಹೀನವನ್ನಾಗಿಸಿ ಅಲ್ಲಿಂದ ಅವನ ಜನ್ಮಭೂಮಿಯಲ್ಲಿ ವಾಸಿಸುವವನನ್ನಾಗಿ ಮಾಡಿದ, ಹಾಗೂ ಅವನನ್ನು ಸಂಪೂರ್ಣ ಭಯರಹಿತನನ್ನಾಗಿಸಿದ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಶ್ರೀರಾಮರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ರಾಮಪಕ್ಷದಲ್ಲಿ 'ಅಹಿಮಕಾಂತಿಮತಃ ಕುಲಂ' ಎಂದೂ ಕೃಷ್ಣಪಕ್ಷದಲ್ಲಿ 'ಅಹಿಂ-ಅಕಾಂತಿಂ-ಅತಃ' ಎಂದೂ, ರಾಮಪಕ್ಷದಲ್ಲಿ 'ಅನ್ಯ-ದಶಾಸ್ಯ-ಸುಖಿಂಡನಃ' ಎಂದೂ ಕೃಷ್ಣಪಕ್ಷದಲ್ಲಿ 'ಅನ್ಯ-ದಶಾ-ಅಸಿ-ಅಸು-ಖಂಡನಃ' ಎಂದೂ, ರಾಮಪಕ್ಷದಲ್ಲಿ 'ಕ್ಷಿತಿ-ಸುತಾ-ಅತಿ-ಸುತಾಪ-ಭಿತ್-ಆಕೃತಿಃ' ಎಂದೂ ಕೃಷ್ಣಪಕ್ಷದಲ್ಲಿ 'ಕ್ಷಿತಿಸುತ-ಅತಿಸುತಾಪ-ಭಿದಾ-ಕೃತಿಃ' ಎಂದೂ ಅನ್ವಯ.

೩. 'ಕ್ಷಿತಿಸುತಾತಿಸುತಾಪಭಿದಾಕೃತಿಃ' [೧]ಎಂಬುದಕ್ಕೆ ರಾಮಪಕ್ಷದಲ್ಲಿ ಭೂಮಿಸುತೆಯಾದ ಸೀತೆಗೋಸ್ಕರವಾಗಿ ಅತಿಶಯವಾದ ಬಗೆಬಗೆಯ ಸುತಾಪಗಳನ್ನು ಲೋಕಮೋಹನಾರ್ಥವಾಗಿ ಮಾಡುತ್ತ ಅವುಗಳಿಂದ ರಾಮನು ದುಃಖೀ ಎಂಬ ಮಿಥ್ಯಾಜ್ಞಾನಕ್ಕೆ ಕಾರಣವಾಗುವ ಕಾರ್ಯವನ್ನು ಮಾಡಿದ ಎಂಬ ಅರ್ಥವೂ ವ್ಯಾಖ್ಯಾನದಲ್ಲಿದೆ.

೪. 'ಕ್ಷಿತಿಸುತಾತಿಸುತಾಪಭಿದಾಕೃತಿಃ' [೨]ಎಂಬುದಕ್ಕೆ ಕೃಷ್ಣಪಕ್ಷದಲ್ಲಿ ಭೂಮಿ ಹಾಗೂ ತನ್ನ ಪುತ್ರನಾದ ಪ್ರದ್ಯುಮ್ನ ಇಬ್ಬರಿಗೆ ಕ್ರಮವಾಗಿ ಅವರ ಭಾರ ಹಾಗೂ ಅನಂಗತ್ವರೂಪ ಕ್ಲೇಶಗಳನ್ನು ಪರಿಹರಿಸುವ ಆಕೃತಿಯನ್ನು ಹೊಂದಿದವನು ಎಂಬ ಅರ್ಥವು ಸಹ ಇದೆ.

೫. [೩]ಗರುಡನ ಭಯದಿಂದಾಗಿ ರಮಣಕದ್ವೀಪವನ್ನು ತೊರೆದು ಸೌಭರಿಮುನಿಗಳ ಶಾಪದಿಂದ ಗರುಡನಿಗೆ ಅಗಮ್ಯವೆನಿಸಿದ್ದ ಯಮುನೆಯ ಮಡುವಿನಲ್ಲಿ ಕಾಳಿಯಸರ್ಪವು ನೆಲೆಸಿದ್ದಿತು; ಭಕ್ತನಾದ್ದರಿಂದ ಅಪರಾಧಿಯಾಗಿದ್ದರೂ ಅವನನ್ನು ಕೊಲ್ಲದೇ ಅವನ ತಲೆಯ

---

ಮಾರೀಚಾದಿಃ ಕಂಸಶ್ಚ । ನಿಶಿಚರೀಂ ತಾಟಕಾಂ ಪೂತನಾಂ ಚ । -ಸು.ವಿ.(ಭಾ.ಪ್ರ.೮/೨೧)

೧. ಯದ್ವಾ ಕ್ಷಿತಿಸುತಾರ್ಥಂ ಸೀತಾರ್ಥಂ ಯೇ ಅತಿಸುತಾಪಾಃ ಲೋಕಮೋಹನಾರ್ಥಂ ಸ್ವಕೃತಸಂತಾಪಾಃ ತ ಏವ ಸುತಾಪಾಃ ಸುಖಿಕರಾಸ್ತಾಪಾ ಇತ್ಯುಕ್ತಮ್ । ತೈಃ ಸಾಧನೈಃ ಭಿದಾಯಾಃ ರಾಮೋ ದುಃಖೀತಿ ಮಿಥ್ಯಾಜ್ಞಾನಸ್ಯ ಕೃತಿಃ ಕರಣಂ ಯಸ್ಮಾದಿತಿ ವಾ । - ವ್ಯಾ.

೨. ಅಥವಾ ಕ್ಷಿತಿಶ್ಚ ಸುತಶ್ಚ ತಯೋಃ ಪೃಥ್ವೀಪ್ರದ್ಯುಮ್ನಯೋಃ ಅತಿಸುತಾಪೌ ಭಾರದೇಹಾಭಾವನಿಮಿತ್ತೌ ಕ್ಲೇಶೌ ಭಿನತ್ತೀತಿ ಕ್ಷಿತಿಸುತಾತಿಸುತಾಪಭೃತ್ ಆಕೃತಿರ್ಯಸ್ಯ ಸಃ । - ವ್ಯಾ.

೩. ಗರುಡಭಯಾದ್ರಮಣಕದ್ವೀಪಂ ತ್ಯಕ್ತ್ವಾ ಸೌಭರಿಶಾಪಾತ್ ಗರುಡಾಗಮ್ಯಯಮುನಾಹ್ರದಂ ಕಾಲೀಯನಾಗಃ ಸ್ಥಿತ ಇತಿ ಪೌರಾಣಿಕೀ ವಾರ್ತಾ । ಭಕ್ತತ್ವಾದಪರಾಧಿನಮಪಿ ತಮಹತ್ವಾ ನೃತ್ಯವ್ಯಾಜೇನ ಶಿರಸಿ ಕೃತಸ್ವಪಾದಲಾಂಛನೈಃ ಕಾಲಿಯನಾಗಂ ಗರುಡಭಯರಹಿತಂ ಕೃತ್ವಾ ಸ್ವಸ್ಥಾನಂ ಪ್ರತ್ಯೇವ ಪ್ರೇಷಿತವಾನಿತಿ ಭಾವಃ । - ವ್ಯಾ.

ಮೇಲೆ ತನ್ನ ಪಾದಲಾಂಛನವನ್ನು ಮೂಡಿಸಿ ಅವನನ್ನು ಗರುಡಭಯರಹಿತನನ್ನಾಗಿ ಮಾಡಿ ಅವನನ್ನು ಸ್ವಸ್ಥಾನಕ್ಕೆ ಶ್ರೀಕೃಷ್ಣನು ಕಳುಹಿಸಿಕೊಟ್ಟನು ಎಂಬ ಅರ್ಥ ವಿವಕ್ಷಿತ.

### ಯಾದವಕೃಷ್ಣರೂಪ-ವಾಸಿಷ್ಠಕೃಷ್ಣರೂಪಗಳ ವರ್ಣನೆ

[೧]ರುಚಿರಭಾರತಪುಣ್ಯಕಥೋದಯಃ
[೨]ಶುಕಸುಭಾಷಣತೋಷಣಕಾರಣಃ ।
ವಿಮಲಧರ್ಮಶುಭಸ್ಥಿತಿಕೃತ್ಕ್ಷಿತಾ-
ವಯಮಸೌ ಯಮಸೌಹೃದಕೃನ್ನೃಣಾಮ್ ॥ ೨೨ ॥

ಭರತವಂಶದಲ್ಲಿ ಜನಿಸಿದ ಅರ್ಜುನನಿಗೆ ರೋಚಕವಾದ ಪುಣ್ಯಕಥಾರೂಪದ ಭಗವ-ದ್ಗೀತೆಯನ್ನು ಬೋಧಿಸಿದ, ಗಿಳಿಯಂತೆ ಸುಂದರವಾಗಿ ನುಡಿಯುವುದನ್ನೇ ಸಂತೋಷದ ಕಾರಣವನ್ನಾಗಿ ಹೊಂದಿರುವ, ಭೂಮಿಯಲ್ಲಿ ನರರ ಮಧ್ಯದಲ್ಲಿ ನಿರ್ಮಲನಾದ ಯುಧಿಷ್ಠಿರನಿಗೆ ಉತ್ತಮರಾಜ್ಯಸ್ಥಿತಿಯನ್ನು ಒದಗಿಸಿದ, ಯಮಳರಾದ ನಕುಲಸಹದೇವರಿಗೆ ಸೌಮನಸ್ಯ ನೀಡಿದ ಶ್ರೀಕೃಷ್ಣನು ದ್ವಾರಾವತಿಯಲ್ಲಿ ನೆಲೆಸಿರುವನು ([೩]ಯಾದವಕೃಷ್ಣಪಕ್ಷ).

ರೋಚಕವಾದ ಮಹಾಭಾರತವೆಂಬ ಪುಣ್ಯಕಥೆಯನ್ನು ರಚಿಸಿದ, ಶುಕಮುನಿಯ ಒಳ್ಳೆಯ [೪]ಮಾತನ್ನೇ ಸಂತೋಷದ ಕಾರಣವನ್ನಾಗಿ ಮಾಡಿಕೊಂಡ, ಭೂಮಿಯಲ್ಲಿ ನಿರ್ಮಲವಾದ ನಿತ್ಯನೈಮಿತ್ತಕಾದಿ ಧರ್ಮಗಳಿಗೆ ಶುಭಸ್ಥಿತಿಯನ್ನು ಉಂಟುಮಾಡಿದ, ಈ ವೇದವ್ಯಾಸರೂಪದ ಶ್ರೀಹರಿಯು ಮನುಷ್ಯರಿಗೆ ಯಮನೊಂದಿಗೆ ಮೈತ್ರಿಯನ್ನು ಉಂಟುಮಾಡುವವ-ನಾಗಿರುವನು (ವಾಸಿಷ್ಠಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಯಾದವಕೃಷ್ಣರೂಪದ ಹಾಗೂ ವಾಸಿಷ್ಠಕೃಷ್ಣರೂಪದ ವರ್ಣನೆ ಬಂದಿದೆ.

೨. ಯಾದವಕೃಷ್ಣಪಕ್ಷದಲ್ಲಿ 'ರುಚಿರಭಾರತ' ಎಂಬುದಕ್ಕೆ ಅರ್ಜುನನಿಗೆ ಪುಣ್ಯಕಥೆಯಾದ ಗೀತೆಯನ್ನು ಉಪದೇಶಿಸಿದವನೆಂದೂ, ವಾಸಿಷ್ಠಕೃಷ್ಣಪಕ್ಷದಲ್ಲಿ ರೋಚಕವಾದ ಮಹಾ-ಭಾರತವೆಂಬ ಕೃತಿಯನ್ನು ರಚಿಸಿದವನೆಂದೂ; 'ಶುಕ' ಎಂಬುದಕ್ಕೆ ಯಾದವಕೃಷ್ಣಪಕ್ಷದಲ್ಲಿ ಗಿಳಿ ಎಂದೂ ವಾಸಿಷ್ಠಕೃಷ್ಣಪಕ್ಷದಲ್ಲಿ ಶುಕಮುನಿ ಎಂದೂ; 'ವಿಮಲಧರ್ಮ' ಎಂಬುದಕ್ಕೆ

---

೧. ರುಚಿತಭಾರತಪುಣ್ಯಕಥಾ ಮಹಾಭಾರತಪುಣ್ಯಕಥಾ ತಸ್ಯಾ ಉದಯೋ ಯಸ್ಮಾತ್ ಲಕ್ಷಪರಿಮಿತಮಹಾಭಾರತಾ-ಖ್ಯಗ್ರಂಥಕೃದಿತ್ಯರ್ಥಃ। – ವ್ಯಾ.

೨. ಶುಕಸ್ಯ ಶುಕಾಚಾರ್ಯಸ್ಯ ಸುಭಾಷಣಮೇವ ತೋಷಕಾರಣಂ ಯಸ್ಯ ಸ ತಥೋಕ್ತಃ। – ವ್ಯಾ.

೩. ಇದಾನೀಂ ಶ್ರೀಕೃಷ್ಣಸ್ಯ ಶ್ರೀವೇದವ್ಯಾಸಸ್ಯ ಚ ಕಥಾಂ ಶ್ಲಿಷ್ಟೋಕ್ತ್ಯಾ ವರ್ಣಯತಿ। – ವ್ಯಾ.

೪. ಪುತ್ರತ್ವಾತ್ಸ್ವಾಭಿಪ್ರಾಯವಿವೇಚಕಶುಕವಾಕ್ಯೇನ ತುಷ್ಯನ್ನಿತ್ಯರ್ಥಃ। – ವ್ಯಾ.

ಯಾದವಕೃಷ್ಣಪಕ್ಷದಲ್ಲಿ ನಿರ್ಮಲಧರ್ಮಾಚರಣೆಯ ಯುಧಿಷ್ಠಿರ ಎಂದೂ ವಾಸಿಷ್ಠಕೃಷ್ಣಪಕ್ಷದಲ್ಲಿ ನಿರ್ಮಲವಾದ ನಿತ್ಯನೈಮಿತ್ತಿಕಾದಿ ಶುಭಧರ್ಮಗಳು[೧] ಎಂದೂ, ಯಾದವಕೃಷ್ಣಪಕ್ಷದಲ್ಲಿ 'ಯಮ' ಎಂಬುದಕ್ಕೆ ಯಮಳರಾದ ನಕುಲಸಹದೇವರೆಂದೂ ವಾಸಿಷ್ಠಕೃಷ್ಣಪಕ್ಷದಲ್ಲಿ ಮೃತ್ಯುದೇವತೆಯಾದ ಯಮ ಎಂದೂ ಅರ್ಥ ವ್ಯತ್ಯಾಸವನ್ನು ತಿಳಿಯಬೇಕು.

೩. ಈಗಾಗಲೇ ೧೩ನೇ ಶ್ಲೋಕದಲ್ಲಿ ವೇದವ್ಯಾಸರೂಪದ ವರ್ಣನೆ ಬಂದಿದ್ದರೂ ಅಲ್ಲಿ ತಿಳಿಸದೇ ಇದ್ದ ಅಪೂರ್ವ ವಿಷಯಗಳನ್ನು ಇಲ್ಲಿ ತಿಳಿಸಿರುವುದರಿಂದ ಪುನರುಕ್ತಿಯಾಗದು ಎಂದು ತಿಳಿಯಬೇಕು.

### [೨]ಬುದ್ಧರೂಪ-ಕೃಷ್ಣರೂಪಗಳ ವರ್ಣನೆ

ಭುವಿ ತಥಾಗತ ಏಷ ಯಥಾಽಂಬರಂ
ಸ್ವವಿದಿತೋ ನವಮಾಕೃತಿರಾತ್ಮನಃ ।
ಸಕಲವಿತ್ ಖಲಸಂಚಯವಂಚಕಃ
ಸ್ವಮತಿದೋ ಮತಿದೋಷಹರೋಽಸ್ತು ನಃ ॥ ೨೩ ॥

ಸ್ವಪ್ರಕಾಶನಾದ ಶ್ರೀಹರಿಯು ಗಗನದಂತೆ ಭೂಮಿಯಲ್ಲಿ ವ್ಯಾಪ್ತನಾಗಿರುವನು; ಆ ಪರಮಾತ್ಮನ ದಶಾವತಾರಗಳ ಮಧ್ಯದಲ್ಲಿ ಒಂಭತ್ತನೆಯ ಅವತಾರನಾದ, ಸರ್ವಜ್ಞನಾದ ತ್ರಿಪುರಾಸುರ ಮೊದಲಾದ ದೈತ್ಯಸಮೂಹಕ್ಕೆ ವಂಚಕನಾದ, ಅವರಿಗೆ ಮಿಥ್ಯಾಜ್ಞಾನವನ್ನು ತಾನು ರಚಿಸಿದ ಬೌದ್ಧಾಗಮದ ಮೂಲಕ ನೀಡಿದ ಬುದ್ಧನು[೩] ನಮ್ಮ ಬುದ್ಧಿದೋಷವನ್ನು ಪರಿಹರಿಸುವವನಾಗಲಿ (ಬುದ್ಧಪಕ್ಷ).

ಆಕಾಶದಂತೆ ಭೂಮಿಯಲ್ಲಿ ಅವತರಿಸಿದವನೂ, ತನ್ನ ಭಕ್ತಜನರಿಂದ ತಿಳಿಯಲ್ಪಡುವವನೂ, ತನ್ನ ಮೂಲಮೂರ್ತಿಯೊಂದಿಗೆ ಕಡಿಮೆಯಲ್ಲದ ಆಕೃತಿಯನ್ನು ಹೊಂದಿದವನೂ,

---

೧. ಶ್ರೀವ್ಯಾಸೋಕ್ತಧರ್ಮಮಾಚರತಾಂ ಯಮಭಯಂ ನಾಸ್ತೀತಿ ಭಾವಃ । ಪ್ರಾಗನುಕ್ತೈವ ಶ್ರೀವೇದವ್ಯಾಸಕಥಾಽತ್ರ ವರ್ಣಿತೇತಿ ನ ಪುನರುಕ್ತಿರಿತಿ ಜ್ಞಾತವ್ಯಮ್ । - ವ್ಯಾ.

೨. ಅಪಿ ವಾಮನೋ ಲಲಿತಬಾಲ್ಯವಾನಯಂ ಪ್ರತಿಭಾಬಲೇನ ಕೃತದೈತ್ಯಕೌತುಕಃ ।
ಉಪಧೇರಧಃಕೃತಬಲೀಂದ್ರಶಾತ್ರವಃ ಸ್ವಜನಾಯ ಕೇವಲಮದಾತ್ ಪರಂ ಪದಮ್ ॥ -ಸು.ವಿ.(೮/೧೭)
ಬುದ್ಧರೂಪೋ ವಾಮನೋಽಲ್ಪಶರೀರೋ ಭೂತ್ವಾ ಜಿನಸ್ಯ ಪುತ್ರತಾಂ ಪ್ರಕಾಶ್ಯ ಅಧಃಕೃತಬಲವದಸುರಃ ಸ್ವಜನಾಯೈವ ಮೋಕ್ಷಮದಾತ್ । -ಸು.ವಿ.(ಭಾ.ಪ್ರ.)
ಮಹಿದಾಸಪೂಜ್ಯಚರಣೋ ದ್ವಿಜಾದಭೂದ್ದಿತಾತ್ ಸ ವಿಷ್ಣುಯಶಸೋಽಮಲಾತ್ಮನಃ ।
ಇಹ ಯೋ ದಧೇ ಜಗತಿ ಪಾಪಶಾಂತಯೇ ಬಹುಧಾಮಹೇತಿಮತಿದೀಪ್ತಗೋಷ್ಠಿಮ್ ॥ -ಸು.ವಿ.(೮/೩೫)

೩. 'ಸರ್ವಜ್ಞಃ ಸುಗತೋ ಬುದ್ಧೋ ಧರ್ಮರಾಜಸ್ತಥಾಗತಃ' ಇತ್ಯಮರಃ । - ವ್ಯಾ.

ಸರ್ವಜ್ಞನೂ, ಖಲಸಂಚಯಕ್ಕೆ ವಂಚಕನೂ, ತನ್ನ ಬಗ್ಗೆ ಜ್ಞಾನವನ್ನು ನೀಡುವವನೂ, ಆದ ಶ್ರೀಕೃಷ್ಣನು ನಮಗೆ ಅಜ್ಞಾನರೂಪದೋಷವನ್ನು ಪರಿಹರಿಸುವವನಾಗಲಿ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಬುದ್ಧರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. ಇಲ್ಲಿ ಬುದ್ಧರೂಪವನ್ನು ಒಂಭತ್ತನೆಯದು ಎಂದು ತಿಳಿಸುವ ಮೂಲಕ ಬಲರಾಮನನ್ನು ದಶಾವತಾರದಲ್ಲಿ ಗಣಿಸುವುದು ಶಾಸ್ತ್ರಸಮ್ಮತವಲ್ಲ ಎಂಬ ವಿಶೇಷಾಂಶವನ್ನು ತಿಳಿಸಿರುವರು.

೩. 'ತಥಾಗತ' ಎಂಬುದಕ್ಕೆ ಬುದ್ಧಪಕ್ಷದಲ್ಲಿ ಬುದ್ಧ ಎಂದೂ ಕೃಷ್ಣಪಕ್ಷದಲ್ಲಿ ಮೂಲರೂಪದಂತೆಯೇ ಪೂರ್ಣನಾಗಿ ಅವತರಿಸಿದವನು ಎಂದೂ, 'ಸ್ವವಿತ್-ಇತಃ' ಎಂಬುದಕ್ಕೆ ಬುದ್ಧಪಕ್ಷದಲ್ಲಿ ಸ್ವಪ್ರಕಾಶನಾದ ಹಾಗೂ ವ್ಯಾಪ್ತನಾದ ಎಂದೂ 'ಸ್ವ-ವಿದಿತಃ' ಎಂಬುದಾಗಿ ಕೃಷ್ಣಪಕ್ಷದಲ್ಲಿ ತನ್ನ ಭಕ್ತಜನರಿಂದ ತಿಳಿಯಲ್ಪಡುವವನು ಎಂದೂ, 'ನವಮಾಕೃತಿಃ' ಎಂಬುದಕ್ಕೆ ಬುದ್ಧಪಕ್ಷದಲ್ಲಿ ಒಂಭತ್ತನೆಯ ರೂಪ ಎಂದೂ ಕೃಷ್ಣಪಕ್ಷದಲ್ಲಿ ಅನವಮಾಕೃತಿಃ ಎಂಬುದಾಗಿ ಮೂಲರೂಪಕ್ಕೆ ಕಡಿಮೆಯಾಗದ ರೂಪ ಎಂದೂ, 'ಸ್ವಮತಿದಃ' ಎಂಬುದಕ್ಕೆ ಬುದ್ಧಪಕ್ಷದಲ್ಲಿ ಅಯೋಗ್ಯರಿಗೆ ಸುಷ್ಠು ಅಮತಿಃ ಎಂಬುದಾಗಿ ಮಿಥ್ಯಾಜ್ಞಾನ ಎಂದೂ ಕೃಷ್ಣಪಕ್ಷದಲ್ಲಿ ತನ್ನ ಬಗ್ಗೆ ಜ್ಞಾನ ನೀಡುವವನು ಎಂದೂ ಅರ್ಥಮಾಡಿಕೊಳ್ಳಬೇಕು.

### ಕಲ್ಕಿರೂಪ-ಕೃಷ್ಣರೂಪಗಳ ವರ್ಣನೆ

ವಿತತ ವಿಷ್ಣುಯಶೋಜನನಾಂಜಸಾ
ಕೃತಯುಗೋನ್ನತಿದಾತೃಕರೋರ್ಜಿತ।
ದ್ವಿಜಸುಹೃತ್ಕಲಿಕಾನನದೈನ್ಯಹೇ-
ತ್ವಸಿಧರಾಸಿ ಧರಾಭಯಕಾರಕಃ ॥ ೨೪ ॥

ಎಲ್ಲೆ ವ್ಯಾಪ್ತನಾದವನೇ ! ವಿಷ್ಣುಯಶಸ್ ಎಂಬ ಬ್ರಾಹ್ಮಣನಿಂದ ಅವತರಿಸಿದವನೇ ! ಚೆನ್ನಾಗಿ ಕೃತಯುಗಕ್ಕೆ ಶ್ರೈಷ್ಠ್ಯವನ್ನು ನೀಡುವವನೇ ! ಉನ್ನತಿನೀಡುವಂತಹ [೧]ಹಸ್ತದಿಂದಾಗಿ ಶ್ರೇಷ್ಠನಾದವನೇ ! ಬ್ರಾಹ್ಮಣರ ಶೋಭನಹೃದಯದಲ್ಲಿ ನೆಲೆಸಿರುವ ಕಲಿ ಎಂಬ ಕಾಡಿನ ದೈನ್ಯಕ್ಕೆ ಕಾರಣವನ್ನು ಪರಿಹರಿಸುವ ಖಡ್ಗವನ್ನು ಧರಿಸಿದವನೇ! ನೀನು [೨]ಭೂಮಿಗೆ ಅಭಯ ನೀಡುವವನಾಗಿರುವಿ (ಕಲ್ಕಿಪಕ್ಷ).

---

೧. ಸ್ವಹಸ್ತೇನ ಮ್ಲೇಚ್ಛಾನ್ ಹತ್ವಾ ಕೃತಯುಗಸ್ಯ ಸದ್ಧರ್ಮಪ್ರರ್ತನೇನ ಶ್ರೈಷ್ಠ್ಯದಾಯಕೇತ್ಯರ್ಥಃ। - ವ್ಯಾ.

೨. ಸತ್ಯಪ್ರವರ್ತಕೋ ದೇವದ್ವಿಜದೀರ್ಘಕ್ಷುಧಾಪಹಃ।
ಅನಂತಸ್ವರ್ಣಯಾಗೈಕಹೇಮಪೂರ್ಣಾಖಿಲದ್ವಿಜ ॥
-ಪದ್ಮಪುರಾಣಾಂತರ್ಗತ ವಾಸುದೇವಸಹಸ್ರನಾಮಸ್ತೋತ್ರ, ಉತ್ತರಖಂಡ (೭೧/೨೮೧,೨೮೩)

ವ್ಯಾಪ್ತನಾದ ನಾರಾಯಣನ ಕೀರ್ತಿಗೆ ಕಾರಣವಾಗುವ ಪ್ರಾದುರ್ಭಾವವನ್ನು ಹೊಂದಿದವನೇ ! ವಕ್ರತ್ವಾದಿದೋಷವಿರದ ನೊಗದಂತೆ ಉನ್ನತಿರೂಪದ ಪುರುಷಾರ್ಥವನ್ನು ನೀಡುವ ಕೈಯಿಂದ ಶ್ರೇಷ್ಠನಾದವನೇ ! ನಕ್ಷತ್ರಗಳಿಗೆ ಸಖನಾದ ಚಂದ್ರನ ಕಲೆಯಂತೆ ಮುಖವುಳ್ಳವನೇ! ಶತ್ರುಗಳಿಗೆ ದೈನ್ಯಹುಟ್ಟಿಸುವ ನಂದಕ ಎಂಬ ಖಡ್ಗವನ್ನು ಧರಿಸಿದವನೇ, ಶ್ರೀಕೃಷ್ಣ! ನೀನು ಭೂಮಿಗೆ ಅಭಯನೀಡುವವನಾಗಿರುವಿ (ಕೃಷ್ಣಪಕ್ಷ).

ವಿ. : ೧. ಈ ಶ್ಲೋಕದಲ್ಲಿ ಶ್ರೀಹರಿಯ ಕಲ್ಕಿರೂಪದ ಹಾಗೂ ಶ್ರೀಕೃಷ್ಣರೂಪದ ವರ್ಣನೆ ಬಂದಿದೆ.

೨. 'ವಿಷ್ಣುಯಶ' ಎಂಬುದಕ್ಕೆ ಕಲ್ಕಿಪಕ್ಷದಲ್ಲಿ ವಿಷ್ಣುಯಶ ಎಂಬ ಬ್ರಾಹ್ಮಣ ಎಂದೂ ಕೃಷ್ಣಪಕ್ಷದಲ್ಲಿ ವಿಷ್ಣುವಿನ ಕೀರ್ತಿ ಎಂದೂ, 'ಕೃತಯುಗ-ಉನ್ನತಿ-ದಾತೃ-ಕರ-ಊರ್ಜಿತ' ಎಂದು ಕಲ್ಕಿಪಕ್ಷದಲ್ಲಿ, 'ಕೃತ-ಯುಗ-ಉನ್ನತಿ-ದಾತೃ-ಕರ- ಊರ್ಜಿತ' ಎಂದು ಕೃಷ್ಣಪಕ್ಷದಲ್ಲಿ, ಕಲ್ಕಿಪಕ್ಷದಲ್ಲಿ 'ದ್ವಿಜ-ಸು-ಹೃತ್-ಕಲಿ-ಕಾನನ-ದೈನ್ಯ-ಹೇತು-ಅಸಿ-ಧರಾ-ಅಸಿ-ಧರಾಭಯ-ಕಾರಕಃ' ಎಂದೂ, ಕೃಷ್ಣಪಕ್ಷದಲ್ಲಿ 'ದ್ವಿಜ-ಸುಹೃತ್-ಕಲಿಕಾ-ಆನನ-ದೈನ್ಯಹೇತ್ವಸಿಧರ-ಅಸಿ-ಧರಾಭಯಕಾರಕಃ' ಎಂದೂ ಅರ್ಥ.

### ಶ್ರೀಕೃಷ್ಣಸ್ತುತಿಯ ಸಮಾಪ್ತಿ

ಇತ್ಥಂ ಸರಸಸಲ್ಲಾಪೈಃ ಸಂಸ್ತುವಂತಃ ಸತಾಂಪತಿಮ್ ।
ಪ್ರತ್ಯಹಂ ತತ್ಪದಾಂಭೋಜಮೀಕ್ಷಮಾಣಾ ವಸಂತಿ ತೇ ॥ ೨೫ ॥

ಹೀಗೆ ಸರಸೋಕ್ತಿಗಳಿಂದ ಸಜ್ಜನರ ಒಡೆಯನಾದ ಶ್ರೀಹರಿಯನ್ನು ಬಹಳವಾಗಿ ಕೊಂಡಾಡುತ್ತಾ ಪ್ರತಿನಿತ್ಯ ಅವನ ಪಾದಕಮಲವನ್ನು ಸಂದರ್ಶಿಸುತ್ತಾ ಆ ಮುನಿಜನರು ದ್ವಾರಕೆಯಲ್ಲಿ ನೆಲೆಸಿದರು.

### ದ್ವಾರಾವತಿಯ ವರ್ಣನೆ

ಇಹಾಖಿಲೈಶ್ವರ್ಯಸುಭೋಗವೃದ್ಧೇಃ
ಪರತ್ರ ನಿಶ್ರೇಯಸಸೌಖ್ಯಸಿದ್ಧೇಃ ।
ಮಹಃ ಪರಂ ದ್ವಾರಮವಾಪ್ಯ ಪೃಥ್ವ್ಯಾ-
ಮಸೌ ಪುರೀ ದ್ವಾರವತೀ[೧] ಬಭೂವ ॥ ೨೬ ॥

---

೧. ಯದ್ಯಪಿ ದ್ವಾರಮಸ್ಯಾಂ ವರ್ತತ ಇತಿ ವ್ಯುತ್ಪತ್ತಿಸಂಭವಾತ್ ಸರ್ವಾಸಾಮಪಿ ಪುರೀಣಾಂ ದ್ವಾರವತೀತ್ವಂ ತಥಾಽಪ್ಯುಕ್ತರೀತ್ಯಾ ವಿಲಕ್ಷಣದ್ವಾರವತ್ತ್ವಾತ್ ಅಸಾಧಾರಣ್ಯೇನ ವ್ಯಪದೇಶಾ ಭವಂತಿ ಇತಿ ನ್ಯಾಯಾದಸ್ಯಾ ಏವ ದ್ವಾರವತೀಶಬ್ದವಾಚ್ಯತ್ವಮ್ । - ವ್ಯಾ.

ಈ ಲೋಕದಲ್ಲಿ ಸಮಸ್ತ ಐಶ್ವರ್ಯ ಹಾಗೂ ಉತ್ತಮ ಭೋಗಗಳ ವೃದ್ಧಿಗೆ, ಆ ಬಳಿಕ ಮೋಕ್ಷಸುಖದ ಸಿದ್ಧಿಗೆ, ಉತ್ತಮವಾದ ದ್ವಾರವಾದ ತೇಜೋರೂಪಿಯಾದ ಶ್ರೀಕೃಷ್ಣನನ್ನು ಪಡೆದು ಭೂಮಿಯಲ್ಲಿ ಇದು ದ್ವಾರವತೀ ಎನ್ನಿಸಿತು.

### ಸ್ಫಟಿಕಮಣಿಗಳ ಕವಾಟಗಳ ದ್ವಾರಕೆ

ಯತೋಽಭಿತೋಽಚ್ಛಸ್ಫಟಿಕಾವದಾತ-
ಲಸತ್ಕವಾಟಾಂತರಿತಾಽಪಿ ಸೇಯಮ್ ।
ಪುರೀ ನೃಣಾಂ ದ್ವಾರವತೀವ ಭಾತಿ
ತತೋಽಪಿ ತಾಂ ದ್ವಾರವತೀಂ ವದಂತಿ ॥ ೨೭ ॥

ಈ ಪಟ್ಟಣವು ಸುತ್ತಲೂ ಇರುವ ಸ್ವಚ್ಛವಾದ ಸ್ಫಟಿಕದಿಂದ ಹೊಳೆಯುವ ಕವಾಟಗಳ ಒಳಗಿದ್ದರೂ, ಸುತ್ತಲೂ ಕವಾಟಗಳನ್ನು ಹಾಕದಿರುವಂತೆ[೧] ಶುಭ್ರವಾಗಿ ಕಾಣುವುದರಿಂದ ಸಹ ಈ ಪಟ್ಟಣವನ್ನು ದ್ವಾರವತೀ ಎಂದು ಕರೆಯುವರು.

ವಿ. : ೧. ದ್ವಾರಕೆಯ ಸುತ್ತ ಇರುವ ಪ್ರಾಕಾರವು ಸ್ಫಟಿಕಮಣಿಗಳಿಂದ ನಿರ್ಮಿತವಾಗಿರುವುದರಿಂದ ಅದರ ಒಳಗಿನ ಇಡೀ ನಗರವು ಎಲ್ಲೆಡೆಗಳಿಂದಲೂ ಕಾಣುವುದರಿಂದ ಎಲ್ಲೆಡೆಯೂ ದ್ವಾರಗಳನ್ನು ಹೊಂದಿದಂತಾಗಿರುವುದರಿಂದ ದ್ವಾರಕೆ ಎಂಬ ಹೆಸರು ಅದಕ್ಕೆ ಅತ್ಯಂತ ಸಮುಚಿತ ಎನ್ನಿಸಿದೆ ಎಂದು ಭಾವ; ಅವದಾತ - ಶುಭ್ರ.

೨. ದ್ವಾರಕೆಯ ಬಾಗಿಲುಗಳು ಹಾಕಿದ್ದರೂ ಸಹ ಹಾಕದಿರುವಂತೆ ಕಾಣುವುದರಿಂದಲೂ ಅದಕ್ಕೆ ದ್ವಾರವತೀ ಎಂಬ ಹೆಸರು ಸಾರ್ಥ ಎಂದು ಭಾವ.

### ಇಂದ್ರನೀಲಮಣಿಗಳ ಕವಾಟಗಳ ದ್ವಾರಕೆ

ಯತಃ ಕವಾಟೇ ವಿವೃತೇಽಪಿ ಸೇಯಂ
ಪುರೀ ಕವಾಟಾಂತರಿತೇವ[೨] ಭಾತಿ ।
ಹರಿನ್ಮಣೇನಾಂ ಪ್ರಭಯಾ ಮಹತ್ಯಾ[೩]
ಕಥಂ ನು ಸಾ ದ್ವಾರವತೀತಿ ಮನ್ಯೇ ॥ ೨೮ ॥

---

೧. ಕವಾಟಾನಾಂ ಸ್ವಚ್ಛತ್ವೇನ ಬಹಿಃಸ್ಥಿತವ್ಯಾಪಾರಸ್ಯಾಂತಃಸ್ಥಿತೈರ್ದೃಶ್ಯತ್ವಾದಂತಃಸ್ಥಿತವ್ಯಾಪಾರಸ್ಯ ಬಹಿಸ್ಥಿತೈರ್ದೃಶ್ಯ-ಮಾನತ್ವಾತ್ ಸದಾ ವಿವೃತದ್ವಾರವತೀವ। - ವ್ಯಾ.

೨. ಸ್ಫಟಿಕಕವಾಟಸ್ಯ ವಿವೃತತ್ವೇನ ತತ್ಕಾಂತ್ಯಾಭಿಭವಾಭಾವಾತ್ ದ್ವಾರಬಂಧಸ್ಯ ಮರಕತರತ್ನಕಾಂತ್ಯಾಽಽವೃತತ್ವೇನ ಕವಾಟಾಂತರಿತೇವ ಭಾತಿ। - ವ್ಯಾ.

೩. ಭ್ರಾಂತಿಮದುತ್ಪ್ರೇಕ್ಷಾಕ್ಷೇಪಾನಾಂ ಸಂಕರಃ। -ವ್ಯಾ.

ಕವಾಟಗಳು ತೆರೆದಿದ್ದರೂ ಸಹ ಇಂದ್ರನೀಲಮಣಿಯ ಅಪಾರ ಕಾಂತಿಯಿಂದಾಗಿ, ಕವಾಟಗಳು ಮುಚ್ಚಿರುವಂತೆ ಕಾಣುವುದರಿಂದ ಇದು ಹೇಗೆ ದ್ವಾರವತಿಯಾಯಿತು ಎಂಬುದಾಗಿ ನಾನು ಯೋಚಿಸುವೆ.

ವಿ. : ೧.ದ್ವಾರಕೆಯು ಇಂದ್ರನೀಲಮಣಿಗಳ ದ್ವಾರಗಳಿಂದ ಕೂಡಿರುವುದರಿಂದ ಅದರ [1]ಬಾಗಿಲುಗಳನ್ನು ತೆರೆದಾಗಲೂ ಆ ಇಂದ್ರನೀಲಮಣಿಗಳ ಅಪಾರ ಕಾಂತಿಯಿಂದಾಗಿ ಬಾಗಿಲು-ಗಳೆಲ್ಲಾ ಹಾಕಿದಂತೆಯೇ ಕಾಣುವುದರಿಂದ ಅದು ದ್ವಾರಾವತೀ ಎನ್ನಿಸುವುದು ಮೇಲ್ನೋಟಕ್ಕೆ ಸರಿ ಎನ್ನಿಸದು ಎಂದರ್ಥ ; ಹರಿನ್ಮಣಿ – ಇಂದ್ರನೀಲಮಣಿ.

೨. ದ್ವಾರಕೆಯ ಗೋಡೆಗಳು ಸ್ಫಟಿಕಮಣಿಗಳಿಂದ ನಿರ್ಮಿತವಾಗಿದ್ದರೆ ಅದರ ಬಾಗಿಲುಗಳು ಮಾತ್ರ ಇಂದ್ರನೀಲಮಣಿಗಳ ನಿರ್ಮಾಣದವಾಗಿದ್ದವು ಎಂದರ್ಥ.

೩. ಈ ಭಾಗ ಒಂದು ರೀತಿಯಲ್ಲಿ ಪಾಂಡವರ ರಾಜಸೂಯಯಾಗದ ಮಯನಿರ್ಮಿತ ಸಭೆಯ ರಚನೆಯನ್ನು ಹೋಲುವುದು ಎಂಬುದು ಗಮನಾರ್ಹ[2].

**ರತ್ನಖಚಿತ ಚಿನ್ನದ ಪ್ರಾಕಾರಗಳ ದ್ವಾರಕೆ**

**ಯದೀಯರತ್ನಾವೃತಹೈಮವಪ್ರ-**
**ಸಕಾಶಮಭ್ಯೇತ್ಯ ನಿವರ್ತತೇ ಸ್ಮ।**

---

೧. ಕವಾಟತಿರೋಧಾನೇ ಸತ್ಯಸಂಭಾವಿತದ್ವಾರವತ್ವಸ್ಯ ಸದ್ಭಾವವರ್ಣನಂ ಕವಾಟೋದ್ಘಾಟನೇ ಸತಿ ಸಂಭಾವಿತದ್ವಾರಸ್ಯಾ ಸಂಭಾವಿತದ್ವಾರವತ್ವಸ್ಯ ಸದ್ಭಾವವರ್ಣನಂ ಕವಾಟೋದ್ಘಾಟನೇ ಸತಿ ಸಂಭಾವಿತದ್ವಾರಸ್ಯ ಸಂಭವ-ವರ್ಣನೇನಾತಿಶಯೋಕ್ತಿರಪಿ। ಸರ್ವೇಷ್ಟದಾಯಕಶ್ರೀಕೃಷ್ಣಾಧಿಷ್ಠಿತಾ ಸ್ಫಟಿಕಶಿಲಾಮಯಚತುಷ್ಕವಾಟವತೀ ಮರಕತ-ರತ್ನಖಚಿತದ್ವಾರಬಂಧನವತೀ ಚೇತಿ ಪುರೀವರ್ಣನಮಪಿ ದ್ರಷ್ಟವ್ಯಮ್। ಏವಮುತ್ತರತ್ರಾಪಿ ದ್ರಷ್ಟವ್ಯಮ್। –ವ್ಯಾ.

೨. ಸ್ಫಾಟಿಕಂ ಸ್ಥಲಮಾಸಾದ್ಯ ಜಲಮಿತ್ಯಭಿಶಂಕಯಾ॥
ಸವಸ್ತ್ರೋತ್ಕರ್ಷಣಂ ರಾಜಾ ಕೃತವಾನ್ ಬುದ್ಧಿಮೋಹಿತಃ।
ದುರ್ಮನಾ ವಿಮುಖಶ್ಚೈವ ಪರಿಚಕ್ರಾಮ ತಾಂ ಸಭಾಮ್॥
ತತಃ ಸ್ಥಲೇ ನಿಪತಿತೋ ದುರ್ಮನಾ ವ್ರೀಡಿತೋ ನೃಪಃ।
ನಿಃಶ್ವಸನ್ ವಿಮುಖಶ್ಚಾಪಿ ಪರಿಚಕ್ರಾಮ ತಾಂ ಸಭಾಮ್॥
ತತಃ ಸ್ಫಾಟಿಕತೋಯಾಂ ವೈ ಸ್ಫಾಟಿಕಾಂಬುಜಶೋಭಿತಾಮ್।
ವಾಪೀಂ ಮತ್ವಾ ಸ್ಥಲಮಿವ ಸವಾಸಾಃ ಪ್ರಾಪತಜ್ಜಲೇ॥ – ಭಾರತ (ಸಭಾ. ೪೭/೩.-೬)
ಸ್ಥಲೇಽಭ್ಯಗೃಹ್ಣಾದ್ವಸ್ತ್ರಾಂತಂ ಜಲಂ ಮತ್ವಾ ಸ್ಥಲೇಽಪತತ್।
ಜಲೇ ಚ ಸ್ಥಲವದ್ಭ್ರಾಂತ್ಯಾ ಮಯಮಾಯಾವಿಮೋಹಿತಃ॥ – ಭಾಗ. (೧೦/೭೫/೩೭)
ದ್ವಾರಂ ಸಭಾಯಾ ಹರಿನೀಲರಶ್ಮಿವ್ಯೂಢಂ ನ ಜಾನನ್ ಸ ವಿಹಾಯ ಭಿತ್ತಿಮ್।
ಅಭ್ಯಂತರಾಣಾಂ ದೃಶಿ ನೋ ವಿಘಾತಿನೀಂ ಸಂಸ್ಫಾಟಿಕಾಮಾಶು ದೃಢಂ ಚುಚುಂಬೇ॥
ತತ್ರೇಂದ್ರನೀಲಭುವಿ ರತ್ನಮಯಾನಿ ದೃಷ್ಟ್ವಾ ಪದ್ಮಾನಿ ನೀರಮನಸಾ ಜಗೃಹೇ ಸ್ವವಸ್ತ್ರಮ್।
ರತ್ನೋರುದೀಧಿತಿನಿಗೂಢಜಲಂ ಸ್ಥಲಂ ಚ ಮತ್ವಾ ಪಪಾತ ಸಹಿತೋಽವರಜೈರ್ಜಲೌಘೇ॥
–ಮ.ಭಾ.ತಾ.ನಿ.(೨೧/೨೭೪,೨೭೬)

ಸಮುದ್ಯತಾಸೀನ್ ಪ್ರತಿಬಿಂಬರಾಶೀನ್
ನಿರೀಕ್ಷ್ಯ ದೀನಾ ಬಹುಶೋಽರಿಸೇನಾ[೧] ॥ ೨೯ ॥

ದ್ವಾರಕೆಯ ರತ್ನಖಚಿತವಾದ ಚಿನ್ನದ ಪ್ರಾಕಾರದ ಬಳಿಗೆ ಬಂದು ಅದರಲ್ಲಿ ಖಡ್ಗಹಿಡಿದು ನಿಂತ ತನ್ನ ಪ್ರತಿಬಿಂಬಗಳ ಸಾಲನ್ನು ಕಂಡು ಶತ್ರುಗಳ ಸೇನೆಯು ಬಹಳವಾಗಿ ದೀನತೆಯನ್ನು ಹೊಂದಿ, ಮರಳಿಬಿಡುವುದು; (ವಪ್ರ - ಪ್ರಾಕಾರ).

ವಿ.: ೧. ದ್ವಾರಕೆಯ ರತ್ನಖಚಿತ ಪ್ರಾಕಾರದಲ್ಲಿ ಖಡ್ಗ ಹಿಡಿದು ನಿಂತ ತನ್ನ ಪ್ರತಿಬಿಂಬಗಳ ಸಾಲನ್ನು ಕಂಡು ಶತ್ರುಗಳ ಸೇನೆಯು ಅದು ತನ್ನನ್ನು ಆಕ್ರಮಿಸಲು ಬರುತ್ತಿರುವ ದ್ವಾರಕೆಯ ಸೇನೆ ಎಂಬು ಭ್ರಮಿಸಿ ಭೀತಿಯಿಂದ ಪಲಾಯನ ಮಾಡುವುದು ಎಂಬ ಇಲ್ಲಿಯ ವಿವರಣೆ ಅತ್ಯಂತ ರೋಚಕವಾದುದು.

೨. ಭಗವಂತನನ್ನು ಎದುರಿಸುವ ಜನರಿಗೆ ಅವರ ಪ್ರತಿಬಿಂಬವೇ ಭೀತಿ ಹುಟ್ಟಿಸುವಷ್ಟು ಅಪಾಯಕವರಾಗುವುದು ಎಂಬ ತತ್ತ್ವವೂ ಇಲ್ಲಿ ಸೂಚಿತ.

### ಮುಕ್ತಿಯ ಶೋಭೆಯ ದ್ವಾರಕೆ

ಮುಕ್ತಾವಲೀರಾಜಿತಸರ್ವಗೇಹಾ
ನಿತ್ಯಂ ಪ್ರಮೋದಾಶನಸತ್ಸಮೂಹಾ ।
ದುಷ್ಟೈರಗಮ್ಯಾ ದಯಿತಾ ಮುರಾರೇ-
ರ್ಮುಕ್ತಿಪ್ರಭಾ ದ್ವಾರವತೀ ಪುರೀ ಸಾ[೨] ॥ ೩೦ ॥

ದುಷ್ಟರು ಪ್ರವೇಶಿಸಲಾಗದ ಆ ದ್ವಾರಕೆಯ ಸಕಲ ಗೃಹಗಳು ಮುತ್ತಿನ ಸಾಲುಗಳಿಂದ ಕಂಗೊಳಿಸುವವು; ಸದಾ ಮಹದಾನಂದವನ್ನು ಅನುಭವಿಸುವ ಸಜ್ಜನರ ಗುಂಪುಗಳಿಂದ ಕೂಡಿರುವವು; ಇಂತಹ ಶ್ರೀಕೃಷ್ಣನಿಗೆ[೩] ಪ್ರಿಯವಾದ ಆ ದ್ವಾರಾವತಿಯು ಮುಕ್ತಿಯ ಶೋಭೆಯನ್ನು ಹೊಂದಿದೆ.

ವಿ : ೧. ದ್ವಾರಕೆಯ ಮನೆಗಳು ಮುತ್ತಿನ ಮಣಿಗಳಿಂದ ನಿರ್ಮಿತ; ಅಲ್ಲಿಯ ಜನರು ಸದಾ ಆನಂದಭರಿತರು; ವೈಕುಂಠದಲ್ಲಿ ಮುಕ್ತರು ತುಂಬಿರುವರು ಹಾಗೂ ಅವರು ಸದಾ ನಿತ್ಯಾನಂದಾನುಭವವನ್ನು ಪಡೆಯುವವರು; ಆದ್ದರಿಂದ ಆ ದ್ವಾರಕೆಯು ಮುಕ್ತರಿಂದ ಕೂಡಿರುವ ವೈಕುಂಠದಂತೆ ಶೋಭಿಸುವುದು ಎಂದು ಭಾವ.

---

೧. ಭ್ರಾಂತಿಮದಲಂಕಾರಃ। -ವ್ಯಾ.

೨. ತುಲ್ಯಯೋಗಿತೋಜ್ಜೀವಿತೋಪಮಾಲಂಕಾರಃ। -ವ್ಯಾ.

೩. ದುಷ್ಟೈಃ ಶಂಖಚಕ್ರಾದಿಚಿಹ್ನರಹಿತ್ಯೆರಗಮ್ಯಾ ಗಂತುಮಯೋಗ್ಯಾ। ''ನಾಮುದ್ರಿತಾಃ ಪ್ರವೇಷ್ಟವ್ಯಾಃ'' ಇತಿ ವಚನಾತ್। ಹರಿವಂಶ(೩/೭೪/೨೫) -ವ್ಯಾ.

೨. ಶ್ರೀಕೃಷ್ಣನ ನೆಲೆಯಾದ ದ್ವಾರಕೆಯ ಸೊಬಗು ಶ್ರೀಕೃಷ್ಣನ ನಿತ್ಯ ನೆಲೆಯಾದ ವೈಕುಂಠದಂತಿತ್ತು ಎಂದರ್ಥ.

**ಸಮುದ್ರವನ್ನು ರತ್ನಾಕರವನ್ನಾಗಿಸಿದ ದ್ವಾರಕೆ**

ವಿಚಿತ್ರರತ್ನಾವೃತವಪ್ರಸೌಧ-
ಗೃಹಾಂಗನಾಗೋಪುರವಾಪಿಕೌಘಮ್ ।
ಇದಂ ಪುರೀರತ್ನಮವಾಪ್ಯ ನೂನಂ
ಬಭೂವ ರತ್ನಾಕರಶಬ್ದಿತೋಽಬ್ಧಿಃ ॥ ೩೧ ॥

ವಿಚಿತ್ರರತ್ನಗಳಿಂದ ಖಚಿತವಾದ ಪ್ರಾಕಾರಗಳು, ಭವನಗಳು, ಗೃಹಗಳು, ಅಂಗನೆಯರು, ಗೋಪುರಗಳು, ಬಾವಿಗಳ ಸಾಲುಗಳು ಇವುಗಳಿಂದ ಕೂಡಿದ ಈ ದ್ವಾರಕೆಯಂತಹ ಶ್ರೇಷ್ಠ ನಗರವನ್ನು ತನ್ನೊಳಗೆ ಹೊಂದಿದ ಕಾರಣದಿಂದಾಗಿ ಸಮುದ್ರವು ರತ್ನಾಕರ ಎಂಬ ಹೆಸರಿಗೆ ಪಾತ್ರವಾಯಿತು ಎನ್ನಿಸುವುದು.

ವಿ : ೧. ಸಮುದ್ರವು ರತ್ನಾಕರವಾಗಿರುವುದು ತನ್ನಲ್ಲಿನ ಅಸಂಖ್ಯ ರತ್ನಗಳಿಂದಾಗಿ ಎಂಬುದು ಸುಪ್ರಸಿದ್ಧ; ಆದರೆ ಶ್ರೀಕೃಷ್ಣನಿರ್ಮಿತವಾದ ರತ್ನರಾಶಿಗಳಿಗೆ ಆಕರವಾದ ಈ ದ್ವಾರಕೆಯನ್ನು ತನ್ನ ಮಧ್ಯದಲ್ಲಿ ಹೊಂದಿದ ಕಾರಣದಿಂದಾಗಿ ಅದಕ್ಕೆ ಅದರ ಹೆಸರು ಮತ್ತಷ್ಟು ಸಾರ್ಥಕವೆನಿಸಿತು ಎಂದು ಭಾವ.

೨. ಸ್ವತಃ ಸುಸಮೃದ್ಧವಾಗಿದ್ದ ದ್ವಾರಕೆಯ ವೈಭವವು ಸುಮಧ್ವವಿಜಯದಲ್ಲಿ ವರ್ಣಿತವಾಗಿದೆ[1].

**ಮುತ್ತಿನ ರಾಶಿಗಳ ದ್ವಾರಕೆ**

ಸಮುದ್ರಮುತ್ಸೃಜ್ಯ ಪುರೀಂ ಪ್ರವಿಷ್ಟಾ
ಬಲೇನ ಮುಕ್ತಾವಲಿರಾಶುಗಸ್ಯ ।
ಭವಾಬ್ಧಿಮುಲ್ಲಂಘ್ಯ ಮರುದ್ಬಲಾಪ್ತ-
ವಿಕುಂಠಮುಕ್ತಾವಲಿವದ್ವಿರೇಜೇ[2] ॥ ೩೨ ॥

ಗಾಳಿಯ ಹೊಡೆತದಿಂದ ಸಮುದ್ರದಿಂದ ಹೊರಬಂದು ದ್ವಾರಾವತಿಗೆ ಪ್ರವೇಶಿಸಿದ ಮುತ್ತಿನ ರಾಶಿಗಳು ವಾಯುದೇವರ ಅನುಗ್ರಹದಿಂದ ಸಂಸಾರಸಾಗರವನ್ನು ದಾಟಿ, ವೈಕುಂಠವನ್ನು ಹೊಂದಿದ ಮುಕ್ತರ ಸಾಲುಗಳಂತೆ ಕಂಗೊಳಿಸಿದವು.

---

೧. ಪುರ ಏವ ಪೂರಿತಮಪೂರಯತ್ ಪುನರ್ನನು ಕೃಷ್ಣ ಏಷ ಪರಮಾರ್ಥಸಂಖ್ಯಯಾ ।
ಭಗವನ್ಮನಃ ಪುರಮಿವಾಯತಂ ಪುರಾ ನಿಜಧಾಮ ತಾಂ ಚ ಜಗೃಹೇ ತದದ್ಭುತಮ್ ॥ -ಸು.ವಿ.(೮/೩)
೨. ಪೂರ್ಣೋಪಮಾ । -ವ್ಯಾ.

ವಿ : ೧. ಸಮುದ್ರತೀರದ ದ್ವಾರಕೆಯಲ್ಲಿ ಮುತ್ತುಗಳ ರಾಶಿ ತುಂಬಿದ್ದು ಅವುಗಳೆಲ್ಲಾ ವೈಕುಂಠದಲ್ಲಿನ ಮುಕ್ತರ ಸಮೂಹಗಳಂತೆ ಕಾಣಿಸುತ್ತಿದ್ದವು[೧] ಎಂದರ್ಥ.

೨. ಇಲ್ಲಿ ಸಮುದ್ರದ ಮುತ್ತುಗಳು ಗಾಳಿಯಿಂದಾಗಿ ದ್ವಾರಾವತಿಗೆ ಬಂದಂತೆ ಸಂಸಾರದಲ್ಲಿ ತೊಳಲುವ ಮುತ್ತಿನಂತಹ ಸಾತ್ವಿಕ ಚೇತನರು ಶ್ರೀವಾಯುದೇವರಾದ ಶ್ರೀಮಧ್ವಾಚಾರ್ಯರ ಅನುಗ್ರಹದಿಂದ ವೈಕುಂಠದಲ್ಲಿ ಶೋಭಿಸುವರು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕವಾದುದು.

೩. ಮುತ್ತುಗಳು ಬಿಳಿಬಣ್ಣದವಾಗಿರುವಂತೆ ಮುಕ್ತರು ಪ್ರಾಕೃತದೋಷಗಳಿಂದ ರಹಿತರಾದವರು ಎಂಬ ಪ್ರಮೇಯ ಇಲ್ಲಿ ಸೂಚಿತ; ಆಶುಗ-ಗಾಳಿ; ಮುಕ್ತಾವಲಿ-ಮುತ್ತಿನ ಸಾಲುಗಳು, ಮುಕ್ತರ ಗುಂಪುಗಳು (ಶ್ಲೇಷಾಲಂಕಾರ).

## ಸ್ವರ್ಗವನ್ನು ಮೀರಿಸಿದ ದ್ವಾರಕೆ

ತರುಂ ಮದೀಯಂ ನಯತೂಚ್ಚಮತ್ತಃ
ಪುರೀಂ ನ ನೇತುಂ ಭವತೇ ಸಮರ್ಥಃ।
ಮರುತ್ವತೇತೀರಿತ ಏವ ನೂನಂ
ಪುರೀಮಿಮಾಂ ರಮ್ಯತಮಾಂ ಚಕಾರ[೨]॥ ೩೩ ॥

'ಶ್ರೀಕೃಷ್ಣನು ನನ್ನ ಪಾರಿಜಾತವೃಕ್ಷವನ್ನು ಬೇಕಿದ್ದರೆ ಒಯ್ಯಬಹುದು; ಆದರೆ ನನ್ನ ಉನ್ನತವಾದ ಅಮರಾವತೀಪಟ್ಟಣವನ್ನು ಮಾತ್ರ ಒಯ್ಯಲು ಸಮರ್ಥನಾಗಲಾರ' ಎಂಬುದಾಗಿ ಇಂದ್ರನಿಂದ ಉಕ್ತನಾದವನಂತೆ ಶ್ರೀಕೃಷ್ಣ ಈ ದ್ವಾರಕೆಯಂತಹ ಅತ್ಯಂತ ಸೊಗಸಾದ ಪಟ್ಟಣವನ್ನು ನಿರ್ಮಿಸಿದ.

ವಿ : ೧. ಮುಂದೆ ಶ್ರೀಕೃಷ್ಣ ಸ್ವರ್ಗದಿಂದ ಪಾರಿಜಾತವನ್ನು ತಂದು ಸತ್ಯಭಾಮಾದೇವಿಯ ಗೃಹಾಂಗಣದಲ್ಲಿ ಇರಿಸುವ ಪ್ರಸಂಗ ಸುಪ್ರಸಿದ್ಧ. ಇದಕ್ಕೆ ದೇವೇಂದ್ರ 'ಶ್ರೀಕೃಷ್ಣ ಆ ವೃಕ್ಷವನ್ನೇನೋ ಒಯ್ಯಬಹುದು; ಆದರೆ ಅಮರಾವತಿಯಂತಹ ರಮ್ಯಪಟ್ಟಣವನ್ನು ಒಯ್ಯಲು ಮಾತ್ರ ಅವನು ಸರ್ವಥಾ ಸಮರ್ಥನಾಗಲಾರ' ಎಂದು ನುಡಿಯಬಹುದು. ಅದಕ್ಕೆ ಉತ್ತರ ಎಂಬಂತೆ ಶ್ರೀಕೃಷ್ಣ ಸ್ವರ್ಗಕ್ಕಿಂತ ಮಿಗಿಲಾದ ದ್ವಾರಕೆಯನ್ನು ನಿರ್ಮಿಸಿ, ತಾನು ಇಂದ್ರನನ್ನು ಮೀರಿಸುವ ಶ್ರೀಹರಿ ಎಂಬುದನ್ನು ನಿರೂಪಿಸಿದ ಎಂದರ್ಥ; (ಮರುತ್ವಾ- ಇಂದ್ರನಿಂದ).

೨. ದ್ವಾರಕೆಯು ಸ್ವರ್ಗಕ್ಕಿಂತಲೂ ರಮಣೀಯವಾದ ಸ್ಥಳ ಎಂದು ಭಾವ[೩].

---

೧. "ಸ ಏನಾನ್ ಬ್ರಹ್ಮ ಗಮಯತಿ" (ಛಾಂದೋಗ್ಯೋಪನಿಷತ್ ೪/೫/೬) ಇತಿ ಶ್ರುತೇಃ ತೇ ಚ ತೇ ಮುಕ್ತಾಸ್ತೇಷಾಮಾ-ವಲಿವದ್ವಿರೇಜೇ। -ವ್ಯಾ.

೨. ಉತ್ಪ್ರೇಕ್ಷಾಲಂಕಾರಃ। -ವ್ಯಾ.

೩. ಸ್ವರ್ಗಾದಪ್ಯಧಿಕಮನೋಹರಾ ದ್ವಾರವತೀತಿ ಭಾವಃ। -(ಉತ್ಪ್ರೇಕ್ಷಾಲಂಕಾರ)

ವೈಕುಂಠದಂತಹ ದ್ವಾರಕೆ

ಅಧಿಷ್ಠಿತಾಃ ಪೋತಮಮೂಂ ಶ್ರಯಂತೇ
ಸ್ವಕಾರ್ಯಲಾಭಾಯ ವಣಿಕ್ಸಮೂಹಾಃ।
ಸ್ವರೂಪಲಬ್ಧ್ಯೈ ಹರಿಪಾದಪೋತ-
ಕೃತಾಶ್ರಯಾಃ ಸಿದ್ಧಜನಾಶ್ಚ ದೂರಾತ್ ॥ ೩೪ ॥

ದೂರದಿಂದ ನಾವೆಗಳನ್ನು ಆಶ್ರಯಿಸಿ ಬರುವ ವರ್ತಕ ಹಿಂಡುಗಳು ತಮ್ಮ ಕ್ರಯವಿಕ್ರಯಾದಿ ಲಾಭಕ್ಕೋಸ್ಕರ, ಈ ದ್ವಾರಕೆಯನ್ನು ಆಶ್ರಯಿಸುವರು; ಹರಿಪಾದವೆಂಬ ನಾವೆಯನ್ನು ಅವಲಂಬಿಸಿರುವ ಯೋಗಿಗಳು ಈ ದ್ವಾರಕೆಯನ್ನು ತಮ್ಮ ಸ್ವರೂಪದ ಲಾಭಕ್ಕಾಗಿ ಆಶ್ರಯಿಸುವರು.

ವಿ : ೧. ಲೌಕಿಕಜನರಿಗೆ ದ್ವಾರಕೆಯು ವ್ಯಾಪಾರಕೇಂದ್ರ; ಆದರೆ ಆಧ್ಯಾತ್ಮಿಕ ಪ್ರವೃತ್ತಿಯ ಚೇತನರಿಗೆ ದ್ವಾರಕೆಯು ವೈಕುಂಠಪ್ರಾಪ್ತಿಯ ಸಾಧನ ಎಂದರ್ಥ.

೨. ದ್ವಾರಕೆಯು ಇಂದಿಗೂ ಸಹ ವ್ಯಾಪಾರಕೇಂದ್ರಗಳಲ್ಲೊಂದು ಎನ್ನಿಸಿದ್ದು ಇದು ಆ ಕಾಲದಿಂದಲೂ ಆ ಪ್ರಸಿದ್ಧಿ ಪಡೆದಿದೆ ಎಂಬುದು ಇದರಿಂದ ತಿಳಿಯುವುದು.

೩. [೧]ಐಹಿಕವಾಗಿ ಮಾತ್ರವಲ್ಲದೆ ಪಾರತ್ರಿಕವಾಗಿಯೂ ದ್ವಾರಕೆಯ ಪ್ರಯೋಜನ ಅಪಾರ ಎಂದು ತಾತ್ಪರ್ಯ; ಪೋತ - ನಾವೆ.

೪. ಸಾತ್ವಿಕರಿಗೆ ಲಭಿಸುವ ಲಾಭ ಎಂದರೆ ಜೀವಸ್ವರೂಪವನ್ನು ಆವರಿಸಿರುವ ಜೀವಾಚ್ಛಾದಿಕೆಯನ್ನು ಹಾಗೂ ಪರಮಾಚ್ಛಾದಿಕೆಯನ್ನು ಪರಿಹರಿಸುವ ಮೂಲಕ ವೈಕುಂಠಪ್ರಾಪ್ತಿ ಎಂದರ್ಥ.

ಮುಕ್ತಲೋಕದಂತಹ ದ್ವಾರಕೆ

ಇಮಾಮಧಿಶ್ರಿತ್ಯ ಪುರೀಂ ಪರತ್ರ
ವಿಮುಕ್ತಿಮೇವ ವ್ರತಿನೋ ವ್ರಜಂತಿ।
ಪುರಾऽಪಿ ನಾಕಾಧಿಕಲೋಕಭಾಜಾಂ
ಕಥಂ ಸ ತೇಷಾಂ ಬಹುಮಾನಪಾತ್ರಮ್ ॥ ೩೫ ॥

ಈ ದ್ವಾರಕೆಯಲ್ಲಿ ನೆಲೆಸಿದ ಯತೀಶ್ವರರು ಮುಂದೆ ಮುಕ್ತಿಯನ್ನೇ ಪಡೆಯುವರು; ಏಕೆಂದರೆ ಆ ಮುನ್ನವೇ ಸ್ವರ್ಗಕ್ಕಿಂತ ಮಿಗಿಲಾದ ಈ ದ್ವಾರಕೆಯನ್ನು ಆಶ್ರಯಿಸಿದ ಅವರಿಗೆ ಆ ಸ್ವರ್ಗವೆಂತು ಆದರಕ್ಕೆ ಪಾತ್ರವಾದೀತು !

---

೧. ಐಹಿಕಾಮುಷ್ಮಿಕಫಲದೇಯಂ ಪುರೀತಿ ಭಾವಃ। -ವ್ಯಾ.

ವಿ : ೧. ದ್ವಾರಕೆಯು ಸ್ವರ್ಗಕ್ಕಿಂತ ಮಿಗಿಲಾದ ಸ್ಥಳವಾದ್ದರಿಂದ ಈ ಕ್ಷೇತ್ರದ ನಿವಾಸಿಗಳು ಸ್ವರ್ಗವನ್ನು ಬಯಸಲು ಕಾರಣವೇ ಇಲ್ಲ; ಆದರೂ ಸಾಧನೆ ಮಾಡುತ್ತಿರುವರು ಎಂದರೆ ಅದು ಸ್ವರ್ಗಕ್ಕಿಂತ ಮಿಗಿಲಾದ ಗುರಿಯೇ ಆಗಿರಬೇಕು ಎಂಬುದು ನಿಶ್ಚಿತ; ಅಂತಹ ಗುರಿ ಮುಕ್ತಿಯೇ ಹೊರತು ಬೇರಾವುದೂ ಅಲ್ಲ ಎಂದು ಭಾವ; ನಾಕ – ಸ್ವರ್ಗ.

೨. ಉತ್ತಮಸ್ಥಾನವನ್ನು ಹೊಂದಿದವನು ಹೆಚ್ಚಿನ ಸಾಧನೆ ಮಾಡುವುದು ಅದಕ್ಕಿಂತ ಮಿಗಿಲಾದ ಉತ್ತಮಸ್ಥಾನದ ಪ್ರಾಪ್ತಿಗೆ ಹೊರತು, ಕೀಳಾದ ಸ್ಥಾನದ ಪ್ರಾಪ್ತಿಗೆ ಅಲ್ಲ. ಕ್ಷೀರಾನ್ನವನ್ನು ತಿನ್ನುವವನು ಗಂಜಿಗೆ ಇಚ್ಛೆಪಡಲು ಸಾಧ್ಯವೆ[1] ! ಅದರಂತೆ ಎಂದು ಇಲ್ಲಿಯ ಭಾವ.

೩. ಇಂದ್ರನ ನೆಲೆಯಾದ ಸ್ವರ್ಗಕ್ಕಿಂತ ಉಪೇಂದ್ರರೂಪಿಯಾದ ಶ್ರೀಹರಿಯ ವಾಸಸ್ಥಾನ-ವೆನ್ನಿಸಿದ ದ್ವಾರಕೆಯು ಸಹಜವಾಗಿಯೇ ಅತ್ಯಂತ ಮಿಗಿಲಾದುದು ಎಂದು ತಾತ್ಪರ್ಯ.

೪. ಅಪಾಯಕರವಾದ ಜ್ವರವೊಂದರಿಂದ ಪೀಡಿತರಾಗಿ ದ್ವಾರಕೆಯಲ್ಲಿದ್ದ ಕೃಷ್ಣ ಎಂಬ ಒಬ್ಬ ಯತಿಗೆ ಸ್ವಪ್ನದಲ್ಲಿ ಶ್ರೀವಾದಿರಾಜರು ರಚಿಸಿದ ಮಧ್ವಾಷ್ಟಕವನ್ನು ಪಠಿಸಿದ್ದಲ್ಲಿ ಅದು ಪರಿಹಾರವಾಗುವುದೆಂದು ಸೂಚನೆ ಲಭಿಸಿ, ಅದರಂತೆ ಅವರು ಶ್ರೀವಾದಿರಾಜರನ್ನು ಸಂದರ್ಶಿಸಿ, ಅವರ ಅನುಗ್ರಹಕ್ಕೆ ಪಾತ್ರರಾಗಿ ಆ ಮಧ್ವಾಷ್ಟಕವನ್ನು ಪಠಿಸುವ ಮೂಲಕ ಜ್ವರದಿಂದ ಮುಕ್ತರಾದರು, ಹಾಗೂ ಮುಂದೆ ವಾದಿಗಳನ್ನು ಜಯಿಸುವಷ್ಟು ಸಮರ್ಥ ಜ್ಞಾನಿಗಳೂ ಆದರು ಎಂಬ ಉಲ್ಲೇಖ ವೃತ್ತರತ್ನಸಂಗ್ರಹದಲ್ಲಿ ಬಂದಿದೆ (೧/೨೧):

ತತ್ರಾಸೀತ್ ಕೃಷ್ಣನಾಮಾ ಯತಿರಪಿ ಸುಜನಃ ಸುಜ್ವರಗ್ರಸ್ತದೇಹೋ
ಭೂತ್ವಾ ಸ್ವಪ್ನಂ ಚ ದೃಷ್ಟ್ವಾ ಯದಿ ಪಠಸಿ ಕೃತಂ ವಾದಿರಾಜಾಷ್ಟಕಂ ತ್ವಮ್ ।
ಶಾಂತಿಃ ಸ್ಯಾದಿತ್ಯಥೈನಂ ಯತಿವರಮುಪಗಮ್ಯೋಕ್ತವಾನ್ ಸ್ವಾಪ್ನಮರ್ಥಂ
ತತ್ಪಾಠಾನ್ಮುಕ್ತರೋಗೋಽಭವದಥ ಸತತಂ ಜೈತ್ರ ಆಸೀತ್ ಸ್ವಯಂ ಚ ॥

– ಇಲ್ಲಿಯ 'ವ್ರತಿನಃ' ಎಂಬ ಪದ ಹಾಗೂ ಅದಕ್ಕಿರುವ ಯತೀಶ್ವರ ಎಂಬ ವ್ಯಾಖ್ಯಾನ ಒಂದು ರೀತಿಯಲ್ಲಿ ಈ ಪ್ರಸಂಗವನ್ನು ಸೂಚಿಸುವಂತಿದೆ ಎನ್ನಬಹುದು.

೫. 'ವ್ರತಿನಃ' ಎಂಬುದಕ್ಕೆ ವ್ರತಶೀಲರಾದ ಮುಮುಕ್ಷುಗಳು ಎಂಬ ಅರ್ಥವನ್ನೂ ಮಾಡಬಹುದು.

ಕಾಶಿಯನ್ನು ನಾಚಿಸುವ ದ್ವಾರಕೆ

ಗುಣೇನ ಯಸ್ಯಾಃ [2]ಶ್ರುತಿಸಂಗತೇನ
ಸ್ವಕೋಟಿಮಾತ್ರೇಣ ವಿನಮ್ರವಕ್ತ್ರಾ ।

---

೧. ನ ಹಿ ಕ್ಷೀರಾನ್ನಭೋಜೀ ಯವಾಗುಮಪೇಕ್ಷತ ಇತಿ ಭಾವಃ । –ವ್ಯಾ.
೨. ವೇದಸಂಬದ್ಧೇನ ವೇದೋಕ್ತೇನೇತ್ಯರ್ಥಃ । – ವ್ಯಾ.

ಅವದ್ಯಸಂಛಾದನವೈಖರೀಜ್ಞಾ
ಬಭಾರ ಕಾಶೀ[1] ಧನುಷೋಽನುಕಾರಮ್[2] ॥ ೩೬ ॥

ತನಗಿಂತ ಕೋಟಿಪಾಲು ಮಿಗಿಲಾದ ದ್ವಾರಕೆಯ ಹಿರಿಮೆಯನ್ನು ಕಿವಿಗೆ ಬೀಳಿಸಿಕೊಂಡ ಕಾಶೀಕ್ಷೇತ್ರವು ತನ್ನಲ್ಲಿನ ದೋಷವನ್ನು ಮರೆಮಾಚಿಕೊಳ್ಳುವ ಪ್ರೌಢಿಮೆಯನ್ನು ಬಲ್ಲದ್ದರಿಂದ ತನ್ನ ಮುಖವನ್ನು ಬಾಗಿಸಿಕೊಂಡದ್ದಾಗಿ ಧನುಸ್ಸಿನ ಆಕಾರವನ್ನು ತಳೆದಿದೆ.

ವಿ : ೧. ಕಾಶಿಯು ಭರತಖಂಡದ ಮಹಾಪುಣ್ಯಕ್ಷೇತ್ರಗಳಲ್ಲೊಂದು; ಆದರೆ ಶ್ರೀಕೃಷ್ಣನ ವಾಸದಿಂದಾಗಿ ಪಾಪಪರಿಹಾರಮಾಡುವ, ಮುಕ್ತಿನೀಡುವ ವಿಶೇಷಗುಣವನ್ನು ಪಡೆದಿರುವ ದ್ವಾರಕೆಯು ಅದಕ್ಕಿಂತ ತುಂಬಾ ಶ್ರೇಷ್ಠವಾದುದು[3] ಎಂಬುದು ಇಲ್ಲಿಯ ಭಾವ.

೨. ತಮಗಿಂತ ಶ್ರೇಷ್ಠರ ಇರುವಿಕೆಯನ್ನು ತಿಳಿದಾಗ ಆಗುವ ಮಾತ್ಸರ್ಯವನ್ನು ಮರೆಮಾಚಿಕೊಳ್ಳಲು, ಮುಖಬಾಗಿಸಿಕೊಳ್ಳುವುದೊಂದೇ ಉಪಾಯ ಎಂಬ ಲೋಕನೀತಿಯು ಇಲ್ಲಿ ಸೂಚಿತ.

೩. ಕಿವಿಯವರೆಗೆ ಸೆಳೆಯಲ್ಪಟ್ಟ ಬಾಣವನ್ನು ಹೊಂದಿದ ಧನುಸ್ಸಿನ ತುದಿಗೆ ಬಾಗುವುದೊಂದೇ ದಾರಿ. ಅದರಂತೆ ಮೋಕ್ಷದತ್ತ ಸಾಗುವ ಬಾಣದಂತಿರುವ ದ್ವಾರಕಾ ಕ್ಷೇತ್ರಕ್ಕೆ ಕಾಶಿಯು ಸಾಧನ-ಭೂತವಾಗಿರುವ ಧನುಸ್ಸಿನ ಸ್ಥಾನವನ್ನು ಪಡೆದಿದೆ ಎಂದರ್ಥ.

೪. ಗುರಿಮುಟ್ಟುವುದು ಬಾಣವೇ ಹೊರತು ಧನುಸ್ಸಲ್ಲ. ಅದರಂತೆ ಮೋಕ್ಷದ ಗುರಿಯನ್ನು ತಲುಪಿಸುವುದು ಶ್ರೀಕೃಷ್ಣಕ್ಷೇತ್ರವಾದ ದ್ವಾರಕೆಯೇ ಹೊರತು ಕಾಶಿಯಲ್ಲ. ಆದರೂ ಬಾಣಪ್ರಯೋಗಕ್ಕೆ ಧನುಸ್ಸು ಅಗತ್ಯವಿರುವಂತೆ ದ್ವಾರಕೆಯ ಪ್ರಯೋಜನ ಪಡೆಯಲು ಕಾಶಿಕ್ಷೇತ್ರ ನೆರವಾಗುವುದು. ಇದು ಒಂದು ರೀತಿಯಲ್ಲಿ ಮೋಕ್ಷಕ್ಕೆ ಜ್ಞಾನವೇ ಸಾಧನವಾದರೂ ಜ್ಞಾನಪ್ರಾಪ್ತಿಗೆ ಕರ್ಮವು ಸಾಧನ ಎನ್ನಿಸುವಂತೆ ಎಂದು ತಿಳಿಯಬೇಕು.

---

೧. ರೂಪ್ಯಾಚಲೇ ಕೃತಪದೋಽಪಿ ಗಿರೀಂದ್ರಪುತ್ರೀಪ್ರೇಮಪ್ರವಾಹಭರಮಾನಿತಮಾನಸೋಽಪಿ।
ಕಾಶೀಮಸೀವರುಣಯೋಃ ಪುರಮಂತರಾಲೇ ಪ್ರೇತಾವೃತಾಮಪಿ ಸತೀಪತಿರಧ್ಯತಿಷ್ಠತ್ ॥ -ತೀ.ಪ್ರ. (೨/೨೩)

೨. ಶ್ರುತಿಸಂಗತೇನ ಆಕರ್ಣಾಂತಮಾಕೃಷ್ಟೇನ ಕೋಟಿಮಾತ್ರೇಣ ಚಾಪಾಗ್ರಮಾತ್ರೇಣ ಗುಣೇನ ಮೌರ್ವ್ಯಾ ಧನುಷಃ ನಮ್ರೀಭಾವಸ್ಯೌಚಿತ್ಯಾತ್ ತದಾಕಾರೇ ಸ್ವೀಕೃತೇ ಸತಿ ಸ್ವನಿಷ್ಠಮಾತ್ಸರ್ಯಲಕ್ಷಣದೋಷ ಆಚ್ಛಾದಿತೋ ಭವತ್ವಿತ್ಯಭಿಪ್ರಾಯೇಣೈವ ಧನುರಾಕಾರಂ ಬಭ್ರೇ ಇತಿ ಭಾವಃ। ಅತ ಏವಾವದ್ಯಸಚ್ಛಾದನವೈಖರೀಜ್ಞೇತ್ಯುಕ್ತಮ್। - ವ್ಯಾ.

೩. ಕಾಶ್ಯಾಃ ಕೋಟಿಗುಣಾಧಿಕಾ ದ್ವಾರವತೀತಿ ಭಾವಃ। -ವ್ಯಾ.

ವಿಶ್ವಂಭರಾಂ ಘನತರಾಮಪಿ ಭೂರಿಯಂತ್ರೈರ್ನಿರ್ಭಿದ್ಯ ಯತ್ಪದಮುಪೇತ್ಯ ಬಲೀಂದ್ರಗೇಹಾತ್।
ಆಸ್ತೇ ತ್ರಿವಿಕ್ರಮತನುರ್ಹರಿರದ್ವಿತೀಯಾ ಸಾ ದ್ವಾರಕೇಪ್ಸಿತಪುಮರ್ಥಕರೀ ಪುರೀ ನಃ॥ - ತೀ.ಪ್ರ. (೧/೧೦)

**ಇಂದ್ರಸಭೆಯಿಂದ ಕಂಗೊಳಿಸುವ ದ್ವಾರಕೆ**

ಸುಧರ್ಮಪುಂಜಾವನಮೂಲಭೂತ-
ಮಿಹಾಚ್ಯುತಂ ವೀಕ್ಷ್ಯ ಕೃತಾಧಿವಾಸಮ್ ।
ಸಭಾಂ ಸುಧರ್ಮಾಂ[1] ಪ್ರದದೌ ಪುರೀವತ್
ಸ್ವಸಂಸದತ್ಯುಚ್ಚಸಭಾಭಿಯೇವ[2] ॥ ೩೭ ॥

ಮಂಗಳಕರವಾದ ನಿತ್ಯನೈಮಿತ್ತಿಕಕರ್ಮಗಳ ರಕ್ಷಣೆಗೆ ಕಾರಣಭೂತನಾದ ಶ್ರೀಕೃಷ್ಣನು ದ್ವಾರಕೆಯಲ್ಲಿ ನೆಲೆಸಿದ್ದನ್ನು ನೋಡಿ ಆ ದ್ವಾರಕೆಯಂತೆ ತನ್ನ ಸಭೆಗಿಂತ ಮಿಗಿಲಾದ ಸಭೆಯನ್ನು ಸಹ ಶ್ರೀಕೃಷ್ಣ ನಿರ್ಮಿಸಿಯಾನು ಎಂಬ ಅಂಜಿಕೆಯಿಂದ ದೇವೇಂದ್ರ ತನ್ನ ಸುಧರ್ಮಾ ಎಂಬ ಸಭೆಯನ್ನೇ ಶ್ರೀಕೃಷ್ಣನಿಗೆ ಸಮರ್ಪಿಸಿದ.

ವಿ : ೧. [3]ಶ್ರೀಕೃಷ್ಣನಿಗೆ ತನ್ನ ಸೇವಾರೂಪ ಕಾಣಿಕೆಯನ್ನಾಗಿ ಇಂದ್ರ 'ಸುಧರ್ಮಾ' ಎಂಬ ತನ್ನ ಸಭೆಯನ್ನು ಸಮರ್ಪಿಸಿದ ಎಂದು ಭಾವ.

೨. ತನ್ನ ಅಮರಾವತಿಯನ್ನು ಸಹ ಮೀರಿಸುವಂತಹ ದ್ವಾರಕೆಯನ್ನು ನಿರ್ಮಿಸಿದ ಶ್ರೀಕೃಷ್ಣ ತನ್ನ ಸುಧರ್ಮಾ ಎಂಬ ಸಭೆಯನ್ನು ಮೀರಿಸುವಂತಹ ಸಭೆಯನ್ನು ಸಹ ನಿರ್ಮಿಸಿದಲ್ಲಿ ತನ್ನ ಅಮರಾವತಿಯ ಖ್ಯಾತಿಯಂತೆ ಸಭೆಯ ಖ್ಯಾತಿಯು ಸಹ ಮಂಕಾದೀತು ಎಂಬ ಕಾರಣದಿಂದ ಇಂದ್ರ ತನ್ನ ಸಭೆಯನ್ನು ಹಾಗೆ ಅರ್ಪಿಸುವ ಮೂಲಕ ಅಂತಹ ಅಪಖ್ಯಾತಿಯಿಂದ ದೂರಾದ ಎಂಬ ಇಲ್ಲಿಯ ಕಾವ್ಯಚಮತ್ಕಾರ ತುಂಬಾ ಅಪೂರ್ವವಾದುದು.

**ಜರಾಸಂಧನಿಗೆ ಮುಪ್ಪು ಕವಿಸಿದ ದ್ವಾರಕೆ**

ಪುರೀಮಗಮ್ಯಾಂ ಪರಿಖೀಕೃತಾಬ್ಧಿಂ
ನಿಶಮ್ಯ ಕೃಷ್ಣಸ್ಯ ನಿರೂಢಚಿಂತಃ ।
ಸ ಮಾಗಧೋಽಭೂದಿಹ ಯೋಗ್ಯನಾಮಾ
ಕ್ರಮಾಜ್ಜರಾಸಂಹಿತಗಾತ್ರಸೀಮಾ ॥ ೩೮ ॥

---

೧. ಸುಧರ್ಮಾಂ ಪಾರಿಜಾತಂ ಚ ಮಹೇಂದ್ರಃ ಪ್ರಾಹಿಣೋದ್ಧರೇಃ — ಭಾ. (೧೦/೫೦/೫೫)
ಸಭಾಂ ಸುಧರ್ಮನಾಮಿಕಾಂ ದದೌ ಸಮೀರಣೋಽಸ್ಯ ಚ ।
ಶತಕ್ರತೋಃ ಸಭಾಂ ತು ತಾಂ ಪ್ರದಾಯ ಕೇಶವಾಯ ಸಃ ॥ — ಮ.ಭಾ.ತಾ.ನಿ. (೧೭/೧೦೫)

೨. ಪುರೀವತ್ ಅಮರಾವತೀಸಕಾಶಾತ್ ಅಧಿಕಮನೋಹರದ್ವಾರಾವತೀವತ್ ಸ್ವಸದಸಃ ಸ್ವಸಭಾಯಾಃ ಸುಧರ್ಮಾಯಾಃ ಅತ್ಯುಚ್ಚಸಭಾಕರಣೇನ ಮದೀಯಸುಧರ್ಮಾಖ್ಯಸಭಾಽಪ್ಯುಪೇಕ್ಷ್ಯಾ ಭವಿಷ್ಯತೀತಿ ಭಿಯೇವೇತ್ಯರ್ಥಃ । — ವ್ಯಾ.

೩. "ಯದಾ ಯದಾ ಹಿ ಧರ್ಮಸ್ಯ" ಇತಿ (ಗೀತಾ.೪/೫) ಸ್ಮೃತೇಃ । — ವ್ಯಾ.

ಸಮುದ್ರದಿಂದ ಸುತ್ತುವರೆಯಲ್ಪಟ್ಟ ಶ್ರೀಕೃಷ್ಣನ ಈ ದ್ವಾರಕೆಯು ಅಗಮ್ಯ ಎಂಬ ವಿಚಾರವನ್ನು ಕೇಳಿಸಿಕೊಂಡ ಜರಾಸಂಧನು ಗಾಢ ಚಿಂತೆಗೊಳಗಾಗಿ[೧], ಕ್ರಮವಾಗಿ ದೇಹಕ್ಕೆ ಮುಪ್ಪುಕವಿದವನಾಗಿ, ತನ್ನ ಹೆಸರಿಗೆ ತಕ್ಕ ದೇಹವನ್ನೇ ಹೊಂದಿದನು.

ವಿ : ೧. ಶ್ರೀಕೃಷ್ಣನ ಈ ದ್ವಾರಕಾನಿರ್ಮಾಣದ ಮಹಿಮೆ ಜರಾಸಂಧನಿಗೆ ಹೆಚ್ಚಿನ ಚಿಂತೆಗೆ ಕಾರಣವಾಯಿತು ಎಂದರ್ಥ.

೨. [೨]ಜೀವನಪೂರ್ತಿ ಪ್ರಯತ್ನಿಸಿದರೂ ಇದನ್ನು ಆಕ್ರಮಿಸಲಾಗದು ಎಂಬ ಚಿಂತೆಗೊಳಗಾದ ಜರಾಸಂಧ ಮುಪ್ಪಡರಿದವನಾದ ಎನ್ನುವ ಮೂಲಕ ಅವನಿಗಾದ ಪರಾಭವದ ಚಿತ್ರ ಇಲ್ಲಿದೆ.

೩. ಜರಾಸಂಧ ಎಂದರೆ ಮುಪ್ಪಿನಿಂದ ಕೂಡಿದವನು ಅಥವಾ ಮುಪ್ಪಡರಿದವನು ಎಂದರ್ಥ. ಹೀಗೆ ದ್ವಾರಕೆಯ ಆಕ್ರಮಣದ ಬಗ್ಗೆ ಚಿಂತಾಗ್ರಸ್ತನಾಗುವ ಮೂಲಕ ಜರಾಸಂಧ ತನ್ನ ಹೆಸರನ್ನು ಅನ್ವರ್ಥಕಮಾಡಿಕೊಂಡ ಎಂದು ಭಾವ.

೪. ಅವನು 'ಜರೆ' ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಶರೀರದಿಂದಾಗಿ ಜರಾಸಂಧ ಎಂಬ ಹೆಸರಿನವನಾಗಿದ್ದ. ಆದರೆ, ಈಗ ಚಿಂತೆ ಎಂಬ ಮುಪ್ಪಿನಿಂದ ಗ್ರಸ್ತನಾದ್ದರಿಂದ ಜರಾಸಂಧನಾದ; ಇಲ್ಲಿ ಜರಾಸಂಧ ಎಂಬ ಹೆಸರಿಗೆ ಬೇರೊಂದು ಕಾರಣದ ಕಲ್ಪನೆಗೆ ಉತ್ಪ್ರೇಕ್ಷೆ ಮೂಲವಾಗಿರುವುದರಿಂದ ಇದು ವಿಭಾವನಾಮೂಲಕೋತ್ಪ್ರೇಕ್ಷಾಲಂಕಾರ[೩] ಎನ್ನಿಸುವುದು.

### ಬೆಳದಿಂಗಳಿನಂತಹ ವಾರಸ್ತ್ರೀಯರ ದ್ವಾರಕೆ

ಸಿತಾನುಲೇಪಾಂಬರಮಾಲ್ಯಹಾರಾಃ
ಶುಚಿಸ್ಮಿತಾ ವಾರವಧೂರ್ವ್ರಜಂತೀಃ ।
ಇಹೋದಿತೇಂದುದ್ಯುತಿತೋಽತಿರಿಕ್ತಾ
ನ ಯಾಮಿಕಾ ಲಕ್ಷಯಿತುಂ ಕ್ಷಮಂತೇ[೪] ॥ ೩೯ ॥

ಶುಭ್ರವಾದ ಅಂಗಲೇಪ, ವಸ್ತ್ರ, ಮಾಲೆ[೫] ಹಾಗೂ ಮುತ್ತಿನ ಹಾರಗಳನ್ನು ಧರಿಸಿ, ನಿರ್ಮಲ ಮಂದಹಾಸದಿಂದ ಓಡಾಡುತ್ತಿದ್ದ ವಾರಸ್ತ್ರೀಯರನ್ನು ಅಲ್ಲಿಯ ಪುರಪಾಲಕರು ಚಂದ್ರನ ಬೆಳದಿಂಗಳಿಗಿಂತ ಭಿನ್ನರನ್ನಾಗಿ ಗುರುತಿಸಲು ಸಮರ್ಥರಾಗಲೇ ಇಲ್ಲ.

---

೧. ಚಿಂತಯಾ ಪಲಿತಗಾತ್ರಃ ಸನ್ನಿತ್ಯರ್ಥಃ । – ವ್ಯಾ.

೨. ಆಮರಣಮುಪಾಯಚಿಂತಯಾಽಪಿ ದ್ವಾರವತೀ ಅಸಾಧ್ಯೇತಿ ಭಾವಃ । –ವ್ಯಾ.

೩. ಜರಯಾ ರಾಕ್ಷಸ್ಯಾ ಸಂಹಿತಗಾತ್ರತ್ವೇನ ಜರಾಸಂಧನಾಮಾ ನ ಬಭೂವ । ಕಿಂತು ಚಿಂತಾಜರಯಾ ಗ್ರಸ್ತತ್ವೇನ ಇತಿ ಭಾವಃ । ಅತ್ರ ಜರಾಸಂಧನಾಮ್ನಃ ಕಾರಣಾಂತರಕಲ್ಪನಾಯಾಃ ಉತ್ಪ್ರೇಕ್ಷಾಮೂಲತ್ವೇನ ವಿಭಾವನಾಮೂಲ-ಕೋತ್ಪ್ರೇಕ್ಷಾಲಂಕಾರಃ । – ವ್ಯಾ.

೪. ಅತ್ಯುಕ್ತಿರಲಂಕಾರಃ । –ವ್ಯಾ.

೫. ಕಬರ್ಯಾ ಮಲ್ಲಿಕಾಮಾಲಾಚ್ಛಾದಿತತ್ವೇನಾನುಲೇಪಸ್ಮಿತಾದೀನಾಮತಿಶುಭ್ರತ್ವೇನ ಏತಾಶ್ಚಂದ್ರಕಿರಣಾ ಏವ ನ ತು ನಾರ್ಯ ಇತಿ ಭ್ರಾಂತ್ಯಾ ತಾಃ ಧರ್ಷಯಿತುಂ ನ ಕ್ಷಮಂತ ಇತ್ಯರ್ಥಃ । –ವ್ಯಾ.

ವಿ : ೧. ರಾತ್ರಿಯಲ್ಲಿ ವಾರಸ್ತ್ರೀಯರು ಶುಭ್ರವಾದ ವಸ್ತ್ರಾದಿಗಳನ್ನು ಧರಿಸಿ, ಬೆಳದಿಂಗಳಿನಲ್ಲಿ ಓಡಾಡುತ್ತಿದ್ದಾಗ ಅವರೂ ಸಹ ಬೆಳದಿಂಗಳಿನಂತೆಯೇ ಕಾಣುತ್ತಿದ್ದುದರಿಂದ ಪುರಪಾಲಕರ ಕಣ್ಣಿಗೆ ಅವರು ಬೀಳಲೇ ಇಲ್ಲ ಎಂದರ್ಥ.

೨. ಅಲ್ಲಿಯ ವಾರಸ್ತ್ರೀಯರು ಚಂದ್ರನ ಬೆಳದಿಂಗಳಿನಂತೆ ಕಾಂತಿಹೊಂದಿದ್ದು ಆಹ್ಲಾದಕ-ರಾಗಿದ್ದರು ಎಂದು ಭಾವ; ಯಾಮಿಕರು – ರಾತ್ರಿಯಲ್ಲಿ ಪುರವನ್ನು ಪಾಲಿಸುವ ಭಟರು.

ಮಹಾಕವಿಗಳಿಗೆ ಕಾವ್ಯವಸ್ತುವಾದ ದ್ವಾರಕೆ

ಕಾವ್ಯೋಚಿತಶ್ಲೋಕಮಪೇಕ್ಷಮಾಣಾ
ವಿಚಾರಯಂತೀಹ ಪದೇ[೧] ಪದೇಽರ್ಥಾನ್ ।
ವಿದ್ವಜ್ಜನಾನಂದಕರಾನ್ ಮನೋಜ್ಞಾ
ಬುಧಾ ವದಾನ್ಯಾಶ್ಚ ಪುರೇ ಮುರಾರೇಃ ॥ ೪೦ ॥

ಮುರಾರಿಯಾದ ಶ್ರೀಕೃಷ್ಣನ ಆ ದ್ವಾರಕಾಪಟ್ಟಣದಲ್ಲಿ ಮನಸ್ಸನ್ನು ಅರಿಯಬಲ್ಲ ಕವಿಗಳು ತಮ್ಮ ಕಾವ್ಯಕ್ಕೆ ಉಚಿತವಾದ ಶ್ಲೋಕವನ್ನು ರಚಿಸಲು ಬಯಸಿದವರಾಗಿ, ಪದಪದಗಳಲ್ಲೂ ಅಲ್ಲಿ ವಿದ್ವಜ್ಜನರಿಗೆ ಆನಂದ ನೀಡುವಂತಹ ಅರ್ಥವಿಶೇಷಗಳನ್ನು ಕಾಣುತ್ತಿದ್ದರು; ದಾನಶೂರರು ಪರಿಣತ ಜನರಿಗೆ ಮುದನೀಡುವಂತಹ ಹಿರಣ್ಯಾದಿ ಪದಾರ್ಥಗಳನ್ನು ಪ್ರತಿಕ್ಷಣದಲ್ಲೂ ಕಾಣುತ್ತಿದ್ದರು.

ವಿ : ೧. ಕವಿಗಳಿಗೆ ಕಾವ್ಯದಲ್ಲಿ ವರ್ಣನೆಗೆ ಅನುಗುಣವಾದ ಶ್ಲೋಕಗಳಿಗೆ ವಿಷಯಗಳು ಅಗತ್ಯ. ಅದರಂತೆ ದಾನಶೂರರಾದವರಿಗೆ ದಾನಮಾಡಲು ಹಿರಣ್ಯಾದಿ ವಸ್ತುಗಳು ಅಗತ್ಯ. ದ್ವಾರಕೆಯಲ್ಲಿ ಕವಿಗಳಿಗೆ ಅಗತ್ಯವಾದ ಅದ್ಭುತವಿಷಯಗಳು ಹಾಗೂ ದಾನಿಗಳಿಗೆ ಅಗತ್ಯವಾದ ಧನಕನಕಾದಿಗಳು ಹೆಜ್ಜೆಹೆಜ್ಜೆಗೂ ದೊರೆಯುತ್ತಿದ್ದವು ಎಂದರ್ಥ.

೨. ದ್ವಾರಕೆಯಲ್ಲಿ ಚಿಂತನೆಗೆ ಅನುಗುಣವಾದ ವಿಷಯಗಳು ಹಾಗೂ ಅಪಾರ ಬೆಲೆಬಾಳುವ ಧನಕನಕಗಳು ತುಂಬಿದ್ದವು ಎಂದು ಭಾವ ; ವದಾನ್ಯ – ದಾನಶೂರ.

ಕಾಶಿಯನ್ನು ಮೀರಿಸಿದ ದ್ವಾರಕೆ

ಯದಂಘ್ರಿತೀರ್ಥೇನ ಯದೀಯನಾಮ್ನೋ
ಬಲೇನ ಕಾಶೀ ಪ್ರಥಿತಾ ಕಿಲಾಸೀತ್ ।
ಮುರದ್ವಿಷಸ್ತಸ್ಯ ನಿವಾಸಭೂತಾ
ಪುರೀ ತ್ರಿಲೋಕ್ಯಾಮಿಯಮದ್ವಿತೀಯಾ ॥ ೪೧ ॥

---

೧. 'ಪದ್ಯೇ ಯಶಸಿ ಚ ಶ್ಲೋಕೇ' ಇತ್ಯುಭಯತ್ರಾಪ್ಯಮರಃ। – ವ್ಯಾ.

ಯಾರ ಪಾದೋದಕದಿಂದ, ಯಾರ ಹೆಸರಿನ ಬಲದಿಂದ, ಕಾಶಿಯು ಪ್ರಸಿದ್ಧಿಯನ್ನು ಪಡೆಯಿತೋ ಅಂತಹ ಮುರಾರಿಯಾದ ಶ್ರೀಕೃಷ್ಣನ ನಿವಾಸಸ್ಥಾನವೆನ್ನಿಸಿದ ಈ ದ್ವಾರಕೆಯು ಮೂರು ಲೋಕಗಳಲ್ಲೂ ಅದ್ವಿತೀಯವಾದುದು.

ವಿ : ೧.[೧] ಕಾಶಿಗೆ ಮಹತ್ವ ಬರಲು ಅಲ್ಲಿಯ ಗಂಗೆ ಕಾರಣ. ಅದು ವಿಷ್ಣುವಿನ ಪಾದೋದಕ. ಅದರಂತೆ ಅದರ ಪ್ರಸಿದ್ಧಿಗೆ ಮತ್ತೊಂದು ಕಾರಣ ಶ್ರೀಕೃಷ್ಣನ 'ರಾಮ' ಎಂಬ ನಾಮ; ಹೀಗೆ ಶ್ರೀಕೃಷ್ಣನಿಗೆ ಸಂಬಂಧಿಸಿದ ಗಂಗೆ ಹಾಗೂ ರಾಮನಾಮಗಳಿಂದ ಕಾಶಿಗೆ ಅಷ್ಟು ಪ್ರಸಿದ್ಧಿ ಲಭಿಸಿದ ಮೇಲೆ ಅಂತಹ ಶ್ರೀಕೃಷ್ಣನೇ ಸಾಕ್ಷಾತ್ತಾಗಿ ನೆಲೆಸಿದ ದ್ವಾರಕೆಯು ಕಾಶಿಗಿಂತ ಮಿಗಿಲಾದ ಅದ್ವಿತೀಯ ಕ್ಷೇತ್ರ ಎಂಬುದು ಕೈಮುತ್ಯಸಿದ್ಧ ಎಂದರ್ಥ.

೨. ಪುರಾರಿಯ ಕ್ಷೇತ್ರವಾದ ಕಾಶಿಯನ್ನು ಮುರಾರಿಯ ಕ್ಷೇತ್ರವಾದ ದ್ವಾರಕೆ ಮೀರಿಸಿತು ಎನ್ನುವ ಮೂಲಕ ಹರನಿಗಿಂತ ಹರಿ ಮಿಗಿಲು ಎಂಬ ಪ್ರಮೇಯವನ್ನು ಸಹ ಸೂಚಿಸುವ ಇಲ್ಲಿಯ ವೈಖರಿ ಅತ್ಯಂತ ಅಪೂರ್ವವಾದುದು.

ಅಪೂರ್ವಲಾವಣ್ಯದ ವಾರಸ್ತ್ರೀಯರ ದ್ವಾರಕೆ

ಚಲದ್ಭ್ರುವಶ್ಚಂಚಲನೇತ್ರಪಾತೈ-
ರ್ಜನಾನ್ ಸಮಾನಾನ್ ವಶಯಂತಿ ತಸ್ಯಾಮ್ ।
ಸ್ಮರೋಚ್ಚಲತ್ಕಾರ್ಮುಕಲಗ್ನನೀಲೋ-
ತ್ಪಲೇಷುಘಾತೈರಿವ ವಾರವಧ್ವಃ ॥ ೪೨ ॥

ಆ ದ್ವಾರಕೆಯ ಹುಬ್ಬು ಕುಣಿಸುವ ವಾರಸ್ತ್ರೀಯರು ತಮ್ಮ ಚಂಚಲ ನೋಟಗಳಿಂದ ('ನಾವು ಸ್ತ್ರೀವಶರಾಗಲಾರೆವು') ಎಂಬ ಹಮ್ಮಿನ ಜನರನ್ನು ಮನ್ಮಥನು ಬಿಲ್ಲಿನಲ್ಲಿ ಹೂಡಿದ ಕನ್ನೈದಿಲೆಗಳ ಬಾಣಗಳ ಪೆಟ್ಟಿನಿಂದಲೋ ಎಂಬಂತೆ ವಶಪಡಿಸಿಕೊಳ್ಳುತ್ತಿದ್ದರು.

ವಿ : ೧. ದ್ವಾರಕೆಯ ವಾರಸ್ತ್ರೀಯರ ಒನಪು-ವೈಯ್ಯಾರಗಳು ಎಂತಹ ಜಿತೇಂದ್ರಿಯರ ಮನಸ್ಸನ್ನು ಸಹ ಗೆಲ್ಲುವಷ್ಟು ಸಮರ್ಥವಾಗಿದ್ದವು ಎಂದರ್ಥ; ವಾರವಧ್ವಃ - ವೇಶ್ಯಾಸ್ತ್ರೀಯರು.

೨. ದ್ವಾರಕೆಯಂತೆ ಅಲ್ಲಿಯ ನಾರಿಯರೂ ಸಹ ಅಪೂರ್ವವಾಗಿದ್ದರು ಎಂದು ಭಾವ.

ಸ್ವರ್ಗಕ್ಕಿಂತ ಮಿಗಿಲಾದ ದ್ವಾರಕೆ

ಸ್ವಗೋಪುರೌಘೈರಿಯಮುನ್ನಮಯ್ಯೋಚ್ಚೈ-
ರ್ದಿವಂ ವ್ಯತೀಯಾಯ ನ ತದ್ವಿಚಿತ್ರಮ್ ।

---

೧. ಯಸ್ಯ ಪಾದೋದಕನಾಮಮಾತ್ರೇಣ ಕಾಶ್ಯಾಃ ಪ್ರಥಿತತ್ವಂ ಕಿಲ। ಕಿಮು ತಸ್ಯೈವ ನಿವಾಸಭೂತಾಯಾ ದ್ವಾರವತ್ಯಾ ಇತಿ ಭಾವಃ। -ವ್ಯಾ.

ಮುಕುಂದಮಂತರ್ಹೃದಿ ಧಾರಯಂತ್ಯಾ
ವಿಚಿತ್ರತೀರ್ಥಾನಿ ಚ ಸಂಸ್ಪೃಶಂತ್ಯಾಃ[1] ॥ ೪೩ ॥

ತನ್ನ ಹೃದಯದಲ್ಲಿ ಮುಕುಂದನಾದ ಶ್ರೀಕೃಷ್ಣನನ್ನು ಧರಿಸಿದ ಹಾಗೂ ವಿಚಿತ್ರತೀರ್ಥಗಳ ಸಂಪರ್ಕವನ್ನು ಪಡೆದ ದ್ವಾರಕೆಯು ಮೇಲ್ಮುಖವಾದ ರತ್ನಕಾಂತಿಗಳ, ತನ್ನ ಪ್ರಾಸಾದ ಗೋಪುರಗಳ ಸಮೂಹದಿಂದ ಸ್ವರ್ಗವನ್ನೂ ಮೀರಿಸಿತು ಎಂಬುದು ಅಚ್ಚರಿಯೇನಲ್ಲ.

ವಿ : ೧. ದ್ವಾರಕೆಯಲ್ಲಿ ವೈಭವ ಸ್ವರ್ಗವನ್ನೂ ಮೀರಿಸಿತ್ತು ಎಂದರ್ಥ.

೨. ದ್ವಾರಕೆಯಲ್ಲಿ ಶ್ರೀಕೃಷ್ಣ ನೆಲೆಸಿರುವುದು ಅದರ ಹೃದಯದಲ್ಲಿ ಅವನ ಧ್ಯಾನನಡೆದದ್ದರ ಸಂಕೇತವಾಗಿತ್ತು; ಅದರಿಂದಾಗಿ ಅಲ್ಲಿಯ ತೀರ್ಥಗಳು ಪುಣ್ಯರಾಶಿಯನ್ನು ನೀಡುವಂತಹ ಶ್ರೇಷ್ಠ ತೀರ್ಥಗಳಾಗಿದ್ದವು ಎಂದು ಭಾವ.

೩. ದ್ವಾರಕೆಯಲ್ಲಿ ಚಕ್ರತೀರ್ಥ ಮೊದಲಾದ ಅನೇಕ ತೀರ್ಥಗಳು ಇರುವ ವಿವರ [2]'ದ್ವಾರಕಾಮಾಹಾತ್ಮ್ಯ'ದಲ್ಲಿ ಬಂದಿದೆ.

## ಶ್ರೀಕೃಷ್ಣಚಿಂತನೆಯ ಬ್ರಹ್ಮಾಸ್ತ್ರದಂತಹ ದ್ವಾರಕೆ

[3]ಪುಷ್ಪೀಕೃತ್ಯ ಶರಾಸನಂ ರತಿಪತೇಃ ಪಂಚತ್ವಭಾಜಃ ಶರಾಂ-
ಸ್ತೇನಾಮಬಲಾಂ[4] ವಿಧಾಯ ಸಚಿವಂ ತೂಷ್ಣೀಂ ವಸಂತಂ ಕ್ವಚಿತ್ ।
[5]ತನ್ಮಿತ್ರಂ ಕ್ಷಯಭಾಜನಂ ತದನುಗಾನ್ [6]ಮಾಧುರ್ಯಧುರ್ಯಾನ್ ಗಿರಾಽ-
ನಂಗೀಕೃತ್ಯ ಚ ತಂ ಜನೋಽತ್ರ ಚರತಿ [7]ಬ್ರಹ್ಮಾಸ್ತ್ರವಾನ್ ಪ್ರತ್ಯಹಮ್ ॥ ೪೪ ॥

ಶ್ರೀಕೃಷ್ಣನೆಂಬ ಬ್ರಹ್ಮಾಸ್ತ್ರವನ್ನು (ಪರಬ್ರಹ್ಮನನ್ನು ಅಸ್ತ್ರವನ್ನಾಗಿ) ಸದಾ ಹೊಂದಿದ್ದ ಆ ದ್ವಾರಕೆಯ ಜನರು ರತಿಪತಿಯಾದ ಕಾಮನ ಧನುಸ್ಸನ್ನು ಹೂವನ್ನಾಗಿಸಿದರು; ಅವನ

---

೧. ದ್ವಾರವತ್ಯಾಂ ನಾನಾತೀರ್ಥಾನಿ ಸಂತೀತಿ ಪ್ರಸಿದ್ಧೇಃ । ತಸ್ಯಾಃ ದ್ವಾರವತ್ಯಾಃ ವಿಚಿತ್ರಮಾಶ್ಚರ್ಯಂ ನ ಭವತಿ ಸಕಲತೀರ್ಥೋಪಸೇವನೇನ ಪರಮಾತ್ಮಧ್ಯಾನೇನ ಚ ಸ್ವರ್ಗಾದೂರ್ಧ್ವಗಮನಮ್ ಅತ್ಯಾಶ್ಚರ್ಯಂ ನ ಭವತೀತಿ ಭಾವಃ। ಅತಿಶಯೋಕ್ತಿರಲಂಕಾರಃ। –ವ್ಯಾ.

೨. ಉಡುಪಿಯ ಪಲಿಮಾರುಮಠದ ತತ್ತ್ವಸಂಶೋಧನ ಸಂಸತ್ತಿನಿಂದ ಪ್ರಕಾಶಿತವಾಗಿರುವ ನನ್ನ ಸಂಪಾದನೆಯ 'ದ್ವಾರಕಾಮಾಹಾತ್ಮ್ಯ' ಎಂಬ ಕೃತಿಯಲ್ಲಿ ಈ ಬಗ್ಗೆ ವಿವರಗಳನ್ನು ಕಾಣಬಹುದು.

೩. ಅತ ಏವ ಪುಷ್ಪಧನ್ವೇತಿ ಕಾಮಪ್ರಸಿದ್ಧಿಃ। – ವ್ಯಾ.
ಪ್ರಾಪ್ತಮರಣಾನಿತಿ ಧ್ವನಿತೋಽರ್ಥಃ। – ವ್ಯಾ.

೪. ಅತ ಏವ ಅಬಲಾ ಇತಿ ಸ್ತ್ರೀಣಾಂ ನಾಮ। – ವ್ಯಾ.

೫. ತನ್ಮಿತ್ರಂ ತಸ್ಯ ಮದನಸ್ಯ ಮಿತ್ರಂ ಸುಹೃದಂ ಚಂದ್ರಂ ಕ್ಷಯಭಾಜನಂ ವಿಧಾಯ। – ವ್ಯಾ.

೬. ಅತ ಏವ ಪಿಕಾದಯೋ ಮಧುರಭಾಷಿಣಃ। – ವ್ಯಾ.

೭. ಸ ಪರಿವಾರಕಾಮಜಯಾಯಾತ್ತಬ್ರಹ್ಮಾಸ್ತ್ರ ಇತಿ ಧ್ವನಿತೋಽರ್ಥಃ। ಅತ ಏವ ಕೃಷ್ಣಪಕ್ಷೇ ಚಂದ್ರಃ ಕ್ಷೀಯತೇ – ವ್ಯಾ.

ಬಾಣಗಳನ್ನು ಮೃತಪ್ರಾಯವನ್ನಾಗಿ ಕಂಡರು; ಮನ್ಮಥನ ಸೇನೆಯಾದ ಸ್ತ್ರೀವೃಂದವನ್ನು ಬಲಹೀನವನ್ನಾಗಿ ಮಾಡಿದರು; ಅವನ ಮಂತ್ರಿಯಾದ [೧]ವಸಂತನನ್ನು ವ್ಯಾಪಾರ-ಶೂನ್ಯನನ್ನಾಗಿಸಿದರು; ಅವನ ಮಿತ್ರನಾದ ಚಂದ್ರನನ್ನು ಕ್ಷಯಹೊಂದುವಂತೆ ಮಾಡಿದರು; ಅವನ ಭಟರಾದ ಕೊಗಿಲೆ ಮೊದಲಾದವರನ್ನು ಮಧುರ ವಚನಗಳನ್ನು ನುಡಿಯುವಂತೆ ಮಾಡಿದರು; ಆ ಕಾಮನನ್ನು ಅನಂಗನನ್ನಾಗಿ ಮಾಡಿ ಓಡಾಡುತ್ತಿದ್ದರು.

ವಿ : ೧. ದ್ವಾರಕೆಯಲ್ಲಿ ಅಂತಹ ಮನಸ್ಸನ್ನು ಸೂರೆಗೊಳ್ಳುವ ವೈಭವವಿದ್ದರೂ ಅಲ್ಲಿಯ ಜನರು ಯಾವುದೇ ವಿಧವಾದ ಕ್ಷುದ್ರ ಕಾಮನೆಗೆ ಒಳಗಾಗದೆ, ಸಾಧನೆಯ ಮಾರ್ಗದಲ್ಲಿಯೇ ತೊಡಗಿದ್ದರು ಎಂದರ್ಥ; ಪಂಚತ್ವ- ಮರಣ.

೨. ಕಾಮನಂತಹ ಪ್ರಬಲ ಶತ್ರುವನ್ನು ಅವರು ಹಾಗೆ ಪರಾಭವಗೊಳಿಸಲು, ಅವರಿಗೆ ತಮ್ಮೊಂದಿಗಿದ್ದ ಶ್ರೀಕೃಷ್ಣನ ಚಿಂತನೆ ಎಂಬ ಬ್ರಹ್ಮಾಸ್ತ್ರನೆರವಾಗಿತ್ತು ಎಂದು ಭಾವ.

೩. ಶ್ರೀಕೃಷ್ಣನನ್ನು ಮನಸ್ಸಿನಲ್ಲಿ ಚಿಂತಿಸುವ ಜನರು ಎಂತಹ ವೈಭವವನ್ನು ಕಂಡರೂ ಸಹ ಕಾಮಪೀಡನೆ ಮೊದಲಾದ ದುರಂತಕ್ಕೆ ಈಡಾಗರು ಎಂಬುದು ಇಲ್ಲಿಯ ಸಂದೇಶ[೨].

೪. ಕಾಮನು ಪುಷ್ಪಚಾಪ, ಪಂಚಬಾಣ, ವಸಂತಸಚಿವ, ಅನಂಗ ಮೊದಲಾದ ವಿವರಗಳನ್ನು ಇಲ್ಲಿ ಧ್ವನಿಪೂರ್ವಕವಾಗಿ ತಿಳಿಸಿರುವುದು ಗಮನಾರ್ಹ.

೫. ಇದರಲ್ಲಿ ಬ್ರಹ್ಮದೇವರನ್ನು ಅಭಿಮಾನಿಯಾಗಿ ಹೊಂದಿದ ಬ್ರಹ್ಮಾಸ್ತ್ರವು ಸಕಲ ಪ್ರತ್ಯಸ್ತ್ರಗಳನ್ನು ನಾಶ ಮಾಡಬಲ್ಲ ದಿವ್ಯಾಸ್ತ್ರ ಎಂಬ ವಿಶೇಷಾಂಶವೂ ಸೂಚಿತ.

**ಜಿತೇಂದ್ರಿಯಜನರ ನೆಲೆಯಾದ ದ್ವಾರಕೆ**

**ಸ್ಮರಸ್ಯ ಭಾರ್ಯಾಮಪಹೃತ್ಯ ವಿಷ್ಣೋಃ**
**ಸ್ನುಷಾಂ ತದಂಘ್ರ್ಯಬ್ಜಯುಗೇ[೩] ನಿಧಾಯ ।**
**ಜಯಂ ಸ್ವಕೀಯಂ ಭುವಿ ದರ್ಶಯಂತ-**
**ಶ್ಚರಂತಿ ತಸ್ಯಾಂ ಪರಿಪಂಥಿಶೂನ್ಯಾಃ[೪] ॥ ೪೫ ॥**

ಮಹಾವಿಷ್ಣುವಿನ ಸೊಸೆಯಾದ ಕಾಮನ ಪತ್ನಿಯಾದ ರತಿಯನ್ನು ಅಪಹರಿಸಿ, ಅವಳನ್ನು ಆ ಶ್ರೀಕೃಷ್ಣನ ಪಾದಕಮಲದಲ್ಲಿ ತೊಡಗಿಸಿ, ತಮ್ಮ ಜಯವನ್ನು ಭೂಮಿಯಲ್ಲಿ ಪ್ರಕಟಿಸುತ್ತಾ, ಅಲ್ಲಿಯ ಸಾಧಕರು, ಎದುರಾಳಿಗಳೇ ಇಲ್ಲದವರಾಗಿ ಓಡಾಡುವರು.

---

೧. ಅತ ಏವ ದ್ವಿತೀಯಾಂತಪದೇನ ವಸಂತಮಿತಿ ವದಂತಿ । - ವ್ಯಾ.

೨. ಕೃಷ್ಣಕೃಪಯಾ ಸಪರಿಕರಂ ಕಾಮಂ ನಿರ್ಜಿತ್ಯ ತತ್ತನ್ನಾಮ್ನೈವ ಸ್ವಜಯಖ್ಯಾತಿಂಚ ಸಂಪಾದ್ಯ ಭಕ್ತಿಸಂತುಷ್ಟೋ ನಿಷ್ಕಾಮೋ ಯೋಗಿಜನೋಽತ್ರ ಸಂಚರತೀತ್ಯರ್ಥಃ । - ವ್ಯಾ.

೩. ವಿಷಯೇ ರತಿಂ ತ್ಯಕ್ತ್ವಾ ಶ್ರೀಕೃಷ್ಣಚರಣಸ್ಮರಣ ಏವ ರತಿಮಂತಃ ಇತ್ಯರ್ಥಃ । - ವ್ಯಾ.

೪. ಶ್ಲೇಷಾಲಂಕಾರ

ವಿ : ೧. ಕಾಮನ ಪತ್ನಿ ಎಂದರೆ ರತಿ ಎಂದರ್ಥ; ಪ್ರದ್ಯುಮ್ನರೂಪದ ಕಾಮ ಶ್ರೀಕೃಷ್ಣನ ಪುತ್ರ. ಆದ್ದರಿಂದ ಅವಳು ಅವನಿಗೆ ಸೊಸೆಯಿದ್ದಂತೆ. ರತಿಯನ್ನು ಕಾಮನಿಂದ ದೂರಾಗಿಸಿ, ಅವಳನ್ನು ಶ್ರೀಕೃಷ್ಣನ ಪಾದಕಮಲದಲ್ಲಿರಿಸಿ, ತಾವು ಕಾಮಜಯವನ್ನು ಮಾಡಿದ್ದನ್ನು ಸಾರುತ್ತ ದ್ವಾರಕೆಯಲ್ಲಿನ ಜನ ನಿಶ್ಚಿಂತೆಯಿಂದ ಇರುವವರು ಎಂದು ಭಾವ[೧].

೨. ದ್ವಾರಕೆಯಲ್ಲಿನ ಜನರು ಕಾಮದಲ್ಲಿ ರತಿಯನ್ನು ಹೊಂದದೆ, ಕೃಷ್ಣನ ಪಾದಕಮಲದಲ್ಲಿ ರತಿಯನ್ನು ಹೊಂದಿ, ಜಿತೇಂದ್ರಿಯರಾಗಿದ್ದು ಮೋಕ್ಷದ ಮಾರ್ಗದಲ್ಲಿ ಯಶಸ್ವಿಯಾಗಿ ಸಾಗುವವರು ಎಂದರ್ಥ; ಪರಿಪಂಥಿ – ಶತ್ರು.

೩. ರತಿ ಎಂದರೆ ಕಾಮನ ಪತ್ನಿ ಹಾಗೂ [೨]ಆಸಕ್ತಿ ಎಂಬ ಎರಡು ಅರ್ಥಗಳೂ ವಿವಕ್ಷಿತ (ಶ್ಲೇಷಾಲಂಕಾರ).

### ಹರಿಭಕ್ತರಿಂದ ತುಂಬಿದ ದ್ವಾರಕೆ

[೩]ಮಾರಂ ದರ್ಪಕರಂ ಪ್ರತರ್ಕ್ಯ ಸುಹೃದಂ ಮತ್ವಾ ಜಗನ್ಮೋಹನಂ
ಸೇನಾಂ ಚ ಪ್ರಮದಾಂ ಶರಾಂಶ್ಚ ವಿಷಮಾಂಸ್ತಸ್ಯಾನುಗಾನ್ ವ್ಯೋಮಗಾನ್ ।
ಕೋದಂಡಂ ಸುಮನಃಸಮೂಹವಿನುತಂ ತೈಃ ಪೂರಿತಂ ಸಾರಥಿಂ
ಸೇನಾಂ ತಾಮವಲಂಬ್ಯ ತಸ್ಯ ವಶಗಾಸ್ತಸ್ಯಾಂ [೪]ರಮಂತೇಽಪರೇ ॥ ೪೬ ॥

ಮನ್ಮಥನನ್ನು ಮದವೇರಿಸುವವನು ಎಂದೂ, ಅವನ ಮಿತ್ರನಾದ ಚಂದ್ರನನ್ನು ಜಗತ್ತನ್ನು ಮೋಹಿಸುವವನು ಎಂದೂ, ಅವನ ಸೇನೆಯನ್ನು ಅಬಲೆ ಎಂದೂ, ಅವನ ಬಾಣಗಳನ್ನು ವಿಷಮ ಎಂದೂ, ಪಕ್ಷಿಗಳನ್ನು ಅವನ ಹಿಂಬಾಲಕರು ಎಂದೂ, ಅವನ ಬಿಲ್ಲನ್ನು ಹೂವುಗಳ ರಾಶಿ ಎಂಬುದಾಗಿ ವಿಶೇಷವಾಗಿ ಕೊಂಡಾಡಲ್ಪಡುವಂತಹುದು ಎಂದೂ, ಅವನ ಸಾರಥಿಯಾದ ವಸಂತನನ್ನು [೫]ಕುಸುಮಾಕರನೆಂದೂ, ದ್ವಾರಕೆಯಲ್ಲಿನ ಜನರು ಭಾವಿಸಿ, ಅವನ ಸೇನೆಯಾದ [೬]ಸ್ತ್ರೀಯನ್ನು ಅವಲಂಬಿಸಿ, ಅವಳ ವಶವರ್ತಿಗಳಾಗಿ ವಿಹರಿಸುವರು.

ವಿ. : ೧. ವ್ಯೋಮ – ಆಕಾಶ; ವ್ಯೋಮಗ – ಖೇಚರ, ಪಕ್ಷಿ.

---

೧. ಯುದ್ಧೇ ಶತ್ರುವಧಾನಂತರಂ ತದ್ಭಾರ್ಯಾಪಹರಣಮಿತಿ ಧ್ವನಿತೋಽರ್ಥಃ। – ವ್ಯಾ.
೨. ವಿಷಯೇ ರತಿಂ ತ್ಯಕ್ತ್ವಾ ಶ್ರೀಕೃಷ್ಣಚರಣಸ್ಮರಣ ಏವ ರತಿಮಂತಃ ಇತ್ಯರ್ಥಃ। – ವ್ಯಾ.
೩. ಸ್ವಪ್ರತಿಭಟಂ ಮಾರಯತಿ ಇತಿ ಮಾರಃ 'ಅನ್ಯಾನ್ ದರ್ಪಯತೀತಿ ದರ್ಪ' ಇತಿ ನಾಮಮಾತ್ರಸ್ಮರಣೇ ಭೀತಾ ಇತಿ ಭಾವಃ। – ವ್ಯಾ.
೪. ದ್ವಾರವತ್ಯಾಂ ಕಾಮಿನಃ ಕಾಮಿನೀಭಿಃ ಸದಾ ಕ್ರೀಡಂತೀತ್ಯರ್ಥಃ। – ವ್ಯಾ.
೫. ಕುಸುಮಮಯತ್ವಾತ್ ಸ್ತುತಮಿತ್ಯರ್ಥಃ ಧ್ವನಿಃ। – ವ್ಯಾ.
೬. ಪ್ರತಿಭಟತಯಾ ಸ್ಥಿತೇ ಸತಿ ಕಾಮೋ ವಧಿಷ್ಯತೀತಿ ಭೀತ್ಯಾ ತದೀಯಸ್ತ್ರೀರೂಪಸೇನಾಮಾಶ್ರಿತ್ಯೇತ್ಯರ್ಥಃ। – ವ್ಯಾ.

೨ ಹಿಂದೆ ತಿಳಿಸಿದಂತೆ ದ್ವಾರಕೆಯಲ್ಲಿನ ಒಂದು ಗುಂಪಿನ ಸಾಧಕರು ಕಾಮವನ್ನು ಜಯಿಸಿ ಮೋಕ್ಷದ ಹಾದಿಯಲ್ಲಿ ಸಾಗಿದ್ದರೆ, ಮತ್ತೆ ಕೆಲವರು ಕಾಮವಶರಾಗಿ ಕ್ರೀಡಿಸುತ್ತಿದ್ದರು ಎಂದರ್ಥ.

೩. ವಿರಕ್ತರಾದವರಿಗೆ ದ್ವಾರಕೆಯಲ್ಲಿ ಕಾಮಜಯಕ್ಕೆ ಅವಕಾಶವಿದ್ದಂತೆ, ಭೋಗಿಗಳಾದವರಿಗೆ [1]ಕಾಮೋಪಭೋಗಕ್ಕೂ ಅವಕಾಶವಿದ್ದಿತು ಎಂದರ್ಥ.

೪. ಮುಕ್ತಿಯಲ್ಲೂ ಸಹ ಭೋಗೇಚ್ಛುಗಳಿಗೆ ಬಗೆಬಗೆಯ ಭೋಗಗಳು ಲಭ್ಯವಿರುವ ವಿವರ ಶ್ರೀಮದ್ಭಾಗವತಾದಿಗಳಲ್ಲಿ ನಿರೂಪಿತವಾಗಿದೆ; ಸುಮಧ್ವವಿಜಯದ ೧೧ನೇ ಸರ್ಗದಲ್ಲಿ ಆ ಬಗ್ಗೆ ವಿಶೇಷ ವಿವರಗಳನ್ನು ಕಾಣಬಹುದು.

### ನವವಿಧ ಭಕ್ತಿಯ ನೆಲೆಯಾದ ದ್ವಾರಕೆ

ತಚ್ಛಾಸ್ತ್ರಶ್ರವಣೋತ್ಸವೇನ ಕತಿಚಿತ್ ಸಂಕೀರ್ತ್ಯ ಸಂಸ್ಮೃತ್ಯ ತಂ
ತತ್ಪಾದಾಬ್ಜನಿಷೇವಯಾ ಚ ಸುಧಿಯಸ್ತಸ್ಯಾರ್ಚಯಾ ಕೇಚನ ।
ಸಖ್ಯೇನಾಪ್ಯಪರೇ ಪ್ರಣಮ್ಯ ಬಹುಶಃ ಕೇಚಿಚ್ಚ ದಾಸಾಸ್ತವೇ-
ತ್ಯಾತ್ಮಾನಂ ಚ ನಿವೇದ್ಯ ಮೋಕ್ಷನಿರತಾಃ ಸಂತ್ಯತ್ರ ಕೃಷ್ಣಾರ್ಚಕಾಃ ॥ ೪೭ ॥

ಆ ದ್ವಾರಕೆಯಲ್ಲಿ ಕೆಲವರು ವೈಷ್ಣವ ಶಾಸ್ತ್ರಗಳ ಶ್ರವಣದಲ್ಲಿ ನಿರತರಾಗಿದ್ದರು. ಮತ್ತೆ ಕೆಲವರು ಹರಿಸಂಕೀರ್ತನೆಯಲ್ಲಿ ನಿರತರಾಗಿದ್ದರೆ, ಹಲವರು ಸಂಸ್ಮರಣೆಯಲ್ಲಿ ತೊಡಗಿದ್ದರು. ಕೆಲವರು ಅವನ ಪಾದಕಮಲಗಳ ಸೇವೆಯಲ್ಲಿ ನಿರತರಾಗಿದ್ದರೆ, ಮತ್ತೆ ಕೆಲವರು ಅವನ ಪೂಜೆಯಲ್ಲಿ ತೊಡಗಿದ್ದರು, ಕೆಲವರು ಅವನಲ್ಲಿ ಸಖ್ಯ ಭಾವವನ್ನು ಹೊಂದಿದ್ದರೆ, ಮತ್ತೆ ಕೆಲವರು ಸಾಷ್ಟಾಂಗ ವಂದನೆಯಲ್ಲಿ ನಿರತರಾಗಿದ್ದರು, ಕೆಲವರು ನಾವು ನಿನ್ನ ದಾಸರು ಎನ್ನುತ್ತಿದ್ದರೆ, ಮತ್ತೆ ಕೆಲವರು ತಮ್ಮನ್ನೇ ಅವನಿಗೆ ಒಪ್ಪಿಸಿಕೊಳ್ಳುತ್ತಾ ಮೋಕ್ಷಸಾಧನೆಯಲ್ಲಿ ನಿರತರಾಗಿ, ಶ್ರೀಕೃಷ್ಣನ ಪೂಜೆಯಲ್ಲಿ ತೊಡಗಿದವರಾಗಿದ್ದರು.

ವಿ : ೧. [2]ಭಕ್ತಿಯು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗೂ ಆತ್ಮನಿವೇದನ ಎಂಬುದಾಗಿ ನವವಿಧವಾದುದು; ದ್ವಾರಕೆಯಲ್ಲಿ ನವವಿಧ ಭಕ್ತಿಯನ್ನು ಮಾಡುತ್ತಾ ಶ್ರೀಹರಿಯನ್ನು ಆರಾಧಿಸುವ ಜನರೇ ತುಂಬಿದ್ದರು ಎಂದರ್ಥ.

೨. ಶ್ರೀಕೃಷ್ಣನಿಗೆ ಸಂಬಂಧಿಸಿದ ಶಾಸ್ತ್ರಗಳ ಶ್ರವಣ, ಸಂಕೀರ್ತನೆ, ಸ್ಮರಣ, ಪಾದಕಮಲಸೇವೆ, ಪೂಜೆ, ವಂದನೆ, ದಾಸ್ಯ, ಸಖ್ಯ ಹಾಗೂ ಆತ್ಮನಿವೇದನೆ ಎಂಬ ಕಾರ್ಯಗಳಲ್ಲಿಯೇ ಸದಾ

---

೧. ದ್ವಾರವತ್ಯಾಂ ಕಾಮಿನಃ ಕಾಮಿನೀಭಿಃ ಸಹ ಸದಾ ಕ್ರೀಡಂತೀತ್ಯರ್ಥಃ । – ವ್ಯಾ.

೨. ''ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ-ನಿವೇದನಮ್'' (ಭಾಗ.೭/೫/೨೩.)ಇತ್ಯುಕ್ತನವವಿಧಭಕ್ತಿಯುಕ್ತಾ ಇತಿ ವರ್ಣಯತಿ । –ವ್ಯಾ.

ತೊಡಗುವ ಜನರು ದ್ವಾರಕೆಯಲ್ಲಿ ತುಂಬಿದ್ದರು, ಎಂಬಲ್ಲಿ ಅಲ್ಲಿಯ ಜನರೆಲ್ಲ ನವವಿಧ ಭಕ್ತಿಯಲ್ಲಿ ಒಂದಲ್ಲ ಒಂದು ವಿಧವಾದ ಭಕ್ತಿಯಲ್ಲಿ ತೊಡಗಿಕೊಂಡಿದ್ದರು ಎಂಬ ವಿಶೇಷಾಂಶ ಸೂಚಿತ.

### ವೈಷ್ಣವಜನರ ನೆಲೆ ಎನ್ನಿಸಿದ ದ್ವಾರಕೆ

ಅಂಗೀಕಾರಗಿರಾಂ ಶ್ರುತಾವಭಿರತಾಃ ಸಂಕೀರ್ತ್ಯ ತಾ ಮಾನಿನೀ-
ಸ್ತತ್ಪಾದೌ ಪರಿಗೃಹ್ಯ ವಂದನಮಹೋ ಕೃತ್ವಾ ತ್ವದೀಯಾ ವಯಮ್ ।
ತ್ವದ್ದಾಸಾ ವಯಮಿತ್ಯುದೀರ್ಯ ಮನಸಾಽತೀತಾಂ ಸ್ಮರಂತೇ ರತಿಂ
ನೀವೀಮೋಕ್ಷಫಲಾಯ ಸಖ್ಯಕುಶಲಾಃ ಕೇಚಿಚ್ಚ ರಾಮಾರ್ಚಕಾಃ ॥ ೪೮ ॥

ಕೆಲವರು ಸ್ತ್ರೀಯರ ಅಂಗೀಕಾರವಚನಗಳನ್ನು ಕೇಳುವುದರಲ್ಲಿ ತೊಡಗಿದ್ದರೆ, ಮತ್ತೆ ಕೆಲವರು ಅವರ ಗುಣಗಳನ್ನು ಕೊಂಡಾಡುವುದರಲ್ಲಿ ತೊಡಗಿದ್ದರು. ಕೆಲವರು ಕೋಪಿಸಿ- ಕೊಂಡ ಅವರ ಪಾದಗಳಿಗೆ ಎರಗಿ ವಂದಿಸುತ್ತಿದ್ದರೆ, ಮತ್ತೆ ಕೆಲವರು ನಾವು ನಿನ್ನವರು, ನಿನ್ನ ದಾಸರು ಎಂದು ನುಡಿದು ಅನುಭವಿಸಿದ ರತಿಯನ್ನು ಮನಸ್ಸಿನಲ್ಲೇ ಸ್ಮರಿಸುತ್ತಿದ್ದರು. ಕೆಲವರು ನೀವೀಮೋಚನ ಕಾರ್ಯಕ್ಕೋಸ್ಕರ ಗೆಳೆತನವನ್ನು ಸಂಪಾದಿಸುವುದರಲ್ಲಿ ನಿಪುಣರಾಗಿದ್ದರು. ಹೀಗೆ ಕೆಲವರು ನಾರಿಯರ ಪೂಜೆಯಲ್ಲಿ ತೊಡಗಿದ್ದರು.

ವಿ : ೧. ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನನ್ನು ಚಿಂತಿಸುತ್ತಾ [೧]ನವವಿಧಭಕ್ತಿಯ ಮೂಲಕ ಆರಾಧಿಸುವ ದ್ವಾರಕೆಯ ಜನಗಳ ವರ್ಣನೆ ಬಂದಿದ್ದರೆ, ಈ ಶ್ಲೋಕದಲ್ಲಿ ಅದಕ್ಕೆ ವಿರುದ್ಧವಾಗಿ ಶ್ರವಣಾದಿಗಳನ್ನು ಶ್ರೀಹರಿಗೆ ಸಂಬಂಧಿಸದ ಸ್ತ್ರೀವ್ಯಾಮೋಹಾದಿಗಳಲ್ಲಿ ವಿನಿಯೋಗಿಸುವ [೨]ವಿಲಾಸೀ ಜನರ ಪ್ರವೃತ್ತಿ ವರ್ಣಿತವಾಗಿದೆ.

೨. ಇದು 'ಸತಿಸುತರಲಿ ಭಕುತಿ ಹಣ ಹೊನ್ನಿನ ಜಪವು ಕಂಸಾರಿ ಪೂಜೆಯಲಿ ವೈರಾಗ್ಯವು' ಎಂಬ ಶ್ರೀವಾದಿರಾಜರ ಕೃತಿಯನ್ನು ಜ್ಞಾಪಿಸುವಂತಹ ಶ್ಲೋಕ; ರಾಮಾ - ಸ್ತ್ರೀ.

೩. ರಾಮಾರ್ಚಕಾಃ ಎಂಬುದಕ್ಕೆ ಸ್ತ್ರೀಯರನ್ನು ಆರಾಧಿಸುವವರು ಎಂದರ್ಥ .

೪. ಹಿಂದಿನ ಶ್ಲೋಕದಲ್ಲಿ ಮುಮುಕ್ಷುಗಳಾಗಿ ನವವಿಧಭಕ್ತಿಯ ಮೂಲಕ ಶ್ರೀಹರಿಯ ಸೇವೆಯಲ್ಲಿ ತೊಡಗಿದ್ದವರನ್ನು ಕೃಷ್ಣಾರ್ಚಕರು ಎಂದು ವರ್ಣಿಸಿ, ಈ ಶ್ಲೋಕದಲ್ಲಿ ಭೋಗದಲ್ಲಿ ತೊಡಗಿದ್ದವರನ್ನು [೩]ರಾಮಾರ್ಚಕರು ಎಂದು ವರ್ಣಿಸಿರುವರು; ಕೃಷ್ಣಾರ್ಚಕಾಃ, ರಾಮಾರ್ಚಕಾಃ

---

೧. ಅನೇನ ಶ್ರವಣಲಕ್ಷಣಭಕ್ತಿರುಕ್ತಾ ಭವತಿ । - ವ್ಯಾ.
೨. ಇದಾನೀಂ ವಿಲಾಸಕೃತನಾನಾವಸ್ಥಾನಾಂ ನವವಿಧಭಕ್ತಿಮತ್ತ್ವಂ ವರ್ಣಯತಿ । -ವ್ಯಾ.
೩. ರಾಮಾರ್ಚನಾನಾಮಿತಿ ಧ್ವನಿನಾ ಕೃಷ್ಣಾರ್ಚನಪ್ರತಿನಿಧಿತ್ವಸ್ಫೋರಣಾಯಾರ್ಚಕಾ ಇತ್ಯನುಕ್ತ್ವಾ ರಾಮಾರ್ಚಕಾ

ಎನ್ನುವ ಪದಗಳಲ್ಲಿಯೇ ಹೀಗೆ ಸ್ವಾರಸ್ಯವನ್ನು ಉಂಟುಮಾಡುವ ಇಲ್ಲಿಯ ನಿರೂಪಣೆ ಅತ್ಯಂತ ರೋಚಕ.

### ಕೂಡಲೆ ಮುಕ್ತಿ ನೀಡುವ ದ್ವಾರಕೆ

ಪ್ರಾಕಾರಾದ್ಬಹಿರತ್ರ ವಾರಿಧಿರಯಂ ಪ್ರಾಪ್ಯಾಂಬುದೈರರ್ಪಿತಂ
[೧]ಸ್ವಾತೌ ವಾರಿ ತತಶ್ಚಿರೇಣ ಹೃದಯೇ ಮುಕ್ತಾಮಯೋ ಜಾಯತೇ ।
ಅಂತರ್ಹಸ್ತತಟೇಷು ವಿಪ್ರಜಲಧಿಃ ಕೃಷ್ಣಾಬ್ದವೃಷ್ಟಂ ಸದಾ
ವಿತ್ತಾಂಬು ಪ್ರತಿಪದ್ಯ ತತ್ಕ್ಷಣಮಹೋ ಮುಕ್ತಾಮಯೋ ಜಾಯತೇ ॥೪೯॥

ಪ್ರಾಕಾರದ ಹೊರಗಿನ ಈ ಸಮುದ್ರವು ಮೋಡಗಳಿಂದ ಸ್ವಾತಿಮಳೆಯಲ್ಲಿ ಸುರಿಯುವ ನೀರನ್ನು ಹೊಂದಿ, ಆ ಬಳಿಕ ಬಹುಕಾಲದ ಅನಂತರ ತನ್ನಲ್ಲಿ ಮುತ್ತನ್ನು ಹೊಂದುವಂತಾಗುವುದು. ಆದರೆ ಪಟ್ಟಣದೊಳಗಿನ ಬ್ರಾಹ್ಮಣರೆಂಬ ಸಮುದ್ರವು ತಮ್ಮ ಕೈಗಳಲ್ಲಿ ಶ್ರೀಕೃಷ್ಣನೆಂಬ ಮೇಘದಿಂದ ಸುರಿಯುವ ದ್ರವ್ಯರೂಪವಾದ ನೀರನ್ನು ಹೊಂದಿ, ಆ ಕ್ಷಣದಲ್ಲೇ ದಾರಿದ್ರ್ಯವೆಂಬ ತಮ್ಮ ವ್ಯಾಧಿಯನ್ನು ಕಳೆದುಕೊಂಡು ಬಿಡುವುದು.

ವಿ : ೧. ಸಮುದ್ರದಲ್ಲಿ ಮುತ್ತು ತುಂಬಿ ಅದು ಸಂಪದ್ಭರಿತವೆನ್ನಿಸಲು ಸ್ವಾತಿಮಳೆಗಾಗಿ ಕಾಯಬೇಕು. ಬಿದ್ದ ಆ ಮಳೆಯ ಹನಿ ಮುತ್ತಾಗಲು, ಸಾಕಷ್ಟು ಸಮಯದ ಅಗತ್ಯವೂ ಇದೆ. ಆದರೆ, ದ್ವಾರಕೆಯಲ್ಲಿನ ಬ್ರಾಹ್ಮಣರಿಗೆ ಶ್ರೀಕೃಷ್ಣನು ನೀಡಿದ ಅಪಾರ ದ್ರವ್ಯದಿಂದ ಆ ಕೂಡಲೇ ಅವರ ದಾರಿದ್ರ್ಯ ಪರಿಹಾರವಾಗಿ, ಸಂಪತ್ತು ಸುರಿಯುತ್ತಿರುವುದು ಎಂದರ್ಥ.

೨. ಇದರಲ್ಲಿ ಶ್ರೀಹರಿಯ ಹೊರತು, ಇತರ ಮೂಲಗಳಿಂದ ಬರುವ ಸಂಪತ್ತು ಕೂಡಲೇ ಬರುವಂತಹುದಲ್ಲ; ಅದು ಅಪರಿಮಿತವೂ ಅಲ್ಲ ಎಂಬ ತತ್ತ್ವವು ಮಾರ್ಮಿಕವಾಗಿ ನಿರೂಪಿತವಾಗಿದೆ.

೩. ಇದರಲ್ಲಿ [೨]ಶ್ರೀಹರಿಯ ಆರಾಧನೆಯಿಂದ ಪರಲೋಕದಲ್ಲಿ ಮುಕ್ತಿ ಮಾತ್ರವಲ್ಲದೆ, ಇಹಲೋಕದಲ್ಲಿ ಅಪಾರ ಸಂಪತ್ತು ಸಹ ಕೂಡಲೇ ಲಭಿಸುವುದು ಎಂಬ ವಿಶೇಷಾಂಶವೂ ನಿರೂಪಿತವಾಗಿದೆ.

---

ಇತ್ಯುಕ್ತಮ್ । - ವ್ಯಾ.

೧. ಸ್ವಾತೌ ಮೇಘವೃಷ್ಟಂ ಜಲಂ ಸಮುದ್ರಕರಸ್ಥಾನೀಯಶುಕ್ತಿಪುಟೇಷು ಪತಿತಂ ಕಾಲಾಂತರೇ ಮೌಕ್ತಿಕಮಣಿಭಾವಂ ಪ್ರಾಪ್ನೋತೀತ್ಯರ್ಥಃ। ದ್ವಾರವತೀಂ ಪರಿತಃ ಶ್ರೀಕೃಷ್ಣಸನ್ನಿಧಾನವಶಾತ್ ಸಮುದ್ರೇ ಮೌಕ್ತಿಕಾನಿ ಫಲಂತೀತಿ ಭಾವಃ। - ವ್ಯಾ.

೨. ಅಹೋ ಆಶ್ಚರ್ಯಂ ಶ್ರೀಕೃಷ್ಣದತ್ತದ್ರವ್ಯಪ್ರತಿಗೃಹೀತೄಣಾಂ ತದೈವ ದಾರಿದ್ರ್ಯವಿನಾಶೋ ಭವತೀತಿ ಭಾವಃ । ದೀಯಮಾನಾನರ್ಘ್ಯದ್ರವ್ಯೇಷ್ವಪಿ ಭಗವತೋ ಲೋಭಾಭಾವಸೂಚನಾಯ ಜಲದತ್ವೇನ ವರ್ಣನಮ್ । ಶ್ಲಿಷ್ಟಗರ್ಭವ್ಯತಿರೇಕಾಲಂಕಾರಃ। -ವ್ಯಾ.

೪. ಮುಕ್ತಾಮಯಃ ಎಂಬುದಕ್ಕೆ ಮುತ್ತಿನದಾಗಿ ಎಂಬುದು ಸಮುದ್ರಕ್ಕೆ ಅನ್ವಯಿಸುವ ಅರ್ಥ; ಮುಕ್ತಾಮಯಃ = ಮುಕ್ತ + ಆಮಯ; ವ್ಯಾಧಿಗಳಿಂದ ಬಿಡುಗಡೆಹೊಂದಿದ್ದಾಗಿ ಎಂಬುದು ವಿಪ್ರಜಲಧಿಗೆ ಅನ್ವಯಿಸುವ ಅರ್ಥ.

## ವೈಕುಂಠಕ್ಕಿಂತ ಮಿಗಿಲಾದ ದ್ವಾರಕೆ

**ಆಶಾಸಕ್ತಜನಾಶುಗೇನ ಜವಿನೋಪಾಂತೇ ರಜೋ ಜೃಂಭಯಂ-**
**ಸ್ತೇನೈವೋಗ್ರತಮಃ ಸೃಜನ್ ಶುಭದೃಶಾಮಪ್ಯಾಂಧ್ಯಮಾಪಾದಯನ್ ।**
**ಅಂತಸ್ತಂಭಿತಸತ್ತ್ವವೃತ್ತಿರನಿಶಂ ಸಂಸಾರವಾರಾಶಿವತ್**
**೧ಪ್ರತ್ಯೂಹೀಭವತಿ ತ್ರಿಧಾಮನಗರಪ್ರಾಪ್ತೌ ಜಲೌಘಾಶ್ರಯಃ ॥ ೫೦ ॥**

ದಿಕ್ಕುಗಳಲ್ಲಿ ನೆಲೆಸಿದ ಜನರು ಎಂಬ ವೇಗದ ಗಾಳಿಯಿಂದ ತೀರದಲ್ಲಿ ಧೂಳನ್ನು ಎಬ್ಬಿಸುತ್ತ, ಅದರಿಂದಾಗಿ ತೀವ್ರವಾದ ಕತ್ತಲೆಯನ್ನು ಕವಿಸುತ್ತ, ಕಣ್ಣಿರುವವರಿಗೂ ಸಹ ಕಾಣದಂತಾಗಿಸುತ್ತ, ಪ್ರಾಣಿಗಳ ಚಟುವಟಿಕೆಯನ್ನು ಒಳಭಾಗದಲ್ಲಿಯೇ ಸ್ತಂಭನಗೊಳಿಸುತ್ತ, ಸದಾಕಾಲ ಸಂಸಾರಸಾಗರದಂತೆ ಈ ಸಮುದ್ರವು ತ್ರಿಧಾಮನಾದ ಶ್ರೀಹರಿಯ ಪಟ್ಟಣವಾದ ವೈಕುಂಠವನ್ನು ತಲುಪಲು ಅಡ್ಡಿ ಎನ್ನಿಸುವುದು.

ವಿ : ೧. ದ್ವಾರಕೆಯ ಸುತ್ತಲೂ ಸಮುದ್ರವಿರುವುದರಿಂದ ಅದನ್ನು ತಲುಪುವುದು ಸುಲಭದ ಕಾರ್ಯವಲ್ಲ ಎಂದು ತಾತ್ಪರ್ಯ.

೨. ವಿಷ್ಣುವಿನ ನೆಲೆಯಾದ ಮೋಕ್ಷವನ್ನು ತಲುಪಲು ಸಂಸಾರ ಸಮುದ್ರವು ಅಡ್ಡಿಯಾಗಿರು-ವಂತೆ ಶ್ರೀಕೃಷ್ಣನ ನೆಲೆಯಾದ ದ್ವಾರಕೆಯನ್ನು ತಲುಪಲು, ಅಲ್ಲಿಯ ಸಮುದ್ರ ಅಡ್ಡಿಯಾಗಿದೆ ಎಂದು ತಿಳಿಸುವ ಮೂಲಕ ಸಂಸಾರವು ಅದರಲ್ಲಿ ಆಸಕ್ತರಾದ ಜನಗಳಿಗೆ ಮೋಕ್ಷ ತಲುಪಲು ಅಡ್ಡಿಯಾಗುವುದು ಎಂಬ ತತ್ತ್ವ ನಿರೂಪಿತವಾಗಿದೆ; ಪ್ರತ್ಯೂಹ-ವಿಘ್ನ; ವಾರಾಶಿ-ಸಮುದ್ರ.

೩. ಆಶಾಸಕ್ತ- ಫಲಾಶೆಯಲ್ಲಿ ತೊಡಗಿದ ಸಂಸಾರಿ ಜನರು ಎಂದರ್ಥ; ಆಶುಗ - ಆಶುಗತಿ, ವಾಯು ಎಂದರ್ಥ; 'ಮನೋಜವಂ ಮಾರುತತುಲ್ಯವೇಗಂ' ಎಂಬ ಮಾತಿನಲ್ಲಿ ವಾಯುವೇಗದ ಚಿತ್ರ ಬಂದಿದೆ.

---

೧. ಅಂತರ್ಯಾಮೀ ವಿಧಾಮಾಂಽತಃ ಸಾಕ್ಷೀ ತ್ರಿಗುಣ ಈಶ್ವರಃ ॥
-ವಾಸುದೇವಸಹಸ್ರನಾಮಸು(ಪದ್ಮ.ಉ.ಖಂ. - ೭೧/೧೩೯)
ಓಂಕಾರೋ ಭಗವಾನ್ ವಿಷ್ಣುಃ ತ್ರಿಧಾಮಾ ವಚಸಾಂ ಪತಿಃ ॥
-ವಿಷ್ಣುಪುರಾಣ

೨. ಯಥಾ ಸಂಸಾರಃ ಮೋಕ್ಷಂ ಗಂತುಂ ನ ಮುಂಚತಿ ತಥಾ ದ್ವಾರಾವತೀಪರಿಖೀಭೂತಃ ಸಮುದ್ರಃ ಅನ್ಯಾನ್ ದ್ವಾರವತೀಂ ಗಂತುಂ ನ ಮುಂಚತೀತ್ಯರ್ಥಃ। - ವ್ಯಾ.

೪. ತ್ರಿಧಾಮನಗರ ಎಂದರೆ ಅನಂತಾಸನ, ವೈಕುಂಠ ಹಾಗೂ ಶ್ವೇತದ್ವೀಪಗಳೆಂಬ ಮೂರು ಧಾಮಗಳನ್ನು ಹೊಂದಿದ್ದ ಶ್ರೀಹರಿಯ ಪಟ್ಟಣವಾದ ವೈಕುಂಠ ಎಂದರ್ಥ.

ಶ್ರೀಕೃಷ್ಣನಂತೆ ರಕ್ಷಣೆ ನೀಡುತ್ತಿದ್ದ ದ್ವಾರಕೆಯ ಸಮುದ್ರ

ಉತ್ತುಂಗೋರ್ಮಿಕರಾನುಷಕ್ತವಿಲಸಚ್ಚಕ್ರಾಂಕಶಂಖಃ ಸ್ಫುರ-
ದ್ರತ್ನೌಘಾವೃತಗಾತ್ರವಾಸ್ಯನಿಮಿಷಃ ಫೇನಾನುಲೇಪೋಜ್ಜ್ವಲಃ।
ಸ್ವಾಸಕ್ತೈರ್ಜಲಸಂಚಯೈರಪಿ ಮಹಾಪಾಪಾನಿ ನಿರ್ಮೂಲಯನ್
ವಾರ್ಧಿಃ ಕೃಷ್ಣ ಇವಾವತೀಹ ಪರಿತೋ ಯೋಗೀಂದ್ರಜಿಹ್ವೋತ್ಸವಃ ॥ ೫೧ ॥

ಎತ್ತರದ ಅಲೆಗಳ ರೂಪದ ಕೈಗಳಲ್ಲಿ ಹೊಳೆಯುವ ಚಕ್ರಾಂಕಿತ-ಶಂಖಗಳು, ಹೊಳೆಯುವ ರತ್ನರಾಶಿಗಳಿಂದ ಮುಚ್ಚಿದ ಶರೀರದ ಮೀನುಗಳು, ನೊರೆಯ ರೂಪದ ಹೊಳೆಯುವ ಅಂಗರಾಗ; ಇಂತಹ ಸಮುದ್ರವು ತನ್ನಲ್ಲಿ ಆಸಕ್ತವಾದ ಜಡಮತಿಯಾದ ಜನರಿಗೂ ಮಹಾಪಾಪಗಳನ್ನು ನಾಶಪಡಿಸುತ್ತಾ, ಶ್ರೀಕೃಷ್ಣನಂತೆ, ಸುತ್ತಲೂ ಯೋಗೀಂದ್ರರ ನಾಲಿಗೆಯ ವರ್ಣನೆಗೆ ಹಬ್ಬವೆನ್ನಿಸಿ ದ್ವಾರಕೆಯನ್ನು ಪಾಲಿಸುತ್ತಿದೆ.

ವಿ : ೧. ಶ್ರೀಕೃಷ್ಣನ ಮೇಲೆತ್ತಿದ ಕೈಗಳಲ್ಲಿ ಚಕ್ರಶಂಖಗಳು, ಅವನ ಸುತ್ತಲೂ ರತ್ನರಾಶಿಯಿಂದ ಅಲಂಕೃತವಾದ ದೇವತಾವೃಂದ, ನೊರೆಯಂತೆ ಶುಭ್ರವಾಗಿ ಹೊಳೆಯುವ ಅಂಗಲೇಪ, ಆರಾಧಿಸುವ ಮಂದಮತಿಗಳ ಪಾಪವನ್ನೂ ಪರಿಹರಿಸುವ ಕಾರುಣ್ಯ, ಯೋಗಿಗಳ ಪಾಲಿಗೆ ಕೃಷ್ಣನ ವರ್ಣನೆಯಂತೂ ದೊಡ್ಡ ಹಬ್ಬ, ಅದರಂತೆ ದ್ವಾರಕೆಯ ಬಳಿಯ ಸಮುದ್ರದಲ್ಲಿ ಅಲೆಗಳ ಮೂಲಕ ಹೊರಬರುವ ಚಕ್ರಾಂಕಿತಗಳು, ಶಂಖಗಳು, ಅದರ ಹೊಳೆಯುವ ರತ್ನಗಳಲ್ಲಿ ಮರೆಯಾಗಿರುವ ಮೀನುಗಳು, ನೊರೆಯರೂಪದ ಉಜ್ವಲವಾದ ಅಂಗಲೇಪನ, ತನ್ನಲ್ಲಿ [1]ಮೀಯುವ ಜನಗಳ ಪಾಪರಾಶಿಯನ್ನು ಪರಿಹರಿಸುವ ಸಾಮರ್ಥ್ಯ, ಯೋಗಿಶ್ರೇಷ್ಠರೂ ಕೊಂಡಾಡುವಂತಹ ಹಿರಿಮೆ.

೨. ಶ್ರೀಕೃಷ್ಣನಂತಿರುವ ಸಮುದ್ರವು ದ್ವಾರಕೆಯನ್ನು ಸುತ್ತಲೂ ರಕ್ಷಿಸುತ್ತಿರುವುದು ಎಂದರ್ಥ.

೩. ತನ್ನ ಭಕ್ತವರ್ಗವನ್ನು ಸದಾ ಶ್ರೀಕೃಷ್ಣನು ಸಮುದ್ರವು ದ್ವಾರಕೆಯನ್ನು ರಕ್ಷಿಸುವಂತೆ ರಕ್ಷಿಸುವನು ಎಂಬ ತತ್ತ್ವವು ಇಲ್ಲಿ ನಿರೂಪಿತ.

೪. ಅನಿಮಿಷ ಎಂದರೆ ದೇವತೆಗಳು ಹಾಗೂ ಮೀನುಗಳು ಎಂದರ್ಥ; ಜಲಸಂಚಯ ಎಂಬುದಕ್ಕೆ ಜಲರಾಶಿ ಹಾಗೂ ಜಡಮತಿಗಳ ಗುಂಪು ಎಂದರ್ಥ.

---

೧. ಸ್ನಾನಪಾನಾದಿಕುರ್ವತಾಂ ಮಹಾಪಾಪಾನಿ ನಿರ್ಮೂಲಯನ್ ಸಮುದ್ರಸ್ಥಚಕ್ರತೀರ್ಥಸ್ಯ ಮಹಾಪಾಪಪರಿಹಾರಕತೀರ್ಥತ್ವಾದಿತಿ ಭಾವಃ। –ವ್ಯಾ.
ಚಕ್ರತೀರ್ಥಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ।
ಯಚ್ಛಿಲಾಮಪಿ ಸಂಗೇನ ವಿಧತ್ತೇ ವಿಶ್ವವಂದಿತಾಮ್ ॥ –ತೀರ್ಥಪ್ರಬಂಧ(೧/೯೧)

## ಶ್ರೀಕೃಷ್ಣನನ್ನು ಹೋಲುತ್ತಿದ್ದ ದ್ವಾರಕೆ

ಸಚ್ಚಕ್ರಾ ಕರಪುಷ್ಕರಮ್ಯಕಟಕಾ ಭೋಗೀಂದ್ರಭೋಗಾಸ್ಪದಾ
ನೇತ್ರಸ್ಥಾನಗತೇಂದ್ವಿನಾ ಕನಕಸದ್ವಪ್ರಾತಿಪೀತಾಂಬರಾ ।
ಭಾತಿ ಸ್ವೋದರವಾಸಿಹಂಸಗಮನಾ ಸೇಯಂ ಸುಧರ್ಮಾವಹಾ
ವಿಷ್ಣೋರಾಕೃತಿವತ್ ಸಮುದ್ರಹೃದಯೇ [1]ಲಕ್ಷ್ಮೀಧರಾಲಿಂಗಿತಾ ॥ ೫೨ ॥

ಸಜ್ಜನರ ಗುಂಪುಗಳು, ಕಪ್ಪಕಾಣಿಕೆಗಳಿಂದಾಗಿ ಸಮೃದ್ಧವಾದ ರಮ್ಯವಾದ ಸೇನೆಗಳು; ಮಹಾವಿಲಾಸಿಗಳ ಭೋಗಕ್ಕೆ ಉತ್ತಮವಾದ ನೆಲೆ, ಉಪ್ಪರಿಗೆಗಳ ಮೇಲೆ ಕಂಗೊಳಿಸುವ ಸೂರ್ಯಚಂದ್ರರು, ಚಿನ್ನದ ಶ್ರೇಷ್ಠ ಪ್ರಾಕಾರದಂತಹ ಪೀತಾಂಬರ, ತನ್ನೊಳಗೆ ನೆಲೆಸಿರುವ ಹಂಸಗಮನೆಯರಾದ ನಾರಿಯರು, ಒಳಗೆ ಸುಧರ್ಮಾ ಎಂಬ ಸಭೆ, – ಇಂತಹ ಲಕ್ಷ್ಮೀಧರನಾದ ಶ್ರೀಕೃಷ್ಣನಿಂದ ಆಲಂಗಿತವಾದ ದ್ವಾರಕಾಪಟ್ಟಣವು ಸಮುದ್ರ ಮಧ್ಯದಲ್ಲಿ ಲಕ್ಷ್ಮೀದೇವೀ ಹಾಗೂ ಧರಾದೇವಿಯಿಂದ ಆಲಂಗಿತನಾದ ಶ್ರೀಹರಿಯ ಆಕೃತಿಯಂತೆ ಶೋಭಿಸುವುದು.

ವಿ. : ೧. ಉತ್ತಮವಾದ ಚಕ್ರಾಂಕಿತಗಳು, ಕೈಯಲ್ಲಿ ಹೊಳೆಯುವ ರಮ್ಯವಾದ ಕಡಗಗಳು, ಶೇಷನ ದೇಹದಲ್ಲಿ ವಿಹಾರ, ಕಣ್ಣುಗಳಲ್ಲಿ ನೆಲೆಸಿದ ಸೂರ್ಯಚಂದ್ರರು, ಹೊಳೆಯುವ ಪೀತಾಂಬರ, ತನ್ನ ಉದರದಲ್ಲಿ ನೆಲೆಸಿರುವ ಬ್ರಹ್ಮಾದಿ ದೇವತೆಗಳು, ಧರ್ಮಗಳಿಗೆ ಸಾಧನವಾಗುವ ಅನುಗ್ರಹ ಎರಡೂ ಪಕ್ಕಗಳಲ್ಲಿ ಲಕ್ಷ್ಮೀದೇವಿ ಹಾಗೂ ಧರಾದೇವಿ – ಇದು ಶ್ರೀಕೃಷ್ಣನಿಗೆ ಅನ್ವಯಿಸುವ ಅರ್ಥ.

೨. ಹೀಗೆ ಸಮುದ್ರವನ್ನು ಶ್ರೀಕೃಷ್ಣನಿಗೆ ಹೋಲಿಸಿರುವುದು ಇಲ್ಲಿಯ ವಿಶೇಷ[2]; ಇಂದು – ಚಂದ್ರ, ಇನ – ಸೂರ್ಯ.

೩. ಈ ಪ್ರಸಂಗದಲ್ಲಿ ಶ್ರೀಕೃಷ್ಣನನ್ನು ಸಮುದ್ರಕ್ಕೆ ಹೋಲಿಸಿರುವ ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ (೩/೩)ದ ಶ್ಲೋಕವನ್ನು ಸ್ಮರಿಸಿಕೊಳ್ಳಬಹುದು:

ಜಯತ್ಯಸಂಖ್ಯೋರುಬಲಾಂಬುಪೂರೋ ಗುಣೋಚ್ಚರತ್ನಾಕರ ಆತ್ಮವೈಭವಃ ।
ಸದಾ ಸದಾತ್ಮಜ್ಞನದೀಭಿರಾಪ್ಯಃ ಕೃಷ್ಣಾವತಾರೋ ಹರಿರೇಕಸಾಗರಃ ॥

---

೧. ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ । –ತಂತ್ರಸಾರಸಂಗ್ರಹ(೧/೨೦)

೨. ''ಸೂರ್ಯಾಚಂದ್ರಮಸಾವಸ್ಯ ಚಕ್ಷುಷೀ'' ಇತಿ ಶ್ರುತೇಃ । –ವ್ಯಾ.

ಭಕ್ತಜನರಿಂದ ತುಂಬಿದ್ದ ದ್ವಾರಕೆ

ಯೇ ಪುರಾರಿರಿಪುಣಾಽನಯೇ ಪುರಾ
ಸಂಗತಾಮ್ರನಯನಾಃ ಸ್ಮ [1]ಸಂಗತಾಃ।
ಕಾಂತಯಾ ಸಹ ವರಾಲಕಾಂತಯಾ
ತೇಽಪಿ ರೇಚಕಭೃತೋಽತ್ರ ತೇಪಿರೇ ॥ ೫೩ ॥

ಹಿಂದೆ ಸ್ತ್ರೀಸಂಗದಿಂದಾಗಿ ಕಣ್ಣು ಕೆಂಪಾದವರಾಗಿ, ತ್ರಿಪುರಾರಿಯಾದ ಶಿವನ ವೈರಿಯಾದ ಕಾಮನಿಂದ ಗ್ರಾಮ್ಯಧರ್ಮವಾದ ಮೈಥುನದಲ್ಲಿ ತೊಡಗಿದ್ದ ವಿಲಾಸಿಜನರು ಸಹ ಸೊಗಸಿನ ಮುಂಗುರುಳುಗಳಿಂದ ಕೂಡಿದ ಕಾಂತೆಯಿಂದೊಡಗೂಡಿ, [2]ಪ್ರಾಣಾ-ಯಾಮದ ಕಾರ್ಯದಲ್ಲಿ ತೊಡಗಿ, ತಪೋನಿರತರಾಗಿರುವರು.

ವಿ. : ೧. ಹಿಂದೆ ವಿಲಾಸಿಗಳಾಗಿದ್ದ ಜನರು ಸಹ ದ್ವಾರಕೆಯಲ್ಲಿ ನೆಲೆಸಿದ ಬಳಿಕ ಗ್ರಾಮ್ಯಧರ್ಮವನ್ನು ತೊರೆದು, ಪ್ರಾಣಾಯಾಮಾದಿ ರೂಪವಾದ ತಪಸ್ಸಿನಲ್ಲಿ ತೊಡಗಿ ಸನ್ಮಾರ್ಗವನ್ನು ಆಶ್ರಯಿಸುವರು ಎಂದರ್ಥ.

೨. ದ್ವಾರಕೆಯಂತಹ ಪುಣ್ಯಕ್ಷೇತ್ರಗಳ ಯಾತ್ರೆ ಹಾಗೂ ವಾಸಗಳಿಂದ ಸಾತ್ವಿಕರ ಮನಸ್ಸು ಪರಿಶುದ್ಧವಾಗಿ ಮೋಕ್ಷದ ಹಾದಿಯನ್ನು ಹಿಡಿಯುವುದು ಎಂದರ್ಥ.

ಬಗೆಬಗೆಯ ಜನರಿಂದ ತುಂಬಿದ್ದ ದ್ವಾರಕೆ

ಚರಂತಿ ತಸ್ಯಾಂ ಬಹುಮಾನಯುಕ್ತಾ
ಬುಧಾ ವಿದಗ್ಧಾ ಬಹುಮಾನಯುಕ್ತಾಃ।
ಗಜಾಶ್ಚ ಮತ್ತಾ ಬಹುಶಸ್ತರಂಗಾ
ಬಹಿಶ್ಚ ಸಿಂಧೋರ್ಬಹುಶಸ್ತರಂಗಾಃ ॥ ೫೪ ॥

ಆ ದ್ವಾರಕೆಯಲ್ಲಿ ಅನೇಕ ಪ್ರಮಾಣಗಳಿಂದ ಕೂಡಿದ ವಿದ್ವಾಂಸರು ಹಾಗೂ ಅಭಿಮಾನ-ಯುಕ್ತರಾದ ವಿಲಾಸಿಗಳು ನೆಲೆಸಿರುವರು; ಅದರಂತೆ ಗೈರಿಕಾದಿ ರಂಜನದ್ರವ್ಯಗಳಿಂದ ಕೂಡಿದ ಮದಿಸಿದ ಆನೆಗಳು ಸಂಚರಿಸುವವು; ಆ ಪಟ್ಟಣದ ಹೊರಗೆ ಸಮುದ್ರದಲ್ಲಿ ಬಹಳ ಅಲೆಗಳು ಸಹ ಸಾಗಿಬರುವವು.

---

೧. 'ಸ್ಮಾತೀತೇ ಚ ಪ್ರಸಿದ್ಧೇ ಚ' ಇತ್ಯನುಶಾಸನಾತ್। – ವ್ಯಾ.

೨. ಪ್ರಾಣಾಯಾಮೈಕದೇಶವಾಸಿನಾ ರೇಚಕಶಬ್ದೇನ ರೇಚಕಕುಂಭಕಪೂರಕರೂಪಪ್ರಾಣಾಯಾಮೋ ಲಕ್ಷ್ಯತೇ । ತೇಪಿರೇ ತಪಸ್ಯಾಂ ಚಕ್ರಿರೇ । ಉಪಭೋಗಾರ್ಹಮನೋಹರನಾರ್ಯಭಾವಾತ್ ನ ತಪಃ ಕರಣಮ್ । ಕಿಂತು ಶಾಂತಿರಸಪ್ರದದ್ವಾರವತೀಪುರವತೀಪುರಪ್ರಭಾವಾದಿತಿ ಭಾವೇನ ವರಾಲಕಾಂತಯಾ ಕಾಂತಯಾ ಸಹೇತ್ಯುಕ್ತಮ್ । –ವ್ಯಾ.

ವಿ : [೧]ಜ್ಞಾನಿಗಳು, ವಿಲಾಸಿಜನರು ಆನೆಗಳು ಮೊದಲಾದ ಬಗೆಬಗೆಯ ವಸ್ತುಗಳಿಂದ ದ್ವಾರಕಾಪುರಿಯು ತುಂಬಿದ್ದಿತು ಎಂದರ್ಥ.

ಜಗನ್ಮೋಹಕವಾದ ದ್ವಾರಕೆ

ಅಂಗನಾಲಮಲಕಾವಲಿಭೃಂಗಂ
ಮಂದಹಾಸಮಧು ಮನ್ಮಥಬಾಣಮ್ ।
ಅಂಗನಾಽಲಮಮಲಂ ಮುಖಪದ್ಮಂ
ಬಿಭ್ರತೀ ವಶಯಿತುಂ ಜಗದಸ್ಯಾಮ್ ॥ ೫೫ ॥

ಈ ದ್ವಾರಕೆಯಲ್ಲಿ ಶರೀರವೆಂಬ ನಾಳದ, ಮುಂಗುರುಳುಗಳ ಸಾಲಿನ ರೂಪದ ದುಂಬಿಗಳ, ಮಂದಹಾಸವೆಂಬ ಮಕರಂದದ, ಮನ್ಮಥನೆಂಬ ಬಾಣದ, ನಿರ್ಮಲ ಮುಖಕಮಲವನ್ನು ಹೊಂದಿದ ಲಲನೆಯು ಜಗತ್ತನ್ನೇ ವಶಪಡಿಸಿಕೊಳ್ಳಲು ಸಮರ್ಥಳಾಗಿರುವಳು.

ವಿ: ೧. ದ್ವಾರಕೆಯ ಕಾಂತಿಯು [೨]ಜಗನ್ಮೋಹಕವಾಗಿದ್ದಿತು ಎಂದು ಭಾವ.

೨. ಇಲ್ಲಿ ಅಂಗನಾಲಂ, ಎಂಬುದಾಗಿ ಪೂರ್ವಾರ್ಧದಲ್ಲಿಯೂ, ಅಂಗನಾ ಅಲಂ ಎಂಬುದಾಗಿ ಉತ್ತರಾರ್ಧದಲ್ಲಿಯೂ ಪದವಿಭಾಗವನ್ನು ತಿಳಿಯಬೇಕು.

ಸಾಕ್ಷಾತ್ ಶ್ರೀಕೃಷ್ಣ ಕಾಣುತ್ತಿದ್ದ ದ್ವಾರಕೆ

ನ ಮುನಯೋಽನುಯಯುರ್ಮನಸಾ ಚ ಯಂ
ತಮಪಿ ಲಬ್ಧುಮಿಮಾಮನಸಾ ಚಯಮ್ ।
ದಧದುಪೈತಿ ಜನಃ ಸಹ ಜಾಯಯಾ
ವಿಘಟಿತಾ ಪ್ರಕೃತಿಃ ಸಹಜಾ ಯಯಾ ॥ ೫೬ ॥

ಮುನಿಗಳು ಸಹ ಯಾವನನ್ನು ಮನಸ್ಸಿನಿಂದಲೂ ಹೊಂದಲು ಆಗುತ್ತಿರಲಿಲ್ಲವೋ ಅಂತಹ ಶ್ರೀಕೃಷ್ಣನನ್ನು ಪಡೆಯಲೆಂದು ಗಾಡಿಗಳಲ್ಲಿ ಗುಂಪು-ಗುಂಪಾಗಿ ಬರುವ ಜನರು ತಮ್ಮ ಪತ್ನಿಯರೊಂದಿಗೆ ಕೂಡಿ, ಪ್ರತಿಬಂಧಕವಾದ ಪ್ರಕೃತಿಯ ಸಹಜಬಂಧವನ್ನು ಕಳೆದುಕೊಂಡವರಾಗಿ ಈ ದ್ವಾರಕೆಗೆ ಆಗಮಿಸುತ್ತಿದ್ದರು.

---

೧. ಬುಧವಿಲಾಸಿಜನಗಜಾದಿಸಂಕೀರ್ಣೇಯಂ ಪುರೀತಿ ಭಾವಃ। - ವ್ಯಾ.
೨. ಜಗನ್ಮೋಹನಕಾಂತ್ಯಾ ಸುಮಪೇತೇಯಂ ಪುರೀತಿ ಭಾವಃ। - ವ್ಯಾ.

ವಿ : ೧. ೬ ತಿಂಗಳುಗಳ[1] ಕಾಲ ನೆಲೆಸಲೆಂದು ಹೆಂಡತಿ, ಮಕ್ಕಳು, ಸಂಪತ್ತು ಮೊದಲಾದ ಸಮಸ್ತ ಭಾರವನ್ನು ಗಾಡಿಗಳ ಮೇಲೆ ಹೇರಿಕೊಂಡು, ಕಳ್ಳರು ಮೊದಲಾದವರ ಭಯವನ್ನು ತಪ್ಪಿಸಿಕೊಳ್ಳಲೆಂದು ಜನರು ಗುಂಪುಗುಂಪಾಗಿ ಅಲ್ಲಿಗೆ ಬರುತ್ತಿದ್ದರು. ಇದರಿಂದಾಗಿ ಯೋಗಿಗಳಿಗೂ ದುರ್ಲಭನಾದ ಶ್ರೀಕೃಷ್ಣನ ಸಾಕ್ಷಾತ್ಕಾರವನ್ನು ದ್ವಾರಕೆಯು ಒದಗಿಸುತ್ತಿದ್ದಿತು ಎಂದು ಭಾವ.

೨. ನ, ಮುನಯಃ, ಅನುಯಯುಃ, ಮನಸಾ, ಚ ಯಂ, ತಮ್, ಅಪಿ, ಲಬ್ಧಂ, ಇಮಾಮ್, ಅನಸಾ, ಚಯಂ, ದಧತ್, ಉಪೈತಿ, ಜನಃ, ಸಹ, ಜಾಯಯಾ, ವಿಘಟಿತಾ, ಪ್ರಕೃತಿಃ, ಸಹಜಾ, ಯಯಾ – ಎಂಬುದಾಗಿ ಈ ಶ್ಲೋಕದ ಪದಚ್ಛೇದ.

### ಸಂಪದ್ಭರಿತವಾದ ದ್ವಾರಕೆ

**ಪರಮಾಪ ರಮಾ ಯಸ್ಯಾಮಾಶ್ರಮಂ ಮಾ ಶ್ರಮಂ ದಿವಿ।**
**ನಿವಸನ್ನಿವ ಸಂವೇತ್ತಿ ಸರ್ವದಾ ಸರ್ವದಾನತಃ ॥ ೫೭ ॥**

ಆ ದ್ವಾರಕೆಯಲ್ಲಿ ಮಹಾಲಕ್ಷ್ಮಿಯು ಸಂಪೂರ್ಣವಾಗಿ ನೆಲೆಸಿದಳು; ಅಲ್ಲಿ ವಾಸಿಸುತ್ತಿದ್ದ ಜನರು ಸ್ವರ್ಗದಲ್ಲಿ ಹೇಗೋ ಹಾಗೆ ಸಮಸ್ತ ವಸ್ತುಗಳನ್ನು ಯಥೇಚ್ಛವಾಗಿ ದಾನ ಮಾಡುತ್ತಾ ಕ್ಲೇಶವನ್ನೇ ಅರಿಯದವರಾಗಿದ್ದರು.

ವಿ : ೧. ಶ್ರೀಕೃಷ್ಣನು ನೆಲೆಸಿದ್ದ ದ್ವಾರಕೆಯು [2]ಸಂಪತ್ತಿನ ನೆಲೆಯಾಗಿದ್ದಿತು; ಅಲ್ಲಿ ಒಬ್ಬ [3]ದರಿದ್ರನೂ ಇರಲಿಲ್ಲ ಎಂದು ಇದರ ಭಾವವಾಗಿದ್ದು ಇದು ರಾಮರಾಜ್ಯದ ವರ್ಣನೆಯನ್ನು ಹೋಲುವುದು.

೨. ದಾನಮಾಡುವುದು ಶ್ರೀಮಂತಿಕೆಗೆ ದ್ಯೋತಕ ಮಾತ್ರವಲ್ಲದೆ, ದಾರಿದ್ರ್ಯಕ್ಕೆ ಪರಿಹಾರಕವೂ ಆಗಿದೆ ಎಂಬ ಸೂಚನೆಯೂ ಇಲ್ಲಿದೆ.

### ಅವೈಷ್ಣವರಿಗೆ ನಿಲುಕದ ದ್ವಾರಕೆ

**ನಿವಾರಯಂತೀಹ ಭಟಾ ಯಥೇಶೋ**
**ನವೀನಮಾರ್ಗೇ ವಿಶತಃ ಕೃತಾಂತೇ।**

---

೧. ಷಣ್ಮಾಸಪರ್ಯಂತಮವಸ್ಥಾನಾರ್ಥಂ ಭಾರ್ಯಾಪುತ್ರವಿತ್ತಾದಿಸಮಸ್ತಭಾರಂ ಶಕಟೈರೂಢ್ವಾ ಚೋರಾದಿ-ಭಯಪರಿಹಾರಾರ್ಥಂ ಪುಂಜೀಭೂಯಾದ್ಯಾಪಿ ಗಚ್ಛಂತೀತ್ಯರ್ಥಃ । ದ್ವಾರವತೀ ಯೋಗಿನಾಮಪಿ ದುರ್ಲಭಂ ಶ್ರೀಕೃಷ್ಣಸಾಕ್ಷಾತ್ಕಾರಂ ಪ್ರಯಚ್ಛತೀತಿ ಭಾವಃ। –ವ್ಯಾ.

೨. ಲಕ್ಷ್ಮ್ಯಾ ನಿವಾಸಭೂತೇಯಂ ಪುರೀತಿ ಭಾವಃ। –ವ್ಯಾ.

೩. ದ್ವಾರವತ್ಯಾಂ ದರಿದ್ರಃ ಕೋಽಪಿ ನಾಸ್ತೀತಿ ಭಾವಃ। –ವ್ಯಾ.

ನ ಚೇತ್ ಕ್ಷಿಪಂತೀಹ ವೃಕಾ ಇವಾರ್ತಾ-
ನವೀನಮಾರ್ಗೇ ವಿಶತಃ ಕೃತಾಂತೇ ॥ ೫೮ ॥

ಕೃತಯುಗವು ಕಳೆದ ಬಳಿಕ ಅವೈಷ್ಣವರನ್ನು ನೂತನ ವೈಷ್ಣವ ಮಾರ್ಗದಲ್ಲಿ ಪ್ರವೇಶಿಸಲು ಶಿವನು ಹೇಗೋ ಹಾಗೆ ಈ ದ್ವಾರಕೆಯಲ್ಲಿ ಶ್ರೀಕೃಷ್ಣನ ಭಟರು ದುಷ್ಟರನ್ನು ಅಮಾರ್ಗದಲ್ಲಿ ಪ್ರವೇಶಿಸಲು ಬಿಡುತ್ತಿರಲಿಲ್ಲ; ಅಲ್ಲಿಗೂ ಬಗ್ಗದೆ, ಕಳ್ಳದಾರಿಯಲ್ಲಿ ದ್ವಾರಕೆಗೆ ನುಗ್ಗುತ್ತಿದ್ದವರನ್ನು ಹಿಡಿದು [೧]ಯಮಲೋಕಕ್ಕೆ, ವೃಕಗಳು ಕುರಿಗಳನ್ನು ಹೇಗೋ ಹಾಗೆ ತಳ್ಳುತ್ತಿದ್ದರು.

ವಿ : ೧. [೨]ಶಿವನು ಕೃತಯುಗ ಕಳೆದ ಬಳಿಕ ವೈಷ್ಣವ ಧರ್ಮವನ್ನು ಅನುಷ್ಠಾನಮಾಡ ಬಯಸಿದ ದೈತ್ಯರನ್ನು ಪಾಶುಪತಾಗಮ ಮೊದಲಾದ ದುಶ್ಶಾಸ್ತ್ರಗಳ ರಚನೆಯ ಮೂಲಕ ಮೋಹಿಸಿ, ವೈಷ್ಣವ ಮಾರ್ಗದಲ್ಲಿ ಸಾಗಲು ಬಿಡುವುದಿಲ್ಲ ಎಂಬುದು ವರಾಹಾದಿ ಪುರಾಣಗಳಲ್ಲಿ ನಿರೂಪಿತವಾಗಿರುವ ವಿವರ[೩].

೨. ದೈತ್ಯರಿಗೆ ವೈಷ್ಣವ ಮಾರ್ಗ ಪ್ರವೇಶಕ್ಕೆ ಶಿವನು ಅಡ್ಡಿಯಾಗಿದ್ದಂತೆ ಅಯೋಗ್ಯರ ದ್ವಾರಕಾ ಪ್ರವೇಶಕ್ಕೆ ಶ್ರೀಕೃಷ್ಣನ ಭಟರು ಅಡ್ಡಿಯಾಗಿದ್ದರು ಎಂದರ್ಥ.

---

೧. ಬಲಾತ್ ದ್ವಾರವತೀಂ ಗತ್ವಾ ಯಮಲೋಕಂ ಪ್ರಾಪಯಂತೀತ್ಯರ್ಥಃ। ಅಥವಾ ಕೃಷ್ಣಭಟಾಃ ವೃಕಾ ಇವ ಆರ್ತಾಃ ನ ಭವಂತಿ। ಕಿಂತು ಕೃಷ್ಣಾಜ್ಞಯಾ ವಿಃ ಪಕ್ಷಿಃ ಇನಃ ಸೂರ್ಯಃ ತಯೋರ್ಮಾರ್ಗೇ ಆಕಾಶಮಾರ್ಗ ಇತ್ಯರ್ಥಃ। - ವ್ಯಾ.

೨. ಈಶಃ ಶಿವಃ ಕೃತಸ್ಯ ಕೃತಯುಗಸ್ಯಾಂತೇ ಅವಸಾನೇ ನವೀನಮಾರ್ಗೇ ನೂತನವೈಷ್ಣವಮಾರ್ಗೇ। ಅಧರ್ಮಿಣಾಂ ಧರ್ಮಮಾರ್ಗಸ್ಯ ನೂತನತ್ವಾನ್ನವೀನೇತ್ಯುಕ್ತಮ್ । ವಿಶತಃ ವೈಷ್ಣವಧರ್ಮಮಾಚರತೋ ದೈತ್ಯಾನ್ । ಶೈವಾಗಮಾದಿದುಃಶಾಸ್ತ್ರಕರಣೇನ ಮೋಹಯಿತ್ವಾ ವೈಷ್ಣವಧರ್ಮಮಾರ್ಗೇ ಗಂತುಂ ಯಥಾ ನ ಮುಂಚತಿ ತಥೇತಿ ಸಂಬಂಧಃ। -ವ್ಯಾ.

೩.. ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ ಮೋಹಯಿಷ್ಯತಿ।
ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥
ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ।
ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರು ॥
ಇತಿ ವಾರಾಹವಚನಂ ಬ್ರಹ್ಮಾಂಡೋಕ್ತಂ ತಥಾ ಪರಮ್।
ಅಮೋಹಾಯ ಗುಣಾ ವಿಷ್ಣೋರಾಕಾರಶ್ಚಿಚ್ಛರೀರತಾ ॥
ನಿರ್ದೋಷತ್ವಂ ತಾರತಮ್ಯಂ ಮುಕ್ತಾನಾಮಪಿ ಚೋಚ್ಯತೇ।
ಏತದ್ವಿರುದ್ಧಂ ಯತ್ ಸರ್ವಂ ತನ್ಮೋಹಾಯೇತಿ ನಿರ್ಣಯಃ ॥
ಪರಮೋ ವಿಷ್ಣುರೇವೈಕಃ ತಜ್ಜ್ಞಾನಂ ಮೋಕ್ಷಸಾಧನಮ್।
ಶಾಸ್ತ್ರಾಣಾಂ ನಿರ್ಣಯಸ್ತ್ವೇಷಸ್ತದನ್ಯನ್ಮೋಹನಾಯ ಹಿ ॥
ಜ್ಞಾನಂ ವಿನಾ ತು ಯಾ ಮುಕ್ತಿಃ ಸಾಮ್ಯಂ ಚ ಮಮ ವಿಷ್ಣುನಾ।
ತೀರ್ಥಾದಿಮಾತ್ರತೋ ಜ್ಞಾನಂ ಮಮಾಧಿಕ್ಯಂ ಚ ವಿಷ್ಣುತಃ ॥
ಅಭೇದಶ್ಚಾಸ್ಮದಾದೀನಾಂ ಮುಕ್ತಾನಾಂ ಹರಿಣಾ ತಥಾ।
ಇತ್ಯಾದಿ ಸರ್ವಂ ಮೋಹಾಯ ಕಥ್ಯತೇ ಪುತ್ರ ನಾನ್ಯಥಾ ॥ -ಮ.ಭಾ.ತಾ.ನಿ.(೧/೪೮- ೫೫)

೩. ಭಟರು ಕಳ್ಳದಾರಿಯಿಂದ ಪುರಪ್ರವೇಶಕ್ಕೆ ಯತ್ನಿಸಿದವರನ್ನು ಹಿಡಿದು ಸಂಹರಿಸುತ್ತಿದ್ದರು ಎಂಬುದು ಸಹ ಗಮನಾರ್ಹವಾಗಿದೆ.

೪. ದ್ವಾರಕೆಯಲ್ಲಿ ಕೃಷ್ಣನ ಭಟರು ವೃಕಗಳಂತೆ ಎಂದೂ ಆರ್ತರಾಗುತ್ತಿರಲಿಲ್ಲ; ಬದಲಾಗಿ ಕೃಷ್ಣನ ಆದೇಶದಂತೆ ಪಕ್ಷಿಗಳಿಗೂ ಸೂರ್ಯನಿಗೂ ವಿಹಿತವಾದ ಗಗನಮಾರ್ಗದ ಮೂಲಕ ದ್ವಾರಕೆಯನ್ನು ಪ್ರವೇಶಿಸಬಯಸಿದ, ಎಂದರೆ ಸೌಭ ಮೊದಲಾದ ಸಾಧನಗಳ ಮೂಲಕ ದ್ವಾರಕೆಯನ್ನು ಪ್ರವೇಶಿಸಬಯಸಿದ ಸಾಲ್ವಾದಿಗಳನ್ನು ತಡೆಯುತ್ತಿದ್ದರು ಎಂಬ ಅರ್ಥವು ವಿವಕ್ಷಿತ[೧]; ಅವಿ – ಕುರಿ.

೫. ನವೀನಮಾರ್ಗೇ, ಎಂಬುದಾಗಿ ಪೂರ್ವಾರ್ಧದಲ್ಲೂ, ಆರ್ತಾನ್, ಅವೀನ್, ಅಮಾರ್ಗೇ – ಎಂಬುದಾಗಿ ಉತ್ತರಾರ್ಧದಲ್ಲೂ ಅರ್ಥಮಾಡಿಕೊಳ್ಳಬೇಕು.

## ಅಪಾರ ವೈಭವದ ದ್ವಾರಕೆ

ತನೋತಿ ಸಾ ಕೋಪಿನಿ ಶಾಂತಭಾವಂ
ಮನಸ್ಸು ಯಃ ಕೋಽಪಿ ನಿಶಾಂತಭಾವಮ್ ।
ಖಗಾಶ್ಚ ಯಸ್ಯಾಂ ಕಲಶಾಲಿಕಂಠಾ
ಗೃಹಾಶ್ಚ ಭಾಸ್ವತ್ಕಲಶಾಲಿಕಂಠಾಃ ॥ ೫೯ ॥

ಆ ದ್ವಾರಕೆಯು [೨]ಸಿಡುಕಿನ ಸ್ವಭಾವದ ಜನರಿಗೂ ಪ್ರಶಾಂತಭಾವವನ್ನು ಉಂಟು-ಮಾಡುತ್ತಿತ್ತು. ಅಲ್ಲಿನ ಎಂತಹ ಸಾಮಾನ್ಯವ್ಯಕ್ತಿಯ ಮನಸ್ಸುಗಳಲ್ಲೂ ಸಹ ಒಂದು ಬಗೆಯ ಬೆಳಕಿನ ಛಾಯೆಯನ್ನು ಮೂಡಿಸುತ್ತಿತ್ತು; ಅಲ್ಲಿಯ [೩]ಪಕ್ಷಿಗಳೂ ಸಹ ಅವ್ಯಕ್ತ ಮಧುರ ಸ್ವರದಿಂದ ಹಾಡುತ್ತಿದ್ದವು; ಅಲ್ಲಿಯ ಮಂದಿರಗಳು ಹೊಳೆಯುವ ಕಲಶಗಳ ಸಾಲುಗಳಿಂದ ಕೂಡಿದವುಗಳಾಗಿದ್ದು ಉಪ್ಪರಿಗೆಗಳಿಂದಲೂ ಶೋಭಿಸುತ್ತಿದ್ದವು.

ವಿ. : ೧. ದ್ವಾರಕೆಯು ಕೋಪ-ತಾಪಗಳನ್ನು ಪರಿಹರಿಸಿ ಪ್ರಶಾಂತಿಯನ್ನು ನೀಡುವ ಅಪೂರ್ವಕ್ಷೇತ್ರ. ಜನಸಾಮಾನ್ಯರಲ್ಲೂ ಜ್ಞಾನದ ಸೆಳಕನ್ನು ಉಂಟುಮಾಡುತ್ತಿದ್ದ ಪುಣ್ಯಕ್ಷೇತ್ರ.

---

೧. ಅಥವಾ ಕೃಷ್ಣಭಟಾಃ ವೃಕಾ ಇವ ಆರ್ತಾಃ ನ ಭವಂತಿ । ಕಿಂತು ಕೃಷ್ಣಾಜ್ಞಯಾ ವಿಃ ಪಕ್ಷಿಃ ಇನಃ ಸೂರ್ಯಃ ತಯೋರ್ಮಾರ್ಗೇ ಆಕಾಶಮಾರ್ಗ ಇತ್ಯರ್ಥಃ । ವಿಶತಃ ಸೌಭಾದಿವ್ಯೋಮಚಾರಿಯಾನೇನ ದ್ವಾರವತೀಂ ಪ್ರವಿಶತಃ ಸಾಲ್ವಾದೀನ್ ಕೃತಾಂತೇ ಅಂತಕೇ ಕ್ಷಿಪಂತಿ। ಅಂತಕಲೋಕಂ ಪ್ರಾಪಯಂತೀತಿ ಯೋಜನಾ। –ವ್ಯಾ.

೨. ಕ್ರೋಧಾದಿದೋಷಪರಿಹರ್ತ್ರೀಯಂ ಪುರೀತಿ ಭಾವಃ । ನಿಶಾಂತಭಾವಂ ಪ್ರಭಾತಸ್ವಭಾವಂ ತಮೋರಾಹಿತ್ಯ-ಮಿತ್ಯರ್ಥಃ। ದ್ವಾರವತೀಸ್ಥಾಃ ಸರ್ವೇಽಪಿ ಮನೋದೋಷನಿರ್ಹರಣಸಮರ್ಥಾ ಇತಿ ಭಾವಃ। –ವ್ಯಾ.

೩. ಪಿಕಾದಿಪಕ್ಷಿಭಿರ್ಮಹಾಗೃಹೈಶ್ಚ ರಮ್ಯೇಯಂ ಪುರೀತಿ ಭಾವಃ। –ವ್ಯಾ.

ಪಶು-ಪಕ್ಷಿಗಳು ಸಹ ಭಗವಂತನ ಗುಣಗಾನವನ್ನು ಮಾಡುತ್ತಿದ್ದ ಸಾಧನ ಕ್ಷೇತ್ರ. ಅಲ್ಲಿಯ ಮನೆಮನೆಗಳಲ್ಲೂ ಸಹ ಶ್ರೀಹರಿಯ ಗುಣಗಾನ ನಡೆದಿತ್ತು ಎಂದರ್ಥ.

೨. "ಕೋಪಿನಿ ಶಾಂತಭಾವಂ", "ಕೋಽಪಿ ನಿಶಾಂತಭಾವಂ" ಎಂಬುದಾಗಿ ಪೂರ್ವಾರ್ಧ-ದಲ್ಲೂ, "ಕಲಶಾಲಿಕಂಠಾಃ, ಭಾಸ್ವತ್ಕಲಶ-ಆಲಿಕಂಠಾಃ" ಎಂಬುದಾಗಿ ಉತ್ತರಾರ್ಧದಲ್ಲೂ ಪದವಿಭಾಗ.

## ರಂಗುರಂಗಿನ ಮಂದಿರಗಳ ದ್ವಾರಕೆ

ಭಿತ್ತಿಸ್ಥರತ್ನಫಲಿತಪ್ರತಿರೂಪಚಿತ್ರ-
ಚಿತ್ರಾಃ ಸುಶೋಭಿನವರತ್ನರುಚಾ ದಧಾನಾಃ ।
ರಂಗಾನುಷಂಗರಮಣೀಯಮಿವ ಪ್ರದೇಶಂ
ಯಸ್ಯಾಂ ವಿಭಾಂತಿ ಮುರಜಿಲ್ಲಲನಾನಿವಾಸಾಃ ॥ ೬೦ ॥

ಆ ದ್ವಾರಕೆಯಲ್ಲಿ ಗೋಡೆಗಳ ರತ್ನಗಳಲ್ಲಿ ಪ್ರತಿಫಲಿತವಾದ ಪ್ರತಿಬಿಂಬಗಳ ಚಿತ್ರಗಳಿಂದ ವಿಚಿತ್ರವಾಗಿದ್ದ ಮುರಾರಿಯಾದ ಶ್ರೀಕೃಷ್ಣನ ಪತ್ನಿಯರ ಅಂತಃಪುರಗಳು ಬಹಳವಾಗಿ ಶೋಭಿಸುವ ನವರತ್ನಗಳ ಕಾಂತಿಯಿಂದ ನೀಲಿ, ಹಳದಿ ಮೊದಲಾದ ರಂಗ-ವಲ್ಲಿಗಳಿಂದೆಂಬಂತೆ ಶೋಭಿಸುತ್ತಿದ್ದವು.

## ಉನ್ನತ ಸೌಧಗಳ ದ್ವಾರಕೆ

ಸೌಹಾರ್ದನೃತ್ಯದುರುಕೇಕಿನಿಕಾಯಶೋಭಿ-
[೧]ಸೌಧೇಷು ಯತ್ರ ರುಚಿರಾಚಲಶೃಂಗಬುದ್ಧ್ಯಾ ।
ಸಂಸಕ್ತಮಭ್ರನಿಚಯಂ ಪರಿತಃ ಪತಂತ್ಯಃ
ಸ್ವಸ್ಪರ್ಧಿಗಾತ್ರಮಜಯನ್ಮರುತಾ ಪತಾಕಾಃ ॥ ೬೧ ॥

ದ್ವಾರಕೆಯಲ್ಲಿ ಸೌಹಾರ್ದದಿಂದಾಗಿ ನರ್ತಿಸುವ ಶ್ರೇಷ್ಠವಾದ ನವಿಲುಗಳ ಸಮೂಹದಿಂದ ಕಂಗೊಳಿಸುವ ಉಪ್ಪರಿಗೆಗಳಲ್ಲಿ, ಅವು ರಮ್ಯವಾದ ಪರ್ವತದ ಶಿಖರಗಳೆಂಬ ಭಾವನೆಯಿಂದ ತಮ್ಮೊಂದಿಗೆ ಸ್ಪರ್ಧಿಸುವ ದೇಹದ ಮೋಡಗಳ ಗುಂಪನ್ನು ಸುತ್ತಲೂ ಹಾರುತ್ತಿದ್ದ ಪತಾಕೆಗಳು ತಮ್ಮ ಗಾಳಿಯಿಂದ ದೂರಕ್ಕೆ ಓಡಿಸಿದವು.

ವಿ : ಸೌಧದ ಮೇಲಿನ ಪತಾಕೆಗಳು ತಮ್ಮ ಹಾರುವಿಕೆಯಿಂದ ಉಂಟಾದ ಗಾಳಿಯಿಂದ [೨]ಸೌಧಗಳಿಗೆ ಅಂಟಿಕೊಂಡಂತಿದ್ದ ಮೇಘಗಳನ್ನು ಪರಾಭವಗೊಳಿಸಿದವು ಎಂದರ್ಥ.

---

೧. ಅನೇನ ಸೌಧಾನಾಮತ್ಯುನ್ನತತ್ವಂ ದ್ಯೋತ್ಯತೇ । - ವ್ಯಾ.

೨. ಸೌಧಸ್ಥಪತಾಕಾಃ ಸ್ವಚಲನಜನ್ಯೇನ ವಾಯುನಾ ಸೌಧಲಗ್ನಮೇಘಾನ್ ನಿರಾಕುರ್ವನ್ನಿತ್ಯರ್ಥಃ । - ವ್ಯಾ.

### ನವರತ್ನದ ಉಪ್ಪರಿಗೆಗಳ ದ್ವಾರಕೆ

ಯಸ್ಯಾಂ ಸುವರ್ಣವರವೇಷ್ಟನಭಾಜಿ ತೇಜಃ-
ಪ್ರದ್ಯೋತಿತಾಂಬರಹರಿನ್ಮಣಿವಿದ್ರುಮಾದ್ಯೈಃ।
ರತ್ನೈರ್ನವೈರ್ನವವಿಧೈಃ ಖಚಿತೇ ಸಹಂತೇ
ಪ್ರಾಸಾದಮೂರ್ಧ್ನಿ ನ ಬುಧಾಃ ಕಪಿಶೀರ್ಷನಾಮ ॥ ೬೨ ॥

ಆ ದ್ವಾರಕೆಯಲ್ಲಿ ವಿದ್ವಾಂಸರು ಚಿನ್ನದ ಹಾಸುಗಳಿಂದ ಕೂಡಿದ ತಮ್ಮ ತೇಜಸ್ಸಿನಿಂದ ಗಗನವನ್ನು ಬೆಳಗುವ ಇಂದ್ರನೀಲ, ಹವಳ ಮೊದಲಾದ ನೂತನ ನವರತ್ನಗಳಿಂದ ನಿರ್ಮಿತವಾದ ಉಪ್ಪರಿಗೆಗಳ ತುದಿಗಳಿಗೆ ಕಪಿಶೀರ್ಷ ಎಂಬ ಹೆಸರನ್ನು ಸಹಿಸದಾದರು.

ವಿ : ೧. ಪ್ರಾಸಾದಗಳ ತುದಿಗೆ ಕಪಿಶೀರ್ಷ ಎಂದು ಹೆಸರು : ಪ್ರಾಸಾದಾಗ್ರೇ ಕಪಿಶೀರ್ಷಮ್ - (ಹಲಾಯುಧ).

೨. ಇತರ ಪ್ರಾಕಾರಗಳ ತುದಿಗೆ ಕಪಿಶೀರ್ಷ ಎಂಬ ಹೆಸರು ಉಚಿತ ಎನ್ನಿಸಬಹುದಾದರೂ ದ್ವಾರಕೆಯ [1]ನವರತ್ನಖಚಿತವಾದ ಸುವರ್ಣದ ಪ್ರಾಸಾದದ ತುದಿಗೆ ಕಪಿಶೀರ್ಷ ಎಂಬ ಹೆಸರು ಸಮುಚಿತ ಎನ್ನಿಸದು ಎಂದು ಭಾವ.

೩. ದ್ವಾರಕೆಯ ನವರತ್ನಖಚಿತವಾದ ಸುವರ್ಣಪ್ರಾಸಾದ ತುದಿಗಳು ಕಪಿಶೀರ್ಷ ಎಂಬ ಹೆಸರನ್ನು ಮೀರಿದ ವಿಶೇಷತೆಯನ್ನು ಹೊಂದಿದ್ದವು ಎಂದು ತಾತ್ಪರ್ಯ.

### ಜಿತೇಂದ್ರಿಯಜನರಿಂದ ತುಂಬಿದ್ದ ದ್ವಾರಕೆ

ನಯತಿ ನ ಯತಿರನ್ಯದ್ಭೋಜ್ಯಮಾತ್ರಾನ್ನಮಾತ್ರಾತ್
[2]ಚರತಿ ಚ ರತಿಭರ್ತ್ರಾ ಪ್ರೇರಿತೋ ನೈವ ಭೋಗ್ಯೇ।
ಜನಿಮಜನಿಮತಜ್ಞಃ ಸಂತರತ್ಯೇವ ಚಾಂತೇ
ಯಮಭಯಮಭಯಾಪ್ತ್ಯಾ ಸ್ವಸ್ಥವೃತ್ತಿರ್ನ ವೇತ್ತಿ ॥ ೬೩ ॥

ಈ ದ್ವಾರಕೆಯಲ್ಲಿ ಯತಿಗಳು ಹೊಟ್ಟೆತುಂಬಲು ಅಗತ್ಯವಾದಷ್ಟು ಅನ್ನವನ್ನು ಹೊರತು ಬೇರೊಂದನ್ನು ಸ್ವೀಕರಿಸುತ್ತಿರಲಿಲ್ಲ; ರತಿಪತಿಯಾದ ಕಾಮನಿಂದ ಪ್ರೇರಿತರಾಗಿ ಕಾಮೋಪ-ಭೋಗದಲ್ಲಿ ತೊಡಗುತ್ತಿರಲಿಲ್ಲ, ಬ್ರಹ್ಮದೇವರ ಸಿದ್ಧಾಂತವನ್ನು ಬಲ್ಲವರಾಗಿ, ಮರುಹುಟ್ಟನ್ನು ಜಯಿಸಿದವರಾಗಿ, ಕೊನೆಯಲ್ಲಿ ಸಂಸಾರವನ್ನು ದಾಟುವ ಮೂಲಕ ಮೃತ್ಯುಭಯವನ್ನು ತೊರೆದ ಸ್ವಸ್ಥ ಜೀವನವನ್ನು ಸಾಗಿಸುತ್ತಿದ್ದರು.

---

೧. ನವರತ್ನಖಚಿತಸೌವರ್ಣಖಚಿತಪ್ರಾಸಾದಾಗ್ರಸ್ಯ ಕಪಿಶೀರ್ಷಮಿತಿ ನಾಮ ನೋಚಿತಮಿತಿ ನ ಸಹಂತ ಇತ್ಯರ್ಥಃ। - ವ್ಯಾ.

೨. ವನಿತಾದಿವಿಷಯೇ ನ ಚರತಿ ಕಾಮಾಸಕ್ತೋ ವನಿತಾದಿವಿಷಯಂ ನ ಭುಂಕ್ತ ಇತ್ಯರ್ಥಃ। - ವ್ಯಾ.

ವಿ : ೧. ಇಂತಹ ಮನಮೋಹಕವಾದ ದ್ವಾರಕೆಯಲ್ಲಿ ನೆಲೆಸಿದ್ದರೂ ಯತಿಗಳು ಮಾತ್ರ ತಮ್ಮ ಧರ್ಮವನ್ನು ತಪ್ಪದೆ ಪಾಲಿಸುತ್ತಿದ್ದರು. ಭೋಜನದಲ್ಲಿ ಮಿತಿ, ಭೋಗದಲ್ಲಿ ವಿರಕ್ತಿ , ಅದರಿಂದಾಗಿ ಮುಕ್ತಿ, ಹೀಗೆ ಮೃತ್ಯುಭಯದ ಪ್ರಸಕ್ತಿಯೇ ಇಲ್ಲದವರಾಗಿದ್ದರು ಎಂದರ್ಥ.

೨. ಅಜನಿಸಿದ್ಧಾಂತ ಎಂದರೆ ಸ್ವತಃ ಶ್ರೀಹರಿಯಿಂದ ಜನಿಸುವ ವಿಶೇಷತೆಯನ್ನು ಹೊಂದಿದ ಬ್ರಹ್ಮದೇವರ ಸಿದ್ಧಾಂತ; ಭಾವಿಬ್ರಹ್ಮರಾದ [೧] ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತ ಎಂದರ್ಥ.

೩. ಅ ಎಂದರೆ ವಿಷ್ಣು , ಜನಿ ಎಂದರೆ ಹುಟ್ಟು - ಮಹಾವಿಷ್ಣುವಿನಿಂದ ಮಾತ್ರ ಹುಟ್ಟು-ವುದರಿಂದ ಬ್ರಹ್ಮದೇವರಿಗೆ ಅಜನಿ ಎಂದರ್ಥ. ಇದು ಅಜ ಎಂಬ ಬ್ರಹ್ಮದೇವರ ಹೆಸರಿನ ವಿವರಣೆಯಾಗಿದೆ ; ಅಭಯ - ವಿಷ್ಣು.

### ಅಪೂರ್ವಸ್ತ್ರೀಜನರ ದ್ವಾರಕೆ

**ನ ವಹತಿ ಹೃದಿ ತೋಷಂ ವೈರಿವಧ್ವಾಃ ಕಪೋಲೇ**
**ನವಹತಿಮವಲೋಕ್ಯ ಶ್ವಾಸವಿಶ್ರಾಂತವಾಕ್ಯಾ ।**
**ಸಮುದಿತರವಿದೃಷ್ಟಿವ್ರೀಡವಿಭ್ರಾಂತನೇತ್ರಾ**
**ಸಮುದಿತರವರಾಂಗೀ ಭಾವಮಾವಿಷ್ಕರೋತಿ ॥ ೬೪ ॥**

ಅಲ್ಲಿ ಒಬ್ಬ ಕಾಮಿನಿಯು ಸವತಿಯ ಕೆನ್ನೆಯ ಮೇಲಿನ ನೂತನವಾದ ದಂತಕ್ಷತವನ್ನು ಕಂಡು ನಿಟ್ಟುಸಿರಿನಿಂದಾಗಿ ಮಾತಿಲ್ಲದವಳಾಗಿ ಮನಸ್ಸಿನಲ್ಲಿ ಸಂತಸವನ್ನು ಹೊಂದದವಳಾದಳು; ಸೂರ್ಯನು ಚೆನ್ನಾಗಿ ಉದಿಸಿದ ಮೇಲೆ ಜನರ ಕಣ್ಣಿಗೆ ಬೀಳುವ ನಾಚಿಕೆಯಿಂದಾಗಿ ಚಂಚಲನೇತ್ರೆಯಾದ ಮತ್ತೊಬ್ಬಳು ನಲಿವಿನಿಂದ ಕೂಡಿ ಅದನ್ನು ಮರೆಮಾಚುವ ವಿಲಾಸವನ್ನು ತೋರುತ್ತಿದ್ದಳು.

ವಿ. : ''ನ ವಹತಿ'' ಹಾಗೂ ''ನವಹತಿಂ'' ಎಂಬುದಾಗಿ ಪೂರ್ವಾರ್ಧದಲ್ಲೂ ; ''ಸಮುದಿತ..., ಸಮುತ್, ಇತರವರಾಂಗೀ...'' ಎಂಬುದಾಗಿ ಉತ್ತರಾರ್ಧದಲ್ಲೂ ಪದವಿಭಾಗ.

### ಸಾಲೋಕ್ಯಮುಕ್ತಿಗಿಂತ ಮಿಗಿಲಾದ ದ್ವಾರಕೆ

**ವಿಹಾಯ ಸಾಲೋಕ್ಯಮುದಾರಮಂತೇ**
**ವಿಹಾಯಸಾಽಽಲೋಕ್ಯ ಮುದಾ ರಮಂತೇ ।**
**ಮಹೀಶಕನ್ಯಾಸಕಲಾರ್ಥರೂಪ-**
**ಮಹೀಶಕನ್ಯಾಸಕಲಾರ್ಥರೂಪಮ್ ॥ ೬೫ ॥**

---

೧. ಅಜನಿರ್ಬ್ರಹ್ಮಾ ತಸ್ಯ ಮತಂ ಸಿದ್ಧಾಂತಂ ಮಧ್ವಸಿದ್ಧಾಂತಮಿತ್ಯರ್ಥಃ। -ವ್ಯಾ.

ಈ ದ್ವಾರಕೆಯಲ್ಲಿನ ಸಿದ್ಧರಾದ ಶೇಷ, ಶಿವ ಹಾಗೂ ಬ್ರಹ್ಮದೇವರ ವಿಷಯ-ಭೋಗತ್ಯಾಗರೂಪವಾದ ಜ್ಞಾನಕ್ಕೆ ವಿಷಯನಾದ, ಉತ್ಕೃಷ್ಟರಾದ ರಾಜಪುತ್ರಿಯರಿಗೆ ಸಕಲ-ಪುರುಷಾರ್ಥರೂಪನಾದ ಶ್ರೀಕೃಷ್ಣನ ರೂಲಗಳನ್ನು ಗಗನದಿಂದ ನೋಡಿ, ಕೊನೆಯಲ್ಲಿ ಲಭಿಸುವ ಶ್ರೇಷ್ಠವಾದ ಸಾಲೋಕ್ಯಮುಕ್ತಿಯನ್ನು ಸಹ ತೊರೆದು ನಲಿಯುವರು.

ವಿ : ೧. ಶ್ರೀಕೃಷ್ಣನ ದರ್ಶನವು ಬ್ರಹ್ಮಾದಿದೇವತೆಗಳಿಗೆ ಇತರ ಸಕಲ ವಿಷಯಗಳನ್ನು ಮರೆಸುವಂತಹ ಅಪೂರ್ವತೆಯನ್ನು ಹೊಂದಿತ್ತು; ಶ್ರೀಕೃಷ್ಣನನ್ನು ವಿವಾಹವಾದ ಸಕಲ ರಾಜ-ಕುಮಾರಿಯರಿಗೂ ಶ್ರೀಕೃಷ್ಣನು ಸಕಲ ಪುರುಷಾರ್ಥಗಳನ್ನು ಕರುಣಿಸುವ ಕರುಣಾಳುವಾಗಿದ್ದ ಎಂದು ಭಾವ.

೨. ಶ್ರೀಕೃಷ್ಣನ ದರ್ಶನವು ಸಾಲೋಕ್ಯಮುಕ್ತಿಗಿಂತಲೂ ಮಿಗಿಲಾದ ಆನಂದವನ್ನು ನೀಡುತ್ತಿದ್ದಿತು ಎಂದರ್ಥ.

೩. ಮುಕ್ತಿಯಲ್ಲಿ ಸಹ ಪ್ರತಿಯೊಬ್ಬರಿಗೂ ಅವರ ಒಂದೊಂದು ಬಿಂಬಮೂರ್ತಿ ಮಾತ್ರವೇ ಗೋಚರಿಸುವುದು. ಆದರೆ, ಈ ದ್ವಾರಕೆಯಲ್ಲಿ ಹದಿನಾರು ಸಾವಿರದ ನೂರೆಂಟು ರೂಪಗಳು ಸರ್ವದಾ ಗೋಚರಿಸುವವು ಎಂಬ ಕಾರಣದಿಂದ ಸಿದ್ಧರು ಹರ್ಷದಿಂದ ವೈಕುಂಠಾದಿ ಲೋಕದಲ್ಲಿನ ಸಾಲೋಕ್ಯವನ್ನು ಸಹ ಉಪೇಕ್ಷಿಸಿ ಗಗನದಲ್ಲಿ ನಿಂತು ದ್ವಾರವತಿಯ ಮಹೋತ್ಸವವನ್ನು ನೋಡುತ್ತಿದ್ದರು ಎಂಬು ಭಾವ[1].

೪. ವಿಹಾಯ, ಸಾಲೋಕ್ಯಮ್, ಉದಾರಮ್, ಅಂತೇ, ವಿಹಾಯಸಾ, ಆಲೋಕ್ಯ, ಮುದಾ, ರಮಂತೇ, ಮಹೀಶಕನ್ಯಾಸಕಲಾರ್ಥರೂಪಮ್, ಅಹಿ-ಈಶ-ಕ-ನ್ಯಾಸಕಲಾರ್ಥರೂಪಮ್ ಎಂಬುದಾಗಿ ಈ ಶ್ಲೋಕದ ಪದವಿಭಾಗ.

**ಜಿತೇಂದ್ರಿಯರನ್ನೂ ಮರುಳುಮಾಡುವ ಚೆಲುವೆಯರ ದ್ವಾರಕೆ**

[2]ಮದಭ್ರಮತ್ತಾರವಿಶಂಕಿನೇತ್ರ-
ಮದಭ್ರಮತ್ತಾ ರವಿಶಂಕಿನೇಽತ್ರ ।
ಪ್ರಾಯೋಜಯದ್ಯಾ ನಗಧೀರಚಿತ್ತಂ
ಪ್ರಾಯೋಽಜಯದ್ಯಾನಗಧೀರಚಿತ್ತಮ್ ॥ ೬೬ ॥

೧. ಮುಕ್ತಾವಪ್ಯೇಕೈಕಸ್ವಬಿಂಬದರ್ಶನಶಕ್ತಿವ್ಯಕ್ತಿಃ ಕದಾಚಿದಿಹ ತು ಸಾಷ್ಟೋತ್ತರಶತಷೋಡಶಸಹಸ್ರರೂಪಾಣಿ ಸರ್ವದಾ ದೃಶ್ಯಂತ ಇತಿ ಹರ್ಷೇಣ ಸಿದ್ಧಾಃ ವೈಕುಂಠಾದಿಲೋಕಸ್ಥಿತ್ಯಾಖ್ಯಸಾಲೋಕ್ಯಮಪ್ಯುಪೇಕ್ಷ್ಯ, ಗಗನೇ ಸ್ಥಿತ್ವಾ ದ್ವಾರವತೀ-ಮಹೋತ್ಸವಂ ಪಶ್ಯಂತೀತಿ ಭಾವಃ। -ವ್ಯಾ.

೨. ಮದಭ್ರಮತ್ತಾರವಿಶಂಕಿನೇತ್ರಮ್ ಅದಭ್ರಮತ್ತಾ ರವಿಶಂಕಿನೇ ಅತ್ರ ಪ್ರಾಯೋಜಯತ್ ಯಾ ನಗಧೀರಚಿತ್ತಂ ಪ್ರಾಯಃ ಅಜಯತ್ ಯಾನಗಧೀಃ ಅಚಿತ್ ತಮಿತಿ ಪದಚ್ಛೇದಃ। - ವ್ಯಾ.

ಆ ದ್ವಾರಕೆಯಲ್ಲಿ ಬಹಳವಾಗಿ ಮದಿಸಿ ಮೈಮರೆತ ಸ್ತ್ರೀಯು ಸೂರ್ಯನನ್ನು ಕಂಡು ಜನರು ನೋಡಿಯಾರು ಎಂದು ಸಂದೇಹಿಸುವಂತಹ ಪುರುಷನಿಗೆ ಮದದಿಂದ ಸುತ್ತುವ ಕಣ್ಣಾಲೆಗಳಿಂದ ಕೂಡಿದ ನೋಟವನ್ನು ಬೀರಿದಳು. ವಿಮಾನದ ಮೂಲಕ ಸಂಚರಿಸುವ ದೇವತೆಗಳು ಸಹ ನೋಡಿ ಮೆಚ್ಚುವಂತಹ ಅತಿ ಸುಂದರಿಯಾದ ಆ ನಾರಿಯು ಪರ್ವತದಂತೆ ಅಚಲಚಿತ್ತದ ಪುರುಷನನ್ನು ಸಹ ಗೆದ್ದುಬಿಟ್ಟಳು.

ವಿ : ೧. ತಮ್ಮ ಕುಡಿನೋಟ ಮಾತ್ರದಿಂದಲೇ ಎಂತಹ ಧೀರ ಪುರುಷನ ಮನಸ್ಸನ್ನು ಸಹ ಸೆಳೆಯಬಲ್ಲಂತಹ ಸ್ತ್ರೀಯರು[೧] ದ್ವಾರಕೆಯಲ್ಲಿದ್ದರು ಎಂದು ಭಾವ.

೨. ಪದಚ್ಛೇದ : ಮದಭ್ರಮತ್ತಾರವಿಶಂಕಿನೇತ್ರಮ್, ಅದಭ್ರಮತ್ತಾ, ರವಿಶಂಕಿನೇ, ಅತ್ರ ಪ್ರಾಯೋಜಯತ್, ಯಾ ನಗಧೀರಚಿತ್ತಂ ಪ್ರಾಯಃ ಅಜಯತ್ ಯಾನಗಧೀಃ ಅಜಿತ್ ತಮ್ । ಎಂಬುದಾಗಿ ಈ ಶ್ಲೋಕದ ಪದಚ್ಛೇದ

### ಅಪ್ರತಿಮ ಸುಂದರಿಯರಿಂದ ಕಂಗೊಳಿಸುವ ದ್ವಾರಕೆ

ಸರಸಾ ವಿಲಸದ್ಧಾರಸರಸಾರಶಿರೋಧರಾಃ ।
ನಯನೈರ್ವಶಯಂತ್ಯಸ್ಯಾಂ ನಯನೈಪುಣ್ಯಜಿಷ್ಣುಭಿಃ ॥ ೬೭ ॥

ಆ ದ್ವಾರಕೆಯಲ್ಲಿ ಹೊಳೆಹೊಳೆಯುವ ಮುತ್ತಿನ ಹಾರಗಳಿಂದ ಕಂಗೊಳಿಸುವ ಕತ್ತಿನ ಸರಸೆಯರಾದ ನಾರಿಯರು ತಮ್ಮ ನಯನೈಪುಣ್ಯಗಳಿಂದ ಗೆಲ್ಲುವ ನೋಟಗಳಿಂದ ಜನರನ್ನು ತಮ್ಮ ವಶಮಾಡಿಕೊಳ್ಳುತ್ತಿದ್ದರು.

### ಯೋಗಿಗಳಿಗೂ ಭೋಗಿಗಳಿಗೂ ಸಮಫಲನೀಡುತ್ತಿದ್ದ ದ್ವಾರಕೆ

ಸೇಯಂ ಪುರೀ ವಿತನುತೇ ವಿಷಯೋಪಭೋಕ್ತುಃ
ಪ್ರಾಯಃ ಫಲೇನ ಸಮತಾಂ ವಿಷಯೋಜ್ಝಿತಸ್ಯ ।
ಯತ್ಕೃಷ್ಣಸಂಗತವಧೂಷು ಲಲಾಮಲೇಪೈ-
ಸ್ತದ್ಧ್ಯಾನಧೂತದುರಿತೇಷು ಚ ತಸ್ಯ ಸಾಮ್ಯಮ್[೨] ॥ ೬೮ ॥

ಶ್ರೀಕೃಷ್ಣನೊಂದಿಗೆ ಒಡಗೂಡಿದ ಸ್ತ್ರೀಯರಲ್ಲಿ ರತಿಕಾಲದ ತಿಲಕದ ಲೇಪನಗಳಿಂದಲೂ, ಧ್ಯಾನದ ಮೂಲಕ ದುರಿತ ನೀಗಿಕೊಂಡ ಜನಗಳಲ್ಲಿ ತಿಲಕಾದಿಗಳ ಲಾಂಛನದ ಮೂಲಕವಾಗಿ ಈ ದ್ವಾರಕೆಯು ವಿಷಯೋಪಭೋಗವನ್ನು ಮಾಡುವಂತಹ ಕಾಮಿಜನಕ್ಕೂ

---

೧. ದ್ವಾರವತ್ಯಾಂ ಕಟಾಕ್ಷಾಕ್ಷೇಪಮಾತ್ರೇಣಾತಿಧೈರ್ಯೋಪೇತಪುರುಷವಶೀಕರಣಸಮರ್ಥಾ ನಾರೀ ತಿಷ್ಠತೀತಿ ಭಾವಃ –ವ್ಯಾ.
೨. ಅಂತಃಕರಣಾತ್ ವಿಷಯೋಪಭೋಕ್ತುಃ ವಿಷಯೋಜ್ಝಿತಸ್ಯ ಚ ಫಲೇನ ಸಮತಾಂ ವಿತನುತ ಇತಿ ಸಂಬಂಧಃ । – ವ್ಯಾ.

ವಿಷಯಗಳಲ್ಲಿ ವಿರಕ್ತರಾದ ಜ್ಞಾನಿಜನಕ್ಕೂ ಪ್ರಾಯಃ ಫಲದಿಂದ ಸಾಮ್ಯವನ್ನು ಉಂಟುಮಾಡುತ್ತಿದ್ದಿತು;

ವಿ.: ದ್ವಾರಕೆಯಲ್ಲಿನ ಭೋಗಿ ಜನರಿಗೂ ಹಾಗೂ ಯೋಗಿ ಜನರಿಗೂ ಸಹ ಅವರವರ ಸೇವೆಗೆ ಅನುಗುಣವಾದ ಉಚಿತ ಫಲವೇ ಲಭಿಸುತ್ತಿದ್ದುದರಿಂದ ಉಭಯರಿಗೂ ಸಾಮ್ಯವುಂಟಾಗುತ್ತಿದ್ದಿತು ಎಂದರ್ಥ.

### ಬಗೆಬಗೆಯ ನಾರಿಯರ ದ್ವಾರಕೆ

ದಂತಕ್ಷತಂ ವೀಕ್ಷ್ಯ ನವಂ ನವೋಷ್ಠೇ
ಚಿಂತಾ ದುರಂತಾ ಸಮಭೂತ್ ಸಪತ್ನ್ಯಾಃ।
ಅನ್ಯಾ ತದಾಚ್ಛಾದನಯುಕ್ತಿಶೂನ್ಯಾ
ತನ್ವೀ ಮುಹುರ್ದರ್ಶಯತೀಹ ದೈನ್ಯಮ್ ॥ ೬೯ ॥

ಯುವತಿಯ ಅಧರದಲ್ಲಿ ನೂತನವಾದ ದಂತಕ್ಷತವನ್ನು ಕಂಡು ಸವತಿಯಾದ ಒಬ್ಬಳಿಗೆ ಕೊನೆಯಿಲ್ಲದ ಚಿಂತೆ ಹುಟ್ಟಿತು; ಅದನ್ನು ಮುಚ್ಚಿಕೊಳ್ಳುವ ದಾರಿಯನ್ನು ಕಾಣದೆ, ಆ ಮತ್ತೊಬ್ಬ ನಾರಿಯು ಸಹ ಮತ್ತೆ ಮತ್ತೆ [೧] ದೀನತೆಯನ್ನು ವ್ಯಕ್ತಪಡಿಸುತ್ತಿದ್ದಳು.

ವಿ.: ಒಬ್ಬಳಿಗೆ ದಂತಕ್ಷತವು ತನಗೆ ದೊರೆಯಲಿಲ್ಲ ಎಂಬ ವ್ಯಥೆಯಾದರೆ, ಇನ್ನೊಬ್ಬಳಿಗೆ ತನ್ನ ಕೆನ್ನೆಯ ಮೇಲೆ ಮೂಡಿರುವ ದಂತಕ್ಷತವನ್ನು ಮುಚ್ಚಿಕೊಳ್ಳಲು ಸಾಧ್ಯವಾಗದ ಚಿಂತೆ. ಹೀಗೆ ಅವರಿಬ್ಬರಿಗೂ ಚಿಂತೆಯಲ್ಲಿ ಸಾಮ್ಯವಿದ್ದಿತು ಎಂಬುದು ಇಲ್ಲಿಯ ಸ್ವಾರಸ್ಯ.

### ಶ್ರೀಕೃಷ್ಣನಿಗೆ ನೆಲೆ ಎನ್ನಿಸಿದ ದ್ವಾರಕೆ

ವಾಚಾ ಯಃ ಕೀರ್ತಿತೋಽಲಂ ದಿವಿಜವರಸಭಾರಾಧಿತಾನಾಂ ಮುನೀನಾಂ
ಜನ್ಮಾಂತಾದ್ಯೇನಸಾಂ ಯೋ ರಚಯತಿ ವಿಹತಿಂ ಚಿತ್ಫಲಂ ಸುಪ್ರಗೀತಃ।
ರುಗ್ಭೇದೀ ಪ್ರೌಢಸದ್ವಾಗ್ಮಿಷು ವಿವಿಧಸುವಾಣೀವಿಲಾಸೈಃ ಪ್ರತರ್ಕ್ಯಃ
ಶಸ್ತೋಽಸ್ಯಾದೌ ತಥಾಽಂತೇ ವಿಮಲಯತಿತತೇರ್ಜಲ್ಪಶುದ್ಧೌ ಸಹಾಯಃ। ೭೦।

ಮಾತಿನಿಂದ ಕೊಂಡಾಡಲ್ಪಡುವ, ಬಗೆಬಗೆಯಲ್ಲಿ ಹಾಡಲ್ಪಡುವ ಇವನು ದೇವತೆಗಳ ಶ್ರೇಷ್ಠ ಸಭೆಗಳಲ್ಲಿ ಪೂಜೆಗೊಳ್ಳುವ ಮುನಿಗಳ ಹುಟ್ಟುಸಾವುಗಳಿಗೆ ಕಾರಣವಾಗುವ ಪಾಪಗಳ ಪರಿಹಾರವನ್ನು ಅಪರೋಕ್ಷಜ್ಞಾನದ ಫಲವಾಗಿ ನೀಡುವನು; ಸಂಸಾರವೆಂಬ ರೋಗವನ್ನು

---

೧. ಭರ್ತೃಸಂಗತಾಯಾಃ ತದಸಂಗತಾಯಾಶ್ಚ ಚಿಂತಾಸಾಮ್ಯಾತ್ ಫಲಸಾಮ್ಯಮಿತಿ ಭಾವಃ। ಪೂರ್ವಂ ಕಪೋಲೇ ದಂತಕ್ಷತಸ್ಯ ವಸ್ತ್ರಾದಿನಾ ಆಚ್ಛಾದನಸಂಭವಾತ್ ಭಾವಮಾವಿಷ್ಕರೋತೀತ್ಯುಕ್ತಮ್। ಇದಾನೀಮಧರೋಷ್ಠಕ್ಷತಸ್ಯಾಚ್ಛಾದನೋಪಾಯಾಭಾವಾತ್ ಉಭಯೋರಪಿ ದೈನ್ಯಮೇವೇತಿ ವಿಶೇಷಃ। -ವ್ಯಾ.

ಪರಿಹರಿಸುವವನು; ಪ್ರೌಢರಾದ ಉತ್ತಮ ವಾಗ್ಮಿಗಳ ಮಧ್ಯದಲ್ಲಿ ಬಗೆಬಗೆಯ ವಾಗ್ವಿಲಾಸಗಳಿಂದ ತರ್ಕಿಸಲ್ಪಡುವವನು; ಸ್ಥಿತಿಕಾಲದಲ್ಲಿ ಹಾಗೆಯೇ ಅಂತ್ಯಕಾಲದಲ್ಲಿ ನಿರ್ಮಲವಾದ ಯತಿವೃಂದಕ್ಕೆ ವಾಕ್ಶುದ್ಧಿಗೆ ನೆರವಾಗುವವನು; ಇಂತಹ ಶ್ರೇಷ್ಠನಾದ ಶ್ರೀಕೃಷ್ಣನು ದ್ವಾರಕೆಯಲ್ಲಿ ನೆಲೆಸಿರುವನು.

ವಿ : ೧. [೧]ದ್ವಾರಕೆಯನ್ನು ಇಷ್ಟೆಲ್ಲಾ ವರ್ಣಿಸಲು ಮುಖ್ಯಕಾರಣ ಅಲ್ಲಿ ನೆಲೆಸಿರುವುದು ಸರ್ವೋತ್ತಮನಾದ ಶ್ರೀಕೃಷ್ಣ ಎಂಬುದು ಇಲ್ಲಿಯ ಭಾವ.

೨. [೨]ಶ್ರೀಹರಿಯ ಸಂಬಂಧ ತಪ್ಪಿದಾಗ ಎಂತಹ ಹಿರಿಮೆಯು ಸಹ ಗೌಣವೆನ್ನಿಸುವುದು. ಅವನ ಸಂಪರ್ಕ ಬಂದಾಗ ಸಾಮಾನ್ಯವೂ ಅಸಾಮಾನ್ಯವೆನ್ನಿಸುವುದು. ಇನ್ನು ಅಪಾರ ಹಿರಿಮೆಯ ದ್ವಾರಕೆಯು ಶ್ರೀಕೃಷ್ಣನ ವಿಶೇಷ ಸನ್ನಿಧಾನದಿಂದಾಗಿ ಅತ್ಯಂತ ಅಸಾಮಾನ್ಯ ಎನ್ನಿಸುವಲ್ಲಿ ಅಚ್ಚರಿಯೇನಿಲ್ಲ[೩] ಎಂದರ್ಥ.

೩. [೪]ಈ ಪದ್ಯದಲ್ಲಿ ಪದ್ಮಬಂಧದ ಮೂಲಕ ಕವಿಯ ಹೆಸರು ಹಾಗೂ ಕಾವ್ಯದ ಹೆಸರುಗಳು ನಿರೂಪಿತವಾಗಿದೆ ಎಂಬುದು ವಿಶೇಷ.

೪. ಈ ಬಗ್ಗೆ ವಿವರವನ್ನು ಪರಿಶಿಷ್ಟ-೧ ರಲ್ಲಿ(ಪು. ೯೩೫) ಕೊಡಲಾಗಿದೆ.

೫. ತಾವು ಪದ್ಯಾರ್ಥವನ್ನು ತಿಳಿಸುವ ಉದ್ದೇಶವನ್ನಷ್ಟೇ ಹೊಂದಿರುವುದರಿಂದ ಇತರ ಕಾವ್ಯಗಳ ಟೀಕಾಕಾರರಂತೆ ಪದ್ಮಬಂಧದ ಹೆಚ್ಚಿನ ವಿವರಗಳನ್ನು ಕೊಡುವ ಕಾರ್ಯಕ್ಕೆ ಕೈಹಾಕಿಲ್ಲ ಎಂಬ ವಿಶೇಷಾಂಶವನ್ನು [೫]ವ್ಯಾಖ್ಯಾನಕಾರರು ಬರೆದಿರುವರು; ರುಕ್ - ರೋಗ.

---

೧. ಶಸ್ತಃ ಪ್ರಶಸ್ತಃ ಶ್ರೀಕೃಷ್ಣಃ ಅಸ್ಯಾಂ ದ್ವಾರವತ್ಯಾಮಸ್ತಿ। ಶ್ರೀಕೃಷ್ಣಸನ್ನಿಧಾನವಶಾದೇವೇಯಂ ಪುರೀ ವರ್ಣಿತೇತಿ ಭಾವಃ। -ವ್ಯಾ.

೨. "ವಂಗಕ್ಷೋಣಿಭುಜಾಪರಾಕ್ರಮಯುಜಾ ನಿರ್ವಾಸಿತಾ ವೈರಿಣಃ । ಸಂವಿಷ್ಟಾಃ ಪ್ರತಿಚತ್ವರಂ ಪ್ರತಿವನಂ ಯೇ ನೂತ್ನಕಾಪಾಲಿಕಾಃ। ಪೂರ್ಯಾರ್ದ್ರವ್ರಣಸಂಸ್ಪೃಶೋ ವ್ಯಪನಯಂತಃ ಸತ್ವರಂ ಮಕ್ಷಿಕಾ" ಇತಿವತ್। -ವ್ಯಾ.

೩. ಅತ್ರೈಕಪದತ್ವಾನ್ನ ಯತಿಭಂಗೋ ದೋಷಾಯ। -ವ್ಯಾ.

೪. ಪದ್ಮಬಂಧಮುಖೇನ ಕವಿನಾಮ ಕಾವ್ಯನಾಮ ಚ ಪ್ರದರ್ಶಯತ್ಯನೇನ ಪದ್ಯೇನ ಕಾವ್ಯಕಾರಃ। -ವ್ಯಾ.

೫. ತಥಾಹಿ। ಶಸ್ತಃ ಪ್ರಶಸ್ತಃ ಏತತ್ಕಾವ್ಯರೂಪೋ ಗ್ರಂಥಃ ಅಸ್ತಿ ಅಸ್ಮಿನ್ ಪದ್ಯೇಽಸ್ತಿ। ವಾಚಾ ಯಃ ಕೀರ್ತಿತೋಽಲಮಿತ್ಯಾದಿ ವಿಮಲಯತಿತತೇಃ ಜಲ್ಪಶುದ್ಧೌ ವಾಕ್‌ಶುದ್ಧೌ ಸಹಾಯ ಇತ್ಯಂತಾನಿ ವಿಶೇಷಣಾನಿ ಸರ್ವಾಣ್ಯಪಿ ಪೂರ್ವವದೇವ ಗ್ರಂಥಪಕ್ಷೇಽಪಿ ಯೋಜನೀಯಾನಿ। ಅಸ್ಮಿನ್ ಪದ್ಯೇ ಗ್ರಂಥಃ ಸ್ಪಷ್ಟಂ ನ ಪ್ರತೀಯತ ಇತಿ ತತ್ರಾಹ। ವಿಮಲೇತಿ। ವಿಮಲಾಃ ಯತಯಃ ವಿಚ್ಛೇದಾಃ। ತ್ರಿಮುನಿಯತಿಯುತೇತಿ ವಚನಾತ್। ಏಕವಿಂಶತಿವರ್ಣಾತ್ಮಕೇ ಏಕಸ್ಮಿನ್ ಪಾದೇ ಸಪ್ತಸಪ್ತವರ್ಣೇಷು ಏಕೈಕೋ ಯತಿರಿತಿ ತ್ರಯೋ ಯತಯಃ। ಏವಂ ಪಾದಚತುಷ್ಟಯೇ ದ್ವಾದಶಯತಯೋ ದ್ರಷ್ಟವ್ಯಾಃ। ತೇಷಾಂ ತತಿಃ ಸಮೂಹಃ ತಸ್ಯಾ ಆದೌ ಸಪ್ತಸಪ್ತಾಕ್ಷರಾಣಾಂ ಅಂತಸ್ತ್ವವಸಿತೇ ಮಧ್ಯ ಇತ್ಯಭಿಧಾನಾತ್। ಅಂತೇ ಶ್ಲೋಕಮಧ್ಯೇ ಅಂತೇ ಶ್ಲೋಕಾವಸಾನೇ ಚ ಸ ಗ್ರಂಥೋಽಸ್ತೀತಿ ಪೂರ್ವೇಣ ಸಂಬಂಧಃ। ತಥಾ ಚ ವಾಚಾ ಯಃ ಕೀರ್ತಿತೋಽಲಮಿತ್ಯೇಕೋ ಯತಿಃ ತಸ್ಯಾದಿವರ್ಣೋ ವಾಕಾರಃ ಏವಮುತ್ತರತ್ರಾಪಿ ಯತಿಷು ಏಕಾದಶವರ್ಣಾಃ ಶ್ಲೋಕಾರ್ಧಾವಸಾನೇ ಏಕೋ ವರ್ಣಃ ಶ್ಲೋಕಾವಸಾನೇ ಏಕೋ

## ಸರ್ಗೋಪಸಂಹಾರ

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸರ್ಗಃ ಸಪ್ತದಶೋ ಮುದಾಮಯಮಭೂತ್ ಸ್ವರ್ಗೀಶ್ವರಾಣಾಂ ಕುಲೇ ॥೭೧॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಗ್ಮಿಣೀಶವಿಜಯೇ ಸಪ್ತದಶಃ ಸರ್ಗಃ ॥

ರೋಮಗಳಿಗೆ ಪುಲಕನೀಡುವ, ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ, ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹದಿನೇಳನೆಯ ಸರ್ಗವು ಮುಕ್ತಾಯವಾಯಿತು.

*****

---

ವರ್ಣ ಇತಿ ವಾದಿರಾಜರಚಿತಃ ರುಗ್ಮಿಣೀಶವಿಜಯ ಇತಿ ಚತುರ್ದಶವರ್ಣಾ ದ್ರಷ್ಟವ್ಯಾಃ। ದ್ವಾದಶಯತೀನಾಂ ಪದ್ಮದ್ವಾದಶದಲಾಗ್ರೇಷು ಮಧ್ಯವರ್ಣಸ್ಯಾಂತಿಮವರ್ಣಸ್ಯ ಚ ಪ್ರಥಮಷಷ್ಠದ್ವಿತೀಯಷಷ್ಠದಲಭಾಗಯೋರ್ಲೇಖನೇ ಕೃತೇ ಸತಿ ದ್ವಾದಶದಲಪದ್ಮಬಂಧೇ ವಾದಿರಾಜರಚಿತಃ ರುಗ್ಮಿಣೀಶವಿಜಯ ಇತಿ ಕವಿಕಾವ್ಯನಾಮ ಕ್ರಮೇಣ ದ್ರಷ್ಟುಂ ಶಕ್ಯತೇ । ಕಾವ್ಯನಾಯಕವಿಷಯತಯಾ ಕಾವ್ಯವಿಷಯತಯಾ ಕಾವ್ಯಸ್ಥಿತಿಸ್ಥಲಸೂಚನಪರತಯಾ ಚೇತ್ಯೇತತ್ಪದ್ಯಸ್ಯೈವ ಪ್ರವೃತ್ತೇಃ ಪದ್ಯಾರ್ಥಕಥನೇನೈವ ಚಾರಿತಾರ್ಥ್ಯಂ ಟೀಕಾಕೃತೋ ಮಮ ನ ತು ಕಾವ್ಯಾಂತರಟೀಕಾಕಾರಸ್ಯೇವ ಬಂಧಸ್ಥಲಪ್ರದರ್ಶನಾಯ ಸ್ವಯಂ ಪ್ರಯತಿತವ್ಯಮ್। ವೃತ್ತಂ ತು ಸ್ರಗ್ಧರಾ। -ವ್ಯಾ.

# ೧೮. ಅಷ್ಟಾದಶಃ ಸರ್ಗಃ

(ಶ್ರೀಕೃಷ್ಣ-ರುಗ್ಮಿಣಿಯರ ಪಾದಕಮಲಗಳ ವರ್ಣನೆ - ೧; ಶ್ರೀಕೃಷ್ಣಪಾದಕಮಲಗಳ ವರ್ಣನೆ - ೧-೧೦; ಜಂಘೆಯ ವರ್ಣನೆ - ೧೧,೧೨; ತೊಡೆಗಳ ವರ್ಣನೆ - ೧೩-೧೫; ಕಟಿಯ ವರ್ಣನೆ - ೧೬; ನಿತಂಬದ ವರ್ಣನೆ - ೧೭; ರುಗ್ಮಿಣಿಯ ನೀವಿಯ ವರ್ಣನೆ - ೧೮; ಶ್ರೀಕೃಷ್ಣನ ಉದರದ ವರ್ಣನೆ - ೧೯; ತ್ರಿವಲಿಗಳ ವರ್ಣನೆ - ೨೦-೨೪; ಮಧ್ಯದ ವರ್ಣನೆ - ೨೫-೨೮; ವಕ್ಷಸ್ಥಳದ ವರ್ಣನೆ - ೨೯-೩೫; ಬಾಹುಗಳ ವರ್ಣನೆ - ೩೬,೩೭; ಸುದರ್ಶನದ ವರ್ಣನೆ - ೩೮; ನಂದಕದ ವರ್ಣನೆ - ೩೯; ಧನುಸ್ಸಿನ ವರ್ಣನೆ - ೪೦; ಹಸ್ತವರ್ಣನೆಯ ಉಪಸಂಹಾರ - ೪೧; ರುಗ್ಮಿಣಿಯ ಹಸ್ತಗಳ ವರ್ಣನೆ - ೪೨; ರುಗ್ಮಿಣಿಯ ಕಪೋಲದ ವರ್ಣನೆ - ೪೩,೪೪; ವನಮಾಲೆಯ ವರ್ಣನೆ - ೪೫; ರುಗ್ಮಿಣಿಯ ಮಾಂಗಲ್ಯದ ವರ್ಣನೆ - ೪೬,೪೭; ಶ್ರೀಕೃಷ್ಣನ ಮುಖದ ವರ್ಣನೆ - ೫೧; ಶ್ರೀಕೃಷ್ಣನ ಮೂಗಿನ ವರ್ಣನೆ - ೫೨; ಶ್ರೀಕೃಷ್ಣನ ಮಾತುಗಳ ವರ್ಣನೆ - ೫೩; ಕಿವಿಗಳ ವರ್ಣನೆ - ೫೪; ನೇತ್ರಗಳ ವರ್ಣನೆ - ೫೫; ಲಲಾಟದ ವರ್ಣನೆ - ೫೬; ಭ್ರೂವಿಲಾಸದ ವರ್ಣನೆ - ೫೭; ಅಧರಗಳ ವರ್ಣನೆ - ೫೮; ಶ್ರೀರುಗ್ಮಿಣಿಯ ಅಧರದ ವರ್ಣನೆ - ೫೯; ಶ್ರೀರುಗ್ಮಿಣಿಯ ಕಪೋಲಗಳ ವರ್ಣನೆ - ೬೦; ಸರ್ಗೋಪಸಂಹಾರ - ೬೧)

ಸಂಪತ್ಕರವಾದ ಶ್ರೀಕೃಷ್ಣರುಗ್ಮಿಣಿಯರ ಪಾದಕಮಲಗಳು

ರಕ್ತಾತ್ಮೀಯತಲತ್ವಿಷಾ ಪ್ರವಿಲಸತ್ಸ್ವೀಯೋರ್ಧ್ವಭಾಗಶ್ರಿಯಾ
ಸ್ವಚ್ಛೇಂದುಚ್ಛವಿವೃತ್ತಸನ್ನಖರುಚಾ ಸ್ವಾಸಕ್ತಭೂಷಾವಲೇಃ।
ಯಚ್ಛಂತ್ಯದ್ಭುತರತ್ನಬಂಧನಮಹಃ ಶ್ರೀರುಗ್ಮಿಣೀಕೃಷ್ಣಯೋ-
ರ್ದಂಪತ್ಯೋಃ [1]ಪದಪಂಕಜಾನಿ ಭಜತಾಂ ಸಂಪತ್ಕರಾಣಿ ಧ್ರುವಮ್ ॥ ೧ ॥

ಕೆಂಪಾದ ತಮ್ಮ ಅಂಗಾಲುಗಳ ಕಾಂತಿ, ಹೊಳೆಹೊಳೆಯುವ ಪಾದಗಳ ಮೇಲ್ಭಾಗದ ಶೋಭೆ, ನಿರ್ಮಲವಾದ ಚಂದ್ರನ ಬೆಳದಿಂಗಳಿನಂತಹ ದುಂಡಾದ ನಖಗಳ ಕಾಂತಿ, ಇವುಗಳಿಂದಾಗಿ ತಾವು ತೊಟ್ಟಿರುವ ಆಭರಣಗಳ ಸಾಲುಗಳಿಗೆ ರತ್ನಬಂಧನದ ಸೊಬಗನ್ನು ನೀಡುವ ದಂಪತಿಗಳಾದ ಶ್ರೀಕೃಷ್ಣರುಗ್ಮಿಣಿಯರ ಪಾದಕಮಲಗಳು ತಮ್ಮನ್ನು ಸೇವಿಸುವವರಿಗೆ ಸಂಪತ್ಕರವೆನ್ನುವುದು ನಿಶ್ಚಿತ.

ವಿ : ೧. ಈ ಸರ್ಗದಲ್ಲಿ ಮುಖ್ಯವಾಗಿ ಶ್ರೀಕೃಷ್ಣರುಗ್ಮಿಣಿಯರ ಆಪಾದಮೌಲಿಪರ್ಯಂತ ವರ್ಣನೆ ಬಂದಿದೆ.

---

೧. ಸರ್ಗೇಽಸ್ಮಿನ್ ರುಗ್ಮಿಣೀಶ್ರೀಕೃಷ್ಣಯೋಃ ಪಾದತಲಮಾರಭ್ಯ ಸರ್ವಾವಯವವರ್ಣನಂ ಕರೋತಿ। - ವ್ಯಾ.

೨. ಈ ಶ್ಲೋಕದಲ್ಲಿ ಶ್ರೀಕೃಷ್ಣರುಗ್ಮಿಣಿಯರ ಪಾದಕಮಲಗಳ ವರ್ಣನೆಯೊಂದಿಗೆ ಅವು ಸಂಪತ್ಕರ ಎನ್ನುವ ವಿಶೇಷ ಪ್ರಮೇಯ[1] ನಿರೂಪಿತವಾಗಿದೆ.

೩. ಕೆಂಪು ಕಾಂತಿಯು ಹವಳದ್ದು, ನೀಲ ಕಾಂತಿಯು ಇಂದ್ರನಿಲಮಣಿಯದ್ದು; ಚಂದ್ರನ ಬೆಳದಿಂಗಳು ಮುತ್ತಿನ ಕಾಂತಿಯದು. ಈ ಮೂರೂ ಸಹ ಮಂಗಳಕರವಾದ ರತ್ನಗಳು; ಶ್ರೀಕೃಷ್ಣರುಗ್ಮಿಣಿಯರ ಪಾದಗಳಲ್ಲಿ ಈ ರತ್ನಗಳ ಕಾಂತಿ ಸಹಜವಾಗಿಯೇ ಮೂಡಿದ್ದು – ಅವುಗಳು ಸದಾ ಸಂಪತ್ಕರ ಎನ್ನುವುದಕ್ಕೆ ಸೂಚಕ ಎಂದು ಭಾವ.

೪. ದೇವತೆಗಳನ್ನು ಆಪಾದಮೌಲಿಪರ್ಯಂತ ವರ್ಣಿಸುವುದು ಶಾಸ್ತ್ರದ ನಿಯಮ[2]. ಅದಕ್ಕನುಗುಣವಾಗಿ ಇಲ್ಲಿ ಸರ್ವೋತ್ಕೃಷ್ಟ ದಂಪತಿಗಳಾದ ಶ್ರೀರುಗ್ಮಿಣಿಕೃಷ್ಣರನ್ನು ಆಪಾದಮೌಳಿ ಪರ್ಯಂತ ವರ್ಣಿಸಲಾಗಿದೆ.

೫. ಶ್ರೀಕೃಷ್ಣರುಗ್ಮಿಣಿಯರ ಪಾದಕಮಲಗಳು ಅವುಗಳನ್ನು ಆಶ್ರಯಿಸಿದ ಅಚೇತನವಾದ ಭೂಷಣಗಳಿಗೂ ಸಹ ಸಂಪತ್ಕರವಾಗಿದೆ ಎಂದ ಮೇಲೆ, ಸೇವಿಸುವ ಚೇತನರಿಗೆ ಸಂಪತ್ಕರವಾಗುವವು ಎಂಬುದು ಕೈಮುತ್ಯ ಸಿದ್ಧ ಎಂಬ ಸೂಚನೆಯು ಇಲ್ಲಿದೆ.

### ಮನೋಹರವಾದ ಶ್ರೀಕೃಷ್ಣನ ಪಾದಕಮಲಗಳು

ಲಕ್ಷ್ಮೀಸ್ತನಸ್ಫುರಿತಕುಂಕುಮಪಂಕಸಂಗೇ[3]
ಭಕ್ತ್ಯಾ ಸ್ಮರನ್ಮುನಿಮನಃಸರಸೀನಿರೂಢೇ ।
ಉತ್ತುಂಗರಮ್ಯನಖಮೌಕ್ತಿಕಪುಂಜಶೋಭೇ
ರಕ್ತಾಂಗುಲೀಪರಿಲಸದ್ದಲಪಂಕ್ತಿಕಾಂತೇ ॥ ೨ ॥

ಮಹಾಲಕ್ಷ್ಮಿಯಾದ ರುಗ್ಮಿಣಿಯ ಸ್ತನಗಳಲ್ಲಿ ಶೋಭಿಸುವ ಕುಂಕುಮರೂಪದ ಪಂಕದ ಸಂಪರ್ಕವನ್ನು ಪಡೆದ, ಭಕ್ತಿಯಿಂದ ಸ್ಮರಿಸುವ ಮುನಿಗಳ ಮಾನಸಸರೋವರದಲ್ಲಿ ನೆಲೆಸಿರುವ, ಉಬ್ಬಿದ ರಮ್ಯವಾದ ನಖಗಳೆಂಬ ಮುತ್ತಿನ ಸಾಲುಗಳಿಂದ ಶೋಭಿಸುವ, ಕೆಂಪಾದ ಅಂಗುಲಿಗಳಲ್ಲಿ ಬಹಳವಾಗಿ ಶೋಭಿಸುವ ದಳಗಳ ಸಾಲಿನ, ಶ್ರೀಕೃಷ್ಣನ ಪಾದಗಳೆಂಬ ಸೊಗಸಾದ[4] ಕಮಲದಲ್ಲಿ ನನ್ನ ಮನಸ್ಸೆಂಬ ದುಂಬಿಯು ಸದಾ ನೆಲೆಸಲಿ.

---

೧. "ಜಾಯಾಯಾ ಜಂಭಾವೋ ದಂಭಾವೋ ವಾ ನಿಪಾತ್ಯತೇ" । ರುಗ್ಮಿಣೀಶ್ರೀಕೃಷ್ಣಯೋಃ ಪದಪಂಕಜಾನಿ ಭಜತಾಂ ಸೇವಮಾನಾನಾಂ ಸಂಪತ್ಕರಾಣಿ ಧ್ರುವಮ್ । ಆಶ್ರಿತಾನಾಮಚೇತನಾನಾಮಪಿ ಭೂಷಣಾನಾಂ ಸಂಪತ್ಕರಾಣಿ ಕಿಲ ಕಿಮು ಭಜತಾಂ ಚೇತನಾನಾಮಿತಿ ಭಾವಃ । ಉಪಮಾಮೂಲೋ ಹೇತುರಲಂಕಾರಃ । –ವ್ಯಾ.

೨. ಮನುಷ್ಯಾ ಮೌಲಿತೋ ವರ್ಣ್ಯಾ ದೇವಾಶ್ಚರಣತಸ್ತಥಾ । –ಪುರಾಣವಾಕ್ಯ

೩.. ಪಾದಸೇವಾಕರಣಸಮಯೇ ರುಗ್ಮಿಣ್ಯಾ ಕುಂಕುಮದಿಗ್ಧಸ್ವವಕ್ಷಸಿ ಶ್ರೀಕೃಷ್ಣಪಾದಸ್ಯ ಸನ್ನಿಧಾಪನಾದಿತಿ ಭಾವಃ । – ವ್ಯಾ.

೪. ಶ್ರೀಕೃಷ್ಣಾಂಘ್ರಿಚಾರುಕಮಲೇ । ಮಮ ಚಿತ್ತಭೃಂಗಃ ಸಂತತಂ ಸ್ಯಾದಿತ್ಯುತ್ತರೇಣಾನ್ವಯಃ । – ವ್ಯಾ.

ವಿ : ೧. ಕಮಲವು ಪಂಕದ ಸಂಪರ್ಕವನ್ನು ಹೊಂದಿರುವುದು; ಸರೋವರದಲ್ಲಿ ಬೆಳೆದಿರುವುದು, ಮುತ್ತಿನಂತೆ ನಿರ್ಮಲವಾಗಿ ಶೋಭಿಸುವುದು, ಕೆಂಪಾದ ದಳಗಳಿಂದ ಕೂಡಿರುವುದು; ಶ್ರೀಕೃಷ್ಣನ ಪಾದವೂ ಸಹ ಮಹಾಲಕ್ಷ್ಮಿಯ ಸ್ತನಗಳ ಕುಂಕುಮ ಸಂಪರ್ಕವನ್ನು ಹೊಂದಿದ ಪಂಕಜ, ಮುನಿಗಳ ಮಾನಸಸರೋವರದಲ್ಲಿ ನೆಟ್ಟಿರುವಂತಹುದು, ಕೆಂಪಾದ ಅಂಗುಲಿಗಳಿಂದ ಶೋಭಿಸುವುದು ಎಂದು ಅರ್ಥ; ಪಂಕ – ಕೆಸರು.

೨. ಶ್ಲೋಕ ೨–೫ರ ವರೆಗೆ ಏಕಾನ್ವಯ(ಕುಲಕ); ಇವುಗಳಲ್ಲಿ ಶ್ರೀಕೃಷ್ಣನ ಪಾದಗಳ ವರ್ಣನೆ ಬಂದಿದೆ.

### ಲಕ್ಷಣಭರಿತವಾದ ಶ್ರೀಕೃಷ್ಣನ ಪಾದಗಳು

ಪ್ರೀತ್ಯಾ ಕ್ವಣದ್ವದನಹಂಸಕದಂಬಜೃಂಭಿ-
ಮುಕ್ತಾಫಲೋಲ್ಲಸಿತಕಿಂಕಿಣಿಮುಖ್ಯಭೂಷೇ ।
ತದ್ವಕ್ತ್ರಜಾತಕವಿಗೀತಮನೋಜ್ಞರೇಖಾ-
ಕಲ್ಪಧ್ವಜಾಂಕುಶಯವಾಶನಿಲಕ್ಷ್ಮಲಕ್ಷ್ಯೇ[೧] ॥ ೩ ॥

ಪ್ರೀತಿಯಿಂದ ಧ್ವನಿಗೈಯುವ ಮುಖವೆಂಬ ಹಂಸಪಕ್ಷಿಗಳ ಸಾಲಿನಂತೆ ಶೋಭಿಸುವ, ಮುತ್ತುಗಳಿಂದ ಹೊಳೆಯುವ ಕಿಂಕಿಣಿಯೇ ಮೊದಲಾದ ಆಭರಣಗಳಿಂದ ಕೂಡಿದ, ಆ ಹಂಸಗಳ ಮುಖಗಳಿಂದ ಹೊರಹೊಮ್ಮುವ ಕವಿಗಳು ಕೊಂಡಾಡುವ ಮನೋಹರವಾದ ರೇಖೆಗಳಂತಿರುವ ಧ್ವಜ, ಅಂಕುಶ, ಯವ, ವಜ್ರ ಎಂಬ ಚಿಹ್ನೆಗಳಿಂದ ಕಂಗೊಳಿಸುವ, ಶ್ರೀಕೃಷ್ಣನ ಪಾದಕಮಲದಲ್ಲಿ ನನ್ನ ಮನಸ್ಸೆಂಬ ದುಂಬಿಯು ನೆಲೆಸಲಿ.

ವಿ. : ೧. ಶ್ರೀಕೃಷ್ಣನ ಪಾದಗಳಲ್ಲಿ ಧ್ವಜ, ಅಂಕುಶ ಮೊದಲಾದ ಚಿಹ್ನೆಗಳು ಇದ್ದು ಅವುಗಳಿಂದ ಅವನು ಸರ್ವೋತ್ತಮ ಎಂದು ಸೂಚಿತವಾಗುವುದು ಎಂಬುದು ಇಲ್ಲಿನ ಮುಖ್ಯ ಭಾವ.

೨. ಇದು ಶ್ರೀಮದ್ಭಾಗವತದ ಕಪಿಲಗೀತೆಯಲ್ಲಿ ಬಂದಿರುವ ಶ್ರೀಹರಿಯ ಪಾದವರ್ಣನೆಯ ವಿವರಣೆಯಂತಿದೆ.

### ಮಧುಭರಿತವಾದ ಶ್ರೀಕೃಷ್ಣನ ಪಾದಗಳು

ಉನ್ಮೀಲಿತೇ ವಿಮಲಬೋಧದಿನೇಶಭಾಸಾ
ಸಮ್ಮಾನನೀಯಗುಣಭಾಜಿ ಕಲಂಕಿದೂರೇ ।

---

೧. ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹ ಲಾಂಛನಾಢ್ಯಮ್ ।
– ಶ್ರೀಮದ್ಭಾಗವತ (೩/೨೮/೨೧)

ಸೌರಭ್ಯಲುಬ್ಧಪವನೇನ ಸದಾ ಪರೀತೇ
ಕಾರುಣ್ಯಮಾನ್ಯಮಕರಂದಮಹಾಪ್ರವಾಹೇ ॥ ೪ ॥

ನಿರ್ಮಲಜ್ಞಾನವೆಂಬ ಸೂರ್ಯನ ಕಾಂತಿಯಿಂದ ಅರಳಿದ, ಸಮ್ಮಾನಕ್ಕೆ ಅರ್ಹವಾದ ಗುಣಗಳಿಂದ ಕೂಡಿದ, ದೋಷಿಗಳಿಗೆ ಎಂದೂ ಲಭಿಸದ, ಪರಿಮಳಕ್ಕಾಗಿ ಕಾತರಿಸುವ ಪವನನಿಂದ ಸದಾ ಪರಿಸೇವಿತವಾದ, ಕಾರುಣ್ಯವೆಂಬ ಮಾನನೀಯವಾದ ಮಕರಂದದ ಮಹಾಪ್ರವಾಹವನ್ನು ಹೊಂದಿದ, ಶ್ರೀಕೃಷ್ಣನ ಮನೋಹರವಾದ ಪಾದಕಮಲದಲ್ಲಿ ನನ್ನ ಮನಸ್ಸೆಂಬ ದುಂಬಿಯು ನೆಲೆಸಲಿ.

ವಿ. : ೧. ಕಲಂಕಿದೂರ ಎಂಬುದರಿಂದ ಕಮಲವು ಸೂರ್ಯನ ಬೆಳಕಿಗೆ ಮಾತ್ರವೇ ಅರಳುವಂತಹುದು, ಚಂದ್ರನ ಬೆಳದಿಂಗಳಿಗೆ ಅಲ್ಲ ಎಂಬ ವಿಶೇಷಾಂಶ ಸೂಚಿತ; ಅದರಂತೆ, ಕಲಂಕಿಗಳಾದ ದುರ್ಜನರಿಗೆ ಶ್ರೀಹರಿಯ ಪಾದ ಅಲಭ್ಯ ಎಂಬ ಅರ್ಥವೂ ಸೂಚಿತ (ದೂರಾದ್ದೂರತರಮ್- ದ್ವಾದಶಸ್ತೋತ್ರ); ಕಲಂಕಿ - ಚಂದ್ರ, ದೋಷಿ (ಶ್ಲೇಷಾಲಂಕಾರ).

೨. 'ಸೌರಭ್ಯಲುಬ್ಧಪವನೇನ' ಎಂಬ ಮಾತು ಮೊದಲ ಸರ್ಗದಲ್ಲಿನ 'ಶ್ರೀನಾಥ ಕೀರ್ತ್ಯಂಭುಜಸೇವ್ಯಗಂಧಂ (೧/೨)' ಎಂಬ ಮಾತಿನ ಹಿನ್ನೆಲೆಯಲ್ಲಿ ವಿಶೇಷಾರ್ಥವನ್ನು ನೀಡುವುದು.

ನಿತ್ಯಾನುಷಕ್ತನಿಜಭೃತ್ಯವಿಲೋಚನಾಖ್ಯ-
ಮತ್ತಾನುರಕ್ತಮಧುಪೈಃ ಸತತಂ ಗೃಹೀತೇ ।
ಸತ್ಕರ್ಣಿಕೋಜ್ಜ್ವಲತಲತ್ವಿಷಿ ಸಂತತಂ ಸ್ಯಾತ್
[೧]ಕೃಷ್ಣಾಂಘ್ರಿಚಾರುಕಮಲೇ ಮಮ ಚಿತ್ತಭೃಂಗಃ[೨] ॥ ೫ ॥

---

೧. ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।
ಉತ್ತುಂಗರಕ್ತವಿಲಸನ್ನಖಚಕ್ರವಾಲಜ್ಯೋತ್ಸ್ನಾಭಿರಾಹತಮಹದ್ಧೃದಯಾಂಧಕಾರಮ್ ॥
ಯಚ್ಛೌಚನಿಃಸೃತಸರಿತ್ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ।
ಧ್ಯಾತುರ್ಮನಃಶಮಲಶೈಲನಿಸೃಷ್ಟವಜ್ರಂ ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಮ್ ॥ - ಶ್ರೀಮದ್ಭಾಗವತ
ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್ ।
ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ ॥ - ದ್ವಾದಶಸ್ತೋತ್ರ (೧/೨)
ತರುಣಾದಿತ್ಯಸವರ್ಣಕಚರಣಾಬ್ಜಾಮಲಕೀರ್ತೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೮)

೨. ಇದು 'ಅನುವ್ಯಾಖ್ಯಾನನಲಿನೇ ಚಂಚರೀಕತಿ ನೇ ಮನಃ' ಎಂಬ ಶ್ರೀಮನ್ನ್ಯಾಯಸುಧೆಯ ಮಾತನ್ನು ಹೋಲುವುದು.

ಸದಾ ಸೇವಿಸುವ ತನ್ನ ಭೃತ್ಯರ ಕಣ್ಣುಗಳೆಂಬ ಮದಿಸಿದ ಆಸಕ್ತ ದುಂಬಿಗಳಿಂದ ಸದಾ ಸೇವಿತವಾದ, ಉಜ್ವಲವಾದ ಕೇಸರಗಳೆಂಬ ಅಂಗಾಲುಗಳ ಕಾಂತಿಯ, ಶ್ರೀಕೃಷ್ಣನ ಮನೋಹರವಾದ ಪಾದಕಮಲದಲ್ಲಿ ನನ್ನ ಮನಸ್ಸೆಂಬ ಭೃಂಗವು ಸದಾ ನೆಲೆಸಲಿ.

ವಿ. : ೧. ಶ್ರೀಹರಿಯ ಪಾದಕಮಲದ ಮಕರಂದವನ್ನು ಅವನ ಭಕ್ತರು ತಮ್ಮ ಕಣ್ಣುಗಳೆಂಬ ದುಂಬಿಗಳಿಂದ ಸದಾ ಹೀರುವರು ಎಂದು ಭಾವ.

೨. ಇದು ಮಹಾಭಾರತತಾತ್ಪರ್ಯನಿರ್ಣಯದಲ್ಲಿನ ರಾಮಾಯಣ ಪ್ರಸಂಗದ ಈ ಕೆಳಗಿನ ಮಾತಿನ ವಿವರಣೆಯಂತಿದೆ (೪/೧೩.):

ಪಪುರ್ನಿತಾಂತಂ ಸರಸಾಕ್ಷಿಭೃಂಗೈರ್ವರಾನನಾಬ್ಜಂ ಪುರುಷೋತ್ತಮಸ್ಯ ।
ವಿದೇಹನಾರೀನರವರ್ಯಸಂಘಾ ಯಥಾ ಮಹಾಪೌರುಷಿಕಾಸ್ತದಂಘ್ರಿಮ್ ॥

### ಸರಿಸಾಟಿಯಿಲ್ಲದ ಶ್ರೀಕೃಷ್ಣನ ಪಾದಕಮಲ

**[1]ಶಂಖಾಂಭೋಜನಿಧೀ ಸಮೀಹಿತಧನಪ್ರತ್ಯರ್ಪಣೇನಾಂಕುಶಂ**
**ಹಸ್ತಿನ್ಯಾಂತರಕರ್ಷಣೇನ ದಿತಿಜಪ್ರಧ್ವಂಸನೇನಾಶನಿಮ್ ।**
**ನಿರ್ಜಿತ್ಯ ಧ್ವಜಮುತ್ಪತಾಕಮದಧಾದ್ಯಃ [2]ಕೃಷ್ಣಪಾದೋ ಮುದಾ**
**ಪ್ರಾಯಸ್ತೇऽಪಿ ಚ ತಸ್ಯ ಲಕ್ಷಣಗಣವ್ಯಾಜೇನ ಭೇಜುಸ್ತಲಮ್ ॥ ೬ ॥**

ಭಕ್ತರು ಬಯಸುವ ದ್ರವ್ಯಗಳನ್ನು ನೀಡುವ ಮೂಲಕ ಶಂಖ ಹಾಗೂ ಪದ್ಮ ಎಂಬ ನಿಧಿಗಳನ್ನೂ, ಹಸ್ತಿನೀಜಾತಿಯ ಸ್ತ್ರೀಯರ ಮನಸ್ಸನ್ನು ಆಕರ್ಷಿಸುವ ಮೂಲಕ ಅಂಕುಶವನ್ನೂ, ದೈತ್ಯರನ್ನು ಸದೆಬಡಿಯುವ ಮೂಲಕ ವಜ್ರವನ್ನೂ ಮೀರಿಸಿದ, ಉನ್ನತವಾದ ಪತಾಕೆ ರೇಖೆಯನ್ನು ಶ್ರೀಕೃಷ್ಣನ ಪಾದವು ಹೊಂದಿದೆ; ಆದರಂತೆ, ನಿಧಿ ಮೊದಲಾದವುಗಳು ಸಹ ರೇಖೆಯ ಲಕ್ಷಣಗಣರೂಪದಲ್ಲಿ ಆ ಶ್ರೀಕೃಷ್ಣನ ಪಾದತಲವನ್ನು ಸಂತೋಷದಿಂದ ಸೇವಿಸುತ್ತಿರುವವು.

ವಿ : ೧. ಶ್ರೀಕೃಷ್ಣನ ಪಾದತಲವು ಶಂಖ, ಪದ್ಮ, ಅಂಕುಶ, ವಜ್ರ ಎಂಬ ರೇಖೆಗಳಿಂದ ಕೂಡಿವೆ ಎಂದರ್ಥ: ಹಿಂದೆ ತಿಳಿಸಿದಂತೆ **ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜ-ಸರೋರುಹಲಾಂಛನಾಢ್ಯಂ** ಎಂಬ ಕಪಿಲಗೀತೆಯಲ್ಲಿನ ಶ್ರೀಕೃಷ್ಣನ ಪಾದದ ವರ್ಣನೆಯನ್ನು ಇದು ಆಧರಿಸಿದೆ.

೨. ಶ್ರೀಕೃಷ್ಣನ ಪಾದದಲ್ಲಿನ ಶಂಖ, ಪದ್ಮ ಚಿಹ್ನೆಗಳು ಭಕ್ತರ ಅಭೀಷ್ಟವನ್ನು ಶಂಖ ಹಾಗೂ ಪದ್ಮ ಎಂಬ ನಿಧಿಗಳಿಗಿಂತ ಮಿಗಿಲಾಗಿ ಪೂರೈಸುವವು; ಅಂಕುಶಕ್ಕೆ ಹೆಣ್ಣಾನೆಗಳು ವಶವಾಗುವಂತೆ

---

೧. 'ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ' ಇತ್ಯುಕ್ತೇಃ । - ವ್ಯಾ.
೨. ಸ್ಮರಣಮಾತ್ರೇಣ ತನ್ಮನಸಾಮಾಕರ್ಷಣಾಜ್ಜಯ ಇತಿ ಭಾವಃ । - ವ್ಯಾ.

ಸ್ತ್ರೀಯರು ಶ್ರೀಕೃಷ್ಣನ ಸೌಂದರ್ಯಕ್ಕೆ ಮನಸೋಲುವರು; ವಜ್ರಕ್ಕೆ ಅಸುರರು ಅಳಿಯುವಂತೆ ಶ್ರೀಕೃಷ್ಣನ ಪಾದಚಿಹ್ನೆಯಲ್ಲಿನ ವಜ್ರದಿಂದ ಅಸುರರು ನಾಶಹೊಂದುವರು ಎಂಬ ಭಾವ ಇಲ್ಲಿ ಸೂಚಿತ.

೩. ಶ್ರೀಕೃಷ್ಣನ ಪಾದವನ್ನು ಸೇವಿಸುವ ಬಯಕೆಯಿಂದ ನಿಧಿ ಮೊದಲಾದವುಗಳು ತಾವಾಗಿಯೇ ಶಂಖ ಮೊದಲಾದವುಗಳ ರೂಪದಲ್ಲಿ ಅವನ ಪಾದದಲ್ಲಿ ನೆಲೆಸಿವೆ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ರೋಚಕ.

### ವಿರುದ್ಧಧರ್ಮಗಳಿಗೂ ಆಕರವೆನ್ನಿಸಿದ ಶ್ರೀಕೃಷ್ಣರುಗ್ಮಿಣಿಯರ ಪಾದಗಳು

ಧರ್ಮಾ ವಿರುದ್ಧಗತಯೋಽಪಿ ಹರೌ ವಿರೋಧಂ
ಸಂತ್ಯಜ್ಯ ಸಂತಿ ಬಹುಶಸ್ತ್ವಿತಿ[2] ಬೋಧಯಂತೌ ।
ಪದ್ಮಸ್ಥಚಂದ್ರಕಲಿಕಾದ್ಯುತಿಮನ್ನಖಾಂಕೌ
ಶ್ರೀರುಗ್ಮಿಣೀಶಚರಣೌ ಶರಣಂ ಮಮಾಸ್ತಾಮ್ ॥ ೭ ॥

ವಿರುದ್ಧರೀತಿಯ ಧರ್ಮಗಳು ಸಹ ಶ್ರೀಹರಿಯಲ್ಲಿ ವಿರೋಧವನ್ನು ತೊರೆದು ನೆಲೆಸಿವೆ ಎಂಬುದನ್ನು ಸ್ಫುಟವಾಗಿ ತಿಳಿಸಿಕೊಡಲೆಂಬಂತೆ, ಕಮಲದಲ್ಲಿನ ಚಂದ್ರಕಲೆಯಂತಹ ಕಾಂತಿಯ ನಖಗಳಿಂದ ಕೂಡಿದ ಶ್ರೀರುಗ್ಮಿಣೀಕೃಷ್ಣರ ಚರಣಗಳು ನನಗೆ ಆಸರೆಯಾಗಿರಲಿ.

ವಿ : ೧. ಚಂದ್ರನ ಬೆಳದಿಂಗಳಿಗೆ ಕಮಲ ಬಾಡುವುದು ಎಂದರೆ ಚಂದ್ರ ಹಾಗೂ ಕಮಲಗಳು ಒಟ್ಟಾಗಿರಲು ಸಾಧ್ಯವಿಲ್ಲ. ಆದರೆ ಶ್ರೀಕೃಷ್ಣನ ಪಾದಗಳು ಕಮಲದಂತಿದ್ದು, ಅವುಗಳು ಚಂದ್ರನ ಕಾಂತಿಯಿಂದ ತುಂಬಿರುವುದರಿಂದ ಅಂತಹ ವಿರುದ್ಧ ಧರ್ಮಗಳೂ ಸಹ ಅವನಲ್ಲಿ ನೆಲೆಸಿರುವವು ಎಂಬ ಪ್ರಮೇಯ ತಿಳಿಯುವುದು ಎಂದರ್ಥ ; ಕಲಿಕಾ – ಕಲಾ.

೨. ಇದು ಸರ್ವಧರ್ಮೋಪಪತ್ತೇಶ್ಚ (೨/೧/೩೮) ಎಂಬ ಬ್ರಹ್ಮಸೂತ್ರದ ಭಾವ.

೩. ಇದು ತೀರ್ಥಪ್ರಬಂಧದಲ್ಲಿನ (೩/೬) ನರಸಿಂಹರೂಪದ ವರ್ಣನೆಯ ಶ್ಲೋಕದಂತಿದೆ :

ವಿರುದ್ಧಧರ್ಮಧರ್ಮಿತ್ವಂ ಸರ್ವಾಂತರ್ಯಾಮಿತಾಂ ತಥಾ ।
ನರಸಿಂಹೋಽದ್ಭುತಸ್ತಂಭಸಂಭೂತಃ ಸ್ಫೋರಯತ್ಯಸೌ ॥

---

೧. ಯಥಾ ಪರಾಜಿತಾಃ ಜೇತುಃ ಪ್ರಾಯಶಃ ಪಾದಸಮಾಶ್ರಯಣೇನ ಜೀವಂತಿ ತದ್ವದಿತಿ ಭಾವಃ । –ವ್ಯಾ.

೨. 'ಸರ್ವಧರ್ಮೋಪಪತ್ತೇಶ್ಚ' । – ಬ್ರಹ್ಮಸೂತ್ರ (೨/೧/೩೮)
ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।
ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥
– ಭಾಷ್ಯೋದ್ಧೃತ ಶ್ರುತಿ (೨/೧/೩೮)
ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ । – ಭಾಗ.(೮/೯/೬)

೪. ಇದರಿಂದ ನರಸಿಂಹ(ಕೃಷ್ಣ)ನ ಪಾದವೂ ಸಹ ನರಸಿಂಹನಂತೆ ವಿರುದ್ಧಧರ್ಮಧರ್ಮಿತ್ವವನ್ನು ಸೂಚಿಸುವುದು ಎಂದಾಗುವುದು; ಶ್ರೀಹರಿಗೂ ಅವನ ಅವಯವಗಳಿಗೂ ಭೇದವಿಲ್ಲ ಎಂಬುದಕ್ಕೂ ಇದು ಗಮಕ ಎಂದು ತಿಳಿಯಬೇಕು.

## ಚಂದ್ರನೂ ಅಸೂಯೆಪಡುವ ಶ್ರೀಕೃಷ್ಣನ ಪಾದಕಮಲ

**ಮೂರ್ಧ್ನ್ಯರ್ಪಿತಸ್ವಸದೃಶಂ ಹರಿಪಾದಪದ್ಮ-**
**ಮಾಶಂಕ್ಯ ನಾಂಬುಜಕುಲಂ ಸಹತೇ ಶಶಾಂಕಃ ।**
**ಸ್ವಸ್ಪರ್ಧಿ ತಚ್ಚ[೧] ಶಶಿನಾ ವಶಿನಾಽನುರಕ್ತಂ**
**ಮತ್ವಾ ಮನಸ್ಯಧಿತ ತತ್ರ ತದಪ್ಯಮೈತ್ರೀಮ್[೨] ॥ ೮ ॥**

ಚಂದ್ರನು, ತನ್ನ ಮುಂಭಾಗದಲ್ಲಿ ಸಮರ್ಪಿತವಾದ ತನ್ನನ್ನು ಹೋಲುವ ನಖರೂಪದ ಚಂದ್ರನುಳ್ಳ ಶ್ರೀಕೃಷ್ಣನ ಪಾದಕಮಲಗಳನ್ನು ತನ್ನೊಂದಿಗೆ ಸ್ಪರ್ಧಿಸುವ ಕಮಲವೃಂದ ಎಂದು ಸಂದೇಹಿಸಿ ಸಹಿಸದಾಗಿರುವನು; ಅದರಂತೆ ಆ ಕಮಲವೃಂದವು ಸಹ ಶ್ರೀಕೃಷ್ಣನ ಪಾದದ ನಖಗಳಲ್ಲಿ ತನ್ನ ಸ್ಪರ್ಧಿಯಾದ ಚಂದ್ರನು ಅನುರಕ್ತನಾಗಿರುವನೆಂದು ತಿಳಿದು, ಅದರ ಬಗ್ಗೆ ವೈರ ಭಾವವನ್ನು ತಳೆಯಿತು.

ವಿ. : ೧. ಶ್ರೀಕೃಷ್ಣನ ಪಾದಗಳು ಕಮಲದಂತಿದ್ದು ಅವುಗಳ ನಖಗಳು ಚಂದ್ರನಂತಿವೆ; ಈ ಕಾರಣದಿಂದ ಚಂದ್ರನಿಗೆ ಕಮಲಗಳ ಬಗ್ಗೆ ಅಸಹನೆ; ಅದರಂತೆ ಶ್ರೀಹರಿಯ [೩]ನಖಗಳನ್ನು ಚಂದ್ರನೆಂದು ತಿಳಿದು ಅವುಗಳನ್ನು ಹೊಂದಿವೆ ಎಂಬ ಕಾರಣದಿಂದ ಕಮಲಗಳಿಗೂ ಅಸಹನೆ; ಹೀಗೆ ಚಂದ್ರ ಹಾಗೂ ಕಮಲಗಳ ವೈರವು ಸ್ಫುಟಗೊಳ್ಳುವಂತಾಯಿತು ಎಂದರ್ಥ.

೨. ಚಂದ್ರೋದಯಕ್ಕೆ ಕಮಲಗಳು ಬಾಡುವುದು ಸಹಜ; ಅದನ್ನು ಇಲ್ಲಿ ಈ ರೀತಿಯಾಗಿ ಉತ್ಪ್ರೇಕ್ಷಿಸಿರುವುದು ಅಪೂರ್ವ.

೩. ಶ್ರೀಕೃಷ್ಣನ ಪಾದಗಳು ಕಮಲಗಳಂತಿದ್ದರೆ, ಆ ಪಾದಗಳ ನಖಗಳು ಚಂದ್ರನಂತಿವೆ ಎಂಬುದು ಇಲ್ಲಿಯ ಮುಖ್ಯ ಭಾವ.

---

೧. ಸ್ವಸ್ಪರ್ಧಿನ್ಯನುರಾಗಕರಣಾದೇವ ಪದ್ಮಸ್ಯ ಚಂದ್ರೇ ವೈರಮಿತಿ ಭಾವಃ । -ವ್ಯಾ.

೨. ಸಲಿಲಪ್ರೋತ್ಥಸರಾಗಕಮಣಿವರ್ಣೋಚ್ಚನಖಾದೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೯)

೩. ನಖಚಂದ್ರಾಣಾಂ ಸ್ವಸದೃಶತ್ವೇನ ಸ್ವವಿರೋಧಿ ಚಂದ್ರಾಂಗೀಕಾರಿಹರಿಪಾದಕಮಲಮಿತಿ ಜಾತಯಾ ಭ್ರಾಂತ್ಯಾ ಸಕಲಾನ್ಯಂಬುಜಾನಿ ನ ಕ್ಷಮತ ಇತ್ಯರ್ಥಃ । - ವ್ಯಾ.

### ಭಕ್ತರಿಗೆ ಸಕಲಸೌಭಾಗ್ಯ ನೀಡುವ ಶ್ರೀಕೃಷ್ಣನ ಪಾದಕಮಲ

**ಅಂಗೀಕೃತಃ ಕಮಲಯೋಚ್ಚಗತಿಃ ಸದೇತಿ**
**ಸಂದರ್ಶನಾಯ ಕಮಲಾಕರಸಂಗತಂ ಪ್ರಾಕ್ ।**
**ಪಶ್ಚಾತ್ ಕ್ರಮೇಣ ಕುಚಫಾಲಕಚಾಗ್ರಲಗ್ನಂ**
**ಶ್ರೀಕೃಷ್ಣಪಾದಕಮಲಂ ಕುರುತಾಚ್ಛ್ರಿಯಂ ನಃ ॥ ೯ ॥**

ಮಹಾಲಕ್ಷ್ಮಿಯಿಂದ ಅನುಗೃಹೀತನಾದ ಪುರುಷನು ಸದಾ ಉನ್ನತಿಯನ್ನು ಹೊಂದುವನು ಎಂಬುದನ್ನು ಸ್ಫುಟಪಡಿಸಲೆಂದು ಮೊದಲಿಗೆ ಮಹಾಲಕ್ಷ್ಮಿಯ ಕೈಯನ್ನು ಸೇರಿ, ಮುಂದೆ ಕ್ರಮವಾಗಿ ಸ್ತನ, ಹಣೆ, ಮುಡಿಗಳ ತುದಿಯನ್ನು ಸೇರಿದ ಶ್ರೀಕೃಷ್ಣನ ಪಾದಕಮಲವು ನಮಗೆ ಸಂಪತ್ತನ್ನು ನೀಡಲಿ.

ವಿ : ಮಹಾಲಕ್ಷ್ಮಿಯು ಶ್ರೀಕೃಷ್ಣನ ಪಾದವನ್ನು ತನ್ನ ಕೈಯಲ್ಲಿ ಹಿಡಿದು ಮುಂದೆ ಕ್ರಮವಾಗಿ, ವಕ್ಷಸ್ಥಳ, ಹಣೆ ಹಾಗೂ ಮುಡಿಗಳಲ್ಲಿರಿಸಿಕೊಂಡು ಆದರಿಸುವ ಶ್ರೀಕೃಷ್ಣನ ಪಾದಕಮಲವು ಮಹಾಲಕ್ಷ್ಮಿಯಿಂದ ಅನುಗೃಹೀತನಾಗುವ[೧] ಪುರುಷನು ಕ್ರಮವಾಗಿ ವಿಶೇಷವಾದ ಉನ್ನತಿಯನ್ನು ಕಾಣುವನು ಎಂಬ ತತ್ತ್ವಕ್ಕೆ ಸೂಚಕ ಎಂದು ಭಾವ.

### ಅಪಾರಲಾವಣ್ಯದ ರುಗ್ಮಿಣಿಯ ಪಾದಕಮಲಗಳು

**ಭಿನ್ನಪ್ರವಾಲಸದೃಶೀ ಪರಿತಃ ಸ್ಫುರಂತೀ**
**ರಮ್ಯಾಂಗುಲೀದಲಚಯದ್ಯುತಿರಿಂದಿರಾಯಾಃ ।**
**ಪಾದಾಂಬುಜೇ ಸಹಜರಾಜದಲಕ್ತಕಾಂಕ-**
**ಕಾಂತಿಂ ತನೋತಿ ನಖಮಂಡಲಮಂಡನಾರ್ಹಾಮ್ ॥ ೧೦ ॥**

ಒಡೆದ ಹವಳದ ತುಣುಕನ್ನು ಹೋಲುವ, ಶ್ರೀಕೃಷ್ಣನ ಪಾದಕಮಲಗಳ ಸುತ್ತಲೂ ಕಾಂತಿಯನ್ನು ಪಸರಿಸಿರುವ, ಮನೋಹರವಾದ ಮಹಾಲಕ್ಷ್ಮಿಯಾದ ರುಗ್ಮಿಣಿಯ ಅಂಗುಲೀದಳಗಳ ಕಾಂತಿಯು, ನಖಗಳ ಸಾಲುಗಳ ಶೋಭೆಗೆ ಉಚಿತವೆನ್ನಿಸುವ, ಸಹಜವಾಗಿ ಹೊಳೆಯುವ ಅರಗಿನ ಚಿಹ್ನೆಯ ಶೋಭೆಯನ್ನು ಉಂಟುಮಾಡುವುದು.

---

೧. ಸ್ನೇಹವಶಾತ್ ಕಮಲಯಾ ಸ್ವವಿಲಾಸಾಯ ಪೂರ್ವಂ ಹಸ್ತೇನ ಗೃಹೀತ್ವಾ ಪಶ್ಚಾತ್ ಸ್ವಕುಚಮಂಡಲೇ ನಿಕ್ಷಿಪ್ಯ ತತಃ ಸ್ವಫಾಲೇ ಧೃತ್ವಾ ತದನಂತರಂ ಸ್ವಶಿರಸ್ಯಾರೋಪ್ಯ ಹರಿಚರಣಸ್ಯೋಪಚಾರೇ ಕ್ರಿಯಮಾಣೇ ಸತಿ ಕಮಲಯಾ ಅಂಗೀಕೃತಪುರುಷಃ ಕ್ರಮೇಣೋಚ್ಚೋಚ್ಚಗತಿರ್ಭವತೀತಿ ತತ್ತ್ವಮಪಿ ಸ್ಪಷ್ಟಮಭೂದಿತಿ ಭಾವಃ। –ವ್ಯಾ.
ಶ್ರೀವಿಲಾಸಪಾತ್ರತ್ವಾತ್ ಶ್ರೀದಾನಸಾಮರ್ಥ್ಯಮಿತಿ ಭಾವಃ। – ವ್ಯಾ.

ವಿ : ೧. ರುಗ್ಮಿಣಿಯ [೧]ಪಾದಗಳ ಉಗುರುಗಳ ಸಾಲಿನ ಸುತ್ತ ಪಸರಿಸಿರುವ ಕೆಂಪಾದ ಬೆರಳುಗಳ ಕಾಂತಿಯಿಂದ ಶ್ರೀಕೃಷ್ಣನ ಪಾದದ ನಖಗಳು ಅಲಕ್ತಕದ ಅಲಂಕಾರ ಹೊಂದಿರುವಂತೆ ಕಂಗೊಳಿಸುವವು ಎಂದು ಭಾವ.

೨. ಅಲಕ್ತಕದ ಕಾಂತಿಯು ಶ್ರೀಕೃಷ್ಣನ ಪಾದಗಳಲ್ಲಿ ಸಹಜವಾಗಿಯೇ ಉಂಟಾಗಿದ್ದಿತು ಎಂಬುದು ಇಲ್ಲಿಯ ವಿಶೇಷಾಂಶ.

೩. ನಖಗಳು ಕೆಂಪಾಗಿರುವುದು ದ್ವಾತ್ರಿಂಶಲ್ಲಕ್ಷಣಗಳಲ್ಲೊಂದು[೨] ಎಂಬ ಲಕ್ಷಣಶಾಸ್ತ್ರದ ಮಾತಿನ ಹಿನ್ನೆಲೆಯಲ್ಲಿ ರುಗ್ಮಿಣಿಯು ಮಹಾಲಕ್ಷ್ಮಿ ಎಂಬುದನ್ನು ವಿಶಿಷ್ಟರೀತಿಯಲ್ಲಿ ತಿಳಿಸಿಕೊಡುವ ಕೌಶಲ ಇದಾಗಿದೆ.

೪. ಅಂಗಾಲುಗಳು ಹಾಗೂ ಕೈಕಾಲುಗಳ ನಖಗಳು ಕೆಂಪಾಗಿರಬೇಕು ಎಂಬುದು ಲಕ್ಷಣಶಾಸ್ತ್ರದ ನಿಯಮ; ಅದಕ್ಕಾಗಿ ವಿಶೇಷವಾಗಿ ಉಗುರುಗಳಿಗೆ ಅಲಕ್ತಗಳನ್ನು ಲೇಪಿಸುವುದು ಲೋಕದಲ್ಲಿ ಕಂಡಿದೆ; ಆದರೆ, ಸಕಲ ಸಲ್ಲಕ್ಷಣೋಪೇತರಾದ ಶ್ರೀರುಗ್ಮಿಣೀಕೃಷ್ಣರ ಪಾದ ಹಾಗೂ ನಖಗಳು ಸಹಜವಾಗಿಯೇ ಕೆಂಪಾದವು ಎಂಬುದು ಇಲ್ಲಿಯ ವಿಶೇಷ ನಿರೂಪಣೆ.

### ಶ್ರೀಕೃಷ್ಣರುಗ್ಮಿಣಿಯರ ಜಂಘೆಗಳ ಹಿರಿಮೆ

ಅಂತಃಸಮಾಪೂರಿತಬಹ್ವನಂತ-
ಸೌಂದರ್ಯಶೇಷೈರಿವ ಪೂರ್ಯಮಾಣ್ಯೈಃ ।
ಪುಷ್ಟೋರ್ಧ್ವಭಾಗೇ ಪರಿತಃ ಸುವೃತ್ತೇ
[೩]ಜಂಘೇ ತಯೋಃ ಸ್ತಾಂ ಸ್ಫುಟಮಂತರಂಗೇ ॥ ೧೧ ॥

ಒಳಗೆ ತುಂಬಿಕೊಂಡಂತಹ ಸಾಟಿಯಿರದ ಸೌಂದರ್ಯದ ಶೇಷವೆಂಬಂತಿರುವ ಅವರಿಬ್ಬರ ಪುಷ್ಟವಾದ ದುಂಡಾದ ಜಂಘೆಗಳು ನನ್ನ ಅಂತರಂಗದಲ್ಲಿ ಸ್ಫುಟವಾಗಿ ನೆಲೆಸಲಿ.

### ಪಾತಕ ಪರಿಹರಿಸುವ ಶ್ರೀಕೃಷ್ಣನ ಮೊಣಕಾಲು

ಪೂರ್ಣಸ್ಯ ತಜ್ಜಾನು ನಿಜಪ್ರಚಾರೈಃ
ಸಾನಂದನಂದಾವಸಥಾಂಗಣೇ ಪ್ರಾಕ್ ।

---

೧. ಶ್ರೀಕೃಷ್ಣಪಾದನಖಮಂಡಲಂ ಪರಿತಃ ಪ್ರಸರಂತೀ ರುಗ್ಮಿಣ್ಯಾಃ ರಕ್ತಾಂಗುಲೀದಲಕಾಂತಿಃ ಕೃಷ್ಣಪಾದನಖಮಂಡಲೇ ಸಹಜಾಲಕ್ತಕಾಲಂಕೃತಿರಿವ ಭಾತೀತ್ಯರ್ಥಃ । -ವ್ಯಾ.

೨. ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ ।
ತ್ರಿಪೃಥುಸ್ತ್ರಿಷು ಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವಿತಿ ॥ ಮ.ಭಾ.ತಾ.ನಿ.(ಭಾ.ಪ್ರ)(೧/೧೨೧)

೩. ಖಜತೂಣೀನಿಭಪಾವನವರಜಂಘಾಮಿತಶಕ್ತೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೦)

ಚೂರ್ಣೀಕೃತಾನೇಕರಜೋಽಸ್ಮದೀಯ-
ಮೇನೋ ಧುನೋತ್ವದ್ಯ ಹೃದಂಗಣಸ್ಥಮ್ ॥ ೧೨ ॥

ಆ ಮುನ್ನ ಆನಂದದಿಂದ ತುಂಬಿದ ನಂದನ ಗೃಹಾಂಗಣದಲ್ಲಿ ತನ್ನ ಓಡಾಟದಿಂದ ಬಗೆ ಬಗೆಯ ಧೂಳಿಯನ್ನು ಪುಡಿಗೈದ ಪರಿಪೂರ್ಣನಾದ ಶ್ರೀಕೃಷ್ಣನ ಮೊಳಕಾಲು ಈಗ ನನ್ನ ಹೃದಯಾಂಗಣದಲ್ಲಿ ನೆಲೆಸಿರುವ ಪಾಪವನ್ನು ಪರಿಹರಿಸಲಿ.

ವಿ : ೧. ನಂದಗೋಕುಲದಲ್ಲಿ ಅಂಬೆಗಾಲಿಟ್ಟು ನಡೆಯುವಾಗ ಶ್ರೀಕೃಷ್ಣನ ಮೊಣಕಾಲು ಧೂಳಿಯನ್ನು ಪುಡಿಯಾಗಿಸುತ್ತಿತ್ತು; ಅದೀಗ ನಮ್ಮ ಹೃದಯಾಂಗಣದಲ್ಲಿನ ಕೊಳೆಯನ್ನು ಕಳೆಯಲಿ ಎಂದು ಭಾವ.

೨. ಧೂಳಿನಿಂದ ಕೊಳಕಾಗುವುದು ಸಹಜ; ಆದರೆ ಕೃಷ್ಣನ ಮೊಳಕಾಲು ಧೂಳಿಯನ್ನೇ ಧೂಳಿಪಟ ಮಾಡುತ್ತ ತಾನು ಪಾತಕಗಳನ್ನು ಪರಿಹರಿಸುವಂತಹುದು ಎಂಬ ತತ್ತ್ವವನ್ನು ಸೂಚಿಸಿದೆ ಎಂದರ್ಥ; ಆವಸಥ – ಮಂದಿರ.

೩. ಶ್ರೀಕೃಷ್ಣನಂತೆ ಅವನ ದೇಹಗಳ ಪ್ರತಿಯೊಂದು ಅಂಗಗಳೂ ಸಹ ಪಾಪರಾಶಿಯನ್ನು ತೊಡೆಯುವ ಮಹಾಸಾಮರ್ಥ್ಯವನ್ನು ಹೊಂದಿವೆ ಎಂದು ಭಾವ.

೪. ಶ್ರೀಕೃಷ್ಣರುಗ್ಮಿಣಿಯರ ಊರುಗಳ ಕಾಂತಿಗೆ ಇಂದ್ರನೀಲ ಸುವರ್ಣಗಳನ್ನು, ಸುತ್ತಲು ದುಂಡಾಗಿರುವಿಕೆಗೆ ಶ್ರೇಷ್ಠ ಆನೆಯ ಸೊಂಡಿಲುಗಳನ್ನು, ಮೃದುತ್ವ ಎಂಬ ಧರ್ಮಕ್ಕೆ ಜಾಜಿನ ಮಾಲೆಯನ್ನು ಹೋಲಿಕೆಯನ್ನಾಗಿ ನೀಡಬಹುದಾದರು ಒಟ್ಟಾಗಿ ಅವುಗಳ ಲಾವಣ್ಯಕ್ಕೆ ಬೇರಾವ ಹೋಲಿಕೆಯನ್ನೂ ಕೊಡಲು ಸಾಧ್ಯವಿಲ್ಲ, ಅವುಗಳಿಗೆ ಅವೇ ಸಾಟಿ ಎಂಬುದು ಮುಖ್ಯ ತಾತ್ಪರ್ಯ.

೫. ಇದು ಮೊದಲಸರ್ಗದ ಈ ಕೆಳಗಿನ ಶ್ಲೋಕಕ್ಕೆ ವಿವರಣೆಯಂತಿದೆ :

ಹಯಾಸ್ಯನಾಸಾಪುಟಜಾತವಾತವಿಘಾತಧೂತಾಘಪಲಾಲಜಾತಃ।
ಮುನೀಶವಾಗೀಶಸುತಃ ಸುರಮ್ಯಾಂ ಹರೇಃ ಕಥಾಂ ಶಂಸತಿ ವಾದಿರಾಜಃ॥ (೧/೮)

ಅನುಪಮವಾದ ಶ್ರೀಕೃಷ್ಣರುಗ್ಮಿಣಿಯರ ತೊಡೆಗಳು

ಸತ್ಕಾಂತ್ಯಾ ಹರಿನೀಲಕಾಂಚನಸಮೌ ಹಸ್ತೀಂದ್ರಹಸ್ತೋಪಮೌ
ವಿಷ್ವಗ್ವರ್ತುಲತಾಗುಣೇನ ಮೃದುತಾಧರ್ಮೇಣ ಕುಂದಸ್ರಜಃ।
ಕಲ್ಪ್ಯೌ ಯದ್ಯಪಿ ರುಗ್ಮಿಣೀಮುರಭಿದೋರೂರೂ ಕಥಂಚಿತ್ ತುಲಾ
ಲಾವಣ್ಯೇನ ಪರಸ್ಪರಂ ಪರಮಿತಿ ದ್ವಂದ್ವಾತ್ಮತಾಂ ಬಿಭ್ರತೌ ॥ ೧೩ ॥

ತಮ್ಮ ಉತ್ತಮ ಕಾಂತಿಯಿಂದ ಇಂದ್ರನೀಲ ಹಾಗೂ ಸುವರ್ಣಗಳ ಕಾಂತಿಗೆ ಸಮಾನವಾದ, ಗಜೇಂದ್ರನ ಸೊಂಡಿಲನ್ನು ಹೋಲುವ, ಸುತ್ತಲೂ ದುಂಡಾಗಿರುವಿಕೆ ಹಾಗೂ ಕೋಮಲತೆ ಎಂಬ ಗುಣದಿಂದ ಜಾಜಿಯ ಮಾಲೆಯಂತಿರುವ, ಶ್ರೀರುಗ್ಮಿಣೀಕೃಷ್ಣರ ತೊಡೆಗಳು ಕೇವಲ ತಮ್ಮ ಲಾವಣ್ಯದಿಂದ ಪರಸ್ಪರ ಹೇಗೋ ಹೋಲುವಂತಿದ್ದು ಎರಡೆರಡಾಗಿ ಕಾಣುವವು.

ವಿ : ೧. [೧]ಅನುಪಮ ಲಾವಣ್ಯದ ಶ್ರೀಕೃಷ್ಣರುಗ್ಮಿಣಿಯರ ತೊಡೆಗಳು ಪರಸ್ಪರ ತಮಗೆ ತಾವೇ ಸಾಟಿ ಎಂಬಂತೆ ಕಂಗೊಳಿಸುತ್ತಿದ್ದವು ಎಂದರ್ಥ.

೨. ಶ್ರೀಕೃಷ್ಣ ಸರ್ವೋತ್ತಮ ಪುರುಷ, ರುಗ್ಮಿಣಿ ಸರ್ವೋತ್ತಮ ಸ್ತ್ರೀ ಅದರಿಂದಾಗಿ ಅವರ ಅಂಗಾಂಗಗಳಿಗೆ ಸಾಟಿ ಎನ್ನಿಸುವ ವಸ್ತುಗಳು ವಿಶ್ವದಲ್ಲಿಯೇ ಇಲ್ಲ ಎಂಬುದು ಇಲ್ಲಿಯ ಮುಖ್ಯಭಾವ ; ಹಸ್ತ - ಸೊಂಡಿಲು ; ಕುಂದ - ಜಾಜಿ.

೩. ಈ ವರ್ಣನೆಯು ಸುಮಧ್ವವಿಜಯದಲ್ಲಿನ ಶ್ರೀವೇದವ್ಯಾಸರ ವರ್ಣನೆಯ ಶ್ಲೋಕವನ್ನು ಜ್ಞಾಪಿಸುವಂತಿರುವುದು ವಿಶೇಷ :

ಸುಕುಮಾರತಲಾಂಗುಲೀಮತೋಃ ಪದಯೋರಸ್ಯ ನಿಗೂಢಗುಲ್ಫಯೋಃ।
ಉಪಮಾನಮಹೋ ನ ಲಭ್ಯತೇ ಕವಿವರ್ಯೈರಿತರೇತರಂ ವಿನಾ ॥ (೭/೨೮)

## ರಾಕ್ಷಸರನ್ನು ಅಳಿಸುವ ಶ್ರೀಕೃಷ್ಣನ ತೊಡೆಗಳು

ಊರೂ[೨] ಸಮಾರೋಪ್ಯ ಮರುದ್ಗಣೇಶ-
ಮಾರಂಜಯಂತೌ ದಿಶತಾಂ ಸುಖಂ ಮೇ।
ವೈರಿವ್ರಜಂ ಸಂಹರತಾಂ ಮುರಾರೇಃ
ಸ್ವಾರಾತಿರಕ್ಷಃಕ್ಷಯಮೂಲಭೂಮೀ ॥ ೧೪ ॥

ಮರುದ್ಗಣಗಳಿಗೆ ಒಡೆಯನಾದ ಮುಖ್ಯಪ್ರಾಣನನ್ನು ಕೂಡಿಸಿಕೊಂಡು ರಂಜಿಸುತ್ತಿರುವ ಶ್ರೀಕೃಷ್ಣನ ಎರಡು ತೊಡೆಗಳು ನನಗೆ ನಲಿವನ್ನೀಯಲಿ; ಅವು ಶತ್ರುಗಳ ಸಮುದಾಯವನ್ನು ವಧೆಗಯ್ಯುವ ಶ್ರೀಕೃಷ್ಣನಿಗೆ ತನ್ನ ಶತ್ರುಗಳಾದ ರಾಕ್ಷಸರ ನಾಶಕ್ಕೆ ಕಾರಣವೆನ್ನಿಸುವ ಮೂಲಸ್ಥಾನದಂತಿರುವವು.

ವಿ : ೧. ಶ್ರೀಕೃಷ್ಣನು ನಾರಾಯಣ. ಅವನ ತೊಡೆಯನ್ನಾಶ್ರಯಿಸಿ ಮುಖ್ಯಪ್ರಾಣ ನೆಲೆಸಿರು-ವನು ಎಂದು ಭಾವ: ಅಚ್ಯುತಾಂಕೇ ಸ್ವಾಸೀನಂ-(ತಂತ್ರಸಾರಸಂಗ್ರಹ.೪/೬೯); ಜೀವೋ-

---

೧. ಅನ್ಯಸಾದೃಶ್ಯಾಭಾವಾತ್ ದಕ್ಷಿಣಸ್ಯೋರೋಃ ವಾಮಃ ಸದೃಶಃ ವಾಮಸ್ಯ ದಕ್ಷಿಣ ಇತಿ ಸಾದೃಶ್ಯಾರ್ಥಂ ದ್ವಾ ದ್ವಾ ಬಭೂವತುರಿತ್ಯರ್ಥಃ। -ವ್ಯಾ.

೨. ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೧)

ಚೂರ್ಣೀಕೃತಾನೇಕರಜೋಽಸ್ಮದೀಯ-
ಮೇನೋ ಧುನೋತ್ವದ್ಯ ಹೃದಂಗಣಸ್ಥಮ್ ॥ ೧೨ ॥

ಆ ಮುನ್ನ ಆನಂದದಿಂದ ತುಂಬಿದ ನಂದನ ಗೃಹಾಂಗಣದಲ್ಲಿ ತನ್ನ ಓಡಾಟದಿಂದ ಬಗೆ ಬಗೆಯ ಧೂಳಿಯನ್ನು ಪುಡಿಗೈದ ಪರಿಪೂರ್ಣನಾದ ಶ್ರೀಕೃಷ್ಣನ ಮೊಳಕಾಲು ಈಗ ನನ್ನ ಹೃದಯಾಂಗಣದಲ್ಲಿ ನೆಲೆಸಿರುವ ಪಾಪವನ್ನು ಪರಿಹರಿಸಲಿ.

ವಿ : ೧. ನಂದಗೋಕುಲದಲ್ಲಿ ಅಂಬೆಗಾಲಿಟ್ಟು ನಡೆಯುವಾಗ ಶ್ರೀಕೃಷ್ಣನ ಮೊಣಕಾಲು ಧೂಳಿಯನ್ನು ಪುಡಿಯಾಗಿಸುತ್ತಿತ್ತು; ಅದೀಗ ನಮ್ಮ ಹೃದಯಾಂಗಣದಲ್ಲಿನ ಕೊಳೆಯನ್ನು ಕಳೆಯಲಿ ಎಂದು ಭಾವ.

೨. ಧೂಳಿನಿಂದ ಕೊಳಕಾಗುವುದು ಸಹಜ; ಆದರೆ ಕೃಷ್ಣನ ಮೊಳಕಾಲು ಧೂಳಿಯನ್ನೇ ಧೂಳಿಪಟ ಮಾಡುತ್ತ ತಾನು ಪಾತಕಗಳನ್ನು ಪರಿಹರಿಸುವಂತಹುದು ಎಂಬ ತತ್ತ್ವವನ್ನು ಸೂಚಿಸಿದೆ ಎಂದರ್ಥ; ಆವಸಥ - ಮಂದಿರ.

೩. ಶ್ರೀಕೃಷ್ಣನಂತೆ ಅವನ ದೇಹಗಳ ಪ್ರತಿಯೊಂದು ಅಂಗಗಳೂ ಸಹ ಪಾಪರಾಶಿಯನ್ನು ತೊಡೆಯುವ ಮಹಾಸಾಮರ್ಥ್ಯವನ್ನು ಹೊಂದಿವೆ ಎಂದು ಭಾವ.

೪. ಶ್ರೀಕೃಷ್ಣರುಗ್ಮಿಣಿಯರ ಊರುಗಳ ಕಾಂತಿಗೆ ಇಂದ್ರನೀಲ ಸುವರ್ಣಗಳನ್ನು, ಸುತ್ತಲು ದುಂಡಾಗಿರುವಿಕೆಗೆ ಶ್ರೇಷ್ಠ ಆನೆಯ ಸೊಂಡಿಲುಗಳನ್ನು, ಮೃದುತ್ವ ಎಂಬ ಧರ್ಮಕ್ಕೆ ಜಾಜಿನ ಮಾಲೆಯನ್ನು ಹೋಲಿಕೆಯನ್ನಾಗಿ ನೀಡಬಹುದಾದರು ಒಟ್ಟಾಗಿ ಅವುಗಳ ಲಾವಣ್ಯಕ್ಕೆ ಬೇರಾವ ಹೋಲಿಕೆಯನ್ನೂ ಕೊಡಲು ಸಾಧ್ಯವಿಲ್ಲ, ಅವುಗಳಿಗೆ ಅವೇ ಸಾಟಿ ಎಂಬುದು ಮುಖ್ಯ ತಾತ್ಪರ್ಯ.

೫. ಇದು ಮೊದಲಸರ್ಗದ ಈ ಕೆಳಗಿನ ಶ್ಲೋಕಕ್ಕೆ ವಿವರಣೆಯಂತಿದೆ :

ಹಯಾಸ್ಯನಾಸಾಪುಟಜಾತವಾತವಿಘಾತಧೂತಾಘಪಲಾಲಜಾತಃ ।
ಮುನೀಶವಾಗೀಶಸುತಃ ಸುರಮ್ಯಾಂ ಹರೇಃ ಕಥಾಂ ಶಂಸತಿ ವಾದಿರಾಜಃ ॥ (೧/೮)

## ಅನುಪಮವಾದ ಶ್ರೀಕೃಷ್ಣರುಗ್ಮಿಣಿಯರ ತೊಡೆಗಳು

ಸತ್ಕಾಂತ್ಯಾ ಹರಿನೀಲಕಾಂಚನಸಮೌ ಹಸ್ತೀಂದ್ರಹಸ್ತೋಪಮೌ
ವಿಷ್ವಗ್ವರ್ತುಲತಾಗುಣೇನ ಮೃದುತಾಧರ್ಮೇಣ ಕುಂದಸ್ರಜಃ ।
ಕಲ್ಪ್ಯೌ ಯದ್ಯಪಿ ರುಗ್ಮಿಣೀಮುರಭಿದೋರೂರೂ ಕಥಂಚಿತ್ ತುಲಾ
ಲಾವಣ್ಯೇನ ಪರಸ್ಪರಂ ಪರಮಿತಿ ದ್ವಂದ್ವಾತ್ಮತಾಂ ಬಿಭ್ರತೌ ॥ ೧೩ ॥

ತಮ್ಮ ಉತ್ತಮ ಕಾಂತಿಯಿಂದ ಇಂದ್ರನೀಲ ಹಾಗೂ ಸುವರ್ಣಗಳ ಕಾಂತಿಗೆ ಸಮಾನವಾದ, ಗಜೇಂದ್ರನ ಸೊಂಡಿಲನ್ನು ಹೋಲುವ, ಸುತ್ತಲೂ ದುಂಡಾಗಿರುವಿಕೆ ಹಾಗೂ ಕೋಮಲತೆ ಎಂಬ ಗುಣದಿಂದ ಜಾಜಿಯ ಮಾಲೆಯಂತಿರುವ, ಶ್ರೀರುಗ್ಮಿಣೀಕೃಷ್ಣರ ತೊಡೆಗಳು ಕೇವಲ ತಮ್ಮ ಲಾವಣ್ಯದಿಂದ ಪರಸ್ಪರ ಹೇಗೋ ಹೋಲುವಂತಿದ್ದು ಎರಡೆರಡಾಗಿ ಕಾಣುವವು.

ವಿ : ೧. [೧]ಅನುಪಮ ಲಾವಣ್ಯದ ಶ್ರೀಕೃಷ್ಣರುಗ್ಮಿಣಿಯರ ತೊಡೆಗಳು ಪರಸ್ಪರ ತಮಗೆ ತಾವೇ ಸಾಟಿ ಎಂಬಂತೆ ಕಂಗೊಳಿಸುತ್ತಿದ್ದವು ಎಂದರ್ಥ.

೨. ಶ್ರೀಕೃಷ್ಣ ಸರ್ವೋತ್ತಮ ಪುರುಷ, ರುಗ್ಮಿಣಿ ಸರ್ವೋತ್ತಮ ಸ್ತ್ರೀ ಆದರಿಂದಾಗಿ ಅವರ ಅಂಗಾಂಗಗಳಿಗೆ ಸಾಟಿ ಎನ್ನಿಸುವ ವಸ್ತುಗಳು ವಿಶ್ವದಲ್ಲಿಯೇ ಇಲ್ಲ ಎಂಬುದು ಇಲ್ಲಿಯ ಮುಖ್ಯಭಾವ ; ಹಸ್ತ – ಸೊಂಡಿಲು ; ಕುಂದ – ಜಾಜಿ.

೩. ಈ ವರ್ಣನೆಯು ಸುಮಧ್ವವಿಜಯದಲ್ಲಿನ ಶ್ರೀವೇದವ್ಯಾಸರ ವರ್ಣನೆಯ ಶ್ಲೋಕವನ್ನು ಜ್ಞಾಪಿಸುವಂತಿರುವುದು ವಿಶೇಷ :

ಸುಕುಮಾರತಲಾಂಗುಲೀಮತೋಃ ಪದಯೋರಸ್ಯ ನಿಗೂಢಗುಲ್ಫಯೋಃ।
ಉಪಮಾನಮಹೋ ನ ಲಭ್ಯತೇ ಕವಿವರ್ಯೈರಿತರೇತರಂ ವಿನಾ ॥ (೭/೨೮)

### ರಾಕ್ಷಸರನ್ನು ಅಳಿಸುವ ಶ್ರೀಕೃಷ್ಣನ ತೊಡೆಗಳು

ಊರೂ[೨] ಸಮಾರೋಪ್ಯ ಮರುದ್ಗಣೇಶ-
ಮಾರಂಜಯಂತೌ ದಿಶತಾಂ ಸುಖಂ ಮೇ।
ವೈರಿವ್ರಜಂ ಸಂಹರತಾಂ ಮುರಾರೇಃ
ಸ್ವಾರಾತಿರಕ್ಷಃಕ್ಷಯಮೂಲಭೂಮೀ ॥ ೧೪ ॥

ಮರುದ್ಗಣಗಳಿಗೆ ಒಡೆಯನಾದ ಮುಖ್ಯಪ್ರಾಣನನ್ನು ಕೂಡಿಸಿಕೊಂಡು ರಂಜಿಸುತ್ತಿರುವ ಶ್ರೀಕೃಷ್ಣನ ಎರಡು ತೊಡೆಗಳು ನನಗೆ ನಲಿವನ್ನೀಯಲಿ; ಅವು ಶತ್ರುಗಳ ಸಮುದಾಯವನ್ನು ವಧೆಗಯ್ಯುವ ಶ್ರೀಕೃಷ್ಣನಿಗೆ ತನ್ನ ಶತ್ರುಗಳಾದ ರಾಕ್ಷಸರ ನಾಶಕ್ಕೆ ಕಾರಣವೆನ್ನಿಸುವ ಮೂಲಸ್ಥಾನದಂತಿರುವವು.

ವಿ : ೧. ಶ್ರೀಕೃಷ್ಣನು ನಾರಾಯಣ. ಅವನ ತೊಡೆಯನ್ನಾಶ್ರಯಿಸಿ ಮುಖ್ಯಪ್ರಾಣ ನೆಲೆಸಿರುವನು ಎಂದು ಭಾವ: **ಅಚ್ಯುತಾಂಕೇ ಸ್ವಾಸೀನಂ**–(ತಂತ್ರಸಾರಸಂಗ್ರಹ.೪/೬೯); ಜೀವೋ-

---

೧. ಅನ್ಯಸಾದೃಶ್ಯಾಭಾವಾತ್ ದಕ್ಷಿಣಸ್ಯೋರೋಃ ವಾಮಃ ಸದೃಶಃ ವಾಮಸ್ಯ ದಕ್ಷಿಣ ಇತಿ ಸಾದೃಶ್ಯಾರ್ಥಂ ದ್ವಾ ದ್ವಾ ಬಭೂವತುರಿತ್ಯರ್ಥಃ। –ವ್ಯಾ.

೨. ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ – ದ್ವಾದಶಸ್ತೋತ್ರ (೧೦/೧೧)

ತ್ತಮನಾದ ಮುಖ್ಯಪ್ರಾಣನನ್ನು ತನ್ನ ಪುತ್ರನನ್ನಾಗಿ ಹೊಂದಿರುವ ಶ್ರೀಕೃಷ್ಣ ಸರ್ವೋತ್ತಮ ಎಂದರ್ಥ; ಅರಾತಿ - ಶತ್ರು.

೨. ಶ್ರೀಕೃಷ್ಣನ ತೊಡೆಯೂ ಸಹ ಶತ್ರುಗಳ ಸಮುದಾಯವನ್ನು ನಾಶಗೊಳಿಸುವಷ್ಟು ಅದ್ಭುತ ಎಂದೂ ಅರ್ಥ. ಶ್ರೀಹರಿಯು ಮಧುಕೈಟಭರನ್ನು ತನ್ನ ತೊಡೆಗಳ ಮೇಲೆ ಮಲಗಿಸಿಕೊಂಡೇ ಸಂಹರಿಸಿದ್ದು, ಹಿರಣ್ಯಕಶಿಪುವನ್ನು ಸಂಹರಿಸಿದ್ದು ಸಹ ಅದರಂತೆಯೇ. ಇದರಿಂದ ಅವನ ತೊಡೆಯೂ ಸಹ ಶತ್ರುನಾಶಕ್ಕೆ ಮೂಲಸ್ಥಾನವಾಗಿದೆ ಎಂದು ಭಾವ.

## ವೈಶ್ಯಜಾತಿಗೆ ಕಾರಣವೆನ್ನಿಸುವ ಶ್ರೀಕೃಷ್ಣನ ತೊಡೆಗಳು

**ಅಪರಿಮಿತಸುಖೌಘಂ ಸ್ವಾಶ್ರಿತಾಯಾ ರಮಾಯಾಃ**
**ಶತಗುಣಿತವಿಕಾಸಂ ವಾಸಸಃ ಸ್ವಾಶ್ರಿತಸ್ಯ ।**
**ಅಪಗತನಿಜಲಾಭಃ ಸಂತತಂ ಯೋ ವಿಧತ್ತೇ**
**ಸ ಕಿಲ ಮುರಭಿದೂರುಃ[೧] ಕಾರಣಂ ವೈಶ್ಯಜಾತೇಃ[೨] ॥ ೧೫ ॥**

ತನ್ನನ್ನು ಆಶ್ರಯಿಸಿರುವ ಮಹಾಲಕ್ಷ್ಮಿಗೆ ಅಪರಿಮಿತವಾದ ಆನಂದದ ರಾಶಿಯನ್ನು ನೀಡುವ, ತಾನು ಧರಿಸಿರುವ ಪೀತಾಂಬರಕ್ಕೆ ಅನಂತ ಮಡಿಯಾದ ಶೋಭೆಯನ್ನುಂಟುಮಾಡುವ, ತನ್ನ ಮಟ್ಟಿಗೆ ಯಾವುದೇ ಲಾಭವನ್ನು ಎಂದೂ ಕಾಣದ ಮುರಾರಿಯಾದ ಶ್ರೀಕೃಷ್ಣನ ತೊಡೆಯು ವೈಶ್ಯಜಾತಿಯ ಹುಟ್ಟಿಗೆ ಕಾರಣವೆನ್ನಿಸಿರುವುದು; ಆಶ್ಚರ್ಯ !

ವಿ : ೧. ಮಹಾಲಕ್ಷ್ಮಿಯು ಸಹ ಶ್ರೀಹರಿಯನ್ನು ಸದಾ ಆಶ್ರಯಿಸಿದವಳು. ಅವನ ಉಡುಗೆ-ಯಾಗಿರುವುದೇ ಅವನು ಧರಿಸಿದ ಪೀತಾಂಬರಕ್ಕೆ ಶೋಭೆ; ಅವನಿಗೆ ಮಾತ್ರ ಇದರಿಂದ ಯಾವುದೇ ಲಾಭವೂ ಇರದು ಎಂದು ಭಾವ. ಶ್ರೀಹರಿಯು ಸ್ವಯಂ ಪರಿಪೂರ್ಣವಾದವನು ಎಂದು ಅರ್ಥ.

೨. ಶ್ರೀಹರಿಯ ತೊಡೆಯಿಂದ ವೈಶ್ಯಜಾತಿಯು ಹುಟ್ಟಿದ ವಿವರ ಪುರುಷಸೂಕ್ತದಲ್ಲಿದೆ: **ಊರೂ ತದಸ್ಯ ಯದ್ವೈಶ್ಯಃ।**

೩. ಲಾಭಕ್ಕಾಗಿ ವ್ಯಾಪಾರಮಾಡುವುದು ವೈಶ್ಯನ ಲಕ್ಷಣ. ಆದರೆ ವೈಶ್ಯಜಾತಿಯ ಹುಟ್ಟಿಗೆ ಕಾರಣನಾದ ಶ್ರೀಹರಿಯ ತೊಡೆಯು ಮಾತ್ರ ಯಾವ ಲಾಭವನ್ನೂ ಆಶಿಸದ ಸ್ವಯಂ

---

೧. ಊರೂ ಸುಪರ್ಣಭುಜಯೋರಧಿಶೋಭಮಾನಾವೋಜೋನಿಧೀ ಸ್ವತಸಿಕಾಕುಸುಮಾವಭಾಸೌ।
ವ್ಯಾಲಂಬಿಪೀತವರವಾಸಸಿ ವರ್ತಮಾನಕಾಂಚೀಕಲಾಪಪರಿರಂಭಿ ನಿತಂಬಮಂಬ॥ - ಶ್ರೀಮದ್ಭಾಗವತ.

೨. ಊರೂ ತದಸ್ಯ ಯದ್ವೈಶ್ಯ ಇತಿ ಶ್ರುತೇಃ । ಕಿಲೇತಿ ವಾರ್ತಾಯಾಮ್ । ವೈಶ್ಯಾ ಹಿ ಸ್ವದತ್ತದ್ರವ್ಯಾದಪಿ ದ್ವಿಗುಣದ್ರವ್ಯಲಾಭಾಯ ಅನ್ಯಸ್ಮೈ ಕ್ರಯವಿಕ್ರಯರೂಪೇಣ ವಸ್ತ್ರಾದಿಕಂ ವೃದ್ಧಿರೂಪೇಣ ದಿಶಂತಿ । ಅಯಂ ತು ಲಾಭಹೀನಃ ಸನ್ ಅನ್ಯಸ್ಮೈ ಬಹು ದಿಶತೀತಿ ವೈಶ್ಯಜಾತೇಃ ಕಾರಣಂ ಕಥಂ ಸ್ಯಾದಿತಿ ಭಾವಃ। ಆಕ್ಷೇಪೋಽಲಂಕಾರಃ।
-ವ್ಯಾ.

ಪರಿಪೂರ್ಣವಸ್ತು ಎಂದು ಅರ್ಥ; ಇದರಿಂದ ಶ್ರೀಕೃಷ್ಣನ ತೊಡೆಯು ವೈಶ್ಯಜಾತಿಗೆ ಉಪಾದಾನ-ಕಾರಣವಾಗಿರದೇ ಕೇವಲ ನಿಮಿತ್ತಕಾರಣವಾಗಿದೆ ಎಂಬ ವಿಶೇಷಾಂಶವೂ ಸೂಚಿತ.

೪. ಲಾಭತೊರೆದ ಶ್ರೀಹರಿಯ ತೊಡೆಯಿಂದ ಲಾಭಮಾಡಿಕೊಳ್ಳುವ ವೃತ್ತಿಯ ವೈಶ್ಯಜಾತಿ ಜನಿಸಿದ್ದು ಎಂತಹ ವಿಡಂಬನೆ ಎಂಬ ಧ್ವನಿಯೂ ಇದರಲ್ಲಿದೆ.

ನೀಲಪರ್ವತಶಿಖರದಂತಹ ಶ್ರೀಕೃಷ್ಣರುಗ್ಮಿಣಿಯರ ಕಟಿಗಳು

ಸುವರ್ಣವರ್ಣಾಂಬರಭಾಸಿ[೧] ಭೈಷ್ಮೀ-
ಮುಕುಂದಯೋಃ ಪಾತು ಕಟಿದ್ವಯಂ ನಃ ।
ಸುಸಾಂದ್ರಸಂಧ್ಯಾಘನಸಂಗಿ ಶೃಂಗ-
ಮಿವೋಲ್ಲಸತ್ಕಾಂಚನನೀಲಗಿರ್ಯೋಃ ॥ ೧೬ ॥

ನಿಬಿಡವಾದ ಸಂಜೆಯ ಮೇಘದ ಸಂಪರ್ಕ ಪಡೆದ ಬಂಗಾರದ ಮೇರುಪರ್ವತ ಹಾಗೂ ನೀಲಪರ್ವತಗಳ ಶಿಖರಗಳಂತೆ ಕಂಗೊಳಿಸುವ ಪೀತಾಂಬರದಿಂದ ಶೋಭಿಸುವ ಶ್ರೀಕೃಷ್ಣ ರುಗ್ಮಿಣಿಯರ ಕಟಿದ್ವಯವು ನಮ್ಮನ್ನು ರಕ್ಷಿಸಲಿ.

ವಿ : ೧. ಶ್ರೀಕೃಷ್ಣನ ಕಟಿಯು ನೀಲಪರ್ವತದಂತೆ ಶೋಭಿಸಿದರೆ, ರುಗ್ಮಿಣಿಯ ಕಟಿಯು ಮೇರುಪರ್ವತದಂತೆ ಶೋಭಿಸುವುದು ಎಂದೂ ಅವರು ಧರಿಸಿದ ಪೀತಾಂಬರಗಳು ದಟ್ಟವಾದ ಸಂಧ್ಯಾಕಾಲದ ಮೇಘಗಳನ್ನು ಹೋಲುವವು ಎಂದೂ ಅರ್ಥ; ಘನ –ಮೇಘ.

೨. ಮೇಘಶ್ಯಾಮನಾದ ಶ್ರೀಕೃಷ್ಣನನ್ನು ನೀಲಪರ್ವತಕ್ಕೂ ಸ್ವರ್ಣಾಂಗಿಯಾದ ರುಗ್ಮಿಣಿಯನ್ನು ಚಿನ್ನದ ಮೇರುಪರ್ವತಕ್ಕೂ ಹೋಲಿಸುವ ಇಲ್ಲಿಯ ಔಚಿತ್ಯವು ಅತ್ಯಂತ ರೋಚಕ.

ಶ್ರೀಕೃಷ್ಣನ ಅಪೂರ್ವವಾದ ನಿತಂಬ

ಪೀತಾಂಬರಾಲಂಕೃತಮಗ್ರ್ಯರತ್ನ-
ಸ್ಯೂತಸ್ಫುರತ್ಕಿಂಕಿಣಿಮೇಖಲಾದ್ಯೈಃ ।
ಜಾತಪ್ರಭಂ ಪೀನಲಸನ್ನಿತಂಬಂ
ಚೇತಃ ಸದಾ ಚಿಂತಯ ಚಿನ್ಮಯಸ್ಯ ॥ ೧೭ ॥

ಪೀತಾಂಬರದಿಂದ ಅಲಂಕೃತವಾದ, ಶ್ರೇಷ್ಠ ರತ್ನಗಳಿಂದ ಖಚಿತವಾದ, ಹೊಳೆಯುವ ಕಿಂಕಿಣಿ, ಮೇಖಲ ಮೊದಲಾದವುಗಳಿಂದ ಕಾಂತಿ ಪಡೆದ, ಜ್ಞಾನಮಯವಾದ ಶ್ರೀಕೃಷ್ಣನ ಉಬ್ಬಿದ ಹೊಳೆಯುವ ನಿತಂಬವನ್ನು ಎಲೈ ಮನಸ್ಸೇ ! ಸದಾ ಚಿಂತಿಸು.

---

೧. ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ – ದ್ವಾದಶಸ್ತೋತ್ರ (೧೦/೧೨)

ವಿ : ಇದು ದ್ವಾದಶಸ್ತೋತ್ರ (೧/೩) ದ ಈ ಕೆಳಗಿನ ಶ್ಲೋಕದ ವಿವರಣೆಯಂತಿದೆ :

ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ ।
ಸ್ವರ್ಣಮಂಜೀರಸಂವೀತಮಾರೂಢಂ ಜಗದಂಬಯಾ ॥

## ರುಗ್ಮಿಣಿಯ ನೀವಿಯ ವೈಭವ

ಆಪಾದಪದ್ಮಂ ಪರಿಲಂಬಮಾನಾ
ನೀವೀ ರಮಾಯಾ ರಮಣೀಯಕಾಂಚ್ಯಾಃ ।
ವಿಷ್ವಕ್ಸ್ಫುರದ್ರತ್ನಗಣಸ್ಯ ಮಧ್ಯ-
ಲಕ್ಷ್ಮ್ಯಾ ವಿನಮ್ರಾ ಇವ ಭಾತಿ ಭಾಸಃ ॥ ೧೮ ॥

ಪಾದಕಮಲದವರೆಗೆ ಇಳಿಬಿದ್ದ ಮಹಾಲಕ್ಷ್ಮಿಯಾದ ರುಗ್ಮಿಣಿಯ ಸೀರೆಯ ನೆರಿಗೆಯು, ಸುತ್ತಲೂ ಹೊಳೆಯುವ ರತ್ನಗಳ ಸಾಲಿನ ನಡುವಿನ ಕಾಂತಿಗೆ ಬಹಳ ನಾಚಿ, ಇಳಿಬಿದ್ದಿರುವ ರತ್ನಖಚಿತವಾದ ರಮಣೀಯವಾದ ಒಡ್ಯಾಣದ ಕಾಂತಿಗಳಂತೆ ತೋರುವವು[೧].

ವಿ : ೧. ರುಗ್ಮಿಣಿಯ ನಡುವಿನ ಕಾಂತಿಯು ಸಕಲ ರತ್ನಗಳ ಕಾಂತಿಯನ್ನು ಮೀರಿಸುವಷ್ಟು ಅಪೂರ್ವ ಎಂಬುದು ಅವರ ಇಳಿಬಿದ್ದ ನೀವಿಯಿಂದ ತಿಳಿಯುವುದು ಎಂದರ್ಥ.

೨. ಲಕ್ಷ್ಮೀನಾರಾಯಣರ ಕಾಂತಿಯು ಸಹಜವಾಗಿಯೇ ಲೋಕೋತ್ತರ. ಅವರು ಧರಿಸಿರುವ ಆಭರಣಗಳಿಗೆ ಶೋಭೆ ಲಭಿಸುವುದು ಸಹ ಅವರಿಂದಲೇ ಹೊರತು, ಆಭರಣಗಳಿಂದಾಗಿ ಅವರಿಗೆ ಶೋಭೆ ಅಲ್ಲ ಎಂಬುದು ಒಟ್ಟು ತಾತ್ಪರ್ಯ.

## ರುಗ್ಮಿಣಿಯು ಬಂಧಿಸಿದ ಶ್ರೀಕೃಷ್ಣನ ಉದರ

ವ್ರಜಭುವಿ ಬಹುಪಾಶೈರ್ಯನ್ನ ಬದ್ಧಂ ಮುರಾರೇ-
ಸ್ತದುದರಮಧುನಾಽಽಸೀತ್ ಸಂತತಂ ಭೀಷ್ಮಪುತ್ರ್ಯಾಃ ।
ಪುಲಕಿತಕರಚಾರುಪ್ರೇಮದಾಮ್ನಾ ನಿಬದ್ಧಂ
ಪ್ರಭುರಪಿ ವಶಮೇತಿ ಪ್ರೇಮಭಾರೈರುದಾರೈಃ ॥ ೧೯ ॥

ನಂದಗೋಕುಲದಲ್ಲಿ ಬಹಳ ಹಗ್ಗಗಳಿಂದಲೂ ಸಹ ಬಂಧನಕ್ಕೊಳಗಾಗದ ಮುರಾರಿಯಾದ ಶ್ರೀಕೃಷ್ಣನ ಉದರವು ಈಗ ಪುಲಕಗೊಂಡ ರುಗ್ಮಿಣೀದೇವಿಯ ಕೈಗಳ ಮನೋಹರವಾದ ಪ್ರೀತಿಯ ಪಾಶದಿಂದ ಸದಾ ಸಂಪೂರ್ಣವಾಗಿ ಬಿಗಿಯಲ್ಪಟ್ಟಿದೆ; ಎಷ್ಟು ಸಮರ್ಥನಾಗಿದ್ದರೂ ಉತ್ಕೃಷ್ಟವಾದ ಪ್ರೀತಿಯ ಒತ್ತಡಕ್ಕೆ ಮಣಿಯುವನಲ್ಲವೆ !

---

೧. ಕಾಂಚ್ಯಾಃ ಅಧೋಭಾಗೇ ಲಂಬಮಾನಾ ನೀವೀ ಸುವರ್ಣವರ್ಣತ್ವಾತ್ ಕಾಂಚೀಪ್ರಭಾವದ್ಭಾತೀತಿ ಭಾವಃ ।- ವ್ಯಾ.

ವಿ : ೧. ಇತರರಿಂದ ಕಟ್ಟಲಾಗದಿದ್ದ ಶ್ರೀಕೃಷ್ಣನನ್ನು ಮಹಾಲಕ್ಷ್ಮಿಯು ತನ್ನ ಭಕ್ತಿಪಾಶದಿಂದ ಸದಾ ಕಟ್ಟಿರುವಳು ಎಂದರ್ಥ. ಇದರಿಂದ ಮಹಾಲಕ್ಷ್ಮಿಗೆ ಶ್ರೀಕೃಷ್ಣನನ್ನು ಹಾಗೆ ಕಟ್ಟಲು ಅವನ ವಿಶೇಷಾನುಗ್ರಹವೇ ಮುಖ್ಯಕಾರಣ ಎಂಬ ಪ್ರಮೇಯವು ತಿಳಿಯುವುದು.

೨. ಎಂತಹ [೧]ಮಹಾಸಮರ್ಥನೂ ಸಹ ಪ್ರೀತಿಯ ಒತ್ತಡಕ್ಕೆ ಮಣಿಯುವನು ಎಂದು ಭಾವ.

೩. ಇದರಿಂದ ಸ್ವೋತ್ತಮರನ್ನು ವಶಪಡಿಸಿಕೊಳ್ಳಲು ಭಕ್ತಿಯೊಂದೇ ಮಾರ್ಗ ಎಂಬ ತತ್ತ್ವವು ಸೂಚಿತ.

೪. ಯಶೋದೆಗೆ ಶ್ರೀಕೃಷ್ಣನನ್ನು ಪಾಶಗಳಿಂದಲೂ ಸಹ ಕಟ್ಟಲಾಗಲಿಲ್ಲ; ಆದರೆ ಮಹಾಲಕ್ಷ್ಮಿಯು ಅಂತಹ ಶ್ರೀಕೃಷ್ಣನನ್ನು ಕೇವಲ ತನ್ನ ಬಾಹುಬಂಧನದಿಂದಲೇ ಸದಾ ಬಿಗಿದಿರುವಳು; ಇದರಿಂದ ಮಹಾಲಕ್ಷ್ಮಿಯ ಹರಿಭಕ್ತಿಯು ಅದೆಷ್ಟು ಅಪಾರ ಎಂಬುದು ಸ್ಫುಟ-ಪಡುವುದು ಎಂದರ್ಥ.

## ಶ್ರೀಕೃಷ್ಣನ ಉದರದ ಮೇಲಿನ ಮೂರು ನಿರಿಗಳು

[೨]ಅಂಕಸ್ಥಿತೋದಧಿಸುತೋಚ್ಚಕರಾಂಗುಲೀನಾಂ[೩]
ಕಾಂತಿಸ್ತ್ರಿಧೋದರಗತೇವ ವಲಿರ್ವಿರೇಜೇ ।
ನಾಭಿಂ ಪ್ರವಿಶ್ಯ ಶನಕೈರುದಿತಾ ತದೀಯ-
ನೇತ್ರಾಂತಕಾಂತಿರಿವ ರೋಮಲತಾ ಚ ತನ್ವೀ ॥ ೨೦ ॥

ಶ್ರೀಕೃಷ್ಣನ ಉದರದಲ್ಲಿನ ತ್ರಿವಲಿಯು, ಅವನ ತೊಡೆಯ ಮೇಲೆ ಕುಳಿತಿರುವ ಸಾಗರಪುತ್ರಿಯಾದ ರುಗ್ಮಿಣೀದೇವಿಯ ಶ್ರೇಷ್ಠವಾದ (ಮೂರು)ಕೈಬೆರಳುಗಳ ಕಾಂತಿಯಂತೆ ಶೋಭಿಸುವುದು; ಸೂಕ್ಷ್ಮವೂ ಮನೋಹರವೂ ಆದ ಶ್ರೀಕೃಷ್ಣನ ರೋಮಗಳ ಸಾಲು ಅವನ ನಾಭಿಯನ್ನು ಹೊಕ್ಕು ಮೆಲ್ಲನೆ ಮೇಲಕ್ಕೆ ಸಾಗುವ, ಆ ರುಗ್ಮಿಣಿಯ [೪]ಕುಡಿನೋಟದ ಕಾಂತಿಯಂತೆ ಕಂಗೊಳಿಸಿತು.

---

೧. ಪ್ರಭುರಪಿ ಸಮರ್ಥೋಽಪಿ ಉದಾರೈಃ ಉತ್ಕೃಷ್ಟೈಃ ಪ್ರೇಮಭಾರೈಃ ಸ್ನೇಹವಿಶೇಷೈರ್ವಶಮೇತಿ । ಸಮರ್ಥೋಽಪಿ ಸ್ನೇಹವಶಾದನ್ಯಾಧೀನೋ ಭವತೀತ್ಯರ್ಥಃ। -ವ್ಯಾ.

೨. ಕೌಶೇಯಪೀತವಸನಾಮರವಿಂದನೇತ್ರಾಂ ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ ಧ್ಯಾಯೇದ್ವಿಧೀಶನುತಪಾದಯುಗಾಂ ಜನಿತ್ರೀಮ್ ॥
-ತಂತ್ರಸಾರ(೪/೫೮)

೩. ನಿರೂಪತಯಾ ಆಲಿಂಗಿತರುಗ್ಮಿಣೀಕರಾಂಗುಲಿತ್ರಯಾತ್ ತ್ರಿವಿಧನಿಃಸೃತಕಾಂತಿರಿವ ಶುಶುಭ ಇತ್ಯರ್ಥಃ । ಶ್ರೀಕೃಷ್ಣೋದರವಲೀನಾಂ ಶ್ಯಾಮಾವದಾತತ್ವಾತ್ ದೃಢಂ ಮಾಂಸಪಿಂಡರೂಪತಯಾ ರತ್ನಖಚಿತಾಂಗುಲೀಯಕ-ಸಂಬದ್ಧಕಾಂತ್ಯಾ ಈಷದ್ರಕ್ತಛಾಯಾಶಬಲತ್ವಾದಿಯಮುಕ್ತಿಃ। - ವ್ಯಾ.

೪. ಕಟಾಕ್ಷಸ್ಯಾಸ್ಥಿರತ್ವಾದಿತಿ ಭಾವಃ। -ವ್ಯಾ.

ವಿ : ೧. ಶ್ರೀರುಗ್ಮಿಣಿಯು ಉದಧಿಜೆ, ಸಮುದ್ರಜಾತೆ, ಕ್ಷೀರಸಮುದ್ರದಲ್ಲಿ ಪ್ರಾದುರ್ಭವಿಸಿದ ಮಹಾಲಕ್ಷ್ಮೀ ಎನ್ನುವ ಮೂಲಕ ಅವರ ಮೂಲರೂಪ ಹಾಗೂ ಅವತಾರರೂಪಗಳಿಗೆ ಭೇದವಿಲ್ಲ ಎಂಬ ವಿಶೇಷಾಂಶ ಸೂಚಿತ.

೨. ಶ್ರೀಕೃಷ್ಣನ ಉದರದಲ್ಲಿನ ತ್ರಿವಲಿಯ ಕಾಂತಿಯು ರುಗ್ಮಿಣಿಯ ಕೈಯ ಬೆರಳುಗಳ ಕಾಂತಿಯಂತಿದ್ದರೆ, ಶ್ರೀಕೃಷ್ಣನ ರೋಮಗಳ ಸಾಲು ರುಗ್ಮಿಣೀದೇವಿಯ ಕುಡಿನೋಟದ ಕಾಂತಿಯಂತಿತ್ತ ಎಂಬ ಇಲ್ಲಿಯ ಭಾವ ಅತ್ಯಂತ ಅಪೂರ್ವ.

೩. ಉದರದ ಮೇಲೆ ತ್ರಿವಳಿಗಳು ಶೋಭಿಸುವುದು ಶ್ರೀಕೃಷ್ಣನ ವಿಶಿಷ್ಟಲಕ್ಷಣಗಳಲ್ಲೊಂದು:

ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।
ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥ - ದ್ವಾದಶಸ್ತೋತ್ರ (೧/೪)

### ಶ್ರೀರುಗ್ಮಿಣಿಯ ಮನೋಹರ ರೋಮಾವಲಿ

ಸುವರ್ಣವರ್ಣೋದರಮಧ್ಯಲಗ್ನಾ
ಮನೋಜ್ಞರೋಮಾವಲಿರಿಂದಿರಾಯಾಃ ।
ಜಿಗಾಯ ವಕ್ಷೋಜಕರೀಂದ್ರಕುಂಭ-
ಯುಗಾವತೀರ್ಣಾಂ ಮದವಾಂಧಾರಾಮ್ ॥ ೨೧ ॥

ರುಗ್ಮಿಣಿಯ ಬಂಗಾರದ ಬಣ್ಣದ ಉದರದ ಮಧ್ಯದಲ್ಲಿ ನೆಲೆಸಿದ ರಮ್ಯವಾದ ರೋಮಪಂಕ್ತಿಯು ಸ್ತನರೂಪದ ಆನೆಗಳ ಎರಡು ಕುಂಭಸ್ಥಳಗಳಿಂದ ಸುರಿದು ಬರುವ ಮದೋದಕದ ಧಾರೆಯನ್ನು ಮೀರಿಸಿದೆ.

ವಿ : ಶ್ರೀರುಗ್ಮಿಣಿಯನ್ನು ಇಂದಿರಾ ಎನ್ನುವ ಮೂಲಕ ಅವರ ಮೂಲರೂಪ ಹಾಗೂ ಅವತಾರರೂಪಗಳಿಗೆ ಭೇದವಿಲ್ಲ ಎಂಬ ಪ್ರಮೇಯವನ್ನು ಸೂಚಿಸಿರುವರು.

### ರುಗ್ಮಿಣಿಯ ತ್ರಿವಲಿಗಳ ಅಪೂರ್ವತೆ

ಸದ್ರೋಮಾವಲಿನೀಲರತ್ನಲತಿಕಾಂ ತನ್ನಾಭಿವಾಪೀತಟಾ-
ದುದ್ಯಾಂತೀಂ ವಿಲಸತ್ಕುಚಾಚಲತಟೀದ್ವಂದ್ವಾಂತರಪ್ರಾಪ್ತಯೇ ।
ಮಧ್ಯೇ ವ್ಯೋಮವಶಾದಲಬ್ಧಸರಣಿಂ ಧರ್ತುಂ ವಿಧಾತ್ರಾ ಕೃತಾಂ
ಸ್ನಿಗ್ಧಾಷ್ಟಾಪದಯಷ್ಟಿಮಬ್ಧಿದುಹಿತುರ್ಮ್ಯದ್ವೀ ವಲಿಃ ಸ್ಪರ್ಧತೇ ॥ ೨೨ ॥

ಸಾಗರಜಾತೆ ಮಹಾಲಕ್ಷ್ಮಿಯಾದ ರುಗ್ಮಿಣಿಯ ಮೃದುವಾದ ವಲಿಯು, ಅವಳ ನಾಭಿಯೆಂಬ ಸರೋವರಪ್ರಾಂತದಿಂದ ಹೊರಹೊಮ್ಮಿ ಅವಳ ಕಂಗೊಳಿಸುವ ವಕ್ಷಃ

ಸ್ಥಳವೆಂಬ ಎರಡು ಬೆಟ್ಟಗಳ ತಪ್ಪಲನ್ನು ಹೊಂದಲೆಂದು ಹೊರಟ, ಮಧ್ಯದಲ್ಲಿ ಆಕಾಶ ಬಂದಿದ್ದರಿಂದಾಗಿ ದಾರಿ ಲಭಿಸದ, ಉತ್ತಮರೋಮಗಳ ಸಾಲುಗಳ ರೂಪದ ನೀಲಮಣಿಯ ಬಳ್ಳಿಯನ್ನು ನಿಲ್ಲಿಸಲೆಂದು ಬ್ರಹ್ಮನು ನಿರ್ಮಿಸಿದ ಸ್ನೇಹಪೂರ್ಣವಾದ ಸುವರ್ಣಯಷ್ಟಿಯನ್ನು ಮೀರಿಸಿದೆ.

ವಿ. : ೧. ಇಲ್ಲಿ ಐದುರೂಪಕಗಳಿಂದ ನಾಭಿವಲಿಯ ಮಧ್ಯದಲ್ಲಿ ವ್ಯೋಮಾದಿಪಂಚ ಅವಯವಗಳನ್ನು ಒಟ್ಟಾಗಿ ವರ್ಣಿಸುವ ಅಪೂರ್ವ ಚಮತ್ಕಾರವಿದೆ.

೨. ಇಲ್ಲಿ ರುಗ್ಮಿಣಿಯ ಉದರದ ಮೇಲಿನ ವಲಿತ್ರಯವನ್ನು ಅಪೂರ್ವರೀತಿಯಲ್ಲಿ ವರ್ಣಿಸಲಾಗಿದೆ; [1]ಅಷ್ಟಾಪದ - ಚಿನ್ನ; ಯಷ್ಟಿ - ಕೋಲು; ದುಹಿತುಃ - ಮಗಳ.

### ಶ್ರೀಕೃಷ್ಣನ ನಾಭಿಯ ವರ್ಣನೆ

ಶ್ರೀಭೂಕಟಾಕ್ಷೋತ್ಪಲಮಬ್ಜಭೂದ್ವಿ-
ರೇಫಾಲಯಾಂಭೋರುಹಮಚ್ಯುತಸ್ಯ ।
[2]ನಾಭಿಹ್ರದಂ ವೃತ್ತಮಗಾಧಮಚ್ಛ-
ಶೋಭಾಂಬುಪೂರ್ಣಂ ವಿಶ ಚಿತ್ತಮೀನ ॥ ೨೩ ॥

ಶ್ರೀದೇವಿ-ಭೂದೇವಿಯರ ಕುಡಿನೋಟಗಳೆಂಬ ಕನ್ನೈದಿಲೆಗಳನ್ನು ಹಾಗೂ ಬ್ರಹ್ಮದೇವರೆಂಬ ಭ್ರಮರವು ನೆಲೆಸಿದ ಕಮಲವನ್ನು ಹೊಂದಿದ ಶ್ರೀಕೃಷ್ಣನ ದುಂಡಾದ ಆಳವಾದ ನಿರ್ಮಲಶೋಭೆಯ ರೂಪದ ಜಲದಿಂದ ತುಂಬಿದ ನಾಭಿ ಎಂಬ ಸರೋವರವನ್ನು, ಎಲೈ ಮನಸ್ಸೆಂಬ ಮೀನವೇ ! ನೀನು ಪ್ರವೇಶಿಸು.

ವಿ : ೧. ಶ್ರೀಕೃಷ್ಣನ ನಾಭಿಯು ದುಂಡಾದ ಆಳವಾದ ನಿರ್ಮಲಶೋಭೆಯೆಂಬ ಜಲದಿಂದ ಕೂಡಿದ ಒಂದು ಸರೋವರ, ಅದರಲ್ಲಿ ಶ್ರೀದೇವಿಭೂದೇವಿಯರೆಂಬ ಲಕ್ಷ್ಮೀರೂಪಗಳ ಕುಡಿನೋಟಗಳೆಂಬ ಕನ್ನೈದಿಲೆಗಳು ಹಾಗೂ ಬ್ರಹ್ಮನೆಂಬ ದುಂಬಿ ಜನಿಸಿರುವ ಕಮಲ; ಅದರಲ್ಲಿ

---

೧. ರೂಪಕಪಂಚಕೇನ ನಾಭಿವಲಿಮಧ್ಯೇ ವ್ಯೋಮರೋಮಲತಾಕುಚಾಖ್ಯಪಂಚಾವಯವಾನಾಂ ಏಕದೈವ ವರ್ಣ-ನಾದತಿಚಮತ್ಕಾರೋಽಯಮ್ । ಅತ ಏವ ರೂಪಕೋಜ್ಜೀವಿತೋತ್ಪ್ರೇಕ್ಷಾಲಂಕಾರಃ । -ವ್ಯಾ.
ರುಗ್ಮಂ ಕಾರ್ತಸ್ವರಂ ಜಾಂಬೂನದಮಷ್ಟಾಪದೋಽಸ್ತ್ರಿಯಾಮ್' - ಅಮರಕೋಶ

೨. ನಾಭಿಹ್ರದಂ ಭುವನಕೋಶಗುಹೋದರಸ್ಥಂ ಯತ್ರಾತ್ಮಯೋನಿಧಿಷಣಾಖಿಲಲೋಕಪದ್ಮಮ್ ।
ವ್ಯೂಢಂ ಹರಿನ್ಮಣಿಮುಷಃ ಸ್ತನಯೋರಮುಷ್ಯ ಧ್ಯಾಯೇದ್ದ್ವಯಂ ವಿತತಹಾರಮಯೂಖಗೌರಮ್ ॥
- ಶ್ರೀಮದ್ಭಾಗವತ.

ಶತಮೋದೋದ್ಭವಸುಂದರವರಪದ್ಮೋತ್ಥಿತನಾಭೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೩)

ಪ್ರವೇಶಿಸುವ ಕಾರ್ಯವನ್ನು ಮನಸ್ಸೆಂಬ ಮೀನು ಪ್ರವೇಶಿಸಬೇಕೆಂಬ ಇಲ್ಲಿಯ ರೂಪಕಗಳ ರಾಶಿ ಇಲ್ಲಿ ಅತ್ಯಂತ ರೋಚಕ. (ಸಮಸ್ತವಸ್ತುವಿಷಯರೂಪಕ)

೨. ಪದ್ಮನಾಭ ಎಂಬುದು ಶ್ರೀಹರಿಯ ಅಸಾಧಾರಣವಾದ ಲಕ್ಷಣ ಎಂಬ ವಿಶೇಷ ಬ್ರಹ್ಮಸೂತ್ರಭಾಷ್ಯ, [೧]ಅನುವ್ಯಾಖ್ಯಾನಗಳಲ್ಲಿ ನಿರೂಪಿತವಾಗಿದೆ.

೩. ಇಲ್ಲಿ ಮನಸ್ಸನ್ನು ಮೀನು ಎಂದು ಕರೆದಿರುವುದು ವಿಶೇಷ; ಮೀನು ಸದಾ ಜಲದಲ್ಲಿ ಸಂಚರಿಸುವಂತೆ, ಮನಸ್ಸು ವಿಷಯಗಳಲ್ಲಿ ಸಂಚರಿಸುವ ಸ್ವಭಾವವನ್ನು ಹೊಂದಿದೆ; ಆದರೆ ಅದು ವಿಷಯಗಳನ್ನು ತೊರೆದು ಶ್ರೀಹರಿಯ ರೂಪಚಿಂತನೆಯಲ್ಲಿ ಮಗ್ನವಾಗಬೇಕು ಎಂಬುದು ಇಲ್ಲಿಯ ಸಂದೇಶ; ದ್ವಿರೇಫ - ಭ್ರಮರ, ದುಂಬಿ.

೪. ಇದು ಈ ಕೆಳಗಿನ ಶ್ರೀಮದಾಚಾರ್ಯರ ಸೂಕ್ತಿಯಂತಿರುವುದು ಗಮನಾರ್ಹ:

[೨]ಚಂಚಲೋಽಯಂ ಮನೋಮೀನಃ ಸಮಾನೇಯೋ ಹರಿಸ್ಥಲೇ ।
ವಿಷಯೋದಕಸಂಚಾರೀ ಸುಯತ್ನಬಡಿಶಾಹೃತಃ ॥

ವಿಶ್ವಂಭರನಾದ ಶ್ರೀಕೃಷ್ಣರುಗ್ಮಿಣಿಯರ ತೆಳು ಉದರ

ಉದ್ದೀಪ್ತಹಾರಾಂತರರತ್ನಕಾಂತ್ಯಾ
ಹೃದ್ಯಂ ಮನೋಜ್ಞೋದರಬಂಧಬದ್ಧಮ್ ।
ತದ್ವಿಶ್ವಪಿತ್ರೋಸ್ತ್ರಿವಲಿ ತ್ರಿಕಾಲಂ
ಶರ್ಮಾಣಿ ನಿರ್ಮಾತು ಕೃಶೋದರಂ ನಃ ॥ ೨೪ ॥

ಹೊಳೆಯುವ ಮುತ್ತಿನಮಾಲೆಗಳ ಮಧ್ಯದಲ್ಲಿ ಶೋಭಿಸುವ ರತ್ನಗಳ ಕಾಂತಿಯಿಂದ ರಮಣೀಯವಾಗಿರುವ, ಮನೋಹರವಾದ, ಉದರಬಂಧವೆಂಬ ಆಭರಣವು ಕಟ್ಟಿದ, ಮೂರು ನಿರಿಗಳನ್ನು ಹೊಂದಿರುವ ವಿಶ್ವದ ಜನನಿ-ಜನಕರಾದ ಶ್ರೀಕೃಷ್ಣ-ರುಗ್ಮಿಣಿಯರ ತೆಳುವಾದ ಉದರವು ತ್ರಿಕಾಲದಲ್ಲೂ ನಮಗೆ ಸುಖ-ಸಂತೋಷಗಳನ್ನು ಉಂಟುಮಾಡಲಿ.

---

೧. ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ।
ಅಜಸ್ಯ ನಾಭಾವಧ್ಯೇಕಮರ್ಜಿತಂ ಮಾತ್ರಯಾ ಪರಃ ॥ -ಅನುವ್ಯಾಖ್ಯಾನ (೨/೨/೨೮೦)

೨. ಇದಕ್ಕೆ ಶ್ರೀವಾದಿರಾಜಸ್ವಾಮಿಗಳು ವ್ಯಾಖ್ಯಾನವೊಂದನ್ನು ರಚಿಸಿದ ಉಲ್ಲೇಖ ಕೂಡಲೀ ಸಂಸ್ಥಾನಕ್ಕೆ ಸೇರಿದ ಶ್ರೀನಾರಾಯಣತೀರ್ಥರು ಎಂಬ ಶ್ರೀವ್ಯಾಸರಾಜ ವಿದ್ಯಾಶಿಷ್ಯರು ಬರೆದಿರುವ ಕೈಬರಹದ ಪ್ರತಿಯಲ್ಲಿ ಇದೆ; ಆ ಕೈಬರಹದ ದಾಖಲೆಯ ಸಮಗ್ರ ಛಾಯಾಪ್ರತಿಯನ್ನು ನಮ್ಮ ಪ್ರಕಾಶನದ 'ಶ್ರೀಜಯತೀರ್ಥರ ಮೂಲ-ವೃಂದಾವನಸ್ಥಳ: ಮಳಖೇಡ' ಎಂಬ ಕೃತಿಯ ರಕ್ಷಾಪುಟ - ೩ರಲ್ಲಿ ಕೊಡಲಾಗಿದೆ.

ವಿ : ೧. [1]ಶ್ರೀಕೃಷ್ಣನ ಉದರದಲ್ಲಿ ಮೂರು ನಿರಿಗಳು ಶೋಭಿಸುತ್ತಿರುವುದು ಅವನು ದ್ವಾತ್ರಿಂಶ- ಲಕ್ಷಣೋಪೇತನಾದವನು ಎಂಬುದಕ್ಕೂ, ರುಗ್ಮಿಣಿಯ ಉದರದಲ್ಲಿ ತ್ರಿವಳಿಗಳು ಕಂಗೊಳಿಸುವುದು ಅವರು ಸಾಕ್ಷಾತ್ ಮಹಾಲಕ್ಷ್ಮೀ ಎಂಬುದಕ್ಕೂ ಸೂಚಕ.

೨. ತ್ರಿಕಾಲಗಳು ಎಂದರೆ ಭೂತ-ವರ್ತಮಾನ-ಭವಿಷ್ಯತ್ ಕಾಲಗಳು ಅಥವಾ ಪ್ರಾತಃ-ಮಧ್ಯಾಹ್ನ-ಸಾಯಂಕಾಲ ಎಂದರ್ಥ.

### ಅತ್ಯಂತಕೃಶವಾದ ಶ್ರೀಕೃಷ್ಣರುಗ್ಮಿಣಿಯ ಮಧ್ಯಭಾಗ

ಗರ್ಭಸ್ಥಸರ್ವಭುವನಾವಪಿ ತಾವಿದಾನೀಂ
ಪ್ರದ್ಯುಮ್ನಮುಖ್ಯಜನಕಾವಿತಿ ಸೂಚನಾಯ ।
ವಿಶ್ವೈಕಮಂದಿರಮಪಿ ಸ್ಮ ದಧತ್ ತದೀಯಂ
ಮಧ್ಯಂ ಮುದೇ ಭವತು ಮನ್ಮಥಗಾತ್ರಮಾತ್ರಮ್[2] ॥ ೨೫ ॥

ಒಡಲಲ್ಲಿ ಸಕಲ ಭುವನಗಳನ್ನು ಹೊತ್ತಿದ್ದರೂ ಪ್ರದ್ಯುಮ್ನನಿಗೆ ಮುಖ್ಯವಾಗಿ ಜನ್ಮನೀಡಿದವರು ತಾವು ಎಂಬುದನ್ನು ಸೂಚಿಸಲು ವಿಶ್ವಕ್ಕೆಲ್ಲಾ ಮುಖ್ಯ ನೆಲೆ ಎನ್ನಿಸಿದ್ದರೂ, ಮನ್ಮಥನ ದೇಹದಂತೆ ಅತ್ಯಂತ ತೆಳುವಾದ ಅವರಿಬ್ಬರ ನಡುಪ್ರದೇಶವು ನಮಗೆ ನಲಿವಿಗೆ ಕಾರಣವಾಗಲಿ.

ವಿ : ಶ್ರೀಕೃಷ್ಣ ರುಗ್ಮಿಣಿಯರ ನಡುಗಳು ಇಲ್ಲವೇ ಇಲ್ಲ ಎಂಬಷ್ಟು ಅತ್ಯಂತ ಸೂಕ್ಷ್ಮ ಎಂಬುದನ್ನು 'ಮನ್ಮಥಗಾತ್ರಮಾತ್ರ' ಎಂಬುದರಿಂದ ಕಾವ್ಯಮಯವಾಗಿ ವರ್ಣಿಸಿರುವರು; ಮನ್ಮಥನು ಅನಂಗ ಎಂದರೆ ದೇಹವಿಲ್ಲದವನು; ಅವನ ದೇಹದಂತೆ ಇರುವ ನಡುಗಳು ಎಂದರೆ ಇಲ್ಲದಿರುವಷ್ಟು ಅತಿ ಸೂಕ್ಷ್ಮವಾದವು ಎಂದು ಧ್ವನಿ.

### ಶ್ರೀಕೃಷ್ಣನ ಉದರದ ಅಪೂರ್ವತೆ

ಸತ್ತರ್ಕಮಾತ್ರಕಲಿತಂ ಸಕಲಾಪವರ್ಗಂ
ಮಧ್ಯಂ[3] ಮುದೇಽಸ್ತು ಮಧುಕೈಟಭಮರ್ದನಸ್ಯ ।

---

೧. ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।
ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥ -ದ್ವಾದಶಸ್ತೋತ್ರ(೧/೫)

೨. ಮಾತಾಪಿತೃಭ್ಯಾಂ ಗರ್ಭೇಣ ಧೃತಸ್ಯೈವ ಪುತ್ರತ್ವೌಚಿತ್ಯಾತ್ ಮನ್ಮಥಸ್ಯ ಗಾತ್ರಮಾತ್ರಧಾರಣೇನ ಪ್ರದ್ಯುಮ್ನಮುಖ್ಯ-ಜನಕತ್ವಸೂಚನಮುಪಪದ್ಯತ ಇತಿ ದ್ರಷ್ಟವ್ಯಮ್ । - ವ್ಯಾ.

೩.. ರುಗ್ಮಿಣ್ಯುಪಭೋಗ್ಯಾಭಿವೃದ್ಧಿರೂಪಪರಿಪಾಕ ಇವ ಸ್ಥಿತಮ್ । ಮಧ್ಯಪ್ರದೇಶಸ್ಯ ನಾಭಿಪ್ರದೇಶಾದುಪರಿಸ್ಥಿತತ್ವಾ-

ತದ್ರಮ್ಯನಾಭಿವಿವರಾಭ್ಯುದಿತಾಂಬರಸ್ಯ[೧]
ಪದ್ಮೋಪಭೋಗ್ಯಪರಿಣಾಮ ಇವೋಪರಿಷ್ಟಾತ್ ॥ ೨೬ ॥

ಕೇವಲ ಸದ್ಯುಕ್ತಿಗೆ ಮಾತ್ರವೇ ನಿಲುಕುವ, ಸಕಲಭಕ್ತರಿಗೂ ಮೋಕ್ಷವನ್ನು ಕರುಣಿಸುವ, ಮಧುಕೈಟಭರನ್ನು ಸಂಹರಿಸಿದ, ಶ್ರೀಕೃಷ್ಣನ ರಮ್ಯವಾದ ನಾಭಿಯ ವಿವರದಿಂದ ಹೊರಹೊಮ್ಮಿದ ಆಕಾಶದ ಮೇಲ್ಭಾಗದಲ್ಲಿ, ರುಗ್ಮಿಣಿಯ ಉಪಭೋಗದ ಫಲ ಎಂಬಂತಿರುವ, ನಡುಪ್ರದೇಶವು ನಮ್ಮ ನಲಿವಿಗೆ ಕಾರಣವಾಗಲಿ.

ವಿ : ೧. ಶ್ರೀಕೃಷ್ಣನ ನಡುವು ಬರಿಗಣ್ಣಿಗೆ ಕಾಣದಷ್ಟು ಸೂಕ್ಷ್ಮವಾದುದು ಎನ್ನುವ ಮೂಲಕ ಅದರ ಸೂಕ್ಷ್ಮತೆ ಎಷ್ಟು ಅಪಾರ ಎಂಬುದನ್ನು ತಿಳಿಸಿರುವರು.

೨. ಸತ್ತರ್ಕಮಾತ್ರಕಲಿತಂ ಎಂಬುದಕ್ಕೆ ನಿರ್ದುಷ್ಟವಾದ ಅನುಮಾನಕ್ಕೆ ಮಾತ್ರ ಗೋಚರಿಸುವ ಎಂದರ್ಥ. ಶ್ರೀಕೃಷ್ಣನ ನಡುವು ಕಣ್ಣಿಗೆ ಕಾಣುವಂತಹುದು ಅಲ್ಲ. ಆದರೂ ಅದು, ದೇಹದ ಮಧ್ಯಭಾಗದಲ್ಲಿರುವುದರಿಂದ ಇರದೇ ಇರಲು ಸಾಧ್ಯವೇ ಇಲ್ಲ. ಇಂತಹ ಚಿಂತನೆಯ ಆಧಾರದ ಮೇಲೆ ಮಾತ್ರ ಅದನ್ನು ತಿಳಿಯಲು ಸಾಧ್ಯ ಎಂಬ ಭಾವ ಸೂಚಿತ.

೩. ಶ್ರೀಕೃಷ್ಣನ ಉದರವು ಸ್ವಲ್ಪವಾದರು ಕಾಣುವಂತಿರುವುದು ಅದನ್ನು ಗಾಢವಾಗಿ ಆಲಂಗಿಸಿಕೊಳ್ಳುವ ಅವಕಾಶವನ್ನು ರುಗ್ಮಿಣಿಗೆ ನೀಡಲು ಎಂಬ ಕಾರಣದಿಂದ ಮಾತ್ರ ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ; ಇದು 'ಉಪಗೂಢಂ ಶ್ರಿಯೈಕಯಾ' ಎಂಬ ದ್ವಾದಶಸ್ತೋತ್ರದ ಅಪೂರ್ವ ವಿವರಣೆಯಂತಿದೆ.

'ಸಂದೇಹ'ವೆನ್ನಿಸಿದ ಶ್ರೀಕೃಷ್ಣರುಗ್ಮಿಣಿಯರ ಉದರಗಳು

ಲಕ್ಷ್ಮೀಮುಕುಂದತನುವೃತ್ತಮನೋಜ್ಞಮಧ್ಯ-
ಮುದ್ವೀಕ್ಷ್ಯ ಶಿಕ್ಷಿತಧಿಯಃ ಕವಯೋಽಪಿ ಯಸ್ಮಾತ್ ।
ಕಿಂಚಾಸ್ತಿ ನೇತಿ ಖಲು ಸಂದಿಹತೇಽಧುನಾಽಪಿ
ಸಂದೇಹಸಂಜ್ಞಿತಮಭೂದತ ಏವ ಮಧ್ಯಮ್ ॥ ೨೭ ॥

ಶ್ರೀಕೃಷ್ಣರುಗ್ಮಿಣಿಯರ ತೆಳುವಾದ, ದುಂಡಾದ, ರಮಣೀಯವಾದ ನಡುಪ್ರದೇಶವನ್ನು ಕಂಡು ಸುಶಿಕ್ಷಿತಬುದ್ಧಿಯ ಜ್ಞಾನಿಗಳೂ ಸಹ ಉಂಟೋ? ಇಲ್ಲವೋ? ಎಂದು ಇಂದಿಗೂ ಸಂದೇಹಗ್ರಸ್ತರಾಗಿಯೇ ಇರುವುದರಿಂದ, ಅದು ಸಂದೇಹ (ಮಧ್ಯ) ಎಂಬ ಹೆಸರನ್ನೇ ಹೊಂದಿದೆ.

---

ದುಪರಿಷ್ಠಾದಿತ್ಯುಕ್ತಮ್ । ಅಂಕಸ್ಥಿತರುಗ್ಮಿಣೀಕರೇಣ ಮಧ್ಯಸ್ಯ ಆಲಿಂಗಿತತ್ವಾದಿತಿ ಭಾವಃ। ನಾಭಿಸ್ಥಸೂಕ್ಷ್ಮಾಕಾಶಸ್ಯ ಮಧ್ಯೇ ಪರಿತೋ ವ್ಯಾಪ್ತತ್ವಾತ್ ಸೂಕ್ಷ್ಮತಯಾ ಸುತರಾಮದೃಶ್ಯತ್ವಾಚ್ಚ ಪದ್ಮೋಪಭೋಗ್ಯಪರಿಣಾಮ ಇತ್ಯುಕ್ತಮ್ । -ವ್ಯಾ.

೧. ನಾಭ್ಯಾ ಆಸೀದಂತರಿಕ್ಷಮ್ । - ಪುರುಷಸೂಕ್ತ

ವಿ: ೧. ಶ್ರೀಕೃಷ್ಣರುಗ್ಮಿಣಿಯರ ನಡುಪ್ರದೇಶವು ಜ್ಞಾನಿಗಳು ಎಷ್ಟು ಬಗೆಯಲ್ಲಿ ವಿಚಾರಿಸಿದರೂ ಸಹ ಗೋಚರಿಸದಿರುವುದರಿಂದ ಅದರ ಬಗ್ಗೆ ಅದು ಉಂಟೋ? ಇಲ್ಲವೋ? ಎಂಬ ಸಂಶಯಕ್ಕೆ ಒಳಗಾಗಿರುವರು ಎಂದರ್ಥ.

೨. [೧]ಇದೆ ಎಂಬುದು ಒಂದು ಬಗೆಯ ನಿಶ್ಚಿತಜ್ಞಾನವಾದರೆ, ಇಲ್ಲ ಎಂಬುದು ಇನ್ನೊಂದು ಬಗೆಯ ನಿಶ್ಚಯಜ್ಞಾನ. ಆದರೆ ಇದೆಯೋ ಇಲ್ಲವೋ ಎಂಬುದು ಎರಡು ಬಗೆಯ ಜ್ಞಾನವೂ ಆಗಿರದೆ, ಮಧ್ಯವರ್ತಿಯಾದ ಜ್ಞಾನವಾದ್ದರಿಂದ ಸಂಶಯಕ್ಕೆ 'ಮಧ್ಯ' ಎಂಬ ಹೆಸರು ಸೂಕ್ತ. ಶ್ರೀಕೃಷ್ಣರುಗ್ಮಿಣಿಯರ ನಡುಪ್ರದೇಶಗಳು ಇರುವವೋ ಇಲ್ಲವೋ ಎಂಬ ಸಂಶಯವನ್ನು ಹುಟ್ಟಿಸುವಷ್ಟು ಸೂಕ್ಷ್ಮವಾಗಿರುವುದರಿಂದ 'ಮಧ್ಯ' ಎಂಬ ಹೆಸರು ಅವಕ್ಕೆ ಸೂಕ್ತ ಎಂಬುದು ಇಲ್ಲಿಯ ಕಾವ್ಯಧ್ವನಿ ಅತ್ಯಂತ ರೋಚಕ; ಸಂದೇಹ – ಮಧ್ಯದೇಹ.

೩. ಹೀಗೆ ದೇಹದ ಮಧ್ಯಪ್ರದೇಶವು ತೆಳುವಾಗಿರುವುದು ಸಾಮುದ್ರಿಕ ಶಾಸ್ತ್ರದಂತೆ ಅತ್ಯಂತ ಶ್ರೇಷ್ಠವಾದ ಲಕ್ಷಣ ಎಂದು ತಿಳಿಯಬೇಕು.

## ರುಗ್ಮಿಣಿಯು ಆಲಿಂಗಿಸಿದ ಶ್ರೀಕೃಷ್ಣನ ತನೂದರ

ಮಧ್ಯಂ[೨] ಮನೋಜ್ಞಂ ಮೃದುಲಂ ಸುವೃತ್ತಂ
ಬುದ್ಧೌ ಸದಾ ತಿಷ್ಠತು ಯತ್ಕೃಶತ್ವಮ್ ।
ಉದ್ವೀಕ್ಷ್ಯ ತತ್ಪೂರ್ತಿವಿಧಿತ್ಸಯೇವ
ಪದ್ಮಾ ಕರಾಬ್ಜೇನ ಸದಾಽಽಲಿಲಿಂಗೇ ॥ ೨೮ ॥

ಅದರ ಕೃಶತ್ವವನ್ನು ನೋಡಿ ಅದನ್ನು ಪೂರ್ಣಮಾಡಲೆಂಬಂತೆ ತನ್ನ ಕರಕಮಲದಿಂದ ರುಗ್ಮಿಣಿಯು ಸದಾ ಆಲಿಂಗಿಸಿಕೊಂಡಿರುವ ದುಂಡಾದ, ಮೃದುವಾದ, ಮನೋಹರವಾದ ಶ್ರೀಕೃಷ್ಣನ ಉದರವು ಸದಾ ನನ್ನ ಬುದ್ಧಿಯಲ್ಲಿ ನೆಲೆಸಲಿ.

ವಿ: ೧. ಶ್ರೀಕೃಷ್ಣನ ಉದರವು ಇಲ್ಲವೇ ಇಲ್ಲ ಎಂದು ಜನ ಭಾವಿಸುವಷ್ಟು ಕೃಶವಾಗಿರುವುದನ್ನು ಕಂಡು ಅದನ್ನು ಪೂರ್ಣಗೊಳಿಸಲೆಂಬಂತೆ ರುಗ್ಮಿಣಿಯು ಅದನ್ನು ಗಾಢವಾಗಿ ಸದಾ ಆಲಿಂಗಿಸಿಕೊಂಡಿರುವಳು ಎಂದು ಅರ್ಥ.

---

೧. 'ಸಂದೇಹೋ ಮಧ್ಯದೇಹಕಃ' ಇತಿ ಹಲಃ । ಸಂದೇಹವಿಷಯತ್ವಾದೇವ ಮಧ್ಯಸ್ಯ ಸಂದೇಹಸಂಜ್ಞೇತಿ ನಿಮಿತ್ತಾಂತರೋತ್ಪ್ರೇಕ್ಷಾ । -ವ್ಯಾ.

೨. ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।
ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥ - ದ್ವಾದಶಸ್ತೋತ್ರ (೧/೪)
ಜಗದಾಗೂಹಕಪಲ್ಲವಸಮಕುಕ್ಷೇ ಶರಣಾದೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ -ದ್ವಾದಶಸ್ತೋತ್ರ (೧೦/೧೪)

೨. ಶ್ರೀಕೃಷ್ಣನ ಸರ್ವಾವಯವಗಳು ಸಹ ರುಗ್ಮಿಣಿಯಿಂದ ಅತ್ಯಂತ ವಿಶಿಷ್ಟರೀತಿಯಲ್ಲಿ ಸೇವಿಸಲ್ಪಡುವ ಪರಿಪೂರ್ಣ ಅವಯವಗಳು ಎಂಬುದು ಭಾವ.

೩. ಮಹಾಲಕ್ಷ್ಮಿಯು ಶ್ರೀಕೃಷ್ಣನ ಉದರವನ್ನು ಸದಾ ಆಲಿಂಗಿಸಿಕೊಂಡಿರುವುದು ಅವರ ನಿತ್ಯಮುಕ್ತತ್ವಕ್ಕೆ ದ್ಯೋತಕ.

### ಶ್ರೀಕೃಷ್ಣನ ಲಕ್ಷ್ಮೀನಿವಾಸವೆನ್ನಿಸಿದ ವಕ್ಷಸ್ಥಳ

[1]ವಕ್ಷಃ ಸುರಕ್ಷಾಂ ಕುರುತಾನ್ಮುರಾರೇಃ
ಸದ್ವರ್ಣ್ಯಲಾವಣ್ಯಗುಣೈಕಧಾಮ ।
ತತ್ತ್ಯಾಜ ಯನ್ನೈವ ಚಿರಂ ಸಪತ್ನೀ-
ವಕ್ಷೋಜಜಲಬ್ಧಾಂಕಮಪಿ ಸ್ಮ ಲಕ್ಷ್ಮೀಃ ॥ ೨೯ ॥

ತನ್ನ ಸವತಿಯರ ಸ್ತನಗಳ ಗುರುತಿನಿಂದ ಕೂಡಿದ್ದರೂ ಸಹ ಮಹಾಲಕ್ಷ್ಮಿಯು ಯಾವುದನ್ನು ಸರ್ವಥಾ ತೊರೆಯಲಾರಳೋ ಅಂಥಹ ಸಜ್ಜನರಿಂದ ವರ್ಣಿಸಲ್ಪಡುವ ಲಾವಣ್ಯದ ಮುಖ್ಯನೆಲೆಯೆನ್ನಿಸಿದ ಮುರಾರಿಯಾದ ಶ್ರೀಕೃಷ್ಣನ ವಕ್ಷಸ್ಥಳವು, ನಮಗೆ ಸುರಕ್ಷೆಯನ್ನು ನೀಡಲಿ.

ವಿ : ೧. [2]ತನ್ನ ಪತಿಯ ಸವತಿಯರ ಸಹವಾಸ ಪತ್ನಿಗೆ ಎಂದೂ ಮುದನೀಡುವಂತಹುದಲ್ಲ. ಆದರೆ ಜಾಂಬವತ್ಯಾದಿ ಇತರ ಪತ್ನಿಯರಿಂದ ಆಲಿಂಗಿತವಾದ ಶ್ರೀಕೃಷ್ಣನ ವಕ್ಷಸ್ಥಳವನ್ನು ಅದು ಅಪ್ರಿಯವೆನ್ನಿಸಿದರೂ ಅದರಲ್ಲಿನ ಅಸಾಧಾರಣವಾದ ಲಾವಣ್ಯದ ಮೇಲಿನ ಮೋಹದಿಂದಾಗಿ ಮಹಾಲಕ್ಷ್ಮಿಯು ಎಂದೂ ಬಿಡದೆ ಆಲಿಂಗಿಸಿಕೊಂಡಿರುವಳು ಎಂದರ್ಥ.

೨. ಲೋಕದೃಷ್ಟಿಯಲ್ಲಿ ತ್ಯಾಗಕ್ಕೆ ಕಾರಣವಾದ ಅಂಶವಿದ್ದರೂ ಅದರ ಸೌಂದರ್ಯಾತಿ-ಶಯದಿಂದಾಗಿ ಮಹಾಲಕ್ಷ್ಮಿಯು ಬಿಡಲಾರದಷ್ಟು ಹಿರಿಮೆಯನ್ನು ಶ್ರೀಕೃಷ್ಣನ ವಕ್ಷಸ್ಥಳವು ಹೊಂದಿದೆ ಎಂದು ಭಾವ.

೩. ಶ್ರೀಹರಿಯು ಕೇವಲ ರಮಾಪತಿಮಾತ್ರನಾದ್ದರಿಂದ ರಮಾದೇವಿಗೆ ಸವತಿಯ ಪ್ರಸಕ್ತಿಯೇ ಇಲ್ಲ. ಇದು ಶ್ರೀಕೃಷ್ಣ ಬಹುಪತ್ನಿಯರನ್ನು ಹೊಂದಿದ್ದ ಎಂಬ ಲೋಕಪ್ರವಾದವನ್ನು ಆಧರಿಸಿದ ಉಕ್ತಿಮಾತ್ರ ಎಂದು ತಿಳಿಯಬೇಕು.

---

೧. ವಕ್ಷೋಽಧಿವಾಸಮೃಷಭಸ್ಯ ಮಹಾವಿಭೂತೇಃ ಪುಂಸಾಂ ಮನೋನಯನನಿರ್ವೃತಿಮಾದಧಾನಮ್ ।
ಕಂಠಂ ಚ ಕೌಸ್ತುಭಮಣೇರಧಿಭೂಷಣಾರ್ಥಂ ಕುರ್ಯಾನ್ಮನಸ್ಯಖಿಲಲೋಕನಮಸ್ಕೃತಸ್ಯ ॥ - ಶ್ರೀಮದ್ಭಾಗವತ.
ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೫)

೨. ಪರಿತ್ಯಾಗಕಾರಣೇ ವಿದ್ಯಮಾನೇಽಪಿ ಸೌಂದರ್ಯಲೋಭಾತ್ ಶ್ರೀಕೃಷ್ಣಸ್ಯ ವಕ್ಷಸ್ಯೇವ ತಿಷ್ಠತೀತ್ಯರ್ಥಃ । -ವ್ಯಾ.

### ಶ್ರೀಕೃಷ್ಣನ ವಕ್ಷಃಸ್ಥಳದ ಅಪೂರ್ವತೆ

ಆಲಿಂಗಿತಪ್ರಿಯತಮಾಕುಚಕುಂಕುಮಾಂಕ-
ಲಕ್ಷ್ಯಂ ಜಿಗಾಯ ವಸುದೇವಸುತಸ್ಯ ವಕ್ಷಃ।
ಮತ್ತಸ್ಫುರತ್ಪರಿಣತದ್ವಿಪಧಾತುರಕ್ತ-
ಕುಂಭಾಂಕಜೃಂಭಿಹರಿನೀಲವಿಶಾಲವಪ್ರಮ್ ॥ ೩೦ ॥

ತನ್ನನ್ನು ಆಲಿಂಗಿಸಿದ ಪ್ರಿಯತಮೆಯಾದ ರುಗ್ಮಿಣಿಯ ಕುಚದ ಕುಂಕುಮದ ಚಿಹ್ನೆಯಿಂದ ಸೊಗಸುವ ವಸುದೇವಸುತನಾದ ಶ್ರೀಕೃಷ್ಣನ ವಕ್ಷಸ್ಥಳವು, ಮದಿಸಿದ, ಹೊಳೆಯುವ, ತಿವಿಯುವ[1] ದಂತದ ಆನೆಯ ಗೈರಿಕಾದಿ ಧಾತುಗಳಿಂದ ಕೆಂಪಾದ ಕುಂಭಚಿಹ್ನೆಯಿಂದ ಕಂಗೊಳಿಸುವ ಇಂದ್ರನೀಲಪರ್ವತದ ವಿಶಾಲವಾದ ತಪ್ಪಲನ್ನು ಮೀರಿಸಿತು.

ವಿ : ೧. ಶ್ರೀಕೃಷ್ಣನ ಉದರವು ಅತ್ಯಂತ ತೆಳುವಾಗಿದ್ದರೆ, ಅವನ ವಕ್ಷಸ್ಥಳವು ಮಾತ್ರ ತುಂಬಾ ವಿಶಾಲವಾಗಿದ್ದಿತು ಎಂದು ಭಾವ.

೨. ಇಲ್ಲಿ ರುಗ್ಮಿಣಿಯ ಕುಚವನ್ನು ಆನೆಯ ಕುಂಭಸ್ಥಳವೆಂದೂ, ಅಲ್ಲಿ ಲಿಪ್ತವಾದ ಕುಂಕುಮವನ್ನು ಗೈರಿಕಾದಿಧಾತುಗಳ ಲೇಪವೆಂದೂ ಶ್ರೀಕೃಷ್ಣನ ವಕ್ಷಸ್ಥಳವನ್ನು ಇಂದ್ರನೀಲಪರ್ವತವೆಂದೂ ಹೋಲಿಸಲಾಗಿದೆ.

೩. ಲಕ್ಷಣಶಾಸ್ತ್ರದಂತೆ ಉದರವು ತೆಳುವಾಗಿಯೂ, ಎದೆಯು ವಿಶಾಲವಾಗಿಯೂ ಇರಬೇಕು; ಅಂತಹ ಲಕ್ಷಣಗಳನ್ನು ನಿರವಧಿಕ ಪರಿಪೂರ್ಣವಾಗಿ ಹೊಂದಿರುವುದು ಶ್ರೀಕೃಷ್ಣನ ವೈಶಿಷ್ಟ್ಯ; ಅದು ಅವನ ಸರ್ವೋತ್ತಮತ್ವಕ್ಕೂ ದ್ಯೋತಕ ಎಂದು ತಿಳಿಯಬೇಕು.

### ಕೌಸ್ತುಭಕ್ಕೆ ಶೋಭೆನೀಡುವ ಶ್ರೀಕೃಷ್ಣನ ವಕ್ಷಃಸ್ಥಳ

[2]ವಕ್ಷೋ ವಿಶಾಲಂ ಹರಿನೀಲನೀಲಂ
ಲಕ್ಷ್ಮೀಗೃಹಂ ಚಂದನಚರ್ಚಿತಂ ತತ್ ।
ಸತ್ಕೌಸ್ತುಭೋದ್ಭಾಸಕಮಸ್ತು ಚಿತ್ತೇ
ವಿಸ್ತೀರ್ಣಭೂಷಾವಲಿ ವಿಟ್ಠಲಸ್ಯ ॥ ೩೧ ॥

ಇಂದ್ರನೀಲಮಣಿಯಂತೆ ನೀಲವರ್ಣದ, ಮಹಾಲಕ್ಷ್ಮಿಯ ನಿತ್ಯನೆಲೆಯಾದ, ಶ್ರೀಗಂಧದಿಂದ ಲೇಪಿತವಾದ, ಉತ್ತಮವಾದ ಕೌಸ್ತುಭರತ್ನಕ್ಕೆ ಶೋಭೆಯನ್ನು ನೀಡುವ, ಶ್ರೇಷ್ಠ ಆಭರಣ-

೧. 'ತಿರ್ಯಗ್ದಂತಪ್ರಹಾರಸ್ತು ಗಜಃ ಪರಿಣತೋ ಮತಃ' ಇತಿ ಹಲಾಯುಧಃ। - ವ್ಯಾ.

೨. ಸ್ಮರಣೀಯಮುರೋ ವಿಷ್ಣೋರಿಂದಿರಾವಾಸಮೀಶಿತುಃ।
ಅನಂತಮಂತವದಿವ ಭುಜಯೋರಂತರಂ ಗತಮ್ ॥ - ದ್ವಾದಶಸ್ತೋತ್ರ (೧/೫)

ಗಳಿಂದ ಭೂಷಿತವಾದ, ವಿಟ್ಠಲನಾದ ಶ್ರೀಕೃಷ್ಣನ ವಿಶಾಲವಾದ ವಕ್ಷಃಸ್ಥಳವು ಸದಾ ಮನಸ್ಸಿನಲ್ಲಿ ನೆಲೆಸಿರಲಿ.

ವಿ : ೧. ಶ್ರೀಕೃಷ್ಣನ ಕಂಠದಲ್ಲಿ ಕೌಸ್ತುಭಮಣಿಯು ಇರುವುದು ಅದಕ್ಕೆ ಭೂಷಣವೇ ಹೊರತು ಅದರಿಂದ ಶ್ರೀಕೃಷ್ಣನಿಗೆ ಶೋಭೆ ಏನಲ್ಲ ಎಂಬುದು ಇಲ್ಲಿಯ ಮುಖ್ಯಭಾವ.

೨. ಇದು ಶ್ರೀಮದಾಚಾರ್ಯರ ದ್ವಾದಶಸ್ತೋತ್ರ(೧/೭)ದ 'ಭಾಸ್ವತ್ಕೌಸ್ತುಭಭಾಸಕಮ್' ಎಂಬ ಮಾತಿನ ವಿವರಣೆಯಂತಿದೆ.

### ಸುವರ್ಣಕಲಶದಂತಹ ರುಗ್ಮಿಣಿಯ ವಕ್ಷಃಸ್ಥಳ

ಸೌವರ್ಣರಮ್ಯಕಲಶೋಪಮಿತಂ ಮನೋಜ್ಞಂ
[೧]ವಕ್ಷೋಜಕುಡ್ಮಲಯುಗಂ ಜಯತೀಂದಿರಾಯಾಃ ।
ಯಚ್ಚರ್ಚಿತೋಽಪಿ ನವಕುಂಕುಮರಾಶಿರಾಸೀ-
ದ್ವಕ್ಷೋಽನುಲೇಪನಮಣಿಃ ಪುರುಷೋತ್ತಮಸ್ಯ ॥ ೩೨ ॥

ಚಿನ್ನದ ರಮ್ಯಕಲಶದಂತಿರುವ, ಮನೋಹರವಾದ, ಮಹಾಲಕ್ಷ್ಮಿಯಾದ ರುಗ್ಮಿಣಿಯ ಎರಡು ಮೊಗ್ಗಿನಂತಹ ಸ್ತನಗಳು ಉತ್ಕೃಷ್ಟವಾಗಿವೆ; ಅವುಗಳಿಗೆ ಲಿಪ್ತವಾದ ನೂತನವಾದ ಕುಂಕುಮದ ರಾಶಿಯು ಪುರುಷೋತ್ತಮನಾದ ಶ್ರೀಕೃಷ್ಣನಿಗೆ ವಕ್ಷಃಸ್ಥಳದ ಶ್ರೇಷ್ಠ ಅನುಲೇಪನವಾಯಿತು.

ವಿ : ೧. ಕುಂಕುಮರಾಶಿಯಿಂದ ಯುಕ್ತಳಾದ ರುಗ್ಮಿಣಿಯನ್ನು ಶ್ರೀಕೃಷ್ಣನು ಗಾಢವಾಗಿ ಆಲಂಗಿಸಿಕೊಳ್ಳುವನು ಎಂಬುದು ಇದರ ಭಾವ.

### ಶ್ರೀಕೃಷ್ಣನು ಮೆಚ್ಚುವ ರುಗ್ಮಿಣಿಯ ವಕ್ಷಃಸ್ಥಳ

ಆಚ್ಛಾದಿತೋರಃಸ್ಥಲಮೂಲದೇಶಂ
[೨]ಜಾತಸ್ಯ ಯಸ್ಯಾಖಿಲಧರ್ಮಗೋಪ್ತಾ[೩] ।
ಶೌರಿಃ ಕರಂ ಯಚ್ಛತಿ ತಂ ರಮಾಯಾ-
ಶ್ಚಾರು ಸ್ತನಂ ವರ್ಣಯಿತುಂ ಕ ಈಶಃ ॥ ೩೩ ॥

---

೧. ಯತ್ಪ್ರಸಾದೋ ಬ್ರಹ್ಮಾದಿಭಿರ್ಧೃತಃ ತಾದೃಶೇನಾಪಿ ಶ್ರೀಕೃಷ್ಣೇನ ರುಗ್ಮಿಣೀವಕ್ಷೋಜಪ್ರಸಾದಧಾರಣಾತ್ ವಕ್ಷೋಜ-ಸೌಂದರ್ಯಸ್ಯಾತಿಶಯಃ ಕಥಂ ಕಥನೀಯ ಇತಿ ಭಾವಃ। -ವ್ಯಾ.

೨. ಸ್ವಜನನಕರ್ಮಣಾ ಆಚ್ಛಾದಿತಸಕಲವಕ್ಷಃಸ್ಥಲಪ್ರದೇಶೋ ಯಥಾ ಭವತಿ ತಥೇತ್ಯರ್ಥಃ। - ವ್ಯಾ.

೩.. ಅಖಿಲಧರ್ಮಗೋಪ್ತಾ ಶೌರಿಃ ಶ್ರೀಕೃಷ್ಣಃ ಕರಂ ಹಸ್ತಂ ಬಲಿಮಿತಿ ಧ್ವನಿಃ। ಯಚ್ಛತಿ ಪ್ರಯಚ್ಛತಿ। ದ್ರೋಹಿಣೋಽಪಿ ಧರ್ಮಗೋಪ್ತುಃ ಶೌರೇಃ ಕರದಾನಾತ್ ಕಾರಣಾತ್ ರಮಾಯಾಃ ರುಗ್ಮಿಣ್ಯಾಃ ತಂ ಚಾರುಸ್ತನಂ ವರ್ಣಯಿತುಂ ಕಃ ಪುಮಾನ್ ಈಶಃ ಸಮರ್ಥಃ ನ ಕೋಽಪೀತ್ಯರ್ಥಃ। - ವ್ಯಾ.

ಸಕಲ ಧರ್ಮಗಳನ್ನು ಪರಿಪಾಲಿಸುವಂತಹ ಶ್ರೀಕೃಷ್ಣನು, ವಕ್ಷಸ್ಥಳದ ಮೂಲಪ್ರದೇಶವನ್ನು ಕಾಣದಂತೆ ಮರೆಮಾಡಿದ, ಯಾವುದರ ಮೇಲೆ ತನ್ನ ಕರವನ್ನು ಇರಿಸುವನೋ ಅಂತಹ ರುಗ್ಮಿಣಿಯ ಮನೋಹರವಾದ ಸ್ತನವನ್ನು ವರ್ಣಿಸಲು ಯಾವನು ತಾನೆ ಸಮರ್ಥನಾದಾನು?

ವಿ: ಇಲ್ಲಿ ಕರ ಎಂಬುದಕ್ಕೆ ಹಸ್ತ ಹಾಗೂ ಕಪ್ಪ ಎಂಬ ಎರಡು ಅರ್ಥಗಳು ವಿವಕ್ಷಿತ (ಶ್ಲೇಷಾಲಂಕಾರ).

**ಸುವರ್ಣಕಲಶದಂತಹ ರುಗ್ಮಿಣಿಯ ವಕ್ಷಃಸ್ಥಳ**

**ಉದ್ಯನ್ಮನೋಜ್ಞಮುಖನಿರ್ಮಲಪೂರ್ಣಚಂದ್ರ-**
**ಮುದ್ವೀಕ್ಷ್ಯ ಮಂದಹಸಿತಾಮೃತಶೋಭಿಬಿಂಬಮ್ ।**
**ಬಿಭ್ರತ್ ಸದಾ ಮುಕುಲಿತಾಂಬುಜಕೋಶಕಾಂತಿಂ**
**ಪುಷ್ಣಾತು ವಿಶ್ವಜನನೀಕುಚಮಂಡಲಂ ನಃ ॥ ೩೪ ॥**

ಮಂದಹಾಸವೆಂಬ ಅಮೃತದಿಂದ ಶೋಭಿಸುವ ಮಂಡಲದ, ಉದಿಸುವಂತಹ ಮನೋಹರವಾದ ಮುಖರೂಪದ ನಿರ್ಮಲವಾದ ಪೂರ್ಣಚಂದ್ರನನ್ನು ಕಂಡು, ಮುದುಡಿದ ಕಮಲದ ಕಾಂತಿಯನ್ನು ಹೊಂದಿರುವ ಲೋಕಮಾತೆಯಾದ ರುಗ್ಮಿಣಿಯ ಸ್ತನಮಂಡಲವು ನಮ್ಮನ್ನು ಪೋಷಿಸಲಿ.

ವಿ.: ಶ್ರೀಕೃಷ್ಣನ ಮುಖವು ನಿರ್ಮಲವಾದ ಹುಣ್ಣಿಮೆಯ ಚಂದ್ರನಂತಿದ್ದರೆ, ಶ್ರೀರುಗ್ಮಿಣಿಯ ಕುಚಮಂಡಲವು ಮುದುಡಿದ ಕಮಲಕೋಶದ ಕಾಂತಿಯನ್ನು ಹೊಂದಿದೆ ಎನ್ನುವಲ್ಲಿ ಶ್ರೀಕೃಷ್ಣನ ಸೌಂದರ್ಯವು ರುಗ್ಮಿಣಿಯ ಸೌಂದರ್ಯಕ್ಕಿಂತ ತುಂಬಾ ಹೆಚ್ಚಿನದು ಎಂಬ ಪ್ರಮೇಯ ನಿರೂಪಿತವಾಗಿದೆ.

**ಸದ್ವಂಶಜಾತಃ[೧] ಸುಗುಣಃ ಸುವೃತ್ತ-**
**ರತ್ನೋಽಪಿ ಹಾರಃ ಕಮಲಾಕುಚಾಂತೇ ।**
**ನೈವಾವಕಾಶಂ ಲಭತೇ ಕುಲೇನ**
**ಕಿಂವಾ ಗುಣೌಘೈಃ ಕಠಿನೋಪಕಂಠೇ ॥ ೩೫ ॥**

ಉತ್ತಮ ವಂಶದಲ್ಲಿ ಜನಿಸಿದ್ದಾಗಿದ್ದರೂ, ಕಲ್ಯಾಣ ಗುಣಗಳಿಂದ ಕೂಡಿದ್ದರೂ, ಶ್ರೇಷ್ಠ ರತ್ನಗಳಿಂದ ಮಾಡಲ್ಪಟ್ಟಿದ್ದರೂ ವರ್ತುಲವಾದ ಮಧ್ಯದ ಪ್ರಧಾನರತ್ನವನ್ನು ಹೊಂದಿದ್ದರೂ ಸಹ ಮುತ್ತಿನ ಹಾರವು ರುಗ್ಮಿಣಿಯ ವಕ್ಷಃಸ್ಥಳಪ್ರಾಂತದಲ್ಲಿ ಅವಕಾಶವನ್ನು ಪಡೆಯದಾಗಿದೆ; ಕಠಿಣಮನಸ್ಸಿನವನ ಬಳಿಯಲ್ಲಿ ಕುಲದಿಂದಲಾಗಲಿ, ಗುಣಗಳ ರಾಶಿಯಿಂದಾಗಲಿ, ಏನಾದೀತು?

---

೧. ವೇಣೋರ್ಮುಕ್ತಾಫಲಜನ್ಮಭೂಮಿತ್ವಾದಿತಿ ಭಾವಃ। ಸತ್ಕುಲಪ್ರಸೂತೋಽಪೀತಿ ಧ್ವನಿಃ। – ವ್ಯಾ.

ವಿ : ೧. ಕಠಿಣಮನಸ್ಸಿನವರಿಗೆ ಕುಲದ ಮಹತ್ತ್ವವಾಗಲಿ, ಗುಣಗಳ ಹಿರಿಮೆಯಾಗಲಿ, ತಿಳಿಯಲಾರದು[೧] ಎಂದು ಭಾವ.

೨. ಉತ್ತಮ ವಂಶ, ಕಲ್ಯಾಣ ಗುಣಗಳು, ಸದಾಚಾರ ಮೊದಲಾದವನ್ನು ಹೊಂದಿದ್ದರೂ, ಕಠಿಣ ಮನಸ್ಸಿನವರನ್ನು ಮೆಚ್ಚಿಸಲು ಸಾಧ್ಯವಿಲ್ಲ ಎಂದರ್ಥ.

### ಶ್ರೀಕೃಷ್ಣನ ಹಸ್ತಗಳ ವೈಭವ

ಶಾರ್ಙ್ಗಸ್ಯ ಗ್ರಹಣೇ ಮನೋರಮಗುಣಸ್ಯಾಕರ್ಷಣೇ ಸಾಯಕ-
ಸ್ಯಾದಾನೇ ಯುಧಿ ಮಾಧವಸ್ಯ ಫಲಿತಾಃ ಸಂಧಾನಕರ್ಮಣ್ಯಪಿ।
ಚತ್ವಾರಃ ಕಬರೀಂ ಪ್ರಗೃಹ್ಯ ಕಮಲಾಮಾಲಿಂಗ್ಯ ಗಂಡಸ್ಥಲೀಂ
ಸಂಗೃಹ್ಯಾಧರಜಾಮೃತಂ ಚ ಪಿಬತೋ ಹಸ್ತಾ[೨] ರಹಃಕೇಲಿಷು ॥ ೩೬ ॥

ಶಾರ್ಙ್ಗವನ್ನು ಹಿಡಿಯುವುದು, ಅದರ ರಮ್ಯವಾದ ಹಗ್ಗವನ್ನು ಎಳೆಯುವುದು, ಬಾಣಗಳನ್ನು ತೆಗೆದುಕೊಳ್ಳುವುದು ಮತ್ತು ಅವುಗಳನ್ನು ಹೂಡುವುದು - ಎಂಬ ಕಾರ್ಯಗಳಲ್ಲಿ ತೊಡಗುವ ಲಕ್ಷ್ಮೀಪತಿಯಾದ ಶ್ರೀಕೃಷ್ಣನ ನಾಲ್ಕು [೩]ಕೈಗಳು ಸುರತಕ್ರೀಡೆಗಳಲ್ಲಿ ರುಗ್ಮಿಣಿಯ ಮುಡಿಯನ್ನು ಹಿಡಿಯಲು, ಆಲಿಂಗಿಸಲು, ಗಂಡಸ್ಥಳವನ್ನು ಹಿಡಿದು ಅಧರಾಮೃತವನ್ನು ಪಾನಮಾಡಲು ಸಹ ತೊಡಗಿಕೊಂಡಿವೆ.

ವಿ. : ಶ್ರೀಕೃಷ್ಣನ ಕೈಗಳು ಧನುಸ್ಸಿನಲ್ಲಿ ಬಾಣಪ್ರಯೋಗವನ್ನು ಮಾಡಲು ಸಮರ್ಥವಾಗಿರುವಂತೆ ರುಗ್ಮಿಣಿಯೊಂದಿಗೆ ವಿಹರಿಸಲು ಸಹ ಸಮರ್ಥವಾಗಿವೆ ಎಂದು ಭಾವ.

### ಪಾರಿಜಾತದ ರೆಂಬೆಗಳಂತಹ ಶ್ರೀಕೃಷ್ಣನ ಹಸ್ತಗಳು

[೪]ಹಸ್ತಾಃ ಸ್ಫುರನ್ಮರಕತದ್ಯುತಯೋಽತಿದೀರ್ಘಾಃ
ಕೃಷ್ಣಸ್ಯ ರಮ್ಯನಖಮೌಕ್ತಿಕಶೋಭಮಾನಾಃ।

---

೧. ನಿಷ್ಠುರಪುರುಷಸಮೀಪೇ ಆಭಿಜಾತ್ಯಂ ಸೌಶೀಲ್ಯಾದಯೋ ಗುಣಾಶ್ಚ ನ ಶೋಭಂತ ಇತ್ಯರ್ಥಃ । ಕುಚ-ಮಂಡಲಸ್ಯಾಪಿ ಕಠಿಣತ್ವಾದರ್ಥಾಂತರನ್ಯಾಸಸ್ಯಾವಕಾಶಃ। - ವ್ಯಾ.

೨. ಕಬರೀಗ್ರಹಣೇ ಏಕಃ । ಆಲಿಂಗನೇ ದ್ವೌ । ಗಂಡಸ್ಥಲಗ್ರಹಣೇ ಏಕ ಇತಿ ಚತ್ವಾರೋ ಹಸ್ತಾಃ ಉಪಯುಕ್ತಾ ಇತ್ಯರ್ಥಃ। - ವ್ಯಾ.

೩. ತ್ವರಾಯುಕ್ತಸ್ಯ ಏಕದೈವ ಕ್ರಿಯಾಚತುಷ್ಟಯಕರಣೇ ಹಸ್ತಚತುಷ್ಟಯಸ್ಯಾಪೇಕ್ಷಿತತ್ವಾದಿತಿ ಭಾವಃ। - ವ್ಯಾ

೪. ಬಾಹೂಂಶ್ಚ ಮಂದರಗಿರೇಃ ಪರಿವರ್ತನೇನ ನಿರ್ಣಿಕ್ತಬಾಹುವಲಯಾನಧಿಲೋಕಪಾಲಾನ್ ।
ಸಂಚಿಂತಯೇದ್ದಶಶತಾರಮಸಹ್ಯತೇಜಃ ಶಂಖಂ ಚ ತತ್ಕರಸರೋರುಹರಾಜಹಂಸಮ್ ॥ - ಶ್ರೀಮದ್ಭಾಗವತ.
ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ।
ಪೀನವೃತ್ತಾ ಜಗದ್ರಕ್ಷಾಕೇವಲೋದ್ಯೋಗಿನೋಽನಿಶಮ್ ॥ - ದ್ವಾದಶಸ್ತೋತ್ರ (೧/೬)
ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ॥ -ದ್ವಾದಶಸ್ತೋತ್ರ (೧೦/೧೬)

ಯಚ್ಛಂತು ನಃ ಫಲಿತಪುಷ್ಪಿತಪಾರಿಜಾತ-
ಶಾಖಾಸಮಾನವಿಭವಾ ವಿಭವೋऽಖಿಲಾರ್ಥಾನ್ ॥ ೩೭ ॥

ಹೊಳೆಯುವ ಮರಕತಮಣಿಗಳ ಕಾಂತಿಯ, ಅತ್ಯಂತ ನೀಳವಾದ, ರಮ್ಯವಾದ ನಖಗಳೆಂಬ ಮುತ್ತುಗಳಿಂದ ಶೋಭಿಸುವ[1], ಹಣ್ಣುಹೂವುಗಳಿಂದ ಕೂಡಿದ, ಪಾರಿಜಾತದ ರೆಂಬೆಗಳಿಗೆ ಸಮಾನವಾದ ಶೋಭೆಯಿಂದ ಕೂಡಿದ, ಸಮರ್ಥವಾದ ಶ್ರೀಕೃಷ್ಣನ ತುಂಬಾ ದೀರ್ಘವಾದ ಹಸ್ತಗಳು ನಮಗೆ ಸಕಲ ಪುರುಷಾರ್ಥಗಳನ್ನು ನೀಡಲಿ.

ವಿ : ೧. ಪಾರಿಜಾತವು ಬಯಸಿದ್ದನ್ನು ನೀಡುವ ವೃಕ್ಷ[2]; ಶ್ರೀಕೃಷ್ಣನ ಹಸ್ತವು ಭಕ್ತರ ಸಕಲ ಅಭೀಷ್ಟಗಳನ್ನು ಈಡೇರಿಸುವುದರಿಂದ ಅವುಗಳನ್ನು ಇಲ್ಲಿ ಪಾರಿಜಾತದ ರೆಂಬೆಗಳು ಎಂದೂ ಕರೆಯಲಾಗಿದೆ. ಹಸ್ತವು ಪಾರಿಜಾತವಾದರೆ ಬೆರಳುಗಳು ಅದರ ರೆಂಬೆಗಳಿದ್ದಂತೆ ಎಂದೂ ಭಾವ.

೨. ಶ್ರೀಕೃಷ್ಣನ ನಾಲ್ಕು ಹಸ್ತಗಳು ನಾಲ್ಕು ಪುರುಷಾರ್ಥಗಳನ್ನು ನೀಡಲಿ ಎಂದು ತಾತ್ಪರ್ಯ.

### ಶ್ರೀಕೃಷ್ಣನ ದೈತ್ಯನಾಶಕವಾದ ಚಕ್ರಶಂಖಾದಿಗಳು

ಚಕ್ರಂ ಹರೇರ್ಮರ್ದಿತದೈತ್ಯಚಕ್ರಂ
ಶಂಖಃ[3] ಸ್ವನೈರ್ಧಿಕ್ಕೃತದೈತ್ಯಶಂಖಃ।
ಪದ್ಮಂ ಚ ವಿಧ್ವಸ್ತಪರಾಸ್ಯಪದ್ಮಂ
ಗದಾ ಚ ಸಾ ಪಾಪಗದಾಪಹಂತ್ರೀ ॥ ೩೮ ॥

ಶ್ರೀಹರಿಯ ಚಕ್ರವು ದೈತ್ಯವೃಂದವನ್ನು ನಾಶಪಡಿಸಿದಂತಹದು. ಶಂಖವು ತನ್ನ ಧ್ವನಿಗಳಿಂದ ದೈತ್ಯರ ಅಪಾರಸೇನೆಯ ಶಂಖ (ಶಂಖಸಂಖ್ಯಾಕವಾದ) ಘೋಷಗಳನ್ನು ಧಿಕ್ಕರಿಸು-ವಂತಹುದು; ಪದ್ಮವು ಶತ್ರುಗಳ ಮುಖಕಮಲವನ್ನು ಮುದುಡಿಸುವಂತಹುದು; ಗದೆಯು ಪಾಪಗಳೆಂಬ ವ್ಯಾಧಿಗಳನ್ನು ನಾಶಪಡಿಸುವಂತಹುದು.

---

೧. "ಮಾಣಿಕ್ಯಪುಷ್ಪೋ ವಿವಿಧಮುಕ್ತಾಫಲಫಲಾನ್ವಿತಃ" (ಪದ್ಮಪುರಾಣಾಂತರ್ಗತ ವಾಸುದೇವಸಹಸ್ರನಾಮಸ್ತೋತ್ರ) ಇತಿ ವಚನಾತ್ । -ವ್ಯಾ.

೨. "ಸ್ಫುರನ್ಮರಕತಸ್ಥೂಲಶಾಖಾಶತವಿರಾಜಿತ" (ಪದ್ಮಪುರಾಣಾಂತರ್ಗತ ವಾಸುದೇವಸಹಸ್ರನಾಮಸ್ತೋತ್ರ) ಇತಿ ವಚನಾತ್ । ಮರಕತರತ್ನವತ್ ಶ್ಯಾಮಲಾಃ ಹಸ್ತಾಃ ಸ್ಥೂಲಶಾಖಾಸ್ಥಾನೀಯಾಃ । ಮಾಣಿಕ್ಯಪುಷ್ಪೋ ವಿವಿಧ ಮುಕ್ತಾಫಲಫಲಾನ್ವಿತಃ ಇತಿ ವಚನಾತ್ । ಈಷದ್ರಕ್ತನಖೋಪಾಂತಪ್ರದೇಶೋ ಮಾಣಿಕ್ಯಸದೃಶತ್ವಾತ್ ಪುಷ್ಪಸ್ಥಾನೀಯಃ। -ವ್ಯಾ.

೩.. ಕೌಮೋದಕೀಂ ಭಗವತೋ ದಯಿತಾಂ ಸ್ಮರೇತ ದಿಗ್ಧಾಮರಾತಿಭಟಶೋಣಿತಕರ್ದಮೇನ।
ಮಾಲಾಂ ಮಧುವ್ರತವರೂಥಗಿರೋಪಘುಷ್ಟಾಂ ಚೈತ್ಯಸ್ಯ ತತ್ತ್ವಮಮಲಂ ಮಣಿಮಸ್ಯ ಕಂಠೇ॥
- ಶ್ರೀಮದ್ಭಾಗವತ

ವಿ : ೧. ಶ್ರೀಕೃಷ್ಣನ ಕೈಯಲ್ಲಿನ ಚಕ್ರ,ಶಂಖ, ಪದ್ಮ ಹಾಗೂ ಗದೆಗಳ ಹಿರಿಮೆಯು ಇಲ್ಲಿ ವರ್ಣಿತವಾಗಿದೆ.

೨. ಶ್ರೀಹರಿಯ ಚಕ್ರಾದಿಗಳಿಗೆ [1]ದುರ್ಗಾದೇವಿ, ಶ್ರೀದೇವಿ, ಭೂದೇವಿ ಹಾಗೂ ವಾಯುದೇವರು ಅಭಿಮಾನಿದೇವತೆಗಳಾಗಿರುವರು ಎಂಬ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ. ಇದರಿಂದ ದುರ್ಗಾದೇವಿ ಮೊದಲಾದವರ ಹಿರಿಮೆಯ ವರ್ಣನೆಯು ಸಹ ತಿಳಿಯುವಂತಾಗಿದೆ ಎಂದು ತಿಳಿಯಬೇಕು.

೩. ಲಕ್ಷ, ಕೋಟಿ ಎಂಬಂತೆ ಶಂಖ ಎಂಬ ಹೆಸರಿನ ಒಂದು [2]ಸಂಖ್ಯೆಯೂ ಇದೆ.

೪. ಶ್ರೀಕೃಷ್ಣನು ಜರಾಸಂಧ ಪ್ರತಿಬಾರಿ ೨೩ ಅಕ್ಷೋಹಿಣಿಯಂತೆ ಒಟ್ಟು ೧೮ ಬಾರಿ ತಂದಿದ್ದ ೧೮೪ ಅಕ್ಷೋಹಿಣಿ ಸೈನ್ಯ, ಕಂಸನ ಬಳಿಯಿದ್ದ ೨೦ ಅಕ್ಷೋಹಿಣಿ ಸೈನ್ಯ, ಕಾಲಯವನನ ಮೂರು ಕೋಟಿ ಅಕ್ಷೋಹಿಣಿ ಸೈನ್ಯ, ಹಂಸಡಿಭಿಕರ ೧೭ ಅಕ್ಷೋಹಿಣಿ ಸೈನ್ಯ, ನರಕಾಸುರನ ೩೦ ಅಕ್ಷೋಹಿಣೀ ಸೈನ್ಯ, ಮೊದಲಾಗಿ ಅಪಾರ ಸಂಖ್ಯೆಯ ದೈತ್ಯ ಸೇನೆಯನ್ನು ನಾಶಗೊಳಿಸಿದ ಎಂಬ ಹಿನ್ನೆಲೆಯಲ್ಲಿ ಇಲ್ಲಿಯ 'ಮರ್ದಿತದೈತ್ಯಚಕ್ರಂ' ಎಂಬ ಇಲ್ಲಿಯ ಮಾತಿನ ಸ್ವಾರಸ್ಯ ಅರ್ಥವಾಗುವುದು. ಅದರಂತೆ ಪಾಂಡವರ ಮೂಲಕ ಕೊಲ್ಲಿಸಿದ ಕೌರವರ ೧೧ ಅಕ್ಷೋಹಿಣಿ ಸೈನ್ಯ ಮೊದಲಾದವು ಇದರಿಂದ ಉಪಲಕ್ಷಿತವೆಂದು ತಿಳಿಯಬೇಕು. ಶ್ರೀರಾಮಾವತಾರದಲ್ಲಿ ೩೬೦೦೦ ಮಹೌಘ ಅಕ್ಷೋಹಿಣಿ ಸಂಖ್ಯೆಯ ರಾವಣನ ಮೂಲಬಲವನ್ನು ಶ್ರೀರಾಮ ಅಷ್ಟೇ ಸಂಖ್ಯೆಯ ರೂಪಗಳನ್ನು ಸ್ವೀಕರಿಸಿ ಸಂಹಾರ ಮಾಡಿದ್ದು [3] ಸಹ ಇಲ್ಲಿ ಗ್ರಾಹ್ಯ. ಶ್ರೀಹರಿಯ ರೂಪರೂಪಗಳಿಗೆ ಭೇದವಿಲ್ಲ ಎಂಬ ಹಿನ್ನೆಲೆಯಲ್ಲಿ ಇದು ತುಂಬಾ ಅರ್ಥವತ್ತಾದ ವಿವರವಾಗಿದೆ.

೪. ಚಕ್ರ – ಚಕ್ರ ಹಾಗೂ ಗುಂಪು, ಶಂಖ – ಶಂಖ ಹಾಗೂ ಸಂಖ್ಯೆ, ಪದ್ಮ – ಕಮಲ ಹಾಗೂ ಮುಖಕಮಲ, ಗದಾ – ಗದೆ; ಗದ – ಔಷಧಿ.

### ಭಕ್ತರಿಗೆ ಮುದನೀಡುವ ಶ್ರೀಕೃಷ್ಣನ ನಂದಕ

**ದ್ವಿಷಾಮಸಹ್ಯೋಽಪಿ ನಿಜಪ್ರಹರ್ಷ-**
**ಕರೋಽಸ್ಯ ಖಡ್ಗಃ ಕಿಲ ನಂದಕಾಖ್ಯಃ ।**

---

೧. ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ ಶ್ರೀರಿತಿ ಯಾಂ ವದಂತಿ ।
ಸತ್ತ್ವಾತ್ಮಿಕಾ ಶಂಖಮಥೋ ರಜಃಸ್ಥಾ ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ ॥ –ಮ.ಭಾ.ತಾ.ನಿ.(೩/೭೩.)

೨. ಶಂಖೋ ನಿಧೌ ಲಲಾಟಾಸ್ಥಿಸಂಖ್ಯಾವಲಯಕಂಬುಷು ಇತಿ ರತ್ನಮಾಲಾ । – ವ್ಯಾ.

ಶತಂ ಶತಸಹಸ್ರಾಣಾಂ ಕೋಟಿಮಾಹುರ್ಮನೀಷಿಣಃ ।
ಶತಂ ಕೋಟಿಸಹಸ್ರಾಣಾಂ ಶಂಖ ಇತ್ಯಭಿಧೀಯತೇ ॥ – ವಾಲ್ಮೀಕಿರಾಮಾಯಣ (೬/೨೮/೩೩.)

೩. ಶ್ರೀಶತಸಹಸ್ರಾಣಿ ಮಹೌಘಾನಾಮಕ್ಷೋಹಿಣೀನಾಂ ಸಹಷಟಹಸ್ರಮ್ ।

ವಿಯುಕ್ತನಾರೀಪರಿತಾಪಕಾರೀ
ಕಿಮಿಂದುರಾನಂದಕರೋ ನ ಲೋಕೇ ॥ ೩೯ ॥

ವೈರಿಗಳಿಗೆ ಸಹಿಸಲಸಾಧ್ಯವೆನ್ನಿಸಿದರೂ ಶ್ರೀಕೃಷ್ಣನ ಈ ನಂದಕ ಎಂಬ ಖಡ್ಗವು ಅವನ ಭಕ್ತರಿಗೆ ವಿಶೇಷ ನಲಿವನ್ನು ನೀಡುವಂತಹುದು; ಅಗಲಿದ ಪ್ರಣಯಿಸ್ತ್ರೀಯರಿಗೆ ನೋವುಂಟು-ಮಾಡುವ ಚಂದ್ರನು ಲೋಕಕ್ಕೆ ನಲಿವು ನೀಡುವವನಾಗಿಲ್ಲವೇನು?

ವಿ : ೧. ಶ್ರೀಕೃಷ್ಣನ ಖಡ್ಗ ಭಕ್ತರಿಗೆ ತಾರಕ, ದ್ವೇಷಿಗಳಿಗೆ ಮಾರಕ ಎಂದರ್ಥ; ಇದನ್ನು ಚಂದ್ರನ ನಿದರ್ಶನದಿಂದ ಸ್ಫುಟಪಡಿಸಿರುವರು; ಚಂದ್ರ ಪತಿಯಿಂದಗಲಿದ ಪ್ರಣಯಿಸ್ತ್ರೀಯರಿಗೆ ಸಂತಾಪ ನೀಡಿದರೂ ಒಟ್ಟಾಗಿ ಲೋಕದ ಜನರಿಗೆ ಬೆಳದಿಂಗಳಿನ ಮೂಲಕ ಹರ್ಷನೀಡುವಂತೆ.

೨. ಕೆಲವರಿಗೆ ನೋವು ನೀಡುವ ಚಂದ್ರನನ್ನು ಲೋಕಕ್ಕೆ ಆನಂದಕರ ಎಂದೇ ಕೊಂಡಾಡುವಂತೆ ದುಷ್ಟರಿಗೆ ಕೇಡು ಬಗೆದರೂ ಸಹ ಸಜ್ಜನರಿಗೆ ಆನಂದಕರವಾದ ಶ್ರೀಕೃಷ್ಣನ ಖಡ್ಗಕ್ಕೆ ನಂದಕ ಎಂಬ ಇಲ್ಲಿಯ ವಿವರಣೆ ಅತ್ಯಂತ ರೋಚಕ.

೩.. ಕಮಪಿ ಸಕಲಹೃದ್ಯಂ ಕಲ್ಪಯನ್ನೈವ ದೈವಮ್ (೧೪/೫೨) ಎಂಬ ಸುಮಧ್ವವಿಜಯದ ಸಕಲರಿಗೂ ರಮ್ಯವೆನಿಸುವ ಪದಾರ್ಥ ಭಗವಂತನ ಸೃಷ್ಟಿಯಲ್ಲಿಯೇ ಇಲ್ಲ ಎಂಬ ಮಾತಿನ ಹಿನ್ನೆಲೆಯಲ್ಲೂ ದೈತ್ಯರಿಗೆ ಅಪ್ರಿಯವಾಗಿದ್ದರೂ ಶ್ರೀಕೃಷ್ಣನ ಖಡ್ಗ ನಂದಕವೇ ಆಗಿದೆ ಎಂಬ ಮಾತಿನ ಸ್ವಾರಸ್ಯ ತಿಳಿಯಬಹುದು.

### ಶತ್ರುವರ್ಗಕ್ಕೆ ದೈನ್ಯವುಂಟುಮಾಡುವ ಶ್ರೀಕೃಷ್ಣನ ಧನುಸ್ಸು

ಶರೈರಪಾರೈ ರಿಪುವರ್ಗದೈನ್ಯ-
ಕರೋಽಸ್ಯ ಚಾಪಸ್ತ್ರಿನತೋ ಮುರಾರೇಃ ।
ತಥಾಹಿ ಸದ್ವಂಶಭವಾ ಗುಣಾಢ್ಯಾ
ನತಾಃ ಸಮರ್ಥಾ ಅಪಿ ಸರ್ವಸಂಧೌ ॥ ೪೦ ॥

ಮೂರು ಕಡೆಗಳಲ್ಲಿ ಬಾಗಿರುವ ಮುರಾರಿಯಾದ ಶ್ರೀಕೃಷ್ಣನ ಈ ಶಾರ್ಙ್ಗಧನುಸ್ಸು ತನ್ನ ಅಪಾರವಾದ ಬಾಣಗಳಿಂದ ಶತ್ರುವರ್ಗಕ್ಕೆ ದೀನತೆಯನ್ನುಂಟುಮಾಡುವುದು; ಅದು ಸರಿಯೆ; ಉತ್ತಮವಂಶದಲ್ಲಿ ಜನಿಸಿದ ಗುಣವಂತರು ಸಮರ್ಥರೇ ಆಗಿದ್ದರೂ ಸರ್ವ ಕಾಲದಲ್ಲೂ ನಮ್ರರೇ ಆಗಿರುವರು.

ವಿ : ೧. ನಂದಕದಂತೆ ಶಾರ್ಙ್ಗಧನುಸ್ಸು ಸಹ ಶತ್ರುವಿನಾಶಕವಾದುದು ಎಂದರ್ಥ.

೨. ಅಪಾರ ಶತ್ರುವರ್ಗಕ್ಕೆ ಮೃತ್ಯುಪ್ರಾಯವಾದ ಧನಸ್ಸು ಮೂರೆಡೆ ಬಾಗಿರುವುದು ಅದರ ವಿನಯದ ಸಂಕೇತ; ಇದರಿಂದ ಗುಣವಂತರಾದವರು ಎಂತಹ ಅಪೂರ್ವ ಸಾಧನೆ ಮಾಡಿದರೂ ನಮ್ರರಾಗಿಯೇ ಇರುವರು ಎಂಬುದು ವಿಶೇಷ.

೩. ಅದರಂತೆ ವಿನೀತರಾದವರಿಗೆ ವಿಶೇಷವಾದ ಕಾರ್ಯಸಾಧನೆ ಅಸಾಧ್ಯವೇನಲ್ಲ ಎಂಬ ಅರ್ಥವೂ ಸೂಚಿತ.

೪. 'ಸದ್ವಂಶಭವಾ', 'ಗುಣಾಢ್ಯಾ' ಹಾಗೂ 'ನತಾಃ' ಎಂಬಲ್ಲಿ ಕ್ರಮವಾಗಿ ಉತ್ತಮ ವಂಶದಲ್ಲಿ ಜನಿಸಿದ ಹಾಗೂ ಉತ್ತಮ ಬಿದಿರಿನಿಂದ ತಯಾರಾದ, ಗುಣದಿಂದ ತುಂಬಿದ ಹಾಗೂ ಹಗ್ಗ ಕಟ್ಟಲ್ಪಟ್ಟ, ನಮ್ರರಾದ ಹಾಗೂ ಬಾಗಿದ ಎಂಬುದಾಗಿ ಎರಡು ಬಗೆಯ ಅರ್ಥಗಳು ಇರುವುದರಿಂದ ಶ್ಲೇಷಾಲಂಕಾರ.

೫. 'ವಿನಯೋ ಹಿ ಭೂಷಯತಿ ಸರ್ವರಸಮ್' ಎಂಬ ಸುಮಧ್ವವಿಜಯದ (೧೧/೫೪) ಮಾತು ಇಲ್ಲಿ ಸ್ಮರಣೀಯವಾಗಿದೆ.

### ಶ್ರೀಕೃಷ್ಣನ ಅಪೂರ್ವ ಹಸ್ತಗಳು

ಹಸ್ತಾ ಹರೇಃ ಕಟಕಕಂಕಣಮುದ್ರಿಕಾದ್ಯೈ-
ರ್ದೀಪ್ತಾಃ ಸುದರ್ಶನಗದಾಂಬುಜಶಂಖಶೋಭಾಃ[೧] ।
ವೃತ್ತಾಸ್ತ್ರಿರೇಖಮಣಿಬಂಧರುಚೋಽತಿದೀರ್ಘಾ
ರಕ್ತಾಬ್ಜಕೋಮಲತಲಾ ಮಮ ಮಾನಸೇ ಸ್ಯುಃ ॥ ೪೧ ॥

ಕಡಗ, ಕಂಕಣ, ಮುದ್ರಿಕೆ ಮೊದಲಾದವುಗಳಿಂದ ಹೊಳೆಯುವ, ಸುದರ್ಶನ, ಗದೆ, ಪದ್ಮ ಶಂಖಗಳಿಂದ ಕಂಗೊಳಿಸುವ, ದುಂಡಾದ, ಮೂರು ರೇಖೆಗಳಿಂದ ಕೂಡಿದ ಮಣಿಕಟ್ಟಿನ ಕಾಂತಿಯನ್ನು ಹೊಂದಿದ, ನೀಳವಾದ ಕೆಂಪು ಕಮಲದಂತಹ ಅಂಗೈಗಳುಳ್ಳ, ಶ್ರೀಹರಿಯ ತೋಳುಗಳು ನನ್ನ ಮನಸ್ಸಿನಲ್ಲಿ ನೆಲೆಸಿರಲಿ.

ವಿ : ೧. ಶ್ರೀಹರಿಯ ನಾಲ್ಕು ಕೈಗಳಲ್ಲಿನ ಆಭರಣ, ಆಯುಧಗಳು ಹಾಗೂ ಅವುಗಳ ಸೌಂದರ್ಯವನ್ನು ಇಲ್ಲಿ ವರ್ಣಿಸಲಾಗಿದೆ.

### ರುಗ್ಮಿಣಿಯ ಹಸ್ತದ ವೈಭವ

ಭೈಷ್ಮ್ಯಾಃ ಕ್ವಣತ್ಕನಕಕಂಕಣರಂಜಿತೋ ಮೇ
ಹಸ್ತಃ ಸಮಸ್ತಫಲದಸ್ತನುತಾದಭೀಷ್ಟಮ್ ।
ಯೇನಾನಿಶಂ ರಹಸಿ ಬಂಧಮಪೇಕ್ಷಮಾಣಃ
ಶ್ರೀಶೋಽಖಿಲಂ ಹರತಿ ಪೂರ್ಣಮನೋರಥೋಽಪಿ ॥ ೪೨ ॥

---

೧. ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ ।
ಕರುಣಾಪೂರ್ಣವರಪ್ರದ ಚರಿತಂ ಜ್ಞಾಪಯ ಮೇ ತೇ ॥ -ದ್ವಾದಶಸ್ತೋತ್ರ(೧೦/೧೬)

ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಸದಾ ಪೂರ್ಣಮನೋರಥನಾಗಿದ್ದರೂ, ಏಕಾಂತದಲ್ಲಿ ಯಾವುದರ ಬಂಧವನ್ನು ಬಯಸಿ, ಸಕಲಜಗತ್ತನ್ನು ನಾಶಪಡಿಸುವನೋ ಅಂತಹ ಧ್ವನಿಗೈಯುವ ಚಿನ್ನದ ಕಂಕಣಗಳಿಂದ ಶೋಭಿಸುವ ಸಮಸ್ತ ಫಲಗಳನ್ನು ನೀಡುವಂತಹ ರುಗ್ಮಿಣಿಯ ಹಸ್ತವು ನನಗೆ ಅಭೀಷ್ಟವನ್ನು ನೀಡಲಿ.

ವಿ : ೧. ಶ್ರೀಹರಿಯು ಪ್ರಳಯಕಾಲದಲ್ಲೂ ಮಹಾಲಕ್ಷ್ಮಿಯಿಂದ ಆಲಿಂಗಿತನಾಗಿರುವನು ಎಂದು ಭಾವ.

೨. ಅಂತಹ ಆಲಿಂಗನಕ್ಕೆ ಅನುಕೂಲವಾದಂತಹ ಏಕಾಂತಸ್ಥಳ ಲಭಿಸಲಿ ಎಂಬಂತೆ ಶ್ರೀಹರಿಯು ಪ್ರಳಯವನ್ನು ಮಾಡುವನು ಎಂಬುದು ಉತ್ಪ್ರೇಕ್ಷೆ.

೩. ಪ್ರಳಯಕಾಲದಲ್ಲೂ ಸಹ ಲಕ್ಷ್ಮೀನಾರಾಯಣರು ಮಾತ್ರ ಎಂದಿನಂತೆ ಆನಂದಪೂರ್ಣ-ರಾಗಿಯೇ ಜೊತೆಯಿಂದಿರುವರು ಎಂಬುದು ಇಲ್ಲಿಯ ತಾತ್ಪರ್ಯ. ಮಹಾಲಕ್ಷ್ಮಿಗೆ ಲಯ ಎಂದರೆ ಶ್ರೀಹರಿಯ ಇಂತಹ ಸಾಮೀಪ್ಯವೇ ಆಗಿದೆ[೧] ಎಂಬುದರ ಹಿನ್ನೆಲೆಯಲ್ಲಿ ಇದರ ಸ್ವಾರಸ್ಯವನ್ನು ಅರ್ಥಮಾಡಿಕೊಳ್ಳಬಹುದು.

೪. ಶ್ರೀಹರಿಯು ಪ್ರಳಯಕಾಲದಲ್ಲಿ ಬಾಹ್ಯವ್ಯಾಪಾರರಹಿತನಾಗಿರುವುದು ತನ್ನ ಪರಮ-ಪ್ರಿಯ ಭಕ್ತಳಾದ ಮಹಾಲಕ್ಷ್ಮಿಗೆ ಅಮಿತಾನಂದವನ್ನು ನೀಡಲೆಂದು ಎಂಬ ಇಲ್ಲಿಯ ವಿವರಣೆ ಅತ್ಯಂತ ಅಪೂರ್ವವಾದುದು.

೫. ಇದು ಈ ಕೆಳಗಿನ ಮಹಾಭಾರತತಾತ್ಪರ್ಯನಿರ್ಣಯ ವಾಕ್ಯದ ವಿವರಣೆಯಂತಿದೆ (೧/೨):

ಆಸೀದುದಾರಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ ಸ ಏಕಃ ।
ಸಂಶಾಂತಸಂವಿದಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ ॥

### ಶ್ರೀಕೃಷ್ಣರುಗ್ಮಿಣಿಯರ ಅಪೂರ್ವ ಕಂಠಗಳು

ವೃತ್ತೇ ತ್ರಿರೇಖೇ ರತ್ನೌಘದೀಪ್ತೇ ಶ್ರೀಶ್ರೀಶಕಂಧರೇ ।
ವಿಷ್ವಕ್ಪ್ರವೃದ್ರತ್ನಚಿತ್ರೌ ಜಿಗ್ಯತುಃ ಶಂಖಶೇವಧೀ[೨] ॥ ೪೩ ॥

ದುಂಡಗಿರುವ, ಮೂರು ರೇಖೆಗಳಿಂದ ಕೂಡಿರುವ, ರತ್ನಗಳ ಸಾಲಿನಿಂದ ಹೊಳೆಯುವ, ಸುತ್ತಲೂ ಪಸರಿಸುವ ರತ್ನಗಳಿಂದ ಮನೋಹರವಾಗಿರುವ, ಶ್ರೀಕೃಷ್ಣರುಗ್ಮಿಣಿಯರ ಕೊರಳುಗಳು ಶಂಖ ಹಾಗೂ ನಿಧಿಗಳನ್ನು ಮೀರಿಸಿವೆ.

---

೧. ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ ।

೨. 'ನಿಧಿರ್ನಾ ಶೇವಧಿರ್ಭೇದಾಃ ಪದ್ಮಶಂಖಾದಯೋ ನಿಧೇಃ' ಇತ್ಯಮರಃ । - ವ್ಯಾ.

ವಿ : ೧. ಶ್ರೀಕೃಷ್ಣರುಗ್ಮಿಣಿಯರ ಕಂಠಗಳು ಶಂಖ ಮತ್ತು ನಿಧಿಗಳೆಂಬ ಮಹಾನಿಧಿಗಳನ್ನು ಮೀರಿಸಿವೆ ಎಂದು ಭಾವ.

೨. ಕೊರಳಿನಲ್ಲಿ ಮೂರು ರೇಖೆಗಳನ್ನು ಹೊಂದಿರುವುದು ಮಹಾಲಕ್ಷಣದ ಸಂಕೇತ ಎಂಬುದು ಲಕ್ಷಣಶಾಸ್ತ್ರದಲ್ಲಿ ಪ್ರಸಿದ್ಧ[೧]: ಶೇವಧಿ- ನಿಧಿ

೩. ಶ್ರೀರುಗ್ಮಿಣೀಕೃಷ್ಣರ ಕಂಠಗಳು ಶಂಖದ ಆಕೃತಿಯನ್ನೂ, ನಿಧಿಯ ಮೌಲ್ಯವನ್ನೂ, ಹೊಂದಿರುವ ಅಪೂರ್ವತೆಯಿಂದ ಕೂಡಿವೆ ಎಂದರ್ಥ.

## ಶ್ರೀಕೃಷ್ಣನ ಕಂಠದ ವೈಭವ

ರತ್ನೌಘರಮ್ಯೇಣ ಪರಿಶ್ರಿತೇನ
ಚಿರೇಣ ದೀಪ್ತಂ ನಿಜಭೂಷಣೇನ ।
ವೃತ್ತಂ ತ್ರಿರೇಖಂ ವರಹಾರಜುಷ್ಟಂ
ನಿತ್ಯಂ ಸ್ಮರ ಶ್ರೀರಮಣಸ್ಯ[೨] ಕಂಠಮ್ ॥ ೪೪ ॥

ರತ್ನಗಳ ಸಾಲಿನಿಂದ ಮನೋಹರವಾಗಿರುವ, ತೊಟ್ಟಿರುವ ತನ್ನ ಭೂಷಣದಿಂದ ಬಹು-ಕಾಲದಿಂದ ಹೊಳೆಯುವ, ವರ್ತುಲವಾಗಿರುವ, ಮೂರು ರೇಖೆಗಳಿಂದ ಕೂಡಿದ, ಶ್ರೇಷ್ಠವಾದ ಮುತ್ತಿನಮಾಲೆ ಧರಿಸಿರುವ, ಲಕ್ಷ್ಮೀರಮಣನಾದ ಶ್ರೀಕೃಷ್ಣನ ಕಂಠವನ್ನು ನಿತ್ಯವೂ ಸ್ಮರಿಸು.

ವಿ : ೧. ಶ್ರೀಕೃಷ್ಣನ ಕಂಠವು ತ್ರಿವಳಿಭೂಷಿತ ಎಂದೂ, ಅವನ ಕಂಠದಲ್ಲಿ ಕೌಸ್ತುಭಮಣಿ ಇರುವುದು ಎಂದೂ ಭಾವ.

೨. ಇಲ್ಲಿ ಶ್ರೀಕೃಷ್ಣನ ಕಂಠವನ್ನು ಬಳಸಿರುವ ನಿಜಭೂಷಣ ಎಂದರೆ ಕೌಸ್ತುಭ ಎಂದು ತಿಳಿಯಬೇಕು[೩].

೩. ಕೌಸ್ತುಭಮಣಿಗೆ ಬ್ರಹ್ಮದೇವರೇ ಅಭಿಮಾನಿದೇವತೆಗಳು ಎಂಬುದು ವಿಶೇಷ: 'ಕೌಸ್ತುಭಂ ಬ್ರಹ್ಮಣೋ ರೂಪಮ್' (ಭಾ.ತಾ.); 'ತ್ವತ್ಕಂಠಗಂ ಕೌಸ್ತುಭಮಾಸ ಧಾತಾ' (ಮ.ಭಾ.ತಾ.ನಿ.)

---

೧. ಸತತಂ ಗಲತಾ ಸ್ವತಃ ಶ್ರುತಿತ್ರಿತಯೇನ್ನೈವ ನಿಕಾಮಮಂಕಿತಃ ।
ಸುವಿಡಂಬಿತಕಂಬುರೀಕ್ಷ್ಯತೇ ವರರೇಖಾತ್ರಯವಾನ್ ಗುರೋರ್ಗಲಃ ॥ - ಸುಮಧ್ವವಿಜಯ (೭/೩.೭)

೨. ಸಂತತಂ ಚಿಂತಯೇತ್ ಕಂಠಂ ಭಾಸ್ವತ್ಕೌಸ್ತುಭಭಾಸಕಮ್ ।
ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ॥ - ದ್ವಾದಶಸ್ತೋತ್ರ (೧/೭)

೩. ಅಸಮೇಽನಧಿಕೇ ಸುಸಾಧಿತೇ ನಿಜತಾತೇ ರವಿರಾಶಿದೀಧಿತಿ ।
ಪ್ರದದೌ ಸ ತ್ರಿಜಗಜ್ಜಯಧ್ವಜಂ ವಿಧಿರೇತದ್ಗಲಸಂಗಿಭೂಷಣಮ್ ॥ - ಸು.ವಿ.(೭/೩೪)

### ಶ್ರೀಕೃಷ್ಣ ಧರಿಸಿದ ಅಪೂರ್ವ ಮಾಲೆ

ಸನ್ನೀಲೋತ್ಪಲಚಾರುಚಂಪಕಲಸಜ್ಜಾತಿಸ್ಫುರನ್ಮಲ್ಲಿಕಾ-
ರಕ್ತಾಶೋಕಮೃದುಪ್ರಸೂನರಚಿತಾ ರಮ್ಯಾಬ್ಜರಾಜನ್ಮುಖೀ।
ಮುಕ್ತಾನೀಲಮಣಿಪ್ರವಾಲವಿಲಸನ್ಮಾಣಿಕ್ಯಹೇಮೋಜ್ಜ್ವಲಾ
ಭರ್ತ್ರಂಸಾರ್ಪಿತರುಗ್ಮಿಣೀಕರಲತೇವಾಭಾತಿ ಮಾಲಾ ವಿಭೋಃ ॥ ೪೫ ॥

ಉತ್ತಮವಾದ ಕನ್ನೈದಿಲೆ, ಮನೋಹರವಾದ ಸಂಪಿಗೆ, ಹೊಳೆಯುವ ಜಾಜಿ, ಬೆಳಗುವ ಮಲ್ಲಿಗೆ, ಕೆಂಪಾದ ಅಶೋಕ ಮೊದಲಾದ ಹೂವುಗಳಿಂದ ಕಟ್ಟಲ್ಪಟ್ಟ, ಮುಂಭಾಗದಲ್ಲಿ ಮನೋಹರವಾದ ಕಮಲದಿಂದ ಕೂಡಿರುವ, ಮುತ್ತು, ಇಂದ್ರನೀಲಮಣಿ, ಹವಳ, ಹೊಳೆಯುವ ಮಾಣಿಕ್ಯ ಹಾಗೂ ಸುವರ್ಣದಿಂದ ಹೊಳೆಯುವ ಶ್ರೀಕೃಷ್ಣ ಧರಿಸಿರುವ ಮಾಲೆಯು ತನ್ನ ಪತಿಯ ಭುಜಗಳ ಮೇಲೆ ಇರಿಸಲ್ಪಟ್ಟಿರುವ ರುಗ್ಮಿಣೀದೇವಿಯ ಬಳ್ಳಿಯಂತಹ ತೋಳಿನಂತೆ ಶೋಭಿಸುತ್ತಿರುವುದು.

ವಿ : ೧. ಶ್ರೀಕೃಷ್ಣನು ಧರಿಸಿರುವ ಮಾಲೆಯು ರುಗ್ಮಿಣಿಯ ತೋಳಿನಂತೆ ಕಂಗೊಳಿಸುವುದು ಎಂದರ್ಥ.

೨. [೧]ಮಾಲೆಯ ರೂಪದಲ್ಲಿ ರುಗ್ಮಿಣೀದೇವಿಯೇ ಶ್ರೀಕೃಷ್ಣನ ಕಂಠವನ್ನು ಬಳಸಿರುವಳು ಎಂಬುದು ತತ್ತ್ವ.

೩. ಪತಿಯ ಕೊರಳನ್ನು ಸತಿಯಾದವಳು ಹಾಗೆ ಬಳಸುವುದು ವಿಶೇಷವಾದ ಅನುರಾಗಕ್ಕೆ ಸೂಚಕ ಎಂಬುದು ಸುಪ್ರಸಿದ್ಧ.

### ರುಗ್ಮಿಣಿಯ ಮಾಂಗಲ್ಯದ ಹಿರಿಮೆ

ಬಂಧೋಜ್ಝಿತಾಯಾ ಅಪಿ ಸಿಂಧುಪುತ್ರ್ಯಾ
ಮಾಂಗಲ್ಯಸೂತ್ರಂ ಕಿಲ ನಿತ್ಯಬದ್ಧಮ್ ।
ಮುಗ್ಧಾಬಲಾಮೋಹನಕಂಠಯೋಗೇ
ಮೋಕ್ಷೋಽಪ್ಯನಾಕಾಂಕ್ಷಿತ ಏವ ನೂನಮ್ ॥ ೪೬ ॥

ಎಂದೂ ಬಂಧವಿರದ ಸಾಗರಪುತ್ರಿಯಾದ ಮಹಾಲಕ್ಷ್ಮಿ, ರುಗ್ಮಿಣೀದೇವಿಯ ಕೊರಳಲ್ಲಿ ಮಂಗಳಸೂತ್ರವು ಸದಾ ಕಟ್ಟಲ್ಪಟ್ಟಿರುವುದು! ಚೆಲುವೆಯಾದ ಅಬಲೆಯ ಮೋಹಕವಾದ ಕಂಠದ ಸಂಪರ್ಕ ಲಭಿಸಿದಾಗ, ನಿಶ್ಚಿತವಾಗಿಯೂ ಬಿಡುಗಡೆಯೇ ಬೇಕೆನ್ನಿಸದು ಅಲ್ಲವೆ !

---

೧. ಅತ್ರ ಕ್ರಮೋ ನಾಪೇಕ್ಷಿತಃ। ನೀಲೋತ್ಪಲಾದೀನಾಂ ಯಥಾಯೋಗ್ಯಂ ನೀಲಮಾಣಿಕ್ಯಾದೌ ಸಾದೃಶ್ಯಂ ದ್ರಷ್ಟವ್ಯಮ್ । ಭರ್ತುಃ ಶ್ರೀಕೃಷ್ಣಸ್ಯ ಯೌ ಅಂಸೌ ತಯೋರರ್ಪಿತಾ ರುಗ್ಮಿಣೀಕರಲತೇವಾಭಾತಿ। -ವ್ಯಾ.

ವಿ : ೧. ಮಾಂಗಲ್ಯವು ಮುತ್ತೈದೆಸ್ತ್ರೀಗೆ ಎಂದೂ ತೊರೆಯಲಾಗದ ನಿತ್ಯಾಭರಣ ಎಂಬ ವಿಶೇಷಾಂಶ ಇಲ್ಲಿ ಸೂಚಿತ; ಮುಗ್ಧಾ - ಚೆಲುವೆ.

೨. ಹಿತವಾದ ಬಂಧವು ಬಿಡುಗಡೆಯನ್ನು ಬಯಸದು; ಅದರಂತೆ ಮಾಂಗಲ್ಯದ ಬಂಧನ ಮಹಾಲಕ್ಷ್ಮಿಯ ನಿತ್ಯ ಸೌಭಾಗ್ಯಕ್ಕೆ ಸೂಚಕವಾಗಿರುವುದರಿಂದ ಅದು ಅಪೇಕ್ಷಿತವಾಗಿದ್ದು ಅವರ ನಿತ್ಯಮುಕ್ತತ್ವಕ್ಕೆ ವಿರೋಧಿಯಾಗದು ಎಂಬುದು ಇಲ್ಲಿಯ ವಿಶೇಷಾಂಶ.

೩. ಸದಾ ಮಾಂಗಲ್ಯ ಧರಿಸಿರುವ ಮಹಾಲಕ್ಷ್ಮಿಯು ಶ್ರೀಹರಿಯ ನಿತ್ಯಾವಿಯೋಗಿನಿಯಾದ ಪತ್ನಿ ಎಂಬ ವಿಶೇಷಾಂಶ ಇದರಿಂದ ಸೂಚಿತ.

## ರುಗ್ಮಿಣಿಯ ಮಾಂಗಲ್ಯದ ಮಹಿಮೆ

ಸನ್ನೀಲರತ್ನರುಚಿರಂ ಸತತಂ ಶ್ರಿಯೈ ಸ್ಯಾ-
ನ್ಮಾಂಗಲ್ಯಸೂತ್ರಮಿಹ ಮಂಗಲದೇವತಾಯಾಃ।
ಯತ್ಕಂಠದೇಶಧೃತಮಬ್ಜದಲಾಯತಾಕ್ಷ್ಯಾ
ನ ಪ್ರಾಗ್ವ್ಯಯುಂಕ್ತ ನ ವಿಯೋಕ್ಷ್ಯತಿ ನೋ ವಿಯುಂಕ್ತೇ ॥ ೪೭ ॥

ಮಂಗಲದೇವತೆಯಾದ ರುಗ್ಮಿಣೀದೇವಿಯ ಇಂದ್ರನೀಲಮಣಿಯಿಂದ ಹೊಳೆಯುವ ಮನೋಹರವಾದ ಈ ಮಂಗಲಸೂತ್ರವು ಸದಾ ಸಂಪತ್ತಿಗೆ ಕಾರಣವಾಗಲಿ; ಪಂಕಜ-ಮುಖಿಯಾದ ರುಗ್ಮಿಣೀದೇವಿಯ ಕಂಠಪ್ರದೇಶದಲ್ಲಿ ಧರಿಸಲ್ಪಟ್ಟಿರುವ ಇದು ಹಿಂದೆ ಇರಲಿಲ್ಲವೆಂದಲ್ಲ, ಮುಂದೆ ಇರಲಾರದು ಎಂದಲ್ಲ, ಈಗಂತೂ ಇದ್ದೇ ಇದೆ.

ವಿ : ೧. ರುಗ್ಮಿಣೀದೇವಿ ಧರಿಸಿರುವ ಮಾಂಗಲ್ಯವು ಅನಾದಿ ಹಾಗೂ ನಿತ್ಯವಾದ ಮಂಗ-ಲಾಭರಣ[೧]. ಇದರಿಂದ ಲಕ್ಷ್ಮೀನಾರಾಯಣರು ನಿತ್ಯ ದಂಪತಿಗಳು ಎಂಬ ತತ್ತ್ವ ಸೂಚಿತ.

೨. [೨]ಯುಜ್‌ಧಾತುವನ್ನು ಮೂರು ಲಕಾರಗಳಲ್ಲೂ ಪ್ರಯೋಗಿಸುವ ಮೂಲಕ, ರುಗ್ಮಿಣಿಯ ಮಂಗಲಸೂತ್ರವು ಮೂರು ಕಾಲಗಳಲ್ಲೂ ಇರುವಂತಹುದು ಎಂಬ ಅರ್ಥವಿಶೇಷವನ್ನು ನಿರೂಪಿಸುವ ಇಲ್ಲಿಯ ಶಬ್ದಚಮತ್ಕಾರ ಅಪೂರ್ವವಾದುದು.

## ಚಂದ್ರನನ್ನು ಮೀರಿಸಿದ ಶ್ರೀಕೃಷ್ಣನ ಮುಖ

ದೂರೇ ವಿಧೂಯ ಹರಿಣಂ ಸುಭಗಂ ತದೀಯ-
ನೇತ್ರಂ ಸ್ವಬಿಂಬಖಚಿತಂ ವಿತನೋತು ಚಂದ್ರಃ।

---

೧. ಮಾಂಗಲ್ಯಸೂತ್ರಸ್ಯ ರುಗ್ಮಿಣೀಕಂಠವಿಯೋಗಃ ಕಾಲತ್ರಯೇಽಪಿ ನಾಸ್ತೀತಿ ಭಾವಃ। -ವ್ಯಾ.

೨. ಏಕಸ್ಮಿನ್ ಧಾತಾವೇವ ಪ್ರಯೋಗತ್ರಯಸ್ಯೋಕ್ತತ್ವಾತ್ ಶಬ್ದಚಮತ್ಕಾರೋಽಯಮ್। -ವ್ಯಾ.

**ಸಾಮ್ಯಂ ತಥಾಪಿ ನ ಸಮೇತಿ ಶುಚಿಸ್ಮಿತಸ್ಯ**
**ಲೋಲಾಲಕಸ್ಯ ಕಮಲಾಚ್ಯುತಸನ್ಮುಖಸ್ಯ[೧] ॥ ೪೮ ॥**

ಚಂದ್ರನು ಬೇಕಾದರೆ ತನ್ನ ಬಿಂಬದಲ್ಲಿ ಸೇರಿಕೊಂಡಿರುವ ಮನೋಹರವಾದ ಜಿಂಕೆಯನ್ನು ದೂರಕ್ಕೆ ಸರಿಸಿ, ಅದರ ನೇತ್ರವನ್ನು ತನ್ನ ಬಿಂಬಕ್ಕೆ ಜೋಡಿಸಿಕೊಂಡರೂ, ನಿರ್ಮಲ ಕಿರುನಗೆ ಸೂಸುವ, ಮುಂಗುರುಳುಗಳು ಹಾರಾಡುವ, ಶ್ರೀಕೃಷ್ಣರುಗ್ಮಿಣಿಯರ ಕಂಗೊಳಿಸುವ ಮುಖದ ಸಾಮ್ಯವನ್ನು ಮಾತ್ರ ಎಂದಿಗೂ ಹೊಂದಲಾರನು.

ವಿ : ೧. [೨]ಚಂದ್ರನ ಮುಖದಲ್ಲಿ ಜಿಂಕೆಯ ರೂಪದ ಕಲಂಕವಿರುವುದರಿಂದ, ಕಣ್ಣುಗಳನ್ನು ಹೊಂದಿಲ್ಲದಿರುವುದರಿಂದ ಅದು ಶ್ರೀಕೃಷ್ಣರುಗ್ಮಿಣಿಯರ ಮುಖಕ್ಕೆ ಸಾಟಿಯಾಗಲಾರದು ಎಂದರ್ಥ.

೨. ಒಂದು ವೇಳೆ ಚಂದ್ರನು ನಿಷ್ಕಲಂಕನಾಗಿ ಜಿಂಕೆಯ ಕಣ್ಣುಗಳನ್ನು ಹೊಂದಿದರೂ ಸಹ ನಿರ್ಮಲ ಮಂದಹಾಸದ ಹಾಗೂ ಹಾರಾಡುವ ಮುಂಗುರುಳುಗಳ ಶ್ರೀಕೃಷ್ಣರುಗ್ಮಿಣಿಯರ ಮುಖಕ್ಕೆ ಸಾಟಿಯಾಗನು ಎಂದು ಭಾವ.

೩. ಮುಖದಲ್ಲಿ ಜಿಂಕೆಯ ಚಿಹ್ನೆ ಇರುವುದು ಕಲಂಕಕ್ಕೆ ದ್ಯೋತಕ. ಜಿಂಕೆಯ ಕಣ್ಣುಗಳು ಶೋಭಾಪ್ರದಾಯಕ ಎಂಬುದು ಸುಪ್ರಸಿದ್ಧವಾದ ವಿಚಾರ. ಆದರೆ, ಅದು ಚಂದ್ರನಿಗೆ ಕೃಷ್ಣ-ರುಗ್ಮಿಣಿಯರ ಮುಖದ ಸಾಮ್ಯವನ್ನು ತಂದುಕೊಡಲು ಮಾತ್ರ ಅಸಮರ್ಥ ಎಂಬುದು ವಿಶೇಷ.

೪. ಶ್ರೀಕೃಷ್ಣರುಗ್ಮಿಣಿಯರ ಮಂಧಹಾಸದಿಂದ ಕೂಡಿದ ಮುಖಚಂದ್ರನು ಉಪಮಾತೀತ ಎಂದು ತಾತ್ಪರ್ಯ.

### ಶ್ರೀಕೃಷ್ಣನ ಅಪೂರ್ವ ಕಪೋಲಗಳು

**ಮಾಣಿಕ್ಯಸಂಶೋಭಿಮುಖಂ ಸದಾಽಂತಃ -**
**ಶಾಣಾಗಮೋದ್ಭಾಸಿತಮೌಕ್ತಿಕಾಢ್ಯಮ್ ।**

---

೧. ತಸ್ಯಾವಲೋಕಮಧಿಕಂ ಕೃಪಯಾಽತಿಘೋರತಾಪತ್ರಯೋಪಶಮನಾಯ ನಿಸೃಷ್ಟಮಕ್ಷ್ಣೋಃ ।
ಸ್ನಿಗ್ಧಸ್ಮಿತಾನುಗುಣಿತಂ ವಿಪುಲಪ್ರಸಾದಂ ಧ್ಯಾಯೇಚ್ಚಿರಂ ವಿತತಭಾವನಯಾ ಗುಹಾಯಾಮ್ ॥
ಭೃತ್ಯಾನುಕಂಪಿತಧಿಯೇಹ ಗೃಹೀತಮೂರ್ತೇಃ ಸಂಚಿಂತಯೇದ್ಭಗವತೋ ವದನಾರವಿಂದಮ್ ।
ಯದ್ವಿಸ್ಫುರನ್ಮಕರಕುಂಡಲವಲ್ಗಿತೇನ ವಿದ್ಯೋತಿತಾಮಲಕಪೋಲಮುದಾರಹಾಸಮ್ ॥ -ಶ್ರೀಮದ್ಭಾಗವತ
ಸ್ಮರೇತ ಯಾಮಿನೀನಾಥಸಹಸ್ರಾಮಿತಕಾಂತಿಮತ್ ।
ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥ - ದ್ವಾದಶಸ್ತೋತ್ರ (೧/೮)
ಪರಮಜ್ಞಾನಮಹಾನಿಧಿವದನಶ್ರೀರಮಣೇಂದೋ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೭)

೨. ಹರಿಣವಿಧೂನನೇನ ತನ್ನೇತ್ರೋಪಾದಾನೇನ ಚ ನೈರ್ಮಲ್ಯಮನೋಹರನೇತ್ರಯೋಃ ಸಂಪಾದನೇಽಪಿ ಶುಚಿಸ್ಮಿತಾಲಕಾನಾಂ ಸತ್ವದೋಕ್ತಾಪರಿಮಿತಕಾಂತೇಶ್ಚಾಸಂಪಾದನಾದಿತಿ ಭಾವಃ । -ವ್ಯಾ.

ಮಾನಾರ್ಹನೀಲೋತ್ಪಲಸತ್ಕರಂಡಂ
ಶ್ರೀನಾಥಗಂಡದ್ವಯಮಾಜಿಗಾಯ ॥ ೪೯ ॥

[1]ಪದ್ಮರಾಗದಿಂದ ಅತಿಶಯವಾಗಿ ಕಂಗೊಳಿಸುವ ಮುಖದ, ಸದಾ ಒಳಗಿನ ಸಾಣೆ ಹಿಡಿದು ಹೊಳೆಯುವ ಕೆಂಬಣ್ಣದ ಮುತ್ತುಗಳಿಂದ ಫಳಫಳಿಸುವ, ಲಕ್ಷ್ಮೀಪತಿಯಾದ ಶ್ರೀಕೃಷ್ಣನ ಎರಡು ಕೆನ್ನೆಗಳು, ಸನ್ಮಾನ್ಯವಾದ ಕನ್ನೈದಿಲೆಯಂತೆ ಹೊಳೆಯುವ ಉತ್ತಮ ಕರಂಡಕವನ್ನು ಮೀರಿಸಿವೆ.

### ಶ್ರೀಕೃಷ್ಣನ ಅಪೂರ್ವ ಮಂದಹಾಸ

ಚಂದ್ರೋಪಮಂ ಶ್ರೀರಮಣಸ್ಯ ಸೌಖ್ಯ-
ಸಂದೋಹದಂ ರಂಜಿತಮೋಷ್ಠಭಾಸಾ ।
ಸೌಂದರ್ಯದುಗ್ಧಾಂಬುಧಿಫೇನಕಲ್ಪಂ
ಮಂದಸ್ಮಿತಂ[2] ಮಂದಯತಾದಘಂ ನಃ ॥ ೫೦ ॥

ಚಂದ್ರನನ್ನು ಹೋಲುವ, ತುಟಿಗಳ ಕಾಂತಿಯಿಂದ ಕೆಂಪಾದ, ಸುಖದ ರಾಶಿಯನ್ನು ಸುರಿಸುವ, ಸೌಂದರ್ಯವೆಂಬ ಕ್ಷೀರಸಾಗರದ ನೊರೆಯಂತಹ, ಲಕ್ಷ್ಮೀಶನಾದ ಶ್ರೀಕೃಷ್ಣನ ಮಂದಹಾಸವು ನಮ್ಮ ಪಾಪವನ್ನು ಪರಿಹರಿಸಲಿ[3].

ವಿ : ೧. ಇಲ್ಲಿ ಶ್ರೀಕೃಷ್ಣನ ಮಂದಸ್ಮಿತವನ್ನು ಚಂದ್ರನಿಗೆ ಹೋಲಿಸಿರುವುದು ನೀಚೋಪಮೆ.

### ಶ್ರೀಕೃಷ್ಣನ ಅಪೂರ್ವ ದಂತಪಂಕ್ತಿ

ಸ್ವಚ್ಛಾ ಮೃದುಸ್ಮಿತದಶಾಕಲಿತೈಕದೇಶಾ
ಲಕ್ಷ್ಮೀಕಪೋಲಲಲಿತಕ್ಷತಹೇತುಭೂತಾ ।
ಸತ್ಕುಂದಕುಡ್ಮಲಸಮಾ ನಿಬಿಡಾ ಮಮಾಂತಃ
ಕೃಷ್ಣಸ್ಯ [4]ರಮ್ಯರದನಾವಲಿರಾವಿರಸ್ತು ॥ ೫೧ ॥

---

೧. ಮಾಣಿಕ್ಯಖಚಿತಮುಖಪ್ರದೇಶಾಂತಃಪೂರಿತಮೌಕ್ತಿಕನೀಲರತ್ನನಿರ್ಮಿತಕರಂಡವದ್ಭಾತೀತ್ಯರ್ಥಃ । -ವ್ಯಾ.

೨. ಹಾಸಂ ಹರೇರವನತಾಖಿಲಲೋಕತೀವ್ರಶೋಕಾಶ್ರುಸಾಗರವಿಶೋಷಣಮತ್ಯುದಾರಮ್ ।
ಸಮ್ಮೋಹನಾಯ ರಚಿತಂ ನಿಜಮಾಯಯಾಽಸ್ಯ ಭ್ರೂಮಂಡಲಂ ಮುನಿಕೃತೇ ಮಕರಧ್ವಜಸ್ಯ ॥
- ಶ್ರೀಮದ್ಭಾಗವತ (೩./೨೮/೩.೨)
ಪೂರ್ಣಾನನ್ಯಸುಖೋದ್ಭಾಸಿ ಮಂದಸ್ಮಿತಮಧೀಶಿತುಃ ।
ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದಪ್ರದಮ್ ॥ - ದ್ವಾದಶಸ್ತೋತ್ರ (೧/೯)

೩. ಪದ್ಮರಾಗಾದಿದಿವ್ಯರತ್ನಾನಾಮಪಿ ಕ್ಷೀರಸಮುದ್ರೋತ್ಪನ್ನತ್ವಾದೋಷ್ಠಭಾಸಾ ರಂಜಿತಮಿತ್ಯುಕ್ತಮ್ । - ವ್ಯಾ.

೪. ಧ್ಯಾನಾಯನಂ ರಹಸಿ ತದ್ಬಹುಲಾಧರೋಷ್ಠಭಾಸಾಽರುಣಾಯಿತತನುದ್ವಿಜಕುಂದಪಂಕ್ತಿ ।
ಧ್ಯಾಯೇತ್ ಸ್ವಹೃತ್ಕುಹರಕೇಽವಸಿತಸ್ಯ ವಿಷ್ಣೋರ್ಭಕ್ತ್ಯಾಽರ್ದ್ರಯಾಽರ್ಪಿತಮನಾ ನ ಪೃಥಗ್ದಿದೃಕ್ಷೇತ್ ॥

ಕಿರುನಗೆಸೂಸಿದಾಗ ಸ್ವಲ್ಪ ಭಾಗ ತೋರುವ, ಮೃದುವಾದ, ಸ್ವಚ್ಛವಾದ, ರುಗ್ಮಿಣಿಯ ಕೆನ್ನೆಯ ಮೇಲೆ ಮನೋಹರವಾದ ಕ್ಷತಿಯನ್ನುಂಟುಮಾಡುವಂತಹ, ಉತ್ತಮವಾದ ಜಾಜಿಯ ಮೊಗ್ಗಿನಂತಿರುವ, ಒತ್ತಾದ, ಶ್ರೀಕೃಷ್ಣನ ಸೊಗಸಾದ ದಂತಪಂಕ್ತಿಯು ನನ್ನ ಮನಸ್ಸಿನಲ್ಲಿ ಬೆಳಗಲಿ.

### ಶ್ರೀಕೃಷ್ಣನ ಮೂಗಿನ ವರ್ಣನೆ

ಸನ್ಮಾನ್ಯಲಾವಣ್ಯಮರಂದ್ರಸಾಂದ್ರ-
ಮಮ್ಲಾನಸಚ್ಚಂಪಕಸಂಪದಂ ನಃ ।
ಮನ್ಮಾನಸೇ ಸ್ಯಾಲ್ಲಸದುನ್ನತಾಗ್ರಂ
ಸೌಮ್ಯಸ್ಯ ನಾಸಾಪುಟಮಚ್ಯುತಸ್ಯ ॥ ೫೨ ॥

ಸಜ್ಜನರು ಆದರಿಸುವ ಲಾವಣ್ಯವೆಂಬ ಮಕರಂದದಿಂದ ತುಂಬಿದ, ಅರಳಿದ ಶ್ರೇಷ್ಠವಾದ ಸಂಪಿಗೆಯ ಸೊಬಗನ್ನು ಪಡೆದ, ಉನ್ನತವಾದ ತುದಿಯನ್ನು ಹೊಂದಿದ, ಸೌಮ್ಯನಾದ, ಚ್ಯುತಿರಹಿತನಾದ ಶ್ರೀಕೃಷ್ಣನ ನಾಸಾಪುಟವು ನನ್ನ ಮನಸ್ಸಿನಲ್ಲಿ ಸದಾ ಇರಲಿ; (ಮರಂದ್ರ-ಮಕರಂದ).

### ಶ್ರೀಕೃಷ್ಣನ ಅಪೂರ್ವ ವಾಣಿ

ವ್ಯಕ್ತಾತಿಕೋಮಲಮನೋರಮವರ್ಣಪೂರ್ಣಂ
ಪ್ರುತ್ಯರ್ಥವೃತ್ತಿ ಮಧುರಸ್ವರಮತ್ಯಗಾಧಮ್ ।
ಸತ್ಕ್ಲೇಶದುರ್ವಿಷಶಮೇಽಮೃತವರ್ಷಕಲ್ಪಂ
ತತ್ತ್ವಂ ನಿಜಂ ಹರಿವಚಃ ಪರಿಬೋಧಯೇನ್ಮಾಮ್ ॥ ೫೩ ॥

ಸ್ಪಷ್ಟವೂ, ಅತ್ಯಂತಕೋಮಲವೂ, ಮನೋಹರವೂ ಆದ ವರ್ಣಗಳಿಂದ ತುಂಬಿದ, ವೇದಾರ್ಥಗಳನ್ನು ಒಳಗೊಂಡ, ಮಧುರಸ್ವರದಿಂದ ಕೂಡಿದ, ಅತ್ಯಂತ ಗಂಭೀರವಾದ, ಸಜ್ಜನರ ಕ್ಲೇಶವೆಂಬ ಕೆಟ್ಟ ವಿಷವನ್ನು ಪರಿಹರಿಸುವ ಕಾರ್ಯದಲ್ಲಿ ಅಮೃತದ ಸುರಿಮಳೆಯಂತಿರುವ, ಶ್ರೀಕೃಷ್ಣನ ಮಾತು ನನಗೆ ಅವನ ನಿಜ ತತ್ತ್ವವನ್ನು ತಿಳಿಸಿಕೊಡಲಿ.

ವಿ : ೧. ಶ್ರೀಕೃಷ್ಣನ ಮಾತಿನ ಸೊಬಗನ್ನು ಇಲ್ಲಿ ವರ್ಣಿಸಲಾಗಿದೆ.

೨. ಶ್ರೀಕೃಷ್ಣನ ಮಾತು ಅತ್ಯಂತ ಸ್ಫುಟವೂ, ಮೃದುವೂ, ಮನೋಹರವೂ ಆದ ವರ್ಣಗಳಿಂದ ಕೂಡಿದುದು; ಪ್ರುತ್ಯರ್ಥವನ್ನು ತಿಳಿಸುವಂತಹುದು; ಮಧುರ ಸ್ವರವನ್ನು ಹೊಂದಿರುವುದು, ತುಂಬಾ ಗಂಭೀರವಾದುದು; ಸಜ್ಜನರ ಕ್ಲೇಶವೆಂಬ ಕೆಟ್ಟ ವಿಷವನ್ನು ಪರಿಹಾರಮಾಡುವಂತಹುದು;

ಅಮೃತಮಳೆಯಂತಹುದು ಎಂಬ ಇಲ್ಲಿಯ ವರ್ಣನೆ ಒಟ್ಟಾಗಿ ಶಾಸ್ತ್ರಪ್ರಪಂಚಕ್ಕೆ ಅನ್ವಯಿಸುವ ವಿಶೇಷತೆಯನ್ನು ಹೊಂದಿದೆ.

೩. ಯಾದವಕೃಷ್ಣನ ಮಾತಿನ ಈ ವರ್ಣನೆ ಅವನ ವಾಸಿಷ್ಠಕೃಷ್ಣರೂಪಕ್ಕೂ ಅನ್ವಯಿಸುವಂತಹುದು ; ಇದರಿಂದ ವೇದವ್ಯಾಸರ ರಚನೆಯಾದ ಮಹಾಭಾರತ, ಬ್ರಹ್ಮಸೂತ್ರ, ಪುರಾಣ ಮೊದಲಾದವುಗಳ ಮಹತ್ತ್ವವೂ ಸಹ ತಿಳಿಯುವಂತಾಗುವುದು. ಇದರೊಂದಿಗೆ ಒಂದು ಆದರ್ಶಮಾತುಗಾರಿಕೆಗೆ ನಿದರ್ಶನವಾಗಿಯೂ ಸಹ ಈ ಶ್ಲೋಕವನ್ನು ಬಳಸಿಕೊಳ್ಳಬಹುದು.

೪. ಇದು ಒಂದು ರೀತಿಯಲ್ಲಿ ಶ್ರೀವಾದಿರಾಜರ ಶ್ರೀಕೃಷ್ಣ ವರ್ಣನಾರೂಪವಾದ ಈ ಕೃತಿಗೂ ಅವರ ಇತರ ಕೃತಿಗಳಿಗೂ ಮುಖ್ಯವಾಗಿ ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳಿಗೂ [೧]ಅನ್ವಯಿಸುವಂತಿದೆ.

## ಶ್ರೀಕೃಷ್ಣ ಧರಿಸಿದ ಕುಂಡಲಗಳು

ನಾನಾವಿಧಾನುಪಮರತ್ನವಿಚಿತ್ರಿತಾಭ್ಯಾಂ
ಮೀನೋಪಮೋಜ್ಜ್ವಲಹಿರಣ್ಮಯಕುಂಡಲಾಭ್ಯಾಮ್ ।
ಶ್ರೀನಾಥಕರ್ಣಯುಗಲಂ ಸುಭಗಂ ಭವಾರ್ತ್ಯಾ
ದೀನಸ್ಯ ಮೇ ಗಿರಮಿಮಾಂ ಶ್ರುಣುತಾಚ್ಛ್ರಿತಸ್ಯ ॥ ೫೪ ॥

ಬಗೆಬಗೆಯಾದ ಅನುಪಮ ರತ್ನಗಳಿಂದ ಖಚಿತವಾದ, ಉಜ್ಜ್ವಲವಾದ ಸುವರ್ಣಮಯ ಕುಂಡಲಗಳನ್ನು ಹೊಂದಿದ, ಅತ್ಯಂತ ಮನೋಹರವಾದ ರುಗ್ಮಿಣೀಪತಿಯಾದ ಶ್ರೀಕೃಷ್ಣನ ಎರಡು ಕಿವಿಗಳು ಸಂಸಾರದ ಬೇಗೆಯಿಂದ ದೀನನಾದ, ಆಶ್ರಿತನಾದ ನನ್ನ ಈ ಮಾತನ್ನು ಕೇಳಿಸಿಕೊಳ್ಳಲಿ.

ವಿ : ೧. ಶ್ರೀಕೃಷ್ಣನ ಕಿವಿಗಳು ರತ್ನಖಚಿತವಾದ ಸುವರ್ಣಮಯ ಕುಂಡಲಗಳಿಂದ ಭೂಷಿತವಾದವುಗಳು ಎಂಬುದು ಇಲ್ಲಿಯ ಮುಖ್ಯಭಾವ.

೨. ಶ್ರೀಕೃಷ್ಣನು ನಮ್ಮ ಮಾತುಗಳನ್ನು ಕೇಳಿಸಿಕೊಳ್ಳಲಿ ಎಂದರೆ ನಮ್ಮ ಪ್ರಾರ್ಥನೆಯನ್ನು ಆಲಿಸಿ ಅನುಗ್ರಹಿಸಲಿ ಎಂದರ್ಥ.

೩.. ಇದರಿಂದ ಭಕ್ತನು ಭಗವಂತನ ಕಿವಿಗಳನ್ನು ಚಿಂತಿಸುವ ರೀತಿಯು ಸಹ ವಿವರಿಸಲ್ಪಟ್ಟಿದೆ. ಈ ಚಿಂತನೆಯಿಂದಲೇ ಗ್ರಂಥಪಾಠ, ಸ್ತೋತ್ರಪಾಠಗಳನ್ನು ಮಾಡುವುದು ವಿಹಿತ.

---

೧. ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।
ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥
ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।
ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥ -ಕೃಷ್ಣಾಮೃತಮಹಾರ್ಣವ (೨, ೨೦೦)

೪. ಇನ್ನೊಂದು ರೀತಿಯಲ್ಲಿ ಸಮಸ್ತ ದೇವತೆಗಳು, ಗುರುಗಳು ಸಹ ನಮ್ಮ ಆರ್ತನುಡಿಯನ್ನು ಪ್ರೀತಿಯಿಂದ ಆಲಿಸಿ, ಅನುಗ್ರಹಿಸಲಿ ಎಂದು ಭಾವ; ವಾಙ್ಮಯಕಾರ್ಯದಲ್ಲಿ ಸದಾ ಜಾಗ್ರತವಾಗಿರಬೇಕು ಎಂಬ ತತ್ತ್ವವೂ ಇದರಿಂದ ಸೂಚಿತ.

## ಶ್ರೀಕೃಷ್ಣನ ಅಪೂರ್ವ ನೇತ್ರಗಳು

ಅಂಭೋಜಕೋಮಲವಿಶಾಲಸುದೀರ್ಘಪತ್ರ-
ಸಂಭಾಸಮಾನಮಲಿರಾಜದಧೀರತಾರಮ್ ।
ಶಂಭುಪ್ರಭೃತ್ಯಮರವಾಂಛಿತವಲ್ಗುವೀಕ್ಷಂ[೧]
ಜೃಂಭನ್ಮುಕುಂದನಯನಂ[೨] ಮುಹುರೀಕ್ಷತಾನ್ಮಾಮ್ ॥ ೫೫ ॥

ಕೋಮಲವೂ, ವಿಶಾಲವೂ, ತುಂಬಾ ದೀರ್ಘವೂ ಆದ ಕಮಲಪತ್ರದಂತೆ ಬಹಳವಾಗಿ ಹೊಳೆಯುವ, ದುಂಬಿಗಳಂತೆ ಕಂಗೊಳಿಸುವ, ಚಂಚಲ ಗುಡ್ಡುಗಳ, ಬ್ರಹ್ಮ ಮೊದಲಾದ ದೇವತೆಗಳು ಬಯಸುವ ಮನೋಹರವಾದ ನೋಟದ, ಅರಳಿದ ಶ್ರೀಕೃಷ್ಣನ ಕಣ್ಣು ನನ್ನನ್ನು ಮತ್ತೆ ಮತ್ತೆ ನೋಡಲಿ.

ವಿ: ೧. ಶ್ರೀಕೃಷ್ಣನು ಪುಂಡರೀಕಾಕ್ಷ ಎಂಬುದನ್ನು ಅಪೂರ್ವರೀತಿಯಲ್ಲಿ ಇಲ್ಲಿ ವಿವರಿಸಲಾಗಿದೆ.

೨. ಶ್ರೀಕೃಷ್ಣನ ಕಣ್ಣುಗಳು ಕಮಲದಂತೆ ವಿಶಾಲವೂ, ಅತಿದೀರ್ಘವೂ ಆಗಿದ್ದು ದುಂಬಿಯಂತೆ ಹೊಳೆಯುತ್ತಿವೆ; ಬ್ರಹ್ಮಾದಿ ದೇವತೆಗಳು ಸಹ ಅಂತಹ ಕಣ್ಣಿನ ನೋಟವನ್ನು ಸದಾ ಪ್ರಾರ್ಥಿಸುವರು ಎಂದರ್ಥ.

೩. ಇಲ್ಲಿ ನೋಟದ ಪ್ರಾರ್ಥನೆಯೆಂದರೆ ಅನುಗ್ರಹದ ಪ್ರಾರ್ಥನೆ ಎಂದರ್ಥ.

೪. ಇಲ್ಲಿ ಶಂಭು ಎಂದರೆ ಬ್ರಹ್ಮ ಹಾಗೂ ಶಿವ ಎಂಬ ಎರಡು ಅರ್ಥಗಳೂ ವಿವಕ್ಷಿತ.

## ಶ್ರೀಕೃಷ್ಣನ ಲಲಾಟದ ಹಿರಿಮೆ

ವಕ್ರಾಲಕಂ ಮಣಿಮಯೋಜ್ಜ್ವಲಪಟ್ಟಬಂಧಂ
ಕಸ್ತೂರಿಕಾತಿಲಕಭೂಷಿತಮಚ್ಯುತಸ್ಯ ।

---

೧. ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್ ।
ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್ ॥ - ದ್ವಾದಶಸ್ತೋತ್ರ (೧/೧೦)

೨. ಯಚ್ಛ್ರೀನಿಕೇತಮಲಿಭಿಃ ಪರಿಸೇವ್ಯಮಾನಂ ಭೂತ್ಯಾ ಸ್ವಯಾ ಕುಟಿಲಕುಂತಲವೃಂದಜುಷ್ಟಮ್ ।
ಮೀನದ್ವಯಶ್ರಿಯಮಧಿಕ್ಷಿಪದಬ್ಜನೇತ್ರಂ ಧ್ಯಾಯೇನ್ಮನೋಮಯಮತಂದ್ರಿತ ಉಲ್ಲಸದ್ಭ್ರು॥ - ಶ್ರೀಮದ್ಭಾಗವತ
ನಿಖಿಲಾಘೌಘವಿನಾಶನ ಪರಸೌಖ್ಯಪ್ರದದೃಷ್ಟೇ ।
ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ - ದ್ವಾದಶಸ್ತೋತ್ರ (೧೦/೧೮)

ವಿಸ್ತೀರ್ಣಮೀಷದುದಿತಾಲಿಕಯುಗ್ಮಮಿಷ್ಟ-
ಮಸ್ಮಾಕಫಾಲಲಿಖಿತಂ ಕುರುತಾಲ್ಲಲಾಟಮ್ ॥ ೫೬ ॥

ವಕ್ರವಾದ ಮುಂಗುರುಳುಗಳ, ಮಣಿಮಯವಾದ ಉಜ್ವಲಕಟ್ಟನ್ನು ಹೊಂದಿರುವ, ಕಸ್ತೂರಿತಿಲಕದಿಂದ ಭೂಷಿತವಾದ, ವಿಶಾಲವಾದ, ಸ್ವಲ್ಪ ಮೇಲೆ ಚಾಚಿದ ಕೊನೆಯ ಮೇಲ್ಭಾಗಗಳನ್ನು ಹೊಂದಿರುವ ಶ್ರೀಕೃಷ್ಣನ ಹಣೆಯು ನಮ್ಮ ಹಣೆಬರಹವು ಇಷ್ಟಪ್ರದವಾಗುವಂತೆ ಮಾಡಲಿ.

ವಿ : ೧. ಶ್ರೀಕೃಷ್ಣನ ಹಣೆಯ ಚಿಂತನೆಯಿಂದ ನಮ್ಮ ಹಣೆಬರಹ ಉತ್ತಮವಾಗುವುದು ಎಂದರ್ಥ; ಫಾಲ – ಹಣೆ.

೨. ಹಣೆಬರಹ ಎಂದರೆ ವಿಧಿಲಿಖಿತ ಎಂದರ್ಥ. ಸಾಮಾನ್ಯವಾಗಿ ಹಣೆಬರಹವನ್ನು ಅನಿಷ್ಟಸೂಚಕವನ್ನಾಗಿ ಬಳಸುವುದುಂಟು; ಮಂಗಲಕರವಾದ ಶ್ರೀಕೃಷ್ಣನ ಹಣೆಯ ಚಿಂತನೆ ನಮ್ಮ ಹಣೆಬರಹವನ್ನು ಬದಲಾಯಿಸಿ, ಶುಭಫಲಕ್ಕೆ ಕಾರಣವಾಗುವುದು[1] ಎಂದು ಭಾವ: ತಂ ಯಥಾ ಯಥಾ ಉಪಾಸತೇ ತಥೈವ ಭವತಿ ।– ಉಪನಿಷತ್.

ಶ್ರೀಕೃಷ್ಣನ ಹುಬ್ಬುಗಳ ವರ್ಣನೆ

ಶ್ಯಾಮಂ ತ್ರಿವಕ್ರಂ ವಿಧಿಮುಖ್ಯದೇವ-
ಸಾಮ್ರಾಜ್ಯವಿಶ್ರಾಣನಹೇತುಲೀಲಮ್ ।
ಕಾಮಾಗ್ರ್ಯಚಾಪಾಕೃತಿ ಕಾಮತಾತ-
ಭ್ರೂಮಂಡಲಂ[2] ಖಂಡಯತಾದಘಂ ನಃ ॥ ೫೭ ॥

ಕಪ್ಪಾದ, ಮೂರು ಕಡೆ ಬಾಗಿದ, ಬ್ರಹ್ಮನೇ ಮೊದಲಾದ ದೇವತೆಗಳಿಗೆ ಸಾಮ್ರಾಜ್ಯವನ್ನು ಲೀಲೆಯಿಂದ ಅನುಗ್ರಹಿಸುವ, ಶ್ರೇಷ್ಠ ಕಾಮನಬಿಲ್ಲಿನಂತಿರುವ, ಮನ್ಮಥಜನಕನಾದ ಶ್ರೀಕೃಷ್ಣನ ಭ್ರೂಮಂಡಲವು ನಮ್ಮ ಪಾಪವನ್ನು ಪರಿಹರಿಸಲಿ.

ವಿ : ೧. ಶ್ರೀಕೃಷ್ಣನ ಭ್ರೂಮಂಡಲವು ಬ್ರಹ್ಮಾದಿದೇವತೆಗಳಿಗೆ ಅವರವರ ಪದವಿಯನ್ನು ಕರುಣಿಸುವ ವಿಶೇಷತೆಯನ್ನು ಹೊಂದಿದೆ ಎಂದರ್ಥ.

---

೧. ತಸ್ಯ ಸದಾ ದುರ್ಲೇಖಾರಹಿತತ್ವಾತ್ ಧ್ಯಾತುರ್ಮಮ ಲಲಾಟಮಪಿ ದುರ್ಲೇಖಾರಹಿತಂ ಕರೋತ್ವಿತ್ಯರ್ಥಃ। –ವ್ಯಾ.

೨. ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿಪ್ರತೀಕ್ಷಿತಮ್ ।
ಭ್ರೂಭಂಗಂ ಪಾರಮೇಷ್ಠ್ಯಾದಿಪದದಾಯಿ ವಿಮುಕ್ತಿದಮ್ ॥ – ದ್ವಾದಶಸ್ತೋತ್ರ (೧/೧೧)

## ಶ್ರೀಕೃಷ್ಣನ ತುಟಿಗಳ ವರ್ಣನೆ

ಸ ಭವತು ಯಶಸೇ ಪ್ರವಾಲಕಾಂತಿ-
ರ್ಮೃದುಲತರಃ ಸರಸೋऽಧರೋ ಮುರಾರೇಃ।
ಯದುದಿತರಸಲುಬ್ಧಧೀರವಾಪ್ತೀ-
ದುರಸಿ ರಮಾऽऽನನಪದ್ಮಚುಂಬಿವೇಣೌ ॥ ೫೮ ॥

ಅತ್ಯಂತ ಮೃದುವಾದ, ಸರಸವಾದ, ಹವಳದ ಕಾಂತಿಯ, ಮುರಾರಿಯಾದ ಶ್ರೀಕೃಷ್ಣನ ಅಧರವು ನಮ್ಮ ಯಶಸ್ಸಿಗೆ ಕಾರಣವಾಗಲಿ; ಅದರಿಂದ ಹೊರಹೊಮ್ಮುವ ರಸದ ಬಯಕೆಯಿಂದ ಹವಳದ ಕಾಂತಿಯನ್ನು ಹೊಂದಿದ, ಮಹಾಲಕ್ಷ್ಮಿಯು ಅವನ ಮುಖಪದ್ಮವನ್ನು ಚುಂಬಿಸುವ ವೇಣುವಿನಲ್ಲಿ ನೆಲೆಸಿದಳು.

ವಿ : ೧. ಶ್ರೀಕೃಷ್ಣನ ಅಧರದ ವರ್ಣನೆ ಇದರಲ್ಲಿ ಬಂದಿದೆ.

೨. ಶ್ರೀಕೃಷ್ಣನ ಅಧರಾಮೃತವನ್ನು ಬಯಸಿಯೋ ಎಂಬಂತೆ ಅವನ ವಕ್ಷಃಸ್ಥಳದಲ್ಲಿ ನೆಲೆಸಿರುವ ಮಹಾಲಕ್ಷ್ಮಿಯು ಅವನು ಊದುವ ಕೊಳಲಿನಲ್ಲಿ ನೆಲೆಸಿದಳು ಎಂಬ ಇಲ್ಲಿಯ ಭಾವ ಅತ್ಯಂತ ರೋಚಕ. ಇದು ಶ್ರೀಕೃಷ್ಣನ ಕೊಳಲಿನಲ್ಲಿ ಸಾಕ್ಷಾತ್ ಮಹಾಲಕ್ಷ್ಮಿಯು ನೆಲೆಸಿ, ಶ್ರೀಕೃಷ್ಣನ ಅಧರಾ-ಮೃತವನ್ನು ಪಾನಮಾಡಿದಳು ಎಂಬ ಶ್ರೀಮದ್ಭಾಗವತತಾತ್ಪರ್ಯ(ತಂತ್ರಭಾಗ. ೧೦/೧೯/೧೦)ದ ವಿವರವನ್ನು ಆಧರಿಸಿದ ನಿರೂಪಣೆ.

ಶ್ರೀದೇವೀ ವೇಣುಮಾಶ್ರಿತ್ಯ ರೇಮೇ ಕೃಷ್ಣಮುಖಾಂಬುಜೇ।
ಪಪೌ ಚ ತದ್ಗತಂ ಗೀತಂ ಸುರಾ ಇತರಭಾಂಡಗಾಃ॥

## ರುಗ್ಮಿಣಿಯ ಅಧರಗಳ ವರ್ಣನೆ

ಸಂಪಕ್ವಬಿಂಬಸಮರಮ್ಯತಮಾಧರೋಷ್ಠಃ
ಸತ್ಸಂಪದೇ ಭವತು ಸಾತ್ವತರಾಜರಾಜ್ಞ್ಯಾಃ।
ಯತ್ಸಂಭವಾಮೃತಕಣೇನ ಫಣೀಂದ್ರತಲ್ಪಃ
ಕೃಷ್ಣಃ ಸ ನಿತ್ಯಮಜರಾಮರಣೋ[1] ಬಭೂವ॥ ೫೯ ॥

ಯದುಪುಂಗವನಾದ ಶ್ರೀಕೃಷ್ಣನ ರಾಣಿಯಾದ ರುಗ್ಮಿಣಿಯ ಪರಿಪಕ್ವವಾದ ತೊಂಡೆ-ಹಣ್ಣಿನಂತಹ ಅತ್ಯಂತ ಮನೋಹರವಾದ ತುಟಿಯು ನಮ್ಮ ಸಂಪತ್ತಿಗೆ ಕಾರಣವಾಗಲಿ; ಅದರಿಂದ ಹುಟ್ಟಿದ ಅಮೃತಬಿಂದುವಿನಿಂದ ಶೇಷಶಾಯಿಯಾದ ಶ್ರೀಕೃಷ್ಣನು ಸದಾ ಮುಪ್ಪು ಸಾವುಗಳು ಇಲ್ಲದವನಾದನು.

---

೧. ಅಜರಾಮರಣಃ ಸಕಲಾರ್ತಿಹರಃ ಕಮಲಾಪತಿರೀಡ್ಯತಮೋऽವತು ನಃ। – ದ್ವಾದಶಸ್ತೋತ್ರ ೪/೧.

ವಿ : ೧. ಶ್ರೀಕೃಷ್ಣನು ಸ್ವತಃ ಅಮೃತಮಯನಾದವನು; ಅವನು ಅಜರನು, ಅಮರನು ಆದವನು ಎಂಬುದು ತತ್ತ್ವ. ಅದನ್ನು ಇಲ್ಲಿ ರುಗ್ಮಿಣಿಯ ಅಧರಾಮೃತಪಾನದ ಫಲ ಎಂಬುದಾಗಿ ಉತ್ಪ್ರೇಕ್ಷಿಸಿರುವರು.

೨. ಶ್ರೀಕೃಷ್ಣನು ಫಣೀಂದ್ರತಲ್ಪನಾದ್ದರಿಂದ ಸ್ವತಃ ಅಮೃತಮಯ ಸ್ವರೂಪ ಎಂಬುದನ್ನು ಎಂಬ ಪದದಿಂದ ಸೂಚಿಸಿರುವರು.

೩. ಇದರ ವಿವರಣೆಯಂತಿರುವ ಈ ಕೆಳಗಿನ ಶ್ಲೋಕ ಗಮನಾರ್ಹ:

ರಮಾಧರೋಷ್ಠಾಮೃತಪಾನಜಾತಮಹಾನುಭಾವೇನ ನ ಪೂತನಾಯಾಃ।
ಉರೋಜಸಂಗ್ರ್ಯಾತಿಕರೋ ಗರೋಽಸೌ ಬಭೂವ ಬಾಲಸ್ಯ ಬಲಾನುಜಸ್ಯ ॥
– ರು.ವಿ. (೨/೩೬)

## ರುಗ್ಮಿಣಿಯ ಕಪೋಲಗಳ ವರ್ಣನೆ

ಸೌವರ್ಣರಮ್ಯಫಲಕೋಪಮಿತಃ ಕಪೋಲಃ
ಸೌಭಾಗ್ಯದೋ ಭವತು ರಂಜಿತಕುಂಡಲಶ್ರೀಃ।
ಯಚ್ಚುಂಬನಂ ವಿರಚಯನ್ ವಿಗತಾನ್ಯತೃಷ್ಣಃ
ಕೃಷ್ಣೋ ಬಭೂವ ಸರಸಃ ಕಿಲ ನಿತ್ಯತೃಪ್ತಃ ॥ ೬೦ ॥

ಚಿನ್ನದ ಮನೋಹರಫಲಕವನ್ನು ಹೋಲುವ, ಕುಂಡಲಗಳಿಂದಾಗಿ ಕೆಂಪಾದ ಕಾಂತಿಯ, ರುಗ್ಮಿಣಿಯ ಕಪೋಲವು ನಮಗೆ ಸೌಭಾಗ್ಯವನ್ನು ನೀಡಲಿ; ರಸಿಕನಾದ ಶ್ರೀಕೃಷ್ಣನು ಅದನ್ನು ಚುಂಬಿಸುತ್ತ ಇತರ ಬಯಕೆಗಳನ್ನು ತೊರೆದವನಾದನೂ, ನಿತ್ಯತೃಪ್ತನೂ ಆದನು ಅಲ್ಲವೆ!

ವಿ : ೧. ಇದರಲ್ಲಿ ಶ್ರೀಕೃಷ್ಣನ ಚುಂಬನಕ್ಕೆ ಪಾತ್ರವಾಗುವ ರುಗ್ಮಿಣಿಯ ಕಪೋಲ ಅತ್ಯಂತ ಶ್ರೇಷ್ಠ ಎಂಬ ಭಾವ ನಿರೂಪಿತವಾಗಿದೆ.

೨. [೧]ಶ್ರೀಕೃಷ್ಣನಿಗೆ ಅದರ ಅಗತ್ಯವಿಲ್ಲವೆಂಬುದನ್ನು ನಿತ್ಯತೃಪ್ತಃ ಎಂಬ ವಿಶೇಷಣದಿಂದ ತಿಳಿಸಿರುವರು.

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಷ್ಟಾದಶಃ ॥ ೬೧ ॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತ ರುಗ್ಮಿಣೀಶವಿಜಯೇ ಅಷ್ಟಾದಶಃ ಸರ್ಗಃ ॥

*****

---

೧. ರುಗ್ಮಿಣೀಕಪೋಲಚುಂಬನಲೋಲಸ್ಯ ತತೋಽನ್ಯತ್ರ ಉತ್ಕಂಠಾರಹಿತತ್ವಾದೇವ ನಿತ್ಯತೃಪ್ತತ್ವಮಿತ್ಯುತ್ಪ್ರೇಕ್ಷಾ। – ವ್ಯಾ.

# ೧೯. ಏಕೋನವಿಂಶಃ ಸರ್ಗಃ

(ರುಗ್ಮಿಣೀಗಂಡಸ್ಥಲವರ್ಣನೆ - ೧; ಮೌಕ್ತಿಕವರ್ಣನೆ - ೨, ೩; ರುಗ್ಮಿಣೀ ಕಟಾಕ್ಷವರ್ಣನೆ - ೪; ರುಗ್ಮಿಣೀ ವರ್ಣನೆ -೫-೭; ಪುನಃ ಕಟಾಕ್ಷವರ್ಣನೆ, ಅಲಕರಾಶಿವರ್ಣನೆ - ೧೦; ಮೌಲಿವರ್ಣನೆ -೧೧; ಜಾಂಬವತ್ಯಾದಿ ಪರಿಣಯ - ೧೨; ಕಾವ್ಯಸಂದೇಶ (ವಿಷ್ಣುಸರ್ವೋತ್ತಮತ್ವರೂಪಪ್ರಮೇಯಸಮರ್ಥನೆ) - ೧೩-೨೩; ಕೈಲಾಸಯಾತ್ರಾಪ್ರಸಂಗ - ೨೪; ರುಗ್ಮಿಣೀ ಗರ್ಭವರ್ಣನೆ - ೨೪, ೨೬; ಪ್ರದ್ಯುಮ್ನ ಜನನ - ೨೭,೨೮; ಪ್ರದ್ಯುಮ್ನನಲ್ಲಿ ಪ್ರದ್ಯುಮ್ನರೂಪೀಭಗವಂತನ ಆವೇಶ - ೨೯; ಅನಿರುದ್ಧೋತ್ಪತ್ತಿ - ೩೦, ೩೧; ವಜ್ರೋತ್ಪತ್ತಿ - ೩೨; ದ್ವಾರಾವತೀವರ್ಣನೆ - ೩೩, ೩೪; ಕುಶಸ್ಥಲೀ ವರ್ಣನೆ - ೩೫; ಶ್ರೀಕೃಷ್ಣಮಹಿಮಾ - ೩೬; ಕಾವ್ಯವರ್ಣನೆ - ೩೭, ೩೮; ಶ್ರೇಯಃ ಪ್ರಾರ್ಥನೆ - ೩೯; ಕಾವ್ಯಪ್ರಶಸ್ತಿ - ೪೦; ಸರ್ಗೋಪಸಂಹಾರ - ೪೧)

ರುಗ್ಮಿಣಿಯ ಗಂಡಸ್ಥಳದ ವರ್ಣನೆ

ದಂತಕ್ಷತೈಃ ಕೃತಪದಂ ಪ್ರವಿಭಾತಿ ದೇವ್ಯಾ
ಗಂಡಸ್ಥಲಂ ಪ್ರಿಯವಶೀಕರಣೋಚಿತಸ್ಯ ।
ಮುಷ್ಣತ್ಪ್ರಭಾಂ ಕನಕಯಂತ್ರವರಸ್ಯ ವಶ್ಯ-
ಕರ್ಮಾರ್ಹರಕ್ತರಸತೋ ರಚಿತಾಕ್ಷರಸ್ಯ ॥ ೧ ॥

ವಶ್ಯಕರ್ಮಕ್ಕೆ ಅಗತ್ಯವಾದ ಕುಂಕುಮೋದಕದಿಂದ ಲಿಖಿತವಾದ ಅಕ್ಷರಗಳಿಂದ, ಪ್ರಿಯರನ್ನು ವಶಮಾಡಿಕೊಳ್ಳಲು ಯೋಗ್ಯವಾದ, ಚಿನ್ನದ ಶ್ರೇಷ್ಠ ಯಂತ್ರದ ಸೊಬಗನ್ನು ಮೀರಿಸುವ, ಶ್ರೀಕೃಷ್ಣನ ದಂತಕ್ಷತಗಳಿಂದ ಒಳಗೂಡಿದ ರುಗ್ಮಿಣೀದೇವಿಯ ಕಪೋಲಪ್ರದೇಶವು ಬಹಳವಾಗಿ ಕಂಗೊಳಿಸುತ್ತಿದೆ.

ವಿ : ಹದಿನೆಂಟನೆಯ ಸರ್ಗದ ಕೊನೆಯಲ್ಲಿ ಬಂದಿದ್ದ ರುಗ್ಮಿಣಿಯ ಕಪೋಲಗಳ ವರ್ಣನೆ ಈ ಸರ್ಗದ ಮೊದಲ ಶ್ಲೋಕದಲ್ಲಿ ಮುಂದುವರೆದಿದೆ.

ರುಗ್ಮಿಣಿಯ ಮೂಗುತಿಯ ವರ್ಣನೆ

ಅಂತರ್ನಿಗೂಢಕನಕಾಂಕುರಿತಾನನೋಽಪಿ
ನಾಸಾವಿಭೂಷಣಮಣಿರ್ಮುರವೈರಿಪತ್ನ್ಯಾಃ ।
ಮುಕ್ತಾಮಯಃ ಕಿಲ ಮನೋಜ್ಞವಧೂಸುಧಾರ್ದ್ರ-
ಬಿಂಬೋಷ್ಠಚುಂಬಿವದನಸ್ಯ ಸದಾಽಽಮಯಃ ಕ್ವ॥ ೨ ॥

ಒಳಗೆ ಮರೆಯಾಗಿರುವ ಚಿನ್ನದ ತುದಿಯಿಂದ ಚುಚ್ಚಲ್ಪಟ್ಟಿದ್ದರು ಸಹ ಮುರಾರಿಯಾದ ಶ್ರೀಕೃಷ್ಣನ ಪತ್ನಿಯಾದ ರುಗ್ಮಿಣಿಯ ಮೂಗುತಿಯು ಮುಕ್ತಾಮಯ (ನೋವಿಲ್ಲದುದಾಗಿ, ಮುತ್ತಿನದಾಗಿ) ಆಗಿದೆ; ಅದು ಸರಿ ! ರಮಣೀಯವಾದ ಪ್ರಿಯೆಯ ಅಧರಸುಧೆಯಿಂದ ಆರ್ದ್ರವಾದ ಕೆಂದುಟಿಯನ್ನು ಸದಾ ಚುಂಬಿಸುವ ಮುಖದವನು ಸದಾ ಮುಕ್ತಾಮಯ (ರೋಗಮುಕ್ತ)ನಾಗದಿರಲು ಹೇಗೆ ಸಾಧ್ಯ?

ವಿ : ೧. ರುಗ್ಮಿಣಿಯು ಧರಿಸಿದ ಮೂಗುತಿಯ ವರ್ಣನೆ ಇದರಲ್ಲಿದೆ.

೨. ಮೂಗುತಿಯು ಮುತ್ತಿನದು ಎಂಬುದನ್ನು ಕಾವ್ಯಮಯವಾಗಿ ವರ್ಣಿಸಲಾಗಿದೆ; ಮುಕ್ತಾಮಯ ಎಂಬುದಕ್ಕೆ ಮುತ್ತಿನದು ಎಂಬುದು ಒಂದು ಅರ್ಥವಾದರೆ ರೋಗಮುಕ್ತ ಎಂಬುದು ಮತ್ತೊಂದು ಅರ್ಥ.

೩. ಮುಕ್ತನಾದವನಿಗೆ ಯಾವುದೇ ನೋವಿನ ಪ್ರಸಂಗವಿಲ್ಲ ಎಂಬುದು ಸಿದ್ಧಾಂತ. ಆದರೆ ಮುತ್ತಿನದಾದ ಮೂಗುತಿಯನ್ನು ಚಿನ್ನದ ತುದಿಯಿಂದ ಚುಚ್ಚಿ ಮೂಗಿನೊಳಕ್ಕೆ ಸೇರಿಸುವುದು ಕಂಡಿದೆ. ಅಂದ ಮೇಲೆ ಅದು ಮುಕ್ತಾಮಯವಾಗುವುದು ಹೇಗೆ ಎಂಬ ಪ್ರಶ್ನೆಗೆ, ಅದು ಮುಕ್ತಾಮಯ (ಮುತ್ತಿನದಾಗಿರುವುದೇ) ಆಗಿರುವುದೇ ಕಾರಣ ಎಂದು ಕಾವ್ಯಮಯವಾಗಿ ತಿಳಿಸಲಾಗಿದೆ.

೪. ಆಮಯ – ವ್ಯಾಧಿ, ರೋಗ; [೧]ನಾಸಾವಿಭೂಷಣಮಣಿಃ– ಮೂಗುತಿ.

### ರುಗ್ಮಿಣಿಯ ಮೂಗುತಿಯ ವರ್ಣನೆ

[೨]ಮುಕ್ತಾತ್ಮಕೋಽಪಿ ಮೃದುಲೋಷ್ಠಪುಟಾನುಷಕ್ತೋ
ನಿತ್ಯಂ ಯದುಲ್ಲಸದಪಾಂಗಶರೇಣ ಭಿನ್ನಃ।
ನಾಸಾವಿಭೂಷಣಮಣಿಃ ಪರಿಲಂಬತೇಽಸ್ಯಾ
ದೇವ್ಯಾಃ ಕಿಮಚ್ಯುತವಶೀಕರಣೇ ಪ್ರಯಾಸಃ ॥ ೩ ॥

ಈ ರುಗ್ಮಿಣೀ ದೇವಿಯ ಮೂಗುತಿಯು ಮುಕ್ತ (ಮುತ್ತಿನ) ಸ್ವರೂಪದ್ದಾದರೂ, ಮೃದುವಾದ ತುಟಿಗಳೊಂದಿಗೆ ಬೆಸೆದಿರುವುದರಿಂದ ಸದಾ ಅವಳ ಹೊಳೆಯುವ ಕುಡಿನೋಟದ ಬಾಣದಿಂದ ಮಿಶ್ರಿತವಾಗಿ ಇಳಿಬಿದ್ದಿದೆ; ಎಂದ ಮೇಲೆ ಇವಳಿಗೆ

---

೧. ಹೃದಿ ನಿರೂಢಶರಸ್ಯ ವ್ಯಾಧ್ಯಭಾವ ಆಶ್ಚರ್ಯಮಿತಿ ಶ್ಲೋಕಸ್ಯ ಧ್ವನ್ಯೋಽರ್ಥಃ । ಅರ್ಥಾಂತರಂ ನ್ಯಸ್ಯತಿ । ಮನೋಜ್ಞವಧೂನಾಂ ಮನೋರಮಸ್ತ್ರೀಣಾಮ್ । ಸುಧಯಾ ಅಧರಾಮೃತೇನಾರ್ದ್ರಃ ದ್ರವೀಭೂತಃ ವಿಂಬೋಷ್ಠಃ ತಂ ಚುಂಬತೀತಿ ಸುಧಾರ್ದ್ರಬಿಂಬೋಷ್ಠಚುಂಬಿವದನಂ ಯಸ್ಯ ಸ ತಥೋಕ್ತಸ್ತಸ್ಯ । ಕಾಂತಾನಾಮ್ ಓಷ್ಠಾಮೃತಪಾನಾಸಕ್ತಮುಖಸ್ಯೇತ್ಯರ್ಥಃ। ನಾಸಾಮಣೇರಧರೋಷ್ಠಪರಿಲಂಬಮಾನತ್ವಾದಿತಿ ಭಾವಃ। – ವ್ಯಾ.

೨. ಶ್ರೀಕೃಷ್ಣಸ್ಯಾಪಿ ಮುಕ್ತತ್ವಾವಿಶೇಷಾತ್ ಸೋಽಪ್ಯೇವಂ ವಶೀಕರ್ತುಂ ಶಕ್ತ ಇತಿ ಭಾವಃ। – ವ್ಯಾ.

ಅಚ್ಯುತನಾದ (ನಿತ್ಯಮುಕ್ತನಾದ) ಶ್ರೀಕೃಷ್ಣನನ್ನು ವಶಮಾಡಿಕೊಳ್ಳುವುದರಲ್ಲಿ ಪ್ರಯಾಸವೆಲ್ಲಿದೆ? ಅಪಾಂಗ - ಕಟಾಕ್ಷ.

ವಿ.: ೧. ರುಗ್ಮಿಣಿಯ ಮಧುರವಾದ ಕೋಮಲ ಅಧರದತ್ತ ಆಕರ್ಷಿತವಾಗಿರುವ ಮುಕ್ತಾತ್ಮಕವಾದ ಮೂಗುತಿಯು ನಿತ್ಯ ಮುಕ್ತನಾದ ಶ್ರೀಕೃಷ್ಣನನ್ನು ಆಕರ್ಷಿಸುವುದರಲ್ಲಿ ಪ್ರಯಾಸವಿಲ್ಲ ಎಂದು ಭಾವ.

## ರುಗ್ಮಿಣಿಯ ಕಟಾಕ್ಷದ ವರ್ಣನೆ

ನಾಸಾಖ್ಯಚಂಪಕಭಿಯಾ ಚಲಿತಸ್ಯ ನೇತ್ರ-
ಚಾರ್ವಂಬುಜಾರ್ಪಿತಹೃದಾ ಚ ಸಮುತ್ಸುಕಸ್ಯ ।
ಭೃಂಗಸ್ಯ ಸಂಪದಮಧೀರಜವಸ್ಯ ಮುಷ್ಣನ್
ಲಕ್ಷ್ಮೀಂ ತನೋತು ಯದುಪುಂಗವರಾಜ್ಞ್ಯಪಾಂಗಃ ॥ ೪ ॥

ಮೂಗಿನ ರೂಪದ ಸಂಪಿಗೆಯ ಭಯದಿಂದ ದೂರಕ್ಕೆ ಸರಿದ ಹಾಗೂ ಕಣ್ಣುಗಳೆಂಬ ಕಮಲದಲ್ಲಿ ಮನಸ್ಸು ನೆಟ್ಟಿದ್ದರಿಂದ ಉತ್ಸಾಹ ಚಿಗುರಿದ, ಉಡುಗಿದ ವೇಗದ ದುಂಬಿಯ ಶೋಭೆಯನ್ನು ಮಂಕಾಗಿಸುವ, ಯಾದವ ಶ್ರೇಷ್ಠನಾದ ಶ್ರೀಕೃಷ್ಣನ ಪಟ್ಟದರಸಿಯಾದ ರುಗ್ಮಿಣಿಯ ಕುಡಿನೋಟವು ನಮಗೆ ಸಂಪತ್ತನ್ನು ನೀಡಲಿ.

ವಿ: ೧. ಇದರಲ್ಲಿ ರುಗ್ಮಿಣಿಯ ಕಟಾಕ್ಷದ ವರ್ಣನೆ ಬಂದಿದೆ.

೨. ರುಗ್ಮಿಣಿಯ ಮೂಗು ಸಂಪಿಗೆ ಹೂವಿನಂತಿದ್ದು ದುಂಬಿಗೆ ಮೆಚ್ಚುಗೆಯಾದದ್ದರಿಂದ ಅದು ದೂರಕ್ಕೆ ಸರಿಯುವುದು; ಆದರೆ, ಅವಳ ಕಣ್ಣುಗಳು ಕಮಲದಂತಿರುವುದರಿಂದ ಆ ದುಂಬಿಯು ಅದರಿಂದ ಆಕರ್ಷಿತವಾಗಿ ಅವುಗಳತ್ತ ಧಾವಿಸುವುದು; ಹೀಗೆ ಅತ್ತಿತ್ತ ಚಲಿಸುವ ದುಂಬಿಯ ಶೋಭೆಯನ್ನು ಮೀರಿಸುವ ಕಾಂತಿ ರುಗ್ಮಿಣಿಯ ಚಂಚಲ ಕುಡಿನೋಟದ್ದು ಎಂದು ಭಾವ.

೩. ಮಹಾಲಕ್ಷ್ಮಿಯಾದ ರುಗ್ಮಿಣಿಯ ಕಟಾಕ್ಷ ಎಂದರೆ ಲಕ್ಷ್ಮೀಕಟಾಕ್ಷ ಎಂದರ್ಥ. ಆದ್ದರಿಂದ ಅದು ಸಂಪತ್ಕರ ಎಂದಾಗುವುದು. ಅಂತಹ ಕುಡಿನೋಟವು ಸಂಪತ್ತನ್ನು ನೀಡುವುದು ಎಂಬುದು ಭಾವ. ಇದು ಒಂದು ರೀತಿಯಲ್ಲಿ ಶ್ರೀಮದಾಚಾರ್ಯರ ದ್ವಾದಶಸ್ತೋತ್ರದ ಏಳನೇ ಅಧ್ಯಾಯದ ಭಾವವನ್ನು ವಿವರಿಸುವಂತಿರುವ ಶ್ಲೋಕ.

## ಪಾರಿಜಾತದಂತಹ ರುಗ್ಮಿಣಿ

ಸ್ವರ್ಣಾಂಗೀ ವರನೀಲರತ್ನಸದೃಶಾಪಾಂಗೀ ಪ್ರವಾಲೋಲ್ಲಸ-
ತ್ಪಾದಾ ಯಾ ಸ್ಮಿತಮೌಕ್ತಿಕಾ ಮರಕತಸ್ಕಂಧಾಭನೀಲಾಜಟಾ ।

ವೈಡೂರ್ಯಾಗ್ರ್ಯನಖಾ ನಖಕ್ಷತಲಸನ್ಮಾಣಿಕ್ಯಪುಷ್ಪೋಷ್ಠಸ-
ದ್ಗೋಮೇದಾ ರದವಜ್ರರುಕ್ ಸುರತರುಂ ನಾಸ್ಯೈ ದದೌ ಶ್ರೀಪತಿಃ ॥ ೫ ॥

ಚಿನ್ನದಂತಹ ಶರೀರ, ಶ್ರೇಷ್ಠವಾದ ಇಂದ್ರನೀಲಮಣಿಯಂತಹ ಕುಡಿನೋಟ, ಹವಳದಂತೆ ಹೊಳೆಯುವ ಪಾದಗಳು, ಮಂದಹಾಸವೆಂಬ ಮುತ್ತು, ಮರಕತದ ರೆಂಬೆಯಂತಹ ಶೋಭೆಯ ಕಟ್ಟಿದ ಜಡೆಗಳು, ವೈಡೂರ್ಯದಂತೆ ಹೊಳೆಯುವ ಶ್ರೇಷ್ಠ ಉಗುರಗಳು, ನಖಕ್ಷತರೂಪದ ಹೊಳೆಯುವ ಉತ್ತಮ ಮಾಣಿಕ್ಯಪುಷ್ಪ , ತುಟಿಗಳ ರೂಪದ ಗೋಮೇದಿಕಾರತ್ನ, ವಜ್ರದ ಕಾಂತಿಯ ಹೊಳೆಯುವ ದಂತಗಳು; ಹೀಗಿರುವ ರುಗ್ಮಿಣಿಗೆ ಶ್ರೀಕೃಷ್ಣನು ಪಾರಿಜಾತ ವೃಕ್ಷವನ್ನು ನೀಡಲಿಲ್ಲ.

ವಿ: ೧. ಶ್ರೀಕೃಷ್ಣನು ಸತ್ಯಭಾಮಾದೇವಿಗೆ ಪಾರಿಜಾತ ವೃಕ್ಷವನ್ನು ನೀಡಿದ ಕಥೆ ಶ್ರೀಮದ್ಭಾಗವತ, ಹರಿವಂಶಾದಿಗಳಲ್ಲಿ ಸುಪ್ರಸಿದ್ಧವಾದುದು. ಶ್ರೀಕೃಷ್ಣ ರುಗ್ಮಿಣಿಗೇಕೆ ಪಾರಿಜಾತವನ್ನು ನೀಡಲಿಲ್ಲ ಎಂಬುದನ್ನು ಇಲ್ಲಿ ಅಪೂರ್ವ ರೀತಿಯಲ್ಲಿ ತಿಳಿಸಿರುವರು.

೨. ಪಾರಿಜಾತವು ನವರತ್ನಗಳನ್ನು ಒಳಗೊಂಡಿರುವ ವಿಶಿಷ್ಟವಾದ ವೃಕ್ಷ. ರುಗ್ಮಿಣಿಯ ಅಂಗಗಳು ಚಿನ್ನದಂತಹವು, ಕುಡಿನೋಟ ಇಂದ್ರನೀಲಮಣಿಯಂತಹುದು, ಪಾದಗಳು ಹವಳದಂತಹವುಗಳು, ಮಂದಹಾಸ ಮುತ್ತಿನಂತಹುದು, ಮುಡಿ ಮರಕತಮಣಿಯಂತಹುದು, ಉಗುರಗಳು ವೈಡೂರ್ಯದಂತಹವುಗಳು, ನಖಕ್ಷತಗಳು ಮಾಣಿಕ್ಯದಂತಹುವುಗಳು, ತುಟಿಗಳು ಗೋಮೇದಿಕೆಯಂತಹುವುಗಳು, ಹಲ್ಲುಗಳು ವಜ್ರದಂತಹುವುಗಳು. ಹೀಗೆ ರುಗ್ಮಿಣಿಯು ಸ್ವತಃ ನವರತ್ನಖಚಿತವಾದ ಪಾರಿಜಾತವೃಕ್ಷದಂತೇ ಇರುವುದರಿಂದ ಅವಳಿಗೆ ಪ್ರತ್ಯೇಕವಾಗಿ ಪಾರಿಜಾತವನ್ನು ಶ್ರೀಕೃಷ್ಣನು ನೀಡಲಿಲ್ಲ ಎಂದು ಭಾವ: ತಾದೃಶೀಂ ರುಗ್ಮಿಣೀಮೇವ ಪಾರಿಜಾತತರುಂ ಮತ್ವಾ ಅಸ್ಯೈ ಪಾರಿಜಾತತರುಂ ನ ದತ್ತವಾನಿತ್ಯರ್ಥಃ। –ವ್ಯಾ.

೩. ರುಗ್ಮಿಣೀ ಹಾಗೂ ಸತ್ಯಭಾಮಾ ಎಂಬ ರೂಪಗಳು ಮಹಾಲಕ್ಷ್ಮಿಯ ಶ್ರೀ, ಭೂ ಎಂಬ ಎರಡು ರೂಪಗಳೇ ಆಗಿದ್ದರೂ, ಲೋಕದೃಷ್ಟಿಯಿಂದ ಇಲ್ಲಿ ರುಗ್ಮಿಣಿಯು ಬೇರೆ ಎಂಬಂತೆ ವರ್ಣಿಸಿರುವರು ಎಂದು ತಿಳಿಯಬೇಕು.

೪. ಮಹಾಲಕ್ಷ್ಮಿಯಾದ ರುಗ್ಮಿಣಿಯ ಜಡೆಗಳು ನಾಲ್ಕು ಎಂಬ ವಿವರ ಶಾಸ್ತ್ರಗಳಲ್ಲಿ ಬಂದಿದೆ[೧].

---

೧. "ಚತುಷ್ಕಪರ್ದಾ ಯುವತಿಃ ಸುಪೇಶಾ" (ಋ.೧೦/೧೧೪/೩)ಇತಿ ಶ್ರುತೇಃ। –ವ್ಯಾ.

ಚತುಷ್ಕಪರ್ದಾ ಯಾ ದೇವೀ ಚತುರಾಸ್ಯಾದಿಭಿಃ ಸ್ತುತಾ।
ಚತುರ್ವೇದೋದಿತಗುಣಾ ಚತುರ್ಮೂರ್ತೇರ್ಹರೇಃ ಪ್ರಿಯಾ॥

– ಶ್ರೀವಾದಿರಾಜಶ್ರೀಚರಣವಿರಚಿತಶ್ರೀಶಗುಣದರ್ಪಣ

೫. ನವರತ್ನಗಳು[1]: ಮುತ್ತು, ಮಾಣಿಕ್ಯ, ವೈಡೂರ್ಯ, ಗೋಮೇದ, ವಜ್ರ, ಹವಳ, ಪದ್ಮರಾಗ, ಮರಕತ ಮತ್ತು ಇಂದ್ರನೀಲ.

## ರುಗ್ಮಿಣಿಯ ವಕ್ಷಃಸ್ಥಳದ ವರ್ಣನೆ

[2]ಕಾರ್ಶ್ಯಂ ಕಾಯೇ ಮನೋಜ್ಞೇ ಕಚಭರಕರಯೋರ್ಲಂಬಮಾನತ್ವದೈರ್ಘ್ಯೇ
ಚಕ್ಷುರ್ಮಧ್ಯೋರುದೇಶೇಷ್ವಧಿಕಚಪಲತಾದೃಶ್ಯತಾಮಾರ್ದವಾನಿ।
ತತ್ ತೇ ತಾನಿ ಕ್ರಮೇಣ ದ್ವಿರದಪರಿಲಸತ್ಕುಂಭಶೋಭಾಪಹಾರಿ-
ಣ್ಯಸ್ತಿ ಸ್ತಃ ಸಂತಿ ಲಕ್ಷ್ಮ್ಯಾಃ ಕುಚಕಲಶತಟೇ ನಾಸ್ತಿ ನಸ್ತೋ ನ ಸಂತಿ ॥ ೬ ॥

ರುಗ್ಮಿಣಿಯ ಸುಂದರ ದೇಹದಲ್ಲಿ ಕೃಶತ್ವವಿದೆ; ಕೇಶಪಾಶ ಹಾಗೂ ತೋಳುಗಳಲ್ಲಿ ನೀಳವಾಗಿರುವಿಕೆ ಹಾಗೂ ದೀರ್ಘವಾಗಿರುವಿಕೆಗರೆಡೂ ಇವೆ; ಕಣ್ಣು ನಡು ಹಾಗೂ ತೊಡೆಯ ಪ್ರದೇಶಗಳಲ್ಲಿ ಬಹಳವಾದ ಚಪಲತೆ, ಕಾಣದಿರುವಿಕೆ, ಮೃದುತ್ವಗಳು ಇರುವವು; ಆದರೆ, ಅವಳ ಆನೆಯಂತೆ ಹೊಳೆಯುವ ಕುಂಭಸ್ಥಳಗಳ ಶೋಭೆಯನ್ನು ಮೀರಿಸುವಂತಹ ವಕ್ಷಃಸ್ಥಳದಲ್ಲಿ ಮಾತ್ರ ಆ ಕೃಶತ್ವವಿಲ್ಲ; ಆ ಲಂಬಮಾನತ್ವ ಹಾಗೂ ದೈರ್ಘ್ಯಗಳೂ ಇಲ್ಲ, ಆ ಚಾಪಲ್ಯ, ಅದೃಶ್ಯತ್ವ ಹಾಗೂ ಮೃದುತ್ವಗಳೂ ಇಲ್ಲ.

ವಿ : ೧. ರುಗ್ಮಿಣಿಯ ದೇಹವು ತೆಳುವಾದುದು, ಕೇಶಗಳು ನೀಳವಾದವು, ಕೈಗಳು ದೀರ್ಘವಾದವು, ಕಣ್ಣುಗಳು ಚಾಂಚಲ್ಯದಿಂದ ಕೂಡಿರುವವು, ನಡುಪ್ರದೇಶ ತುಂಬಾ ತೆಳುವಾದುದು, ಉದರ ಪ್ರದೇಶವು ಕೋಮಲವಾದುದು. ಆದರೆ, ಅವಳ ಕಲಶದಂತಹ ಸ್ತನಪ್ರದೇಶದಲ್ಲಿ ಮಾತ್ರ ಇದಕ್ಕೆ ವಿರುದ್ಧವಾಗಿ ಕಠಿಣವಾಗಿ, ವೃತ್ತಾಕಾರವಾಗಿ ಇರುವುದು ಎಂದರ್ಥ.

೨. ರುಗ್ಮಿಣಿಯ ದೇಹ ಶಾಸ್ತ್ರೋಕ್ತವಾದ ಸಕಲ ಸ್ತ್ರೀಲಕ್ಷಣಗಳನ್ನು ಹೊಂದಿರುವುದು ಎಂಬುದು ಮುಖ್ಯ ಭಾವ.

೩. ಇದು ವಿಷಮಸಮಸ್ಯಾಪೂರಣ ಶ್ಲೋಕ[3]. ಶ್ರೀವಾದಿರಾಜರ ಕೃತಿಗಳಲ್ಲಿ ಇಂತಹ ಅನೇಕ ಸಮಸ್ಯಾಪೂರಣಶ್ಲೋಕಗಳು ಕಂಡುಬರುವವು; ಈ ಕೃತಿಯಲ್ಲಿ 'ಶಿಶೋಃ ಕರೇ ಹಸ್ತಿಸಹಸ್ರಮಸ್ತಿ' (೬/೧೩) ಎಂಬುದು ಹಾಗೂ ತೀರ್ಥಪ್ರಬಂಧದಲ್ಲಿನ 'ಕಾತ್ಯಾಯನೀ ಕಂದುಕವದ್ವಿಭಾತಿ' (೧/೫೭)ಎಂಬ ಮಾತು ಇದಕ್ಕೆ ನಿದರ್ಶನ.

---

೧. ಮುಕ್ತಾಮಾಣಿಕ್ಯವೈಡೂರ್ಯಗೋಮೇದಾನ್ ವಜ್ರವಿದ್ರುಮೌ।
ಪದ್ಮರಾಗಂ ಮರಕತಂ ನೀಲಂ ಚೇತಿ ಯಥಾಕ್ರಮಮ್ ॥

೨. ಕಾಯಾದಿಷು ಕಾರ್ಶ್ಯಾದೀನಾಂ ಗುಣತ್ವಾತ್ ಕುಚಸ್ಯ ದೋಷತ್ವಾದಿತಿ ಭಾವಃ। -ವ್ಯಾ.

೩. ವಿಷಮಸಮಸ್ಯಾಪೂರಣಮಿದಮ್। -ವ್ಯಾ.

### ಶ್ರೀಕೃಷ್ಣರುಗ್ಮಿಣಿಯರ ಲಲಾಟರೇಖೆಗಳು

[೧]ಭ್ರೂಮಧ್ಯಲಗ್ನಮೃಗನಾಭಿಲಲಾಮರೇಖಾ
ಶ್ರೀಶ್ರೀಶಯೋರನುಕರೋತಿ ಹಿ ನೀಲನೀಲಾ ।
ಶಾಣೋಪಲೋಪರಿಗತಂ ರಣಧೀರಮಾರ-
ಚಾಪಾನುಷಕ್ತಮಸಿತೋತ್ಪಲಚಾರುಬಾಣಮ್ ॥ ೭ ॥

ಕಡುನೀಲಿಯಾದ ರುಗ್ಮಿಣೀ-ಕೃಷ್ಣರ ಹುಬ್ಬಗಳ ಮಧ್ಯದಲ್ಲಿ ಲಿಪ್ತವಾಗಿರುವ ಕಸ್ತೂರಿತಿಲಕವು ಸಾಣೆಕಲ್ಲಿನ ಮೇಲೆ ಇರಿಸಲ್ಪಟ್ಟಿರುವ, ರಣಧೀರನಾದ ಮನ್ಮಥನ ಧನುಸ್ಸಿನಲ್ಲಿ ಹೂಡಲ್ಪಟ್ಟಿರುವ ಕಪ್ಪಾದ ಕನ್ನೈದಿಲೆಯ ಬಾಣವನ್ನು ಹೋಲುವುದು.

ವಿ : ೧. ಶ್ರೀಕೃಷ್ಣ-ರುಗ್ಮಿಣಿಯರ ತಿಲಕದ ವರ್ಣನೆ ಈ ಶ್ಲೋಕದಲ್ಲಿದೆ.

೨. ಕಡುಕಪ್ಪಾದ ಆ ತಿಲಕವು ಮನ್ಮಥನ ಪಂಚಬಾಣಗಳಲ್ಲಿ ಒಂದಾದ ಕನ್ನೈದಿಲೆಯ ಬಾಣದಂತಿದೆ ಎಂದು ತಾತ್ಪರ್ಯ.

೩. ಮನ್ಮಥನ ಬಾಣವು ಅತ್ಯಂತ ಆಕರ್ಷಕವಾಗಿರುವಂತೆ ಶ್ರೀಕೃಷ್ಣ-ರುಗ್ಮಿಣಿಯರ ಹಣೆಯಲ್ಲಿ ಕಂಗೊಳಿಸುವ ತಿಲಕಗಳು ತುಂಬಾ ಮನೋಹರವಾಗಿವೆ ಎಂದು ಭಾವ; ಶಾಣೋಪಲ - ಸಾಣೆಕಲ್ಲು.

೪. ಭ್ರೂಮಧ್ಯವನ್ನು ಮನ್ಮಥನ ಚಾಪಕ್ಕೂ, ಹಣೆಯನ್ನು ಸಾಣೆಕಲ್ಲಿಗೂ, ತಿಲಕವನ್ನು ನೈದಿಲೆಯ ಬಾಣಕ್ಕೂ ಇಲ್ಲಿ ಹೋಲಿಸಲಾಗಿದೆ.

### ಶ್ರೀಕೃಷ್ಣರುಗ್ಮಿಣಿಯರ ಕಟಾಕ್ಷಗಳ ವರ್ಣನೆ

ನಿತ್ಯಂ ಪರಸ್ಪರಮನೋರಮಗಾತ್ರಸಂಗಾ-
ನ್ಮತ್ತಾಲಿರಕ್ತಸರಸೀರುಹಕಾಂತಿಮಂತೌ[೨] ।
ಲಕ್ಷ್ಮೀರಮಾರಮಣಯೋರ್ಜಗದಾದಿಪಿತ್ರೋ-
ರಸ್ಮಾಕಮೀಪ್ಸಿತಫಲಂ ಕುರುತಾಂ ಕಟಾಕ್ಷೌ ॥ ೮ ॥

---

೧. ಭ್ರೂಮಧ್ಯಸ್ಯ ಚಾಪಮಧ್ಯೋಪಮತ್ವಾತ್ ಫಾಲಸ್ಯ ಶಾಣಪ್ರಾಂತೋಪಮತ್ವಾತ್ ಕಸ್ತೂರೀತಿಲಕಸ್ಯ ನೀಲೋತ್ಪಲ-ಕುಡ್ಮಲಸಮಾನತ್ವಾತ್ ರಣಧೀರತ್ವೇನ ಚಾಪಮಧ್ಯಶರ ಏವ ನಿಶಿತತ್ವಸ್ಯ ಸಂಪಾದನೀಯತ್ವಾತ್ ದೃಷ್ಟಜನಮನೋ-ಮೋಹನತ್ವಾತ್ ಚರಣಧೀರಮಾರಚಾಪಾನುಷಕ್ತಾಸಿತೋತ್ಪಲಶರಸಾಮ್ಯಮಿತಿ ಸಮಗ್ರೋಪಮೇಯಮ್ । -ವ್ಯಾ

೨. ಶ್ರೀಕೃಷ್ಣಶರೀರಸ್ಯ ನೀಲತ್ವಾತ್ ತಚ್ಛರೀರಸಂಬಂಧೇನ ದೇವ್ಯಾಃ ಕಟಾಕ್ಷಸ್ಯ ಭ್ರಮರಕಾಂತಿಃ । ದೇವ್ಯಾಃ ಶರೀರಸ್ಯ ಪೀತವರ್ಣತ್ವಾತ್ ತಚ್ಛರೀರಸಂಬಧೇನ ಶ್ರೀಕೃಷ್ಣಕಟಾಕ್ಷಸ್ಯೇಷದ್ರಕ್ತಾಂಬುಜಕಾಂತಿಃ ಸಂಪನ್ನೇತಿ ಬೋಧ್ಯಮ್ । - ವ್ಯಾ.

ನಿತ್ಯದಲ್ಲೂ ಪರಸ್ಪರರ ಮನೋಹರವಾದ ದೇಹಗಳ ಸಂಪರ್ಕದಿಂದಾಗಿ ಮದಿಸಿದ ದುಂಬಿ ಹಾಗೂ ನಸುಗೆಂಪುಕಮಲಗಳ ಕಾಂತಿಯನ್ನು ಹೊಂದಿರುವ ಶ್ರೀಲಕ್ಷ್ಮೀನಾರಾಯಣರೇ ಆದ ಜಗತ್ತಿನ ಮುಖ್ಯ ತಂದೆ-ತಾಯಿಗಳಾದ ಶ್ರೀರುಗ್ಮಿಣೀ-ಕೃಷ್ಣರ ಕುಡಿನೋಟಗಳು ನಮಗೆ ಅಭೀಪ್ಸಿತವಾದ ಫಲವನ್ನು ನೀಡಲಿ.

ವಿ : ೧. ಶ್ರೀಕೃಷ್ಣ-ರುಗ್ಮಿಣಿಯರ ಕಟಾಕ್ಷಗಳ ವರ್ಣನೆ ಇದರಲ್ಲಿ ಬಂದಿದೆ.

೨. ಶ್ರೀಕೃಷ್ಣರುಗ್ಮಿಣಿಯರು ಲೋಕೋತ್ತರ ಸೌಂದರ್ಯದ ಮಹನೀಯರು. ಅವರಿಬ್ಬರ ಪರಸ್ಪರ ಕುಡಿನೋಟಗಳೇ ಅದಕ್ಕೆ ಸಾಕ್ಷಿ ಎಂದು ಭಾವ.

೩. ಲಕ್ಷ್ಮೀನಾರಾಯಣರಾದ ಶ್ರೀಕೃಷ್ಣ-ರುಗ್ಮಿಣಿಯರು ಜಗತ್ತಿನ ತಂದೆ ತಾಯಿಗಳು. ಎಂದರೆ ಇಡೀ ಜಗತ್ತಿನ ಸೃಷ್ಟಿ ಕಾರ್ಯದ ಮೂಲಪುರುಷರು ಎಂದರ್ಥ. ಬ್ರಹ್ಮಾದಿಗಳು ಅನಂತರದ ಹಂತದಲ್ಲಿ ಸೃಷ್ಟಿ ಮೊದಲಾದ ಕಾರ್ಯಗಳನ್ನು ಮಾಡುವವರು. ಮುಖ್ಯವಾಗಿ ಲಕ್ಷ್ಮೀನಾರಾಯಣರೇ ಜಗತ್ತಿನ ಸೃಷ್ಟ್ಯಾದಿ ಸಕಲ ಕಾರ್ಯಗಳ ಕರ್ತೃಗಳು ಎಂಬದನ್ನು 'ಜಗದಾದಿಪಿತ್ರೋಃ' ಎಂಬ ಪದದಿಂದ ಸೂಚಿಸಿರುವರು.

೪. ಶ್ರೀಕೃಷ್ಣನ ದೇಹವು ನೀಲವರ್ಣದ್ದು, ರುಗ್ಮಿಣಿಯ ಕುಡಿನೋಟವು ಶ್ರೀಕೃಷ್ಣನ ದೇಹದ ಸಂಪರ್ಕದಿಂದಾಗಿ ಭ್ರಮರದ ಕಾಂತಿಯಿಂದ ಕಂಗೊಳಿಸುವುದು. ಶ್ರೀರುಗ್ಮಿಣಿಯ ದೇಹವು ಪೀತ ವರ್ಣದ್ದು. ಅವರ ದೇಹದ ಸಂಪರ್ಕಧಿಂದಾಗಿ ಶ್ರೀಕೃಷ್ಣನ ನಯನವು ಕಮಲದ ಕಾಂತಿಯನ್ನು ಹೊಂದಿ ಶೋಭಿಸುವುದು ಎಂಬದನ್ನು '**ಮತ್ತಾಲಿರಕ್ತಸರಸೀರುಹಕಾಂತಿಮಂತೌ**' ಎಂಬ ಪದದಿಂದ ಸೂಚಿಸಿರುವರು.

೫. ಕುಡಿನೋಟವು ಅನುಗ್ರಹದ ಸಂಕೇತ. ಶ್ರೀರುಗ್ಮಿಣೀ-ಕೃಷ್ಣರ ಕಟಾಕ್ಷದ ಚಿಂತನೆಯು ಅನುಗ್ರಹವನ್ನು ಸೂಚಿಸುವ ಮೂಲಕ ಇಷ್ಟಾರ್ಥಸಿದ್ಧಿಗೆ ಕಾರಣವಾಗುವುದು ಎಂದು ಭಾವ.

**ರುಗ್ಮಿಣಿಕೃಷ್ಣರ ಕಟಾಕ್ಷದ ಪ್ರಾರ್ಥನೆ**

**ರಕ್ತಾ ರಮಾರಾಮಕಟಾಕ್ಷಲಕ್ಷ್ಮೀ-**
**ರ್ಲಕ್ಷೀಕರೋತ್ವಸ್ಮದಮಿತ್ರವರ್ಗಮ್ ।**
**ಸೈವಾನುರಕ್ತಾ ವಿಧಿಶರ್ವಪೂರ್ವ-**
**ಸೌಭಾಗ್ಯದಾತ್ರೀ ಶರಣಾಗತಂ ಮಾಮ್ ॥ ೯ ॥**

ಶ್ರೀಕೃಷ್ಣ-ರುಗ್ಮಿಣಿಯರ ಕಟಾಕ್ಷದ ಕೆಂಪು ಕಾಂತಿಯು ನಮಗೆ ಅಹಿತರಾದವರ ಗುಂಪನ್ನು ಲಕ್ಷಿಸಲಿ; ಬ್ರಹ್ಮ-ರುದ್ರಾದಿ ಸಕಲ ದೇವತೆಗಳಿಗೆ ಸೌಭಾಗ್ಯವನ್ನು ನೀಡುವಂತಹ ಅವರ ಪ್ರೀತಿಯ ಕಟಾಕ್ಷವು ಶರಣುಹೊಕ್ಕಿರುವ ನನ್ನ ಮೇಲೆ ಬೀಳಲಿ.

### ಶ್ರೀಕೃಷ್ಣರುಗ್ಮಿಣಿಯರ ಲಲಾಟರೇಖೆಗಳು

[೧]ಭ್ರೂಮಧ್ಯಲಗ್ನಮೃಗನಾಭಿಲಲಾಮರೇಖಾ
ಶ್ರೀಶ್ರೀಶಯೋರನುಕರೋತಿ ಹಿ ನೀಲನೀಲಾ ।
ಶಾಣೋಪಲೋಪರಿಗತಂ ರಣಧೀರಮಾರ-
ಚಾಪಾನುಷಕ್ತಮಸಿತೋತ್ಪಲಚಾರುಬಾಣಮ್ ॥ ೭ ॥

ಕಡುನೀಲಿಯಾದ ರುಗ್ಮಿಣೀ-ಕೃಷ್ಣರ ಹುಬ್ಬುಗಳ ಮಧ್ಯದಲ್ಲಿ ಲಿಪ್ತವಾಗಿರುವ ಕಸ್ತೂರಿತಿಲಕವು ಸಾಣೆಕಲ್ಲಿನ ಮೇಲೆ ಇರಿಸಲ್ಪಟ್ಟಿರುವ, ರಣಧೀರನಾದ ಮನ್ಮಥನ ಧನುಸ್ಸಿನಲ್ಲಿ ಹೂಡಲ್ಪಟ್ಟಿರುವ ಕಪ್ಪಾದ ಕನ್ನೈದಿಲೆಯ ಬಾಣವನ್ನು ಹೋಲುವುದು.

ವಿ : ೧. ಶ್ರೀಕೃಷ್ಣ-ರುಗ್ಮಿಣಿಯರ ತಿಲಕದ ವರ್ಣನೆ ಈ ಶ್ಲೋಕದಲ್ಲಿದೆ.

೨. ಕಡುಕಪ್ಪಾದ ಆ ತಿಲಕವು ಮನ್ಮಥನ ಪಂಚಬಾಣಗಳಲ್ಲಿ ಒಂದಾದ ಕನ್ನೈದಿಲೆಯ ಬಾಣದಂತಿದೆ ಎಂದು ತಾತ್ಪರ್ಯ.

೩. ಮನ್ಮಥನ ಬಾಣವು ಅತ್ಯಂತ ಆಕರ್ಷಕವಾಗಿರುವಂತೆ ಶ್ರೀಕೃಷ್ಣ-ರುಗ್ಮಿಣಿಯರ ಹಣೆಯಲ್ಲಿ ಕಂಗೊಳಿಸುವ ತಿಲಕಗಳು ತುಂಬಾ ಮನೋಹರವಾಗಿವೆ ಎಂದು ಭಾವ; ಶಾಣೋಪಲ - ಸಾಣೆಕಲ್ಲು.

೪. ಭ್ರೂಮಧ್ಯವನ್ನು ಮನ್ಮಥನ ಚಾಪಕ್ಕೂ, ಹಣೆಯನ್ನು ಸಾಣೆಕಲ್ಲಿಗೂ, ತಿಲಕವನ್ನು ನೈದಿಲೆಯ ಬಾಣಕ್ಕೂ ಇಲ್ಲಿ ಹೋಲಿಸಲಾಗಿದೆ.

### ಶ್ರೀಕೃಷ್ಣರುಗ್ಮಿಣಿಯರ ಕಟಾಕ್ಷಗಳ ವರ್ಣನೆ

ನಿತ್ಯಂ ಪರಸ್ಪರಮನೋರಮಗಾತ್ರಸಂಗಾ-
ನ್ಮತ್ತಾಲಿರಕ್ತಸರಸೀರುಹಕಾಂತಿಮಂತೌ[೨] ।
ಲಕ್ಷ್ಮೀರಮಾರಮಣಯೋರ್ಜಗದಾದಿಪಿತ್ರೋ-
ರಸ್ಮಾಕಮೀಪ್ಸಿತಫಲಂ ಕುರುತಾಂ ಕಟಾಕ್ಷೌ ॥ ೮ ॥

---

೧. ಭ್ರೂಮಧ್ಯಸ್ಯ ಚಾಪಮಧ್ಯೋಪಮತ್ವಾತ್ ಫಾಲಸ್ಯ ಶಾಣಪ್ರಾಂತೋಪಮತ್ವಾತ್ ಕಸ್ತೂರೀತಿಲಕಸ್ಯ ನೀಲೋತ್ಪಲ-ಕುಡ್ಮಲಸಮಾನತ್ವಾತ್ ರಣಧೀರತ್ವೇನ ಚಾಪಮಧ್ಯಶರ ಏವ ನಿಶಿತತ್ವಸ್ಯ ಸಂಪಾದನೀಯತ್ವಾತ್ ದೃಷ್ಟಜನಮನೋ-ಮೋಹನತ್ವಾತ್ ಚರಣಧೀರಮಾರಚಾಪಾನುಷಕ್ತಾಸಿತೋತ್ಪಲಶರಸಾಮ್ಯಮಿತಿ ಸಮಗ್ರೋಪಮೇಯಮ್ । -ವ್ಯಾ

೨. ಶ್ರೀಕೃಷ್ಣಶರೀರಸ್ಯ ನೀಲತ್ವಾತ್ ತಚ್ಛರೀರಸಂಬಂಧೇನ ದೇವ್ಯಾಃ ಕಟಾಕ್ಷಸ್ಯ ಭ್ರಮರಕಾಂತಿಃ । ದೇವ್ಯಾಃ ಶರೀರಸ್ಯ ಪೀತವರ್ಣತ್ವಾತ್ ತಚ್ಛರೀರಸಂಬಧೇನ ಶ್ರೀಕೃಷ್ಣಕಟಾಕ್ಷಸ್ಯೇಷದ್ರಕ್ತಾಂಬುಜಕಾಂತಿಃ ಸಂಪನ್ನೇತಿ ಬೋಧ್ಯಮ್ । - ವ್ಯಾ.

ನಿತ್ಯದಲ್ಲೂ ಪರಸ್ಪರರ ಮನೋಹರವಾದ ದೇಹಗಳ ಸಂಪರ್ಕದಿಂದಾಗಿ ಮದಿಸಿದ ದುಂಬಿ ಹಾಗೂ ನಸುಗೆಂಪುಕಮಲಗಳ ಕಾಂತಿಯನ್ನು ಹೊಂದಿರುವ ಶ್ರೀಲಕ್ಷ್ಮೀನಾರಾಯಣರೇ ಆದ ಜಗತ್ತಿನ ಮುಖ್ಯ ತಂದೆ-ತಾಯಿಗಳಾದ ಶ್ರೀರುಗ್ಮಿಣೀ-ಕೃಷ್ಣರ ಕುಡಿನೋಟಗಳು ನಮಗೆ ಅಭೀಪ್ಸಿತವಾದ ಫಲವನ್ನು ನೀಡಲಿ.

ವಿ: ೧. ಶ್ರೀಕೃಷ್ಣ-ರುಗ್ಮಿಣಿಯರ ಕಟಾಕ್ಷಗಳ ವರ್ಣನೆ ಇದರಲ್ಲಿ ಬಂದಿದೆ.

೨. ಶ್ರೀಕೃಷ್ಣರುಗ್ಮಿಣಿಯರು ಲೋಕೋತ್ತರ ಸೌಂದರ್ಯದ ಮಹನೀಯರು. ಅವರಿಬ್ಬರ ಪರಸ್ಪರ ಕುಡಿನೋಟಗಳೇ ಅದಕ್ಕೆ ಸಾಕ್ಷಿ ಎಂದು ಭಾವ.

೩. ಲಕ್ಷ್ಮೀನಾರಾಯಣರಾದ ಶ್ರೀಕೃಷ್ಣ-ರುಗ್ಮಿಣಿಯರು ಜಗತ್ತಿನ ತಂದೆ ತಾಯಿಗಳು. ಎಂದರೆ ಇಡೀ ಜಗತ್ತಿನ ಸೃಷ್ಟಿ ಕಾರ್ಯದ ಮೂಲಪುರುಷರು ಎಂದರ್ಥ. ಬ್ರಹ್ಮಾದಿಗಳು ಅನಂತರದ ಹಂತದಲ್ಲಿ ಸೃಷ್ಟಿ ಮೊದಲಾದ ಕಾರ್ಯಗಳನ್ನು ಮಾಡುವವರು. ಮುಖ್ಯವಾಗಿ ಲಕ್ಷ್ಮೀನಾರಾಯಣರೇ ಜಗತ್ತಿನ ಸೃಷ್ಟ್ಯಾದಿ ಸಕಲ ಕಾರ್ಯಗಳ ಕರ್ತೃಗಳು ಎಂಬದನ್ನು 'ಜಗದಾದಿಪಿತ್ರೋಃ' ಎಂಬ ಪದದಿಂದ ಸೂಚಿಸಿರುವರು.

೪. ಶ್ರೀಕೃಷ್ಣನ ದೇಹವು ನೀಲವರ್ಣದ್ದು, ರುಗ್ಮಿಣಿಯ ಕುಡಿನೋಟವು ಶ್ರೀಕೃಷ್ಣನ ದೇಹದ ಸಂಪರ್ಕದಿಂದಾಗಿ ಭ್ರಮರದ ಕಾಂತಿಯಿಂದ ಕಂಗೊಳಿಸುವುದು. ಶ್ರೀರುಗ್ಮಿಣಿಯ ದೇಹವು ಪೀತ ವರ್ಣದ್ದು. ಅವರ ದೇಹದ ಸಂಪರ್ಕಧಿಂದಾಗಿ ಶ್ರೀಕೃಷ್ಣನ ನಯನವು ಕಮಲದ ಕಾಂತಿಯನ್ನು ಹೊಂದಿ ಶೋಭಿಸುವುದು ಎಂಬದನ್ನು '**ಮತ್ತಾಲಿರಕ್ತಸರಸೀರುಹಕಾಂತಿಮಂತೌ**' ಎಂಬ ಪದದಿಂದ ಸೂಚಿಸಿರುವರು.

೫. ಕುಡಿನೋಟವು ಅನುಗ್ರಹದ ಸಂಕೇತ. ಶ್ರೀರುಗ್ಮಿಣೀ-ಕೃಷ್ಣರ ಕಟಾಕ್ಷದ ಚಿಂತನೆಯು ಅನುಗ್ರಹವನ್ನು ಸೂಚಿಸುವ ಮೂಲಕ ಇಷ್ಟಾರ್ಥಸಿದ್ಧಿಗೆ ಕಾರಣವಾಗುವುದು ಎಂದು ಭಾವ.

**ರುಗ್ಮಿಣಿಕೃಷ್ಣರ ಕಟಾಕ್ಷದ ಪ್ರಾರ್ಥನೆ**

**ರಕ್ತಾ ರಮಾರಾಮಕಟಾಕ್ಷಲಕ್ಷ್ಮೀ-**
**ರ್ಲಕ್ಷೀಕರೋತ್ವಸ್ಮದಮಿತ್ರವರ್ಗಮ್ ।**
**ಸೈವಾನುರಕ್ತಾ ವಿಧಿಶರ್ವಪೂರ್ವ-**
**ಸೌಭಾಗ್ಯದಾತ್ರೀ ಶರಣಾಗತಂ ಮಾಮ್ ॥ ೯ ॥**

ಶ್ರೀಕೃಷ್ಣ-ರುಗ್ಮಿಣಿಯರ ಕಟಾಕ್ಷದ ಕೆಂಪು ಕಾಂತಿಯು ನಮಗೆ ಅಹಿತರಾದವರ ಗುಂಪನ್ನು ಲಕ್ಷಿಸಲಿ; ಬ್ರಹ್ಮ-ರುದ್ರಾದಿ ಸಕಲ ದೇವತೆಗಳಿಗೆ ಸೌಭಾಗ್ಯವನ್ನು ನೀಡುವಂತಹ ಅವರ ಪ್ರೀತಿಯ ಕಟಾಕ್ಷವು ಶರಣುಹೊಕ್ಕಿರುವ ನನ್ನ ಮೇಲೆ ಬೀಳಲಿ.

ವಿ : ೧. ಶ್ರೀಕೃಷ್ಣ-ರುಗ್ಮಿಣಿಯರು ಕಟಾಕ್ಷಮಾತ್ರದಿಂದಲೇ ಭಕ್ತರಿಗೆ ಇಷ್ಟವನ್ನು ಅಭಕ್ತರಿಗೆ ಅನಿಷ್ಟವನ್ನು ನೀಡಬಲ್ಲ ಮಹಾಶಕ್ತರು ಎಂಬ ವರ್ಣನೆ ಇದರಲ್ಲಿದೆ.

೨. ರಕ್ತಾ ಎಂದರೆ ಕೆಂಪಾದ ಎಂದರ್ಥ. ಕಣ್ಣು ಕೆಂಪಾಗುವುದು ಕ್ರೋಧದ ಸಂಕೇತ. ಅಂತಹ ಕ್ರೋಧದ ನೋಟದಿಂದ ಶ್ರೀಕೃಷ್ಣರುಗ್ಮಿಣಿಯರು ನಮ್ಮ ಶತ್ರುಗಳನ್ನು ನಾಶಗೈಯಲಿ ಎಂಬುದು ಈ ಶ್ಲೋಕದ ಪೂರ್ವಾರ್ಧದ ಅರ್ಥ.

೩. ಅನುರಕ್ತಾ ಎಂದರೆ, ಅನುಗ್ರಹೋನ್ಮುಖವಾದ ಎಂದರ್ಥ; ಅಂತಹ ಕೃಪಾಪೂರಿತ ಕಟಾಕ್ಷವನ್ನು ಅವರಿಬ್ಬರು ಭಕ್ತರ ಮೇಲೆ ಹಾಕಿ, ಅವರ ಮನೋಗತವನ್ನು ಪೂರೈಸುವರು ಎಂಬುದು ದ್ವಿತೀಯಾರ್ಧದ ಮುಖ್ಯ ಭಾವ.

೪. ಅಂತಹ ಅನುಗ್ರಹದ ಕಟಾಕ್ಷವನ್ನೇ ಶರಣಾಗತರಾದ ಭಕ್ತ ಜನರ ಮೇಲೆ ಅವರಿಬ್ಬರು ಹಾಕಲಿ ಎಂಬ ಪ್ರಾರ್ಥನೆ ಇದರ ಮುಖ್ಯ ಭಾವ.

೫. ಈ ಎರಡು (೮,೯) ಪದ್ಯಗಳು ಒಂದರ್ಥದಲ್ಲಿ ಶ್ರೀಮದಾಚಾರ್ಯರ ದ್ವಾದಶ ಸ್ತೋತ್ರದ ಏಳನೇ ಅಧ್ಯಾಯದ ಭಾವಸಂಗ್ರಹದಂತಿವೆ.

## ಶ್ರೀರುಗ್ಮಿಣಿಯ ಮುಂಗುರುಳುಗಳ ವರ್ಣನೆ

[೧]ಮುಕುಟರವಿಭಿಯಾऽಧೋಲಂಬಮಾನಂ [೨]ಮುಖೇಂದು-
ಪ್ರವಿಲಸದುರುಭಾಸಾ ಚೋನ್ಮುಖಂ ತನ್ಮುಖಸ್ಥಮ್ ।
ಕುಟಿಲಮಲಕರಾಶಿಂ ಕರ್ಣನೀಲೋತ್ಪಲಶ್ರೀ-
ಪರಿಹೃತನಿಜದೈನ್ಯಂ ತರ್ಕಯಾಮ್ಯಂಧಕಾರಮ್[೩] ॥ ೧೦ ॥

ಕಿರೀಟರೂಪದ ಸೂರ್ಯನ ಅಂಜಿಕೆಯಿಂದ ಕೆಳಕ್ಕೆ ಜೋಲುವ ಹಾಗೂ ಮುಖರೂಪದ ಹೊಳೆಹೊಳೆಯುವ ಚಂದ್ರನ ಕಾಂತಿಯಿಂದ ಮೇಲೇರುವ, ಶ್ರೀಕೃಷ್ಣರುಗ್ಮಿಣಿಯರ ವಕ್ರವಾದ ಮುಂಗುರುಳ ಸಾಲನ್ನು ಕಿವಿಗಳಲ್ಲಿ ಶೋಭಿಸುವ ಕನ್ನೈದಿಲೆಯ ಕಾಂತಿಯಿಂದ ತನ್ನ ದೈನ್ಯವನ್ನು ಪರಿಹರಿಸಿಕೊಂಡ ಅಂಧಕಾರ ಎಂಬುದಾಗಿ ನಾನು ಊಹಿಸುವೆ.

ವಿ : ೧. ಶ್ರೀಕೃಷ್ಣ-ರುಗ್ಮಿಣಿಯರ ಮುಂಗುರುಳುಗಳ ವರ್ಣನೆ ಈ ಶ್ಲೋಕದಲ್ಲಿ ಬಂದಿದೆ.

---

೧. ಮುಕುಟರವೇರುಪರಿವಿದ್ಯಮಾನತ್ವಾತ್ ಅಧಃಪಲಾಯನಂ ಕರ್ತುಂ ಲಲಾಟದೇಶಮಾಗತಮಿತ್ಯರ್ಥಃ। - ವ್ಯಾ.

೨. ತೇಜಸ್ತಿಮಿರಯೋರ್ವಿರೋಧಾದತ್ರಾಪಿ ಮುಖಚಂದ್ರತೇಜಸಾऽಧಃಪ್ರದೇಶೇ ಗಂತುಮಶಕ್ಯತ್ವಾತ್ ಪುನರಪಿ ಗಂತುಮುನ್ಮುಖಮಿತ್ಯರ್ಥಃ। - ವ್ಯಾ.

೩.. ಉಭಯತ್ರಾಪಿ ಗಂತುಮಶಕ್ಯತ್ವಾತ್ ತಯೋಃ ರುಗ್ಮಿಣೀಶ್ರೀಕೃಷ್ಣಯೋಃ ಮುಖ ಏವ ಸ್ಥಿತಮಿತ್ಯರ್ಥಃ। - ವ್ಯಾ.
ನೀಲೋತ್ಪಲಕಾಂತೇಃ ಚಂದ್ರಸುಹೃತ್ತ್ವೇ ತತ್ತೇಜಃಸಹತ್ವಾತ್ ಅತ ಏವ ಸೂರ್ಯತೇಜಸೋऽಪ್ಯಭೀತತ್ವಾಚ್ಚೋಭಯತಃ ತಾವದ್ದೇಶಪ್ರಸೃತನೀಲೋತ್ಪಲಕಾಂತಿಸಹಾಯೇನ ವಿಜಿತಮಂಧಕಾರೇಣೇತಿ ಭಾವಃ। - ವ್ಯಾ.

೨. ಮುಂಗುರುಳುಗಳು ಎಂದರೆ ಹಣೆಯ ಮೇಲೆ ಹಾರಾಡುವ ವಕ್ರಾಕಾರದ ಕೇಶಗಳು. ಅವುಗಳನ್ನು ಅಂಧಕಾರ ಎಂದೂ, ಅವು ಕೆಳಕ್ಕೆ ಹಾರಲು ಕಿರೀಟ ರೂಪದ ಸೂರ್ಯನ ಕಾಂತಿ ಎಂಬುದಾಗಿಯೂ, ಅವು ಮೇಲಕ್ಕೆ ಹಾರಲು ಮುಖದ ರೂಪದ ಚಂದ್ರನು ಕಾರಣ ಎಂಬುದಾಗಿಯೂ ಉತ್ಪ್ರೇಕ್ಷಿಸಿರುವರು.

೩. ಕತ್ತಲೆಯು ಸೂರ್ಯ ಹಾಗೂ ಚಂದ್ರರ ಪ್ರಕಾಶಕ್ಕೆ ದೂರ ಸರಿಯುವುದು. ಕೃಷ್ಣರುಗ್ಮಿಣಿಯ ಮುಂಗುರುಳುಗಳು ಕತ್ತಲೆಯಂತಿದ್ದರೆ, ಅವರಿಬ್ಬರ ಕಿರೀಟಗಳು ಸೂರ್ಯನಂತೆಯು, ಮುಖವು ಚಂದ್ರನಂತೆಯು ಇವೆ. ಸೂರ್ಯ ಚಂದ್ರರ ಮಧ್ಯೆ ಸಿಲುಕಿದ ಕತ್ತಲೆಯಂತೆ ಅವರ ಮುಂಗುರುಳುಗಳು ಇದ್ದು, ಅವರಿಬ್ಬರ ಕಿವಿಗಳಲ್ಲಿ ಕಂಗೊಳಿಸುವ ಕನ್ನೈದಿಲೆ ಮಾತ್ರ ಕಪ್ಪು ಕಾಂತಿಯದಾಗಿತ್ತು. ಅಂಧಕಾರಕ್ಕೆ ಕನ್ನೈದಿಲೆಯು ಮನಸ್ಸಿಗೆ ನೆಮ್ಮದಿ ನೀಡಿದ ವಸ್ತುವಾಗಿತ್ತು ಎಂಬ ಇಲ್ಲಿಯ ಪರಿಕಲ್ಪನೆ ಅತ್ಯಮೋಘವಾದುದು.

೪. ಶ್ರೀಕೃಷ್ಣ-ರುಗ್ಮಿಣಿಯರ ಮುಂಗುರುಳಿನ ಚಿಂತನೆಯು ಭಕ್ತಜನರ ದೈನ್ಯವನ್ನು ಪರಿಹರಿಸುವ ಸಾಧನ ಎಂಬುದಾಗಿಯೂ 'ಪರಿಹೃತನಿಜದೈನ್ಯಂ' ಎಂಬ ಪದದಿಂದ ಸೂಚಿಸಿರುವರು.

## ಶ್ರೀಕೃಷ್ಣರುಗ್ಮಿಣಿಯರ ಶಿರಸ್ಸುಗಳ ವರ್ಣನೆ

ಉತ್ತುಂಗನೀಲಚಮರೀಮೃಗವಾಲಭಾರ-
ಕಲ್ಪಂ ಸ್ಫುರದ್ವಿವಿಧರತ್ನಲಸತ್ಕಿರೀಟಮ್ ।
ಉತ್ಫುಲ್ಲಪುಷ್ಪನಿಕರಾಕರಮುಜ್ಜ್ವಲಂತಂ
ನಿತ್ಯಂ ಸ್ಮರಾಮಿ ಕಮಲಾಚ್ಯುತಮೌಲಿದೇಶಮ್ ॥ ೧೧ ॥

ಉನ್ನತವಾದ, ನೀಲವರ್ಣದ ಚಮರೀಮೃಗದ ಬಾಲದ ರೋಮಗುಚ್ಛದಂತಿರುವ, ಹೊಳೆಯುವ ಬಗೆಬಗೆಯ ರತ್ನಗಳಿಂದ ಶೋಭಿಸುವ ಕಿರೀಟ ಉಳ್ಳ, ಅರಳಿದ ಪುಷ್ಪರಾಶಿಗಳನ್ನು ಧರಿಸಿರುವ ಶ್ರೀಕೃಷ್ಣ-ರುಗ್ಮಿಣಿಯರ ಪ್ರಕಾಶಮಾನವಾದ ಶಿರಃಪ್ರದೇಶವನ್ನು ನಾನು ಸದಾ ಸ್ಮರಣೆ ಮಾಡುವೆನು.

ವಿ : ಶ್ರೀಕೃಷ್ಣರುಗ್ಮಿಣಿಯರ ಕೇಶರಾಶಿಗಳು ನೀಳವು, ಕಪ್ಪೂ ಆಗಿದ್ದು ಚಮರೀಮೃಗದ ಬಾಲದ ಕೂದಲನ್ನು ಹೋಲುವವು; ಅವರಿಬ್ಬರ ತಲೆಯ ಮೇಲೆ ಶೋಭಿಸುವ ಅನರ್ಘ್ಯರತ್ನಖಚಿತ ಕಿರೀಟಗಳು ಇರುವವು. ಅವರಿಬ್ಬರ ಮೌಲಿಪ್ರದೇಶಗಳು ಪುಷ್ಪಗಳಿಂದ ಅಲಂಕೃತವಾಗಿರುವವು ಎಂದು ಭಾವ.

## ಜಾಂಬವತೀ ಮೊದಲಾದವರ ಕಲ್ಯಾಣ

ಇತ್ಥಂ ಜಾಂಬವತೀಮುವಾಹ ಸ ವಿಭುಃ ಸಲ್ಲಕ್ಷ್ಣಾಂ ಲಕ್ಷಣಾಂ
ಸತ್ಯಾಂ ಸರ್ವಗುಣಾಕರಾಂ ಶಶಿಮುಖೀಂ ನೀಲಾಂ ಚ ನೀಲಾಲಕಾಮ್ ।
ಕಾಲಿಂದೀಂ ಕಲಕಂಠಕಂಠನಿನದಾಂ ಸ್ವಾಂ ಮಿತ್ರವಿಂದಾಂ ತಥಾ
ಬಾಲಾ ಭೂಮಿಸುತಾಹೃತಾಶ್ಚ ಬಹುಶೋ ದ್ವಾರಾವತೀವಲ್ಲಭಃ ॥ ೧೨ ॥

ಹೀಗೆ ದ್ವಾರಕೆಯ ವಲ್ಲಭನಾದ, ಪ್ರಭುವಾದ ಶ್ರೀಕೃಷ್ಣನು ಜಾಂಬವತಿಯನ್ನೂ, ಲಕ್ಷಣಗಳಿಂದ ಕೂಡಿದ ಲಕ್ಷಣೆಯನ್ನೂ, ಸಕಲ ಗುಣಗಳಿಗೆ ನೆಲೆಯೆನ್ನಿಸಿದ ಸತ್ಯಭಾಮಾ-ದೇವಿಯನ್ನೂ, ನೀಲಕೇಶಗಳನ್ನು ಹೊಂದಿದ ನೀಲಾದೇವಿಯನ್ನೂ, ಕೋಗಿಲೆಯ ಕಂಠದಂತಹ ಕಾಳಿಂದಿಯನ್ನೂ, ತನ್ನವಳೇ ಆದ ಮಿತ್ರವಿಂದಾದೇವಿಯನ್ನೂ, ಅದರಂತೆ ನರಕಾಸುರನು ಅಪಹರಿಸಿದ್ದ ಅಪಾರ ಸಂಖ್ಯೆಯ ಕನ್ಯೆಯರನ್ನೂ ವಿವಾಹವಾದನು.

ವಿ : ೧. ಇದರಂತೆಯೇ ಶ್ರೀಕೃಷ್ಣನು ಜಾಂಬವತಿಯನ್ನು ಸತ್ಯಭಾಮಾ ಮೊದಲಾದ ಇತರ ಆರು ಜನ ಮಹಿಷಿಯರನ್ನು ಮತ್ತು ನರಕಾಸರನಲ್ಲಿ ಬಂದಿಗಳಾಗಿದ್ದ ಹದಿನಾರು ಸಾವಿರದ ನೂರು ಜನರನ್ನು ಸಹ ವಿವಾಹವಾದನು ಎಂದರ್ಥ.

೨. ಶ್ರೀಕೃಷ್ಣನ ಒಟ್ಟು ಹದಿನಾರುಸಾವಿರದ ನೂರೆಂಟು ಪತ್ನಿಯರಲ್ಲಿ ಶ್ರೀರುಗ್ಮಿಣೀ ಹಾಗೂ ಸತ್ಯಭಾಮಾ ಇಬ್ಬರೂ ಸಾಕ್ಷಾತ್ ಮಹಾಲಕ್ಷ್ಮಿಯ ರೂಪಗಳು; ರುಗ್ಮಿಣೀದೇವಿಯು ಶ್ರೀರೂಪದ ಅವತಾರವಾದರೆ, ಸತ್ಯಭಾಮೆಯು ಭೂರೂಪದ ಅವತಾರ; ಜಾಂಬವತಿ, ನೀಲಾ, ಭದ್ರಾ, ಕಾಳಿಂದೀ, ಲಕ್ಷಣಾ ಹಾಗೂ ಮಿತ್ರವಿಂದಾ ಇವರು ಷಣ್ಮಹಿಷಿಯರು; ಇವರಲ್ಲೂ ಇತರ ಎಲ್ಲರಲ್ಲೂ ರಮಾವೇಶ ಎಂದು ತಿಳಿಯಬೇಕು.

೩. [1]ಸತ್ಯಭಾಮಾದೇವಿಯು ಸಾಕ್ಷಾತ್ ಮಹಾಲಕ್ಷ್ಮೀ ಎಂಬುದನ್ನು 'ಸರ್ವಗುಣಾಕರಾಂ' ಎಂಬ ವಿಶೇಷಣದಿಂದ ತಿಳಿಸಿರುವರು.

೪. ಜಾಂಬವತಿ ಮೊದಲಾದವರ ಹಿರಿಮೆಯನ್ನು ಅವರವರಿಗೆ ಸಂಬಂಧಿಸಿದ ವಿಶೇಷಣಗಳಿಂದಲೇ ಸೂಚಿಸಿರುವರು.

೫. ಸಲ್ಲಕ್ಷ್ಣಾಂ, ಶಶಿಮುಖೀಂ, ನೀಲಾಲಕಾಂ, ಕಲಕಂಠಕಂಠನಿನದಾಂ, ಸ್ವಾಂ ಎಂಬ ವಿಶೇಷಣಗಳು ಯಥೋಚಿತವಾಗಿ ಶ್ರೀಕೃಷ್ಣನ ಸಕಲ ಮಡದಿಯರಿಗೂ ಅನ್ವಯಿಸುವ

---

೧. ರಮೈವ ಸಾ ಹಿ ಭೂರಿತಿ ದ್ವಿತೀಯಮೂರ್ತಿರುತ್ತಮಾ ।
ಬಭೂವ ಸತ್ರಜಿತ್ಸುತಾ ಸಮಸ್ತಲೋಕಸುಂದರೀ ।
ತಥಾ ಹಿ ಸಾ ಚ ರುಗ್ಮಿಣೀಪ್ರಿಯಂ ಪ್ರಿಯಾಸು ತೇಽಧಿಕಮ್ ।
ಜನಾರ್ದನಸ್ಯ ತೇ ಹರೇಃ ಸದಾಽವಿಯೋಗಿನೀ ಯತಃ ॥ –ಮ.ಭಾ.ತಾ.ನಿ.(೧೭/೨/೮,೨/೯)
ಸಾಕ್ಷಾತ್ ಸತ್ಯಾ ರುಗ್ಮಿಣೀತ್ಯೇಕಸಂವಿತ್ ದ್ವಿಧಾ ಭೂತಾ ನಾತ್ರ ಭೇದೋಽಸ್ತಿ ಕಶ್ಚಿತ್ ।–ಮ.ಭಾ.ತಾ.ನಿ.೨೦/೮೩

ವಿಶೇಷಣಗಳಾಗಿವೆ. ಮುಖ್ಯವಾಗಿ ಅವುಗಳು ಅವರಲ್ಲಿ ನೆಲೆಸಿದ್ದ ರಮಾವೇಶಕ್ಕೆ ಅನ್ವಯಿಸುವವು ಎಂದು ತಿಳಿಯಬೇಕು.

೬. ಅಷ್ಟ ಮಹಿಷಿಯರ ಹೊರತಾದ ಹದಿನಾರುಸಾವಿರದ ನೂರು ಜನಗಳು ಮೂಲತಃ ಅಗ್ನಿಪುತ್ರರು. ಶ್ರೀಕೃಷ್ಣನ ಸಂಗಮದ ಬಯಕೆಯಿಂದಾಗಿ ಅವರು ಮೊದಲಿಗೆ ವಾಯುದೇವರ ಅನುಗ್ರಹದಿಂದ ಸ್ತ್ರೀರೂಪವನ್ನು ಪಡೆದು, ಬಳಿಕ ಹೀಗೆ ಶ್ರೀಕೃಷ್ಣನ ಪತ್ನಿಯರಾಗುವ ಅವಕಾಶವನ್ನು ಪಡೆದುಕೊಂಡರು ಎಂಬ ವಿವರ [೧]ಶ್ರೀಮದ್ಭಾಗವತತಾತ್ಪರ್ಯಾದಿಗಳಿಂದ ತಿಳಿಯುವುದು.

## ಶ್ರೀಕೃಷ್ಣನ ಸರ್ವೋತ್ತಮತ್ವದ ಸಮರ್ಥನೆ

ಕಸ್ಮಾನ್ಮುಹ್ಯಥ ಮಾನವಾ ಮುರಭಿದಃ ಸರ್ವೋತ್ತಮತ್ವೇ[೨] ಪುರಾ
ಯಃ ಪದ್ಮಾಸನಧೂರ್ಜಟಿಪ್ರಭೃತಿಭಿಃ ಕಾರ್ಯಾರ್ಕ್ಷಮೈಃ[೩] ಪ್ರಾರ್ಥಿತಃ।
ಗರ್ಭೇ[೪] ಗೀರ್ಭಿರಭಿಷ್ಟುತಃ ಫಣಿಫಣೇ[೫] ನೃತ್ಯಂಶ್ಚ ಯಃ ಸೇವಿತಃ
ಸದ್ವೇಣುಂ[೬] ರಣಯಂಶ್ಚ ನಮ್ರತನುಭಿರ್ಯೋ ವಿಸ್ಮಿತೈರೀಕ್ಷಿತಃ ॥ ೧೩ ॥

---

೧. ಅಗ್ನಿಪುತ್ರಾ ಮಹಾತ್ಮಾನಸ್ತಪಸಾ ಸ್ತ್ರೀತ್ವಮಾಪಿರೇ।
ಭರ್ತಾರಂ ಚ ಜಗದ್ಯೋನಿಂ ವಾಸುದೇವಮಜಂ ವಿಭುಮ್' ॥
– ಭಾ.ತಾ.(೧/೧೦/೩೧) ಉದಾಹೃತ ಮಹಾಕೌರ್ಮವಚನ
ಹುತಾಶನಸುತಾಃ ಸರ್ವಾಃ ಭವಂತ್ಯೋಽಪ್ಸರಸಃ ಪುರಾ ॥
– ಮತ್ಸ್ಯಪುರಾಣ (೬೯/೨೧)(ಕೃಷ್ಣಪತ್ನಿಯರನ್ನು ಕುರಿತು ದಾಲ್ಭ್ಯರ ವಚನ)

೨. ಪ್ರಮಾಣಮಾಲಾಂ ದರ್ಶಯತಿ। –ವ್ಯಾ.

೩. ಯೋ ಯೇನ ಪ್ರಾರ್ಥ್ಯತೇ ಸ ತಸ್ಮಾದುತ್ತಮಃ ಯಥಾ ರಾಜೇತ್ಯಾದಿನಾ ಸರ್ವತ್ರ ವ್ಯಾಪ್ತೇಃ ಸದ್ಭಾವಾದಿತಿ ಭಾವಃ। –ವ್ಯಾ.
ಬ್ರಹ್ಮಾ ತದುಪಧಾರ್ಯಾಥ ಸಹ ದೇವೈಸ್ತಯಾ ಸಹ।
ಜಗಾಮ ಸತ್ರಿನಯನಃ ತೀರಂ ಕ್ಷೀರಪಯೋನಿಧೇಃ ॥
ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್।
ಪುರುಷಃ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥ – (ಭಾ.೧೦/೧/೧೯)ಇತಿ ವಚನಾತ್।
– ಈ ರುಗ್ಮಿಣೀಶವಿಜಯದ ಮೊದಲ ಸರ್ಗದಲ್ಲಿ ಬ್ರಹ್ಮಾದಿ ದೇವತೆಗಳು ಶ್ರೀಹರಿಯನ್ನು ಶ್ರೀಕೃಷ್ಣಾವತಾರಕ್ಕಾಗಿ ಬಗೆಬಗೆಯಲ್ಲಿ ಪ್ರಾರ್ಥಿಸಿದ ವಿವರ ಬಂದಿದೆ.

೪. ಯಃ ಕೃಷ್ಣಃ ಗರ್ಭೇ ದೇವಕ್ಯುದರೇ ಪದ್ಮಾಸನಧೂರ್ಜಟಿಪ್ರಭೃತಿಭಿರ್ಗೀರ್ಭಿಃ ಸ್ತುತಿರೂಪಾಭಿರಭಿಷ್ಟುತಃ।
ಬ್ರಹ್ಮಾ ಭವಶ್ಚ ತತ್ರೈತ್ಯ ಮುನಿಭಿರ್ನಾರದಾದಿಭಿಃ।
ದೇವೈಃ ಸಾನುಚರೈಃ ಸಾರ್ಧಂ ಗೀರ್ಭಿರ್ವಿಷ್ಣುಮಥಾಸ್ತುವತ್ ॥ ಇತಿ – (ಭಾ.೧೦/೨/೨೫)

೫. ತಂ ನರ್ತುಮುದ್ಯತಮವೇಕ್ಷ್ಯ ತದಾ ತದೀಯಗಂಧರ್ವಸಿದ್ಧಸುರಚಾರಣದೇವವಧ್ವಃ।
ಪ್ರೀತ್ಯಾ ಮೃದಂಗಪಣವಾನಕವಾದ್ಯಗೀತಪುಷ್ಪೋಪಹಾರಬಲಿಭಿಃ ಸಹಸೋಪಸೇದುರಿತಿ ॥ – (ಭಾ.೧೦/೧೪/೨೬)

೬. ''ಸುಮನಸಸ್ತದುಪಧಾರ್ಯ ಸುರೇಶಾಃ ಶರ್ವಶಕ್ರಪರಮೇಷ್ಠಿಪುರೋಗಾಃ।
ಕವಯ ಆನತಕಂಧರಗಾತ್ರಾಃ ಕಶ್ಮಲಂ ಯಯುರನಿಶ್ಚಿತತತ್ತ್ವಾಃ'।
– (ಭಾ.೧೦/೩೩/೧೫) ಇತಿ ವಚನಾದಯಮರ್ಥಃ ಸಿದ್ಧಃ। – ವ್ಯಾ.

ಎಲೈ ಮಾನವರೇ ! ಹಿಂದೆ ಇವನು, ಕಾರ್ಯವನ್ನು ನಿರ್ವಹಿಸಲು ಅಸಮರ್ಥರಾದ ಪದ್ಮಾಸನನಾದ ಬ್ರಹ್ಮ, ಧೂರ್ಜಟಿಯಾದ ಶಿವ, ಮೊದಲಾದವರಿಂದ ಪ್ರಾರ್ಥನೆ ಮಾಡಲ್ಪಟ್ಟ; ಗರ್ಭದಲ್ಲಿದ್ದಾಗ ಮಾತುಗಳಿಂದ ಬಹಳವಾಗಿ ಸ್ತುತಿಸಲ್ಪಟ್ಟ; ಕಾಳೀಯನ ಹೆಡೆಯ ಮೇಲೆ ನರ್ತಿಸುತ್ತಿದ್ದಾಗ ಆ ದೇವತೆಗಳಿಂದ ಸೇವಿತನಾದ; ಅದರಂತೆ ವೇಣುವನ್ನು ನುಡಿಸುವಾಗಲೂ ಶಿರಬಾಗಿ ವಂದಿಸಿದ ದೇವತೆಗಳಿಂದ ವಿಸ್ಮಯದಿಂದ ವೀಕ್ಷಿತನಾದ. ಇಂತಹ ಶ್ರೀಕೃಷ್ಣನ ಸರ್ವೋತ್ತಮತ್ವದಲ್ಲಿ ಏತಕ್ಕಾಗಿ ಸಂದೇಹ ಪಡುವಿರಿ?

ವಿ : ೧. ಶ್ರೀಕೃಷ್ಣಾವತಾರದ ಘಟನೆಗಳನ್ನು ಉಲ್ಲೇಖಿಸುತ್ತಾ ಅವುಗಳೆಲ್ಲ ಅವನ ಸರ್ವೋತ್ತಮತ್ವವನ್ನು ಸ್ಫುಟಪಡಿಸುವ ಅಂಶಗಳು ಎಂಬುದನ್ನು ಇಲ್ಲಿಂದ ಮುಂದಿನ ಕೆಲವು ಶ್ಲೋಕಗಳಲ್ಲಿ ನಿರೂಪಿಸುತ್ತಿರುವರು.

೨. ಶ್ರೀಕೃಷ್ಣನು ಅವತರಿಸಲು ಪ್ರಾರ್ಥಿಸಿದವರು ಬ್ರಹ್ಮಾದಿ ದೇವತೆಗಳು; ತಾವು ಮಾಡಲಾಗದ ಕಾರ್ಯವನ್ನು ಅವನು ಮಾಡಿ ಅನುಗ್ರಹಿಸಬೇಕು ಎಂಬುದು ಅವರ ಭಾವವಾಗಿತ್ತು ಎಂದು ಇದರಿಂದ ತಿಳಿಯುವುದು.

೩. ಶ್ರೀಕೃಷ್ಣನು ದೇವಕಿಯ ಗರ್ಭದಲ್ಲಿ ನೆಲೆಸಿದ್ದಾಗ ಬ್ರಹ್ಮಾದಿ ದೇವತೆಗಳು ಮಾಡಿದ ಸ್ತುತಿ ಶ್ರೀಮದ್ಭಾಗವತದಲ್ಲಿ ಗರ್ಭಸ್ತುತಿ ಎಂಬುದಾಗಿಯೇ ಸುಪ್ರಸಿದ್ಧವಾಗಿದೆ. ಅದರಲ್ಲಿ ಶ್ರೀಕೃಷ್ಣನನ್ನು ಸಕಲ ದೇವತೆಗಳು ಸರ್ವೋತ್ತಮ ಎಂಬುದಾಗಿ ಪರಿಪರಿಯಿಂದ ಸ್ತುತಿಸಿದ ವಿವರ ಬಂದಿದೆ. ಅದು ಅವನು ಗರ್ಭವಾಸ ಮೊದಲಾದ ಯಾವುದೇ ವಿಧವಾದ ದೋಷಗಳಿಗೆ ಒಳಗಾಗುವವನಲ್ಲ ಎಂಬುದಕ್ಕೆ ದೊಡ್ಡ ಪುರಾವೆ ಅಲ್ಲವೇ!

೪. ಕಾಳೀಯ ಮಥನದ ಸಮಯದಲ್ಲಿ ಶ್ರೀಕೃಷ್ಣನನ್ನು ಬ್ರಹ್ಮದೇವರು ಮೃದಂಗ ನುಡಿಸಿ ಸ್ತುತಿಸಿದರು. ಹನುಮಂತ ಪರಿಪರಿಯ ಗಾನ ಮಾಡಿ ಸ್ತುತಿಸಿದ; ಶಿವ ತಾಳ ಕಟೆದು ಸೇವಿಸಿದ ವಿವರ ಈಗಾಗಲೇ ಬಂದಿದೆ (೪/೬೮). ಇದೆಲ್ಲವೂ ಅವರು ಶ್ರೀಕೃಷ್ಣನನ್ನು ಸರ್ವೋತ್ತಮ ಎಂದು ಆರಾಧಿಸಿದುದಕ್ಕೆ ದಾಖಲೆ.

೫. ಅದರಂತೆ ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಬ್ರಹ್ಮಾದಿ ದೇವತೆಗಳು ಶಿರಬಾಗಿ ನಮಿಸಿದರು; ಅದರ ದಿವ್ಯತೆಗೆ ತಲೆಬಾಗಿ ನಿಂತರು (ಸರ್ಗ-೯).

೬. ಇಂತಹ ಘಟನೆಗಳೆಲ್ಲ ಶ್ರೀಕೃಷ್ಣನು ಸಕಲದೇವತಾಸೇವ್ಯನಾದ ಸರ್ವೋತ್ತಮ ಎಂದು ಸ್ಫುಟಪಡಿಸುವವು. ಆದ್ದರಿಂದ ಇವುಗಳನ್ನು ಯಾವುದೋ ಸಾಮಾನ್ಯ ಕಾರ್ಯಗಳೆಂದು ಭಾವಿಸದೆ ಅವನ ಸರ್ವೋತ್ತಮತ್ವವನ್ನು ನಿರೂಪಿಸುವ ಕಾರ್ಯಗಳೆಂದು ತಿಳಿದು ಅವನು ಸರ್ವದೇವೋತ್ತಮ ಎಂದು ಆರಾಧಿಸಬೇಕು; ಸಲ್ಲದ ಸಂಶಯಕ್ಕೆ ಗುರಿಯಾಗಿ ಅನರ್ಥಕ್ಕೆ ಒಳಗಾಗಬಾರದು ಎಂದು ಭಾವ.

## ಅಕ್ರೂರನಿಗೆ ದರ್ಶನ - ಮುಚುಕುಂದನಿಗೆ ಮೋಕ್ಷಪ್ರದಾನ

ಕೃಷ್ಣಾಯಾಮಪಿ ತೈರ್ನತೈಃ ಪರಿವೃತಂ ದೃಷ್ಟ್ವಾ ಶ್ವಫಲ್ಕಾತ್ಮಜೋ
ಯಂ ತುಷ್ಟಾವ ಗುಣೈರಬದ್ಧಮಿತರಾನ್ [೧]ಬದ್ಧಾನುದೀರ್ಯ ಸ್ಫುಟಮ್ ।
ಸೇವಾತುಷ್ಟಹೃದೋಽಪಿ ದೇವನಿಕರಾದಪ್ರಾಪ್ತಮುಕ್ತಿಂ[೨] ಪ್ರಭು-
ರ್ಯಃ [೩]ಪ್ರಾದಾನ್ಮುಚುಕುಂದಭೂಮಿಪತಯೇ ತೈರ್ನಿದ್ರಿತಾಯಾಪ್ಯಲಮ್ ॥೧೪॥

ಯಮುನೆಯಲ್ಲಿ ಸಹ ಆ ದೇವತೆಗಳಿಂದ ಸುತ್ತಲೂ ವಂದಿತನಾದ ಆ ಶ್ರೀಕೃಷ್ಣನನ್ನು ಕಂಡು ಅಕ್ರೂರನು, ಅವನು ಸತ್ವಾದಿಗುಣಗಳಿಂದ ಬದ್ಧನಾದವನಲ್ಲ ಹಾಗೂ ಇತರರೆಲ್ಲರೂ ಅವುಗಳಿಂದ ಬದ್ಧರು ಎಂದು ಘೋಷಿಸಿ ಅವನನ್ನು ಸ್ತುತಿಸಿದ; ಅವನ ಸೇವೆಯಿಂದ ಅತ್ಯಂತ ಸಂತುಷ್ಟಮನಸ್ಕರಾದ ದೇವತೆಗಳ ಗುಂಪಿನಿಂದಲೂ ದೊರೆಯದ ಮುಕ್ತಿಯನ್ನು ಪ್ರಭುವಾದ ಶ್ರೀಕೃಷ್ಣ ಆ ಮುಚುಕುಂದ ರಾಜನಿಗೆ ಅವನು ನಿದ್ರಿಸುತ್ತಿದ್ದರೂ ಸಹ ನೀಡಿದ.

ವಿ : ೧. ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ತಿಳಿಸುವ ಮತ್ತೆರಡು ಪ್ರಸಂಗಗಳನ್ನು ಇಲ್ಲಿ ತಿಳಿಸಿರುವರು.

೨. ಅಕ್ರೂರನು ಶ್ರೀಕೃಷ್ಣ-ಬಲರಾಮರನ್ನು ಮಧುರೆಗೆ ಕರೆದೊಯ್ಯುವಾಗ ಮಾರ್ಗ ಮಧ್ಯದಲ್ಲಿ ಯಮುನೆಯ ಬ್ರಹ್ಮಹ್ರದದಲ್ಲಿ ಅಘಮರ್ಷಣ ಸ್ನಾನ ಮಾಡುವಾಗ ಕಂಡ ದೃಶ್ಯ ಅದ್ಭುತ; ಅವನು ಶ್ರೀಕೃಷ್ಣನು ಬ್ರಹ್ಮರುದ್ರಾದಿ ಸಕಲ ದೇವತೆಗಳಿಂದ ಸೇವಿತನಾದುದ್ದನ್ನು ಉಲ್ಲೇಖಿಸುತ್ತಾ ಅಕ್ರೂರನು ಅವನು ಅಪ್ರಾಕೃತ ಶರೀರ; ಬ್ರಹ್ಮಾದಿಗಳೆಲ್ಲ ಗುಣಬದ್ಧರಾದವರು ಎಂದು ಘೋಷಿಸುತ್ತಲೇ ಸ್ತುತಿಸಿದ ಪ್ರಸಂಗ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಸಾಧಿಸುವುದು.

೩. ಮುಚುಕುಂದ ರಾಜ ದೇವತೆಗಳಿಗೆ ಅವರು ಸಂತುಷ್ಟರಾಗುವಂತಹ ಸೇವೆಯನ್ನು ಸಲ್ಲಿಸಿದಾಗ ಅವರು ತಿಳಿಸಿದರು: "ನೀನು ಯಾವ ವರವನ್ನು ಬೇಕಾದರೂ ಕೇಳಿಕೊ, ನೀಡುವೆವು. ಆದರೆ ಮೋಕ್ಷವನ್ನು ಮಾತ್ರ ಕೇಳಬೇಡ. ಅದನ್ನು ಕೊಡುವ ಸಾಮರ್ಥ್ಯ ಭಗವಂತನಾದ

---

೧. ಸುನಂದನಂದಪ್ರಮುಖೈಃ ಪಾರ್ಷದೈಃ ಸನಕಾದಿಭಿಃ ।
ಸುರೇಶೈರ್ಬ್ರಹ್ಮರುದ್ರಾದ್ಯೈರ್ನವಭಿಶ್ಚ ದ್ವಿಜೋತ್ತಮೈಃ ॥ - ಭಾ. (೧೦/೩೯/೫೩)
ನೈತೇ ಸ್ವರೂಪಂ ವಿದುರಾತ್ಮನಸ್ತೇ ಹ್ಯಜಾದಯೋಽನಾತ್ಮತಯಾ ಗೃಹೀತಾಃ ।
ಅಜೋಽನುಬದ್ಧಃ ಸಗುಣೈರಜಾಯಾ ಗುಣಾತ್ ಪರಂ ವೇದ ನ ತೇ ಸ್ವರೂಪಮ್ ॥ - ಭಾ. (೧೦/೪೦/೩)

೨. ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ॥ - ಭಾ. (೧೦/೫/೨೦)

೩. ಜನ್ಮನ್ಯನಂತರೇ ರಾಜನ್ ಸರ್ವಭೂತಸುಹೃತ್ತಮಃ ।
ಭೂತ್ವಾ ದ್ವಿಜವರಸ್ತ್ವಂ ವೈ ಮಾಮುಪೇಷ್ಯಸಿ ಕೇವಲಮ್ ॥ - ಭಾ. (೧೦/೫೧/೬೪)

ಮಹಾವಿಷ್ಣುವಿನದು ಮಾತ್ರ". ಈ ಪ್ರಸಂಗದಲ್ಲಿ ಅವರಾರು ಮೋಕ್ಷ ನೀಡಲು ಸಮರ್ಥರಲ್ಲ ಎಂಬ ಅಂಶ ಸ್ಫುಟವಾಗಿ ನಿರೂಪಿತವಾಗಿದೆ.

೪. ಅವರಿಂದ ಗಾಢ ನಿದ್ರೆಯನ್ನು, ಆ ನಿದ್ರೆಗೆ ಭಂಗ ತರುವವರ ಸಾವನ್ನು ಮುಚುಕುಂದ ಪ್ರಾರ್ಥಿಸಿಕೊಂಡ; ಆ ಬಳಿಕ ಬದರೀಕ್ಷೇತ್ರದ ಬಳಿಯ ಗುಹೆಯೊಂದರಲ್ಲಿ ಮಲಗಿಕೊಂಡಿದ್ದ ಅವನ ಬಳಿಗೆ ಶ್ರೀಕೃಷ್ಣ ತೆರಳಿ ಅವನಿಂದ ಕಾಲಯವನನನ್ನು ಭಸ್ಮ ಮಾಡಿಸಿದ; ಅವನು ಬಯಸಿದ ಮುಕ್ತಿಯನ್ನು ನೀಡಿ ಅವನನ್ನು ಉದ್ಧರಿಸಿದ. ಇದು ಶ್ರೀಕೃಷ್ಣನು ಇತರ ದೇವತೆಗಳು ನೀಡಲಾಗದ ಮೋಕ್ಷವನ್ನು ನೀಡಬಲ್ಲ ಸಮರ್ಥ ಎಂಬುದಕ್ಕೆ ನಿದರ್ಶನವಲ್ಲವೆ?

### ಶ್ರೀಕೃಷ್ಣನು ಶಂಭುರಕ್ಷಕ - ಭೃಗುಮುನಿವರದ

ಯಃ ಕಲ್ಪಾಂಘ್ರಿಪಮಾಹರನ್ ಸುರವರಾನ್ ವ್ಯದ್ರಾವಯತ್ [1]ಸೇಶ್ವರಾನ್
ಯೋ ಭಸ್ಮೀಕೃತಭಸ್ಮದಾನವಪತಿಃ ಶಂಭುಂ ಪುರಾಽಪಾಲಯತ್[2] ।
ಯೋಗೀಂದ್ರಾದೃತವೈಭವೋ ಭೃಗುಮುನಿರ್ಯಚ್ಛ್ರೈಷ್ಠ್ಯಮಸ್ಪಷ್ಟಯತ್[3]
ತಂ ಭಕ್ತ್ಯಾ ಭಜತಾಜಿತಂ ಮಧುಜಿತಂ ಕೈವಲ್ಯಕಾಮಾ ಜನಾಃ ॥ ೧೫ ॥

ಶ್ರೀಕೃಷ್ಣನು ಕಲ್ಪವೃಕ್ಷವಾದ ಪಾರಿಜಾತವನ್ನು ತರುವಾಗ ಶಿವನ ಸಮೇತವಾಗಿ ಸಕಲಶ್ರೇಷ್ಠ ದೇವತೆಗಳನ್ನೂ ಪರಾಭವಗೊಳಿಸಿದ; ಮಹಾರಾಕ್ಷಸನಾದ ವೃಕಾಸುರನನ್ನು ಭಸ್ಮ ಮಾಡಿ ಶಿವನನ್ನು ಸಂರಕ್ಷಿಸಿದ; ಯೋಗಿಶ್ರೇಷ್ಠರು ಆದರಿಸುವ ವೈಭವದಿಂದ ಕೂಡಿದ ಇವನ ಸರ್ವೋತ್ತಮತ್ವವನ್ನು ಭೃಗುಮುನಿಯು ಸ್ಫುಟಪಡಿಸಿದ. ಆದ್ದರಿಂದ ಮುಕ್ತಿಯನ್ನು ಬಯಸುವ ಜನರೇ! ಇಂತಹ ಮಧುಸೂದನನಾದ, ಅಜಿತನಾದ ಶ್ರೀಕೃಷ್ಣನನ್ನು ಸರ್ವೋತ್ತಮ ಎಂಬುದಾಗಿ ಆರಾಧಿಸಿರಿ.

ವಿ : ೧. ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಮತ್ತೆ ಮೂರು ನಿದರ್ಶನಗಳಿಂದ ಇಲ್ಲಿ ಸಾಧಿ-ಸಲಾಗಿದೆ.

---

೧. ತೂರ್ಣಂ ಗೃಹೀತ್ವಾ ಪಾಣಿಭ್ಯಾಂ ವಿಷಾಣೇ ತಸ್ಯ ನಂದಿನಃ ।
ಸಶೂಲಪಾಣಿಂ ಚಿಕ್ಷೇಪ ವೈನತೇಯೋ ಧನುಃಶತಮ್ ॥ - ಭಾ. (೧೦/೬೬/೪೮)

೨. ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ ।
ದೇವರ್ಷಿಪಿತೃಗಂಧರ್ವಾ ಮೋಚಿತಃ ಸಂಕಟಾಚ್ಛಿವಃ ॥ - ಭಾ. (೧೦/೯೨/೩೭)

೩. ಪುನಃ ಸ್ವಸತ್ರಮಾಸಾದ್ಯ ಮುನೀನಾಂ ಬ್ರಹ್ಮವಾದಿನಾಮ್ ।
ಸ್ವಾನುಭೂತಮಶೇಷೇಣ ರಾಜನ್ ಭೃಗುರವರ್ಣಯತ್ ॥
ತಂ ನಿಶಮ್ಯಾಥ ಮುನಯೋ ವಿಸ್ಮಿತಾ ಮುಕ್ತಸಂಶಯಾಃ ।
ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್ ॥ - ಭಾ. (೧೦/೯೩/೧೫,೧೬)

೨. ಶ್ರೀಕೃಷ್ಣನು ಪಾರಿಜಾತವೃಕ್ಷವನ್ನು ತೆಗೆದುಕೊಂಡು ಹೋಗುವುದನ್ನು ತಡೆಯಲು ರುದ್ರಾದಿ ದೇವತೆಗಳೊಂದಿಗೆ ಇಂದ್ರ ಧಾವಿಸಿದ. ಆಗ ನಂದಿಯ ಎರಡು ಕೋಡುಗಳನ್ನು ಹಿಡಿದು ಅದರ ಮೇಲೆ ಕುಳಿತಿದ್ದ ಶಿವನ ಸಮೇತವಾಗಿ ಅದನ್ನು ತನ್ನೆರಡು ಕೈಗಳಿಂದ ವಿಷ್ಣುವಿನ ವಾಹನನಾದ ಗರುಡ ನೂರಾರು ಧನುಸ್ಸಿನಷ್ಟು ದೂರ ಎಸೆದ; ವಿಷ್ಣುವಿನ ವಾಹನನಾದ ಗರುಡನೇ ಶಿವನನ್ನು ಅವನ ವಾಹನವಾದ ನಂದಿಯ ಸಮೇತ ನೂರಾರು ಧನುಸ್ಸುಗಳಷ್ಟು ದೂರ ಎಸೆಯಬಲ್ಲ ಸಮರ್ಥ ಎಂದ ಮೇಲೆ, ಶಿವನು ಸರ್ವೋತ್ತಮನಲ್ಲ ಎಂದು, ಗರುಡವಾಹನನಾದ ಶ್ರೀಹರಿಯೇ ಸಮರ್ಥ ಎಂದು ಸಿದ್ಧವಾಗುವುದಲ್ಲವೇ?

೩. ವೃಕಾಸುರನು ಬೇಡಿದ ವರ ವಿಚಿತ್ರವಾಗಿತ್ತು. ಅವನು ಯಾರ ತಲೆಯ ಮೇಲೆ ಕೈ ಇಡುವನೋ ಅವನು ಕೂಡಲೇ ಭಸ್ಮವಾಗಬೇಕು ಎಂಬ ವರವನ್ನು ಶಿವ ಅವನಿಗೆ ನೀಡಿದಾಗ, ಆ ಅಸುರನು ಶಿವನ ತಲೆಯ ಮೇಲೆಯೇ ಕೈ ಇಡಲು ಮುಂದಾದ. ಅಂಜಿದ ಶಿವ ಶ್ರೀಹರಿಯನ್ನು ಸ್ಮರಣೆ ಮಾಡುತ್ತಾ ಓಡತೊಡಗಿದಾಗ ವಟುವಿನ ವೇಷದಲ್ಲಿ ಬಂದ ಶ್ರೀಕೃಷ್ಣನು ಆ ಅಸುರನು ತನ್ನ ಕೈಯನ್ನು ತನ್ನ ತಲೆಯ ಮೇಲೆಯೇ ಇರಿಸಿಕೊಳ್ಳುವಂತೆ ಮಾಡಿ ಅವನನ್ನು ಬೂದಿಯಾಗಿಸಿದ. ಸಂಕಟಕ್ಕೊಳಗಾಗಿದ್ದ ಶಿವನನ್ನು ಪರಿಪಾಲಿಸಿದ. ತಾನು ನೀಡಿದ ವರಕ್ಕೆ ತಾನೇ ಬಲಿಪಶುವಾಗುವ ಸನ್ನಿವೇಶವನ್ನು ಶಿವ ಹೊಂದಿದ ಎಂದ ಮೇಲೆ ಅವನು ಸರ್ವೋತ್ತಮ ಎಂಬುದು ಸಿದ್ಧವಾಗದು. ಅವನನ್ನು ಆ ಸಂಕಟದಿಂದ ಪಾಲಿಸಿದ ಶ್ರೀಕೃಷ್ಣನೇ ಸರ್ವೋತ್ತಮ ಎಂಬುದು ಸ್ಪಷ್ಟಪಡುವುದು ಸಹ; ಸುಪ್ರಸಿದ್ಧವಾಗಿರುವ ಈ ವೃಕಾಸುರನನ್ನು ಭಸ್ಮಮಾಡಿದ ಪ್ರಸಂಗ ಶ್ರೀಕೃಷ್ಣನ ಸರ್ವೋ- ತ್ತಮತ್ವಕ್ಕೆ ಹಿಡಿದ ಕನ್ನಡಿ ಎಂದು ಭಾವ.

೪. ತಪಸ್ಸಿನಲ್ಲಿ ತೊಡಗಿದ್ದ ಕಶ್ಯಪಾದಿ ಮುನಿಗಳಿಗೆ ನಾರದರು ನೀಡಿದ ಆದೇಶದಂತೆ, ಅವರಿಂದ ಸರ್ವೋತ್ತಮ ದೇವತೆಯನ್ನು ತಿಳಿದು ಬರಲೆಂದು ತೆರಳಿದ ಭೃಗುಮುನಿ ಬ್ರಹ್ಮಾದಿಗಳ ಲೋಕಕ್ಕೆ ತೆರಳಿ ಕೊನೆಗೆ ವಿಷ್ಣುವೇ ಸರ್ವೋತ್ತಮ ಎಂದು ಸಾರಿದ ಪ್ರಸಂಗ ಶ್ರೀಮದ್ಭಾಗವತಾದಿ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಈ ಪ್ರಸಂಗದಲ್ಲಿ ಕೊನೆಗೆ ಭೃಗುಮುನಿಗಳು ವಿಷ್ಣುಸರ್ವೋತ್ತ- ಮತ್ವವನ್ನು ಪರಿಪರಿಯಾಗಿ ಘೋಷಿಸಿದ್ದು ಸರ್ವಸಮ್ಮತ.

೫. ಅಂಘ್ರಿಪ – ಪಾದಪ, ವೃಕ್ಷ; ಕಲ್ಪಾಂಘ್ರಿಪ – ಕಲ್ಪವೃಕ್ಷ

## ಶ್ರೀಕೃಷ್ಣನ ಕೈಲಾಸಯಾತ್ರೆಯ ಮರ್ಮ

ಕೈಲಾಸಯಾತ್ರಾದಿಭಿರೂನಭಾವೋ[೧]
ಯದ್ಯಸ್ಯ ತಹ್ಯೈರ್ಕ್ಯವಚೋ ವೃಥಾ ಸ್ಯಾತ್ ।

---

೧. ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಮ್ ।
ರುಗ್ಮಿಣ್ಯಾಂ ತನಯಂ ಲೇಭೇ ನಷ್ಟಂ ಕಾಮಂ ಪುನರ್ಹರಿಃ ॥ (ಭಾಗವತ. ೧೦/೬೮/೧,೨)
ಅಸ್ಯ ಶ್ರೀಕೃಷ್ಣಸ್ಯ ಊನಭಾವಃ ಶಿವಾನ್ನೀಚತಾ ಯದಿ ತರ್ಹಿ "ಶಿವಾಯ ವಿಷ್ಣುರೂಪಾಯ" ಇತಿ ಭವದೀಯಂ ವಿಷ್ಣುಶಿವಯೋರೈಕ್ಯವಚಃ ವೃಥಾ ಬಾಧಿತಾರ್ಥಕಂ ಸ್ಯಾತ್ ।....ತಥಾ ಚ ನಿರಂಕುಶಂ ಪೂರ್ವೋಕ್ತವಿಷ್ಣುಸರ್ವೋ- ತ್ತಮತ್ವಮಿತಿ ಭಾವಃ । -ವ್ಯಾ.

ಲೀಲೇತಿ ವಾಚ್ಯಂ ಭವತಾ ವಯಂ ತು
ಪೌತ್ರಾಲಯಪ್ರಾಪ್ತಿಮುಪೇಕ್ಷಯಾಮಃ ॥ ೧೬ ॥

ಕೈಲಾಸಯಾತ್ರೆ ಮೊದಲಾದ ಪ್ರಸಂಗಗಳಲ್ಲಿ ಶ್ರೀಕೃಷ್ಣನು ಕಡಿಮೆ ಎನ್ನುವಂತೆ ಕಾಣುವುದು ಎಂದು ವಾದಿಸುವುದಾದಲ್ಲಿ, ಅದು ಹರಿಹರರ ಐಕ್ಯವನ್ನು ಹೇಳುವುದು ಎಂಬ ಮಾತು ವ್ಯರ್ಥ ಎಂದಾಗುವುದು; ಅದನ್ನು ನೀವು ಲೀಲೆ ಎಂದೇ ಹೇಳಬೇಕಾಗುವುದು; ತನ್ನ ಮೊಮ್ಮಗನ ಮನೆಯಾದ ಕೈಲಾಸಕ್ಕೆ ಶ್ರೀಕೃಷ್ಣ ಹಾಗೆ ತೆರಳಿದ್ದನ್ನು ನಾವಾದರೋ ಉಪೇಕ್ಷಿಸಿಬಿಡುವೆವು.

ವಿ : ೧. ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ತಿಳಿಸುವ ಘಟನೆಗಳನ್ನು ಉಲ್ಲೇಖಿಸಿ ಇನ್ನು ಮುಂದೆ ಶ್ರೀಕೃಷ್ಣನಿಗೆ ದೋಷವನ್ನು ಹೇಳುವಂತೆ ಕಾಣುವ ಘಟನೆಗಳ ಬಗ್ಗೆ ಸೂಕ್ತ ವಿವರಣೆಯನ್ನು ನೀಡಿ, ಅವನು ದೋಷ ದೂರ ಎಂಬುದನ್ನು ಸಮರ್ಥಿಸುತ್ತಿರುವರು.

೨. ಶ್ರೀಕೃಷ್ಣನು ಪುತ್ರಪ್ರಾಪ್ತಿಗಾಗಿ ಕೈಲಾಸ ಯಾತ್ರೆಯನ್ನು ಮಾಡಿದ ವಿವರ ಹರಿವಂಶಾದಿಗಳಲ್ಲಿ ಕಂಡುಬರುವುದು. ಇದು ಶ್ರೀಕೃಷ್ಣನ ಸರ್ವೋತ್ತಮತ್ವಕ್ಕೆ ಧಕ್ಕೆ ತರುವ ಪ್ರಸಂಗ ಎಂಬುದು ಕೆಲವರ ವಾದ. ಅದು ಸರಿಯಲ್ಲ. ಶ್ರೀಕೃಷ್ಣ ಬ್ರಹ್ಮದೇವರ ತಂದೆ, ಶಿವ ಬ್ರಹ್ಮದೇವರ ಪುತ್ರ. ಇದರಿಂದ ಶಿವನು ಶ್ರೀಕೃಷ್ಣನಿಗೆ ಮೊಮ್ಮಗ ಎಂದಾಗುವುದು. ತನ್ನ ಮೊಮ್ಮಗನ ಮನೆಗೆ ತಾತ ತೆರಳುವುದು ಪ್ರೀತಿಯಿಂದಲೇ ಹೊರತು ಪ್ರಾರ್ಥನೆ ಮಾಡಲೆಂದೇನೂ ಅಲ್ಲ. ಆದ್ದರಿಂದ ಅದು ಶ್ರೀಕೃಷ್ಣನ ಸರ್ವೋತ್ತಮತ್ವಕ್ಕೆ ಬಾಧಕವಾಗದು ಎಂಬುದು ಮೊದಲ ಅಂಶ.

೩. ಕೆಲವರು ಹರಿಹರರ ಐಕ್ಯವನ್ನು ಹೇಳುವುದುಂಟು. ಶ್ರೀಕೃಷ್ಣನ ಕೈಲಾಸಯಾತ್ರೆಯ ಪ್ರಸಂಗ ಅವರ ವಾದಕ್ಕೆ ವಿರುದ್ಧವೆನ್ನಿಸುವಂತಹುದು. ಹರಿಹರರಿಬ್ಬರು ಒಂದೇ ಎಂದು ವಾದಿಸುವವರು ಹರಿಯಾದ ಶ್ರೀಕೃಷ್ಣ ಹರಿನ ಮಂದಿರಕ್ಕೆ ತೆರಳಿ ಪ್ರಾರ್ಥಿಸಿದ ಎಂದರೆ, ಅದು ಐಕ್ಯಕ್ಕೆ ಸಂಗತವೆನ್ನಿಸದು. ಅದಕ್ಕೆ ಅವರು ಹರಿಹರರ ಲೋಕಮೋಹನಕ್ಕೋಸ್ಕರ ಮಾಡಿದ ಲೀಲೆ ಎಂದು ಮಾತ್ರವೇ ಹೇಳಬೇಕಾಗುವುದು. ಎಂದರೆ, ಈ ಪ್ರಸಂಗ ಹರಿಹರರ ಐಕ್ಯ ಹೇಳುವವರಿಗೂ ಅನುಕೂಲಕರವಾದುದೇನಲ್ಲ. ಅವರು ಸಹ ಇದಕ್ಕೆ ಬೇರೆ ಅರ್ಥವನ್ನೇ ಹೇಳಬೇಕು. ನಾವು ಇದನ್ನು ಅಸುರಮೋಹಕವಾದ ಶ್ರೀಕೃಷ್ಣನ ಲೀಲೇ ಎಂದು ಹೇಳುವೆವು. ಆದ್ದರಿಂದ ಇದು ಅವನ ಸರ್ವೋತ್ತಮತ್ವಕ್ಕೆ ಧಕ್ಕೆ ತರುವ ಪ್ರಸಂಗವಾಗದು ಎಂದು ಭಾವ.

## ಶ್ರೀಕೃಷ್ಣನ ಲೋಕವಿಡಂಬನೆ

ಯುಧಿಷ್ಠಿರಸ್ಯಾಲಯಮೇವ ಗಚ್ಛಂ-
[೧]ಸ್ತಥಾ ದ್ವಿಜಾದೀನ್ ಯಮಿನಃ ಸಮರ್ಚನ್ ।

---

೧. ಯದಿ ಶಿವಪೂಜಾಕರಣೇನ ಶಿವಾನ್ನೀಚಃ ಸ್ಯಾತ್ ತರ್ಹಿ ದ್ವಿಜಾದಿಪೂಜಾಕರಣೇನ ತೇಭ್ಯೋಽಪಿ ನೀಚಃ ಸ್ಯಾದಿತಿ ಭಾವಃ । – ವ್ಯಾ.

[1]ತತೋಽಪಿ ನೀಚಃ ಕಿಮಯಂ ನೃಲೋಕೇ
[2]ನರಾನುಕಾರಾರ್ಥಮಿದಂ ಹಿ ಸರ್ವಮ್ ॥ ೧೭ ॥

[3]ಯುಧಿಷ್ಠಿರನ ಮನೆಗೆ ಶ್ರೀಕೃಷ್ಣ ತೆರಳಿದ, ಅದರಂತೆ, ಬ್ರಾಹ್ಮಣರನ್ನೂ, ಋಷಿಮುನಿಗಳನ್ನೂ ಪೂಜಿಸಿದ; ಅದರಿಂದ ಅವನು ಅವರಿಗಿಂತ ಕಡಿಮೆ ಎಂದಾಗುವುದೇನು? ಮನುಷ್ಯಲೋಕದಲ್ಲಿ ಮನುಷ್ಯರನ್ನು ವಿಡಂಬನೆ ಮಾಡಲೆಂದು ಇದೆಲ್ಲವೂ ಉಕ್ತವಾಗಿದೆ.

ವಿ : ೧. ಶ್ರೀಕೃಷ್ಣನ ಕೈಲಾಸಯಾತ್ರೆಯು ಅವನ ಘನತೆಗೆ ಕುಂದು ತರಲಾರದು ಎಂಬುದನ್ನು ಸೋದಾಹರಣವಾಗಿ ಇಲ್ಲಿ ವಿವರಿಸಲಾಗಿದೆ.

೨. ಶ್ರೀಕೃಷ್ಣನು ಕೈಲಾಸ ಯಾತ್ರೆ ಮಾಡಿದ್ದು ದೋಷ ಎನ್ನುವುದು ಸರಿಯಲ್ಲ. ಏಕೆಂದರೆ ಅವನು ಯುಧಿಷ್ಠಿರಾದಿಗಳನ್ನು ಸಂದರ್ಶಿಸಲೆಂದು ಇಂದ್ರಪ್ರಸ್ಥ, ಹಸ್ತಿನಾಪುರ ಮೊದಲಾದವು-ಗಳಿಗೆ ತೆರಳಿದ್ದ ಉಲ್ಲೇಖ ಶ್ರೀಮದ್ಭಾಗವತ, ಶ್ರೀಮನ್ಮಹಾಭಾರತಾದಿಗಳಲ್ಲಿ ಅನೇಕ ಬಾರಿ ಬಂದಿದೆ; ಅದರಿಂದ ಶ್ರೀಕೃಷ್ಣನು ಯುಧಿಷ್ಠಿರಾದಿಗಳಿಗಿಂತ ಕಡಿಮೆ ಎಂದು ಹೇಳಲು ಸಾಧ್ಯವೇ? ಅದರಂತೆ ಕೈಲಾಸಕ್ಕೆ ತೆರಳಿದ ಮಾತ್ರಕ್ಕೆ ಶ್ರೀಕೃಷ್ಣನು ಶಿವನಿಗಿಂತ ಕಡಿಮೆ ಎಂದೇನೂ ಆಗುವುದಿಲ್ಲ; ಅಲ್ಲವೇ?

೩. ಇನ್ನು ಶ್ರೀಕೃಷ್ಣನು ಶಿವನಿಗೆ ನಮಸ್ಕರಿಸಿದ ಪ್ರಸಂಗ. ಅದೂ ಸಹ ಅವನ ಸರ್ವೋತ್ತಮತ್ವಕ್ಕೆ ಬಾಧಕವೇನಲ್ಲ. ಏಕೆಂದರೆ, ಶ್ರೀಕೃಷ್ಣನು ಅನೇಕ ಸಂದರ್ಭಗಳಲ್ಲಿ ನಮಸ್ಕರಿಸಿದ ಉಲ್ಲೇಖ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ. ಅದರಿಂದ ಅವನು ಆ ಋಷಿಮುನಿಗಳಿಗಿಂತ ಕಡಿಮೆಯಾದವನು ಎಂದು ಸರ್ವಥಾ ವಾದಿಸುವಂತಿಲ್ಲ. ಆ ಋಷಿಗಳೂ ಸಹ ಆ ರೀತಿ ಭಾವಿಸಿಯೂ ಇಲ್ಲ. ಅದರಂತೆ, ಶಿವನಿಗೆ ನಮಸ್ಕರಿಸಿದ ಮಾತ್ರಕ್ಕೆ ಶ್ರೀಕೃಷ್ಣ ಅವನಿಗಿಂತ ಕಡಿಮೆ ಎಂದೇನೂ ಆಗುವುದಿಲ್ಲ ಎಂದು ಭಾವ.

೪. ಶ್ರೀಕೃಷ್ಣನು ಋಷಿಮುನಿಗಳಿಗೆ ವಂದಿಸಿದ್ದು ಲೋಕದ ಜನರಿಗೆ ಧರ್ಮಾನುಷ್ಠಾನದ ಕ್ರಮವನ್ನು ತಿಳಿಸಿಕೊಡಲೆಂದು ಮಾತ್ರ. ಶ್ರೀಕೃಷ್ಣನು ಕ್ಷತ್ರಿಯ ವರ್ಣದಲ್ಲಿ ಅವತರಿಸಿದ್ದವನು. ಋಷಿಮುನಿಗಳು ವಿಪ್ರರು. ವಿಪ್ರವರ್ಣ ಕ್ಷತ್ರಿಯವರ್ಣಕ್ಕಿಂತ ಮಿಗಿಲು. ಆದ್ದರಿಂದ ವಿಪ್ರರು

---

೧. ಇದಂ ಕೃಷ್ಣೇನ ಕೃತಂ ಸರ್ವಂ ಕೈಲಾಸೇಂದ್ರಪ್ರಸ್ಥಯಾತ್ರಾದಿಕಂ ನೃಲೋಕೇ ಮನುಷ್ಯಲೋಕೇ ಅವತೀರ್ಣಸ್ಯ ಶ್ರೀಕೃಷ್ಣಸ್ಯ ನರಾನುಕಾರಾರ್ಥಂ ಹಿ ಮನುಷ್ಯವಿಡಂಬನಾರ್ಥಮೇವೇದಂ ಕೃತಮಿತಿ ಭಾವಃ। -ವ್ಯಾ.

೨. ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ - ಗೀತಾ (೩/೨೧)

೩.. ಯುಧಿಷ್ಠಿರಾದಪಿ ಶ್ರೀಕೃಷ್ಣಸ್ಯ ನೀಚತ್ವಂ ಪರಸ್ಯಾಪ್ಯನಭಿಮತಮಿತಿ ಕಿಂಶಬ್ದೇನಾಕ್ಷಿಪತಿ । ಯದಿ ಕೈಲಾಸ-ಯಾತ್ರಾಮಾತ್ರೇಣ ಶಿವಾದಪಿ ನೀಚಃ ಸ್ಯಾತ್ ತರ್ಹಿ ಇಂದ್ರಪ್ರಸ್ಥಯಾತ್ರಾಮಾತ್ರೇಣ ಯುಧಿಷ್ಠಿರಾದಪಿ ನೀಚಃ ಸ್ಯಾದಿತಿ ಭಾವಃ। - ವ್ಯಾ.

ವಂದ್ಯರು ಎಂದು ತಿಳಿಸಲೆಂದು ಶ್ರೀಕೃಷ್ಣ ಹಾಗೆ ಮಾಡಿದ. ಇಂತಹ ವಿಷಯಗಳನ್ನು ಭಗವದ್ಗೀತೆಯಲ್ಲಿ ತಾನೇ ಸ್ಪಷ್ಟವಾಗಿ ತಿಳಿಸಿರುವನು: ಶಿವನನ್ನು ಸ್ತುತಿಸಿದ್ದು ಸಹ ದೇವತೆಗಳು ಮನುಷ್ಯರಿಗೆ ಪೂಜ್ಯರು ಎಂಬ ತತ್ತ್ವವನ್ನು ತಿಳಿಸಿಕೊಡಲೆಂದು ಮಾತ್ರ. ಆದ್ದರಿಂದ ಶ್ರೀಕೃಷ್ಣ ಶಿವನಿಗಿಂತ ಕಡಿಮೆ ಎಂದು ವಾದಿಸಲು ಅವಕಾಶವೇನಿಲ್ಲ ಎಂದು ಭಾವ.

**ಶಿವಾದಿಗಳದು ವಿಡಂಬನೆ ಎನ್ನಲಾಗದು**

**[1]ಯದೀಹ ಶಂಕಾ ವಿಪರೀತಭಾವೇ**
**ತದಾ [2]ನರಾಃ ಸಂತಿ ಕಿಮಾತ್ಮಲೋಕಾತ್ ।**
**ಪಯೋಬ್ಧಿತೀರಂ ವ್ರಜತೋ ವಿಧಾತುಃ**
**ಶಿವಸ್ಯ ಚ ಸ್ವಾಲಯತೋ ಗತಸ್ಯ ॥ ೧೮ ॥**

ಇದಕ್ಕೆ ವಿರುದ್ಧವಾಗಿ ಬ್ರಹ್ಮಾದಿಗಳ ಕ್ಷೀರಸಮುದ್ರಯಾತ್ರೆ, ಶ್ರೀಹರಿಯ ಅರ್ಚನೆ ಮೊದಲಾದವುಗಳು ಸಹ ಲೋಕವಿಡಂಬನೆಗಾಗಿ ಎಂದು ಶಂಕಿಸುವುದಾದಲ್ಲಿ ಆಗ ಸತ್ಯಲೋಕದಿಂದ ಬ್ರಹ್ಮನು, ಕೈಲಾಸದಿಂದ ಶಿವನು ಕ್ಷೀರಸಮುದ್ರಲೋಕಕ್ಕೆ ತೆರಳಿದಾಗ ಅಲ್ಲಿ ನರರು ಇದ್ದರೇನು?

ವಿ : ೧. ಶ್ರೀಕೃಷ್ಣನ ಕೈಲಾಸಯಾತ್ರೆ ಮೊದಲಾದವುಗಳು ಲೋಕವಿಡಂಬನೆ ಎನ್ನಲು ಅದನ್ನೆಲ್ಲ ನರರು ಕಾಣುತ್ತಿದ್ದುದು ಕಾರಣ. ಆದರೆ, ಬ್ರಹ್ಮಾದಿಗಳ ಕ್ಷೀರಸಾಗರ ಗಮನ ಮೊದಲಾದವು ಲೋಕವಿಡಂಬನೆಯಾಗಲು ಸಾಧ್ಯವಿಲ್ಲ ಎಂಬುದನ್ನು ಇಲ್ಲಿ ತಿಳಿಸಿರುವರು.

೨. ಶ್ರೀಕೃಷ್ಣ ಹಾಗೆ ಕೈಲಾಸಕ್ಕೆ ತೆರಳಿದ್ದು ತನ್ನ ಲೋಕವಾದ ವೈಕುಂಠದಿಂದೇನಲ್ಲ; ಭೂಲೋಕದಲ್ಲಿ ಅವತರಿಸಿದ್ದರಿಂದ ದ್ವಾರಕೆಯಿಂದ ಧರ್ಮಶಿಕ್ಷಣಕ್ಕೆಂದು ಹಾಗೆ ತೆರಳಿದ ಎಂಬುದರಲ್ಲಿ ಬಾಧಕವೇನೂ ಇಲ್ಲ.

೩. ಬ್ರಹ್ಮ ಶಿವ ಮೊದಲಾದವರು ಶ್ರೀಕೃಷ್ಣನನ್ನು ಸ್ತುತಿಸಲು ಕ್ಷೀರಸಾಗರಕ್ಕೆ ತೆರಳಿದ್ದು ಮಾತ್ರ ಶ್ರೀಕೃಷ್ಣನೇ ಸರ್ವೋತ್ತಮ, ಅವರು ಸರ್ವೋತ್ತಮರಲ್ಲ ಎಂಬುದಕ್ಕೆ ದ್ಯೋತಕ. ಏಕೆಂದರೆ, ಅವರು ಹಾಗೆ ತೆರಳಿದ್ದು ತಮ್ಮ ಲೋಕವಾದ ಸತ್ಯಲೋಕ ಹಾಗೂ ಕೈಲಾಸಗಳಿಂದಲೇ ಹೊರತು ಭೂಲೋಕದ ಯಾವುದೇ ಸ್ಥಳದಿಂದಲ್ಲ. ಭೂಲೋಕದಲ್ಲಿ ಅವರು ಹಾಗೆ ಮಾಡಿದ್ದರೆ, ಅದು

---

೧. ನನ್ವೇವಂ ಬ್ರಹ್ಮಾದೀನಾಂ ಕ್ಷೀರಸಮುದ್ರಯಾತ್ರಾ ಹರ್ಯರ್ಚನಾದಿಕಮಪಿ ನರಾನುಕಾರಾರ್ಥಂ ಕಿಂ ನ ಸ್ಯಾದಿತ್ಯಾಶಂಕ್ಯ ತದಾ ವಿಡಂಬನೀಯಮನುಷ್ಯಾಭಾವಾನ್ನೇತ್ಯಾಹ। – ವ್ಯಾ.

೨. ನರಾಃ ಸಂತಿ ಕಿಮ್ । ಯೇನೇದಂ ನರವಿಡಂಬನಾರ್ಥಂ ಸ್ಯಾತ್ । ನರವಿಡಂಬನಂ ತು ನರಮಧ್ಯ ಏವ ಕರ್ತವ್ಯಮ್ । ನರಾಭಾವಾನ್ನರವಿಡಂಬನಾರ್ಥಂ ನ ಭವತಿ ಕಿಂತು ಕಾರ್ಯಾಕ್ಷಮೈರ್ಭಕ್ತ್ಯಾ ಕೃತಮಿದಂ ನ ನೀಚತಾಪಹಾರಕಮಿತಿ ಭಾವಃ। – ವ್ಯಾ.

ಭೂಲೋಕದ ಜನರಿಗೆ ತಿಳಿಸಿಕೊಡಲೆಂದು ಮಾತ್ರ ಎಂದು ವಾದಿಸಬಹುದಿತ್ತು. ಆದರೆ, ಅವರು ತಮ್ಮ ತಮ್ಮ ಲೋಕಗಳಿಂದಲೇ ತೆರಳಿರುವುದರಿಂದ ಅದು ಲೋಕಪ್ರದರ್ಶನಕ್ಕೆಂದು ನಡೆದಿರುವ ಪ್ರಸಂಗವಾಗಿರದೇ, ತತ್ತ್ವಪ್ರದರ್ಶನದ ಪ್ರಸಂಗವೇ ಆಗಿದೆ ಎಂಬುದಕ್ಕೆ ದ್ಯೋತಕ.

೪. ಬ್ರಹ್ಮ ಶಿವ ಮೊದಲಾದವರು ಕ್ಷೀರಸಾಗರಕ್ಕೆ ತೆರಳಿದ್ದು ತಮ್ಮ ತಮ್ಮ ಮುಖ್ಯ ಲೋಕಗಳಾದ ಸತ್ಯಲೋಕ, ಕೈಲಾಸಗಳಿಂದಲೇ ಹೊರತು, ಶ್ರೀಕೃಷ್ಣನಂತೆ ಭೂಲೋಕದ ದ್ವಾರಕೆ ಮೊದಲಾದ ಸ್ಥಳಗಳಿಂದಲ್ಲ ಎಂಬುದು ಒಂದು ಅಂಶ; ಶ್ರೀಕೃಷ್ಣನು ಹಾಗೆ ತೆರಳಿದ್ದು ಲೋಕವಿಡಂಬನೆ ಎನ್ನಲು ಅದು ನರಲೋಕದಲ್ಲಿ ನಡೆದ ಪ್ರಸಂಗವಾಗಿದ್ದು ಇನ್ನೊಂದು ಕಾರಣ. ಆದರೆ, ಬ್ರಹ್ಮರುದ್ರಾದಿಗಳು ಶ್ರೀಹರಿಯನ್ನು ಪ್ರಾರ್ಥಿಸಲೆಂದು ಕ್ಷೀರಸಾಗರಕ್ಕೆ ತೆರಳಿದಾಗ ಅದನ್ನು ಕಾಣಲು ಅಲ್ಲಿ ಯಾವ ನರರಿದ್ದರು? ನರಲೋಕವೇ ಅಲ್ಲದ ಆ ಸ್ಥಳದಲ್ಲಿ ನಡೆದ ಘಟನೆ ನರವಿಡಂಬನೆಯಾಗಲು ಎಂತು ಸಾಧ್ಯ? ಎಂಬುದು ಇಲ್ಲಿಯ ಮುಖ್ಯ ಭಾವ.

೫. ಇದನ್ನು ಹದಿಮೂರನೇ ಶ್ಲೋಕದಲ್ಲಿ ಸೂಚ್ಯವಾಗಿ ತಿಳಿಸಿರುವುದನ್ನು ಗಮನಿಸಬಹುದು.

### ಬ್ರಹ್ಮಾದಿಗಳ ವಿಷ್ಣುಸ್ತುತಿ ರೂಪ ಕಾರ್ಯಗಳು ಮನುಷ್ಯದೃಷ್ಟಿಗಮ್ಯವೇನಲ್ಲ

ಉಕ್ತಾಃ ಕಿಮರ್ಥಾ [೧]ನರದೃಷ್ಟಿಗಮ್ಯಾಃ
ಸ್ವಸ್ಥಾನಸಂಸ್ಥೈ ರಚಿತಾಃ ಸಮಸ್ತಾಃ ।
[೨]ಅತ್ರಾಪ್ಯದೃಶ್ಯಾಕೃತಿಭಿರ್ಮುನೀಂದ್ರ-
ವಿಜ್ಞಾನದೃಷ್ಟೇರಪಿ ದೂರದೂರೈಃ ॥ ೧೯ ॥

ತಮ್ಮ ತಮ್ಮ ಮೂಲಸ್ಥಳಗಳಿಂದಲೇ ಬ್ರಹ್ಮಾದಿಗಳಿಂದ ಮಾಡಲ್ಪಟ್ಟ ಹಿಂದೆ ಹೇಳಿದ ಕ್ಷೀರಸಮುದ್ರಯಾತ್ರಾದಿ ಕಾರ್ಯಗಳು ಮನುಷ್ಯ ದೃಷ್ಟಿಗೆ ಗಮ್ಯವಾದವುಗಳೇನು? ಈ ಲೋಕದಲ್ಲೂ ಮನುಷ್ಯರಿಗೆ ಕಾಣಲಾಗದ ದೇಹದ, ಮುನಿಶ್ರೇಷ್ಠರ ಜ್ಞಾನದೃಷ್ಟಿಗೂ ಅತ್ಯಂತ ದೂರರಾದ ಬ್ರಹ್ಮಾದಿಗಳಿಂದ ಗರ್ಭಸ್ತುತಿ ಮೊದಲಾದವುಗಳು ಮನಷ್ಯದೃಷ್ಟಿಗೆ ಗೋಚರ-ವಾಗುವಂತಹವುಗಳೇನು?

ವಿ : ೧. ಬ್ರಹ್ಮಾದಿ ದೇವತೆಗಳು ಹಾಗೆ ತೆರಳಿದ್ದು ಮನುಷ್ಯ ದೃಷ್ಟಿಯಿಂದ ಎಂದು ಹೇಳುವಂತಿಲ್ಲ. ಏಕೆಂದರೆ, ಅವರು ತೆರಳಿದ ವಿಚಾರ ಮನುಷ್ಯರ ದೃಷ್ಟಿಗೆ ಗೋಚರಿಸುವಂತವೇ ಅಲ್ಲ. ಆದ್ದರಿಂದ ಅವರು ವಾಸ್ತವವಾಗಿಯೇ ಶ್ರೀಹರಿಯನ್ನು ಸ್ತುತಿಸಿದರು ಎಂದೇ ಸಿದ್ಧವಾಗುವುದು.

---

೧. ಕ್ಷೀರಸಮುದ್ರಯಾತ್ರಾಹರ್ಯುಪಾಸನಾದಿಪ್ರಮೇಯಾನಿ ನರದೃಷ್ಟಿಗಮ್ಯಾಃ ಕಿಮ್ । ಅತ್ರತ್ಯನರೈಃ ಲೋಕಾಂತರೇ ಕೃತಸ್ಯ ದ್ರಷ್ಟುಮಶಕ್ಯತ್ವಾದಿತಿ ಭಾವಃ । – ವ್ಯಾ.

೨. ಅತ್ರಾಪಿ ಕೃತಸ್ಯ ನರವಿಡಂಬನಾರ್ಥತಾ ನ ಸಂಭವತೀತಿ ಭಾವಃ । –ವ್ಯಾ.

೨. ಬ್ರಹ್ಮಾದಿ ದೇವತೆಗಳು ಗರ್ಭಸ್ತುತಿ ಮಾಡಿದ್ದು ಲೋಕದ ಜನರು ಕಂಡ ವಿಚಾರವೇನಲ್ಲ. ಅದು ಕೇವಲ ಜ್ಞಾನದೃಷ್ಟಿಯ ಋಷಿಮುನಿಗಳು ಸಹ ಕಾಣದಿದ್ದ ವಿಷಯ. ಆದ್ದರಿಂದ ಬ್ರಹ್ಮಾದಿಗಳು ಮಾಡಿದ ಗರ್ಭಸ್ತುತಿ ತಾತ್ವಿಕವಾದ ಪ್ರಸಂಗವೇ ಆಗಿದ್ದು ಅದು ಶ್ರೀಕೃಷ್ಣನ ಸರ್ವೋತ್ತಮತ್ವವನ್ನೇ ದೃಢಪಡಿಸುವುದು. ಆದರೆ, ಶ್ರೀಕೃಷ್ಣನು ಮಾಡಿದ ಶಿವಸ್ತುತಿ ಲೋಕದ ಜನರಿಗೋಸ್ಕರ ಮಾಡಿದ ಲೋಕವೇ ಕಂಡಂತಹ ಘಟನೆಯಾದ್ದರಿಂದ, ಅದು ಕೇವಲ ಅಸುರಮೋಹನಕ್ಕೋಸ್ಕರ ಮಾಡಿದ ವಿಡಂಬನೆ ಎಂದಷ್ಟೇ ಸಿದ್ಧವಾಗುವುದು.

**ಭಸ್ಮಾಸುರ ಪ್ರಸಂಗ, ಭೃಗುಮುನಿ ಪ್ರಸಂಗ ವಿಡಂಬನೆಯ ಪ್ರಸಂಗಗಳಲ್ಲ**

**ಪುರೋಗ್ರಭಸ್ಮಾಸುರಘಾತಕಾಲೇ[೧]**
**ನರಾನುಕಾರಸ್ಯ ಹಿ ಕಾऽಸ್ತಿ ಯುಕ್ತಿಃ।**
**ಮುನೇಶ್ಚ[೨] ಸತ್ತತ್ವವಿಚಾರಹೇತೋ-**
**ರ್ಗತಸ್ಯ ಮರ್ತ್ಯಾನುಕೃತಿಃ ಕಿಮರ್ಥಾ ॥ ೨೦ ॥**

ಹಿಂದೆ ಉಗ್ರನಾದ ಭಸ್ಮಾಸುರನನ್ನು ಸಂಹರಿಸುವ ಸಮಯದಲ್ಲಿ ಶಿವನು ನರರಂತೆ ವಿಡಂಬನೆ ಮಾಡಿದ ಎಂದು ಹೇಳಲು ಯಾವ ಯುಕ್ತಿ ಇದೆ? ಅದರಂತೆ ಸತ್ತತ್ವದ ನಿರ್ಣಯಕ್ಕಾಗಿ ಹೊರಟಂತಹ ಭೃಗುಮುನಿಗಳು ಮಾಡಿದ ಕಾರ್ಯ ಲೋಕದ ವಿಡಂಬನೆಯಾಗುವ ಕಾರಣವಾದರೂ ಯಾವುದು?

ವಿ : ೧. ಶ್ರೀಕೃಷ್ಣನ ಕೈಲಾಸಯಾತ್ರೆಯು ಲೋಕವಿಡಂಬನೆಯಾಗಿರುವಂತೆ ಶಿವನ ಭಸ್ಮಾಸುರ ಪ್ರಸಂಗ ಹಾಗೂ ಭೃಗುಮುನಿಗಳ ಸರ್ವೋತ್ತಮತ್ವ ಸ್ಥಾಪನೆಯ ಪ್ರಸಂಗಗಳು ಲೋಕವಿಡಂಬನೆಯಾಗಲು ಸಾಧ್ಯವಿಲ್ಲ ಎಂಬ ನಿರೂಪಣೆ ಇದರಲ್ಲಿದೆ.

೨. ಶ್ರೀಕೃಷ್ಣನಂತೆ ಶಿವನು ಸಹ ಭಸ್ಮಾಸುರ ಪ್ರಸಂಗದಲ್ಲಿ ಲೋಕವಿಡಂಬನೆಗಾಗಿ ಹಾಗೆ ಸಂಕಟವನ್ನು ಪ್ರದರ್ಶಿಸಿದ ಎನ್ನುವಂತಿಲ್ಲ. ಪ್ರಾಣಸಂಕಟದಂತಹ ಘೋರಪ್ರಸಂಗದಲ್ಲಿ ಅವರು ಲೋಕವಿಡಂಬನೆ ಮಾಡುವ ಪ್ರಸಕ್ತಿ ಹೇಗೆ ತಾನೆ ಬಂದೀತು? ಆದ್ದರಿಂದ ಅದು ವಾಸ್ತವವಾಗಿ ಶಿವನಿಗೆ ಒದಗಿದ್ದ ಸಂಕಟವನ್ನು ಶ್ರೀಹರಿಯು ಮೋಚನ ಮಾಡಿದ ಪ್ರಸಂಗವೇ ಆಗಿದೆ ಎಂದು ಖಚಿತಪಡುವುದು.

---

೧. ಸ್ವಪ್ರಾಣಸಂಕಟೇ ಸ್ವಸಾಮರ್ಥ್ಯಸ್ಯ ಸರ್ವೈಃ ಪ್ರದರ್ಶನೀಯತ್ವಾದಿತಿ ಭಾವಃ। – ವ್ಯಾ.

೨. ಕಿಂಚ ಸತ್ತತ್ವವಿಚಾರಹೇತೋಃ ತತ್ತ್ವವಿಚಾರಾರ್ಥಂ ಗತಸ್ಯ ಕೈಲಾಸಸತ್ಯಲೋಕವೈಕುಂಠಲೋಕಾನ್ ಪ್ರತಿ ಗತಸ್ಯ ಮುನೇಶ್ಚ ಭೃಗೋಃ ಮರ್ತ್ಯಾನುಕೃತಿಃ ಮನುಷ್ಯಾನುಕರಣಂ ಕಿಮರ್ಥಂ ತತ್ತ್ವವಿಚಾರಕಾಲೇ ತತ್ತ್ವಸ್ಯೈವ ನಿರೂಪಣೀಯತ್ವೇನ ಮನುಷ್ಯವತ್ ಅನೃತಕಥನಸ್ಯಾನುಚಿತತ್ವಾದಿತಿ ಭಾವಃ। –ವ್ಯಾ.

೩. ಭೃಗುಮುನಿ ತ್ರಿಮೂರ್ತಿಗಳಲ್ಲಿ ಶ್ರೀವಿಷ್ಣುವೇ ಶ್ರೇಷ್ಠ ಎಂದು ಸಮರ್ಥಿಸಿದ್ದು ಸಹ ನರರ ಅನುಕರಣೆಯ ಸಂಗತಿಯೇನಲ್ಲ. ಅದು ತತ್ತ್ವನಿರ್ಣಯದ ಶ್ರೇಷ್ಠ ಪ್ರಸಂಗವೇ ಹೊರತು ಲೋಕಾನುಕರಣದ ಪ್ರಸಂಗ ಹೇಗಾದೀತು ಎಂದು ಭಾವ. ಆ ಇಡೀ ಪ್ರಸಂಗ ನಾರದರ ಆದೇಶದಂತೆ ಕಶ್ಯಪಾದಿ ಋಷಿಮುನಿಗಳೆಲ್ಲ ಕೈಕೊಂಡ ತತ್ತ್ವನಿರ್ಣಯದ ಶ್ರೇಷ್ಠ ಪ್ರಸಂಗವಾಗಿದ್ದಿತು ಎಂಬುದು ಶ್ರೀಮದ್ಭಾಗವತಾದಿ ಪುರಾಣಗಳಲ್ಲಿಯೇ ಪ್ರತಿಪಾದಿತವಾಗಿರು ವಿಶೇಷಾಂಶ ಎಂದು ತಿಳಿಯಬೇಕು.

### ಶ್ರೀಕೃಷ್ಣನ ಕೈಲಾಸಯಾತ್ರಾಪ್ರಸಂಗವು ಲೋಕವಿಡಂಬನೆಯೇ ಆಗಿದೆ

ಮರ್ತ್ಯಾನುಕಾರೋಽಪಿ ಹಿ ಮರ್ತ್ಯಲೋಕಂ
ಪ್ರಾಪ್ತಸ್ಯ ಯುಕ್ತೋ ನರದೃಷ್ಟಿಮಾರ್ಗೇ।
[೧]ಕೈಲಾಸಶೈಲಂ ಸ್ವಜನಸ್ಯ ಮಧ್ಯೇ
ವಿಜ್ಞಾಪ್ಯ ಕೃಷ್ಣೋಽಗಮದಾಗಮಚ್ಚ ॥ ೨೧ ॥

ಮರ್ತ್ಯರ ಅನುಕರಣೆ ಎಂಬುದು ಮರ್ತ್ಯಲೋಕಗಳಲ್ಲಿ ಅವತರಿಸಿದವರಿಗೆ ಮಾತ್ರ ಅನ್ವಯಿಸುವಂತಹುದು. ನರರ ಕಣ್ಣಿಗೆ ಕಾಣುವಂತೆ ಶ್ರೀಕೃಷ್ಣನು ಕೈಲಾಸಯಾತ್ರೆಯ ಬಗ್ಗೆ ತನ್ನ ಜನರಿಗೆ ತಿಳಿಸಿ ಅದರಂತೆ ತೆರಳಿದ, ಹಾಗೂ ಅಲ್ಲಿಂದ ಮರಳಿದ.

ವಿ : ೧. ಶ್ರೀಕೃಷ್ಣನ ಕೈಲಾಸಯಾತ್ರೆಯು ಲೋಕವಿಡಂಬನೆ ಎಂಬುದನ್ನು ಇಲ್ಲಿ ನಿರೂಪಿಸಲಾಗಿದೆ.

೨. ಶ್ರೀಕೃಷ್ಣ ಕೈಲಾಸಯಾತ್ರೆಗೆ ತೆರಳುವ ಮುನ್ನ ಅದರ ಬಗ್ಗೆ ಜನರಿಗೆಲ್ಲ ತಿಳಿಸುತ್ತಾನೆ. ಅವರಿಗೆಲ್ಲ ಕಾಣುವಂತೆಯೇ ಕೈಲಾಸಕ್ಕೆ ತೆರಳುತ್ತಾನೆ. ಮತ್ತು ಅವರು ನೋಡುತ್ತಿದ್ದಂತೆಯೇ ಅಲ್ಲಿಂದ ಮರಳುತ್ತಾನೆ ಸಹ. ಹೀಗೆ ಭೂಲೋಕದಲ್ಲಿ ಅವತರಿಸಿದ ಶ್ರೀಕೃಷ್ಣ ಭೂಲೋಕದ ಜನರಂತೆ ವರ್ತಿಸುವುದು ವಿಡಂಬನೆ ಎಂಬುದು ಅತ್ಯಂತ ಸಮುಚಿತವಾದುದು. ಆದ್ದರಿಂದ ಇದು ಅವನ ಸರ್ವೋತ್ತಮತ್ವಕ್ಕೆ ಬಾಧಕವಾಗದು ಎಂದು ಭಾವ.

### ಶ್ರೀಕೃಷ್ಣನಿಗೆ ಶಿವಾದಿಗಳ ವರಗಳು ಅನಗತ್ಯ

ಯದಾ ಸ ಪುತ್ರಂ [೨]ನಿಜನಾಭಿಜಾತ-
ಕುಶೇಶಯಾತ್ ಪ್ರಾಗ್ಜನಯಾಂಬಭೂವ।

---

೧. ಮಯಾ ಕೈಲಾಸಂ ಪ್ರತಿ ಗಮ್ಯತೇ। ತಾವತ್ ಪುರೀಯಂ ರಕ್ಷಣೀಯಾ ಇತ್ಯಾದ್ಯಾಘೋಷ್ಯ ಕೈಲಾಸಶೈಲಮಗಮತ್ ಆಗಮಚ್ಚ। ವಿಡಂಬನೀಯನರಾಣಾಂ ವಿದ್ಯಮಾನತ್ವಾತ್ ಕೈಲಾಸಯಾತ್ರಾ ನರವಿಡಂಬನಾಯ ಕೃತೇತಿ ವಕ್ತುಂ ಯುಕ್ತಮಿತಿ ಭಾವಃ। -ವ್ಯಾ.

೨. ವರಸ್ಯ ದಾತಾ ಶಿವಃ ಕುತ್ರ। ಕುತ್ರತ್ಯಃ ಪದ್ಮಜೋತ್ಪತ್ತಿಕಾಲೇ ತತ್ಪುತ್ರಸ್ಯ ಶಿವಸ್ಯಾಭಾವಾದಿತಿ ಭಾವಃ। ತಸ್ಮಾತ್ ಸ್ವತ ಏವ ಪುತ್ರಜನನಸಮರ್ಥಸ್ಯ ಶ್ರೀಕೃಷ್ಣಸ್ಯ ಅಸಮರ್ಥಾಚ್ಛಿವಾತ್ ವರಾದಾನಮಪಿ ವಿಡಂಬನಾರ್ಥಮೇವೇತಿ ಭಾವಃ। -ವ್ಯಾ.

ತದಾ ಶಿವಃ ಕುತ್ರ ವರಸ್ಯ ದಾತಾ
ತದೀಯಫಾಲಾಂತರಜನ್ಮಭೂಮಿಃ ॥ ೨೨ ॥

ಶ್ರೀಕೃಷ್ಣನು ತನ್ನ ನಾಭಿಯಿಂದ ಹೊರಹೊಮ್ಮಿಸಿದ ಕಮಲದಲ್ಲಿ ಬ್ರಹ್ಮದೇವರನ್ನು ಸೃಷ್ಟಿ ಮಾಡಿದಾಗ ಅವನಿಗೆ ವರ ನೀಡಲು ಶಿವನು ಎಲ್ಲಿದ್ದ? ಅವನು ಜನಿಸಿದ್ದು ವಿಷ್ಣುವಿನಿಂದ ಜನಿಸಿದ ಬ್ರಹ್ಮದೇವರ ಭ್ರೂಮಧ್ಯದಿಂದ ಅಲ್ಲವೇ?

ವಿ: ೧. ಶ್ರೀಕೃಷ್ಣನು ಶಿವನ ವರದಿಂದ ಪುತ್ರರನ್ನು ಪಡೆದುಕೊಂಡ ಎಂಬುದು ಲೋಕವಿಡಂಬನೆ ಎಂಬುದನ್ನು ಇಲ್ಲಿ ತೋರಿಸಿಕೊಟ್ಟಿರುವರು.

೨. ಶ್ರೀಕೃಷ್ಣನು ಸಾಕ್ಷಾತ್ ಶ್ರೀಹರಿ. ಅವನು ಸೃಷ್ಟಿಸಿದ ಬ್ರಹ್ಮದೇವರು ಅವನ ನಾಭಿಕಮಲ ಸಂಜಾತರು. ಬ್ರಹ್ಮದೇವರನ್ನು ಶ್ರೀಹರಿ ಹಾಗೆ ಸೃಷ್ಟಿಸಿದಾಗ ಅವರಿಗೆ ವರ ನೀಡಲು ಶಿವ ಎಲ್ಲಿದ್ದ? ಆ ಶಿವನು ಜನಿಸಿದ್ದೇ ಶ್ರೀಹರಿ ಸೃಷ್ಟಿಸಿದ ಬ್ರಹ್ಮದೇವರ ಭ್ರೂಮಧ್ಯದಿಂದ. ಹೀಗೆ ಜಗತ್ತನ್ನು ಸೃಷ್ಟಿಸುವ ಬ್ರಹ್ಮನನ್ನೇ ತನ್ನ ನಾಭಿಕಮಲದಿಂದ ಹುಟ್ಟಿಸಿದ ಶ್ರೀಕೃಷ್ಣನಿಗೆ ಪುತ್ರೋತ್ಪತ್ತಿಯ ವರವನ್ನು ಶಿವ ಹೇಗೆ ತಾನೆ ನೀಡಿಯಾನು? ಆದ್ದರಿಂದ ಇದು ಕೇವಲ ಲೋಕಮೋಹನದ ಘಟನೆ ಎಂಬುದು ದೃಢಪಡುವುದು ಎಂದರ್ಥ; ಕುಶೇಶಯ - ಕಮಲ.

### ವಿಷ್ಣುವಿನ ವಾಹನವಾದ ಗರುಡನಿಗೂ ಸೋತ ಶಿವ

ಯದ್ವಾಹನೀಭೂತಗರುತ್ಮದೋಜೋ
ವಿದ್ರಾವಯಾಮಾಸ ಪಿನಾಕಪಾಣಿಮ್[೧] ।
ತಸ್ಯ ಪ್ರಸಾದಾತ್ ಸ ಸುತಂ ಜಗಾಮೇ-
ತ್ಯುಕ್ತಿರ್ನ [೨]ವಿದ್ವಜ್ಜನಮಾನನೀಯಾ ॥ ೨೩ ॥

ಶ್ರೀಕೃಷ್ಣನಿಗೆ ವಾಹನವಾದ ಗರುಡನ ಸಾಮರ್ಥ್ಯವೇ ಪಿನಾಕಪಾಣಿಯಾದ ಶಿವನನ್ನು ದೂರಕ್ಕೆ ಓಡಿಸಿತ್ತು; ಅಂತಹ ಶಿವನ ಅನುಗ್ರಹದಿಂದ ಶ್ರೀಕೃಷ್ಣ ಪುತ್ರನನ್ನು ಪಡೆದ ಎಂಬ ಮಾತು ಎಂದೂ ಸಹ ವಿದ್ವಜ್ಜನರ ಮನ್ನಣೆಯನ್ನು ಪಡೆಯಲಾರದು.

ವಿ : ೧. ಶ್ರೀಕೃಷ್ಣನ ವಾಹನವಾದ ಗರುಡನೇ ಶಿವನನ್ನು ಪಲಾಯನಗೈಸಿರುವಾಗ ಅಂತಹ ಶಿವನ ಅನುಗ್ರಹ ಗರುಡ ವಾಹನನಿಗೆ ಹೇಗೆ ತಾನೆ ಅಗತ್ಯವೆನ್ನಿಸೀತು ಎಂಬ ವಿವರ ಇದರಲ್ಲಿದೆ.

---

೧. ಶಿವಂ ಚ ಶಕ್ರಾರ್ಥಮುಪಾಗತಂ ಹರಿರ್ನ್ಯವಾರಯಚ್ಛಾರ್ಙ್ಗವಿನಿಃಸೃತೈಃ ಶರೈಃ।
ಸವಾಹನೋ ದೂರತರೇ ನಿಪಾತಿತೋ ಗರುತ್ಮತಾ ಶಂಭುರಗಾಚ್ಛರಾಹತಃ॥ - ಮ.ಭಾ.ತಾ.ನಿ (೨೦/೩.೩೦)

೨. ನಹಿ ವಿದ್ವಾಂಸಃ ಅಸಮರ್ಥಃ ಸಮರ್ಥಾಯ ವರಂ ದತ್ತವಾನಿತ್ಯುಕ್ತಿಂ ಸಹಂತ ಇತ್ಯರ್ಥಃ। -ವ್ಯಾ.

೨. ಹಿಂದೆ ಹೇಳಿದಂತೆ ಶ್ರೀಕೃಷ್ಣನು ಪಾರಿಜಾತಾಪಹರಣವನ್ನು ಮಾಡಿದ ಪ್ರಸಂಗದಲ್ಲಿ ಶಿವನನ್ನು ನಂದಿಯ ಸಮೇತ ಗರುಡ ನೂರಾರು ಧನುಸ್ಸುಗಳಷ್ಟು ದೂರಕ್ಕೆ ಎಸೆದ ಎಂಬ ಹರಿವಂಶದ ಉಲ್ಲೇಖ ಶಿವನ ಇತಿಮಿತಿಗಳಿಗೆ ಸಾಧಕ. ಅಂತಹ ಶಿವನಿಂದ ಗರುಡವಾಹನನಾದ ಶ್ರೀಹರಿಗೆ ಅನುಗ್ರಹ ಎಂಬುದು ಹಾಸ್ಯಾಸ್ಪದ ಸಂಗತಿ ಎಂದು ತಾತ್ಪರ್ಯ.

೩. ಹಾಗಿದ್ದರೆ, ಇಂತಹ ವಾದವನ್ನು ಕೆಲವರು ಮಾಡುವರಲ್ಲ ಎಂಬುದಕ್ಕೆ ಇದು ವಿದ್ವಾಂಸರು ಮೆಚ್ಚುವ ವಾದವಲ್ಲ ಎಂಬುದೇ ಉತ್ತರ. ಎಂದರೆ, ಇಂತಹ ಕಥೆಗಳಿಂದ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಅಲ್ಲಗಳೆಯುವವರು ವಿದ್ವಜ್ಜನರಲ್ಲ ಅಜ್ಞರು, ಮೂಢರು ಎಂದು ಭಾವ.

ತೂರ್ಣಂ ಗೃಹೀತ್ವಾ ಪಾಣಿಭ್ಯಾಂ ವಿಷಾಣೇ ತಸ್ಯ ನಂದಿನಃ ।
ಸಶೂಲಪಾಣಿಂ ಚಿಕ್ಷೇಪ ವೈನತೇಯೋ ಧನುಃಶತಮ್ ॥ - ಭಾ. (೧೦/೬೬/೪೮)

### ಕೈಲಾಸಯಾತ್ರೆಯ ಆಂತರ್ಯ

ಮದನ್ಯಸೇವೈಹಿಕಕಾಮದಾತ್ರೀ-
ತ್ಯುದೀರಯನ್ ಸರ್ವಸುರಾಗ್ರಗಣ್ಯಃ ।
[೧]ಸ್ವಪೌತ್ರಯಾತ್ರಾಂ ವಿರಚಯ್ಯ ಸೂನು-
ಮವಾಪ ಪಾಪೌಘತಮಿಸ್ರಭಾನುಃ ॥ ೨೪ ॥

ನನ್ನ ಹೊರತು ಇತರರ ಸೇವೆಯು ಐಹಿಕ ಬಯಕೆಗಳನ್ನು ಮಾತ್ರ ನೀಡುವಂತಹುದು ಎಂಬುದನ್ನು ತಿಳಿಸಿಕೊಡಲೆಂದು ಸರ್ವಗುಣಗಳಿಂದಲೂ ಸಹ ಅಗ್ರಮಾನ್ಯನೂ, ಪಾಪ-ರಾಶಿಯ ಅಂಧಕಾರವನ್ನು ಪರಿಹರಿಸುವ ಸೂರ್ಯನೂ ಆದ ಶ್ರೀಕೃಷ್ಣನು ತನ್ನ ಮೊಮ್ಮಗನಾದ ಶಿವನ ಲೋಕವಾದ ಕೈಲಾಸಕ್ಕೆ ತೆರಳಿ ಪುತ್ರನನ್ನು ಪಡೆದ.

ವಿ : ೧. ಕೈಲಾಸಯಾತ್ರೆಯ ಪ್ರಸಂಗವನ್ನು ಅದರ ಮರ್ಮವನ್ನು ತಿಳಿಸುತ್ತಾ ಉಪಸಂಹಾರ ಮಾಡಿರುವರು.

೨. ಶ್ರೀಕೃಷ್ಣನ ಆರಾಧನೆಯಿಂದ ಬ್ರಹ್ಮ, ಶಿವ ಮೊದಲಾದವರೆಲ್ಲ ಮುಕ್ತಿಯನ್ನು ಪಡೆದುಕೊಂಡರು. ಆದರೆ, ಶ್ರೀಕೃಷ್ಣನು ಕೈಲಾಸಯಾತ್ರೆ ಮಾಡಿದ್ದು ಪುತ್ರಪ್ರಾಪ್ತಿಗೋಸ್ಕರ ಮಾಡಿದ ವಿಡಂಬನೆ ಮಾತ್ರ. ಮುಕ್ತಿ ನೀಡುವ ಶ್ರೀಕೃಷ್ಣನೆಲ್ಲಿ? ಕೇವಲ ಸಂತತಿ ನೀಡಬಲ್ಲ ಶಿವನೆಲ್ಲಿ? ಎನ್ನುವ ಮೂಲಕ ಫಲನೀಡುವ ಸಾಮರ್ಥ್ಯದಲ್ಲೂ ಅವರಿಬ್ಬರ ವ್ಯತ್ಯಾಸ ಅಪಾರ ಎಂಬ ತತ್ತ್ವವನ್ನು ತಿಳಿಸಿರುವರು.

---

೧. ಶ್ರೀಕೃಷ್ಣೇನ ಪುತ್ರಾರ್ಥಂ ನ ಶಿವಪೂಜಾ ಕೃತಾ । ತಸ್ಯ ಸ್ವಪೌತ್ರತ್ವಾತ್ । ನ ವಾ ಪಾಪಪರಿಹಾರಾಯ । ಅವದ್ಯಗಂಧವಿಧುರತ್ವಾತ್ ಅತ ಏವ ಪಾಪೌಘತಮಿಸ್ರಭಾನುರಿತ್ಯುಕ್ತಮಿತಿ ಭಾವಃ। -ವ್ಯಾ.

೩. ಶಿವ ಮೊದಲಾದ ದೇವತೆಗಳು ಐಹಿಕ ಫಲವನ್ನು ನೀಡುವ ಮಿತಸಾಮರ್ಥ್ಯದ ದೇವತೆಗಳೇ ಹೊರತು, ಮೋಕ್ಷ ನೀಡಬಲ್ಲ ಸರ್ವೋತ್ತಮ ದೇವತೆಗಳಲ್ಲ ಎಂಬ ತತ್ತ್ವದ ಆವಿಷ್ಕಾರ ಈ ಕೈಲಾಸಯಾತ್ರೆಯ ಮತ್ತೊಂದು ಸಂದೇಶ ಎಂದು ತಾತ್ಪರ್ಯ.

೪. ಶ್ರೀಕೃಷ್ಣನಿಗೆ ಯಾವ ಲಾಭವೂ ಒದಗಬೇಕಿಲ್ಲ ಎಂಬುದನ್ನು ಅವನು 'ಸರ್ವಸುರಾಗ್ರಗಣ್ಯ' ಎಂಬ ಪದದಿಂದಲೂ, ಅವನಿಗೆ ಈ ಪ್ರಸಂಗ ದೋಷದಾಯಕವಲ್ಲ ಎಂಬ ಭಾವವನ್ನು 'ಪಾಪೌಘತಮಿಸ್ರಭಾನುಃ' ಎಂಬ ಪದದಿಂದಲೂ ತಿಳಿಸಿರುವರು.

೫. ಈ ನಿರೂಪಣೆಯೊಂದಿಗೆ ಶ್ರೀಕೃಷ್ಣನ ಸರ್ವೋತ್ತಮತ್ವದ ಬಗೆಗಿನ ಬಾಧಕವನ್ನು ಪರಿಹರಿಸಿ ಈ ಪ್ರಸಂಗವನ್ನು ಉಪಸಂಹರಿಸಿರುವರು.

೬. ಶ್ರೀಕೃಷ್ಣಾವತಾರದಲ್ಲಿ ಕೈಲಾಸಯಾತ್ರಾ ಪ್ರಸಂಗವು ಶ್ರಿಕೃಷ್ಣನ ಸರ್ವೋತ್ತಮತ್ವಕ್ಕೆ ವಿರೋಧಿಯಂತೆ ಕಂಡರೆ ಶ್ರೀರಾಮಾವತಾರದಲ್ಲಿ ಶ್ರೀರಾಮ ಮಾಡಿದ ರಾಮೇಶ್ವರದ ಶಿವಲಿಂಗ ಪ್ರತಿಷ್ಠೆಯು ಅವನ ಸರ್ವೋತ್ತಮತ್ವಕ್ಕೆ ವಿರೋಧಿಯಂತೆ ಕಾಣುವುದು. ಇಲ್ಲಿ ಶ್ರೀವಾದಿರಾಜಸ್ವಾಮಿಗಳು ಕೈಲಾಸಯಾತ್ರೆಯ ಈ ಪ್ರಸಂಗವನ್ನು ಹೀಗೆ ವಿಶ್ಲೇಷಿಸಿ ಶ್ರೀಹರಿಸರ್ವೋತ್ತಮತ್ವವನ್ನು ಅತ್ಯಂತ ಸಮಂಜಸವಾಗಿ ನಿರೂಪಿಸಿರುವರು; ತಮ್ಮ [೧]ತೀರ್ಥಪ್ರಬಂಧದಲ್ಲಿ ರಾಮೇಶ್ವರದಲ್ಲಿ ಶಿವಲಿಂಗಪ್ರತಿಷ್ಠಾಪನೆಯ ಆಂತರ್ಯವನ್ನು ವಿಸ್ತಾರವಾಗಿ ವಿಶ್ಲೇಷಿಸಿ ಶ್ರೀರಾಮನ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವರು; ಹೀಗೆ ಈ ಎರಡು ಜಟಿಲ ಪ್ರಸಂಗಗಳನ್ನು ಸಹ ಶ್ರೀಮದಾಚಾರ್ಯರ ನಿರ್ಣಯದ ಹಿನ್ನೆಲೆಯಲ್ಲಿ ಸಮಿಚೀನವಾಗಿ ನಿರೂಪಿಸಿದ ಹಿರಿಮೆ ಅವರದು.

---

೧. ಕಾಮದ್ವಿಷಂ ಕಾಮಿತದಾನದಕ್ಷಂ ಶ್ರೀಮಜ್ಜಟಾಜೂಟವಿಭಾಸಿಗಂಗಮ್ ।
ರಾಮೇಶ್ವರಂ ರಾಮಕೃತಪ್ರತಿಷ್ಠಂ ರಾಮಾಗೃಹೀತಾರ್ಧತನುಂ ನತೋಽಸ್ಮಿ ॥
ಕಲ್ಪಾಂತೇ ಸುರಭೂಸುರಾಸುರಮುನಿಸ್ತೋಮಂ ಹರನ್ ಕಂ ಹರಂ
ಪೃಥ್ವ್ಯಾಂ ಪಾತಕಕೋಟಿಪಾಟನಪಟೂ ರಾಮಃ ಸಮಾರಾಧಯತ್ ।
ಯತ್ಪಾದಾಬ್ಜರಜೋಽಹರನ್ಮುನಿವಧೂಪಾಪಂ ಶ್ರುತಾ ಯತ್ಕಥಾ
ಮುಕ್ತಿಂ ದೋಗ್ಧಿ ಪರೇಶಿತುಃ ಪರಮಿಯಂ ಲೀಲಾ ಖಿಲಧ್ವಂಸಿನಃ ॥
ಯಂ ಧ್ಯಾಯಂಸ್ತಾರಕಬ್ರಹ್ಮಮಂತ್ರಂ ಜಪತಿ ಧೂರ್ಜಟಿಃ ।
ಅಘೋತ್ತಾರಾಯ ಕಾಕುತ್ಸ್ಥಃ ಪೂಜಯಾಮಾಸ ತಂ ಕಿಲ ॥
ಬ್ರಹ್ಮಹತ್ಯಾನಿಮಿತ್ತೇನ ಕಪಾಲ್ಯಾಸ್ತೇಽಧುನಾಽಪಿ ಯಃ ।
ಅಂಹಸ್ತದೇವ ಸಂಹರ್ತುಂ ಸ ರಾಮಸ್ಯಾರ್ಚಿತಃ ಕಿಲ ॥
ಯದ್ರಾವಣವಧೇ ಹೇತುಃ ಸೇತುರ್ಜೇತುಂ ಕ್ಷಮಸ್ತಮಃ ।
ತದಘಂ ತದ್ರಿಪೋರಾಸೀದಸಂಗಸ್ಯ ಕಿಲಾದ್ಭುತಮ್ ॥
ಯದ್ಭಾರತಸ್ಥಬಹುತೀರ್ಥನಿಷೇವಣೇನ ಲಭ್ಯಂ ಫಲಂ ದಿಶತಿ ತನ್ಮಮ ಸೇತುಖಂಡಃ ।
ಇತ್ಥಂ ಧಿಯೇವ ಪರಿವರ್ತಿತಚಾಪಕೋಟ್ಯಾ ಚಿಚ್ಛೇದ ಸೇತುಮಧಿಕಂ ರಘುಪುಂಗವೋಽತ್ರ ॥
- ತೀರ್ಥಪ್ರಬಂಧ (೪/೨೧-೨೬)

## ರುಗ್ಮಿಣಿಯಲ್ಲಿ ಮನ್ಮಥನ ಅವತಾರ

[೧]ಆನಂದಾಂಬುಧಿಮಗ್ನಮೂರ್ತಿರುದಯನ್ಮೋದಾಶ್ರುಧಾರಾಜಲಂ
[೨]ಭರ್ತ್ರಂಘ್ರೌ ಪ್ರಣಿಧಾಯ [೩]ಕಾಯಕನಕಂ [೪]ಕೃಷ್ಣಾರ್ಪಿತಂ[೫] ಯಾಽತನೋತ್ ।
ಯಾ ತದಾತ್ತ್ರಹರಿನ್ಮಣಿಂ ಕರವಶಂ ಚಕ್ರೇಽನವಾಪ್ತೋಽನಯಾ
[೬]ಕೋಽರ್ಥೋ ಯಾ ಕಮಲಾ ವಿಮುಕ್ತಕಬರೀ ಗರ್ಭೇ ದಧಾರ ಸ್ಮರಮ್॥೨೫॥

ಆನಂದಸಾಗರದಲ್ಲಿ ಮಗ್ನಶರೀರಳಾದ ರುಗ್ಮಿಣಿಯು, ಉಕ್ಕಿಬರುವ ಆನಂದಾಶ್ರುಧಾರೆ ಎಂಬ ಜಲವನ್ನು ಪತಿಯಾದ ಶ್ರೀಕೃಷ್ಣನ ಪಾದದಲ್ಲಿ ಇರಿಸಿ ತನ್ನ ದೇಹವೆಂಬ ಸುವರ್ಣವನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದಳು; ಶ್ರೀಕೃಷ್ಣನ ದೇಹವೆಂಬ ಇಂದ್ರನೀಲಮಣಿಯನ್ನು ಕರವಶ ಮಾಡಿಕೊಂಡು, ಮುಡಿಬಿಚ್ಚಿದವಳಾದ ಸಾಕ್ಷಾತ್ ಮಹಾಲಕ್ಷ್ಮಿಯಾದ ಈ ರುಗ್ಮಿಣಿಗೆ ಯಾವ ಪುರುಷಾರ್ಥ ಲಭಿಸಿಲ್ಲ ಎಂಬ ಕಾರಣದಿಂದ ಮನ್ಮಥನನ್ನು ಗರ್ಭದಲ್ಲಿ ಇರಿಸಿಕೊಂಡಾಳು?

ವಿ : ೧. ಶ್ರೀಕೃಷ್ಣನ ಕೈಲಾಸಯಾತ್ರೆಯು ಮೋಹಕವಾಗಿರುವಂತೆ, ರುಗ್ಮಿಣಿಯು ಕಾಮನನ್ನು ಗರ್ಭದಲ್ಲಿ ಧರಿಸಿದ್ದು ಸಹ ಕೇವಲ ವಿಡಂಬನೆ ಎಂಬ ವಿಶೇಷಾಂಶವನ್ನು ಇಲ್ಲಿ ತಿಳಿಸಿರುವರು.

೨. ಸಕಲಗುಣಪೂರ್ಣನೂ, ಸರ್ವದೋಷದೂರನು ಆದ ಶ್ರೀಕೃಷ್ಣನಿಗೆ ಪುತ್ರಪ್ರಾಪ್ತಿ [೭]ಅಗತ್ಯವೇ ಇಲ್ಲ. ಅದರಂತೆ ನಿತ್ಯಮುಕ್ತಳಾದ ಮಹಾಲಕ್ಷ್ಮಿಯೇ ಆದ ರುಗ್ಮಿಣೀದೇವಿಗೂ ಸಹ ಸಂತತಿಯ ಅಗತ್ಯ ಸರ್ವಥಾ ಇಲ್ಲ. ಎಂದ ಮೇಲೆ, ಅಂತಹ ಸಂತತಿ ಪ್ರಾಪ್ತಿಗಾಗಿ ಅವರು ಕೈಲಾಸ ಯಾತ್ರೆಯನ್ನು ಮಾಡುವ ಅಗತ್ಯ ಎಲ್ಲಿದೆ ಎಂದರ್ಥ.

---

೧. ಶ್ರೀಕೃಷ್ಣದರ್ಶನೇ ಸತಿ ಸರ್ವಾಂಗೇ ಜಾತಪುಲಕೇತ್ಯರ್ಥಃ। - ವ್ಯಾ.

೨. ಶ್ರೀಕೃಷ್ಣಚರಣಯೋಃ ಸ್ವಮುಖಂ ನಿಕ್ಷಿಪ್ಯ ನಮಸ್ಕಾರೇ ಕೃತೇ ಸತಿ ಸ್ವನಯನಾದುದ್ಭೂತಾನಂದಜಲಂ ಪಾದದ್ವಯೇ ನಿಕ್ಷಿಪ್ಯೇತ್ಯರ್ಥಃ। - ವ್ಯಾ.

೩. ಅನೇನ ದಾನೋಚಿತಧಾರಾಜಲಂ ರತೇರಾದಿಂ ಚ ಧ್ವನಯತಿ । ಸ್ವಕಾಯಾಖ್ಯಕನಕಂ ರುಗ್ಮಿಣ್ಯಾಃ ಸುವರ್ಣವರ್ಣತ್ವಾದಿತಿ ಧ್ವನಿಃ। - ವ್ಯಾ.

೪. ನಮಸ್ಕೃತ್ಯ ಲಜ್ಜಯಾ ತೂಷ್ಣೀಂ ಸ್ಥಿತಾಂ ಶ್ರೀಕೃಷ್ಣ ಏವ ಪ್ರಥಮಮಾಲಿಂಗಿತವಾನಿತಿ ಭಾವಃ। - ವ್ಯಾ.

೫. ಅನೇನ ಸ್ನಾತ್ವಾ ಜಲಧಾರಪೂರ್ವಕಂ ಶ್ರೀಕೃಷ್ಣಾರ್ಪಣಬುದ್ಧ್ಯಾ ಸುವರ್ಣದಾನರೂಪಂ ಧರ್ಮಾಖ್ಯಂ ರತಿಮಧ್ಯಸ್ಯಾರಂಭಂ ಚ ಸೂಚಯತಿ। - ವ್ಯಾ.

೬. ಚತುರ್ವಿಧಪುರುಷಾರ್ಥಾಃ ಪ್ರಾಪ್ತಾ ಏವ । ಉಕ್ತಯಾ ವಾಚೋಭಂಗ್ಯಾ ಚತುರ್ವಿಧಪುರುಷಾರ್ಥಲಾಭಸ್ಯ ಧ್ವನಿತತ್ವಾದಿತಿ ಭಾವಃ। ಸ್ವಪ್ರಿಯಪುರುಷಸಮಾಗಮಃ ಸ್ತ್ರೀಣಾಂ ಪುರುಷಾರ್ಥಚತುಷ್ಟಯಲಾಭಸ್ಯಾಪಿ ಸಮಾನ ಇತಿ ಹೃದಯಮ್। - ವ್ಯಾ.

೭. ಅನೇನ ಕಾಮಾಖ್ಯಪುರುಷಾರ್ಥಪ್ರಾಪ್ತಿಃ ವಿಮುಕ್ತಕಬರೀಪದೇನ ಮೋಕ್ಷಾಖ್ಯಪುರುಷಾರ್ಥೋ ರತ್ಯವಸಾನಂ ಚ ವರ್ಣಿತಂ ಭವತಿ। - ವ್ಯಾ.

೩. ಪುತ್ರಪ್ರಾಪ್ತಿ ಮೊದಲಾದ ಸಕಲಭಾಗ್ಯಗಳೂ ಸಹ ಶ್ರೀಹರಿಯ ಪ್ರೀತಿಗಾಗಿ. ಅಂತಹ ಶ್ರೀಹರಿ ಎಂಬ ಅನರ್ಘ್ಯರತ್ನವನ್ನೇ ಕರವಶ ಮಾಡಿಕೊಂಡಿರುವ ಸುವರ್ಣಮಯ ವ್ಯಕ್ತಿತ್ವ ರುಗ್ಮಿಣೀದೇವಿಯದು. ಶ್ರೀಹರಿಯಿಂದ ಸರ್ವರೀತಿಯ ಸುಖವನ್ನು ಅನುಭವಿಸುವ ಅವರಿಗೆ ಇತರ ಬಯಕೆಗಳ ಅಗತ್ಯವಾದರೂ ಎಲ್ಲಿದೆ?

೪. ರುಗ್ಮಿಣಿಯು ಶ್ರೀಕೃಷ್ಣನಿಗೆ ತನ್ನನ್ನು ಸಮರ್ಪಿಸಿಕೊಂಡಿದ್ದು ಸುವರ್ಣದಾನರೂಪವಾದ ಧರ್ಮ ಎಂಬ ಪುರುಷಾರ್ಥವಾಯಿತು[೧]; ಶ್ರೀಕೃಷ್ಣನನನು ಆಲಂಗಿಸಿಕೊಂಡಿದ್ದು ಅರ್ಥವೆಂಬ ಪುರುಷಾರ್ಥವಾದರೆ, ಮನ್ಮಥನನ್ನು ಗರ್ಭದಲ್ಲಿ ಧರಿಸಿದ್ದು ಕಾಮ ಎಂಬ ಪುರುಷಾರ್ಥವಾಯಿತು; ಮುಡಿ ಬಿಚ್ಚಿದ್ದು ಮೋಕ್ಷ ಎಂಬ ಪುರುಷಾರ್ಥವಾಯಿತು. ಹೀಗೆ ರುಗ್ಮಿಣಿಯು ಶೃಂಗಾರದ ಮೂಲಕವೇ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ ಎಂಬ ನಾಲ್ಕು [೨]ಪುರುಷಾರ್ಥಗಳನ್ನು ಸಹ ಪಡೆದುಕೊಂಡಳು ಎಂಬ ವಿಶೇಷಾಂಶ ಸೂಚಿತವಾಯಿತು.

೫. ಈ ಕಾರಣದಿಂದಲೂ ಶ್ರೀಕೃಷ್ಣನ ಕೈಲಾಸ ಯಾತ್ರೆ ಕೇವಲ ವಿಡಂಬನೆ ಹಾಗೂ ಅಸುರಮೋಹನ ಎಂದು ಸ್ಫುಟಪಡುವುದು ಎಂದು ಭಾವ.

### ರುಗ್ಮಿಣಿಯು ಮಾಡಿದ ಲೋಕವಿಡಂಬನೆ

ಗರ್ಭಂ ಬಭಾರ ಗಜರಮ್ಯಗತಿಃ ಸ್ವಕಾಂತಾ-
ನ್ಮಧ್ಯೇ ಮನೋಜ್ಞಮದನಾತ್ಮಕಮಬ್ಧಿಪುತ್ರೀ ।
ಹೃದ್ಯಪ್ಯಯೋಗಚಕಿತೇ ಹೃದಯಂಗಮಸ್ಯ
[೩]ಮರ್ತ್ಯಾನುಕಾರಿಚರಿತಸ್ಯ ತಮೇವ[೪] ತನ್ವೀ ॥ ೨೬ ॥

ಸಾಗರಜಾತೆಯಾದ ಮಹಾಲಕ್ಷ್ಮಿಯಾದ ಗಜದಂತೆ ರಮ್ಯಗಮನೆಯಾದ ರುಗ್ಮಿಣಿಯು ಮನೋಹರನಾದ ಮನ್ಮಥರೂಪದ ಗರ್ಭವನ್ನು ತನ್ನ ಪತಿಯಾದ ಶ್ರೀಕೃಷ್ಣನಿಂದ ಧರಿಸಿದಳು;

---

೧. ಸ್ವಪಾಣಿಭ್ಯಾಂ ಶ್ರೀಕೃಷ್ಣಾಂಗಂ ದೃಢಮಾಲಿಂಗಿತವತೀತ್ಯರ್ಥಃ। – ವ್ಯಾ.

೨. ಅನೇನ ಅರ್ಥಾಖ್ಯಪುರುಷಾರ್ಥಮ್ ಅನ್ಯೋನ್ಯಾಲಿಂಗನಾಖ್ಯಂ ರತಿಮಧ್ಯಂ ಚ ವರ್ಣಿತಮ್ । – ವ್ಯಾ.
ಅನೇನ ಕಾಮಾಖ್ಯಪುರುಷಾರ್ಥಪ್ರಾಪ್ತಿಃ ವಿಮುಕ್ತಕಬರೀಪದೇನ ಮೋಕ್ಷಾಖ್ಯಪುರುಷಾರ್ಥೋ ರತ್ಯವಸಾನಂ ಚ ವರ್ಣಿತಂ ಭವತಿ । ಅತ ಏವ ಅನಯಾ ರುಗ್ಮಿಣ್ಯಾ ಕಃ ಅರ್ಥಃ ಪುರುಷಾರ್ಥಃ ಅನವಾಪ್ತಃ । ನ ಕೋಽಪಿ । ಚತುರ್ವಿಧಪುರುಷಾರ್ಥಾಃ ಪ್ರಾಪ್ತಾಃ ಏವ । ಉಕ್ತಯಾ ವಾಚೋಭಂಗ್ಯಾ ಚತುರ್ವಿಧಪುರುಷಾರ್ಥಲಾಭಸ್ಯ ಧ್ವನಿತತ್ವಾದಿತಿ ಭಾವಃ । ಸ್ವಪ್ರಿಯಪುರುಷಸಮಾಗಮಃ ಸ್ತ್ರೀಣಾಂ ಪುರುಷಾರ್ಥಚತುಷ್ಟಯಲಾಭಸ್ಯಾಪಿ ಸಮಾನ ಇತಿ ಹೃದಯಮ್ । – ವ್ಯಾ.

೩. ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ.... – ಭಾಗವತ. (೫/೧೯/೫)

೪. ಯಾಂ ಯಾಂ ಪರೇಶ ಉರುಧೈವ ಕರೋತಿ ಲೀಲಾಮ್ ।
ತಾಂ ತಾಂ ಕರೋತ್ಯನು ತಥೈವ ರಮಾಪಿ ದೇವೀ ॥ –ಮ.ಭಾ.ತಾ.ನಿ.(೫/೩೫)

ಆದರಂತೆ ಹೃದಯಂಗಮನೂ, ನರರ ರೀತಿಯನ್ನು ವಿಡಂಬಿಸುವವನೂ ಆದ ಶ್ರೀಕೃಷ್ಣನ ವಿರಹದ ಭಯದಿಂದಾಗಿ ಮನಸ್ಸಿನಲ್ಲೂ ಆ ಕಾಮರೂಪವಾದ ಅವನನ್ನೇ ಧರಿಸಿದಳು.

ವಿ : ೧. ಶ್ರೀರುಗ್ಮಿಣಿಯು ಗರ್ಭಧರಿಸಿದಳು ಎಂಬುದನ್ನು ಕಾವ್ಯಮಯವಾಗಿ ಇಲ್ಲಿ ತಿಳಿಸಿರುವರು.

೨. ರುಗ್ಮಿಣಿಯು ಶ್ರೀಕೃಷ್ಣನಿಂದ ಗರ್ಭವನ್ನು ಧರಿಸಿದ್ದು ಒಂದು ಬಗೆಯಾದರೆ, ಶ್ರೀಕೃಷ್ಣನ ವಿರಹಕ್ಕೆ ಅಂಜಿದ ಹೃದಯದಲ್ಲಿ ಸಹ ಶ್ರೀಕೃಷ್ಣನ ಬಗೆಗಿನ ಕಾಮನನ್ನೇ ಸದಾ ಹೊಂದಿದಳು; ಎಂದರೆ, ರುಗ್ಮಿಣಿಯು ಮುಂಚಿನಂತಯೇ ಆ ಬಳಿಕವೂ ಸದಾ ಶ್ರೀಕೃಷ್ಣನ ಸಂಗವನ್ನೇ ಪರಿಪೂರ್ಣವಾಗಿ ಹೊಂದಿದ್ದಳು ಎಂದರ್ಥ.

೩. ಋತುಕಾಲ ಭಿನ್ನ ಕಾಲದಲ್ಲೂ, ಗರ್ಭಿಣಿಯಾಗಿದ್ದಾಗಲೂ, ಸ್ತ್ರೀಸಂಗಮವು ನಿಷಿದ್ಧ ಎಂಬುದು ಕೃಷ್ಣ ಅನುಕರಣೆ ಮಾಡಿದ ನರರ ರೀತಿಯಾಗಿದೆ[೧].

## ಪ್ರದ್ಯುಮ್ನನ ಜನನ

**ಮಾರಂ ಕುಮಾರಂ ಸುಷುವೇಽಥ ಭೈಷ್ಮೀ**
**ಶೌರೇರ್ಜಿತಾರೇರನುರೂಪರೂಪಮ್ ।**
**[೨]ಪ್ರಾಚೀವ ಶೋಚಿಶ್ಶತಪೂರಿತಾಶಂ**
**ಪ್ರಾಚಾಂ ಸುವಾಚಾಂ ವಿಷಯಂ ನಿಶೇಶಮ್ ॥ ೨೭ ॥**

ಶತ್ರುಗಳನ್ನು ಮಣಿಸಿದ ಶ್ರೀಕೃಷ್ಣನಿಗೆ ಅತ್ಯಂತಅನುರೂಪನಾದಂತಹ ಪುತ್ರನಾದ ಮನ್ಮಥನನ್ನೇ ರುಗ್ಮಿಣಿಯು ಹೆತ್ತಳು; ಪ್ರಾಚೀನ ಕವಿಗಳ ಮಾತಿಗೆ, ವರ್ಣನೆಗೆ ವಿಷಯವಾದ ನಿಶಾಕರನಾದ, ತನ್ನ ಸಹಸ್ರಾರು ಕಿರಣಗಳಿಂದ ದಿಕ್ಕುಗಳನ್ನು ಬೆಳಗುವ ಚಂದ್ರನನ್ನು ಪೂರ್ವ ದಿಕ್ಕು ಹೇಗೋ ಹಾಗೆ.

ವಿ : ೧. ರುಗ್ಮಿಣಿಯು ಪ್ರದ್ಯುಮ್ನ ಎಂಬ ಪುತ್ರರನ್ನು ಪಡೆದ ವಿವರ ಇಲ್ಲಿದೆ.

೨. ಸಾಕ್ಷಾನ್ಮನ್ಮಥಮನ್ಮಥನಾದ ಶ್ರಿಕೃಷ್ಣನ ಪುತ್ರನಾಗಿ ಸಾಕ್ಷಾನ್ಮನ್ಮಥನೇ ಜನಿಸಿದ ಎಂದು ಭಾವ.

---

೧. "ಅನೃತೌ ಗರ್ಭಿಣೀಂ ಚೈವ ಗತ್ವಾ ಚಾಂದ್ರಾಯಣಂ ಚರೇತ್" ಇತಿ ಸ್ಮೃತೇಃ। -ವ್ಯಾ.
ಗರ್ಭಧಾರಣಾನಂತರಂ ಸಂಭೋಗಸ್ಯ ನಿಷಿದ್ಧತ್ವಾತ್ । ಸ್ವಯಮಪಿ ಮರ್ತ್ಯಾನುಚರಿತಾ ರುಗ್ಮಿಣೀ ಸದಾ ಶ್ರೀಕೃಷ್ಣಸಂಗಮೇವ ಕಾಮಯಮಾನಾ ತಿಷ್ಠತೀತ್ಯರ್ಥಃ। - ವ್ಯಾ.

೨. ಕಾಂತಾದೃತೌ ಸಮುಚಿತೇಽಥ ಬಭಾರ ಗರ್ಭಂ ಸಾ ಭೂಸುರೇಂದ್ರದುಹಿತಾ ಜಗತಾಂ ಹಿತಾಯ।
ಅಚ್ಛಾಂಬರೇವ ರಜನೀ ಪರಿಪೂರಿತಾಶಾ ಭಾವಿನ್ಯಪಾಸ್ತತಮಸಂ ವಿಧುಮಾದ್ಯಪಕ್ಷಾತ್ ॥ - ಸು.ವಿ (೨/೨೩
- ಎಂಬ ಸುಮಧ್ವವಿಜಯದ ಶ್ಲೋಕವನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

೩. ರುಗ್ಮಿಣಿಯು ಹಾಗೆ ಪ್ರದ್ಯುಮ್ನನನ್ನು ಹೆತ್ತದ್ದು ಪೂರ್ವ ದಿಕ್ಕಿನಲ್ಲಿ ತನ್ನ ಚೆಂದದ ಕಿರಣಗಳಿಂದ ಚಂದ್ರನು ಉದಿಸಿದಂತೆ ಇತ್ತು.

೪. ಇಲ್ಲಿ ರುಗ್ಮಿಣಿಯನ್ನು ಪೂರ್ವ ದಿಕ್ಕು ಎಂಬುದಾಗಿಯು ಪ್ರದ್ಯುಮ್ನನನ್ನು ಚಂದ್ರ ಎಂಬುದಾಗಿಯೂ ಕರೆಯಲಾಗಿದೆ.

## ಪ್ರದ್ಯುಮ್ನನು ಶ್ರೀಕೃಷ್ಣನ ಅಪೂರ್ವಪುತ್ರ

ಯಃ [೧]ಕರ್ಣೇ ನಿಜಚಿಹ್ನಮುನ್ನತಶರಾನ್ ದಂತೋಷ್ಠದೃಗ್ದೋಃಪದೇ
ಸ್ವಾಂಗಂ ಮಧ್ಯತನೌ [೨]ಭ್ರುವೋರ್ವರಧನುರ್ಮೌರ್ವೀಂ ಲಸತ್ಕುಂತಲೇ ।
[೩]ಮಾಲ್ಯೇ ಮಂತ್ರಿಣಮಾನನೇ ಚ ಸುಹೃದಂ[೪] ವಾಕ್ಯೇಽರ್ಪಯಿತ್ವಾ[೫] ಶುಕಂ[೬]
ತದ್ಗಾತ್ರಂ ರಚಯಾಂಬಭೂವ ಸ ಸುತಸ್ತಸ್ಯ ಸ್ಮರೋಽಭೂತ್ ಕಿಲ ॥ ೨೮ ॥

ಶ್ರೀಕೃಷ್ಣನ ಕಿವಿಗೆ ತನ್ನ ಲಾಂಛನವಾದ ಮಕರವನ್ನು ಸಮರ್ಪಿಸಿದ, ದಂತ, ತುಟಿ, ಎರಡು ಕಣ್ಣುಗಳು, ಎರಡು ತೋಳುಗಳಲ್ಲಿ ಹಾಗೂ ಎರಡು ಪಾದಗಳಲ್ಲಿ ತನ್ನ ಶ್ರೇಷ್ಠವಾದ ಬಾಣಗಳೆನ್ನಿಸಿದ ಮಲ್ಲಿಗೆ ಮೊದಲಾದವುಗಳನ್ನು ಅರ್ಪಿಸಿದ, ಮಧ್ಯದೇಹದಲ್ಲಿ ತನ್ನ ಶರೀರವನ್ನು ಒಪ್ಪಿಸಿದ, ಎರಡು ಹುಬ್ಬುಗಳಲ್ಲಿ ತನ್ನ ಶ್ರೇಷ್ಠ ಧನುಸ್ಸನ್ನು ಒಪ್ಪಿಸಿದ, ಹೊಳೆಯುವ ಮುಂಗುರುಳುಗಳಲ್ಲಿ ಮೌರ್ವಿಯನ್ನು ಇರಿಸಿದ, ವನಮಾಲೆಯಲ್ಲಿ ತನ್ನ ಮಂತ್ರಿಯಾದ ವಸಂತನನ್ನೂ, ಮುಖದಲ್ಲಿ ಮಿತ್ರನಾದ ಚಂದ್ರನನ್ನೂ, ಮಾತಿನಲ್ಲಿ ಗಿಳಿಯನ್ನೂ ಸಮರ್ಪಿಸಿದ ಮನ್ಮಥನೇ ಶ್ರೀಕೃಷ್ಣನಿಗೆ ಪುತ್ರನಾಗಿ ಜನಿಸಿದನಲ್ಲವೆ !

ವಿ: ೧. ಶ್ರೀಕೃಷ್ಣನ ಕಿವಿಗಳು ಮಕರಂದತಿವೆ, ದಂತ, ತುಟಿ ಕಣ್ಣು, ತೋಳುಗಳೂ ಹಾಗೂ ಪಾದಗಳು ಮಲ್ಲಿಗೆ, ಮಾವು, ಕನ್ನೈದಿಲೆ, ಕಮಲ ಹಾಗೂ ಅಶೋಕ ಎಂಬ ಪುಷ್ಪಗಳಂತಿವೆ[೭]; ಉದರವು ಇಲ್ಲವೇ ಇಲ್ಲ ಎನ್ನುವಷ್ಟು ಅತ್ಯಂತ ತೆಳುವಾಗಿದೆ, ಹುಬ್ಬುಗಳು ಧನುಸ್ಸಿನ ಆಕಾರದಲ್ಲಿವೆ; ಮುಂಗುರುಳುಗಳು [೮]ದುಂಬಿಗಳಂತಿವೆ. ವನಮಾಲೆಯು ವಸಂತನಂತಿದೆ. ಮುಖವು ಚಂದ್ರನಂತಿದೆ; ಮಾತು ಗಿಳಿಯಂತಿದೆ ಎಂಬುದು ಇಲ್ಲಿಯ ಮುಖ್ಯ ಭಾವ.

---

೧. ಮಕರಾಕಾರಕುಂಡಲಧಾರಿತ್ವಾತ್ ಶ್ರೀಕೃಷ್ಣಕರ್ಣಸ್ಯೇತಿ ಭಾವಃ । - ವ್ಯಾ.
೨. ಭ್ರೂಮಂಡಲಸ್ಯ ಧನುರಾಕಾರತ್ವಾದಿತಿ ಭಾವಃ । - ವ್ಯಾ.
೩. ವನಮಾಲಾಯಾಃ ನಾನಾಕುಸುಮಾಕರತ್ವಾದಿತಿ ಭಾವಃ । - ವ್ಯಾ.
೪. ಮುಖಸ್ಯ ಚಂದ್ರಾಕಾರತ್ವಾದಿತಿ ಭಾವಃ । - ವ್ಯಾ.
೫. ಅರ್ಪಯಿತ್ವಾ ದಂತಾದೀನಾಂ ಮಲ್ಲಿಕಾಕುಡ್ಮಲಾದಿಸದೃಶತ್ವಾದಿತಿ ಭಾವಃ । - ವ್ಯಾ.
೬. ಕೃಷ್ಣವಚಸಾಂ ಶುಕವಾಕ್ಯವನ್ಮನೋಹರತ್ವಾದಿತಿ ಭಾವಃ । - ವ್ಯಾ.
೭. ಅಶೋಕಮರವಿಂದಂ ಚ ಚೂತಂ ಚ ನವಮಲ್ಲಿಕಾ ।
ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ ॥
೮. ಕುಂತಲಾನಾಮನ್ಯೋನ್ಯಬದ್ಧಭೃಂಗಾಕಾರತ್ವಾದಿತಿ ಭಾವಃ । - ವ್ಯಾ.

೨. ಶ್ರೀಕೃಷ್ಣನಲ್ಲಿ ಈ ರೀತಿಯಾಗಿ ಮನ್ಮಥನ ವಿಶೇಷಗಳೆಲ್ಲ ಒಂದೆಡೆ ಸೇರಿರುವುದರಿಂದ ಮನ್ಮಥನೇ ಅಲ್ಲಿ ಮೂರ್ತಿಮತ್ತಾಗಿ ನೆಲೆಸಿದಂತಿದೆ; ಅಂತಹ ಮನ್ಮಥನು ಶ್ರೀಕೃಷ್ಣನಿಗೆ ಪುತ್ರನಾದ ಎಂಬುದು ಅದೆಂತು ಉಚಿತ?[೧] ಎಂದು ಭಾವ.

೩. ಇದರಲ್ಲಿ ಮನ್ಮಥನ ಸಕಲ ಪರಿಕರಗಳ ವರ್ಣನೆಯೊಂದಿಗೆ ಶ್ರೀಕೃಷ್ಣನ ಸರ್ವಾಂಗಗಳ ವರ್ಣನೆಯು ಜೊತೆಯಾಗಿಯೇ ಬಂದಿರುವುದರಿಂದ ಅಪೂರ್ವ ಚಮತ್ಕಾರ ಎನ್ನಿಸಿದೆ[೨].

## ಪ್ರದ್ಯುಮ್ನನಲ್ಲಿ ಪ್ರದ್ಯುಮ್ನನ ಆವೇಶ

[೩]ತಾರುಣ್ಯಲಾವಣ್ಯಸುವೀರ್ಯಧೈರ್ಯ-
ಕಾರುಣ್ಯಮುಖ್ಯೈರ್ದ್ರವಿಣೈಃ ಪ್ರಕೃಷ್ಟಃ।
ಪ್ರದ್ಯುಮ್ನನಾಮಾರ್ಥಮಸೌ ಕುಮಾರಃ
ಪ್ರದ್ಯುಮ್ನಮುಖ್ಯಾಂಶಯುತಃ[೪] ಪಿಪರ್ತಿ ॥ ೨೯ ॥

ತಾರುಣ್ಯ, ಲಾವಣ್ಯ, ಉತ್ತಮ ಸಾಮರ್ಥ್ಯ, ಧೈರ್ಯ, ಕಾರುಣ್ಯ ಮೊದಲಾದ ಸಂಪತ್ತಿನಿಂದ ತುಂಬಾ ಶ್ರೇಷ್ಠನೆನ್ನಿಸಿದ್ದ ಆ ಪ್ರದ್ಯುಮ್ನ ಎಂಬ ಹೆಸರಿನ ಕುಮಾರನು ಪ್ರದ್ಯುಮ್ನ ರೂಪದ ಶ್ರೀಹರಿಯ ಆವೇಶದಿಂದ ಕೂಡಿದವನಾಗಿ ಅದನ್ನು ಸಾರ್ಥಕಪಡಿಸಿದ.

ವಿ : ೧. ಶ್ರೀಕೃಷ್ಣಪುತ್ರನಿಗೆ ಪ್ರದ್ಯುಮ್ನ ಎಂದು ಹೆಸರಾಯಿತು ಎಂದರ್ಥ.

೨. ತಾರುಣ್ಯ ಮೊದಲಾದ ಸಕಲ ಗುಣಗಳಲ್ಲೂ ಆ ಪ್ರದ್ಯುಮ್ನನು, ಪ್ರದ್ಯುಮ್ನ ರೂಪದ ಶ್ರೀಹರಿಯ ಪುತ್ರ ಎನ್ನಿಸಿದ್ದು ಸಾರ್ಥಕವಾಗಿತ್ತು; ಎಂದರೆ, ಆ ಪ್ರದ್ಯುಮ್ನನಲ್ಲಿ ಶ್ರೀಹರಿಯ ವಾಸುದೇವಾದಿ ನಾಲ್ಕು ರೂಪಗಳಲ್ಲಿ ಪ್ರದ್ಯುಮ್ನ ಎಂಬ ರೂಪದ ಆವೇಶವಿದ್ದಿತು ಎಂದೂ ಭಾವ.

---

೧. ಧ್ವಜಶರಾದಿಸ್ವಸನ್ನಾಹಮುಪಾದಾನೀಕೃತ್ಯ ಶ್ರೀಕೃಷ್ಣಶರೀರಂ ಕೃತವತೋ ಮದನಸ್ಯ ಶ್ರೀಕೃಷ್ಣಪುತ್ರತ್ವಮನುಚಿತಮ್। - ವ್ಯಾ

೨. ಕಾಮಸರ್ವಸನ್ನಾಹವರ್ಣನಸ್ಯ ಶ್ರೀಕೃಷ್ಣಸರ್ವಾಂಗವರ್ಣನಸ್ಯ ಚ ಯುಗಪದೇವ ಕೃತತ್ವಾದತಿ (ಪಾ. ಸೂ.೨/೪/೨) ಚಮತ್ಕಾರೋಽಯಮ್। -ವ್ಯಾ.

೩. ತಾರುಣ್ಯಾದಿಪ್ರಕೃಷ್ಟದ್ರವ್ಯೋಪೇತತ್ವಾತ್ ಪ್ರದ್ಯುಮ್ನಾಂಶಯುಕ್ತತ್ವಾಚ್ಚ ಅಸ್ಯ ಪ್ರದ್ಯುಮ್ನನಾಮ ಅನ್ವರ್ಥಮಿತ್ಯರ್ಥಃ। - ವ್ಯಾ.

೪. ಅಧತ್ತ ಪುತ್ರಮುತ್ತಮಂ ಮನೋಭವಂ ಪುರಾತನಮ್।
ಚತುಸ್ತನೋರ್ಹರೇಃ ಪ್ರಭೋಸ್ತೃತೀಯರೂಪಸಂಯುತಃ॥
ತತಸ್ತದಾಹ್ವಯೋಽಭವತ್ ಸ ರುಗ್ಮಿಣೀಸುತೋ ಬಲೀ॥ -ಮ.ಭಾ.ತಾ.ನಿ.(೧೭/೧೮೧,೧೮೨)
ಪ್ರದ್ಯುಮ್ನೇ ಚಾನಿರುದ್ಧೇ ಚ ಬಲದೇವೇ ಚ ಕೇಶವಃ।
ಸನ್ನಿಧಾನಂ ವಿಶೇಷೇಣ ಕರೋತಿ ಜಗತಾಂ ಪತಿಃ॥ -ಭಾ.ತಾತ್ಪರ್ಯ(೧೦/೨೮/೨೨))

### ಪ್ರದ್ಯುಮ್ನಪುತ್ರನಾದ ಅನಿರುದ್ಧ

ಸ ರುಗ್ಮವತ್ಯಾಂ ಕಿಲ ರುಗ್ಮಿಪುತ್ರ್ಯಾಂ
ಹರೇಃ ಸುತೋಽಜೀಜನದಾತ್ಮಜಾತಮ್ ।
ಅಸೂತ ತಂ ಯಾಽಮಲಹೇಮಕಲ್ಪ-
ಮಸೌ ಸ್ವನಾಮೋಚಿತಮೇವ ಬಭ್ರೇ ॥ ೩೦ ॥

ಶ್ರೀಕೃಷ್ಣಪುತ್ರನಾದ ಆ ಪ್ರದ್ಯುಮ್ನನು ರುಗ್ಮವತೀ ಎಂಬ ರುಗ್ಮಿಯ ಪುತ್ರಿಯಲ್ಲಿ ಮಗನೊಬ್ಬನನ್ನು ಪಡೆದನು. ಅಂತಹ ಅಪ್ಪಟ ಚಿನ್ನದಂತಿದ್ದ ಆ ಮಗುವನ್ನು ಹೆತ್ತ ರುಗ್ಮವತಿಯು, ರುಗ್ಮವತೀ ಎಂಬ ತನ್ನ ಹೆಸರನ್ನು ಸಾರ್ಥಕಮಾಡಿಕೊಂಡಳು.

ವಿ: ೧. ಪ್ರದ್ಯುಮ್ನನು ರುಗ್ಮವತಿಯಲ್ಲಿ ಒಬ್ಬ ಪುತ್ರನನ್ನು ಪಡೆದನು ಎಂದರ್ಥ.

೨. ರುಗ್ಮವತೀ ಎಂಬುವವಳು ರುಗ್ಮಿಣಿಯ ಅಣ್ಣನಾದ ರುಗ್ಮೀ ಎಂಬುವವನ ಮಗಳು. ಅಪ್ಪಟ ಚಿನ್ನದ ವರ್ಣದವಳಾಗಿದ್ದ ಅವಳಿಗೆ ರುಗ್ಮವತೀ ಎಂಬ ಹೆಸರು ಸಾರ್ಥಕವಾಗಿತ್ತು ಎಂದು ಭಾವ.

### ಅನಿರುದ್ಧನಲ್ಲಿ ಅನಿರುದ್ಧನ ಆವೇಶ

ಸಪತ್ನಸೈನ್ಯೈರನಿರುದ್ಧಮಾಜೌ
ಯಮೂಮನಂತಿ ಹ್ಯನಿರುದ್ಧಸಂಜ್ಞಮ್ ।
ಸದಾಽಽಶ್ರಿತಾಭೀಪ್ಸಿತವಿತ್ತರಾಶಿ-
ಪ್ರದಾನಕಾಲೇಽಪ್ಯನಿರುದ್ಧಮನ್ಯೈಃ ॥ ೩೧ ॥

ಯುದ್ಧದಲ್ಲಿ ಶತ್ರುಸೇನೆಗಳಿಂದ ತಡೆಯಲು ಅಸಾಧ್ಯವೆನ್ನಿಸಿದ್ದ ಅವನು ಅನಿರುದ್ಧ ಎಂಬ ಹೆಸರನ್ನು ಹೊಂದಿದ; ಸದಾ ತನ್ನನ್ನು ಆಶ್ರಯಿಸಿದವರಿಗೆ ಇಷ್ಟವೆನ್ನಿಸಿದ ಸಂಪತ್ತಿನ ರಾಶಿಯನ್ನು ಕೊಡುವ ಕಾರ್ಯದಲ್ಲಿ ಸಹ ಅವನಿಗೆ ಇತರ ಯಾರಿಂದಲೂ ತಡೆಯೇ ಇರಲಿಲ್ಲ.

ವಿ: ೧. ಪ್ರದ್ಯುಮ್ನ ಪುತ್ರನಿಗೆ ಅನಿರುದ್ಧ ಎಂದು ಹೆಸರು ಎಂದು ಭಾವ.

೨. ಆ ಅನಿರುದ್ಧನು ಶತ್ರುಸೇನೆಗಳಿಂದ ಎಂದೂ ನಿರುದ್ಧನಾಗುತ್ತಿರಲಿಲ್ಲ. ಎಂದರೆ, ಸೋತು ವಶವಾಗುತ್ತಿರಲಿಲ್ಲ; ಅವನು ತನ್ನ ಸೇವಕ ವರ್ಗಕ್ಕೆ ಧಾರೆ ಎರೆಯುತ್ತಿದ್ದ ಸಂಪತ್ತಿಗೆ ಯಾವುದೇ ಅಡೆತಡೆಗಳನ್ನೂ ಹೊಂದಿರಲಿಲ್ಲ; ಎಂದರೆ, ಅವನ ದಾನ-ಧರ್ಮ ಕಾರ್ಯ, ಅವನ ಪರಿವಾರಕ್ಕೆ ಸಂಪೂರ್ಣವಾಗಿ ತೃಪ್ತಿಯನ್ನು ನೀಡಿದ್ದಿತು ಎಂದರ್ಥ.

### ಅನಿರುದ್ಧಪುತ್ರನಾದ ವಜ್ರನ ಜನನ

ಉಷಾಭಿಧಾಯಾಂ ಸ ಚ ವಜ್ರಸಂಜ್ಞ-
ಮಜೀಜನದ್ವೈರಿನಗೌಘವಜ್ರಮ್ ।
ತಮಃಸಮುನ್ಮೂಲನಮುಜ್ಜ್ವಲಂತ-
ಮುಷಸ್ಯಶೀತಾಂಶುಮಿವೋದಯಾದ್ರಿಃ ॥ ೩೨ ॥

ಉಷೆ ಎಂಬ ಹೆಸರಿನ ತನ್ನ ಪತ್ನಿಯಲ್ಲಿ ಆ ಅನಿರುದ್ಧನು ವೈರಿಗಳೆಂಬ ಪರ್ವತಗಳಿಗೆ ವಜ್ರಾಯುಧದಂತಿದ್ದ ವಜ್ರ ಎಂಬ ಹೆಸರಿನ ಮಗನನ್ನು ಪಡೆದನು; ಕತ್ತಲೆಯನ್ನು ನಿರ್ಮೂಲಗೊಳಿಸುವ, ಉಜ್ವಲವಾಗಿದ್ದ ಸೂರ್ಯನನ್ನು ಉಷಃಕಾಲದಲ್ಲಿ ಉದಯಪರ್ವತವು ಹೇಗೆ ವ್ಯಕ್ತಗೊಳಿಸುವುದೋ ಹಾಗೆ.

ವಿ : ೧.ಉದಯಾದ್ರಿಯಲ್ಲಿ ಸೂರ್ಯ ಉದಿಸುವಂತೆ, ಉಷೆಯ ಪುತ್ರನಾಗಿ ವಜ್ರ ಎಂಬುವನು ಜನಿಸಿದ ಎಂದರ್ಥ.

೨. ಅನಿರುದ್ಧನಿಗೆ ಅನಿರುದ್ಧ ಎಂಬ ಹೆಸರು ಸಾರ್ಥಕವಾಗಿದ್ದಂತೆ, ವಜ್ರ ಎಂಬ ಅನಿರುದ್ಧ ಪುತ್ರನಿಗೂ ವಜ್ರ ಎಂಬ ಹೆಸರು ಸಾರ್ಥಕವಾಯಿತು ಎಂದರ್ಥ.

೩. ಅನಿರುದ್ಧನ ಪತ್ನಿಗೆ ಉಷೆ ಎಂದು ಹೆಸರು. ಅವಳು ಬಾಣಾಸುರ ಪುತ್ರಿ; ಅವಳೊಂದಿಗೆ ವಿವಾಹವಾದ ಅನಿರುದ್ಧನಿಗೆ ವಜ್ರ ಎಂಬ ಸಾರ್ಥಕ ಹೆಸರಿನ ಪುತ್ರ ಜನಿಸಿದ. ಅವನು ಶ್ರೀಕೃಷ್ಣನ ಮರಿಮೊಮ್ಮಗ.

### ದ್ವಾರಕೆಯ ವರ್ಣನೆ

ಯಃ ಪೃಥ್ವೀಪತಿಮೌಲಿರತ್ನಘಟಿತಶ್ರೀಪಾದಪೀಠಃ[೧] ಕ್ಷಿತೌ
ಯಃ ಸ್ವರ್ಗೀಶ್ವರಫಾಲಮಂಡನಕರಶ್ರೀಪಾದರೇಣುರ್ದಿವಿ ।
ಯಃ ಶ್ರೇಯಃಪಥಪಾಂಥಸಜ್ಜನಮನಃಪಾಥೇಯಗೇಯೋದಯ-
ಸ್ತಸ್ಯ ದ್ವಾರವತೀ ಪುರೀ ಪ್ರಿಯತಮಾ ಸೇಯಂ ಬಭೂವಾಸಮಾ ॥ ೩೩ ॥

ಶ್ರೀಕೃಷ್ಣನು ಭೂಮಿಯಲ್ಲಿ ಭೂಪತಿಗಳಾದ ಅರಸರ ಕಿರೀಟರತ್ನಗಳಿಂದ ಘಟ್ಟಿಸಲ್ಪಡುವ ಮಂಗಳಕರವಾದ ಪಾದಪೀಠನು; ಅವನು ಸ್ವರ್ಗದ ಒಡೆಯರಾದ ದೇವತೆಗಳ ಲಲಾಟಕ್ಕೆ ಅಲಂಕಾರ ನೀಡುವಂತಹ ಮಂಗಳಕರವಾದ ಪಾದ ಧೂಳಿಯನ್ನು ಹೊಂದಿರುವನು; ಅವನು ಶ್ರೇಯಸ್ಸಿನ ಹಾದಿ ಹಿಡಿದ ಸಜ್ಜನರ ಮನಸ್ಸಿಗೆ ಬುತ್ತಿ ಎಂಬಂತೆ ಕೊಂಡಾಡಲ್ಪಡುವ

---

೧. ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್ ।
ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ ॥ - ದ್ವಾದಶಸ್ತೋತ್ರ (೧/೨)

ಅಭ್ಯುದಯವನ್ನು ಹೊಂದಿರುವನು; ಅಂತಹ ಶ್ರೀಕೃಷ್ಣನಿಗೆ, ಸಾಟಿಯಿಲ್ಲದ ಪಟ್ಟಣವಾದ ದ್ವಾರಕೆಯು ಅತ್ಯಂತ ಪ್ರಿಯವೆನ್ನಿಸಿತು.

ವಿ : ೧. ಶ್ರೀಕೃಷ್ಣನ ಮಹಿಮೆಯು ಲೋಕತ್ರಯಗಳಲ್ಲೂ ಸಹ ಮಾನ್ಯವಾದ ಹಿರಿಮೆಯನ್ನು ಪಡೆದಿದೆ ಎಂಬ ವರ್ಣನೆ ಇದರಲ್ಲಿ ಬಂದಿದೆ.

೨. ಭೂಲೋಕದಲ್ಲಿನ ಸಕಲ ರಾಜರು ಶ್ರೀಕೃಷ್ಣನ ಪಾದಪೀಠಕ್ಕೆ ತಮ್ಮ ಕಿರೀಟಮಣಿಗಳನ್ನು ಘಟ್ಟಿಸಿ ವಂದಿಸುವರು. ಸ್ವರ್ಗದಲ್ಲಿನ ಸಮಸ್ತ ದೇವತೆಗಳು ಇವನ ಪಾದಧೂಳಿಯನ್ನು ಶಿರಸಾ ಧರಿಸುವರು. ಅವನ ಹಿರಿಮೆಯಂತೂ ಮುಕ್ತಿಮಾರ್ಗವನ್ನು ಹಿಡಿದ ಸಜ್ಜನರ ಮನಸ್ಸಿಗೆ ಬುತ್ತಿಯಂತೆ ಆಸರೆಯಾಗಿದೆ. ಅವನ ನೆಲೆಯಾದ ದ್ವಾರಕೆಯಂತೂ ಭೂಮಿಯಲ್ಲೇ ಅದ್ವಿತೀಯವೆನ್ನಿಸಿರುವ ಶ್ರೇಷ್ಠ ಪಟ್ಟಣ. ಹೀಗೆ ಶ್ರೀಕೃಷ್ಣನ ಹಿರಿಮೆಯು ಅತ್ಯಗಾಧವಾದುದು ಎಂದು ಭಾವ; ಪಾಥೇಯ – ಬುತ್ತಿ.

### ದ್ವಾರಕೆಗೆ ಶೋಭೆ ನೀಡಿದ ಶ್ರೀಕೃಷ್ಣ

ಮಧ್ಯೇಸಮುದ್ರಂ ಮಣಿಮಂಜುಮೌಲಿ-
ವಿದ್ಯೋತಿತಾಶಾದಶಕಃ ಸ ದೇವಃ ।
[೧]ಅದ್ಯಾಪಿ ಭೈಷ್ಮ್ಯಾ ಸಹ ಭಾಸಯಂಸ್ತಾ-
ಮಾದ್ಯಃ ಪುಮಾನಾರ್ಯವೃತಃ ಕಿಲಾಸ್ತೇ ॥೩೪॥

ತನ್ನ ಮನೋಹರವಾದ ಕಿರೀಟ ಮಣಿಗಳಿಂದ ಹತ್ತು ದಿಕ್ಕುಗಳನ್ನು ಬೆಳಗುವ ಶ್ರೀಕೃಷ್ಣನು ಋಷಿಮುನಿಗಳು ಕೊಂಡಾಡುವ ಆದಿಪುರುಷನಾದ ಶ್ರೀಹರಿ; ಅವನು ಈಗಲೂ ಸಮುದ್ರ ಮಧ್ಯದಲ್ಲಿ ಅದಕ್ಕೆ ಶೋಭೆಯನ್ನು ನೀಡುತ್ತಾ ರುಗ್ಮಿಣಿಯೊಂದಿಗೆ ನೆಲೆಸಿರುವನು.

ವಿ. : ೧. ಶ್ರೀಕೃಷ್ಣರುಗ್ಮಿಣಿಯರು ಈಗಲೂ ದ್ವಾರಾವತಿಯಲ್ಲಿ ಭಕ್ತಾನುಗ್ರಹಕ್ಕಾಗಿ ನೆಲೆಸಿರುವರು ಎಂಬ ವಿಶೇಷಾಂಶ ಈ ಶ್ಲೋಕದಲ್ಲಿದೆ.

೨. ಶ್ರೀಕೃಷ್ಣನ ಕಿರೀಟಮಣಿಗಳ ಕಾಂತಿ ಹತ್ತು ದಿಕ್ಕುಗಳಿಗೂ ಬೆಳಗುವಷ್ಟು ಉಜ್ವಲವಾದುದು. ಅವನಂತೂ ಋಷಿಮುನಿಗಳು ಕೊಂಡಾಡುವ ಆದಿಪುರುಷನಾದ ಸಾಕ್ಷಾತ್ ಶ್ರೀಹರಿ. ಅವನು ಈಗಲೂ ಸಹ ದ್ವಾರಕೆಯಲ್ಲಿ ರುಗ್ಮಿಣೀ ಸಮೇತನಾಗಿ ನೆಲೆಸಿರುವನು ಎಂಬ ಇಲ್ಲಿಯ ವಿವರಗಳು ಅವನ ಸರ್ವೋತ್ತಮತ್ವಕ್ಕೆ ನಿದರ್ಶನವೆನ್ನಿಸುವಂತಹವು.

೩. ಶ್ರೀಕೃಷ್ಣರುಗ್ಮಿಣಿಯರು ಅನಾದಿನಿತ್ಯರಾದ ಶ್ರೀಲಕ್ಷ್ಮೀನಾರಾಯಣರು ಎಂಬುದು ಇಲ್ಲಿಯ ಒಟ್ಟು ಭಾವ.

---

೧. ದ್ವಾರವತ್ಯಾಂ ಅದ್ಯಾಪಿ ಶ್ರೀಕೃಷ್ಣೋ ರುಗ್ಮಿಣ್ಯಾ ಸಹ ತಿಷ್ಠತೀತಿ ಪೌರಾಣಿಕೀ ಕಥಾ । – ವ್ಯಾ.

### ದ್ವಾರಕೆಯ ಪ್ರಾರ್ಥನೆ

ಕುಶಸ್ಥಲೀ[೧] ಸಾ ಕುಶಲೈಕಗಮ್ಯಾ
ಪ್ರಶಸ್ತಕೀರ್ತೇಃ ಪ್ರಥಿತಾ ಪುರೀಯಮ್ ।
ಶರೀರಿಣಾಂ ಸರ್ವಪುಮರ್ಥಸಾರ್ಥ-
ಕರೀ[೨] ನರೀನರ್ತು ಮದಂತರಂಗೇ ॥ ೩೫ ॥

ಯೋಗಿಗಳು ಮಾತ್ರವೇ ಹೊಂದಲು ಸಾಧ್ಯವಾಗುವಂತಹ ಆ ದ್ವಾರಕೆಯು ಪ್ರಶಸ್ತವಾದ ಕೀರ್ತಿಯನ್ನು ಹೊಂದಿದ ಶ್ರೀಕೃಷ್ಣನ ಪಟ್ಟಣ; ದೇಹಿಗಳಿಗೆ ಸಕಲ ಪುರುಷಾರ್ಥಗಳನ್ನು ಸಹ ಒಟ್ಟಾಗಿ ನೀಡುವ ಅದು ನನ್ನ ಮನಸ್ಸಿನಲ್ಲಿ ನರ್ತಿಸಲಿ.

ವಿ : ಶ್ರೀಕೃಷ್ಣನು ನೆಲೆಸಿರುವ ದ್ವಾರಕೆಯ[೩] ಚಿಂತನೆಯು ಸಹ ಅತ್ಯಂತ ಸಾರ್ಥಕ; ಸಕಲ ಪುರುಷಾರ್ಥದಾಯಕ ಎಂದು ಭಾವ.

### ದ್ವಾರಕೆಯಲ್ಲಿ ರಾರಾಜಿಸಿದ ಶ್ರೀಕೃಷ್ಣ

[೪]ವಂದಾರುದ್ವಿಜವರ್ಯವಾಂಛಿತನಿಜಧ್ಯಾನಃ ಕ್ಷಮಾಶಂಕರಃ
ಸ್ವರ್ವಾಗ್ಮಿವ್ರಜವರ್ಣ್ಯದಿಗ್ವಿತತಿಕೃತ್ಕರ್ಮೌಘರಾಜತ್ಕರೀ ।
ರುದ್ರಾಣೀಪತಿಮಾನ್ಯರಾಜಿತಗತಿಃ ಸತ್ಯಾಸಹಾಯಃ ಸತಾಂ
ತಾಂ ರೇಮೇ ವರದಃ ಸ್ವಬಂಧುರುಚಿರಾಂ ರಕ್ಷನ್ ಪುರೀಮದ್ಭುತಾಮ್[೫] ॥೩೬॥

---

೧. ತ್ರಿವಿಕ್ರಮೋ ವಿಜಯತೇ ತ್ರಯೀ ವಿಖ್ಯಾತವಿಕ್ರಮಃ ।
ಯಃ ಕುಶಂ ದಮಯಿತ್ವೇಮಾಂ ಚಕ್ರೇ ವಿಪ್ರಕುಶಸ್ಥಲೀಮ್ ॥ -ತೀರ್ಥಪ್ರಬಂಧ(೧/೯೧)

೨. ಸದಾ ಮದ್ಧ್ಯಾನಗೋಚರಾऽಸ್ತ್ವಿತ್ಯರ್ಥಃ । - ವ್ಯಾ.

೩. ನಿತ್ಯಂ ಸನ್ನಿಹಿತಸ್ತತ್ರ ಭಗವಾನ್ ಮಧುಸೂದನಃ । - ಭಾಗವತ. (೧೧/೩೧/೨೪)

೪. ವಂದಾರುದ್ವಿಜಯವರ್ಯೇತಿ । ವಂದಾರುದ್ವಿಜರ್ಯೈಃ ವಂದನಶೀಲಬ್ರಾಹ್ಮಣಶ್ರೇಷ್ಠೈಃ ವಾಂಛಿತಃ ನಿಜಧ್ಯಾನೋ ಯಸ್ಯ ಸ ತಥೋಕ್ತಃ । ಕ್ಷಮಾಯಾಃ ಭೂಮೇಃ ಶಂ ಸುಖಂ ಕರೋತೀತಿ ಕ್ಷಮಾಶಂಕರಃ । ಸ್ವಃ ಸ್ವರ್ಗೇ ಯೇ ವಾಗ್ಮಿನೋ ಬೃಹಸ್ಪತ್ಯಾದಯಃ ತೇಷಾಂ ವ್ರಜೇನ ಸಮೂಹೇನ ವರ್ಣ್ಯಾನಿ ದಿಕ್ಷು ವಿತತಿಂ ವಿಸ್ತಾರಂ ಕುರ್ವಂತೀತಿ ದಿಗ್ವಿತತಿಕೃಂತಿ । ದಿಕ್ಷು ವಿಸ್ತೃತಾನೀತ್ಯರ್ಥಃ । ತಾನಿ ಚ ತಾನಿ ಕರ್ಮಾಣಿ ಚ ತೇಷಾಮ್ ಓಘೈಃ ಸಮೂಹೈಃ ರಾಜತ್ಕರೀ ಅಸ್ಯಾಸ್ತೀತಿ ಸ್ವರ್ವಾಗ್ಮಿವ್ರಜವರ್ಣ್ಯದಿಗ್ವಿತತಿಕೃತ್ಕರ್ಮೌಘರಾಜತ್ಕರೀ । ರುದ್ರಾಣೀಪತಿನಾ ಪಾರ್ವತೀಪತಿನಾ ಶಿವೇನ । ಮಾನ್ಯಾ ಮಾನಿತಾ ರಾಜಿತಗತಿಃ ಶೋಭಿತಗತಿಃ । ಕೈಲಾಸಯಾತ್ರಾಖ್ಯಾ ಯಸ್ಯ ಸ ತಥೋಕ್ತಃ । ಸತ್ಯಾಸಹಾಯಃ ಸತ್ಯಭಾಮಾ ಸಹಾಯೋ ಯಸ್ಯ ಸ ತಥೋಕ್ತಃ । ಸತಾಂ ವರದಃ ಶ್ರೀಕೃಷ್ಣಃ ಸ್ವಬಂಧುಭಿಃ ಯಾದವೈಃ ಸಹ ರುಚಿರಾಮ್ ಅದ್ಭುತಾಮ್ ಆಶ್ಚರ್ಯಭೂತಾಂ ತಾಂ ಪುರೀಂ ರಕ್ಷನ್ ರೇಮೇ । - ವ್ಯಾ.

೫. ಚಕ್ರಬಂಧೋऽಯಂ ಶ್ಲೋಕಃ । ಅಸ್ಮಿನ್ ಶ್ಲೋಕೇ ವಾದಿರಾಜಕೃತರುಗ್ಮಿಣೇಶವಿಜಯ ಇತಿ ಕವಿನಾಮ ಕಾವ್ಯನಾಮ ಚಾಸ್ತೀತಿ ದ್ರಷ್ಟವ್ಯಮ್ । ಚಕ್ರಬಂಧೋದ್ಧಾರಪ್ರಕಾರಸ್ತು- ಮಂಡಲಾಕಾರೇಣ ಏಕಾಂ ರೇಖಾಂ ಲಿಖಿತ್ವಾ ಮಧ್ಯೇ ಪಶ್ಚಿಮಭಾಗಸ್ಥಿತರೇಖಾಮಾರಭ್ಯ ಪೂರ್ವಭಾಗಸ್ಥರೇಖಾಪರ್ಯಂತಂ ಪೂರ್ವಾಯಾಮಂ ರೇಖಾದ್ವಯಂ

ಶ್ರೀಕೃಷ್ಣನು ವಂದನಶೀಲರಾದ ದ್ವಿಜಶ್ರೇಷ್ಠರು ಬಯಸುವ ನಿಜಧ್ಯಾನವನ್ನು ಹೊಂದಿದವನು; ಭೂಮಿಗೆ ಸುಖವನ್ನು ನೀಡವವನು; ಸ್ವರ್ಗಲೋಕದ ವಾಗ್ಮಿಗಳೆನ್ನಿಸಿದ ಬೃಹಸ್ಪತಿ ಮೊದಲಾದವರ ತಂಡಗಳು ವರ್ಣಿಸುವ, ದಿಕ್ಕುಗಳಲ್ಲಿ ವ್ಯಾಪಿಸಿದಂತಹ ಕರ್ಮಗಳ ಸಾಲಿನ ರೂಪದ ದಿಗ್ಗಜಗಳಿಂದ ಶೋಭಿಸುವಂತಹವನು; ಪಾರ್ವತೀಪತಿಯಾದ ಶಿವ ಮೊದಲಾದವರಿಂದ ಆದರಿಸಲ್ಪಡುವಂತಹ ಶೋಭಾಯಮಾನವಾದ ಗಮನವನ್ನು ಹೊಂದಿದವನು; ಸತ್ಯಭಾಮಾದೇವಿಗೆ ಪತಿಯಾದವನು; ಸಕಲರಿಗೂ ವರ ನೀಡುವವನು; ಸಜ್ಜನರಿಗೆ ಅವನು ಸದಾ ನೆರವು ನೀಡುವವನು; ಅಂತಹ ಅವನು ತನ್ನ ಬಂಧುಗಳಿಂದ ಮನೋಹರವೆನ್ನಿಸುವ ಆ ಅದ್ಭುತವಾದ ದ್ವಾರಕಾಪುರಿಯನ್ನು ಪಾಲಿಸುತ್ತಾ ವಿಹರಿಸಿದನು.

ವಿ : ೧. ಶ್ರೀಕೃಷ್ಣನ ಧ್ಯಾನ ವಂದಿಸುವ ದ್ವಿಜಶ್ರೇಷ್ಠರಿಗೆ ಅತ್ಯಂತ ಪ್ರಿಯವಾದುದು. ಅವನ ಕೀರ್ತಿಯು ಸಕಲ ದಿಕ್ಕುಗಳಲ್ಲೂ ವ್ಯಾಪಿಸಲ್ಪಟ್ಟಿದ್ದು ಅದನ್ನು ಸ್ವರ್ಗಲೋಕದ ಬೃಹಸ್ಪತ್ಯಾ-ಚಾರ್ಯರಂತಹ ವಾಚಸ್ಪತಿಗಳೂ ಸಹ ಕೊಂಡಾಡುವರು. ಅವನು ಮಾಡಿದ ಕೈಲಾಸಯಾತ್ರೆ ಮೊದಲಾದ ಕಾರ್ಯಗಳು ಶಿವಾದಿ ದೇವತೆಗಳೂ ಕೊಂಡಾಡುವಂತಹವುಗಳು. ಅವನು ಸದಾ ಸಜ್ಜನರಿಗೆ ಅನುಗ್ರಹಿಸುವವನು. ಸಾಕ್ಷಾತ್ ಮಹಾಲಕ್ಷ್ಮಿಯಾದ ಸತ್ಯಭಾಮೆ ಅವನ ಪತ್ನಿ. ಅವನು ಮನೋಹರವಾದ ದ್ವಾರಕೆಯನ್ನು ಸದಾ ಪಾಲಿಸುತ್ತಲಿರುವನು; ರುದ್ರಾಣೀ – ಪಾರ್ವತಿ.

೨. ರುಗ್ಮಿಣೀಶವಿಜಯವೆಂಬ ತಮ್ಮ ಕೃತಿಯನ್ನು ಈ ಪದ್ಯದ ಮೂಲಕ ಶ್ರೀವಾದಿರಾಜ-ಸ್ವಾಮಿಗಳು ಉಪಸಂಹರಿಸಿರುವರು.

---

ಮಧ್ಯೇ ಯಥಾ ವೀಥೀ ಭವತಿ ತಥಾ ಲಿಖೇತ್ । ತಥೋತ್ತರಭಾಗಸ್ಥಿತರೇಖಾಮಾರಭ್ಯ ದಕ್ಷಿಣಾಯಾಮಂ ರೇಖಾದ್ವಯಂ ದಕ್ಷಿಣಭಾಗಾಸ್ಥಿತರೇಖಾಪರ್ಯಂತಂ ಮಧ್ಯೇ ಯಥಾ ವೀಥೀ ಭವತಿ ತಥಾ ಲಿಖೇತ್ । ತಥಾ ವಾಯವ್ಯದಿಗ್ಭಾಗಸ್ಥಿತರೇಖಾಮಾರಭ್ಯ ಆಗ್ನೇಯದಿಗ್ಭಾಗಸ್ಥಿತರೇಖಾಪರ್ಯಂತಂ ದೀರ್ಘಾಕಾರೇಣ ರೇಖಾದ್ವಯಂ ಪೂರ್ವವಲ್ಲಿಖೇತ್ । ಏವಂ ವೀಥೀತ್ರಯಲೇಖನೇ ಷಟ್ಕೋಣಚಕ್ರಾಕಾರತಾ ಭವತಿ । ತತ್ರ ಏಕೈಕಪಾದಸ್ಥಿತಾಷ್ಟಾದಶಾಕ್ಷರಾಣಾಂ ವೀಥೀತ್ರಯಸ್ಯಾದಾವಂತೇ ಚ ಅಷ್ಟಾದಶಾಕ್ಷರಸ್ಥಾನಾನಿ ಯಥಾ ಭವಂತಿ ತಥಾ ಪರಿತಃ ಪುನರಪಿ ರೇಖಾಷ್ಟಕಂ ಲಿಖೇತ್ । ಪಾದತ್ರಯಮಧ್ಯಸ್ಥಿತೈಕವರ್ಣಸ್ಯ ಮಧ್ಯೇ ಏಕಮೇವ ಸ್ಥಾನಂ ಕಲ್ಪಯೇತ್ । ಅಂತ್ಯಪಾದಸ್ಥಿತೈಕೋನವಿಂಶತ್ಯಕ್ಷರೇಷು ಆದ್ಯಾಕ್ಷರಂ ಪುನರ್ವರ್ಣದ್ವಯಮಧ್ಯಸ್ಥಿತಪಂಚಾಕ್ಷರಾಣಿ ಚ ವಿಹಾಯ ದ್ವೇ ದ್ವೇ ಅಕ್ಷರೇ ವೀಥೀತ್ರಯಮಧ್ಯಸ್ಥಿತಷಟ್ಕೋಣೇಷು ಲಿಖೇತ್ । ಉರ್ವರಿತಾನಿ ಷಡಕ್ಷರಾಣಿ ತು ಪಾದತ್ರಯಾದ್ಯಂತಸ್ಥಷಡಕ್ಷರಾತ್ಮಕತ್ವಾತ್ ನ ಪೃಥಕ್ ಲಿಖೇತ್ । ಏವಂ ಚಕ್ರಬಂಧೇ ಶ್ಲೋಕಪಾದ-ಚತುಷ್ಟಯಾಕ್ಷರಾಣಾಂ ಲೇಖನೇ ಕೃತೇ ಸತಿ ವೀಥೀತ್ರಯಸ್ಥಿತಪಾದತ್ರಯಾದಿಭಾಗಸ್ಥವರ್ಣತ್ರಯಾತ್ ತೃತೀ-ಯೇಷು ಸ್ಥಾನತ್ರಯೇಷು ವೀಥೀತ್ರಯಸ್ಥಪಾದತ್ರಯಾಂತಿಮವರ್ಣತ್ರಯಾತ್ ಪೂರ್ವಭಾಗಸ್ಥಿತಸ್ಥಾನತ್ರಿತಯೇನ ರುಗ್ಮಿಣೀಶವಿಜಯ ಇತಿ ಕಾವ್ಯನಾಮ ಭವತಿ । ಪೂರ್ವವತ್ ಪಾದತ್ರಯಾದಿ-ಭಾಗಸ್ಥಾಷ್ಟಮಸ್ಥಾನತ್ರಿಕೇ ಚರಮಭಾಗಸ್ಥಿತಾಷ್ಟಮಸ್ಥಾನತ್ರಿಕೇ ಚ ವಾದಿರಾಜಕೃತಿರಿತಿ ಕವಿನಾಮ ಚ ಭವತಿ । ಸ್ಥಾನಪಂಚಕೇ ವರ್ಣದ್ವಯಂ ದ್ವೇಧಾ ಯಥಾ ಆಯಾತಿ ಮಧ್ಯಸ್ಥಾನೇ ಅಂತಿಮಸ್ಥಾನೇ ಚ ವರ್ಣದ್ವಯಂ ದ್ವೇಧಾ ಯಥಾ ಆಯಾತಿ ದ್ವಾದ-ಶಸ್ಥಾನೇಷು ಕಾವ್ಯನಾಮ ಕವಿನಾಮ ಚ ಯಥಾ ಆಯಾತಿ ತಥಾ ಪ್ರಾಗೇವಾಲೋಚ್ಯ ಪದ್ಯರಚನಾ ಕರ್ತವ್ಯಾ । ಅತಃ ಕವೇರಿದಂ ಮಹತ್ಕೌಶಲಮ್ । – ವ್ಯಾ.

೩. ಈ ಪದ್ಯದಲ್ಲಿ ಚಕ್ರಬಂಧ ಎಂಬ ಕಾವ್ಯಬಂಧವಿದ್ದು ಅದರಲ್ಲಿ ಇದು "ವಾದಿರಾಜಕೃತ ರುಗ್ಮಿಣೀಶವಿಜಯ" ಎಂಬುದಾಗಿ ಕವಿ ಹಾಗೂ ಕಾವ್ಯಗಳ ಹೆಸರು ಘಟಿತವಾಗಿವೆ.

೪. ಈ ಚಕ್ರಬಂಧವನ್ನು ಪರಿಶಿಷ್ಟ-೨ (ಪು. ೯೩೬) ರಲ್ಲಿ ಕೊಡಲಾಗಿದೆ.

## ದ್ವಾರಕೆಯಂತಹ ರುಗ್ಮಿಣೀಶವಿಜಯ

[೧]ಕೃಷ್ಣಸ್ಯೋದಯವರ್ಣನೈಃ [೨]ಸುಚರಿತಸ್ತೋಮಸ್ತವೈಃ ಸೂಕ್ತಿಭಿಃ
ಸುಶ್ಲೋಕೈಃ ಸುಭಗಾ ರಸೈಶ್ಚ ವಿವಿಧೈಃ ಸ್ವಾನಂದಸರ್ಗೈರ್ವೃತಾ ।
ದುಷ್ಪ್ರಾಗಮ್ಯನಿಜಾರ್ಥತೋಷಿತಖಗಾ ಸಾಽಸ್ಯಾಃ ಕೃತೇರ್ವೈಖರೀಂ
ಬಿಭ್ರಾಣೇವ ವಿಭಾತಿ [೩]ವಿಟ್ಠಲಪುರೀ ವಿಷ್ವಕ್ಸುವರ್ಣೋಜ್ಜ್ವಲಾ ॥ ೩೭ ॥

ಶ್ರೀಕೃಷ್ಣನ ಉದಯಗಳ ವರ್ಣನೆಗಳಿಂದ, ಅವನ ಸತ್ಕರ್ಮ ವೃಂದದ ಸ್ತೋತ್ರಗಳಿಂದ, ಅವನ ಸೂಕ್ತಿಗಳಿಂದ, ಪುಣ್ಯಕರವಾದ ಮಹಿಮೆಗಳಿಂದ, ಮನೋಹರವಾಗಿರುವ, ಬಗೆಬಗೆಯ ರಸಗಳಿಂದ, ನಲಿವು ನೀಡುವ ಸರ್ಗಗಳಿಂದ ಕೂಡಿರುವ, ದುಷ್ಟರಿಂದ ತಿಳಿಯಲಾಗದಂತಹ ಒಳ ಅರ್ಥಗಳಿಂದ ದೇವತೆಗಳಿಗೂ ಮುದನೀಡುವ, ಎಲ್ಲೆಡೆಗಳಿಂದಲೂ ಸುವರ್ಣದಿಂದ ಉಜ್ವಲವಾಗಿ ಶೋಭಿಸುವ, ಶ್ರೀಕೃಷ್ಣನ ಪಟ್ಟಣವಾದ ದ್ವಾರಕೆಯು ಈ ಕೃತಿಯ ಪ್ರೌಢಿಮೆಯನ್ನು ಹೊಂದಿರುವಂತೆ ಕಂಗೊಳಿಸುವುದು.

ವಿ : ೧. ತಾವು ರಚಿಸಿದ ರುಗ್ಮಿಣೀಶವಿಜಯವು ಶ್ರೀಕೃಷ್ಣನ ನೆಲೆಯಾದ ದ್ವಾರಕೆಯಂತೆ ಕಂಗೊಳಿಸುವುದು ಎಂಬುದಾಗಿ ಇದರಲ್ಲಿ ಬಣ್ಣಿಸಿರುವರು.

೨. ಶ್ರೀರುಗ್ಮಿಣೀಶವಿಜಯ ಕೃತಿಯು ದ್ವಾರಕೆಯ ವೈಭವವನ್ನೆಲ್ಲ ಒಳಗೊಂಡಿದೆ ಎಂಬುದನ್ನು ಕೃತಿ ಹಾಗೂ ದ್ವಾರಕೆಗೆ ಅನ್ವಯಿಸುವಂತಹ ವರ್ಣನೆಗಳಿಂದ ವಿವರಿಸಿರುವರು.

೩. ಈ ಕಾವ್ಯದಲ್ಲಿ ಕೃಷ್ಣನ ಉದಯಗಳ ವರ್ಣನೆಯಿದೆ, ಸಜ್ಜನರು ಅವನನ್ನು ಕುರಿತು ಮಾಡಿದ ಸ್ತೋತ್ರಗಳಿವೆ, ಅವನು ನುಡಿದ ಸೂಕ್ತಿಗಳಿವೆ, ಅವನ ಮಹಿಮೆಯನ್ನು ಕೊಂಡಾಡುವ

---

೧. ಇಂದ್ರೇಣ ಸುಧರ್ಮಾ ದತ್ತಾ । ಕುಬೇರೇಣ ನಿಧಯೋ ದತ್ತಾಃ । ಸಮುದ್ರೇಣ ನಾನಾವಿಧರತ್ನಾನಿ ದತ್ತಾನಿ । ಭೂಸ್ಥರಾಜಾದಿಭಿಃ ನಾನಾವಿಧದ್ರವಿಣಾನಿ ದತ್ತಾನಿ । ಇತ್ಯಾದಿವರ್ಣನೈಃ । – ವ್ಯಾ.

೨. ಸುಚರಿತಾನಾಂ ದಾನವ್ರತಯಜ್ಞಾದಿಸತ್ಕರ್ಮಾಚರಣಾನಾಂ । – ವ್ಯಾ.

೩. "ವೇದನಂ ವಿತ್ ಜ್ಞಾನಮ್ । ವಿದ್ ಜ್ಞಾನೇಽಸ್ಮಾತ್ 'ಸಂಪದಾದಿಭ್ಯಃ ಕ್ವಿಪ್' (೩/೩/೬೪) ಇತಿ ಭಾವೇ ಕ್ವಿಪ್, ತೇನ ಠಾಃ ಶೂನ್ಯಾಃ, ಠಃ ಶೂನ್ಯೇ ಚ ಬೃಹದ್ಧ್ವನಾವಿತ್ಯಭಿಧಾನಾತ್ । ತಾನ್ ಲಾತಿ ಸ್ವೀಕರೋತೀತಿ ವಿಟ್ಠಲಃ । ಲಾಽಽದಾನೇಽಸ್ಮಾತ್ 'ಆತೋಽನುಪಸರ್ಗೇ ಕಃ' (೩/೨/೩) ಇತಿ ಕಃ । ಆತೋ ಲೋಪಶ್ಚೇತ್ಯಾಲೋಪಃ । ಅಜ್ಞಾನುಗ್ರಾಹಕ ಇತ್ಯರ್ಥಃ ।" ಇತಿ .... ಅನ್ಯೇ ತು "ವೇದನಂ ವಿತ್, ಯಾಂಚಾ ವಿದ್ ಯಾಚತೇ ಕ್ವಿಬಂತಃ । ತಯಾ ಠಾಃ ಶೂನ್ಯಾ ನಿಸ್ಪೃಹಾಸ್ತಾನ್ ಲಾತೀತಿ ವಿಟ್ಠಲ' ಇತಿ ವ್ಯಾಚಕ್ಷತೇ" ಇತಿ ಚ ತತ್ರೈವ ।
– ಇತಿ ಪ್ರಕ್ರಿಯಾಕೌಮುದೀವ್ಯಾಖ್ಯಾಯಾಮ್ (ಪ್ರಕಾಶೇ)

ಶ್ಲೋಕಗಳಿವೆ, ಬಗೆಬಗೆಯ ರಸಗಳಿಂದ ತುಂಬಿರುವ ಸರ್ಗಗಳು ಇದರಲ್ಲಿವೆ, ದುಷ್ಟರು ತಿಳಿಯಲಾಗದಂತಹ ಒಳ ಅರ್ಥಗಳನ್ನು ಹೊಂದಿರುವ ಇದು ದೇವತೆಗಳಿಗೂ ಮುದ ನೀಡುವಂತಹುದು, ಇದರಲ್ಲಿ ಎಲ್ಲೆಡೆಯಲ್ಲೂ ಸಹ ಒಳ್ಳೊಳ್ಳೆ ವರ್ಣಗಳು ತುಂಬಿವೆ ಎಂಬುದು ಕಾವ್ಯಕ್ಕೆ ಅನ್ವಯಿಸುವ ಅರ್ಥ.

೪. ದ್ವಾರಕೆಯು ಶ್ರೀಕೃಷ್ಣನ ಹಿರಿಮೆಯನ್ನು ತಿಳಿಸಿಕೊಡುವಂತಹ ವೈಭವವನ್ನು ಹೊಂದಿದೆ. ಅಲ್ಲಿ ನಡೆಯುವ ದಾನ, ವ್ರತ, ಯಜ್ಞ ಮೊದಲಾದ ಸತ್ಕರ್ಮಗಳ ವರ್ಣನೆ ಬಂದಿದೆ. ಶ್ರೀಕೃಷ್ಣನ ಸ್ತೋತ್ರಗಳಿಂದ ಕೂಡಿದೆ. ಶ್ರೀಕೃಷ್ಣನ ಮನೋಹರವಾದ ಮಾತುಗಳನ್ನು ಒಳಗೊಂಡಿದೆ. ಅವನ ದುಷ್ಟನಿಗ್ರಹ ಮೊದಲಾದ ರೂಪದ ಮಹಿಮೆಗಳಿಂದ ಮನೋಹರವಾಗಿದೆ. ಮಧುರವಾದ ಷಡ್ರಸಗಳಿಂದ ಕೂಡಿದ ಹಿರಿಮೆ ಅದರಲ್ಲಿದೆ. ದುಷ್ಟ ಜನರು ಅದನ್ನು ಪ್ರವೇಶಿಸಲು ಸರ್ವಥಾ ಅಸಾಧ್ಯ, ಅದರ ಉಪವನಗಳಲ್ಲಿ ಲಭಿಸುವ ಬಗೆಬಗೆಯ ಹಣ್ಣು ಮೊದಲಾದವುಗಳಿಂದಾಗಿ ಪಕ್ಷಿಗಳು ನಲಿಯುವವು ಎಂಬುದು ದ್ವಾರಕೆಯ ಪರವಾದ ಅರ್ಥ.

೫. ದ್ವಾರಕೆಯಲ್ಲಿ ಶ್ರೀಕೃಷ್ಣ ನೆಲೆಸಿರುವಂತೆ, ಈ ಕೃತಿಯಲ್ಲಿ ಶ್ರೀಕೃಷ್ಣನ ಮಹಿಮೆ ತುಂಬಿಕೊಂಡಿರುವುದು ಎಂಬುದು ಒಟ್ಟು ತಾತ್ಪರ್ಯ.

### ರುಗ್ಮಿಣೀಶವಿಜಯ ಕಾವ್ಯದ ಹಿರಿಮೆ

ಯಸ್ಮಿನ್ ಮಂಗಲದೇವತಾಽಖಿಲಜಗನ್ಮಾತಾ ರಮಾ ನಾಯಿಕಾ
ಪದ್ಮಾಪದ್ಮಭವಾದಿಸೇವ್ಯಚರಣಸ್ತದ್ವಲ್ಲಭೋ ನಾಯಕಃ।
ಅಶ್ವಗ್ರೀವದಯಾಪಯೋಬ್ಧಿಫಲಿತಂ ಪ್ರಾಗ್ರ್ಯೋಕ್ತಿರತ್ನೋಜ್ಜ್ವಲಂ
ತದ್ದಾಸಾನುಗವಾದಿರಾಜರಚಿತಂ ಕಾವ್ಯಂ ವಿಭಾವ್ಯಂ ಬುಧೈಃ॥ ೩೮ ॥

ಶ್ರೀರುಗ್ಮಿಣೀಶವಿಜಯ ಕಾವ್ಯಕ್ಕೆ ಮಂಗಲದೇವತೆಯೂ, ಸಕಲ ಜಗತ್ತಿನ ಮಾತೆಯೂ ಆದ ಮಹಾಲಕ್ಷ್ಮಿಯೇ ನಾಯಕಿ; ರಮಾಬ್ರಹ್ಮಾದಿ ದೇವತೆಗಳಿಂದ ಸೇವಿಸಲ್ಪಡುವ ಪಾದದ ಲಕ್ಷ್ಮೀಪತಿಯಾದ ನಾರಾಯಣನೇ ನಾಯಕ; ಶ್ರೀಹಯಗ್ರೀವದೇವರ ಕರುಣೆ ಎಂಬ ಕ್ಷೀರಸಮುದ್ರದಿಂದ ಪ್ರಾದುರ್ಭವಿಸಿದ ಶ್ರೇಷ್ಠವಾದ ಯುಕ್ತಿಗಳೆಂಬ ರತ್ನಗಳಿಂದ ಇದು ಕಂಗೊಳಿಸುತ್ತಿದೆ; ಶ್ರೀಹಯಗ್ರೀವನ ದಾಸರಾದ ಶ್ರೀಮನ್ಮಧ್ವಾಚಾರ್ಯರು ಮೊದಲಾದವರ ಭೃತ್ಯರಾದ ವಾದಿರಾಜರಿಂದ ಇದು ರಚಿತವಾದ ಕಾವ್ಯ; ವಿದ್ವಜ್ಜನರು ಇದನ್ನು ಆದರದಿಂದ ಸ್ವೀಕರಿಸಬೇಕು.

ವಿ : ೧. ರುಗ್ಮಿಣೀಶವಿಜಯ ಕಾವ್ಯಕ್ಕೆ ರುಗ್ಮಿಣಿಯೇ ನಾಯಕಿ; ಅವಳಂತೂ ಸಾಕ್ಷಾತ್ ಮಹಾಲಕ್ಷ್ಮೀ; ಶ್ರೀಕೃಷ್ಣನೇ ನಾಯಕ; ಅವನು ರಮಾಬ್ರಹ್ಮಾದಿ ವಂದಿತನಾದ ಸಾಕ್ಷಾತ್ ಲಕ್ಷ್ಮೀಪತಿಯಾದ ನಾರಾಯಣ. ಶ್ರೀಹಯಗ್ರೀವದೇವರ ಕೃಪೆಯೆಂಬ ಕ್ಷೀರಸಾಗರದಿಂದ ಇದು

ಉದ್ಭವಿಸಿದ ರತ್ನದಂತಹ ಕೃತಿ. ಇದರಲ್ಲಿ ಶ್ರೇಷ್ಠವಾದ ರತ್ನಸದೃಶವಾದ ಮಾತುಗಳು ತುಂಬಿವೆ. ಇದನ್ನು ಬರೆದ ಶ್ರೀವಾದಿರಾಜರಂತೂ ಹರಿಭಕ್ತರಾದ ಶ್ರೀಮನ್ಮಧ್ವಾಚಾರ್ಯರು ಮೊದಲಾದವರ ಅನುಯಾಯಿಗಳು; ಈ ಕಾರಣದಿಂದ ಇದು ವಿದ್ವಜ್ಜನರ ಸ್ವೀಕಾರಕ್ಕೆ ಅರ್ಹವಾದ ಕೃತಿ ಎಂದು ಭಾವ.

೨. ಸಾಮಾನ್ಯವಾಗಿ ಲೌಕಿಕವಾದ ಕಾವ್ಯಗಳ ಅಧ್ಯಯನಾದಿಗಳು ಜ್ಞಾನಿಗಳಿಗೆ ಉಪಾದೇಯವೆನ್ನಿಸುವುದಿಲ್ಲ; "ಕಾವ್ಯಾಲಾಪಾಂಶ್ಚ ವರ್ಜಯೇತ್". ಆದರೆ ಇದು ಕೇವಲ ಶೃಂಗಾರಾದಿಗಳಿಂದ ಕೂಡಿದ ಮನಸ್ಸಿಗೆ ಉದ್ರೇಕ ಉಂಟುಮಾಡುವಂತಹ ಲೌಕಿಕ ಕಾವ್ಯವಲ್ಲ. ಮೋಕ್ಷ ನೀಡುವಂತಹ ಭಗವಂತನ ಮಹಿಮೆ. ಶ್ರೀಹರಿಯನ್ನು ಕೊಂಡಾಡುವ ವೇದಾದಿ ಶಾಸ್ತ್ರಗಳಿಗೆ ಅಭಿಮಾನಿನಿಯಾದ ಮಹಾಲಕ್ಷ್ಮಿಯ ಮಹಿಮೆ. ಇದರ ಅಧ್ಯಯನ ಜ್ಞಾನಪ್ರಾಪ್ತಿಗೆ ಸಾಧನ. ಅದರಿಂದ ಮನಸ್ಸಿಗೆ ಉಲ್ಲಾಸ ಉಂಟಾಗುವುದು. ಆದ್ದರಿಂದ ಇದನ್ನು ವಿದ್ವಜ್ಜನರು ಅಗತ್ಯವಾಗಿ ಅಧ್ಯಯನಾದಿಗಳನ್ನು ಮಾಡಬೇಕು ಎಂದು ತಾತ್ಪರ್ಯ.

೩. ಲೌಕಿಕ ಕಾವ್ಯಗಳಲ್ಲಿ ಲೋಕದ ಜನರಾದ ರಾಜರು ಮೊದಲಾದವರು ನಾಯಕರು, ಅವರು ಮೆಚ್ಚುವ ಸ್ತ್ರೀಯರು ನಾಯಕಿಯರು ಆಗಿದ್ದು ಅದರಿಂದ ಅವರ ವರ್ಣನೆಗಳೇ ಪ್ರಸಕ್ತವಾಗಿ ಅವುಗಳ ಅಧ್ಯಯನದಿಂದ ಮನಸ್ಸಿಗೆ ಉಲ್ಲಾಸದ ಬದಲು ಉದ್ರೇಕ ಹೆಚ್ಚುವುದು. ಆ ಕಾರಣದಿಂದ ಅಂತಹ ಕಾವ್ಯಗಳನ್ನು ಜ್ಞಾನಿಜನರು ಅಧ್ಯಯನ ಮಾಡಕೂಡದು ಎಂಬ ನಿಯಮವಿದೆ. ಪ್ರಸ್ತುತ ಕೃತಿ ಲೌಕಿಕ ಕಾವ್ಯವಾಗಿರದೆ ಅಲೌಕಿಕ ಕಾವ್ಯವಾಗಿದೆ ಎಂಬ ವೈಶಿಷ್ಟ್ಯ ಇದರಲ್ಲಿ ನಿರೂಪಿತವಾಗಿದೆ.

### ಶ್ರೀಕೃಷ್ಣಾನುಗ್ರಹದ ಪ್ರಾರ್ಥನೆ

[೧]ಕೃಷ್ಣಃ ಕಾವ್ಯಕೃತೇ ಸ್ವಹಸ್ತಕಮಲಚ್ಛತ್ರಂ[೨] ಪ್ರದದ್ಯಾತ್ ಪ್ರಭುಃ
[೩]ಸಚ್ಛಾಸ್ತ್ರಾಭಿಧರಮ್ಯರಾಜ್ಯಪದವೀಂ[೪] ಸುಜ್ಞಾನಯಾನಂ ಮುದಾ ।

---

೧. ಇದಾನೀಂ ವಿರಕ್ತಯತಿತ್ವೇನ ಲೌಕಿಕಫಲಾನಪೇಕ್ಷಃ ಕಾವ್ಯಕರ್ತಾ ಕವಿಃ ಲೌಕಿಕಾನಾಂ ಕಟಕಛತ್ರಶಿಬಿಕಾದೀನಾಮೇವ ಲೋಕೇ ಶ್ಲಾಘ್ಯತ್ವಾತ್, ಲೌಕಿಕಫಲೋಪಮತಯಾ ಸ್ವಾಲೌಕಿಕಫಲಂ ಕಾವ್ಯನಾಯಕಾದಭ್ಯರ್ಥಯತೇ । - ವ್ಯಾ.

೨. ಛತ್ರಸ್ಯಾಪೂ ಕಮಲಾಕಾರತ್ವಾತ್ ಮಸ್ತಕೋಪರಿ ಧಾರ್ಯಮಾಣತ್ವಾಚ್ಚ ಕ್ಷಸ್ತಸ್ತೋತುರ್ಭಕ್ತಸ್ಯ ಮಮ ಮಸ್ತಕೇ ಕೃಪಯಾ ನಿಕ್ಷಿಪ್ತಂ ಹರೇರ್ವಿಸ್ತೃತಹಸ್ತಕಮಲಮೇವ ಛತ್ರಮಿತಿ ಭಾವಃ । - ವ್ಯಾ.

೩. ನಿರ್ದೋಷಂ ಯಚ್ಛಾಸ್ತ್ರಂ ವೇದಾಂತಶಾಸ್ತ್ರಮಿತ್ಯರ್ಥಃ । ತದಿತಿ ಅಭಿಧಾ ನಾಮ ಯಸ್ಯ ತತ್ತಥೋಕ್ತಮ್ । ಯದ್ರಮ್ಯರಾಜ್ಯಂ ತದೇವ ಪದವೀಂ ಪದಂ ತಾಮ್ । ಸ್ವಪ್ರಭುತ್ವಪೋಷಕಸ್ಯ ಸ್ವೇನ ಸದಾ ವಿಚಾರ್ಯಮಾಣಸ್ಯ ರಾಜಯೋಗ್ಯವಸ್ತುನೋ ರಾಜ್ಯತ್ವಾತ್ ವಿದ್ವದಗ್ರೇಸರತ್ವಾಖ್ಯಪ್ರಭುತ್ವಪೋಷಣಹೇತುಭೂತಂ ಸದಾ ವಿಚಾರಾಸ್ಪದಂ ಯತಿರಾಜ್ಯಯೋಗ್ಯಂ ವೇದಾಂತಶಾಸ್ತ್ರಮೇವ ಮಮ ರಾಜ್ಯಮಿತಿ ಭಾವಃ । - ವ್ಯಾ.

೪. 'ರಾಜ್ಯಂ ಮೇ ತವ ಶಾಸ್ತ್ರಮೇವ' (೧೨/೨೧)
ಛತ್ರಂ ಮೂರ್ಧ್ನಿ ಕೃತಂ ಭವತಾಪಹರಂ ಹಸ್ತಾರವಿಂದಂ ತವ ॥ (೧೨/೨)
ನಿತ್ಯಂ ಭಕ್ತಿವಿರಕ್ತಿದೈನ್ಯಶಮನಜ್ಞಾನಾದಿಲಾಭೋ ಧನಮ್ । (೧೨/೨)

ಸ್ವಾಂಘ್ರ್ಯಾರಾಧನಕಂಕಣಂ [1]ಕರಯುಗೇ ಕೈಂಕರ್ಯಹಾರಂ[2] ಗಲೇ
ಸ್ವಾತ್ಮಾನಂ ಹೃದಿ ನಿತ್ಯಚಿಂತನಧನಂ ಸದ್ಯುಕ್ತಿರತ್ನಾನ್ಯಪಿ[3] ॥ ೩೯ ॥

ಪ್ರಭುವಾದ ಶ್ರೀಕೃಷ್ಣನು ಸಂತುಷ್ಟನಾಗಿ ಈ ಕಾವ್ಯವನ್ನು ರಚಿಸಿದ ಶ್ರೀವಾದಿರಾಜಸ್ವಾಮಿಗಳಿಗೆ ತನ್ನ ಕರಕಮಲದ ಛತ್ರವನ್ನು ನೀಡಲಿ; ಸಚ್ಛಾಸ್ತ್ರ ಎಂಬ ರಮ್ಯವಾದ ರಾಜ್ಯಪದವಿಯನ್ನು ಅನುಗ್ರಹಿಸಲಿ[4]; [5]ಸುಜ್ಞಾನವೆಂಬ ವಾಹನವನ್ನು ನೀಡಲಿ; ಎರಡೂ ಕೈಗಳಿಗೂ ತನ್ನ ಪಾದಕಮಲದ ಆರಾಧನೆ ಎಂಬ ಕಂಕಣವನ್ನು ತೊಡಿಸಲಿ; ಕಂಠಕ್ಕೆ ಸೇವಾರೂಪವಾದ ಮಾಲೆಯನ್ನು ಹಾಕಲಿ; ಹೃದಯದಲ್ಲಿ ತನ್ನನ್ನು ನಿತ್ಯ ಚಿಂತಿಸುವಂತಹ ಸಂಪತ್ತನ್ನು ಕರುಣಿಸಲಿ; ಉತ್ತಮ ಯುಕ್ತಿಗಳು ಎಂಬ ರತ್ನಗಳನ್ನು ನೀಡಲಿ.

ವಿ : ೧. ತಮ್ಮ ರುಗ್ಮಿಣೀಶವಿಜಯ ಕೃತಿಯ ರಚನೆಗೆ ಶ್ರೀಹರಿಯು ಕೇವಲ ಆಧ್ಯಾತ್ಮಿಕ ಫಲವನ್ನಷ್ಟೇ ನೀಡಲಿ ಎಂಬುದನ್ನು ಅತ್ಯಂತ ಮನೋಜ್ಞವಾಗಿ ಈ ಶ್ಲೋಕದಲ್ಲಿ ಶ್ರೀವಾದಿರಾಜಸ್ವಾಮಿಗಳು ಕೇಳಿಕೊಂಡಿರುವರು.

೨. ಸಾಮಾನ್ಯವಾಗಿ ಕರ್ಮಗಳಿಗೆ ಐಹಿಕ ಫಲಗಳನ್ನು ಬಯಸುವುದು ಸಾಮಾನ್ಯ ಭಕ್ತರ ಪದ್ಧತಿ. ಆದರೆ, ಅಂತಹ ಫಲದ ಅಪೇಕ್ಷೆ ಬಂಧಕ; ಅದನ್ನು ಸರ್ವಥಾ ಕೇಳಕೂಡದು ಎಂಬುದು ಶಾಸ್ತ್ರಗಳ ಆದೇಶ. ಆದರೆ, ಪಾರಲೌಕಿಕ ಫಲಗಳಾದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಮಾತ್ರ ತಪ್ಪದೇ ಕೇಳಲೇಬೇಕು ಎಂಬುದು ಸಹ ಶಾಸ್ತ್ರದ ಆದೇಶವೇ ಆಗಿದೆ: ಜ್ಞಾನಭಕ್ತ್ಯಾದಿ ಪ್ರಾರ್ಥನಾ ಸರ್ವದಾ ಕಾರ್ಯ (ಗೀತಾಭಾಷ್ಯ).

೩. ಪ್ರಸ್ತುತ ಶ್ರೀವಾದಿರಾಜಸ್ವಾಮಿಗಳು ಲೌಕಿಕ ಫಲಗಳಾದ ಛತ್ರ, ಸಾಮ್ರಾಜ್ಯ, ವಾಹನ, ಕೈಗಳಿಗೆ ಕಂಕಣ, ಕಂಠಕ್ಕೆ ಮಾಲೆ, ಪುಷ್ಕಳ ಧನ ಹಾಗೂ ರತ್ನಗಳನ್ನು ಕೇಳದೆ, ಶ್ರೀಕೃಷ್ಣನ ಕರಾವಲಂಬನದ ಆಸರೆ, ಸಚ್ಛಾಸ್ತ್ರ ಸಾಮ್ರಾಜ್ಯದ ಆಧಿಪತ್ಯ, ಜ್ಞಾನವೆಂಬೋ ವಾಹನ, ಪರಮಾತ್ಮನ ಪಾದಕಮಲಗಳ ಆರಾಧನೆ ಎಂಬ ಕಂಕಣ, ಶ್ರೀಹರಿಯ ಸೇವೆಯೆಂಬ ಮುತ್ತಿನ ಮಾಲೆ, ಶ್ರೀಹರಿಯನ್ನು ಹೃದಯದಲ್ಲಿ ಚಿಂತಿಸುವ ಧನ, ಸುಯುಕ್ತಿಗಳು ಎಂಬ ರತ್ನಗಳನ್ನು ಕೇಳಿಕೊಂಡಿರುವರು.

---

– ಎಂಬುದಾಗಿ ಉಗ್ರಸೇನ ಮಾಡಿದ ಶ್ರೀಕೃಷ್ಣನ ಪ್ರಾರ್ಥನೆಯಲ್ಲಿ ಬಂದಿರುವ ವಿವರಗಳ ಸಂಗ್ರಹರೂಪವಾಗಿ ಈ ಮಾತುಗಳು ಬಂದಿರುವುದು ಗಮನಾರ್ಹ.

೧. 'ಶಾವೌ ಕರೌ ನೋ ಕುರುತಃ ಸಪರ್ಯಾಂ ಹರೇರ್ಲಸತ್ಕಾಂಚನಕಂಕಣೌ ವಾ' (ಭಾಗವತ ೨/೩/೨೧) ಇತಿ ವಚನಾತ್ ಹರ್ಯಾರಾಧನಮೇವ ಕರಭೂಷಣಮಿತಿ ಭಾವಃ। – ವ್ಯಾ.

೨. 'ಕಾಮಂ ತು ದಾಸ್ಯೇ' ಇತ್ಯುಕ್ತ್ವಾ ಶ್ಲಾಘ್ಯಾತ್ವಾಚ್ಚ ದಾಸ್ಯಮೇವ ಕಂಠಭೂಷಣಮಿತಿ ಭಾವಃ। – ವ್ಯಾ.

೩. ಧ್ಯಾನಸ್ಯ ಧನತ್ವಂ ಮುಕ್ತೀನಾಂ ರತ್ನತ್ವಂ ಚ ಸುಪ್ರಸಿದ್ಧಮೇವೇತಿ ಭಾವಃ। – ವ್ಯಾ.

೪. ಅತಿತುಷ್ಟೋ ರಾಜಾ ಸದಾ ಸ್ವಭೃತ್ಯಗೃಹ ಏವ ತಿಷ್ಠತೀತ್ಯತ ಇದಂ ಪ್ರಾರ್ಥಿತಮಿತಿ ಭಾವಃ। – ವ್ಯಾ.

೫. ಸುಜ್ಞಾನಯಾನಂ ಸಮ್ಯಜ್ಞಾನಲಕ್ಷಣಾಂದೋಲಿಕಾಮ್ ಅತಿದೂರಸ್ಥಮೋಕ್ಷನಾರೀಟಪ್ರಾಪ್ತಿಹೇತುಭೂತತ್ವಾತ್ । ಜ್ಞಾನಸ್ಯ ಯಾನತ್ವಮಿತಿ ಭಾವಃ। – ವ್ಯಾ.

೪. ನಶ್ವರವಾದ ಛತ್ರಾದಿಗಳನ್ನು ಅಪೇಕ್ಷಿಸದೆ ಶಾಶ್ವತವಾದ ಭಗವತ್ಸಂಬಂಧಿಯಾದ ಅನುಗ್ರಹಾದಿ ಸಂಪತ್ತನ್ನು ಪ್ರಾರ್ಥಿಸಿಕೊಳ್ಳುವುದೇ ಶ್ರೇಷ್ಠ ಭಾಗವತ ಧರ್ಮ ಎಂಬ ಮಹಾಪ್ರಮೇಯವನ್ನು ಇಲ್ಲಿ ಸೂಚಿಸಿರುವರು; ಕೈಂಕರ್ಯ – ಸೇವೆ.

೫. ಯತಿಗಳಲ್ಲದ ಭಕ್ತರು ಸಹ ಲೌಕಿಕ ಫಲಗಳನ್ನು ಕೇಳಿಕೊಳ್ಳುವುದು ಸಲ್ಲದು. ಇನ್ನು ಯತಿಗಳಲ್ಲೂ ಪರಮಹಂಸರಾಗಿ ಪೀಠಾಧೀಶರಾಗಿದ್ದವರು ಜ್ಞಾನಭಕ್ತ್ಯಾದಿ ಶ್ರೇಷ್ಠ ಫಲಗಳನ್ನು ಹೊರತು ಬಂಧಕವಾಗುವ ಬೇರಾವ ಫಲಗಳನ್ನು ಸರ್ವದಾ ಅಪೇಕ್ಷಿಸಕೂಡದು ಎಂಬ ವಿಶೇಷಾಂಶವು ಇದರಲ್ಲಿದೆ.

## ಕಾವ್ಯದ ಸಮರ್ಪಣೆ

[೧]ಹಂಸಾನಾಂ ಹೃದಯಂಗಮಂ ಕವಿಲಸದ್ಭೃಂಗಾದೃತಂ ಮೌಕ್ತಿಕ-
ಪ್ರಖ್ಯಾಗ್ರ್ಯೋಕ್ತಿನವಂ ಪ್ರಬಂಧಜಲಜಂ ಪಾದೇಽರ್ಪಿತಂ ಸ್ಯಾದ್ಧರೇಃ।
ಲಕ್ಷ್ಮೀರಮ್ಯಕರೇ ವರಾಮರತತೇಃ ಸನ್ಮಾನಸೇ ಶಾರದಾ-
ನಂದಂ ತತ್ಪವನಃ ಸ್ವಹೃತ್ಕೃತಗುಣಂ ವಿಸ್ತಾರಯತ್ವಂಜಸಾ ॥ ೪೦ ॥

ಈ ಕಾವ್ಯವು ಯತಿಗಳಿಗೂ ಸಹ ಹೃದಯಂಗಮವಾದುದು; ಕವಿಗಳು ಎಂಬ ಹೊಳೆಯುವ ಭ್ರಮರಗಳಿಗೆ ಪ್ರಿಯವಾದುದು; [೨]ಮುತ್ತಿನ ಮಾಲೆಯಂತಹ ಉತ್ತಮವಾದ ಮಾತುಗಳಿಂದ ಕೂಡಿದಂತಹುದು; ಇಂತಹ ಈ ಪ್ರಬಂಧರೂಪದ ಕಮಲವು ಶ್ರೀಹರಿಯ ಪಾದದಲ್ಲಿ ಸಮರ್ಪಿತವಾಗಲಿ[೩]; ಮಹಾಲಕ್ಷ್ಮಿಯ ರಮ್ಯವಾದ ಕರದಲ್ಲಿ ಶೋಭಿಸಲಿ[೪]; ಶ್ರೇಷ್ಠರಾದ ದೇವತೆಗಳ ಉತ್ತಮ ಮನಸ್ಸಿನಲ್ಲಿ ನೆಲೆಗೊಳ್ಳಲಿ[೫]; [೬]ಮುಖ್ಯಪ್ರಾಣನು ಸರಸ್ವತಿಗೆ

---

೧. ಇದಾನೀಂ ಸ್ವಕೃತಕಾವ್ಯಂ ಶ್ರೀಪರಿವಾರಸಹಿತಕೃಷ್ಣಾರ್ಪಿತಂ ಕುರ್ವನ್ ಕಾವ್ಯಸ್ಯ ಪ್ರಚಯಂ ಪ್ರಾರ್ಥಯಮಾನಃ ಶ್ರೀಕೃಷ್ಣಮಾಹಾತ್ಮ್ಯವರ್ಣನಪರತ್ವಾತ್ ಶ್ರೀಕೃಷ್ಣಪ್ರಿಯಸ್ಯ ಸ್ವಕಾವ್ಯಸ್ಯ ಶ್ರೀಕೃಷ್ಣಚರಣಸಮರ್ಪಣಯೋಗ್ಯತಾಂ ರುಗ್ಮಿಣೀರೂಪಲಕ್ಷ್ಮೀವಿವಾಹೋತ್ಸವವರ್ಣನೇನ ಶ್ರೀಕರಪರಿಗ್ರಹಯೋಗ್ಯತಾಂ ಸಕಲಸುರಾಣಾಂ ಸ್ವರೂಪೇಣ ಪರಮಪ್ರಿಯತ್ವಯೋಗ್ಯತಾಂ ವಾಗ್ವಿಲಾಸದಾತ್ರ್ಯಾಃ ಭಾರತ್ಯಾಃ ಸುಖಪ್ರದತ್ವಯೋಗ್ಯತಾಂ ಸ್ವಮತರಹಸ್ಯ-ವರ್ಣನಪರತ್ವಾತ್ ವೈಷ್ಣವಮತಧುರ್ಯಮಧ್ವಾಚಾರ್ಯಸ್ವರೂಪಿಪವನವಿಸ್ತಾರ್ಯತ್ವಯೋಗ್ಯತಾಂ ರಮಾ-ದೀನಾಂ ಹರಿಪ್ರಸಾದಾಲಂಬಿತ್ವರೂಪತತ್ತ್ವಂ ಚ ಸ್ಪಷ್ಟಂ ದರ್ಶಯಿತುಂ ಮೃದುತ್ವಮನೋಹರತ್ವಾದಿಗುಣೈಃ ಶ್ರಾವ್ಯಂ ಕಾವ್ಯಂ ಕಮಲತಯಾ ವರ್ಣಯತಿ। – ವ್ಯಾ

೨. ಅಪರ್ಯುಷಿತಮ್। ಛಾಯಾಪಹಾರಮಿತಿ ಧ್ವನಿಃ। – ವ್ಯಾ.

೩. ಕಮಲೇನ ಹರಿಚರಣಾರ್ಚನಸ್ಯೋಚಿತತ್ವಾತ್ ಹರಿಚರಣಸ್ಯಾಪಿ ಕಮಲಸ್ಥಾನತ್ವಾದಿತಿ ಭಾವಃ। – ವ್ಯಾ. ಶ್ರೀಹರಿಚರಣಸಮರ್ಪಣಾನಂತರಂ ಲಕ್ಷ್ಮ್ಯಾದೀನಾಂ ಪ್ರಿಯತ್ವೋಕ್ತೇಃ ತೇಷಾಂ ತದ್ದಾಸತಾ ಸೂಚಿತೇತಿ ಸರ್ವಮವದಾತಮ್। – ವ್ಯಾ.

೪. ಪದ್ಮದ್ವಯಾಭಯಕರೋದ್ಧೃತಪದ್ಮಹಸ್ತಾಮ್ ಇತ್ಯುಕ್ತ್ವಾ ಲಕ್ಷ್ಮೀಕರಸ್ಯ ಪದ್ಮಯೋಗಸ್ಥಾನತ್ವಾದಿತಿ ಭಾವಃ।– ವ್ಯಾ.

೫. ಸಕಲಜನಮನಸ್ತೋಷಕರತಯಾ ದಿಕ್ಷು ದಿಕ್ಷು ಬುಧಶ್ಲಾಘ್ಯತರಂ ಕರೋತ್ವಿತ್ಯರ್ಥಃ। – ವ್ಯಾ.

೬. ಬ್ರಹ್ಮಾದಯೋ ದೇವಾಃ ಇದಂ ಕಾವ್ಯಂ ಸ್ವಮನಸಿ ಆನೀಯ ಸಂತೋಷಂ ಕುರ್ವಂತ್ವಿತ್ಯರ್ಥಃ। – ವ್ಯಾ.

ಆನಂದವನ್ನುಂಟುಮಾಡುತ್ತಾ ತನ್ನ ಮತದಲ್ಲಿ ಪ್ರತಿಪಾದಿತವಾದ ಭಗವನ್ಮಹಿಮೆಯನ್ನು ವರ್ಣಿಸುವ ಇದನ್ನು ಚೆನ್ನಾಗಿ ಲೋಕದಲ್ಲಿ ಪಸರಿಸಲಿ[೧].

ವಿ : ೧. ತಾವು ರಚಿಸಿರುವ ಈ ರುಗ್ಮಿಣೀಶವಿಜಯ ಕೃತಿಯು ಪರಮಹಂಸರಾದ ಯತಿಗಳು ಸಹ ಮನಸಾ ಆದರಿಸುವ ಅಪೂರ್ವ ಕೃತಿ ಎಂಬುದನ್ನು ಈ ಶ್ಲೋಕದಲ್ಲಿ ಮನೋಜ್ಞವಾಗಿ ತಿಳಿಸಿರುವರು.

೨. ಈ ಕೃತಿಯು ಅಪೂರ್ವವಾದ ಕಮಲದಂತಿದ್ದು ಶ್ರೀಕೃಷ್ಣನ ಪಾದಕಮಲದಲ್ಲಿ ಸಮರ್ಪಿತವಾಗಿದೆ ಎಂದಿರುವರು; ಕಮಲವು ಹಂಸಗಳಿಗೆ ಹೃದಯಂಗಮವಾಗಿರುವುದು, ಭ್ರಮರಗಳಿಗೆ ಆಪ್ಯಾಯಮಾನವಾಗಿರುವುದು, ಮುತ್ತುಗಳಿಗೆ ಆಕರವೆನ್ನಿಸುವಂತಹುದು, ಮಹಾಲಕ್ಷ್ಮಿಯ ಕೈಯಲ್ಲಿ ಹಿಡಿಯಲ್ಪಟ್ಟಿರುವಂತಹುದು, ಸಜ್ಜನರ ಮಾನಸಸರೋವರದಲ್ಲಿ ನೆಲೆಸಿರುವಂತಹುದು[೨], ಗಾಳಿಯಿಂದ ಪಸರಿಸಲ್ಪಡುವಂತಹ ಪರಿಮಳವನ್ನು ಹೊಂದಿ-ರುವಂತಹುದು. ಆದ್ದರಿಂದ ಕಮಲದ ಸಾಮ್ಯವನ್ನು ಹೊಂದಿ ಶ್ರೀಹರಿಯ ಪಾದಗಳಿಗೆ ಸಮರ್ಪಿತವಾಗಲು ಯೋಗ್ಯವಾಗಿದೆ ಎಂದರ್ಥ.

೩. 'ಹಂಸಾನಾಂ' ಎಂಬುದಕ್ಕೆ ಪರಮಹಂಸರಿಗೆ ಹಾಗೂ ಹಂಸಪಕ್ಷಿಗಳಿಗೆ ಎಂದೂ, 'ಸನ್ಮಾನಸೇ' ಎಂಬುದಕ್ಕೆ ಸಜ್ಜನರ ಮನಸ್ಸಿನಲ್ಲಿ ಎಂದೂ, ಉತ್ತಮವಾದ ಮಾನಸಸರೋವರದಲ್ಲಿ ಎಂದೂ, 'ಪವನಃ' ಎಂಬುದಕ್ಕೆ ವಾಯುದೇವರು ಎಂದೂ, ಗಾಳಿ ಎಂದೂ ಅರ್ಥ (ಶ್ಲೇಷಾಲಂಕಾರ).

೪. ತೀರ್ಥಕ್ಷೇತ್ರವರ್ಣನೆ ಪರವಾದ ತಮ್ಮ ತೀರ್ಥಪ್ರಬಂಧ ಕೃತಿಯಂತೆ ಈ ರುಗ್ಮಿಣೀಶ-ವಿಜಯ ಕೃತಿಯನ್ನು ಸಹ ಶ್ರೀವಾದಿರಾಜಸ್ವಾಮಿಗಳು ಪ್ರಬಂಧ ಎಂದು ಕರೆದಿರುವುದು ಗಮನಾರ್ಹ; ಇದು ಕೇವಲ ಕಾಲ್ಪನಿಕವಾದ ಕೃತಿಯಾಗಿರದೆ, ಆಧ್ಯಾತ್ಮಿಕವಾದ ಮಹತ್ತರವಾದ ಕೃತಿ ಎಂಬ ವಿಶೇಷಾರ್ಥವನ್ನು ಈ ಮೂಲಕ ತಿಳಿಸಿರುವರು.

೫. ಪ್ರಾರಂಭದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯ ಮಾಹಾತ್ಮ್ಯ ಸೌಗಂಧ್ಯವನ್ನು ಪಸರಿಸುವ ಸಾಮರ್ಥ್ಯ ಶ್ರೀವಾಯುದೇವರದು ಎಂಬುದಾಗಿ ತಿಳಿಸಿದ ಶ್ರೀವಾದಿರಾಜಸ್ವಾಮಿಗಳು, ಈ ಶ್ಲೋಕದಲ್ಲಿ ತಮ್ಮ ಈ ಕೃತಿಯ ಹಿರಿಮೆಯನ್ನು ಅಂಗೀಕರಿಸಿ ಲೋಕದಲ್ಲಿ ಪ್ರಸಾರಮಾಡಲಿ ಎಂಬುದಾಗಿ 'ಪವನಃ ವಿಸ್ತಾರಯತ್ವಂಜಸ' ಎಂಬುದಾಗಿ ಕೇಳಿಕೊಂಡಿರುವರು[೩].

೬. ಇಲ್ಲಿ ಕಾವ್ಯದ ಬಗ್ಗೆ ಬಂದಿರುವ ವರ್ಣನೆಗಳೆಲ್ಲ ಯಥೋಚಿತವಾಗಿ ಹಂಸಗಳ ಪರವಾಗಿಯು ಸಹ ಅನ್ವಯಿಸುವವು.

---

೧. ಸ್ವಮತಪ್ರತಿಪಾದಿತಭಗವನ್ಮಹಿಮ್ನಾಮೇವ ವರ್ಣನಾತ್ ಸ್ವಮನಃಪ್ರಿಯಮಿತಿ ಭಾವಃ। – ವ್ಯಾ.

೨. ಮಾನಸಸರೋವರೇ ಕಮಲಾವಸ್ಥಿತೇರೌಚಿತ್ಯಾದಿತಿ ಭಾವಃ। – ವ್ಯಾ.

೩. ಯಥಾ ವಾಯುಃ ಕಮಲೋದರಸ್ಥಸೌರಭ್ಯಗುಣಂ ಸಂಗೃಹ್ಯ ದಿಕ್ಷು ವಿಸ್ತಾರಯತಿ । ಸಕಲಜನ-ಮನಸ್ತೋಷಕರತಯ ದಿಕ್ಷು ದಿಕ್ಷು ಸ್ವಮತಾನುಕೂಲಮೇತತ್ ಕಾವ್ಯಜಲಜಂ ವಿಸ್ತಾರಯತು। – ವ್ಯಾ.

## ಕಾವ್ಯೋಪಸಂಹಾರ

ರೋಮ್ಣಾಂ[೧] ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
[೨]ಪ್ರೇಮ್ಣಾ[೩]ಚಿಂತಯತಾಂ[೪]ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।
[೫]ಸಂಜಾತೇ ಭುವಿ[೬]ರುಗ್ಮಿಣೀಶವಿಜಯೇ[೭]ಸದ್ವಾದಿರಾಜೋದಿತೇ
[೮]ಸರ್ಗೋಽಭೂತ್ಸುರಮಂಡಲೀಷು ಸುತರಾಮೇಕೋನವಿಂಶೋ[೯]ಮುದಾಮ್[೧೦]
॥ ೪೧ ॥

॥ ಇತಿ ಶ್ರೀಮತ್ಕವಿಕುಲತಿಲಕಶ್ರೀಮದ್ವಾದಿರಾಜತೀರ್ಥಪೂಜ್ಯಚರಣವಿರಚಿತೇ
ಶ್ರೀರುಗ್ಮಿಣೀಶವಿಜಯೇ ಏಕೋನವಿಂಶಃ ಸರ್ಗಃ ॥

## ॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ ರುಗ್ಮಿಣೀಶವಿಜಯಃ ॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ

---

೧. 'ರೋಮಾಂಚೋ ರೋಮಹರ್ಷಣಂ'। ಇತ್ಯಮರಃ।

೨. ಭಕ್ತ್ಯಾ............, ಆದರೇಣ। - ವ್ಯಾ.

೩.. ಸ್ಮರತಾಂ ....., ಚಿಂತನಂ ಕುರ್ವತಾಮ್। - ವ್ಯಾ.

೪. ವಿಚಿತ್ರಾ ಆಶ್ಚರ್ಯಭೂತಾಃ। ವಿಮಲಾ ನಿರ್ಮಲಾಃ। ಶ್ಲಾಘ್ಯಾಃ ಸ್ತುತ್ಯಾಃ। ಅರ್ಥಾಃ ಧರ್ಮಾದಿಚತುರ್ವಿಧ ಪುರುಷಾರ್ಥಾಃ। ತಾಂ ಸಮ್ಯಕ್ ದದಾತೀತಿ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯೀ ತಸ್ಮಿನ್ ।...., ವಿಚಿತ್ರಃ ಅನೇಕ ಪ್ರಕಾರೋ ವಿಮಲಃ । ಜುಗುಪ್ಸಾಶ್ಲೀಲತಾದಿದೋಷರಹಿತಃ । ಶ್ಲಾಘ್ಯೋ ವರ್ಣನೀಯೋ ಯೋಽರ್ಥಃ । ಅಭಿಧೇಯಃ। ತಂ ಸಂದಾಯಿನಿ ತತ್ಪ್ರಕಾಶಕರ ಇತ್ಯರ್ಥಃ। - ವ್ಯಾ.

೫. ಸಂಜಾತಃ ಅಭವತ್ । ಕೃಷ್ಣಪರಾಕ್ರಮೇ ಭುವಿ ಉಕ್ತರೀತ್ಯಾ ಉಜ್ಜೃಂಭಿತೇ ಸತಿ ದೇವಾನಾಂ ಪ್ರಥಮಾ ಸಂತೋಷಸೃಷ್ಟಿರ್ಜಾತೇತಿ ಭಾವಃ। - ವ್ಯಾ.

೬. ರುಗ್ಮಿಣೀಶಸ್ಯ ಕೃಷ್ಣಸ್ಯ। ವಿಜಯೇ ಪರಾಕ್ರಮೇ। ಭುವಿ ಭೂಮೌ ಸಂಜಾತೇ ಸತಿ। ಉಜ್ಜೃಂಭಿತೇ ಸತಿ। - ವ್ಯಾ.
ರುಗ್ಮಿಣೀಶವಿಜಯಾಖ್ಯೇ ಕಾವ್ಯೇ ಅಧಿಕರಣೇ - ವ್ಯಾ.

೭. ಸಂತೋ ವಾದಿರಾಜಾಃ ವಾದಿಶ್ರೇಷ್ಠಾಃ । ಶುಕಾದಯಃ । ತೈರುದಿತೇ ಅಭಿವರ್ಣಿತೇ । ...., ಸನ್ ಕಾಮಾದಿದೋಷಶೂನ್ಯಃ । ಸತ್ಪುರುಷ ಇತಿ ಯಾವತ್ । ವಿಷ್ಣುಭಕ್ತತ್ವಾತ್ ಉತ್ತಮ ಇತಿ ವಾ ಸ ಚಾಸೌ ವಾದಿರಾಜಾಖ್ಯೋ ಯತಿಶ್ಚ ತೇನೋದಿತೇ। - ವ್ಯಾ.

೮. ಸೃಷ್ಟಿಃ 'ಸರ್ಗಃ ಸ್ವಭಾವನಿರ್ಮೋಕ್ಷ ನಿಶ್ಚಯಾಧ್ಯಾಯಸೃಷ್ಟಿಷು' ಇತ್ಯಮರಃ।.....ಸೃಷ್ಟಿಃ ಉಪಸರ್ಗಃ ಪರಿಚ್ಛೇದಃ । - ವ್ಯಾ.

೯. ಮುದಾಂ ಸಂತೋಷಾಣಾಂ । ನಿಗಡಮೋಚನಕವಾಟೋದ್ಘಾಟನನದೀಮಾರ್ಗದಾನಾದಿ ಬಹುಪರಾಕ್ರಮ-ದರ್ಶನೇನ ಬಹುಶಃ ಸಂತೋಷಾತ್ ಬಹುವಚನಮ್। - ವ್ಯಾ.

೧೦. ಏಕೇನೈವ ಶ್ಲೋಕೇನ ಕಥಾಸಂಗ್ರಹಸ್ಯ ಪರಿಚ್ಛೇದಸ್ಯ ಚೋಕ್ತತ್ವಾದತಿಕೌಶಲಮಿದಮ್। - ವ್ಯಾ.

ಆನಂದವನ್ನುಂಟುಮಾಡುತ್ತಾ ತನ್ನ ಮತದಲ್ಲಿ ಪ್ರತಿಪಾದಿತವಾದ ಭಗವನ್ಮಹಿಮೆಯನ್ನು ವರ್ಣಿಸುವ ಇದನ್ನು ಚೆನ್ನಾಗಿ ಲೋಕದಲ್ಲಿ ಪಸರಿಸಲಿ[1].

ವಿ : ೧. ತಾವು ರಚಿಸಿರುವ ಈ ರುಗ್ಮಿಣೀಶವಿಜಯ ಕೃತಿಯು ಪರಮಹಂಸರಾದ ಯತಿಗಳು ಸಹ ಮನಸಾ ಆದರಿಸುವ ಅಪೂರ್ವ ಕೃತಿ ಎಂಬುದನ್ನು ಈ ಶ್ಲೋಕದಲ್ಲಿ ಮನೋಜ್ಞವಾಗಿ ತಿಳಿಸಿರುವರು.

೨. ಈ ಕೃತಿಯು ಅಪೂರ್ವವಾದ ಕಮಲದಂತಿದ್ದು ಶ್ರೀಕೃಷ್ಣನ ಪಾದಕಮಲದಲ್ಲಿ ಸಮರ್ಪಿತವಾಗಿದೆ ಎಂದಿರುವರು; ಕಮಲವು ಹಂಸಗಳಿಗೆ ಹೃದಯಂಗಮವಾಗಿರುವುದು, ಭ್ರಮರಗಳಿಗೆ ಆಪ್ಯಾಯಮಾನವಾಗಿರುವುದು, ಮುತ್ತುಗಳಿಗೆ ಆಕರವೆನ್ನಿಸುವಂತಹುದು, ಮಹಾಲಕ್ಷ್ಮಿಯ ಕೈಯಲ್ಲಿ ಹಿಡಿಯಲ್ಪಟ್ಟಿರುವಂತಹುದು, ಸಜ್ಜನರ ಮಾನಸಸರೋವರದಲ್ಲಿ ನೆಲೆಸಿರುವಂತಹುದು[2], ಗಾಳಿಯಿಂದ ಪಸರಿಸಲ್ಪಡುವಂತಹ ಪರಿಮಳವನ್ನು ಹೊಂದಿ-ರುವಂತಹುದು. ಆದ್ದರಿಂದ ಕಮಲದ ಸಾಮ್ಯವನ್ನು ಹೊಂದಿ ಶ್ರೀಹರಿಯ ಪಾದಗಳಿಗೆ ಸಮರ್ಪಿತವಾಗಲು ಯೋಗ್ಯವಾಗಿದೆ ಎಂದರ್ಥ.

೩. 'ಹಂಸಾನಾಂ' ಎಂಬುದಕ್ಕೆ ಪರಮಹಂಸರಿಗೆ ಹಾಗೂ ಹಂಸಪಕ್ಷಿಗಳಿಗೆ ಎಂದೂ, 'ಸನ್ಮಾನಸೇ' ಎಂಬುದಕ್ಕೆ ಸಜ್ಜನರ ಮನಸ್ಸಿನಲ್ಲಿ ಎಂದೂ, ಉತ್ತಮವಾದ ಮಾನಸಸರೋವರದಲ್ಲಿ ಎಂದೂ, 'ಪವನಃ' ಎಂಬುದಕ್ಕೆ ವಾಯುದೇವರು ಎಂದೂ, ಗಾಳಿ ಎಂದೂ ಅರ್ಥ (ಶ್ಲೇಷಾಲಂಕಾರ).

೪. ತೀರ್ಥಕ್ಷೇತ್ರವರ್ಣನೆ ಪರವಾದ ತಮ್ಮ ತೀರ್ಥಪ್ರಬಂಧ ಕೃತಿಯಂತೆ ಈ ರುಗ್ಮಿಣೀಶ-ವಿಜಯ ಕೃತಿಯನ್ನು ಸಹ ಶ್ರೀವಾದಿರಾಜಸ್ವಾಮಿಗಳು ಪ್ರಬಂಧ ಎಂದು ಕರೆದಿರುವುದು ಗಮನಾರ್ಹ; ಇದು ಕೇವಲ ಕಾಲ್ಪನಿಕವಾದ ಕೃತಿಯಾಗಿರದೆ, ಆಧ್ಯಾತ್ಮಿಕವಾದ ಮಹತ್ತರವಾದ ಕೃತಿ ಎಂಬ ವಿಶೇಷಾರ್ಥವನ್ನು ಈ ಮೂಲಕ ತಿಳಿಸಿರುವರು.

೫. ಪ್ರಾರಂಭದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯ ಮಾಹಾತ್ಮ್ಯ ಸೌಗಂಧ್ಯವನ್ನು ಪಸರಿಸುವ ಸಾಮರ್ಥ್ಯ ಶ್ರೀವಾಯುದೇವರದು ಎಂಬುದಾಗಿ ತಿಳಿಸಿದ ಶ್ರೀವಾದಿರಾಜಸ್ವಾಮಿಗಳು, ಈ ಶ್ಲೋಕದಲ್ಲಿ ತಮ್ಮ ಈ ಕೃತಿಯ ಹಿರಿಮೆಯನ್ನು ಅಂಗೀಕರಿಸಿ ಲೋಕದಲ್ಲಿ ಪ್ರಸಾರಮಾಡಲಿ ಎಂಬುದಾಗಿ 'ಪವನಃ ವಿಸ್ತಾರಯತ್ವಂಜಸ' ಎಂಬುದಾಗಿ ಕೇಳಿಕೊಂಡಿರುವರು[3].

೬. ಇಲ್ಲಿ ಕಾವ್ಯದ ಬಗ್ಗೆ ಬಂದಿರುವ ವರ್ಣನೆಗಳೆಲ್ಲ ಯಥೋಚಿತವಾಗಿ ಹಂಸಗಳ ಪರವಾಗಿಯು ಸಹ ಅನ್ವಯಿಸುವವು.

---

೧. ಸ್ವಮತಪ್ರತಿಪಾದಿತಭಗವನ್ಮಹಿಮ್ನಾಮೇವ ವರ್ಣನಾತ್ ಸ್ವಮನಃಪ್ರಿಯಮಿತಿ ಭಾವಃ। – ವ್ಯಾ.

೨. ಮಾನಸಸರೋವರೇ ಕಮಲಾವಸ್ಥಿತೇರೌಚಿತ್ಯಾದಿತಿ ಭಾವಃ। – ವ್ಯಾ.

೩. ಯಥಾ ವಾಯುಃ ಕಮಲೋದರಸ್ಥಸೌರಭ್ಯಗುಣಂ ಸಂಗೃಹ್ಯ ದಿಕ್ಷು ವಿಸ್ತಾರಯತಿ । ಸಕಲಜನ-ಮನಸ್ತೋಷಕರತಯ ದಿಕ್ಷು ದಿಕ್ಷು ಸ್ವಮತಾನುಕೂಲಮೇತತ್ ಕಾವ್ಯಜಲಜಂ ವಿಸ್ತಾರಯತು। – ವ್ಯಾ.

## ಕಾವ್ಯೋಪಸಂಹಾರ

ರೋಮ್ಣಾಂ[೧] ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
[೨]ಪ್ರೇಮ್ಣಾ [೩]ಚಿಂತಯತಾಂ [೪]ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
[೫]ಸಂಜಾತೇ ಭುವಿ [೬]ರುಗ್ಮಿಣೀಶವಿಜಯೇ [೭]ಸದ್ವಾದಿರಾಜೋದಿತೇ
[೮]ಸರ್ಗೋಽಭೂತ್ಸುರಮಂಡಲೀಷು ಸುತರಾಮೇಕೋನವಿಂಶೋ [೯]ಮುದಾಮ್[೧೦]
॥ ೪೧ ॥

॥ ಇತಿ ಶ್ರೀಮತ್ಕವಿಕುಲತಿಲಕಶ್ರೀಮದ್ವಾದಿರಾಜತೀರ್ಥಪೂಜ್ಯಚರಣವಿರಚಿತೇ
ಶ್ರೀರುಗ್ಮಿಣೀಶವಿಜಯೇ ಏಕೋನವಿಂಶಃ ಸರ್ಗಃ ॥

## ॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಪ್ರಣೀತ ರುಗ್ಮಿಣೀಶವಿಜಯಃ ॥

ರೋಮಗಳಿಗೆ ಪುಲಕನೀಡುವ ಶ್ರವಣಮಾತ್ರದಿಂದಲೇ ಪಾಪಗಳ ಸಮೂಹವನ್ನು ತೊಡೆದು ಹಾಕುವ ಪ್ರೀತಿಯಿಂದ ಚಿಂತಿಸುವವರಿಗೆ ವಿಚಿತ್ರವಾದ, ನಿರ್ಮಲವಾದ, ಶ್ಲಾಘ್ಯವಾದ ಅರ್ಥಗಳನ್ನು ಕರುಣಿಸುವ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಈ

---

೧. 'ರೋಮಾಂಚೋ ರೋಮಹರ್ಷಣಂ' । ಇತ್ಯಮರಃ ।

೨. ಭಕ್ತ್ಯಾ............, ಆದರೇಣ । - ವ್ಯಾ.

೩. ಸ್ಮರತಾಂ ....., ಚಿಂತನಂ ಕುರ್ವತಾಮ್ । - ವ್ಯಾ.

೪. ವಿಚಿತ್ರಾ ಆಶ್ಚರ್ಯಭೂತಾಃ । ವಿಮಲಾ ನಿರ್ಮಲಾಃ । ಶ್ಲಾಘ್ಯಾಃ ಸ್ತುತ್ಯಾಃ । ಅರ್ಥಾಃ ಧರ್ಮಾದಿಚತುರ್ವಿಧ ಪುರುಷಾರ್ಥಾಃ । ತಾಂ ಸಮ್ಯಕ್ ದದಾತೀತಿ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯೀ ತಸ್ಮಿನ್ ।...., ವಿಚಿತ್ರಃ ಅನೇಕ ಪ್ರಕಾರೋ ವಿಮಲಃ । ಜುಗುಪ್ಸಾಶ್ಲೀಲತಾದಿದೋಷರಹಿತಃ । ಶ್ಲಾಘ್ಯೋ ವರ್ಣನೀಯೋ ಯೋಽರ್ಥಃ । ಅಭಿಧೇಯಃ । ತಂ ಸಂದಾಯಿನಿ ತತ್ಪ್ರಕಾಶಕರ ಇತ್ಯರ್ಥಃ । - ವ್ಯಾ.

೫. ಸಂಜಾತಃ ಅಭವತ್ । ಕೃಷ್ಣಪರಾಕ್ರಮೇ ಭುವಿ ಉಕ್ತರೀತ್ಯಾ ಉಜ್ಜೃಂಭಿತೇ ಸತಿ ದೇವಾನಾಂ ಪ್ರಥಮಾ ಸಂತೋಷಸೃಷ್ಟಿರ್ಜಾತೇತಿ ಭಾವಃ । - ವ್ಯಾ.

೬. ರುಗ್ಮಿಣೀಶಸ್ಯ ಕೃಷ್ಣಸ್ಯ । ವಿಜಯೇ ಪರಾಕ್ರಮೇ । ಭುವಿ ಭೂಮೌ ಸಂಜಾತೇ ಸತಿ । ಉಜ್ಜೃಂಭಿತೇ ಸತಿ । - ವ್ಯಾ.
ರುಗ್ಮಿಣೀಶವಿಜಯಾಖ್ಯೇ ಕಾವ್ಯೇ ಅಧಿಕರಣೇ - ವ್ಯಾ.

೭. ಸಂತೋ ವಾದಿರಾಜಾಃ ವಾದಿಶ್ರೇಷ್ಠಾಃ । ಶುಕಾದಯಃ । ತೈರುದಿತೇ ಅಭಿವರ್ಣಿತೇ । ...., ಸನ್ ಕಾಮಾದಿದೋಷಶೂನ್ಯಃ । ಸತ್ಪುರುಷ ಇತಿ ಯಾವತ್ । ವಿಷ್ಣುಭಕ್ತತ್ವಾತ್ ಉತ್ತಮ ಇತಿ ವಾ ಸ ಚಾಸೌ ವಾದಿರಾಜಾಖ್ಯೋ ಯತಿಶ್ಚ ತೇನೋದಿತೇ । - ವ್ಯಾ.

೮. ಸೃಷ್ಟಿಃ 'ಸರ್ಗಃ ಸ್ವಭಾವನಿರ್ಮೋಕ್ಷ ನಿಶ್ಚಯಾಧ್ಯಾಯಸೃಷ್ಟಿಷು' ಇತ್ಯಮರಃ ।.....ಸೃಷ್ಟಿಃ ಉಪಸರ್ಗಃ ಪರಿಚ್ಛೇದಃ । - ವ್ಯಾ.

೯. ಮುದಾಂ ಸಂತೋಷಾಣಾಂ । ನಿಗಡಮೋಚನಕವಾಟೋದ್ಘಾಟನನದೀಮಾರ್ಗದಾನಾದಿ ಬಹುಪರಾಕ್ರಮ-ದರ್ಶನೇನ ಬಹುಶಃ ಸಂತೋಷಾತ್ ಬಹುವಚನಮ್ । - ವ್ಯಾ.

೧೦. ಏಕೇನೈವ ಶ್ಲೋಕೇನ ಕಥಾಸಂಗ್ರಹಸ್ಯ ಪರಿಚ್ಛೇದಸ್ಯ ಚೋಕ್ತತ್ವಾದತಿಕೌಶಲಮಿದಮ್ । - ವ್ಯಾ.

ರುಗ್ಮಿಣೀಶವಿಜಯವೆಂಬ ದೇವತಾಮಂಡಲಿಯಲ್ಲಿಯೂ ಪೂಜಿತವಾದ ಈ ಕೃತಿಯಲ್ಲಿ ಹತ್ತೊಂಬತ್ತನೆಯ ಸರ್ಗವು ಮುಕ್ತಾಯವಾಯಿತು.

ವಿ.: ೧. ಇದು ಪ್ರತಿಸರ್ಗದ ಕೊನೆಯಲ್ಲಿ ಬಂದಿರುವ ಶ್ಲೋಕವಾಗಿದ್ದು ಇದರಲ್ಲಿ ಗ್ರಂಥದ ಹತ್ತೊಂಭತ್ತನೆಯ ಸರ್ಗವು ಮುಕ್ತಾಯವಾದ ವಿವರ ಬಂದಿದೆ.

೨. ರುಗ್ಮಿಣೀಶನಾದ ಶ್ರೀಕೃಷ್ಣನ ವಿಜಯವು ಶ್ರವಣಮಾತ್ರದಿಂದಲೇ ಪಾಪರಾಶಿಯನ್ನು ತೊಡೆದುಹಾಕುವಂತಹುದು; ಭಕ್ತಿಯಿಂದ ಸ್ಮರಿಸುವವರಿಗೆ ಅಚ್ಚರಿ ಹುಟ್ಟಿಸುವಂತಹ ಪರಿಶುದ್ಧವಾದ ಸ್ತುತ್ಯವಾದ ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನು ಸಹ ನೀಡುವಂತಹುದು; ವಾದಿಶ್ರೇಷ್ಠರಾದ ಶುಕಮುನಿಗಳೇ ಮೊದಲಾದವರು ವರ್ಣಿಸುವಂತಹ ರುಗ್ಮಿಣೀಶನಾದ ಶ್ರೀಕೃಷ್ಣನ ಪರಾಕ್ರಮವು ಭೂಲೋಕದಲ್ಲಿ ಪ್ರಕಾಶಿತವಾಗುತ್ತಿದ್ದಂತೆ, ದೇವತಾವೃಂದವು ಸಹ ಪೂಜಿಸುವಂತಹುದು; ಹೀಗೆ ಇದು ಬಗೆಬಗೆಯ ನಲಿವುಗಳಿಗೆ ಕಾರಣವಾಗಿದೆ ಎಂಬುದು ಶ್ರೀಕೃಷ್ಣನ ಹಿರಿಮೆಯ ಪರವಾದ ಅರ್ಥ.

೩. ಈ ರುಗ್ಮಿಣೀಶವಿಜಯ ಕಾವ್ಯವು ಶಬ್ದಾರ್ಥ ಚಮತ್ಕಾರ ಮೊದಲಾದವುಗಳ ಮೂಲಕ ರೋಮಾಂಚನ ಹುಟ್ಟಿಸುವಂತಹುದು; ಆದರದಿಂದ ಚಿಂತನೆ ಮಾಡುವವರಿಗೆ ಅನೇಕ ರೀತಿಯಲ್ಲಿ ನಿರ್ಮಲವಾದ ಶ್ರೇಷ್ಠವಾದ ಅರ್ಥಗಳನ್ನು ನೀಡುವಂತಹುದು; ಸಜ್ಜನರಾದ ವಿಷ್ಣುಭಕ್ತಿ ಮೊದಲಾದ ಗುಣಗಳಿಂದ ಪೋಷಿತರಾದ ಶ್ರೀವಾದಿರಾಜರು ಎಂಬ ಯತಿಗಳಿಂದ ರಚಿತವಾದ ಕಾವ್ಯ ಎಂಬುದು ಕೃತಿಯ ಪರವಾದ ಅರ್ಥ.

೪. ಒಟ್ಟಾಗಿ ಈ ಶ್ಲೋಕದಲ್ಲಿ ಬಂದಿರುವ ವರ್ಣನೆಗಳು ಶ್ರೀರುಗ್ಮಿಣೀಶನಾದ ಶ್ರೀಕೃಷ್ಣನ ಮಾಹಾತ್ಮ್ಯೆ ಪರವಾಗಿಯೂ, ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಶ್ರೀರುಗ್ಮಿಣೀಶವಿಜಯ ಕಾವ್ಯದ ಪರವಾಗಿಯೂ ಒಟ್ಟಾಗಿ ಅನ್ವಯಿಸುವವು ಎಂಬುದನ್ನು ಗಮನಿಸಬೇಕು.

೫. ಶ್ರೀವಾದಿರಾಜರ ಇತರ ಸಕಲ ಕೃತಿಗಳಿಗೂ ಸಹ ಇಲ್ಲಿಯ ವಿಶೇಷಣಗಳು ಯಥಾ-ಯೋಗ್ಯವಾಗಿ ಅನ್ವಯಿಸುತ್ತವೆ ಎಂದು ತಿಳಿಯಬೇಕು.

★★★★★

॥ ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ ಶ್ರೀರುಗ್ಮಿಣೀಶವಿಜಯ ಕೃತಿಯ ಅನುವಾದವು ಇಲ್ಲಿಗೆ ಮುಕ್ತಾಯವಾಗಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

## ಪರಿಶಿಷ್ಟ-೧

# ಶ್ರೀರುಗ್ಮಿಣೇಶವಿಜಯದ ಪದ್ಮಬಂಧಶ್ಲೋಕ (೧೭/೨೦)

ವಾಚಾ ಯಃ ಕೀರ್ತಿತೋಽಲಂ ದಿವಿಜವರಸಭಾಽಽರಾಧಿತಾನಾಂ ಮುನೀನಾಂ
ಜನ್ಮಾಂತಾದ್ಯೇನಸಾಂ ಯೋ ರಚಯತಿ ವಿಹತಿಂ ಚಿತ್ಫಲಂ ಸುಪ್ರಗೀತಃ।
ರುಗ್ವೇದೀ ಪ್ರೌಢಸದ್ವಾಗ್ಮಿಷು ವಿವಿಧಸುವಾಣೀವಿಲಾಸೈಃ ಪ್ರತರ್ಕ್ಯಃ
ಶಸ್ತೋಽಸ್ಯಾದೌ ತಥಾಽಂತೇ ವಿಮಲಯತಿತತೇರ್ಜಲ್ಪಶುದ್ಧೌ ಸಹಾಯಃ॥೨೦॥



ಕೃಪೆ: ಶ್ರೀರಾಮತತ್ತ್ವಪ್ರಕಾಶನ ಪ್ರೆಸ್, ಬೆಳಗಾವಿ

## ಪರಿಶಿಷ್ಟ-೨

# ಶ್ರೀರುಗ್ಮಿಣೇಶವಿಯದ ಚಕ್ರಬಂಧಶ್ಲೋಕ (೧೯/೩೬)

ವಂದಾರುದ್ವಿಜವರ್ಯವಾಂಛಿತನಿಜಧ್ಯಾನಕ್ಷಮಾಶಂಕರಃ
ಸ್ವರ್ವಾಗ್ಮಿವ್ರಜವರ್ಣ್ಯದಿಗ್ವಿತತಿಕೃತ್ಕರ್ಮೌಘರಾಜತ್ಕರೀ ।
ರುದ್ರಾಣೀಪತಿಮಾನ್ಯರಾಜಿತಗತಿಃ ಸತ್ಯಾಸಹಾಯಃ ಸತಾಂ
ತಾಂ ರೇಮೇ ವರದಃ ಸ್ವಬಂಧುರುಚಿರಾಂ ರಕ್ಷನ್ ಪುರೀಮದ್ಭುತಾಮ್ ॥೩೬॥




ಕೃಪೆ: ಶ್ರೀರಾಮತತ್ತ್ವಪ್ರಕಾಶನ ಪ್ರೆಸ್, ಬೆಳಗಾವಿ

# ಪರಿಶಿಷ್ಟ-೩

## ಶ್ರೀರುಕ್ಮಿಣೀಶವಿಜಯದಲ್ಲಿನ ಸೂಕ್ತಿಗಳು

### ಸರ್ಗ-೧

೦೧. ಅಕೌಶಲೇನ ಗ್ರಥಿತೇತಿ ಜಾತಿಪ್ರಸೂನಮಾಲಾಂ ಕಿಮು ಸಂತ್ಯಜಂತಿ ॥ ೧ ॥

೦೨. ವಿದಗ್ಧೈಃ ಕಿಮುಪೇಕ್ಷಣೀಯಾ ಪಯೋಬ್ಧಿಜಾ ಚಂಚಲತಾಖ್ಯಾದೋಷಾತ್ ॥ ೧೦ ॥

೦೩. ಲೋಕೇ ಪತಿನಿಂದಕೇಣ್ಯಂ ಪತಿವ್ರತಾನಾಮತಪರಃ ಕ್ವ ಭಾರಃ ॥ ೧೨ ॥

೦೪. ಸಂಪ್ರೇಷಯಂತಿ ಸ್ಮ ನರೈರ್ನರೇಂದ್ರಾಃ ಶಯ್ಯಾಂ ಸ್ವಕೀಯಾಂ ಪುರತಃ ಪ್ರಯಾಣೇ । ೨೬ ।

೦೫. ಶಿಶುಂ ವಶೀಕರ್ತುಮಥೋ ನ ಭಾರಃ ॥ ೪೧ ॥

೦೬. ತುಷ್ಟಿರ್ಭುವಿ ಕಸ್ಯ ನ ಸ್ಯಾದದೃಷ್ಟಪೂರ್ವಸ್ಯ ನಿರೀಕ್ಷಣೇನ ॥ ೪೪ ॥

೦೭. ಯದೀಯರೂಪಂ ಪ್ರಕಟೀಕರೋತಿ ಪಿತಾ ಸ ತಸ್ಯೇತಿ ಹಿ ವೇದವಾದಃ ॥ ೪೮ ॥

೦೮. ಕರಸ್ಥದೇವಸ್ಯ ಕುತೋಽಂತರಾಯಃ ॥ ೫೯ ॥

### ಸರ್ಗ-೨

೦೧. ಬಿಭೇತಿ ಸರ್ವಃ ಪರುಷಾನ್ನ ಶಾಂತಾನ್ ॥ ೨೨ ॥

೦೨. ವಿಷ್ಣಪದಾನುಷಕ್ತಕರಃ ಕಥಂ ನೋರ್ಧ್ವಮುಪೈತಿ ಲೋಕಃ ॥ ೨೩ ॥

೦೩. ಶ್ರೇಯೋಽನುಜಸ್ಯಾಪಿ ನ ವೈ ಸಹಂತೇ ॥ ೨೪ ॥

೦೪. ಕ್ರೂರೋಽಪಿ ಮರ್ತ್ಯಃ ಸ್ವಕಲತ್ರಸಾಂದ್ರಸಂಬಂಧಭಾಜಾಂ ನ ಹಿ ತಾಪದಾಯೀ ॥ ೨೫ ॥

೦೫. ಪ್ರಿಯೇಷು ನೂತ್ನೇಷು ಹಿ ಕಸ್ಯ ತೃಪ್ತಿಃ ॥ ೨೯ ॥

೦೬. ಕೃತ್ಯಾ ಮಹತಿ ಪ್ರಯುಕ್ತಾ ಸ್ವಕೀಯಮೃತ್ಯುತ್ವಮುಪೈತಿ ಪೃಥ್ವ್ಯಾಮ್ ॥ ೩೮ ॥

೦೭. ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ ॥ ೪೫ ॥

೦೮. ಜ್ಞಾನಂ ವಿನಾ ಯನ್ನ ಹಿ ಬಂಧಮೋಕ್ಷಃ ॥ ೪೮ ॥

೦೯. ಅವೈಷ್ಣವಾನಾಂ ಯತನೈರ್ನ ಮೋಕ್ಷಃ ಪತತ್ಯಧಸ್ತಾಮಸವೃತ್ತಯಸ್ತೇ ॥ ೫೦ ॥

೧೦. ನಿಂದಾಂ ಮುಕುಂದಸ್ಯ ಸಕೃನ್ನಿಶಮ್ಯ ಮಂದಃ ಪತೇರ್ತ ಕಿಂ ಪುರಚ್ಯುತಂ ತಮ್ ॥ ೫೧ ॥

೧೧. ವಿನಾಶಕಾಲೇ ಹಿ ವಿರುದ್ಧಬುದ್ಧಿಃ ॥ ೬೭ ॥

### ಸರ್ಗ-೩

೦೧. ಅಯೋಗ್ಯಕಾಮಸ್ಯ ಕಥಂ ನ ಪಾತಃ ॥ ೫ ॥

೦೨. ವಾತಸ್ಯ ಜವೋಽಧಿಕೋಽಪಿ ಕಥಂ ನು ವಿಶ್ವಂಭರಮುದ್ಬಿಭರ್ತಿ ॥ ೬ ॥

೦೩. ಶಬ್ದೇಷು ಬಹೂದಿತೇಷು ಪ್ರಿಯೇರಿತಃ ಪ್ರೀತಿಕರೋ ಹಿ ಲೋಕೇ ॥ ೨೦ ॥
೦೪. ಲಕ್ಷ್ಮೀನಯನಾಂತಭಾಜಾಮಸಹ್ಯದೋಷೋಽಪಿ ಭವೇದ್ಗುಣಾಯ ॥ ೩೭ ॥
೦೫. ಕಸ್ಸಕ್ಷತಿ ಸಿದ್ಧವಿದ್ಯಾಮ್ ॥ ೩೯ ॥

ಸರ್ಗ-೪

೦೧. ಭಕ್ತೈಕವಶ್ಯಃ ಪ್ರಭುಃ ॥ ೧ ॥
೦೨. ಕ್ಷಿಣೋತಿ ನೂನಂ ಧನಲೋಭಭಾಜಾಂ ಧನಲಿಪ್ಸುನರ್ಹತ್ಸ್ವತಿದಿಶ್ಯ ದೇವಃ ॥ ೪ ॥
೦೩. ನ ಹಿ ರೋಷರುದ್ಧಂ ಮನೋ ಮಿನೋತ್ಯಪ್ಯಮರಾನುಭಾವಮ್ ॥ ೭ ॥
೦೪. ಹರೌ ಪ್ರಸನ್ನೇ ಕಿಮಿಹಾಸ್ತ್ಯಸಾಧ್ಯಮ್ ॥ ೨೪ ॥
೦೫. ಗೃಹೀತಮಾಯಸ್ಯ ಚ ತಸ್ಯ ಪಾತಃ ॥ ೨೯ ॥
೦೬. ಕೃಷ್ಣಪ್ರತಿಪಕ್ಷಪಕ್ಷಃ ಕಥಂ ನ ಪಾತ್ಯೈಕಫಲಸ್ತ್ರಿಲೋಕ್ಯಾಮ್ ॥ ೩೦ ॥
೦೭. ನ ಹಿ ಸ ವೇತ್ತಿ ಬಲಂ ಶ್ರವಣೋಜ್ಝಿತಃ ಪರಮಯಾ ರಮಯಾ ಶ್ರುತಿಭಿಃ ಸ್ತುತಮ್ । ೫೯ ।
೦೮. ನರ್ನರ್ತಿ ಸುಹೃದಾಗಮನೇ ನ ಕಃ ॥ ೬೨ ॥
೦೯. ನಿರಾಗಸಂ ಕಂ ವರಯೇನ್ನ ಶೌರಿಃ ॥ ೬೫ ॥
೧೦. ನಿಜೇಷು ಶಿಕ್ಷಾಽಪಿ ಹಿ ತಸ್ಯ ವಿಷ್ಣೋಃ ಪರಂ ಪರಾನುಗ್ರಹಹೇತುರೇವ ॥ ೬೬ ॥
೧೧. ತಥಾಹಿ ನಾರೀಮೃದುಭಾಷಣೇನ ನ ಕಸ್ಯ ಚಿತ್ತಂ ಮೃದುತಾಮುಪೈತಿ ॥ ೬೯ ॥
೧೨. ನ ಕಸ್ಯ ಯೋಷಿತ್ಸು ಹಿ ಪಕ್ಷಪಾತಃ ॥ ೭೦ ॥
೧೩. ಕ್ರೋಧೋಽಪಿ ದೇವಸ್ಯ ವರೇಣ ತುಲ್ಯಃ ॥ ೭೧ ॥

ಸರ್ಗ-೫

೦೧. ಸ್ವನಾಸಿಕಾಚ್ಛೇದಮಪೀಹ ಸೋಢ್ವಾ ಖಲೋ ನಿರುಂಧೇ ಖಲು ಸಂಪ್ರಯಾಣಮ್ ॥ ೮ ॥
೦೨. ಕೃಷ್ಣವಿಪಕ್ಷಮೈತ್ರೀ ಕಿಮು ಸೌಖ್ಯದಾತ್ರೀ ॥ ೧೦ ॥
೦೩. ಖಲಃ ಪ್ರಕೃತ್ಯಾ ಖಲು ಗೂಢವೃತ್ತಿಃ ॥ ೧೨ ॥
೦೪. ಪ್ರಭೋಃ ಕ್ರಿಯೈಕಾಽಪ್ಯುರುಕಾರ್ಯಸಾಧಿಕಾ ॥ ೧೪ ॥
೦೫. ಫಲಾರ್ಥಿನಾಂ ಕಿಂ ನ ವಿಷಹ್ಯಮಸ್ತಿ ॥ ೧೬ ॥
೦೬. ದುಷ್ಟಸ್ಯ ವಿನಾಶತೋಽನ್ಯರ್ತ ಸತಾಂ ಮನಸ್ಸ್ರೀತಿಕರಂ ಕಿಮಸ್ತಿ ॥ ೨೨ ॥
೦೭. ವಿನಾಶಶೂನ್ಯಸ್ಯ ಹಿ ಕಿಂ ನ ಕಾರ್ಯಮ್ ॥ ೨೯ ॥
೦೮. ಮರ್ತ್ಯೋಪಕಾರನಿರತಸ್ಯ ನ ಕಃ ಸಹಾಯಃ ॥ ೩೧ ॥

೦೯. ಕಾಮಂ ಪರೋಪಕೃತಿಲಗ್ನಮನೋರಥಾನಾಂ ಕ್ಷೇಮಂಕರತ್ವಮುಪಯಂತಿ ಹಿ ಶತ್ರವೋಽಪಿ

೧೦. ಸರ್ವಂಸಹಾಜೀವನಜರ್ತುರಸ್ಯ ದುರ್ವಾರತೇಜೋಽಪಿ ಕಿಮೇತಿ ವೃದ್ಧಿಮ್ ॥ ೩೫ ॥

೧೧. ಯುಕ್ತಂ ಹಿ ತ್ವಮುರರಿಪೋರನುಗಾ ವಿರಾಗಾ ಯತ್ನಂ ಕದಾಚಿದಪಿ ನ ಸ್ವಕೃತೇ ಪ್ರಕುರ್ಯುಃ

೧೨. ಪುಂಸ್ತ್ವೇನ ಕಿಂ ಪೂರುಷಮೌಲಿಭಾಜಾಮ್ ॥ ೫೩ ॥

೧೩. ನಿಗಮೈಕವೇದ್ಯೇ ಕಿಮಕ್ಷಿಬಾಹುಲ್ಯಮುಪೈತಿ ಕೃತ್ಯಮ್ ॥ ೫೬ ॥

೧೪. ಜಿಹೀರ್ಷುಭಿಃ ಸ್ವಾಸಮಶತ್ರುಶೌರ್ಯಂ ತದಾದ್ಯವೈರ್ಯುದ್ಧರಣಂ ಹಿ ಕಾರ್ಯಮ್

## ಸರ್ಗ-೬

೦೧. ವಿಪತ್ಸು ಕಃ ಸ್ವೀಯಮುಪೇಕ್ಷತೇಽಗ್ರ್ಯಃ ॥ ೬೮ ॥

೦೨. ಗೋಬ್ರಾಹ್ಮಣರಕ್ಷಕಸ್ಯ ಕ್ವ ಕೃಷ್ಣದೋರ್ದಂಡಧೃತಸ್ಯ ಕಂಪಃ ॥ ೧೦ ॥

೦೩. ಶಿಶೋಃ ಕರೇ ಹಸ್ತಿಸಹಸ್ರಮಸ್ತಿ ॥ ೧೩ ॥

೦೪. ಕಿಂ ಸುಕರಂ ನಿತ್ಯಂ ಕ್ಷಮಧಾರಿಣಃ ॥ ೧೬ ॥

೦೫. ವಿಧೇರ್ನಿದೇಶೋ ಮಹತಾಽಪ್ಯಲಂಘ್ಯ ॥ ೨೮ ॥

೦೬. ನಷ್ಟಾಃ ಪ್ರಿಯಾಃ ಖಲು ಸಮೃದ್ಧಿಯುಜೋಽಪಿ ವಕ್ತ್ರಮ್ ॥ ೩೧ ॥

೦೭. ಆಶಾ ಹಿ ನೂತ್ನವಿಷಯಾ ಗಣಯಂತಿ ನೈನಃ ॥ ೩೫ ॥

೦೮. ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ ॥ ೪೮ ॥

೦೯. ಮಧುರನಿನದಭಾಜಾಂ ಕಿಂ ಸಾಧ್ಯಂ ಹಿ ಲೋಕೇ ॥ ೪೯ ॥

## ಸರ್ಗ-೭

೦೧. ಹರಿಚರಣವಿದೂರಾಃ ಕೋ ನು ಸಂಭಾಷಯೇನ್ನಃ। ಸುಕೃತಮಪಿ ತದಾಜ್ಞಾರೂಪ-
ಮಾಪಾದಯೇತ್ ಕಿಮ್ ॥ ೪ ॥

೦೨. ಸ್ನಿಗ್ಧೇ ಭರ್ತರಿ ಕಾಮಿನೀಜನರುಚಿಸ್ತತ್ಕ್ಷ ಏವ ಹ್ಯಲಮ್ ॥ ೩೫ ॥

೦೩. ಪರಪುಷ್ಟಃ ಸ ವಿಸ್ಪಷ್ಟಂ ಪೋಷ್ಟುರ್ವೈಃ ವಿಪ್ರಲಂಭಕಃ ॥ ೪೦ ॥

## ಸರ್ಗ-೮

೦೧. ನ ಹಿ ರಜ್ಜುಹೇಃ ಕ್ಷತಿರಭೂತಿರಭೂತ್ ॥ ೩೧ ॥

೦೨. ಕಿಂ ನಾಮ ನಾಸ್ತಿ ಮುನಿಮಾರ್ಗಜುಷಾಂ ಹಿ ಲೋಕೇ ॥ ೩೨ ॥

೦೩. ನ ಹಿ ಕಥಾ ವ್ಯರ್ಥಾ ಪರಬ್ರಹ್ಮಣಃ ॥ ೪೬ ॥

೦೪. ಕೋ ನಾಮ ನೋ ನೃತ್ಯತಿ ಸಿದ್ಧಕೃತ್ಯಃ ॥ ೫೨ ॥

೦೫. ಗುರುಕಾರ್ಯಲಾಭೇ ಲಘ್ವರ್ಥಸಾಧನಕೃತಿರ್ನಹಿ ದೃಷ್ಟಪೂರ್ವಾ ॥ ೫೩. ॥

ಸರ್ಗ-೧೦

೦೧. ಅಪಿ ಶಿರಸಿ ಧೃತೋ ಯತ್ಸ್ವೀಯ ಏವಾಂತಕಾಲೇ। ಕರವಶಮುಪಯಾತಃ ಶತ್ರುತಾಮೇತಿ ಶತ್ರೋಃ ॥ ೮ ॥

೦೨. ಅರಿಷ್ವಮುಷ್ಟಿರ್ನಹಿ ದೃಷ್ಟಪೂರ್ವಾ ॥ ೯ ॥

೦೩. ಕರೋದಯಾನ್ ವೀಕ್ಷ್ಯ ಪರಸ್ಯ ಜಾತಾನಸೂನಸೂಯಾಭಿರತಾಸ್ತ್ಯಜಂತಿ ॥ ೧೫ ॥

೦೪. ದಾಸ್ಯೈಕವಶ್ಯಃ ಪ್ರಭುಃ ॥ ೪೯ ॥

೦೫. ಮುಕ್ತೋಽಪಿ ನೈವೋಜ್ಝತಿ ಕೃಷ್ಣಸೇವಾಮ್ ॥ ೭೧ ॥

೦೬. ಶ್ರೇಯೋ ವಿನಾ ಪುಣ್ಯಮುಪಾರ್ಜಯೇತ್ ಕಃ ॥ ೭೬ ॥

೦೭. ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯಶತ್ರುರ್ಭವೇತ್ ॥ ೭೮ ॥

ಸರ್ಗ-೧೧

೦೧. ಚತುರಪುರುಷಕಾಂಕ್ಷಾ ವಕ್ರಯೋಷಿತ್ಸು ನೂನಮ್ ॥ ೫ ॥

೦೨. ಚುಬುಕಗತಕರಾಣಾಮಂಚತಾಂ ಕ್ವಾಸ್ತಿ ವಕ್ರಾ ॥ ೮ ॥

೦೩. ಅನುಕೂಲಯಿತುಂ ಬಾಲಾಂ ಕರ ಏವ ಹಿ ಕಾರಣಮ್ ॥ ೯ ॥

೦೪. ಕೃಷ್ಣಃ ಕಥಂ ಜಡತಮಸ್ಯ ಬಲಿಂ ಸಹೇತ ॥ ೧೧ ॥

೦೫. ವಕ್ರಹೃದೋ ಹಿ ಪುಂಶಃ ಕೋ ವಾ ಗುಣಃ ಕೋವಿದಮಾನಯೋಗ್ಯಃ ॥ ೧೨ ॥

೦೬. ಕಿಮಿಹ ಕರುಣಾ ಶುಷ್ಕಹೃದಯೇ ॥ ೧೩. ॥

೦೭. ದ್ವೈಧೀಭಾವಮಂ ವಿಪಕ್ಷೇ ವಿರಚಯತಿ ಬತ ಸ್ವೀಯ ಏವ ಸ್ವಶತ್ರುಃ ॥ ೧೪ ॥

೦೮. ವನೇ ನಿವಾಸಃ ಕಿಂ ದೂಷಣಂ ವಿಮತಕೇಸರಿಸಮ್ಮಿತಾನಾಂ ಕಿಂ ಭೂಷಣಂ ಪ್ರತಿದಿನಂ ನಗರೇ ನಿವಾಸಃ ॥ ೩.೨ ॥

೦೯. ಗಜಫಲಮತಿಯತ್ನಾಭ್ಯಸ್ತವಿದ್ಯಾಽನವಸ್ಥಾ ಫಲತಿ ಸಹಜತೇಜೋಬುದ್ಧಿಭಾಜಾಂ ಕಿಮಗ್ರೇ

೧೦. ದುಷ್ಟೈರಾಚರಿತಾಂ ಕಿಮತ್ರ ಮತಿಮಾನ್ ಮೃತ್ಯುಪದಾಂ ವಿಶ್ವಸೇತ್ ॥ ೪೩. ॥

೧೧. ಮೃದುಸರಸಕವೇಃ ಪುರಃ ಕಿಮೀಡ್ಯಾ ಕಠಿನಪದಪ್ರಿಯಕಾವ್ಯಕಾರಶೀಲಾ ॥ ೪೪ ॥

## ಸರ್ಗ-೧೨

೦೧. ಲಭ್ಯಾ ವಿಮುಕ್ತಿಃ ಪುರೀ ॥ ೩. ॥

೦೨. ಸ್ವಕುಕ್ಷಿಪೂರ್ತೌ ನ ರತಿರ್ಹಿ ಕಸ್ಯ ನಿಜಾನುಭಾವಸ್ಮರಣೋತ್ಸವೇ ಚ ॥ ೨೭ ॥

೦೩. ಪ್ರಾಯೇಣ ಧನವಾನೇವ ಜಾಯತೇ ಕ್ಲೇಶವಾನಪಿ ॥ ೫೩. ॥

೦೪. ಕಾಲೇ ಕಾಲೇ ಧನಂ ನೂನಮರ್ಥಿಭ್ಯೋ ವಿತರೇದ್ಧಿ ಯಃ।
ಮುಚ್ಯತೇ ಸರ್ವದುಃಖೇಭ್ಯಃ ಕಂಟಕೇಭ್ಯ ಇವ ದ್ರುಮಃ ॥ ೫೪ ॥

೦೫. ವಿತ್ತೈಃ ಕೀರ್ತಿ ಶರ್ಯೈಃ ಶೌರ್ಯಂ ಪ್ರತ್ಯಹಂ ಯಃ ಸಮಾರ್ಜಯೇತ್।
ಸ ಏವ ಧನವಾನ್ ಸಮ್ರಾಡನ್ಯಂ ಮನ್ಯೇ ಹ್ಯಕಿಂಚನಮ್ ॥ ೫೫ ॥

೦೬. ಅರ್ಥಿಭ್ಯೋಽರ್ಥಮನಾದಿಶ್ಯ ಯಸ್ತನ್ನಿಕ್ಷಿಪತಿ ಕ್ಷಿತೌ।
ಮೃತ್ಸ್ನಾಂ ಸ್ವಯೋಗ್ಯಾಮಾದಾಯ ವಿತ್ತಂ ಭೂಮ್ಯೈ ಪ್ರದತ್ತವಾನ್ ॥ ೫೬ ॥

೦೭. ವಿಷ್ಣುಭಕ್ತಿರತಂ ಭೂಪಂ ನೈವ ತ್ಯಕ್ಷ್ಯತಿ ತತ್ಪ್ರಿಯಾ।
ತದ್ದ್ವೇಷಿಣಿ ನ ಸಾ ಸ್ಥಾತುಮುತ್ಸಹೇತ ಪತಿವ್ರತಾ ॥ ೫೮ ॥

೦೮. ಧರ್ಮದ್ವಿತೀಯಂ ನೃಪತಿಂ ಧರ್ಮೋಽನ್ಯೋ ನೈವ ಪೀಡಯೇತ್ ॥ ೫೯ ॥

೦೯. ವಿಷ್ಣೋರರ್ಭಕಸಂಕಾಶಾನ್ ವೈಷ್ಣವಾನ್ ಯಸ್ತು ನಿಂದತಿ।
ತತ್ರಾಪಿ ನ ಸ್ಥಿರಾ ಶ್ರೀಃ ಸ್ಯಾತ್ ಪುತ್ರದ್ವೇಷಿಣಿ ಮಾತೃವತ್ ॥ ೬೦ ॥

೧೦. ದೋಷಿಣಾಂ ಗುಣಲುಬ್ಧಾ ಶ್ರೀರ್ನಾಶ್ರಯೇದಿತಿ ಮೇ ಮತಿಃ ॥ ೬೧ ॥

೧೧. ಕಠೋರಗಿರಮುತ್ಸೃಜ್ಯವೃಣೋತ್ಯಪರಮಿಂದಿರಾ ॥ ೬೨ ॥

೧೨. ಸನ್ಮಂತ್ರಶೀರ್ಣೋ ದುರ್ಮಂತ್ರಃ ಪ್ರಯೋಕ್ತಾರಂ ಕ್ಷಿಣೋತಿ ಹಿ ॥ ೬೩ ॥

೧೩. ಪ್ರಜಾನಾಂ ಪೀಡನಂ ಕೃತ್ವಾ ಯೋ ಲುಬ್ಧೋ ಧನಮಾರ್ಜಯೇತ್।
ವಿಕ್ರಿಯ ಸ್ವಸುತಾನೇವ ಸ ವೈ ಸಂಚಿನುತೇ ವಸು ॥ ೬೫ ॥

೧೪. ಪ್ರಜಾಪರಂಪರಾಮೇತಿ ಪ್ರಜಾರಂಜನಕೃನ್ನೃಪಃ।
ಪೀಡಿತಾ ಸಾ ಸನಾಮ್ನೀಂ ತಾಂ ನೋತ್ಪಾದಯತಿ ತತ್ಕುಲೇ ॥ ೬೬ ॥

೧೫. ಅಪೂಜಿತೋಽತಿಥಿಃ ಸ್ವೀಯಮತಿಥಿತ್ವಮಪಾರ್ಥಕಮ್।
ಸಮರ್ಪಯತಿ ತತ್ತಿಥ್ಯಾಮಪೂಜ್ಯತ್ವಮಿವಾರ್ಪಯನ್ ॥ ೬೭ ॥

೧೬. ವಿಷಯೇರ್ಪಭುಕ್ತೇಷು ತೃತೀಯಾಂಶೋಽಸ್ಯ ಜೀರ್ಯತೇ।
ಶಿಷ್ಟಂ ತು ವಿಷಸಾರೂಪ್ಯಾತ್ ಕಷ್ಟಾಯ ಪರಿಕಲ್ಪತೇ ॥ ೬೮ ॥

ಸರ್ಗ-೧೩

೦೧. ಲಕ್ಷ್ಮೀಶಪದೈಭಕ್ತಾಸ್ತದನ್ಯದರ್ಚಂತಿ ತದೀಯಬುದ್ಧ್ಯಾ ॥ ೧೪ ॥

ಸರ್ಗ-೧೪

೦೧. ಅಸತಾಂ ಪುಣ್ಯಸರಿದಪ್ಯನಿಷ್ಪಸ್ಯ ಹಿ ಕಾರಣಮ್ ॥ ೨೫ ॥

೦೨. ದುರಾತ್ಮನಾಂ ವಕ್ತ್ರನಿರೀಕ್ಷಣಂ ಸ್ವೈರ್ಜನೈರ್ನ ಕಾರ್ಯಂ ತ್ವಿತಿ ಶಂಸತಿ ಸ್ಮ॥ ೩೩ ॥

೦೩. ಅಸಲ್ಲಾಪಮಸದ್ವರ್ಗೈಃ ಸತಾಂ ಸಂಶಿಕ್ಷಯನ್ನಿವ ॥ ೩೪ ॥

ಸರ್ಗ-೧೬

೦೧. ಧನಸ್ಯ ಲಾಭಾದಧಿಕೋ ಹಿ ಲೋಭಃ ॥ ೫೨ ॥

೦೨. ನಾರ್ಯಾ ಸಹ ಸಂಗತಾನಾಂ ಕುತೋ ವಿವೇಕಣ ಕುತ ಏವ ವೆಲಾ ॥ ೫೩ ॥

೦೩. ಏಕಸ್ಯಾಮಭಿರತಿಮಿಚ್ಛತೋಃ ಕ್ವ ಮೈತ್ರೀ ॥ ೫೫ ॥

೦೪. ಇಂದುದೃಷ್ಟ್ವಾ ನ ಕಸ್ಯ ಕಾಮಃ ಸರಸಸ್ಯ ಹಿ ಸ್ಯಾತ್ ॥ ೫೯ ॥

೦೫. ಕಲತ್ರವಸ್ತ್ರಕೃತಾಲಯಂ ಕಃ ಖಲು ಜೇತುಕಾಮಃ ॥ ೫೮ ॥

ಸರ್ಗ-೧೭

೦೧. ಯಮಭಯಮಭಯಾಪ್ಯ ಸ್ವಸ್ಥವೃತ್ತಿರ್ನ ವೇತ್ತಿ ॥ ೬೨ ॥

೦೨. ಸದ್ವಂಶಭವಾ ಗುಣಾಢ್ಯಾ ನತಾಃ ಸಮರ್ಥಾ ಅಪಿ ಸರ್ವಸಂಧೌ ॥೪೦ ॥

ಸರ್ಗ-೧೮

೦೧. ಪುಲಕಿತಕರಚಾರುಪ್ರೇಮದಾಮ್ನಾ ನಿಬದ್ಧಂ ಪ್ರಭುರಪಿ ವಶಮೇತಿ ಪ್ರೇಮಭಾರ್ಯೈರುದಾರ್ಯೈಃ ॥೧೯॥

# ಪರಿಶಿಷ್ಟ-೪

## ಶ್ರೀರುಗ್ಮಿಣೀಶವಿಜಯ ವ್ಯಾಖ್ಯಾನ - ಆದ್ಯಂತ ಶ್ಲೋಕಗಳು

### ಶ್ರೀನಾರಾಯಣಭಟ್ಟವಿರಚಿತಾ ಟೀಕಾ - ಗುರುಭಾವಪ್ರಕಾಶಿಕಾ

ಪ್ರಥಮಸರ್ಗಃ

ದಶನಮುಖದೃಗೋಷ್ಠಂ ಯಸ್ಯ ಸೌಂದರ್ಯವಲ್ಲೀ
ಕುಸುಮವದಭಿರಾಮಂ ಪಂಚಬಾಣಾನ್ [೧]ನಿಧಾಯ ।
ಧನುರಪಿ ರತಿಜಾನಿರ್ಭ್ರೂಲತಾಂ ಬಲ್ಲವೀನಾಂ
ನಿವಹಮಜಯದಸ್ಮಾನ್ ಪಾತ್ವಸೌ ರುಗ್ಮಿಣೀಶಃ ॥ ೧ ॥

ವೈರೋಚನಿಂ ವಿಗತಮಾನಮಥಾಂಡಭಂಗಂ
ಕೃತ್ವಾ ಸುಧಾನಿಧಿಲಲಾಮಜಟಾಜ್ಜಲೌಘಮ್ ।
ಯೋಽಜೀಜನಚ್ಚಿವವಿರಿಂಚರಮಾದರಾರ್ಚ್ಯಃ
ಪಾದಃ ಸದಾ ಮುದಮಸೌ ಪ್ರದದಾತು ವಿಷ್ಣೋಃ ॥ ೨ ॥

ವ್ಯಾಸತಾಪಸಪಾದಾಬ್ಜಂ ದೋಷಾವಸ್ಥಾವಿವರ್ಜಿತಮ್ ।
ದಾಸಾಲಿಸೇವ್ಯಂ ಮತ್ಸ್ವಾಂತಕಾಸಾರೇ ವರ್ತತಾಂ ಸದಾ ॥ ೩ ॥

ಗಂಭೀರಚಿಜ್ಜಲೋಪೇತಂ ದುಷ್ಕೃತಕ್ಷಾಲನಕ್ಷಮಮ್ ।
ಆನಂದತೀರ್ಥಮನಿಶಂ ಭಜೇಽಹಂ ಬುದ್ಧಿಶುದ್ಧಯೇ ॥ ೪ ॥

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ [೨]ಹಯಗ್ರೀವದಯಾಶ್ರಯಾನ್ ॥ ೫ ॥

[೩]ಚಿತ್ರಾಲಂಕಾರರಮ್ಯಾ ಮೃದುಪದವಿಲಸಂತ್ಯರ್ಥಗಂಭೀರಭಾವಾ
ಲೋಕಾಶ್ಚರ್ಯಪ್ರಬಂಧಾ ನವರಸಭರಿತಾ ಸತ್ಯಸಂಸ್ಥಾನಯುಕ್ತಾ ।
ಕಾವ್ಯಶ್ರೀರಾವಿರಾಸೀತ್ ಸದಮಲಹೃದಯಾ ಶ್ರೀಪತೇರ್ವಾಸಯೋಗ್ಯಾ
ಸಾಽವ್ಯಾಚ್ಚ್ರೀವಾದಿರಾಜಾಮೃತಮಯಜಲಧೇರ್ಯುಕ್ತಿರತ್ನಾಕರಾನ್ನಃ ॥ ೬ ॥

ಶ್ರೀವಾದಿರಾಜಯೋಗೀಂದ್ರರಚಿತಂ ರಸವತ್ತರಮ್ ।
ಗಂಭೀರಮರ್ಥತಃ ಕಾವ್ಯಂ ವ್ಯಾಕುರ್ವೇಽಹಂ ಯಥಾಮತಿ ॥ ೭ ॥

---

೧. ವಿಧಾಯ (ಪಾ.)

೨. ಹಯಗ್ರೀವಪದಾಶ್ರಯಾನ್ (ಪಾ.)

೩. ಚಿತ್ರಾಲಂಕಾರರಮ್ಯಾ ಮೃದುಪದವಿಲಾಸನ್ನರ್ಮಗಂಭೀರಭಾವಾ
ಸತ್ಸರ್ಗಾಶ್ಚರ್ಯಬಂಧಾ ನವರಸಭರಿತಾ ಸತ್ಯಸಂಸ್ಥಾನಯುಕ್ತಾ ।
ಕಾವ್ಯಶ್ರೀರಾವಿರಾಸೀತ್ ಸದಮಲಹೃದಯಾ ಶ್ರೀಪತೇರ್ಯತ್ರ ವಾಸಃ
ಸೋಽವ್ಯಾಚ್ಚ್ರೀವಾದಿರಾಜಾಮೃತಮಯಜಲಧೇರ್ಯುಕ್ತಿರತ್ನಾಕರೋ ನಃ ॥ -ಇತಿ ಪಾಠಾಂತರಮ್

ವಾದಿರಾಜೋಕ್ತಿಚಾತುರ್ಯಮಶಕ್ಯಂ ಜ್ಞಾತುಮಂಜಸಾ ।
ತಥಾಽಪಿ ವಕ್ಷ್ಯೇ ತಚ್ಛಿಕ್ಷಾಮನುಸೃತ್ಯೈವ ಲೇಶತಃ ॥ ೮ ॥

ದ್ವಿತೀಯಸರ್ಗಃ

ವಂದೇ ನಂದಾತ್ಮಜಂ ದೇವವೃಂದೈರ್ವಂದ್ಯಪದಾಂಬುಜಮ್ ॥
ಯದ್ಬಾಲಲೀಲಾಸ್ವರ್ಗಂಗಾ ಪುನಾತಿ ಭುವನತ್ರಯಮ್ ॥ ೧ ॥ (ಆದಿ)

ತೃತೀಯಸರ್ಗಃ

ವಂದೇ ವ್ರಜವಧೂವೇಶ್ಮನವನೀತಹರಂ ಹರಿಮ್ ।
ಕುಂದದ್ವಿಜೋಲ್ಲಸನ್ಮಂಜುಮಂದಹಾಸಮುಖಾಂಬುಜಮ್ ॥ ೧ ॥(ಆದಿ)

ಚತುರ್ಥಸರ್ಗಃ

ಕರುಣಾವರುಣಾವಾಸಂ ತರುಣಾರುಣಸದ್ದ್ಯುತಿಮ್ ।
ಕರುಣಾಕರ್ಷಣೋತ್ಸಾಹತನುಂ ನಾರಾಯಣಂ ನುಮಃ ॥ ೧ ॥ (ಆದಿ)

ಆದ್ಯಾದಿಸರ್ಗವ್ಯಾಖ್ಯಾಖ್ಯಸೋಪಾನೈರ್ಗುರುದರ್ಶಿತೈಃ ।
ಚತುರ್ಥಸರ್ಗಹೇಮಾದ್ರಿಮಾರೋಢುಮಹಮುದ್ಯತಃ ॥ ೨ ॥ (ಆದಿ)

ಪಂಚಮಸರ್ಗಃ

ವಂದ್ಯೇಂದಿರಾಸದಾವಾಸಂ ಶ್ರಯೇ ಕೃಷ್ಣಸರೋರುಹಮ್ ।
ಯಲ್ಲೀಲಾಮಕರಂದೇನ ಸಂತುಷ್ಟಃ ಸಜ್ಜನಾಲಯಃ ॥ ೧ ॥ (ಆದಿ)

ಷಷ್ಠಸರ್ಗಃ

ಖರ್ವೀಕೃತಸುಪರ್ವೇಶಗರ್ವಸರ್ವಸ್ವಪಾವಕಃ ॥
ಉರ್ವೀತಾಪಹರಃ ಕೃಷ್ಣವಾರ್ವಾಹಃ ಸ್ಯಾನ್ಮುದೇ ಮಮ ॥ ೧ ॥ (ಆದಿ)

ಸಪ್ತಮಸರ್ಗಃ

ರಾಸಕ್ರೀಡಾರಸೋತ್ಕಂಠಮಾನಿನೀಮಾನಸಾಲಯಃ ॥
ಪದ್ಮಾಪದ್ಮಭವಸ್ತುತ್ಯಃ ಕೃಷ್ಣಃ ಪುಷ್ಣಾತು ಮಾಂ ವಿಭುಃ ॥ ೧ ॥ (ಆದಿ)

ಹಯಗ್ರೀವಕೃಪಾದೃಷ್ಟಿದೃಷ್ಟೇನ ಕೃತಿನಾ ಮಯಾ ॥
ಗುರೂಪದೇಶಾತಿಶಯಾದ್ವಿಶೇಷೋಽಪ್ಯತ್ರ ಲಿಖ್ಯತೇ ॥ ೨ ॥ (ಆದಿ)

ಅಷ್ಟಮಸರ್ಗಃ

ವ್ಯಾಹಾರೈರ್ದೀನತಾಧಾರ್ಯೈರುದಾರೈರ್ಮಧುರೈರಪಿ ॥
ಕೃಷ್ಣಂ ಗೋಪೀಭಿರಾಕೃಷ್ಟಂ ನೌಮಿ ನಾವಂ ಭವಾಂಬುಧೇಃ ॥ ೧ ॥ (ಆದಿ)

ನವಮಸರ್ಗಃ

ರಾಸಕ್ರೀಡಾವಿತೃಷ್ಣಾಯ ಕೃಷ್ಣಾಯಾನಂದಮೂರ್ತಯೇ।
ನಮಃ ಕಾರುಣ್ಯಧಿಷ್ಣ್ಯಾಯ ವಿಷ್ಣವೇ ಕೇಶಿಜಿಷ್ಣವೇ ॥ ೧ ॥ (ಆದಿ)

ತುರಂಗತುಂಡಕರುಣಾಮಂಡಿತಃ ಖಂಡಿತೇಷಣಃ।
ಧರಾಸುರಾಗ್ರಣೀರ್ದದ್ಯಾದ್ವಾದಿರಾಜಗುರುರ್ದೃಶಮ್ ॥ ೨ ॥ (ಆದಿ)

ದಶಮಸರ್ಗಃ

ಆಕ್ರಾಂತಗೋಪಿಕಾಚಕ್ರಮಕ್ರೂರಸ್ತುತವಿಕ್ರಮಮ್।
ವಕ್ರಾಲಕೋಲ್ಲಸದ್ವಕ್ತ್ರಂ ಶಕ್ರನೀಲಚ್ಛವಿಂ ನುಮಃ ॥ ೧ ॥(ಆದಿ)

ಏಕಾದಶಸರ್ಗಃ

ಋಜ್ವೀಂ ಚಕಾರ ಯಃ ಪ್ರೇಮ್ಣಾ ಕುಬ್ಜಾಮಬ್ಜಾಲಯಾಪ್ರಿಯಃ।
ಮಧುರಾಂ ಕಂಸವಿಧುರಾಂ ತಂ ವಂದೇ ಯದುನಂದನಮ್ ॥ ೧ ॥(ಆದಿ)

ದ್ವಾದಶಸರ್ಗಃ

ಹತ್ವಾ ಪೂತನಿಕಾಂ ವಿಧೂಯ ಶಕಟಂ ಜಿತ್ವಾರ್ಜುನೌ ದಾನವಾನ್
ಸಪ್ತಾರುಜ್ಯ ವಿನಾಶ್ಯ ಕಾಲಿಯವಿಷಂ ನಿಷ್ಪೀಡ್ಯ ಶಿಷ್ಟೇತರಮ್।
ಭಿತ್ವಾ ಕೇಶಿನಮುನ್ಮದಂ ವಿಷತರುಂ ಚೋದ್ಧೃತ್ಯ ಗೋವರ್ಧನಂ
ಯಃ ಕಂಸಂ ಸಗಜೇಂದ್ರಮಲ್ಲಮವಧೀತ್ ತಸ್ಮೈ ನಮೋ ವಿಷ್ಣವೇ ॥ ೧ ॥ (ಆದಿ)

ಯೋ ವಿದ್ಯಾಧಿಪತಿರ್ವಿದ್ಯಾಮಗಾದ್ವಿಶ್ವಗುರುರ್ಗುರೋಃ।
ಸಂಪೂರ್ಣೈಶ್ವರ್ಯಸಂಪನ್ನಂ ತಂ ಶೌರಿಂ ಸಮುಪಾಸ್ಮಹೇ ॥ ೨ ॥ (ಆದಿ)

ತ್ರಯೋದಶಸರ್ಗಃ

ಯದುದ್ಧತೋದ್ಧವನಿರ್ಧೂತತಾಪಾ ಗೋಪ್ಯೋ ಮುದಂ ದಧುಃ।
ತಸ್ಮೈ ನಮಶ್ಚಿದಾನಂದಸಿಂಧವೇ ದೀನಬಂಧವೇ ॥ ೧೩ ॥ (ಆದಿ)

ಚತುರ್ದಶಸರ್ಗಃ

ನಮೋಽಸ್ತು ವಾದಿರಾಜಾಯ ಗುರವೇ ದೀನಬಂಧವೇ।
ಯೋ ಮಾಂ ವರಾಕಂ ಕೃಪಯಾ ಮೃತ್ಯುಗ್ರಸ್ತಮಮೂಮುಚತ್ ॥ ೧ ॥ (ಆದಿ)

ಜರಾಸಂಧಮಹಾಸೇನಾವರುಣಾಲಯವಾಡವಃ॥
ಮುರಾರಿಃ ಕರುಣಾರಾಶಿಃ ಪರಮಃ ಪ್ರೀಯತಾಂ ಮಮ ॥ ೨ ॥ (ಆದಿ)

